****************************************
ಮಾಧ್ವಭೂಷಣ ಶ್ರೀ ಬಿ. ಭೀಮರಾಯರ ಜನ್ಮಶತಾಬ್ದಿ ಆಚರಣಾ ವರ್ಷದ
ಸಮಾರೋಪ ಸಮಾರಂಭದ ಅಂಗವಾಗಿ ಪ್ರಕಟಿತ
****************************************

ಶ್ರೀ ಬಾದರಾಯಣ ಕೃತ

# ಶ್ರೀ ವಿಷ್ಣುರಹಸ್ಯ

(ಮೂಲಸಹಿತ ಕನ್ನಡ ಅರ್ಥಾನುವಾದ)



ನ ಮಾಧವಸಮೋ ದೇವಃ ನ ಚ ಮಧ್ವಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥

ಟಿಪ್ಪಣಿ - ಅಡಿಟಿಪ್ಪಣಿಗಳ ಸಹಿತ

ಅನುವಾದಕರು :
ಶ್ರೀ ಬಿ. ಭೀಮರಾವ್, ದಾವಣಗೆರೆ

ಪ್ರಕಾಶಕರು :
ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.)
ದಾವಣಗೆರೆ - 577 002

॥ ಶ್ರೀಃ ॥

# ಅನುವಾದಕರ ಪ್ರಸ್ತಾವ

ಆಚಾರ್ಯಃ ಪವನೋಸ್ಮಾಕಂ ಆಚಾರ್ಯಾಣೀ ಚ ಭಾರತೀ।
ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಲದೇವತಾ ॥
ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್॥

ಶ್ರೀವಿಷ್ಣುರಹಸ್ಯ ಪುರಾಣವು ಶ್ರೀ ಬಾದರಾಯಣಕೃತ ಇತರ ಪುರಾಣಗಳಂತೆ ಸೂತಶೌನಕಾದಿ ಸಂವಾದರೂಪದಿಂದಿದೆ. ಶ್ರೀ ಬಾದರಾಯಣ ವಿರಚಿತ ಪುರಾಣಗಳ ಮತ್ತು ಉಪಪುರಾಣಗಳ ನಿರೂಪಣೆಯು, ವಿವಿಧ ಪುರಾಣಗಳಲ್ಲಿ ವಿವಿಧವಾಗಿರುವುದು ಕಂಡು ಬರುತ್ತದೆ. ಈ ಪುರಾಣವೂ ಶ್ರೀ ವೇದವ್ಯಾಸ ವಿರಚಿತವೇ ಎಂಬ ಜ್ಞಾನಿಸಂಪ್ರದಾಯಪ್ರಾಪ್ತ ಅಭಿಪ್ರಾಯವನ್ನು ಶಂಕಿಸಲು ಯಾವ ಕಾರಣವೂ ಇರುವುದಿಲ್ಲ. ಇದನ್ನು ಸಾತ್ವಿಕ ಉಪಪುರಾಣಗಳಲ್ಲಿ ಒಂದೆಂದು ಭಾವಿಸಲೂಬಹುದು. ಶ್ರೀಕೃಷ್ಣನು ರಥಾಗ್ರಭಾಗದಲ್ಲಿ ಕುಳಿತು ಯುದ್ಧಭೂಮಿಯಲ್ಲಿ ಅರ್ಜುನನಿಗೆ ಉಪದೇಶಿಸಿದ ಗೀತೆಯನ್ನು ಶ್ರೀವೇದವ್ಯಾಸರು ಶ್ಲೋಕಗಳ ರೂಪದಿಂದ ರಚಿಸಿ, ಶ್ರೀ ಮಹಾಭಾರತದಲ್ಲಿ ಅಡಕಮಾಡಿರುವಂತೆ, ಹಯಗ್ರೀವ ರೂಪದಿಂದ, ಶ್ರೀವಿಷ್ಣುವು, ಪುರುಷನಾಮಕ ಬ್ರಹ್ಮದೇವನಿಗೆ ಉಪದೇಶಿಸಿದುದನ್ನೇ ಶ್ರೀ ಬಾದರಾಯಣರು ಶ್ಲೋಕರೂಪದಿಂದ ಗ್ರಥನಮಾಡಿದರೆಂದು ಭಾವಿಸುವಲ್ಲಿ ಯಾವ ಅನುಪಪತ್ತಿಯೂ ತೋರುವುದಿಲ್ಲ. ಜೀವೋತ್ತಮನಾದ ಬ್ರಹ್ಮದೇವನಿಗೆ ಸಕಲ ವಿದ್ಯಾ ಪ್ರವರ್ತಕನೂ, ಪ್ರತಿಪಾದ್ಯನೂ ಆದ ಶ್ರೀ ಹಯಗ್ರೀವದೇವನು ಸ್ವಯಂ ಮಾಡಿದ ಉಪದೇಶವು ಮೊದಲಿನ 19 ಅಧ್ಯಾಯಗಳಲ್ಲಿ ಅಡಕವಾಗಿದೆ. ಅವಶಿಷ್ಟ ಗ್ರಂಥಭಾಗವು, ಶ್ರೀವಿಷ್ಣುವು ತನ್ನ ನಾಭಿಕಮಲದಿಂದ ಉತ್ಪಾದಿಸಲ್ಪಟ್ಟ ಚತುರ್ಮುಖಬ್ರಹ್ಮನಿಗೆ ಆದರದಿಂದ ಮಾಡಿದ, ಉಪದೇಶವನ್ನು ವಿಶೇಷವಾಗಿ ಸೂತಶೌನಕಾದಿಗಳ ಸಂವಾದರೂಪದಿಂದ ವಿಸ್ತರಿಸುತ್ತದೆ.

ವಿಷ್ಣುಭಕ್ತರಿಗೆ (ಮುಕ್ತಿಯೋಗ್ಯಸ್ವರೂಪದ ಸಜ್ಜನರಿಗೆ), ಮೋಕ್ಷಸಾಧನೆಗೆ ಅವಶ್ಯಕವಾದ ಆಚಾರ ಅನುಷ್ಠಾನಗಳ ವಿಷಯದಲ್ಲಿ ಪಂಚರಾತ್ರಾಗಮವು ಪರಮ ಪ್ರಮಾಣವಾಗಿದೆ. ಪಂಚರಾತ್ರಾಗಮವು ಕನ್ನಡಕ್ಕೆ ಈವರೆಗೆ ಭಾಷಾಂತರಿಸಲ್ಪಟ್ಟದ್ದಿರುವುದಿಲ್ಲ— ಅಥವಾ ಬೇರಾವ ಭಾಷೆಗಳಲ್ಲಿ ವ್ಯಾಖ್ಯಾತವಾದಂತೆಯೂ ಕಂಡುಬರುವುದಿಲ್ಲ. ಆಗಮದ ಮೂಲಗ್ರಂಥಗಳು ಸಹ ಉಪಲಬ್ಧವಿಲ್ಲ. ರಾಮಾನುಜೀಯರು ಮುದ್ರಿಸಿ ಪ್ರಕಾಶಗೊಳಿಸುವ ರೆಂಬ ವದಂತಿ ಮಾತ್ರ ಕೇಳಿಬರುತ್ತಿದೆ. ಶ್ರೀ ವಿಷ್ಣುರಹಸ್ಯ ಪುರಾಣವು ಪಂಚರಾತ್ರದ ಸಾರವನ್ನೇ

ಸಂಗ್ರಹಿಸಿ ನಿರೂಪಿಸುತ್ತದೆ. 'ಸಮಸ್ತ ಪಂಚರಾತ್ರದ ವಕ್ತಾರನು ನಾನೇ' ಎಂದು ಶ್ರೀ ಹಯಗ್ರೀವನು ಹೇಳಿಕೊಂಡಿರುತ್ತಾನೆ—ಹೀಗೆಂದು ಈ ಪುರಾಣದಲ್ಲಿಯೂ ಉಕ್ತವಾಗಿದೆ. ಅದನ್ನೇ, ಬ್ರಹ್ಮದೇವನಿಗೆ, ಸ್ವಸ್ಯರ್ಥವಾಗಿ ಅತ್ಯವಶ್ಯಕವಾದ ಸರ್ವಜ್ಞತ್ವವನ್ನು ಸಾಧಿಸಿ ಕೊಡಲು, ಶ್ರೀಹಯಗ್ರೀವನೂ, ತದಭಿನ್ನನಾದ ಶ್ರೀವಿಷ್ಣುವೂ ಈ ಪುರಾಣದಲ್ಲಿ ಉಪ ದೇಶಿಸಿರುತ್ತಾನೆ. ಹೀಗೆ ಈ ಪುರಾಣವು ಪಂಚರಾತ್ರಾಗಮದ ಪ್ರಧಾನ ಪ್ರಮೇಯಗಳನ್ನು ಸರಹಸ್ಯವಾಗಿ ವಿಸ್ತರಿಸುವುದರಿಂದ ವಿಷ್ಣುಭಕ್ತರಿಗೆ, ಅತ್ಯುಪಯುಕ್ತವಾದುದೆಂದು ಸಿದ್ಧವಾಗುತ್ತದೆ.

ಶ್ರೀವಿಷ್ಣುಸರ್ವೋತ್ತಮತ್ವಾದಿ ಮಧ್ವಸಿದ್ಧಾಂತ ತತ್ವಗಳ ನಿಶ್ಚಯ ಜ್ಞಾನವಿಲ್ಲದೇ ಮೋಕ್ಷವು ದೊರೆಯದು; ಶ್ರೀಹರಿಯು ಸರ್ವವೇದಪ್ರತಿಪಾದ್ಯನಾದ ಅನಂತಗುಣ ಪರಿಪೂರ್ಣನಾದರೂ, ಆತನ (ಸ್ವಯೋಗ್ಯ) ಗುಣಪೂರ್ವತ್ವ ಜ್ಞಾನನಿಶ್ಚಯವು, ಅಧಿ ಕಾರಿಜೀವನಿಗೆ, ಕೇವಲ ವೇದಗಳಿಂದ ದೊರೆಯುವುದಿಲ್ಲ—ತಂತ್ರಜ್ಞಾನವು ಅತ್ಯವಶ್ಯಕ ವೆಂಬುದನ್ನು ಬ್ರಹ್ಮದೇವನ ಸ್ವಾನುಭವಸಿದ್ಧನುಡಿಗಳಿಂದ, ಇಲ್ಲಿ ನಿದರ್ಶನ ಮಾಡಲಾಗಿದೆ. ವೇದಭಿನ್ನ ಸ್ಮೃತಿಗಳೂ, ಇತಿಹಾಸ, ಪುರಾಣಗಳೂ, ಆಗಮಗಳೂ 'ತಂತ್ರ'ಭಾಗದಲ್ಲಿ ಸೇರುತ್ತವೆ; ತಂತ್ರಗಳಲ್ಲಿ ಪಂಚರಾತ್ರವು (ಆಗಮವು) ಶ್ರೀವಿಷ್ಣು ಪ್ರಸನ್ನತೆಯನ್ನು ದೊರಕಿಸು ವುದರಲ್ಲಿ ಅತ್ಯುತ್ತಮ ಸಾಧನವಾಗಿದೆ—ಅದು ಸ್ವಯಂ ಶ್ರೀವಿಷ್ಣುಮುಖೋದ್ಗತವಾದುದು. ಅದರ ಸಾರವೇ, ವಿವಿಧ ರಹಸ್ಯಗಳ ವಿವರಣಪೂರ್ವಕ ಪ್ರತಿಪಾದಿಸಲ್ಪಟ್ಟಿರುತ್ತದೆ—ಈ ಪುರಾಣದಲ್ಲಿ.

ಇಲ್ಲಿ ಪ್ರತಿಪಾದಿತವಾದ ರಹಸ್ಯಗಳು—ಗೋಪ್ಯವಾಗಿಟ್ಟು ರಕ್ಷಿಸಿಕೊಳ್ಳಲರ್ಹವಾದವು ಗಳು; ಹಾಗೂ ಅನಧಿಕಾರಿಗಳಾದ ಅಭಕ್ತರಿಗೆ ದೊರೆಯದಂತೆ ರಕ್ಷಿಸಬೇಕಾದುದು ಸಹ ಅಷ್ಟೇ ಅವಶ್ಯಕ. ಹೀಗಿದ್ದರೂ ಸಜ್ಜನರಿಗೆ ಇವುಗಳ ಲಾಭವನ್ನು ದೊರಕಿಸುವ ಸದುದ್ದೇಶ್ಯದಿಂದ ಈ ಗ್ರಂಥದ ಕನ್ನಡಾನುವಾದದಲ್ಲಿ, ಉತ್ತಮ ಜ್ಞಾನಿಗಳ ಅಭಿಪ್ರಾಯಾನುಸಾರ ಪ್ರವೃತ್ತನಾಗಿದ್ದೇನೆ. ದುರ್ಜನರ ತೆಗಳುವಿಕೆಯಿಂದ, ಪಾಪ ತಗಲದಂತೆ ನನ್ನನ್ನು ಶ್ರೀಹರಿಯು ರಕ್ಷಿಸುವನೆಂಬ ಆಶ್ವಾಸನವೂ ದೊರೆತಿದೆ. ಆ ಬಗ್ಗೆ ನಾನಾದರೂ ಶ್ರೀಹರಿವಾಯುಗಳನ್ನು ಪ್ರಾರ್ಥಿಸುತ್ತೇನೆ.

ಶ್ರೀಮದಾನಂದತೀರ್ಥಭಗವತ್ಪಾದರ ಸಿದ್ಧಾಂತಗಳಿಗೆ ಅವಿರುದ್ಧವಾದ ಪ್ರಮೇಯ ಗಳನ್ನು ನಿರೂಪಿಸುವ ಮತ್ತು ಯುಕ್ತಿಯುಕ್ತವಾಗಿ, ಅನುಭವಸಿದ್ಧ ದೃಷ್ಟಾಂತಗಳಿಂದ, ಸಾಧಿಸುವ ಶ್ರೇಷ್ಠ ಪ್ರಮೇಯ ಗ್ರಂಥವಿದು; ಸತ್ಯಾನ್ವೇಷಿಗಳಾದ ವಿವೇಕಿಗಳಿಗೆ, ಹೆಜ್ಜೆ ಹೆಜ್ಜೆಗೆ ತಲೆದೋರುವ ವಿವಿಧ ಸಂಶಯಗಳನ್ನೇ ಸರ್ವಜ್ಞನೂ, ಜೀವೋತ್ತಮನೂ ಆದ ಬ್ರಹ್ಮದೇವನು ಮುಂದೆಮಾಡಿ, ಶ್ರೀವಿಷ್ಣುವನ್ನು ಪ್ರಶ್ನಿಸಿ, ಉತ್ತರಗಳನ್ನು ಪಡೆದುದರ ನಿರೂಪಣೆಯನ್ನು ಇಲ್ಲಿ ಕಾಣುತ್ತೇವೆ. ಈ ಪುರಾಣದ ಶ್ರವಣ, ಪಾರಾಯಣ, ಅಧ್ಯಯನ, ಪ್ರವಚನಾದಿಗಳಿಂದ, ಜಿಜ್ಞಾಸುಗಳ ಸರ್ವಪ್ರಕಾರದ ಸಂಶಯಗಳ ಪರಿಹಾರವಾಗಿ, ತತ್ವಜ್ಞಾನನಿಶ್ಚಯವುಂಟಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ವಿಶ್ವಸೃಷ್ಟಿಯ ವೈಚಿತ್ರ್ಯ, ಬಾಹ್ಯಾಂತರ ಸೃಷ್ಟಿಭೇದಗಳು, ಬ್ರಹ್ಮಾಂಡದ ಸೃಷ್ಟಿ ವಿವಿಧ ಸೃಷ್ಟಿಯ ನಾನಾ ಹಂತಗಳಲ್ಲಿ ಸಂಭವಿಸುವ, ಅಚಿಂತ್ಯವೂ, ಅದ್ಭುತವೂ ಆದ ವಿವಿಧ

ಚರಿತ್ರೆಗಳು, ಕರ್ಮಫಲವೈವಿಧ್ಯ ನಿರೂಪಣೆಯಿಂದ ಜಗದ್ವೈಚಿತ್ರ್ಯದ ಸಮರ್ಥಕ ನಿರ್ವಹಣೆ, ಶ್ರೀಹರಿಯ ಸರ್ವದೋಷದೂರತ್ವ ಸ್ಥಾಪನೆ, ಜೀವಕರ್ತೃತ್ವ, ದತ್ತಸ್ವಾತಂತ್ರ್ಯ, ಅನಾದಿಕರ್ಮ, ಲಿಂಗದೇಹಕಾರ್ಯ, ಬಿಂಬಪ್ರತಿಬಿಂಬಭಾವ, ಮುಕ್ತಭೋಗ, ಮೊದಲಾದ ಬಹುತೊಡಕಿನ (ಕ್ಲಿಷ್ಟತಮ) ಪ್ರಕ್ರಿಯೆಗಳನ್ನು ಬಿಡಿಸಿ ವಿವರಿಸಿ, ತತ್ಸಂಬಂಧವಾದ ನಿರ್ಣಯಗಳನ್ನು ಸಾಧಿಸಿ, ಬುದ್ಧಿಸ್ಥವಾಗುವಂತೆ ಮಾಡುವುದು, ಈ ಪುರಾಣದ ವೈಶಿಷ್ಟ್ಯ. ಈ ದೃಷ್ಟಿಯಿಂದ, ಈ ಗ್ರಂಥವು ಶಾಸ್ತ್ರ ಪ್ರಪಂಚದಲ್ಲಿ ಅನ್ಯಾದೃಶವಾದುದು. ಈ ಪುರಾಣವು ಶ್ರೀಮದಾಚಾರ್ಯರ ಕಾಲದಲ್ಲಿ (12-13ನೇ ಕ್ರಿಸ್ತ ಶತಮಾನದಲ್ಲಿ), ಜನಸಾಮಾನ್ಯರಲ್ಲಿ ಸಹ ವಿಶೇಷ ಪ್ರಸಿದ್ಧವಾಗಿ ಬಳಕೆಯಲ್ಲಿದ್ದ ಪುರಾಣವೆಂದು ತಿಳಿಯಬಹುದಾಗಿದೆ. ಈ ಕಾರಣದಿಂದಲೇ, ವೇದಾಂತ (ಮಾಯಾವಾದ) ಮತ್ತು ಇತಿಹಾಸ ಪುರಾಣಗಳಲ್ಲಿ ಸ್ಪಷ್ಟವಾಗಿ ತೋರುತ್ತಿದ್ದ ವಿರೋಧದಿಂದಲೇ ಮಾಯಾವಾದ ತತ್ವಗಳಿಂದ ಅಸಂತುಷ್ಟರಾಗಿ, ನಿತ್ಯಸುಖರೂಪದ ಮೋಕ್ಷಕ್ಕೆ ಮಾರ್ಗವನ್ನು ಕಾಣದೇ, ಸಜ್ಜನರು ಪರಿತಪಿಸುತ್ತಿದ್ದರೆಂದೂ ತಿಳಿಯುತ್ತದೆ. ಶ್ರೀಮದಾಚಾರ್ಯರು ತಮ್ಮಿಂದ ರಚಿತವಾದ ಗ್ರಂಥಗಳಲ್ಲಿ ಅಲ್ಲಲ್ಲಿ, ಈ ಪುರಾಣದಿಂದ (ರಕ್ಷತೀತ್ಯೇವವಿಶ್ವಾಸಃ ತದೀಯೋಽಹಮಿತಿಸ್ಮೃತಿಃ (ಗೀತಾತಾತ್ಪರ್ಯ) ಇತ್ಯಾದಿ) ಬಹು ವಾಕ್ಯಗಳನ್ನು ಉದಹರಿಸಿರುವರು. ಅಪರೋಕ್ಷಜ್ಞಾನಿಗಳಾದ ಪ್ರಸಿದ್ಧ ಹರಿದಾಸರುಗಳು ಸಹ ಈ ಪುರಾಣವನ್ನು, ತಮ್ಮ ಕೃತಿಗಳಲ್ಲಿ, ಅವಲಂಬಿಸಿರುವುದು ಕಂಡುಬರುತ್ತದೆ. ಶ್ರೀ ವಿಜಯದಾಸಾರ್ಯರ ಒಂದು ಸೃಷ್ಟಿ ನಿರೂಪಣ ಸುಳಾದಿಯು ಈ ಪುರಾಣದ 20ನೇ ಅಧ್ಯಾಯದ ಅನುವಾದದಂತಿದೆ. ಶ್ರೀ ಜಗನ್ನಾಥದಾಸರವರ ಹರಿಕಥಾಮೃತಸಾರದ, ದತ್ತ ಸ್ವಾತಂತ್ರ್ಯ, ಸ್ವಗತ ಸ್ವಾತಂತ್ರ್ಯ ಮತ್ತು ಸರ್ವಸ್ವಾತಂತ್ರ್ಯ ಸಂಧಿಗಳು, ಈ ಪುರಾಣದ ಇಂದ್ರದ್ಯುಮ್ನ ಭೃಗು ಸಂವಾದವನ್ನೇ (20-31ನೇ ಅಧ್ಯಾಯಗಳ ನಿರೂಪಣೆಯನ್ನು) ಆಧರಿಸಿವೆ—ಹಾಗೆಂದು ಸಂಧಿಸೂಚನೆಯಲ್ಲಿ ಸಹ ದಾಸಾರ್ಯರು ಹೇಳಿದ್ದಾರೆ. ಶ್ರೀ ವಿಜಯದಾಸರು, ಶ್ರೀ ಜಗನ್ನಾಥದಾಸರು, ಅಪರೋಕ್ಷಜ್ಞಾನಿಗಳೆಂದು ಸರ್ವಮಾನ್ಯರಾಗಿದ್ದಾರೆ. ಅವರ ಮಾತುಗಳು (ಕೃತಿಗಳು) ಪಂಡಿತವರ್ಗದಿಂದ ಸಹ ಪ್ರಮಾಣತ್ವೇನ ಮಾನ್ಯವಾಗಿವೆ.

ಹೀಗೆ ಪರಮಪ್ರಮಾಣಭೂತವೂ ಅತ್ಯಾದರಣೀಯವೂ ಆದ ಶ್ರೇಷ್ಠಗ್ರಂಥದ ಸಂಸ್ಕೃತ ಮೂಲಗ್ರಂಥವೂ ಈಗ ಉಪಲಬ್ಧವಿಲ್ಲ. ಅರ್ಥಬೋಧಕ ವ್ಯಾಖ್ಯಾನವಂತೂ ಯಾವುದೂ ಇಲ್ಲ. ಈ ಕೊರತೆಯನ್ನು ನೀಗಿ, ಸಜ್ಜನರಿಗೆ ಪರಮೋಪಕಾರಕವಾದ ಈ ಗ್ರಂಥವನ್ನು ಪ್ರತಿಪದಾರ್ಥ, ತಾತ್ಪರ್ಯ, ವಿಶೇಷ ವಿವರಣೆಗಳೊಂದಿಗೆ, ಸರಳ ಕನ್ನಡದಲ್ಲಿ ಮುದ್ರಿಸಿ ಪ್ರಕಾಶಗೊಳಿಸುವ, ಈ ಹರಿಸೇವೆಯನ್ನು ದಾವಣಗೆರೆಯ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘವು ಕೈಗೊಂಡಿದೆ. ಮೂಲಗ್ರಂಥವನ್ನು ವ್ಯಾಖ್ಯಾನ ಮಾಡಿ, ಸಂಘದ ಸಂಕಲ್ಪದಂತೆ, ಕನ್ನಡಾನುವಾದವನ್ನು ಸಿದ್ಧಗೊಳಿಸುವ ಕಾರ್ಯದಲ್ಲಿ ಸಮರ್ಥರಾದ ಪಂಡಿತವರೇಣ್ಯರಿದ್ದರೂ, ಅಲ್ಪಜ್ಞನಾದ ನನ್ನನ್ನು ಯೋಜಿಸಿ, ಈ ಮಹಾಸೇವೆಯ ಸದವಕಾಶವನ್ನು ನನಗೆ ಒದಗಿಸಿರುವ ಶ್ರೀ ಸಂಘದ ಅಧಿಕಾರಿವರ್ಗದವರಿಗೆ ಚಿರಋಣಿಯಾಗಿದ್ದೇನೆ. ಪ್ರತಿಯೊಂದೂ 200-250 ಮುದ್ರಿತ ಪುಟಗಳುಳ್ಳ 8 ಸಂಪುಟಗಳಲ್ಲಿ ಈ ಮಹಾಕಾರ್ಯವನ್ನು ಪೂರ್ತಿಗೊಳಿಸಲು

ಸಾಧ್ಯವಾಗಬಹುದೆಂದು ಅಂದಾಜು ಮಾಡಲಾಗಿದೆ. ಶ್ರೀಹರಿವಾಯುಗಳ ಅನುಗ್ರಹ, ವಿಷ್ಣುಭಕ್ತರ ಸದಾಶಯ, ಆಶೀರ್ವಾದಗಳ ಬಲದಿಂದ ಮಾತ್ರ ನನ್ನಿಂದ ಈ ಸೇವೆಯು ಪೂರ್ಣಗೊಳ್ಳಬೇಕಾಗಿದೆ. ಉಡುಪಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು, ಕೃಪೆಮಾಡಿ, ಸಂಘದ ಪ್ರಾರ್ಥನೆಯಂತೆ ಈ ಗ್ರಂಥಕ್ಕೆ, ಗ್ರಂಥದ ಮಹಾತ್ಮೆಯನ್ನೂ ಪ್ರಾಮಾಣ್ಯವನ್ನೂ ಪ್ರತಿಪಾದಿಸುವ, ಅತ್ಯುಪಯುಕ್ತವಾದ ಮುನ್ನುಡಿಯನ್ನು ಬರೆದು ಅನುಗ್ರಹಿಸಿದ್ದಾರೆ. ಶ್ರೀ ಶ್ರೀಗಳವರ ಆಶೀರ್ವಾದ ಬಲದಿಂದಲೇ ಆರಂಭಿಸಿದ ಈ ಗ್ರಂಥಮಾಲಿಕೆಯು ಪೂರ್ಣವಾಗಲಿದೆ, ಎಂಬ ಭರವಸೆಯೂ ನನಗಿದೆ.

ಮೂಲಶ್ಲೋಕಗಳನ್ನು ಸಂಸ್ಕೃತ ಗ್ರಂಥದಿಂದ ಮುದ್ರಣದೋಷಗಳನ್ನು ನನಗೆ ತಿಳಿದಮಟ್ಟಿಗೆ ತಿದ್ದಿಕೊಂಡು ಕನ್ನಡಲಿಪಿಯಲ್ಲಿ ಬರೆದಿದ್ದೇನೆ. ಪ್ರತಿಶ್ಲೋಕಕ್ಕೆ ಅನ್ವಯಾನುಸಾರ ಪದಶಃ ಅರ್ಥಗಳನ್ನು ಬರೆದಿದ್ದೇನೆ. ಪ್ರತಿಶ್ಲೋಕಗಳ ತಾತ್ಪರ್ಯವನ್ನು ಮಾತ್ರ ಓದಿ ಮುಂದೆ ಸಾಗಲಿಚ್ಛಿಸುವ ಓದುಗರಿಗೆ ಅನುಕೂಲಿಸುವಂತೆ, ತಾತ್ಪರ್ಯವನ್ನು ಬೇರ್ಪಡಿಸಿ ಮುದ್ರಿಸಲಾಗಿದೆ. ವಿಶೇಷ ವಿವರಣೆಗಳು ಅವಶ್ಯಕವೆನಿಸುವಲ್ಲಿ ಅಡಿಟಿಪ್ಪಣಿಗಳನ್ನೂ ರಚಿಸಿದ್ದೇನೆ. ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಲು ಸರ್ವಪ್ರಯತ್ನ ಮಾಡಿದ್ದೇನೆ. ಪ್ರತಿ ಅಧ್ಯಾಯದಲ್ಲಿ ಪ್ರಸಕ್ತವಾಗುವ ಪ್ರಧಾನ ಪ್ರಮೇಯಗಳನ್ನು ಸೂಚಿಸಿ, ಓದುಗರಿಗೆ ಗ್ರಂಥಾವಲೋಕನದ ಕುತೂಹಲವನ್ನು ಹೆಚ್ಚಿಸುವಂತೆ ಸ್ವಲ್ಪ ವಿಸ್ತಾರವಾಗಿಯೇ, ವಿಷಯಸೂಚಿಯನ್ನು ರಚಿಸಿ, ಜೋಡಿಸಿದ್ದೇನೆ. ಗ್ರಾಹಕರು ಹಂಸಕ್ಷೀರ ನ್ಯಾಯದಿಂದ ಗುಣವನ್ನು ಮಾತ್ರ ಗ್ರಹಿಸಿ ಸಂತೋಷಿಸಬೇಕೆಂದು, ಪ್ರಾರ್ಥಿಸುತ್ತೇನೆ. ಈ ನನ್ನ ಅಲ್ಪ ಸೇವೆಯನ್ನು ಭಕ್ತಪ್ರಿಯನಾದ ಶ್ರೀಕೃಷ್ಣಪ್ರಭು ಸ್ವೀಕರಿಸಿ ಪ್ರೀತನಾಗಲೆಂದು ದೀನನಾಗಿ ಆತನಲ್ಲಿ ಯಾಚಿಸುತ್ತೇನೆ.

ವಿಷಯಸೂಚಿಯನ್ನು ರಚಿಸುವುದರಲ್ಲಿ ಹಾಗೂ ಒಪ್ಪೋಲೆಯನ್ನು ಸಿದ್ಧಗೊಳಿಸುವುದರಲ್ಲಿ ನನಗೆ ಸಹಾಯಕರಾಗಿ ನಿಂತು ದುಡಿಯುತ್ತಿರುವ ನನ್ನ ಮಾನ್ಯ ಮಿತ್ರರಾದ ಶ್ರೀ ಎಚ್. ವೆಂಕೋಬಾಚಾರ್ಯ, ಬಿ.ಎ., ಎಲ್‌ಎಲ್.ಬಿ. ಇವರನ್ನು ಅಭಿನಂದಿಸಿ ವಂದಿಸುತ್ತೇನೆ. ಸ್ವಂತ ಕಾರ್ಯವೆಂಬಷ್ಟು ಆದರ ವಿಶ್ವಾಸಗಳಿಂದ, ಬಹು ಎಚ್ಚರಿಕೆ ವಹಿಸಿ, ಹಸ್ತಪ್ರತಿಯನ್ನು ಪರಿಶೀಲಿಸಿ, ಕೆಲಸಗಾರರಿಗೆ ಯೋಗ್ಯ ಸೂಚನೆಗಳನ್ನಿತ್ತು ಪ್ರಥಮ ಮುದ್ರಿತ ಪ್ರತಿಗಳನ್ನು ತಿದ್ದಿ ಸರಿಪಡಿಸಿ, ತಪ್ಪುಗಳಿಗೆ ಅವಕಾಶವಿಲ್ಲದಂತೆ, ಮುದ್ರಣ ಕಾರ್ಯಗಳನ್ನು ನಿರ್ವಹಿಸಿ ಸಕಾಲದಲ್ಲಿ ಗ್ರಂಥಮಾಲಿಕೆಯ ಸಂಪುಟಗಳನ್ನು ಸಿದ್ಧಗೊಳಿಸಿಕೊಡುವ ಜವಾಬ್ದಾರಿಯನ್ನು ಸಂತೋಷದಿಂದ ವಹಿಸಿಕೊಂಡು, ಶುದ್ಧವೂ, ಸುಂದರವೂ ಆದ ರೀತಿಯಲ್ಲಿ ಸಾಧಿಸುತ್ತಿರುವ, ಸಂಘದ ಅಧಿಕಾರಿವರ್ಗದವರೊಂದಿಗೆ ಬಹುಪರಿಯಿಂದ ಸಹಕರಿಸುತ್ತಿರುವ ಪ್ರಭಾ ಮುದ್ರಣಾಲಯದ ಮಾಲೀಕ ಶ್ರೀ ಡಿ. ಎಸ್. ಕೃಷ್ಣಾಚಾರ್ಯ, ಎಂ.ಎಸ್‌ಸಿ. ಇವರಿಗೆ, ಬಹುಭಾಗದ ಶ್ರಮವನ್ನು ತಾವೇ ವಹಿಸಿಕೊಂಡು ನನಗೆ ಸಹಾಯ ಮಾಡುತ್ತಿರುವುದನ್ನು ಕೃತಜ್ಞತೆಯಿಂದ ಸ್ಮರಿಸಿ, ಅನಂತ ವಂದನೆಗಳನ್ನು ಅರ್ಪಿಸುತ್ತೇನೆ. ಜ್ಞಾನಪ್ರಚಾರರೂಪದ ಈ ಮಹಾಸೇವೆಯಲ್ಲಿ ನನಗೂ ಭಾಗವನ್ನಿತ್ತು ತಮ್ಮೊಂದಿಗೆ ಪುಣ್ಯಭಾಗಿಯನ್ನಾಗಿಸುತ್ತಿರುವ

ಶ್ರೀ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳನ್ನು ಕೃತಜ್ಞನಾಗಿ ವಂದಿಸುತ್ತೇನೆ. ಎಲ್ಲಕ್ಕಿಂತ ಅಧಿಕವಾಗಿ, ಈ ಪುರಾಣವನ್ನು ಕನ್ನಡದಲ್ಲಿ ಅನುವಾದಿಸುವ ಈ ನನ್ನ ಇಚ್ಛೆಗೆ ತಮ್ಮ ಅನುಮತಿ ಪ್ರದಾನದಿಂದ ಬೆಂಬಲವನ್ನಿತ್ತು, ಸಂತೋಷದಿಂದ ಮುನ್ನುಡಿಯನ್ನು ರಚಿಸಿಕೊಟ್ಟು ಆಶೀರ್ವದಿಸಿರುವ ಶ್ರೀ ೧೦೮ ಶ್ರೀ ವಿಶ್ವೇಶತೀರ್ಥರನ್ನು ಕೃತಜ್ಞನಾಗಿ ಕೈಜೋಡಿಸಿ ವಂದಿಸಿ, ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಈ ಗ್ರಂಥ ಮಾಲಿಕೆಯ ಗ್ರಾಹಕರೆಲ್ಲರೂ ಓದಿ ಸಂತೋಷಿಸಿ, ಯಥಾಯೋಗ್ಯವಾದ ಭಕ್ತಿಜ್ಞಾನಾಭಿವೃದ್ಧಿಯನ್ನು ಹೊಂದಿದರೆ ನಾನು ಧನ್ಯ. ಹಾಗಾಗಲೆಂದು ಶ್ರೀಹರಿವಾಯುಗಳಲ್ಲಿ ಪ್ರಾರ್ಥಿಸುತ್ತೇನೆ. ನನ್ನಿಂದ, ತತ್ತ್ವಾಭಿಮಾನಿಗಳ ದ್ವಾರಾ, ಶ್ರೀಹರಿಯೇ ನನ್ನಲ್ಲಿ ನಿಂತು ಮಾಡಿಸಿರುವ, ಈ ಸೇವೆಯನ್ನು ನನ್ನ ಆತ್ಮೋದ್ಧಾರಕ ಗುರುಗಳಾದ ಶ್ರೀ ಶ್ರೀ ಪುತ್ತಿಗಾ ಮಠಾಧೀಶ ಶತಾಯುಷಿ ಶ್ರೀ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರ ದ್ವಾರಾ, ಶ್ರೀಕೃಷ್ಣನಲ್ಲಿ ಅರ್ಪಿಸಿದ್ದೇನೆ—ಸುಪ್ರೀತನಾಗಿ ಈ ಮುಂದಿನ ವರವನ್ನು ನನಗೆ ಅನುಗ್ರಹಿಸಲಿ—

'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ ।'

॥ ಶ್ರೀ ಕೃಷ್ಣಾರ್ಪಣಮಸ್ತು ॥

ಹರಿಭಕ್ತ ಸೇವಕ
ಬಿ. ಭೀಮರಾವ್
ದಾವಣಗೆರೆ

# ಮುನ್ನುಡಿ

ವಿಷ್ಣುವಿನ ಮಹಿಮೆಯನ್ನು ಸ್ಪಷ್ಟ ಭಾಷೆಯಲ್ಲಿ ಪ್ರತಿಪಾದಿಸಿ ಅವರವರ ಅಧಿಕಾರಕ್ಕನುಗುಣವಾಗಿ ಪ್ರತಿಯೊಬ್ಬರು ಮಾಡಬೇಕಾದ ಕರ್ತವ್ಯಗಳ ವಿಶದ ವಿವರಣೆಯನ್ನು ನೀಡುವ ವಿಷ್ಣುರಹಸ್ಯ ಗ್ರಂಥವನ್ನು ವೈಷ್ಣವರ ಕೈಪಿಡಿಯೆಂದೇ ಹೇಳಬಹುದು. ಶ್ರೀಮದಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತದ ಪ್ರಮೇಯಗಳಿಗೆಲ್ಲಾ ಸ್ಪಷ್ಟ ಸಮರ್ಥನೆಯನ್ನು ಈ ಗ್ರಂಥದಲ್ಲಿ ನಾವು ಕಾಣಬಹುದು. ಇದನ್ನು ಸರಿಯಾಗಿ ಅಭ್ಯಾಸ ಮಾಡುವುದರಿಂದ ನಮ್ಮ ಮುಂದಿರುವ ಅನೇಕ ಪ್ರಶ್ನೆ, ಸಮಸ್ಯೆಗಳಿಗೆ ಸೂಕ್ತ ಪರಿಹಾರವು ಒದಗಿ ವಿವಿಧ ಅಕೃತ್ಯಗಳು ನಮ್ಮಿಂದ ಘಟಿಸಿದ್ದರೂ ನಿರಾಶರಾಗದೆ ಹೇಗೆ ಆತ್ಮೋನ್ನತಿಯನ್ನು ಸಾಧಿಸಿ ಭಗವದನುಗ್ರಹವನ್ನು ಹೊಂದಬಹುದೆನ್ನುವ ಬಗ್ಗೆ ಸಮರ್ಥ ಮಾರ್ಗದರ್ಶನವನ್ನು ಈ ಗ್ರಂಥದಿಂದ ನಾವು ಪಡೆಯಬಹುದು. ಹೀಗೆ ಸಜ್ಜನರಿಗೆ ಅತ್ಯಂತ ಉಪಕಾರಕವಾದ ಉತ್ತಮ ವೈಷ್ಣವ ಗ್ರಂಥವಿದಾಗಿದೆ.

ಮಾನವ ದೇಹವು ಭಗವಂತನ ಸರ್ವಾಂಗಪೂರ್ಣವಾದ ಒಂದು ಅಪೂರ್ವ ಕೊಡುಗೆಯಾಗಿದೆ. ಸೃಷ್ಟಿಯ ಆದಿಯಲ್ಲಿ ಪರಮಾತ್ಮನಿಂದ ಉದ್ಬೋಧಿತರಾದ ತತ್ತ್ವಾಭಿಮಾನಿ ದೇವತೆಗಳು ತಮಗೆ ವಾಸಯೋಗ್ಯವೂ ಉತ್ತಮ ಕಾರ್ಯಕ್ಷೇತ್ರವೂ ಆದ ಸ್ಥಾನವನ್ನು ಶ್ರೀಹರಿಯಲ್ಲಿ ಪ್ರಾರ್ಥಿಸಿದರು. ಭಗವಂತನು ಮೃಗ, ಪಕ್ಷಿ ಮರ, ಗಿಡಗಳ ನಾನಾ ಶರೀರಗಳನ್ನು ದೇವತೆಗಳಿಗೆ ತೋರಿಸಿದನು.

ತೃಣಗುಲ್ಮಲತಾವೃಕ್ಷಾನ್ ಗ್ರಾಮ್ಯಾರಣ್ಯಪಶೂನಪಿ ।
ಕ್ರಮೇಣಾದರ್ಶಯಂಸ್ತಾಂಸ್ತೇ ಸ್ಥಿತಾ ತೃಪ್ತಿಂ ನ ಭೇಜಿರೇ ॥

ಈ ನಾನಾ ಪ್ರಾಣಿಗಳ ಶರೀರವನ್ನು ಪಡೆದರೂ ದೇವತೆಗಳಿಗೆ ಸಮಾಧಾನವಾಗಲಿಲ್ಲ. ಅಲ್ಪ ಅಪೂರ್ಣ ಐಂದ್ರಿಯಿಕ ಸುಖಸೇವನೆಗೆ ಮಾತ್ರ ಮೀಸಲಾದ ಈ ತಿರ್ಯಕ್ ಪ್ರಾಣಿಗಳ ಶರೀರಗಳಲ್ಲಿ ಜೀವರ ಆಧ್ಯಾತ್ಮಿಕ ಸಾಧನೆಗಳಿಗೆ ಯಾವ ಸೌಕರ್ಯವಿಲ್ಲದನ್ನು ಮನಗಂಡ ದೇವತೆಗಳು ಭಗವಂತನು ತೋರಿಸಿದ ಯಾವ ಶರೀರಗಳಿಂದಲೂ ತೃಪ್ತರಾಗಲಿಲ್ಲ. ಕೊನೆಗೆ ಮಾನವ ದೇಹವನ್ನು ಕಂಡಾಗಲೇ ದೇವತೆಗಳಿಗೆ ಸಮಾಧಾನವಾಯಿತು. ಸರ್ವಾಂಗ ಸುಂದರವಾದ ಈ ಸಾಧನ ಶರೀರದಿಂದ ಜೀವರ ಆತ್ಮೋನ್ನತಿಯ ಕಾರ್ಯವನ್ನು ಸಾಧಿಸಬಹುದೆಂದು ದೇವತೆಗಳು ಭಾವಿಸಿದರು. ದೇವತೆಗಳ ಈ ಆಶೋತ್ತರಗಳಿಗೆ ಅನುಗುಣವಾಗಿ ಮಾನವರು ಕಾರ್ಯವನ್ನು ನಡೆಸುತ್ತಿದ್ದಾರೆಯೇ ಎಂಬುದನ್ನು ನಾವಿಂದು ಆಲೋಚಿಸಬೇಕಾಗಿದೆ. ದೇವತೆಗಳ ವಾಸಯೋಗ್ಯವೆನಿಸಿ ಅವರು ತಮ್ಮ ವಿಹಾರಕ್ಕಾಗಿ ಆರಿಸಿದ ಈ ಪವಿತ್ರ ಸಾಧನ ಕೇಂದ್ರವನ್ನು ನಮ್ಮ ಪಾಪಕೃತ್ಯಗಳಿಂದ ಹೊಲಸು ತುಂಬಿ ನಾರುವ ಕೊಳಚೆ ಭೂಮಿಯನ್ನಾಗಿಸಿ ದೇವತೆಗಳಿಗೆ ಅದೆಂತಹ ಆಘಾತ ಅಸಮಾಧಾನವನ್ನು ನಾವು ಮಾಡಿಲ್ಲ?

ದೇವತೆಗಳ ಬದಲು ಅಸುರರ ಅರ್ಭಟ ಕಾರುಬಾರುಗಳೇ ಇಲ್ಲಿ ನಡೆದಿವೆ. ವಿಷ್ಣುರಹಸ್ಯದಲ್ಲಿ ವರ್ಣಿಸಿದ ಮಾನವ ಶರೀರ ನಿರ್ಮಾಣದ ಈ ಹಿನ್ನೆಲೆಯನ್ನೂ ಓದಿದಾಗ ನಮ್ಮ ಕರ್ತವ್ಯ ಮತ್ತು ಹೊಣೆಗಾರಿಕೆಯ ಅರಿವು ನಮಗೆ ಉಂಟಾಗದಿರದು.

ಈ ಸೃಷ್ಟಿ ಮಾನವ ಶರೀರ ಇವೆಲ್ಲಾ ಭಗವಂತನ ಕಾರುಣ್ಯದ ಉಜ್ವಲ ನಿದರ್ಶನವಾಗಿದೆ. ಈ ಸೃಷ್ಟಿಯಿಂದ ಭಗವಂತನಿಗೆ ಯಾವ ಪ್ರಯೋಜನ ಲಾಭವು ಇಲ್ಲ. ನಿತ್ಯತೃಪ್ತನೂ ಪರಿಪೂರ್ಣನೂ ಆದ ಪರಮಾತ್ಮನು ತನ್ನ ಯಾವ ಸ್ವಾರ್ಥಸಾಧನೆಗಾಗಿ ಸೃಷ್ಟಿಕಾರ್ಯಕ್ಕೆ ಪ್ರವರ್ತಿಸಲಿ? ಪ್ರಯೋಜನವಿಲ್ಲದಿದ್ದರೂ ವಿಧಿ ಸಂಬಂಧಗಳಿಗೆ ಒಳಗಾಗಿ ನಾವಾದರೂ ಕಾರ್ಯಪ್ರವೃತ್ತರಾಗಬಹುದು. ಆದರೆ ಯಾವುದೇ ವಿಧಿ ನಿಯಮ ಬಂಧನಗಳಿಗೆ ಒಳಗಾಗದ ಭಗವಂತನು ನಿರ್ವ್ಯಾಪಾರನಾಗಿ ಜಗದ್ವ್ಯವಹಾರವನ್ನು ಸ್ಥಗಿತಗೊಳಿಸಿ ಸುಮ್ಮನಿದ್ದರೆ ಯಾರೂ ಅವನನ್ನು ಆಕ್ಷೇಪಿಸಲಾರರು. ಇದರಿಂದ ಅವನಿಗೆ ಯಾವ ಪ್ರಯೋಜನ ಹಾನಿಯೂ ಒದಗದು. ಆದರೆ ಭಗವಂತನು ಒಂದು ಕ್ಷಣವೂ ನಿಷ್ಕ್ರಿಯನಾಗಿಲ್ಲ. ಯಾವ ಸ್ವಾರ್ಥವೂ ಇಲ್ಲದೆ ಪ್ರತಿಕ್ಷಣವೂ ಅಖಂಡ ಕಾರ್ಯತತ್ಪರನಾಗಿರುವನು. ಇದಕ್ಕೆಲ್ಲಾ ಅವನ ಸಹಜವಾದ ದಯಾಭಾವವೇ ಕಾರಣವಾಗಿದೆ.

ಇತಿ ತೇಷಾಂ ತು ಕಾರುಣ್ಯಾತ್ ದಯಾಲುರ್ಭಗವಾನಿದಂ।
ಸೃಷ್ಟ್ಯಾದಿ ಕುರುತೇ ಸರ್ವಂ॥

ಅನಾದಿ ಕರ್ಮಗಳಿಂದ ಬದ್ಧರಾಗಿ ಜೀವರು ತಮ್ಮದೇ ಆದ ಆನಂದಮಯ ವ್ಯಕ್ತಿತ್ವವನ್ನು ಅನುಭವಿಸದಂತಹ ದುರ್ದಶೆಗೆ ಒಳಗಾಗಿದ್ದಾರೆ. ಜ್ಞಾನಾನಂದಮಯವಾದ ರೂಪವು ಇದ್ದೂ ಅವರ ಪಾಲಿಗೆ ಇಲ್ಲದಂತಾಗಿದೆ. ಈ ಸ್ಥೂಲಶರೀರವನ್ನು ಹೊಂದಿ ನಾನಾ ವಿಧ ಸಾಧನ ಕಲಾಪವನ್ನು ನಡಸಿದರೆ ಮಾತ್ರ ತಮ್ಮ ಸ್ವಚ್ಛ ಸುಂದರ ರೂಪವನ್ನು ಅವರು ಅಭಿವ್ಯಕ್ತಗೊಳಿಸಬಲ್ಲರು. ಸಜ್ಜನ ಜೀವವರ್ಗದ ಈ ದುರ್ದಶೆಯನ್ನು ಕಂಡು ಮರುಗಿಯೇ ಭಗವಂತನು ಈ ಜಗತ್ತನ್ನು ಸೃಜಿಸಿ ಸಾಧನ ಶರೀರವನ್ನು ಅವರಿಗೆ ಒದಗಿಸಿದ್ದಾನೆ. ಯಾವ ವಿಧಿ ನಿಬಂಧವೂ ಪ್ರಯೋಜನ ಅಪೇಕ್ಷೆಯೂ ಇಲ್ಲದ ಭಗವಂತನು ನಿಷ್ಕ್ರಿಯನಾಗಿ ಕುಳಿತಿದ್ದರೆ ಜೀವರು ಅನಂತಕಾಲದವರೆಗೆ ಈ ಕತ್ತಲೆಯಲ್ಲಿ ಕೊಳೆಯಬೇಕಾಗುವುದು. ಜ್ಞಾನಾನಂದ ರೂಪಿಗಳಾದ ಈ ಸಚ್ಚೇತನರು ಸದಾಕಾಲ ಈ ದುಸ್ಥಿತಿಯಲ್ಲಿ ಇರುವುದನ್ನು ಕರುಣಾಮೂರ್ತಿಯಾದ ಭಗವಂತನು ಹೇಗೆ ಸಹಿಸಬಲ್ಲನು? ಅದಕ್ಕಾಗಿ ಈ ವಿಶಾಲ ಪ್ರಪಂಚ ಹಾಗೂ ವಿವಿಧ ಸಾಧನ ಶರೀರಗಳನ್ನು ಒದಗಿಸಿ ಸತ್ವರಜಸ್ತಮೋಗುಣಗಳ ನಿರಂತರ ಘರ್ಷಣವಿರುವ ಈ ಜಗತ್ತಿನಲ್ಲಿ ಹೋರಾಡಿ ತನ್ನ ಶುಭ್ರ ವ್ಯಕ್ತಿತ್ವವನ್ನು ಸಜ್ಜನರು ಪಡೆಯುವಂತೆ ಅನುಕೂಲವನ್ನು ಶ್ರೀಹರಿಯು ಕಲ್ಪಿಸಿದ್ದಾನೆ.

ಪರಮಾತ್ಮನು ಪರಮದಯಾಲುವಾದಲ್ಲಿ ಅವನು ಎಲ್ಲರಿಗೂ ಒಂದೇ ರೀತಿಯಲ್ಲಿ ಶುಭಫಲವನ್ನು ಯಾಕೆ ಕೊಡುವುದಿಲ್ಲ? ಕೆಲವರಿಗೆ ಸ್ವರ್ಗ ಮುಕ್ತಿಗಳನ್ನು ಕರುಣಿಸಿ ಮತ್ತೆ ಕೆಲವರನ್ನು ನರಕ ಅಂಧಂತಮಸ್ಸುಗಳಿಗೆ ಯಾಕೆ ತಳ್ಳುವನು? ಪರಮಾತ್ಮನಲ್ಲಿ ಈ ವೈಷಮ್ಯ

ನಿರ್ದಯತೆಗಳು ಏಕೆ? ಎಂಬ ಪ್ರಶ್ನೆಯು ನಮ್ಮಲ್ಲಿ ಮೂಡಬಹುದು. ವಿಷ್ಣುರಹಸ್ಯದಲ್ಲಿ ಈ ಅಂಶವನ್ನು ವಿಮರ್ಶಿಸಲಾಗಿದೆ. ಪ್ರಜೆಗಳಲ್ಲಿ ಅನುರಾಗ ಅಭಿಮಾನಗಳಿಂದ ವರ್ತಿಸಬೇಕಾದ ಸರಕಾರವು ಅನೇಕ ಸಂದರ್ಭಗಳಲ್ಲಿ ಕೆಲವು ಪ್ರಜೆಗಳಿಗೆ ಕಠಿಣ ಶಿಕ್ಷೆಯನ್ನು ವಿಧಿಸಿ ಅವರನ್ನು ನಿಗ್ರಹಿಸುವುದೇಕೆ? ಸರಕಾರವು ತಾನೇ ಏರ್ಪಡಿಸಿದ ನಿಯಮಗಳ ಕಕ್ಷೆಯೊಳಗೆ ಕೆಲಸ ಮಾಡಬೇಕಾಗುತ್ತದೆ. ನಿಯಮಗಳನ್ನು ಅತಿಕ್ರಮಿಸಿ ವರ್ತಿಸುವವರ ಮೇಲೆ ಕ್ರಮವನ್ನು ಕೈಗೊಳ್ಳಬೇಕಾಗುವುದು. ಭಗವಂತನು ಜೀವವರ್ಗದ ಆಡಳಿತವನ್ನು ಇದೇ ರೀತಿ ನಡೆಸುವನು. ಅವನು ಕಾರುಣ್ಯಮೂರ್ತಿಯಾದರೂ ಜಗತ್ತಿನ ಒಳಿತಿಗಾಗಿ ತನ್ನ ಅನಾದಿ ಸತ್ಯಸಂಕಲ್ಪದಂತೆ ಏರ್ಪಡಿಸಲಾದ ಶಾಸನಗಳನ್ನು ಅಲಕ್ಷಿಸುವ ಅತಿಕ್ರಮಕಾರಿಗಳನ್ನು ಶಿಕ್ಷಿಸುತ್ತಾನೆ. ಅವನಲ್ಲಿ ಯಾವ ರಾಗ-ದ್ವೇಷಗಳೂ ಇಲ್ಲ. ಅಪೌರುಷೇಯವಾದ ವೇದವೇ ಶ್ರೀಹರಿಯು ಮಾನವ ಸಮಾಜಕ್ಕಾಗಿ ಏರ್ಪಡಿಸಿದ ಸಂವಿಧಾನ (constitution). ಅದೇ ಭಗವಂತನ ಆದೇಶ. ತಮ್ಮ ಸ್ವಭಾವ ಸಂಸ್ಕಾರಗಳ ಒತ್ತಡದಿಂದ ಭಗವಂತನ ಆದೇಶವನ್ನು ಉಲ್ಲಂಘಿಸಿ ಸ್ವಚ್ಛಂದ ಪಾಪಜೀವನವನ್ನು ನಡೆಸುವ ವ್ಯಕ್ತಿಗಳನ್ನು ಶಿಕ್ಷಿಸುವುದೂ ಅನಿವಾರ್ಯವೇ ಆಗಿದೆ. ಇದರಿಂದ ಅವನ ದಯಾಮಯ ಉದಾರ ವ್ಯಕ್ತಿತ್ವಕ್ಕೆ ಯಾವ ಕುಂದೂ ಬರಲಾರದು. ಹೀಗೆ ಪರಮಾತ್ಮನು ನಮಗೆ ಸಾಧನ ಶರೀರವನ್ನು ನೀಡಿ ಜೊತೆಗೆ ನಮ್ಮ ಜೀವನ ವಿಧಾನ, ಹಾಗೂ ಕರ್ತವ್ಯದ ಬಗ್ಗೆ ಶ್ರುತಿಸ್ಮೃತಿಗಳೆಂಬ ಅಮರವಾದ ಸಂದೇಶವನ್ನು ದಯಪಾಲಿಸಿದ್ದಾನೆ.

ಶ್ರುತಿಸ್ಮೃತೀ ಮಮೈವಾಜ್ಞೇ ಕುರ್ಯಾತ್ತದನುಸಾರತಃ ।<br>
ಸತ್ಕರ್ಮಾಣಿ ದದಾಮ್ಯಸ್ಮೈ ಫಲಂ ಕರ್ಮಾನುಸಾರತಃ ॥<br>
ನಿಷಿದ್ಧಾನಿ ತು ಯಃ ಕುರ್ಯಾದಜ್ಞಾನಾದ್ಧಾರ್ಷ್ಟ್ಯತೋಽಪಿ ವಾ ।<br>
ವಿಹಿತಂ ಚ ನ ಕುರ್ವೀತ ತಂ ಕುರ್ಯಾನ್ನರಕೇ ಸ್ಥಿತಂ ॥

ದೇವರ ಕಾರುಣ್ಯದ ಕೊಡುಗೆಯಾದ ಈ ಮಾನವ ಶರೀರ ಮತ್ತು ಶಾಸ್ತ್ರಸಂದೇಶ ಇವೆರಡರ ಸದುಪಯೋಗವನ್ನು ಸಾಧಿಸುವುದೇ ನಮ್ಮ ಜೀವನದ ಪ್ರಧಾನ ಲಕ್ಷ್ಯವಾಗಿರಬೇಕು.

ಇಂಥಹ ಅಪೂರ್ವ ಉದ್ಬೋಧಕ ವಿಚಾರಗಳನ್ನು ವಿಷ್ಣುರಹಸ್ಯ ಗ್ರಂಥದ ಪುಟ ಪುಟಗಳಲ್ಲಿ ನಾವು ಕಾಣಬಹುದು. ಸಜ್ಜನರು ವಿಷ್ಣುಭಕ್ತಿ ಹಾಗೂ ವೈಷ್ಣವ ದೀಕ್ಷೆಯಿಂದ ತಮ್ಮ ಸಮಗ್ರಜೀವನವನ್ನು ಹೇಗೆ ಪುನೀತಗೊಳಿಸಬೇಕೆಂಬುದನ್ನು ಬಹಳ ಸುಂದರವಾಗಿ ಈ ಗ್ರಂಥದಲ್ಲಿ ವಿವರಿಸಲಾಗಿದೆ. ದೀಕ್ಷೆಯು ಎರಡು ಪ್ರಕಾರವಾಗಿದ್ದು ಒಂದು ಆಂತರವಾಗಿದ್ದರೆ ಇನ್ನೊಂದು ಬಾಹ್ಯವಾಗಿದೆ. ಗೋಪೀಚಂದನಧಾರಣೆ ಮುದ್ರಾಂಕನ ಮೊದಲಾದವು ಬಾಹ್ಯದೀಕ್ಷೆಯಾಗಿದ್ದರೆ ನಾನು ಶ್ರೀಹರಿಯ ಸೇವಕನೆಂಬ ನಿರಂತರ ಸುದೃಢ ಜ್ಞಾನವೇ ಆಂತರಿಕ ದೀಕ್ಷೆಯಾಗಿದೆ.

ಅಯಂ ಸರ್ವೇಷ್ಟದಾತಾ ಮೇ ಸರ್ವಾನಿಷ್ಟನಿವಾರಕಃ ।
ಸರ್ವೋತ್ಕೃಷ್ಟೋಯಮೇವೈಕಸ್ತದೀಯೋಽಹಂ ಸ ಮೇ ಪತಿಃ ॥

ಶ್ರೀವಿಷ್ಣುವೇ ಸರ್ವೋತ್ತಮನು, ಅವನೇ ಸ್ವಾಮಿಯು, ಅವನು ನನ್ನ ಸರ್ವ ಅನಿಷ್ಟವನ್ನು ನಿವೃತ್ತಿಗೊಳಿಸಿ ಸಕಲೇಷ್ಟಗಳನ್ನೂ ನೀಡುವವನು. ನಾನು ಎಂದೆಂದಿಗೂ ಅವನವನು. ಎಂಥಹ ಸುಂದರ ಭಾವನೆಯು ಈ ಶ್ಲೋಕದಲ್ಲಿ ಮೂಡಿದೆ! ಇದೇ ಅಂತರಂಗ ದೀಕ್ಷೆ ಎನಿಸುವುದು. ಇಂದು ಈ ಅಂತರದೀಕ್ಷೆಯ ಎಲ್ಲೆಲ್ಲೂ ಶಿಥಿಲವಾಗಿ ಸ್ವಾರ್ಥ ಅಹಂಕಾರಗಳೇ ಹೆಡೆ ಎತ್ತಿವೆ. ಬಾಹ್ಯದೀಕ್ಷೆಯಂತೂ ಶೂನ್ಯವೇ ಆಗಿದೆ. ಇದ್ದರೂ ಕೆಲವೆಡೆ ಅವು ಡಾಂಬಿಕ ಪ್ರದರ್ಶನದ ರೂಪವನ್ನು ತಾಳಿದೆ. ಈ ಗ್ರಂಥವನ್ನು ಓದಿದರೆ ವೈಷ್ಣವ ಜೀವನದ ಶುದ್ಧ ಆದರ್ಶವು ನಮ್ಮ ಕಣ್ಮುಂದೆ ನಿಂತು ನಮ್ಮ ಕರ್ತವ್ಯದ ಸ್ಮರಣೆ ಆಗುವುದರಲ್ಲಿ ಸಂದೇಹವಿಲ್ಲ. ಯಾವ ಜಾತಿಯವರೇ ಆಗಿರಲಿ, ಪತಿತರೇ ಆಗಿರಲಿ, ಎಲ್ಲರೂ ವಿಷ್ಣುಭಕ್ತರಾಗಿ ಪುನೀತರಾಗಲು ಅವಕಾಶವನ್ನು ಈ ಗ್ರಂಥದಲ್ಲಿ ಕಾಣಬಹುದು. ಅನುಲೋಮರು, ಪ್ರತಿಲೋಮರು, ಪತಿತರೂ, ಸಕಲಜಾತಿಯವರೂ ತಮ್ಮ ಮಟ್ಟಕ್ಕೆ ಅನುಸಾರವಾಗಿ ವಿಷ್ಣುಭಕ್ತಿ ಹಾಗೂ ವೈಷ್ಣವ ದೀಕ್ಷೆಯನ್ನು ಹೊಂದಿ ಶ್ರೇಯಸ್ಸನ್ನೂ ಪಡೆಯಬಹುದೆಂಬುದನ್ನು ಇಲ್ಲಿ ವರ್ಣಿಸಲಾಗಿದೆ.

ಇಂತಹ ವಿಷ್ಣುಭಕ್ತಿ ಪ್ರಚೋದಕವೂ ಅಪೂರ್ವ ಪ್ರಮೇಯಾರ್ಥಗಳ ಕೈಗನ್ನಡಿಯೂ ಆಗಿರುವ ಈ ಗ್ರಂಥವನ್ನು ಸರಳವಾಗಿ ಕನ್ನಡಿಸಿ ಶ್ರೀ ಬಿ.ಭೀಮರಾಯರು ವೈಷ್ಣವ ಜನರಿಗೆ ಪರಮೋಪಕಾರವನ್ನು ಮಾಡಿರುವರು. ಶ್ರೀಮದಾಚಾರ್ಯರ ಸಿದ್ಧಾಂತಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಿಸಿ ಶ್ರೀ ಭೀಮರಾಯರು ಈಗಾಗಲೇ ಸಜ್ಜನವೃಂದಕ್ಕೆ ಅಪೂರ್ವ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಈ ಸೇವೆಯನ್ನು ಮಾಧ್ವ ಸಮಾಜವು ಎಂದೆಂದಿಗೂ ಮರೆಯದು. ಅವರು ಹರಿವಾಯುಗಳಿಗೆ ಅರ್ಪಿಸಿರುವ ಕೃತಿರತ್ನಗಳ ಮಾಲೆಯಲ್ಲಿ ವರ್ಷ ವರ್ಷವೂ ಹೊಸ ಹೊಸ ರತ್ನಗಳು ಸೇರ್ಪಡೆಯಾಗುತ್ತಲೇ ಇವೆ. ಆ ಮಾಲೆಯ ಉತ್ತಮ ರತ್ನಗಳಲ್ಲಿ ಈ ಗ್ರಂಥವು ಒಂದಾಗಿದೆ. ಶ್ರೀ ಭೀಮರಾಯರು ಅರ್ಪಿಸಿರುವ ಈ ಜ್ಞಾನ ನೈವೇದ್ಯದಿಂದ ಹರಿವಾಯುಗಳು ಪೂರ್ಣಪ್ರಸನ್ನರಾಗಿದ್ದಾರೆ. ವರ್ಷವರ್ಷವೂ ಅರ್ಪಿಸಲಾಗುತ್ತಿರುವ ಈ ಜ್ಞಾನನೈವೇದ್ಯದ ಆಕರ್ಷಣೆಗೆ ಒಳಗಾದ ಶ್ರೀಕೃಷ್ಣನು ಶ್ರೀ ಭೀಮರಾಯರಿಗೆ ದೀರ್ಘಾಯುಷ್ಯ ಪೂರ್ಣಾರೋಗ್ಯಗಳನ್ನು ನೀಡಿ ಇನ್ನೂ ಬಹುಕಾಲದವರೆಗೆ ಪ್ರತಿ ವರ್ಷ ಇಂತಹ ಜ್ಞಾನ ಕಾಣಿಕೆಗಳನ್ನು ಸ್ವೀಕರಿಸುವನೆಂದು ನಂಬಿದ್ದೇವೆ.

ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು

# ಪ್ರಕಾಶಕರ ಮುನ್ನುಡಿ

## (ದ್ವಿತೀಯ ಮುದ್ರಣ)

**ನ ಮಾಧವಸಮೋ ದೇವೋ ನ ಚ ಮಧ್ವಸಮೋ ಗುರುಃ ।**
**ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್ ॥**

ಈ ಮಂತ್ರವಾಕ್ಯವನ್ನು ಧ್ಯೇಯವಾಗಿಟ್ಟುಕೊಂಡು ಕಾರ್ಯಪ್ರವೃತ್ತವಾದ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘವು ತನ್ನ ಉದ್ದೇಶ ಸಾಧನೆಯಲ್ಲಿ ಹಿಂದೆ ಬೀಳದೇ 69 ಸಂವತ್ಸರಗಳ ಸಾರ್ಥಕ ಸೇವೆ ಸಲ್ಲಿಸಿ ಭಾರತದಾದ್ಯಂತ ತನ್ನ ಹೆಸರನ್ನು ಆಸ್ತಿಕ ಭಕ್ತಾದಿಗಳ ಮನದಲ್ಲಿ ಅಚ್ಚಳಿಯದೇ ನಿಲ್ಲಿಸಿದೆ.

ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಸ್ಥಾಪನೆಯಲ್ಲಿ ಅದನ್ನು ಹುಟ್ಟುಹಾಕುವ ಪ್ರಮುಖ ಕಾರ್ಯವನ್ನು ಮಾಡಿದ್ದೇ ಅಲ್ಲದೇ ಅಮೂಲ್ಯ ಶಾಸ್ತ್ರಗ್ರಂಥಗಳಿಗೆ ಅನುವಾದ ಮಾಡಿ ಸಂಘದ ಹೆಸರನ್ನು ಓದುಗರ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವಂತೆ ಶ್ರೀಹರಿ-ವಾಯು-ಗುರುಗಳ ಅನುಗ್ರಹದಿಂದ ಸೇವೆ ಸಲ್ಲಿಸಿದವರು ಸಂಸ್ಥಾಪಕರಾದ ಶ್ರೀ ಬಿ. ಭೀಮರಾಯರು. ಅವರು ನಮ್ಮ ಮಧ್ಯೆ ಇಂದು ಇರುತ್ತಿದ್ದರೆ ಅವರು ನೂರು ವರ್ಷ ಪೂರ್ಣಗೊಳಿಸುತ್ತಿದ್ದರು ಎನ್ನುವುದಕ್ಕಿಂತ, ಇಂದಿಗೂ ಅವರು ನಮ್ಮೊಂದಿಗೆ ಇದ್ದಿದ್ದರೆ ಅಮೂಲ್ಯ ಅನುವಾದ ಗ್ರಂಥಗಳ ಮುತ್ತು-ರತ್ನಗಳು ಆಸ್ತಿಕ ಓದುಗರಿಗೆ ಲಭ್ಯವಾಗುತ್ತಿತ್ತೆಂಬುದನ್ನು ಗಮನಿಸಿದಲ್ಲಿ ಅವರ ಅಗಲುವಿಕೆಯ ನಷ್ಟದ ಪ್ರಮಾಣವನ್ನು ಊಹಿಸಲೂ ಸಾಧ್ಯವಿಲ್ಲ. ಇಂಥಹ ಮಹಾನುಭಾವರ ಜನ್ಮಶತಾಬ್ದಿ ವರ್ಷಾಚರಣೆಯು ಶ್ರೀ ಚಿತ್ರಭಾನು ಸಂವತ್ಸರದ ಜೇಷ್ಠ ಶುದ್ಧ ಬಿದಿಗೆಯಂದು ಜರುಗಿದಾಗ ವಿಶೇಷವಾದ ಜ್ಞಾನಯಜ್ಞದ ಮೂಲಕ ಶ್ರೀಯುತರ ಜನ್ಮಶತಾಬ್ದಿ ಆಚರಣೆ ಮಾಡಬೇಕೆಂದು ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘವು ಸಂಕಲ್ಪ ಮಾಡಿತಲ್ಲದೇ ಶ್ರೀಹರಿ-ವಾಯು-ಗುರುಗಳ ಅನುಗ್ರಹದಿಂದ ಅವರ ತದ್ರೂಪದ ಪುತ್ಥಳಿಯನ್ನೂ ಸಹ ಸಂಘದ ಪ್ರವಚನ ಮಂದಿರದಲ್ಲಿ ಸ್ಥಾಪಿಸಿದ ಸಾರ್ಥಕ್ಯದ ಕಾರ್ಯ ನೆರವೇರಿತೆಂಬುದನ್ನು ತಿಳಿಸಲು ಹರ್ಷಿಸುತ್ತೇವೆ.

ಶ್ರೀ ಭೀಮರಾಯರ ಜನ್ಮ ಶತಾಬ್ದಿ ವರ್ಷಾಚರಣೆಯ ಅಂಗವಾಗಿ ದಿವಂಗತರಿಗೆ ಪ್ರೀತ್ಯಾಸ್ಪದವಾದ ಜ್ಞಾನಯಜ್ಞ ಕಾರ್ಯ ನಡೆಸಬೇಕೆಂಬ ಸಂಕಲ್ಪದಡಿಯಲ್ಲಿ ದಿವಂಗತರಿಂದ ಅನುವಾದಗೊಂಡು ಆಸ್ತಿಕ ಓದುಗರಿಂದ ಬೇಡಿಕೆಯಿದ್ದ "ಶ್ರೀ ಸತ್‌ತತ್ವರತ್ನಮಾಲಾ" "ಪ್ರಾತಃ ಸಂಕಲ್ಪಗದ್ಯಂ" ಮತ್ತು "ನಾರಾಯಣ ಶಬ್ದಾರ್ಥ" ಗ್ರಂಥಗಳು ಮರುಮುದ್ರಣಗೊಂಡು ಆಸ್ತಿಕ ಓದುಗರಿಗೆ ತಲುಪಿಸುವಲ್ಲಿ ಶ್ರೀ ಹರಿ-ವಾಯು-ಗುರುಗಳು ಸಂಘದ ಪದಾಧಿಕಾರಿಗಳನ್ನು ಹರಸಿ ಸಂಕಲ್ಪದ ಕಾರ್ಯ ಕೈಗೂಡುವಂತೆ ಮಾಡಿದ್ದಾರೆಂಬುದು ಸಂಘದ ಪದಾಧಿಕಾರಿಗಳೆಲ್ಲರ ಸುಕೃತ ಎಂಬುದನ್ನು ತಮಗೆಲ್ಲಾ ನಿವೇದಿಸಿಕೊಳ್ಳುತ್ತಿದ್ದೇವೆ.

ಇದೇ ತೆರನಾಗಿ ದಿವಂಗತರ ಜನ್ಮ ಶತಾಬ್ದಿ ಆಚರಣೆಯಲ್ಲಿ ಹಮ್ಮಿಕೊಳ್ಳಲಾದ ಜ್ಞಾನ ಯಜ್ಞದ ಕಾರ್ಯದ ಅಂಗವಾಗಿ ದಿವಂಗತರಿಂದ ಹಲವಾರು ಗ್ರಂಥಗಳು ಅನುವಾದ

ಗೊಂಡಿದ್ದು ಅವುಗಳು ಬೇರೆ ಸಂಘ-ಸಂಸ್ಥೆಗಳಿಂದ ಪ್ರಕಾಶನಗೊಳ್ಳಲ್ಪಟ್ಟದ್ದು ಅವುಗಳನ್ನು ಮರು-ಮುದ್ರಣವಾಗಿಲ್ಲವೆಂಬುದನ್ನು ಗಮನಿಸಿ, ದಿವಂಗತರು ಬೇರೆ ಸಂಘ-ಸಂಸ್ಥೆಗಳಿಗೆ ಅನುವಾದ ಮಾಡಿಕೊಟ್ಟ ಗ್ರಂಥಗಳ ಪ್ರಕಾಶಕರೆಲ್ಲರನ್ನೂ ಸಂಪರ್ಕಿಸಿ ಎಲ್ಲಾ ಗ್ರಂಥಗಳನ್ನು ಏಕತ್ರ ಮಾಡಿ, ಸಂಘದಿಂದ ಮರು ಮುದ್ರಣಗೊಳಿಸಬೇಕೆಂಬ ಮಹತ್ಕಾರ್ಯವನ್ನು ಶ್ರೀ ಹರಿ-ವಾಯು-ಗುರುಗಳ ಅನುಗ್ರಹದಿಂದ ಸಂಕಲ್ಪಿಸಲಾಗಿದ್ದರ ಅಂಗವಾಗಿ ಬೆಂಗಳೂರಿನ ಶ್ರೀಮತಿ ತುಳಸಮ್ಮ ಟ್ರಸ್ಟ್‌ನವರಿಂದ "ಪ್ರಾತಃಸಂಕಲ್ಪಗದ್ಯಂ" ಗ್ರಂಥದ ಪ್ರಕಾಶನದ ಹಕ್ಕನ್ನು ಪಡೆದು ಈ ಗ್ರಂಥವನ್ನು ಈಗಾಗಲೇ ಮಾಧ್ವಭೂಷಣ ಶ್ರೀ ಭೀಮರಾಯರ ಜನ್ಮ ಶತಾಬ್ದಿ ಆಚರಣಾ ವರ್ಷದ ಜ್ಞಾನಯಜ್ಞದ ಪ್ರಥಮ ಪುಷ್ಪವಾಗಿ ಮರು ಮುದ್ರಣಗೊಳಿಸಿ ಆಸ್ತಿಕ ಓದುಗರಿಗೆ ಲಭ್ಯವಾಗಿಸುವಲ್ಲಿ ಶ್ರೀ ಹರಿ-ವಾಯು-ಗುರುಗಳು ನಮ್ಮನ್ನು ಅನುಗ್ರಹಿಸಿದ್ದಾರೆ ಎಂದು ತಿಳಿಸಲು ಹರ್ಷಿಸುತ್ತೇವೆ. ಮಾಧ್ವಭೂಷಣ ಶ್ರೀ ಭೀಮರಾಯರ ಜನ್ಮಶತಾಬ್ದಿ ಆಚರಣಾ ವರ್ಷದ ಜ್ಞಾನಯಜ್ಞದ ದ್ವಿತೀಯ ಪುಷ್ಪವಾಗಿ "ಶ್ರೀ ನಾರಾಯಣ ಶಬ್ದಾರ್ಥ" ಗ್ರಂಥವೂ ಕೂಡ ಈಗಲೇ ಮರು ಮುದ್ರಣಗೊಂಡು ಬಿಡುಗಡೆಯಾಗಿ ಆಸ್ತಿಕ ಓದುಗರಿಗೆ ಲಭ್ಯವಿರುತ್ತದೆ. ಮಾಧ್ವಭೂಷಣ ಶ್ರೀ ಭೀಮರಾಯರ ಜನ್ಮ ಶತಾಬ್ದಿ ಆಚರಣಾ ವರ್ಷದ ಸಮಾರೋಪ ಸಮಾರಂಭವು ಶ್ರೀ ಸ್ವಭಾನು ಸಂವತ್ಸರದ ಜ್ಯೇಷ್ಠ ಶುದ್ಧ ಬಿದಿಗೆ ಅಂದರೆ ದಿನಾಂಕ 2.6.2003ರಂದು ವಿಜೃಂಭಣೆಯಿಂದ ಜರುಗಿದ್ದು ತನ್ನಿಮಿತ್ತವಾಗಿ ವಿಶೇಷವಾದ ಜ್ಞಾನಯಜ್ಞ ಕಾರ್ಯಕ್ರಮ ನಡೆಸಲಾಯಿತಲ್ಲದೇ ಈ ಸಮಾರೋಪ ಸಮಾರಂಭದ ತೃತೀಯ ಹಾಗೂ ಅಂತಿಮ ಪುಷ್ಪವಾಗಿ ಮರು ಮುದ್ರಣಕ್ಕಾಗಿ ತುಂಬಾ ಬೇಡಿಕೆಯಲ್ಲಿದ್ದ "ಶ್ರೀವಿಷ್ಣುರಹಸ್ಯ" ಗ್ರಂಥವನ್ನು ಬಿಡುಗಡೆಗೊಳಿಸಲು ಸಕಲ ತಯಾರಿ ಮಾಡಿಕೊಂಡಿದ್ದರೂ ಸಂಘದ. ಗ್ರಂಥಗಳನ್ನು ಅಂದವಾಗಿ ಮತ್ತು ತಪ್ಪುಗಳಿಂದ ಹೊರತಾಗಿ ಮುದ್ರಣ ಮಾಡಿಕೊಡುತ್ತಿದ್ದ ಬೆಂಗಳೂರಿನ ಶ್ರೀ ಪ್ರಭಾ ಮುದ್ರಣಾಲಯದವರು ಎದುರಿಸಬೇಕಾಗಿ ಬಂದ ಅನಿವಾರ್ಯ ಕಾರಣಗಳಿಂದ ಗ್ರಂಥದ ಬಿಡುಗಡೆಯು ಶ್ರೀ ಟೀಕಾಕೃತ್ಪಾದರ ಆರಾಧನೆ ದಿನವಾದ ದಿನಾಂಕ 18-7-2003ರಂದು ಬಿಡುಗಡೆಗೊಳಿಸಲ್ಪಟ್ಟಿತು ಎಂದು ತಿಳಿಸಲು ಹರ್ಷಿಸುತ್ತೇವೆ.

ಮಾಧ್ವಭೂಷಣ ಶ್ರೀ ಬಿ. ಭೀಮರಾಯರ ಜನ್ಮಶತಾಬ್ದಿ ಆಚರಣಾ ವರ್ಷದಲ್ಲಿ ಜರುಗಿದ ಒಂದು ಮಹತ್ವದ ಘಟನೆಯಿಂದಾಗಿ ದಿವಂಗತರ ಜನ್ಮಶತಾಬ್ದಿ ಆಚರಣೆಯು ಅರ್ಥಪೂರ್ಣವಾಗಿ ಸಂಪನ್ನಗೊಂಡಿರುವುದಾಗಿ ನಾವು ಬಲವಾಗಿ ನಂಬಿದ್ದೇವೆ. ದಿವಂಗತರು ಪ್ರಪ್ರಥಮವಾಗಿ ಕನ್ನಡಾನುವಾದ ಮಾಡಿದ ಗ್ರಂಥ "ಶ್ರೀಮತ್ ಭಾಗವತ ಸಾರೋದ್ಧಾರ" ಗ್ರಂಥ. ಇದನ್ನು ಅವಲೋಕಿಸಿ, ಅದನ್ನು ಕನ್ನಡಬಾರದ ಕೇವಲ ತಮಿಳಷ್ಟನ್ನೇ ಬಲ್ಲ ಆಸ್ತಿಕ ಓದುಗರಿಗಾಗಿ ತಮಿಳಿಗೆ ಭಾಷಾಂತರ ಮಾಡಿ ಪುಸ್ತಕಗಳ ಮುದ್ರಣಕ್ಕಾಗಿ ಸಂಘಕ್ಕೆ ಕೋರಿಕೆ ಸಲ್ಲಿಸಿದ್ದ ಕುಂಭಕೋಣಂ ವಾಸಿ (ಪ್ರಸ್ತಕದಲ್ಲಿ ಡೊಂಬಿವಿಲಿಯಲ್ಲಿ ವಾಸವಾಗಿದ್ದಾರೆ) ಶ್ರೀಯುತ ಆರ್. ಅಪ್ಪುಸ್ವಾಮಿರಾವ್ ಅವರ ಪರಿಶ್ರಮದ ಫಲವಾಗಿ ಸದರೀ ತಮಿಳು ಭಾಷಾಂತರ ಪುಸ್ತಕವನ್ನು ನಮ್ಮ ಸಂಘದ ಕೋರಿಕೆ ಮೇರೆಗೆ ಕೈಗೆತ್ತಿಕೊಂಡು ದಿವಂಗತರ ಜನ್ಮ ಶತಾಬ್ದಿ

ಆಚರಣಾ ವರ್ಷದ ಸಮಾರೋಪ ಸಮಾರಂಭದ ಕಳಶಪ್ರಾಯವಾದ ಕಾರ್ಯವಾಗಿ ಸಂಘದ ಗ್ರಂಥ ಪ್ರಕಟಣಾ ಚಟುವಟಿಕೆಯನ್ನು ತಮಿಳು ಪ್ರಾಂತಕ್ಕೆ ವಿಸ್ತರಿಸಿದ ಹೆಮ್ಮೆಯ ಕಾರ್ಯವೆಂದು ಧನ್ಯತೆ ತಾಳುವಲ್ಲಿ ನಮಗೆ ಸ್ಫೂರ್ತಿ ಹಾಗೂ ಉತ್ತೇಜನ ನೀಡಿದ ಕೊಯಿಮತ್ತೂರು ವಾಸಿಗಳಾದ ತಾಮ್ರಪರ್ಣಿ ಮನೆತನದ ಶ್ರೀಮತಿ ಎ. ಎಸ್. ಜಯಲಕ್ಷ್ಮೀ ಹಾಗೂ ಅವರ ಪತಿ ಶ್ರೀಯುತ ಸುಂದರರಾಜನ್ ದಂಪತಿಗಳು. ಈ ದಂಪತಿಗಳು ಸಂಘದ ಅಜೀವ ಸದಸ್ಯರಷ್ಟೇ ಅಲ್ಲದೇ ಶ್ರೀ ಸತ್‌ತತ್ವರತ್ನಮಾಲಾ ಗ್ರಂಥದ-ಮರು ಮುದ್ರಣದಲ್ಲಿ ಸ್ವಯಂ ಪ್ರೇರಣೆಯಿಂದ ರೂ. 15,000ಗಳನ್ನು ಹಾಗೆಯೇ ಈ ಗ್ರಂಥದ ಮರು ಮುದ್ರಣದಲ್ಲಿಯೂ ಧನ ಸಹಾಯ ಮಾಡಿ ಸಂಘದ ಪದಾಧಿಕಾರಿಗಳನ್ನು ಪ್ರೋತ್ಸಾಹಿಸಿದವರಾಗಿದ್ದಾರೆ. ಈ ಮಹತ್ವದ ಕಾರ್ಯ ಕೈಗೂಡುವಲ್ಲಿ ಸಂಘದ ಪದಾಧಿಕಾರಿಗಳಿಗೆ ಸಹಕರಿಸಿರುವ ಶ್ರೀಯುತ ಆರ್. ಅಪ್ಪುಸ್ವಾಮಿರಾವ್ ಹಾಗೂ ಶ್ರೀಮತಿ ಎ. ಎಸ್. ಜಯಲಕ್ಷ್ಮೀ ಹಾಗೂ ಶ್ರೀ ಸುಂದರರಾಜನ್ ದಂಪತಿಗಳಿಗೆ ನಾವು ಕೃತಜ್ಞರೂ ಹಾಗೂ ಆಭಾರಿಗಳೂ ಕೂಡಾ ಆಗಿದ್ದೇವೆ.

ನಮ್ಮ ಈ ಗ್ರಂಥದ ಮರು ಮುದ್ರಣ ಕಾರ್ಯದಲ್ಲಿ ಈ ಗ್ರಂಥಕ್ಕೆ ಉಪಯುಕ್ತ ಮುನ್ನುಡಿಯನ್ನು ಬರೆದುಕೊಟ್ಟು ನಮ್ಮನ್ನು ಪ್ರೋತ್ಸಾಹಿಸಿರುವ ಸಂಘದ ಹಿತೈಷಿಗಳು ಹಾಗೂ ನಮ್ಮೆಲ್ಲರ ಶ್ರೇಯೋಭಿವೃದ್ಧಿಗಾಗಿ ನಿರಂತರ ಪಾಠ-ಪ್ರವಚನ ನಡೆಸಿ ಅನುಗ್ರಹಿಸುತ್ತಿರುವ ಜ್ಞಾನಿಗಳೂ, ಪಂಡಿತರೂ ಹಾಗೂ ನಮ್ಮೆಲ್ಲರ ಗುರುಗಳೂ ಆಗಿರುವ ಸ್ಥಳೀಯರಾದ ವೇ. ಪಂ. ಶ್ರೀ ಎ. ಎಸ್. ವೆಂಕಟಗಿರೀಶಾಚಾರ್ಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಮಾಧ್ವಭೂಷಣ ಶ್ರೀ ಭೀಮರಾಯರು ಇತರೆ ಸಂಸ್ಥೆಗಳಿಗೆ ಹಲವಾರು ಗ್ರಂಥಗಳನ್ನು ಅನುವಾದ ಮಾಡಿಕೊಟ್ಟಿರುವರೆಂಬುದನ್ನು ನಾವು ಈಗಾಗಲೇ ತಮ್ಮ ಗಮನಕ್ಕೆ ತಂದಿರುತ್ತೇವೆ. ಅದರಲ್ಲಿ ದಿವಂಗತರು ಬೆಂಗಳೂರಿನ ಹರಿದಾಸರತ್ನಂ ದಿ॥ ಗೋಪಾಲದಾಸರ "ವಿಜಯಾಂಕ ರತ್ನಮಾಲೆ"ಯಡಿಯಲ್ಲಿ ಹತ್ತು ಗ್ರಂಥಗಳಿಗೆ ಅನುವಾದ ಮಾಡಿದ್ದು ಅವೆಲ್ಲವುಗಳನ್ನು ನಮ್ಮ ಸಂಘದಿಂದ ಮರು ಮುದ್ರಣಗೊಳಿಸಲು ಹರಿದಾಸರತ್ನಂ ದಿ॥ ಗೋಪಾಲದಾಸರ ಜೇಷ್ಠ ಪುತ್ರರಾದ ಶ್ರೀಯುತ ವಿಜಯಮೋಹನದಾಸ್‌ರವರಿಂದ ಹತ್ತು ಗ್ರಂಥಗಳ ಪ್ರಕಾಶನದ ಹಕ್ಕನ್ನು ಸಂಘವು ಪಡೆದಿದ್ದು ಈ ಹತ್ತೂ ಗ್ರಂಥಗಳು ಮರು ಮುದ್ರಣಗೊಳ್ಳಬೇಕಾಗಿರುವ ಬೃಹತ್ ಕಾರ್ಯದಲ್ಲಿ ಶ್ರೀ ಹರಿ-ವಾಯು-ಗುರುಗಳ ಅನುಗ್ರಹದ ಜೊತೆಗೆ ಆಸ್ತಿಕ ಭಕ್ತಾದಿಗಳೂ ಸಹ ಈ ನಮ್ಮ ಜ್ಞಾನಯಜ್ಞದಲ್ಲಿ ಯಥಾನುಶಕ್ತಿ ಧನಸಹಾಯ ಮಾಡಿ ಶ್ರೀ ಹನುಮ-ಭೀಮ-ಮಧ್ವಾಂತರ್ಗತ ಶ್ರೀ ರಾಮ-ಕೃಷ್ಣ-ವೇದವ್ಯಾಸ ದೇವರ ಅನುಗ್ರಹಕ್ಕೆ ತಾವೂ ಪಾತ್ರರಾಗಿ ನಮ್ಮ ಕಾರ್ಯದಲ್ಲಿ ಸಹಕರಿಸಬೇಕೆಂದು ತಮ್ಮಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇವೆ.

ನಮ್ಮ ಸಂಘದಿಂದ ಹಮ್ಮಿಕೊಳ್ಳಲಾದ ಎಲ್ಲಾ ಗ್ರಂಥಗಳ ಮರುಮುದ್ರಣ ಕಾರ್ಯದಲ್ಲಿ ಅಮೇರಿಕಾದ ಡಾಯಲೆನ್ ಟೌನ್ ವಾಸಿ ಶ್ರೀಮತಿ ಲೀಲಾ ಪ್ರಹ್ಲಾದ ಮತ್ತು ಶ್ರೀಯುತ ಶ್ರೀನಿವಾಸ ಆರ್ ಪ್ರಹ್ಲಾದ್ ಇವರು "ಸಂಘದ ಗ್ರಂಥ ಪ್ರಕಾಶನದ ನಿಧಿ"ಗೆ \$500/- (ಐದುನೂರು ಅಮೇರಿಕನ್ ಡಾಲರ್—ಅರ್ಥಾತ್ ಭಾರತೀಯ ರೂ. 23,475) ಡಾಲರ್‌ಗಳನ್ನು ಸ್ವಯಂಪ್ರೇರಣೆಯಿಂದ ದಾನವಾಗಿ ನೀಡಿ ನಾವು ಹಮ್ಮಿಕೊಂಡ ಕಾರ್ಯದಲ್ಲಿ

ನಮ್ಮನ್ನು ಹುರಿದುಂಬಿಸಿದ್ದಾರೆ ಎಂದರೆ ತಪ್ಪಾಗಲಾರದು. ಇದೇ ತೆರನಾಗಿ ಶ್ರೀವಿಷ್ಣುರಹಸ್ಯ ಗ್ರಂಥದ ಮರು ಮುದ್ರಣಕ್ಕಾಗಿ ಈ ಕೆಳಗೆ ತಿಳಿಸಲಾದ ಮಹನೀಯರುಗಳು ಧನಸಹಾಯ ಮಾಡಿ ತಾವು ಪುಣ್ಯಭಾಗಿಗಳಾಗಿರುವುದಲ್ಲದೇ, ನಮಗೆ ಉತ್ತೇಜನಪೂರ್ವಕವಾದ ಪ್ರೋತ್ಸಾಹವನ್ನು ನೀಡಿದ್ದಾರೆ ಎಂಬುದು ನಮ್ಮ ದೃಢವಾದ ನಂಬಿಕೆ.

(1) ಶ್ರೀಯುತ ಎಸ್.ಆರ್.ಶ್ಯಾಮರಾವ್, ಚೆನ್ನೈ — ರೂ. 10,000

(2) ಶ್ರೀಮತಿ ಎ. ಎಸ್. ಜಯಲಕ್ಷ್ಮೀ ಮತ್ತು
ಶ್ರೀ ಸುಂದರರಾಜನ್, ಚಾರ್ಟರ್ಡ್ ಅಕೌಂಟೆಂಟ್ಸ್
ಕೊಯಿಮತ್ತೂರ್ — ರೂ. 5,000

(3) ಶ್ರೀಯುತ ಕೆ. ಎಸ್. ವಾದಿರಾಜ್, ಮ್ಯಾನೇಜಿಂಗ್ ಪಾರ್ಟನರ್,
ಮೆ. ರ್‍ಯಾಕೋ ಇಂಡಸ್ಟ್ರಿಯಲ್ ಪ್ರಾಡಕ್ಟ್ಸ್, ಭದ್ರಾವತಿ. — ರೂ. 5,000

(4) ಶ್ರೀಯುತ ಕೆ. ಎಸ್. ವಾದಿರಾಜ್, ಭದ್ರಾವತಿ, ಇವರು ಅವರ
ಮಾತೋಶ್ರೀ ದಿ || ಸೌ. ಹೆಚ್. ಎಸ್. ಶಾಂತಾಬಾಯಿ
ಇವರ ಸ್ಮರಣಾರ್ಥ — ರೂ. 5,000

ಈ ಮೂರೂ ಮಹನೀಯರುಗಳು ಶ್ರೀವಿಷ್ಣುರಹಸ್ಯ ಗ್ರಂಥದ ಮರು ಮುದ್ರಣಕ್ಕಾಗಿ ಸ್ವಯಂಪ್ರೇರಣೆಯಿಂದ ನೀಡಿದ ಉದಾರ ದೇಣಿಗೆಯ ಸುತ್ಕರ್ತಕಾರ್ಯಕ್ಕಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತ ದಾನಿಗಳಿಗೆ ಆಯುರಾರೋಗ್ಯ ಭಾಗ್ಯ ಪೂರ್ವಕ ಜ್ಞಾನ-ಭಕ್ತಿ-ವೈರಾಗ್ಯಾದಿ ಸಕಲ ಇಷ್ಟಾರ್ಥಗಳು ಅವರ ಈ ಸೇವಾರೂಪದ ಕಾರ್ಯದ ಅಂಗವಾಗಿ ಶ್ರೀಯುತರೆಲ್ಲರಿಗೂ ಹಾಗೂ ಅವರ ಕುಟುಂಬವರ್ಗದವರಿಗೆಲ್ಲಾ ದೊರೆಯಲಿ ಎಂದು ಸಕಲಗುಣ ಪರಿಪೂರ್ಣನಾದ ಮತ್ತು ಸರ್ವೋತ್ತಮನಾದ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ವಿಷ್ಣುವಿನಲ್ಲಿ ಕೈ ಜೋಡಿಸಿ ಪ್ರಾರ್ಥಿಸುತ್ತೇವೆ.

ನಮ್ಮ ಸಂಘದ ಎಲ್ಲಾ ಪ್ರಕಟಣೆಗಳನ್ನು ಇಂದಿನವರೆಗೂ ಅಂದವಾಗಿ ಮುದ್ರಿಸಿ ಅಪಾರ ಅನುಭವವಿರುವ ಬೆಂಗಳೂರಿನ ಶ್ರೀ ಪ್ರಭಾ ಮುದ್ರಣಾಲಯದ ಮಾಲಿಕರುಗಳೂ ಸಂಘದ ಆಜೀವ ಸದಸ್ಯರೂ ಆಗಿರುವ ಶ್ರೀ ಡಿ. ಎಸ್. ಕೃಷ್ಣಾಚಾರ್ ಹಾಗೂ ಅವರ ಪುತ್ರರಾದ ಶ್ರೀ ಡಿ. ಕೆ. ವಾಸುದೇವ್ ಅವರಿಗೂ ಕೂಡ ನಮ್ಮ ಕೃತಜ್ಞತಾ ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇವೆ.

ಸಂಘದ ಪದಾಧಿಕಾರಿಯಾಗಿ ಸೇವೆ ಸಲ್ಲಿಸುವಲ್ಲಿ ನನಗೆ ಸಹಕರಿಸುತ್ತಿರುವ ಸಮಿತಿ ಕಾರ್ಯದರ್ಶಿ ಹಾಗೂ ಎಲ್ಲ ಸದಸ್ಯರುಗಳಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಶ್ರೀ ಸ್ವಭಾನು ಜ್ಯೇಷ್ಠ ಶುದ್ಧ ಬಿದಿಗೆ — ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಪರವಾಗಿ,
ದಿ. 02.06-2003 ಮತ್ತು — ಟಿ. ಆರ್. ಹನುಮಂತರಾವ್ ಪದಕಿ
ಶ್ರೀ ಸ್ವಭಾನು ಆಷಾಢ ಬಹುಳ ಪಂಚಮಿ — ಅಧ್ಯಕ್ಷರು
ದಿ. 18.07.2003
ದಾವಣಗೆರೆ

ದೂರವಾಣಿ : (08192) 259125

# ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.)

"ಮಧ್ವರಾಜ ಮಂದಿರ", ಕುವೆಂಪು ರಸ್ತೆ 3ನೇ ತಿರುವು,
ಕೆ.ಬಿ.ಬಡಾವಣೆ, ದಾವಣಗೆರೆ - 577 002

## ಆಸಕ್ತ ಗ್ರಂಥಾವಲೋಕಿಗಳಲ್ಲಿ ಒಂದು ಮನವಿ

ಮಾಧ್ವಭೂಷಣ ಶ್ರೀ ಭೀಮರಾಯರು ಸಂಸ್ಕೃತ ಗ್ರಂಥಗಳಿಗೆ ಕನ್ನಡದಲ್ಲಿ ಟಿಪ್ಪಣಿ- ಅಡಿ ಟಿಪ್ಪಣಿಗಳನ್ನು ಬರೆದು ಮಠಾಧಿಪತಿಗಳಿಂದಲೂ ಸಹ ಪ್ರಶಂಸನೆಗೊಳಗಾಗಿರುವುದಲ್ಲದೇ ಅವರ ಸೇವಾರೂಪವಾದ ಗ್ರಂಥಗಳ ಅನುವಾದದಿಂದಲೂ ಸಹ ಸಂಘದ ಹೆಸರನ್ನು ಅನ್ವರ್ಥಕಗೊಳಿಸುವಲ್ಲಿ ಅವರು ಪಟ್ಟಿರುವ ಶ್ರಮ ಅವರ ಅಭಿಮಾನಿ ಓದುಗರಿಗೆ ತಿಳಿಯದ ವಿಷಯವೇನಲ್ಲ.

ಇಂಥ ಜ್ಞಾನಿಗಳೂ, ಸಂಘದ ಸಂಸ್ಥಾಪಕರೂ ಆಗಿರುವ ಮಾಧ್ವಭೂಷಣ ಶ್ರೀ ಭೀಮರಾಯರು ಈಗಲೂ ಬದುಕುಳಿದಿದ್ದರೆ ಶತಾಯುಷಿ ಎಂದು ಕರೆಸಿಕೊಳ್ಳುತ್ತಿದ್ದರಷ್ಟೇ ಅಲ್ಲ ಅವರಿಂದ ಇನ್ನೂ ಹಲವಾರು ಶಾಸ್ತ್ರಗ್ರಂಥಗಳು ಕನ್ನಡದಲ್ಲಿ ಟಿಪ್ಪಣಿ-ಅಡಿ ಟಿಪ್ಪಣಿಗಳಿಂದ ಅನುವಾದಗೊಂಡು ಸಂಸ್ಕೃತ ಬಾರದ ಆದರೆ ಶಾಸ್ತ್ರಾಸಕ್ತರಾದ ಗ್ರಂಥಾವಲೋಕಿಗಳಿಗೆ ಲಭ್ಯವಾಗುತ್ತಿದ್ದವು. ಆದರೆ ಇಂದು ನಾವು ಈ ಅವಕಾಶದಿಂದ ವಂಚಿತರಾಗಿದ್ದೇವೆ. ಶ್ರೀಯುತರು ಒಟ್ಟು 2 ಸ್ವತಂತ್ರ ಗ್ರಂಥಗಳನ್ನು ಬರೆದಿದ್ದಾರಲ್ಲದೇ, 8 ಶಾಸ್ತ್ರಗ್ರಂಥಗಳು ಹಾಗೂ 9 ಪದ್ಯ (ದಾಸ) ಸಾಹಿತ್ಯದ ಪ್ರಾಕಾರಗಳಿಗೆ ಕನ್ನಡದಲ್ಲಿ ಟಿಪ್ಪಣಿ - ಅಡಿಟಿಪ್ಪಣಿಗಳ ಅನುವಾದ ಮಾಡಿದ್ದು ಅವುಗಳ ವಿವರಗಳನ್ನು ಈ ಕೆಳಗೆ ನೀಡುತ್ತಿದ್ದೇವೆ.

1. ಸ್ವತಂತ್ರ ಕೃತಿಗಳು

(ಅ) 'ಸಂದೇಶ ರತ್ನಮಾಲಾ' ಮಾಲಿಕೆ ಗ್ರಂಥ

(1) ನಾಸ್ತಿಕ್ಯ ನಿರಾಸ* (2) ಆಗಮ ಪ್ರಾಮಾಣ್ಯ*

(3) ಆಗಮ ಸಾರ* ಮತ್ತು (4) ಮೋಕ್ಷಮಾರ್ಗ ಮತ್ತು ಮುಕ್ತಿ*

(ಆ) ಶ್ರೀಮತ್ ಭಾಗವತ ಪ್ರದೀಪಿತ ಸೂತ್ರಾರ್ಥಸಾರ*

2. ಟಿಪ್ಪಣಿ-ಅಡಿ ಟಿಪ್ಪಣಿಗಳ ಅನುವಾದ ಗ್ರಂಥಗಳು

(1) ಶ್ರೀಮತ್ ಭಾಗವತ ಸಾರೋದ್ಧಾರ+ (2) ಉಪನ್ಯಾಸ ಭಾರತೀ*

(3) ಶ್ರೀ ಕೃಷ್ಣಾರ್ಜುನ ಸಂವಾದ*$ (4) ಶ್ರೀಮನ್ನೈತರೇಯ ಉಪನಿಷತ್ ಭಾಷ್ಯ*

(5) ಸುತತ್ತ್ವರತ್ನಮಾಲಾ+ (6) ಪ್ರಾತಸಂಕಲ್ಪಗದ್ಯಂ+
(7) ಶ್ರೀವಿಷ್ಣುರಹಸ್ಯ+ (8) ಯುಕ್ತಿಮಲ್ಲಿಕಾ*

3. ಪದ್ಯ ಸಾಹಿತ್ಯದಲ್ಲಿ ಟಿಪ್ಪಣಿ-ಅಡಿ ಟಿಪ್ಪಣಿಗಳಿಂದ ಅನುವಾದಿತ ಗ್ರಂಥಗಳು

(1) ತತ್ವ ಸುವ್ವಾಲಿ*$ (2) ಶ್ರೀ ಲಕ್ಷ್ಮೀ ಶೋಭಾನ ಪದ*$
(3) ವೈಕುಂಠ ವರ್ಣನೆ*$ (4) ಗುಂಡ ಕ್ರಿಯೆ*$
(5) ಹರಿಸರ್ವೋತ್ತಮ ಸಾರ-ಸ್ವಪ್ನ ಪದ*$ (6) ಸಪ್ತ ಸುಳಾದಿಗಳು*$
(7) ಕೋಲು ಹಾಡು-ಶ್ರೀ ಮೋಹನದಾಸರು*$
(8) ಕೀಚಕ ವಧೆ-ಭಾರತೀಮಜ್ಜನೀ*$
(9) ಹರಿಭಜನ ಪದ್ಧತಿ-ಭಾಗ 1 ಮತ್ತು ಭಾಗ 2*$

---

ವಿವರಣೆ :

* = ಮರು-ಮುದ್ರಣಗೊಳ್ಳಬೇಕಾಗಿರುವ ಗ್ರಂಥಗಳು

$ = ಬೆಂಗಳೂರಿನ ಹರಿದಾಸರತ್ನಂ ಡಿ|| ಗೋಪಾಲದಾಸರ ''ವಿಜಯಾಂಕ ರತ್ನಮಾಲೆ''ಯಲ್ಲಿ ಪ್ರಕಾಶಿತ ಗ್ರಂಥಗಳು ಈಗ ಲಭ್ಯವಿಲ್ಲದಿರುವುದರಿಂದ ಸದರಿ ಗ್ರಂಥಗಳ ಪ್ರಕಾಶನದ ಹಕ್ಕನ್ನು (ಒಂದು ಬಾರಿಗೆ) ಸಂಘವು ಪಡೆದಿರುತ್ತದೆ.

\+ = ಮರು-ಮುದ್ರಣಗೊಂಡು ಲಭ್ಯವಿರುವ ಗ್ರಂಥಗಳು.

---

ಈ ಮೇಲಿನ ಕೃತಿಗಳಲ್ಲಿ 2 (3,6) ಹಾಗೂ 3 (1 ರಿಂದ 9) ರ ಗ್ರಂಥಗಳು ಸಂಘದಿಂದ ಪ್ರಕಾಶಿತ ಗ್ರಂಥಗಳಾಗಿರದೇ, ಅವುಗಳನ್ನು ಏಕತ್ರ ಸಂಗ್ರಹಿಸಿ ಮರು ಮುದ್ರಣಗೊಳಿಸಿ ಅವರ ಎಲ್ಲಾ ಅನುವಾದ ಕೃತಿಗಳು ಅವರಿಂದ ಸ್ಥಾಪಿತ ಸಂಘದ ಮೂಲಕ ಆಸಕ್ತ ಗ್ರಂಥಾವಲೋಕಿಗಳಿಗೆ ಲಭ್ಯವಾಗಿಸಬೇಕೆಂಬ ವಿಚಾರವಿದ್ದರೂ ಅದು ಸಾಧ್ಯವಾಗಿರಲಿಲ್ಲ. ಆದರೆ ಚಿತ್ರಭಾನು ಸಂವತ್ಸರದ ಜೇಷ್ಠ ಶುದ್ಧ ಬಿದಿಗೆಯಿಂದ ಸ್ವಭಾನು ಸಂವತ್ಸರದ ಜೇಷ್ಠ ಶುದ್ಧ ಬಿದಿಗೆವರೆಗೆ ಜರುಗಿದ ಶ್ರೀಯುತರ ಜನ್ಮಶತಾಬ್ದಿ ಆಚರಣಾ ವರ್ಷದ ಅವಕಾಶವು ಸಂಘದ ಸಂಕಲ್ಪವನ್ನು ಈಗಾಗಲೇ 2(6)ರ ಗ್ರಂಥವನ್ನು ಶ್ರೀಮತಿ ತುಳಸಮ್ಮ ಟ್ರಸ್ಟ್ ಬೆಂಗಳೂರು ಇವರಿಂದ ಪ್ರಕಾಶನದ ಹಕ್ಕನ್ನು ಪಡೆಯುವುದರ ಮೂಲಕ ಮರು ಮುದ್ರಣಗೊಳಿಸಲಾಗಿದೆ. ಅದೇ ತೆರನಾಗಿ 2(3) ಹಾಗೂ 3 (1 ರಿಂದ 9)ರ ವರೆಗಿನ ಗ್ರಂಥಗಳು ಮರು-ಮುದ್ರಣಗೊಳ್ಳಬೇಕಾಗಿರುವುದಲ್ಲದೇ, ಸಂಘದಿಂದಲೆ ಪ್ರಕಾಶಿತಗೊಂಡ ಹಲವಾರು ಗ್ರಂಥಗಳೂ ಸಹ ಮರು ಮುದ್ರಣಕ್ಕಾಗಿ ಕಾದಿವೆ. ಈ ನಮ್ಮ ಬೃಹತ್ ಸಂಕಲ್ಪದ ಕಾರ್ಯ ಕೈಗೂಡಬೇಕಾದರೆ ಹನಿ-ಹನಿಗೂಡಿದರೆ ಹಳ್ಳ ಎನ್ನುವಂತೆ ಆಸಕ್ತ ಗ್ರಂಥಾವಲೋಕಿಗಳ ಆರ್ಥಿಕ ಸಹಾಯದ ಹಸ್ತದ ನೆರವಿಗೆ ನಮ್ಮ ಸಂಕಲ್ಪವನ್ನು ಸಾಕಾರಗೊಳಿಸುವ ಶಕ್ತಿಯಿರುವುದರಿಂದ ಸಂಘವು ಹಮ್ಮಿಕೊಂಡಿರುವ ಈ ಜ್ಞಾನಯಜ್ಞದಲ್ಲಿ ತಾವು ನೀಡುವ ಪ್ರತಿ ಪೈಸೆಯೂ ಸದ್ವಿನಿಯೋಗವಾಗುವ; ಸಮೀಚೀನ ರೀತಿಯಲ್ಲಿ ಗ್ರಂಥಗಳ ಮುದ್ರಣದ

ಜ್ಞಾನಯಜ್ಞಕ್ಕಾಗಿ ವ್ಯಯಿಸಲ್ಪಡುವ ಮಾರ್ಗವೊಂದೇ ಇರುವುದರಿಂದ, ಪಾತ್ರಾಪಾತ್ರರ ವಿವೇಚನೆಯಿಂದಲೂ ಸಹ ದಾನ ತೆಗೆದುಕೊಳ್ಳುವವರು ಶ್ರೀ ಸರ್ವಜ್ಞಾಚಾರ್ಯ ರಾಗಿರುವರಲ್ಲದೇ. ಅವರು ತೆಗೆದುಕೊಂಡ ದಾನವು ಅವರಿಗೆ ಪ್ರೀತ್ಯಾಸ್ಪದವಾದ ಜ್ಞಾನ ಯಜ್ಞಕ್ಕಾಗಿ ಬಳಸಲ್ಪಡುವುದರಿಂದ ತಾವು ನೀಡುವ ಧನದಾನವು ಸಮೀಚೀನ ದಾನ ವಾಗುವುದೆಂಬ ನಮ್ಮ ದೃಢ ವಿಶ್ವಾಸದ ವಾಣಿಯೊಂದಿಗೆ ತಮ್ಮ ಯಥಾ ಶಕ್ತಿಯಿಂದ ಧನ ಸಹಾಯ ಸಲ್ಲಿಸಿ ಶ್ರೀ ಹನುಮ-ಭೀಮ-ಮಧ್ವಾಂತರ್ಗತ ಶ್ರೀ ರಾಮ-ಕೃಷ್ಣ-ವೇದವ್ಯಾಸರ ಅನುಗ್ರಹಕ್ಕೆ ಪಾತ್ರರಾಗಲು ಕೋರುತ್ತೇವೆ.

ಸಂಘದ ಹೆಸರಿಗೆ ಡಿಡಿ ಕಳುಹಿಸುವವರು ಅಕೌಂಟ್ ಪೇಯಿ ಇಂಡಿಯನ್ ಬ್ಯಾಂಕ್ ಉಳಿತಾಯ ಖಾತೆ ನಂ. 199ಕ್ಕೆ ಸಂದಾಯವಾಗುವಂತೆ "ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.)"ದ ಹೆಸರಿಗೆ ತೆಗೆಯಲಾದ ಡಿಡಿ ಕಳುಹಿಸಬಹುದು ಅಥವಾ ನಗದು ಸಂದಾಯ ಮಾಡುವವರು ಇಂಡಿಯನ್ ಬ್ಯಾಂಕ್ ಉಳಿತಾಯ ಖಾತೆ ನಂ. 199ಕ್ಕೆ ಜಮಾ ಮಾಡಬಹುದು ಅಥವಾ ಖುದ್ದಾಗಿ ಇಲ್ಲವೇ ಮನಿ ಆರ್ಡರ್ ಮೂಲಕ ಸಂದಾಯ ಮಾಡಿ ಸಹಕರಿಸಬೇಕಾಗಿ ವಿಜ್ಞಾಪನೆ.

ಇತಿ ಸಜ್ಜನ ವಿಧೇಯರಾದ,

ಸ್ಥಳ : ದಾವಣಗೆರೆ

ದಿನಾಂಕ : 8.12.2003

ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಪರವಾಗಿ
ಟಿ. ಆರ್. ಹನುಮಂತರಾವ್ ಪದಕಿ
ಅಧ್ಯಕ್ಷರು

**2003-04ನೇ ಸಾಲಿನ ಕಾರ್ಯಕಾರಿ ಸಮಿತಿಯ ಸದಸ್ಯರುಗಳು ದೂರವಾಣಿ**

| | | |
|---|---|---|
| 1. ಶ್ರೀಯುತ ಹನುಮಂತರಾವ್ ಪದಕಿ | ಅಧ್ಯಕ್ಷರು | 232292 |
| 2. ಶ್ರೀಯುತ ಎನ್. ಎಸ್. ಸತ್ಯನಾರಾಯಣ | ಕಾರ್ಯದರ್ಶಿ | 232306 |
| 3. ಶ್ರೀ ರಾಘವೇಂದ್ರಾಚಾರ್ ಕಟ್ಟಿ | ಜಂಟಿ ಕಾರ್ಯದರ್ಶಿ | 259125 |
| 4. ಶ್ರೀಯುತ ಬಿ. ಮಾಧವರಾವ್ | ಸದಸ್ಯರು | (080)6660485/ 6662486 |
| 5. ಶ್ರೀಯುತ ಡಾ. ವಿ. ಕೆ. ಖಾರದ್ | ಸದಸ್ಯರು | 233897 |
| 6. ಶ್ರೀಯುತ ರಘುನಾಥರಾವ್ ರಾಮದುರ್ಗ | ಸದಸ್ಯರು | 251573 |
| 7. ಶ್ರೀಯುತ ಆರ್. ಎಸ್. ಬದರೀನಾಥ್ | ಸದಸ್ಯರು | 224900 |

# ಗ್ರಂಥ ಪ್ರಸ್ತಾವನೆ
## (ದ್ವಿತೀಯ ಮುದ್ರಣ)

ವಿಷ್ಣುರಹಸ್ಯ ಗ್ರಂಥವು ಸರ್ವೋತ್ತಮನಾದ ವಿಷ್ಣುವಿನ ಮಹಿಮೆಯನ್ನು ಪ್ರತಿಪಾದಿಸುತ್ತ ಎಲ್ಲ ವರ್ಗದ ಜನರು ಅವಶ್ಯವಾಗಿ ಆಚರಿಸಬೇಕಾದ ಕರ್ತವ್ಯಕರ್ಮಗಳನ್ನು ಪ್ರತಿಪಾದಿಸುತ್ತದೆ. ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತಕ್ಕನುಗುಣವಾದ ಅನೇಕ ಪ್ರಮೇಯಗಳನ್ನು ಈ ಗ್ರಂಥದಲ್ಲಿ ನಾವು ಕಾಣುವೆವು. ಚತುರ್ಮುಖ ಬ್ರಹ್ಮದೇವರಿಗೆ ವಿಷ್ಣುವಿನ ಉಪದೇಶದಿಂದ ಲೋಕದಲ್ಲಿ ಪ್ರಸಿದ್ಧವಾದ ಈ ಗ್ರಂಥವು ಎಲ್ಲ ಪುರಾಣಗಳಂತೆ ಸೂತ-ಶೌನಕರ ಸಂವಾದರೂಪವಾಗಿದೆ.

ಆಚರಣೆಯ ಕುರಿತು ಅನೇಕ ಮಹತ್ತ್ವದ ವಿಚಾರಗಳನ್ನು ತಿಳಿಸುವ ಈ ವಿಷ್ಣುರಹಸ್ಯ ಗ್ರಂಥದಲ್ಲಿಯ ಒಂದೆರಡು ಮಾತುಗಳನ್ನು ತಿಳಿಯೋಣ. ವಿಷ್ಣುದೀಕ್ಷೆಯ ಮಹತ್ತ್ವವನ್ನು ತಿಳಿಸುತ್ತ ಈ ದೀಕ್ಷೆಯು ಬಾಹ್ಯ ಮತ್ತು ಆಂತರಿಕ ಎಂದು ಎರಡು ವಿಧವಾಗಿದೆ. ಆಂತರಿಕ ದೀಕ್ಷೆಯನ್ನು ಈ ವಿಧವಾಗಿ ನಿರೂಪಿಸುತ್ತಾರೆ—

अयं सर्वेष्टदाता मे सर्वारिष्टनिवारकः ।
सर्वोत्कृष्टोऽयमेवैकः तदीयोऽहं स मे पतिः ।
इति ज्ञानं निश्चितं यद् सादीक्षाऽभ्यन्तरामता ।

ಪರಮಾತ್ಮನು ನನ್ನ ಎಲ್ಲ ಕಷ್ಟಗಳನ್ನು ಪರಿಹರಿಸಿ ಸಕಲ ಅಭೀಷ್ಟಗಳನ್ನು ಪೂರೈಸುವನು. ಈ ಪರಮಾತ್ಮನೊಬ್ಬನೇ ಸರ್ವೋತ್ತಮನು. ನಾನು ಅವನ ದಾಸ. ಅವನು ನನ್ನ ಸ್ವಾಮಿ. ಈ ವಿಧವಾದ ನಿಶ್ಚಿತಜ್ಞಾನವು ಆಂತರಿಕ ದೀಕ್ಷೆ ಎಂದು ಕರೆಯಲ್ಪಡುತ್ತದೆ.

नामचिह्नादिना देहे वह्निना वा मृदाङ्कनम् ।
सा बाह्या प्रोच्यते दीक्षा...........॥

ಅಗ್ನಿಯಿಂದ ಅಥವಾ ಮೃತ್ತಿಕೆ (ಗೋಪೀಚಂದನ)ಯಿಂದ ದೇಹದಲ್ಲಿ ಊರ್ಧ್ವಪುಂಡ್ರಾದಿಗಳು ಮತ್ತು ಚಕ್ರ, ಶಂಖಾದಿಗಳನ್ನು ಧರಿಸುವುದು ಬಾಹ್ಯದೀಕ್ಷೆ ಎಂದು ಕರೆಯಲ್ಪಡುತ್ತದೆ. ಭಗವಂತನ ಚಿಹ್ನೆಯಾದ ನಾಮ, ಮುದ್ರಾದಿಗಳನ್ನು ಮನೆಯಲ್ಲಿರುವ ಶಿಶುಗಳು, ಪಶುಗಳು, ಪಾತ್ರೆಗಳು, ಆಭರಣಗಳು, ರಥ, ಧ್ವಜ, ಪತಾಕೆ ಮುಂತಾದವುಗಳ ಮೇಲೆ ಅವು ಭಗವದಧೀನವೆಂದು ತಿಳಿಸಲು ಬರೆಯಬೇಕು.

ಸುಮಂಗಲಿಯಾದ ಸ್ತ್ರೀಯು ತನ್ನ ಕಂಠದಲ್ಲಿ ಮಂಗಲಸೂತ್ರವನ್ನು ಧರಿಸಿ, ಅದರಿಂದ ಭಾಗ್ಯಶಾಲಿಯಾಗಿ, ಪತಿಸಹಿತಳಾಗಿ, ಪವಿತ್ರ ದೇಹವುಳ್ಳವಳಾಗುವಳು. ಈ ಮಂಗಳ ಸೂತ್ರದಿಂದ ರಹಿತಳಾದ ವಿಧವೆಯಾದ ಹೆಣ್ಣು ಎಲ್ಲ ಮಂಗಲಕಾರ್ಯಗಳಲ್ಲಿ ನಿಂದಿತ ಳಾಗಿರುವಂತೆ ಮತ್ತು ಅಪವಿತ್ರದೇಹವುಳ್ಳಳಾಗುವಂತೆ, ವಿಷ್ಣುದೀಕ್ಷೆ ರಹಿತವಾದ ವ್ಯಕ್ತಿಯು ಎಲ್ಲ ಶುಭಕಾರ್ಯಗಳಲ್ಲಿ ಅಯೋಗ್ಯನಾಗಿ, ಅಪವಿತ್ರದೇಹವುಳ್ಳವನಾಗುವನು.

ವಿಷ್ಣುರಹಸ್ಯದ ಮುಂದಿನ ಮಾತು ನಮ್ಮೆಲ್ಲರ ಕಣ್ಣನ್ನು ತೆರಸುವಂತಹುದು—

नारी वा पुरुषो वाऽपि तप्तचक्रांकवर्जितः ।
श्मशानकाष्ठवत्तस्य स्पर्शे स्नानं समाचरेत् ।

ತನ್ನ ಗುರುಗಳಿಂದ ತಪ್ತ ಮುದ್ರೆಯನ್ನು ಧಾರಣೆ ಮಾಡಿಸಿಕೊಳ್ಳದ ಪುರುಷ ಅಥವಾ ಸ್ತ್ರೀಯು ಸ್ಮಶಾನದಲ್ಲಿರುವ ಕಟ್ಟಿಗೆಯಂತೆ ಅಪವಿತ್ರ. ಅಂಥವರ ಸ್ಪರ್ಶವಾದರೇ ಸ್ನಾನಮಾಡಿ ಶುದ್ಧರಾಗಬೇಕು.

ಈ ಮಾತನ್ನು ಕಂಡಾಗ ವಿಧ್ಯುಕ್ತರೀತಿಯಲ್ಲಿ ಗುರುಗಳ ಬಳಿ ಹೋಗಿ ತಪ್ತ ಮುದ್ರಾಧಾರಣ ಮಾಡಿಸಿಕೊಳ್ಳುವುದು ಎಷ್ಟು ಮುಖ್ಯವೆಂದು ತಿಳಿದುಬರುತ್ತದೆ. ಮುದ್ರಾರಿಗಳ ಧಾರಣೆ ಮಾಡಿಸಿಕೊಳ್ಳದ ನಿಂದಿತವಾದ ವ್ಯಕ್ತಿಯ ಸ್ಪರ್ಶವಾದ ಯಾವ ವಸ್ತುವನ್ನು ದೇವತೆಗಳಾಗಲಿ, ಪಿತೃಗಳಾಗಲಿ ನಾಯಿಯ ಸ್ಪರ್ಶವಾದ ವಸ್ತುವಿನಂತೆ ಸ್ವೀಕರಿಸುವುದಿಲ್ಲ. ಈ ಪ್ರಕಾರ ವಿಷ್ಣುರಹಸ್ಯ ಗ್ರಂಥವು ಆಂತರಿಕ ದೀಕ್ಷೆ ಮತ್ತು ಬಾಹ್ಯ ದೀಕ್ಷೆಯ ಮಹತ್ತ್ವವನ್ನು ಸ್ಫುಟವಾಗಿ ಪ್ರತಿಪಾದಿಸುತ್ತದೆ.

ಇಂತಹ ನೂರಾರು ಅತಿಮಹತ್ವದ ವಿಚಾರಗಳನ್ನು ತಿಳಿಸುವ ಗ್ರಂಥವು ವಿಷ್ಣುರಹಸ್ಯವು. ಈ ಗ್ರಂಥವು ಸುಮಾರು 25 ವರ್ಷಗಳ ಹಿಂದೆ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದಿಂದ ಪ್ರಕಟಿತವಾಗಿತ್ತು. ಆದರೆ ಪ್ರತಿಗಳು ಮುಗಿದಿದ್ದರಿಂದ ಪುಸ್ತಕಕ್ಕೆ ಬಹಳ ಬೇಡಿಕೆ ಇತ್ತು. ಇದನ್ನು ತಿಳಿದು ಸಂಘದವರು ಈ ಗ್ರಂಥವನ್ನು ಪುನರ್ಮುದ್ರಿಸಲು ನಿರ್ಣಯಿಸಿದ್ದು ಸುತ್ಯವಾದ ಕಾರ್ಯವಾಗಿದೆ. ಗ್ರಂಥವನ್ನು ಅನುವಾದಿಸಿದ ದಿ|| ಶ್ರೀ ಬಿ. ಭೀಮರಾಯರು ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ಅನುವಾದಿಸಿರುವರು. ಅನೇಕ ಗ್ರಂಥಗಳ ಅನುವಾದ ಮೂಲಕ ಮಾಧ್ವಸಮಾಜಕ್ಕೆ ಚಿರಪರಿಚಿತರಾಗಿರುವ ಶ್ರೀ ಭೀಮರಾಯರು ಅನೇಕ ಪೀಠಾಧಿಪತಿಗಳಿಂದಲೂ ಸಹ ಸನ್ಮಾನಿತರಾಗಿರುವರು. ಭಾಗವತ ಸಾರೋದ್ಧಾರ, ಸತತ್ತ್ವ ರತ್ನಮಾಲಾ ಮುಂತಾದ ಗ್ರಂಥಗಳನ್ನು ಪುನರ್ ಮುದ್ರಿಸಿರುವ ಸಂಘದವರು ಇದೀಗ ವಿಷ್ಣುರಹಸ್ಯವನ್ನು ಪುನರ್ಮುದ್ರಿಸುತ್ತಿರುವುದು ಅತ್ಯಂತ ಶ್ಲಾಘನೀಯವಾಗಿದೆ. ಇದರಿಂದ ಶ್ರೀ ಭೀಮರಾಯರು ಮಾಡಿದ ಕಾರ್ಯದ ಪರಿಚಯ ಜನರಿಗೆ ಆಗುವುದರ ಜತೆಗೆ ಶ್ರೀ ಮಧ್ವಾಚಾರ್ಯರ ಸೇವೆಯು ಆಗುತ್ತದೆ. ಭಗವಂತನು ಶ್ರೀ ಭೀಮರಾಯರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಸಂಘದ ಪದಾಧಿಕಾರಿಗಳಿಗೆ ದೀರ್ಘಾಯುಷ್ಯ, ಧಾರ್ಮಿಕ ಶ್ರದ್ಧಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುವ

ದಾವಣಗೆರೆ — ಹರಿಭಕ್ತ ಸೇವಕ

ದಿನಾಂಕ 3-7-2003 — ವೆಂಕಟಗಿರೀಶಾಚಾರ್ಯ, ಎ. ಎಸ್.

### ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘದ ಗ್ರಂಥಗಳ ಮರು ಮುದ್ರಣ ಕಾರ್ಯಕ್ಕೆ ಉದಾರವಾಗಿ ಹಣ ದಾನಮಾಡಿರುವ ಮಹನೀಯರುಗಳು

| | | |
|---|---|---|
| 1. | ಶ್ರೀ ಶ್ರೀನಿವಾಸ ಆರ್. ಪ್ರಹ್ಲಾದ್ ಮತ್ತು ಶ್ರೀಮತಿ ಲೀಲಾ ಪ್ರಹ್ಲಾದ್ (USA $ 500) | ರೂ. 23,475 |
| 2. | ಶ್ರೀ ಆನಂದ ಪಡಿ, ಬೆಂಗಳೂರು | 1,000 |
| 3. | ಶ್ರೀ ರಮೇಶ ಪಡಿ, ಬೆಂಗಳೂರು | 1,000 |
| 4. | ಶ್ರೀಮತಿ ಶಾಂತಾಬಾಯಿ ಪಡಿ, ಬೆಂಗಳೂರು | 1,000 |
| 5. | ಶ್ರೀ ಮಧು ಪಡಿ, ಬೆಂಗಳೂರು | 1,000 |
| 6. | ಶ್ರೀಮತಿ ಉಷಾಪ್ರಕಾಶ, ಬೆಂಗಳೂರು | 500 |
| 7. | ಬಿ. ವಾಸುದೇವಮೂರ್ತಿ, ಬೆಂಗಳೂರು | 1,250 |
| 8. | ಶ್ರೀ ಕೆ. ಜಿ. ಶ್ರೀವತ್ಸ, ಬೆಂಗಳೂರು | 2,000 |
| 9. | ಶ್ರೀಮತಿ ಕಮಲಾಬಾಯಿ, ಬೆಂಗಳೂರು | 500 |
| 10. | ಶ್ರೀ ಎಂ. ಮುರಳೀಧರ, ಬೆಂಗಳೂರು | 2,500 |
| 11. | ಶ್ರೀ ಎಂ. ಹೆಚ್. ಪ್ರಸಾರ್, ಬೆಂಗಳೂರು | 5,000 |
| 12. | ಶ್ರೀ ಎಸ್. ಆರ್. ನಾಗರಾಜ, ಬೆಂಗಳೂರು | 2,000 |
| 13. | ಶ್ರೀ ಗುರುಪ್ರಸಾದ್, ಬೆಂಗಳೂರು | 10,000 |
| 14. | ಶ್ರೀ ಹೆಚ್. ಪಿ. ವಿಜಯ, ಕುಮಾರಪಟ್ಟಣ | 1,000 |
| 15. | ಶ್ರೀ ಪ್ರಫುಲ್ಲ ಪಂಚಾಂಗಮ್, ಬೆಂಗಳೂರು | 1,000 |
| 16. | ಶ್ರೀ ಪಿ. ಅಜಿತ್, ಬೆಂಗಳೂರು | 2,000 |
| 17. | ಶ್ರೀ ಜಿ. ವಿಜಯಾನಂದ, ಬೆಂಗಳೂರು | 5,000 |
| 18. | ಶ್ರೀಮತಿ ಶೋಭಾ ರವಿ, ಬೆಂಗಳೂರು | 1,000 |
| 19. | ಶ್ರೀ ಬಿ. ವಿ. ಹನುಮೇಶ್, ರಾಂಚಿ | 1,000 |
| 20. | ಶ್ರೀ ಗುರುರಾಜಾಚಾರ್ಯ ಹೆಚ್. ಮಠದ, ದಾವಣಗೆರೆ | 1,000 |
| 21. | ಶ್ರೀ ಬಿ. ಆರ್. ಶ್ರೀನಾಥ, ಮೈಸೂರು | 2,000 |
| 22. | ಶ್ರೀ ಎ. ಹೆಚ್. ಕೃಷ್ಣಮೂರ್ತಿ, ಬೆಂಗಳೂರು | 1,000 |
| 23. | ಶ್ರೀ ಕೆ. ಮುಕುಂದಾಚಾರ್, ಬೆಂಗಳೂರು | 500 |
| 24. | ಶ್ರೀಮತಿ ವಸುಂಧರಾ ಲಕ್ಷ್ಮಣ, ಬಳ್ಳಾರಿ | 3,000 |
| 25. | ಶ್ರೀಮತಿ ಶ್ರುತಿ ನಾರಾಯಣ, ಬಳ್ಳಾರಿ | 2,000 |
| 26. | ಶ್ರೀ ವಿಜಯಸಿಂಹ, ಬಳ್ಳಾರಿ | 2,000 |
| 27. | ಡಾ|| ಆರ್. ಪಿ. ಡಂಬಳ, ಬೆಂಗಳೂರು | 1,000 |

# ವಿಷಯಸೂಚೀ

ನಿರೂಪಣೆ; ಲೋಕಾನುಭವಗಳಿಂದ ಸಹ ಸಿದ್ಧವಾಗುವ ಶ್ರೀವಿಷ್ಣುಮಾಯಾ (ಶಕ್ತಿಯ) ವೈಭವದ ವರ್ಣನೆ; ಶ್ರೀವಿಷ್ಣುವೇ ಸರ್ವವಿದ್ಯಾ ಪ್ರವರ್ತಕ—ಆತನೇ ಮುಖ್ಯ ಜಗದ್ಗುರು; ಶ್ರೀವಿಷ್ಣುಮಹಿಮೆಗಳ ಶ್ರವಣ, ಮನನಾದಿಗಳಿಂದ ಆತನ ಸಾಕ್ಷಾದ್ದರ್ಶನ ಲಾಭ—ಪ್ರಾರಬ್ಧ ಭೋಗಾನಂತರ ಮೋಕ್ಷ. ಪುಟ 65–83

ಅಧ್ಯಾಯ ೫—ಸೃಷ್ಟ್ಯಾದಿಕಾರಣಕಥನ. ಶ್ಲೋಕಸಂಖ್ಯಾ ೧೭

ಪೂರ್ಣಾನಂದನಾದರೂ ಶ್ರೀವಿಷ್ಣುವು ಸೃಷ್ಟ್ಯಾದಿಗಳಲ್ಲಿ ತೊಡಗುವುದು ಯುಕ್ತವಾಗುತ್ತದೆ; ಆನಂದದಿಂದಲೇ ಪ್ರವೃತ್ತಿ—ಆನಂದದ ಲೇಶಾಂಶದಿಂದ ಜಗತ್ತಿನ ಸೃಷ್ಟ್ಯಾದಿ ಸರ್ವವೂ ಸಾಧ್ಯ; ದಯಾಸಮುದ್ರನಾದ್ದರಿಂದ ಜೀವರ ಪ್ರಯೋಜನಕ್ಕಾಗಿ-ಅವರವರ ಗತಿಗಳನ್ನು ಹೊಂದಿಸಲು ಜಗತ್ತಿನ ಸರ್ವಕರ್ತನಾಗಿ ಪ್ರವರ್ತಿಸುವನು ಪುಟ 84–91

ಅಧ್ಯಾಯ ೬—ಸ್ವಾತಂತ್ರ್ಯಾದ್ಯುಪಪಾದನ. ಶ್ಲೋಕಸಂಖ್ಯಾ ೨೭

ಜೀವರಿಗೆ ಭಿನ್ನಭಿನ್ನ ಗತಿಗಳನ್ನು ಕೊಡುವುದರಿಂದ ಶ್ರೀವಿಷ್ಣುವು ವೈಷಮ್ಯಾದಿ ದೋಷಿಯೆಂದು ತಿಳಿಯುವುದು ಸರಿಯಲ್ಲ—ಆತನು ಸರ್ವಸಮನು; ಕರ್ಮಾನುಸಾರ ಫಲಪ್ರದನೆಂಬುದರಿಂದ ಶ್ರೀವಿಷ್ಣುವಿನ ಸ್ವಾತಂತ್ರ್ಯಕ್ಕೆ ಹಾನಿ ಇಲ್ಲ; ಜಡಕರ್ಮವು ಫಲಪ್ರದವಾಗಲು ಸ್ವತಂತ್ರ ಪ್ರಭುವೊಬ್ಬನನ್ನು ಅಪೇಕ್ಷಿಸುತ್ತದೆ; ಶ್ರುತಿಸ್ಮೃತಿಗಳೇ ಶ್ರೀಹರಿಯ ಆಜ್ಞೆಗಳು—ಅವುಗಳನ್ನು ಪಾಲಿಸುವುದರಿಂದಲೇ ಆತನ ಪ್ರಸನ್ನತೆ—ಅದಿಲ್ಲದೇ ಮೋಕ್ಷವಿಲ್ಲ; ಹರಿಭಕ್ತಿಯ ಮಹಿಮೆ—ಹರಿದ್ವೇಷದಿಂದ ತಮಃ ಪ್ರಾಪ್ತಿ; ನವವಿಧ ಭಕ್ತಿ—ನವವಿಧ ದ್ವೇಷಗಳು. ಪುಟ 91–102

ಅಧ್ಯಾಯ ೭—ದೀಕ್ಷಾಧಿಕಾರಕಥನ. ಶ್ಲೋಕಸಂಖ್ಯಾ ೯೭

ಶ್ರುತಿಗಳು (ವೇದಗಳು) ಮತ್ತು ತಂತ್ರಗಳು (ಸ್ಮೃತಿಗಳು) ಬ್ರಾಹ್ಮಣನಿಗೆ ಎರಡು ಕಣ್ಣಿದ್ದಂತೆ; ಉಭಯಜ್ಞಾನವೂ ಅವಶ್ಯಕ; ವೇದಗಳು ಶ್ರೀವಿಷ್ಣುಮಹಿಮೆಗಳನ್ನು ತಿಳಿಸಿಕೊಟ್ಟರೆ, ತಂತ್ರಗಳು ಪೂಜಾರ್ಥವಾಗಿ ಆತನನ್ನು ಆಹ್ವಾನಿಸುವ ವಿಧಾನವನ್ನು ನಿರೂಪಿಸುತ್ತವೆ; ತಂತ್ರಗಳು ಪೂಜಾವಿಧಾನಗಳನ್ನೂ, ಅನ್ಯದೇವತೆಗಳನ್ನು ಆರಾಧಿಸಿ ಪ್ರಸನ್ನೀಕರಿಸಿಕೊಳ್ಳುವ ಮಾರ್ಗವನ್ನೂ ನಿರೂಪಿಸುತ್ತವೆ; ಆಗಮಗಳು ಪಾಂಚರಾತ್ರ, ಪಾಶುಪತಾದಿ ನಾನಾ ಪ್ರಕಾರವಾಗಿವೆ; ಪಂಚರಾತ್ರಾಗಮದ ವಕ್ತೃವು ಸ್ವಯಂ ಶ್ರೀವಿಷ್ಣುವು—ವಿಷ್ಣುಭಕ್ತರು ಇದನ್ನನುಸರಿಸಿ, ಮೋಕ್ಷವನ್ನು ಪಡೆಯುತ್ತಾರೆ; ರಾಜಸ, ತಾಮಸರು ಅನ್ಯಾಗಮಗಳನ್ನಾಶ್ರಯಿಸಿ, ಕ್ಷುದ್ರಸಿದ್ಧಿಗಳಿಂದ ಪ್ರಲೋಭಿತರಾಗಿ, ನಷ್ಟರಾಗುತ್ತಾರೆ; ತಂತ್ರಜ್ಞಾನವಿಲ್ಲದೇ ವೇದಜ್ಞಾನದ ಪರಿಪೂರ್ತಿಯಿಲ್ಲ; ಮೋಕ್ಷಕ್ಕೆ ಏಕೈಕ ಹೇತುವಾದ ಶ್ರೀವಿಷ್ಣುಪ್ರಸನ್ನತೆಗೆ, ವಿಷ್ಣುದೀಕ್ಷೆಯು ಅತ್ಯವಶ್ಯಕ; ಬಾಹ್ಯಾಂತರ ದೀಕ್ಷೆಗಳ ವಿವರಣೆ; ಅಜ್ಞಾನಿಗೆ (ಜಿಜ್ಞಾಸುವಿಗೆ) ಬಾಹ್ಯದೀಕ್ಷೆಯು ಅವಶ್ಯಕ; ಜ್ಞಾನಿಗೆ ಉಭಯವೂ ಅವಶ್ಯಕ; ಬಾಹ್ಯವಿಷ್ಣುದೀಕ್ಷೆಯುಳ್ಳವರು ಶ್ರೀವಿಷ್ಣುಪ್ರತಿಮೆಗಳು—ಅವರನ್ನು ಉಪೇಕ್ಷಿಸಿದರೆ, ಯಥಾಯೋಗ್ಯವಾಗಿ ಸತ್ಕರಿಸಿ ಪೂಜಿಸದಿದ್ದರೆ, ವಿಷ್ಣುವಿನ ಅವಜ್ಞೆಯ ಮಹಾದೋಷವುಂಟಾಗುತ್ತದೆ; ವಿಷ್ಣುಭಕ್ತಿಯುಳ್ಳ ಸರ್ವಮುಮುಕ್ಷುಗಳೂ

(ತಪ್ತಮುದ್ರಾಧಾರಣಾದಿ) ಬಾಹ್ಯದೀಕ್ಷೆಯಿಲ್ಲದೇ, ಮೇಲ್ಕಂಡ ಯಾವ ಕರ್ಮಾಚರಣೆಗೂ ಅಧಿಕಾರವಿಲ್ಲ—ವೇದಾನಧಿಕಾರಿಗಳಿಗೆ ತಂತ್ರೋಕ್ತ ಪೂಜಾದಿಗಳಿದ್ದರೂ, ಬಾಹ್ಯದೀಕ್ಷೆಯಿಲ್ಲದೇ ಆಚರಿಸಿಯೂ ಅವು ವ್ಯರ್ಥವಾಗುತ್ತವೆ. ಪುಟ 150–174

ಅಧ್ಯಾಯ ೧೦—ಪ್ರತಿಮಾಪೂಜಾವಿವೇಕ. ಶ್ಲೋಕಸಂಖ್ಯಾ ೩೪

ವಿಷ್ಣುಪ್ರತಿಮೆಗಳು ಚಲ ಮತ್ತು ಅಚಲಗಳೆಂದು ದ್ವಿವಿಧ—ಅಚಲಪ್ರತಿಮೆಗಳು ದ್ವಿವಿಧ—ಸಹಜ, ಆಹಿತಗಳೆಂದು; ಸಹಜಪ್ರತಿಮೆಗಳು ತ್ರಿವಿಧ—ಕ್ಷೇತ್ರ, ತೀರ್ಥ, ಶಾಲಗ್ರಾಮಾದಿ ಶಿಲಾರೂಪಗಳೆಂದು; ಸಹಜಪ್ರತಿಮೆಗಳಲ್ಲಿ ಶ್ರೀವಿಷ್ಣುವನ್ನು ಪೂಜಿಸಲು ಸರ್ವರೂ ಅಧಿಕಾರಿಗಳು ಮತ್ತು ಆವಾಹನಾದಿ ಅವಶ್ಯಕವಿಲ್ಲ; ಸುವರ್ಣ, ರಜತಾದಿ ಲೋಹನಿರ್ಮಿತ ಪ್ರತಿಮೆಗಳಲ್ಲಿ ವೈದಿಕ ತಾಂತ್ರಿಕ ಮಂತ್ರಗಳಿಂದ ಶ್ರೀವಿಷ್ಣುಸನ್ನಿಧಾನವನ್ನು ಪ್ರತಿಷ್ಠಿಸುವುದು—ಆಹಿತಪ್ರತಿಮೆಯು—ಈ ಪೂಜೆಯಲ್ಲಿ ಸ್ತ್ರೀಶೂದ್ರರಿಗೆ ಅಧಿಕಾರವಿಲ್ಲ; ದ್ವಿಜರು ಮಾತ್ರ ಅಧಿಕಾರಿಗಳು; ಪ್ರತಿಮಾಪೂಜೆಗೆ ಅಧಿಕಾರ—ಅವಶ್ಯಕವಾದ ಸದ್ಗುಣಗಳು; ಅವುಗಳಿಲ್ಲದಿದ್ದರೆ ಸನ್ನಿಧಾನವು ನಷ್ಟವಾಗುತ್ತದೆ—೧೦ ದಿನಗಳು ಪೂಜೆ ನಿಂತರೂ ನಷ್ಟವಾಗುತ್ತದೆ.

ಪುಟ 174–187

ಅಧ್ಯಾಯ ೧೧—ಕರ್ಮಭೇದಕಥನ. ಶ್ಲೋಕಸಂಖ್ಯಾ ೮೧

ಕರ್ಮಸ್ವರೂಪ—ಪಾಪಪುಣ್ಯಗಳೆಂದು ದ್ವಿವಿಧ; ಉಭಯವೂ, ಮಾನಸಿಕ, ವಾಚನಿಕ ಮತ್ತು ಕಾಯಿಕವೆಂದು ತ್ರಿವಿಧ; ಸತ್ಯ–ಅನೃತಗಳ ಸ್ವರೂಪ, ಕಾಯಿಕ ಕರ್ಮ—ನಿತ್ಯ, ನೈಮಿತ್ತಿಕ, ಕಾಮ್ಯವೆಂದು ತ್ರಿವಿಧ; ಈ ತ್ರಿವಿಧಕರ್ಮಗಳಲ್ಲಿ ಪುಣ್ಯಾಪಾಪಗಳ ವಿವೇಕ; ಸಾತ್ವಿಕ, ರಾಜಸ, ತಾಮಸ ಭೇದದಿಂದ ಪುಣ್ಯಾಪಾಪಗಳು ಪುನಃ ತ್ರಿವಿಧ—ಇವುಗಳಲ್ಲಿ ಸಬೀಜ, ನಿರ್ಬೀಜ ಪ್ರಭೇದ; ಪಾಪಗಳಲ್ಲಿ ಸಹ ಸಾತ್ವಿಕಾದಿ ಪ್ರಭೇದಗಳಿವೆ—ಅವುಗಳ ವಿವರ; ಸಾತ್ವಿಕಾದಿ ಪುಣ್ಯಗಳಲ್ಲಿ ಉತ್ತಮಾಧಮಮಧ್ಯಮ ಭೇದದಿಂದ ಪುನಃ ತ್ರೈವಿಧ್ಯ; ಆಚಾರಗಳು ಮತ್ತು ಪ್ರಧಾನ ಕರ್ಮಗಳು—ಆಚಾರಗಳು ಅಂಗ—ಪೂರ್ಣಾಂಗಯುಕ್ತವಾದುದೇ ಉತ್ತಮ ಇತ್ಯಾದಿ; ದೇಶಕಾಲಾದಿ ವಿಶೇಷಗಳಿಂದ ಸಹ ವಿವಿಧ ಕರ್ಮಗಳಲ್ಲಿ ಪುನಃ ಪ್ರಭೇದಗಳು—ಹೀಗೆ ಸಿದ್ಧವಾಗುವ ಅಸಂಖ್ಯ ಕರ್ಮಪ್ರಭೇದಗಳನ್ನು ವಿಷ್ಣ್ವನುಗ್ರಹದಿಂದ ಯಮರಾಜನು ತಿಳಿಯುತ್ತಾನೆ—ಬ್ರಹ್ಮನಂತೂ ಸರ್ವಜ್ಞನೇ ಇರುವನು; ಅನಂತಕರ್ಮ ಪ್ರಭೇದಗಳಲ್ಲಿ ವಿಷ್ಣ್ವರ್ಪಿತ—ಅನ್ಯಾರ್ಪಿತ—ಅನರ್ಪಿತವೆಂಬ ಭೇದವು, ಫಲಪ್ರಾಪ್ತಿಯಲ್ಲಿ ಮುಖ್ಯಹೇತುವಾಗಿರುತ್ತದೆ; ಪಾಪಕರ್ಮಪ್ರಭೇದಗಳಲ್ಲಿ ಪಶ್ಚಾತ್ತಾಪ—ಧಾರ್ಷ್ಟ್ಯ—ಉತ್ಸಾಹ ನಿಮಿತ್ತತ್ರೈವಿಧ್ಯವು ಪಾಪಫಲದಲ್ಲಿ ಹೇತುವಾಗುತ್ತದೆ; ಕರ್ಮಗಳು ಪ್ರವಾಹ ನಿತ್ಯ ಮತ್ತು ಅನಾದಿ; ಫಲವನ್ನು ಅನುಭವಿಸುವವರು ತ್ರಿವಿಧಜೀವರು; ಪ್ರಾರಬ್ಧ, ಸಂಚಿತ, ಆಗಾಮಿಗಳೆಂದು ಕರ್ಮವು ಪುನಃ ತ್ರಿವಿಧ; ಕರ್ಮಗಳ ಫಲವು ಸಾಮಾನ್ಯವಾಗಿ ಜನ್ಮಾಂತರದಲ್ಲಿ ಮಾತ್ರ—ಕ್ರಿಯಮಾಣ ಕ್ರಮಕ್ಕೆ ಸಂಚಿತವು ಸಹಕಾರಿಯಾದಾಗ, ಫಲವು ತತ್ಕಾಲದಲ್ಲಿ ದೊರೆಯುವುದೂ ಉಂಟು; ಜಡಸೃಷ್ಟಿಯ ವೈಚಿತ್ರ್ಯ—ಜೀವರ ಕರ್ಮ

ಅಧ್ಯಾಯ ೧೫—ಶ್ರೀಹರಿಯ ಸ್ವಾತಂತ್ರ್ಯವರ್ಣನ. ಶ್ಲೋಕಸಂಖ್ಯಾ ೪೯

ಸರ್ವಕರ್ತನಾದ ಶ್ರೀಹರಿಯೇ ಸರ್ವಜೀವರಿಂದ ಸಕಲಕರ್ಮಗಳನ್ನು ತಾನೇ ಮಾಡಿ, ಮಾಡಿಸುವವನಾದರೆ, ಜೀವರಿಗೇಕೆ ಕರ್ಮಫಲಭೋಗ? ಸಾತ್ವಿಕಾದಿ ಜೀವಪ್ರಭೇದವು ಜೀವಸ್ವರೂಪವೇ ಆದುರು, ಅದು ನಿತ್ಯ; ಹರಿಭಕ್ತಿ-ಹರಿದ್ವೇಷಗಳು, ಸಾತ್ವಿಕ, ತಾಮಸ ಜೀವರ ನೈಸರ್ಗಿಕ ಧರ್ಮಗಳು—ತದನುಸಾರವಾದ ಕರ್ಮಪ್ರವೃತ್ತಿಯೆಂಬುದು. ಸಾಮಾನ್ಯ ನಿಯಮ—ಸಹಕಾರಿ ಕಾರಣಗಳ ಪ್ರಭಾವಾನುಸಾರವಾಗಿ, ತದ್ವಿರುದ್ಧಕರ್ಮಗಳ ಸಂಭವ; ಹರಿಭಕ್ತರ (ಸಾತ್ವಿಕ ಜೀವರ) ತ್ರೈವಿಧ್ಯ; ನಿಷ್ಕಾಮಭಕ್ತರು, ಉತ್ತಮರು—ಮೋಕ್ಷಾರ್ಥವಾಗಿ ಭಕ್ತಿಯಿಂದ ಸೇವಿಸುವವರು, ಮಧ್ಯಮರು—ಅನ್ಯಫಲಾಪೇಕ್ಷೆಯಿಂದ ಭಕ್ತಿಮಾಡುವವರು, ಅಧಮರು; ತ್ರಿವಿಧ ಭಕ್ತರ ಲಕ್ಷಣಗಳು—ಏಕಾಂತ ಭಕ್ತರು; ಶ್ರೀಹರಿಯೇ ಸ್ವತಂತ್ರ ಸರ್ವ ಕರ್ತನು; ಪೂಜ್ಯ ಪೂಜಕನೂ ಆತನೇ; ಜೀವರಿಗೆ ಸ್ವಾತಂತ್ರ್ಯದಾನ—ತನ್ನಿಮಿತ್ತಕ ಫಲಭೋಗ; ತಾತ್ವಿಕದೇವದೈತ್ಯರು ಅವರಲ್ಲಿ ಸ್ಥಾಪಿತವಾದ ಸ್ವಾತಂತ್ರ್ಯಾಂಶಗಳ ಪ್ರಮಾಣದ ಕರ್ಮಫಲಕ್ಕೆ ಪಾತ್ರರು; ಕರ್ಮಫಲ ಮುಖ್ಯಭೋಕ್ತನು, ಶ್ರೀಹರಿಯೇ; ಸ್ವತಂತ್ರನಾದ್ದರಿಂದ ಪುಣ್ಯಫಲವಾದ ಸುಖವನ್ನು ಮಾತ್ರ ಭೋಗಿಸುತ್ತಾನೆ—ದುಃಖವು ಆತನ ಬಳಿ ಸುಳಿಯಲೂ ಅಸಮರ್ಥವು; ಕಲ್ಯಾದಿ ದೈತ್ಯರ ಪೀಡೆಯಿಂದಲೇ ದೇವಾದಿ ಸುಜನರಿಗೆ ದುಃಖಪ್ರಾಪ್ತಿ; ಪ್ರಾಣದೇಹಗತ ತತ್ವಾಭಿಮಾನಿ ದೇವತೆಗಳಿಗೆ ಅಸುರಪೀಡೆಗಳಿಲ್ಲ; ಪುಣ್ಯದಿಂದ ಪುಣ್ಯ—ಪಾಪದಿಂದ ಪಾಪ ವೃದ್ಧಿ; ಪರಾಧೀನಕರ್ತರಿಗೂ ಫಲಭೋಗವುಂಟು—ರಾಜ-ಭೃತ್ಯ ನಿದರ್ಶನ; ಶ್ರೀಹರಿಯು ಸರ್ವರಿಗೆ ಸೇವಾನುರೂಪವಾದ ಫಲಪ್ರದನು; ಬ್ರಹ್ಮಾದಿಗಳಿಗೆ ಮಾಡಿದ ಉಪದೇಶವನ್ನು ಉಪಸಂಹರಿಸಿ, ಶ್ರೀ ಹಯಗ್ರೀವನು ಅಂತರ್ಧಾನ ಹೊಂದುವುದು. ಪುಟ 262–283

ಅಧ್ಯಾಯ ೧೬—ಸೂಕ್ಷ್ಮಸೃಷ್ಟಿಕಥನ. ಶ್ಲೋಕಸಂಖ್ಯಾ ೩೦

ಸೂಕ್ಷ್ಮಸೃಷ್ಟಿಯ ವಿವರಗಳನ್ನು ತಿಳಿಯಲು ಬ್ರಹ್ಮನು ಶ್ರೀವಿಷ್ಣುವನ್ನು ಪ್ರಶ್ನಿಸುವುದು; ಮಹತತ್ತ್ವದಿಂದ ಪುರುಷ-ಪ್ರಕೃತಿ, ಸೂತ್ರ-ಭಾರತೀ ಇವರ ಸೃಷ್ಟಿ 'ಪುರುಷ' ಮೊದಲು ಸೃಷ್ಟನಾದ್ದರಿಂದ ಅವನೇ 'ಆದ್ಯಬ್ರಹ್ಮ'ನು; ಅಲ್ಲಿಂದ ಆತನ ೧೦೦ ವರ್ಷ ಆಯುಷ್ಯದ ಗಣನೆ; ೨ ವರ್ಷದ ನಂತರ ಸೂತ್ರನ ಜನ್ಮ—ನಂತರ ೩ ವರ್ಷದ ಮೇಲೆ ಪ್ರಕೃತಿ ಭಾರತಿಯರ ಜನ್ಮ; ಪ್ರಕೃತಿ ಪುರುಷರಿಂದ 'ಜೀವ'ನಾಮಕ ಶೇಷನ ಜನ್ಮ—ವಾಣೀ(ಭಾರತೀ)ಯರಿಂದ 'ಕಾಲ'ನಾಮಕ ಗರುಡನ ಜನ್ಮ—ಉಭಯರ ದೇಹಗಳು ಅಹಂಕಾರ ತತ್ತ್ವ ನಿರ್ಮಿತ; ಪ್ರಕೃತಿ ಜನ್ಮದ ನಂತರ ೨ ವರ್ಷಕ್ಕೆ ಶೇಷ ಗರುಡರ ಜನ್ಮ; ಮಹದಾದಿ ತತ್ವಗಳಲ್ಲಿ ಅರ್ಧಭಾಗ ಅವುಗಳಿಂದ ಸೃಷ್ಟರಾದವರ ದೇಹಗಳ ಉಪಚಯಕ್ಕಾಗಿ ಪ್ರತ್ಯೇಕವಾಗಿಡಲ್ಪಡುವುವು—ಅವು ಸತ್ವಾದಿ ಗುಣಮಿಶ್ರಣದಿಂದ ವೃದ್ಧಿಹೊಂದಿ ತತ್ವಪ್ರಭೇದಗಳ ಉತ್ಪತ್ತಿಗೆ ಕಾರಣವಾಗುವುದು; ಮಹತತ್ತ್ವವು ಸತ್ವಾದಿ ಗುಣಗಳಿಂದ ಸಂಬಂಧಿಸಲು, ಪ್ರಕೃತಿಯು, ಬ್ರಹ್ಮನ ಸೇವೆಗಾಗಿ, ಗಾಯತ್ರೀ, ಸರಸ್ವತೀ, ಸಾವಿತ್ರೀ ಎಂಬ ಮೂರು ರೂಪಗಳನ್ನು ಹೊಂದುವುದು; ಬ್ರಹ್ಮನು ವೀರ್ಯಾಧಾನ—ಶೇಷಜನ್ಮದ ೧ ವರ್ಷದ ನಂತರ, ಬ್ರಹ್ಮನೇ ಒಬ್ಬಳಲ್ಲಿ 'ವಿಧಿ' ನಾಮಕನಾಗಿ ಜನಿಸುವುದು; ಇನ್ನೊಬ್ಬಳಲ್ಲಿ 'ಮುಖ್ಯಪ್ರಾಣ' (ವಾಯು) ಜನ್ಮ; ಮೂರನೆಯವಳಲ್ಲಿ

ವೈಕಾರಿಕಾಹಂಕಾರತತ್ತ್ವಾಂಶದಿಂದ ಶಿವನ ಜನ್ಮ; 'ಸೂತ್ರ'ನಿಂದ ತೈಜಸಾಹಂಕಾರತತ್ತ್ವಾಂಶದಿಂದ, ಶಿವನ ೨ನೇ ರೂಪದ ಜನ್ಮ; ಶೇಷನಿಂದ ತಾಮಸಾಹಂಕಾರಾಂಶ ದೇಹದಿಂದ ೩ನೇ ರೂಪದಿಂದ ಶಿವನ ಜನ್ಮ; ವೈಕಾರಿಕ ಶಿವನು ವಿಷ್ಣುವೆಂದೂ, ತೈಜಸ ಶಿವನು ಬ್ರಹ್ಮನೆಂದೂ, ತಾಮಸಶಿವನು ಮಹೇಶ್ವರನೆಂದೂ ವ್ಯವಹರಿಸಲ್ಪಡುವುದೂ ಉಂಟು; ವೈಕಾರಿಕಾದಿ ಅಹಂಕಾರತತ್ತ್ವಾಂಶಗಳಿಂದ ಉಮೆಯೂ ೩ ರೂಪಗಳಿಂದ ಶಿವನನ್ನು ಹೊಂದುವುದು; ವೈಕಾರಿಕ ಉಮೆಯಿಂದ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳೂ; ವಿಷ್ಣುನಾಮಕ ಶಿವನಿಂದ, ವೈಕಾರಿಕ ತತ್ತ್ವಾಂಶದೇಹವುಳ್ಳ ಇಂದ್ರ–ಕಾಮರ ಜನ್ಮ; ಮತ್ತು ಇತರ ಅಹಂಕಾರಿಕ ಪ್ರಾಣ ಮೊದಲಾದ ತತ್ತ್ವದೇವತೆಗಳ ಜನ್ಮ, ಹಾಗೂ ಮನಸ್ತತ್ತ್ವದ ಉತ್ಪತ್ತಿ; ತೈಜಸ ಉಮೆಯಿಂದ, ಪಂಚಭೂತಗಳೂ ಪಂಚತನ್ಮಾತ್ರೆಗಳೂ ಹುಟ್ಟುವುದು; ವೈಕಾರಿಕ ಉಮೆಯಿಂದ ಜನಿಸಿದ ತಾತ್ತ್ವಿಕದೇವತೆಗಳು, ತಮ್ಮಿಂದ ನಿಯಮ್ಯ ತತ್ತ್ವಗಳಲ್ಲಿ (ಇಂದ್ರಿಯ, ಭೂತ, ತನ್ಮಾತ್ರೆಗಳಲ್ಲಿ) ಪ್ರವೇಶ; ಶ್ರೀವಿಷ್ಣುವೂ ಬಹುರೂಪಗಳನ್ನು ಧರಿಸಿ, ಎಲ್ಲ ತತ್ತ್ವ ಮತ್ತು ತತ್ತ್ವಾಭಿಮಾನಿಗಳಲ್ಲಿ ಪ್ರವೇಶ; ಈ ಅವಧಿಯಲ್ಲಿ ಮುಖ್ಯಪ್ರಾಣನಿಂದ ಇಂದ್ರಾದಿ ದೇವತೆಗಳೂ ಅಶ್ವಮೇಧಾದಿ ಯಜ್ಞಾಭಿಮಾನಿಗಳೂ, ಸನಂದಾದಿ ವಿಷ್ಣುಪಾರ್ಷದರೂ ವಿಷ್ವಕ್ಸೇನ ಮೊದಲಾದವರೂ ಜನಿಸುವುದು; ಇಲ್ಲಿಗೆ ಬ್ರಹ್ಮನಿಗೆ ೧೦ ವರ್ಷಗಳಾದವು.

ಪುಟ 283–296

ಅಧ್ಯಾಯ ೧೭—ಪ್ರಕೃತಿ ಪ್ರಾಕೃತಾದಿ ವಿಭಾಗಕಥನ. ಶ್ಲೋಕಸಂಖ್ಯಾ ೩೩

ಪ್ರಕೃತಿ, ಪ್ರಾಕೃತ, ಅಪ್ರಾಕೃತವಸ್ತುಸ್ವರೂಪ ವರ್ಣನೆ; ಯಥಾರ್ಥಜ್ಞಾನಪ್ರಮೇಯ; ಪ್ರಮೇಯ ವಿಭಾಗ—ಚೇತನ, ಅಚೇತನ; ಚೇತನ ಲಕ್ಷಣ; ಅದು ಅಪ್ರಾಕೃತವು; ಚೇತನ ವಿಭಾಗ—ಸ್ವತಂತ್ರ, ಅಸ್ವತಂತ್ರ; ಇವುಗಳ ಲಕ್ಷಣ; ವಿಷ್ಣು ಒಬ್ಬನೇ ಸ್ವತಂತ್ರ—ಉಳಿದುದೆಲ್ಲವೂ ಆತನ ಅಧೀನ; ಅಭಾವವು ಅಚೇತನ—ಭಾವಾಭಾವಗಳ ಲಕ್ಷಣ; ಭಾವವು ದ್ವಿವಿಧ—ಚೇತನ, ಅಚೇತನವೆಂದು; ಅಚೇತನ ವಿಭಾಗ—ನಿತ್ಯ, ಅನಿತ್ಯ, ನಿತ್ಯಾನಿತ್ಯಲಕ್ಷಣ; ಚೇತನವು ನಿತ್ಯ; ಅಚೇತನವು ನಿತ್ಯ, ಅನಿತ್ಯವೆಂದು ದ್ವಿವಿಧ; ಮೂಲಪ್ರಕೃತಿ, ಶುದ್ಧಸತ್ತ್ವ, ಶುದ್ಧತಮ, ಅವ್ಯಾಕೃತಾಕಾಶ, ಕಾಲಪ್ರವಾಹ, ಅಕಾರಾದಿ ವರ್ಣ ಸಮೂಹ, ಪದವಾಕ್ಯಾತ್ಮಕ ವೇದಗಳು, ಈ ಎಲ್ಲವೂ ನಿತ್ಯ; ವೈಕುಂಠಾದಿ ತ್ರಿಧಾಮಗಳ ಶ್ರೀಭಾಗಗಳು, ಅಲ್ಲಿರುವ ರಮಾನಾರಾಯಣರ ವಸ್ತ್ರಾಭರಣಾದಿಗಳೂ ಶುದ್ಧಸತ್ತ್ವಾತ್ಮಕ—ಅನಾದಿ ನಿತ್ಯ ತ್ರಿಧಾಮಗಳ ಭೂದುರ್ಗಾ ಭಾಗಗಳ ಸ್ವರೂಪ; ಶುದ್ಧಸತ್ತ್ವಾತ್ಮಕ ಮತ್ತು ಶುದ್ಧತಮೋಗುಣಾತ್ಮಕ ಲೋಕಗಳು—ಅಲ್ಲಿರುವ ವಸ್ತುಗಳ ವಿವಿಧಾಕಾರ ಮತ್ತು ವರ್ಣಗಳ ಉಪಪನ್ನತೆ; ಗುಣಸಾಮ್ಯ, ಗುಣವೈಷಮ್ಯಗಳ ನಿರೂಪಣೆ; ಅನಿತ್ಯವು ಸಾದಿ, ಅನಾದಿ ಎಂದು ದ್ವಿವಿಧ; ಸೃಷ್ಟವಾದ ಪಂಚಭೂತಾದಿ ಸರ್ವವೂ ಸಾದಿ ಅನಿತ್ಯಗಳು; ಪಂಚತನ್ಮಾತ್ರೆಗಳು, ಪಂಚ ಕರ್ಮೇಂದ್ರಿಯಗಳು ಮತ್ತು ಮನಸ್ಸು ಈ ೧೬ ತತ್ತ್ವಗಳ ಕಲೆಗಳುಳ್ಳ ಲಿಂಗದೇಹವು ಅನಾದಿ ಮತ್ತು ಅನಿತ್ಯ (ನಾಶವುಳ್ಳದ್ದು); ಅಪರೋಕ್ಷಾನಂತರ ಪ್ರಾರಬ್ಧಕರ್ಮವು ಭೋಗದಿಂದ ಮುಗಿಯಲು, ಲಿಂಗಭಂಗವಾಗುವಿಕೆ; ಅಮುಕ್ತ ಜೀವರಿಗೆಲ್ಲ ಲಿಂಗದೇಹವಿದೆ—ಇದು ಅನಾದಿ; ಇದು ಲಯವಾದಾಗ, ತದ್ಗತ

ಸತ್ವಾದಿ ಗುಣಗಳು, (ಷೋಡಶಕಲೆಗಳು ತ್ರಿಗುಣ ವಿಕಾರಗಳಿಂದಾದುವೇ) ಮೂಲ ಪ್ರಕೃತಿಯಲ್ಲಿ ಲೀನವಾಗುತ್ತವೆ; ಪುನಃ ಕ್ರಮವಾಗಿ ತತ್ವಗಳ ಸೃಷ್ಟಿ—ಪುನಃ ವ್ಯುತ್ಕ್ರಮದಿಂದ ಲಯ ಇತ್ಯಾದಿ. ಪುಟ 296–312

ಅಧ್ಯಾಯ ೧೮—ಪ್ರಾಣೇಶ್ವರ ಮಹಿಮಾವರ್ಣನ. ಶ್ಲೋಕಸಂಖ್ಯಾ ೩೦

ತತ್ವಾಭಿಮಾನಿದೇವತೆಗಳು ಸೃಷ್ಟರಾಗುವವರೆಗೆ, ಮೊದಲು ಸೃಷ್ಟವಾದ ತತ್ವಗಳ ಕಾರ್ಯಗಳು ಯಾರಿಂದ ನಿರ್ವಹಿಸಲ್ಪಡುತ್ತವೆ; ಸೃಷ್ಟರಾದ ತತ್ವಾಭಿಮಾನಿಗಳಲ್ಲಿ ವಿವಾದ—ಮುಖ್ಯಪ್ರಾಣನ ಶ್ರೇಷ್ಠತೆ; ಪುರುಷದೇಹ ಪ್ರವೇಶನಿರ್ಗಮನಗಳಿಂದ ಶ್ರೇಷ್ಠತೆಯ ನಿರ್ಣಯ; ಮುಖ್ಯಪ್ರಾಣನು, ಸರ್ವ ಪ್ರಾಣಗಳಲ್ಲಿದ್ದು ಸರ್ವರ ಸರ್ವಚೇಷ್ಟಾಪ್ರದನು—ಸರ್ವಾಧಾರನು; ಸರ್ವರ ದೇಹದಲ್ಲಿ ಸದಾ ಜಾಗ್ರತನಾಗಿರುವನು—ಜೀವರನ್ನು ದೇಹಾಂತರಗಳನ್ನು ಕರ್ಮಾನುಸಾರ ಹೊಂದಿಸುವನೂ ಆತನೇ; ಪ್ರಲಯಕಾಲದಲ್ಲಿ ಸಹ ಪ್ರತಿಭಾತ ಪರಾವರನು; ಶ್ರೀಹರಿಯು ಜಗತ್ಸಂಬಂಧವಾದ ಸೃಷ್ಟ್ಯಾದ್ಯಷ್ಟಕರ್ತೃತ್ವಗಳನ್ನು ಮುಖ್ಯಪ್ರಾಣನನ್ನು ತನ್ನೊಂದಿಗಿಟ್ಟುಕೊಂಡೇ ನಡೆಸುವನು; ಸರ್ವಜೀವರಲ್ಲಿ ಶ್ವಾಸರೂಪ ಮಂತ್ರ ಜಪಕರ್ತನು; ಪ್ರಾಣಾಪಾನಾದಿಗಳಿಂದ ಶರೀರದಲ್ಲಿ ಆಗುವ ಸರ್ವವ್ಯಾಪಾರಗಳನ್ನು ಮಾಡಿ ಮಾಡಿಸುವವನು; ಬಲ-ಜ್ಞಾನ-ಧೈರ್ಯ-ಬುದ್ಧಿ-ಭಕ್ತಿ-ಶ್ರದ್ಧೆಗಳು ಈತನಿಂದಲೇ; ಇತ್ಯಾದಿ ಮಹಾ ಮಹಿಮೋಪೇತನಾದ ಮುಖ್ಯಪ್ರಾಣನಿಗೆ, ಸ್ವಾತಂತ್ರ್ಯಾದಿ ಅನಂತಗುಣಪೂರ್ಣನಾದ ಶ್ರೀವಿಷ್ಣುವೇ ಚೇಷ್ಟಕನು; ದೃಢಭಕ್ತಿ ಮಾತ್ರದಿಂದ ಶ್ರೀವಿಷ್ಣು ಪ್ರಸಾದವು ಲಭ್ಯ.

ಪುಟ 312–324

ಅಧ್ಯಾಯ ೧೯— ತಾಪತ್ರಯ ವರ್ಣನ. ಶ್ಲೋಕಸಂಖ್ಯಾ ೫೨

ತ್ರಿವಿಧ ತಾಪಗಳು—ವಿವರಣೆ; ಸೃಷ್ಟರಾದ ಯಾವ ಜೀವರಿಗೂ ಇವು ತಪ್ಪಿದ್ದಲ್ಲ; ಈ ತಾಪಗಳ ಪರಿಹಾರಕ್ಕೆ ಶ್ರೀವಿಷ್ಣುವನ್ನು ಶರಣುಹೊಂದುವುದೊಂದೇ ಮಾರ್ಗ; ಶರಣಾಗತಿಯ ಲಕ್ಷಣ, ಸಂಸಾರದಲ್ಲಿ ಆಸಕ್ತರಾದ ಜೀವರ ದುಃಖಪ್ರಕಾರಗಳ ನಿರೂಪಣೆ; ವೈರಾಗ್ಯದ ಅಭಾವವೇ ದುಃಖಗಳ ಪ್ರಧಾನ ಕಾರಣ; ದಾರಾಸುತಧನಾದಿಗಳು ಜೀವರನ್ನು ಮೋಹಗ್ರಸ್ತನನ್ನಾಗಿ ಮಾಡುವ ಪ್ರಕಾರ ನಿರೂಪಣೆ; ಮರಣಕಾಲದ ಸಂಸಾರಿ ಜೀವನ ಚಿಂತೆ—ರೋದನಾದಿಗಳು; ಅಭಿಮಾನಸತ್ಯಾಗವೇ ದುಃಖನಿವಾರಣೆಯ ಸಾಧನ; ಅಭಿಮಾನವು ಜೀವರನ್ನು ಸಂಸಾರದಲ್ಲಿ ಬಂಧಿಸುವ ಪ್ರಕಾರ—ಭರತ ಚಕ್ರವರ್ತಿ (ಜಡಭರತನ) ನಿದರ್ಶನ; ಐಹಿಕಾಮುಷ್ಮಿಕ (ಇಹಪರಲೋಕಗಳ) ಸುಖಾಪೇಕ್ಷೆಯನ್ನು ತ್ಯಜಿಸಿ, ಕೇವಲ ವಿಷ್ಣುಪ್ರೀತ್ಯರ್ಥವಾಗಿ ಶ್ರಮಿಸುವುದು ಅತ್ಯವಶ್ಯಕ. ಪುಟ 324–344

ಅಧ್ಯಾಯ ೨೦—ವಿರಕ್ತಮುಮುಕ್ಷುವಿನ ಕರ್ತವ್ಯ ನಿರೂಪಣ.

ಶ್ಲೋಕಸಂಖ್ಯಾ ೧೩೭

ಮೋಕ್ಷಾಪೇಕ್ಷಿಯಾದ ಗೃಹಸ್ಥನು ಹೇಗೆ ಪ್ರವರ್ತಿಸತಕ್ಕದ್ದೆಂದು ಗೋಭಿಲರ ಪ್ರಶ್ನೆ; ಸರ್ವಾಶ್ರಮಗಳಿಗೆ ಆಶ್ರಯವಾದ ಗೃಹಸ್ಥಾಶ್ರಮಧರ್ಮಗಳು—ಪೋಷ್ಯವರ್ಗರಕ್ಷಣೆ

ಸುಜೀವರಿಗೆ ವಿವೇಕವನ್ನಿತ್ತು ಮುಕ್ತಿಸಾಧನಗಳಾಗುತ್ತವೆ—ಅವೇ ತಮೋಯೋಗ್ಯರಿಗೆ ತಮಸ್ಸಾಧನಗಳೂ ಆಗುತ್ತವೆ; ಮನುಷ್ಯದೇಹವು ದುರ್ಲಭ—ದೊರೆಯುವ ಪ್ರಕಾರ—ಅದರಿಂದ ಜ್ಞಾನವನ್ನು ಸಾಧಿಸದಿದ್ದರೆ ಮಹಾನರ್ಥವುಂಟು; ಅಸಾರವಾದ ಸಂಸಾರದಲ್ಲಿ ಸಾರಮಾತ್ರ ಗ್ರಾಹಕರಾಗಬೇಕು; ಕರ್ಮಗಳು ಜನ್ಮಾಂತರದಲ್ಲಿ ಫಲಪ್ರದಗಳೆಂಬುದು ಸಾಮಾನ್ಯ ನಿಯಮ—ಲೋಕನಿದರ್ಶನಗಳು; ಯತ್ನಸಾಧ್ಯಗಳೆಂಬ ಫಲಗಳೂ ಕರ್ಮಾನುಸಾರ ಶ್ರೀಹರಿದತ್ತವಾದವುಗಳೇ—ಯತ್ನವೂ ಶ್ರೀಹರೀಚ್ಛೆಯಂತೆ ನಡೆಯುತ್ತವೆ—ಭಕ್ಷಣಾ ಗಮನಾದಿಕ್ರಿಯೆಗಳಲ್ಲಿ ಸಹ ಶ್ರೀಹರಿಕರ್ತೃತ್ವವಿದೆ—ಇದನ್ನು ವಿವೇಕಿಸಿ ತಿಳಿಯುವ ಕ್ರಮ; ದೇಹ ಜೀವರು ಭಿನ್ನರು—ಭೇದಜ್ಞಾನದಿಂದ ಈಶ್ವರಾಧೀನತ್ವಜ್ಞಾನ—ಜೀವೇಶ್ವರರ ವಿರುದ್ಧ ಸ್ವಭಾವಧರ್ಮಗಳು—ಈಶ್ವರನೊಬ್ಬನೇ ಸ್ವತಂತ್ರನು; ಜೀವರಿಗೆ ಸ್ವಾತಂತ್ರ್ಯದಾನ—ಸ್ವಾತಂತ್ರ್ಯಾಂಶಗಳ ವಿಭಾಗ—ತಾತ್ತ್ವಿಕ ದೇವತೆಗಳು, ತಾತ್ತ್ವಿಕ ದೈತ್ಯರು ಮತ್ತು ಜೀವರಲ್ಲಿ ಅವುಗಳ ಸ್ಥಾಪನೆ; ತಾಮಸರ ಲಕ್ಷಣಗಳು—ತಾಮಸ ಆಹಾರಾದಿಗಳನ್ನು ಮುಮುಕ್ಷುವು ಯತ್ನಪೂರ್ವಕ ತ್ಯಜಿಸಬೇಕು—ತಾಮಸರ ಸಂಗತ್ಯಾಗ ಪ್ರಥಮತಃ ಅವಶ್ಯಕ; ಸಜ್ಜನಸಂಗದಿಂದ ಹರಿಭಕ್ತಿಯ ಉದಯ—ಹರಿದ್ವೇಷಿಗಳ ಹಾಗೂ ಹರಿಭಕ್ತದ್ವೇಷಿಗಳ ವಿರೋಧವೂ ವೃದ್ಧಿಗೊಳ್ಳುತ್ತದೆ; ವೈರಾಗ್ಯ, ಕ್ಷಮಾ, ಮೃದುತ್ವ ದಯಾದಿ ಸದ್ಗುಣಗಳ ವೃದ್ಧಿಯೂ ಸಾಧುಸಂಗದಿಂದಲೇ; ಜೀವನೇ ವಿಧಿನಿಷೇಧಗಳಿಗೆ ಪಾತ್ರ—ಅವನಲ್ಲಿರುವ ಸ್ವಾತಂತ್ರ್ಯಾಂಶರಷ್ಟೇ ಕರ್ಮಗಳ ಫಲಕ್ಕೂ ಭಾಗಿಯಾಗುತ್ತಾನೆ; ಕರ್ಮಫಲ ವಿತರಣೆಯ ವಿವರ; ತಾತ್ತ್ವಿಕ ದೇವದೈತ್ಯರಿಗೆ ಜೀವಕೃತಕರ್ಮಫಲದಲ್ಲಿ ದೊರೆಯುವ ಭಾಗ—ಉತ್ತಮಾಧಮ ಜೀವರಲ್ಲಿರುವ ಅವರದೇವದೈತ್ಯರ ಫಲ ಭಾಗಗಳ ವಿತರಣೆ; ಸರ್ವಪುಣ್ಯಕರ್ಮ ಪ್ರಧಾನಫಲಭೋಕ್ತ, ಶ್ರೀಹರಿ—ಆತನೇ ಆನಂದಮಯನು—ಶಿರ ಮೊದಲಾದ ಅವಯವಗಳೂ ಆನಂದಮಯಗಳೇ—ಪೂರ್ಣಾನಂದ ಸ್ವರೂಪನಿಗೆ ಸುಖಭೋಗವು ಹೇಗೆ ಕೊಡುತ್ತದೆಂಬುದಕ್ಕೆ ಪರಿಹಾರ; ದ್ವಾಸುಪರ್ಣಾಶ್ರುತ್ಯರ್ಥದ ನಿರೂಪಣೆ; ಪಾಪ-ಫಲವು, ಸೂರ್ಯನನ್ನು ಕತ್ತಲೆಯಂತೆ, ಎಂದೂ ಸಮೀಪಿಸದು; ಪುಣ್ಯಪಾಪಕರ್ಮ ಸಹಾಯರಿಗೆ ಆ ಕರ್ಮಫಲ ಭಾಗವು ಲಭಿಸುವ ವ್ಯವಸ್ಥೆ; ತಾತ್ತ್ವಿಕ ದೈತ್ಯರಲ್ಲಿ ಸ್ಥಾಪಿತವಾದ ಶ್ರೀಹರಿಯ ಸ್ವಾತಂತ್ರ್ಯಾಂಶಗಳು ಮನುಷ್ಯರನ್ನಾರಂಭಿಸಿ ಉತ್ತಮ ಜೀವರಲ್ಲಿ ಕ್ಷೀಣಗೊಳ್ಳುತ್ತ ಬ್ರಹ್ಮವಾಯುಗಳಲ್ಲಿ (ಅವರ ಪತ್ನಿಯರಲ್ಲಿ ಸಹ) ಲೇಶವೂ ಇರುವುದಿಲ್ಲ; ಬ್ರಹ್ಮನಿಗೆ ಉಂಟೆಂಬ (ಕಾದಾಚಿತ್ಕ-ಒಂದುಕ್ಷಣ ಕಾಲದ) ಅಜ್ಞಾನ, ಭಯಲೇಶಗಳ ಕಾರಣ ಮತ್ತು ಸ್ವಭಾವ; ತಮೋಯೋಗ್ಯರಲ್ಲಿ (ದೈತ್ಯರಲ್ಲಿ)ರುವ ತತ್ವದೇವತೆಗಳಿಗೆ ಲಭಿಸುವ ಕರ್ಮಫಲ; ದೈತ್ಯರಿಗೆ ವಾಯುಗದಾಪ್ರಹಾರದಿಂದ ಲಿಂಗಭಂಗ—ಅಂಧತಮಸ್ಸಿನ ಪ್ರಾಪ್ತಿ—ಅಲ್ಲಿಂದ ಉತ್ಥಾನವಿಲ್ಲ; ವಿಧಿನಿಷೇಧಗಳ ಜ್ಞಾನಕ್ಕಾಗಿ ಶ್ರುತಿಸ್ಮೃತಿಗಳ ಉಪದೇಶ—ಅವುಗಳ ಪಾಲನೆಯಿಂದಲೇ ಕರ್ಮಬಂಧನಿವೃತ್ತಿ; ಶ್ರೀಹರಿಯಲ್ಲಿ ಅನರ್ಪಿತವಾದ ಕರ್ಮಗಳ ಗತಿ; ನಿಷಿದ್ಧತ್ಯಾಗ—ಪ್ರಮಾದಾದಿಕಾರಣಗಳಿಂದ ಸಂಭವಿಸಿದರೆ ಶಾಸ್ತ್ರೋಕ್ತ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಬೇಕು—ತಪ್ಪಿದರೆ ನರಕಾದ್ಯನರ್ಥಗಳು ತಪ್ಪಿದ್ದಲ್ಲ; ಕೃಪಾಸಮುದ್ರನಾದ

ಶ್ರೀಹರಿಯು ಯೋಗ್ಯಜೀವರ ಬಹುಪಾಪಗಳನ್ನು ಪರಿಹರಿಸುತ್ತಾನೆ—ಗುರುವಾದ ಪಾಪಗಳಿಗೆ ಲಘುವಾದ ಫಲಗಳನ್ನಿತ್ತೂ ಅನುಗ್ರಹಿಸುತ್ತಾನೆ; ಬಾಹ್ಯದೃಷ್ಟಿಗೆ ವಿವಿಧ ಜೀವರು ಆಚರಿಸುವ ಕರ್ಮಗಳು ಒಂದೇ ವಿಧವೆಂದು ತೋರಿದರೂ ಜೀವರ ಯೋಗ್ಯತಾನುಗುಣಫಲಗಳೇ ದೊರೆಯುತ್ತವೆ—ಏಕ ಪ್ರಕಾರದ ಫಲಗಳಲ್ಲ; ಪ್ರಾಣಿಗಳಲ್ಲಿ ಕಂಡುಬರುವ ಪರಸ್ಪರ ಸ್ನೇಹಾದಿಗಳು ವಿಷ್ಣುಮಾಯಾ ನಿರ್ಮಿತಗಳು; ಸ್ನೇಹವು ಪ್ರಾಣಿಗಳ ರಕ್ಷಣೆಗೆ ಪ್ರಧಾನ ನಿಮಿತ್ತವು; ಸ್ನೇಹವನ್ನು ಪೂರ್ಣವಾಗಿ ತ್ಯಜಿಸುವುದು ಶ್ರೀವಿಷ್ಣುವಿನ ಆಜ್ಞಾ ಉಲ್ಲಂಘನೆಯೇ ಸರಿ; ಕುಟುಂಬ ರಕ್ಷಣೆ—ಅವಶ್ಯಕರ್ತವ್ಯ—ಪೋಷ್ಯವರ್ಗವನ್ನು ಯಥೋಚಿತವಾಗಿ ರಕ್ಷಿಸಬೇಕು—ಅದಕ್ಕೆ ಅವಶ್ಯಕವಾಗುವ ಅಭಿಮಾನವನ್ನು ಹೊಂದಿರಬೇಕು—ಅತ್ಯಾಸಕ್ತಿಯನ್ನು ತ್ಯಜಿಸಬೇಕು; ಕುಟುಂಬ ಪೋಷಣೆಗಾಗಿ ದುರ್ಜನಾಶ್ರಯವನ್ನೂ ಅತ್ಯಾಯಾಸವನ್ನೂ ಮಾಡಬಾರದು; ಶ್ರೀಹರಿ ಕೊಟ್ಟದ್ದರಿಂದ ತೃಪ್ತನಾಗಬೇಕು—ಕರ್ತವ್ಯವನ್ನು ಆ ಮಿತಿಗೆ ಒಳಪಟ್ಟು ನಿರ್ವಹಿಸಬೇಕು; ಪುರುಷ ಪ್ರಯತ್ನದ ಅವಶ್ಯಕತೆ—ಅದರ ಸ್ಥಾನ; ದುಃಖವನ್ನು ಶ್ರೀಹರಿದತ್ತವೆಂದು ತಿಳಿದು ಅದರ ಭೋಗವೂ ಆತನ ಆಜ್ಞೆಯೆಂದು ತಿಳಿದು ಅನುಭವಿಸಬೇಕು; ದುಃಖಿಯು ಅಧಿಕ ದುಃಖಿಗಳನ್ನು ಸುಖಿಯು ಅಧಿಕ ಸುಖಿಗಳನ್ನು ನೋಡಿ ಕಲಿಯಬೇಕಾದ ಪಾಠ; ಶ್ರೀಹರಿ ಸ್ಮರಣೆ ವಿಸ್ಮರಣೆಗಳೇ ಕರ್ಮಸ್ವರೂಪವನ್ನು ನಿಯಮಿಸುತ್ತವೆ; ನಿರ್ಣಯಿಸುತ್ತವೆ—ಸರ್ವತ್ರ ಶ್ರೀಹರಿಯ ಸ್ವತಂತ್ರ ಕರ್ತೃತ್ವವನ್ನು ತಿಳಿದವನೇ ಸರ್ವವಿಧಿಗಳನ್ನು ಪಾಲಿಸಿದವನು—ಈ ಸ್ಮರಣೆಯಿಲ್ಲದವನೇ ಸರ್ವನಿಷೇಧಕರ್ತನು; ಭಕ್ತಿ ದ್ವೇಷಗಳ ತಾರತಮ್ಯ—ಜೀವರ ಯೋಗ್ಯತೆಯನ್ನು ಪರೀಕ್ಷೆಯಿಂದ ಗುರ್ತಿಸಿ ಅವರೊಡನೆ ಯಥೋಚಿತ ವ್ಯವಹಾರಗಳನ್ನು ಇಟ್ಟುಕೊಳ್ಳಬೇಕು. ಪುಟ 401–459

ಅಧ್ಯಾಯ ೨೨—ಪ್ರದ್ಯುಮ್ನ ಸೃಷ್ಟಿಕಥನ. ಶ್ಲೋಕಸಂಖ್ಯಾ ೩೨

ಅರ್ಧನಾರೀನರಾತ್ಮಕ ಪ್ರದ್ಯುಮ್ನರೂಪ—ದೇಹದ ಬಲಭಾಗದಿಂದ ಪುರುಷರೂ, ಎಡಭಾಗದ ಅವಯವಗಳಿಂದ ಅವರ ಭಾರ್ಯರೂ, ಉತ್ಪನ್ನರಾದರು; ಮುಖದ ಬಲಭಾಗದಿಂದ ಬ್ರಾಹ್ಮಣವರ್ಣಾಭಿಮಾನಿ ಬ್ರಹ್ಮನೂ ಎಡಭಾಗದಿಂದ ಆತನ ಭಾರ್ಯೆಗಳೂ—ಬಲಭುಜದಿಂದ ಪ್ರಧಾನವಾಯು, ರುದ್ರಾದಿಗಳ ಸೃಷ್ಟಿ—ಎಡಭುಜದಿಂದ ಅವರ ಪತ್ನಿಯರ ಸೃಷ್ಟಿ ದೇವತೆಗಳು ಪ್ರಾಯಃ ಕ್ಷತ್ರಿಯವರ್ಣದವರು—ವಾಯುದೇವನು ಕ್ಷತ್ರವರ್ಣದ ಪ್ರಧಾನಾಭಿಮಾನಿಯು; ಕುಬೇರಾದಿ ವೈಶ್ಯರು ಬಲತೊಡೆಯಿಂದಲೂ, ಅವರ ಭಾರ್ಯರು ಎಡತೊಡೆಯಿಂದಲೂ ಹುಟ್ಟಿದರು; ಕುಬೇರನು ವೈಶ್ಯವರ್ಣಾಭಿಮಾನಿಯು; ಯಮಾದಿ ಶೂದ್ರವರ್ಣದವರು ಬಲಪಾದದಿಂದಲೂ, ಅವರ ಸ್ತ್ರೀಯರು ಎಡಪಾದದಿಂದಲೂ ಸೃಷ್ಟರಾದರು; ಯಮನು ಶೂದ್ರವರ್ಣಾಭಿಮಾನಿಯು; ರೋಮಗಳಿಂದ ಪಶುಪಕ್ಷಿವೃಕ್ಷಾದಿಗಳ ಸೃಷ್ಟಿ ಈ ಪ್ರದ್ಯುಮ್ನ ಸೃಷ್ಟಿಯು ಪುರುಷನಾಮಕ ಬ್ರಹ್ಮನ ೧೦ ರಿಂದ ೨೦ ವರ್ಷದವರೆಗಿನ ಕಾಲಾವಧಿಯಲ್ಲಿ ಸಂಭವಿಸಿತು; ಬ್ರಹ್ಮಾದಿಗಳು ಬ್ರಾಹ್ಮಣಾದಿಗಳೆಂಬ ಪ್ರಮೇಯದ ವಿವರಣೆ; ಈ ಎಲ್ಲರೂ ಶ್ರೀವಿಷ್ಣುಭಕ್ತರು—ವಿಷ್ಣುಪ್ರಸಾದಕ್ಕೆ ಈ ಎಲ್ಲರ ಅನುಗ್ರಹವೂ ಅವಶ್ಯಕ—ಅವರು ಕುಪಿತರಾದರೆ ಭಕ್ತನ ಭಕ್ತಿಪ್ರವಾಹದ ವಿಚ್ಛಿತ್ತಿಯುಂಟು. ಪುಟ 459–471

ಅಧ್ಯಾಯ ೨೩—ಅನಿರುದ್ಧ ಸೃಷ್ಟಿನಿರೂಪಣ. ಶ್ಲೋಕಸಂಖ್ಯಾ ೮೬

ಪ್ರದ್ಯುಮ್ನನಿಂದ ಜನಿಸಿದ ಜೀವರನ್ನು, ಬೀಜಾಂಕುರಗಳಂತೆ ಅನಿರುದ್ಧನು ತನ್ನಲ್ಲಿ ಸ್ವೀಕರಿಸಿ, ಶಾಂತಿದೇವಿಯಲ್ಲಿ ಸ್ಥಾಪಿಸುವುದು; ಬ್ರಹ್ಮ, ವಾಣಿ, ಸಾವಿತ್ರೀ, ಭಾರತಿಯರ ಜನ್ಮ—ಅನಂತನ ಜನ್ಮ; ತ್ರಿವಿಧ ಅಹಂಕಾರ ತತ್ತ್ವಾಂಶಗಳಿಂದ ತ್ರಿರೂಪನಾಗಿ ಶಿವನ ಜನ್ಮ—ಮೂರು ರೂಪಗಳು ಏಕೀಭಾವವನ್ನು ಹೊಂದಿ, ವಾಮಭಾಗವು ಸ್ತ್ರೀರೂಪವಾಗಲು, ಬಹುಕಾಲ ಆನಂದದ ತಾಂಡವ; ನಂತರ ಮೊದಲಿನ ಮೂರು ರೂಪಗಳು ಪ್ರತ್ಯೇಕವಾಗಿ, ಅರ್ಧನಾರೀನಟೇಶ್ವರ ರೂಪದೊಂದಿಗೆ ನಾಲ್ಕು ರೂಪಗಳಿಂದ ಶ್ರೀವಿಷ್ಣುವಿನ ಆರಾಧನೆ—ಶ್ರೀವಿಷ್ಣು ಪ್ರತ್ಯಕ್ಷನಾಗಿ ವರದಾನ—ಸರ್ವರ ಜನಕನಾಗೆಂದು—ನಾನೂ ನಿನ್ನಿಂದ ಜನಿಸುವನೆಂದು ಹೇಳಿ, ಶ್ರೀಮಹಾವಿಷ್ಣುವು, ಅನಿರುದ್ಧ ರೂಪದಿಂದ ಮಹೇಶ್ವರನನ್ನು ಪ್ರವೇಶಿಸಿ, ಆತನ ದ್ವಾರಾ ನಡೆಸಿದ ಸೃಷ್ಟಿಯ ವಿವರ; ದ್ವಾದಶಾದಿತ್ಯರು, ಏಕಾದಶರುದ್ರರು, ಅಷ್ಟವಸುಗಳು, ದಶವಿಶ್ವೇದೇವತೆಗಳು, ಇತ್ಯಾದಿ ದೇವತೆಗಳೂ ಅವರ ಸ್ತ್ರೀಯರೂ, ಇತರ ದೇವಗಂಧರ್ವ ಯಕ್ಷಾದಿಗಳೂ ಅರ್ಧನಾರೀನಟೇಶ್ವರನ ಬಲ ಎಡಭಾಗಗಳಿಂದ ಜನಿಸುವುದು; ಉರಗ, ಗಜಾಶ್ವಾದಿ ಪಶುಗಳು, ಅನ್ಯ ಮನುಷ್ಯಾದಿಗಳೂ, ಆತನ ಅಧೋಭಾಗದ ಅಂಗಗಳಿಂದ ಸೃಷ್ಟರಾದರು; ಈ ಸೃಷ್ಟಿಯು 'ಪುರುಷ'ನ ೧೫ ವರ್ಷಗಳಷ್ಟು ಕಾಲ ನಡೆದು, ಈ ಅವಧಿಯ ಕಡೆಯ ದಿನದಲ್ಲಿ ರಾಕ್ಷಸರು ಮನುಷ್ಯಾದಿ ಸಕಲ ಪ್ರಾಣಿಗಳನ್ನು ಭಕ್ಷಿಸಿದರು; ವಾಯುವಿನಿಂದ ವೃಕ್ಷಗಳು ರಾಶಿಯಾದವು—ಅಗ್ನಿಯು ದಹಿಸಿದನು—ದೇವತೆಗಳು ರಾಕ್ಷಸರ ಮೇಲೆ ಬೀಳಲು, ಅವರು ದೈತ್ಯರನ್ನಾಶ್ರಯಿಸಿದರು—ದೇವದೈತ್ಯರ ಯುದ್ಧದಿಂದ ಸರ್ವನಾಶ—ವಾಯು ಶೋಷಣ, ಅಗ್ನಿದಹನದಿಂದ; ಇಲ್ಲಿಂದ ಬ್ರಹ್ಮದೇವನ ೩೬ನೇ ವರ್ಷದ ಆರಂಭ; ಅನಿರುದ್ಧನು ಬ್ರಹ್ಮಾಂಡವನ್ನು ಸೃಷ್ಟಿಸಲಿಚ್ಛಿಸಿ, ಶಾಂತೀದೇವಿಯಿಂದ, ಮೊದಲಿಗೆ ಸತ್ತ್ವ, ರಜ, ತಮೋಗುಣಗಳ ಬಹಿರಾವರಣಗಳನ್ನು ನಿರ್ಮಾಣ ಮಾಡಿಸಿ, ನಂತರ ಬ್ರಹ್ಮನಿಂದ ಮಹತತ್ತ್ವಾವರಣ, ರುದ್ರನಿಂದ ಅಹಂಕಾರತತ್ತ್ವಾವರಣವನ್ನು ಇತರ ತಾತ್ತ್ವಿಕ ದೇವತೆಗಳಿಂದ ಪೃಥಿವ್ಯಂತತತ್ತ್ವಗಳ ಆವರಣಗಳನ್ನು ನಿರ್ಮಾಣ ಮಾಡಿದನು; ಬ್ರಹ್ಮಾಂಡದ ಬಹಿರಾವರಣಗಳ ಸೃಷ್ಟಿಯು ಬ್ರಹ್ಮನ ೧೦ ವರ್ಷಗಳ ಕಾಲ ನಡೆಯಿತು. ಪುಟ 472—487

ಅಧ್ಯಾಯ ೨೪—ಪಾದ್ಮಕಲ್ಪಸೃಷ್ಟಿ ವರ್ಣನ. ಶ್ಲೋಕಸಂಖ್ಯಾ ೧೧೯

ಜಲಾವೃತವಾದ ಪೃಥ್ವೀಬಹಿರಾವರಣದಲ್ಲಿ ಶ್ರೀ ವಾಸುದೇವನು ಮಾಯಾ ಸಮೇತನಾಗಿ ನಿಂತು, ದೇವಾದಿಗಳಿಂದ ಸೇವ್ಯನಾಗಿ ಕ್ರೀಡಿಸುತ್ತಿರಲು 'ಪುರುಷ'ನ ೨ ವರ್ಷಗಳು ಕಳೆದವು; ಶ್ರೀವಾಸುದೇವನ ಇಚ್ಛೆಯಂತೆ ಮಾಯಾದೇವಿಯು ಶ್ರೀ, ಭೂ, ದುರ್ಗಾರೂಪಳಾದಳು—ಆಕೆಯಲ್ಲಿ ವಾಸುದೇವನು, ವಿಷ್ಣುಬ್ರಹ್ಮಮಹೇಶ್ವರ ನಾಮಕ ರೂಪಗಳಿಂದ ಅವತರಿಸಿದನು; ಶ್ರೀವಿಷ್ಣುವಿನಿಂದ ಆಕಾಶಾದಿ ಪಂಚಭೂತಗಳ ಸೃಷ್ಟಿ—ಆಪ್ಯ, ತೈಜಸ, ಭೌಮದೇಹ ಸೃಷ್ಟಿಗಾಗಿ ತ್ರಿವೃತ್ಕರಣ—ಪ್ರೇತಾದಿ ದೇಹ ನಿರ್ಮಾಣಕ್ಕಾಗಿ ವಾಯವೀಯರಾಶಿ ನಿರ್ಮಾಣ—ಹೀಗೆ ನಾಲ್ಕು ಭೌತಿಕರಾಶಿಗಳು ಬ್ರಹ್ಮನ ೨ ವರ್ಷ ಕಾಲಾವಧಿಯಲ್ಲಿ ಸೃಷ್ಟ

ವಾರವು, ನಂತರ ಬ್ರಹ್ಮಾಂಡ ಸೃಷ್ಟಿ—ನಂತರ ಸಕಲ ಜೀವರನ್ನು ವಿಷ್ಣುವು ನುಂಗಿ, ಬ್ರಹ್ಮನನ್ನು ಪ್ರವೇಶಿಸಿದನು—ರುದ್ರನೂ ಬ್ರಹ್ಮನನ್ನು ಪ್ರವೇಶಿಸಿದನು; ರಮಾದೇವಿಯು ಅವ್ಯಾದಿ ರಾಶಿಗಳನ್ನು ತನ್ನ ಉದರದಲ್ಲಿ ಧರಿಸುವುದು—ರಮಾಸಹಿತನಾಗಿ ವಿಷ್ಣುವು ಬ್ರಹ್ಮಾಂಡ ಪ್ರವೇಶ ಮಾಡಿದುದು; ಬ್ರಹ್ಮಾಂಡದಲ್ಲಿ ಪ್ರಕಟವಾದ ಗರ್ಭೋದಕ ಪ್ರವೇಶವಿಲ್ಲದ ವೈಕುಂಠವನ್ನು ಬಿಟ್ಟು ಗರ್ಭೋದಕದಲ್ಲಿ ರಮಾಸಹಿತ ಶಯನ; ಎದ್ದು ಗರ್ಭೋದಕವನ್ನು ಮುಖ್ಯವಾಯುವಿನಿಂದ ಶೋಷಣ—ಶ್ವೇತದ್ವೀಪದಲ್ಲಿ ಕೆಲವುಕಾಲ ವಿಹರಿಸಿ, ಅಂಧಂತಮಸ್ಸಿನಲ್ಲಿ ತಮೋಯೋಗ್ಯರ ಸ್ಥಿತಿಯನ್ನು ಗಮನಿಸಿ, ಅನಂತಾಸನಕ್ಕೆ ಹೋಗಿ ಅಲ್ಲಿಂದ ವೈಕುಂಠಕ್ಕೆ ಆಗಮನ; ಬ್ರಹ್ಮಾಂಡ ಸೃಷ್ಟವಾಗಿ ಬ್ರಹ್ಮನು ಒಂದು ಹಗಲು ಕಳೆಯಲು, ಪ್ರಳಯೋದಕವು ವೈಕುಂಠದವರೆಗೆ ಬಂತು—ಆ ಜಲದಲ್ಲಿ ರಾತ್ರಿಯನ್ನು ಕಳೆದು, ಪುನಃ ಮುಖ್ಯವಾಯುವಿನಿಂದ ಜಲಶೋಷಣ; ಬಹಿರಾವರಣದ ಅಸಂಸೃಷ್ಟ ತತ್ತ್ವಗಳಿಂದ, ಬ್ರಹ್ಮಾಂಡದೊಳಗೆ ಸ್ಥೂಲಭಾವದಿಂದ ಮಹದಾದಿ ತತ್ತ್ವಗಳ ಸೃಷ್ಟಿ; ಬ್ರಹ್ಮನ ೫೦ನೇ ವರ್ಷದ ಕಡೆಯದಿನದ ಆರಂಭದಲ್ಲಿ ನಾಭಿಯಿಂದ ಪದ್ಮದ ಉದ್ಭವ—ಆ ದಿನಕ್ಕೆ ಪದ್ಮಕಲ್ಪವೆಂಬ ನಾಮ; ಪದ್ಮದಲ್ಲಿ ಬ್ರಹ್ಮನ ಜನ್ಮ—ನಾಲ್ಕು ದಿಕ್ಕುಗಳನ್ನೂ ಮೇಲೆ ಸಹ ನೋಡಿದ್ದರಿಂದ ಐದು ಮುಖಗಳಾದುದು; ಲಕ್ಷ್ಮೀದೇವಿಯು ಮಳೆಯಿಂದ ಸಹಿತವಾದ ಚಂಡಮಾರುತವನ್ನು ಬ್ರಹ್ಮನ ಮೇಲೆ ಪ್ರಯೋಗ—ಬ್ರಹ್ಮನ ಭಯದುಃಖಗಳು—ಶ್ರೀಹರಿಸ್ಮರಣೆ—'ತಪತಪ' ಎಂಬ ಶಬ್ದದಿಂದ ಪ್ರೇರಿತನಾಗಿ ಬ್ರಹ್ಮನು ತಪಸ್ಸನ್ನಾಚರಿಸುವುದು; ದೇವಮಾನದ ೧೦,೦೦೦ ವರ್ಷಗಳನಂತರ ಸಮಾಧಿಯಿಂದ ಎಚ್ಚರ—'ಕುಮಾರ' ರೂಪದಿಂದ ಶ್ರೀಹರಿಯು ಪ್ರತ್ಯಕ್ಷನಾಗಿ ವೇದವೇದಾಂಗ ಪಂಚರಾತ್ರಾದಿ ಸಕಲಾಗಮಗಳನ್ನು ಉಪದೇಶಿಸಿ ಅದೃಶ್ಯನಾಗುವುದು; ೧೦೦೦ ವರ್ಷಗಳ ಕಾಲ ಅಧೀತ ವಿದ್ಯೆಯನ್ನು ಮನನ ಮಾಡಿ, ಬ್ರಹ್ಮನು ಸೃಷ್ಟಿಯಲ್ಲಿ ತೊಡಗುವುದು; ಪದ್ಮವು ವೈಕುಂಠಪರ್ಯಂತ ಬೆಳೆಯುವುದು—ಪದ್ಮದ ಆಶ್ರಯದಲ್ಲಿ ೧೪ ಲೋಕಗಳನ್ನು ವ್ಯವಸ್ಥೆಗೊಳಿಸುವುದು—ಈ ಲೋಕಾಶ್ರಯವಾದ ಮಹದಾದಿಸರ್ವತತ್ತ್ವ ನಿರ್ಮಿತ ವೈರಾಜದೇಹ ನಿರ್ಮಾಣ—ಪುರುಷಾಕಾರದ ಆ ದೇಹವನ್ನು ಪುರುಷನಾಮಕ ಶ್ರೀಹರಿಯು ಪ್ರವೇಶಿಸಿ, ಪುರುಷಸೂಕ್ತೋಕ್ತ ಕ್ರಮದಿಂದ, ತಾತ್ತ್ವಿಕರಾದ ಬ್ರಹ್ಮಾದಿಗಳನ್ನೂ, ಅತಾತ್ತ್ವಿಕ ದೇವತೆಗಳನ್ನೂ ಮನು ಋಷ್ಯಾದಿಗಳನ್ನೂ ಸೃಷ್ಟಿಸಿದುದು; ತಾತ್ತ್ವಿಕ ದೇವತೆಗಳಲ್ಲಿ ಶ್ರೇಷ್ಠತ್ವ ವಿವಾದ—ಶ್ರೀವಿಷ್ಣುಬ್ರಹ್ಮರು ಆ ದೇಹದಲ್ಲಿ ಉದಾಸೀನರಾಗಿರುತ್ತಿರಲು ನಡೆದ ಪರೀಕ್ಷೆ— ಮುಖ್ಯಪ್ರಾಣನ ಶ್ರೇಷ್ಠತ್ವ—ದೇಹಕ್ಕೆ ಶರೀರ ಎಂಬ ನಾಮ ಉಂಟಾಗಲು ಕಾರಣ; ದಶಪ್ರಾಣರಲ್ಲಿದ್ದು ಮುಖ್ಯಪ್ರಾಣನು ಸರ್ವ ಪ್ರಾಣಿ ದೇಹಗಳ ರಕ್ಷಕನಾಗಿ ಸರ್ವಚೇಷ್ಟಾಪ್ರದನಾಗಿರುವುದು; ಲಕ್ಷ್ಮೀದೇವಿಯ ಆಜ್ಞೆಯಿಂದ ರುದ್ರನು, ಬ್ರಹ್ಮನ ಐದನೇ ಮುಖವು, ಅಪಸ್ವರದಿಂದ ವೇದೋಚ್ಚಾರ ಮಾಡಲು, ಅದನ್ನು ಕತ್ತರಿಸಿದುದು—ರುದ್ರನು ಬ್ರಹ್ಮಹತ್ಯಾಪಾಪ ಪರಿಹಾರಕ್ಕೆ ಆಕೆಯನ್ನೇ ಶರಣು ಹೊಂದಿದುದು—ಗಂಗಾಜಲ ಸೇವೆಯಿಂದ ಪರಿಹರಿಸಿದುದು; ವೈರಾಜದೇಹದ ಪಾದಾದಿಶಿರಸ್ಸಿನವರೆಗಿನ ಅವಯವಗಳು ೧೪ ಲೋಕಗಳ ಸ್ಥಿತಿಗೆ ಆಶ್ರಯ; ಪ್ರಥಮಯಜ್ಞ—ಯಜ್ಞಸಂಭಾರಗಳು— ಸರ್ವಸಮರ್ಪಣ—

ಶ್ರೀಹರಿಯ ಪ್ರತ್ಯಕ್ಷದರ್ಶನ—ಪುರುಷಸೂಕ್ತ ಮಹಿಮೆಗಳಿಂದ ದೇವತೆಗಳ ಸ್ತೋತ್ರ—ವರವಿತ್ತು ಅದೃಶ್ಯನಾದುದು; ದೇವತೆಗಳು ಪೂರ್ವಮುಕ್ತರೊಂದಿಗೆ ವಿರಾಜಿಸಿರರು—ಯಜ್ಞಫಲ; ಯಜ್ಞನಾಮಕ ಶ್ರೀಹರಿಯಿಂದ ಪ್ರಥಮಯಜ್ಞದಲ್ಲಿ ಪೃಷದಾಜ್ಯ ಮೊದಲಾದವು—ಸರ್ವವನ್ನೂ ಆತನಿಗೆ ಅರ್ಪಿಸಿರುದು; ಛಂದಸ್ಸುಗಳು, ಭೌಮ ಆಪ್ಯ ತೈಜಸಾದಿ ಪ್ರಾಣ ದೇಹಗಳ ಸೃಷ್ಟಿ—ಬ್ರಹ್ಮದೇವನಿಗೆ ತೃಪ್ತಿ ದೊರೆಯಲಿಲ್ಲ—ಪುರುಷಾಕಾರದ ಸ್ತ್ರೀ ಪುರುಷರ ಸೃಷ್ಟಿ— ಪೂರ್ವಸೃಷ್ಟವಾದ ಸರ್ವಪ್ರಾಣಿಗಳು ಇವರ ವಶ—ಜ್ಞಾನಾಧಿಕ್ಯದಿಂದ—ಇದರಿಂದ ಮನುಷ್ಯ ದೇಹಕ್ಕೆ ಶ್ರೇಷ್ಠತ್ವ; ಮೋಕ್ಷಸಾಧನೆಯ ಯತ್ನವು ಈ ದೇಹದಿಂದ ಮಾತ್ರ ಸಾಧ್ಯ; ಬ್ರಹ್ಮನು ತನ್ನ ದಿನಾಂತ್ಯದಲ್ಲಿ ಸರ್ವವನ್ನೂ ಸಂಹರಿಸಿ, ಪ್ರಾತಃ ಪೂರ್ವದಂತೆ ಸೃಷ್ಟಿಯಲ್ಲಿ ಪ್ರವೃತ್ತಿ; ದೈನಂದಿನ ಲಯದ ವಿವರಣೆ—ಲಯವು ವ್ಯತ್ಯಯದಿಂದಲೇ ಸಂಭವಿಸುತ್ತದೆ ಇತ್ಯಾದಿ. ಪುಟ 487–534

ಅಧ್ಯಾಯ ೨೫—ಸ್ವಾಯಂಭುವಮನ್ವಂತರ ವರ್ಣನೆ. ಶ್ಲೋಕಸಂಖ್ಯಾ ೮೦

ಪಾದ್ಮಕಲ್ಪದಿಂದ ಪ್ರಥಮ ಪರಾರ್ಧದ ಸಮಾಪ್ತಿ; ದ್ವಿತೀಯ ಪರಾರ್ಧದ ಪ್ರಥಮ ದಿನಕಲ್ಪ—ಶ್ವೇತವರಾಹ ಕಲ್ಪ—ಭಾನುವಾರ, ಅಶ್ವಿನೀ ನಕ್ಷತ್ರದಿಂದ ಆರಂಭ; ಪಾದ್ಮಕಲ್ಪದ ರಾತ್ರಿ ೧/೮ ಭಾಗ ಉಳಿದಿರುವಾಗ ಬ್ರಹ್ಮದೇವನು ಪದ್ಮನಾಭಸ್ಮರಣಪೂರ್ವಕ ಎದ್ದುದು; ಪದ್ಮನಾಭನು ಸಂದರ್ಶನವಿತ್ತು ಬ್ರಹ್ಮನನ್ನು ಪ್ರವೇಶಿಸಿ ಮೊದಲಿಗೆ ಸೂರ್ಯಾದಿ ಗ್ರಹಗಳನ್ನು ನಕ್ಷತ್ರಗಳನ್ನು ಸೃಷ್ಟಿಸಿ, ಅವುಗಳಲ್ಲಿ ತಾನೇ ನಿಂತು ಗಗನದಲ್ಲಿ ಸಂಚಾರ; ಮುಂದೆ ಯಥಾಕಾಲದಲ್ಲಿ ಸೂರ್ಯಾದಿ ದೇವತೆಗಳ ಸೃಷ್ಟಿ—ಅವರನ್ನು ಆಯಾ ಮಂಡಲಗಳಲ್ಲಿ ಸ್ಥಾಪಿಸಿ, ಅವರ ಅಂತರ್ಯಾಮಿಯಾಗಿ ತಾನೂ ಇದ್ದು ಗ್ರಹನಕ್ಷತ್ರಾದಿಗಳ ಸಂಚಾರ ನಿಯಮನ; ಬ್ರಹ್ಮಾಂಡದ ಅರ್ಧಭಾಗವನ್ನು ಆಕ್ರಮಿಸಿದ್ದ ಪ್ರಲಯಜಲವನ್ನು ಶ್ರೀಲಕ್ಷ್ಮೀದೇವಿಯು ವಾಯುರೂಪದಿಂದ ಶೋಷಿಸುವುದು, ಪುನಃ ಜಲಪೂರ್ಣ—ಬ್ರಹ್ಮನು ಪೃಥ್ವಿಯನ್ನು ಮೇಲೆತಂದು ಸ್ಥಾಪಿಸಲು ಪ್ರಾರ್ಥನೆ—ಬ್ರಹ್ಮಕೃತಸ್ತುತಿ; ಶ್ರೀವರಾಹರೂಪದಿಂದ ಪ್ರಲಯಜಲವನ್ನು ಪ್ರವೇಶಿಸಿ, ಜಲದಲ್ಲಿ ವಿಹರಿಸುವುದು; ಈ ಮಧ್ಯೆ ಬ್ರಹ್ಮನ ನಿಃಶ್ವಾಸದಿಂದ ಹಿರಣ್ಯಾಕ್ಷನ ಜನ್ಮ; ಈತನೂ ಪ್ರಲಯಜಲವನ್ನು ಪ್ರವೇಶಿಸಿದುದು; ಕೋರೆದಾಡಿನಲ್ಲಿ ಭೂಮಿಯನ್ನು ಧರಿಸಿ ಮೇಲೆ ಬರುತ್ತಿದ್ದ ಶ್ರೀವರಾಹನನ್ನು ತಡೆದು, ಗದೆಯಿಂದ ತಾಡನ—ವರಾಹನ ಕೋರೆದಾಡಿನ ಏಟಿನಿಂದ ಆತನ ಸಂಹಾರ—ಭೂ ಸ್ಥಾಪನೆ—ಅಂತರ್ಧಾನ, ಸನಕಾದಿಗಳ ಸೃಷ್ಟಿ—ಪ್ರಜಾ ಸೃಷ್ಟಿಗಾಗಿ ಆಜ್ಞೆ—ಬ್ರಹ್ಮಪರರಾದ ಅವರು ಧ್ಯಾನಾಸಕ್ತರಾದುದು; ಕೋಪಗೊಂಡ ಬ್ರಹ್ಮನಿಂದ ರುದ್ರನ ಜನನ, ರೋದನದಿಂದ ರುದ್ರ—ಕೋಪದ ಕೇಂದ್ರೀಕರಣ; ಲಲಾಟದಲ್ಲಿ ಅದರಿಂದ ಮೂರನೇ ಕಣ್ಣು; ರುದ್ರನಿಗೆ ಪಂಚಮುಖ, ದಶಬಾಹುಗಳನ್ನು ಅನುಗ್ರಹಿಸುವುದು; ಸಪ್ತರ್ಷಿಗಳು, ದಕ್ಷ ನಾರದಾದಿಗಳ ಸೃಷ್ಟಿ ಸ್ವದೇಹದ ಬಲಭಾಗದಿಂದ ಸ್ವಾಯಂಭುವಮನು, ಎಡಭಾಗದಿಂದ ಶತರೂಪಾದೇವಿ, ಇವರ ಸೃಷ್ಟಿ ಅವರ ವಿವಾಹವನ್ನು ಮಾಡಿ ಪ್ರಜಾಸೃಷ್ಟಿಗಾಗಿ ಆಜ್ಞೆ; ಸಂಸಾರ ಮು ಖಿಗಳಿಂದ ಭೀತಳಾದ ಶತರೂಪಳು ತಪಸ್ಸಿನಲ್ಲಿ ಸ್ಥಿತಳಾದುದು; ಆಕೆಗೆ ಬ್ರಹ್ಮ ವರಪ್ರದಾನಮಾಡಿ, ಭಾವೀಸ್ತ್ರೀಯರಿಗೆ ಸಹ ಪತಿಸೇವೆ, ಶಿಶುಸಂರಕ್ಷಣಾದಿಗಳನ್ನು ವಿಷ್ಣುಪೂಜೆ

ಯೆಂದು ಆಚರಿಸಿ, ತಪಸ್ವಿಗಳಂತೆ ಮೋಕ್ಷಾರ್ಹರಾಗಲೆಂಬ ವರವನ್ನಿತ್ತು, ಶತರೂಪಳನ್ನು ಸಂಸಾರ ಮಾಡಿ ಮಾಡಿಕೊಂಡಿರುವಂತೆ ಮಾಡಿದುದು; ಈ ದಂಪತಿಯರಿಂದ, ಪ್ರಿಯವ್ರತ, ಉತ್ತಾನಪಾದ, ಆಕೂತಿ, ಪ್ರಸೂತಿ, ದೇವಹೂತಿಯರ ಜನ್ಮ; ಈ ಕನ್ಯೆಯರ ಜನನಪೂರ್ವದಲ್ಲಿ ರುಚಿ, ಕರ್ದಮರೆಂಬ ಬ್ರಹ್ಮಮಾನಸಪುತ್ರರ ಜನ್ಮ; ಆಕೂತಿ-ರುಚಿ, ದೇವಹೂತಿ-ಕರ್ದಮ, ಪ್ರಸೂತಿ-ದಕ್ಷ ಇವರ ವಿವಾಹ; ಮರೀಚಿಯಿಂದ ಕಶ್ಯಪನ ಜನ್ಮ—ಕಶ್ಯಪನಿಂದ ಸಕಲ ಪ್ರಾಣವರ್ಗದ ಮೂಲಭೂತ (ವಿವಿಧ ಯೋನಿಗಳ) ಜೀವರ ಜನ್ಮ, ಆಕೂತಿಯಲ್ಲಿ ಯಜ್ಞ-ದಕ್ಷಿಣಾ ಇವರ ಅವಳಿ ಜನ್ಮ; ದೇವಹೂತಿಯಲ್ಲಿ ಕಪಿಲನ ಅವತಾರ; ಕಶ್ಯಪರಿಂದ ಜನಿಸಿದ ಪ್ರಾಣಗಳಿಂದ ಭೂಮಿಯು ತುಂಬಿಹೋಗುವುದು; ಬ್ರಹ್ಮನು ಮೃತ್ಯುದೇವತೆಯನ್ನು ಸೃಷ್ಟಿಸಿ, ಪ್ರಜೆಗಳನ್ನು ಸಂಹರಿಸಲು ಆಜ್ಞೆಯಿತ್ತುದು; ಆಕೆಯು ಪ್ರೇತಬಂಧುಗಳ ಆರ್ತನಾದ ದಿಂದ ದುಃಖಿತಳಾಗಿ, ಆ ಕೆಲಸದಿಂದ ನಿವೃತ್ತಿಗೊಳಿಸಲು ಬ್ರಹ್ಮನನ್ನು ಪ್ರಾರ್ಥಿಸುವುದು; ಬ್ರಹ್ಮನ ಸಾಂತ್ವನಪ್ರಕಾರ; ಮೃತ್ಯುದೇವತೆಯ ಅಶ್ರುಗಳಿಂದ ವಿವಿಧ ರೋಗಗಳ ಉತ್ಪತ್ತಿ—ರೋಗರಾಜ್ಯದಲ್ಲಿ ಕ್ಷಯಕ್ಕೆ ಪಟ್ಟ—ರೋಗಾದಿ ಪೀಡೆಗಳ ಪರಿಹಾರಕ್ಕಾಗಿ ಮರೀಚ್ಯಾದಿಗಳಿಗೆ ಆಯುರ್ವೇದದ ಉಪದೇಶ. ಪುಟ 535–566

ಅಧ್ಯಾಯ ೨೬—ಮನ್ವಂತರಾನುವರ್ಣನ. ಶ್ಲೋಕಸಂಖ್ಯಾ ೧೬

ಬ್ರಹ್ಮದೇವನು ಪ್ರಜೆಗಳ ವಿವಿಧ ವಿಪತ್ಪರಿಹಾರಾರ್ಥವಾಗಿ ಧರ್ಮಾಚರಣೆಗಳನ್ನು ಶಾಸನಮಾಡಿ, ನಿಯಮಾವಳಿಗಳನ್ನು ವೇದಾನುಸಾರವಾಗಿ ರಚಿಸಿ, ಮನುವಿಗೆ ಉಪದೇಶಿಸಿ, ಮನೂಕ್ತಧರ್ಮಗಳೇ ಪ್ರಜೆಗಳ ಹಿತಸಾಧಕವೆಂದು ಋಷಿಗಳಿಗೆ ಉಪದೇಶಿಸಿ, ಅದೃಶ್ಯನಾಗುವುದು; ಪ್ರಿಯವ್ರತನನ್ನು ರಾಜ್ಯದಲ್ಲಿ ಪಟ್ಟಗಟ್ಟಿ ಮನುವು ತಪಸ್ಸಿಗಾಗಿ ಅರಣ್ಯಕ್ಕೆ ತೆರಳುವುದು; ಅಲ್ಲಿ ತಪಸ್ಸಿನಲ್ಲಿರುವ ಮನುವನ್ನು ಭಕ್ಷಿಸಲು, ದೈತ್ಯ ರಾಕ್ಷಸರು ಬಂದುದು; ಯಜ್ಞನಾಮಕ ನಾರಾಯಣನು ರಾಕ್ಷಸಾದಿಗಳನ್ನು ಸಂಹರಿಸಿ ರಕ್ಷಿಸುವುದು; ಸ್ವಾಯಂಭುವ ಮನುವು ಹೀಗೆ ರಕ್ಷಿತನಾಗಿ ತಪಸ್ಸನ್ನು ಮುಂದುವರಿಸುತ್ತಿರಲು, ಋಷಿಗಳು ಬಂದು ಧರ್ಮಾಧರ್ಮಗಳ ನಿರೂಪಣೆಗಾಗಿ ಪ್ರಾರ್ಥಿಸಿದುದು; ಮನುವು ಬ್ರಹ್ಮೋಕ್ತನಿಬಂಧಗಳನ್ನು ವಿಸ್ತಾರವಾಗಿ ಉಪದೇಶಿಸುವುದು; ಋಷಿಗಳು ಸ್ಮೃತಿಗಳನ್ನು ರಚಿಸುವುದು; ಯುಗಾನುಸಾರ ಪಾದ ಧರ್ಮಗಳನ್ನು ವರ್ಣಾಶ್ರಮ ಧರ್ಮಾದಿಗಳನ್ನು ಅವುಗಳಲ್ಲಿ ವಿಸ್ತರಿಸಿದುದು; ಸ್ವಹಿತವನ್ನು ಇಚ್ಛಿಸುವ ಸರ್ವರೂ ಮನೂಕ್ತಸ್ಮೃತಿಗಳಂತೆ ನಡೆಯಬೇಕಾದುದರ ಅವಶ್ಯಕತೆ. ಪುಟ 567–573

ಅಧ್ಯಾಯ ೨೭—ಮನ್ವಂತರಾನುವರ್ಣನ. ಶ್ಲೋಕಸಂಖ್ಯಾ ೬೪

ಅಗ್ನಿಪುತ್ರ ಸ್ವಾರೋಚಿಷ—೨ನೇ ಮನು; ರೋಚನ (ಸೂತ್ರನಾಮಕ ವಾಯುದೇವ) ನಾಮಕನಾಗಿ ಇಂದ್ರನಾದನು; ಶ್ರೀಹರಿಯು ಉಪೇಂದ್ರನಾಗಿ ಅವತರಿಸಿ ಇಂದ್ರನ ರಕ್ಷಣೆ; ಉತ್ತಮನು ೩ನೇ ಮನು—ಯಮಧರ್ಮನೇ (ಸತ್ಯಜಿತ್ ನಾಮಕನಾಗಿ) ಇಂದ್ರ-ಶ್ರೀಹರಿಯು (ಸತ್ಯಸೇನನಾಗಿ) ಇಂದ್ರನ ರಕ್ಷಣೆ—ವಸಿಷ್ಠಪುತ್ರರು ೭ ಜನ ಸಪ್ತರ್ಷಿಗಳು;

ಇವರು ವಸಿಷ್ಠರಿಂದ ಧರ್ಮಗಳನ್ನು ತಿಳಿದರು; ವಸಿಷ್ಠರ ಉಪದೇಶವೇ ವಸಿಷ್ಠಸ್ಮೃತಿ–ಪುನಃ ಈ ಋಷಿಗಳು ಮೋಕ್ಷಸಾಧಕ ಧರ್ಮಗಳನ್ನು ಕುರಿತು ವಸಿಷ್ಠರನ್ನು ಪ್ರಶ್ನಿಸುವುದು–ವೈಷ್ಣವ ಧರ್ಮಗಳ ಉಪದೇಶ; ವಿಷ್ಣುದೀಕ್ಷೆಯ ಅವಶ್ಯಕತೆ–ದೀಕ್ಷಾಗ್ರಹಣ ವಿಧಿ; ವಿಷ್ಣುಲಾಂಛನಗಳ ಧಾರಣೆ–ಬ್ರಾಹ್ಮಣಾದಿ ವಿವಿಧ ವರ್ಣದವರು ಧರಿಸತಕ್ಕ ಪುಂಡ್ರಗಳ ವಿವರ; ಬ್ರಾಹ್ಮಣ, ಕ್ಷತ್ರಿಯಾದಿಗಳು ದೇಹದಲ್ಲಿ ಧರಿಸಬೇಕಾದ ಶಂಖಚಕ್ರಾದಿ ಮುದ್ರೆಗಳ ವಿವರ; ಅನುಲೋಮಿಗಳು, ಪ್ರತಿಲೋಮಿಗಳು, ಕುಂಡ, ಗೋಲಕ, ಸ್ತ್ರೀ ಮೊದಲಾದವರು ಧರಿಸಬೇಕಾದ ತಿಲಕಾದಿಗಳ ವಿವರ; ಸರ್ವರೂ ಸ್ವಯೋಗ್ಯ ವಿಷ್ಣುಲಾಂಛನಗಳನ್ನು ಧರಿಸಿ, ಸ್ವಹಿತ ಕರ್ಮಗಳನ್ನಾಚರಿಸಿ ಶ್ರೀವಿಷ್ಣು ಪ್ರೀತ್ಯರ್ಥವಾಗಿ ಅರ್ಪಿಸಬೇಕಾದುದರ ಅವಶ್ಯಕತೆ; ಅದರಿಂದ ಲಭಿಸುವ ಫಲವೇ ಮೋಕ್ಷ; ಚತುರ್ವಿಧ ಮುಕ್ತಿ; ಮುಕ್ತರ ಸ್ವೇಚ್ಛಾವಿಹಾರ; ನಿಯತ ದಂಪತಿಗಳ ಮುಕ್ತ ಕ್ರೀಡೆ; ಸತೀಧರ್ಮ–ಸಹಗಮನ–ವಿಧವಾ ಧರ್ಮಗಳು—ಇವುಗಳ ಆಚರಣೆಯಿಂದ ವಿಧವಾ ಸ್ತ್ರೀಯರು ಯತಿಯಂತೆ ಮಹಾ ಪುಣ್ಯಭಾಗಿಗಳಾಗುವರು; ವಿಷ್ಣು ಧರ್ಮದ ಸ್ವರೂಪ—ಅದರ ಆಚರಣೆಯು ಎಷ್ಟು ಮಾತ್ರವೂ ವ್ಯರ್ಥವಲ್ಲ; ಕರ್ಮ ಸಂಕೋಚದಿಂದ ವಿಶೇಷವಾಗಿ ಶ್ರವಣದಲ್ಲಿ ತೊಡಗಬೇಕು; ಮನನದಿಂದ ಜ್ಞಾನ ನಿಶ್ಚಯ—ಅದರಿಂದ ಧ್ಯಾನವನ್ನು ಸಾಧಿಸಬೇಕು; ಬಹುಜನ್ಮಗಳಿಂದ ಧ್ಯಾನಸಿದ್ಧಿ–ಬ್ರಹ್ಮದರ್ಶನ; ದರ್ಶನಫಲ—ಪ್ರಾರಬ್ಧ ಭೋಗದಿಂದ ಲಿಂಗಭಂಗ–ಮೋಕ್ಷ; ವಸಿಷ್ಠರ ಉಪದೇಶದಿಂದ ಭಕ್ತ್ಯುದ್ರೇಕಗೊಂಡ ಸಪ್ತರ್ಷಿಗಳು ನಮಸ್ಕರಿಸಿ ತೆರಳುವುದು. ಪುಟ 573–602

ಅಧ್ಯಾಯ ೨೮—ಇಂದ್ರದ್ಯುಮ್ನೋಪಾಖ್ಯಾನ. ಶ್ಲೋಕಸಂಖ್ಯಾ ೨೬

ನಾಲ್ಕನೇ ಮನ್ವಂತರ–ತಾಪಸ ಮನು–ವಿಶಿಖಾ ನಾಮಕ ಇಂದ್ರ (ಅವಳಿ ಅಶ್ವಿನೀ ದೇವತೆಗಳು); ಹರಿಮೇಧಾ ಮತ್ತು ಹರಣೀ ನಾಮಕ ಋಷಿ ದಂಪತಿಗಳಿಂದ 'ಹರಿ' ನಾಮದಿಂದ ಶ್ರೀಹರಿಯ ಅವತಾರ; ಹಾಹಾ ಹೂಹೂ ಗಂಧರ್ವರು—ದೇವಲ ಋಷಿ ಶಾಪ; ಹಾಹಾ, ಮೊದಲು ಇಂದ್ರದ್ಯುಮ್ನ ರಾಜನಾಗಿ ಹುಟ್ಟಿ ಆ ಜನ್ಮದಲ್ಲಿ ಅಗಸ್ತ್ಯರಿಂದ ಶಪ್ತನಾಗಿ ಗಜನಾಗಿ ಹುಟ್ಟುವುದು; ಹೂಹೂ ದೇವಲರ ಶಾಪದಿಂದ ನಕ್ರಜನ್ಮ ಹೊಂದಿದುದು; ಇಂದ್ರದ್ಯುಮ್ನನಲ್ಲಿಗೆ ಭೃಗ್ವಾದಿ ಋಷಿಗಳ ಆಗಮನ—ರಾಜನು ಭೃಗು ಋಷಿಗಳನ್ನು ಪೂಜಿಸಿ ಸತ್ಕರಿಸಿದುದು. ಪುಟ 603–613

ಅಧ್ಯಾಯ ೨೯—ಇಂದ್ರದ್ಯುಮ್ನೋಪಾಖ್ಯಾನ. ಶ್ಲೋಕಸಂಖ್ಯಾ ೫೮

ರಾಜನ ಪ್ರಶ್ನೆ—ಜೀವಸೃಷ್ಟಿ ಕರ್ಮ, ಬಂಧನಮೋಕ್ಷಾದಿಗಳನ್ನು ಕುರಿತು; ಭೃಗು ಋಷಿಗಳ ಉತ್ತರ, ಪ್ರಶ್ನೆಗಳ ಪ್ರಶಂಸನೆಯ ನಂತರ; ಅನುಭವಿಸಿದ್ದವಾದ ಜೀವರ ಅಸ್ವಾತಂತ್ರ್ಯ ಮತ್ತು ಯತ್ನಗಳಿಗೆ ದೊರೆಯುವ ಫಲವೈಚಿತ್ರ್ಯಗಳಿಂದ ಮತ್ತು ವೇದಾದಿ ಸದಾಗಮಗಳಿಂದ ಕರ್ಮ, ಜೀವ, ಈಶ್ವರರ ಸಂಬಂಧವಾದ ಯಥಾರ್ಥ ಜ್ಞಾನವು ಲಭಿಸುತ್ತದೆ; 'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ। ದಿವೀವ ಚಕ್ಷುರಾತತಂ' ಇತ್ಯಾದಿ ಪುರುಷಸೂಕ್ತ ಪ್ರಮೇಯಗಳ ವಿವರಣೆ; ಮುಕ್ತರೇ ಮುಖ್ಯ 'ಸೂರಿ'ಗಳು—ಜ್ಞಾನಿಗಳೇ ನಿತ್ಯ ಜಾಗ್ರತರು—

ಅವರೇ 'ವಿಷನ್ನವ'ರು; ಕೇವಲ ಜಡದಿಂದ ಸೃಷ್ಟಿಯು ಸಂಭವಿಸುವುದಿಲ್ಲ—ಚೇತನೇಚ್ಛೆಯ ಅವಶ್ಯಕತೆ; ಚೇತನ ಅಸ್ತಿತ್ವವನ್ನು ನಿರ್ಣಯಿಸುವ ಹೇತುಗಳು; ಸರ್ವಕರ್ತ ಸ್ವತಂತ್ರ ಪರಮಚೇತನನನ್ನು ನಿರ್ಧರಿಸುವ ಯುಕ್ತಿಗಳು; ಯಥಾರ್ಥ ಜ್ಞಾನ ಸಾಧನಗಳು— ಪ್ರಮಾಣ ಗಳು–ಅವುಗಳ ನಿರ್ದೋಷತ್ವ; ವೇದ ಮತ್ತು ಪಂಚರಾತ್ರಗಳು ಪ್ರಧಾನ ಪ್ರಮಾಣಗಳು— ತದನುಸಾರಿ ಪುರಾಣಗಳು ಮತ್ತು ಭಾರತಾದಿ ಇತಿಹಾಸಗಳೂ ಪ್ರಮಾಣಗಳು; ಆಗಮೋಕ್ತ ವಿಧಿಗಳ ಆಚರಣೆಯಿಂದ ಪುಣ್ಯವೂ, ತನ್ನಿಷೇಧಗಳ ಆಚರಣೆಯಿಂದ ಪಾಪವೂ, ಕರ್ತೃವಿಗೆ ಲಭಿಸುತ್ತದೆ; ಪುಣ್ಯಪಾಪಗಳ ಶುಭಾಶುಭ ಫಲಗಳು–ಸುಖದುಃಖ ರೂಪವಾದವುಗಳು; ಸುಖವೇ ಸರ್ವಾಪೇಕ್ಷಿತವಾದುದು—ಆತ ಏವ ಆಗಮೋದಿತ ವಿಹಿತ ಕರ್ಮಗಳನ್ನೇ ಆಚರಿಸತಕ್ಕದ್ದು; ಕರ್ಮಗಳ ಫಲಾಶೆಯನ್ನು ತೊರೆದು, ಅವುಗಳನ್ನು ಶ್ರೀಹರಿಯಲ್ಲಿ ಅರ್ಪಿಸಬೇಕು—ತುಷ್ಟನಾದ ಶ್ರೀಹರಿಯು ಜೀವಯೋಗ್ಯತಾನುಸಾರ ಫಲಪ್ರದನಾಗುತ್ತಾನೆ; ಸ್ವತಂತ್ರ ಪ್ರಭುವಾದ ಶ್ರೀಹರಿಯ ಆಜ್ಞೆಗಳೇ ಶ್ರುತಿ ಸ್ಮೃತಿಗಳು—ಅವುಗಳ ವಿಧಿಗಳನ್ನು ಪಾಲಿಸುವುದರಿಂದ ಶ್ರೀಹರಿಯು ತುಷ್ಟನಾಗುತ್ತಾನೆ; ಶ್ರೀಹರಿಯು ಸರ್ವಸಮನು— ವೈಷಮ್ಯಾದಿ ದೋಷರಹಿತನು; ಕರ್ಮವು ಜಡ—ಫಲದಾನ ಶಕ್ತಿರಹಿತವಾದುದು— ಆದ್ದರಿಂದ ಸ್ವತಂತ್ರ ಚೇತನನನ್ನು ಕರ್ಮವು ಅಪೇಕ್ಷಿಸುತ್ತದೆ ಇತ್ಯಾದಿ. ಪುಟ 613–638

ಅಧ್ಯಾಯ ೩೦—ಕರ್ಮಫಲದಲ್ಲಿ ಜೀವಭಾಗನಿರ್ಣಯ. ಶ್ಲೋಕಸಂಖ್ಯಾ ೧೮

ಜೀವ ದೇಹಗತ ದೇವ, ದೈತ್ಯ ಅಭಿಮಾನಿಗಳು; ಜೀವ ಕರ್ಮಸಿದ್ಧಿಗಾಗಿ ಶ್ರೀಹರಿಯು ತನ್ನ ಸ್ವಾತಂತ್ರ್ಯಾಂಶಗಳನ್ನು ವಿಭಾಗದಿಂದ ಸ್ಥಾಪಿಸುವ ವಿವರ; ಈ ಸ್ವಾತಂತ್ರ್ಯಾಂಶಗಳು ಮಾಡಿ ಜೀವನಿಂದ ಮಾಡಿಸುವ ಕರ್ಮಗಳು ಜೀವಕೃತ ಕರ್ಮಗಳೇ ಆಗುತ್ತವೆ; ಜೀವನಲ್ಲಿ ೧/೪೦ ಭಾಗದ ಅಂಶ ಮಾತ್ರ ಸ್ಥಾಪಿಸಲ್ಪಟ್ಟಿರುವುದರಿಂದ (ಪಾಪಪುಣ್ಯರೂಪ) ಉಭಯ ಕರ್ಮಗಳ ಫಲದಲ್ಲಿ ಅಷ್ಟುಭಾಗದ ಫಲಕ್ಕೆ ಮಾತ್ರ ಅರ್ಹನಾಗಿರುತ್ತಾನೆ; ದೈತ್ಯಾಭಿಮಾನಿಗಳಲ್ಲಿ ಸಹ ಸ್ವಾತಂತ್ರ್ಯಾಂಶಗಳಿದ್ದರೂ, ಅವರಿಗೆ ಪುಣ್ಯಕರ್ಮಗಳ ಫಲದಲ್ಲಿ ಭಾಗ ದೊರೆಯುವುದಿಲ್ಲ— ಹೀಗೆಯೇ ಅಭಿಮಾನಿ ದೇವತೆಗಳಿಗೆ ಪಾಪಫಲದಲ್ಲಿ ಭಾಗವಿಲ್ಲ; ದೇವ ದೈತ್ಯಾಭಿಮಾನಿಗಳಿಗೆ ಹೀಗೆ ದೊರೆಯದಿರುವ ಫಲಾಂಶಗಳ ವಿತರಣೆಯ ವಿವರ. ಪುಟ 639–648

ಅಧ್ಯಾಯ ೩೧—ಇಂದ್ರದ್ಯುಮ್ನ ಭೃಗು ಸಂವಾದ – ಜಾತಿವಿವೇಕ. ಶ್ಲೋ. ಸಂ ೬೯

ವೈರಾಜ ದೇಹದಿಂದಾದ ಸೃಷ್ಟಿ ಬ್ರಾಹ್ಮಣಾದಿ ವರ್ಣಗಳ ಮೂಲಪುರುಷರ ಉತ್ಪತ್ತಿ ವರ್ಣಧರ್ಮಗಳು—ಇವು ಉಪಜೀವಿಕಾ ಉಪಯುಕ್ತವಾಗಿರುವಂತೆ, ಪರಗತಿ ಸಾಧಕವೂ ಆಗಿರುತ್ತವೆ; ಬ್ರಾಹ್ಮಣಾದಿ ಪ್ರಥಮ ನಾಲ್ಕು ವರ್ಣಗಳಿಂದ ಅನುಲೋಮ ಪ್ರತಿಲೋಮ ಜಾತಿಗಳ ಉತ್ಪತ್ತಿ; ವರ್ಣಗಳ (ಜಾತಿಗಳ) ಪರಸ್ಪರ ಉಚ್ಚನೀಚತ್ವ ನಿರ್ಣಾಯಕ ನಿಯಮಗಳು; ವಿವಿಧ ಶಿಲ್ಪಾದಿ ವೃತ್ತಿಗಳು ಮತ್ತು ವಿದ್ಯೆಗಳು; ಕುಂಡಗೋಲಕಾದಿ ೧೮ ಜಾತಿಗಳು; ಚತುರ್ಥ ಪಂಚಮಾದಿ ವರ್ಣಗಳಿಗೆ ಸೇರುವ ಸಂಕರ ಜಾತಿಗಳ ಉತ್ಪತ್ತಿ; ವಿವಿಧ ಜಾತಿಗಳ ವೇದಾದ್ಯಧಿ ಕಾರ ಮತ್ತು ಸಂಸ್ಕಾರ ಭೇದಗಳು; ಜಾತಿಗಳ ಉಚ್ಚನೀಚತ್ವಗಳನ್ನರಿಯುವ ಪ್ರಕಾರ–ಗುಣಾಂಶ

ಗಣನೆಯ ನಿರೂಪಣೆ; ಅಧಿಕಾರ, ಸಂಸ್ಕಾರಾದಿ ವ್ಯವಸ್ಥಾ ನಿರ್ಣಯಗಳು; ಸರ್ವರೂ ಸ್ವವಿಹಿತ ವೃತ್ತಿಗಳನ್ನೂ ಧರ್ಮಗಳನ್ನೂ ಅನುಸರಿಸುವುದರಿಂದ, ಸಕಲರ ಉಪಜೀವನವೂ, ಸುಖಶಾಂತಿಗಳೂ ಲಭಿಸುತ್ತವೆ; ಆಪತ್ಕಾಲದಲ್ಲಿ ಅನುಷ್ಠಾನ ಯೋಗ್ಯವಾದ ವೃತ್ತಿಗಳು; ಮಹಾಪತ್ತಿನಲ್ಲಿ ಆಚರಿಸಬಹುದಾದ ವೃತ್ತಿಗಳ ನಿಯಮಗಳು; ಬ್ರಾಹ್ಮಣಾದಿ ೪ ಮತ್ತು ಅನುಲೋಮ ಪ್ರತಿಲೋಮಗಳು ೧೨, ಹೀಗೆ ೧೬ ಜಾತಿಗಳು, ಜೀವರ ಸ್ವರೂಪದಲ್ಲಿಯೂ ಉಂಟು—ಸೃಷ್ಟಿಕಾಲದಲ್ಲಿ ಅವರವರ ವೃತ್ತಿಗಳನ್ನು ಭಗವಂತನು ಶಿಕ್ಷಿಸುತ್ತಾನೆ; ಮುಂದೆ ಅಸಂಖ್ಯ ಸಂಕರ ಜಾತಿಗಳೂ ವೃತ್ತಿಸಾಂಕರ್ಯಗಳೂ ಸಂಭವಿಸುವ ಪ್ರಕಾರ; ಸಂಕರ ಜಾತಿಗಳ ವೃತ್ತಿಗಳು—ರಾಜರ ಪ್ರಬಲ ದುರ್ಬಲತೆಗಳ ಪರಿಣಾಮಗಳು. ಪುಟ 648–678

ಅಧ್ಯಾಯ ೩೨—ಮುಕ್ತಾನಂದ ನಿರೂಪಣೆ. ಶ್ಲೋಕಸಂಖ್ಯಾ ೫೧

ಸ್ವರೂಪದಿಂದ ೧೬ ಜಾತಿಗಳಿಗೆ ಸೇರಿದ ಜೀವರು ಮುಕ್ತಿಯಲ್ಲಿ ಆನಂದಿಸುವ ಬಗೆ; ತೃಣ, ವೃಕ್ಷ, ಪಶು, ಪಕ್ಷ್ಯಾದಿ ಜೀವರ ವಿಹಾರಗಳು; ಮುಕ್ತರ ಆನಂದ ತಾರತಮ್ಯ; ತೃಣಜೀವನ ಆನಂದದ ಕಲ್ಪನೆ ಸಂಸಾರಿ ಜೀವರಿಗುಂಟಾಗಲು ಲೌಕಿಕಾನಂದರ ಸಾದೃಶ್ಯ; ಮುಕ್ತ ಬ್ರಾಹ್ಮಣ ಜೀವನ ಆನಂದ—ಜಂಬೂದ್ವೀಪಾಧಿಪತಿಯೂ, ಪತ್ನಿಪುತ್ರಾದಿ ಸಕಲ ಸೌಭಾಗ್ಯಯುತನೂ, ದುಃಖ ಲೇಶವಿಲ್ಲದ ತರುಣ ರಾಜನ ಸುಖಸದೃಶ, ಇತ್ಯಾದಿ; ಅತಿ ನೀಚ (ಕಡೆಯ ತಾರತಮ್ಯ ಕಕ್ಷ್ಯೆಯ) ಮುಕ್ತ ಮಾನುಷಾನಂದ; ಚಕ್ರವರ್ತಿ ಜೀವ, ಮನುಷ್ಯಗಂಧರ್ವ, ಆಜಾನಜ, ಪಿತೃ, ದೇವಗಂಧರ್ವ, ಕರ್ಮಜದೇವತೆ, ಅಗ್ನಿಯಿಂದ ಬ್ರಹ್ಮನವರೆಗಿನ ತತ್ತ್ವಾಭಿಮಾನಿಗಳು, ೧೦ ರಿಂದ ೧೦ ಸಾವಿರ ಗುಣಾಧಿಕ ಆನಂದವುಳ್ಳವರು; ತಮೋಯೋಗ್ಯಜೀವರ ಮುಕ್ತಿ—ತಮಸ್ಸಿನಲ್ಲಿ ಅನುಭವಿಸುವ ದುಃಖತಾರತಮ್ಯ; ತಾಮಸತೃಣಜೀವಿಯ ದುಃಖದಿಂದ ಕಲಿ ಪರ್ಯಂತರದ ದೈತ್ಯವರ್ಗದವರ ದುಃಖ—ಲೌಕಿಕದುಃಖಸಾದೃಶ್ಯಗಳು—ಕಲಿಯು ಪ್ರವೇಶಿಸುವ ತಮಸ್ಸಿನ ಅಧೋಭಾಗದ ದುಃಖನಿರೂಪಣೆ—ಪ್ರಮಾಣಗಳು; ತಮೋಯೋಗ್ಯರ ಲಿಂಗಭಂಗಪ್ರಕಾರ—ತಮಃಪ್ರವೇಶ—ಪುನರಾವೃತ್ತಿರಹಿತ ನಿತ್ಯದುಃಖಸ್ಥಾನ, ಸಾತ್ತ್ವಿಕರ ಮೋಕ್ಷ—ಬ್ರಹ್ಮನೊಂದಿಗೆ—ವಿರಜಾನದೀ ಸ್ನಾನ—ವಿರಜಾ ಸ್ವರೂಪ ಮತ್ತು ಸ್ಥಾನ—ಲಿಂಗಭಂಗ, ಶಿಂಶುಮಾರ ಶ್ವೇತದ್ವೀಪ ದರ್ಶನ—ವಾಸುದೇವನ ಉದರಪ್ರವೇಶ, ಸೃಷ್ಟಿ ಕಾಲವು ಬರಲು ಪುನಃ ವೈಕುಂಠಾದಿ ಸ್ಥಾನಗಳಲ್ಲಿ ವಿಹರಿಸುವುದು, ಇವರೆಲ್ಲರೂ ನಿತ್ಯಾನಂದ ಭೋಗವುಳ್ಳವರು,ಪುನರಾವೃತ್ತಿ ರಹಿತರು; ಈ ಜ್ಞಾನದಿಂದ ಸಂಸಾರದಲ್ಲಿ ಆಸಕ್ತಿಯನ್ನು ತ್ಯಜಿಸಲು ಸಹಾಯ—ಅಭಿಮಾನವೇ ದುಃಖಕ್ಕೆ ಮೂಲಕಾರಣ; ಆದ್ದರಿಂದ ಶ್ರೀಹರಿಯನ್ನು ಭಕ್ತಿಯಿಂದ ಆಶ್ರಯಿಸಿ, ಆತನ ಪ್ರಸನ್ನತೆಯನ್ನು ದೊರಕಿಸಿಕೊಳ್ಳತಕ್ಕದ್ದು; ಹರಿಭಕ್ತರಿರುವ ಪ್ರದೇಶವೇ ಪುಣ್ಯದೇಶವು. ಪುಟ 678–699

ಅಧ್ಯಾಯ ೩೩—ಕರ್ಮನಿರೂಪಣ. ಶ್ಲೋಕಸಂಖ್ಯಾ ೩೧

ಕರ್ಮವಿಭಾಗ—ಸಂಚಿತಾದಿ ಕರ್ಮಾನುಸಾರ ದೇಹಪ್ರಾಪ್ತಿ; ಜೀವನಿಗೆ ದೇಹಪ್ರಾಪ್ತಿಯಲ್ಲಿ ವಾಸುದೇವಾದಿ ಶ್ರೀಹರಿರೂಪಗಳ ವ್ಯಾಪಾರ—ಪಿತೃದೇಹ ಪ್ರವೇಶ—ಮಾತೃಗರ್ಭ

ಸಿದ್ಧವಾದುವುಗಳು—ಈ ವಿವಿಧ ಜಾತಿಯ ದೇವಾದಿಪ್ರಜೆಗಳ ಸೃಷ್ಟಿ ವಿವಿಧ ಶಿಲ್ಪಗಳು ಮತ್ತು ವೃತ್ತಿಗಳು—ಜಾತಿನಿರ್ಣಾಯಕಗಳಲ್ಲ; ದೇವತೆಗಳು ಸರ್ವವರ್ಣಾಶ್ರಮಧರ್ಮಗಳುಳ್ಳವರು—ಧರ್ಮಗಳ ಪ್ರಾಚುರ್ಯದಿಂದ ಅವರ ವರ್ಣನಿರೂಪಣೆಗಳು— ಸರ್ವಧರ್ಮ ನಿಯಾಮಕನಾದ ಶ್ರೀವಿಷ್ಣುವು ಯಾವ ಜಾತಿಗೂ ಸೇರಿದವನಲ್ಲ; ದೇವಾದಿಗಳಂತೆ ಮನುಷ್ಯಜೀವರಲ್ಲಿಯೂ ಸ್ವಾಭಾವಿಕವಾದ ೧೬ ಜಾತಿಗಳುಂಟು; ಶ್ರೀಹರಿಯ ವಿಶ್ವಕರ್ಮಾವತಾರ—ವಿವಿಧ ಶಿಲ್ಪಗಳ ಉಪದೇಶ—ಭುವನನೆಂಬ ದೇವತೆಯ ಮಗನಾಗಿ ಅವತರಿಸಿದ ವಿಶ್ವಕರ್ಮನು ಭೌವನನೆನಿಸಿ, ದೇವಲೋಕಗಳ ನಗರ ಪ್ರಾಸಾದ ಉದ್ಯಾನಾದಿಗಳನ್ನು ನಿರ್ಮಿಸಿದುದು—ಈತನೇ ಋಷ್ಯಂತರ್ಗತನಾಗಿ ನಿಂತು ಬ್ರಾಹ್ಮಣಾದಿ ತ್ರಿವರ್ಣದ ಪ್ರಜೆಗಳಿಗೆ ಸಾಂಗವೇದಗಳನ್ನು ಉಪದೇಶಿಸಿದುದು—ಈತನು ಆಯುರ್ವೇದ, ಧನುರ್ವೇದ, ಗಾಂಧರ್ವಾದಿ ವಿದ್ಯೆಗಳನ್ನು ಉಪದೇಶಿಸಿದುದು; ಬ್ರಾಹ್ಮಣಾದಿ ವರ್ಣೀಯರಿಗೆ ಯೋಗ್ಯವಾದ ಉತ್ತಮ, ಮಧ್ಯಮ, ಅಧಮ ಕರ್ಮಾಚರಣೆಗಳ ನಿರೂಪಣೆ; ಚತುರ್ವರ್ಣದವರ ಗುಣತಾರತಮ್ಯ—ದೇಹನಿಮಿತ್ತಕ ಉತ್ತಮ ಹೀನತೆಗಳ ಗುಣಾಂಶಗಳ ಗಣನಕ್ರಮ; ಅನುಲೋಮಾದಿ ಜಾತಿಗಳವರ ಗುಣಾಂಶಗಳನ್ನು ನಿರ್ಧರಿಸುವ ವಿಧಾನ—ಅವರ ಸಂತಾನಗಳ ಗುಣತಾರತಮ್ಯ ನಿರ್ಣಯಕ್ರಮ; ವಿವಿಧವರ್ಣದವರ ಪತ್ನಿಯರಿಂದ ಒಬ್ಬ ಅನುಲೋಮಿಗೆ ಜನಿಸುವ ಸಂತಾನಗಳ ಗುಣಾಂಶಗಳ ನಿರ್ಣಯಕ್ರಮ—ಈ ನ್ಯಾಯವನ್ನು ಪ್ರತಿಲೋಮಿಗಳಿಗೆ ಅತಿದೇಶಮಾಡುವುದು; ಪರಪುರುಷಸಂಗದಿಂದ ಸಂತಾನ—ಜ್ಞಾನವಿಲ್ಲದೇ ಅಥವಾ ಬಲಾತ್ಕಾರಸಂಭೋಗದಿಂದ ಜನಿಸುವ ಸಂತಾನಗಳ ಗುಣತಾರತಮ್ಯ ಮತ್ತು ಪ್ರಾಯಶ್ಚಿತ್ತಾಚರಣೆಯಿಂದಾಗುವ ವ್ಯತ್ಯಾಸ—ಪ್ರಾಯಶ್ಚಿತ್ತದಿಂದ ಸ್ತ್ರೀಶುದ್ಧಿ ಮತ್ತು ಪತಿಯಿಂದ ಗ್ರಾಹ್ಯಳಾಗುವಿಕೆ; ಕೆಲವು ಅನುಲೋಮಿಗಳಿಗೆ ಸಹ ವೈದಿಕಕರ್ಮಾಧಿಕಾರವಿಲ್ಲ; ವಿವಿಧ ವರ್ಣದವರ ಗೋತ್ರಗಳನ್ನು ನಿರ್ಧರಿಸುವ ವಿಧಾನ ; ಸಪಿಂಡ, ಸಮಾನೋದಕ, ಸಗೋತ್ರ, ಗೋತ್ರಜವಿಭಾಗಗಳ ನಿರೂಪಣೆ; ಗುರುಗಳನ್ನು ಬದಲಿಸಿಕೊಳ್ಳುವ ನಿಯಮಗಳು; ವಿವಿಧ ವಿವಾಹಗಳು—ಬ್ರಾಹ್ಮ, ದೈವ, ಆರ್ಷಾದಿ ವಿವಿಧ ವಿವಾಹಗಳಲ್ಲಿ ವಿವಿಧ ಜಾತಿಯೋಗ್ಯ ವಿವಾಹಕ್ರಮಗಳ ನಿರೂಪಣೆ; ಮಂತ್ರಾಧಿಕಾರಿಗಳು—ದ್ವಿವಿಧಗಾಯತ್ರೀ—ವೈದಿಕ ಸಂಸ್ಕಾರಾರ್ಹತೆಗಳು; ಚತುರ್ವಿಧ ವ್ರಾತ್ಯರು; ಕುಂಡ ಗೋಲಕರ ಗುಣಾಂಶತಾರತಮ್ಯ; ಭೃಜ್ಜಕಂಟಕಾದಿ ಜಾತಿಯವರು, ದೋಷಪರಿಹಾರದಿಂದ ಮೂಲಪುರುಷನ ಜಾತಿಯನ್ನು ಹೊಂದುವ ಕ್ರಮ; ಅಂತ್ಯಜರು—ಗುರ್ತಿಸುವ ಬಗೆ—ಯವನರ ಲಕ್ಷಣಗಳು—ಜಾತಿ ಮಿಶ್ರಣದಿಂದ ಮ್ಲೇಂಛರು; ವಿವಿಧಜಾತಿಯವರು ಅನುಸರಿಸಬಹುದಾದ ಜೀವಿಕಾವೃತ್ತಿಗಳು; ಜಾತಿಧರ್ಮಗಳು—ಬ್ರಾಹ್ಮಣಾದಿ ನಾಲ್ಕು ವರ್ಣಗಳ ಧರ್ಮಗಳು—ಅವೇ ವೃತ್ತಿಗಳೂ ಆಗುತ್ತವೆ—ಸರ್ವಸಾಧಾರಣ ಧರ್ಮಗಳು; ಅನ್ನಪಾನಾದಿ ಸ್ವೀಕಾರಸಂಬಂಧ ಜಾತಿನಿಯಮಗಳು; ಗುಣಾಂಶತಾರತಮ್ಯದಿಂದ ನಿರ್ಧರಿಸುವ ಬಗೆ; ಹುರಿದ ಕರಿದ ಆಹಾರವಸ್ತುಗಳು ಫಲದಂತೆ ಅನ್ಯರಿಂದ ಗ್ರಾಹ್ಯಗಳು; ಅನ್ನ ಜಲ ಸ್ವೀಕಾರವಿಷಯಕ ತಾರತಮ್ಯ ನಿಯಮಗಳು; ಸೇವಾವೃತ್ತಿ—ತ್ರೈವಿಧ್ಯ ಲಕ್ಷಣಗಳು—ನೀಚಪರಿಚರ್ಯವು ಶ್ವಾನವೃತ್ತಿ—ಇದನ್ನು ನಿವಾರಿಸು

ಪಾಪವೆಂಬ ಅದೃಷ್ಟವು ಉದ್ಭವಿಸುತ್ತದೆ—ಕ್ರಮದಿಂದ ಪುಣ್ಯಾಪಾಪಗಳು, ಕಾಲಾಂತರದ ಸುಖದುಃಖಗಳಿಗೆ ಕಾರಣವಾಗುತ್ತವೆ; ನಿತ್ಯನೈಮಿತ್ತಿಕತ್ಯಾಗದಿಂದ ಪಾಪವುಂಟು—ಕಾಮ್ಯತ್ಯಾಗದಿಂದ ಪಾಪವಿಲ್ಲ; ಈ ತ್ರಿವಿಧಕರ್ಮಗಳೂ ಒಂದೊಂದೂ ದ್ವಿವಿಧ—ಸಬೀಜ, ನಿರ್ಬೀಜವೆಂದು; ಸಬೀಜವೂ ದ್ವಿವಿಧ—ಪುಣ್ಯಬೀಜ, ಪಾಪಬೀಜವೆಂದು; ಪುಣ್ಯಬೀಜ ಕರ್ಮದ ಲಕ್ಷಣ—ಆಸ್ತಿಕ್ಯಬುದ್ಧಿ ಶ್ರೀಹರ್ಯಧೀನಕರ್ತೃತ್ವಜ್ಞಾನ ಮತ್ತು ಶಾಠ್ಯವಿಲ್ಲದಿರುವಿಕೆ; ಶಾಠ್ಯರಹಿತ ಕರ್ಮಸ್ವಭಾವ; ಶಾಠ್ಯ, ಅಸೂಯೆ, ದಂಭ, ಲೋಭಾದಿಗಳಿಂದ ಆಚರಿಸುವ ಪುಣ್ಯಕರ್ಮವು ಪಾಪಬೀಜವು; ಈ ಉಭಯ ವಿಧ ಪುಣ್ಯಕರ್ಮಗಳ ಫಲ—ಪುಣ್ಯಪಾಪಗಳ ವೃದ್ಧಿ ಮತ್ತು ಸುಖದುಃಖಗಳು; ನಿರ್ಬೀಜಪುಣ್ಯವೂ ದ್ವಿವಿಧ—ಜ್ಞಾತಫಲಕ, ಅಜ್ಞಾತಫಲಕವೆಂದು—ಇವುಗಳ ಲಕ್ಷಣ ಮತ್ತು ನಿದರ್ಶನಗಳು; ಕೇವಲ ವಿಷ್ಣುಪ್ರೀತ್ಯರ್ಥವಾಗಿ ಆಚರಿಸಲ್ಪಡುವ ಕರ್ಮಗಳು ಮೋಕ್ಷಬೀಜವು—ಅನಪೇಕ್ಷಿತವಾದರೂ ಇಹಫಲಗಳ ಅಧಿಕ ಸತ್ಫಲಗಳೂ ಲಭಿಸುತ್ತವೆ; ಅನ್ಯದೇವತೋದ್ದೇಶ್ಯವಾದ ಪುಣ್ಯಕರ್ಮಗಳ ಫಲಸ್ವರೂಪ—ಅಲ್ಪ ಮತ್ತು ನಶ್ವರ—ಮೋಕ್ಷಹೇತುವಲ್ಲ—ಕಾರಣ; ಆಭಿಚಾರಿಕಕರ್ಮಗಳೂ ದ್ವಿವಿಧ—ಪುಣ್ಯಬೀಜ, ಪಾಪಬೀಜಗಳೆಂದು—ಸದೃಷ್ಟಾಂತ ವಿವರಣೆ; ದೋಷವಿಲ್ಲದ ಪತ್ನೀಪುತ್ರಧನದೇಹಾದಿಗಳು ಪೂರ್ವದ ಸಾಂಗ ಪುಣ್ಯಕರ್ಮಗಳ ಫಲಗಳು—ತದ್ವಿರುದ್ಧ ದುರ್ಭೋಗ್ಯ ದುಃಖಪ್ರದ ವಸ್ತುಗಳು ಶಾಸ್ತ್ರವಿರುದ್ಧ ಪೂರ್ವಕರ್ಮಫಲಗಳು; ಧನಾದಿ ಸಂಪತ್ತುಗಳ ಚಂಚಲತ್ವ—ಶ್ರೀಹರಿಸಂಕಲ್ಪವೇ ಕಾರಣ—ಇತರ ಸಾಧುತ್ವ; ಶ್ರೀಹರಿಯ ಅನುಗ್ರಹದ ಮಹತ್ವ; ಪಾಪಕರ್ಮ ಪ್ರಭೇದಗಳು—ವಿಹಿತತ್ಯಾಗ, ನಿಷಿದ್ಧಕರಣಗಳೇ ಪಾಪಮೂಲ; ಸಬೀಜನಿರ್ಬೀಜ ಪಾಪಗಳು; ನಿರ್ಬೀಜಪಾಪ—ಜ್ಞಾತಾಜ್ಞಾತ ಫಲಕ ನಿದರ್ಶನಗಳು; ಪ್ರಿಯ ವಸ್ತುವಿಯೋಗ ಮತ್ತು ಅಪ್ರಿಯಪ್ರಾಪ್ತಿಗಳೇ ದುಃಖಮೂಲ; ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿಗಳೇ ಸುಖಹೇತು; ಸಬೀಜಪಾಪ—ಪುಣ್ಯಬೀಜ, ಪಾಪಬೀಜವೆಂದು ಎರಡು ವಿಧ—ಇವುಗಳ ಸ್ವರೂಪ ಮತ್ತು ಫಲ; ಸತ್ಕರ್ಮಾಚರಣೆಯಲ್ಲಿ ವಿಷ್ಣುಭಕ್ತಿಯೂ, ಪಾಪಾಚರಣೆಯಲ್ಲಿ ವಿಷ್ಣುದ್ವೇಷವೂ, ಕರ್ಮಫಲ ದಾನಶಕ್ತಿಯನ್ನು ಅಧಿಕಗೊಳಿಸುತ್ತವೆ; ತ್ರಿಕರಣಗಳಿಂದ ಸಂಭವಿಸುವ ಕರ್ಮಗಳು, ಸತ್ಕರ್ಮ, ದುಷ್ಕರ್ಮ, ಉದಾಸೀನಗಳೆಂದು ತ್ರಿವಿಧ—ಪುಣ್ಯ, ಪಾಪ, ನಿಷ್ಫಲಗಳೆಂಬ ಫಲವುಳ್ಳವು; ಶಾಸ್ತ್ರೋಕ್ತ ವಿಧಿನಿಷೇಧಗಳ ಗುಂಪಿಗೆ ಸೇರದ ಕರ್ಮಗಳು ಉದಾಸೀನಕರ್ಮಗಳೆಂಬುವು; ಕರ್ಮವು ಪುನಃ ತ್ರಿವಿಧವು—ಸಂಚಿತ, ಪ್ರಾರಬ್ಧ ಆಗಾಮಿಗಳೆಂದು; ಪ್ರಾರಬ್ಧವು ಭೋಗದಿಂದ ನಾಶವಾಗುತ್ತದೆ; ಸಂಚಿತಪಾಪವು ಉತ್ಕಟ ಸತ್ಕರ್ಮಗಳಿಂದ ನಷ್ಟವಾಗುತ್ತದೆ; ಉತ್ಕಟ ಪುಣ್ಯಗಳೆಂದರೆ, ವೇದಾಧ್ಯಯನ, ಜಪ, ಸಚ್ಛಾಸ್ತ್ರಮನನ, ಶ್ರೀವಿಷ್ಣುನಾಮಸಂಕೀರ್ತನ, ತಪ, ಬ್ರಾಹ್ಮಣತೋಷಣ, ತೀರ್ಥಕ್ಷೇತ್ರಯಾತ್ರೆ, ಅಹಿಂಸಾ ವ್ರತಪಾಲನೆ, ಸತ್ಪಾತ್ರದಾನ, ಅರವಂಟಿಗೆ ನಡೆಸುವುದು, ಮಾತಾಪಿತೃಗಳ ಸಂಪ್ರೀತಿ; ಪೂರ್ವಪುಣ್ಯವನ್ನು ನಾಶಗೊಳಿಸುವ ಉತ್ಕಟ ದುಷ್ಕರ್ಮಗಳೆಂದರೆ, ವಿಷ್ಣು ವೈಷ್ಣವ ನಿಂದೆ, ಮಾತಾಪಿತೃಗಳ ಅಪ್ರೀತಿ, ಅಧ್ಯಯನದ ಉಪೇಕ್ಷೆ, ಇತ್ಯಾದಿ; ಗುರುವಿನಂತೆ ಪೂಜಾರ್ಹರಾದ ಜನರ ವಿವರ; ಶ್ರೀವಿಷ್ಣುಪೂಜಾಯೋಗ್ಯ ಅಧಿಷ್ಠಾನಗಳು—ಅಗ್ನಿಬ್ರಾಹ್ಮಣಾದಿಗಳು;

ವಿಪ್ರಾವಜ್ಞೆ—ದುರ್ಗತಿಸಾಧನ—ಇಂದ್ರದ್ಯುಮ್ನಾದಿ ಬಹು ರಾಜಾದಿಗಳ ನಿದರ್ಶನ; ವಿಪ್ರಾನುಗ್ರಹ—ಸತ್ಫಲಪ್ರಾಪ್ತಿ—ನಿದರ್ಶನಗಳು; ಪ್ರಜೆಗಳ ಸಂಪದ್ವಿಪತ್ತುಗಳಿಗೆ ವಿಪ್ರರ ತೃಪ್ತಿ ಅತೃಪ್ತಿಗಳು ಕಾರಣ; ವಿಪ್ರರು ವಿಷ್ಣುದೂತರಂತೆ ಮಾನ್ಯರು—ಈ ರಹಸ್ಯವನ್ನು ಶ್ರೀವಿಷ್ಣುಮಾಯಾಬಲದಿಂದ ಅಜ್ಞರು ತಿಳಿಯುವುದಿಲ್ಲ; ಧನಿಕರನ್ನು ದರಿದ್ರರನ್ನಾಗಿಯೂ, ದರಿದ್ರರನ್ನು ಧನಿಕರನ್ನಾಗಿಯೂ ಮಾಡಲಿಕ್ಕಾಗಿ ಶ್ರೀವಿಷ್ಣುವು ಬ್ರಾಹ್ಮಣರನ್ನು ನಿರ್ಧನಿಕರನ್ನಾಗಿ ಇಡುತ್ತಾನೆ—ಬ್ರಾಹ್ಮಣರಲ್ಲಿ ಮಾಡುವ ದಾನದ ಫಲ—ಪರಲೋಕಪಾಥೇಯ—ಬ್ರಾಹ್ಮಣನ ಪುಣ್ಯವು ದಾತನಿಗೆ ಲಭಿಸುತ್ತದೆ—ಸ್ವೀಕರಿಸುವ ಬ್ರಾಹ್ಮಣನು ಜಪ, ಅಧ್ಯಯನ, ಹೋಮಾದಿಗಳಿಂದ ತುಂಬಿಕೊಳ್ಳುತ್ತಾನೆ; ದಾನಾದಿ ಪುಣ್ಯಕರ್ಮಗಳನ್ನು ಹೇಳಿಕೊಳ್ಳುವುದ ರಿಂದ ಪುಣ್ಯನಾಶ—ಮನಸಾ ಭಾವಿಸುವುದರಿಂದ ಸಹ ಪುಣ್ಯಹಾನಿ; ಪುಣ್ಯಾಚರಣೆಯಲ್ಲಿ ಅಧಿಕ ಪುಣ್ಯಕರ್ತರನ್ನು ನೋಡಿ ಹೆಮ್ಮೆಪಡದಂತಿರಬೇಕು—ಪಾಪವಿಷಯದಲ್ಲಿ ಅಧಿಕ ಪಾಪಕರ್ತರನ್ನು ನೋಡಿ ಸಮಾಧಾನಪಡಬಾರದು—ಆದರೆ ದುಃಖವಿಷಯದಲ್ಲಿ ಅಧಿಕ ದುಃಖಿಗಳನ್ನು ನೋಡಿ ಶಾಂತಚಿತ್ತನಾಗಬೇಕು; ಧನಾದಿಗಳ ವಿಷಯದಲ್ಲಿಯೂ, ಅವುಗಳ ಕಾರಣವಾದ ಪುಣ್ಯದಲ್ಲಿಯೂ ನನ್ನದೆಂಬ ಅಭಿಮಾನ ತ್ಯಾಗ ಮಾಡಿ ವಿನೀತನಾಗಿರಬೇಕು; ಸಂಚಿತ ಕರ್ಮಗಳು ಫಲಕೊಡಲಾರಂಭಿಸಲು, ಅವೇ ಪ್ರಾರಬ್ಧಗಳೆನಿಸುವುವು—ಇವುಗಳ ಭೋಗಕಾಲದಲ್ಲಿ ಕೋಟಿಶಃ ಹೊಸ ಕರ್ಮಗಳು ಸಂಭವಿಸುತ್ತವೆ—ಫಲಭೋಗದಿಂದ ಕರ್ಮಕ್ಷಯವನ್ನೂ ನಂತರ ಮೋಕ್ಷವನ್ನೂ ಪಡೆಯುವುದು ದುಃಸಾಧ್ಯ; ಆದ್ದರಿಂದ ಶ್ರವಣಮನನಾದಿಗಳನ್ನು ಬೆಳೆಸಿಕೊಂಡು ಭಕ್ತಿಯನ್ನೂ ಧ್ಯಾನದಿಂದ ಅಪರೋಕ್ಷವನ್ನೂ ಸಾಧಿಸ ಬೇಕು; ಅಪರೋಕ್ಷದಿಂದ ಸಂಚಿತ ಕರ್ಮನಾಶವೂ, ಆಗಾಮಿ ಕರ್ಮಗಳ ನಿರ್ಲೇಪವೂ ಸಿದ್ಧಿಸುತ್ತದೆ—ಅಪರೋಕ್ಷವಾಗುವ ಕಾಲದಲ್ಲಿ ಆರಂಭವಾದ ಕರ್ಮವನ್ನು ಭೋಗಿಸಿದ ನಂತರ ಲಿಂಗಭಂಗದಿಂದ ಮುಕ್ತನಾಗುತ್ತಾನೆ—ಸಂಸಾರಕ್ಕೆ ತಿರಿಗಿ ಬರುವುದಿಲ್ಲ ಸಾಲೋಕ್ಯಾದಿ ಚತುರ್ವಿಧ ಮುಕ್ತಿಗಳಲ್ಲಿ ಸ್ವಯೋಗ್ಯವಾದ ಮುಕ್ತಿಯನ್ನು ಪಡೆದು ನಿತ್ಯವೂ ನಿರ್ದುಃಖಾನಂದ ವನ್ನು ಯಥೇಚ್ಛವಿಹಾರಾದಿಗಳಿಂದ ಭೋಗಿಸುತ್ತ ಸ್ಥಿತನಾಗುತ್ತಾನೆ. ಪುಟ 800–845

ಅಧ್ಯಾಯ ೩೮—ಬ್ರಾಹ್ಮಣಪ್ರಶಂಸೆ. ಶ್ಲೋಕಸಂಖ್ಯಾ ೭೧

ಸರ್ವಜೀವರೂ ಅನಾದಿಕರ್ಮಬದ್ಧರು—ಸರ್ವರೂ ಸುಖಾಪೇಕ್ಷಿಗಳು; ಸುಖ ಪ್ರದಾನದಲ್ಲಿ ಶ್ರೀಹರಿಯೇ ಸ್ವತಂತ್ರನು—ಸುಖಾನುಭವ ವಿನಿಮಯದಲ್ಲಿ ಭಗವಂತನು ಯಾರಿಗೆ ಎಷ್ಟು ಸುಖವನ್ನು ಅಥವಾ ದುಃಖವನ್ನು ಹೇಗೆ ಕೊಡಬೇಕೆಂಬ ನಿಯಮವಿಲ್ಲದೆ ಸ್ವೇಚ್ಛೆಯಿಂದ ವರ್ತಿಸಿದರೆ, ವೈಷಮ್ಯ ನಿರ್ದಯತ್ವಾದಿ ದೋಷವುಳ್ಳವನೆಂದು ಪ್ರಾಪ್ತವಾಗು ತ್ತದೆ—ಸರ್ವಪ್ರಮಾಣಗಳು ಆತನನ್ನು ನಿರ್ದೋಷಿ ಎಂದು ಸಾರುತ್ತವೆ—ಆದ್ದರಿಂದ, ದಾನತಪಸ್ಸುಗಳನ್ನು ಸುಖಪ್ರದಾನ ನಿಮಿತ್ತಕಾರಣಗಳನ್ನಾಗಿಯೂ, ತದ್ವಿರುದ್ಧಪ್ರವೃತ್ತಿಗಳನ್ನು ದುಃಖಪ್ರದಾನಕಾರಣಗಳನ್ನಾಗಿಯೂ, ಭಗವಂತನು ವಿಧಿಸಿ, ಅದರಂತೆ ವರ್ತಿಸುತ್ತಾನೆ; ತಪಸ್ಸು ದಾನಗಳ ಲಕ್ಷಣ—ತಪಸ್ಸಿಗೆ ಉಪದೇಶಕರೂ, ದಾನಕ್ಕೆ ಸ್ವೀಕಾರಪಾತ್ರರೂ ಅವಶ್ಯಕ —ಈ ಉಭಯವನ್ನು ಒದಗಿಸಲು ಬ್ರಾಹ್ಮಣರನ್ನು ತನ್ನ ಪ್ರತಿನಿಧಿಗಳನ್ನಾಗಿ ಮಾಡಿರುವನು;

ಬ್ರಾಹ್ಮಣರು ಪ್ರಾಯಃ ನಿರ್ಧನರು ಮತ್ತು ಅತೃಪ್ತರು—ಇವು ಉಪದೇಶ ದಾನಸ್ವೀಕಾರಗಳಿಗೆ ನಿಮಿತ್ತಗಳಾಗುತ್ತವೆ; ದಾನಪಾತ್ರತ್ವ ಲಕ್ಷಣಗಳು—ಅನ್ನದಾನಕ್ಕೆ ಜಾತಿವಿವೇಕದ ಎಡೆಯಿಲ್ಲದಿದ್ದರೂ ಬ್ರಾಹ್ಮಣನು ವಿಶೇಷ ಪಾತ್ರನು; ಪಶು ವಸ್ತ್ರ ಧನಾದಿಗಳ ದಾನಕ್ಕೆ ಬ್ರಾಹ್ಮಣನೇ ಪಾತ್ರನು—ತಪಸ್ಸು, ಅಧ್ಯಯನ, ವಿದ್ಯೆಗಳು ಒಂದಕ್ಕಿಂತ ಒಂದು ಅಧಿಕ ಪಾತ್ರತ್ವವನ್ನುಂಟುಮಾಡುತ್ತವೆ; ಸತ್ಪಾತ್ರದಾನದ ಮಹಿಮೆ, ವಿಪ್ರತೋಷಣಪ್ರಕಾರ; ದಾನ ಪಾತ್ರರಲ್ಲಿ ತಾರತಮ್ಯ; ದಾತನು ಸ್ವಯೋಗ್ಯತೆಯಂತೆ ದಾನಮಾಡಿದರೂ ವಿಪ್ರನು ತೃಪ್ತನಾಗದಿದ್ದರೆ ದಾತನಿಗೆ ದೋಷವಿಲ್ಲ—ಶ್ರೀಹರಿಯು ಪ್ರೀತನಾಗುತ್ತಾನೆ; ದೇಶ ಕಾಲಾನುಗುಣರಾದ ಪಾತ್ರರನ್ನು ಆರಿಸಿಕೊಂಡು ದಾನಮಾಡಬೇಕು—ಸತ್ಪಾತ್ರರಿಲ್ಲೆಂದು ಬ್ರಾಹ್ಮಣಪೂಜೆಯನ್ನು ಬಿಡಬಾರದು; ಅಗ್ನಿಯಲ್ಲಿ ಹೋಮಿಸುವುದಕ್ಕಿಂತ ಅಧಿಕವಾಗಿ, ಬ್ರಾಹ್ಮಣಸಂಪ್ರೀತಿಯಿಂದ ಶ್ರೀಹರಿಯು ಪ್ರೀತನಾಗುತ್ತಾನೆ; ಶ್ರೀಹರಿಪ್ರೀತಿಯಿಂದ ಅನ್ಯದೇವತೆಗಳು ಪ್ರೀತರಾಗುತ್ತಾರೆ; ದಾನದಲ್ಲಿ ವಿವೇಕ; ಧನಾದಿಗಳಲ್ಲಿ ೧/೧೦ ಅಂಶವನ್ನು ದಾನಕ್ಕೆ ವಿನಿಯೋಗಿಸಬೇಕು—ವಿನಿಯೋಗವೈವಿಧ್ಯದಿಂದ ಲಭಿಸುವ ಪುಣ್ಯತಾರತಮ್ಯ; ಶಾರೀರಕ ತಪಸ್ಸು ಸಹ ಹೀಗೆಯೇ ಸತ್ಕರ್ಮಕ್ಕಾಗಿ ವಿನಿಯೋಗಿಸುವ ದೇಹಶಕ್ತಿಯು ಪ್ರಮಾಣಾನುಸಾರವಾದ ಪುಣ್ಯವನ್ನು ದೊರಕಿಸುತ್ತದೆ; ಭಕ್ತಿಯ ಆಧಿಕ್ಯದಿಂದ ಸತ್ಕರ್ಮಗಳಿಗೆ ಪುಣ್ಯಾಧಿಕ್ಯ—ಕೊರತೆಯಿಂದ ಅದೇ ಕರ್ಮಕ್ಕೆ ಅಲ್ಪ ಪುಣ್ಯ; ಬ್ರಾಹ್ಮಣಸೇವೆಗಾಗಿ ದೇಹಶಕ್ತಿಯನ್ನು, ವಿಪ್ರತೋಷಣಕ್ಕಾಗಿ ಧನಾದಿ ಇತರ ವಸ್ತುಗಳನ್ನೂ ಅಧಿಕಪ್ರಮಾಣದಲ್ಲಿ ವಿನಿಯೋಗಿಸುವವರೇ ಮಹಾಧನಿಕರು; ಜೀವರಿಗೆ ದೊರೆಯುವ ಸುಖಸಾಧನವಸ್ತುಗಳು ಅವರ ಪೂರ್ವ ದಾನತಪಸ್ಸುಗಳಿಗೆ ಅನುಗುಣವಾಗಿರುವುದು; ಪೂರ್ವಜನ್ಮಗಳ ದಾನತಪಸ್ಸುಗಳಿಲ್ಲದವರು ನಿರ್ಧನರೂ ಸಂತಾನವಿಹೀನರೂ ದುಃಖಿಗಳೂ ಆಗಿರುತ್ತಾರೆ—ಇಚ್ಛಿತ ಫಲಪ್ರಾಪ್ತಿಗಾಗಿ ವಿಶೇಷ ಯತ್ನಗಳನ್ನು ಮಾಡಿ, ದೊರೆಯದಿರಲು ಶ್ರೀಹರಿಯಲ್ಲಿ ದೋಷವನ್ನೆಣಿಸುತ್ತಾರೆ—ಕೆಲವರು ತಮ್ಮ ಯತ್ನಗಳ ದೋಷವೆಂದು ಭಾವಿಸುತ್ತಾರೆ—ಉಭಯರೂ ಅಜ್ಞರೇ—ತಮ್ಮ ಫಲಾಭಾವದ ನಿಜಕಾರಣವನ್ನರಿಯದ ಪಾಮರರು; ಜನ್ಮ ಮಾತ್ರದಿಂದಲೂ ಅಲ್ಪ ಯತ್ನಗಳಿಂದಲೂ ಮಹಾಸುಖಸಾಧಕ ಫಲಗಳು ದೊರೆಯುತ್ತವೆ—ನಿದರ್ಶನಗಳು; ಪೂರ್ವಕೃತ ದಾನತಪಸ್ಸುಗಳೇ ಮುಖ್ಯ ಕಾರಣವೆಂಬುದು ಶಾಸ್ತ್ರನಿಶ್ಚಯ; ಸಂಪದ್ವಿಪತ್ತುಗಳು ಚಂಚಲ—ದೇಹಶಕ್ತ್ಯಾದಿಗಳ ಅನುಕೂಲ್ಯವಿದ್ದಾಗ ಪುಣ್ಯವನ್ನು ಗಳಿಸಬೇಕು; ದಾನತಪಸ್ಸುಗಳನ್ನು ತಪ್ಪದೇ ಆಚರಿಸತಕ್ಕದ್ದು ಮುಮುಕ್ಷುಕರ್ತವ್ಯ; ವಿಪ್ರತೋಷಣ ಕ್ಕಾಗಿ ಉಪಯೋಗಿಸಿ, ಮಿಕ್ಕ ಧನಾದಿ ವಸ್ತುಗಳೇ ಪಾವನಕರಗಳು—ಸೇವ್ಯಗಳು; ಲೋಭಾದಿ ಗಳಿಗೆ ಯಾವ ಕಾರಣವಿಲ್ಲ—ಶ್ರೀಹರಿಯು ಅನಂತಹಸ್ತದಿಂದ ಕೊಡುವಾಗ, ಮನುಷ್ಯನು ತನ್ನ ಎರಡು ಕೈಗಳಿಂದ ದಾನಕ್ಕೆ ಎಷ್ಟು ಕೊಟ್ಟಾನು? ಧನಾದಿಗಳ ಹಾನಿಯೇ ಆ ಅನಂತಹಸ್ತ ಇಚ್ಛೆಯಾಗಿದ್ದರೆ ಎರಡು ಕೈಗಳಿಂದ ಎಷ್ಟು ಉಳಿಸಿಕೊಳ್ಳಲಾದೀತು? ವಿಪ್ರಕೋಪವು ಮಹಾಗ್ನಿಯಂತೆ ಸಾಮರ್ಥ್ಯವುಳ್ಳದ್ದು; ಶ್ರವಣ, ಮನನ ಧ್ಯಾನರೂಪದ ತಪಸ್ಸು ಅಪರೋಕ್ಷಸಾಧಕ ಮಹಾತಪಸ್ಸು; ಈ ಮಹಾತಪಃಸಾಧಕವಾದುದು, ಸತ್ಸಂಗ—ಸತ್ಸಂಗದಲ್ಲಿ

ನಿರಂತರ ಶ್ರೀಹರಿಮಹಿಮೆಗಳ ಶ್ರವಣಮನನಗಳು ಮತ್ತು ಭಕ್ತಿರ್ದಾರ್ಢ್ಯ; ದಾನಶಾಠ್ಯ—ಶಕ್ತಿವಂಚನೆ—ಫಲಹ್ರಾಸಮಾತ್ರವಲ್ಲ ಪಾಪವೂ ಉಂಟು; ವಿಪ್ರಸತ್ಕಾರಕ್ರಮ—ಯೋಗ್ಯ ಸತ್ಕಾರದಿಂದ ವಿಪ್ರನು ತೃಪ್ತನಾಗಿರಿದ್ದರೆ, ದೋಷವಿಲ್ಲ ಬ್ರಾಹ್ಮಣಾವಜ್ಞೆಯಿಂದ ಮಹಾ ದುಷ್ಫಲ—ಅತ ಏವ ಸರ್ವದಾ ಎಚ್ಚರದಿಂದ ಬ್ರಾಹ್ಮಣರನ್ನು ಸೇವಿಸಿ ಕೃತಾರ್ಥರಾಗಬೇಕು. ಪುಟ 845–874

ಅಧ್ಯಾಯ ೩೯—ಭೂಗೋಳ ಮತ್ತು ಧಾಮತ್ರಯ ವರ್ಣನೆ ಶ್ಲೋಕಸಂಖ್ಯಾ ೭೩

ಗಾಲವರ ಪ್ರಶ್ನೆ—ಬ್ರಹ್ಮಾಂಡವಿಸ್ತಾರಾದಿ ವಿವರಗಳನ್ನು ಕುರಿತು; ಸೂತರ ಉತ್ತರಗಳು—ಬ್ರಹ್ಮಾಂಡಮಧ್ಯದಲ್ಲಿ ಮೇರುಪರ್ವತ; ಸಪ್ತ ದ್ವೀಪಗಳು—ಸಪ್ತ ಸಮುದ್ರಗಳು—ವಿಸ್ತಾರ; ಕ್ಷೀರಸಮುದ್ರ ಮಧ್ಯದಲ್ಲಿ ಶ್ವೇತದ್ವೀಪ—ವಿಸ್ತಾರ ಮತ್ತು ವಿಭಾಗಗಳು; ಸಪ್ತ ಸಮುದ್ರಗಳಾಚೆ ಸ್ವರ್ಣಭೂಮಿ, ಲೋಕಾಲೋಕ ಪರ್ವತ, ಅವುಗಳ ವಿಸ್ತಾರ ಮತ್ತು ವಿವರ; ಅದರಾಚೆ ತಮಸ್ಸು—ಅದರಾಚೆ ಘನೋದಕ—ಮಣಿದೀಪಗಳಿಂದ ಪ್ರಕಾಶಪೂರ್ಣ; ಅದರಾಚೆ ಖರ್ಪರದವರೆಗೆ ಅನಂತಾಸನ; ಶ್ವೇತದ್ವೀಪ ಅನಂತಾಸನಗಳ ಎತ್ತರಾದಿ ವಿವರ—ಪ್ರಲಯದಲ್ಲಿ ಭೂ ದುರ್ಗಾ ಭಾಗಗಳು ನಷ್ಟವಾಗುವಿಕೆ; ಶ್ರೀಭಾಗಗಳು ನಿತ್ಯ ಮತ್ತು ಮುಕ್ತರ ಆವಾಸಗಳು; ಭೂಮಿಯ ಕೆಳಗೆ ಖರ್ಪರದವರೆಗೆ ೨೫ ಕೋಟಿ ಯೋಜನ ವಿಸ್ತಾರ—ಪಾತಾಳಾದಿ ಸಪ್ತ ಲೋಕಗಳು—ಸಪ್ತ ಪ್ರಧಾನ ನರಕಗಳು—ವರುಣ ಲೋಕ ಇತ್ಯಾದಿ; ಘನೋದಕದಲ್ಲಿ ಬ್ರಹ್ಮಾಂಡವನ್ನು ಹೊತ್ತಿರುವ ಶೇಷದೇವ—ಆತನನ್ನು ಹೊತ್ತ ವಾಯುಕೂರ್ಮ—ಆತನನ್ನು ಹೊತ್ತಿರುವ ವಿಷ್ಣುಕೂರ್ಮ—ಮಂಡೂಕವರಾಹಾದಿ ವಿಷ್ಣುರೂಪಗಳು; ಮೇರುವಿನ ಮೇಲ್ಭಾಗ—ದೇವ, ಗಂಧರ್ವಾದಿಗಳ ನಗರಗಳು, ಉದ್ಯಾನಗಳು; ಭೂಮಧ್ಯದ ಮೇರುವಿನ ಸುತ್ತ ಇಳಾವೃತ ಖಂಡ—ವಿಸ್ತಾರ—ಪೂರ್ವ ಪಶ್ಚಿಮ ಗಡಿ ಪರ್ವತಗಳು—ಆಚಿನ ಖಂಡಗಳು—ಅವುಗಳ ವಿಸ್ತಾರ; ಇಳಾವೃತಖಂಡದ ದಕ್ಷಿಣೋತ್ತರದಲ್ಲಿನ ಖಂಡಗಳು—ವಿಸ್ತಾರಗಳು ಮತ್ತು ಅವುಗಳ ಮಧ್ಯದ ಮರ್ಯಾದಾ ಪರ್ವತಗಳು—ಹೀಗೆ ಜಂಬೂದ್ವೀಪವು ೯ ಖಂಡಗಳುಳ್ಳದ್ದು—ಒಟ್ಟು ವಿಸ್ತೀರ್ಣ ಸುತ್ತಲೂ ಇರುವ ಲವಣಸಮುದ್ರದವರೆಗೆ ೧ ಲಕ್ಷ ಯೋಜನ; ಪ್ಲಕ್ಷಾದಿ ಇತರ ದ್ವೀಪಗಳು—ಒಂದೊಂದರಲ್ಲಿ ೭ ದ್ವೀಪಗಳು; ಪುಷ್ಕರದ್ವೀಪದಲ್ಲಿ ೨ ಖಂಡಗಳು ಮಾತ್ರ; ಭೂಮಿಯ ಮೇಲೆ ಬ್ರಹ್ಮಾಂಡಖರ್ಪರದ ವರೆಗಿರುವ ಲೋಕಗಳು—ಕಡೆಯ ವೈಕುಂಠಲೋಕ—ಅದರ ವಿಸ್ತಾರ; ತ್ರಿಧಾಮಗಳು—ಅಲ್ಲಿ ಅಮೃತ ಸಮುದ್ರಗಳಿಂದ ವಿಭಕ್ತವಾದ ಶ್ರೀ, ಭೂ, ದುರ್ಗಾ ಭಾಗಗಳು; ಶ್ರೀಭಾಗದಲ್ಲಿ ಲಿಂಗಭಂಗ ಹೊಂದಿದ ಮುಕ್ತರೇ ವಾಸ—ಮಿಕ್ಕೆರಡು ಭಾಗಗಳ ಪ್ರಜೆಗಳಲ್ಲಿ ಕೆಲವರು ಪ್ರಬಲನಿಮಿತ್ತಗಳಿಂದ ಭೂಮಿಗೆ ಬರುವುದುಂಟು; ಶ್ರೀಭಾಗ ಶುದ್ಧ ಸತ್ತ್ವಾತ್ಮಕ—ಮುಕ್ತರ ಭೋಗಸಮರ್ಥನ—ಸ್ತ್ರ್ಯಾದಿ ಭೋಗಗಳು ದೋಷಗಳಲ್ಲ—ಮುಕ್ತರು ಸರ್ವದೋಷವರ್ಜಿತರು—ಅಸೂಯಾದಿಗಳಿಲ್ಲ; ಶ್ರೀವಿಷ್ಣುವಿನ ಇಚ್ಛಾನುಸಾರವಾದ ಇಚ್ಛೆಗಳನ್ನು ಮಾತ್ರ ಉಳ್ಳವರು; ಮುಕ್ತರು ದ್ವಿವಿಧ—ನಿತ್ಯಸುಖ ಮತ್ತು ನಿತ್ಯದುಃಖ ರೂಪವಾದುದು; ಈ ಉಭಯವೂ ರಾಜಸರಿಗಿಲ್ಲ; ನಿತ್ಯಸುಖವು ವಿಷ್ಣುಭಕ್ತಿಯಿಂದಲೇ ಲಭ್ಯ—ನಿತ್ಯದುಃಖವು ದ್ವೇಷಲಭ್ಯ; ಮೋಕ್ಷಪ್ರದನಾದ ಶ್ರೀವಾಸುದೇವನ ಪ್ರಸಾದವು, ಆತನ

ಮಹಿಮೆಗಳ ಶ್ರವಣ, ಮನನ, ಧ್ಯಾನದಿಂದ ದೊರೆಯುವ ಅಪರೋಕ್ಷಜ್ಞಾನದಿಂದ ಮಾತ್ರ ಲಭಿಸುತ್ತದೆ; ಪ್ರಸಾದದಿಂದ ಮಾತ್ರ ವೈಕುಂಠಾದಿ ಮುಕ್ತಸ್ಥಾನಗಳ ಪ್ರಾಪ್ತಿ. ಪುಟ 875–901

**ಅಧ್ಯಾಯ ೪೦—ಶಾಂಡಿಲ್ಯಪ್ರಶ್ನೋತ್ತರ. ಶ್ಲೋಕಸಂಖ್ಯಾ ೧೧೧**

ಶಾಂಡಿಲ್ಯರ ಪ್ರಶ್ನೆ—ಚಿದಾತ್ಮಕದೇಹದಿಂದ ಮುಕ್ತರಿಗೆ ವಿಷಯ ಭೋಗಗಳು ಹೇಗೆ ದೊರೆಯುತ್ತವೆ? ದೇಹದಲ್ಲಿ ಭೋಗದಿಂದ ಮಲಾದಿಗಳ ಉತ್ಪತ್ತಿ ಕಂಡಿಲ್ಲವೇ? ಕರ್ಮವಿರುದ್ಧ ಸುಖದುಃಖಗಳು ಲೋಕದಲ್ಲಿ ಕಂಡಿರುವಾಗ ಕರ್ಮಾನುಸಾರ ಫಲವೆಂಬುದು ಹೇಗೆ? ಸೂತರ ಪರಿಹಾರಗಳು; ಶ್ರೀವಿಷ್ಣುವೇ ಸರ್ವಕರ್ತನು—ಆತನ ಲೀಲಾರಹಸ್ಯಗಳನ್ನು ಯಾರೂ ತಿಳಿಯಲಾರರು—ಆದರೂ ಶ್ರೀ ವೇದವ್ಯಾಸರಿಂದ ತಿಳಿದಿರುವಂತೆ ನಿಮ್ಮ ಪ್ರಶ್ನೆಗಳಿಗೆ ಪರಿಹಾರವನ್ನು ನಿರೂಪಿಸುತ್ತೇನೆ; ಸ್ತ್ರೀಭೋಗ—ಸ್ತ್ರೀಯರು ದ್ವಿವಿಧರು—ನಿಯತಪತ್ನಿಯರು, ಸಾಮಾನ್ಯರು, ಎಂದು—ಇವರು ವಿವಿಧ ಪುರುಷರಿಂದ ಭೋಗ್ಯರು; ಅಪ್ಸರೆಯರು—ರಮಾವೇಶದಿಂದ ವಿಷ್ಣುವಿನ ಅಂಗಸಂಗಕ್ಕೆ ಅರ್ಹತೆ; ಕಾಲವಿಶೇಷಗಳಲ್ಲಿ (ರಮಾವೇಶವಿಲ್ಲದಾಗ) ಅನ್ಯದೇವಭೋಗ್ಯರೂ ಆಗಿರುವರು; ವಿಷ್ಣ್ವಂಗಸಂಗಕ್ಕೆ ಸರ್ವಥಾ ಅನರ್ಹರಾದ ಅಪ್ಸರೆಯರು, ದೇವ, ಗಂಧರ್ವ, ಮನುಷ್ಯಾದಿಗಳಿಂದಲೂ ಭೋಗ್ಯರು; ಮುಕ್ತರಿಗೆ ಇಚ್ಛಿತ ಭೋಗಪ್ರಾಪ್ತಿ—ಭೋಗದಿಂದ ಸುಖ ವಿಶೇಷಾಭಿವ್ಯಕ್ತಿ; ಅವರಿಗೆ ಅಯೋಗ್ಯ ಇಚ್ಛೆಯೇ ಹುಟ್ಟುವುದಿಲ್ಲ—ಅವರ ಕ್ರೀಡೆ ವಿಲಕ್ಷಣ—ದೋಷರಹಿತ; ಲೋಕದಲ್ಲಿ ಸಹ ವಿವಿಧ ಪ್ರಾಣಗಳ ವಿಚಿತ್ರ ಭೋಗಗಳು; ತಮಸ್ಸಿನಲ್ಲಿ ದಂಪತಿಗಳ ಇಚ್ಛೈಕ್ಯವಿಲ್ಲದೇ ಸಂಭೋಗ ನಡೆದು ಅದರಿಂದ ದುಃಖವೇ ಲಭಿಸುವುದು—ವಿಶೇಷ ದುಃಖಾಭಿವ್ಯಕ್ತಿಗೆ ಕಾರಣವಾಗುತ್ತದೆ; ಮುಕ್ತನಿಯಾಮಕ ಬ್ರಹ್ಮದೇವ; ಅಪರೋಕ್ಷದನಂತರ ಜ್ಞಾನಿಯಿಂದ ಕ್ರಿಯಮಾಣ ಕರ್ಮಗಳು—ಇವುಗಳ ಮೇಲೆ ಪ್ರಾರಬ್ಧಕರ್ಮದ ಪ್ರಭಾವ; ಪ್ರಬಲ ಪಾಪಪುಣ್ಯಗಳು—ನಿದರ್ಶನಗಳು, ದುರ್ಬಲ ಪುಣ್ಯಪಾಪಗಳು—ಈ ಉಭಯ ವಿಕರ್ಮಗಳ ಪ್ರಭಾವ; ಸರ್ವದಾ ಪುಣ್ಯವನ್ನೇ ಆಚರಿಸಬೇಕಾದುದರ ಅವಶ್ಯಕತೆ; ಕರ್ಮಗಳ ಫಲಭೇದಕ್ಕೆ ಕಾರಣವಾಗುವ ಅರ್ಹತೆಯು ನಾಲ್ಕು ವಿಧ—ಸ್ವಾಭಾವಿಕ, ದೈಹಿಕ, ದೈಶಿಕ, ಕಾಲಿಕಗಳೆಂದು; ಸ್ವಾಭಾವಿಕ ಅರ್ಹತೆಯ ವೈವಿಧ್ಯ; ಮೋಕ್ಷರೂಪದ ಗುರಿಯಿಂದ ವಿವಿಧ ದೂರಗಳಲ್ಲಿರುವ ಜೀವರು, ವೃದ್ಧ ತರುಣ, ಬಾಲಕ, ಶಿಶುಗಳೆಂಬ ಭೇದವುಳ್ಳವರು—ಈ ವಯೋನುಗುಣವಾಗಿ ಅವರ ಪುಣ್ಯ-ಪಾಪ ಕರ್ಮಗಳ ವಿಭಿನ್ನಫಲಗಳು ದೊರೆಯುತ್ತವೆ—ಕರ್ಮಾಚರಣೆಯು ವಿಷ್ಣು ವಿಹಿತವೂ ಆಗುತ್ತದೆ; ಇದು ಸ್ವಾಭಾವಿಕ ಕರ್ಮಸ್ವರೂಪವೆಂಬ ಅಧಿಕಾರದ ಫಲವೈಚಿತ್ರ್ಯವು; ಕರ್ತನ ಜಾತಿಯ ದೈಹಿಕ ಅಧಿಕಾರ—ಒಂದು ಜಾತಿಯ ಪುಣ್ಯಕರ್ಮವು ಮತ್ತೊಂದು ಜಾತಿಗೆ ಪಾಪವಾಗುತ್ತದೆ—ಶೈಶವಾದ್ಯವಸ್ಥೆಗಳು, ಯತ್ಯಾದ್ಯಾಶ್ರಮಗಳೂ ದೈಹಿಕ ಅಧಿಕಾರವೇ; ಆಶೌಚ; ರಜಸ್ವಲಾಸ್ಪರ್ಶಾದಿಗಳಿಂದ ಅಶುದ್ಧರಾದ ಕಾಲದಲ್ಲಿ ಮಾಡುವ ಪುಣ್ಯಕರ್ಮಗಳಿಗೆ ಫಲವಿಲ್ಲ—ಇದು ಕಾಲಿಕ ಅಧಿಕಾರ—ಆಪದ್ಧರ್ಮಗಳು ಕಾಲಿಕ ಅಧಿಕಾರವನ್ನು ನಿರ್ಣಯಿಸುತ್ತವೆ; ದೈಶಿಕ ಅಧಿಕಾರ—ತೀರ್ಥಕ್ಷೇತ್ರಾದಿಗಳಲ್ಲಿ ಆಚರಿಸುವ ಕರ್ಮಗಳಿಗೆ ಫಲಾಧಿಕ್ಯ—ದುಷ್ಟಸಮಾಜ, ಬೀದಿಗಳಲ್ಲಿ ವೇದಾಧ್ಯಯನಾದಿ ಪುಣ್ಯಗಳಿಗೆ ಫಲವಿಲ್ಲ; ಪುಣ್ಯ

ಪಾಪಗಳು ಪರಸ್ಪರ ಅಗ್ನಿಯಂತೆ (ದಾಹಕವಾಗಿ) ವರ್ತಿಸುತ್ತವೆ—ವಿವರಣೆ—ಸುಶ್ರೀಕ, ಸುಕಾಂತರ ಕಥೆ—ಕರ್ಮಗತಿ ಅತಿಗಹನ; ಫಲೋನ್ಮುಖ ಪುಣ್ಯ ಪಾಪಗಳು, ಕ್ರಿಯಮಾಣ ಅನುಗ್ರಾಹಕ ಕರ್ಮಾನುಸಾರ ಫಲ ಕೊಡುತ್ತವೆ; ಕರ್ಮಫಲಗಳ ವಿತರಣೆ—ದಾತನ ಪಾಪ ದಾನಪರಿಗ್ರಹಿಯನ್ನು ಸೇರುತ್ತದೆ—ಅದು ಬ್ರಾಹ್ಮಣನಿಂದಕನನ್ನು ಸೇರುತ್ತದೆ; ಶ್ರವಣಕೀರ್ತನ ಗಳಲ್ಲಿ ಆಸಕ್ತರಾದವರ ಪಾಪಗಳು ಅವರ ನಿಂದಕರಿಗೆ; ಸಂಗಫಲ—ದುಃಸಂಗತ್ಯಾಗಪೂರ್ವಕ ಸತ್ಸಂಗವನ್ನು ದೊರಕಿಸಿಕೊಳ್ಳಬೇಕು; ಅಪರೋಕ್ಷ—ಕರ್ಮಕ್ಷಯ—ಜ್ಞಾನಿಯ ಪಾಪಭಾಗವು ಆತನ ನಿಂದಕರಿಗೆ—ಸುಹೃದರಿಗೆ ಪುಣ್ಯಭಾಗ; ಜ್ಞಾನೋತ್ತರಕರ್ಮ ಲೇಪವು ಜ್ಞಾನಿಗಿಲ್ಲ—ಆದರೂ ವ್ಯರ್ಥವಲ್ಲ; ಜ್ಞಾನಿಯೂ ಪುಣ್ಯಕರ್ಮಗಳನ್ನೇ ಆಚರಿಸಬೇಕು—ಕಾರಣ; ಪಕ್ಷತಾಮಸಿಯ ಕರ್ಮಗಳ ವಿತರಣೆಯಲ್ಲಿ ವಿರುದ್ಧ ಕ್ರಮ; ಸುಖದುಃಖ ಸಂತತಿಯಂತೆ ಕರ್ಮಸಂತತಿಯೂ ನಿರಂತರವಾದುದು; ಸಜ್ಜನದುರ್ಜನರ ಅವಜ್ಞೆ ನಿಂದೆಗಳ ಫಲ ಮತ್ತು ಫಲಭಾಗಿಗಳು; ಸತ್ಸಂಗದ ಮಹಿಮೆ—ಸಂಗಲಕ್ಷಣ; ಭಕ್ತದ್ವೇಷಗಳು ಮೋಕ್ಷತಮಸ್ಸುಗಳ ಸಾಧಕ—ತರತಮಭಾವ ನಿರೂಪಣೆ; ಹರಿದ್ವೇಷಕ್ಕಿಂತ ಹರಿಭಕ್ತದ್ವೇಷವು ಹೆಚ್ಚು ಅನರ್ಥಕರ; ಸತ್ಸಂಗವಿಲ್ಲದೇ ಮುಕ್ತಿಯಿಲ್ಲ—ಅದನ್ನು ಯಥಾಕಾಲದಲ್ಲಿ ಶ್ರೀಹರಿಯೇ ದೊರಕಿಸುತ್ತಾನೆ; ಜ್ಞಾನಪೂರ್ವಕ ಮಾಡಿದ ಪಾಪಗಳ ಪರಿಹಾರ—ದಾನಜಪಾದಿಗಳ ನಿರಂತರ ಅನುಷ್ಠಾನ; ಧನ ಸುಖಸಾಧನಗಳ ಮೂಲ—ಪಾಪವಿಲ್ಲದೆ ಧನ ದೊರೆಯದು—ಆತಏವ ಜಪದಾನಗಳ ಅತ್ಯಾವಶ್ಯಕತೆ; ಅಜ್ಞಾನಿಗಳೇ ಬಹಳ—ಕಣ್ಣದ್ದೂ ಕುರುಡರಂತೆ—ಸ್ವಹಿತವನ್ನಾಚರಿಸುವುದಿಲ್ಲ; ಸಂಸಾರಬಂಧಕನೂ ಮೋಚಕನೂ ಶ್ರೀಹರಿಯೇ; ಭಗವದಿತರ ವಸ್ತುಸಂಗತ್ಯಾಗದ ಆವಶ್ಯಕತೆ; ದುರ್ಜನಸಂಗ, ಅಪವಿತ್ರ ದೇಶ ಸ್ಥಿತಿಗಳು ನಿತ್ಯಹರಿಸ್ಮರಣ ವುಳ್ಳವನನ್ನು ಕೆಡಿಸುವುದಿಲ್ಲ (ಅಶುಚಿಗೊಳಿಸುವುದಿಲ್ಲ) ದೇವತಾಋಷಿನಾಮಗಳನ್ನು ಅಶುಚಿಯು ಉಚ್ಚರಿಸಕೂಡದು—ಶ್ರೀಹರಿನಾಮೋಚ್ಚಾರ ಸರ್ವದಾ ಯೋಗ್ಯ; ಸರ್ವೇಂದ್ರಿಯ ಸರ್ವಕೃತಿಗಳನ್ನು ಶ್ರೀಹರಿಕೃತವೆಂಬ ಅನುಸಂಧಾನವಿರಬೇಕು; ಸ್ವಾಭಾವಿಕ ಚಂಚಲತ್ವದ ಮನಸ್ಸು ಭಗವದಿತರ ವಸ್ತುಗಳಲ್ಲಿ ಧಾವಿಸುತ್ತದೆ—ಅದನ್ನು ಶ್ರೀಹರಿ ಗುಣಚಿಂತನೆಯಿಂದ ನಿಗ್ರಹಿಸಬೇಕು—ಅನಂತಗುಣಪೂರ್ಣ ಶ್ರೀಹರಿಯು ನಿತ್ಯ ನೂತನನು—ಅನ್ಯವಸ್ತುಗಳನ್ನು ಅರಸಿಕೊಂಡುಹೋಗುವ ಕಾರಣವಿಲ್ಲ; ಸುಖ ದುಃಖಗಳ ಪ್ರಾಪ್ತಿವಿಷಯಕ ಅನುಸಂಧಾನಪ್ರಕಾರ—ಪರಮದಯಾಳು ಶ್ರೀಹರಿಯು ಮಹಾಪಾಪಗಳಿಗೆ ಅಲ್ಪದುಃಖವನ್ನೇ ಕೊಡುವನು—ಅಜ್ಞಾನಿಯು ಅಲ್ಪಪುಣ್ಯ ಮಾಡಿ ತಾನು ಮಹಾಪುಣ್ಯಕರ್ತ ನೆಂದು ಭ್ರಮಿಸಿ ಅಧಿಕಸುಖವನ್ನು ಅಪೇಕ್ಷಿಸುತ್ತಾನೆ; ಶ್ರೀಹರಿಯಾಜ್ಞೆಯೆಂಬ ಭಾವನೆಯಿಂದ ದುಃಖವನ್ನು ಅನುಭವಿಸಿ ಶ್ರೀಹರಿಯಲ್ಲಿ ಅರ್ಪಿಸುವುದು ವಿವೇಕಿಗಳ ಲಕ್ಷಣ; ಸಂಪತ್ತು ದ್ವಿವಿಧ—ಗೃಹಗಜಾದಿಗಳು ಬಾಹ್ಯ, ಭಕ್ತಿ ವೈರಾಗ್ಯ ಯಮ ನಿಯಮಾದಿಗಳು ಆಂತರಿಕ; ಉಭಯಸಂಪತ್ತನ್ನು ಶ್ರೀಹರಿಪೂಜೆಗಾಗಿಯೇ ವಿನಿಯೋಗಿಸಬೇಕು; ವಿತ್ತಶಾಠ್ಯವು ತ್ಯಾಜ್ಯ—ಶಕ್ತ್ಯನುಸಾರದ ಪೂಜೆಗೆ ಪೂರ್ಣಫಲ—ಶಕ್ತಿಮೀರಿದ ಪೂಜೆಗೆ ಮಹಾಫಲ—ಇದು ಕರ್ಮವಿತರಣೆಯ ರಹಸ್ಯಮಹಿಮೆ. ಪುಟ 901–947

ಅಧ್ಯಾಯ ೪೮—ಭಗವನ್ಮಹಿಮಾವರ್ಣನ. ಶ್ಲೋಕಸಂಖ್ಯಾ ೨೮

ಕೌಂಡಿನ್ಯರ ಪ್ರಶ್ನೆ—ನಿತ್ಯವೂ ನಿರ್ವಿಕಾರವೂ ಆದ ವೈಕುಂಠಾದಿ ಲೋಕಗಳಲ್ಲಿ ವಿವಿಧವರ್ಣ ಮತ್ತು ಆಕಾರದ ಫಲಪುಷ್ಪಾದಿ ವಸ್ತುಗಳ ಭೋಗವು ಹೇಗೆ? ಶುದ್ಧಸತ್ವವು ಶುಕ್ಲವರ್ಣದ್ದು—ಒಂದೇ ವರ್ಣವು ವಸ್ತುಗಳಿಗೆ ಶೋಭಿಸುವುದಿಲ್ಲ; ಸೂತರ ಪರಿಹಾರ—ಸತ್ವಗುಣದಿಂದ ಶ್ರೀಹರಿಸಂಕಲ್ಪಾನುಸಾರದ ಸಂಕಲ್ಪವುಳ್ಳ ಮುಕ್ತರ ಇಚ್ಛಾನುಸಾರವಾದ ವಿವಿಧ ಭೋಗ್ಯವಸ್ತುಗಳು ತತ್ಕಾಲದಲ್ಲಿ ಸಿದ್ಧವಾಗಿ ಭೋಗಾನಂತರ ಸತ್ವಗುಣದಲ್ಲಿ ಅಡಗುತ್ತವೆ ಇತ್ಯಾದಿ; ಮುಕ್ತ ವಿಹಾರಗಳು—ಧ್ಯಾನ, ಯಜ್ಞಪ್ರವಚನ, ಅನ್ಯವ್ಯವಹಾರಗಳು, ಜಲಕ್ರೀಡೆ, ಉದ್ಯಾನಸಂಚಾರಾದಿಗಳು; ಸದಾ ಆನಂದಪೂರ್ಣರು; ಶುದ್ಧಸತ್ವಾತ್ಮಕರ ಇಚ್ಛಿತ ದೇಹಗಳನ್ನು ಮುಕ್ತರು ಸ್ವೀಕರಿಸಿ ಭೋಗಾನಂತರ ತ್ಯಜಿಸುತ್ತಾರೆ; ಶ್ರೀಹರಿಯ ಜಗತ್ಸಂಬಂಧವಾದ ಸೃಷ್ಟ್ಯಾದಿಕ್ರಿಯೆಗಳನ್ನು ನೋಡುತ್ತ ಆಶ್ಚರ್ಯಭರಿತರಾಗುತ್ತಾರೆ—ಆದರೂ ಶ್ರೀಹರಿಕರ್ಮಗಳನ್ನು ಪೂರ್ಣವಾಗಿ ತಿಳಿಯರು—ಯಥಾ ಯೋಗ್ಯವಾಗಿ ಆ ಮಹಿಮೆಗಳನ್ನು ತಿಳಿಯುತ್ತಾರೆ—ಇದೂ ಆತನ ಪ್ರಸಾದದಿಂದಲೇ. ಪುಟ 947—956

ಅಧ್ಯಾಯ ೪೨—ಭಗವನ್ನಾಮ ನಿರ್ವಚನ. ಶ್ಲೋಕಸಂಖ್ಯಾ ೫೦

ಆರ್ಷ್ಟಿಷೇಣನ ಪ್ರಶ್ನೆ—ಜಗತ್ತಿನ ಸೃಷ್ಟಿಸ್ಥಿತಿಲಯಾದಿಗಳು ಶ್ರೀಹರಿಯ ಪ್ರದ್ಯುಮ್ನಾದಿ ರೂಪಗಳಿಂದ ಸಂಭವಿಸುವುವೆಂದೂ ಬ್ರಹ್ಮ, ವಿಷ್ಣು, ಮಹೇಶ್ವರರಿಂದ ಪ್ರತ್ಯೇಕವಾಗಿ ನಡೆಯುವುವೆಂದೂ ಹೇಳುವ ವಿವಿಧ ನಿರೂಪಣೆಗಳಿಂದಲೂ, ಇವುಗಳನ್ನಾಶ್ರಯಿಸಿ ಪ್ರವೃತ್ತವಾಗಿರುವ ಸಾಂಖ್ಯ, ಯೋಗ, ಪಾಶುಪತಾದಿ ನಾನಾಮತಗಳಿಂದಲೂ ಸಜ್ಜನರಿಗೆ ಉಂಟಾಗುವ ಮೋಹವನ್ನು ಪರಿಹರಿಸಿ ಶ್ರೀವ್ಯಾಸರಿಗೆ ಸಮ್ಮತವಾದ ನಿರ್ಣಯಗಳನ್ನು ಹೇಳಿರಿ; ಸೂತರ ಉತ್ತರ; ಬ್ರಹ್ಮನು ಸ್ಮರಿಸಲು ಪ್ರತ್ಯಕ್ಷವಾಗಿ ಶ್ರೀವಿಷ್ಣುವು, ನಾರದಾದಿಗಳಿಗೆ ಪಂಚರಾತ್ರಾಗಮವನ್ನು ಉಪದೇಶಿಸಿದನು—ಅದು ಸರ್ವಶಾಸ್ತ್ರಾರ್ಥವನ್ನು ಹೇಳುತ್ತದೆ—ಅದರ ಸಾರವನ್ನೇ ನಿಮಗೆ ಹೇಳುತ್ತೇನೆ; ನೀವು ಮಾಡಿರುವ ಅನ್ಯಾಭಿಪ್ರಾಯಗಳಿಂದ ಸಜ್ಜನರಿಗೆ ಉದ್ಭವಿಸುವುವೆಂಬ ಎಲ್ಲ ಸಂಶಯಗಳನ್ನು ನಿವಾರಿಸಿ ನಿರ್ಣಯಗಳನ್ನು ಹೇಳಲು, ಶ್ರೀವೇದವ್ಯಾಸರು, ಬ್ರಹ್ಮಸೂತ್ರಗಳನ್ನು ರಚಿಸಿರುವರು—ಅದರಿಂದಲೇ ಸರ್ವಸಜ್ಜನರಿಗೆ ಯಥಾರ್ಥಜ್ಞಾನ ನಿಶ್ಚಯಲಾಭ—ಈ ನಿರ್ಣಯಗಳಿಂದ ಸಿದ್ಧವಾಗುವ ತತ್ವಗಳನ್ನೇ ಪಂಚರಾತ್ರಾಗಮವು ನಿರೂಪಿಸುತ್ತದೆ; ಬ್ರಹ್ಮಾದಿಗಳಲ್ಲಿ ಅಂತರ್ಯಾಮಿಯಾಗಿದ್ದು ಶ್ರೀವಿಷ್ಣುವೇ ಸೃಷ್ಟ್ಯಾದಿಗಳನ್ನು ನಿರ್ವಹಿಸುತ್ತಾನೆ—ಅವರು ಮುಖ್ಯಕರ್ತರಲ್ಲ—ಅಜ್ಞಾನಿಗಳು ವಿರುದ್ಧವಾದ ಅರಿವನ್ನು ಹೊಂದುತ್ತಾರೆ—ಇದಕ್ಕೆ ಶ್ರೀವಿಷ್ಣುಮಾಯೆಯೇ ಕಾರಣ; ಆತನನ್ನು ಶರಣುಹೊಂದಿದವರು ಮಾತ್ರ ಆ ಮಾಯೆಯನ್ನು ದಾಟಬಲ್ಲರು; ಶ್ರೀಹರಿಯು, ಬ್ರಹ್ಮ, ವಿಷ್ಣು ನಾರಾಯಣ, ಮಹೇಶ್ವರ, ವಾಸುದೇವ, ಪ್ರದ್ಯುಮ್ನ ಸಂಕರ್ಷಣ, ಅನಿರುದ್ಧ ಇಂದ್ರ, ಮಹೇಂದ್ರ, ಅಗ್ನಿ ಮಾರುತ, ಸವಿತೃ, ಪ್ರಾಣ, ರುದ್ರ, ಇತ್ಯಾದಿ ಅನಂತನಾಮಗಳಿಂದ ಬೋಧ್ಯವಾದ ಗುಣಗಳನ್ನು ಅನಂತವಾಗಿ ಹೊಂದಿರುವನು—ಗುಣಸ್ವರೂಪನೇ ಆಗಿದ್ದಾನೆ;

ಕುಬೇರ, ನಿಋತಿ, ವಹ್ನಿ, ಓಂ, ಆಪಃ, ಪ್ರಕೃತಿ, ಸರ್ವ, ಪ್ರಧಾನ, ಪಶುಪತಿ, ಹಿರಣ್ಯಗರ್ಭಾದಿ ಅನ್ವರ್ಥನಾಮಗಳುಳ್ಳ ಅನಂತರೂಪನಾಗಿದ್ದಾನೆ; ಘಟ, ಪಟ, ಪರ್ಣಾದಿ ಸಕಲ ವೈದಿಕ, ಲೌಕಿಕ ಶಬ್ದವಾಚ್ಯನೂ, ಜೀವ, ಅಸತ್, ಶೂನ್ಯ, ಜನಾದಿ ನಾಮ ವಾಚ್ಯನೆಂದೂ ಶ್ರುತಿಸಿದ್ಧವೇ; ಈ ವಿಷಯಕವಾದ ಅಭಿಪ್ರಾಯ ಭೇದಗಳು ಅಜ್ಞಾನಿಗಳ ಕುತರ್ಕಮೂಲವಾದವುಗಳು; ಸರ್ವಶಬ್ದವಾಚ್ಯನೆಂಬ ನಿಶ್ಚಯಜ್ಞಾನದಿಂದ ಸಿದ್ಧವಾಗುವ, ಸ್ವಾತಂತ್ರ್ಯ, ಸಾರ್ವಜ್ಞ್ಯ ಸರ್ವಶಕ್ತ್ಯಾದಿಗಳನ್ನು ತಿಳಿದು ಅನನ್ಯರಾಗಿ ಶ್ರೀಹರಿಯನ್ನೇ ಶರಣುಹೊಂದಿ, ಆತನ ಸಾಕ್ಷಾತ್ಕಾರವನ್ನು ಪಡೆದು, ಜೀವನ್ಮುಕ್ತನೆನಿಸಿ, ನಂತರ ನಿತ್ಯಾನಂದಸ್ಥಿತಿಯನ್ನು (ಮೋಕ್ಷವನ್ನು) ಹೊಂದುತ್ತಾನೆ; ಇದೇ ಸರ್ವಶಾಸ್ತ್ರಾರ್ಥಸಂಗ್ರಹ. ಪುಟ 956—978

ಅಧ್ಯಾಯ ೪೩—ಭಗವನ್ಮಹಿಮಾವರ್ಣನೆ. ಶ್ಲೋಕಸಂಖ್ಯಾ ೧೨೮

ಸಂವರ್ತನ ಪ್ರಶ್ನೆ—ಅಲ್ಪ ಅನುಗ್ರಾಹಕ ಕರ್ಮಗಳಿಂದ, ಪೂರ್ವ ಕರ್ಮಗಳಿಂದ ಪ್ರಾಪ್ತವ್ಯವಾದ ಮಹಾಫಲಗಳಲ್ಲಿ ೪೦ನೇ ಅಧ್ಯಾಯದಲ್ಲಿ ಸುಶ್ರೀಕ, ಸುಕಾಂತರ ಕಥಾನಿದರ್ಶನ ದಿಂದ ಹೇಳಲಾದ ದೊಡ್ಡ ವ್ಯತ್ಯಾಸಗಳಾಗುವುದು ಹೇಗೆ ಯುಕ್ತವಾಗುತ್ತದೆ? ಸ್ವಯಂ ದರಿದ್ರರಾದ ಬ್ರಾಹ್ಮಣರನ್ನು ತೃಪ್ತಿಗೊಳಿಸುವುದರಿಂದ ಐಶ್ವರ್ಯಾದಿಗಳೂ, ಅವರ ಅತೃಪ್ತಿ ಕ್ರೋಧಾದಿಗಳಿಂದ ಅನರ್ಥಗಳೂ ಹೇಗೆ ಸಂಭಾವ್ಯಗಳು? ಸೂತರ ಉತ್ತರ—ಅಲ್ಪನಿಮಿತ್ತವು ಫಲಪ್ರಾಪ್ತಿಗೆ ಸಹಾಯಕವೆಂಬಲ್ಲಿ ನಿದರ್ಶನಗಳು—ಸಹಕಾರಿ ಕಾರಣಗಳು, ದೃಷ್ಟ ಅದೃಷ್ಟವೆಂದು ದ್ವಿವಿಧ—ಉಭಯವೂ ಫಲಹೇತುಗಳೆಂಬಲ್ಲಿ ವಿವಿಧ ನಿದರ್ಶನಗಳು—ದೃಷ್ಟವಾದ ಅತ್ಯಲ್ಪ ಸಹಕಾರಿಕಾರಣವೇ ಪ್ರಾರಬ್ಧಫಲಪ್ರಾಪ್ತಿಗೆ ನಿಮಿತ್ತವೆಂಬಲ್ಲಿ ಸುದೇವ—ರೇವತಕರ ಕಥೆ; ಅಲ್ಪವಾಗಲಿ ದೊಡ್ಡದಾಗಲಿ, ದೃಷ್ಟವಾಗಲಿ ಅದೃಷ್ಟವಾಗಲಿ, ಸಹಕಾರಿಕರ್ಮವು ಪ್ರಾರಬ್ಧಫಲಪ್ರಾಪ್ತಿಗೆ ಅವಶ್ಯಕ; ಬ್ರಾಹ್ಮಣದೇಹವು ಕ್ಷುದ್ರವಿಷಯಭೋಗಕ್ಕಲ್ಲ—ಕಠಿಣತಪಸ್ಸಿನಿಂದ, ಮರಣಾನಂತರ ಉತ್ತಮಗತಿಯನ್ನು ಸಾಧಿಸಲು ಮಾತ್ರ ಬಂದುದು; ತಪೋಯುಕ್ತ ಜ್ಞಾನಿಗಳು ಅನ್ಯರಿಂದ ಸಂಪದಾದಿಗಳನ್ನು ಆಶಿಸುವುದಿಲ್ಲ—ಅವರನ್ನು ತೃಪ್ತಿಗೊಳಿಸಿ ಸಂಪದಾದಿ ಶ್ರೇಯಸ್ಸುಗಳನ್ನು ಹೊಂದುವರು—ಕಲಿಗಾಲದಲ್ಲಿ ಅಲ್ಪತಪಸ್ಸಿನ ವಿಷಯಲೋಲುಪ ಬ್ರಾಹ್ಮಣರೂ ಪೂಜ್ಯರೇ—ಅವರ ಆಶೀರ್ವಾದಗಳೂ ಸಫಲವೇ—ಕಾಲವಿಳಂಬದಿಂದಲೋ ಅಲ್ಪಫಲಗಳಿಂದಲೋ ಸಾರ್ಥಕವೇ ಆಗುತ್ತದೆ; ಹೀಗೆಯೇ ಅವರ ಅತೃಪ್ತಿಯಿಂದ ದುಷ್ಫಲಗಳೂ ಅನರ್ಥಗಳೂ ತಪ್ಪುವುದಿಲ್ಲ; ಪಾಪಕರ್ಮಗಳ ಫಲ—ನರಕಾದಿ ಸ್ಥಾನಗಳಲ್ಲಿ ದುಃಖವನ್ನು ಅನುಭವಿಸಿ, ನಂತರ ಕ್ರಮವಾಗಿ ವೃಕ್ಷ ಗುಲ್ಮ ಲತಾದಿ ಸ್ಥಾವರದೇಹ ಗಳಲ್ಲಿ ಚಳಿ, ಗಾಳಿ, ಬಿಸಿಲು, ಛೇದಾದಿ ದುಃಖಗಳನ್ನನುಭವಿಸಿ, ನಂತರ ಪಶು ಪಕ್ಷಿ ಮೊದಲಾದ ದೇಹದಲ್ಲಿ ದುಃಖಾನುಭವ ಮಾಡಿ, ಮನುಷ್ಯದೇಹ ಪ್ರಾಪ್ತಿಯಾಗುತ್ತದೆ—ಅಲ್ಲಿಯೂ ಪಾಪಫಲದಿಂದ ಬಡತನ ರೋಗಾದಿ ಅನರ್ಥಗಳು ಲಭಿಸುತ್ತವೆ—ಇವು ಮಹಾಪಾತಕದ ಅನರ್ಥ ಪರಂಪರೆಯು; ಅಶ್ವತ್ಥ ತುಳಸೀ, ಬ್ರಾಹ್ಮಣ ಈ ಮೂರು ಶ್ರೀಹರಿಯ ನಿತ್ಯ ಸನ್ನಿಧಾನವುಳ್ಳ ಪ್ರತಿಮೆಗಳು; ಅಶ್ವತ್ಥ ತುಳಸಿಗಳು ಸ್ಥಾವರಜೀವರು—ಅವುಗಳಿಗೆ ತಮ್ಮ ಕ್ಲೇಶಗಳಿವೆ—ಆದರೂ ಅಲ್ಲಿರುವ ಶ್ರೀಹರಿಯು ಅವುಗಳ ಪೂಜೆಯಿಂದ ಪ್ರೀತನಾಗಿ

ಅನುಗ್ರಹಿಸುತ್ತಾನೆ; ಹೀಗೆಯೇ ಬ್ರಾಹ್ಮಣರೂ ಸ್ವಕರ್ಮಾನುಸಾರವಾದ ದುಃಖಾದಿಕ್ಲೇಶಗಳನ್ನು ಅನುಭವಿಸುತ್ತಿದ್ದರೂ ಸೇವಿಸಲ್ಪಡಲರ್ಹರು—ಅವರಲ್ಲಿ ನಿಂತು ಶ್ರೀಹರಿಯು ಸೇವೆಯನ್ನು ಸ್ವೀಕರಿಸುತ್ತಾನೆ—ಫಲಪ್ರದನಾಗುತ್ತಾನೆ—ಕುಷ್ಠರೋಗಿಯಾದ ಪತಿಯನ್ನು ಸೇವಿಸಿ, ಪತ್ನಿಯು ಸದ್ಗತಿಯನ್ನು ಹೊಂದುವಂತೆ—ಧರ್ಮವ್ಯಾಧಾದಿಗಳಂತೆ; ಪೂರ್ವಕರ್ಮಾನುಸಾರ ಈ ಜನ್ಮದಲ್ಲಿ ಸುಖದುಃಖಾದಿಗಳು ದೊರೆಯುತ್ತವೆ—ಪಾಪಾಚಾರಿಗಳು ಸುಖಿಗಳೂ ಪುಣ್ಯಾಚಾರಗಳು ದುಃಖಿಗಳೂ ಆಗಿ ಕಂಡುಬರುವ ಕಾರಣ—ಕರ್ಮಗಳು ವೃಕ್ಷಾದಿಗಳಂತೆ ಕಾಲಾಂತರದಲ್ಲಿ ಫಲಕೊಡುತ್ತವೆ—ವಿಭಿನ್ನ ಕರ್ಮಗಳು ವಿಭಿನ್ನ ಕಾಲಾವಧಿಗಳಲ್ಲಿ ಫಲಪ್ರಾಪಕವಾಗುತ್ತವೆ—ಈ ರಹಸ್ಯವನ್ನು ತಿಳಿದು ಪುಣ್ಯಾಚರಣೆಯಿಂದ ವಿಮುಖನಾಗಬಾರದು; ಸರ್ವರಿಗೂ ಸುಖದುಃಖಗಳು ಮಿಶ್ರವಾಗಿ ಮುಕ್ತಿಪರ್ಯಂತ ಇರುವುವು—ಲೋಕದಲ್ಲಿ ಎಲ್ಲ ಪಾಪಿಗಳೂ ದುಃಖಿಗಳಲ್ಲ—ಎಲ್ಲ ಪುಣ್ಯಾತ್ಮರೂ ಸುಖಿಗಳಲ್ಲ—ಭೋಗಸಾಮಗ್ರಿಗಳುಳ್ಳ ಎಲ್ಲರೂ ಸುಖವನ್ನು ಹೊಂದುವುದಿಲ್ಲ; ಸುಖಾಧಿಕ್ಯದಿಂದ ಪುಣ್ಯವಂತನೆಂದೂ, ದುಃಖಾಧಿಕ್ಯದಿಂದ ಪಾಪಿಯೆಂದೂ ಪ್ರಾಚುರ್ಯಮಾತ್ರದಿಂದ ವ್ಯವಹಾರವು; ಪಾಪಕರ್ಮಗಳು ಸಂಭವಿಸಿದಾಗ ಅದರ ಪರಿಹಾರವನ್ನು ಆಚರಿಸಬೇಕು; ದೇವ, ಬ್ರಾಹ್ಮಣ, ಅಗ್ನಿಗಳನ್ನು ತೃಪ್ತಿಗೊಳಿಸುವುದು ಪಾಪಪರಿಹಾರಕವೂ ಪುಣ್ಯಸಾಧಕವೂ ಆದುದು; ಇವುಗಳಲ್ಲಿ ಶ್ರೀಹರಿಯನ್ನು ಅರ್ಚಿಸಲು ಅಶಕ್ತರಾದವರು ಬ್ರಾಹ್ಮಣರನ್ನಾದರೂ ಯಥಾಶಕ್ತಿ ಸಂತೋಷಗೊಳಿಸಬೇಕು—ಫಲಗಳು ಜನ್ಮಾಂತರಕರ್ಮಾನುಸಾರವೆಂಬ ದೃಢಜ್ಞಾನವುಳ್ಳವನಾಗಿರಬೇಕು. ರಾಜಪುತ್ರಾದಿ ನಿದರ್ಶನಗಳು; ಶ್ರೀಹರಿಸ್ಮರಣೆ—ವಿಸ್ಮರಣೆಗಳ ಮಹಿಮೆ—ಸ್ಮರಣಫಲವು ತತ್ಕಾಲದಲ್ಲಿ ಸಹ ಅನುಭವಗೋಚರವಾಗುತ್ತದೆ; ಪೂರ್ವಕರ್ಮಗಳ ಫಲಭೋಗವು ತಪ್ಪಿದ್ದಲ್ಲ—ಅನುಗ್ರಾಹಕ ಕ್ರಿಯಮಾಣಕರ್ಮದ ಪ್ರಭಾವವನ್ನೂ, ಫಲಗಳ ತೀವ್ರತೆ ಉಪಮರ್ದಗಳು ಶ್ರೀಹರೀಚ್ಛಾಧೀನಗಳೆಂಬುದನ್ನು ಮರೆಯಲಾಗದು—ಮಾಲಾಕಾರ ಅಂಗಾರಕಾರರ ನಿದರ್ಶನ; ಬಂಧು-ಭೃತ್ಯಾದಿಗಳು ಋಣಾನುಬಂಧದಿಂದ ಏಕತ್ರ ಸೇರಿ ಋಣ ತೀರಿದೊಡನೆ ಬೇರೆಯಾಗುತ್ತಾರೆ; ಋಣಾನುಬಂಧುಗಳ ದ್ವೈವಿಧ್ಯ; ಅಭಿಮಾನತ್ಯಾಗಕ್ಕೆ ಅನಿತ್ಯತ್ವ ಶ್ರೀಹರ್ಯಧೀನತ್ವಗಳ ನಿರಂತರ ಸ್ಮರಣೆ ಅಗತ್ಯ; ಅಭಿಮಾನ—ಅನ್ಯವಸ್ತುಗಳ ಮೇಲೆ ತನ್ನ ಸ್ವಾಮಿತ್ವಬುದ್ಧಿ—ಇದರ ತ್ಯಾಗವು ಶ್ರೀಹರಿಯೇ ಸರ್ವಸ್ವಾಮಿ ಎಂಬುವ ಜ್ಞಾನದಿಂದ ಮಾತ್ರ ಸಾಧ್ಯ; ಬ್ರಾಹ್ಮಣರನ್ನು ಎಲ್ಲರಿಗೂ ಸುಲಭರನ್ನಾಗಿ ಮಾಡಿದ್ದಾನೆ—ಶ್ರೀಹರಿ; ಅವರು ದಾನ ತಪಸ್ಸುಗಳ ಮೂಲಸಾಧನ; ಬ್ರಾಹ್ಮಣ, ಗಂಗೆ, ಶ್ರೀಹರಿ, ಈ ಮೂರನ್ನು ಸರ್ವರಿಗೂ ಸುಲಭವನ್ನಾಗಿಸಿದ್ದಾನೆ; ನಿತ್ಯವೂ ಇವುಗಳ ಸೇವೆಯಲ್ಲಿ ತೊಡಗಬೇಕು—ಹೀಗಿದ್ದರೂ, ಭಾರತವರ್ಷದಲ್ಲಿ ಸಹ ಶ್ರೀಹರಿಮಹಿಮೆಗಳ ಶ್ರವಣವು ದುರ್ಲಭವಾಗಿ ಪೂರ್ವಪುಣ್ಯದ ಪಕ್ವತೆಯಿಂದ ಮಾತ್ರ ಸಾಧ್ಯವಾಗಿದೆ; ಶ್ರವಣಕ್ಕಿಂತ ಮನನವೂ, ಅದಕ್ಕಿಂತ ಧ್ಯಾನವೂ ದುರ್ಲಭ—ಧ್ಯಾನದಿಂದ ಸಾಕ್ಷಾದ್ದರ್ಶನವೂ ಅದರಿಂದ ಮೋಕ್ಷವೂ ದೊರೆಯುವ ಪ್ರಕಾರ;—ಮುಮುಕ್ಷುವಿನ ಕರ್ತವ್ಯ—ನಿಷ್ಕಾಮಕರ್ಮ; ಕರ್ಮಸಾಕ್ಷಿದೇವತೆಗಳು ಜೀವರ ಸೂಕ್ಷ್ಮತಮಕರ್ಮಗಳನ್ನೂ ತಿಳಿಯುತ್ತಾರೆ—ಅತಏವ ನಿರ್ಭಯದಿಂದ (ಯಾರೂ ಇಲ್ಲ

ವೆಂದು) ನಿಷಿದ್ಧವನ್ನಾಚರಿಸಕೂಡದು. ಪುಣ್ಯಾಚರಣೆಯಲ್ಲಿ ಯಾರೂ ತಿಳಿಯದಿರಲೆಂಬ ಅನುಸಂಧಾನವಿರಬೇಕು; ಪುಣ್ಯದಿಂದ ಸುಖ, ಪಾಪದಿಂದ ದುಃಖವೆಂಬ ನಿಯಮವನ್ನು ಎಂದೂ ಮರೆಯಲಾಗದು: ಈರ್ಷೆ, ಅಸೂಯೆ, ಪರಪೀಡೆಗಳನ್ನು ಸರ್ವಥಾ ತ್ಯಜಿಸಬೇಕು; ಈರ್ಷಾದಿಗಳ ಸ್ವರೂಪ—ಅವುಗಳ ಫಲ; ಪತ್ನೀಪುತ್ರಾದಿಗಳನ್ನು ವಂಚಿಸುವುದು—ಫಲ; ಪತಿ, ಪುತ್ರಾದಿ ಬಂಧುಗಳ ವಂಚನೆ, ಸವತಿಮಾತ್ಸರ್ಯ ಇತ್ಯಾದಿಗಳಿಂದ ಸ್ತ್ರೀಯರಿಗೆ ಫಲ; ಉತ್ಕಟ ಪುಣ್ಯಪಾಪಗಳು ಅದೇ ಜನ್ಮದಲ್ಲಿ ಫಲಕೊಡುವ ನಿಯಮಗಳು; ಕರ್ಮರಹಸ್ಯವನ್ನು ಶಾಸ್ತ್ರಗಳನ್ನು ಗಾಢವಾಗಿ ಅಭ್ಯಸಿಸಿಯೇ ತಿಳಿಯಬೇಕು—ಶಾಸ್ತ್ರಶ್ರವಣದ ಆವಶ್ಯಕತೆ; ಉತ್ತಮರು ಹೇಳಬೇಕು—ಅನ್ಯರು ಕೇಳಬೇಕೆಂಬ ನಿಯಮವನ್ನು ಗಮನಿಸಬೇಕು; ಮಾನವ ಜನ್ಮ ದುರ್ಲಭ—ಅಲ್ಪಾಯುಷ್ಯ—ಪ್ರತಿಕ್ಷಣವನ್ನು ವ್ಯರ್ಥಗೊಳಿಸದೇ ಸದುಪಯೋಗಮಾಡಿ ಕೊಳ್ಳಬೇಕು. ಸತ್ಸಂಗಮಹಿಮೆ—ವಿಷ್ಣುಮಹಿಮಾ ಜ್ಞಾನಕ್ಕೆ ಮುಖ್ಯ ಸಾಧನ.

ಪುಟ 978–1027

ಅಧ್ಯಾಯ ೪೪—ಮನ್ವಂತರಾನುವರ್ಣನ. ಶ್ಲೋಕಸಂಖ್ಯಾ ೭೪

ರೈವತ ಮನ್ವಂತರ—ರೈವತಮನು—ಭೂತರಯ ದೇವತೆಗಳು—ವಿಭುನಾಮಕ ಇಂದ್ರ—ವೈಕುಂಠನಾಮಕ ಶ್ರೀಹರಿಯ ಅವತಾರ—ಅವತಾರಕಾರ್ಯ—ವೈಕುಂಠದ ಭೂಭಾಗ ದಲ್ಲಿ ಶ್ರೀದೇವಿ ಪ್ರೀತ್ಯರ್ಥವಾಗಿ ನಗರನಿರ್ಮಾಣ; ಮುಂದೆ ೬ನೇ ಚಾಕ್ಷುಷಮನ್ವಂತರ ಚಾಕ್ಷುಷ ಮನು—ಸಮುದ್ರ ಮಥನ—ಅಜಿತ, ಧನ್ವಂತರೀ, ಕೂರ್ಮ, ಮೋಹಿನೀ ನಾಮಕ ಶ್ರೀಹರಿಯ ಅವತಾರಗಳು; ಮಥನೋತ್ಪನ್ನ ವಸ್ತುಗಳು—ಲಕ್ಷ್ಮೀದೇವಿಯು ಶ್ರೀಹರಿಯನ್ನೇ ವರಿಸುವುದು—ಶ್ರಾದ್ಧದೇವನ ಚರಿತ್ರೆ—ಮತ್ಸ್ಯಾವತಾರ ಚರಿತ್ರೆ ಅದ್ಭುತ ಮತ್ಸ್ಯ—ಭವಿಷ್ಯ ಮನ್ವಂತರಪ್ರಲಯ ವನ್ನು ಸೂಚಿಸಿ ಕರ್ತವ್ಯವನ್ನು ಆಜ್ಞಾಪಿಸುವುದು; ಮನ್ವಂತರ ಪ್ರಲಯಲೋಕದಲ್ಲಿ ಮಾಯಾಮತ್ಸ್ಯದ ಆಗಮನ—ಶೇಷನಿಂದ ಮತ್ಸ್ಯಶೃಂಗಕ್ಕೆ ನಾವೆಯನ್ನು ಬಿಗಿದುದು; ಸ್ವಸ್ಥರಾಗಿ ಕೂತ ಶ್ರಾದ್ಧದೇವನೂ ಸಪ್ತರ್ಷಿಗಳೂ ಮತ್ಸ್ಯರೂಪಿ ಶ್ರೀಹರಿಯಿಂದ ನಾನಾ ಧರ್ಮಶ್ರವಣ—ಇದೇ ಮತ್ಸ್ಯರೂಪದಿಂದ ಪಾದ್ಮಕಲ್ಪದ ಪ್ರಲಯದಲ್ಲಿ ಹಯಗ್ರೀವಾಸುರನನ್ನು ಸಂಹರಿಸಿದ ಚರಿತ್ರೆನಿರೂಪಣ—ವೇದಗಳನ್ನು ಈ ಮಹಾಸುರನು ಹೇಗೆ ಕದ್ದನೆಂಬ ಮೊದಲಾದ ಶ್ರಾದ್ಧದೇವನ ಪ್ರಶ್ನೆಗಳನ್ನುತ್ತರಿಸುವುದು; ಸಮುದ್ರವು ಶಾಂತವಾಗಲು ಪುನಃ ಪ್ರಜಾಸೃಷ್ಟಿ ಶ್ರಾದ್ಧದೇವನೇ ಮನು—ಇಕ್ಷ್ವಾಕು ಮುಂತಾದವರು ಮನುಪುತ್ರರು—ಇತರ ಅಧಿಕಾರ ವರ್ಗದವರು; ಶ್ರೀ ವಾಮನಾವತಾರ—ಬಲಿನಿಗ್ರಹ ಮತ್ತು ಭೂದಾನ ವ್ಯಾಜದಿಂದ ಪಡೆದ ತ್ರೈಲೋಕ್ಯಾಧಿಪತ್ಯವನ್ನು ಇಂದ್ರನಿಗೆ ದಾನ—ಬಲಿಗೆ ಮುಂದಿನ ಮನ್ವಂತರದ ಇಂದ್ರಪದವಿಯನ್ನಿತ್ತು ಅನುಗ್ರಹಿಸಿದುದು; ಪರಶುರಾಮಾವತಾರ—ದುಷ್ಟಕ್ಷತ್ರಿಯ ನಾಶ-ಶ್ರೀರಾಮಾವತಾರ – ರಾವಣಾದಿ ರಾಕ್ಷಸ ವಧೆ – ವಿಭೀಷಣನಿಗೆ ಪಟ್ಟ-ಕೃಷ್ಣದ್ವೈಪಾಯನನಾಗಿ ಅವತರಿಸುವುದು—ಶ್ರೀ ಕೃಷ್ಣಾವತಾರ—ಪಾಂಡವಾದಿ ದೇವಾಂಶರನ್ನುಪಯೋಗಿಸಿಕೊಂಡು ಧರ್ಮಸ್ಥಾಪನೆ—ಅಸುರ ಸಂಹಾರ—ಬುದ್ಧಾವತಾರ—ಅಸುರ ಜನರನ್ನು ವೈದಿಕ ಮಾರ್ಗ ದಿಂದ ವಿಮುಖಗೊಳಿಸಿದುದು—ಕಲ್ಕಿ ಅವತಾರ—ವೇದ ರಕ್ಷಣೆ ಮತ್ತು ವರ್ಣಾಶ್ರಮಧರ್ಮ

ಸ್ಥಾಪನೆ; ೮ನೇ ಮನ್ವಂತರ–ಸಾವರ್ಣಿ ಮನು—ಮನುಪುತ್ರರು, ಇಂದ್ರ, ಸಪ್ತರ್ಷಿಗಳು; ೯ನೇ ದಕ್ಷ ಸಾವರ್ಣೀ ಮನ್ವಂತರ—ಮನುಸುತಾದಿ ಇತರ ಅಧಿಕಾರಿ ವರ್ಗ—ಋಷಭನಾಮಕನಾಗಿ ಶ್ರೀಹರಿಯ ಅವತಾರ; ೧೦ನೇ ಬ್ರಹ್ಮ ಸಾವರ್ಣಿ ಮನ್ವಂತರ—ಇಂದ್ರಾದಿ ಇತರ ಅಧಿಕಾರ ವರ್ಗದವರು–ಶ್ರೀಹರಿಯು ವಿಷ್ವಕ್ಸೇನನಾಗಿ ಅವತಾರ; ೧೧ನೇ ಮನ್ವಂತರ—ಧರ್ಮಸಾವರ್ಣಿಮನು—ಧರ್ಮಸೇತು ನಾಮಕ ಶ್ರೀಹರಿಯ ಅವತಾರ; ೧೨ನೇ ರುದ್ರ ಸಾವರ್ಣಿ ಮನ್ವಂತರ—ಇತರ ಅಧಿಕಾರಿಗಳು–ಸ್ವಧಾಮನೆಂಬ ಶ್ರೀಹರಿಯ ಅವತಾರ; ೧೩ನೇ ಮನು—ದೇವ ಸಾವರ್ಣಿ—ಅಧಿಕಾರಿಗಳು—ಯೋಗೇಶ್ವರನೆಂಬ ಶ್ರೀಹರಿಯ ಅವತಾರ; ೧೪ನೇ ಮನು—ಇಂದ್ರ ಸಾವರ್ಣಿ. ಅಧಿಕಾರಿವರ್ಗ—ಬೃಹದ್ಭಾನು ನಾಮಕ ಶ್ರೀಹರಿಯ ಅವತಾರ; ಇತರ ಬಹು ಅವತಾರಗಳನ್ನು ಕಾಲಕಾಲದಲ್ಲಿ ಪ್ರಕಟಗೊಳಿಸಿ, ಕಾರ್ಯಾನಂತರ ತಿರೋಧಾನಗೊಳಿಸುತ್ತಾನೆ. ಪುಟ 1028–1060

**ಅಧ್ಯಾಯ ೪೫—ಲಿಂಗಭಂಗದ್ವಾರಾ ಮುಕ್ತಿವರ್ಣನ. ಶ್ಲೋಕಸಂಖ್ಯಾ ೬೩**

ಪ್ರಲಯಕಾಲ–ಸಂಕರ್ಷಣ ಮುಖದಿಂದ ಅಗ್ನಿಜ್ವಾಲೆ–ಸಾಗರಗಳ ಶೋಷಣ–ಅನಾವೃಷ್ಟಿಯಿಂದ ಸಸ್ಯಾದಿ ಪ್ರಾಣಿಗಳ ನಾಶ; ಅಂಧತಮಸ್ಸಿನ ದ್ವಾರದಲ್ಲಿ ಬಂದು ನಿಂತಿರುವ ಕಲ್ಯಾದಿ ದೈತ್ಯರ ಲಿಂಗಭಂಗ—ವಾಯುದೇವರ ಗದಾ ಪ್ರಹಾರದಿಂದ—ವಾಯುಭೃತ್ಯರು ಅಸುರರನ್ನು ತಮಸ್ಸಿನಲ್ಲಿ ಹಾಕುವುದು—ಇದೇ ಅವರ ಮುಕ್ತಿ—ಅಲ್ಲಿ ನಿತ್ಯದುಃಖಾನುಭವ ಮಾಡುತ್ತಲಿರುವರು–ಸಂಸಾರಕ್ಕೆ ತಿರುಗಿಬರುವುದೇ ಇಲ್ಲ; ನಂತರ ವ್ಯುತ್ಕ್ರಮದಿಂದ ಭುವದಾದಿ ಲೋಕಗಳ ಮತ್ತು ದೇವತೆಗಳ ಲಯವೂ ನಡೆದು, ಬ್ರಹ್ಮದೇವನ ೯೦ನೇ ವಯಸ್ಸಿನಲ್ಲಿ ಬ್ರಹ್ಮಾಂಡಲಯ ಆರಂಭ; ಆತನ ೯೫ನೇ ವಯಸ್ಸಿನವರೆಗೆ ಬ್ರಹ್ಮಾಂಡದ ಬಹಿರಾವರಣಗಳ ಲಯ—ಮುಂದೆ ಸೂಕ್ಷ್ಮ ತತ್ತ್ವಗಳ ಮತ್ತು ಅಭಿಮಾನಿ ದೇವತೆಗಳ ಸೂಕ್ಷ್ಮ ಲಯ; ೧೦೦ನೇ ವರ್ಷದ ಕಡೆಯ ದಿನದಲ್ಲಿ ಮುಕ್ತರಾಗಲಿರುವರೆಲ್ಲ ಬ್ರಹ್ಮನಲ್ಲಿಯೂ, ಮುಂದಿನ ಬ್ರಹ್ಮಕಲ್ಪದಲ್ಲಿ ಸೃಷ್ಟಿಗೆ ಬರಲಿರುವವರು ಸೂತ್ರನಾಮಕ ವಾಯುದೇವನಲ್ಲಿಯೂ ಲಯ—ಬ್ರಹ್ಮನಲ್ಲಿ ಲಯ ಹೊಂದುವವರು ವಿರಜಾಸ್ನಾನದಿಂದ ಲಿಂಗದೇಹ ತ್ಯಾಗ; ಅವರು ಕ್ರಮವಾಗಿ ಮಾಯಾ, ಜಯಾದೇವಿಯವರ ದ್ವಾರಾ ವಾಸುದೇವ, ಸಂಕರ್ಷಣರಲ್ಲಿ ಕ್ರಮೇಣ ನಾರಾಯಣನಲ್ಲಿಯೂ ಲೀನರಾಗುವರು; ಮುಕ್ತರು ಪರಮಾತ್ಮನ ಉದರದಲ್ಲಿ ಪುನಃ ಸೃಷ್ಟಿಕಾಲ ಪರ್ಯಂತ ಧ್ಯಾನದಲ್ಲಿದ್ದು ನಂತರ ವೈಕುಂಠಾದಿ ಸ್ಥಾನಗಳಲ್ಲಿ ವಿಹರಿಸುತ್ತ ನಿತ್ಯಾನಂದ ಭೋಗವುಳ್ಳವರಾಗುವರು—ತಿರಿಗಿ ಸಂಸಾರದಲ್ಲಿ ಬರುವುದಿಲ್ಲ; ಮುಕ್ತರು ಸಂಸಾರದಲ್ಲಿ ಸುತ್ತುವ ಜೀವರನ್ನು ಕಾಣುತ್ತಾರೆ; ಗುಣಸಾಮ್ಯವೇ ಲಯ, ಗುಣ ವೈಷಮ್ಯವೇ ಸೃಷ್ಟಿ—ಇದರ ವಿವರಣೆ. ಪ್ರಕೃತಿಯು ತ್ರಿಗುಣಾತ್ಮಕವೆಂಬಲ್ಲಿರುವ ಭಿನ್ನಾಭಿಪ್ರಾಯಗಳ ಸಮನ್ವಯ; ನಾರಾಯಣನಲ್ಲಿ ವಾಸುದೇವಾದಿ ರೂಪಗಳು ಐಕ್ಯ ಹೊಂದುವಿಕೆ; ಅಂಭ್ರಣೀ ರೂಪದಲ್ಲಿ ಮಾಯಾದಿ ಲಕ್ಷ್ಮೀರೂಪಗಳ ಐಕ್ಯ; ಮೂಲರೂಪಗಳ ಪರಸ್ಪರ ಕ್ರೀಡೆ—ಅದ್ಭುತ ಮತ್ತು ಚಿಂತಿಸಲು ಯೋಗ್ಯವಲ್ಲ—ಬುದ್ಧಿಗೋಚರವೂ ಅಲ್ಲ; ಸೃಷ್ಟಿಯು ಎಲ್ಲ ಬ್ರಹ್ಮಕಲ್ಪ ಮತ್ತು ದಿನಕಲ್ಪಗಳಲ್ಲಿ ಏಕಪ್ರಕಾರ—ಅಲ್ಪ ವ್ಯತ್ಯಾಸವು ಅಸಂಭಾವ್ಯವಲ್ಲ; ಸೃಷ್ಟರಾಗುವ ಜೀವರಲ್ಲಿ

ತಾಮಸರೇ, ಅಧಿಕ-ಸಾತ್ವಿಕ ರಾಜಸರು ಅಲ್ಲ; ವಿಷ್ಣುರಹಸ್ಯ ಪುರಾಣದ ಮಹಿಮೆ-ಪಠನ, ಶ್ರವಣಾದಿಗಳು ಮುಕ್ತಿಗೆ ಪ್ರಧಾನ ಸಾಧನ; ಸ್ಪಷ್ಟವಾಗುವ ವಸ್ತುಗಳು ದ್ವಿವಿಧ; ಭಾವ, ಅಭಾವಗಳೆಂದು; ಭಾವವಸ್ತುಜಾತವು ಚೇತನ, ಅಚೇತನಗಳೆಂದು ದ್ವಿವಿಧ; ಶ್ರೀ ಬ್ರಹ್ಮಾದಿ ಸರ್ವರೂ ಚೇತನರು-ಜಡಗಳೆಲ್ಲ ಅಚೇತನಗಳು-ಶ್ರೀಹರಿಯು ಪರಮಚೇತನನು; ಜಡವೆಲ್ಲ ಪ್ರಕೃತಿಯ ಅಧೀನ-ಚೇತನರೆಲ್ಲ ಪರಮಾತ್ಮಾಧೀನರು-ಜಡಚೇತನವೆಲ್ಲವೂ ಪರಮಾತ್ಮಾಧೀನವೇ-ಆತನೊಬ್ಬನೇ ಸ್ವತಂತ್ರನು; ಅನಂತರೂಪಗಳಿಂದಿರುವ ಆತನನ್ನು ಸೇವಿಸಿ, ಚೇತನರು ಐಹಿಕ ಪಾರತ್ರಿಕ ಫಲಗಳನ್ನು ಮುಕ್ತಿಯನ್ನು ಪಡೆಯುವರು; ಮುಕ್ತಿಗಿಂತ ಉತ್ತಮ ಗತಿ ಇಲ್ಲ—ವೈರಾಗ್ಯಕ್ಕಿಂತ ಹೆಚ್ಚಿನ ಭಾಗ್ಯವಿಲ್ಲ—ನಿತ್ಯಾನಿತ್ಯ ವಿವೇಕಜ್ಞಾನವುಳ್ಳವರಾಗಿ ಯಮ ನಿಯಮಗಳನ್ನು ಸಾಧಿಸಿ, ವಿಹಿತ ನಿತ್ಯ ನೈಮಿತ್ತಿಕ ಕರ್ಮಗಳನ್ನಾಚರಿಸಿ ಶ್ರೀಹರಿಯಲ್ಲಿ ಸಮರ್ಪಿಸುವನೇ ಮುಕ್ತಿಗೆ ಅರ್ಹನು; ನಿತ್ಯ ಶ್ರೀಹರಿ ಮಹಿಮೆಗಳ ಶ್ರವಣ ಮಾಡಬೇಕು—ಮನನ ಧ್ಯಾನಗಳ ಸಿದ್ಧಿಯಿಂದ ಶ್ರೀಹರಿಯ ಸಾಕ್ಷಾದ್ದರ್ಶನವನ್ನು, ನಂತರ ಪುನರಾವರ್ತಿ ರಹಿತವಾದ ಗತಿಯನ್ನು ಹೊಂದುವನು. **ಪುಟ 1060–1085**

**ಅಧ್ಯಾಯ ೪೬—ಸತ್ಸಂಗಮಹಿಮಾ ವರ್ಣನ ಶ್ಲೋಕಗಳು ೫೬**

ಸಜ್ಜನ ಸಮಾಗಮವು ಪೂರ್ವಪುಣ್ಯ ಮಾತ್ರ ಲಭ್ಯ; ಸುಖ ಪ್ರಾಪ್ತಿ ದುಃಖನಾಶವೆಂದು ಇಷ್ಟವು ದ್ವಿವಿಧ; ದೃಷ್ಟ ಅದೃಷ್ಟವೆಂದು ಇಷ್ಟಸಾಧನೆಯು ದ್ವಿವಿಧ; ಅದೃಷ್ಟದಿಂದ ದೃಷ್ಟ ಸಾಧನ ಲಭ್ಯ; ಧರ್ಮ, ಅರ್ಥ, ಕಾಮಗಳು ಸಕಲರಿಗೂ ಇಷ್ಟಪ್ರದಗಳು—ಧರ್ಮವಿಲ್ಲದೇ ಅರ್ಥಕಾಮಗಳಿಲ್ಲ—ಆದರಿಂದ ಧರ್ಮವೇ ಶ್ರೇಷ್ಠವಾದುದು; ಅನಿಷ್ಟವೂ ದ್ವಿವಿಧ—ದ್ವಿವಿಧ ಇಷ್ಟಗಳ ವಿನಾಶ ಅಥವಾ ಪ್ರತಿಬಂಧ ಮತ್ತು ದುಃಖಾನುಭವಗಳೆಂದು; ಅನಿಷ್ಟ ಸಾಧನೆಯೂ ದ್ವಿವಿಧ-ದೃಷ್ಟ ಮತ್ತು ಅದೃಷ್ಟವೆಂದು; ಧರ್ಮಾಧರ್ಮಗಳಂತೆ ದೃಷ್ಟಾದೃಷ್ಟ ಭೇದದಿಂದ ಅರ್ಥವೂ ದ್ವಿವಿಧ; ಅರ್ಥದಿಂದಲೇ ಕಾಮೋಪಶಾಂತಿ ಭೋಗಸಾಮಗ್ರಿಗಳ ಪ್ರಾಪ್ತಿ-ಅದೃಷ್ಟಾರ್ಥವು ನಿತ್ಯಾನಿತ್ಯವೆಂದು ದ್ವಿವಿಧ—ಶ್ರೀವಿಷ್ಣು ಪ್ರೀತ್ಯರ್ಥವಾಗಿ ವಿನಿಯೋಗವಾಗುವ ಅರ್ಥಗಳು ನಿತ್ಯಫಲಪ್ರದಗಳಾಗುವುವು; ಕಾಮಗಳೂ ನಿತ್ಯಾನಿತ್ಯ ಭೇದದಿಂದ ದ್ವಿವಿಧ; ಅರ್ಥವನ್ನು ಸತ್ಪಾತ್ರ ದಾನಾದಿ ಸದುಪಯೋಗ ಮಾಡುವುದರಿಂದ ದೃಷ್ಟಾದೃಷ್ಟ ದ್ವಿವಿಧ ಫಲಪ್ರಾಪ್ತಿ—ಕೀರ್ತಿ ಮತ್ತು ಧರ್ಮಗಳೇ ಅವು; ಕಾಮದಿಂದ ಧರ್ಮವುಂಟು-ಸ್ತ್ರೀಯರ ಕಾಮತೃಪ್ತಿಯಿಂದ ಪುಣ್ಯವೂ ಈ ಕರ್ತವ್ಯ ಲೋಪದಿಂದ ಪಾಪವೂ ಲಭಿಸುವುವು; ಬಹು ಪತ್ನಿ ಸ್ವೀಕಾರ ನಿಷೇಧ-ಕಾರಣ; ಸ್ವ ಸ್ತ್ರೀಯರಿಗೆ ಭೋಗದಾನ ನಿಯಮಗಳು—ಭೋಗೇಚ್ಛೆಯನ್ನು ಸ್ತ್ರೀಯರಲ್ಲಿ ಗುರ್ತಿಸುವ ಲಕ್ಷಣಗಳು; ಭೋಗವನ್ನಿತ್ತು ಅನವಸ್ಥಾದಿಗಳಿಂದ ರಕ್ಷಿಸಬೇಕಾದ ಕರ್ತವ್ಯ; ಕಾಮುಕನಾದ ಪತಿಯನ್ನು ಅನುಸರಿಸಬೇಕಾದುದು ಸತಿಯ ಕರ್ತವ್ಯ—ದೇಶ ಕಾಲಾದಿ ದೋಷಗಳಿಗೆ ಪತಿಯೇ ಜವಾಬ್ದಾರನು; ಭೋಗವನ್ನು ತಿರಸ್ಕರಿಸಬಹುದಾದ ಸಂದರ್ಭಗಳು; ಪತಿಯನ್ನು ಎಚ್ಚರಿಸಿ ಸನ್ಮಾರ್ಗದಲ್ಲಿಡುವುದು ಸತಿಯ ಕರ್ತವ್ಯ—ಪತಿಯ ಬಂಧುಗಳನ್ನು ಮಾನಿಸಿ ಪೋಷ್ಯರನ್ನು ಪೋಷಿಸುವುದೂ ಆಕೆಯ ಕರ್ತವ್ಯವೇ; ಪತಿಯನ್ನು ಶ್ರೀವಿಷ್ಣುಪೂಜೆಯೆಂಬ ಭಾವದಿಂದ ಸೇವಿಸತಕ್ಕದ್ದು; ಗೃಹಸ್ಥ ಧರ್ಮಗಳು-ಯಜ್ಞ ಶೇಷಾನ್ನ

ಭೋಜನ–ಅಮೃತತುಲ್ಯ–ಪೋಷ್ಯರುಂಡು ಮಿಕ್ಕ ಆಹಾರಗಳು ಹಾಗೆಯೇ; ಪುರುಷಾರ್ಥಗಳನ್ನು ಸಾಧಿಸಲು, ಗೃಹಸ್ಥನ ಕರ್ತವ್ಯಗಳು; ಅಲ್ಪಧನದಲ್ಲಿ ಅಲ್ಪವನ್ನಾದರೂ ಧರ್ಮಾರ್ಥವಾಗಿ ವಿನಿಯೋಗಿಸಬೇಕು—ಮಹಾಧನವಂತನು ೧/೨ ಅಥವಾ ೩/೪ ಭಾಗವನ್ನು ವಿನಿಯೋಗಿಸಬೇಕು; ಅರ್ಥವು ಧನ ಮತ್ತು ವಿದ್ಯೆ ಎಂದು ದ್ವಿವಿಧ–ವಿದ್ಯೆಯಿಂದ ಭಕ್ತಿ—ಅದರಿಂದ ಮುಕ್ತಿ ಸಾಧಕ ಶ್ರೀವಿಷ್ಣುಪ್ರಸಾರ—ಏಕಾಂತ ಭಕ್ತರು; ಸಜ್ಜನ ಸಂಗದಿಂದ ಭಗವನ್ಮಹಿಮಾ ಶ್ರವಣ–ಅದರಿಂದ ಭಕ್ತಿ; ಸತ್ಯಮಾರ್ಗವಾರ ಮಹಿಮೆ–ಸಜ್ಜನ ಲಕ್ಷಣ. ಪುಟ **1086–1107**

**ಅಧ್ಯಾಯ ೪೭—ಪುರುಷಾರ್ಥ ವರ್ಣನೆ. ಶ್ಲೋಕಸಂಖ್ಯಾ ೭೪**

ಮುಮುಕ್ಷುವು ದುಸ್ಸಂಗವನ್ನು ತ್ಯಜಿಸುವುದು ಪ್ರಥಮ ಕರ್ತವ್ಯ; ಸ್ತ್ರೀಪುರುಷರ ಅತಿ ಸಾಮೀಪ್ಯ ವಾಸವೂ ದುಃಸಂಗವೇ ಸರಿ—ಅಗ್ನಿ ಬೆಣ್ಣೆಗಳಂತೆ ಸ್ತ್ರೀಪುರುಷರು—ಲೋಹ ಆಯಸ್ಕಾಂತಗಳಂತೆ ಪರಸ್ಪರ ಆಕರ್ಷಕ–ಪಂಚಚೂಡಾ ಅಪ್ಸರೆಯು ನಾರದರಿಗೆ ಸ್ವಾನುಭವ ನಿರೂಪಣೆ; ಸ್ತ್ರೀ ಸಹಜ ಸ್ವಭಾವ–ಮರದ ಹೆಣ್ಣುಗೊಂಬೆಯನ್ನು ನೋಡಿದರೂ ಪುರುಷನು ಕಾಮೋದ್ದೀಪಿತನಾಗುತ್ತಾನೆ—ಅತ ಏವ ಏಕಾಸನಾದಿ ಸಾಮೀಪ್ಯ ಸ್ತ್ರೀಪುರುಷರು ತ್ಯಜಿಸತಕ್ಕದ್ದು; ಕಾಮವಶನಾಗುವುದರಿಂದಾಗುವ ಅನರ್ಥಗಳು—ಸೌಭರಿ, ವಿಶ್ವಾಮಿತ್ರ, ಇಂದ್ರ, ಚಂದ್ರ, ಅಹಲ್ಯಾ ಮೊದಲಾದ ನಿದರ್ಶನಗಳು; ಸ್ತ್ರೀಯರೂ ಪುರುಷ ಸಂಸರ್ಗದಿಂದ ಕಾಮವಶರಾಗಿ ಅನರ್ಥವನ್ನು ಹೊಂದುತ್ತಾರೆ—ಪಿಂಗಲಾ ನಿದರ್ಶನ; ಕೆಲವು ಕರ್ಮಗಳು ಕಾಲಾಂತರದಲ್ಲಿ ಫಲಿಸುತ್ತವೆ—ಸ್ತ್ರೀ ಪುರುಷರ ದೀರ್ಘಕಾಲದ ಏಕಾಂತ ವಾಸದ ಅನರ್ಥ; ನಿಷಿದ್ಧ ಮೈಥುನದ ಕ್ಷಣಿಕ ಸುಖಕ್ಕಾಗಿ ಮಹಾ ದುಃಖವನ್ನು ಹೊಂದುವುದು ನಿಶ್ಚಯ–ಅದು ವಿವೇಕವಲ್ಲ; ದೇಹ ಮಿಥುನೀ ಭಾವವು ಅಸಹ್ಯ–ಮಾಂಸರಕ್ತಾದಿ ದೇಹದ ವರ್ಣನೆ-ಪರ ಸ್ತ್ರೀ ಪರಧನಗಳು ಸುಖಕರವೆಂದು ಎಂದೂ ಕಂಡಿಲ್ಲ—ಜಾರಚೋರರಿಗೆ ರಾತ್ರಿ ನಿದ್ರೆ ಸಹ ಬರದು–ಪರತ್ರದಲ್ಲಿ ನರಕ ವಾಸವೂ ಇದೆ–ಇಹ ಪರಗಳಲ್ಲಿ ಯಾವ ಸುಖಕ್ಕೂ ಕಾರಣವಾಗದ ಈ ಆಚರಣೆಯುಳ್ಳವರು ಮೂರ್ಖರೇ ಸರಿ; ಕಾಮಾರ್ತನು ಸ್ವಸ್ತ್ರೀಭೋಗದಿಂದ ಇಹ ಪರ ಸುಖ ಸಾಧಿಸಿಕೊಳ್ಳಬಹುದು; ಹೀಗೆಯೇ ಶ್ರೀವಿಷ್ಣುವಿನಲ್ಲಿ ಮತ್ತು ವಿಷ್ಣುಭಕ್ತರಲ್ಲಿ ಅರ್ಪಿತ–ಶೇಷ ಆಹಾರ ದ್ರವ್ಯಾದಿಗಳಿಂದ ಸುಖಿಸಬಹುದು; ತೀರ್ಥಸ್ನಾನಾದಿಗಳ ಕಾಲದ ಚಳಿಗಾಳಿ ಮಳೆ ಬಿಸಿಲುಗಳು ಪಾರತ್ರಿಕ ಸುಖಸಾಧನಗಳಾಗುತ್ತವೆ; ಪರತ್ರದಲ್ಲಿ ಅನರ್ಥಕ್ಕೆ ಕಾರಣವಾಗುವ ನಿಷಿದ್ಧ ಜಿಹ್ವೋಪಸ್ಥ ಭೋಗ್ಯ ವಿಷಯಗಳೆಲ್ಲವೂ ದುರ್ಭೋಗಗಳೇ–ನಿದರ್ಶನಗಳು; ದುಃಖ ಹಾನಿ ಮತ್ತು ಸುಖಪ್ರಾಪ್ತಿಗಳೆರಡೂ ಲಭಿಸುವ ಸ್ತ್ರೀಸಂಗವು ಸರ್ವಾಪೇಕ್ಷಿತವು–ಆಹಾರವು ಅದಕ್ಕಿಂತ ಅಧಿಕೇಷ್ಟವು—ಅದಕ್ಕಿಂತ ದಾಹ ಪರಿಹಾರಕ ಜಲಪಾನವು ಅಧಿಕೇಷ್ಟವು; ಸರ್ವ ವಿಷಯಗಳೂ ಇಂದ್ರಿಯಗಳನ್ನು ಆಕರ್ಷಿಸುತ್ತವೆ—ಅತ ಏವ ಇಂದ್ರಿಯ ಜಯವು ಕಷ್ಟಸಾಧ್ಯ—ಸ್ತ್ರೀ, ಅನ್ನ, ಜಲಪಾನಗಳು ಅತ್ಯಂತ ದುರ್ಜಯಗಳೆಂದು ಜ್ಞಾನಿಗಳ ನಿರ್ಣಯ; ಸುಖಕ್ಕಿಂತ ದುಃಖಹಾನಿಯು ಅಧಿಕೇಷ್ಟವು—ದುಃಖವೇ ಮಹಾನಿಷ್ಟವು—ನಿದರ್ಶನಗಳು; ಜಿಹ್ವೋಪಸ್ಥಗಳನ್ನು ಶಾಂತಿಗೊಳಿಸಲು ಧರ್ಮಾಧರ್ಮ ವಿವೇಕದಿಂದ ಪ್ರವೃತ್ತಿಸಬೇಕು; ಇಷ್ಟಹಾನಿ ಮತ್ತು ಇಷ್ಟ ವಿರೋಧಗಳು ದುಃಖಪ್ರದಗಳು; ದುಃಖದ ಮೂಲ ಕಾರಣವು

ಪೂರ್ವ ಕರ್ಮವೇ—ಅತ ಎವ, ದುಃಖಬಂದಾಗ ಯಾವ ವಿಷಯದಲ್ಲಿಯೂ ಅಸೂಯೆ ಈರ್ಷ್ಯಾದಿ ಭಾವನೆಗಳನ್ನು ಹೊಂದಬಾರದು; ಗೌತಮೀ ನಾಮಕ ಬ್ರಾಹ್ಮಣ ವಿಧವೆಯ ಚರಿತ್ರೆ–ತನ್ನ ಮಗನನ್ನು ಕಚ್ಚಿ ಕೊಂದ ಸರ್ಪಸಂಹಾರಕ್ಕೆ ಉದ್ಯುಕ್ತನಾದ ವ್ಯಾಧನನ್ನು ನಿಷೇಧಿಸುವುದು; ಯಮನು ಬಾಲಕನ ಮರಣವನ್ನು ಹೇಳಿ, ಆ ಕರ್ಮಾನುಸಾರವಾಗಿ ಶ್ರೀಹರಿಯು ಫಲ ಕೊಟ್ಟಿರುವುದರಿಂದ ಕರ್ಮಕರ್ತನು ತನಗೆ ತಾನೇ ಶತ್ರುವು; ಇದನ್ನರಿಯದ ಅವಿವೇಕಿಗಳು ದುಃಖಹೇತುಗಳಾದ ಕರ್ಮಗಳಲ್ಲಿ ತೊಡಗುತ್ತಾರೆ; ವಿಷ್ಣುಮಾಯಾ ಬಲವು ಅದ್ಭುತವಾದುದು; ದುಃಖದ ಆತ್ಯಂತಿಕ ನಾಶವು ನಿತ್ಯ ನಿರಂತರಾನಂದ (ಮುಕ್ತಿ)ದಿಂದಲೇ ಸಾಧ್ಯ—ಎಂದು ಮುಂತಾಗಿ ಉಪದೇಶಿಸುವುದು ಅದು ಯಾರ ಪ್ರಸಾದವಿಲ್ಲದೇ ದೊರೆಯುವುದಿಲ್ಲವೋ ಆತನೇ ಶ್ರೀವಿಷ್ಣುವು—ಆತನ ಪ್ರಸನ್ನತೆಗಾಗಿಯೇ ಸರ್ವದಾ ಶ್ರಮಿಸಬೇಕು—ಅನ್ಯಸೇವೆಯ ಕಾರಣವಾಗದು. ಪುಟ 1107–1130

ಅಧ್ಯಾಯ ೪೮—ಪುರುಷಾರ್ಥ ವರ್ಣನೆ. ಶ್ಲೋಕಸಂಖ್ಯಾ ೧೮

ದೃಷ್ಟಾದೃಷ್ಟಗಳೆಂಬ ಉಭಯ ವಿಧ ಇಷ್ಟ ಸಾಧನವು ಪುರುಷಾರ್ಥವೆನಿಸುವುದು; ಇಷ್ಟವು 'ದುಃಖಹಾನಿ' ಮತ್ತು ಸುಖಪ್ರಾಪ್ತಿಗಳೆಂದು ಎರಡು ವಿಧ; ಅದೃಷ್ಟ ಧರ್ಮವು (ಪುಣ್ಯವು) ಸುಖಪ್ರಾಪಕವು—ಇದು ತಪಸ್ಸು ದಾನಗಳಿಂದ ಲಭ್ಯ; ತ್ರಿಕರಣ ಸಾಧ್ಯ ಸತ್ಕರ್ಮಗಳೇ ತಪಸ್ಸು—ಅದು, ನಿತ್ಯ, ನೈಮಿತ್ತಿಕ, ಕಾಮ್ಯಗಳೆಂದು ತ್ರಿವಿಧ; ಸತ್ಪಾತ್ರರಲ್ಲಿ ನ್ಯಾಯಾರ್ಜಿತ ಧನಾದಿ ವಸ್ತು ತ್ಯಾಗವು, ದಾನವೆನಿಸುವುದು—ದೇವೋದ್ದೇಶಿತ ಅಗ್ನಿಹೋಮಾದಿಗಳೂ ದಾನವೇ; ಧರ್ಮ ಮಾತ್ರ ಲಭ್ಯವಾದುದು, ಕೆಲವು ಭೋಗಸ್ಥಾನಗಳು–ಸ್ವರ್ಗ, ಅಂತರಿಕ್ಷ, ಭೂ, ಪಾತಾಳಾದಿ ಲೋಕಗಳು ಪುಣ್ಯ ಮಾತ್ರ ಪ್ರಾಪ್ಯಗಳು–ಈ ಸ್ಥಾನಗಳು ದೇಶ ಕಾಲಗಳಿಂದ ಅನಿತ್ಯ—ಕೆಲವು ಕಾಲದೀರ್ಘ ಅನಿತ್ಯವಾದರೂ ದೇಶತಃ ದೀರ್ಘಕಾಲ ಇರುವುವು; ಇಷ್ಟ ಹಾನಿ ಮತ್ತು ದುಃಖಪ್ರಾಪ್ತಿಗಳೇ ಅಧರ್ಮದ (ಪಾಪದ) ಫಲ–ಭೂಲೋಕ, ನರಕಗಳಲ್ಲಿ ಇಂತಹ ಸ್ಥಾನಗಳವೆ; ಅಧರ್ಮವೂ ದ್ವಿವಿಧ–ನಿಷಿದ್ಧಕರಣ ಮತ್ತು ವಿಹಿತ ತ್ಯಾಗವೆಂದು; ಅರ್ಥವು, ಧನ, ವಿದ್ಯೆ, ಯಶಸ್ಸೆಂದು ಮೂರು ವಿಧ—ಪ್ರಾಯಃ ದೃಷ್ಟ ಕಾಮವೂ ದೃಷ್ಟಫಲಕವೇ; ಅರ್ಥ ಕಾಮಗಳಿಂದ ಹುಟ್ಟುವ ಅದೃಷ್ಟವೂ ಧರ್ಮಾಧರ್ಮ ಸ್ವರೂಪ ದವುಗಳು; ಮೋಕ್ಷವು ದ್ವಿವಿಧ—ದುರ್ಮೋಕ್ಷ, ಸನ್ಮೋಕ್ಷವೆಂದು; ಲಿಂಗಭಂಗವೇ ಮೋಕ್ಷ ಶಬ್ದದ ಮುಖ್ಯಾರ್ಥ; ವೈಕುಂಠಾದಿ ನಿತ್ಯ ಸುಖಸ್ಥಾನಗಳ ಪ್ರಾಪ್ತಿಯು ಸನ್ಮೋಕ್ಷ—ಅಂಧತಮಸ್ಸು ಮತ್ತು ಪಪ್ರಗಳು ನಿತ್ಯ ದುಃಖಸ್ಥಾನಗಳು; ಉಭಯ ಮೋಕ್ಷದಿಂದ ಸಂಸಾರಕ್ಕೆ ತಿರುಗಿ ಬರುವುದೆಂಬುದಿಲ್ಲ. ಪುಟ 1130–1137

ಅಧ್ಯಾಯ ೪೯—ನಾನಾಲೋಕ ವರ್ಣನೆ. ಶ್ಲೋಕಸಂಖ್ಯಾ ೬೨

ಕಹೋಳರ ಪ್ರಶ್ನೆ—ಸ್ಥಿರಲೋಕಗಳೆಷ್ಟು ಎಲ್ಲಿವೆ? ದೇಶತಃ ಸ್ಥಿರವಾದರೂ ಕಾಲತಃ ಅಸ್ಥಿರಗಳಾವುವು? ಇತ್ಯಾದಿ; ಸೂತರ ಉತ್ತರ—ಬ್ರಹ್ಮಕಲ್ಪಾವಸಾನ ಪರ್ಯಂತ ಇರುವ ತಾರಕೆಗಳು ಸ್ಥಿರಲೋಕಗಳೆನಿಸುತ್ತವೆ; ಇವೆಲ್ಲವೂ ವಾಯು ಚಾಲಿತಗಳು–ಪುಣ್ಯಜೀವಿಗಳಿಂದ

ಮಾತ್ರ ಆಶ್ರಿತಗಳು—ಪುಣ್ಯಭೋಗವು ಮುಗಿಯುತ್ತ ಬರಲು ಭೂಮಿಗೆ ಬರುತ್ತಾರೆ; ರಾತ್ರಿಕಾಲದಲ್ಲಿ ನಕ್ಷತ್ರಗಳು ಭೂಮಿಗೆ ಬೀಳುವಂತೆ ಕಾಣುವ ಶಿಲಾಖಂಡಗಳನ್ನು ಆಶ್ರಯಿಸಿ ಭೂಮಿಯಲ್ಲಿ ಬಂದು; ತೃಣ ಜಲಾದಿಗಳ ದ್ವಾರಾ ತಂದೆಯ ದೇಹವನ್ನು ಆತನ ರೇತೋ ದ್ವಾರಾ ಮಾತೃಗರ್ಭವನ್ನು ಪ್ರವೇಶಿಸಿ ಜನಿಸುವರು; ಸೂರ್ಯಮಂಡಲದ ವರ್ಣನೆ–ಅಲ್ಲಿ ದಿವ್ಯ ಸಿಂಹಾಸನದಲ್ಲಿ ಕುಳಿತು ಸೂರ್ಯದೇವನು, ಗಂಧರ್ವ ವಿದ್ಯಾಧರರಿಂದ ಸೇವಿಸಲ್ಪಡು ತ್ತಾನೆ—ಸೂರ್ಯಲೋಕದ ಭೋಗಗಳು, ಅಲ್ಲಿಗೆ ಬರುವ ಜೀವರು ಇತ್ಯಾದಿ; ರಥಾರೂಢ ವಾದ ಸೂರ್ಯಮಂಡಲವು, ಕೇಶವಾಜ್ಞೆಯಿಂದ ಮೇರು ಪರ್ವತವನ್ನು ಪ್ರದಕ್ಷಿಣೆ ಮಾಡು ತ್ತದೆ—ಅಲ್ಲಿರುವ ಪ್ರಜೆಗಳಿಗೆ ವೇಗದ ಜ್ಞಾನವಾಗುವುದಿಲ್ಲ—ನಿದರ್ಶನ; ಸೂರ್ಯಲೋಕ ವಾಸಕ್ಕೆ ಅರ್ಹರಾದ ಪುಣ್ಯ ಜೀವಿಗಳು–ಗಾಯತ್ರೀ ಉಪಾಸಕರು, ಪತಿಯೊಡನೆ ಸಹಗಮನ ಮಾಡುವ ಸ್ತ್ರೀಯರು ಇತ್ಯಾದಿ; ಇತರ ಜ್ಯೋತಿರ್ಮಂಡಲಗಳೂ ನಕ್ಷತ್ರ ಲೋಕಗಳೂ ನಾನಾ ಭೋಗಗಳಿಂದ ಸುಖಿಸುವ ಪುಣ್ಯಜೀವಿಗಳಿರುವ ಪ್ರದೇಶಗಳು—ಅಲ್ಲಿ ಅನ್ನದಾನ, ಪರೋಪಕಾರ ಗೋದಾನಾದಿ ವಿವಿಧ ದಾನಗಳನ್ನು ಮಾಡಿದವರು, ವೈದ್ಯ, ಜ್ಯೋತಿಷ-ಮೀಮಾಂಸಾದಿಗಳಲ್ಲಿ ಆಸಕ್ತರು, ಮುಂತಾದ ವಿವಿಧ ಪುಣ್ಯಕರ್ಮಿಗಳು ವಾಸಿಸುವರು; ಯಾವ ಸತ್ಕರ್ಮದಿಂದ ಯಾವ ಲೋಕ ಪ್ರಾಪ್ತಿ ಎಂಬುದನ್ನು ಯಾರೂ ತಿಳಿಯಲಾರರು–ಶ್ರೀಹರಿಯ ವಿಶೇಷಾನುಗ್ರಹ ಬಲದಿಂದ ಯಮದೇವನು ತಿಳಿಯುತ್ತಾನೆ; ದೇಶತಃ ಸ್ಥಿರವಾದರೂ ಕಾಲತಃ ಚಂಚಲವಾದ ಲೋಕಗಳು–ಪಾತಾಲಾದಿ ಸಪ್ತಲೋಕಗಳು ಭೂ ವಿವರಗಳಾದ್ದರಿಂದ ಭೂ ಪ್ರಭೇದಗಳೆಂದೂ ಗಣಿಸಲಾಗುತ್ತವೆ—ಇವು ಪುಣ್ಯಕರ್ಮಪ್ರಾಪ್ಯಗಳೇ ಸರಿ; ಆ ಲೋಕಗಳಲ್ಲಿ ರತ್ನದೀಪಗಳು; ಉದ್ಯಾನ ಸರೋವರಾದಿ ನಾನಾ ಭೋಗ ಸ್ಥಾನಗಳು—ಈ ಲೋಕ ಪ್ರಾಪ್ತಿಗೆ ಕಾರಣವಾಗುವ ಪುಣ್ಯಕರ್ಮಗಳು; ಅಮುಕ್ತ ವೈಕುಂಠಾದಿ ಲೋಕಗಳಲ್ಲಿ ವಾಸಿಸುವ ಪುಣ್ಯ ಜೀವಿಗಳು; ಮುಕ್ತ ಲೋಕಗಳಲ್ಲಿ ಅನಾಯಾಸವಾಗಿ ಇಚ್ಛಿತ ಸರ್ವಸುಖಭೋಗಗಳೂ ದೊರೆಯುವುವು–ಮುಕ್ತರಿಗೆ ಅಯೋಗ್ಯೇಚ್ಛೆಯೇ ಹುಟ್ಟುವುದಿಲ್ಲ; ಅನಿತ್ಯ ನರಕಗಳು–ದುಃಖಾದಿ ದುರ್ಭೋಗಗಳನ್ನು ಪಡೆಯುವ ಪಾಪಿಗಳ ವಿವರ–ಪರಸ್ತ್ರೀ ಪರದ್ರವ್ಯಾದಿಗಳಲ್ಲಿ ಆಸಕ್ತರು, ವ್ಯಭಿಚಾರಾದಿ ದೋಷಗಳುಳ್ಳ ಸ್ತ್ರೀಯರು ಇತ್ಯಾದಿ; ಅನಿತ್ಯ ನರಕವಾಸಿಗಳ ಮುಂದಿನ ಗತಿಗಳು; ನಿತ್ಯನರಕ ಸ್ಥಾನವನ್ನು ಸೇರುವವರ ಸಾಧನೆಗಳು; ನಿತ್ಯನರಕವೇ ದೇಶತಃ ಮತ್ತು ಕಾಲತಃ ನಿತ್ಯಲೋಕವು; ನಿತ್ಯ ಮತ್ತು ಅನಿತ್ಯನರಕಗಳ ವರ್ಣನೆಯು ವಿವೇಕಿಗಳಿಗೆ ಪಾಪಕರ್ಮದಿಂದ ದೂರವಿರಲು ಎಚ್ಚರಿಸುತ್ತದೆ; ನಿತ್ಯನರಕ ಸಾಧಕ ಪಾಪಗಳ ವಿವರ; ನಿತ್ಯ ನರಕದಲ್ಲಿ ಸುಖಲೇಶವಿಲ್ಲ; ಕ್ಷುದ್ರ ಪಾಪಾದಿ ಅಷ್ಟವಿಧ ಪಾತಕಗಳ ನಿರೂಪಣೆ; ಶ್ರೀವಿಷ್ಣುವಿನ ವಿವಿಧ ಗತಿ ಪ್ರದಾನ ಮಹಿಮಾ ಶ್ರವಣದ ಫಲ. ಪುಟ 1137–1160

ಅಧ್ಯಾಯ ೫೦—ಭಕ್ತಿದ್ವೇಷವಿಭಾಗ ನಿರೂಪಣೆ. ಶ್ಲೋಕಸಂಖ್ಯಾ ೪೬

ಶಾಕಲ್ಯರ ಪ್ರಶ್ನೆ—ಶ್ರೀಹರಿಭಕ್ತಿಯಿಂದ ಮೋಕ್ಷವೂ, ದೋಷದಿಂದ ತಮಸ್ಸೂ ಆಗುತ್ತದೆಂಬುದು ಯುಕ್ತವಲ್ಲ; ಶ್ರೀಹರಿನಾಮ ಮಹಿಮೆ–ಸರ್ವಪಾಪಕ್ಷಯದಿಂದ ಸರ್ವರೂ ಮುಕ್ತರಾಗಬೇಕು; ಕಂಸ, ಸೃಗಾಲವಾಸುದೇವಾದಿ ದುರ್ಜನರೂ ಮುಕ್ತರಾದರೆಂದು ಕೇಳು

ತ್ತೇವೆ; ಭಕ್ತಿಯಿಂದಲೇ ಮೋಕ್ಷವೆಂಬುದರ ಮರ್ಮವನ್ನು ತಿಳಿಯಲಿಚ್ಛಿಸುತ್ತೇವೆ; ಯೋಗ್ಯಚಿಕಿತ್ಸೆಗಳಿಂದ ಲೋಹವು ಸುವರ್ಣವಾಗಬಹುದು–ಚಿಪ್ಪು ಹಂಚು ಮೊದಲಾದುವು ಆಗುವುದಿಲ್ಲ ವಷ್ಟೆ ಅಗ್ನಿಯು ದಹಿಸಲ್ಪಡುವ ಯೋಗ್ಯತೆ ಇದ್ದ ವಸ್ತುಗಳನ್ನು ಮಾತ್ರ ದಹಿಸುತ್ತದೆ; ಸನ್ಮೋಕ್ಷಕ್ಕೆ ಸ್ವರೂಪದಿಂದ ಅರ್ಹತೆಯು (ಯೋಗ್ಯತೆಯು) ಅವಶ್ಯಕ; ಭಕ್ತಿಯಿಂದ ಉಚ್ಚರಿಸುವ ಹರಿನಾಮ ಮಾತ್ರ ಪಾಪಹರ; ಯಾವುದೇ ಸ್ಥಿತಿಯಲ್ಲಿ ಯಾರೇ ಆಗಲಿ ನಾಮೋಚ್ಚರಣ ಮಾಡಿದರೆ ಅವರ ವಿಶಿಷ್ಟ ಪಾಪಗಳ ಪರಿಹಾರವಾಗಿ ಮೋಕ್ಷವಾಗುತ್ತೆಂಬುದು ಸರಿಯಲ್ಲ–ಭಕ್ತಿಯೇ ಫಲಪ್ರದವು, ಕೇವಲ ಉಚ್ಚಾರವಲ್ಲ; ಅಜಾಮಿಳನು ಸ್ವಭಾವಭಕ್ತನು; ಆದ್ದರಿಂದ ಭಕ್ತಿ ಮಾಡುವ ಬ್ರಹ್ಮಾದಿಗಳು ಮೂಢರಲ್ಲ–ಸರ್ವಜ್ಞರು; ದ್ವೇಷದಿಂದ ಹಿರಣ್ಯಕನು ಮುಕ್ತನಾದರೆ, ಪ್ರಹ್ಲಾದನು ಏಕೆ ಭಕ್ತಿ ಮಾಡುವನು? ಹರಿಭಕ್ತಿಯು ಸ್ವರೂಪಗುಣವೇ ಆಗಿದೆ, ಆದ್ದರಿಂದ ಹರಿದ್ವೇಷ ಭಕ್ತಿಗಳೇ ಅವರಿಗೆ ದೊರೆತ ಫಲಗಳಿಗೆ ಪ್ರಧಾನಕಾರಣಗಳು; ತಮೋಯೋಗ್ಯರ ಸ್ವರೂಪ–ತಮಸ್ಸೇ ಫಲ; ವಿಭೀಷಣ, ಬಲಿ ಮೊದಲಾದವರ ನಿದರ್ಶನಗಳು; ಸುಜನರಿಗೆ ಸರ್ವಸಮರ್ಪಣೆಯಿಂದ ಭಕ್ತಿಯ ವೃದ್ಧಿ—ಅದರಿಂದ ಪುನರಾವೃತ್ತಿರಹಿತವಾದ ನಿತ್ಯಸುಖ ಸ್ಥಾನ ಪ್ರಾಪ್ತಿ. ಪುಟ 1160–1178

ಅಧ್ಯಾಯ ೫೧—ಮುಕ್ತಾವಸ್ಥೆಯ ವರ್ಣನೆ. ಶ್ಲೋಕಸಂಖ್ಯಾ ೨೬

ವಿರಜರ ಪ್ರಶ್ನೆ–ಮುಕ್ತರಿಂದ ಭೋಗಕ್ಕೂ, ಲೌಕಿಕ ಶ್ರೀಮಂತರ ವಿಷಯ ಭೋಗಕ್ಕೂ ವೈಲಕ್ಷಣ್ಯವೇನು? ಉತ್ತರ–ಇಚ್ಛಾಪೂರ್ವಕ ಭೋಗವೇ ಸುಖಹೇತುವು; ಸಂಸಾರಾವಸ್ಥೆಯಲ್ಲಿ ಇಚ್ಛಿಸದಿದ್ದರೂ ಕಾಮ, ಹಸಿವು, ತೃಷೆಗಳು ಪೀಡಿಸುತ್ತವೆ; ಮುಕ್ತಿಯಲ್ಲಿ ಇವು, ಸ್ವೇಚ್ಛೆಯಿಂದ ಮಾತ್ರ ಉಂಟಾಗುತ್ತವೆ; ಇಚ್ಛಿತ ಭೋಗ್ಯವಸ್ತುಗಳು ದೊರೆಯುವ ಸ್ವರ್ಗಸುಖದಿಂದ ಮುಕ್ತಿಯ ವೈಲಕ್ಷಣ್ಯ; ಮುಕ್ತಿಯಲ್ಲಿ ಅಸೂಯೆ, ಅತೃಪ್ತಿಗಳಿಲ್ಲ; ನಿದರ್ಶನಗಳು; ಮುಕ್ತರು ಸ್ವಾನಂದಪೂರ್ಣರು—ಸ್ವಧರ್ಮಗಳನ್ನು ಸ್ವಾಭಾವಿಕವಾಗಿಯೇ ಆಚರಿಸುತ್ತ ವಿಹರಿಸುತ್ತಾರೆ—ವಿಧಿನಿಷೇಧಗಳ ನಿರ್ಬಂಧವಿಲ್ಲ; ಮುಕ್ತರು ಅಮಲದೇಹಿಗಳು; ಭೋಗದಿಂದ ಸ್ವಾಭಾವಿಕ ಆನಂದದ ಉದ್ರೇಕ; ಈ ಜ್ಞಾನದ ಫಲ. ಪುಟ 1178–1188

ಅಧ್ಯಾಯ ೫೨—ತಾಪತ್ರಯ ಪರಿಹಾರ ಮತ್ತು ಭಗವದಾರಾಧನಾ ಮಹಿಮೆ. ಶ್ಲೋಕಸಂಖ್ಯಾ ೬೫

ಭಾಗುರಿಋಷಿಯ ಪ್ರಶ್ನೆ–ತಾಪತ್ರಯಗ್ರಸ್ತಜೀವರು, ವಿಷ್ಣುವೇ ಉತ್ತಮ ಹಿತಕಾರಿ ಎಂದು ತಿಳಿಯುವುದು ಹೇಗೆ? ವೇದಾದ್ಯಾಗಮಗಳು ಶ್ರೀವಿಷ್ಣುಪ್ರಸಾದ ಮಾತ್ರದಿಂದ ಮೋಕ್ಷವು ಲಭ್ಯವೆಂದು ಹೇಳುತ್ತವೆ; ಪ್ರಸಾದವು ಉಪಾಸನಾ ಸಾಧ್ಯವೆಂದೂ ಹೇಳುತ್ತವೆ; ಶ್ರೀವಿಷ್ಣೂಪಾಸನೆಯ ಪ್ರಕಾರವನ್ನು ವಿವರಿಸಿರಿ, ಸೂತರು ಹೇಳುತ್ತಾರೆ—ಸರ್ವೇಂದ್ರಿಯಗಳ ಮಧ್ಯೆ ಶ್ರವಣೇಂದ್ರಿಯವು ಉಪಾಸನೆಗೆ ಬಹು ಸಹಾಯಕವು–ವಿಷ್ಣುವೈಷ್ಣವಶ್ರವಣವು ಅದರಿಂದಲೇ ಸಾಧ್ಯ; ಶ್ರೋತ್ರದ ಪರಮಸಖನು ವಾಗಿಂದ್ರಿಯವು–ಪರಸ್ಪರ ಉಪಕಾರಿಗಳು; ಅನ್ಯೇಂದ್ರಿಯಗಳು ಉಪಾಸನೆಯ ಉಪಾಂಗಗಳು; ಎಲ್ಲವೂ ಮನಸ್ಸಿನ ಸಹಾಯದಿಂದ

ಕೆಲಸಮಾಡುತ್ತವೆ; ಬಾಹ್ಯ ಮತ್ತು ಆಂತರವೆಂಬುದಾಗಿ ಭಗವದಾರಾಧನೆಯು ದ್ವಿವಿಧ; ವಿವೇಕದಿಂದ ವರ್ತಿಸುವುದು ಅಂತರ ಆರಾಧನೆಯು—ವಿವೇಕವು ಮನಸ್ಸಿನ ವ್ಯಾಪಾರ; ಮಾತಾಪಿತೃಗಳು, ಗುರುಗಳನ್ನು ಹುಂಕರಿಸಿ ಮಾತನಾಡುವುದು ಮಹಾಪಾಪಕರ–ತತ್ಕಾಲದಲ್ಲಿ ಭ್ರಷ್ಟನಾಗುತ್ತಾನೆ; ಈ ವಿಧ ಗೌರವಕ್ಕೆ ಪಾತ್ರರಾಗಲು ಅವರಲ್ಲಿರುವ ಪ್ರಾಣನೇ ಕಾರಣನು; ಪ್ರಾಣಶಬ್ದವಾಚ್ಯನು ಶ್ರೀಹರಿಯೇ; ಮುಖ್ಯಪ್ರಾಣನೂ ಪ್ರಾಣಶಬ್ದವಾಚ್ಯನು–ಈತನು ಶ್ರೀಹರೀಚ್ಛೆಯನ್ನು ತಿಳಿದು, ತತ್ವಾಭಿಮಾನಿಗಳೊಂದಿಗೆ, ಜೀವನಿಂದ ವಿವಿಧ ಸಾಧನೆಗಳನ್ನು ಮಾಡಿಸುತ್ತಿದ್ದು ಕಾಲಪ್ರಾಪ್ತವಾಗಲು, ದೇಹದಿಂದ ಹೊರಡುತ್ತಾನೆ; ಅದೇ ಮರಣವು—ಅವರೆಗೆ, ಜೀವನು ಶ್ರೀಹರಿ ವಾಯುಗಳ ಅಧೀನನಾಗಿ, ಪೂರ್ವಕರ್ಮ ಫಲಗಳನ್ನು ಭೋಗಿಸುತ್ತ ನೂತನಕರ್ಮಗಳನ್ನು ಆಚರಿಸುತ್ತಿರುವನು; ಸುಖಕ್ಕಾಗಿ ಯತ್ನಿಸಲು ಕ್ವಚಿತ್ ಸುಖವು ಲಭಿಸುತ್ತದೆ–ಮತ್ತೆ ಕೆಲವು ವೇಳೆ ಸುಖವು ದೊರೆಯುವುದಿಲ್ಲ–ಇಷ್ಟು ಮಾತ್ರವಲ್ಲ ಸುಖಕ್ಕಾಗಿ ಮಾಡಿದ ಯತ್ನದಿಂದ ದುಃಖವೇ ಲಭಿಸುತ್ತದೆ; ತನ್ನ ಯತ್ನವೇ ದೋಷಯುಕ್ತವೆಂದು ತಿಳಿದು ಮೂಢ ಮನುಷ್ಯನು ಸುಖಕ್ಕಾಗಿ ಪುನಃ ಪುನಃ ಯತ್ನಿಸುತ್ತಾನೆ; ಶ್ರೀಹರೀಚ್ಛೆಯಿಂದ ಸುಖದುಃಖಗಳ ಪ್ರಾಪ್ತಿಯೆಂದು ತಿಳಿಯುವುದಿಲ್ಲ; ಜೀವನು ಸತ್ಯಸಂಕಲ್ಪನಲ್ಲ—ಶ್ರೀಹರಿ ಮಾತ್ರ ಸತ್ಯಸಂಕಲ್ಪನು—ಅನಾದ್ಯನಂತ ಕಾಲಕ್ಕೂ ಜೀವರ ಸ್ವತಂತ್ರ ಪ್ರಭುವು; ಆತನು ಜೀವರ ನಿತ್ಯಸಖನು–ಆತನ ಭಕ್ತಿಯನ್ನುವೃದ್ಧಿಗೊಳಿಸಿಕೊಳ್ಳುವುದು ಪ್ರಧಾನಕರ್ತವ್ಯ; ಶ್ರೀಹರಿಯು ನಿತ್ಯದೋಷದೂರನು–ಚತುರ್ವಿಧ ನಾಶವಿಲ್ಲದವನು; ತಂದೆ ಮೊದಲಾದವರಲ್ಲಿದ್ದು ಸೃಷ್ಟಿಸಿ, ತಾಯಿ ಮುಂತಾದವರಲ್ಲಿದ್ದು ರಕ್ಷಿಸಿ, ವಿರೋಧಿಗಳಲ್ಲಿದ್ದು ಸಂಹರಿಸುವವನು; ಗುರುಗಳಲ್ಲಿದ್ದು ಜ್ಞಾನೋಪದೇಶಕನೂ, ರಾಜಾದಿ ಅಧಿಕಾರಿಗಳಲ್ಲಿದ್ದು ನಿಯಾಮಕನೂ, ಸರ್ವಾಂತಃಪ್ರೇರಕನೂ, ಭವಪಾಶದಿಂದ ಬಂಧಕನೂ, ಮೋಚಕನೂ ಆಗಿರುವನು; ಆ ಶ್ರೀ ಸ್ವಾತಂತ್ರ್ಯಾದಿ ಗುಣಪೂರ್ಣನಾದ ಸರ್ವೋತ್ತಮನೆಂದು ಶ್ರುತ್ಯಾದಿಗಳು ಸಾರುತ್ತವೆ; ಶ್ರೀಹರಿಯು ಪ್ರೀತನಾದರೆ, ನಮಗೆ ಸರ್ವರೂ ಪ್ರಿಯರು; ಅಪ್ರೀತನಾದರೆ ಭಾರ್ಯಾದಿ ಸರ್ವರೂ ಅಪ್ರಿಯರೇ—ಕ್ರೋಧಯುಕ್ತರಾಗಿ ವರ್ತಿಸುವರು; ದುಃಖ, ಅಪಜಯಾದಿ ಹಾನಿಗಳುಂಟಾದಾಗ ಇರಬೇಕಾದ ಅನುಸಂಧಾನ; ಹರಿಸ್ಮೃತಿಯು ಸರ್ವವಿಪತ್ಪರಿಹಾರಕವು; ಶ್ರುತಿಸ್ಮೃತ್ಯಾದಿಗಳ ಶ್ರೀಹರಿಯಾಜ್ಞೆಯನ್ನು ಅತಿಕ್ರಮಿಸುತ್ತ ಪಾಹಿ ಪಾಹಿ ಎಂದು ಕೂಗಿದರೆ ರಕ್ಷಣೆಯಾಗುವುದಿಲ್ಲ; ಭಗವದಾರಾಧನೆಯು ಬಾಹ್ಯ, ಆಂತರವೆಂದು ದ್ವಿವಿಧ; ಪೂರ್ವೋಕ್ತ ಸದನುಸಂಧಾನಗಳನ್ನು ರೂಢಿಸಿಕೊಳ್ಳುವುದು ಆಂತರ ಆರಾಧನೆಯು; ಬಾಹ್ಯಾರಾಧನೆಯೂ ದ್ವಿವಿಧ–ದೇಹದಿಂದ ಮತ್ತು ಧನದಿಂದ; ನಿತ್ಯನೈಮಿತ್ತಿಕ ವಿಹಿತ ಕರ್ಮಾನುಷ್ಠಾನವು ದೈಹಿಕಪ್ರಧಾನ ಆರಾಧನೆಯು; ನಾಮಮುದ್ರಾಧಾರಣ, ಮಂತ್ರಜಪ, ಮೂರ್ತಿಗಳಲ್ಲಿ ವಿಷ್ಣುಪೂಜೆ, ವಿಷ್ಣುಮಹಿಮಾಶ್ರವಣ, ಕೀರ್ತನ, ಪ್ರದಕ್ಷಿಣ ನಮಸ್ಕಾರ, ಸರ್ವೇಂದ್ರಿಯಗಳನ್ನು ಶ್ರೀಹರಿಯ ಸೇವೆಗೆ ವಿನಿಯೋಗಿಸುವುದು, ಇವೂ ದೈಹಿಕ ಆರಾಧನೆಗಳೇ; ಧನದಿಂದ ಆರಾಧನೆ; ಹೋಮ, ದಾನವೆಂದು ದ್ವಿವಿಧ; ಅಗ್ನಿಯು ದೇವಮುಖನು; ತನ್ನಲ್ಲಿ ಅರ್ಪಿತವಾದ ಹವಿಸ್ಸುಗಳನ್ನು ರೂಪಾಂತರಗೊಳಿಸಿ, ದೇವಯೋಗ್ಯ

ಅಮೃತರೂಪದಿಂದ ದೇವತೆಗಳಿಗೆ ಮುಟ್ಟಿಸುತ್ತಾನೆ; ಶ್ರೀವಿಷ್ಣುವಿನ ಮುಖನೂ ಆತನೇ– ಅಗ್ನಿಮುಖದಿಂದ ಶ್ರೀವಿಷ್ಣುವೂ ತನ್ನ ಭಾಗವನ್ನು ಸ್ವೀಕರಿಸುತ್ತಾನೆ; ದಾನವು ದೇಶಕಾಲ ಪಾತ್ರಾನುಗುಣಾನುಸಾರ ಫಲಪ್ರದವಾಗುವುದು; ಸರ್ವರಿಗೂ ದೇಹಧಾರಣೆಗೆ ಅವಶ್ಯವಾದ ಆಹಾರವನ್ನು ಶ್ರೀಹರಿಯೇ ಕೊಡುತ್ತಾನೆ; ಒಂದು ತುತ್ತು ಅಗ್ನಿಯಲ್ಲಿಯೂ, ಒಂದು ತುತ್ತು ಬ್ರಾಹ್ಮಣಮುಖದಲ್ಲಿಯೂ ಅನ್ನದಾತನ ಪ್ರೀತ್ಯರ್ಥವಾಗಿ ಅರ್ಪಿಸಬೇಕು; ಮುಮುಕ್ಷುಗಳು ದಾನಶೀಲರಾಗುವುದರಿಂದ ಜಗದ್ರಕ್ಷಣೆಯೂ ಸಾಧಿಸುತ್ತದೆ; ಬ್ರಾಹ್ಮಣದೇಹದ ಅಧೋ ಭಾಗದಲ್ಲಿ ಪಿತೃಗಳೂ, ನಾಭಿಯಿಂದ ಮೇಲೆ ಸಕಲದೇವತೆಗಳೂ ಇರುವರು–ಸರ್ವದೇಹವನ್ನು ವ್ಯಾಪಿಸಿ ಶ್ರೀ ವಾಸುದೇವನೇ ಇರುತ್ತಾನೆ; ಬ್ರಾಹ್ಮಣನು ತೃಪ್ತನಾದರೆ ಈ ಸರ್ವರೂ ತುಷ್ಟರಾಗುತ್ತಾರೆ; ದಾನಾದಿಗಳಂತೆ, ಯಮನಿಯಮಾದಿಗಳನ್ನೂ ಭಕ್ತಿಪೂರ್ವಕ ಆಚರಿಸು ವುದು ಅವಶ್ಯಕ; ಪುರುಷೋತ್ತಮನ ಈ ಆರಾಧನೆಯ ವಿನಹ ಮುಕ್ತಿಗೆ ಅನ್ಯಸಾಧನೆಯಿಲ್ಲ.

ಪುಟ 1188–1212

ಅಧ್ಯಾಯ ೫೩—ವಿಷ್ಣುಮಹಿಮೆ ಮತ್ತು ಸಾಧುಸಂಗದ ವರ್ಣನೆ. ಶ್ಲೋ. ಸಂ. ೭೨

ಮಾನವಜನ್ಮದ ಶ್ರೇಷ್ಠತೆ; ಆಹಾರ, ನಿದ್ರೆ, ಭಯ, ಮೈಥುನಗಳು ಸಕಲಪ್ರಾಣಿ ಮಾತ್ರ ಸಮಾನವಾದರೂ, ಮಾನವನು ವಿವೇಕದಿಂದ ಉತ್ತಮನು; ಮಾನವನ ವಿವೇಕರಹಿತ ಪ್ರವೃತ್ತಿಯು ಆಶ್ಚರ್ಯಕರ; ಸ್ವಸ್ತ್ರೀಯನ್ನು ಕಾಮುಕ ದೃಷ್ಟಿಯಿಂದ ನೋಡಲು, ಅವರನ್ನು ಕೊಲ್ಲುವವರೆಗೆ ದುಡುಕುತ್ತಾನೆ—ಆದರೆ ತಾನು ಪರಸ್ತ್ರೀಭೋಗವನ್ನಿಚ್ಛಿಸುತ್ತಾನೆ; ತನಗೆ ತಾಪವಿತ್ತವರನ್ನು ಅತಿಯಾಗಿ ದಂಡಿಸುತ್ತಾನೆ–ನಿರಪರಾಧಿಗಳಾಗಿ ತೃಣಾದಿಗಳಿಂದ ಜೀವಿಸುವ ಪಶುಪಕ್ಷಿಗಳನ್ನು ಕೊಂದು ತಿನ್ನುತ್ತಾನೆ; ಕಾಮೋಪಭೋಗಕ್ಕಾಗಿ ಮುನ್ನುಗ್ಗುತ್ತಾನೆ—ತನ್ನ ವಿವೇಕವನ್ನೇ ನಾಶಮಾಡುವ ಮದ್ಯಪಾನವನ್ನು ಮಾಡುತ್ತಾನೆ; ಮೈಮೇಲೆ ವಸ್ತ್ರಜ್ಞಾನವಿಲ್ಲದೇ ಬೀಳುವ ಈತನು ಸ್ತ್ರೀಭೋಗದಿಂದೇನು ಸುಖವನ್ನು ಪಡೆಯುತ್ತಾನೆ? ತಾಡನಮಾಡಿದರೂ ವಿವೇಕಹುಟ್ಟದ ಸ್ಥಿತಿಯನ್ನು ಹೊಂದಿಸುವ ವಿಷಯಾಸಕ್ತಿಯು ಎಷ್ಟು ಪ್ರಬಲವು! ವಿಷಯಾಸಕ್ತನು ಸಂಪತ್ತಿನ ಮದದಿಂದ, ಹಿರಿಯರನ್ನೂ, ಬ್ರಾಹ್ಮಣರನ್ನೂ ಅವಮಾನಿಸುತ್ತಾನೆ—ಆದರಿಂದ ಐಶ್ವರ್ಯಭ್ರಷ್ಟನಾಗುತ್ತಾನೆ—ಶ್ರೀಮದಾಂಧರಿಗೆ ದಾರಿದ್ರ್ಯವೇ ಅಂಜನವು; ಕಷ್ಟೆರೆದು ಸತ್ಸಂಗವನ್ನು ಹೊಂದುತ್ತಾನೆ; ತೀರ್ಥಯಾತ್ರೆ, ಯಜ್ಞ ದಾನ, ತಪಸ್ಸುಗಳ ಫಲರೂಪವಾಗಿ ಸತ್ಸಂಗಲಾಭ; ತೀರ್ಥದ ಅರ್ಥನಿರ್ವಚನ; ಗಂಗಾದಿ ತೀರ್ಥಗಳು, ಅಂತಃಕರಣಶುದ್ಧಿ ಯನ್ನಿತ್ತು ಪುಣ್ಯವನ್ನುತ್ಪಾದಿಸಿ, ಸತ್ಸಂಗವನ್ನು ದೊರಕಿಸುತ್ತವೆ; ಸಜ್ಜನಸಂಗದ ಮಹಿಮೆ— ನಾರದರ ಪೂರ್ವಜನ್ಮ, ಸನ್ಯಾಸಿಗಳ ಸೇವೆ, ಕಥಾಶ್ರವಣ ಇತ್ಯಾದಿ; ಸಾಧುಸಂಗವು ಮುಕ್ತಿಸಾಧನ; ಜೀವನಸ್ವರೂಪವು ಮುಕ್ತಿಯೋಗ್ಯವಾಗಿರಬೇಕು; ನಿದರ್ಶನಗಳು—ಅಹಲ್ಯಾ, ತಾಟಕಾ, ಶೂರ್ಪಣಖಿ, ಪರೀಕ್ಷಿತ, ಪ್ರಹ್ಲಾದಾದಿಗಳು; ದೇವತೆಗಳು ತಮ್ಮ ಪದಗಳನ್ನು ಸಾಧುಸಂಗದಿಂದ ಹೊಂದಿರುವರು; ಸಾಧುಸಂಗದಿಂದ ನಿರಂತರ ಶ್ರೀಹರಿಮಹಿಮೆಗಳ ಶ್ರವಣ–ಜ್ಞಾನ, ಶ್ರವಣದಿಂದ ಮನನ, ಧ್ಯಾನವೂ, ಅಪರೋಕ್ಷವೂ ಲಭಿಸುತ್ತವೆ–ಆದರಿಂದ ಮುಕ್ತಿಯು ಸಿದ್ಧವೇ; ಶ್ರವಣ ಮಾಡದವನ ನಿಂದೆ–ಅನರ್ಥಗಳು; ಶ್ರೀಹರಿಯ

ನಾಮರೂಪಗಳ ಅರ್ಚನೆ–ಫಲ–ನಿದರ್ಶನಗಳು; ಅಧಿಕಾರಿ ಜೀವರ ಬಹು ಪಾಪಪರಿಹಾರಕ್ಕೆ ಸುಲಭಮಾರ್ಗ ಇತ್ಯಾದಿ ಮಹಿಮೆ; ಬ್ರಹ್ಮನೇ ಮುಖ್ಯನಿದರ್ಶನನು—ಶ್ರವಣಾಕೀರ್ತನೆಗಳ ಫಲಭಾಗಿಗಳಲ್ಲಿ ಶ್ರವಣವು ಸತ್ಸಂಗಲಭ್ಯ–ಅಲ್ಲಿ ಗಂಗಾದಿ ತೀರ್ಥಗಳ ಸನ್ನಿಧಾನ—ಶ್ರವಣವು ಅಮೃತಪಾನದಂತೆ ಆನಂದಪ್ರದವು; ಶ್ರೀಹರಿಯ ಸರ್ವೋತ್ತಮತ್ವಜ್ಞಾನ–ತನ್ನ ಅಲ್ಪತೆ ಯನ್ನರಿತವನೇ ಮಹಾತ್ಮನು—ತಿಳಿಯದವನೇ ಮೂಢನು; ಮಾನವಜನ್ಮವನ್ನು ಸಫಲಗೊಳಿಸ ದವನು 'ಆರೂಢಚ್ಯುತನು'; ಶಾಸ್ತ್ರಶ್ರವಣಫಲ–ನಿತ್ಯಾನಿತ್ಯವಿವೇಕ, ಹಿತಾಹಿತಗಳ ಜ್ಞಾನ; ವಿವೇಕಿಯ ಕರ್ತವ್ಯ–ಶ್ರೀವಿಷ್ಣುವಿನಲ್ಲಿ ಮನಸ್ಸನ್ನು ಸ್ಥಾಪಿಸಬೇಕು—ಇಹಪರಗಳ ಸುಖಾಸಕ್ತಿಯನ್ನು ತ್ಯಜಿಸಬೇಕು—ಧ್ಯಾನಸಿದ್ಧಿಗಾಗಿ ಯತ್ನಿಸಬೇಕು–ಅಶಕ್ತನಾದರೆ ವಿಷ್ಣು ಪ್ರೀತಿಕರ ಕರ್ಮಗಳಲ್ಲಿಯೇ ತೊಡಗಬೇಕು—ಅದರಿಂದ ಕ್ರಮೇಣ ಧ್ಯಾನಸಿದ್ಧಿಯೂ ಹರಿದರ್ಶನವೂ, ಶೀಘ್ರವಾಗಿ ಮೋಕ್ಷವೂ ಲಭಿಸುತ್ತವೆ; ಹೀಗೆಂಬ ನಿರ್ಣಯಗಳನ್ನು ಬ್ರಹ್ಮದೇವನು ನಾರದನಿಗೆ ಉಪದೇಶಿಸಿರುದರ ಸಾರವನ್ನು ಸೂತರು ಶ್ರೀವ್ಯಾಸರ ಮುಖದಿಂದ ಶ್ರವಣಮಾಡಿ, ಋಷಿಗಳಿಗೆ ಉಪದೇಶಿಸಿರುವರು. ಪುಟ 1212–1242

ಅಧ್ಯಾಯ ೫೪—ಅದೃಷ್ಟ ಯತ್ನಗಳ ಸ್ಥಾನ. ಶ್ಲೋಕಸಂಖ್ಯಾ ೮೨

ಸುಮಂತುಗಳ ಪ್ರಶ್ನೆ; ಪೂರ್ವಕರ್ಮಾನುಸಾರ ಶ್ರೀಹರಿಯೇ ಫಲಪ್ರದನಾದರೆ ಯತ್ನದ ಅವಶ್ಯಕತೆಯೇನು? ಉತ್ತರ;—ಯತ್ನವೂ ಪೂರ್ವಕರ್ಮಾನುಸಾರವೇ (ಅದೃಷ್ಟದಿಂದಲೇ); ಯತ್ನದಿಂದ ಕರ್ಮ-ಅದೃಷ್ಟವೇ ಪ್ರಧಾನಕಾರಣ, ಫಲಪ್ರಾಪ್ತಿಗೆ; ರಾಜಪುತ್ರನಾಗಿ ಹುಟ್ಟುವುದು; ನಿಧಿಲಾಭಗಳು ಅದೃಷ್ಟಮಾತ್ರ ಪ್ರಾಪ್ತಗಳು; ಫಲಭೋಗವೂ ಯತ್ನಸಾಧ್ಯ; ಯತ್ನವೇ ಪ್ರಧಾನಕಾರಣವಾದ ಭೋಗಗಳು–ಸ್ತ್ರೀಭೋಗ, ಭಕ್ಷಣಾದಿ; ಯತ್ನದ ಸ್ಥಾನ–ಸುಭದ್ರನ ಚರಿತ್ರೆ; ಹಸ್ತಪಾದಾದಿ ಕರಣಗಳಿಲ್ಲದ ಕೀಟದ ಆಹಾರ ಮುಖದ ಬಳಿ ಒದಗಿದ್ದನ್ನು ಕಂಡು ಸುಭದ್ರನು ಯತ್ನವನ್ನು ತ್ಯಜಿಸಿ ಕೂತುದು–೩ ದಿನ ಉಪವಾಸ; ೪ನೇ ದಿನ ವೃದ್ಧಬ್ರಾಹ್ಮಣರೂಪದಿಂದ ಶ್ರೀಹರಿಯು ಪ್ರಾಪ್ತನಾಗಿ ಉಪದೇಶ; ವಿವಿಧ ಸಾಧನಸಾಮಗ್ರಿಗಳನ್ನು ದೇಹದಲ್ಲಿಟ್ಟು ಸೃಷ್ಟಮಾಡಿದ ಶ್ರೀಹರಿಯು, ಅವುಗಳಿಂದ ಸಾಧ್ಯವಾಗುವ ಯತ್ನವನ್ನು ಮಾಡಿಸಿಯೇ ಜೀವಿಕೆಯನ್ನು ಕೊಡುತ್ತಾನೆ; ಪೂರ್ವಕರ್ಮಾನುಸಾರ ಆಯುಃಪರ್ಯಂತ ರಕ್ಷಿಸುವ ನಿಯಮ; ಜಲೂಕವಾದರೂ, ಮುಖದ ಬಳಿ ಬಂದ ಆಹಾರವನ್ನು ನುಂಗುವಷ್ಟು ಯತ್ನವನ್ನಾದರೂ ಮಾಡಲೇಬೇಕಾಗುತ್ತದೆ; ವಿದ್ಯಾವಂತನಾದ ಸುಭದ್ರನು ಜ್ಞಾನಕರ್ಮೇಂದ್ರಿಯಗಳುಳ್ಳವನು—ಅವನಿಗೆ ಜಲೂಕದಂತೆ ಆಹಾರವನ್ನು ತಂದೀಯುವುದಿಲ್ಲ; ಅದೃಷ್ಟವು ಫಲಪ್ರಾಪ್ತಿಯಲ್ಲಿ ಪ್ರಧಾನಕಾರಣವಾದರೂ ತನ್ನ ಅಧೀನವಾದ ಪುರುಷಯತ್ನವನ್ನು ಅಪೇಕ್ಷಿಸುತ್ತದೆ; ಅದೃಷ್ಟ ರಾಜನಂತೆ—ಯತ್ನಗಳು ಭೃತ್ಯರಂತೆ; ಈ ಪ್ರಮೇಯ ನಿದರ್ಶನಕ್ಕಾಗಿ ಪೂರ್ವೇತಿಹಾಸ; ಜಯಂತೀನಗರ–ವಿಚಿತ್ರ ಪ್ರಚಂಡರೆಂಬ ಸಖರು; ವಿಚಿತ್ರನು ಅದೃಷ್ಟವಾದಿ–ಪ್ರಚಂಡನು ಯತ್ನವಾದಿ; ತಮ್ಮ ಈ ವಿವಾದದ ನಿರ್ಣಯಕ್ಕಾಗಿ ರಾಜನ ಬಳಿ ಹೋದುದು–ಅವರನ್ನು ರಾತ್ರಿ ಕತ್ತಲೆಯಾದ ಶಿವಾಲಯದಲ್ಲಿಟ್ಟದ್ದು–ಪ್ರಚಂಡನಿಗೆ ಅಲ್ಲಿ ಯತ್ನದಿಂದ ಶಿವನೆದುರಿದ್ದ ಆಹಾರವು ದೊರೆತುದು–ಅದನ್ನುಂಡು ವಿಚಿತ್ರನನ್ನು ಹೀಯಾಳಿಸಿ, ಅಲ್ಲಿದ್ದ ಕಲ್ಲುಗಳನ್ನು ಅವನ ಮೇಲೆ

ಎಸೆದುದು—ವಿಚಿತ್ರನು ಅವುಗಳನ್ನು ತನ್ನ ವಸ್ತ್ರದಲ್ಲಿ ಕಟ್ಟಿಟ್ಟುಕೊಂಡದ್ದು—ಬೆಳಿಗ್ಗೆ ರಾಜನು ಕರೆಸಿದಾಗ ಅವರಿಬ್ಬರೂ ತಮ್ಮ ಅನುಭವಗಳನ್ನು ಹೇಳಿದುದು—ವಿಚಿತ್ರನ ಕಲ್ಲುಗಳು ರತ್ನಗಳಾಗಿದ್ದುದನ್ನು ಕಂಡ ರಾಜನು ಅವರ ವಿವಾದವು ಶ್ರಮವಿಲ್ಲದೇ ಪರಿಹಾರವಾಯಿತೆಂದು ಹೇಳಿರುದು; ಯತ್ನಸಾಧ್ಯವಲ್ಲದ್ದು ಅದೃಷ್ಟದಿಂದ ದೊರೆಯುತ್ತದೆ; ಜನನ, ಮರಣ, ನಿಧಿಲಾಭ, ಆದರ ನಷ್ಟಗಳು ಕೇವಲ ಅದೃಷ್ಟಲಭ್ಯ—ಭಕ್ಷಣಾದಿಗಳು ಕೇವಲ ಯತ್ನಸಾಧ್ಯ; ಅದೃಷ್ಟವೇ ಫಲಪ್ರಾಪ್ತಿಯ ಬಲಿಷ್ಠಕಾರಣವಾದರೂ ಯತ್ನವಿಲ್ಲದೇ ಫಲವಿಲ್ಲ ಇತ್ಯಾದಿ ಸುಭದ್ರನಿಗೆ ಉಪದೇಶಿಸಿ ವೃದ್ಧಬ್ರಾಹ್ಮಣನು ಅದೃಶ್ಯನಾದುದು; ಸುಭದ್ರನು ಯಥೋಚಿತ ಯತ್ನದಿಂದ ಧನಧಾನ್ಯಗಳನ್ನು ಹೊಂದಿ ಸುಖಿಯಾದುದು; ಸತ್ಯಸಂಕಲ್ಪನಾದ ಶ್ರೀಹರಿಯು ಯತ್ನವಿಲ್ಲದೇ ಫಲಕೊಡಲು ಸಮರ್ಥನಾದರೂ, ಹಾಗೆ ಮಾಡುವುದಿಲ್ಲ ಶ್ರೀಹರಿಯ ಅಧೀನನಾಗಿ ಸ್ವಾತಂತ್ರ್ಯವನ್ನು ತನ್ನಲ್ಲಿ ಆರೋಪಿಸಿಕೊಳ್ಳಕೊಳ್ಳದೇ ಯತ್ನಮಾಡುತ್ತಿರಬೇಕು; ಜೀವನು ಪರಾಧೀನ ಕರ್ತನು; ಬ್ರಹ್ಮಸೂತ್ರಗಳು ಹೀಗೆಂದೇ ನಿರ್ಣಯಿಸಿರುತ್ತವೆ; ವಿಧಿನಿಷೇಧಗಳು ಶ್ರೀಹರಿಯ ಆಜ್ಞೆಗಳು—ಅವುಗಳ ಅತಿಕ್ರಮಣವು ಮಹಾಪರಾಧವು; ಪದೇ ಪದೇ ಅತಿಕ್ರಮಿಸುವುದರಿಂದ ಭಯರಹಿತನಾಗುವಂತೆ ನೋಡಿಕೊಳ್ಳದೇ, ನಿತ್ಯವೂ ಅವುಗಳ ಅನುಷ್ಠಾನ ಪರನಾಗಬೇಕು; ಪಾಹಿ ಎಂದು ಸರ್ವದಾ ಪ್ರಾರ್ಥಿಸುತ್ತಿರಬೇಕು; ಹರಿಸ್ಮರಣೆಯು ಮಹಾಫಲವುಳ್ಳದ್ದು—ಆದ್ದರಿಂದ ನಿರಂತರ ಸ್ಮರಣೆಯುಳ್ಳವನಾಗಬೇಕು. ಪುಟ 1243–1270

ಅಧ್ಯಾಯ ೫೫—ಅವಶಿಷ್ಟ ವಿಷ್ಣುಮಹಿಮೆಗಳ ವರ್ಣನೆ. ಶ್ಲೋಕಸಂಖ್ಯಾ ೫೨

ಮನುಷ್ಯಜನ್ಮ—ಪೂರ್ವಪುಣ್ಯ—ಶ್ರೀಹರಿಯ ಅನುಗ್ರಹ; ಗರ್ಭವಾಸದುಃಖ ಮತ್ತು ಅನುಭವಗಳು; ೫ನೇ ತಿಂಗಳಲ್ಲಿ ಜಾಗ್ರತನಾಗುತ್ತಾನೆ—ಪೂರ್ವಾನುಭವಗಳ ಸ್ಮರಣೆ–ಜನಿಸಿದ ನಂತರ, ದಾನಧರ್ಮಗಳಿಂದ ನಿನ್ನ ಪ್ರೀತಿಯನ್ನು ಸಂಪಾದಿಸಿ, ತಿರಿಗಿ ಈ ಗರ್ಭವಾಸಕ್ಕೆ ಬರದಂತೆ ಮಾಡಿಕೊಳ್ಳುವ ಪ್ರತಿಜ್ಞೆ; ಸೂತಿಕಾ ವಾಯುವು ಯೋನಿದ್ವಾರಾ ದೂಡಿ ಕಳುಹಿಸಲು, ಎಚ್ಚರತಪ್ಪಿ ಹೊರಗೆ ಬರುವುದು, ಶೈಶವ, ಬಾಲ್ಯಾವಸ್ಥೆಗಳು—ನಾನಾದುಃಖಾನುಭವ; ತಾರುಣ್ಯ—ವಿಷಯಭೋಗ, ಧನಾಕಾಂಕ್ಷೆ; ಮೋಕ್ಷವಾರ್ತೆಗೆ ಅವಕಾಶವಿಲ್ಲ; ಮರಣವು ಅನಿಶ್ಚಿತ—ಗರ್ಭದಲ್ಲಿ ಕೆಲವರು, ಶೈಶವಾದಿ ಅವಸ್ಥೆಗಳಲ್ಲಿ ಕೆಲವರು ಮೃತರಾಗುತ್ತಾರೆ; ದೀರ್ಘಾಯುಗಳಾದರೂ ವಾರ್ಧಕ್ಯದಲ್ಲಿನ ದುಃಖಗಳು; ಮತ್ತೆ ಮತ್ತೆ ವಿಷಯಭೋಗಚಿಂತೆ; ಮರಣಕಾಲದ ಅವಸ್ಥೆ; ಮರಣದ ನಂತರ ಪುನಃ ಗರ್ಭವಾಸ–ಹೀಗೆ ಬಹುಜನ್ಮಗಳಲ್ಲಿ ನಾನಾ ಯೋನಿಗಳಲ್ಲಿ ಸುತ್ತುವುದು ವಿಷಯಭೋಗಾಸಕ್ತಿಯ ಫಲ—ತನ್ನ ಅಸ್ವಾತಂತ್ರ್ಯವನ್ನು ತಿಳಿಯದಿರುವುದು; ಸಜ್ಜನಸಂಗ—ಬಹುಪುಣ್ಯಲಭ್ಯ, ಸಜ್ಜನಸಂಗದ ಫಲ—ಶ್ರವಣಾದಿ ಆನಂದ—ಯಥಾ ಯೋಗ್ಯವಾದ ಜ್ಞಾನ ಭಕ್ತಿ ವಿರಕ್ತಿಗಳ ಲಾಭ; ವಿಷ್ಣುರಹಸ್ಯದ ಮಹಿಮೆ—ಉಪಸಂಹಾರ—ಶೌನಕಾದಿಗಳ ಪ್ರಶಂಸೆ; ದೇವ, ಋಷಿ, ಪಿತೃ ಋಣಗಳೆಂಬ ಋಣತ್ರಯಗಳಿಂದ ಮುಕ್ತರಾಗಿ ಕೃತಾರ್ಥರಾದರೆವೆಂದು ಹೇಳಿ, ಸೂತರನ್ನು ಇಹಪರ ಸರ್ವಾಭೀಷ್ಟಗಳನ್ನು ಹೊಂದು, ಎಂದು ಆಶೀರ್ವದಿಸುವುದು; ಸಕೃತ್ ಶ್ರವಣದಿಂದ ಸಹ ಮೋಕ್ಷಕ್ಕೆ ಮಹಾಸಾಧನ—ಮಂಗಳ. ಪುಟ 1271–1298

ಶ್ರೀಃ

ಶ್ರೀ ಗುರುಭ್ಯೋ ನಮಃ ಹರಿಃ ಓಂ

# ಶ್ರೀ ವಿಷ್ಣುರಹಸ್ಯ

ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀ ಚ ಭಾರತೀ ।
ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಲದೇವತಾ ॥

## ಅಧ್ಯಾಯ ೧

ಶ್ರೀ ವೇದವ್ಯಾಸಾಯ ನಮಃ

ಓಂ

**ಯತೋ ಭೂತಾನಿ ಜಾಯಂತೇ ಯೇನ ಜೀವಂತಿ ತಾನ್ಯುತ ।**
**ಯೋ ಹಂತಿ ಮೋಕ್ಷದಸ್ತೇಷಾಂ ತಂ ವಿಷ್ಣುಂ ಪ್ರಣಮಾಮ್ಯಹಂ ॥ ೧ ॥**

ಅರ್ಥ:—ಯತಃ- ಯಾವಾತನಿಂದ, ಭೂತಾನಿ–ಪ್ರಾಣಿಗಳು, ಜಾಯಂತೇ–ಹುಟ್ಟು ತ್ತವೆಯೋ, ತಾನಿ–ಅವುಗಳು (ಹಾಗೆ ಹುಟ್ಟಿದವುಗಳು), ಯೇನ–ಯಾವಾತನಿಂದ, ಜೀವಂತಿ–ಬದುಕುತ್ತವೆಯೋ (ಚೇಷ್ಟಿಸುತ್ತವೆಯೋ), ಉತ–ಮತ್ತು ಯಃ–ಯಾವಾತನು, ಹಂತಿ–(ಅವುಗಳನ್ನು) ಸಂಹರಿಸುತ್ತಾನೆಯೋ, (ದೇಹವಿಯೋಗವನ್ನು ಹೊಂದಿಸು ತ್ತಾನೆಯೋ), ತೇಷಾಂ–ಆ ಜೀವರಿಗೆ (ಹಾಗೆ ಹುಟ್ಟಿ, ಬದುಕಿ, ಸಾಯುತ್ತಲಿರುವ ಜೀವ ರಿಗೆ), ಮೋಕ್ಷದಃ–ಮೋಕ್ಷವನ್ನು ಕೊಡುತ್ತಾನೆಯೋ (ಸ್ವಯೋಗ್ಯಗತಿಗಳನ್ನು ಹೊಂದಿಸು ವನೋ), ತಂ ವಿಷ್ಣುಂ–ಆ ವಿಷ್ಣುವನ್ನು, ಅಹಂ–ನಾನು, ಪ್ರಣಮಾಮಿ–ನಮಸ್ಕರಿಸುತ್ತೇನೆ (ಭಕ್ತಿಪೂರ್ವಕ ಶರಣುಹೊಂದುತ್ತೇನೆ).

---

ತಾತ್ಪರ್ಯ:—ಜೀವರು, (ಸಾಧನೆಗಾಗಿ ಸ್ಥೂಲದೇಹಗಳನ್ನು ಹೊಂದುವುದೆಂಬ) ಸೃಷ್ಟಿಯನ್ನೂ, (ಆ ದೇಹಗಳಲ್ಲಿದ್ದು ವಿವಿಧ ವ್ಯಾಪಾರಗಳಲ್ಲಿ ಪ್ರವೃತ್ತರಾಗುವುದೆಂಬ) ಸ್ಥಿತಿಯನ್ನೂ, (ಆ ದೇಹಗಳ ವಿಯೋಗ ರೂಪದ) ಲಯವನ್ನೂ ಯಾವಾತನಿಂದ ಹೊಂದುವರೋ[1] ಮತ್ತು ಯಾರಿಂದ (ತಂತಮ್ಮ ಆತ್ಯಂತಿಕ ಗತಿಗಳನ್ನು) ನಿತ್ಯಸ್ಥಿತಿರೂಪದ ಮೋಕ್ಷವನ್ನೂ ಪಡೆಯುವರೋ, ಆ ಮಹಾವಿಷ್ಣುವನ್ನು ನಮಸ್ಕರಿಸುತ್ತೇನೆ (೧).

---

1. 'ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ' ಇತ್ಯಾದಿ ತೈತ್ತಿರೀಯ ಶ್ರುತಿ ಪ್ರತಿಪಾದ್ಯ ಮಹಿಮೆಗಳಿಂದ, ವಿಷ್ಣುವನ್ನು ಸ್ತುತಿಸಲಾಗಿದೆ.

ನೈಮಿಷೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ ।
ದೀಕ್ಷಿತಾ ವೈಷ್ಣವೇ ಯಜ್ಞೇ ಸೂತಂ ಪಪ್ರಚ್ಛುರಾದರಾತ್ ॥ ೨ ॥

ಅನಿಮಿಷಕ್ಷೇತ್ರೇ–ದೇವಕ್ಷೇತ್ರವಾದ (ದೇವತಾಸನ್ನಿಧಾನದಿಂದ ಪವಿತ್ರವಾದ), ನೈಮಿಷೇ–ನೈಮಿಷಾರಣ್ಯದಲ್ಲಿ ವೈಷ್ಣವೇ–ಶ್ರೀವಿಷ್ಣುಪ್ರೀತಿಕರವಾದ, ಯಜ್ಞೇ–(ಜ್ಞಾನ) ಯಜ್ಞದಲ್ಲಿ ದೀಕ್ಷಿತಾಃ–ದೀಕ್ಷಿತರಾದ (ಪ್ರತಿಜ್ಞಾಪೂರ್ವಕ ಸ್ಥಿರಚಿತ್ತರಾದ), ಶೌನಕಾದಯಃ–ಶೌನಕರೇ ಮೊದಲಾದ, ಋಷಯಃ–ಋಷಿಗಳು, ಆದರಾತ್–ಆದರದಿಂದ (ಭಕ್ತಿಪೂರ್ವಕವಾದ ಉತ್ಸಾಹದಿಂದ), ಸೂತಂ—ಸೂತನನ್ನು (ಅವರಿಂದಲೇ ಪ್ರವಚನಕ್ಕಾಗಿ ಬ್ರಹ್ಮಾಸನದಲ್ಲಿ ಕೂಡಿಸಲ್ಪಟ್ಟ ಸೂತಾಚಾರ್ಯನನ್ನು), ಪಪ್ರಚ್ಛುಃ–ಕೇಳಿದರು (ಪ್ರಶ್ನಿಸಿದರು).

ಋಷಯ ಊಚುಃ—

ಸೂತ ಸೂತ ಮಹಾಭಾಗ ವದ ನೋ ವದತಾಂ ವರ ।
ದುಃಖಾಂಬುಧೌ ನಿಮಗ್ನಸ್ಯ ಕಥಂ ಸ್ಯಾಜ್ಜಗತೋ ಹಿತಂ ॥ ೩ ॥

---

ದೇವತೆಗಳ ಸಾನ್ನಿಧ್ಯದಿಂದ ಪರಮಪವಿತ್ರವಾದ ನೈಮಿಷಾರಣ್ಯವೆಂಬ ಪುಣ್ಯಕ್ಷೇತ್ರದಲ್ಲಿ[1] ಶೌನಕಾದಿ ಋಷಿಗಳು ಶ್ರೀವಿಷ್ಣುಪ್ರೀತಿಕರವಾದ ಜ್ಞಾನಸತ್ರದಲ್ಲಿ ದೀಕ್ಷಿತರಾಗಿದ್ದರು. ಪ್ರವಚನಾಚಾರ್ಯನಾದ ಸೂತನನ್ನು ಋಷಿಗಳು, (ಶೌನಕಮುಖೇನ) ಪ್ರಶ್ನಿಸುತ್ತಾರೆ (೨). ಹೇ ಸೂತ! ಮಹಾಭಾಗ್ಯವಂತ! ವಕ್ತೃಶ್ರೇಷ್ಠನಾದ ನೀನು, ದುಃಖಸಮುದ್ರದಲ್ಲಿ

---

1. ನೈಮಿಷಾರಣ್ಯವು ಅತ್ಯಂತ ಪವಿತ್ರವಾದ ಕ್ಷೇತ್ರವು; ಅಲ್ಲಿ ಭೂಮಿಯು ಸೃಷ್ಟವಾದಂದಿನಿಂದ, ಮಹಾಯಜ್ಞಾದಿ ಕಾರ್ಯಗಳು ಮಹಾತ್ಮರಿಂದ ನಡೆಸಲ್ಪಡುತ್ತ ಬಂದಿವೆ. ಬ್ರಹ್ಮಾಂಡಪುರಾಣದ ಪ್ರಕ್ರಿಯಾಪಾದದ ೧-೨ನೇ ಅಧ್ಯಾಯಗಳಲ್ಲಿ ಈ ಕ್ಷೇತ್ರದಲ್ಲಿ ನಡೆದ ಮಹಾಯಜ್ಞಾದಿ ಕಾರ್ಯಗಳ ವಿಸ್ತಾರವಾದ ವಿವರಣೆ ಇದೆ. ಅಲ್ಲಿ ವಾಯುದೇವರು, ನೈಮಿಷಾರಣ್ಯವಾಸಿಗಳಾದ ವಸಿಷ್ಠಾದಿ ಋಷಿಗಳಿಗೆ ಸಚ್ಛಾಸ್ತ್ರಗಳನ್ನು ಉಪದೇಶಿಸಿದ್ದಾರೆ. ಸೃಷ್ಟಿಯಲ್ಲಿ ತೊಡಗುವ ಮೊದಲು, ಬ್ರಹ್ಮದೇವನು ಸಹಸ್ರವರ್ಷಪರ್ಯಂತ ಪುಣ್ಯತಮವಾದ ಸತ್ರವನ್ನು ನಡೆಸಿದನು. ಪುರೂರವ ರಾಜನು ದೀರ್ಘಕಾಲ ಆಚರಿಸಿದ ಯಜ್ಞವಾದರೂ, ಇಲ್ಲಿಯೇ ನಡೆದುದು. ಹೀಗೆ ಧರ್ಮಾತ್ಮರಿಂದ ಧರ್ಮಕೆಲಸಗಳು ಆರಂಭವಾಗಿ, ಅಲ್ಲಿಯೇ ಧರ್ಮರಥದ ಚಕ್ರದ ನೇಮಿಯು ಸೀಳಿ, ರಥವು ನಿಂತುಹೋದಂತೆ, ಸಹಸ್ರಾರು ವರ್ಷಗಳವರೆಗೆ ಧರ್ಮಕಾರ್ಯಗಳು ನೆರವೇರುತ್ತ ಬಂದ ಕಾರಣ, 'ಭ್ರಮತೋ ಧರ್ಮಚಕ್ರಸ್ಯ ಯತ್ರ ನೇಮಿರಶೀರ್ಯತ । ಕರ್ಮಣಾ ತೇನ ವಿಖ್ಯಾತಂ ನೈಮಿಷಂ ಮುನಿಪೂಜಿತಂ ॥' (ಬ್ರಹ್ಮಾಂಡಪುರಾಣ). 'ನೈಮಿಷ'ವೆಂಬ ಅನ್ವರ್ಥನಾಮವುಳ್ಳದ್ದಾಗಿದೆ. ಈ ಪುಣ್ಯಕ್ಷೇತ್ರದಲ್ಲಿ ದಾನವಬಲವು ನಿಮಿಷಮಾತ್ರದಲ್ಲಿ (ಕ್ಷಣಮಾತ್ರದಲ್ಲಿ) ಸಂಹರಿಸಲ್ಪಟ್ಟು ಯಜ್ಞಾದಿ (ತಪಸ್ಸು ಮೊದಲಾದ) ಸತ್ಕರ್ಮಗಳನ್ನು ಸಾರೋದ್ಧಾರವಾಗಿ ನಡೆದಿವೆ. ಈ ಕಾರಣದಿಂದ ಸಹ ಇದು ನೈಮಿಷಾರಣ್ಯವೆನಿಸಿದೆ. 'ಯತಸ್ತು ನಿಮಿಷೇಣೇದಂ ನಿಹತಂ ದಾನವಂ ಬಲಂ । ಅರಣ್ಯೇಽಸ್ಮಿನ್ ತತಸ್ತೇನ ನೈಮಿಷಾರಣ್ಯ ಸಂಜ್ಞಿತಂ ॥' ಇತ್ಯಾದಿ ಪ್ರಮಾಣವಾಕ್ಯಗಳು ಈ ಅಂಶವನ್ನು ಸಾರುತ್ತವೆ.

ಸೂತಸೂತ–ಹೇ ! ಸೂತ, ಮಹಾಭಾಗ–ಮಹಾಭಾಗ್ಯಶಾಲಿಯೇ! (ಜ್ಞಾನನಿಧಿಯೇ!), ವದತಾಂ ವರ–ವಕ್ತೃಗಳಲ್ಲಿ ಶ್ರೇಷ್ಠನೇ (ಸ್ವಯಂ ತಿಳಿದಿದ್ದು ಅನ್ಯರು ತಿಳಿಯುವಂತೆ ಹೇಳಲು ಶಕ್ತನಾದ ಹೇ ! ಸೂತ), ದುಃಖಾಂಬುಧೌ–ದುಃಖವೆಂಬ ಸಮುದ್ರದಲ್ಲಿ ನಿಮಗ್ನಸ್ಯ–ಮುಳುಗಿರುವ, ಜಗತಃ–ಜಗತ್ತಿಗೆ (ಪ್ರಾಣಿಗಳಿಗೆ), ಹಿತಂ–ಹಿತವು (ಆತ್ಯಂತಿಕ ಶ್ರೇಯಸ್ಸು ಅಥವಾ ನಿತ್ಯಸುಖವು), ಕಥಂ ಸ್ಯಾತ್–ಹೇಗೆ ದೊರೆಯುತ್ತದೆ ? ನೋ ವದ–ನಮಗೆ ಹೇಳು.

ಯಸ್ಮಿನ್ ಶ್ರುತೇ ಶ್ರುತಂ ಸರ್ವಂ ಯಸ್ಮಿನ್ ಕೃತೇऽಖಿಲಂ ಕೃತಂ ।
ಯದಜ್ಞಾನೇನ ಕಿಂಚಿತ್ ಜ್ಞೋ ಯಸ್ಮಿನ್ ಜ್ಞಾತೇ ಚ ಸರ್ವವಿತ್ ॥ ೪ ॥

ಯಸ್ಮಿನ್ ಶ್ರುತೇ–ಯಾವುದನ್ನು ಶ್ರವಣಮಾಡಿದರಲ್ಲಿ, ಸರ್ವಂ ಶ್ರುತಂ–ಎಲ್ಲವನ್ನೂ (ಅವಶ್ಯ ಶ್ರವಣಮಾಡಬೇಕಾದುದೆಲ್ಲವನ್ನೂ) ಶ್ರವಣಮಾಡಿದಂತಾಗುತ್ತದೆಯೋ (ಪೂರ್ಣಶ್ರವಣಫಲವು ದೊರೆಯುವುದೋ–ಬೇರೇನನ್ನೂ ಕೇಳಬೇಕಾದುದು ಉಳಿಯುವುದಿಲ್ಲವೋ), ಯಸ್ಮಿನ್ ಕೃತೇ–ಯಾವುದನ್ನು ಮಾಡುತ್ತಿರಲು, ಅಖಿಲಂ ಕೃತಂ–(ಮಾಡಬೇಕಾದ) ಎಲ್ಲವನ್ನೂ ಮಾಡಿದಂತಾಗುತ್ತದೆಯೋ, ಯದಜ್ಞಾನೇನ–ಯಾವುದರ ಅಜ್ಞಾನದಿಂದ (ಯಾವುದನ್ನು ತಿಳಿಯದಿರುವುದರಿಂದ), ಕಿಂಚಿತ್ ಜ್ಞಃ–ಅಲ್ಪಜ್ಞನೆನಿಸುವನೋ, ಯಸ್ಮಿನ್ ಜ್ಞಾತೇ–ಯಾವುದನ್ನು ತಿಳಿಯುವುದರಿಂದ, ಸರ್ವವಿತ್–ಸರ್ವಜ್ಞನೆನಿಸುವನೋ; (ಮುಂದಿನ ಶ್ಲೋಕದಲ್ಲಿ ಅನ್ವಯ ಪೂರ್ತಿಯಾಗುತ್ತದೆ.)

ತಾದೃಶಂ ಬ್ರೂಹಿ ನಃ ಕಿಂಚಿತ್ ಕಿಂ ವೃಥಾ ವಚನಾತ್ ಫಲಂ ।
ಕ್ಷಣೇ ಕ್ಷಣೇ ಪ್ರಯಾತ್ಯೇತದಾಯುರ್ನೃಣಾಂ ಮಿತಂ ಚ ತತ್ ॥ ೫ ॥

---

ಮುಳುಗಿರುವ ಜೀವರಿಗೆ ಸಂಸಾರದಿಂದ ಬಿಡುಗಡೆಯಾಗಿ ನಿತ್ಯಾನಂದರೂಪದ ಪರಮಹಿತವು (ಶ್ರೇಯಸ್ಸು) ಹೇಗೆ ದೊರೆಯುತ್ತದೆಂಬುದನ್ನು ಹೇಳು (೩). ಯಾವುದರ ಶ್ರವಣದಿಂದ, ಕೇಳಬೇಕಾದ ಸರ್ವವನ್ನೂ ಕೇಳಿದಂತಾಗುವುದೋ, ಬೇರೇನೂ ಕೇಳಬೇಕಾದುದು ಉಳಿಯುವುದಿಲ್ಲವೋ; ಯಾವುದನ್ನು ಮಾಡಿದರೆ ಅವಶ್ಯ ಮಾಡಬೇಕಾದ ಎಲ್ಲವನ್ನೂ ಮಾಡಿದಂತಾಗುವುದೋ; ಏನನ್ನು ತಿಳಿಯದವನು ಅಲ್ಪಜ್ಞನೆನಿಸುವನೋ ಮತ್ತು ಯಾವುದನ್ನು ತಿಳಿದವನು ಸರ್ವಜ್ಞನೆನಿಸುವನೋ, ಆ ವಿಧದ ವಿಷಯವನ್ನು (ವಸ್ತುವನ್ನು-ಪ್ರಮೇಯವನ್ನು ನಮಗೆ ಹೇಳುವವನಾಗು (೪). ಅನ್ಯವ್ಯರ್ಥನುಡಿಗಳಿಂದ ಏನು ಪ್ರಯೋಜನ? ಮೊದಲೇ ನಾವು ಅಲ್ಪ ಆಯುಷ್ಯವುಳ್ಳವರು; ಅದು ಕ್ಷಣಕ್ಷಣಕ್ಕೂ ವ್ಯಯವಾಗುತ್ತದೆ (೫). ಆದ್ದರಿಂದ, ಯಾವುದರಿಂದ ಆಯುಷ್ಯವು ಸಫಲವಾಗುತ್ತದೆಯೋ, ಅದನ್ನೇ ಅನ್ಯರಿಂದ ಕೇಳಿ

ತಾದೃಶಂ ಕಿಂಚಿತ್–ಆ ವಿಧದ ಒಂದು ವಿಷಯವನ್ನು, ನಃ–ನಮಗೆ, ಬ್ರೂಹಿ–ಹೇಳುವವನಾಗು; ವೃಥಾವಚನಾತ್–ವ್ಯರ್ಥವಾದ ನುಡಿಗಳಿಂದ, ಕಿಂ ಫಲಂ–ಏನು ಫಲ? (ಯಾವ ಪ್ರಯೋಜನವೂ ಇಲ್ಲ); ನೃಣಾಂ–ಮನುಷ್ಯರ, ಏತತ್ ಆಯುಃ–ಈ ಆಯುಷ್ಯವು, ಕ್ಷಣೇ ಕ್ಷಣೇ–ಪ್ರತಿ ಕ್ಷಣದಲ್ಲಿಯೂ, ಪ್ರಯಾತಿ—ನಷ್ಟವಾಗುತ್ತಿರೆ; ಚ–ಮತ್ತು, ತತ್–ಅದು (ಆಯುಷ್ಯವು), ಮಿತಂ–ಅಲ್ಪವಾದುದು.

ತಸ್ಮಾತ್ತತ್ಸಾರ್ಥಕಂ ಯೇನ ತಾದೃಶಂ ಸುಧಿಯಾ ಸದಾ ।
ಶ್ರೋತವ್ಯಂ ಚಾಪಿ ವಕ್ತವ್ಯಂ ಕರ್ತವ್ಯಂ ಚ ತದೇವ ಹಿ ॥ ೬ ॥

ತಸ್ಮಾತ್–ಆದ್ದರಿಂದ, ಯೇನ–ಯಾವುದರಿಂದ, ತತ್–ಆಯುಷ್ಯದ ಕಾಲವು, ಸಾರ್ಥಕಂ–ಸಾರ್ಥಕವಾಗುವುದೋ (ಫಲವುಳ್ಳದ್ದಾಗುವುದೋ), ತಾದೃಶಂ–ಅದೇ (ಆ ಕಾರ್ಯವೇ), ಸುಧಿಯಾ–ವಿವೇಕಿಯಾದವನಿಂದ (ಸದ್ಬುದ್ಧಿಯುಳ್ಳವನಿಂದ), ಸದಾ–ಎಲ್ಲ ಕಾಲದಲ್ಲಿ ಶ್ರೋತವ್ಯಂ–ಶ್ರವಣ ಮಾಡಲ್ಪಡತಕ್ಕದ್ದು ಅಪಿ ಚ–ಮತ್ತೂ ಕೂಡ, ವಕ್ತವ್ಯಂ–(ಅನ್ಯರಿಗಾಗಿ) ಹೇಳಲ್ಪಡತಕ್ಕದ್ದು ಚ–ಮತ್ತು ತದೇವ–ಅದೇ (ಆ ಕಾರ್ಯವೇ), ಕರ್ತವ್ಯಂ ಹಿ–ಮಾಡಲ್ಪಡತಕ್ಕದ್ದೆಂದು ಶಾಸ್ತ್ರಸಿದ್ಧವಷ್ಟೆ

ವ್ಯಾಸಶಿಷ್ಯೋ ಮಹಾಭಾಗ ತತ್ಪ್ರಸಾದಾಚ್ಚ ಸರ್ವವಿತ್ ।
ಅತಃ ಪೃಚ್ಛಾಮಹೇ ಸರ್ವೇ ಶುಶ್ರೂಷಂತೋ ಜಗದ್ಧಿತಂ ॥ ೭ ॥

ಮಹಾಭಾಗ–ಹೇ ಪುಣ್ಯಶಾಲಿಯೇ ! ವ್ಯಾಸಶಿಷ್ಯಃ–ವೇದವ್ಯಾಸರ ಶಿಷ್ಯನಾಗಿರುವಿ; ತತ್ಪ್ರಸಾದಾತ್–ಅವರ ಅನುಗ್ರಹದಿಂದ, ಸರ್ವವಿತ್ ಚ–ಸರ್ವವನ್ನೂ ತಿಳಿದವನಾಗಿರುವಿ; ಅತಃ–ಆದ್ದರಿಂದ, ಶುಶ್ರೂಷಂತಃ–(ನಿಮ್ಮಿಂದ) ಕೇಳಲಿಚ್ಛಿಸುವ, ಸರ್ವೇ–ನಾವೆಲ್ಲರೂ, ಜಗದ್ಧಿತಂ–ಜಗತ್ತಿಗೆ (ಸಜ್ಜನಲೋಕಕ್ಕೆ) ಹಿತವಾಗುವ ಪ್ರಕಾರವನ್ನು ಕುರಿತು, ಪೃಚ್ಛಾಮಹೇ–(ನಿಮ್ಮನ್ನು) ಪ್ರಶ್ನೆ ಮಾಡುತ್ತೇವೆ.

---

ತಿಳಿಯಬೇಕು, ಅನ್ಯರಿಗೆ ಹೇಳಬೇಕು; ಅದನ್ನೇ ಅವಶ್ಯಕರ್ತವ್ಯವೆಂದು ತಿಳಿದು ಆಚರಿಸಬೇಕು (೬). ಹೇ ಸೂತಾಚಾರ್ಯ ! ನೀನು ವೇದವ್ಯಾಸರ ಪ್ರಸಾದದಿಂದ ಸರ್ವವನ್ನೂ ತಿಳಿದಿರುವಿ; ನಮ್ಮ ಎಲ್ಲ ಪ್ರಶ್ನೆಗಳನ್ನೂ ಉತ್ತರಿಸಲು ಶಕ್ತನಾಗಿರುವಿ; ಆದ್ದರಿಂದ ಮಹಾಭಾಗ್ಯವಂತನಾದ ನಿನ್ನನ್ನು ತಿಳಿಯಲಿಚ್ಛಿಸುವ ನಾವೆಲ್ಲರೂ ಲೋಕಹಿತವನ್ನು ಕುರಿತು (ಸಜ್ಜನರ ಶ್ರೇಯಸ್ಸಾಧಕವಾದ ವಿಷಯವನ್ನು ತಿಳಿಯಲು), ನಿಮ್ಮನ್ನು ಪ್ರಶ್ನಿಸುತ್ತೇವೆ (೭). ಎಲೈ ಋಷಿಗಳೇ! ನೀವೆಲ್ಲರೂ ವೇದಜ್ಞಾನಿಗಳು, ಸಕಲಶಾಸ್ತ್ರಾರ್ಥಗಳನ್ನು ತಿಳಿದವರು; ತಿಳಿದುದನ್ನೇ ಪುನಃ ಪುನಃ ಶ್ರವಣಮಾಡುವ ಇಚ್ಛೆಯಿಂದ ನನ್ನನ್ನು ಪ್ರಶ್ನೆ ಮಾಡುತ್ತೀರಲ್ಲದೇ ಬೇರೆಯಲ್ಲ; ಸೃಷ್ಟಿಯ ಆರಂಭಕ್ಕೆ

ಸೂತ ಉವಾಚ—

ಭವಂತೋ ವೇದವಿದ್ವಾಂಸಃ ಸರ್ವಶಾಸ್ತ್ರಾರ್ಥವೇದಿನಃ ।
ಯನ್ಮಾಂ ಪೃಚ್ಛಥ ತತ್ಪ್ರೀತ್ಯಾ ಕೇವಲಂ ಗುಣನಾಯ ವಾ ॥ ೮ ॥

ಅತೋ ಯಾವದಹಂ ವೇದ್ಮಿ ತಾವದ್ವಕ್ಷ್ಯಾಮಿ ನಾನ್ಯಥಾ ।
ಯತ್ಪುರಾ ವಿಷ್ಣುನಾ ಪ್ರೋಕ್ತಂ ಸೃಷ್ಟ್ಯಾದೌ ಬ್ರಹ್ಮಣೇ ಸ್ವಯಂ ॥ ೯ ॥

ಸೂತಾಚಾರ್ಯನು ಹೇಳುತ್ತಾನೆ—

ಭವಂತಃ–ನೀವುಗಳು, ವೇದವಿದ್ವಾಂಸಃ–ವೇದಜ್ಞಾನಿಗಳು, ಸರ್ವಶಾಸ್ತ್ರಾರ್ಥ ವೇದಿನಃ–ಸಕಲಶಾಸ್ತ್ರಾರ್ಥಗಳನ್ನೂ ತಿಳಿದವರು, ಪ್ರೀತ್ಯಾ–(ನನ್ನಲ್ಲಿರುವ) ವಿಶ್ವಾಸದಿಂದ (ಪ್ರೀತಿಯಿಂದ), ಮಾಂ–ನನ್ನನ್ನು, ಯತ್ ಪೃಚ್ಛಥ—ಏನನ್ನು ಕೇಳುತ್ತೀರೋ, ತತ್–ಅದು, ಕೇವಲಂ ಗುಣನಾಯ ವಾ–ಪುನಃ ಕೇಳಬೇಕೆಂಬ ಇಚ್ಛೆಯಿಂದ ಮಾತ್ರ (ಶ್ರವಣದಿಂದ ಆವೃತ್ತಿಯಾಗಲೆಂದು ಮಾತ್ರ–ನಿಮಗೆ ತಿಳಿದುದರ ಪುನಃಶ್ರವಣಕ್ಕಾಗಿ ಮಾತ್ರ); ಅತೋ–ಆದ್ದರಿಂದ, ಯತ್–ಯಾವುದು (ಯಾವುದು ಶ್ರೇಯಃಕಾರಣವೆಂದು), ಪುರಾ–ಈ ಮೊದಲು, ಸೃಷ್ಟ್ಯಾದೌ–ಸೃಷ್ಟಿಗೆ ಮೊದಲು, ಬ್ರಹ್ಮಣೇ–ಚತುರ್ಮುಖನಿಗೋಸ್ಕರ, ವಿಷ್ಣುನಾ–ಶ್ರೀ ಮಹಾವಿಷ್ಣುವಿನಿಂದ, ಸ್ವಯಂ–ಸಾಕ್ಷಾತ್ತಾಗಿ, ಪ್ರೋಕ್ತಂ–ಹೇಳಲ್ಪಟ್ಟಿತೋ (ಉಪದೇಶಿಸಲ್ಪಟ್ಟಿತೋ), (ಅದರಲ್ಲಿ) ಯಾವತ್–ಎಷ್ಟನ್ನು ಅಹಂ–ನಾನು, ವೇದ್ಮಿ–ತಿಳಿದಿರುವೆನೋ, ತಾವತ್–ಅಷ್ಟನ್ನು, ವಕ್ಷ್ಯಾಮಿ–ಹೇಳುತ್ತೇನೆ; ನಾನ್ಯಥಾ–ಬೇರೆಯಲ್ಲ (ಶ್ರೀವಿಷ್ಣುವಿನಿಂದ ಹೇಳಲ್ಪಡದದ್ದನ್ನು ಅಲ್ಲ).

ಬ್ರಹ್ಮಾ ಪ್ರಾಹ ವಸಿಷ್ಠಾಯ ವಸಿಷ್ಠಸ್ತು ಪರಾಶರಂ ।
ಸ ಕೃಷ್ಣಾಯ ಸುತಾಯಾಹ ಸ ವ್ಯಾಸಃ ಶುಕಮುಕ್ತವಾನ್ ॥ ೧೦ ॥

ನಿಷೇವಿತ ಪದದ್ವಂದ್ವಾಚ್ಛುಕಾದಹಮವಾಪ್ತವಾನ್ ।
ಇಮಂ ವಿಷ್ಣುರಹಸ್ಯಾಖ್ಯಮಿತಿಹಾಸಂ ಹರಿಪ್ರಿಯಂ ॥ ೧೧ ॥

---

ಮೊದಲು ಬ್ರಹ್ಮದೇವನಿಗೆ ಶ್ರೀವಿಷ್ಣುವೇ ಉಪದೇಶಮಾಡಿದ ವಿಷಯವನ್ನೇ ನಾನು ತಿಳಿದಮಟ್ಟಿಗೆ ಹೇಳುತ್ತೇನೆ—ಅದು ನಿಮ್ಮ ಪ್ರಶ್ನೆಗೆ ಸಾಧುವಾದ ಪರಿಹಾರ (ಉತ್ತರ)ವಾಗುತ್ತದೆ (೮-೯). ಸೃಷ್ಟ್ಯಾದಿಯಲ್ಲಿ ಶ್ರೀವಿಷ್ಣು ತನಗೆ ಉಪದೇಶ ಮಾಡಿರುದನ್ನು ಬ್ರಹ್ಮದೇವನು, ವಸಿಷ್ಠಮಹರ್ಷಿಗೆ ಉಪದೇಶಿಸಿದನು; ವಸಿಷ್ಠರು ಪರಾಶರಋಷಿಗಳಿಗೂ ಅವರು ತಮ್ಮ ಮಗನಾದ ಶ್ರೀ ವೇದವ್ಯಾಸರಿಗೂ, ಅವರು ತಮ್ಮ ಮಗನಾದ ಶುಕಾಚಾರ್ಯರಿಗೂ ಉಪದೇಶಿಸಿದರು. ಶ್ರೀ ಶುಕಾಚಾರ್ಯಚರಣಗಳನ್ನು ಸೇವಿಸಿ, ನಾನು (ಸೂತಾಚಾರ್ಯನಾದ ನಾನು), ವಿಷ್ಣುರಹಸ್ಯವೆಂಬ ಈ ಶ್ರೇಷ್ಠ ವಿದ್ಯೆ

ಶ್ರೀವಿಷ್ಣು ಮಾಡಿದ ಉಪದೇಶವು ತನಗೆ ಲಭಿಸಿದ ಪ್ರಕಾರವನ್ನು ಸೂತಾಚಾರ್ಯನು ವಿವರಿಸುತ್ತಾನೆ—

ಬ್ರಹ್ಮಾ-(ವಿಷ್ಣುವಿನಿಂದ ಉಪದಿಷ್ಟನಾದ) ಚತುರ್ಮುಖನು, ವಸಿಷ್ಠಾಯ-ವಸಿಷ್ಠ ಋಷಿಗಳಿಗೆ, ಪ್ರಾಹ-(ಉಪದೇಶದ ಸಾರವನ್ನು) ಹೇಳಿದನು; ವಸಿಷ್ಠಸ್ತು-ಆ ವಸಿಷ್ಠ ರಾದರೋ, ಪರಾಶರಂ-ಪರಾಶರರನ್ನು ಕುರಿತು (ತಮ್ಮ ಮೊಮ್ಮಗ-ಪೌತ್ರನಾದ ಪರಾಶರ ಋಷಿಗಳಿಗೆ) ಉಪದೇಶಿಸಿದರು; ಸಃ-ಆ ಪರಾಶರರು, ಸುತಾಯ-ತಮ್ಮ ಮಗನಾದ, ಕೃಷ್ಣಾಯ-ವೇದವ್ಯಾಸರಿಗೆ, (ವಾಸಿಷ್ಠಕೃಷ್ಣ-ವೇದವ್ಯಾಸ; ವಸಿಷ್ಠರ ವಂಶದಲ್ಲಿ ಅವತರಿಸಿದ್ದ ರಿಂದ, ನಾರಾಯಣನು, ವಾಸಿಷ್ಠಕೃಷ್ಣನೆಂದೂ ಪ್ರಸಿದ್ಧನಾಗಿರುವನು); ಸ ವ್ಯಾಸಃ-ಆ ವ್ಯಾಸರು, ಶುಕಂ-(ಸ್ವಪುತ್ರನಾದ) ಶುಕಾಚಾರ್ಯನನ್ನು ಕುರಿತು, ಉಕ್ತವಾನ್-ಹೇಳುವವ ರಾದರು; ಅಹಂ-ನಾನು, ನಿಷೇವಿತಪದ ದ್ವಂದ್ವಾತ್ ಶುಕಾತ್-ಸೇವಿತವಾದ ಪದ ದ್ವಂದ್ವಗಳುಳ್ಳ ಶುಕಾಚಾರ್ಯರಿಂದ, ಅವಾಪ್ತವಾನ್-(ಆ ವಿಷ್ಣೂಪದೇಶವನ್ನು) ಪಡೆ ದೆನು; ಇಮಂ-(ಹೀಗೆ ನನಗೆ ಪ್ರಾಪ್ತವಾದ) ಈ, ವಿಷ್ಣುರಹಸ್ಯಾಖ್ಯಂ-ವಿಷ್ಣುರಹಸ್ಯವೆಂದು ಕರೆಯಲ್ಪಡುವ, ಇತಿಹಾಸಂ—ಇತಿಹಾಸವು (ಪೂರ್ವೋಪದಿಷ್ಟಜ್ಞಾನದ ನಿರೂ ಪಣೆಯು), ಹರಿಪ್ರಿಯಂ-ಶ್ರೀಹರಿಗೆ ಅತಿಪ್ರಿಯವಾದುದು (ಇದನ್ನು ಶ್ರವಣ ಅಧ್ಯಯ ನಾದಿಗಳಿಂದ ಸೇವಿಸುವ ಅಧಿಕಾರಿಗಳಿಗೆ ಆತನು ಶೀಘ್ರವಾಗಿ ಪ್ರೀತನಾಗಿ ಅಭೀಷ್ಟಗಳನ್ನು ಸಲ್ಲಿಸುತ್ತಾನೆ).

**ಲಕ್ಷಸಂಖ್ಯಾಮುವಾಚಾಸ್ಮೈ ಬ್ರಹ್ಮಣೇ ಸಸುತಂ ನಿಜಂ ।**
**ಕಿಂಚಿತ್‌ಭಾಗಂ ಪ್ರಾಹ ಚಾನ್ಯಾನ್ ಕಶ್ಯಪಾದೀನ್ ಮುನೀಶ್ವರಾನ್ ॥ ೧೨ ॥**

**ತೈಶ್ಚ ಸ್ವಕೀಯಶಿಷ್ಯೇಭ್ಯಃ ಪ್ರಿಯೇಭ್ಯಃ ಸದುದೀರಿತಂ ।**
**ಯತ್ತು ಪ್ರಾಪ್ತಂ ವಸಿಷ್ಠೇನ ತಚ್ಛುಕೋ ಮಾಮವೋಚತ್ ॥ ೧೩ ॥**

**ಯಾನಿ ಚಾನ್ಯಾನಿ ಲೋಕೇಸ್ಮಿನ್ ಪ್ರಸಿದ್ಧಾನಿ ದ್ವಿಜೋತ್ತಮ ।**
**ರಹಸ್ಯಾನಿ ಮಹಾವಿಷ್ಣೋಃ ವೇದ ತಾನ್ಯಪಿ ನಾರದಾತ್ ॥ ೧೪ ॥**

---

ಯನ್ನು ಪಡೆದೆನು; ಇದು ಶ್ರೀಹರಿಗೆ ಅತಿಪ್ರಿಯಕರವು; ಭಕ್ತರಿಗೆ ಶ್ರೀಹರಿಪ್ರಸನ್ನತೆಯನ್ನು ಶೀಘ್ರವಾಗಿ ದೊರಕಿಸುತ್ತದೆ (೧೦-೧೧). ಶ್ರೀವಿಷ್ಣುವು ಬ್ರಹ್ಮದೇವನಿಗೆ ಒಂದು ಲಕ್ಷ ಗ್ರಂಥಾತ್ಮಕ (ಗ್ರಂಥ-೩೨ ಅಕ್ಷರಗಳ ಒಂದು ಶ್ಲೋಕ) ವಿದ್ಯೆಯನ್ನು ಉಪದೇಶಿಸಿದನು; ಬ್ರಹ್ಮದೇವನು, ಅದರಲ್ಲಿ ಕೆಲವು ಭಾಗವನ್ನು ನಾರದನಿಗೂ, ಮತ್ತೆ ಕೆಲವು ಭಾಗಗಳನ್ನು ಕಶ್ಯಪಾದಿ ಮುನೀಶ್ವರರಿಗೂ ಉಪದೇಶಿಸಿದನು; ಕಶ್ಯಪಾದಿ ಋಷಿಗಳು ತಮಗೆ ಬ್ರಹ್ಮದೇವನಿಂದ ಪ್ರಾಪ್ತವಾದುದನ್ನು ತಂತಮ್ಮ ಪ್ರಿಯಶಿಷ್ಯರಿಗೆ ಉಪದೇಶಿಸಿದರು; ವಸಿಷ್ಠರ ದ್ವಾರಾ ಶುಕರಿಗೂ ಅವರಿಂದ ನನಗೂ ಪ್ರಾಪ್ತವಾದುದನ್ನು ಮಾತ್ರ ನಾನು ಹೇಳುತ್ತೇನೆ; ಈ

ಶ್ರೀ ಶುಕರ ಮೂಲಕ ತನಗೆ ಪ್ರಾಪ್ತವಾದುದು ಶ್ರೀ ವಿಷ್ಣೂಪದೇಶದ ಒಂದು ಭಾಗ ಮಾತ್ರವೆನ್ನುತ್ತಾನೆ—ಸೂತನು.

ಅಸ್ಮೈ–ಬ್ರಹ್ಮದೇವನಿಗೆ, ಲಕ್ಷಸಂಖ್ಯಾಂ–ಒಂದು ಲಕ್ಷ ಸಂಖ್ಯೆಯನ್ನು (ಲಕ್ಷಸಂಖ್ಯಾತ್ಮಕ ಗ್ರಂಥವನ್ನು ಎಂದರೆ ೧,೦೦,೦೦೦ ಶ್ಲೋಕಗಳುಳ್ಳ ವಿಷ್ಣುರಹಸ್ಯ ಗ್ರಂಥವನ್ನು ಉವಾಚ–(ಶ್ರೀವಿಷ್ಣುವು) ಉಪದೇಶಿಸಿದನು; ಸಃ–ಆ ಬ್ರಹ್ಮನಾದರೋ, ನಿಜಂ ಸುತಂ–ತನ್ನ ಮಗನಾದ ನಾರದನಿಗೆ, ಕಿಂಚಿದ್ಭಾಗಂ–ಅದರಲ್ಲಿ ಒಂದು ಭಾಗವನ್ನು (ಕೆಲವು ಭಾಗ ಮಾತ್ರ), ಪ್ರಾಹ–ಹೇಳಿದನು; ಅನ್ಯಾನ್–ಮತ್ತೆ ಬೇರೆ ಕೆಲವು ಭಾಗಗಳನ್ನು ಕಶ್ಯಪಾದೀನ್ ಮುನೀಶ್ವರಾನ್–ಕಶ್ಯಪರೇ ಮೊದಲಾದ ಋಷಿಶ್ರೇಷ್ಠರಿಗೆ, (ಪ್ರಾಹ– ಹೇಳಿದನು), ತೈಶ್ಚ–ಆ ಕಶ್ಯಪಾದಿಗಳಿಂದ, ಪ್ರಿಯೇಭ್ಯಃ–(ತಮಗೆ) ಪ್ರೀತಿಪಾತ್ರರಾದ, ಸ್ವಕೀಯ ಶಿಷ್ಯೇಭ್ಯಃ–ತಂತಮ್ಮ ಶಿಷ್ಯರಿಗಾಗಿ, ಸದುದೀರಿತಾ–ಚನ್ನಾಗಿ (ಪ್ರಸನ್ನಚಿತ್ತರಾಗಿ) ಉಪದೇಶಿಸಲ್ಪಟ್ಟಿತು; ವಸಿಷ್ಠೇನ ಯತ್ ತು ಪ್ರಾಪ್ತಂ–ವಸಿಷ್ಠರಿಂದ ಯಾವುದು ಪ್ರಾಪ್ತವಾಗಿದ್ದಿತೋ, ತತ್–ಅದನ್ನು ಶುಕಃ–ಶುಕಾಚಾರ್ಯರು, ಮಾಂ–ನನ್ನನ್ನು ಕುರಿತು (ನನಗೆ), ಅವೋಚತ–ಹೇಳಿದರು. ಲೋಕೇ ಅಸ್ಮಿನ್–ಈ ಲೋಕದಲ್ಲಿ ಪ್ರಸಿದ್ಧಾನಿ— (ಪ್ರಚಾರಗೊಂಡು) ಪ್ರಸಿದ್ಧವಾಗಿರುವ, ಯಾನಿ–ಯಾವ, ಅನ್ಯಾನಿ ರಹಸ್ಯಾನಿ– ಅನ್ಯರಹಸ್ಯಗಳಿವೆಯೋ (ಶ್ರೀವಿಷ್ಣುವಿನ ಸ್ವರೂಪ ಮಹಿಮೆಗಳ ರಹಸ್ಯವನ್ನು ಪ್ರತಿಪಾದಿಸುವ ವಾಕ್ಯಸಮೂಹಗಳಿವೆಯೋ), ದ್ವಿಜೋತ್ತಮ–ಹೇ ಶೌನಕರೇ! ತಾನಿ–ಅವುಗಳು, ನಾರದಾತ್ ಅಪಿ–ನಾರದರಿಂದ ಸಹ ಪ್ರಾಪ್ತವಾದವೆಂದು, ವೇದ–ತಿಳಿಯುತ್ತೇನೆ.

ತತ್ರಾದೌ ಯಚ್ಛುಕಾದಾಪ್ತಂ ಶ್ರೂಯತಾಂ ಕಥಯಾಮಿ ತತ್ ।
ಸೃಷ್ಟ್ಯಾದೌ ನಿರ್ಮಿತೋ ಬ್ರಹ್ಮಾ ವಿಷ್ಣುನಾ ಪ್ರಭವಿಷ್ಣುನಾ ॥ ೧೫ ॥

ನಾಮ್ನಾ ಸ ಪುರುಷೋ ನಾಮ ಪಪ್ರಚ್ಛ ಪಿತರಂ ಸ್ವಕಂ ।
ಕಿಮರ್ಥಂ ಸೃಷ್ಟವಾನ್ಮಾಂ ತ್ವಂ ಕಿಂನು ಕುರ್ಯಾಮತಃ ಪರಂ ॥ ೧೬ ॥

ಕಿಮಾಸೀದದ್ಯಪರ್ಯಂತಂ ತನ್ಮೇ ವಿಸ್ತರತೋ ವದ
ಇತ್ಯುಕ್ತೋ ಬ್ರಹ್ಮಣಾ ತೇನ ಕೃಪಯಾ ಸ ಮಹೇಶ್ವರಃ ।
ಪ್ರೋವಾಚಾಖಿಲಮಸ್ಮೈ ತದ್ಯತ್ಪೃಷ್ಟಂ ತೇನ ವಿಸ್ತರಾತ್ ॥ ೧೭ ॥

---

ಲೋಕದಲ್ಲಿ (ಲೋಕಾಂತರಗಳಲ್ಲಿ ವಿಸ್ತಾರವಾದ ವಿಷ್ಣುರಹಸ್ಯವು ಪ್ರಸಿದ್ಧವಾಗಿರುತ್ತದೆ) ಪ್ರಸಿದ್ಧವಾಗಿರುವ, ನಾನು ಹೇಳುವುದರಿಂದ ಭಿನ್ನವಾದ, ವಿವರಣಾತ್ಮಕ ರಹಸ್ಯಗಳು, ನಾರದರ ದ್ವಾರಾ (ಆ ಪರಂಪರೆಯಿಂದ) ಬಂದುವೆಂದು ತಿಳಿಯುತ್ತೇನೆ (ಹಾಗೆ ನೀವೂ ಗ್ರಹಿಸಿರಿ). (೧೨-೧೪). ಈ ಜಗತ್ತಿನ ಸೃಷ್ಟಿಗೆ ಮೊದಲು, ಶ್ರೀವಿಷ್ಣುವು ಬ್ರಹ್ಮದೇವನನ್ನು

ಶ್ರೀ ಶುಕರಿಂದ ತನಗೆ ಪ್ರಾಪ್ತವಾದ ವಿದ್ಯೆಯನ್ನು ಸೂತಾಚಾರ್ಯನು ಉಪದೇಶಿಸಲು ಆರಂಭಿಸುತ್ತಾನೆ—

ತತ್ರ–ಹೀಗೆ ಬಹುಪ್ರಕಾರದಿಂದ ಲೋಕದಲ್ಲಿ ಪ್ರಾಪ್ತವಾದ ಈ ವಿದ್ಯೆಯಲ್ಲಿ ಆದೌ–ಆರಂಭದಲ್ಲಿ ಯತ್–ಯಾವುದು, ಶುಕಾತ್–ಶುಕಾಚಾರ್ಯರಿಂದ, ಆಪ್ತಂ–ಪ್ರಾಪ್ತವಾದುದೋ, ತತ್–ಅದನ್ನು ಕಥಯಾಮಿ–ಹೇಳುತ್ತೇನೆ; (ಅನ್ಯರೀತಿಯಿಂದ ಪ್ರಾಪ್ತವಾದರೂ ನನಗೆ ತಿಳಿದ ರಹಸ್ಯವಿಶೇಷಗಳನ್ನೂ ಕ್ರಮೇಣ, ಅಳವಡಿಸಿ ನಿರೂಪಿಸುವೆ ಸಂಬರ್ಧವು ಇದರಿಂದ ಧ್ವನಿತವೆಂದು ತಿಳಿಯಬಹುದು); ಶ್ರೂಯತಾಂ–ಶ್ರವಣಮಾಡಲ್ಪಡಲಿ (ಕೇಳಿರಿ); ಪ್ರಭವಿಷ್ಣುನಾ–ಜಗತ್ಸೃಷ್ಟ್ಯಾದಿಗಳಲ್ಲಿ ಸಮರ್ಥನಾದ, ವಿಷ್ಣುನಾ–ಶ್ರೀ ಮಹಾವಿಷ್ಣುವಿನಿಂದ, ಬ್ರಹ್ಮಾ–ಚತುರ್ಮುಖಬ್ರಹ್ಮನು, ಸೃಷ್ಟ್ಯಾದೌ–ಸೃಷ್ಟಿಯ ಆರಂಭದಲ್ಲಿ ನಿರ್ಮಿತಃ–ಹುಟ್ಟಿಸಲ್ಪಟ್ಟನು (ನಿರ್ಮಿತನಾದನು); ಸಃ–ಆತನು, ನಾಮ್ನಾ–ಹೆಸರಿನಿಂದ, ಪುರುಷೋನಾಮ–'ಪುರುಷ'ನೆಂಬ ಹೆಸರುಳ್ಳವನಾಗಿ, ಸ್ವಕಂ ಪಿತರಂ–ತನ್ನ ಜನಕನನ್ನು ಪಪ್ರಚ್ಛ–(ಹೀಗೆ) ಕೇಳಿದನು; ತ್ವಂ–ನೀನು, ಕಿಮರ್ಥಂ–ಏತಕ್ಕಾಗಿ (ಯಾವ ಉದ್ದೇಶದಿಂದ), ಮಾಂ–ನನ್ನನ್ನು ಸೃಷ್ಟವಾನ್–ಹುಟ್ಟಿಸಿದೆ? ಅತಃ ಪರಂ–ಈ ಮುಂದೆ, ಕಿಂನು–ಏನನ್ನು ಕುರ್ಯಾಂ–ಮಾಡಲಿ? ಅದ್ಯಪರ್ಯಂತಂ–ಈವರೆಗೆ (ನಾನು ಹುಟ್ಟುವ ಮೊದಲು), ಕಿಂ ಆಸೀತ್–ಏನು ಇತ್ತು (ಏನು ನಡೆಯಿತು)? ತತ್–ಅದನ್ನು ಮೇ–ನನಗೆ, ವಿಸ್ತರತಃ–ವಿಸ್ತಾರವಾಗಿ, ವದ–ಹೇಳು; ತೇನ–ಆ, ಬ್ರಹ್ಮಣಾ–ಬ್ರಹ್ಮನಿಂದ, ಇತ್ಯುಕ್ತಃ–ಹೀಗೆ ಪ್ರಶ್ನಿಸಲ್ಪಟ್ಟ ಸಃ ಮಹೇಶ್ವರಃ–ಆ ಮಹಾಸ್ವಾಮಿಯು (ಶ್ರೀವಿಷ್ಣುವು), ಕೃಪಯಾ–ಕೃಪೆಮಾಡಿ, ಅಸ್ಮೈ– ಆತನಿಗೆ (ಹೀಗೆ ಕೇಳಿದ ಈ ಬ್ರಹ್ಮದೇವನಿಗೆ), ತೇನ ಯತ್ ಪೃಷ್ಟಂ–ಆತನಿಂದ ಯಾವುದು ಕೇಳಲ್ಪಟ್ಟಿತೋ, ತತ್–ಅದನ್ನು ವಿಸ್ತರಾತ್–ವಿಸ್ತಾರವಾಗಿ, ಅಖಿಲಂ–ಸರ್ವವನ್ನೂ, ಪ್ರೋವಾಚ–ಹೇಳಿದನು.

ಶ್ರೀವಿಷ್ಣುರುವಾಚ—

ಅತೀತೇ ಪ್ರಲಯೇ ಬ್ರಹ್ಮನ್ನವಶಿಷ್ಟಾಷ್ಟಭಾಗತಃ ।
ಯೋಗನಿದ್ರಾಂ ತದಾ ಮುಕ್ತ್ವಾ ದೃಷ್ಟ್ವಾ ತಾಮಂತಿಕೇಽಂಬ್ರಣೀಂ ॥ ೧೮ ॥

---

ಮೊದಲು ನಿರ್ಮಿಸಿದನು; ಪುರುಷಾಕಾರದಿಂದ ಸೃಷ್ಟನಾದ ಆತನು 'ಪುರುಷ'ನೆಂದೇ ಕರೆಯಲ್ಪಡುತ್ತಾನೆ. ಹುಟ್ಟಿದೊಡನೆ ಬ್ರಹ್ಮನು, ತನ್ನ ಜನಕನನ್ನು ಕುರಿತು ಹೀಗೆ ಪ್ರಶ್ನಿಸಿದನು:—'ನನ್ನನ್ನು ಏತಕ್ಕಾಗಿ ಹುಟ್ಟಿಸಿರುವಿ; ನಾನು ಮುಂದೇನು ಮಾಡಲಿ; ನಾನು ಹುಟ್ಟುವ ಮೊದಲು ಏನು ಇತ್ತು? (ನೀನೇನು ಮಾಡುತ್ತಿದ್ದಿ?) ಈ ಎಲ್ಲವನ್ನೂ ವಿಸ್ತಾರವಾಗಿ ಹೇಳು.' ಬ್ರಹ್ಮನು ಹೀಗೆ ಪ್ರಶ್ನಿಸಲು, ಶ್ರೀವಿಷ್ಣುವು ಎಲ್ಲವನ್ನೂ ವಿಸ್ತಾರವಾಗಿ ಉತ್ತರಿಸಿದನು. (೧೫-೧೭). ಹೇ ಬ್ರಹ್ಮ! ಕಳೆದುಹೋದ (ಹಿಂದಿನ) ಪ್ರಲಯಕಾಲದಲ್ಲಿ ಅಷ್ಟಮಾಂಶವು

**ಅಂಬ್ರಹ್ಮ ಪರಮೋವಿಷ್ಣುಃ ಧ್ರಿಯಮಾಣಾ ಸದಾ ತು ಯಾ ।**
**ತೇನೈವ ಸಾ ಸುಖಜ್ಞಾನ ಬಲರೂಪಾಂಭ್ರಣೀ ರಮಾ ॥ ೧೯ ॥**

**ತಾಂ ವೀಕ್ಷ್ಯ ಚಕಮೇ ವಿಷ್ಣುಃ ನಾನಾರೂಪಧರೋಽಸ್ತ್ವಹಂ ।**
**ಕ್ರೀಡಾಮಿ ಸಮಯಂ ಕಿಂಚಿನ್ನಾನಾರೂಪಧರೋಽನಯಾ ॥ ೨೦ ॥**

ಬ್ರಹ್ಮನ್–ಹೇ ಬ್ರಹ್ಮ! ಅತೀತೇ–ಕಳೆದುಹೋದ (ಗತಿಸಿರುವ) ಪ್ರಲಯಕಾಲದಲ್ಲಿ ಅವಶಿಷ್ಟಾಷ್ಟಭಾಗತಃ–ಅಷ್ಟಮಾಂಶವು ಉಳಿದಿದ್ದಾಗ (೧/೮ನೇ ಭಾಗವು ಉಳಿದಿರಲು), ಯೋಗನಿದ್ರಾಂ–ಯೋಗನಿದ್ರೆಯನ್ನು ಮುಕ್ತ್ವಾ–ಬಿಟ್ಟು (ನಿದ್ರೆಯಿಂದ ಎದ್ದು), ತದಾ–ಆಗ, ಅಂತಿಕೇ–ಸಮೀಪದಲ್ಲಿ, ತಾಂ ಅಂಭ್ರಣೀಂ–(ವೇದಮುಖ್ಯಾಭಿಮಾನಿಯಾದ ಮಹಾಲಕ್ಷ್ಮಿಯು ದುರ್ಗಾರೂಪದಿಂದ ಸೃಷ್ಟಿಗಾಗಿ ಪ್ರವೃತ್ತನಾಗೆಂದು ನನ್ನನ್ನು ಸ್ತುತಿಸಿ ಪ್ರಾರ್ಥಿಸುತ್ತಿರುವ) ಆ ಲಕ್ಷ್ಮೀದೇವಿಯನ್ನು ದೃಷ್ಟ್ವಾ–ಕಂಡು; ಪರಮೋ ವಿಷ್ಣುಃ–ಸರ್ವೋತ್ತಮನಾದ ಶ್ರೀ ಮಹಾವಿಷ್ಣುವು, ಅಂಬ್ರಹ್ಮ–'ಅಂ' ಎಂದು ಕರೆಯಲ್ಪಡುವ ಪ್ರರಬ್ರಹ್ಮನೇ; ಸದಾ– ನಿತ್ಯವೂ, ತೇನೈವ–ಆ ವಿಷ್ಣುವಿನಿಂದಲೇ (ಅನ್ಯಾಧೀನಳಲ್ಲದೇ), ಧ್ರಿಯಮಾಣಾ–ಧರಿಸಲ್ಪಟ್ಟಿರುವ, ಯಾ–ಯಾವ, ರಮಾ–ಲಕ್ಷ್ಮೀದೇವಿಯೋ, ಸಾ–ಆಕೆಯು, ಸುಖಜ್ಞಾನಬಲರೂಪಾ–ಸುಖ, ಜ್ಞಾನ, ಶಕ್ತಿರೂಪಳು (ಜ್ಞಾನಾನಂದ ಶಕ್ತ್ಯಾದಿ ಗುಣಗಳೇ ಮೂರ್ತಿವೆತ್ತ ಅಪ್ರಾಕೃತ ರೂಪವುಳ್ಳವಳು—ನಿತ್ಯ ಸಚ್ಚಿದಾನಂದ ದೇಹ ವುಳ್ಳವಳು), ಅಂಭ್ರಣೀ– ಅಂಭ್ರಣೀ ಎಂಬ ಅನ್ವರ್ಥನಾಮವುಳ್ಳವಳು; ವಿಷ್ಣುಃ–ಶ್ರೀವಿಷ್ಣುವು, ತಾಂ–ಅಂಭ್ರಣೀ ನಾಮಕ ರಮಾದೇವಿಯನ್ನು ವೀಕ್ಷ್ಯ–ನೋಡಿ, ವಿಷ್ಣುಃ–ಶ್ರೀವಿಷ್ಣುವು, ನಾನಾ ರೂಪಧರಃ–ಅನಂತರೂಪಿಯಾದ, ಅಹಂನು–ನಾನೇ ಅಷ್ಟೆ ಕಿಂಚಿತ್ ಸಮಯಂ–ಕೆಲವು ಕಾಲ, ಅನಯಾ–ಈಕೆಯಿಂದ ಕೂಡಿ, ನಾನಾರೂಪಧರಃ–(ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸಲು, ಈ ಮೂಲರೂಪದಿಂದಲೇ ಅವುಗಳನ್ನು ನಡೆಸಲಿಚ್ಛಿಸದೆ, ವಾಸುದೇವಾದಿ) ಬಹುರೂಪಗಳನ್ನೂ (ಕ್ರೀಡಾರ್ಥವಾಗಿ ಅಸಂಖ್ಯ ಇತರ ರೂಪಗಳನ್ನೂ) ಪ್ರಕಟಿಸಿ, ಕ್ರೀಡಾಮೀ–ಕ್ರೀಡಿಸುತ್ತೇನೆ, (ಹೀಗೆಂದು) ಚಕಮೇ–ಇಚ್ಛಿಸಿದನು.

---

ಉಳಿದಿರಲು ಶ್ರೀವಿಷ್ಣುವು (ನಾನು) ಯೋಗನಿದ್ರೆಯಿಂದ ಎದ್ದು ಸಮೀಪದಲ್ಲಿ ಅಂಭ್ರಣೀನಾಮಕಳಾದ ರಮಾದೇವಿಯನ್ನು ಕಂಡನು. ಸರ್ವೋತ್ತಮನಾದ ಶ್ರೀವಿಷ್ಣುವು 'ಅಂ' ಎನಿಸುವನು; ಆತನಿಂದ ಸದಾ ಧರಿಸಲ್ಪಟ್ಟವಳಾದ, ಸಚ್ಚಿದಾನಂದರೂಪಳಾದ ರಮಾದೇವಿಯು 'ಅಂಭ್ರಣೀ' ಎಂದು ಕರೆಯಲ್ಪಡುತ್ತಾಳೆ; ಅನಂತರೂಪಿಯಾದ ಶ್ರೀವಿಷ್ಣುವು, ಬಹುರೂಪಗಳನ್ನೇ ಸ್ವೀಕರಿಸಿ (ಪ್ರಕಟಿಸಿ), ರಮಾದೇವಿಯೊಂದಿಗೆ ಸ್ವಲ್ಪಕಾಲದವರೆಗೆ ಕ್ರೀಡಿಸಲಿಚ್ಛಿಸಿದನು (೧೯-೨೦). ಹೀಗೆ ರಮಾದೇವಿಯೊಡನೆ ಕೆಲವು ಕಾಲ ಕ್ರೀಡಿಸಲು ಸಂಕಲ್ಪಿಸಿ, ಸಾಕ್ಷಾತ್ ನಾರಾಯಣನಾದ (ಮೂಲರೂಪಿಯಾದ) ತಾನು,

ಏವಂ ಸಂಚಿಂತ್ಯ ದೇವೇಶಃ ಸ್ವಯಂ ನಾರಾಯಣಃ ಪ್ರಭುಃ ।
ಚತುರ್ಧಾ ಹ್ಯಭವತ್ಪೂರ್ವಂ ತಥೈವಾಭೂತ್ತತೋ ರಮಾ ॥ ೨೦ ॥

ಏವಂ–ಹೀಗೆಂದು, ಸಂಚಿಂತ್ಯ–ಆಲೋಚಿಸಿ, ದೇವೇಶಃ–ಸರ್ವದೇವ ನಿಯಾಮಕ ನಾದ ಶ್ರೀವಿಷ್ಣುವು, ಸ್ವಯಂ ನಾರಾಯಣಃ–ಸಾಕ್ಷಾತ್ ನಾರಾಯಣನೂ, ಪ್ರಭುಃ–ಸಮರ್ಥನೂ (ಸತ್ಯಸಂಕಲ್ಪನೂ) ಆದ ತಾನು, ಪೂರ್ವಂ–ಮೊದಲಿಗೆ, ಚತುರ್ಧಾ–ನಾಲ್ಕು ರೂಪಗಳುಳ್ಳವನು, ಅಭವತ್ ಹಿ–ಆದನೆಂಬುದು ವೇದಪ್ರಸಿದ್ಧವಷ್ಟೆ; ತತಃ–ನಂತರ (ಆಗ), ರಮಾ–ಶ್ರೀ ಮಹಾಲಕ್ಷ್ಮೀದೇವಿಯೂ, ತಥೈವ–ಹಾಗೆಯೇ (ನಾಲ್ಕು ರೂಪಗಳುಳ್ಳ ವಳು), ಅಭವತ್–ಆದಳು.

ವಾಸುದೇವಸ್ಯ ಭಾರ್ಯಾಭೂನ್ಮಾಯಾಸಂಕರ್ಷಣಸ್ಯ ಚ ।
ಜಯಾಥಾಸೀತ್ ಕೃತಿಃ ಶಾಂತಿರಭೂತ್ಸಾ ಕ್ರಮಶಸ್ತ್ವಿಮೇ ॥ ೨೧ ॥

ಪ್ರದ್ಯುಮ್ನಸ್ಯಾನಿರುದ್ಧಸ್ಯ ಭಾರ್ಯೇ ನಿತ್ಯಸುಖಾತ್ಮಿಕೇ ।
ಚತುರ್ವಿಂಶತಿಧಾ ಪಶ್ಚಾದ್ದಶಧಾ ಚ ಸಹಸ್ರಧಾ ॥ ೨೨ ॥

ಅನಂತಧಾ ತತೋ ಭೂತ್ವಾ ತಥೈವಾಸೀದ್ರಮಾಪಿ ಹಿ ।

---

ಸ್ವೇಚ್ಛೆಯಂತೆ ಕ್ರೀಡಿಸಲು ಸಮರ್ಥನಾಗಿದ್ದು ನಾಲ್ಕು ರೂಪಗಳಿಂದ ಪ್ರಕಟನಾದನು; ಆಗ, ರಮಾದೇವಿಯೂ ಸಹ ತಾನೂ ನಾಲ್ಕು ರೂಪಗಳನ್ನು ಸ್ವೀಕರಿಸಿ ಪತಿಸೇವೆಗೆ ಸಿದ್ಧಳಾದಳು. ಹೀಗೆ ರಮಾನಾರಾಯಣರು ರೂಪಗಳನ್ನು ಸ್ವೀಕರಿಸಿರುದು ವೇದಪ್ರಸಿದ್ಧವು (೨೦). ನಾನು ಮೊದಲು ವಾಸುದೇವರೂಪನಾದೆನು; ಆಗ ರಮಾದೇವಿಯು ಮಾಯಾನಾಮಕ ರೂಪವನ್ನು ಧರಿಸಿ, ನನ್ನ ಭಾರ್ಯಳಾದಳು; ನಂತರ ಕ್ರಮವಾಗಿ ನಾನು ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧನಾಮಕರೂಪಗಳಿಂದ ಅಭಿವ್ಯಕ್ತನಾದೆನು; ರಮೆಯಾದರೂ ಈ ನನ್ನ ರೂಪಗಳ ಸೇವಾರ್ಥವಾಗಿ, ಜಯಾ, ಕೃತಿ, ಶಾಂತಿನಾಮಕರೂಪಗಳನ್ನು ಧರಿಸಿ ನನ್ನ ಭಾರ್ಯಳಾದಳು. ಆ ನಂತರ ನಾನು, ೨೪, ೧೦, ೧೦೦೦, ಸಂಖ್ಯೆಗಳುಳ್ಳ ಪ್ರತ್ಯೇಕ ರೂಪಗಳನ್ನು (ಅಭಿನ್ನನಾದರೂ ನಾನಾವ್ಯೂಹಗಳ ರೂಪಗಳನ್ನು)[1] ಧರಿಸಿದೆನು; ರಮೆಯೂ ಸಹ ಅಷ್ಟಷ್ಟೇ ರೂಪಗಳನ್ನು ಧರಿಸಿ ನನ್ನ ಭಾರ್ಯಳಾದಳು (೨೧-೨೨).

---

1. ಕೇಶವಾದಿ ೨೪, ಮತ್ಸ್ಯಾದಿ ೧೦, ವಿಶ್ವಾದಿ ಸಹಸ್ರ (೧೦೦೦) ಇತ್ಯಾದಿ ಭಗವದ್ರೂಪಗಳ ವ್ಯೂಹಗಳು (ಗುಂಪುಗಳು) ಇಲ್ಲಿ ಪ್ರಸಕ್ತವೆಂದು ತಿಳಿಯಬೇಕು; ವಿವಿಧ ವ್ಯೂಹಗತ ವಿವಿಧ ಭಗವದ್ರೂಪಗಳಿಗೆ ಮೂಲಸ್ವರೂಪದಿಂದ ಅತ್ಯಂತ ಅಭೇದವಿದ್ದರೂ ಅವುಗಳಿಂದ ಬಹುವಿಧ ನಾನಾ ವ್ಯಾಪಾರಗಳು ನಡೆಯುತ್ತವೆ ಮತ್ತು ಅವು 'ವಿಶೇಷ' ಬಲದಿಂದ ವಿಭಿನ್ನನಾಮರೂಪಗಳೆಂದು ವ್ಯವಹರಿಸಲ್ಪಡುತ್ತವೆ.

ತಾನು ಮತ್ತು ರಮಾದೇವಿಯೂ ಸ್ವೀಕರಿಸಿದ ರೂಪಗಳ ವಿವರವನ್ನು ಶ್ರೀವಿಷ್ಣುವು ನಿರೂಪಿಸುತ್ತಾನೆ—

ವಾಸುದೇವಸ್ಯ-ವಾಸುದೇವರೂಪದ (ನನ್ನ ಈ ರೂಪದ), ಭಾರ್ಯಾ—ಪತ್ನಿಯು, ಮಾಯಾ—(ಮಾಯಾನಾಮಕ ರೂಪವನ್ನು ಧರಿಸಿದ ಲಕ್ಷ್ಮೀದೇವಿಯು) ಮಾಯಾರೂಪ ಳಾದ ರಮೆಯು, ಅಭೂತ್-ಆದಳು; ಅಥ-ನಂತರ (ಪ್ರಕಟಿಸಿದ ನನ್ನ), ಸಂಕರ್ಷಣಸ್ಯ-ಸಂಕರ್ಷಣರೂಪದ ಭಾರ್ಯಳು, ಜಯಾ-ಜಯಾರೂಪದ ರಮೆಯು, ಆಸೀತ್-ಆದಳು; ಸಾ-ಆ ರಮಾದೇವಿಯೇ, ಕೃತಿಃ-ಕೃತಿನಾಮಕಳೂ, ಶಾಂತಿಃ-ಶಾಂತಿನಾಮಕಳೂ, ಅಭೂತ್-ಆದಳು; ಇಮೇ-ಈ ಎರಡು ರಮಾರೂಪಗಳೂ, ನಿತ್ಯಸುಖಾತ್ಮಿಕೇ-(ಆಕೆಯ ಎಲ್ಲ ರೂಪಗಳಂತೆ) ನಿತ್ಯಾನಂದ ಸ್ವರೂಪಗಳೇ; ಕ್ರಮಶಃ-ಕ್ರಮವಾಗಿ, ಪ್ರದ್ಯುಮ್ನಸ್ಯ-ಪ್ರದ್ಯುಮ್ನನ (ಪ್ರದ್ಯುಮ್ನರೂಪದಿಂದ ಪ್ರಕಟನಾದ ನನ್ನ), ಅನಿರುದ್ಧಸ್ಯ-ಅನಿರುದ್ಧನ (ಅನಿರುದ್ಧರೂಪಿಯಾದ ನನ್ನ), ಭಾರ್ಯೇ-ಪತ್ನಿಯರಾದವು; ಪಶ್ಚಾತ್-ಆ ನಂತರ, ಚತುರ್ವಿಂಶತಿಧಾ-(ನಾನು) ೨೪ ರೂಪಗಳನ್ನು ಧರಿಸಿದೆನು, ದಶಧಾ-ಹತ್ತು ಪ್ರಕಾರನೂ (೧೦ ರೂಪಗಳನ್ನು ಧರಿಸಿದವನೂ), ಸಹಸ್ರಧಾ-ಸಹಸ್ರ ಪ್ರಕಾರನೂ, ಅನಂತಧಾ-ಅಸಂಖ್ಯರೂಪನೂ (ಆದೆನು); ತತಃ-ಅನಂತರ (ಹೀಗೆ ನಾನು ಬಹುರೂಪಗಳನ್ನು ಧರಿಸಿದ ನಂತರ), ರಮಾಪಿ-ರಮೆಯೂ ಸಹ, ತಥಾ ಭೂತ್ವಾ-ಹಾಗೆಯೇ (ಬಹು ರೂಪಳು) ಆಗಿ, ಆಸೀತ್-ನನ್ನ ಆ ರೂಪಗಳ ಭಾರ್ಯಳಾದಳು.

---

ಶ್ರೀಹರಿಯು ವಾಸುದೇವಾದಿ ಬಹುರೂಪಗಳನ್ನು ಧರಿಸಲು ರಮಾದೇವಿಯೂ, ಬಹುರೂಪಗಳನ್ನು ಧರಿಸಿ, ಆ ನನ್ನ (ಶ್ರೀ ವಿಷ್ಣುವಿನ) ರೂಪಗಳ ಸೇವೆಗೆ ನಿಂತನಂತರ, ಮುಕ್ತರಾದ ನಾನಾವಿಧ ದೇವತೆಗಳು, ಅವರ ಮುಕ್ತಭಾರ್ಯರೂ,[1] ಇನ್ನೂ ವಿವಿಧರಾದ ಮುಕ್ತಸ್ತ್ರೀಯರೂ, ಯಕ್ಷ ರಾಕ್ಷಸ, ಋಷಿ, ಗಂಧರ್ವ, ಗುಹ್ಯಕ, ಸಿದ್ಧ ಮೊದಲಾದವರೂ, ಮುಕ್ತ ಅಪ್ಸರಾಸ್ತ್ರೀಯರೂ, ವೈಕುಂಠಾದಿ ನಾನಾ ಮುಕ್ತಸ್ಥಾನಗಳಲ್ಲಿದ್ದ[2] ಸರ್ವಮುಕ್ತಜೀವ ಗಣಗಳೂ, ಈ ಹಿಂದೆ ಹೇಳಿದ ನನ್ನ ಬಹುರೂಪಗಳನ್ನು, ತಂತಮ್ಮ ಬ್ರಹ್ಮನನ್ನು[3] ಮುಂದೆ

---

1. ದೇವತೆಗಳೆಲ್ಲರೂ ಪ್ರಾಯಃ ಸ್ವನಿಯತಪತ್ನಿಯರೊಂದಿಗೆ ಮುಕ್ತರಾಗುತ್ತಾರೆ (ದಂಪತ್ತುಗಳು ದಂಪತ್ಸಮೇತ ಮುಕ್ತರಾಗುತ್ತಾರೆ).

2. ಮುಕ್ತರೆಲ್ಲರೂ ವೈಕುಂಠ, ಶ್ವೇತದ್ವೀಪ, ಅನಂತಾಸನಗಳೆಂಬ ಮುಕ್ತ ತ್ರಿಧಾಮಗಳನ್ನು ಹೊಂದುವರಿಲ್ಲ. ಸ್ವಸ್ವಯೋಗ್ಯತಾನುಸಾರ ಮೇರುಪರ್ವತ, ಅಂತರಿಕ್ಷವೇ ಮೊದಲಾದ ವಿಭಿನ್ನ ಸ್ಥಾನಗಳಲ್ಲಿ ವಿಹರಿಸುತ್ತಾ ಆನಂದಿಸುತ್ತಿರುತ್ತಾರೆ.

3. ಮುಕ್ತಬ್ರಹ್ಮರು, ತಮ್ಮೊಂದಿಗೆ ಮುಕ್ತರಾದ ಜೀವರಿಗೆಲ್ಲ ಮುಕ್ತಿಯಲ್ಲಿ ಸಹ ಅಧಿಪತಿಗಳಾಗಿರುತ್ತಾರೆ. ಒಬ್ಬ ಬ್ರಹ್ಮನೊಂದಿಗೆ ಮುಕ್ತರಾದ ಜೀವರಿಗೆ ಅನ್ಯ ಬ್ರಹ್ಮರೊಂದಿಗೆ ಮುಕ್ತರಾದ ಜೀವರು ಜ್ಞಾತಿಗಳು ಮಾತ್ರ. ಹಿಂದೆ ಹಿಂದಿನ (ಪೂರ್ವಪೂರ್ವಮುಕ್ತರು ದೂರದ ಜ್ಞಾತಿಗಳು—ಅಜ್ಞಾತಿಗಳು ಎನಿಸುವರು.

ಅನ್ಯಾ ನಾನಾವಿಧಾ ನಾರ್ಯೋ ಮುಕ್ತಾಃ ಸಂಸಾರಬಂಧನಾತ್ ॥ ೨೪ ॥
ದೇವಪತ್ನ್ಯೋಽಪಿ ಯಾ ಮುಕ್ತಾಸ್ತಥಾ ದೇವಾದಯಃ ಪರೇ ।
ಗಂಧರ್ವಾ ಯಕ್ಷರಕ್ಷಾಂಸಿ ಋಷಯೋ ಗುಹ್ಯಕಾಸ್ತಥಾ ॥ ೨೫ ॥

ಸಿದ್ಧಾ ಅಪ್ಸರಸಶ್ಚೈವ ವೈಕುಂಠಾದಿಸ್ಥಿತಾಶ್ಚ ಯೇ ।
ಸರ್ವೇ ಮುಕ್ತಗಣಾಸ್ತಾನಿ ಮಮ ರೂಪಾಣಿ ಸರ್ವಶಃ ॥ ೨೬ ॥

ಸ್ವಸ್ವೇಚ್ಛಯಾ ಜುಷಂತೇಽಸ್ಮ ತತ್ತದ್ಬ್ರಹ್ಮಪುರಸ್ಸರಾಃ ।
ತತೋಽಽಭೂದ್ಧಯಶೀರ್ಷಃ ಸ ಶ್ರೀರಪ್ಯಾಸೀದ್ಧಯಾನನಾ ॥ ೨೭ ॥

ಶ್ರೀ ವಿಷ್ಣುವು ಮುಕ್ತರೊಂದಿಗೆ ನಡೆಸಿದ ಕ್ರೀಡೆಯನ್ನು ವರ್ಣಿಸುತ್ತಾನೆ—

ಸಂಸಾರಬಂಧನಾತ್-ಸಂಸಾರಬಂಧದಿಂದ, ಮುಕ್ತಾ-ಮುಕ್ತರಾದ, ನಾನಾವಿಧಾ-ಬಹುವಿಧರಾದ, ಅನ್ಯಾ-ಇತರ (ಲಕ್ಷ್ಮೀದೇವಿಯಿಂದ ಇತರರಾದ), ನಾರ್ಯಃ-ಸ್ತ್ರೀಯರು, ತಥಾ-ಹಾಗೂ, ಮುಕ್ತಾ-ಮುಕ್ತರಾದ, ಪರೇ ದೇವಾದಯಃ-ಇತರ ದೇವತೆಗಳೂ, ಯಾಃ-ಯಾರು, ದೇವಪತ್ನ್ಯಃ ಅಪಿ-ಆ ದೇವತೆಗಳ ಪತ್ನಿಯರೋ (ಅವರೂ), ಗಂಧರ್ವಾ-ಗಂಧರ್ವರು, ಯಕ್ಷರಕ್ಷಾಂಸಿ-ಯಕ್ಷರೂ ರಾಕ್ಷಸರೂ, ಋಷಯಃ-ಋಷಿಗಳೂ, ತಥಾ-ಮತ್ತು ಗುಹ್ಯಕಾಃ-ಗುಹ್ಯಕರೂ, ಸಿದ್ಧಾಃ-ಸಿದ್ಧರೂ, ಅಪ್ಸರಸಃ ಚ-ಅಪ್ಸರಸ್ತ್ರೀಯರೂ, ಯೇ-ಯಾರು, ವೈಕುಂಠಾದಿಸ್ಥಿತಾಃ-ವೈಕುಂಠ ಮೊದಲಾದ ಸ್ಥಾನಗಳಲ್ಲಿದ್ದ, ಸರ್ವೇ-ಎಲ್ಲ ಮುಕ್ತಗಣಾಃ-ಮುಕ್ತಜೀವಸಮೂಹಗಳೂ; ಸರ್ವಶಃ-ಈ ಸಕಲರೂ, ತಾನಿ-ಪೂರ್ವೋಕ್ತವಾದ, ಮಮ-ನನ್ನ ರೂಪಾಣಿ-ರೂಪಗಳನ್ನು (ನಾನಾ ವ್ಯೂಹಗತ ಬಹುರೂಪಗಳನ್ನು), ಸ್ವಸ್ವೇಚ್ಛಯಾ-ತಂತಮ್ಮ ಇಚ್ಛಾನುಸಾರವಾಗಿ, ತತ್ತದ್ಬ್ರಹ್ಮಪುರಸ್ಸರಾಃ-ಆಯಾ ಮುಕ್ತಬ್ರಹ್ಮರನ್ನು (ಯಾವ ಜೀವರು ಯಾವ ಮುಕ್ತಬ್ರಹ್ಮನೊಂದಿಗೆ, ಆ ಬ್ರಹ್ಮ ಕಲ್ಪದ ಮಾಡಿಕೊಂಡು, ಸ್ವೇಚ್ಛಾನುಸಾರ ಸೇವಿಸಿ ಆನಂದಿಸುತ್ತಿದ್ದರು; ಆಗ ನಾನು ಹಯಗ್ರೀವರೂಪನಾದೆನು—ರಮಾದೇವಿಯು ಹಯಮುಖ ರೂಪವನ್ನು ಧರಿಸಿದಳು.[1] (೨೪-೨೭).

1. ಸ್ವರೂಪದಿಂದ ಸ್ತ್ರೀಯರಾದ ಸಾಮಾನ್ಯಜೀವರಿಗೆ ಸಹ, ಪುರುಷತ್ವವು ದೊರೆಯುವುದಿಲ್ಲ; ಸಂಸಾರಾವಸ್ಥೆಯಲ್ಲಿ ಸಹ 'ನ ಸ್ತ್ರೀ ಪುಂಸ್ತ್ವಮರ್ಹತಿ'—ಸ್ತ್ರೀಯು ಪುರುಷದೇಹವನ್ನು ಹೊಂದುವುದಿಲ್ಲ; ವಿಷಯಭೋಗದಲ್ಲಿ ಅತ್ಯಾಸಕ್ತರಾದ ಪುರುಷ ಜೀವರಿಗೆ (ಪಾಪನಿಮಿತ್ತವಾಗಿ) ಸ್ತ್ರೀದೇಹವು ಬರುವುದುಂಟು. ಸ್ತ್ರೀಪುರುಷ ಸಂಬಂಧ ನಿಯಮವು ಹೀಗಿರುವಾಗ, ನಿತ್ಯಸೌಭಾಗ್ಯದೇವಿಯೂ ಪರಮಮಂಗಳ ಸ್ತ್ರೀಸ್ವರೂಪಳೂ ಆದ ರಮಾದೇವಿಗೆ ಹಯರೂಪವೆಂದರೆ, ಹೆಣ್ಣುಕುದುರೆರೂಪವೆಂದೇ ತಿಳಿಯಬೇಕು. ಪ್ರಕೃತ 'ಹಯಾನನಾ' ಎಂಬುದರಿಂದ, ಶ್ರೀವಿಷ್ಣುವಿನಂತೆ ಹಯಮುಖವೂ ಇತರ ಅವಯವಗಳು ಸ್ತ್ರೀದೇಹದಂತೆ ಎಂದೂ ತಿಳಿಯಬೇಕು.

ಅಂತ್ಯದಲ್ಲಿ ಮುಕ್ತರಾದರೋ ಆತನನ್ನು) ಮುಂದಿಟ್ಟುಕೊಂಡು, ಜುಷಂತೇ ಸ್ಮ-(ನನ್ನ ರೂಪಗಳನ್ನು) ಸೇವಿಸುತ್ತಿದ್ದರು.[1] ತತಃ ಅನಂತರ, ಸಃ-ಆ ಶ್ರೀ ವಿಷ್ಣುವು, ಹಯಶೀರ್ಷಃ-ಹಯಗ್ರೀವರೂಪನು, ಅಭೂತ್-ಆದನು; ಶ್ರೀಃ ಅಪಿ-ರಮಾದೇವಿಯೂ, ಹಯಾನನಾ-ಹಯಮುಖವುಳ್ಳವಳು (ಆ ರೂಪವನ್ನು ಧರಿಸಿದವಳು), ಆಸೀತ್-ಆದಳು.

ಹಯರೂಪೀ ಬಭೂವಾಯಂ ರಮಾಪ್ಯಾಸೀತ್ತತೋಶ್ವಿನೀ ।
ದೇವಾದ್ಯಾಶ್ಚ ತಥೈವಾಸನ್ ಚಿಕ್ರೀಡೇಽಸೌ ತತಃ ಸುರೈಃ ॥ ೨೮ ॥
ಕಿಂಚಿತ್‌ಕಾಲಂ ತತಃ ಕಾಮರೂಪೀ ಗೋರೂಪವಾನಭೂತ್ ।
ರಮಾದ್ಯಾಶ್ಚ ತಥೈವಾಸನ್ ಶುದ್ಧಸತ್ತ್ವಗುಣೇನ ಸಃ ॥ ೨೯ ॥

ಅಯಂ-ಈ ಶ್ರೀವಿಷ್ಣುವು (ಹೀಗೆ ಬಹುರೂಪಗಳಿಂದ ಮುಕ್ತಬ್ರಹ್ಮಾದಿಗಳೊಂದಿಗೆ ಕ್ರೀಡಿಸುತ್ತಿದ್ದ ನಾನು), ಹಯರೂಪೀ-ಹಯ (ಕುದುರೆ-ಅಶ್ವ)ರೂಪನು, ಬಭೂವ-ಆದನು; ತತಃ-ಆಗ, ರಮಾಪಿ-ರಮಾದೇವಿಯೂ ಸಹ, ಅಶ್ವಿನೀ-ಹೆಣ್ಣು ಅಶ್ವರೂಪಳು, ಆಸೀತ್-ಆದಳು; ದೇವಾದ್ಯಾಶ್ಚ-ದೇವತೆಗಳೇ ಮೊದಲಾದವರೆಲ್ಲರೂ, ತಥೈವ-ಹಾಗೆಯೇ (ಹರಿಯ ರೂಪರೇ), ಆಸನ್-ಆದರು; ತತಃ-ನಂತರ, ಸುರೈಃ-ದೇವತೆಗಳಿಂದ ಕೂಡಿ, ಅಸೌ-ಈತನು (ಹಯರೂಪೀ ವಿಷ್ಣುವು), ಚಿಕ್ರೀಡೇ-ಕ್ರೀಡಿಸಿದನು; ಕಿಂಚಿತ್‌ಕಾಲಂ-ಸ್ವಲ್ಪಕಾಲ ಹೀಗೆ ಕ್ರೀಡಿಸಿ, ತತಃ-ನಂತರ, ಸಃ-ಆ, ಕಾಮರೂಪೀ-ಸ್ವೇಚ್ಛಾನುಸಾರವಾದ ರೂಪವನ್ನು ಧರಿಸಲು ಸಮರ್ಥನಾದ ಶ್ರೀವಿಷ್ಣುವು, ಗೋರೂಪವಾನ್-ಗೋರೂಪವುಳ್ಳವನು, ಅಭೂತ್-ಆದನು; ರಮಾದ್ಯಾಃ ಚ-ರಮಾದೇವಿಯೇ ಮೊದಲಾದ ಸ್ತ್ರೀಜೀವರೆಲ್ಲರೂ, (ರಮಾದೇವಿಯೇ ಪ್ರಧಾನಳಾಗಿ ಉಳ್ಳ ಅನ್ಯಸ್ತ್ರೀಯ

ಹಯಗ್ರೀವರೂಪದಿಂದ ಕೆಲವು ಕಾಲ ವಿಹರಿಸಿ, ಹಯರೂಪವನ್ನು ಶ್ರೀವಿಷ್ಣುವು ಧರಿಸಿದನು; (ಆಗ) ರಮಾದೇವಿ ಸಹ ಹಯರೂಪಳಾದಳು; ಎಲ್ಲ ದೇವತೆಗಳೂ ದೇವಸ್ತ್ರೀಯರೂ, ಮುಕ್ತಪುರುಷ ಸ್ತ್ರೀಗಣದವರು ಸಹ, ಗಂಡು ಹೆಣ್ಣು ಹಯರೂಪರಾದರು. ಆಗ ಶ್ರೀವಿಷ್ಣುವು, ಈ ರೂಪಗಳಿಂದ ಸ್ವಲ್ಪಕಾಲ ಕ್ರೀಡಿಸಿ, ಗೋರೂಪವನ್ನು ಧರಿಸಿದನು. ಶ್ರೀವಿಷ್ಣುವು ಕಾಮರೂಪಿಯು; ಸ್ವತಂತ್ರವಾದ ತನ್ನ ಇಚ್ಛಾಮಾತ್ರದಿಂದ ಯಾವ ರೂಪವನ್ನಾದರೂ ಪ್ರಕಟಿಸಲು ಶಕ್ತನಾದ ತಾನು,[2] ತನ್ನ ವಿವಿಧ ಅನಂತಾನಂತ

1. ಬ್ರಹ್ಮನು, ತಾನು ಹುಟ್ಟುವ ಮೊದಲು ಏನೇನು ನಡೆದಿತ್ತೆಂದು ಮಾಡಿದ ಪ್ರಶ್ನೆಗೆ ಉತ್ತರವಾಗಿ ಶ್ರೀವಿಷ್ಣುವು ಹೇಳುತ್ತಿದ್ದಾನೆ.

2. ಅನ್ಯಕಾಮರೂಪಿಗಳೆಂಬ ರಾಕ್ಷಸಾದಿ ಜೀವರು, ಸ್ವಾಭಾವಿಕವಲ್ಲದ ತಾತ್ಕಾಲಿಕ ಯೋಗಶಕ್ತಿಯಿಂದ ಇಚ್ಛಿತ ಭೌತಿಕದೇಹಗಳನ್ನು ಸ್ವೀಕರಿಸಲು ಮಾತ್ರ ಸಮರ್ಥರು. ಶ್ರೀಹರಿಯ ರೂಪಗಳೆಲ್ಲ ಸಚ್ಚಿದಾನಂದಾತ್ಮಕವಾದವುಗಳು-ಇಚ್ಛಿತರೂಪಗ್ರಹಣವು ಆತನ ಸಹಜವಾದ ಸ್ವತಂತ್ರ (ಅನ್ಯಾಧೀನವಲ್ಲದ) ಸಾಮರ್ಥ್ಯವು.

ರೆಲ್ಲರೂ–ಆಕೆಯನ್ನು ಬಿಟ್ಟು ಇತರರು), ಶುದ್ಧಸತ್ವಗುಣೇನ–ಶುದ್ಧಸತ್ವಗುಣದಿಂದಾದ ಗೋರೂಪದೇಹಿಗಳಾಗಿ, ತಥೈವ–ಹಾಗೆಯೇ, ಆಸನ್–ಆದರು.

ನದೀಪರ್ವತವೃಕ್ಷಾದೀನ್ ನಾನಾರತ್ನಾನಿ ಸೃಷ್ಟವಾನ್ ।
ಸುವರ್ಣರಜತಾದೀನಿ ಭೂಮಿಂ ದ್ಯಾಂ ಸಾಗರಾನಪಿ ॥ ೩೦ ॥

ತತೋ ಮಕರ ಮೀನಾದಿ ನಾನಾ ಜಲಚರಾಣಿ ತು ।
ಸ್ವಯಮೇವಾಭವತ್ಸರ್ವರೂಪಃ ಪುರುಷವಿಗ್ರಹಃ ॥ ೩೧ ॥

ತತ್ತದ್ರೂಪವತೀ ಚಾಥ ರಮಾಪ್ಯಾಸೀತ್ತಥೇತರೇ ।
ಬ್ರಹ್ಮಾದ್ಯಾಶ್ಚ ಸಪತ್ನೀಕಾ ನಿತ್ಯಾನಂದಾ ಯಥೇಚ್ಛತಃ ॥ ೩೨ ॥

ನದೀಪರ್ವತವೃಕ್ಷಾದೀನ್–ನದೀ, ಪರ್ವತ, ವೃಕ್ಷ ಮೊದಲಾದವುಗಳನ್ನೂ, ನಾನಾರತ್ನಾನಿ–ವಿವಿಧರತ್ನಗಳನ್ನೂ, ಸುವರ್ಣರಜತಾದೀನಿ–ಭಂಗಾರ ಬೆಳ್ಳಿಗಳ ಸಮೃದ್ಧಿಯುಳ್ಳ, ಭೂಮಿಂ–ಭೂಮಿಯನ್ನೂ, ದ್ಯಾಂ–ಅಂತರಿಕ್ಷ (ಅಥವಾ ಸ್ವರ್ಗ)ವನ್ನೂ, ಅಪಿ–ಮತ್ತು, ಸಾಗರಾನ್–ಸಮುದ್ರಗಳನ್ನೂ, ಸೃಷ್ಟವಾನ್–(ಸಃ–ಶ್ರೀವಿಷ್ಣುವು, ಶುದ್ಧಸತ್ತ್ವಗುಣೇನ– ಶುದ್ಧಸತ್ತ್ವದಿಂದ) ಸೃಷ್ಟಿಸಿದವನಾದನು; ತತಃ–ನಂತರ, ಮಕರ ಮೀನಾದಿ ನಾನಾ ಜಲಚರಾಣಿ ತು–ಮೊಸಳೆ, ಮೀನು ಮೊದಲಾದ ಜಲಚರಪ್ರಾಣಿಗಳನ್ನೂ, (ಸೃಷ್ಟವಾನ್–ಸೃಷ್ಟಿಸಿದನು); ಪುರುಷವಿಗ್ರಹಃ–ಮೂಲನಾರಾಯಣರೂಪದಲ್ಲಿ ಪುರುಷಾಕಾರದ ಸಚ್ಚಿದಾನಂದ ದೇಹವುಳ್ಳ, ಸ್ವಯಂ ಏವ–ತಾನೇ, ಸರ್ವರೂಪಃ–ನಿರ್ಮಿತಗಳಾದ

---

ರೂಪಗಳಲ್ಲಿ ಗೋರೂಪವನ್ನು ಧರಿಸಿದನು. ರಮಾದೇವಿಯೂ ಗೋರೂಪಳಾದಳು; ಅನ್ಯಮುಕ್ತಗಣದ ಸ್ತ್ರೀಯರೆಲ್ಲರೂ ಶುದ್ಧ ಸತ್ತ್ವಾತ್ಮಕ ಗೋರೂಪಗಳನ್ನು ಧರಿಸಿದರು[1] (೨೮-೨೯). ವಿವಿಧ ನದೀಪರ್ವತವೃಕ್ಷಗಳನ್ನೂ, ಸುವರ್ಣರಜತಾದಿ ನಾನಾರತ್ನಗಳನ್ನೂ, ಭೂಮಿ, ಸ್ವರ್ಗ, ಸಾಗರಗಳನ್ನೂ, ಇಚ್ಛಾಮಾತ್ರದಿಂದ ಸತ್ತ್ವಾದಿ ಶುದ್ಧಪ್ರಕೃತಿ ಗುಣಗಳಿಂದ ನಿರ್ಮಿಸಿದನು; ನಂತರ ಮೀನು ಮೊಸಳೆ ಮೊದಲಾದ ಜಲಚರಪ್ರಾಣಿಗಳನ್ನೂ

1. ಜಗನ್ನಿರ್ಮಾಣದಲ್ಲಿ ಅಪಾರವಾದ ಮೂಲಪ್ರಕೃತಿಯ ಒಂದು ಭಾಗ ಮಾತ್ರ ಉಪಯೋಗಿಸಲ್ಪಡುತ್ತದೆ. ಹೀಗೆ ಉಪಯೋಗಿಸಲ್ಪಡದ ಪ್ರಕೃತಿಯೂ, ಸೂಕ್ಷ್ಮ ಸತ್ತ್ವಾದಿ ಗುಣಾತ್ಮಕವಾದುದೇ. ಇದರ ಸತ್ತ್ವಗುಣವು 'ಶುದ್ಧಸತ್ತ್ವ'ವೆಂದು ಕರೆಯಲ್ಪಡುತ್ತದೆ. ಶುದ್ಧಸತ್ತ್ವಗುಣವೂ ಪ್ರಾಕೃತವೇ; ಇದು, ಮುಕ್ತರ ಇಚ್ಛಾನುಸಾರವಾಗಿ, ಅವರಿಂದ ಭೋಗ್ಯವಾಗುವ ಫಲಪುಷ್ಪ ಮೊದಲಾದ ವಸ್ತುರೂಪದಿಂದಲೂ, ಮುಕ್ತರಿಂದ ಸ್ವೇಚ್ಛೆಯಿಂದ ಸ್ವೀಕರಿಸಲ್ಪಡುವ ದೇಹರೂಪದಿಂದ ಸಹ, ಉಪಯೋಗಿಸಲ್ಪಟ್ಟು, ಸಮುದ್ರದಿಂದ ಅಲೆಗಳು ಮೇಲೆದ್ದು ಪುನಃ ಅಲ್ಲಿಯೇ ಲೀನವಾಗುವಂತೆ, ಶುದ್ಧಸತ್ತ್ವದಲ್ಲಿಯೇ ಲೀನವಾಗುತ್ತದೆ. ಈ ಪ್ರಮೇಯ, ಈ ಗ್ರಂಥದಲ್ಲಿ ಕ್ರಮಶಃ ಪ್ರಸಕ್ತವಾಗಲಿದೆ; ಅಲ್ಲಿ ಇದರ ವಿವರಣವು ವಿಸ್ತಾರದಿಂದ ಕೈಗೊಳ್ಳಲಾಗುತ್ತದೆ.

ಮೇಲಿನ ಎಲ್ಲ ವಸ್ತುಗಳ ರೂಪನೂ, ಅಭವತ್–ಆದನು; ಅಥ–ಅನಂತರದಲ್ಲಿ ರಮಾ ಅಪಿ– ರಮಾದೇವಿಯೂ ಸಹ, ತತ್ತದ್ರೂಪವತೀ–ಆಯಾ ರೂಪಳು, (ಶ್ರೀವಿಷ್ಣು ಧರಿಸಿದ ರೂಪಗಳಿಗೆ ಸದೃಶಗಳಾದ ಸ್ತ್ರೀರೂಪಗಳುಳ್ಳವಳು), ಆಸೀತ್–ಆದಳು; ತಥಾ–ಹಾಗೂ, ಇತರೇ–ಅನ್ಯರಾದ, ನಿತ್ಯಾನಂದಾಃ–ಮುಕ್ತರಾದ, ಸಪತ್ನೀಕಾಃ–ತಂತಮ್ಮ ಪತ್ನಿಯರಿಂದ ಸಹಿತರಾದ, ಬ್ರಹ್ಮಾದ್ಯಾಶ್ಚ–ಬ್ರಹ್ಮಾದಿ ಜೀವರೂ ಕೂಡ, ಯಥೇಚ್ಛತಃ–ಸ್ವೇಚ್ಛಾನುಸಾರವಾಗಿ, (ತಥಾ ಆಸನ್–ಶ್ರೀವಿಷ್ಣುರೂಪಗಳೊಂದಿಗೆ ಕ್ರೀಡಿಸಲು ತೊಡಗಿದರು).

ಭೂಮೌ ಚಾಪ್ಯಸೃಜತ್ ಸೋಽಥ ಸ್ವಾತ್ಮಾನಂ ಶಿಲ್ಪವಿತ್ತಮಂ ।
ನಾನಾಶಿಲ್ಪಾನಿ ಚಕ್ರೇ ಸ ಸರ್ವವೇತ್ತಾ ಜಗತ್ಪತಿಃ ॥ ೩೩ ॥
ಶಿಷ್ಯತ್ವೇ ಕಲ್ಪಯಾಮಾಸ ಬ್ರಹ್ಮಾದ್ಯಾಃ ಸರ್ವದೇವತಾಃ ।
ಗ್ರಾಮ್ಯಾರಣ್ಯಪಶೂನಾಂ ಸ ಬಭ್ರೇ ರೂಪಾಣಿ ದೇವರಾಟ್ ॥ ೩೪ ॥

ಮುಕ್ತರೊಡನೆ ಶ್ರೀವಿಷ್ಣುವು ಕ್ರೀಡಿಸಿದ ವಿವರಗಳನ್ನು ಇಲ್ಲಿಂದ ಮುಂದೆ

---

ಸೃಷ್ಟಿಸಿದನು;[1] ಈ ಎಲ್ಲ ವಸ್ತುಗಳನ್ನು ಚೇಷ್ಟಿಸಲು, ಮೂಲಪುರುಷರೂಪಿಯಾದ ತಾನೇ, ತದಾಕಾರದ ಅಸಂಖ್ಯರೂಪಗಳುಳ್ಳವನಾದನು; ಆಗ ರಮಾದೇವಿಯು ತದನುರೂಪವಾದ ಅಸಂಖ್ಯ ಸ್ತ್ರೀರೂಪಗಳುಳ್ಳವಳಾದಳು; ಸಪತ್ನೀಕರಾದ ಮುಕ್ತಬ್ರಹ್ಮಾದಿ ಜೀವರು, ಶ್ರೀವಿಷ್ಣುವಿನ ಈ ಅದ್ಭುತ ಕ್ರೀಡೆಯಲ್ಲಿ ಅಂಗಭೂತರಾಗಿ ಕ್ರೀಡಿಸಲು ಯಥಾಯೋಗ್ಯ ಶುದ್ಧಸತ್ತ್ವಾತ್ಮಕ ದೇಹಗಳನ್ನು ಧರಿಸಿ, ಸಿದ್ಧರಾದರು (೩೦-೩೨). ಹಾಗೆ ನಿರ್ಮಿಸಿದ ಭೂಮಿಯಲ್ಲಿ ತಾನು, ಶಿಲ್ಪಶ್ರೇಷ್ಠನೂ ಜಗತ್ಪ್ರಭುವೂ ಆದ ತನ್ನದೊಂದು ರೂಪವನ್ನು ಪ್ರಕಟಗೊಳಿಸಿದನು; ಬ್ರಹ್ಮಾದಿ ಮುಕ್ತದೇವತೆಗಳನ್ನು ಶಿಷ್ಯರನ್ನಾಗಿ ಮಾಡಿಕೊಂಡು,

1. ಸಾಮಾನ್ಯ ಮುಕ್ತಮನುಷ್ಯೋತ್ತಮಾದಿ ಜೀವರು ಸಹ ಇಚ್ಛಾಮಾತ್ರದಿಂದ ಶುದ್ಧಸತ್ತ್ವಾತ್ಮಕ ದೇಹಗಳನ್ನು ಧರಿಸಿ, ಶುದ್ಧಸತ್ತ್ವಾತ್ಮಕ ಫಲಪುಷ್ಪಾದಿ ಭೋಗ್ಯ ವಸ್ತುಗಳನ್ನು ಸಂಕಲ್ಪಮಾತ್ರದಿಂದ ಪಡೆದು ಭೋಗಿಸಲು ಶಕ್ತರಾಗಿರುವಾಗ, ಈ ವಿಧವಾದ ಅದ್ಭುತ ಸೃಷ್ಟಿಯು ಶ್ರೀವಿಷ್ಣುವಿನಲ್ಲಿ ಆಶ್ಚರ್ಯವಲ್ಲ—ಆದರೆ ಒಂದು ಮುಖ್ಯ ಪ್ರಮೇಯವನ್ನು ತಪ್ಪದೇ ಗಮನದಲ್ಲಿಡಬೇಕು. ಅದೇನೆಂದರೆ, ರಮಾನಾರಾಯಣರು, ಎಂದೂ ಯಾವ ಕಾರಣದಿಂದಲೂ ಶುದ್ಧಸತ್ತ್ವಾದಿ ಪ್ರಾಕೃತ ಗುಣನಿರ್ಮಿತ ದೇಹಗಳನ್ನು ಧರಿಸುವುದಿಲ್ಲ. ಅವರು ನಿತ್ಯವೂ ತಮ್ಮ ಸರ್ವರೂಪಗಳಲ್ಲಿ ಚಿದಾನಂದಸ್ವರೂಪರೇ ಸರಿ. ಅಪ್ರಾಕೃತಸ್ವರೂಪಗಳಿಂದಲೇ ಪ್ರಾಕೃತರೊಡನೆಯೂ, ಮುಕ್ತರೊಂದಿಗೂ ಯಥೇಚ್ಛವಾಗಿ ವಿಹರಿಸುತ್ತಾರೆ. ಮುಕ್ತಜೀವರ ಸ್ವರೂಪದೇಹಗಳು, ಅಣುಪರಿಮಾಣದವುಗಳು—ವ್ಯಾಪ್ತಗಳಲ್ಲ; ಶ್ರೀಹರಿಯ ಅಚಿಂತ್ಯಾದ್ಭುತಶಕ್ತಿಯ ಬಲದಿಂದ, ಆತನ ಅನುಗ್ರಹದಿಂದ, ಯದ್ಯಪಿ, ಸ್ವರೂಪ ದೇಹಗಳೂ, ಮುಕ್ತರ ನಾನಾಭೋಗಗಳಿಗೆ ಅವಕಾಶವಾಗುವಂತೆ, (ಅವುಗಳ ನಿರ್ವಿಕಾರತ್ವಕ್ಕೆ ವಿರೋಧವಿಲ್ಲದಂತೆ) ಬೆಳೆಯುತ್ತವೆ; ಹೀಗಿದ್ದರೂ ತಮ್ಮ ಇಚ್ಛಾಭೋಗಗಳಿಗಾಗಿ ಮುಕ್ತರು ಶುದ್ಧಸತ್ತ್ವಾತ್ಮಕ ದೇಹಗಳನ್ನೂ ಧರಿಸುತ್ತಾರೆ. ರಮಾನಾರಾಯಣರ ಸ್ವರೂಪಗಳು (ಅವರ ಸರ್ವರೂಪಗಳೂ) ವ್ಯಾಪ್ತಗಳೇ—ಜೀವರಂತೆ ಅಣುಗಳಲ್ಲ. ಈ ವಿಶೇಷ ವೈಲಕ್ಷಣ್ಯವನ್ನು ಗಮನದಲ್ಲಿಡಬೇಕು

ನಿತ್ಯಾನಂದಾನ್ ಲೀಲಯೈವ ವಿಷ್ಣುಭಕ್ತಿಪರಾಯಣಾನ್ ।
ದುಃಖಲೇಶವಿನಿರ್ಮುಕ್ತಾನ್ ಸ್ವಸ್ವವೃತ್ತ್ಯೈವ ತೋಷಿತಾನ್ ॥ ೩೮ ॥
ಅಸೂಯಾದ್ಯಖಿಲೈರ್ದೋಷೈರ್ವರ್ಜಿತಾನ್ ಲೀಲಯೈವ ಹಿ ।
ವಿಕ್ರೀಣಂತಶ್ಚ ಕ್ರೀಣಂತೋ ಹರಿತುಷ್ಟ್ಯರ್ಥಮೇವ ಹಿ ॥ ೩೯ ॥

ಅಸ್ಮಾನ್-ಇತರ, ಮುಕ್ತಾನ್ ಏವ-ಮುಕ್ತಜೀವರನ್ನೇ, ಅನೇಕಶಃ-ಬಹುಸಂಖ್ಯೆಯಲ್ಲಿ ಅಥವಾ ಬಹುಪ್ರಕಾರದ, ಪ್ರಜಾರೂಪಾನ್-ಪ್ರಜೆಗಳನ್ನಾಗಿ, ಚಕಾರ-ಮಾಡಿದನು (ನಿಲ್ಲಿಸಿದನು-ಸ್ಥಾಪಿಸಿದನು); (ಈ ಎಲ್ಲರನ್ನೂ) ದುಃಖಲೇಶವಿನಿರ್ಮುಕ್ತಾನ್-ದುಃಖಲೇಶರಹಿತರೂ, ಸ್ವಸ್ವವೃತ್ತ್ಯೈವ-ತಂತಮ್ಮ (ಮುಕ್ತಾವಸ್ಥೆಯಲ್ಲಿ ಸಹಜವಾದ, ಕಥಾಶ್ರವಣ, ಧ್ಯಾನ, ಯಜ್ಞಾದಿ ಕರ್ಮಕರಣ ಇತ್ಯಾದಿ) ವೃತ್ತಿಗಳಿಂದ ಸಂತುಷ್ಟರೂ, ನಿತ್ಯಾನಂದವನ್ನು ಅನುಭವಿಸುವವರೂ, ಲೀಲಯಾ-ಲೀಲೆಯಿಂದಲೇ, ವಿಷ್ಣುಭಕ್ತಿಪರಾಯಣಾನ್-ಶ್ರೀವಿಷ್ಣುವಿನಲ್ಲಿ ಭಕ್ತಿಯನ್ನು ಮಾಡುವ (ಅನ್ಯ ಫಲಕ್ಕೆ ಸಾಧನವಲ್ಲದ ಸ್ವಾಭಾವಿಕವಾದ ಭಕ್ತಿಯುತರಾದ), ಅಸೂಯಾದಿ-ಅಸೂಯೆಯೇ (ದ್ವೇಷಾದಿ) ಮೊದಲಾದ, ದೋಷೈಃ-ದೋಷಗಳಿಂದ, ವರ್ಜಿತಾನ್-ಬಿಡಲ್ಪಟ್ಟವರಾದ (ರಹಿತರಾದ), (ಈ ಮುಕ್ತರನ್ನು ರಾಜ್ಯದ ಪ್ರಜೆಗಳನ್ನಾಗಿ ನೇಮಿಸಿದನು); (ಅವರು), ಕ್ರೀಣಂತಃ-(ಪದಾರ್ಥಗಳನ್ನು) ಕೊಳ್ಳುವವರೂ, ವಿಕ್ರೀಣಂತಃ-ಮಾರುವವರೂ, ಲೀಲಯಾ-ಕ್ರೀಡೆಗಾಗಿ, ಮತ್ತು, ಹರಿತುಷ್ಟ್ಯರ್ಥ ಮೇವ-ಶ್ರೀಹರಿಪ್ರೀತ್ಯರ್ಥವಾಗಿಯೇ, ಆಸನ್-(ವ್ಯವಹರಿಸುವವರೂ) ಆದರು (ಎಂದು ಮುಂದಿನ ಶ್ಲೋಕದಿಂದ ಅನ್ವಯ ಮಾಡಿಕೊಳ್ಳಬೇಕು); ಹಿ-ಶ್ರೀ ವಿಷ್ಣುವಿನ ಮುಕ್ತ ಕ್ರೀಡನವು ಹೀಗೆಂದು ಪ್ರಮಾಣಸಿದ್ಧವೇ ಸರಿ.

ಆಸನ್ ಕದಾಚಿತ್ ಸ್ತ್ರೀರೂಪೋ ನಾನಾರೂಪಸಹಸ್ರಕೈಃ ।
ಸರ್ವೇಽಪಿ ದೇವಾ ಸ್ತ್ರೀರೂಪಾ ಭೂತ್ವಾ ತಾನಿ ನಿಷೇವಿರೇ ॥ ೪೦ ॥
ತಾನಿ ಪ್ರಚ್ಛಾದ್ಯ ರೂಪಾಣಿ ಪುನಃ ಪುರುಷರೂಪಕಃ ।
ಜಾತೋ ದೇವಾಸ್ತತೋಽಪ್ಯಾಸನ್ ಸರ್ವೇ ಪುರುಷರೂಪಿಣಃ ॥ ೪೧ ॥

ಕದಾಚಿತ್-ಮತ್ತೊಂದು ವೇಳೆ, ನಾನಾರೂಪಸಹಸ್ರಕೈಃ-ಸಹಸ್ರಾರು ರೂಪಗಳಿಂದ,

---

ಅವರೆಲ್ಲರೂ ಕ್ರಯವಿಕ್ರಯ ವ್ಯವಹಾರಗಳನ್ನು ಶ್ರೀವಿಷ್ಣುಪ್ರೀತ್ಯರ್ಥವಾಗಿಯೇ, ಕ್ರೀಡೆಗಾಗಿ ಮಾಡುತ್ತಿದ್ದರು (೩೭-೩೯). ಒಂದು ವೇಳೆ, ಶ್ರೀವಿಷ್ಣು ತನ್ನ ಅಸಂಖ್ಯರೂಪಗಳನ್ನು ಸ್ತ್ರೀರೂಪಗಳನ್ನಾಗಿ ಮಾಡಿದನು; ಎಲ್ಲ ದೇವತೆಗಳೂ ಸ್ತ್ರೀರೂಪರಾಗಿ ಆತನನ್ನು ಸೇವಿಸಿದರು; ಪುನಃ, ಶ್ರೀವಿಷ್ಣುವು ಎಲ್ಲವನ್ನೂ ಪುರುಷರೂಪಗಳನ್ನಾಗಿ ಮಾಡಿದನು; ಆಗ ದೇವತೆಗಳೆಲ್ಲರೂ ಪುರುಷರೂಪಗಳನ್ನು ತಾಳಿದರು (೪೦-೪೧). ಆ ಮುಕ್ತ ಪ್ರಜೆಗಳಲ್ಲಿ ಕೆಲವರು ಶ್ರೀವಿಷ್ಣು ಪ್ರೀತ್ಯರ್ಥವಾಗಿ ಯಜ್ಞಗಳನ್ನು ಆಚರಿಸಿದರು; ಮತ್ತೆ ಕೆಲವರು

ಸ್ತ್ರೀರೂಪಃ–ಸ್ತ್ರೀರೂಪನು; ಜಾತಃ–ಆದನು; ಸರ್ವೇಽಪಿ ದೇವಾಃ–ಎಲ್ಲ ದೇವತೆಗಳೂ, ಸ್ತ್ರೀರೂಪಾಃ–ಸ್ತ್ರೀರೂಪರು, ಭೂತ್ವಾ–ಆಗಿ, ತಾನಿ–(ಶ್ರೀವಿಷ್ಣುವಿನ) ಆ (ಸ್ತ್ರೀ)ರೂಪಗಳನ್ನು ನಿಷೇವಿರೇ–ಸೇವಿಸಿದರು; ತಾನಿ ರೂಪಾಣಿ–ಆ ತನ್ನ ಸ್ತ್ರೀರೂಪಗಳನ್ನು ಪ್ರಚ್ಛಾದ್ಯ–ಮುಚ್ಚಿಕೊಂಡು (ಅದೃಶ್ಯಗೊಳಿಸಿ), ಪುನಃ–ಮತ್ತೆ, ಪುರುಷರೂಪಕಃ–ಪುರುಷರೂಪ ಉಳ್ಳವನು, ಜಾತಃ–ಆದನು; ತತಃ–ಆಗ, ದೇವಾಃ–ದೇವತೆಗಳು, ಸರ್ವೇ ಅಪಿ–ಎಲ್ಲರೂ ಸಹ, ಪುರುಷರೂಪಿಣಃ–ಪುರುಷರೂಪವುಳ್ಳವರು, ಆಸನ್–ಆದರು.

**ಕೇಚಿದ್ಯಜ್ಞೈರೀಜಿರೇ ವಿಷ್ಣುಮೇವ**
**ನಾನಾರೂಪಂ ಕೇಚಿದಧ್ಯಾಪಯಂಶ್ಚ ।**
**ಸ್ವಸ್ಮಾನ್ನ್ಯೂನಾನ್ ಕೇಚಿತ್ ಆಹುಃ ಪುರಾಣಾ-**
**ನೀತಿಹಾಸಾನ್ ಕೇಚಿದಾಹುರ್ಮಿಥಶ್ಚ ॥ ೪೨ ॥**

ಕೇಚಿತ್–(ಆ ಮುಕ್ತಪ್ರಜೆಗಳಲ್ಲಿ) ಕೆಲವರು, ಯಜ್ಞೈಃ–ಯಜ್ಞಗಳಿಂದ, ವಿಷ್ಣುಂ ಏವ–ಶ್ರೀವಿಷ್ಣುವನ್ನೇ, ಈಜಿರೇ–ಪೂಜಿಸಿದರು; ಕೇಚಿತ್–ಮತ್ತೆ ಕೆಲವರು, ನಾನಾರೂಪಂ–ಬಹುರೂಪಿಯಾದ ವಿಷ್ಣುವನ್ನು ಸ್ವಸ್ಮಾತ್–ತಮ್ಮಿಂದ, ನ್ಯೂನಾನ್–ಅಲ್ಪರಿಗೆ (ನೀಚರಿಗೆ ತಾರತಮ್ಯದಲ್ಲಿ ಅಧಮರಾದವರಿಗೆ), ಅಧ್ಯಾಪಯನ್–ಅಧ್ಯಯನಮಾಡಿಸಿದರು (ಶ್ರೀವಿಷ್ಣುಮಹಿಮೆಗಳನ್ನು ತಿಳಿಸಿಕೊಟ್ಟರು–ಜ್ಞಾಪಕಕ್ಕೆ ತಂದುಕೊಟ್ಟು ಆನಂದಪಡಿಸಿದರು); ಕೇಚಿತ್–ಮತ್ತೆ ಕೆಲವರು, ಪುರಾಣಾನ್–ಪುರಾಣಗಳನ್ನು, ಆಹುಃ–ಹೇಳಿದರು; ಕೇಚಿತ್–ಇನ್ನೂ ಕೆಲವರು, ಮಿಥಶ್ಚ–ಪರಸ್ಪರವಾಗಿ ಸಹ, ಇತಿಹಾಸಾನ್–ಇತಿಹಾಸಗಳನ್ನು (ರಾಮಕೃಷ್ಣಾದ್ಯವತಾರ ಮಹಿಮೆಗಳನ್ನು ನಿರೂಪಿಸುವ ರಾಮಾಯಣ ಭಾರತಾದಿಗಳನ್ನು), ಆಹುಃ–ಹೇಳಿದರು.

**ಏವಂ ಪೂರ್ವಂ ದೇವದೇವೋಽಹಮೇವ**
**ಕಾಲಂ ಕಂಚಿನ್ಮುಕ್ತಬಂಧೈರಜಾದ್ಯೈಃ ।**
**ಲಕ್ಷ್ಮ್ಯಾ ಯುಕ್ತಃ ಕ್ರೀಡಯಾಮಾಸ ಪಶ್ಚಾತ್**
**ಸ್ರಷ್ಟುಂ ಚಾಸೀನ್ಮಾನಸಂ ಕರ್ಮಬದ್ಧಾನ್ ॥ ೪೩ ॥**

---

ಶ್ರೀಹರಿಯ ಬಹುರೂಪಗಳ ಮಹಿಮೆಗಳನ್ನೇ ಪ್ರತಿಪಾದಿಸುವ ವೇದಾದಿಗಳನ್ನು ತಮಗಿಂತ ಕನಿಷ್ಠರಿಗೆ ಅಧ್ಯಯನ ಮಾಡಿಸಿದರು; ಕೆಲವರು ಪುರಾಣಗಳನ್ನು ಹೇಳಿದರು; ಇನ್ನೂ ಕೆಲವರು ಪರಸ್ಪರವಾಗಿ ಇತಿಹಾಸಗಳನ್ನು ಹೇಳಿಕೊಳ್ಳುತ್ತಾ ಆನಂದಿಸಿದರು (೪೨). ಹೀಗೆ ಪ್ರಲಯಕಾಲದ ಅಷ್ಟಮಾಂಶವು ಉಳಿದಿರುವಾಗ, ಕೆಲವು ಕಾಲ, ಲಕ್ಷ್ಮೀಸಮೇತ ನಾದ, ಮುಕ್ತಬ್ರಹ್ಮಾದಿ ಜೀವರನ್ನು ಸೇರಿಸಿಕೊಂಡು, ಸ್ವೇಚ್ಛೆಯಿಂದ ಕ್ರೀಡಿಸಿ, ನಂತರ ಕರ್ಮಬದ್ಧರಾದ ಜೀವರನ್ನು ಸೃಷ್ಟಿಸಲು ಸಂಕಲ್ಪಿಸಿದೆನು, ಎಂದು ಮೊದಲು ಸೃಷ್ಟನಾರ

**ಏವಂ ಯಃ ಕ್ರೀಡನಂ ವಿಷ್ಣೋರಹಸ್ಯಂ ಪರಮಾದ್ಭುತಂ ।**
**ಪ್ರಾತಃ ಸ್ಮರತಿ ವಾ ರಾತ್ರೌ ಸೋಽಪ್ಯೇವಂ ತೇನ ಮೋದತೇ ॥ ೪೪ ॥**

**ಧನಂ ಧಾನ್ಯಂ ಪಶೂನ್ ಪುತ್ರಾನ್**
**ಭಾರ್ಯಾಂ ಚೈವ ಮನೋಹರಾಂ ।**
**ಇಹ ಲೋಕೇ ಚಿರಂ ಭುಕ್ತ್ವಾ**
**ತತೋ ಮುಕ್ತಿಮವಾಪ್ನುಯಾತ್ ॥ ೪೫ ॥**

ಏವಂ–ಹೀಗೆ, ಪೂರ್ವಂ–(ಹೇ ಬ್ರಹ್ಮ ನೀನು ಹುಟ್ಟುವ) ಮೊದಲು, ದೇವದೇವಃ–ದೇವೋತ್ತಮನಾದ, ಅಹಮೇವ–ನಾನೇ, ಕಂಚಿತ್ ಕಾಲಂ–ಸ್ವಲ್ಪಕಾಲ, ಮುಕ್ತಬಂಧೈಃ–ಬಂಧನದಿಂದ ಬಿಡುಗಡೆಹೊಂದಿದ (ಸಂಸಾರದಿಂದ ಮುಕ್ತರಾದ), ಅಜಾದ್ಯೈಃ–ಬ್ರಹ್ಮಾದಿಗಳಿಂದ ಕೂಡಿ, ಲಕ್ಷ್ಮ್ಯಾ–ಶ್ರೀ ಲಕ್ಷ್ಮೀದೇವಿಯಿಂದ, ಯುಕ್ತಃ–ಸಹಿತನಾಗಿ, ಕ್ರೀಡಯಾಮಾಸ–ಕ್ರೀಡಿಸಿರೆನು; ಪಶ್ಚಾತ್–ನಂತರ, ಕರ್ಮಬದ್ಧಾನ್–ಅನಾದಿ ಕರ್ಮಾದಿಗಳಿಂದ ಬದ್ಧರಾದ ಜೀವರನ್ನು, ಸ್ರಷ್ಟುಂ–ಸೃಷ್ಟಿಸಲು (ಸ್ಥೂಲ ಸಾಧನ ದೇಹಗಳನ್ನಿತ್ತು ಸಾಧನೆಯಲ್ಲಿ ತೊಡಗಿಸಲು), ಮಾನಸಂ ಆಸೀತ್–ಮನಸ್ಸನ್ನು ಹೊಂದಿದೆನು (ಸಂಕಲ್ಪಿಸಿದೆನು);

ಯಃ–ಯಾವ ಅಧಿಕಾರಿಯು, ಪರಮಾದ್ಭುತಂ–ಅತ್ಯಾಶ್ಚರ್ಯಕರವೂ, ರಹಸ್ಯಂ–ರಹಸ್ಯವೂ (ಗೋಪ್ಯವೂ), ಆದ, ವಿಷ್ಣೋಃ–ಶ್ರೀವಿಷ್ಣುವಿನ, ಏವಂ–ಈ ಪ್ರಕಾರವಾದ, ಕ್ರೀಡನಂ–ಮುಕ್ತರೊಡನೆ ನಡೆಸಿದ ಕ್ರೀಡೆಯನ್ನು ಪ್ರಾತಃ–ಪ್ರಾತಃಕಾಲದಲ್ಲಿ, ರಾತ್ರೌ ವಾ–ರಾತ್ರಿಯಲ್ಲಾಗಲಿ, ಸ್ಮರತಿ–ಸ್ಮರಿಸುವನೋ, ಸಃ ಅಪಿ–ಅವನೂ ಕೂಡ, ಏವಂ–ಹೀಗೆಯೇ (ಇತರ ಮುಕ್ತರಂತೆ ತಾನೂ ಮುಕ್ತನಾಗಿ), ತೇನ–ಶ್ರೀವಿಷ್ಣುವಿನಿಂದ ಕೂಡಿ, ಮೋದತೇ–ಕ್ರೀಡೆಯಿಂದ ಆನಂದಿಸುತ್ತಾನೆ; ಇಹಲೋಕೇ–ಈ ಲೋಕದಲ್ಲಿ (ಸಂಸಾರಾವಸ್ಥೆಯಲ್ಲಿ), ಧನಂ–ಐಶ್ವರ್ಯವನ್ನೂ, ಧಾನ್ಯಂ–ಧಾನ್ಯಾದಿ ಸಂಪತ್ತನ್ನೂ, ಪಶೂನ್–(ಗೋ, ಅಶ್ವ ಗಜಾದಿ) ಪಶುಗಳನ್ನೂ, ಪುತ್ರಾನ್–ಪುತ್ರಪೌತ್ರಾದಿ ಸತ್ಸಂತಾನವನ್ನೂ, ಮನೋಹರಾಂ–ಮನೋಹರಳಾದ, (ಸುಂದರಳೂ ಮನೋನುಕೂಲಳೂ ಆದ), ಭಾರ್ಯಾಂ–ಪತ್ನಿಯನ್ನೂ, ಚಿರಂ–ಬಹುಕಾಲ, ಭುಕ್ತ್ವಾ–ಭೋಗಿಸಿ (ಸುಖದಿಂದ ಇಹ ಜೀವನವನ್ನು ಅನುಭವಿಸಿ), ತತಃ–ಅನಂತರ, ಮುಕ್ತಿಂ–ಮೋಕ್ಷವನ್ನು ಅವಾಪ್ನುಯಾತ್–ಹೊಂದುತ್ತಾನೆ.

---

ಬ್ರಹ್ಮದೇವನಿಗೆ ಶ್ರೀವಿಷ್ಣುವು ಹೇಳಿ, ತನ್ನ ಈ ಮುಕ್ತಕ್ರೀಡಾಮಹಿಮೆಯನ್ನು ಪ್ರಾತಃಕಾಲದಲ್ಲಿ ಅಥವಾ (ರಾತ್ರೌ) ರಾತ್ರಿಯಲ್ಲಿ ಸ್ಮರಿಸುವ ಅಧಿಕಾರಿಗಳು, ಇಹದಲ್ಲಿ (ಮುಕ್ತರಾಗುವ ಮೊದಲು) ಧನ, ಧಾನ್ಯ ಪಶು ಮೊದಲಾದ ಸಂಪತ್ತನ್ನೂ, ಸತ್ಸಂತಾನವನ್ನೂ ಅನುಕೂಲಳಾದ ಭಾರ್ಯಳನ್ನೂ ಹೊಂದುತ್ತ, ಬಹುಕಾಲ ಸುಖಭೋಗವನ್ನು ಪಡೆದು, ನಂತರ ಮೋಕ್ಷವನ್ನೇ ಹೊಂದುವರೆಂಬ ಮಹಾಫಲವನ್ನೂ ಹೇಳಿರುವನು (೪೩-೪೫).

ವಿಷ್ಣುಕ್ರೀಡೆಯೆಂಬ ೧ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೨

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

ಕಿಯಾನ್ ಪ್ರಲಯಕಾಲೋ ವೈ ಸೃಷ್ಟಿಕಾಲಃ ಕಿಯಾನಪಿ ।
ಸೃಷ್ಟಿಃ ಕತಿ ವಿಧಾ ಚಾಸೀತ್ ಕ್ರೀಡನಾನಂತರಂ ಹರೇಃ ॥ ೧ ॥

ಪ್ರಲಯಕಾಲಃ–ಪ್ರಳಯಕಾಲದ ಅವಧಿಯು, ಕಿಯಾನ್ ವೈ–ಎಷ್ಟು ಪ್ರಮಾಣವುಳ್ಳದ್ದು; ಅಪಿ–ಮತ್ತು ಸೃಷ್ಟಿಕಾಲದ ಪರಿಮಿತಿಯು, ಕಿಯಾನ್–ಎಷ್ಟು? ಹರೇಃ–ಶ್ರೀವಿಷ್ಣುವಿನ, ಕ್ರೀಡನಾನಂತರಂ–ಪೂರ್ವೋಕ್ತ ಕ್ರೀಡೆಯ ನಂತರ, ಸೃಷ್ಟಿಃ–ಸೃಷ್ಟಿಯು, ಕತಿ ವಿಧಾ ಚ–ಎಷ್ಟು ಪ್ರಕಾರವುಳ್ಳದ್ದು ಆಸೀತ್–ಆಯಿತು?

ಶ್ರೀ ಭಗವಾನುವಾಚ—

ಅತಿಸೂಕ್ಷ್ಮಸ್ತು ಯಃ ಕಾಲಃ ಸ ಕ್ಷಣಃ ಪರಿಕೀರ್ತಿತಃ ।
ಕ್ಷಣಾಃ ಪಂಚ ತೃಟಿಃ ಪ್ರೋಕ್ತಾ ಪಂಚಾಶತ್ತಾ ಲವಃ ಸ್ಮೃತಃ ॥ ೨ ॥

ಲವದ್ವಯಂ ನಿಮೇಷ ಸ್ಯಾನ್ಮಾತ್ರಾಸ್ಯಾದಷ್ಟಭಿಸ್ತು ತೈಃ ।
ಯಥಾಯಂ ವದತೇ ಚಾಷೋ ಮಾತ್ರಯೋ ದ್ವಿತಯಂ ಗುರುಃ ॥ ೩ ॥

ಗುರೂಣಾಂ ದಶಕಂ ಪ್ರಾಣಃ ಪ್ರಾಣಷಟ್ಕಂ ಪಳಂ ಭವೇತ್ ।
ಪಳಷಷ್ಟಿರ್ಘಟೀ ಪ್ರೋಕ್ತಾ ತಾಃ ಷಷ್ಟಿರ್ದಿನಮುಚ್ಯತೇ ॥ ೪ ॥

---

ಪ್ರಲಯಕಾಲದ ಅವಧಿಯೇನು? ಮತ್ತು ಸೃಷ್ಟಿಕಾಲವು ಎಷ್ಟು ಪ್ರಮಾಣವುಳ್ಳದ್ದು?; ಶ್ರೀವಿಷ್ಣುವು ಲಕ್ಷ್ಮೀದೇವಿ ಮತ್ತು ಮುಕ್ತ ಬ್ರಹ್ಮಾದಿ ಜೀವರೊಡನೆ ಕ್ರೀಡಿಸಿದನಂತರ ನಡೆಸಿದ ಸೃಷ್ಟಿಯು ಎಷ್ಟು ಪ್ರಕಾರವಾದುದು, ಎಂದು ಬ್ರಹ್ಮದೇವನು ಕೇಳಿದನು (೧). ಅತ್ಯಂತ ಸೂಕ್ಷ್ಮವಾದ (ಅಲ್ಪವಾದ) ಕಾಲವು ಕ್ಷಣವೆನಿಸುತ್ತದೆ; ೫ ಕ್ಷಣಗಳು ಸೇರಿದರೆ ೧ ತೃಟಿಯು; ೫೦ ತೃಟಗಳು ೧ ಲವ; ೨ ಲವಗಳು ೧ ನಿಮೇಷ; ೮ ನಿಮೇಷಗಳು ಒಂದು ಮಾತ್ರಾ; ೨ ಮಾತ್ರೆಗಳು ೧ ಗುರು; ೧೦ ಗುರುಗಳು ೧ ಪ್ರಾಣ; ೬ ಪ್ರಾಣಗಳು ೧ ಪಳ; ೬೦ ಪಳಗಳಿಗೆ ೧ ಘಳಿಗೆ; ೬೦ ಘಳಿಗೆಗಳಿಗೆ ೧ ದಿನ; ಅದರಲ್ಲಿ ಮೊದಲಿನ ೩೦ ಘಳಿಗೆಗಳು

ತತಸ್ತ್ರಿಂಶದ್ಘಟೀಃ ಪೂರ್ವಾ ದಿವಾ ರಾತ್ರಿಸ್ತಥಾ ಪರಾ ।
ದಿನಪಂಚದಶಪಕ್ಷಸ್ತೌ ದ್ವೌಮಾಸಸ್ತು ತದ್ದ್ವಯಂ ॥ ೫ ॥

ಅತಿಸೂಕ್ಷ್ಮಃ ತು-ಅತ್ಯಂತ ಸೂಕ್ಷ್ಮವಾದ (ಅತ್ಯಲ್ಪವಾದ), ಯಃ ಕಾಲಃ-ಯಾವ ಕಾಲವೋ, ಸಃ-ಅದು, ಕ್ಷಣಃ ಪರಿಕೀರ್ತಿತಃ-ಕ್ಷಣವೆಂದು ಹೇಳಲ್ಪಡುತ್ತದೆ; ಕ್ಷಣಾಃ ಪಂಚ-ಐದು ಕ್ಷಣಗಳು, ತ್ರುಟಿಃ-ತ್ರುಟಿಯೆಂದು, ಪ್ರೋಕ್ತಾ-ಹೇಳಲ್ಪಡುತ್ತದೆ; ತಾಃ-ಆ ತ್ರುಟಿಗಳು, ಪಂಚಾಶತ್-ಐವತ್ತಾದರೆ, ಲವಃ ಸ್ಮೃತಃ-ಅದು ಲವವೆನಿಸುತ್ತದೆ; ಲವದ್ವಯಂ-ಎರಡು ಲವಗಳು, ನಿಮೇಷಃ ಸ್ಯಾತ್-ಒಂದು ನಿಮೇಷವೆನಿಸುತ್ತದೆ; ತೈಃ ಅಷ್ಟಭಿಃ-ನಿಮೇಷಗಳ ಎಂಟರಿಂದ, ಮಾತ್ರಾ-ಒಂದು ಮಾತ್ರೆಯು, ಸ್ಯಾತ್-ಆಗುತ್ತದೆ; ಅಯಂ-ಈ, ಚಾಷಃ-ಪಕ್ಷಿವಿಶೇಷವು, ಯಥಾ ವದತೇ-ಹೇಗೆ ಧ್ವನಿಗೈಯುತ್ತದೆಯೋ ಅದರ ಕಾಲವು ಮಾತ್ರೆಯು (ಅತಿವೇಗವಾಗಿ ಉಚ್ಚರಿಸುವ ಹ್ರಸ್ವಾಕ್ಷರದಷ್ಟು ಕಾಲವು ಮಾತ್ರೆಯೆನಿಸುತ್ತದೆ—ಕಾಗೆಯ ಜಾತಿಗೆ ಸೇರಿದ ಈ ಪಕ್ಷಿಯು (ಚಾಷಃ-Jay) ಶಬ್ದಮಾಡುವ ಕಾಲವು ಅತ್ಯಲ್ಪ—ಕ್, ಕ್ ಎಂದು ಕೂಗುತ್ತದಂತೆ); ಮಾತ್ರಯೋಃ-ಮಾತ್ರೆಗಳ, ದ್ವಿತಯಂ-ಎರಡು, ಗುರುಃ-ಗುರುವೆನಿಸುತ್ತದೆ; ಗುರೂಣಾಂ ದಶಕಂ-ಹತ್ತು ಗುರುಗಳು, ಪ್ರಾಣಃ-ಪ್ರಾಣವೆನಿಸುತ್ತದೆ; ಪ್ರಾಣಷಟ್ಕಂ-ಆರು ಪ್ರಾಣಗಳ ಕಾಲವು, ಪಳಂ ಭವೇತ್-'ಪಳ'ವಾಗುತ್ತದೆ; ಪಳಷಷ್ಟಿ-ಅರವತ್ತು ಪಳಗಳು, ಘಟೀ-ಒಂದು ಘಳಿಗೆಯೆಂದು, ಪ್ರೋಕ್ತಾ-ಹೇಳಲ್ಪಡುತ್ತದೆ; ತಾಃ ಷಷ್ಟಿ-ಘಳಿಗೆಗಳ ಅರವತ್ತು ದಿನಂ ಉಚ್ಯತೇ-ಒಂದು ದಿನವೆಂದು ಹೇಳಲ್ಪಡುತ್ತದೆ; ತತಃ ಅದರ (ದಿನದ), ಪೂರ್ವಾ-ಮೊದಲಿನ, ತ್ರಿಂಶತ್‌ಘಟೀಃ-ಮುವ್ವತ್ತು ಘಳಿಗೆಗಳ ಕಾಲವು, ದಿವಾ-ಹಗಲು; ತಥಾ-ಹಾಗೆಯೇ, ಅಪರಾ-ನಂತರದ ೩೦ ಘಳಿಗೆಗಳ ಕಾಲವು, ರಾತ್ರಿಃ-ರಾತ್ರಿಯು; ದಿನಪಂಚದಶ-ದಿನಗಳ ಹದಿನೈದು, ಪಕ್ಷಃ-ಒಂದು ಪಕ್ಷವೆಂದು ಕರೆಯಲ್ಪಡುತ್ತದೆ; ತೌದ್ವೌ-ಎರಡು ಪಕ್ಷಗಳು, ಮಾಸಃ-ಒಂದು ತಿಂಗಳು; ತದ್ದ್ವಯಂ-ಮಾಸಗಳ ಎರಡು (ಎರಡು ತಿಂಗಳಿಗೆ), (ಋತುಃ-ಒಂದು ಋತುವು, ಎಂದು ಮುಂದಿನ ಶ್ಲೋಕದಿಂದ ಅನ್ವಯ).

ಋತುಸ್ತತ್ತ್ರಯಂ ಪ್ರೋಕ್ತಮಯನಂ ತದ್ದ್ವಯಂ ಪುನಃ ।
ವರ್ಷಮಿತ್ಯುಚ್ಯತೇ ತಚ್ಚ ದೇವಾನಾಂ ದಿನಮೇವ ತು ॥ ೬ ॥

---

ಹಗಲು— ನಂತರದ ೩೦ ಘಳಿಗೆಗಳು ರಾತ್ರಿ; ೧೫ ದಿನಗಳಿಗೆ ಒಂದು ಪಕ್ಷ; ೨ ಪಕ್ಷಗಳಿಗೆ ಒಂದು ಮಾಸ (ತಿಂಗಳು); ೨ ತಿಂಗಳಿಗೆ ೧ ಋತು (೨-೫).

ಮೂರು ಋತುಗಳು ಸೇರಿದ ಕಾಲವು ಒಂದು ಅಯನವೆನಿಸುತ್ತದೆ; ಎರಡು ಅಯನಗಳಿಗೆ ಒಂದು ವರ್ಷ; ಹೀಗಿರುವ (ಮನುಷ್ಯಮಾನದ) ಒಂದು ವರ್ಷವು ದೇವತೆಗಳಿಗೆ ಒಂದು ದಿನವೆಂದು ತಿಳಿಯಬೇಕು; ಉತ್ತರಾಯಣವು ದೇವತೆಗಳ

ಅಯನಂ ತೂತ್ತರಂ ತತ್ರ ದಿವಾರಾತ್ರಿಶ್ಚ ದಕ್ಷಿಣಂ ।
ಏವಂ ದಿನಾನಾಂ ಷಷ್ಟಿಶ್ಚ ಶತತ್ರಯಸಮನ್ವಿತಂ ॥ ೭ ॥

ದಿವ್ಯಂ ವರ್ಷಮಿದಂ ಪ್ರೋಕ್ತಂ ಯುಗಸಂಖ್ಯಾಂ ತತಃ ಶೃಣು ।
ಚತ್ವಾರ್ಯೇವ ಸಹಸ್ರಾಣಿ ಕೃತಂ ಯುಗಮಿತೀರಿತಂ ॥ ೮ ॥

ಅಷ್ಟೌ ಶತಾನಿ ವರ್ಷಾಣಾಮಾದಾವಂತೇ ಚ ಸಂಧ್ಯಕೇ ।
ಏತತ್ಪಾದವಿಹೀನಂ ತು ತ್ರೇತಾಯುಗಮಿತೀರ್ಯತೇ ॥ ೯ ॥

ತತೋಽಪಿ ಪಾದಹೀನಂ ತು ದ್ವಾಪರಂ ತಸ್ಯ ಯತ್ತ್ವನಃ ।
ಅರ್ಧಂ ತತ್ಕಲಿಮಾನಂ ಸ್ಯಾದೇವಂ ಯುಗಚತುಷ್ಟಯಂ ॥ ೧೦ ॥

ದಿವ್ಯದ್ವಾದಶಸಾಹಸ್ರಂ ವರ್ಷಮಾನಂ ಮಹಾಯುಗಂ ।

(ಋತುಃ-ಹಿಂದಿನ ಶ್ಲೋಕದಲ್ಲಿ ಅಧ್ಯಾಹಾರ್ಯವಾಗಿದೆ), ತತ್ತ್ರಿತಯಂ-ಅವುಗಳ (ಋತುಗಳ) ಮೂರು, ಅಯನಂ ಪ್ರೋಕ್ತಂ-ಅಯನವೆಂದು ಹೇಳಲ್ಪಡುತ್ತದೆ; ಪುನಃ-ಮತ್ತು ತದ್ದ್ವಯಂ-ಅವುಗಳ (ಅಯನಗಳ) ಎರಡು, ವರ್ಷಂ ಇತಿ-ವರ್ಷವೆಂದು, ಉಚ್ಯತೇ-ಹೇಳಲ್ಪಡುತ್ತದೆ; ತತ್ ಚ-ಈ ವರ್ಷವೆಂಬ ಕಾಲಾವಧಿಯು, ದೇವಾನಾಂ ತು-ದೇವತೆಗಳಿಗಾದರೋ, ದಿನಂ ಏವ-ಒಂದು ದಿನ ಮಾತ್ರವೇ; ತತ್ರ-ಅಲ್ಲಿ (ಆ ದೇವತೆಗಳ ಒಂದು ದಿನದಲ್ಲಿ), ಉತ್ತರಂ ಅಯನಂ ತು-ಉತ್ತರಾಯಣವಾದರೋ,

---

ಹಗಲು—ದಕ್ಷಿಣಾಯನವು ರಾತ್ರಿ; ಇಂಥ ೩೬೦ ದಿನಗಳು ದೇವತೆಗಳ ಒಂದು ವರ್ಷ. ಕೃತಯುಗವು, ದೇವತೆಗಳ ೪,೦೦೦ ವರ್ಷಗಳ ಕಾಲಾವಧಿಯುಳ್ಳದ್ದು; ಅದರ ಮೊದಲು ಮತ್ತು ಕೊನೆಯಲ್ಲಿರುವ ಎರಡೂ ಸಂಧಿಕಾಲಗಳಿಂದ ದೇವಮಾನದ ೮೦೦ ವರ್ಷಗಳಾಗುತ್ತವೆ; (ಪ್ರತಿಯೊಂದು ಯುಗಕ್ಕೂ ಯುಗಾರಂಭಕ್ಕೆ ಮೊದಲು ಮತ್ತು ಯುಗವು ಮುಗಿದನಂತರ ಆ ಯುಗದ ಸಂಧಿಕಾಲಗಳಿರುತ್ತವೆ; ಉದಾ.—ಕೃತಯುಗಾರಂಭದ ಮೊದಲು, ೪೦೦ ವರ್ಷಗಳ ಸಂಧಿಕಾಲವೂ, ಯುಗವು ಮುಗಿದನಂತರ, ಎಂದರೆ ೪,೦೦೦ ಸಾವಿರ ದೇವಮಾನದ ವರ್ಷಗಳಾದ ನಂತರ, ಕೃತಯುಗದ ಸಂಧಿಕಾಲವಾದ ೪೦೦ ವರ್ಷಗಳೂ. ನಂತರ ತ್ರೇತಾಯುಗದ ಆರಂಭದ ಸಂಧಿಕಾಲವಾದ ೩೦೦ ವರ್ಷಗಳೂ ಕಳೆದನಂತರ ತ್ರೇತಾಯುಗವು ಆರಂಭವಾಗುತ್ತದೆ. ಹೀಗೆ ಇತರ ಯುಗಗಳಿಗೂ ಸಂಧಿಕಾಲಗಳನ್ನು ತಿಳಿಯಬೇಕು. ಆಯಾ ಯುಗದ ಸಂಧಿಕಾಲವು ಆಯಾ ಯುಗನಾಮದಿಂದಲೇ ವ್ಯವಹರಿಸಲ್ಪಡುತ್ತದೆ); ತ್ರೇತಾಯುಗವು ೩,೦೦೦ ದಿವ್ಯವರ್ಷಗಳ ಅವಧಿಯುಳ್ಳದ್ದು—ಇದರ ಸಂಧಿಕಾಲವು ಆದ್ಯಂತ್ಯಗಳಲ್ಲಿ ಒಟ್ಟು ೬೦೦ ವರ್ಷಗಳು; ದ್ವಾಪರಯುಗವು ೨,೦೦೦ ವರ್ಷಗಳ ಕಾಲಮಾನವುಳ್ಳದ್ದು—

ದಿವಾ–ಹಗಲು; ದಕ್ಷಿಣಂ ಚ–ದಕ್ಷಿಣಾಯನವಾದರೂ, ರಾತ್ರಿಃ–ರಾತ್ರಿಯು; ಏವಂ–ಈ ಪ್ರಕಾರದ, ಶತತ್ರಯಸಮನ್ವಿತಂ–ಮೂರುನೂರರಿಂದ (೩.೦೦) ಕೂಡಿದ, ದಿನಾನಾಂ ಷಷ್ಟಿ–ಅರವತ್ತು (೬೦) ದಿನಗಳು (೩.೬೦ ದಿನಗಳು), ಇದಂ–ಇದು, ದಿವ್ಯಂವರ್ಷಂ–ದಿವ್ಯವರ್ಷವೆಂದು (ದೇವಮಾನದ ಒಂದು ವರ್ಷವೆಂದು), ಪ್ರೋಕ್ತಂ–ಹೇಳಲಾಗುತ್ತದೆ; ತತಃ–ನಂತರ, ಯುಗಸಂಖ್ಯಾಂ–ಯುಗಗಳ ಸಂಖ್ಯೆಯನ್ನು (ಗಣನೆಯ ಕ್ರಮವನ್ನು), ಶೃಣು–ಕೇಳು; ಕೃತಯುಗಂ–ಕೃತಯುಗವು, ಚತ್ವಾರಿ–ನಾಲ್ಕು, ಸಹಸ್ರಾಣಿ ಏವ–ಸಾವಿರ ವರ್ಷಗಳೆಂದೇ, (ದೇವಮಾನದ ೪,೦೦೦ ವರ್ಷಗಳ ಕಾಲಪರಿಮಿತವಾದುದೆಂದು), ಇತಿ ಈರಿತಂ–ಹೀಗೆ ಹೇಳಲಾಗುತ್ತದೆ; ಆದಾವಂತೇ ಚ–(ಕೃತಯುಗದ) ಪ್ರಾರಂಭದಲ್ಲಿ ಮತ್ತು ಅಂತ್ಯದಲ್ಲಿ ಸಹ, ಸಂಧ್ಯಕೇ–ಸಂಧಿ ಕಾಲಗಳೆರಡೂ ಸೇರಿ, ವರ್ಷಾಣಾಂ–ದಿವ್ಯವರ್ಷಗಳ, ಅಷ್ಟೌಶತಾನಿ–(೮೦೦) ಎಂಟುನೂರು; ತ್ರೇತಾಯುಗಂ–ತ್ರೇತಾಯುಗವು, ಏತತ್ಪಾದ ವಿಹೀನಂ ತು–ಇದರ (ಕೃತಯುಗದ) ಪಾದ ೧/೪ ಕಡಿಮೆಯೇ, ಇತಿ ಈರ್ಯತೇ–ಎಂದು ಹೇಳಲ್ಪಡುತ್ತದೆ; ತತೋಽಪಿ–ಅದಕ್ಕಿಂತಲೂ (ತ್ರೇತಾಯುಗಕ್ಕಿಂತಲೂ), ದ್ವಾಪರಂ ತು–ದ್ವಾಪರಯುಗವಾದರೋ, ಪಾದಹೀನಂ–೧/೪ ಭಾಗ ಕಡಿಮೆಯಾದುದು; ಪುನಃ–ಮತ್ತು ಯತ್ ಅರ್ಧಂ–ಯಾವುದರ (ದ್ವಾಪರದ) ಅರ್ಧಭಾಗವು, ತತ್–ಅದು (೧೦೦೦ ವರ್ಷಗಳು), ಕಲಿಮಾನಂ–ಕಲಿಯುಗದ ಪ್ರಮಾಣವು, ಸ್ಯಾತ್–ಆಗುತ್ತದೆ; ಏವಂ–ಹೀಗೆ (ಒಟ್ಟು ಸೇರಿ), ಯುಗಚತುಷ್ಟಯಂ–ಕೃತಾದಿ ನಾಲ್ಕು ಯುಗಗಳು, ಮಹಾಯುಗಂ–ಮಹಾಯುಗವೆಂದು ಕರೆಯಲ್ಪಡುವುದು; ದಿವ್ಯದ್ವಾದಶಸಾಹಸ್ರಂ ವರ್ಷಮಾನಂ–ದೇವಮಾನದ ೧೨೦೦೦ ವರ್ಷಗಳ ಪ್ರಮಾಣ (ಕಾಲಮಾನ-ಕಾಲದ ಅಳತೆ) ವುಳ್ಳದ್ದು.

**ಮಹಾಯುಗಾನಾಂ ಸಪ್ತತ್ಯಾ ಸೈಕಯ್ಯಾವಾಂತರಂ ಮನೋಃ ॥ ೧೧ ॥**

---

ಇದರ ಒಟ್ಟುಸಂಧಿಕಾಲವು ೪೦೦ ವರ್ಷಗಳು; ಕಲಿಯುಗವು, ದ್ವಾಪರಯುಗದ ಅರ್ಧ (ಅಥವಾ ಕೃತಯುಗದ ೧/೪) ಅವಧಿಯುಳ್ಳದ್ದು ಎಂದರೆ ೧,೦೦೦ ವರ್ಷಗಳ ಪ್ರಮಾಣವುಳ್ಳದ್ದು; ನಾಲ್ಕೂ ಯುಗಗಳಿಂದ (ಸಂಧಿಕಾಲಗಳೂ ಸೇರಿ) ಒಟ್ಟು ದೇವಮಾನದ ೧೨,೦೦೦ ವರ್ಷಗಳಾಗುತ್ತವೆ. ನಾಲ್ಕು ಯುಗಗಳು ಸೇರಿ ಒಂದು ಮಹಾಯುಗವೆಂದು ವ್ಯವಹರಿಸಲ್ಪಡುತ್ತದೆ—ಅದರ ಕಾಲಮಾನ, ದಿವ್ಯ ೧೨,೦೦೦ ವರ್ಷಗಳು (೬-೧೦). ೭೧ ಮಹಾಯುಗಗಳಿಗೊಂದು ಮನ್ವಂತರ; (ಒಬ್ಬ ಮನುವು ಅಧಿಕಾರಾರೂಢನಾಗಿ ಮನ್ವಂತರಕಾಲವು ಸಮಾಪ್ತಿಯಾಗುವವರೆಗೆ ಧರ್ಮ ವ್ಯವಸ್ಥಾಪಕನಾಗಿ ಕಾಲಕಾಲಕ್ಕೆ ಧರ್ಮಶಾಸ್ತ್ರಗಳನ್ನು ರಚಿಸಿ, ಶ್ರೀಹರಿಸೇವೆಯಲ್ಲಿ ತೊಡಗಿರುತ್ತಾನೆ); ಇಂಥ ೧೪ ಮನ್ವಂತರಗಳಿಗೆ ಒಂದು ಬ್ರಹ್ಮದೇವನ ಹಗಲು; ಆತನಿಗೆ ಅಷ್ಟೇ ಕಾಲಾವಧಿಯ ರಾತ್ರಿಯು—ಈ ಹಗಲು ರಾತ್ರಿಗಳು ಸೇರಿ ಒಂದು ದಿನ; ಅದು

ಚತುರ್ದಶೈವಂ ಮನವಃ ಪ್ರತ್ಯೇಕಂ ತು ತದಂತತಃ ।
ಸಂಧ್ಯಾ ಕೃತೋನ್ಮಿತೈಕಾ ಸ್ಯಾತ್ ಕಲ್ಪಾದೌ ಚ ತಥೈಕಕಾ ॥ ೧೨ ॥

ಸಂಧ್ಯಾ ಪಂಚದಶೈವಂ ತು ಯುಕ್ತಾ ಮನ್ವಂತರಾಬ್ದಕೈಃ ।
ಕೃತ್ಸ್ನೈವಂ ಜಾಯತೇ ಯತ್ರ ಮಹಾಯುಗಸಹಸ್ರಕಂ ॥ ೧೩ ॥

ಪಿತಾಮಹದಿನಂ ತ್ವೇತತ್ತಾವತೀ ರಾತ್ರಿರೇವ ಹಿ ।
ಸ ಹಿ ಕಲ್ಪ ಇತಿ ಪ್ರೋಕ್ತಃ ತಚ್ಛತತ್ರಯಷಷ್ಟಿಕಂ ॥ ೧೪ ॥

ವರ್ಷಂ ಬ್ರಾಹ್ಮಮಿತಿ ಪ್ರೋಕ್ತಂ ತಚ್ಛತಂ ಪರಮುಚ್ಯತೇ ।
ತದರ್ಧಂ ತು ಪರಾರ್ಧಾ ಸ್ಯಾತ್ ಪಂಚಾಶದ್ಬ್ರಾಹ್ಮವರ್ಷಕಂ ॥ ೧೫ ॥

ಪರಮಾಯುರ್ಬ್ರಹ್ಮಣಃ ಸ್ಯಾತ್ತದತೀತೌ ಚ ತಲ್ಲಯಃ ॥ ೧೬ ॥

ಮಹಾಯುಗಾನಾಂ–ಮಹಾಯುಗಗಳ ಸೈಕಯಾ ಸಪ್ತತ್ಯಾ–ಎಪ್ಪತ್ತೊಂದ(೭೧)ರಿಂದ, (೭೧ ಮಹಾಯುಗಗಳಿಗೆ), ಮನೋಃ–ಮನುವಿನ, ಅಂತರಂ ಏವ–ಅಂತರವೇ (ಆಗುತ್ತದೆ); ಏವಂ–ಹೀಗಿರುವ, ಮನವಃ–ಮನುಗಳು, ಚತುರ್ದಶ–೧೪, (ಬ್ರಹ್ಮದೇವನ ಒಂದು ಹಗಲಿನಲ್ಲಿ ಅಧಿಕಾರದಲ್ಲಿರುತ್ತಾರೆ); ತದಂತತಃ–ಆ ಮನ್ವಂತರಗಳ ಮಧ್ಯದಲ್ಲಿ ಪ್ರತ್ಯೇಕಂ–ಬೇರೆಬೇರೆಯಾಗಿ, ಏಕಾಸಂಧ್ಯಾ–ಈ ಮನ್ವಂತರಗಳ ಮಧ್ಯದಲ್ಲಿ ಬರುವ ಒಂದೊಂದು ಸಂಧಿಕಾಲವೂ, ಕೃತೋನ್ಮಿತಾಸ್ಯಾತ್–ಒಂದು ಕೃತಯುಗದಮಾನದಷ್ಟು ಇರುತ್ತದೆ; ಕಲ್ಪಾದೌ ಚ–ಕಲ್ಪದ ಆದಿಯಲ್ಲಿ (ಬ್ರಹ್ಮದೇವನ ದಿನವು ದಿನಕಲ್ಪವೆನಿಸುತ್ತದೆ; ಅದರ ಆದಿಯಲ್ಲಿ ಒಂದು ಕೃತಯುಗದಷ್ಟು ಕಾಲವು ಗತಿಸಿದನಂತರ ಮೊದಲನೇ ಮನುವಿನ ಅಧಿಕಾರ ಕಾಲವು ಆರಂಭವಾಗುತ್ತದೆ) ಸಹ; ತಥಾ–ಹಾಗೆಯೇ (ಪ್ರತಿಮನ್ವಂತರದ ಮಧ್ಯದ ಸಂಧಿಕಾಲದಂತೆ), ಏಕಕಾ–ಒಂದು (ಕೃತಯುಗಮಾನದ)

---

ಕಲ್ಪವೆಂದು ಕರೆಯಲ್ಪಡುತ್ತದೆ. ದಿನಕಲ್ಪದ ಆರಂಭದಲ್ಲಿ ಮೊದಲನೆ ಮನುವಿನ ಕಾಲವು ಪ್ರಾರಂಭವಾಗುವ ಮೊದಲು, ೪,೮೦೦ ದೇವಮಾನ ವರ್ಷಗಳ ಅವಧಿಯ ಒಂದು ಕೃತಯುಗ ಸಮಾನವಾದ ಸಂಧಿಕಾಲವೂ, ಮುಂದೆ ಪ್ರತಿಮನ್ವಂತರದ ಮಧ್ಯದಲ್ಲಿ ಸಹ ಅಷ್ಟೇ ಕಾಲದ (ಒಂದು ಕೃತಯುಗದಷ್ಟು) ಸಂಧಿಕಾಲವಿರುತ್ತದೆ; ೧೪ ಮನ್ವಂತರಗಳ ಒಂದು ದಿನದಲ್ಲಿ ಒಟ್ಟು ಮನ್ವಂತರಗಳ ಸಂಧಿಕಾಲಗಳು ೧೫ ಬರುತ್ತವೆ. ಈ ಸಂಧಿ ಕಾಲಗಳಿಂದ ಸಹಿತವಾದ ೧೪ ಮನ್ವಂತರಗಳ ಒಟ್ಟು ಕಾಲವು ೧,೦೦೦ ಮಹಾಯುಗಗಳಾಗುತ್ತವೆ. ಇದು ಬ್ರಹ್ಮನ ಹಗಲು—ಅಷ್ಟೇ ರಾತ್ರಿ; ಇಂತಹ ೩೬೦ ದಿನಗಳಿಗೆ ಬ್ರಹ್ಮದೇವನ ಒಂದು ವರ್ಷ; ಬ್ರಹ್ಮನ ಆಯುರ್ಮಾನವು ೧೦೦ ವರ್ಷಗಳು;

ಸಂಧಿಕಾಲವೂ ಇದ್ದು ಸಂಧ್ಯಾಪಂಚದಶ–ಹದಿನೈದು ಸಂಧಿಕಾಲಗಳಾಗುತ್ತವೆ; ಮನ್ವಂತರಾಬ್ದಕೈಃ–ಮನ್ವಂತರಗಳ ವರ್ಷಗಳಿಂದ, ಯುಕ್ತಾ–ಈ ಸಂಧಿಕಾಲಗಳು ಕೂಡಿದರೆ, ಏವಂಕೃತ್ವಾ–ಹೀಗೆ ಗಣನೆ ಮಾಡುವುದರಿಂದ, ಯತ್ ಜಾಯತೇ–ಯಾವ ಕಾಲಾವಧಿಯು ದೊರೆಯುವುದೋ, ತತ್–ಅದು, ಮಹಾಯುಗ ಸಹಸ್ರಕಂ–೧೦೦೦ ಮಹಾಯುಗಗಳಷ್ಟು ಆಗುತ್ತದೆ; ಏತತ್ ತು–ಇದು (೧೦೦೦ ಮಹಾಯುಗಗಳ ಕಾಲವು) ಆದರೂ, ಪಿತಾಮಹದಿನಂ–ಬ್ರಹ್ಮದೇವನ ಹಗಲು (ಎನಿಸುತ್ತದೆ); ರಾತ್ರಿಃ–(ಪಿತಾಮಹನ) ರಾತ್ರಿಯೂ, ತಾವತೀ ಏವ ಹಿ–ಅಷ್ಟೇ (೧೦೦೦ ಮಹಾಯುಗಗಳ) ಅವಧಿಯುಳ್ಳದ್ದು ಎಂದು ಶಾಸ್ತ್ರಪ್ರಸಿದ್ಧವು; ಸಃ–ಹಗಲು ರಾತ್ರಿಗಳು ಸೇರಿದ ಆ ಒಂದು ದಿನವು, ಕಲ್ಪ ಇತಿ ಪ್ರೋಕ್ತಃ ಹಿ–(ದಿನ) ಕಲ್ಪವೆಂದು ಕರೆಯಲ್ಪಡುತ್ತದಷ್ಟೆ ಶತತ್ರಯಷಷ್ಟಿಕಂ–೩೬೦ ದಿನಗಳ, ತತ್–ಆ ಕಾಲವು, ಬ್ರಾಹ್ಮಂ ವರ್ಷಂ ಇತಿ–ಬ್ರಹ್ಮದೇವನ ಒಂದು ವರ್ಷವೆಂದು, ಪ್ರೋಕ್ತಂ–ಹೇಳಲ್ಪಡುತ್ತದೆ; ತಚ್ಛತಂ–ಅದರ (ಆ ವರ್ಷದ) ಒಂದು ನೂರು, ಪರಂ–'ಪರ'ವೆಂದು, ಉಚ್ಯತೇ–ಹೇಳಲ್ಪಡುತ್ತದೆ; ತದರ್ಧಂ ತು–ಅದರ ಅರ್ಧ ಭಾಗವಾದರೋ, ಪಂಚಾಶತ್ ಬ್ರಾಹ್ಮವರ್ಷಕಂ–ಬ್ರಹ್ಮದೇವನ ೫೦ ವರ್ಷಗಳು, ಪರಾರ್ಧಾ–'ಪರಾರ್ಧ'ವೆಂದು ಸ್ಯಾತ್–ಆಗುತ್ತದೆ. ಬ್ರಹ್ಮಣಃ–ಬ್ರಹ್ಮನಿಗೆ, ಪರಂ ಆಯುಃ–'ಪರ' (೧೦೦ ವರ್ಷಗಳು) ಕಾಲದ ಆಯುಷ್ಯವು; ಸ್ಯಾತ್ ಆಗಿರುತ್ತದೆ; ಚ–ಮತ್ತು, ತದತೀತೌ–ಅದು ಮುಗಿಯುತ್ತಿರಲು (ಆ 'ಪರ' ಕಾಲವು ಕಳೆಯಲು), ತಲ್ಲಯಃ–ಆತನಿಗೆ ಲಯವು (ಮರಣವುಂಟಾಗುತ್ತದೆ).

---

ಇದು 'ಪರ' ಎಂದು ಕರೆಯಲ್ಪಡುತ್ತದೆ; ಇದರ ಅರ್ಧಭಾಗವು 'ಪರಾರ್ಧ'ವೆಂದು ಕರೆಯಲ್ಪಡುತ್ತದೆ. ಈ 'ಪರ'ನಾಮಕ ಬ್ರಹ್ಮದೇವನ ಆಯುಷ್ಯವು ಪೂರ್ತಿಗೊಳ್ಳಲು, ಆತನಿಗೆ ಮರಣವುಂಟಾಗುತ್ತದೆ (ದೇಹವಿಯೋಗವಾಗುತ್ತದೆ) (೧೧-೧೬). ಪ್ರಲಯ ಕಾಲವೂ ಬ್ರಹ್ಮದೇವನ ಪರನಾಮಕ ೧೦೦ ವರ್ಷಗಳ ಆಯುರ್ಮಾನದಷ್ಟೇ ಆಗಿರುತ್ತದೆ. ಅದರಲ್ಲಿ ೮೭-೧/೨ ವರ್ಷಗಳು ಕಳೆದು, ೧/೮ನೇ ಭಾಗದ ೧೨-೧/೨ ವರ್ಷಗಳು ಉಳಿದಿರುವಾಗ ಯೋಗನಿದ್ರೆಯಿಂದ ಎದ್ದು[1] ಈ ಹಿಂದೆ ಹೇಳಿದಂತೆ ಮುಕ್ತರೊಡನೆ ಕ್ರೀಡಿಸಲು ತೊಡಗುತ್ತೇನೆ. ಪ್ರಲಯಕಾಲದ ಕಡೆಯ ದಿನ ಕಲ್ಪದಷ್ಟು ಕಾಲವು ಉಳಿದಿರುವಾಗ, ನನ್ನ ವಿವಿಧ ಕ್ರೀಡೆಗಳನ್ನು ಮುಗಿಸಿದೆನು; ಜಗತ್ಸೃಷ್ಟಿಯಲ್ಲಿ ಇಚ್ಛೆಯುಂಟಾಯಿತು. ಆಗ ನನ್ನ ಸಂಕಲ್ಪವನ್ನು (ಇಚ್ಛೆಯನ್ನು) ತಿಳಿದ ಲಕ್ಷ್ಮೀದೇವಿಯು,

1. ಶ್ರೀವಿಷ್ಣುವಿನ ಪ್ರಲಯಕಾಲದ ನಿದ್ರೆಯು, ನಿತ್ಯಜ್ಞಾನಸ್ವರೂಪನಾದ ಶ್ರೀಹರಿಗೆ, ಪಸ್ಮದಾದಿಗಳಂತೆ ಅಜ್ಞಾನದಿಂದ ಉಂಟಾದುದಲ್ಲ. ಯೋಗನಿದ್ರೆ ಎಂದರೆ, ಆತ್ಮಧ್ಯಾನದಿಂದ ಆತ್ಮಾನಂದದ ಭೋಗದಲ್ಲಿಯೇ ನಿರತನಾಗಿ, ಜಗದ್ವ್ಯಾಪಾರಗಳನ್ನು ಉಪಶಮಗೊಳಿಸಿ, ಶಯನಮಾಡಿರುವ ಅವಸ್ಥಾವಿಶೇಷದ ಅಭಿವ್ಯಕ್ತಿಗೊಳಿಸುವುದೆಂದರ್ಥ.

**ಪ್ರಲಯಃ ಪರಸಂಖ್ಯಾಕಃ ಸಾರ್ಧಂದ್ವಾದಶವರ್ಷಕಂ ।**
**ಅಷ್ಟಮಾಂಶೋಭವೇತ್ಸಾರ್ಧಂ ಸಪ್ತಾಶೀತ್ಯಬ್ದಕೇ ಗತೇ ॥ ೧೭ ॥**

**ಯೋಗನಿದ್ರಾಂ ವಿಮುಂಚಾಮಿ ತತಃ ಕ್ರೀಡಾಮಿ ಪೂರ್ವವತ್ ।**
**ತತಶ್ಚೈವಾಂತಿಮೇ ಕಲ್ಪೇ ಪ್ರಲಯಸ್ಯಾವಶೇಷಿತೇ ॥ ೧೮ ॥**

**ಕ್ರೀಡಾಃ ಸಮಾಪಿತಾಃ ಪಶ್ಚಾತ್ ಸಿಸೃಕ್ಷಾ ಮೇ ವ್ಯಜಾಯತ ।**
**ತತೋ ವಿದಿತತತ್ವಾ ಮೇ ಲಕ್ಷ್ಮೀರೂಪದ್ವಯಾನ್ವಿತಾ ॥**
**ಪ್ರಕೃತಿಂ ಬೋಧಯಾಮಾಸ ದೇವಾನಾಂ ದೇಹಸೃಷ್ಟಯೇ ॥ ೧೯ ॥**

**ಸತ್ವರಾಶೇಸ್ತತಃ ಸತ್ವಂ ಶ್ರೀಃ ಸಮಾದಾಯ ತಸ್ಥುಷೀ ।**
**ತಮೋರಾಶೇಸ್ತಥಾದಾಯ ತಮೋ ದುರ್ಗಾ ವ್ಯವಸ್ಥಿತಾ ॥ ೨೦ ॥**

ಪ್ರಲಯಃ-ಪ್ರಲಯಕಾಲವೂ, ಪರಸಂಖ್ಯಾಕಃ-ಪರಸಂಖ್ಯೆಯುಳ್ಳದ್ದು(ಬ್ರಹ್ಮನ೧೦೦ ವರ್ಷಗಳಷ್ಟು ಕಾಲಾವಧಿಯುಳ್ಳದ್ದು); ಸಾರ್ಧಂ ದ್ವಾದಶವರ್ಷಕಂ-೧೨-೧/೨ ವರ್ಷಗಳು, ಅಷ್ಟಮಾಂಶಃ-(ಪ್ರಲಯಕಾಲದ) ೧/೮ನೇ ಭಾಗವು, ಭವೇತ್-ಆಗುತ್ತದೆ; ಸಾರ್ಧಂಸಪ್ತಾಸೀತ್ಯಬ್ದಕೇ-(ಪ್ರಳಯ ಕಾಲದ ೧೦೦ ವರ್ಷಗಳಲ್ಲಿ) ೮೭-೧/೨ ವರ್ಷಗಳು, ಗತೇ-ಗತಿಸುತ್ತಿರಲು (ಕಳೆದಾಗ), ಯೋಗನಿದ್ರಾಂ-ಯೋಗನಿದ್ರೆಯನ್ನು, ವಿಮುಂಚಾಮಿ-ಬಿಡುತ್ತೇನೆ; ತತಃ-ನಂತರ, ಪೂರ್ವವತ್-ಈ ಮೊದಲು ಹೇಳಿದಂತೆ, ಕ್ರೀಡಾಮಿ-ಕ್ರೀಡಿಸುತ್ತೇನೆ; ತತಃ-ನಂತರ, ಪ್ರಲಯಸ್ಯ-ಪ್ರಳಯಕಾಲದ, ಅಂತಿಮೇ ಕಲ್ಪೇ ಏವ-ಕೊನೆಯ ಕಲ್ಪಮಾತ್ರವು (ಕಡೆಯದಿನ ಕಲ್ಪದಷ್ಟು ಕಾಲವು), ಅವಶೇಷಿತೇ- ಉಳಿದಿರಲು, ಕ್ರೀಡಾಃ-(ಮುಕ್ತರೊಡನೆ ನಡೆಸಿದ ನನ್ನ) ಕ್ರೀಡೆಗಳು, ಸಮಾಪಿತಾಃ-ಮುಗಿಸಲ್ಪಟ್ಟವು; ಪಶ್ಚಾತ್-ಆಮೇಲೆ, ಮೇ-ನನಗೆ, ಸಿಸೃಕ್ಷಾ ಅಪಿ-ಜಗತ್ತನ್ನುಸೃಷ್ಟಿಮಾಡಬೇಕೆಂಬ ಇಚ್ಛೆಯು, ಅಜಾಯತ-ಉಂಟಾಯಿತು; ತತಃ-ನಂತರ, ಮೇ-ನನ್ನ ವಿದಿತತತ್ವಾ-ಸಂಕಲ್ಪನಿಶ್ಚಯವನ್ನು ತಿಳಿದ, ಲಕ್ಷ್ಮೀಃ-ಲಕ್ಷ್ಮೀದೇವಿಯು, ರೂಪದ್ವಯಾನ್ವಿತಾ-ಎರಡು ರೂಪಗಳುಳ್ಳವಳಾಗಿ, ದೇವಾನಾಂ-ದೇವತೆಗಳ, ದೇಹ ಸೃಷ್ಟಯೇ-ದೇಹಗಳನ್ನು ಸೃಷ್ಟಿಮಾಡುವುದಕ್ಕಾಗಿ, ಪ್ರಕೃತಿಂ-(ತನ್ನ ಅಧೀನವಾದ) ಜಡಪ್ರಕೃತಿಯನ್ನು, ಬೋಧಯಾಮಾಸ-ಜಾಗ್ರತಗೊಳಿಸಿ

---

ಶ್ರೀ ಮತ್ತು ದುರ್ಗಾನಾಮಕ ಎರಡು ರೂಪಗಳಿಂದ ಸಿದ್ಧಳಾಗಿ ನಿಂತು, ದೇವತೆಗಳ ದೇಹಸೃಷ್ಟಿಗಾಗಿ ತನ್ನಿಂದ ನಿಯಮ್ಯವಾದ ಮೂಲಪ್ರಕೃತಿಯನ್ನು ಪ್ರಬೋಧಿಸಿದಳು. ಪ್ರಕೃತಿಯಲ್ಲಿದ್ದ ಸೂಕ್ಷ್ಮ ಸತ್ವಗುಣರಾಶಿಯಿಂದ, ಸ್ವಲ್ಪಭಾಗ ಸತ್ವಗುಣವನ್ನು ಕೈಗೆ ತೆಗೆದುಕೊಂಡು ಶ್ರೀರೂಪದಿಂದಲೂ, ಹಾಗೆಯೇ ಸೂಕ್ಷ್ಮತಮೋರಾಶಿಯಿಂದ, ಸ್ವಲ್ಪ

ದಧೇ (ಪ್ರೇರಿಸಿದಳು–ಕಾರ್ಯೋನ್ಮುಖವನ್ನಾಗಿ ಮಾಡಿದಳು); ತತಃ–ಅನಂತರ, ಸತ್ತ್ವರಾಶೇಃ–(ಮೂಲಪ್ರಕೃತಿಯಲ್ಲಿರುವ ಸೂಕ್ಷ್ಮರೂಪದ) ಸತ್ತ್ವಗುಣದ ರಾಶಿಯಿಂದ, ಸತ್ತ್ವಂ–(ಸ್ವಲ್ಪಭಾಗ) ಸತ್ತ್ವಗುಣವನ್ನು ಶ್ರೀಃ–ಶ್ರೀರೂಪಳಾದ ಲಕ್ಷ್ಮೀದೇವಿಯು, ಸಮಾದಾಯ–ತೆಗೆದುಕೊಂಡು, ತಸ್ಥುಷೀ–ನಿಂತಳು; ತಥಾ–ಹಾಗೆಯೇ, ತಮೋರಾಶೇಃ–ತಮೋಗುಣದ ರಾಶಿಯಿಂದ, ತಮಃ–ತಮೋಗುಣವನ್ನು ಆದಾಯ–ತಂದು (ತೆಗೆದುಕೊಂಡು), ದುರ್ಗಾ–ದುರ್ಗಾ ರೂಪದಿಂದ ಲಕ್ಷ್ಮೀದೇವಿಯು, ವ್ಯವಸ್ಥಿತಾ–ಸಿದ್ಧಳಾಗಿ ನಿಂತಳು.

**ಅತಿಶ್ವೇತಂ ಶುದ್ಧಸತ್ತ್ವಂ ಅತಿಶ್ಯಾಮಂ ತಮಸ್ತಥಾ ।**
**ತತೋ ಮಮೇಚ್ಛಯೈವೈಷಾ ಲಕ್ಷ್ಮೀರ್ಭೂರೂಪಮಾಸ್ಥಿತಾ ॥ ೨೦ ॥**

**ತತೋ ಭೂಸ್ತಮಸೋ ರಾಶೇಃ ಕಿಂಚಿಚ್ಚಕ್ರೇ ತಮಃ ಪೃಥಕ್ ।**
**ಸತ್ತ್ವರಾಶೇಸ್ತಥಾ ಸತ್ತ್ವಂ ಪೃಥಕ್ ಚೈವ ಚಕಾರ ಹ ॥ ೨೧ ॥**

**ವಿಲೋಡಯಾಮಾಸ ತಮಃ ಸತ್ತ್ವೇ ಸತ್ತ್ವಂ ತಮಸ್ಯಪಿ ।**
**ತತಸ್ತಸ್ಮಾತ್ಸಮಾದಾಯ ಮಿಶ್ರೀಭೂತಾದ್ಗುಣದ್ವಯಾತ್ ॥ ೨೨ ॥**

**ಭಾಗದ್ವಯಯುತಂ ಚಕ್ರೇ ಶಬಲಂ ತದ್ರಜೋಽಭವತ್ ।**

ಶುದ್ಧಸತ್ತ್ವಂ–ಅಮಿಶ್ರಿತ ಸತ್ತ್ವಗುಣವು, ಅತಿಶ್ವೇತಂ–ಅತ್ಯಂತ ಶುಭ್ರ (ಬಿಳಿ)

---

ತಮೋಗುಣವನ್ನು ತೆಗೆದುಕೊಂಡು ದುರ್ಗಾರೂಪದಿಂದಲೂ, ನನ್ನೆದುರು ನಿಂತಳು (೧೭-೨೦). ಸತ್ತ್ವಗುಣವು ಅತ್ಯಂತ ಶುಭ್ರವಾದುದು; ತಮೋಗುಣವು ನೀಲವರ್ಣವುಳ್ಳದ್ದು (ಅತಿಕಪ್ಪು); ಹಿಂದೆ ಹೇಳಿದಂತೆ ಶ್ರೀ ಮತ್ತು ದುರ್ಗಾರೂಪಗಳಿಂದ ಬಂದು ನಿಂತ ಶ್ರೀ ಮಹಾಲಕ್ಷ್ಮೀದೇವಿಯು, ನನ್ನ ಇಚ್ಛಾಮಾತ್ರದಿಂದ, ಭೂನಾಮಕ ಮತ್ತೊಂದು ರೂಪವನ್ನು ಧರಿಸಿದಳು; ಈ ಭೂದೇವಿಯು, ಸತ್ತ್ವಗುಣರಾಶಿಯಿಂದ, ಸ್ವಲ್ಪ ಸತ್ತ್ವಗುಣವನ್ನೂ, ತಮೋಗುಣರಾಶಿಯಿಂದ ಸ್ವಲ್ಪ ತಮೋಗುಣವನ್ನೂ ಬೇರ್ಪಡಿಸಿ, ಸತ್ತ್ವಗುಣವನ್ನು ತಮೋಗುಣದಲ್ಲಿಯೂ, ತಮೋಗುಣವನ್ನು ಸತ್ತ್ವಗುಣದಲ್ಲಿಯೂ ಬೆರೆಸಿದಳು; ಹಾಗೆ ಬೆರೆಸಿದ ಎರಡು ಗುಣರಾಶಿಗಳಿಂದ ಸಮವಾದ ಎರಡು ಭಾಗಗಳನ್ನು ಮಿಶ್ರಮಾಡಿದಳು. ಅದು ಮಿಶ್ರವರ್ಣದ (ಶಬಲ) ರಜೋಗುಣವಾಯಿತು[1] (೨೦-೨೨). ಅಧಿಕವಾದ ರಜೋಗುಣಕ್ಕೆ ಅದಕ್ಕಿಂತ ಕಡಿಮೆ (ಸ್ವಲ್ಪವಾದ) ಸತ್ತ್ವಗುಣವನ್ನೂ, ಅದಕ್ಕೂ

1. ಬಿಳಿ ಮತ್ತು ಕಪ್ಪು ವರ್ಣಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರಸಿದರೆ, ಮಿಶ್ರಣದಿಂದಾದ ಪದಾರ್ಥವು ಕೆಂಪು ವರ್ಣವುಳ್ಳದ್ದಾಗುತ್ತದೆ. ಆದ್ದರಿಂದ ರಜೋಗುಣವು ಕೆಂಪು ವರ್ಣವೆಂದೂ ನಿರೂಪಿಸಲಾಗುತ್ತದೆ.

ವರ್ಣವುಳ್ಳದ್ದು; ತಥಾ–ಹಾಗೆಯೇ, ತಮಃ–ಶುದ್ಧತಮೋಗುಣವು, ಅತಿಶ್ಯಾಮಂ–ಅತಿ ಕಪ್ಪು ವರ್ಣವುಳ್ಳದ್ದು; ತತಃ–ಶ್ರೀ ಮತ್ತು ದುರ್ಗೆಯರು, ನನ್ನೆದುರು ನಿಂತಬಳಿಕ, ಮಮ–ನನ್ನ ಇಚ್ಛಯಾ ಏವ–ಇಚ್ಛೆಯಿಂದಲೇ, ಏಷಾ ಲಕ್ಷ್ಮೀಃ–ಈ ಲಕ್ಷ್ಮೀದೇವಿಯು, ಭೂರೂಪಂ–ಭೂನಾಮಕ ಮತ್ತೊಂದು ರೂಪವನ್ನು, ಆಸ್ಥಿತಾ–ಹೊಂದಿದಳು; ತತಃ–ನಂತರ, ಭೂಃ–ಭೂದೇವಿಯು, ತಮಸಃ ರಾಶೇಃ–ತಮೋಗುಣದ ರಾಶಿಯಿಂದ, ಕಿಂಚಿತ್ ತಮಃ–ಸ್ವಲ್ಪತಮೋಗುಣವನ್ನು, ಪೃಥಕ್ ಚಕ್ರೇ–ಬೇರೆ ಮಾಡಿದಳು (ಪ್ರತ್ಯೇಕಿಸಿ ತೆಗೆದಳು); ತಥಾ–ಹಾಗೆಯೇ, ಸತ್ತ್ವರಾಶೇಃ–ಸತ್ತ್ವಗುಣದ ರಾಶಿಯಿಂದ, ಸತ್ತ್ವಂ–ಸ್ವಲ್ಪ ಸತ್ತ್ವಗುಣವನ್ನು, ಪೃಥಕ್ ಚೈವ–ಬೇರೆಯಾಗಿಯೇ, ಚಕಾರ ಹ–ತೆಗೆದಳು (ಮಾಡಿದಳು), ನಿಶ್ಚಯವು; ತಮಃ–ತಮೋಗುಣವನ್ನು (ಹಾಗೆ ಪ್ರತ್ಯೇಕಿಸಿದ ತಮೋಗುಣವನ್ನು), ಸತ್ತ್ವೇ–ಸತ್ತ್ವ ಗುಣದಲ್ಲಿಯೂ, ತಮಸಿ–ತಮೋಗುಣದಲ್ಲಿ, ಸತ್ತ್ವಂ ಅಪಿ–ಸತ್ತ್ವಗುಣವನ್ನೂ, ವಿಲೋಡಯಾಮಾಸ–ಬೆರೆಸಿ ಕಲಸಿದಳು; ತತಃ–ಅನಂತರ, ತಸ್ಮಾತ್–ಆ, ಮಿಶ್ರೀಭೂತಾತ್–ಹಾಗೆ ಮಿಶ್ರಮಾಡಲ್ಪಟ್ಟ, ಗುಣದ್ವಯಾತ್–ಎರಡು ಗುಣಗಳಿಂದ, ಭಾಗದ್ವಯಯುತಂ–ಸಮವಾದ ಎರಡು ಭಾಗಗಳುಳ್ಳದ್ದನ್ನಾಗಿ, ಚಕ್ರೇ–(ಭೂದೇವಿಯು) ಮಾಡಿದಳು; ತತ್–ಅದು, ಶಬಲಂ–ಮಿಶ್ರವಾದ ವರ್ಣವುಳ್ಳ, ರಜಃ–ರಜೋಗುಣವು, ಅಭವತ್–ಉಂಟಾಯಿತು.

**ಏವಂ ರಾಶಿತ್ರಯೇ ಜಾತೇ ಶ್ರೀಭೂದುರ್ಗಾಭಿರಕ್ಷಿತೇ ॥ ೨೪ ॥**

**ರಜೋಭೂಯಿಷ್ಠಮಾದಾಯ ತತೋಽಲ್ಪಂ ಸತ್ತ್ವಮೇವ ತು ।**
**ತತೋಽಪ್ಯಲ್ಪಂ ತಮಶ್ಚಾಥ ತ್ರಯಮೇಕತ್ರ ಕ್ಲಿಪ್ತವಾನ್ ॥ ೨೫ ॥**

**ಮಹತ್ತತ್ತ್ವಂ ತು ತತ್ಪ್ರೋಕ್ತಂ ತತೋಽಪ್ಯರ್ಧಂ ಸಮಾದದೇ ।**
**ಕಿಂಚಿತ್ತತ್ರ ತಮಃ ಕ್ಷಿಪ್ತ್ವಾ ಹ್ಯಹಂಕಾರಂ ಕೃತವಾನಹಂ ॥ ೨೬ ॥**

ಏವಂ–ಹೀಗೆ, ಶ್ರೀಭೂದುರ್ಗಾಭಿರಕ್ಷಿತೇ–ಶ್ರೀಭೂದುರ್ಗಾರೂಪಗಳಿಂದ ರಕ್ಷಿತವಾದ, ರಾಶಿತ್ರಯೇ–ರಾಶಿಗಳ ಮೂರು (ಸತ್ತ್ವ, ರಜ, ತಮಗಳೆಂಬ ಮೂರು ಗುಣರಾಶಿಗಳು), ಜಾತೇ–ಉಂಟಾಗುತ್ತಿರಲು; ರಜೋಭೂಯಿಷ್ಠಂ–ಅಧಿಕವಾದ ರಜೋ

---

ಅಲ್ಪವಾದ ತಮೋಗುಣವನ್ನೂ ಕೂಡಿಸಿ, ಶ್ರೀವಿಷ್ಣುವು, ಮಹತ್ತತ್ತ್ವವನ್ನು ನಿರ್ಮಿಸಿದನು; ಮಹತ್ತತ್ತ್ವದಲ್ಲಿ ಅರ್ಧಭಾಗವನ್ನು ಬೇರ್ಪಡಿಸಿ, ಅದಕ್ಕೆ ಸ್ವಲ್ಪ ತಮೋಗುಣವನ್ನು ಕೂಡಿಸಿ, ಅಹಂಕಾರತತ್ತ್ವವನ್ನು ನಿರ್ಮಿಸಿದನು (೨೪-೨೬). ಅಹಂಕಾರ ತತ್ತ್ವವು ಸಿದ್ಧವಾಗಲು, ಅದನ್ನು ಮೂರು ರಾಶಿಗಳನ್ನಾಗಿ ವಿಭಾಗಿಸಿ, ಒಂದರಲ್ಲಿ ಸತ್ತ್ವಗುಣವನ್ನೂ ಮತ್ತೊಂದರಲ್ಲಿ ರಜೋಗುಣವನ್ನೂ ಮೂರನೆಯದರಲ್ಲಿ ತಮೋಗುಣವನ್ನೂ ಸಮಾನಪ್ರಮಾಣದಲ್ಲಿ

ಗುಣವನ್ನು, ಆದಾಯ–ತೆಗೆದುಕೊಂಡು, ತತಃ–ಅದಕ್ಕಿಂತ, ಅಲ್ಪಂ–ಸ್ವಲ್ಪವಾದ (ಕಡಿಮೆಯಾದ), ಸತ್ತ್ವಂ ಏವ ತು–ಸತ್ತ್ವಗುಣವನ್ನೂ, ತತೋಽಪಿ–ಅದಕ್ಕಿಂತ (ಸತ್ತ್ವಗುಣಕ್ಕಿಂತ), ಅಲ್ಪಂ–ಕಡಿಮೆಯಾದ, ತಮಶ್ಚ–ತಮೋಗುಣವನ್ನೂ (ಆದಾಯ–ತೆಗೆದುಕೊಂಡು), ಅಥ–ಅನಂತರ, ತ್ರಯಂ–ಆ ಮೂರನ್ನೂ, ಏಕತ್ರ–ಒಂದಾಗಿ, ಕ್ಷಿಪ್ತವಾನ್–ಮಾಡಿದೆನು (ಕೂಡಿಸಿದೆನು); ತತ್–ಈ ಮಿಶ್ರಣದಿಂದಾದುದು, ಮಹತ್ತತ್ತ್ವಂ ತು–ಮಹತ್ತತ್ತ್ವವೆಂದೇ, ಪ್ರೋಕ್ತಂ–ಹೇಳಲ್ಪಡುತ್ತದೆ; ತತೋಽಪಿ ಅರ್ಧಂ–ಅದರಲ್ಲಿ ಸಹ ಅರ್ಧಭಾಗವನ್ನು ಸಮಾದದೇ–ತೆಗೆದುಕೊಂಡೆನು; ತತ್ರ–ಅದರಲ್ಲಿ (ಆ ಮಹತ್ತತ್ತ್ವದ ಅರ್ಧಭಾಗದಲ್ಲಿ), ಕಿಂಚಿತ್–ಸ್ವಲ್ಪ ತಮಃ–ತಮೋಗುಣವನ್ನು ಕ್ಷಿಪ್ತ್ವಾ–ಹಾಕಿ, ಅಹಂ–ನಾನು, ಅಹಂಕಾರಂ–ಅಹಂಕಾರತತ್ತ್ವವನ್ನು ಕೃತವಾನ್–ಮಾಡಿದೆನು.

ಅಹಂಕಾರಂ ವಿಭಜ್ಯಾಥ ತ್ರೀನ್ ರಾಶೀನ್ ಕೃತವಾನಹಂ ।
ರಾಶಿತ್ರಯಂ ಕ್ರಮೇಣೈವ ತತ್ತದ್ರಾಶಿಂ ಸಮಂ ಪುನಃ ॥ ೨೭ ॥

ಗುಣತ್ರಯಂ ವಿನಿಕ್ಷಿಪ್ತಮೇಕಸ್ಮಿನ್ನೇಕಮೇವ ಹಿ ।
ಯತ್ರ ಸತ್ತ್ವಂ ವಿನಿಕ್ಷಿಪ್ತಂ ಜಾತೋ ವೈಕಾರಿಕೋ ಹಿ ಸಃ ॥ ೨೮ ॥

ಕೂಡಿಸಿದೆನು; ಅದರಿಂದ, ಕ್ರಮವಾಗಿ ವೈಕಾರಿಕ, ತೈಜಸ, ತಾಮಸಗಳೆಂದು ಕರೆಯಲ್ಪಡುವ ಅಹಂಕಾರತತ್ತ್ವಪ್ರಭೇದಗಳು ಸೃಷ್ಟವಾದವು; ವೈಕಾರಿಕದ ಅರ್ಧಭಾಗದಿಂದ,[1] ಬ್ರಹ್ಮಾದಿ ದೇವತೆಗಳ ದೇಹಗಳನ್ನೂ ಮನಸ್ತತ್ತ್ವವನ್ನೂ;

1. ವೈಕಾರಿಕಾಹಂಕಾರದಿಂದ, ತತ್ತ್ವಾಭಿಮಾನಿದೇವತೆಗಳ ದೇಹಗಳು ನಿರ್ಮಿತವಾದವು; ವೈಕಾರಿಕದಲ್ಲಿ ಸತ್ತ್ವಗುಣವೇ ಬಹಳವಾಗಿರುತ್ತದೆ; ಬ್ರಹ್ಮದೇವನ ದೇಹವು ಬಹು ಸತ್ತ್ವಮಯವಾದುದು—ಮಹತ್ತತ್ತ್ವದಿಂದ ಆದುದೆಂದೂ ಹೇಳಲಾಗುತ್ತದೆ. ಮಹತ್ತತ್ತ್ವದಲ್ಲಿ ಈ ಹಿಂದೆ ಹೇಳಿದಂತೆ, ರಜೋಗುಣ, ತಮೋಗುಣಾಂಶಗಳಿರುತ್ತವೆ; ಅಲ್ಪವಾದ ತಮೋಗುಣವನ್ನು ಮಹತ್ತತ್ತ್ವಕ್ಕೆ ಕೂಡಿಸಿದ್ದರಿಂದ, ಅಹಂಕಾರತತ್ತ್ವವು ನಿರ್ಮಿತವಾದುದಾದರೂ, ವೈಕಾರಿಕದಲ್ಲಿ ಪುನಃ ಸತ್ತ್ವಗುಣವು ಸೇರಿದ್ದರಿಂದ ಸತ್ತ್ವಗುಣಾಧಿಕ್ಯವಿದೆ. ಬ್ರಹ್ಮದೇವನ ದೇಹನಿರ್ಮಾಣದಲ್ಲಿರುವ ರಜಸ್ತಮೋಗುಣಾಂಶಗಳು, ಅತ್ಯಲ್ಪ ಮತ್ತು ತಮ್ಮ ಕಾರ್ಯಗಳಾದ ರಾಗ, ಅಜ್ಞಾನಾದಿ ಕಾರ್ಯಗಳನ್ನು ಉತ್ಪಾದಿಸಲು ಅಸಮರ್ಥವಾದ ಸ್ಥಿತಿಯಲ್ಲಿವೆ. 'ಸತ್ತ್ವಸತ್ತ್ವಮಹಾಸತ್ತ್ವ ಸೂಕ್ಷ್ಮ ಸತ್ತ್ವಶತ್ರುವಿರ್ಮುಖಃ' (ಗೀತಾ-ಭಾ) ಮತ್ತು 'ವಿಶುದ್ಧಸತ್ತ್ವ ಬ್ರಹ್ಮಾದೇಃ ಶರೀರೇ ಸಂಸ್ಥಿತೋ ಹರಿಃ' (ಭಾಗ-ತಾ) ಮೊದಲಾದ ವಾಕ್ಯಗಳು ಬ್ರಹ್ಮದೇವನ ದೇಹವು ಶುದ್ಧಸತ್ತ್ವಾತ್ಮಕವೆಂದು ಹೇಳಿದರೂ, ಮಹತ್ತತ್ತ್ವದಲ್ಲಿರುವ ರಜಸ್ತಮೋಗುಣಗಳು ಬಂಧಕಶಕ್ತಿಶೂನ್ಯಗಳಾದ್ದರಿಂದ, ಹಾಗೆ ಹೇಳಲಾಗಿರುತ್ತದೆಂದು ತಿಳಿಯಬೇಕು. ಅಲ್ಲಿರುವ ಶುದ್ಧಸತ್ತ್ವಗುಣವೂ ಸಹ ಅಬಂಧಕವಾದುದೇ ಸರಿ; 'ಅಬಂಧಕ ಪರಮಸೂಕ್ಷ್ಮ ಸತ್ತ್ವೋಪಾದಾನಕ ದೇಹಾದಿಮತ್ತ್ವಾಭಿಧಾನಾತ್' ಎಂದು (ಸತ್ತತ್ತ್ವರತ್ನಮಾಲಾ)ದಲ್ಲಿ ಹೇಳಲಾಗಿದೆ. ಬ್ರಹ್ಮೇತರ ದೇವತೆಗಳಿಗೆ, ತಾರತಮ್ಯಾನುಸಾರವಾದ ಅತ್ಯಲ್ಪಗುಣಬಂಧವನ್ನು ತಿಳಿಯಬೇಕು.

ರಜಸಾ ತೈಜಸಃ ಪ್ರೋಕ್ತಃ ತಮಸಾಚ್ಚೈವ ತಾಮಸಃ ।
ಅರ್ಧವೈಕಾರಿಕಾದ್ವೃಷ್ಟದೇವದೇಹಾನ್ಮನಸ್ತಥಾ ॥ ೨೯ ॥

ವಿನಿರ್ಮಮೇ ತೈಜಸಾರ್ಧಾತ್ ಜ್ಞಾನಕರ್ಮೇಂದ್ರಿಯಾಣಿ ಚ ।
ಋಷಿಗಂಧರ್ವಮುಖ್ಯಾನಾಂ ದೇಹಾನಪಿ ವಿಭಾಗಶಃ ॥ ೩೦ ॥

ತಾಮಸಾರ್ಧಾತ್ತು ಕೃತವಾನ್ ಸೂಕ್ಷ್ಮಂ ಶಬ್ದಾದಿಪಂಚಕಂ ।
ಯಕ್ಷರಾಕ್ಷಸದೇಹಾಂಶ್ಚ ತಥೈವಾನ್ಯಾನ್ ಸಹಸ್ರಶಃ ॥ ೩೧ ॥

ಅಥ–ಅನಂತರದಲ್ಲಿ ಅಹಂ–ನಾನು, ಅಹಂಕಾರಂ–ಅಹಂಕಾರತತ್ತ್ವವನ್ನು ವಿಭಜ್ಯ–ವಿಭಾಗಿಸಿ, ತ್ರೀನ್ ರಾಶೀನ್–ಮೂರು ರಾಶಿಗಳನ್ನು ಕೃತವಾನ್; ಕ್ರಮೇಣ ಏವ–ಕ್ರಮವಾಗಿಯೇ (ಒಂದಾದನಂತರ ಒಂದರಂತೆ), ರಾಶಿತ್ರಯಂ–ಆ ಮೂರು ರಾಶಿಗಳನ್ನು, ಪುನಃ–ಮತ್ತು, ತತ್ತದ್ರಾಶಿಂ–ಆಯಾ ರಾಶಿಯನ್ನು (ಒಂದೊಂದು ರಾಶಿಯಲ್ಲಿಯೂ), ಸಮಂ–(ಪರಸ್ಪರ) ಸಮಪರಿಮಾಣದ, ಗುಣತ್ರಯಂ–ಮೂರು (ಸತ್ತ್ವಾದಿ) ಗುಣಗಳನ್ನು ಏಕಸ್ಮಿನ್–ಒಂದು ರಾಶಿಯಲ್ಲಿ (ಅಹಂಕಾರತತ್ತ್ವದಿಂದ ವಿಭಾಗಿಸಲ್ಪಟ್ಟ ಒಂದರಲ್ಲಿ), ಏಕಮೇವ–ಒಂದನ್ನೇ (ಎಂದರೆ ಒಂದರಲ್ಲಿ ಸತ್ತ್ವಗುಣವನ್ನೂ, ಮತ್ತೊಂದರಲ್ಲಿ ಸಮವಾದ ರಜೋಗುಣವನ್ನೂ, ಮೂರನೇ ರಾಶಿಯಲ್ಲಿ ಅಷ್ಟೇ ಪರಿಮಾಣದ ತಮೋಗುಣವನ್ನೂ), ವಿನಿಕ್ಷಿಪ್ತಂ–(ಹಾಕಿದೆನು) ಹಾಕಲಾಯಿತು; ಯತ್ರ–ಯಾವ ರಾಶಿಯಲ್ಲಿ ಸತ್ತ್ವಂ–ಸತ್ತ್ವಗುಣವು, ವಿನಿಕ್ಷಿಪ್ತಂ–ಹಾಕಲ್ಪಟ್ಟಿತೋ, ಸಃ–ಅದು (ಆ ರಾಶಿಯು), ವೈಕಾರಿಕಃ ಜಾತಃ–ವೈಕಾರಿಕ ಅಹಂಕಾರವೆಂದು ಆಯಿತು; ರಜಸಾ–ರಜೋಗುಣದ ಮಿಶ್ರಣದಿಂದ, ತೈಜಸಃ–ತೈಜಸಾಹಂಕಾರವೆಂದೂ, ತಮಸಾ–ತಮೋ

---

ತೈಜಸಾಹಂಕಾರದ ಅರ್ಧಭಾಗದಿಂದ,[1] ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನೂ, ಋಷಿ ಗಂಧರ್ವ ಮೊದಲಾದವರ ದೇಹಗಳನ್ನೂ ಯಥೋಚಿತ ವಿಭಾಗಯುಕ್ತಗಳನ್ನಾಗಿ ನಿರ್ಮಿಸಿದೆನು; ತಾಮಸಾರ್ಧದಿಂದ ಶಬ್ದಾದಿ ಪಂಚತನ್ಮಾತ್ರೆಗಳನ್ನೂ, ಯಕ್ಷರಾಕ್ಷಸರ ದೇಹಗಳನ್ನೂ ಇನ್ನೂ ಇತರ ಅಸಂಖ್ಯ ಪ್ರಕಾರಕ ಪ್ರಾಣಿದೇಹಗಳನ್ನೂ ನಿರ್ಮಿಸಿದೆನು (೨೭-೩೧).

---

1. ವೈಕಾರಿಕಾದಿ ಮೂರು ಅಹಂಕಾರತತ್ತ್ವಗಳ ಉಳಿದ ಅರ್ಧಭಾಗಗಳನ್ನು ಕೆಳಗಿನ (ಮುಂದೆ ನಿರ್ಮಾಣವಾಗುವ) ತತ್ತ್ವಗಳ ಕಾಲೋಚಿತ ಉಪಚಯಗಳಿಗಾಗಿ, ಯಥಾಯೋಗ್ಯವಾಗಿ ಉಪಯೋಗಿಸಲ್ಪಡುತ್ತವೆ. ಮಣ್ಣಿನ ಗೋಡೆಯನ್ನು ಮಣ್ಣಿನಿಂದಲೂ, ಗಾರೆಯ ಗೋಡೆಯನ್ನು ಗಾರೆಯಿಂದಲೂ ಲೇಪಿಸಿ ದೃಢಗೊಳಿಸುವಂತೆ (ರಿಪೇರಿ ಮಾಡುವಂತೆ) ತತ್ತ್ವಗಳ ಉಪಚಯವನ್ನು ತಿಳಿಯಬೇಕು.

ಗುಣಮಿಶ್ರಣದಿಂದ, ತಾಮಸಾಚ್ಚೈವ-ತಾಮಸಾಹಂಕಾರವೆಂದೂ, ಪ್ರೋಕ್ತ-ಕರೆಯಲ್ಪಡುತ್ತದೆ; ಅರ್ಧವೈಕಾರಿಕಾತ್-ವೈಕಾರಿಕಾಹಂಕಾರದ ಅರ್ಧಭಾಗದಿಂದ, ಬ್ರಹ್ಮದೇವದೇಹಾನ್-ಬ್ರಹ್ಮಾದಿ ದೇವತೆಗಳ ದೇಹಗಳನ್ನೂ, ತಥಾ-ಹಾಗೂ, ಮನಃ-ಮನಸ್ಸನ್ನೂ (ಮನಸತ್ತ್ವವನ್ನೂ), ವಿನಿರ್ಮಮೇ-ನಾನು (ಶ್ರೀವಿಷ್ಣುವು) ನಿರ್ಮಿಸಿದೆನು; ತೈಜಸಾರ್ಧಾತ್-ತೈಜಸಾಹಂಕಾರದ ಅರ್ಧಭಾಗದಿಂದ, ಜ್ಞಾನಕರ್ಮೇಂದ್ರಿಯಾಣಿ ಚ-ಜ್ಞಾನೇಂದ್ರಿಯ (ಶ್ರೋತ್ರ, ಚಕ್ಷು, ಸ್ಪರ್ಶ, ರಸನ, ಘ್ರಾಣಗಳೆಂಬ ಇಂದ್ರಿಯ)ಗಳನ್ನೂ ಕರ್ಮೇಂದ್ರಿಯ (ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಇಂದ್ರಿಯ)ಗಳನ್ನೂ ಅಪಿ-ಮತ್ತು ಋಷಿಗಂಧರ್ವಮುಖ್ಯಾನಾಂ-ಋಷಿಗಳು, ಗಂಧರ್ವರೇ ಮೊದಲಾದವರ, ದೇಹಾನ್-ದೇಹಗಳನ್ನೂ ವಿಭಾಗಶಃ-ಯಥೋಚಿತವಾದ ವಿಭಾಗಗಳಿಂದ ಸಹಿತವಾಗಿ, (ವಿನಿರ್ಮಮೇ-ನಿರ್ಮಿಸಿದೆನು); ತಾಮಸಾರ್ಧಾತ್ತು-ತಾಮಸಾಹಂಕಾರದ ಅರ್ಧಭಾಗದಿಂದ, ಸೂಕ್ಷ್ಮಂ-ಸೂಕ್ಷ್ಮಗಳಾದ, ಶಬ್ದಾದಿಕಂ-ಶಬ್ದಾದಿ (ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ತನ್ಮಾತ್ರೆ)ಗಳನ್ನೂ ಚ-ಮತ್ತು ಯಕ್ಷರಾಕ್ಷಸದೇಹಾನ್-ಯಕ್ಷರು, ರಾಕ್ಷಸರು, ಇವರ ದೇಹಗಳನ್ನೂ, ತಥೈವ-ಹಾಗೆಯೇ (ಅದರಿಂದಲೇ-ತಾಮಸಾಹಂಕಾರದಿಂದಲೇ), ಅನ್ಯಾನ್-ಬೇರೆ, ಸಹಸ್ರಶಃ-ಸಹಸ್ರ (ಬಹು-ಅಸಂಖ್ಯ) ಪ್ರಕಾರದ ದೇಹಗಳನ್ನೂ ಕೃತವಾನ್-ಮಾಡಿದವನು (ಆದೆನು-ನಿರ್ಮಿಸಿದೆನು).

ಹಸ್ತಿನೋಽಶ್ವಾನ್ ವೃಕಾನ್ ಗಾಶ್ಚ ಮೃಗವ್ಯಾಘ್ರಸರೀಸೃಪಾನ್ ।
ಅಜಾನವೀನ್ ಶುನಃ ಕೋಲಾನ್ ಸೃಗಾಲಾನ್ ಪಕ್ಷಿಣಸ್ತರೂನ್ ॥ ೩೨ ॥

ತೃಣಗುಲ್ಮಲತಾದೀಂಶ್ಚ ಬಿಡಾಲಾದೀನ್ ತಥಾಖಿಲಾನ್ ।
ತಥಾ ಮಕರಮೀನಾದೀನ್ ಮದ್ರಕರ್ಕಟಭುವೃಕಾನ್ ॥ ೩೩ ॥

ಏವಂ ಜಲಚರಾನ್ ಸರ್ವಾನ್ ಗ್ರಾಮ್ಯಾರಣ್ಯಪಶೂನಪಿ ।
ಕಲ್ಪಯಿತ್ವಾಽಖಿಲಾನ್ ಪಶ್ಚಾಜ್ಜೀವರಾಶೀನ್ ವ್ಯಲೋಕಯಂ ॥ ೩೪ ॥

---

ತಾಮಸಾಹಂಕಾರದಿಂದ ನಿರ್ಮಿತವಾದ ಪ್ರಾಣಿದೇಹಗಳು ಇಲ್ಲಿ ವಿವರಿಸಲ್ಪಟ್ಟಿವೆ. ಗಜ, ಕುದುರೆ, ಗೋವು, ಜಿಂಕೆ, ತೋಳ, ಹುಲಿ, ಸರ್ಪ ಮೊದಲಾದವುಗಳು; ಮೇಕೆ, ಕುರಿ, ನಾಯಿ, ಹಂದಿ, ನರಿ, ಪಕ್ಷಿ, ವೃಕ್ಷ, ತೃಣ, ಗುಲ್ಮ (ಪೊದೆಯಾಗಿ ಬೆಳೆಯುವ ಗಿಡಗಳು), ಬಳ್ಳಿ ಮೊದಲಾದವುಗಳು; ಬೆಕ್ಕು ಮೊದಲಾದ ವಿವಿಧ ಪ್ರಾಣಿಗಳು; ಮಕರ, ಮೀನು, ಏಡಿ ಮೊದಲಾದ ಸಮಸ್ತ ಜಲಚರ ಪ್ರಾಣಿಗಳು, ಗ್ರಾಮ್ಯ ಮತ್ತು ಆರಣ್ಯಕ ಪಶುಗಳು, ಇತ್ಯಾದಿ ನಾನಾ ಪ್ರಾಣಿದೇಹಗಳನ್ನು ಸೃಷ್ಟಿಮಾಡಿದ ನಂತರ, ಶ್ರೀವಿಷ್ಣುವು, ಸೃಷ್ಟರಾಗಬೇಕಾದ (ಸ್ಥೂಲದೇಹಸಂಬಂಧವನ್ನು ಹೊಂದಿಸಲ್ಪಡಬೇಕಾದ) ಜೀವರಾಶಿಗಳನ್ನು ನೋಡಿದನು (೩೦-೩೪). ಸೃಷ್ಟಿಗಾಗಿ ಜೀವರಾಶಿಗಳನ್ನು ಶ್ರೀವಿಷ್ಣುವು

ಹಸ್ತಿನಃ–ಗಜಗಳನ್ನು ಅಶ್ವಾನ್–ಕುದುರೆಗಳನ್ನು ವೃಕಾನ್–ತೋಳಗಳನ್ನು ಗಾಃ ಚ–ಗೋವುಗಳನ್ನು ಮೃಗವ್ಯಾಘ್ರಸರೀಸೃಪಾನ್–ಜಿಂಕೆ, ಹುಲಿ, ಸರ್ಪಗಳನ್ನು ಅಜಾನ್–ಮೇಕೆಗಳನ್ನು ಅವೀನ್–ಕುರಿಗಳನ್ನು ಶುನಃ–ನಾಯಿಗಳನ್ನು ಕೋಲಾನ್–ವರಾಹ (ಕಾಡುಹಂದಿ)ಗಳನ್ನು ಸೃಗಾಲಾನ್–ನರಿಗಳನ್ನು ಪಕ್ಷಿಣಃ–ವಿವಿಧ ಪಕ್ಷಿಗಳನ್ನೂ ತರೂನ್–ನಾನಾ ವಿಧ ವೃಕ್ಷಗಳನ್ನೂ ತೃಣಗುಲ್ಮಲತಾದೀನ್ ಚ–ತೃಣ, ಗುಲ್ಮ ಬಳ್ಳಿ ಮೊದಲಾದವುಗಳನ್ನೂ ಬಿಡಾಲಾದೀನ್–ಬೆಕ್ಕು ಮೊದಲಾದವುಗಳನ್ನು ತಥಾ–ಹಾಗೂ, ಅಖಿಲಾನ್–ನಾನಾ ವಿಧಗಳಾದ ಸಮಸ್ತ ಮಕರಮೀನಾದೀನ್–ಮೊಸಳೆ ಮತ್ಸ್ಯ ಮೊದಲಾದ, ಮದ್ರಕರ್ಕಟಘುಪ್ರಿಕಾನ್–ಮದ್ರ, ಏಡಿ, ಘುಪ್ರಿಕೆ ಮೊದಲಾದ, ಏವಂ–ಹೀಗೆ, ಸರ್ವಾನ್ ಜಲಚರಾನ್–ಸಕಲ ಜಲಚರ ಪ್ರಾಣದೇಹಗಳನ್ನೂ ಅಪಿ–ಮತ್ತು ಗ್ರಾಮ್ಯಾರಣ್ಯಪಶೂನ್–ಗ್ರಾಮ್ಯ (ಗ್ರಾಮಗಳಲ್ಲಿರುವ) ಮತ್ತು ಆರಣ್ಯ (ಅರಣ್ಯದಲ್ಲಿರುವ) ನಾನಾ ಪಶುಗಳ ದೇಹಗಳನ್ನೂ ಅಖಿಲಾನ್–ಇನ್ನಿತರ ಸಕಲ ಪ್ರಾಣದೇಹಗಳನ್ನೂ ಕಲ್ಪಯಿತ್ವಾ–ಸೃಷ್ಟಿಮಾಡಿ, ಪಶ್ಚಾತ್–ಅನಂತರ, ಜೀವರಾಶೀನ್–(ಸೃಷ್ಟವಾದ ದೇಹಗಳಲ್ಲಿ ಯಥಾಯೋಗ್ಯವಾಗಿ ಪ್ರವೇಶಗೊಳಿಸಲ್ಪಡಬೇಕಾದ) ಜೀವರಾಶಿಗಳನ್ನು ವ್ಯಲೋಕಯಂ–ನೋಡಿದೆನು.

**ಕತಿಚಿತ್ ಪುರುಷಾಕಾರಾಃ ಕತಿಚಿದ್ಧಯರೂಪಿಣಃ ।**
**ಸಿಂಹವ್ಯಾಘ್ರಮೃಗಾದೀನಾಂ ಗಜಗೋಜಾವಿಪಕ್ಷಿಣಾಂ ॥ ೩೫ ॥**

**ವೃಕ್ಷಗುಲ್ಮಲತಾದೀನಾಮಾಕಾರಂ ಬಿಭ್ರತೋ ಪರೇ ।**
**ಅಪರೇ ಸದೃಶಾಕಾರಾನ್ ಝುಷಮೀನಾದಿಯಾದಸಾಂ ॥ ೩೬ ॥**

**ಸ್ವರೂಪೇಣೈವ ಯೇ ಜೀವಾಸ್ತಾದೃಶಾನಂತಸಂಜ್ಞಕಾಃ ।**
**ಗುಣೈರನೇಕಸಂಖ್ಯಾಕೈಃ ಪ್ರತ್ಯೇಕಮಪಿ ಚಾನ್ವಿತಾಃ ॥ ೩೭ ॥**

ಕತಿಚಿತ್–ಕೆಲವು ಜೀವರು, ಪುರುಷಾಕಾರಾಃ–ಮನುಷ್ಯಾಕಾರವುಳ್ಳವರು, ಕತಿಚಿತ್–

---

ನೋಡಿದನಷ್ಟೆ; ಅವರಲ್ಲಿ ಕೆಲವರು ಪುರುಷಾಕಾರವುಳ್ಳವರು; ಕೆಲವರು ಹಯಾಕಾರವುಳ್ಳರು; ಸಿಂಹ, ವ್ಯಾಘ್ರ, ಪಶು, ಪಕ್ಷಿ, ಗಜ-ಗೋ-ಅಜ-ಅವಿ ಮೊದಲಾದ ರೂಪಗಳುಳ್ಳವರನ್ನೂ ವೃಕ್ಷ ಗುಲ್ಮ ಲತಾದಿ ರೂಪಗಳುಳ್ಳವರನ್ನೂ ಮಕರ ಮೀನಾದಿ ಜಲಚರಪ್ರಾಣರೂಪಗಳುಳ್ಳವರನ್ನೂ ಕಂಡನು; ಈ ಎಲ್ಲ ಜೀವರು ಸ್ವರೂಪದಿಂದಲೇ ಆಯಾ ರೂಪಗಳುಳ್ಳವರು ಮತ್ತು ಪುರುಷ, ಅಶ್ವ, ಸಿಂಹಾದಿ ನಾಮಗಳಿಂದ ಕರೆಯಲ್ಪಡುವವರೂ, ಪ್ರತ್ಯೇಕವಾದ ಗುಣಗಳುಳ್ಳವರೂ ಆಗಿದ್ದರು—ಅವರೆಲ್ಲರನ್ನೂ ಸೃಷ್ಟಿಯಲ್ಲಿ ತರಲು ಶ್ರೀಹರಿಯು ಸಂಕಲ್ಪಿಸಿದನು (೩೫-೩೭). ಪುರುಷ, ಅಶ್ವ, ಗಜಾದಿ

ಇನ್ನೂ ಕೆಲವರು, ಹಯರೂಪಿಣಃ–ಕುದುರೆಯ ಆಕಾರವುಳ್ಳವರು; ಅಪರೇ–ಇನ್ನೂ ಇತರರಾದ, ಸಿಂಹವ್ಯಾಘ್ರಮೃಗಾದೀನಾಂ–ಸಿಂಹ, ಹುಲಿ, ಜಿಂಕೆ ಮೊದಲಾದ ಪ್ರಾಣಿಗಳ, ಗಜಗೋಜಾವಿಪಕ್ಷಿಣಾಂ–ಆನೆ, ಗೋವು, ಮೇಕೆ, ಕುರಿ, ಪಕ್ಷಿಗಳ ಮತ್ತು ವೃಕ್ಷ ಗುಲ್ಮಲತಾದೀನಾಂ–ಗಿಡ, ಪೊದೆ, ಬಳ್ಳಿ ಮೊದಲಾದವುಗಳ, ಆಕಾರಂ–ಆಕಾರವನ್ನು ಬಿಭ್ರತಃ–ಉಳ್ಳವರನ್ನು ಅಪರೇ–ಮತ್ತೆ ಕೆಲವರಾದ, ಝುಷಮೀನಾದಿಯಾದಸಾಂ–ಮಕರಮೀನಾದಿ ಜಲಚರಪ್ರಾಣಿಗಳ, ಸದೃಶಾಕಾರಾನ್–ಸದೃಶವಾದ ಆಕಾರವುಳ್ಳವರನ್ನು ವ್ಯಲೋಕಯಂ–ನೋಡಿದೆನು; ಯೇ ಜೀವಾಃ–ಯಾವ ಜೀವರು, ಸ್ವರೂಪೇಣ ಏವ–ಸ್ವರೂಪದಿಂದಲೇ, ತಾದೃಶಾನಂತ ಸಂಜ್ಞಾಃ–ಆ ಪ್ರಕಾರದ ವಿವಿಧ ಲಕ್ಷಣಗಳುಳ್ಳವರು (ಪುರುಷ, ಅಶ್ವ, ಗಜಾದಿ ಅಸಂಖ್ಯ ಪ್ರತ್ಯೇಕ ನಾಮಗಳಿಂದ ಹೇಳಲ್ಪಡುವರೂ); ಮತ್ತು ಅನೇಕಸಂಖ್ಯಾಕೈಃ–ಬಹುಸಂಖ್ಯೆಯ, ಗುಣೈಃ–ಗುಣಗಳಿಂದ, ಪ್ರತ್ಯೇಕಂ ಅಪಿ–(ತಮ್ಮ ತಮ್ಮಲ್ಲಿ) ಪ್ರತ್ಯೇಕವಾಗಿ ಸಹ, ಅನ್ವಿತಾಃ–ಕೂಡಿದವರೂ (ಯುಕ್ತರಾದವರು) ಆಗಿರುತ್ತಾರೆ.

> ಸಾತ್ವಿಕಾಃ ಶ್ವೇತರೂಪಾಸ್ತು ಶ್ಯಾಮಾಸ್ತತ್ರೈವ ತಾಮಸಾಃ ।
> ತತ್ರಾಪಿ ತಾರತಮ್ಯೇನ ಶ್ವೇತಶ್ವೇತತರಾದಿಕಂ ॥ ೩೮ ॥
>
> ಯಥಾಯೋಗ್ಯತಯಾ ಸರ್ವೇ ರಾಜಸಾಃ ಶಬಲಾಸ್ತಥಾ ।
> ತತ್ತದಾಕಾರಸದೃಶೈರ್ಲಿಂಗದೇಹೈರನಾದಿಭಿಃ ॥ ೩೯ ॥

---

ನಾನಾ ಆಕಾರಗಳ ಸ್ವರೂಪವುಳ್ಳ ಜೀವರಲ್ಲಿ ಸದ್ಗುಣ ಸ್ವಭಾವದವರು ಸಾತ್ವಿಕರು—ಅವರು ಶ್ವೇತವರ್ಣದ ಸ್ವರೂಪ ಉಳ್ಳವರು; ದುಷ್ಟಸ್ವಭಾವದ ದೋಷಸ್ವರೂಪರು, ತಾಮಸರು—ಅವರು ಕಪ್ಪು ವರ್ಣವುಳ್ಳವರು; ಮಿಶ್ರಗಳಾದ ಗುಣ ಸ್ವರೂಪರು, ರಾಜಸರು—ಮಿಶ್ರ (ಶಬಲ) ವರ್ಣವುಳ್ಳವರು; ಹೀಗಿರುವ ತ್ರಿವಿಧ ಜೀವರಲ್ಲಿ ಸಹ ಬಹು ತಾರತಮ್ಯವಿದೆ—ಅವರ ಸ್ವರೂಪ ವರ್ಣಗಳಲ್ಲಿ ಸಹ ತದನುಗುಣವಾದ ತರತಮ ಭಾವಗಳುಳ್ಳವರು; ಈ ಎಲ್ಲರೂ ಅನಾದಿ ಕಾಲದಿಂದ, ಪ್ರತಿ ಜೀವನೂ ಪ್ರತ್ಯೇಕವಾದ, ಲಿಂಗದೇಹವೆಂಬ ಆಚ್ಛಾದನೆಯುಳ್ಳವನಾಗಿದ್ದಾನೆ; ಅವರವರ ಲಿಂಗದೇಹಗಳು, ದೇಹದ ಮೇಲೆ ಧರಿಸುವ ಕವಚದಂತೆ, ಅವರವರ ಸ್ವರೂಪಸದೃಶಾಕಾರವುಳ್ಳವುಗಳೂ, ಸ್ವರೂಪ ಸದೃಶವರ್ಣಗಳುಳ್ಳವೂ ಆಗಿರುತ್ತವೆ. ಈ ಲಿಂಗದೇಹವೆಂಬ ಆಚ್ಛಾದನೆಯು ಷೋಡಶಕಲಾತ್ಮಕವಾದುದು—ಎಂದರೆ ಜ್ಞಾನಕರ್ಮೇಂದ್ರಿಯಗಳೆಂಬ ೧೦ ಇಂದ್ರಿಯಗಳು, ಮನಸ್ಸು ಮತ್ತು ಶಬ್ದ ಸ್ಪರ್ಶ ಮೊದಲಾದ ೫ ತನ್ಮಾತ್ರೆಗಳು, ಹೀಗೆ ೧೬ ತತ್ವಗಳ ಸೂಕ್ಷ್ಮಾಂಶಗಳಿಂದ ನಿರ್ಮಿತವಾದುದು. ಹೀಗಿರುವ ಲಿಂಗದೇಹಧಾರಿಗಳಾದ ಜೀವರಾಶಿಗಳಲ್ಲಿ, ಈ ಬ್ರಹ್ಮಕಲ್ಪದಲ್ಲಿ (ಮಹಾಪ್ರಳಯಕಾಲಕ್ಕೆ ಬ್ರಹ್ಮನೊಂದಿಗೆ) ಮುಕ್ತರಾಗಲು ಸಿದ್ಧರಿರುವರು,

**ಕಂಚುಕೈರಿವ ಸಂಛನ್ನಾಸ್ತತ್ತದ್ವರ್ಣೈಃ ಪೃಥಕ್ ಪೃಥಕ್ ।**
**ಇಂದ್ರಿಯಾಣಿ ದಶೈಕಂ ಚ ಮನಸ್ತನ್ಮಾತ್ರಕಾಸ್ತಥಾ ॥ ೪೦ ॥**

**ಪಂಚೈವ ಷೋಡಶಕಲಂ ಲಿಂಗದೇಹಮನಾದಿಮತ್ ।**

ಸಾತ್ತ್ವಿಕಾಃ-(ಆ ವಿವಿಧಾಕಾರದ ಸ್ವರೂಪಗಳುಳ್ಳ ಜೀವರಲ್ಲಿ) ಸಾತ್ತ್ವಿಕಾಃ-ಸಾತ್ತ್ವಿಕರು (ಸದ್ಗುಣಸ್ವಭಾವದವರು), ಶ್ವೇತರೂಪಾಃ-ಶುಭ್ರವರ್ಣದವರಾಗಿರುವರು; ತು-ಹಾಗೆಯೇ ಸರಿ; ತತ್ರೈವ-ಅವರಲ್ಲಿಯೇ (ಆ ಜೀವರಲ್ಲಿಯೇ), ತಾಮಸಾಃ-ತಾಮಸರು (ದುಷ್ಟಸ್ವಭಾವದ ದೋಷಿಗಳು), ಶ್ಯಾಮಾಃ-ಕಪ್ಪುವರ್ಣವುಳ್ಳವರು; ತತ್ರಾಪಿ-ಹೀಗಿರುವ ಜೀವರಲ್ಲಿ ಸಹ, ತಾರತಮ್ಯೇನ-ತರತಮಭಾವಗಳಿಂದ, ಶ್ವೇತಶ್ವೇತತರಾದಿಕಂ-ಶ್ವೇತ, ಶ್ವೇತತರ, ಶ್ವೇತತಮ, ಎಂದೂ, ಶ್ಯಾಮ, ಶ್ಯಾಮತರ, ಶ್ಯಾಮತಮ, ಎಂದೂ, (ವಿವಿಧ ಕಕ್ಷ್ಯೆಗಳಿವೆ); ತಥಾ-ಮತ್ತು (ಹಾಗೆಯೇ), ಸರ್ವೇ ರಾಜಸಾಃ-ಎಲ್ಲ ರಾಜಸಜೀವರೂ, ಯಥಾಯೋಗ್ಯತಯಾ-ಸ್ವಯೋಗ್ಯತೆಗೆ ಅನುಗುಣವಾಗಿ, ಶಬಲಾಃ-ಮಿಶ್ರವರ್ಣವುಳ್ಳವರು; ತತ್ತದಾಕಾರಸದೃಶೈಃ-(ಈ ತ್ರಿವಿಧ ಜೀವರೂ) ತಂತಮ್ಮ ಸ್ವರೂಪದ ಆಕಾರಕ್ಕೆ ಸದೃಶಗಳಾದ, ಅನಾದಿಭಿಃ-ಅನಾದಿಯಿಂದ ಇರತಕ್ಕ, ಲಿಂಗದೇಹೈಃ-ಲಿಂಗದೇಹಗಳಿಂದ, ಕಂಚುಕೈಃ ಇವ-ಧರಿಸುವ ಕವಚಗಳಂತೆ, ಪೃಥಕ್ಪೃಥಕ್-ಬೇರೆಬೇರೆಯಾದ, ತದ್ವರ್ಣೈಃ-ತಮ್ಮ ಸ್ವರೂಪದ ವರ್ಣಗಳುಳ್ಳವುಗಳಿಂದ (ಲಿಂಗದೇಹಗಳಿಂದ), ಸಂಛನ್ನಾಃ- ಆಚ್ಛಾದಿತರಾಗಿದ್ದಾರೆ.[1] ಅನಾದಿಮತ್-ಅನಾದಿಯಾದ, ಲಿಂಗದೇಹಂ-ಲಿಂಗ

---

ಆಸನ್ನಮರಣರು (ಸಮೀಪಿಸಿದ ಮರಣಕಾಲವುಳ್ಳವರು); ಯಾರು ವಿಳಂಬದಿಂದ ಮುಕ್ತರಾಗುವರೋ ಅವರು ವೃದ್ಧರು; ಅದಕ್ಕಿಂತ ಹೆಚ್ಚುಕಾಲದ ನಂತರ ಮೋಕ್ಷವನ್ನು ಹೊಂದುವವರು, ಯುವಕರು, ಅದಕ್ಕೂ ಹೆಚ್ಚಿನ ದೀರ್ಘಕಾಲದ ನಂತರ (ಅನೇಕ ಬ್ರಹ್ಮಕಲ್ಪಗಳ ನಂತರ) ಮುಕ್ತರಾಗುವವರು ಶಿಶುಗಳು ಅಥವಾ ಬಾಲಕರು. ಈ ಎಲ್ಲರ ಮಧ್ಯದಲ್ಲಿದ್ದ ಮುಖ್ಯ ಪ್ರಾಣನನ್ನು ಶ್ರೀವಿಷ್ಣುವು ಪ್ರೇರಿಸಿ ಜಾಗ್ರತಗೊಳಿಸಿದನು.[2] ಹೀಗೆ

---

1. ಜೀವಸ್ವರೂಪಗಳು ನಿತ್ಯ—ಅನಾದಿಯಿಂದ ಇವು, ಸ್ವರೂಪ ಸದೃಶ ಆಕಾರವುಳ್ಳ (ದೇಹದಮೇಲೆ ಧರಿಸಿದ ಕವಚದಂತಿರುವುದು) ಲಿಂಗದೇಹಗಳಿಂದ ಆಚ್ಛಾದಿಸಲ್ಪಟ್ಟಿವೆ. ಗಜ, ಸಿಂಹ, ಪುರುಷಾದಿ ಆಕಾರಗಳನ್ನು ಸ್ವರೂಪದಿಂದಲೇ ಹೊಂದಿರುತ್ತವೆ. ಅವುಗಳಿಗೆ ಸದೃಶವಾದ ಸ್ಥೂಲದೇಹಗಳನ್ನು (ಮಾನುಷಾದಿ ದೇಹಗಳನ್ನು ಸಹ) ಸ್ವಯೋಗ್ಯಸಾಧನೆಗಾಗಿ ಹೊಂದುವುದುಂಟು.

2. ಶ್ರೀ ಮುಖ್ಯಪ್ರಾಣನಿಗೆ (ಶ್ರೀ ವಾಯುದೇವನಿಗೆ) ಪ್ರಳಯಕಾಲದಲ್ಲಿಸಹ ಅಜ್ಞಾನದಿಂದ ಪ್ರಾಪ್ತವಾಗುವ ನಿದ್ರೆ ಇರುವುದಿಲ್ಲ. ಜಾಗ್ರತಗೊಳಿಸಿದನೆಂದರೆ, ಮುಂದಿನ ಕಾರ್ಯಕ್ಕೆ ಸಿದ್ಧನಾಗುವಂತೆ ಉತ್ಸಾಹಯುಕ್ತನನ್ನಾಗಿ ಮಾಡಿದನೆಂದರ್ಥ.

ದೇಹವು, ಇಂದ್ರಿಯಾಣಿ ದಶ–ಹತ್ತು ಇಂದ್ರಿಯಗಳು, ಏಕಂ ಚ ಮನಃ–ಒಂದು ಮನಸ್ಸು ತಥಾ–ಹಾಗೂ, ತನ್ಮಾತ್ರಕಾಃ ಪಂಚ–ಐದು ತನ್ಮಾತ್ರೆಗಳು (ಶಬ್ದ ಸ್ಪರ್ಶಾದಿಗಳು) (ಎಂಬ) ಷೋಡಶಕಲಂ ಏವಂ–ಹದಿನಾರು ಕಲೆಯಿಂದಾದುದೇ (ಈ ೧೬ ತತ್ತ್ವಗಳ ಸೂಕ್ಷ್ಮಾಂಶಗಳಿಂದ ನಿರ್ಮಿತವಾದುದೇ ಸರಿ—ಹೀಗೆಂದು ಪ್ರಮಾಣಸಿದ್ಧವು);

**ಆಸನ್ನಮರಣಾಸ್ತೇಷು ಯೇಸ್ಮಿನ್ ಕಲ್ಪೇ ಮುಮುಕ್ಷವಃ ॥ ೪೧ ॥**

**ತತೋ ವಿಲಂಬಿತಂ ಯೇಷಾಂ ತೇ ವೈ ವೃದ್ಧಾಸ್ತತೋಽಪಿ ಯೇ ।**
**ವಿಲಂಬಿತಾ ಮೋಕ್ಷಮಾಪ್ತುಂ ತೇ ಯುವಾನಸ್ತತೋಽರ್ಭಕಾಃ ॥ ೪೨ ॥**

**ಏವಂ ಪ್ರತೀಯಮಾನಾಸ್ತೇ ತೇಷು ಪ್ರಾಣಂ ವ್ಯಬೋಧಯಂ ।**
**ಉದ್ಬೋಧಿತಸ್ತತಃ ಪ್ರಾಣಃ ಪ್ರಣಿಪತ್ಯೋಪತಸ್ಥಿವಾನ್ ॥ ೪೩ ॥**

ತೇಷು–ಈ ಲಿಂಗದೇಹಯುಕ್ತರಾದ ಜೀವರಲ್ಲಿ, ಯೇ–ಯಾರು, ಅಸ್ಮಿನ್ ಕಲ್ಪೇ–ಈ ಕಲ್ಪದಲ್ಲಿ (ಬ್ರಹ್ಮಕಲ್ಪದಲ್ಲಿ), ಮುಮುಕ್ಷವಃ–ಮೋಕ್ಷವನ್ನು ಹೊಂದಲಿರುವರೋ, ತೇ–ಅವರು, ಆಸನ್ನಮರಣಾಃ–ಸಾಯುವುದಕ್ಕೆ ಸಿದ್ಧರು; (ಮರಣಕಾಲವನ್ನು ಸಮೀಪಿಸಿದವರು) ಎನಿಸುವರು. ಯೇಷಾಂ–ಯಾರಿಗೆ, ತತಃ–ಅದಕ್ಕಿಂತ, ವಿಲಂಬಿತಂ–(ಮೋಕ್ಷಪ್ರಾಪ್ತಿಯು) ತಡವಾಗಿರುವುದೋ, ತೇವೈ–ಅವರೇ, ವೃದ್ಧಾಃ–ವೃದ್ಧರೆನಿಸುತ್ತಾರೆ; ತತೋಽಪಿ–ಅದಕ್ಕಿಂತಲೂ, ಮೋಕ್ಷಂ–ಮುಕ್ತಿಯನ್ನು ಆಪ್ತುಂ–ಹೊಂದಲಿಕ್ಕೆ, ವಿಲಂಬಿತಾಃ–ವಿಳಂಬವುಳ್ಳವರೋ (ಹೆಚ್ಚು ತಡವಾಗಿ ಮುಕ್ತರಾಗಲಿರುವರೋ), ತೇ–ಅವರು, ಯುವಾನಃ–ಯುವಕರೆನಿಸುವರು; ತತಃ–ಅದಕ್ಕಿಂತ ನಿಧಾನವಾಗಿ ಮುಕ್ತರಾಗಲಿರುವವರು, ಅರ್ಭಕಾಃ–ಶಿಶುಗಳೆನಿಸುತ್ತಾರೆ; ಏವಂ–ಹೀಗೆ, ತೇ–ಆ ಜೀವರು, ಪ್ರತೀಯಮಾನಾಃ–ತೋರಿದರು (ಶ್ರೀವಿಷ್ಣುವು ಹೀಗಿರುವವರನ್ನಾಗಿ ತಿಳಿದನು); ತೇಷು–ಅವರಲ್ಲಿ (ಹಾಗೆ ಸೃಷ್ಟಿಗೆ ಬರತಕ್ಕ ಜೀವರ ಮಧ್ಯದಲ್ಲಿ ಅಥವಾ ಸೃಷ್ಟಿಯಲ್ಲಿ ಬರಲಿರುವ ಜೀವರ ವಿಷಯದಲ್ಲಿ), ಪ್ರಾಣಂ–ಮುಖ್ಯಪ್ರಾಣನನ್ನು, ವ್ಯಬೋಧಯಂ–

---

ಉದ್ಬೋಧಿತನಾದ ಮುಖ್ಯಪ್ರಾಣನು, ನಮಸ್ಕರಿಸಿ ಶ್ರೀಹರಿಯ ಎದುರಿನಲ್ಲಿ ಕೈಮುಗಿದು ನಿಂತನು (೩೮-೪೩). ಈ ಬ್ರಹ್ಮಕಲ್ಪದಲ್ಲಿ ನಿನ್ನೊಡನೆ ಮುಕ್ತರಾಗಲಿರುವ ಜೀವರನ್ನು ಈ ಜೀವರಾಶಿಗಳಿಂದ ಬೇರೆಮಾಡೆಂದು, ಮಹಾಪ್ರಾಜ್ಞನಾದ ಮುಖ್ಯಪ್ರಾಣನಿಗೆ ಆಜ್ಞಾಪಿಸಿದೆನು[1] (೪೪). ಸರ್ವಜ್ಞನಾದ ಮುಖ್ಯಪ್ರಾಣದೇವನು, ನನ್ನ ಆಜ್ಞೆಯಂತೆ, ಆ

---

1. ಇಲ್ಲಿ ಮುಖ್ಯಪ್ರಾಣ ಅಥವಾ ಶ್ರೀ ವಾಯುದೇವನೆಂಬುದರಿಂದ, ಸೃಷ್ಟಿಯಾದೊಡನೆ ಬ್ರಹ್ಮಪದವಿಗೆ ಬರಲಿರುವ, ಹಿಂದಿನ ಕಲ್ಪದ ವಾಯುದೇವನನ್ನು ಇಟ್ಟುಕೊಳ್ಳಬೇಕು—'ನಿನ್ನೊಂದಿಗೆ ಮುಕ್ತರಾಗುವ ಜೀವರನ್ನು' ಎಂದಿರುವುದರಿಂದ ಹೀಗೆ ತಿಳಿಯಬೇಕು.

ಪ್ರೇರಿಸಿ ಜಾಗ್ರತಗೊಳಿಸಿದೆನು; ತತಃ-ನಂತರ, ಉದ್ಬೋಧಿತಃ ಪ್ರಾಣಃ-ಪ್ರಬೋಧಿತನಾದ ಮುಖ್ಯಪ್ರಾಣನು, ಪ್ರಣಿಪತ್ಯ-(ನನ್ನನ್ನು-ಶ್ರೀವಿಷ್ಣುವನ್ನು) ನಮಸ್ಕರಿಸಿ, ಉಪತಸ್ಥಿವಾನ್-ಸಮೀಪದಲ್ಲಿ ಬಂದು ನಿಂತನು.

**ತಮವೋಚಂ ತತಃ ಪ್ರಾಣಮಸ್ಮಿನ್ ಕಲ್ಪೇ ತ್ವಯಾ ಸಹ ।**
**ಮೋಕ್ಷಮಾಣಾಂಶ್ಚ ತಾನ್ ಜೀವಾನ್ ಪೃಥಕ್ಕುರು ಮಹಾಮತೇ ॥ ೪೪ ॥**

ತತಃ-ಅನಂತರ, ಅಸ್ಮಿನ್ ಕಲ್ಪೇ-ಈ ಕಲ್ಪದಲ್ಲಿ, ತ್ವಯಾ ಸಹ-ನಿನ್ನೊಂದಿಗೆ, ಮೋಕ್ಷಮಾಣಾನ್-ಮೋಕ್ಷವನ್ನು ಹೊಂದಲಿರುವ, ತಾನ್ ಜೀವಾನ್-ಆ ಜೀವರನ್ನು, ಮಹಾಮತೇ-ಹೇ ಮಹಾಜ್ಞಾನಿಯೇ! ಪೃಥಕ್ ಕುರು-ಪ್ರತ್ಯೇಕಿಸು (ಬೇರೆಮಾಡಿ ಇಡು), (ಎಂದು) ತಂ ಪ್ರಾಣಂ-ಆ ಪ್ರಾಣದೇವನನ್ನು ಕುರಿತು, ಅವೋಚಂ-ಹೇಳಿದೆನು.

**ಏವಂ ಮದಾಜ್ಞಯಾ ಪ್ರಾಣೋ ಜೀವಾನ್ ಸರ್ವಾಂಶ್ಚ ತಾದೃಶಾನ್ ।**
**ಉದ್ಬೋಧಯಿತ್ವಾ ಪುರತಃ ಸ್ಥಾಪಯಾಮಾಸ ಸರ್ವವಿತ್ ॥ ೪೫ ॥**

ಮದಾಜ್ಞಯಾ-ನನ್ನ ಆಜ್ಞೆಯಿಂದ, ಪ್ರಾಣಃ-ಮುಖ್ಯಪ್ರಾಣನು, ಏವಂ-ಹೀಗೆ (ನಾನು ಹೇಳಿದಂತೆ), ತಾದೃಶಾನ್-ಆ ವಿಧದ (ತನ್ನೊಡನೆ ಮುಕ್ತರಾಗುವ), ಸರ್ವಾನ್ ಜೀವಾನ್-ಎಲ್ಲ ಜೀವರನ್ನೂ ಉದ್ಬೋಧಯಿತ್ವಾ-ನಿದ್ರೆಯಿಂದ ಎಚ್ಚರಗೊಳಿಸಿ,

---

ವಿಧರಾದ[1] ಎಲ್ಲ ಜೀವರನ್ನೂ ಜಾಗ್ರತಗೊಳಿಸಿ ನನ್ನ ಮುಂದೆ ಇರಿಸಿದನು (೪೫). ಆ ನಂತರ ಈ ಬ್ರಹ್ಮಕಲ್ಪದಲ್ಲಿ ಮುಕ್ತರಾಗುವ ರುದ್ರ ಮೊದಲಾದವರನ್ನು (ಈಗ ಶೇಷನಾಗಿ ಸ್ವಷ್ಟನಾಗುವ ಹಿಂದಿನ ಕಲ್ಪದಲ್ಲಿ ರುದ್ರನಾಗಿದ್ದವನು), ಮತ್ತು ಇಂದ್ರ ಸೂರ್ಯಾದಿ (ಈ ಕಲ್ಪದಲ್ಲಿ ಈ ಪದಗಳಿಂದ ಮುಕ್ತರಾಗಲಿರುವವರು) ಎಲ್ಲ ದೇವತೆಗಳನ್ನೂ ಎಚ್ಚರ

---

1. ಒಂದೇ ಬ್ರಹ್ಮಕಲ್ಪಸಾಧನೆಯುಳ್ಳ ಮನುಷ್ಯೋತ್ತಮ ಜೀವರೆಲ್ಲರೂ ಈ ವಿಧ ಜೀವರಲ್ಲಿ ಸೇರಿರುತ್ತಾರೆ. ಮನುಷ್ಯೋತ್ತಮರೆಂದರೆ ಸ್ವರೂಪದಿಂದಲೇ ವೇದವಿದ್ಯಾಧಿಕಾರವುಳ್ಳ ದ್ವಿಜರು (ಅವರಲ್ಲಿ ಸಹ ವಿವಿಧ ಆಶ್ರಮಗಳಲ್ಲಿ ಸ್ವರೂಪದಿಂದಲೇ ಸ್ಥಿತರಾದವರು), ಪಶುಪಕ್ಷಿಗುಲ್ಮಲತಾದಿ ಪರ್ಯಂತರ ಮುಕ್ತಿಯೋಗ್ಯ ಜೀವರೆಲ್ಲರಿರುತ್ತಾರೆ. ಅಲ್ಲದೇ ನಿತ್ಯಸಂಸಾರಿಗಳೆಂಬ ಮನುಷ್ಯ ಮಧ್ಯಮಜೀವರೂ ಮತ್ತು ತಮೋಯೋಗ್ಯರಾದ ಮನುಷ್ಯಾಧಮರು, ಕೆಲವು ಪಿಶಾಚ ರಾಕ್ಷಸರೂ ಸೇರುತ್ತಾರೆ.

ಇವರಲ್ಲದೇ ೨ರಿಂದ ಆರಂಭಿಸಿ ಅನೇಕ ಬ್ರಹ್ಮಕಲ್ಪಗಳ ಪರ್ಯಂತದ ಸಾಧನಕಾಲವುಳ್ಳ, ವಿವಿಧ ತಾರತಮ್ಯಕಕ್ಷ್ಯಗಳಲ್ಲಿರುವ ಜೀವರೂ ಸಹ ಸೇರಿರುತ್ತಾರೆ. ೨ ಬ್ರಹ್ಮಕಲ್ಪ ಸಾಧನವುಳ್ಳ ಮನುಷ್ಯಗಂಧರ್ವರು, ೩ ಕಲ್ಪಸಾಧನವುಳ್ಳ ಚಿರಪಿತೃಗಳು ಇತ್ಯಾದಿ, ಕ್ರಮವಾಗಿ ಪೂರ್ವಪೂರ್ವ ಕಲ್ಪಗಳಲ್ಲಿ ಸಹ ಸೃಷ್ಟರಾಗಿ, ಮಹಾ ಪ್ರಳಯದಲ್ಲಿ ಪರಮಾತ್ಮನ ಉದರ ಪ್ರವೇಶಮಾಡಿ, ಈ ಕಲ್ಪದಲ್ಲಿ ಮುಕ್ತರಾಗಲಿರುವವರೂ ಈ ರಾಶಿಯಲ್ಲಿ ಸೇರಿರುತ್ತಾರೆಂದು ತಿಳಿಯಬೇಕು.

ಸರ್ವವಿತ್–ಸರ್ವಜ್ಞನಾದ ಆ ಪ್ರಾಣನು, ಪುರತಃ–(ನನ್ನ) ಎದುರಿಗೆ, ಸ್ಥಾಪಯಾಮಾಸ–ಇಟ್ಟನು (ನಿಲ್ಲಿಸಿದನು).

**ತತಸ್ತತ್ತ್ವಾಭಿಮಾನಿನ್ಯಸ್ತತ್ರ ರುದ್ರಪುರಸ್ಸರಾಃ ।**
**ದೇವತಾಃ ಶಕ್ರಸೂರ್ಯಾದ್ಯಾಃ ತಾಃ ಸರ್ವಾಃ ಪ್ರತಿಬೋಧಯ ॥ ೪೬ ॥**

**ಇತ್ಯುಕ್ತಃ ಸ ಮಯಾ ಪ್ರಾಣಸ್ತಾನಪ್ಯಾದಾಯ ತಸ್ಥಿವಾನ್ ।**

ತತಃ–ಆನಂತರ, ತತ್ತ್ವಾಭಿಮಾನಿನ್ಯಃ–ತತ್ತ್ವಾಭಿಮಾನಿಗಳಾದ, ತತ್ರ–ಅವರಲ್ಲಿಯೂ, ರುದ್ರಪುರಸ್ಸರಾಃ–ಮಹದೇವನೇ ಮೊದಲಾದ, ಶಕ್ರ ಸೂರ್ಯಾದ್ಯಾಃ–ಇಂದ್ರ ಸೂರ್ಯಾದಿ, ತಾಃ–ಆ, ಸರ್ವಾಃ ದೇವತಾಃ–ಎಲ್ಲಾ ದೇವತೆಗಳನ್ನೂ, ಪ್ರತಿಬೋಧಯ–ಎಚ್ಚರಗೊಳಿಸು; ಇತಿ–ಹೀಗೆಂದು, ಮಯಾ–ನನ್ನಿಂದ, ಉಕ್ತಃ–ಹೇಳಲ್ಪಟ್ಟ ಸಃ ಪ್ರಾಣಃ–ಆ ಪ್ರಾಣದೇವನು, ತಾನ್ ಅಪಿ–ಅವರನ್ನೂ ಸಹ, ಆದಾಯ–ತಂದು, ತಸ್ಥಿವಾನ್–ನಿಂತನು.

---

ಗೊಳಿಸಂದು (ಸೃಷ್ಟಿಗೆ ಸಿದ್ಧಗೊಳಿಸುವಂತೆ) ನನ್ನಿಂದ ಆಜ್ಞಪ್ತನಾದ ಮುಖ್ಯಪ್ರಾಣನು, ಆ ಎಲ್ಲರನ್ನೂ ಕರೆತಂದು, ನನ್ನೆದುರು ನಿಂತನು (೪೬). ಆ ನಂತರ ನನ್ನ ಆಜ್ಞೆಯಿಂದ ಮುಖ್ಯಪ್ರಾಣನು ತತ್ತ್ವಾಭಿಮಾನಿದೇವತೆಗಳನ್ನು ಭಿನ್ನಭಿನ್ನ ತತ್ತ್ವಗಳಲ್ಲಿ ಪ್ರವೇಶ ಗೊಳಿಸಿದನು; ಇಂದ್ರನನ್ನು ಮನಸ್ಸಿನಲ್ಲಿಯೂ, ಶ್ರೋತ್ರೇಂದ್ರಿಯದಲ್ಲಿ ದಿಗ್ದೇವತೆಗಳನ್ನೂ[1] ಸ್ಪರ್ಶೇಂದ್ರಿಯದಲ್ಲಿ ಭೂತವಾಯುವನ್ನೂ (ತದಭಿಮಾನಿ ದೇವತೆಯನ್ನೂ),

---

1. ಯಾವ ಯಾವ ತತ್ತ್ವಗಳಿಗೆ ಯಾರು ಯಾರು ಅಭಿಮಾನಿಗಳೆಂಬ ವಿಷಯದಲ್ಲಿ ಈ ಮುಂದಿನ ಸಂಗ್ರಹವಾದ ವಿವರಣೆಯನ್ನು ಗಮನದಲ್ಲಿಟ್ಟು ವಿಸ್ತಾರವನ್ನು ಗ್ರಂಥಾಂತರಗಳ ಅಭ್ಯಾಸದಿಂದ ತಿಳಿಯಬೇಕು. ಮೊದಲು ಮೊದಲು ಉತ್ಪನ್ನವಾದ ತತ್ತ್ವಗಳ ಅಭಿಮಾನಿದೇವತೆಗಳು, ನಂತರ ಉತ್ಪನ್ನವಾದ ಎಲ್ಲ ತತ್ತ್ವಗಳ ಅಭಿಮಾನಿಗಳೂ ಆಗಿರುತ್ತಾರೆ; ನಂತರ ಉತ್ಪನ್ನವಾದ ತತ್ತ್ವಗಳ ಅಭಿಮಾನಿಗಳು, ತಮ್ಮ ಉತ್ಪತ್ತಿಗೆ ಕಾರಣವಾದ ಮೇಲಿನ ತತ್ತ್ವಗಳಿಗೆ ಅಭಿಮಾನಿಗಳಲ್ಲ; ಇದು ಸಾಮಾನ್ಯ ನಿಯಮ; ತಂದೆಯ ಅಧಿಕಾರಕ್ಕೆ ಒಳಪಟ್ಟ ವಿಷಯದಲ್ಲಿ ಮಗನಿಗೂ ಸ್ಥಾನವಿರುವಂತೆ, ಇಂದ್ರಾದಿಗಳಿಗೆ ಅಹಂಕಾರತತ್ತ್ವಾಭಿಮಾನಿತ್ವವೂ ಇರುತ್ತದೆ. ಮುಖ್ಯ ನಿಯಾಮಕನನ್ನು ಮಾತ್ರ ಆ ತತ್ತ್ವದ ಅಭಿಮಾನಿಯೆಂದು ನಿರೂಪಿಸಲಾಗುತ್ತದೆ. ಒಂದೊಂದು ತತ್ತ್ವಕ್ಕೂ ಅವಾಂತರಾಭಿಮಾನಿಗಳು, ಅನೇಕರಿರುತ್ತಾರೆ; ಒಂದು ವಿವಕ್ಷೆಯಿಂದ, ಎಲ್ಲ ತತ್ತ್ವಾಭಿಮಾನಿಗಳೂ, ಎಲ್ಲ ತತ್ತ್ವಗಳ ಅಭಿಮಾನಿಗಳೆಂದೂ ನಿರೂಪಿಸುವುದುಂಟು. ಎಲ್ಲ ತತ್ತ್ವಾಭಿಮಾನಿಗಳೂ ಸರ್ವಜ್ಞರು—ಸಾಮಾನ್ಯರಿಂದ ಅಚಿಂತ್ಯವಾದ (ಕೆಳಗಿನವರಿಂದ ತಿಳಿಯಲಾಗದ) ಶಕ್ತಿಯುಳ್ಳ ಮಹಾಪ್ರತಿಭಾನ್ವಿತರು; ಅಷ್ಟ ಮಹಾಸಿದ್ಧಿಗಳುಳ್ಳವರು. ಪರ್ಜನ್ಯಾದಿ ಪುಷ್ಕರಾಂತ್ಯ ಇತರ ದೇವತೆಗಳೂ, ತತ್ತ್ವಾಭಿಮಾನಿಗಳೆಂದು ಹೇಳಲ್ಪಡುವುದುಂಟು. ಇವರು ಬ್ರಹ್ಮಾಂಡದ ಹೊರಗಿನ (ಅಸಂಸೃಷ್ಟ) ತತ್ತ್ವಗಳಿಗೆ ಅಭಿಮಾನಿಗಳಲ್ಲ; ಪ್ರಾಣದೇಹಗತ ತತ್ತ್ವಾಂಶಗಳಿಗೆ (ಕಲೆಗಳಿಗೆ) ಮಾತ್ರ ಅಭಿಮಾನಿಗಳು.

ತತೋ ಮದಾಜ್ಞಯಾ ಪ್ರಾಣೋ ಮನಸೀಂದ್ರಂ ನ್ಯವೇಶಯತ್ ॥ ೪೭ ॥

ಶ್ರೋತ್ರೇ ದಿಗ್ದೇವತಾ ವಾಯುಂ ತ್ವಚಿ ಸೂರ್ಯಂ ವಿಲೋಚನೇ ।
ರಸೇ ತು ವರುಣಂ ಘ್ರಾಣೇ ದಸ್ರೌ ವಾಚಿ ಧನಂಜಯಂ ॥ ೪೮ ॥

ಪಾಣೌ ದಕ್ಷಂ ಜಯಂತಂ ಚ ಪಾದೇ ಶಿಶ್ನೇ ತಥಾ ಮನುಂ ।
ಪಾಯೌ ಮಿತ್ರಂ ತತಸ್ತಾಸಾಂ ಬುಭುಕ್ಷಾ ಚಾಭವತ್ತೃಷಾ ॥ ೪೯ ॥

ತತಃ ಸಂಪೀಡ್ಯಮಾನಾಸ್ತಾಸ್ತದಾಮಾಂ ಶರಣಂ ಯಯುಃ ।
ಸ್ಥಾನಂ ಪ್ರದಿಶ ಯತ್ರಸ್ಥಾ ವಿಷಯಾನ್ ಭುಞ್ಜ್ಮಹೇ ವಯಂ ॥ ೫೦ ॥

ತತಃ–ನಂತರ, ಮದಾಜ್ಞಯಾ–ನನ್ನಾಜ್ಞೆಯಿಂದ, ಪ್ರಾಣಃ–ಮುಖ್ಯಪ್ರಾಣನು, ಇಂದ್ರಂ–ಇಂದ್ರದೇವನನ್ನು ಮನಸಿ–ಮನಸ್ಸಿನಲ್ಲಿ (ಮನಸ್ತತ್ತ್ವದಲ್ಲಿ), ನ್ಯವೇಶಯತ್–ಪ್ರವೇಶಗೊಳಿಸಿದನು; ದಿಗ್ದೇವತಾಃ–ದಿಗ್ದೇವತೆಗಳನ್ನು ಶ್ರೋತ್ರೇ–ಶ್ರೋತ್ರೇಂದ್ರಿಯ ದಲ್ಲಿಯೂ, ತ್ವಚಿ–ಚರ್ಮದಲ್ಲಿ (ಸ್ಪರ್ಶೇಂದ್ರಿಯದಲ್ಲಿ–ಚರ್ಮವು ಈ ಇಂದ್ರಿಯದ ಗೋಳಕ ಸ್ಥಾನದಲ್ಲಿದೆ), ವಾಯುಂ–ವಾಯುದೇವನನ್ನೂ (ಭೂತವಾಯುವಿನ ಅಭಿಮಾನಿಯನ್ನೂ – ಮುಖ್ಯವಾಯುದೇವನಲ್ಲ), ವಿಲೋಚನೇ – ಚಕ್ಷುರಿಂದ್ರಿಯದಲ್ಲಿ ಸೂರ್ಯಂ–ಸೂರ್ಯನನ್ನೂ ರಸೇ–ರಸನೇಂದ್ರಿಯದಲ್ಲಿ ವರುಣಂ–ವರುಣದೇವನನ್ನೂ ಘ್ರಾಣೇ–ಘ್ರಾಣೇಂದ್ರಿಯದಲ್ಲಿ ದಸ್ರೌ–ಅಶ್ವಿನೀದೇವತೆಗಳನ್ನೂ ವಾಚಿ–ವಾಗಿಂದ್ರಿಯದಲ್ಲಿ ಧನಂಜಯಂ–ಅಗ್ನಿದೇವನನ್ನೂ ಪಾಣೌ–ಕರಗಳಲ್ಲಿ ದಕ್ಷಂ–ದಕ್ಷನನ್ನು ಚ–ಮತ್ತು ಪಾದೇ–ಪಾದಗಳಲ್ಲಿ ಜಯಂತಂ–ಜಯಂತನನ್ನೂ (ಜಯಂತನು ಇಂದ್ರಪುತ್ರನು), ತಥಾ–ಹಾಗೂ, ಶಿಶ್ನೇ–ಗುಹ್ಯೇಂದ್ರಿಯದಲ್ಲಿ ಮನುಂ–ಸ್ವಾಯಂಭುವ ಮನುವನ್ನೂ, ಪಾಯೌ–ಗುದದಲ್ಲಿ (ಮಲವಿಸರ್ಜನೆಯ ಕರ್ಮೇಂದ್ರಿಯದಲ್ಲಿ), ಮಿತ್ರಂ–ಮಿತ್ರನಾಮಕ ಸೂರ್ಯನನ್ನೂ (ನ್ಯವೇಶಯತ್–ಪ್ರವೇಶಗೊಳಿಸಿದನು);

---

ಚಕ್ಷುರಿಂದ್ರಿಯದಲ್ಲಿ ಸೂರ್ಯದೇವನನ್ನೂ ರಸನೇಂದ್ರಿಯದಲ್ಲಿ ವರುಣನನ್ನೂ ಘ್ರಾಣೇಂದ್ರಿಯದಲ್ಲಿ ಅಶ್ವಿನೀದೇವತೆಗಳನ್ನೂ ವಾಗಿಂದ್ರಿಯದಲ್ಲಿ ಅಗ್ನಿಯನ್ನೂ ಕರಗಳಲ್ಲಿ ದಕ್ಷನನ್ನೂ, ಪಾದಗಳಲ್ಲಿ ಜಯಂತನನ್ನೂ ಶಿಶ್ನದಲ್ಲಿ ಮನುವನ್ನೂ ಗುದದಲ್ಲಿ ಮಿತ್ರನನ್ನೂ ಪ್ರವೇಶಗೊಳಿಸಿದನು. ಆಗ ಅವರಿಗೆ ಹಸಿವೆ ತೃಷೆಗಳ ಪೀಡೆಯುಂಟಾಯಿತು; ಅವರು ನನ್ನನ್ನು ಶರಣು ಹೊಂದಿ ಯಾವ ದೇಹದಲ್ಲಿ ವಾಸಿಸುತ್ತ ವಿಷಯಗಳನ್ನು ಭೋಗಿಸಿ, ಈ ಪೀಡೆಗಳನ್ನು ಪರಿಹರಿಸಿಕೊಳ್ಳಬಹುದೋ, ಆ ಸ್ಥಾನವನ್ನು ತೋರಿಸೆಂದು ಪ್ರಾರ್ಥಿಸಿದರು (೪೭-೫೦). ತತ್ತ್ವಾಭಿಮಾನಿಗಳ ಈ ಪ್ರಾರ್ಥನೆಯನ್ನು

ತತಃ-ನಂತರ, ತಾಸಾಂ-ಈ ತತ್ತ್ವಾಭಿಮಾನಿಗಳಿಗೆ, ತೃಷಾ-ನೀರಡಿಕೆಯೂ, ಬುಭುಕ್ಷಾಚ-ಹಸಿವೆಯೂ, ಅಭವತ್-ಉಂಟಾಯಿತು; ತತಃ-ನಂತರ, ಸಂಪೀಡ್ಯಮಾನಾಃ-(ಹಸಿವೆ ತೃಷೆಗಳಿಂದ) ಪೀಡಿತರಾದ, ತಾಃ-ಆ ದೇವತೆಗಳು, ತದಾ-ಆಗ, ಮಾಂ-ನನ್ನನ್ನು ಶರಣಂ ಯಯುಃ-ಶರಣು ಹೊಂದಿದರು; (ಏನೆಂದು ಪ್ರಾರ್ಥಿಸಿದರೆಂದರೆ), ಸ್ಥಾನಂ-(ನಮ್ಮ ವಾಸಕ್ಕೆ ಯೋಗ್ಯವಾದ) ಸ್ಥಾನವನ್ನು (ಪ್ರಾಣದೇಹವನ್ನು), ಪ್ರದಿಶ-ತೋರಿಸು (ಇಲ್ಲಿ ವಾಸಮಾಡಿರೆಂದು ಆಜ್ಞಾಪಿಸು), ಯತ್ರಸ್ಥಾ-ಎಲ್ಲಿ ವಾಸಿಸುವವರಾಗಿ, ವಯಂ-ನಾವು, ವಿಷಯಾನ್-(ಹಸಿವೆ ತೃಷೆಗಳನ್ನು ಪರಿಹರಿಸುವ) ಅನ್ನ, ನೀರು ಮೊದಲಾದ ವಿಷಯಗಳನ್ನು (ಭೋಗಗಳನ್ನು), ಭುಜ್ಮಹೇ-ಭೋಗಿಸುವೆವೋ (ಅಂತಹ ಸ್ಥಾನವನ್ನು ತೋರಿಸು).

ತೃಣಗುಲ್ಮಲತಾವೃಕ್ಷಾನ್ ಗ್ರಾಮ್ಯಾರಣ್ಯಪಶೂನಪಿ ।
ಕ್ರಮೇಣಾದರ್ಶಯಂಸ್ತಾಂಸ್ತೇ ಸ್ಥಿತಾ ತೃಪ್ತಿಂ ನ ಭೇಜಿರೇ ॥ ೫೧ ॥

ತೃಣಗುಲ್ಮಲತಾವೃಕ್ಷಾನ್-ತೃಣ, ಗುಲ್ಮ, ಲತೇ, ವೃಕ್ಷದೇಹಗಳನ್ನು, ಅಪಿ-ಮತ್ತು ಗ್ರಾಮ್ಯಾರಣ್ಯಪಶೂನ್-ಗ್ರಾಮ್ಯ, ಅರಣ್ಯ ಪಶುಗಳ ದೇಹಗಳನ್ನು ಕ್ರಮೇಣ-ಕ್ರಮದಿಂದ (ಒಂದಾದನಂತರ ಒಂದರಂತೆ), ಅದರ್ಶಯನ್-(ಪ್ರವೇಶಿಸಿ ವಿಷಯಗಳನ್ನು ಭೋಗಿಸಿ ಹಸಿವೆ ತೃಷೆಗಳ ಪರಿಹಾರವನ್ನು ಹೊಂದಿರೆಂದು) ತೋರಿಸಿದನು; ತಾನ್-ಆ ದೇಹಗಳನ್ನು ತೇ-ಆ ತತ್ತ್ವಾಭಿಮಾನಿಗಳು, ಸ್ಥಿತಾಃ-ಅಲ್ಲಿದ್ದವರಾಗಿ, ತೃಪ್ತಿಂ-ತೃಪ್ತಿಯನ್ನು, ನ ಭೇಜಿರೇ-ಹೊಂದಲಿಲ್ಲ.

ತತೋಽಶ್ವಂ ದರ್ಶಯಾಮಾಸ ನಾಸ್ಮಿನ್ ಪ್ರೀತಾ ಬಭೂವಿರೇ ।
ತತೋ ಗಾಂ ದರ್ಶಯಾಮಾಸ ತತ್ರಾಪ್ಯಾಸುರತೃಪ್ತಯಃ ॥ ೫೨ ॥

ತತಃ-ನಂತರ, ಅಶ್ವಂ-ಅಶ್ವವನ್ನು, ದರ್ಶಯಾಮಾಸ-ತೋರಿಸಿದನು; ಅಸ್ಮಿನ್-ಆ ದೇಹದಲ್ಲಿದ್ದು ಪ್ರೀತಾಃ-ಸಂತುಷ್ಟರಾದವರು, ನ ಬಭೂವಿರೇ-ಆಗಲಿಲ್ಲ; ತತಃ-ನಂತರ,

---

ಕೇಳಿ, ಅವರಿಗೆ ಕ್ರಮವಾಗಿ, ತೃಣಗುಲ್ಮಲತಾವೃಕ್ಷಾದಿ ಸ್ಥಾನಗಳನ್ನು ಗ್ರಾಮ್ಯಾರಣ್ಯ ಪಶುಗಳ (ದೇಹಗಳೆಂಬ) ಸ್ಥಾನಗಳನ್ನೂ, (ಮುಖ್ಯಪ್ರಾಣನು ನನ್ನಾಜ್ಞೆಯಿಂದ) ತೋರಿಸಿದನು; ಅವರು ಆ ದೇಹಗಳನ್ನು ಪ್ರವೇಶಿಸಿ, ಅಲ್ಲಿ ಸ್ಥಿತರಾಗಿ ತೃಪ್ತಿಯನ್ನು ಹೊಂದಲಿಲ್ಲ (೫೧). ನಂತರ ಮುಖ್ಯಪ್ರಾಣನು ತತ್ತ್ವಾಭಿಮಾನಿ ದೇವತೆಗಳಿಗೆ, ಅಶ್ವದೇಹವನ್ನೂ ಗೋದೇಹವನ್ನೂ ವಾಸಸ್ಥಾನವನ್ನಾಗಿ ನಿರ್ದೇಶಿಸಿದನು; ಅವುಗಳಲ್ಲಿ ಹೊಕ್ಕ ಅವರಿಗೆ ಅಲ್ಲಿಯೂ ತೃಪ್ತಿ ದೊರೆಯಲಿಲ್ಲ (೫೨). ನಂತರ ಈ ಮೊದಲು, ಮಹತತ್ತ್ವದಿಂದ ನಾನು ನಿರ್ಮಿಸಿದ ಪುರುಷಾಕೃತಿಯ ದೇಹವನ್ನು, ನಾನು ಆ ತತ್ತ್ವಾಭಿಮಾನಿ ದೇವತೆಗಳಿಗೆ ಅವರ

ಗಾಂ–ಗೋದೇಹವನ್ನು ದರ್ಶಯಾಮಾಸ–ತೋರಿಸಿದನು (ವಾಸಸ್ಥಾನವನ್ನಾಗಿ ನಿರ್ದೇಶಿಸಿದನು); ತತ್ರಾಪಿ–ಅಲ್ಲಿಯೂ ಸಹ, ಅತೃಪ್ತಯಃ–ತೃಪ್ತಿಯಿಲ್ಲದವರು, ಆಸುಃ–ಆದರು.

ಮಹತತ್ತ್ವೇನ ಕೃತವಾನ್ ಪೂರ್ವಂ ಯಾಂ ಪುರುಷಾಕೃತಿಂ ।
ತತ್ತ್ವೇನ ಭೂಯಸಾ ಭೂಯೋ ಭಾವಿನಾಂ ಸ್ವಯಮೇವ ಹಿ ॥ ೫೩ ॥

ತಾಮದರ್ಶಯಮೇತಾಭ್ಯೋ ವರಮಿತ್ಯಬ್ರುವಂಶ್ಚ ತಾಃ ।
ತತಃ ಪ್ರಾಣಂ ತು ದೇಹೇಷ್ವನ್ವಿವೇಶ್ಯೇಂದ್ರಿಯದೇವತಾಃ ॥ ೫೪ ॥

ಸರ್ವಾನ್ ಜೀವಗಣಾಂಶ್ಚಾಪಿ ಸರ್ವಾನ್ ದೇವಾನಪಿ ಸ್ವ ಹ ।
ಯಾವನ್ನ್ಯವೇಶಯತ್ತಾವದ್ಬುಭುಕ್ಷಾ ಚ ಪಿಪಾಸಿಕಾ ॥ ೫೫ ॥

ಆವಾಭ್ಯಾಮದಿಶ ಸ್ಥಾನಮಿತಿ ಚುಕ್ರುಶತುಸ್ತತಃ ।
ಅವೋಚಂ ಕೃಪಯಾ ತಾಭ್ಯಾಂ ಸರ್ವೇ ಸ್ಥಾನಂ ಭವಂತ್ವಿತಿ ॥ ೫೬ ॥

ಪೂರ್ವಂ–ಹಿಂದೆ (ಮೊದಲು), ಮಹತತ್ತ್ವೇನ–ಮಹತತ್ತ್ವದಿಂದ, ಯಾಂ ಪುರುಷಾಕೃತಿಂ–ಯಾವ ಪುರುಷದೇಹವನ್ನು ಕೃತವಾನ್–ನಿರ್ಮಿಸಿರೆನೋ, ಭೂಯಸಾತತ್ತ್ವೇನ–ಅಧಿಕವಾದ ತತ್ತ್ವದಿಂದ (ಅಧಿಕವಾದ ಇತರ ವಿಕೃತತತ್ತ್ವಗಳ ಸಮೂಹದಿಂದ), ಭೂಯೋ

---

ವಾಸಸ್ಥಾನವನ್ನಾಗಿ ತೋರಿಸಿದೆನು; ಮುಂದೆ ಬ್ರಹ್ಮನಿಂದ ಸೃಷ್ಟರಾಗುವ ಅಸಂಖ್ಯ ಜೀವರಿಗೆ, ಈ ಪುರುಷಾಕಾರದ ದೇಹವೇ ಶ್ರೇಷ್ಠ ಸಾಧನ ದೇಹವಾಗಲಿದ್ದು ಈ ದೇಹವನ್ನು ಆ ದೇವತೆಗಳು ತಮಗೆ ಯೋಗ್ಯವಾದ ಸ್ಥಾನವೆಂದು ಒಪ್ಪಿದರು. ನಂತರ ಆ ಪುರುಷಾಕಾರದ ದೇಹದಲ್ಲಿ ಮುಖ್ಯ ಪ್ರಾಣನನ್ನೂ, ತತ್ತ್ವಾಭಿಮಾನಿ ದೇವತೆಗಳನ್ನೂ ಇತರ ಸಕಲ ದೇವತೆಗಳನ್ನೂ, ಸೃಷ್ಟಿಯಲ್ಲಿ ಬರಲಿರುವ ಸಮಸ್ತ ಜೀವರನ್ನೂ ಪ್ರವೇಶಗೊಳಿಸಿ ನಾನೂ ಅದರಲ್ಲಿ ಹೊಕ್ಕೆನು; ಅಷ್ಟರಲ್ಲಿ ಹಸಿವೆ ತೃಷೆಗಳು ಎಲ್ಲರನ್ನೂ ಬಾಧಿಸತೊಡಗಿದವು. ಈ ಹಸಿವೆ ತೃಷೆಗಳ ನಿಯಾಮಕದೇವತೆಗಳು, ನಮಗೆ ಯೋಗ್ಯ ಸ್ಥಾನಗಳನ್ನು ತೋರಿಸೆಂದು ಆಕ್ರೋಶ ಮಾಡಿದವು—ಕೂಗಿಕೊಳ್ಳಲಾರಂಭಿಸಿದವು;[1]

---

1. ಆರಣ್ಯಕ ೨—ಅಧ್ಯಾಯ ೪—ಖಂಡ ೨ (ಐತರೇಯೋಪನಿಷತ್ತು)ರಲ್ಲಿ ಈ ಅಶನಾಪಿಪಾಸೆಗಳಿಗೆ ನಿಯಾಮಕರಾದ ದೇವತೆಗಳು, ವಾಯುದೇವನ ಎರಡು ರೂಪಗಳೆಂದೂ, ಅಗ್ನಿ ಮೊದಲಾದ ಸಕಲ ತತ್ತ್ವಾಭಿಮಾನಿಗಳನ್ನು ಪ್ರವೇಶಿಸಿ. ಈ ಎರಡು ರೂಪಗಳಿಂದ ಎಲ್ಲ ದೇವತೆಗಳ ಭೋಗಭೋಕ್ತನಾಗಿರುವನೆಂದೂ ಹೇಳಲಾಗಿದೆ. ಪ್ರಾಣನಾಮಕನಾಗಿ ಎಲ್ಲ ದೇವತೆಗಳಲ್ಲಿದ್ದು ಅಶನಪಿಪಾಸಾನಾಮಕನೂ ಆಗಿರುವಾತನು ಶ್ರೀ ವಾಯುದೇವನೇ. ಶ್ರೀಹರಿಯ ನಂತರ, ಆತನೇ ಸರ್ವಪ್ರಾಣಿಗಳ ದೇಹದಲ್ಲಿದ್ದು ಸರ್ವಭೋಕ್ತನೆನಿಸುವನು.

ಭಾವಿನಾಂ-ಬಹುವಾಗಿ (ಅಸಂಖ್ಯವಾಗಿ) ಮುಂದೆ ಹುಟ್ಟುವ, ಮನುಷ್ಯಾದಿ ಜೀವರಿಗೆ, ಹಿ-ಯಾವ ಕಾರಣದಿಂದ, ಸ್ವಯಮೇವ-ಪುರುಷಾಕಾರದ ದೇಹಗಳು ಸಾಕ್ಷಾತ್ಸಾಧನಗಳಾಗುವುವೋ (ಅಂಥ), ತಾಂ-ಆ ಪುರುಷಾಕೃತಿಯನ್ನು, ಏತಾಭ್ಯಃ-ಈ ತತ್ತ್ವಾಭಿಮಾನಿಗಳಿಗೆ, ಆದರ್ಶಯಂ-(ವಾಸಸ್ಥಾನವನ್ನಾಗಿ) ತೋರಿಸಿದೆನು; ತಾಃ-ಅವರು, ವರಂ ಇತಿ ಚ-ಉತ್ತಮವಾಗಿದೆ ಎಂಬುದಾಗಿಯೂ (ತಮ್ಮ ವಾಸಕ್ಕೆ ಯೋಗ್ಯವೆಂದೂ), ಅಬ್ರುವನ್-ಹೇಳಿದರು; ತತಃ-ಅನಂತರ, ಅಸ್ಮಿನ್ ದೇಹೇ-ಈ ಪುರುಷಾಕಾರದ ದೇಹದಲ್ಲಿ, ಪ್ರಾಣಂ-ಮುಖ್ಯಪ್ರಾಣನನ್ನೂ, ಇಂದ್ರಿಯದೇವತಾಃ-ಇಂದ್ರಿಯಾಭಿಮಾನಿ ದೇವತೆಗಳನ್ನೂ, ಸರ್ವಾನ್ ದೇವಾನಪಿ-ಸಕಲ (ಇತರ ದೇವತೆಗಳನ್ನೂ) ದೇವತಾ ಜೀವರನ್ನೂ, ಸರ್ವಾನ್-ಸಮಸ್ತ ಜೀವಗಣಾನ್ ಚ ಅಪಿ-ಜೀವಸಮೂಹಗಳನ್ನೂ ಸಹ, ನಿವೇಶ್ಯ-ಪ್ರವೇಶಗೊಳಿಸಿ, ಯಾವತ್‌ನ್ಯವೇಶಯತ್-ತಾನೂ (ಶ್ರೀವಿಷ್ಣುವೂ) ಪ್ರವೇಶಿಸಿದನೋ (ನಾನೂ ಪ್ರವೇಶಿಸಿದೆನೋ), ತಾವತ್-ಅಷ್ಟರೊಳಗೆ (ಆ ಕಾಲಕ್ಕೆ) ಬುಭುಕ್ಷಾಪಿಪಾಸಿಕಾ-ಹಸಿವು ತೃಷೆಗಳು (ಈ ದೇವಾದಿ ಜೀವಸಮೂಹಕ್ಕೆ ಉಂಟಾದುವು); ತತಃ-ಹೀಗಾದ ಒಡನೆ, ಆವಾಭ್ಯಾಂ-ನಮಗೆ (ಈ ಹಸಿವೆ ತೃಷೆಗಳು), ಸ್ಥಾನಂ-ಸ್ಥಾನವನ್ನು ಆದಿಶ-ಆಜ್ಞಾಪಿಸು (ತೋರಿಸು—ನಾವು ಇರಬೇಕಾದ ಸ್ಥಾನವನ್ನು ನಿರ್ದೇಶಿಸು), ಇತಿ-ಹೀಗೆಂದು, ಚುಕ್ರುಶತುಃ-ಕಿರುಚಿಕೊಳ್ಳುವುದಕ್ಕೆ ಆರಂಭಿಸಿದವು; ತಾಭ್ಯಾಂ-ಅವುಗಳಿಗೆ (ಹಸಿವೆ ತೃಷೆಗಳಿಗೆ), ಕೃಪಯಾ-ಕೃಪೆಯಿಂದ, ಸರ್ವೇ-ಎಲ್ಲವೂ (ಎಲ್ಲಾ ಪ್ರಾಣದೇಹಗಳೂ), ಸ್ಥಾನಂ-ನಿಮ್ಮ ವಾಸಸ್ಥಾನವು; ಭವಂತು-ಆಗಲಿ, ಇತಿ-ಹೀಗೆ, ಅವೋಚಂ-ಹೇಳಿದೆನು.

ಏವಂ ಪುರುಷದೇಹಂ ತು ವಾಸುದೇವೋಗಿಲಂ ತತಃ ।
ಮಾಯಾಯಾಂ ಜನಯಾಮಾಸ ಪುರುಷಂ ಪರಮಾದ್ಭುತಂ ॥ ೫೭ ॥

ಏವಂ ಪುರುಷದೇಹಂ ತು-ಹೀಗೆ ಎಲ್ಲವನ್ನೂ ಪ್ರವೇಶಗೊಳಿಸಿದ ಪುರುಷಾಕಾರದ ದೇಹವನ್ನು, ತತಃ-(ಹಾಗೆ ಎಲ್ಲರನ್ನೂ ಪ್ರವೇಶಗೊಳಿಸಿದ) ನಂತರ, ವಾಸುದೇವಃ-

---

ಆಗ ನಾನು, ಅವುಗಳಿಗೆ, ನನ್ನಿಂದ ಸೃಷ್ಟವಾದ ಎಲ್ಲ ಪ್ರಾಣದೇಹಗಳೂ ನಿಮಗೆ ವಾಸಸ್ಥಾನವಾಗಲಿ; ಅಲ್ಲಿದ್ದು ತೃಪ್ತಿಯನ್ನು ಹೊಂದಿರಿ ಎಂದು ಹೇಳಿದೆನು (೫೩-೫೬). ನನ್ನಿಂದ ಪೂರ್ವಸೃಷ್ಟವಾದ ಪುರುಷಾಕಾರದ ದೇಹದಲ್ಲಿ ತತ್ತ್ವಾಭಿಮಾನಿಗಳನ್ನೂ, ಮುಖ್ಯಪ್ರಾಣನನ್ನೂ, ಇತರ ಸಕಲ ಜೀವಗಣಗಳನ್ನೂ ಪ್ರವೇಶಮಾಡಿಸಿ, ವಾಸುದೇವರೂಪನಾದ ನಾನು, ಆ ಪುರುಷದೇಹವನ್ನು ನುಂಗಿದೆನು; ನಂತರ, ವಾಸುದೇವರೂಪದ ಭಾರ್ಯಗಳಾದ ಮಾಯಾನಾಮಕ ಶ್ರೀಲಕ್ಷ್ಮೀದೇವಿಯಲ್ಲಿ ಅದ್ಭುತನಾದ ಪುರುಷನಾಮಕ ಬ್ರಹ್ಮದೇವನನ್ನು ಹುಟ್ಟಿಸಿದೆನು. (೫೭). ಬ್ರಹ್ಮದೇವನು,

ವಾಸುದೇವರೂಪನಾದ ನಾನು (ಶ್ರೀವಿಷ್ಣುವು), ಅಗಿಲಂ–ನುಂಗಿದೆನು; (ತತಃ–ನಂತರ), ಮಾಯಾಯಾಂ–ಮಾಯರೂಪಳಾದ ಲಕ್ಷ್ಮೀದೇವಿಯಲ್ಲಿ ಪರಮಾದ್ಭುತಂ–ಅತ್ಯಾಶ್ಚರ್ಯಕರನಾದ, ಪುರುಷಂ–ಪುರುಷನಾಮಕ ಬ್ರಹ್ಮದೇವನನ್ನು ಜನಯಾಮಾಸ–ಹುಟ್ಟಿಸಿದನು.

ಸ್ವಸಹಾಯಂ ದ್ವಿತೀಯಂ ಸ ವಾಂಛಮಾನೋಽಥ ಮಾಂ ಪ್ರತಿ ।
ಉಕ್ತವಾನ್ ದೇಹಿ ಮೇ ಸ್ವಾಮಿನ್ ಸಹಾಯಂ ಕೃಪಯೇತಿ ವೈ ॥ ೫೮ ॥

ತತಃ ಸಂಕರ್ಷಣಾದ್ಜಜ್ಞೇ ಮಹತತ್ತ್ವಸ್ಯ ಭಾಗತಃ ।
ಸೂತ್ರನಾಮಾ ಜೀವಗಣೈರ್ಯುಕ್ತಃ ಪ್ರಾಣೋ ಜಯಾತ್ಮಜಃ ॥ ೫೯ ॥

ಆದಿದೇವೌ ಪುರಾ ತೌ ತು ತಾಭ್ಯಾಂ ಸೃಷ್ಟ್ಯರ್ಥಮೇವ ಹಿ ।
ಪ್ರದ್ಯುಮ್ನೋ ಜನಯಾಮಾಸ ಕೃತೌ ಕನ್ಯಾದ್ವಯಂ ತದಾ ॥ ೬೦ ॥

ಸರಸ್ವತೀಂ ತು ಂ ತತ್ರಾದ್ಯಾಂ ಬ್ರಹ್ಮಣಾ ಸಮಯೋಜಯತ್ ।
ವಾಣೀಂ ಪ್ರಾಣೇನ ತಾಭ್ಯಾಂ ತೌ ಕ್ರೀಡಂತೌ ತಸ್ಥತುಶ್ಚಿರಂ ॥ ೬೧ ॥

ಅಥ–ಹೀಗೆ ಸೃಷ್ಟನಾದ ನಂತರ, ಸ್ವಸಹಾಯಂ–ತನಗೆ ಸಹಾಯಕನಾದ, ದ್ವಿತೀಯಂ–ಎರಡನೆಯವನನ್ನು ವಾಂಛಮಾನಃ–ಅಪೇಕ್ಷಿಸುವನಾಗಿ, ಸ್ವಾಮಿನ್–ಹೇ ಸ್ವಾಮಿ!, ಕೃಪಯಾ–ಕೃಪೆಮಾಡಿ, ಮೇ–ನನಗೆ, ಸಹಾಯಂ–ಸಹಾಯಕನೊಬ್ಬನನ್ನು ದೇಹಿ–ಕೊಡು(ಕರುಣಿಸು), ಇತಿ ವೈ–ಹೀಗೆಂದು, ಮಾಂ ಪ್ರತಿ–ನನ್ನನ್ನು ಕುರಿತು, ಉಕ್ತವಾನ್–ಹೇಳಿದನು; ತತಃ–ಈ ಪ್ರಾರ್ಥನೆಯ ನಂತರ, ಸಂಕರ್ಷಣಾತ್–ಸಂಕರ್ಷಣರೂಪನಾದ

---

ತನಗೊಬ್ಬ ಸಹಾಯಕನನ್ನು ಕರುಣಿಸೆಂದು ನನ್ನನ್ನು ಪ್ರಾರ್ಥಿಸಿದನು; ಆಗ ನನ್ನ ಸಂಕರ್ಷಣರೂಪದಿಂದ, ಆ ರೂಪದ ನನ್ನ ಭಾರ್ಯಳಾದ ಜಯಾನಾಮಕ ಲಕ್ಷ್ಮೀದೇವಿಯಲ್ಲಿ ಮಹತತ್ತ್ವದ ಮತ್ತೊಂದು ಭಾಗದಿಂದ, ಸೂತ್ರನಾಮಕ ವಾಯುದೇವನನ್ನು ಸೃಷ್ಟಿಸಿದೆನು; ಸೃಷ್ಟಿಗೆ ಆದಿಭೂತರಾದ (ಇತರ ಜೀವರ ಸೃಷ್ಟಿಗೆ ಕಾರಣರಾದ) ಈ ಉಭಯರ ಸೃಷ್ಟಿಕಾರ್ಯಕ್ಕಾಗಿ, ಪ್ರದ್ಯುಮ್ನರೂಪನಾದ ನಾನು, ನನ್ನ ಭಾರ್ಯಳಾದ ಕೃತಿದೇವಿಯಲ್ಲಿ (ಲಕ್ಷ್ಮೀರೂಪದಲ್ಲಿ), ಇಬ್ಬರು ಕನ್ಯೆಯರನ್ನು ಹುಟ್ಟಿಸಿದೆನು; ಅವರಲ್ಲಿ ಮೊದಲಿನವಳಾದ ಸರಸ್ವತೀದೇವಿಯನ್ನು ಬ್ರಹ್ಮನಿಂದಲೂ, ಇನ್ನೊಬ್ಬಳಾದ ವಾಣೀ (ಭಾರತೀ) ದೇವಿಯನ್ನು ವಾಯುವಿನಿಂದಲೂ, ಸೇರಿಸಿ (ಕ್ರಮವಾಗಿ ಅವರ ಪತ್ನಿಯರನ್ನಾಗಿಮಾಡಿ)ದೆನು; ಆಗ ಬ್ರಹ್ಮವಾಯುಗಳು ಸರಸ್ವತೀ ಭಾರತೀಯರೊಂದಿಗೆ ಬಹುಕಾಲ ವಿಹರಿಸುತ್ತಿದ್ದರು (೫೮-೬೧). ಪ್ರಕೃತಿಯನ್ನು

ನನ್ನ ರೆಶೆಯಿಂದ, ಮಹತತ್ತ್ವಸ್ಯ–ಮಹತತ್ತ್ವದ, ಭಾಗತಃ–ಒಂದು ಭಾಗದಿಂದ, ಜಯಾತ್ಮಜಃ–ಜಯಾನಾಮಕ ಲಕ್ಷ್ಮೀದೇವಿಯ ಮಗನಾಗಿ, ಜೀವಗಣೈಃ ಯುಕ್ತಃ–ಜೀವಗಣಗಳಿಂದ ಸಹಿತನಾಗಿ, ಸೂತ್ರನಾಮಾ–ಸೂತ್ರನಾಮಕ ವಾಯುದೇವನು, ಜಜ್ಞೇ–ಹುಟ್ಟಿದನು; ತೌ ತು–ಆ ಇಬ್ಬರಾದರೋ (ಬ್ರಹ್ಮ ಮತ್ತು ವಾಯು, ಇವರೀರ್ವರೂ), ಪುರಾ–ಮೊದಲಿಗೆ, ಆದಿದೇವೌ–ಎಲ್ಲ ದೇವತೆಗಳ ಉತ್ಪಾದಕರು; ತಾಭ್ಯಾಂ–ಅವರಿಬ್ಬರಿಗೋಸ್ಕರ, ಸೃಷ್ಟ್ಯರ್ಥಂ ಏವ–ಸೃಷ್ಟಿಗಾಗಿಯೇ (ಜಗತ್ಸೃಷ್ಟಿಕಾರ್ಯವನ್ನು ಮುಂದುವರಿಸಲಿಕ್ಕಾಗಿಯೇ), ಪ್ರದ್ಯುಮ್ನಃ–ಪ್ರದ್ಯುಮ್ನನ ರೂಪನಾದ ಶ್ರೀವಿಷ್ಣುವು, ತದಾ–ಆಗ, ಕೃತೌ–(ತನ್ನ ಭಾರ್ಯಳಾದ) ಕೃತೀನಾಮಕ ಲಕ್ಷ್ಮೀದೇವಿಯಲ್ಲಿ ಕನ್ಯಾದ್ವಯಂ–ಇಬ್ಬರು ಹೆಣ್ಣುಮಕ್ಕಳನ್ನು ಜನಯಾಮಾಸ–ಹುಟ್ಟಿಸಿದನು; ತತ್ರ–ಆ ಇಬ್ಬರಲ್ಲಿ ಆದ್ಯಾಂ–ಮೊದಲಿನವಳಾದ, ಸರಸ್ವತೀಂ–ಸರಸ್ವತಿಯನ್ನು, ಬ್ರಹ್ಮಣಾ–ಬ್ರಹ್ಮದೇವನಿಂದ, ಸಮಯೋಜಯತ್–ಕೂಡಿಸಿದನು(ಆತನ ಭಾರ್ಯಳನ್ನಾಗಿ ಮಾಡಿದನು); ವಾಣೀಂ–(ಎರಡನೆಯವಳಾದ) ಭಾರತಿಯನ್ನು, ಪ್ರಾಣೇನ–ಸೂತ್ರನಾಮಕ ವಾಯುದೇವನೊಡನೆ (ಸೇರಿಸಿದನು–ಭಾರ್ಯಳನ್ನಾಗಿ ಮಾಡಿದನು); ತೌ–ಆ ಬ್ರಹ್ಮ ವಾಯುಗಳಿಬ್ಬರೂ, ತಾಭ್ಯಾಂ–ಆ ಸರಸ್ವತೀವಾಣಿಯರಿಂದ ಕೂಡಿ, ಚಿರಂ–ಬಹುಕಾಲ, ಕ್ರೀಡಂತೌ–ವಿಹರಿಸುತ್ತ ತಸ್ಥತುಃ–ಇರುವವರಾದರು.

ಯ ಇಮಾಂ ಪ್ರಾಕೃತಾಂ ಸೃಷ್ಟಿಂ ಜನನಂ ಬ್ರಹ್ಮಸೂತ್ರಯೋಃ ।
ಶ್ರಾವಯೇತ್ ಶೃಣುಯಾದ್ವಾಪಿ ಪ್ರಾಕೃತೈರ್ಮುಚ್ಯತೇ ಗುಣೈಃ ॥ ೬೨ ॥

ಧನವಾನ್ ಪುತ್ರವಾನ್ ಲೋಕೇ ದೀರ್ಘಾಯುಃ ಪ್ರಿಯದರ್ಶನಃ ।
ಜಾತಿಶ್ರೈಷ್ಠ್ಯಮವಾಪ್ಯೈವ ಸಭಾರ್ಯೋ ಮೋದತೇ ಚಿರಂ ॥ ೬೩ ॥

ಯಃ–ಯಾರು,[1] ಇಮಾಂ–ಈ (ಈ ಮೊದಲು ಹೇಳಿದ), ಪ್ರಾಕೃತಾಂ–ಪ್ರಕೃತಿಯಿಂದಾದ, ಸೃಷ್ಟಿಂ–ಸೃಷ್ಟಿಯನ್ನು (ಮತ್ತು), ಬ್ರಹ್ಮಸೂತ್ರಯೋಃ–ಬ್ರಹ್ಮವಾಯುಗಳ, ಜನನಂ–ಉತ್ಪತ್ತಿಯನ್ನೂ, ಶೃಣುಯಾತ್–ಶ್ರವಣ ಮಾಡುತ್ತಾರೆಯೋ (ಶ್ರದ್ಧೆಯಿಂದ

---

ವಿಕಾರಗೊಳಿಸಿ, ಮಹದಾದಿತತ್ತ್ವಗಳನ್ನು ನಿರ್ಮಿಸಿ, ಅವುಗಳಿಂದ ಶ್ರೀವಿಷ್ಣುವು ಮಾಡಿದ ನಾನಾ ಯೋನಿಗಳ ಸೃಷ್ಟಿಯನ್ನೂ, ವಾಸುದೇವ, ಸಂಕರ್ಷಣ ಮತ್ತು ಪ್ರದ್ಯುಮ್ನ ರೂಪಗಳಿಂದ ಪುರುಷನಾಮಕ (ಬ್ರಹ್ಮ ಸೂತ್ರನಾಮಕವಾಯು, ಸರಸ್ವತೀ ಭಾರತೀದೇವಿಯರನ್ನೂ (ಆಯಾ ಲಕ್ಷ್ಮೀರೂಪಗಳಿಂದ) ಸೃಷ್ಟಿಮಾಡಿದ ಮಹಿಮೆಯನ್ನೂ ಯಾರು

---

1. ಯಃ–ಯಾವಾತನು (ಯಾರೊಬ್ಬನು): ಇಲ್ಲಿರುವ ಏಕವಚನವು ಅಧಿಕಾರಿ ವರ್ಗವನ್ನು (ಮುಕ್ತಿಯೋಗ್ಯ ಜೀವಸಮುದಾಯವನ್ನು) ಪ್ರತಿನಿಧಿಸುವ ವ್ಯಕ್ತಿಯನ್ನು ಹೇಳುತ್ತದೆ.

ಕೇಳುತ್ತಾರೆಯೋ), ವಾ–ಮತ್ತು (ಅಥವಾ), ಶ್ರಾವಯೇತ್–ಅನ್ಯರಿಗೆ ಶ್ರವಣ ಮಾಡಿಸುತ್ತಾರೆಯೋ (ಅನ್ಯರಿಗೆ ಹೇಳಿ ಕೇಳಿಸುತ್ತಾರೆಯೋ), (ಅವರು), ಪ್ರಾಕೃತೈಃ ಗುಣೈಃ–ಪ್ರಾಕೃತಗುಣಗಳಿಂದ (ಸತ್ವಾದಿ ಗುಣಬಂಧರೂಪದ ಸಂಸಾರದಿಂದ), ಮುಚ್ಯತೇ–ಬಿಡುಗಡೆಯನ್ನು ಹೊಂದುತ್ತಾರೆ; (ಹೀಗೆ ಪ್ರಾಕೃತಸೃಷ್ಟಿಯನ್ನು ಕೇಳುವ, ಹೇಳುವ ಅಧಿಕಾರಿ ಜೀವನು) ಧನವಾನ್–ಧನವಂತನೂ, ಪುತ್ರವಾನ್–ಪುತ್ರವಂತನೂ, ದೀರ್ಘಾಯುಃ–ದೀರ್ಘಾಯುಷ್ಯವುಳ್ಳವನೂ, ಲೋಕೇ–ಲೋಕದಲ್ಲಿ ಪ್ರಿಯದರ್ಶನಃ–ಪ್ರೀತಿಪಾತ್ರನೂ (ಜನರಿಂದ ಪ್ರೀತಿಯಿಂದ ಕಾಣಲ್ಪಡುವವನೂ) (ಆಗಿ) ಜಾತಿಶ್ರೈಷ್ಠ್ಯಂ–ಸ್ವಜಾತಿಯಲ್ಲಿ ಶ್ರೇಷ್ಠತ್ವವನ್ನು, ಅವಾಪ್ಯ–ಹೊಂದಿ, ಸಭಾರ್ಯಃ–ಪತ್ನಿಸಮೇತನಾಗಿ, ಚಿರಂ–ಬಹುಕಾಲ, ಮೋದತೇ ಏವ–ಸುಖಿಸುವುದು ನಿಶ್ಚಯ.

---

# ಅಧ್ಯಾಯ ೩

**ಶ್ರೀ ಭಗವಾನ್ ಉವಾಚ—**

ಏಕದಾ ಚಿಂತಯಾವಿಷ್ಟಃ ಸ ಬ್ರಹ್ಮಾಚಿಂತಯಚ್ಚಿರಂ ।
ಕಥಂ ಸರ್ವಜ್ಞತಾಂ ಯಾಮಿ ಸೃಷ್ಟೌ ಶಕ್ತಿಃ ಕಥಂ ಭವೇತ್ ॥ ೧ ॥

ಏಕದಾ–(ಹೀಗೆ ಸ್ವಭಾರ್ಯೆಳೊಂದ ಕೂಡಿ ವಿಹರಿಸುತ್ತಿರುವಾಗ) ಒಂದುವೇಳೆ,

---

ಕೇಳುತ್ತಾರೆಯೋ, ಯಾರು ಅನ್ಯಶ್ರದ್ಧಾವಂತರಿಗೆ ಕೇಳಿಸುತ್ತಾರೆಯೋ, ಅವರು ಲೋಕದಲ್ಲಿ ಜನಪ್ರಿಯರಾಗಿ, ಧನವಂತರೂ, ಪುತ್ರವಂತರೂ, ದೀರ್ಘಾಯುಗಳೂ, ಆಗಿ, ತಮ್ಮ ಜಾತಿಯಲ್ಲಿ ಶ್ರೇಷ್ಠರೆನಿಸಿ, ಪತ್ನೀಸಮೇತ ಬಹುಕಾಲ ಸುಖಿಸುತ್ತಾರೆ. (ಈ ಅಧ್ಯಾಯದ ಶ್ರೀವಿಷ್ಣುಮಹಿಮೆಯ ಶ್ರವಣಫಲವನ್ನು ಹೇಳಲಾಗಿದೆ) (೬೨-೬೩).

ಬ್ರಹ್ಮೋತ್ಪತ್ತಿಯೆಂಬ ೨ನೇ ಅಧ್ಯಾಯವು ಮುಗಿದುದು

---

ಸೃಷ್ಟಿಗಾಗಿಯೇ ಹುಟ್ಟಿಸಲ್ಪಟ್ಟ ನಾನು, ಜಗತ್ತಿನ ಸೃಷ್ಟಿಕಾರ್ಯದಲ್ಲಿ ಹೇಗೆ ಸಮರ್ಥನಾದೇನು ಮತ್ತು ಅದಕ್ಕೆ ಅವಶ್ಯಕವಾದ ಸರ್ವಜ್ಞತ್ವವು,[1] ಹೇಗೆ ಉಂಟಾದೀತು,

---

1. ಅಸಂಖ್ಯಜೀವರಿಗೆ, ಅವರವರ ಯೋಗ್ಯತೆ ಮತ್ತು ಕರ್ಮಾನುಸಾರವಾಗಿ ಸಾಧನದೇಹಗಳನ್ನು, ಯೋಗ್ಯಕಾಲಗಳಲ್ಲಿ ಕೊಟ್ಟು ಅವರವರ ಗತಿಗಳನ್ನು ಸಾಧಿಸಿಕೊಳ್ಳುವಂತೆ ಸೃಷ್ಟಿಕಾರ್ಯವನ್ನು ನೆರವೇರಿಸಿ, ಶ್ರೀಹರಿಪ್ರೀತಿಯನ್ನು ಪಡೆಯಲು, ಪ್ರತಿಜೀವರ ಸ್ವರೂಪ,

ಬ್ರಹ್ಮಾ-ಬ್ರಹ್ಮದೇವನು, ಕಥಂ-ಹೇಗೆ, ಸೃಷ್ಟೌ-(ಜಗತ್ತಿನ ಸೃಷ್ಟಿಗಾಗಿಯೇ ಹುಟ್ಟಿಸಲ್ಪಟ್ಟ ನನಗೆ) ಸೃಷ್ಟಿಕಾರ್ಯದಲ್ಲಿ ಶಕ್ತಿ-ಸಾಮರ್ಥ್ಯವು, ಭವೇತ್-ಉಂಟಾದೀತು, (ಮತ್ತು), ಸರ್ವಜ್ಞತಾಂ-(ಆ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸಲು ಅವಶ್ಯಕವಾದ) ಸರ್ವಜ್ಞತ್ವವನ್ನು, ಕಥಂ-ಹೇಗೆ, ಯಾಮಿ-ಹೊಂದುವೆನು, (ಎಂಬ), ಚಿಂತಯಾವಿಷ್ಟಃ-ಚಿಂತೆಯಲ್ಲಿ ಮುಳುಗಿ, ಚಿರಂ-ಬಹುಕಾಲ, ಅಚಿಂತಯತ್-ಯೋಚಿಸಿದನು.

ಕಥಂ ಮೋಕ್ಷಮವಾಪ್ಸ್ಯಾಮಿ ಮುಕ್ತಃ ಸಂಸಾರಸಾಗರಾತ್ ।
ಏವಂ ಚಿಂತಯತಾ ತೇನ ಸ್ಮೃತೋಽಹಂ ಸರ್ವವಿತ್ತಮಃ ॥ ೨ ॥

ಸ ಏವ ಭಗವಾನ್ ಮಹ್ಯಮುಪದೇಷ್ಟುಮಿಹಾರ್ಹತಿ ।
ನಾನ್ಯತ್ಕಿಂಚಿತ್ ಪ್ರಪಶ್ಯಾಮಿ ಮಮ ಚಿಂತಾಪನೋದಕಂ ॥ ೩ ॥

ಸಂಸಾರಸಾಗರಾತ್-ಭವಸಮುದ್ರದಿಂದ, ಮುಕ್ತಃ-ಬಿಡಲ್ಪಟ್ಟು (ಜನನಮರಣ ರೂಪದ ಸಂಸಾರದಿಂದ ಬಿಡುಗಡೆಯನ್ನು ಹೊಂದಿ), ಕಥಂ-ಹೇಗೆ, ಮೋಕ್ಷಂ-(ಸ್ವಯೋಗ್ಯಪೂರ್ಣಾನಂದಾನುಭವದಿಂದಿರುವ ನಿತ್ಯಸ್ಥಿತಿಯನ್ನು) ಮೋಕ್ಷವನ್ನು ಅವಾಪ್ಸ್ಯಾಮಿ-ಹೊಂದುವೆನು, ಏವಂ-ಹೀಗೆಂದು, ಚಿಂತಯತಾ-ಯೋಚಿಸುತ್ತಿರುವ,

ಎಂಬ ಚಿಂತೆಗೆ ಒಳಗಾಗಿ, ಬಹುಕಾಲದವರೆಗೆ ಬ್ರಹ್ಮದೇವನು, ನನ್ನನ್ನೇ ಶರಣುಹೊಂದಿ ಯೋಚಿಸಿದನು (೧). ಸರ್ವಜ್ಞತ್ವವನ್ನು ಹೊಂದಿ, ಜನಕನ ಆಜ್ಞೆಯಂತೆ ಸೃಷ್ಟಿಕಾರ್ಯವನ್ನು ನಿರ್ವಹಿಸಿ, ಆತನ ಪ್ರಸಾದದಿಂದ, ನನ್ನ ಸ್ವಯೋಗ್ಯ ಆನಂದಾತಿಶಯಯುಕ್ತವಾದ ಮೋಕ್ಷವನ್ನು[1] ಹೇಗೆ ಹೊಂದುವೆನೆಂದು ಚಿಂತಿಸಿ, ತನ್ನ ಉತ್ಪಾದಕನಾದ ಶ್ರೀವಿಷ್ಣುವನ್ನೇ ಧ್ಯಾನಿಸಿದನು; ತನ್ನ ಚಿಂತೆಯ ಪರಿಹಾರಕ್ಕೆ ಯೋಗ್ಯವಾದ ಉಪದೇಶವನ್ನು, ನಾನು ಮಾತ್ರ, ಮಾಡಬಲ್ಲೆನೆಂದೂ ಅನ್ಯಮಾರ್ಗವಿಲ್ಲವೆಂದೂ ನಿಶ್ಚಯಿಸಿ, ಧ್ಯಾನಮಗ್ನನಾದನು (೨-೩). ಆಗ ನಾನು ಹಯಗ್ರೀವರೂಪದಿಂದ, ಬ್ರಹ್ಮದೇವನ ಎದುರಿಗೇ ಪ್ರತ್ಯಕ್ಷನಾದೆನು;

---

ಪೂರ್ವಕರ್ಮಗಳು, ಅವುಗಳು ಪಕ್ವವಾಗುವ ಕಾಲ, ದೊರೆಯಬೇಕಾದ ಐಹಿಕಾದಿ ಫಲಗಳು, ಯೋಗ್ಯಜ್ಞಾನಸಾಧನೆಗಳು, ಇತ್ಯಾದಿ ಬಹುವಿಷಯಕ ವಿವರವಾದ ಸ್ಪಷ್ಟಜ್ಞಾನವು ಇರಬೇಕಾಗುತ್ತದೆ. ಇದು ಸರ್ವಜ್ಞತೆಯ ವಿನಹ ಅನುಪಪನ್ನವಾಗುತ್ತದೆ.

1. ಬ್ರಹ್ಮದೇವನು ಏಕಾಂತಭಕ್ತರಲ್ಲಿ ಶ್ರೇಷ್ಠನು; ತನ್ನ ಸಾಧನದ ಫಲರೂಪವಾಗಿ ಮೋಕ್ಷವನ್ನು ಎಂದೂ ಇಚ್ಛಿಸುವುದಿಲ್ಲ. ಮತ್ತು ಅನಾದಿಕಾಲದಿಂದ, ಪರೋಕ್ಷಜ್ಞಾನಪೂರ್ತಿಯನ್ನೂ, ಬಹುಭಗವದ್ರೂಪಗಳ ಸಾಮಾನ್ಯಾಪರೋಕ್ಷಜ್ಞಾನವನ್ನು (ಅಪರೋಕ್ಷಜ್ಞಾನವನ್ನು) ಹೊಂದಿರುವ ಈತನಿಗೂ (ಈತನ ಗುಂಪಿಗೆ ಸೇರಿದ ಋಜುಗಣಸ್ಥರಿಗೂ) ಮೋಕ್ಷವು ಸಿದ್ಧವಾಗಿಯೇ ಇದೆ—ಸಾಧನೆಗಳಿಂದ ಮೋಕ್ಷವು ದೊರೆಯಬೇಕಾಗಿಲ್ಲ; ಆದರೂ, ಈತನ ೧೦೦ ಜನ್ಮಗಳ ಸಾಧನೆಯು, ಮೊದಲೇ ಪೂರ್ಣವಾದ ಜ್ಞಾನಕ್ಕೆ ಅಧಿಕ (ಅತಿಶಯ) ಪೂರ್ಣತ್ವವನ್ನೂ, ಭಗವಂತನ

ತೇನ–ಬ್ರಹ್ಮದೇವನಿಂದ, ಸರ್ವವಿತ್ತಮಃ–ಸರ್ವಜ್ಞಶ್ರೇಷ್ಠನಾದ, ಅಹಂ–ನಾನು, ಸ್ಮೃತಃ–ಧ್ಯಾನಿಸಲ್ಪಟ್ಟೆನು; ಅತನು ಹೀಗೂ ಚಿಂತೆಯಲ್ಲಿ ನಿಶ್ಚಯಿಸಿದನು; ಇಹ–ಈ ನನ್ನನ್ನಾವರಿಸಿರುವ ಚಿಂತೆಯ ವಿಷಯದಲ್ಲಿ, ಭಗವಾನ್–ಷಡ್ಗುಣೈಶ್ವರ್ಯಪೂರ್ಣನಾದ (ಮುಖ್ಯ ಭಗವಚ್ಛಬ್ದವಾಚ್ಯನಾದ), ಸ ಏವ–(ನನ್ನ ಜನಕನಾದ) ಶ್ರೀ ಮಹಾವಿಷ್ಣುವೇ, ಮಹ್ಯಂ–ನನಗೆ, ಉಪದೇಷ್ಟುಂ–ಉಪದೇಶಿಸಲಿಕ್ಕೆ (ಉಪದೇಶದಿಂದ ನನ್ನ ಚಿಂತೆಯನ್ನು ಪರಿಹರಿಸಲಿಕ್ಕೆ), ಅರ್ಹತಿ–ಶಕ್ತನಾಗಿದ್ದಾನೆ; ಮಮ–ನನ್ನ ಚಿಂತಾಪನೋದಕಂ–ಚಿಂತೆಯನ್ನು ಪರಿಹರಿಸುವ, ಅನ್ಯತ್ ಕಿಂಚಿತ್–ಬೇರೆ ಯಾವುದನ್ನೂ (ಬೇರಾವ ಮಾರ್ಗವನ್ನೂ), ನ ಪ್ರಪಶ್ಯಾಮಿ–ಕಾಣೆನು.

ತತೋ ಹಯಾಸ್ಯರೂಪೇಣ ತತ್ಸಮೀಪೇ ತದೈವ ತು ।
ಆವಿರ್ಭೂತಸ್ತತೋ ಮಾಂ ಸ ದೃಷ್ಟ್ವಾಽಶ್ಚರ್ಯಸ್ವರೂಪಿಣಂ ॥ ೪ ॥

ವಿಸ್ಮಿತಃ ಪ್ರೇಕ್ಷಮಾಣೋ ಮಾಂ ಕಿಂಚಿನ್ನೈವಾಭ್ಯಪದ್ಯತ ।

ತತಃ–ನಂತರ, ತದೈವ–ಆಗಲೇ (ಬ್ರಹ್ಮನು ಹಾಗೆ ನನ್ನನ್ನು ಧ್ಯಾನಿಸಿದಾಗಲೇ),[1] ತತ್ಸಮೀಪೇ ತು–ಆತನ ಸಮೀಪದಲ್ಲಿಯೇ, ಹಯಾಸ್ಯರೂಪೇಣ–ಕುದುರೆಮುಖವುಳ್ಳ ರೂಪದಿಂದ (ಹಯಗ್ರೀವ ರೂಪದಿಂದ), ಆವಿರ್ಭೂತಃ–ಪ್ರಕಟನಾದೆನು; ತತಃ–ನಂತರ, ಸಃ–ಆ ಬ್ರಹ್ಮನು, ಆಶ್ಚರ್ಯ ಸ್ವರೂಪಿಣಂ–ಅದ್ಭುತ ಸ್ವರೂಪನಾದ,

---

ಆಶ್ಚರ್ಯ ಸ್ವರೂಪನಾದ[2] ನನ್ನನ್ನು ಚಕಿತನಾಗಿ, ಎವೆಯಿಕ್ಕದೇ ನೋಡುತ್ತ ಕರ್ತವ್ಯ ಮೂಢನಾಗಿ ನಿಂತನು (೪). ಬ್ರಹ್ಮದೇವನು ಹಾಗೆ ಆಶ್ಚರ್ಯಚಕಿತನಾಗಿ ನಿಲ್ಲಲು, ವಾಯುದೇವನೂ ಅಲ್ಲಿಗೆ ಬಂದನು; ಆಗ ನಾನು ಆ ಉಭಯರನ್ನೂ ಕೃಪಾದೃಷ್ಟಿಯಿಂದ ನೋಡಿ, ನನ್ನ ಭುಜಗಳಿಂದ ಆಲಂಗಿಸಿ, ಬ್ರಹ್ಮದೇವನ ಚಿಂತಾಪರಿಹಾರಕ್ಕಾಗಿ

---

ಅನಂತ ರೂಪಗಳ ಸಾಕ್ಷಾತ್ಕಾರವನ್ನೂ, ಅಪರೋಕ್ಷದಲ್ಲಿ ಅಧಿಕ ಸ್ಪಷ್ಟತೆಯನ್ನೂ ಹೊಂದಿ, ಸುಖಪ್ರಾರಬ್ಧಭೋಗದ ಪೂರ್ತಿಗಾಗಿ, ಸತ್ಯಲೋಕಾಧಿಪತ್ಯವನ್ನು ಹೊಂದಿ, ಪ್ರಾರಬ್ಧವನ್ನು ಮುಗಿಸಿ, ಸ್ವಯೋಗ್ಯವಾದ ಮೌಕ್ತಿಕ ಆನಂದಾತಿಶಯವನ್ನು ಸಾಧಿಸಲು ಭಗವಂತನ ವಿಶೇಷ ಪ್ರೀತಿಯನ್ನು ಗಳಿಸಲು ಮಾತ್ರ, ನಿಯತವಾಗಿದೆ; ಸಾಧನೆಗಳಿಂದ ಈತನಿಗೆ ಅನ್ಯಪ್ರಯೋಜನವಾವುದೂ ಇಲ್ಲವೇ ಇಲ್ಲ.

1. ಭಕ್ತವತ್ಸಲನಾದ್ದರಿಂದ, ತಡಮಾಡದೇ ಪ್ರತ್ಯಕ್ಷನಾದೆನು.

2. 'ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ...' ಇತ್ಯಾದಿ (ಭಗವದ್ಗೀತೆ)ಯಲ್ಲಿ ಪ್ರಸಕ್ತನಾಗಿರುವ ನನ್ನನ್ನು ಆಶ್ಚರ್ಯನೆಂದೇ ಕಂಡನು; ಮುಕ್ತಜನರಿಗೆ ಆನಂದಪ್ರದವಾದ ಶ್ರೀವಿಷ್ಣುವಿನ ರೂಪವೂ 'ಆಶ್ಚರ್ಯ'ನಾಮಕವಾದುದು.'ಆಶ್ಚರ್ಯಮಾಶ್ಚರ್ಯಮಹೋ ಮುಹುರ್ಮುಹುಃ' (ಸುಮಧ್ವವಿಜಯ).

ಮಾಂ-ನನ್ನನ್ನು ದೃಷ್ಟ್ವಾ-ಕಂಡು, ಮಾಂ-ನನ್ನನ್ನು ಪ್ರೇಕ್ಷಮಾಣಃ-ನಿಟ್ಟಿಸಿ ನೋಡುವವನಾಗಿ (ರೆಪ್ಪೆ ಮುಚ್ಚದಂತೆ ದೃಷ್ಟಿಸಿ ನೋಡಿ), ವಿಸ್ಮಿತಃ-ಆಶ್ಚರ್ಯಚಕಿತನಾಗಿ, ಕಿಂಚಿತ್-ಏನನ್ನೂ, ನೈವ ಅಭ್ಯಪದ್ಯತ-ಮಾಡಲು ತಿಳಿಯದವನಾದನು (ಕರ್ತವ್ಯ ಮೂಢನಾದನು).

**ತತ್ರಾಗಮತ್ತದಾ ಸೂತ್ರನಾಮಾ ಪ್ರಾಣಸ್ತದೈವ ಹಿ ॥ ೫ ॥**

**ತತಸ್ತೌ ಕೃಪಯಾ ವೀಕ್ಷ್ಯ ಪರಾಮೃಶ್ಯ ಚ ಬಾಹುಭಿಃ ।**
**ತ್ವಚ್ಚಿಂತಾಪರಿಹಾರಾಯ ವಿಷ್ಣುರೇವಾಹಮಾಗತಃ ॥ ೬ ॥**

**ಇತಿ ಶ್ರುತ್ವಾ ತತೋ ಬ್ರಹ್ಮಾ ಪ್ರಣನಾಮ ಸ ದಂಡವತ್ ।**
**ತತಃ ಪ್ರಾಣೋಪಿ ತತ್ಪತ್ನ್ಯೌ ಸರ್ವೇ ನೇಮುಃ ಪುನಃ ಪುನಃ ॥ ೭ ॥**

ತದಾ-ಆಗ (ಹಾಗೆ ನಾನು ಹಯಮುಖನಾಗಿ ಪ್ರಕಟನಾದಾಗ), ತತ್ರ-ಅಲ್ಲಿಗೆ (ನಾನಿದ್ದಲ್ಲಿಗೆ), ಸೂತ್ರನಾಮಾ ಪ್ರಾಣಃ-ಸೂತ್ರನಾಮಕ ಮುಖ್ಯಪ್ರಾಣನು (ವಾಯುದೇವನೂ), ಅಗಮತ್-ಬಂದನು; ತದಾ ಏವ-ಆ ಕೂಡಲೆ, ಕೃಪಯಾ-ಕೃಪೆಯಿಂದ, ತೌ-ಅವರಿಬ್ಬರನ್ನೂ, ವೀಕ್ಷ್ಯ-ನೋಡಿ, ತತಃ-ನಂತರ, ಬಾಹುಭಿಃ-(ನನ್ನ) ತೋಳುಗಳಿಂದ, ಪರಾಮೃಶ್ಯ-ಆಲಿಂಗಿಸಿ, ತ್ವಚ್ಚಿಂತಾಪರಿಹಾರಾಯ-ಹೇ ಬ್ರಹ್ಮನ್! ನಿನ್ನ ಚಿಂತೆಯನ್ನು ಪರಿಹರಿಸಲಿಕ್ಕಾಗಿ, ಆಗತಃ-ಬಂದಿರುವ, ಅಹಂ-ನಾನು, ವಿಷ್ಣು ಏವ-ಸಾಕ್ಷಾತ್ ವಿಷ್ಣುವೇ (ನಿನ್ನ ಜನಕನೇ), ಇತಿ-ಹೀಗೆಂಬ (ನನ್ನ ಮಾತನ್ನು), ಶ್ರುತ್ವಾ-ಕೇಳಿ, ತತಃ-ನಂತರ, ಸಃ ಬ್ರಹ್ಮಾ-ಆ ಬ್ರಹ್ಮದೇವನು, ದಂಡವತ್-ದಂಡದಂತೆ, ಪ್ರಣನಾಮ-ನಮಸ್ಕರಿಸಿದನು (ಸಾಷ್ಟಾಂಗವೆರಗಿದನು; ದೇಹವನ್ನು ದಂಡದಂತೆ ನನ್ನ ಪಾದಗಳಲ್ಲಿ ಕೆಡವಿದನು); ತತಃ-ನಂತರ, ಪ್ರಾಣಃ-ಪ್ರಾಣದೇವನೂ, ತತ್ಪತ್ನ್ಯೌ ಅಪಿ-ಬ್ರಹ್ಮವಾಯುಗಳಿಬ್ಬರ ಪತ್ನಿಯರೂ (ಸರಸ್ವತೀಭಾರತಿಯರೂ) ಸಹ, ಸರ್ವೇ-ಎಲ್ಲರೂ, ಪುನಃ ಪುನಃ-ಮತ್ತೆ ಮತ್ತೆ ನೇಮುಃ-ನಮಸ್ಕರಿಸಿದರು.

**ಲಕ್ಷ್ಮೀರಪ್ಯಭವತ್ತತ್ರ ಸದಾ ಮತ್ಸೇವನೇ ರತಾ ।**
**ಬ್ರಹ್ಮಾಣಮುಪವೇಶ್ಯಾಗ್ರೇ ಪೃಷ್ಠತೋನ್ಯಾನ್ನಿವೇಶ್ಯ ಚ ॥ ೮ ॥**

**ವೇದಾಂಶ್ಚೈವೋಪವೇದಾಂಶ್ಚ ಸರ್ವಾನಧ್ಯಾಪಯಂ ಕ್ರಮಾತ್ ।**
**ಋಚೋ ಯಜೂಂಷಿ ಸಾಮಾನಿ ತಥಾಥರ್ವಾಂಗಿರಾಂಸಿ ಚ ॥ ೯ ॥**

---

ಪ್ರಾಪ್ತನಾಗಿರುವ ಶ್ರೀವಿಷ್ಣುವೇ ನಾನೆಂದು ಹೇಳಿದೆನು; ಆಗ ಬ್ರಹ್ಮನು ನನಗೆ ಸಾಷ್ಟಾಂಗ ನಮಸ್ಕಾರ ಮಾಡಿದನು; ನಂತರ ವಾಯುದೇವನೂ, ಅವರೀರ್ವರ ಭಾರ್ಯೆಯರಾದ ಸರಸ್ವತೀಭಾರತಿಯರೂ, ಸರ್ವರೂ ಪುನಃ ಪುನಃ ನನ್ನನ್ನು ನಮಸ್ಕರಿಸಿದರು (೫-೭).

**ಆಯುರ್ವೇದಂ ಧನುರ್ವೇದಂ ಗಾಂಧರ್ವಂ ಚಾರ್ಥಶಾಸ್ತ್ರಂ ।**
**ಚತುರ್ಣಾಮುಪವೇದಾಂಶ್ಚ ತತೋಂಗಾನಿ ಪೃಥಕ್ ಪೃಥಕ್ ॥ ೧೦ ॥**

**ಶಿಕ್ಷಾ ಕಲ್ಪೋ ನಿರುಕ್ತಂ ಚ ಛಂದೋ ವ್ಯಾಕರಣಂ ತಥಾ ।**
**ಜ್ಯೋತಿಷಂ ಚೇತಿ ಷಟ್ ಪ್ರೋಕ್ತಾನ್ಯಂಗಾನಿ ವಿಧಿವನ್ಮಯಾ ॥ ೧೧ ॥**

ಸದಾ–ನಿತ್ಯವೂ, ಮತ್ಸೇವನೇ ರತಾ–ನನ್ನ ಸೇವೆಯಲ್ಲಿಯೇ ಆಸಕ್ತಳಾದ (ನನ್ನ ಸೇವೆಯಿಂದಲೇ ಆನಂದಿಸುವ), ಲಕ್ಷ್ಮೀಃ ಅಪಿ–ಲಕ್ಷ್ಮೀದೇವಿಯೂ ಸಹ, ತತ್ರ–ಅಲ್ಲಿ ಅಭವತ್–ಇದ್ದಳು; ಅಗ್ರೇ–(ನನ್ನ) ಎದುರಿಗೆ, ಬ್ರಹ್ಮಾಣಂ–ಬ್ರಹ್ಮದೇವನನ್ನು, ಉಪವೇಶ್ಯ–ಕೂಡಿಸಿ, ಅನ್ಯಾನ್–ಇತರರನ್ನು ಪೃಷ್ಠತಃ–ಆತನ ಹಿಂದೆ, ನಿವೇಶ್ಯ–ಕೂಡಿಸಿ,

---

ಬ್ರಹ್ಮಾದಿಗಳು ನಮಸ್ಕರಿಸಿ ನಿಂತಾಗ, ನಿತ್ಯ ನನ್ನ ಸೇವೆಯಲ್ಲಿಯೇ ತೊಡಗಿರುವ ನನ್ನ ಭಾರ್ಯಳೂ (ಶ್ರೀ ಲಕ್ಷ್ಮೀದೇವಿಯೂ ಅಲ್ಲಿಯೇ ಇದ್ದಳು; ಬ್ರಹ್ಮದೇವನನ್ನು ನನ್ನ ಎದುರಿಗೂ, ಆತನ ಹಿಂದೆ ಪ್ರಾಣದೇವ ಮತ್ತು ಸರಸ್ವತೀಭಾರತಿಯರನ್ನೂ ಕೂಡಿಸಿ, ವೇದ, ಉಪವೇದಗಳನ್ನೆಲ್ಲವನ್ನೂ[1] ಅಧ್ಯಯನ ಮಾಡಿಸಿದೆನು; ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳನ್ನೂ, ಆಯುರ್ವೇದ, ಧನುರ್ವೇದಗಳೆಂಬ ವಿದ್ಯೆಗಳನ್ನೂ ಗಾಂಧರ್ವ ಅರ್ಥಶಾಸ್ತ್ರಗಳನ್ನೂ, ಉಪವೇದಗಳ ಪ್ರಭೇದಗಳನ್ನೂ (ನಾನಾ ವೇದಶಾಖೆಗಳನ್ನೂ) ಕ್ರಮವಾಗಿ ಅಧ್ಯಯನ ಮಾಡಿಸಿದೆನು; ಹಾಗೂ, ಶಿಕ್ಷಾ, ಕಲ್ಪ, ನಿರುಕ್ತ, ಛಂದಸ್ಸು, ವ್ಯಾಕರಣ ಮತ್ತು ಜ್ಯೋತಿಷಗಳೆಂಬ ಆರು ವೇದಾಂಗಗಳನ್ನೂ ವಿಧ್ಯುಕ್ತಕ್ರಮದಿಂದ ಬೋಧಿಸಿದೆನು (೮-೧೧).

---

1. 'ಮೂಲವೇದಶ್ಚೋಪವೇದಸ್ತಥಾವಾಂತರ ಏವ ಚ । ಶಾಖೋಪಶಾಖಾಭೇದೇನ ವೇದೋಽನೇಕವಿಧೋ ಮತಃ ॥ (ಸ.ರ.ಮಾ.) ಎಂದು ವೇದಗಳಲ್ಲಿರುವ ಬಹುವಿಧಗಳು ನಿರೂಪಿಸಲ್ಪಟ್ಟಿವೆ. ಮೂಲವೇದ, ಉಪವೇದ, ಅವಾಂತರವೇದ ಮತ್ತು ಶಾಖೆ, ಉಪಶಾಖೆಗಳೆಂಬ ವೇದಭಾಗಗಳು, ಹೀಗೆ ವೇದಗಳು ಬಹುವಿಧವಾಗಿವೆ. ಪಂಚರಾತ್ರದಿಂದ ಸಹಿತವಾದ ವೇದವೆಲ್ಲವೂ ಕೃತಯುಗದಲ್ಲಿ ಒಂದೇ ಆಗಿತ್ತು—ಋಗಾದಿರೂಪದಿಂದ ವಿಭಕ್ತವಾಗಿರಲಿಲ್ಲ—ಇದು ಮೂಲವೇದ; ತ್ರೇತಾಯುಗದಲ್ಲಿ ಋಕ್, ಯಜು, ಸಾಮಭೇದದಿಂದ ಮೂರು ಭಾಗಗಳಾದವು—ಇವೇ ಉಪವೇದಗಳು; ಮುಂದೆ ದ್ವಾಪರದಲ್ಲಿ ಶ್ರೀ ವೇದವ್ಯಾಸರು, ಆಯಾ ರಾಶಿಗಳಿಂದ ಮಂತ್ರಗಳನ್ನು ತೆಗೆದುಕೊಂಡು, ವಿಂಗಡಿಸಿ, ಋಗಾದಿ ಮೂರು ಮತ್ತು ಅಥರ್ವಣವೆಂಬ ನಾಲ್ಕು ವೇದಗಳನ್ನಾಗಿ ವಿಭಾಗ ಮಾಡಿದರು. ಇವು ಅವಾಂತರವೇದಗಳೆನಿಸುತ್ತವೆ. ಶ್ರೀ ವೇದವ್ಯಾಸರೇ ಈ ನಾಲ್ಕು ವೇದಗಳಲ್ಲಿ ಅಧಿಕಾರಿಗಳ ಯೋಗ್ಯತೆಯನ್ನು ಲಕ್ಷಿಸಿ, ಋಗ್ವೇದದಲ್ಲಿ ೨೪, ಯಜುರ್ವೇದದಲ್ಲಿ ೧೦೧, ಸಾಮವೇದದಲ್ಲಿ ೧೦೦೦, ಅಥರ್ವಣವೇದದಲ್ಲಿ ೧೨, ಹೀಗೆ ಶಾಖೆಗಳನ್ನೇರ್ಪಡಿಸಿದರೂ, ಈ ಶಾಖೆಗಳಲ್ಲಿ ಸಹ ಋಷಿಗಳು ತಮ್ಮ ಶಿಷ್ಯರಿಗಾಗಿ ವಿಂಗಡಿಸಿ ಅಧ್ಯಯನ ಮಾಡಿಸಿದ ವಿಭಾಗಗಳು ಅವಾಂತರ ಶಾಖೆ ಅಥವಾ ಉಪಶಾಖೆಗಳೆಂದೆನಿಸಿದವು.

ವೇದಾನ್–ವೇದಗಳನ್ನೂ ಉಪವೇದಾನ್ ಚೈವ–ಉಪವೇದಗಳನ್ನೂ ಕ್ರಮಾತ್–ಕ್ರಮವಾಗಿ (ಒಂದಾದನಂತರ ಒಂದರಂತೆ),[1] ಸರ್ವಾನ್–ಎಲ್ಲವುಗಳನ್ನೂ ಅಧ್ಯಾಪಯಂ–ಅಧ್ಯಯನ ಮಾಡಿಸಿದೆನು;[2] (ಅವು ಯಾವುವೆಂದರೆ) ಋಚಃ–ಋಗ್ವೇದಮಂತ್ರಗಳನ್ನೂ, ಯಜೂಂಷಿ–ಯಜುರ್ವೇದಗಳನ್ನೂ (ನಾನಾ ಶಾಖೆಗಳಲ್ಲಿರುವ ಮಂತ್ರಗಳನ್ನು), ಸಾಮಾನಿ–ಸಾಮಗಳನ್ನೂ,[3] ತಥಾ–ಹಾಗೂ, ಅಥರ್ವಾಂಗಿರಾಂಸಿ ಚ–ಅಥರ್ವವೇದಮಂತ್ರಗಳನ್ನೂ; ಆಯುರ್ವೇದಂ–ಆಯುರ್ವೇದವನ್ನೂ (ವೈದ್ಯ ಶಾಸ್ತ್ರದ ಮೂಲ), ಧನುರ್ವೇದಂ–ಧನುರ್ವೇದವನ್ನೂ (ಯುದ್ಧಶಾಸ್ತ್ರ ಮೂಲ), ಗಾಂಧರ್ವಂ–ಗಂಧರ್ವವೇದವನ್ನೂ (ಸಂಗೀತಶಾಸ್ತ್ರದ ಮೂಲ), ಅರ್ಥ ಶಾಸ್ತ್ರಂ–ಅರ್ಥಶಾಸ್ತ್ರವನ್ನೂ, ಚತುರ್ಣಾಂ–ನಾಲ್ಕರ (ನಾಲ್ಕೂವೇದಗಳ), ಉಪವೇದಾನ್ ಚ–ಉಪವೇದಗಳನ್ನೂ ಸಹ; ತತಃ–ನಂತರ, ಪೃಥಕ್ ಪೃಥಕ್–ಬೇರೆ ಬೇರೆಯಾಗಿ, ಅಂಗಾನಿ–ವೇದಾಂಗಗಳನ್ನೂ (ಅಧ್ಯಾಪಯಂ–ಅಧ್ಯಯನ ಮಾಡಿಸಿದೆನು); (ವೇದಾಂಗ ಗಳು[4] ಯಾವುವೆಂದರೆ) ಶಿಕ್ಷಾ–ಶಿಕ್ಷೆಯು, ಕಲ್ಪಃ–ಕಲ್ಪವು, ನಿರುಕ್ತಂ ಚ–ನಿರುಕ್ತವೂ, ಛಂದಃ–ಛಂದಸ್ಸು, ತಥಾ–ಹಾಗೂ, ವ್ಯಾಕರಣಂ–ವ್ಯಾಕರಣವೂ, ಜ್ಯೋತಿಷಂ ಚೇತಿ–ಜ್ಯೋತಿಷ ಎಂಬುದಾಗಿಯೂ, ಷಟ್–ಆರು, ಅಂಗಾನಿ–ವೇದಾಂಗಗಳು; ಮಯಾ–ನನ್ನಿಂದ, ವಿಧಿವತ್–ವಿಧ್ಯುಕ್ತಕ್ರಮದಿಂದ (ಉಪದೇಶಿಸಲ್ಪಟ್ಟವು).

---

ನಾನು ಹೀಗೆ ಬ್ರಹ್ಮಾದಿಗಳಿಗೆ ಬೋಧಿಸಿದ ವೇದವೇದಾಂಗಗಳ ಅರ್ಥ ವಿಶೇಷಗಳನ್ನು ಬ್ರಹ್ಮನು ಗ್ರಹಿಸಲಿಲ್ಲ (ಇತರರೂ ಹಾಗೆಯೇ ಎಂದು ಹೇಳಲೇನು!); ನಂತರ ನಾನು ಅವರ ವಿಶೇಷ ಜ್ಞಾನಸಿದ್ಧಿಗಾಗಿ, ಬ್ರಹ್ಮನಲ್ಲಿ ಬ್ರಹ್ಮರೂಪದಿಂದಲೂ, ಪ್ರಾಣನಲ್ಲಿ ಪ್ರಾಣರೂಪದಿಂದಲೂ, ಭಾರತಿಯಲ್ಲಿ ವಾಣೀರೂಪದಿಂದಲೂ,

---

1. ಯದ್ಯಪಿ, ಬ್ರಹ್ಮದೇವನು ಯುಗಪತ್ (ಏಕಕಾಲದಲ್ಲಿ) ಎಲ್ಲವನ್ನೂ ಗ್ರಹಿಸಲು ಸಮರ್ಥನೇ ಆಗಿರುವನು; ಅಜ್ಞಲೋಕಶಿಕ್ಷಾರ್ಥವಾಗಿ ಈ ಕ್ರಮದಲ್ಲಿ ಅಧ್ಯಯನ ಮಾಡಿಸಿರುದೆಂದು ತಿಳಿಯಬೇಕು.

2. ಅಧ್ಯಯನವೆಂದರೆ ಕೇವಲ ಉಚ್ಚಾರವಲ್ಲ—ಅರ್ಥಜ್ಞಾನಸಹಿತವಾದ ಪಠಣವು.

3. ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ ಮತ್ತು ನಿಧನಗಳು ಐದು ಸಾಮಗಳು—ಸಪ್ತ ವಿಧಗಳೂ ಇವೆ. ಗಾಯತ್ರ, ರಥಂತರ, ವಾಮದೇವಾದಿ ಬಹುವಿಧ ಸಾಮಗಳೂ ಇವೆ; (ವಿವರಗಳಿಗೆ ಛಾಂದೋಗ್ಯ ಉಪನಿಷತ್ತನ್ನು ನೋಡಬಹುದು).

4. ಶಿಕ್ಷಾ—ಉಚ್ಚಾರಣ ನಿಯಮಗಳನ್ನು ನಿರೂಪಿಸುವುದು; ಕಲ್ಪ—ವೇದೋಕ್ತ ಕರ್ಮಾಚರಣ ನಿಯಮಗಳನ್ನು ಹೇಳುವುದು; ಛಂದಸ್ಸು—ವರ್ಣಸಂಖ್ಯಾಭೇದದಿಂದ ವೇದಮಂತ್ರಗಳಲ್ಲಿ ವ್ಯವಸ್ಥಿತವಾದ ನಾನಾ ಛಂದಸ್ಸುಗಳನ್ನು ನಿರೂಪಿಸುವುದು; ವ್ಯಾಕರಣ—ಶಬ್ದಗಳ ಸಾಧುತ್ವವನ್ನು ಪ್ರತಿಪಾದಿಸುವುದು; ನಿರುಕ್ತ—ಶಬ್ದಗಳ ನಿರ್ವಚನಪ್ರಕಾರವನ್ನು ಶಾಸನಮಾಡುವುದು; ಜ್ಯೋತಿಷ—ಗ್ರಹನಕ್ಷತ್ರಾದಿಗಳ ಸಂಚಾರ ಮತ್ತು ತತ್ಫಲಗಳನ್ನು ನಿರೂಪಿಸುವುದು.

**ತದಾ ಬ್ರಹ್ಮಾ ತದನ್ಯೇಪಿ ಯನ್ಮಯೈತದುರೀತಂ ।**
**ನ ಸಮ್ಯಗ್ವಿವಿದುಃ ಪಶ್ಚಾದ್ಬ್ರಹ್ಮಾಹಂ ಬ್ರಹ್ಮಣಿ ಸ್ಥಿತಃ ॥ ೧೨ ॥**

**ಪ್ರಾಣೇ ಪ್ರಾಣೋ ಗಿರೌ ವಾಣೀ ಸರಸ್ವತ್ಯಾಂ ಸರಸ್ವತೀ ।**

ತದಾ-(ಹೀಗೆ ಹೇಳಿದ ಎಲ್ಲ ವಿದ್ಯೆಗಳನ್ನೂ) ನಾನು ಉಪದೇಶಿಸಿದಾಗ, ಬ್ರಹ್ಮಾ-ಬ್ರಹ್ಮದೇವನೂ, ಅನ್ಯೇಪಿ-ಇತರರೂ ಸಹ, ಮಯಾ-ನನ್ನಿಂದ, ಯತ್-ಯಾವಾಗ, ಏತತ್-ಈ ಶಾಸ್ತ್ರಗಳ (ವೇದಾದಿಗಳ), ತತ್-ಅದನ್ನು (ಉಪದೇಶವನ್ನು), ಸಮ್ಯಕ್-ಪೂರ್ಣವಾಗಿ, ನ ವಿವಿದುಃ-ತಿಳಿಯಲಿಲ್ಲವೋ, ಪಶ್ಚಾತ್-ನಂತರ, ಅಹಂ-ನಾನು, ಬ್ರಹ್ಮಾ-ಬ್ರಹ್ಮದೇವನ ರೂಪದಿಂದ, ಬ್ರಹ್ಮಣಿ-ಬ್ರಹ್ಮನಲ್ಲಿ ಸ್ಥಿತಃ-ನಿಂತೆನು (ವಿಶೇಷ ಪ್ರಸನ್ನನಾಗಿ ಅಧಿಷ್ಠಾನಭೂತನಾದ ಬ್ರಹ್ಮನಿಗೆ ನನ್ನ ಉಪದೇಶದಿಂದ ಯಥಾಯೋಗ್ಯ ಪೂರ್ಣಜ್ಞಾನವಾಗಲೆಂಬ ಇಚ್ಛಾಯುಕ್ತನಾದೆನು); ಪ್ರಾಣೇ-ವಾಯುದೇವನಲ್ಲಿ ಪ್ರಾಣಃ-ಪ್ರಾಣನಾಮಕರೂಪದಿಂದಲೂ, ಗಿರೌ-ಭಾರತೀದೇವಿಯಲ್ಲಿ ವಾಣೀ-ವಾಣೀರೂಪದಿಂದಲೂ, ಸರಸ್ವತ್ಯಾಂ-ಸರಸ್ವತೀದೇವಿಯಲ್ಲಿ ಸರಸ್ವತೀ-ಸರಸ್ವತೀರೂಪದಿಂದಲೂ (ಅಹಂ ಸ್ಥಿತಃ-ನಾನೇ ನಿಂತೆನು).

**ತತಃ ಪುರುಷದೇಹೇ ತು ಯೇ ಮಯಾ ನಿಹಿತಾಃ ಪುರಾ ॥ ೧೩ ॥**

**ದೇವಾಶ್ಚ ಋಷಿಗಂಧರ್ವಾ ನಾನಾದೇಹಧರಾಶ್ಚ ಯೇ ।**
**ಜಗತಾಂ ಬೀಜಭೂತಾ ಯೇ ಪಶವಃ ಕ್ರಿಮಿಕೀಟಕಾಃ ॥ ೧೪ ॥**

**ವೃಕ್ಷಗುಲ್ಮಲತಾದ್ಯಾಶ್ಚ ತೇಷು ತೇಷು ಪ್ರವಿಷ್ಟವಾನ್ ।**
**ತೈಸ್ತೈರೂಪೈಃ ಸ್ವಯಮಹಂ ತತ್ತನ್ನಾಮಾಖಿಲಾಶ್ರಯಃ ॥ ೧೫ ॥**

ತತಃ-ಆ ನಂತರ, ಪುರುಷದೇಹೇ ತು-ಪುರುಷದೇಹದಲ್ಲಿಯಾದರೋ (ನನ್ನಿಂದ ಸೃಷ್ಟವಾದ ಪುರುಷದೇಹದಲ್ಲಿ), ಮಯಾ-ನನ್ನಿಂದ, ಪುರಾ-ಮೊದಲು, (ನನ್ನಿಂದ ಸೃಷ್ಟವಾದ ನಾನಾಯೋನಿದೇಹಗಳನ್ನು ಪುರುಷ ದೇಹದಲ್ಲಿ ಪ್ರವೇಶಿಸಿ, ಆ

---

ಸರಸ್ವತಿಯಲ್ಲಿ ಸರಸ್ವತೀರೂಪದಿಂದಲೂ, ಸ್ಥಿತನಾದೆನು[1] (೧೨). ಬ್ರಹ್ಮವಾಯು ಮೊದಲಾದವರಲ್ಲಿ ಪ್ರವಿಷ್ಟನಾಗಿ, ಸ್ಥಿತನಾಗಿರುವಂತೆ, ಪುರುಷದೇಹಗತರಾದ ಸಕಲಜೀವರಲ್ಲಿ ಎಂದರೆ, ದೇವತೆಗಳು, ಋಷಿಗಂಧರ್ವರು, ಮುಂದೆ ಸೃಷ್ಟರಾಗುವ

1. ಆಯಾ ರೂಪಗಳಿಂದ ಅಂತರ್ಯಾಮಿಯಾಗಿ, ಶ್ರೀವಿಷ್ಣುವು ಬ್ರಹ್ಮಾದಿಗಳಲ್ಲಿದ್ದನು. ಸ್ವಯೋಗ್ಯಪೂರ್ಣಜ್ಞಾನವು ಅವರಿಗೆ ದೊರೆಯಲೆಂಬ ಇಚ್ಛಾರೂಪ ಪ್ರಸನ್ನತೆಯಿಂದ ಯುಕ್ತನಾಗಿ, ಮುಂದೆ ಸ್ಥಿತನಾದನೆಂದರ್ಥ.

ಪುರುಷದೇಹವನ್ನು ನುಂಗಿ, ಮಾಯಾದೇವಿಯಲ್ಲಿ ಬ್ರಹ್ಮನನ್ನು ಹುಟ್ಟಿಸುವ ಮೊದಲು). ನಿಹಿತಾಃ–ಸ್ಥಾಪಿಸಲ್ಪಟ್ಟ (ಹಾಕಲ್ಪಟ್ಟ), ದೇವಾಃ–ದೇವತೆಗಳು, (ದೇವಾದಿ ಯೋನಿಗಳ ದೇಹಗಳೊಂದಿಗೆ, ಸೃಷ್ಟರಾಗಬೇಕಾದ ದೇವಾದಿ ಸಕಲ ಜೀವರನ್ನೂ ಆ ಪುರುಷಾಕೃತಿಯಲ್ಲಿ ಪ್ರವೇಶಗೊಳಿಸಿದ್ದನಷ್ಟೆ),[1] ಚ–ಮತ್ತು ಋಷಿಗಂಧರ್ವಾಃ–ಋಷಿಗಳು ಮತ್ತು ಗಂಧರ್ವರೂ, ಚ–ಮತ್ತು ಯೇ–ಯಾರು, ಜಗತಾಂ ಬೀಜಭೂತಾಃ–ಮುಂದೆ ಹುಟ್ಟುವ ಜೀವರಿಗೆ ಬೀಜಪ್ರಾಯರಾಗಿರುವರೋ, ಚ–ಮತ್ತು ಯೇ–ಯಾರು, ನಾನಾದೇಹಧರಾಃ–ವಿವಿಧವಾದ ದೇಹಗಳನ್ನು ಹೊಂದಿದ್ದರೋ, (ಆ) ಪಶವಃ–ಪಶುಗಳು, ಕ್ರಿಮಿ ಕೀಟಕಾಃ–ಕ್ರಿಮಿಕೀಟಗಳೂ, ಚ–ಮತ್ತು ವೃಕ್ಷಗುಲ್ಮಲತಾದ್ಯಾಃ–ವೃಕ್ಷಗುಲ್ಮಲತಾದಿಗಳು, ತೇಷುತೇಷು–ತತ್ತದ್ದೇಹಗತಜೀವರಲ್ಲಿ (ಆಯಾ ಯೋನಿಗತಜೀವರಲ್ಲಿ), ಪ್ರವಿಷ್ಟವಾನ್–ಪ್ರವಿಷ್ಟನಾದ (ಅಂತರ್ಯಾಮಿಯಾದ), ಸ್ವಯಂ ಅಹಂ–ನಾನೇ ಸಾಕ್ಷಾತ್ತಾಗಿ, ತೈಃ ತೈಃ ರೂಪೈಃ–ಆಯಾ ರೂಪಗಳಿಂದ, ತತ್ತನ್ನಾಮಾ–ಆಯಾ ನಾಮಗಳುಳ್ಳವನಾಗಿದ್ದು ಅಖಿಲಾಶ್ರಯಃ–ಸರ್ವಾಶ್ರಯನಾದೆನು (ಆಯಾ ದೇಹಗಳಿಗೂ ತದ್ಗತ ಜೀವರಿಗೂ ಸರ್ವಪ್ರಕಾರದಿಂದ ನಾನೇ ಸ್ವತಂತ್ರನಾದ ಆಶ್ರಯನು).

**ಅತೋ ಮಾಂ ಸರ್ವನಾಮಾನಂ ತಥಾ ಸರ್ವಸ್ವರೂಪಿಣಂ ।**
**ಸರ್ವೇ ವೇದಾ ವದಂತೀ ಮೇ ತಥಾ ತೈಸ್ತೈಶ್ಚ ನಾಮಭಿಃ ॥ ೧೬ ॥**

ಅತಃ–ಈ ಕಾರಣದಿಂದ (ಹೀಗೆ ನಾನು ಪ್ರವಿಷ್ಟನಾದ್ದರಿಂದ), ಮಾಂ–ನನ್ನನ್ನು ಸರ್ವನಾಮಾನಂ–ಎಲ್ಲ ನಾಮಗಳಿಂದಲೂ (ಸರ್ವನಾಮಗಳುಳ್ಳವನೆಂದೂ), ತಥಾ–ಹಾಗೂ, ಸರ್ವಸ್ವರೂಪಿಣಂ–ಸರ್ವರೂಪಗಳುಳ್ಳವನೆಂದೂ, ತಥಾ–ಮತ್ತು ತೈಃ ತೈಃ–ಆಯಾ, ನಾಮಭಿಃ ಚ–ನಾಮಗಳಿಂದಲೇ, ಇಮೇ–ಈ, ಸರ್ವೇ ವೇದಾಃ–ಎಲ್ಲ

---

ಜೀವರಿಗೆ ಬೀಜಭೂತರಾದ (ಬೀಜಗಳಂತಿರುವ), ನಾನಾದೇಹಗಳನ್ನು ಧರಿಸಿದ್ದ ಪಶು, ಕ್ರಿಮಿಕೀಟಾದಿಗಳು, ವೃಕ್ಷಗುಲ್ಮಲತಾದಿಗಳು ಮೊದಲಾದವರಲ್ಲಿ ಆಯಾ ರೂಪಗಳಿಂದ ಆಯಾ ನಾಮಗಳುಳ್ಳವನಾಗಿ, ಸರ್ವಾಶ್ರಯರೂಪಗಳಿಂದ ಪ್ರವಿಷ್ಟನಾದೆನು (೧೩-೧೫). ಹೀಗೆ ಸ್ವತಂತ್ರನಾಗಿ ಸರ್ವಾಶ್ರಯನಾದ ನಾನು ಸರ್ವರಲ್ಲಿ ಪ್ರವಿಷ್ಟನಾಗಿರುವ ಕಾರಣದಿಂದಲೇ, ಈ ಎಲ್ಲ ವೇದಗಳೂ ನನ್ನನ್ನು ಸರ್ವನಾಮಗಳಿಂದ ಕರೆಯುತ್ತವೆ. ಆ ದೇವಋಷಿಗಂಧರ್ವಾದಿ ಸರ್ವರಲ್ಲಿ ಆಯಾ ನಾಮಗಳಿಂದ, ಆಯಾ ರೂಪಗಳಿಂದ ನಾನೇ ಪ್ರವೇಶ ಮಾಡಿರುವುದರಿಂದ, ಹಾಗೆ ವೇದಗಳು ನನ್ನನ್ನು ಸರ್ವನಾಮ, ಸರ್ವಸ್ವರೂಪನೆಂದು ನಿರೂಪಿಸುತ್ತವೆ—ಅವುಗಳಿಂದ ಅಭಿನ್ನವಾದ ಸ್ವರೂಪವುಳ್ಳವನಾದ್ದರಿಂದ ಅಲ್ಲ (೧೬). ಹೀಗೆ ಸರ್ವವಸ್ತುಗತನೂ ಸರ್ವನಾಮನೂ, ಸರ್ವ

---

1. ಅಧ್ಯಾಯ ೨, ಶ್ಲೋಕಗಳು ೫೩ ರಿಂದ ೫೭ ರವರೆಗೆ ನೋಡಿಕೊಳ್ಳಿರಿ.

ವೇದಗಳೂ, ವದಂತಿ–ಹೇಳುತ್ತವೆ (ಆಯಾ ಪ್ರಾಣಗಳಿಂದಾಗಲಿ–ಜೀವರಿಂದಾಗಲಿ, ಅವರ ದೇಹಗಳಿಂದಾಗಲಿ ಅಭಿನ್ನವಾದ ಸ್ವರೂಪವುಳ್ಳವನೆಂದಲ್ಲ—ಅಲ್ಲಲ್ಲಿ ಆಯಾ ನಾಮರೂಪಗಳಿಂದ ತಾನೇ ತನ್ನ ಬಹುರೂಪಗಳಿಂದ ಪ್ರವಿಷ್ಟನಾಗಿರುವುದರಿಂದ ಸರ್ವನಾಮ, ಸರ್ವಸ್ವರೂಪ ಇತ್ಯಾದಿಯಾಗಿ ವೇದಗಳು ನಿರೂಪಿಸುತ್ತವೆ).

ತತ್ತತ್ಸ್ವರೂಪಂ ಮಾಮೇವ ಪ್ರಣಮಂತಿ ಸ್ತುವಂತಿ ಚ ।
ಮುಖ್ಯತೋ ವೇದವೇದ್ಯೋಽಹಂ ಗೌಣವೃತ್ತ್ಯಾ ತಥಾಪರೇ ॥ ೧೭ ॥

ವಿದ್ವಾಂಸಸ್ತದ್ವಿಜಾನಂತಿ ಮಮ ವಿಷ್ಣೋಃ ಪರಂ ಪದಂ ।
ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ದಿವಿ ಚಕ್ಷುರಿವಾತತಂ ॥ ೧೮ ॥

ವಿದ್ವಾಂಸಃ–ಜ್ಞಾನಿಗಳು, ತತ್ತತ್ಸ್ವರೂಪಂ–ಆಯಾ ವಸ್ತುಗತವಾದ ಆಯಾ ವಸ್ತುಸದೃಶಸ್ವರೂಪವುಳ್ಳವನಾದ, ಮಾಂ ಏವ–ನನ್ನನ್ನೇ, ಪ್ರಣಮಂತಿ–ನಮಸ್ಕರಿಸುತ್ತಾರೆ, ಸ್ತುವಂತಿ ಚ–ಸ್ತುತಿಸುತ್ತಾರೆ; ಮುಖ್ಯತಃ–ಮುಖ್ಯವಾಗಿ, ವೇದವೇದ್ಯಃ–ವೇದಗಳಿಂದ ತಿಳಿಯ ಲ್ಪಡತಕ್ಕವನು (ಹೇಳಲ್ಪಡುವವನು), ಅಹಂ–ನಾನು, ತಥಾ–ಹಾಗೆಯೇ (ವೇದವೇದ್ಯ ರಾದವರು), ಅಪರೇ–ದೇವಾದಿ ಇತರರು, ಗೌಣವೃತ್ತ್ಯಾ–ಅಮುಖ್ಯವೃತ್ತಿಯಿಂದ (ಪ್ರತಿಪಾದ್ಯರು); ತತ್–ಈ (ಮುಖ್ಯ ಗೌಣವೃತ್ತಿಗಳಿಂದ ಪ್ರತಿಪಾದ್ಯರೆಂಬ) ರಹಸ್ಯವನ್ನು ವಿದ್ವಾಂಸಃ–ವೇದಜ್ಞಾನಿಗಳು, ವಿಜಾನಂತಿ–ತಿಳಿಯುತ್ತಾರೆ; ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ–

---

ಸ್ವರೂಪನೂ ಆದ ನನ್ನನ್ನು (ತತ್ತದ್ವಸ್ತುಗತನೂ ಆಯಾ ವಸ್ತುಸದೃಶರೂಪಗಳುಳ್ಳವನೂ ಆದ ನನ್ನನ್ನೇ), ಎಲ್ಲ ವೇದಗಳೂ ಮುಖ್ಯವೃತ್ತಿಯಿಂದ[1] ಪ್ರತಿಪಾದಿಸುತ್ತವೆ; ಇತರ ದೇವತೆಗಳು (ವೇದಭಾಗಗಳಿಂದ) ಗೌಣವೃತ್ತಿಯಿಂದ ಪ್ರತಿಪಾದಿಸಲ್ಪಡುತ್ತಾರೆ; ಹೀಗೆ

---

1. ಶಬ್ದಗಳಿಂದ ಬೋಧ್ಯವಾದ ಅರ್ಥಗಳನ್ನು ತಿಳಿಸುವ ಶಬ್ದಗಳ ವ್ಯಾಪಾರವನ್ನು 'ಶಬ್ದಪ್ರವೃತ್ತಿ' ಎನ್ನುತ್ತಾರೆ. ಶಬ್ದಪ್ರವೃತ್ತಿಗಳು ನಾನಾ ಪ್ರಕಾರವಾಗಿರುತ್ತವೆ. ಪರಮಮುಖ್ಯ ವೃತ್ತಿಯಿಂದ ಎಲ್ಲ ಶಬ್ದಗಳೂ ಪರಮಾತ್ಮನನ್ನೇ ತಿಳಿಸುತ್ತವೆ; ಶಬ್ದಗಳು ಭಗವದಿತರ ವಸ್ತುವಾಚಕಗಳಾದಾಗ, ಮುಖ್ಯವೃತ್ತಿ ಮೊದಲಾದ ನಾಮಗಳಿಂದ ಕರೆಯಲಾಗುವ ವೃತ್ತಿಗಳುಳ್ಳವೆಂದು ಹೇಳಲಾಗುತ್ತದೆ. ಮುಖ್ಯವೃತ್ತಿಯು, ಯೋಗ, ರೂಢಿಯೋಗ ಮತ್ತು ರೂಢಿ ಎಂದು ಮೂರು ವಿಧ. ಲಕ್ಷಣಾವೃತ್ತಿ ಗೌಣೀ, ಉಪಚಾರ, ರೂಢೋಪಚಾರ, ರೂಢಿಲಕ್ಷಣಾ ಎಂದು ಕರೆಯಲಾಗುವ ಶಬ್ದವೃತ್ತಿಗಳೂ ಇವೆ. ಪರಮಮುಖ್ಯವೃತ್ತಿಯನ್ನು ಬಿಟ್ಟು ಇತರ ವೃತ್ತಿಗಳನ್ನು ಅಮುಖ್ಯವೃತ್ತಿಯೆಂದು ಕರೆಯುವುದೂ ಉಂಟು. ಪ್ರಕೃತ ಗೌಣೀವೃತ್ತಿಯೆಂಬುದು ಅಮುಖ್ಯವೃತ್ತಿಗಳಲ್ಲಿ ಒಂದೆಂದು ತಿಳಿಯಬಹುದು. ಮುಖ್ಯವೃತ್ತಿ ಯಿಂದ ಹೇಳಲ್ಪಡುವ ವಸ್ತುವಿಗೆ ಸದೃಶವಾದ ವಸ್ತುವಿನಲ್ಲಿ ಅದೇ ಶಬ್ದವನ್ನು ಪ್ರಯೋಗಿಸುವುದು ಗೌಣವೃತ್ತಿಯು; ತೇಜಸ್ವಿಯಾದ ವಟುವನ್ನು 'ಅಗ್ನಿ' ಎಂದು ಕರೆಯುವಂತೆ. ವಿವರಗಳನ್ನು ಗುರುಮುಖದಿಂದ ಶಾಸ್ತ್ರವನ್ನು ಅಭ್ಯಸಿಸಿ ತಿಳಿಯಬೇಕು.

ನನ್ನ (ಪರಮಾತ್ಮನ) ಸ್ವತಂತ್ರತ್ವ ಮತ್ತು ಅನ್ಯರ ಪರಾಧೀನತ್ವಗಳಿಂದ, ವಿಷ್ಣೋಃ-ನನ್ನ (ವೇದಮುಖ್ಯ ಪ್ರತಿಪಾದ್ಯನಾದ ವಿಷ್ಣುವಿನ), ಚಕ್ಷುಃ-ಸೂರ್ಯನು, ದಿವಿ-ಅಂತರಿಕ್ಷದಲ್ಲಿ ಆತತಂ ಇವ-ವ್ಯಾಪ್ತನಾಗಿರುವಂತೆ, ಪರಂಪದಂ-(ಸರ್ವತ್ರ ವ್ಯಾಪ್ತವಾದ) ಶ್ರೇಷ್ಠ ಸ್ವರೂಪವನ್ನು (ವಿಜಾನಂತಿ-ತಿಳಿಯುತ್ತಾರೆ).

**ತತೋ ಮನನಶೀಲಾಸ್ತೇ ಶ್ರುತಸ್ಯಾರ್ಥಸ್ಯ ಯುಕ್ತಿಭಿಃ ।**
**ನಿಶ್ಚಿತ್ಯ ಧ್ಯಾನಧಾರಾಯಾಂ ಜಾಯಂತೇ ಮಗ್ನಮಾನಸಾಃ ॥ ೧೯ ॥**

ತತಃ-ನಾನೇ ಸಕಲ ವೇದಗಳಿಂದ ಮುಖ್ಯವೇದ್ಯನೆಂದು ತಿಳಿದನಂತರ, ತೇ-ಆ ವಿದ್ವಾಂಸರು (ವೇದಾಧ್ಯಯನ ಸಂಪನ್ನರು), ಮನನಶೀಲಾಃ-ವಿಮರ್ಶಾತ್ಮಕಸ್ವಭಾವ ದವರಾದ್ದರಿಂದ, ಶ್ರುತಸ್ಯ-ಶ್ರವಣಮಾಡಿದ, ಅರ್ಥಸ್ಯ-ಅರ್ಥದ (ಗುರೂಪದಿಷ್ಟ ಅರ್ಥಗಳನ್ನು), ಯುಕ್ತಿಭಿಃ-ನಾನಾ ಯುಕ್ತಿಗಳಿಂದ, ನಿಶ್ಚಿತ್ಯ-ನಿಶ್ಚಯಿಸಿಕೊಂಡು, ಧ್ಯಾನ ಧಾರಾಯಾಂ- ಏಕಾಗ್ರಮನೋಧಾರೆಯಲ್ಲಿ, ಮಗ್ನಮಾನಸಾಃ-ಮುಳುಗಿದ ಮನಸ್ಸುಳ್ಳ ವರು, ಜಾಯಂತೇ-ಆಗುತ್ತಾರೆ.

**ಯತೋ ಯತೋ ಮನೋ ಯಾತಿ ತೇಷಾಂ ಬ್ರಹ್ಮನ್ ಸದೈವ ಹಿ ।**
**ಧ್ಯಾಯಂತಿ ತತ್ರ ತತ್ರೈವ ಸ್ವಾತಂತ್ರ್ಯಾದಿಗುಣೈರ್ಯುತಂ ॥ ೨೦ ॥**

---

ಪರಮಮುಖ್ಯವೃತ್ತಿಯಿಂದ ವೇದವೇದ್ಯನೆಂದು ವೇದಜ್ಞಾನಿಗಳು ನನ್ನನ್ನು ಸ್ತುತಿಸುತ್ತಾರೆ-ನಮಸ್ಕರಿಸುತ್ತಾರೆ; ವೇದಪ್ರತಿಪಾದ್ಯರೆಂಬ ಇತರ ದೇವತೆಗಳು ಗೌಣವೃತ್ತಿಯಿಂದ ಪ್ರತಿಪಾದ್ಯರು; ಸ್ವಾತಂತ್ರ್ಯಪಾರತಂತ್ರ್ಯ ಲಕ್ಷಣಗಳಿಂದ—ಸೂರ್ಯಪ್ರಕಾಶವು ಅಂತರಿಕ್ಷ ವನ್ನು ವ್ಯಾಪಿಸಿರುವಂತೆ—ಸರ್ವತ್ರವ್ಯಾಪ್ತನಾದ, ಆದ್ದರಿಂದಲೇ ವಿಷ್ಣುಶಬ್ದವಾಚ್ಯನಾದ ನನ್ನ ಸರ್ವೋತ್ಕೃಷ್ಟಸ್ವರೂಪವನ್ನು ವಿದ್ವಾಂಸರು, ನಿಶ್ಚಯಿಸಿ ತಿಳಿದು ಏಕಮಾತ್ರ ಸ್ವತಂತ್ರ ವಸ್ತುವಾದ ನನ್ನನ್ನೇ ಶರಣುಹೊಂದುತ್ತಾರೆ (೧೭-೧೮). ಸಕಲ ವೇದಗಳು ನನ್ನನ್ನೇ ಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತವೆಂದು ಗುರುಮುಖೇನ ಶ್ರವಣಮಾಡಿದ ಆ ವಿದ್ವಾಂಸರು, ಹಾಗೆ ಶ್ರವಣಮಾಡಿದ ಅರ್ಥಗಳ ನಿಶ್ಚಯವನ್ನು ಯುಕ್ತಿಗಳಿಂದ ವಿಮರ್ಶಿಸಿ ತಿಳಿದು (ಮನನದಿಂದ ನಿರ್ಣಯವನ್ನು ದೃಢಪಡಿಸಿಕೊಂಡು), ಧ್ಯಾನಧಾರೆಯಲ್ಲಿ ಮಗ್ನರಾಗುತ್ತಾರೆ[1] (೧೯). ಧ್ಯಾನಮಗ್ನವಾದ ಮನಸ್ಸಿನಿಂದ ಭಗವಂತನನ್ನು

---

1. ಶ್ರವಣ—ಗುರುಮುಖದಿಂದ ಅರ್ಥಜ್ಞಾನಪೂರ್ವಕ ವೇದಗಳನ್ನು ಕೇಳುವುದು; ಮನನ—ಶ್ರವಣಮಾಡಿದ ಪ್ರಮೇಯಗಳ ನಿಶ್ಚಯವನ್ನು ಯುಕ್ತಿಗಳಿಂದ ವಿಮರ್ಶಿಸಿ ತಿಳಿಯುವುದು; ಧ್ಯಾನ—ನಿಶ್ಚಯಜ್ಞಾನದಿಂದ ಭಗವಂತನನ್ನು ಚಿಂತಿಸುವುದು (ಭಗವನ್ಮಹಿಮೆಗಳ ಜ್ಞಾನಸಹಿತವಾಗಿ ಭಗವದ್ರೂಪವನ್ನು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲಿಸಿಕೊಳ್ಳುವುದು). ನಿರಂತರ ಚಿಂತನೆಯು ಧ್ಯಾನ—ಮಧ್ಯೆ ಮಧ್ಯೆ ಖಂಡಿತವಾದ (ವಿಚ್ಛಿತ್ತಿಯುಳ್ಳ) ಚಿಂತನವು 'ಧಾರಣ'ವೆನಿಸುತ್ತದೆ.

ಯತಃ ಯತಃ–ಹೇಗೆ ಹೇಗೆ (ಯಾವ ಯಾವ ಅನ್ಯವಸ್ತುವಿನಲ್ಲಿ), ತೇಷಾಂ–(ಧ್ಯಾನಿಸುವವರ) ಅವರ, ಮನಃ–ಮನಸ್ಸು ಯಾತಿ–ಹೋಗುತ್ತದೆಯೋ, ಬ್ರಹ್ಮನ್–ಹೇ ಬ್ರಹ್ಮದೇವ!, ಸದಾ ಏವ–ಯಾವಾಗಲೂ, ತತ್ರ ತತ್ರ ಏವ–ಅಲ್ಲಲ್ಲಿಯೇ (ಆಯಾ ಸ್ಥಾನಗಳಲ್ಲಿ), ಸ್ವಾತಂತ್ರ್ಯಾದಿಗುಣೈಃ–ಸ್ವಾತಂತ್ರ್ಯವೇ ಮೊದಲಾದ ಗುಣಗಳಿಂದ, ಯುತಂ–ಕೂಡಿದ (ಪೂರ್ಣನಾದ) ನನ್ನನ್ನು ಧ್ಯಾಯಂತಿ–ಧ್ಯಾನಮಾಡುತ್ತಾರೆ.

**ಏವಂ ಧ್ಯಾನಪರೀಪಾಕೇ ಜಾತೇ ತೇಷಾಂ ಮಹಾತ್ಮನಾಂ ।**
**ಸ್ವರೂಪಯೋಗ್ಯಂ ಯತ್ತೇಷಾಂ ತಾದೃಶಂ ರೂಪಮಾಸ್ಥಿತಃ ॥ ೨೦ ॥**

**ಪ್ರತ್ಯಕ್ಷವಿಷಯೋ ಹ್ಯೇಷಾಂ ಭವಾಮಿ ಕೃಪಯಾ ತತಃ ।**
**ಅವ್ಯಕ್ತೋ ವ್ಯಕ್ತತಾಂ ಯಾಮಿ ತದ್ಭಕ್ತ್ಯಾ ತುಷ್ಟಮಾನಸಃ ॥ ೨೨ ॥**

ಏವಂ–ಹೀಗೆ, ಧ್ಯಾನಪರೀಪಾಕೇ–ಧ್ಯಾನದ ಪರಿಪಕ್ವತೆಯು (ಮನಸ್ಸಿನ ಸಮಾಧ್ಯವಸ್ಥೆಯು), ಜಾತೇ–ಉಂಟಾಗುತ್ತಿರಲು, ತೇಷಾಂ ಮಹಾತ್ಮನಾಂ–ಆ ಮಹಾತ್ಮರ, ಸ್ವರೂಪಯೋಗ್ಯಂ ಯತ್–ಸ್ವರೂಪಯೋಗ್ಯವಾದುದು ಯಾವುದೋ (ಯಾವ ರೂಪವೋ), ತಾದೃಶಂ ರೂಪಂ–ಆ ವಿಧದ ರೂಪವನ್ನು (ಅಂತಿರುವ ರೂಪವನ್ನು), ಆಸ್ಥಿತಃ–ಹೊಂದಿರದವನಾಗಿ, ತೇಷಾಂ–ಅವರಿಗೆ, ಪ್ರತ್ಯಕ್ಷವಿಷಯಃ–ಪ್ರತ್ಯಕ್ಷವಿಷಯನು (ದೃಷ್ಟಿಗೋಚರನು), ಭವಾಮಿ–ಆಗುತ್ತೇನೆ; ತತಃ–ಅಲ್ಲಿಂದ ಮುಂದೆ, ತದ್ಭಕ್ತ್ಯಾ–ಅವರ ಭಕ್ತಿಯಿಂದ, ತುಷ್ಟಮಾನಸಃ–ಸಂತುಷ್ಟನಾಗಿ, ಕೃಪಯಾ–(ಅವರ ಮೇಲಿನ) ಕೃಪೆಯಿಂದ,

---

ಚಿಂತಿಸುತ್ತಿರಲು, ಚಂಚಲವಾದ ಮನಸ್ಸು (ಭಗವದ್ರೂಪವನ್ನೂ, ಆತನ ಗುಣಗಳನ್ನೂ ಚಿಂತಿಸದೇ) ಅನ್ಯತ್ರ ಹೋಗುತ್ತದೆ. ಅದು ಹೇಗೆ ಹೇಗೆ ಅನ್ಯತ್ರ ಧಾವಿಸುತ್ತದೆಯೋ[1] ಹಾಗೆ ಹಾಗೆ (ಅಲ್ಲಲ್ಲಿ) ಸ್ವಾತಂತ್ರ್ಯಾದಿ ಗುಣಪೂರ್ಣನಾದ, ನನ್ನನ್ನೇ ಚಿಂತಿಸುತ್ತ ಧ್ಯಾನವಂತರು, ಅಪ್ರಯತ್ನವಾಗಿ ತಮ್ಮ ಮನಸ್ಸು ನನ್ನಲ್ಲಿಯೇ ನಿಲ್ಲುವುದೆಂಬ 'ಸಮಾಧಿ' ಸ್ಥಿತಿಯನ್ನು ಹೊಂದುತ್ತಾರೆ (೨೦). ಹೀಗೆ ಧ್ಯಾನಪರಿಪಕ್ವತೆಯನ್ನು ಹೊಂದಿ, ಮನಸ್ಸನ್ನು ಸಮಾಧಿಯಲ್ಲಿ ನಿಲ್ಲಿಸಿದ ಅಧಿಕಾರಿ ಜೀವರಿಗೆ, ಅವರ ಸ್ವರೂಪಯೋಗ್ಯವಾದ ನನ್ನ ರೂಪವನ್ನು (ಆತನ ಬಿಂಬರೂಪವನ್ನು) ತೋರಗೊಡುತ್ತೇನೆ (ನನ್ನ ದಿವ್ಯ ದರ್ಶನವನ್ನೀಯುತ್ತೇನೆ); ಅಲ್ಲಿಂದ ಮುಂದೆ, ಆ ಭಕ್ತನ ಭಕ್ತಿಯಿಂದ ಪ್ರಸನ್ನನಾದ ನಾನು, ಸ್ವಭಾವತಃ ಅವ್ಯಕ್ತನಾದರೂ, ಆತನು ಧ್ಯಾನಿಸಿದಾಗಲೆಲ್ಲಾ ಕೃಪೆಯಿಂದ, ವ್ಯಕ್ತನಾಗಿ

1. 'ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ। ತತೋ ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ।' (ಗೀತಾ) ಎಂಬಲ್ಲಿ ಈ ಪ್ರಮೇಯದ ವಿಸ್ತಾರವನ್ನು ಕಾಣಬಹುದು. ಗೀತಾ ೬ನೇ ಅಧ್ಯಾಯ (ಧ್ಯಾನಯೋಗ)ವನ್ನು ನೋಡಿರಿ.

ಏಷಾಂ-ಈ ಅಪರೋಕ್ಷಜ್ಞಾನಿಗಳಿಗೆ (ನನ್ನ ಸಾಕ್ಷಾತ್ ದರ್ಶನವನ್ನು ಹೊಂದಿದ ಜ್ಞಾನಿಗಳಿಗೆ), ಅವ್ಯಕ್ತಃ-ಅವ್ಯಕ್ತನಾದ (ಯಾರಿಗೂ ಕಾಣದವನಾದ) ನಾನು, ವ್ಯಕ್ತತಾಂ-ವ್ಯಕ್ತತ್ವವನ್ನು (ಪ್ರತ್ಯಕ್ಷಗೋಚರತ್ವವನ್ನು), ಯಾಮಿ-ಹೊಂದುತ್ತೇನೆ.

ನ ಕಶ್ಚಿತ್ ಸ್ವೇಚ್ಛಯಾ ಮಾಂ ಯತ್ ದ್ರಷ್ಟುಮೀಶೋ ಹಿ ವಿದ್ಯತೇ ।
ಅವ್ಯಕ್ತಸ್ತದಹಂ ಪ್ರೋಕ್ತೋ ಮದಿಚ್ಛಾತೋ ಯತೋಽಖಿಲಾಃ ॥ ೨೩ ॥
ಪಶ್ಯಂತಿ ಮಾಂ ತತೋ ವೇದೈರ್ಗೀಯೇಽಹಂ ವ್ಯಕ್ತ ಇತ್ಯಪಿ ।

ಯತ್-ಯಾವ ಕಾರಣದಿಂದ, ಕಶ್ಚಿತ್-ಯಾರೊಬ್ಬನೂ, ಸ್ವೇಚ್ಛಯಾ-ತನ್ನ ಇಚ್ಛೆಯಂತೆ (ಇಚ್ಛಾನುಸಾರವಾಗಿ), ಮಾಂ-ನನ್ನನ್ನು ದ್ರಷ್ಟುಂ-ನೋಡುವುದಕ್ಕೆ, ಈಶಃ-ಸಮರ್ಥನು, ನ ವಿದ್ಯತೇ-ಇರುವುದಿಲ್ಲವೋ, ತತ್-ಆ ಕಾರಣದಿಂದ, ಅಹಂ-ನಾನು, ಅವ್ಯಕ್ತಃ-ಅವ್ಯಕ್ತನೆಂದು ಕರೆಯಲ್ಪಡುತ್ತೇನೆ; ಯತಃ-ಯಾವ ಕಾರಣದಿಂದ, ಅಖಿಲಾಃ-ಸರ್ವರೂ, ಮದಿಚ್ಛಾತಃ-ನನ್ನ ಇಚ್ಛೆಯಿಂದಲೇ (ಇಚ್ಛಿಸುವ ಮಾತ್ರವೇ), ಮಾಂ-ನನ್ನನ್ನು ಪಶ್ಯಂತಿ-ನೋಡುತ್ತಾರೋ, ತತಃ-ಆ ಕಾರಣದಿಂದ, ಅಹಂ-ನಾನು, ವೇದೈಃ-ವೇದಗಳಿಂದ, ವ್ಯಕ್ತಃ-ವ್ಯಕ್ತನು, ಇತ್ಯಪಿ-ಹೀಗೆಂದೂ, ಗೀಯೇ-ಹೇಳಲ್ಪಡುತ್ತೇನೆ.

ಯತೋಽಹಮಖಿಲಂ ನ್ಯಸ್ಯ ಪುರುಷಸ್ಯ ಕಲೇವರೇ ॥ ೨೪ ॥

ಪ್ರಾಕೃತಾನ್ ಜೀವಸಂಘಾಂಶ್ಚ ಲಿಂಗದೇಹೇನ ಸಂಯುತಾನ್ ।
ವಾಸುದೇವೇನ ರೂಪೇಣ ತಾನ್ನಿರೀಕ್ಷ್ಯ ವಿಸೃಷ್ಟವಾನ್ ॥ ೨೫ ॥

---

ದರ್ಶನವನ್ನು ಕೊಡುತ್ತೇನೆ—ಆತನ ಪ್ರತ್ಯಕ್ಷಕ್ಕೆ ವಿಷಯನಾಗುತ್ತೇನೆ[1] (೨೦-೨೨). ಯಾರೂ ತಮ್ಮ ಇಚ್ಛೆಯಂತೆ ನನ್ನನ್ನು ಕಾಣಲು ಸಮರ್ಥರಲ್ಲ—ಆದ್ದರಿಂದ ನಾನು 'ಅವ್ಯಕ್ತ'ನು; ಎಲ್ಲರೂ ನನ್ನ ಇಚ್ಛೆಯಿಂದಲೇ (ಇಚ್ಛಿಸಿ ಅವರಿಗೆ ನನ್ನ ರೂಪವನ್ನು ತೋರಗೊಟ್ಟರೆ ಮಾತ್ರ), ನನ್ನನ್ನು ಕಾಣುತ್ತಾರಾದ್ದರಿಂದ, ವೇದಗಳು ನನ್ನನ್ನು 'ವ್ಯಕ್ತ'ನೆಂದೂ ಹೇಳುತ್ತವೆ[2] (೨೩). ಪುರುಷನನ್ನು ಮೊದಲು ಮಹತತ್ತ್ವದಿಂದ ನಿರ್ಮಿಸಿ,

---

1. ಇದೇ ಬ್ರಹ್ಮದರ್ಶನ, ಅಪರೋಕ್ಷಜ್ಞಾನ, ಬಿಂಬಾಪರೋಕ್ಷ ಇತ್ಯಾದಿ ಶಬ್ದಗಳಿಂದ ಹೇಳಲ್ಪಡುತ್ತದೆ. ಹೀಗೆ ಶ್ರೀವಿಷ್ಣುವಿನ ಸಾಕ್ಷಾತ್ಕಾರವನ್ನು ಹೊಂದಿದವನೇ ಮುಖ್ಯಾರ್ಥದಲ್ಲಿ ಜ್ಞಾನಿಯು (ಅಪರೋಕ್ಷಜ್ಞಾನಿಯು).

2. ಜ್ಞಾನಿಯು ಸಮಾಧಿಯಲ್ಲಿ ಶ್ರೀಹರಿಯನ್ನು ಕಾಣುವುದು, ಶ್ರೀಹರಿಯು ಇಚ್ಛಿಸಿ ಪ್ರತ್ಯಕ್ಷಗೋಚರನಾದರೆ ಮಾತ್ರ; ರಾಮಕೃಷ್ಣಾದಿ ಅವತಾರರೂಪಗಳೆಲ್ಲ ಲೋಕಕ್ಕೆಲ್ಲ ಗೋಚರಿಸುವುದೂ ಆತನ ಇಚ್ಛೆಯಿಂದಲೇ—ಆದರೆ ಎಲ್ಲರೂ ಅವತಾರ ರೂಪಗಳನ್ನು ಯಥಾರ್ಥವಾಗಿ (ಸಚ್ಚಿದಾನಂದಸ್ವರೂಪನೆಂದು) ತಿಳಿಯುವುದಿಲ್ಲ; ರೂಪವು ಪ್ರತ್ಯಕ್ಷಕ್ಕೆ ಎಲ್ಲರಿಗೂ ಗೋಚರಿಸುವುದೂ, ಅವ್ಯಕ್ತನಾದ ಶ್ರೀಹರಿಯು ಇಚ್ಛಿಸುವ ಮಾತ್ರದಿಂದಲೇ ಸರಿ—ಅನ್ಯಥಾ ಅಲ್ಲ.

**ಮಾಯಾಯಾಂ ಬೀಜರೂಪೇಣ ಯತಃ ಸಾ ತದ್ವ್ಯಜೀಜನತ್ ।**
**ಜಗತ್ಪಿತಾ ತತೋಽಹಂ ವೈ ಜಗನ್ಮಾತಾ ರಮಾ ತತಃ ॥ ೨೬ ॥**

ಯತಃ–ಯಾವ ಕಾರಣದಿಂದ, ಅಹಂ–ನಾನು, ಪುರುಷಸ್ಯ–(ನನ್ನಿಂದ ಸೃಷ್ಟವಾದ) ಪುರುಷನ (ಪುರುಷಾಕಾರದ), ಕಲೇವರೇ–ದೇಹದಲ್ಲಿ ಪ್ರಾಕೃತಾನ್–ಪ್ರಕೃತಿ ನಿರ್ಮಿತಗಳಾದ ಇತರ ದೇಹಗಳನ್ನೂ, ಚ–ಮತ್ತು ಲಿಂಗದೇಹೇನ–ಲಿಂಗದೇಹದಿಂದ, ಸಂಯುತಾನ್–ಕೂಡಿರುವ, ಜೀವಸಂಘಾನ್–ಜೀವಗಣಗಳನ್ನೂ, ನ್ಯಸ್ಯ–ಸ್ಥಾಪಿಸಿ (ಇಟ್ಟು), ವಾಸುದೇವೇನ ರೂಪೇಣ–ವಾಸುದೇವರೂಪದಿಂದ, ನಿಗೀಲ್ಯ–(ಆ ಪುರುಷದೇಹವನ್ನು) ನುಂಗಿ, ತಾನ್–(ಹಾಗೆ ಒಳಗಿದ್ದ) ಎಲ್ಲರನ್ನೂ, ಮಾಯಾಯಾಂ–ಮಾಯಾನಾಮಕ ಲಕ್ಷ್ಮೀದೇವಿಯಲ್ಲಿ ಬೀಜರೂಪೇಣ–(ಮುಂದಿನ ಸೃಷ್ಟಿಗೆ) ಬೀಜರೂಪರನ್ನಾಗಿ, ವಿಸೃಷ್ಟವಾನ್–ಸ್ಥಾಪಿಸಿದೆನೋ, ತತಃ–ಆ ಕಾರಣದಿಂದ, ಅಹಂ–ನಾನು, ಜಗತ್ಪಿತಾ–ಜಗತ್ತಿನ (ಸರ್ವರ) ತಂದೆಯು; ವೈ–ಹಾಗೆಯೇ, ಯತಃ–ಯಾವ ಕಾರಣದಿಂದ, ಸಾ–ಆ ಮಾಯಾ ದೇವಿಯು, ತತ್–ಆ ಜಗತ್ತನ್ನು (ಎಲ್ಲ ಯೋನಿಗಳ ಎಲ್ಲ ಜೀವರನ್ನೂ), ವ್ಯಜೀಜನತ್–(ನನ್ನಿಂದ) ಪ್ರಸವಿಸಿದಳೋ, ತತಃ–ಆ ಕಾರಣದಿಂದ, ರಮಾ–ಲಕ್ಷ್ಮೀದೇವಿಯು, ಜಗನ್ಮಾತಾ–ಜಗನ್ಮಾತೆಯು (ಸರ್ವರ ತಾಯಿಯು).

**ಮಾಯಾಜನ್ಯಮಿದಂ ಸರ್ವಂ ಮಾಯಿಕಂ ಚ ತತಃ ಸ್ಮೃತಂ ।**
**ಜಂಗಮಾನಾಂ ಸ್ಥಾವರಾಣಾಮೇವಂ ಯೋನಿರ್ಭವೇದ್ರಮಾ ॥ ೨೭ ॥**

**ಅಹಂ ಬೀಜಪ್ರದಸ್ತತ್ರ ಸರ್ವೋತ್ಪತ್ತಿಸ್ತತೋಽಭವೇತ್ ।**
**ಏವಂ ಮೇ ಮಹಿಮಾನಂ ಯೋ ವಿಜಾನಾತಿ ಚ ಭಕ್ತಿಮಾನ್ ॥ ೨೮ ॥**

---

(ತ್ರಿವಿಧ ಅಹಂಕಾರತತ್ತ್ವಗಳಿಂದ, ಇಂದ್ರಿಯಾಭಿಮಾನಿ ದೇವತೆಗಳು, ಇಂದ್ರಿಯಗಳು, ಪಂಚಭೂತಗಳು, ದೇವ, ಋಷಿ, ಗಂಧರ್ವ, ಮನುಷ್ಯ, ಪಶು, ಪಕ್ಷಿ ಜಲಚರಾದಿ ನಾನಾ ಪ್ರಾಣದೇಹಗಳನ್ನೂ ಸೃಷ್ಟಿಮಾಡಿ), ಇಂದ್ರಿಯಾಭಿಮಾನಿ ದೇವತೆಗಳು, ಇತರ ಎಲ್ಲ ದೇಹಗಳಲ್ಲಿರಲು ಒಪ್ಪದೇ, ನಾನು ತೋರಿಸಿದ ಪುರುಷದೇಹವನ್ನು ಒಪ್ಪಿಕೊಂಡಿದ್ದರಿಂದ, ಆ ಸರ್ವವನ್ನೂ ಆ ಪುರುಷದೇಹದಲ್ಲಿ ಪ್ರವೇಶಿಸಿ, ಅದನ್ನು ವಾಸುದೇವರೂಪದಿಂದ ನುಂಗಿದೆನು; ನಂತರ ನನ್ನ ಮಾಯಾನಾಮಕ ಭಾರ್ಯಳಲ್ಲಿ ಗರ್ಭಾಧಾನಮಾಡಿ ಮೊದಲು ಬ್ರಹ್ಮದೇವನನ್ನೂ, ನಂತರ ಕ್ರಮವಾಗಿ ಇತರರನ್ನೂ ಹುಟ್ಟಿಸಿದೆನು. ಆದ್ದರಿಂದ ನಾನೇ ಜಗತ್ಪಿತನು—ಮಾಯಾದೇವಿಯೇ ಜಗನ್ಮಾತೆಯು (೨೪-೨೬). ಚೇತನಾಚೇತನಾತ್ಮಕ ವಾದ ಜಗತ್ತೆಲ್ಲವೂ, ಮಾಯಾನಾಮಕ ಲಕ್ಷ್ಮೀದೇವಿಯಿಂದ ಹುಟ್ಟಿದ ಕಾರಣ, 'ಮಾಯಿಕ' ವೆಂದು ಹೇಳಲ್ಪಡುತ್ತದೆ; ಜಗತ್ತಿನ ಉತ್ಪತ್ತಿಗೆ ಮಾಯಾದೇವಿಯೇ ಯೋನಿಯು (ಪ್ರಸವಿಸುವ ಸ್ತ್ರೀಯು—ಅಥವಾ ಕ್ಷೇತ್ರವು), ನಾನು ಆಕೆಯಲ್ಲಿ ಗರ್ಭಾಧಾನಮಾಡುವ

ಸ ಏವ ಮಾಂ ಸ್ಫುಟಂ ಪಶ್ಯೇನ್ನ ಖಿದ್ಯೇತ ತತಃ ಪರಂ ।
ಕ್ರಿಯಮಾಣೈಃ ಪುಣ್ಯಪಾಪೈರ್ಯಾನಿ ಸ್ಯುಃ ಸಂಚಿತಾನಿ ಚ ॥ ೨೯ ॥

ತಾನಿ ಮದ್ದರ್ಶನಾದೇವ ವಹ್ನಿಯೋಗಾದ್ಯಥೇಷಿಕಾಃ ।
ತತ್ಕ್ಷಣಾದ್ಭಸ್ಮತಾಂ ಯಾಂತಿ ಯಾನಿ ಸ್ಯುಃ ಫಲಿತಾನಿ ಚ ॥ ೩೦ ॥

ಕರ್ಮಾಣಿ ತಾನಿ ಭುಕ್ತ್ವೈವ ಶುಭಾಶುಭಫಲಾನಿ ವೈ ।
ಕೃತಕೃತ್ಯಾ ಭವೇಯುಸ್ತೇ ಬೋಧಯಂತಿ ಪರಾನಪಿ ॥ ೩೧ ॥

ಇದಂ ಸರ್ವಂ–ಈ ಜಗತ್ತೆಲ್ಲವೂ, ಮಾಯಾಜನ್ಯಂ–ಮಾಯಾನಾಮಕ ಲಕ್ಷ್ಮೀದೇವಿಯಿಂದ ಹುಟ್ಟಿದುದು; ತತಃ–ಆ ಕಾರಣದಿಂದ, ಮಾಯಿಕಂ–ಮಾಯಿಕವೆಂದು (ಮಾಯಾನಿರ್ಮಿತವೆಂದು), ಸ್ಮೃತಂ–ಹೇಳಲ್ಪಡುತ್ತದೆ (ಮಾಯಾಜನ್ಯವೆಂದರೆ ಇಂದ್ರಜಾಲವೆಂದಾಗಲಿ, ಮಿಥ್ಯಾಭೂತವಾದುದೆಂದಾಗಲಿ, ಅಜ್ಞಾನಕಲ್ಪಿತವಾದುದೆಂದಾಗಲಿ ಅಲ್ಲ); ಜಂಗಮಾನಾಂ–ಚರ, ಮತ್ತು ಸ್ಥಾವರಾಣಾಂ–ಅಚರವಸ್ತುಗಳ (ಚೇತನಾಚೇತನರೂಪದ ಸಕಲ ಜಗತ್ತಿನ), ಯೋನಿಃ–ಉತ್ಪತ್ತಿ ಕಾರಣಳು (ಪ್ರಸವವಾಗುವಾಕೆಯು), ಏವಂ–ಹೀಗೆ, ರಮಾ–ಲಕ್ಷ್ಮೀದೇವಿಯು, ಭವೇತ್–ಆಗುತ್ತಾಳೆ; ಅಹಂ–ನಾನು, ಬೀಜಪ್ರದಃ–ಗರ್ಭವನ್ನು ಉತ್ಪಾದಿಸುವ ತಂದೆಯು (ಸಸ್ಯಾದಿಗಳ ಉತ್ಪತ್ತಿಗೆ, ಬೀಜ ಮತ್ತು ಕ್ಷೇತ್ರಗಳಂತೆ ನಾನು ಮತ್ತು

ಪುರುಷನು—ಕ್ಷೇತ್ರದಲ್ಲಿ ಬೀಜವನ್ನು ಬಿತ್ತುವವನು; ಹೀಗೆ ನನ್ನಿಂದ ಮಾಯಾದೇವಿಯಲ್ಲಿ ಜಗತ್ತು ಹುಟ್ಟಿತೆಂಬ ಪ್ರಮೇಯವನ್ನು ಮನಗಂಡು, ಸೃಷ್ಟಿಕರ್ತನು ನಾನೇ ಎಂಬ ನನ್ನ ಮಹಿಮೆಯ ಜ್ಞಾನಪೂರ್ವಕವಾಗಿ ನನ್ನಲ್ಲಿ ಭಕ್ತಿಯುಳ್ಳವನಾಗುತ್ತಾನೆಯೋ, ಅವನೇ ನನ್ನ ಪ್ರತ್ಯಕ್ಷ ದರ್ಶನವನ್ನು ಪಡೆಯುತ್ತಾನೆ; ನನ್ನ ದರ್ಶನವಾದಮೇಲೆ ಈ ಜ್ಞಾನಿಯು ಮಾಡುವ ಪುಣ್ಯಪಾಪರೂಪದ ಯಾವ ಕರ್ಮಗಳೂ ಆತನಿಗೆ ಲೇಪಿಸುವುದಿಲ್ಲ— ಅವುಗಳಿಂದ ಆತನು ಯಾವ ಪ್ರಕಾರದ ಮನೋವಿಕಾರವನ್ನೂ ಹೊಂದುವುದಿಲ್ಲ; ನನ್ನ ಸಾಕ್ಷಾತ್ಕಾರದಿಂದ, ಸಂಚಿತರಾಶಿಯ ಕರ್ಮಗಳು,[1] ಅಗ್ನಿಸ್ಪರ್ಶದಿಂದ ಹುಲ್ಲುಕಡ್ಡಿಗಳ ರಾಶಿಯು ತಕ್ಷಣದಲ್ಲಿ ದಗ್ಧವಾಗಿ ಬೂದಿಯಾಗುವಂತೆ, ಸುಟ್ಟುಹೋಗುತ್ತವೆ; ನನ್ನ ದರ್ಶನ

1. ಸಂಚಿತಕರ್ಮರಾಶಿಯಲ್ಲಿ ಪುಣ್ಯಪಾಪರೂಪದ ಉಭಯಕರ್ಮಗಳೂ ಇರುತ್ತವೆ. ಅಪರೋಕ್ಷಜ್ಞಾನದಿಂದ, ಸಂಚಿತರಾಶಿಯೊಳಗಿನ ಸರ್ವಪಾಪಕರ್ಮಗಳೂ, ಅನಿಷ್ಟ ಪುಣ್ಯಕರ್ಮಗಳೂ ದಹಿಸಿಹೋಗುತ್ತವೆ. ಇಷ್ಟಪುಣ್ಯಕರ್ಮಗಳು, ಕಾಮ್ಯ, ಅಕಾಮ್ಯಭೇದದಿಂದ ಎರಡು ವಿಧ. ಅಕಾಮ್ಯಪುಣ್ಯಗಳು ಅಪರೋಕ್ಷದರ್ಶನಕ್ಕೆ ಕಾರಣವಾಗಿ ದರ್ಶನದಲ್ಲಿ ಪರಿಸಮಾಪ್ತಿಗೊಳ್ಳುತ್ತವೆ; ಕಾಮ್ಯಪುಣ್ಯಗಳನ್ನು ಅಪರೋಕ್ಷಜ್ಞಾನಿಯು, ಇಚ್ಛಾನುಸಾರ ತನ್ನನ್ನು ಸೇವಿಸುವವರಿಗೆ ಕೊಡುವುದುಂಟು; ಪಾಪಗಳ ನಾಶವೆಂದರೆ, ಅವುಗಳ ಫಲರೂಪವಾದ ದುಃಖಾದಿಗಳು ಜ್ಞಾನಿಯ ಭೋಗಕ್ಕೆ ಬರದಿರುವುದು; ಆ ದುಷ್ಟಫಲಗಳು, ಆತನ ದ್ವೇಷಿಗಳಿಗೂ, ನಾಶವಾಗುವ ಪುಣ್ಯಫಲಗಳು ಬಂಧುಮಿತ್ರರಿಗೂ, ಯಥಾಯೋಗ್ಯವಾಗಿ ಸಲ್ಲುತ್ತವೆ.

ರಮಾದೇವಿಯೂ ಇರುವೆವು); ತತಃ–ತಚ್ಛಬ್ದವಾಚ್ಯನಾದ ನನ್ನಿಂದ, ತತ್ರ–ಆ ಮಾಯಾ ನಾಮಕ ನನ್ನ ಭಾರ್ಯಳಲ್ಲಿ ಸರ್ವೋತ್ಪತ್ತಿಃ–ಸಕಲ ಜಗತ್ತಿನ ಉತ್ಪತ್ತಿಯು, ಅಭವತ್–ಉಂಟಾಯಿತು; ಯಃ–ಯಾರು, ಭಕ್ತಿಮಾನ್–(ನನ್ನಲ್ಲಿ) ಭಕ್ತಿಯುಳ್ಳವನಾಗಿ, ಮೇ–ನನ್ನ ಮಹಿಮಾನಂ–ಮಹಿಮೆಯನ್ನು ಏವಂ–ಹೀಗೆ, ವಿಜಾನಾತಿ–ತಿಳಿಯುವನೋ, ಸಃ ಏವ–ಆ ಅಧಿಕಾರಿಯೇ, ಮಾಂ–ನನ್ನನ್ನು ಸ್ಫುಟಂ–ಸ್ಪಷ್ಟವಾಗಿ, ಪಶ್ಯೇತ್–ಕಾಣುತ್ತಾನೆ (ಸಾಕ್ಷಾತ್ ದರ್ಶನವನ್ನು ಹೊಂದುತ್ತಾನೆ); ತತಃಪರಂ–ಆ ಮುಂದೆ (ಅಪರೋಕ್ಷಜ್ಞಾನವಾದ ಮೇಲೆ), ಕ್ರಿಯಮಾಣೈಃ–ಮಾಡುವ, ಪುಣ್ಯಪಾಪೈಃ–ಪುಣ್ಯಪಾಪಕರ್ಮಗಳಿಂದ, ನ ಖಿದ್ಯೇತ–ದುಃಖಿಸುವುದಿಲ್ಲ (ಲಿಪ್ತನಾಗುವುದಿಲ್ಲ–ಯಾವ ಮನೋವಿಕಾರಗಳನ್ನು ಹೊಂದುವುದಿಲ್ಲ); ಚ–ಮತ್ತು ಯಾನಿ ಸಂಚಿತಾನಿ–ಯಾವ ಸಂಚಿತಕರ್ಮಗಳು (ಕೂಡಿಬದ್ದಿರುವ ಕರ್ಮರಾಶಿಗಳು), ಸ್ಯುಃ–(ಭಗವದ್ದರ್ಶನಕ್ಕೆ ಪೂರ್ವದಲ್ಲಿ) ಯಾವುವು ಇದ್ದವೋ, ತಾನಿ–ಅವು, ಮದ್ದರ್ಶನಾದೇವ–ನನ್ನ ದರ್ಶನಮಾತ್ರದಿಂದ, ವಹ್ನಿ ಯೋಗಾತ್–ಅಗ್ನಿ ಸಂಬಂಧದಿಂದ, ಈಷಿಕಾಃ–ತೃಣಗಳು (ದರ್ಭೆಗಳು), ಯಥಾ–ಹೇಗೋ ಹಾಗೆ, ತತ್ಕ್ಷಣಾತ್–ತತ್ಕ್ಷಣದಲ್ಲಿ (ಬ್ರಹ್ಮದರ್ಶನವಾದ ಕ್ಷಣದಲ್ಲಿಯೇ), ಭಸ್ಮತಾಂಯಾಂತಿ–ಬೂದಿಯಾಗುತ್ತವೆ; ಯಾನಿಚ ಕರ್ಮಾಣಿ–ಯಾವ ಕರ್ಮಗಳಾದರೋ, ಫಲಿತಾನಿ ಸ್ಯುಃ–ಫಲಕೊಡಲಿಕ್ಕೆ ಆರಂಭವಾಗಿರುತ್ತವೆಯೋ, ತಾನಿ ಶುಭಾಶುಭಫಲಾನಿ–ಅವುಗಳ ಶುಭಾಶುಭಫಲಗಳನ್ನು (ಸುಖದುಃಖರೂಪದ ಅವುಗಳ ಫಲಗಳನ್ನು), ಭುಕ್ತ್ವಾ ಏವ–ಭೋಗಮಾಡಿಯೇ (ಅನುಭವಿಸಿಯೇ), ಕೃತಕೃತ್ಯಾಃ–ಕೃತಕೃತ್ಯರು (ಧನ್ಯರು–ಸಾಧನಪರಿಪೂರ್ತಿಯುಳ್ಳವರು-ಮುಕ್ತರು), ಭವೇಯುಃ–ಆಗುತ್ತಾರೆ; ತೇ–ಅವರು (ಈ ಭಗವದ್ದರ್ಶನವನ್ನು ಪಡೆದ ಅಪರೋಕ್ಷಜ್ಞಾನಿಗಳು), ಪರಾನ್–ಇತರರನ್ನು (ಸಾಧಕ ಜೀವರನ್ನು) ಕುರಿತು, ಬೋಧಯಂತಿ ಅಪಿ–ಯೋಗ್ಯವಾದ ಉಪದೇಶವನ್ನೂ ಮಾಡು

---

ಕಾಲಕ್ಕೆ ಫಲವನ್ನು ಕೊಡಲಿಕ್ಕೆ ಆರಂಭವಾಗಿರ್ದ ಕರ್ಮಗಳ[1] ಶುಭಾಶುಭ ಫಲಗಳನ್ನು ಭೋಗಿಸಿ, ಜ್ಞಾನಿಯು ಮುಕ್ತನಾಗುತ್ತಾನೆ; ಸ್ವಾನುಭವಸಿದ್ಧವಾದ ಹಿತನುಡಿಗಳಿಂದ ಸಾಧನೆಯಲ್ಲಿ ತೊಡಗಿರುವ (ಅಪರೋಕ್ಷ ದರ್ಶನವಾಗದಿರುವ) ಜೀವರನ್ನು ಯಥಾಯೋಗ್ಯವಾಗಿ ಎಚ್ಚರಗೊಳಿಸುತ್ತಾನೆ (೨೭-೩೦). ಎಲ್ಲರೂ ಮಲಗಿರುವಾಗ

---

1. ಅಪರೋಕ್ಷಜ್ಞಾನಿಯು ಪ್ರಾರಬ್ಧಕರ್ಮವನ್ನು ಭೋಗದಿಂದ ಕಳೆದುಕೊಳ್ಳುವ ಕಾಲದಲ್ಲಿ ಮಾಡುವ ಕರ್ಮಗಳು ಆಗಾಮಿಗಳೆನಿಸುತ್ತವೆ. ಆಗಾಮಿ ಕರ್ಮಗಳೂ ಜ್ಞಾನಿಗೆ ಲೇಪಿಸುವುದಿಲ್ಲ. ಭೋಗದಿಂದಲೇ ಕಳೆದುಕೊಳ್ಳಬೇಕಾದ ಪ್ರಾರಬ್ಧ ಕರ್ಮಕ್ಕೆ ವಿಶೇಷ ಹರಿಪ್ರಸಾದದಿಂದ ಉಪಮರ್ದವೂ ಉಂಟು. ಉಪಮರ್ದವೆಂದರೆ ಫಲದಲ್ಲಿ ಕಡಿಮೆಯಾಗುವುದು; ಫಲದ ತೀವ್ರತೆಯೂ ಕಡಿಮೆಯಾಗುತ್ತದೆ. ಕೆಲವು ಭಾಗದ ಫಲವನ್ನು ಭೋಗಿಸಿ ಅವಶಿಷ್ಟಭಾಗಕ್ಕೇ ಉಪಮರ್ದವು.

ತ್ತಾರೆ–ಸ್ವಾನುಭವದಿಂದ ತಿಳಿದ ವಿಷಯಗಳನ್ನು ಉಪದೇಶಿಸಿ ಸಾಧಕರನ್ನು ಎಚ್ಚರಗೊಳಿಸುತ್ತಾರೆ.

ಯಥಾ ಸುಪ್ತೇಷು ಸರ್ವೇಷು ಯದೇಕೋ ಜಾಗ್ರವಾನ್ ಭವೇತ್ ।
ಪರಾನ್ ಸಂಬೋಧಯತ್ಯೇವ ಹ್ಯನರ್ಥೇ ಸಮುಪಸ್ಥಿತೇ ॥ ೩೨ ॥

ತಥೈವ ಸುಪ್ತಾನ್ ಸಂಸಾರೇ ಸ್ವಹಿತಂ ಚಾಪ್ಯಪಶ್ಯತಃ ।
ಪ್ರತಿಪನ್ನಾನ್ ಸ್ವಭಕ್ತಾಂಶ್ಚ ಜಾಗೃವಾಂಸೋ ವಿಮನ್ಯವಃ ॥ ೩೩ ॥

ಸ್ವರೂಪಂ ಪರಮಂ ವಿಷ್ಣೋರ್ಯದ್ವೇದೈಃ ಪ್ರತಿಪಾದಿತಂ ।
ಪ್ರಕಾಶಯಂತಿ ಲೋಕಾನ್ ಹಿ ಗ್ರಸ್ಯಮಾನಾನ್ನಿಮಜ್ಜತಃ ॥ ೩೪ ॥

ಭವೇ ದುಃಖಪಯೋರಾಶೌ ಕೃಪಯಾ ದೀನವತ್ಸಲಾಃ ।

ಯಥಾ–ಹೇಗೆ, ಸರ್ವೇಷು–ಎಲ್ಲರೂ, ಸುಪ್ತೇಷು–ನಿದ್ರೆಮಾಡುತ್ತಿರಲು, ಏಕಃ–ಯಾರೊಬ್ಬನು, ಯತ್–ಯಾವಾಗ, ಜಾಗ್ರವಾನ್–ಎಚ್ಚರವಿದ್ದವನು, ಭವೇತ್–ಆಗುತ್ತಾನೋ (ಆಗ), ಅನರ್ಥೇ–ವಿಪತ್ತು, ಸಮುಪಸ್ಥಿತೇ–ಸನ್ನಿಹಿತವಾಗಿರಲು, ಪರಾನ್–

ಯಾವುದಾದರೂ, ವಿಪತ್ತು ಪ್ರಾಪ್ತವಾದರೆ, ಎಚ್ಚರವಿದ್ದ ಯಾವನೊಬ್ಬನು, ಮಲಗಿದವರನ್ನೆಲ್ಲಾ ಕೃಪಾಯುಕ್ತನಾಗಿ ಎಚ್ಚರಿಸುವಂತೆ, ಶ್ರೀಹರಿಯ ಸಾಕ್ಷಾತ್ಕಾರವನ್ನು ಪಡೆದ ಜ್ಞಾನಿಗಳು, ಕ್ರೋಧಾದಿ ದೋಷಗಳಿಲ್ಲದವರಾದ್ದರಿಂದ, ಕೃಪೆಯಿಂದ, ಸಂಸಾರವೆಂಬ ದುಃಖಸಮುದ್ರದಲ್ಲಿ ಮುಳುಗಿ, ಭಗವಂತನ ವಿಷಯಕವಾದ ಜ್ಞಾನವಿಲ್ಲದೇ, ಅಜ್ಞಾನವೆಂಬ ಕತ್ತಲೆಯಲ್ಲಿ ಮಲಗಿ ನಿದ್ರಿಸುತ್ತಿರುವ, ತಮ್ಮನ್ನಾಶ್ರಯಿಸಿದ ಸ್ವಭಕ್ತರನ್ನು, ವೇದಪ್ರತಿಪಾದ್ಯನಾದ ಶ್ರೀವಿಷ್ಣುವಿನ ಸರ್ವೋತ್ತಮತ್ವವನ್ನು ಉಪದೇಶಿಸಿ, ಅಜ್ಞಾನವನ್ನು ಪರಿಹರಿಸಿ, ಜ್ಞಾನಪ್ರಕಾಶವನ್ನು ದೊರಕಿಸುತ್ತಾರೆ; ಜ್ಞಾನಿಗಳು ಸ್ವಯಂ ನಿದ್ರೆಯಿಲ್ಲದವರು—ಸದಾ ಜಾಗೃತರಾಗಿರುತ್ತಾರೆ[1] (೩೨-೩೪). ನಾನು, ಈ ಹಿಂದೆ ಹೇಳಿದಂತೆ, ಯಾವಾಗ ಬ್ರಹ್ಮ, ವಾಯು, ಸರಸ್ವತೀ ಮತ್ತು ಭಾರತೀ, ಇವರಲ್ಲಿ ಪ್ರವಿಷ್ಟನಾಗಿ

1. ಇದೇ ಅಧ್ಯಾಯದ ೧೮ನೇ ಶ್ಲೋಕಭಾಗವನ್ನೂ ಇಲ್ಲಿ ನೋಡಬೇಕು. 'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ। ದಿವೀವ ಚಕ್ಷುರಾತತಂ। ತದ್ವಿಪ್ರಾಸೋ ವಿಮನ್ಯವೋ ಜಾಗೃವಾಂಸಃ ಸಮಿಂಧತೇ॥' (ವಿಷ್ಣುಸೂಕ್ತ)ದಲ್ಲಿ ಹೇಳಲಾದ ಪ್ರಮೇಯವೇ ಇಲ್ಲಿ ಹೇಳಲಾಗಿದೆ. ಬ್ರಹ್ಮದರ್ಶನವನ್ನು ಪಡೆದ ಜ್ಞಾನಿಗಳಿಗೆ ಅಜ್ಞಾನಿಗಳ ರಾತ್ರಿಯೇ ಹಗಲು; ಅವರ ಹಗಲೇ ಜ್ಞಾನಿಗಳ ರಾತ್ರಿಯು, ಎಂದು 'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ। ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ।' (ಭಗವದ್ಗೀತೆಯಲ್ಲಿ ಜ್ಞಾನಿಯು ಭಗವದ್ವಿಷಯದಲ್ಲಿ ನಿತ್ಯಜಾಗೃತನೆಂದು ಹೇಳಲಾಗಿದೆ.)

ಇತರರನ್ನು (ಮಲಗಿದವರನ್ನು), ಸಂಬೋಧಯತ್ಯೇವ–ಎಚ್ಚರಗೊಳಿಸುತ್ತಾನಷ್ಟೆ; ತಥೈವ–ಹಾಗೆಯೇ, ಸ್ವಹಿತಂ ಚ ಅಪಿ–ಸ್ವಹಿತವನ್ನೂ ಸಹ, ಅಪಶ್ಯತಃ–ತಿಳಿಯದ, ಪ್ರತಿಪನ್ನಾನ್–(ತಮ್ಮನ್ನೇ) ಆಶ್ರಯಿಸಿದ, ಸಂಸಾರೇ–ಸಂಸಾರದಲ್ಲಿ, ಸುಪ್ತಾನ್– ನಿದ್ರಿಸುತ್ತಿರುವ (ಅಜ್ಞಾನನಿದ್ರೆಯಲ್ಲಿರುವ), ಸ್ವಭಕ್ತಾನ್–ತಮ್ಮ ಭಕ್ತರನ್ನು, ವಿಮನ್ಯವಃ– ಕ್ರೋಧರಹಿತರಾದ, ಜಾಗ್ರವಾಂಸಃ–ಜ್ಞಾನಿಗಳು (ಅಜ್ಞಾನನಿದ್ರೆಯಿಂದ ಎಚ್ಚರಗೊಂಡವರು), (ಸಂಬೋಧಯಂತಿ–ಎಚ್ಚರಗೊಳಿಸುತ್ತಾರೆ–ತಮ್ಮ ಉಪದೇಶದಿಂದ ಅಜ್ಞಾನವನ್ನು ಪರಿಹರಿಸುತ್ತಾರೆ); ದೀನವತ್ಸಲಾಃ–ಕೃಪಣವತ್ಸಲರಾದ (ದುಃಖಿಗಳಲ್ಲಿ ದಯಾವಂತರಾದ) ಜ್ಞಾನಿಗಳು, ಭವೇ–ಸಂಸಾರದಲ್ಲಿ, ನಿಮಜ್ಜತಃ–ಮುಳುಗುತ್ತಿರುವ, ದುಃಖಪಯೋರಾಶೌ–ದುಃಖ ಸಮುದ್ರದಲ್ಲಿ, ಗ್ರಸ್ಯಮಾನಾನ್–ಸಿಕ್ಕು ನುಂಗಲ್ಪಡುತ್ತಿರುವ, ಲೋಕಾನ್–ಅಜ್ಞಾನಿಗಳನ್ನು ಕುರಿತು, ಕೃಪಯಾ–ಕೃಪೆಯಿಂದ, ವೇದೈಃ–ವೇದಗಳಿಂದ, ಪ್ರತಿಪಾದಿತಂ– ಪ್ರತಿಪಾದಿಸಲ್ಪಡುವ, ಯತ್–ಯಾವ, ವಿಷ್ಣೋಃ–ಶ್ರೀ ಮಹಾವಿಷ್ಣುವಿನ, ಪರಮಂ– ಸರ್ವೋತ್ಕೃಷ್ಟವಾದ, ಸ್ವರೂಪಂ–ಸ್ವರೂಪವೋ ಅದನ್ನು, ಪ್ರಕಾಶಯಂತಿ–ಪ್ರಕಾಶ ಪಡಿಸುತ್ತಾರೆ–ಉಪದೇಶದಿಂದ ವಿಷ್ಣುಸ್ವರೂಪ ಮಾಹಾತ್ಮ್ಯಯನ್ನು ತಿಳಿಸಿಕೊಡುತ್ತಾರೆ.

**ಯದಾ ಪ್ರವಿಷ್ಟೋ ಬ್ರಹ್ಮಾಣಂ ತಥಾ ಪ್ರಾಣಂ ಸರಸ್ವತೀಂ ॥ ೩೫ ॥**

**ವಾಣೀಂ ಚಾಪಿ ತತೋ ಬ್ರಹ್ಮಾ ಮನ್ಮಯೋಽಭೂದ್ವಿಶೇಷತಃ ।**
**ಅನ್ಯೇಽಪಿ ಮನ್ಮಯಾ ಜಾತಾಸ್ತತೋ ಯನ್ಮದುದೀರಿತಂ ॥ ೩೬ ॥**

**ಚಿಂತಯಿತ್ವಾ ವಿದುಃ ಸಮ್ಯಕ್ ತದರ್ಥಂ ಸರ್ವಮೇವ ಹಿ ।**

ಯದಾ–ಯಾವಾಗ, ಬ್ರಹ್ಮಾಣಂ–ಬ್ರಹ್ಮದೇವನನ್ನೂ, ತಥಾ–ಹಾಗೂ, ಪ್ರಾಣಂ–ವಾಯುದೇವನನ್ನೂ, ಸರಸ್ವತೀಂ–ಸರಸ್ವತಿಯನ್ನೂ, ವಾಣೀಂ ಚಾಪಿ–ಭಾರತಿಯನ್ನೂ ಸಹ, ಪ್ರವಿಷ್ಟಃ–(ನಾನು) ಪ್ರವೇಶಮಾಡಿದೆನೋ,[1] ತತಃ–ಆಗ, ಬ್ರಹ್ಮಾ–ಬ್ರಹ್ಮನು, ವಿಶೇಷತಃ–ವಿಶೇಷವಾಗಿ (ಅಧಿಕವಾಗಿ), ಮನ್ಮಯಃ–ನನ್ನನ್ನೇ ಪ್ರಧಾನವಾಗಿ ಉಳ್ಳವನು (ನನ್ನ ಪ್ರಸಾದದಿಂದ ನನ್ನ ಉಪದೇಶದ ವಿಶೇಷ ಜ್ಞಾನದಲ್ಲಿ ಸಮರ್ಥನು), ಅಭೂತ್–ಆದನು; ಅನ್ಯೇಽಪಿ–ಮುಖ್ಯಪ್ರಾಣಾದಿ ಇತರ ಶ್ರೋತೃಗಳೂ, ಮನ್ಮಯಾಃ ಜಾತಾಃ–ಮನ್ಮಯರು (ನನ್ನ ಸರ್ವೋತ್ತಮತ್ವ ವಿಶೇಷಜ್ಞಾನದಲ್ಲಿ ಸಮರ್ಥರು), ಆದರು; ತತಃ–ಆ ನಂತರ,

ನಿಂತೆನೋ, ಆಗ ಆ ಮುಂದಿನ ನನ್ನ ಉಪದೇಶಗಳ ವಿಶೇಷ ರಹಸ್ಯಗಳನ್ನೂ ಯಥಾರ್ಥವಾಗಿ ಗ್ರಹಿಸುವುದರಲ್ಲಿ ಸಮರ್ಥರಾದರು; ನನ್ನಿಂದ ಶ್ರವಣಮಾಡಿದ್ದನ್ನು ಚಿಂತನೆಮಾಡಿ, ಸ್ಪಷ್ಟವಾಗಿ ಬಹುರಹಸ್ಯಾರ್ಥಗಳನ್ನು ತಿಳಿದರು (೩.೫-೩.೬). ಅಂಗಸಹಿತ ವೇದಗಳನ್ನೂ

1. ಇಲ್ಲಿ ಇದೇ ಅಧ್ಯಾಯದ ೧೨-೧೩ನೇ ಶ್ಲೋಕಭಾಗಗಳ ವಿವರಣೆಯನ್ನು ಓದಿಕೊಳ್ಳಿರಿ.

ಯತ್–ಯಾವುದು (ಯಾವ ಪ್ರಮೇಯ ರಹಸ್ಯಗಳು), ಮದುದೀರಿತಂ–ನನ್ನಿಂದ ನಿರೂಪಿಸಲ್ಪಟ್ಟಿತೋ (ಹೇಳಲ್ಪಟ್ಟವೋ), ತದರ್ಥಂ–ಅದರ ಅರ್ಥವನ್ನು (ಅಭಿಪ್ರಾಯವನ್ನು), ಸರ್ವಂ ಏವ ಹಿ–ಪೂರ್ಣವಾಗಿ (ಅನ್ಯ ಸರ್ವಜೀವರಕಿಂತ ಅತಿಶಯವಾಗಿ), ಸಮ್ಯಕ್–ಸ್ಪಷ್ಟವಾಗಿ (ಯಥಾರ್ಥವಾಗಿ), ಚಿಂತಯಿತ್ವಾ–ಯೋಚಿಸಿ (ಮನನಮಾಡಿಕೊಂಡು), ವಿದುಃ–ತಿಳಿಸಿದರು.

ವಿದಿತೇ ಸಾಂಗವೇದಾರ್ಥೇ ಹ್ಯುಪವೇದಾರ್ಥ ಏವ ಚ ॥ ೩೭ ॥

ಅಪೂರ್ಣಂ ಮೇನಿರೇತ್ಮಾನಂ ಚತ್ವಾರಸ್ತೇ ಪುನಃ ಪುನಃ ।
ಮಾಮುವಾಚ ತತೋ ಬ್ರಹ್ಮಾ ಸ್ವಾಮಿನ್ ಭವದನುಗ್ರಹಾತ್ ॥ ೩೮ ॥

ಉನ್ಮೀಲಿತಂ ಜ್ಞಾನಚಕ್ಷುರ್ಭವದ್ವಾಗಂಜನೇನ ಮೇ ।
ತಥಾಪಿ ಮನ್ಯೇ ಹ್ಯಾತ್ಮಾನಮಪೂರ್ಣಂ ತದ್ವದಸ್ವ ಮೇ ॥ ೩೯ ॥

ಸಾಂಗವೇದಾರ್ಥೇ–ಅಂಗಗಳಿಂದ ಸಹಿತವಾದ ವೇದಗಳ ಅರ್ಥವೂ, ಚ–ಮತ್ತು ಉಪವೇದಾರ್ಥೇ ಏವ–ಉಪವೇದಗಳ ಅರ್ಥವೂ, ವಿದಿತೇ–(ಹೀಗೆ) ತಿಳಿಯಲ್ಪಡುತ್ತಿರಲಾಗಿ, ತೇ–ಆ, ಚತ್ವಾರಃ–ನಾಲ್ಕುಮಂದಿ (ಬ್ರಹ್ಮಾ, ವಾಯು, ಸರಸ್ವತೀಭಾರತಿಯರು), ತ್ಮಾನಂ[1]–ತನ್ನನ್ನು (ಒಬ್ಬೊಬ್ಬರೂ ತಮ್ಮನ್ನು), ಅಪೂರ್ಣಂ–ಅಪೂರ್ಣನನ್ನಾಗಿ (ಸರ್ವಜ್ಞರಲ್ಲವೆಂದು), ಮೇನಿರೇ–ತಿಳಿದರು; ತತಃ–ಅನಂತರ, ಬ್ರಹ್ಮಾ–ಬ್ರಹ್ಮದೇವನು, ಮಾಂ–ನನ್ನನ್ನು ಕುರಿತು, ಪುನಃ ಪುನಃ–ಮತ್ತೆ ಮತ್ತೆ ಸ್ವಾಮಿನ್–ಹೇ ಸ್ವಾಮಿ!, ಭಗವದನುಗ್ರಹಾತ್–ನಿನ್ನ ಅನುಗ್ರಹದಿಂದ, ಭವದ್ವಾಗಂಜನೇನ–ನಿನ್ನ ಉಪದೇಶನುಡಿ

---

ಉಪವೇದಾದಿಗಳನ್ನೂ ತಿಳಿದರೂ ಸಹ, ಬ್ರಹ್ಮ–ವಾಯು–ಸರಸ್ವತೀ–ಭಾರತಿಯರು, ತಮ್ಮ ಜ್ಞಾನವು ಅಪೂರ್ಣವೆಂದೇ ಭಾವಿಸಿದರು;[2] ಬ್ರಹ್ಮದೇವನು, 'ಹೇ ಸ್ವಾಮಿ! ನಿನ್ನ ಅನುಗ್ರಹದಿಂದ, ನಿನ್ನ ಉಪದೇಶವೆಂಬ ಅಂಜನಲೇಪದಿಂದ, ನನ್ನ ಜ್ಞಾನದೃಷ್ಟಿಯು, ತೆರೆಯಿತು; ಆದರೂ ಯಾವ ಕಾರಣದಿಂದ, ಅಪೂರ್ಣತ್ವದ ಭಾವನೆಯು ಮನಸ್ಸಿಗೆ ಉಂಟಾಗಿದೆಯೋ ಅದನ್ನು ತಿಳಿದ ನೀನು, ಅವಶಿಷ್ಟರಹಸ್ಯ ವಿಶೇಷಗಳನ್ನು ಉಪದೇಶಿಸಿ, ನನ್ನ ಯೋಗ್ಯತೆಗೆ ತಕ್ಕುದಾದ ಸರ್ವಜ್ಞತ್ವವನ್ನು ದೊರಕಿಸಿಕೊಡು', ಎಂಬುದಾಗಿ

---

1. ಆತ್ಮನ್=ತ್ಮನ್; ತ್ಮನ್ ಎಂಬುದು ಛಾಂದಸವು, ಎಂದರೆ ವೈದಿಕ ಪ್ರಯೋಗವು. ಈ ಗ್ರಂಥವೂ ವೇದತುಲ್ಯವೆಂಬುದರ ಸೂಚನೆಗಾಗಿ ಈ ವಿಧ ಪ್ರಯೋಗಗಳೆಂದು ತಿಳಿಯಬೇಕು.

2. ಸ್ವಯೋಗ್ಯಜ್ಞಾನಪೂರ್ತಿಯನ್ನು (ಸರ್ವಜ್ಞತ್ವವನ್ನು). ಬ್ರಹ್ಮಾದಿಗಳು ಹೊಂದಿದರೂ, ಅವರು ಸರ್ವಜೀವಸಮುದಾಯಕ್ಕಿಂತ ಶ್ರೇಷ್ಠ ಜ್ಞಾನಿಗಳೆನಿಸಿದರೂ, ಅವರೂ ಸಹ ಶ್ರೀವಿಷ್ಣುವನ್ನು ಪೂರ್ಣವಾಗಿ ತಿಳಿಯಲಾರರು.

ಎಂಬ ಅಂಜನದಿಂದ, ಮೇ–ನನ್ನ, ಜ್ಞಾನಚಕ್ಷುಃ–ಜ್ಞಾನವೆಂಬ ಕಣ್ಣು (ಜ್ಞಾನದೃಷ್ಟಿಯು), ಉನ್ಮೀಲಿತಂ–ತೆರೆಯಲ್ಪಟ್ಟಿತು; ತಥಾಪಿ–ಹೀಗಿದ್ದರೂ, ಕಿ–ಯಾವ ಕಾರಣದಿಂದ, ಆತ್ಮಾನಂ–ನನ್ನನ್ನು ಅಪೂರ್ಣಂ–ಅಪೂರ್ಣನೆಂದು, ಮನ್ಯೇ–ತಿಳಿಯುತ್ತಿರುವೆನೋ, ತತ್–ಅದನ್ನು (ತಿಳಿಯಬೇಕಾದ ಅವಶಿಷ್ಟರಹಸ್ಯವನ್ನು), ಮೇ–ನನಗೆ, ವದಸ್ವ–ಹೇಳು, ಉವಾಚ–(ಹೀಗೆಂದು) ನುಡಿದನು.

> ತ್ವಂ ಮೇ ಮಾತಾಪಿತಾ ಬಂಧುರ್ಗುರುಃ ಸ್ವಾಮೀ ಚ ನಿತ್ಯಶಃ ।
> ಸರ್ವಜ್ಞಃ ಸರ್ವಕರ್ತಾ ಚ ಮಿಥ್ಯಾಜ್ಞಾನತಮೋಪಹಃ ॥ ೪೦ ॥
>
> ಅತಸ್ತ್ವಾಂ ಪರಿಪೃಚ್ಛಾಮಿ ಯತ್ತನ್ಮೇ ಕೃಪಯಾ ವದ ।
> ವಕ್ತವ್ಯಮವಶಿಷ್ಟಂ ಕಿಂ ಯೇನಾತ್ಮಾ ಮೇ ನ ತುಷ್ಯತಿ ॥ ೪೧ ॥

ತ್ವಂ–ನೀನು, ಮೇ–ನನ್ನ, ಮಾತಾ–ತಾಯಿಯು, ಪಿತಾ–ತಂದೆಯು, ಬಂಧುಃ–ಬಂಧುವು, ಗುರುಃ–ಗುರುವು, ಸ್ವಾಮೀ–ಸ್ವಾಮಿಯು, ನಿತ್ಯಶಃ ಚ–ಸದಾ ಈ ಎಲ್ಲವೂ ನೀನೇ ಆಗಿರುತ್ತೀ; ಸರ್ವಜ್ಞಃ–ಸರ್ವಜ್ಞನೂ, ಸರ್ವಕರ್ತಾ ಚ–ಸ್ವತಂತ್ರನಾಗಿ ಸರ್ವವನ್ನೂ ಮಾಡತಕ್ಕವನು, ಚ–ಮತ್ತು ಮಿಥ್ಯಾಜ್ಞಾನ ತಮೋಪಹಃ–ಮಿಥ್ಯಾಜ್ಞಾನವೆಂಬ ಅಂಧಕಾರ ವನ್ನು ಪರಿಹರಿಸುವವನೂ (ಆಗಿರುವಿ): ಅತಃ–ಆದ್ದರಿಂದ, ತ್ವಾಂ–ನಿನ್ನನ್ನು ಪರಿಪೃಚ್ಛಾಮಿ–ಪರಿಪರಿಯಿಂದ ಪ್ರಾರ್ಥಿಸುತ್ತಿರುವೆನು; ವಕ್ತವ್ಯಂ–ಹೇಳಬೇಕಾದುದು, ಕಿಂ–ಏನು, ಅವಶಿಷ್ಟಂ–ಉಳಿದಿದೆ; ಯೇನ–ಯಾವುದರಿಂದ, ಮೇ–ನನ್ನ ಆತ್ಮಾ–ಮನಸ್ಸು ನ ತುಷ್ಯತಿ–ತೃಪ್ತಿಯನ್ನು ಹೊಂದುವುದಿಲ್ಲವೋ, ತತ್–ಅದನ್ನು, ಕೃಪಯಾ–ಕೃಪೆದೋರಿ, ಮೇ–ನನಗೆ, ವದ–ಹೇಳು.

---

ಪರಿಪರಿಯಿಂದ ನನ್ನನ್ನು ಪ್ರಾರ್ಥಿಸಿದನು (೩೭-೩೯). ಹೇ ಸ್ವಾಮಿ! ನೀನೇ ನನಗೆ ಸರ್ವಕಾಲದಲ್ಲಿ ತಾಯಿ, ತಂದೆ, ಬಂಧು, ಗುರು, ಸ್ವಾಮಿ, ಎಲ್ಲವೂ ಆಗಿರುವಿ; ಸರ್ವಜ್ಞನೂ ಸರ್ವಕರ್ತನೂ ಆದ ನಿನಗೆ ತಿಳಿಯದುದು ಯಾವುದೂ ಇಲ್ಲ; ಮಿಥ್ಯಾಜ್ಞಾನರೂಪದ ಅಂಧಕಾರವನ್ನೂ ನಾಶಪಡಿಸುವ ಸೂರ್ಯನಾಗಿರುವಿ; (ಯದ್ಯಪಿ, ಬ್ರಹ್ಮಾದಿಗಳಲ್ಲಿ ಮಿಥ್ಯಾಜ್ಞಾನಲೇಶಕ್ಕೂ ಎಡೆಯಿಲ್ಲ—ಕೈಮುತ್ಯಾರ್ಥದಲ್ಲಿ ಮಿಥ್ಯಾಜ್ಞಾನ ನಾಶಕತ್ವ ಮಹಿಮೆಯು ಉಕ್ತವಾಗಿದೆ.) ಎಲ್ಲವನ್ನೂ ಶ್ರವಣಮಾಡಿದರೂ, ನನ್ನ ಮನಸ್ಸಿಗೆ ತೃಪ್ತಿಯಾಗದಿರಲು ಕಾರಣವಾಗಬಹುದಾದ ಹೇಳಬೇಕಾದ್ದರಲ್ಲಿ ಉಳಿದುದು ಏನಾದರೂ ಇದ್ದರೆ, ಅದನ್ನು ಕೃಪೆಮಾಡಿ ಉಪದೇಶಿಸು (೪೦-೪೧).

**ಅಪೂರ್ಣಂ ಮನುತೇ ಕಸ್ಮಾತ್ ಕಸ್ಮಿನ್ ಜ್ಞಾತೇ ಚ ಪೂರ್ಣತಾಂ ।**
**ಭವೇಯಂ ತದ್ವದಾಶು ತ್ವಂ ಯೇನಾಹಂ ಸರ್ವವಿತ್ತಮಃ ॥ ೪೨ ॥**

**ಸರ್ವಪೂಜ್ಯಃ ಸರ್ವಗುರುಸ್ತವ ಭಕ್ತೋ ವಿಶೇಷತಃ ।**
**ಭವೇಯಂ ಕೃತಕೃತ್ಯಶ್ಚ ನಾನ್ಯಥಾಹಂ ಸುಖಂ ಲಭೇ ॥ ೪೩ ॥**

ಕಸ್ಮಾತ್–ಯಾವುದರಿಂದ, ಅಪೂರ್ಣಂ–ಅಪೂರ್ಣವೆಂದು, ಮನುತೇ–(ನನ್ನ ಮನಸ್ಸು) ಭಾವಿಸುತ್ತದೆ; ಚ–ಮತ್ತು ಕಸ್ಮಿನ್–ಯಾವುದು, ಜ್ಞಾತೇ–ತಿಳಿಯಲ್ಪಡುತ್ತಿರಲು, ಪೂರ್ಣತಾಂ–ಪೂರ್ಣತ್ವವನ್ನು (ಮನುತೇ–ತಿಳಿಯುತ್ತದೆಯೋ), ಮತ್ತು ಯೇನ–ಯಾವುದರಿಂದ, ಅಹಂ–ನಾನು, ಸರ್ವವಿತ್ತಮಃ–ಶ್ರೇಷ್ಠಸರ್ವಜ್ಞನು, ಭವೇಯಂ–ಆಗುವೆನೋ, ತತ್–ಅದನ್ನು, ತ್ವಂ–ನೀನು, ಆಶು–ಜಾಗ್ರತೆಯಾಗಿ (ತಡಮಾಡದೆ), ವದ–ಹೇಳು (ಉಪದೇಶಿಸು); ಸರ್ವಪೂಜ್ಯಃ–(ಜಗತ್ತಿನಲ್ಲಿ) ಎಲ್ಲರಿಂದ ಪೂಜ್ಯನೂ, ಸರ್ವಗುರುಃ–ಸರ್ವರ ಗುರುವೂ (ಜಗದ್ಗುರುವೂ–ಸರ್ವರ ಜ್ಞಾನೋಪದೇಶಕನೂ), ವಿಶೇಷತಃ–ಇದಕ್ಕಿಂತ ಹೆಚ್ಚಾಗಿ, ತವ–ನಿನ್ನ ಭಕ್ತಃ–ಶ್ರೇಷ್ಠ ಭಕ್ತನೂ, ಚ–ಮತ್ತು ಕೃತಕೃತ್ಯಃ–ಧನ್ಯನೂ (ಮುಕ್ತನೂ), ಭವೇಯಂ–ಆಗುವೆನೋ (ತದ್ವದ–ಅದನ್ನು ಹೇಳು); ಅನ್ಯಥಾ–ಹಾಗಲ್ಲದೇ (ಅವಶಿಷ್ಟ ಜ್ಞಾನರಹಸ್ಯದ ಉಪದೇಶವಿಲ್ಲದೇ), ಅಹಂ–ನಾನು, ಸುಖಂ ನ ಲಭೇ–ಸುಖಿಯಾಗುವುದಿಲ್ಲ.

---

ಯಾವುದರ ಅಭಾವದಿಂದ ನನ್ನ ಮನಸ್ಸು ಅಪೂರ್ಣವೆಂದು ಭಾವಿಸುತ್ತದೆಯೋ, ಯಾವುದನ್ನು ತಿಳಿಯುವುದರಿಂದ (ಯಾವ ಅವಶಿಷ್ಟ ವಿಶೇಷಜ್ಞಾನದಿಂದ), ಪೂರ್ಣತ್ವವನ್ನು ಹೊಂದಿ ತೃಪ್ತಿಗೊಳ್ಳುವುದೋ ಮತ್ತು ಯಾವ ಪೂರ್ಣಜ್ಞಾನದಿಂದ ಶ್ರೇಷ್ಠ ಸರ್ವಜ್ಞನೂ, ಸರ್ವರಿಂದ ಪೂಜ್ಯನೂ, ಜಗದ್ಗುರುವೂ,[1] ಎಲ್ಲಕ್ಕೂ ಹೆಚ್ಚಾಗಿ ನಿನ್ನ ಉತ್ತಮ ಭಕ್ತನೆನಿಸುವೆನೋ ಹಾಗೂ ಮುಕ್ತನಾಗಿ ನಿನ್ನ ನಿತ್ಯಸೇವೆಯಲ್ಲಿರುವೆನೋ, ಅದನ್ನು ಕೃಪೆಮಾಡಿ ಉಪದೇಶಿಸು—ಅದಿಲ್ಲದೇ ನಾನು ಸುಖಿಯಾಗಲಾರೆನು (೪೨-೪೩). ಹಿಂದೆ

---

1. ಮುಕ್ತಿಯೋಗ್ಯಜೀವರು ಸಾಧನಪರಿಪಕ್ವತೆಯನ್ನು ಹೊಂದಿ, ಸ್ವಯೋಗ್ಯವಾದ ಪೂರ್ಣಜ್ಞಾನವುಳ್ಳವರಾಗುವರು—ಒಂದು ವಿವಕ್ಷೆಯಿಂದ ಈ ಎಲ್ಲರೂ ಸರ್ವಜ್ಞರೇ. ಜೀವೋತ್ತಮರಾದ ಬ್ರಹ್ಮವಾಯುಗಳು ಸರ್ವಜ್ಞಶ್ರೇಷ್ಠರು—ಅವರಿಗಿಂತ ಪೂರ್ಣಜ್ಞಾನಿಗಳು ಜೀವರಾಶಿಗಳಲ್ಲಿ ಅನ್ಯರಾರೂ ಇಲ್ಲ. ಇವರ ಸರ್ವಜ್ಞತ್ವಕ್ಕೆ ಸ್ವಲ್ಪ ಕಡಿಮೆಯಾದ ಸರ್ವಜ್ಞರು ರುದ್ರೇಂದ್ರಾದಿದೇವತೆಗಳು 'ಸರ್ವಜ್ಞಕಲ್ಪ'ರು. ಬ್ರಹ್ಮದೇವರು ಹೀಗೆ ಸರ್ವಜ್ಞಶ್ರೇಷ್ಠನು ಮಾತ್ರವಲ್ಲ—ಜಗದ್ಗುರುವೂ ಆಗಿದ್ದಾನೆ. ಸರ್ವರ ಚಿತ್ತಾಭಿಮಾನಿಯಾಗಿದ್ದಾನೆ. ಪ್ರತಿ ಜೀವನಿಗೂ ಸ್ವಯೋಗ್ಯ ಗುರುವಿನಿಂದ ಆಗುವ ಉಪದೇಶವನ್ನು ಗ್ರಹಿಸುವಂತೆ ಮಾಡುವವನು, ಚಿತ್ತಸ್ಥನಾದ ಬ್ರಹ್ಮದೇವನೇ—ಆದ್ದರಿಂದ ಈತನೇ ಸರ್ವರ ಗುರುವು—ಜಗದ್ಗುರುವು.

**ಇತ್ಯುಕ್ತೋಽಹಂ ತದಾ ಬ್ರಹ್ಮನ್ ಪುರುಷೇಣ ಮಹಾತ್ಮನಾ ।**
**ಗುಹ್ಯಾದ್ಗುಹ್ಯತಮಂ ಜ್ಞಾನಂ ಕೃಪಯೈತದವಾದಿಷಂ ॥ ೪೪ ॥**

ಬ್ರಹ್ಮನ್–ಹೇ ಬ್ರಹ್ಮದೇವ!, ಮಹಾತ್ಮನಾ–ಮಹಾತ್ಮನಾದ, ಪುರುಷೇಣ–ಪುರುಷ ನಾಮಕ ಬ್ರಹ್ಮನಿಂದ, ಇತ್ಯುಕ್ತಃ–ಹೀಗೆ ಹೇಳಲ್ಪಟ್ಟ ಅಹಂ–ನಾನು (ಶ್ರೀವಿಷ್ಣುವು), ತದಾ–ಆಗ, ಕೃಪಯಾ–ಕೃಪೆಯಿಂದ, ಗುಹ್ಯಾತ್–ರಹಸ್ಯಕ್ಕಿಂತ, ಗುಹ್ಯತಮಂ–ಅತ್ಯಂತ ರಹಸ್ಯವಾದ, ಏತತ್–ಈ (ಮುಂದೆ ಹೇಳುವ), ಜ್ಞಾನಂ–ಜ್ಞಾನವನ್ನು ಅವಾದಿಷಂ–ಹೇಳಿದೆನು[1] (ಅದನ್ನೇ ಮುಂದೆ ನಿನಗೆ ಹೇಳುತ್ತೇನೆ).

---

## ಅಧ್ಯಾಯ ೪

ಶ್ರೀ ಹಯಗ್ರೀವ ಉವಾಚ—

**ವ್ಯಾಪಕತ್ವಾದಹಂ ವಿಷ್ಣುರ್ವಿಶಿಷ್ಟ ಪ್ರಾಣನಾದಿತಃ ।**
**ವಿಶಿಷ್ಟಸುಖವತ್ವಾದೇರಪಿ ವಿಷ್ಣುರಹಂ ಶ್ರುತಃ ॥ ೧ ॥**

ಅಹಂ–ನಾನು, ವ್ಯಾಪಕತ್ವಾತ್–ವ್ಯಾಪ್ತನಾದ್ದರಿಂದ (ಸರ್ವವನ್ನೂ ವ್ಯಾಪಿಸಿರುವುದರಿಂದ), ವಿಷ್ಣುಃ–ವಿಷ್ಣುವು (ವಿಷ್ಣು ಎಂಬ ನಾಮವುಳ್ಳವನು); ವಿಶಿಷ್ಟಪ್ರಾಣನಾದಿತಃ–

---

ಪುರುಷನಾಮಕ ಬ್ರಹ್ಮನಾಗಿದ್ದ ನಿನಗೇ ಇದೇ ರೀತಿಯಿಂದ ಪ್ರಶ್ನಿಸಲ್ಪಟ್ಟು ಆಗ ಉಪದೇಶಿಸಿದ ಅತ್ಯಂತಗೋಪ್ಯವಾದ ಪ್ರಮೇಯಗಳನ್ನೇ (ಅವುಗಳ ಸಂಬಂಧವಾದ ಜ್ಞಾನವನ್ನು) ಈ ಮುಂದೆ ನಿನಗೆ ಹೇಳುತ್ತೇನೆ (೪೪).

ವೇದವಿದ್ಯೋಪದೇಶವೆಂಬ ಮೂರನೇ ಅಧ್ಯಾಯವು ಮುಗಿದುದು.

---

ಸರ್ವವ್ಯಾಪಕನಾದ್ದರಿಂದ ನಾನು ವಿಷ್ಣುವು; ಸರ್ವಜಗಚ್ಚೇಷ್ಟಕನಾದ್ದರಿಂದ ಮತ್ತು (ಅಲೌಕಿಕ) ಪೂರ್ಣಾನಂದವನ್ನು ನಿತ್ಯವೂ ಅನುಭವಿಸುವೆನಾದ್ದರಿಂದಲೂ, ನಾನು

---

1. ಅಧ್ಯಾಯ ೧, ಶ್ಲೋಕ ೧೫-೧೬-೧೭ಗಳನ್ನು ಇಲ್ಲಿ ಓದಿಕೊಳ್ಳಬೇಕು. ಆದಿ(ಸೂಕ್ಷ್ಮ) ಸೃಷ್ಟಿಯಲ್ಲಿ ಶ್ರೀವಿಷ್ಣುವು ಮೊದಲಿಗೆ ಪುರುಷಾಕಾರದ ಪುರುಷನಾಮಕಬ್ರಹ್ಮನನ್ನು ಸೃಷ್ಟಿಮಾಡಿದನು; ಅವನಿಗೆ ಆಗ ಮಾಡಿದ ಉಪದೇಶವನ್ನು, ನಂತರ ಆ ಪುರುಷನನ್ನು ನುಂಗಿ, ಮಾಯಾದೇವಿಯಲ್ಲಿ ಬ್ರಹ್ಮನನ್ನು ಹುಟ್ಟಿಸಿ, ಹಾಗೂ ಸಂಕರ್ಷಣಪ್ರದ್ಯುಮ್ನರೂಪಗಳಿಂದ ಸೃಷ್ಟರಾದ ವಾಯುದೇವ, ಸರಸ್ವತೀ ಭಾರತಿಯರಿಗೆ ವೇದವೇದಾಂಗಾದಿಗಳನ್ನು ಉಪದೇಶಿಸುತ್ತಿರುವಾಗ, ಬ್ರಹ್ಮನ ಪ್ರಶ್ನೆಗಳನ್ನು ಹಯಗ್ರೀವರೂಪದಿಂದ ಶ್ರೀವಿಷ್ಣುವೇ ಉಪದೇಶಿಸುತ್ತಿದ್ದಾನೆ.

ಸರ್ವಚೇಷ್ಟಕನಾದ್ದರಿಂದಲೂ, ವಿಶಿಷ್ಟಸುಖವತ್ತ್ವಾರೇಃ–ಪೂರ್ಣಸುಖಸ್ವರೂಪನಾದ್ದರಿಂದಲೂ, ಅಪಿ–ಸಹ, ಅಹಂ–ನಾನು, ವಿಷ್ಣುಃ–ವಿಷ್ಣುವೆಂದು, ಶ್ರುತಃ–(ವೇದಾದಿಗಳಲ್ಲಿ ಸಹ) ಪ್ರಸಿದ್ಧನಾಗಿರುವೆನು.

**ಸೃಷ್ಟಿಕಾಲೇ ಮಯಾ ಸೃಷ್ಟಂ ವಿಶ್ವಂ ಸ್ಥಾವರಜಂಗಮಂ ।**
**ತಸ್ಯಾಹಂ ವ್ಯಾಪಕತ್ವಾಚ್ಚ ಬಹಿರಂತರ್ವ್ಯವಸ್ಥಿತಃ ॥ ೨ ॥**

ಸೃಷ್ಟಿಕಾಲೇ–ಸೃಷ್ಟಿಕಾಲ ಬಂದಾಗ, ಮಯಾ–ನನ್ನಿಂದ, ಸ್ಥಾವರಜಂಗಮಂ–ಸ್ಥಾವರ (ಅಚರ) ಜಂಗಮ (ಚರ) ರೂಪದ, ವಿಶ್ವಂ–ಜಗತ್ತು, ಸೃಷ್ಟಂ–ಸೃಜಿಸಲ್ಪಟ್ಟಿತು (ನಿರ್ಮಿತವಾಯಿತು); ಅಹಂ–ನಾನು, ತಸ್ಯ–ಆ ವಿಶ್ವದ, ಬಹಿರಂತಃ–ಹೊರಗೂ ಒಳಗೂ, ವ್ಯವಸ್ಥಿತಃ–ಇದ್ದವನಾಗಿ, ವ್ಯಾಪಕತ್ವಾತ್–ವ್ಯಾಪಕನಾದ್ದರಿಂದ (ವಿಶ್ವವನ್ನು ಒಳ ಹೊರಗೆ ವ್ಯಾಪಿಸಿರುವುದರಿಂದ), (ವಿಷ್ಣುವೆನಿಸಿರುವೆನು); ಅಥವಾ, ತಸ್ಯ–ಆ ವಿಶ್ವದ, ವ್ಯಾಪಕತ್ವಾತ್–ವ್ಯಾಪಕನಾದ್ದರಿಂದ, ಬಹಿರಂತಃ ವ್ಯವಸ್ಥಿತಃ–(ಅದರ) ಹೊರಗೂ ಒಳಗೂ ಸ್ಥಿತನಾಗಿದ್ದೇನೆ.

**ಅಪರಿಚ್ಛಿನ್ನರೂಪೋಽತಃ ಪರಿಚ್ಛಿನ್ನ ಇವಾಭವಂ ।**
**ಭೂಯೋಽನಿರುದ್ಧರೂಪೇಣ ತತ್ತದ್ವಸ್ತುವಿಚೇಷ್ಟಕಃ ॥ ೩ ॥**

ಅತಃ–(ನನ್ನ ವ್ಯಾಪ್ತಿಯು) ಹೀಗಿರುವುದರಿಂದ, ಅಪರಿಚ್ಛಿನ್ನರೂಪಃ–ವ್ಯಾಪ್ತವಾದ ರೂಪವುಳ್ಳ ನಾನು, ಪರಿಚ್ಛಿನ್ನಃ ಇವ–ಪರಿಮಿತಿಯುಳ್ಳ ನಾನಾ ರೂಪಗಳುಳ್ಳವನಂತೆ, ಅಭವಂ–ಆಗಿರುವೆನು, ಭೂಯಃ–ಪುನಃ(ಅಥವಾ ಅತಿಶಯವಾಗಿ), ಅನಿರುದ್ಧ

---

ವಿಷ್ಣುಶಬ್ದವಾಚ್ಯನು (ವಿಷ್ಣುಶಬ್ದವು ಈ ನನ್ನ ಮಹಿಮೆಗಳನ್ನು ಹೇಳುತ್ತದೆ); ಹೀಗೆಂದು ವೇದಾದಿಗಳಲ್ಲಿ ನಾನು ಪ್ರಸಿದ್ಧನಾಗಿದ್ದೇನೆ[1] (೧). ಸೃಷ್ಟಿಕಾಲಬರಲು, ನಾನು ಸ್ಥಾವರಜಂಗಮಾತ್ಮಕವಾದ ವಿಶ್ವವನ್ನು ನಿರ್ಮಿಸಿದೆನು; ಈ ವಿಶ್ವದ ಹೊರಗೂ ಒಳಗೂ ಸಹ ನಾನೇ ಇರುವುದರಿಂದ, ನಾನು ವಿಶ್ವವ್ಯಾಪಕನು; ಆದ್ದರಿಂದ ನಾನು ವಿಷ್ಣುವೆನಿಸುತ್ತೇನೆ (೨). ಹೀಗೆ ಜಗತ್ತನ್ನು ಒಳಹೊರಗೆ ವ್ಯಾಪಿಸಿರುವ ರೂಪವುಳ್ಳ ನಾನು, ಪ್ರತಿಪದಾರ್ಥದಲ್ಲಿರುವ ನನ್ನ ಅನಂತರೂಪಗಳಿಂದ ಅಭಿನ್ನನಾಗಿದ್ದರೂ, ಪರಿಮಿತಿಯುಳ್ಳ (ಆಯಾ ವಸ್ತುಸದೃಶ ಪರಿಮಿತಿಯುಳ್ಳ) ವನಂತೆ, ಆಯಾ ವಸ್ತುಗಳಲ್ಲಿ ಸ್ಥಿತನಾಗಿದ್ದೇನೆ.

---

1. ವಿಷಲೃ–ವ್ಯಾಪ್ತೌ ಎಂದಿರುವುದರಿಂದ, ವ್ಯಾಪ್ತನಾದ್ದರಿಂದ ವಿಷ್ಣು 'ವಿ' ಎಂದರೆ ವಿಶಿಷ್ಟ; 'ವಿಶಿಷ್ಟ' ಎಂದರೆ ಉತ್ತಮ—ಪೂರ್ಣ; 'ಷ'ಕಾರವು ಚೇಷ್ಟಕ ಶಕ್ತಿಯನ್ನು, 'ಣ'ಕಾರವು (ಣಶ್ಚನಿರ್ವೃತಿವಾಚಕಃ) ಸುಖವನ್ನೂ ಹೇಳುತ್ತವೆ; ಆದ್ದರಿಂದ ಸರ್ವಚೇಷ್ಟಕಶಕ್ತಿಯುಳ್ಳವನೂ ಪೂರ್ಣಾನಂದವುಳ್ಳವನೂ, ಎಂಬರ್ಥವನ್ನು ವಿಷ್ಣುಶಬ್ದವು ಹೇಳುತ್ತದೆ.

ರೂಪೇಣ–(ನನ್ನ) ಅನಿರುದ್ಧರೂಪದಿಂದ, ತತ್ತದ್ವಸ್ತುವಿಚೇಷ್ಟಕಃ–ಆಯಾ ವಸ್ತುಗಳ (ಪ್ರತಿಯೊಂದು ಪದಾರ್ಥದ) ಚೇಷ್ಟಕನೂ (ಅವುಗಳ ವಿವಿಧ ಸರ್ವಕ್ರಿಯೆಗಳಿಗೂ ಕಾರಣನು) ಆಗಿರುವೆನು.

ತತ್ತಚ್ಛಕ್ತಿಪ್ರದೋ ನಿತ್ಯಂ ತತ್ತತ್ಕರ್ಮಾನುಸಾರತಃ ।
ಸರ್ವತ್ರಾವಸ್ಥಿತೇರೇವಮನಿರುದ್ಧ ಇತಿ ಸ್ಮೃತಃ ॥ ೪ ॥

ತತ್ತತ್ಕರ್ಮಾನುಸಾರತಃ–ಅವರವರ ಕರ್ಮಾನುಸಾರವಾಗಿ, ತತ್ತಚ್ಛಕ್ತಿಪ್ರದಃ–ಅವರವರ ಶಕ್ತಿಗಳನ್ನು (ಜ್ಞಾನಕ್ರಿಯಾದಿ ಶಕ್ತಿಗಳನ್ನು) ಕೊಡತಕ್ಕವನು (ಉದ್ಬೋಧಿಸಿ ಅವರಿಂದ ನಾನಾ ವ್ಯಾಪಾರಗಳನ್ನು ಮಾಡಿಸುವವನು); ಸರ್ವತ್ರಾವಸ್ಥಿತೇಃ–ಹೀಗೆ ಸರ್ವವಸ್ತುಗಳಲ್ಲಿ ಸ್ಥಿತನಾಗಿರುವುದರಿಂದಲೇ (ಆಯಾ ವಸ್ತುಗಳ ಸಹಜಶಕ್ತಿಗಳನ್ನು ಸ್ವತಂತ್ರನಾಗಿ ಪ್ರೇರಿಸುವುದರಿಂದಲೇ), ಏವಂ–ಹೀಗೆ (ನನ್ನ ಅಚಿಂತ್ಯಶಕ್ತಿಗೆ ತಡೆಯಿಲ್ಲದಿರುವುದರಿಂದಲೇ), ಅನಿರುದ್ಧಃ ಇತಿ ಸ್ಮೃತಃ–ಅನಿರುದ್ಧನೆಂದು ಜ್ಞಾನಿಗಳಿಂದ ತಿಳಿಯಲ್ಪಟ್ಟಿರುವೆನು.

ಘಟಾಕಾರಂ ಭವತ್ಯೇವ ಘಟಸ್ಥಂ ಸಲಿಲಂ ಯಥಾ ।
ತತ್ತದಾಕಾರವಾನ್ ವಿಷ್ಣುಃ ತತ್ತದ್ವಸ್ತುಸ್ಥಿತಸ್ತಥಾ ॥ ೫ ॥

ಯಥಾ–ಹೇಗೆ, ಘಟಸ್ಥಂ–ಘಟದಲ್ಲಿರುವ (ಕೊಡ ಮೊದಲಾದ ಪಾತ್ರೆಯಲ್ಲಿರುವ), ಸಲಿಲಂ–ನೀರು, ಘಟಾಕಾರಂ–ಪಾತ್ರೆಯ ಆಕಾರವುಳ್ಳದ್ದು ಭವತಿ ಏವ–ತಪ್ಪದೇ ಆಗುತ್ತದೆಯೋ, ತಥಾ–ಹಾಗೆ ತತ್ತದ್ವಸ್ತುಸ್ಥಿತಃ–ಆಯಾ ವಸ್ತುಗಳಲ್ಲಿರುವ, ವಿಷ್ಣುಃ–ಶ್ರೀವಿಷ್ಣುವೂ, ತತ್ತದಾಕಾರವಾನ್–ಆಯಾ ವಸ್ತುಗಳ ಆಕಾರವುಳ್ಳವನೇ ಆಗಿರುತ್ತಾನೆ.

ತಥಾವಿಧಂ ಮಾಂ ಜಾನಂತಿ ಪಶ್ಯಂತ್ಯಥಪರೋಕ್ಷತಃ ।
ಅನಂತಶಕ್ತಿಮೀಶಾನಂ ಕಥಯಂತ್ಯಪಿ ವೈ ಮಿಥಃ ॥ ೬ ॥

---

ಅನಿರುದ್ಧರೂಪದಿಂದ ಸಕಲ (ಚೇತನಾಚೇತನ) ಪದಾರ್ಥಗಳ ಸರ್ವವಿಧ ಚೇಷ್ಟೆಗಳಿಗೂ (ಕ್ರಿಯೆಗಳಿಗೂ) ನಾನು ಕಾರಣನಾಗಿದ್ದೇನೆ (೩). ಆಯಾ ದೇವಾದಿ ಸರ್ವಚೇತನರ ಕರ್ಮಾನುಸಾರವಾಗಿ, ಅವರವರ ಸ್ವಾಭಾವಿಕಶಕ್ತಿಗಳನ್ನು ಉದ್ಬೋಧಿಸಿ ಅವರವರ ನಾನಾ ಕ್ರಿಯೆಗಳಿಗೆ ಅವಶ್ಯಕವಾದ ಶಕ್ತಿಪ್ರದನಾಗಿ, ಸ್ವತಂತ್ರನಾಗಿ ಸರ್ವವಸ್ತುಸ್ಥಿತನಾದ್ದರಿಂದಲೇ ನಾನು ಅನಿರುದ್ಧನಾಮವುಳ್ಳವನಾಗಿರುವೆನು (೪) ಘಟದಲ್ಲಿರುವ ಜಲವು, ಘಟಸದೃಶವಾದ ರೂಪವನ್ನೇ ಹೊಂದಿರುವಂತೆ, ಸಕಲಪದಾರ್ಥಗಳಲ್ಲಿರುವ ವಿಷ್ಣುರೂಪಗಳೂ ಆಯಾ ವಸ್ತುಸದೃಶ ರೂಪವುಳ್ಳವುಗಳೇ ಆಗಿರುತ್ತವೆ (೫). ಹೀಗೆ

ಮಾಂ–ನನ್ನನ್ನು (ವಿದ್ವಾಂಸಃ–ಜ್ಞಾನಿಗಳು, ೮ನೇ ಶ್ಲೋಕದಿಂದ ಕರ್ತೃಪದವನ್ನು ಯೋಜಿಸಿಕೊಳ್ಳಬಹುದು), ತಥಾವಿಧಂ–ಆ ಪ್ರಕಾರವಿರುವವನನ್ನಾಗಿ (ತತ್ತದ್ವಸ್ತುಗಳಲ್ಲಿ ತದಾಕಾರನಾಗಿರುತ್ತಾನೆಂದು), ಜಾನಂತಿ–ತಿಳಿಯುತ್ತಾರೆ; ಅಥ–ಹಾಗೂ, ಪರೋಕ್ಷತಃ–ಶಾಸ್ತ್ರಾಭ್ಯಾಸಾದಿಗಳಿಂದ, ಪಶ್ಯಂತಿ–ನಿಶ್ಚಯಜ್ಞಾನವುಳ್ಳವರಾಗುತ್ತಾರೆ (ಸರ್ವತ್ರ ಶ್ರೀವಿಷ್ಣುವನ್ನೇ ಕಾಣುತ್ತಾರೆ); ಅಪಿ–ಮತ್ತು, ಮಿಥಃ–ಪರಸ್ಪರವಾಗಿ, ಈಶಾನಂ–ಸರ್ವನಿಯಾಮಕನಾದ ನನ್ನನ್ನು ಅನಂತಶಕ್ತಿಂ–ಅಪರಿಮಿತ ಸಾಮರ್ಥ್ಯವುಳ್ಳವನೆಂದು, ಕಥಯಂತಿ–ಹೇಳಿಕೊಳ್ಳುತ್ತಾರೆ.

ಶಿಕ್ಷಯಂತಿ ಸ್ವಶಿಷ್ಯೇಷು ಪ್ರಪನ್ನೇಷ್ವಪಿ ನಿತ್ಯಶಃ ।
ದಯಾಲವಃ ಪದಂ ವಿಷ್ಣೋಸ್ತ್ವೇದೃಶಂ ಸದಸತ್ಪರಂ ॥ ೭ ॥

ಜಾಗೃವಾಂಸೋಥ ವಿದ್ವಾಂಸೋ ದಿವಿ ಚಕ್ಷುರಿವಾತತಂ ।
ತನ್ಮೂಢಾ ನೈವ ಜಾನಂತಿ ಮಾಯಾಮುಷಿತಚಕ್ಷುಷಃ ॥ ೮ ॥

(ಆ ಜ್ಞಾನಿಗಳು), ಪ್ರಪನ್ನೇಷು–ತಮ್ಮನ್ನಾಶ್ರಯಿಸಿರುವವರಲ್ಲಿ ಸ್ವಶಿಷ್ಯೇಷು–ತಮ್ಮ ಶಿಷ್ಯರಲ್ಲಿಯೂ, ನಿತ್ಯಶಃ–ನಿತ್ಯವೂ, ಶಿಕ್ಷಯಂತಿ–(ಹೀಗೆಂದೇ) ಉಪದೇಶಿಸುತ್ತಾರೆ; ಜಾಗೃವಾಂಸಃ–ನಿತ್ಯಜಾಗ್ರತರಾಗಿರುವ (ಅಜ್ಞಾನವೆಂಬ ನಿದ್ರೆಯಿಲ್ಲದ), ದಯಾಲವಃ–ದಯಾಳುಗಳಾದ, ವಿದ್ವಾಂಸಃ–ಜ್ಞಾನಿಗಳು, ದಿವಿ–ಆಕಾಶದಲ್ಲಿ ಚಕ್ಷುಃ ಇವ–ಸೂರ್ಯ

---

ಸಕಲವಸ್ತುಗಳಲ್ಲಿ ತತ್ತದಾಕಾರನಾಗಿ ನಾನಿರುವೆನೆಂದು ವಿದ್ವಾಂಸರು ತಿಳಿಯುತ್ತಾರೆ; ಆ ಅನುಸಂಧಾನದಿಂದ ಎಲ್ಲ ವಸ್ತುಗಳನ್ನು ನೋಡುತ್ತಾರೆ—ಅಲ್ಲಿ ನನ್ನನ್ನೇ ಕಾಣುತ್ತಾರೆ; ಪರಸ್ಪರ ಅನಂತಶಕ್ತಿಯುತನಾದ ನನ್ನನ್ನು ಸರ್ವನಿಯಾಮಕನೆಂದು ಹೇಳುತ್ತಾ ಆನಂದಿಸುತ್ತಾರೆ (೬). ಅಜ್ಞಾನವೆಂಬ ನಿದ್ರೆಗೆ ವಶರಾಗದ, ಅತ ಏವ, ನಿತ್ಯಜಾಗ್ರತರಾದ, ದಯಾಳುಗಳಾದ, ಜ್ಞಾನಿಗಳು, ತಮ್ಮ ಆಶ್ರಿತಜನರಿಗೂ, ಶಿಷ್ಯರಿಗೂ, ಶ್ರೀವಿಷ್ಣುಸ್ವರೂಪವನ್ನು ಕಾರ್ಯಕಾರಣ ವಸ್ತುಗಳಿಂದ ಭಿನ್ನವೆಂದೂ,[1] ಆಕಾಶದಲ್ಲಿ ಸೂರ್ಯಪ್ರಕಾಶದಂತೆ, ಸರ್ವತ್ರ ವ್ಯಾಪ್ತವೆಂದೂ, ಸರ್ವವಸ್ತುನಿಯಾಮಕವಾದ ತತ್ತದ್ವಸ್ತುಸದೃಶ ಆಕಾರಗಳುಳ್ಳ ಅನಂತರೂಪಗಳಿಂದ ಅಂತರ್ಯಾಮಿಯಾಗಿದ್ದು

---

1. ಸತ್ತ್ವರಜಸ್ತಮೋಗುಣಾತ್ಮಕಪ್ರಕೃತಿಯಿಂದ ಮೊದಲು ಸೃಷ್ಟವಾದ ಮಹತ್ತತ್ತ್ವವು, ಪ್ರಕೃತಿಕಾರ್ಯವು–ಪ್ರಕೃತಿಯು ಕಾರಣವು; ಮಹತ್ತತ್ತ್ವದಿಂದ (ಅದರ ವಿಕಾರದಿಂದ) ಹುಟ್ಟಿದ ಅಹಂಕಾರತತ್ತ್ವವು, ಮಹತ್ತತ್ತ್ವದ ಕಾರ್ಯವು—ಮಹತ್ತತ್ತ್ವವು ಅದರ ಕಾರಣವು; ಹೀಗೆ ಎಲ್ಲ ತತ್ತ್ವಗಳನ್ನೂ ಕಾರ್ಯಕಾರಣಾತ್ಮಕಗಳೆಂದು ತಿಳಿಯಬೇಕು. ಇವುಗಳಿಂದ ಪರನಾದವನು (ಭಿನ್ನನೂ; ನಿಯಾಮಕನೂ—ಸೃಷ್ಟಿಕರ್ತನೂ ಆದ್ದರಿಂದ, ಉತ್ತಮನೂ ಆದವನು) ಶ್ರೀವಿಷ್ಣುವು.

ನಂತೆ, ಆತತಂ–ವ್ಯಾಪ್ತನೂ, ಸದಸತ್ಪರಂ–ಸತ್(ಕಾರ್ಯ) ಅಸತ್ (ಕಾರಣ)ಗಳಿಂದ ಭಿನ್ನನೂ ಶ್ರೇಷ್ಠನೂ ಆದ, ವಿಷ್ಣೋಃ–ಶ್ರೀವಿಷ್ಣುವಿನ, ಪದಂ–ಸ್ವರೂಪವನ್ನು, ಈದೃಶಂ–ಈ ಪ್ರಕಾರ ಸರ್ವತ್ರ ಇದ್ದು ಸರ್ವನಿಯಾಮಕ ಅನಂತಶಕ್ತಿಯುಳ್ಳದ್ದೆಂದು, (ಶಿಕ್ಷಯಂತಿ–ಅಧಿಕಾರವಾಣಿಯಿಂದ ಉಪದೇಶಿಸುತ್ತಾರೆ); ತತ್–(ಈ ಮುಖ್ಯ ಪ್ರಮೇಯವನ್ನು) ಹೀಗೆಂಬುದನ್ನು, ಮಾಯಾಮುಷಿತಚಕ್ಷುಷಃ–ಮಾಯಾಮೋಹಿತವಾದ ದೃಷ್ಟಿಯುಳ್ಳವರಾದ (ವಿಷ್ಣುವಿನ ಇಚ್ಛೆಯಿಂದ ಮೋಹಿತರಾದ ಅಥವಾ ಆತನ ಅಧೀನವಾದ ಮಾಯಾ ನಾಮಕ ಲಕ್ಷ್ಮೀದೇವಿಯಿಂದಲೂ ಆಕೆಯಿಂದ ಅಭಿಮನ್ಯಮಾನವಾದ ಪ್ರಕೃತಿಯಿಂದಲೂ ಯಥಾರ್ಥವನ್ನರಿಯುವ ಸಾಮರ್ಥ್ಯರಹಿತರಾದ), ಮೂಢಾಃ–ಅಜ್ಞಾನಿಗಳು, ನೈವ ಜಾನಂತಿ–ತಿಳಿಯುವುದಿಲ್ಲ.

ದೇಹೇಹಂಭಾವಿನೋಽನ್ಯತ್ರ ಮಮತಾಬುದ್ಧಯಃ ಸದಾ ।
ಅನಿಚ್ಛಂತೋಽಪಿ ಭುಂಜಂತಿ ದುಃಖಾನಿ ವಿವಿಧಾನ್ಯಪಿ ॥ ೯ ॥

ದೇಹೇ–(ತನ್ನ) ದೇಹದಲ್ಲಿ, ಸದಾ–ನಿರಂತರವೂ, ಅಹಂಭಾವಿನಃ–ನಾನೇ ಎಂಬ ಜ್ಞಾನವುಳ್ಳವರು (ದೇಹವೇ ತಾನೆಂದು) ತಿಳಿಯುವವರು, ಮತ್ತು ಅನ್ಯತ್ರ–(ದೇಹಭಿನ್ನವಾದ) ಪತ್ನೀ ಪುತ್ರ ಗೃಹಾದಿಗಳಲ್ಲಿ ಮಮತಾಬುದ್ಧಯಃ–ಮಮತ್ವ (ನನ್ನವು–ತನ್ನ ಅಧೀನಗಳೆಂಬ) ಬುದ್ಧಿಯುಳ್ಳವರು, ಅನಿಚ್ಛಂತಃ ಅಪಿ–ಅವರು ಇಚ್ಛಿಸದಿದ್ದರೂ (ಅವರ ಇಚ್ಛೆಗೆ ವಿರುದ್ಧವಾಗಿ), ವಿವಿಧಾನಿ–ನಾನಾ ಪ್ರಕಾರದ, ದುಃಖಾನಿ ಅಪಿ–ದುಃಖಗಳನ್ನೂ ಸಹ, ಭುಂಜಂತಿ–ಅನುಭವಿಸುತ್ತಾರೆ.

ಸುಖಾನಿ ಪ್ರಾರ್ಥ್ಯಮಾನಾನಿ ನಾಪ್ನುವಂತಿ ನಿಜೇಚ್ಛಯಾ ।
ಪ್ರತಿಕ್ಷಣಂ ಪ್ರಪಶ್ಯಂತಿ ಸರ್ವೇಷ್ವೇವ ಪರಾತ್ಮತಾಂ ॥ ೧೦ ॥

ನಿಜೇಚ್ಛಯಾ–ತಮ್ಮ ಇಚ್ಛೆಯಂತೆ, ಪ್ರಾರ್ಥ್ಯಮಾನಾನಿ–(ಅವರು ಕೋರುವ)

---

ಸರ್ವನಿಯಾಮಕನಾದ ಅನಂತಶಕ್ತಿಯುಳ್ಳದ್ದೆಂದೂ ಉಪದೇಶಿಸುತ್ತಾರೆ; ವಿಷ್ಣುಮಾಯಾ ಮೋಹಿತರಾದ ಅಜ್ಞಾನಿಗಳು ಮಾತ್ರ ಹೀಗೆಂಬುದನ್ನು ತಿಳಿಯುವುದಿಲ್ಲ (೭-೮). ದೇಹವನ್ನೇ ಆತ್ಮನೆಂದು ತಿಳಿಯುವವರೂ, (ದೇಹಾತ್ಮೈಕ್ಯವಾದಿಗಳೂ), ದಾರಾಪುತ್ರಗೃಹೈಶ್ವರ್ಯಾದಿಗಳು ತಮ್ಮವೆಂದೂ (ತಮ್ಮ ಯತ್ನದಿಂದ ಸಂಪಾದಿತವಾದ ತಮ್ಮ ಅಧೀನವಸ್ತುಗಳೆಂದೂ) ತಿಳಿಯುವವರೂ (ಅಹಂಮಮಕಾರಗಳುಳ್ಳವರು), ತಮ್ಮ ಇಚ್ಛೆಗೆ ವಿರೋಧವಾಗಿ ನಾನಾವಿಧ ದುಃಖಗಳನ್ನು ಅನುಭವಿಸುತ್ತಾರೆ(೯). ತಾವು ಇಚ್ಛಿಸುವಂತೆ, ಅಪೇಕ್ಷಿಸುವ ಸುಖಗಳು ದೊರೆಯುವುದಿಲ್ಲ. ಎಲ್ಲರೂ ಪ್ರತಿಕ್ಷಣದಲ್ಲಿ ಅಹಂಮಮಕಾರಗಳಿಗೆ ವಿಷಯಗಳಾದ ದೇಹಗೃಹಾದಿ ಸರ್ವವೂ, ತಮ್ಮ ಅಧೀನ

ಅಪೇಕ್ಷಿಸುವ, ಸುಖಾನಿ-ಸುಖಗಳನ್ನು ನಾಪ್ನುವಂತಿ-ಹೊಂದುವುದಿಲ್ಲ. ಪ್ರತಿಕ್ಷಣಂ-ಪ್ರತಿಕ್ಷಣದಲ್ಲಿ ಪರಾತ್ಮತಾಂ-ಅನ್ಯಾಧೀನತ್ವವನ್ನು (ದೇಹಾದಿಗಳೆಲ್ಲವೂ ಪರಮಾತ್ಮನ ಅಧೀನಗಳೆಂಬುದನ್ನು), ಸರ್ವೇ-ಎಲ್ಲರೂ (ಲೋಕದ ಎಲ್ಲ ಪ್ರಜರೂ), ಪ್ರಪಶ್ಯಂತಿ ಏವ-ಸ್ಪಷ್ಟವಾಗಿ ತಿಳಿಯುತ್ತಾರೆ (ಇದು ಸರ್ವರ ಅನುಭವಸಿದ್ಧವೇ ಇದೆ).

**ಸ್ವಾತಂತ್ರ್ಯಂ ಮನ್ಯತೇ ಚಾಪಿ ಮಹಾಮೋಹಸ್ಯ ಜೃಂಭಣಂ ।**
**ವಿದಿತ್ವಾಪಿ ನ ಜಾನಾತಿ ಪಶ್ಯನ್ನಪಿ ನ ಪಶ್ಯತಿ ॥ ೧೧ ॥**

ಅಪಿ-ಹೀಗಿದ್ದರೂ (ಪರಾಧೀನತೆಯು ಪ್ರತಿಕ್ಷಣದಲ್ಲಿ ಅನುಭವಕ್ಕೆ ಬರುತ್ತಿದ್ದರೂ), ಸ್ವಾತಂತ್ರ್ಯಂ-ತನ್ನ ಸ್ವಾತಂತ್ರ್ಯವನ್ನು (ತಾನು ಸ್ವತಂತ್ರನೆಂದು), ಮನ್ಯತೇ-ತಿಳಿಯುತ್ತಾನೆ; (ಅಪಿ-ಇದಾದರೋ), ಮಹಾಮೋಹಸ್ಯ-ಮಹಾಮೋಹದ (ಅಧಿಕವಾದ ಆತ್ಮ ವಂಚನೆಯ), ಜೃಂಭಣಂ-ವಿಜೃಂಭಣವೇ (ತಲೆಎತ್ತಿ ಮೆರೆಯುವುದೇ) ಆಗಿದೆ; ವಿದಿತ್ವಾಪಿ-ತಿಳಿದೂ ಸಹ, ನ ಜಾನಾತಿ-ತಿಳಿಯುವುದಿಲ್ಲ; ಪಶ್ಯನ್ನಪಿ-ಕಂಡೂ ಸಹ, ನ ಪಶ್ಯತಿ-ಕಾಣುವುದಿಲ್ಲ (ಕುರುಡನಂತಿರುತ್ತಾನೆ).

**ನ ಶೃಣೋತಿ ತಥಾ ಶೃಣ್ವನ್ ಶಿಕ್ಷಮಾಣೋ ನ ಶಿಕ್ಷತೇ ।**
**ಯತ್ತನ್ಮಾಯಾಬಲಂ ವಿಷ್ಣೋರ್ಮಹಾಶಕ್ತೇರ್ಮಹಾತ್ಮನಃ ॥ ೧೨ ॥**

ತಥಾ-ಹಾಗೂ, ಶೃಣ್ವನ್-ಕೇಳಿದರೂ, ನ ಶೃಣೋತಿ-ಕೇಳುವುದಿಲ್ಲ (ಕಿವುಡನೇ ಸರಿ); ಶಿಕ್ಷಮಾಣಃ-ಕಲಿಸಲ್ಪಟ್ಟರೂ, ನ ಶಿಕ್ಷತೇ-ಕಲಿಯುವುದಿಲ್ಲ (ಹಿರಿಯರ ಉಪದೇಶಗಳನ್ನೇ ಕಿವಿಯಲ್ಲಿ ಹಾಕಿಕೊಳ್ಳುವುದಿಲ್ಲ-ಅವರ ಅನುಭವದ ನುಡಿಗಳಿಂದ ಪಾಠ ಕಲಿಯುವುದಿಲ್ಲ); ಯತ್-ಹೀಗಿರುವುದೆಂಬುದು ಯಾವುದೋ, ತತ್-ಅದು, ಮಹಾಶಕ್ತೇಃ-ಅದ್ಭುತಶಕ್ತಿಯುತನಾದ, ಮಹಾತ್ಮನಃ-ಅನಂತಮಹಿಮನಾದ, ವಿಷ್ಣೋಃ-ಶ್ರೀವಿಷ್ಣುವಿನ, ಮಾಯಾಬಲಂ-ಇಚ್ಛಾಶಕ್ತಿಯಿಂದಾದುದು.[1]

---

ಗಳಲ್ಲವೆಂದು (ಪರಾಧೀನಗಳೆಂದು, ವಿವೇಕಿಗಳು ಪರನಾಮಕ ಶ್ರೀಹರಿಯ ಅಧೀನಗಳೆಂದು) ತಿಳಿಯುತ್ತಾರೆ (೧೦). ಪ್ರತಿಕ್ಷಣದಲ್ಲಿ ಉಂಟಾಗುವ ಅಸ್ವಾತಂತ್ರ್ಯದ ಅನುಭವವನ್ನು ತಿರಸ್ಕರಿಸಿ ತಾನೇ ಸ್ವತಂತ್ರನೆಂದು, ತಿಳಿಯುವುದು ಆತ್ಮವಂಚನೆಯೇ ಸರಿ; ತಿಳಿದೂ ತಿಳಿಯದವನು, ಕಂಡೂ ಕಾಣದ ಕುರುಡನಂತೆ (೧೧). ಕೇಳಿಯೂ ಕೇಳದಿರುವವನು ಕಿವುಡನೇ ಸರಿ; ಶಿಕ್ಷಿಸಿದರೂ ಉಪದೇಶವನ್ನು ಗ್ರಹಿಸದವನು, ಮೂಢನೇ—ಹೀಗಾಗುವುದಕ್ಕೆ, ಅಚಿಂತ್ಯಶಕ್ತಿಯುತನೂ ಅನಂತಮಹಿಮನೂ ಆದ

1. ಮಾಯಾ—ಇಚ್ಛಾಶಕ್ತಿ; ಮಾಯಾ-ಲಕ್ಷ್ಮೀದೇವಿ ಮತ್ತು ಆಕೆಯಿಂದ ಅಭಿಮನ್ಯಮಾನವಾದ ಸತ್ವಾದಿಗುಣಾತ್ಮಕಪ್ರಕೃತಿ; ಶ್ರೀಹರಿಯ ಇಚ್ಛೆಯು, ಲಕ್ಷ್ಮೀ ಮತ್ತು ಪ್ರಕೃತಿಗಳ ದ್ವಾರಾ, ಜೀವರ ಪೂರ್ವ ಕರ್ಮಗಳನ್ನು ನಿಮಿತ್ತ ಮಾಡಿಕೊಂಡು, ಬುದ್ಧಿಮೋಹಾದಿಗಳನ್ನುಂಟುಮಾಡುತ್ತದೆ.

**ಬೋಧಯಂತಃ ಪರಾನ್ಯೇತು ಸ್ವಯಂ ಮುಗ್ಧಾಭವಂತ್ಯುತ ।**
**ಯತ್ತನ್ಮಾಯಾಬಲಂ ವಿಷ್ಣೋರ್ಮಹಾಶಕ್ತೇರ್ಮಹಾತ್ಮನಃ ॥ ೧೩ ॥**

ಯೇತು–ಯಾರು, ಪರಾನ್–ಅನ್ಯರನ್ನು ಕುರಿತು (ಅನ್ಯರಿಗೆ), ಬೋಧಯಂತಃ–ಉಪದೇಶಮಾಡುವವರಾದರೂ, ಸ್ವಯಂ–ತಾವೇ, ಮುಗ್ಧಾ–ಮುಗ್ಧರು (ತಾವು ಉಪದೇಶಿಸುವ ವಿಷಯಕ ಅಜ್ಞಾನಿಗಳು) ಭವಂತಿ ಉತ–ಆಗಿರುತ್ತಾರೆಂಬುದು ಅನುಭವಸಿದ್ಧವಲ್ಲವೇ!, ಯತ್–ಹೀಗೆಂಬ, ತತ್–ಅದು, ಮಹಾಶಕ್ತೇಃ, ಮಹಾತ್ಮನಃ ವಿಷ್ಣೋಃ ಮಾಯಾಬಲಂ–ಅದ್ಭುತಶಕ್ತಿಯುತನೂ ಮಹಾಮಹಿಮನೂ ಆದ ಶ್ರೀವಿಷ್ಣುವಿನ ಮಾಯಾಬಲವಲ್ಲದೇ ಬೇರೆಯಲ್ಲ.

**ಪರೇಷಾಂ ಹಾನಿಲಾಭಾದಿವೇತ್ತಾರಃ ಸ್ವಂ ನ ಜಾನತೇ ।**
**ಯತ್ತನ್ಮಾಯಾಬಲಂ ವಿಷ್ಣೋರ್ಮಹಾಶಕ್ತೇರ್ಮಹಾತ್ಮನಃ ॥ ೧೪ ॥**

**ಪರೇಷಾಂ ರೋಗಹರ್ತಾರಃ ಸ್ವರೋಗಂ ನ ವಿಜಾನತೇ ।**
**ಯತ್ತನ್ಮಾಯಾಬಲಂ ವಿಷ್ಣೋರ್ಮಹಾಶಕ್ತೇರ್ಮಹಾತ್ಮನಃ ॥ ೧೫ ॥**

**ಪರೇಷಾಮಭಿಚಾರಾದಿ ಕುರ್ವಂತಃ ಸ್ವಂ ನ ಜಾನತೇ ।**
**ಯತ್ತನ್ಮಾಯಾಬಲಂ ವಿಷ್ಣೋರ್ಮಹಾಶಕ್ತೇರ್ಮಹಾತ್ಮನಃ ॥ ೧೬ ॥**

**ಅಧೀಯಾನೇಷು ಸರ್ವೇಷು ಜಾಯಂತೇ ಚಿತ್ರಬುದ್ಧಯಃ ।**
**ಯತ್ತನ್ಮಾಯಾಬಲಂ ವಿಷ್ಣೋರ್ಮಹಾಶಕ್ತೇರ್ಮಹಾತ್ಮನಃ ॥ ೧೭ ॥**

ಪರೇಷಾಂ–ಅನ್ಯರ, ಹಾನಿಲಾಭಾದಿ–ನಷ್ಟಲಾಭಗಳನ್ನು ವೇತ್ತಾರಃ–ತಿಳಿಯುವವರು, ಸ್ವಂ–ತಮ್ಮದನ್ನು (ತಮ್ಮ ನಷ್ಟಲಾಭಗಳನ್ನು), ನ ಜಾನತೇ–ತಿಳಿಯುವುದಿಲ್ಲ; ಯತ್ ತತ್–ಯಾವುದರಿಂದ ಹೀಗಾಗುವುದೋ ಅದು, ಮಹಾಶಕ್ತೇಃ, ಮಹಾತ್ಮನಃ ವಿಷ್ಣೋಃ–ಅಚಿಂತ್ಯಶಕ್ತಿಯುತನೂ ಮಹಾಮಹಿಮನೂ ಆದ ಶ್ರೀವಿಷ್ಣುವಿನ, ಮಾಯಾಬಲಂ–ಇಚ್ಛಾಶಕ್ತಿಯಿಂದಾದುದು.

---

ಶ್ರೀವಿಷ್ಣುವಿನ ಇಚ್ಛಾಬಲವೇ ಕಾರಣ (೧೨). ಅನ್ಯರಿಗೆ ಉಪದೇಶಮಾಡುವವರು, ಸ್ವಯಂ ತದ್ವಿಷಯಕ ಮೋಹವುಳ್ಳವರಾಗಿರುತ್ತಾರೆ; ಇದೂ ಶ್ರೀವಿಷ್ಣುವಿನ ಮಾಯಾಬಲವೇ ಸರಿ (೧೩). ಅನ್ಯರ ಹಾನಿ ಲಾಭಗಳನ್ನು ತಿಳಿಯುವವರು ತಮ್ಮ ಹಾನಿ ಲಾಭಗಳನ್ನು ತಿಳಿಯುವುದಿಲ್ಲ. ಇತರರ ರೋಗಗಳನ್ನು ಪರಿಹರಿಸುವವರು (ವೈದ್ಯರೇ ಮೊದಲಾದವರು) ತಮ್ಮ ರೋಗಗಳಿಗೆ ಪರಿಹಾರವನ್ನು ತಿಳಿಯರು; ಅನ್ಯರ ಮೇಲೆ ಅಭಿಚಾರಗಳನ್ನು ಪ್ರಯೋಗಿಸಿ (ಮಂತ್ರಮಾಟಗಳನ್ನು ಮಾಡಿ) ಪೀಡಿಸುವವರು, ತಮ್ಮ

ಪರೇಷಾಂ–ಇತರರ, ರೋಗಹರ್ತಾರಃ–ರೋಗಗಳನ್ನು ಪರಿಹರಿಸುವವರು, ಸ್ವರೋಗಂ–ತಮ್ಮ ರೋಗವನ್ನು ನ ವಿಜಾನತೇ–ತಿಳಿಯುವುದಿಲ್ಲ ಹೀಗೆಂಬುದು ಶ್ರೀವಿಷ್ಣುವಿನ ಮಾಯಾಬಲದಿಂದ (ಹಿಂದಿನ ಶ್ಲೋಕಗಳಲ್ಲಿ ಈ ಉತ್ತರಾರ್ಧಶ್ಲೋಕದ ಅರ್ಥವನ್ನು ಹೇಳಿರುವಂತೆ ಇಲ್ಲಿಯೂ ತಿಳಿಯಬೇಕು).

ಪರೇಷಾಂ–ಇತರರಿಗೆ, ಅಭಿಚಾರಾದಿ–ಅಭಿಚಾರಾದಿಗಳನ್ನು (ಮಾಟಮಂತ್ರಾದಿ ವಾಮಾಚಾರಗಳಿಂದ ಪೀಡೆಗಳನ್ನು), ಕುರ್ವಂತಃ–ಮಾಡುವವರು, ಸ್ವಂ–ತಮ್ಮದನ್ನು (ಅನ್ಯರು ತಮ್ಮಲ್ಲಿ ಪ್ರಯೋಗಿಸುವ ಅಭಿಚಾರಗಳನ್ನು), ನ ಜಾನತೇ–ತಿಳಿಯುವುದಿಲ್ಲ ಉತ್ತರಾರ್ಧದ ಅರ್ಥವನ್ನು ಹಿಂದಿನಂತೆ ತಿಳಿಯಬೇಕು); ಸರ್ವೇಷು–ಎಲ್ಲರೂ (ಬಹುಜನರು ಒಬ್ಬ ಗುರುವಿನಲ್ಲಿ), ಅಧೀಯಾನೇಷು–ಅಧ್ಯಯನಮಾಡುತ್ತಿರಲು (ಓದುತ್ತಿರಲು), ಚಿತ್ರಬುದ್ಧಯಃ–ವಿವಿಧವಾದ ಬುದ್ಧಿಯುಳ್ಳವರು (ವಿಭಿನ್ನ ಜ್ಞಾನವುಳ್ಳವರು), ಜಾಯಂತೇ–ಆಗುತ್ತಾರೆ; ಉತ್ತರಾರ್ಧ ಮೊದಲಿನಂತೆ.

**ಅಚೇತನಸ್ಯ ವೃಕ್ಷಾದೇಃ ಸೂರ್ಯಾದೇರ್ದರ್ಶನಾದಿನಾ ।**
**ಯತ್ ಸ್ಯಾತ್ ಪತ್ರವಿಕಾಸಾದಿ ಸಾ ಮಾಯಾ ಪರಮಾ ಮಮ ॥ ೧೮ ॥**

**ಅಚೇತನೋಽಪಿ ದೇಹೋಽಯಂ ನಾನಾಚೇಷ್ಟಾಃ ಕರೋತಿ ವೈ ।**
**ಸ್ವಘಾತಂ ನೈವ ಜಾನಾತಿ ಸಾ ಮಾಯಾ ಪರಮಾ ಮಮ ॥ ೧೯ ॥**

**ಏಕರೋಗೇಷು ದೇಹೇಷು ಏಕಮೇವ ಹಿ ಚೌಷಧಂ ।**
**ಕರೋತಿ ಫಲಭೇದಂ ಯತ್ ಸಾ ಮಾಯಾ ಪರಮಾ ಮಮ ॥ ೨೦ ॥**

---

ಮೇಲೆ ಅನ್ಯರು ಪ್ರಯೋಗಿಸಬಹುದಾದ ಅಭಿಚಾರಗಳನ್ನು ತಿಳಿಯುವುದಿಲ್ಲ (ಅವುಗಳಿಗೆ ಪರಿಹಾರವನ್ನೂ ತಿಳಿಯುವುದಿಲ್ಲ); ಒಬ್ಬ ಗುರುವಿನಲ್ಲಿ ಅಧ್ಯಯನಮಾಡುವ ಬಹುಜನರು (ಏಕೋದರಭ್ರಾತೃಗಳು ಸಹ), ವಿಭಿನ್ನ ಬುದ್ಧಿಯುಳ್ಳವರಾಗುತ್ತಾರೆ (ಏಕಪ್ರಕಾರದ ವಿದ್ಯಾವಂತರಾಗುವುದಿಲ್ಲ); ಈ ಎಲ್ಲಕ್ಕೂ ಅಚಿಂತ್ಯಶಕ್ತಿಯುತನೂ, ಅಪಾರಮಹಿಮನೂ ಆದ ಶ್ರೀಮಹಾವಿಷ್ಣುವಿನ ಇಚ್ಛೆಯೇ ಮುಖ್ಯಕಾರಣವು (೧೪-೧೭).

ಅಚೇತನಗಳಾದ ವೃಕ್ಷಾದಿಗಳಿಗೆ, ಸೂರ್ಯಕಿರಣಗಳ ದರ್ಶನದಿಂದ (ಸೂರ್ಯಕಿರಣಾದಿಗಳ ಸಂಗದಿಂದ) ಎಲೆಗಳು ಹುಟ್ಟುತ್ತವೆ—ಪುಷ್ಪಾದಿಗಳು ವಿಕಾಸ ಹೊಂದುತ್ತವೆ;[1] ಅಚೇತನಗಳಾದ ನಾನಾ ಪ್ರಾಣಿದೇಹಗಳು ವಿವಿಧವಾಗಿ ಚಲನಾದಿ

---

1. 'ವೃಕ್ಷಾದಿ' ಎಂಬಲ್ಲಿನ ಆದಿಶಬ್ದದಿಂದ ಲತಾಗುಲ್ಮಾದಿ ಪುಷ್ಪಗಳನ್ನು ಬಿಡುವ ಸಸ್ಯಗಳನ್ನು ಇಟ್ಟುಕೊಳ್ಳಬೇಕು; ವೃಕ್ಷಾದಿಗಳು, (ತದ್ಗತ) ಅವುಗಳಲ್ಲಿರುವ ವೃಕ್ಷಾದಿಜೀವರುಗಳ ದೇಹಗಳು; ಮನುಷ್ಯದೇಹದಲ್ಲಿ ಜೀವವಿದ್ದರೂ, ಆ ದೇಹವು ಸ್ವತಃ ಪ್ರವೃತ್ತಿಶೂನ್ಯವಾದ ಜಡವಷ್ಟೆ—. ಅದರಂತೆ

ಗೋಮಯಾದೇರ್ಹಿ ಜಾಯಂತೇ ನಾನಾ ಜೀವಾಃ ಸಹಸ್ರಶಃ ।
ವಿನಾ ಮಾತಾಪಿತೃಭ್ಯಾಂ ಯತ್ ಸಾ ಮಾಯಾ ಪರಮಾ ಮಮ ॥ ೨೧ ॥

ಗವಾದಿ ಭಕ್ಷಿತಂ ವಸ್ತು ಕ್ಷೀರರಕ್ತಾದಿ ಭೇದತಃ ।
ಭಜತೇ ಪರಿಣಾಮಂ ಯತ್ ಸಾ ಮಾಯಾ ಪರಮಾ ಮಮ ॥ ೨೨ ॥

ದೇಹಸ್ಥಾನವಿಶೇಷೇಷು ನಖಲೋಮಾದಿಕಂ ಹಿ ಯತ್ ।
ಜಾಯತೇ ಸ್ವೇಚ್ಛಯಾ ನೈವ ಸಾ ಮಾಯಾ ಪರಮಾ ಮಮ ॥ ೨೩ ॥

ಬೀಜಮಂಕುರತಾಂ ಯಾತಿ ಕಾಚಿಚ್ಛಾಖಾ ಪ್ರರೋಹತಿ ।
ನ ಪ್ರರೋಹತಿ ಕಿಂಚಿಚ್ಚ ಸಾ ಮಾಯಾ ಪರಮಾ ಮಮ ॥ ೨೪ ॥

ಜೀವಾದಿನಾ ವಿನೈವಾನ್ನದ್ಧೂಮೇರ್ವಾ ಸಲಿಲಾದಪಿ ।
ಜಾಯತೇ ಸ್ವೇಚ್ಛಯಾ ನೈವ ಸಾ ಮಾಯಾ ಪರಮಾ ಮಮ ॥ ೨೫ ॥

ರಜಸ್ವಲಾಯಾಂ ಭಾರ್ಯಾಯಾಂ ರೇತಃ ಸೇಕೇ ಕೃತೇಽಪಿ ಹಿ ।
ನೈವೋತ್ಪತ್ತಿರ್ಹಿ ಗರ್ಭಸ್ಯ ಸಾ ಮಾಯಾ ಪರಮಾ ಮಮ ॥ ೨೬ ॥

ಶುಕ್ರಶೋಣಿತಸಂಬಂಧಾದ್ಗರ್ಭೋತ್ಪತ್ತಿರ್ಹಿ ಜಾಯತೇ ।
ತಥಾವಯವಸಂಸ್ಥಾನಂ ಸಾ ಮಾಯಾ ಪರಮಾ ಮಮ ॥ ೨೭ ॥

ಶುಕ್ರಶೋಣಿತಸಂಬಂಧಾತ್ ಸ್ತ್ರೀಪುಂಕ್ಲೀಬಾದಿಭೇದತಃ ।
ಜಾಯತೇ ಗರ್ಭನಿಷ್ಪತ್ತಿಃ ಸಾ ಮಾಯಾ ಪರಮಾ ಮಮ ॥ ೨೮ ॥

ಅಚೇತನಸ್ಯ–ಅಚೇತನಗಳಾದ, ವೃಕ್ಷಾದೇಃ–ವೃಕ್ಷ ಮೊದಲಾದವುಗಳಿಗೆ, ಸೂರ್ಯಾದೇಃ–ಸೂರ್ಯಾದಿಗಳ, ದರ್ಶನಾದಿನಾ–ದರ್ಶನ ಮೊದಲಾದ ಕಾರಣ

---

ಚೇಷ್ಟೆಗಳನ್ನು ಮಾಡುತ್ತವೆ—ಆದರೆ ಒಂದು ಕಾಲಕ್ಕೆ ನಿಶ್ಚೇಷ್ಟಗಳಾಗುತ್ತವೆ; ಬಹು ದೇಹಗಳಲ್ಲಿ ಗುರ್ತಿಸಬಹುದಾದ ಒಂದೇ ರೋಗಕ್ಕೆ, ಒಂದೇ ಔಷಧಿಯನ್ನು

---

ವೃಕ್ಷಾದಿಗಳನ್ನು ಇಲ್ಲಿ ಅಚೇತನಗಳೆಂದು ನಿರೂಪಿಸಲಾಗಿದೆ. ಸೂರ್ಯಕಿರಣಗಳಿಂದ ಕಮಲವು ಅರಳಿದರೆ, ಚಂದ್ರಕಿರಣಗಳಿಂದ ಅದು ಮುಕುಳಿತವಾಗುತ್ತದೆ—ನೈದಿಲೆಯು (ಕುಮುದ ಪುಷ್ಪವು) ಅರಳುತ್ತದೆ. ಅಚೇತನವಸ್ತುಗಳ ಚೇಷ್ಟೆಗಳು, ಆ ದೇಹಧಾರಿ ಜೀವರ ಶಕ್ತಿಯಿಂದಾಗುವ ವ್ಯಾಪಾರಗಳಲ್ಲ—'ತೇನ ವಿನಾ ತೃಣಮಪಿ ನ ಚಲತಿ'—ಶ್ರೀಹರಿಯನ್ನುಳಿದು ಒಂದು ಹುಲ್ಲುಕಡ್ಡಿಯೂ ಅಲುಗಾಡುವುದಿಲ್ಲವೆಂದು ಶ್ರುತಿಯು ಸಾರುತ್ತದೆ.

ಗಳಿಂದ, ಪತ್ರವಿಕಾಸಾದಿ–ಎಲೆಹುಟ್ಟುವುದು; (ಅರಳುವಿಕೆ ಮೊದಲಾದ ವಿಕಾರಗಳು, ಯತ್ಸ್ಯಾತ್–ಯಾವುವು ಉಂಟಾಗುತ್ತವೆಯೋ, ಸಾ ಮಾಯಾ–ಆ ಶಕ್ತಿಯು, ಮಮ–ನನ್ನದು, ಮತ್ತು ಪರಮಾ–ಶ್ರೇಷ್ಠವಾದುದು (ಅಚಿಂತ್ಯವಾದುದು).

ಅಯಂ ದೇಹಃ–ಈ ದೇಹವು (ಪ್ರತ್ಯಕ್ಷಕ್ಕೆ ಗೋಚರಿಸುವುದು), ಅಚೇತನಃ ಅಪಿ–(ಸ್ವಯಂ ಚೇಷ್ಟಾಶಕ್ತಿರಹಿತವಾದುದಾದರೂ), ಜಡವಾದರೂ, ನಾನಾ ಚೇಷ್ಟಾ–ಬಹುವಿಧ ವ್ಯಾಪಾರಗಳನ್ನು(ಚಲನಾದಿಗಳನ್ನು), ಕರೋತಿ ವೈ–ಮಾಡುತ್ತದಷ್ಟೆ ಸ್ವಪಾತಂ–ತಾನು ಯಾವಾಗ ಬಿದ್ದುಹೋಗುವುದೆಂಬುದನ್ನು (ಯಾವಾಗ ಚೇಷ್ಟಿಸಲು ಅಸಮರ್ಥವಾಗುತ್ತದೆಂಬುದನ್ನು), ನೈವ ಜಾನಾತಿ–ತಿಳಿಯುವುದೇ ಇಲ್ಲ ಸಾ ಮಾಯಾ–ಪರಮಾ ಮಮ–ಹಿಂದಿನ ಶ್ಲೋಕದಂತೆ ಇಲ್ಲಿಯೂ ಮತ್ತು ೪೦ನೇ ಶ್ಲೋಕದವರೆಗಿನ ಮುಂದಿನ ಶ್ಲೋಕಗಳಲ್ಲಿ ಸಹ ಈ ಶಬ್ದಗಳ ಅರ್ಥವನ್ನು ತಿಳಿಯಬೇಕು).

ಏಕರೋಗೇಷು–ಒಂದೇ ವಿಧವಾದ ರೋಗವುಳ್ಳ, ದೇಹೇಷು–ಬಹು ದೇಹಗಳಲ್ಲಿ ಏಕಮೇವ–ಒಂದೇ, ಔಷಧಂ–ಔಷಧಿಯು, ಫಲಭೇದಂ–ಫಲ ವ್ಯತ್ಯಾಸವನ್ನು, ಕರೋತಿ ವೈ–ಮಾಡುತ್ತದೆಂಬುದು ಅನುಭವಸಿದ್ಧವಷ್ಟೆ (ಸಾ ಮಾಯಾ–ಅದಕ್ಕೆ ಕಾರಣವಾದ ಶಕ್ತಿಯು–ಹಿಂದಿನಂತೆ).

ಗೋಮಯಾದೇಃ–ಗೋಮಯ (ಶಗಣಿ) ಮೊದಲಾದವುಗಳಿಂದ, ಸಹಸ್ರಶಃ–ಸಹಸ್ರಾರು, ನಾನಾಜೀವಾಃ–ವಿವಿಧ ಪ್ರಾಣಿಗಳು, ಜಾಯಂತೇ ಹಿ–ಹುಟ್ಟುತ್ತವೆಯಷ್ಟೆ ಮಾತಾಪಿತೃಭ್ಯಾಂ–ತಾಯಿತಂದೆಗಳಿಂದ, ವಿನಾ–ರಹಿತವಾಗಿ (ಮಾತಾಪಿತೃಗಳಿಲ್ಲದೇ, ಯತ್–ಯಾವ ಈ ಪ್ರಾಣಿಗಳ ಉತ್ಪತ್ತಿಯೋ, (ಅದು ಸಾ ಮಾಯಾ ಇತ್ಯಾದಿ).

---

ಪ್ರಯೋಗಿಸಿದರೂ, ಅದು ವಿವಿಧವಾದ ಪರಿಣಾಮಗಳನ್ನುಂಟುಮಾಡುತ್ತದೆ;[1] ಗೋಮಯಾದಿಗಳಿಂದ ಸಹಸ್ರಾರು ಕ್ರಿಮಿಕೀಟಾದಿ ಪ್ರಾಣಿಗಳು ಹುಟ್ಟುತ್ತವೆ—ಅವುಗಳಿಗೆ ತಾಯಿತಂದೆಗಳೇ ಇಲ್ಲ ಗೋ ಮೊದಲಾದ ಪಶುಗಳು ಭಕ್ಷಿಸುವ ತೃಣಾದಿ (ಹುಲ್ಲುನೀರು ಮೊದಲಾದ) ಪದಾರ್ಥಗಳು, ಹಾಲು, ರಕ್ತ ಮೊದಲಾದ ವಸ್ತುರೂಪವಾಗಿ ಪರಿಣಾಮ (ವಿಕಾರ)ಗೊಳ್ಳುತ್ತವೆ; ದೇಹದಲ್ಲಿ ಕೆಲವು ಸ್ಥಳಗಳಲ್ಲಿ ಮಾತ್ರ ಉಗುರು ಕೂದಲು ಬೆಳೆಯುತ್ತವೆ—ಎಲ್ಲ ಸ್ಥಳಗಳಲ್ಲಿ ಅಲ್ಲ—ಎಲ್ಲರಿಗೂ ಏಕಪ್ರಕಾರವಾಗಿಯೂ

1. ಒಂದು ರೋಗಕ್ಕೆ ಪ್ರಯೋಗಿಸಲಾಗುವ ಒಂದೇ ಔಷಧಿಯಿಂದ ಒಬ್ಬನಿಗೆ ರೋಗವು ಗುಣವಾದರೆ ಮತ್ತೊಬ್ಬನಿಗೆ ರೋಗವು ಉಲ್ಬಣವಾಗುತ್ತದೆ—ಅನ್ಯನಿಗೆ ಏನೂ ಪರಿಣಾಮವೇ ಆಗುವುದಿಲ್ಲ—ಬೇರೊಬ್ಬನೂ ಅದೇ ಔಷಧಿಯಿಂದ ಮೃತನೂ ಆಗುತ್ತಾನೆ. ಪೆನ್ಸಿಲಿನ್ ಮೊದಲಾದವುಗಳ ಪ್ರಯೋಗದ ವಿವಿಧ ಪರಿಣಾಮಗಳನ್ನು ಎಲ್ಲರೂ ಕಂಡಿದ್ದಾರೆ—ಕೇಳಿಯೂ ಇದ್ದಾರೆ. ಇವುಗಳಿಗೆ ಕಾರಣಗಳನ್ನು ಆ ಕಾರಣಗಳ ಕಾರಣಗಳನ್ನೂ ವೈದ್ಯಶಾಸ್ತ್ರಾದಿಗಳಂತೆ ಅನ್ವೇಷಮಾಡುತ್ತ ಹೋಗುವುದು ಅನವಸ್ಥೆಯಲ್ಲಿ ಪರ್ಯವಸಾನಗೊಳ್ಳುತ್ತದೆಂಬುದನ್ನೂ ವಿವೇಕಿಗಳು ಗಮನಿಸಬಹುದು.

ಗವಾದಿ ಭಕ್ಷಿತಂ ವಸ್ತು–ಗೋ (ಹಸು) ಮೊದಲಾದ ಪಶುಗಳಿಂದ ಭಕ್ಷಿಸಲ್ಪಡುವ ವಸ್ತುವು (ಹುಲ್ಲು ಮೊದಲಾದ ಪದಾರ್ಥಗಳು), ಕ್ಷೀರರಕ್ತಾದಿ ಭೇದತಃ–ಹಾಲು, ರಕ್ತ ಮೊದಲಾದ ಭಿನ್ನರೂಪವುಳ್ಳದ್ದಾಗಿ, ಯತ್ ಪರಿಣಾಮಂ–ಯಾವ ಪರಿಣಾಮವನ್ನು (ವಿಕಾರವನ್ನು), ಭಜತೇ–ಹೊಂದುತ್ತರೆಯೋ, ಅದು (ಸಾ ಮಾಯಾ ಇತ್ಯಾದಿ).

ದೇಹಸ್ಥಾನವಿಶೇಷೇಷು–ದೇಹದ ಗೊತ್ತಾದ ಸ್ಥಾನಗಳಲ್ಲಿಯೇ ನಖಲೋಮಾದಿಕಂ–ಉಗುರು ರೋಮಾದಿಗಳು, ಜಾಯತೇ ಹಿ–ಹುಟ್ಟುತ್ತವಷ್ಟೆ; ಸ್ವೇಚ್ಛಯಾ ನೈವ–ನಮ್ಮ ಇಚ್ಛೆಯಂತೆ ಬೆಳೆಯುವುದೇ ಇಲ್ಲ (ಅನ್ಯಸ್ಥಳಗಳಲ್ಲಿ ಇಚ್ಛಿಸಿದರೂ ಬೆಳೆಯುವುದಿಲ್ಲ); ಯತ್–ಹೀಗೆಂಬುದೂ, ಸಾ ಮಾಯಾ ಇತ್ಯಾದಿ.

ಬೀಜಂ–ಬೀಜವು, ಅಂಕುರತಾಂ–ಅಂಕುರಿಸುವಿಕೆಯನ್ನು, ಯಾತಿ–ಹೊಂದುತ್ತದೆ (ಅಂಕುರವಾಗುತ್ತದೆ); (ಕೆಲವು ಬೀಜಗಳು ಅಂಕುರಿಸುವುದೇ ಇಲ್ಲ); ಕಾಚಿತ್–(ಅಂಕುರಗಳಲ್ಲಿಯೂ) ಯಾವುದೋ ಒಂದು, ಶಾಖಾ–ಶಾಖೆಯಾಗಿ, ಪ್ರರೋಹತಿ–ಬೆಳೆಯುತ್ತದೆ; ಕಿಂಚಿತ್ ಚ–ಬೇರೊಂದು ಶಾಖೆಯು, ನ ಪ್ರರೋಹತಿ–ಬೆಳೆದು ಗಿಡವಾಗುವುದಿಲ್ಲ; ಇದು ಸಾ ಮಾಯಾ ಇತ್ಯಾದಿ.

ಅನ್ಯತ್–ಬೇರೊಂದು (ಸಸ್ಯವಿಶೇಷಗಳು), ಬೀಜಾದಿನಾ ವಿನೈವ–ಬೀಜಾದಿಗಳಿಲ್ಲದೇ (ತೋರುವ ಯಾವ ಕಾರಣವೂ ಇಲ್ಲದೇ), ಭೂಮೇಃ–ಭೂಮಿಯಿಂದ, ವಾ–ಅಥವಾ, ಸಲಿಲಾದಪಿ–ನೀರಿನಿಂದ ಸಹ, ಜಾಯತೇ–ಹುಟ್ಟುತ್ತದೆ, ಸ್ವೇಚ್ಛಯಾ–ನಮ್ಮ (ತನ್ನ) ಇಚ್ಛೆಯಿಂದ, ನೈವ–ಅಲ್ಲವೇ ಅಲ್ಲ; ಸಾ ಮಾಯಾ ಇತ್ಯಾದಿ.

---

ಅಲ್ಲ)—ನಮ್ಮ ಇಚ್ಛಾನುಸಾರ ಬೆಳೆಯುವುದಿಲ್ಲ—ನಿಲ್ಲುವುದೂ ಇಲ್ಲ; ಬಿತ್ತಿದ ಬಹುಬೀಜಗಳಲ್ಲಿ ಕೆಲವು ಮಾತ್ರ ಅಂಕುರಿಸುತ್ತವೆ—ಅಂಕುರಗಳಲ್ಲಿ ಕೆಲವು ಮಾತ್ರ ಬೆಳೆದು ಶಾಖೆಗಳು ಕಾಣುತ್ತವೆ—ಮತ್ತೆ ಕೆಲವು ಅಂಕುರಿಸುವುದೇ ಇಲ್ಲ—ಶಾಖೆಗಳು ಕಂಡರೂ ಬೆಳೆದು ಗಿಡವಾಗುವುದಿಲ್ಲ; ಇನ್ನು ಕೆಲವು ಲತಾದಿ ಸಸ್ಯಗಳು, ಬೀಜವೇ ಇಲ್ಲದೇ ಭೂಮಿಯಿಂದಲೂ, ನೀರಿನಿಂದಲೂ ಹುಟ್ಟುತ್ತವೆ—ನಾವು ಇಚ್ಛಿಸುವ ಮಾತ್ರದಿಂದ ಅವು ಬೆಳೆಯುವುದಿಲ್ಲ; ರಜಸ್ವಲೆಯಾದ ಸ್ತ್ರೀಯಲ್ಲಿ (ಭಾರ್ಯೆಳಲ್ಲಿ ಸಹ) ರೇತಸ್ಸೇಚನಮಾಡಿದರೂ ಗರ್ಭೋತ್ಪತ್ತಿಯಾಗುವುದಿಲ್ಲ—ರೇತಸ್ಸೇಚನದಿಂದ ಎಲ್ಲ ಸ್ತ್ರೀಯರಲ್ಲಿ ಗರ್ಭಧಾರಣೆಯಾಗುವುದಿಲ್ಲ (ಬಂಜೆಯರಲ್ಲಿ ಮಾತ್ರ ಗರ್ಭಧಾರಣವಿಲ್ಲೆಂದು ಅಲ್ಲ); ಶುಕ್ರಶೋಣಿತಸಂಬಂಧದಿಂದ (ಕೆಲವು ಸನ್ನಿವೇಶಗಳಲ್ಲಿ ಮಾತ್ರ) ಗರ್ಭಧಾರಣೆಯಾಗುತ್ತದೆ ಮತ್ತು ಆ ಗರ್ಭಕ್ಕೆ ಕರಚರಣಾದಿ ಅವಯವಗಳು ಮೂಡಿ ಬೆಳೆಯುತ್ತವೆ; ನಿರ್ದಿಷ್ಟ ಸ್ತ್ರೀ-ಪುರುಷರ ಮಿಥುನದಿಂದ (ಶುಕ್ರಶೋಣಿತ ಸಂಯೋಗದಿಂದ), ಹುಟ್ಟುವ ಗರ್ಭವು, ಸ್ತ್ರೀ, ಪುರುಷ, ನಪುಂಸಕಗಳೆಂಬ ಲಿಂಗಭೇದಗಳುಳ್ಳದ್ದಾಗುತ್ತವೆ; ಈ ಮೊದಲಾದ ಘಟನೆಗಳೆಲ್ಲವೂ ನನ್ನ ಅಚಿಂತ್ಯವಾದ

ರಜಸ್ವಲಾಯಾಂ–ರಜಸ್ವಲೆಯಾದ (ಋತುಸ್ನಾತಳಾದ ಅಥವಾ ಋತುದರ್ಶನವುಳ್ಳ) ಭಾರ್ಯಾಯಾಂ–ಹೆಂಡತಿಯಲ್ಲಿ(ಸ್ತ್ರೀಯಲ್ಲಿ), ರೇತಃ ಸೇಕೇ–ರೇತಃಸೇಚನವು (ರೇತೋ ವಿಸರ್ಜನವು), ಕೃತೇ ಅಪಿ–ಮಾಡಲ್ಪಟ್ಟರೂ ಸಹ, ಗರ್ಭಸ್ಯ–ಗರ್ಭದ, ಉತ್ಪತ್ತಿ–ಉತ್ಪತ್ತಿಯು, ನೈವ–ಆಗುವುದೇ ಇಲ್ಲ ಇದು ಸಾ ಮಾಯಾ ಇತ್ಯಾದಿ.

ಶುಕ್ರಶೋಣಿತಸಂಬಂಧಾತ್–ಶುಕ್ರ (ಪುರುಷ ರೇತಸ್ಸು) ಶೋಣಿತ (ಸ್ತ್ರೀ ವೀರ್ಯವೂ) ಸಂಬಂಧದಿಂದ (ಕೂಡುವುದರಿಂದ), ಗರ್ಭೋತ್ಪತ್ತಿ–ಗರ್ಭದ ಉತ್ಪತ್ತಿಯು, ಜಾಯತೇ ಹಿ–ಆಗುವುದಷ್ಟೆ (ಶುಕ್ರಶೋಣಿತಗಳ ಕೂಡುವಿಕೆಯು ಗರ್ಭೋತ್ಪತ್ತಿಗೆ ನಿಮಿತ್ತಕಾರಣವಲ್ಲವೇ!), ಇದಕ್ಕೂ (ಗರ್ಭೋತ್ಪತ್ತಿಗೂ), ತಥಾ–ಮತ್ತು ಅವಯವ ಸಂಸ್ಥಾನಂ–ಗರ್ಭಕ್ಕೆ (ಕರಚರಣಾದಿ) ಅವಯವಗಳ ರಚನೆ ಮತ್ತು ರಕ್ಷಣೆಯು, (ಜಾಯತೇ ಹಿ–ಉಂಟಾಗುವುದಷ್ಟೆ), ಸಾ ಮಾಯಾ ಇತ್ಯಾದಿ.

ಶುಕ್ರಶೋಣಿತಸಂಬಂಧಾತ್–(ಅದೇ) ಶುಕ್ರಶೋಣಿತಗಳ (ಪುರುಷ ಸ್ತ್ರೀ ವೀರ್ಯಗಳ) ಸಂಬಂಧದಿಂದ, ಸ್ತ್ರೀಪುಂಕ್ಲೀಬಾದಿಭೇದತಃ–ಸ್ತ್ರೀ, ಪುರುಷ, ನಪುಂಸಕ ಎಂಬ ಭೇದದಿಂದ (ಭಿನ್ನರೂಪದ), ಗರ್ಭನಿಷ್ಪತ್ತಿ–ಗರ್ಭದ ರಚನೆಯು, ಜಾಯತೇ–ಉಂಟಾಗುತ್ತದೆ; ಇದಕ್ಕೆ ಕಾರಣವಾದುದು ಸಾ ಮಾಯಾ ಇತ್ಯಾದಿ.

ಗರ್ಭಸ್ಥಸ್ಯಾಪಿ ಜೀವಸ್ಯ ಕಾಣಖಂಜಾದಿದೋಷತಃ ।
ತಥಾವಯವದಾರ್ಢ್ಯಾದಿ ಸಾ ಮಾಯಾ ಪರಮಾ ಮಮ ॥ ೨೯ ॥

---

ಇಚ್ಛಾಶಕ್ತಿಯಿಂದಲೇ ಸಂಭವಿಸುತ್ತವೆ.[1] (ಸ್ವತಂತ್ರವಾದ ನನ್ನ ಇಚ್ಛಾಶಕ್ತಿಯ ಅಧೀನ ಗಳಾದ ಮಾಯಾನಾಮಕ ಪ್ರಾಕೃತ ವಸ್ತುಗಳು ಮತ್ತು ಅವುಗಳ ನಿಯಾಮಕಳಾದ ನನ್ನ ಭಾರ್ಯೆ ಶ್ರೀ ರಮಾದೇವಿಯೂ, ಸರ್ವಪ್ರಕಾರದಿಂದ ನನ್ನ ಅಧೀನರಾಗಿ ಈ ವಿಷಯಗಳಲ್ಲಿ ಪ್ರವೃತ್ತಿಸುತ್ತಾರೆ.) (೧೮-೨೮). ಗರ್ಭಸ್ಥಜೀವರ ಕರ್ಮಾನುಸಾರವಾದ, ಒಂದು ಕಣ್ಣು ಇಲ್ಲದಿರುವಿಕೆ, ಹೆಳವತನ, ಇತ್ಯಾದಿ ದೋಷಗಳನ್ನು ಅನುಸರಿಸಿ, ಗರ್ಭದಲ್ಲಿ ಆಯಾ ಕಣ್ಣುಕಾಲು ಮೊದಲಾದ ಅವಯವಗಳು ಏರ್ಪಡುತ್ತವೆ; ತಾಯಿಯ ಹೊಟ್ಟೆಯಲ್ಲಿರುವ ಕೋಮಲವಾದ ಗರ್ಭವು, ಆಹಾರ ಭಕ್ಷಣಾದಿಗಳಿಲ್ಲದೆ, ಉಸಿರು

---

1. ಈ ಮೇಲಿನ ಶ್ಲೋಕಗಳಲ್ಲಿಯೂ ಮತ್ತು ಮುಂದೆ ೪೦ನೇ ಶ್ಲೋಕದವರೆಗೂ ನಿರೂಪಿಸಲಾಗುವ ಲೋಕಾನುಭವಸಿದ್ಧ ಘಟನೆಗಳಿಗೆ, ಊಹಾಪೋಹಗಳಿಂದ ಸಹಕೃತವಾದ ಯುಕ್ತಿಗಳಿಂದ ಕಾರಣಗಳನ್ನು ವೈಜ್ಞಾನಿಕ ಪ್ರವೀಣರು ಮತ್ತು ವೈದ್ಯಶಾಸ್ತ್ರನಿಪುಣರು ಹೇಳಲು ಯತ್ನಿಸಿದರೂ, ಸಮರ್ಪಕಪರಿಹಾರರೂಪದ ಉತ್ತರಗಳು ದೊರೆಯುವುದಿಲ್ಲವೆಂಬುದನ್ನು ದೀರ್ಘವಿಮರ್ಶೆಯಿಂದ ಮನಗಾಣಬಹುದು ಇದೇ ಗ್ರಂಥಕರ್ತನಿಂದ ರಚಿತವಾದ 'ನಾಸ್ತಿಕ್ಯನಿರಾಸ'ದ ಪುಟ ೪೨ ರಿಂದ ೫೬ರವರೆಗೆ ನೋಡಬಹುದು.

ಭಕ್ಷಣೇನ ವಿನ್ಯೈವೇಷ ಶ್ವಾಸರೋಧಾದಿ ಪೀಡನಾತ್ ।
ಜೀವತ್ಯೇವ ಮೃದುರ್ಗರ್ಭಃ ಸಾ ಮಾಯಾ ಪರಮಾ ಮಮ ॥ ೩೦ ॥

ಮಾತುರ್ಜಠರದಾಹೇನ ಪೀಡ್ಯಮಾನೋಪ್ಯಧೋಮುಖಃ ।
ಜೀವತ್ಯೇವ ಮೃದುರ್ಗರ್ಭಃ ಸಾ ಮಾಯಾ ಪರಮಾ ಮಮ ॥ ೩೧ ॥

ಅಪಕ್ವೋಪಿ ಪತತ್ಯೇಷಃ ಪಕ್ವೋಪಿ ನ ಪತತ್ಯಯಂ ।
ಬಹಿರ್ನ್ಯೈವೇಚ್ಛಯಾ ಯಾತಿ ಸಾ ಮಾಯಾ ಪರಮಾ ಮಮ ॥ ೩೨ ॥

ಆಯಾತಿ ಋಜುಮಾರ್ಗೇಣ ಮಾರ್ಗಮನ್ಯಂ ವಿಶತ್ಯಪಿ ।
ಅನೃಜುರ್ಜಾಯತೇ ವಾಪಿ ಸಾ ಮಾಯಾ ಪರಮಾ ಮಮ ॥ ೩೩ ॥

ಜಾತಮಾತ್ರಃ ಪಿಬತ್ಯೇಷಃ ಸ್ತನಂ ರೋರೂಯತೇ ಹಿ ತತ್ ।
ನಾನಾಚೇಷ್ಟಾಶ್ಚ ಕುರುತೇ ಸಾ ಮಾಯಾ ಪರಮಾ ಮಮ ॥ ೩೪ ॥

ವೃಕ್ಷಾದಿಪತ್ರಪುಷ್ಪಾದೌ ಚಿತ್ರಾಕಾರೋ ಹಿ ಜಾಯತೇ ।
ವಿಚಿತ್ರವರ್ಣಗಂಧಾದಿ ಸಾ ಮಾಯಾ ಪರಮಾ ಮಮ ॥ ೩೫ ॥

---

ಕಟ್ಟಿಕೊಂಡು ಮೃತವಾಗದೇ ಬದುಕಿರುತ್ತದೆ; ತಾಯಿಯ ಜಠರಾಗ್ನಿಯ ತಾಪದಿಂದ ಪೀಡಿತವಾದರೂ ಮುಖ ಕೆಳಗೆ ಮಾಡಿ ಬಿದ್ದುಕೊಂಡು ಜೀವಿಸಿಯೇ ಇರುತ್ತದೆ; ಅಕಾಲದಲ್ಲಿ ಅಪಕ್ವವಾದ ಗರ್ಭವು ಹೊರಗೆ ಬೀಳುತ್ತದೆ (ಗರ್ಭಪಾತವಾಗುತ್ತದೆ); ಪೂರ್ಣಮಾಸಗಳು ತುಂಬಿದ್ದರೂ ಪ್ರಸವವಾಗುವುದೇ ಇಲ್ಲ; ಗರ್ಭವು ಸರಿಯಾದ ಮಾರ್ಗದಲ್ಲಿ (ಪ್ರಸವಕಾಲದಲ್ಲಿ) ಹೊರಗೆ ಬರುತ್ತದೆ—ಅನ್ಯಮಾರ್ಗವನ್ನು ಹಿಡಿದು, ಅಡ್ಡವಾಗಿ ತಲೆಕೆಳಗಾಗಿ ಇತ್ಯಾದಿ ತಪ್ಪು ಮಾರ್ಗದಲ್ಲಿ ಬಂದು ವಿಪತ್ತುಗಳಿಗೆ ಕಾರಣವಾಗುವುದೂ ಇದೆ; ಹುಟ್ಟಿದೊಡನೆ ಆ ಶಿಶುವು ಅಳುತ್ತದೆ; ತಾಯಿಯ ಸ್ತನ್ಯಪಾನ ಮಾಡುತ್ತದೆ; (ಈ ಕ್ರಿಯೆಗಳನ್ನು ಯಾರ ಮಾರ್ಗಪ್ರದರ್ಶನವೂ ಇಲ್ಲದೇ ಆಗತಾನೇ ಹುಟ್ಟಿದ ಶಿಶುವು ಮಾಡುತ್ತದೆ); ವೃಕ್ಷ ಲತಾ ಗುಲ್ಮಾದಿಗಳಲ್ಲಿ ವಿವಿಧವಾದ ಆಕಾರಗಳುಳ್ಳ ಪತ್ರಗಳೂ ಪುಷ್ಪಗಳೂ, ವಿಚಿತ್ರವಾದ ಬಣ್ಣ ಮತ್ತು ವಾಸನೆಗಳುಳ್ಳವೂ, ಹುಟ್ಟುತ್ತವೆ; ಭಾರವಾದ ಮರದ ಶಾಖೆಗಳು (ತೊಲೆಗಳು) ನೀರಲ್ಲಿ ತೇಲುತ್ತವೆ; ಅವುಗಳನ್ನು ಆಶ್ರಯಿಸಿದ ಇತರ ಪ್ರಾಣಿಗಳನ್ನು ತೇಲಿಸುತ್ತವೆ; (ಅವುಗಳನ್ನು ಆಶ್ರಯಿಸಿ, ನದೀ ಮೊದಲಾದವುಗಳನ್ನು ದಾಟಬಹುದು); ಚಿಕ್ಕರೂ ಹಗುರವೂ ಆದ ಕಲ್ಲುತುಂಡುಗಳು ಮುಳುಗಿ ಹೋಗುತ್ತವೆ; ಕೆಲವು ಪ್ರಾಣಿಗಳು ನೀರಲ್ಲಿ ಕಣ್ಣುಬಿಡಲಾರವು—ಮುಚ್ಚಿಕೊಳ್ಳುತ್ತವೆ—ಏನೂ ಕಾಣುವುದಿಲ್ಲ; ಮತ್ತೆ ಕೆಲವು ಪ್ರಾಣಿಗಳಿಗೆ ಭೂಮಿಯ ಮೇಲೆ

ಕಾಷ್ಠಭಾರೋ ಮಹಾನೇಷಃ ಸ್ವಯಂ ತರತಿ ತಾರಯೇತ್ ।
ಮಜ್ಜಯೇಚ್ಚ ಶಿಲಾಖಂಡಂ ಸಾ ಮಾಯಾ ಪರಮಾ ಮಮ ॥ ೩೬ ॥

ನ ಪಶ್ಯಂತಿ ಜಲೇ ಕೇಚಿತ್ ಜೀವಾ ನಿರ್ಮಗ್ನಚಕ್ಷುಷಃ ।
ಸ್ಥಲೇ ಕೇಚಿನ್ನ ಪಶ್ಯಂತಿ ಸಾ ಮಾಯಾ ಪರಮಾ ಮಮ ॥ ೩೭ ॥

ರಾತ್ರೌ ಕೇಚಿನ್ನ ಪಶ್ಯಂತಿ ದಿವಾ ಕೇಚಿತ್ತಥಾಪರೇ ।
ಸ್ಥಲೇ ಜಲೇನ್ಯೇ ಪಶ್ಯಂತಿ ಸಾ ಮಾಯಾ ಪರಮಾ ಮಮ ॥ ೩೮ ॥

ಉಡ್ಡೀಯಂತೇ ಪಕ್ಷಹೀನಾ ಮಹಾಪಕ್ಷಾಸ್ತಥಾಪರೇ ।
ನೈವೋಡ್ಡನಂ ಪ್ರಕುರ್ವಂತಿ ಸಾ ಮಾಯಾ ಪರಮಾ ಮಮ ॥ ೩೯ ॥

ಸ್ಥಲೇ ವಾಪಿ ಜಲೇ ವಾಪಿ ತತ್ತತ್ಸ್ಥಾನವಿಶೇಷತಃ ।
ಜಾಯತೇ ವಿವಿಧಂ ವಸ್ತು ಸಾ ಮಾಯಾ ಪರಮಾ ಮಮ ॥ ೪೦ ॥

ಗರ್ಭಸ್ಥಸ್ಯ-(ಮಾತೃ) ಗರ್ಭದಲ್ಲಿರುವ, ಜೀವಸ್ಯ-ಜೀವನ, ಕಾಣಖಂಜಾದಿ-ದೋಷತಃ-ಕಾಣ (ಒಕ್ಕಣ್ಣು) ಖಂಜ (ಹೆಳವ) ಮೊದಲಾದ (ಪಾಪನಿಮಿತ್ತಕ) ದೋಷಗಳಿಂದ, ತಥಾ-ಹಾಗೆ ಹಾಗೆ, ಅವಯವ ದಾರ್ಢ್ಯಾದಿ-ಕಣ್ಣುಕಾಲುಗಳ ದಾರ್ಢ್ಯ (ದೃಢವಾಗಿರುವಿಕೆ ಅಥವಾ ಊನತ್ವ) ಮೊದಲಾದವುಗಳು, [ಜಾಯತೇ-(ಹಿಂದಿನ ಶ್ಲೋಕದಿಂದ ಅನುಕರ್ಷಮಾಡಿಕೊಳ್ಳಬೇಕು.) ಉಂಟಾಗುವುದೋ] ಸಾ ಮಾಯಾ ಇತ್ಯಾದಿ.

ಏಷಃ-ಈ, ಮೃದುಃ-ಕೋಮಲವಾದ, ಗರ್ಭಃ-ಗರ್ಭವು, ಭಕ್ಷಣೇನ ವಿನಾಪಿವ-(ಆಹಾರಾದಿ) ಭಕ್ಷಣವಿಲ್ಲದೇ, ಶ್ವಾಸರೋಧಾದಿ ಪೀಡನಾತ್-ಉಸಿರು ಕಟ್ಟುವ ಮೊದಲಾದ ಹಿಂಸೆಯಿಂದ ಸಹ, ಜೀವತ್ಯೇವ-ಬದುಕಿಯೇ ಇರುತ್ತದೆ (ಉಸಿರುಗಟ್ಟಿ ಸಾಯದೇ ಬದುಕಿರುವುದೂ ಸಹ, ಸಾ ಮಾಯಾ ಇತ್ಯಾದಿ);

---

ಸಹ ಕಣ್ಣು ಕಾಣಿಸುವುದಿಲ್ಲ; ಕೆಲವು ರಾತ್ರಿಯಲ್ಲಿ ನೋಡಲಾರವು—ಇನ್ನೂ ಕೆಲವು ಹಗಲಲ್ಲಿಯೇ ಕಾಣಲಾರವು; ಕೆಲವು ಪ್ರಾಣಿಗಳಂತೂ ಸ್ಥಲಜಲಗಳಲ್ಲಿ (ಭೂಮಿಯ ಮೇಲೆ ಮತ್ತು ನೀರೊಳಗೆ ಸಹ) ನೋಡಬಲ್ಲವು; ಕೆಲವು ಪ್ರಾಣಿಗಳು ರೆಕ್ಕೆಗಳಿಲ್ಲದೇ ಹಾರುತ್ತವೆ; ಮತ್ತೆ ಕೆಲವು ಬಹು ದೊಡ್ಡ ರೆಕ್ಕೆಗಳಿದ್ದರೂ ಅಷ್ಟು ದೂರ ಅಥವಾ ಎತ್ತರದಲ್ಲಿ ಹಾರಲಾರವು; ಭೂಮಿಯಲ್ಲಿ ಮತ್ತು ಜಲದಲ್ಲಿ ಆಯಾ ಸ್ಥಾನವಿಶೇಷಗಳನ್ನನುಸರಿಸಿ, ವಿಚಿತ್ರವಾದ ಬಹು ವಸ್ತುಗಳು ಹುಟ್ಟುತ್ತವೆ; ಈ ಎಲ್ಲವೂ ನನ್ನ ಮಾಯಾಬಲದಿಂದ ಸಂಭವಿಸುತ್ತವೆ; ಆ ಮಾಯಾಬಲವು ಅಚಿಂತ್ಯವಾದುದು, ಸರ್ವೋತ್ಕೃಷ್ಟವಾದುದು (೨೯-೪೦). ಹೇ ಬ್ರಹ್ಮ! ನನ್ನಿಂದ ಸೃಷ್ಟವಾದ ಯಾವುದೊಂದು ವಸ್ತುವನ್ನು

ಮೃದುಃ ಗರ್ಭಃ-ಮೃದುವಾದ ಗರ್ಭವು, ಮಾತುಃ-ತಾಯಿಯ, ಜಠರದಾಹೇನ-ಜಠರಾಗ್ನಿಯ ತಾಪದಿಂದ, ಪೀಡ್ಯಮಾನೋಽಪಿ-ಪೀಡಿಸಲ್ಪಟ್ಟರೂ, ಅಧೋಮುಖಃ-ಮುಖ ಕೆಳಗೆಮಾಡಿ ಮಲಗಿ, ಜೀವತಿ ಏವ-ಬದುಕಿಯೇ ಇರುತ್ತದೆ; ಇದು ಸಾ ಮಾಯಾ ಇತ್ಯಾದಿ;

ಏಷಃ-ಈ ಗರ್ಭವು, ಅಪಕ್ವಃ ಅಪಿ-ಪಕ್ವವಾಗದಿದ್ದರೂ (ಪೂರ್ತಿ ಬೆಳೆಯದಿದ್ದರೂ ಕಾಲಕ್ಕೆ ಮೊದಲೇ), ಪತತಿ-(ಹೊರಗೆ) ಬೀಳುತ್ತದೆ; ಅಯಂ-ಅದು, ಪಕ್ವಃ ಅಪಿ-ಪಕ್ವವಾಗಿದ್ದರೂ (ಹತ್ತುತಿಂಗಳು ಅಥವಾ ನಿರ್ದಿಷ್ಟಕಾಲಾವಧಿಯು ಮುಗಿದಿದ್ದರೂ), ನ ಪತತಿ-ಹೊರಗೆ ಬರುವುದಿಲ್ಲ (ಪ್ರಸವವಾಗುವುದಿಲ್ಲ); ಇಚ್ಛಯಾ-ನಮ್ಮ ಇಚ್ಛೆಯಿಂದ (ತಾಯಿಯ ಇಚ್ಛೆಯಂತೆ), ಬಹಿಃ ನೈವ ಯಾತಿ-ಹೊರಗೆ ಬರುವುದೇ ಇಲ್ಲ ಇದು, ಸಾ ಮಾಯಾ ಇತ್ಯಾದಿ;

(ಅದೇ ಗರ್ಭವು, ಋಜುಮಾರ್ಗೇಣ-ಸರಿಯಾದ ಮಾರ್ಗದಿಂದ, ಆಯಾತಿ-ಹೊರಗೆ ಬರುತ್ತದೆ; ಅಪಿ-ಮತ್ತು, ಅನ್ಯಂ ಮಾರ್ಗಂ-ಬೇರೆ ಮಾರ್ಗವನ್ನೂ ವಿಶತಿ-ಹೊಂದುತ್ತದೆ; ಅಪಿ-ಮತ್ತೂ (ಎಷ್ಟೋ ವೇಳೆ), ಅನೃಜುಃ-ನೇರವಾದ (ಸರಿಯಾದ) ಮಾರ್ಗವನ್ನು ಬಿಟ್ಟು ಅಮಾರ್ಗದಲ್ಲಿ (ತಲೆಕೆಳಗಾಗಿ, ಕಾಲುಮುಂದಾಗಿ), ಜಾಯತೇ-ಹೊರಗೆ ಬರುತ್ತದೆ; ಇದು, ಸಾ ಮಾಯಾ ಇತ್ಯಾದಿ;

ಏಷಃ-ಪ್ರಸವವಾದ ಗರ್ಭವು (ಹುಟ್ಟಿದ ಶಿಶುವು), ಜಾತಮಾತ್ರಃ-ಹುಟ್ಟಿದಕೂಡಲೆ (ಅನ್ಯಶಿಕ್ಷಾದಿಗಳಿಲ್ಲದೇ, ಯಾರೂ ಹೇಳಿಕೊಡದೇ), ಸ್ತನಂ-(ತಾಯಿಯ) ಮೊಲೆಯನ್ನು ಪಿಬತಿ-ಕುಡಿಯುತ್ತದೆ, ತತ್-ಆ ಕಾರಣಕ್ಕಾಗಿ (ತಸ್ಮಾತ್), ರೋರೂಯತೇ ಹಿ-ಅಳುವುದೆಂಬುದೂ ಲೋಕಸಿದ್ಧವೇ; ನಾನಾಚೇಷ್ಟಾಶ್ಚ-ವಿವಿಧವಾದ ಚಲನಾದಿ ಕ್ರಿಯೆಗಳನ್ನೂ ಕುರುತೇ-ಮಾಡುತ್ತದೆ; ಇದು, ಸಾ ಮಾಯಾ ಇತ್ಯಾದಿ;

ವೃಕ್ಷಾದಿ ಪತ್ರಪುಷ್ಪಾದೌ-ವೃಕ್ಷಾದಿಗಳ ಪತ್ರ (ಎಲೆ) ಪುಷ್ಪಗಳಲ್ಲಿ ಚಿತ್ರಾಕಾರಃ-ಬಹುವಿಧದ ಆಕಾರಗಳು, ಮತ್ತು ವಿಚಿತ್ರವರ್ಣಗಂಧಾದಿ-ಚಿತ್ರವಿಚಿತ್ರಗಳಾದ ಬಣ್ಣ ಮತ್ತು ಗಂಧ (ವಾಸನೆ)ಗಳು, ಜಾಯತೇ-ಉಂಟಾಗುತ್ತವೆ; ಇದು, ಸಾ ಮಾಯಾ ಇತ್ಯಾದಿ;

ಏಷಃ-ಈ, ಕಾಷ್ಠಭಾರಃ-ಬಹುತೂಕದ (ಭಾರವಾದ) ಕಾಷ್ಠವು, (ಮರದ ಕೊಂಬೆ ಮೊದಲಾದವು), ಸ್ವಯಂ-ತಾನೂ, ತರತಿ-(ಜಲಾಶಯಾದಿಗಳನ್ನು) ತೇಲಿಕೊಂಡು ಹೋಗಿ ದಾಟುತ್ತದೆ; ತಾರಯೇತ್-(ಅದನ್ನಾಶ್ರಯಿಸಿದ ಅನ್ಯರನ್ನೂ) ದಾಟಿಸುತ್ತದೆ; ಶಿಲಾಖಂಡಂ-ಕಲ್ಲುಹರಳು (ಅತಿಚಿಕ್ಕದೂ ಹಗುರವೂ ಆಗಿದ್ದರೂ), ಮಜ್ಜಯೇತ್ ಚ-ಮುಳುಗಿಯೇ ಹೋಗುತ್ತದೆ; ಇದು, ಸಾ ಮಾಯಾ ಇತ್ಯಾದಿ;

---

ವಿಮರ್ಶಿಸಿದರೂ, ಅದ್ಭುತವೇ ಆಗಿರುತ್ತದೆ; ಏಕೆಂದರೆ, ಅನ್ಯರಾರೂ ಅಂಥ ವಸ್ತುಸಮುದಾಯವನ್ನು—ಅವುಗಳಲ್ಲಿ ಯಾವುದೊಂದನ್ನಾಗಲಿ, ಸೃಷ್ಟಿಮಾಡಲು ಶಕ್ತರಲ್ಲ ಸೃಷ್ಟಿ ಮಾಡುವುದಿರಲಿ! ಈ ಪಂಡಿತಂಮನ್ಯನಾದ ಮೂಢನು ನಾನು ಹೇಗೆ

ಕೇಚಿತ್ ಜೀವಾಃ-ಕೆಲವು ಪ್ರಾಣಿಗಳು, ನಿರ್ಮಗ್ನಚಕ್ಷುಷಃ-(ನೀರಲ್ಲಿ ಮುಳುಗಿ) ಕಣ್ಣುಮುಚ್ಚಿಕೊಂಡು, ಜಲೇ-ನೀರಲ್ಲಿ ನ ಪಶ್ಯಂತಿ-ನೋಡಲಾರವು; ಕೇಚಿತ್-ಮತ್ತೆ ಕೆಲವು ಪ್ರಾಣಿಗಳು, ಸ್ಥಲೇ-ಸ್ಥಲದಲ್ಲಿ (ನೀರಿನ ಮೇಲೆ-ಭೂಮಿಯಲ್ಲಿದ್ದು), ನ ಪಶ್ಯಂತಿ-ಕಾಣುವುದಿಲ್ಲ(ನೋಡಲಾರವು); ಇದು, ಸಾ ಮಾಯಾ ಇತ್ಯಾದಿ; ಕೇಚಿತ್-ಕೆಲವು ಪ್ರಾಣಿಗಳು, ರಾತ್ರೌ-ರಾತ್ರಿಯಲ್ಲಿ (ಕತ್ತಲಲ್ಲಿ), ನ ಪಶ್ಯಂತಿ-ಕಾಣುವುದಿಲ್ಲ (ನೋಡಲಾರವು); ಅಪರೇ-ಮತ್ತೆ ಕೆಲವು ಪ್ರಾಣಿಗಳು, ದಿವಾ-ಹಗಲಲ್ಲಿ ತಥಾ-ನೋಡಲಾರವು; ಅನ್ಯೇ-ಇನ್ನೂ ಕೆಲವು ಪ್ರಾಣಿಗಳು, ಸ್ಥಲೇಜಲೇ-ಭೂಮಿ ಯಲ್ಲಿಯೂ ಜಲದಲ್ಲಿಯೂ ಪಶ್ಯಂತಿ-(ಕಣ್ಣಿಂದ) ನೋಡಬಲ್ಲವು; ಇದು, ಸಾ ಮಾಯಾ ಇತ್ಯಾದಿ;

ಪಕ್ಷಹೀನಾಃ-ರೆಕ್ಕೆಗಳಿಲ್ಲದ ಕೆಲವು ಪ್ರಾಣಿಗಳು, ಉಡ್ಡೀಯಂತೇ-ಹಾರಬಲ್ಲವು; ತಥಾಪರೇ-ಬೇರೆ ಕೆಲವು ಪ್ರಾಣಿಗಳು, ಮಹಾಪಕ್ಷಾ-ದೊಡ್ಡ ರೆಕ್ಕೆಗಳುಳ್ಳವಾದರೂ, ಉಡ್ಡನಂ-(ರೆಕ್ಕೆಗಳಿಲ್ಲದ ಪ್ರಾಣಿಗಳು ಹಾರುವಷ್ಟು ಸಹ) ಹಾರುವುದನ್ನು ನೈವ ಪ್ರಕುರ್ವಂತಿ-ಮಾಡುವುದಿಲ್ಲ ಇದು ಸಾ ಮಾಯಾ ಇತ್ಯಾದಿ;

ಸ್ಥಲೇವಾಪಿ-ಭೂಮಿಯಲ್ಲಿ ಆಗಲಿ, ಜಲೇವಾಪಿ-ನೀರಿನಲ್ಲಾಗಲಿ, ತತ್ತತ್ಸ್ಥಾನವಿಶೇಷತಃ-ಆಯಾ ಸ್ಥಾನವಿಶೇಷದಿಂದ (ಆಯಾ ಸ್ಥಾನದ ಪ್ರಭಾವವ್ಯತ್ಯಾಸಗಳನ್ನನುಸರಿಸಿ), ವಿವಿಧಂ-ಬಹುವಿಧಗಳಾದ, ವಸ್ತು-ವಸ್ತುಸಮುದಾಯಗಳು, ಜಾಯತೇ-ಉತ್ಪನ್ನವಾಗುತ್ತವೆ; ಈ ಶಕ್ತಿಯು ಸಾ ಮಾಯಾ ಇತ್ಯಾದಿ.

ವಿಚಾರಿತೇಽಖಿಲಂ ವಸ್ತು ಯದ್ಯತ್ಸೃಷ್ಟಂ ಮಯಾ ವಿಧೇ ।
ವಿಚಿತ್ರಮೇವ ಮನ್ಯಸ್ವ ಯತಃ ಶಕ್ತೋ ನ ಹೀತರಃ ॥ ೪೧ ॥

ಕರ್ತುಂ ಚೇಷ್ಟಯಿತುಂ ವಾಪಿ ಕಥಂ ವಾಪಿ ಮಯಾ ಕೃತಂ ।
ಜಾನಾತಿ ನೈವ ಮೂಢೋಽಯಂ ವೃಥಾ ಪಂಡಿತಮಾನವಾನ್ ॥ ೪೨ ॥

ವಿಧೇ-ಹೇ ಬ್ರಹ್ಮ!, ಮಯಾ-ನನ್ನಿಂದ, ಯದ್ಯತ್-ಯಾವು ಯಾವುದು, ಸೃಷ್ಟಂ-ಸೃಷ್ಟವಾದುದೋ, ಅಖಿಲಂವಸ್ತು-ಆ ಸಮಸ್ತ ವಸ್ತು ಸಮುದಾಯವೂ (ಪ್ರತಿಯೊಂದೂ), ವಿಚಾರಿತೇ-(ಆಳವಾಗಿ) ವಿಮರ್ಶೆ ಮಾಡಿದರೆ, ವಿಚಿತ್ರಂ ಏವ-ಆಶ್ಚರ್ಯಕರವಾದುದೆಂದೇ, ಮನ್ಯಸ್ವ-ತಿಳಿಯುವವನಾಗು (ತಿಳಿಯುತ್ತೀಯೆ); ಯತಃ-ಏಕೆಂದರೆ, ಇತರಃ-(ನನ್ನನ್ನು ಬಿಟ್ಟು) ಮತ್ತೊಬ್ಬನು, ನ ಶಕ್ತಃ ಹಿ-(ನನ್ನ ಸೃಷ್ಟಿಸದೃಶವಾದ) ಯಾವುದೊಂದನ್ನು ಸೃಷ್ಟಿಸಲೂ ಸಮರ್ಥನಲ್ಲವೆಂಬುದು ಅನುಭವಸಿದ್ಧವಾಗಿದೆ.

---

ಸೃಷ್ಟಿಸುವನೆಂಬುರನ್ನೇ ತಿಳಿಯನು; ಸದೃಶ ಸೃಷ್ಟಿಯಲ್ಲಿ ಪೂರ್ಣ ಅಸಮರ್ಥನಾದ ಈ ಅಜ್ಞನು, ಸೃಷ್ಟವಾದ ವಸ್ತುಗಳನ್ನು ನನ್ನಂತೆ ಚೇಷ್ಟಿಸುವುದಕ್ಕೆ (ಅವುಗಳಿಂದ ನಾನಾ ಕ್ರಿಯೆಗಳನ್ನು ಮಾಡಿಸಲು) ಸಮರ್ಥರಾಗಬಹುದೇ? ಸರ್ವಥಾ ಇಲ್ಲ (೪೧-೪೨).

ವೃಥಾಪಂಡಿತಮಾನವಾನ್–ವ್ಯರ್ಥವಾಗಿ (ತನ್ನನ್ನು) ಪಂಡಿತನೆಂದು ತಿಳಿದು ಕೊಳ್ಳುವ, ಅಯಂ ಮೂಢಃ–ಈ ಮೂರ್ಖನು, ಮಯಾ–ನನ್ನಿಂದ, ಕಥಂವಾ–ಹೇಗೆ, ಕೃತಂ–(ನಾನಾವಸ್ತುಗಳು) ಮಾಡಲ್ಪಟ್ಟವು (ನಿರ್ಮಿಸಲ್ಪಟ್ಟವು), ಅಪಿ–ಮತ್ತು, ಕರ್ತುಂ–(ತಾನು ಹಾಗೆ) ನಿರ್ಮಿಸಲಿಕ್ಕೂ, ವಾ–ಅಥವಾ, ಚೇಷ್ಟಯಿತುಂ–(ಆಯಾ ವಸ್ತುಗಳಿಂದ) ನಾನಾಕ್ರಿಯೆಗಳನ್ನು ಮಾಡಿಸಲಿಕ್ಕೂ, ನ ಜಾನಾತಿ ಏವ–ತಿಳಿಯುವುದೇ ಇಲ್ಲ (ಇದು ನಿಶ್ಚಿತವು).

**ಸರ್ವೇಷಾಮಪಿ ವಿದ್ಯಾನಾಂ ಸರ್ವಶಿಲ್ಪಾದಿಕಸ್ಯ ಚ ।**
**ಅಹಮೇವ ಗುರುರ್ಮುಖ್ಯಸ್ತತ್ತದ್ವಿದ್ಯಾಪ್ರದರ್ಶನಾತ್ ॥ ೪೩ ॥**

**ನಾನಾರೂಪಧರೋ ಲೋಕೇ ನಾನಾಜೀವೇಷು ಸಂಸ್ಥಿತಃ ।**
**ದರ್ಶಯಾಮ್ಯಖಿಲಾ ವಿದ್ಯಾಸ್ತಥಾ ಶಿಲ್ಪಾನ್ಯನೇಕಶಃ ॥ ೪೪ ॥**

**ಅತೋ ಮಹಾಗುರುರಹಂ ಸ್ವತಂತ್ರಃ ಪೂರ್ಣಶಕ್ತಿಮಾನ್ ।**
**ಪೂರ್ಣಾನಂದಃ ಪೂರ್ಣತನುಃ ಪೂರ್ಣಜ್ಞಾನೋಽಖಿಲಾತ್ಮಕಃ ॥ ೪೫ ॥**

ಸರ್ವೇಷಾಂ–ಎಲ್ಲಾ, ವಿದ್ಯಾನಾಂ ಅಪಿ–ವಿದ್ಯೆಗಳಿಗೂ, ಚ–ಮತ್ತು, ಸರ್ವಶಿಲ್ಪಾದಿಕಸ್ಯ–ಎಲ್ಲ ವಿಧದ ಶಿಲ್ಪಕಲೆಗಳಿಗೂ, ತತ್ತದ್ವಿದ್ಯಾಪ್ರದರ್ಶನಾತ್–ಆಯಾ ವಿದ್ಯೆಗಳನ್ನು (ಜಗತ್ತಿನಲ್ಲಿ) ಪ್ರದರ್ಶನಮಾಡಿರುವುದರಿಂದ, ಅಹಂ ಏವ–ನಾನೇ, ಮುಖ್ಯಃ–ಮುಖ್ಯವಾದ, ಗುರುಃ–ಗುರುವು;

ನಾನಾರೂಪಧರಃ–ಬಹುರೂಪಗಳುಳ್ಳ ನಾನು, ಲೋಕೇ–ಲೋಕದಲ್ಲಿ, ನಾನಾಜೀವೇಷು–ವಿವಿಧ ಜೀವರಲ್ಲಿ, ಸಂಸ್ಥಿತಃ–(ತತ್ತದಾಕಾರನಾಗಿ ಅಂತರ್ಯಾಮಿಯಾಗಿ) ನಿಂತು, ಅಖಿಲಾಃ ವಿದ್ಯಾಃ–ಸಮಸ್ತವಿದ್ಯೆಗಳನ್ನು, ತಥಾ–ಹಾಗೂ, ಅನೇಕಶಃ–ಬಹುಪ್ರಕಾರದ, ಶಿಲ್ಪಾನಿ–ಶಿಲ್ಪಕಲೆಗಳನ್ನು, ದರ್ಶಯಾಮಿ–ತಿಳಿಸಿಕೊಡುತ್ತೇನೆ;

---

ಜಗತ್ತಿನಲ್ಲಿ ಸಕಲ ವಿದ್ಯೆಗಳನ್ನೂ ಸರ್ವವಿಧದ ಶಿಲ್ಪಕಲೆಗಳನ್ನೂ ಪ್ರದರ್ಶನಮಾಡುವವ ನಾದ್ದರಿಂದ, ನಾನೇ ಸರ್ವರ (ಸರ್ವವಿದ್ಯೆಗಳ ಮತ್ತು ಶಿಲ್ಪಗಳ ಉಪದೇಶಕನು) ಮುಖ್ಯಗುರುವು; ಆ ವಿದ್ಯೆ ಮತ್ತು ಶಿಲ್ಪಗಳ ಪ್ರವರ್ತಕರೆಂದು ತೋರುವ ಆಯಾ ಜನರಲ್ಲಿ ಅನಂತರೂಪಿಯಾದ ನಾನು, ತತ್ತದ್ರೂಪದಿಂದ ಅಂತರ್ಯಾಮಿಯಾಗಿ ನಿಂತು, ಸರ್ವವಿದ್ಯೋಪದೇಶಕನಾಗಿರುವೆನು; ಆದ್ದರಿಂದ ನಾನೇ ಮಹಾಗುರುವು—ಸ್ವತಂತ್ರನು (ನನಗೊಬ್ಬ ಗುರುವಿಲ್ಲ); ನಾನು ಅನಂತಶಕ್ತಿಯುತನು, ಪೂರ್ಣಾನಂದನು, ಅನಂತ ರೂಪನು, ಸರ್ವಜ್ಞನು, ಸರ್ವಾಂತರ್ಯಾಮಿಯೂ, ಸರ್ವಸ್ವಾಮಿಯೂ ಆಗಿರುವೆನು (೪೩-೪೫). ನಾನೇ ಸರ್ವವಸ್ತುಗಳಲ್ಲಿ ತತ್ತದಾಕಾರನಾಗಿ ಅಂತರ್ಯಾಮಿಯಾಗಿ ನಿಂತು,

ಅತಃ-ಆದ್ದರಿಂದ, ಅಹಂ-ನಾನು, ಸ್ವತಂತ್ರಃ-ಸ್ವತಂತ್ರನಾದ, ಮಹಾಗುರುಃ-ಮಹಾಗುರುವು, ಪೂರ್ಣಶಕ್ತಿಮಾನ್-ಅನಂತಸಾಮರ್ಥ್ಯವುಳ್ಳವನು, ಪೂರ್ಣಾನಂದಃ-ಪೂರ್ಣಾನಂದಸ್ವರೂಪನು, ಪೂರ್ಣಶನುಃ-ಅನಂತರೂಪಿಯು, ಪೂರ್ಣಜ್ಞಾನಃ-ಸರ್ವಜ್ಞನು (ಅನಂತಜ್ಞಾನಮೂರ್ತಿಯು), ಅಖಿಲಾತ್ಮಕಃ-ಸರ್ವಸ್ವಾಮಿಯು (ಸರ್ವಾಂತರ್ಯಾಮಿಯು) (ಆಗಿರುವೆನು).

**ಸರ್ವಾಕಾರಃ ಸರ್ವರೂಪಃ ಸರ್ವನಾಮಾಖಿಲೇಶ್ವರಃ ।**
**ನಾನಾ ವೇದಾಃ ಸ್ತುವಂತೀತ್ಥಂ ನಾನಾಕಾರಂ ಜಗದ್ಗುರುಂ ॥ ೪೬ ॥**

(ಅಹಂ-ನಾನು), ಸರ್ವಾಕಾರಃ-ಎಲ್ಲ ರೂಪಗಳುಳ್ಳವನು (ಅನಂತರೂಪನು-ಪೂರ್ಣಸ್ವರೂಪನು-ಎಲ್ಲ ರೂಪಗಳೂ ಪೂರ್ಣಗಳೇ-ಅನಂತಗುಣಪೂರ್ಣಗಳೇ), ಸರ್ವರೂಪಃ-ಎಲ್ಲ ಕಾಲದಲ್ಲಿ ಎಲ್ಲ ವಸ್ತುಗಳ ಸ್ವರೂಪ ರಕ್ಷಕನು; ಸರ್ವನಾಮಾ-ಎಲ್ಲ ವಸ್ತುಗಳ ಎಲ್ಲ ನಾಮಗಳೂ ನನ್ನವೇ (ಸರ್ವಶಬ್ದವಾಚ್ಯನು); ಅಖಿಲೇಶ್ವರಃ-ಸರ್ವತ್ರ ಸರ್ವರ ಸಕಲಾಭೀಷ್ಟಗಳನ್ನು ಕೊಡುವವನು ನಾನೇ; ಇತ್ಥಂ-ಹೀಗೆಂದು, ನಾನಾಕಾರಂ-ಅನಂತರೂಪನಾದ, ಜಗದ್ಗುರುಂ-ಜಗದ್ಗುರುವಾದ ನನ್ನನ್ನು ನಾನಾವೇದಾಃ- ಅನಂತ ವೇದಗಳು, ಸ್ತುವಂತಿ-ಸ್ತುತಿಸುತ್ತವೆ.

**ನಾನಾನಾಮಾನಮೀಶಾನಂ ಸ್ವಾತಂತ್ರ್ಯಾದಿಗುಣೈರ್ಯುತಂ ।**
**ಸ್ವಸ್ವಜ್ಞಾನಾನುಸಾರೇಣ ಸರ್ವೇ ಮಾಂ ಹಿ ವಿಜಾನತೇ ॥ ೪೭ ॥**

ಸ್ವಾತಂತ್ರ್ಯಾದಿಗುಣೈಃ-ಸ್ವಾತಂತ್ರ್ಯ ಮೊದಲಾದ ಗುಣಗಳಿಂದ, ಯುತಂ-ಕೂಡಿರುವ, ನಾನಾನಾಮಾನಂ-ಅನಂತ ನಾಮಗಳುಳ್ಳ (ಸರ್ವಶಬ್ದವಾಚ್ಯನಾದ), ಈಶಾನಂ-ಸರ್ವನಿಯಾಮಕನಾದ, ಮಾಂ-ನನ್ನನ್ನು, ಸರ್ವೇ-ಎಲ್ಲರೂ, ಸ್ವಸ್ವಜ್ಞಾನಾನುಸಾರೇಣ-ತಂತಮ್ಮ ಜ್ಞಾನಾನುಸಾರವಾಗಿ (ಸ್ವಯೋಗ್ಯಜ್ಞಾನಕ್ಕೆ ತಕ್ಕಷ್ಟು, ವಿಜಾನತೇ-ತಿಳಿಯುತ್ತಾರೆ.

---

ಸಕಲರ ಸರ್ವಾಭೀಷ್ಟಪ್ರದನಾಗಿರುವೆನು; ಅನಂತರೂಪನಾದ ನಾನು ಸರ್ವನಾಮಗಳಿಂದ ಕರೆಯಲ್ಪಡುವವನೂ ಸರ್ವನಾಮಗಳಿಂದ ಬೋಧ್ಯವಾದ ಸರ್ವಮಹಿಮೆಗಳುಳ್ಳವನೂ ಆಗಿರುವೆನು; ಅನಂತರೂಪಿಯೂ ಜಗದ್ಗುರುವೂ ಆದ ನನ್ನನ್ನು ಹೀಗೆಂದು, ಸಕಲ ವೇದಗಳೂ ಸ್ತುತಿಸುತ್ತವೆ (೪೬). ಎಲ್ಲ ಶಬ್ದಗಳೂ ಶ್ರೀವಿಷ್ಣುವಿನ ನಾಮಗಳೇ—ಆತನ ಮಹಿಮೆಗಳನ್ನೇ ಹೇಳುತ್ತವೆ; ಸರ್ವನಾಮನೂ, ಸ್ವಾತಂತ್ರ್ಯ ಮೊದಲಾದ (ಜ್ಞಾನ ಆನಂದಾದಿ) ಅನಂತ ಗುಣಪೂರ್ಣನೂ, ಸರ್ವನಿಯಾಮಕನೂ ಆದ ನನ್ನನ್ನು ಎಲ್ಲರೂ ತಂತಮ್ಮ ಜ್ಞಾನವಿದ್ದಷ್ಟು ತಿಳಿಯುತ್ತಾರೆ—ನನ್ನನ್ನು ಪೂರ್ಣವಾಗಿ ತಿಳಿಯುವವರು ಯಾರೂ ಎಲ್ಲಿಯೂ ಯಾವ ಕಾಲಕ್ಕೂ ಇಲ್ಲವೇ ಇಲ್ಲ (೪೭). ಸರ್ವ ಮುಕ್ತಿಯೋಗ್ಯಸ್ವರೂಪದ

ಭಜಂತಿ ಸ್ವಾನುರೂಪೇಣ ಪ್ರಾಪ್ನುವಂತಿ ಫಲಂ ತಥಾ ।
ಯ ಇದಂ ಮಮ ಚಾರಿತ್ರಂ ಚಿತ್ರಂ ಮಾಯಾವಿಜೃಂಭಿತಂ ॥ ೪೮ ॥

ಶೃಣುಯಾದ್ವಾ ಪಠೇದ್ವಾಪಿ ಸ ಭಕ್ತಿಂ ಮಯಿಂ ವಿಂದತಿ ।
ಗರ್ಭದುಃಖಂ ಚ ನಾಪ್ನೋತಿ ಲಭತೇ ಚ ಧನಂ ಸುತಾನ್ ॥ ೪೯ ॥

ಅಂತೇ ಮಲ್ಲೋಕಮಾಪ್ನೋತಿ ಸತ್ಯಂ ಸತ್ಯಂ ವದಾಮಿ ತೇ ॥ ೫೦ ॥

(ಸರ್ವೇ—ಎಲ್ಲರೂ), ಸ್ವಾನುರೂಪೇಣ—ಸ್ವಯೋಗ್ಯತೆಯಂತೆ, ಭಜಂತಿ—(ನನ್ನನ್ನು) ಸೇವಿಸುತ್ತಾರೆ; ತಥಾ—ಹಾಗೆ (ಭಜನಾನುಸಾರವಾಗಿ), ಫಲಂ—ಫಲವನ್ನು ಪ್ರಾಪ್ನುವಂತಿ—ಹೊಂದುತ್ತಾರೆ; ಮಾಯಾವಿಜೃಂಭಿತಂ—ನನ್ನ ಇಚ್ಛೆಯಿಂದ ವಿಜೃಂಭಿಸುವ (ನನ್ನ ಇಚ್ಛಾನುಸಾರವಾದ ವೃದ್ಧಿಯುಳ್ಳ—ಇಚ್ಛಾನುಸಾರವ್ಯಕ್ತಗೊಂಡು ವಿರಾಜಿಸುವ), ಚಿತ್ರಂ—ಆಶ್ಚರ್ಯಕರವಾದ (ಅದ್ಭುತವಾದ), ಇದಂ—ಈ, ಮಮ—ನನ್ನ ಚಾರಿತ್ರಂ— ಚರಿತ್ರೆಯನ್ನು (ಲೀಲೆಯನ್ನು), ಯಃ—ಯಾವ ಅಧಿಕಾರಿಯು (ಮುಕ್ತಿಯೋಗ್ಯಜೀವನು), ಶೃಣುಯಾತ್—(ಗುರುಮುಖದಿಂದ) ಶ್ರವಣಮಾಡುವನೋ, ವಾ—ಮತ್ತು ಪಠೇತ್ ವಾಪಿ—ಪಠನವನ್ನೂ ಮಾಡುತ್ತಾನೋ (ಮನನಾರ್ಥವಾಗಿ ಪಾರಾಯಣಾದಿರೂಪದಿಂದ ಪಠಿಸುವನೋ), ಸಃ—ಆತನು, ಮಯಿ—ನನ್ನಲ್ಲಿ ಭಕ್ತಿಂ—ಭಕ್ತಿಯನ್ನು ವಿಂದತಿ—ಹೊಂದುತ್ತಾನೆ; ಧನಂ—ಐಶ್ವರ್ಯವನ್ನು ಚ—ಮತ್ತು ಸುತಾನ್—(ಯೋಗ್ಯ)ಸಂತಾನವನ್ನೂ, ಲಭತೇ—ಹೊಂದುತ್ತಾನೆ, ಗರ್ಭದುಃಖಂ ಚ—(ಮಾತ್ರ) ಗರ್ಭವಾಸದ ದುಃಖವನ್ನೂ ನ ಆಪ್ನೋತಿ—ಹೊಂದುವುದಿಲ್ಲ ಅಂತೇ—ಕೊನೆಗೆ (ಹೀಗೆ ಐಹಿಕ ಸುಖಭೋಗಗಳನ್ನೂ ಹೊಂದಿದ ನಂತರ), ಪ್ರಾರಬ್ಧಭೋಗಾನಂತರ, ಮಲ್ಲೋಕಂ—ನನ್ನ (ವೈಕುಂಠ ಮೊದಲಾದ) ಮುಕ್ತಸ್ಥಾನವನ್ನು ಆಪ್ನೋತಿ—ಹೊಂದುತ್ತಾನೆ; ತೇ—ನಿನಗೆ, (ಹೇ ಬ್ರಹ್ಮ!), ಸತ್ಯಂ ಸತ್ಯಂ—ಆದರಪೂರ್ವಕ ಯಥಾರ್ಥವನ್ನೇ (ನಿಜವನ್ನೇ), ವದಾಮಿ—ಹೇಳುತ್ತೇನೆ.

---

ಜೀವರೂ ನನ್ನನ್ನು ಸ್ವಯೋಗ್ಯತಾನುಸಾರವಾಗಿ ಸೇವಿಸುತ್ತಾರೆ ಮತ್ತು ಸೇವಾನುಸಾರವಾದ ಫಲವನ್ನೂ ಹೊಂದುತ್ತಾರೆ; ಸ್ವೇಚ್ಛಾನುಸಾರ ವಿಜೃಂಭಿಸುವ ನನ್ನ ಈ ಅದ್ಭುತವಾದ ಲೀಲೆಯನ್ನು ಶ್ರವಣಮಾಡುವ ಮತ್ತು ಪಠನಮಾಡುವ ಪ್ರತಿಯೊಬ್ಬ ಅಧಿಕಾರಿಜೀವನೂ, ನನ್ನಲ್ಲಿ ಶ್ರೇಷ್ಠಭಕ್ತಿಯನ್ನು ಹೊಂದುತ್ತಾನೆ; ಐಶ್ವರ್ಯ ಸಂತಾನಾದಿ ನಾನಾ ಸುಖ ಭೋಗಗಳನ್ನು ಅನುಭವಿಸಿ, ಭಕ್ತಿಲಭ್ಯವಾದ ನನ್ನ ಪ್ರಸಾದದಿಂದ, ಗರ್ಭವಾಸ ದುಃಖರಹಿತನಾಗಿ (ಪುನಃ ಸಂಸಾರಕ್ಕೆ ಬರದೇ—ಜನನಮರಣ ರೂಪದ ಸುಳಿವಿನಲ್ಲಿ ಸಿಕ್ಕದೇ), ವೈಕುಂಠಾದಿ ಲೋಕಗಳನ್ನು ಹೊಂದುತ್ತಾನೆ (೪೮-೫೦).

ಮಾಯಾಚರಿತ್ರಕಥನವೆಂಬ ನಾಲ್ಕನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೫

ಬ್ರಹ್ಮೋವಾಚ—

ಪೂರ್ಣಾನಂದೋಽಪಿ ಭಗವಾನ್ ಕಿಮರ್ಥಂ ಸೃಷ್ಟಿಮಾತನೋತ್ ।
ಪ್ರಾಪ್ತವಾನ್ ಕಿಂ ವ ಸೃಷ್ಟ್ಯಾ ಸ ಕಥಂ ಪೂರ್ಣಸ್ತಥಾ ಸತಿ ॥ ೧ ॥

ಭಗವಾನ್–ಭಗವಂತನು (ಶ್ರೀವಿಷ್ಣುವು), ಪೂರ್ಣಾನಂದಃ ಅಪಿ–ಆನಂದ ಪೂರ್ಣನಾದರೂ, ಕಿಮರ್ಥಂ–ಯಾವ ಪ್ರಯೋಜನಕ್ಕಾಗಿ, ಸೃಷ್ಟಿಂ–ಸೃಷ್ಟಿಯನ್ನು ಆತನೋತ್–ಮಾಡಿದನು?, ಸೃಷ್ಟ್ಯಾ–ಸೃಷ್ಟಿಯಿಂದ (ಸೃಷ್ಟಿಮಾಡಿದ್ದರಿಂದ), ಕಿಂ ನು–ಏನನ್ನು (ಯಾವ ಪ್ರಯೋಜನವನ್ನು), ಪ್ರಾಪ್ತವಾನ್–ಹೊಂದಿದನು?, ತಥಾ ಸತಿ–ಹಾಗೆ ಆದರಿಂದ ಏನಾದರೂ ಪ್ರಯೋಜನವನ್ನು ಹೊಂದಿದ್ದರೆ, ಸಃ–ಆತನು, ಪೂರ್ಣಃ–ಪೂರ್ಣನು, ಕಥಂ–ಹೇಗೆ ? (ಹೊಸ ಪ್ರಯೋಜನವನ್ನು ಹೊಂದಿದರೆ ಆ ಮೊದಲು–ಸೃಷ್ಟಿಗೆ ಮೊದಲು ಅಪೂರ್ಣನೆಂದಾಗುವುದಿಲ್ಲವೇ ?)

ಶ್ರೀ ಹಯಗ್ರೀವ ಉವಾಚ—

ಯ ಏವ ಆನಂದವಾನ್ ಲೋಕೇ ಸ ಕ್ರೀಡಾಂ ತನುತೇ ಭೃಶಂ ।
ಅತಿ ಚಿತ್ರಾಣಿ ಕರ್ಮಾಣಿ ಸ ಏವ ತನುತೇ ಯತಃ ॥ ೨ ॥

ಲೋಕೇ–ಲೋಕದಲ್ಲಿ ಯಃ–ಯಾವಾತನು, ಆನಂದವಾನ್–ಆನಂದವುಳ್ಳವನೋ, ಸಃ ಏವ–ಆತನೇ, ಭೃಶಂ–ಅತಿಶಯವಾಗಿ, ಕ್ರೀಡಾಂ–ಕ್ರೀಡೆಯನ್ನು(ಲೀಲೆಗಾಗಿ ನಾನಾ ಚೇಷ್ಟೆಗಳನ್ನು), ತನುತೇ–ಮಾಡುತ್ತಾನೆ; ಯತಃ–ಯಾವ ಕಾರಣದಿಂದ (ಆನಂದವುಳ್ಳವನಾದ ಕಾರಣದಿಂದಲೇ), ಅತಿ ಚಿತ್ರಾಣಿ–ಬಹುಪ್ರಕಾರದ (ಆಶ್ಚರ್ಯಕರಗಳಾದ), ಕರ್ಮಾಣಿ–ಕೃತಿಗಳನ್ನು ಸಃ ಏವ–ಆತನೇ, ತನುತೇ–ಮಾಡುತ್ತಾನೆ (ಸುಖಿಗಳಲ್ಲದವರಲ್ಲ)

ನರಾ ಅಶ್ವಾಶ್ಚ ಗೋಜಾವಿಮುಖಾ ಯೇ ಪಶವೋಽಪಿ ಹಿ ।
ಕ್ರೀಡಂತ್ಯಾನಂದತೋ ಲೋಕೇ ಪೂರ್ಣಾನಂದೋ ಹರಿಃ ಕಿಮು ॥ ೩ ॥

---

ಪೂರ್ಣಾನಂದನಾದ ಶ್ರೀವಿಷ್ಣು ಜಗತ್ತನ್ನೇಕೆ ಸೃಷ್ಟಿಸಿದನು? ಅದರಿಂದ ಆತನು ಏನಾದರೂ ಪ್ರಯೋಜನವನ್ನು ಹೊಂದಿದನೆಂದರೆ, ಸೃಷ್ಟಿ ಪೂರ್ವದಲ್ಲಿ ಹೊಂದಬೇಕಾದ ಪ್ರಯೋಜನವುಳ್ಳವನಾದ್ದರಿಂದ (ಪ್ರಾಪ್ತವ್ಯ ಪ್ರಯೋಜನವುಳ್ಳವನಾದ್ದರಿಂದ) ಅಪೂರ್ಣನೆಂದು ಸಿದ್ಧನಾಗುವುದಿಲ್ಲವೇ ? (೧). ಲೋಕದಲ್ಲಿ ಆನಂದವುಳ್ಳವನೇ ಕ್ರೀಡಿಸುವುದನ್ನು ಕಾಣುತ್ತೇವೆ; ಆತನೇ ಬಹುಪರಿಯ ಆಶ್ಚರ್ಯಕರ ಕೃತಿಗಳಲ್ಲಿ ತೊಡಗುತ್ತಾನೆ—ಅನ್ಯ

**ಚಿಂತಾಮಗ್ನೋ ಜ್ವರೇಣಾರ್ತಃ ಸ್ವಪ್ತುಂ ಶಕ್ನೋತಿ ನೋ ಸುಖಂ ।**
**ಯಃ ಸ ಕಿಂ ಕ್ರೀಡತೇ ತಸ್ಯ ಯತಃ ಸರ್ವಂ ವಿಷಾಯತೇ ॥ ೪ ॥**

**ಯಥಾನಂದಸ್ತಥಾ ಕ್ರೀಡಾ ಯಥಾನಂದಸ್ತಥೋದ್ಯಮಃ ।**
**ಮಹಾನಂದಸ್ಯ ಮಹತೀ ತಥಾ ಕ್ರೀಡೇಯಮೀರಿತಾ ॥ ೫ ॥**

ನರಾಃ–ಮನುಷ್ಯರು, ಗೋಜಾವಿಮುಖಾಃ–ಗೋವು, ಮೇಕೆ, ಕುರಿ ಮುಂತಾದ, ಯೇ–ಯಾವ, ಪಶವಃ ಅಪಿ–ಪಶುಗಳು ಸಹ, ಲೋಕೇ–ಲೋಕದಲ್ಲಿ, ಆನಂದತಃ–ಆನಂದದಿಂದಲೇ (ಆನಂದದಿಂದ ಇರುವಾಗಲೇ), ಕ್ರೀಡಂತಿ ಹಿ–ಕ್ರೀಡಿಸುತ್ತವೆಯಷ್ಟೆ (ಆಟಪಾಟವಿಹಾರಗಳಲ್ಲಿ ತೊಡಗುತ್ತವೆ); ಪೂರ್ಣಾನಂದಃ–ಪೂರ್ಣಾನಂದವುಳ್ಳ, ಹರಿಃ–ಶ್ರೀಹರಿಯು, ಕಿಮು–ಆಶ್ಚರ್ಯಕರವಾಗಿ ಕ್ರೀಡಿಸುತ್ತಾನೆಂದು ಹೇಳಲೇನಿದೆ? (ಆನಂದದ ಉದ್ರೇಕದಿಂದಲೇ ಜಗತ್ತಿನ ಸೃಷ್ಟಿ ಮೊದಲಾದ ಕ್ರೀಡೆಯು ಸಂಭವಿಸುತ್ತದೆ);

ಚಿಂತಾಮಗ್ನಃ–ಚಿಂತೆಯಲ್ಲಿ ಮುಳುಗಿದವನು, ಜ್ವರೇಣ–ಜ್ವರದಿಂದ, ಆರ್ತಃ–ದುಃಖಪಡುವವನೂ, ಸುಖಂ–ಸುಖವಾಗಿ, ಸ್ವಪ್ತುಂ–ನಿದ್ರಿಸಲೂ, ನೋ ಶಕ್ನೋತಿ–ಶಕ್ತನಾಗುವುದಿಲ್ಲ; ಯಃ–ಯಾವ, ಸಃ–ಆತನು, ಕಿಂ ಕ್ರೀಡತೇ–ಆಟವನ್ನೇನು ಆಡುತ್ತಾನೆ? (ಕ್ರೀಡಿಸಲು ಅಸಮರ್ಥನೇ ಸರಿ); ಯತಃ–ಏಕೆಂದರೆ, ತಸ್ಯ–ಆತನಿಗೆ (ದುಃಖವುಳ್ಳವನಿಗೆ), ಸರ್ವಂ–ಎಲ್ಲವೂ, ವಿಷಾಯತೇ–ವಿಷದಂತೆ ಬೇಸರವಾಗುತ್ತದೆ; (ಆದ್ದರಿಂದ). ಯಥಾ–ಹೇಗೆ ಹೇಗೆ, ಆನಂದಃ–ಆನಂದವೋ (ಆನಂದವು ಎಷ್ಟೆಷ್ಟು ಅಧಿಕವೋ), ತಥಾ–ಹಾಗೆ ಹಾಗೆ (ಅಷ್ಟಷ್ಟು), ಕ್ರೀಡಾ–ಕ್ರೀಡೆಯಲ್ಲಿ ಆಸಕ್ತಿಯು ಇರುತ್ತದೆ; (ಶಕ್ತಿಯು ಇರುತ್ತದೆ); ಯಥಾ ಆನಂದಃ–ಆನಂದದ ಆಧಿಕ್ಯತೆಗೆ ಅನುಗುಣವಾಗಿ,

---

ರಲ್ಲ (೨). ಲೋಕದಲ್ಲಿ ಮನುಷ್ಯರು—ಅಷ್ಟೇಕೆ, ಹಸು ಮೇಕೆ ಕುರಿ ಮೊದಲಾದ ಪಶುಗಳು ಸಹ, ಆನಂದದಿಂದಿರುವಾಗ ಮಾತ್ರ ಕ್ರೀಡಿಸುತ್ತವೆ; ಚಿಂತೆಯಲ್ಲಿ ಮುಳುಗಿದವನೂ, ಜ್ವರಾದಿಗಳಿಂದ ನರಳುವ (ದುಃಖಿಸುವ) ಮನುಷ್ಯನೂ, ಸುಖದಿಂದ ನಿದ್ರಿಸಲು ಸಹ ಅಸಮರ್ಥನಾಗಿರುವುದು ಕಂಡುಬರುತ್ತದೆ; ಅಂಥವನು ಯಾವ ಕ್ರೀಡೆಯಲ್ಲಿ ತೊಡಗಬಹುದು? ಯಾವ ಆಟವನ್ನು ಆಡಬಹುದು? ಆತನಿಗೆ (ಹಾಗೆ ದುಃಖಿಯಾದವನಿಗೆ) ಕ್ರೀಡಾದಿಗಳು ಯಾವುವೂ (ಅಷ್ಟೇಕೆ ಆಹಾರ ವಿಹಾರಗಳು ಸಹ) ವಿಷಪ್ರಾಯವಾಗುತ್ತವೆ; ಆದ್ದರಿಂದ ಆನಂದವು ಅಧಿಕವಾದಂತೆ, ಕ್ರೀಡಾದಿಗಳಲ್ಲಿ ಆಸಕ್ತಿಯೂ ಹೆಚ್ಚುವುದೆಂದು ಸಿದ್ಧವಾಗುತ್ತದೆ; ಸರ್ವೋತ್ಕೃಷ್ಟವಾದ ಪೂರ್ಣಾನಂದ ಸ್ವರೂಪನೇ ಆದ, ದುಃಖಲೇಶಸ್ಪರ್ಶವು ಎಂದೂ ಇಲ್ಲದ ಶ್ರೀಹರಿಯಿಂದಲೇ, ಈ ಅತ್ಯದ್ಭುತವಾದ ಜಗತ್ಸೃಷ್ಟ್ಯಾದಿ ಕ್ರೀಡೆಗಳು ಸಂಭವಿಸುತ್ತವೆಂದು ಸಿದ್ಧವಾಗುತ್ತದೆ (೩-೫). ಆನಂದಕ್ಕೆ (ಆನಂದದ ಪರಿಮಾಣ—ಅಳತೆಗೆ) ತಕ್ಕಷ್ಟು (ಯೋಗ್ಯವಾಗು

# ಅಧ್ಯಾಯ ೫

ಬ್ರಹ್ಮೋವಾಚ—

ಪೂರ್ಣಾನಂದೋಽಪಿ ಭಗವಾನ್ ಕಿಮರ್ಥಂ ಸೃಷ್ಟಿಮಾತನೋತ್ ।
ಪ್ರಾಪ್ತವಾನ್ ಕಿಂ ನ ಸೃಷ್ಟ್ಯಾ ಸ ಕಥಂ ಪೂರ್ಣಸ್ತಥಾ ಸತಿ ॥ ೧ ॥

ಭಗವಾನ್-ಭಗವಂತನು (ಶ್ರೀವಿಷ್ಣುವು), ಪೂರ್ಣಾನಂದಃ ಅಪಿ-ಆನಂದ ಪೂರ್ಣನಾದರೂ, ಕಿಮರ್ಥಂ-ಯಾವ ಪ್ರಯೋಜನಕ್ಕಾಗಿ, ಸೃಷ್ಟಿಂ-ಸೃಷ್ಟಿಯನ್ನು ಆತನೋತ್-ಮಾಡಿದನು?, ಸೃಷ್ಟ್ಯಾ-ಸೃಷ್ಟಿಯಿಂದ (ಸೃಷ್ಟಿಮಾಡಿದ್ದರಿಂದ), ಕಿಂ ನು-ಏನನ್ನು (ಯಾವ ಪ್ರಯೋಜನವನ್ನು), ಪ್ರಾಪ್ತವಾನ್-ಹೊಂದಿದನು?, ತಥಾ ಸತಿ-ಹಾಗೆ ಅದರಿಂದ ಏನಾದರೂ ಪ್ರಯೋಜನವನ್ನು ಹೊಂದಿದ್ದರೆ, ಸಃ-ಆತನು, ಪೂರ್ಣಃ-ಪೂರ್ಣನು, ಕಥಂ-ಹೇಗೆ ? (ಹೊಸ ಪ್ರಯೋಜನವನ್ನು ಹೊಂದಿದರೆ ಆ ಮೊದಲು-ಸೃಷ್ಟಿಗೆ ಮೊದಲು ಅಪೂರ್ಣನೆಂದಾಗುವುದಿಲ್ಲವೇ ?)

ಶ್ರೀ ಹಯಗ್ರೀವ ಉವಾಚ—

ಯ ಏವ ಆನಂದವಾನ್ ಲೋಕೇ ಸ ಕ್ರೀಡಾಂ ತನುತೇ ಭೃಶಂ ।
ಅತಿ ಚಿತ್ರಾಣಿ ಕರ್ಮಾಣಿ ಸ ಏವ ತನುತೇ ಯತಃ ॥ ೨ ॥

ಲೋಕೇ-ಲೋಕದಲ್ಲಿ, ಯಃ-ಯಾವಾತನು, ಆನಂದವಾನ್-ಆನಂದವುಳ್ಳವನೋ, ಸಃ ಏವ-ಆತನೇ, ಭೃಶಂ-ಅತಿಶಯವಾಗಿ, ಕ್ರೀಡಾಂ-ಕ್ರೀಡೆಯನ್ನು(ಲೀಲೆಗಾಗಿ ನಾನಾ ಚೇಷ್ಟೆಗಳನ್ನು), ತನುತೇ-ಮಾಡುತ್ತಾನೆ; ಯತಃ-ಯಾವ ಕಾರಣದಿಂದ (ಆನಂದವುಳ್ಳವನಾದ ಕಾರಣದಿಂದಲೇ), ಅತಿ ಚಿತ್ರಾಣಿ-ಬಹುಪ್ರಕಾರದ (ಆಶ್ಚರ್ಯಕರಗಳಾದ), ಕರ್ಮಾಣಿ-ಕೃತಿಗಳನ್ನು ಸಃ ಏವ-ಆತನೇ, ತನುತೇ-ಮಾಡುತ್ತಾನೆ (ಸುಖಿಗಳಲ್ಲದವರಲ್ಲ)

ನರಾ ಅಶ್ವಾಶ್ಚ ಗೋಜಾವಿಮುಖಾ ಯೇ ಪಶವೋಽಪಿ ಹಿ ।
ಕ್ರೀಡಂತ್ಯಾನಂದತೋ ಲೋಕೇ ಪೂರ್ಣಾನಂದೋ ಹರಿಃ ಕಿಮು ॥ ೩ ॥

---

ಪೂರ್ಣಾನಂದನಾದ ಶ್ರೀವಿಷ್ಣು ಜಗತ್ತನ್ನೇಕೆ ಸೃಷ್ಟಿಸಿದನು? ಅದರಿಂದ ಆತನು ಏನಾದರೂ ಪ್ರಯೋಜನವನ್ನು ಹೊಂದಿದನೆಂದರೆ, ಸೃಷ್ಟಿ ಪೂರ್ವದಲ್ಲಿ ಹೊಂದಬೇಕಾದ ಪ್ರಯೋಜನವುಳ್ಳವನಾದ್ದರಿಂದ (ಪ್ರಾಪ್ತವ್ಯ ಪ್ರಯೋಜನವುಳ್ಳವನಾದ್ದರಿಂದ) ಅಪೂರ್ಣನೆಂದು ಸಿದ್ಧನಾಗುವುದಿಲ್ಲವೇ ? (೧). ಲೋಕದಲ್ಲಿ ಆನಂದವುಳ್ಳವನೇ ಕ್ರೀಡಿಸುವುದನ್ನು ಕಾಣುತ್ತೇವೆ; ಆತನೇ ಬಹುಪರಿಯ ಆಶ್ಚರ್ಯಕರ ಕೃತಿಗಳಲ್ಲಿ ತೊಡಗುತ್ತಾನೆ—ಅನ್ಯ

**ಚಿಂತಾಮಗ್ನೋ ಜ್ವರೇಣಾರ್ತಃ ಸ್ವಪ್ತುಂ ಶಕ್ನೋತಿ ನೋ ಸುಖಂ ।**
**ಯಃ ಸ ಕಿಂ ಕ್ರೀಡತೇ ತಸ್ಯ ಯತಃ ಸರ್ವಂ ವಿಷಾಯತೇ ॥ ೪ ॥**

**ಯಥಾನಂದಸ್ತಥಾ ಕ್ರೀಡಾ ಯಥಾನಂದಸ್ತಥೋದ್ಯಮಃ ।**
**ಮಹಾನಂದಸ್ಯ ಮಹತೀ ತಥಾ ಕ್ರೀಡೇಯಮೀರಿತಾ ॥ ೫ ॥**

ನರಾಃ-ಮನುಷ್ಯರು, ಗೋಜಾವಿಮುಖಾಃ-ಗೋವು, ಮೇಕೆ, ಕುರಿ ಮುಂತಾದ, ಯೇ-ಯಾವ, ಪಶವಃ ಅಪಿ-ಪಶುಗಳು ಸಹ, ಲೋಕೇ-ಲೋಕದಲ್ಲಿ ಆನಂದತಃ-ಆನಂದದಿಂದಲೇ (ಆನಂದದಿಂದ ಇರುವಾಗಲೇ), ಕ್ರೀಡಂತಿ ಹಿ-ಕ್ರೀಡಿಸುತ್ತವೆಯಷ್ಟೆ (ಆಟಪಾಟವಿಹಾರಗಳಲ್ಲಿ ತೊಡಗುತ್ತವೆ); ಪೂರ್ಣಾನಂದಃ-ಪೂರ್ಣಾನಂದವುಳ್ಳ, ಹರಿಃ-ಶ್ರೀಹರಿಯು, ಕಿಮು-ಅಶ್ಚರ್ಯಕರವಾಗಿ ಕ್ರೀಡಿಸುತ್ತಾನೆಂದು ಹೇಳಲೇನಿದೆ? (ಆನಂದದ ಉದ್ರೇಕದಿಂದಲೇ ಜಗತ್ತಿನ ಸೃಷ್ಟಿ ಮೊದಲಾದ ಕ್ರೀಡೆಯು ಸಂಭವಿಸುತ್ತದೆ);

ಚಿಂತಾಮಗ್ನಃ-ಚಿಂತೆಯಲ್ಲಿ ಮುಳುಗಿದವನು, ಜ್ವರೇಣ-ಜ್ವರದಿಂದ, ಆರ್ತಃ-ದುಃಖಪಡುವವನೂ, ಸುಖಂ-ಸುಖವಾಗಿ, ಸ್ವಪ್ತುಂ-ನಿದ್ರಿಸಲೂ, ನೋ ಶಕ್ನೋತಿ-ಶಕ್ತನಾಗುವುದಿಲ್ಲ; ಯಃ-ಯಾವ, ಸಃ-ಈತನು,ಕಿಂ ಕ್ರೀಡತೇ-ಆಟವನ್ನೇನು ಆಡುತ್ತಾನೆ? (ಕ್ರೀಡಿಸಲು ಅಸಮರ್ಥನೇ ಸರಿ); ಯತಃ-ಏಕೆಂದರೆ, ತಸ್ಯ-ಆತನಿಗೆ (ದುಃಖ ವುಳ್ಳವನಿಗೆ), ಸರ್ವಂ-ಎಲ್ಲವೂ, ವಿಷಾಯತೇ-ವಿಷದಂತೆ ಬೇಡವಾಗುತ್ತದೆ; (ಆದ್ದರಿಂದ), ಯಥಾ-ಹೇಗೆ ಹೇಗೆ, ಆನಂದಃ-ಆನಂದವೋ (ಆನಂದವು ಎಷ್ಟೆಷ್ಟು ಅಧಿಕವೋ), ತಥಾ-ಹಾಗೆ ಹಾಗೆ (ಅಷ್ಟಷ್ಟು), ಕ್ರೀಡಾ-ಕ್ರೀಡೆಯಲ್ಲಿ ಆಸಕ್ತಿಯು ಇರುತ್ತದೆ; (ಶಕ್ತಿಯು ಇರುತ್ತದೆ); ಯಥಾ ಆನಂದಃ-ಆನಂದದ ಅಧಿಕ್ಯತೆಗೆ ಅನುಗುಣವಾಗಿ,

---

ರಲ್ಲ (೨). ಲೋಕದಲ್ಲಿ ಮನುಷ್ಯರು—ಅಷ್ಟೇಕೆ, ಹಸು ಮೇಕೆ ಕುರಿ ಮೊದಲಾದ ಪಶುಗಳು ಸಹ, ಆನಂದದಿಂದಿರುವಾಗ ಮಾತ್ರ ಕ್ರೀಡಿಸುತ್ತವೆ; ಚಿಂತೆಯಲ್ಲಿ ಮುಳುಗಿದವನೂ, ಜ್ವರಾದಿಗಳಿಂದ ನರಳುವ (ದುಃಖಿಸುವ) ಮನುಷ್ಯನೂ, ಸುಖದಿಂದ ನಿದ್ರಿಸಲು ಸಹ ಅಸಮರ್ಥನಾಗಿರುವುದು ಕಂಡುಬರುತ್ತದೆ; ಅಂಥವನು ಯಾವ ಕ್ರೀಡೆಯಲ್ಲಿ ತೊಡಗಬಹುದು? ಯಾವ ಆಟವನ್ನು ಆಡಬಹುದು? ಆತನಿಗೆ (ಹಾಗೆ ದುಃಖಿಯಾದವನಿಗೆ) ಕ್ರೀಡಾದಿಗಳು ಯಾವುವೂ (ಅಷ್ಟೇಕೆ ಆಹಾರ ವಿಹಾರಗಳು ಸಹ) ವಿಷಪ್ರಾಯವಾಗುತ್ತವೆ; ಆದ್ದರಿಂದ ಆನಂದವು ಅಧಿಕವಾದಂತೆ, ಕ್ರೀಡಾದಿಗಳಲ್ಲಿ ಆಸಕ್ತಿಯೂ ಹೆಚ್ಚುವುದೆಂದು ಸಿದ್ಧವಾಗುತ್ತದೆ; ಸರ್ವೋತ್ಕೃಷ್ಟವಾದ ಪೂರ್ಣಾನಂದ ಸ್ವರೂಪನೇ ಆದ, ದುಃಖಲೇಶಸ್ಪರ್ಶವು, ಎಂದೂ ಇಲ್ಲದ ಶ್ರೀಹರಿಯಿಂದಲೇ, ಈ ಅತ್ಯದ್ಭುತವಾದ ಜಗತ್ಸೃಷ್ಟ್ಯಾದಿ ಕ್ರೀಡೆಗಳು ಸಂಭವಿಸುತ್ತವೆಂದು ಸಿದ್ಧವಾಗುತ್ತದೆ (೩-೫). ಆನಂದಕ್ಕೆ (ಆನಂದದ ಪರಿಮಾಣ—ಅಳತೆಗೆ) ತಕ್ಕಷ್ಟು (ಯೋಗ್ಯವಾಗು

ಉದ್ಯಮಃ–ಕ್ರಿಯಾ ಸಾಮರ್ಥ್ಯವೂ (ಇರುತ್ತದೆ); ತಥಾ–ಹೀಗೆ, (ಈ ಲೋಕಾನುಭವವನ್ನಾಶ್ರಯಿಸುವ ಯುಕ್ತಿಯಿಂದ), ಮಹಾನಂದಸ್ಯ–ಸರ್ವೋತ್ಕೃಷ್ಟವಾದ ಆನಂದವುಳ್ಳವನ (ಅಪಾರವಾದ ಆನಂದಸ್ವರೂಪನೇ ಆದ ಶ್ರೀಹರಿಯ), ಮಹತೀ–ಅತ್ಯದ್ಭುತವಾದ, ಕ್ರೀಡಾ–ಕ್ರೀಡೆಯು, ಇಯಂ–ಈ ಜಗತ್ಸೃಷ್ಟ್ಯಾದಿವ್ಯಾಪಾರಗಳು, ಈರಿತಾ–ಎಂದು (ವೇದಾದಿಗಳಲ್ಲಿ) ಹೇಳಲ್ಪಡುತ್ತದೆ.

ಇಯಂ ಹಿ ಸಕಲಾ ಸೃಷ್ಟಿಃ ತಸ್ಯಾನಂದಸ್ಯ ಲೇಶತಃ ।
ಅನಂತಾನಂದಪೂರ್ಣಸ್ಯ ಹ್ಯನುರೂಪಾ ಕಥಂ ಭವೇತ್ ॥ ೬ ॥

ಸಕಲಾ–ಸಮಸ್ತವಾದ, ಇಯಂ ಸೃಷ್ಟಿಃ–ಈ ಸೃಷ್ಟಿಯು, ತಸ್ಯ–ಆತನ (ಶ್ರೀಹರಿಯ), ಆನಂದಸ್ಯ–ಆನಂದದ, ಲೇಶತಃ–ಅತ್ಯಲ್ಪಾಂಶಮಾತ್ರದಿಂದ (ಆದುದು), ಹಿ–ಹೀಗೆಯೇ ಸರಿ (ಏಕೆಂದರೆ), ಅನಂತಾನಂದಪೂರ್ಣಸ್ಯ–ಅನಂತವಾದ ಆನಂದದಿಂದ ಪೂರ್ಣನಾದ ಶ್ರೀಹರಿಯ ಅಪಾರವಾದ ಆನಂದಕ್ಕೆ, ಅನುರೂಪಾ–ಅನುರೂಪವಾದುದು (ಪೂರ್ಣವಾಗಿ ಅನುಗುಣವಾದುದು), ಕಥಂ ಭವೇತ್–ಹೇಗಾದೀತು!

ಬ್ರಹ್ಮಾಂಡದೇಃ ಪರಿಚ್ಛಿನ್ನಾ ಸೃಷ್ಟಿರೇಷೇತಿ ಹಿ ಶ್ರುತಿಃ ।
ಪೂರ್ಣಾನಂದೋ ನ ಚೇತ್ ಸ ಸ್ಯಾತ್ಕಥಂ ಸೃಷ್ಟಿರ್ಭವೇದಿಯಂ ॥ ೭ ॥

ಏಷಾ–ಈ, ಬ್ರಹ್ಮಾಂಡಾದೇಃ–ಬ್ರಹ್ಮಾಂಡ ಮೊದಲಾದುದರ (ಆದಿ ಶಬ್ದದಿಂದ ಬಹಿರಾವರಣಗಳನ್ನೂ, ಬ್ರಹ್ಮಾಂಡದೊಳಗಿನ ಅನಂತ ಜಡಚೇತನಗಳ ಸೃಷ್ಟಿಯನ್ನೂ ಗ್ರಹಿಸಬೇಕು), ಸೃಷ್ಟಿಃ–ಸೃಷ್ಟಿಯು, ಪರಿಚ್ಛಿನ್ನಾ–ಪರಿಮಿತಿಯುಳ್ಳದ್ದು ಇತಿ–ಎಂದು, ಶ್ರುತಿಃ

---

ವಷ್ಟು) ಕ್ರೀಡೆಯು ಲೋಕಾನುಭವದಿಂದ ಕಂಡುಬರುತ್ತದೆ; ಈ ವಿಶ್ವದ ಸೃಷ್ಟಿ ಸ್ಥಿತಿ, ಲಯಾದಿ ಕೃತಿಗಳು ಅತ್ಯದ್ಭುತವಾಗಿವೆ; ಅಚಿಂತ್ಯವಾದ ಅನಂತಶಕ್ತಿಯುಳ್ಳವನಿಂದಲೇ ಸಾಧ್ಯವಾದ ಈ ರೂಪದ ಕ್ರೀಡೆಗಳು ಸಹ, ಅನಂತಾನಂದ ಪೂರ್ಣಸ್ವರೂಪನಾದ ಶ್ರೀಹರಿಯ, ಪೂರ್ಣಾನಂದಕ್ಕೆ ಯೋಗ್ಯವಾದ ಕ್ರೀಡೆಗಳಾಗುವುದಿಲ್ಲ; ಕಿಂತು, ಆತನ ಆನಂದದ ಏಕದೇಶಕ್ಕೆ ಮಾತ್ರ ಯೋಗ್ಯವೆನಿಸುತ್ತವೆ; ಆ ಪ್ರಕಾರದ ಲೋಕ ವಿಲಕ್ಷಣವಾದ, ಅಪರಿಮಿತವಾದ, ದುಃಖಲೇಶಸ್ಪರ್ಶವಿಲ್ಲದ, ಆನಂದಪೂರ್ಣನು— ಶ್ರೀಹರಿ (೬). ಬ್ರಹ್ಮಾಂಡಾದಿಗಳ ಸೃಷ್ಟಿಯು, ಪರಿಮಿತಿಯುಳ್ಳದ್ದೆಂದು ಶ್ರುತಿಯು ಹೇಳುವುದರಿಂದ, ಶ್ರೀಹರಿಯ ಆನಂದದ ಲೇಶದಿಂದ (ಆನಂದಸಾಗರದ ಒಂದು ಬಿಂದುಮಾತ್ರದಿಂದ), ಸೃಷ್ಟ್ಯಾದಿ ಕ್ರೀಡೆಯು ಸಂಭವಿಸುತ್ತದೆಂದು ತಿಳಿಯಬೇಕು. ಶ್ರೀಹರಿಯು ಆನಂದಮಾತ್ರ ದೇಹಿಯಲ್ಲದಿದ್ದರೆ (ದುಃಖಲೇಶದ ಮಿಶ್ರವೂ ಇರದಂತೆ ಇಲ್ಲದಿದ್ದರೆ), ಸೃಷ್ಟಿರೂಪದ ಕ್ರೀಡೆಯೇ ಯುಕ್ತಿಯುಕ್ತವಾಗುವುದಿಲ್ಲ (೭). ಆನಂದಪೂರ್ಣನಲ್ಲದ ಯಾರೊಬ್ಬನೂ,

ಹಿ–ಶ್ರುತಿಯು ಹೇಳುತ್ತದೆ; (ಈ ಕಾರಣದಿಂದ ಶ್ರೀಹರಿಯು ಆನಂದದ ಲೇಶಾಂಶದಿಂದ ಮಾತ್ರ ಸೃಷ್ಟ್ಯಾದಿ ಕ್ರೀಡೆಗಳೆಂದು ಸಿದ್ಧವಾಗುತ್ತದೆ); ಸಃ–ಆತನು (ಶ್ರೀಹರಿಯು), ಪೂರ್ಣಾನಂದಃ–ಪೂರ್ಣಾನಂದನು (ದುಃಖಲೇಶರಹಿತನು), ನ ಚೇತ್–ಅಲ್ಲದಿದ್ದರೆ, ಇಯಂ–ಈ (ಸೃಷ್ಟ್ಯಾದಿರೂಪದ) ಕ್ರೀಡೆಯಾದ, ಸೃಷ್ಟಿಃ–ಸೃಷ್ಟಿಯು, ಕಥಂ–ಹೇಗೆ, ಭವೇತ್–ಸಂಭವಿಸುತ್ತದೆ?

**ಕೋಹ್ಯೇವಾನ್ಯಾಚ್ಚ ಕಃ ಪ್ರಾಣ್ಯಾತ್ ಸ್ಫುಟಮಿತ್ಯಾಹ ಹಿ ಶ್ರುತಿಃ ।**
**ತಸ್ಮಾದಾನಂದಪೂರ್ಣಾಬ್ಧೇರ್ವೀಚೀಬುದ್ಬುದಲೇಶವತ್ ॥ ೮ ॥**

(ಏಕೆಂದರೆ), ಶ್ರುತಿಃ–ಶ್ರುತಿಯು, ಸ್ಫುಟಂ–ಸ್ಪಷ್ಟವಾಗಿ, ಕಃ ಏವ ಹಿ–ಯಾರುತಾನೇ, ಅನ್ಯಾತ್–(ಈ ಜಗತ್ತನ್ನು ಚೇಷ್ಟಿಸಲು ಶಕ್ತನಾದಾನು?, ಕಃ–ಯಾರೊಬ್ಬನು, ಪ್ರಾಣ್ಯಾತ್–ಸರ್ವಪ್ರೇರಕನಾದಾನು? (ಯ ಏಷ ಆನಂದೋ ನ ಸ್ಯಾತ್–ಯಾವ ಈತನು ಆನಂದ ಪೂರ್ಣನಲ್ಲದಿದ್ದರೆ, ಜಗಚ್ಚೇಷ್ಟಕನಾಗಲಾರನು), ಇತಿ ಆಹ–ಹೀಗೆಂದು ಹೇಳುತ್ತದೆ, ತಸ್ಮಾತ್–ಈ ಕಾರಣದಿಂದ, ಆನಂದಪೂರ್ಣಾಬ್ಧೇಃ–ಆನಂದವೆಂಬ ಅಪಾರಸಮುದ್ರದ, ವೀಚೀಬುದ್ಬುದಲೇಶವತ್–ಅಲೆಯೊಂದರ ಮೇಲಿನ ಬುರುಗಿನ (ಬುದ್ಬುದ) ಅಲ್ಪಭಾಗದಂತೆ, (ಏಷಾ ಅಖಿಲಾ ಸೃಷ್ಟಿಃ–ಈ ಸಮಸ್ತ ಜಗತ್ತಿನ ಸೃಷ್ಟಿಯು, ಎಂದು ಮುಂದಿನ ಶ್ಲೋಕದಿಂದ ಅನ್ವಯಪೂರ್ತಿಯನ್ನು ತಿಳಿಯಬೇಕು).

**ಸೃಷ್ಟಿರೇಷಾಖಿಲಾ ಬ್ರಹ್ಮನ್ ಅನ್ಯದಪ್ಯವಧಾರಯ ।**
**ಅನಾದಿಕರ್ಮಣಾ ಬದ್ಧಾ ಜೀವಾ ನಿತ್ಯಾ ಹ್ಯನೇಕಶಃ ॥ ೯ ॥**

---

ಈ ಜಗತ್ತನ್ನು ಸೃಷ್ಟಿಸಲು ಮತ್ತು ಯಥಾಯೋಗ್ಯವಾಗಿ ಕಾಲಕಾಲದಲ್ಲಿ ಅದನ್ನು ಚೇಷ್ಟಿಸಲು (ಈ ಜಡಚೇತನಾತ್ಮಕ ವಿಶ್ವದಿಂದ ಬಹುಪ್ರಕಾರದ ಕ್ರಿಯೆಗಳನ್ನು ಮಾಡಿಸಲು) ಸರ್ವಥಾ ಶಕ್ತನಾಗಲಾರನೆಂಬ ಯುಕ್ತಿಪೂರ್ವಕವಾಗಿ ಶ್ರುತಿಯು, ಸೃಷ್ಟಿಯ ಸಂಭವವನ್ನು ನಿರೂಪಿಸುತ್ತದೆ ಮತ್ತು ಈ ವಿಶ್ವಸೃಷ್ಟಿಯು (ಸೃಷ್ಟಿ ಮೊದಲಾದ ಕ್ರೀಡೆಗಳು), ಆನಂದಸಮುದ್ರನೇ ಆದ ಶ್ರೀಹರಿಯ, ಅನಂತಸಾಗರದ ಒಂದು ತೆರೆಯ ಬುರುಗಿನ (ನೊರೆಯ) ಏಕಾಂಶದಿಂದ ಎಂದು ಸಿದ್ಧವಾಗುತ್ತದೆ (೮). ಜಗತ್ಸೃಷ್ಟ್ಯಾದಿರೂಪ ಕ್ರೀಡೆಯಿಂದ ಶ್ರೀವಿಷ್ಣುವಿಗೆ ಯಾವ ಪ್ರಯೋಜನವೂ ಇಲ್ಲವೇ ಇಲ್ಲ ಹೀಗಿದ್ದರೂ ಈ ಕ್ರೀಡೆಯಿಂದ ಅನಾದಿಕರ್ಮದಿಂದ ಬದ್ಧರೂ ಲಿಂಗದೇಹಯುತರಾಗಿ ಮೂರ್ಛಿತರಂತೆ ಬಿದ್ದಿರುವ ಜೀವರಿಗೆ ಮಹಾಪ್ರಯೋಜನವಿದೆ—ಈ ಅಂಶವನ್ನು ಚೆನ್ನಾಗಿ ಗಮನದಲ್ಲಿಡು. ಈ ಅನಂತ ಜೀವರಾಶಿಗಳಲ್ಲಿ ಮುಕ್ತಿಯೋಗ್ಯರಾದ ಜೀವರಿಗೆ ಸೃಷ್ಟಿಯಿಲ್ಲದಿದ್ದರೆ, ಸ್ಥೂಲದೇಹ (ಸಾಧನೆಗೆ ಯೋಗ್ಯವಾದ) ದೊರೆಯದಿದ್ದರೆ, ಸ್ವಸ್ವರೂಪದ ಆವಿರ್ಭಾವವಾಗಲು, ಅವಶ್ಯಕವಾಗಿ ಕಳೆದುಕೊಳ್ಳಬೇಕಾದ ಅನಾದಿ ಕರ್ಮಾದಿಗಳ

**ಲಿಂಗದೇಹಯುತಾಃ ಸರ್ವೇ ಪತಿತಾ ಮೂರ್ಛಿತಾ ಇವ ।**
**ಯದಿ ತೇ ಸ್ಥೂಲದೇಹೇನ ಯುತಾ ನ ಸ್ಯುರಿಮೇಽಖಿಲಾಃ ॥ ೧೦ ॥**

**ಕಥಂ ಕರ್ಮಾಣಿ ಕುರ್ವೀರನ್ ವಿಷ್ಣುಭಕ್ತಿ ಪರಾಯಣಾಃ ।**
**ಅಪೂರ್ಣಭಕ್ತಯಸ್ತೇ ವಾ ಕಥಂ ಮೋಕ್ಷಮವಾಪ್ನುಯುಃ ॥ ೧೧ ॥**

(ವಿಷಾ ಅಖಿಲಾ ಸೃಷ್ಟಿ ಎಂಬ ಪದಗಳು ಹಿಂದಿನ ಶ್ಲೋಕದಲ್ಲಿ ಅನ್ವಯಗೊಂಡಿವೆ); ಬ್ರಹ್ಮನ್–ಹೇ ಬ್ರಹ್ಮ!, ಅನ್ಯದಪಿ–(ಈ ವಿಷಯಕ್ಕೆ ಸಂಬಂಧಿಸಿದ) ಬೇರೊಂದು ಪ್ರಮೇಯವನ್ನೂ (ತಿಳಿಯಬೇಕಾದ ವಿಷಯವನ್ನೂ), ಅವಧಾರಯ–ಮನಸ್ಸಿನಲ್ಲಿ ನಿಶ್ಚಯ ನಾಗಿ ತಿಳಿ; ಅನಾದಿಕರ್ಮಣಾ–ಅನಾದಿಕರ್ಮದಿಂದ, ಬದ್ಧಾಃ–ಬಂಧಿತರಾದ, ಅನೇಕಶಃ ಜೀವಾಃ–ಅಸಂಖ್ಯ ಜೀವರು (ಬಹುಪ್ರಕಾರದ–ಬಹುಭಿನ್ನಯೋಗ್ಯತೆಯ ಜೀವರು), ನಿತ್ಯಾಃ ಹಿ–ನಿತ್ಯರಾಗಿರುವಷ್ಟೆ; ಸರ್ವೇ–ಈ ಎಲ್ಲರೂ, ಲಿಂಗದೇಹಯುತಾಃ–ಲಿಂಗ ದೇಹದಿಂದ ಆಚ್ಛಾದಿತ ಸ್ವರೂಪವುಳ್ಳವರಾಗಿ, ಮೂರ್ಛಿತಾಃ ಇವ–ಮೂರ್ಛೆಯನ್ನು ಹೊಂದಿದವ ರಂತೆ, ಪತಿತಾಃ–ಬಿದ್ದಿರುವರು; ತೇ ಅಖಿಲಾಃ–ಆ ಎಲ್ಲರೂ (ಸರ್ವರೂ ಸ್ವಗತಿಪ್ರಾಪ್ತಿಗಾಗಿ ಮುಕ್ತಿಯೋಗ್ಯರು ವಿಶೇಷವಾಗಿ), ಯದಿ–ಒಂದು ಪಕ್ಷ ಸ್ಥೂಲದೇಹೇನ–ಸ್ಥೂಲದೇಹ ದಿಂದ, ಯುತಾಃ–ಕೂಡಿದವರು, ನ ಸ್ಯುಃ–ಆಗದಿದ್ದರೆ, ಕಥಂ–ಹೇಗೆ, ವಿಷ್ಣುಭಕ್ತಿಪರಾ ಯಣಾಃ–ವಿಷ್ಣುಭಕ್ತಿಪರಾಯಣರಾಗಿ, ಕರ್ಮಾಣಿ–ಕರ್ಮಗಳನ್ನು ಕುರ್ವೀರನ್– ಮಾಡಲು ಶಕ್ತರಾದಾರು? ಅಪೂರ್ಣಭಕ್ತಯಃ ತೇ–(ಸ್ವವಿಹಿತ ಕರ್ಮಗಳನ್ನಾಚರಿಸಿ ಶ್ರೀಹರಿಯನ್ನು ಪೂಜಿಸಿ- ಅರ್ಪಿಸಿ) ಸ್ವಯೋಗ್ಯಪೂರ್ಣ ಭಕ್ತಿಯನ್ನು ದೊರಕಿಸಿಕೊಳ್ಳದ ಅವರು, ಕಥಂ ವಾ–ಹೇಗೆ ತಾನೇ, ಮೋಕ್ಷಂ–(ನಿತ್ಯಾನಂದಸ್ಥಿತಿ ರೂಪದ– ನಿತ್ಯಸ್ವರೂಪಾವಿರ್ಭಾವವೆಂಬ) ಮೋಕ್ಷವನ್ನು, ಅವಾಪ್ನುಯುಃ–ಹೊಂದಿಯಾರು?

**ಇತಿ ತೇಷಾಂ ತು ಕಾರುಣ್ಯಾತ್ ದಯಾಲುರ್ಭಗವಾನಿದಂ ।**
**ಸೃಷ್ಟ್ಯಾದಿ ಕುರುತೇ ಸರ್ವಮನ್ಯಥಾ ತದ್ದಯಾಲುತಾ ॥ ೧೨ ॥**

---

ಬಂಧಪರಿಹಾರಕ್ಕಾಗಿ ಆಚರಿಸಬೇಕಾದ ಕರ್ಮಗಳೇ ಸಂಭವಿಸುವುದಿಲ್ಲ; ಸ್ವಯೋಗ್ಯ ವಿಹಿತ ಕರ್ಮಗಳನ್ನಾಚರಿಸಿ, ಶ್ರೀಹರಿಗೆ ಅರ್ಪಿಸಿ, ಆತನ ಪ್ರಸನ್ನತೆಯನ್ನು ಸಂಪಾದಿಸ ದಿದ್ದರೆ, ವಿಷ್ಣುಭಕ್ತಿ ಪರಾಯಣರಾಗುವುದಿಲ್ಲ; ವಿಷ್ಣುಭಕ್ತಿಯಿಲ್ಲದೇ ಅವರಿಗೆ ಎಂದೂ, ಮೋಕ್ಷವು (ಬಂಧದ ಬಿಡುಗಡೆ ಮತ್ತು ಸ್ವರೂಪಾವಿರ್ಭಾವದ ನಿತ್ಯನಿರ್ದುಃಖಸ್ಥಿತಿಯು) ದೊರೆಯುವುದಿಲ್ಲ(೯-೧೧). ಹೀಗೆ ಜೀವರ ಮೇಲಿನ ದಯೆಯಿಂದಲೇ ಶ್ರೀಹರಿಯು, ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ; ಸೃಷ್ಟ್ಯಾದಿಗಳನ್ನು ಮಾಡದಿದ್ದರೆ ಆತನು ದಯಾಳುವೆಂಬ ಮಾತು (ವೇದಗಳ ನುಡಿಯು) ಅರ್ಥವಿಲ್ಲದುದಾಗುತ್ತದೆ;

ವ್ಯಾಹನ್ಯೇತ ತಥಾಪ್ಯನ್ಯಾನ್ ಜೀವಾನ್ ಮಧ್ಯಮತಾಮಸಾನ್ ।
ಸೃಜತ್ಯವತಿ ಹಂತ್ಯೇವ ಭಕ್ತಾನಾಂ ಭಕ್ತಿವೃದ್ಧಯೇ ॥ ೧೩ ॥

ಏವಂ ಸಾತ್ವಿಕಮಧ್ಯಸ್ಥತಾಮಸಾಂಸ್ತ್ರಿವಿಧಾನಪಿ ।
ಸೃಜತ್ಯವತಿ ಹಂತೀಶೋ ಲೀಲಯಾ ಭಕ್ತವತ್ಸಲಃ ॥ ೧೪ ॥

ಇತಿ–ಹೀಗೆ, ತೇಷಾಂ–ಅವರ (ಜೀವರ ಮೇಲಿನ), ಕಾರುಣ್ಯಾತ್ ತು–ಕರುಣೆಯಿಂದಲೇ, ದಯಾಲುಃ–ದಯಾಳುವಾದ, ಭಗವಾನ್–ಶ್ರೀವಿಷ್ಣುವು, ಇದಂ–ಈ (ಈ ಜಗತ್ತಿನ), ಸೃಷ್ಟ್ಯಾದಿ–ಸೃಷ್ಟಿ ಮೊದಲಾದವುಗಳನ್ನು ಕುರುತೇ–ಮಾಡುತ್ತಾನೆ; ಅನ್ಯಥಾ–ಹಾಗಲ್ಲದಿದ್ದರೆ (ಜೀವರ ಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡದಿದ್ದರೆ), ತದ್ದಯಾಲುತಾ–ಆತನ (ಶ್ರೀವಿಷ್ಣುವಿನ) ದಯಾಲುತ್ವವು (ಕೃಪಾಪೂರ್ಣನೆಂಬುದು), ವ್ಯಾಹನ್ಯೇತ–ವ್ಯರ್ಥವಾದೀತು (ಇಲ್ಲದ್ದನ್ನು ಹೇಳುವ ವಿರುದ್ಧವಚನವಾಗುತ್ತದೆ); ತಥಾಪಿ–ಹೀಗಿದ್ದರೂ, (ಆತನ ದಯಾಲುತ್ವವು ಸತ್ಯವಾದರೂ—ದಯಾಸಮುದ್ರನೇ ಆದರೂ), ಮಧ್ಯಮತಾಮಸಾನ್–ಮಧ್ಯಮರು(ರಾಜಸರು) ತಾಮಸರೆಂಬ, ಅನ್ಯಾನ್ ಜೀವಾನ್–ಇತರ ಜೀವರನ್ನು ಭಕ್ತಾನಾಂ–ಸ್ವಭಾವಭಕ್ತರಾದ ಸಾತ್ವಿಕಜೀವರ, ಭಕ್ತಿವೃದ್ಧಯೇ–ಭಕ್ತಿಯ ಅಭಿವೃದ್ಧಿಗಾಗಿ, ಸೃಜತಿ–ಸೃಷ್ಟಿಸುತ್ತಾನೆ, ಅವತಿ–ರಕ್ಷಿಸುತ್ತಾನೆ, ಹಂತಿ ಏವ–ಸಂಹಾರವನ್ನು ಮಾಡುತ್ತಾನೆ; ಏವಂ–ಹೀಗೆ (ಕ್ರೀಡೆಯಿಂದ, ಜೀವರನ್ನು ಅವರವರ ಗತಿಗಳನ್ನು ಹೊಂದಿಸುವುದೆಂಬ ಜೀವರ ಪ್ರಯೋಜನಕ್ಕಾಗಿ), ತ್ರಿವಿಧಾನ್–ಮೂರು

---

ಶ್ರೀಹರಿಯು ಭಕ್ತವತ್ಸಲನಾದ್ದರಿಂದ, ತ್ರಿವಿಧ ಜೀವರನ್ನೂ ಸೃಷ್ಟಿಸಿ, ರಕ್ಷಿಸಿ ಸಂಹರಿಸುತ್ತಾನೆ—ರಾಜಸ ತಾಮಸರಾದ (ಮಧ್ಯಮ, ಅಧಮ) ಜೀವರ ಸೃಷ್ಟ್ಯಾದಿಗಳಿಂದ ಸಹ ಸ್ವಭಾವದಿಂದಲೇ ಭಕ್ತರಾದ ಸಾತ್ವಿಕರ ಭಕ್ತಿಯು ಅಭಿವೃದ್ಧಿ ಹೊಂದುತ್ತದೆ);[1] ಸಕಲ ಜೀವರು ತಂತಮ್ಮ ಅಂತಿಮಗತಿಗಳನ್ನು ಸಾಧಿಸಿಕೊಳ್ಳುವ ಮಹಾಪ್ರಯೋಜನವುಳ್ಳದ್ದು—ಶ್ರೀಹರಿಯ ಸೃಷ್ಟ್ಯಾದಿ ಲೀಲೆ (೧೨-೧೪). ಪೂರ್ಣಾನಂದಸ್ವರೂಪನೇ ಆದ ಶ್ರೀಹರಿಗೆ, ಈ ಜಗತ್ತಿನ ಸೃಷ್ಟ್ಯಾದಿರೂಪ ಲೀಲೆಯಿಂದ, ಯಾವ ಅಧಿಕ ಲಾಭವೂ, ಎಂದೂ ಇಲ್ಲವೇ ಸೇ

---

1. ದುಃಖಪ್ರಚುರವಾದ, ಜನನ ಮರಣ ರೂಪದ ಸಂಸಾರದಲ್ಲಿ ಸುತ್ತುತ್ತ ದುಃಖಪಡುವ ಜೀವರನ್ನೂ ಶ್ರೀಹರಿ ಮತ್ತು ಹರಿಭಕ್ತರ ದ್ವೇಷಾದಿಗಳಿಂದ, ವಿವಿಧ ನರಕಗಳಲ್ಲಿ ದುಃಖವನ್ನನುಭವಿಸಿ, ಅಂತ್ಯಕ್ಕೆ ಅಂಧತಮಸ್ಸನ್ನೇ (ನಿತ್ಯನರಕವನ್ನೇ) ಹೊಂದುವವರೆಂಬ ಶಾಸ್ತ್ರಜ್ಞಾನ ನಿಶ್ಚಯದಿಂದಲೂ, ಸಾತ್ವಿಕರಾದ ಮುಕ್ತಿಯೋಗ್ಯ ಜೀವರ ವಿಷ್ಣುಭಕ್ತ್ಯಾದಿ ಗುಣಗಳು ವೃದ್ಧಿಹೊಂದುತ್ತವೆ. ಆತ ಏವ ಮಧ್ಯಮ ಮತ್ತು ಅಧಮ ಜೀವರ ಸೃಷ್ಟ್ಯಾದಿಗಳೂ ಭಕ್ತರ ಭಕ್ತಿಯನ್ನು ವೃದ್ಧಿಗೊಳಿಸುವುದೆಂದೂ, ಅವರನ್ನು ಸೃಷ್ಟಿಸುವುದರಿಂದ, ಅವರ ಗತಿಗಳನ್ನು ಹೊಂದಿಸುವುದರೊಂದಿಗೆ, ಇದೂ ಒಂದು ಮಹಾ ಪ್ರಯೋಜನವಿರುತ್ತದೆಂದೂ ಹೇಳಲಾಗಿದೆ.

ವಿಧರಾದ, ಸಾತ್ತ್ವಿಕ ಮಧ್ಯಸ್ಥ ತಾಮಸಾನ್–ಸಾತ್ತ್ವಿಕರು, ರಾಜಸರು ಮತ್ತು ತಾಮಸರನ್ನು ಈಶಃ–ಶ್ರೀವಿಷ್ಣುವು, ಭಕ್ತವತ್ಸಲಃ–ಭಕ್ತವತ್ಸಲನಾದ ತಾನು, ಲೀಲಯಾ–ಲೀಲೆಯಿಂದ (ಕ್ರೀಡಿಸುವವನಾಗಿ), ಸೃಜತಿ- ಅವತಿ- ಹಂತಿ—ಸೃಷ್ಟಿಸುತ್ತಾನೆ- ರಕ್ಷಿಸುತ್ತಾನೆ-ಸಂಹರಿಸುತ್ತಾನೆ.

ನ ಕಾಚಿದಧಿಕಾಲಬ್ಧಿರನಯಾ ಸೃಷ್ಟಿಲೀಲಯಾ ।
ನ ಹಾನಿಶ್ಚಾಪಿ ಸಂಹಾರಾತ್ ಪೂರ್ಣಾನಂದಸ್ಯ ಸರ್ವದಾ ॥ ೧೫ ॥

ಅನಾದಿಕಾಲತಸ್ತ್ವೇವ ಸಂಕಲ್ಪೋ ಜಗದೀಶಿತುಃ ।
ಅತಃ ಸೃಷ್ಟ್ಯಾದಿಕಾ ಲೀಲಾ ಯಥಾಕಾಲಂ ಭವಂತಿ ಹಿ ॥ ೧೬ ॥

ಇತಿ ಬ್ರಹ್ಮಂಸ್ತ್ವಾಖ್ಯಾತಂ ಯನ್ಮಾಂ ತ್ವಂ ಪರಿಪೃಷ್ಟವಾನ್ ।
ಸಂಮತಂ ಸರ್ವವೇದಾನಾಂ ಕಿಮನ್ಯತ್ ಶ್ರೋತುಮಿಚ್ಛಸಿ ॥ ೧೭ ॥

ಪೂರ್ಣಾನಂದಸ್ಯ–ಪೂರ್ಣಾನಂದಸ್ವರೂಪನಾದ ಶ್ರೀಹರಿಗೆ, ಸರ್ವದಾ–ಎಂದೂ (ಯಾವ ಕಾಲಕ್ಕೂ), ಅನಯಾ–ಈ ಸೃಷ್ಟಿಲೀಲಯಾ–ಸೃಷ್ಟ್ಯಾದಿ ಕ್ರೀಡೆಯಿಂದ, ಕಾಚಿತ್ ಅಪಿ–ಎಷ್ಟು ಅಲ್ಪಮಾತ್ರವೂ, ಅಧಿಕಾ–ಹೆಚ್ಚಿನ, ಲಬ್ಧಿ–ಲಾಭವು (ಹೊಂದಲ್ಪಡಬೇಕಾದ ಯಾವ ಆಧಿಕ್ಯವೂ–ಪೂರ್ಣತ್ವ ಸಾಧಕ ಪ್ರಯೋಜನವೂ), ನ–ಇಲ್ಲ ಸಂಹಾರಾತ್–ಜಗತ್ತನ್ನು ಸಂಹಾರ ಮಾಡುವುದರಿಂದ, (ಸಂಹಾರರೂಪಕ್ರೀಡೆಯಿಂದ), ಹಾನಿಃ ಚ ಅಪಿ–ಯಾವ ಹಾನಿಯೂ (ಕೊರತೆಯೂ ಅಥವಾ ಇದ್ದುದರ ನಾಶವೂ, ಆನಂದಹ್ರಾಸವೂ), ನ–ಇಲ್ಲವು; ಅನಾದಿಕಾಲತಃ ತು ಏವ–ಅನಾದಿಕಾಲದಿಂದಲೇ, ಜಗದೀಶಿತುಃ–ಜಗನ್ನಿಯಾಮಕನಾದ ಶ್ರೀವಿಷ್ಣುವಿನ, ಸಂಕಲ್ಪಃ–ಸಂಕಲ್ಪವು (ಹೀಗೆ ಕ್ರೀಡಿಸಿ ಜೀವರನ್ನು ಅವರವರ ಗತಿಹೊಂದಿಸಬೇಕೆಂಬ ಇಚ್ಛೆಯು ಅನಾದಿಯಾದುದು); ಅತಃ–ಆದ್ದರಿಂದಲೇ, ಸೃಷ್ಟ್ಯಾದಿಕಾ–ಸೃಷ್ಟ್ಯಾದಿರೂಪದ, ಲೀಲಾ–ಕ್ರೀಡೆಯು, ಯಥಾಕಾಲಂ–ಆಯಾ ಕಾಲದಲ್ಲಿ ಭವಂತಿ ಹಿ–ಸಂಭವಿಸುತ್ತವೆಂದು (ಅಪೌರುಷೇಯ)–ವೇದಪ್ರಸಿದ್ಧಿಯಿದೆ, ಬ್ರಹ್ಮನ್–ಹೇ ಬ್ರಹ್ಮದೇವ!, ಇತಿ–ಹೀಗೆ, ಸರ್ವವೇದಾನಾಂ–ಸಕಲ ವೇದಗಳಿಗೆ, ಸಂಮತಂ–ಸಮ್ಮತವಾದ (ಏಕಾಭಿಪ್ರಾಯವಾದ), ಪ್ರಮೇಯಗಳನ್ನು (ಈವರೆಗೆ), ತವ–ನಿನಗೆ, ತ್ವಂ–ನೀನು, ಮಾಂ–ನನ್ನನ್ನು ಯತ್ ಪರಿಪೃಷ್ಟವಾನ್–

---

ಇಲ್ಲ; ಸಂಹಾರದಿಂದ ಆತನ ಪೂರ್ಣಾನಂದಾದಿ ಗುಣಗಳಿಗೆ ಯಾವ ಹಾನಿಯೂ (ಕೊರತೆಯಾಗಲಿ–ಹ್ರಾಸವಾಗಲಿ) ಇಲ್ಲ; ಹೀಗೆ ಸದಾ ಕ್ರೀಡಿಸುತ್ತ ಅಸಂಖ್ಯ ಜೀವರನ್ನು ಅವರವರ ಗತಿಕಾಣಿಸುವೆನೆಂಬುದು ಶ್ರೀಹರಿಯ ಅನಾದಿ ಸಂಕಲ್ಪವು—ಅತ ಏವ ಆಯಾ ಕಾಲದಲ್ಲಿ ಜಗತ್ತಿನ ಸೃಷ್ಟ್ಯಾದಿಗಳು ಸಂಭವಿಸುತ್ತವೆ. ಹೀಗೆಂದು ಅಪೌರುಷೇಯ ಶ್ರುತಿಗಳು (ಸ್ವತಃ ಪ್ರಮಾಣಗಳಾದ ವೇದಗಳು) ಸಾರುತ್ತವೆ (೧೫-೧೭).

ಯಾವುದನ್ನು ಪ್ರಶ್ನಿಸಿದೆಯೋ, (ಅದು), ಆಖ್ಯಾತಂ–ಹೇಳಲ್ಪಟ್ಟಿತು; ಅಸ್ಮಾತ್ ಕಿಂ–ಬೇರೇನನ್ನು ಶ್ರೋತುಂ–ಕೇಳಲು, ಇಚ್ಛಸಿ–ಅಪೇಕ್ಷಿಸುವಿ?

ಸೃಷ್ಟ್ಯಾದಿ ಕಾರಣಕಥನವೆಂಬ ಐದನೇ ಅಧ್ಯಾಯವು ಮುಗಿದುದು.

---

# ಅಧ್ಯಾಯ ೬

ಬ್ರಹ್ಮೋವಾಚ—

**ಯದಿ ಸಾಕ್ಷಾನ್ಮಹಾವಿಷ್ಣುರ್ಜೀವಾನ್ ಕರ್ಮಾನುಸಾರತಃ ।**
**ಸೃಜತ್ಯವತಿ ಹಂತೀಶಃ ಸ್ವಾತಂತ್ರ್ಯಂ ತಸ್ಯ ತತ್ಕಥಂ ॥ ೧ ॥**

ಈಶಃ–ಸರ್ವಶಕ್ತನಾದ, ಮಹಾವಿಷ್ಣುಃ–ಶ್ರೀ ಮಹಾವಿಷ್ಣುವು, ಸಾಕ್ಷಾತ್–ಸ್ವಯಂ (ತಾನೇ), ಜೀವಾನ್–ಜೀವರನ್ನು ಕರ್ಮಾನುಸಾರತಃ–ಅವರವರ ಪೂರ್ವಕರ್ಮಾನುಸಾರವಾಗಿ, ಯದಿ–ಒಂದು ಪಕ್ಷ ಸೃಜತಿ–ಸೃಷ್ಟಿಸುತ್ತಾನೆ (ಸ್ಥೂಲದೇಹಗಳನ್ನು ಹೊಂದಿಸುತ್ತಾನೆ), ಅವತಿ–ರಕ್ಷಿಸುತ್ತಾನೆ ಮತ್ತು ಹಂತಿ–ಸಂಹರಿಸುತ್ತಾನೆ, ಎಂದಾದರೆ, ತಸ್ಯ–ಆತನಿಗೆ (ಶ್ರೀವಿಷ್ಣುವಿಗೆ), ತತ್ ಸ್ವಾತಂತ್ರ್ಯಂ–ಆ ಸ್ವಾತಂತ್ರ್ಯವೆಂಬುದು, ಕಥಂ–ಹೇಗೆ ಯುಕ್ತವಾಗುತ್ತದೆ; (ಪೂರ್ವಕರ್ಮಕ್ಕೆ ಅಧೀನನೆಂದಾಗುವುದಿಲ್ಲವೇ?)

**ಸ್ವೇಚ್ಛಯೈವ ಯದಾ ಕುರ್ಯಾಜ್ಜೀವಾನಾಂ ಸರ್ಜನಾದಿಕಂ ।**
**ಕಥಂ ತರ್ಹಿ ವಿಚಿತ್ರಾ ಸ್ಯಾತ್ ಸೃಷ್ಟಿರೇಷಾ ಸನಾತನೀ ॥ ೨ ॥**

ಸ್ವೇಚ್ಛಯಾ ಏವ–ತನ್ನ ಇಚ್ಛೆಗೆ ಬಂದಂತೆಯೇ, ಜೀವಾನಾಂ–ಜೀವರುಗಳ, ಸರ್ಜನಾದಿಕಂ–ಸೃಷ್ಟ್ಯಾದಿಗಳನ್ನು ಯದಾ ಕುರ್ಯಾತ್–ಮಾಡುವ ಪಕ್ಷದಲ್ಲಿ ತರ್ಹಿ–ಆಗ, ಏಷಾ–ಈ, ಸನಾತನೀ–ಸನಾತನವಾದ (ಪ್ರವಾಹರೂಪದಿಂದ ಅನಾದಿಯಿಂದ

---

ಶ್ರೀ ಮಹಾವಿಷ್ಣುವು, ತಾನು, ಜೀವರ ಪೂರ್ವಕರ್ಮಗಳಿಗನುಸಾರವಾಗಿಯೇ ಸೃಷ್ಟಿ ಸ್ಥಿತಿ, ಸಂಹಾರಗಳನ್ನು ನಡೆಸುವುದಾದರೆ, ಆತನು ಸ್ವತಂತ್ರನೆಂಬುದು ಹೇಗೆ ಕೂಡುತ್ತದೆ? (೧). ಹಾಗಲ್ಲದೇ (ಕರ್ಮಾನುಸಾರವಾಗಿ ಅಲ್ಲದೇ) ತನ್ನ ಇಚ್ಛೆ ಬಂದಂತೆ ಈ ಜೀವರ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದರೆ, ಸನಾತನವಾದ ಈ ಸೃಷ್ಟಿಯಲ್ಲಿ ಬಹುಪ್ರಕಾರದ ಭೇದಗಳಿರಲು ಕಾರಣವೇನು? (೨). ಸೃಷ್ಟಿಸಲ್ಪಟ್ಟ ಜೀವರಲ್ಲಿ ಕೆಲವರು ಸ್ವರ್ಗವನ್ನೂ ಕೆಲವರು ನರಕವನ್ನೂ, ಮತ್ತೆ ಕೆಲವರು (ಅಲ್ಪಸಂಖ್ಯೆಯವರು) ಮೋಕ್ಷವನ್ನೂ, ಇನ್ನೂ ಕೆಲವರು ಸಂಸಾರವನ್ನೂ, ಹೊಂದುತ್ತಾರೆ; ಈ ಪ್ರಕಾರದ ವಿಭಿನ್ನ ಗತಿಗಳಿಂದ

ನಡೆಸುತ್ತಿರುವ, ಮುಂದೆ ನಡೆಯುವುದೆಂದು ವೇದಾದಿಗಳು ಹೇಳುವ), ಸೃಷ್ಟಿ-ಸೃಷ್ಟಿಯು, ಕಥಂ-ಹೇಗೆ, ವಿಚಿತ್ರಾಸ್ಯಾತ್-ವಿಚಿತ್ರವಾದುದು (ಬಹುಪ್ರಕಾರದ ಭೇದಗಳುಳ್ಳದ್ದು) ಆಗುತ್ತದೆ?

ಸ್ವರ್ಗಂ ವಾ ನರಕಂ ವಾಪಿ ಮೋಕ್ಷಂ ವಾಪ್ಯಥವಾ ಸೃತಿಂ ।
ಭಜೇಯುರೇವಮೀಶಸ್ಯ ವೈಷಮ್ಯಂ ನ ಕಥಂ ಭವೇತ್ ॥ ೩ ॥

ನಾಸ್ತಿ ತಸ್ಯ ರಿಪುಃ ಕಶ್ಚಿತ್ ನ ಮಿತ್ರಂ ವಾ ಕಥಂಚನ ।
ಪೂರ್ಣಾನಂದಸ್ಯ ತಸ್ಯೈತೇ ಭವೇಯುರ್ದೇಹಿನಃ ಸಮಾಃ ॥ ೪ ॥

ಅತ್ರ ಮೇ ಸಂಶಯಸ್ತಾತ ತಂ ಭವಾನ್ ಛೇತ್ತುಮರ್ಹಸಿ ।

ಸ್ವರ್ಗಂ-ಸ್ವರ್ಗಲೋಕವನ್ನು, ವಾ-ಅಥವಾ, ನರಕಂ-ನರಕವನ್ನು, ವಾ-ಅಥವಾ, ಮೋಕ್ಷಂ-ಮೋಕ್ಷವನ್ನು, ಅಥವಾ-ಅದಿಲ್ಲದಿದ್ದರೆ, ಸೃತಿಂ-ಸಂಸಾರವನ್ನಾಗಲಿ, ಭಜೇಯುಃ-(ಜೀವರು) ಹೊಂದುವರು; ಏವಂ-ಹೀಗೆ (ಜೀವರು ಭಿನ್ನ ಭಿನ್ನ ಗತಿಗಳನ್ನು ಹೊಂದಿದರೆ), ಈಶಸ್ಯ-ಶ್ರೀವಿಷ್ಣುವಿಗೆ, ವೈಷಮ್ಯಂ-ಭೇದಭಾವವು (ಪಕ್ಷಪಾತರೂಪದ ದೋಷವು) ಕಥಂ-ಹೇಗೆ, ನ ಭವೇತ್-ಉಂಟಾಗುವುದಿಲ್ಲ? (ವೈಷಮ್ಯವುಳ್ಳವನೆಂದೇ ಪ್ರಾಪ್ತವಾಗುತ್ತದೆ); (ಏಕೆಂದರೆ), ತಸ್ಯ-ಆತನಿಗೆ, ಕಶ್ಚಿತ್-ಯಾರೊಬ್ಬ ಜೀವನೂ, ರಿಪುಃ-ಶತ್ರುವು, ನಾಸ್ತಿ-ಇರುವುದಿಲ್ಲ (ಶ್ರೀಹರಿಗೆ ಶತ್ರುವೆಂಬುವನು ಯಾರೂ ಇಲ್ಲ—ಆತನು ಯಾರನ್ನೂ ಶತ್ರುವೆಂದು ಭಾವಿಸುವುದಿಲ್ಲ); ವಾ-ಅಥವಾ, ಕಥಂಚನ-ಯಾವ ಪ್ರಕಾರದಿಂದಲೂ, ನ ಮಿತ್ರಂ-(ಸ್ವಭಾವದಿಂದಲೇ— ನಿರ್ನಿಮಿತ್ತವಾಗಿ) ಮಿತ್ರನೆಂಬುವನೂ ಇಲ್ಲ; ಪೂರ್ಣಾನಂದಸ್ಯ-ಪೂರ್ಣಾನಂದವುಳ್ಳವನಾದ, ತಸ್ಯ-ಭಗವಂತನಿಗೆ, ಏತೇ-ಈ, ದೇಹಿನಃ-ಎಲ್ಲ ಜೀವರೂ (ಸೃಷ್ಟಿಯಲ್ಲಿ ಶ್ರೀಹರಿಯಿಂದಲೇ ದೇಹಗಳನ್ನು ಹೊಂದುವ ಈ ಎಲ್ಲರೂ), ಸಮಾಃ-ಸಮಾನರು (ಸಮಭಾವಕ್ಕೆ ಪಾತ್ರರು) ಭವೇಯುಃ-ಆಗಿರುವರು; ತಾತ-ಹೇ ತಂದೆ!, ಮೇ-ನನಗೆ, ಅತ್ರ-ಈ ವಿಷಯದಲ್ಲಿ (ಶ್ರೀಹರಿಯ ಸರ್ವಸಮತ್ವವಿಷಯದಲ್ಲಿ), ಸಂಶಯಃ- ಸಂದೇಹವಿದೆ; ತಂ-ಅದನ್ನು

---

ಶ್ರೀವಿಷ್ಣುವಿನಲ್ಲಿ ವೈಷಮ್ಯ (ಪಕ್ಷಪಾತ)ವಿರುವುದೆಂದು ತಿಳಿಯುವುದಿಲ್ಲವೇ? ಆತನಿಗೆ ಸ್ವಾಭಾವಿಕವಾಗಿ ಎಲ್ಲರೂ ಸಮರೇ ಆಗಿರುವರು; ಆತನಿಗೆ ಕೆಲವರು ಶತ್ರುಗಳು, ಅನ್ಯರು ಮಿತ್ರರು (ಹೀಗೆಯೇ ಮತ್ತಿತ್ತರರು ಉದಾಸೀನರು) ಎಂಬುವರಿಲ್ಲವಷ್ಟೆ? ಆತನು ಸರ್ವಸಮನಲ್ಲವೇ? ಶ್ರೀಹರಿಯ ಸರ್ವಸಮತ್ವ ವಿಷಯದಲ್ಲಿ ನನಗೆ ಪ್ರಾಪ್ತವಾಗಿರುವ ಈ ಸಂಶಯವನ್ನು, ಹೇ ತಂದೆ ! ಪರಿಹರಿಸಿ ರಕ್ಷಿಸು (೩-೪). ಹೇಗೆ ಲೋಕದಲ್ಲಿ ರಾಜರು (ಅಧಿಕಾರಿಗಳು), ತಮ್ಮ ಸೇವಕರನ್ನು ಕುರಿತು, 'ನೀನು ಈ ನನ್ನ ಸೇವೆಯನ್ನು ಮಾಡಿದರೆ

ಭವಾನ್-ನೀನು, ಛೇತ್ತುಂ-ಕತ್ತರಿಸಿಹಾಕಲು (ಸಂಶಯವನ್ನು ಪರಿಹರಿಸಲು), ಅರ್ಹಸಿ-ಸಮರ್ಥನಾಗಿರುತ್ತೀ (ಯೋಗ್ಯಸ್ಥಾನದಲ್ಲಿರುವಿ).

ಶ್ರೀ ಹಯಗ್ರೀವ ಉವಾಚ—

ಯಥೈವ ಲೋಕೇ ಭೂಪಾಲಾಃ ಶಿಕ್ಷಯಂತಿ ನಿಜಾನ್ ಜನಾನ್ ॥ ೫ ॥

ಮಮ ಸೇವಾಮಿಮಾಂ ಕುರ್ಯಾಶ್ಚೇದ್ಧನಂ ತ್ವಮಿತಂ ತತಃ ।
ದಾಸ್ಯಾಮಿ ನೋ ಚೇನ್ನೋದದ್ಯಾಮಥ ತ್ವಂ ಸ್ತೇಯಕರ್ಮ ಚೇತ್ ॥ ೬ ॥

ಕರೋಷಿ ವಾಥ ಮೇ ದಾಸ್ಯಾದನ್ಯಥಾ ವರ್ತಸೇ ಯದಿ ।
ದಂಡನೀಯೋ ಮಯಾ ನೂನಂ ಮಮ ದ್ವೇಷಂ ಕರೋಷಿ ಚೇತ್ ॥ ೭ ॥

ಶಿರಚ್ಛೇದಾದಿನಾ ತ್ವಾಂ ಹಿ ಯೋಜಯಿಷ್ಯಾಮಿ ನಾನ್ಯಥಾ ।
ಅಥಾನನ್ಯಮನಸ್ತ್ವೇನ ಮಮ ಭಕ್ತಿಂ ಕರೋಷಿ ಚೇತ್ ॥ ೮ ॥

ದಿನೇ ದಿನೇ ಕರಿಷ್ಯಾಮಿ ತವ ವೇತನವರ್ಧನಂ ।
ಏವಂ ಸತಿ ಯಥಾ ಕುರ್ಯಾಸ್ತಥಾಫಲಮವಾಪ್ಸ್ಯಸಿ ॥ ೯ ॥

ನ ಚ ಮಿತ್ರಂ ನ ವಾ ಶತ್ರುರಸಿ ತ್ವಂ ಮೇ ಸ್ವಭಾವತಃ ।
ಯಥಾ ಭಾವಯಸೇ ಮಾಂ ತ್ವಂ ತಥಾ ತ್ವಾಂ ಭಾವಯಾಮ್ಯಹಂ ॥ ೧೦ ॥

ಲೋಕೇ-ಲೋಕದಲ್ಲಿ, ಭೂಪಾಲಾಃ-ರಾಜರು, ನಿಜಾನ್-ತಮ್ಮ, ಜನಾನ್-

---

ನಿನಗೆ ಅಧಿಕ ಧನವನ್ನು ಕೊಡುತ್ತೇನೆ, ಅದನ್ನು ಮಾಡದಿದ್ದರೆ, ಧನವನ್ನು ಕೊಡುವುದಿಲ್ಲವೆಂದು ಮಾತ್ರವಲ್ಲ; ವಂಚನಾದಿಗಳನ್ನು ಮಾಡಿದರೆ ಅಥವಾ ಅನ್ಯರ ಸೇವೆಯಲ್ಲಿ ಆಸಕ್ತನಾದರೆ, ನಿನಗೆ ಯೋಗ್ಯ ಶಿಕ್ಷೆ ಮಾಡುತ್ತೇನೆ; ನನ್ನನ್ನು ದ್ವೇಷಿಸಿದರೆ, ನಿನ್ನ ಶಿರಚ್ಛೇದಮಾಡಿಸುತ್ತೇನೆ; ಹಾಗಲ್ಲದೇ ನನ್ನಲ್ಲಿ ವಿಶೇಷ ಪ್ರೇಮವುಳ್ಳವನಾಗಿ ನನ್ನನ್ನೇ ಆಶ್ರಯಿಸಿದರೆ (ನನ್ನಲ್ಲಿ 'ಭಕ್ತಿ' ಮಾಡಿದರೆ), ಕಾಲಕಾಲದಲ್ಲಿ ನಿನಗೆ ಅಧಿಕವೇತನವನ್ನು ಕೊಡುತ್ತೇನೆ (ಅಧಿಕವಾಗಿ ಅಭೀಷ್ಟಗಳನ್ನು ಸಲ್ಲಿಸುತ್ತೇನೆ); ನನ್ನ ಸಂಕಲ್ಪಿತ ನಿಯಮವು ಹೀಗಿರುವುದರಿಂದ ಹೇಗೆ ಹೇಗೆ ನಿಷ್ಠೆಯಿಂದ ನನ್ನನ್ನು ಸೇವಿಸುವಿಯೋ ಅದಕ್ಕನುಸಾರವಾದ ಅಧಿಕ ಫಲಗಳನ್ನು ಹೊಂದುತ್ತೀ' ಎಂದು ವಿಧಿಸಿ, ಭೃತ್ಯರನ್ನು ಅನುಗ್ರಹಿಸುತ್ತಾರೆಯೋ ಹಾಗೆ, ಶ್ರೀಹರಿಯೂ ತನ್ನ ಭೃತ್ಯರಾದ ಜೀವರಿಗೆ ಆಜ್ಞೆಮಾಡಿ (ಶಾಸನ ಮಾಡಿ), ಅವರಿಂದ ಸೇವೆಗೊಂಡು ಸೇವಾನುಗುಣವಾದ ಫಲಗಳನ್ನಿತ್ತು ಅನುಗ್ರಹಿಸುತ್ತಾನೆ. ಶ್ರೀಹರಿಗೆ ಸ್ವಭಾವದಿಂದಲೇ ಯಾವ ಜೀವನೂ, ಮಿತ್ರನೂ ಅಲ್ಲ

ಪ್ರದೇಗಳನ್ನು (ಅಥವಾ ಭೃತ್ಯವರ್ಗದ ಜನರನ್ನು), ಯಥೈವ–ಹೇಗೆ, ಶಿಕ್ಷಯಂತಿ–ಶಾಸನಮಾಡುತ್ತಾರೆಯೋ, (ಆಜ್ಞಾಪಿಸಿ, ಸರಿಯಾದ ಮಾರ್ಗದಲ್ಲಿಡುತ್ತಾರೋ), (ತಥಾ–ಹಾಗೆಯೇ ಶ್ರೀಹರಿಯೂ ಜೀವರ ಶಾಸಕನು–ಆಳುವ ಪ್ರಭುವಾಗಿದ್ದಾನೆ), ಹೇಗೆಂದರೆ:—ಇಮಾಂ–ಈ, ಮಮ ಸೇವಾಂ–ನನ್ನ ಸೇವೆಯನ್ನು ಕುರ್ಯಾಃ ಚೇತ್–ಮಾಡುವಿಯಾದರೆ, ತತಃ–ಅದರಿಂದ (ಪ್ರೀತನಾಗಿ), ಅಮಿತಂ–ಅಧಿಕವಾದ, ಧನಂ ತು–ಧನವನ್ನೂ ಸಹ, ದಾಸ್ಯಾಮಿ–(ನಿನಗೆ) ಕೊಡುತ್ತೇನೆ; ನೋ ಚೇತ್–ಹಾಗೆ ಸೇವೆಯನ್ನು ಮಾಡದಿದ್ದರೆ, ನೋ ದದ್ಯಾಂ–(ಧನವನ್ನು) ಕೊಡುವುದಿಲ್ಲ; ಅಥ–ಮತ್ತು ತ್ವಂ–ನೀನು, ಸ್ತೇಯ ಕರ್ಮ–ಕಳ್ಳತನವನ್ನು (ನನ್ನ ಆಜ್ಞೆಯನ್ನು ಪಾಲಿಸುವುದರಲ್ಲಿ ವಂಚಕತನವನ್ನು) ಕರೋಷಿ ಚೇತ್–ಮಾಡಿದರೆ, ವಾ–ಅಥವಾ, ಅಥ–ಅನಂತರ (ನನ್ನ ಸೇವೆಯನ್ನು ಬಿಟ್ಟನಂತರ), ಮೇ–ನನ್ನ ದಾಸ್ಯಾತ್–ಸೇವೆಯ ದೆಸೆಯಿಂದ, ಅನ್ಯಥಾ–ಬೇರೆ ಕೆಲಸದಲ್ಲಿ ಯದಿ ವರ್ತಸೇ–ತೊಡಗಿದವನಾದರೆ, ಮಯಾ–ನನ್ನಿಂದ, ನೂನಂ–ನಿಶ್ಚಯವಾಗಿ (ತಪ್ಪದೇ) ದಂಡನೀಯಃ–ಶಿಕ್ಷಿಸಲ್ಪಡುವಿ; ಮಮ–ನನ್ನ ದ್ವೇಷಂ ಕರೋಷಿ ಚೇತ್–ದ್ವೇಷವನ್ನು ಮಾಡುವಿಯಾದರೆ, ಶಿರಚ್ಛೇದಾದಿನಾ–ಶಿರಚ್ಛೇದ(ತಲೆಕತ್ತರಿಸುವ) ಮೊದಲಾದ ಶಿಕ್ಷೆಯಿಂದ, ತ್ವಾಂ–ನಿನ್ನನ್ನು, ಯೋಜಯಿಷ್ಯಾಮಿ–ಸೇರಿಸುತ್ತೇನೆ (ಶಿಕ್ಷೆಗೆ ಭಾಗಿಯನ್ನಾಗಿ ಮಾಡುತ್ತೇನೆ); ಅನ್ಯಥಾ ನ–ಬೇರೆಯಲ್ಲ (ಬೇರೆ ವಿಧದಿಂದ ನಿನ್ನನ್ನು ರಕ್ಷಿಸುವುದಿಲ್ಲ); ಅಥ–ಮತ್ತು (ಹಾಗಲ್ಲದೇ), ಅನನ್ಯಮನಸ್ತ್ವೇನ–ಅನನ್ಯವಾದ ಮನಸ್ಸಿನಿಂದ (ನಾನೇ ಸರ್ವೋತ್ತಮನೆಂಬ ಭಾವದಿಂದ), ಮಮ ಭಕ್ತಿಂ–ನನ್ನ (ನನ್ನಲ್ಲಿ) ಭಕ್ತಿಯನ್ನು ಕರೋಷಿ ಚೇತ್–ಮಾಡುವಿಯಾದರೆ, ದಿನೇದಿನೇ–ದಿನದಿನದಲ್ಲಿ (ಅಲ್ಪ ಕಾಲಾವಧಿಗಳಲ್ಲಿ), ತವ–ನಿನ್ನ ವೇತನವೃದ್ಧಿಂ ಕರಿಷ್ಯಾಮಿ–ಸಂಬಳವನ್ನು ಹೆಚ್ಚುಮಾಡುತ್ತೇನೆ; (ನೀನು ಮಾಡುವ ಸೇವೆಗೆ ಅಧಿಕಫಲಗಳನ್ನು ಕೊಡುತ್ತೇನೆ); ಏವಂ ಸತಿ–ಹೀಗಿರುವುದರಿಂದ, ಯಥಾ–ಹೇಗೆ, ಕುರ್ಯಾಃ–(ನನ್ನ ಸೇವೆಯನ್ನು) ಮಾಡುವೆಯೋ, ತಥಾ–ಹಾಗೆ (ಸೇವಾನುಗುಣವಾಗಿ), ಫಲಂ–ಫಲವನ್ನು, ಅವಾಪ್ಸ್ಯಸಿ–ಹೊಂದುತ್ತೀ; ತ್ವಂ–ನೀನು, ಮೇ–ನನಗೆ, ಸ್ವಭಾವತಃ–ಸ್ವಭಾವದಿಂದಲೇ, ಮಿತ್ರಂ ನ ಚ ಅಸಿ–ಮಿತ್ರನೂ ಅಲ್ಲ; ನ ವಾ ಶತ್ರುಃ ಅಸಿ–ಶತ್ರುವೂ ಅಲ್ಲದವನು ಆಗಿರುವಿ; ತ್ವಂ–ನೀನು, ಮಾಂ–ನನ್ನನ್ನು ಯಥಾ–ಹೇಗೆ (ಶತ್ರು, ಮಿತ್ರ, ಸ್ವಾಮಿ, ಬಂಧು ಮೊದಲಾದ ಯಾವ ಯಾವ ಭಾವದಿಂದ), ಭಾವಯಸೇ–ಭಾವಿಸುತ್ತೀಯೋ (ಚಿಂತಿಸಿ ನಡೆದು

---

ಶತ್ರುವೂ ಅಲ್ಲ—ಆತನು ಸರ್ವ ಸಮನು; ಜೀವರು ಆತನಲ್ಲಿ ಯಾವ ಯಾವ ಭಾವಗಳುಳ್ಳವರಾಗುತ್ತಾರೆಯೋ, ಶ್ರೀಹರಿಯೂ ಅವರಲ್ಲಿ ಆಯಾ ಭಾವಗಳಿಗೆ ಅನುಗುಣವಾದ ಭಾವಗಳನ್ನೇ ಹೊಂದುವವನಾಗುತ್ತಾನೆ (೫-೧೦). ಶ್ರೀಹರಿಯ ಸಂಕಲ್ಪವು ಅನಾದಿಕಾಲದಿಂದ ಹೀಗಿರುವುದರಿಂದ, ಶ್ರೀಹರಿಗೆ ವೈಷಮ್ಯವೆಲ್ಲಿಂದ

ಕೊಳ್ಳುವಿಯೋ), ತಥಾ–ಹಾಗೆ (ಆ ಭಾವಗಳಿಂದ), ತ್ವಾಂ–ನಿನ್ನನ್ನು ಭಾವಯಾಮಿ–ತಿಳಿಯುತ್ತೇನೆ.

**ಅನಾದಿಕಾಲತಸ್ತ್ವೇವಂ ಸಂಕಲ್ಪಃ ಸ್ವಯಮೇವ ಹಿ ।**
**ಕುತೋಽಸ್ತಿ ತೇನ ನೈವ ಸ್ಯಾತ್ ಸ್ವಾತಂತ್ರ್ಯಸ್ಯ ವಿಘಾತನಂ ॥ ೧೧ ॥**

ಏವಂ–ಈ ರೀತಿಯಾದ, ಸಂಕಲ್ಪವು, ಅನಾದಿಕಾಲತಃ ತು–ಅನಾದಿ ಕಾಲದಿಂದಲೇ, ಹಿ–ಯಾವ ಕಾರಣದಿಂದ, ಸ್ವಯಂ ಏವ–ತನ್ನದೇ (ಶ್ರೀವಿಷ್ಣುವಿನದೇ) ಆಗಿದೆಯೋ; ತೇನ–ಅದರಿಂದ, ಕುತಃ ಅಸ್ತಿ–(ವೈಷಮ್ಯವು) ಎಲ್ಲಿದೆ?, ಸ್ವಾತಂತ್ರ್ಯಸ್ಯ–(ಶ್ರೀವಿಷ್ಣುವಿನ) ಸ್ವಾತಂತ್ರ್ಯದ, ವಿಘಾತನಂ–ನಾಶವು (ಹಾನಿಯು), ನೈವ ಸ್ಯಾತ್–ಉಂಟಾಗುವುದೇ ಇಲ್ಲ.

**ಶ್ರುತಿಸ್ಮೃತೀ ಮಮೈವಾಜ್ಞೇ ಕುರ್ಯಾತ್ತದನುಸಾರತಃ ।**
**ಸತ್ಕರ್ಮಾಣಿ ದದಾಮ್ಯಸ್ಮೈ ಫಲಂ ಕರ್ಮಾನುಸಾರತಃ ॥ ೧೨ ॥**

**ನಿಷಿದ್ಧಾನಿ ತು ಯಃ ಕುರ್ಯಾದಜ್ಞಾನಾದ್ಧಾರ್ಷ್ಟ್ಯತೋಽಪಿ ವಾ ।**
**ವಿಹಿತಂ ಚ ನ ಕುರ್ವೀತ ತಂ ಕುರ್ಯಾನ್ನರಕೇ ಸ್ಥಿತಂ ॥ ೧೩ ॥**

ಶ್ರುತಿಸ್ಮೃತೀ–ಶ್ರುತಿಸ್ಮೃತಿಗಳು, ಮಮ–ನನ್ನ, ಆಜ್ಞೇ ಏವ–ಆಜ್ಞೆಗಳೇ; ತದನುಸಾರತಃ–ಅವುಗಳನ್ನನುಸರಿಸಿ, ಸತ್ಕರ್ಮಾಣಿ–ವಿಹಿತ ಕರ್ಮಗಳನ್ನು ಕುರ್ಯಾತ್–ಮಾಡತಕ್ಕದ್ದು; ಅಸ್ಮೈ–ಈತನಿಗೆ (ಸತ್ಕರ್ಮಗಳನ್ನು ಮಾಡುವವನಿಗೆ), ಕರ್ಮಾನುಸಾರತಃ–ಕರ್ಮಾನುಸಾರವಾಗಿ, ಫಲಂ–ಫಲವನ್ನು ದದಾಮಿ–ಕೊಡುತ್ತೇನೆ; ಯಃ–ಯಾವನೊಬ್ಬನು, ನಿಷಿದ್ಧಾನಿ–(ಶ್ರುತಿಸ್ಮೃತಿಗಳಲ್ಲಿ ನಿಷೇಧಿಸಲ್ಪಟ್ಟಿರುವ) ಕರ್ಮಗಳನ್ನು ಅಜ್ಞಾನಾತ್– ಅಜ್ಞಾನದಿಂದಾಗಲಿ (ವಿಧಿನಿಷೇಧಗಳನ್ನು ತಿಳಿಯದೇ), ಅಪಿವಾ–ಅಥವಾ, ಧಾರ್ಷ್ಟ್ಯತಃ– (ತಿರಸ್ಕಾರಭಾವದಿಂದ ಹುಟ್ಟಿದ) ಹುಚ್ಚು ಧೈರ್ಯದಿಂದಲಾಗಲಿ,

---

ಬಂದೀತು? (ಶತ್ರುಮಿತ್ರ ಭಾವಗಳಿಲ್ಲದ ಸರ್ವಸಮಭಾವವುಳ್ಳ ಶ್ರೀಹರಿಯಲ್ಲಿ ಪಕ್ಷಪಾತವನ್ನು ಆರೋಪಿಸಲು ಅವಕಾಶವೇ ಇಲ್ಲ) ಮತ್ತು ಸ್ವಸಂಕಲ್ಪಾನುಸಾರವಾಗಿ ಜೀವರ ವಿಷಯದಲ್ಲಿ ವರ್ತಿಸುತ್ತಾನಾದ್ದರಿಂದ ಆತನ ಸ್ವಾತಂತ್ರ್ಯಕ್ಕೂ ಹಾನಿಯಿಲ್ಲ (೧೧). ಶ್ರುತಿಸ್ಮೃತಿಗಳು ನನ್ನ ಆಜ್ಞೆಗಳೇ ಆಗಿವೆ. ಅವುಗಳನ್ನು ಅನುಸರಿಸಿ, ಸತ್ಕರ್ಮಗಳನ್ನು ಮಾಡಬೇಕು; ಸತ್ಕರ್ಮಗಳನ್ನು ಮಾಡುವವರಿಗೆ, ಅವರವರ ಕರ್ಮಾನುಸಾರವಾಗಿ ಫಲವನ್ನು ಕೊಡುತ್ತೇನೆ; ಅಜ್ಞಾನದಿಂದಾಗಲಿ, ಧಾರ್ಷ್ಟ್ಯದಿಂದಾಗಲಿ, ವಿಧಿನಿಷೇಧ (ನನ್ನ ಆಜ್ಞೆ)ಗಳನ್ನು ತಿಳಿಯದೇ, ಯಾವನು ನಿಷಿದ್ಧಕರ್ಮಗಳನ್ನು ಮಾಡುವನೋ ಮತ್ತು ವಿಹಿತ ಸತ್ಕರ್ಮಗಳನ್ನು ಮಾಡುವುದಿಲ್ಲವೋ, ಅವನನ್ನು ನರಕದಲ್ಲಿ ಹಾಕುತ್ತೇನೆ(೧೨-೧೩).

ಕುರ್ಯಾತ್– ಮಾಡುವನೋ, ಚ–ಮತ್ತು ವಿಹಿತಂ–ವಿಹಿತವಾದ (ಮಾಡಲೇಬೇಕಾದು ದೆಂದು ವಿಧಿಸಲ್ಪಟ್ಟ) ಕರ್ಮವನ್ನು, ನ ಕುರ್ವೀತ–ಮಾಡುವುದಿಲ್ಲವೋ, ತಂ–ಅಂಥವನನ್ನು, ನರಕೇ–ನರಕದಲ್ಲಿ ಸ್ಥಿತಂ–ಇರುವವನನ್ನಾಗಿ, ಕುರ್ಯಾಂ–ಮಾಡುವೆನು.

ಯಸ್ತಸ್ಯೈ ಮೋಕ್ಷದಾತಾಹಂ ಯೋ ದ್ವೇಷ್ಟಿ ಸತತಂ ಹಿ ಮಾಂ ॥ ೧೪ ॥
ತಮೋಂಧೇ ಪಾತಯಿಷ್ಯಾಮಿ ನಿವೃತ್ತಿರ್ನ ಯತೋ ಭವೇತ್ ।
ತಮೋ ನಾರಂಭಣಂ ವಪ್ರಮನಂತಂ ಪಂಚಕಷ್ಟದಂ ॥ ೧೫ ॥

ಯಂ–ಯಾವಾತನು, ಶ್ರವಣಂ–ಶ್ರವಣವನ್ನು, ಮನನಂ–ಮನನವನ್ನು, ಧ್ಯಾನಂ–ಧ್ಯಾನವನ್ನು, ಕುರ್ವನ್–ಮಾಡುವವನಾಗಿ, ಮಾಂ–ನನ್ನನ್ನು, ಸಾಕ್ಷಾತ್ಕರೋತಿ–ಪ್ರತ್ಯಕ್ಷವಾಗಿ ನೋಡುತ್ತಾನೆಯೋ (ಪ್ರತ್ಯಕ್ಷವಿಷಯನನ್ನಾಗಿ ಮಾಡಿಕೊಳ್ಳುತ್ತಾನೋ), ತಸ್ಮೈ–ಅವನಿಗೆ, ಅಹಂ–ನಾನು, ಮೋಕ್ಷದಾತಾ–ಮೋಕ್ಷವನ್ನು ಕೊಡುವವನು (ಆಗುತ್ತೇನೆ); ಯಃ–ಯಾರು, ಮಾಂ–ನನ್ನನ್ನು, ಸತತಂ–ನಿತ್ಯವೂ, ದ್ವೇಷ್ಟಿ–ದ್ವೇಷಿಸುತ್ತಾನೆಯೋ, (ಅವನನ್ನು), ತಮೋಂಧೇ–ಅಂಧತಮಸ್ಸಿನಲ್ಲಿ ಪಾತಯಿಷ್ಯಾಮಿ–ಹಾಕುವೆನು; ಯತಃ–ಯಾವುದರಿಂದ, ನಿವೃತ್ತಿಃ–ಬಿಡುಗಡೆಯು (ತಿರುಗಿ ಬರೋಣವು), ನ ಭವೇತ್–ಇಲ್ಲವೋ, ಅನಾರಂಭಣಂ–ಆರಂಭವಿಲ್ಲದ (ಸರ್ವತ್ರ ಏಕಪ್ರಕಾರಕ ಸಾಂದ್ರತೆಯುಳ್ಳ),

---

ಶ್ರವಣ ಮನನ ಧ್ಯಾನಗಳಿಂದ ಯಾರು ನನ್ನನ್ನು ಪ್ರತ್ಯಕ್ಷೀಕರಿಸಿಕೊಳ್ಳುವನೋ,[1] ಅವನಿಗೆ ತಪ್ಪದೇ ಮೋಕ್ಷವನ್ನು ಕೊಡುತ್ತೇನೆ; ಯಾರು ನನ್ನನ್ನು ನಿರಂತರವಾಗಿ ದ್ವೇಷಿಸುವನೋ ಅವನನ್ನು ಪುನರಾವೃತ್ತಿರಹಿತವಾದ ಅಂಧತಮಸ್ಸಿನಲ್ಲಿ ಹಾಕುತ್ತೇನೆ; ಆ ತಮಸ್ಸು (ನರಕವು) ವ್ಯಾಪ್ತವಾದುದು; ನಿತ್ಯವಾದುದು; ಪಂಚಜ್ಞಾನೇಂದ್ರಿಯಗಳಿಗೆ ನಿರಂತರವಾದ ತೀವ್ರದುಃಖವನ್ನು ಕೊಡತಕ್ಕದ್ದು ವಪ್ರವೆಂದೂ ಕರೆಯಲ್ಪಡುತ್ತದೆ (೧೪-೧೫). ಹೀಗೆ

---

1. ಭಗವಂತನ ಸಾಕ್ಷಾತ್ಕಾರಕ್ಕೆ ಶ್ರವಣ-ಮನನ ಧ್ಯಾನಗಳು ಪ್ರಧಾನ ಸಾಧನಗಳು. ಶ್ರವಣ—ಗುರುಮುಖದಿಂದ, ಅರ್ಥಜ್ಞಾನಪೂರ್ವಕವಾಗಿ, ವೇದಾದಿ ಸಚ್ಛಾಸ್ತ್ರಗಳನ್ನು ಶ್ರವಣಮಾಡುವುದು (ಕೇಳುವುದು); ಮನನ—ಕೇಳಿದುದರ ನಿಶ್ಚಯಕ್ಕಾಗಿ, ವಿಮರ್ಶೆಯಿಂದ ಸಂಶಯಗಳನ್ನು ಪರಿಹರಿಸುವ ಚಿಂತನೆಯು; ಧ್ಯಾನ—ನಿಶ್ಚಯಜ್ಞಾನದಿಂದಲೇ ಸಾಧ್ಯವಾದ ಶ್ರೀಹರಿಚಿಂತನೆ- ಮನಸ್ಸನ್ನು ಏಕಾಗ್ರ ಮಾಡಿಕೊಂಡು, ಯೋಗ್ಯವಾದ ಆಸನಾದಿಗಳ ಸಿದ್ಧತೆಯಿಂದ, ಶ್ರೀಹರಿಮೂರ್ತಿಯನ್ನು ಧ್ಯಾನಿಸಿ, ಸಮಾಧಿಯಲ್ಲಿ ಮನಸ್ಸನ್ನು ನಿಲ್ಲಿಸುವುದು. ಧ್ಯಾನಸಿದ್ಧಿಯಿಂದ ಶ್ರೀಹರಿಯು ಪ್ರಸನ್ನನಾಗಿ, ತನ್ನ ಸಂದರ್ಶನವನ್ನು ಅನುಗ್ರಹಿಸುತ್ತಾನೆ—ಇದೇ ಬ್ರಹ್ಮಸಾಕ್ಷಾತ್ಕಾರವು—ಅಪರೋಕ್ಷಜ್ಞಾನವು. ಈ ಪ್ರಧಾನಸಾಧನಗಳಾದ ಶ್ರವಣಾದಿಗಳು, ನಿರಂತರ ಶಾಸ್ತ್ರಾಭ್ಯಾಸರೂಪದ ಭಗವದುಪಾಸನೆಯಿಂದಲೂ ಅನುಷ್ಠಿತಗಳಾಗುವುದರಿಂದ, ಅದರಿಂದ ಸಹ ಅಪರೋಕ್ಷವು ಲಭಿಸುತ್ತದೆ. ಇಲ್ಲಿ ೩.ನೇ ಅಧ್ಯಾಯದ ೧೯ನೇ ಶ್ಲೋಕದ ಟಿಪ್ಪಣಿಯನ್ನು ನೋಡಲಹುದು.

ಅನಂತಂ–ನಿತ್ಯವಾದ (ವಿಸ್ತಾರವಾದ), ಪಂಚಕಷ್ಟದಂ–ಪಂಚಜ್ಞಾನೇಂದ್ರಿಯಗಳಿಗೂ ಬಹುದುಃಖಪ್ರದವಾದ, ವಪ್ರಂ–ವಪ್ರನಾಮಕ, ತಮಃ–ತಮಸ್ಸು–ನರಕವು, ಅದು.

**ತನ್ಮಧ್ಯೇ ಪತಿತೋ ಜಾತು ನ ಬಹಿರ್ಗಂತುಮರ್ಹತಿ ।**
**ನ ಹಿ ಪ್ರೀಣಾಮ್ಯಹಂ ಕಂಚಿನ್ನಹಿ ದ್ವೇಷ್ಮಿ ಚ ಕಂಚನ ॥ ೧೬ ॥**

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।**
**ಸತ್ಯಸಂಕಲ್ಪತಸ್ತಸ್ಮಾದನ್ಯಥಾ ನ ಕರೋತ್ಯಯಂ ॥ ೧೭ ॥**

ತನ್ಮಧ್ಯೇ–ಆ ಅಂಧತಮಸ್ಸಿನ ಮಧ್ಯದಲ್ಲಿ ಪತಿತಃ–ಬಿದ್ದ ಜೀವನು, ಜಾತು–ಎಂದೂ, ಬಹಿಃ–ಹೊರಗೆ, ಗಂತುಂ–ಹೋಗುವುದಕ್ಕೆ, ನ ಅರ್ಹತಿ–ಸಮರ್ಥನಾಗುವುದಿಲ್ಲ (ಹೀಗೆ ಆಯಾ ಜೀವರು ತಮ್ಮ ಸ್ವರೂಪಯೋಗ್ಯವಾದ ಗತಿಗಳನ್ನೇ ಹೊಂದುವರು), ಹಿ–ಆ ಕಾರಣದಿಂದ, ಅಹಂ–ನಾನು, ಕಂಚಿತ್–ಯಾರೊಬ್ಬನನ್ನೂ, ಪ್ರೀಣಾಮಿ–(ನಿರ್ನಿಮಿತ್ತವಾಗಿ) ಪ್ರೀತಿಸುವುದಿಲ್ಲ ಚ–ಮತ್ತು ಕಂಚನ–ಯಾರನ್ನೂ, ನ ಹಿ ದ್ವೇಷ್ಮಿ–ದ್ವೇಷಿಸುವುದಿಲ್ಲ (ಎಂಬುದು ಸಿದ್ಧವಾಗುತ್ತದೆ); (ಮತ್ತೇನೆಂದರೆ), ಯೇ–ಯಾರು, ಯಥಾ–ಹೇಗೆ, ಮಾಂ–ನನ್ನನ್ನು, ಪ್ರಪದ್ಯಂತೇ–ಹೊಂದುತ್ತಾರೆಯೋ (ಸ್ನೇಹಾದಿ ಭಾವಗಳಿಂದ ನನ್ನನ್ನು ಸೇವಿಸುವರೋ), ತಾನ್–ಅವರನ್ನು ಅಹಂ–ನಾನು, ತಥಾ ಏವ–ಹಾಗೆಯೇ (ಆಯಾ ಭಾವಗಳಿಂದಲೇ ಯುಕ್ತನಾಗಿ ಅವರಲ್ಲಿ ಸ್ನೇಹಾದಿಗಳುಳ್ಳವನಾಗಿ), ಭಜಾಮಿ–(ಅವರ ಸೇವೆಗೆ) ಫಲವನ್ನು ಕೊಡುತ್ತೇನೆ; ಅಯಂ–(ನಾನು) ಈ ಭಗವಂತನು, ಸತ್ಯಸಂಕಲ್ಪತಃ–ಸತ್ಯಸಂಕಲ್ಪನಾದ್ದರಿಂದ (ತನ್ನ ಸಂಕಲ್ಪವನ್ನು ವ್ಯತ್ಯಾಸಗೊಳಿಸುವುದಿಲ್ಲವಾದ್ದರಿಂದ), ತಸ್ಮಾತ್–ಆಯಾ ಗತಿಗಳನ್ನು ಹೊಂದಿಸುವುದರಿಂದ, ಅನ್ಯಥಾ–ಬೇರೆ ವಿಧವಾಗಿ, ನ ಕರೋತಿ–ಮಾಡುವುದಿಲ್ಲ.

**ಅನ್ಯಃ ಕೋಽಪಿ ನ ಚಾಸ್ತ್ಯೇವ ತತ್ಸಂಕಲ್ಪವಿಘಾಟಕಃ ।**
**ಸತ್ಯಸಂಕಲ್ಪತಸ್ತಸ್ಮಾಜ್ಜಾಯತೇ ಸರ್ವದೈವ ಹಿ ॥ ೧೮ ॥**

**ಜೀವಸ್ಯಪ್ಯಾದಿಕಂ ಸರ್ವದೋಷಶಂಕಾಪಿ ತತ್ರ ನ ।**

---

ಅಂಧತಮಸ್ಸಿನಲ್ಲಿ ಬಿದ್ದ ಜೀವನು ಅಲ್ಲಿಂದ ಹೊರಗೆ ಬರಲು, ಎಂದೂ ಶಕ್ತನಾಗುವುದಿಲ್ಲ ನಾನು ಸರ್ವಸಮನು—ಸ್ವಭಾವದಿಂದಲೇ ಪ್ರಿಯರು ಮತ್ತು ದ್ವೇಷಿಗಳೆಂಬುವರಿಲ್ಲ. ಯಾರು ನನ್ನಲ್ಲಿ ಯಾವ ಭಾವನೆಯುಳ್ಳವರಾಗುತ್ತಾರೆಯೋ, ಅವರು ನನ್ನಿಂದ ಅದೇ ಭಾವನೆಯನ್ನು ತಮ್ಮ ವಿಷಯಕ್ಕೆ ಹೊಂದುತ್ತಾರೆ. ಈ ಸಂಕಲ್ಪವನ್ನು ಭಗವಂತನು ಎಂದಿಗೂ ಬದಲುಗೊಳಿಸುವುದಿಲ್ಲ, ಆದ್ದರಿಂದ ಆತನು ಸರ್ವಸಮನೆಂದು ಸಿದ್ಧವಾಗುತ್ತದೆ(೧೬-೧೭). ಶ್ರೀಹರಿಯ ಸಂಕಲ್ಪಕ್ಕೆ ವಿಘ್ನವನ್ನುಂಟುಮಾಡಲು (ಬೇರೆ

ತತ್ಸಂಕಲ್ಪವಿಘಟ್ಟಕಃ–(ಭಗವಂತನ) ಆ ಸಂಕಲ್ಪಕ್ಕೆ ವಿರೋಧವನ್ನುಂಟುಮಾಡ ಬಲ್ಲವನು (ತದ್ವಿರುದ್ಧವಾಗಿ ಆಗುವಂತೆ ಮಾಡಲು ಶಕ್ತನೆಂಬುವನು), ಅನ್ಯಃ–ಮತ್ತೊಬ್ಬನು, ಕಃ ಅಪಿ–ಯಾವನೂ ಸಹ, ನ ಅಸ್ತ್ಯೇವ–ಇರುವುದೇ ಇಲ್ಲ; ಸತ್ಯಸಂಕಲ್ಪತ್ವಃ–ಸತ್ಯಸಂಕಲ್ಪತ್ವವಿರುವುದರಿಂದಲೇ, ತಸ್ಮಾತ್–ಆತನಿಂದ (ಶ್ರೀವಿಷ್ಣುವಿನಿಂದಲೇ), ಜೀವಸೃಷ್ಟ್ಯಾದಿಕಂ–ಜೀವರುಗಳು ಸೃಷ್ಟಿ ಮೊದಲಾದವುಗಳೆಲ್ಲವೂ, ಸರ್ವದಾ ಏವ–ಎಲ್ಲ ಕಾಲದಲ್ಲಿಯೂ, ಜಾಯತೇ–ಉಂಟಾಗುತ್ತದೆ; ತತ್ರ–ಈ ವಿಷಯದಲ್ಲಿ (ಸೃಷ್ಟ್ಯಾದಿಗಳನ್ನು ನಿರ್ವಹಿಸುವುದರಲ್ಲಿ), ಸರ್ವದೋಷಶಂಕಾ ಅಪಿ–ಸರ್ವಪ್ರಕಾರದ ದೋಷಶಂಕೆಯು (ವೈಷಮ್ಯಾದಿ ಸಂಶಯಗಳು) ಸಹ, ನ–ಇರುವುದಿಲ್ಲ.

ಬ್ರಹ್ಮೋವಾಚ—

**ಕರ್ಮೈವಾಸ್ತು ತತಃ ಕಿಂ ನು ಕಾರ್ಯಮಸ್ಮಾಕಮೀಶ್ವರಾತ್ ॥ ೧೯ ॥**

**ಯತ ಏವ ಭವೇನ್ನೃಣಾಮೂರ್ಧ್ವಾಧೋಗಮನಂ ಸದಾ ।**

ತತಃ–(ಅವರವರ ಪೂರ್ವಕರ್ಮಾನುಸಾರವಾಗಿ ಜೀವರ ಸೃಷ್ಟ್ಯಾದಿಗಳು ನಡೆಯುವುದರಿಂದ) ಆ ಕಾರಣದಿಂದ, ಕರ್ಮ ಏವ–ಕರ್ಮವೇ, ಅಸ್ತು–ಇರಲಿ (ಕರ್ಮವೇ ಕಾರಣವಾಗಲಿ); ಅಸ್ಮಾಕಂ–ನಮಗೆ (ಜೀವರಿಗೆ), ಈಶ್ವರಾತ್–(ಸರ್ವಶಕ್ತನೆಂಬ) ಶ್ರೀವಿಷ್ಣುವಿನಿಂದ, ಕಿಂ ನು ಕಾರ್ಯಂ–ಆಗತಕ್ಕ ಕೆಲಸವೇನಿದೆ? ಯತಃ ಏವ–ಯಾವ ಕರ್ಮಗಳಿಂದಲೇ (ಪೂರ್ವಕರ್ಮ, ಮತ್ತು ಅದರಿಂದ (ಅದರ ಸಂಸ್ಕಾರಬಲದಿಂದ ಈಗ ಸಂಭವಿಸುವ ಕರ್ಮಗಳಿಂದ)ಲೇ, ನೃಣಾಂ–ಮನುಷ್ಯರಿಗೆ (ಸಾಧನ ದೇಹದಲ್ಲಿರುವ ಜೀವರಿಗೆ), ಸದಾ–ಯಾವಾಗಲೂ, ಊರ್ಧ್ವಾಧೋಗಮನಂ–ಮೇಲೆ ಕೆಳಗಿನ ಗತಿಗಳು, (ಸ್ವರ್ಗನರಕಾದಿಲೋಕಗಳಿಗೆ ಹೋಗುವುದು), ಭವೇತ್–ಉಂಟಾಗುತ್ತದೆಯೋ (ಆ ಕರ್ಮಗಳೇ ಯಥಾಯೋಗ್ಯ ಫಲಗಳನ್ನು ದೊರಕಿಸಲು ಸಾಕು—ಈಶ್ವರನೇಕೆ?).

---

ವಿಧವಾಗಿ ಸೃಷ್ಟ್ಯಾದಿಗಳನ್ನು ನಡೆಯುವಂತೆ ಮಾಡಬಲ್ಲವನು) ಮತ್ತೊಬ್ಬನು ಯಾರೂ ಯಾವ ಕಾಲಕ್ಕೂ ಇಲ್ಲ. ಶ್ರೀವಿಷ್ಣುವು ಹೀಗೆ ಸತ್ಯಸಂಕಲ್ಪನಾದ್ದರಿಂದ, ಜೀವರ ಸೃಷ್ಟ್ಯಾದಿಗಳು ಅನಂತಭವಿಷ್ಯಕಾಲದಲ್ಲಿ ಸಹ, ಏಕಪ್ರಕಾರವಾಗಿಯೇ ನಡೆಯುತ್ತವೆ; ಹೀಗಿರುವುದರಿಂದ, ಶ್ರೀವಿಷ್ಣುವಿನಲ್ಲಿ ವೈಷಮ್ಯಾದಿ ದೋಷಗಳ ಸಂಶಯಕ್ಕೆ ಸಹ ಎಷ್ಟೂ ಅವಕಾಶವಿಲ್ಲ (೧೮). ಕರ್ಮಾನುಸಾರವಾದ ಗತಿಗಳನ್ನು ಜೀವರಿಗೆ ಶ್ರೀಹರಿಯು ಕೊಡುತ್ತಾನೆಂದರೆ, ಕರ್ಮಗಳೇ ಸಾಕು, ನಮಗೆ ಸರ್ವಶಕ್ತನೆಂಬ ಶ್ರೀವಿಷ್ಣುವಿನಿಂದೇನು? ಕರ್ಮಗಳಿಂದಲೇ ಸ್ವರ್ಗನರಕಾದಿ ಲೋಕಗಳು ಜೀವರಿಗೆ ದೊರೆಯುತ್ತದಷ್ಟೆ (೧೯). ಒಬ್ಬನು ಮಾಡಿದ ಕಳ್ಳತನ, ಪರಸ್ತ್ರೀ ಗಮನಾದಿ ಯಾವುದೊಂದು ಅಪರಾಧಕ್ಕೆ ಯೋಗ್ಯ ಶಿಕ್ಷೆಯು, ಆ ಅಪರಾಧರೂಪದ ಕರ್ಮದಿಂದ ದೊರೆಯುವುದಿಲ್ಲ—ಕರ್ಮವೇ

ಶ್ರೀ ಹಯಗ್ರೀವ ಉವಾಚ—

ಚೌರ್ಯಂ ವಾ ಪಾರದಾರ್ಯಂ ವಾಥವಾನ್ಯದಪರಾಧನಂ ॥ ೨೦ ॥

ಕರೋತಿ ಕಶ್ಚಿತ್ತತ್ಕರ್ಮ ತನ್ನ ದಂಡಯತಿ ಸ್ವಯಂ ।
ಕಿಂತು ರಾಜಾ ನರಸ್ಯಾಸ್ಯ ವಿದಿತ್ವಾ ಕರ್ಮ ಪಾಪಕಂ ॥ ೨೧ ॥

ದಂಡಂ ಕರೋತಿ ಶಾಸ್ತ್ರೋಕ್ತಂ ಸ್ವೇಚ್ಛಯೈವಾತ್ರ ಪೂರುಷೇ ।
ಏವಂ ಹಿ ಕಶ್ಚಿತ್ ಸ್ವಗೃಹೇ ನಿರ್ಜನೇ ವಾಥವಾ ವನೇ ॥ ೨೨ ॥

ಕರೋತಿ ಧಾವನಾದೀನಿ ತತ್ಫಲಂ ನ ಸಮಶ್ನುತೇ ।
ತಾದೃಕ್ ಚ ಧಾವನಾದೀನಿ ಭೂಪಸ್ಯಾಗ್ರೇ ಕರೋತಿ ಚೇತ್ ॥ ೨೩ ॥

ತುಷ್ಟಃ ಸ ಏವ ದದ್ಯಾಚ್ಚ ತತ್ತತ್ಕರ್ಮಾನುಸಾರತಃ ।
ಏವಂ ಕರ್ಮ ಜಡಂ ನೈವ ಫಲಂ ದಾತುಮಲಂ ಸ್ವಯಂ ॥ ೨೪ ॥

ತತ ಏವಾಸ್ಯಪೇಕ್ಷಾತ್ರ ಫಲದಾನೇ ಮಹೇಶಿತುಃ ।

ಕಶ್ಚಿತ್–ಯಾರೊಬ್ಬನು, ಚೌರ್ಯಂ–ಕಳ್ಳತನವನ್ನು ವಾ–ಅಥವಾ, ಪಾರದಾರ್ಯಂ–ಪರಸ್ತ್ರೀಗಮನವನ್ನು (ಅನ್ಯನ ಭಾರ್ಯಾಸಂಗವನ್ನು), ವಾ–ಮತ್ತು ಅನ್ಯದ-ಪರಾಧನಂ–ಬೇರೆ ಅಪರಾಧವನ್ನು ಕರೋತಿ–ಮಾಡುತ್ತಾನೆ; ತತ್ಕರ್ಮ–ಆ ಕರ್ಮವು,

---

ಸಾಕ್ಷಾತ್ತಾಗಿ ಶಿಕ್ಷೆಯನ್ನು ಮಾಡುವುದಿಲ್ಲ—ಅದನ್ನು (ಆ ಅಪರಾಧವನ್ನು) ತಿಳಿದ ರಾಜನು—ಅಧಿಕಾರಿಯು ಆಯಾ ಅಪರಾಧಕ್ಕೆ ಯೋಗ್ಯವಾದ ಶಿಕ್ಷೆಯನ್ನು ವಿಧಿಸುತ್ತಾನೆ (ಶಾಸನಗಳಲ್ಲಿ—ಧರ್ಮಶಾಸ್ತ್ರಗಳಲ್ಲಿ ಉಕ್ತವಾದ ದಂಡವನ್ನೇ ವಿಧಿಸುತ್ತಾನೆ);[1] ಯಾರೊಬ್ಬನು, ತನ್ನ ಮನೆಯಲ್ಲಿ ಅಥವಾ ನಿರ್ಜನ ವನದಲ್ಲಿ ತನ್ನ ಸಾಮರ್ಥ್ಯಪ್ರದರ್ಶಕ

1. ಲೌಕಿಕ ರಾಜಾದಿ ಅಧಿಕಾರಿಗಳು ಅಪರಾಧವನ್ನು ವಿಚಾರಣೆಯಿಂದ ನಿರ್ಧರಿಸಿಕೊಳ್ಳುತ್ತಾರೆ; ಅವರ ತೀರ್ಮಾನಗಳು ಬುದ್ಧಿದೌರ್ಬಲ್ಯಾದಿಗಳಿಂದ ತಪ್ಪಾಗಿರಬಹುದು ಮತ್ತು ಪಕ್ಷಪಾತಾದಿ ಕಾರಣಗಳಿಂದ ಯೋಗ್ಯದಂಡವನ್ನು ವಿಧಿಸಲಿಕ್ಕಿಲ್ಲ; ಆದರೆ ಸರ್ವಸಮನೂ ಸರ್ವಜ್ಞನೂ ಆದ ಶ್ರೀಹರಿಯು ಜೀವರ ಕರ್ಮಗಳಿಗೆ ಕೊಡುವ ವಿವಿಧ ಫಲಗಳಲ್ಲಿ ಹೀಗೆ ವ್ಯತ್ಯಾಸವಾಗಲು ಅವಕಾಶವೇ ಇಲ್ಲ, ಆತನ ಆಜ್ಞೆಗಳೇ ಶ್ರುತಿಸ್ಮೃತಿಗಳು—ತದನುಸಾರವಾದ ಫಲಗಳನ್ನೇ ಕೊಡುತ್ತಾನೆ. ಅಪರಾಧಗಳಿಗೆ ಶಾಸನದಲ್ಲಿ ಸೂಚಿಸಲ್ಪಟ್ಟ ಶಿಕ್ಷೆಗಳನ್ನು ವಿಧಿಸುವುದರಲ್ಲಿ ಲೌಕಿಕ ಅಧಿಕಾರಿಗಳಿಗೆ ಹೇಗೆ, ಶಿಕ್ಷೆಯ ಪರಿಮಾಣದಲ್ಲಿ ಯೋಗ್ಯವಿತರಣೆ ಮಾಡುವ ಸ್ವಾತಂತ್ರ್ಯ (Discretion) ಇರುತ್ತದೆಯೋ, ಹಾಗೆಯೇ ಪೂರ್ಣಸ್ವತಂತ್ರನಾದ ಶ್ರೀಹರಿಯು, ದಂಡವನ್ನು ವಿಧಿಸುವುದರಲ್ಲಿ (ಹಾಗೆಯೇ ಪುಣ್ಯಕರ್ಮಗಳ ಫಲಕೊಡುವುದರಲ್ಲಿಯೂ) ಯುಕ್ತಾಯುಕ್ತ ವಿವೇಚನೆಯಿಂದ, ಪ್ರವೃತ್ತಿಸುತ್ತಾನೆ.

ತತ್ಸಂಕಲ್ಪವಿಘಟ್ಟಕಃ–(ಭಗವಂತನ) ಆ ಸಂಕಲ್ಪಕ್ಕೆ ವಿರೋಧವನ್ನುಂಟುಮಾಡ ಬಲ್ಲವನು (ತದ್ವಿರುದ್ಧವಾಗಿ ಆಗುವಂತೆ ಮಾಡಲು ಶಕ್ತನೆಂಬುವನು), ಅನ್ಯಃ–ಮತ್ತೊಬ್ಬನು, ಕಃ ಅಪಿ–ಯಾವನೂ ಸಹ, ನ ಅಸ್ತ್ಯೇವ–ಇರುವುದೇ ಇಲ್ಲ; ಸತ್ಯಸಂಕಲ್ಪತ್ವ–ಸತ್ಯಸಂಕಲ್ಪತ್ವವಿರುವುದರಿಂದಲೇ, ತಸ್ಮಾತ್–ಆತನಿಂದ (ಶ್ರೀವಿಷ್ಣುವಿನಿಂದಲೇ), ಜೀವಸೃಷ್ಟ್ಯಾದಿಕಂ–ಜೀವರುಗಳು ಸೃಷ್ಟಿ ಮೊದಲಾದವುಗಳೆಲ್ಲವೂ, ಸರ್ವದಾ ಏವ–ಎಲ್ಲ ಕಾಲದಲ್ಲಿಯೂ, ಜಾಯತೇ–ಉಂಟಾಗುತ್ತದೆ; ತತ್ರ–ಈ ವಿಷಯದಲ್ಲಿ (ಸೃಷ್ಟ್ಯಾದಿಗಳನ್ನು ನಿರ್ವಹಿಸುವುದರಲ್ಲಿ), ಸರ್ವದೋಷಶಂಕಾ ಅಪಿ–ಸರ್ವಪ್ರಕಾರದ ದೋಷಶಂಕೆಯು (ವೈಷಮ್ಯಾದಿ ಸಂಶಯಗಳು) ಸಹ, ನ–ಇರುವುದಿಲ್ಲ.

ಬ್ರಹ್ಮೋವಾಚ—

**ಕರ್ಮೈವಾಸ್ತು ತತಃ ಕಿಂ ನು ಕಾರ್ಯಮಸ್ಮಾಕಮೀಶ್ವರಾತ್ ॥ ೧೯ ॥**

**ಯತ ಏವ ಭವೇನ್ನೃಣಾಮೂರ್ಧ್ವಾಧೋಗಮನಂ ಸದಾ ।**

ತತಃ–(ಅವರವರ ಪೂರ್ವಕರ್ಮಾನುಸಾರವಾಗಿ ಜೀವರ ಸೃಷ್ಟ್ಯಾದಿಗಳು ನಡೆಯುವುದರಿಂದ) ಆ ಕಾರಣದಿಂದ, ಕರ್ಮ ಏವ–ಕರ್ಮವೇ, ಅಸ್ತು–ಇರಲಿ (ಕರ್ಮವೇ ಕಾರಣವಾಗಲಿ); ಅಸ್ಮಾಕಂ–ನಮಗೆ (ಜೀವರಿಗೆ), ಈಶ್ವರಾತ್–(ಸರ್ವಶಕ್ತನೆಂಬ) ಶ್ರೀವಿಷ್ಣುವಿನಿಂದ, ಕಿಂ ನು ಕಾರ್ಯಂ–ಆಗತಕ್ಕ ಕೆಲಸವೇನಿದೆ? ಯತಃ ಏವ–ಯಾವ ಕರ್ಮಗಳಿಂದಲೇ (ಪೂರ್ವಕರ್ಮ, ಮತ್ತು ಅದರಿಂದ (ಅದರ ಸಂಸ್ಕಾರಬಲದಿಂದ ಈಗ ಸಂಭವಿಸುವ ಕರ್ಮಗಳಿಂದ)ಲೇ, ನೃಣಾಂ–ಮನುಷ್ಯರಿಗೆ (ಸಾಧನ ದೇಹದಲ್ಲಿರುವ ಜೀವರಿಗೆ), ಸದಾ–ಯಾವಾಗಲೂ, ಊರ್ಧ್ವಾಧೋಗಮನಂ–ಮೇಲೆ ಕೆಳಗಿನ ಗತಿಗಳು, (ಸ್ವರ್ಗನರಕಾದಿಲೋಕಗಳಿಗೆ ಹೋಗುವುದು), ಭವೇತ್–ಉಂಟಾಗುತ್ತದೆಯೋ (ಆ ಕರ್ಮಗಳೇ ಯಥಾಯೋಗ್ಯ ಫಲಗಳನ್ನು ದೊರಕಿಸಲು ಸಾಕು—ಈಶ್ವರನೇಕೆ?).

---

ವಿಧವಾಗಿ ಸೃಷ್ಟ್ಯಾದಿಗಳನ್ನು ನಡೆಯುವಂತೆ ಮಾಡಬಲ್ಲವನು) ಮತ್ತೊಬ್ಬನು ಯಾರೂ ಯಾವ ಕಾಲಕ್ಕೂ ಇಲ್ಲ. ಶ್ರೀವಿಷ್ಣುವು ಹೀಗೆ ಸತ್ಯಸಂಕಲ್ಪನಾದ್ದರಿಂದ, ಜೀವರ ಸೃಷ್ಟ್ಯಾದಿಗಳು ಅನಂತಭವಿಷ್ಯಕಾಲದಲ್ಲಿ ಸಹ, ಏಕಪ್ರಕಾರವಾಗಿಯೇ ನಡೆಯುತ್ತವೆ; ಹೀಗಿರುವುದರಿಂದ, ಶ್ರೀವಿಷ್ಣುವಿನಲ್ಲಿ ವೈಷಮ್ಯಾದಿ ದೋಷಗಳ ಸಂಶಯಕ್ಕೆ ಸಹ ಎಷ್ಟೂ ಅವಕಾಶವಿಲ್ಲ (೧೮). ಕರ್ಮಾನುಸಾರವಾದ ಗತಿಗಳನ್ನು ಜೀವರಿಗೆ ಶ್ರೀಹರಿಯು ಕೊಡುತ್ತಾನೆಂದರೆ, ಕರ್ಮಗಳೇ ಸಾಕು, ನಮಗೆ ಸರ್ವಶಕ್ತನೆಂಬ ಶ್ರೀವಿಷ್ಣುವಿನಿಂದೇನು? ಕರ್ಮಗಳಿಂದಲೇ ಸ್ವರ್ಗನರಕಾದಿ ಲೋಕಗಳು ಜೀವರಿಗೆ ದೊರೆಯುತ್ತದಷ್ಟೆ (೧೯). ಒಬ್ಬನು ಮಾಡಿದ ಕಳ್ಳತನ, ಪರಸ್ತ್ರೀ ಗಮನಾದಿ ಯಾವುದೊಂದು ಅಪರಾಧಕ್ಕೆ ಯೋಗ್ಯ ಶಿಕ್ಷೆಯು, ಆ ಅಪರಾಧರೂಪದ ಕರ್ಮದಿಂದ ದೊರೆಯುವುದಿಲ್ಲ—ಕರ್ಮವೇ

ಶ್ರೀ ಹಯಗ್ರೀವ ಉವಾಚ—

ಚೌರ್ಯಂ ವಾ ಪಾರದಾರ್ಯಂ ವಾಥವಾನ್ಯದಪರಾಧನಂ ॥ ೨೦ ॥

ಕರೋತಿ ಕಶ್ಚಿತ್ತತ್ಕರ್ಮ ತನ್ನ ದಂಡಯತಿ ಸ್ವಯಂ ।
ಕಿಂತು ರಾಜಾ ನರಸ್ಯಾಸ್ಯ ವಿದಿತ್ವಾ ಕರ್ಮ ಪಾಪಕಂ ॥ ೨೧ ॥

ದಂಡಂ ಕರೋತಿ ಶಾಸ್ತ್ರೋಕ್ತಂ ಸ್ವೇಚ್ಛಯೈವಾತ್ರ ಪೂರುಷೇ ।
ಏವಂ ಹಿ ಕಶ್ಚಿತ್ ಸ್ವಗೃಹೇ ನಿರ್ಜನೇ ವಾಥವಾ ವನೇ ॥ ೨೨ ॥

ಕರೋತಿ ಧಾವನಾದೀನಿ ತತ್ಫಲಂ ನ ಸಮಶ್ನುತೇ ।
ತಾದೃಕ್ ಚ ಧಾವನಾದೀನಿ ಭೂಪಸ್ಯಾಗ್ರೇ ಕರೋತಿ ಚೇತ್ ॥ ೨೩ ॥

ತುಷ್ಟಃ ಸ ಏವ ದದ್ಯಾಚ್ಚ ತತತ್ಕರ್ಮಾನುಸಾರತಃ ।
ಏವಂ ಕರ್ಮ ಜಡಂ ನೈವ ಫಲಂ ದಾತುಮಲಂ ಸ್ವಯಂ ॥ ೨೪ ॥

ತತ ಏವಾಸ್ಯಪೇಕ್ಷಾತ್ರ ಫಲದಾನೇ ಮಹೇಶಿತುಃ ।

ಕಶ್ಚಿತ್–ಯಾರೊಬ್ಬನು, ಚೌರ್ಯಂ–ಕಳ್ಳತನವನ್ನು ವಾ–ಅಥವಾ, ಪಾರದಾರ್ಯಂ–ಪರಸ್ತ್ರೀಗಮನವನ್ನು (ಅನ್ಯನ ಭಾರ್ಯಾಸಂಗವನ್ನು), ವಾ–ಮತ್ತು ಅನ್ಯದ-ಪರಾಧನಂ–ಬೇರೆ ಅಪರಾಧವನ್ನು ಕರೋತಿ–ಮಾಡುತ್ತಾನೆ; ತತ್ಕರ್ಮ–ಆ ಕರ್ಮವು,

---

ಸಾಕ್ಷಾತ್ತಾಗಿ ಶಿಕ್ಷೆಯನ್ನು ಮಾಡುವುದಿಲ್ಲ—ಅದನ್ನು (ಆ ಅಪರಾಧವನ್ನು) ತಿಳಿದ ರಾಜನು—ಅಧಿಕಾರಿಯು ಆಯಾ ಅಪರಾಧಕ್ಕೆ ಯೋಗ್ಯವಾದ ಶಿಕ್ಷೆಯನ್ನು ವಿಧಿಸುತ್ತಾನೆ (ಶಾಸನಗಳಲ್ಲಿ—ಧರ್ಮಶಾಸ್ತ್ರಗಳಲ್ಲಿ ಉಕ್ತವಾದ ದಂಡವನ್ನೇ ವಿಧಿಸುತ್ತಾನೆ);[1] ಯಾರೊಬ್ಬನು, ತನ್ನ ಮನೆಯಲ್ಲಿ ಅಥವಾ ನಿರ್ಜನ ವನದಲ್ಲಿ ತನ್ನ ಸಾಮರ್ಥ್ಯಪ್ರದರ್ಶಕ

---

1. ಲೌಕಿಕ ರಾಜಾದಿ ಅಧಿಕಾರಿಗಳು ಅಪರಾಧವನ್ನು ವಿಚಾರಣೆಯಿಂದ ನಿರ್ಧರಿಸಿಕೊಳ್ಳುತ್ತಾರೆ; ಅವರ ತೀರ್ಮಾನಗಳು ಬುದ್ಧಿದೌರ್ಬಲ್ಯಾದಿಗಳಿಂದ ತಪ್ಪಾಗಿರಬಹುದು ಮತ್ತು ಪಕ್ಷಪಾತಾದಿ ಕಾರಣಗಳಿಂದ ಯೋಗ್ಯದಂಡವನ್ನು ವಿಧಿಸಲಿಕ್ಕಿಲ್ಲ. ಆದರೆ ಸರ್ವಸಮನೂ ಸರ್ವಜ್ಞನೂ ಆದ ಶ್ರೀಹರಿಯು ಜೀವರ ಕರ್ಮಗಳಿಗೆ ಕೊಡುವ ವಿವಿಧ ಫಲಗಳಲ್ಲಿ ಹೀಗೆ ವ್ಯತ್ಯಾಸವಾಗಲು ಅವಕಾಶವೇ ಇಲ್ಲ. ಆತನ ಆಜ್ಞೆಗಳೇ ಶ್ರುತಿಸ್ಮೃತಿಗಳು—ತದನುಸಾರವಾದ ಫಲಗಳನ್ನೇ ಕೊಡುತ್ತಾನೆ. ಅಪರಾಧಗಳಿಗೆ ಶಾಸನದಲ್ಲಿ ಸೂಚಿಸಲ್ಪಟ್ಟ ಶಿಕ್ಷೆಗಳನ್ನು ವಿಧಿಸುವುದರಲ್ಲಿ ಲೌಕಿಕ ಅಧಿಕಾರಿಗಳಿಗೆ ಹೇಗೆ, ಶಿಕ್ಷೆಯ ಪರಿಮಾಣದಲ್ಲಿ ಯೋಗ್ಯವಿತರಣೆ ಮಾಡುವ ಸ್ವಾತಂತ್ರ್ಯ (Discretion) ಇರುತ್ತದೆಯೋ, ಹಾಗೆಯೇ ಪೂರ್ಣಸ್ವತಂತ್ರನಾದ ಶ್ರೀಹರಿಯು, ದಂಡವನ್ನು ವಿಧಿಸುವುದರಲ್ಲಿ (ಹಾಗೆಯೇ ಪುಣ್ಯಕರ್ಮಗಳ ಫಲಕೊಡುವುದರಲ್ಲಿಯೂ) ಯುಕ್ತಾಯುಕ್ತ ವಿವೇಚನೆಯಿಂದ, ಪ್ರವೃತ್ತಿಸುತ್ತಾನೆ.

ಸ್ವಯಂ–ತಾನೇ, ತಂ–ಆತನನ್ನು (ಆ ಕರ್ಮಮಾಡಿದವನನ್ನು), ನ ದಂಡಯತಿ–ಶಿಕ್ಷಿಸುವುದಿಲ್ಲ ಕಿಂತು–ಮತ್ತೇನೆಂದರೆ, ರಾಜಾ–ರಾಜನು(ಅಧಿಕಾರಿಯು), ಅಸ್ಯ ನರಸ್ಯ–ಈ ಮನುಷ್ಯನ, ಪಾಪಕಂ ಕರ್ಮ–ಪಾಪರೂಪದ ಕರ್ಮವನ್ನು, ವಿದಿತ್ವಾ–ತಿಳಿದು (ವಿಮರ್ಶೆಯಿಂದ ನಿಶ್ಚಯಿಸಿ), ಸ್ವೇಚ್ಛಯಾ ಏವ–ತನ್ನ ಇಚ್ಛಾನುಸಾರವಾಗಿಯೇ, ಅತ್ರ ಪೂರುಷೇ–ಆ ಅಪರಾಧಿಗೆ, ಶಾಸ್ತ್ರೋಕ್ತಂ–ಧರ್ಮಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ, ದಂಡಂ–ಶಿಕ್ಷೆಯನ್ನು, ಕರೋತಿ–ಮಾಡುತ್ತಾನೆ; ಏವಂ ಹಿ–ಹೀಗೆಯೇ, (ಕರ್ಮದಿಂದಲೇ) ಕಶ್ಚಿತ್–ಒಬ್ಬ ಪುರುಷನು, ಸ್ವಗೃಹೇ–ತನ್ನ ಮನೆಯಲ್ಲಿ, ಅಥವಾ, ನಿರ್ಜನೇ ವನೇ–ಜನರಿಲ್ಲದ ಕಾಡಿನಲ್ಲಿ ಧಾವನಾದೀನಿ–ಓಡುವುದೇ ಮೊದಲಾದುವನ್ನು (ತನ್ನ ಸಾಮರ್ಥ್ಯಪ್ರಕಾಶಕ ಕರ್ಮಗಳನ್ನು) ಕರೋತಿ–ಮಾಡುತ್ತಾನೆ; ತತ್ಫಲಂ–ಅದಕ್ಕೆ ಯೋಗ್ಯವಾದ ಫಲವನ್ನು; ನ ಸಮಶ್ನುತೇ–ಹೊಂದುವುದಿಲ್ಲ ತಾದೃಕ್ ಧಾವನಾದೀನಿ ಚ–ಆ ವಿಧದ ಸಾಮರ್ಥ್ಯಪ್ರದರ್ಶನವನ್ನೇ, ಭೂಪಸ್ಯ ಅಗ್ರೇ–ರಾಜನ ಎದುರಿಗೆ, ಕರೋತಿ ಚೇತ್–ಮಾಡುವವನಾದರೆ, ತುಷ್ಟಃ ಸ ಏವ–ತೃಪ್ತನಾದ ಆ ರಾಜನೇ, ತತ್ತತ್ ಕರ್ಮಾನುಸಾರತಃ–ಆಯಾ (ಬಲಪ್ರದರ್ಶಕ) ಕರ್ಮಗಳಿಗೆ ತಕ್ಕಂತೆ, ದದ್ಯಾತ್–(ಫಲವನ್ನು–ಬಹುಮಾನಾದಿಗಳನ್ನು) ಕೊಡುತ್ತಾನೆ; ಏವಂ–ಹೀಗೆಯೇ, ಜಡಂಕರ್ಮ–ಜಡವಾದ (ಸ್ವತಃ ಕ್ರಿಯಾಶಕ್ತಿರಹಿತವಾದ—ಸ್ವತಃ ಪ್ರವೃತ್ತಿ ಇಲ್ಲದ) ಕರ್ಮವು, ಸ್ವಯಂ–ತಾನೇ, ಫಲಂ–ಫಲವನ್ನು ದಾತುಂ–ಕೊಡಲಿಕ್ಕೆ, ನೈವ ಅಲಂ–ಸಮರ್ಥವಲ್ಲ ತತಃ ಏವ–ಆದ್ದರಿಂದಲೇ (ಕರ್ಮವು ಹೀಗೆ ಜಡವಾದ್ದರಿಂದಲೇ), ಅತ್ರ ಫಲದಾನೇ–ಕರ್ಮಗಳಿಗೆ ಫಲಕೊಡುವುದರಲ್ಲಿ ಮಹೇಶಿತುಃ–ಮಹೇಶ್ವರನ (ಭಗವಂತನ), ಅಪೇಕ್ಷಾ–ಅವಶ್ಯಕತೆಯು, ಅಸ್ತಿ–ಇರುತ್ತದೆ.

ಧಾವನಾದಿ ಕೃತಿಗಳನ್ನು ಆಚರಿಸಿದರೆ, ಅವುಗಳ ಫಲವನ್ನು (ಬಹುಮಾನ–ಪ್ರಶಸ್ತಿ ಮೊದಲಾದವುಗಳನ್ನು) ಪಡೆಯುವುದಿಲ್ಲ ಅದೇ ರಾಜನೆದುರಿಗೆ (ಅಥವಾ ಇತರ ಉದಾರಿಗಳಾದ ಶ್ರೀಮಂತರ ಎದುರಿಗೆ) ಆ ಕೃತಿಗಳನ್ನು ಪ್ರದರ್ಶನ ಮಾಡಿದರೆ, ಅವರು ಮೆಚ್ಚಿ ಯೋಗ್ಯ ಬಹುಮಾನ ಮಾಡುತ್ತಾರೆ. ಈ ಮೊದಲಾದ ನಿದರ್ಶನಗಳಿಂದ, ಜಡವಾದ ಕರ್ಮವು ಸ್ವಯಂ ಫಲದಾನದಲ್ಲಿ ಅಸಮರ್ಥವೆಂದು ಸಿದ್ಧವಾಗುತ್ತದೆ; ಆದ್ದರಿಂದ ಕರ್ಮಾನುಸಾರವಾಗಿ ಜೀವರ ಸೃಷ್ಟ್ಯಾದಿಗಳನ್ನು ನಡೆಸಲಿಕ್ಕೂ, ಸರ್ವಜ್ಞನೂ, ಸರ್ವಶಕ್ತನೂ, ಸ್ವತಂತ್ರನೂ ಆದ, ಮಹೇಶ್ವರನೊಬ್ಬನು ಅವಶ್ಯಕವೇ ಸರಿ (೨೦-೨೪). ಶ್ರೀವಿಷ್ಣುವು ಜೀವರ ಕರ್ಮಾದಿಗಳಿಂದ ತುಷ್ಟನಾದರೆ (ಪ್ರೀತನಾದರೆ), ಅವರ ಪಾಪವನ್ನು ಸುಟ್ಟುಹಾಕುತ್ತಾನೆ;[1] ಕುಪಿತನಾದರೆ ಅವರ ಪುಣ್ಯಗಳನ್ನು ಸುಡುತ್ತಾನೆ; ಆತನು ಜೀವರು

1. ಪುಣ್ಯಪಾಪಗಳ ಫಲಗಳಾದ ಸುಖದುಃಖಗಳನ್ನು ಅನುಭವಿಸುವುದರಿಂದ ಆ ಕರ್ಮಗಳು ನಷ್ಟವಾಗುತ್ತವೆಂಬುದು ಸಾಮಾನ್ಯ ನಿಯಮ. ಭಕ್ತರ ಬಹುಪಾಪಗಳನ್ನು ಭಕ್ತರ ಭೋಗಕ್ಕೆ

ತುಷ್ಟಃ ಪಾಪಂ ದಹೇದೇಷ ರುಷ್ಟಃ ಪುಣ್ಯಂ ದಹೇದಪಿ ॥ ೨೫ ॥

ತಸ್ಯೈವ ತಚ್ಚರೇದ್ಭಕ್ತಿಂ ನ ಚ ದ್ವೇಷಂ ಮನಾಗಪಿ ।

ಇತಿ ತೇ ಸರ್ವಮಾಖ್ಯಾತಂ ಯತ್ ಪೃಷ್ಟಂ ಮೇ ತ್ವಯಾನಘ ॥ ೨೬ ॥

ಇದಾನೀಂ ಕಥಯಿಷ್ಯಾಮಿ ಯೇನ ಪೂರ್ಣಂ ಭವೇನ್ಮನಃ ।

ಶೃಣುಷ್ವಾವಹಿತೋ ಬ್ರಹ್ಮನ್ ಪರಂ ಗುಹ್ಯಂ ವದಾಮಿ ತೇ ॥ ೨೭ ॥

ಏಷಃ–ಈತನು (ಶ್ರೀವಿಷ್ಣುವು), ತುಷ್ಟಃ–ತೃಪ್ತನಾದರೆ (ಜೀವನ ವಿಷಯದಲ್ಲಿ, ಅವನ ಭಕ್ತಿ ಕರ್ಮಾದಿಗಳಿಂದ ಸಂತುಷ್ಟನಾದರೆ), ಪಾಪಂ–(ಆ ಜೀವನ) ಪಾಪವನ್ನು ದಹೇತ್–ಸುಟ್ಟುಬಿಡುತ್ತಾನೆ; ರುಷ್ಟಃ–(ಹೀಗೆಯೇ) ಕುಪಿತನಾದರೆ (ಆ ಜೀವನು ತನ್ನಲ್ಲಿ ಮಾಡುವ ದ್ವೇಷಾದಿಗಳಿಂದಲೂ ದುಷ್ಟಕರ್ಮಗಳಿಂದಲೂ ಸಿಟ್ಟಾದರೆ) ಪುಣ್ಯ ಅಪಿ–ಪುಣ್ಯವನ್ನು ಸಹ, ದಹೇತ್–ಸುಡುತ್ತಾನೆ; ತತ್–ಆದ್ದರಿಂದ, ತಸ್ಯೈವ–ಆತನ (ಶ್ರೀಹರಿಯ) ಪ್ರೀತ್ಯರ್ಥವಾಗಿಯೇ, ಭಕ್ತಿಂ–(ಆತನಲ್ಲಿ) ಭಕ್ತಿಯನ್ನು ಚರೇತ್–ಮಾಡತಕ್ಕದ್ದು (ಅಧಿಕಾರಿಯು ಆತನ ಮಾಹಾತ್ಮ್ಯಜ್ಞಾನದಿಂದ ಆತನಲ್ಲಿ ಸ್ನೇಹಭಾವವನ್ನು ವೃದ್ಧಿಪಡಿಸಿಕೊಳ್ಳಬೇಕು); ಮನಾಕ್ ಅಪಿ–ಸ್ವಲ್ಪವಾದರೂ (ಅತ್ಯಲ್ಪವಾದರೂ), (ಎಂದೂ), ದ್ವೇಷಂ–

---

ತನ್ನಲ್ಲಿ ಮಾಡುವ ಭಕ್ತಿಯಿಂದ ತುಷ್ಟನಾಗುತ್ತಾನೆ—ದ್ವೇಷದಿಂದ ರುಷ್ಟ (ಕುಪಿತ) ನಾಗುತ್ತಾನೆ; ಆದ್ದರಿಂದ ಆತನಲ್ಲಿ ಸದಾ ಭಕ್ತಿಯನ್ನೇ ಮಾಡಬೇಕು; ಅತ್ಯಲ್ಪದ್ವೇಷದ

---

ಹಚ್ಚಗೊಡದರೇ, ಹಾಗೆಯೇ ನಾಶಮಾಡುತ್ತಾನೆ. ಪಾಪಗಳ ಈ ನಾಶವು ಎರಡು ವಿಧವಾಗಿರುತ್ತವೆ:—ಒಂದು, ಪಾಪದ ಫಲವಾದ ದುಃಖದ ಉಪಶಮನ ಮಾಡುವುದು ತೀವ್ರತೆಯನ್ನು ತಗ್ಗಿಸುವುದು ಅಥವಾ ಉಪಮರ್ದ; ಎರಡು-ದುಃಖಲೇಶದ ಅನುಭವವಾಗದಂತೆ, ಪಾಪವನ್ನು ಪೂರಾ ನಿರ್ವೀರ್ಯಗೊಳಿಸಿ, ಭಕ್ತರನ್ನು ಅನುಗ್ರಹಿಸುವುದು; ಎರಡನೇ ವರ್ಗಕ್ಕೆ ಸೇರುವ ಪಾಪಗಳು ಅಧಿಕವಾಗಿರುತ್ತವೆ. ಶಾಸ್ತ್ರವಿಧಿಗಳನ್ನು ಪಾಲಿಸದಿರುವುದು ಮತ್ತು ನಿಷೇಧಗಳನ್ನಾಚರಿಸುವುದು, ಉಭಯವೂ ಪಾಪವೇ ಮತ್ತು ಆಚರಿಸುವ ಕರ್ಮಗಳಲ್ಲಿ, ಕರ್ಮಾಂಗಗಳಲ್ಲಿ ನ್ಯೂನಾತಿರಿಕ್ತ ದೋಷಗಳು ಬಹುವಾಗಿರುತ್ತವೆ—ಶುದ್ಧವಾದ ನಿರ್ದುಷ್ಟ ಕರ್ಮಗಳನ್ನಾಚರಿಸಲು ಬ್ರಹ್ಮದೇವನೊಬ್ಬನೇ ಸಮರ್ಥನು. ಅನ್ಯರ 'ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ।' (ಗೀತಾ) ಎಲ್ಲ ಕರ್ಮಗಳು, ಅಗ್ನಿಯು ಹೊಗೆಯಿಂದ ಆವರಿಸಲ್ಪಡುವಂತೆ, ದೋಷಗಳಿಂದ ಕೂಡಿಯೇ ಇರುತ್ತದೆ. ಈ ವಿಧದ ಎಲ್ಲ ಪಾಪಗಳನ್ನೂ ಅಜ್ಞಾನಾವಸ್ಥೆಯಲ್ಲಿ ಮಾಡಿದ ಸರ್ವ ಪಾಪಗಳನ್ನು ಶ್ರೀಹರಿಯು ದಹಿಸುತ್ತಾನೆ—ಭಕ್ತರ ಪ್ರಾರ್ಥನೆಯನ್ನು ಮನ್ನಿಸಿ; ಹಾಗೆ ಕ್ಷಮಿಸಿ ಉದ್ಧರಿಸದಿದ್ದರೆ, 'ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ । ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ॥' ಎಂಬ ಪ್ರಾರ್ಥನೆಯು ವ್ಯರ್ಥವಲ್ಲವೇ? ಮಾಡಿದ ಕರ್ಮಗಳನ್ನೆಲ್ಲಾ ಭೋಗಿಸಿಯೇ ತೀರಬೇಕೆಂಬ ನಿಯಮವಿದ್ದರೆ, (ಕ್ಷಮಿಸುವ ಶಕ್ತಿಯೇ ಇಲ್ಲದವನನ್ನು ಪ್ರಾರ್ಥಿಸು ವುದು) ಪ್ರಾರ್ಥನೆಯು ವ್ಯರ್ಥವಲ್ಲವೇ? ಹೀಗೆಯೇ ಭಕ್ತರ ಕಾಮ್ಯಪುಣ್ಯಕರ್ಮಗಳ ಫಲಗಳನ್ನು ನಾಶಮಾಡಿ ಶೀಘ್ರವಾಗಿ ಜ್ಞಾನದ್ವಾರಾ ಮೋಕ್ಷಕ್ಕೆ ಅವಕಾಶಗಳನ್ನು ಕಲ್ಪಿಸಿ ಅನುಗ್ರಹಿಸುತ್ತಾನೆ.

ದ್ವೇಷವನ್ನು ನ ಚ–ಮಾಡಬಾರದು. ಇತಿ–ಹೀಗೆ, ಅನಘ–ಹೇ ಪಾಪವಿದೂರನಾದ ಬ್ರಹ್ಮದೇವ! ತ್ವಯಾ–ನಿನ್ನಿಂದ, ಮೇ–ನನ್ನಲ್ಲಿ ಯತ್ ಪೃಷ್ಟಂ–ಯಾವುದು ಪ್ರಶ್ನಿಸಲ್ಪಟ್ಟಿತೋ, ಸರ್ವಂ–ಆ ಎಲ್ಲವೂ, ತೇ–ನಿನಗೋಸ್ಕರ, ಆಖ್ಯಾತಂ–ಹೇಳಲ್ಪಟ್ಟಿತು; ಯೇನ–ಯಾವುದರಿಂದ (ಯಾವ ರಹಸ್ಯವನ್ನು ತಿಳಿಯುವುದರಿಂದ), ಮನಃ–(ನಿನ್ನ) ಮನಸ್ಸು ಪೂರ್ಣಂ ಭವೇತ್–ಪೂರ್ಣವಾಗುತ್ತದೆಯೋ, (ನಿನ್ನ ಜ್ಞಾನವು ಪೂರ್ಣವಾಗಿ ಸೃಷ್ಟಿಕಾರ್ಯದಲ್ಲಿ ಪೂರ್ಣದಕ್ಷತೆಯನ್ನು ಪಡೆಯುವೆಯೋ–ಪೂರ್ಣತೃಪ್ತನಾಗುವೆಯೋ), (ಅದನ್ನು) ಇದಾನೀಂ–ಈಗ (ಈ ಮುಂದೆ); ಕಥಯಿಷ್ಯಾಮಿ–ಹೇಳುತ್ತೇನೆ; ಬ್ರಹ್ಮನ್–ಹೇ ಬ್ರಹ್ಮ!, ತೇ–ನಿನಗೆ, ಪರಂ ಗುಹ್ಯಂ–ಪರಮಗೋಪ್ಯವಾದುದನ್ನು, ವದಾಮಿ–ಹೇಳುತ್ತೇನೆ, ಅವಹಿತಃ–ಸಾವಧಾನ ಮನಸ್ಕನಾಗಿ (ಏಕಾಗ್ರತೆಯಿಂದ), ಶೃಣುಷ್ವ–ಶ್ರವಣಮಾಡು.

---

ಮಿಶ್ರಣವೂ ಆ ಭಕ್ತಿಯಲ್ಲಿರಕೂಡದು;[1] ಹೇ ಬ್ರಹ್ಮ! ನೀನು ನನ್ನಲ್ಲಿ ಮಾಡಿದ ಪ್ರಶ್ನೆಗಳೆಲ್ಲವನ್ನೂ ಉತ್ತರಿಸಿದ್ದೇನೆ; ಹೇ ನಿಷ್ಪಾಪನೇ! ನಿನ್ನ ಮನಸ್ಸು ಪೂರ್ಣತ್ವವನ್ನು ಹೊಂದಿತೆಂಬ ತೃಪ್ತಿಯು ನಿನಗುಂಟಾಗದೇಕಾದರೆ,[2] ಇನ್ನು ಕೆಲವು ರಹಸ್ಯಗಳ ಜ್ಞಾನವನ್ನು ನೀನು ಸಂಪಾದಿಸುವುದಿದೆ. ಅದನ್ನು ಈ ಮುಂದೆ ನಿನಗೆ ಉಪದೇಶಿಸುತ್ತೇನೆ—ಸಾವಧಾನ ಚಿತ್ತನಾಗಿ ಶ್ರವಣಮಾಡು (೨೫-೨೭).

ಶ್ರೀಹರಿಯ ಸ್ವಾತಂತ್ರ್ಯಾದಿಗಳ ಉಪಪಾದನವೆಂಬ ೬ನೇ ಅಧ್ಯಾಯವು ಮುಗಿದುದು.

---

1. ನವವಿಧಭಕ್ತಿಗಳು:— 'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ' (ಭಾಗ) (1) ಹರಿ ಮಹಿಮೆಗಳ ಶ್ರವಣ (2) ಕೀರ್ತನ (3) ಸ್ಮರಣೆ (4) ಹರಿಪಾದಸೇವೆ (5) ಹರಿಮೂರ್ತಿಗಳ ಪೂಜೆ 6) ನಮಸ್ಕಾರ (7) ಹರಿದಾಸನೆಂಬ ನಿತ್ಯಭಾವನೆ (8) ನಿತ್ಯಸಖನೆಂಬ ಚಿಂತನೆ (9) ಆತ್ಮಸಮರ್ಪಣೆ—ಎಲ್ಲ ಪ್ರಕಾರದಿಂದ, ಸ್ವರೂಪದಿಂದ ಸಹ ಶ್ರೀಹರಿಯು ನಿತ್ಯಾಧೀನನೆಂಬ ಅನುಸಂಧಾನ. ನವವಿಧದ್ವೇಷಗಳು:— ಜೀವಾ-ಭೇದೋ ನಿರ್ಗುಣತ್ವಂ ಅಪೂರ್ಣ ಗುಣತಾ ತಥಾ। ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ। ಪ್ರಾದುರ್ಭಾವ ವಿಪರ್ಯಾಸಃ ತದ್ಭಕ್ತದ್ವೇಷ ಏವ ಚ। ತತ್ಪ್ರಮಾಣಸ್ಯ ನಿಂದಾಚ ದ್ವೇಷಾ ಏತೇಽಖಿಲಾ ಮತಾಃ॥' (ಭಾರತ-ತಾ.) (1) ಜೀವನು ಶ್ರೀಹರಿಯಿಂದ ಅಭಿನ್ನನೆಂದು ತಿಳಿಯುವುದು; (2) ಶ್ರೀಹರಿಯನ್ನು ಆನಂದಾದಿ ಗುಣಶೂನ್ಯನೆಂಬ ಜ್ಞಾನ (3) ಅಪೂರ್ಣಗುಣನೆಂಬ ಜ್ಞಾನ (4) ಶ್ರೀಹರಿಗೆ ಸಮರೂ ಅಧಿಕರೂ ಇರುವರೆಂಬ ಜ್ಞಾನ (5) ಶ್ರೀಹರಿಯ ಅನಂತರೂಪಗಳಿಗೆ ಪರಸ್ಪರವಾಗಿಯೂ (6) ಒಂದೊಂದು ರೂಪದ ಕರಚರಣಾದ್ಯವಯವಗಳಿಗೂ ಆ ರೂಪಕ್ಕೂ ಭೇದವನ್ನು ತಿಳಿಯುವುದು; (7) ಶ್ರೀಹರಿಯ ಅವತಾರಗಳನ್ನು ಸಾಮಾನ್ಯ ಮನುಷ್ಯ ಅಥವಾ ಪ್ರಾಕೃತದೇಹಗಳುಳ್ಳವೆಂದು ತಿಳಿಯುವುದು; (8) ಹರಿಭಕ್ತರನ್ನು ದ್ವೇಷಿಸುವುದು—ನಿಂದಿಸುವುದು ಇತ್ಯಾದಿ (9) ವೇದಾದಿ ಪ್ರಮಾಣಗಳನ್ನು ನಿಂದಿಸುವುದು—ಅಪ್ರಮಾಣವೆಂದು ತಿರಸ್ಕರಿಸುವುದು ಮತ್ತು ಹಾಗೆಂದು ವಾದಿಸುವುದು.

2. ಅಧ್ಯಾಯ 3ರ ಶ್ಲೋಕ 41-42ನ್ನು ಇಲ್ಲಿ ನೋಡಿಕೊಳ್ಳಿರಿ. ಮನಸ್ಸಿನ ಅತೃಪ್ತಿಗೆ ಕಾರಣವಾದ ಅಪೂರ್ಣತ್ವವನ್ನು ಪರಿಹರಿಸಬೇಕೆಂಬುದು ಬ್ರಹ್ಮದೇವನ ಪ್ರಾರ್ಥನೆ.

# ಅಧ್ಯಾಯ ೭

ಶ್ರೀ ವೇದವ್ಯಾಸಾಯ ನಮಃ

**ಶ್ರೀ ಹಯಗ್ರೀವ ಉವಾಚ—**

**ಏವಂ ವಸ್ತುಷು ಸರ್ವೇಷು ವಿದ್ಯಮಾನಂ ಮಹೇಶ್ವರಂ ।**
**ವೇದಾಃ ಸ್ತುವಂತಿ ಮಾಮೇವ ನಾನಾರೂಪಮನೇಕಧಾ ॥ ೧ ॥**

ಏವಂ—ಈ ಹಿಂದೆ ನಿರೂಪಿಸಿದಂತೆ,[1] ಸರ್ವೇಷು—ಎಲ್ಲಾ, ವಸ್ತುಷು—ವಸ್ತುಗಳಲ್ಲಿ ವಿದ್ಯಮಾನಂ—ಇರುವ (ಅಂತಃಪ್ರವಿಷ್ಟನಾಗಿ ಸ್ಥಿತನಾಗಿರುವ), ಮಹೇಶ್ವರಂ—ಸರ್ವೋತ್ತಮ ಪ್ರಭುವಾದ, ಮಾಂ ಏವ—ನನ್ನನ್ನೇ, ವೇದಾಃ—(ಸಮಸ್ತ) ವೇದಗಳು, ನಾನಾರೂಪಂ—ಅನಂತರೂಪನಾದ ನನ್ನನ್ನು, ಅನೇಕಧಾ—ಬಹುಪ್ರಕಾರವಾಗಿ (ಬಹುಮಹಿಮೆಯುಳ್ಳವ ನನ್ನಾಗಿ), ಸ್ತುವಂತಿ—ಸ್ತುತಿಸುತ್ತವೆ.

**ತಾವದ್ರೂಪೈಸ್ತು ತಂತ್ರಾಣಿ ಸ್ಫುಟಂ ತೈಸ್ತೈಶ್ಚ ನಾಮಭಿಃ ।**
**ಪ್ರಸಾದಯಂತಿ ಮಾಂ ಮಂತ್ರೈಸ್ತತ್ತದಾಗಮದೀಕ್ಷಿತಾಃ ॥ ೨ ॥**

ತಂತ್ರಾಣಿ—ತಂತ್ರಗಳು, (ಸ್ಮೃತಿಗಳು), ಸ್ಫುಟಂ—ಸ್ಪಷ್ಟವಾಗಿ, ತೈಃ ತೈಃ—ಆಯಾ, ನಾಮಭಿಃ— ನಾಮಗಳಿಂದ, ತಾವದ್ರೂಪೈಃ—ಅಷ್ಟು ರೂಪಗಳಿಂದ, (ಆಯಾ ನಾಮಗಳಿಂದ ಬೋಧ್ಯವಾದ ನಾನಾರೂಪಗಳುಳ್ಳವನೆಂದು), ಸ್ತುವಂತಿ—ಸ್ತುತಿಸುತ್ತವೆ; ತತ್ತದಾಗಮ ದೀಕ್ಷಿತಾಃ—ಆಯಾ ಆಗಮಗಳಲ್ಲಿ ದೀಕ್ಷೆಯುಳ್ಳವರು (ನಿಷ್ಠೆಯುಳ್ಳವರು), ಮಂತ್ರೈಃ—ಆಯಾ ಆಗಮೋಕ್ತ) ಮಂತ್ರಗಳಿಂದ, ಮಾಂ—ನನ್ನನ್ನು, ಪ್ರಸಾದಯಂತಿ—ಪ್ರಸನ್ನೀಕರಿಸಿಕೊಳ್ಳುತ್ತಾರೆ.

---

ಸಮಸ್ತ ವಸ್ತುಗಳಲ್ಲಿ ತತ್ತದಾಕಾರವುಳ್ಳ ಅನಂತರೂಪಗಳಿಂದ, ನಾನೇ ಅಂತರ್ಯಾಮಿಯಾಗಿ ನೆಲಸಿದ್ದೇನೆ; ಹೀಗಿರುವ ನನ್ನನ್ನೇ (ಪರಮ ಮುಖ್ಯ ವೃತ್ತಿಯಿಂದ) ಸಕಲ ವೇದಗಳು, ಅನಂತ ಮಹಿಮೆಗಳುಳ್ಳ ಮಹಾಪ್ರಭುವನ್ನಾಗಿ, ಬಹುಪರಿಯಾಗಿ ಸ್ತುತಿಸುತ್ತವೆ(೧). ತಂತ್ರಗಳೆಲ್ಲವೂ, ಬಹುನಾಮಗಳಿಂದ ಬೋಧ್ಯವಾದ ಮಹಿಮೆಗಳುಳ್ಳ ನಾನೇ ಬಹುರೂಪಿಯಾಗಿ ನಾನಾವಸ್ತುಗಳಲ್ಲಿ ಸ್ಥಿತನಾಗಿರುವೆನೆಂದು, ನನ್ನನ್ನು ಸ್ಪಷ್ಟವಾಗಿ ಸ್ತುತಿಸುತ್ತವೆ; ಆಯಾ ಆಗಮಗಳಲ್ಲಿ ನಿಷ್ಠೆಯುಳ್ಳ ಜೀವರು, ಆಯಾ ಆಗಮೋಕ್ತ ಮಂತ್ರಗಳಿಂದ ನನ್ನ ಪ್ರಸನ್ನತೆಗಾಗಿ ಯತ್ನಿಸುತ್ತಾರೆ(೨).

---

1. ೪ನೇ ಅಧ್ಯಾಯದ ೪೬ನೇ ಶ್ಲೋಕಭಾಗವನ್ನು ನೋಡಿರಿ; ಹಾಗೂ ೩ನೇ ಅಧ್ಯಾಯದ ೧೫-೧೭ನೇ ಶ್ಲೋಕಗಳನ್ನು ನೋಡಬಹುದು.

ಸರ್ವರೂಪಸ್ತುತಿಪರಾಃ ಸರ್ವೇ ವೇದಾ ಹಿ ಮುಖ್ಯತಃ ।
ಆಹ್ವಾನತತ್ಪರಾಣ್ಯಾಹುಃ ಸರ್ವತಂತ್ರಾಣಿ ಮುಖ್ಯತಃ ॥ ೩ ॥

ವೇದಾಃ ಶ್ರುತಯ ಇತ್ಯುಕ್ತಾಸ್ತಂತ್ರಾಣಿ ಸ್ಮೃತಯಸ್ತ್ವಿತಿ ।
ಶ್ರುತಿಸ್ಮೃತಿ ಉಭೇ ನೇತ್ರೇ ವಿಪ್ರಾಣಾಂ ಪರಿಕೀರ್ತಿತೇ ॥ ೪ ॥

ಏಕೇನ ಹೀನಃ ಕಾಣಃ ಸ್ಯಾತ್ ದ್ವಾಭ್ಯಾಮಂಧಃ ಪ್ರಕೀರ್ತಿತಃ ।
ಅತೋ ವಿಪ್ರೇಣ ಕರ್ತವ್ಯಂ ಶೀಲನಂ ವೇದತಂತ್ರಯೋಃ ॥ ೫ ॥

ಸರ್ವೇ–ಎಲ್ಲ, ವೇದಾಃ–ವೇದಗಳು, ಮುಖ್ಯತಃ–ಮುಖ್ಯವಾಗಿ, ಸರ್ವರೂಪಸ್ತುತಿಪರಾಃ–(ನನ್ನ) ಸರ್ವರೂಪಗಳಸ್ತುತಿಪರಗಳೇ; ಹಿ–ಹೀಗೆಂಬುದೂ ವೇದಪ್ರಸಿದ್ಧವೇ; ಸರ್ವತಂತ್ರಾಣಿ–ಸಕಲ ಸ್ಮೃತಿಗಳು, ಮುಖ್ಯವಾಗಿ, ಆಹ್ವಾನತತ್ಪರಾಣಿ–(ಪೂಜಾರ್ಥವಾಗಿ) ನನ್ನನ್ನು ಆಹ್ವಾನಿಸುವ ತಾತ್ಪರ್ಯವುಳ್ಳವುಗಳೆಂದು, ಆಹುಃ–ಜ್ಞಾನಿಗಳು ಹೇಳುತ್ತಾರೆ; ವೇದಾಃ–ವೇದಗಳು, ಶ್ರುತಯಃ–ಶ್ರುತಿಗಳು, ಇತ್ಯುಕ್ತಾಃ–ಎಂದು ಹೇಳಲ್ಪಡುತ್ತವೆ; ತಂತ್ರಾಣಿ–ತಂತ್ರಗಳು, ಸ್ಮೃತಯಃ ಇತಿ–ಸ್ಮೃತಿಗಳೆಂದು (ಕರೆಯಲ್ಪಡುತ್ತವೆ); ಶ್ರುತಿಸ್ಮೃತೀ–ಶ್ರುತಿ ಮತ್ತು ಸ್ಮೃತಿಗಳೆಂಬ, ಉಭೇ–ಎರಡೂ, ವಿಪ್ರಾಣಾಂ–ಬ್ರಾಹ್ಮಣರಿಗೆ, ನೇತ್ರೇ–ಎರಡು ಕಣ್ಣುಗಳೆಂದು, ಕೀರ್ತಿತೇ–ಹೇಳಲ್ಪಡುತ್ತವೆ; ಏಕೇನ–ಒಂದರಿಂದ (ವೇದ, ತಂತ್ರಗಳೆಂಬೆರಡರಲ್ಲಿ ಒಂದರಿಂದ), ಹೀನಃ–ರಹಿತನು (ಹೀನನಾದವನು), ಕಾಣಃ ಸ್ಯಾತ್–ಒಕ್ಕಣ್ಣನೆನಿಸುತ್ತಾನೆ; ದ್ವಾಭ್ಯಾಂ–ಎರಡರಿಂದಲೂ (ಹೀನನು), ಅಂಧಃ–ಕುರುಡನೆಂದು, ಪ್ರಕೀರ್ತಿತಃ–ಹೇಳಲ್ಪಡುವನು; ಅತಃ–ಆದ್ದರಿಂದ, ವೇದತಂತ್ರಯೋಃ–ವೇದತಂತ್ರಗಳ

---

ಎಲ್ಲ ವೇದಗಳು ಮುಖ್ಯವಾಗಿ ನನ್ನ ಸರ್ವರೂಪಗಳನ್ನೇ ಸ್ತುತಿಸುತ್ತವೆ (ಮಹಿಮೆಗಳನ್ನು ಪ್ರತಿಪಾದಿಸುತ್ತವೆ); ಸಕಲ ತಂತ್ರಗಳು ಮುಖ್ಯವಾಗಿ, ಪೂಜಾರ್ಥವಾಗಿ ಪ್ರತಿಮಾದಿಗಳಿಗೆ ಬರಲು ನನ್ನನ್ನು ಆಹ್ವಾನಿಸುವ ತಾತ್ಪರ್ಯವುಳ್ಳವುಗಳೇ ಆಗಿರುತ್ತವೆ.[1] ವೇದಗಳು ಶ್ರುತಿಗಳೆಂದೂ, ತಂತ್ರಗಳು ಸ್ಮೃತಿಗಳೆಂದೂ ಕರೆಯಲ್ಪಡುತ್ತವೆ; ಶ್ರುತಿಸ್ಮೃತಿಗಳೆರಡೂ ಬ್ರಾಹ್ಮಣರಿಗೆ ಎರಡು ಕಣ್ಣುಗಳಿದ್ದಂತೆ; ಅವುಗಳಲ್ಲಿ ಒಂದಿಲ್ಲದವನು ಒಕ್ಕಣ್ಣನು —ಎರಡೂ ಇಲ್ಲದವನು ಕುರುಡನೆಂದು ಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ

---

1. ಶ್ರೀಹರಿಯು ಸರ್ವವಸ್ತುಗಳಲ್ಲಿ ಆಯಾ ವಸ್ತುಸದೃಶರೂಪನಾಗಿ ಸ್ಥಿತನಾಗಿರುತ್ತಾನೆ; ಆದರೂ ಪ್ರತಿಮಾದಿಗಳಲ್ಲಿ ಆತನನ್ನು ಪೂಜಿಸುವ ಮೊದಲು, ವಿಧ್ಯುಕ್ತ ಮಂತ್ರಗಳಿಂದ ಆತನನ್ನು ಆಹ್ವಾನಿಸಬೇಕು. ಅಲ್ಲಿದ್ದು ಭಕ್ತನ ಪೂಜೆಯನ್ನು ಸ್ವೀಕರಿಸಿ, ಅನುಗ್ರಹಿಸುವೆನೆಂಬ ಇಚ್ಛೆಯುಳ್ಳವನಾಗುವುದು ಅವಶ್ಯಕ. ಹೀಗೆ ಅನುಗ್ರಹೋನ್ಮುಖನಾಗುವುದನ್ನು ಸನ್ನಿಧಾನವೆನ್ನುವರು—ಆಹ್ವಾನ ಮಂತ್ರಗಳು ಭಗವಂತನನ್ನು ಈ ವಿಧ ಸುಮುಖನನ್ನಾಗಿ ಮಾಡಿಕೊಡುತ್ತವೆ.

(ಶ್ರುತಿಸ್ಮೃತಿಗಳ), ಶೀಲನಂ–ಅಭ್ಯಾಸವು (ಅವುಗಳಲ್ಲಿ ಆಸಕ್ತನಾಗುವ ಸ್ವಭಾವವು), ವಿಪ್ರೇಣ–ಬ್ರಾಹ್ಮಣನಿಂದ, ಕರ್ತವ್ಯಂ–ಮಾಡಲ್ಪಡತಕ್ಕದ್ದು.

**ಅನುಷ್ಠಾನಂ ತಥಾ ಕುರ್ಯಾದುಭಯೋಕ್ತಂ ವಿಶೇಷತಃ ।**
**ಅತಸ್ತಂತ್ರಾಣಿ ವಕ್ಷ್ಯಾಮಿ ತೇನ ಪೂರ್ಣೋ ಭವಿಷ್ಯಸಿ ॥ ೬ ॥**

ತಥಾ–ಹಾಗೆ, ಅನುಷ್ಠಾನಂ–ಅನುಷ್ಠಾನವನ್ನು ಕುರ್ಯಾತ್–(ವಿಪ್ರನು) ಮಾಡ ತಕ್ಕದ್ದು; ವಿಶೇಷತಃ–(ವಿಪ್ರನು) ವಿಶೇಷವಾಗಿ, ಉಭಯೋಕ್ತಂ–ಶ್ರುತಿ ಮತ್ತು ಸ್ಮೃತಿಗಳೆರಡರಲ್ಲಿ ಹೇಳಿರುವುದನ್ನು (ವಿಧಿಸಿರುವುದನ್ನು); (ಕುರ್ಯಾತ್ ಆಚರಿಸಬೇಕು); ಅತಃ–ಈ ಕಾರಣದಿಂದ ತಂತ್ರಾಣಿ–ಸ್ಮೃತಿಗಳನ್ನು ವಕ್ಷ್ಯಾಮಿ–ಹೇಳುತ್ತೇನೆ; ತೇನ ಅವುಗಳ ಶ್ರವಣದಿಂದ, ಪೂರ್ಣಃ–ಪೂರ್ಣನು (ಪೂರ್ಣಮನಸ್ತೃಪ್ತಿಯನ್ನು ಹೊಂದಿದವನು), ಭವಿಷ್ಯಸಿ–ಆಗುತ್ತೀ.

ಶ್ರೀ ಭಗವಾನುವಾಚ—

**ಏವಮುಕ್ತಃ ಸ ಭಗವಾನ್ ಹಯಗ್ರೀವೋಽಪಿ ಮತ್ತನುಃ ।**
**ಬ್ರಹ್ಮಣೇ ಕಥಯಾಮಾಸ ಕ್ರಮಾತ್ ತಂತ್ರಾಣಿ ಸರ್ವಶಃ ॥ ೭ ॥**

**ಪಂಚರಾತ್ರಂ ಪಾಶುಪತಂ ಕಾಪಿಲಂ ಶಾಕ್ತಮೇವ ಚ ।**
**ಸೌರಗಾಣೇಶವಾಮ್ನಾದೀನ್ ಸುಸಿದ್ಧಾನ್ಯಾಮಲಾದಿಕಾನ್ ॥ ೮ ॥**

---

ಬ್ರಾಹ್ಮಣನು ವೇದ ತಂತ್ರಗಳ ಅಭ್ಯಾಸದಲ್ಲಿ ಆಸಕ್ತನಾಗಬೇಕಾದುದು ಅವಶ್ಯಕರ್ತವ್ಯ ವಾಗಿದೆ (೩-೫).

ಶ್ರುತಿಸ್ಮೃತಿಗಳಲ್ಲಿ ವಿಧಿಸಲ್ಪಟ್ಟಿರುವಂತೆ ಆಚರಿಸಬೇಕು; ವಿಶೇಷವಾಗಿ ವಿಪ್ರನು, ಉಭಯೋಕ್ತವಾದ ವಿಧಿಗಳನ್ನು ಪಾಲಿಸಲೇಬೇಕು. ಈ ಕಾರಣದಿಂದ (ತಂತ್ರಗಳನ್ನು) ಸ್ಮೃತಿಗಳನ್ನು ನಿನಗೆ ಹೇಳುತ್ತೇನೆ[1]—ಅದರಿಂದ (ಅವುಗಳ ಶ್ರವಣದಿಂದ) ನೀನು ಪೂರ್ಣಮನಸ್ಕನಾಗುವಿ—ಸರ್ವಜ್ಞನಾಗುವಿ—ಮನಸ್ಸಿನ ಅತೃಪ್ತಿಯನ್ನು ಪರಿಹರಿಸಿ ಕೊಳ್ಳುವಿ(೬). ತಂತ್ರಜ್ಞಾನವು (ಸ್ಮೃತಿಗಳ ಜ್ಞಾನವು) ನಿನ್ನ ಪೂರ್ಣತ್ವಕ್ಕೆ (ಸರ್ವಜ್ಞತ್ವದ ಪರಿಪೂರ್ಣತೆ ಮತ್ತು ಅತೃಪ್ತಿಭಾವನೆಯ ಪರಿಹಾರಕ್ಕೆ) ಅವಶ್ಯಕವೆಂದು ಹೇಳಿ, ಶ್ರೀ ಹಯಗ್ರೀವರೂಪನಾದ ಶ್ರೀವಿಷ್ಣುವು ಬ್ರಹ್ಮದೇವನಿಗೆ ವಿವಿಧ ತಂತ್ರಗಳನ್ನು

---

1. 'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್'—ಇತಿಹಾಸ ಪುರಾಣಗಳು, ವೇದಜನ್ಯಜ್ಞಾನವನ್ನು ಪೂರ್ಣಗೊಳಿಸುತ್ತವೆ—ವೇದಜ್ಞಾನದ ಪರಿಪೂರ್ತಿಯನ್ನು (ಸ್ವಯೋಗ್ಯ ಪೂರ್ಣತ್ವವನ್ನು—ದೃಢಜ್ಞಾನವನ್ನು) ಪುರಾಣಾದಿಗಳಿಂದ ಸಾಧಿಸಿಕೊಳ್ಳಲೇಬೇಕು. ಅದಿಲ್ಲದವನೋ (ಕೇವಲ ವೇದಗಳನ್ನು ಅಧ್ಯಯನಮಾಡಿದವನು) 'ವಿಚಕ್ಷಣ'ನೆನಿಸುವುದಿಲ್ಲ.

ಸರ್ವರೂಪಸ್ತುತಿಪರಾಃ ಸರ್ವೇ ವೇದಾ ಹಿ ಮುಖ್ಯತಃ ।
ಆಹ್ವಾನತತ್ಪರಾಣ್ಯಾಹುಃ ಸರ್ವತಂತ್ರಾಣಿ ಮುಖ್ಯತಃ ॥ ೩ ॥

ವೇದಾಃ ಶ್ರುತಯ ಇತ್ಯುಕ್ತಾಸ್ತಂತ್ರಾಣಿ ಸ್ಮೃತಯಸ್ತ್ವಿತಿ ।
ಶ್ರುತಿಸ್ಮೃತಿ ಉಭೇ ನೇತ್ರೇ ವಿಪ್ರಾಣಾಂ ಪರಿಕೀರ್ತಿತೇ ॥ ೪ ॥

ಏಕೇನ ಹೀನಃ ಕಾಣಃ ಸ್ಯಾತ್ ದ್ವಾಭ್ಯಾಮಂಧಃ ಪ್ರಕೀರ್ತಿತಃ ।
ಅತೋ ವಿಪ್ರೇಣ ಕರ್ತವ್ಯಂ ಶೀಲನಂ ವೇದತಂತ್ರಯೋಃ ॥ ೫ ॥

ಸರ್ವೇ–ಎಲ್ಲ, ವೇದಾಃ–ವೇದಗಳು, ಮುಖ್ಯತಃ–ಮುಖ್ಯವಾಗಿ, ಸರ್ವರೂಪಸ್ತುತಿಪರಾಃ– (ನನ್ನ) ಸರ್ವರೂಪಗಳಸ್ತುತಿಪರಗಳೇ; ಹಿ–ಹೀಗೆಂಬುದೂ ವೇದಪ್ರಸಿದ್ಧವೇ; ಸರ್ವತಂತ್ರಾಣಿ–ಸಕಲ ಸ್ಮೃತಿಗಳು, ಮುಖ್ಯವಾಗಿ, ಆಹ್ವಾನತತ್ಪರಾಣಿ–(ಪೂಜಾರ್ಥವಾಗಿ) ನನ್ನನ್ನು ಆಹ್ವಾನಿಸುವ ತಾತ್ಪರ್ಯವುಳ್ಳವುಗಳೆಂದು, ಆಹುಃ–ಜ್ಞಾನಿಗಳು ಹೇಳುತ್ತಾರೆ; ವೇದಾಃ–ವೇದಗಳು, ಶ್ರುತಯಃ–ಶ್ರುತಿಗಳು, ಇತ್ಯುಕ್ತಾಃ–ಎಂದು ಹೇಳಲ್ಪಡುತ್ತವೆ; ತಂತ್ರಾಣಿ–ತಂತ್ರಗಳು, ಸ್ಮೃತಯಃ ಇತಿ–ಸ್ಮೃತಿಗಳೆಂದು (ಕರೆಯಲ್ಪಡುತ್ತವೆ); ಶ್ರುತಿಸ್ಮೃತೀ–ಶ್ರುತಿ ಮತ್ತು ಸ್ಮೃತಿಗಳೆಂಬ, ಉಭೇ–ಎರಡೂ, ವಿಪ್ರಾಣಾಂ–ಬ್ರಾಹ್ಮಣರಿಗೆ, ನೇತ್ರೇ–ಎರಡು ಕಣ್ಣುಗಳೆಂದು, ಕೀರ್ತಿತೇ–ಹೇಳಲ್ಪಡುತ್ತವೆ; ಏಕೇನ–ಒಂದರಿಂದ (ವೇದ, ತಂತ್ರಗಳೆಂಬೆರಡರಲ್ಲಿ ಒಂದರಿಂದ), ಹೀನಃ–ರಹಿತನು (ಹೀನನಾದವನು), ಕಾಣಃ ಸ್ಯಾತ್–ಒಕ್ಕಣ್ಣನೆನಿಸುತ್ತಾನೆ; ದ್ವಾಭ್ಯಾಂ–ಎರಡರಿಂದಲೂ (ಹೀನನು), ಅಂಧಃ–ಕುರುಡನೆಂದು, ಪ್ರಕೀರ್ತಿತಃ–ಹೇಳಲ್ಪಡುವನು; ಅತಃ–ಆದ್ದರಿಂದ, ವೇದತಂತ್ರಯೋಃ–ವೇದತಂತ್ರಗಳ

---

ಎಲ್ಲ ವೇದಗಳು ಮುಖ್ಯವಾಗಿ ನನ್ನ ಸರ್ವರೂಪಗಳನ್ನೇ ಸ್ತುತಿಸುತ್ತವೆ (ಮಹಿಮೆಗಳನ್ನು ಪ್ರತಿಪಾದಿಸುತ್ತವೆ); ಸಕಲ ತಂತ್ರಗಳು ಮುಖ್ಯವಾಗಿ, ಪೂಜಾರ್ಥವಾಗಿ ಪ್ರತಿಮಾದಿಗಳಿಗೆ ಬರಲು ನನ್ನನ್ನು ಆಹ್ವಾನಿಸುವ ತಾತ್ಪರ್ಯವುಳ್ಳವುಗಳೇ ಆಗಿರುತ್ತವೆ.[1] ವೇದಗಳು ಶ್ರುತಿಗಳೆಂದೂ, ತಂತ್ರಗಳು ಸ್ಮೃತಿಗಳೆಂದೂ ಕರೆಯಲ್ಪಡುತ್ತವೆ; ಶ್ರುತಿಸ್ಮೃತಿಗಳೆರಡೂ ಬ್ರಾಹ್ಮಣರಿಗೆ ಎರಡು ಕಣ್ಣುಗಳಿದ್ದಂತೆ; ಅವುಗಳಲ್ಲಿ ಒಂದಿಲ್ಲದವನು ಒಕ್ಕಣ್ಣನು—ಎರಡೂ ಇಲ್ಲದವನು ಕುರುಡನೆಂದು ಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ

---

1. ಶ್ರೀಹರಿಯು ಸರ್ವವಸ್ತುಗಳಲ್ಲಿ ಆಯಾ ವಸ್ತುಸದೃಶರೂಪನಾಗಿ ಸ್ಥಿತನಾಗಿರುತ್ತಾನೆ; ಆದರೂ ಪ್ರತಿಮಾದಿಗಳಲ್ಲಿ ಆತನನ್ನು ಪೂಜಿಸುವ ಮೊದಲು, ವಿಧ್ಯುಕ್ತ ಮಂತ್ರಗಳಿಂದ ಆತನನ್ನು ಆಹ್ವಾನಿಸಬೇಕು. ಅಲ್ಲಿದ್ದು ಭಕ್ತನ ಪೂಜೆಯನ್ನು ಸ್ವೀಕರಿಸಿ, ಅನುಗ್ರಹಿಸುವೆನೆಂಬ ಇಚ್ಛೆಯುಳ್ಳವನಾಗುವುದು ಅವಶ್ಯಕ. ಹೀಗೆ ಅನುಗ್ರಹೋನ್ಮುಖನಾಗುವುದನ್ನು ಸನ್ನಿಧಾನವೆನ್ನುವರು—ಆಹ್ವಾನ ಮಂತ್ರಗಳು ಭಗವಂತನನ್ನು ಈ ವಿಧ ಸುಮುಖನನ್ನಾಗಿ ಮಾಡಿಕೊಡುತ್ತವೆ.

(ಶ್ರುತಿಸ್ಮೃತಿಗಳ), ಶೀಲನಂ–ಅಭ್ಯಾಸವು (ಅವುಗಳಲ್ಲಿ ಆಸಕ್ತನಾಗುವ ಸ್ವಭಾವವು), ವಿಪ್ರೇಣ–ಬ್ರಾಹ್ಮಣನಿಂದ, ಕರ್ತವ್ಯಂ–ಮಾಡಲ್ಪಡತಕ್ಕದ್ದು

ಅನುಷ್ಠಾನಂ ತಥಾ ಕುರ್ಯಾದುಭಯೋಕ್ತಂ ವಿಶೇಷತಃ ।
ಅತಸ್ತಂತ್ರಾಣಿ ವಕ್ಷ್ಯಾಮಿ ತೇನ ಪೂರ್ಣೋ ಭವಿಷ್ಯಸಿ ॥ ೬ ॥

ತಥಾ–ಹಾಗೆ, ಅನುಷ್ಠಾನಂ–ಅನುಷ್ಠಾನವನ್ನು ಕುರ್ಯಾತ್–(ವಿಪ್ರನು) ಮಾಡ ತಕ್ಕದ್ದು; ವಿಶೇಷತಃ–(ವಿಪ್ರನು) ವಿಶೇಷವಾಗಿ, ಉಭಯೋಕ್ತಂ–ಶ್ರುತಿ ಮತ್ತು ಸ್ಮೃತಿಗಳೆರಡರಲ್ಲಿ ಹೇಳಿರುವುದನ್ನು (ವಿಧಿಸಿರುವುದನ್ನು); (ಕುರ್ಯಾತ್ ಆಚರಿಸಬೇಕು); ಅತಃ–ಈ ಕಾರಣದಿಂದ ತಂತ್ರಾಣಿ–ಸ್ಮೃತಿಗಳನ್ನು ವಕ್ಷ್ಯಾಮಿ–ಹೇಳುತ್ತೇನೆ; ತೇನ ಅವುಗಳ ಶ್ರವಣದಿಂದ, ಪೂರ್ಣಃ–ಪೂರ್ಣನು (ಪೂರ್ಣಮನಸ್ತುಷ್ಟಿಯನ್ನು ಹೊಂದಿದವನು), ಭವಿಷ್ಯಸಿ–ಆಗುತ್ತೀ.

ಶ್ರೀ ಭಗವಾನುವಾಚ—

ಏವಮುಕ್ತಃ ಸ ಭಗವಾನ್ ಹಯಗ್ರೀವೋಪಿ ಮತ್ತನುಃ ।
ಬ್ರಹ್ಮಣೇ ಕಥಯಾಮಾಸ ಕ್ರಮಾತ್ ತಂತ್ರಾಣಿ ಸರ್ವಶಃ ॥ ೭ ॥

ಪಂಚರಾತ್ರಂ ಪಾಶುಪತಂ ಕಾಪಿಲಂ ಶಾಕ್ತಮೇವ ಚ ।
ಸೌರಗಾಣೇಶವಾಮ್ನಾದೀನ್ ಸುಸಿದ್ಧಾನ್ಯಾಮಲಾದಿಕಾನ್ ॥ ೮ ॥

ಬ್ರಾಹ್ಮಣನು ವೇದ ತಂತ್ರಗಳ ಅಭ್ಯಾಸದಲ್ಲಿ ಆಸಕ್ತನಾಗಬೇಕಾದುದು ಅವಶ್ಯಕರ್ತವ್ಯ ವಾಗಿದೆ (೩-೫).

ಶ್ರುತಿಸ್ಮೃತಿಗಳಲ್ಲಿ ವಿಧಿಸಲ್ಪಟ್ಟಿರುವಂತೆ ಆಚರಿಸಬೇಕು; ವಿಶೇಷವಾಗಿ ವಿಪ್ರನು, ಉಭಯೋಕ್ತವಾದ ವಿಧಿಗಳನ್ನು ಪಾಲಿಸಲೇಬೇಕು. ಈ ಕಾರಣದಿಂದ (ತಂತ್ರಗಳನ್ನು) ಸ್ಮೃತಿಗಳನ್ನು ನಿನಗೆ ಹೇಳುತ್ತೇನೆ[1]—ಅದರಿಂದ (ಅವುಗಳ ಶ್ರವಣದಿಂದ) ನೀನು ಪೂರ್ಣಮನಸ್ಕನಾಗುವಿ—ಸರ್ವಜ್ಞನಾಗುವಿ—ಮನಸ್ಸಿನ ಅತೃಪ್ತಿಯನ್ನು ಪರಿಹರಿಸಿ ಕೊಳ್ಳುವಿ(೬). ತಂತ್ರಜ್ಞಾನವು (ಸ್ಮೃತಿಗಳ ಜ್ಞಾನವು) ನಿನ್ನ ಪೂರ್ಣತ್ವಕ್ಕೆ (ಸರ್ವಜ್ಞತ್ವದ ಪರಿಪೂರ್ಣತೆ ಮತ್ತು ಅತೃಪ್ತಿಭಾವನೆಯ ಪರಿಹಾರಕ್ಕೆ) ಅವಶ್ಯಕವೆಂದು ಹೇಳಿ, ಶ್ರೀ ಹಯಗ್ರೀವರೂಪನಾದ ಶ್ರೀವಿಷ್ಣುವು ಬ್ರಹ್ಮದೇವನಿಗೆ ವಿವಿಧ ತಂತ್ರಗಳನ್ನು

1. 'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್'—ಇತಿಹಾಸ ಪುರಾಣಗಳು, ವೇದಜನ್ಯಜ್ಞಾನವನ್ನು ಪೂರ್ಣಗೊಳಿಸುತ್ತವೆ—ವೇದಜ್ಞಾನದ ಪರಿಪೂರ್ತಿಯನ್ನು (ಸ್ವಯೋಗ್ಯ ಪೂರ್ಣತ್ವವನ್ನು—ದೃಢಜ್ಞಾನವನ್ನು) ಪುರಾಣಾದಿಗಳಿಂದ ಸಾಧಿಸಿಕೊಳ್ಳಲೇಬೇಕು. ಅದಿಲ್ಲದವನೋ (ಕೇವಲ ವೇದಗಳನ್ನು ಅಧ್ಯಯನಮಾಡಿದವನು) 'ವಿಚಕ್ಷಣ'ನೆನಿಸುವುದಿಲ್ಲ.

ಏವಂ–ಹೀಗೆ, ಉಕ್ತ–ಹೇಳಿದ, ಸಃ ಭಗವಾನ್–ಆ ಷಡ್ಗುಣೈಶ್ವರ್ಯ ಪೂರ್ಣನಾದ, ಮತ್ತನುಃ–ನನ್ನ ಸ್ವರೂಪದಿಂದ ಅಭಿನ್ನನೇ ಆದ (ನನ್ನ ದೇಹವೇ ಆದ), ಹಯಗ್ರೀವಃ ಅಪಿ–ಶ್ರೀ ಹಯಗ್ರೀವನಾದರೂ, ಬ್ರಹ್ಮಣೇ–ಬ್ರಹ್ಮದೇವನಿಗೋಸ್ಕರ, ಕ್ರಮಾತ್–ಕ್ರಮವಾಗಿ, ಸರ್ವಶಃ–ಎಲ್ಲ ತಂತ್ರಾಣಿ–ಸ್ಮೃತಿಗಳನ್ನು(ಆಗಮಗಳನ್ನು), ಕಥಯಾಮಾಸ–ಹೇಳಿದನು (ವಿಸ್ತಾರವಾಗಿ ಉಪದೇಶಿಸಿದನು); (ಅವು ಯಾವುವೆಂದರೆ), ಪಂಚರಾತ್ರಂ–ಪಂಚರಾತ್ರವನ್ನು, ಪಾಶುಪತಂ–ಪಾಶುಪತವನ್ನು, ಕಾಪಿಲಂ–ಕಾಪಿಲವನ್ನು, ಶಾಕ್ತಂ–ಶಾಕ್ತವನ್ನು ಏವ ಚ ಮತ್ತು ಹಾಗೆಯೇ, ಸೌರಗಾಣೇಶ ವಾಮಾದೀನ್–ಸೌರ, ಗಾಣೇಶ, ವಾಮ ಮೊದಲಾದ[1] ಆಗಮಗಳನ್ನು, ಸುಸಿದ್ಧಾನ್–ಅಲ್ಪಕಾಲದಲ್ಲಿ ಸುಸ್ಪಷ್ಟವಾದ ಸಿದ್ಧಿ (ಫಲ)ಗಳನ್ನು ದೊರಕಿಸಲು ಸಮರ್ಥಗಳಾದ, ಯಾಮಲಾದಿಕಾನ್–ಮಂತ್ರಸಹಿತ ಹೋಮಾದಿಗಳನ್ನೂ (ಕಥಯಾಮಾಸ—ಹಿಂದಿನ ಶ್ಲೋಕದಿಂದ ಸಮಾಕರ್ಷಿಸಿ ಅನ್ವಯಿಸಿಕೊಳ್ಳಬೇಕು.)

ದೇವತಾಋಷಿಗಂಧರ್ವಾಃ ಸಿದ್ಧಗುಹ್ಯಕಪನ್ನಗಾಃ ।
ವೃಕ್ಷಗುಲ್ಮಲತಾದ್ಯಾಶ್ಚ ವಜ್ರಾದ್ಯಾ ರತ್ನಜಾತಯಃ ॥ ೯ ॥

ಗಜಾಶ್ವಗೋಜಮೇಷಾದ್ಯಾ ಯೇ ಚಾನ್ಯೇ ಸ್ಯುಃ ಪದಾರ್ಥಕಾಃ ।
ಸರ್ವೇ ತೇ ವೇದವಾಕ್ಯೇಷು ಸ್ತೂಯಂತೇ ಹಿ ತಥೈವ ಚ ॥ ೧೦ ॥

---

ಉಪದೇಶಿಸಿದನು; ಪಂಚರಾತ್ರ, ಪಾಶುಪತ, ಕಾಪಿಲ, ಶಾಕ್ತ ಸೌರ, ಗಾಣೇಶ, ವಾಮ, ಯಾಮಲಾದಿ ನಾನಾ ಆಗಮಗಳನ್ನು ಉಪದೇಶಿಸಿದನು. ಈ ಎಲ್ಲವೂ ಯಥಾ ಯೋಗ್ಯವಾದ ಜ್ಞಾನಾದಾರ್ಢ್ಯವನ್ನು ಹೊಂದಲು, ಅವಶ್ಯಶ್ರವಣೀಯಗಳೇ ಆಗಿವೆ (೭-೮). ವೇದಗಳಲ್ಲಿ ದೇವತೆಗಳು, ಋಷಿಗಳು, ಗಂಧರ್ವರು, ಸಿದ್ಧರು, ಗುಹ್ಯಕರು, ಪನ್ನಗರೂ, ಅಷ್ಟೇಕೆ! ವೃಕ್ಷ ಗುಲ್ಮ ಲತಾದಿಗಳು (ಅವುಗಳ ಅಭಿಮಾನಿ ದೇವತೆಗಳು), ವಿವಿಧ ವಜ್ರಾದಿ ರತ್ನಗಳು, ಗಜ, ಅಶ್ವ, ಗೋ, ಅಜ, ಮೇಷ ಮೊದಲಾದವುಗಳು (ತದಭಿಮಾನಿ ತನ್ನಾಮಕ ದೇವತೆಗಳೂ) ಮತ್ತು ಇತರ ಸಕಲ ಪದಾರ್ಥಗಳೂ (ತದಭಿಮಾನಿ ದೇವತೆಗಳೂ), ಸ್ತುತಿಸಲ್ಪಡುತ್ತಾರೆ; ತಂತ್ರಗಳಲ್ಲಿ ಈ ಎಲ್ಲ ದೇವತೆಗಳ ಆಹ್ವಾನಾದಿಗಳು ಹೇಳಲ್ಪಡುತ್ತವೆ. ಹಾಗೆ ಆಹ್ವಾನಿಸಿ ಆಯಾ ದೇವತೆಗಳನ್ನು ಉಪಾಸಿಸುವ ಆಯಾ ಭಕ್ತರು, ಆಯಾ ದೇವತೆಗಳನ್ನು ಪ್ರತಿಪಾದಿಸಿ ಸ್ತುತಿಸುವ ತಂತ್ರಗಳ ಮಂತ್ರಗಳಿಂದ, ಆಯಾ ದೇವತೆಯನ್ನು ಪ್ರಸನ್ನೀಕರಿಸಿಕೊಳ್ಳುತ್ತಾರೆ; ಆದರೆ ಸರ್ವತ್ರ

---

1. ಮಂತ್ರಮಾಟಾದಿಗಳಿಂದ ಅನ್ಯರನ್ನು ಪೀಡಿಸಲು ಉಪಯೋಗಿಸುವ 'ವಾಮಾಚಾರಗಳನ್ನು'—ಅಭಿಚಾರಿಕವಿದ್ಯೆಗಳನ್ನು ನಿರೂಪಿಸುವ ತಂತ್ರವಿಶೇಷ. ಸೂರ್ಯ, ಗಣೇಶ, ಪಶುಪತಿ, ಶಕ್ತಿಗಳನ್ನು ಪ್ರಸನ್ನೀಕರಿಸಿಕೊಳ್ಳುವ ವಿಧಾನಗಳನ್ನು ನಿರೂಪಿಸುವ ವಿವಿಧ ತಂತ್ರಗಳು.

**ತಂತ್ರೇಷು ತೇಷಾಮಾಹ್ವಾನಂ ಪ್ರಸಾದೋನ್ಮುಖತಾ ತತಃ ।**
**ತತ್ತನ್ಮಂತ್ರೈಶ್ಚ ಜಾಯೇತ ತತ್ತದ್ಭಕ್ತೇಭ್ಯ ಏವ ಹಿ ॥ ೧೧ ॥**

**ಯೋ ಭಾವಯತಿ ಸರ್ವತ್ರ ತೃಣಗುಲ್ಮಲತಾದಿಷು ।**
**ಸ್ಥಿತಂ ಮಾಂ ಸೋಽಶ್ನುತೇ ಸರ್ವಂ ಫಲಂ ಮತ್ಪ್ರೀತಿಸಂಭವಂ ॥ ೧೨ ॥**

ದೇವತಾಃ–ದೇವತೆಗಳು; ಋಷಿಗಂಧರ್ವಾಃ–ಋಷಿಗಳೂ ಗಂಧರ್ವರೂ; ಸಿದ್ಧಗುಹ್ಯಕಪನ್ನಗಾಃ–ಸಿದ್ಧರೂ, ಗುಹ್ಯಕರೂ, ಪನ್ನಗರೂ; ವೃಕ್ಷಗುಲ್ಮಲತಾದ್ಯಾಃ–ವೃಕ್ಷಗಳೂ, ಗುಲ್ಮಗಳೂ, ಲತಾದಿಗಳು(ವೃಕ್ಷಾದಿಗಳ ಅಭಿಮಾನಿದೇವತೆಗಳಾದ ಆಯಾ ನಾಮಗಳಿಂದ ಕರೆಯಲ್ಪಡುವ ದೇವತೆಗಳೂ); ಚ–ಹಾಗೂ, ರತ್ನಜಾತಯಃ–ರತ್ನಗಳ ಗುಂಪಿಗೆ ಸೇರಿದ, ವಜ್ರಾದ್ಯಾಃ–ವಜ್ರ ಮೊದಲಾದ ರತ್ನಗಳೂ (ತನ್ನಾಮಕ ತದಭಿಮಾನಿ ದೇವತೆಗಳೂ); ಗಜಾಶ್ವಗೋಜಮೇಷಾದ್ಯಾಃ–ಗಜ, ಅಶ್ವ, ಗೋ, ಅಜ, ಮೇಷ, ಇವೇ ಮೊದಲಾದ ಪ್ರಾಣ್ಯಭಿಮಾನಿ ದೇವತೆಗಳೂ; ಚ–ಮತ್ತು ಯೇ ಅನ್ಯೇ–ಯಾವ ಬೇರೆ, ಪದಾರ್ಥಕಾಃ–ಪದಾರ್ಥಗಳು (ಜಗತ್ತಿನಲ್ಲಿ) ಇರುವುವೋ, ತೇ ಸರ್ವೇ–ಆ ಎಲ್ಲವೂ, ವೇದವಾಕ್ಯೇಷು–ವೇದವಾಕ್ಯಗಳಲ್ಲಿ (ಪ್ರತ್ಯೇಕ ವಾಕ್ಯಗಳಿಂದ), ಸ್ತೂಯಂತೇ–ಸ್ತುತಿಸಲ್ಪಡುತ್ತವೆ; ತಂತ್ರೇಷು–ತಂತ್ರಗಳಲ್ಲಿ (ಆಗಮಗಳಲ್ಲಿ), ತೇಷಾಂ–ಆ ದೇವತೆಗಳ, ಆಹ್ವಾನಂ–ಆಹ್ವಾನವೂ, ತತಃ–ಅದರಿಂದ (ಹಾಗೆ ಸನ್ನಿಧಾನವನ್ನು ಆಹ್ವಾನಿಸಿ, ಅಲ್ಲಿ ಪೂಜಿಸುವುದರಿಂದ), ತತ್ತದ್ಭಕ್ತೇಭ್ಯಃ–ಆಯಾ ದೇವತೆಗಳ ಭಕ್ತರಿಗೆ, ತತ್ತನ್ಮಂತ್ರೈಶ್ಚ–ಯಾ ದೇವತಾ (ಪ್ರತಿಪಾದಕ) ಮಂತ್ರಗಳಿಂದಲೇ, ಪ್ರಸಾದೋನ್ಮುಖತಾ–ಪ್ರಸನ್ನಚಿತ್ತನಾಗುವಿಕೆಯೆಂಬ ಫಲವು, ಜಾಯೇತ–ಉಂಟಾಗುತ್ತದೆ; (ಆದರೆ), ಯಃ–ಯಾವ ಅಧಿಕಾರಿಯು, ತೃಣಗುಲ್ಮಲತಾದಿಷು–ತೃಣಗುಲ್ಮಲತಾದಿಗಳಲ್ಲಿ (ತದಭಿಮಾನಿತನ್ನಾಮಕ ದೇವತೆಗಳಲ್ಲಿ), ಸರ್ವತ್ರ–ಎಲ್ಲ ವಸ್ತುಗಳಲ್ಲಿ ಸ್ಥಿತಂ–ಇರುವ, ಮಾಂ–ನನ್ನನ್ನು (ಶ್ರೀವಿಷ್ಣುವನ್ನು), ಭಾವಯತಿ–ಚಿಂತಿಸಿ ಪೂಜಿಸುವನೋ (ಭಕ್ತಿಯಿಂದ ಪೂಜಿಸುವನೋ), ಸಃ–ಆತನು ಮತ್ಪ್ರೀತಿಸಂಭವಂ–ನನ್ನ ಪ್ರೀತಿಯಿಂದ (ಪ್ರಸನ್ನತೆಯಿಂದ) ಉದಯಿಸುವ, ಸರ್ವಂಫಲಂ–ಸಮಸ್ತ(ಪೂರ್ಣ) ಫಲವನ್ನು ಅಶ್ನುತೇ–ಹೊಂದುತ್ತಾನೆ.

---

(ತೃಣಗುಲ್ಮ ಲತಾದಿ ಸಕಲ ವಸ್ತುಗಳಲ್ಲಿ ಮತ್ತು ಅವುಗಳ ಅಭಿಮಾನಿ ದೇವತೆಗಳಲ್ಲಿ ಸಹ) ಸ್ಥಿತನಾಗಿರುವವನು ನಾನೇ ಎಂದು ತಿಳಿದು, ಭಕ್ತಿಯಿಂದ ನನ್ನನ್ನೇ ಉಪಾಸಿಸುವವನು, ನನ್ನ ಪ್ರಸನ್ನತೆಯಿಂದ, ಪೂರ್ಣ ಫಲವನ್ನು (ಆ ಎಲ್ಲ ದೇವತೆಗಳಿಂದ ದೊರೆಯಬಹುದಾದ ಸರ್ವಫಲಗಳನ್ನು), ಹೊಂದುತ್ತಾನೆ (೯-೧೨). ಶ್ರೀ ಹಯಗ್ರೀವ ದೇವನು ಹೀಗೆ ಹೇಳಿದ್ದನ್ನು ಕೇಳಿ ಆದ್ಯಪುರುಷನಾದ ಬ್ರಹ್ಮದೇವನು, ಭಕ್ತ್ಯುದ್ರೇಕದಿಂದ ವಿಕಸಿತವಾದ ನೇತ್ರಗಳುಳ್ಳವನಾಗಿ, ಪುನಃ ಮುಂದೆ ಹೇಳುವಂತೆ ಪ್ರಶ್ನಿಸಿದನು. ಬ್ರಹ್ಮನು

ಇತಿ ಶ್ರುತ್ವಾ ವಚಸ್ತಸ್ಯ ಹಯಾಸ್ಯಸ್ಯ ಮಹಾತ್ಮನಃ ।
ಪಪ್ರಚ್ಛ ಪುರುಷಸ್ತ್ವಾದ್ಯಃ ಪ್ರಣಯೋತ್ಫುಲ್ಲಲೋಚನಃ ॥ ೧೩ ॥

ಶ್ರೀ ಬ್ರಹ್ಮೋವಾಚ—

ಭಗವನ್ನಿದಮಾಖ್ಯಾತಂ ತಂತ್ರಜಾತಂ ತ್ವಯಾಖಿಲಂ ।
ವೇದಾಶ್ಚ ಸರ್ವೇ ವ್ಯಾಖ್ಯಾತಾಃ ವದ ತತ್ರಾಧಿಕಾರಿಣಃ ॥ ೧೪ ॥

ತಸ್ಯ–ಆ, ಮಹಾತ್ಮನಃ–ಮಹಾಸ್ವಾಮಿಯಾದ, ಹಯಾಸ್ಯಸ್ಯ–ಶ್ರೀ ಹಯಗ್ರೀವದೇವನ, ಇತಿವಚಃ–ಹೀಗೆಂಬ ಮಾತನ್ನು ಶ್ರುತ್ವಾ–ಕೇಳಿ, ಆದ್ಯಃ ಪುರುಷಃ ತು–ಮೊದಲು ಹುಟ್ಟಿದ ಪುರುಷನಾದ ಬ್ರಹ್ಮನು, ಪ್ರಣಯೋತ್ಫುಲ್ಲಲೋಚನಃ–ಭಕ್ತಿಯಿಂದ ವಿಕಸಿತವಾದ (ಅರಳಿದ) ಕಣ್ಣುಗಳುಳ್ಳವನಾಗಿ, ಪಪ್ರಚ್ಛ–ಪ್ರಶ್ನಿಸಿದನು. ಬ್ರಹ್ಮದೇವನು ಮಾತನಾಡು ತ್ತಾನೆ:—

ಭಗವನ್–ಹೇ ಹಯಗ್ರೀವದೇವ! ತ್ವಯಾ–ನಿನ್ನಿಂದ, ಅಖಿಲಂ–ಸಮಸ್ತವಾದ, ಇದಂ ತಂತ್ರಜಾತಂ–ಈ ಆಗಮಸಮೂಹವು, ಆಖ್ಯಾತಂ–ವಿವರವಾಗಿ ಉಪದೇಶಿಸ ಲ್ಪಟ್ಟಿತು; ಸರ್ವೇ–ಎಲ್ಲ ವೇದಾಶ್ಚ–ವೇದಗಳೂ ಸಹ, ವ್ಯಾಖ್ಯಾತಾಃ–ಉಪದೇಶಿಸಲ್ಪಟ್ಟವು; ತತ್ರ–ಈ ವೇದತಂತ್ರಗಳಲ್ಲಿ (ವೇದತಂತ್ರಗಳ ಅಧ್ಯಯನ, ಅನುಷ್ಠಾನಾದಿಗಳಲ್ಲಿ), ಅಧಿ ಕಾರಿಣಃ–ಅಧಿಕಾರಿಗಳನ್ನು (ಅರ್ಹತೆಯುಳ್ಳವರನ್ನು), ವದ–ಹೇಳುವವನಾಗು.

ಶ್ರೀ ಹಯಗ್ರೀವ ಉವಾಚ—

ಸರ್ವವರ್ಣಾಶ್ರಮಾಚಾರಾಃ ಸರ್ವೇ ದೇವಾಃ ಪ್ರಕೀರ್ತಿತಾಃ ।
ವೇದೇಷು ಚಾಥ ತಂತ್ರೇಷು ತೇ ಮುಖ್ಯಾಹ್ಯಧಿಕಾರಿಣಃ ॥ ೧೫ ॥

ತೇಷು ಸರ್ವೇಷ್ವಪಿ ಭವಾನ್ ಮುಖ್ಯತಃ ಸರ್ವಸಾರವಿತ್ ।
ಅಧಿಕಾರೀ ಮುಖ್ಯತಮಃ ಸರ್ವೇಽಪಿ ತದನಂತರಂ ॥ ೧೬ ॥

ಮಾತನಾಡುತ್ತಾನೆ:—'ಹೇ ಹಯಗ್ರೀವದೇವ! ಸಕಲಾಗಮಗಳನ್ನೂ ಎಲ್ಲವೇದಗಳನ್ನೂ ವಿಸ್ತಾರವಾಗಿ ಉಪದೇಶ ಮಾಡಿರುವಿ; ಈ ವೇದಗಳಲ್ಲಿ ಮತ್ತು ತಂತ್ರ (ಆಗಮ)ಗಳಲ್ಲಿ ಅಧಿಕಾರಿಗಳು[1] ಯಾರೆಂಬುದನ್ನು ಹೇಳು ಸ್ವಾಮಿ! (೧೩-೧೪). ಎಲ್ಲ ವರ್ಣಗಳ ಮತ್ತು ಆಶ್ರಮಗಳ ಧರ್ಮಗಳನ್ನು ಆಚರಿಸುವುದರಲ್ಲಿ, ಎಲ್ಲ ದೇವತೆಗಳು ಮುಖ್ಯಾಧಿ

1. ವೇದಗಳು ಮತ್ತು ತಂತ್ರಗಳ ಅಧ್ಯಯನ ಮತ್ತು ತಂತ್ರೋಕ್ತ ಉಪಾಸನಾದಿಗಳ ಅನುಷ್ಠಾನಗಳಿಂದ, ಉಕ್ತವಾದ ಫಲಗಳನ್ನು ಹೊಂದುವ ಅರ್ಹತೆಯುಳ್ಳವರು, ಅವುಗಳಲ್ಲಿ ಅಧಿ ಕಾರವುಳ್ಳವರೆಂದು ಹೇಳಲ್ಪಡುತ್ತಾರೆ.

ಸರ್ವೇ ದೇವಾಃ–ಎಲ್ಲ ದೇವತೆಗಳೂ, ಸರ್ವವರ್ಣಾಶ್ರಮಾಚಾರಾಃ–ಬ್ರಾಹ್ಮಣಾದಿ ಎಲ್ಲ ವರ್ಣಗಳ ಮತ್ತು ಯತ್ಯಾಶ್ರಮಾದಿ ಎಲ್ಲ ಆಶ್ರಮಗಳ ಆಚಾರಗಳ ಅನುಷ್ಠಾನವುಳ್ಳವರು (ಎಂದು), ಪ್ರಕೀರ್ತಿತಾಃ–ಪ್ರಸಿದ್ಧರಾಗಿರುವರು; ವೇದೇಷು–ವೇದಗಳಲ್ಲಿ ಚ ಅಥ–ಮತ್ತೇನೆಂದರೆ, ತಂತ್ರೇಷು–ತಂತ್ರಗಳಲ್ಲಿಯೂ, ಮುಖ್ಯಾಃ ಅಧಿಕಾರಿಣಃ–ಮುಖ್ಯಾಧಿಕಾರಿಗಳು, ತೇ ಹಿ–ಅವರೇ ಸರಿ;

ತೇಷು ಸರ್ವೇಷು ಅಪಿ–ಆ ಎಲ್ಲರಲ್ಲಿ (ದೇವತೆಗಳಲ್ಲಿ) ಸಹ, ಭವಾನ್–ನೀನು, ಮುಖ್ಯತಃ–ಮುಖ್ಯವಾಗಿ, ಸರ್ವಸಾರವಿತ್–(ಆ ಎಲ್ಲವುಗಳ—ವೇದತಂತ್ರಗಳ) ಪೂರ್ಣಸಾರವನ್ನು ತಿಳಿದವನು; (ಆದ್ದರಿಂದಲೇ), ಮುಖ್ಯತಮಃ–ಅತ್ಯಂತ ಮುಖ್ಯನಾದ, ಅಧಿಕಾರೀ–ಅಧಿಕಾರಿಯು; ಸರ್ವೇ ಅಪಿ–(ಉಳಿದ) ಎಲ್ಲರೂ (ಎಲ್ಲ ದೇವತೆಗಳೂ), ತದನಂತರಂ–ನಿನ್ನ ನಂತರ (ಕೆಳಗಿನ) ಅಧಿಕಾರಿಗಳು.

**ಏತೇ ಹಿ ವಿಷ್ಣುಂ ಸರ್ವತ್ರ ಸರ್ವಶಬ್ದಾಭಿದಂ ಪರಂ ।**
**ವೈದಿಕೈಸ್ತಾಂತ್ರಿಕೈರ್ಮಂತ್ರೈರ್ಯಥಾಯೋಗ್ಯಮುಪಾಸತೇ ॥ ೧೭ ॥**

ಏತೇ ಈ ದೇವತೆಗಳೇ, ಸರ್ವಶಬ್ದಾಭಿದಂ–ಸಕಲ ಶಬ್ದಗಳೇ ತನ್ನ ನಾಮಗಳಾಗಿವುಳ್ಳ (ಸರ್ವಶಬ್ದವಾಚ್ಯನಾದ), ಪರಂ–ಸರ್ವೋತ್ತಮನಾದ, ವಿಷ್ಣುಂ–ಶ್ರೀವಿಷ್ಣುವನ್ನು, ಸರ್ವತ್ರ–

---

ಕಾರಿಗಳು;[1] ಆ ಎಲ್ಲರಲ್ಲಿ ವೇದತಂತ್ರಗಳ ಸರ್ವಸಾರವೇತ್ತನಾದ ನೀನು ಅತ್ಯಂತ ಮುಖ್ಯಾಧಿಕಾರಿಯು—ಇತರ ದೇವತೆಗಳೆಲ್ಲ ನಿನ್ನ ನಂತರದ ಅಧಿಕಾರಿಗಳು (೧೫-೧೬). ದೇವತೆಗಳು ಸರ್ವಶಬ್ದವಾಚ್ಯನಾದ (ಸಕಲ ಶಬ್ದಗಳಿಂದ ಬೋಧ್ಯವಾದ ಗುಣ ಧರ್ಮಗಳೆಲ್ಲವನ್ನೂ ಅನಂತವಾಗಿ ತನ್ನಲ್ಲಿ ಹೊಂದಿರುವವನೂ), ಸರ್ವೋತ್ತಮನೂ ಆದ ಶ್ರೀವಿಷ್ಣುವನ್ನು, ಸರ್ವತ್ರ[2] ವೇದೋಕ್ತವಾದ ಮತ್ತು ತಂತ್ರೋಕ್ತವಾದ ಮಂತ್ರಗಳಿಂದ ಸ್ವಯೋಗ್ಯತಾನುಸಾರ ಉಪಾಸಿಸುತ್ತಾರೆ—ಹೀಗೆಂಬುದು ವೇದಪ್ರಸಿದ್ಧವು(೧೭). ವೇದ

---

1. ಪ್ರಸಿದ್ಧರಾದ ದೇವತೆಗಳು ಒಂಭತ್ತುಕೋಟಿ ಸಂಖ್ಯೆಯಲ್ಲಿರುವರೆಂದು 'ನವಕೋಟ್ಯೋಹಿ ದೇವಾನಾಂ...' ಇತ್ಯಾದಿ ಪ್ರಮಾಣಗಳಿಂದ ತಿಳಿದುಬರುತ್ತದೆ. ಇವರಲ್ಲಿ ತತ್ತ್ವಾಭಿಮಾನಿಗಳೆಲ್ಲರೂ ಸರ್ವ ವರ್ಣ ಮತ್ತು ಸರ್ವ ಆಶ್ರಮಗಳುಳ್ಳವರಲ್ಲಿಯೂ ಇರುವರು. ಅಲ್ಲಿದ್ದು ಆಯಾ ವರ್ಣದವರ ಮತ್ತು ಆಯಾ ಆಶ್ರಮದವರ ಕರ್ಮಗಳನ್ನು ತಾವು ಪ್ರೇರಕರಾಗಿ, ಆಯಾ ಜ್ಞಾನಕರ್ಮೇಂದ್ರಿಯಗಳಲ್ಲಿದ್ದು ಆಯಾ ಜೀವರೊಂದಿಗೆ ಆಚರಿಸುತ್ತಾರೆ. ಸರ್ವ ವರ್ಣಾಶ್ರಮಗಳ ಧರ್ಮಗಳನ್ನು ಆಚರಿಸುವ ಅರ್ಹತೆಯು, ಯಜ್ಞದಲ್ಲಿ ಆಹ್ವಾನಿಸಲ್ಪಡಲು ಅರ್ಹರಾದ, ಮತ್ತು ಸೋಮಪಾನಾರ್ಹರಾದ ೧೦೧ ದೇವತೆಗಳಿಗೆಲ್ಲ ಇರುತ್ತದೆ.

2. ಸರ್ವತ್ರ ಶ್ರೀವಿಷ್ಣುವನ್ನು ಉಪಾಸಿಸುವ ಯೋಗ್ಯತೆಯುಳ್ಳವರು—ವ್ಯಾಪ್ತೋಪಾಸಕರಾದ, ಅಪ್ರತೀಕಾಲಂಬನರೆಂದು ಕರೆಯಲ್ಪಡುವ ದೇವತೆಗಳು; ದೇವಾನ್ಯರು (ಅವರಕಿಂತ ತಾರತಮ್ಯದಲ್ಲಿ ಕೆಳಗಿರುವವರು, ಪ್ರತೀಕಾಲಂಬನರು—ವಿವಿಧ ಪ್ರತಿಮೆಗಳಲ್ಲಿ ಶ್ರೀಹರಿಯನ್ನು ಉಪಾಸಿಸುವವರು.

ಸರ್ವತ್ರ (ಎಲ್ಲ ಅಧಿಷ್ಠಾನಗಳಲ್ಲಿ), ವೈದಿಕೈಃ–ವೇದೋಕ್ತವಾದ, ತಾಂತ್ರಿಕೈಃ–ತಂತ್ರೋಕ್ತವಾದ, ಮಂತ್ರೈಃ–ಮಂತ್ರಗಳಿಂದ, ಯಥಾಯೋಗ್ಯಂ–ತಂತಮ್ಮ ಯೋಗ್ಯತಾನುಗುಣವಾಗಿ, ಉಪಾಸತೇ ಹಿ–ಉಪಾಸಿಸುತ್ತಾರೆ—ಇದು ವೇದಪ್ರಸಿದ್ಧವು.

**ನ್ಯಾಯೇನಾನೇನ ಯಜ್ಞೇಷು ಸರ್ವವೇದಸ್ವರೂಪಿಣಂ ।**
**ತತ್ತನ್ಮಂತ್ರೈಶ್ಚ ಹವಿಷಾ ಮಾಮೇವ ಹಿ ಭಜಂತಿ ತೇ ॥ ೧೮ ॥**

ಅನೇನ–ಈ (ಪೂರ್ವೋಕ್ತ), ನ್ಯಾಯೇನ–ನಿಯಮಾನುಸಾರವಾಗಿ, ತೇ–ಆ ದೇವತೆಗಳು, ಯಜ್ಞೇಷು–ಯಜ್ಞಗಳಲ್ಲಿ (ತಾವು ಮಾಡುವ ನನ್ನ ವಿವಿಧ ಪೂಜಾರೂಪ ಕರ್ಮಗಳಲ್ಲಿ), ಸರ್ವವೇದಸ್ವರೂಪಿಣಂ–ಸಕಲ ವೇದಗಳಿಂದ ಪ್ರತಿಪಾದ್ಯವಾದ ಸ್ವರೂಪವುಳ್ಳ, ಮಾಂ ಏವ–ನನ್ನನ್ನೇ, ಭಜಂತಿ ಹಿ–ಸೇವಿಸುವರೆಂಬುದು ನಿಶ್ಚಯ.

**ಇಂದ್ರಿಯೇಷು ಚ ಸರ್ವೇಷು ತೇಷಾಮಹಮವಸ್ಥಿತಃ ।**
**ಹೃಷೀಕೇಶಸ್ತತೋಽಹಂ ವೈ ಖ್ಯಾತೋ ವೇದವಿದಾಂ ಮುಖೇ ॥ ೧೯ ॥**

ತೇಷಾಂ–ಆ ದೇವತೆಗಳ, ಸರ್ವೇಷು–ಎಲ್ಲ ಇಂದ್ರಿಯೇಷು ಚ–ಇಂದ್ರಿಯಗಳಲ್ಲಿ ಸಹ, ಅಹಂ–ನಾನು, ಅವಸ್ಥಿತಃ–ಇರುವೆನು; ತತಃ–ಆದ್ದರಿಂದ, ವೇದವಿದಾಂ–ವೇದಜ್ಞಾನಿಗಳ, ಮುಖೇ–ಮುಖದಲ್ಲಿ (ಅವರ ಮಾತುಗಳಲ್ಲಿ—ಉಪದೇಶಗಳಲ್ಲಿ), ಅಹಂ ವೈ–ನಾನೇ, ಹೃಷಿಕೇಶಃ–ಹೃಷಿಕೇಶನು, ಎಂದು, ಖ್ಯಾತಃ–ಪ್ರಸಿದ್ಧನಾಗಿರುವೆನು.

**ಯಥಾಯೋಗ್ಯತಯಾಽನ್ಯೇ ಚ ಯಥಾ ಜ್ಞಾನಂ ಚ ತೇಽಖಿಲಾಃ ।**
**ಆರಾಧಯಂತಿ ತೇ ವೈ ಮಾಂ ತಂತ್ರೈರ್ನಾನಾಸ್ವರೂಪಿಣಂ ॥ ೨೦ ॥**

---

ತಂತ್ರಗಳೆಂಬ ಉಭಯಮಂತ್ರಗಳಿಂದ ನನ್ನನ್ನು ಭಜಿಸುವ (ಉಪಾಸಿಸುವ) ದೇವತೆಗಳು, ನಾನಾ ಯಜ್ಞಗಳಲ್ಲಿ ಸರ್ವವೇದಪ್ರತಿಪಾದ್ಯ ಮಹಿಮೋಪೇತವಾದ ಸ್ವರೂಪವುಳ್ಳ ನನ್ನನ್ನೇ ಸೇವಿಸುತ್ತಾರೆ—ಇದು ನಿಶ್ಚಯ (೧೮). ವೇದವೇತ್ತೃಗಳಾದ ಜ್ಞಾನಿಗಳು ನನ್ನನ್ನು ಹೃಷಿಕೇಶನೆಂದು ಕರೆಯುತ್ತಾರೆ; ('ಹೃಷೀಕ' ಎಂದರೆ ಇಂದ್ರಿಯ). ಆ ಎಲ್ಲ ದೇವತೆಗಳ ಎಲ್ಲ ಇಂದ್ರಿಯಗಳಲ್ಲಿ ನಾನೇ ಇದ್ದುದರಿಂದ (ಇದ್ದು ಅವುಗಳಿಂದ ಎಲ್ಲ ವ್ಯಾಪಾರಗಳನ್ನು ಮಾಡಿಸುವ ಈಶ-ನಿಯಾಮಕನಾದ್ದರಿಂದ), ಹೃಷೀಕೇಶ ಎಂಬುದು ನನ್ನ ಅನ್ವರ್ಥನಾಮವು (೧೯). ಸರ್ವವರ್ಣಾಶ್ರಮಾಚಾರಗಳನ್ನು ಅನುಷ್ಠಾನಮಾಡುವುದರಲ್ಲಿ ಅಧಿಕಾರಿಗಳಾದ ದೇವತೆಗಳನ್ನುಳಿದು, ಅನ್ಯರೆಲ್ಲರೂ, ತಮ್ಮ ಜ್ಞಾನವಿದ್ದಷ್ಟು ತಮ್ಮ ಸ್ವರೂಪ ಯೋಗ್ಯತಾನುಗುಣವಾಗಿ ತಂತ್ರಗಳಿಂದ, ಬಹುರೂಪಿಯಾದ ನನ್ನನ್ನು (ತಾವು ಮೆಚ್ಚುವ ರೂಪಗಳನ್ನು), ಆರಾಧಿಸುತ್ತಾರೆ (೨೦). ಗಂಧರ್ವ, ಋಷಿ, ಸಿದ್ಧ, ಪಿಶಾಚ,

ಅನ್ಯೇ–ದೇವತೆಗಳಿಂದ ಅನ್ಯರಾದ, ತೇ ಅಖಿಲಾಃ–ಸಮಸ್ತ ಜೀವರು, ಯಥಾಜ್ಞಾನಂ–ತಂತಮ್ಮ ಜ್ಞಾನವಿದ್ದಷ್ಟು, ಯಥಾಯೋಗ್ಯತಯಾ–ತಂತಮ್ಮ ಸ್ವರೂಪಯೋಗ್ಯತೆಯನ್ನನುಸರಿಸಿ, ನಾನಾಸ್ವರೂಪಿಣಂ–ಬಹುರೂಪನಾದ, ಮಾಂ–ನನ್ನನ್ನು ತಂತ್ರೈಃ–ತಂತ್ರಗಳಿಂದ, ಆರಾಧಯಂತಿ ವೈ–ಆರಾಧಿಸುತ್ತಾರೆ, ಇದು ಯೋಗ್ಯವೇ ಆಗಿದೆ.

**ಗಂಧರ್ವಾ ಋಷಯಃ ಸಿದ್ಧಾಃ ಪಿಶಾಚಾ ಗುಹ್ಯಕಾದಯಃ ।**
**ತತೋಧಮಾ ಮನುಷ್ಯಾಸ್ತು ವೇದತಂತ್ರಾಧಿಕಾರಿಣಃ ॥ ೨೧ ॥**

ಗಂಧರ್ವಾಃ–ಗಂಧರ್ವರು, ಋಷಯಃ–ಋಷಿಗಳು, ಸಿದ್ಧಾಃ–ಸಿದ್ಧರು, ಪಿಶಾಚಾಃ–ಪಿಶಾಚಿಗಳು, ಗುಹ್ಯಕಾದಯಃ–ಗುಹ್ಯಕರೇ ಮೊದಲಾದವರು, ತತಃ–ಇವರೆಲ್ಲರಗಿಂತ, ಅಧಮಾಃ–ನೀಚರಾದ (ಕೆಳಗಿನವರಾದ), ಮನುಷ್ಯಾಃ–ಮನುಷ್ಯರು, ತು–ಸಹ, ವೇದತಂತ್ರಾಧಿಕಾರಿಣಃ–ವೇದಗಳು ಮತ್ತು ತಂತ್ರಗಳಲ್ಲಿ(ಉಭಯಕ್ಕೂ) (ಪ್ರತ್ಯೇಕ) ಅಧಿಕಾರಿಗಳು (ಇರುತ್ತಾರೆ). (ಇದರ ವಿವರಗಳು ಮುಂದೆ ಪ್ರಸಕ್ತವಾಗಿವೆ).

**ತತ್ರಾಪಿ ಬ್ರಾಹ್ಮಣಾಃ ಶ್ರೇಷ್ಠಾಃ ಕ್ಷತ್ರಿಯಾಶ್ಚ ತತೋಧಮಾಃ ।**
**ವೈಶ್ಯಾಶ್ಚೈವಾನುಲೋಮಾಶ್ಚ ಕೇಚಿದ್ವೇದಾಧಿಕಾರಿಣಃ ॥ ೨೨ ॥**

ತತ್ರಾಪಿ–ಮನುಷ್ಯರಲ್ಲಿ ಸಹ (ಮನುಷ್ಯದೇಹಗಳಲ್ಲಿರುವ ಇವರಲ್ಲಿಯಾದರೂ), ಬ್ರಾಹ್ಮಣಾಃ–ಬ್ರಾಹ್ಮಣರು, ಶ್ರೇಷ್ಠಾಃ–ಶ್ರೇಷ್ಠರು; ತತಃ–ಅವರಿಗಿಂತ, ಕ್ಷತ್ರಿಯಾಃ ಚ–ಕ್ಷತ್ರಿಯರಾದರೂ, ಅಧಮಾಃ–ಅಧಮರು; ವೈಶ್ಯಾಃ–ವೈಶ್ಯರು, ಚ–ಮತ್ತು (ಈ ಮೂರು ವರ್ಣದವರೊಂದಿಗೆ, ಕೇಚಿತ್–ಕೆಲವು, ಅನುಲೋಮಾಃ–ಅನುಲೋಮಜಾತಿಯವರು, ವೇದಾಧಿಕಾರಿಣಃ–ವೇದಗಳಲ್ಲಿ ಅಧಿಕಾರಿಗಳಾಗಿರುತ್ತಾರೆ, (ವೇದಾಧ್ಯಯನಾದಿಗಳಲ್ಲಿಯೂ ವೇದೋಕ್ತಕರ್ಮಾನುಷ್ಠಾನದಲ್ಲಿಯೂ ಅಧಿಕಾರಿಗಳು).

---

ಗುಹ್ಯಕಾದಿಗಳು[1] ಮತ್ತು ಅವರಗಿಂತ ಕೆಳಗಿನವರಾದ ಮನುಷ್ಯ ಮೊದಲಾದ ಅಸಂಖ್ಯಜೀವರಲ್ಲಿ ಸಹ, ವೇದಗಳು ಮತ್ತು ತಂತ್ರಗಳೆಂಬ ಉಭಯಕ್ಕೂ ಪ್ರಪ್ರತ್ಯೇಕ ಅಧಿಕಾರಿಗಳಿರುವರು (೨೧). ಈ ವಿವಿಧ ಅಧಿಕಾರಿಗಳಲ್ಲಿ ತತ್ರಾಪಿ ಮನುಷ್ಯರಲ್ಲಿ ಬ್ರಾಹ್ಮಣರು, ಶ್ರೇಷ್ಠರು; ಕ್ಷತ್ರಿಯರು ಅವರಿಗಿಂತ ಕೆಳಗಿನವರು; ಈ ಉಭಯರು ಮತ್ತು ವೈಶ್ಯರು ಸಹ ವೇದಾಧಿಕಾರಿಗಳು; ಮತ್ತು ಕೆಲವು ಅನುಲೋಮ ಜಾತಿಯವರೂ ಸಹ ವೇದಾಧಿ

---

1. ಪಿಶಾಚ ಗುಹ್ಯಕಾದಿ ದೇಹಗಳು ಪೃಥಿವ್ಯಾದಿ ಪಂಚಭೂತಗಳಲ್ಲಿ ವಾಯುಪ್ರಚುರವಾದ ಭೂತಗಳಿಂದ ನಿರ್ಮಿತ ದೇಹಗಳು; ಕರ್ಮಾನುಸಾರವಾಗಿ ಮುಕ್ತಿಯೋಗ್ಯರಾದ ಸಾತ್ವಿಕ ಸ್ವರೂಪದ ಜೀವರೂ ಈ ದೇಹಗಳಲ್ಲಿ ಬರುತ್ತಾರೆ (ಹುಟ್ಟಿಸಲ್ಪಡುತ್ತಾರೆ). ಹೀಗಿದ್ದರೂ, ಸರ್ವಜೀವರಿಗೆ ಮನುಷ್ಯದೇಹವೇ ವಿಶೇಷವಾಗಿ ಸ್ವಗತಿಸಾಧಕವೆಂದು ಹೇಳಲಾಗುತ್ತದೆ.

ಸ್ತ್ರೀಶೂದ್ರಪ್ರತಿಲೋಮಾದ್ಯಾ ತಂತ್ರಮಾತ್ರಾಧಿಕಾರಿಣಃ ।
ನ ತೇಷಾಂ ವೈದಿಕೇ ಮಾರ್ಗೇ ಪ್ರವೇಶೋ ವಿಹಿತೋದಿತಃ ॥ ೨೩ ॥

ಸ್ತ್ರೀ ಶೂದ್ರ ಪ್ರತಿಲೋಮಾದ್ಯಾಃ–ಸ್ತ್ರೀಯರು, ಶೂದ್ರರು, ಪ್ರತಿಲೋಮಜರೇ ಮೊದಲಾದವರು, ತಂತ್ರಮಾತ್ರಾಧಿಕಾರಿಣಃ–ತಂತ್ರಗಳಲ್ಲಿ ಮಾತ್ರ ಅಧಿಕಾರವುಳ್ಳವರಾಗಿದ್ದಾರೆ; ತೇಷಾಂ–ಅವರಿಗೆ, ವೈದಿಕೇ ಮಾರ್ಗೇ–ವೇದಮಾರ್ಗದಲ್ಲಿ, ಪ್ರವೇಶಃ–ಪ್ರವೇಶವು, ನ ವಿಹಿತೋದಿತಃ–ವಿಹಿತವೆಂದು ಹೇಳಲ್ಪಟ್ಟಿಲ್ಲ(ವೇದಗಳಲ್ಲಿ ಹೇಳಲಾಗಿಲ್ಲ).

ಸಾತ್ವಿಕಾ ರಾಜಸಾಶ್ಚೈವ ತಾಮಸಾಶ್ಚ ತಥಾಪರೇ ।
ಮನುಷ್ಯೇಷು ಹಿ ವಿದ್ಯಂತೇ ತತ್ರ ಯೇ ಸಾತ್ವಿಕಾ ನರಾಃ ॥ ೨೪ ॥

ಬ್ರಾಹ್ಮಣಾದ್ಯಾಶ್ಚ ಸರ್ವೇಽಪಿ ಸಂಸಾರಾದ್ಯೇ ಮುಮುಕ್ಷವಃ ।
ತೇ ತು ತಂತ್ರಂ ಪಂಚರಾತ್ರಮಾಶ್ರಯೇಯುರ್ನ ಚೇತರತ್ ॥ ೨೫ ॥

---

ಕಾರಿಗಳಾಗಿದ್ದಾರೆ[1] (೨೨). ಸ್ತ್ರೀಯರು, ಶೂದ್ರರು ಮತ್ತು ಪ್ರತಿಲೋಮ ಜಾತಿಯವರೇ ಮೊದಲಾದ ಅನ್ಯರು, ತಂತ್ರಗಳಲ್ಲಿ ಮಾತ್ರ ಅಧಿಕಾರಿಗಳು; ಇವರಿಗೆ ವೈದಿಕಮಾರ್ಗದಲ್ಲಿ ಪ್ರವೇಶವುಂಟೆಂದು ಶ್ರುತಿಗಳಲ್ಲಿ ಹೇಳಲಾಗಿರುವುದಿಲ್ಲ[2] (೨೩). ಮನುಷ್ಯರಲ್ಲಿ (ಜೀವರಲ್ಲಿ) ಸಾತ್ವಿಕರು, ರಾಜಸರು, ತಾಮಸರು ಎಂದು ಮೂರು ವಿಧವಿದೆ; ಬ್ರಾಹ್ಮಣಾದಿ[3] ವರ್ಣಗಳಲ್ಲಿ ಜನಿಸಿರುವ ಸಾತ್ವಿಕಜೀವರು, ಮುಮುಕ್ಷುಗಳಾಗಿ

---

1. ಋಷ್ಯಾದಿ ಶಬ್ದಗಳು ನಾನಾಯೋನಿಗಳ ನಾಮಗಳಾಗಿರುವಂತೆ, ಜೀವ ಸ್ವರೂಪವಾಚಕವೂ ಆಗಿವೆ. ಸ್ವರೂಪದಿಂದಲೇ, ಋಷಿ ಮನುಷ್ಯಾದಿ ಜೀವಭೇದಗಳೂ ಇವೆ. ಇಲ್ಲಿ ಪ್ರಸಕ್ತವಾದ ಅಧಿಕಾರ ನಿರೂಪಣೆಯು ಮುಖ್ಯವಾಗಿ ಜೀವ ಸ್ವರೂಪಗಳಿಗೆ ಅನ್ವಯಿಸುತ್ತವೆಯಾದರೂ, ತನ್ನಾಮಕ ಪ್ರಾಕೃತದೇಹಗಳಲ್ಲಿರುವ ಜೀವರಿಗೂ, ವಿಶೇಷವಾಗಿ ಮನುಷ್ಯದೇಹಗಳಲ್ಲಿರುವವರಿಗೂ ಅನ್ವಯಿಸುತ್ತದೆಂದು ತಿಳಿಯಬೇಕು. ಅನುಲೋಮಾದಿ ಜಾತಿವಿವೇಕವು ಮುಂದಿನ ಅಧ್ಯಾಯಗಳಲ್ಲಿ ಪ್ರಸಕ್ತವಾಗಲಿದೆ. ಉತ್ತಮವರ್ಣದ ಪುರುಷ ಮತ್ತು ಅಧಮವರ್ಣದ ಸ್ತ್ರೀ, ಇವರ ಸಂಗದಿಂದ ಜನಿಸುವವರು ಅನುಲೋಮಜರೆನಿಸುತ್ತಾರೆ.

2. ಉತ್ತಮಸ್ತ್ರೀಯರಿಗೆ, ಎಂದರೆ ದೇವತಾಸ್ತ್ರೀಯರಿಗೆ ಮತ್ತು ಕೆಲವು ಋಷಿಪತ್ನಿಯರಿಗೆ ವೇದಾಧಿಕಾರವುಂಟೆಂದು ಅನ್ಯಪ್ರಮಾಣಗಳಿಂದ ಸಿದ್ಧವಾಗುತ್ತದೆ. ಅವರನ್ನುಳಿದು ಇತರ ಸ್ತ್ರೀಯರಿಗೆ ವೇದಾಧಿಕಾರವಿಲ್ಲೆಂದು ತಿಳಿಯಬೇಕು.

ಪ್ರತಿಲೋಮಜರೆಂದರೆ, ಉತ್ತಮವರ್ಣದ ಸ್ತ್ರೀ ಮತ್ತು ಅಧಮವರ್ಣದ ಪುರುಷ—ಇವರ ಸಂಯೋಗದಿಂದ ಹುಟ್ಟಿದವರು.

3. ಎಲ್ಲ ಜೀವರ ಸಾಧನೆಗಳು ಸಾಮಾನ್ಯವಾಗಿ ಮನುಷ್ಯದೇಹದಿಂದಲೇ ನಡೆಯುತ್ತವೆ. ಆದಿ ಶಬ್ದದಿಂದ ವೇದಾಧಿಕಾರವುಳ್ಳ ಕ್ಷತ್ರಿಯ ವೈಶ್ಯರು ಮತ್ತು ಇತರ ಅನುಲೋಮಜರು ಸಹ ವಿವಕ್ಷಿತರು. ಇದರ ವಿವರಗಳು ಮುಂದಿನ ಅಧ್ಯಾಯಗಳಲ್ಲಿ ಪ್ರಸಕ್ತವಾಗುತ್ತವೆ.

ಮನುಷ್ಯೇಷು–ಮನುಷ್ಯರಲ್ಲಿ, ಸಾತ್ತ್ವಿಕಾಃ–ಸಾತ್ತ್ವಿಕರೂ, ರಾಜಸಾಃ ಚೈವ–ರಾಜಸರೂ, ತಥಾ–ಹಾಗೂ, ಅಪರೇ–ಅನ್ಯರಾದ, ತಾಮಸಾಃ–ತಾಮಸರೂ, ವಿದ್ಯಂತೇಹಿ–ಇರುವರಷ್ಟೆ (ತ್ರಿವಿಧರಾದ, ಕ್ರಮವಾಗಿ ಮುಕ್ತಿಯೋಗ್ಯರೂ, ಮಿಶ್ರರೂ [ನಿತ್ಯಸಂಸಾರಿಗಳೂ] ತಮೋಯೋಗ್ಯರೂ ಆದ ಜೀವರು ಸಾತ್ತ್ವಿಕಾದಿ ನಾಮಗಳಿಂದ ಕರೆಯಲ್ಪಡುತ್ತಾರೆ); ತತ್ರ–ಈ ತ್ರಿವಿಧ ಜೀವರ ಮಧ್ಯದಲ್ಲಿ ಯೇ ಸಾತ್ತ್ವಿಕಾಃ ನರಾಃ–ಸಾತ್ತ್ವಿಕರಾದ ಮನುಷ್ಯರು, ಬ್ರಾಹ್ಮಣಾದ್ಯಾಃ ಚ–ಬ್ರಾಹ್ಮಣಾದಿ ವರ್ಣಗಳಲ್ಲಿರುವವರು, ಸಂಸಾರಾತ್–ಸಂಸಾರದಿಂದ, ಮುಮುಕ್ಷವಃ–ಮುಕ್ತರಾಗಬೇಕೆಂಬ ಇಚ್ಛೆಯುಳ್ಳವರಾಗಿ, ಪಂಚರಾತ್ರಂ ತಂತ್ರಂ–ಪಂಚರಾತ್ರ ಆಗಮವನ್ನು ತೇ–ಅವರು (ಮುಮುಕ್ಷುಗಳು), ಆಶ್ರಯೇಯುಃ–ಆಶ್ರಯಿಸುತ್ತಾರೆ; ಇತರತ್ ನ ಚ–ಇತರ ಪಾಶುಪತಾದಿ (ಈ ಮೊದಲು ಹೇಳಲಾದ) ಆಗಮಗಳನ್ನು ಆಶ್ರಯಿಸುವುದೇ ಇಲ್ಲ.

**ರಾಜಸಾ ಮನುಜಾ ಯೇ ತು ವಿದ್ಯೈಶ್ವರ್ಯಧನೇಪ್ಸವಃ ।**
**ಶಾಕ್ತಗಾಣೇಶಸೌರಾದೀನಾಶ್ರಯೇಯುಸ್ತಥಾಗಮಾನ್ ॥ ೨೬ ॥**

ಯೇ–ಯಾವ, ಮನುಜಾಃ ತು–ಮನುಷ್ಯರಾದರೂ, ರಾಜಸಾಃ–ರಾಜಸರೋ, (ಅವರು), ವಿದ್ಯೈಶ್ವರ್ಯಧನೇಪ್ಸವಃ–ವಿದ್ಯೆ, ಐಶ್ವರ್ಯ, ಧನಗಳನ್ನು ಆಶಿಸುವವರಾಗಿ, ಶಾಕ್ತಗಾಣೇಶಸೌರಾದೀನ್–ಶಾಕ್ತ ಗಾಣೇಶ, ಸೌರ ಮೊದಲಾದ, ಆಗಮಾನ್–ಆಗಮಗಳನ್ನು, ತಥಾ–ಹಾಗೆಯೇ (ಆ ಫಲಗಳ ಪ್ರಾಪ್ತಿಗಾಗಿಯೇ), ಆಶ್ರಯೇಯುಃ–ಆಶ್ರಯಿಸುತ್ತಾರೆ.

**ಪರದಾರಪರದ್ರವ್ಯಪರವಶ್ಯಪರಕ್ಷಯಾಃ ।**
**ಮಾರಣೋಚ್ಚಾಟನಾದೀನಿ ಕ್ರೂರಕರ್ಮಾಣಿ ಯಾನಿ ತು ॥ ೨೭ ॥**

---

(ಮೋಕ್ಷಾಪೇಕ್ಷೆಯುಳ್ಳವರಾಗಿ), ಪಂಚರಾತ್ರಾಗಮವನ್ನು ಆಶ್ರಯಿಸುತ್ತಾರೆ—ಇತರ ಪಾಶುಪತಾದಿ ಆಗಮವನ್ನಲ್ಲ (೨೪-೨೫). ವಿದ್ಯೆ, ಐಶ್ವರ್ಯ, ಧನಾದಿ ಫಲಗಳನ್ನು ಆಶಿಸುವ ರಾಜಸಜೀವರು, ಶಾಕ್ತ, ಗಾಣಾಪತ್ಯ, ಸೌರ ಮೊದಲಾದ ಆಗಮಗಳನ್ನು (ಆಯಾ ಆಗಮೋಕ್ತದೇವತೆಗಳ ಆಹ್ವಾನ ಮತ್ತು ಆರಾಧನೆಗಳಿಗಾಗಿ) ಆಶ್ರಯಿಸುತ್ತಾರೆ (೨೬). ಪರಸ್ತ್ರೀ ಮತ್ತು ಪರದ್ರವ್ಯಗಳನ್ನೂ, ಪರರ ವಶೀಕರಣವನ್ನೂ ಮತ್ತು ಪರರ ನಾಶವನ್ನೂ, ಸಾಧಿಸಲಿಚ್ಛಿಸುವವರು, ಮಾರಣ-ಉಚ್ಚಾಟನ ಮೊದಲಾದ ಉಗ್ರಕರ್ಮಗಳಲ್ಲಿ ತೊಡಗುತ್ತಾರೆ; ಈ ಕರ್ಮಗಳು, ಆ ಫಲಗಳನ್ನು ಕೊಡುವುವೆಂಬ ದೇವತೆಗಳಿಗೆ ಮದ್ಯಮಾಂಸಾದಿಗಳ ಉಪಹಾರಗಳನ್ನು ಅರ್ಪಿಸುವುದರಿಂದಲೂ, ಪೂಜಾದಿಗಳಿಗೆ ಶ್ಮಶಾನಾದಿ (ಅಪವಿತ್ರ) ಸ್ಥಾನಗಳನ್ನು ಆರಿಸಿಕೊಳ್ಳುವುದರಿಂದಲೂ, ಸಿದ್ಧಿಸುತ್ತವೆ; ಈ ವಿಧ ಉಗ್ರಕರ್ಮಗಳು ಯಾರಿಗೆ ರುಚಿಸುತ್ತವೆಯೋ, ಅವರು ಮನುಷ್ಯರಲ್ಲಿ ತಾಮಸರೆಂದು

**ಸುರಾಮಾಂಸೋಪಹಾರಾದ್ಯೈಃ ಶ್ಮಶಾನನಿಲಯಾದಿಭಿಃ ।**
**ಸಾಧ್ಯಾನಿ ತಾನಿ ರೋಚಂತೇ ತಾಮಸಾಸ್ತೇ ನರಾ ಮತಾಃ ॥ ೨೮ ॥**

ಪರದಾರಪರದ್ರವ್ಯಪರವಶ್ಯಪರಕ್ಷಯಾಃ–ಪರರ ಪತ್ನಿಯರನ್ನೂ (ಪರಸ್ತ್ರೀಯರನ್ನೂ), ಪರದ್ರವ್ಯವನ್ನೂ, ಪರರನ್ನು ಸ್ವವಶಮಾಡಿಕೊಳ್ಳುವುದನ್ನೂ, ಪರರ ನಾಶವನ್ನೂ, ಸಾಧಿಸಲಿಚ್ಛಿಸುವವರು, (ಈ ಉದ್ದೇಶಗಳ ಸಾಧನೆಗಾಗಿ), ಸುರಾಮಾಂಸೋಪಹಾರಾದ್ಯೈಃ–ಸುರೆ, ಮಾಂಸ (ಮದ್ಯಮಾಂಸ)ಗಳ ಉಪಹಾರಗಳಿಂದಲೂ, ಶ್ಮಶಾನನಿಲಯಾದಿಭಿಃ–ಶ್ಮಶಾನಸ್ಥಳಾದಿಗಳಿಂದಲೂ (ಪೂಜಾಸ್ಥಾನಗಳಿಂದಲೂ), ಸಾಧ್ಯಾನಿ–ಸಾಧ್ಯಗಳಾದ, ಮಾರಣೋಚ್ಚಾಟನಾದೀನಿ–ಮಾರಣ (ಸಂಹಾರ) ಉಚ್ಚಾಟನ (ಸ್ಥಾನ ಬಿಟ್ಟು ಓಡಿಸುವುದು) ಮೊದಲಾದ, ಯಾನಿ–ಯಾವ, ಕ್ರೂರಕರ್ಮಾಣಿ ತು–ಕ್ರೂರಕರ್ಮಗಳೋ, ತಾನಿ–ಅವುಗಳನ್ನು ರೋಚಂತೇ–(ಕೈಗೊಳ್ಳಲು) ಇಚ್ಛಿಸುತ್ತಾರೆ (ಇಂಥ ಉಗ್ರಕರ್ಮಗಳು ಅವರಿಗೆ ರುಚಿಸುತ್ತವೆ); ತೇ–ಈ ಜನರು, ತಾಮಸಾಃ ನರಾಃ–ತಾಮಸ ಮನುಷ್ಯರೆಂದು, ಮತಾಃ–ತಿಳಿಯಲ್ಪಡುತ್ತಾರೆ.

**ತೇ ಹಿ ಯಾಮಲವಾಮಾದಿಕಾಪಾಲಾದ್ಯಾಗಮಾನಪಿ ।**
**ಆಶ್ರಯೇಯುಸ್ತತೋ ಭ್ರಷ್ಟಾಸ್ತತ್ತದ್ದೇಹಾಭಿಮಾನಿನಃ ॥ ೨೯ ॥**

**ಪಾಪಾಚಾರಾ ಹಿ ಜಾಯಂತೇ ಲಭಂತೇ ಹಿ ಫಲಾನಿ ತೇ ।**
**ಅಂತೇ ನಿರಯವಾಸಃ ಸ್ಯಾತ್ತೇಷಾಂ ಪಾಪಾತ್ಮನಾಂ ಸದಾ ॥ ೩೦ ॥**

ತೇ ಹಿ–ಆ ತಾಮಸ ಮನುಷ್ಯರಾದರೂ, ಯಾಮಲವಾಮಾದಿ–ಯಾಮಲ, ವಾಮ ಮೊದಲಾದ, ಕಾಪಾಲಾದಿ–ಕಾಪಾಲ ಮುಂತಾದ, ಆಗಮಾನ್ ಅಪಿ–ಆಗಮಗಳನ್ನೇ, ಆಶ್ರಯೇಯುಃ–ಆಶ್ರಯಿಸುತ್ತಾರೆ; ತತಃ–ಈ ಆಗಮಗಳ ಆಶ್ರಯದಿಂದ (ತದುಕ್ತಕರ್ಮಗಳನ್ನು ಆಚರಿಸುವುದರಿಂದ), ಭ್ರಷ್ಟಾಃ–ಪತಿತರಾಗಿ, ತತ್ತದ್ದೇಹಾಭಿಮಾನಿನಃ–ಆಯಾದೇಹಗಳಲ್ಲಿ (ಮನುಷ್ಯದೇಹಗಳಲ್ಲಿ) ಅಭಿಮಾನವುಳ್ಳವರಾಗಿ (ಅಹಂಮಮಕಾರಗಳುಳ್ಳವರಾಗಿ), ಪಾಪಾಚಾರಾಃ–ಪಾಪಾಚಾರವುಳ್ಳವರು, ಜಾಯಂತೇ ಹಿ–ತಪ್ಪದೇ ಆಗುತ್ತಾರೆ;

---

ಹೇಳಲ್ಪಡುತ್ತಾರೆ (೨೭-೨೮). ಆ ತಾಮಸ ಸ್ವಭಾವದ ಜೀವರು, ಯಾಮಲ, ವಾಮ, ಕಾಪಾಲ ಮೊದಲಾದ ಆಗಮಗಳನ್ನು ಆಶ್ರಯಿಸಿ, ತದುಕ್ತಕರ್ಮಗಳನ್ನು— ವಾಮಾಚಾರಗಳನ್ನು ಆಚರಿಸಿ, ಪತಿತರಾಗುತ್ತಾರೆ; ಸ್ವದೇಹದಲ್ಲಿ ಅಹಂಮಮಕಾರವುಳ್ಳವರಾಗಿ ನಾನಾ ಪಾಪಗಳನ್ನು ಮಾಡಿ ಅವುಗಳ ಫಲವನ್ನೂ ಭೋಗಿಸಿ, ಅಂತ್ಯಕ್ಕೆ, ಪಾಪ ಸ್ವರೂಪರೇ ಆದ ತಾವು ತಮಗೆ ಯೋಗ್ಯವಾದ ಅಂಧತಮಸ್ಸನ್ನೇ (ನಿತ್ಯ ದುಃಖಾನುಭವದ-ಸುಖ ಲೇಶವಿಲ್ಲದ ನಿತ್ಯನರಕವನ್ನೇ) ಹೊಂದುತ್ತಾರೆ (೨೯-೩೦). ಸ್ವಭಾವದಿಂದಲೇ

ತೇ–ಅವರು, ಫಲಾನಿ–ಆ ಪಾಪಗಳ ಫಲಗಳನ್ನೂ ಲಭಂತೇ ಹಿ–ಹೊಂದುವರೆಂಬುದೂ ನಿಶ್ಚಯವು; ಅಂತೇ–ಮಾನುಷದೇಹವಿಯೋಗಾನಂತರ (ಸಾಧನಪೂರ್ತಿಯನಂತರ) ಪಾಪಾತ್ಮನಾಂ–ಪಾಪಸ್ವರೂಪರೇ ಆದ, ತೇಷಾಂ–ಆ ತಾಮಸಜೀವರಿಗೆ, ಸದಾ–ನಿತ್ಯವೂ, ನಿರಯವಾಸಃ–ನರಕವಾಸವು (ನಿತ್ಯನರಕವೇ–ಅಂಧತಮಃ ಪ್ರಾಪ್ತಿಯೇ), ಸ್ಯಾತ್–ಆಗುತ್ತದೆ (ದೊರೆಯುತ್ತದೆ).

ತತ್ರಾಪಿ ಬ್ರಾಹ್ಮಣಾ ಯೇ ಸ್ಯುಃ ಸಾತ್ವಿಕಾ ವಿಷ್ಣುತತ್ಪರಾಃ ।
ಕ್ಷತ್ರಿಯಾಶ್ಚ ತಥಾ ವೈಶ್ಯಾಃ ಪಂಚರಾತ್ರಂ ಹಿ ತನ್ಮತಂ ॥ ೩೧ ॥

ತತ್ರಾಪಿ–ಈ ತ್ರಿವಿಧ ಜೀವರ ಮಧ್ಯದಲ್ಲಿ, ಯೇ–ಯಾರು, ವಿಷ್ಣುತತ್ಪರಾಃ–ವಿಷ್ಣುಭಕ್ತರಾದ (ಶ್ರೀವಿಷ್ಣುವನ್ನೇ ಸರ್ವೋತ್ತಮನೆಂಬ ಜ್ಞಾನವುಳ್ಳವರಾಗಿ ಆಶ್ರಯಿಸಿರುವ), ಸಾತ್ವಿಕಾಃ–ಸಾತ್ವಿಕರು, ಬ್ರಾಹ್ಮಣಾಃ–ಬ್ರಾಹ್ಮಣರು, ಚ–ಮತ್ತು ಕ್ಷತ್ರಿಯಾಃ–ಕ್ಷತ್ರಿಯರು, ತಥಾ–ಹಾಗೂ, ವೈಶ್ಯಾಃ–ವೈಶ್ಯರು, ಸ್ಯುಃ–ಆಗಿರುವರೋ (ಈ ವರ್ಣಗಳಲ್ಲಿ ಜನಿಸಿರವರೋ), (ಅವರಿಗೆ), ಪಂಚರಾತ್ರಂ–ಪಂಚರಾತ್ರಾಗಮವು, ತನ್ಮತಂ ಹಿ–ಅವರಿಗೆ ಸಮ್ಮತವಾಗಿರುತ್ತದೆ.

ಅನ್ಯೇಷಾಂ ಆಗಮಾನಾಂ ತು ವಕ್ತಾರೋಽನ್ಯೇ ಭವಂತ್ಯಪಿ ।
ಪಾಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾಹಂ ಸ್ವಯಮೇವ ಹಿ ॥ ೩೨ ॥

ಅತೋ ಹಿ ಸರ್ವಶಾಸ್ತ್ರೇಷು ವರಮೇತನ್ನಿಗದ್ಯತೇ ।
ಮನ್ಮುಖಾದೇವ ಸಂಶ್ರುತ್ಯ ನಾರದಾದ್ಯಾ ಮಹರ್ಷಯಃ ॥ ೩೩ ॥

ಲೋಕೇ ಪ್ರಕಾಶಯಿಷ್ಯಂತಿ ಮದ್ಭಕ್ತೇಷ್ವೇವ ನಾನ್ಯಥಾ ।
ಸನಕಾದ್ಯಾಶ್ಚ ಶೃಣ್ವಂತಿ ನಾರದಾತ್ ಪಾಂಚರಾತ್ರಕಂ ॥ ೩೪ ॥

---

ವಿಷ್ಣುಭಕ್ತರಾದ ಸಾತ್ವಿಕರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣದವರಾದರೆ, ಅವರಿಗೆ ಪಂಚರಾತ್ರಾಗಮವೇ ಪರಮಸಂಮತವಾಗಿರುತ್ತದೆ (೩೧). ಇತರ ಎಲ್ಲ ಆಗಮಗಳ ವಕ್ತೃಗಳು, (ಕರ್ತೃಗಳು ಮತ್ತು ಉಪದೇಶಕರು), ನನ್ನ ಆಜ್ಞೆಯಂತೆ ರುದ್ರಾದಿ ಇತರ ದೇವತೆಗಳು, ಆಗಿರುತ್ತಾರೆ—ಆದರೆ ಸಮಗ್ರವಾದ ಪಂಚರಾತ್ರಾಗಮದ ವಕ್ತಾರನು ಸ್ವಯಂ ನಾನೇ ಆಗಿದ್ದೇನೆ; ಈ ಕಾರಣದಿಂದಲೇ, ಸಕಲಾಗಮಗಳ ಮಧ್ಯದಲ್ಲಿ ಪಂಚರಾತ್ರವು ಶ್ರೇಷ್ಠವೆಂದು ಜ್ಞಾನಿಗಳು ಹೇಳುವರು; ಇದನ್ನು ನನ್ನ ಮುಖದಿಂದ ನಾರದಾದಿ ಮಹರ್ಷಿಗಳು ಶ್ರವಣಮಾಡಿ, ನನ್ನ ಭಕ್ತರಲ್ಲಿ ಮಾತ್ರ (ವಿಷ್ಣುಭಕ್ತರಿಗೆ ಮಾತ್ರ) ಪ್ರಕಾಶಪಡಿಸುತ್ತಾರೆ; ನಾರದನಿಂದ ಸನಕಾದಿಗಳು ಸಹ ಪಂಚರಾತ್ರವನ್ನು ಆದರದಿಂದ ಶ್ರವಣಮಾಡುತ್ತಾರೆ (೩೨-೩೪). ಮುಂದೆ ಹುಟ್ಟಲಿರುವ ನನ್ನ ಭಕ್ತರೆಲ್ಲರೂ ಯೋಗ್ಯ

ಅನ್ಯೇಷಾಂ–ಇತರ ಎಲ್ಲ ಆಗಮಾನಾಂ–ಆಗಮಗಳ, ವಕ್ತಾರಃ–ವಕ್ತೃಗಳು (ಹೇಳುವವರು–ಪ್ರವರ್ತಕರು), ಅನ್ಯೇ–ಇತರರು (ರುದ್ರಾದಿಗಳು), ಭವಂತಿ ಅಪಿ–(ನನ್ನ ಆಜ್ಞೆಯಿಂದಲೇ) ಆಗುತ್ತಾರೆ; ಕೃತ್ಸ್ನಸ್ಯ–ಪೂರ್ಣವಾದ (ಸಕಲ), ಪಾಂಚರಾತ್ರಸ್ಯ– ಪಂಚರಾತ್ರಾಗಮದ, ವಕ್ತಾ–ವಕ್ತಾರನು (ಪ್ರವರ್ತಕನು–ಉಪದೇಶಕನು), ಸ್ವಯಂ–ಸಾಕ್ಷಾತ್ತಾಗಿ, ಅಹಂ ಏವ–ನಾನೇ ಆಗಿರುವೆನು; ಹಿ–ಇದು ಪ್ರಸಿದ್ಧವು; ಅತಃ ಹಿ– ಆದ್ದರಿಂದಲೇ, ಸರ್ವಶಾಸ್ತ್ರೇಷು–ಸಕಲಶಾಸ್ತ್ರಗಳಲ್ಲಿ (ಆಗಮಗಳಲ್ಲಿ), ಏತತ್–ಈ ಪಂಚರಾತ್ರಾಗಮವು, ಪರಂ–ಶ್ರೇಷ್ಠವೆಂದು, ನಿಗದ್ಯತೇ–(ಜ್ಞಾನಿಗಳಿಂದ) ಹೇಳಲ್ಪಡುತ್ತದೆ; ಮನ್ಮುಖಾದೇವ–ನನ್ನ ಮುಖದಿಂದಲೇ, ನಾರದಾದ್ಯಾಃ–ನಾರದನೇ ಮೊದಲಾದ, ಮಹರ್ಷಯಃ–ಮಹರ್ಷಿಗಳು (ಜ್ಞಾನಿಶ್ರೇಷ್ಠರು), ಸಂಶ್ರುತ್ಯ–ಭಕ್ತಿಪೂರ್ವಕ ಶ್ರವಣ ಮಾಡಿ (ಅರ್ಥಜ್ಞಾನಪೂರ್ವಕ ಕೇಳಿ ತಿಳಿದು), ಮದ್ಭಕ್ತೇಷು ಏವ–ನನ್ನ ಭಕ್ತರಲ್ಲಿಯೇ (ವಿಷ್ಣುಭಕ್ತರಿಗೆ ಮಾತ್ರ), ಅನ್ಯಥಾ ನ–ಬೇರೆಯವರಿಗೆ ಅಲ್ಲವೇ ಅಲ್ಲ ಪ್ರಕಾಶಯಿಷ್ಯಂತಿ–(ಪಂಚರಾತ್ರಾಗಮವನ್ನು) ಪ್ರಕಾಶಗೊಳಿಸುತ್ತಾರೆ; ನಾರದಾತ್–ನಾರದನಿಂದ, ಸನಕಾದ್ಯಾಶ್ಚ– ಸನಕಾದಿಗಳು ಸಹ, ಪಾಂಚರಾತ್ರಕಂ–ಪಂಚರಾತ್ರಾಗಮವನ್ನು ಶೃಣ್ವಂತಿ– ಶ್ರವಣಮಾಡುತ್ತಾರೆ.

ಭವಿಷ್ಯಂತೋಽಪಿ ಮೇ ಭಕ್ತಾಃ ಕರಿಷ್ಯಂತ್ಯೇವಮೇವ ಹಿ ।
ಪ್ರಹ್ಲಾದಧ್ರುವಬಲ್ಯಾದ್ಯಾ ವಸಿಷ್ಠಾದ್ಯಾ ಮಹರ್ಷಯಃ ॥ ೩೫ ॥

ಸ್ವಾಯಂಭುವಾದ್ಯಾ ಮನವೋ ಹ್ಯನ್ಯೇ ತದ್ವಂಶಜಾಸ್ತಥಾ ।
ಮಹರ್ಷಯಸ್ತಥಾ ಪುಣ್ಯಾಃ ಪುಣ್ಯಾ ರಾಜರ್ಷಯಃ ಪರೇ ॥ ೩೬ ॥

---

ಗುರುಗಳಿಂದ ಪಂಚರಾತ್ರವನ್ನು ಶ್ರವಣಮಾಡಿ, ಆ ಮಾರ್ಗದಿಂದ ನನ್ನನ್ನು ಆರಾಧಿಸುವರೆಂಬಲ್ಲಿ ಸಂಶಯವಿಲ್ಲ; ಪ್ರಹ್ಲಾದ, ಧ್ರುವ, ಬಲಿ ಮೊದಲಾದವರೂ, ವಸಿಷ್ಠಾದಿ ಮಹರ್ಷಿಗಳೂ, ಸ್ವಾಯಂಭುವಾದಿ ಮನುಗಳೂ ಮತ್ತು ಅವರ ವಂಶಜರೂ, ಮತ್ತು ಇತರ ಪುಣ್ಯಶಾಲಿಗಳಾದ ಮಹರ್ಷಿಗಳೂ ಮತ್ತು ರಾಜರ್ಷಿಗಳೂ ವಿಭೀಷಣಾದಿ ಭಕ್ತರೂ, ಅಷ್ಟೇಕೆ! ಬ್ರಹ್ಮರುದ್ರಾದಿದೇವತೆಗಳೂ ಪಂಚರಾತ್ರೋಕ್ತ ವಿಧಾನದಿಂದಲೇ ನನ್ನನ್ನು ಆರಾಧಿಸಿ ನನ್ನನ್ನು ಹೊಂದಿರುವರು[1] (೩೫-೩೬). ಉಪನಯನ ಸಂಸ್ಕಾರವು

---

1. ಸೃಷ್ಟಿಗಾಗಿ ಅವಶ್ಯಕವಾದ ಪರಿಪೂರ್ಣ ಸರ್ವಜ್ಞತ್ವವನ್ನೂ ಚಿತ್ತಸ್ವಾಸ್ಥ್ಯವನ್ನೂ ದೊರಕಿಸಲು ಶ್ರೀವಿಷ್ಣುವು ಬ್ರಹ್ಮದೇವನಿಗೆ ಉಪದೇಶ ಮಾಡುತ್ತಿರುವ ಭಾಗದಲ್ಲಿ, ಪ್ರಹ್ಲಾದಾದಿಗಳ, ಮತ್ತು ಬ್ರಹ್ಮರುದ್ರಾದಿಗಳ ಪ್ರಸಕ್ತಿ ಬಂದಿರುವುದನ್ನು ಹಿಂದಿನ ಬ್ರಹ್ಮಕಲ್ಪದ ಸನಾಮಕಭಕ್ತರೂ, ದೇವತೆಗಳೂ ಇಲ್ಲಿ ವಿವಕ್ಷಿತರೆಂದು ತಿಳಿಯಬೇಕು. ಪ್ರತಿಕಲ್ಪದಲ್ಲಿ ಸಮಾನನಾಮವುಳ್ಳ ಬ್ರಹ್ಮಾದಿ ದೇವತೆಗಳು ಇರುವರೆಂಬುದು ಶಾಸ್ತ್ರನಿರ್ಣೀತವಿಷಯವಾಗಿದೆ. ಬ್ರಹ್ಮಸೂತ್ರಗಳ ಅಧ್ಯಾಯ ೧-ಪಾದ ೩-ಅಧಿಕರಣ ೮ರಲ್ಲಿ 'ಓಂ ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್

**ವಿಭೀಷಣಾದ್ಯಾಃ ಸರ್ವೇಽಪಿ ಬ್ರಹ್ಮರುದ್ರಾದಿದೇವತಾಃ ।**
**ಆರಾಧ್ಯ ಪಂಚರಾತ್ರೇಣ ವಿಧಿನಾ ಮಾಂ ಪ್ರಪೇದಿರೇ ॥ ೩೭ ॥**

ಭವಿಷ್ಯಂತಃ-ಮುಂದೆ ಬರಲಿರುವ, ಮೇ-ನನ್ನ ಭಕ್ತಾಃ ಅಪಿ-ಭಕ್ತರೂ ಸಹ, ಏವಮೇವ-ಹೀಗೆಯೇ, ಕರಿಷ್ಯಂತಿ ಹಿ-ಮಾಡುವರೆಂಬಲ್ಲಿ ಸಂದೇಹವಿಲ್ಲ ಪ್ರಹ್ಲಾದ ಧ್ರುವ ಬಲ್ಯಾದ್ಯಾಃ-ಪ್ರಹ್ಲಾದ, ಧ್ರುವ, ಬಲಿ ಮೊದಲಾದವರು, ವಸಿಷ್ಠಾದ್ಯಾಃ ಮಹರ್ಷಯಃ-ವಸಿಷ್ಠಾದಿಮಹರ್ಷಿಗಳು, ಸ್ವಾಯಂಭುವಾದ್ಯಾಃ-ಸ್ವಾಯಂಭುವನೇ ಮೊದಲಾದ, ಮನವಃ-ಮನ್ವಂತರಾಧಿಪತಿಗಳು, ತಥಾ-ಹಾಗೂ, ತದ್ವಂಶಜಾಃ-ಅವರ (ಆ ಮನುಗಳ) ವಂಶದಲ್ಲಿ ಹುಟ್ಟಿದವರಾದ, ಅನ್ಯೇ-ಇತರರೂ, ತಥಾ-ಮತ್ತು ಪುಣ್ಯಾಃ-ಪುಣ್ಯವಂತರಾದ, ಮಹರ್ಷಯಃ-ಮಹರ್ಷಿಗಳು, ಪರೇ-ಇತರರಾದ, ಪುಣ್ಯಾಃ-ಪುಣ್ಯಶಾಲಿಗಳಾದ, ರಾಜರ್ಷಯಃ-ರಾಜರ್ಷಿಗಳೂ, ವಿಭೀಷಣಾದ್ಯಾಃ-ವಿಭೀಷಣನೇ ಮೊದಲಾದ, ಸರ್ವೇ-ಎಲ್ಲ ಭಕ್ತರೂ, ಬ್ರಹ್ಮರುದ್ರಾದಿದೇವತಾಃ-ಬ್ರಹ್ಮರುದ್ರಾದಿದೇವತೆಗಳೂ, ಪಂಚರಾತ್ರೇಣ-ಪಂಚರಾತ್ರದ (ಪಂಚರಾತ್ರೋಕ್ತವಾದ), ವಿಧಿನಾ-ಮಾರ್ಗದಿಂದ (ವಿಧಿಸಲ್ಪಟ್ಟಂತೆ), ಆರಾಧ್ಯ-ಸೇವಿಸಿ (ಪೂಜಿಸಿ), ಮಾಂ-ನನ್ನನ್ನು ಪ್ರಪೇದಿರೇ-ಹೊಂದಿದರು.

**ಉಪನೀತಾ ದ್ವಿಜಾಃ ಸರ್ವೇ ವೇದೇಷ್ವಧಿಕೃತಾ ಮತಾಃ ।**
**ತಂತ್ರೇಷು ದೀಕ್ಷಿತಾ ಏವ ಪ್ರೋಚ್ಯಂತೇ ಹ್ಯಧಿಕಾರಿಣಃ ॥ ೩೮ ॥**

ಉಪನೀತಾಃ-ಉಪನಯನ ಸಂಸ್ಕಾರವನ್ನು ಹೊಂದಿದ, ಸರ್ವೇ-ಎಲ್ಲ ದ್ವಿಜಾಃ-ದ್ವಿಜರೂ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ), ವೇದೇಷು-ವೇದಗಳಲ್ಲಿ (ಅಧ್ಯಯನ-ವೇದೋಕ್ತ ಕರ್ಮಾನುಷ್ಠಾನಗಳಲ್ಲಿ), ಅಧಿಕೃತಾಃ-ಅಧಿಕಾರವುಳ್ಳವರೆಂದು, ಮತಾಃ-ಸಂಮತರಾಗಿದ್ದಾರೆ (ಹೇಳಲ್ಪಟ್ಟಿದ್ದಾರೆ-ಗ್ರಹಿಸಲ್ಪಟ್ಟಿದ್ದಾರೆ); ತಂತ್ರೇಷು-ತಂತ್ರಗಳಲ್ಲಿ

---

ದ್ವಿಜರಿಗೆ ವೇದಾಧಿಕಾರವನ್ನು ದೊರಕಿಸುತ್ತದೆ; ಆದರೆ ತಂತ್ರೋಕ್ತ ಪೂಜಾದಿ ಕರ್ಮಾನುಷ್ಠಾನಗಳ ವಿಷಯದಲ್ಲಿ ವಿಧಿಪೂರ್ವಕ ದೀಕ್ಷೆಯನ್ನು ಪಡೆದವರು ಮಾತ್ರ ಅಧಿಕಾರಿಗಳಾಗುತ್ತಾರೆ (೩೮). ಬಾಹ್ಯ ಮತ್ತು ಅಂತರವೆಂದು ದೀಕ್ಷೆಯು ಎರಡು

---

ಸ್ಮೃತೇಶ್ಚ ಓಂ' ಎಂಬ ಸೂತ್ರವು ಈ ಪ್ರಮೇಯವನ್ನು ನಿರ್ಣಯಿಸುತ್ತದೆ. ದೇವತೆಗಳು, ಅಸುರರು ಪ್ರತಿಮನ್ವಂತರದಲ್ಲಿ ಅವೇ ಇಂದ್ರ ಪ್ರಹ್ಲಾದಾದಿ ನಾಮಗಳುಳ್ಳ ಜೀವರು ಇರುತ್ತಾರೆಂದು ಹೇಳಲಾಗಿದೆ.

'ದೇವಾಸುರಾದಯಃ ಕ್ಷತ್ತಃ ಕಲ್ಪೇಷ್ವಿನ್ ಯೇ ಪ್ರಕೀರ್ತಿತಾಃ ।
ತ ಏವ ನಾಮರೂಪಾಭ್ಯಾಂ ಆಸನ್ ಮನ್ವಂತರಾಂತರೇ ॥ (ಭಾಗ)

ಏವಂ ಚ ವಿಷ್ಣುಭಕ್ತರೆಲ್ಲರೂ, ಎಲ್ಲ ಕಲ್ಪಗಳಲ್ಲಿ ಪಂಚರಾತ್ರವಿಧಿಗಳಿಂದಲೇ ಶ್ರೀ ವಿಷ್ಣುವನ್ನು ಆರಾಧಿಸಿ, ಮುಕ್ತರಾಗುವರೆಂದು ಹೇಳಲಾಗಿದೆ.

(ಪಂಚರಾತ್ರಾದಿ ಸ್ಮೃತ್ಯುಕ್ತ ಪೂಜಾದಿಗಳಲ್ಲಿ), ದೀಕ್ಷಿತಾಃ ಏವ-ದೀಕ್ಷೆಯನ್ನು ಹೊಂದಿರುವವರು ಮಾತ್ರವೇ, ಅಧಿಕಾರಿಣಃ-ಅಧಿಕಾರಿಗಳೆಂದು, ಪ್ರೋಚ್ಯಂತೇ ಹಿ-ಹೇಳಲ್ಪಡುವರಷ್ಟೆ

**ದೀಕ್ಷಾ ಹಿ ದ್ವಿವಿಧಾ ಪ್ರೋಕ್ತಾ ಬಾಹ್ಯಾಭ್ಯಂತರಭೇದತಃ ।**
**ಜ್ಞಾನಿನಾಮುಭಯಂ ತತ್ರ ಬಾಹ್ಯೋವಾಽಜ್ಞಾನಿನಾಂ ಭವೇತ್ ॥ ೬೯ ॥**

ದೀಕ್ಷಾ ಹಿ-ದೀಕ್ಷೆಯೆಂಬುದಾದರೋ, ಬಾಹ್ಯಾಭ್ಯಂತರಭೇದತಃ-'ಬಾಹ್ಯ' ಮತ್ತು 'ಅಂತರ'ಗಳೆಂಬ ಭೇದದಿಂದ, ದ್ವಿವಿಧಾ-ಎರಡು ಪ್ರಕಾರವೆಂದು, ಪ್ರೋಕ್ತಾ-ಹೇಳಲಾಗಿದೆ; ತತ್ರ-ದ್ವಿವಿಧ ದೀಕ್ಷೆಗಳಲ್ಲಿ ಜ್ಞಾನಿನಾಂ-ಜ್ಞಾನಿಗಳಿಗೆ, ಉಭಯಂ-ಎರಡೂ ದೀಕ್ಷೆಗಳೂ, ವಾ-ಮತ್ತು ಬಾಹ್ಯಾಃ-ಬಾಹ್ಯಮಾತ್ರವು, ಅಜ್ಞಾನಿನಾಂ-ಅಜ್ಞಾನಿಗಳಿಗೂ, ಭವೇತ್-ಉಂಟು (ಅನ್ವಯಿಸುತ್ತದೆ).

**ಅಯಂ ಸರ್ವೇಷ್ಟದಾತಾ ಮೇ ಸರ್ವಾನಿಷ್ಟನಿವಾರಕಃ ।**
**ಸರ್ವೋತ್ತಮೋಽಯಮೇವೈಕಸ್ತದೀಯೋಽಹಂ ಸ ಮೇ ಪತಿಃ ॥ ೭೦ ॥**

**ಇತಿಜ್ಞಾನಂ ನಿಶ್ಚಿತಂ ಯತ್ ಸಾ ದೀಕ್ಷಾಭ್ಯಂತರಾ ಮತಾ ।**
**ನಾಮಚಿಹ್ನಾದಿನಾ ದೇಹೇ ವಹ್ನಿನಾ ವಾ ಮೃದಾಂಕನಂ ॥ ೭೧ ॥**

**ಸಾ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಾಂ ಜ್ಞಾನಿನಾಮಪಿ ।**
**ಶಿಶವಃ ಪಶವೋಽನ್ನಾನಿ ಪಾತ್ರಾಣ್ಯಾಭರಣಾನಿ ಚ ॥ ೭೨ ॥**

---

ವಿಧವಾಗಿರುತ್ತದೆ; ಅದರಲ್ಲಿ ಜ್ಞಾನಿಗಳಿಗೆ ಎರಡೂ ದೀಕ್ಷೆಗಳು ಅವಶ್ಯಕವು; ಅಜ್ಞಾನಿಗಳಿಗೆ ಬಾಹ್ಯಮಾತ್ರವೆಂದೂ ಹೇಳಲಾಗಿದೆ (೬೯). ಶ್ರೀವಿಷ್ಣುವೇ ನನ್ನ ಸರ್ವಾಭೀಷ್ಟಗಳನ್ನು ಕೊಡುವವನು—ಆತನೇ ನನ್ನ ಸರ್ವ ಅನಿಷ್ಟಗಳನ್ನು ಪರಿಹರಿಸುವವನು; ಸರ್ವೋತ್ತಮನಾದವನು ಆತನೊಬ್ಬನೇ—ಆತನಿಗೆ ಸಮರೂ ಅಧಿಕರೂ ಯಾರೂ ಯಾವ ಕಾಲದಲ್ಲಿಯೂ ಇಲ್ಲವೇ ಇಲ್ಲ; ನಾನು ಆತನ ಪರಿವಾರದಲ್ಲಿರುವ ಆತನ ನಿತ್ಯಸೇವಕನು; ಆತನೇ ನನ್ನ ಸ್ವಾಮಿಯು; ಎಂಬ ನಿಶ್ಚಯಜ್ಞಾನವೇ, 'ಅಂತರದೀಕ್ಷೆ' ಎನಿಸುತ್ತದೆ.[1] ಶ್ರೀ ವಿಷ್ಣುನಾಮಗಳನ್ನು ಮತ್ತು ಆತನ ಚಕ್ರ ಮೊದಲಾದ ಚಿಹ್ನೆಗಳನ್ನು ತಪ್ತಮುದ್ರೆಗಳಿಂದ, ಮತ್ತು ಗೋಪಿ ಚಂದನಾದಿ ಮೃತ್ತಿಕೆಯಿಂದ, ದೇಹದಲ್ಲಿ

1. ಅಂತರದೀಕ್ಷೆಯು ಜ್ಞಾನಿಗಳಿಗೆ (ಪರೋಕ್ಷಜ್ಞಾನಿಗಳಿಗೆ) ಆವಶ್ಯಕ. ಅಜ್ಞಾನಿಗಳಿಗೆ—ಶಾಸ್ತ್ರಾವಲೋಕನಾದಿ ಅಶಕ್ತರಿಗೆ ಬಾಹ್ಯದೀಕ್ಷೆಯು ಪುಣ್ಯ (ಜ್ಞಾನ) ಸಾಧಕವಾಗುತ್ತದೆ. ಈ ಬಾಹ್ಯದೀಕ್ಷೆಯು ಜ್ಞಾನಿಗಳಿಗೂ ಅತ್ಯವಶ್ಯಕ.

**ರಥಧ್ವಜಪತಾಕಾದಿ ಸರ್ವಮಜ್ಞಾನಮುಚ್ಯತೇ ।**
**ಏತೇಷಾಂ ಹಿ ಮದೀಯತ್ವಜ್ಞಾಪನಾಯ ಲಿಖೇತ್ತ್ವಯಮ್ ॥ ೪೩ ॥**

ಮೇ–ನನಗೆ, ಸರ್ವೇಷ್ಟದಾತಾ–ಸಕಲಾಭೀಷ್ಟಗಳನ್ನು ಕೊಡುವವನೂ, ಸರ್ವಾನಿಷ್ಟ ನಿವಾರಕಃ–ಸಕಲ ಅನಿಷ್ಟಗಳನ್ನು ಪರಿಹರಿಸುವವನೂ, ಅಯಂ–ಈತನೇ (ಶ್ರೀವಿಷ್ಣುವೇ); ಅಯಂ ಏವ ಏಕಃ–ಈತನೊಬ್ಬನೇ, ಸರ್ವೋತ್ಕೃಷ್ಟಃ–ಸರ್ವೋತ್ತಮನು, ಅಹಂ–ನಾನು, ತದೀಯಃ–ಆತನವನು (ಅವನ ಭೃತ್ಯನು); ಸಃ–ಆತನೇ, ಮೇಪತಿಃ–ನನ್ನ ಒಡೆಯನು; ಇತಿ ಜ್ಞಾನಂ–ಹೀಗೆಂಬ ಜ್ಞಾನವು, ಯತ್ ನಿಶ್ಚಿತಂ–ನಿಶ್ಚಿತವಾದರೆ, ಸಾದೀಕ್ಷಾ–ಆ ದೀಕ್ಷೆಯು (ಮನೋನಿಶ್ಚಯವು), ಅಭ್ಯಂತರಾ–ಅಂತರದೀಕ್ಷೆಯೆಂದು, ಮತಾ–ತಿಳಿಯಲಾಗುತ್ತದೆ; ನಾಮ ಚಿಹ್ನಾದಿನಾ–ನಾಮ, ಚಿಹ್ನೆ ಮೊದಲಾದ್ದರಿಂದ (ನಾರಾಯಣಾದಿ ನಾಮ, ಚಕ್ರಾದಿ ಚಿಹ್ನೆಗಳಿಂದ), ವಹ್ನಿನಾ–ಅಗ್ನಿಯಿಂದ, ಮೃದಾ ವಾ–ಅಥವಾ (ಮತ್ತು), ಮೃತ್ತಿಕೆಯಿಂದ, ದೇಹೇ–ದೇಹದಲ್ಲಿ, ಅಂಕನಂ–ಗುರ್ತಿಸಿಕೊಳ್ಳುವುದು, ಸಾ ದೀಕ್ಷಾ–ಆ ದೀಕ್ಷೆಯು, ಬಾಹ್ಯಾ–ಬಾಹ್ಯದೀಕ್ಷೆಯೆಂದು, ಪ್ರೋಚ್ಯತೇ–ಹೇಳಲಾಗುತ್ತದೆ; ಅಜ್ಞಾನಾಂ–ಅಜ್ಞರಿಗೂ, ಜ್ಞಾನಿನಾಂ ಅಪಿ–ಜ್ಞಾನಿಗಳಿಗೂ ಸಹ, (ಸಾ ದೀಕ್ಷಾ ಪ್ರೋಚ್ಯತೇ–ಆ ಬಾಹ್ಯದೀಕ್ಷೆಯು ವಿಹಿತವಾಗಿದೆ). ಶಿಶವಃ–ಮಕ್ಕಳು, ಪಶವಃ–ಪಶುಗಳು, ಅನ್ನಾನಿ–ಧಾನ್ಯಾದಿ ಆಹಾರ ವಸ್ತುಗಳು, ಪಾತ್ರಾಣಿ–ಪಾತ್ರೆಗಳು, ಚ–ಮತ್ತು ಆಭರಣಾನಿ–ಆಭರಣಗಳೂ, ರಥ ಧ್ವಜಪತಾಕಾದಿ–ರಥ, ಧ್ವಜ, ಪತಾಕೆಗಳೇ ಮೊದಲಾದ ವಾಹನಪರಿಕರಗಳೂ, ಸರ್ವಂ–ಈ ಎಲ್ಲವೂ, ಅಜ್ಞಾನಂ ಉಚ್ಯತೇ–'ಅಜ್ಞಾನ'ವೆಂದು ಹೇಳಲ್ಪಡುತ್ತದೆ; ಏತೇಷಾಂ–ಇವುಗಳ, ಮದೀಯತ್ವಜ್ಞಾಪನಾಯ–ನನ್ನವೆಂಬುವುದರ ಜ್ಞಾಪಕಕ್ಕಾಗಿ (ಈ

---

ಗುರ್ತಿಸಿಕೊಳ್ಳುವುದು, ಬಾಹ್ಯದೀಕ್ಷೆಯು; ಇದು ಜ್ಞಾನಿಗಳಿಗೂ ಅಜ್ಞಾನಿಗಳಿಗೂ, ಉಭಯರಿಗೂ ಆವಶ್ಯಕವು (ವಿಹಿತವಾಗಿದೆ); 'ಅಜ್ಞಾನ' ಶಬ್ದದಿಂದ, ಶಿಶುಗಳು, ಹಸು ಮೊದಲಾದ ಪಶುಗಳು, ಧಾನ್ಯಾದಿಗಳು, ಪಾತ್ರೆಗಳು, ಆಭರಣಗಳು, ರಥ ಧ್ವಜ ಪತಾಕಾದಿಗಳೂ, ವಿವಕ್ಷಿತವೆಂದು ತಿಳಿದು, ಅವೆಲ್ಲವೂ ಶ್ರೀವಿಷ್ಣುವಿನ ಸ್ವಾಮ್ಯಕ್ಕೆ ಒಳಪಟ್ಟುವೆಂಬುದರ ಜ್ಞಾಪಕಾರ್ಥವಾಗಿ, ಅವುಗಳ ಮೇಲೆ ಸಹ ಶ್ರೀವಿಷ್ಣುವಿನ ನಾಮಚಿಹ್ನೆಗಳನ್ನು ಲೇಖಿಸಬೇಕು (೪೦-೪೩). ವಿಷ್ಣುಭಕ್ತರಲ್ಲಿಯೂ ವಿಶೇಷವಾಗಿ, ದೀಕ್ಷಿತನಾದ ಬ್ರಾಹ್ಮಣನು,[1] ವಿಷ್ಣುದೀಕ್ಷಾರಹಿತಳಾದ ಭಾರ್ಯಳಲ್ಲಿ ಪುತ್ರನನ್ನು ಉತ್ಪಾದಿಸಿದರೆ, ಆ ಪುತ್ರನು ಜಾರತ್ವದಿಂದ ಆ ಸ್ತ್ರೀಯು ಪಡೆದ ಪುತ್ರನಂತೆ

1. ಇಲ್ಲಿ ಪ್ರಸಕ್ತವಾಗಿರುವ ದೀಕ್ಷೆಯು ಈ ಹಿಂದೆ ಹೇಳಲಾದ ದ್ವಿವಿಧ ದೀಕ್ಷೆಗಳಲ್ಲಿ ಬಾಹ್ಯದೀಕ್ಷೆಯೆಂದು ತಿಳಿಯಬೇಕು. 'ವಿಷ್ಣುಭಕ್ತ ಮತ್ತು ಬ್ರಾಹ್ಮಣ' ಶಬ್ದಗಳು, ಸ್ವರೂಪವಿವಕ್ಷೆಯಿಂದ ಪ್ರಯೋಗಿಸಲ್ಪಟ್ಟಿಲ್ಲ, ಬ್ರಾಹ್ಮಣವರ್ಣದಲ್ಲಿ ಹುಟ್ಟಿ ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವರು ಇಲ್ಲಿ ವಿವಕ್ಷಿತರು.

ಎಲ್ಲವೂ ಶ್ರೀವಿಷ್ಣುವಿನ ಅಧೀನಗಳೇ–ಅವನ ಸ್ವಾಮಿತ್ವಕ್ಕೆ ಒಳಪಟ್ಟವುಗಳೇ ಎಂಬುದರ ಜ್ಞಾಪಕಾರ್ಥವಾಗಿ), ಸ್ವಯಂ–ತಾನೇ (ಇವೆಲ್ಲವುಗಳನ್ನು ಉಪಯೋಗಿಸುವ ವಿಷ್ಣುಭಕ್ತನು), ಲಿಖೇತ್–(ಅವುಗಳಮೇಲೆ, ವಿಷ್ಣುನಾಮ ಅಥವಾ ಅತನ ಚಿಹ್ನೆಗಳನ್ನು) ಚಿತ್ರಿಸಬೇಕು (ಬರೆಯಬೇಕು).

ವಿಷ್ಣುಭಕ್ತೋ ವಿಶೇಷೇಣ ಬ್ರಾಹ್ಮಣಶ್ಚ ವಿಶೇಷತಃ ।
ಅದೀಕ್ಷಿತಾಯಾಂ ಭಾರ್ಯಾಯಾಂ ದೀಕ್ಷಿತೋಜನಯೇತ್ಸುತಂ ॥ ೪೪ ॥

ಸ ಹಿ ಜಾರಜವತ್ ಪ್ರೋಕ್ತೋ ದೀಕ್ಷಿತಶ್ಚೇತ್ ವಿಶುಧ್ಯತಿ ।

ವಿಶೇಷೇಣ–ವಿಶೇಷವಾಗಿ (ಅನ್ಯಜೀವರ ವಿವಕ್ಷೆಯಿಂದ, ಅವಶ್ಯವಾಗಿ), ವಿಷ್ಣುಭಕ್ತಃ–ವಿಷ್ಣುಭಕ್ತನು (ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವನು), ಚ–ಅದರಲ್ಲಿಯೂ, ವಿಶೇಷತಃ–(ಅನ್ಯವರ್ಣದವರಿಂದ) ಹೆಚ್ಚಾಗಿ (ಅವಶ್ಯವಾಗಿ), ಬ್ರಾಹ್ಮಣಃ–ಬ್ರಾಹ್ಮಣನೇ, ದೀಕ್ಷಿತಃ–ವಿಷ್ಣುದೀಕ್ಷೆಯನ್ನು ಪಡೆದವನಾಗಿದ್ದು ಅದೀಕ್ಷಿತಾಯಾಂ–ವಿಷ್ಣುದೀಕ್ಷೆಯನ್ನು ಹೊಂದದಿರುವ, ಭಾರ್ಯಾಯಾಂ–ಹೆಂಡತಿಯಲ್ಲಿ ಸುತಂ–ಮಗನನ್ನು (ಪುತ್ರಸಂತಾನವನ್ನು), ಜನಯೇತ್–ಹುಟ್ಟಿಸಿದರೆ, ಸಃ–ಆ ಪುತ್ರನು, ಹಿ–ನಿಶ್ಚಯವಾಗಿ, ಜಾರಜವತ್–ಪರಪುರುಷ (ಜಾರ)ನಿಂದ ಹುಟ್ಟಿದವನಂತೆ ಎಂದು, ಪ್ರೋಕ್ತಃ–ಹೇಳಲ್ಪಡುತ್ತಾನೆ; ದೀಕ್ಷಿತಃ ಚೇತ್–ಆ ಸುತನು (ಪುತ್ರನು) ವಿಷ್ಣುದೀಕ್ಷೆಯನ್ನು ಹೊಂದಿದರೆ ಅಥವಾ ಶೈಶವಾವಸ್ಥೆಯಲ್ಲಿಯೇ ಹೊಂದಿಸಲ್ಪಟ್ಟರೆ), ವಿಶುಧ್ಯತಿ–ಶುದ್ಧನಾಗುತ್ತಾನೆ (ಯೋಗ್ಯ ಔರಸಪುತ್ರನೆನಿಸುತ್ತಾನೆ).

ತಸ್ಕರಾಶ್ಚ ಯಥಾ ಲೋಕೇ ಕಸ್ಯಚಿನ್ನೀಯತೇ ತಥಾ ॥ ೪೫ ॥

ರಾಜಕೀಯಾ ನ ತೈಃ ಸಾಕಂ ವ್ಯವಹಾರಂ ಹಿ ಕುರ್ವತೇ ।
ತಥಾ ದೀಕ್ಷಾವಿಹೀನಾ ಯೇ ನಿರ್ನಾಥಾಸ್ತಸ್ಕರಾ ಇವ ॥ ೪೬ ॥

---

ಅಪವಿತ್ರದೇಹಿಯಾಗುತ್ತಾನೆ; ಆ ಮಗನು ಯೋಗ್ಯಕಾಲದಲ್ಲಿ ವಿಷ್ಣುದೀಕ್ಷೆಯನ್ನು ಹೊಂದಿದರೆ, ಶುದ್ಧನಾಗಿ ಆ ಮಾತಾಪಿತೃಗಳ ಔರಸಪುತ್ರನಂತೆ ಪವಿತ್ರದೇಹವುಳ್ಳವನೆಂದು ಭಾವಿಸಲ್ಪಡುತ್ತಾನೆ (ಭಾವಿಸತಕ್ಕದ್ದು—ತಿಳಿಯತಕ್ಕದ್ದು) (೪೪). ರಾಜಾಶ್ರಯದಲ್ಲಿರುವ ಪ್ರಜೆಗಳು (ಸ್ವಾಮಿಭಕ್ತಿಯುಳ್ಳವರು), ರಾಜಾಜ್ಞೆಯನ್ನು ಅತಿಕ್ರಮಿಸಿ ಅನ್ಯರ ವಸ್ತುವನ್ನು ಅಪಹರಿಸುವ ಕಳ್ಳರೊಂದಿಗೆ ಹೇಗೆ ವ್ಯವಹರಿಸುವುದಿಲ್ಲವೋ ಹಾಗೆ ಸ್ವಾಮಿಭಕ್ತರಾದ ವಿಷ್ಣುಭಕ್ತರು, ಕಳ್ಳರಂತಿರುವ ದೀಕ್ಷಾರಹಿತ ವಿಷ್ಣುಭಕ್ತರೊಡನೆ ಯಾವ ವ್ಯವಹಾರವನ್ನೂ ಇಟ್ಟುಕೊಳ್ಳುವುದಿಲ್ಲ (ಇಟ್ಟುಕೊಳ್ಳಕೂಡದು—ಸ್ವಾಮಿಯ ಕೋಪಕ್ಕೆ ಗುರಿಯಾಗುತ್ತಾರೆ)(೪೫-೪೬). ಯಮದೂತರು ಎಳೆದೊಯ್ಯುತ್ತಿರುವ ಪಾಪಿಗಳನ್ನು ಯಾರೂ

ಯಥಾ–ಹೇಗೆ, ಲೋಕೇ–ಲೋಕದಲ್ಲಿ, ತಸ್ಕರಾಃ–ಕಳ್ಳರು, ಕಸ್ಯಚಿತ್–ಯಾರೊಬ್ಬನ (ಅನ್ಯರ) ವಸ್ತುವನ್ನು ನೀಯತೇ–ಒಯ್ಯುವರೋ, ತಥಾ–ಹಾಗೆ (ಕಳ್ಳರೊಂದಿಗೆ ಎಂಬಂತೆ), ತೈಃ ಸಾಕಂ–ಅವರೊಡನೆ, ರಾಜಕೀಯಾಃ–ರಾಜಾನುವರ್ತಿಗಳಾದ ಪ್ರಜೆಗಳು, ವ್ಯವಹಾರಂ–ಯಾವ ವ್ಯವಹಾರವನ್ನೂ ನ ಕುರ್ವತೇ–ಮಾಡುವುದಿಲ್ಲ (ವಿಷ್ಣುಭಕ್ತರು ಅದೀಕ್ಷಿತರೊಂದಿಗೆ ವ್ಯವಹರಿಸುವುದಿಲ್ಲ); ಯೇ–ಯಾರು, ದೀಕ್ಷಾವಿಹೀನಾಃ–ದೀಕ್ಷಾ ರಹಿತರೋ, (ಅವರು) ತಸ್ಕರಾಃ ಇವ–ಕಳ್ಳರಂತೆ, ನಿರ್ನಾಥಾಃ–ಅನಾಥರೇ ಸರಿ, ಸ್ವಾಮಿರಹಿತರು–ರಾಜಾಶ್ರಯವಿಲ್ಲದವರು.

**ಯಮದೂತೈರ್ನೀಯಮಾನಾನ್ನ ಕಶ್ಚಿದ್ವಾರಯೇಚ್ಚ ತಾನ್ ।**
**ಹನ್ಯಮಾನಾನ್ಯಥಾ ಚೋರಾನ್ನ ಹಿ ಕಶ್ಚಿನ್ನಿವಾರಯೇತ್ ॥ ೪೭ ॥**

ಯಮದೂತೈಃ–ಯಮದೂತರಿಂದ, ನೀಯಮಾನಾನ್–ಕರೆದೊಯ್ಯಲ್ಪಡುವವರನ್ನು ಕಶ್ಚಿತ್–ಯಾರೊಬ್ಬರೂ, (ಯಥಾ–ಹೇಗೆ) ನ ವಾರಯೇತ್–ಬಿಡಿಸುವುದಿಲ್ಲವೋ; ಯಥಾ–ಹೇಗೆ, ತಾನ್–ಆ, ಹನ್ಯಮಾನಾನ್–ಹೊಡೆಯಲ್ಪಡುವ (ಶಿಕ್ಷಿಸಲ್ಪಡುವ), ಚೋರಾನ್–ಕಳ್ಳರನ್ನು ಕಶ್ಚಿತ್–ಯಾರೊಬ್ಬರೂ, ನ ನಿವಾರಯೇತ್–ಬಿಡಿಸುವುದಿಲ್ಲವೋ (ತಡೆಯುವುದಿಲ್ಲವೋ); (ಹಾಗೆ ವಿಷ್ಣುದೀಕ್ಷಾರಹಿತರ ಸಹಾಯಕ್ಕೆ ಯಾರೂ ಹೋಗುವುದಿಲ್ಲ).

**ಪತ್ಯುಶ್ಚಿಹ್ನಂ ಯಥಾ ನಾರೀ ಕಂಠಸೂತ್ರಂ ಬಿಭರ್ತಿ ಹಿ ।**
**ಸನಾಥಾ ಸುಭಗಾ ತೇನ ಪೂತಗಾತ್ರಾ ಚ ಜಾಯತೇ ॥ ೪೮ ॥**

---

ಬಿಡಿಸಲೆತ್ನಿಸುವುದಿಲ್ಲ (ತಡೆಯುವುದಿಲ್ಲ); ಹಾಗೆಯೇ ಶಿಕ್ಷಿಸಲ್ಪಡುವ (ದಂಡಿಸಲ್ಪಡುವ) ಕಳ್ಳರನ್ನು ಯಾರೂ ತಡೆಯುವುದಿಲ್ಲ (ಹೀಗೆಯೇ ವಿಷ್ಣುದೀಕ್ಷೆಯನ್ನು ಪಡೆದವರು ಅದೀಕ್ಷಿತರ ಸಹಾಯಕ್ಕೆ ಹೋಗುವದಿಲ್ಲ)[1] (೪೭). ಸ್ತ್ರೀಯು ಕಂಠದಲ್ಲಿ ಮಂಗಲ ಸೂತ್ರವನ್ನು ಧರಿಸಿದ್ದರೆ, ಸಧವೆಯೆಂದು ಗುರ್ತಿಸಲ್ಪಡುತ್ತಾಳೆ; ಕಂಠಸೂತ್ರದಿಂದ, ಸನಾಥಳೂ ಸೌಭಾಗ್ಯಶಾಲಿನಿಯಾದ ಪವಿತ್ರ ದೇಹವುಳ್ಳವಳೂ ಎನಿಸುತ್ತಾಳೆ; ಅದೇ ಕಂಠಸೂತ್ರವಿಲ್ಲದ ತರುಣ ಸ್ತ್ರೀಯು (ಕಂಠಸೂತ್ರವಿಲ್ಲದವಳು), ವಿಧವೆಯೆನಿಸಿ, ಶುಭಕಾರ್ಯಗಳಲ್ಲಿ ಭಾಗವಹಿಸಲು ಅನರ್ಹಳಾಗಿ, ಬೇರೆ ವಿಧದಿಂದ ಸಹ ಅಪವಿತ್ರದೇಹವುಳ್ಳವಳಾಗುತ್ತಾಳೆ; ಹೀಗೆಯೇ ವಿಷ್ಣುದೀಕ್ಷಾಹೀನನಾದ ಮನುಷ್ಯನು

---

1. ವಿಷ್ಣು ದೀಕ್ಷೆಯನ್ನು ಸ್ವೀಕರಿಸಲು ಅರ್ಹರಾಗಿದ್ದೂ ಸಹ ದೀಕ್ಷೆಯನ್ನು ಪಡೆಯದವರು, ವಿಷ್ಣುವಿನ ಆಜ್ಞೆಯನ್ನು ಮೀರಿದವರೇ ಸರಿ—ವಿಷ್ಣುವಿಮುಖರೊಡನೆ ವಿಷ್ಣುಭಕ್ತರು ಸಹಕರಿಸುವುದು ಅಸಂಭವ.

**ತೇನೈವ ಹೀನಾ ವಿಧವಾ ನಿಂದಿತಾ ಮಂಗಲಾದಿಷು ।**
**ಅನ್ಯಥಾ ಚಾಪವಿತ್ರಾಂಗೀ ದೀಕ್ಷಾಹೀನಸ್ತಥಾ ನರಃ ॥ ೪೯ ॥**

ಯಥಾ–ಹೇಗೆ, ಪತ್ಯುಃ–ಪತಿಯ, ಚಿಹ್ನಂ ಹಿ–ಗುರುತೇ ಆದ, (ಸಧವಾ ಎಂಬುದನ್ನು ತೋರಿಸುವ), ಕಂಠಸೂತ್ರಂ–ಕಂಠಸೂತ್ರವನ್ನು(ಮಂಗಲಸೂತ್ರವನ್ನು), ನಾರೀ–ಸ್ತ್ರೀಯು, ಬಿಭರ್ತಿ–(ಕಂಠದಲ್ಲಿ) ಧರಿಸುವಳೋ, ತೇನ–ಅದರಿಂದ (ಹಾಗೆ ಧರಿಸುವುದರಿಂದ), ಸುಭಗಾ–ಭಾಗ್ಯಶಾಲಿಯಾದ, ಸನಾಥಾ–ಪತಿಯುಳ್ಳವಳೂ (ಸೌಭಾಗ್ಯವಂತಳೂ–) ಚ–ಮತ್ತು ಪೂತಗಾತ್ರಾ–ಪವಿತ್ರವಾದ ದೇಹವುಳ್ಳವಳೂ, ಜಾಯತೇ–ಆಗುವಳೋ; ಮತ್ತು ತೇನೈವ–ಆ ಕಂಠಸೂತ್ರದಿಂದ, ಹೀನಾ–ಹೀನಳಾದ (ಇಲ್ಲದವಳಾದ), ವಿಧವಾ–ವಿಧವೆಯು, ಮಂಗಲಾದಿಷು–ಮಂಗಲಕಾರ್ಯಗಳಲ್ಲಿ ನಿಂದಿತಾ–ಅಯೋಗ್ಯ (ಅನರ್ಹ)ಳೆಂದೆನಿಸಿ, ಚ–ಮತ್ತು ಅನ್ಯಥಾ–ಬೇರೆ ವಿಧದಿಂದ, ಅಪವಿತ್ರಾಂಗೀ–ಅಪವಿತ್ರದೇಹವುಳ್ಳವಳೂ ಆಗುವಳೋ, ತಥಾ–ಹಾಗೆ, ದೀಕ್ಷಾಹೀನಃ–ದೀಕ್ಷಾರಹಿತ ನಾದ, ನರಃ–ಮನುಷ್ಯನು, (ಶುಭಕಾರ್ಯಗಳಲ್ಲಿ ಅನರ್ಹನೂ, ಅಪವಿತ್ರದೇಹಿಯೂ, ಎಂದೆನಿಸುತ್ತಾನೆ).

**ದೀಕ್ಷಿತೋ ಲಭತೇ ಪೂಜಾಂ ಯಮಾದಪಿ ಬಿಭೇತಿ ನ ।**
**ನೃಪಾಮಾತ್ಯಃ ಕಥಂ ತ್ರಸ್ಯೇದನ್ಯಸ್ಮಾಂ ನೃಪಬಾಹ್ಯತಃ ॥ ೫೦ ॥**

ದೀಕ್ಷಿತಃ–ವಿಷ್ಣುದೀಕ್ಷೆಯನ್ನು ಪಡೆದವನು, ಪೂಜಾಂ–(ವಿಷ್ಣುಭಕ್ತರೆಲ್ಲರಿಂದ) ಪೂಜೆಯನ್ನು(ಸತ್ಕಾರವನ್ನು), ಲಭತೇ–ಹೊಂದುತ್ತಾನೆ; ಯಮಾತ್ ಅಪಿ–ಯಮನದೆಶೆಯಿಂದ ಸಹ, ನ ಬಿಭೇತಿ–ಹೆದರುವುದಿಲ್ಲ; ನೃಪಾಮಾತ್ಯಃ–ರಾಜಸಚಿವನು, ನೃಪಬಾಹ್ಯತಃ–ರಾಜಭಿನ್ನನಾದ, ಅನ್ಯಸ್ಮಾತ್–ಮತ್ತೊಬ್ಬನಿಂದ, ಕಥಂ–ಹೇಗೆ, ತ್ರಸ್ಯೇತ್–ಹೆದರುತ್ತಾನೆ (ಭಯಪಡುವುದೇ ಇಲ್ಲ).

---

ಶುಭಕರ್ಮಗಳನ್ನು ಆಚರಿಸಲು ಅಯೋಗ್ಯನಾಗುವನು; ಅವನ ದೇಹವನ್ನು ಅಪವಿತ್ರವೆಂದು, ಜ್ಞಾನಿಗಳು ತಿಳಿಯುತ್ತಾರೆ (೪೮-೪೯). ವಿಷ್ಣುದೀಕ್ಷೆಯನ್ನು ಪಡೆದವನು, ಸರ್ವವಿಷ್ಣುಭಕ್ತರಿಂದ ಯೋಗ್ಯ ಸತ್ಕಾರವನ್ನು ಪಡೆಯುತ್ತಾನೆ; ಆತನು ಯಮನಿಗೂ ಹೆದರುವುದಿಲ್ಲ; ಅಮಾತ್ಯನು ತನ್ನ ರಾಜನನ್ನು ಬಿಟ್ಟು ಅನ್ಯರಿಂದ ಭಯಪಡುವನೇ? (ಸರ್ವಥಾ ಇಲ್ಲ) (೫೦). ತನ್ನ ವರ್ಣ ಮತ್ತು ಆಶ್ರಮಕ್ಕೆ ಯೋಗ್ಯವಾದ ಕರ್ಮಗಳಲ್ಲಿ ನಿರತನಾಗಿ, ಸತ್ಯಭಾಷಿಯೂ, ಶುದ್ಧನೂ[1] ಆಗಿರುವವನು ಮಾತ್ರ, ವಿಷ್ಣುದೀಕ್ಷೆಯಿಂದ

---

1. ಕಾಯೇನ ಮನಸಾ ವಾಚಾ—ಎಂದರೆ, ದೇಹ, ಮನಸ್ಸು ಮಾತುಗಳಿಂದ ಏಕಪ್ರಕಾರವಾದ, ಶುದ್ಧವಾದ ನಡತೆಯುಳ್ಳವನು, ಶುಚಿಯು. ಈ ಮೂರು ತ್ರಿಕರಣಗಳೆನಿಸುತ್ತವೆ—ಯಾವುದೊಂದು ಕರ್ಮದ ಸಂಘಟನೆಗೆ ಸಾಧನಗಳು.

**ಸ್ವಸ್ವವರ್ಣಾಶ್ರಮಾಚಾರನಿರತಃ ಸತ್ಯವಾಕ್ ಶುಚಿಃ ।**
**ಸ ಏವ ಲಭತೇ ಸರ್ವಂ ದೀಕ್ಷಾಗ್ರಹಣಜಂ ಫಲಂ ॥ ೫೧ ॥**

(ಯಃ–ಯಾರು, ಸ್ವಸ್ವವರ್ಣಾಶ್ರಮಾಚಾರನಿರತಃ–ತನ್ನ ವರ್ಣ ಮತ್ತು ಆಶ್ರಮಗಳಿಗೆ ಯೋಗ್ಯವಾದ ಕರ್ಮಾನುಷ್ಠಾನದಲ್ಲಿ ನಿರತನಾಗಿರುವನೋ (ಆಸಕ್ತಿಯಿಂದ ಆಚರಿಸುವನೋ), ಸತ್ಯವಾಕ್–ಯಥಾರ್ಥ ಭಾಷಿಯೂ, ಶುಚಿಃ–(ತ್ರಿಕರಣ) ಶುದ್ಧಿಯುಳ್ಳವನೂ ಆಗಿರುವನೋ, ಸಃ ಏವ–ಆತನೇ, ದೀಕ್ಷಾಗ್ರಹಣಜಂ–ವಿಷ್ಣುದೀಕ್ಷೆಯನ್ನು ಸ್ವೀಕರಿಸುವುದರಿಂದ ಉತ್ಪನ್ನವಾಗುವ ಸರ್ವಂಫಲಂ–ಪೂರ್ಣಫಲವನ್ನು ಲಭತೇ–ಹೊಂದುತ್ತಾನೆ.

**ವಿಷ್ಣುದೀಕ್ಷಾಯುತೋ ಯೋಽಪಿ ವಿಷ್ಣುಭಕ್ತಿವಿವರ್ಜಿತಃ ।**
**ದೀಕ್ಷಾಫಲಂ ನ ತಸ್ಯಾಸ್ತಿ ದೀಕ್ಷಯಾ ನರಕಂ ವ್ರಜೇತ್ ॥ ೫೨ ॥**

ವಿಷ್ಣುದೀಕ್ಷಾಯುತಃ ಅಪಿ–ವಿಷ್ಣುದೀಕ್ಷೆಯುಳ್ಳವನಾದರೂ, ವಿಷ್ಣುಭಕ್ತಿವಿವರ್ಜಿತಃ–ವಿಷ್ಣುಭಕ್ತಿರಹಿತನಾದ, ತಸ್ಯ–(ಆ) ಪುರುಷನಿಗೆ, ದೀಕ್ಷಾಫಲಂ–ದೀಕ್ಷಾಸ್ವೀಕಾರದ ಫಲವು, ನ ಅಸ್ತಿ–ಇರುವುದಿಲ್ಲ (ದೊರೆಯುವುದಿಲ್ಲ); (ಕಿಂತು), ದೀಕ್ಷಯಾ–ದೀಕ್ಷೆಯಿಂದ, ನರಕವನ್ನು ವ್ರಜೇತ್–ಹೊಂದುತ್ತಾನೆ.

**ಸರ್ವಾಸಾಮಪಿ ದೀಕ್ಷಾಣಾಂ ವಿಷ್ಣುದೀಕ್ಷಾಧಿಕಾ ಮತಾ ।**
**ಯತಃ ಸರ್ವೇಶ್ವರೋ ವಿಷ್ಣುರ್ದೇವಾನಾಮಪಿ ದೇವತಾ ॥ ೫೩ ॥**

ಸರ್ವಾಸಾಂ ದೀಕ್ಷಾಣಾಂ ಅಪಿ–ವಿವಿಧಗಳಾದ ಎಲ್ಲ ದೀಕ್ಷೆಗಳ ಮಧ್ಯದಲ್ಲಿ ವಿಷ್ಣುದೀಕ್ಷಾ–ವಿಷ್ಣುದೀಕ್ಷೆಯು, ಅಧಿಕಾ–ಶ್ರೇಷ್ಠವೆಂದು, ಮತಾ–(ಜ್ಞಾನಿಗಳಿಂದ) ತಿಳಿಯಲ್ಪಡುತ್ತದೆ; ಯತಃ–ಏಕೆಂದರೆ, (ಯಾವಕಾರಣದಿಂದ), ವಿಷ್ಣುಃ–ಶ್ರೀವಿಷ್ಣುವೆ, ಸರ್ವೇಶ್ವರಃ–ಸರ್ವರ ಒಡೆಯನು (ಸರ್ವಸ್ವಾಮಿಯು), ಮತ್ತು ದೇವಾನಾಂ ಅಪಿ–(ಬ್ರಹ್ಮಾದಿ) ದೇವತೆಗಳಿಗೂ ಸಹ, ದೇವತಾ–ದೇವತೆಯು (ಆರಾಧ್ಯದೇವತೆಯಾಗಿರುವನು).

---

ಹುಟ್ಟುವ ಪೂರ್ಣಫಲವನ್ನು ಹೊಂದುತ್ತಾನೆ (೫೧). ವಿಷ್ಣುಭಕ್ತಿರಹಿತನಾದವನು, ವಿಷ್ಣುದೀಕ್ಷೆಯನ್ನು ಸ್ವೀಕರಿಸುವ ಮಾತ್ರದಿಂದ ಯಾವ ಫಲವನ್ನೂ ಹೊಂದುವುದಿಲ್ಲ; ಅಷ್ಟುಮಾತ್ರವಲ್ಲ, ಆ ಕಪಟದೀಕ್ಷೆಯಿಂದ ನರಕವನ್ನೇ ಹೊಂದುತ್ತಾನೆ (೫೨). ಎಲ್ಲ ದೀಕ್ಷೆಗಳಲ್ಲಿ ವಿಷ್ಣುದೀಕ್ಷೆಯು ಶ್ರೇಷ್ಠವು. ಏಕೆಂದರೆ, ಶ್ರೀವಿಷ್ಣುವೇ ಸಕಲ ದೇವತೆಗಳಿಗೆ ಆರಾಧ್ಯದೇವತೆಯು–ಸರ್ವಸ್ವಾಮಿಯು–ಸ್ವತಂತ್ರನಾಗಿ ಸರ್ವನಿಯಾಮಕನು (೫೩). ಶ್ರೀವಿಷ್ಣುಮಹಿಮೆಗಳ (ಆತನ ಪ್ರತಿ ಮಹಿಮೆಯೂ—ಜ್ಞಾನಾನಂದಾದಿ ಅನಂತಗುಣಗಳಲ್ಲಿ ಪ್ರತಿಯೊಂದೂ ಅನಂತವಾದುದರಿಂದ) ಕೊನೆಯನ್ನು (ಪೂರ್ಣವಾಗಿ) ತಿಳಿದವನು, ಹಿಂದೆ ಯಾರೂ ಹುಟ್ಟಲಿಲ್ಲ, ಈಗ ಯಾರೂ ಇಲ್ಲ, ಮುಂದೆ ಯಾರೂ

**ಯನ್ಮಹಿಮ್ನಃ ಪರಂ ಪಾರಂ ವೇತ್ತಾ ಜಾತೋ ನ ಚಾಸ್ತಿ ನ ।**
**ನ ಭವಿಷ್ಯತಿ ಕಶ್ಚಾಪಿ ಕುತಸ್ತಸ್ಯ ಸಮೋಧಿಕಃ ॥ ೫೪ ॥**

ಯನ್ಮಹಿಮ್ನಃ–ಯಾವ ಶ್ರೀವಿಷ್ಣುವಿನ ಮಹಿಮೆಯು, ಪರಂ ಪಾರಂ–ಅಂತ್ಯವನ್ನು (ಆ ಕಡೆಯ ತೀರವನ್ನು), ವೇತ್ತಾ–ತಿಳಿದವನು (ಕಂಡವನು), ನ ಜಾತಃ–(ಹಿಂದೆ) ಈವರೆಗೆ ಯಾರೂ ಹುಟ್ಟಲಿಲ್ಲ; ಚ–ಮತ್ತು ನ ಅಸ್ತಿ–ಈಗ ಇಲ್ಲ; ಕಶ್ಚಾಪಿ–ಯಾರೊಬ್ಬನು—ನ ಭವಿಷ್ಯತಿ (ಮುಂದೆಯೂ ಇರುವುದಿಲ್ಲ—ಶ್ರೀವಿಷ್ಣುವಿನ ಮಹಿಮೆಗಳನ್ನು ಯಾವುದೊಂದು ಮಹಿಮೆಯನ್ನಾಗಲಿ, ಪೂರ್ಣವಾಗಿ ತಿಳಿದವನು ತ್ರಿಕಾಲಗಳಲ್ಲಿ ಸಹ ಯಾರೊಬ್ಬನೂ ಇಲ್ಲವೇ ಇಲ್ಲ; (ಹೀಗಿರುವಾಗ) ತಸ್ಯ–ಆತನಿಗೆ (ಶ್ರೀವಿಷ್ಣುವಿನ), ಸಮಃ–ಸಮನೂ, ಅಧಿಕಃ–ಅಧಿಕನೂ, ಕುತಃ–ಎಲ್ಲಿಂದ ಬರಬೇಕು! (ಶ್ರೀವಿಷ್ಣುವು ಸಮಾಧಿಕರಹಿತನಾದ ಸರ್ವೋತ್ತಮನು).

**ಯಸ್ಯ ಸ್ಯಾದ್ವೈಷ್ಣವೀ ದೀಕ್ಷಾ ಸರ್ವೈರ್ಮಾನ್ಯಃ ಸ ದೀಕ್ಷಿತಃ ।**
**ಅವಜಾನಾತಿ ಯಸ್ತಂ ತು ಸೋವಜಾನಾತಿ ಕೇಶವಂ ॥ ೫೫ ॥**

ಯಸ್ಯ–ಯಾರಿಗೆ, ವೈಷ್ಣವೀದೀಕ್ಷಾ–ವಿಷ್ಣುದೀಕ್ಷೆಯು, ಸ್ಯಾತ್–ಆಗಿರುವುದೋ, ಸಃ ದೀಕ್ಷಿತಃ–ಆ ದೀಕ್ಷೆಯುಳ್ಳವನು, ಸರ್ವೈಃ–ಎಲ್ಲರಿಂದಲೂ, ಮಾನ್ಯಃ–ಗೌರವಿಸಲ್ಪಡಲು ಅರ್ಹನು; ಯಃ–ಯಾರು, ತಂ ತು–ಅವನನ್ನೇ, ಅವಜಾನಾತಿ–ಅವಮಾನ ಮಾಡುತ್ತಾನೋ (ತಿರಸ್ಕಾರಬುದ್ಧಿಯಿಂದ ಕೀಳಾಗಿ ಕಾಣುತ್ತಾನೋ), ಸಃ–ಆತನು, ಕೇಶವಂ–ಶ್ರೀವಿಷ್ಣುವನ್ನೇ, ಅವಜಾನಾತಿ–ಅಪಮಾನಗೊಳಿಸುತ್ತಾನೆ (ಶ್ರೀವಿಷ್ಣುವನ್ನೇ ಅಪಮಾನಗೊಳಿಸಿದಂತೆಯೇ ಸರಿ).

**ಅಂಕಿತಂ ಶಂಖಚಕ್ರಾದ್ಯೈರ್ವಿಷ್ಣುದೀಕ್ಷಾನ್ವಿತಂ ನರಂ ।**
**ಯೋ ನಿಂದತಿ ವಿಮೂಢಾತ್ಮಾ ಸ ದ್ವೇಷ್ಟಾ ವಿಷ್ಣುಮೇವ ಹಿ ॥ ೫೬ ॥**

---

ಜನಿಸುವುದಿಲ್ಲ—ಹೀಗಿರುವಾಗ, ಆತನಿಗೆ ಸಮನು ಮತ್ತೊಬ್ಬನು ಎಲ್ಲಿರುವನು? (ಇಲ್ಲವೇ ಇಲ್ಲ) ಅಧಿಕನೊಬ್ಬನನ್ನು ಎಲ್ಲಿ ತರಬೇಕು? (ತ್ರಿಕಾಲಗಳಲ್ಲಿ ಶ್ರೀವಿಷ್ಣುವೇ ಸಮಾಧಿಕರಹಿತನಾದ ಮಹಾಮಹಿಮನು) (೫೪). ವಿಷ್ಣುದೀಕ್ಷೆಯನ್ನು ಹೊಂದಿದ ಪುರುಷನು ಸರ್ವರಿಂದಲೂ ಪೂಜ್ಯನು (ಗೌರವಿಸಲ್ಪಡಲರ್ಹನು); ಯಾರು ಆತನನ್ನು (ಈ ದೀಕ್ಷಿತನನ್ನು) ಅಪಮಾನಗೊಳಿಸುವನೋ, ಆತನು ಶ್ರೀವಿಷ್ಣುವನ್ನೇ ಅಪಮಾನ ಗೊಳಿಸಿದ ಮಹಾದೋಷಿಯಾಗುತ್ತಾನೆ (೫೫). ಶಂಖಚಕ್ರಾದಿ ವಿಷ್ಣುಚಿಹ್ನೆಗಳನ್ನು ತನ್ನ ದೇಹದಲ್ಲಿ ಮುದ್ರಿಸಿಕೊಂಡ, ವಿಷ್ಣುದೀಕ್ಷಾವುಳ್ಳ ಮನುಷ್ಯನನ್ನು ನಿಂದಿಸುವವನು ಶ್ರೀವಿಷ್ಣುದ್ವೇಷಿಯೇ ಸರಿ (೫೬). ಭುಜದಲ್ಲಿ ತಪ್ತಚಕ್ರದ ಮುದ್ರೆಯನ್ನು (ಅಂಕಿತವನ್ನು)

ಶಂಖಚಕ್ರಾದ್ಯೈಃ–ಶಂಖ ಚಕ್ರ ಮೊದಲಾದವುಗಳಿಂದ, ಅಂಕಿತಂ–ಚಿಹ್ನಿತನಾದ (ಮುದ್ರಿತನಾದ), ವಿಷ್ಣುದೀಕ್ಷಾನ್ವಿತಂ–ವಿಷ್ಣುದೀಕ್ಷೆಯನ್ನು ಹೊಂದಿರುವ, ನರಂ–ಮನುಷ್ಯನನ್ನು ಯಃ–ಯಾರು, ನಿಂದತಿ–ನಿಂದಿಸುವನೋ, ಸಃ–ಆ, ವಿಮೂಢಾತ್ಮಾ–ಮೂರ್ಖನು, ವಿಷ್ಣುಂ ಏವ–ಶ್ರೀವಿಷ್ಣುವನ್ನೇ, ದ್ವೇಷ್ಟಿ ಹಿ–ದ್ವೇಷಿಸುವವನೇ ಸರಿ (ವಿಷ್ಣುದ್ವೇಷಿಯೇ ಸರಿ).

**ತಪ್ತಚಕ್ರಂ ಭುಜೇ ಯಸ್ಯ ವಿಪ್ರಾದೇರ್ಯಸ್ಯ ಕಸ್ಯ ವಾ ।**
**ವಿಷ್ಣೋರೇವ ಹಿ ಸಾ ಮೂರ್ತಿರ್ನಾವಮನ್ಯೇತ ಕರ್ಹಿಚಿತ್ ॥ ೫೭ ॥**

ಯಸ್ಯ–ಯಾವಾತನ, ಭುಜೇ–ಬಾಹುಗಳಲ್ಲಿ (ಭುಜದಲ್ಲಿ), ತಪ್ತಚಕ್ರಂ–ತಪ್ತಚಕ್ರ ಮುದ್ರೆಯೋ (ವಿಧ್ಯುಕ್ತರೀತಿಯಲ್ಲಿ ಅಗ್ನಿಯಲ್ಲಿ ದಹಿಸಲ್ಪಟ್ಟ ಚಕ್ರದಿಂದ, ಯೋಗ್ಯ ಅಧಿಕಾರಿಗಳಿಂದ ಭುಜದಲ್ಲಿ ಮುದ್ರಿತವಾದ ಚಿಹ್ನೆಯುಳ್ಳವನೋ), ವಿಪ್ರಾದೇಃ–ಬ್ರಾಹ್ಮಣಾದಿಗಳ, ಯಸ್ಯಕಸ್ಯವಾ–ಯಾರಾದರೊಬ್ಬನ, ಸಾ ಮೂರ್ತಿಃ–ಆ (ದೇಹರೂಪದ) ಪ್ರತಿಮೆಯು, ವಿಷ್ಣೋಃ ಏವ–ಶ್ರೀವಿಷ್ಣುವಿನದೇ (ಶ್ರೀವಿಷ್ಣುಪ್ರತಿಮೆಯೇ ಸರಿ); ಕರ್ಹಿಚಿತ್–ಎಂದಿಗೂ (ಯಾವ ಪ್ರಕಾರದಿಂದಲೂ), ನ ಅವಮನ್ಯೇತ–(ಆ ಪ್ರತಿಮೆಯನ್ನು) ಅವಮಾನಗೊಳಿಸಕೂಡದು.

**ನೀಚವರ್ಣೋಽಪಿ ಯೋ ವಿಷ್ಣುದೀಕ್ಷಾವಾನ್ ಸ ಹಿ ಬಂಧುವತ್ ।**
**ವಿನಾ ಪ್ರಣಾಮಂ ಮಾನ್ಯಃ ಸ ರಾಮಕೃಷ್ಣಾದಿನಾಮಭಿಃ ॥ ೫೮ ॥**

ಯಃ–ಯಾವನೊಬ್ಬನು, ನೀಚವರ್ಣೋಽಪಿ–ನೀಚವರ್ಣದವನಾದರೂ (ಕೀಳು ಜಾತಿಯವನಾದರೂ), ವಿಷ್ಣುದೀಕ್ಷಾವಾನ್–ವಿಷ್ಣುದೀಕ್ಷೆಯುಳ್ಳವನಾದರೆ, ಸಃ–ಆತನು, ಬಂಧುವತ್–ಬಂಧುವಿನಂತೆ; ಪ್ರಣಾಮಂ ವಿನಾ–ನಮಸ್ಕಾರ ವಿನಹ (ನಮಸ್ಕರಿಸುವುದನ್ನು ಬಿಟ್ಟು), ರಾಮಕೃಷ್ಣಾದಿನಾಮಭಿಃ–ರಾಮ, ಕೃಷ್ಣ ಮೊದಲಾದ ನಾಮೋಚ್ಚಾರಣಪೂರ್ವಕವಾಗಿ, ಸಃ–ಅವನು, ಮಾನ್ಯಃ–ಮಾನಿಸಲ್ಪಡಲರ್ಹನೇ ಸರಿ (ಗೌರವಿಸಲ್ಪಡಬೇಕು).

---

ಧರಿಸಿದ ಯಾವನೊಬ್ಬ ವ್ಯಕ್ತಿಯು, ಆತನು ಬ್ರಾಹ್ಮಣಾದಿ ವರ್ಣಗಳಲ್ಲಿ ಯಾರೇ ಆಗಲಿ, ಶ್ರೀವಿಷ್ಣುವಿನ ಪ್ರತಿಮೆಯೇ ಆಗಿರುವನು; ಈ ವಿಷ್ಣುಪ್ರತಿಮಾರೂಪದ ಮನುಷ್ಯನನ್ನು ಯಾವ ವಿಧದಿಂದಲೂ ಎಂದಿಗೂ ಅವಮಾನಗೊಳಿಸಕೂಡದು (೫೭). ವಿಷ್ಣುದೀಕ್ಷೆಯುಳ್ಳವನು ನೀಚವರ್ಣದವನಾದರೂ, ಆತನು ವಿಷ್ಣುಭಕ್ತರಿಗೆ ಬಂಧುವಿದ್ದಂತೆಯೇ ಸರಿ; ಆತನನ್ನು ರಾಮಕೃಷ್ಣಾದಿ ನಾಮೋಚ್ಚಾರಣಪೂರ್ವಕವಾಗಿ ಸತ್ಕರಿಸಿ ಗೌರವಿಸಬೇಕು (೫೮). ಶ್ರೇಷ್ಠವಾದ ಬ್ರಾಹ್ಮಣಜಾತಿಯಲ್ಲಿ ಹುಟ್ಟಿ ವೇದವೇದಾಂಗಪಾರಂಗತನಾಗಿ, ಸದಾಚಾರನಿಷ್ಠನಾಗಿದ್ದರೂ, ವಿಷ್ಣುದೀಕ್ಷಾರಹಿತನು, ದೇವಕಾರ್ಯ ಪಿತೃಕಾರ್ಯಗಳಲ್ಲಿ ಬಹಿಷ್ಕರಿಸಲ್ಪಡಬೇಕು; ಲೌಕಿಕದಲ್ಲಿ ಚೋರನಂತೆ,

**ಉಚ್ಚವರ್ಣೋಽಪಿ ಯೋ ವಿಪ್ರೋ ವೇದವೇದಾಂಗಪಾರಗಃ ।**
**ಸದಾಚಾರರತೋಽಪಿ ಸ್ಯಾದ್ವಿಷ್ಣುದೀಕ್ಷಾವಿವರ್ಜಿತಃ ॥ ೫೯ ॥**

**ಸ ಚೋರವದ್ಬಹಿಷ್ಕಾರ್ಯಸ್ತಸ್ಮೈ ದತ್ತಂ ಚ ನಿಷ್ಫಲಂ ।**
**ಪಾತ್ರಂ ಹಿ ಪರಮಂ ಪ್ರೋಕ್ತಂ ಹವ್ಯಕವ್ಯಾದಿತಃ ಸದಾ ॥ ೬೦ ॥**

**ಯಸ್ಯ ಸ್ಯಾದ್ವೈಷ್ಣವೀದೀಕ್ಷಾ ದತ್ತಂ ಭವತಿ ಚಾಕ್ಷಯಂ ।**

ಯಃ ವಿಪ್ರಃ-ಯಾವ ಬ್ರಾಹ್ಮಣನು, ಉಚ್ಚವರ್ಣಃ ಅಪಿ-ಉತ್ತಮ ವರ್ಣದವನಾದರೂ (ಶ್ರೇಷ್ಠ ಜಾತಿಯವನಾದರೂ), ವೇದವೇದಾಂಗಪಾರಗಃ-ವೇದವೇದಾಂಗ ಪಾರಂಗತನಾಗಿದ್ದು, ಸದಾಚಾರರತಃ ಅಪಿ-ಸದಾಚಾರವುಳ್ಳವನಾದರೂ, ವಿಷ್ಣುದೀಕ್ಷಾವಿವರ್ಜಿತಃ-ವಿಷ್ಣುದೀಕ್ಷಾರಹಿತನು, ಸ್ಯಾತ್-ಆದರೆ, ಸಃ-ಆತನು (ಬ್ರಾಹ್ಮಣನಾದರೂ), ಸದಾ-ಸರ್ವದಾ, ಹವ್ಯಕವ್ಯಾದಿತಃ-ಹವ್ಯಕವ್ಯಾದಿಗಳಿಂದ (ದೇವಪಿತೃಕಾರ್ಯಗಳಿಂದ), ಚೋರವತ್-ಕಳ್ಳನಂತೆ (ಕಳ್ಳನೊಂದಿಗೆ ಸಜ್ಜನರು ಯಾವ ವ್ಯವಹಾರವನ್ನೂ ಇಟ್ಟುಕೊಳ್ಳದಂತೆ), ಬಹಿಷ್ಕಾರ್ಯಃ-ಬಹಿಷ್ಕರಿಸಲ್ಪಡಬೇಕು (ಹೊರಗೆ ಹಾಕಲ್ಪಡಬೇಕು-ತ್ಯಜಿಸತಕ್ಕದ್ದು); ತಸ್ಮೈ-ಅವನಿಗೆ (ದೀಕ್ಷಾವಿಹೀನನಿಗೆ), ದತ್ತಂ-ಕೊಡಲ್ಪಟ್ಟದ್ದು (ದಾನ ದಕ್ಷಿಣೆ ಮುಂತಾದುವು), ನಿಷ್ಫಲಂ-ವ್ಯರ್ಥವು; ಚ-ಮತ್ತು ಯಸ್ಯ-ಯಾವ ಬ್ರಾಹ್ಮಣನಿಗೆ, ವೈಷ್ಣವೀ ದೀಕ್ಷಾ-ವಿಷ್ಣುದೀಕ್ಷೆಯು, ಸ್ಯಾತ್-ಆಗಿರುವುದೋ, (ತಸ್ಯ-ಅವನಿಗೆ), ದತ್ತಂ-ಕೊಟ್ಟದ್ದು ಅಕ್ಷಯಂ-ಅಕ್ಷಯಫಲವುಳ್ಳದ್ದು (ಬಹುಫಲ ಪ್ರಾಪಕವು), ಭವತಿ-ಆಗುತ್ತದೆ; (ಹವ್ಯಕವ್ಯಾದಿಗಳಲ್ಲಿ), ಸಃ-ಆತನೇ, ಪರಮಂ-ಉತ್ತಮ, ಪಾತ್ರಂ-ಪಾತ್ರನೆಂದು, ಪ್ರೋಕ್ತಂ-ಹೇಳಲಾಗಿದೆ.

---

ಆತನು ತ್ಯಾಜ್ಯನೇ ಸರಿ. ವಿಷ್ಣುದೀಕ್ಷೆಯುಳ್ಳವನೇ (ಯೋಗ್ಯಾಧಿಕಾರಿಗಳಿಂದ ದೀಕ್ಷೆಯನ್ನು ಪಡೆದವನೇ) ಹವ್ಯಕವ್ಯಾದಿಗಳಲ್ಲಿ[1] ಉತ್ತಮ ಪಾತ್ರನು; ಆತನಿಗೆ ಕೊಡಲ್ಪಟ್ಟ ದಾನಾದಿಗಳು ಅಕ್ಷಯಫಲವನ್ನು ಹೊಂದಿಸುತ್ತವೆ (೫೯-೬೦). ತಪ್ತಚಕ್ರಾಂಕಿತದೇಹವುಳ್ಳ ಚಂಡಾಲನೂ ಸಹ, ಅದೀಕ್ಷಿತ ಉತ್ತಮವರ್ಣದವರಿಗಿಂತ, ದರ್ಶನಾದಿಗಳಿಗೆ ಪ್ರಶಸ್ತನಾದವನಾಗಿರಲು (ಉತ್ತಮನಾಗಿರುವಾಗ), ತಪ್ತಚಕ್ರಾದಿ ಚಿಹ್ನೆಗಳುಳ್ಳ ಪುಣ್ಯವಂತರಾದ ಬ್ರಾಹ್ಮಣರು, ಅವರಲ್ಲಿಯೂ ವಿಶೇಷವಾಗಿ ಸದಾಚಾರನಿಷ್ಠರಾದವರು, (ದೇವಪಿತೃಕಾರ್ಯಗಳಲ್ಲಿ

---

1. ಹವ್ಯ—ದೇವತೆಗಳನ್ನು ಉದ್ದೇಶಿಸಿ ಯಜ್ಞಾದಿಗಳಲ್ಲಿ ಅರ್ಪಿಸುವ ಹವಿಸ್ಸು ಮೊದಲಾದ ಪೂಜಾದ್ರವ್ಯಗಳು; ಕವ್ಯ—ಪಿತೃಗಳಿಗಾಗಿ ಶ್ರಾದ್ಧಾದಿಗಳಲ್ಲಿ ಅರ್ಪಿಸುವ ಪಿಂಡಾದಿ ದ್ರವ್ಯಗಳು; ಹವ್ಯಕವ್ಯಶಬ್ದಗಳು, ಅವುಗಳುಳ್ಳ ದೇವಪಿತೃಕಾರ್ಯಗಳನ್ನು (ತದುದ್ದೇಶಿತ ಕರ್ಮಗಳನ್ನು) ಸೂಚಿಸುತ್ತವೆ.

**ತಪ್ತಚಕ್ರಾಂಕಿತೋ ಯಃ ಸ್ಯಾತ್ ಸ ಚಾಂಡಾಲೋ ವರೋ ಭವೇತ್ ॥೬೧**
**ಕಿಂ ಪುನರ್ಬ್ರಾಹ್ಮಣಾ ಪುಣ್ಯಾಃ ಸದಾಚಾರಾ ವಿಶೇಷತಃ ।**

ಯಃ-ಯಾರೊಬ್ಬನು, ತಪ್ತಚಕ್ರಾಂಕಿತಃ-ತಪ್ತಚಕ್ರದಿಂದ ಚಿಹ್ನಿತನು, ಸ್ಯಾತ್-ಆಗುವನೋ, ಸಃ-ಆತನು, ಚಾಂಡಾಲಃ ಅಪಿ-ನೀಚವರ್ಣದ ಚಂಡಾಲನಾದರೂ, ವರಃ-ಉತ್ತಮನು (ಅದೀಕ್ಷಿತ ಉತ್ತಮ ವರ್ಣದ ಪುರುಷನಗಿಂತ), ಭವೇತ್-(ಮುಖದರ್ಶನಾದಿಗಳಿಗೆ ಅರ್ಹನು) ಆಗುತ್ತಾನೆ; (ಹೀಗಿರುವಾಗ), ಪುಣ್ಯಾಃ-ಪುಣ್ಯವಂತರಾದ (ಜನ್ಮಾಂತರ ಪುಣ್ಯದಿಂದ ಬ್ರಾಹ್ಮಣನಾಗಿ ಜನಿಸಿದವರಾದ), ಬ್ರಾಹ್ಮಣಾಃ-ಬ್ರಾಹ್ಮಣರು, ವಿಶೇಷತಃ-ವಿಶೇಷವಾಗಿ, ಸದಾಚಾರಾಃ-ಸದಾಚಾರನಿಷ್ಠರು, ಕಿಂ ಪುನಃ-ಉತ್ತಮರೆಂದು ಹೇಳಲೇನು!

**ನಾರೀ ವಾ ಪುರುಷೋ ವಾಪಿ ತಪ್ತಚಕ್ರಾಂಕವರ್ಜಿತಃ ॥ ೬೨ ॥**

**ಶ್ಮಶಾನಕಾಷ್ಠವತ್ತಸ್ಯ ಸ್ಪರ್ಶೇ ಸ್ನಾನಂ ಸಮಾಚರೇತ್ ।**

ನಾರೀ-ಸ್ತ್ರೀ, ವಾ-ಅಥವಾ, ಪುರುಷಃ ಅಪಿ-ಪುರುಷನಾಗಲಿ, ತಪ್ತಚಕ್ರಾಂಕವರ್ಜಿತಃ-ತಪ್ತಚಕ್ರಚಿಹ್ನೆಯಿಂದ ರಹಿತನಾದರೆ (ಸ್ವಗುರುಗಳಿಂದ ತಪ್ತಮುದ್ರಾಧಾರಣೆಯನ್ನು ಮಾಡಿಸಿಕೊಳ್ಳದಿದ್ದರೆ), ಶ್ಮಶಾನಕಾಷ್ಠವತ್-ಶ್ಮಶಾನದಲ್ಲಿ ಬಿದ್ದಿರುವ ಕಟ್ಟಿಗೆಯಂತೆ (ಶವದಹನಾವಶಿಷ್ಟಕಾಷ್ಠದಂತೆ); (ಅಪವಿತ್ರರು), ತಸ್ಯ-ಆ ವ್ಯಕ್ತಿಯ, ಸ್ಪರ್ಶೇ-ಸ್ಪರ್ಶವಾದರೆ, ಸ್ನಾನಂ-ಸ್ನಾನವನ್ನು ಸಮಾಚರೇತ್-ಮಾಡತಕ್ಕದ್ದು(ಸ್ನಾನಮಾಡಿ ಶುದ್ಧನಾಗಬೇಕು).

**ಕಂಚುಕಂ ಕಂಠಸೂತ್ರಂ ಚ ಲಲಾಟೇ ಚೋರ್ಧ್ವಪುಂಡ್ರಕಂ ॥ ೬೩ ॥**

**ತಪ್ತಚಕ್ರಂ ತಥಾ ಶಂಖಂ ಯಸ್ಯಾ ಗಾತ್ರೇ ನ ವಿದ್ಯತೇ ।**
**ಹವ್ಯಂ ಕವ್ಯಂ ತಯಾ ಸ್ಪೃಷ್ಟಂ ದೇವಾಶ್ಚ ಪಿತರೋಽಪಿ ಹಿ ॥ ೬೪ ॥**

---

ದಾನಾದಿಗಳಿಗೆ ಶ್ರೇಷ್ಠಪಾತ್ರರೆಂದು) ಉತ್ತಮರೆಂದು ಹೇಳಲೇನಿದೆ! (೬೧). ಸ್ತ್ರೀಯಾಗಲಿ ಪುರುಷನಾಗಲಿ, ತಪ್ತಮುದ್ರಾಧಾರಣ ಮಾಡಿಸಿಕೊಂಡಿರದಿದ್ದರೆ, ಅವರ ಸ್ಪರ್ಶವಾದರೆ, ಶ್ಮಶಾನದಲ್ಲಿ ಬಿದ್ದಿರುವ ಕಟ್ಟಿಗೆಯನ್ನು ಮುಟ್ಟಿದಂತೆ, ಸ್ನಾನದಿಂದ ಶುದ್ಧನಾಗಬೇಕು. ಚಕ್ರಾಂಕಿತವಲ್ಲದ ದೇಹವು ಅಷ್ಟು ಅಪವಿತ್ರವಾದುದು (೬೨). ಕಂಚುಕ (ಕುಬಸ-ಕುಪ್ಪಸ), ಮಂಗಲಸೂತ್ರ, ಹಣೆಯಲ್ಲಿ ಊರ್ಧ್ವಪುಂಡ್ರ, (ಕೈಗಳಮೇಲೆ) ತಪ್ತಚಕ್ರ ಶಂಖಗಳು, ಇಲ್ಲದ ಸ್ತ್ರೀಯು ಮುಟ್ಟಿದ ಹವ್ಯಕವ್ಯಗಳನ್ನು (ದೇವತೆಗಳಿಗೂ ಮತ್ತು ಪಿತೃಗಳಿಗೂ ಅರ್ಪಿಸಬೇಕಾದ ದ್ರವ್ಯಗಳನ್ನು), ನಾಯಿ ಮುಟ್ಟಿದ ವಸ್ತುಗಳು ಹೇಗೋ ಹಾಗೆ. ದೇವತೆಗಳು ಮತ್ತು ಪಿತೃಗಳು, ಸಿಟ್ಟಿನಿಂದ ಸ್ವೀಕರಿಸುವುದಿಲ್ಲ(ಇಂಥ ಸ್ತ್ರೀಯರು ಅವರಿಂದ ಅಪವಿತ್ರ ದೇಹಿಗಳೆಂದು ಭಾವಿಸಲ್ಪಡುತ್ತಾರೆ) (೬೩-೬೪).

ನೈವ ಗೃಹ್ಣಂತಿ ಕುಪಿತಾ ಶುನಾ ಸ್ಪೃಷ್ಟಂ ಯಥಾತಥಾ ।

ಕಂಚುಕಂ–ಕುಪ್ಪಸವೂ, ಕಂಠಸೂತ್ರಂ ಚ–ಕಂಠದಲ್ಲಿ ಮಂಗಲಸೂತ್ರವೂ, ಲಲಾಟೇ–ಹಣೆಯಲ್ಲಿ ಊರ್ಧ್ವಪುಂಡ್ರಂ–ಊರ್ಧ್ವಪುಂಡ್ರವೂ (ಹಣೆಯಮಧ್ಯದಲ್ಲಿ ನೇರವಾಗಿ ಮೇಲೇರುವ ಮೃತ್ತಿಕಾದಿರಚಿತನಾಮವೂ), ತಪ್ತಚಕ್ರಂ–ತಪ್ತಚಕ್ರವೂ, ತಥಾ–ಹಾಗೂ, ಶಂಖಂ–ತಪ್ತಶಂಖವೂ (ಇವುಗಳ ಅಂಕಿತವೂ), ಯಸ್ಯಾಃ–ಯಾವ ಸ್ತ್ರೀಯ, ಗಾತ್ರೇ–ದೇಹದಲ್ಲಿ ನ ವಿದ್ಯತೇ–ಇರುವುದಿಲ್ಲವೋ, ತಯಾ–ಆಕೆಯಿಂದ (ಅಂಥ ಸ್ತ್ರೀಯಿಂದ), ಸ್ಪೃಷ್ಟಂ–ಮುಟ್ಟಲಾದ, ಹವ್ಯಂ–ಹವ್ಯವನ್ನೂ ಕವ್ಯಂ–ಕವ್ಯವನ್ನೂ ದೇವಾಃ–ದೇವತೆಗಳೂ, ಚ–ಮತ್ತು, ಪಿತರಃ ಅಪಿ–ಪಿತೃಗಳೂ, ಕುಪಿತಾಃ–ಕುಪಿತರಾಗಿ (ಆ ಸ್ತ್ರೀಯ ಸ್ಪರ್ಶದಿಂದ ಸಿಟ್ಟಾಗಿ), ಶುನಾ–ನಾಯಿಯಿಂದ, ಸ್ಪೃಷ್ಟಂ–ಮುಟ್ಟಲ್ಪಟ್ಟದ್ದನ್ನು ಯಥಾ–ಹೇಗೋ, ತಥಾ–ಹಾಗೆ, ಗೃಹ್ಣಂತಿ ನ ಏವ–ಸ್ವೀಕರಿಸುವುದೇ ಇಲ್ಲ.

ಪತಿತಾ ಅಪಿ ಶುದ್ಧ್ಯಂತಿ ತಪ್ತಚಕ್ರಾದಿಧಾರಣಾತ್ ॥ ೬೫ ॥

ಸ್ವಸ್ವವರ್ಣಾಶ್ರಮಾಚಾರಾಃ ಕಿಂ ಪುನರ್ಬ್ರಾಹ್ಮಣಾದಯಃ ।

ತಪ್ತಚಕ್ರಾದಿಧಾರಣಾತ್–ತಪ್ತಚಕ್ರಾದಿಗಳನ್ನು ದೇಹದಲ್ಲಿ ಮುದ್ರಿಸಿಕೊಳ್ಳುವುದರಿಂದ, ಪತಿತಾಃ ಅಪಿ–ಪತಿತರಾದವರು ಸಹ (ಕೀಳುಜಾತಿಯವರು ಮತ್ತು ಮಹಾಪಾತಕಿಗಳು ಸಹ), ಶುದ್ಧ್ಯಂತಿ–ಪರಿಶುದ್ಧರಾಗುತ್ತಾರೆ; (ಹೀಗಿರಲು), ಸ್ವಸ್ವವರ್ಣಾಶ್ರಮಾಚಾರಾಃ–ತಂತಮ್ಮ ವರ್ಣಾಶ್ರಮ ಧರ್ಮಗಳನ್ನು ಆಚರಿಸುವ, ಬ್ರಾಹ್ಮಣಾದಯಃ–ಬ್ರಾಹ್ಮಣರೇ ಮೊದಲಾದವರು (ದ್ವಿಜರು), ಕಿಂಪುನಃ–(ತಪ್ತಮುದ್ರಾಧಾರಣದಿಂದ) ಪರಮಪಾವನರೆಂದು ಹೇಳಲೇನು!

ದಾತಾ ಹಿ ಪರಮಂ ಮಿತ್ರಂ ಯತೋ ಜೀವಯತೇಽರ್ಥಿನಃ ॥ ೬೬ ॥

ಯೋ ಹಿ ವಿಷ್ಣುಂ ಪರಂ ದ್ವೇಷ್ಟಿ ತೇನ ಮೈತ್ರೀಂ ಕರೋತಿ ಯಃ ।
ರಿಪುರ್ಮಿತ್ರಾಯ ತೇ ತಸ್ಮೈ ಕಥಂ ವಿಷ್ಣುಃ ಪ್ರಸೀದತಿ ॥ ೬೭ ॥

---

ತಪ್ತಚಕ್ರಶಂಖಾದಿಗಳನ್ನು ಧಾರಣಮಾಡುವ ಪತಿತರೂ ಸಹ ಪರಿಶುದ್ಧರಾಗುತ್ತಾರೆ; ಹೀಗಿರಲು, ಸ್ವವರ್ಣಾಶ್ರಮಾಚಾರನಿರತರಾದ ಬ್ರಾಹ್ಮಣಾದಿ ಉತ್ತಮರು, ತಪ್ತಮುದ್ರಾಂಕನದಿಂದ ಪರಮಪವಿತ್ರರೆಂದು ಹೇಳಲೇನಿದೆ! (೬೫). ಯಾಚಿಸುವವರ ಅಭೀಷ್ಟಗಳನ್ನು ಕೊಡುವಾತನು, ಪರಮಮಿತ್ರನೆನಿಸುತ್ತಾನೆ—ಏಕೆಂದರೆ, ಕೇಳಿದ್ದನ್ನು ಕೊಟ್ಟು ಬದುಕಿಸುತ್ತಾನೆ; ಹೀಗಿರಲು, ಸರ್ವರ ಸರ್ವಾಭೀಷ್ಟಗಳನ್ನು ಸಲ್ಲಿಸುವ ಶ್ರೀವಿಷ್ಣುವನ್ನು ದ್ವೇಷಿಸುವವನೊಡನೆ, ಮಿತ್ರತ್ವವನ್ನು ಇಟ್ಟುಕೊಂಡರೆ (ಪರಮಮಿತ್ರನಾದ ಶ್ರೀವಿಷ್ಣುವನ್ನು ದ್ವೇಷಿಸುವವನೊಡನೆ, ಮಿತ್ರನಾಗಿರುವನಾದರೆ), ತನ್ನ ದ್ವೇಷಿಯ ಮಿತ್ರನ

ಯತಃ–ಯಾವ ಕಾರಣದಿಂದ, ಅರ್ಥಿನಃ–ಅರ್ಥಿಗಳನ್ನು (ಪ್ರಾರ್ಥಿಸುವವರನ್ನು), ಜೀವಯತೇ–(ಅಪೇಕ್ಷಿತವನ್ನಿತ್ತು) ರಕ್ಷಿಸುವನೋ, (ಆ ಕಾರಣದಿಂದ), ದಾತಾ–(ಅಪೇಕ್ಷಿತ ಅರ್ಥವನ್ನು) ಕೊಡುವಾತನು, ಪರಮಂ ಮಿತ್ರಂ–ಶ್ರೇಷ್ಠ ಮಿತ್ರನೆನಿಸುವನು; ಯಃ– ಯಾರು, ಪರಂ ವಿಷ್ಣುಂ–ಸರ್ವೋತ್ತಮನಾದ ಶ್ರೀವಿಷ್ಣುವನ್ನು ದ್ವೇಷ್ಟಿ–ದ್ವೇಷಿಸುವನೋ, ತೇನ–ಆತನಿಂದ, ಮೈತ್ರೀಂ–ಮಿತ್ರಭಾವವನ್ನು (ಆತನೊಂದಿಗೆ ಸ್ನೇಹವನ್ನು), ಯಃ– ಯಾರು, ಕರೋತಿ–ಮಾಡುವನೋ, ತಸ್ಯೈ–ಆತನಿಗೆ, ರಿಪುಃ–(ಶ್ರೀವಿಷ್ಣುವಿನ) ಶತ್ರುವು, ಮಿತ್ರಾಯತೇ–ಮಿತ್ರನಂತಾಗುತ್ತಾನೆ; ಹಿ–ಆದ್ದರಿಂದ (ತಸ್ಯೈ–ಅಂಥವನ ವಿಷಯಕ್ಕೆ), ವಿಷ್ಣುಃ–ಶ್ರೀವಿಷ್ಣುವು, ಕಥಂ–ಹೇಗೆ, ಪ್ರಸೀದತಿ–ಪ್ರಸನ್ನನಾಗುತ್ತಾನೆ? (ಪ್ರಸನ್ನನಾಗುವ ಸಂಭವವೇ ಇಲ್ಲ).

**ಯಃ ಕುರ್ಯಾದ್ವೈಷ್ಣವಂ ಚಿಹ್ನಂ ತಪ್ತಚಕ್ರಾದಿಧಾರಣಾತ್ ।**
**ತದೀಯೋಽಸ್ಮೀತಿ ಯೋ ನಿತ್ಯಂ ಭಾವಯನ್ ಮನಸಾಪಿ ಹಿ ॥ ೬೮ ॥**

**ತನ್ಮಂತ್ರಜಾಪಕೋ ಯಃ ಸ್ಯಾತ್ತನ್ನಾಮ್ನಾಂ ಚಾಪಿ ಕೀರ್ತಕಃ ।**
**ಕಥಂ ಸ ನ ಭವೇನ್ಮೂರ್ತಿಃ ಸರ್ವದೇವಪತೇರ್ಹರೇಃ ॥ ೬೯ ॥**

**ಕಥಂ ನ ಸ್ಯಾಚ್ಚ ಸಂತೋಷೋ ವಿಷ್ಣೋರಪಿ ತದರ್ಚನಾತ್ ।**

ಯಃ–ಯಾರು, ತಪ್ತಚಕ್ರಾದಿಧಾರಣಾತ್–ತಪ್ತಚಕ್ರಾದಿಗಳನ್ನು (ದೇಹದಲ್ಲಿ) ಧರಿಸುವುದರಿಂದ, ವೈಷ್ಣವಂ–ಶ್ರೀವಿಷ್ಣುವಿನ, ಚಿಹ್ನಂ–ಚಿಹ್ನೆಯನ್ನು ಕುರ್ಯಾತ್– ಮಾಡಿಕೊಳ್ಳುವನೋ (ಮತ್ತು), ಯಃ–ಯಾರು, ಮನಸಾಪಿ ಹಿ–ಮನಸ್ಸಿನಿಂದ ಸಹ, ನಿತ್ಯಂ–ಸದಾ, ತದೀಯಃ–ಆತನ (ಶ್ರೀವಿಷ್ಣುವಿನ) ಸೇವಕನು, ಅಸ್ಮಿ–ಆಗಿರುವೆನು, ಇತಿ –ಹೀಗೆಂದು, ಭಾವಯನ್–ಚಿಂತಿಸುವನೋ; ಮತ್ತು ಯಃ–ಯಾರು, ತನ್ಮಂತ್ರಜಾಪಕಃ– ಆತನ ಮಂತ್ರಗಳನ್ನು ಜಪಿಸುವನು (ವಿಷ್ಣುಮಂತ್ರಜಪದಲ್ಲಿ ತೊಡಗಿರುವನು),

---

ವಿಷಯಕ್ಕೆ ಶ್ರೀವಿಷ್ಣುವು ಹೇಗೆ ಪ್ರಸನ್ನನಾದಾನು? (ಸರ್ವಥಾ ಆತನ ಪ್ರಸಾದವು ಲಭಿಸುವ ಸಂಭವವೇ ಇಲ್ಲ) (೬೬-೬೭). ಯಾರು ತಪ್ತಚಕ್ರಾದಿಗಳನ್ನು ತನ್ನ ದೇಹದಲ್ಲಿ ಧರಿಸಿ, ತಾನು ಶ್ರೀಹರಿಯ ನಿತ್ಯಸೇವಕನೆಂದು ಸದಾ ಮನಸ್ಸಿನಲ್ಲಿ ಭಾವಿಸುತ್ತಿರುವನೋ, ಆತನ (ಶ್ರೀಹರಿಯ) ಮಂತ್ರಗಳನ್ನೇ ಜಪಿಸುತ್ತ, ಆತನ ನಾಮಗಳನ್ನು ಕೀರ್ತಿಸುವುದರಲ್ಲಿ ಆಸಕ್ತನಾಗಿರುವನೋ, ಆತನು (ಹೀಗಿರುವ ಹರಿಭಕ್ತನು), ಸರ್ವ ದೇವತೆಗಳ ಒಡೆಯನಾದ ಶ್ರೀಹರಿಯ ಪ್ರತೀಕನೇ ಆಗಿರುವನು; ಶ್ರೀಹರಿಯನ್ನು ತನ್ನೊಳಗೆ ಧರಿಸಿದ ಪ್ರತಿಮೆಯೇ ಆಗಿರುವನು; ಈತನನ್ನು (ಈ ವಿಷ್ಣುಪ್ರತಿಮೆಯನ್ನು) ಪೂಜಿಸುವುದರಿಂದ, ಶ್ರೀವಿಷ್ಣುವು ನಿಶ್ಚಯವಾಗಿ ಪ್ರೀತನಾಗುತ್ತಾನೆ (೬೮-೬೯). ತಮ್ಮ ಪರಮಸ್ವಾಮಿಯಾದ

ಸ್ಯಾತ್–ಆಗಿರುವನೋ; ಚ–ಮತ್ತು ತನ್ನಾಮ್ನಾಂ–ಆತನ (ಶ್ರೀವಿಷ್ಣುವಿನ) ನಾಮಗಳ, ಕೀರ್ತಕಃ–ಕೀರ್ತನೆಮಾಡುವವನಾಗುತ್ತಾನೋ; ಸಃ–ಆತನು, ಸರ್ವದೇವಪತೇಃ–ಸಕಲ ದೇವತೆಗಳ ಒಡೆಯನಾದ, ಹರೇಃ–ಶ್ರೀಹರಿಯ, ಮೂರ್ತಿಃ–ಪ್ರತಿಮೆಯು, ಕಥಂ–ಹೇಗೆ, ನ ಭವೇತ್–ಆಗುವುದಿಲ್ಲ? (ಅಂಥವನು ಶ್ರೀವಿಷ್ಣುವನ್ನು ಒಳಗಿಟ್ಟುಕೊಂಡಿರುವ ಪ್ರತಿಮೆಯೇ ಸರಿ); ತದರ್ಚನಾತ್–ಆತನ ಸತ್ಕಾರಾದಿಗಳಿಂದ (ಅರ್ಚನೆಯಿಂದ), ವಿಷ್ಣೋಃ ಅಪಿ–ಶ್ರೀವಿಷ್ಣುವಿಗೆ ಸಹ, ಸಂತೋಷಃ–ಸಂತೋಷವು, ಕಥಂ ನ ಸ್ಯಾತ್–ಹೇಗೆ ಆಗುವುದಿಲ್ಲ? (ಶ್ರೀವಿಷ್ಣುವು ನಿಶ್ಚಯವಾಗಿ ಪ್ರೀತನಾಗುತ್ತಾನೆ).

**ಸರ್ವದೇವಾತ್ಮಕಸ್ಯಾಸ್ಯ ವಿಷ್ಣೋರಾರಾಧನೇ ಕೃತೇ ॥ ೭೦ ॥**

**ಸರ್ವೇ ದೇವಾಃ ಕಥಂ ನ ಸ್ಯುಸ್ತುಷ್ಟಾಸ್ತತ್ತೋಷತೋಷಿಣಃ ।**
**ತಾದೃಶಸ್ಯ ಹರೇರ್ಮೂರ್ತೇರವಜ್ಞಾನೇ ಕೃತೇಽಖಿಲಾಃ ॥ ೭೧ ॥**

**ಕಥಂ ದೇವಾಃ ನ ರುಷ್ಯೇಯುರ್ನಾರಾಯಣಪರಾಯಣಾಃ ।**

ಸರ್ವದೇವಾತ್ಮಕಸ್ಯ–ಸರ್ವದೇವತೆಗಳ ಪರಮಸ್ವಾಮಿಯಾದ, ಅಸ್ಯ–ಈ, ವಿಷ್ಣೋಃ–ಶ್ರೀವಿಷ್ಣುವಿನ, ಆರಾಧನೇ–ಆರಾಧನೆಯು (ಪೂಜೆಯು–ಸೇವೆಯು), ಕೃತೇ–ಮಾಡಲ್ಪಡುತ್ತಿರಲು, ಕಥಂ–ಹೇಗೆ (ಯಾವ ಕಾರಣದಿಂದ), ಸರ್ವೇದೇವಾಃ–ಎಲ್ಲ (ಆತನ ಪರಿವಾರಭೂತರಾದ ಬ್ರಹ್ಮಾದಿ) ದೇವತೆಗಳು, ತುಷ್ಟಾಃ–ಸಂತುಷ್ಟರು, ನ ಸ್ಯುಃ–ಆಗದಿರುವರು?; (ಸಂತುಷ್ಟರೇ ಆಗುತ್ತಾರೆ); ಏಕೆಂದರೆ, (ಎಲ್ಲ ದೇವತೆಗಳು) ತತ್ತೋಷತೋಷಿಣಃ–ಆತನ (ಶ್ರೀವಿಷ್ಣುವಿನ ಸಂತೋಷದಿಂದ ಸಂತೋಷಪಡತಕ್ಕ ಸ್ವಭಾವದವರಾಗಿದ್ದಾರೆ; ತಾದೃಶಸ್ಯ–ಹೀಗಿರುವ) ಸಕಲದೇವತೆಗಳ ಸ್ವಾಮಿಯಾದ–, ಹರೇಃ–ಶ್ರೀಹರಿಯ ಮೂರ್ತೇಃ–ಮೂರ್ತಿಯ (ಪ್ರತಿಮೆಯಾದ ವಿಷ್ಣುದೀಕ್ಷೆಯನ್ನು ಹೊಂದಿರುವ ಭಕ್ತನ), ಅವಜ್ಞಾನೇ–ನಿಂದೆಯು (ಅಪಮಾನವು–ತಿರಸ್ಕಾರವು),

---

ಶ್ರೀವಿಷ್ಣುವನ್ನು ಆರಾಧಿಸಿದರೆ, ಆತನ ಪರಿವಾರದವರಾದ ಬ್ರಹ್ಮಾದಿದೇವತೆಗಳೂ; ಶ್ರೀವಿಷ್ಣುಪೂಜೆಯಿಂದ, ತಾವೂ ಸಂತುಷ್ಟರಾಗುತ್ತಾರೆ; ಅವರೆಲ್ಲರೂ ಶ್ರೀವಿಷ್ಣುವು ಸಂತೋಷಗೊಂಡರೆ ತಾವೂ ಸಂತೋಷಪಡುವ ಸ್ವಭಾವವುಳ್ಳವರು. ಹೀಗಿರುವಲ್ಲಿ ವಿಷ್ಣುವಿನ ಪ್ರತಿಮೆಯಂತಿರುವ ವಿಷ್ಣುದೀಕ್ಷೆಯನ್ನು ಹೊಂದಿದ ವಿಷ್ಣುಭಕ್ತನ ನಿಂದೆ ತಿರಸ್ಕಾರಾದಿಗಳಿಂದ, ದೇವತೆಗಳು (ವಿಷ್ಣುಭಕ್ತನಲ್ಲಿ ಅಂತಃಸನ್ನಿಹಿತನಾದ ಶ್ರೀವಿಷ್ಣುವಿನ ಅವಜ್ಞೆಯಿಂದ) ಹೇಗೆ ಕುಪಿತರಾಗದೇ ಇರುವರು? ಅವರೆಲ್ಲರೂ ಸರ್ವದಾ ನಾರಾಯಣ ಪರಾಯಣರಾದ್ದರಿಂದ, ವಿಷ್ಣುಭಕ್ತನನ್ನು ಅವಮಾನಮಾಡಿದ ಮನುಷ್ಯನ ಮೇಲೆ ಕುಪಿತರಾಗಿಯೇ ತೀರುತ್ತಾರೆ (೭೦-೭೧). ಶ್ರೀವಿಷ್ಣುವಿನ ಪ್ರತಿಮಾಸ್ಥಾನೀಯನಾರ

ಕೃತೇ(ಸತಿ)–ಮಾಡಲ್ಪಡುತ್ತಿರಲು, ನಾರಾಯಣಪರಾಯಣಾಃ–ಸರ್ವದಾ ಶ್ರೀನಾರಾಯಣ ನನ್ನೇ (ಸರ್ವಥಾ) ಆಶ್ರಯಿಸಿಕೊಂಡಿರುವ, (ಶ್ರೀನಾರಾಯಣನೇ ಸರ್ವೋತ್ತಮನೆಂಬ ಜ್ಞಾನ ನಿಶ್ಚಯವುಳ್ಳವರಾದ), ಅಖಿಲಾಃ–ಸಮಸ್ತರಾದ, ದೇವಾಃ–ದೇವತೆಗಳು, ಕಥಂ ನ ರುಷ್ಯೇಯುಃ–ಹೇಗೆ ಸಿಟ್ಟಾಗದಿರುವರು? (ಕುಪಿತರಾಗುವುದು ನಿಶ್ಚಯ).

**ತಸ್ಮಾತ್ತು ವೈಷ್ಣವೀ ದೀಕ್ಷಾ ನಿಖಿಲೈರ್ಬ್ರಾಹ್ಮಣಾದಿಭಿಃ ॥ ೭೨ ॥**

**ಮನಸಾ ಕರ್ಮಣಾ ವಾಚಾ ಗ್ರಹಣೀಯಾ ಪ್ರಯತ್ನತಃ ।**
**ತಥೈವ ಪೂಜ್ಯತಾಂ ಯಾತಿ ಪ್ರಿಯತಾಂ ಚ ಹರೇರಪಿ ॥ ೭೩ ॥**

**ಪ್ರಾಪ್ನೋತ್ಯಪಿ ಚ ಸರ್ವೇಷ್ಟಮೈಹಿಕಾಮುಷ್ಮಿಕಂ ಸದಾ ।**
**ಕ್ರಮೇಣ ಮುಕ್ತಿಮಾಪ್ನೋತಿ ಪುನರ್ನಾವರ್ತತೇ ತತಃ ॥ ೭೪ ॥**

ತಸ್ಮಾತ್ ತು–ಆ ಕಾರಣದಿಂದಲೇ, (ಶ್ರೀವಿಷ್ಣುಸಹಿತ ಸಕಲ ದೇವತೆಗಳು ಪ್ರೀತರಾಗುವುದರಿಂದಲೇ), ನಿಖಿಲೈಃ–ಸಮಸ್ತರಾದ, ಬ್ರಾಹ್ಮಣಾದಿಭಿಃ–ಬ್ರಾಹ್ಮಣರೇ ಮೊದಲಾದವರಿಂದ, ಮನಸಾ–ಮನಸ್ಸಿನಿಂದಲೂ, ಕರ್ಮಣಾ–ಕರ್ಮದಿಂದಲೂ, ವಾಚಾ–ನುಡಿಯಿಂದಲೂ, ಪ್ರಯತ್ನತಃ–ಯತ್ನಪೂರ್ವಕವಾಗಿ (ಎಲ್ಲ ವಿಘ್ನಗಳನ್ನು ಪರಿಹರಿಸಿಕೊಂಡು), ವೈಷ್ಣವೀ ದೀಕ್ಷಾ–ವಿಷ್ಣುದೀಕ್ಷೆಯು, ಗ್ರಹಣೀಯಾ–ಸ್ವೀಕರಿಸಲ್ಪಡ ಬೇಕು; ತಥಾ ಏವ–ಹೀಗೆ ಮಾಡುವುದರಿಂದಲೇ, (ಆ ದೀಕ್ಷಿತನಾದವನು), ಪೂಜ್ಯತಾಂ–ಪೂಜ್ಯತ್ವವನ್ನು(ಸಕಲರ ಗೌರವವನ್ನು), ಯಾತಿ–ಹೊಂದುತ್ತಾನೆ; ಚ–ಮತ್ತು ಹರೇಃ–ಶ್ರೀಹರಿಯ, ಪ್ರಿಯತಾಂ ಅಪಿ–ಪ್ರೀತಿಯನ್ನು ಸಹ, ಪ್ರಾಪ್ನೋತಿ–ಹೊಂದುತ್ತಾನೆ (ಶ್ರೀಹರಿಗೂ ಪ್ರಿಯನಾಗುತ್ತಾನೆ); ಚ–ಹಾಗೂ, ಐಹಿಕಾಮುಷ್ಮಿಕಂ–ಇಹಪರಲೋಕಗಳ, ಸರ್ವೇಷ್ಟಂ–ಸರ್ವ ಇಷ್ಟಾರ್ಥಗಳನ್ನೂ, ಸದಾ–ನಿರಂತರವಾಗಿ, (ಪ್ರಾಪ್ನೋತಿ–ಹೊಂದು

---

ವಿಷ್ಣುದೀಕ್ಷಾಯುಕ್ತನಾದವನನ್ನು ಯಥಾಯೋಗ್ಯವಾಗಿ ಪೂಜಿಸುವುದರಿಂದ ಅಂತ ರ್ಯಾಮಿಯಾದ ಶ್ರೀವಿಷ್ಣುವು ಪ್ರೀತನಾಗುತ್ತಾನೆ; ಶ್ರೀವಿಷ್ಣು ಪ್ರೀತನಾದರೆ, ಆತನ ಪರಿವಾರಭೂತರಾದ ಸಕಲ ದೇವತೆಗಳೂ ಪ್ರೀತರಾಗುತ್ತಾರೆ; ಈ ಕಾರಣದಿಂದ, ಬ್ರಾಹ್ಮಣಾದಿ ಸರ್ವರೂ ಕಾಯೇನ ಮನಸಾ ವಚಸಾ, ಯತ್ನಪೂರ್ವಕವಾಗಿ, ವಿಷ್ಣುದೀಕ್ಷೆ ಯನ್ನು ಗ್ರಹಿಸಬೇಕು; ಹೀಗೆ ದೀಕ್ಷಿತರಾದವರು ಸರ್ವರಿಂದ ಮಾನ್ಯರಾಗುತ್ತಾರೆ; ಇವರು ಶ್ರೀಹರಿಪ್ರೀತಿಗೆ ಪಾತ್ರರಾಗಿ, ಇಹಪರಲೋಕಗಳಲ್ಲಿ ಸಕಲಾಭೀಷ್ಟಗಳನ್ನು ಹೊಂದಿ, ಕ್ರಮವಾಗಿ ಶ್ರೀಹರಿಯ ಸಾಕ್ಷಾದ್ದರ್ಶನವನ್ನು ಪಡೆದು, ಪ್ರಾರಬ್ಧಕರ್ಮದ ಭೋಗವು ಮುಗಿದನಂತರ ಮುಕ್ತರಾಗುತ್ತಾರೆ; ಜನನ ಮರಣ ರೂಪದ ಈ ಸಂಸಾರಕ್ಕೆ ಅವರು ಎಂದೂ ತಿರಿಗಿಬರುವುದಿಲ್ಲ(೭೨-೭೪).

ತಾನೆ); ಕ್ರಮೇಣ—ಕ್ರಮವಾಗಿ (ಅಪರೋಕ್ಷಜ್ಞಾನ-ಪ್ರಾರಬ್ಧ ಭೋಗಗಳನಂತರ), ಮುಕ್ತಿಂ-ಮೋಕ್ಷವನ್ನೂ ಆಪ್ನೋತಿ-ಹೊಂದುತ್ತಾನೆ; ತತಃ-ಅಲ್ಲಿಂದ (ಮುಕ್ತಸ್ಥಾನದಿಂದ), ಪುನಃ-ಮತ್ತೆ ನ ಆವರ್ತತೇ-ಸಂಸಾರಕ್ಕೆ ಬರುವುದಿಲ್ಲ.

**ಆಷಾಢೇ ಕಾರ್ತಿಕೇ ಮಾಘೇ ವೈಶಾಖೇ ಮಾರ್ಗಶೀರ್ಷಕೇ ।**
**ಪುಷ್ಪಚಂದ್ರೇ ತಿಥೌ ತತ್ರ ದಶಮ್ಯಾದೌ ವಿಶೇಷತಃ ॥ ೭೫ ॥**

**ಬುಧಭಾರ್ಗವಜೀವಾನಾಂ ಶನೇರರ್ಕಸ್ಯ ವಾ ದಿನೇ ।**
**ಮೃದುಕ್ಷಿಪ್ರಧ್ರುವರ್ಕ್ಷೇಷು ಕುಯೋಗೈರ್ವರ್ಜಿತೇ ಶುಭೇ ॥ ೭೬ ॥**

**ಗೃಹ್ಣೀಯಾದ್ವೈಷ್ಣವೀಂ ದೀಕ್ಷಾಂ ಶ್ರವಣೇ ಚ ವಿಶೇಷತಃ ।**
**ಶನಿರ್ಯದಾನುಕೂಲಃ ಸ್ಯಾತ್ತದಾ ದೀಕ್ಷಾ ಫಲಾಧಿಕಾ ॥ ೭೭ ॥**

ಆಷಾಢೇ-ಆಷಾಢದಲ್ಲಿ ಕಾರ್ತಿಕೇ-ಕಾರ್ತಿಕದಲ್ಲಿ ಮಾಘೇ-ಮಾಘದಲ್ಲಿ

---

ದೀಕ್ಷಾಸ್ವೀಕಾರಕಾಲವೂ ದೀಕ್ಷಾಫಲದ ಆಧಿಕ್ಯಕ್ಕೆ ಕಾರಣವಾಗುತ್ತದೆ; ಆಷಾಢ, ಕಾರ್ತಿಕ, ಮಾಘ, ವೈಶಾಖ, ಮಾರ್ಗಶಿರ ಮಾಸಗಳಲ್ಲಿಯೂ, ಶುಕ್ಲಪಕ್ಷದ ದಶಮ್ಯಾದಿ ತಿಥಿಗಳಲ್ಲಿಯೂ, ಬುಧ, ಶುಕ್ರ, ಬೃಹಸ್ಪತಿ, ಶನಿ, ರವಿವಾರಗಳಲ್ಲಿಯೂ, ಕುಯೋಗವರ್ಜಿತ ಶುಭಯೋಗದಲ್ಲಿಯೂ,[1] ಮೃದು, ಕ್ಷಿಪ್ರ, ಧ್ರುವತಾರೆಗಳಲ್ಲಿಯೂ[2] ವಿಶೇಷವಾಗಿ ಶ್ರವಣ ನಕ್ಷತ್ರದಲ್ಲಿಯೂ, ವಿಷ್ಣುದೀಕ್ಷೆಯನ್ನು ಸ್ವೀಕರಿಸಬೇಕು; ಶನಿಯು

---

1. ಯೋಗಗಳು, ೨೭; ವಿಷ್ಕಂಭ, ಪ್ರೀತಿ, ಆಯುಷ್ಮಾನ್ ಇತ್ಯಾದಿ; ಇವುಗಳ ವಿವರಗಳನ್ನು ಜ್ಯೋತಿಷಶಾಸ್ತ್ರದಿಂದ ತಿಳಿಯಲಹುದು. ಈ ೨೭ ಯೋಗಗಳಲ್ಲಿ ಸಾಮಾನ್ಯವಾಗಿ, ಶೂಲ, ಗಂಡ, ವ್ಯಾಘಾತ, ವ್ಯತೀಪಾತ, ವೈಧೃತಿ ಮೊದಲಾದ ಕೆಲವು, ಕುಯೋಗಗಳೆಂದು ಹೇಳಲ್ಪಡುತ್ತವೆ. ಇದಲ್ಲದೇ ದಗ್ಧಯೋಗ—ಮೃತ್ಯುಯೋಗಗಳು ಸಮಸ್ತ ಶುಭಕಾರ್ಯಗಳಲ್ಲಿ ನಿಂದ್ಯವೆಂದು ಹೇಳಲಾಗಿವೆ. ಇವು, ತದಿಗೆ-ಬುಧವಾರ, ನವಮಿ-ಶನಿವಾರ ಇತ್ಯಾದಿ ತಿಥಿ ವಾರ ಸಂಯೋಗದಿಂದಲೂ, ಭಾನುವಾರ-ಅನೂರಾಧ ಇತ್ಯಾದಿ ಕೆಲವು ವಿಶಿಷ್ಟವಾದ ವಾರ ನಕ್ಷತ್ರಗಳ ಯೋಗದಿಂದಲೂ, ಸಂಭವಿಸುವುವೆಂದು ಜ್ಯೋತಿಷಿಗಳು ಹೇಳುವರು. ಇಷ್ಟು ಮಾತ್ರವಲ್ಲ—೨೭ ವಿಷ್ಕಂಭಾದಿ ಯೋಗಗಳಲ್ಲಿ ನಿರ್ದಿಷ್ಟವಾದ ಕೆಲವು ಘಳಿಗೆಗಳು (ವಿಷ್ಕಂಭ-೩೦; ಪ್ರೀತಿ-೨೪ ಇತ್ಯಾದಿ) ತ್ಯಾಜ್ಯಕಾಲಗಳೆಂದೂ ಹೇಳಲಾಗಿದೆ.

2. ಚಿತ್ರ ರೇವತಿ, ಮೃಗಶಿರ, ಅನೂರಾಧಾ ನಕ್ಷತ್ರಗಳು 'ಮೃದು' ಸಂಜ್ಞೆಯುಳ್ಳವು; ಅಶ್ವಿನಿ, ಹಸ್ತ ಪುಷ್ಯ ನಕ್ಷತ್ರಗಳು 'ಕ್ಷಿಪ್ರ' ಎಂದು ಕರೆಯಲ್ಪಡುತ್ತವೆ; ರೋಹಿಣಿ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ನಕ್ಷತ್ರಗಳು 'ಸ್ಥಿರ' (ಧ್ರುವ) ಸಂಜ್ಞೆಯುಳ್ಳವುಗಳು. ಹೀಗೆಯೇ ಇತರ ನಕ್ಷತ್ರಗಳು ದಾರುಣ—ಉಗ್ರ—ಸಾಧಾರಣ—ಚರ ಇತ್ಯಾದಿ ನಾಮಗಳಿಂದ ಸೂಚಿಸಲ್ಪಡುತ್ತವೆ. ನಕ್ಷತ್ರಗಳು ಆಯಾ ಸಂಜ್ಞಾಪ್ರಕಾರದ ಫಲ ಕೊಡತಕ್ಕವುಗಳೆಂದು ಹೇಳಲಾಗುತ್ತದೆ.

ವೈಶಾಖೇ–ವೈಶಾಖದಲ್ಲಿ ಮಾರ್ಗಶೀರ್ಷಕೇ–ಮಾರ್ಗಶಿರಮಾಸದಲ್ಲಿ ಪುಷ್ಟಚಂದ್ರೇ–ಚಂದ್ರನು ವೃದ್ಧಿಹೊಂದುವ ಶುಕ್ಲಪಕ್ಷದ, ತಿಥೌ–ತಿಥಿಯಲ್ಲಿ ತತ್ರ–ಅದರಲ್ಲಿಯೂ, ವಿಶೇಷತಃ–ವಿಶೇಷವಾಗಿ (ಶ್ರೇಷ್ಠವೆಂದರೆ), ದಶಮ್ಯಾದೌ–ದಶಮೀ ಮೊದಲಾದ ತಿಥಿಗಳಲ್ಲಿ ಬುಧಭಾರ್ಗವಜೀವಾನಾಂ–ಬುಧ, ಶುಕ್ರ, ಬೃಹಸ್ಪತಿಗಳ, ವಾ–ಅಥವಾ, ಶನೇಃ–ಶನಿಯು, ಅರ್ಕಸ್ಯ–ಸೂರ್ಯನ—(ರವಿಯ), ದಿನೇ–ದಿನದಲ್ಲಿ ವಾರದಲ್ಲಿ ಕುಯೋಗೈಃ–ಕುಯೋಗಗಳಿಂದ, ವರ್ಜಿತೇ–ರಹಿತವಾದ, ಶುಭೇ–ಶುಭಯೋಗದಲ್ಲಿ ಮೃದುಕ್ಷಿಪ್ರ–ಧ್ರುವರ್ಕ್ಷೇಷು–ಮೃದು, ಕ್ಷಿಪ್ರ, ಧ್ರುವತಾರೆಗಳಲ್ಲಿ ವಿಶೇಷತಃ–ವಿಶೇಷವಾಗಿ, ಶ್ರವಣೇ–ಶ್ರವಣನಕ್ಷತ್ರದಲ್ಲಿ ವೈಷ್ಣವೀಂ ದೀಕ್ಷಾಂ–ವಿಷ್ಣುದೀಕ್ಷೆಯನ್ನು ಗೃಹ್ಣೀಯಾತ್–ಸ್ವೀಕರಿಸತಕ್ಕದ್ದು; ಯದಾ–ಯಾವಕಾಲದಲ್ಲಿ ಶನಿಃ–ಶನಿಗ್ರಹವು, ಅನುಕೂಲಃ ಸ್ಯಾತ್–ಅನುಕೂಲವಾಗಿರುವುದೋ, ತದಾ–ಆಗ, ದೀಕ್ಷಾ–ದೀಕ್ಷೆಯ ಸ್ವೀಕಾರವು, ಫಲಾಧಿಕಾ–ಅಧಿಕಫಲವುಳ್ಳದ್ದು(ಆಗುತ್ತದೆ).

**ಗಂಗಾದಿಪುಣ್ಯತೀರ್ಥೇಷು ಚಂದ್ರಸೂರ್ಯಗ್ರಹೇ ತಥಾ ।**
**ಮಹಾಗುರುಸಮಾಜೇ ಚ ಕಾಲಂ ನೈವ ಪ್ರತೀಕ್ಷಯೇತ್ ॥ ೭೮ ॥**

**ತದಾನೀಂ ಯದಿ ಲಭ್ಯೇತ ಶುಭಕಾಲಸ್ತದಾಧಿಕಂ ।**

ಗಂಗಾದಿಪುಣ್ಯತೀರ್ಥೇಷು–ಗಂಗಾದಿಪುಣ್ಯತೀರ್ಥಗಳಲ್ಲಿ ತಥಾ–ಹಾಗೂ, ಚಂದ್ರಸೂರ್ಯಗ್ರಹಾದಿಷು–ಚಂದ್ರಸೂರ್ಯಗ್ರಹಣಗಳಲ್ಲಿ ಚ–ಮತ್ತು ಮಹಾಗುರುಸಮಾಜೇ–ಮಹಾಗುರುಗಳಿರುವ ಸಭೆಯಲ್ಲಿ (ಮಹಾಗುರುಗಳ ಸನ್ನಿಧಾನದಲ್ಲಿ), ಕಾಲಂ–(ದೀಕ್ಷಾಸ್ವೀಕಾರಕ್ಕೆ) ಕಾಲವನ್ನು ನೈವ ಪ್ರತೀಕ್ಷಯೇತ್–(ಪೂರ್ವೋಕ್ತಮಾಸ, ತಿಥಿ,

---

ಅನುಕೂಲನಾಗಿದ್ದಾಗ, ದೀಕ್ಷೆಗೆ ಫಲಾಧಿಕ್ಯವನ್ನು ತಿಳಿಯತಕ್ಕದ್ದು[1] (೭೫-೭೭). ಭಾಗೀರಥೀ ಮೊದಲಾದ ಪುಣ್ಯತೀರ್ಥಗಳಲ್ಲಿಯೂ, ಚಂದ್ರಸೂರ್ಯಗ್ರಹಣಗಳಲ್ಲಿಯೂ, ಮತ್ತು ಮಹಾಗುರುಗಳ ಸನ್ನಿಧಾನದಲ್ಲಿಯೂ ಈ ಹಿಂದೆ ಹೇಳಲಾದ ಮಾಸ, ತಿಥಿವಾರಾದಿಗಳನ್ನು ದೀಕ್ಷಾಸ್ವೀಕಾರಕ್ಕೆ, ಅಪೇಕ್ಷಿಸತಕ್ಕದ್ದಲ್ಲ; ಒಂದು ಪಕ್ಷದಲ್ಲಿ ಈ ಕಾಲವಿಶೇಷಗಳೂ, ಆಗ ಒದಗಿಬಂದರೆ, ದೀಕ್ಷಾಸ್ವೀಕಾರದಿಂದ ಫಲಾಧಿಕ್ಯವು ದೊರೆಯುತ್ತದೆ (೭೮). ಬಾಲಕರಿಗೆ ನಾಮಕರಣ ಮತ್ತು ಉಪನಯನಗಳನ್ನು

---

1. ದೀಕ್ಷಾಸ್ವೀಕಾರಮಾಡುವ ವ್ಯಕ್ತಿಯ ಕುಂಡಲಿಯಲ್ಲಿ ಚಂದ್ರನಿರುವ ರಾಶಿಯಿಂದ, ೩—೬—೧೧ನೇ ರಾಶಿಗಳಲ್ಲಿ ಶನಿಯು ಇದ್ದರೆ, ಆತನಿಗೆ ಶನಿಯು 'ಅನುಕೂಲ'ನೆಂದೂ, ಉತ್ತಮ ಫಲದಾತನಾಗುವನೆಂದೂ, (ಮಕರ—ಕುಂಭ—ತುಲಾ ರಾಶಿಗಳು ಶನಿಯ ಸ್ವಂತ ಮನೆಗಳೆಂದೂ, ಶನಿಯು ಅಲ್ಲಿದ್ದರೆ ಉಚ್ಚನೆಂದೂ) ಜ್ಯೋತಿಷವು ಹೇಳುತ್ತದೆ.

ತ್ತಾನೆ); ಕ್ರಮೇಣ—ಕ್ರಮವಾಗಿ (ಅಪರೋಕ್ಷಜ್ಞಾನ-ಪ್ರಾರಬ್ಧ ಭೋಗಗಳನಂತರ), ಮುಕ್ತಿಂ-ಮೋಕ್ಷವನ್ನೂ ಅಪ್ನೋತಿ-ಹೊಂದುತ್ತಾನೆ; ತತಃ-ಅಲ್ಲಿಂದ (ಮುಕ್ತಸ್ಥಾನದಿಂದ), ಪುನಃ-ಮತ್ತೆ ನ ಆವರ್ತತೇ-ಸಂಸಾರಕ್ಕೆ ಬರುವುದಿಲ್ಲ.

ಆಷಾಢೇ ಕಾರ್ತಿಕೇ ಮಾಘೇ ವೈಶಾಖೇ ಮಾರ್ಗಶೀರ್ಷಕೇ ।
ಪುಷ್ಪಚಂದ್ರೇ ತಿಥೌ ತತ್ರ ದಶಮ್ಯಾದೌ ವಿಶೇಷತಃ ॥ ೭೫ ॥

ಬುಧಭಾರ್ಗವಜೀವಾನಾಂ ಶನೇರರ್ಕಸ್ಯ ವಾ ದಿನೇ ।
ಮೃದುಕ್ಷಿಪ್ರಧ್ರುವರ್ಕ್ಷೇಷು ಕುಯೋಗೈರ್ವರ್ಜಿತೇ ಶುಭೇ ॥ ೭೬ ॥

ಗೃಹ್ಣೀಯಾದ್ವೈಷ್ಣವೀಂ ದೀಕ್ಷಾಂ ಶ್ರವಣೇ ಚ ವಿಶೇಷತಃ ।
ಶನಿರ್ಯದಾನುಕೂಲಃ ಸ್ಯಾತ್ತದಾ ದೀಕ್ಷಾ ಫಲಾಧಿಕಾ ॥ ೭೭ ॥

ಆಷಾಢೇ-ಆಷಾಢದಲ್ಲಿ ಕಾರ್ತಿಕೇ-ಕಾರ್ತಿಕದಲ್ಲಿ ಮಾಘೇ-ಮಾಘದಲ್ಲಿ

---

ದೀಕ್ಷಾಸ್ವೀಕಾರಕಾಲವೂ ದೀಕ್ಷಾಫಲದ ಆಧಿಕ್ಯಕ್ಕೆ ಕಾರಣವಾಗುತ್ತದೆ; ಆಷಾಢ, ಕಾರ್ತಿಕ, ಮಾಘ, ವೈಶಾಖ, ಮಾರ್ಗಶಿರ ಮಾಸಗಳಲ್ಲಿಯೂ, ಶುಕ್ಲಪಕ್ಷದ ದಶಮ್ಯಾದಿ ತಿಥಿಗಳಲ್ಲಿಯೂ, ಬುಧ, ಶುಕ್ರ, ಬೃಹಸ್ಪತಿ, ಶನಿ, ರವಿವಾರಗಳಲ್ಲಿಯೂ, ಕುಯೋಗವರ್ಜಿತ ಶುಭಯೋಗದಲ್ಲಿಯೂ,[1] ಮೃದು, ಕ್ಷಿಪ್ರ, ಧ್ರುವತಾರೆಗಳಲ್ಲಿಯೂ[2] ವಿಶೇಷವಾಗಿ ಶ್ರವಣ ನಕ್ಷತ್ರದಲ್ಲಿಯೂ, ವಿಷ್ಣುದೀಕ್ಷೆಯನ್ನು ಸ್ವೀಕರಿಸಬೇಕು; ಶನಿಯು

1. ಯೋಗಗಳು, ೨೭; ವಿಷ್ಕಂಭ, ಪ್ರೀತಿ, ಆಯುಷ್ಮಾನ್ ಇತ್ಯಾದಿ; ಇವುಗಳ ವಿವರಗಳನ್ನು ಜ್ಯೋತಿಷಶಾಸ್ತ್ರದಿಂದ ತಿಳಿಯಬಹುದು. ಈ ೨೭ ಯೋಗಗಳಲ್ಲಿ ಸಾಮಾನ್ಯವಾಗಿ, ಶೂಲ, ಗಂಡ, ವ್ಯಾಘಾತ, ವ್ಯತೀಪಾತ, ವೈಧೃತಿ ಮೊದಲಾದ ಕೆಲವು, ಕುಯೋಗಗಳೆಂದು ಹೇಳಲ್ಪಡುತ್ತವೆ. ಇದಲ್ಲದೇ ದಗ್ಧಯೋಗ—ಮೃತ್ಯುಯೋಗಗಳು ಸಮಸ್ತ ಶುಭಕಾರ್ಯಗಳಲ್ಲಿ ನಿಂದ್ಯವೆಂದು ಹೇಳಲಾಗಿವೆ. ಇವು, ತದಿಗೆ-ಬುಧವಾರ, ನವಮಿ-ಶನಿವಾರ ಇತ್ಯಾದಿ ತಿಥಿ ವಾರ ಸಂಯೋಗದಿಂದಲೂ, ಭಾನುವಾರ-ಅನೂರಾಧ ಇತ್ಯಾದಿ ಕೆಲವು ವಿಶಿಷ್ಟವಾದ ವಾರ ನಕ್ಷತ್ರಗಳ ಯೋಗದಿಂದಲೂ, ಸಂಭವಿಸುವುವೆಂದು ಜ್ಯೋತಿಷಿಗಳು ಹೇಳುವರು. ಇಷ್ಟು ಮಾತ್ರವಲ್ಲ—೨೭ ವಿಷ್ಕಂಭಾದಿ ಯೋಗಗಳಲ್ಲಿ ನಿರ್ದಿಷ್ಟವಾದ ಕೆಲವು ಘಳಿಗೆಗಳು (ವಿಷ್ಕಂಭ-೩೧; ಪ್ರೀತಿ-೨೪ ಇತ್ಯಾದಿ) ತ್ಯಾಜ್ಯಕಾಲಗಳೆಂದೂ ಹೇಳಲಾಗಿದೆ.

2. ಚಿತ್ರ ರೇವತಿ, ಮೃಗಶಿರ, ಅನೂರಾಧಾ ನಕ್ಷತ್ರಗಳು 'ಮೃದು' ಸಂಜ್ಞೆಯುಳ್ಳವು; ಅಶ್ವಿನಿ, ಹಸ್ತ ಪುಷ್ಯ ನಕ್ಷತ್ರಗಳು 'ಕ್ಷಿಪ್ರ' ಎಂದು ಕರೆಯಲ್ಪಡುತ್ತವೆ; ರೋಹಿಣಿ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ನಕ್ಷತ್ರಗಳು 'ಸ್ಥಿರ' (ಧ್ರುವ) ಸಂಜ್ಞೆಯುಳ್ಳವುಗಳು. ಹೀಗೆಯೇ ಇತರ ನಕ್ಷತ್ರಗಳು ದಾರುಣ—ಉಗ್ರ—ಸಾಧಾರಣ—ಚರ ಇತ್ಯಾದಿ ನಾಮಗಳಿಂದ ಸೂಚಿಸಲ್ಪಡುತ್ತವೆ. ನಕ್ಷತ್ರಗಳು ಆಯಾ ಸಂಜ್ಞಾಪ್ರಕಾರದ ಫಲ ಕೊಡತಕ್ಕವುಗಳೆಂದು ಹೇಳಲಾಗುತ್ತದೆ.

ವೈಶಾಖೇ–ವೈಶಾಖದಲ್ಲಿ ಮಾರ್ಗಶೀರ್ಷಕೇ–ಮಾರ್ಗಶಿರಮಾಸದಲ್ಲಿ ಪುಷ್ಟಚಂದ್ರೇ–ಚಂದ್ರನು ವೃದ್ಧಿಹೊಂದುವ ಶುಕ್ಲಪಕ್ಷದ, ತಿಥೌ–ತಿಥಿಯಲ್ಲಿ ತತ್ರ–ಅದರಲ್ಲಿಯೂ, ವಿಶೇಷತಃ–ವಿಶೇಷವಾಗಿ (ಶ್ರೇಷ್ಠವೆಂದರೆ), ದಶಮ್ಯಾದೌ–ದಶಮೀ ಮೊದಲಾದ ತಿಥಿಗಳಲ್ಲಿ ಬುಧಭಾರ್ಗವಜೀವಾನಾಂ–ಬುಧ, ಶುಕ್ರ, ಬೃಹಸ್ಪತಿಗಳ, ವಾ–ಅಥವಾ, ಶನೇಃ–ಶನಿಯು, ಅರ್ಕಸ್ಯ–ಸೂರ್ಯನ—(ರವಿಯ), ದಿನೇ–ದಿನದಲ್ಲಿ ವಾರದಲ್ಲಿ ಕುಯೋಗೈಃ–ಕುಯೋಗಗಳಿಂದ, ವರ್ಜಿತೇ–ರಹಿತವಾದ, ಶುಭೇ–ಶುಭಯೋಗದಲ್ಲಿ ಮೃದುಕ್ಷಿಪ್ರ–ಧ್ರುವರ್ಕ್ಷೇಷು–ಮೃದು, ಕ್ಷಿಪ್ರ, ಧ್ರುವತಾರೆಗಳಲ್ಲಿ ವಿಶೇಷತಃ–ವಿಶೇಷವಾಗಿ, ಶ್ರವಣೇ–ಶ್ರವಣನಕ್ಷತ್ರದಲ್ಲಿ ವೈಷ್ಣವೀಂ ದೀಕ್ಷಾಂ–ವಿಷ್ಣುದೀಕ್ಷೆಯನ್ನು ಗೃಹ್ಣೀಯಾತ್–ಸ್ವೀಕರಿಸತಕ್ಕದ್ದು; ಯದಾ–ಯಾವಕಾಲದಲ್ಲಿ, ಶನಿಃ–ಶನಿಗ್ರಹವು, ಅನುಕೂಲಃ ಸ್ಯಾತ್–ಅನುಕೂಲವಾಗಿರುವುದೋ, ತದಾ–ಆಗ, ದೀಕ್ಷಾ–ದೀಕ್ಷೆಯ ಸ್ವೀಕಾರವು, ಫಲಾಧಿಕಾ–ಅಧಿಕಫಲವುಳ್ಳದ್ದು (ಆಗುತ್ತದೆ).

**ಗಂಗಾದಿಪುಣ್ಯತೀರ್ಥೇಷು ಚಂದ್ರಸೂರ್ಯಗ್ರಹೇ ತಥಾ ।**
**ಮಹಾಗುರುಸಮಾಜೇ ಚ ಕಾಲಂ ನೈವ ಪ್ರತೀಕ್ಷಯೇತ್ ॥ ೭೮ ॥**

**ತದಾನೀಂ ಯದಿ ಲಭ್ಯೇತ ಶುಭಕಾಲಸ್ತದಾಧಿಕಂ ।**

ಗಂಗಾದಿಪುಣ್ಯತೀರ್ಥೇಷು–ಗಂಗಾದಿಪುಣ್ಯತೀರ್ಥಗಳಲ್ಲಿ ತಥಾ–ಹಾಗೂ, ಚಂದ್ರಸೂರ್ಯಗ್ರಹಾದಿಷು–ಚಂದ್ರಸೂರ್ಯಗ್ರಹಣಗಳಲ್ಲಿ ಚ–ಮತ್ತು ಮಹಾಗುರುಸಮಾಜೇ–ಮಹಾಗುರುಗಳಿರುವ ಸಭೆಯಲ್ಲಿ (ಮಹಾಗುರುಗಳ ಸನ್ನಿಧಾನದಲ್ಲಿ), ಕಾಲಂ–(ದೀಕ್ಷಾಸ್ವೀಕಾರಕ್ಕೆ) ಕಾಲವನ್ನು ನೈವ ಪ್ರತೀಕ್ಷಯೇತ್–(ಪೂರ್ವೋಕ್ತಮಾಸ, ತಿಥಿ,

---

ಅನುಕೂಲನಾಗಿದ್ದಾಗ, ದೀಕ್ಷೆಗೆ ಫಲಾಧಿಕ್ಯವನ್ನು ತಿಳಿಯತಕ್ಕದ್ದು[1] (೭೫-೭೭). ಭಾಗೀರಥೀ ಮೊದಲಾದ ಪುಣ್ಯತೀರ್ಥಗಳಲ್ಲಿಯೂ, ಚಂದ್ರಸೂರ್ಯಗ್ರಹಣಗಳಲ್ಲಿಯೂ, ಮತ್ತು ಮಹಾಗುರುಗಳ ಸನ್ನಿಧಾನದಲ್ಲಿಯೂ ಈ ಹಿಂದೆ ಹೇಳಲಾದ ಮಾಸ, ತಿಥಿವಾರಾದಿಗಳನ್ನು ದೀಕ್ಷಾಸ್ವೀಕಾರಕ್ಕೆ, ಅಪೇಕ್ಷಿಸತಕ್ಕದ್ದಲ್ಲ; ಒಂದು ಪಕ್ಷದಲ್ಲಿ ಈ ಕಾಲವಿಶೇಷಗಳೂ, ಆಗ ಒದಗಿಬಂದರೆ, ದೀಕ್ಷಾಸ್ವೀಕಾರದಿಂದ ಫಲಾಧಿಕ್ಯವು ದೊರೆಯುತ್ತದೆ (೭೮). ಬಾಲಕರಿಗೆ ನಾಮಕರಣ ಮತ್ತು ಉಪನಯನಗಳನ್ನು

---

1. ದೀಕ್ಷಾಸ್ವೀಕಾರಮಾಡುವ ವ್ಯಕ್ತಿಯ ಕುಂಡಲಿಯಲ್ಲಿ ಚಂದ್ರನಿರುವ ರಾಶಿಯಿಂದ, ೩—೬—೧೧ನೇ ರಾಶಿಗಳಲ್ಲಿ ಶನಿಯು ಇದ್ದರೆ, ಆತನಿಗೆ ಶನಿಯು 'ಅನುಕೂಲ'ನೆಂದೂ, ಉತ್ತಮ ಫಲದಾತನಾಗುವನೆಂದೂ, (ಮಕರ—ಕುಂಭ—ತುಲಾ ರಾಶಿಗಳು ಶನಿಯ ಸ್ವಂತ ಮನೆಗಳೆಂದೂ, ಶನಿಯು ಅಲ್ಲಿದ್ದರೆ ಉಚ್ಚನೆಂದೂ) ಜ್ಯೋತಿಷವು ಹೇಳುತ್ತದೆ.

ದಿನ, ನಕ್ಷತ್ರ, ಯೋಗಾದಿಗಳನ್ನು) ನಿರೀಕ್ಷಿಸಬಾರದು (ಎಂದರೆ, ಕಾಲದ ಗುಣಾವಗುಣವನ್ನು ಗಮನಿಸಿದೇ ಪುಣ್ಯತೀರ್ಥಾದಿಗಳಲ್ಲಿ ದೀಕ್ಷೆಯನ್ನು ತೆಗೆದು ಕೊಳ್ಳಬೇಕು); ತದಾನೀಂ–ಆಗಲೇ (ಪುಣ್ಯತೀರ್ಥಕ್ಕೆ ಹೋದ ದಿನವೇ ಅಥವಾ ಗ್ರಹಣಗಳ ದಿನವೇ), ಯದಿ–ಒಂದು ವೇಳೆ, ಶುಭಕಾಲಃ–(ಪೂರ್ವೋಕ್ತ) ಶುಭಕಾಲವು, ಲಭ್ಯೇತ–ದೊರೆತರೆ (ಲಭಿಸಿದರೆ), ತದಾ–ಆಗ, ಅಧಿಕಂ–ದೀಕ್ಷಾಕರ್ಮವು ಫಲಾಧಿಕ್ಯ ವುಳ್ಳದ್ದಾಗುತ್ತದೆ.

ನಾಮಕರ್ಮಣಿ ಬಾಲಾನಾಂ ತಥೋಪನಯನೇಽಪಿ ಚ ॥ ೭೯ ॥

ದೀಕ್ಷಾಕಾಲಃ ಸ ವಿಜ್ಞೇಯಃ ಪಿತುಃ ಕುಲಗುರೋರಪಿ ।
ದೀಕ್ಷಾಂ ಗೃಹ್ಣೀತ ಯತ್ನೇನ ವಿಷ್ಣುಪ್ರೀಣನಹೇತವೇ ॥ ೮೦ ॥

ಬಾಲಾನಾಂ–ಬಾಲಕರ, ನಾಮಕರ್ಮಣಿ–ನಾಮಕರಣಕರ್ಮದಲ್ಲಿ (ನಾಮಕರಣ ಕಾಲದಲ್ಲಿ), ತಥಾ–ಹಾಗೂ, ಉಪನಯನೇ ಅಪಿ ಚ–ಉಪನಯನಕಾಲದಲ್ಲಿ ಸಹ, ಸಃ ದೀಕ್ಷಾಕಾಲಃ–ಅದೇ (ಶ್ರೇಷ್ಠವಾದ) ದೀಕ್ಷಾಕಾಲವೆಂದು, ವಿಜ್ಞೇಯಃ–ತಿಳಿಯತಕ್ಕದ್ದು; ಕುಲಗುರೋಃ–ಕುಲಗುರುಗಳಿಂದ, ಪಿತುಃ–ತಂದೆಯಿಂದ, ಅಪಿ–ಸಹ, ವಿಷ್ಣುಪ್ರೀಣನ ಹೇತವೇ–ಶ್ರೀವಿಷ್ಣುಪ್ರೀತ್ಯರ್ಥವಾಗಿ, ಯತ್ನೇನ–ಯತ್ನಪೂರ್ವಕವಾಗಿ, ದೀಕ್ಷಾಂ–ದೀಕ್ಷೆ ಯನ್ನು ಗೃಹ್ಣೀತ–ಸ್ವೀಕರಿಸತಕ್ಕದ್ದು.

ಶಿಖಾಯಜ್ಞೋಪವೀತಾಭ್ಯಾಂ ಯಥಾ ಹೀನೋ ನ ಕರ್ಮಸು ।
ಅಧಿಕಾರೀ ತಥಾ ನ ಸ್ಯಾತ್ತಪ್ತಚಕ್ರಾದಿವರ್ಜಿತಃ ॥ ೮೧ ॥

ಯಥಾ–ಹೇಗೆ, ಶಿಖಾಯಜ್ಞೋಪವೀತಾಭ್ಯಾಂ–ಶಿಖಾಯಜ್ಞೋಪವೀತಗಳಿಂದ (ಜುಟ್ಟು ಜನಿವಾರಗಳಿಂದ), ಹೀನಃ–ರಹಿತನಾದವನು (ಅವುಗಳಿಲ್ಲದವನು), ಕರ್ಮಸು–ವೇದೋಕ್ತ ಕರ್ಮಾನುಷ್ಠಾನದಲ್ಲಿ ಅಧಿಕಾರೀ ನ–ಅಧಿಕಾರಿಯಲ್ಲವೋ (ಕರ್ಮಾನುಷ್ಠಾನಕ್ಕೆ ಅನರ್ಹನೋ), ತಥಾ–ಹಾಗೆ, ತಪ್ತಚಕ್ರಾದಿವರ್ಜಿತಃ–ತಪ್ತಚಕ್ರಾದಿಗಳಿಲ್ಲದವನು, ನ ಸ್ಯಾತ್–(ಕರ್ಮಸು ಅಧಿಕಾರೀ–ಕರ್ಮಗಳನ್ನು ಆಚರಿಸಲರ್ಹನು) ಆಗುವದಿಲ್ಲ.

ಗಾಯತ್ರ್ಯಾದಿಷು ಮಂತ್ರೇಷು ವೇದಸ್ವಾಧ್ಯಯನಾದಿಷು ।
ಅತಪ್ತಚಕ್ರಗಾತ್ರೋಽಪಿ ನಾಧಿಕಾರೀ ಭವೇದ್ಧ್ರುವಂ ॥ ೮೨ ॥

---

ನೆರವೇರಿಸುವ ಕಾಲವು, ದೀಕ್ಷಾಸ್ವೀಕಾರಕ್ಕೆ ಪರಮಯೋಗ್ಯವಾದ ದೀಕ್ಷಾಕಾಲವೆನಿಸುತ್ತದೆ. ವಿಷ್ಣುದೀಕ್ಷೆಯನ್ನು ತಂದೆಯಿಂದಲೂ, ಕುಲಗುರುಗಳಿಂದ ಸಹ, ಶ್ರೀವಿಷ್ಣುವಿನ ಪ್ರೀತ್ಯರ್ಥವಾಗಿ, ಯತ್ನಪೂರ್ವಕವಾಗಿ ದೀಕ್ಷೆಯನ್ನು ಸ್ವೀಕರಿಸತಕ್ಕದ್ದು (೭೯-೮೦).

ಗಾಯತ್ರ್ಯಾದಿಷು ಮಂತ್ರೇಷು–ಗಾಯತ್ರೀ ಮೊದಲಾದ ಮಂತ್ರಗಳ ವಿಷಯದಲ್ಲಿ (ಮಂತ್ರಗಳ ಜಪದಲ್ಲಿ), ವೇದಸ್ಯ–ವೇದದ, ಅಧ್ಯಯನಾದಿಷು–ಅಧ್ಯಯನಾದಿಗಳಲ್ಲಿ ಅಪಿ–ಸಹ, ಅತಪ್ತಚಕ್ರಗಾತ್ರಃ–ತಪ್ತಚಕ್ರವನ್ನು ಧರಿಸದ ದೇಹವುಳ್ಳವನು, ಧ್ರುವಂ–ನಿಶ್ಚಯವಾಗಿಯೂ, ಅಧಿಕಾರೀ–ಅಧಿಕಾರಿಯು (ಅವುಗಳ ಆಚರಣೆಯಿಂದ ಹೊಂದ ಬೇಕಾದ ಫಲಕ್ಕೆ ಅರ್ಹನು), ನ ಭವೇತ್–ಆಗುವುದಿಲ್ಲ.

**ಮಂತ್ರಗ್ರಹಣಕಾಲೇ ತು ತಪ್ತಚಕ್ರಾದಿಧಾರಣಂ ।**
**ವೈಷ್ಣವೈಃ ಕ್ರಿಯತೇ ತದ್ಧಿ ಮಂತ್ರಷಾಡ್ಗುಣ್ಯಕೃದ್ಭವೇತ್ ॥ ೮೩ ॥**

ಮಂತ್ರಗ್ರಹಣಕಾಲೇ ತು–ಮಂತ್ರವನ್ನು (ಗುರುವಿನಿಂದ) ಸ್ವೀಕರಿಸುವ (ಉಪದೇಶ ವನ್ನು ಪಡೆಯುವ) ಕಾಲದಲ್ಲಿಯೇ, ತಪ್ತಚಕ್ರಾದಿಧಾರಣಂ– ತಪ್ತಚಕ್ರಾದಿಧಾರಣೆಯು, (ತಪ್ತಮುದ್ರಾಧಾರಣೆಯು), ವೈಷ್ಣವೈಃ–ವಿಷ್ಣು ಭಕ್ತರಿಂದ, ಕ್ರಿಯತೇ–ಮಾಡಲ್ಪಡುತ್ತದೆ; ತತ್–ಹೀಗೆ ಮಾಡುವುದು (ತಪ್ತಮುದ್ರೆಗಳನ್ನು ಗುರುಗಳಿಂದ ದೇಹದಲ್ಲಿ ಪಡೆಯುವುದು), ಮಂತ್ರ ಷಾಡ್ಗುಣ್ಯಕೃತ್–ಉಪದೇಶ ಹೊಂದಿದ ಮಂತ್ರಜಪದ ಫಲವು ಆರುಮಡಿ ಅಧಿಕವಾದುದು, ಭವೇತ್ ಹಿ–ಆಗುವುದು ನಿಶ್ಚಯ.

---

ಶಿಖಾಯಜ್ಞೋಪವೀತಗಳಿಲ್ಲದವನು ವೇದೋಕ್ತಸಂಧ್ಯಾವಂದನಾದಿ ಕರ್ಮಗಳನ್ನು ಆಚರಿಸಲು ಹೇಗೆ ಅನರ್ಹನೋ, (ಅಧಿಕಾರಿಯಲ್ಲವೋ—ಆತನ ಕರ್ಮಗಳು ಹೇಗೆ ವ್ಯರ್ಥವಾಗುವವೋ) ಹಾಗೆ ತಪ್ತಚಕ್ರಾದಿ ವಿಷ್ಣುಚಿಹ್ನೆಗಳನ್ನು ದೇಹದಲ್ಲಿ ಧರಿಸದಿದ್ದವನು (ಬಾಹ್ಯದೀಕ್ಷಾರಹಿತನು), ಆ ಕರ್ಮಗಳ ಆಚರಣೆಗೆ ಅಯೋಗ್ಯನೆನಿಸುತ್ತಾನೆ[1] (೮೧).

---

1. 'ತಪ್ತಚಕ್ರಂ ದ್ವಿಭುಜೇ ಧಾರ್ಯಮಿತಿ । ಅಗ್ನಿನಾ ವೈ ಹೋತ್ರಾ
ವಿಷ್ಣೋಃ ಸಾಯುಜ್ಯಂ ಸ ಲೋಕತಾಮಾಪ್ನೋತಿ ।'
(ಶುಕ್ಲ ಯಜುರ್ವೇದದ ಶತಪಥಬ್ರಾಹ್ಮಣ);
'ಅಗ್ನಿರ್ವೈ ಸಹಸ್ರಾರಃ ಸಹಸ್ರಾರೋ ನೇಮಿಃ ನೇಮಿನಾ ತಪ್ತತನುಃ
ಸಾಯುಜ್ಯಂ ಪ್ರಾಪ್ನುಯಾತ್ ॥' (ಸಾಮವೇದ);
'ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂ ತಸ್ತತ್ ಸಮಾಶತ ॥'
(ಋಗ್ವೇದ)

ಈ ಶ್ರುತಿಗಳ ಭಾವಾರ್ಥಗಳು ಕ್ರಮವಾಗಿ ಹೀಗಿವೆ :—

'ಹೋಮಾಗ್ನಿಯಲ್ಲಿ ರಚಿಸಿ, ಎರಡೂ ಭುಜಗಳಲ್ಲಿ ಧರಿಸಿದವನು, ಸಾಯುಜ್ಯ ಸಾಲೋಕ್ಯ ಮುಕ್ತಿಯನ್ನು ಹೊಂದುತ್ತಾನೆ.'

'ಅಗ್ನಿಯೇ ಸಹಸ್ರಾರವು; ಸಹಸ್ರಾರವೇ ನೇಮಿಯು; ನೇಮಿಯಿಂದ ತಪ್ತವಾದ ದೇಹವುಳ್ಳವನು, ಸಾಯುಜ್ಯವನ್ನು ಹೊಂದುತ್ತಾನೆ.'

ವಿನಾ ಮಂತ್ರಗ್ರಹಂ ಯತ್ತು ತಪ್ತಚಕ್ರಾದಿಧಾರಣಂ ।
ಪಾಪಾನಾಂ ನಾಶಕಂ ತಸ್ಮಾತ್ ಪುಣ್ಯಾನಾಂ ಚ ವಿವರ್ಧಕಂ ॥ ೮೪ ॥

ವಿಷ್ಣುಪ್ರೀತಿಕರಂಭೂಯಸ್ತತೋಽಪಿ ಪ್ರತ್ಯಹಂ ಲಿಖೇತ್ ।
ಸ್ವಸ್ವವರ್ಣೋಕ್ತಪುಂಡ್ರೇಷು ಹೃದಿಬಾಹೂದರಾದಿಷು ॥ ೮೫ ॥

ಚಕ್ರಾದೀನಿ ಯಥಾಸ್ಥಾನಂ ದ್ವಾರವತ್ಯಾದಿಮೃತ್ಸ್ನಯಾ ।

ಮಂತ್ರಗ್ರಹಂ ವಿನಾ—ಮಂತ್ರೋಪದೇಶವನ್ನು ಸ್ವೀಕರಿಸುವುದನ್ನು ಬಿಟ್ಟು, ಯತ್—

---

ಗಾಯತ್ರ್ಯಾದಿ ಮಂತ್ರಗಳನ್ನು ಜಪಿಸಲಿಕ್ಕೂ, ವೇದಗಳ ಅಧ್ಯಯನಾದಿಗಳನ್ನು[1] ಮಾಡಲಿಕ್ಕೂ, ದೇಹದಲ್ಲಿ ತಪ್ತಮುದ್ರೆಗಳನ್ನು ಧರಿಸದವನು ಅರ್ಹನಾಗುವುದಿಲ್ಲ(೮೨). ವಿಷ್ಣುಭಕ್ತರು, ಗುರುಗಳಿಂದ ಮಂತ್ರೋಪದೇಶವನ್ನು ಪಡೆಯುವಾಗ ಅವರಿಂದ ತಪ್ತಚಕ್ರಾದಿ ಮುದ್ರೆಗಳನ್ನೂ ಧರಿಸಬೇಕು—ಇದರಿಂದ, ಉಪದೇಶಗೊಂಡ ಮಂತ್ರಜಪವು ಆರರಷ್ಟು ಅಧಿಕಫಲಪ್ರಾಪಕವಾಗುತ್ತದೆ. ಇದು ಪ್ರಮಾಣಸಿದ್ಧ (೮೩). ಮಂತ್ರೋಪದೇಶವನ್ನು ಪಡೆಯದೇ ಗುರುಗಳಿಂದ ತಪ್ತಮುದ್ರಾಧಾರಣವನ್ನು ಮಾತ್ರ ಪಡೆಯುವುದೂ ವ್ಯರ್ಥವಲ್ಲ—ಮಹಾಫಲಪ್ರಾಪಕವಾದುದೇ; ತಪ್ತಚಕ್ರಾದಿ ಧಾರಣೆಯಿಂದ ಪಾಪಗಳ ನಾಶವೂ, ಪುಣ್ಯವೃದ್ಧಿಯೂ ಆಗುತ್ತದೆ; ಇದಕ್ಕಿಂತ ಹೆಚ್ಚಿನ ಫಲವೆಂದರೆ, ಶ್ರೀವಿಷ್ಣುವೂ ಪ್ರೀತನಾಗುತ್ತಾನೆ. ವಿಷ್ಣುಚಿಹ್ನೆಗಳನ್ನು ದೇಹದಲ್ಲಿ ಧರಿಸುವುದು, ವಿಷ್ಣುಪ್ರೀತಿಕರವಾದುದರಿಂದ, ವಿಷ್ಣುಭಕ್ತರೆಲ್ಲರೂ, ತಂತಮ್ಮ ವರ್ಣಗಳಿಗೆ

---

'ಪವಿತ್ರಂ ಚರಣಂ ನೇಮೀ ಪವಿಶಕ್ತ್ರಂ ಸುದರ್ಶನಂ ।
ಸಹಸ್ರಾರಂ ಪ್ರಾಕೃತಘ್ನಂ ಲೋಕಾಧಾರಂ ಮಹೌಜಸಂ ॥'
ಇವು ಹತ್ತು ಶ್ರೀವಿಷ್ಣುಚಕ್ರದ ನಾಮಗಳು.

'ಚತುರ್ಮುಖನಿಗೂ ಪ್ರಭುವಾದ ಹೇ ವಿಷ್ಣೋ! (ಬ್ರಹ್ಮಣಸ್ಪತೇ), ಸರ್ವತ್ರ ವ್ಯಾಪ್ತವಾದ ಪವಿತ್ರ ತೇಜಸ್ಸುಳ್ಳ ನಿನ್ನ ಚಕ್ರದಿಂದ ಚಿಹ್ನಿತವಾದ ದೇಹವುಳ್ಳ ನಾವು ಶತ್ರುರಹಿತರಾಗಿ (ಪಾಪವಿಮುಕ್ತರಾಗಿ) ನಿನ್ನ ಪರಮಪದವನ್ನು ಹೊಂದುತ್ತೇವೆ'; ಅತಪ್ತತನುಗಳು (ತಪ್ತಚಕ್ರವನ್ನು ಧರಿಸದ ದೇಹವುಳ್ಳವರು) ಉತ್ತಮಲೋಕವನ್ನು ಹೊಂದುವುದಿಲ್ಲ.

('ಶೃತಾಸ'ವೆಂದರೆ ದಹಿಸಲ್ಪಟ್ಟವುಗಳೆಂದರ್ಥ; 'ಶ್ರ' ಎಂದರೆ ದಹಿಸುವುದು, 'ಅಗ್ನಿದೂರ ಸಮೀಪಸ್ಥ ವಸ್ತುನ್ಯಾತ್ಮತ್ವ ಸಾಮ್ಯತಃ ।ಶೃತಾಸ ಇತಿಶಬ್ದಾರ್ಥೋ ದಾಹವಂತೋ ನ ತಾಪಸಾಃ'). ಏವಂ ಚ ಮೂರು ವೇದಗಳು ತಪ್ತಚಕ್ರಧಾರಣೆಯನ್ನು ವಿಧಿಸುತ್ತವೆ. ಆದ್ದರಿಂದ ಅದಿಲ್ಲದೇ (ಈ ಬಾಹ್ಯವಿಷ್ಣುದೀಕ್ಷೆಯ ವಿನಹ) ಮೋಕ್ಷವಿಲ್ಲ—ಮೋಕ್ಷಸಾಧಕಗಳೆಂಬ ವಿಹಿತಕರ್ಮಾಚರಣೆಯೂ ವ್ಯರ್ಥ.

1. ಅಧ್ಯಯನಾದಿಗಳೆಂಬಲ್ಲಿರುವ 'ಆದಿ' ಶಬ್ದದಿಂದ, ಅಧ್ಯಾಪನ, ಯಜನ,—ಯಾಜನ, ದಾನ ಪರಿಗ್ರಹಗಳೂ ಸೂಚಿತವಾಗಿವೆ—ವೇದೋಕ್ತ ಕರ್ಮಾನುಷ್ಠಾನಗಳಲ್ಲಿ ಬ್ರಾಹ್ಮಣಾದಿ ದ್ವಿಜರು, ತಂತಮ್ಮ ವರ್ಣೋಚಿತ ವೇದವಿಹಿತ ಕರ್ಮಗಳಲ್ಲಿ ಅನಧಿಕಾರಿಗಳಾಗುತ್ತಾರೆ.

ಯಾವ, ತಪ್ತಚಕ್ರಾದಿಧಾರಣಂ–ತಪ್ತಚಕ್ರಾದಿಗಳ ಧಾರಣವೋ (ಮಂತ್ರೋಪದೇಶವಿಲ್ಲದ ಕೇವಲ ತಪ್ತಚಕ್ರಾದಿಧಾರಣವು), ತತ್–ಅದು, ಪಾಪಾನಾಂ–ಪಾಪಗಳ, ನಾಶಕಂ–ನಾಶ ಮಾಡತಕ್ಕದ್ದೂ ಚ–ಮತ್ತು ಪುಣ್ಯಾನಾಂ–ಪುಣ್ಯಗಳ, ವಿವರ್ಧಕಂ–ವೃದ್ಧಿಗೊಳಿಸತಕ್ಕದ್ದೂ ಭೂಯಃ–ಅತಿಶಯವಾಗಿ, ವಿಷ್ಣುಪ್ರೀತಿಕರಂ–ಶ್ರೀವಿಷ್ಣುಪ್ರೀತಿಯನ್ನುಂಟುಮಾಡುವುದೂ, ಸ್ಯಾತ್–ಆಗುತ್ತದೆ; ತತಃ–ಆದ್ದರಿಂದ, ಅಪಿ–ಸಹ (ಶ್ರೀವಿಷ್ಣುಪ್ರೀತಿಜನಕವಾದ್ದರಿಂದ ಸಹ), ಹೃದಿಬಾಹೂದರಾದಿಷು–ಹೃದಯ (ಎದೆ), ಬಾಹು (ಭುಜಗಳು), ಉದರ (ಹೊಟ್ಟೆ) ಮೊದಲಾದ ದೇಹ ಭಾಗಗಳಲ್ಲಿ ಸ್ವಸ್ವರ್ಣೋಕ್ತಪುಂಡ್ರೇಷು–ತಂತಮ್ಮ ವರ್ಣಗಳಿಗೆ ವಿಧಿ ಸಲ್ಪಟ್ಟಿರುವ ಪುಂಡ್ರ (ನಾಮ)ಗಳಲ್ಲಿ (ನಾಮಗಳ ಮೇಲೆ), ಯಥಾಸ್ಥಾನಂ–ವಿಧ್ಯುಕ್ತ ಸ್ಥಾನಗಳಲ್ಲಿ, ದ್ವಾರವತ್ಯಾದಿ–ದ್ವಾರಕಾ (ದ್ವಾರಾವತೀ) ಮೊದಲಾದ ಪವಿತ್ರಕ್ಷೇತ್ರಗಳ, ಮೃತ್ಸ್ನಯಾ–ಮೃತ್ತಿಕೆಯಿಂದ (ಗೋಪೀ ಚಂದನಾದಿ ಮೃತ್ತಿಕೆಯಿಂದ), ಪ್ರತ್ಯಹಂ–ಪ್ರತಿನಿತ್ಯವೂ, ಚಕ್ರಾದೀನಿ–ಚಕ್ರ (ಶಂಖ, ಗದಾ, ಪದ್ಮ) ಮೊದಲಾದವುಗಳನ್ನು ಲಿಖೇತ್–ಲೇಪಿಸಿಕೊಳ್ಳಬೇಕು (ಗುರ್ತಿಸಿಕೊಳ್ಳಬೇಕು).

**ವಿಧಿನಾಗ್ನಿಂ ಪ್ರತಿಷ್ಠಾಪ್ಯ ತಿಲಾಜ್ಯೇನ ಘೃತೇನ ವಾ ॥ ೮೬ ॥**

**ಸಹಸ್ರಂ ವ್ಯಾಹೃತೀರ್ಹುತ್ವಾ ವಷಟ್ ತೇ ವಿಷ್ಣುಮಂತ್ರತಃ ।**
**ಅಷ್ಟೋತ್ತರಶತಂ ಹುತ್ವಾ ಪ್ರತ್ಯೇಕಂ ಚ ತತಃ ಪರಂ ॥ ೮೭ ॥**

**ಹೋಮಶೇಷಂ ಸಮಾಪ್ಯಾಗ್ನೌ ಚಕ್ರಶಂಖೌ ಪ್ರತಾಪಯೇತ್ ।**

ವಿಧಿನಾ–ವಿಧಿಪೂರ್ವಕವಾಗಿ (ವಿಧ್ಯುಕ್ತಪ್ರಕಾರವಾಗಿ), ಅಗ್ನಿಂ–ಅಗ್ನಿಯನ್ನು ಪ್ರತಿಷ್ಠಾಪ್ಯ–ಪ್ರತಿಷ್ಠಿಸಿ (ಅಗ್ನಿದೇವನನ್ನು ಸ್ಥಾಪನೆಮಾಡಿ), ತಿಲಾಜ್ಯೇನ–ಎಳ್ಳುತುಪ್ಪದಿಂದ (ಇವುಗಳ ಮಿಶ್ರಣದಿಂದ), ವಾ–ಅಥವಾ, ಘೃತೇನ–ತುಪ್ಪದಿಂದ ಮಾತ್ರ, ಸಹಸ್ರಂ–

---

(ಜಾತಿಗೆ) ವಿಧಿಸಲಾಗಿರುವ ನಿಯಮಗಳನ್ನನುಸರಿಸಿ,[1] ತಾವು, ಹೃದಯ, ಭುಜ, ಉದರ ಮೊದಲಾದ ಸ್ಥಳಗಳಲ್ಲಿ ಧರಿಸುವ ನಾಮಗಳ ಮೇಲೆ, ವಿಧಿಗಳಲ್ಲಿ ಹೇಳಲಾಗುವಂತೆ, ಗೋಪೀಚಂದನಾದಿ ಮೃತ್ತಿಕೆಯಿಂದ, ಚಕ್ರಾದಿ ಚಿಹ್ನೆಗಳನ್ನು ನಿತ್ಯವೂ, ಧರಿಸತಕ್ಕದ್ದು (೮೪-೮೫). ತಪ್ತಚಕ್ರಾದಿಗಳ ಧಾರಣಕ್ರಮ ಹೇಗೆಂದರೆ:—ವಿಧ್ಯುಕ್ತಕ್ರಮದಿಂದ ಅಗ್ನಿ ಪ್ರತಿಷ್ಠೆಯನ್ನು ಮಾಡಿ, ಎಳ್ಳುತುಪ್ಪಗಳ ಮಿಶ್ರಣದಿಂದ ಅಥವಾ ತುಪ್ಪದಿಂದ ೧೦೦೦ (ಒಂದು ಸಾವಿರ) ಹೋಮಗಳನ್ನು, ವ್ಯಾಹೃತಿಮಂತ್ರದಿಂದ ಅರ್ಪಿಸಿ, ವಷಟ್ಕಾರ ರೂಪದ ವಿಷ್ಣುಮಂತ್ರದಿಂದ (೧೦೮) ನೂರೆಂಟು ಹೋಮಗಳನ್ನೂ, ವಿಧ್ಯುಕ್ತ ಅವಶಿಷ್ಟ ಹೋಮಗಳನ್ನು ಹೋಮಶೇಷದಿಂದಲೂ ಮಾಡಿ, ಅಗ್ನಿಕಾರ್ಯವನ್ನು ಮುಗಿಸಿ, ಆ

---

1. ಈ ಮುಂತಾದ ನಿಯಮಗಳು ಈ ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗುತ್ತದೆ.

ಸಾವಿರಾವರ್ತಿ, ವ್ಯಾಹೃತೀ–ವ್ಯಾಹೃತಿ ಮಂತ್ರಗಳನ್ನು (ಉಚ್ಚರಿಸಿ) (ಭೂರ್ಭುವಸ್ಸ್ವ–ಎಂಬುದು ವ್ಯಾಹೃತಿ), ಹುತ್ವಾ–ಹೋಮಮಾಡಿ, (ಮತ್ತು) ವಷಟ್‌ಕೇ–'ವಷಟ್‌ಕೇ' ಎಂಬ ವಷಟ್ಕಾರ ರೂಪದ, ವಿಷ್ಣುಮಂತ್ರತಃ–ವಿಷ್ಣುಮಂತ್ರದಿಂದ, ಅಷ್ಟೋತ್ತರಶತಂ–ನೂರೆಂಟಾವರ್ತಿ, ಹುತ್ವಾ–ಹೋಮಿಸಿ, ತತಃಪರಂ–ಆ ನಂತರ, ಪ್ರತ್ಯೇಕಂ–ಪ್ರತ್ಯೇಕವಾದ, ಹೋಮಶೇಷಂ–ಅವಶಿಷ್ಟಹೋಮಗಳನ್ನು ಸಮಾಪ್ಯ–ಮುಗಿಸಿ, ಅಗ್ನೌ–ಅಗ್ನಿಯಲ್ಲಿ ಚಕ್ರಶಂಖೌ–ಚಕ್ರ ಮತ್ತು ಶಂಖಗಳನ್ನು ಪ್ರತಾಪಯೇತ್–ದಹಿಸಬೇಕು (ಕಾಸಬೇಕು).

ಅಭಿವಾದನತಃ ಪಶ್ಚಾತ್ ಪ್ರಪನ್ನಂ ವಿಷ್ಣುತತ್ಪರಂ ॥ ೮೮ ॥

ಪಿತಾವಾಪಿ ಗುರುರ್ವಾಪಿ ಯಃ ಕೋಪಿ ಹಿ ಮಹಾನ್ ಭವೇತ್ ।
ಸ ದಹೇದ್ದಕ್ಷಿಣೇ ಬಾಹೌ ಚಕ್ರಂ ಶಂಖಂ ಚ ವಾಮತಃ ॥ ೮೯ ॥

ಸ್ತನಯೋರೂರ್ಧ್ವತಶ್ಚಾಪಿ ಸ್ವೇಚ್ಛಯಾ ಚ ತಥೋದರೇ ।
ಏವಂ ಮುದ್ರಾಪಂಚಕಂ ವಾ ಮುದ್ರಾದ್ವಯಮಥಾಪಿ ವಾ ॥ ೯೦ ॥

ಗೃಹ್ಣೀಯಾತ್ತು ಪ್ರಯತ್ನೇನ ಬಾಹ್ಯದೀಕ್ಷಾ ತು ಸಾ ಭವೇತ್ ।

ಅಭಿವಾದನತಃ ಪಶ್ಚಾತ್–ಅಗ್ನಿಯನ್ನು ನಮಸ್ಕರಿಸಿದ ನಂತರ, ವಿಷ್ಣುತತ್ಪರಂ–ಶ್ರೀವಿಷ್ಣುಸರ್ವೋತ್ತಮತ್ವಜ್ಞಾನದಿಂದ, ವಿಷ್ಣುಭಕ್ತನಾದ, ಪ್ರಪನ್ನಂ–(ದೀಕ್ಷಾರ್ಥವಾಗಿ) ಬಂದಿರುವ (ಶರಣುಹೊಂದಿರುವ) ಮನುಷ್ಯನನ್ನು, ಪಿತಾವಾಪಿ–ತಂದೆಯಾಗಲಿ, ಗುರುರ್ವಾಪಿ–ಗುರುವಾಗಲಿ, ಯಃ ಕಃ ಅಪಿ–ಯಾರಾದರಾಗಲಿ, ಮಹಾನ್‌ಭವೇತ್–ಮಹಾತ್ಮನಾದ, (ಪೂಜ್ಯನಾದ), ಸಃ–ಒಬ್ಬನು, ದಹೇತ್–(ದೇಹವನ್ನು) ಮುದ್ರಿಸಬೇಕು (ತಪ್ತಚಕ್ರಾದಿಗಳನ್ನು ದೇಹಕ್ಕೆ ಒತ್ತಬೇಕು); ದಕ್ಷಿಣೇಬಾಹೌ–ಬಲಭುಜದಲ್ಲಿ, ಚಕ್ರಂ–ಚಕ್ರವನ್ನೂ, ವಾಮತಃ–ಎಡಭುಜದಲ್ಲಿ, ಶಂಖಂ ಚ–ಶಂಖವನ್ನೂ, ಸ್ತನಯೋಃ–ಎದೆಯ

---

ಅಗ್ನಿಯಲ್ಲಿ ಶರೀರದಲ್ಲಿ ಮುದ್ರಿಸಲು ಉಪಯೋಗಿಸುವ ಚಕ್ರಶಂಖಗಳನ್ನು ಕಾಯಿಸಬೇಕು (ದಹಿಸಬೇಕು) (೮೭-೮೭). ಅಗ್ನಿನಮಸ್ಕಾರದ ನಂತರ, ದೀಕ್ಷಾರ್ಥವಾಗಿ ಪ್ರಾಪ್ತನಾಗಿರುವ ವಿಷ್ಣುತತ್ಪರನಾದ ಭಕ್ತನಿಗೆ, ತಂದೆಯಾಗಲಿ, ಗುರುವಾಗಲಿ ಅಥವಾ ಸದ್ಗುಣಗಳಿಂದ ಪೂಜ್ಯರಾದ ಅನ್ಯರು ಯಾರಾದರೊಬ್ಬರು, ಮುದ್ರೆಯನ್ನು ಕೊಡಬೇಕು (ದೇಹದಲ್ಲಿ ಒತ್ತಬೇಕು); ಬಲಭುಜದಲ್ಲಿ ಚಕ್ರವನ್ನೂ ಎಡಭುಜದಲ್ಲಿ ಶಂಖವನ್ನೂ ಹೀಗೆಯೇ ಬಲಸ್ತನಭಾಗದಲ್ಲಿ ಚಕ್ರವನ್ನೂ ಎಡಸ್ತನಭಾಗದಲ್ಲಿ ಶಂಖವನ್ನೂ, ಇಚ್ಛಾನುಸಾರ ಹೊಟ್ಟೆಯಮೇಲೆ ಒಂದು ಚಕ್ರವನ್ನೂ ಮುದ್ರಿಸಬೇಕು. ಹೀಗೆ ಪಂಚಮುದ್ರೆಗಳನ್ನಾಗಲಿ ಅಥವಾ ಎರಡನ್ನು ಮಾತ್ರವಾಗಲಿ (ಬಲ ಎಡಭುಜಗಳಲ್ಲಿ ಮಾತ್ರವಾಗಲಿ) ತಪ್ತ ಚಕ್ರ ಶಂಖಮುದ್ರೆಗಳನ್ನು ಸ್ವೀಕರಿಸಬೇಕು.

ಎಡಬಲಭಾಗಗಳ, ಊರ್ಧ್ವತಃ–ಮೇಲ್ಭಾಗದಲ್ಲಿಯೂ (ಬಲಭಾಗದಲ್ಲಿ ಚಕ್ರವನ್ನೂ ಎಡಭಾಗದಲ್ಲಿ ಶಂಖವನ್ನೂ), ಚ–ಮತ್ತು (ಸ್ವೇಚ್ಛಯಾ–ಗುರುವಿನ) ಇಚ್ಛಾನುಸಾರವಾಗಿ, ತಥಾ–ಹಾಗೆಯೇ (ಚಕ್ರವನ್ನು), ಉದರೇ ಅಪಿ–ಉದರದಲ್ಲಿಯೂ (ಹೊಟ್ಟೆಯ ಮೇಲೂ), ಏವಂ–ಹೀಗೆ, ಮುದ್ರಾಪಂಚಕಂ ವಾ–ಐದು ಮುದ್ರೆಗಳನ್ನಾಗಲಿ, ಮುದ್ರಾದ್ವಯಂ ಅಥಾಪಿ–ಎರಡೇ ಮುದ್ರೆಗಳನ್ನಾಗಲಿ (ಬಲಎಡಭುಜಗಳ ಮೇಲೆ ಎರಡನ್ನಾಗಲಿ), ಪ್ರಯತ್ನೇನ–ಯತ್ನಪೂರ್ವಕ (ಅವಕಾಶವನ್ನು ಕಲ್ಪಿಸಿಕೊಂಡು–ಅವಕಾಶ ಬಂದೊದಗಿದಾಗ), ಗೃಹ್ಣೀಯಾತ್ ತು–ಸ್ವೀಕರಿಸಲೇಬೇಕು; ಸಾ–ಅದು, ಬಾಹ್ಯದೀಕ್ಷಾ–ಬಾಹ್ಯದೀಕ್ಷೆಯು, ಭವೇತ್–ಆಗುತ್ತದೆ (ಹೀಗೆ ಮುದ್ರೆಯನ್ನು ಧರಿಸುವುದು ಬಾಹ್ಯದೀಕ್ಷೆಯು).

**ಬಾಲಾನಾಮುದರೇಷ್ವೇವ ಬಾಹ್ವೋರೇವ ಹಿ ಯೋಷಿತಾಂ ॥ ೯೦ ॥**

**ಶೂದ್ರಾದೀನಾಂ ತಥೈವ ಸ್ಯಾನ್ಮುದ್ರಾದ್ವಿತಯಮೇವ ಹಿ ।**
**ಶೂದ್ರಾದಿಯೋಷಿತಾದೀನಾಂ ನ ದಹೇತ್ ಹೋಮವಹ್ನಿನಾ ॥ ೯೨ ॥**

ಬಾಲಾನಾಂ–ಬಾಲಕರಿಗೆ (ಅನುಪನೀತರಿಗೆ), ಉದರೇಷು ಏವ–ಹೊಟ್ಟೆಯ ಮೇಲೆ ಮಾತ್ರ (ತಪ್ತಚಕ್ರವನ್ನು ಮುದ್ರಿಸಬೇಕು); ಯೋಷಿತಾಂ–ಸ್ತ್ರೀಯರಿಗೆ, ಬಾಹ್ವೋಃ–ಬಾಹುಗಳಲ್ಲಿ (ಕೈಗಳಮೇಲೆ) ಮಾತ್ರ (ಬಲ ಎಡಗೈಗಳಮೇಲೆ ಕ್ರಮವಾಗಿ ಚಕ್ರಶಂಖಗಳನ್ನು ಮಾತ್ರ ಧಾರಣಮಾಡಿಸಬೇಕು); ತಥಾ–ಹಾಗೂ, ಶೂದ್ರಾದೀನಾಂ ಏವ–ಶೂದ್ರಾದಿಗಳಿಗೂ, ಮುದ್ರಾದ್ವಿತಯಂ ಏವ–ಎರಡು ಮುದ್ರೆಗಳು ಮಾತ್ರವೇ; ಶೂದ್ರಾದಿ–ಯೋಷಿತಾದೀನಾಂ–ಶೂದ್ರಾದಿಗಳು ಹಾಗೂ ಸ್ತ್ರೀಯರೇ ಮೊದಲಾದವರಿಗೆ, ಹೋಮವಹ್ನಿನಾ–ಹೋಮಾಗ್ನಿಯಿಂದ, ನ ದಹೇತ್–ಚಕ್ರಾದಿಗಳನ್ನು ದಹಿಸಕೂಡದು (ಹೋಮಾಗ್ನಿಯಲ್ಲಿ ಕಾಸಿದ ಚಕ್ರಾದಿಗಳಿಂದ ಮುದ್ರೆಗಳನ್ನು ಕೊಡಬಾರದು).

**ದ್ವಿಜಾನಾಮೇವ ಹೋಮಾಗ್ನಿ ತಪ್ತಚಕ್ರಾದಿಧಾರಣಂ ।**
**ದ್ವಿಜಾನಾಂ ಯೋಷಿತೋ ಬಾಲಾಶ್ಚಕ್ರಶಂಖಾದಿಮುದ್ರಯಾ ॥ ೯೩ ॥**

**ಹೋಮಾಗ್ನಿನಾಪಿ ದಗ್ಧವ್ಯಾಃ ಶೂದ್ರಾದೀನ್ ನ ತಥಾ ದಹೇತ್ ।**

---

ಯತ್ನಪೂರ್ವಕವಾಗಿ ತಪ್ತಮುದ್ರಾಧಾರಣೆಯನ್ನು ಪಡೆಯಬೇಕು. ಇದೇ ಬಾಹ್ಯದೀಕ್ಷೆ ಎನಿಸುತ್ತದೆ (೮೮-೯೦). ಬಾಲಕರಿಗೆ ಹೊಟ್ಟೆಯಮೇಲೆ ಮಾತ್ರ ಒಂದು ಚಕ್ರವನ್ನೂ ಸ್ತ್ರೀಯರಿಗೆ ಬಲ ಎಡ ಕೈಗಳಮೇಲೆ ಮಾತ್ರ ಕ್ರಮವಾಗಿ ಚಕ್ರಶಂಖಗಳನ್ನು ಮುದ್ರಿಸಬೇಕು (ಸ್ತ್ರೀಯರಿಗೆ ಉದರದಮೇಲೂ ಸ್ತನಭಾಗಗಳಲ್ಲಿಯೂ ಮುದ್ರಿಸಕೂಡದು); ಸ್ತ್ರೀಯರಂತೆಯೇ ಶೂದ್ರಾದಿ ಕೀಳುಜಾತಿಯವರಿಗೂ ಎರಡೇ ಮುದ್ರೆಗಳು

ಹೋಮಾಗ್ನಿತಪ್ತಚಕ್ರಾದಿಧಾರಣಂ–ಹೋಮಾಗ್ನಿಯಲ್ಲಿ ದಹಿಸಿದ ಚಕ್ರಾದಿಗಳ ಧಾರಣವು, ದ್ವಿಜಾನಾಂ ಏವ–ದ್ವಿಜರಿಗೆ ಮಾತ್ರ (ಬ್ರಾಹ್ಮಣ ಕ್ಷತ್ರಿಯ ವೈಶ್ಯವರ್ಣದವರಿಗೆ ಮಾತ್ರ); ದ್ವಿಜಾನಾಂ–ದ್ವಿಜರ, ಯೋಷಿತಃ–ಸ್ತ್ರೀಯರು, ಚ–ಮತ್ತು, ಬಾಲಾಃ–ಬಾಲಕರು, ಚಕ್ರಶಂಖಾದಿಮುದ್ರಯಾ–ಚಕ್ರಶಂಖ ಮೊದಲಾದ ಮುದ್ರೆಯಿಂದ, ಹೋಮಾಗ್ನಿನಾ ಅಪಿ–ಹೋಮಾಗ್ನಿಯಿಂದ ಸಹ, ದಗ್ಧವ್ಯಾಃ–ದಹಿಸಲ್ಪಡಲು ಅರ್ಹರು; (ಹೋಮಾಗ್ನಿಯಲ್ಲಿ ದಹಿಸಿದ ಚಕ್ರಾದಿಗಳಿಂದ ಮುದ್ರೆಗಳನ್ನು ಹೊಂದಲು ದ್ವಿಜರ ಸ್ತ್ರೀಯರು ಮತ್ತು ಮಕ್ಕಳು ಸಹ ಅರ್ಹರು); ಶೂದ್ರಾದೀನ್–ಶೂದ್ರಾದಿಗಳನ್ನು, ತಥಾ–ಹಾಗೆ (ಹೋಮಾಗ್ನಿ ದಗ್ಧಚಕ್ರಾದಿಗಳಿಂದ), ನ ದಹೇತ್–ದೇಹವನ್ನು (ಮುದ್ರಿಸತಕ್ಕದ್ದಲ್ಲ); (ಚಕ್ರಾದಿಗಳನ್ನು ಹೋಮಾಗ್ನಿಯಲ್ಲಿ ಕಾಯಿಸಕೂಡದು).

ಮಂತ್ರಂ ವೋಪದಿಶೇತ್ ಪಶ್ಚಾತ್ತದ್ಯೋಗ್ಯತಯಾ ಗುರುಃ ॥ ೯೪ ॥

ತ್ರಿವಾರಮುಪದೇಶಃ ಸ್ಯಾದಂತೇ ಶಿಷ್ಯೋ ನಮೇದಪಿ ।
ಪ್ರಸನ್ನೋ ಭವತಾದ್ವಿಷ್ಣುಸ್ತತ್ತನ್ಮಂತ್ರಾಧಿದೇವತಾ ॥ ೯೫ ॥

ಇತ್ಯಾಶಿಷಂ ಪ್ರಯುಂಜ್ಯಾಥ ನ್ಯಸೇತ್ತನ್ಮಸ್ತಕೇ ಕರಂ ।
ಪರಸ್ಪರಂ ನಿರೀಕ್ಷ್ಯಾಥ ಪ್ರೀತ್ಯಾ ಶಿಷ್ಯಂ ವಿಸರ್ಜಯೇತ್ ॥ ೯೬ ॥

ಕೃಪಯಾ ತತ್ಪ್ರಗೃಹೀತಂ ವಾಸುದೇವೇ ಸಮರ್ಪಯೇತ್ ।
ಇತಿ ದೀಕ್ಷಾವಿಧಾನಂ ತೇ ಕಥಿತಾಸ್ತಾಧಿಕಾರಿಣಃ ।
ಬ್ರಹ್ಮನ್ ಪೃಷ್ಟಂ ತ್ವಯಾ ಯತ್ತು ಕಿಮನ್ಯತ್ ಶ್ರೋತುಮಿಚ್ಛಸಿ ॥ ೯೭ ॥

ಗುರುಃ–ಗುರುವು (ತಪ್ತಮುದ್ರೆಯನ್ನು ಕೊಡುವ ಗುರುವು), ಪಶ್ಚಾತ್–ಮುದ್ರಾಧಾರಣೆಯನಂತರ ಮೇಲೆ, ಯೋಗ್ಯತಯಾ–ಶಿಷ್ಯನ ಯೋಗ್ಯತಾನುಗುಣವಾಗಿ, ಮಂತ್ರಂ ವಾ–ಮಂತ್ರವನ್ನಾದರೂ, ಉಪದಿಶೇತ್–ಉಪದೇಶಮಾಡಬೇಕು; ಉಪದೇಶಃ–

---

ವಿಹಿತವಾಗಿವೆ—ಇದರಲ್ಲಿ ಸಹ ವಿಶೇಷವೇನೆಂದರೆ;—ಶೂದ್ರಾದಿ ಸ್ತ್ರೀ ಮೊದಲಾದವರಿಗೆ ಹೋಮಾಗ್ನಿಯಲ್ಲಿ ದಹಿಸಿದ (ಕಾಯಿಸಿದ) ಚಕ್ರಾದಿಗಳಿಂದ ಮುದ್ರೆಗಳನ್ನು ಕೊಡಬಾರದು (೯೧-೯೨). ಹೋಮಾಗ್ನಿಯಲ್ಲಿ ದಹಿಸಿದ ಚಕ್ರಾದಿಗಳಿಂದ ಮುದ್ರಾಧಾರಣೆಯನ್ನು ಮಾಡಿಸುವುದು ದ್ವಿಜರಿಗೂ ದ್ವಿಜರ ಸ್ತ್ರೀಯರಿಗೂ ಮಕ್ಕಳಿಗೂ ಯುಕ್ತವಾಗುತ್ತದೆ (ವಿಧಿಯಿಂದ ಅವಕಾಶವಿದೆ); ಶೂದ್ರಾದಿಗಳಿಗೆ ಮಾತ್ರ, ಹಾಗಲ್ಲ—ಹೋಮಾಗ್ನಿ ದಗ್ಧ ಚಕ್ರಾದಿಗಳನ್ನು ಅವರಿಗೆ ಮುದ್ರಿಸಕೂಡದು (೯೩). ತಪ್ತಮುದ್ರೆಯನ್ನು ಧಾರಣಮಾಡಿಸುವ ಗುರುವು, ಶಿಷ್ಯನ ಯೋಗ್ಯತಾನುಗುಣವಾದ ಮಂತ್ರವನ್ನೂ, ಮುದ್ರಾಧಾರಣೆಯ ನಂತರ, ಉಪದೇಶಿಸಬೇಕು. ಮಂತ್ರವನ್ನು ಮೂರಾವರ್ತಿ ಉಪದೇಶಿಸಬೇಕು—ನಂತರ

ಮಂತ್ರೋಪದೇಶವು, ತ್ರಿವಾರಂ–ಮೂರಾವರ್ತಿ, ಸ್ಯಾತ್–ಮಾಡಲ್ಪಡಬೇಕು; ಅಂತೇ–ಉಪದೇಶಾನಂತರ, ಶಿಷ್ಯಃ ಅಪಿ–ಶಿಷ್ಯನಾದರೂ, ನಮೇತ್–ನಮಸ್ಕಾರ ಮಾಡಬೇಕು; ತತ್ತನ್ಮಂತ್ರಾಧಿದೇವತಾ–(ಉಪದೇಶಿಸಲಾದ) ಆಯಾ ಮಂತ್ರಗಳ ಅಧಿದೇವತೆಯಾದ (ಮುಖ್ಯಪ್ರತಿಪಾದ್ಯನೂ ಸರ್ವೋತ್ತಮನೂ ಆದ), ವಿಷ್ಣುಃ–ಶ್ರೀವಿಷ್ಣುವು, ಪ್ರಸನ್ನಃ–ಪ್ರಸನ್ನನು, ಭವತಾತ್–ಆಗಲಿ, ಇತಿ–ಎಂದು, ಆಶಿಷಂ–ಆಶೀರ್ವಾದವನ್ನು ಪ್ರಯುಂಜ್ಯ–ಮಾಡಿ, (ಶಿಷ್ಯನನ್ನು ಆಶೀರ್ವದಿಸಿ), ಅಥ–ನಂತರ, ತನ್ಮಸ್ತಕೇ–ಆ ಶಿಷ್ಯನ ತಲೆಯಲ್ಲಿ ಕರಂ–ಹಸ್ತವನ್ನು ನ್ಯಸೇತ್–ಇಡಬೇಕು; ಅಥ–ನಂತರ, ಪರಸ್ಪರಂ–ಅನ್ಯೋನ್ಯವಾಗಿ (ಗುರುಶಿಷ್ಯರು ಒಬ್ಬರನ್ನೊಬ್ಬರು), ನಿರೀಕ್ಷ್ಯ–ದೃಷ್ಟಿಸಿ ನೋಡಿ, ಪ್ರೀತ್ಯಾ–ಸಂತೋಷವಾಗಿ, ಶಿಷ್ಯಂ–ಶಿಷ್ಯನನ್ನು ವಿಸರ್ಜಯೇತ್–ಬಿಡಬೇಕು (ಕಳುಹಿಸಬೇಕು); ಕೃಪಯಾ–(ಶಿಷ್ಯನಮೇಲೆ) ಕೃಪೆಮಾಡಿ, ತತ್ಸಗೃಹೀತಂ–ದೀಕ್ಷೆಯನ್ನು ಸ್ವೀಕರಿಸಿದ ಆತನನ್ನು ವಾಸುದೇವೇ–ಶ್ರೀಹರಿಯಲ್ಲಿ ಸಮರ್ಪಯೇತ್–ಸಮರ್ಪಿಸಬೇಕು (ಆತನ ದೀಕ್ಷೆಯನ್ನು ರಕ್ಷಿಸಿ ಕಾಪಾಡೆಂದು ಶ್ರೀಹರಿಯಲ್ಲಿ ಪ್ರಾರ್ಥಿಸಬೇಕು); ಇತಿ–ಹೀಗೆ, ತೇ–ನಿನಗೋಸ್ಕರ, ದೀಕ್ಷಾವಿಧಾನಂ–ಶ್ರೀವಿಷ್ಣುದೀಕ್ಷಾವಿಧಾನವೂ, ಅಧಿಕಾರಿಣಃ–ಅಧಿಕಾರಿಗಳೂ (ದೀಕ್ಷೆಯನ್ನು ಕೊಡುವ ಮತ್ತು ಸ್ವೀಕರಿಸುವ ಅಧಿಕಾರಿಗಳು ಅರ್ಹತೆಯುಳ್ಳವರು ಯಾರು ಯಾರೆಂಬುದೂ), ಬ್ರಹ್ಮನ್–ಹೇ ಬ್ರಹ್ಮದೇವ! ಯತ್–ಯಾವುದು (ಯಾವ ದೀಕ್ಷಾ ವಿಷಯವು), ತ್ವಯಾ–ನಿನ್ನಿಂದ, ಪೃಷ್ಟಂ–ಕೇಳಲ್ಪಟ್ಟಿತ್ತೋ (ಆ ಎಲ್ಲವೂ), ಕಥಿತಾಃ–ಹೇಳಲ್ಪಟ್ಟವು; ಅನ್ಯತ್ ಕಿಂ–ಬೇರೇನನ್ನು ಶ್ರೋತುಂ–ಕೇಳಲು, ಇಚ್ಛಸಿ–ಅಪೇಕ್ಷಿಸುವಿ? (ಕೇಳು).

---

ಶಿಷ್ಯನು ನಮಸ್ಕರಿಸಬೇಕು; ಗುರುವು, 'ಮಂತ್ರಾಧಿದೇವತೆಯಾದ ಶ್ರೀವಿಷ್ಣುವು ಪ್ರಸನ್ನನಾಗಿ ನಿನ್ನನ್ನು ಅನುಗ್ರಹಿಸಲಿ' ಎಂದು, ಆಶೀರ್ವದಿಸಿ, ಶಿಷ್ಯನ ತಲೆಯಮೇಲೆ ತನ್ನ ಹಸ್ತವನ್ನಿಡಬೇಕು; ನಂತರ ಗುರುಶಿಷ್ಯರು ದೃಷ್ಟಿಸಿ ನೋಡಬೇಕು; ಗುರುವು ಪ್ರೀತಿಯಿಂದ ಶಿಷ್ಯನನ್ನು ಬೀಳ್ಕೊಡಬೇಕು; ದೀಕ್ಷೆಯನ್ನು ಸ್ವೀಕರಿಸಿದ ಶಿಷ್ಯನನ್ನು ಕೃಪೆಯಿಂದ ರಕ್ಷಿಸೆಂದು ಗುರುವು ಆತನನ್ನು ಶ್ರೀವಿಷ್ಣುವಿಗೇ ಸಮರ್ಪಿಸಬೇಕು; ಹೀಗೆ ನೀನು ಪ್ರಶ್ನಿಸಿದ ದೀಕ್ಷಾವಿಧಾನವನ್ನೂ ಅಧಿಕಾರಿಗಳನ್ನೂ ಹೇ ಬ್ರಹ್ಮ! ನಿನಗೋಸ್ಕರ ನಿರೂಪಿಸಿರ್ದೇನೆ—ಮತ್ತೇನನ್ನು ಕೇಳಲಿಚ್ಛಿಸುವಿ ? ಕೇಳು (೯೪-೯೭).

ದೀಕ್ಷಾಧಿಕಾರಕಥನವೆಂಬ ೭ನೇ ಅಧ್ಯಾಯವು ಮುಗಿದುದು.

---

## ಅಧ್ಯಾಯ ೮

### ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

**ದೀಕ್ಷಾಪ್ರದಾನೇ ಭಗವನ್ ಕೇ ಕೇ ಸ್ಯುರಧಿಕಾರಿಣಃ ।**
**ಗೌಣಮುಖ್ಯಪ್ರಭೇದೇನ ವದ ತದ್ದಯಯಾ ಮಮ ॥ ೧ ॥**

ಭಗವನ್–ಹೇ ಭಗವಂತ! (ವಿಷ್ಣೋ!), ದೀಕ್ಷಾ ಪ್ರದಾನೇ–ದೀಕ್ಷೆಯನ್ನು ಕೊಡುವುದರಲ್ಲಿ (ದೀಕ್ಷಾಪ್ರದಾನಕ್ಕೆ), ಕೇ ಕೇ–ಯಾರು ಯಾರು, ಅಧಿಕಾರಿಣಃ ಸ್ಯುಃ–ಅಧಿಕಾರಿಗಳಾಗಿರುತ್ತಾರೆ(ಅರ್ಹರು)?; ಗೌಣಮುಖ್ಯಪ್ರಭೇದೇನ–ಗೌಣ ಮತ್ತು ಮುಖ್ಯ ಭೇದದಿಂದ (ಯಾರು ಮುಖ್ಯರು ಯಾರು ಅಮುಖ್ಯರು, ಎಂಬ ಭೇದದಿಂದ) ಕೇಕೇ ಅಧಿಕಾರಿಣಃ–ಯಾರು ಯಾರು ಅಧಿಕಾರಿಗಳು?; ತತ್–ಅದನ್ನು, ದಯಯಾ–ಕೃಪೆ ಮಾಡಿ, ಮಮ–ನನಗೆ, ವದ–ಹೇಳು.

ಶ್ರೀ ಹಯಗ್ರೀವ ಉವಾಚ—

**ಪ್ರತಿಲೋಮಾನುಲೋಮಾನಾಂ ವರ್ಣಾನಾಮಪಿ ಸರ್ವಶಃ ।**
**ಬ್ರಾಹ್ಮಣೋ ಹಿ ಗುರುರ್ಮುಖ್ಯೋ ಗೌಣಃ ಪಿತ್ರಾದಯಃ ಸ್ಮೃತಾಃ ॥ ೨ ॥**

ಪ್ರತಿಲೋಮಾನುಲೋಮಾನಾಂ ವರ್ಣಾನಾಂ–ಪ್ರತಿಲೋಮ ಮತ್ತು ಅನುಲೋಮ ಜಾತಿಗಳ, ಸರ್ವಶಃ–ಎಲ್ಲರಿಗೂ, ಬ್ರಾಹ್ಮಣಃ–ಬ್ರಾಹ್ಮಣನು, ಮುಖ್ಯಃ ಗುರುಃ–ಮುಖ್ಯಗುರುವು, ಹಿ–ಹೀಗೆಂದು ಶಾಸ್ತ್ರಪ್ರಸಿದ್ಧವು; ಪಿತ್ರಾದಯಃ–ತಂದೆ ಮೊದಲಾದವರು (ಅವರವರ ತಂದೆ ಮೊದಲಾದ ಹಿರಿಯರು), ಗೌಣಾಃ–ಅಮುಖ್ಯಗುರುಗಳು.

---

ದೀಕ್ಷಾಪ್ರದಾನದಲ್ಲಿ ಮುಖ್ಯ–ಅಮುಖ್ಯ ಭೇದದಿಂದ ಅಧಿಕಾರಿಗಳು ಯಾರುಯಾರೆಂಬುದನ್ನು ದಯಮಾಡಿ, ನನಗೆ ಹೇಳುವವನಾಗು, ಪ್ರಭೋ! (೧). ಪ್ರತಿಲೋಮ ಅನುಲೋಮವರ್ಣಗಳ[1] ಎಲ್ಲರಿಗೂ ಬ್ರಾಹ್ಮಣನೇ ಮುಖ್ಯಗುರುವು; ಅವರವರ ತಂದೆ ಮೊದಲಾದ ಹಿರಿಯರು ಅಮುಖ್ಯಗುರುಗಳು (೨). ಬ್ರಹ್ಮಚಾರೀ, ಗೃಹಸ್ಥ ವಾನಪ್ರಸ್ಥ ಮತ್ತು ಯತಿಗಳೆಂಬ ಆಶ್ರಮಗಳಲ್ಲಿ ಯಾವ ಆಶ್ರಮಕ್ಕೆ

1. ಪ್ರತಿಲೋಮ—ಉತ್ತಮವರ್ಣದ ಸ್ತ್ರೀಯಲ್ಲಿ ನೀಚವರ್ಣದ ಪುರುಷನಿಂದ ಹುಟ್ಟುವವರು ಪ್ರತಿಲೋಮವರ್ಣದವರು.

ಅನುಲೋಮ—ಉತ್ತಮವರ್ಣದ ಪುರುಷರಿಂದ ನೀಚವರ್ಣದ ಸ್ತ್ರೀಯಲ್ಲಿ ಹುಟ್ಟುವ ಸಂತಾನವು ಅನುಲೋಮವರ್ಣದ್ದೆಂದು ಹೇಳಲಾಗುತ್ತದೆ.

**ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ ।**
**ಬ್ರಾಹ್ಮಣಃ ಸರ್ವಜಂತೂನಾಂ ಗುರುರ್ಮುಖ್ಯಃ ಪ್ರಕೀರ್ತಿತಃ ॥ ೩ ॥**

ಬ್ರಾಹ್ಮಣಃ–ಬ್ರಾಹ್ಮಣನು, ಬ್ರಹ್ಮಚಾರೀ–ಬ್ರಹ್ಮಚಾರಿಯಾಗಲಿ, ವಾ–ಅಥವಾ, ಗೃಹಸ್ಥಃ–ಗೃಹಸ್ಥನಾಗಲಿ, ವಾನಪ್ರಸ್ಥಃ–ವಾನಪ್ರಸ್ಥನಾಗಲಿ, ಅಥವಾ, ಯತಿಃ–ಯತಿಯಾಗಲಿ, ಸರ್ವಜಂತೂನಾಂ–ಸರ್ವಪ್ರಾಣಿಗಳಿಗೆ, ಮುಖ್ಯಃ ಗುರುಃ–ಮುಖ್ಯಗುರುವೆಂದು, ಪ್ರಕೀರ್ತಿತಃ–ಹೇಳಲ್ಪಟ್ಟಿರುವನು.

**ವಿಪ್ರಾಣಾಂ ಗುರವೋ ವಿಪ್ರಾ ಮಿಥೋ ಯೇ ಜ್ಞಾನಿನೋಽಧಿಕಾಃ ।**
**ತೇಷಾಮಪಿ ವಿಶೇಷೇಣ ವನಸ್ಥೋ ವಾ ಯತಿರ್ಭವೇತ್ ॥ ೪ ॥**

ವಿಪ್ರಾಣಾಂ–ಬ್ರಾಹ್ಮಣರಿಗೆ, ವಿಪ್ರಾಃ–ಬ್ರಾಹ್ಮಣರೇ, ಮಿಥಃ–ಪರಸ್ಪರವಾಗಿ (ಒಬ್ಬರಿಗೆ ಮತ್ತೊಬ್ಬರು), ಗುರವಃ–ಗುರುಗಳು; ಯೇ–ಯಾರು, ಅಧಿಕಾಃ ಜ್ಞಾನಿನಃ–ಹೆಚ್ಚು ಜ್ಞಾನವುಳ್ಳವರೋ (ಅವರು), ತೇಷಾಂ–(ಕಡಿಮೆಜ್ಞಾನವುಳ್ಳ) ಇತರರಿಗೆ, (ಗುರುಗಳು), ತೇಷಾಂ ಅಪಿ–ಅವರಲ್ಲಿ ಸಹ, ವಿಶೇಷೇಣ–ವಿಶೇಷವಾಗಿ, ವನಸ್ಥಃ–ವಾನಪ್ರಸ್ಥ ಆಶ್ರಮಿಯೂ, ವಾ–ಅಥವಾ, ಯತಿಃ–ಯತ್ಯಾಶ್ರಮಿಯೂ, ಭವೇತ್–ಗುರುವಾಗುತ್ತಾನೆ.

**ಗೃಹಸ್ಥೇಷ್ವಪಿ ಪಿತ್ರಾದ್ಯಾ ಯೇ ವಾ ಸ್ಯುರ್ವೈಷ್ಣವೋತ್ತಮಾಃ ।**
**ಜ್ಞಾನತೋ ವಾಧಿಕಾ ಯೇ ಸ್ಯುಃ ಕುಲಸ್ಯ ಗುರವೋಽಪಿ ಯೇ ॥ ೫ ॥**

---

ಸೇರಿದವನಾದರೂ, ಸಕಲ ಪ್ರಾಣಿಗಳಿಗೆ, ಬ್ರಾಹ್ಮಣನೇ ಮುಖ್ಯಗುರುವು (೩). ಜ್ಞಾನದಿಂದ ಅಧಿಕರಾದ ಬ್ರಾಹ್ಮಣರು, ಇತರ ಬ್ರಾಹ್ಮಣರಿಗೆ ಗುರುಗಳಾಗಿರುತ್ತಾರೆ; ಏವಂ ಚ, ಬ್ರಾಹ್ಮಣರಿಗೆ ಬ್ರಾಹ್ಮಣರು (ಪರಸ್ಪರ ಒಬ್ಬರಿಗೊಬ್ಬರು) ಗುರುಗಳೆನಿಸುತ್ತಾರೆ; ಅವರಲ್ಲಿಯೂ ವಿಶೇಷವಾಗಿ ವಾನಪ್ರಸ್ಥ ಮತ್ತು ಯತ್ಯಾಶ್ರಮಿಗಳು, ಇತರ ಆಶ್ರಮಿಗಳಿಗೆ ಗುರುಗಳು (೪). ಉತ್ತಮಾಶ್ರಮಿಗಳ ಅಭಾವದಲ್ಲಿ ಗೃಹಸ್ಥಾಶ್ರಮಿಗಳಲ್ಲಿ ವಿಷ್ಣುಭಕ್ತಿಯಿಂದ ಯಾರು ಉತ್ತಮರೋ ಅಥವಾ ಜ್ಞಾನದಿಂದ ಅಧಿಕರೋ ಅವರೂ, ದೀಕ್ಷೆಯನ್ನು ಸ್ವೀಕರಿಸುವವರ ಕುಲಪುರೋಹಿತಾದಿ ಗುರುಗಳೂ, ದೀಕ್ಷಾಪ್ರದಾನಕ್ಕೆ ಅರ್ಹರಾಗುತ್ತಾರೆ; ಇವರುಗಳ ನಂತರ, ದೀಕ್ಷೆಯನ್ನು ಪಡೆಯುವವನ ತಂದೆ, ಹಿರಿಯ ಅಣ್ಣ, ತಂದೆಯ ಸಹೋದರ, ಸೋದರಮಾವ (ತಾಯಿಯ ಸಹೋದರ), ಸೋದರಮಾವನ ಮಗ, ಹೆಣ್ಣುಕೊಟ್ಟ ಮಾವ (ಹೆಂಡತಿಯ ತಂದೆ), ಇವರುಗಳೂ, ಅಥವಾ ಈ ಬಂಧುವರ್ಗದವರ ತಂದೆ ಮೊದಲಾದವರೂ, ಅವರಲ್ಲಿಯೂ ಜ್ಞಾನಿಗಳಾದವರು ದೀಕ್ಷೆ ಕೊಡಲು ಅಧಿಕಾರಿಗಳಾಗುತ್ತಾರೆ (೫-೬). ಬ್ರಹ್ಮಚಾರಿಗಳಿಗೆ ಗೃಹಸ್ಥ ವಾನಪ್ರಸ್ಥ ಮತ್ತು ಯತ್ಯಾಶ್ರಮಿಗಳು ಉಪದೇಶಕರಾಗಬಹುದು (ಗುರುಗಳಾಗುತ್ತಾರೆ); ಗೃಹಸ್ಥನಿಗೆ,

# ಅಧ್ಯಾಯ ೮

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

**ದೀಕ್ಷಾಪ್ರದಾನೇ ಭಗವನ್ ಕೇ ಕೇ ಸ್ಯುರಧಿಕಾರಿಣಃ ।**
**ಗೌಣಮುಖ್ಯಪ್ರಭೇದೇನ ವದ ತದ್ದಯಯಾ ಮಮ ॥ ೧ ॥**

ಭಗವನ್–ಹೇ ಭಗವಂತ! (ವಿಷ್ಣೋ!), ದೀಕ್ಷಾ ಪ್ರದಾನೇ–ದೀಕ್ಷೆಯನ್ನು ಕೊಡುವುದರಲ್ಲಿ (ದೀಕ್ಷಾಪ್ರದಾನಕ್ಕೆ), ಕೇ ಕೇ–ಯಾರು ಯಾರು, ಅಧಿಕಾರಿಣಃ ಸ್ಯುಃ–ಅಧಿಕಾರಿಗಳಾಗಿರುತ್ತಾರೆ(ಅರ್ಹರು)?; ಗೌಣಮುಖ್ಯಪ್ರಭೇದೇನ–ಗೌಣ ಮತ್ತು ಮುಖ್ಯ ಭೇದದಿಂದ (ಯಾರು ಮುಖ್ಯರು ಯಾರು ಅಮುಖ್ಯರು, ಎಂಬ ಭೇದದಿಂದ) ಕೇಕೇ ಅಧಿಕಾರಿಣಃ–ಯಾರು ಯಾರು ಅಧಿಕಾರಿಗಳು?; ತತ್–ಅದನ್ನು ದಯಯಾ–ಕೃಪೆ ಮಾಡಿ, ಮಮ–ನನಗೆ, ವದ–ಹೇಳು.

ಶ್ರೀ ಹಯಗ್ರೀವ ಉವಾಚ—

**ಪ್ರತಿಲೋಮಾನುಲೋಮಾನಾಂ ವರ್ಣಾನಾಮಪಿ ಸರ್ವಶಃ ।**
**ಬ್ರಾಹ್ಮಣೋ ಹಿ ಗುರುರ್ಮುಖ್ಯೋ ಗೌಣಃ ಪಿತ್ರಾದಯಃ ಸ್ಮೃತಾಃ ॥ ೨ ॥**

ಪ್ರತಿಲೋಮಾನುಲೋಮಾನಾಂ ವರ್ಣಾನಾಂ–ಪ್ರತಿಲೋಮ ಮತ್ತು ಅನುಲೋಮ ಜಾತಿಗಳ, ಸರ್ವಶಃ–ಎಲ್ಲರಿಗೂ, ಬ್ರಾಹ್ಮಣಃ–ಬ್ರಾಹ್ಮಣನು, ಮುಖ್ಯಃ ಗುರುಃ–ಮುಖ್ಯಗುರುವು, ಹಿ–ಹೀಗೆಂದು ಶಾಸ್ತ್ರಪ್ರಸಿದ್ಧವು; ಪಿತ್ರಾದಯಃ–ತಂದೆ ಮೊದಲಾದವರು (ಅವರವರ ತಂದೆ ಮೊದಲಾದ ಹಿರಿಯರು), ಗೌಣಾಃ–ಅಮುಖ್ಯಗುರುಗಳು.

---

ದೀಕ್ಷಾಪ್ರದಾನದಲ್ಲಿ ಮುಖ್ಯ–ಅಮುಖ್ಯ ಭೇದದಿಂದ ಅಧಿಕಾರಿಗಳು ಯಾರುಯಾರೆಂಬುದನ್ನು ದಯಮಾಡಿ, ನನಗೆ ಹೇಳುವವನಾಗು, ಪ್ರಭೋ! (೧). ಪ್ರತಿಲೋಮ ಅನುಲೋಮವರ್ಣಗಳ[1] ಎಲ್ಲರಿಗೂ ಬ್ರಾಹ್ಮಣನೇ ಮುಖ್ಯಗುರುವು; ಅವರವರ ತಂದೆ ಮೊದಲಾದ ಹಿರಿಯರು ಅಮುಖ್ಯಗುರುಗಳು (೨). ಬ್ರಹ್ಮಚಾರೀ, ಗೃಹಸ್ಥ ವಾನಪ್ರಸ್ಥ ಮತ್ತು ಯತಿಗಳೆಂಬ ಆಶ್ರಮಗಳಲ್ಲಿ ಯಾವ ಆಶ್ರಮಕ್ಕೆ

---

1. ಪ್ರತಿಲೋಮ—ಉತ್ತಮವರ್ಣದ ಸ್ತ್ರೀಯಲ್ಲಿ ನೀಚವರ್ಣದ ಪುರುಷನಿಂದ ಹುಟ್ಟುವವರು ಪ್ರತಿಲೋಮವರ್ಣದವರು.

ಅನುಲೋಮ—ಉತ್ತಮವರ್ಣದ ಪುರುಷರಿಂದ ನೀಚವರ್ಣದ ಸ್ತ್ರೀಯಲ್ಲಿ ಹುಟ್ಟುವ ಸಂತಾನವು ಅನುಲೋಮವರ್ಣದ್ದೆಂದು ಹೇಳಲಾಗುತ್ತದೆ.

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ ।
ಬ್ರಾಹ್ಮಣಃ ಸರ್ವಜಂತೂನಾಂ ಗುರುರ್ಮುಖ್ಯಃ ಪ್ರಕೀರ್ತಿತಃ ॥ ೩ ॥

ಬ್ರಾಹ್ಮಣಃ-ಬ್ರಾಹ್ಮಣನು, ಬ್ರಹ್ಮಚಾರೀ-ಬ್ರಹ್ಮಚಾರಿಯಾಗಲಿ, ವಾ-ಅಥವಾ, ಗೃಹಸ್ಥಃ-ಗೃಹಸ್ಥನಾಗಲಿ, ವಾನಪ್ರಸ್ಥಃ-ವಾನಪ್ರಸ್ಥನಾಗಲಿ, ಅಥವಾ, ಯತಿಃ-ಯತಿಯಾಗಲಿ, ಸರ್ವಜಂತೂನಾಂ-ಸರ್ವಪ್ರಾಣಿಗಳಿಗೆ, ಮುಖ್ಯಃ ಗುರುಃ-ಮುಖ್ಯಗುರುವೆಂದು, ಪ್ರಕೀರ್ತಿತಃ-ಹೇಳಲ್ಪಟ್ಟಿರುವನು.

ವಿಪ್ರಾಣಾಂ ಗುರವೋ ವಿಪ್ರಾ ಮಿಥೋ ಯೇ ಜ್ಞಾನಿನೋಽಧಿಕಾಃ ।
ತೇಷಾಮಪಿ ವಿಶೇಷೇಣ ವನಸ್ಥೋ ವಾ ಯತಿರ್ಭವೇತ್ ॥ ೪ ॥

ವಿಪ್ರಾಣಾಂ-ಬ್ರಾಹ್ಮಣರಿಗೆ, ವಿಪ್ರಾಃ-ಬ್ರಾಹ್ಮಣರೇ, ಮಿಥಃ-ಪರಸ್ಪರವಾಗಿ (ಒಬ್ಬರಿಗೆ ಮತ್ತೊಬ್ಬರು), ಗುರವಃ-ಗುರುಗಳು; ಯೇ-ಯಾರು, ಅಧಿಕಾಃ ಜ್ಞಾನಿನಃ-ಹೆಚ್ಚು ಜ್ಞಾನವುಳ್ಳವರೋ (ಅವರು), ತೇಷಾಂ-(ಕಡಿಮೆಜ್ಞಾನವುಳ್ಳ) ಇತರರಿಗೆ, (ಗುರುಗಳು), ತೇಷಾಂ ಅಪಿ-ಅವರಲ್ಲಿ ಸಹ, ವಿಶೇಷೇಣ-ವಿಶೇಷವಾಗಿ, ವನಸ್ಥಃ-ವಾನಪ್ರಸ್ಥ ಆಶ್ರಮಿಯೂ, ವಾ-ಅಥವಾ, ಯತಿಃ-ಯತ್ಯಾಶ್ರಮಿಯೂ, ಭವೇತ್-ಗುರುವಾಗುತ್ತಾನೆ.

ಗೃಹಸ್ಥೇಷ್ವಪಿ ಪಿತ್ರಾದ್ಯಾ ಯೇ ವಾ ಸ್ಯುರ್ವೈಷ್ಣವೋತ್ತಮಾಃ ।
ಜ್ಞಾನತೋ ವಾಧಿಕಾ ಯೇ ಸ್ಯುಃ ಕುಲಸ್ಯ ಗುರವೋಽಪಿ ಯೇ ॥ ೫ ॥

---

ಸೇರಿದವನಾದರೂ, ಸಕಲ ಪ್ರಾಣಿಗಳಿಗೆ, ಬ್ರಾಹ್ಮಣನೇ ಮುಖ್ಯಗುರುವು (೩). ಜ್ಞಾನದಿಂದ ಅಧಿಕರಾದ ಬ್ರಾಹ್ಮಣರು, ಇತರ ಬ್ರಾಹ್ಮಣರಿಗೆ ಗುರುಗಳಾಗಿರುತ್ತಾರೆ; ಏವಂ ಚ, ಬ್ರಾಹ್ಮಣರಿಗೆ ಬ್ರಾಹ್ಮಣರು (ಪರಸ್ಪರ ಒಬ್ಬರಿಗೊಬ್ಬರು) ಗುರುಗಳೆನಿಸುತ್ತಾರೆ; ಅವರಲ್ಲಿಯೂ ವಿಶೇಷವಾಗಿ ವಾನಪ್ರಸ್ಥ ಮತ್ತು ಯತ್ಯಾಶ್ರಮಿಗಳು, ಇತರ ಆಶ್ರಮಿಗಳಿಗೆ ಗುರುಗಳು (೪). ಉತ್ತಮಾಶ್ರಮಿಗಳ ಅಭಾವದಲ್ಲಿ ಗೃಹಸ್ಥಾಶ್ರಮಿಗಳಲ್ಲಿ ವಿಷ್ಣುಭಕ್ತಿಯಿಂದ ಯಾರು ಉತ್ತಮರೋ ಅಥವಾ ಜ್ಞಾನದಿಂದ ಅಧಿಕರೋ ಅವರೂ, ದೀಕ್ಷೆಯನ್ನು ಸ್ವೀಕರಿಸುವವರ ಕುಲಪುರೋಹಿತಾದಿ ಗುರುಗಳೂ, ದೀಕ್ಷಾಪ್ರದಾನಕ್ಕೆ ಅರ್ಹರಾಗುತ್ತಾರೆ; ಇವರುಗಳ ನಂತರ, ದೀಕ್ಷೆಯನ್ನು ಪಡೆಯುವವನ ತಂದೆ, ಹಿರಿಯ ಅಣ್ಣ ತಂದೆಯ ಸಹೋದರ, ಸೋದರಮಾವ (ತಾಯಿಯ ಸಹೋದರ), ಸೋದರಮಾವನ ಮಗ, ಹೆಣ್ಣುಕೊಟ್ಟ ಮಾವ (ಹೆಂಡತಿಯ ತಂದೆ), ಇವರುಗಳೂ, ಅಥವಾ ಈ ಬಂಧುವರ್ಗದವರ ತಂದೆ ಮೊದಲಾದವರೂ, ಅವರಲ್ಲಿಯೂ ಜ್ಞಾನಿಗಳಾದವರು ದೀಕ್ಷೆ ಕೊಡಲು ಅಧಿಕಾರಿಗಳಾಗುತ್ತಾರೆ (೫-೬). ಬ್ರಹ್ಮಚಾರಿಗಳಿಗೆ ಗೃಹಸ್ಥ ವಾನಪ್ರಸ್ಥ ಮತ್ತು ಯತ್ಯಾಶ್ರಮಿಗಳು ಉಪದೇಶಕರಾಗಬಹುದು (ಗುರುಗಳಾಗುತ್ತಾರೆ); ಗೃಹಸ್ಥನಿಗೆ,

**ಪಿತಾ ಭ್ರಾತಾ ತು ಯೋ ಜ್ಯೇಷ್ಠ ಪಿತೃವ್ಯೋ ಮಾತುಲಸ್ತಥಾ ।**
**ತತ್ಸುತಃ ಶ್ವಶುರೋಽಪಿ ಸ್ಯಾದೇಷಾಂ ಪಿತ್ರಾದಯೋಽಪಿ ಚ ॥ ೬ ॥**

**ತತ್ರಾಪಿ ಜ್ಞಾನವಂತಃ ಸ್ಯುರ್ದೀಕ್ಷಾದಾನೇಽಧಿಕಾರಿಣಃ ।**

ಗೃಹಸ್ಥೇಷು ಅಪಿ–ಗೃಹಸ್ಥಾಶ್ರಮಿಗಳಲ್ಲಿಯಾದರೋ (ವಾನಪ್ರಸ್ಥಾದಿ ಉತ್ತಮಾಶ್ರಮಿಗಳು ಇಲ್ಲದಾಗ), ಯೇ ವಾ ಸ್ಯುಃ–ಯಾರೇ ಆಗಲಿ, ವೈಷ್ಣವೋತ್ತಮಾಃ–ವಿಷ್ಣುಭಕ್ತಿಯಿಂದ ಉತ್ತಮರಾದವರು, ವಾ–ಅಥವಾ, ಯೇ–ಯಾರು, ಜ್ಞಾನತಃ–ಜ್ಞಾನದಿಂದ, ಅಧಿಕಾಃ ಸ್ಯುಃ–ಉತ್ತಮರಾದವರೋ, ಯೇ–ಯಾರು, ಕುಲಸ್ಯ–ವಂಶದ (ತಮ್ಮ ಮನೆತನದ), ಗುರವಃ ಅಪಿ–ಗುರುಗಳೂ ಆಗಿರುವವರೋ (ಇಂಥವರಿಲ್ಲದಾಗ), ಪಿತಾ–ತಂದೆಯೂ, ಯಃ ತು–ಯಾರಾದರೆ, ಜ್ಯೇಷ್ಠ ಭ್ರಾತಾ–ಹಿರಿಯ ಅಣ್ಣನೋ, ಪಿತೃವ್ಯಃ–ಪಿತೃಸಹೋದರರರೋ, (ದೊಡ್ಡಪ್ಪ ಚಿಕ್ಕಪ್ಪಗಳೋ), ತಥಾ–ಹಾಗೂ, ಮಾತುಲಃ–ಸೋದರಮಾವನೋ, (ಈ ಬಾಂಧವರಲ್ಲಿ ಕ್ರಮದಿಂದ ಯಾರೂ ಇಲ್ಲದಿದ್ದರೆ), ತತ್ಸುತಃ–ಸೋದರಮಾವನ ಮಗನೂ, ಶ್ವಶುರಃ ಅಪಿ–ಮಾವನು (ಹೆಣ್ಣುಕೊಟ್ಟ ಮಾವನೂ), ಸ್ಯಾತ್–ದೀಕ್ಷಾಪ್ರದಾನದಲ್ಲಿ ಅಧಿಕಾರಿಯು) ಆಗುತ್ತಾನೆ; ಏಷಾಂ–ಈ ಬಂಧುಗಳ, ಪಿತ್ರಾದಯಃ ಅಪಿ–ತಂದೆ ಮೊದಲಾದವರು ಸಹ, ತತ್ರಾಪಿ–ಅವರಲ್ಲಿಯೂ, ಜ್ಞಾನವಂತಃ–ಜ್ಞಾನಿಗಳಾದವರು, ದೀಕ್ಷಾದಾನೇ–ದೀಕ್ಷೆಯನ್ನು ಕೊಡುವುದರಲ್ಲಿ ಅಧಿಕಾರಿಣಃ ಸ್ಯುಃ–ಅಧಿಕಾರಿಗಳಾಗುತ್ತಾರೆ.

**ಬ್ರಹ್ಮಚಾರ್ಯುಪದೇಷ್ಟಾರೋ ಗೃಹಸ್ಥಾದಿತ್ರಯೋಽಪಿ ಚ ॥ ೭ ॥**

**ವನಸ್ಥಾ ಯತಿನಶ್ಚಾಪಿ ನೈಷ್ಠಿಕಬ್ರಹ್ಮಚಾರಿಣಃ ।**
**ಗುರವೋ ಗೃಹಿಣಃ ಸ್ಯುಃ ಸ ನ ಹ್ಯೇತೇಷಾಂ ಗುರುರ್ಭವೇತ್ ॥ ೮ ॥**

ಗೃಹಸ್ಥಾದಿತ್ರಯಃ ಅಪಿ ಚ–ಗೃಹಸ್ಥಾದಿ ಮೂರು ಆಶ್ರಮದವರೂ (ಗೃಹಸ್ಥ ವಾನಪ್ರಸ್ಥ ಮತ್ತು ಯತ್ಯಾಶ್ರಮಿಗಳೆಲ್ಲರೂ), ಬ್ರಹ್ಮಚಾರ್ಯುಪದೇಷ್ಟಾರಃ–ಬ್ರಹ್ಮಚಾರಿಗೆ ಗುರುಗಳಾಗುತ್ತಾರೆ; ಗೃಹಿಣಃ–ಗೃಹಸ್ಥನಿಗೆ, ವನಸ್ಥಾಃ–ವಾನಪ್ರಸ್ಥರು, ಯತಿನಃ ಚ–ಯತಿಗಳೂ, ನೈಷ್ಠಿಕ ಬ್ರಹ್ಮಚಾರಿಣಃ ಅಪಿ–ನೈಷ್ಠಿಕಬ್ರಹ್ಮಚಾರಿಗಳೂ ಸಹ, ಗುರವಃ–ಗುರುಗಳು, ಸ್ಯುಃ–ಆಗುವರು; ಸಃ–ಆ ಗೃಹಸ್ಥನು, ಏತೇಷಾಂ–ಇವರಿಗೆ (ವನಸ್ಥ ಯತಿ ಮತ್ತು ನೈಷ್ಠಿಕ ಬ್ರಹ್ಮಚಾರಿಗಳಿಗೆ),

---

ವಾನಪ್ರಸ್ಥ ಯತಿ ಮತ್ತು ನೈಷ್ಠಿಕ ಬ್ರಹ್ಮಚಾರಿಗಳು ಗುರುಗಳಾಗಬಹುದು; ಆದರೆ ಗೃಹಸ್ಥನು, ಇವರಿಗೆ (ವಾನಪ್ರಸ್ಥ ಯತಿ ಮತ್ತು ನೈಷ್ಠಿಕ ಬ್ರಹ್ಮಚಾರಿಗಳಿಗೆ) ಗುರುವಾಗಲರ್ಹನಲ್ಲ. ಈ ನಿಯಮವು ಶಾಸ್ತ್ರಸಿದ್ಧವಾದುದು (೭-೮). ಯತಿಗಳಿಗೆ ಯತಿಗಳೇ ಗುರುಗಳಾಗಲರ್ಹರು; ಅನ್ಯರಾರೂ ಅಲ್ಲ. ನೈಷ್ಠಿಕ ಬ್ರಹ್ಮಚಾರಿಗಳಿಗೆ ನೈಷ್ಠಿಕ

ಗುರುಃ–ಗುರುವು (ಉಪದೇಶಕನು), ನ ಭವೇತ್ ಹಿ–ಆಗಲಾರನೆಂದು ಶಾಸ್ತ್ರಪ್ರಸಿದ್ಧವಾಗಿದೆ.

**ಯತೀನಾಂ ಯತಯಃ ಪ್ರೋಕ್ತಾ ಗುರವೋಽನ್ಯೇ ನ ಹಿ ಕ್ವಚಿತ್ ।**
**ನೈಷ್ಠಿಕವ್ರತಿನಃ ಪ್ರೋಕ್ತೋ ನೈಷ್ಠಿಕವ್ರತವಾನ್ ಗುರುಃ ॥ ೯ ॥**

ಯತೀನಾಂ–ಯತಿಗಳಿಗೆ, ಯತಯಃ–ಯತಿಗಳು, ಗುರವಃ–ಗುರುಗಳು, ಪ್ರೋಕ್ತಾ–(ಎಂದು) ಹೇಳಲ್ಪಡುತ್ತಾರೆ; ಅನ್ಯೇ–ಬೇರೆ (ಅನ್ಯಾಶ್ರಮದವರು), ಕ್ವಚಿತ್– ಯಾರೊಬ್ಬನೂ, ನ ಹಿ–ಅಲ್ಲವೇ ಅಲ್ಲ; ನೈಷ್ಠಿಕವ್ರತಿನಃ–ನೈಷ್ಠಿಕಬ್ರಹ್ಮಚಾರಿಗೆ, ನೈಷ್ಠಿಕವ್ರತವಾನ್–ನೈಷ್ಠಿಕ ಬ್ರಹ್ಮಚಾರಿಯೇ (ಆ ವ್ರತವುಳ್ಳವನೇ), ಗುರುಃ–ಗುರುವು.

**ವನೀ ಯತಿರ್ವಾ ವನಿನೋ ವನೀಪ್ರವ್ರಾಜಕೋ ಗುರುಃ ।**
**ಬ್ರಾಹ್ಮಣೇಷು ವಿವೇಕೋಽಯಂ ಯತೀನಾಂ ವನವಾಸಿನಾಂ ॥ ೧೦ ॥**

ವನಿನಃ–ವಾನಪ್ರಸ್ಥಾಶ್ರಮಿಗೆ, ವನೀ–ವಾನಪ್ರಸ್ಥಾಶ್ರಮಿಯೂ ವಾ–ಅಥವಾ, ಯತಿಃ–ಯತಿಯೂ, ವನೀಪ್ರವ್ರಾಜಕಃ–ವಾನಪ್ರಸ್ಥನಾದರೂ ಸರ್ವಸಂಗತ್ಯಾಗದಿಂದ ಪ್ರವ್ರಾಜಕ (ಯತಿ) ಜೀವನದಲ್ಲಿರುವವನೂ, ಗುರುಃ–ಗುರುವಾಗಲರ್ಹನು; ಅಯಂ–ಈ, ವಿವೇಕಃ–ವಿವೇಕವು (ವಿಶೇಷ ವ್ಯವಸ್ಥೆಯು), ಬ್ರಾಹ್ಮಣೇಷು–ಬ್ರಾಹ್ಮಣರಲ್ಲಿ (ಮಾತ್ರ), ಯತೀನಾಂ... ಇತ್ಯಾದಿ ಮುಂದಿನ ಶ್ಲೋಕದಿಂದ ಅನ್ವಯವಾಗುತ್ತದೆ.

**ಕ್ಷತ್ರಿಯಾಣಾಂ ಚ ವೈಶ್ಯಾನಾಂ ನೈಷ್ಠಿಕಬ್ರಹ್ಮಚಾರಿಣಾಂ ।**
**ಗೃಹಸ್ಥಾನಾಂ ತಥಾನ್ಯೇಷಾಂ ಬ್ರಾಹ್ಮಣೋ ಗುರುರೇವ ಹಿ ॥ ೧೧ ॥**

---

ಬ್ರಹ್ಮಚಾರಿಯೇ ಗುರುವು[1] (೯). ವಾನಪ್ರಸ್ಥರಿಗೆ, ವಾನಪ್ರಸ್ಥರೂ, ಯತಿಗಳೂ, ವಾನಪ್ರಸ್ಥರಲ್ಲಿಯೇ ಸರ್ವಸಂಗತ್ಯಾಗದಿಂದ ಯತಿಜೀವನದಲ್ಲಿರುವವರೂ ಗುರುಗಳಾಗಲರ್ಹರು; ಈ ವಿಶೇಷ ವ್ಯವಸ್ಥೆಯು ಬ್ರಾಹ್ಮಣರಾಗಿ, ಬ್ರಹ್ಮಚರ್ಯಾದಿ ಆಶ್ರಮಗಳಲ್ಲಿರುವವರಿಗೆ ಮಾತ್ರ ಅನ್ವಯಿಸುತ್ತದೆ (೧೦). ಕ್ಷತ್ರಿಯ ಮತ್ತು ವೈಶ್ಯವರ್ಣಗಳ, ಗೃಹಸ್ಥರು, ಯತಿಗಳು, ವಾನಪ್ರಸ್ಥರು, ನೈಷ್ಠಿಕಬ್ರಹ್ಮಚಾರಿಗಳು (ಕೈಮುತ್ಯದಿಂದ ಬ್ರಹ್ಮಚಾರಿಗಳು, ಮತ್ತು ಇತರ ಈ ವರ್ಣದ ಸರ್ವರಿಗೆ, ಬ್ರಾಹ್ಮಣನೇ ಗುರುವು (೧೧). ಕ್ಷತ್ರಿಯ ವೈಶ್ಯ ಅನುಲೋಮಿ ವರ್ಣಗಳ ಎಲ್ಲ ಆಶ್ರಮದವರಿಗೂ, ಬ್ರಾಹ್ಮಣ ಸಾಮಾನ್ಯನು—ಆತನು ಯಾವ ಆಶ್ರಮದವನಾದರೂ ಸರಿಯೇ, ಮುಖ್ಯ

1. ಗುರುಶುಶ್ರೂಷಾದಿ ಬ್ರಹ್ಮಚರ್ಯಾಶ್ರಮಧರ್ಮಗಳನ್ನು ಮರಣಪರ್ಯಂತ ನಡೆಸುವ ನಿಷ್ಠೆ (ದೃಢಸಂಕಲ್ಪ ಮಾಡಿ) ಯಲ್ಲಿ ಸ್ಥಿರವಾಗಿ ಸ್ಥಿರನಾದವನು 'ನೈಷ್ಠಿಕವ್ರತಿ' ಯು.

ಕ್ಷತ್ರಿಯಾಣಾಂ-ಕ್ಷತ್ರಿಯ ವರ್ಣದವರಾದ, ಚ-ಮತ್ತು ವೈಶ್ಯಾನಾಂ-ವೈಶ್ಯವರ್ಣದವರಾದ (ಯತೀನಾಂ-ಯತಿಗಳಿಗೆ, ವನವಾಸಿನಾಂ-ವಾನಪ್ರಸ್ಥರಿಗೆ; ಈ ಪದಗಳು ಹಿಂದಿನ ಶ್ಲೋಕದಿಂದ ಅನ್ವಯಗೊಂಡಿವೆ), ನೈಷ್ಠಿಕ ಬ್ರಹ್ಮಚಾರಿಣಾಂ-ನೈಷ್ಠಿಕಬ್ರಹ್ಮಚಾರಿಗಳಿಗೆ, ಗೃಹಸ್ಥಾನಾಂ-ಗೃಹಸ್ಥರಿಗೆ, ತಥಾ-ಹಾಗೂ, ಅನ್ಯೇಷಾಂ-ಇತರರೆಲ್ಲರಿಗೂ, ಬ್ರಾಹ್ಮಣಃ ಏವ-ಬ್ರಾಹ್ಮಣನು ಮಾತ್ರ (ಬ್ರಾಹ್ಮಣನೇ), ಗುರುಃ ಹಿ-ಗುರುವೆಂದು ಪ್ರಸಿದ್ಧನು.

ಬ್ರಹ್ಮಚಾರೀ ಗೃಹಸ್ಥೋ ವಾ ವನಸ್ಥೋ ವಾಥವಾ ಯತಿಃ ।
ಸರ್ವಾಶ್ರಮವತಾಂ ಕ್ಷತ್ರವೈಶ್ಯಾನಾಮನುಲೋಮಿನಾಂ ॥ ೧೨ ॥

ಮುಖ್ಯೋ ಗುರುರ್ಭವೇದ್ವಿಪ್ರಃ ಕ್ಷತ್ರಿಯಾದಿಷು ಯೇಽಧಿಕಾಃ ।
ತೇಽಪಿ ವಿಪ್ರಾಜ್ಞಯಾ ತೇಷಾಂ ದೀಕ್ಷಾಯಾಂ ಗುರವೋ ಮತಾಃ ॥ ೧೩ ॥

ಸರ್ವಾಶ್ರಮವತಾಂ-ಬ್ರಹ್ಮಚರ್ಯಾದಿ ಎಲ್ಲ ಆಶ್ರಮಗಳ, ಕ್ಷತ್ರ ವೈಶ್ಯಾನಾಂ-ಕ್ಷತ್ರಿಯ ಮತ್ತು ವೈಶ್ಯರಿಗೆ, ಅನುಲೋಮಿನಾಂ-ಅನುಲೋಮ ಜಾತಿಯವರಿಗೆ ಸಹ, ವಿಪ್ರಃ-ಬ್ರಾಹ್ಮಣನು, ಬ್ರಹ್ಮಚಾರೀ-ಬ್ರಹ್ಮಚಾರಿಯಾಗಲಿ, ಗೃಹಸ್ಥಃ ವಾ-ಗೃಹಸ್ಥನಾಗಲಿ, ವನಸ್ಥಃ ವಾ-ವಾನಪ್ರಸ್ಥನಾಗಲಿ, ಅಥವಾ ಯತಿಃ-ಅಥವಾ ಯತಿಯಾಗಲಿ, ಮುಖ್ಯಃ ಗುರುಃ-ಮುಖ್ಯ ಗುರುವು, ಭವೇತ್-ಆಗಿರುತ್ತಾನೆ (ವಿಪ್ರನು ಯಾವ ಆಶ್ರಮಿಯಾಗಿದ್ದರೂ ಕ್ಷತ್ರಿಯ ವೈಶ್ಯ ಮತ್ತು ಅನುಲೋಮಿಗಳೆಲ್ಲರಿಗೂ ಮುಖ್ಯಗುರುವಾಗಿರಲರ್ಹನು); ಕ್ಷತ್ರಿಯಾದಿಷು-ಕ್ಷತ್ರಿಯ ಮೊದಲಾದವರಲ್ಲಿ ಯೇ-ಯಾರು, ಅಧಿಕಾಃ-(ಭಕ್ತಿಜ್ಞಾನಾದಿ ಗುಣಗಳಿಂದ) ಅಧಿಕರೋ, ತೇ ಅಪಿ-ಅವರೂ ಸಹ, ವಿಪ್ರಾಜ್ಞಯಾ-ಬ್ರಾಹ್ಮಣನ ಆಜ್ಞೆಯಿಂದ, ತೇಷಾಂ-ಅವರಿಗೆ (ತಮ್ಮ ವರ್ಣದವರಿಗೂ, ಅನುಲೋಮಾದಿ ವರ್ಣದವರಿಗೂ), ದೀಕ್ಷಾಯಾಂ-ದೀಕ್ಷೆಯನ್ನು ಕೊಡುವ ವಿಷಯದಲ್ಲಿ ಗುರವಃ-ಗುರುಗಳೆಂದು, ಮತಾಃ-ತಿಳಿಯಲ್ಪಡುತ್ತಾರೆ (ಪ್ರಮಾಣಗಳಿಂದ ತಿಳಿಯಬರುತ್ತದೆ).

ಶೂದ್ರಾದಿಷ್ವಪಿ ಸರ್ವೇಷು ಶ್ವಪಾಕಾಂತೇಷ್ವಪಿ ಕ್ರಮಾತ್ ।
ಜಾತಿತೋ ಜ್ಞಾನತೋ ಯೇ ಸ್ಯುರಧಿಕಾಸ್ತೇಽಪಿ ಸರ್ವಶಃ ॥ ೧೪ ॥

---

ಗುರುವಾಗಲರ್ಹನು; ಕ್ಷತ್ರಿಯಾದಿಗಳಲ್ಲಿ ಯಾರು ಭಕ್ತಿ ಜ್ಞಾನಾದಿ ಸದ್ಗುಣಗಳಿಂದ ಅಧಿಕರೋ, ಅವರು ತಮಗಿಂತ ಅವರರಾದ ಸರ್ವರಿಗೂ, ದೀಕ್ಷೆಯನ್ನು ಕೊಡುವ ವಿಷಯದಲ್ಲಿ ಗುರುಗಳಾಗಲರ್ಹರೆಂದು ಪ್ರಮಾಣಪ್ರಮಿತವಾಗಿದೆ (೧೨-೧೩). ಶೂದ್ರರಿಂದ ಆರಂಭಿಸಿ ಚಂಡಾಲರವರೆಗಿನ ಸಕಲರಿಗೂ, ಕ್ರಮವಾಗಿ, ಜಾತಿಯಿಂದಲೂ ಜ್ಞಾನದಿಂದಲೂ ಅಧಿಕರಾದವರೆಲ್ಲರೂ, ಈ ವಿಧ ಆಧಿಕ್ಯವುಳ್ಳವರ ಮಧ್ಯದಲ್ಲಿ ಈ ಹಿಂದೆ ಹೇಳಿದ ಪಿತ್ರಾದಿ ಬಂಧುವರ್ಗದವರೂ, ಮೊದಲಿನವರು ಇಲ್ಲದಾಗ ನಂತರದವರೂ,

ಪಿತ್ರಾದಯೋಽಥವಾಪಿ ಸ್ಯುಃ ಪೂರ್ವಾಭಾವೇ ಪರಃಪರಃ ।
ಗುರ್ವಾಧಿಕ್ಯವಶಾತ್ ಪ್ರೋಕ್ತಂ ದೀಕ್ಷಾಗ್ರಹಣಜಂ ಫಲಂ ॥ ೧೫ ॥

ಬ್ರಾಹ್ಮಣೋಽತ್ರ ಗುರುರ್ಮುಖ್ಯಸ್ತದನ್ಯೇ ತು ತದಾಜ್ಞಯಾ ।
ಅನ್ಯಥಾ ನರಕಂ ಯಾತಿ ಗೃಹೀತಾರೋಽಪಿ ತಾದೃಶಾಃ ॥ ೧೬ ॥

ಶೂದ್ರಾದಿಷು-ಶೂದ್ರವರ್ಣದವರೇ ಮೊದಲಾಗಿ, ಶ್ವಪಾಕಾಂತೇಷು-ಚಂಡಾಲ ಜಾತಿಯವರೇ ಕಡೆಯಾದ, ಸರ್ವೇಷು ಅಪಿ-ಸರ್ವರಲ್ಲಿಯೂ, ಕ್ರಮಾತ್-ಕ್ರಮವಾಗಿ, ಜಾತಿತಃ-ಜಾತಿ(ವರ್ಣ)ಯಿಂದಲೂ, ಜ್ಞಾನತಃ-ಜ್ಞಾನದಿಂದಲೂ, ಯೇ-ಯಾರು, ಅಧಿಕಾಃ ಸ್ಯುಃ-ಅಧಿಕರಾಗಿರುವರೋ, ತೇ-ಅವರು, ಸರ್ವಶಃ ಅಪಿ-ಎಲ್ಲರೂ, ಅಥವಾ, ಪಿತ್ರಾದಯಃ-ತಂದೆಯೇ ಮೊದಲಾದವರು (ಈ ಹಿಂದೆ ಹೇಳಿದ ಬಂಧುವರ್ಗದವರು), ಸ್ಯುಃ-ಆಗಲಿ, ಪೂರ್ವಾಭಾವೇ-ಮೊದಲಿನವರು ಇಲ್ಲದಿರುವಾಗ, ಪರಃ ಪರಃ-ನಂತರದ ವ್ಯಕ್ತಿಯು, [ಗುರುವ್ಯೋಮತಾಃ-(೧೩ ಶ್ಲೋಕದಿಂದ ಆಕರ್ಷಿಸಿ) ಗುರುಗಳಾಗಲರ್ಹರೆಂದು ತಿಳಿಯಲ್ಪಟ್ಟಿರುವರು]; ಗುರ್ವಾಧಿಕ್ಯವಶಾತ್-(ದೀಕ್ಷಾಪ್ರದಾನ ಮಾಡುವ) ಗುರುವಿನ ಆಧಿಕ್ಯವನ್ನನುಸರಿಸಿ, ದೀಕ್ಷಾಗ್ರಹಣಜಂ-ದೀಕ್ಷಾಸ್ವೀಕಾರದಿಂದ ಲಭಿಸುವ, ಫಲಂ-ಫಲವೆಂದು, ಪ್ರೋಕ್ತಂ-ಹೇಳಲಾಗುತ್ತದೆ; ಅತ್ರ-ದೀಕ್ಷಾಪ್ರದಾನವಿಷಯದಲ್ಲಿ ಬ್ರಾಹ್ಮಣಃ-ಬ್ರಾಹ್ಮಣನು, ಮುಖ್ಯಗುರುಃ-ಮುಖ್ಯಗುರುವು(ಶ್ರೇಷ್ಠಗುರುವು); ತದನ್ಯೇತು-ಇತರರಾದರೋ, ತದಾಜ್ಞಯಾ-ಆ ಮುಖ್ಯಗುರುವಿನ ಆಜ್ಞೆಯಿಂದಲೇ ಗುರುವು (ಗುರುಗಳಾಗುತ್ತಾರೆ); ಅನ್ಯಥಾ-ಹಾಗೆ ಆಜ್ಞೆಯನ್ನು ಪಡೆಯದೇ ದೀಕ್ಷಾ ಗುರುತ್ವವನ್ನು ವಹಿಸಿದರೆ, ನರಕಂ-ನರಕವನ್ನು ಯಾತಿ-ಹೊಂದುತ್ತಾನೆ; ಗೃಹೀತಾರಃ ಅಪಿ-(ಅವರಿಂದ) ದೀಕ್ಷೆಯನ್ನು ಸ್ವೀಕರಿಸಿದವರೂ ಸಹ, ತಾದೃಶಾಃ-ನರಕ ಭಾಗಿಗಳೇ ಆಗುತ್ತಾರೆ.

ಸ್ಥಂಡಿಲೇಽಗ್ನಿಂ ಪ್ರತಿಷ್ಠಾಪ್ಯ ವಾಸುದೇವಾದಿನಾಮಭಿಃ ।
ಚತುರ್ಭಿಶ್ಚ ಚತುರ್ಥ್ಯಂತೈರ್ನಮೋಽಂತೈರ್ಮಂತ್ರಯೇಚ್ಚ ತಂ ॥ ೧೭ ॥

ಚಕ್ರಾದಿ ತತ್ರ ಸಂತಾಪ್ಯ ಸಂಸ್ಕಾರ್ಯಾ ಹಿ ದ್ವಿಜೇತರಾಃ ।

---

ದೀಕ್ಷಾ ಗುರುಗಳಾಗಲು ಅರ್ಹರೆಂದು ತಿಳಿಯಲ್ಪಟ್ಟಿರುತ್ತಾರೆ; ದೀಕ್ಷಾಸ್ವೀಕಾರ ಫಲವು, ಗುರುವಿನ ಆಧಿಕ್ಯವನ್ನು (ಶ್ರೇಷ್ಠತೆಯನ್ನು) ಅವಲಂಬಿಸಿರುತ್ತದೆ; ಈ ಎಲ್ಲರಿಗೂ ಬ್ರಾಹ್ಮಣನೇ ಮುಖ್ಯಗುರುವಾಗಿರುತ್ತಾನಾದ್ದರಿಂದ, ಅನ್ಯ ದೀಕ್ಷಾಪ್ರದಾನಗುರುಗಳೆಂಬುವರು, ಬ್ರಾಹ್ಮಣನ ಆಜ್ಞೆಯನ್ನು ಪಡೆದೇ ದೀಕ್ಷೆಯನ್ನು ಕೊಡಬೇಕು; ಹಾಗಲ್ಲದಿದ್ದರೆ (ಆಜ್ಞೆಯನ್ನು ಪಡೆಯದಿದ್ದರೆ) ನರಕವನ್ನು ಹೊಂದುತ್ತಾನೆ; ಆತನಿಂದ ದೀಕ್ಷೆಯನ್ನು ಸ್ವೀಕರಿಸಿದವರೂ ಸಹ ನರಕಭಾಗಿಗಳೇ ಆಗುತ್ತಾರೆ (೧೪-೧೬). ವಿಧಿಪೂರ್ವಕವಾಗಿ

ಸ್ಥಂಡಿಲೇ–ಭೂಮಿಯಲ್ಲಿ ನಿರ್ಮಿತವಾದ ಕಟ್ಟೆಯಮೇಲೆ, (ಅಗ್ನಿ ಸ್ಥಾಪನೆಗಾಗಿ ಏರ್ಪಡಿಸಿದ ಪವಿತ್ರಪ್ರದೇಶದಲ್ಲಿ), ಅಗ್ನಿಂ–ಅಗ್ನಿಯನ್ನು ಪ್ರತಿಷ್ಠಾಪ್ಯ–ಪ್ರತಿಷ್ಠೆಮಾಡಿ, ಚತುರ್ಭಿಃ–ನಾಲ್ಕು, ವಾಸುದೇವಾದಿ–ನಾಮಭಿಃ–ವಾಸುದೇವಾದಿ (ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧಗಳೆಂಬ) ನಾಮಗಳಿಂದ, ಚತುರ್ಥ್ಯಂತೈಃ–ಚತುರ್ಥೀ ವಿಭಕ್ತಿಯಲ್ಲಿರುವ, ನಮೋಂತೈಃ–ನಮಃಶಬ್ದದಿಂದ ಕೊನೆಗೊಳ್ಳುವ ಮಂತ್ರಗಳಿಂದ (ವಾಸುದೇವಾಯ ನಮಃ ಸಂಕರ್ಷಣಾಯ ನಮಃ ಇತ್ಯಾದಿಗಳಿಂದ), ತಂ–ಆ ಅಗ್ನಿಯನ್ನು ಮಂತ್ರಯೇತ್–ಅಭಿಮಂತ್ರಿಸಬೇಕು; ತತ್ರ–ಆ ಅಗ್ನಿಯಲ್ಲಿ ಚಕ್ರಾದಿ–ಚಕ್ರಾದಿಗಳನ್ನು ಸಂತಾಪ್ಯ–ದಹಿಸಿ, (ಕಾಯಿಸಿ), ದ್ವಿಜೇತರಾಃ–ದ್ವಿಜರಲ್ಲದ ಇತರರು (ಶೂದ್ರಾದಿಗಳು), ಸಂಸ್ಕಾರ್ಯಾಃ–ಸಂಸ್ಕಾರಮಾಡಲ್ಪಡತಕ್ಕವರು (ಎಂದರೆ, ತಪ್ತಚಕ್ರಾದಿಮುದ್ರೆಗಳನ್ನು ಧಾರಣೆಮಾಡಿಸತಕ್ಕದ್ದು).

**ಅದತ್ವಾ ವಿಧಿವನ್ಮುದ್ರಾಂ ಯೋ ಮಂತ್ರಂ ವೈಷ್ಣವಂ ವದೇತ್ ॥ ೧೮ ॥**
**ಸ ಯಾತಿ ನರಕಂ ಘೋರಂ ಶಿಷ್ಯೇಣಾಪಿ ಸಹೈವ ತು ।**

ವಿಧಿವತ್–ವಿಧಿಪೂರ್ವಕವಾಗಿ (ನಿಯಮಗಳಂತೆ), ಮುದ್ರಾಂ–ತಪ್ತಚಕ್ರಾದಿಮುದ್ರೆಯನ್ನು ಅದತ್ವಾ–ಕೊಡದೇ (ಶಿಷ್ಯನ ದೇಹದಮೇಲೆ ಮುದ್ರಿಸದೇ), ಯಃ–ಯಾರು (ಯಾವ ಗುರುವು), ವೈಷ್ಣವಂ–ವಿಷ್ಣು ಸಂಬಂಧಿಯಾದ, ಮಂತ್ರಂ–ಮಂತ್ರವನ್ನು ವದೇತ್–ಉಪದೇಶಿಸುವನೋ, ಸಃ–ಅತನು, ಶಿಷ್ಯೇಣ ಅಪಿ ಸಹ–ಶಿಷ್ಯನಿಂದಲೂ ಕೂಡಿಕೊಂಡು, ಘೋರಂ–ಘೋರವಾದ, ನರಕಂ–ನರಕವನ್ನು ಯಾತಿ ಏವ ತು–ನಿಶ್ಚಯವಾಗಿಯೂ ಹೊಂದುತ್ತಾನೆ.

**ಪೂರ್ವೋಕ್ತೇನ ವಿಧಾನೇನ ದೀಕ್ಷಾಂ ಗೃಹ್ಣಾತಿ ವೈಷ್ಣವೀಂ ॥ ೧೯ ॥**

---

ಸ್ಥಂಡಿಲದಲ್ಲಿ ಅಗ್ನಿಪ್ರತಿಷ್ಠೆಮಾಡಿ, ವಾಸುದೇವಾಯ ನಮಃ—ಸಂಕರ್ಷಣಾಯ ನಮಃ—ಪ್ರದ್ಯುಮ್ನಾಯ ನಮಃ—ಅನಿರುದ್ಧಾಯ ನಮಃ, ಎಂಬುದಾಗಿ ಅಗ್ನಿಯನ್ನು ಅಭಿಮಂತ್ರಿಸಿ, ಆ ಅಗ್ನಿಯಲ್ಲಿ ಚಕ್ರಾದಿಗಳನ್ನು ಕಾಯಿಸಿ (ದಹಿಸಿ), ಅದರಿಂದ, ಶೂದ್ರಾದಿಗಳಿಗೆ ಮುದ್ರೆಗಳನ್ನು ಕೊಡತಕ್ಕದ್ದು (೧೭). ತಪ್ತಮುದ್ರಾಧಾರಣೆಯನ್ನು ಮಾಡಿಸಿಯೇ ಗುರುವು ವೈಷ್ಣವಮಂತ್ರವನ್ನು ಶಿಷ್ಯನಿಗೆ ಉಪದೇಶಿಸಬೇಕು; ಮುದ್ರೆಯನ್ನು ಕೊಡದೇ ಹಾಗೆಯೇ ಮಂತ್ರೋಪದೇಶಮಾಡಿದ ಗುರುವು, ಶಿಷ್ಯನಿಂದ ಕೂಡಿಕೊಂಡು ಘೋರ ನರಕವನ್ನೇ ಹೊಂದುತ್ತಾನೆ—ಇದು ಶಾಸ್ತ್ರನಿಶ್ಚಯವು (೧೮). ಪೂರ್ವೋಕ್ತವಿಧಿಯಂತೆ ವೈಷ್ಣವದೀಕ್ಷೆಯನ್ನು ಸ್ವೀಕರಿಸಿದವನು ಶೀಘ್ರವಾಗಿ ಸಂಸಾರದಿಂದ ಮುಕ್ತನಾಗಿ, ವಿಷ್ಣುಲೋಕವನ್ನು ಹೊಂದಿ ನಿತ್ಯಾನಂದದಿಂದ ವಿಹರಿಸುತ್ತಾನೆ; ಹಾಗಲ್ಲದೇ

**ಸೋಽಚಿರೇಣೈವ ನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ।**
**ಅಕಾಲೇ ಚಾಪ್ಯದೇಶೇ ಚ ವಿಧಿಮುಲ್ಲಂಘ್ಯ ಯೋ ನರಃ ॥ ೨೦ ॥**

**ಲೋಭಾದ್ಯುಪಾಧಿನಾ ವಾಪಿ ಯಸ್ಮಾತ್ಕಸ್ಮಾಚ್ಚ ಪೂರುಷಾತ್ ।**
**ಸ್ವಯಂ ವಾಪಿ ದಹೇದ್ಗಾತ್ರಂ ಚಕ್ರಶಂಖಾದಿಕೈರಪಿ ॥ ೨೧ ॥**

**ಸೋಽಪಿ ವ್ರಜೇತ ನಿರಯಂ ಸಾಕಂ ಸ್ವಗುರುಣಾ ಚಿರಂ ।**
**ತಸ್ಮಾತ್ತು ವಿಧಿನಾ ಬ್ರಹ್ಮನ್ ಗೃಹ್ಣೀಯಾತ್ ಸದ್ಗುರೋರಪಿ ॥ ೨೨ ॥**

ಪೂರ್ವೋಕ್ತೇನ—ಈ ಹಿಂದೆ ನಿರೂಪಿಸಲಾದ, ವಿಧಾನೇನ—ಕ್ರಮದಿಂದ (ನಿಯಮಾನುಸಾರವಾಗಿ), (ಯಃ—ಯಾರು), ವೈಷ್ಣವೀಂ ದೀಕ್ಷಾಂ—ವಿಷ್ಣುದೀಕ್ಷೆಯನ್ನು ಗೃಹ್ಣಾತಿ—ಸ್ವೀಕರಿಸುವನೋ, ಸಃ—ಆತನು, ಅಚಿರೇಣ ಏವ—ಶೀಘ್ರವಾಗಿಯೇ, ನಿರ್ಮುಕ್ತಃ—(ಸಂಸಾರದಿಂದ) ಮುಕ್ತನಾಗಿ, ವಿಷ್ಣುಲೋಕೇ—ವೈಕುಂಠ ಮೊದಲಾದ ಶ್ರೀವಿಷ್ಣುವು ನಿತ್ಯಪ್ರತ್ಯಕ್ಷನಾಗುವ ಲೋಕದಲ್ಲಿ, ಮಹೀಯತೇ—ವಿರಾಜಿಸುತ್ತಾನೆ (ಆನಂದದಿಂದ ವಿಹರಿಸುತ್ತಾನೆ); ಅಕಾಲೇ—ಅಕಾಲದಲ್ಲಿಯೂ (ನಿಷಿದ್ಧಕಾಲಗಳಲ್ಲಿ), ಅದೇಶೇಚಾಪಿ—ಅಪವಿತ್ರದೇಶಗಳಲ್ಲಿಯೂ, ಯಃ ನರಃ—ಯಾವ ಮನುಷ್ಯನು, ವಿಧಿಂ—ವಿಧಿಯನ್ನು (ದೀಕ್ಷಾಸ್ವೀಕಾರ ನಿಯಮವನ್ನು), ಉಲ್ಲಂಘ್ಯ—ಮೀರಿ (ಅತಿಕ್ರಮಿಸಿ—ನಿಯಮಕ್ಕೆ ವಿರುದ್ಧವಾಗಿ), ಲೋಭಾದ್ಯುಪಾಧಿನಾ—ದ್ರವ್ಯಾದಿ ಲೋಭನಿಮಿತ್ತದಿಂದ, ಅಪಿ—ಆಗಲೀ, ವಾ—ಅಥವಾ, ಯಸ್ಮಾತ್ ಕಸ್ಮಾತ್—ಯಾರಾದರೊಬ್ಬ, ಪೂರುಷಾತ್-ಪುರುಷನಿಂದ, ಅಪಿ ಚ- ಮತ್ತೇನೆಂದರೆ, ಸ್ವಯಂ ವಾ—ತಾನೇ ಆಗಲಿ, ಚಕ್ರಶಂಖಾದಿಕೈಃ— ಚಕ್ರಶಂಖಾದಿಗಳಿಂದ, ಗಾತ್ರಂ—ತನ್ನ ದೇಹವನ್ನು, ದಹೇತ್—ಸುಟ್ಟುಕೊಂಡರೆ, ಸಃ ಅಪಿ—ಆ ಮನುಷ್ಯನೂ,

---

ಅಯೋಗ್ಯವಾದ ಕಾಲದೇಶಗಳಲ್ಲಿ[1] ವಿಧಿಯನ್ನು ಮೀರಿ, ದ್ರವ್ಯಾಶೆ ಮೊದಲಾದ ಕಾರಣಗಳಿಂದ, ಯಾವನೊಬ್ಬ (ಸದ್ಗುರುವಲ್ಲದ) ಪುರುಷನಿಂದ, ಅಥವಾ ತಾನೇ ಚಕ್ರ ಶಂಖಾದಿಗಳಿಂದ ತನ್ನ ರೇಹವನ್ನು ಸುಡಿಸಿಕೊಂಡರೆ, ಆತನು ಅಂಥ ಕಶ್ಮಲ ಗುರುವಿನೊಂದಿಗೆ ಬಹುಕಾಲಾವಧಿಯ ನರಕವಾಸವನ್ನು ಹೊಂದುತ್ತಾನೆ; ಆದ್ದರಿಂದ ಹೇ ಬ್ರಹ್ಮನ್! ವಿಧಿಪೂರ್ವಕವಾಗಿ ಸದ್ಗುರುವಿನಿಂದಲೇ ವಿಷ್ಣುದೀಕ್ಷೆಯನ್ನು ಎಲ್ಲರೂ ಸ್ವೀಕರಿಸತಕ್ಕದ್ದು (೧೯-೨೨). ಯೋಗ್ಯವಾದ ರೇಶ ಕಾಲಗಳಲ್ಲಿ ಮತ್ತು ವಿಶೇಷವಾಗಿ

1. ದೀಕ್ಷೆಯಿಂದ ಫಲಾಧಿಕ್ಯಕ್ಕೆ ಕಾರಣವಾಗುವ ಕಾಲವಿಶೇಷಗಳ ವಿವರಗಳಿಗೆ 7ನೇ ಅಧ್ಯಾಯದ 75-77ನೇ ಶ್ಲೋಕಗಳನ್ನೂ ಆ ಶ್ಲೋಕಗಳ ಟಿಪ್ಪಣಿಗಳನ್ನೂ ನೋಡಬಹುದು. ಶುಭಕರ್ಮಗಳಿಗೆ ನಿಂದ್ಯಗಳೆಂದು ಜ್ಯೋತಿಷದಿಂದ ತಿಳಿದುಬರುವ ಕಾಲವಿಶೇಷಗಳು 'ಅಕಾಲ'ಗಳು; ಸಜ್ಜನಸಂಗಮ, ಮಹಾಗುರುಸಮಾಜಗಳಿಲ್ಲದ ಸ್ಥಳಗಳು 'ಅದೇಶ' (ಅಯೋಗ್ಯ) ಗಳೆನಿಸುತ್ತವೆ.

ಸ್ವಗುರುಣಾಸಾಕಂ–ತನ್ನ ಗುರುವಿನೊಡನೆ, ಚಿರಂ–ಬಹುಕಾಲ, ನಿರಯಂ–ನರಕವನ್ನು ಪ್ರಜೇತ–ಹೊಂದುತ್ತಾನೆ; ತಸ್ಮಾತ್–ಈ ಕಾರಣದಿಂದ, ಬ್ರಹ್ಮನ್–ಹೇ ಬ್ರಹ್ಮದೇವ !, ವಿಧಿನಾ–ವಿಧ್ಯುಕ್ತಕ್ರಮದಿಂದ, ಅಪಿ–ಮತ್ತು ಸದ್ಗುರೋಃ– ಸದ್ಗುರುವಿನಿಂದ, ಗೃಹ್ಣೀಯಾತ್–(ದೀಕ್ಷೆಯನ್ನು) ಸ್ವೀಕರಿಸತಕ್ಕದ್ದು.

ದೇಶೇ ಕಾಲೇ ವಿಶೇಷೇಣ ವಿಷ್ಣುಭಕ್ತಿಸಮನ್ವಿತಃ ।
ವಿಷ್ಣುದೀಕ್ಷಾಫಲಂ ಕೃತ್ಸ್ನಂ ಸಮ್ಯಕ್ ಸ ಲಭತೇ ನರಃ ॥ ೨೩ ॥

ಅನ್ಯಥಾ ನ ತಥಾ ತಸ್ಯ ಫಲಂ ಭವತಿ ನಿಶ್ಚಿತಂ ॥ ೨೪ ॥

ವಿಶೇಷೇಣ–ವಿಶೇಷವಾಗಿ, ವಿಷ್ಣುಭಕ್ತಿಸಮನ್ವಿತಃ–ವಿಷ್ಣುಭಕ್ತಿಯುಳ್ಳವನು, ದೇಶೇ ಕಾಲೇ–(ದೀಕ್ಷಾಸ್ವೀಕಾರಕ್ಕೆ ಯೋಗ್ಯವಾದ) ದೇಶಕಾಲಗಳಲ್ಲಿ ವಿಷ್ಣುದೀಕ್ಷಾಫಲಂ–ವಿಷ್ಣುದೀಕ್ಷೆಯ ಫಲವನ್ನು, ಕೃತ್ಸ್ನಂ–ಪೂರ್ಣವಾಗಿ, ಲಭತೇ–ಹೊಂದುತ್ತಾನೆ; ಸ ನರಃ–ಆ ಮನುಷ್ಯನು, ಅನ್ಯಥಾ–ಹಾಗಿಲ್ಲದಿದ್ದರೆ (ವಿಷ್ಣುಭಕ್ತಿಯಿಲ್ಲದಿದ್ದರೆ), ತಸ್ಯ–ಆ ಪುರುಷನಿಗೆ, ನಿಶ್ಚಿತಂ–ನಿಶ್ಚಯವಾಗಿ, ಫಲಂ–ದೀಕ್ಷಾಫಲವು, ನ ಭವತಿ–ಉಂಟಾಗುವುದಿಲ್ಲ (ದೊರೆಯುವುದಿಲ್ಲ); ತಥಾ–ಹಾಗೂ (ಕಾಲ ದೇಶ ವಿಶೇಷಗಳಿಂದ ದೊರೆಯುವ ಪೂರ್ಣಫಲವೂ), ನ ಭವತಿ–ಲಭಿಸುವುದಿಲ್ಲ.

---

## ಅಧ್ಯಾಯ ೯

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

ಯೇಷಾಂ ಹಿ ಪ್ರತಿಲೋಮಾನಾಂ ದರ್ಶನಾದೇವ ಜಾಯತೇ ।
ಶೌಚಭಂಗೋ ದ್ವಿಜಾತೀನಾಂ ತೇಷಾಂ ಮುದ್ರಾಂಕನಂ ಕಥಂ ॥ ೧ ॥

---

ವಿಷ್ಣುಭಕ್ತಿಯಿಂದ ಕೂಡಿದವನಾಗಿ, ದೀಕ್ಷೆಯನ್ನು ಸ್ವೀಕರಿಸುವ ನರನು, ವಿಷ್ಣುದೀಕ್ಷೆಯಿಂದ ಲಭ್ಯವಾದ ಪೂರ್ಣಫಲವನ್ನು ಹೊಂದುತ್ತಾನೆ; ಅನ್ಯಥಾ, ದೀಕ್ಷಾಫಲವು, ಆ ಪ್ರಕಾರವಾಗಿ (ಪೂರ್ಣವಾಗಿ) ದೊರೆಯುವುದಿಲ್ಲವೆಂಬುದು ನಿಶ್ಚಯ (೨೩-೨೪).

ಗುರುವಿಚಾರವೆಂಬ ೮ನೇ ಅಧ್ಯಾಯವು ಮುಗಿದುದು.

ಪ್ರತಿಲೋಮಾದಿ ಅಧಮ (ಕೀಳು) ಜಾತಿಯವರನ್ನು ನೋಡುವ ಮಾತ್ರದಿಂದ, ದ್ವಿಜರಿಗೆ ಮೈಲಿಗೆಯಾಗುತ್ತದೆ (ಮಡಿಗೆ ಭಂಗ ಬರುತ್ತದೆ); ಹೀಗಿರಲು, ಆ ಜನರಿಗೆ, ಸ್ಪರ್ಶಮಾಡಿ (ಅವರನ್ನು ಮುಟ್ಟಿ), ತಪ್ತಮುದ್ರಾಧಾರಣಮಾಡಿಸುವುದು ಹೇಗೆ ಸಾಧ್ಯ?

ಕಥಂ ಚೋಪದಿಶೇಯುಸ್ತಾನ್ ಶ್ವಪಾಕಾದೀನ್ ದ್ವಿಜೋತ್ತಮಾಃ ।
ಕಥಂ ವಾ ಬಿಭೃಯುರ್ಹಸ್ತಂ ತೇಷಾಮುಪರಿ ಮಸ್ತಕೇ ॥ ೨ ॥

ಉಪಾದಿಶೇಯುಃ ಕಾನ್ ಮಂತ್ರಾನ್ ತೇಷು ಜಾತ್ಯಧಮೇಷು ವೈ ।
ಏತಂ ಮೇ ಸಂಶಯಂ ದೇವ ಛೇತ್ತುಮರ್ಹಸ್ಯಶೇಷತಃ ॥ ೩ ॥

ಯೇಷಾಂ–ಯಾವ, ಪ್ರತಿಲೋಮಾನಾಂ–ಪ್ರತಿಲೋಮ ಜಾತಿಯವರ, ದರ್ಶನಾತ್ ಏವ–ದರ್ಶನ ಮಾತ್ರದಿಂದ, ದ್ವಿಜಾತೀನಾಂ–ದ್ವಿಜಾತಿಯವರಿಗೆ (ಬ್ರಾಹ್ಮಣಾದಿ ತ್ರಿವರ್ಣದವರಿಗೆ), ಶೌಚಭಂಗಃ–ಶುದ್ಧತೆಯ ಭಂಗವು, ಜಾಯತೇ–ಉಂಟಾಗುತ್ತದೆಯೋ (ಮೈಲಿಗೆಯಾಗುವುದೋ), ತೇಷಾಂ–ಆ ಪ್ರತಿಲೋಮ ವರ್ಣದವರಿಗೆ, ಮುದ್ರಾಂಕನಂ–ತಪ್ತಮುದ್ರಾಧಾರಣ ಮಾಡಿಸುವುದು, ಕಥಂ–ಹೇಗೆ (ಸಾಧ್ಯವಾಗುತ್ತದೆ?) (ಯಾವ ರೀತಿ ಮಾಡಬೇಕು); ದ್ವಿಜೋತ್ತಮಾಃ–ಬ್ರಾಹ್ಮಣಶ್ರೇಷ್ಠರು (ಸರ್ವರಿಗೂ ಮುಖ್ಯ ಗುರುಗಳಾದವರು), ಶ್ವಪಾಕಾದೀನ್ ತಾನ್–ಚಂಡಾಲರೇ ಮೊದಲಾದ ಆ ಹೀನಕುಲದವರನ್ನು ಕುರಿತು, ಕಥಂ ಚ–ಹೇಗೆ ತಾನೆ, ಉಪದಿಶೇಯುಃ–ಮಂತ್ರೋಪದೇಶ ಮಾಡುತ್ತಾರೆ?; ಕಥಂ ವಾ–ಮತ್ತು ಹೇಗೆ, ತೇಷಾಂ–ಆ ಹೀನಜಾತಿಯವರ, ಮಸ್ತಕೇ ಉಪರಿ–ತಲೆಯ ಮೇಲ್ಭಾಗದಲ್ಲಿ, ಹಸ್ತಂ–(ತಮ್ಮ) ಹಸ್ತವನ್ನು, ಬಿಭೃಯುಃ–ಇಡುತ್ತಾರೆ?; ಜಾತ್ಯಧಮೇಷು ತೇಷು–ಕೀಳುಜಾತಿಯ ಅವರಲ್ಲಿ (ಅವರಿಗೆ), ಕಾನ್ ಮಂತ್ರಾನ್–ಯಾವ ಮಂತ್ರಗಳನ್ನು, ಉಪದಿಶೇಯುಃ–ಉಪದೇಶಿಸುತ್ತಾರೆ? ವೈ–ಇವೆಲ್ಲವೂ ನಿಷಿದ್ಧಗಳೆಂದು ತೋರುತ್ತವೆಯಷ್ಟೆ! ದೇವ–ಹೇ ಸ್ವಾಮಿ!, ಮೇ–ನನ್ನ, ಏತಂ ಸಂಶಯಂ–ಈ ಸಂಶಯವನ್ನು, ಅಶೇಷತಃ–ಪೂರ್ಣವಾಗಿ (ಸ್ವಲ್ಪವೂ ಉಳಿಯದಂತೆ), ಛೇತ್ತುಂ–ಕತ್ತರಿಸಿ ಒಗೆಯಲು (ನಾಶಮಾಡಲು–ಪರಿಹರಿಸಲು), ಅರ್ಹಸಿ–ಸಮರ್ಥನಾಗಿರುವಿ (ಹಾಗೆ ಮಾಡು, ದೇವ!).

---

ಮುಖ್ಯಗುರುಗಳೆಂಬ ಬ್ರಾಹ್ಮಣರು ಚಂಡಾಲಾದಿ[1] ಹೀನಜಾತಿಯವರನ್ನು ಕುರಿತು, ಮಂತ್ರೋಪದೇಶವನ್ನು ಮಾಡುವುದು ಹೇಗೆ ? ಅವರನ್ನು ಮುಟ್ಟಿ ಅವರ ತಲೆಯಮೇಲೆ ಗುರುವು ತನ್ನ ಹಸ್ತವನ್ನಿಡುವುದು ಹೇಗೆ ? ಅಂಥ ಕೀಳುಜಾತಿಯವರಿಗೆ ಯಾವ ಮಂತ್ರಗಳನ್ನು ಉಪದೇಶಿಸಬೇಕು (ಉಪದೇಶಿಸುತ್ತಾರೆ)? ಈ ಮುಂತಾದ ನನ್ನ ಸಂಶಯಗಳನ್ನು ನಿಶ್ಶೇಷವಾಗಿ ಪರಿಹರಿಸು, ದೇವ ! ಈ ಸಂಶಯಗಳ ಪರಿಹಾರ

1. ಶ್ವಪಾಕರೆಂದರೆ ನಾಯಿಮಾಂಸವನ್ನು ಬೇಯಿಸಿ ತಿನ್ನುವವರು. ಶ್ವಪಾಕ ಶಬ್ದದಿಂದ ಚಂಡಾಲಾದಿ ಪ್ರತಿಲೋಮಜಾತಿಯವರು ವಿವಕ್ಷಿತರೆಂದು ತಿಳಿಯಬೇಕು; ಚಂಡಾಲನೆಂದರೆ, ಉತ್ತಮವರ್ಣದ ಬ್ರಾಹ್ಮಣಸ್ತ್ರೀಯಲ್ಲಿ ಶೂದ್ರವರ್ಣದ ಅಥವಾ ಆತನಗಿಂತ ಅಧಮಪುರುಷನಿಂದ, ಹುಟ್ಟಿದವನು.

ಹಯಗ್ರೀವ ಉವಾಚ—

ಯಥಾ ನಾನಾ ರಸಾ ಲೋಕೇ ಯಥಾ ನಾನೌಷಧೀಗಣಃ ।
ಸರ್ವವ್ಯಾಧಿಹರಾಃ ಪ್ರೋಕ್ತಾ ಪ್ರಯುಕ್ತಾಶ್ಚ ಚಿಕಿತ್ಸಕೈಃ ॥ ೪ ॥

ದಯಯಾ ರೋಗಿಸಂಘೇಷು ಭವಂತಿ ವ್ಯಾಧಿಘಾತಕಃ ।
ತಥಾ ಸಂಸಾರದುಃಖೇನ ಸಂತಾಪೈಸ್ತ್ರಿವಿಧೈರಪಿ ॥ ೫ ॥

ಅನಿಶಂ ಪೀಡ್ಯಮಾನಾನಾಂ ಪರಮಂ ದುಃಖಮೋಚನಂ ।
ದೀಕ್ಷಾಯಾ ಗ್ರಹಣಂ ವಿಷ್ಣೋರೇಕಮೇವಾಸ್ತಿ ನಾನ್ಯಥಾ ॥ ೬ ॥

ಲೋಕೇ–ಲೋಕದಲ್ಲಿ, ಯಥಾ–ಹೇಗೆ, ನಾನಾ ರಸಾಃ–ವಿವಿಧ ರಸಗಳು (ರಸಾಯನಗಳು), ಮತ್ತು ಯಥಾ–ಹೇಗೆ, ನಾನಾ ಔಷಧೀಗಣಃ–ವಿವಿಧವಾದ ಔಷಧಿಗಳ ಸಮೂಹವು, ಚಿಕಿತ್ಸಕೈಃ–ಚಿಕಿತ್ಸಕರಿಂದ (ವೈದ್ಯರಿಂದ), ರೋಗಿಸಂಘೇಷು–ರೋಗಿಗಳ ಗುಂಪುಗಳಲ್ಲಿ (ಅಸಂಖ್ಯರೋಗಿಗಳಲ್ಲಿ), ದಯಯಾ–ಕೃಪೆಯಿಂದ, ಪ್ರಯುಕ್ತಾ–ಪ್ರಯೋಗಿಸಲ್ಪಟ್ಟು, ಸರ್ವವ್ಯಾಧಿಹರಾಃ–ಸಕಲ ರೋಗಗಳನ್ನು ಪರಿಹರಿಸುವವುಗಳು, ಭವಂತಿ–ಆಗುತ್ತವೆಯೋ, ಯಥಾ–ಹೇಗೆ, ವ್ಯಾಧಿಘಾತಕಃ–ರೋಗಗಳನ್ನು ನಾಶಮಾಡುವ ವೈದ್ಯನೋ (ದಯಯಾ–ದಯೆಯಿಂದ, ರೋಗಿಸಂಘೇಷು–ರೋಗಿಗಳ ಸಮೂಹಗಳಲ್ಲಿ ಪ್ರವೇಶಿಸಿ, ಅವರನ್ನು ಮುಟ್ಟಿ ಯೋಗ್ಯಚಿಕಿತ್ಸೆಗಳನ್ನು ನಡೆಸುತ್ತಾನೆಯೋ), ಸಂಸಾರದುಃಖೇನ–ಸಂಸಾರದುಃಖದಿಂದ, ಅಪಿ–ಮತ್ತು ತ್ರಿವಿಧೈಃ–ಮೂರು ವಿಧದ

---

ಮಾಡುವಲ್ಲಿ ನೀನೇ ಸಮರ್ಥನು (೧-೩). ವಿವಿಧ ರಸಾಯನಗಳು ಮತ್ತು ಔಷಧಿಗಳು ವೈದ್ಯರಿಂದ ರೋಗಿಗಳಲ್ಲಿ ಪ್ರಯೋಗಿಸಲ್ಪಟ್ಟರೆ, ರೋಗಿಗಳ ವಿವಿಧ ರೋಗಗಳು ಗುಣವಾಗುವುದು, ಲೋಕದಲ್ಲಿ ಕಂಡಿದೆಯಷ್ಟೆ ಚಿಕಿತ್ಸಕನು ರೋಗಿಗಳನ್ನು ಮುಟ್ಟಲು ಮತ್ತು ಅವರ ಮಧ್ಯದಲ್ಲಿಯೇ ಇದ್ದು ಕೃಪೆಯಿಂದ, ಮನಸ್ಸಿನಿಂದ ಯಾವ ರೀತಿಯಲ್ಲಿಯೂ ಬೇಸರಪಟ್ಟುಕೊಳ್ಳದೇ, ಚಿಕಿತ್ಸೆಯಲ್ಲಿ ತೊಡಗುತ್ತಾನೆ; ಹೀಗೆಯೇ ಸಂಸಾರದಲ್ಲಿರುವ ಜೀವರು ನಾನಾ ದುಃಖಗಳಿಂದಲೂ, ತ್ರಿವಿಧ ತಾಪಗಳಿಂದಲೂ,[1] ಅತಿಶಯವಾಗಿ ಪೀಡಿತರಾಗಿರುವರು; ಈ ದುಃಖಗಳಿಂದ ಮುಕ್ತರಾಗಲು, ವಿಷ್ಣುದೀಕ್ಷೆಯನ್ನು ವಿಧಿಪ್ರಕಾರ ಸ್ವೀಕರಿಸುವುದೊಂದೇ ಮಾರ್ಗವು—ಅನ್ಯಥಾ ಈ ದುಃಖಗಳಿಗೆ ಪರಿಹಾರಮಾರ್ಗವಿಲ್ಲ; ಆದ್ದರಿಂದ, ದಯಾವಂತನಾದ ಗುರುವು,

1. ತಾಪಗಳು ಮೂರುವಿಧ:—ಅಧಿಭೂತ—ದೇಹಕ್ಕೊದಗುವ ರೋಗಾದಿ ಉಪದ್ರವಗಳು; ಆಧ್ಯಾತ್ಮ—ನಾನಾವಿಧ ಮನೋರೋಗಗಳು; ಅಧಿದೈವ—ದೈವಿಕವಾಗಿ ಪ್ರಾಪ್ತವಾಗುವ, ಅತಿವೃಷ್ಟಿ- ಅನಾವೃಷ್ಟಿ- ಬಿರುಗಾಳಿ, ದುರ್ಭಿಕ್ಷ ಸಿಡಿಲು ಮೊದಲಾದವು.

(ಆಧ್ಯಾತ್ಮಿಕ, ಆಧಿಭೌತಿಕ ಮತ್ತು ಆಧಿದೈವಿಕಗಳೆಂಬ ತ್ರಿವಿಧ), ಸಂತಾಪೈಃ–ವಿಶೇಷ ದುಃಖಗಳಿಂದ, ಅನಿಶಂ–ನಿರಂತರವೂ, ಪೀಡ್ಯಮಾನಾನಾಂ–ಪೀಡಿಸಲ್ಪಡುತ್ತಿರುವವರಿಗೆ, ವಿಷ್ಣೋಃ–ವಿಷ್ಣುವಿನ, ದೀಕ್ಷಾಯಾಃ–ದೀಕ್ಷೆಯ (ತಪ್ತಮುದ್ರಧಾರಣ ಮಂತ್ರೋಪದೇಶ ಗಳ), ಗ್ರಹಣಂ–ಸ್ವೀಕಾರವು, ಪರಮಂ–ಉತ್ಕೃಷ್ಟವಾದ, ದುಃಖಮೋಚನಂ–ದುಃಖಪರಿಹಾರಮಾರ್ಗವು, ಏಕಮೇವ ಅಸ್ತಿ–ಒಂದು ಮಾತ್ರವಾಗಿರುತ್ತದೆ; ಅನ್ಯಥಾ ನ–ಬೇರೆ ಮಾರ್ಗವೇ ಇಲ್ಲ (ಆದ್ದರಿಂದ) ತಥಾ–ವೈದ್ಯನಂತೆ, (ದ್ವಿಜನು ಕೀಳುಜಾತಿ ಯವರ ಸ್ಪರ್ಶದಿಂದಾದರೂ ಅವರನ್ನು ಅನುಗ್ರಹಿಸಬೇಕು—ಇದಕ್ಕೆ ಆ ದ್ವಿಜನು—ಗುರುವು ಮಾಡಿಕೊಳ್ಳಬೇಕಾದ ದೋಷಪರಿಹಾರವು, ಈ ಮುಂದೆ ಪ್ರಸಕ್ತವಾಗಲಿದೆ).

ನಾತ್ರ ವರ್ಣಾ ನಿಯಮ್ಯಂತೇ ನಾಪ್ಯಾಶ್ರಮನಿವಾಸಿನಃ ।
ಸರ್ವಾಶ್ರಮ್ಯೈಃ ಸರ್ವವರ್ಣ್ಯೈಃ ಸರ್ವಾಭಿರ್ಜಾತಿಭಿಸ್ತಥಾ ॥ ೭ ॥

ವಿಲೋಮ್ಯೈಃ ಪ್ರತಿಲೋಮ್ಯೈಶ್ಚ ತಥಾ ಕುಂಡೈಶ್ಚ ಗೋಳಕೈಃ ।
ಕರ್ತವ್ಯಾ ವಿಷ್ಣುಭಕ್ತೈಶ್ಚ ಗ್ರಾಹ್ಯಾ ದೀಕ್ಷಾ ಹರೇರಪಿ ॥ ೮ ॥

ಅತ್ರ–ದೀಕ್ಷಾಸ್ವೀಕಾರ ವಿಷಯದಲ್ಲಿ ವರ್ಣಾಃ–ವರ್ಣಗಳಾಗಲಿ (ಜಾತಿಗಳಾಗಲಿ), ಆಶ್ರಮನಿವಾಸಿನಃ ಅಪಿ–ಆಶ್ರಮಗಳಲ್ಲಿರುವವರಾಗಲಿ, ನ ನಿಯಮ್ಯಂತೇ–ಯಾವ ನಿಯಮಕ್ಕೂ (ನಿರ್ಬಂಧಕ್ಕೂ) ಒಳಗಾಗುವುದಿಲ್ಲ (ಎಂದರೆ ದೀಕ್ಷಾಸ್ವೀಕಾರಕ್ಕೆ ಇಂಥ ವರ್ಣದವರು, ಇಂಥ ಆಶ್ರಮದಲ್ಲಿರುವವರು ಮಾತ್ರ ಅರ್ಹರೆಂಬ ಯಾವ ನಿಯಮವೂ ಇರುವುದಿಲ್ಲ—ವರ್ಣಗಳೂ ಆಶ್ರಮಗಳೂ ದೀಕ್ಷಾಸ್ವೀಕಾರಕ್ಕೆ ಯಾವ ನಿರ್ಬಂಧವನ್ನೂ ಉಂಟುಮಾಡುವುದಿಲ್ಲ); ಮತ್ತೇನೆಂದರೆ, ಸರ್ವಾಶ್ರಮ್ಯೈಃ–ಎಲ್ಲ ಆಶ್ರಮಿಗಳಿಂದಲೂ, ಸರ್ವವರ್ಣ್ಯೈಃ–ಎಲ್ಲ ವರ್ಣದವರಿಂದಲೂ, ತಥಾ–ಹಾಗೂ, ಸರ್ವಾಭಿಃ–ಎಲ್ಲ

---

ರೋಗಿಯ ದುಃಖವನ್ನು ಚಿಕಿತ್ಸೆಗಳಿಂದ ವೈದ್ಯನು ಪರಿಹರಿಸುವಂತೆ, ತನಗೆ ಉಂಟಾಗುತ್ತ ವೆಂಬ ಶೌಚಭಂಗಾದಿಗಳನ್ನು ಗಮನಿಸದೇ, ಚಂಡಾಲಾದಿ ಹೀನವರ್ಣದವರನ್ನು ಸ್ಪರ್ಶಮಾಡಿ ತಪ್ತಚಕ್ರಾದಿಗಳನ್ನು ದೇಹದಲ್ಲಿ ಧಾರಣೆಮಾಡಿಸಿ (ಮುದ್ರಾಂಕಿತರನ್ನಾಗಿ ಮಾಡಿ), ಯೋಗ್ಯ ಮಂತ್ರೋಪದೇಶವನ್ನು ಮಾಡಿ, ಆತನ ತಲೆಯಮೇಲೆ ತನ್ನ ಹಸ್ತವನ್ನಿಟ್ಟು ಶ್ರೀಹರಿಸ್ಮರಣೆಪೂರ್ವಕ, ವಿಷ್ಣುಭಕ್ತಿಯುಳ್ಳ ಶಿಷ್ಯನನ್ನು ಅನುಗ್ರಹಿಸಲೇಬೇಕು (೪-೬). ವರ್ಣಾಶ್ರಮಗಳು ದೀಕ್ಷಾಸ್ವೀಕಾರದ ಅರ್ಹತೆಯನ್ನು ನಿಯಮಿಸುವುದಿಲ್ಲ; ಎಲ್ಲ ಆಶ್ರಮಿಗಳೂ, ಎಲ್ಲ ವರ್ಣದವರೂ, ಹಾಗೂ ಎಲ್ಲ ಜಾತಿಯವರೂ,* ವಿಲೋಮಿ ಗಳೂ ಪ್ರತಿಲೋಮಿಗಳೂ ಕುಂಡಗೋಳಕಾದಿ ಅಪಕೃಷ್ಟರೂ (ಸಂಸಾರದುಃಖ

* ಬ್ರಾಹ್ಮಣಾದಿ ವರ್ಣದವರೂ, ಈ ವರ್ಗದಲ್ಲಿ ಸೇರಿರುವುದರಿಂದ, ಕೈಮುತ್ಯ ನ್ಯಾಯದಿಂದ ('ಜಾತಿ' ಶಬ್ದದಿಂದ ಉಪಲಕ್ಷಿತರಾದ) ಅನುಲೋಮಿಗಳನ್ನು ಇಲ್ಲಿ ಗ್ರಹಿಸಬೇಕು.

ಜಾತಿಭಿಃ–ಜಾತಿಯವರಿಂದಲೂ, ವಿಲೋಮ್ಯೈಃ[1]–ವಿಲೋಮಿಗಳಿಂದಲೂ, ಪ್ರತಿಲೋಮ್ಯೈಃ ಚ–ಪ್ರತಿಲೋಮಿಗಳಿಂದಲೂ, ತಥಾ–ಮತ್ತು ಕುಂಡೈಃ[2]–ಕುಂಡರಿಂದಲೂ, ಚ–ಮತ್ತು ಗೋಲಕೈಃ[3]–ಗೋಲಕರಿಂದಲೂ, ವಿಷ್ಣುಭಕ್ತಿಃ–ವಿಷ್ಣುಭಕ್ತಿಯು, ಕರ್ತವ್ಯಾ ಚ (ಏವ)– ಅವಶ್ಯವಾಗಿ ಮಾಡಲ್ಪಡತಕ್ಕದ್ದು; ಅಪಿ–ಮತ್ತು ಹರೇಃ ದೀಕ್ಷಾ–ವಿಷ್ಣು ದೀಕ್ಷೆಯು, ಗ್ರಾಹ್ಯಾ–ಸ್ವೀಕರಿಸಲ್ಪಡಬೇಕು.

ಸಂಸಾರೇ ದುಃಖಬಹುಲೇ ವಿಯೋಗಃ ಪ್ರಿಯವಸ್ತುನಃ ।
ಸಂಯೋಗಶ್ಚಾಪ್ರಿಯಸ್ಯೈವ ಜಾಯತೇ ಸತತಂ ನೃಣಾಂ ॥ ೯ ॥

ನೃಣಾಂ–ಮನುಷ್ಯರಿಗೆ, ದುಃಖಬಹುಲೇ–ದುಃಖವೇ ಬಹಳವಾಗಿವುಳ್ಳ, ಸಂಸಾರೇ –ಸಂಸಾರದಲ್ಲಿ, ಪ್ರಿಯವಸ್ತುನಃ–ಪ್ರಿಯವಸ್ತುವಿನ, ವಿಯೋಗಃ–ವಿಯೋಗವೂ (ಸಂಬಂಧ ತಪ್ಪುವಿಕೆಯೂ), ಅಪ್ರಿಯಸ್ಯ ಏವ–ಅಪ್ರಿಯವಾದ ವಸ್ತುವಿನ (ತನಗೆ ಇಷ್ಟವಲ್ಲದ್ದೇ ಆದ ವಸ್ತುವಿನ), ಸಂಯೋಗಃ–ಸಂಬಂಧವೂ (ಸಮೀಪದಲ್ಲಿ ಕೂಡುವಿಕೆಯೂ), ಸತತಂ–ನಿತ್ಯವೂ, ಜಾಯತೇ–ಉಂಟಾಗುತ್ತದೆ.

ತಸ್ಮಾದತೋ ವಿರಕ್ತಃ ಸ್ಯಾದೇಕೈಕಂ ಚ ಶನೈಃಶನೈಃ ।
ವಿಸೃಜೇದ್ವಿಷಯಂ ಧೀಮಾನ್ ನಿತ್ಯಮುದ್ವಿಗ್ನಮಾನಸಃ ॥ ೧೦ ॥

---

ಪರಿಹಾರವನ್ನು ಇಚ್ಛಿಸುವ ಸರ್ವರೂ), ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡಲೇಬೇಕು ಮತ್ತು ವಿಷ್ಣುದೀಕ್ಷೆಯನ್ನು ಸ್ವೀಕರಿಸಲೇಬೇಕು (೭-೮). ಮನುಷ್ಯರಿಗೆ ದುಃಖಪ್ರಚುರವಾದ ಈ ಸಂಸಾರದಲ್ಲಿ ನಿತ್ಯವೂ ಪ್ರಿಯವಸ್ತುವಿನ ವಿಯೋಗವೂ, ಅಪ್ರಿಯವಸ್ತುವಿನ ಯೋಗವೂ, ಉಂಟಾಗುತ್ತಲೇ ಇರುತ್ತದೆ (೯). ಸಂಸಾರದಲ್ಲಿ ಮನುಷ್ಯನು ನಿಯಮೇನ ಅಶಾಂತ ಮನಸ್ಕನಾಗಿರುತ್ತಾನೆ (ಮನಸ್ಸು ಒಂದಲ್ಲ ಒಂದು ವಿಷಯಿಕವಾಗಿ ಉದ್ವೇಗಗೊಂಡೇ ಇರುತ್ತದೆ—ಶಾಂತವಾಗಿರುವುದಿಲ್ಲ); ಈ ಅಶಾಂತತೆಯ ಪರಿಹಾರಕ್ಕಾಗಿ ವಿವೇಕಿಯು ವಿರಕ್ತನಾಗಬೇಕು; ವಿಷಯ ಭೋಗಗಳನ್ನು ಸಹಸಾ ತ್ಯಜಿಸುವುದು ಶಕ್ಯವಲ್ಲ—ಆದ್ದರಿಂದ ಮೆಲ್ಲಮೆಲ್ಲಗೆ, ಯತ್ನಪೂರ್ವಕವಾಗಿ ವೈರಾಗ್ಯವನ್ನು ದೊರಕಿಸಿಕೊಳ್ಳಬೇಕು (೧೦).

---

1. ವಿಲೋಮಿಗಳೆಂದರೆ ಪ್ರತಿಲೋಮಿಗಳೇ ಆದರೂ, ಪ್ರತಿಲೋಮಿಗಳು ಮಾತ್ರರಲ್ಲ; ಪ್ರತಿಲೋಮಿಗಳಿಂದ ಉತ್ತಮ ಸ್ತ್ರೀಯಲ್ಲಿ ಹುಟ್ಟಿದವರೂ ವಿಲೋಮಿಗಳಲ್ಲಿ ಸೇರುತ್ತಾರೆ.

2. ಕುಂಡ—ಪತಿಯುಳ್ಳ ಸ್ತ್ರೀಯಲ್ಲಿ ಅನ್ಯಪುರುಷನಿಂದ (ಜಾರತ್ವದಿಂದ) ಹುಟ್ಟಿದ ಸಂತಾನ;

3. ಗೋಲಕ—ವಿಧವೆಯು ಪರಪುರುಷಸಂಗದಿಂದ ಪಡೆಯುವ ಸಂತಾನ. ವರ್ಣ, ಜಾತಿಗಳು ಮತ್ತು ಈ ಟಿಪ್ಪಣಿಗಳ ವಿಷಯಗಳು ಮುಂದೆ ಜಾತಿವಿವೇಕವೆಂಬ ೩೫ನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಪ್ರಸ್ತಾಪಿಸಲ್ಪಡುತ್ತವೆ.

ತಸ್ಮಾತ್–ಆದ್ದರಿಂದ, ನಿತ್ಯಂ–ನಿತ್ಯವೂ (ನಿಯಮೇನ–ತಪ್ಪದೇ), ಉದ್ವಿಗ್ನಮಾನಸಃ– ಅಶಾಂತಮನಸ್ಕನಾದ ಸಂಸಾರಿಯು, ಅತಃ–ಈ ಸಂಸಾರದಿಂದ, ವಿರಕ್ತಃ–ವಿರಕ್ತನು (ಸಂಸಾರದಲ್ಲಿ ಆಸಕ್ತಿಯನ್ನು ತ್ಯಜಿಸಿದವನು), ಸ್ಯಾತ್–ಆಗಬೇಕು; ಧೀಮಾನ್– ವಿವೇಕಿಯಾದವನು, ಏಕೈಕಂ–ಒಂದೊಂದನ್ನೂ ಪ್ರತ್ಯೇಕವಾಗಿ, ವಿಷಯಂ–ವಿಷಯವನ್ನು (ಅಹಂ ಮಮಕಾರಗಳನ್ನು ಬಲಪಡಿಸುವ ಭೋಗಗಳನ್ನು), ಶನೈಃ ಶನೈಃ–ಮೆಲ್ಲಮೆಲ್ಲಗೆ (ಸಹಸಾ–ಇದ್ದಕ್ಕಿದ್ದಂತೆ ಬಿಡಲು ಅಶಕ್ಯವಾದ್ದರಿಂದ), ವಿಸೃಜೇತ್–ತ್ಯಜಿಸುತ್ತ ಸಾಗಬೇಕು (ಹೀಗೆ ವೈರಾಗ್ಯವು ಬಹುಯತ್ನಸಾಧ್ಯವು).

**ಸತ್ಯವಾದೀ ಜಿತಕ್ರೋಧೋ ದಯಾವಾನ್ ವಿಜಿತೇಂದ್ರಿಯಃ ।**
**ಪರದಾರಪರದ್ರವ್ಯಪರದ್ರೋಹಪರಾಙ್ಮುಖಃ ॥ ೧೧ ॥**

ವೈರಾಗ್ಯಸಂಪಾದನೆಗೆ ಸಹಾಯಕವಾಗುವ (ವೈರಾಗ್ಯದ ಫಲರೂಪಗಳೂ ಆದ) ಸದ್ಗುಣಗಳು, ಯಾವುವೆಂದರೆ:—ಸತ್ಯವಾದೀ–ಸತ್ಯಭಾಷಣವುಳ್ಳವನೂ, ಜಿತಕ್ರೋಧಃ– ಕೋಪವನ್ನು ಜಯಿಸಿದವನೂ, ದಯಾವಾನ್–ದಯಾವಂತನೂ, ವಿಜಿತೇಂದ್ರಿಯಃ– ಇಂದ್ರಿಯಜಯವುಳ್ಳವನೂ, ಪರದಾರ ಪರದ್ರವ್ಯ ಪರದ್ರೋಹ ಪರಾಙ್ಮುಖಃ–ಪರಸ್ತ್ರೀ, ಪರದ್ರವ್ಯ, ಪರವಂಚನೆಗಳನ್ನು ಮನಸ್ಸಿಗೆ ತರದವನೂ (ಆಗಿರಬೇಕು).

**ತೀರ್ಥಸೇವಾಪರೋ ನಿತ್ಯಂ ನಾತಿತೃಷ್ಣೋತಿಶಾಂತಧೀಃ ।**
**ನ್ಯಾಯಾರ್ಥ್ಯರ್ಾರ್ಜಕೋ ಯಶ್ಚ ಪಾತ್ರೇ ದಾನಂ ಕರೋತಿ ಯಃ ॥ ೧೨ ॥**

**ಸತಾಂ ಸಂತೋಷಕೋ ಯಃ ಸ್ಯಾದಸತಾಂ ಸಂಗವರ್ಜಿತಃ ।**
**ಆಸ್ತಿಕ್ಯಬುದ್ಧಿಃ ಸತತಂ ಪಶ್ಚಾತ್ತಾಪೋ ಹಿ ಪಾತಕಾತ್ ॥ ೧೩ ॥**

---

ದೃಢವಾದ ವೈರಾಗ್ಯವನ್ನು ಸಾಧಿಸುವ ಇಚ್ಛೆಯುಳ್ಳ ಪುರುಷನು ಸತ್ಯವಾದಿಯಾಗಬೇಕು; ಕೋಪಾದಿಗಳನ್ನು ಜಯಿಸಬೇಕು; ಸರ್ವಪ್ರಾಣಿಗಳಲ್ಲಿ ದಯಾವಂತನಾಗಿರಬೇಕು; ಪರಸ್ತ್ರೀ ಪರದ್ರವ್ಯಗಳನ್ನು ಎಂದೂ ಇಚ್ಛಿಸಕೂಡದು; ಪರರನ್ನು ವಂಚಿಸುವ ಇಚ್ಛೆಯನ್ನು ಮನಸ್ಸಿನಿಂದ ದೂರವಿಡಬೇಕು (೧೧). ವಿಷ್ಣುದೀಕ್ಷೆಯನ್ನು ಪಡೆದು ಅದರ ಫಲಕ್ಕೆ ಭಾಗಿಯಾಗತಕ್ಕವನು, ದೀಕ್ಷಾಸ್ವೀಕಾರದಲ್ಲಿ ಅಧಿಕಾರಿಯೆನಿಸುತ್ತಾನೆ; ದೀಕ್ಷಾಧಿಕಾರಿಯಲ್ಲಿರ ಬೇಕಾದ (ದೀಕ್ಷಾಸ್ವೀಕಾರಕ್ಕೆ ಅರ್ಹತೆಯನ್ನು ದೊರಕಿಸಿಕೊಡುವ) ಸದ್ಗುಣಗಳು ಯಾವುವೆಂದರೆ: ಪುಣ್ಯತೀರ್ಥಗಳನ್ನು ಸೇವಿಸುವುದರಲ್ಲಿ ಆಸಕ್ತಿಯಿರಬೇಕು; ವಿಷಯಾಶಾರಹಿತನಾಗಿರಬೇಕು (ವಿರಕ್ತನಾಗಿರಬೇಕು), ಅದರಿಂದ ಲಭ್ಯವಾದ ಮನಃ ಶಾಂತಿಯಿರಬೇಕು; ಧರ್ಮಮಾರ್ಗದಿಂದ ದ್ರವ್ಯಾರ್ಜನೆ ಮಾಡುವವನೂ, ಸತ್ಪಾತ್ರರಲ್ಲಿ ದ್ರವ್ಯದಾನಮಾಡುವವನೂ, ಸಜ್ಜನರಿಗೆ ಸಂತೋಷವನ್ನುಂಟುಮಾಡುವವನೂ,

ಅದ್ವೇಷ್ಟಾ ಸರ್ವಭೂತಾನಾಂ ಶುಶ್ರೂಷುರತಿಥಿಪ್ರಿಯಃ ।
ಪ್ರಿಯವಕ್ತಾ ಸದಾಚಾರೋ ವಿಷ್ಣುಭಕ್ತಿಸಮನ್ವಿತಃ ॥ ೧೪ ॥

ವಿಷ್ಣುದೀಕ್ಷಾಧಿಕಾರೀ ಸ್ಯಾದ್ಯೋವಾ ಕೋ ವಾ ಭವತ್ವಸೌ ।
ಪೂರ್ವೋಕ್ತಗುಣವಾನ್ ವಿಪ್ರೋ ಗುರುರ್ಮುಖ್ಯೋ ನಿಗದ್ಯತೇ ॥ ೧೫ ॥

ನಿತ್ಯಂ–ನಿತ್ಯವೂ, ತೀರ್ಥಸೇವಾಪರಃ–ತೀರ್ಥಯಾತ್ರಾದಿಗಳಲ್ಲಿ ಆಸಕ್ತನಾದ ಮನಸ್ಸುಳ್ಳವನಾಗಬೇಕು; ಅತಿತೃಷ್ಣಃ ನ–ಅತಿಯಾದ ಆಶೆಯುಳ್ಳವನಾಗಬಾರದು; ಅತಿಶಾಂತಧೀಃ–ಅಧಿಕವಾದ ಮನಶ್ಶಾಂತಿಯುಳ್ಳವನಾಗಬೇಕು; ಯಶ್ಚ–ಯಾರಾದರೆ, ನ್ಯಾಯದ್ರವ್ಯಾರ್ಜಕಃ–ನ್ಯಾಯಮಾರ್ಗದಿಂದ ದ್ರವ್ಯವನ್ನು ಸಂಪಾದಿಸುವನೋ, ಯಃ–ಯಾರು, ಪಾತ್ರೇ–ಸತ್ಪಾತ್ರನಲ್ಲಿ ದಾನಂ–ದಾನವನ್ನು ಕರೋತಿ–ಮಾಡುತ್ತಾನೆಯೋ, ಸತಾಂ–ಸಜ್ಜನರಿಗೆ, ಸಂತೋಷಕಃ–ಸಂತೋಷವನ್ನುಂಟುಮಾಡುವವನೋ, ಅಸತಾಂ–ದುರ್ಜನರ, ಸಂಗವರ್ಜಿತಃ–ಸಂಗವನ್ನು ಬಿಟ್ಟವನೂ, ಸ್ಯಾತ್–ಆಗಿರುವನೋ, ಸತತಂ–ನಿತ್ಯವೂ, ಆಸ್ತಿಕ್ಯಬುದ್ಧಿಃ–ಆಸ್ತಿಕ್ಯಬುದ್ಧಿಯುಳ್ಳವನೋ,[1] ಪಾತಕಾತ್–ಪಾಪಕರ್ಮದಿಂದ, ಪಶ್ಚಾತ್ತಾಪಃ–ಪಶ್ಚಾತ್ತಾಪವುಳ್ಳವನೋ, (ಪಾಪಕರ್ಮವನ್ನಾಚರಿಸಿದ ನಂತರ ಮನಸ್ಸಿನಲ್ಲಿ ತಾಪವನ್ನು ಹೊಂದುವನೋ—ಈ ಪರಿಯ ಕೃತ್ಯವು ಸಂಭವಿಸಿದುದು ಮಹಾಪರಾಧ ವಾಯಿತೆಂದೂ, ಮುಂದೆ ಹೀಗಾಗಬಾರದೆಂಬ ಬುದ್ಧಿಯೂ ಹುಟ್ಟುವುದು ಪಶ್ಚಾತ್ತಾಪ ವೆನಿಸುತ್ತದೆ); ಸರ್ವಭೂತಾನಾಂ–ಸಕಲಪ್ರಾಣಿಗಳ, ಅದ್ವೇಷ್ಟಾ–ದ್ವೇಷರಹಿತನೋ, (ಯಾರನ್ನೂ ದ್ವೇಷಿಸದವನೋ), ಶುಶ್ರೂಷುಃ-ಸತ್ಕಥಾಶ್ರವಣಾಸಕ್ತನೋ (ಸ್ವೋತ್ತಮ ಸೇವಾಪರನೋ), ಅತಿಥಿಪ್ರಿಯಃ–ಅತಿಥಿಗಳನ್ನು ಪ್ರೀತಿಯಿಂದ ನೋಡುವನೋ, ಪ್ರಿಯವಕ್ತಾ–ಪ್ರಿಯವನ್ನು ನುಡಿಯುವನೋ (ಅಪ್ರಿಯವನ್ನು ನುಡಿಯದವನೋ),

ದುರ್ಜನರ ಸಹವಾಸವನ್ನು ತ್ಯಜಿಸಿದವನೂ, ಮತ್ತು ಪಾಪಕರ್ಮಗಳು ತನ್ನಿಂದ ಸಂಭವಿಸಿದೊಡನೆ ಪಶ್ಚಾತ್ತಾಪವನ್ನು ಹೊಂದುವವನೂ, ಆಸ್ತಿಕ್ಯಬುದ್ಧಿಯುಳ್ಳವನೂ, ಯಾರನ್ನೂ ದ್ವೇಷಿಸದವನೂ, ಸತ್ಕಥಾಶ್ರವಣ ಮತ್ತು ಸಜ್ಜನಸೇವೆಯಲ್ಲಿ ಆಸಕ್ತನೂ, ಅತಿಥಿಪ್ರಿಯನೂ, ಪ್ರಿಯನುಡಿಗಳನ್ನಾಡುವವನೂ, ವಿಷ್ಣುಭಕ್ತಿಯುತನಾಗಿ ಸದಾಚಾರ ಸಂಪನ್ನನಾಗಿರುವವನೂ ವಿಷ್ಣುದೀಕ್ಷಾಸ್ವೀಕಾರಕ್ಕೆ ಅರ್ಹನಾಗಿರುತ್ತಾನೆ. ದೀಕ್ಷಾಸ್ವೀಕರಿಸು ವವನು ಯಾವನೇ ಆಗಿರಲಿ, ಆತನಲ್ಲಿ ಈ ಸದ್ಗುಣಗಳಿರಬೇಕು. ಈ ವಿಧ ಸದ್ಗುಣ ಸಂಪನ್ನನಾದ ವಿಪ್ರನು, ವಿಷ್ಣುದೀಕ್ಷಾಪ್ರದಾನಾರ್ಹರಲ್ಲಿ ಮುಖ್ಯನೆಂದು (ಮುಖ್ಯಗುರು ವೆಂದು) ಹೇಳಲ್ಪಡುತ್ತಾನೆ (೧೨-೧೫) ವಿಷ್ಣುದೀಕ್ಷೆಯನ್ನು ಅಪೇಕ್ಷಿಸಿ ತನ್ನನ್ನು ಶರಣು

1. ವೇದಾದಿ ಸಚ್ಛಾಸ್ತ್ರಗಳಲ್ಲಿ ಪ್ರಾಮಾಣ್ಯಬುದ್ಧಿಯುಳ್ಳವನಾಗಿ ಅತ ಏವ ಪರಮಾತ್ಮನಲ್ಲಿಯೂ ಪಾಪಪುಣ್ಯಗಳಲ್ಲಿಯೂ ವಿಶ್ವಾಸವುಳ್ಳವನೂ ಆಗಿರುವವನು ಆಸ್ತಿಕ್ಯಬುದ್ಧಿಯುಳ್ಳವನೆನಿಸುತ್ತಾನೆ.

ಸದಾಚಾರಃ-ಸಜ್ಜನಸಂಮತವಾದ ಆಚಾರಗಳುಳ್ಳವನೋ, ವಿಷ್ಣುಭಕ್ತಿ ಸಮನ್ವಿತಃ-ವಿಷ್ಣುಭಕ್ತಿಯುಳ್ಳವನೋ, ಅಸೌ-ಈ ಪೂರ್ವೋಕ್ತ ಸದ್ಗುಣ ಸಂಪನ್ನನು, ಯಃ ವಾ ಕಃ ವಾ-ಯಾವನಾದರಾಗಲಿ, (ಯಾವ ವರ್ಣದವನಾಗಲಿ ಅಥವಾ ವರ್ಣಬಾಹಿರನೇ ಆಗಲಿ) ವಿಷ್ಣುದೀಕ್ಷಾಧಿಕಾರೀ-ವಿಷ್ಣುದೀಕ್ಷಾಸ್ವೀಕಾರದಲ್ಲಿ ಅಧಿಕಾರವುಳ್ಳವನು. ಸ್ಯಾತ್-ಆಗುತ್ತಾನೆ; ಪೂರ್ವೋಕ್ತ ಗುಣವಾನ್-ಈ ಮೊದಲು ನಿರೂಪಿಸಿದ ವೈರಾಗ್ಯಾದಿ ಸದ್ಗುಣಗಳುಳ್ಳ, ವಿಪ್ರಃ-ಬ್ರಾಹ್ಮಣನು, ಮುಖ್ಯಗುರುಃ-(ದೀಕ್ಷಾಪ್ರದಾನಕ್ಕೆ) ಮುಖ್ಯಗುರುವೆಂದು, ನಿಗದ್ಯತೇ-ನಿಸ್ಸಂಶಯವಾಗಿ ಹೇಳಲ್ಪಡುತ್ತಾನೆ.[1]

**ಏವಂ ಯೋ ವಿದ್ಯತೇ ಕಶ್ಚಿತ್ ಪ್ರಪನ್ನಂ ದೀಕ್ಷಣೇ ಹರೇಃ ।**
**ಸೋಽನುಗ್ರಾಹ್ಯೋ ಭವೇದೇವ ನೈವ ತ್ಯಾಜ್ಯಃ ಕಥಂಚನ ॥ ೧೬ ॥**

ಯಃ ಕಶ್ಚಿತ್-ಯಾರೊಬ್ಬನು, ಏವಂ-(ಹೀಗೆ) ವೈರಾಗ್ಯಾದಿಗುಣಗಳುಳ್ಳವನು, ವಿದ್ಯತೇ-ಇರುತ್ತಾನೆಯೋ, ಹರೇಃ-ಶ್ರೀ ವಿಷ್ಣುವಿನ, ದೀಕ್ಷಣೇ-ದೀಕ್ಷೆಗಾಗಿ, ಪ್ರಪನ್ನಂ-ಬಂದುಸೇವಿಸುವ, ಸಃ-ಆತನು, ಅನುಗ್ರಾಹ್ಯಃ-ಅನುಗ್ರಹಿಸಲ್ಪಡುವವನು, ಭವೇತ್ ಏವ-ಆಗಿಯೇ ಇರುತ್ತಾನೆ; ಕಥಂಚನ-ಯಾವಕಾರಣದಿಂದಲೂ, ನೈವ ತ್ಯಾಜ್ಯಃ-ತಿರಸ್ಕರಿಸಲ್ಪಡಲು ಅರ್ಹನಲ್ಲ (ದೀಕ್ಷೆಯನ್ನು ಕೊಡಲೇಬೇಕು)

**ದರ್ಶನಸ್ಪರ್ಶನಪ್ರಶ್ನೈಃ ಶ್ವಪಾಕಾದೀನಪಿ ಧ್ರುವಂ ।**
**ರೋಗಿಣೋ ಹಿ ಚಿಕಿತ್ಸಂತೇ ದಯಾವಂತಶ್ಚಿಕಿತ್ಸಕಾಃ ॥ ೧೭ ॥**

**ನೈವಂ ತಾಂಸ್ತೇ ಜುಗುಪ್ಸಂತೇ ಶೌಚಹಾನೇರ್ನ ಬಿಭ್ಯತಿ ।**
**ದಯಯಾ ಕ್ಲಿನ್ನಮನಸೋ ರೋಗಂ ತೇಷಾಂ ನುದಂತಿ ಹಿ ॥ ೧೮ ॥**

---

ಹೊಂದಿರ, ವೈರಾಗ್ಯ ಆಸ್ತಿಕ್ಯಬುದ್ಧಿ ವಿಷ್ಣುಭಕ್ತ್ಯಾದಿಗುಣಗಳುಳ್ಳ ಯಾವನನ್ನೂ ಗುರುವು, ತ್ಯಜಿಸದೇ (ತಿರಸ್ಕರಿಸಿ ಕಳುಹಿಸದೇ), ದೀಕ್ಷೆಯನ್ನಿತ್ತು ಅನುಗ್ರಹಿಸಲೇಬೇಕು (೧೬). ದಯಾವಂತರಾದ ವೈದ್ಯರು ಚಂಡಾಲಾದಿ ಜಾತಿಗಳ ರೋಗಿಗಳನ್ನು ತಮಗೆ ಅಶುಚಿಯುಂಟಾಗುವುದೆಂಬ ಭಯದಿಂದ (ರೋಗವೇ ತಮಗೂ ಅಂಟಿಕೊಳ್ಳಬಹುದೆಂಬ ಮುಂತಾದ ಭಯದಿಂದ) ಚಿಕಿತ್ಸೆ ಮಾಡದೇ ಕೈಬಿಡುವುದಿಲ್ಲ; ದಯೆಯಿಂದ ಕರಗಿದ ಹೃದಯವುಳ್ಳವರಾಗಿ, ರೋಗಿಗಳನ್ನು ನೋಡುವುದು, ಸ್ಪರ್ಶಿಸುವುದು, ಅವರೊಡನೆ ಸಂಭಾಷಣೆ ಮಾಡುವುದು ಇತ್ಯಾದಿಯಾಗಿ, ರೋಗಿಗಳೊಡನೆ ಬೆರೆತು, ಯೋಗ್ಯ

---

1. ದೀಕ್ಷಾಸ್ವೀಕಾರಕ್ಕೆ ವೈರಾಗ್ಯ, ಆಸ್ತಿಕ್ಯಬುದ್ಧಿ, ಸಜ್ಜನಸೇವಾಸಕ್ತಿ, ಸರ್ವ ಪ್ರಾಣದಯೆ ಮೊದಲಾದ ಸದ್ಗುಣಗಳುಳ್ಳವನು ಅಧಿಕಾರಿಯೆಂದು ಹೇಳುತ್ತಿರಲು, ದೀಕ್ಷಾಪ್ರದಾನ ಮಾಡುವ ಗುರುಗಳಲ್ಲಿ ಮುಖ್ಯಗುರುವೆಂದು ಹೇಳಲಾಗುವ ವಿಪ್ರನಲ್ಲಿ ಈ ಸದ್ಗುಣಗಳು ಅವಶ್ಯಕವಾಗಿ ಇರಬೇಕೆಂದು ನಿರ್ವಿವಾದವಾಗಿ ಸಿದ್ಧವಾಗುವುದಷ್ಟೆ.

**ಪುನಃ ಶೌಚಂ ಪ್ರಕುರ್ವಂತಿ ಪುನಃ ಸ್ನಾನಂ ಪ್ರಕುರ್ವತೇ ।**
**ನೈವೋದ್ವಿಜಂತಿ ತೇಭ್ಯಸ್ತೇ ರೋಗಿಭ್ಯಃ ಸುಚಿಕಿತ್ಸಕಾಃ ॥ ೧೯ ॥**

**ತಥಾ ದಯಾಲವಃ ಶಾಂತಾ ವಿಷ್ಣುಭಕ್ತಿಪರಾಯಣಾಃ ।**
**ಪತಿತಾದೀನ್ ಶ್ವಪಾಕಾಂ ತಾನನುಗೃಹ್ಣಂತಿ ದೀಕ್ಷತಃ ॥ ೨೦ ॥**

ಶ್ವಪಾಕಾದೀನ್–ಚಂಡಾಲಾದಿ, ರೋಗಿಣಃ–ರೋಗಿಗಳನ್ನು ಅಪಿ–ಸಹ, ದರ್ಶನಸ್ಪರ್ಶನಪ್ರಶ್ನೈಃ–ನೋಡಿ, ಮುಟ್ಟಿ ಪ್ರಶ್ನೆಮಾಡಿ (ಅವರೊಡನೆ ಬೆರತು), ಧ್ರುವಂ–ನಿಶ್ಚಯವಾಗಿಯೂ, ದಯಾವಂತಃ–ದಯಾವಂತರಾದ, ಚಿಕಿತ್ಸಕಾಃ–ವೈದ್ಯರು, ಚಿಕಿತ್ಸಂತೇ–ಚಿಕಿತ್ಸೆಗಳನ್ನು (ರೋಗಿಗಳಿಗೆ ಯೋಗ್ಯ ಪರಿಹಾರಸಂಸ್ಕಾರಗಳನ್ನು) ಮಾಡುತ್ತಾರೆ; ತೇ–ಅವರು (ವೈದ್ಯರು), ತಾನ್–ಅವರನ್ನು (ಆ ರೋಗಿಗಳನ್ನು), ಏವಂ–ಹೀಗೆ, ನ ಜುಗುಪ್ಸಂತೇ–ಜುಗುಪ್ಸೆಯನ್ನು ಹೊಂದುವುದಿಲ್ಲ; ಶೌಚಹಾನೇಃ–ತಮ್ಮ ಶುದ್ಧತೆಯು ನಷ್ಟವಾಗುವುದೆಂದು, ನಬಿಭ್ಯತಿ–ಹೆದರುವುದಿಲ್ಲ; ದಯಾಕ್ಲಿನ್ನಮನಸಃ–ದಯೆಯಿಂದ ಆರ್ದ್ರವಾದ (ತೊಯ್ದ) ಮನಸ್ಸುಳ್ಳ ಅವರು (ವೈದ್ಯರು), ತೇಷಾಂ–ಆ ಚಂಡಾಲಾದಿಗಳ, ರೋಗಂ–ರೋಗವನ್ನು ನುದಂತಿ ಹಿ–ದೇಹದಿಂದ ಹೊರಗೆ ಹಾಕುತ್ತಾರೆ (ನಾಶಗೊಳಿಸುತ್ತಾರೆ); ಪುನಃ–ಮತ್ತೆ (ಚಿಕಿತ್ಸೆಯನ್ನು ನಡೆಸಿದನಂತರ), ಶೌಚಂ–(ಯೋಗ್ಯ) ಶುದ್ಧತೆಯನ್ನು ಪ್ರಕುರ್ವಂತಿ–ಆಚರಿಸುತ್ತಾರೆ; ಪುನಃ ಸ್ನಾನಂ–ಮತ್ತೆ ಸ್ನಾನವನ್ನು (ಅವಶ್ಯವಿದ್ದಲ್ಲಿ), ಪ್ರಕುರ್ವತೇ–ಮಾಡುತ್ತಾರೆ; ಸುಚಿಕಿತ್ಸಕಾಃ–ಒಳ್ಳೆಯ ವೈದ್ಯರು, ತೇಭ್ಯಃ–ಆ, ರೋಗಿಭ್ಯಃ–ರೋಗಿಗಳಿಂದ, ನೈವ ಉದ್ವಿಜಂತಿ–ಹೆದರುವುದಿಲ್ಲ (ಮನೋದ್ವೇಗವನ್ನು–ದೀರ್ಘಚಿಂತಾದಿಗಳನ್ನು ಹೊಂದುವುದಿಲ್ಲ); ತಥಾ–ಹಾಗೆಯೇ (ಕೃಪಾಳುಗಳಾದ ವೈದ್ಯರಂತೆ), ದಯಾಲವಃ–ದಯಾಳುಗಳೂ, ಶಾಂತಾಃ–ಶಾಂತ ಮನಸ್ಕರೂ, (ಆದ), ವಿಷ್ಣುಭಕ್ತಿಪರಾಯಣಾಃ–ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳ ದೀಕ್ಷಾ ಗುರುಗಳು, ಶ್ವಪಾಕಾಂತಾನ್–ಚಂಡಾಲರವರೆಗಿನ ವರ್ಣದ, ಪತಿತಾದೀನ್–ಅಜ್ಞಾನಾಂಧಕಾರದಲ್ಲಿ ಪತಿತರಾದ (ಜಾತ್ಯಾಪತಿತರು–ಕೀಳುಜನರೆಂದು ಭಾವಿಸಲ್ಪಡುವ) ಆ ಜನರನ್ನು, ದೀಕ್ಷತಃ–ದೀಕ್ಷೆಯಿಂದ (ದೀಕ್ಷೆಯನ್ನಿತ್ತು), ಅನುಗೃಹ್ಣಂತಿ–ಅನುಗ್ರಹಿಸುತ್ತಾರೆ

---

ಚಿಕಿತ್ಸೆಗಳನ್ನು ನಡೆಸುತ್ತಾರೆ; ನಂತರ ಶುಚಿ ಮಾಡಿಕೊಳ್ಳುತ್ತಾರೆ; ಅವಶ್ಯವಿದ್ದಲ್ಲಿ ಸ್ನಾನಾದಿಗಳನ್ನು ಮಾಡುತ್ತಾರೆ—ರೋಗಿಗಳ ವಿಷಯದಲ್ಲಿ ಹೇಗೂ ಉದ್ವಿಗ್ನಮನಸ್ಕರಾಗುವುದಿಲ್ಲ. ಹೀಗೆಯೇ ದಯಾಲುಗಳೂ ಶಾಂತಚಿತ್ತರೂ ವಿಷ್ಣುಭಕ್ತಿಪರಾಯಣರೂ ಆದ ದೀಕ್ಷಾಗುರುಗಳು, ದೀಕ್ಷೆಗಾಗಿ ತಮ್ಮನ್ನು ಶರಣುಹೊಂದಿದ ಶ್ವಪಾಕಾದಿ ಕೀಳುಜನರನ್ನು ತಿರಸ್ಕರಿಸದೇ ದೀಕ್ಷೆಯನ್ನಿತ್ತು ಅನುಗ್ರಹಿಸುತ್ತಾರೆ (೧೭-೨೦). ತಾವೇ ಸ್ವತಃ ಚಂಡಾಲಾದಿ ಜಾತಿಯವರನ್ನು ಮುಟ್ಟಿ ದೀಕ್ಷೆಯನ್ನು ಕೊಡದಿದ್ದರೂ, ದೀಕ್ಷಾಸ್ವೀಕಾರಕ್ಕಾಗಿ

(ಉದ್ಧತರಾಗಲು, ವಿಷ್ಣುಪ್ರೀತಿಯನ್ನು ದೊರಕಿಸಿಕೊಳ್ಳಲು ಸಹಾಯಮಾಡುತ್ತಾರೆ).

**ಅನುಗೃಹ್ಣಾತಿ ದೃಷ್ಟ್ವೈವ ತತ್ತಜ್ಜಾತ್ಯಧಿಕಾನಪಿ ।**
**ಆಜ್ಞಾಪ್ಯ ತತ್ತಜ್ಜಾತೀಯಂ ದೀಕ್ಷಯಂತ್ಯಥವಾ ಹಿ ತೇ ॥ ೨೧ ॥**

ಅಥವಾ–ಅಥವಾ (ತಾವೇ ಸ್ಪರ್ಶಿಸಿ ದೀಕ್ಷೆಯನ್ನು ಮಾಡದೇ ಬೇರೆ ರೀತಿಯಿಂದ ಸಹ), ತೇ–ಆ ದೀಕ್ಷಾಗುರುಗಳು, ದೃಷ್ಟ್ವೈವ–ದೃಷ್ಟಿಮಾತ್ರದಿಂದ (ದೀಕ್ಷಾರ್ಥವಾಗಿ ಬಂದ ಶಿಷ್ಯನನ್ನು ಕೃಪಾದೃಷ್ಟಿ ಮಾತ್ರದಿಂದ), ಅನುಗೃಹ್ಣಾತಿ–ಅನುಗ್ರಹಿಸುತ್ತಾರೆ; ಅಪಿ–ಮತ್ತು (ದೀಕ್ಷೆಯನ್ನು ಕೊಡುವುದಿಲ್ಲವೆಂದಲ್ಲ), ತತ್ತಜ್ಜಾತ್ಯಧಿಕಾನ್–ಆಯಾ ಶಿಷ್ಯನ ಜಾತಿಯಲ್ಲಿ ಶ್ರೇಷ್ಠರಾದವರನ್ನು, ಆಜ್ಞಾಪ್ಯ–(ತಪ್ತಚಕ್ರಾದಿಗಳನ್ನು ಧಾರಣೆಮಾಡಿಸಲು) ಆಜ್ಞಾಪಿಸಿ, ತತ್ತಜ್ಜಾತೀಯಂ–ಆಯಾಜಾತಿಯ ಶಿಷ್ಯನನ್ನು, ದೀಕ್ಷಯಂತಿ–ದೀಕ್ಷೆ ಮಾಡಿಸುತ್ತಾರೆ.

**ತಸ್ಮಾತ್ ಸರ್ವಪ್ರಯತ್ನೇನ ಪ್ರತಿಪನ್ನಂತು ವೈಷ್ಣವಂ ।**
**ಯಥಾತಥಾನುಗೃಹ್ಣೀತ ನ ಸ ತ್ಯಾಜ್ಯೋ ಹರಿಪ್ರಿಯೈಃ ॥ ೨೨ ॥**

ತಸ್ಮಾತ್–ಆದ್ದರಿಂದ, ಪ್ರತಿಪನ್ನಂ–(ದೀಕ್ಷಾರ್ಥವಾಗಿ) ಶರಣು ಹೊಂದಿದ, ವೈಷ್ಣವಂ–ವಿಷ್ಣುಭಕ್ತನನ್ನು, ಸರ್ವಪ್ರಯತ್ನೇನ–ಎಲ್ಲ ಪ್ರಯತ್ನದಿಂದ (ಶೌಚಭಂಗಾದಿ ವಿರೋಧಗಳನ್ನೂ ಮನೋದ್ವೇಗಗಳನ್ನೂ ಪರಿಹರಿಸಿಕೊಂಡು), ಯಥಾತಥಾ–ಶಿಷ್ಯನಿಗೆ ಉಚಿತವಾದ ವಿಧ್ಯುಕ್ತಕ್ರಮದಿಂದ, ಅನುಗೃಹ್ಣೀತ–(ದೀಕ್ಷೆಯನ್ನಿತ್ತು) ಅನುಗ್ರಹಿಸಬೇಕು; ಹರಿಪ್ರಿಯೈಃ–ಶ್ರೀಹರಿಗೆ ಪ್ರಿಯರಾದವರಿಂದ (ವಿಷ್ಣುಪ್ರೀತಿಗೆ ಪಾತ್ರರಾದವರಿಂದ), ಸಃ–ಅಂಥ ಕೀಳುಜಾತಿಯ ಶಿಷ್ಯನು, ನ ತ್ಯಾಜ್ಯಃ–ತಿರಸ್ಕರಿಸಲ್ಪಡಲು ಅರ್ಹನಲ್ಲ (ದೀಕ್ಷೆಯನ್ನು ಕೊಡದೇ ಹಾಗೆಯೇ ಕಳುಹಿಸಬಾರದು);

---

ಪ್ರಾರ್ಥಿಸುವವನ ಜಾತಿಯಲ್ಲಿ ಜ್ಞಾನಾದಿಗಳಿಂದ ಶ್ರೇಷ್ಠರಾದ (ವಿಷ್ಣುಭಕ್ತಿಯುತರಾದ) ಹಿರಿಯರನ್ನು ಆಜ್ಞಾಪಿಸಿ, ಅವರಿಂದ ದೀಕ್ಷೆಯನ್ನು ಕೊಡಿಸುತ್ತಾರೆ; ತಾವು ಶಿಷ್ಯನನ್ನು ಕೃಪಾದೃಷ್ಟಿಯಿಂದ ನೋಡಿ ಅನುಗ್ರಹಮಾಡುತ್ತಾರೆ[1] (೨೧). ವಿಷ್ಣುದೀಕ್ಷೆಯನ್ನು ಸ್ವೀಕರಿಸಲು, ಚಂಡಾಲಾದಿ ಸರ್ವಜಾತಿಯವರೂ ಅರ್ಹರಾಗಿರುವುದರಿಂದ, ದೀಕ್ಷಾಸ್ವೀಕಾರಕ್ಕೆ ಅವಶ್ಯಕವಾದ ವಿಷ್ಣುಭಕ್ತ್ಯಾದಿಗುಣಗಳುಳ್ಳ ಕೀಳುಜಾತಿಯವರಿಗೆ ದೀಕ್ಷೆಯನ್ನಿತ್ತು ಅನುಗ್ರಹಿಸುವುದು ಶ್ರೀಹರಿಪ್ರೀತಿಕರವಾದ ಕರ್ಮವಾದ್ದರಿಂದ, ಶ್ರೀಹರಿಪ್ರಿಯರಾದ ದೀಕ್ಷಾಗುರುಗಳು, ಸರ್ವಪ್ರಯತ್ನದಿಂದ, ಆ ಶಿಷ್ಯರಿಗೆ ದೀಕ್ಷೆಯನ್ನು ಹೊಂದಿಸಿ, ಅನುಗ್ರಹಿಸುವುದು, ಆ ಗುರುಗಳ ಅವಶ್ಯ ಕರ್ತವ್ಯವಾಗಿರುತ್ತದೆ (೨೨).

---

1. ಈ ಪಕ್ಷಾಂತರದ ದೀಕ್ಷಾಪ್ರದಾನಕ ಗುರುಗಳು, ವಿಶೇಷವಾಗಿ ಯತ್ಯಾಶ್ರಮಿಗಳಾದ ವಿಪ್ರರೆಂದು ತಿಳಿಯಬಹುದಾಗಿದೆ.

**ಮಂತ್ರಾ ನಾನಾವಿಧಾಃ ಸಂತಿ ಸೋಂಕಾರಾಶ್ಚ ನಿರೋಂಕೃತಾಃ ।**
**ಸ ಬೀಜಾಶ್ಚಾಪಿ ನಿರ್ಬೀಜಾ ನಾನಾಧಿಕೃತಭೇದತಃ ॥ ೨೩ ॥**

ಸೋಂಕಾರಾಃ–ಓಂಕಾರಸಹಿತವಾದುವು, ಚ–ಮತ್ತು ನಿರೋಂಕೃತಾಃ–ಓಂಕಾರ ಎಲ್ಲದವು, ಮತ್ತು ಸಬೀಜಾಃ–ಬೀಜಸಹಿತವಾದುವು, ಚ–ಹಾಗೂ, ನಿರ್ಬೀಜಾಃ–ಬೀಜ ರಹಿತವಾದುವು (ಎಂದು), ನಾನಾಧಿಕೃತಭೇದತಃ–ವಿವಿಧರಾದ ಅಧಿಕಾರಿಗಳ ಭೇದದಿಂದ, ಮಂತ್ರಾಃ–ಮಂತ್ರಗಳು, ನಾನಾವಿಧಾಃ–ಬಹುವಿಧವಾಗಿ, ಸಂತಿ–ಇವೆ.

**ತತ್ತನ್ನಾಮ ಚತುರ್ಥ್ಯಂತಂ ನಮೋಂತಂ ಪ್ರಣವಾದಿಕಂ ।**
**ಇತಿ ಸಾಮಾನ್ಯತೋ ಮಂತ್ರಸ್ತತ್ತದ್ದೇವಸ್ಯ ಕೀರ್ತಿತಃ ॥ ೨೪ ॥**

ತತ್ತದ್ದೇವಸ್ಯ–(ಉಪಾಸ್ಯರಾದ) ಆಯಾ ದೇವತೆಯ, ಚತುರ್ಥ್ಯಂತಂ–ಚತುರ್ಥೀ ವಿಭಕ್ತಿಯಲ್ಲಿರುವ, ತತ್ತನ್ನಾಮ–ಆಯಾ ನಾಮವು, ಪ್ರಣವಾದಿಕಂ–ಮೊದಲು ಓಂಕಾರ ವಿದ್ದು ನಮೋಂತಂ–ನಮಃ ಶಬ್ದವನ್ನು ಕೊನೆಯಲ್ಲಿ ಹೊಂದಿರುವುದು, ಸಾಮಾನ್ಯತಃ–ಸಾಮಾನ್ಯವಾಗಿ (ಸರ್ವಸಾಧಾರಣವಾದ), ಮಂತ್ರಃ–ಮಂತ್ರವು, ಇತಿ–ಎಂದು, ಕೀರ್ತಿತಃ–ಹೇಳಲಾಗುತ್ತದೆ.

**ನಮಃ ಶಬ್ದೋಽಥವಾ ಪೂರ್ವೋ ನಾಮ್ನಾ ಸ್ವಾಹಾಂತತೋಽಪಿ ವಾ ।**
**ಸಂಬುದ್ಧ್ಯಂತಾ ನಮಃಸ್ವಾಹಾ ವರ್ಜಿತಾಶ್ಚಾಪಿ ಕೇಚನ ॥ ೨೫ ॥**

**ಶ್ರೀಕಾರಪೂರ್ವಾಃ ಕೇಚಿತ್ ಮಾಲಾಮಂತ್ರಾಸ್ತಥಾಪರೇ ।**
**ತತ್ತದ್ದೇವಸ್ತುತಿಪರಾಃ ನಾನಾಸಿದ್ಧಿಪ್ರದಾಶ್ಚ ತೇ ॥ ೨೬ ॥**

ಅಥವಾ–ಅಥವಾ (ಹಾಗಲ್ಲದೇ), ಪೂರ್ವಃ–ಮೊದಲಿಗೇ ನಮಃ ಶಬ್ದಃ–ನಮಃ ಶಬ್ದವೂ, ನಾಮ್ನಾ–ನಾಮದಿಂದ ಸಹಿತವಾದ, ಸ್ವಾಹಾಂತತಃ ಅಪಿವಾ–ಸ್ವಾಹಾಶಬ್ದವನ್ನು

---

ಓಂಕಾರಯುಕ್ತವಾದುವು, ಓಂಕಾರವಿಲ್ಲದವು, ಸಬೀಜ ಮತ್ತು ನಿರ್ಬೀಜಗಳೆಂದು, ವಿವಿಧ ಅಧಿಕಾರಗಳ ಭೇದದಿಂದ (ಆ ಮಂತ್ರಗಳನ್ನು ಉಪಯೋಗಿಸುವ ಅಧಿಕಾರಿಗಳು ಭಿನ್ನರಾಗಿರುವುದರಿಂದ), ಮಂತ್ರಗಳು ಬಹುವಿಧವಾಗಿರುತ್ತದೆ (೨೩). ಉಪಾಸ್ಯದೇವತೆಯ ಚತುರ್ಥೀ ವಿಭಕ್ತಿಯಲ್ಲಿರುವ ನಾಮವು, ಓಂಕಾರವನ್ನು ಮೊದಲಿನಲ್ಲಿಯೂ, ನಮಃ ಶಬ್ದವನ್ನು ಕೊನೆಯಲ್ಲಿಯೂ ಹೊಂದಿದ್ದರೆ, ಆ ದೇವತೆಯ ಮಂತ್ರವೆನಿಸುತ್ತದೆಂಬುದು ಸಾಧಾರಣ ನಿಯಮವು. (ಓಂ ಕೃಷ್ಣಾಯ ನಮಃ, ಎಂಬುದು ಕೃಷ್ಣಮಂತ್ರ—ಓಂ ರಾಮಾಯ ನಮಃ, ಎಂಬುದು ರಾಮಮಂತ್ರ, ಇತ್ಯಾದಿ) (೨೪).

ಕೆಲವು ಮಂತ್ರಗಳಲ್ಲಿ ನಮಃ ಶಬ್ದವು ಮೊದಲಿರುವುದೂ ಉಂಟು—'ಓಂ ನಮಃ

ಕೊನೆಯಲ್ಲಿ ಉಳ್ಳದ್ದಾದರೂ ಆಗಲಿ (ಕೇಚನ–ಕೆಲವು ಮಂತ್ರಗಳೂ), ಚ–ಮತ್ತು ನಮಃಸ್ವಾಹಾವರ್ಜಿತಾಃ–ನಮಃ ಮತ್ತು ಸ್ವಾಹಾಶಬ್ದಗಳಿಲ್ಲದೇ ಇರುವ, ಸಂಬುದ್ಧ್ಯಂತಾಃ–ಸಂಬೋಧನಾ ವಿಭಕ್ತಿಯಲ್ಲಿರುವ ದೇವತಾನಾಮಗಳು, ಕೇಚನ–ಕೆಲವು ಮಂತ್ರಗಳು; ಕೇಚಿತ್–ಮತ್ತೆ ಕೆಲವು ಮಂತ್ರಗಳು, ಶ್ರೀಕಾರಪೂರ್ವಾಃ–ಶ್ರೀಕಾರವನ್ನು ಮೊದಲಿನಲ್ಲಿ ಉಳ್ಳವು, ತಥಾ–ಹಾಗೂ, ಅಪರೇ–ಮತ್ತೆ ಬೇರೆ ಮಂತ್ರಗಳು, ತತ್ತದ್ದೇವಸ್ತುತಿಪರಾಃ–ಆಯಾ ಉಪಾಸ್ಯಸದೇವತೆಯ ಸ್ತುತಿಪರಗಳಾದ, ಮಾಲಾಮಂತ್ರಾಃ–ಮಾಲಾಮಂತ್ರಗಳು; ತೇ – ಅವು, ನಾನಾಸಿದ್ಧಿಪ್ರದಾಃ ಚ – ವಿವಿಧ ಸಿದ್ಧಿಗಳನ್ನು (ಉಪಾಸಕರಿಗೆ) ದೊರಕಿಸತಕ್ಕವುಗಳೇ (ಆಗಿರುತ್ತವೆ).

**ನಾನಾಧಿಕಾರಿಣಸ್ತೇಷು ವಿಸ್ತಾರಾದ್ವಚ್ಮಿ ತಚ್ಛೃಣು ।**
**ಸೋಂಕಾರಾಸ್ತೇಷು ಯೇ ಮಂತ್ರಾ ದ್ವಿಜಾಸ್ತತ್ರಾಧಿಕಾರಿಣಃ ॥ ೨೭ ॥**

ತೇಷು–ಆ ನಾನಾಮಂತ್ರಗಳಲ್ಲಿ (ಅವುಗಳಿಂದ ಉಪಾಸಿಸುವುದರಲ್ಲಿ), ನಾನಾಧಿಕಾರಿಣಃ–ವಿವಿಧರಾದ ಅಧಿಕಾರಿಗಳಿರುವರು; ವಿಸ್ತಾರಾತ್–ವಿಸ್ತಾರದಿಂದ, ವಚ್ಮಿ–ಹೇಳುತ್ತೇನೆ; ತತ್–ಆ ವಿವರವನ್ನು ಶೃಣು–ಕೇಳು; ತೇಷು–ನಾನಾ ಮಂತ್ರಗಳ ಮಧ್ಯದಲ್ಲಿಯೇ ಮಂತ್ರಾಃ–ಯಾವ ಮಂತ್ರಗಳು, ಸೋಂಕಾರಾಃ–ಓಂಕಾರಯುಕ್ತವಾದವುಗಳೋ, ತತ್ರ–ಆ ಮಂತ್ರಗಳಲ್ಲಿ ದ್ವಿಜಾಃ–ದ್ವಿಜರು, ಅಧಿಕಾರಿಣಃ–ಅಧಿಕಾರಿಗಳಾಗಿರುತ್ತಾರೆ.

**ತತ್ರಾಪ್ಯಷ್ಟೌ ಮಹಾಮಂತ್ರಾ ಮಹಾವಿಷ್ಣೋರ್ಮಹಾಪ್ರಿಯಾಃ ।**
**ಸದಾಚಾರೈರ್ದ್ವಿಜೈರೇವ ಜಪಿತವ್ಯಾಃ ಶುಚಿಭಿಃ ॥ ೨೮ ॥**

---

ಶಿವಾಯ' ಎಂಬಂತೆ; ಅಥವಾ, ಮೊದಲು ನಮಃಶಬ್ದವಿದ್ದು ಕೊನೆಯಲ್ಲಿ ಸ್ವಾಹಾ ಶಬ್ದವುಳ್ಳ ಮಂತ್ರಗಳೂ ಕೆಲವು ಇರುವುದುಂಟು; 'ಓಂ ನಮಃ ಕೃಷ್ಣಾಯ ಸ್ವಾಹಾ' ಇತ್ಯಾದಿ; (ಇಲ್ಲಿ ಸ್ವಾಹಾ ಶಬ್ದವು ಅರ್ಪಣಾರ್ಥವುಳ್ಳದ್ದು—ನಮಸ್ಕಾರವನ್ನು ಸಮರ್ಪಿಸುತ್ತೇನೆಂದರ್ಥ); 'ನಮಃ' ಮತ್ತು 'ಸ್ವಾಹಾ' ಶಬ್ದಗಳೆರಡೂ ಇಲ್ಲದೇ, ಕೇವಲ ಸಂಬೋಧನಾವಿಭಕ್ತಿಯಲ್ಲಿರುವ ದೇವತಾನಾಮವೂ ಮಂತ್ರರೂಪವಾಗಿರುತ್ತದೆ— ಉದಾಹರಣೆ:—ಕೃಷ್ಣಕೃಷ್ಣ ಹರೇಹರೇ—ಹರೇರಾಮ ಹರೇರಾಮ, ಇತ್ಯಾದಿ; ಕೆಲವು ಮಂತ್ರಗಳು ಮೊದಲಿನಲ್ಲಿ ಶ್ರೀಕಾರವುಳ್ಳವಾಗಿರುತ್ತವೆ; (ಶ್ರೀ ಕೃಷ್ಣಾಯ ನಮಃ— ಇತ್ಯಾದಿ); ಇನ್ನೂ ಕೆಲವು ಮಂತ್ರಗಳು ಮಾಲಾಮಂತ್ರಗಳ ರೂಪದಿಂದಿರುತ್ತವೆ[1]—ಅವು ಆಯಾ ಉಪಾಸ್ಯದೇವತೆಯ ಸ್ತುತಿಪರವಾಗಿರುತ್ತವೆ—ಮಹಿಮೆಗಳನ್ನು ಸ್ತುತಿಸುತ್ತವೆ;

---

1. ಪುರುಷಸೂಕ್ತವು ಅಷ್ಟಮಹಾಮಂತ್ರಗಳಲ್ಲಿ ಒಂದಾಗಿರೆ—ಅದು ಮಾಲಾ ಮಂತ್ರಕ್ಕೆ ಉದಾಹರಣೆಯಾಗುತ್ತದೆ.

ತತ್ರಾಪಿ-ಜಪಿಸಲಿಕ್ಕೆ ಯೋಗ್ಯವಾದ ಮಂತ್ರಗಳ ಮಧ್ಯದಲ್ಲಿಯೂ, ಅಷ್ಟೌ-ಎಂಟು, ಮಹಾಮಂತ್ರಾಃ-ಮಹಾಮಂತ್ರಗಳು, (ಅಷ್ಟ ಮಹಾಮಂತ್ರಗಳು), ಮಹಾವಿಷ್ಣೋಃ-ಮಹಾವಿಷ್ಣುವಿಗೆ, ಮಹಾಪ್ರಿಯಾಃ-ಅತಿ ಪ್ರಿಯವಾದವುಗಳು; ಅತಿಶೌಚಿಭಿಃ-ಅತಿಶುಚಿರ್ಭೂತರೂ, ಸದಾಚಾರೈಃ-ಸದಾಚಾರವುಳ್ಳವರೂ, (ಆದ) ದ್ವಿಜೈರೇವ-ದ್ವಿಜರಿಂದಲೇ, ಜಪಿತವ್ಯಾಃ-ಜಪಿಸಲಿಕ್ಕೆ ಯೋಗ್ಯವಾದವುಗಳು.

ಪ್ರಣವೋ ಮಾತೃಕಾಷ್ಟಾರ್ಣೋ ವ್ಯಾಹೃತಿರ್ದ್ವಾದಶಾಕ್ಷರಃ ।
ಗಾಯತ್ರೀ ಪುರುಷೋ ವಿಷ್ಣುರ್ಮಹಾಮಂತ್ರಾಷ್ಟಕಂ ಸ್ಮೃತಂ ॥ ೨೯ ॥

---

ಹೀಗೆ ವಿವಿಧವಾಗಿರುವ ಸರ್ವದೇವತಾಮಂತ್ರಗಳೂ, ಉಪಾಸಕರಿಗೆ ನಾನಾ ಬಗೆಯ ಸಿದ್ಧಿಗಳನ್ನು (ಫಲಗಳನ್ನು) ದೊರಕಿಸುತ್ತವೆ. (ಈ ಮಂತ್ರಗಳ ಉಪಾಸನೆಯಲ್ಲಿ ಅಧಿಕಾರಿಗಳೂ ವಿಭಿನ್ನರಾಗಿರುವರು—ಅಧಿಕಾರಿಭೇದವು ಮುಂದಿನ ಶ್ಲೋಕಗಳಲ್ಲಿ ಪ್ರಸಕ್ತವಾಗಲಿದೆ) (೨೫-೨೬). ಈ ವಿವಿಧವಾದ ಮಂತ್ರಗಳನ್ನು ಉಪಯೋಗಿಸಿ ಉಪಾಸಿಸುವವರಲ್ಲಿ ನಾನಾ (ಭಿನ್ನಭಿನ್ನ) ಅಧಿಕಾರಿಗಳಿರುತ್ತಾರೆ; ಅಧಿಕಾರಭೇದದ ವಿಸ್ತಾರವನ್ನು ವಿವರಿಸುತ್ತೇನೆ—ಶ್ರವಣ ಮಾಡುವವನಾಗು; ಓಂಕಾರಸಹಿತವಾದ ಮಂತ್ರಗಳನ್ನು ಉಪಯೋಗಿಸುವುದರಲ್ಲಿ ದ್ವಿಜರು ಅಧಿಕಾರಿಗಳು (೨೭). ಹೀಗೆ ಬಹುವಿಧವಾಗಿರುವ ಮಂತ್ರಗಳಲ್ಲಿ ಅಷ್ಟಮಹಾಮಂತ್ರಗಳು ಪ್ರಸಿದ್ಧವಾದವು; ಅವು, ಅತಿಶುದ್ಧರೂ, ಸದಾಚಾರಸಂಪನ್ನರೂ ಆದ ದ್ವಿಜರಿಂದಲೇ ಜಪಿಸಲು ಅರ್ಹವಾದವುಗಳು (೨೮). [1]ಪ್ರಣವ, ಮಾತೃಕಾ, ಅಷ್ಟಾಕ್ಷರ, ವ್ಯಾಹೃತಿ, ದ್ವಾದಶಾಕ್ಷರ, ಗಾಯತ್ರೀ, ಪುರುಷಸೂಕ್ತ ಮತ್ತು ವಿಷ್ಣುಷಡಕ್ಷರಗಳೆಂಬ ಎಂಟು ಮಂತ್ರಗಳು, ಅಷ್ಟಮಹಾಮಂತ್ರಗಳೆಂದು ಜ್ಞಾನಿಗಳಿಂದ ತಿಳಿಯಲಾಗಿವೆ (೨೯). ಈ

---

1. ಅಷ್ಟಮಹಾಮಂತ್ರಗಳ ಜಪದಿಂದ ಶ್ರೀವಿಷ್ಣುವು ಶೀಘ್ರವಾಗಿ ಪ್ರಸನ್ನನಾಗುತ್ತಾನೆ; ಆತನು ಪ್ರಸನ್ನನಾದ ಭಕ್ತನಿಗೆ ಅಲಭ್ಯವಾದ ಪುರುಷಾರ್ಥವಿಲ್ಲ. ಈ ಮಹಾಸಿದ್ಧಿಯ ಮುಂದೆ ಅಣಿಮಾದಿ ಸಿದ್ಧಿಗಳು ಕ್ಷುದ್ರ (ಅಲ್ಪ) ಗಳಾಗಿರುವುವು. ಈ ಮಂತ್ರಗಳನ್ನು ಜಪಿಸುವ ಕ್ರಮ, ಪೂರ್ವಭಾವಿಯಾಗಿ ಆಚರಿಸಬೇಕಾದ ನ್ಯಾಸಾದಿಗಳು ಮೊದಲಾದ ವಿವರಗಳನ್ನು ಆ ಮಂತ್ರಾರ್ಥಗಳೊಂದಿಗೆ ಗುರುಮುಖದಿಂದ ತಿಳಿಯಬೇಕು; ಅಕಾರಾದಿ ವರ್ಣಗಳಿಂದ ಪ್ರತಿಪಾದ್ಯವಾದ ಭಗವದ್ರೂಪಗಳು ಮತ್ತು ಅವುಗಳ ಮಹಿಮೆಗಳನ್ನು ಶ್ರೀಮದಾನಂದತೀರ್ಥಭಗವತ್ಪಾದರಿಂದ ವಿರಚಿತವಾದ 'ತಂತ್ರಸಾರಸಂಗ್ರಹ'ವೆಂಬ ಗ್ರಂಥವನ್ನು ಅಭ್ಯಸಿಸಿ ತಿಳಿಯಬೇಕು; ಅಕಾರಾದಿ ವರ್ಣಗಳಿಂದ ಅಜಾದಿ ಭಗವದ್ರೂಪಗಳು, ಆ ನಾಮಗಳಿಂದ ಬೋಧ್ಯವಾದ ಮಹಿಮೆಗಳೂ ಹೇಳಲ್ಪಡುತ್ತವೆ; ಪುರುಷಸೂಕ್ತವೇ ಅಷ್ಟಮಂತ್ರಗಳಲ್ಲಿ ಒಂದು ಮಂತ್ರ—ಈ ಮಂತ್ರವನ್ನು ಮಾಲಾಮಂತ್ರವೆಂದೂ ತಿಳಿಯಬಹುದು (ಬಹುಮಂತ್ರಗಳ ಮಾಲೆಯಾಗಿರುತ್ತದೆ); ಇಲ್ಲಿ ವಿವಿಧ ಮಂತ್ರಗಳು ಮತ್ತು ಅವುಗಳ ಅಧಿಕಾರಿಗಳನ್ನು ನಿರೂಪಿಸುವ ವಿಷಯವು ಮಾತ್ರ ಪ್ರಸಕ್ತವಾಗಿದೆ.

ಪ್ರಣವಃ–ಓಂಕಾರವು; ಮಾತೃಕಾಃ–ಅಕಾರಾದಿ ೫೦ ವರ್ಣಗಳು; ಅಷ್ಟಾರ್ಣಃ–ಅಷ್ಟಾಕ್ಷರದ 'ಓಂ ನಮೋನಾರಾಯಣಾಯಃ ; ಎಂಬ ಮಂತ್ರ; ವ್ಯಾಹೃತಿಃ–(ಭೂಃ, ಭುವಃ, ಸ್ವಃ ಮತ್ತು ಭೂರ್ಭುವಸ್ವಃ ಎಂದು ವ್ಯಾಹೃತಿಗಳು ನಾಲ್ಕು) ವ್ಯಾಹೃತಿಯೂ, ದ್ವಾದಶಾಕ್ಷರಃ–('ಓಂ ನಮೋ ಭಗವತೇ ವಾಸುದೇವಾಯ' ಎಂಬ ೧೨ ಅಕ್ಷರಗಳುಳ್ಳ) ವಾಸುದೇವ ಮಂತ್ರವೂ, ಗಾಯತ್ರೀ–(೨೪ ಅಕ್ಷರಗಳುಳ್ಳ) ಗಾಯತ್ರೀಮಂತ್ರವೂ; ಪುರುಷಃ–ಪುರುಷ ಸೂಕ್ತವೂ; ವಿಷ್ಣುಃ–('ಓಂ ವಿಷ್ಣವೇ ನಮಃ'–ಎಂಬ ೬ ಅಕ್ಷರಗಳುಳ್ಳ) ವಿಷ್ಣುಷಡಕ್ಷರ ಮಂತ್ರವೂ, ಮಹಾಮಂತ್ರಾಷ್ಟಕಂ–ಅಷ್ಟ ಮಹಾಮಂತ್ರಗಳೆಂದು, ಸ್ಮೃತಂ–ತಿಳಿಯಲ್ಪಡುತ್ತವೆ.

**ತತ್ರಾಪಿ ಪ್ರಣವೋ ಮಂತ್ರೋ ಯತೀನಾಮೇವ ಕೀರ್ತಿತಃ ।**
**ಅನ್ಯಾಶ್ರಮಾ ಹಿ ತಂ ಜಪ್ತ್ವಾ ಭವಂತಿ ಪ್ರತ್ಯವಾಯಿನಃ ॥ ೩೦ ॥**

ತತ್ರಾಪಿ–ಈ ಅಷ್ಟಮಹಾಮಂತ್ರಗಳಲ್ಲಿ ಸಹ, ಪ್ರಣವಃ ಮಂತ್ರಃ–ಪ್ರಣವಮಂತ್ರವು, ಯತೀನಾಂ ಏವ–ಯತಿಗಳಿಗೆ ಮಾತ್ರ, ಕೀರ್ತಿತಃ–ಹೇಳಲ್ಪಟ್ಟಿದೆ (ಅದರ ಜಪಕ್ಕೆ ಯತಿಗಳು ಮಾತ್ರ ಅಧಿಕಾರಿಗಳು); ಹಿ–ಏಕೆಂದರೆ, ಅನ್ಯಾಶ್ರಮಾಃ–ಗೃಹಸ್ಥಾದಿ ಬೇರೆ ಆಶ್ರಮದಲ್ಲಿರುವವರು, ತಂ–ಆ ಪ್ರಣವವನ್ನು, ಜಪ್ತ್ವಾ–ಜಪಿಸಿ, ಪ್ರತ್ಯವಾಯಿನಃ–ದೋಷವನ್ನು ಹೊಂದುವವರು, ಭವಂತಿ–ಆಗುತ್ತಾರೆ.

**ಮಾತೃಕಾದಿಷು ಮಂತ್ರೇಷು ಗೃಹಸ್ಥಾಶ್ಚಾಧಿಕಾರಿಣಃ ।**
**ನರಸಿಂಹಹಯಗ್ರೀವಹಂಸವಾರಾಹಭಾರ್ಗವಾಃ ॥ ೩೧ ॥**

**ಕಪಿಲವ್ಯಾಸದತ್ತಾದ್ಯಾ ದ್ವಿಜಾನಾಮೇವ ಕೀರ್ತಿತಾಃ ।**
**ಸ್ವಸ್ವವರ್ಣಾಶ್ರಮಾಚಾರೈರ್ದುರಾಚಾರವಿವರ್ಜಿತೈಃ ॥ ೩೨ ॥**

---

ಅಷ್ಟಮಹಾಮಂತ್ರಗಳಲ್ಲಿ ಪ್ರಣವಮಂತ್ರವು, ಯತಿಗಳಿಂದ ಮಾತ್ರ ಜಪಿಸಲು ಅರ್ಹವಾದುದು (ಪ್ರಣವಜಪದಲ್ಲಿ ಯತಿಗಳಿಗೆ ಮಾತ್ರ ಅಧಿಕಾರವಿರುತ್ತದೆ); ಅನ್ಯಾಶ್ರಮದವರು, ಪ್ರಣವವನ್ನು ಜಪಿಸಿದರೆ, ದೋಷಿಗಳಾಗುತ್ತಾರೆ (೩೦). ಅಷ್ಟಮಹಾಮಂತ್ರಗಳಲ್ಲಿ ಮಾತೃಕಾದಿ ಇತರ ಮಂತ್ರಗಳನ್ನು ಉಪಾಸಿಸುವುದರಲ್ಲಿ ಗೃಹಸ್ಥರೂ ಅಧಿಕಾರಿಗಳಾಗಿರುತ್ತಾರೆ (ಯತಿಗಳಂತೂ ಅಧಿಕಾರಿಗಳೇ ಎಂದರ್ಥ); ನರಸಿಂಹ, ಹಯಗ್ರೀವ, ಹಂಸ, ವರಾಹ, ಭಾರ್ಗವ, ಕಪಿಲ, ವ್ಯಾಸ, ದತ್ತ ಮೊದಲಾದ ಇತರ ಭಗವನ್ಮಂತ್ರಗಳು, (ಅವುಗಳ ಉಪಾಸನೆಯು) ದ್ವಿಜರಿಗೆ ಮಾತ್ರವೆಂದು ಹೇಳಲಾಗಿವೆ; ಹೀಗೆ ಅಧಿಕಾರಿಗಳೆನಿಸುವ ದ್ವಿಜರು ದುರಾಚಾರಗಳಿಲ್ಲದವರಾಗಿರಬೇಕು ಮತ್ತು ಸ್ವವರ್ಣಾಶ್ರಮಧರ್ಮಗಳನ್ನು ತಪ್ಪದೇ ಆಚರಿಸುತ್ತಿರುವವರಾಗಿರಬೇಕು; ಹೀಗಿಲ್ಲದವರು ಉಪಾಸಿಸಿದರೆ ಈ ಮಂತ್ರಗಳು ಸಿದ್ಧಿಸುವುದಿಲ್ಲ; ಮುಖ್ಯವಾಗಿ ಪರಸ್ತ್ರೀ,

**ಏತೇ ಮಂತ್ರಾ ಉಪಾಸ್ಯಾಃ ಸ್ಯುರನ್ಯಥಾ ನ ಫಲಪ್ರದಾಃ ।**
**ಪರದಾರಪರದ್ರವ್ಯದುಷ್ಪ್ರತಿಗ್ರಹವರ್ಜಿತೈಃ ।**
**ಏತೇ ಮಂತ್ರಾ ಉಪಾಸ್ಯಾಃ ಸ್ಯುರನ್ಯಥಾ ನ ಫಲಪ್ರದಾಃ ॥ ೩೩ ॥**

ಮಾತೃಕಾದಿಷು ಮಂತ್ರೇಷು–ಮಾತೃಕಾದಿ ಇತರ ಮಂತ್ರಗಳ ಜಪದಲ್ಲಿ ಗೃಹಸ್ಥಾ–ಗೃಹಸ್ಥಾಶ್ರಮಿಗಳು, ಅಧಿಕಾರಿಣಃ–ಅಧಿಕಾರಿಗಳಾಗಿರುವರು; ನರಸಿಂಹಹಯಗ್ರೀವಹಂಸ-ವಾರಾಹಭಾರ್ಗವಾಃ–ನರಸಿಂಹ, ಹಯಗ್ರೀವ, ಹಂಸ, ಭಾರ್ಗವಮಂತ್ರಗಳೂ, ಕಪಿಲವ್ಯಾಸದತ್ತಾದ್ಯಾಃ–ಕಪಿಲ, ವ್ಯಾಸ, ದತ್ತ ಮೊದಲಾದ ಮಂತ್ರಗಳೂ, ದ್ವಿಜಾನಾಂ ಏವ–ದ್ವಿಜರಿಗೆ ಮಾತ್ರವೆಂದು, ಕೀರ್ತಿತಾಃ–(ದ್ವಿಜರಿಂದ ಮಾತ್ರ ಜಪಿಸಲು ಅರ್ಹವಾದವುಗಳೆಂದು) ಹೇಳಲ್ಪಟ್ಟಿವೆ; ಏತೇ–ಈ ಮಂತ್ರಾಃ–ಮಂತ್ರಗಳು, ಸ್ವಸ್ವವರ್ಣಾಶ್ರಮಾಚಾರೈಃ–ತಂತಮ್ಮ ವರ್ಣಾಶ್ರಮಗಳ ಆಚಾರಗಳುಳ್ಳವರಾದ, ದುರಾಚಾರವರ್ಜಿತೈಃ–ದುರಾಚಾರರಹಿತರಾದುದರಿಂದ, ಉಪಾಸ್ಯಾಃ ಸ್ಯುಃ–ಉಪಾಸ್ಯಗಳಾಗಿರುತ್ತವೆ (ಜಪಿಸಲು ಯೋಗ್ಯವಾಗುತ್ತವೆ); ಅನ್ಯಥಾ–ಹಾಗಿಲ್ಲದೇ ಇದ್ದರೆ, ನ ಫಲಪ್ರದಾಃ–(ಮಂತ್ರ ಜಪವು) ಫಲಪ್ರದವಾಗುವುದಿಲ್ಲ (ಮಂತ್ರಸಿದ್ಧಿಯು ದೊರೆಯುವುದಿಲ್ಲ); ಪರದಾರಪರ-ದ್ರವ್ಯದುಷ್ಪ್ರತಿಗ್ರಹವರ್ಜಿತೈಃ–ಪರಸ್ತ್ರೀ, ಪರದ್ರವ್ಯಗಳ ಆಶೆಯಿಲ್ಲದವರಿಂದಲೂ, ದುರ್ದಾನಗಳನ್ನು ಸ್ವೀಕರಿಸದ ಬ್ರಾಹ್ಮಣರಿಂದಲೂ, ಏತೇ ಮಂತ್ರಾಃ–ಈ ಮಂತ್ರಗಳು, ಉಪಾಸ್ಯಾಃ ಸ್ಯುಃ–ಜಪಿಸಲು ಯೋಗ್ಯವಾಗಿರುತ್ತವೆ; ಅನ್ಯಥಾ–ಹಾಗಲ್ಲದೇ (ಅನ್ಯರಿಂದ ಜಪಿಸಲ್ಪಟ್ಟರೆ), ನ ಫಲಪ್ರದಾಃ–ವ್ಯರ್ಥವಾಗುತ್ತವೆ (ಸಿದ್ಧಿಸುವುದಿಲ್ಲ).

**ಅಗ್ನಿಹೋತ್ರರತಾ ಯೇಽತ್ರ ವೇದಾಧ್ಯಾಯರತಾಶ್ಚ ಯೇ ।**
**ಏತೇ ಮಂತ್ರಾ ಉಪಾಸಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೪ ॥**

---

ಪರದ್ರವ್ಯಗಳ ಆಶಾವರ್ಜಿತರಾಗಿರಬೇಕು; ಅವರಲ್ಲಿ ದಾನಸ್ವೀಕಾರಕ್ಕೆ ಅರ್ಹರಾದ ಬ್ರಾಹ್ಮಣರು ದುಷ್ಟರಿಂದ ದಾನಸ್ವೀಕಾರ ಮಾಡಿರಕೂಡದು (ಅಥವಾ ದುಷ್ಟ ಸ್ತ್ರೀ ಮೊದಲಾದ ಪರಿವಾರರಹಿತರಾಗಿರಬೇಕು—ದುರ್ಜನ ಸಹವಾಸದಲ್ಲಿ ಆಸಕ್ತಿಯನ್ನು ತೊರೆದಿರಬೇಕು); ಹೀಗಿರುವ ಅಧಿಕಾರಿಗಳಿಂದ ಮಾತ್ರ ಈ ಮಂತ್ರಗಳು ಉಪಾಸ್ಯಗಳು—ಅನ್ಯಥಾ ಫಲಪ್ರದಗಳಾಗುವುದಿಲ್ಲ(೩೧-೩೩).

ವಿವಿಧ ಮಂತ್ರಗಳನ್ನು ಉಪಾಸಿಸುವವರಲ್ಲಿ ಯಾರು, ವೇದಾಧ್ಯಯನದಲ್ಲಿಮತ್ತು ಅಗ್ನಿಹೋತ್ರಾದಿ ಕರ್ಮಗಳಲ್ಲಿ ಆಸಕ್ತರಾಗಿರುವರೋ, ಅವರಿಂದ ಈ ನರಸಿಂಹ, ಹಯಗ್ರೀವಾದಿ ಮಂತ್ರಗಳು ಜಪಿಸಲರ್ಹವಾಗುತ್ತವೆ—ಹೀಗಿರುವವರೇ ಅಧಿಕಾರಿಗಳು—ಅನ್ಯರಿಗೆ ಈ ಮಂತ್ರಗಳು ಫಲಪ್ರದಗಳಾಗುವುದಿಲ್ಲ. ಯಾರು ಪರಪೀಡೆಯಿಂದ ವಿಮುಖರೋ, ಪ್ರಾಣಾಯಾಮಾದಿ ನಿಯಮಗಳ ಅನುಷ್ಠಾನವುಳ್ಳವರೋ,

ಹಿಂಸಾಯಾಂ ವಿಮುಖಾ ಯೇ ತು ಜಿತಶ್ವಾಸಾ ಜಿತೇಂದ್ರಿಯಾಃ ।
ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೫ ॥

ಸ್ವಸ್ಥ ಚಿತ್ತೈರ್ಧ್ಯಾನಪರೈಃ ನಿಕ್ರೋಧೈರತಿಥಿಪ್ರಿಯೈಃ ।
ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೬ ॥

ವಿಷ್ಣುಭಕ್ತಿರ್ದೃಢಾ ಯೇಷಾಂ ದಾನೇ ಚಿತ್ತಂ ಸದೈವ ತು ।
ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೭ ॥

ಈಶ್ವರಾರ್ಪಿತ ಸರ್ವಸ್ವಾ ನ್ಯಾಯಾಗತಧನಾಶ್ಚ ಯೇ ।
ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೮ ॥

ಅತ್ರ—ಈ ಮಂತ್ರೋಪಾಸಕರ ಮಧ್ಯದಲ್ಲಿ ಯೇ—ಯಾರು, ಅಗ್ನಿಹೋತ್ರ ರತಾಃ—ಅಗ್ನಿ ಕಾರ್ಯದಲ್ಲಿ ಆಸಕ್ತರೋ, ಚ—ಮತ್ತು ಯೇ—ಯಾರು, ವೇದಾಧ್ಯಾಯರತಾಃ—ವೇದಾಧ್ಯಯನದಲ್ಲಿ ಆದರವುಳ್ಳವರೋ, (ಅವರಿಂದ), ಏತೇ ಮಂತ್ರಾಃ—ಹಿಂದೆ ಹೇಳಿದ ನರಸಿಂಹ, ಹಯಗ್ರೀವಾದಿ ಭಗವದ್ರೂಪಗಳು, ಉಪಾಸ್ಯಾಃ ಇತ್ಯಾದಿಗಳ ಅರ್ಥವನ್ನು ೩೩ನೇ ಶ್ಲೋಕಭಾಗದಲ್ಲಿದ್ದಂತೆ ತಿಳಿಯಬೇಕು; ಸ್ವಸ್ಥಚಿತ್ತೈಃ—ಶಾಂತಮನಸ್ಕರಾದ, ಧ್ಯಾನಪರೈಃ—ಧ್ಯಾನದಲ್ಲಿ ಆದರವುಳ್ಳವರೂ, ನಿಕ್ರೋಧೈಃ—ಕ್ರೋಧರಹಿತರೂ, ಅತಿಥಿಪ್ರಿಯೈಃ—ಅತಿಥಿಗಳಿಗೆ ಪ್ರಿಯರೂ (ಅತಿಥಿ ಸೇವೆಯಲ್ಲಿ ಪ್ರೀತಿಯುಳ್ಳವರೂ) ಆದವರಿಂದ, ಯೇ—ಯಾರು, ಹಿಂಸಾಯಾಂ—ಪರಪೀಡೆಯಲ್ಲಿ ವಿಮುಖಾಃ—ದ್ವೇಷವುಳ್ಳವರೋ, ಜಿತಶ್ವಾಸಾಃ—ಶ್ವಾಸನಿರೋಧವುಳ್ಳವರೋ (ಪ್ರಾಣಾಯಾಮಾದಿ ನಿಯಮಾನುಷ್ಠಾನವಂತರೋ), ಜಿತೇಂದ್ರಿಯಾಃ ತು—ಇಂದ್ರಿಯ ಜಯವುಳ್ಳವರೋ (ಅವರಿಂದ ಮಾತ್ರ, ಏತೇ ಮಂತ್ರಾಃ ಉಪಾಸ್ಯಾಃ ಸ್ಯುಃ—ಇತ್ಯಾದಿ; (ಯೇ—ಯಾರು) ವಿಷ್ಣುಭಕ್ತಿರ್ದೃಢಾಃ—(ಶ್ರೀವಿಷ್ಣುವಿನಲ್ಲಿ ದೃಢವಾದ

---

ಮತ್ತು ಇಂದ್ರಿಯ ಜಯವುಳ್ಳವರೋ, ಅಂಥ, ಕ್ರೋಧಾದಿರಹಿತರೂ ಅತಿಥಿಪ್ರಿಯರೂ ಶಾಂತಚಿತ್ತರೂ ಧ್ಯಾನಾಸಕ್ತರೂ ಆದವರಿಂದ ಈ ಮಂತ್ರಗಳು ಉಪಾಸ್ಯಗಳು—ಅನ್ಯಥಾ ಫಲಪ್ರದಗಳಲ್ಲ; ಯಾರು ದೃಢವಾದ ವಿಷ್ಣುಭಕ್ತಿಯುಳ್ಳವರೋ, ಸತ್ಪಾತ್ರದಾನದಲ್ಲಿ ಆದರವುಳ್ಳವರೋ, ಅವರಿಂದ ಮಾತ್ರ ಉಪಾಸ್ಯಗಳು—ಅನ್ಯಥಾ ಮಂತ್ರಸಿದ್ಧಿಯು ದೊರೆಯುವುದಿಲ್ಲ; ನ್ಯಾಯಾರ್ಜಿತವಾದ ಧನಾದಿಗಳುಳ್ಳವರೂ ಮತ್ತು ಶ್ರೀಹರಿಯಲ್ಲಿ ಸರ್ವವನ್ನೂ ಸಮರ್ಪಿಸುವ ಬುದ್ಧಿಯುಳ್ಳವರೂ ಈ ಮಂತ್ರಗಳನ್ನು ಉಪಾಸಿಸುವುದರಲ್ಲಿ (ಜಪಿಸಿ, ಮಂತ್ರಪ್ರತಿಪಾದ್ಯದೇವತೆಯಾದ ಶ್ರೀವಿಷ್ಣುವನ್ನು ಪ್ರಸನ್ನೀಕರಿಸಿಕೊಳ್ಳುವುದಕ್ಕೆ) ಅರ್ಹರು—ಅನ್ಯರಿಗೆ ಈ ಮಂತ್ರಗಳು ಸಿದ್ಧಿಸುವುದಿಲ್ಲ (೩೫-೩೮). ಪೂರ್ವೋಕ್ತ

ಏತೇ ಮಂತ್ರಾ ಉಪಾಸ್ಯಾಃ ಸ್ಯುರನ್ಯಥಾ ನ ಫಲಪ್ರದಾಃ ।
ಪರದಾರಪರದ್ರವ್ಯದುಷ್ಟತಿಗ್ರಹವರ್ಜಿತೈಃ ।
ಏತೇ ಮಂತ್ರಾ ಉಪಾಸ್ಯಾಃ ಸ್ಯುರನ್ಯಥಾ ನ ಫಲಪ್ರದಾಃ ॥ ೩೩ ॥

ಮಾತೃಕಾದಿಷು ಮಂತ್ರೇಷು–ಮಾತೃಕಾದಿ ಇತರ ಮಂತ್ರಗಳ ಜಪದಲ್ಲಿ, ಗೃಹಸ್ಥಾ–ಗೃಹಸ್ಥಾಶ್ರಮಿಗಳು, ಅಧಿಕಾರಿಣಃ–ಅಧಿಕಾರಿಗಳಾಗಿರುವರು; ನರಸಿಂಹಹಯಗ್ರೀವಹಂಸವಾರಾಹಭಾರ್ಗವಾಃ–ನರಸಿಂಹ, ಹಯಗ್ರೀವ, ಹಂಸ, ಭಾರ್ಗವಮಂತ್ರಗಳೂ, ಕಪಿಲವ್ಯಾಸದತ್ತಾದ್ಯಾಃ–ಕಪಿಲ, ವ್ಯಾಸ, ದತ್ತ ಮೊದಲಾದ ಮಂತ್ರಗಳೂ, ದ್ವಿಜಾನಾಂ ಏವ–ದ್ವಿಜರಿಗೆ ಮಾತ್ರವೆಂದು, ಕೀರ್ತಿತಾಃ–(ದ್ವಿಜರಿಂದ ಮಾತ್ರ ಜಪಿಸಲು ಅರ್ಹವಾದವುಗಳೆಂದು) ಹೇಳಲ್ಪಟ್ಟವೆ; ಏತೇ–ಈ ಮಂತ್ರಾಃ–ಮಂತ್ರಗಳು, ಸ್ವಸ್ವವರ್ಣಾಶ್ರಮಾಚಾರೈಃ–ತಂತಮ್ಮ ವರ್ಣಾಶ್ರಮಗಳ ಆಚಾರಗಳುಳ್ಳವರಾದ, ದುರಾಚಾರವರ್ಜಿತೈಃ–ದುರಾಚಾರರಹಿತರಾದುದರಿಂದ, ಉಪಾಸ್ಯಾಃ ಸ್ಯುಃ–ಉಪಾಸ್ಯಗಳಾಗಿರುತ್ತವೆ (ಜಪಿಸಲು ಯೋಗ್ಯವಾಗುತ್ತವೆ); ಅನ್ಯಥಾ–ಹಾಗಿಲ್ಲದೇ ಇದ್ದರೆ, ನ ಫಲಪ್ರದಾಃ–(ಮಂತ್ರ ಜಪವು) ಫಲಪ್ರದವಾಗುವುದಿಲ್ಲ (ಮಂತ್ರಸಿದ್ಧಿಯು ದೊರೆಯುವುದಿಲ್ಲ); ಪರದಾರಪರದ್ರವ್ಯದುಷ್ಟತಿಗ್ರಹವರ್ಜಿತೈಃ–ಪರಸ್ತ್ರೀ, ಪರದ್ರವ್ಯಗಳ ಆಶೆಯಿಲ್ಲದವರಿಂದಲೂ, ದುರ್ದಾನಗಳನ್ನು ಸ್ವೀಕರಿಸದ ಬ್ರಾಹ್ಮಣರಿಂದಲೂ, ಏತೇ ಮಂತ್ರಾಃ–ಈ ಮಂತ್ರಗಳು, ಉಪಾಸ್ಯಾಃ ಸ್ಯುಃ–ಜಪಿಸಲು ಯೋಗ್ಯವಾಗಿರುತ್ತವೆ; ಅನ್ಯಥಾ–ಹಾಗಲ್ಲದೇ (ಅನ್ಯರಿಂದ ಜಪಿಸಲ್ಪಟ್ಟರೆ), ನ ಫಲಪ್ರದಾಃ–ವ್ಯರ್ಥವಾಗುತ್ತವೆ (ಸಿದ್ಧಿಸುವುದಿಲ್ಲ).

ಅಗ್ನಿಹೋತ್ರರತಾ ಯೇಽತ್ರ ವೇದಾಧ್ಯಾಯರತಾಶ್ಚ ಯೇ ।
ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೪ ॥

---

ಪರದ್ರವ್ಯಗಳ ಆಶಾವರ್ಜಿತರಾಗಿರಬೇಕು; ಅವರಲ್ಲಿ ದಾನಸ್ವೀಕಾರಕ್ಕೆ ಅರ್ಹರಾದ ಬ್ರಾಹ್ಮಣರು ದುಷ್ಟರಿಂದ ದಾನಸ್ವೀಕಾರ ಮಾಡಿರಕೂಡದು (ಅಥವಾ ದುಷ್ಟ ಸ್ತ್ರೀ ಮೊದಲಾದ ಪರಿವಾರರಹಿತರಾಗಿರಬೇಕು—ದುರ್ಜನ ಸಹವಾಸದಲ್ಲಿ ಆಸಕ್ತಿಯನ್ನು ತೊರೆದಿರಬೇಕು); ಹೀಗಿರುವ ಅಧಿಕಾರಿಗಳಿಂದ ಮಾತ್ರ ಈ ಮಂತ್ರಗಳು ಉಪಾಸ್ಯಗಳು—ಅನ್ಯಥಾ ಫಲಪ್ರದಗಳಾಗುವುದಿಲ್ಲ(೩೧-೩೩).

ವಿವಿಧ ಮಂತ್ರಗಳನ್ನು ಉಪಾಸಿಸುವವರಲ್ಲಿ ಯಾರು, ವೇದಾಧ್ಯಯನದಲ್ಲಿ ಮತ್ತು ಅಗ್ನಿಹೋತ್ರಾದಿ ಕರ್ಮಗಳಲ್ಲಿ ಆಸಕ್ತರಾಗಿರುವರೋ, ಅವರಿಂದ ಈ ನರಸಿಂಹ, ಹಯಗ್ರೀವಾದಿ ಮಂತ್ರಗಳು ಜಪಿಸಲರ್ಹವಾಗುತ್ತವೆ—ಹೀಗಿರುವವರೇ ಅಧಿಕಾರಿಗಳು—ಅನ್ಯರಿಗೆ ಈ ಮಂತ್ರಗಳು ಫಲಪ್ರದಗಳಾಗುವುದಿಲ್ಲ; ಯಾರು ಪರಪೀಡೆಯಿಂದ ವಿಮುಖರೋ, ಪ್ರಾಣಾಯಾಮಾದಿ ನಿಯಮಗಳ ಅನುಷ್ಠಾನವುಳ್ಳವರೋ,

**ಹಿಂಸಾಯಾಂ ವಿಮುಖಾ ಯೇ ತು ಜಿತಶ್ವಾಸಾ ಜಿತೇಂದ್ರಿಯಾಃ ।**
**ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೫ ॥**

**ಸ್ವಸ್ಥ ಚಿತ್ತೈರ್ಧ್ಯಾನಪರೈಃ ನಿಕ್ರೋಧೈರತಿಥಿಪ್ರಿಯೈಃ ।**
**ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೬ ॥**

**ವಿಷ್ಣುಭಕ್ತಿರ್ದೃಢಾ ಯೇಷಾಂ ದಾನೇ ಚಿತ್ತಂ ಸದೈವ ತು ।**
**ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೭ ॥**

**ಈಶ್ವರಾರ್ಪಿತ ಸರ್ವಸ್ವಾ ನ್ಯಾಯಾಗತಧನಾಶ್ಚ ಯೇ ।**
**ಏತೇ ಮಂತ್ರಾ ಉಪಾಸ್ಯಾ ಸ್ಯುರನ್ಯಥಾ ನ ಫಲಪ್ರದಾಃ ॥ ೩೮ ॥**

ಅತ್ರ—ಈ ಮಂತ್ರೋಪಾಸಕರ ಮಧ್ಯದಲ್ಲಿ ಯೇ—ಯಾರು, ಅಗ್ನಿಹೋತ್ರ ರತಾಃ—ಅಗ್ನಿ ಕಾರ್ಯದಲ್ಲಿ ಆಸಕ್ತರೋ, ಚ—ಮತ್ತು ಯೇ—ಯಾರು, ವೇದಾಧ್ಯಯರತಾಃ—ವೇದಾಧ್ಯಯನದಲ್ಲಿ ಆದರವುಳ್ಳವರೋ, (ಅವರಿಂದ), ಏತೇ ಮಂತ್ರಾಃ—ಹಿಂದೆ ಹೇಳಿದ ನರಸಿಂಹ, ಹಯಗ್ರೀವಾದಿ ಭಗವದ್ರೂಪಗಳು, ಉಪಾಸ್ಯಾಃ ಇತ್ಯಾದಿಗಳ ಅರ್ಥವನ್ನು ೩೩ನೇ ಶ್ಲೋಕಭಾಗದಲ್ಲಿದ್ದಂತೆ ತಿಳಿಯಬೇಕು; ಸ್ವಸ್ಥಚಿತ್ತೈಃ—ಶಾಂತಮನಸ್ಕರಾದ, ಧ್ಯಾನಪರೈಃ—ಧ್ಯಾನದಲ್ಲಿ ಆದರವುಳ್ಳವರೂ, ನಿಕ್ರೋಧೈಃ—ಕ್ರೋಧರಹಿತರೂ, ಅತಿಥಿಪ್ರಿಯೈಃ—ಅತಿಥಿಗಳಿಗೆ ಪ್ರಿಯರೂ (ಅತಿಥಿ ಸೇವೆಯಲ್ಲಿ ಪ್ರೀತಿಯುಳ್ಳವರೂ) ಆದವರಿಂದ, ಯೇ—ಯಾರು, ಹಿಂಸಾಯಾಂ—ಪರಪೀಡೆಯಲ್ಲಿ, ವಿಮುಖಾಃ—ದ್ವೇಷವುಳ್ಳವರೋ, ಜಿತಶ್ವಾಸಾಃ—ಶ್ವಾಸನಿರೋಧವುಳ್ಳವರೋ (ಪ್ರಾಣಾಯಾಮಾದಿ ನಿಯಮಾನುಷ್ಠಾನವಂತರೋ), ಜಿತೇಂದ್ರಿಯಾಃ ತು—ಇಂದ್ರಿಯ ಜಯವುಳ್ಳವರೋ (ಅವರಿಂದ ಮಾತ್ರ, ಏತೇ ಮಂತ್ರಾಃ ಉಪಾಸ್ಯಾಃ ಸ್ಯುಃ—ಇತ್ಯಾದಿ; (ಯೇ—ಯಾರು) ವಿಷ್ಣುಭಕ್ತಿರ್ದೃಢಾ—(ಶ್ರೀವಿಷ್ಣುವಿನಲ್ಲಿ ದೃಢವಾದ

---

ಮತ್ತು ಇಂದ್ರಿಯ ಜಯವುಳ್ಳವರೋ, ಅಂಥ, ಕ್ರೋಧಾದಿರಹಿತರೂ ಅತಿಥಿಪ್ರಿಯರೂ ಶಾಂತಚಿತ್ತರೂ ಧ್ಯಾನಾಸಕ್ತರೂ ಆದವರಿಂದ ಈ ಮಂತ್ರಗಳು ಉಪಾಸ್ಯಗಳು—ಅನ್ಯಥಾ ಫಲಪ್ರದಗಳಲ್ಲ; ಯಾರು ದೃಢವಾದ ವಿಷ್ಣುಭಕ್ತಿಯುಳ್ಳವರೋ, ಸತ್ಪಾತ್ರದಾನದಲ್ಲಿ ಆದರವುಳ್ಳವರೋ, ಅವರಿಂದ ಮಾತ್ರ ಉಪಾಸ್ಯಗಳು—ಅನ್ಯಥಾ ಮಂತ್ರಸಿದ್ಧಿಯು ದೊರೆಯುವುದಿಲ್ಲ; ನ್ಯಾಯಾರ್ಜಿತವಾದ ಧನಾದಿಗಳುಳ್ಳವರೂ ಮತ್ತು ಶ್ರೀಹರಿಯಲ್ಲಿ ಸರ್ವವನ್ನೂ ಸಮರ್ಪಿಸುವ ಬುದ್ಧಿಯುಳ್ಳವರೂ ಈ ಮಂತ್ರಗಳನ್ನು ಉಪಾಸಿಸುವುದರಲ್ಲಿ (ಜಪಿಸಿ, ಮಂತ್ರಪ್ರತಿಪಾದ್ಯದೇವತೆಯಾದ ಶ್ರೀವಿಷ್ಣುವನ್ನು ಪ್ರಸನ್ನೀಕರಿಸಿಕೊಳ್ಳುವುದಕ್ಕೆ) ಅರ್ಹರು—ಅನ್ಯರಿಗೆ ಈ ಮಂತ್ರಗಳು ಸಿದ್ಧಿಸುವುದಿಲ್ಲ (೩೫-೩೮). ಪೂರ್ವೋಕ್ತ

ಭಕ್ತಿಯುಳ್ಳವುಳ್ಳವರೋ, ಯೇಷಾಂ ತು– ಯಾರಿಗಾದರೆ, ಸದಾ ಏವ-ನಿತ್ಯವೂ, ದಾನೇ-(ಸತ್ಪಾತ್ರ) ದಾನದಲ್ಲಿ ಚಿತ್ತಂ– ಮನಸ್ಸೋ–ಮನಸ್ಸುಳ್ಳವರೋ), ಅವರಿಂದ, ಏತೇ ಮಂತ್ರಾಃ ಇತ್ಯಾದಿ; ಯೇ–ಯಾರು, ಈಶ್ವರಾರ್ಪಿತಸರ್ವಸ್ವಾಃ-ಶ್ರೀಹರಿಯಲ್ಲಿ ಸರ್ವಸಮರ್ಪಣಾಬುದ್ಧಿಯುಳ್ಳವರೋ, ಚ–ಮತ್ತು ನ್ಯಾಯಾಗತಧನಾಃ–ನ್ಯಾಯ (ಧರ್ಮ) ಪ್ರಾಪ್ತವಾದ ಧನವುಳ್ಳವರೋ, ಅವರಿಂದ, ಏತೇ ಮಂತ್ರಾಃ ಇತ್ಯಾದಿ.

**ತತ್ರಾಪಿ ಚ ಹಯಗ್ರೀವನರಸಿಂಹವರಾಹಕಾಃ ।**
**ಭಾರ್ಗವಶ್ಚ ದುರಾಚಾರೈರ್ನೈವ ಸೇವ್ಯಾಃ ಕಥಂಚನ ॥ ೩೯ ॥**

**ಏತನ್ಮಂತ್ರೋಪಾಸಕಾ ಯೇ ಯದಿ ಸ್ಯುಃ ಪರದಾರಿಣಃ ।**
**ಪರದ್ರವ್ಯಹರಾವಾಪಿ ವೃಥಾ ಹಿಂಸಾಪರಾಯಣಾಃ ॥ ೪೦ ॥**

**ಮದ್ಯಮಾಂಸಸುರಾದೀನಾಂ ಯದಿ ಸ್ಯುಃ ಸೇವಿನೋಥವಾ ।**
**ಮಂತ್ರಕ್ಷೋಭೋ ಭವೇತ್ತೇಷಾಂ ತತ್ಕಾಲೇ ಸ್ಯುಃ ಪಿಶಾಚಕಾಃ ॥ ೪೧ ॥**

ತತ್ರಾಪಿ ಚ–ಈ ಹಿಂದೆ ಹೇಳಿದ ಮಂತ್ರಗಳಲ್ಲಿ ಸಹ (೩೧-೩೨ನೇ ಶ್ಲೋಕಗಳಲ್ಲಿ ಹೇಳಲಾದ ನರಸಿಂಹಾದಿ ಮಂತ್ರಗಳಲ್ಲಿ ಸಹ), ಹಯಗ್ರೀವನರಸಿಂಹ-ವರಾಹಕಾಃ–ಹಯಗ್ರೀವ, ನರಸಿಂಹ, ವರಾಹಮಂತ್ರಗಳು, ಚ–ಮತ್ತು ಭಾರ್ಗವಃ-ಭಾರ್ಗವ(ಪರಶುರಾಮ) ಮಂತ್ರವೂ, ದುರಾಚಾರೈಃ–ದುರಾಚಾರಿಗಳಿಂದ, ಕಥಂಚನ-ಹೇಗೂ (ಯಾವ ರೀತಿಯಿಂದಲೂ) ನೈವ ಸೇವ್ಯಾಃ–ಸೇವಿಸಲ್ಪಡತಕ್ಕವುಗಳಲ್ಲ; ಯೇ–ಯಾರು, ಏತನ್ಮಂತ್ರೋಪಾಸಕಾಃ–ಈ ಮಂತ್ರಗಳನ್ನು ಉಪಾಸಿಸುವರೋ (ಅವರು), ಯದಿ–ಒಂದು ವೇಳೆ, ಪರದಾರಿಣಃ–ಪರಸ್ತ್ರೀಯರಲ್ಲಿ ಆಸಕ್ತರೂ, ವಾ–ಅಥವಾ, ಪರದ್ರವ್ಯಹರಾಃ–ಪರದ್ರವ್ಯಾಪಹಾರಿಗಳೂ, ವೃಥಾ–ವ್ಯರ್ಥವಾಗಿ,

---

ನರಸಿಂಹಾದಿ ಮಂತ್ರಗಳಲ್ಲಿಯೂ, ಹಯಗ್ರೀವ, ನರಸಿಂಹ, ವರಾಹ ಮತ್ತು ಪರಶುರಾಮ ಮಂತ್ರಗಳನ್ನು ದುರಾಚಾರಗಳುಳ್ಳವರು ಯಾರೂ, ಯಾವ ಪ್ರಕಾರದಿಂದಲೂ ಉಪಾಸಿಸಕೂಡದು; ಪರಸ್ತ್ರೀ ಪರದ್ರವ್ಯಗಳನ್ನು ಅಪಹರಿಸುವವರೂ, ವ್ಯರ್ಥವಾದ ಪರಹಿಂಸೆಗಳಲ್ಲಿ ತೊಡಗುವವರೂ, ಅಥವಾ ಮದ್ಯ ಮಾಂಸ ಸುರಾದಿಗಳನ್ನು ಸೇವಿಸುವವರೂ, ಈ ಮಂತ್ರಗಳನ್ನು ಜಪಿಸಿದರೆ, ಮಂತ್ರ ಕ್ಷೋಭೆಯೂ (ದುಃಖಾದಿ ದುಷ್ಟಫಲಗಳೂ) ಉಂಟಾಗಿ,[1] ಅಲ್ಪಕಾಲದಲ್ಲಿ ಪಿಶಾಚ ಜನ್ಮವೂ

1. ಪಿಶಾಚ ಜನ್ಮವು ಮಹಾದುಃಖಕರವಾದುದು; ಸದಾ ಹಸಿವು ನೀರಡಿಕೆಗಳಿಂದ ಪೀಡಿಸಲ್ಪಡುತ್ತವೆ—ಪಿಶಾಚಿಗಳು; ಅನ್ನಪಾನಗಳಿದ್ದರೂ, ಅನ್ನದೇಹ ಪ್ರವೇಶವಿಲ್ಲದೆ, ಭೋಗಿಸುವಂತಿಲ್ಲ—ಪ್ರವೇಶ ಯೋಗ್ಯ ಅನ್ನರು ದೊರಕುವುದು ಸುಲಭವಲ್ಲ—ಬಹುಪರಳ.

ಹಿಂಸಾಪರಾಯಣಾಃ- ಪರಪೀಡಾಪರರೂ, ಸ್ಯುಃ-ಆಗುವವದಾದರೆ, ಅಥವಾ, ಮದ್ಯಮಾಂಸಸುರಾದೀನಾಂ- ಮದ್ಯ, ಮಾಂಸ, ಸುರಾದಿಗಳ, ಸೇವಿನಃ-ಸೇವಿಸುವವರು, ಯದಿ ಸ್ಯುಃ-ಆಗುವವರಾದರೆ, ತೇಷಾಂ-ಅವರಿಗೆ (ಈ ದುರಾಚಾರವುಳ್ಳವರಾಗಿ ಆ ಮಂತ್ರಗಳನ್ನು ಜಪಾದಿಗಳಿಂದ ಸೇವಿಸಿದರೆ), ಮಂತ್ರಕ್ಷೋಭಃ-ಮಂತ್ರಕ್ಷೋಭೆಯು (ದುಷ್ಪರಿಣಾಮವು) ಭವೇತ್ -(ತಪ್ಪದೇ) ಆಗುತ್ತದೆ; ತತ್ಕಾಲೇ-ತತ್ಕಾಲದಲ್ಲಿ (ಅಲ್ಪಕಾಲದಲ್ಲಿ-ಬೇಗನೇ), ಪಿಶಾಚಕಾಃ ಪಿಶಾಚರು, ಸ್ಯುಃ-ಆಗುತ್ತಾರೆ.

**ಅನ್ಯವೈಷ್ಣವಮಂತ್ರಾಸ್ತು ಕಾಲೇನೈವಾಪಕಾರಕಾಃ ।**
**ವಿಲಂಬೇನಾಪಕಾರೋಪಿ ಜಾಯತೇ ನಾತ್ರ ಸಂಶಯಃ ॥ ೪೨ ॥**

ಅನ್ಯವೈಷ್ಣಮಂತ್ರಾಃ ತು-(ಹಿಂದಿನ ಶ್ಲೋಕದಲ್ಲಿ ಹೇಳಿದ ಹಯಗ್ರೀವ, ನಾರಸಿಂಹ, ವರಾಹ, ಭಾರ್ಗವಮಂತ್ರಗಳಲ್ಲದೇ) ಇತರ ವೈಷ್ಣವ ಮಂತ್ರಗಳಾದರೋ, ಕಾಲೇನ ಏವ-ದೀರ್ಘಕಾಲದಿಂದಲೇ (ದುರಾಚಾರಿಗಳು ಉಪಾಸಿಸಿದರೆ, ತತ್ಕಾಲದಲ್ಲಿ ಅಲ್ಲದೇ, ಕೆಲವು ಕಾಲದ ನಂತರವೇ), ಅಪಕಾರಕಾಃ-ಕೆಡಕನ್ನುಂಟುಮಾಡುತ್ತವೆ; ಅಪಕಾರಃ-ದುಷ್ಫಲವು, ವಿಲಂಬೇನಾಪಿ-ವಿಳಂಬದಿಂದಾದರೂ, ಜಾಯತೇ-ಉಂಟಾಗಿಯೇ ತೀರುತ್ತದೆ (ತಪ್ಪುವುದಿಲ್ಲ), ಅತ್ರ-ಈ ವಿಷಯದಲ್ಲಿ ನ ಸಂಶಯಃ-ಸಂಶಯವಿಲ್ಲ.

**ಏವಂ ಸಂಕರ್ಷಣೋಮಂತ್ರಸ್ತ್ರಿವಿಕ್ರಮಜನಾರ್ದನೈಃ ।**
**ನಾರಸಿಂಹಾದಿವತ್ ಜ್ಞೇಯಾ ಉಪಾಸ್ಯಾ ನಿಯತವ್ರತೈಃ ॥ ೪೩ ॥**

ಸಂಕರ್ಷಣಃ ಮಂತ್ರಃ-ಸಂಕರ್ಷಣಮಂತ್ರವೂ, ಏವಂ-ಹೀಗೆಯೇ (ದುರಾಚಾರಿಗಳಿಂದ ಸೇವ್ಯವಲ್ಲ); ತ್ರಿವಿಕ್ರಮಜನಾರ್ದನೈಃ-ತ್ರಿವಿಕ್ರಮ, ಜನಾರ್ದನ ಮಂತ್ರಗಳಿಂದ (ಅವುಗಳ ಉಪಾಸನೆಯಿಂದ), ನಾರಸಿಂಹಾದಿವತ್-ನರಸಿಂಹ ಮೊದಲಾದ ಮಂತ್ರಗಳಂತೆ, ಜ್ಞೇಯಾಃ-(ದುಷ್ಫಲಗಳು) ತಿಳಿಯಲ್ಪಡತಕ್ಕದ್ದು; ನಿಯತವ್ರತೈಃ-ವ್ರತಾದಿ

---

ಪ್ರಾಪ್ತವಾಗುತ್ತದೆ (೩೯-೪೧). ಹಯಗ್ರೀವಾದಿ ನಾಲ್ಕನ್ನು ಬಿಟ್ಟು ಅನ್ಯವೈಷ್ಣವ ಮಂತ್ರಗಳು (ಈ ಹಿಂದೆ ಉಕ್ತವಾಗಿರುವುವುಗಳು) ಸಹ, ದುರಾಚಾರಿಗಳಿಂದ ಉಪಾಸಿಸಲ್ಪಟ್ಟರೆ, ಕಾಲಾಂತರದಲ್ಲಿ ತಪ್ಪದೇ ದುಷ್ಟಫಲಗಳು, ಉಪಾಸಕರಿಗೆ, ಲಭಿಸುತ್ತವೆ; ವಿಳಂಬದಿಂದಾದರೂ ಆ ಮಂತ್ರಗಳೂ ದುರಾಚಾರಿಗಳಿಗೆ ಅಪಕಾರಕವಾಗುತ್ತವೆಂಬಲ್ಲಿ ಸಂಶಯವಿಲ್ಲ (ಆದ್ದರಿಂದ ಮದ್ಯ ಮಾಂಸ, ಪರಸ್ತ್ರೀ ಮೊದಲಾದ ಪೂರ್ವೋಕ್ತಗಳಾದ ಮತ್ತು ತತ್ಸದೃಶ ದುರಾಚಾರಗಳುಳ್ಳವರು, ವೈಷ್ಣವ ಮಂತ್ರಗಳನ್ನು ಉಪಾಸಿಸಕೂಡದು) (೪೨). ಸಂಕರ್ಷಣ, ತ್ರಿವಿಕ್ರಮ, ಜನಾರ್ದನ ಮಂತ್ರಗಳೂ ಸಹ, ನರಸಿಂಹಾದಿ ಮಂತ್ರಗಳಂತೆ ಉಗ್ರಗಳೆಂದೂ, ದುರಾಚಾರಿಗಳಿಂದ ಸೇವ್ಯಗಳಲ್ಲವೆಂದೂ ತಿಳಿಯಲ್ಪಡತಕ್ಕದ್ದು; ನಿಯತವಾದ ವ್ರತಾಚಾರಗಳುಳ್ಳವರೇ ಈ ಮಂತ್ರಗಳನ್ನು ಉಪಾಸಿಸಬೇಕು (೪೩).

ನಿಯಮಗಳುಳ್ಳವರಿಂದ (ಸದಾಚಾರಿಗಳಿಂದಲೇ), ಉಪಾಸ್ಯಾಃ-ಉಪಾಸಿಸಲ್ಪಡಲು ಯೋಗ್ಯವಾದವುಗಳೆಂದು (ಜ್ಞೇಯಾಃ-ತಿಳಿಯಲ್ಪಡತಕ್ಕವುಗಳು).

**ರಾಮಗೋಪಾಲಕೃಷ್ಣಾದ್ಯಾ ಹರಿದಾಮೋದರಾಚ್ಯುತಾಃ ।**
**ಮತ್ಸ್ಯವಾಮನಕೂರ್ಮಾದ್ಯಾಃ ಸರ್ವೇ ಸ್ಯುಃ ಸೌಮ್ಯಮೂರ್ತಯಃ ॥೪೪॥**

**ನ ಕುಪ್ಯಂತಿ ದುರಾಚಾರೈಃ ಸದಾಚಾರೈಃ ಫಲಾಧಿಕಾಃ ।**
**ದ್ವಿಜೈರೇತೇ ತು ಸೋಂಕಾರಾ ಉಪಾಸ್ಯಾ ವಿಷ್ಣುವಲ್ಲಭಾಃ ॥ ೪೫ ॥**

ರಾಮಗೋಪಾಲಕೃಷ್ಣಾದ್ಯಾಃ-ರಾಮ, ಗೋಪಾಲ, ಕೃಷ್ಣ ಮೊದಲಾದ ಮಂತ್ರಗಳೂ, ಹರಿದಾಮೋದರಾಚ್ಯುತಾಃ-ಹರಿ, ದಾಮೋದರ, ಅಚ್ಯುತಮಂತ್ರಗಳೂ, ಮತ್ಸ್ಯವಾಮನ- ಕೂರ್ಮಾದ್ಯಾಃ-ಮತ್ಸ್ಯ, ವಾಮನ, ಕೂರ್ಮ ಮೊದಲಾದವುಗಳೂ, ಸರ್ವೇ-ಈ ಎಲ್ಲವೂ, ಸೌಮ್ಯಮೂರ್ತಯಃ-ಸೌಮ್ಯಮೂರ್ತಿಗಳನ್ನು ಪ್ರತಿಪಾದಿಸುವ ಮಂತ್ರಗಳು (ಸೌಮ್ಯಸ್ವರೂಪದ ಮಂತ್ರಗಳು), ಸ್ಯುಃ-ಆಗಿರುತ್ತವೆ; ದುರಾಚಾರೈಃ-ದುರಾಚಾರಿಗಳ ಉಪಾಸನೆಯಿಂದ, ನ ಕುಪ್ಯಂತಿ-ಕೋಪಗೊಳ್ಳುವುದಿಲ್ಲ (ದುಷ್ಪರಿಣಾಮಗಳನ್ನುಂಟುಮಾಡುವುದಿಲ್ಲ); ಸದಾಚಾರೈಃ – ಸದಾಚಾರವುಳ್ಳವರ ಉಪಾಸನೆಯಿಂದ, ಫಲಾಧಿಕಾಃ-ಅಧಿಕಫಲಗಳನ್ನು ದೂರಕಿಸುತ್ತವೆ; ಏತೇ ತು-ಈ (ಸೌಮ್ಯ) ಮಂತ್ರಗಳಾದರೂ, ದ್ವಿಜೈಃ- ದ್ವಿಜರಿಂದ, ಸೋಂಕಾರಾಃ-ಓಂಕಾರಸಹಿತವಾಗಿ, ಉಪಾಸ್ಯಾ – ಉಪಾಸಿಸಲ್ಪಡತಕ್ಕವುಗಳು; ವಿಷ್ಣುವಲ್ಲಭಾಃ – ಈ ಮಂತ್ರಗಳು ವಿಷ್ಣು ಪ್ರಿಯಕರಗಳು, (ಆಗಿರುತ್ತವೆ).

**ತತ್ತದ್ಧ್ಯಾನಾನುಸಾರೇಣ ತತ್ತದ್ಬೀಜಾನುಸಾರತಃ ।**
**ತತ್ತದ್ಭಕ್ತೇಷ್ಟದಾತಾರೋ ಭವಂತ್ಯೇವ ನ ಸಂಶಯಃ ॥ ೪೬ ॥**

---

ರಾಮ, ಗೋಪಾಲ, ಕೃಷ್ಣ ಹರಿ, ದಾಮೋದರ, ಅಚ್ಯುತ ಮತ್ತು ಮತ್ಸ್ಯ, ವಾಮನ, ಕೂರ್ಮಾದಿ ಮಂತ್ರಗಳು, ಸೌಮ್ಯಸ್ವಭಾವದ ಮಂತ್ರಗಳು; ದುರಾಚಾರಿಗಳು ಇವುಗಳನ್ನು ಉಪಾಸಿಸಿದರೆ, ಕೋಪಗೊಂಡು (ನರಸಿಂಹಾದಿ ಉಗ್ರಮಂತ್ರಗಳಂತೆ) ಅಪಕಾರಮಾಡುವುದಿಲ್ಲ; ಸದಾಚಾರಿಗಳಿಗೆ ಅಧಿಕಫಲವನ್ನು ಕೊಡುತ್ತವೆ (೪೪-೪೫). ಮಂತ್ರಗಳು, ತಮ್ಮ ಬೀಜಾನುಸಾರ[1]ವಾಗಿಯೂ (ಸಬೀಜವಾಗಿದ್ದರೆ), ಧ್ಯಾನಪ್ರಕಾರವನ್ನನುಸರಿಸಿಯೂ, ತಮ್ಮನ್ನು ಜಪಾದಿಗಳಿಂದ ಸೇವಿಸುವ ಭಕ್ತರಿಗೆ ಅವರ ಅಭೀಷ್ಟಗಳನ್ನು ದೂರಕಿಸುತ್ತವೆ—ಸಂಶಯವಿಲ್ಲ (೪೬). ಇವೇ ಮಂತ್ರಗಳನ್ನು

1. ಇದೇ ಅಧ್ಯಾಯ ೬೦-೬೧ನೇ ಶ್ಲೋಕಗಳನ್ನು ನೋಡಿ ಸಬೀಜ ಮಂತ್ರಗಳ ಸ್ವರೂಪವನ್ನು ತಿಳಿಯಿರಿ.

ತತ್ತದ್ಧ್ಯಾನಾನುಸಾರೇಣ–ಆಯಾ ಮಂತ್ರಗಳ ಧ್ಯಾನಪ್ರಕಾರಾನುಸಾರವಾಗಿ, ತತ್ತದ್ಬೀಜಾನುಸಾರತಃ–ಆಯಾ ಮಂತ್ರಗಳ ಬೀಜಾನುಸಾರವಾಗಿ, ತತ್ತದ್ಧ್ಯಕ್ಷೇಷ್ಟದಾತಾರಃ– ಆಯಾ ಮಂತ್ರೋಪಾಸಕರಾದ ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವುವು (ದೊರಕಿಸುವವು), ಭವಂತಿ ಏವ–ತಪ್ಪದೇ ಆಗುತ್ತವೆ; ನ ಸಂಶಯಃ–ಸಂದೇಹವಿಲ್ಲ

**ಏತ ಏವ ನಿರೋಂಕಾರಾಃ ಸ ಬೀಜಾಃ ಶುಚಿಭಿಃ ಸದಾ ।**
**ದ್ವಿಜಸ್ತ್ರೀಭಿರುಪಾಸ್ಯಾ ಸ್ಯುಃ ನಾನ್ಯೈರೇವ ಕಥಂಚನ ॥ ೪೭ ॥**

ಏತೇ ಏವ–ಈ ಮಂತ್ರಗಳೇ, ಸಬೀಜಾಃ–ಬೀಜಸಹಿತಗಳಾಗಿ, ನಿರೋಂಕಾರಾಃ– (ಆದರೆ) ಓಂಕಾರರಹಿತಗಳಾಗಿ, ಶುಚಿಭಿಃ–ಶುದ್ಧರಾದ (ಸ್ನಾನಾದಿಗಳಿಂದ ಶುದ್ಧರೂ, ಶುದ್ಧಮನಸ್ಕರೂ ಆದ), ದ್ವಿಜಸ್ತ್ರೀಭಿಃ–ದ್ವಿಜಸ್ತ್ರೀಯರಿಂದ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣಗಳ ಸ್ತ್ರೀಯರಿಂದ), ಉಪಾಸ್ಯಾಃ ಸ್ಯುಃ–ಉಪಾಸಿಸಲ್ಪಡಲು ಅರ್ಹಗಳಾಗಿವೆ; ಕಥಂಚನ–ಎಂದೂ (ಹೇಗೂ) ಅನ್ಯೈಃ–ಇತರರಿಂದ, ನೈವ—ಅಲ್ಲವೇ ಅಲ್ಲ

**ಪತಿತಾ ಯೇ ದ್ವಿಜಾತೀನಾಂ ಪ್ರಾಯಶ್ಚಿತ್ತವಿವರ್ಜಿತಾಃ ।**
**ಪಶ್ಚಾತ್ತಾಪೇನ ಸಂತಪ್ತಾ ವೇದಿಕಾತ್ ಕರ್ಮಣೋ ಗತಾಃ ॥ ೪೮ ॥**

**ಮದ್ಯಮಾಂಸಸುರಾಭಕ್ಷ್ಯೈರುಜ್ಝಿತಾ ಧರ್ಮಬುದ್ಧಯಃ ।**
**ಪಾಪಕರ್ಮಭಿರಪ್ಯನ್ಯೇ ಪರದಾರಧನಾದಿತಃ ॥ ೪೯ ॥**

**ನಿವೃತ್ತಾಸ್ತೇಽಪಿ ಸಂಸ್ಕಾರ್ಯಾ ದ್ವಿಜಸ್ತ್ರೀವದ್ದಯಾಲುಭಿಃ ।**
**ತಪ್ತಚಕ್ರಾಂಕನಂ ತದ್ವತ್ತದ್ವನ್ಮಂತ್ರೋಪದೇಶನಂ ॥ ೫೦ ॥**

**ತಥಾಕೃತೇ ಕ್ರಮೇಣೈವ ಪಾಪಮುಕ್ತಾ ಭವಂತಿ ಹಿ ।**

ದ್ವಿಜಾತೀನಾಂ–ದ್ವಿಜರಲ್ಲಿ (ದ್ವಿಜಾತಿಗಳ ಮಧ್ಯದಲ್ಲಿ), ಯೇ–ಯಾರು, ಪತಿತಾಃ–

---

ಓಂಕಾರವಿಲ್ಲದೇ ಬೀಜಸಹಿತವಾಗಿ, ದ್ವಿಜಸ್ತ್ರೀಯರು ಮಾತ್ರ ಉಪಾಸಿಸಬಹುದು— ಅನ್ಯರಿಗೆ ಅಧಿಕಾರವಿಲ್ಲ (೪೭). ದ್ವಿಜಾತಿಗಳವರಲ್ಲಿ ಪತಿತರೂ, ಪ್ರಾಯಶ್ಚಿತ್ತಮಾಡಿ ಕೊಳ್ಳದವರೂ (ಪ್ರಾಯಶ್ಚಿತ್ತವೇ ಇಲ್ಲದ ಪಾಪಗಳನ್ನು ಮಾಡಿದವರೂ), ಪಶ್ಚಾತ್ತಾಪವುಳ್ಳವರಾಗಿ, ವೇದೋಕ್ತಕರ್ಮಾಚರಣ ಶೂನ್ಯರಾದರೂ, ಧರ್ಮಬುದ್ಧಿ ಯುಳ್ಳವರಾಗಿ, ಪಾಪಕರ್ಮಗಳನ್ನು ಬಿಟ್ಟು ಪರಸ್ತ್ರೀ ಪರದ್ರವ್ಯಗಳಿಂದ ನಿವೃತ್ತರಾಗಿ, ಮದ್ಯಮಾಂಸಸುರಾದಿ ನಿಷಿದ್ಧ ಆಹಾರಪಾನಗಳನ್ನು ದೂರ ತೊರೆದು ತತ್ಕಾಲದಲ್ಲಿ ಶುದ್ಧರಾಗಿರುವವರಿಗೆ, ದ್ವಿಜಸ್ತ್ರೀಯರಂತೆ, ದಯಾಳುಗಳಾದ ಗುರುಗಳು, ತಪ್ತಚಕ್ರಧಾರಣ ಮಾಡಿಸಿ, ಮಂತ್ರೋಪದೇಶವನ್ನಿತ್ತು ಅನುಗ್ರಹಿಸುತ್ತಾರೆ (ಅನುಗ್ರಹಿಸಬೇಕು—ಅನುಗ್ರಹಿಸಲ್ಪಡಲು ಇಂಥವರು ಅರ್ಹರಾಗಿರುವರು); ಹೀಗೆ

ಭ್ರಷ್ಟರಾದವರೋ, ಪ್ರಾಯಶ್ಚಿತ್ತವಿವರ್ಜಿತಾಃ–ಪ್ರಾಯಶ್ಚಿತ್ತ ಮಾಡಿಕೊಳ್ಳದವರೋ, (ಆದರೆ), ಪಶ್ಚಾತ್ತಾಪೇನ–(ತಮ್ಮ ಪಾಪಗಳ ಬಗ್ಗೆ) ಪಶ್ಚಾತ್ತಾಪದಿಂದ, ಸಂತಪ್ತಾ–ನೊಂದಮನಸ್ಸುಳ್ಳವರೋ, ಮತ್ತು ವೈದಿಕಾತ್ ಕರ್ಮಣಃ–ವೇದೋಕ್ತಕರ್ಮಗಳಿಂದ, ಗತಾಃ–ಬಿಡಲ್ಪಟ್ಟವರೋ (ವೈದಿಕಕರ್ಮಾಚರಣೆಯಿಲ್ಲದವರೋ), ಮದ್ಯಮಾಂಸ-ಸುರಾಭಕ್ಷ್ಯೈಃ–ಮದ್ಯ, ಮಾಂಸ, ಸುರಾ ಮೊದಲಾದವುಗಳಿಂದ, ಉಜ್ಝಿತಾಃ–ರಹಿತರಾಗಿರುವರೋ (ಅವುಗಳನ್ನು ತ್ಯಜಿಸಿರುವರೋ), ಧರ್ಮಬುದ್ಧಯಃ–ಧರ್ಮದಲ್ಲಿ ಆಸಕ್ತಿಯುಳ್ಳವರೋ, ಅನ್ಯೇ–ಬೇರೆ ಯಾರು, ಪಾಪಕರ್ಮಭಿಃ–ಪಾಪಕರ್ಮಗಳಿಂದಲೂ, (ಉಜ್ಝಿತಾಃ–ರಹಿತರಾಗಿ), ಪರದಾರಧನಾದಿತಃ–ಪರಸ್ತ್ರೀ ಪರದ್ರವ್ಯಗಳಿಂದ, ನಿವೃತ್ತಾಃ– ರಹಿತರೋ (ಆ ಕರ್ಮಗಳನ್ನೂ ಬಿಟ್ಟವರೋ), ತೇ ಅಪಿ–ಅವರೂ ಸಹ, ದಯಾಲುಭಿಃ–ಕೃಪಾಳುಗಳಾದ (ಗುರುಗಳಿಂದ), ದ್ವಿಜಸ್ತ್ರೀವತ್–ದ್ವಿಜಸ್ತ್ರೀಯರಂತೆ, ಸಂಸ್ಕಾರ್ಯಾಃ–ಸಂಸ್ಕಾರ ಮಾಡಲ್ಪಡಲರ್ಹರೇ (ಆಗಿರುತ್ತಾರೆ); ತದ್ವತ್–ಅವರಂತೆ (ದ್ವಿಜಸ್ತ್ರೀಯರಂತೆ), ತಪ್ತಚಕ್ರಾಂಕನಂ–ತಪ್ತಚಕ್ರದ ಚಿಹ್ನೆಯನ್ನು ದೇಹದಲ್ಲಿ ಧರಿಸುವುದು, ಮಂತ್ರೋಪದೇಶನಂ–ಮಂತ್ರೋಪದೇಶವೂ (ಆದರೆ), ತಥಾಕೃತೇ–ಹಾಗೆ ಗುರುಗಳು ಮಾಡಿದರೆ (ಅನುಗ್ರಹಿಸಿದರೆ), ಕ್ರಮೇಣ–ಕ್ರಮವಾಗಿ, ಪಾಪಮುಕ್ತಾಃ–ಪಾಪನಿರ್ಮುಕ್ತರು, ಭವಂತಿ ಏವ–ನಿಶ್ಚಯವಾಗಿಯೂ ಆಗುತ್ತಾರೆ; ಹಿ–ಹೀಗೆಂಬುದೇ ಶಾಸ್ತ್ರಸಿದ್ಧವು.

**ಅನುಲೋಮೇಷು ಯೇ ಕೇಚಿತ್ ತ್ರಯೀ ವಿದ್ಯಾಧಿಕಾರಿಣಃ ॥ ೫೧ ॥**

**ತೇಽಪಿ ದ್ವಿಜಾತಿವತ್ ಜ್ಞೇಯಾಸ್ತೇಷಾಂ ದೀಕ್ಷಾದಿಕಂ ತಥಾ ।**
**ಸಚ್ಛೂದ್ರಾ ಅಪಿ ಯೇ ಕೇಚಿತ್ ಸೂತಾದ್ಯಾಃ ಪ್ರತಿಲೋಮಿನಃ ॥ ೫೨ ॥**

**ದ್ವಿಜಸ್ತ್ರೀವತ್ ಸಂಸ್ಕಾರ್ಯಾಸ್ತಥಾ ಮಂತ್ರೋಪದೇಶನಂ ।**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತ್ರಯೋ ವರ್ಣಾ ದ್ವಿಜಾತಯಃ ॥ ೫೩ ॥**

---

ದೀಕ್ಷಿತರಾಗಿ, ಸ್ವಯೋಗ್ಯಮಂತ್ರವನ್ನು ಜಪಾದಿಗಳಿಂದ ಸೇವಿಸಿದವರು, ಕ್ರಮವಾಗಿ ಪಾಪಗಳಿಂದ ಮುಕ್ತರಾಗುತ್ತಾರೆ—ಸಂಶಯವಿಲ್ಲ (೪೮-೫೦). ಅನುಲೋಮ ಜಾತಿಗಳಲ್ಲಿ ಕೆಲವರು ವೇದವಿದ್ಯಾಧಿಕಾರಿಗಳಿದ್ದಾರೆ; ಅವರಿಗೆ ದೀಕ್ಷಾಮಂತ್ರೋಪದೇಶಗಳು ದ್ವಿಜರಂತೆ ನಡೆಯಬೇಕು—ಅವರನ್ನು ದ್ವಿಜರಂತೆಯೇ ತಿಳಿಯಬೇಕು; ಸಚ್ಛೂದ್ರರೂ ಮತ್ತು ಸೂತ ಮೊದಲಾದ ಪ್ರತಿಲೋಮ ಜಾತಿಯವರು, ದ್ವಿಜಸ್ತ್ರೀಯರಂತೆ ಸಂಸ್ಕಾರಗಳಿಗೆ ಅರ್ಹರಾಗಿರುತ್ತಾರೆ—ಅವರಂತೆ (ದ್ವಿಜಸ್ತ್ರೀಯರಂತೆ) ದೀಕ್ಷಾಪ್ರದಾನ ಮತ್ತು ಮಂತ್ರೋಪದೇಶಗಳು, ಅವರಿಗೆ, ನಡೆಯಬೇಕು; ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು, ಎಂಬ ಮೂರು ವರ್ಣದವರು ಮಾತ್ರ ದ್ವಿಜರೆನಿಸುತ್ತಾರೆ (೫೧-೫೩).

ಅನುಲೋಮಿಷು–ಅನುಲೋಮಜಾತಿಗಳಲ್ಲಿ, ಯೇ ಕೇಚಿತ್–ಯಾವ ಕೆಲವರು, ತ್ರಯೀವಿದ್ಯಾಧಿಕಾರಿಣಃ–ವೇದವಿದ್ಯೆಯಲ್ಲಿ ಅಧಿಕಾರವುಳ್ಳವರೋ, ತೇಪಿ–ಅವರೂ ಸಹ, ದ್ವಿಜಾತಿವತ್–ದ್ವಿಜರಂತೆ, ಜ್ಞೇಯಾಃ–ತಿಳಿಯಲ್ಪಡಲರ್ಹರು; ತೇಷಾಂ–ಅವರಿಗೆ, ದೀಕ್ಷಾದಿಕಂ-ದೀಕ್ಷೆ ಮಂತ್ರೋಪದೇಶಗಳು, ತಥಾ-ಹಾಗೆಯೇ (ದ್ವಿಜರಂತೆಯೇ ನಡೆಯತಕ್ಕದ್ದು); ಯೇ ಕೇಚಿತ್–ಯಾವ ಕೆಲವರು, ಸಚ್ಛೂದ್ರಾಃ– ಶುದ್ಧಸ್ವಭಾವದ ಶೂದ್ರರೋ, ಮತ್ತು ಸೂತಾದ್ಯಾಃ–ಸೂತರೇ ಮೊದಲಾದ, ಪ್ರತಿ-ಲೋಮಿನಃ–ಪ್ರತಿಲೋಮ ಜಾತಿಯವರೋ, (ಅವರು), ದ್ವಿಜಸ್ತ್ರೀವತ್–ದ್ವಿಜಸ್ತ್ರೀಯರಂತೆ, ಸಂಸ್ಕಾರ್ಯಾಃ–ಸಂಸ್ಕಾರ(ವಿಷ್ಣುದೀಕ್ಷಾಸಂಸ್ಕಾರ) ಮಾಡಲ್ಪಡಲು ಅರ್ಹರು; ತಥಾ–ಹಾಗೆಯೇ (ದ್ವಿಜಸ್ತ್ರೀಯರಂತೆ), ಮಂತ್ರೋಪದೇಶನಂ–ಮಂತ್ರೋಪದೇಶವೂ (ನಡೆಯತಕ್ಕದ್ದು); ಬ್ರಾಹ್ಮಣಾಃ–ಬ್ರಾಹ್ಮಣರೂ, ಕ್ಷತ್ರಿಯಾಃ–ಕ್ಷತ್ರಿಯರೂ, ವೈಶ್ಯಾಃ–ವೈಶ್ಯರೂ, ತ್ರಯೋವರ್ಣಾಃ– ಈ ಮೂರು ವರ್ಣದವರೂ, ದ್ವಿಜಾತಯಃ–ದ್ವಿಜರೆಂಬ ಜಾತಿಗೆ ಸೇರಿದವರು.

**ತೈರಾದೌ ವೈದಿಕಂ ಕರ್ಮ ಸಂಧ್ಯಾಹೋಮಜಪಾದಿಕಂ ।**
**ಕೃತ್ವೈವ ತಾಂತ್ರಿಕೀ ಪೂಜಾ ತಂತ್ರಮಂತ್ರಜಪಾದಿಕಂ ॥ ೫೪ ॥**

**ಕರ್ತವ್ಯಂ ನಾನ್ಯಥಾ ಕುರ್ಯಾತ್ ಕೃತಂ ಚೇನ್ನಿಷ್ಫಲಂ ಭವೇತ್ ।**
**ವಿನೋಪನಯನಂ ಯದ್ವತ್ ನಾಧಿಕಾರೀ ಶ್ರುತಿ ಶ್ರುತೌ ॥ ೫೫ ॥**

**ತಥಾ ವಿನಾ ನಿತ್ಯಕರ್ಮ ನಾಧಿಕಾರೀ ತು ತಾಂತ್ರಿಕೇ ।**

ತೈಃ–ಅವರಿಂದ (ಆ ದ್ವಿಜರಿಂದ), ಆದೌ–ಮೊದಲಿಗೆ, ಸಂಧ್ಯಾಹೋಮ-ಜಪಾದಿಕಂ–ಸಂಧ್ಯಾವಂದನೆ, ಅಗ್ನಿಕಾರ್ಯ, ಜಪ ಮೊದಲಾದ, ವೈದಿಕಂ ಕರ್ಮ–ವೇದೋಕ್ತಕರ್ಮಗಳೆಲ್ಲವನ್ನೂ ಕೃತ್ವಾ ಏವ–ಮಾಡಿಯೇ (ಮಾಡಿದ ನಂತರವೇ), ತಂತ್ರಮಂತ್ರಜಪಾದಿಕಂ–ಸ್ಮೃತ್ಯುಕ್ತಮಂತ್ರಗಳಿಂದ ಪೂಜೆ, ವಿಶೇಷ ಜಪಾದಿಗಳು, ಕರ್ತವ್ಯಂ–ಮಾಡಲ್ಪಡತಕ್ಕದ್ದು; ಅನ್ಯಥಾ–ಬೇರೆ ಪ್ರಕಾರದಿಂದ (ಸಂಧ್ಯಾದಿಗಳನ್ನು

---

ದ್ವಿಜರು, ಮೊದಲು, ವೇದೋಕ್ತವಾದ ಸಂಧ್ಯಾವಂದನೆ, ಅಗ್ನಿಕಾರ್ಯ ಮೊದಲಾದ ಕರ್ಮಗಳನ್ನು ಮಾಡಿಕೊಂಡು, ನಂತರ ತಂತ್ರಸಾರೋಕ್ತವಾದ ಶ್ರೀಹರಿ ಪೂಜಾದಿಕರ್ಮಗಳನ್ನು ಆಚರಿಸಬೇಕು; ಹಾಗಲ್ಲದಿದ್ದರೆ, ತಂತ್ರೋಕ್ತಪೂಜಾದಿಗಳು ವ್ಯರ್ಥವಾಗುತ್ತವೆ—ಫಲಪ್ರದಗಳಾಗುವುದಿಲ್ಲ; ಉಪನಯನ ಸಂಸ್ಕಾರವಿಲ್ಲದೇ, ವೇದೋಕ್ತಕರ್ಮಗಳಲ್ಲಿ ಅಧಿಕಾರವಿಲ್ಲದಿರುವಂತೆ, ಮೊದಲು ನಿತ್ಯಕರ್ಮಗಳನ್ನು ಅನುಷ್ಠಾನ ಮಾಡದೇ ತಾಂತ್ರಿಕಪೂಜಾದಿಗಳಲ್ಲಿ ಅಧಿಕಾರವೇ ಉಂಟಾಗುವುದಿಲ್ಲ (೫೪-೫೫). ವೇದೋಕ್ತಕರ್ಮಾನುಷ್ಠಾನದಲ್ಲಿ ಅಧಿಕಾರವೇ ಇಲ್ಲದ ಸ್ತ್ರೀಶೂದ್ರ

ಮಾಡದೇ), ನ ಕುರ್ಯಾತ್–ಮಾಡತಕ್ಕದ್ದಲ್ಲ; ಕೃತಂಚೇತ್–ಮಾಡಿದ್ದಾದರೆ, ನಿಷ್ಫಲಂ ಭವೇತ್–ವ್ಯರ್ಥವಾಗುತ್ತದೆ; ಯದ್ವತ್–ಹೇಗೆ, ಉಪನಯನಂ ವಿನಾ–ಉಪನಯನ ಸಂಸ್ಕಾರವಿಲ್ಲದೇ, ಶ್ರುತಿ ಶ್ರುತೌ–ಶ್ರುತ್ಯುಕ್ತ ಕರ್ಮಾಚರಣೆಯಲ್ಲಿ ಅಧಿಕಾರೀ ನ–ಅಧಿಕಾರಿಯಲ್ಲವೋ, ತಥಾ–ಹಾಗೆ, ನಿತ್ಯಕರ್ಮ ವಿನಾ–(ಸಂಧ್ಯಾದಿ ವೇದೋಕ್ತ) ನಿತ್ಯಕರ್ಮವನ್ನಾಚರಿಸದೇ, ತಾಂತ್ರಿಕೇ–ತಂತ್ರೋಕ್ತವಾದ (ಸ್ಮೃತ್ಯುಕ್ತ) ಹರಿಪೂಜಾದಿಗಳಲ್ಲಿ, ಅಧಿಕಾರೀ ನ ತು–ಅಧಿಕಾರಿಯಾಗುವುದೇ ಇಲ್ಲ.

**ವೈದಿಕಾನಾಧಿಕಾರಾ ಯೇ ಸ್ತ್ರೀಶೂದ್ರಪತಿತಾದಯಃ ॥ ೫೬ ॥**

**ತೇಷಾಂ ತಾಂತ್ರಿಕಮೇವ ಸ್ಯಾತ್ ಪೂಜಾಮಂತ್ರಜಪಾದಿಕಂ ।**
**ನಿರೋಂಕಾರಾಶ್ಚ ನಿರ್ಬೀಜಾ ನಮಃ ಪೂರ್ವಾ ನಮೋಂತಕಾಃ ॥ ೫೭ ॥**

ವೈದಿಕಾನಾಧಿಕಾರಾಃ–ವೇದೋಕ್ತಕರ್ಮಗಳಲ್ಲಿ ಅಧಿಕಾರವಿಲ್ಲದ, ಯೇ–ಯಾವ, ಸ್ತ್ರೀಶೂದ್ರಪತಿತಾದಯಃ–ಸ್ತ್ರೀಯರು, ಶೂದ್ರರು, ಪತಿತರೇ ಮೊದಲಾದವರೋ (ಕರ್ಮಭ್ರಷ್ಟರೋ), ತೇಷಾಂ–ಅವರಿಗೆ, ತಾಂತ್ರಿಕಂ-ತಂತ್ರೋಕ್ತವಾದ (ಸ್ಮೃತ್ಯುಕ್ತ), ಪೂಜಾಮಂತ್ರಜಪಾದಿಕಂ–ಪೂಜೆ, ಮಂತ್ರ ಜಪ ಮೊದಲಾದುದೇ, ಸ್ಯಾತ್–(ವಿಹಿತ) ಆಗುತ್ತದೆ; (ಆದರೆ, ಮಂತ್ರಗಳಾದರೋ), ನಿರೋಂಕಾರಾಃ–(ಅವರಿಗೆ) ಓಂಕಾರ ರಹಿತಗಳೂ, ನಿರ್ಬೀಜಾಃ–ಬೀಜರಹಿತಗಳೂ, ನಮಃ ಪೂರ್ವಾಃ–ಮೊದಲಿಗೇ 'ನಮಃ' ಶಬ್ದವುಳ್ಳವುಗಳೂ, (ವಾ–ಅಥವಾ), ನಮೋಂತಕಾಃ–'ನಮಃ' ಶಬ್ದವು ಕೊನೆಯಲ್ಲಿರ ತಕ್ಕವುಗಳೂ (ಆಗಿರಬೇಕೆಂದು ಹೇಳಲ್ಪಡುತ್ತವೆ).

**ಶ್ರೀಶಬ್ದಪೂರ್ವಕಾ ವಾಪಿ ಸಂಬುದ್ಧ್ಯಂತಾಶ್ಚ ಯೇ ಸ್ಮೃತಾಃ ।**
**ಸೌಮ್ಯರೂಪಾಶ್ಚ ರಾಮಾದ್ಯಾ ಮನವಸ್ತೇ ಯಥಾ ರುಚಿ ॥ ೫೮ ॥**

---

ಪತಿತರಿಗೆ, ಕೇವಲ ತಂತ್ರೋಕ್ತಪೂಜೆ, ಮಂತ್ರ ಜಪಾದಿಗಳು ಮಾತ್ರ ಅನುಷ್ಠೇಯ ವಾಗುತ್ತವೆ; ಅವರು ಉಪಾಸಿಸುವ (ಜಪಿಸುವ ಪೂಜೆಯಲ್ಲಿ ಪ್ರಯೋಗಿಸುವ) ಮಂತ್ರಗಳು ಓಂಕಾರವಿಲ್ಲದವೂ, ಬೀಜರಹಿತಗಳೂ ಆಗಿರಬೇಕು; ಆದಿಯಲ್ಲಿ ಅಥವಾ ಅಂತ್ಯದಲ್ಲಿ 'ನಮಃ' ಶಬ್ದವಿರಬೇಕು (೫೬-೫೭). ಸ್ತ್ರೀಶೂದ್ರಪತಿತರಿಗೆ ಉಪದೇಶಿಸಲ್ಪಡಬಹುದಾದ ನಿರೋಂಕಾರಾದಿ ಮಂತ್ರಗಳು, ಪ್ರಾರಂಭದಲ್ಲಿ 'ಶ್ರೀ' ಶಬ್ದವುಳ್ಳವುಗಳಾಗಿ, ಸಂಬುದ್ಧ್ಯಂತವಾಗಿಯೂ ಇರಬಹುದು (ಉದಾ:—ಶ್ರೀಕೃಷ್ಣ! ಶ್ರೀರಾಮ! ಇತ್ಯಾದಿ; ಅಥವಾ ಕೇವಲ ಸಂಬುದ್ಧ್ಯಂತವೂ ಆಗಿರಬಹುದು; ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ಇತ್ಯಾದಿ); ಸೌಮ್ಯರೂಪದ ರಾಮಕೃಷ್ಣಾದಿ ಮಂತ್ರಗಳನ್ನು, ಈ ವಿಧದಿಂದ, ಉಪಾಸಕರು ಪುನೀತರಾಗಲು, ಶೂದ್ರಾದಿ

**ಶೂದ್ರಾದಿಶ್ವಪಚಾಂತೇಭ್ಯ ಉಪದೇಶ್ಯಾ ವಿಶುದ್ಧಯೇ ।**

ವಾ-ಅಥವಾ, ಶ್ರೀಶಬ್ದಪೂರ್ವಕಾಃ-(ಹಿಂದೆ ಹೇಳಿದ ನಿರೋಂಕಾರ ನಿರ್ಬೀಜ ಮಂತ್ರಗಳು) ಶ್ರೀಶಬ್ದದಿಂದ ಆರಂಭವಾಗಿ, ಯೇ-ಯಾವುವು, ಸಂಬುದ್ಧ್ಯಂತಾಃ-ಸಂಬೋಧನ ವಿಭಕ್ತ್ಯಂತವಾಗಿಯೂ ಇರಬಹುದೆಂದು, ಸ್ಮೃತಾಃ-ಹೇಳಲಾಗುತ್ತವೆಯೋ, ಸೌಮ್ಯರೂಪಾಃ-ಸೌಮ್ಯಸ್ವಭಾವದ, ರಾಮಾದ್ಯಾಃ ಚ-ರಾಮಕೃಷ್ಣಾದಿಗಳು, ಯಥಾ ರುಚಿ-(ಉಪಾಸಿಸುವ ಅಧಿಕಾರಿಗಳ) ಇಚ್ಛಾನುಸಾರವಾಗಿ, ತೇ ಮನವಃ-ಆ ಮಂತ್ರ ಗಳು, ವಿಶುದ್ಧಯೇ-ಶುದ್ಧ್ಯರ್ಥವಾಗಿ (ಅಧಿಕಾರಿಗಳ ಪವಿತ್ರತೆಗಾಗಿ), ಶೂದ್ರಾದಿ-ಶ್ವಪಚಾಂತೇಭ್ಯಃ-ಶೂದ್ರಾದಿ ಚಂಡಾಲರವರೆಗಿನ ಹೀನವರ್ಣದವರಿಗೆ, ಉಪದೇಶ್ಯಾಃ-ಉಪದೇಶಿಸಲಡಬೇಕು.

**ತತ್ರಾಪಿ ಯೇ ವಿಶಿಷ್ಟಾಃ ಸ್ಯುಃ ನಿಯಮವ್ರತಚಾರಿಣಃ ॥ ೫೯ ॥**

**ತೇಷಾಂ ಸಾಮಾನ್ಯತೋ ಬೀಜಯುಕ್ತಾನ್ಮಂತ್ರಾನುಪಾದಿಶೇತ್ ।**

ತತ್ರಾಪಿ-ಅವರಲ್ಲಿಯೂ (ಶೂದ್ರಾದಿ ಚಂಡಾಲಾಂತರಾದವರಲ್ಲಿ), ಯೇ-ಯಾರು, ನಿಯಮವ್ರತಚಾರಿಣಃ-ನಿಯಮಗಳನ್ನೂ (ಏಕಾದಶ್ಯಾದಿ) ವ್ರತಗಳನ್ನೂ ಆಚರಿಸುತ್ತ ವಿಶಿಷ್ಟಾಃ ಸ್ಯುಃ-ಉತ್ತಮರಾಗಿರುವರೋ, ತೇಷಾಂ-ಅವರಿಗೆ, ಸಾಮಾನ್ಯತಃ-ಸಾಮಾನ್ಯ ವಾಗಿ, ಬೀಜಯುಕ್ತಾನ್-ಬೀಜಸಹಿತವಾದ, ಮಂತ್ರಾನ್-ಮಂತ್ರಗಳನ್ನು, ಉಪಾದಿಶೇತ್- ಉಪದೇಶಿಸಬೇಕು.

**ಯಸ್ತು ನಾಮಾದಿಮೋ ವರ್ಣಃ ಸೋನುಸ್ವಾರಸಮನ್ವಿತಃ ॥ ೬೦ ॥**

**ಭವೇತ್ ಸಾಮಾನ್ಯತೋ ಬೀಜಂ ನಾಮಮಂತ್ರೇಷು ಸರ್ವಶಃ ॥**

**ಇತಿ ಮಂತ್ರವಿವೇಕಸ್ತೇ ತಥಾ ತದಧಿಕಾರಿಣಃ ।**

**ವಿಸ್ತರೇಣ ಮಯಾ ಪ್ರೋಕ್ತಾಃ ಶೇಷಂ ವಿದ್ಧಿ ತದಾಗಮಾತ್ ॥ ೬೧ ॥**

ನಾಮಾದಿಮಃ-ನಾಮದ ಮೊದಲಿನ (ಪ್ರಾರಂಭದ), ವರ್ಣಃ-ಅಕ್ಷರವು, ಯಸ್ತು-ಯಾವುದೋ, ಸಃ-ಅದು, ಅನುಸ್ವಾರಸಮನ್ವಿತಃ-ಅನುಸ್ವಾರದಿಂದ ಯುಕ್ತವಾದರೆ (ಅ-ಅಂ, ರ-ರಂ, ಇತ್ಯಾದಿ), ಸಾಮಾನ್ಯತಃ-ಸಾಮಾನ್ಯವಾಗಿ, ಸರ್ವಶಃ- ಸರ್ವತ್ರ,

---

ಚಂಡಾಲಪರ್ಯಂತರ ಹೀನವರ್ಣದವರಿಗೆ, ಅವರವರ ಇಚ್ಛಾನುಸಾರ (ರಾಮ, ಕೃಷ್ಣ ಮತ್ಸ್ಯ ಮೊದಲಾದ ಸೌಮ್ಯಮಂತ್ರಗಳನ್ನು) ಉಪದೇಶಿಸಬಹುದು (೫೮). ಶೂದ್ರಚಂಡಾಲಾದಿಗಳಲ್ಲಿ ಸಹ ನಿಯಮ ವ್ರತಾದಿಗಳನ್ನು ಆಚರಿಸುವ ಉತ್ತಮರಿಗೆ, ಸಾಮಾನ್ಯವಾಗಿ ಬೀಜಸಹಿತವಾದ ಮಂತ್ರಗಳನ್ನು ಉಪದೇಶಿಸತಕ್ಕದ್ದು (೫೯). ಮಂತ್ರದ

ನಾಮಮಂತ್ರೇಷು–ನಾಮಮಂತ್ರಗಳಲ್ಲಿ, ಬೀಜಂ–ಬೀಜವು, ಭವೇತ್–ಆಗುತ್ತದೆ; (ಅಂ ಅಜಾಯನಮಃ; ರಂ ರಾಮಾಯನಮಃ ಇತ್ಯಾದಿ); ಇತಿ–ಹೀಗೆ, ತೇ–ನಿನಗೋಸ್ಕರ ವಾಗಿ, ಮಂತ್ರವಿವೇಕಾಃ–ಮಂತ್ರವ್ಯತ್ಯಾಸಗಳು (ವಿವಿಧ ಮಂತ್ರಸ್ವರೂಪಗಳು), ತಥಾ–ಹಾಗೂ, ತದಧಿಕಾರಿಣಃ–ಆ ಮಂತ್ರಗಳ ಅಧಿಕಾರಿಗಳೂ, ಮಯಾ–ನನ್ನಿಂದ, ವಿಸ್ತರೇಣ–ವಿಸ್ತಾರವಾಗಿ, ಪ್ರೋಕ್ತಾಃ–ಹೇಳಲ್ಪಟ್ಟವು; ಶೇಷಂ–ಅವಶಿಷ್ಟ (ಹೆಚ್ಚಿನ) ವಿಶೇಷಗಳನ್ನು ತದಾಗಮಾತ್–ಆಯಾ ಆಗಮದಿಂದ (ಮಂತ್ರಶಾಸ್ತ್ರಾದಿಗಳಿಂದ), ವಿದ್ಧಿ–ತಿಳಿ.

## ಅಧ್ಯಾಯ ೧೦

ಶ್ರೀ ವೇದವ್ಯಾಸಾಯ ನಮಃ

**ಬ್ರಹ್ಮೋವಾಚ—**

**ಕಸ್ಯಾಂ ಮೂರ್ತೌ ಪ್ರಕರ್ತವ್ಯಂ ಪೂಜನಂ ತವ ವೈಷ್ಣವೈಃ ।**
**ಕಥಂ ಚೈತತ್ ಪ್ರಕರ್ತವ್ಯಂ ಭಗವಾನ್ ತದ್ವದಸ್ವ ಮೇ ॥ ೧ ॥**

**ಅರ್ಥ:—**ವೈಷ್ಣವೈಃ–ವಿಷ್ಣುಭಕ್ತರಿಂದ, ಕಸ್ಯಾಂ–ಯಾವ, ಮೂರ್ತೌ–ಪ್ರತಿಮೆಯಲ್ಲಿ, ತವ–ನಿನ್ನ, ಪೂಜನಂ–ಪೂಜೆಯು, ಪ್ರಕರ್ತವ್ಯಂ–ಮಾಡಲ್ಪಡತಕ್ಕದ್ದು; ಏತತ್–ಈ ಪೂಜೆಯು, ಕಥಂ–ಹೇಗೆ, ಪ್ರಕರ್ತವ್ಯಂ–ಮಾಡಲ್ಪಡಬೇಕು; ಭಗವನ್–ಹೇ ಸ್ವಾಮಿ! ತತ್–ಅದನ್ನು, ಮೇ–ನನಗೆ, ವದಸ್ವ–ಹೇಳು.

---

ಮೊದಲನೆ ಅಕ್ಷರವು ಅನುಸ್ವಾರದಿಂದ ಕೂಡಿದರೆ, ಸಾಮಾನ್ಯವಾಗಿ ಅದು, ಎಲ್ಲ ಮಂತ್ರಗಳಲ್ಲಿ ಬೀಜವೆನಿಸುತ್ತದೆ; ಹೀಗೆ ವಿವಿಧ ಮಂತ್ರಗಳೂ ಅವುಗಳ ಅಧಿಕಾರಿಗಳೂ, ನಿನಗೋಸ್ಕರ ನನ್ನಿಂದ ವಿಸ್ತಾರವಾಗಿಯೇ ಹೇಳಲ್ಪಟ್ಟಿವೆ; ಈ ಸಂಬಂಧದ ಹೆಚ್ಚಿನ ವಿಷಯಗಳನ್ನು ಮಂತ್ರಶಾಸ್ತ್ರಗಳಿಂದ[1] (ಆಗಮಗಳಿಂದ) ತಿಳಿಯಬೇಕು (೬೦-೬೧).

ಮಂತ್ರಾಧಿಕಾರಿ ವಿವೇಕವೆಂಬ ೯ನೇ ಅಧ್ಯಾಯವು ಮುಗಿದುದು.

---

1. ಬೃಹತ್ಸಂಹಿತೆಯಲ್ಲಿ ಧ್ವನ್ಯಾತ್ಮಕಶಬ್ದಗಳಿಂದ ಪ್ರತಿಪಾದ್ಯಗಳಾದ ಶ್ರೀಹರಿ ಮಹಿಮೆಗಳನ್ನು ತಿಳಿಯಲು, ಆ ಶಬ್ದಗಳನ್ನು ಶ್ರೀವಿಷ್ಣುವಿನಲ್ಲಿ ಸಮನ್ವಯಗೊಳಿಸುವ ಪ್ರಕಾರವು ವರ್ಣಿತವಾಗಿದೆ. ಸಮುದ್ರಘೋಷದಿಂದ ವ್ಯಂಗ್ಯವಾದ ಹುಂಕಾರವು, ಶ್ರೀಹರಿಯ ಸರ್ವಪರಾಭವ ಅದ್ಭುತಶಕ್ತಿಯನ್ನು ಹೇಳುತ್ತದೆ. ಮೇಘಗಳಲ್ಲಿರುವ ವಾಯುವು ಸದಾ 'ಓಂ' ಎಂದು ಧ್ವನಿಮಾಡುತ್ತದೆ—ಇದರಿಂದ ಶ್ರೀವಿಷ್ಣುವಿನ ಸರ್ವಾಧಿಕ ಉತ್ಕೃಷ್ಟತೆಯು ಪ್ರತಿಪಾದ್ಯವಾಗಿದೆ. ಇತ್ಯಾದಿ; ಗರ್ಗರ, ಗೋಧಾದಿಗಳ (ಜಿಟ್ಟೆ—ಹಲ್ಲಿ ಮೊದಲಾದ ಜಂತುಗಳ) ನಾದಗಳೂ ವರ್ಣಗಳಿಂದೂ ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಮಂತ್ರಗಳಿಂದ ತಿಳಿಯಬೇಕಾದ ಶ್ರೀಹರಿ ಮಹಿಮೆಗಳ ವಿಶೇಷಗಳನ್ನು ಮಂತ್ರಶಾಸ್ತ್ರದಿಂದಲೂ, ಇತರ ಆಗಮ ಭಾಗಗಳಿಂದಲೂ ತಿಳಿಯಬಹುದು.

**ಶ್ರೀ ಹಯಗ್ರೀವ ಉವಾಚ—**

**ಚಲಾಚಲವಿಭೇದೇನ ಪ್ರತಿಮಾ ದ್ವಿತಯಂ ಮಮ ।**
**ಚಲಾ ತು ವೈಷ್ಣೋ ವಿಪ್ರೋ ದ್ವಿವಿಧಾ ತ್ವಚಲಾ ಮತಾ ॥ ೨ ॥**

ಮಮ–ನನ್ನ ಪ್ರತಿಮಾ–ಪ್ರತಿಮೆಯು, ಚಲಾಚಲವಿಭೇದೇನ–ಚಲ ಮತ್ತು ಅಚಲವೆಂಬ ಭೇದದಿಂದ, ದ್ವಿತಯಂ–ಎರಡು ವಿಧವಾಗಿರುತ್ತದೆ; ವೈಷ್ಣವಃ ವಿಪ್ರಃ ತು–ವಿಷ್ಣುಭಕ್ತನಾದ ಬ್ರಾಹ್ಮಣನೇ, ಚಲಾ–ಚಲಪ್ರತಿಮೆಯು; ಅಚಲಾ–ಅಚಲ ಪ್ರತಿಮೆಯು, ದ್ವಿವಿಧಾ ತು–ಎರಡೇ ಪ್ರಕಾರವೆಂದು, ಮತಾ–ತಿಳಿಯಲ್ಪಡುತ್ತದೆ.

**ಸಹಜಾಹಿತಭೇದೇನ ಸಹಜಾ ತ್ರಿವಿಧಾ ಸ್ಮೃತಾ ।**
**ತೀರ್ಥಕ್ಷೇತ್ರಶಿಲಾಭೇದಾಜ್ಜಲಂ ತೀರ್ಥಮಿತಿ ಸ್ಮೃತಂ ॥ ೩ ॥**
**ಭೂಭಾಗಃ ಕ್ಷೇತ್ರಮಿತ್ಯುಕ್ತಂ ಶಾಲಗ್ರಾಮಾದಿಕಾ ಶಿಲಾ ।**

ಸಹಜಾಹಿತಭೇದೇನ–ಸಹಜ ಮತ್ತು ಅಹಿತ, ಎಂಬ ಭೇದದಿಂದ (ಅಚಲ ಪ್ರತಿಮೆಯು ಎರಡು ವಿಧ); ಸಹಜಾ–ಸಹಜಪ್ರತಿಮೆಯು, ತ್ರಿವಿಧಾ ಸ್ಮೃತಾ—ಮೂರು ವಿಧವೆಂದು ತಿಳಿಯಲ್ಪಡುತ್ತದೆ; ತೀರ್ಥಕ್ಷೇತ್ರಶಿಲಾಭೇದಾತ್–ತೀರ್ಥ, ಕ್ಷೇತ್ರ ಮತ್ತು ಶಿಲಾ (ಎಂಬುದೇ ಆ ಮೂರು); ಜಲಂ—ಜಲವು, ತೀರ್ಥಂ ಇತಿ–ತೀರ್ಥವೆಂದು,

---

ಅಧ್ಯಾಯ ೧೦

**ತಾತ್ಪರ್ಯ:**—ವಿಷ್ಣುಭಕ್ತರು ನಿನ್ನನ್ನು ಯಾವ ಪ್ರತಿಮೆಯಲ್ಲಿ ಪೂಜಿಸಬೇಕು ಮತ್ತು ಹೇಗೆ ಪೂಜಿಸಬೇಕು, ಎಂಬುದನ್ನು ಹೇ ಪ್ರಭೋ ! ನನಗಾಗಿ ವಿವರಿಸು (೧). ಶ್ರೀ ಹಯಗ್ರೀವನು ಹೇಳುತ್ತಾನೆ:— ನನ್ನ ಪ್ರತಿಮೆಯು ಚಲ ಮತ್ತು ಅಚಲವೆಂಬ ಭೇದದಿಂದ ಎರಡು ವಿಧವು; ವಿಷ್ಣುಭಕ್ತನಾದ ಬ್ರಾಹ್ಮಣನು ಚಲಪ್ರತಿಮೆಯು; ಅಚಲಪ್ರತಿಮೆಯು, ಎರಡು ವಿಧವಾಗಿರುತ್ತದೆ(೨). ಸಹಜ ಮತ್ತು ಅಹಿತವೆಂದು, ಅಚಲಪ್ರತಿಮೆಯು ಎರಡು ವಿಧ; ಸಹಜವೆಂಬುದು, ತೀರ್ಥ-ಕ್ಷೇತ್ರ-ಶಿಲಾ, ಎಂದು ಮೂರುವಿಧ; ಜಲವು ತೀರ್ಥವೆಂದೂ, ಭೂಭಾಗವು ಕ್ಷೇತ್ರವೆಂದೂ, ಶಾಲಗ್ರಾಮ ಮೊದಲಾದುದು ಶಿಲಾ ಎಂದೂ ಹೇಳಲ್ಪಡುತ್ತವೆ(೩). ಪ್ರಯಾಗ, ಕಾಶೀ, ಬದರೀ, ಕುರುಕ್ಷೇತ್ರ ಮೊದಲಾದ ಪವಿತ್ರ(ಪುಣ್ಯ) ಕ್ಷೇತ್ರಗಳು, ನನ್ನ (ಕ್ಷೇತ್ರರೂಪದ) ಪ್ರತಿಮೆಗಳೆನಿಸುತ್ತವೆ; ಗಂಗಾಕೃಷ್ಣಾದಿ ನದಿಗಳೂ, ಪುಷ್ಕರಾದಿ ಸರೋವರಗಳೂ, ನನ್ನ ತೀರ್ಥಪ್ರತಿಮೆಗಳು; ಶಾಲಗ್ರಾಮ ಶಿಲೆಯಲ್ಲಿ ನನ್ನನ್ನು ಪೂಜಿಸಿ (ಪ್ರಸನ್ನೀಕರಿಸಿ ಕೊಳ್ಳಬಹುದೆಂಬುದು) ನನ್ನನ್ನು ತುಷ್ಟಿಗೊಳಿಸಬಹುದೆಂಬುದು ಸಕಲ ಜ್ಞಾನಿಗಳಿಗೆ

ಸ್ಮೃತಂ–ತಿಳಿಯಲಾಗುತ್ತದೆ; ಭೂಭಾಗಃ–ಭೂಮಿಯ ಒಂದು ಭಾಗವು (ವಿಶಿಷ್ಟ ಪ್ರದೇಶವು), ಕ್ಷೇತ್ರಂ ಇತಿ—ಕ್ಷೇತ್ರವೆಂದು, ಉಕ್ತಂ–ಹೇಳಲ್ಪಡುತ್ತದೆ; ಶಾಲಗ್ರಾಮಾದಿಕಾ–ಶಾಲಗ್ರಾಮ ಮೊದಲಾದುದು, ಶಿಲಾ–ಶಿಲೆಯು (ಶಿಲಾಪ್ರತಿಮೆಯು).

**ಪ್ರಯಾಗಕಾಶೀಬದರೀಕುರುಕ್ಷೇತ್ರಾದಿಕಾನಿ ಚ ॥ ೪ ॥**

**ಭೂಖಂಡಾನಿ ಪವಿತ್ರಾಣಿ ಕ್ಷೇತ್ರಾಣಿ ಮಮ ಮೂರ್ತಯಃ ।**
**ಗಂಗಾಪುಷ್ಕರಕೃಷ್ಣಾದ್ಯಾ ಮಮಸ್ಯುಸ್ತೀರ್ಥಮೂರ್ತಯಃ ॥ ೫ ॥**

**ಶಾಲಗ್ರಾಮಶಿಲಾಯಾಂ ತು ಪೂಜನಂ ಸರ್ವಸಂಮತಂ ।**
**ತಸ್ಯಾಃ ಸಹಜಮೂರ್ತಿತ್ವಾಚ್ಛ್ವಪಾಕಸ್ಪರ್ಶನಾದಿನಾ ॥ ೬ ॥**

**ಸಾನ್ನಿಧ್ಯಂ ಮಮ ನಾಪೈತಿ ಸರ್ವದಾ ಮಮ ಸನ್ನಿಧಿಃ ।**
**ನಾತ್ರ ಪ್ರತಿಷ್ಠಾಪೇಕ್ಷಾಸ್ತಿ ಪೂಜಯೇತ್ತಾಂ ದಿನೇ ದಿನೇ ॥ ೭ ॥**

ಪ್ರಯಾಗಕಾಶೀಬದರೀಕುರುಕ್ಷೇತ್ರಾದಿಕಾನಿ–ಪ್ರಯಾಗ, ಕಾಶೀ, ಬದರೀ, ಕುರುಕ್ಷೇತ್ರ ಮೊದಲಾದ, ಭೂಖಂಡಾನಿ–ಭೂಭಾಗಗಳಾದ, ಪವಿತ್ರಾಣಿ–ಪವಿತ್ರಗಳಾದ, ಕ್ಷೇತ್ರಾಣಿ – ಕ್ಷೇತ್ರಗಳು, ಮಮ–ನನ್ನ ಮೂರ್ತಯಃ ಚ–ಪ್ರತಿಮೆಗಳೇ (ಆಗಿವೆ); ಗಂಗಾಪುಷ್ಕರಕೃಷ್ಣಾದ್ಯಾಃ–ಗಂಗಾ, ಪುಷ್ಕರ, ಕೃಷ್ಣಾ ಮೊದಲಾದವುಗಳು (ನದೀ ಸರೋವರಗಳು), ಮಮ–ನನ್ನ ತೀರ್ಥಮೂರ್ತಯಃ–ತೀರ್ಥ ಪ್ರತಿಮೆಗಳು, ಸ್ಯುಃ–ಆಗಿರುತ್ತವೆ; ಶಾಲಗ್ರಾಮ ಶಿಲಾಯಾಂ ತು–ಶಾಲಗ್ರಾಮ ಶಿಲೆಯಲ್ಲಿ ಆದರೋ, ಪೂಜನಂ–(ನನ್ನನ್ನು) ಪೂಜಿಸುವುದು, ಸರ್ವಸಂಮತಃ–ಸಕಲ ಜ್ಞಾನಿಗಳಿಗೂ ಸಮ್ಮತವಾದುದು; ತಸ್ಯಾಃ–ಆ ಶಿಲೆಗೆ (ಶಾಲಗ್ರಾಮಕ್ಕೆ), ಸಹಜಮೂರ್ತಿತ್ವಾತ್–ಸಹಜಪ್ರತಿಮೆಯ ಭಾವವಿರುವುದರಿಂದ (ಸ್ವಭಾವಸಿದ್ಧ ಪ್ರತಿಮೆಯಾದ್ದರಿಂದ),

---

ಸಂಮತವಾಗಿದೆ; ಅದು ಸಹಜಮೂರ್ತಿಯಾದುದರಿಂದ, (ಸಹಜ ಪ್ರತಿಮೆಗಳು) ಶ್ವಪಾಕಸ್ಪರ್ಶಾದಿಗಳಿಂದ ಸಹ ಅಪವಿತ್ರವಾಗುವುದಿಲ್ಲ—ಸಾನ್ನಿಧ್ಯವು ನಷ್ಟವಾಗುವುದಿಲ್ಲ; ನನ್ನ ಶಾಲಗ್ರಾಮದಲ್ಲಿರುವ ಸನ್ನಿಧಾನವು (ಸಹಜಪ್ರತಿಮೆಗಳಲ್ಲಿರುವ ಸನ್ನಿಧಾನವು), ಮುಂದೆ ಹೇಳಲಾಗುವ ಇತರ ಲೋಹಾದಿ ಪ್ರತಿಮೆಗಳಂತೆ ಆವಾಹನಾದಿ ಕ್ರಮದಿಂದ ಪ್ರತಿಷ್ಠಾಪನೆಯನ್ನು ಅಪೇಕ್ಷಿಸುವುದಿಲ್ಲ (ನನ್ನ ಸನ್ನಿಧಾನವನ್ನು ತಂದುಕೊಳ್ಳಲು ಪ್ರತಿಷ್ಠಾದಿಗಳ ಅವಶ್ಯಕತೆಯಿಲ್ಲ); ಪ್ರತಿನಿತ್ಯವೂ ಶಾಲಗ್ರಾಮವನ್ನು (ಸನ್ನಿಧಾನವನ್ನು ಪ್ರತಿಷ್ಠಿಸಿಕೊಳ್ಳದೇ) ಪೂಜಿಸಬೇಕು (೪-೭). ಬ್ರಾಹ್ಮಣಾದಿ ಚಂಡಾಲ ಪರ್ಯಂತರಾದ ಸರ್ವ ಮಾನವರೂ, ಶಾಲಗ್ರಾಮವನ್ನು ಪೂಜಿಸುವುದರಲ್ಲಿ (ಸ್ವಯೋಗ್ಯ ಮಂತ್ರಸ್ತೋತ್ರಗಳಿಂದ ಅರ್ಚಿಸುವುದರಲ್ಲಿ) ಅಧಿಕಾರಿಗಳೇ ಆಗಿರುತ್ತಾರೆ—ಈ

ಶ್ವಪಾಕಸ್ಪರ್ಶನಾದಿನಾ–ಚಂಡಾಲಸ್ಪರ್ಶಾದಿಗಳಿಂದ, ಮಮ–ನನ್ನ ಸಾನ್ನಿಧ್ಯಂ–ಸಾನ್ನಿಧ್ಯವು (ಅಲ್ಲಿದ್ದು ಭಕ್ತರ ಪೂಜಾದಿಗಳನ್ನು ಸ್ವೀಕರಿಸಿ ಅನುಗ್ರಹಿಸುವೆನೆಂಬ ಇಚ್ಛೆಯಿಂದ ಕೂಡಿ ಇರುವಿಕೆಯು), ನ ಅಪೈತಿ–ಹೋಗುವುದಿಲ್ಲ (ನಷ್ಟವಾಗುವುದಿಲ್ಲ); ಸರ್ವಥಾ–ಸದಾ, ಮಮ ಸನ್ನಿಧಿಃ–ಅಲ್ಲಿರುವ ನನ್ನ ಸನ್ನಿಧಾನವು, ಅತ್ರ–ಅಲ್ಲಿ (ಆ ಶಿಲೆಯಲ್ಲಿ), ಪ್ರತಿಷ್ಠಾಪೇಕ್ಷಾ–ಪ್ರತಿಷ್ಠೆಯನ್ನು ಅಪೇಕ್ಷಿಸುವುದು, ನ–ಅಲ್ಲ; ತಾಂ–ಆ ಶಿಲೆಯನ್ನು ದಿನೇ ದಿನೇ–ಪ್ರತಿನಿತ್ಯವೂ (ಭಗವಂತನ ಸಾನ್ನಿಧ್ಯವನ್ನು ಆವಾಹನಾದಿ ಕ್ರಮಗಳಿಂದ ಸ್ಥಾಪಿಸಿಕೊಳ್ಳದೇ), ಪೂಜಯೇತ್–ಪೂಜಿಸಬೇಕು.

**ಬ್ರಾಹ್ಮಣಾದ್ಯಾ ಶ್ವಪಾಕಾಂತಾಸ್ತತ್ಪೂಜಾಧಿಕೃತಾ ಮತಾ ।**
**ನಾತ್ರ ಜಾತಿವಿವೇಕೋಸ್ತಿ ತಥೈವೈಕಾದಶೀವ್ರತೇ ॥ ೮ ॥**

**ಕೀರ್ತನೇ ವಿಷ್ಣುನಾಮ್ನಾಂ ಚ ದಯಾದಾನ ಕ್ಷಮಾದಿಷು ।**

ಬ್ರಾಹ್ಮಣಾದ್ಯಾಃ–ಬ್ರಾಹ್ಮಣರೇ ಮೊದಲಾಗಿ, ಶ್ವಪಾಕಾಂತಾಃ–ಚಂಡಾಲರೇ ಅಂತ್ಯ ರಾಗಿರುವ ಸರ್ವರೂ, ತತ್ಪೂಜಾಧಿಕೃತಾಃ–ಶಾಲಗ್ರಾಮಪೂಜೆಯಲ್ಲಿ ಅಧಿಕಾರವುಳ್ಳವ ರೆಂದು, ಮತಾಃ–ತಿಳಿಯಲ್ಪಟ್ಟಿರುವರು; ಅತ್ರ–ಶಾಲಗ್ರಾಮ ಪೂಜಾವಿಷಯದಲ್ಲಿ ಜಾತಿವಿವೇಕಃ– ಜಾತಿವಿವೇಕವು (ಜಾತಿನಿಮಿತ್ತವಾದ ವ್ಯತ್ಯಾಸಗಳು—ಭೇದಭಾವವು), ನ ಅಸ್ತಿ– ಇರುವುದಿಲ್ಲ; ಏಕಾದಶೀವ್ರತೇ–ಏಕಾದಶೀವ್ರತಾಚರಣೆಯಲ್ಲಿಯೂ, ಚ– ಮತ್ತು ವಿಷ್ಣುನಾಮ್ನಾಂ–ಶ್ರೀವಿಷ್ಣುವಿನ ನಾಮಗಳ, ಕೀರ್ತನೇ–ಉಚ್ಚರಿಸುವುದರಲ್ಲಿಯೂ (ಶ್ರೀಹರಿನಾಮ ಸಂಕೀರ್ತನೆಯಲ್ಲಿಯೂ), ದಯಾದಾನಕ್ಷಮಾದಿಷು–ದಯೆ, ದಾನ, ಕ್ಷಮಾಗುಣಗಳಲ್ಲಿಯೂ (ಇವುಗಳನ್ನು ಹೊಂದಿರುವುದರಲ್ಲಿಯೂ), ತಥೈವ–ಹಾಗೆಯೇ ಸರಿ (ಯಾವ ಜಾತಿನಿಮಿತ್ತಕವಾದ ಭೇದಭಾವಗಳೂ ಇರುವುದಿಲ್ಲ).

**ದೇವತಾಋಷಿನಾಮಾನಿ ನಾಶುಚಿಃ ಪರಿಕೀರ್ತಯೇತ್ ॥ ೯ ॥**
**ಮಮ ದಿವ್ಯಾನಿ ನಾಮಾನಿ ಸರ್ವದಾ ಪರಿಕೀರ್ತಯೇತ್ ।**

---

ವಿಷಯದಲ್ಲಿ ಜಾತಿನಿಮಿತ್ತಕ ಭೇದಗಳಿಲ್ಲ—ಶಾಲಗ್ರಾಮಪೂಜೆಯನ್ನು ಇಂಥ ಜಾತಿಯವರೇ ಮಾಡತಕ್ಕದ್ದೆಂಬ ಯಾವ ನಿರ್ಬಂಧವೂ ಇರುವುದಿಲ್ಲ. ಹೀಗೆಯೇ, ಏಕಾದಶೀ ಉಪವಾಸಾದಿ ನಿಯಮಗಳನ್ನು ಪಾಲಿಸುವುದರಲ್ಲಿಯೂ, ದಾನಾದಿ ಧರ್ಮಕಾರ್ಯಗಳನ್ನು ಮಾಡುವುದರಲ್ಲಿಯೂ, ದಯಾ, ಕ್ಷಮಾದಿ ಗುಣಗಳನ್ನು ಹೊಂದುವುದರಲ್ಲಿಯೂ ಸಕಲ ಮಾನವರೂ ಜಾತಿಭೇದವಿಲ್ಲದೇ ಅಧಿ ಕಾರಿಗಳಾಗಿರುತ್ತಾರೆ (ಅರ್ಹತೆಯುಳ್ಳವರು) (೮). ದೇವತೆಗಳ ಮತ್ತು ಋಷಿಗಳ (ಜ್ಞಾನಿಗಳ) ಹೆಸರುಗಳನ್ನು ಅಶುದ್ಧರಾಗಿ ಉಚ್ಚರಿಸಕೂಡದು; ಆದರೆ ಶ್ರೀಹರಿಯ ದಿವ್ಯನಾಮಗಳನ್ನು ಸದಾ ಉಚ್ಚರಿಸುತ್ತಲಿರಬೇಕು—ಇದಕ್ಕೆ ಶುಚಿ-ಅಶುಚಿಗಳ ನಿಯಮ

ದೇವತಾಋಷಿನಾಮಾನಿ—ದೇವತೆಗಳ ಮತ್ತು ಋಷಿಗಳ ಹೆಸರುಗಳನ್ನು ಅಶುಚಿಃ-ಅಶುದ್ಧರಾಗಿ (ಮೈಲಿಗೆಯಿಂದ-ಸ್ನಾನಾದಿಗಳಿಲ್ಲದೇ), ನ ಪರಿಕೀರ್ತಯೇತ್-ಉಚ್ಚರಿಸಲಾಗದು; (ಆದರೆ) ಮಮ-ನನ್ನ, ದಿವ್ಯಾನಿ-ದಿವ್ಯವಾದ (ಲೋಕವಿಲಕ್ಷಣ ಗಳಾದ), ನಾಮಾನಿ-ನಾಮಗಳನ್ನು ಸರ್ವದಾ-ಸದಾ (ಸ್ನಾನಾದಿ ನಿರ್ಬಂಧಗಳಿಲ್ಲದೇ), ಪರಿಕೀರ್ತಯೇತ್-ಉಚ್ಚರಿಸುತ್ತಿರಬೇಕು.

**ಉಪಚಾರೈಃ ಷೋಡಶಭಿಸ್ತತ್ತನ್ಮಂತ್ರಸಮರ್ಪಿತೈಃ ॥ ೧೦ ॥**

**ಅರ್ಚಯೇತ್ ಪ್ರತಿಮಾಂ ವಿಷ್ಣೋಃ ತ್ರಿಕಾಲಂ ನಿತ್ಯಮಾದೃತಃ ।**

ತತ್ತನ್ಮಂತ್ರಸಮರ್ಪಿತೈಃ-ಆಯಾ ಮಂತ್ರಗಳನ್ನು ಉಚ್ಚರಿಸಿ ಸಮರ್ಪಿಸಲ್ಪಟ್ಟ ಷೋಡಶಭಿಃ ಉಪಚಾರೈಃ-ಷೋಡಶ (೧೬ ವಿವಿಧ) ಉಪಚಾರಗಳಿಂದ, ವಿಷ್ಣೋಃ-ಶ್ರೀಮಹಾವಿಷ್ಣುವಿನ, ಪ್ರತಿಮಾಂ-ಪ್ರತಿಮೆಯನ್ನು ತ್ರಿಕಾಲಂ-ಮೂರು ಕಾಲಗಳಲ್ಲಿಯೂ, ಆದೃತಃ-ಭಕ್ತಿಪೂರ್ವಕವಾಗಿ (ಆದರ ಬುದ್ಧಿಯುಳ್ಳವನಾಗಿ), ಅರ್ಚಯೇತ್-ಪೂಜಿಸಬೇಕು.

**ಸೌವರ್ಣೀಂ ರಾಜತೀಂ ತಾಮ್ರೀಂ ಯಾಂ ಕಾಂಚಿದ್ವಾ ಶಿಲಾಮಯೀಂ ॥ ೧೧ ॥**

**ಸ್ವಸ್ವಧ್ಯಾನಾನುಸಾರೇಣ ನಿರ್ಮಿತಾ ಪ್ರತಿಮಾಹಿತಾ ।**
**ತತ್ರ ಪ್ರಾಣಪ್ರತಿಷ್ಠಾನಂ ಮಂತ್ರೈರ್ವೈದಿಕತಾಂತ್ರಿಕೈಃ ॥ ೧೨ ॥**

**ಕುರ್ವೀತ ವಿಧಿನಾ ಪಶ್ಚಾತ್ ಪೂಜಯೇತ್ತಾಂ ದಿನೇ ದಿನೇ ।**
**ದ್ವಿಜೈರೇವ ಹಿ ಪೂಜ್ಯಾ ಸಾ ನಸ್ತ್ರೀಭಿರ್ನಾಪಿ ಪಾರಜೈಃ ॥ ೧೩ ॥**

---

ವಿಲ್ಲ (ಅದನ್ನು ಉಚ್ಚರಿಸುವುದರಿಂದ ಅಶುದ್ಧನೂ ಶುದ್ಧನಾಗುತ್ತಾನೆ). ಶ್ರೀವಿಷ್ಣುಪ್ರತಿಮೆಯನ್ನು ಮಂತ್ರಪೂರ್ವಕ ಸಮರ್ಪಿಸಲಾದ ಷೋಡಶೋಪಚಾರ ಗಳಿಂದ[1] ತ್ರಿಕಾಲದಲ್ಲಿಯೂ ಭಕ್ತಿಪೂರ್ವಕವಾಗಿ ಪೂಜಿಸಬೇಕು (೯-೧೦). ಹಾಗೆ ಪೂಜಿಸಲ್ಪಡುವ ಪ್ರತಿಮೆಯು ಆಹಿತಪ್ರತಿಮೆಯೆನಿಸುತ್ತದೆ; ಅದು ಬಂಗಾರ, ಬೆಳ್ಳಿ, ತಾಂಮ್ರ, ಅಥವಾ ಶಿಲಾ (ಕಪ್ಪು ಶಿಲೆ ಅಥವಾ ಅಮೃತಶಿಲೆ ಮೊದಲಾದ) ಯಾವುದಾದರೂ ಒಂದರಿಂದ ನಿರ್ಮಿತವಾದುದಾಗಿರಬೇಕು; ಆ ಪ್ರತಿಮೆಯು

---

1. ಷೋಡಶ(೧೬) ಉಪಚಾರಗಳಾವುವೆಂದರೆ:—ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ, ಸ್ನಾನ, ವಸ್ತ್ರ ಭೂಷಣ, ಉಪವೀತ, ಆಸನ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನಮಸ್ಕಾರ, ಇವು ೧೬ ಉಪಚಾರಗಳು.

ಸೌವರ್ಣೀಂ–ಸುವರ್ಣನಿರ್ಮಿತವಾದುದನ್ನಾಗಲಿ, ರಾಜತೀಂ–ರಜತಮಯವಾದುದನ್ನಾಗಲಿ(ಬೆಳ್ಳಿಯದನ್ನಾಗಲಿ), ತಾಂಮ್ರೀಂ–ತಾಂಮ್ರದ್ದನ್ನಾಗಲಿ, ಶಿಲಾಮಯೀಂ–ಶಿಲಾಮಯವಾದುದನ್ನಾಗಲಿ, ಯಾಂ ಕಾಂಚಿತ್ ವಾ–ಯಾವುದಾದರೊಂದು ಪ್ರತಿಮೆಯನ್ನು (ಅರ್ಚಯೇತ್–ಪೂಜಿಸಬೇಕು, ಹಿಂದಿನ ಶ್ಲೋಕದಿಂದ ಅನ್ವಯಿಸಿಕೊಳ್ಳಬೇಕು); ಸ್ವಸ್ವಧ್ಯಾನಾನುಸಾರೇಣ–ತಂತಮ್ಮ ಧ್ಯಾನಾನುಸಾರವಾಗಿ, ನಿರ್ಮಿತಾ–ನಿರ್ಮಿಸಲ್ಪಟ್ಟ ಪ್ರತಿಮಾ–ಪ್ರತಿಮೆಯು, ಆಹಿತಾ–ಆಹಿತಪ್ರತಿಮೆಯು; ತತ್ರ–ಆ ಪ್ರತಿಮೆಯಲ್ಲಿ ವೈದಿಕತಾಂತ್ರಿಕೈಃ–ಶ್ರುತಿಸ್ಮೃತ್ಯುಕ್ತ ಮಂತ್ರೈಃ–ಮಂತ್ರಗಳಿಂದ, ಪ್ರಾಣಪ್ರತಿಷ್ಠಾನಂ–ಪ್ರಾಣ ಪ್ರತಿಷ್ಠೆಯನ್ನು ವಿಧಿನಾ–ವಿಧಿಪೂರ್ವಕವಾಗಿ (ದೇವತಾಸಾನ್ನಿಧ್ಯವನ್ನು ಪ್ರತಿಮೆಯಲ್ಲಿ ಸ್ಥಾಪಿಸುವ ಮಂತ್ರೋಚ್ಚಾರಣಮಾಡಿ), ಕುರ್ವೀತ–ಮಾಡತಕ್ಕದ್ದು; ಪಶ್ಚಾತ್–ನಂತರ, ತಾಂ–ಆ ಪ್ರತಿಮೆಯನ್ನು ದಿನೇ ದಿನೇ–ನಿತ್ಯವೂ, (ವಿಧಿನಾ–ವಿಧಿಪೂರ್ವಕ), ಪೂಜಯೇತ್– ಪೂಜಿಸಬೇಕು; ಸಾ–ಆ ಪ್ರತಿಮೆಯು, ದ್ವಿಜೈಃ ಏವ–ದ್ವಿಜರಿಂದಲೇ, ಪೂಜ್ಯಾ–ಪೂಜಿಸಲ್ಪಡಲು ಅರ್ಹವಾದುದು ; ಸ್ತ್ರೀಭಿಃ–ಸ್ತ್ರೀಯರಿಂದ, ನ–ಅಲ್ಲ(ಅರ್ಚಿಸಲ್ಪಡತಕ್ಕದ್ದಲ್ಲ); ನಾಪಿ ಪಾದಜೈಃ–ಶೂದ್ರರಿಂದಲೂ ಅಲ್ಲ.

**ಯೇ ತು ವೇದೇಷ್ವಧಿಕೃತಾಸ್ತೈಸ್ತೈರೇವಾಭಿಪೂಜ್ಯತೇ ।**
**ಶೂದ್ರಸಂಸ್ಪರ್ಶನಾತ್ತದ್ಧಃ ಸನ್ನಿಧಾನಂ ವಿನಶ್ಯತಿ ॥ ೧೪ ॥**

ಯೇ ತು–ಯಾರಾದರೆ, ವೇದೇಷು–ವೇದಗಳಲ್ಲಿ(ಅಧ್ಯಯನ ಮತ್ತು ವೇದೋಕ್ತ ಕರ್ಮಾನುಷ್ಠಾನಗಳಲ್ಲಿ), ಅಧಿಕೃತಾಃ–ಅಧಿಕಾರವುಳ್ಳವರೋ, ತೈಃ ತೈಃ ಏವ–ಅಂಥವರಿಂದಲೇ, ಅಭಿಪೂಜ್ಯತೇ–(ಆಹ್ವಾನಿಸಿ ಪ್ರಾಣಪ್ರತಿಷ್ಠಾಪನಾ ಮಾಡಿದ ಪ್ರತಿಮಾಂತರ್ಗತ

---

ಅವರವರ (ಪೂಜಿಸುವವರ) ಧ್ಯಾನಾನುಸಾರವಾಗಿರಬೇಕು;[1] ಅಲ್ಲಿ ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ಮಂತ್ರಗಳಿಂದ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಬೇಕು (ಶ್ರೀವಿಷ್ಣುಸಾನ್ನಿಧ್ಯವನ್ನು ವಿಧಿಪೂರ್ವಕ ತಂದುಕೊಳ್ಳಬೇಕು); ನಂತರ ನಿತ್ಯವೂ ಅದನ್ನು ಪೂಜಿಸಬೇಕು; ಈ ಆಹಿತ ಪ್ರತಿಮಾಪೂಜೆಯಲ್ಲಿ ದ್ವಿಜರು ಮಾತ್ರ ಅಧಿಕಾರಿಗಳಾಗಿರುತ್ತಾರೆ; ಸ್ತ್ರೀ ಶೂದ್ರಾದಿಗಳು ಆಹಿತ ಪ್ರತಿಮಾಪೂಜೆಯಲ್ಲಿ ಅಧಿಕಾರವುಳ್ಳವರಲ್ಲ; ಅವರು ಅದನ್ನು ಪೂಜಿಸತಕ್ಕದ್ದಲ್ಲ (೧೧-೧೩). ವೇದಾಧಿಕಾರಿಗಳೇ ಈ ಪ್ರಾಣಪ್ರತಿಷ್ಠಾಪಿತ (ಆಹಿತ) ಪ್ರತಿಮೆಗಳನ್ನು ಪೂಜಿಸಬೇಕು; ಅಂಥವರಿಂದ ಮಾತ್ರ ಅಲ್ಲಿ ಶ್ರೀಹರಿಯು

---

1. ಪ್ರತಿಮೆಯು ತಂತ್ರಸಾರೋಕ್ತ ಲಕ್ಷಣಯುಕ್ತವಾಗಿ, ವಿಧಿಪೂರ್ವಕ ನಿರ್ಮಿತವಾದುದಾಗಿರಬೇಕು. ಧ್ಯಾನಾನುಸಾರವಾಗಿ ಉಪಾಸಕನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಪ್ರತಿಮೆಯನ್ನು ನಿರ್ಮಿಸತಕ್ಕದ್ದಲ್ಲ—ಅದು ದುರ್ಲಕ್ಷಣಯುಕ್ತವಾಗುವ ಸಂಭವವೂ ಇರುತ್ತದೆ. ಆದ್ದರಿಂದ ಅದು ಪ್ರತಿಮಾನಿರ್ಮಾಣ ಶಿಲ್ಪಶಾಸ್ತ್ರವನ್ನು ಅರಿತ ಶಿಲ್ಪಿಯಿಂದ ರಚಿತವಾದುದಾಗಿರಬೇಕು. ಶ್ರೀಮದಾಚಾರ್ಯರಿಂದ ರಚಿತವಾದ ತಂತ್ರಸಾರಸಂಗ್ರಹ ಗ್ರಂಥದಿಂದ ಈ ಸಂಬಂಧದ ವಿವರಗಳನ್ನು ತಿಳಿಯಬಹುದು.

ನಾದ ಶ್ರೀವಿಷ್ಣುವು) ಪೂಜಿಸಲ್ಪಡುತ್ತಾನೆ; ಶೂದ್ರ ಸಂಸ್ಪರ್ಶನಾತ್-ಶೂದ್ರನ ಸ್ಪರ್ಶಮಾತ್ರದಿಂದ, ಸದ್ಯಃ-ತಕ್ಷಣದಲ್ಲಿ ಸನ್ನಿಧಾನಂ-(ಭಗವಂತನ) ಸನ್ನಿಧಾನವು, ವಿನಶ್ಯತಿ-ನಷ್ಟವಾಗುತ್ತದೆ.

**ಚಾಂಡಾಲಪತಿತೋದಕ್ಯಾ ಸೂತಿಕಾದಿನಿರೀಕ್ಷಣೈಃ ।**
**ಪೂಜಾಭಾವಾದ್ದಶಾಹಂ ಚ ಸನ್ನಿಧಾನಂ ವಿನಶ್ಯತಿ ॥ ೧೫ ॥**

ಚಾಂಡಾಲಪತಿತೋದಕ್ಯಾಸೂತಿಕಾದಿನಿರೀಕ್ಷಣೈಃ-ಚಂಡಾಲ, ಪತಿತ, ಉದಕ್ಯಾ (ಬಹಿಷ್ಠೆಯಾದ ಸ್ತ್ರೀ), ಸೂತಿಕಾ(ಅಶೌಚ)ದಲ್ಲಿರುವ ಮುಂತಾದವರ ದೃಷ್ಟಿಗಳಿಂದ (ಆ ಪ್ರತಿಮೆಗಳ ಮೇಲೆ ಅವರ ದೃಷ್ಟಿ ಬೀಳುವುದರಿಂದ), ಚ-ಮತ್ತು ದಶಾಹಂ-ಹತ್ತು ದಿನಗಳವರೆಗೆ, ಪೂಜಾಭಾವಾತ್-ಪೂಜೆಯಿಲ್ಲದಿದ್ದರೆ, ಸನ್ನಿಧಾನಂ- ಸನ್ನಿಧಾನವು, ವಿನಶ್ಯತಿ-ನಷ್ಟವಾಗುತ್ತದೆ.

**ಪರದಾರರತಸ್ಪರ್ಶಾತ್ ಪರದ್ರವ್ಯಾಪಹಾರಿಣಃ ।**
**ಕುಯೋನಿಗಾಮಿನಃ ಸ್ಪರ್ಶಾತ್ ಸನ್ನಿಧಾನಂ ವಿನಶ್ಯತಿ ॥ ೧೬ ॥**

ಪರದಾರರತಸ್ಪರ್ಶಾತ್-ಪರಸ್ತ್ರೀಯರಲ್ಲಿ ಆಸಕ್ತನಾದ ಪುರುಷನ ಸ್ಪರ್ಶದಿಂದಲೂ, ಪರದ್ರವ್ಯಾಪಹಾರಿಣಃ-ಪರದ್ರವ್ಯವನ್ನು ಅಪಹರಿಸಿದವನ, ಮತ್ತು ಕುಯೋನಿಗಾಮಿನಃ-ನೀಚಯೋನಿಯ ಗಮನಮಾಡಿದವನ (ನೀಚ ಸ್ತ್ರೀ ಅಥವಾ ನೀಚದೇಹದೊಂದಿಗೆ ರಮಣಮಾಡಿದವನ), ಸ್ಪರ್ಶಾತ್-ಸ್ಪರ್ಶದಿಂದಲೂ, ಸನ್ನಿಧಾನಂ-ಸನ್ನಿಧಾನವು, ವಿನಶ್ಯತಿ- ನಷ್ಟವಾಗುತ್ತದೆ.

**ನೀಲಕಾರ್ಪಾಸವಸ್ತ್ರಸ್ಯ ತಥಾ ಮಲಿನವಾಸಸಃ ।**
**ಸ್ಪರ್ಶಾಚ್ಚ ದೀಪತೈಲಸ್ಯ ಸನ್ನಿಧಾನಂ ವಿನಶ್ಯತಿ ॥ ೧೭ ॥**

ನೀಲಕಾರ್ಪಾಸವಸ್ತ್ರಸ್ಯ-ಕಪ್ಪುನೂಲಿನ ಬಟ್ಟೆಯ, ತಥಾ-ಹಾಗೂ ಮಲಿನವಾಸಸಃ-ಅಶುದ್ಧ ವಸ್ತ್ರದ (ಮೈಲಿಗೆ ಬಟ್ಟೆಯ), ಚ-ಮತ್ತು ದೀಪತೈಲಸ್ಯ-ದೀಪದ ಎಣ್ಣೆಯ,

---

ಪೂಜಾಸ್ವೀಕಾರ ಮಾಡುತ್ತಾನೆ; ಶೂದ್ರಸ್ಪರ್ಶಮಾತ್ರದಿಂದ ತಕ್ಷಣ ಆ ಪ್ರತಿಮೆಯಲ್ಲಿನ ಭಗವತ್ಸನ್ನಿಧಾನವು ನಷ್ಟವಾಗುತ್ತದೆ(೧೪). ಹಾಗೂ ಚಂಡಾಲ, ಪತಿತ, ಬಹಿಷ್ಠೆಯಾದ ಸ್ತ್ರೀ, ಸೂತಕದಲ್ಲಿರುವವರು ಮುಂತಾದವರ ದೃಷ್ಟಿಬೀಳುವುದರಿಂದಲೂ, ಆ ಪ್ರತಿಮೆಯಲ್ಲಿರುವ ಭಗವತ್ಸನ್ನಿಧಾನವು ನಷ್ಟಹೊಂದುತ್ತದೆ; ಪ್ರತಿಮೆಯನ್ನು ಹತ್ತುದಿನಗಳವರೆಗೆ ಪೂಜೆಮಾಡದಿದ್ದರೂ ಸನ್ನಿಧಾನವು ನಷ್ಟವಾಗುತ್ತದೆ(೧೫). ಪರಸ್ತ್ರೀಯಲ್ಲಿ ಆಸಕ್ತನಾದವನ, ಪರದ್ರವ್ಯವನ್ನು ಅಪಹರಿಸಿದವನ ಮತ್ತು ನೀಚಸ್ತ್ರೀಸಂಗಮಾಡಿದ ಪುರುಷಸ್ಪರ್ಶದಿಂದ ಸಹ ಆಹಿತಪ್ರತಿಮೆಯಲ್ಲಿನ ಭಗವತ್ಸನ್ನಿಧಾನವು ನಷ್ಟವಾಗುತ್ತದೆ(೧೬). ಕಪ್ಪಾದ ನೂಲಿನ ಬಟ್ಟೆ ಅಥವಾ ಮೈಲಿಗೆ (ಅಶುದ್ಧ) ವಸ್ತ್ರ ಅಥವಾ ದೀಪದ ಎಣ್ಣೆಗಳ

ಸ್ಪರ್ಶಾತ್–ಸ್ಪರ್ಶದಿಂದಲೂ (ಸ್ಪರ್ಶವಾದರೆ), ಸನ್ನಿಧಾನಂ—ಸನ್ನಿಧಾನವು, ವಿನಶ್ಯತಿ–ನಷ್ಟವಾಗುತ್ತದೆ.

**ಯಃ ಸ್ಯಾದ್ರಜಸ್ವಲಾ ಗಂತಾ ಮದ್ಯಪೋ ವ್ಯರ್ಥಮಾಂಸಭುಕ್ ।**
**ಮಹಾಪಾತಕಸಂಸರ್ಗೀ ವೃಥಾ ಹಿಂಸಾ ಪರಾಯಣಃ ॥ ೧೮ ॥**
**ವೇದಾಧ್ಯಯನಹೀನಶ್ಚ ನಾಸ್ತಿಕೋ ವೇದನಿಂದಕಃ ।**
**ದ್ರೋಹೀ ಚ ದೇವತಾವಿಪ್ರತೀರ್ಥಕ್ಷೇತ್ರಾದಿಕಸ್ಯ ಯಃ ॥ ೧೯ ॥**
**ಕನ್ಯಾಯಾ ದೂಷಕೋ ಯಶ್ಚ ಮಾತಾಪಿತ್ರೋಶ್ಚ ನಿಂದಕಃ ।**
**ತಸ್ಯ ಸ್ಪರ್ಶನಮಾತ್ರೇಣ ಸನ್ನಿಧಾನಂ ವಿನಶ್ಯತಿ ॥ ೨೦ ॥**

ಯಃ–ಯಾರು, ರಜಸ್ವಲಾಗಂತಾ–ರಜೋದರ್ಶನವುಳ್ಳ ಸ್ತ್ರೀಯನ್ನು ಭೋಗ ಮಾಡಿದವನು, ಸ್ಯಾತ್–ಆಗಿರುವನೋ, ಮದ್ಯಪಃ–ಮದ್ಯಪಾನಮಾಡುವವನೂ, ವ್ಯರ್ಥಮಾಂಸಭುಕ್–ವ್ಯರ್ಥಮಾಂಸಭೋಜನವುಳ್ಳವನೂ, ಮಹಾಪಾತಕ ಸಂಸರ್ಗೀ–ಮಹಾಪಾತಕಿಗಳ ಸಹವಾಸವುಳ್ಳವನೂ, ವೃಥಾಹಿಂಸಾಪರಾಯಣಃ–ವ್ಯರ್ಥವಾದ ಪ್ರಾಣಿಹಿಂಸೆಯಲ್ಲಿ ಆಸಕ್ತನೂ, ಚ–ಮತ್ತು ವೇದಾಧ್ಯಯನಹೀನಃ–ವೇದಾಧ್ಯಯನವನ್ನು ಬಿಟ್ಟವನೂ, ನಾಸ್ತಿಕಃ–ನಾಸ್ತಿಕನೂ, ವೇದನಿಂದಕಃ–ವೇದಗಳನ್ನು ನಿಂದಿಸುವವನೂ,

---

ಸ್ಪರ್ಶವಾದರೂ, ಆಹಿತ ಪ್ರತಿಮೆಯಲ್ಲಿನ ಭಗವತ್ಸಾನ್ನಿಧ್ಯವು ನಷ್ಟವಾಗುತ್ತದೆ(೧೭). ಬಹಿಷ್ಠೆಯಾದ ಸ್ತ್ರೀಸಂಗಮಾಡಿದವನೂ, ಮದ್ಯಪಾನ ಮಾಡುವವನೂ, ವ್ಯರ್ಥಮಾಂಸಭೋಜನವುಳ್ಳವನೂ,[1] ವ್ಯರ್ಥಹಿಂಸಾ ಪರಾಯಣನೂ,[2] ಮಹಾಪಾತಕಿಗಳ ಸಹವಾಸದಲ್ಲಿರುವವನೂ, ವೇದಾಧ್ಯಯನವನ್ನು ತ್ಯಜಿಸಿದವನೂ, ನಾಸ್ತಿಕನೂ, ವೇದದೂಷಕನೂ,[1] ದೇವಬ್ರಾಹ್ಮಣತೀರ್ಥಕ್ಷೇತ್ರಗಳ ದ್ವೇಷಿಯೂ, ಕನ್ಯೆಯನ್ನು ಭೋಗದಿಂದ ಕೆಡಿಸಿದವನೂ, ಮಾತಾಪಿತೃನಿಂದಕನೂ, ಆಹಿತಪ್ರತಿಮೆಯನ್ನು ಸ್ಪರ್ಶಮಾಡುವ ಮಾತ್ರದಿಂದ, ಸನ್ನಿಧಾನವು ನಷ್ಟವಾಗುತ್ತದೆ (೧೮-೨೦). ಪ್ರತಿಮಾರ್ಚನೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೂ ಮತ್ತು ಇತರ ವೇದಾಧಿಕಾರಿಗಳು

---

1. ಮಾಂಸಭೋಜನವು ದ್ವಿಜರಿಗೆ ಕಲಿಯುಗದಲ್ಲಿ ಸರ್ವಥಾ ನಿಷೇಧ ಮಾಡಲ್ಪಟ್ಟಿದೆ. ಬೇರೆ ಯುಗಗಳಲ್ಲಿ ಶ್ರಾದ್ಧಾದಿಗಳಲ್ಲಿ, ಅನಿಷಿದ್ಧಪ್ರಾಣಿಗಳ ಮಾಂಸವನ್ನು ಉಪಯೋಗಿಸಲು ಅವಕಾಶವಿರುತ್ತದೆ. ಶ್ರಾದ್ಧಾದಿ ವಿಶೇಷ ಸಂದರ್ಭಗಳಲ್ಲದೇ, ನಿತ್ಯಭೋಜನದಲ್ಲಿ ಮಾಂಸವನ್ನು ಉಪಯೋಗಿಸುವುದು ದ್ವಿಜರಿಗೆ ವ್ಯರ್ಥಮಾಂಸಭೋಜನವೆನಿಸುತ್ತದೆ.

2. ಯಜ್ಞಾದಿಗಳಲ್ಲಿ ವಿಧ್ಯುಕ್ತ ಪಶುಹಿಂಸೆಯು ವೃಥಾ ಪ್ರಾಣಿಹಿಂಸೆಯೆನಿಸುವುದಿಲ್ಲ; ಕ್ರೀಡಾರ್ಥವಾಗಿ ಬೇಟೆಯಾಡುವುದು (ಮೃಗಯಾ) ವ್ಯರ್ಥ ಪ್ರಾಣಿಹಿಂಸೆಯು

3. ಪಾಪ-ಪುಣ್ಯ, ನರಕ-ಸ್ವರ್ಗ, ಈಶ್ವರಾದಿ ಅತೀಂದ್ರಿಯ ವಸ್ತುಗಳನ್ನು ಒಪ್ಪದವನು ನಾಸ್ತಿಕ; ವೇದಗಳಿಗೆ ಪ್ರಾಮಾಣ್ಯವನ್ನು ಒಡಂಬಡದವನು ವೇದದೂಷಕನು.

ದೇವತಾವಿಪ್ರತೀರ್ಥಕ್ಷೇತ್ರಾದಿಕಸ್ಯ–ದೇವ, ಬ್ರಾಹ್ಮಣ, ತೀರ್ಥ, ಕ್ಷೇತ್ರಾದಿಗಳ, ದ್ರೋಹೀ–ದ್ರೋಹಿಯೂ (ದ್ವೇಷಿಯೂ), ಕನ್ಯಾಯಾಃ–ಕನ್ನಿಕೆಯ, ದೂಷಕಃ– ಕೆಡಿಸಿದವನೂ (ಕನ್ಯಾವಸ್ಥೆಯಲ್ಲಿರುವ ಸ್ತ್ರೀಯನ್ನು ಭೋಗದಿಂದ ಕೆಡಿಸಿದವನೂ) ಯಶ್ಚ–ಯಾರು, ಮಾತಾಪಿತ್ರೋಃ–ಮಾತಾಪಿತೃಗಳ, ನಿಂದಕಃ–ನಿಂದಿಸುವವನೂ, ಸ್ಯಾತ್– ಆಗಿರುತ್ತಾನೋ (ಉಕ್ತದೋಷಗಳಲ್ಲಿ ಯಾವ ವಿಧದ ದೋಷವುಳ್ಳವನಾದರೂ), ತಸ್ಯ–ಅವನ, ಸ್ಪರ್ಶನಮಾತ್ರೇಣ–ಸ್ಪರ್ಶಮಾತ್ರದಿಂದ (ಪ್ರತಿಮೆಯನ್ನು ಮುಟ್ಟುವ ಮಾತ್ರದಿಂದ, ಸನ್ನಿಧಾನಂ–ಸನ್ನಿಧಾನವು, ವಿನಶ್ಯತಿ–ನಷ್ಟವಾಗುತ್ತದೆ.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಯೇಽನ್ಯೇ ವೇದಾಧಿಕಾರಿಣಃ ।**
**ತೇ ಚೇದೀದೃಶಕರ್ಮಾಣೋ ನ ಯೋಗ್ಯಾಃ ಪ್ರತಿಮಾರ್ಚನೇ ॥ ೨೦ ॥**

ಬ್ರಾಹ್ಮಣಾಃ–ಬ್ರಾಹ್ಮಣರು, ಕ್ಷತ್ರಿಯಾಃ–ಕ್ಷತ್ರಿಯರು, ವೈಶ್ಯಾಃ–ವೈಶ್ಯರು, ಮತ್ತು ಯೇ ಅನ್ಯೇ–ಬೇರೆ ಯಾರು, ವೇದಾಧಿಕಾರಿಣಃ–ವೇದಾಧಿಕಾರಿಗಳೋ, ತೇ–ಅವರು, ಈದೃಶಕರ್ಮಾಣಃ ಚೇತ್–(ಹಿಂದೆ ಹೇಳಿದ) ಈ ವಿಧ ದುಷ್ಕರ್ಮಗಳುಳ್ಳವರಾದರೆ, ಪ್ರತಿಮಾರ್ಚನೇ–ಪ್ರತಿಮೆಯನ್ನು ಪೂಜಿಸುವುದರಲ್ಲಿ ನ ಯೋಗ್ಯಾಃ–ಯೋಗ್ಯರಲ್ಲ.

**ಪ್ರಸಕ್ತಿರೇವ ನಾಸ್ತ್ಯತ್ರ ವೇದೇಷ್ವನಧಿಕಾರಿಣಾಂ ।**
**ಲಕ್ಷಣೈಃ ಪಾಂಚರಾತ್ರೋಕ್ತೈಃ ನಿರ್ಮಿತಾವಯವಾ ಹಿ ಯಾ ॥ ೨೧ ॥**
**ಪ್ರತಿಷ್ಠಿತಾಪಿ ತೈರ್ಮಂತ್ರೈರ್ವೇದಮಂತ್ರೈರ್ಯಥಾವಿಧಿ ।**
**ಪೂಜನೀಯಾ ದ್ವಿಜೈರೇವ ಮಂತ್ರೈರ್ವೈದಿಕತಾಂತ್ರಿಕೈಃ ॥ ೨೨ ॥**

ಅತ್ರ–ಪ್ರತಿಮಾರ್ಚನೆ ವಿಷಯದಲ್ಲಿ ವೇದೇಷು–ವೇದಗಳಲ್ಲಿ ಅನಧಿಕಾರಿಣಾಂ– ಅಧಿಕಾರವಿಲ್ಲದವರ, ಪ್ರಸಕ್ತಿಃ ಏವ–ಪ್ರಸಕ್ತಿಯೇ (ಅವರು ಪೂಜಿಸಬಹುದೇ ಅಥವಾ ಇಲ್ಲವೇ ಎಂಬ ಪ್ರಶ್ನೆಯೇ), ನಾಸ್ತಿ–ಇರುವುದಿಲ್ಲ(ಏಳುವುದಿಲ್ಲ), ಪಾಂಚರಾತ್ರೋಕ್ತೈಃ– ಪಂಚರಾತ್ರದಲ್ಲಿ ಉಕ್ತವಾದ, ಲಕ್ಷಣೈಃ–ಲಕ್ಷಣಗಳಿಂದ, ನಿರ್ಮಿತಾವಯವಾ–ರಚಿತವಾದ ಅವಯವಗಳುಳ್ಳ, ಯಾ–ಯಾವ ಪ್ರತಿಮೆಯು, ತೈಃ ಮಂತ್ರೈಃ–ಆ ಮಂತ್ರಗಳಿಂದಲೂ (ಪಂಚರಾತ್ರಮಂತ್ರಗಳಿಂದಲೂ), ವೇದಮಂತ್ರೈಃ ಅಪಿ–ವೇದೋಕ್ತಮಂತ್ರಗಳಿಂದಲೂ,

---

ಮಾತ್ರ ಅಧಿಕಾರಿಗಳಾಗಿದ್ದರೂ, ಅವರಲ್ಲಿ ಈ ಪೂರ್ವೋಕ್ತ ದುಷ್ಕರ್ಮಗಳ ದೋಷವಿದ್ದರೆ, ಅವರೂ ಸಹ ಪ್ರತಿಮಾರ್ಚನೆಗೆ ಅನರ್ಹರಾಗುತ್ತಾರೆ—ಅಂಥ ಅಯೋಗ್ಯ ದ್ವಿಜರ ಪೂಜೆಯು ವ್ಯರ್ಥವಾಗುತ್ತದೆ ಮತ್ತು ಅನರ್ಥಗಳಿಗೂ ಕಾರಣವಾಗುತ್ತದೆ(೨೦). ಹೀಗಿರಲು, ವೇದಾನಧಿಕಾರಿಗಳಲ್ಲಿ ಪ್ರತಿಮಾರ್ಚನೆಯ ಪ್ರಸಕ್ತಿಯೇ ಉದ್ಭವಿಸುವುದಿಲ್ಲ; ಅರ್ಚನೆಗೆ ಯೋಗ್ಯವೆನಿಸುವ ಪ್ರತಿಮೆಯು,

ಯಥಾವಿಧಿ–ವಿಧಿಯನ್ನನುಸರಿಸಿ, ಪ್ರತಿಷ್ಠಿತಾ–ಪ್ರತಿಷ್ಠಿತವಾದುದೋ (ಭಗವತ್ಸನ್ನಿಧಾನವುಳ್ಳದುದೋ), (ಸಾ–ಆ ಪ್ರತಿಮೆಯೇ), ದ್ವಿಜೈಃ ಏವ–ದ್ವಿಜರಿಂದಲೇ, ವೈದಿಕತಾಂತ್ರಿಕೈಃ–ವೇದ ಮತ್ತು ತಂತ್ರಗಳಲ್ಲಿ (ಶ್ರುತಿಸ್ಮೃತಿಗಳಲ್ಲಿ) ಉಕ್ತವಾದ, ಮಂತ್ರೈಃ(ಏವ)–ಮಂತ್ರಗಳಿಂದಲೇ, ಪೂಜನೀಯಾ–ಪೂಜಿಸಲ್ಪಡಬೇಕು (ಪೂಜಿಸಲರ್ಹವಾಗುತ್ತದೆ), ಹಿ–ಹೀಗೆಂಬುದು ಶಾಸ್ತ್ರಪ್ರಸಿದ್ಧವು.

**ತ್ರಿಸಂಧ್ಯಾದೀಕ್ಷಿತೋ ನಿತ್ಯಂ ತತ್ತನ್ಮಂತ್ರಸ್ಯ ಜಾಪಕಃ ।**
**ಯದಿ ದೀಕ್ಷಾವಿಹೀನಸ್ತಾಂ ಸ್ಪೃಶೇದ್ಧಾತುಮಯೀಂ ತನುಂ ॥ ೨೪ ॥**
**ನೈವ ಸಿದ್ಧಿಮವಾಪ್ನೋತಿ ಪ್ರತ್ಯವಾಯೋ ಭವೇದಪಿ ।**
**ಲೋಹಸೀಸಕರಂಗಾಣಾಂ ಮೂರ್ತಿರ್ನೈವಾರಕೂಟಕೀ ॥ ೨೫ ॥**
**ಕರ್ತವ್ಯಾ ಸಿದ್ಧಿದಾ ನೈವ ಪೂಜಕಾನಾಂ ಭವೇದ್ಧಿ ಸಾ ।**

ನಿತ್ಯಂ–ಪ್ರತಿದಿನವೂ, ತ್ರಿಸಂಧ್ಯಾದೀಕ್ಷಿತಃ–ತ್ರಿಕಾಲಗಳಲ್ಲಿ ಸಂಧ್ಯಾವಂದನೆ ಮಾಡುವುದರಲ್ಲಿ ಸ್ಥಿರಮನಸ್ಸುಳ್ಳವನೂ, ತತ್ತನ್ಮಂತ್ರಸ್ಯಜಾಪಕಃ–ಆಯಾ ಭಗವನ್ಮೂರ್ತಿಯ (ಆಯಾ ಪ್ರತಿಮೆಯ) ಮಂತ್ರವನ್ನು ಜಪಿಸುವವನೂ, ಯದಿ–ಒಂದು ಪಕ್ಷ ದೀಕ್ಷಾವಿಹೀನಃ–ವಿಷ್ಣುದೀಕ್ಷಾರಹಿತನಾಗಿ (ತಪ್ತಮುದ್ರೆಯನ್ನು ಧರಿಸದೇ ವಿಷ್ಣುಭಕ್ತಿರಹಿತನಾಗಿ), ತಾಂ–ಆ ಪ್ರತಿಮೆಯ, ಧಾತುಮಯೀಂ–ಸುವರ್ಣಾದಿ ನಿರ್ಮಿತ, ತನುಂ–

ಪಂಚರಾತ್ರದಲ್ಲಿ ಉಕ್ತವಾದ ಲಕ್ಷಣಗಳಿರುವಂತೆ, ನಿರ್ಮಿತವಾದ ಕರಚರಣಾದಿ ಅವಯವಗಳುಳ್ಳದ್ದಾಗಿರಬೇಕು;[1] ಪಂಚರಾತ್ರೋಕ್ತ ಮಂತ್ರಗಳಿಂದ ವಿಧಿಪ್ರಕಾರ ಪ್ರತಿಷ್ಠಾಪಿತವಾಗಿರಬೇಕು (ಶ್ರೀವಿಷ್ಣು ಸನ್ನಿಧಾನವುಳ್ಳದ್ದಾಗಿರಬೇಕು); ವೇದ ಮಂತ್ರಗಳಿಂದಲೂ, ಪಂಚರಾತ್ರಮಂತ್ರಗಳಿಂದಲೂ ವಿಧ್ಯುಕ್ತರೀತಿಯಲ್ಲಿ ದ್ವಿಜರಿಂದ ಮಾತ್ರ ಪೂಜಿಸಲ್ಪಡಬೇಕು(೨೨-೨೩). ಪೂಜಿಸುವ ದ್ವಿಜನು, ಯದ್ಯಪಿ, ನಿತ್ಯವೂ ತ್ರಿಕಾಲ ಸಂಧ್ಯಾವಂದನಾದಿ ಕರ್ಮಗಳಲ್ಲಿಯೂ, ಆಯಾ ಪ್ರತಿಮೆಯ (ಕೃಷ್ಣ ಗೋಪಾಲಾದಿ) ಮಂತ್ರವನ್ನು ಜಪಿಸುವುದರಲ್ಲಿಯೂ ಶ್ರದ್ಧೆಯುಳ್ಳವನಾಗಿದ್ದರೂ, ವಿಷ್ಣುದೀಕ್ಷಾ(ಬಾಹ್ಯ ಮತ್ತು ಅಂತರಂಗ ದೀಕ್ಷೆಗಳಿಂದ ರಹಿತನಾಗಿದ್ದರೆ, ಸುವರ್ಣರಜತಾದಿ ನಿರ್ಮಿತ

1. ಶ್ರೀಮನ್ಮಧ್ವಾಚಾರ್ಯರಿಂದ ರಚಿತವಾದ ತಂತ್ರಸಾರ ಗ್ರಂಥದಲ್ಲಿ ಪಂಚರಾತ್ರೋಕ್ತ ಪ್ರತಿಮಾಲಕ್ಷಣವು ೩ನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುತ್ತದೆ. ಸಲ್ಲಕ್ಷಣಯುಕ್ತ ಪ್ರತಿಮೆಗಳನ್ನೇ ಪೂಜಿಸಬೇಕಾದ್ದರಿಂದ ಲಕ್ಷಣ ಜ್ಞಾನವುಳ್ಳ ಶಿಲ್ಪಿಯೇ ಪ್ರತಿಮೆಯನ್ನು ನಿರ್ಮಿಸಬೇಕು. ಅಲ್ಲಿಯೇ ಪ್ರತಿಮೆಯ ನಿರ್ಮಾಣಕ್ಕೆ ಉಪಯೋಗಿಸಲರ್ಹವಾದ ಶಿಲೆ, ಲೋಹಾದಿ ವಸ್ತುಗಳ ಲಕ್ಷಣಗಳೂ ಹೇಳಲ್ಪಟ್ಟಿವೆ. ಮುಂದೆ ೪ನೇ ಅಧ್ಯಾಯದಲ್ಲಿ ತಂತ್ರಸಾರೋಕ್ತ ಪೂಜಾ ಮಂತ್ರಗಳನ್ನೂ ಸಂಗ್ರಹಿಸಿ ನಿರೂಪಿಸಲಾಗಿದೆ. ಪ್ರತಿಮಾರ್ಚನೆ ಮಾಡುವ ದ್ವಿಜರು, ಈ ವಿಷಯಗಳನ್ನು, ಗುರುಮುಖದಿಂದ, ಆ ಗ್ರಂಥವನ್ನು ಅಭ್ಯಸಿಸಿ ತಿಳಿದುಕೊಳ್ಳಬೇಕಾದುದು ಅತ್ಯವಶ್ಯಕ.

ದೇಹವನ್ನು ಸ್ಪೃಶೇತ್–ಮುಟ್ಟಿದರೆ, ಸಿದ್ಧಿಂ–ಪೂಜಾಫಲವನ್ನು ನೈವ ಅವಾಪ್ನೋತಿ–ಹೊಂದುವುದೇ ಇಲ್ಲ; ಅಪಿ–(ಅಷ್ಟು ಮಾತ್ರವಲ್ಲ) ಮತ್ತೇನೆಂದರೆ, ಪ್ರತ್ಯವಾಯಃ–ದೋಷವೂ (ಪಾಪವೂ), ಭವೇತ್–ಉಂಟಾಗುತ್ತದೆ; ಲೋಹಸೀಸಕರಂಗಾಣಾಂ–ಕಬ್ಬಿಣ, ಸೀಸ, ಬಣ್ಣಗಳ, ಮೂರ್ತಿಃ–ಪ್ರತಿಮೆಯು, ಅರಕೂಟಕೀ–ಕ್ಷುದ್ರಕೊಂಬು ಮುಂತಾದ್ದರಿಂದ ನಿರ್ಮಿತವಾದುದೂ, ನೈವಕರ್ತವ್ಯಾ–ನಿರ್ಮಿತವಾಗತಕ್ಕದ್ದಲ್ಲ; ಸಾ–ಅದು (ಆ ಪ್ರತಿಮೆಯು), ಪೂಜಕಾನಾಂ–ಪೂಜಕರಿಗೆ, ಸಿದ್ಧಿದಾ–ಫಲವನ್ನು ಕೊಡುವುದು, ನೈವ ಭವೇತ್–ಆಗುವುದೇ ಇಲ್ಲ.

ಪೂಜಾವಿಧಾನವಿಸ್ತಾರೋ ವಿಜ್ಞೇಯಃ ಪಾಂಚರಾತ್ರತಃ ॥ ೨೬ ॥

ಗೃಹೀತ್ವಾ ವೈಷ್ಣವೀಂ ದೀಕ್ಷಾಂ ನಾಸ್ತಿಕ್ಯಾದ್ಯಸ್ತ್ಯಜೇದಿಮಾಂ ।
ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್ ॥ ೨೭ ॥

ಪೂಜಾವಿಧಾನ ವಿಸ್ತಾರಃ–ಪ್ರತಿಮಾರ್ಚನೆಯ ವಿಧಿಗಳ ವಿಸ್ತಾರವು, ಪಾಂಚರಾತ್ರತಃ–ಪಂಚರಾತ್ರಾಗಮದಿಂದ, ವಿಜ್ಞೇಯಃ–ತಿಳಿಯಲ್ಪಡತಕ್ಕದ್ದು; ಯಃ–ಯಾರು, ವೈಷ್ಣವೀಂ ದೀಕ್ಷಾಂ–ವಿಷ್ಣುದೀಕ್ಷೆಯನ್ನು ಗೃಹೀತ್ವಾ–ಸ್ವೀಕರಿಸಿ, ನಾಸ್ತಿಕ್ಯಾತ್–ನಾಸ್ತಿಕ್ಯಬುದ್ಧಿಯಿಂದ, ಇಮಾಂ–ಈ ದೀಕ್ಷೆಯನ್ನು ತ್ಯಜೇತ್–ಬಿಡುವನೋ, ಗುರುಮಂತ್ರಪರಿತ್ಯಾಗೀ– (ದೀಕ್ಷಾಕಾಲದಲ್ಲಿ ಗುರುವಿನಿಂದ ಉಪದೇಶಗೊಂಡ) ಗುರೂಪದಿಷ್ಟಮಂತ್ರವನ್ನು ತ್ಯಜಿಸುವನೋ (ಸಃ–ಅಂಥವನು), ರೌರವಂ ನರಕಂ–ರೌರವವೆಂಬ ನರಕವನ್ನು, ವ್ರಜೇತ್–ಹೊಂದುತ್ತಾನೆ.

ಏವಂ ಚ ವೈಷ್ಣವೀಂ ದೀಕ್ಷಾಂ ಪಂಚರಾತ್ರೋಕ್ತಮಾರ್ಗತಃ ।
ಗೃಹೀತ್ವಾ ಕುರುತೇ ನಿತ್ಯಂ ಸ್ವಕರ್ಮಾಣಿ ನರಃ ಶುಚಿಃ ॥ ೨೮ ॥

---

ಪ್ರತಿಮೆಯನ್ನು ಮುಟ್ಟಿದರೆ, ಆ ಪ್ರತಿಮೆಯ ಪೂಜೆಯು (ಪ್ರತಿಮಾರ್ಚನೆಯು) ಫಲಪ್ರದವಾಗುವುದಿಲ್ಲ; ಮತ್ತೇನೆಂದರೆ, ಪ್ರತ್ಯವಾಯವೂ (ವಿರುದ್ಧಫಲವೂ-ಕೆಡಕೂ) ಉಂಟಾಗುತ್ತದೆ. ಪ್ರತಿಮೆಯು, ಕಬ್ಬಿಣ, ಸೀಸ, ಬಣ್ಣದ ವಸ್ತುಗಳು, ಕನಿಷ್ಠಕೊಂಬು ಮೊದಲಾದವುಗಳಿಂದ ನಿರ್ಮಿತವಾಗಿರಬಾರದು—ಅಂಥ ಪ್ರತಿಮೆಯು ಪೂಜಕರಿಗೆ ಯಾವ ಫಲವನ್ನು ಕೊಡುವುದಿಲ್ಲ(೨೪-೨೫). ಪ್ರತಿಮಾಪೂಜೆಯ ವಿಧಾನವನ್ನು ಪಂಚರಾತ್ರಾಗಮದಿಂದ ತಿಳಿದು, ಆ ಪ್ರಕಾರ ಪೂಜಿಸಬೇಕು. ಗುರುಗಳಿಂದ ವಿಷ್ಣುದೀಕ್ಷೆಯನ್ನೂ ಮಂತ್ರೋಪದೇಶವನ್ನೂ ಪಡೆದು, ನಾಸ್ತಿಕ್ಯಬುದ್ಧಿಯಿಂದ ದೀಕ್ಷೆಯನ್ನು ತೊರೆದು, ಮಂತ್ರಜಪವನ್ನೂ ತ್ಯಜಿಸಿದವನು, ರೌರವ ನರಕವನ್ನೇ ಹೊಂದುತ್ತಾನೆ (ನಿತ್ಯವಿಷ್ಣುದೀಕ್ಷಾಸ್ವರೂಪದ ನಾಮ ಮುದ್ರಾದಿಗಳನ್ನು ಗೋಪೀಚಂದನಾದಿ ಮೃತ್ತಿಕೆಯಿಂದ ಧರಿಸದೇ ಮತ್ತು ಗುರುಮಂತ್ರವನ್ನು ಮಾಡಿಕೊಳ್ಳದೇ, ಪ್ರತಿಮಾರ್ಚನೆಯನ್ನು

**ಪೂರ್ವೋಕ್ತ ಗುಣವಾನ್ ಕೋಽಪಿ ಜಪೇನ್ಮಂತ್ರಂ ಚ ನಿತ್ಯಶಃ ।**
**ಪೂಜಯೇತ್ ಪ್ರತಿಮಾಂ ಚಾಪಿ ಮಮ ನಿತ್ಯಂ ಯತವ್ರತಃ ॥ ೨೯ ॥**

**ಮತ್ಕಥಾಶ್ರವಣೇ ಸಕ್ತೋ ಮದ್ಭಕ್ತೈಃ ಸಂಗವಾನ್ ಸದಾ ।**
**ಮತ್ಸಮರ್ಪಿತಸರ್ವಸ್ವೋ ನ ಚಿರಾನ್ಮುಕ್ತಿಮಾಪ್ನುಯಾತ್ ॥ ೩೦ ॥**

ಏವಂ ಚ–ಸಾರಾಂಶವೇನೆಂದರೆ, ಪಂಚರಾತ್ರೋಕ್ತಮಾರ್ಗತಃ–ಪಂಚರಾತ್ರದಲ್ಲಿ ಹೇಳಿರುವಂತೆ, ವೈಷ್ಣವೀಂ ದೀಕ್ಷಾಂ–ವಿಷ್ಣುದೀಕ್ಷೆಯನ್ನು ಗೃಹೀತ್ವಾ–ಸ್ವೀಕಾರಮಾಡಿ, ನಿತ್ಯಂ–ನಿತ್ಯವೂ (ಪ್ರತಿದಿನವೂ), ಸ್ವಕರ್ಮಾಣಿ–ಸ್ವ(ವರ್ಣಾಶ್ರಮ) ವಿಹಿತಕರ್ಮಗಳನ್ನು ಕುರುತೇ–ಮಾಡುತ್ತಾನೆಯೋ, (ಸಃ–ಅ), ನರಃ–ಮನುಷ್ಯನು, ಶುಚಿಃ–ಶುದ್ಧನು (ಪ್ರತಿಮೆಯನ್ನು ಪೂಜಿಸಲು ಅರ್ಹನು); ಪೂರ್ವೋಕ್ತಗುಣವಾನ್–ಹಿಂದೆ ಹೇಳಿದ ಗುಣಗಳುಳ್ಳವನು, ಕೋಽಪಿ–ಯಾರೇ ಆಗಲಿ, ನಿತ್ಯಶಃ–ನಿತ್ಯವೂ, ಮಂತ್ರಂ–ಮಂತ್ರವನ್ನು (ಗುರೂಪದಿಷ್ಟಮಂತ್ರಜಪವನ್ನು–ಗುರುಮಂತ್ರವನ್ನೂ), ಜಪೇತ್ ಚ–ಜಪಿಸಲೇಬೇಕು; ಚ–ಮತ್ತು ನಿತ್ಯಂ–ನಿತ್ಯವೂ, ಮಮ–ನನ್ನ ಪ್ರತಿಮಾಂ ಅಪಿ–ಪ್ರತಿಮೆಯನ್ನೂ ಪೂಜಯೇತ್–ಪೂಜಿಸಬೇಕು; (ಯಾರು ಮಂತ್ರಜಪವನ್ನೂ, ನಿತ್ಯ ಪ್ರತಿಮಾಪೂಜೆ ಯನ್ನೂ ಮಾಡಿ), ಯತವ್ರತಃ–ನಿಯಮಿತ ವ್ರತಾನುಷ್ಠಾನವುಳ್ಳವನಾಗಿ, ಮತ್ಕಥಾ ಶ್ರವಣೇ–ನನ್ನ ಮಹಿಮೆಗಳ ಶ್ರವಣದಲ್ಲಿ ಸಕ್ತಃ–ತೊಡಗಿ (ಆಸಕ್ತನಾಗಿ), ಸದಾ–ನಿತ್ಯವೂ, ಮದ್ಭಕ್ತೈಃ–ನನ್ನ ಭಕ್ತರಿಂದ, ಸಂಗವಾನ್–ಸಹವಾಸವುಳ್ಳವನಾಗಿ, ಮತ್ಸಮರ್ಪಿತ ಸರ್ವಸ್ವಃ–ನನ್ನಲ್ಲಿ ಅರ್ಪಿಸಲ್ಪಟ್ಟ ಸರ್ವಸ್ವವುಳ್ಳವನಾಗಿ, (ಪತ್ನೀಪುತ್ರಧನಾದಿ ಸರ್ವಸ್ವ ವನ್ನೂ ನನ್ನಲ್ಲಿ ಅರ್ಪಿಸಿ, ನನ್ನ ಸ್ವಾಮಿತ್ವಕ್ಕೆ ಒಳಪಟ್ಟವುಗಳೆಂಬ ನಿಶ್ಚಿತಬುದ್ಧಿಯುಳ್ಳವ ನಾಗಿ), ನ ಚಿರಾತ್–ಶೀಘ್ರವಾಗಿ (ಅಲ್ಪಕಾಲದಲ್ಲಿ), ಮುಕ್ತಿಂ–ಮೋಕ್ಷವನ್ನು ಆಪ್ನುಯಾತ್–ಹೊಂದುತ್ತಾನೆ.

---

ಸರ್ವಥಾ ಮಾಡಕೂಡದೆಂದು ಎಚ್ಚರಿಸಲಾಗಿದೆ)(೨೬-೨೭). ಮುಖ್ಯಾಂಶವೇನೆಂದರೆ, ಪಂಚರಾತ್ರೋಕ್ತ ಕ್ರಮದಿಂದ ವಿಷ್ಣುದೀಕ್ಷೆಯನ್ನು ಹೊಂದಿ, ಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ನಿತ್ಯವೂ ಆಚರಿಸುತ್ತ ಗುರೂಪದಿಷ್ಟ ಮಂತ್ರವನ್ನು ನಿತ್ಯವೂ ಜಪಿಸು ವವನು, ಯಾರೇ ಇರಲಿ, ಅತನೇ ಶುದ್ಧನು; ಹೀಗೆ ಮಂತ್ರಜಪಾದಿಗಳಿಂದ ಶುದ್ಧನಾದ ದ್ವಿಜನು, ನಿತ್ಯವೂ ವಿಧ್ಯುಕ್ತ ಕ್ರಮದಿಂದ ಪ್ರತಿಮೆಯಲ್ಲಿ ಶ್ರೀವಿಷ್ಣುವನ್ನು ಪೂಜಿಸುತ್ತ ವ್ರತಾನುಷ್ಠಾನಾದಿಗಳಿಂದ ನಿಯತಜೀವನನ್ನು ನಡೆಸುತ್ತ ಶ್ರೀಹರಿ ಮಹಿಮೆಗಳ ಶ್ರವಣದಲ್ಲಿ ನಿತ್ಯವೂ ಆಸಕ್ತನಾಗಿ, ಹರಿಭಕ್ತರ ಸಂಗವುಳ್ಳವನಾಗಿ, ತನ್ನ ಸರ್ವಸ್ವವನ್ನೂ ಶ್ರೀಹರಿಯಲ್ಲಿ ಸಮರ್ಪಿಸುವವನು, ಶೀಘ್ರದಲ್ಲಿ ಮುಕ್ತಿಯನ್ನೇ ಹೊಂದುತ್ತಾನೆ— ಸಂಶಯವಿಲ್ಲ(೨೮-೩೦). ಆದ್ದರಿಂದ ನನ್ನ ಪ್ರಸನ್ನತೆಯನ್ನು ಅಪೇಕ್ಷಿಸುವವರೆಲ್ಲರೂ,

ತಸ್ಮಾತ್ ಸರ್ವಪ್ರಯತ್ನೇನ ಮಮ ಪ್ರೀತಿಮಭೀಪ್ಸುಭಿಃ ।
ಪೂರ್ವೋಕ್ತೇನ ವಿಧಾನೇನ ಪಂಚರಾತ್ರೋಕ್ತಮಾರ್ಗತಃ ॥ ೩೧ ॥

ಗ್ರಾಹ್ಯಾ ಹಿ ವೈಷ್ಣವೀ ದೀಕ್ಷಾ ತಥಾ ಮಂತ್ರಜಪಾದಿಕಂ ।
ಯಥಾಧಿಕಾರಂ ಕರ್ತವ್ಯಂ ದೇಹಬಂಧಾನ್ಮುಮುಕ್ಷುಭಿಃ ॥ ೩೨ ॥

ಯೇಽರ್ಚಯಂತಿ ಮಹಾವಿಷ್ಣುಂ ಮನೋವಾಕ್ಕಾಯಕರ್ಮಭಿಃ ।
ತೇಷಾಂ ಹಿ ವಚನಂ ಗ್ರಾಹ್ಯಂ ತೇ ಹಿ ವಿಷ್ಣುಸಮಾ ಮತಾಃ ॥ ೩೩ ॥

ಇತಿ ದೀಕ್ಷಾದಿಸಂಕಲ್ಪಂ ಮಯೋಕ್ತಂ ಶೃಣುಯಾನ್ನರಃ ।
ಪಠೇದ್ವಾ ಶ್ರಾವಯೇದ್ವಾಪಿ ಜ್ಞಾನಯಜ್ಞ ಫಲಂ ಲಭೇತ್ ॥
ಇತಿ ತೇ ಕಥಿತಂ ಬ್ರಹ್ಮನ್ ಕಿಮನ್ಯತ್ ಶ್ರೋತುಮಿಚ್ಛಸಿ ॥ ೩೪ ॥

ತಸ್ಮಾತ್–ಆದ್ದರಿಂದ, ಮಮ–ನನ್ನ ಪ್ರೀತಿಂ–ಪ್ರೀತಿಯನ್ನು (ಪ್ರಸನ್ನತೆಯನ್ನು), ಅಭೀಪ್ಸುಭಿಃ–ಇಚ್ಛಿಸುವವರಿಂದ, ಸರ್ವಪ್ರಯತ್ನೇನ–ಎಲ್ಲ ಯತ್ನಗಳನ್ನು ಮಾಡಿ, ಪಂಚರಾತ್ರೋಕ್ತಮಾರ್ಗತಃ–ಪಂಚರಾತ್ರದಲ್ಲಿ ಹೇಳಿರುವಂತೆ, ಪೂರ್ವೋಕ್ತೇನ ವಿಧಾನೇನ–ಈ ಹಿಂದೆ ಹೇಳಿದ ಪ್ರಕಾರದಿಂದ, ವೈಷ್ಣವೀದೀಕ್ಷಾ–ವಿಷ್ಣುದೀಕ್ಷೆಯು, ಗ್ರಾಹ್ಯಾ ಹಿ–ಸ್ವೀಕರಿಸಲ್ಪಡತಕ್ಕದ್ದೇ ಸರಿ; ತಥಾ–ಹಾಗೂ ದೇಹಬಂಧಾತ್–ದೇಹಬಂಧದಿಂದ

---

ಸರ್ವಪ್ರಯತ್ನದಿಂದ, ಪಂಚರಾತ್ರದಲ್ಲಿ ಹೇಳಿರುವ ಪ್ರಕಾರದಿಂದ ವಿಷ್ಣುದೀಕ್ಷೆಯನ್ನು ಅವಶ್ಯವಾಗಿ ಸ್ವೀಕರಿಸಲೇಬೇಕು; ಮತ್ತು ಸಂಸಾರಬಂಧದಿಂದ ಮುಕ್ತರಾಗಲು ಇಚ್ಛಿಸುವವರು, ಮಂತ್ರಜಪಾದಿಗಳನ್ನು ತಮ್ಮ ಅರ್ಹತೆಯನ್ನನುಸರಿಸಿ (ಅಧಿಕಾರಾನುಸಾರವಾಗಿ) ಮಾಡಬೇಕು; ಮನೋವಾಕ್ಕಾಯಗಳಿಂದ ಸಂಭವಿಸುವ ಸರ್ವಕರ್ಮಗಳನ್ನು ಶ್ರೀವಿಷ್ಣುವಿನಲ್ಲಿ ಅರ್ಪಿಸಬೇಕು; ಈ ಪ್ರಕಾರವಾದ ಆಚರಣೆಯುಳ್ಳವರಾಗಿ ಶ್ರೀವಿಷ್ಣುವಿನಲ್ಲಿ ಸರ್ವಸಮರ್ಪಣೆಯುಳ್ಳ ವಿಷ್ಣುಭಕ್ತರ ನುಡಿಗಳೂ, ಶ್ರೀವಿಷ್ಣುವಿನ ಆಜ್ಞೆಗಳಂತೆ (ಶ್ರುತಿಸ್ಮೃತಿಗಳಂತೆ), ಮಾನ್ಯಗಳೇ ಸರಿ; ಈ ವಿವಕ್ಷೆಯಿಂದ, ವಿಷ್ಣುಭಕ್ತರೂ ವಿಷ್ಣುಸಮರೆನಿಸುತ್ತಾರೆ; ಅವರೂ ಯಥಾಯೋಗ್ಯವಾಗಿ ಪೂಜ್ಯರೇ ಸರಿ;[1]

1. 'ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ।'
ಇತ್ಯಾದಿ ವಾಕ್ಯಗಳಲ್ಲಿ 'ಯಥಾ ದೇವೇ ತಥಾ ಗುರೌ' ಎಂಬಲ್ಲಿ ತಾರತಮ್ಯಾನುಗುಣವಾದ ಉತ್ತಮಭಕ್ತಿಯನ್ನೇ ಗುರುಗಳಲ್ಲಿಯೂ (ಸ್ವೋತ್ತಮರಲ್ಲಿಯೂ) ಮಾಡಬೇಕೆಂದು ವಿಧಿಸಿರುವಂತೆ, ಇಲ್ಲಿಯೂ, ವಿಷ್ಣುಸಮರೆಂದರೆ, ವಿಷ್ಣುವಿನಂತೆ, ಯಥಾಯೋಗ್ಯವಾಗಿ ಪೂಜ್ಯರೆಂಬರ್ಥವನ್ನೇ ತಿಳಿಯಬೇಕು.

(ಸಂಸಾರದಿಂದ), ಮುಮುಕ್ಷುಭಿಃ–ಮುಕ್ತರಾಗಬೇಕೆಂದು ಇಚ್ಛಿಸುವವರಿಂದ, ಮಂತ್ರಜಪಾದಿಕಂ-ಮಂತ್ರಜಪ ಮೊದಲಾದುದು, ಯಥಾಧಿಕಾರಂ–ತಂತಮ್ಮ ಅಧಿಕಾರವಿದ್ದಂತೆ (ಅರ್ಹತೆಯನ್ನನುಸರಿಸಿ). ಕರ್ತವ್ಯಂ–ಮಾಡಲ್ಪಡತಕ್ಕದ್ದು ಯೇ–ಯಾರು, ಮನೋವಾಕ್ಕಾಯಕರ್ಮಭಿಃ–ಮನಸ್ಸು, ವಾಗಿಂದ್ರಿಯ, ದೇಹಗಳಿಂದ (ತ್ರಿಕರಣಗಳಿಂದ) ಸಂಭವಿಸುವ ಎಲ್ಲ ಕರ್ಮಗಳಿಂದ (ಕರ್ಮಗಳನ್ನು ಅರ್ಪಿಸುವುದರಿಂದ), ಮಹಾವಿಷ್ಣುಂ–ಶ್ರೀಮಹಾವಿಷ್ಣುವನ್ನು ಅರ್ಚಯಂತಿ–ಪೂಜಿಸುವರೋ, ತೇಷಾಂ–ಅವರ, ವಚನಂ–ವಚನವೂ (ಧರ್ಮ ವಿಷಯಕವಾದ ನುಡಿಗಳೂ), ಗ್ರಾಹ್ಯಂ ಹಿ–ಸ್ವೀಕಾರಾರ್ಹವೇ ಸರಿ (ಒಪ್ಪಿ, ಅದರಂತೆ ನಡೆಯತಕ್ಕದ್ದೇ ಸರಿ); ತೇ–ಅವರು, ವಿಷ್ಣುಸಮಾಃ–ವಿಷ್ಣುಸಮರೆಂದು (ಶ್ರೀವಿಷ್ಣುವಿನ ನುಡಿಗಳು–ಶಾಸ್ತ್ರಗಳು, ಸರ್ವರ ಹಿತಸಾಧಕವಾಗಿರುವಂತೆ, ವಿಷ್ಣುಭಕ್ತರ ನುಡಿಗಳೂ ಹಿತಕರವೆಂದು, ನಂಬಲು ಅರ್ಹರಗಳೆಂದು). ಮತಾಃ ಹಿ–ತಿಳಿಯಲ್ಪಟ್ಟಿರುವಷ್ಟೇ (ವಿಷ್ಣುವಿನಂತೆ, ಯಥಾಯೋಗ್ಯವಾಗಿ, ವಿಷ್ಣುಭಕ್ತರಾದ ಬ್ರಹ್ಮಾದಿಗಳೂ ಭಕ್ತಿಯಿಂದ ಪೂಜಿಸಲ್ಪಡಲರ್ಹರೆಂದೂ ಅಭಿಪ್ರಾಯ). ಇತಿ–ಹೀಗೆ, ಮಯಾ–ನನ್ನಿಂದ, ಉಕ್ತಂ–ಹೇಳಲಾದ, ದೀಕ್ಷಾದಿಸಂಕಲ್ಪಂ–ದೀಕ್ಷಾದಿ ವಿಷಯಕವಾದ ನನ್ನ ಇಚ್ಛೆಯನ್ನು (ದೀಕ್ಷಾದಿಗಳಿಂದಲೇ ಪ್ರೀತನಾಗುವೆನೆಂಬ ನನ್ನ ಸಂಕಲ್ಪವನ್ನು), (ಯಃ) ನರಃ–ಯಾವ ಮನುಷ್ಯನು, ಶೃಣುಯಾತ್–ಶ್ರವಣ ಮಾಡುವನೋ, ವಾ–ಅಥವಾ ಪಠೇತ್-ಪಠಿಸುವನೋ (ಕೀರ್ತಿಸುವನೋ). ಶ್ರಾವಯೇತ್ ವಾಪಿ-ಅಥವಾ ಅನ್ಯರಿಗೆ ಶ್ರವಣ ಮಾಡಿಸುವನೋ, (ಸಃ–ಅತನು). ಜ್ಞಾನಯಜ್ಞಫಲಂ–ಜ್ಞಾನಯಜ್ಞದ ಫಲವನ್ನು (ನನ್ನ ಮಹಿಮಾಜ್ಞಾನಾರ್ಜನಾ ರೂಪದ ಶ್ರೇಷ್ಠಪೂಜೆಯನ್ನು ಮಾಡಿದ ಫಲವನ್ನು– ಜ್ಞಾನಸಿದ್ಧಿಯನ್ನು), ಲಭೇತ್–ಹೊಂದುತ್ತಾನೆ; ಬ್ರಹ್ಮನ್–ಹೇ ಬ್ರಹ್ಮ! ಇತಿ–ಹೀಗೆ, ತೇ–ನಿನಗೋಸ್ಕರ, ಕಥಿತಂ–(ನಿನ್ನ ಪ್ರಶ್ನೆಗೆ ಉತ್ತರವು) ಹೇಳಲ್ಪಟ್ಟಿತು; ಅನ್ಯತ್ ಕಿಂ–ಬೇರೇನನ್ನು, ಶ್ರೋತುಂ–ಕೇಳಲಿಕ್ಕೆ, ಇಚ್ಛಸಿ–ಅಪೇಕ್ಷಿಸುವಿ.

ಪ್ರತಿಮಾಪೂಜಾವಿವೇಕ ನಿರೂಪಣವೆಂಬ ೧೧ನೇ ಅಧ್ಯಾಯವು ಮುಗಿದುದು.

---

ನಾನು(ಶ್ರೀವಿಷ್ಣುವು) ಹೀಗೆ ದೀಕ್ಷಾದಿಗಳಿಂದಲೇ ಪ್ರಸನ್ನನಾಗುವೆನೆಂಬ ಸತ್ಯಸಂಕಲ್ಪವುಳ್ಳವನೆಂಬ ನನ್ನ ಮಹಿಮೆಯನ್ನು ಶ್ರವಣ ಮಾಡುವವರೂ, ಕೀರ್ತನಮಾಡುವವರೂ, ಅನ್ಯರಿಗೆ ಶ್ರವಣಮಾಡಿಸುವವರೂ, ಜ್ಞಾನಯಜ್ಞದ ಫಲವನ್ನು (ಜ್ಞಾನಸಿದ್ಧಿಯನ್ನು-ಅಪರೋಕ್ಷದರ್ಶನವನ್ನೂ-ಮೋಕ್ಷವನ್ನೂ). ತಪ್ಪದೇ ಹೊಂದುತ್ತಾರೆ—ಮತ್ತೇನನ್ನು ಕೇಳಬೇಕೆನ್ನುವಿ, ಹೇ ಬ್ರಹ್ಮ! (೩೧-೩೪).

೧೧ನೇ ಅಧ್ಯಾಯವು ಮುಗಿದುದು.

ದೇಹವನ್ನು ಸ್ಪೃಶೇತ್–ಮುಟ್ಟಿದರೆ, ಸಿದ್ಧಿಂ–ಪೂಜಾಫಲವನ್ನು ನೈವ ಅವಾಪ್ನೋತಿ–ಹೊಂದುವುದೇ ಇಲ್ಲ. ಅಪಿ–(ಅಷ್ಟು ಮಾತ್ರವಲ್ಲ) ಮತ್ತೇನೆಂದರೆ, ಪ್ರತ್ಯವಾಯಃ–ದೋಷವೂ (ಪಾಪವೂ), ಭವೇತ್–ಉಂಟಾಗುತ್ತದೆ; ಲೋಹಸೀಸಕರಂಗಾಣಾಂ–ಕಬ್ಬಿಣ, ಸೀಸ, ಬಣ್ಣಗಳ, ಮೂರ್ತಿಃ–ಪ್ರತಿಮೆಯು, ಅರಕೂಟಕೀ–ಕ್ಷುದ್ರಕೊಂಬು ಮುಂತಾದ್ದರಿಂದ ನಿರ್ಮಿತವಾದುದೂ, ನೈವಕರ್ತವ್ಯಾ–ನಿರ್ಮಿತವಾಗತಕ್ಕದ್ದಲ್ಲ; ಸಾ–ಅದು (ಆ ಪ್ರತಿಮೆಯು), ಪೂಜಕಾನಾಂ–ಪೂಜಕರಿಗೆ, ಸಿದ್ಧಿದಾ–ಫಲವನ್ನು ಕೊಡುವುದು, ನೈವ ಭವೇತ್–ಆಗುವುದೇ ಇಲ್ಲ.

**ಪೂಜಾವಿಧಾನವಿಸ್ತಾರೋ ವಿಜ್ಞೇಯಃ ಪಾಂಚರಾತ್ರತಃ ॥ ೨೬ ॥**

**ಗೃಹೀತ್ವಾ ವೈಷ್ಣವೀಂ ದೀಕ್ಷಾಂ ನಾಸ್ತಿಕ್ಯಾದ್ಯಸ್ತ್ಯಜೇದಿಮಾಂ ।**
**ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್ ॥ ೨೭ ॥**

ಪೂಜಾವಿಧಾನ ವಿಸ್ತಾರಃ–ಪ್ರತಿಮಾರ್ಚನೆಯ ವಿಧಿಗಳ ವಿಸ್ತಾರವು, ಪಾಂಚರಾತ್ರತಃ–ಪಂಚರಾತ್ರಾಗಮದಿಂದ, ವಿಜ್ಞೇಯಃ–ತಿಳಿಯಲ್ಪಡತಕ್ಕದ್ದು; ಯಃ–ಯಾರು, ವೈಷ್ಣವೀಂ ದೀಕ್ಷಾಂ–ವಿಷ್ಣುದೀಕ್ಷೆಯನ್ನು ಗೃಹೀತ್ವಾ–ಸ್ವೀಕರಿಸಿ, ನಾಸ್ತಿಕ್ಯಾತ್–ನಾಸ್ತಿಕ್ಯಬುದ್ಧಿಯಿಂದ, ಇಮಾಂ–ಈ ದೀಕ್ಷೆಯನ್ನು ತ್ಯಜೇತ್–ಬಿಡುವನೋ, ಗುರುಮಂತ್ರಪರಿತ್ಯಾಗೀ– (ದೀಕ್ಷಾಕಾಲದಲ್ಲಿ ಗುರುವಿನಿಂದ ಉಪದೇಶಗೊಂಡ) ಗುರೂಪದಿಷ್ಟಮಂತ್ರವನ್ನು ತ್ಯಜಿಸುವನೋ (ಸಃ–ಅಂಥವನು). ರೌರವಂ ನರಕಂ–ರೌರವವೆಂಬ ನರಕವನ್ನು ವ್ರಜೇತ್–ಹೊಂದುತ್ತಾನೆ.

**ಏವಂ ಚ ವೈಷ್ಣವೀಂ ದೀಕ್ಷಾಂ ಪಂಚರಾತ್ರೋಕ್ತಮಾರ್ಗತಃ ।**
**ಗೃಹೀತ್ವಾ ಕುರುತೇ ನಿತ್ಯಂ ಸ್ವಕರ್ಮಾಣಿ ನರಃ ಶುಚಿಃ ॥ ೨೮ ॥**

---

ಪ್ರತಿಮೆಯನ್ನು ಮುಟ್ಟಿದರೆ, ಆ ಪ್ರತಿಮೆಯ ಪೂಜೆಯು (ಪ್ರತಿಮಾರ್ಚನೆಯು) ಫಲಪ್ರದವಾಗುವುದಿಲ್ಲ ಮತ್ತೇನೆಂದರೆ, ಪ್ರತ್ಯವಾಯವೂ (ವಿರುದ್ಧಫಲವೂ-ಕೆಡಕೂ) ಉಂಟಾಗುತ್ತದೆ. ಪ್ರತಿಮೆಯು, ಕಬ್ಬಿಣ, ಸೀಸ, ಬಣ್ಣದ ವಸ್ತುಗಳು, ಕನಿಷ್ಠಕೊಂಬು ಮೊದಲಾದವುಗಳಿಂದ ನಿರ್ಮಿತವಾಗಿರಬಾರದು—ಅಂಥ ಪ್ರತಿಮೆಯು ಪೂಜಕರಿಗೆ ಯಾವ ಫಲವನ್ನು ಕೊಡುವುದಿಲ್ಲ(೨೪-೨೫). ಪ್ರತಿಮಾಪೂಜೆಯ ವಿಧಾನವನ್ನು ಪಂಚರಾತ್ರಾಗಮದಿಂದ ತಿಳಿದು, ಆ ಪ್ರಕಾರ ಪೂಜಿಸಬೇಕು. ಗುರುಗಳಿಂದ ವಿಷ್ಣುದೀಕ್ಷೆಯನ್ನೂ ಮಂತ್ರೋಪದೇಶವನ್ನೂ ಪಡೆದು, ನಾಸ್ತಿಕ್ಯಬುದ್ಧಿಯಿಂದ ದೀಕ್ಷೆಯನ್ನು ತೊರೆದು, ಮಂತ್ರಜಪವನ್ನೂ ತ್ಯಜಿಸಿದವನು, ರೌರವ ನರಕವನ್ನೇ ಹೊಂದುತ್ತಾನೆ (ನಿತ್ಯವಿಷ್ಣುದೀಕ್ಷಾಸ್ವರೂಪರ ನಾಮ ಮುದ್ರಾದಿಗಳನ್ನು ಗೋಪೀಚಂದನಾದಿ ಮೃತ್ತಿಕೆಯಿಂದ ಧರಿಸದೇ ಮತ್ತು ಗುರುಮಂತ್ರವನ್ನು ಮಾಡಿಕೊಳ್ಳದೇ, ಪ್ರತಿಮಾರ್ಚನೆಯನ್ನು

**ಪೂರ್ವೋಕ್ತಗುಣವಾನ್ ಕೋಽಪಿ ಜಪೇನ್ಮಂತ್ರಂ ಚ ನಿತ್ಯಶಃ ।**
**ಪೂಜಯೇತ್ ಪ್ರತಿಮಾಂ ಚಾಪಿ ಮಮ ನಿತ್ಯಂ ಯತವ್ರತಃ ॥ ೨೯ ॥**
**ಮತ್ಕಥಾಶ್ರವಣೇ ಸಕ್ತೋ ಮದ್ಭಕ್ತೈಃ ಸಂಗವಾನ್ ಸದಾ ।**
**ಮತ್ಸಮರ್ಪಿತಸರ್ವಸ್ವೋ ನ ಚಿರಾನ್ಮುಕ್ತಿಮಾಪ್ನುಯಾತ್ ॥ ೩೦ ॥**

ಏವಂ ಚ–ಸಾರಾಂಶವೇನೆಂದರೆ, ಪಂಚರಾತ್ರೋಕ್ತಮಾರ್ಗತಃ–ಪಂಚರಾತ್ರದಲ್ಲಿ ಹೇಳಿರುವಂತೆ, ವೈಷ್ಣವೀಂ ದೀಕ್ಷಾಂ–ವಿಷ್ಣುದೀಕ್ಷೆಯನ್ನು, ಗೃಹೀತ್ವಾ–ಸ್ವೀಕಾರಮಾಡಿ, ನಿತ್ಯಂ–ನಿತ್ಯವೂ (ಪ್ರತಿದಿನವೂ), ಸ್ವಕರ್ಮಾಣಿ–ಸ್ವ(ವರ್ಣಾಶ್ರಮ) ವಿಹಿತಕರ್ಮಗಳನ್ನು ಕುರುತೇ–ಮಾಡುತ್ತಾನೆಯೋ, (ಸಃ–ಅ), ನರಃ–ಮನುಷ್ಯನು, ಶುಚಿಃ–ಶುದ್ಧನು (ಪ್ರತಿಮೆಯನ್ನು ಪೂಜಿಸಲು ಅರ್ಹನು); **ಪೂರ್ವೋಕ್ತಗುಣವಾನ್**–ಹಿಂದೆ ಹೇಳಿದ ಗುಣಗಳುಳ್ಳವನು, ಕೋಽಪಿ–ಯಾರೇ ಆಗಲಿ, ನಿತ್ಯಶಃ–ನಿತ್ಯವೂ, ಮಂತ್ರಂ–ಮಂತ್ರವನ್ನು (ಗುರೂಪದಿಷ್ಟಮಂತ್ರಜಪವನ್ನು–ಗುರುಮಂತ್ರವನ್ನೂ), ಜಪೇತ್ ಚ–ಜಪಿಸಲೇಬೇಕು; ಚ–ಮತ್ತು ನಿತ್ಯಂ–ನಿತ್ಯವೂ, ಮಮ–ನನ್ನ ಪ್ರತಿಮಾಂ ಅಪಿ–ಪ್ರತಿಮೆಯನ್ನೂ ಪೂಜಯೇತ್–ಪೂಜಿಸಬೇಕು; (ಯಾರು ಮಂತ್ರಜಪವನ್ನೂ ನಿತ್ಯ ಪ್ರತಿಮಾಪೂಜೆಯನ್ನೂ ಮಾಡಿ), ಯತವ್ರತಃ–ನಿಯಮಿತ ವ್ರತಾನುಷ್ಠಾನವುಳ್ಳವನಾಗಿ, ಮತ್ಕಥಾಶ್ರವಣೇ–ನನ್ನ ಮಹಿಮೆಗಳ ಶ್ರವಣದಲ್ಲಿ ಸಕ್ತಃ–ತೊಡಗಿ (ಆಸಕ್ತನಾಗಿ), ಸದಾ–ನಿತ್ಯವೂ, ಮದ್ಭಕ್ತೈಃ–ನನ್ನ ಭಕ್ತರಿಂದ, ಸಂಗವಾನ್–ಸಹವಾಸವುಳ್ಳವನಾಗಿ, ಮತ್ಸಮರ್ಪಿತ ಸರ್ವಸ್ವಃ–ನನ್ನಲ್ಲಿ ಅರ್ಪಿಸಲ್ಪಟ್ಟ ಸರ್ವಸ್ವವುಳ್ಳವನಾಗಿ, (ಪತ್ನೀಪುತ್ರಧನಾದಿ ಸರ್ವಸ್ವವನ್ನೂ ನನ್ನಲ್ಲಿ ಅರ್ಪಿಸಿ, ನನ್ನ ಸ್ವಾಮಿತ್ವಕ್ಕೆ ಒಳಪಟ್ಟವುಗಳೆಂಬ ನಿಶ್ಚಿತಬುದ್ಧಿಯುಳ್ಳವನಾಗಿ), ನ ಚಿರಾತ್–ಶೀಘ್ರವಾಗಿ (ಅಲ್ಪಕಾಲದಲ್ಲಿ), ಮುಕ್ತಿಂ–ಮೋಕ್ಷವನ್ನು ಆಪ್ನುಯಾತ್–ಹೊಂದುತ್ತಾನೆ.

---

ಸರ್ವಥಾ ಮಾಡಕೂಡದೆಂದು ಎಚ್ಚರಿಸಲಾಗಿದೆ)(೨೬-೨೭). ಮುಖ್ಯಾಂಶವೇನೆಂದರೆ, ಪಂಚರಾತ್ರೋಕ್ತಕ್ರಮದಿಂದ ವಿಷ್ಣುದೀಕ್ಷೆಯನ್ನು ಹೊಂದಿ, ಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ನಿತ್ಯವೂ ಆಚರಿಸುತ್ತ ಗುರೂಪದಿಷ್ಟ ಮಂತ್ರವನ್ನು ನಿತ್ಯವೂ ಜಪಿಸುವವನು, ಯಾರೇ ಇರಲಿ, ಆತನೇ ಶುದ್ಧನು; ಹೀಗೆ ಮಂತ್ರಜಪಾದಿಗಳಿಂದ ಶುದ್ಧನಾದ ದ್ವಿಜನು, ನಿತ್ಯವೂ ವಿಧ್ಯುಕ್ತ ಕ್ರಮದಿಂದ ಪ್ರತಿಮೆಯಲ್ಲಿ ಶ್ರೀವಿಷ್ಣುವನ್ನು ಪೂಜಿಸುತ್ತ ವ್ರತಾನುಷ್ಠಾನಾದಿಗಳಿಂದ ನಿಯತಜೀವನನ್ನು ನಡೆಸುತ್ತ ಶ್ರೀಹರಿ ಮಹಿಮೆಗಳ ಶ್ರವಣದಲ್ಲಿ ನಿತ್ಯವೂ ಆಸಕ್ತನಾಗಿ, ಹರಿಭಕ್ತರ ಸಂಗವುಳ್ಳವನಾಗಿ, ತನ್ನ ಸರ್ವಸ್ವವನ್ನೂ ಶ್ರೀಹರಿಯಲ್ಲಿ ಸಮರ್ಪಿಸುವವನು, ಶೀಘ್ರದಲ್ಲಿ ಮುಕ್ತಿಯನ್ನೇ ಹೊಂದುತ್ತಾನೆ—ಸಂಶಯವಿಲ್ಲ(೨೮-೩೦). ಆದ್ದರಿಂದ ನನ್ನ ಪ್ರಸನ್ನತೆಯನ್ನು ಅಪೇಕ್ಷಿಸುವವರೆಲ್ಲರೂ,

ತಸ್ಮಾತ್ ಸರ್ವಪ್ರಯತ್ನೇನ ಮಮ ಪ್ರೀತಿಮಭೀಪ್ಸುಭಿಃ ।
ಪೂರ್ವೋಕ್ತೇನ ವಿಧಾನೇನ ಪಂಚರಾತ್ರೋಕ್ತಮಾರ್ಗತಃ ॥ ೩೧ ॥

ಗ್ರಾಹ್ಯಾ ಹಿ ವೈಷ್ಣವೀ ದೀಕ್ಷಾ ತಥಾ ಮಂತ್ರಜಪಾದಿಕಂ ।
ಯಥಾಧಿಕಾರಂ ಕರ್ತವ್ಯಂ ದೇಹಬಂಧಾನ್ಮುಮುಕ್ಷುಭಿಃ ॥ ೩೨ ॥

ಯೇಽರ್ಚಯಂತಿ ಮಹಾವಿಷ್ಣುಂ ಮನೋವಾಕ್ಕಾಯಕರ್ಮಭಿಃ ।
ತೇಷಾಂ ಹಿ ವಚನಂ ಗ್ರಾಹ್ಯಂ ತೇ ಹಿ ವಿಷ್ಣುಸಮಾ ಮತಾಃ ॥ ೩೩ ॥

ಇತಿ ದೀಕ್ಷಾದಿಸಂಕಲ್ಪಂ ಮಯೋಕ್ತಂ ಶೃಣುಯಾನ್ನರಃ ।
ಪಠೇದ್ವಾ ಶ್ರಾವಯೇದ್ವಾಪಿ ಜ್ಞಾನಯಜ್ಞ ಫಲಂ ಲಭೇತ್ ॥
ಇತಿ ತೇ ಕಥಿತಂ ಬ್ರಹ್ಮನ್ ಕಿಮನ್ಯತ್ ಶ್ರೋತುಮಿಚ್ಛಸಿ ॥ ೩೪ ॥

ತಸ್ಮಾತ್–ಆದ್ದರಿಂದ, ಮಮ–ನನ್ನ ಪ್ರೀತಿಂ–ಪ್ರೀತಿಯನ್ನು (ಪ್ರಸನ್ನತೆಯನ್ನು), ಅಭೀಪ್ಸುಭಿಃ–ಇಚ್ಛಿಸುವವರಿಂದ, ಸರ್ವಪ್ರಯತ್ನೇನ–ಎಲ್ಲ ಯತ್ನಗಳನ್ನು ಮಾಡಿ, ಪಂಚರಾತ್ರೋಕ್ತಮಾರ್ಗತಃ–ಪಂಚರಾತ್ರದಲ್ಲಿ ಹೇಳಿರುವಂತೆ, ಪೂರ್ವೋಕ್ತೇನ ವಿಧಾನೇನ–ಈ ಹಿಂದೆ ಹೇಳಿದ ಪ್ರಕಾರದಿಂದ, ವೈಷ್ಣವೀದೀಕ್ಷಾ–ವಿಷ್ಣುದೀಕ್ಷೆಯು, ಗ್ರಾಹ್ಯಾ ಹಿ–ಸ್ವೀಕರಿಸಲ್ಪಡತಕ್ಕದ್ದೇ ಸರಿ; ತಥಾ–ಹಾಗೂ ದೇಹಬಂಧಾತ್–ದೇಹಬಂಧದಿಂದ

---

ಸರ್ವಪ್ರಯತ್ನದಿಂದ, ಪಂಚರಾತ್ರದಲ್ಲಿ ಹೇಳಿರುವ ಪ್ರಕಾರದಿಂದ ವಿಷ್ಣುದೀಕ್ಷೆಯನ್ನು ಅವಶ್ಯವಾಗಿ ಸ್ವೀಕರಿಸಲೇಬೇಕು; ಮತ್ತು ಸಂಸಾರಬಂಧದಿಂದ ಮುಕ್ತರಾಗಲು ಇಚ್ಛಿಸುವವರು, ಮಂತ್ರಜಪಾದಿಗಳನ್ನು ತಮ್ಮ ಅರ್ಹತೆಯನ್ನನುಸರಿಸಿ (ಅಧಿಕಾರಾನುಸಾರವಾಗಿ) ಮಾಡಬೇಕು; ಮನೋವಾಕ್ಕಾಯಗಳಿಂದ ಸಂಭವಿಸುವ ಸರ್ವಕರ್ಮಗಳನ್ನು ಶ್ರೀವಿಷ್ಣುವಿನಲ್ಲಿ ಅರ್ಪಿಸಬೇಕು; ಈ ಪ್ರಕಾರವಾದ ಆಚರಣೆಯುಳ್ಳವರಾಗಿ ಶ್ರೀವಿಷ್ಣುವಿನಲ್ಲಿ ಸರ್ವಸಮರ್ಪಣೆಯುಳ್ಳ ವಿಷ್ಣುಭಕ್ತರ ನುಡಿಗಳೂ, ಶ್ರೀವಿಷ್ಣುವಿನ ಆಜ್ಞೆಗಳಂತೆ (ಶ್ರುತಿಸ್ಮೃತಿಗಳಂತೆ), ಮಾನ್ಯಗಳೇ ಸರಿ; ಈ ವಿವಕ್ಷೆಯಿಂದ, ವಿಷ್ಣುಭಕ್ತರೂ ವಿಷ್ಣುಸಮರೆನಿಸುತ್ತಾರೆ; ಅವರೂ ಯಥಾಯೋಗ್ಯವಾಗಿ ಪೂಜ್ಯರೇ ಸರಿ;[1]

---

1. 'ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ।'
ಇತ್ಯಾದಿ ವಾಕ್ಯಗಳಲ್ಲಿ 'ಯಥಾ ದೇವೇ ತಥಾ ಗುರೌ' ಎಂಬಲ್ಲಿ, ತಾರತಮ್ಯಾನುಗುಣವಾದ ಉತ್ತಮಭಕ್ತಿಯನ್ನೇ ಗುರುಗಳಲ್ಲಿಯೂ (ಸ್ವೋತ್ತಮರಲ್ಲಿಯೂ) ಮಾಡಬೇಕೆಂದು ವಿಧಿಸಿರುವಂತೆ, ಇಲ್ಲಿಯೂ, ವಿಷ್ಣುಸಮರೆಂದರೆ, ವಿಷ್ಣುವಿನಂತೆ, ಯಥಾಯೋಗ್ಯವಾಗಿ ಪೂಜ್ಯರೆಂಬರ್ಥವನ್ನೇ ತಿಳಿಯಬೇಕು

(ಸಂಸಾರದಿಂದ), ಮುಮುಕ್ಷುಭಿಃ–ಮುಕ್ತರಾಗಬೇಕೆಂದು ಇಚ್ಛಿಸುವವರಿಂದ, ಮಂತ್ರಜಪಾದಿಕಂ-ಮಂತ್ರಜಪ ಮೊದಲಾದುದು, ಯಥಾಧಿಕಾರಂ–ತಂತಮ್ಮ ಅಧಿಕಾರವಿದ್ದಂತೆ (ಅರ್ಹತೆಯನ್ನನುಸರಿಸಿ), ಕರ್ತವ್ಯಂ–ಮಾಡಲ್ಪಡತಕ್ಕದ್ದು; ಯೇ–ಯಾರು, ಮನೋವಾಕ್ಕಾಯಕರ್ಮಭಿಃ–ಮನಸ್ಸು, ವಾಗಿಂದ್ರಿಯ, ದೇಹಗಳಿಂದ (ತ್ರಿಕರಣಗಳಿಂದ) ಸಂಭವಿಸುವ ಎಲ್ಲ ಕರ್ಮಗಳಿಂದ (ಕರ್ಮಗಳನ್ನು ಅರ್ಪಿಸುವುದರಿಂದ), ಮಹಾವಿಷ್ಣುಂ–ಶ್ರೀಮಹಾವಿಷ್ಣುವನ್ನು ಅರ್ಚಯಂತಿ–ಪೂಜಿಸುವರೋ, ತೇಷಾಂ–ಅವರ, ವಚನಂ–ವಚನವೂ (ಧರ್ಮ ವಿಷಯಕವಾದ ನುಡಿಗಳೂ), ಗ್ರಾಹ್ಯಂ ಹಿ–ಸ್ವೀಕಾರಾರ್ಹವೇ ಸರಿ (ಒಪ್ಪಿ, ಅದರಂತೆ ನಡೆಯತಕ್ಕದ್ದೇ ಸರಿ); ತೇ–ಅವರು, ವಿಷ್ಣುಸಮಾಃ–ವಿಷ್ಣುಸಮರೆಂದು (ಶ್ರೀವಿಷ್ಣುವಿನ ನುಡಿಗಳು–ಶಾಸ್ತ್ರಗಳು, ಸರ್ವರ ಹಿತಸಾಧಕವಾಗಿರುವಂತೆ, ವಿಷ್ಣುಭಕ್ತರ ನುಡಿಗಳೂ ಹಿತಕರವೆಂದು, ನಂಬಲು ಅರ್ಹಗಳೆಂದು), ಮತಾಃ ಹಿ–ತಿಳಿಯಲ್ಪಟ್ಟಿರುವಷ್ಟೇ (ವಿಷ್ಣುವಿನಂತೆ, ಯಥಾಯೋಗ್ಯವಾಗಿ, ವಿಷ್ಣುಭಕ್ತರಾದ ಬ್ರಹ್ಮಾದಿಗಳೂ ಭಕ್ತಿಯಿಂದ ಪೂಜಿಸಲ್ಪಡಲರ್ಹರೆಂದೂ ಅಭಿಪ್ರಾಯ). ಇತಿ–ಹೀಗೆ, ಮಯಾ–ನನ್ನಿಂದ, ಉಕ್ತಂ–ಹೇಳಲಾದ, ದೀಕ್ಷಾದಿಸಂಕಲ್ಪಂ–ದೀಕ್ಷಾದಿ ವಿಷಯಕವಾದ ನನ್ನ ಇಚ್ಛೆಯನ್ನು (ದೀಕ್ಷಾದಿಗಳಿಂದಲೇ ಪ್ರೀತನಾಗುವೆನೆಂಬ ನನ್ನ ಸಂಕಲ್ಪವನ್ನು), (ಯಃ) ನರಃ–ಯಾವ ಮನುಷ್ಯನು, ಶೃಣುಯಾತ್–ಶ್ರವಣ ಮಾಡುವನೋ, ವಾ–ಅಥವಾ ಪಠೇತ್-ಪಠಿಸುವನೋ (ಕೀರ್ತಿಸುವನೋ), ಶ್ರಾವಯೇತ್ ವಾಪಿ-ಅಥವಾ ಅನ್ಯರಿಗೆ ಶ್ರವಣ ಮಾಡಿಸುವನೋ, (ಸಃ–ಆತನು), ಜ್ಞಾನಯಜ್ಞಫಲಂ–ಜ್ಞಾನಯಜ್ಞದ ಫಲವನ್ನು (ನನ್ನ ಮಹಿಮಾಜ್ಞಾನಾರ್ಜನಾ ರೂಪದ ಶ್ರೇಷ್ಠಪೂಜೆಯನ್ನು ಮಾಡಿದ ಫಲವನ್ನು– ಜ್ಞಾನಸಿದ್ಧಿಯನ್ನು), ಲಭೇತ್–ಹೊಂದುತ್ತಾನೆ; ಬ್ರಹ್ಮನ್–ಹೇ ಬ್ರಹ್ಮ! ಇತಿ–ಹೀಗೆ, ತೇ–ನಿನಗೋಸ್ಕರ, ಕಥಿತಂ–(ನಿನ್ನ ಪ್ರಶ್ನೆಗೆ ಉತ್ತರವು) ಹೇಳಲ್ಪಟ್ಟಿತು; ಅನ್ಯತ್ ಕಿಂ–ಬೇರೇನನ್ನು ಶ್ರೋತುಂ–ಕೇಳಲಿಕ್ಕೆ, ಇಚ್ಛಸಿ–ಅಪೇಕ್ಷಿಸುವಿ.

ಪ್ರತಿಮಾಪೂಜಾವಿವೇಕ ನಿರೂಪಣವೆಂಬ ೧೦ನೇ ಅಧ್ಯಾಯವು ಮುಗಿದುದು.

---

ನಾನು(ಶ್ರೀವಿಷ್ಣುವು) ಹೀಗೆ ದೀಕ್ಷಾದಿಗಳಿಂದಲೇ ಪ್ರಸನ್ನನಾಗುವೆನೆಂಬ ಸತ್ಯಸಂಕಲ್ಪವುಳ್ಳವನೆಂಬ ನನ್ನ ಮಹಿಮೆಯನ್ನು ಶ್ರವಣ ಮಾಡುವವರೂ, ಕೀರ್ತನಮಾಡುವವರೂ, ಅನ್ಯರಿಗೆ ಶ್ರವಣಮಾಡಿಸುವವರೂ, ಜ್ಞಾನಯಜ್ಞದ ಫಲವನ್ನು (ಜ್ಞಾನಸಿದ್ಧಿಯನ್ನು-ಅಪರೋಕ್ಷದರ್ಶನವನ್ನೂ-ಮೋಕ್ಷವನ್ನೂ), ತಪ್ಪದೇ ಹೊಂದುತ್ತಾರೆ—ಮತ್ತೇನನ್ನು ಕೇಳಬೇಕೆನ್ನುವಿ, ಹೇ ಬ್ರಹ್ಮ! (೩೧-೩೪).

೧೦ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೧೧

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

**ಸೃಷ್ಟಿವೈಚಿತ್ರ್ಯಹೇತುರ್ಯಜ್ಜೀವಾನಾಂ ಯದನಾದಿತಃ ।**
**ಕರ್ಮ ತಸ್ಯ ಕಥಂ ಭೇದಾ ವಿಸ್ತರಾತ್ತದ್ವದಸ್ವ ಮೇ ॥ ೧ ॥**

**ಅರ್ಥ**—ಯತ್–ಯಾವ, ಕರ್ಮ–ಕರ್ಮವೆಂಬುದು, ಅನಾದಿತಃ–ಅನಾದಿಯಿಂದ(ಇರುತ್ತದೆಯೋ), ಯತ್–ಯಾವುದು(ಅನಾದಿಕರ್ಮವೆಂಬುದು), ಜೀವಾನಾಂ–ಜೀವರ, ಸೃಷ್ಟಿವೈಚಿತ್ರ್ಯಹೇತುಃ–ಸೃಷ್ಟಿಯಲ್ಲಿ ಕಂಡುಬರುವ ಬಹುವಿಧ ಭೇದಗಳಿಗೆ ಕಾರಣವೋ, ತಸ್ಯ–ಆ ಅನಾದಿಕರ್ಮದ, ಭೇದಾಃ–ನಾನಾ ಭೇದಗಳು, ಕಥಂ–ಹೇಗೆ (ಯಾವ ಪ್ರಕಾರವಾಗಿರುತ್ತವೆ) ಎಂಬುದನ್ನು, ವಿಸ್ತರಾತ್–ವಿಸ್ತಾರವಾಗಿ, ಮೇ–ನನಗೆ, ವದಸ್ವ–ಹೇಳು.

ಶ್ರೀ ಹಯಗ್ರೀವ ಉವಾಚ—

**ಯೇನ ಬದ್ಧೋ ನರೋ ಮುಕ್ತಿಂ ನ ವ್ರಜತ್ಯೇಷ ಸಂಸೃತೌ ।**
**ಸ್ವರ್ಗೇ ವಾ ನರಕೇ ವಾಪಿ ಭ್ರಮತ್ಯೇವಾನಿಶಂ ಯತಃ ॥ ೨ ॥**

ನರಃ–ಮನುಷ್ಯನು, ಯೇನ–ಯಾವುದರಿಂದ, ಬದ್ಧಃ–ಬದ್ಧನಾಗಿ, ಮುಕ್ತಿಂ–ಮೋಕ್ಷವನ್ನು ನ ವ್ರಜತಿ—ಹೊಂದುವುದಿಲ್ಲವೋ, ಮತ್ತು ಸ್ವರ್ಗೇವಾ–ಸ್ವರ್ಗದಲ್ಲಿ ಆಗಲಿ, ನರಕೇ ವಾಪಿ–ನರಕದಲ್ಲಿಯಾಗಲೀ, ಏಷಃ–ಈ ಜೀವನು, ಸಂಸೃತೌ–ಸಂಸಾರದಲ್ಲಿ (ಮನುಷ್ಯಾದಿ ಸಾಧನದೇಹಗಳಲ್ಲಿ ಆಗಲಿ), ಅನಿಶಂ–ನಿರಂತರವಾಗಿ, ಯತಃ–ಯಾವುದರಿಂದ (ಯಾವುದರ ಫಲರೂಪವಾಗಿ), ಭ್ರಮತ್ಯೇವ–ಸುತ್ತುತ್ತಲೇ ಇರುವನೋ;

---

**ತಾತ್ಪರ್ಯ:**—ಜೀವರ ಅನಾದಿಕರ್ಮವು, ಸೃಷ್ಟಿಯಲ್ಲಿ ಕಂಡುಬರುವ ವೈಚಿತ್ರ್ಯಕ್ಕೆ (ವೈವಿಧ್ಯಕ್ಕೆ–ಬಹುವಿಧ ವ್ಯತ್ಯಾಸಗಳಿಗೆ) ಹೇತು (ಕಾರಣ)ವಾಗುವುದು ಹೇಗೆ? ಅದನ್ನು ನನಗೆ ವಿಸ್ತಾರವಾಗಿ ನಿರೂಪಿಸು, ಪ್ರಭೋ! (೧). ಹೇ ಬ್ರಹ್ಮ! ಕರ್ಮಸ್ವರೂಪವನ್ನು ಹೇಳುವೆನು ಕೇಳು; ಯಾವುದರಿಂದ ಬದ್ಧನಾಗಿ, ಜೀವನು ಮೋಕ್ಷವನ್ನು ಹೊಂದುವುದಿಲ್ಲವೋ ಮತ್ತು ಯಾವುದರ ಫಲರೂಪವಾಗಿ ಜೀವನು, ಸ್ವರ್ಗ ನರಕಗಳಲ್ಲಿ ನಿರಂತರವಾಗಿ ಸುತ್ತುತ್ತಿರುವನೋ; ಮತ್ತು ಯಾವುದರ ವಿನಾಶದಿಂದ,

**ಯಸ್ಯ ಕ್ಷಯೇಣ ಜೀವಸ್ಯ ಮುಕ್ತಿರ್ಭವತಿ ದೇಹತಃ ।**
**ತದ್ಧಿ ಕರ್ಮೇತಿ ವಿಜ್ಞೇಯಂ ಪುಣ್ಯಂ ಪಾಪಮಿತಿ ದ್ವಿಧಾ ॥ ೩ ॥**

ಯಸ್ಯ–ಯಾವುದರ (ಯಾವ ಕರ್ಮದ), ಕ್ಷಯೇಣ–ನಾಶದಿಂದ, ಜೀವಸ್ಯ–ಜೀವನಿಗೆ, ದೇಹತಃ–ದೇಹದಿಂದ (ದೇಹಬಂಧದಿಂದ–ಸಂಸಾರದಿಂದ), ಮುಕ್ತಿ–ಮುಕ್ತಿಯು (ಬಿಡುಗಡೆಯು), ಭವತಿ–ಉಂಟಾಗುವುದೋ, ತತ್ ಹಿ–ಅದೇ, ಕರ್ಮ ಇತಿ–ಕರ್ಮ ಎಂಬುದಾಗಿ, ವಿಜ್ಞೇಯಂ–ತಿಳಿಯತಕ್ಕದ್ದು (ತತ್–ಅದು) ಪುಣ್ಯಂ–ಪುಣ್ಯವೆಂದೂ, ಪಾಪಂ ಇತಿ–ಪಾಪವೆಂದೂ, ದ್ವಿಧಾ–ಎರಡು ವಿಧವಾಗಿರುತ್ತದೆ.

**ಸುಖಮೇವ ಹಿ ಪುಣ್ಯಸ್ಯ ದುಃಖಂ ಪಾಪಸ್ಯ ವೈ ಫಲಂ ।**
**ಸಾಕ್ಷಾದಿಷ್ಟಂ ಸುಖಂ ಪ್ರೋಕ್ತಮನಿಷ್ಟಂ ದುಃಖಮುಚ್ಯತೇ ॥ ೪ ॥**

**ಶ್ರುತಿಸ್ಮೃತಿಪುರಾಣಾದ್ಯೈರನ್ಯೈಶ್ಚಾಪಿ ಸದಾಗಮೈಃ ।**
**ಕರ್ತವ್ಯಮಿತಿ ಯತ್ ಪ್ರೋಕ್ತಂ ತತ್ಕೃತ್ವಾ ಪುಣ್ಯಮಶ್ನುತೇ ॥ ೫ ॥**

**ಯದೇವ ರಾಗತಃ ಪ್ರಾಪ್ತಂ ನಿದ್ರಾಭಕ್ಷಣಮೈಥುನಂ ।**
**ಅನಿಷಿದ್ಧಂ ಚ ಯತ್ಕಿಂಚಿತ್ತ್ಯಾಗಾದಪಿ ಪುಣ್ಯಭಾಕ್ ॥ ೬ ॥**

ಪುಣ್ಯಸ್ಯ–ಪುಣ್ಯದ, ಫಲಂ–ಫಲವು, ಸುಖಂ ಏವ–ಸುಖವೇ (ಆಗಿದೆ); ಪಾಪಸ್ಯ–ಪಾಪದ(ಫಲಂ), ದುಃಖಂವೈ–ದುಃಖವೇ(ಆಗಿದೆ); ಹಿ–ಹೀಗೆಂಬುದು ಶಾಸ್ತ್ರಸಿದ್ಧವು; ಸಾಕ್ಷಾದಿಷ್ಟಂ–ಸ್ವಯಂ (ತನ್ನಿಂದಲೇ) ಅಪೇಕ್ಷಿತವಾದುದು, ಸುಖಂ ಪ್ರೋಕ್ತಂ–ಸುಖವೆಂದು ಹೇಳಲ್ಪಡುತ್ತದೆ; ಅನಿಷ್ಟಂ–ಇಷ್ಟವಲ್ಲದ್ದು (ಅಪ್ರಿಯವಾದುದು), ದುಃಖಂ ಉಚ್ಯತೇ–ದುಃಖವೆಂದು ಹೇಳಲ್ಪಡುತ್ತದೆ; (ಪುಣ್ಯವು ಹೇಗೆ ದೊರೆಯುವುದೆಂದರೆ).

---

ಜೀವನು ದೇಹಬಂಧವೆಂಬ ಸಂಸಾರದಿಂದ ಮುಕ್ತನಾಗುವನೋ, ಅದೇ ಕರ್ಮವೆಂದೆನಿಸುತ್ತದೆ; ಈ ಕರ್ಮವು ಪುಣ್ಯ ಮತ್ತು ಪಾಪವೆಂದು ಎರಡು ವಿಧವಾಗಿರುತ್ತದೆ. (೨, ೩). ಪುಣ್ಯದ ಫಲವೇ ಸುಖ; ಪಾಪದ ಫಲ ದುಃಖ; ಸ್ವಯಂ ತನಗೆ ಅಪೇಕ್ಷಿತವಾದುದರ ಪ್ರಾಪ್ತಿಯೇ ಸುಖ; ಅನಿಷ್ಟ (ಅಪ್ರಿಯ)ವಾದುದರ ಪ್ರಾಪ್ತಿಯೇ ದುಃಖವು; ಶ್ರುತಿ, ಸ್ಮೃತಿ, ಪುರಾಣಗಳಲ್ಲಿಯೂ ಮತ್ತು ಇತರ ಸದಾಗಮಗಳಲ್ಲಿಯೂ ಕರ್ತವ್ಯವೆಂದು ವಿಧಿಸಲ್ಪಟ್ಟದ್ದನ್ನು ಮಾಡಿ ಪುಣ್ಯವನ್ನು ಪಡೆಯಬಹುದು; ಹಾಗೂ ನಮಗೆ ಅಪೇಕ್ಷಿತಗಳಾದ ನಿದ್ರೆ, ಭಕ್ಷಣ, ಮೈಥುನಗಳು ಅಥವಾ ಅನಿಷಿದ್ಧವಾದ (ಸಚ್ಛಾಸ್ತ್ರಗಳಿಂದ ನಿಷೇಧಿಸಲ್ಪಡದಿರುವ) ಯಾವುದೊಂದು ಭೋಗದ ತ್ಯಾಗದಿಂದಲೂ ಪುಣ್ಯವನ್ನು ಹೊಂದಬಹುದು (೪-೬). ಯಾವುದು

ಶ್ರುತಿಸ್ಮೃತಿಪುರಾಣಾದ್ಯೈಃ-ಶ್ರುತಿಸ್ಮೃತಿ ಪುರಾಣಗಳಿಂದಲೂ, ಅಪಿ ಚ-ಮತ್ತು ಅನ್ಯೈಃ-ಇತರ, ಸದಾಗಮೈಃ-ಸಚ್ಛಾಸ್ತ್ರಗಳಿಂದಲೂ (ಧರ್ಮಶಾಸ್ತ್ರಾದಿಗಳಿಂದಲೂ), ಯತ್-ಯಾವುದು, ಕರ್ತವ್ಯಂ ಇತಿ-ಕರ್ತವ್ಯವೆಂದು, ಪ್ರೋಕ್ತಂ-ಹೇಳಲ್ಪಡುವುದೋ, ತತ್-ಅದನ್ನು ಕೃತ್ವಾ-ಮಾಡಿ, ಪುಣ್ಯಂ-ಪುಣ್ಯವನ್ನು ಅಶ್ನುತೇ-(ಅದನ್ನು ಮಾಡಿರವವನು) ಹೊಂದುತ್ತಾನೆ; ಯತ್-ಯಾವ, ನಿದ್ರಾಭಕ್ಷಣಮೈಥುನಂ-ನಿದ್ರೆ, ಭಕ್ಷಣ, ಮೈಥುನವು (ಸ್ತ್ರೀಯರಿಗಳೊಂದಿಗೆ ರಮಣ ಮೊದಲಾದವು), ರಾಗತಃ-ಸ್ವೇಚ್ಛೆಯಿಂದ (ಅಪೇಕ್ಷಿಸಿ), ಪ್ರಾಪ್ತಂ-ಬಂದುದೋ (ದೊರೆತುದೋ), ಚ-ಮತ್ತು ಯತ್ಕಿಂಚಿತ್- ಯಾವುದೊಂದು, ಅನಿಷಿದ್ಧಂ-(ಶಾಸ್ತ್ರದಿಂದ) ನಿಷೇಧಿಸಲ್ಪಟ್ಟದ್ದು ಅಲ್ಲವೋ, ತತ್ತ್ಯಾಗಾದಪಿ-ಅದನ್ನು ತ್ಯಜಿಸುವುದರಿಂದ ಸಹ, ಪುಣ್ಯಭಾಕ್-ಪುಣ್ಯಭಾಗಿಯಾಗುತ್ತಾನೆ; (ಅವುಗಳನ್ನು ತ್ಯಜಿಸಿದವನೂ ಪುಣ್ಯವನ್ನು ಹೊಂದುತ್ತಾನೆ).

**ಯಚ್ಚ ಶ್ರುತ್ಯಾದಿಭಿರ್ನೈವ ಕರ್ತವ್ಯಮಿತಿ ಕೀರ್ತಿತಂ ।**
**ಯತ್ಕೃತ್ವಾ ಜಾಯತೇ ಪಾಪಂ ಯತ್ತೈಃ ಕರ್ತವ್ಯಮೀರಿತಂ ॥ ೭ ॥**

**ಸರ್ವಥೈವಾಕೃತೇಸ್ತಸ್ಯ ನಿತ್ಯನೈಮಿತ್ತಿಕಸ್ಯ ಚ ।**
**ಜಾಯತೇ ಚ ತಥಾ ಪಾಪಂ ದ್ವಯಮೇವ ತ್ರಿಧಾ ಮತಂ ॥ ೮ ॥**

ಯತ್ ಚ-ಯಾವುದೇ ಕರ್ಮವು, ಶ್ರುತ್ಯಾದಿಭಿಃ-ಶ್ರುತಿ ಮೊದಲಾದವುಗಳಿಂದ, ನೈವ ಕರ್ತವ್ಯಂ-ಮಾಡತಕ್ಕದಲ್ಲ ಇತಿ-ಎಂದು, ಕೀರ್ತಿತಂ-ಹೇಳಲ್ಪಟ್ಟಿರುತ್ತದೆಯೋ, ಯತ್‌ಕೃತ್ವಾ-ಯಾವ(ಅಂಥ ನಿಷೇಧಿತ) ಕರ್ಮವನ್ನು ಮಾಡುವುದರಿಂದ, ಜಾಯತೇ-ಹುಟ್ಟುವುದೋ, ಪಾಪಂ-(ಅದು-ಆ ಕರ್ಮಜನಿತ ಅದೃಷ್ಟವಿಶೇಷವು) ಪಾಪವು (ಎನಿಸುತ್ತದೆ); ಮತ್ತು ಯತ್-ಯಾವುದು, ತೈಃ-ಅವುಗಳಿಂದ (ಶ್ರುತ್ಯಾದಿಗಳಿಂದ), ಕರ್ತವ್ಯಂ-ಕರ್ತವ್ಯವೆಂದು, ಈರಿತಂ-ವಿಧಿಸಲ್ಪಟ್ಟಿರುವುದೋ, ತಸ್ಯ-ಆ, ನಿತ್ಯನೈಮಿತ್ತಿಕಸ್ಯ-ನಿತ್ಯನೈಮಿತ್ತಿಕ ಕರ್ಮದ, ಸರ್ವಥಾ ಏವ-ಯಾವ ರೀತಿಯಿಂದಲೂ, ಅಕೃತೇಃ-ಮಾಡದಿರುವುದರಿಂದ (ಪರಿತ್ಯಾಗದಿಂದ), ಜಾಯತೇ-ಹುಟ್ಟುವುದೋ, ತಥಾ ಚ ಪಾಪಂ-ಅದೂ ಪಾಪವೇ(ಎನಿಸುತ್ತದೆ); ದ್ವಯಂಏವ-ಈ ಪುಣ್ಯಪಾಪಗಳೆರಡೂ, ತ್ರಿಧಾಮತಂ-ಮೂರು ಪ್ರಕಾರವಾಗಿರುವುವೆಂದು ಹೇಳಲಾಗುತ್ತದೆ.

---

ಶ್ರುತಿಸ್ಮೃತಿ ಧರ್ಮಶಾಸ್ತ್ರಗಳಿಂದ ಮಾಡಬಾರದೆಂದು ನಿಷೇಧಿಸಲ್ಪಟ್ಟಿರುತ್ತದೆಯೋ, ಅದನ್ನು ಮಾಡುವುದರಿಂದಲೂ ಮತ್ತು ಅವು, ಅವಶ್ಯ ಕರ್ತವ್ಯಗಳೆಂದು ವಿಧಿಸುವ ಕರ್ಮಗಳನ್ನು ಸರ್ವಥಾ ಪರಿತ್ಯಾಗಮಾಡುವುದರಿಂದಲೂ ಹುಟ್ಟುವ ಅದೃಷ್ಟವಿಶೇಷವು, ಪಾಪವೆನಿಸುತ್ತದೆ; ಈ ಪುಣ್ಯಪಾಪಗಳೆರಡೂ (ಒಂದೊಂದೂ) ಮೂರು ಪ್ರಕಾರವಾಗಿರುತ್ತವೆ (೭-೮).

**ಮಾನಸಂ ವಾಚಿಕಂ ಚೈವ ಕಾಯಿಕಂ ಚೇತಿ ಭೇದತಃ ।**
**ಅಹಂತಾಮಮತಾದ್ರೋಹಲೋಭನಾಸ್ತಿಕ್ಯಮತ್ಸರಾಃ ॥ ೯ ॥**

**ಈರ್ಷಾ ದುರ್ಮೈಥುನೇಚ್ಛಾ ಚ ಶಠತ್ವಂ ವಂಚನಂ ತಥಾ ।**
**ಇತ್ಯಾದಿ ಮಾನಸಂ ಪಾಪಮಹಂತಾದಿವಿವರ್ಜಿತಂ ॥ ೧೦ ॥**

**ಆಸ್ತಿಕ್ಯಂ ದುರ್ವಿಷಯತ್ಯಾಗೋ ಮಯಿ ಭಕ್ತಿರಚಂಚಲಾ ।**
**ಧ್ಯಾನಂ ಕ್ಷಮಾ ಚ ಮನನಂ ಮಾನಸಂ ಪುಣ್ಯಮುಚ್ಯತೇ ॥ ೧೧ ॥**

ಮಾನಸಂ–ಮಾನಸವೆಂದೂ, ವಾಚಿಕಂ ಚೈವ–ವಾಚಿಕವೆಂದೂ, ಚ–ಮತ್ತು ಕಾಯಿಕಂ–ಕಾಯಿಕವೆಂದೂ (ದೈಹಿಕವೆಂದೂ), ಇತಿ–ಹೀಗೆಂಬ, ಭೇದತಃ–ಭೇದದಿಂದ (ಪುಣ್ಯಪಾಪಗಳು ತ್ರಿವಿಧವು): ಅಹಂತಾಮಮತಾದ್ರೋಹಲೋಭನಾಸ್ತಿಕ್ಯಮತ್ಸರಾಃ– [ಅಹಂತಾ–ಅಹಂಕಾರವು (ನಾನು ಸ್ವತಂತ್ರಕರ್ತನೆಂಬ ಭಾವನೆ), ಮಮತಾ– (ದಾರಾಪುತ್ರಗೃಹೈಶ್ವರ್ಯಾದಿಗಳು) ನನ್ನ ಅಧೀನಗಳೆಂಬ ಜ್ಞಾನ, ದ್ರೋಹ– ವಂಚಕಬುದ್ಧಿ, ಲೋಭ–ಔದಾರ್ಯವಿಲ್ಲದಿರುವುದು, ನಾಸ್ತಿಕ್ಯಮತ್ಸರಾಃ– ನಾಸ್ತಿಕಬುದ್ಧಿ ಮತ್ತು ಅನ್ಯರ ಉತ್ತಮಸ್ಥಿತಿಯನ್ನು ಸಹಿಸದಿರುವುದು], ಈರ್ಷಾ–ದ್ವೇಷ, ದುರ್ಮೈಥುನೇಚ್ಛಾ–ಅಯೋಗ್ಯಸಂಗವನ್ನು ಆಶಿಸುವ ದುರಿಚ್ಛೆ, ಚ–ಹಾಗೂ, ಶಠತ್ವಂ–ಮೂರ್ಖತನ, ತಥಾ–ಹಾಗೂ, ವಂಚನಂ–ಮೋಸಗೊಳಿಸುವ ಬುದ್ಧಿ ಇತ್ಯಾದಿ–ಇವೇ ಮೊದಲಾದ ಭಾವಗಳನ್ನು ಹೊಂದಿರುವುದು, ಮಾನಸಂ ಪಾಪಂ– ಮಾನಸಪಾಪವು; ಅಹಂತಾದಿವಿವರ್ಜಿತಂ–ಅಹಂ ಮಮಕಾರಗಳಿಲ್ಲದ,

---

ಮಾನಸ, ವಾಚಿಕ ಮತ್ತು ಕಾಯಿಕಗಳೆಂದು ಪುಣ್ಯಪಾಪಗಳು ಮೂರು ವಿಧ; ಅಹಂಕಾರ (ಸ್ವತಂತ್ರಕರ್ತನೆಂಬ ಬುದ್ಧಿ), ಮಮಕಾರ (ದಾರಾಪುತ್ರ ಗೃಹೈಶ್ವರ್ಯಾದಿಗಳು ನನ್ನ ಅಧೀನವೆಂಬ ಬುದ್ಧಿ), ದ್ರೋಹ (ವಂಚನೆ), ಲೋಭ (ಸ್ವಾರ್ಥ), ನಾಸ್ತಿಕ್ಯ (ವೇದಗಳಲ್ಲಿ ಅಪ್ರಾಮಾಣ್ಯ ಬುದ್ಧಿ ಮತ್ತು ಈಶ್ವರ, ಧರ್ಮಾಧರ್ಮಗಳಲ್ಲಿ ಅವಿಶ್ವಾಸ), ಮತ್ಸರ (ಅನ್ಯರ ಉತ್ಕರ್ಷವನ್ನು ಸಹಿಸದಿರುವುದು), ಈರ್ಷಾ (ದ್ವೇಷ), ದುರ್ಮೈಥುನೇಚ್ಛಾ (ಅಯೋಗ್ಯ ಸಂಗದ ದುರಿಚ್ಛೆ), ಮೂರ್ಖತನ (ಜ್ಞಾನಿಗಳ ವಚನಗಳನ್ನು ದುರ್ಲಕ್ಷಿಸುವುದು), ವಂಚನೆ (ಅನ್ಯರನ್ನು ಮೋಸಗೊಳಿಸಿ ಸ್ವಾರ್ಥವನ್ನು ಸಾಧಿಸಿಕೊಳ್ಳುವ ಇಚ್ಛೆ), ಇವೇ ಮೊದಲಾದ ಮನಸ್ಸಿನ ಭಾವಗಳು ಮಾನಸ ಪಾಪಗಳೆನಿಸುತ್ತವೆ; ಅಹಂ ಮಮಕಾರಗಳ ತ್ಯಾಗ (ಇವುಗಳಿಲ್ಲದ ಮನೋಭಾವ) ಪೂರ್ವಕವಾದ ಆಸ್ತಿಕ್ಯಬುದ್ಧಿ (ಈಶ್ವರ, ಧರ್ಮಾಧರ್ಮ, ಸ್ವರ್ಗ ನರಕಾದಿಗಳಲ್ಲಿ ಶ್ರದ್ಧೆ), ದುರ್ವಿಷಯಗಳ ಭೋಗೇಚ್ಛೆ ಇಲ್ಲದೆ

ಆಸ್ತಿಕ್ಯಂ- ಆಸ್ತಿಕ್ಯಬುದ್ಧಿಯೂ, ದುರ್ವಿಷಯತ್ಯಾಗಃ-ನಿಷಿದ್ಧಭೋಗೇಚ್ಛೆ ಇಲ್ಲದಿರುವುದು, ಮಯಿ-ನನ್ನಲ್ಲಿ (ಶ್ರೀವಿಷ್ಣುವಿನಲ್ಲಿ), ಅಚಂಚಲಾ-ಸ್ಥಿರವಾದ, ಭಕ್ತಿ-ಭಕ್ತಿಯೂ, ಧ್ಯಾನಂ-ಧ್ಯಾನವೂ, ಕ್ಷಮಾ-ಕ್ಷಮಾಗುಣವೂ (ಅನ್ಯದೌರ್ಜನ್ಯ ಸಹನೆ), ಚ-ಮತ್ತು ಮನನಂ-ಶಾಸ್ತ್ರಮನನವೂ (ಶ್ರವಣಮಾಡಿದ ಶಾಸ್ತ್ರವಿಷಯಗಳ ಸಂಬಂಧವಾದ ವಿಮರ್ಶೆಯಲ್ಲಿ ಸಂಶಯ ವಿಪರ್ಯಗಳ ಪರಿಹಾರಕ್ಕಾಗಿ ತೊಡಗುವುದು), ಮಾನಸಂ ಪುಣ್ಯಂ-ಮಾನಸಪುಣ್ಯವೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಶಾಸ್ತ್ರಪ್ರವಚನಂ ವೇದಪಂಚಕಾಧ್ಯಯನಂ ಜಪಃ ।**
**ಸತ್ಯೋಕ್ತಿಶ್ಚ ಪ್ರಿಯೋಕ್ತಿಶ್ಚ ಮೌನಂ ಪುಣ್ಯಂ ತು ವಾಚಿಕಂ ॥ ೧೨ ॥**

**ಸ್ವಾಧ್ಯಾಯಸ್ಯ ಪರಿತ್ಯಾಗಃ ತಥಾ ಪ್ರವಚನಸ್ಯ ಚ ।**
**ದುರ್ವಾರ್ತಾ ಪಿಶುನೋಕ್ತಿಶ್ಚ ನಿಷ್ಠುರಂ ಚಾನೃತಂ ತಥಾ ॥ ೧೩ ॥**

**ವಾಚಿಕಂ ಪಾಪಮೇತತ್ಸ್ಯಾತ್ ಸತ್ಯಂ ಭೂತಹಿತಂ ಸ್ಮೃತಂ ।**

ಶಾಸ್ತ್ರಪ್ರವಚನಂ-ಶಾಸ್ತ್ರಪ್ರವಚನವೂ, ವೇದಪಂಚಕಾಧ್ಯಯನಂ-ಐದು ವೇದಗಳ ಅಧ್ಯಯನವೂ,[1] ಜಪಃ-ಮಂತ್ರಜಪವೂ, ಚ-ಮತ್ತು ಸತ್ಯೋಕ್ತಿ-ಯಥಾರ್ಥ ಭಾಷಣ (ಇದ್ದಹಾಗೆ ನುಡಿಯುವುದು), ಪ್ರಿಯೋಕ್ತಿಶ್ಚ-ಪ್ರಿಯವಾದ (ಕೇಳುವವರಿಗೆ ಸಂತೋಷವನ್ನುಂಟುಮಾಡುವ) ಮಾತುಗಳನ್ನಾಡುವುದು; ಮೌನಂ-ಮೌನವೂ

---

ನನ್ನಲ್ಲಿ(ಶ್ರೀಹರಿಯಲ್ಲಿ) ಮಾಡುವ ಸ್ಥಿರವಾದ ಭಕ್ತಿ ಧ್ಯಾನ, ಕ್ಷಮಾಗುಣ, ಶಾಸ್ತ್ರಮನನ, ಇತ್ಯಾದಿಗಳು ಮಾನಸಪುಣ್ಯಗಳೆನಿಸುವುವು (೯-೧೧). ಶಾಸ್ತ್ರಪ್ರವಚನವೂ, ಪಂಚವೇದಗಳ ಅಧ್ಯಯನವೂ, ಮಂತ್ರಜಪವೂ, ಸತ್ಯನುಡಿ, ಪ್ರಿಯಭಾಷಣ, ಮೌನ ಇವು ಮೊದಲಾದವು ವಾಚಿಕಪುಣ್ಯಗಳೆನಿಸುತ್ತವೆ; ವೇದಾಧ್ಯಯನ ಮತ್ತು ಪ್ರವಚನಗಳನ್ನು ತ್ಯಜಿಸುವುದೂ,[2] ಅಶುಭವಾರ್ತೆ, ಚಾಡಿ ಮಾತು, ನಿಷ್ಠುರನುಡಿ, ಸುಳ್ಳು (ಅಸತ್ಯ ಹೇಳುವುದು) ಇತ್ಯಾದಿಯು ವಾಚಿಕಪಾಪವೆನಿಸುತ್ತದೆ; ಪ್ರಾಣಿಹಿತಸಾಧಕವಾದ ನುಡಿಯೇ ಸತ್ಯವೆನಿಸುವುದು (೧೨-೧೩). ನಿರಪರಾಧಿಗಳಾದ ಸಜ್ಜನರಿಗೆ ಯಾವ ನುಡಿಯಿಂದ ಅಹಿತವಾಗುತ್ತದೆಯೋ ಅದು ಸತ್ಯವಲ್ಲ-ವಾಚಿಕಪಾಪವೇ ಸರಿ; ಯಾವ

---

1. ಋಕ್, ಯಜು, ಸಾಮ, ಅಥರ್ವಗಳೆಂಬ ನಾಲ್ಕು ಮತ್ತು ಐದನೇ ವೇದವೆನಿಸಿದ ಮಹಾಭಾರತವು, ಹೀಗೆ ಪಂಚವೇದಗಳು.

2. ಸ್ವಾಧ್ಯಾಯವೆಂದರೆ ಅರ್ಥಾನುಸಂಧಾನಪೂರ್ವಕವಾಗಿ, ವೇದಾದಿಗಳನ್ನು ಅಭ್ಯಾಸ ಮಾಡುವುದು. ಪ್ರವಚನವೆಂದರೆ, ತಾನು ತಿಳಿದಿರುವುದನ್ನು ಅನುವಾದಮಾಡಿ ಹೇಳುವುದು. ಸ್ವಾಧ್ಯಾಯಪ್ರವಚನಗಳೇ ಶ್ರೇಷ್ಠವಾದ ಭಗವತ್ಪ್ರಸಾದನಗಳು— ಮೌದ್ಗಲ್ಯಋಷಿಗಳ ಅಭಿಪ್ರಾಯದಲ್ಲಿ ಸಹ 'ತದ್ಧಿತಪಸ್ತದ್ಧಿತಪಃ' (ಶ್ರುತಿ) ಎಂದೇ ಮಹಾತಪಸ್ಸು

(ವ್ಯರ್ಥನುಡಿಗಳನ್ನಾಡದಿರುವುದು), ತು–ಇವುಗಳಾದರೂ, ವಾಚಿಕಂ ಪುಣ್ಯಂ–ವಾಚಿಕ ಪುಣ್ಯವು; ಸ್ವಾಧ್ಯಾಯಸ್ಯ–ವೇದಾಧ್ಯಯನದ, ಪರಿತ್ಯಾಗಃ–ತ್ಯಜಿಸುವಿಕೆಯೂ, ಚ–ಮತ್ತು ತಥಾ–ಹಾಗೆಯೇ, ಪ್ರವಚನಸ್ಯ–ಪ್ರವಚನದ ತ್ಯಾಗವೂ (ಸ್ವಾಧ್ಯಾಯಪ್ರವಚನಗಳನ್ನು ಬಿಡುವುದು); ದುರ್ವಾರ್ತಾಪಿಶುನೋಕ್ತಿ–ಕೆಟ್ಟವಾರ್ತೆ(ದುಃಖಕರ ಅಥವಾ ಅಮಂಗಳ ಸಮಾಚಾರ) ಮತ್ತು ಚಾಡಿಮಾತುಗಳನ್ನು ನುಡಿಯುವುದು, ತಥಾ–ಹಾಗೆಯೇ, ನಿಷ್ಠುರಂ–ನಿಷ್ಠುರವೂ, ಚ–ಮತ್ತು ಅನೃತಂ–ಅಸತ್ಯವೂ (ಸುಳ್ಳಾಡುವುದೂ), ಏತತ್–ಈ ಮುಂತಾದುವು. ವಾಚಿಕಂ ಪಾಪಂ–ವಾಚಿಕಪಾಪವೆನಿಸುತ್ತವೆ; ಭೂತಹಿತಂ–ಪ್ರಾಣಿಗಳಿಗೆ ಹಿತಸಾಧಕವಾದ ನುಡಿಯು, ಸತ್ಯಂ–ಸತ್ಯವೆಂದು, ಸ್ಮೃತಂ–ತಿಳಿಯಲ್ಪಟ್ಟಿದೆ.

**ಯೇನ ಸತ್ಯೇನ ಜಾಯೇತ ಸಜ್ಜನಾನಾಂ ನಿರಾಗಸಾಂ ॥ ೧೪ ॥**

**ಅಹಿತಂ ತನ್ನ ಸತ್ಯಂ ಸ್ಯಾತ್ ಪಾಪಂ ವಾಚಿಕಮೇವ ತತ್ ।**
**ಯೇನಾನೃತೇನ ಜಾಯೇತ ಪರೇಷಾಮುಪಕಾರಿತಾ ॥ ೧೫ ॥**

**ಅನೃತಂ ನೈವ ತತ್ ಪ್ರೋಕ್ತಂ ಪುಣ್ಯಂ ವಾಚಿಕಮೇವ ತತ್ ।**

ನಿರಾಗಸಾಂ–ನಿರಪರಾಧಿಗಳಾದ, ಸಜ್ಜನಾನಾಂ–ಸಜ್ಜನರಿಗೆ, ಯೇನ–ಯಾವ, ಸತ್ಯೇನ–ಸತ್ಯನುಡಿಯಿಂದ, ಅಹಿತಂ–ಅಹಿತವು, ಜಾಯೇತ–ಉಂಟಾಗುವುದೋ, ತತ್–ಅದು, ಸತ್ಯಂ–ಸತ್ಯವು, ನ ಸ್ಯಾತ್–ಆಗುವುದಿಲ್ಲ; ಅದು (ಆ ಸತ್ಯನುಡಿ) ವಾಚಿಕಪಾಪವೇ ಸರಿ; ಯಾವ ಅಸತ್ಯನುಡಿಯಿಂದ, ಪರೇಷಾಂ–ಅನ್ಯರಿಗೆ, ಉಪಕಾರಿತಾ ಜಾಯೇತ–ಉಪಕಾರವಾಗುವುದೋ, ತತ್–ಅದು, ಅನೃತಂ ನೈವ–ಅನೃತವಲ್ಲ; ವಾಚಿಕಂ ಪುಣ್ಯಂ ಏವ–ವಾಚಿಕಪುಣ್ಯವೇ ಸರಿ.

**ಯೇನಕೇನಾಪಿ ಪಾಪೇನ ಸ್ಯಾತ್ಸತಾಮುಪಕಾರಿತಾ ॥ ೧೬ ॥**

**ನಿರಾಗಸಾಂ ವಾ ಜಾಯೇತ ತತ್ಪಾಪಂ ಪುಣ್ಯಸಾಧನಂ ।**

ಯೇನಕೇನಾಪಿ–ಯಾವುದೇ ಒಂದು, ಪಾಪೇನ–ಪಾಪದಿಂದ (ಪಾಪಕರ್ಮದಿಂದ), ಸ್ಯಾತ್–ಆಗಲಿ, ನಿರಾಗಸಾಂ–ನಿರಪರಾಧಿಗಳಾದ(ಸಾಧುಗಳಾದ), ಸತಾಂ–

---

ಅಸತ್ಯನುಡಿಯಿಂದ ಅನ್ಯರಿಗೆ (ಸಜ್ಜನರಿಗೆ) ಉಪಕಾರವಾಗುವುದೋ, ಅದು ಅನೃತವಲ್ಲ– ವಾಚಿಕಪುಣ್ಯವೆಂದೇ ಹೇಳಲ್ಪಡುತ್ತದೆ (೧೪-೧೫). ಯಾವುದೊಂದು ಪಾಪದಿಂದಲೇ ಆಗಲಿ ನಿರಪರಾಧಿಗಳಾದ ಸಜ್ಜನರಿಗೆ, ಉಪಕಾರವುಂಟಾಗುವುದಾದರೆ, ಆ ಪಾಪವು ಪುಣ್ಯಸಾಧನವೇ ಸರಿ (೧೬). ತನ್ನನ್ನೇ ಆಶ್ರಯಿಸಿರುವವನೂ, ತನ್ನಲ್ಲಿ ವಿಶ್ವಾಸವುಳ್ಳವನೂ ಆದ ಯಾರೇ ಆಗಲಿ, ತ್ರಿದ್ರೋಹದಿಂದ ತನ್ನನ್ನು ಯಾವುದನ್ನಾದರೂ

ಸಜ್ಜನರಿಗೆ, ಉಪಕಾರಿತಾ–ಉಪಕಾರವು, ಜಾಯೇತ–ಉಂಟಾಗುವುದಾದರೆ, ತತ್ಪಾಪಂ–ಆ ಪಾಪವು, ಪುಣ್ಯಸಾಧನಂ ವಾ–ಪುಣ್ಯಸಾಧಕವೇ ಸರಿ.

**ಸ್ವಾಧೀನಃ ಸ್ವಾನುರಕ್ತೋ ವಾ ಭಕ್ತ್ಯಾ ಪೃಚ್ಛೇಚ್ಚ ಯೋ ಹಿತಂ II ೧೭ II**

**ಬ್ರೂಯಾದೇವ ಹಿತಂ ತಸ್ಮೈ ಯದ್ಯಪಿ ಸ್ಯಾತ್ತದಪ್ರಿಯಂ ।**

ಸ್ವಾಧೀನಃ–ತನ್ನ ಅಧೀನನೂ, ವಾ–ಅಥವಾ, ಸ್ವಾನುರಕ್ತಃ–ತನ್ನಲ್ಲಿ ವಿಶ್ವಾಸವುಳ್ಳವನೂ, ಯಃ–(ಆದ) ಯಾರೊಬ್ಬನೂ, ಭಕ್ತ್ಯಾ–ಭಕ್ತಿಯಿಂದ (ಶ್ರದ್ಧೆಯಿಂದ), ಪೃಚ್ಛೇತ್–ಪ್ರಶ್ನೆಮಾಡಿದರೆ, ತಸ್ಮೈ–ಆತನಿಗೋಸ್ಕರ, ಹಿತಂ–ಹಿತವನ್ನು, ಯದ್ಯಪಿ–ಒಂದು ಪಕ್ಷ ತತ್–ಅದು (ಆ ನುಡಿಯು), ಅಪ್ರಿಯಂ–ಅಪ್ರಿಯವಾದುದು, ಸ್ಯಾತ್–ಆದರೂ, ಬ್ರೂಯಾತ್ ಏವ–ನುಡಿಯಲೇಬೇಕು.

**ನಿತ್ಯಂ ನೈಮಿತ್ತಿಕಂ ಕಾಮ್ಯಂ ಸ್ನಾನಂ ಶೌಚಾದಿಕಂ ತು ಯತ್ II ೧೮ II**

**ಕ್ರಿಯತೇ ಕಾಯಿಕಂ ತತ್ಸ್ಯಾತ್ ಪುಣ್ಯಂ ಪಾಪಮಥಾ ಬ್ರುವೇ ।**

ನಿತ್ಯಂ, ನೈಮಿತ್ತಿಕಂ, ಕಾಮ್ಯಂ–ನಿತ್ಯಕರ್ಮಗಳು, ನೈಮಿತ್ತಿಕ ಅಥವಾ ಕಾಮ್ಯಕರ್ಮಗಳು (ಮತ್ತು) ಯತ್–ಯಾವ, ಸ್ನಾನಂ–ಸ್ನಾನವು, ಶೌಚಾದಿಕಂ–ಶೌಚ ಮೊದಲಾದುವು (ಸ್ನಾನಾದಿ ಕರ್ಮಗಳು), ಕ್ರಿಯತೇ–ಮಾಡಲ್ಪಡುತ್ತದೆಯೋ, ತತ್–ಅದು, ಕಾಯಿಕಂ ಪುಣ್ಯಂ–ಕಾಯಿಕಪುಣ್ಯವೆಂದು, ಸ್ಯಾತ್–ಆಗುತ್ತದೆ (ತಿಳಿಯಬೇಕು); ಅಥ–ಮುಂದೆ, ಪಾಪಂ–ಕಾಯಿಕಪಾಪವನ್ನು ಬ್ರುವೇ–ಹೇಳುತ್ತೇನೆ.

---

ಪ್ರಶ್ನಿಸಿದರೆ, ಅವನಿಗೆ ಹಿತವನ್ನೇ ನುಡಿಯಬೇಕು; (ಒಳ್ಳೆಯದಾಗುವುದನ್ನೇ ಹೇಳಬೇಕು). ಹೇಳುವ ಮಾತು ಕೇಳಲಿಕ್ಕೆ ಅಪ್ರಿಯವಾಗಿದ್ದರೂ, ಹಿತವನ್ನು ನುಡಿಯಲೇಬೇಕು (೧೭). ನಿತ್ಯನೈಮಿತ್ತಿಕ ಮತ್ತು ಕಾಮ್ಯಕರ್ಮಗಳನ್ನಾಚರಿಸುವುದೂ ಮತ್ತು ಪೂರ್ವಭಾವಿಯಾಗಿ ಮಾಡುವ ಸ್ನಾನ ಶೌಚಾದಿ ಕರ್ಮಗಳು, (ದೇಹದಿಂದ ಸಂಭವಿಸುವ) ಕಾಯಿಕಪುಣ್ಯಗಳೆನಿಸುತ್ತವೆ; ಕಾಯಿಕಪಾಪವನ್ನು ಹೇಳುತ್ತೇನೆ, ಕೇಳು(೧೮). ದೇಹಸಾಧ್ಯವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಪರಿತ್ಯಜಿಸುವುದೂ,[1]

---

1. ದೇಹದಿಂದ ಸಾಧ್ಯಗಳಾದ ನಿತ್ಯನೈಮಿತ್ತಿಕ ಮತ್ತು ಕಾಮ್ಯಕರ್ಮಗಳ ಆಚರಣೆಯೂ ಕಾಯಿಕಪುಣ್ಯವೇ—ಆ ಕರ್ಮಗಳಾಚರಣೆಗೆ ಪೂರ್ವಭಾವಿಯಾಗಿ ಮಾಡಬೇಕಾದ ಶೌಚ ಸ್ನಾನಾದಿಗಳೂ ಕಾಯಿಕಪುಣ್ಯಗಳೇ. ದೇಹಸಾಧ್ಯಗಳಾದ ನಿತ್ಯನೈಮಿತ್ತಿಕ ಕರ್ಮಗಳ ತ್ಯಾಗವೂ ಮತ್ತು ನಿಷಿದ್ಧಕರಣವೂ ಕಾಯಿಕಪಾಪಗಳು. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು—ಕಾಯಿಕಪಾಪಗಳಲ್ಲಿ ಕಾಮ್ಯಕರ್ಮಗಳ ತ್ಯಾಗವು ಪಾಪವೆಂದು ಹೇಳಲಾಗಿಲ್ಲ; ಕಾಮ್ಯಕರ್ಮಗಳೆಂದರೆ, ಫಲಾಪೇಕ್ಷೆಯಿಂದ ಮಾಡುವ ನಾನಾ ವ್ರತಪೂಜಾದಿ ಕರ್ಮಗಳು— ಫಲಾಪೇಕ್ಷೆಯಿಲ್ಲ

**ನಿತ್ಯಂ ನೈಮಿತ್ತಿಕಂ ಕರ್ಮ ಸರ್ವಥಾ ನ ಕ್ರಿಯೇತ ಚೇತ್ ॥ ೧೯ ॥**

**ಕಾಯಸಾಧ್ಯನಿಷಿದ್ಧಸ್ಯ ಕೃತಿಃ ಕಾಯಿಕಪಾತಕಂ ।**

ನಿತ್ಯಂ ನೈಮಿತ್ತಿಕಂ ಕರ್ಮ–ನಿತ್ಯನೈಮಿತ್ತಿಕ ಕರ್ಮಗಳನ್ನು (ಕರ್ಮಗಳ ಸಮೂಹವನ್ನು ಅಥವಾ ಅವುಗಳಲ್ಲಿ ಯಾವುದೊಂದನ್ನಾಗಲಿ), ಸರ್ವಥಾ–ಯಾವ ಪ್ರಕಾರದಿಂದಲೂ, ನ ಕ್ರಿಯತೇ ಚೇತ್–ಮಾಡದಿದ್ದರೆ (ಆಚರಿಸದಿದ್ದರೆ), (ಅದೂ–ಅದರ ಪರಿತ್ಯಾಗವೂ), ಕಾಯಸಾಧ್ಯನಿಷಿದ್ಧಸ್ಯ–ದೇಹದಿಂದ ಸಾಧ್ಯವಾದ (ಮಾಡಲು ಶಕ್ಯವಾದ) ನಿಷಿದ್ಧಕರ್ಮದ, ಕೃತಿಃ–ಮಾಡೋಣವೂ, ಕಾಯಿಕಪಾತಕಂ–ಕಾಯಿಕಪಾತಕವೆನಿಸುತ್ತದೆ.

**ದೇವಗೋಗುರುವಿಪ್ರಾಣಾಮನ್ಯೇಷಾಮಪಿ ವಾ ಸತಾಂ ॥ ೨೦ ॥**

**ಕಾಯಕ್ಲೇಶೇನ ಯಾ ವೃತ್ತಿಃ ತತ್ಪುಣ್ಯಂ ಕಾಯಿಕಂ ಸ್ಮೃತಂ ।**

ದೇವಗೋಗುರುವಿಪ್ರಾಣಾಂ–ದೇವತೆಗಳು, ಗೋವು, ಗುರುಗಳು ಮತ್ತು ಬ್ರಾಹ್ಮಣರು, ಅಪಿ–ಮತ್ತು ಅನ್ಯೇಷಾಂ–ಇತರ, ಸತಾಂ ವಾ–ಸಜ್ಜನರ, ಕಾಯಕ್ಲೇಶೇನ–(ತನ್ನ) ದೇಹಶ್ರಮದಿಂದ, ಯಾ ವೃತ್ತಿ–ಮಾಡಲಾಗುವ ಸೇವೆಯು, (ಅವರಿಗೋಸ್ಕರ ಮಾಡಲಾಗುವ ಕ್ರಿಯೆಗಳು), ತತ್–ಅದು, ಕಾಯಿಕಂ ಪುಣ್ಯಂ–ಕಾಯಿಕಪುಣ್ಯವೆಂದು, ಸ್ಮೃತಂ–ಹೇಳಲ್ಪಡುತ್ತದೆ.

---

ಮತ್ತು ನಿಷಿದ್ಧ ಕರ್ಮವನ್ನಾಚರಿಸುವುದೂ ಕಾಯಿಕಪಾಪವು(೧೯). ದೇವ, ಬ್ರಾಹ್ಮಣ, ಗುರು, ಗೋವುಗಳ ಹಾಗೂ ಇತರ ಸಜ್ಜನರ ಉದ್ದೇಶವಾಗಿ, ದೇಹಶ್ರಮದಿಂದ ಮಾಡಲ್ಪಡುವ, ಎಲ್ಲ ಕರ್ಮಗಳೂ ಕಾಯಿಕಪುಣ್ಯಗಳೆಂದೇ ಹೇಳಲಾಗುತ್ತವೆ(೨೦). ಬೀಜವಿಲ್ಲದ್ದು (ಬೀಜವೆಂದರೆ ಮುಂದಿನ ಮತ್ತೊಂದು ಕರ್ಮಕ್ಕೆ ಕಾರಣವಾಗುವುದೆಂದರ್ಥ) ರಾಜಸಪುಣ್ಯವು; ಪುಣ್ಯಬೀಜವಾದುದು (ಅನ್ಯಪುಣ್ಯಕರ್ಮಕ್ಕೆ ಕಾರಣವಾಗುವ ಸಂಸ್ಕಾರವನ್ನುತ್ಪಾದಿಸುವುದು) ಸಾತ್ತ್ವಿಕಪುಣ್ಯವು; ಪಾಪಬೀಜವಾದ ಪುಣ್ಯವು ತಾಮಸಪುಣ್ಯವು; ನಿರ್ಬೀಜವಾದ ರಾಜಸಪುಣ್ಯವು ತನ್ನ ಫಲವಾದ

---

ರವರು ಅವುಗಳನ್ನು ಮಾಡದಿರುವುದರಿಂದ ಪಾಪ ಸಂಭವಿಸುವುದಿಲ್ಲ. ನಿತ್ಯನೈಮಿತ್ತಿಕ ಕರ್ಮಗಳು ಅವರ ಕರ್ತವ್ಯಗಳು; ಅವುಗಳಿಂದ ಇಹಪರಲೋಕಗಳ ಸುಖಹೇತುವಾದ ಫಲಗಳ ಉದಯವಾಗುವುದಿಲ್ಲ; ಕಿಂತು, ಮನಶ್ಶುದ್ಧಿದ್ವಾರಾ ಜ್ಞಾನಸಾಧನೆಗೆ ಅವಶ್ಯವಾದ ನಿಷ್ಕಾಮಪುಣ್ಯ (ಅಕಾಮ್ಯಪುಣ್ಯ)ದ ಉದಯವಾಗುತ್ತದೆ. ನಿತ್ಯಕರ್ಮವೆಂದರೆ, ಶೌಚ, ಸ್ನಾನ, ಸಂಧ್ಯಾ, ವಿಷ್ಣುಪೂಜೆ, ಏಕಾದಶೀ ಉಪವಾಸ ಮೊದಲಾದ ಕರ್ಮಗಳು; ನೈಮಿತ್ತಿಕ ಕರ್ಮವೆಂದರೆ, ಒಂದು ಕಾರಣವಿದ್ದ ಪ್ರಯುಕ್ತ ಅವಶ್ಯ ಆಚರಿಸಬೇಕಾದ, ಪಿತೃಶ್ರಾದ್ಧ-ಗ್ರಹಣನಿಮಿತ್ತ ಸ್ನಾನ-ತರ್ಪಣ ಮೊದಲಾದ ಕರ್ಮಗಳು-ಇತ್ಯಾದಿ, ವಿವಿಧ ಕರ್ಮಗಳ ಸ್ವರೂಪವನ್ನು ತಿಳಿಯಬೇಕು.

ಸಾತ್ವಿಕಾದಿ ಭೇದದಿಂದ ಪುಣ್ಯಪಾಪಗಳೂ ತ್ರಿವಿಧವೆಂದು ಹೇಳುತ್ತ ಮೊದಲಿಗೆ, ಅವುಗಳಲ್ಲಿರುವ ನಿರ್ಬೀಜ ಸಬೀಜಗಳೆಂದು ಭೇದವನ್ನು ನಿರೂಪಿಸುತ್ತಾರೆ:—

**ನಿರ್ಬೀಜಂ ರಾಜಸಂ ಪ್ರೋಕ್ತಂ ಪುಣ್ಯಬೀಜಂ ತು ಸಾತ್ವಿಕಂ ॥ ೨೧ ॥**

**ಪಾಪಬೀಜಂ ತಾಮಸಂ ಸ್ಯಾನ್ನಿರ್ಬೀಜಂ ಭೋಗತೋ ಗತಂ ।**

ನಿರ್ಬೀಜಂ–ಬೀಜರಹಿತವಾದುದು (ಅನ್ಯಪುಣ್ಯ ಅಥವಾ ಪಾಪಕ್ಕೆ ಕಾರಣವಾಗದಿರುವುದು), ರಾಜಸಂ–ರಾಜಸಪುಣ್ಯವು, ಪ್ರೋಕ್ತಂ–(ಎಂದು ಹೇಳಲ್ಪಡುತ್ತದೆ); ಪುಣ್ಯಬೀಜಂ–ಪುಣ್ಯಕ್ಕೆ ಕಾರಣವಾಗುವುದು (ಅನ್ಯಪುಣ್ಯಕ್ಕೆ ಕಾರಣವಾಗುವ ಸಂಸ್ಕಾರವನ್ನುಂಟುಮಾಡುವುದು), ಸಾತ್ವಿಕಂ ತು–ಸಾತ್ವಿಕಪುಣ್ಯವೇ ಸರಿ; ಪಾಪಬೀಜಂ–ಪಾಪಕ್ಕೆ ಕಾರಣವಾಗುವುದು, ತಾಮಸಂ ಸ್ಯಾತ್–ತಾಮಸ ಪುಣ್ಯವೆನಿಸುತ್ತದೆ; ನಿರ್ಬೀಜಂ–ನಿರ್ಬೀಜಪುಣ್ಯವು, ಭೋಗತಃ–ಭೋಗದಿಂದ (ಆ ಪುಣ್ಯದಿಂದ ಲಭ್ಯವಾದ ಸುಖಭೋಗದಿಂದ), ಗತಂ–ನಷ್ಟವಾಗುತ್ತದೆ.

**ದೇಶಕಾಲಾದ್ಯನುಗುಣಾನ್ ನ್ಯಾಯಾರ್ಜಿತಧನೇನ ಯತ್ ॥ ೨೨ ॥**

**ವಿಧಿವಚ್ಛ್ರದ್ಧಯಾ ಯುಕ್ತಂ ಕ್ರಿಯತೇ ನಿರುಪಾಧಿಕಂ ।**

**ತತ್ಪುಣ್ಯಂ ಸಾತ್ವಿಕಂ ಪ್ರೋಕ್ತಂ ತತ್ಫಲಂ ಗತಿರುತ್ತಮಾ ॥ ೨೩ ॥**

ನ್ಯಾಯಾರ್ಜಿತಧನೇನ–ನ್ಯಾಯಮಾರ್ಗದಿಂದ ಸಂಪಾದಿಸಿದ ಧನದಿಂದ, ದೇಶಕಾಲಾದ್ಯನುಗುಣಾನ್–ದೇಶಕಾಲಾನುಗುಣವಾದ ಕರ್ಮಗಳನ್ನು, ವಿಧಿವತ್–ವಿಧಿಯಂತೆ, (ವಿಧ್ಯುಕ್ತರೀತಿಯಲ್ಲಿ), ಶ್ರದ್ಧಯಾ–ಶ್ರದ್ಧೆಯಿಂದ, ಯುಕ್ತಂ–ಸಹಿತವಾಗಿ, ನಿರುಪಾಧಿಕಂ–(ಫಲೋದ್ದೇಶವಿಲ್ಲದೇ) ಉಪಾಧಿರಹಿತವಾಗಿ, ಕ್ರಿಯತೇ–ಮಾಡಲ್ಪಡುವ, ಯತ್–ಯಾವ ಪುಣ್ಯವೋ, ತತ್ ಪುಣ್ಯಂ–ಆ ಪುಣ್ಯವು, ಸಾತ್ವಿಕಂ–ಸಾತ್ವಿಕಪುಣ್ಯವೆಂದು, ಪ್ರೋಕ್ತಂ–ಹೇಳಲ್ಪಡುತ್ತದೆ; ತತ್ಫಲಂ–ಅದರ ಫಲವು, ಉತ್ತಮಾ ಗತಿಃ–ಉತ್ತಮಗತಿಯೇ (ಸರಿ).

---

ಸುಖಭೋಗವನ್ನಿತ್ತು ನಷ್ಟವಾಗುತ್ತದೆ (ಹೀಗೆಯೇ ಪಾಪದಲ್ಲಿ ಸಹ ರಾಜಸಾದಿ ಪ್ರಭೇದವನ್ನೂ ತಿಳಿಯಬೇಕು) (೨೧). ನ್ಯಾಯಾರ್ಜಿತವಾದ ಧನದಿಂದ, ದೇಶಕಾಲಾನುಗುಣಗಳಾದ ಯಾವ ಕರ್ಮಾಚರಣರೂಪದ ಪುಣ್ಯವೋ ಮತ್ತು ಯಾವ ಪುಣ್ಯಕರ್ಮವು ನಿರುಪಾಧಿಕವಾಗಿ ವಿಧ್ಯುಕ್ತರೀತಿಯಿಂದ ಆಚರಿಸಲ್ಪಡುವುದೋ, ಆ ಪುಣ್ಯವೇ ಸಾತ್ವಿಕಪುಣ್ಯವೆನಿಸುತ್ತದೆ; ಶ್ರದ್ಧೆಯಿಂದ ಆಚರಿಸಲಾದ ಸಾತ್ವಿಕಪುಣ್ಯದ ಫಲವು ಉತ್ತಮ ಗತಿಯೇ ಆಗಿರುತ್ತದೆ (೨೨-೨೩). ಸಾತ್ವಿಕಪುಣ್ಯದ ಆಧಿಕ್ಯದಿಂದ ಸ್ವರ್ಗಲೋಕವಾಸವು ದೊರೆಯುತ್ತದೆ; ಆ ಪುಣ್ಯವು ಸ್ವರ್ಗಸುಖಭೋಗದಿಂದ ಕ್ಷಯವಾದ ನಂತರ,

**ತದಾಧಿಕ್ಯವಶಾದೇವ ಸ್ವರ್ಗಲೋಕಾಧಿವಾಸತಾ ।**
**ಜಾಯತೇ ಚ ತತಃ ಕ್ಷೀಣೇ ಪುಣ್ಯೇ ಸಂಜಾಯತೇ ಭುವಿ ॥ ೨೪ ॥**

ತದಾಧಿಕ್ಯವಶಾತ್ ಏವ–ಅಧಿಕಪುಣ್ಯ ಪ್ರಭಾವದಿಂದಲೇ (ಅದರ ಫಲ ದಿಂದಲೇ), ಸ್ವರ್ಗಲೋಕಾಧಿವಾಸತಾ–ಸ್ವರ್ಗಲೋಕವನ್ನು (ಆಶ್ರಯಿಸಿ) ಹೊಂದಿ ಅಲ್ಲಿ ವಾಸಿಸುವಿಕೆಯು, ಜಾಯತೇ–ಉಂಟಾಗುತ್ತದೆ; ತತಃ–(ಅಲ್ಲಿ ಕೆಲಕಾಲ ವಾಸಮಾಡಿದ ನಂತರ), ಪುಣ್ಯೇ–ಪುಣ್ಯವು, ಕ್ಷೀಣೇ–ನಷ್ಟವಾಗುತ್ತಿರಲಾಗಿ, ಭುವಿ–ಭೂಮಿಯಲ್ಲಿ ಸಂಜಾಯತೇ–ಹುಟ್ಟುತ್ತಾನೆ.

**ಪುಣ್ಯಶೇಷೇಣ ತೇನೈವ ಸತ್ಕುಲೇ ಜಾಯತೇ ಜನಿಃ ।**
**ಧನವಾನ್ ಪುತ್ರವಾನ್ ದಕ್ಷಃ ಸುಂದರಃ ಸುಂದರೀಪ್ರಿಯಃ ॥ ೨೫ ॥**

ತೇನ ಏವ–ಅದೇ ಪುಣ್ಯದ, ಪುಣ್ಯಶೇಷೇಣ–ಅವಶಿಷ್ಟವಾದ (ಭೋಗದಿಂದ ವ್ಯಯವಾಗದೇ ಉಳಿದಿರುವ) ಪುಣ್ಯಭಾಗದಿಂದ, ಸತ್ಕುಲೇ–ಸದ್ವಂಶದಲ್ಲಿ, ಜನಿಃ–ಉತ್ಪತ್ತಿಯು, ಜಾಯತೇ–ಉಂಟಾಗುತ್ತದೆ (ಜನ್ಮವು ದೊರೆಯುತ್ತದೆ); ಧನವಾನ್–ಐಶ್ವರ್ಯವಂತನೂ, ಪುತ್ರವಾನ್–ಪುತ್ರಸಂತಾನಯುಕ್ತನೂ, ದಕ್ಷಃ–ಸಮರ್ಥನೂ (ಕಾರ್ಯಶಕ್ತಿಯುಳ್ಳವನೂ), ಸುಂದರಃ–ರೂಪವಂತನೂ, ಸುಂದರೀಪ್ರಿಯಃ–ಭಾರ್ಯೆಗಳ ಪ್ರೇಮಪಾತ್ರನೂ (ಅಥವಾ ಶ್ರೀ ಲಕ್ಷ್ಮೀಕೃಪಾ ಪಾತ್ರನೂ), (ಆಗುತ್ತಾನೆ).

**ದಾತಾ ಭೋಕ್ತಾ ಕರ್ಮನಿಷ್ಠಃ ಪರೋಪಕರಣೇ ರತಃ ।**
**ಫಲೇನಾನೇನ ಪುಣ್ಯಸ್ಯ ಪುನಃ ಪುಣ್ಯಂ ವಿವರ್ಧತೇ ॥ ೨೬ ॥**

**ಪುನಃ ಸ್ವರ್ಗಂ ಪುನಃ ಸಂಪದೇವಂ ಜನ್ಮನಿ ಜನ್ಮನಿ ।**

---

ಪುನಃ ಭೂಮಿಯಲ್ಲಿ ಆ ಪುಣ್ಯವಂತನು, ಜನಿಸುತ್ತಾನೆ (೨೪). ಅದೇ ಪುಣ್ಯಶೇಷದಿಂದ (ಮುಂದೆ ಸ್ವರ್ಗಸುಖಭೋಗಕ್ಕೆ ಅವಶ್ಯಕವಾದಷ್ಟು ಪುಣ್ಯವು ಉಳಿದಿರುವುದಿಲ್ಲವಾದ್ದರಿಂದ), ಭೂಮಿಯಲ್ಲಿ ಸತ್ಕುಲದಲ್ಲಿ ಜನ್ಮವು ದೊರೆಯುತ್ತದೆ. ಆ ಜನ್ಮದಲ್ಲಿ ಶ್ರೀಮಂತನೂ ಸುಂದರನೂ ಆಗಿದ್ದು, ದಾಂಪತ್ಯ ಸುಖಾದಿಗಳನ್ನೂ ಪಡೆಯುತ್ತಾನೆ (೨೫). ಹೀಗೆ ಭೂಮಿಯಲ್ಲಿ ಹುಟ್ಟಿದವನು, ಉದಾರ ದಾನಿಯೂ, ನಾನಾ ಭೋಗಗಳನ್ನು ಅನುಭವಿಸುವವನೂ, ವಿಹಿತ ಕರ್ಮಾನುಷ್ಠಾನಪರನೂ, ಪರೋಪಕಾರದಲ್ಲಿ ಆಸಕ್ತನೂ, ಆಗಿರುತ್ತ ಈ ಪುಣ್ಯ ಫಲದಿಂದ ಪುನಃ ಪುಣ್ಯಾಧಿಕ್ಯವನ್ನು (ಪುಣ್ಯವೃದ್ಧಿಯನ್ನು) ಹೊಂದಿ, ಪುನಃ ಸ್ವರ್ಗವಾಸವನ್ನೂ, ಅಲ್ಲಿಂದ ಭೂಮಿಯಲ್ಲಿ ಪುನಃ ಹುಟ್ಟಿ ಸಂಪದಾದಿಗಳನ್ನು

ಸಾತ್ತ್ವಿಕಾದಿ ಭೇದದಿಂದ ಪುಣ್ಯಪಾಪಗಳೂ ತ್ರಿವಿಧವೆಂದು ಹೇಳುತ್ತ ಮೊದಲಿಗೆ, ಅವುಗಳಲ್ಲಿರುವ ನಿರ್ಬೀಜ ಸಬೀಜಗಳೆಂದು ಭೇದವನ್ನು ನಿರೂಪಿಸುತ್ತಾರೆ:—

**ನಿರ್ಬೀಜಂ ರಾಜಸಂ ಪ್ರೋಕ್ತಂ ಪುಣ್ಯಬೀಜಂ ತು ಸಾತ್ತ್ವಿಕಂ ॥ ೨೧ ॥**

**ಪಾಪಬೀಜಂ ತಾಮಸಂ ಸ್ಯಾನ್ನಿರ್ಬೀಜಂ ಭೋಗತೋ ಗತಂ ।**

ನಿರ್ಬೀಜಂ–ಬೀಜರಹಿತವಾದುದು (ಅನ್ಯಪುಣ್ಯ ಅಥವಾ ಪಾಪಕ್ಕೆ ಕಾರಣವಾಗದಿರುವುದು), ರಾಜಸಂ–ರಾಜಸಪುಣ್ಯವು, ಪ್ರೋಕ್ತಂ–(ಎಂದು ಹೇಳಲ್ಪಡುತ್ತದೆ); ಪುಣ್ಯಬೀಜಂ–ಪುಣ್ಯಕ್ಕೆ ಕಾರಣವಾಗುವುದು (ಅನ್ಯಪುಣ್ಯಕ್ಕೆ ಕಾರಣವಾಗುವ ಸಂಸ್ಕಾರವನ್ನುಂಟುಮಾಡುವುದು), ಸಾತ್ತ್ವಿಕಂ ತು–ಸಾತ್ತ್ವಿಕಪುಣ್ಯವೇ ಸರಿ; ಪಾಪಬೀಜಂ–ಪಾಪಕ್ಕೆ ಕಾರಣವಾಗುವುದು, ತಾಮಸಂ ಸ್ಯಾತ್–ತಾಮಸ ಪುಣ್ಯವೆನಿಸುತ್ತದೆ; ನಿರ್ಬೀಜಂ–ನಿರ್ಬೀಜಪುಣ್ಯವು, ಭೋಗತಃ–ಭೋಗದಿಂದ (ಆ ಪುಣ್ಯದಿಂದ ಲಭ್ಯವಾದ ಸುಖಭೋಗದಿಂದ), ಗತಂ–ನಷ್ಟವಾಗುತ್ತದೆ.

**ದೇಶಕಾಲಾದ್ಯನುಗುಣಾನ್ ನ್ಯಾಯಾರ್ಜಿತಧನೇನ ಯತ್ ॥ ೨೨ ॥**

**ವಿಧಿವಚ್ಛ್ರದ್ಧಯಾ ಯುಕ್ತಂ ಕ್ರಿಯತೇ ನಿರುಪಾಧಿಕಂ ।**

**ತತ್ಪುಣ್ಯಂ ಸಾತ್ತ್ವಿಕಂ ಪ್ರೋಕ್ತಂ ತತ್ಫಲಂ ಗತಿರುತ್ತಮಾ ॥ ೨೩ ॥**

ನ್ಯಾಯಾರ್ಜಿತಧನೇನ–ನ್ಯಾಯಮಾರ್ಗದಿಂದ ಸಂಪಾದಿಸಿದ ಧನದಿಂದ, ದೇಶಕಾಲಾದ್ಯನುಗುಣಾನ್–ದೇಶಕಾಲಾನುಗುಣವಾದ ಕರ್ಮಗಳನ್ನು, ವಿಧಿವತ್–ವಿಧಿಯಂತೆ, (ವಿಧ್ಯುಕ್ತರೀತಿಯಲ್ಲಿ), ಶ್ರದ್ಧಯಾ–ಶ್ರದ್ಧೆಯಿಂದ, ಯುಕ್ತಂ–ಸಹಿತವಾಗಿ, ನಿರುಪಾಧಿಕಂ–(ಫಲೋದ್ದೇಶವಿಲ್ಲದೇ) ಉಪಾಧಿರಹಿತವಾಗಿ, ಕ್ರಿಯತೇ–ಮಾಡಲ್ಪಡುವ, ಯತ್–ಯಾವ ಪುಣ್ಯವೋ, ತತ್ ಪುಣ್ಯಂ–ಆ ಪುಣ್ಯವು, ಸಾತ್ತ್ವಿಕಂ–ಸಾತ್ತ್ವಿಕಪುಣ್ಯವೆಂದು, ಪ್ರೋಕ್ತಂ–ಹೇಳಲ್ಪಡುತ್ತದೆ; ತತ್ಫಲಂ–ಅದರ ಫಲವು, ಉತ್ತಮಾ ಗತಿಃ–ಉತ್ತಮಗತಿಯೇ (ಸರಿ).

---

ಸುಖಭೋಗವನ್ನಿತ್ತು ನಷ್ಟವಾಗುತ್ತದೆ (ಹೀಗೆಯೇ ಪಾಪದಲ್ಲಿ ಸಹ ರಾಜಸಾದಿ ಪ್ರಭೇದವನ್ನೂ ತಿಳಿಯಬೇಕು) (೨೧). ನ್ಯಾಯಾರ್ಜಿತವಾದ ಧನದಿಂದ, ದೇಶಕಾಲಾನುಗುಣಗಳಾದ ಯಾವ ಕರ್ಮಾಚರಣರೂಪದ ಪುಣ್ಯವೋ ಮತ್ತು ಯಾವ ಪುಣ್ಯಕರ್ಮವು ನಿರುಪಾಧಿಕವಾಗಿ ವಿಧ್ಯುಕ್ತರೀತಿಯಿಂದ ಆಚರಿಸಲ್ಪಡುವುದೋ, ಆ ಪುಣ್ಯವೇ ಸಾತ್ತ್ವಿಕಪುಣ್ಯವೆನಿಸುತ್ತದೆ; ಶ್ರದ್ಧೆಯಿಂದ ಆಚರಿಸಲಾದ ಸಾತ್ತ್ವಿಕಪುಣ್ಯದ ಫಲವು ಉತ್ತಮ ಗತಿಯೇ ಆಗಿರುತ್ತದೆ (೨೨-೨೩). ಸಾತ್ತ್ವಿಕಪುಣ್ಯದ ಆಧಿಕ್ಯದಿಂದ ಸ್ವರ್ಗಲೋಕ ವಾಸವು ದೊರೆಯುತ್ತದೆ; ಆ ಪುಣ್ಯವು ಸ್ವರ್ಗಸುಖಭೋಗದಿಂದ ವ್ಯಯವಾದ ನಂತರ,

**ತದಾಧಿಕ್ಯವಶಾದೇವ ಸ್ವರ್ಗಲೋಕಾಧಿವಾಸತಾ ।**
**ಜಾಯತೇ ಚ ತತಃ ಕ್ಷೀಣೇ ಪುಣ್ಯೇ ಸಂಜಾಯತೇ ಭುವಿ ॥ ೨೪ ॥**

ತದಾಧಿಕ್ಯವಶಾತ್ ಏವ–ಅಧಿಕಪುಣ್ಯ ಪ್ರಭಾವದಿಂದಲೇ (ಅದರ ಫಲ ದಿಂದಲೇ), ಸ್ವರ್ಗಲೋಕಾಧಿವಾಸತಾ–ಸ್ವರ್ಗಲೋಕವನ್ನು (ಆಶ್ರಯಿಸಿ) ಹೊಂದಿ ಅಲ್ಲಿ ವಾಸಿಸುವಿಕೆಯು, ಜಾಯತೇ–ಉಂಟಾಗುತ್ತದೆ; ತತಃ–(ಅಲ್ಲಿ ಕೆಲಕಾಲ ವಾಸಮಾಡಿದ ನಂತರ), ಪುಣ್ಯೇ–ಪುಣ್ಯವು, ಕ್ಷೀಣೇ–ನಷ್ಟವಾಗುತ್ತಿರಲಾಗಿ, ಭುವಿ–ಭೂಮಿಯಲ್ಲಿ, ಸಂಜಾಯತೇ–ಹುಟ್ಟುತ್ತಾನೆ.

**ಪುಣ್ಯಶೇಷೇಣ ತೇನೈವ ಸತ್ಕುಲೇ ಜಾಯತೇ ಜನಿಃ ।**
**ಧನವಾನ್ ಪುತ್ರವಾನ್ ದಕ್ಷಃ ಸುಂದರಃ ಸುಂದರೀಪ್ರಿಯಃ ॥ ೨೫ ॥**

ತೇನ ಏವ–ಅದೇ ಪುಣ್ಯದ, ಪುಣ್ಯಶೇಷೇಣ–ಅವಶಿಷ್ಟವಾದ (ಭೋಗದಿಂದ ವ್ಯಯವಾಗದೇ ಉಳಿದಿರುವ) ಪುಣ್ಯಭಾಗದಿಂದ, ಸತ್ಕುಲೇ–ಸದ್ವಂಶದಲ್ಲಿ, ಜನಿಃ–ಉತ್ಪತ್ತಿಯು, ಜಾಯತೇ–ಉಂಟಾಗುತ್ತದೆ (ಜನ್ಮವು ದೊರೆಯುತ್ತದೆ); ಧನವಾನ್–ಐಶ್ವರ್ಯವಂತನೂ, ಪುತ್ರವಾನ್–ಪುತ್ರಸಂತಾನಯುಕ್ತನೂ, ದಕ್ಷಃ–ಸಮರ್ಥನೂ (ಕಾರ್ಯಶಕ್ತಿಯುಳ್ಳವನೂ), ಸುಂದರಃ–ರೂಪವಂತನೂ, ಸುಂದರೀಪ್ರಿಯಃ–ಭಾರ್ಯೆಗಳ ಪ್ರೇಮಪಾತ್ರನೂ (ಅಥವಾ ಶ್ರೀ ಲಕ್ಷ್ಮೀಕೃಪಾ ಪಾತ್ರನೂ), (ಆಗುತ್ತಾನೆ).

**ದಾತಾ ಭೋಕ್ತಾ ಕರ್ಮನಿಷ್ಠಃ ಪರೋಪಕರಣೇ ರತಃ ।**
**ಫಲೇನಾನೇನ ಪುಣ್ಯಸ್ಯ ಪುನಃ ಪುಣ್ಯಂ ವಿವರ್ಧತೇ ॥ ೨೬ ॥**

**ಪುನಃ ಸ್ವರ್ಗಂ ಪುನಃ ಸಂಪದೇವಂ ಜನ್ಮನಿ ಜನ್ಮನಿ ।**

---

ಪುನಃ ಭೂಮಿಯಲ್ಲಿ ಆ ಪುಣ್ಯವಂತನು, ಜನಿಸುತ್ತಾನೆ (೨೪). ಅದೇ ಪುಣ್ಯಶೇಷದಿಂದ (ಮುಂದೆ ಸ್ವರ್ಗಸುಖಭೋಗಕ್ಕೆ ಅವಶ್ಯಕವಾದಷ್ಟು ಪುಣ್ಯವು ಉಳಿದಿರುವುದಿಲ್ಲವಾದ್ದರಿಂದ). ಭೂಮಿಯಲ್ಲಿ ಸತ್ಕುಲದಲ್ಲಿ ಜನ್ಮವು ದೊರೆಯುತ್ತದೆ. ಆ ಜನ್ಮದಲ್ಲಿ ಶ್ರೀಮಂತನೂ ಸುಂದರನೂ ಆಗಿದ್ದು, ದಾಂಪತ್ಯ ಸುಖಾದಿಗಳನ್ನೂ ಪಡೆಯುತ್ತಾನೆ (೨೫). ಹೀಗೆ ಭೂಮಿಯಲ್ಲಿ ಹುಟ್ಟಿದವನು, ಉದಾರ ದಾನಿಯೂ, ನಾನಾ ಭೋಗಗಳನ್ನು ಅನುಭವಿಸುವವನೂ, ವಿಹಿತ ಕರ್ಮಾನುಷ್ಠಾನಪರನೂ, ಪರೋಪಕಾರದಲ್ಲಿ ಆಸಕ್ತನೂ, ಆಗಿರುತ್ತ ಈ ಪುಣ್ಯ ಫಲದಿಂದ ಪುನಃ ಪುಣ್ಯಾಧಿಕ್ಯವನ್ನು (ಪುಣ್ಯವೃದ್ಧಿಯನ್ನು) ಹೊಂದಿ, ಪುನಃ ಸ್ವರ್ಗವಾಸವನ್ನೂ, ಅಲ್ಲಿಂದ ಭೂಮಿಯಲ್ಲಿ ಪುನಃ ಹುಟ್ಟಿ ಸಂಪದಾದಿಗಳನ್ನು

(ಹಾಗೆ ಪುಣ್ಯಶೇಷದಿಂದ ಭೂಮಿಯಲ್ಲಿ ಜನಿಸಿದವನು). ದಾತಾ–ಉದಾರವಾಗಿ ದಾನಕೊಡುವವನೂ, ಭೋಕ್ತಾ–ಸ್ವಯಂ ಭೋಗಿಸುವವನೂ, ಕರ್ಮನಿಷ್ಠ–ವಿಹಿತ ಕರ್ಮಾನುಷ್ಠಾನಪರನೂ, ಪರೋಪಕರಣೇ–ಪರರಿಗೆ ಉಪಕಾರ ಮಾಡುವುದರಲ್ಲಿ ರತಃ–ಆಸಕ್ತನೂ, (ಆಗಿದ್ದು); ಅನೇನ–ಈ, (ಹೀಗೆ ಮಾಡುವ) ಪುಣ್ಯಸ್ಯ–ಪುಣ್ಯದ, ಫಲೇನ–ಫಲದಿಂದ, ಪುನಃ–ಮತ್ತೆ ಪುಣ್ಯಂ–ಪುಣ್ಯವೇ, ವಿವರ್ಧತೇ–ವೃದ್ಧಿಯಾಗುತ್ತದೆ (ಅಧಿಕವಾಗುತ್ತದೆ); ಪುನಃ(ಪುಣ್ಯಾಧಿಕ್ಯದಿಂದ) ಮತ್ತೆ ಸ್ವರ್ಗಂ–ಸ್ವರ್ಗವಾಸವೂ, ಪುನಃ(ತಿರುಗಿ ಭೂಮಿಯಲ್ಲಿ ಪುಣ್ಯಶೇಷದಿಂದ ಹುಟ್ಟಿ) ಮತ್ತೆ ಸಂಪತ್–ಐಶ್ವರ್ಯವೂ, ಏವಂ–ಹೀಗೆ, ಜನ್ಮನಿ ಜನ್ಮನಿ — ಪ್ರತಿ ಜನ್ಮದಲ್ಲಿಯೂ (ಮುಂದುವರಿಯುತ್ತಾನೆ).

**ಯದಿ ಮಯ್ಯರ್ಪಿತಂ ಪುಣ್ಯಂ ತರ್ಹಿ ಸ್ಯಾತ್ ಜ್ಞಾನಸಾಧಕಂ ॥ ೨೭ ॥**

**ಜ್ಞಾನೇನ ಜಾಯತೇ ಮೋಕ್ಷಃ ಕ್ರಮೇಣೈವ ವಿನಿಶ್ಚಯಾತ್ ।**

ಯದಿ–ಒಂದು ವೇಳೆ ಪುಣ್ಯಂ–(ಹೀಗೆ ಸತ್ಕರ್ಮಗಳಿಂದ ಸಂಪಾದಿತವಾದ) ಪುಣ್ಯವು, ಮಯಿ–ನನ್ನಲ್ಲಿ ಅರ್ಪಿತಂ–ಅರ್ಪಿಸಲ್ಪಟ್ಟರೆ, ತರ್ಹಿ–ಆಗ, ಜ್ಞಾನಸಾಧಕಂ–(ಮೋಕ್ಷಸಾಧಕವಾದ) ಜ್ಞಾನವನ್ನು ಸಾಧಿಸುವುದು, ಸ್ಯಾತ್–ಆಗುತ್ತದೆ. ಜ್ಞಾನೇನ–ಜ್ಞಾನದಿಂದ, ವಿನಿಶ್ಚಯಾತ್–ನಿಶ್ಚಯವಾಗಿ, ಕ್ರಮೇಣ–ಕ್ರಮವಾಗಿ (ಅಪರೋಕ್ಷದಲ್ಲಿ ನನ್ನ ಸಂದರ್ಶನವೂ, ಅದರ ಫಲವಾಗಿ ಕರ್ಮಕ್ಷಯ, ಲಿಂಗಭಂಗಾದಿಗಳೂ ದೊರೆತು). ಮೋಕ್ಷಃ ಏವ–(ಸ್ವಯೋಗ್ಯ) ಮೋಕ್ಷವೇ, ಜಾಯತೇ–ಲಭಿಸುತ್ತದೆ.

**ಯದ್ಯನ್ಯದೇವತಾ ಭಕ್ತ್ಯಾ ಪುಣ್ಯಮೇವ ಕರೋತಿ ಚೇತ್ ॥ ೨೮ ॥**

---

ಹೊಂದುತ್ತ, ಪ್ರತಿ ಜನ್ಮ ಜನ್ಮದಲ್ಲಿ ಹೀಗೆಯೇ ಮುಂದುವರಿಯುತ್ತ ಸಂಸಾರದಲ್ಲಿ ಸುತ್ತುತ್ತಾನೆ (೨೬). ಹೀಗಲ್ಲದೇ ಆ ಪುಣ್ಯವನ್ನು (ಪುಣ್ಯಫಲವನ್ನೆಲ್ಲ) ನನ್ನಲ್ಲಿ ಸಮರ್ಪಿಸಿದರೆ, ಆ ಪುಣ್ಯವು ಜ್ಞಾನ (ಮುಕ್ತಿಪ್ರಯೋಜಕವಾದ ಮೋಕ್ಷಸಾಧಕ ಜ್ಞಾನ) ಸಾಧಕವಾಗುತ್ತದೆ. ಆ ಜ್ಞಾನದಿಂದ ಕ್ರಮವಾಗಿ ಭಕ್ತಿಯೂ, ಭಗವದಪರೋಕ್ಷವೂ, ಕಡೆಗೆ ಫಲವಾಗಿ ಮೋಕ್ಷವೂ ಲಭಿಸುತ್ತದೆ(೨೭). ಅನ್ಯದೇವತಾಭಕ್ತನು ಕೇವಲ ಪುಣ್ಯವನ್ನೇ ಆಚರಿಸುತ್ತಿದ್ದರೂ, ಪುನಃ ಪುನಃ ಸ್ವರ್ಗ ಭೂಮಿಗಳಲ್ಲಿ ಸುತ್ತುತ್ತಲೇ ಇರುತ್ತಾನೆ. ಮೋಕ್ಷವು ಲಭಿಸುವುದೇ ಇಲ್ಲ (ಇದು ಶ್ರೀವಿಷ್ಣುರಹಸ್ಯ ಸ್ವರ್ಗಪ್ರಚುರ ನಿತ್ಯಸಂಸಾರಿಜೀವ ವಿಷಯಕವಾದುದು). ಪುಣ್ಯಕರ್ಮಗಳಲ್ಲಿ ಆಸಕ್ತನಾದವನು, ನನ್ನ ಭಕ್ತನಾಗಿದ್ದರೆ (ಸ್ವರೂಪದಿಂದ ಮುಕ್ತಿಯೋಗ್ಯಜೀವನಾಗಿದ್ದು ನನ್ನ ಭಕ್ತಿಯು ಸ್ವರೂಪಸಿದ್ಧವಾದುದಾಗಿದ್ದರೆ). ಅವನೂ ಪುಣ್ಯಕರ್ಮಗಳಿಂದ, ಸ್ವರ್ಗಾದಿ ಭೋಗಗಳನ್ನು

**ಪುನಃ ಪುನಃ ಸ ಭವತಿ ಸ್ವರ್ಗೇ ವಾ ಪೃಥಿವೀತಲೇ ।**
**ನೈವ ಮೋಕ್ಷಮವಾಪ್ನೋತಿ ಯಾವತ್ಕಾಮೋ ನ ಪೂರ್ಯತೇ ॥ ೨೯ ॥**

**ಸ ಕಾಮೋಽಪಿ ಹಿ ಮದ್ಭಕ್ತೋ ಲಭತೇ ಕರ್ಮಣಾಂ ಫಲಂ ।**
**ಅಂತೇ ನಿಷ್ಕಾಮತಾಂ ಪ್ರಾಪ್ಯ ಕ್ರಮಾನ್ಮುಕ್ತಿಮವಾಪ್ನುಯಾತ್ ॥ ೩೦ ॥**

ಅನ್ಯದೇವತಾಭಕ್ತಃ-(ಶ್ರೀವಿಷ್ಣುವಿನ ಅಧೀನರಾದ ಸಮಸ್ತ ದೇವತೆಗಳ ಮಧ್ಯದಲ್ಲಿ) ಯಾವ ದೇವತೆಯನ್ನೇ ಆಗಲಿ ಆರಾಧಿಸುವ ಭಕ್ತನು, ಪುಣ್ಯಂ ಏವ—ಪುಣ್ಯವನ್ನೇ, ಯದಿ ಕರೋತಿ ಚೇತ್-ಮಾಡುವವನಾದರೂ, ಸಃ-ಅವನು (ಆ ಅನ್ಯದೇವತಾಭಕ್ತನು), ಪುನಃ ಪುನಃ-ಮತ್ತೆ ಮತ್ತೆ ಸ್ವರ್ಗೇ ವಾ-ಸ್ವರ್ಗದಲ್ಲಿ ಆಗಲಿ, ಪೃಥಿವೀತಲೇ-ಭೂತಳದಲ್ಲಿ ಆಗಲಿ, ಭವತಿ-ಇರುವವನಾಗುತ್ತಾನೆ; ಯಾವತ್-ಎಲ್ಲಿವರೆಗೆ, ಕಾಮಃ-(ಸ್ವರ್ಗಾದಿ ಭೋಗಗಳ) ಇಚ್ಛೆಯು (ವಿಷಯ ಭೋಗೇಚ್ಛೆಯು), ನ ಪೂರ್ಯತೇ-ಪೂರ್ಣವಾಗುವುದಿಲ್ಲವೋ, (ತಾವತ್=ಅಲ್ಲಿಯವರೆಗೆ), ಮೋಕ್ಷಂ-ಮೋಕ್ಷವನ್ನು, ನೈವ ಅವ್ನೋತಿ-ಹೊಂದುವುದಿಲ್ಲ); ಮದ್ಭಕ್ತಃ-ನನ್ನ ಭಕ್ತನು, (ಅನ್ಯ ದೇವತೆಗಳ ಆಶ್ರಯಕ್ಕಾಗಿ ಯತ್ನಿಸದ ವಿಷ್ಣುಭಕ್ತನು), ಸಕಾಮಃ ಅಪಿ-(ವಿಷಯಭೋಗದಿಂದ ಲಭಿಸುವ) ಸುಖಾಪೇಕ್ಷೆಯುಳ್ಳವನಾದರೂ, ಕರ್ಮಣಾಂ-(ತನ್ನ) ಪುಣ್ಯಗಳ, ಫಲಂ-ಫಲವನ್ನು (ಭೂಸ್ವರ್ಗಗಳ ಭೋಗವನ್ನು), ಲಭತೇ-ಹೊಂದುತ್ತಾನೆ; (ಆದರೆ), ಅಂತೇ-ಕೊನೆಯಲ್ಲಿ (ಬಹುಕಾಲ ಈ ಸುಖವನ್ನು ಭೋಗಿಸಿದ ನಂತರ), ನಿಷ್ಕಾಮತಾಂ-ನಿಷ್ಕಾಮತ್ವವನ್ನು (ಪುಣ್ಯಫಲಗಳ ಆಶೆಯನ್ನು ತ್ಯಜಿಸಿ), ಕ್ರಮಾತ್-ಕ್ರಮವಾಗಿ (ಮೇಲೆ ಮೇಲಿನ ಸಾಧನಮಟ್ಟಗಳನ್ನು ಹೊಂದಿ), ಮುಕ್ತಿಂ-ಮುಕ್ತಿಯನ್ನು ಅವಾಪ್ನುಯಾತ್-ಹೊಂದುತ್ತಾನೆ.

**ಯೇನ ಪುಣ್ಯಫಲೇನ ಸ್ಯಾದೇವಂ ಪುಣ್ಯಸ್ಯ ವರ್ಧನಂ ।**
**ತತ್ಸಾತ್ತ್ವಿಕಮಿತಿ ಪ್ರೋಕ್ತಂ ಯೇನ ಪುಣ್ಯಫಲೇನ ಚ ॥ ೩೧ ॥**

---

ಭೋಗಿಸಲು ಸ್ವರ್ಗ ಭೂಮಿಗಳ ವಾಸವನ್ನು ಹೊಂದುತ್ತ ಬಂದರೂ, ಅಂತ್ಯಕ್ಕೆ (ಕೆಲಕಾಲ ನಂತರ ವಿರಕ್ತನಾಗಿ) ನಿಷ್ಕಾಮಕರ್ಮಗಳಲ್ಲಿ ಅಭಿರುಚಿಯನ್ನು ಹೊಂದಿ, ಕ್ರಮವಾಗಿ ಮುಕ್ತಿಯನ್ನೂ ಹೊಂದುತ್ತಾನೆ (೨೮-೩೦). ಯಾವ ಪುಣ್ಯದ ಫಲದಿಂದ ಪುಣ್ಯದ ವೃದ್ಧಿಯುಂಟಾಗುತ್ತದೆಯೋ, ಅದು ಸಾತ್ತ್ವಿಕಪುಣ್ಯವು. ಯಾವುದರ ಫಲದಿಂದ ಪಾಪವೃದ್ಧಿಯೇ ಸಂಭವಿಸುವುದೋ ಆ ಪುಣ್ಯವು ತಾಮಸಪುಣ್ಯವೆಂದು ಕರೆಯಲ್ಪಡುತ್ತದೆ (೩೧). ಕಾಮ, ಅಸೂಯೆ, ಲೋಭ, ದಂಭ, ಭಯ ಮೊದಲಾದ ಭಾವಗಳಿಂದ ಮುಕ್ತವಾದ ಮನಸ್ಸುಳ್ಳವನಾಗಿ, (ಮಾನಸಪಾಪರಹಿತನಾಗಿ)[1] ಯುಕ್ತ

1 ಇದೇ ಅಧ್ಯಾಯದ ೯-೧೧ ಶ್ಲೋಕಗಳನ್ನು ಇಲ್ಲಿ ಗಮನಿಸಬೇಕು.

(ಹಾಗೆ ಪುಣ್ಯಶೇಷದಿಂದ ಭೂಮಿಯಲ್ಲಿ ಜನಿಸಿದವನು). ದಾತಾ–ಉದಾರವಾಗಿ ದಾನಕೊಡುವವನೂ, ಭೋಕ್ತಾ–ಸ್ವಯಂ ಭೋಗಿಸುವವನೂ, ಕರ್ಮನಿಷ್ಠ–ವಿಹಿತ ಕರ್ಮಾನುಷ್ಠಾನಪರನೂ, ಪರೋಪಕರಣೇ–ಪರರಿಗೆ ಉಪಕಾರ ಮಾಡುವುದರಲ್ಲಿ ರತಃ–ಆಸಕ್ತನೂ, (ಆಗಿದ್ದು); ಅನೇನ–ಈ, (ಹೀಗೆ ಮಾಡುವ) ಪುಣ್ಯಸ್ಯ–ಪುಣ್ಯದ, ಫಲೇನ–ಫಲದಿಂದ, ಪುನಃ–ಮತ್ತೆ ಪುಣ್ಯಂ–ಪುಣ್ಯವೇ, ವಿವರ್ಧತೇ–ವೃದ್ಧಿಯಾಗುತ್ತದೆ (ಅಧಿಕವಾಗುತ್ತದೆ); ಪುನಃ(ಪುಣ್ಯಾಧಿಕ್ಯದಿಂದ) ಮತ್ತೆ ಸ್ವರ್ಗಂ–ಸ್ವರ್ಗವಾಸವೂ, ಪುನಃ(ತಿರಿಗಿ ಭೂಮಿಯಲ್ಲಿ ಪುಣ್ಯಶೇಷದಿಂದ ಹುಟ್ಟಿ) ಮತ್ತೆ ಸಂಪತ್–ಐಶ್ವರ್ಯವೂ, ಏವಂ–ಹೀಗೆ, ಜನ್ಮನಿ ಜನ್ಮನಿ — ಪ್ರತಿ ಜನ್ಮದಲ್ಲಿಯೂ (ಮುಂದುವರಿಯುತ್ತಾನೆ).

**ಯದಿ ಮಯ್ಯರ್ಪಿತಂ ಪುಣ್ಯಂ ತರ್ಹಿ ಸ್ಯಾತ್ ಜ್ಞಾನಸಾಧಕಂ ॥ ೨೭ ॥**

**ಜ್ಞಾನೇನ ಜಾಯತೇ ಮೋಕ್ಷಃ ಕ್ರಮೇಣೈವ ವಿನಿಶ್ಚಯಾತ್ ।**

ಯದಿ–ಒಂದು ಪಕ್ಷ ಪುಣ್ಯಂ(ಹೀಗೆ ಸತ್ಕರ್ಮಗಳಿಂದ ಸಂಪಾದಿತವಾದ) ಪುಣ್ಯವು, ಮಯಿ–ನನ್ನಲ್ಲಿ ಅರ್ಪಿತಂ–ಅರ್ಪಿಸಲ್ಪಟ್ಟರೆ, ತರ್ಹಿ–ಆಗ, ಜ್ಞಾನಸಾಧಕಂ–(ಮೋಕ್ಷಸಾಧಕವಾದ) ಜ್ಞಾನವನ್ನು ಸಾಧಿಸುವುದು, ಸ್ಯಾತ್–ಆಗುತ್ತದೆ; ಜ್ಞಾನೇನ–ಜ್ಞಾನದಿಂದ, ವಿನಿಶ್ಚಯಾತ್–ನಿಶ್ಚಯವಾಗಿ, ಕ್ರಮೇಣ–ಕ್ರಮವಾಗಿ (ಅಪರೋಕ್ಷದಲ್ಲಿ ನನ್ನ ಸಂದರ್ಶನವೂ, ಅದರ ಫಲವಾಗಿ ಕರ್ಮಕ್ಷಯ, ಲಿಂಗಭಂಗಾದಿಗಳೂ ದೊರೆತು), ಮೋಕ್ಷಃ ಏವ–(ಸ್ವಯೋಗ್ಯ) ಮೋಕ್ಷವೇ, ಜಾಯತೇ–ಲಭಿಸುತ್ತದೆ.

**ಯದ್ಯನ್ಯದೇವತಾ ಭಕ್ತಃ ಪುಣ್ಯಮೇವ ಕರೋತಿ ಚೇತ್ ॥ ೨೮ ॥**

---

ಹೊಂದುತ್ತ ಪ್ರತಿ ಜನ್ಮ ಜನ್ಮದಲ್ಲಿ ಹೀಗೆಯೇ ಮುಂದುವರಿಯುತ್ತ ಸಂಸಾರದಲ್ಲಿ ಸುತ್ತುತ್ತಾನೆ (೨೬). ಹೀಗಲ್ಲದೇ ಆ ಪುಣ್ಯವನ್ನು (ಪುಣ್ಯಫಲವನ್ನೆಲ್ಲ) ನನ್ನಲ್ಲಿ ಸಮರ್ಪಿಸಿದರೆ, ಆ ಪುಣ್ಯವು ಜ್ಞಾನ (ಮದ್ವಿಷಯಕವಾದ ಮೋಕ್ಷಸಾಧಕ ಜ್ಞಾನ) ಸಾಧಕವಾಗುತ್ತದೆ; ಆ ಜ್ಞಾನದಿಂದ ಕ್ರಮವಾಗಿ, ಭಕ್ತಿಯೂ, ಭಗವದಪರೋಕ್ಷವೂ, ತತ್ಫಲವಾಗಿ ಮೋಕ್ಷವೂ ಲಭಿಸುತ್ತದೆ(೨೭). ಅನ್ಯದೇವತಾಭಕ್ತನು ಕೇವಲ ಪುಣ್ಯವನ್ನೇ ಆಚರಿಸುತ್ತಿದ್ದರೂ, ಪುನಃ ಪುನಃ ಸ್ವರ್ಗ ಭೂಮಿಗಳಲ್ಲಿ ಸುತ್ತುತ್ತಲೇ ಇರುತ್ತಾನೆ; ಮೋಕ್ಷವು ಲಭಿಸುವುದೇ ಇಲ್ಲ (ಇದು ತ್ರೈವಿದ್ಯರೆಂಬ ಸ್ವರ್ಗಪ್ರಚುರ ನಿತ್ಯಸಂಸಾರಿಜೀವ ವಿಷಯಕವಾದುದು); ಪುಣ್ಯಕರ್ಮಗಳಲ್ಲಿ ಆಸಕ್ತನಾದವನು, ನನ್ನ ಭಕ್ತನಾಗಿದ್ದರೆ (ಸ್ವರೂಪದಿಂದ ಮುಕ್ತಿಯೋಗ್ಯಜೀವನಾಗಿದ್ದು ನನ್ನ ಭಕ್ತಿಯು ಸ್ವರೂಪಸಿದ್ಧವಾದುದಾಗಿದ್ದರೆ); ಅವನೂ ಪುಣ್ಯಕರ್ಮಗಳಿಂದ, ಸ್ವರ್ಗಾದಿ ಭೋಗಗಳನ್ನು

ಪುನಃ ಪುನಃ ಸ ಭವತಿ ಸ್ವರ್ಗೇ ವಾ ಪೃಥಿವೀತಲೇ ।
ನೈವ ಮೋಕ್ಷಮವಾಪ್ನೋತಿ ಯಾವತ್ಕಾಮೋ ನ ಪೂರ್ಯತೇ ॥ ೨೯ ॥

ಸ ಕಾಮೋಽಪಿ ಹಿ ಮದ್ಭಕ್ತೋ ಲಭತೇ ಕರ್ಮಣಃ ಫಲಂ ।
ಅಂತೇ ನಿಷ್ಕಾಮತಾಂ ಪ್ರಾಪ್ಯ ಕ್ರಮಾನ್ಮುಕ್ತಿಮವಾಪ್ನುಯಾತ್ ॥ ೩೦ ॥

ಅನ್ಯದೇವತಾಭಕ್ತ–(ಶ್ರೀವಿಷ್ಣುವಿನ ಅಧೀನರಾದ ಸಮಸ್ತ ದೇವತೆಗಳ ಮಧ್ಯದಲ್ಲಿ) ಯಾವ ದೇವತೆಯನ್ನೇ ಆಗಲಿ ಆರಾಧಿಸುವ ಭಕ್ತನು, ಪುಣ್ಯಂ ಏವ—ಪುಣ್ಯವನ್ನೇ, ಯದಿ ಕರೋತಿ ಚೇತ್–ಮಾಡುವವನಾದರೂ, ಸಃ–ಅವನು (ಆ ಅನ್ಯದೇವತಾಭಕ್ತನು), ಪುನಃ ಪುನಃ–ಮತ್ತೆ ಮತ್ತೆ, ಸ್ವರ್ಗೇ ವಾ–ಸ್ವರ್ಗದಲ್ಲಿ ಆಗಲಿ, ಪೃಥಿವೀತಲೇ–ಭೂತಳದಲ್ಲಿ ಆಗಲಿ, ಭವತಿ–ಇರುವವನಾಗುತ್ತಾನೆ; ಯಾವತ್–ಎಲ್ಲಿವರೆಗೆ, ಕಾಮಃ–(ಸ್ವರ್ಗಾದಿ ಭೋಗಗಳ) ಇಚ್ಛೆಯು (ವಿಷಯ ಭೋಗೇಚ್ಛೆಯು), ನ ಪೂರ್ಯತೇ–ಪೂರ್ಣವಾಗುವುದಿಲ್ಲವೋ, (ತಾವತ್=ಅಲ್ಲಿಯವರೆಗೆ), ಮೋಕ್ಷಂ–ಮೋಕ್ಷವನ್ನು, ನೈವ ಆಪ್ನೋತಿ–ಹೊಂದುವುದಿಲ್ಲ; ಮದ್ಭಕ್ತಃ–ನನ್ನ ಭಕ್ತನು, (ಅನ್ಯ ದೇವತೆಗಳ ಆಶ್ರಯಕ್ಕಾಗಿ ಯತ್ನಿಸದ ವಿಷ್ಣುಭಕ್ತನು), ಸಕಾಮಃ ಅಪಿ–(ವಿಷಯಭೋಗದಿಂದ ಲಭಿಸುವ) ಸುಖಾಪೇಕ್ಷೆಯುಳ್ಳವನಾದರೂ, ಕರ್ಮಣಃ–(ತನ್ನ) ಪುಣ್ಯಗಳ, ಫಲಂ–ಫಲವನ್ನು (ಭೂಸ್ವರ್ಗಗಳ ಭೋಗವನ್ನು), ಲಭತೇ–ಹೊಂದುತ್ತಾನೆ; (ಆದರೆ), ಅಂತೇ–ಕೊನೆಯಲ್ಲಿ (ಬಹುಕಾಲ ಈ ಸುಖವನ್ನು ಭೋಗಿಸಿದ ನಂತರ), ನಿಷ್ಕಾಮತಾಂ–ನಿಷ್ಕಾಮತ್ವವನ್ನು (ಪುಣ್ಯಫಲಗಳ ಆಶೆಯನ್ನು ತ್ಯಜಿಸಿ), ಕ್ರಮಾತ್–ಕ್ರಮವಾಗಿ (ಮೇಲೆ ಮೇಲಿನ ಸಾಧನಮಟ್ಟಗಳನ್ನು ಹೊಂದಿ), ಮುಕ್ತಿಂ–ಮುಕ್ತಿಯನ್ನು ಅವಾಪ್ನುಯಾತ್–ಹೊಂದುತ್ತಾನೆ.

ಯೇನ ಪುಣ್ಯಫಲೇನ ಸ್ಯಾದೇವಂ ಪುಣ್ಯಸ್ಯ ವರ್ಧನಂ ।
ತತ್ಸಾತ್ತ್ವಿಕಮಿತಿ ಪ್ರೋಕ್ತಂ ಯೇನ ಪುಣ್ಯಫಲೇನ ಚ ॥ ೩೧ ॥

---

ಭೋಗಿಸಲು ಸ್ವರ್ಗ ಭೂಮಿಗಳ ವಾಸವನ್ನು ಹೊಂದುತ್ತ ಬಂದರೂ, ಅಂತ್ಯಕ್ಕೆ (ಕೆಲಕಾಲ ನಂತರ ವಿರಕ್ತನಾಗಿ) ನಿಷ್ಕಾಮಕರ್ಮಗಳಲ್ಲಿ ಅಭಿರುಚಿಯನ್ನು ಹೊಂದಿ, ಕ್ರಮವಾಗಿ ಮುಕ್ತಿಯನ್ನೂ ಹೊಂದುತ್ತಾನೆ (೨೯-೩೦). ಯಾವ ಪುಣ್ಯದ ಫಲದಿಂದ ಪುಣ್ಯದ ವೃದ್ಧಿಯುಂಟಾಗುತ್ತದೆಯೋ, ಅದು ಸಾತ್ವಿಕಪುಣ್ಯವು; ಯಾವುದರ ಫಲದಿಂದ ಪಾಪವೃದ್ಧಿಯೇ ಸಂಭವಿಸುವುದೋ ಆ ಪುಣ್ಯವು ತಾಮಸಪುಣ್ಯವೆಂದು ಕರೆಯಲ್ಪಡುತ್ತದೆ (೩೧). ಈರ್ಷೆ, ಅಸೂಯೆ, ಲೋಭ, ದಂಭ, ಭಯ ಮೊದಲಾದ ಭಾವಗಳಿಂದ ಯುಕ್ತವಾದ ಮನಸ್ಸುಳ್ಳವನಾಗಿ, (ಮಾನಸಪಾಪಯುಕ್ತನಾಗಿ)[1] ಯಜ್ಞ

1 ೨ನೇ ಅಧ್ಯಾಯದ ೯-೧೧ ಶ್ಲೋಕಗಳನ್ನು ಇಲ್ಲಿ ಗಮನಿಸಬೇಕು

**ಜಾಯತೇ ಪಾಪವೃದ್ಧಿಶ್ಚ ತತ್ತಾಮಸಮಿತೀರಿತಂ ।**

ಯೇನ–ಯಾವ, ಪುಣ್ಯಫಲೇನ–ಪುಣ್ಯಫಲದಿಂದ, ಏವಂ–ಹಿಂದೆ ಹೇಳಿದಂತೆ, ಪುಣ್ಯಸ್ಯ–ಪುಣ್ಯದ, ವರ್ಧನಂ–ವೃದ್ಧಿಯು, ಸ್ಯಾತ್–ಆಗುತ್ತದೆಯೋ, ತತ್–ಆ ಪುಣ್ಯವು, ಸಾತ್ತ್ವಿಕಂ–ಸಾತ್ತ್ವಿಕಪುಣ್ಯವು, ಇತಿಪ್ರೋಕ್ತಂ–ಎಂದು ಹೇಳಲ್ಪಡುತ್ತದೆ; ಯೇನ–ಯಾವ, ಪುಣ್ಯಫಲೇನ ಚ–ಪುಣ್ಯಫಲದಿಂದಾದರೆ, ಪಾಪವೃದ್ಧಿಃ ಚ–ಪಾಪದ ವೃದ್ಧಿಯೇ, ಜಾಯತೇ–ಉಂಟಾಗುವುದೋ, ತತ್–ಆ ಪುಣ್ಯವು, ತಾಮಸಂ ಇತಿ–ತಾಮಸಪುಣ್ಯವೆಂದು, ಈರಿತಂ–ಹೇಳಲಾಗುತ್ತದೆ.

**ಈರ್ಷ್ಯಾಸೂಯಾಲೋಭದಂಭಭಯಯುಕ್ತೇನ ಚೇತಸಾ ॥ ೩೨ ॥**

**ವಿಧಿವತ್ ಕ್ರಿಯತೇ ಕರ್ಮ ತತ್ಫಲಾತ್ಪಾಪವರ್ಧನಂ ।**
**ವೇಶ್ಯಾದಿಗಮನಂ ಯದ್ವತ್ ದುಷ್ಟಸಂಗಾದ್ಧನಾಗಮಃ ॥ ೩೩ ॥**

**ಚೌರ್ಯಾದಿನಾ ಧನಾವಾಪ್ತಿಃ ದುಷ್ಟಪ್ರತಿಗ್ರಹಸ್ತಥಾ ।**
**ಈದೃಶಾನೀಹ ಪುಣ್ಯಸ್ಯ ಫಲಾನಿ ಪಾಪವೃದ್ಧಯೇ ॥ ೩೪ ॥**

ಪುಣ್ಯಕರ್ಮದಿಂದ ಪಾಪವೃದ್ಧಿಯಾಗುವುದು ಹೇಗೆಂಬುದನ್ನು ವಿವರಿಸಲಾಗುತ್ತದೆ—

ಈರ್ಷ್ಯಾಸೂಯಾಲೋಭದಂಭಭಯಯುಕ್ತೇನ–ಈರ್ಷ್ಯೆ (ಪರೋತ್ಕರ್ಷದ ಅಸಹನೆಯಿಂದ ಆಗುವ ಮನಸ್ಸಿನ ತಾಪ), ಅಸೂಯಾ (ಇಲ್ಲದ ದೋಷಗಳನ್ನು ಆರೋಪಮಾಡುವ ಮನಸ್ಸು), ಲೋಭ (ಕೀರ್ತಿ, ದ್ರವ್ಯಲಾಭ ಮೊದಲಾದ ಆಶೆ), ದಂಭ (ಇಲ್ಲದ ಸದ್ಗುಣಪ್ರದರ್ಶನಮಾಡುವ ಮನಸ್ಸು), ಭಯ (ವಿಹಿತಕರ್ಮತ್ಯಾಗದಿಂದ ಪ್ರಾಪ್ತವಾಗುವುವೆಂದು ಶಂಕಿಸುವ, ಸ್ವಕೀಯಮಿತ್ರಬಾಂಧವಾದಿಗಳಿಂದ ಅಪಹಾಸ್ಯ ಇತ್ಯಾದಿಗಳ ಭಯ). ಈ ಪ್ರಕಾರದ ಭಾವನೆಗಳುಳ್ಳ, ಚೇತಸಾ–ಮನಸ್ಸಿನಿಂದ, ವಿಧಿವತ್–ಶಾಸ್ತ್ರವಿಧಿಯನ್ನು ಪಾಲಿಸಿ (ಹಾಗಲ್ಲದಿದ್ದರೆ ಅದು ಸ್ವರೂಪತಃ

---

ಪೂಜಾ, ತಪಸ್ಸು ಮೊದಲಾದ ಕರ್ಮಗಳನ್ನು ವಿಧಿಪೂರ್ವಕ ಆಚರಿಸಿದರೆ, ಪುಣ್ಯಕರ್ಮದ ಬಾಹ್ಯಸ್ವರೂಪವುಳ್ಳ ಆ ಪುಣ್ಯವು, ಪಾಪವೃದ್ಧಿಗೇ ಕಾರಣವಾಗುತ್ತದೆ; ವಿಧಿಯಂತೆ ಆಚರಿಸಲಾದ ಆ ಸತ್ಕರ್ಮವೂ, ವೇಶ್ಯಾಗಮನರೂಪದ ಪಾಪಕರ್ಮದಂತೆ, ದುಷ್ಟಪ್ರವೃತ್ತಿಗಳಿಗೆ ಕಾರಣವಾಗುತ್ತದೆ; ಆ ಪುಣ್ಯವು ದೊರಕಿಸುವ ಫಲವು, ತಾತ್ಕಾಲಿಕ ಸುಖಕ್ಕೆ ಕಾರಣವಾಗುವ, ವೇಶ್ಯಾಗಮನ, ದುಷ್ಟಸಹವಾಸದಿಂದಲೂ, ಚೌರ್ಯಾದಿಗಳಿಂದಲೂ, ದುಷ್ಪ್ರತಿಗ್ರಹದಿಂದಲೂ (ಅಯೋಗ್ಯರ ದಾನಸ್ವೀಕಾರದಿಂದಲೂ)

ಸತ್ಕರ್ಮ–ಪುಣ್ಯಕರ್ಮವೇ ಆಗುವುದಿಲ್ಲ). ಕರ್ಮ–(ಯಾವ) ಕರ್ಮವು, ಕ್ರಿಯತೇ–ಮಾಡಲ್ಪಡುತ್ತದೆಯೋ, ತತ್ಫಲಾತ್–ಅದರ ಫಲದಿಂದ, ಪಾಪವರ್ಧನಂ–ಪಾಪದ ವೃದ್ಧಿಯು (ಆಗುತ್ತದೆ); ಯದ್ವತ್–ಹೇಗೆ, ವೇಶ್ಯಾದಿಗಮನಂ–ವೇಶ್ಯಾಸ್ತ್ರೀಗಮನವೋ (ಅದರಿಂದ ಹೇಗೆ ಪಾಪವೃತ್ತಿಯು ಬೆಳೆಯುವುದೋ ಹಾಗೆ); ದುಷ್ಟಸಂಗಾತ್–ದುರ್ಜನರ ಸಹವಾಸದಿಂದ, ಧನಾಗಮಃ–ದ್ರವ್ಯಲಾಭವೂ; ಚೌರ್ಯಾದಿನಾ–ಕಳ್ಳತನ ಮೊದಲಾದ್ದರಿಂದ, ಧನಾವಾಪ್ತಿ–ಧನಲಾಭವೂ, ತಥಾ–ಹಾಗೂ, ದುಷ್ಪ್ರತಿಗ್ರಹತಃ–ದುರ್ದಾನ ಸ್ವೀಕಾರದಿಂದ (ಅಯೋಗ್ಯರಿಂದ ದಾನವನ್ನು ಪಡೆಯುವುದರಿಂದ) ಧನಾದಾಯವೂ, ಪುಣ್ಯಸ್ಯ–(ಈರ್ಷ್ಯಾದಿಗಳಿಂದ ಆಚರಿಸಲ್ಪಟ್ಟ) ಪುಣ್ಯದ, ಈದೃಶಾನಿ–ಈ ವಿಧದ, ಫಲಾನಿ–ಫಲಗಳು, ಪಾಪವೃದ್ಧಯೇ–ಪಾಪವೃದ್ಧಿಗೇ ಕಾರಣವಾಗುತ್ತವೆ.

**ಯಾನಿ ಪ್ರಸಂಗಾಜ್ಜಾಯಂತೇ ನ ಭಕ್ತ್ಯಾ ನ ಭಯಾದಿನಾ ।**
**ಪುಣ್ಯಾನಿ ತಾನಿ ವಿದ್ಧಿ ತ್ವಂ ರಾಜಸಾನಿ ವಿನಿಶ್ಚಯಾತ್ ॥ ೩೫ ॥**

ಯಾನಿ–ಯಾವ, ಪುಣ್ಯಾನಿ–ಪುಣ್ಯಕರ್ಮಗಳು (ಅವುಗಳಿಂದ ಹುಟ್ಟುವ ಪುಣ್ಯಗಳು–ಅದೃಷ್ಟವಿಶೇಷಗಳು), ಪ್ರಸಂಗಾತ್–ಅನ್ಯಪ್ರಸಂಗದಿಂದ (ತಾನು ಅದನ್ನು ಇಚ್ಛಿಸಿ ಪ್ರಯತ್ನ ಮಾಡದೇ), ಜಾಯಂತೇ–ಹುಟ್ಟುವುವೋ, ನ ಭಕ್ತ್ಯಾ–ಭಕ್ತಿಯಿಂದ (ಶ್ರದ್ಧೆಯಿಂದ) ಅಲ್ಲವೋ ಮತ್ತು ಭಯಾದಿನಾ ನ–ಭಯಾದಿಗಳಿಂದಲೂ ಅಲ್ಲವೋ (ಸತ್ಕರ್ಮತ್ಯಾಗದಿಂದ ಪಾಪ ಬರುವುದೆಂಬ ಭಯದಿಂದಲ್ಲವೋ), ತಾನಿ–ಆ ಪುಣ್ಯಗಳನ್ನು, ರಾಜಸಾನಿ–ರಾಜಸಪುಣ್ಯಗಳೆಂದು, ತ್ವಂ–ನೀನು, ವಿನಿಶ್ಚಯಾತ್–ನಿಶ್ಚಯವಾಗಿ, ವಿದ್ಧಿ–ತಿಳಿ.

**ಯಥಾ ಸ್ವಪತ್ನೀಭೋಗಾದಿ ಹ್ಯನಿಷಿದ್ಧಃ ಸ್ವವಾಂಛಯಾ ।**
**ಲಬ್ಧಸ್ಯ ಭಕ್ಷಣಂ ಯದ್ವನ್ನ್ಯಾಯಪ್ರಾಪ್ತಧನಾದಿತಃ ॥ ೩೬ ॥**

---

ದೊರೆಯುವ ದ್ರವ್ಯಲಾಭಾದಿಗಳಂತಿರುವ ಅಲ್ಪಸುಖಗಳನ್ನಿತ್ತು ಪಾಪವೃದ್ಧಿಗೇ ಕಾರಣವಾಗುತ್ತದೆ (೩೨-೩೪). ಯಾವ ಪುಣ್ಯಗಳು ಪ್ರಸಂಗ (ಸಂದರ್ಭ) ವಶದಿಂದ, ತಾನು ಇಚ್ಛಿಸಿ ಯತ್ನಿಸದೇ, ಸಂಭವಿಸುತ್ತವೆಯೋ ಮತ್ತು ಯಾವುವು, ಸತ್ಕರ್ಮವನ್ನು ಆಚರಿಸಬೇಕೆಂಬ ಶ್ರದ್ಧೆಯಿಂದಾಗಲಿ, ಅಥವಾ ಬಿಟ್ಟರೆ ಪಾಪಾದಿ ದುಷ್ಫಲಗಳುಂಟಾಗುವುವೆಂಬ ಭಯದಿಂದಾಗಲಿ, ಮಾಡಲ್ಪಟ್ಟವುಗಳಲ್ಲವೋ, ಆ ಪುಣ್ಯಗಳನ್ನು ರಾಜಸಪುಣ್ಯಗಳೆಂದು ತಿಳಿಯಬೇಕು(೩೫). ಯಾವ ಪುಣ್ಯಫಲದಿಂದ ಸ್ವೇಚ್ಛಾನುಸಾರವಾದ ಅನಿಷಿದ್ಧಸ್ವಪತ್ನೀ ಭೋಗಾದಿಗಳು ದೊರೆಯುವುವೋ, ಅದು ರಾಜಸಪುಣ್ಯವೇ ಸರಿ; ನ್ಯಾಯಮಾರ್ಗದಿಂದ ಸಂಪಾದಿಸಿದ ಧನಾದಿಗಳಿಂದ ದೊರೆಯುವ, ಗಜಾಶ್ವಾದಿ ವಾಹನ ಮೊದಲಾದ ವಸ್ತುಗಳ ಭೋಗದಂತೆ, ಸುಖಭೋಗವನ್ನಿತ್ತು ಆ ಪುಣ್ಯವು ನಷ್ಟವಾಗುತ್ತದೆ;

**ಯಥಾಕಾಲಂ ಗಜಾಶ್ವಾದಿ ಭೋಗೋ ಯೋ ಜಾಯತೇ ನೃಣಾಂ ।**
**ಪುಣ್ಯಸ್ಯ ವಾಥ ಪಾಪಸ್ಯ ಯೇನೋತ್ಪತ್ತಿರ್ನ ಜಾಯತೇ ॥ ೩೭ ॥**

**ಭೋಗೇನ ಕ್ಷೀಣತಾಂ ಯಾತಿ ಯತ್ಫಲಂ ರಾಜಸಂ ಹಿ ತತ್ ।**

ರಾಜಸಪುಣ್ಯದಲ್ಲಿ ಸಬೀಜ ನಿರ್ಬೀಜವೆಂಬ ಭೇದರಾಹಿತ್ಯವು ಹೇಳಲ್ಪಡುತ್ತದೆ:—

ಸ್ವವಾಂಛಯಾ-ಸ್ವೇಚ್ಛಾನುಸಾರವಾಗಿ, ಅನಿಷಿದ್ಧಃ-ನಿಷಿದ್ಧವಲ್ಲದ, ಸ್ವಪತ್ನೀ ಭೋಗಾದಿ-ಸ್ವಪತ್ನಿಯ ಭೋಗಾದಿಗಳು, ಯಥಾ-ಹೇಗೋ, (ಮತ್ತು) ಯದ್ವತ್-ಹೇಗೆ, ನ್ಯಾಯಪ್ರಾಪ್ತಧನಾದಿತಃ-ನ್ಯಾಯಮಾರ್ಗದಿಂದ ಲಬ್ಧವಾದ ಧನಾದಿಗಳಿಂದ, ಲಬ್ಧಸ್ಯ-ದೊರೆತ ಭೋಗದ, ಭಕ್ಷಣಂ-ಅನುಭವವೋ, (ಮತ್ತು ಹೇಗೆ), ನೃಣಾಂ-ಮನುಷ್ಯರಿಗೆ, ಯಃ-ಯಾವ, ಯಥಾಕಾಲಂ-ಕಾಲಪ್ರಾಪ್ತವಾದ (ಕಾಲಾನುಸಾರ ದೊರೆತ), ಗಜಾಶ್ವಾದಿಭೋಗಃ-ಆನೆ ಕುದುರೆ ಮೊದಲಾದ ವಾಹನಗಳ ಭೋಗವು, ಜಾಯತೇ-ಉಂಟಾಗುವುದೋ, (ತಥಾ-ಹಾಗೆ), ಯೇನ-ಯಾವ ಪುಣ್ಯಫಲದಿಂದ, ಪುಣ್ಯಸ್ಯ-ಪುಣ್ಯದ, ವಾ ಅಥ-ಮತ್ತು ಅಥವಾ, ಪಾಪಸ್ಯ-ಪಾಪದ, ಉತ್ಪತ್ತಿಃ-ಉತ್ಪತ್ತಿಯು, ನ ಜಾಯತೇ-ಉಂಟಾಗುವುದಿಲ್ಲವೋ, ಭೋಗೇನ-(ಕಿಂತು) ಭೋಗದಿಂದ (ಅನುಭವಿಸುವ ಮಾತ್ರದಿಂದ), ಕ್ಷೀಣತಾಂ-ನಾಶವನ್ನು, ಯತ್ಫಲಂ-ಯಾವ ಪುಣ್ಯಫಲವು, ಯಾತಿ-ಹೊಂದುತ್ತದೆಯೋ, ತತ್-ಅದು, ರಾಜಸಂ ಹಿ-ರಾಜಸವೇ ಸರಿ (ರಾಜಸಪುಣ್ಯವೇ ಸರಿ).

**ಏವಮೇವ ಹಿ ಪಾಪಾನಿ ಬುದ್ಧಿಪೂರ್ವಕೃತಾನಿ ಚ ॥ ೩೮ ॥**

---

ಅದರಿಂದ ಲಭ್ಯವಾಗುವ ಭೋಗಮಾತ್ರವಲ್ಲದೇ, ಅನ್ಯಪುಣ್ಯಪಾಪಗಳು ಯಾವುದರಿಂದ ಹುಟ್ಟುವುದಿಲ್ಲವೋ, (ಯಾವ ಪುಣ್ಯದ ಫಲರೂಪವಾಗಿ ಬೇರೆ ಪುಣ್ಯಪಾಪಗಳು ಸಂಭವಿಸುವುದಿಲ್ಲವೋ), ಅದು ರಾಜಸಪುಣ್ಯವೆನಿಸುತ್ತದೆ (೩೬-೩೭). ಈವರೆಗೆ ಸಾತ್ವಿಕ, ತಾಮಸ, ರಾಜಸಪುಣ್ಯಗಳೆಂಬ ಪುಣ್ಯವಿಭಾಗಗಳನ್ನು ನಿರೂಪಿಸಿ, ಈಗ ಪಾಪವಿಭಾಗಗಳನ್ನು ವಿವರಿಸುತ್ತಾರೆ:—ಬುದ್ಧಿಪೂರ್ವಕವಾಗಿ (ಪಾಪವೆಂದು ತಿಳಿದೂ) ನಾಸ್ತಿಕ್ಯಭಾವನೆಯಿಂದಲೂ, ಹರಿದ್ವೇಷದಿಂದಲೂ (ಸತ್ಕರ್ಮದ್ವೇಷಭಾವದಿಂದಲೂ), ಆಚರಿಸಲ್ಪಡುವ ಪಾಪಗಳು, ತಾಮಸಪಾಪಗಳೆನಿಸುತ್ತವೆ; ಆ ಪಾಪಗಳ ಫಲಗಳಿಂದ ಪುನಃಪುನಃ ಪಾಪಗಳ ವೃದ್ಧಿಯೇ (ಪಾಪಕರ್ಮಗಳನ್ನು ಮತ್ತೆ ಮತ್ತೆ ಆಚರಿಸುವ ಪ್ರವೃತ್ತಿಯೇ) ಸಂಭವಿಸುತ್ತದೆ; ತಾಮಸಪಾಪಗಳಿಂದ ಜನಿಸುವ, ಅವುಗಳ ಫಲಗಳಾದ ನರಕಾದಿಗಳಿಂದ ಭಿನ್ನವಾದ, ಸಂಸ್ಕಾರವಿಶೇಷಗಳು, ಜೀವನನ್ನು ಪುನಃ ಪಾಪಕರ್ಮಗಳಲ್ಲಿ ಪ್ರವೃತ್ತನಾಗುವಂತೆ ಪ್ರಚೋದಿಸುತ್ತವೆ (೩೮-೩೯). ತಾಮಸಪಾಪಫಲಗಳನ್ನು

**ನಾಸ್ತಿಕ್ಯ ದ್ವೇಷ ಭೂರೀಣಿ ತಾಮಸಾನಿ ಪ್ರಕೀರ್ತಿತಂ ।**
**ಪಾಪಾನಾಮೇವ ವೃದ್ಧಿಃ ಸ್ಯಾತ್ತತ್ಫಲೈಶ್ಚ ಪುನಃ ಪುನಃ ॥ ೩೯ ॥**

ಏವಮೇವ-ಹೀಗೆಯೇ, ಹಿ-ಯಾವ ಕಾರಣದಿಂದ, ಬುದ್ಧಿಪೂರ್ವಕೃತಾನಿ-ಬುದ್ಧಿಪೂರ್ವಕವಾಗಿ (ಪಾಪವೆಂದು ತಿಳಿದು) ಮಾಡಲ್ಪಡುವ, ಪಾಪಾನಿ-ಪಾಪಗಳು, ನಾಸ್ತಿಕ್ಯದ್ವೇಷಭೂರೀಣಿ-ನಾಸ್ತಿಕಭಾವ(ಈಶ್ವರನಿಲ್ಲ-ಪುಣ್ಯಪಾಪಗಳಿಲ್ಲವೆಂಬ ಜ್ಞಾನ) ಮತ್ತು ದ್ವೇಷಗಳೇ (ಶ್ರೀಹರಿಯ ಆಜ್ಞೆಗಳ-ಶ್ರುತಿಸ್ಮೃತಿಗಳ ಉಲ್ಲಂಘನಾಭಿಪ್ರಾಯವೇ) ಪ್ರಚುರವಾಗಿ ಉಳ್ಳವುಗಳೋ (ಆ ಕಾರಣದಿಂದ), ತಾಮಸಾನಿ-(ಅವು) ತಾಮಸಪಾಪಗಳೆಂದು, ಪ್ರಕೀರ್ತಿತಂ-ಪ್ರಸಿದ್ಧವಾಗಿವೆ (ಜ್ಞಾನಿಗಳಿಂದ ಹೇಳಲಾಗುತ್ತವೆ); ತತ್ಫಲೈಃ-ಅವುಗಳ ಫಲಗಳಿಂದ, ಪುನಃಪುನಃ-ಮತ್ತೆಮತ್ತೆ, ಪಾಪಾನಾಂ-ಪಾಪಗಳ, ವೃದ್ಧಿಃ ಏವ-ವೃದ್ಧಿಯೇ (ಆಧಿಕ್ಯವೇ), ಸ್ಯಾತ್-ಉಂಟಾಗುತ್ತದೆ.

**ಆದೌ ಪಾಪೇನ ನರಕಾನ್ ಚಿರಂ ನಾನಾವಿಧಾನ್ ಭಜೇತ್ ।**
**ಪಾಪಶೇಷೇಣ ತೇನೈವ ದಾರಿದ್ರ್ಯಾದಿಗುಣಾನ್ವಿತಃ ॥ ೪೦ ॥**

**ಜಾಯತೇ ಛಿ ತತೋಽಪಿ ಸ್ಯಾಚ್ಚೌರ್ಯಾದಿನಾ ಧನಾರ್ಜಕಃ ।**
**ಪ್ರಾಣಹಿಂಸಾಪರೋ ವಾಪಿ ನಿತ್ಯಂ ಧಾವನ್ ಶ್ರಮಾನ್ವಿತಃ ॥ ೪೧ ॥**

**ಏವಂ ಪಾಪಫಲಂ ದುಃಖಂ ಭುಂಜಾನಃ ಪಾಪಕರ್ಮಕೃತ್ ।**
**ಪುನಃಪುನಶ್ಚ ನಿರಯಾಂಸ್ತಿರ್ಯಗ್ಯೋನೀಸ್ತಥಾ ವ್ರಜನ್ ॥ ೪೨ ॥**

**ಪುನಃ ಪಾಪಂ ಪುನರ್ದುಃಖಮಾಪ್ತೇ ಹ್ಯನುಭವನ್ ಸದಾ ।**

---

ವಿಸ್ತರಿಸುತ್ತಾರೆ:—ಮೊದಲು, ಪಾಪಫಲವಾದ ವಿವಿಧ ನರಕಗಳನ್ನು ಬಹುಕಾಲ ಅನುಭವಿಸುತ್ತಾನೆ; ಪಾಪಶೇಷದಿಂದ ದಾರಿದ್ರ್ಯರೋಗಾದಿಯುಕ್ತನಾಗಿ ಭೂಮಿಯಲ್ಲಿ ಹುಟ್ಟುತ್ತಾನೆ; ಅಲ್ಲಿ ಚೌರ್ಯಾದಿಗಳಿಂದ ಧನವನ್ನು ಸಂಪಾದಿಸುವುದರಲ್ಲಿಯೂ, ಪ್ರಾಣಗಳನ್ನು ಹಿಂಸಿಸುವುದರಲ್ಲಿಯೂ ತೊಡಗುತ್ತಾನೆ; ಬಹುಶ್ರಮದಿಂದ ಜೀವನವನ್ನು ಸಾಗಿಸುತ್ತ, ಪಾಪಶೇಷದ ಫಲವಾದ ದಾರಿದ್ರ್ಯಾದಿ ದುಃಖವನ್ನೂ ಅನುಭವಿಸುತ್ತಾನೆ; ಆ ಜನ್ಮದಲ್ಲಿ ಮಾಡಿದ ಚೌರ್ಯಾದಿ ನಾನಾ ಪಾಪಗಳ ಫಲಭೋಗಕ್ಕಾಗಿ ನರಕಗಳನ್ನೂ ಹೊಂದಿ, ಪಶ್ವಾದಿ ದೇಹಗಳಲ್ಲಿ ಹುಟ್ಟುತ್ತಾನೆ; ಹೀಗೆ ಪಾಪದಿಂದ ದುಃಖಾನುಭವ, ಪುನಃ ಪಾಪ, ಮತ್ತೆ ಅದರಿಂದ ದುಃಖವನ್ನೂ ಹೊಂದುತ್ತ ತಾಮಸಪಾಪಾಚಾರಿಯು ಸಂಸಾರದಲ್ಲಿ ಸುತ್ತುತ್ತಾನೆ(೪೦-೪೨). ಹೀಗೆ ತಾಮಸಪಾಪಗಳಲ್ಲಿ ಆಸಕ್ತನಾದವನು, ನನ್ನ ದ್ವೇಷದಲ್ಲಿ ದುರಾಗ್ರಹವನ್ನು ಹೊಂದಿ, ಅಂಧತಮಸ್ಸನ್ನೇ ಹೊಂದುತ್ತಾನೆ;

ತಾಮಸಪಾಪದ ಅನರ್ಥಪರಂಪರೆಯನ್ನು ವಿವರಿಸುತ್ತಾನೆ:—

ಆದೌ-(ತಾಮಸಪಾಪದ ಫಲಾನುಭವದಲ್ಲಿ) ಮೊದಲಿಗೆ, ಪಾಪೇನ-ಪಾಪದಿಂದ, ನಾನಾವಿಧಾನ್-ವಿವಿಧಗಳಾದ, ನರಕಾನ್-ನರಕಗಳನ್ನು (ಯಾತನಾಸ್ಥಾನದ ದುಃಖಗಳನ್ನು), ಚಿರಂ-ಬಹುಕಾಲದವರೆಗೆ (ಆಯಾ ಪಾಪಕ್ಕೆ ವಿಧಾಯಕವಾದ ಕಾಲಪರ್ಯಂತ), ಭಜೇತ್-ಅನುಭವಿಸುತ್ತಾನೆ (ಹೊಂದುತ್ತಾನೆ); ತೇನ-ಆ, ಪಾಪಶೇಷೇಣ ಏವ-ಪಾಪಶೇಷದಿಂದಲೇ, (ನರಕವಾಸವು ಮುಂದರಿಯಲು ಆವಶ್ಯಕವಾದುದಕ್ಕಿಂತ ಅಲ್ಪಪಾಪವು ಉಳಿದಿರುವಾಗಲೇ),[1] ದಾರಿದ್ರ್ಯಾದಿ ಗುಣಾನ್ವಿತಃ-ಬಡತನ ಮೊದಲಾದ ಗುಣಯುಕ್ತನಾಗಿ (ದಾರಿದ್ರ್ಯ, ರೋಗಾದಿ ಪೀಡಿತನಾಗಿ), ಜಾಯತೇ-(ಭೂಮಿಯಲ್ಲಿ) ಹುಟ್ಟುತ್ತಾನೆ; ತತಃ ಅಪಿ-ನಂತರವೂ, ಚೌರ್ಯಾದಿನಾ-ಕಳ್ಳತನ ಮೊದಲಾದ ಮಾರ್ಗದಿಂದ, ಧನಾರ್ಜಕಃ-ಧನವನ್ನು ಸಂಪಾದಿಸುವವನೂ, ವಾ-ಅಥವಾ, ಪ್ರಾಣಿಹಿಂಸಾಪರಃ-ಪ್ರಾಣಿಗಳನ್ನು ಹಿಂಸೆಮಾಡುವವನೂ, ಸ್ಯಾತ್-ಆಗುತ್ತಾನೆ; ಅಪಿ-ಮತ್ತು ಶ್ರಮಾನ್ವಿತಃ-ಬಹುಶ್ರಮದಿಂದ, ನಿತ್ಯಂ-ನಿತ್ಯವೂ, ಧಾವನ್-(ಧಾವಿಸುತ್ತ) ಸಂಸಾರಯಾತ್ರೆಯನ್ನು ನಡೆಸುತ್ತ ಏವಂ-ಹೀಗೆ, ಪಾಪಫಲಂ-ಪಾಪಫಲವಾದ, ದುಃಖಂ-ದುಃಖವನ್ನು ಭುಂಜಾನಃ-ಭೋಗಿಸುವವನಾಗಿ, ಪುನಃ-ಮತ್ತೆ ಪಾಪಕರ್ಮಕೃತ್-ಪಾಪಕರ್ಮವನ್ನು ಮಾಡಿ, ಪುನಃ-ಮತ್ತೆ (ಅದರ ಫಲವಾಗಿ), ನಿರಯಾನ್-ನರಕಗಳನ್ನೂ, ಚ-ಮತ್ತು ತಿರ್ಯಗ್ಯೋನೀಃ-ಪಶ್ವಾದಿ ಯೋನಿಗಳನ್ನೂ (ದೇಹಗಳನ್ನೂ), ವ್ರಜನ್-ಹೊಂದುವವನಾಗಿ, ಪುನಃ-ಮತ್ತೆ (ಮನುಷ್ಯನಾಗಿ ಹುಟ್ಟಿ) ಪಾಪಂ-ಪಾಪವನ್ನೂ, ಪುನಃದುಃಖಂ-ಮತ್ತೆ ದುಃಖವನ್ನೂ, ಸದಾ-ನಿರಂತರವಾಗಿ, ಅನುಭವನ್-ಅನುಭವಿಸುತ್ತ ಆಸ್ತೇ ಹಿ-ಇರುತ್ತಾನೆಂಬುದು ನಿಶ್ಚಯ.

---

ಅಂಧತಮಸ್ಸಿನತ್ತ ಧಾವಿಸುವ ಮಧ್ಯಕಾಲದಲ್ಲಿ ಕೆಲವು ವೇಳೆ, ಅನ್ಯಪ್ರಭಾವಗಳಿಗೆ ವಶನಾಗಿ, ಪುಣ್ಯಕರ್ಮಗಳನ್ನು ಮಾಡುವುದುಂಟು; ಆಗ ಆ ಪುಣ್ಯಗಳ ಫಲವನ್ನೂ (ವಿಷಯ ಭೋಗನಿಮಿತ್ತಗಳಾದ ಕ್ಷುದ್ರ ಸುಖವಿಶೇಷಗಳನ್ನು) ಅನುಭವಿಸುತ್ತಾನೆ;

---

1. ಪುಣ್ಯಶೇಷ ಮತ್ತು ಪಾಪಶೇಷಗಳೆಂದರೆ, ಪುಣ್ಯಪಾಪಗಳ ಪ್ರಧಾನಫಲಗಳಾದ ಸ್ವರ್ಗನರಕಾದಿಗಳನ್ನು ಅನುಭವಿಸಿದ ನಂತರ ಆ ಅನುಭವಗಳ ಪ್ರಭಾವದಿಂದ, ಮುಂದರಿಯುವ ಸುಖದುಃಖ ವಿಶೇಷಗಳೆಂದೂ ತಿಳಿಯಬಹುದು; ಚೌರ್ಯಕ್ಕಾಗಿ ನ್ಯಾಯಾಧಿಕಾರಿಯು ವಿಧಿಸಿದ ಕಾರಾಗೃಹವಾಸವನ್ನು ಪೂರ್ಣ ಅನುಭವಿಸಿ, ಹೊರಗೆ ಬಂದರೂ, ಎಲ್ಲರೂ ಈತನೇ ಕಳ್ಳನೆಂದು ಕೈಮಾಡಿತೋರುವುದರಿಂದ, ಉಂಟಾಗುವ ಅಪಮಾನ, ಮನೋವ್ಯಥೆಗಳಂತೆ, ಪಾಪಶೇಷದ ಫಲವೂ ದುಃಖದಾಯಕವೇ. ಇದರಂತೆ, ರಾಜನಿಂದ ಸನ್ಮಾನಿತನಾದ ಸತ್ಪುರುಷನ ವಿಷಯದಲ್ಲಿ ಸಹ ಪುಣ್ಯಶೇಷ ಪ್ರಭಾವದ ಮನೋತ್ಸಾಹ, ಗೌರವ ಹರ್ಷಾದಿಗಳ ಅನುಭವವೂ ಇರುವುದಷ್ಟೆ!

ತತ್ರಾಪಿ ಯದಿ ಮದ್ದ್ವೇಷಸ್ತದಾಯಾತಿ ತಮೋಧಿಕಂ ॥ ೪೩ ॥

ಮಧ್ಯೇ ಕದಾಚಿತ್ ಪುಣ್ಯಾನಿ ಕೃತ್ವಾ ತತ್ಫಲಮಶ್ನುತೇ ।
ಪುನಃ ಸ ಪಾಪಬುದ್ಧಿತ್ವಾತ್ ಪುಣ್ಯಂ ತಾಮಸಮಾರ್ಜಯೇತ್ ॥ ೪೪ ॥

ತತ್ಫಲಾದಪಿ ಪಾಪಾನಿ ತತ್ಫಲಂ ದುಃಖಮಶ್ನುತೇ ।
ಏವಂ ಪಾಪಸ್ಯ ಬೀಜತ್ವಾತ್ ಫಲಂ ಪಾಪಸ್ಯ ತಾಮಸಂ ॥ ೪೫ ॥

ತತ್ರಾಪಿ-ಹೀಗೆ ಪಾಪಗಳಲ್ಲಿಯೇ ಆಸಕ್ತನಾಗಿರುವಲ್ಲಿಯೂ, ಯದಿ ಮದ್ದ್ವೇಷಃ-ನನ್ನ ದ್ವೇಷವನ್ನೂ ಮಾಡಿದರೆ, ತದಾ-ಆಗ, ಅಧಿಕಂ ತಮಃ-ಅಂಧತಮಸ್ಸನ್ನೇ, ಯಾತಿ-ಹೊಂದುತ್ತಾನೆ; ಮಧ್ಯೇ-ಹೀಗೆ ಅಂಧತಮಸ್ಸಿನತ್ತ ಧಾವಿಸುತ್ತಿರುವ ಮಧ್ಯಕಾಲದಲ್ಲಿ, ಕದಾಚಿತ್-ಒಂದೊಂದು ವೇಳೆ, ಪುಣ್ಯಾನಿ-ಪುಣ್ಯಕರ್ಮಗಳನ್ನು ಕೃತ್ವಾ-(ಅನ್ಯಸಹವಾಸಾದಿಗಳ ಪ್ರಭಾವದಿಂದ) ಮಾಡಿ, ತತ್ಫಲಂ-ಆ ಪುಣ್ಯಗಳ ಫಲವನ್ನು ಅಶ್ನುತೇ-ಭೋಗಿಸುತ್ತಾನೆ; ಸಃ-ಆತನು, ಪಾಪಬುದ್ಧಿತ್ವಾತ್-ಪಾಪಬುದ್ಧಿಯುಳ್ಳವನೇ ಆದ್ದರಿಂದ, ಪುನಃ-ಮತ್ತೆ ಮತ್ತೆ ತಾಮಸಂ ಪುಣ್ಯಂ-ತಾಮಸ ಪುಣ್ಯವನ್ನು ಸಮಾರ್ಜಯೇತ್-ಸಂಪಾದಿಸಿ, ತತ್ಫಲಾತ್ ಅಪಿ-(ತಾಮಸಪುಣ್ಯದ) ಅದರ ಫಲರೂಪದಿಂದ ಸಹ, ಪಾಪಾನಿ-ಪಾಪಗಳನ್ನು (ಕೃತ್ವಾ- ಮಾಡಿ) ತತ್ಫಲಂ-ಅದರ ಫಲವಾದ, ದುಃಖಂ-ದುಃಖವನ್ನು ಅಶ್ನುತೇ-ಅನುಭವಿಸುತ್ತಾನೆ; ಏವಂ-ಹೀಗೆ, ಪಾಪಸ್ಯ-ಪಾಪಕ್ಕೆ (ಪಾಪವನ್ನು ಮಾಡಲು), ಬೀಜತ್ವಾತ್-ಕಾರಣವಾದ್ದರಿಂದ, ಪಾಪಸ್ಯ-ತಾಮಸಪಾಪಕ್ಕೆ, ತಾಮಸಂ ಫಲಂ-ತಾಮಸಫಲವೇ (ದುಃಖ, ಅಜ್ಞಾನಾದಿಗಳೇ ದೊರೆಯುವ ಫಲಗಳು).

ಯತ್ತು ದುಷ್ಟಭಯೇನೈವ ನ ಲೋಭಾನ್ನಾಪಿ ಮತ್ಸರಾತ್ ।
ಪಶ್ಚಾತ್ತಾಪಯುತೇನೈವ ನರಕಸ್ಯ ಭಯಾವಹಂ ॥ ೪೬ ॥

---

ಪಾಪಿಯು, ಪಾಪದಲ್ಲಿಯೇ ಬುದ್ಧಿಯುಳ್ಳವನಾದ್ದರಿಂದ, ಪುನಃ ಪುನಃ ತಾಮಸಪುಣ್ಯವನ್ನು ಸಂಪಾದಿಸಿ, ಅದರ ಫಲವಾಗಿ ಮತ್ತೆ ತಾಮಸ ಪಾಪಗಳನ್ನೇ ಮಾಡುತ್ತ ಅವುಗಳ ಫಲವಾದ ದುಃಖಾಜ್ಞಾನಾದಿಗಳನ್ನೇ ಹೊಂದುತ್ತಾನೆ(೪೩-೪೫). ಸ್ವಪ್ರಯೋಜನಕ್ಕಾಗಿ ಅಲ್ಲದೇ (ಸ್ವಾರ್ಥಸಾಧನೆಗಾಗಿ ಅಲ್ಲದೇ) ಅಥವಾ ಅನ್ಯರ ದ್ವೇಷಾಸೂಯೆಗಳಿಂದಾಗಲಿ ಅಲ್ಲದೇ, ನರಕ ಭಯಕ್ಕೆ ಕಾರಣವಾಗುವುದೆಂದು ತಿಳಿದೂ ಸಹ, ದುಷ್ಟರ ಭಯದಿಂದಾಗಲಿ, ಆಪತ್ತಿನಿಂದ ತಪ್ಪಿಸಿಕೊಳ್ಳಲಿಕ್ಕಾಗಲಿ, ಆಚರಿಸಲ್ಪಡುವ ಪಾಪಕರ್ಮವು, ಪಶ್ಚಾತ್ತಾಪಯುಕ್ತವಾದ ಮನಸ್ಸಿನಿಂದ ಆಚರಿಸಲ್ಪಟ್ಟರೆ, ಅದು ಸಾತ್ವಿಕಪಾಪವೆನಿಸುತ್ತದೆ; ಆದರಿಂದ ಬಹುಸುಖಕ್ಕೆ ಕಾರಣವಾಗುವ ಪುಣ್ಯವೇ

**ಆವಶ್ಯಕತ್ವಾದಾಪತ್ತೌ ಯತ್ಕುರ್ಯಾತ್ ಕರ್ಮ ಪಾಪಕಂ ।**
**ತತ್ಫಲಾಜ್ಜಾಯತೇ ಪುಣ್ಯಂ ಯೇನ ಸ್ಯಾದ್ಬಹುಲಂ ಸುಖಂ ॥ ೪೭ ॥**

**ಯಾತ್ರಾಸು ಪುಣ್ಯಕ್ಷೇತ್ರಾಣಾಂ ತಥಾ ಸ್ನಾನಾದಿ ಕರ್ಮಸು ।**
**ಚೋರವ್ಯಾಘ್ರಹಿಮೋಷ್ಣಾದೇರ್ಯದ್ದುಃಖಂ ಪ್ರಾಪ್ಯತೇ ಹಿ ತತ್ ॥೪೮॥**

**ಮಹಾಪುಣ್ಯಸ್ಯ ಜನಕಂ ತತ್ಪಾಪಂ ಸಾತ್ತ್ವಿಕಂ ತಥಾ ।**

ಸಾತ್ತ್ವಿಕಪಾಪದ ಲಕ್ಷಣವನ್ನು ನಿರೂಪಿಸಲಾಗುತ್ತದೆ:—

ಯತ್‌ತು-ಯಾವ ಪಾಪವಾದರೋ, ದುಷ್ಟಭಯೇನ ಏವ-ಕೇವಲ ದುಷ್ಟರ ಭಯದಿಂದಲೇ, ನ ಲೋಭಾತ್-ಲೋಭದಿಂದಲೂ ಅಲ್ಲ (ತಾತ್ಕಾಲಿಕ ಫಲಾಶೆಯಿಂದಲೂ ಅಲ್ಲ), ನಾಪಿ ಮತ್ಸರಾತ್-ಮತ್ಸರಬುದ್ಧಿಯಿಂದಲೂ ಅಲ್ಲ, (ಕಿಂತು), ನರಕಸ್ಯ-ನರಕದ, ಭಯಾವಹಂ-ಕಾರಣವೆಂದು ತಿಳಿದೂ, ಪಶ್ಚಾತ್ತಾಪಯುತೇನ ಏವ-ಪಶ್ಚಾತ್ತಾಪದಿಂದ ಯುಕ್ತವಾದ ಮನಸ್ಸಿನಿಂದಲೇ, (ಅಥವಾ) ಆಪತ್ತೌ-ಆಪತ್ತಿನಲ್ಲಿ ಆವಶ್ಯಕತ್ವಾತ್-ಅವಶ್ಯಕವಾದ್ದರಿಂದ (ತನಗೆ ಪ್ರಾಪ್ತವಾದ ವಿಪತ್ತಿನ ಪರಿಹಾರಕ್ಕಾಗಿ ಮಾಡಲೇಬೇಕಾದ್ದರಿಂದ), ಯತ್-ಯಾವುದೊಂದು, ಪಾಪಕಂ ಕರ್ಮ-ಪಾಪ ಕರ್ಮವನ್ನು ಕುರ್ಯಾತ್-ಮಾಡುತ್ತಾನೆಯೋ, ತತ್ಫಲಾತ್-ಅದರ (ಆ ಪಾಪದ) ಫಲದಿಂದ, ಯೇನ-ಯಾವ ಪುಣ್ಯದಿಂದ, ಬಹುಲಂ-ಬಹಳವಾದ, ಸುಖಂ-ಸುಖವು, ಸ್ಯಾತ್-ಉಂಟಾಗುವುದೋ, ಪುಣ್ಯಂ-(ಅಂಥ) ಪುಣ್ಯವು, ಜಾಯತೇ-ಹುಟ್ಟುತ್ತದೆ. (ಆ ಪಾಪವು ಅಂಥ ಪುಣ್ಯಕ್ಕೆ ಕಾರಣವಾಗುತ್ತದೆ); ಪುಣ್ಯಕ್ಷೇತ್ರಾಣಾಂ-ಪುಣ್ಯಕ್ಷೇತ್ರಗಳ, ಯಾತ್ರಾಸು-ಯಾತ್ರೆಗಳಲ್ಲಿ ತಥಾ-ಹಾಗೂ, ಸ್ನಾನಾದಿಕರ್ಮಸು-ಸ್ನಾನಾದಿ ಕರ್ಮಗಳಲ್ಲಿ ಚೋರವ್ಯಾಘ್ರಹಿಮೋಷ್ಣಾದೇಃ-ಕಳ್ಳರು, ಹುಲಿ ಮೊದಲಾದ ಹಿಂಸ್ರಮೃಗಗಳು, ಶೀತ, ಉಷ್ಣಾದಿಗಳ ಅತಿರೇಕ ಮೊದಲಾದವುಗಳ, ಯತ್ ದುಃಖಂ-ಯಾವ ದುಃಖವು, ಪ್ರಾಪ್ಯತೇ ಹಿ-ಹೊಂದಲ್ಪಡುತ್ತದಷ್ಟೆ ತತ್-ಅದು, ಮಹಾಪುಣ್ಯಸ್ಯ-ಮಹಾಪುಣ್ಯದ,

---

ಲಭಿಸುತ್ತದೆ; ಈ ಪಾಪದ ಫಲವು ಪುಣ್ಯಕ್ಷೇತ್ರಗಳ ಯಾತ್ರೆಗಳಲ್ಲಿಯೂ, ಸ್ನಾನಾದಿ ಕಾಲದಲ್ಲಿ ಶೀತೋಷ್ಣಗಳ ಅತಿರೇಕದಿಂದಲೂ ಆಗುವ ದುಃಖಕ್ಕೆ ಕಾರಣವಾಗುತ್ತದೆ; ಅಂಥ ಪುಣ್ಯತೀರ್ಥಕ್ಷೇತ್ರಾದಿಗಳ ಯಾತ್ರೆಗಳಿಂದ, ಬಹುಸುಖವೇ ಫಲವಾಗಿ ಉಳ್ಳ ಮಹಾಪುಣ್ಯವೇ ಲಭಿಸುತ್ತದೆ. ಏವಂಚ, ಯಾವ ಪಾಪವು ಮಹಾಪುಣ್ಯ ಸಂಪಾದನೆಯ ಕಾಲದಲ್ಲಿ ಅನಿವಾರ್ಯವಾಗಿ ಅನುಭವಿಸಬೇಕಾಗುವ ದುಃಖಗಳಿಗೆ ಕಾರಣವಾಗುವುದೋ ಅದು ಸಾತ್ತ್ವಿಕಪಾಪವೆನಿಸುತ್ತದೆ(೪೭-೪೮). ಪ್ರಮಾದದಿಂದಾಗಲಿ, ಅಜ್ಞಾನದಿಂದಾಗಲಿ ಸಂಭವಿಸುವ ಪಾಪವು, ರಾಜಸಪಾಪವೆನಿಸುತ್ತದೆ; ಆ ಪಾಪವು ಅದರ ಫಲಭೋಗದಿಂದ ನಷ್ಟವಾಗುತ್ತದೆ; ಅದರ ಫಲದಿಂದ, ಪುನಃ ಪುಣ್ಯವಾಗಲಿ

ಜನಕಂ- ಉತ್ಪಾದಕವು (ಮಹಾಪುಣ್ಯಕ್ಕೆ ಕಾರಣವಾದುದಾಗುತ್ತದೆ); ತತ್ಪಾಪಂ-(ಈ ವಿಧ ದುಃಖಕ್ಕೂ, ಮುಂದೆ ಮಹಾಪುಣ್ಯಕ್ಕೂ ಕಾರಣವಾಗುವ) ಆ ಪಾಪವು, ಸಾತ್ತ್ವಿಕಂ-ಸಾತ್ತ್ವಿಕಪಾಪವೆನಿಸುತ್ತದೆ.

**ಪ್ರಮಾದಾಜ್ಜಾಯತೇ ಯತ್ತು ಯದಜ್ಞಾನಾಚ್ಚ ಜಾಯತೇ ॥ ೪೯ ॥**
**ತತ್ಪಾಪಂ ರಾಜಸಂ ಪ್ರೋಕ್ತಂ ಭೋಗಾದೇವ ಕ್ಷಯಂ ಭವೇತ್ ।**
**ನ ಪುಣ್ಯಂ ನಾಥವಾ ಪಾಪಂ ಜನಯೇತ್ತತ್ಫಲಂ ಪುನಃ ॥ ೫೦ ॥**
**ಗರ್ತಾದೌ ಪತನಂ ಯದ್ವತ್ ಘಾತಃ ಕಾಷ್ಠಶಿಲಾದಿತಃ ।**

ರಾಜಸಪಾಪಸ್ವರೂಪವನ್ನು ಸದೃಷ್ಟಾಂತವಾಗಿ ವಿವರಿಸಲಾಗುತ್ತದೆ:—

ಯತ್ ತು-ಯಾವ ಪಾಪವಾದರೋ, ಪ್ರಮಾದಾತ್-ಪ್ರಮಾದದಿಂದ (ವಿಸ್ಮರಣಾದಿ ದೋಷದಿಂದ), ಜಾಯತೇ-ಸಂಭವಿಸುವುದೋ, ಚ-ಮತ್ತು ಯತ್-ಯಾವುದು, ಅಜ್ಞಾನಾತ್-ಅಜ್ಞಾನದಿಂದ, ಜಾಯತೇ-ಸಂಭವಿಸುತ್ತದೆಯೋ, ತತ್‌ಪಾಪಂ-ಆ ಪಾಪವು, ರಾಜಸಂ-ರಾಜಸವೆಂದು, ಪ್ರೋಕ್ತಂ-ಹೇಳಲ್ಪಡುತ್ತದೆ; (ಆ ಪಾಪವು), ಭೋಗಾದೇವ-(ಅದರ ಫಲವನ್ನು) ಭೋಗಿಸುವುದರಿಂದಲೇ, ಕ್ಷಯಂ ಭವೇತ್-ನಾಶವನ್ನು ಹೊಂದುತ್ತದೆ; ತತ್ಫಲಂ-ಅದರ (ರಾಜಸಪಾಪದ) ಫಲವು, ಪುನಃ-ಮತ್ತೆ ಪುಣ್ಯಂ-ಪುಣ್ಯವನ್ನು ನ ಜನಯೇತ್-ಹುಟ್ಟಿಸುವುದಿಲ್ಲ; ಅಥವಾ-ಅಥವಾ, ಪಾಪಂ-ಪಾಪವನ್ನೂ ನ(ಜನಯೇತ್)-ಹುಟ್ಟಿಸುವುದಿಲ್ಲ (ಸಬೀಜಕರ್ಮಗಳಂತೆ ಅನ್ಯ ಮುಂದಿನ ಕರ್ಮಗಳಿಗೆ ಕಾರಣವಾಗುವುದಿಲ್ಲ); ಯದ್ವತ್-ಹೇಗೆಂದರೆ, ಗರ್ತಾದೌ-ಗುಂಡಿ(ಕೆಸರು) ಮೊದಲಾದವುಗಳಲ್ಲಿ ಪತನಂ-ಬೀಳುವುದು, ಕಾಷ್ಠಶಿಲಾದಿತಃ-ಕಟ್ಟಿಗೆ ಕಲ್ಲು ಮೊದಲಾದ್ದರಿಂದ, ಘಾತಃ-ಪೆಟ್ಟು ತಾಕುವುದು, (ಹೇಗೋ ಅದರಂತೆ, ರಾಜಸ ಪಾಪದ ಫಲವು ಅಲ್ಲಿಗೇ-ತನ್ನ ಫಲವಾದ ದುಃಖಭೋಗವನ್ನುಂಟುಮಾಡುವುದರಿಂದಲೇ, ಕೊನೆಗಾಣುತ್ತದೆ).

---

ಪಾಪವಾಗಲಿ ಹುಟ್ಟುವುದಿಲ್ಲ; ಗುಂಡಿಯಲ್ಲಿ ಬೀಳುವುದು, ಕಟ್ಟಿಗೆ ಕಲ್ಲುಗಳಿಂದ ಪೆಟ್ಟು ತಾಕುವುದು, ಮುಂತಾದ ಫಲಭೋಗಗಳು, ಮುಂದೆ ಬೇರಾವ ನೂತನ ಕರ್ಮಕ್ಕೂ ಕಾರಣವಾಗದೇ, ಅಚಾತುರ್ಯದಿಂದ (ಅಲಕ್ಷ್ಯದಿಂದ) ಸಂಭವಿಸಿದ ಆ ಕರ್ಮಗಳು, ಬೀಳುವುದು, ಗಾಯಗೊಳ್ಳುವುದು ಮುಂತಾದ ಫಲಗಳಿಂದ ಪರ್ಯವಸಾನಗೊಳ್ಳುತ್ತವೆಯಷ್ಟೆ—ಅದರಂತೆ(೪೯-೫೦). ಸ್ನಾನಾದಿ ಅಂಗಗಳಿಂದ ಆಚರಿಸಲ್ಪಡುವ ಪ್ರಧಾನ ಕರ್ಮವು ಸಾತ್ತ್ವಿಕವೆನಿಸುತ್ತದೆ; (ಪೂರ್ಣಾಂಗಸಹಿತವಾದ ಪ್ರಧಾನ ಕರ್ಮವು ಸಾತ್ತ್ವಿಕವು); ಅದೇ ಉತ್ತಮ ಕರ್ಮವು; ಕಿಂಚಿತ್ (ಸ್ವಲ್ಪಮಟ್ಟಿಗೆ) ಅಂಗಹೀನವಾದುದು,

**ಸಾತ್ತ್ವಿಕಾದಿಷು ಪುಣ್ಯೇಷು ತಥಾ ಪಾಪೇಷ್ವಪಿ ಸ್ಫುಟಂ ॥ ೫೧ ॥**

**ಭೇದತ್ರಯಂ ತು ಯತ್ಪ್ರೋಕ್ತಂ ನಾನಾಭೇದೇಷ್ವಪಿ ಸ್ಮೃ ಹ ।**
**ಪೂರ್ಣಾಂಗಾನ್ಯುತ್ತಮಾನ್ಯಾಹುಃ ಸಾತ್ತ್ವಿಕಾನೀತಿ ಚೋಚ್ಯತೇ ॥ ೫೨ ॥**

**ಕಿಂಚಿದಂಗೈರ್ವಿಹೀನಾನಿ ಮಧ್ಯಮಾನೀತಿ ಕೀರ್ತಿತಂ ।**
**ತಾನ್ಯೇವ ರಾಜಸಾನ್ಯಾಹುಃ ಸರ್ವೈರಂಗೈರ್ವಿವರ್ಜಿತಂ ॥ ೫೩ ॥**

**ಪ್ರಧಾನಮಾತ್ರಂ ಯತ್ಕರ್ಮ ತಾಮಸಂ ಚಾಧಮಂ ಚ ತತ್ ।**

ಪ್ರಧಾನಕರ್ಮ ಮತ್ತು ತದಂಗಭೂತವಾದ ಕರ್ಮಗಳ ವಿವಕ್ಷೆಯಿಂದ, ಸಾತ್ತ್ವಿಕಾದಿ ಕರ್ಮವಿಭಾಗವನ್ನು ನಿರೂಪಿಸುತ್ತಾರೆ:—

ಸಾತ್ತ್ವಿಕಾದಿಷು-ಸಾತ್ತ್ವಿಕಾದಿ, ಪುಣ್ಯೇಷು-ಪುಣ್ಯಗಳಲ್ಲಿಯೂ, ತಥಾ-ಮತ್ತು ಪಾಪೇಷು ಅಪಿ-ಪಾಪಗಳಲ್ಲಿಯೂ, ಸ್ಫುಟಂ-ಸ್ಪಷ್ಟವಾದ, ಯತ್-ಯಾವ, ಭೇದತ್ರಯಂ-ತ್ರಿವಿಧ ಭೇದಗಳು, ಪ್ರೋಕ್ತಂ-ಹೇಳಲ್ಪಟ್ಟವೋ, (ಅ) ನಾನಾಭೇದೇಷು ಅಪಿ-ಮತ್ತು ಅವುಗಳ ಪ್ರಭೇದಗಳಲ್ಲಿ ಸಹ, ಪೂರ್ಣಾಂಗಾನಿ-ಪೂರ್ಣಾಂಗಗಳುಳ್ಳವುಗಳನ್ನೇ, ಉತ್ತಮಾನಿ-ಶ್ರೇಷ್ಠವಾದವುಗಳೆಂದು, ಆಹುಃ-(ಜ್ಞಾನಿಗಳು) ಹೇಳುತ್ತಾರೆ; ಸಾತ್ತ್ವಿಕಾನಿ ಇತಿ ಚ-(ಅವೇ) ಸಾತ್ತ್ವಿಕಗಳೆಂದೂ, ಉಚ್ಯತೇ-ಹೇಳಲ್ಪಡುತ್ತವೆ; ಅಂಗೈಃ-ಅಂಗಗಳಿಂದ,

---

ಮಧ್ಯಮವು—ಅದೇ ರಾಜಸವೆಂದು ಕರೆಯಲ್ಪಡುತ್ತದೆ; ಸರ್ವಾಂಗಶೂನ್ಯವಾದ ಪ್ರಧಾನ ಕರ್ಮವು, ತಾಮಸವು—ಅದೇ ಅಧಮವು.[1] ಈ ವಿವಕ್ಷೆಯಿಂದ ವ್ಯವಸ್ಥಿತವಾಗುವ ಸಾತ್ತ್ವಿಕಾದಿ ಭೇದಗಳನ್ನು ವಿವಿಧ ಪುಣ್ಯಪಾಪಗಳಲ್ಲಿ, ಈ ಮೊದಲು ನಿರೂಪಿಸಲಾದ ಅವುಗಳ ಸಬೀಜ ನಿರ್ಬೀಜಾದಿ ಪ್ರಭೇದಗಳಲ್ಲಿ ಸಹ ತಿಳಿಯಬೇಕು. ಈ ವಿವಕ್ಷೆಯಿಂದ ಬಹು ಭಿನ್ನಪ್ರಭೇದಗಳು ಏರ್ಪಡುತ್ತವೆ (೫೧-೫೩). ತಾಮಸ ರಾಜಸ

---

1. ಪ್ರಧಾನಕರ್ಮಕ್ಕೆ ಅಂಗಭೂತವಾದವುಗಳೇ ಆಚಾರಗಳು. ಯಜ್ಞಾಂಗಗಳೆಂಬ ಆಚಾರಗಳು ಶುದ್ಧವಾಗಿದ್ದರೆ ಮಾತ್ರ, ಮುಖ್ಯ ಕರ್ಮಗಳಾದ ಯಜ್ಞಾದಿಗಳಿಗೆ ಶುದ್ಧಿಯನ್ನು ತಂದುಕೊಡುತ್ತವೆ; ಆಚಾರಗಳು (ಅಂಗಗಳು) ಅಶುದ್ಧವಾಗಿದ್ದಲ್ಲಿ ಪ್ರಧಾನ ಕರ್ಮವು ಅಶುದ್ಧವಾಗುತ್ತದೆ; ಪ್ರಧಾನ ಕರ್ಮದ ಶುದ್ಧಾಶುದ್ಧತೆಗಳಿಂದ, ಅವುಗಳ ಫಲದಲ್ಲಿ ವ್ಯತ್ಯಾಸವಾಗುತ್ತದೆ. 'ಆಚಾರ ಇತಿ ಸಂಪ್ರೋಕ್ತಃ ಕರ್ಮಾಂಗತ್ವೇನ ಶುದ್ಧಿದಃ। ಅಶುದ್ಧಿದಸ್ತ್ವನಾಚಾರಃ ಚರಣಂ ತೂಭಯಂ ಸ್ಮೃತಂ॥' ಎಂಬ ಪ್ರಮಾಣವು ಉಕ್ತಪ್ರಮೇಯವನ್ನು ಸಾಧಿಸುತ್ತದೆ. ಬ್ರಹ್ಮಸೂತ್ರಗಳ 3ನೇ ಅಧ್ಯಾಯದ 1ನೇ ವೈರಾಗ್ಯಪಾದದ ಚರಣಾಧಿಕರಣದಲ್ಲಿ ಪ್ರಧಾನ (ಮುಖ್ಯ) ಕರ್ಮಕ್ಕೆ ಅಂಗಭೂತಗಳಾದ ಆಚಾರಗಳ ಸಂಬಂಧವಾದ ನಿರ್ಣಯವನ್ನು ಕಾಣಬಹುದು.

ಕಿಂಚಿತ್-ಸ್ವಲ್ಪಮಟ್ಟಿಗೆ, ವಿಹೀನಾನಿ-ಹೀನವಾದವುಗಳು (ಅಂಗನ್ಯೂನತೆಯುಳ್ಳವುಗಳು), ಮಧ್ಯಮಾನಿ ಇತಿ-ಮಧ್ಯಮಗಳೆಂದು, ಕೀರ್ತಿತಂ-ಹೇಳಲ್ಪಡುತ್ತವೆ; ತಾನಿ ಏವ-ಈ ಮಧ್ಯಮ ಕರ್ಮಗಳನ್ನೇ, ರಾಜಸಾನಿ-ರಾಜಸಗಳೆಂದೂ, ಆಹುः-ಹೇಳುವರು; ಸರ್ವೈः-ಎಲ್ಲ, ಅಂಗೈಃ- ಅಂಗಗಳಿಂದ, ವಿವರ್ಜಿತಂ-ರಹಿತವಾದ, ಯತ್‌ಕರ್ಮ-ಯಾವ ಕರ್ಮವು, ಪ್ರಧಾನಮಾತ್ರಂ-ಮುಖ್ಯಕರ್ಮಮಾತ್ರವಾಗಿರುವುದೋ, ತತ್-ಅದು, ಅಧಮಂ-ಅಧಮಕರ್ಮವು, ತಾಮಸಂ ಚ-ಅದೇ ತಾಮಸಕರ್ಮ (ಎಂದೂ ಹೇಳಲಾಗುತ್ತದೆ).

**ತಾಮಸೇ ರಾಜಸೇ ಪಾಪೇ ವ್ಯುತ್ಕ್ರಮಾತ್ಸಾತ್ತ್ವಿಕಾದಯಃ ॥ ೫೪ ॥**

**ಭೇದಾ ಊಹ್ಯಾಶ್ಚ ಸರ್ವೇಷು ಪುಣ್ಯೇಷ್ವಪಿ ಚ ಪಾಪ್ಮಸು ।**
**ತತ್ತದ್ದೇಶವಿಶೇಷೇಣ ತತ್ತತ್ಕಾಲವಿಶೇಷತಃ ॥ ೫೫ ॥**

**ಅನ್ಯೇಷಾಂ ಕಾರಣಾನಾಂ ಚ ವಿಶೇಷಸ್ತು ಸಹಸ್ರಶಃ ।**
**ಲಕ್ಷಶಃ ಕೋಟಿಶಶ್ಚಾಪಿ ಗಣಶೋಽನಂತಶಸ್ತಥಾ ॥ ೫೬ ॥**

**ಕರ್ಮಭೇದಾಃ ಪ್ರಜಾಯಂತೇ ತಾನ್ಯಹಂ ವೇದ್ಮಿ ಸರ್ವಶಃ ।**
**ವಕ್ತುಂ ಶಕ್ಯಾನಿ ನೈವ ಸ್ಯುಸ್ತಾನಿ ವರ್ಷಶತೈರಪಿ ॥ ೫೭ ॥**

ಭೇದನಿಮಿತ್ತ ಕಾರಣಗಳಿಂದ, ಅಸಂಖ್ಯ ಕರ್ಮಭೇದಗಳು ಸಿದ್ಧವಾಗುತ್ತವೆಂದು ಹೇಳಲಾಗುತ್ತದೆ:—

---

ಪಾಪಗಳಲ್ಲಿಯೂ, ವಿರುದ್ಧಕ್ರಮದಿಂದ,[1] ಸಾತ್ತ್ವಿಕಾದಿ ಭೇದಗಳನ್ನು ಊಹಿಸಿ ತಿಳಿಯಬೇಕು; ಸರ್ವಪುಣ್ಯಪಾಪಗಳಲ್ಲಿ ಆಯಾ ಕರ್ಮಗಳನ್ನಾಚರಿಸುವ ದೇಶದ ಪಾವಿತ್ರ್ಯ ತಾರತಮ್ಯಗಳಿಂದಲೂ, ಪರ್ವಕಾಲಾದಿ ಕಾಲವಿಶೇಷಗಳಿಂದಲೂ, ಮತ್ತಿತರ ಕಾರಣ ವಿಶೇಷಗಳಿಂದಲೂ, ಸಹಸ್ರಶಃ ಲಕ್ಷಶಃ ಕೋಟಿಶಃ, ಗುಂಪುಗಳುಳ್ಳ ಅಸಂಖ್ಯವಾದ

---

1. ಪ್ರತಿಯೊಂದು ವಿಧದ ಪಾಪದಲ್ಲಿಯೂ ಸಾತ್ತ್ವಿಕಾದಿ ಭೇದಗಳನ್ನು ವಿರುದ್ಧ ಕ್ರಮದಿಂದ ತಿಳಿಯಬೇಕೆಂದರೆ, ಈ ಹಿಂದೆ ಹೇಳಿದ ಕ್ರಮಕ್ಕೆ ವಿರುದ್ಧವಾದ ಕ್ರಮದಿಂದ ಗ್ರಹಿಸಬೇಕೆಂದರ್ಥ. ಎಂದರೆ, ಸರ್ವಾಂಗಪೂರ್ಣವಾದ ಪ್ರಧಾನ ಕರ್ಮವು (ಪಾಪವು) ಉತ್ತಮವು (ಶ್ರೇಷ್ಠವು); ಕಿಂಚಿತ್ ಅಂಗಹೀನವಾದುದು—ಮಧ್ಯಮ, ಪೂರ್ಣಾಂಗವುಳ್ಳದ್ದು ಅಧಮಪಾಪವು. ಇಲ್ಲಿ ಸಾತ್ತ್ವಿಕಾದಿಗಳನ್ನು ತಿಳಿಯಬೇಕೆನ್ನುವುದಕ್ಕೆ ಉತ್ತಮ, ಮಧ್ಯಮ ಮತ್ತು ಅಧಮತ್ವಗಳನ್ನು ತಿಳಿಯಬೇಕೆಂದರ್ಥ. ಪಾಪದಲ್ಲಿ ಅತಿ ಕನಿಷ್ಠವಾದುದು (ಮಹದ್ದುಃಖಹೇತುವಾದುದು) ಶ್ರೇಷ್ಠ ಪಾಪವೆನಿಸುತ್ತದೆ—ಪಾಪಲಭ್ಯವಾದ ದುಃಖದ ವಿವಕ್ಷೆಯಿಂದ ಈ ಭೇದವನ್ನು ತಿಳಿಯಬೇಕು. ಅಧಮಪಾಪವೆಂದರೆ, ಅಲ್ಪದುಃಖಪ್ರದವೆಂದೂ, ಶ್ರೇಷ್ಠಪಾಪವೆಂದರೆ ಮಹದ್ದುಃಖಪ್ರದವೆಂದೂ ತಿಳಿಯಬೇಕು.

ತಾಮಸೇ ರಾಜಸೇ ಪಾಪೇ-ತಾಮಸರಾಜಸಪಾಪಗಳಲ್ಲಿ, ವ್ಯತ್ಯಯಾತ್-ವಿರುದ್ಧ ಕ್ರಮದಿಂದ, ಸಾತ್ತ್ವಿಕಾದಯಃ-ಸಾತ್ತ್ವಿಕಾದಿ (ಉತ್ತಮ, ಮಧ್ಯಮ, ಅಧಮಾದಿ), ಭೇದಾಃ-ಭೇದಗಳು (ವಿಭಾಗಗಳು), ಊಹ್ಯಾಃ-ಊಹಿಸಲ್ಪಡಬೇಕು (ಊಹೆಯಿಂದ ತಿಳಿಯಬೇಕು); ಸರ್ವೇಷು-ಎಲ್ಲ ಪುಣ್ಯೇಷು-ಪುಣ್ಯಗಳಲ್ಲಿಯೂ, ಅಪಿ ಚ-ಮತ್ತು ಪಾಪ್ಮಸು-ಪಾಪಗಳಲ್ಲಿಯೂ, ತತ್ತದ್ದೇಶವಿಶೇಷೇಣ-(ಆಯಾ ಕರ್ಮಗಳು ಸಂಭವಿಸುವ) ದೇಶವಿಶೇಷಗಳಿಂದಲೂ, (ದೇಶಗಳ ಪಾವಿತ್ರ್ಯ ತಾರತಮ್ಯವನ್ನನುಸರಿಸಿ), ತತ್ತತ್ಕಾಲವಿಶೇಷತಃ-ಆಯಾ ಕಾಲವಿಶೇಷಗಳಿಂದಲೂ (ಪರ್ವ ಮೊದಲಾದ ಪುಣ್ಯಕಾಲಾದಿಗಳ ವಿಶೇಷಗಳಿಂದಲೂ), ಅನ್ಯೇಷಾಂ-ಇತರ, ಕಾರಣಾನಾಂ ಚ-ಕಾರಣಗಳ (ವಿಶೇಷಗಳಿಂದಲೂ), ಸಹಸ್ರಶಃ-ಸಾವಿರಾರು ಪ್ರಕಾರದ, ವಿಶೇಷಃ-ವಿಶೇಷವು (ಕರ್ಮಪ್ರಭೇದಗಳು), ಲಕ್ಷಶಃ-ಬಹು ಲಕ್ಷಗಳ, ಕೋಟಿಶಃ ಅಪಿ-ಬಹು ಕೋಟಿಗಳ ಸಂಖ್ಯಾಪ್ರಮಾಣದ, ತಥಾ-ಹಾಗೂ, ಗಣಶಃ-ಗುಂಪುಗುಂಪುಗಳ, ಅನಂತಶಃ-ಅಸಂಖ್ಯಪ್ರಕಾರದ, ಕರ್ಮಭೇದಾಃ-ಕರ್ಮಭೇದಗಳು, ಪ್ರಜಾಯಂತೇ-ಉದ್ಭವಿಸುತ್ತವೆ; ತಾನಿ ಸರ್ವಶಃ-ಆ ಎಲ್ಲವನ್ನೂ, ಅಹಂ-ನಾನು, ವೇದ್ಮಿ-ತಿಳಿದಿರುವೆನು; ತಾನಿ-ಅವು (ಅನಂತ ಕರ್ಮಭೇದಗಳು), ವರ್ಷಶತೈಃ ಅಪಿ-ನೂರಾರು ವರ್ಷಗಳಿಂದ ಸಹ (ನೂರು ವರ್ಷಗಳವರೆಗೆ ಹೇಳಿದರೂ), ವಕ್ತುಂ-ಹೇಳಲಿಕ್ಕೆ (ಹೇಳಿ ಮುಗಿಸಲು), ಶಕ್ಯಾನಿ-ಸಾಧ್ಯವಾದವುಗಳು, ನ ಭವನ್ತಿ-ಆಗುವುದೇ ಇಲ್ಲ (ಅಷ್ಟು ಅಸಂಖ್ಯವಾಗಿವೆ-ಆ ಕರ್ಮಭೇದಗಳು).

**ಮತ್ಪ್ರಸಾದಾದ್ವಿಜಾನಾತಿ ಯಮೋ ರಾಜಾಖಿಲಾನಿ ತು ।**
**ತ್ವಮಪ್ಯೇವಂ ಪ್ರಸಾದಾನ್ಮೇ ಸರ್ವಜ್ಞೋ ಹ್ಯಸಿ ಮಾಚಿರಂ ॥ ೫೮ ॥**

ಕರ್ಮಪ್ರಭೇದಗಳನ್ನು ತಿಳಿದ ಅನ್ಯರಾರೆಂದರೆ:—

ರಾಜಾ-ರಾಜನಾದ, ಯಮಃ-ಯಮನು, ಮತ್ಪ್ರಸಾದಾತ್-ನನ್ನ ಅನುಗ್ರಹದಿಂದ, ಅಖಿಲಾನಿ-ಸಮಸ್ತ ಕರ್ಮಭೇದಗಳನ್ನು, ಜಾನಾತಿ ತು-ತಿಳಿಯುತ್ತಾನೆ, (ನನ್ನ ಆಜ್ಞಾನುವರ್ತಿಯಾಗಿ ತನ್ನ ಶಾಸಕ ಕಾರ್ಯಗಳನ್ನು ನಿರ್ವಹಿಸಲು ಅವಶ್ಯಕವಾದ ಸಕಲವನ್ನೂ ತಿಳಿಯುತ್ತಾನೆ); ಏವಂ-ಹೀಗೆಯೇ, ಮೇ-ನನ್ನ, ಪ್ರಸಾದಾತ್-ಅನುಗ್ರಹ

ಕರ್ಮಭೇದಗಳು ಸಿದ್ಧವಾಗುತ್ತವೆ; ಆ ಸರ್ವ ಅಸಂಖ್ಯ ಕರ್ಮಭೇದಗಳ ವಿವರಗಳನ್ನು ನಾನು ತಿಳಿದಿರುವೆನು—ಆದರೆ ನೂರು ವರ್ಷಗಳವರೆಗೆ ಹೇಳಿದರೂ, ಎಲ್ಲವನ್ನೂ ಹೇಳಿ ಮುಗಿಸಲು ಶಕ್ಯವಿಲ್ಲ(೫೪-೫೭). ಈ ಅಸಂಖ್ಯ ಕರ್ಮಭೇದಗಳನ್ನು ಯಮರಾಜನು ನನ್ನ ಅನುಗ್ರಹದಿಂದ ತಿಳಿಯುತ್ತಾನೆ; ನೀನೂ ಸಹ ನನ್ನ ಪ್ರಸಾದದಿಂದಲೇ ಸದಾ ಇದೆಲ್ಲವನ್ನೂ ತಿಳಿದ ಸರ್ವಜ್ಞನಾಗಿರುವೆ(೫೮). ಮನುಷ್ಯಕೃತ ಕರ್ಮವು ಮಾನಸ, ವಾಚಿಕ ಮತ್ತು ಕಾಯಿಕವೆಂದು ತ್ರಿವಿಧವಾಗಿರುತ್ತದೆ. ಇವುಗಳಲ್ಲಿ

ಎಂದ, ತ್ವಂ ಅಪಿ-ನೀನೂ ಸಹ (ಹೇ ಬ್ರಹ್ಮ!), ಮಾಚಿರಂ-ಸರ್ವದಾ (ಅನಾದಿಯಿಂದ), ಸರ್ವಜ್ಞಃ-ಎಲ್ಲವನ್ನೂ ತಿಳಿದವನು, ಅಸಿ-ಆಗಿರುವಿ.

ಮಾನಸಾದಿ ತ್ರಿಧಾ ಭಿನ್ನಂ ಪ್ರತ್ಯೇಕಂ ತತ್ತ್ರಿಧೈವ ತು ।
ಸಾತ್ವಿಕಾದಿಪ್ರಭೇದೇನ ತಥಾ ಚ ನವಧಾ ಸ್ಮೃತಂ ॥ ೫೯ ॥

ತತ್ರಾಪಿ ಸಾತ್ವಿಕಾದ್ಯೈಸ್ತು ಪ್ರತ್ಯೇಕಂ ಭಿನ್ನಮಾಗತಂ ।
ಸಪ್ತವಿಂಶತಿಧಾ ಚೈವ ಪ್ರತ್ಯೇಕಂ ಪುಣ್ಯಪಾಪ್ಮನಾಂ ॥ ೬೦ ॥

ತೇಷಾಮೇವಾವಾಂತರಾಸ್ಯುರ್ಭೇದಾಶ್ಚೈವಮನಂತಶಃ ।
ತತ್ರಾಪಿ ಪುಣ್ಯಭೇದೇಷು ತ್ರೈವಿಧ್ಯಂ ಸ್ಯಾತ್ ಪ್ರತಿಪ್ರತಿ ॥ ೬೧ ॥

ವಿಷ್ಣ್ವರ್ಪಿತತ್ವಂ ತಸ್ಮಾದ್ಯದನ್ಯಸ್ಮಿನ್ ದೈವತೇಽರ್ಪಿತಂ ।
ಅನರ್ಪಿತಂ ಚ ಕುತ್ರಾಪಿ ತದೇವಂ ತ್ರಿವಿಧಂ ಭವೇತ್ ॥ ೬೨ ॥

ವಿಷ್ಣ್ವರ್ಪಿತಂ ವರಂ ಪ್ರೋಕ್ತಂ ತದನ್ಯತ್ರ ತು ಮಧ್ಯಮಂ ।
ಅನರ್ಪಿತಂ ಕನಿಷ್ಠಂ ಸ್ಯಾದ್ಯಥಾ ಕರ್ಮ ತಥಾ ಫಲಂ ॥ ೬೩ ॥

ಕರ್ಮಭೇದಗಳು ಅನಂತಪ್ರಕಾರಕವೆಂಬುದನ್ನು ಸಂಗ್ರಹವಾಗಿ ಅನುವಾದ ಮಾಡಿ, ಅವುಗಳ ಫಲವೈವಿಧ್ಯಕ್ಕೆ ಹೇತುವಾದ ಕರ್ತೃವಿನ ಅನುಸಂಧಾನವಿಶೇಷಗಳನ್ನು ನಿರೂಪಿಸಲಾಗುತ್ತದೆ:—

ತತ್-(ಮಾನವಕೃತ ಕರ್ಮವು) ಅದು, ಮಾನಸಾದಿ-ಮಾನಸಾದಿ (ಮಾನಸ, ವಾಚಿಕ, ಕಾಯಿಕವೆಂಬ), ತ್ರಿಧಾ-ಮೂರು ಪ್ರಕಾರದಿಂದ, ಭಿನ್ನಂ-ಭಿನ್ನವಾಗಿರುವುದು;

---

ಒಂದೊಂದೂ ಸಾತ್ವಿಕ, ರಾಜಸ, ತಾಮಸಭೇದದಿಂದ ಮೂರು ಪ್ರಕಾರವಾಗಿರುವುದು; ತಥಾ ಚ ಒಟ್ಟಿನಲ್ಲಿ ೯ ಪ್ರಕಾರವಾಯಿತು; ಈ ೯ ಪ್ರಕಾರಗಳಲ್ಲಿ ಪ್ರತಿಯೊಂದೂ, ಪುನಃ ಸಾತ್ವಿಕಾದಿ ಭೇದದಿಂದ, ೨೭ ಪ್ರಕಾರಗಳು ಏರ್ಪಡುತ್ತವೆ; ಉದಾ:—ಮಾನಸ ಸಾತ್ವಿಕವೆಂಬ ಒಂದರಲ್ಲಿ ಮಾನಸ ಸಾತ್ವಿಕ ಸಾತ್ವಿಕ, ಮಾನಸ ಸಾತ್ವಿಕ ರಾಜಸ, ಮಾನಸ ಸಾತ್ವಿಕ ತಾಮಸಗಳೆಂಬ ಭೇದಗಳೂ ಇರುತ್ತವೆ; ಈ ೨೭ ವಿಧ ಕರ್ಮಗಳು, ಪುಣ್ಯಪಾಪ ಭೇದದಿಂದಲೂ, ಇನ್ನೂ (ಸಬೀಜ-ನಿರ್ಬೀಜ; ಪುಣ್ಯಬೀಜ ಪಾಪಬೀಜಾದಿ) ಅಸಂಖ್ಯ ಅವಾಂತರ ಭೇದಗಳಿಂದಲೂ, ಯುಕ್ತವಾಗಿರುತ್ತವೆ; ಈ ಅನಂತ ಕರ್ಮ ಪ್ರಭೇದಗಳ ಮಧ್ಯದಲ್ಲಿ ಪುಣ್ಯಕರ್ಮ ಪ್ರಭೇದಗಳಲ್ಲಿಯೇ, ದೃಷ್ಟಿಭೇದದಿಂದ (ಕರ್ತನ ಅನುಸಂಧಾನ ಭೇದದಿಂದ) ಪ್ರತಿಯೊಂದರಲ್ಲಿ ತ್ರೈವಿಧ್ಯವು ಏರ್ಪಡುತ್ತದೆ—ಶ್ರೀವಿಷ್ಣುವಿನಲ್ಲಿ ಅರ್ಪಿತವಾದುದು, ಅನ್ಯದೇವತೆಗಳಲ್ಲಿ ಅರ್ಪಿತವಾದುದು

ಪ್ರತ್ಯೇಕಂ-ಒಂದೊಂದೂ, ಸಾತ್ತ್ವಿಕಾದಿಪ್ರಭೇದೇನ-ಸಾತ್ತ್ವಿಕಾದಿ (ಸಾತ್ತ್ವಿಕ, ರಾಜಸ, ತಾಮಸವೆಂಬ) ಭೇದದಿಂದ, ತ್ರಿಧಾ ಏವ ತು-ಮೂರು ಪ್ರಕಾರವಾಗಿಯೇ (ಇರುತ್ತವೆ); ತಥಾ ಚ-ಹೀಗೆ, ನವಧಾ-ಒಂಭತ್ತು ಪ್ರಕಾರವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ; ತತ್ರಾಪಿ-ಈ ಒಂಭತ್ತರಲ್ಲಿ ಸಹ, ಪ್ರತ್ಯೇಕಂ-ಒಂದೊಂದೂ, ಸಾತ್ತ್ವಿಕಾದ್ಯೈಃ-ಸಾತ್ತ್ವಿಕಾದಿ ಭೇದಗಳಿಂದ, ಸಪ್ತವಿಂಶತಿಧಾ-೨೭ ಪ್ರಕಾರದ, ಭಿನ್ನಂ-ಭೇದವು, ಪುಣ್ಯಪಾಪ್ಮನಾಂ-ಪುಣ್ಯ ಪಾಪಗಳಿಗೆ, ಆಗತಂ-ಪ್ರಾಪ್ತವಾಗುತ್ತದೆ; ತೇಷಾಂ ಏವ-ಈ ಪ್ರಭೇದಗಳಿಗೆ (ಅವುಗಳ ಮಧ್ಯದಲ್ಲಿಯೇ), ಅವಾಂತರಭೇದಾಃ-ಅವಾಂತರಭೇದಗಳು (ಸೂಕ್ಷ್ಮವಾದ ಒಳಭೇದಗಳು), ಅನಂತಶಃ ಏವ-ಅಸಂಖ್ಯಪ್ರಕಾರವಾಗಿಯೇ, ಸ್ಯುಃ-ಉಂಟಾಗುತ್ತವೆ; ತತ್ರಾಪಿ-ಅದರಲ್ಲಿ ಸಹ, ಪುಣ್ಯಭೇದೇಷು-ಪುಣ್ಯಪ್ರಭೇದಗಳಲ್ಲಿ, ಪ್ರತಿಪ್ರತಿ-ಪ್ರತಿಯೊಂದು ಪ್ರಕಾರವಿಶೇಷದಲ್ಲಿಯೂ, ತ್ರೈವಿಧ್ಯಂ-ಮೂರು ಪ್ರಕಾರಗಳು, ಸ್ಯಾತ್-ಏರ್ಪಡುತ್ತದೆ; (ಆ ತ್ರೈವಿಧ್ಯವು ಹೇಗೆಂದರೆ) ವಿಷ್ಣ್ವರ್ಪಿತಂ-ಶ್ರೀವಿಷ್ಣುವಿನಲ್ಲಿ ಅರ್ಪಿತವಾದುದು, ತಸ್ಮಾತ್-ಶ್ರೀವಿಷ್ಣುವಿನಿಂದ, ಅನ್ಯಸ್ಮಿನ್-ಬೇರೆ, ದೈವತೇ-ದೇವತೆಯಲ್ಲಿ ಯತ್ ಅರ್ಪಿತಂ-ಯಾವ ಪುಣ್ಯವು ಅರ್ಪಿತವಾದುದೋ, ಅದು, ಚ-ಮತ್ತು ಅನರ್ಪಿತಂ-(ಯಾರಲ್ಲಿಯೂ) ಅರ್ಪಿಸಲ್ಪಡದುದು(ಎಂದು ತ್ರೈವಿಧ್ಯವು); ತತ್-ಈ ತ್ರಿವಿಧ ಪುಣ್ಯಕರ್ಮಗಳು, ಏವಂ-ಹೀಗೆ (ಮುಂದೆ ಹೇಳಿರುವಂತೆ), ತ್ರಿವಿಧಂ-(ತಾರತಮ್ಯದಿಂದ) ಮೂರು ವಿಧವಾದುದು, ಭವೇತ್-ಆಗುತ್ತದೆ; (ಆ ತರತಮಭಾವವು ಹೇಗೆಂದರೆ); ವಿಷ್ಣ್ವರ್ಪಿತಂ- ಶ್ರೀವಿಷ್ಣುವಿನಲ್ಲಿ ಅರ್ಪಿತವಾದುದು, ವರಂ-ಉತ್ತಮವೆಂದೂ, ತದನ್ಯತ್ರ-ಅನ್ಯದೇವತೆಗಳಲ್ಲಿ ಅರ್ಪಿತವಾದುದು, ಮಧ್ಯಮಂ-ಮಧ್ಯಮವೆಂದೂ, ಅನರ್ಪಿತಂ-ಅರ್ಪಿಸಲ್ಪಡದುದು. ಕನಿಷ್ಠ-ಅಧಮ ವೆಂದೂ, ಪ್ರೋಕ್ತಂ-ಹೇಳಲಾಗುತ್ತದೆ; ಯಥಾ ಕರ್ಮ-ಕರ್ಮವು ಹೇಗೋ, ತಥಾ-ಹಾಗೆ, (ಕರ್ಮಾನುಸಾರವಾಗಿ, ತಾರತಮ್ಯವನ್ನನುಸರಿಸಿ), ಫಲಂ-(ಅದರ) ಫಲವೂ, ಸ್ಯಾತ್-ಉಂಟಾಗುತ್ತದೆ (ದೊರೆಯುತ್ತದೆ).

**ಪಾಪೇಷ್ವಪಿ ತು ಯತ್ಪ್ರೋಕ್ತಂ ತ್ರೈವಿಧ್ಯಂ ಸಕಲೇಷ್ವಪಿ ।**
**ಮಯೇದಂ ಯತ್ಕೃತಂ ಪಾಪಂ ತನ್ನೈವ ಶುಭದಂ ಮಮ ॥ ೬೪ ॥**

---

ಮತ್ತು ಯಾರಲ್ಲಿಯೂ ಅರ್ಪಿಸದೇ ಇದ್ದುದು (ಅನರ್ಪಿತವು) ಎಂದು. ಇವುಗಳಲ್ಲಿ ಸಹ ತಾರತಮ್ಯದಿಂದ ತ್ರಿವಿಧವಿದೆ; ವಿಷ್ಣ್ವರ್ಪಿತವಾದುದು ಉತ್ತಮ—ಅನ್ಯ ದೇವತಾರ್ಪಿತ ವಾದುದು ಮಧ್ಯಮ—ಅನರ್ಪಿತವಾದುದು ಅಧಮ; ಈ ಪುಣ್ಯ ಪ್ರಭೇದ ಕರ್ಮಗಳಿಗೆ ತಾರತಮ್ಯಾನುಗುಣವಾದ ಫಲಗಳೇ ದೊರೆಯುತ್ತವೆ. (೫೯-೬೩). ಸಕಲ ಪಾಪಕರ್ಮಗಳಲ್ಲಿ ಸಹ ಅನುಸಂಧಾನನಿಮಿತ್ತವಾದ ತರತಮಭಾವಗಳಿವೆ; 'ನನ್ನಿಂದ ಮಾಡಲ್ಪಟ್ಟ ಈ ಕರ್ಮದಿಂದ ನನಗೆ ಶುಭವಾಗುವುದಿಲ್ಲ ಹೇ ಸ್ವಾಮಿ ! ವಿಷ್ಣೋ ! ಪುನಃ

**ಸ್ವಾಮಿನ್ ವಿಷ್ಣೋ ಕ್ಷಮಸ್ವೈತನ್ನೈವ ಕುರ್ಯಾಮಿದಂ ಪುನಃ ।**
**ಇತಿಭಾವೇನ ಯಸ್ತ್ಯಾಗಃ ಪಾಪಕರ್ಮಣಿ ಜಾಯತೇ ॥ ೬೫ ॥**

**ಪಶ್ಚಾತ್ತಾಪೋ ಹ್ಯಯಂ ಪ್ರೋಕ್ತಃ ಪಾಪಂ ಸ್ವಲ್ಪಫಲಂ ತತಃ ।**

ವಿವಿಧ ಪಾಪಕರ್ಮಗಳಲ್ಲಿ ಕರ್ತನ ಅನುಸಂಧಾನದಿಂದ ಏರ್ಪಡುವ ತ್ರೈವಿಧ್ಯವನ್ನು ನಿರೂಪಿಸುತ್ತಾರೆ:—

ಯತ್- ಯಾವ (ಅನುಸಂಧಾನಕ್ಕೆ ಅನುಗುಣವಾದ), ತ್ರೈವಿಧ್ಯಂ-ತ್ರೈವಿಧ್ಯವು (ಮೂರು ವಿಧವು), ಪ್ರೋಕ್ತಂ-ಹೇಳಲ್ಪಟ್ಟಿತ್ತೋ, (ಅದು) ಸಕಲೇಷು ಅಪಿ ಪಾಪೇಷು- ಎಲ್ಲ ಪಾಪಗಳಲ್ಲಿಯೂ (ಇರುತ್ತದೆ); ಮಯಾ-ನನ್ನಿಂದ, ಯತ್ ಕೃತಂ-ಯಾವುದು ಮಾಡಲ್ಪಟ್ಟಿತೋ, ತತ್ ಇದಂ ಪಾಪಂ-(ಆ) ಈ ಪಾಪವು, ಮಮ-ನನಗೆ, ಶುಭದಂ- ಶುಭವನ್ನುಂಟುಮಾಡುವುದು, ನೈವ-ಅಲ್ಲವೇ ಅಲ್ಲ; ಸ್ವಾಮಿನ್ ವಿಷ್ಣೋ-ಹೇ ವಿಷ್ಣೋ! ಸ್ವಾಮಿ!, ಏತತ್-ಇದನ್ನು ಕ್ಷಮಸ್ವ-ಕ್ಷಮಿಸು; ಇದಂ-ಇದನ್ನು (ಇಂಥ ಪಾಪಕೃತ್ಯವನ್ನು), ಪುನಃ-ಮತ್ತೆ ನೈವ ಕುರ್ಯಾಂ-ಮಾಡುವುದೇ ಇಲ್ಲ, ಇತಿ ಭಾವೇನ-ಈ ಭಾವನೆಯಿಂದ (ಅನುಸಂಧಾನದಿಂದ), ಯಃ-ಯಾವ, ತ್ಯಾಗಃ-ಸಮರ್ಪಿಸುವಿಕೆಯು (ಪಾಪವನ್ನು ತ್ಯಜಿಸುವ ಬುದ್ಧಿಯು), ಪಾಪಕರ್ಮಣಿ-ಪಾಪಕರ್ಮದಲ್ಲಿ ಜಾಯತೇ- ಹುಟ್ಟುವುದೋ, ಅಯಂ-ಅದು, (ಈ ಭಾವನೆಯು), ಪಶ್ಚಾತ್ತಾಪಃ-ಪಶ್ಚಾತ್ತಾಪವೆಂದು, ಪ್ರೋಕ್ತಃ-ಹೇಳಲಾಗುತ್ತದೆ; ತತಃ-ಅದರಿಂದ, ಪಾಪಂ-ಪಾಪವು, ಸ್ವಲ್ಪಫಲಂ-ಅಲ್ಪಫಲ ವುಳ್ಳದ್ದಾಗುತ್ತದೆ.

**ಕೃತ್ವಾ ಪಾಪಂ ಪುನಸ್ತತ್ರ ಸಕ್ತೋ ಯತ್ಕುರುತೇ ಪುನಃ ॥ ೬೬ ॥**

**ಕಿಂ ಭವಿಷ್ಯತ್ಯನೇನೇತಿ ಸೋತ್ಸಾಹೋಽಪಿ ಪುನಃಪುನಃ ।**
**ಪಾಪೋತ್ಸಾಹಃ ಸ ವಿಜ್ಞೇಯೋ ವೃದ್ಧಿಃ ಪಾಪಫಲೇ ತತಃ ॥ ೬೭ ॥**

**ಪಶ್ಚಾತ್ತಾಪೇನ ಯತ್ತಪ್ತಂ ತತ್ಪಾಪಂ ಸಾತ್ತ್ವಿಕಂ ಭವೇತ್ ।**
**ಉತ್ಸಾಹೇನ ಯುತಂ ಯತ್ತು ತತ್ತಾಮಸಮಿತೀರಿತಂ ॥ ೬೮ ॥**

---

ಈ ವಿಧ ಕರ್ಮವನ್ನು (ಪಾಪವನ್ನು) ಮಾಡುವುದಿಲ್ಲ, ಕ್ಷಮಿಸು' ಎಂಬ ಪ್ರಾರ್ಥನಾರೂಪದ ಮನೋಭಾವವನ್ನು ಹೊಂದುವುದೇ, ಆ ಕರ್ಮದ ತ್ಯಾಗವು(ಅರ್ಪಣೆಯು); ಇದನ್ನೇ ಪಶ್ಚಾತ್ತಾಪವೆನ್ನುವರು; ಪಾಪವನ್ನು ಮಾಡಿದವನು, ಪಶ್ಚಾತ್ತಾಪವನ್ನು ಹೊಂದಿದರೆ, ಅದರ ಫಲವು ಅಲ್ಪವಾಗುತ್ತದೆ(೬೪-೬೫). ಪಾಪವನ್ನು ಮಾಡಿ, ಅದರಲ್ಲಿ ಆದರವುಳ್ಳವನಾಗಿ, ಅದರಿಂದ ಏನಾದೀತೆಂಬ ಧಾರ್ಷ್ಟ್ಯಭಾವದಿಂದ, ಪುನಃಪುನಃ ಪಾಪವನ್ನೇ ಮಾಡುತ್ತಿದ್ದರೆ, ಅದನ್ನು ಪಾಪೋತ್ಸಾಹವೆಂದು ತಿಳಿಯಬೇಕು;

**ಉಭಾಭ್ಯಾಂ ಚ ವಿಹೀನಂ ಯತ್ತದ್ರಾಜಸಮುದಾಹೃತಂ ।**

ಪಾಪಗಳಲ್ಲಿ ಸಾತ್ತ್ವಿಕಾದಿ ಭೇದಗಳನ್ನೂ ಅವುಗಳ ಲಕ್ಷಣಗಳನ್ನೂ ಹೇಳುತ್ತಾರೆ:—

ಪಾಪಂ-ಪಾಪವನ್ನು ಕೃತ್ವಾ-ಮಾಡಿ, ಪುನಃ-ಮತ್ತು ತತ್ರ-ಅದರಲ್ಲಿ (ಪಾಪದಲ್ಲಿ), ಸಕ್ತ-ಸಕ್ತನಾಗಿ (ಆದರವುಳ್ಳವನಾಗಿ), ಪುನಃ-ಮತ್ತೆ ಅನೇನ-ಇದರಿಂದ (ಪಾಪವನ್ನು ಮಾಡುವುದರಿಂದ), ಕಿಂ ಭವಿಷ್ಯತಿ-ಏನಾದೀತು (ಏನೂ ಕೇಡು ಉಂಟಾಗುವುದಿಲ್ಲ), ಇತಿ-ಹೀಗೆಂಬ ಬುದ್ಧಿಯಿಂದ, ಯತ್ ಕುರುತೇ-ಯಾವ ಪಾಪವನ್ನು ಮಾಡುತ್ತಾನೆಯೋ, ಅಪಿ-ಮತ್ತು ಸಃ ಉತ್ಸಾಹಃ-ಆ ಉತ್ಸಾಹವು (ಪಾಪವನ್ನು ಮತ್ತೆ ಮತ್ತೆ ಮಾಡಬೇಕೆಂಬಲ್ಲಿ ಅತಿಶಯವಾದ ಆದರವು), ಪುನಃಪುನಃ-ಮೇಲಿಂದಮೇಲೆ (ಉಂಟಾದರೆ), ಸಃ-ಅದು, ಪಾಪೋತ್ಸಾಹಃ-ಪಾಪೋತ್ಸಾಹವೆಂದು, ವಿಜ್ಞೇಯಃ-ತಿಳಿಯತಕ್ಕದ್ದು; ತತಃ-ಆ ಉತ್ಸಾಹದಿಂದ, ಪಾಪಫಲೇ-ಪಾಪದಿಂದ ದೊರೆಯುವ ಫಲದಲ್ಲಿ ವೃದ್ಧಿಃ-ಆಧಿಕ್ಯವು (ಉಂಟಾಗುತ್ತದೆ); ಯತ್-ಯಾವ ಪಾಪವು, ಪಶ್ಚಾತ್ತಾಪೇನ-ಪಶ್ಚಾತ್ತಾಪದಿಂದ, ತಪ್ತಂ-(ಕರ್ತನ ಮನಸ್ಸಿಗೆ ತಾಪವನ್ನುಂಟು ಮಾಡುತ್ತದೆಯೋ) ಮನೋವ್ಯಥೆಯೆಂಬ ತಾಪದಿಂದ ಯುಕ್ತವಾದುದೋ, ತತ್ ಪಾಪಂ-ಆ ಪಾಪವು, ಸಾತ್ತ್ವಿಕಂ-ಸಾತ್ತ್ವಿಕವೆಂದು ಭವೇತ್-ಆಗುತ್ತದೆ (ತಿಳಿಯಲಾಗುತ್ತದೆ); ಯತ್ ತು-ಯಾವ ಪಾಪವಾದರೆ, ಉತ್ಸಾಹೇನಯುತಂ-ಉತ್ಸಾಹದಿಂದ ಕೂಡಿ ಆಚರಿಸಲ್ಪಡುವುದೋ, ತತ್-ಅದು, ತಾಮಸಂ ಇತಿ-ತಾಮಸವೆಂದು, ಈರಿತಂ-ಹೇಳಲ್ಪಡುತ್ತದೆ; ಯತ್-ಯಾವ ಪಾಪವು, ಉಭಾಭ್ಯಾಂ ಚ-ಎರಡರಿಂದಲೂ (ಪಶ್ಚಾತ್ತಾಪ, ಉತ್ಸಾಹಗಳಿಂದ), ವಿಹೀನಂ-ರಹಿತವಾದುದೋ, ತತ್-ಅದು, ರಾಜಸಂ-ರಾಜಸವೆಂದು, ಉದಾಹೃತಂ-ಹೇಳಲ್ಪಡುತ್ತದೆ.

**ಏವಂ ಹಿ ಕರ್ಮಣಾಂ ಭೇದಾಃ ಗಣಶೋಽನಂತಶಸ್ತಥಾ ॥ ೬೯ ॥**

**ಪ್ರವಾಹತೋಽನಾದಿಭಿಸ್ತೈರೇವಂ ಬದ್ಧಾ ಹ್ಯನಂತಶಃ ।**
**ಗಣಶೋಽನಂತಶೋ ಜೀವಾಸ್ತತ್ತತ್ಕರ್ಮಫಲಾಶಿನಃ ॥ ೭೦ ॥**

---

ಹೀಗೆ ಉತ್ಸಾಹದಿಂದ ಮಾಡಿದ ಪಾಪದ ಫಲವು ಅಧಿಕವಾಗುತ್ತದೆ; ಪಶ್ಚಾತ್ತಾಪದಿಂದ ಯುಕ್ತವಾದ ಪಾಪವು ಸಾತ್ತ್ವಿಕಪಾಪವೆನಿಸುತ್ತದೆ; ಉತ್ಸಾಹದಿಂದ ಕೂಡಿದುದು ತಾಮಸಪಾಪವು; ಪಶ್ಚಾತ್ತಾಪ ಅಥವಾ ಉತ್ಸಾಹ, ಎರಡೂ ಇಲ್ಲದ್ದು ರಾಜಸಪಾಪವೆಂದು ಹೇಳಲಾಗುತ್ತದೆ(೬೭-೬೮). ಹೀಗೆ ಬಹುಭಿನ್ನಗಳಾದ ಕರ್ಮಗುಣಗಳು ಅಸಂಖ್ಯವಾಗಿರುತ್ತವೆ; ಮತ್ತು ಇವು ಪ್ರವಾಹತಃ (ನದೀಪ್ರವಾಹರೂಪದಿಂದ ನಿತ್ಯವೂ) ಅನಾದಿಯೂ ಆಗಿವೆ; ಕರ್ಮಬದ್ಧರಾದ ಜೀವರ ಗಣಗಳೂ (ಸಮೂಹಗಳೂ) ಅಸಂಖ್ಯವಾಗಿವೆ; ಜೀವರೆಲ್ಲರೂ ನಾನಾ ಪ್ರಕಾರದ ವಿವಿಧ (ಭಿನ್ನಭಿನ್ನ)

ಏವಂ-ಹೀಗೆ, ಕರ್ಮಣಾಂ-ಕರ್ಮಗಳ, ಭೇದಾಃ-ಭೇದಗಳು, ಗಣಶಃ-ನಾನಾಗಣ(ವ್ಯೂಹ-ಸಮೂಹ-ಗುಂಪು)ವುಳ್ಳವುಗಳೂ, ತಥಾ-ಹಾಗೂ, ಅನಂತಶಃ-ಅಸಂಖ್ಯವಿವಿಧಪ್ರಕಾರಗಳುಳ್ಳವುಗಳೂ (ಆಗಿರುತ್ತವೆ); ಪ್ರವಾಹತಃ-ಪ್ರವಾಹರೂಪದಿಂದ, ಅನಾದಿಭಿಃ-ಅನಾದಿಗಳಾದ, ತೈಃ-(ಆ ವಿವಿಧ) ಕರ್ಮಗಳಿಂದ, ಅನಂತಶಃ-ಅಸಂಖ್ಯವಿವಿಧಪ್ರಕಾರಗಳಿಂದ, ಬದ್ಧಾಃ-(ಸಂಸಾರದಲ್ಲಿ) ಬಂಧಿತರಾಗಿರುವ, ಗಣಶಃ-ನಾನಾ ಗಣಕ್ಕೆ ಸೇರಿದ, ಅನಂತಶಃ-ಬಹುಪ್ರಕಾರದ ಯೋಗ್ಯತೆಗಳುಳ್ಳ, ಜೀವಾಃ-ಜೀವರು, ಏವಂ-ಉಕ್ತರೀತಿಯಲ್ಲಿ ತತ್ತತ್ಕರ್ಮ ಫಲಾಶಿನಃ-ಆಯಾ ಕರ್ಮಗಳ ಫಲವನ್ನು ಭೋಗಿಸುತ್ತಾರೆ; ಹಿ-(ಹೀಗೆಂಬುದು) ಪ್ರಸಿದ್ಧವು.

**ಅತಃ ಪ್ರತ್ಯೇಕವೈಚಿತ್ರ್ಯಂ ಸರ್ವಜೀವೇಷು ವಿದ್ಯತೇ ।**
**ಪೂರ್ವೋಕ್ತಾನ್ಯಖಿಲಾನ್ಯೇವ ಜೀವಕರ್ಮಾಣ್ಯನಂತಶಃ ॥ ೨೦ ॥**

**ನಾನಾವಿಶೇಷಭಿನ್ನಾನಿ ತ್ರಿವಿಧಾನಿ ಪುನಃ ಶೃಣು ।**
**ಪ್ರಾರಬ್ಧಂ ಸಂಚಿತಂ ಚೈವ ಕ್ರಿಯಮಾಣಮಿತಿ ತ್ರಿಧಾ ॥ ೨೧ ॥**

**ಕ್ರಿಯತೇ ಕ್ರಿಯಮಾಣಂ ತತ್ ಸಂಚಿತಂ ತಚ್ಚ ಕಾಲತಃ ।**
**ಫಲೋನ್ಮುಖಂ ತು ಪ್ರಾರಬ್ಧಂ ತ್ರೈವಿಧ್ಯಮಿತಿ ಕರ್ಮಣಃ ॥ ೨೨ ॥**

ಅತಃ-ಈ ಕಾರಣದಿಂದ, ಸರ್ವಜೀವೇಷು-ಸಕಲ ಜೀವರಲ್ಲಿ, ಪ್ರತ್ಯೇಕ ವೈಚಿತ್ರ್ಯಂ-ಪ್ರತಿ ಜೀವನಿಗೂ ಆತನದೇ ಆದ ಭಿನ್ನಕರ್ಮವು (ಕರ್ಮವೈಚಿತ್ರ್ಯವು-ಅನ್ಯವಿಲಕ್ಷಣವಾದ ಕರ್ಮಪ್ರಭೇದವು), ವಿದ್ಯತೇ-ಇರುತ್ತದೆ; ಪೂರ್ವೋಕ್ತಾನಿ-ಈ

---

ಯೋಗ್ಯತೆಯುಳ್ಳವರಾಗಿಯೂ ಇದ್ದಾರೆ; ಅವರು ತಂತಮ್ಮನ್ನು ಬಂಧಿಸಿರುವ ಕರ್ಮಗಳ ಫಲವನ್ನು ಭೋಗಿಸುತ್ತಾರೆ (೧೯-೨೦). ಸಕಲ ಜೀವರ ಕರ್ಮಗಳಲ್ಲಿ ಪ್ರತ್ಯೇಕವಾದ (ಪ್ರತಿ ಜೀವಕರ್ಮದ) ವಿಲಕ್ಷಣತ್ವವು (ಭೇದವಿಶೇಷವು), ಇರುತ್ತದೆ; ಈ ಹಿಂದೆ ಹೇಳಲಾದ ಅನಂತ ಪ್ರಕಾರದ ಎಲ್ಲ ಜೀವಕರ್ಮಗಳು ಬಹುವಿಧ ವಿಶೇಷಗಳಿಂದ ಕೂಡಿರುತ್ತವೆ; ಒಂದು ಕರ್ಮದಂತೆ ಅಥವಾ ಒಬ್ಬ ಜೀವನ ಕರ್ಮದಂತೆ ಮತ್ತೊಬ್ಬನ ಕರ್ಮವಿರುವುದಿಲ್ಲ; ಹೀಗಿರುವ ಅಸಂಖ್ಯ ಕರ್ಮಗಳಲ್ಲಿ ಬೇರೆ ವಿಧದ ತ್ರೈವಿಧ್ಯವೂ ಇದೆ; ಪ್ರಾರಬ್ಧ ಸಂಚಿತ ಮತ್ತು ಕ್ರಿಯಮಾಣ(ಆಗಾಮಿ)ಗಳೆಂಬುವೇ ಅವು; ಈಗ ಮಾಡುವ ಕರ್ಮವೂ, ಮುಂದೆ ಮಾಡುವ (ಆಗಾಮಿ) ಕರ್ಮವೂ, ಕಾಲಾಂತರದಲ್ಲಿ ಸಂಚಿತಗಳೇ ಆಗುತ್ತವೆ; ಎಂದರೆ, ಪ್ರತಿ ಜೀವನ ಹಿಂದೆ ಅನಾದಿಯಿಂದ ಕೂಡಿ ಬದ್ಧಿರುವ ಕರ್ಮರಾಶಿಯಲ್ಲಿ ಇವೂ ಸೇರಿಕೊಳ್ಳುತ್ತವೆಂದರ್ಥ; ತತ್ಕಾಲದಲ್ಲಿ ಫಲಕೊಡಲುದ್ಯುಕ್ತವಾಗಿರುವ (ಸಂಚಿತದೊಳಗಿದ್ದ) ಕರ್ಮವು ಪ್ರಾರಬ್ಧವೆನಿಸುತ್ತದೆ (೨೦-೨೨). ಕರ್ಮಗಳ

ಹಿಂದೆ ಹೇಳಲಾದ, ಅನಂತಶಃ-ಅಸಂಖ್ಯಪ್ರಕಾರದ, ಅಖಿಲಾನಿ-ಎಲ್ಲ ಜೀವ ಕರ್ಮಾಣಿ-ಜೀವಕರ್ಮಗಳು, ನಾನಾವಿಶೇಷಭಿನ್ನಾನಿ ಏವ-ಬಹುವಿಧದ ವಿಶೇಷ ಗಳಿಂದ ಕೂಡಿದವುಗಳೇ (ಒಂದು ಕರ್ಮದಂತೆ, ಒಬ್ಬ ಜೀವನ ಕರ್ಮದಂತೆ ಮತ್ತೊಬ್ಬರ ಕರ್ಮವಿರುವುದಿಲ್ಲ) ಆಗಿರುತ್ತವೆ; ಪುನಃ-ಮತ್ತೆ ತ್ರಿವಿಧಾನಿ-(ಕರ್ಮಗಳು ಬೇರೆ ವಿಧದಿಂದಲೂ) ಮೂರು ವಿಧವಾಗಿರುತ್ತವೆ; ಶೃಣು-ಕೇಳುವವನಾಗು; (ಆ ತ್ರೈವಿಧ್ಯ ಯಾವುದೆಂದರೆ), ಪ್ರಾರಬ್ಧಂ-ಪ್ರಾರಬ್ಧವೆಂದೂ, ಸಂಚಿತಂ-ಸಂಚಿತವೆಂದೂ, ಚ-ಮತ್ತು ಕ್ರಿಯಮಾಣಂ-(ಮುಂದೆ) ಮಾಡಲ್ಪಡುವುದು ಎಂದೂ, (ಆಗಾಮಿ), ತ್ರಿಧಾ ಏವ-ಮೂರು ಪ್ರಕಾರವಾದುದೇ ಅದು; ಕ್ರಿಯತೇ-ಈಗ ಮಾಡುವ, ತತ್-ಆ ಕರ್ಮವೂ, ಕ್ರಿಯಮಾಣಂ-ಮುಂದೆ ಮಾಡಲ್ಪಡುವುದು, ತತ್-ಅದೂ ಸಹ, ಕಾಲತಃ-ಕಾಲಗತಿಯಿಂದ, ಸಂಚಿತಂ-ಸಂಚಿತವಾಗುತ್ತದೆ (ಹಿಂದೆ ಕೂಡಿಬಿದ್ದಿರುವ ಕರ್ಮರಾಶಿಯಲ್ಲಿ ಸೇರಿಕೊಂಡು ಕಾಲದಲ್ಲಿ ಸಂಚಿತವೆನಿಸುತ್ತದೆ; ಫಲೋನ್ಮುಖಂ ತು-ಈಗ ಫಲಕೊಡಲುದ್ಯುಕ್ತವಾಗಿರುವ ಕರ್ಮವಾದರೋ, ಪ್ರಾರಬ್ಧಂ-ಪ್ರಾರಬ್ಧ ವೆನಿಸುತ್ತದೆ; ಇತಿ-ಹೀಗೆ, ಕರ್ಮಣಃ-ಕರ್ಮದ, ತ್ರೈವಿಧ್ಯಂ-ತ್ರಿವಿಧತ್ವವು (ಮೂರು ಪ್ರಕಾರತೆಯು) ಇರುತ್ತದೆ.

ಜನ್ಮಾಂತರೇ ಫಲಾವಾಪ್ತಿಃ ಪ್ರಾಯಶಃ ಕರ್ಮಣಾಂ ಭವೇತ್ ।
ಸಂಚಿತಂ ಸಹಕಾರೀ ಸ್ಯಾತ್ ಕ್ರಿಯಾಮಾಣಸ್ಯ ಕರ್ಮಣಃ ॥ ೭೪ ॥

ತದೈವ ತರ್ಹಿ ಲಭತೇ ಕ್ರಿಯಮಾಣಫಲಂ ನರಃ ।
ಯಥಾ ಚೋರಾದಿಕಸ್ಯಾತ್ರ ಶೂಲಾರೋಪಾದಿ ದೃಶ್ಯತೇ ॥ ೭೫ ॥

ಫಲಪ್ರಾಪ್ತಿಯು, ಬಹಳವಾಗಿ, (ಸಾಮಾನ್ಯ ನಿಯಮದಂತೆ), ಜನ್ಮಾಂತರಗಳಲ್ಲಿಯೇ ಆಗುತ್ತದೆ— ಕ್ರಿಯಮಾಣ (ಮಾಡಲ್ಪಡುವ) ಕರ್ಮಗಳಿಗೆ ಒಡನೆಯೇ ಫಲ ದೊರೆಯುವುದಿಲ್ಲ. ಆದರೆ ಕರ್ಮಕ್ಕೆ ಸಂಚಿತವು ಸಹಕಾರಿಯಾಗಿದ್ದರೆ,[1] ಅದರ ಫಲವು ತತ್ಕಾಲದಲ್ಲಿಯೇ ಲಭಿಸುವುದೂ ಉಂಟು; ಉದಾ:—ಕಳ್ಳತನವೆಂಬ ದುಷ್ಕರ್ಮಕ್ಕೆ ಮರಣದಂಡನೆ ಮೊದಲಾದ ಶಿಕ್ಷೆಯು, ಆ ಜನ್ಮದಲ್ಲಿಯೇ ಕಂಡುಬರುವಂತೆ(೭೪-೭೫).

1. ಸಂಚಿತವು ತಾನೇ ಫಲ ಕೊಡಲುದ್ಯುಕ್ತವಾದರೆ ಪ್ರಾರಬ್ಧವೆನಿಸುತ್ತದೆ; ಹಾಗಲ್ಲದೇ, ತಾನೇ ಫಲಕ್ಕೆ ಕಾರಣವಾಗದೇ ಕ್ರಿಯಮಾಣಕರ್ಮಕ್ಕೆ ಸಹಕಾರಿ ಮಾತ್ರವೂ ಆಗುವುದುಂಟು. ಪೂರ್ವಸಂಸ್ಕಾರರೂಪದಿಂದ ಸಂಚಿತವಾಗುವಾಗ ಸಹಕಾರಿಯೆನಿಸುತ್ತದೆ. ಕಳ್ಳತನಕ್ಕೆ ಕೈಕತ್ತರಿಸುವುದು ಸಾಮಾನ್ಯಶಿಕ್ಷೆಯಾದರೂ, ಹಿಂದಿನ ಕಳ್ಳತನಗಳು ಮರಣದಂಡನೆ ರೂಪದ, ಅಧಿಕ ಶಿಕ್ಷೆಗೆ ಕಾರಣವಾಗುವಂತೆ, ಸಹಕಾರಿ ಸಂಚಿತ ಕರ್ಮವು, ಕ್ರಿಯಮಾಣ ಕರ್ಮಕ್ಕೆ ಆ ಜನ್ಮದಲ್ಲಿಯೇ ಫಲಪ್ರದವಾಗುವಂತೆ ಮಾಡುತ್ತದೆ.

ಪ್ರಾಯಶಃ-ಬಹಳ ಮಾಡಿ, ಕರ್ಮಣಾಂ-ಕರ್ಮಗಳ, ಫಲಾವಾಪ್ತಿಃ-ಫಲ ಪ್ರಾಪ್ತಿಯು, ಜನ್ಮಾಂತರೇ-ಬೇರೆ ಜನ್ಮದಲ್ಲಿ (ಕರ್ಮ ಮಾಡಿದ ಜನ್ಮದಲ್ಲಿ ಅಲ್ಲ). ಭವೇತ್-ಆಗುತ್ತದೆ; ಕ್ರಿಯಮಾಣಸ್ಯ-ಮಾಡಲಾಗುವ, ಕರ್ಮಣಃ-ಕರ್ಮಕ್ಕೆ, ಸಂಚಿತಂ-ಸಂಚಿತಕರ್ಮವು, ಸಹಕಾರೀ-ಸಹಕಾರಿ ಕಾರಣವೂ, ಸ್ಯಾತ್-ಆಗುತ್ತದೆ; ತರ್ಹಿ-ಆಗ (ಹಾಗೆ ಕ್ರಿಯಮಾಣ ಕರ್ಮಕ್ಕೆ ಸಂಚಿತವು, ಪ್ರಾರಬ್ಧರೂಪದಿಂದ ಫಲಪ್ರಾಪಕವಾಗದೇ, ಸಹಕಾರಿ ಮಾತ್ರವಾದಾಗ), ತದೈವ-ಆಗಲೇ (ಆ ಕರ್ಮ ಮಾಡಿದಾಗಲೇ—ಜನ್ಮಾಂತರದಲ್ಲಿ ಅಲ್ಲ), ನರಃ-ಮನುಷ್ಯನು, ಕ್ರಿಯಮಾಣಂ ಫಲಂ-ಮಾಡುವ ಕರ್ಮದ ಫಲವನ್ನು ಲಭತೇ-ಹೊಂದುತ್ತಾನೆ (ಕರ್ಮಗಳು ಸಾಮಾನ್ಯವಾಗಿ ಜನ್ಮಾಂತರದಲ್ಲಿ ಫಲ ಕೊಡುತ್ತವೆಂಬ ನಿಯಮಕ್ಕೆ ಇದು ಅಪವಾದವು); ಅತ್ರ-ಲೋಕದಲ್ಲಿ ಚೋರಾದಿಕಸ್ಯ-ಕಳ್ಳತನವೇ ಮೊದಲಾದ ಕರ್ಮಕ್ಕೆ, ಶೂಲಾರೋಪಾದಿ-ಶೂಲಕ್ಕೇರಿಸುವ (ಮರಣದಂಡನೆ) ಮೊದಲಾದ ಫಲವು, ಯಥಾ ದೃಶ್ಯತೇ-ಕಂಡುಬರುವಂತೆ.

**ಇತಿ ಸಂಕ್ಷೇಪತಃ ಸರ್ವೇ ಕರ್ಮಭೇದಾಹ್ಯನಂತಶಃ ।**
**ವೈಚಿತ್ರ್ಯೇ ಸರ್ವಸೃಷ್ಟೀನಾಂ ಹೇತವೋಽಮೀ ಪ್ರಕೀರ್ತಿತಾಃ ॥ ೭೬ ॥**

ಇತಿ-ಹೀಗೆ, ಸರ್ವಸೃಷ್ಟೀನಾಂ-ಸರ್ವಸೃಷ್ಟಿಗಳ, ವೈಚಿತ್ರ್ಯೇ-ವೈಚಿತ್ರ್ಯ ವಿಷಯದಲ್ಲಿ (ಸೃಷ್ಟಿಯಲ್ಲಿ ಕಾಣುವ ವಿವಿಧ ಭೇದಗಳಿಗೆ), ಹೇತವಃ-ಮೂಲ ಕಾರಣಗಳಾದ, ಅಮೀ-ಈ, ಅನಂತಶಃ-ಬಹುಪ್ರಕಾರದ (ಅಸಂಖ್ಯಗಳಾದ), ಸರ್ವೇ-ಎಲ್ಲ ಕರ್ಮಭೇದಾಃ-ಕರ್ಮಪ್ರಭೇದಗಳು, ಸಂಕ್ಷೇಪತಃ-ಸಂಕ್ಷೇಪವಾಗಿ (ಸಂಗ್ರಹಿಸಿ), ಪ್ರಕೀರ್ತಿತಾಃ-ಹೇಳಲ್ಪಟ್ಟವು.

**ಜಡಾನಾಂ ಸೃಷ್ಟಿವೈಚಿತ್ರ್ಯಂ ಜೀವಭೋಗಾಯ ಕೇವಲಂ ।**
**ಜೀವಕರ್ಮೈವ ತತ್ರ ಸ್ಯಾದ್ವೈಚಿತ್ರ್ಯೇ ಕಾರಣಂ ತಥಾ ॥ ೭೭ ॥**

ಜಡಾನಾಂ-ಜಡಪದಾರ್ಥಗಳ, ಸೃಷ್ಟಿವೈಚಿತ್ರ್ಯಂ-ವಿವಿಧ ವಿಚಿತ್ರ ಸೃಷ್ಟಿಯು, ಜೀವಭೋಗಾಯ ಕೇವಲಂ-ಅವುಗಳನ್ನು (ಆ ಜಡವಸ್ತುಗಳನ್ನು) ಭೋಗಿಸುವ

---

ಹೀಗೆ, ಸಕಲ ಸೃಷ್ಟಿವೈಚಿತ್ರ್ಯಕ್ಕೆ ಮೂಲಕಾರಣಗಳಾದ ಅಸಂಖ್ಯ ಕರ್ಮಭೇದಗಳು, ಸಂಕ್ಷೇಪವಾಗಿ ಹೇಳಲ್ಪಟ್ಟವು(೭೬). ಜಡಪದಾರ್ಥಗಳ ಸೃಷ್ಟಿಯಲ್ಲಿ ಕಾಣುವ ಸೃಷ್ಟಿವೈಚಿತ್ರ್ಯಕ್ಕೆ ಅವುಗಳನ್ನು ಭೋಗಿಸುವ ಜೀವರ ವಿವಿಧ ಭೋಗಪ್ರಕಾರಗಳೇ ಕಾರಣವು; ಆದ್ದರಿಂದ, ಜಡವಸ್ತುಗಳಲ್ಲಿರುವ ಸೃಷ್ಟಿವೈಚಿತ್ರ್ಯಕ್ಕೆ, ಅವುಗಳನ್ನು ಭೋಗಿಸುವ ಜೀವರ ಕರ್ಮವೇ ಕಾರಣವಾಗಿರುತ್ತದೆ(೭೭). ಈ ಕರ್ಮಪ್ರಭೇದಗಳ ವಿವರವನ್ನು ಆದರದಿಂದ ಶ್ರವಣಮಾಡಿ ಯಾರು ವಿಶ್ವಾಸಮಾಡುವರೋ ಮತ್ತು ಅನ್ಯರಿಗೆ ಕೇಳಿಸಿ

(ಉಪಯೋಗಿಸಿ ಅನುಭವಿಸುವ) ಜೀವರಿಗಾಗಿ ಮಾತ್ರ (ಜೀವರ ಸೃಷ್ಟಿ ವೈಚಿತ್ರ್ಯದಿಂದ ಅವರ ಭೋಗವೂ ವಿಚಿತ್ರವಾದುದೇ); ತತ್ರ-ಜಡವಸ್ತುಗಳ ಸೃಷ್ಟಿಯಲ್ಲಿ ತಥಾ-(ಜೀವಸೃಷ್ಟಿವೈಚಿತ್ರ್ಯಕ್ಕೆ ಅವರವರ ಕರ್ಮವೈಚಿತ್ರ್ಯವು ಕಾರಣವಾಗಿರುವಂತೆ) ಅದರಂತೆ, ವೈಚಿತ್ರ್ಯೇ-ವಿಭಿನ್ನ ಸೃಷ್ಟಿಯಲ್ಲಿ ಜೀವಕರ್ಮೈವ-(ಅವುಗಳನ್ನುಪ ಭೋಗಿಸುವ) ಜೀವರ ಕರ್ಮವೇ, ಕಾರಣಂ-ಕಾರಣವು, ಸ್ಯಾತ್-ಆಗಿರುತ್ತದೆ.

ಯ ಏವ ಕರ್ಮಣೋ ಭೇದಾನ್ ಶೃಣೋತಿ ಶ್ರಾವಯೇಚ್ಚ ಯಃ ।
ತಸ್ಯ ಕ್ರಮೇಣ ಜಾಯೇತ ಕರ್ಮಣಾಮಪಿ ಸಂಕ್ಷಯಃ ॥ ೭೮ ॥

ಯಃ ಏವ-ಯಾವನಾದರೆ, ಕರ್ಮಣಃ-ಕರ್ಮದ, ಭೇದಾನ್-ಭೇದಗಳನ್ನು ಶೃಣೋತಿ-ಶ್ರವಣಮಾಡುತ್ತಾನೆಯೋ, ಯಃ ಚ-ಯಾವನಾದರೆ, ಶ್ರಾವಯೇತ್-(ಅನ್ಯರಿಗೆ) ಶ್ರವಣಮಾಡಿಸುತ್ತಾನೆಯೋ, ತಸ್ಯ-ಅವನಿಗೆ, ಕರ್ಮಣಾಂ-(ಅವನ) ಕರ್ಮಗಳ, ಸಂಕ್ಷಯಃ ಅಪಿ-ನಾಶವೂ ಸಹ, ಕ್ರಮೇಣ-ಕ್ರಮವಾಗಿ, ಜಾಯೇತ-ಉಂಟಾಗುತ್ತದೆ.

ಇದಂ ತವ ಹಿ ಸೃಷ್ಟ್ಯರ್ಥಂ ಜೀವಾನಾಂ ಕಥಿತಂ ಮಯಾ ।
ಜಡಾನಾಂ ಚಾಪಿ ಸರ್ವೇಷಾಂ ಜ್ಞಾತ್ವೈವಂ ಸೃಜ ಸರ್ವಶಃ ॥ ೭೯ ॥

ಅಹಂ ಹಿ ಸರ್ವದಾ ತಸ್ಮಿನ್ ಬ್ರಹ್ಮನ್ ಸನ್ನಿಹಿತಃ ಸದಾ ।
ಸ್ಮರಿಷ್ಯತಿ ತದಾತ್ಮಾನಂ ದರ್ಶಯಾಮ್ಯಪಿ ನಾನ್ಯಥಾ ॥ ೮೦ ॥

ಶ್ರಾವ್ಯಂ ಶ್ರುತಂ ತ್ವಯಾ ಪ್ರಾಯಃ ಸ್ವಸ್ಥಚಿತ್ತೋ ಭವಾಧುನಾ ।
ಮದ್ಭಕ್ತ್ಯಾ ನಿರತೋ ನಿತ್ಯಂ ಬ್ರಹ್ಮನ್ ಸರ್ವಮಿದಂ ಸೃಜ ॥ ೮೧ ॥

ಬ್ರಹ್ಮನ್-ಹೇ ಬ್ರಹ್ಮ!, ಇದಂ-ಈ ಕರ್ಮಭೇದ ವಿವರವು, ತವ-ನಿನಗೆ, ಜೀವಾನಾಂ-ಜೀವರುಗಳ, ಸೃಷ್ಟ್ಯರ್ಥಂ-ಸೃಷ್ಟಿಗಾಗಿ (ಉಪಯೋಗಿಸಿಕೊಳ್ಳಲು),

---

ಆದರವನ್ನುಂಟುಮಾಡುವರೋ, ಅವರು, ಕ್ರಮವಾಗಿ, ತಮ್ಮ ಕರ್ಮಗಳಬಂಧದಿಂದ ಮುಕ್ತರಾಗುತ್ತಾರೆ(೭೮). ಈ ಕರ್ಮಪ್ರಭೇದಗಳ ವಿವರಣೆಯು, ಹೇ ಬ್ರಹ್ಮದೇವ! ಜೀವರ ಸೃಷ್ಟಿಗಾಗಿ ಹೇಳಲ್ಪಟ್ಟಿತು; ಈ ಜ್ಞಾನಯುಕ್ತನಾಗಿಯೇ ಜಡಜಗತ್ತಿನ ಸೃಷ್ಟಿಯನ್ನೂ ಮಾಡುವವನಾಗು; ನಿನ್ನ ಜ್ಞಾನದಲ್ಲಿ ನಾನು ಸದಾ ಸನ್ನಿಹಿತನಾಗಿರುತ್ತೇನೆ—ಆದ್ದರಿಂದ ಜೀವರಿಗೆ, ಅವರವರ ಕರ್ಮಾನುಸಾರವಾದ ಸ್ಥೂಲದೇಹಗಳನ್ನಿತ್ತು ಸೃಷ್ಟಿಮಾಡಲು ಸಮರ್ಥನಾಗಿರುವೆ; ನಿನಗೆ ಜೀವರ ಕರ್ಮಭೇದ ವಿಷಯಕ ಜ್ಞಾನವು ಎಂದೂ ತಿರೋಧಾನ ಹೊಂದುವುದಿಲ್ಲ ಮತ್ತು ನನ್ನ ಪ್ರತ್ಯಕ್ಷದರ್ಶನವು ಸದಾ ಸಿದ್ಧವಾಗಿರುತ್ತದೆ;

ಮಯಾ-ನನ್ನಿಂದ, ಕಥಿತಂ-ಹೇಳಲ್ಪಟ್ಟಿತು; ಏವಂ-ಹೀಗೆಯೇ, ಜ್ಞಾತ್ವಾ ಏವ-ಜೀವಕರ್ಮಭೇದಗಳ ಜ್ಞಾನವುಳ್ಳವನಾಗಿಯೇ, ಸರ್ವೇಷಾಂ-ಎಲ್ಲ ಜಡಾನಾಂ ಚಾಪಿ-ಜಡವಸ್ತುಗಳ, ಸರ್ವಶಃ-ಸರ್ವ (ವಿವಿಧ ವಿಚಿತ್ರಗಳನ್ನು), ಸೃಜ-ಸೃಷ್ಟಿ ಮಾಡುವನಾಗು; ಅಹಂ ಹಿ-ನಾನಾದರೋ, ಸರ್ವದಾ-ಯಾವಾಗಲೂ, ತಸ್ಮಿನ್-(ಕರ್ಮಭೇದ ವಿಷಯಕವಾದ ನಿನ್ನ) ಜ್ಞಾನದಲ್ಲಿ ಸನ್ನಿಹಿತಃ-ಇರುತ್ತೇನೆ; ತತ್-ಆದ್ದರಿಂದ, ಸದಾ-ಸರ್ವಕಾಲದಲ್ಲಿ ಸ್ಮರಿಷ್ಯತಿ-(ನೀನು) ಸ್ಮರಣೆಯುಳ್ಳವನಾಗುತ್ತೀ, (ಜೀವಕರ್ಮಭೇದಜ್ಞಾನವನ್ನು ಸ್ಪಷ್ಟವಾಗಿ ಗ್ರಹಿಸಿರುವಿ), ಅಪಿ-ಮತ್ತು ಆತ್ಮಾನಂ-ನನ್ನನ್ನು (ಸದಾ-ಸರ್ವದಾ), ದರ್ಶಯಾಮಿ-(ನಿನಗೆ) ಪ್ರತ್ಯಕ್ಷದರ್ಶನಮಾಡಿಸುವೆನು; ಅನ್ಯಥಾ ನ-(ನನ್ನ ದರ್ಶನದ ಅಭಾವವು ನಿನಗೆ ಎಂದೂ ಸಂಭವಿಸುವುದಿಲ್ಲ) ತಪ್ಪುವುದಿಲ್ಲ; ಬ್ರಹ್ಮನ್-ಹೇ ಬ್ರಹ್ಮದೇವ!, ತ್ವಯಾ-ನಿನ್ನಿಂದ, ಪ್ರಾಯಃ-ಬಹಳ ಮಾಡಿ (ಕೊರತೆ ಇಲ್ಲದಂತೆ), ಶ್ರಾವ್ಯಂ-ಕೇಳಬೇಕಾದುದೆಲ್ಲವೂ, ಶ್ರುತಂ-ಕೇಳಲ್ಪಟ್ಟಿತು; ಅಧುನಾ-ಈಗ, ಸ್ವಸ್ಥಚಿತ್ತಃ ಭವ-ಸ್ವಸ್ಥವಾದ ಮನಸ್ಸುಳ್ಳವನಾಗು (ಹೇಗೆ ಸೃಷ್ಟಿಯಲ್ಲಿ ಶಕ್ತನಾದೇನೆಂಬ ಚಿಂತೆಯನ್ನು ಬಿಡು); ನಿತ್ಯಂ-ನಿರಂತರವಾಗಿ, ಮದ್ಭಕ್ತ್ಯಾ-ನನ್ನ ಭಕ್ತಿಯಲ್ಲಿ ನಿರತಃ-ಸ್ಥಿತನಾಗಿ, ಇದಂ-ಈ, ಸರ್ವಂ-ಸಕಲ ಜಗತ್ತನ್ನು ಸೃಜ-ಸೃಷ್ಟಿಸು.

ಕರ್ಮಭೇದಕಥನವೆಂಬ ೧೧ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೧೨

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

ಸೃಜೇಯಂ ಕಥಮೇತಾನಿ ಜೀವವೃಂದಾನ್ಯನೇಕಶಃ ।
ಏತದ್ವಿಸ್ತರತೋ ಬ್ರೂಹಿ ಕೃಪಯಾ ಭೂತಭಾವನ ॥ ೧ ॥

ಅರ್ಥ:— ಭೂತಭಾವನ-ಹೇ(ಸ್ವತಂತ್ರ) ಸೃಷ್ಟಿಕರ್ತ! ಕಥಂ-ಹೇಗೆ (ಯಾವ ಪ್ರಕಾರ), ಅನೇಕಶಃ-ನಾನಾ ಪ್ರಕಾರವಾಗಿ, ಏತಾನಿ-ಈ (ಸೃಷ್ಟಿಯಲ್ಲಿ ಬರಲಿರುವ),

---

ನೀನು ಕೇಳಬೇಕಾದುದನ್ನೆಲ್ಲಾ ಕೇಳಿದಂತಾಗಿದೆ—ಸ್ವಸ್ಥಚಿತ್ತನಾಗಿ ಜಗತ್ಸೃಷ್ಟಿಕಾರ್ಯದಲ್ಲಿ ತೊಡಗುವವನಾಗು; ಹೇಗೆ ಸಮರ್ಥನಾದೇನೆಂಬ ಚಿಂತೆಯನ್ನು ಬಿಟ್ಟು ನನ್ನ ಭಕ್ತಿಯಲ್ಲಿಯೇ ನಿಂತು, ಜಗತ್ತನ್ನು ಸೃಷ್ಟಿಮಾಡು(೭೯-೮೧).

೧೧ನೇ ಅಧ್ಯಾಯವು ಮುಗಿದುದು.

ಜೀವವೃಂದಾನಿ- ಜೀವಸಮೂಹಗಳನ್ನು, ಸೃಜೇಯಂ-ಸೃಷ್ಟಿ ಮಾಡಲಿ; ಏತತ್ - ಇದನ್ನು ಕೃಪಯಾ-ಕೃಪೆಯಿಂದ, ವಿಸ್ತರತಃ- ವಿಸ್ತಾರವಾಗಿ, ಬ್ರೂಹಿ- ಹೇಳುವವನಾಗು.

**ಶ್ರೀ ಹಯಗ್ರೀವ ಉವಾಚ—**

**ಸರ್ವೇಷಾಂ ಬೀಜಭೂತಾ ಯೇ ಸ್ಥಾವರಾ ಜಂಗಮಾಸ್ತಥಾ ।**
**ಸರ್ವಾನ್ ಸೃಷ್ಟ್ವೈವ ಸೂಕ್ಷ್ಮಾಂಸ್ತಾನ್ ನಿದಧೇ ತ್ವಚ್ಛರೀರಕೇ ॥ ೨ ॥**

**ಅನ್ಯೇಽಪ್ಯನಂತಸಂಖ್ಯಾಕಾನ್ ದೇಹಮಾತ್ರಾಶ್ಚ ಸರ್ವಶಃ ।**
**ತ್ವಯ್ಯೇವ ನಿಹಿತಾ ಬ್ರಹ್ಮನ್ ತಾನ್ ಸ್ರಕ್ಷ್ಯೇಽಹಂ ತ್ವಯಿ ಸ್ಥಿತಃ ॥ ೩ ॥**

**ಪಿತಾಮಹ ತ್ವಂ ಸರ್ವೇಷಾಂ ಸರ್ವೋತ್ಪತ್ತಿಯಶಸ್ತ್ವಯಿ ।**
**ದಾಸ್ಯಾಮಿ ಕೇವಲಂ ತಸ್ಮಾತ್ ಸ್ವಸ್ಥಚಿತ್ತೋ ಭವಾಧುನಾ ॥ ೪ ॥**

ಯೇ- ಯಾರು, ಸರ್ವೇಷಾಂ-ಸೃಷ್ಟರಾಗಬೇಕಾದ ಸರ್ವರಿಗೆ, ಬೀಜಭೂತಾ- ಮೂಲಭೂತರಾದ (ಮೂಲಪುರುಷರಂತಿರುವ), ಜಂಗಮಾಃ-ಜಂಗಮರೂ (ಸಂಚಾರವುಳ್ಳವರೂ), ತಥಾ- ಮತ್ತು, ಸ್ಥಾವರಾಃ-ಸ್ಥಾವರರೂ (ಆಗಿರುವರೋ), ಸರ್ವಾನ್- ಆ ಎಲ್ಲರನ್ನೂ, ಸೃಷ್ಟ್ವಾ - ಏವ-ಸೃಷ್ಟಿ ಮಾಡಿಯೇ (ಸೂಕ್ಷ್ಮರೂಪದಿಂದ ನಾನೇ ಸೃಷ್ಟಿಮಾಡಿ), ತಾನ್ ಸೂಕ್ಷ್ಮಾನ್-ಸೂಕ್ಷ್ಮರೂಪರಿಂದಿರುವ ಅವರನ್ನು (ಸ್ಥಾವರ-ವೃಕ್ಷಾದಿ, ಜಂಗಮ- ಮನುಷ್ಯಾದಿಗಳನ್ನು), ತ್ವಚ್ಛರೀರಕೇ-ನಿನ್ನ ದೇಹದಲ್ಲಿ, ನಿದಧೇ- ಇಡುತ್ತೇನೆ (ಇಟ್ಟಿದ್ದೇನೆ); ಸರ್ವಶಃ-ಸರ್ವರೂ, ದೇಹ ಮಾತ್ರಾಃ ಚ-ಸೂಕ್ಷ್ಮಲಿಂಗ ದೇಹ ಮಾತ್ರವುಳ್ಳವರು, ತ್ವಯಿ-ನಿನ್ನಲ್ಲಿ, ನಿಹಿತಾಃ ಏವ-ಸ್ಥಾಪಿಸಲ್ಪಟ್ಟಿರುವರು; ಅನಂತ ಸಂಖ್ಯಾಕಾನ್-ಅನಂತ ಸಂಖ್ಯೆಯವರಾದ, ಅನ್ಯೇಪಿ-ಇತರರನ್ನೂ, ತ್ವಯಿ-ನಿನ್ನಲ್ಲಿ ಸ್ಥಿತಃ-ಇದ್ದವನಾಗಿ, ಬ್ರಹ್ಮನ್-ಹೇ ಬ್ರಹ್ಮ, ಅಹಂ-ನಾನು, ತಾನ್-ಅವರೆಲ್ಲರನ್ನೂ ಸ್ರಕ್ಷ್ಯೇ-ಸೃಷ್ಟಿಮಾಡುತ್ತೇನೆ; ಸರ್ವೇಷಾಂ-ಎಲ್ಲರ, ಪಿತಾಮಹತ್ವಂ-ಪಿತಾಮಹನೆಂಬ

---

ಅಧ್ಯಾಯ ೧೨

**ತಾತ್ಪರ್ಯ:**—ಸೃಷ್ಟಿಯಲ್ಲಿ ಬರಲಿರುವ ಜೀವವೃಂದಗಳನ್ನು ಅನೇಕ ಪ್ರಕಾರದಿಂದ ಸೃಷ್ಟಿಮಾಡುವ ವಿಧಾನವನ್ನು ಕೃಪೆಮಾಡಿ, ವಿಸ್ತರಿಸು, ಹೇ ಪ್ರಭೋ! (೧). ಸೃಷ್ಟರಾಗಲಿರುವ, ಸಕಲ ಸ್ಥಾವರ ಜಂಗಮ ಜೀವರ ಮೂಲ ಪುರುಷರಂತಿರುವ ಎಲ್ಲ ಜೀವರನ್ನೂ ನಾನೇ ಸೃಷ್ಟಿಮಾಡಿ, ಸೂಕ್ಷ್ಮರೂಪದಿಂದಿರುವ ಅವರನ್ನು ನಿನ್ನ ದೇಹದಲ್ಲಿಡುತ್ತೇನೆ; ಈ ಎಲ್ಲರನ್ನೂ ಮತ್ತಿತರ ಲಿಂಗದೇಹ ಮಾತ್ರ ಯುಕ್ತರಾಗಿರುವ ಅಸಂಖ್ಯ ಜೀವರನ್ನು, ಹೇ ಬ್ರಹ್ಮ! ನಿನ್ನಲ್ಲಿ ನಿಂತು ನಾನೇ ಸೃಷ್ಟಿಮಾಡುತ್ತೇನೆ; ಆದರೆ,

ಪೂಜ್ಯತೆಯೂ, ಸರ್ವೋತ್ಪತ್ತಿಯಶಃ-ಸರ್ವವನ್ನೂ ಸೃಷ್ಟಿಸುವವನೆಂಬ ಕೀರ್ತಿಯೂ, ಕೇವಲಂ ತ್ವಯಿ-ನಿನ್ನಲ್ಲಿ ಮಾತ್ರ, ದಾಸ್ಯಾಮಿ-ಕೊಡುತ್ತೇನೆ; ತಸ್ಮಾತ್-ಆದ್ದರಿಂದ, ಅಧುನಾ-ಇನ್ನು ಮುಂದೆ (ಈಗ), ಸ್ವಸ್ಥಚಿತ್ತಃ-ಶಾಂತಮನಸ್ಕನು, (ಚಿಂತೆಯನ್ನು ಬಿಟ್ಟು) ನಿಶ್ಚಿಂತನು, ಭವ-ಭಗು.

**ಸರ್ವೇಷಾಂ ಪ್ರಕೃತಿರ್ಮಾತಾ ಬೀಜದಾತಾತ್ವಹಂ ಪಿತಾ ।**
**ಅನ್ಯೇ ನಿಮಿತ್ತಮಾತ್ರಾಣಿ ಯಥಾ ಪುಣ್ಯಂ ಯಶಃಪ್ರದಃ ॥ ೫ ॥**

ಸರ್ವೇಷಾಂ-ಸೃಷ್ಟರಾಗುವ ಎಲ್ಲ ಜೀವರಿಗೆ, ಪ್ರಕೃತಿಃ-ಲಕ್ಷ್ಮೀದೇವಿಯು, ಮಾತಾ-ಜನನಿಯು; ಅಹಂ ತು-ನಾನಾದರೋ, ಬೀಜದಾತಾ-ಬೀಜಪ್ರದನಾದ (ಬೀಜಾವಾಪಮಾಡುವ-ಉತ್ಪತ್ತಿಗೆ ಕಾರಣನಾದ), ಪಿತಾ-ತಂದೆಯು (ಜನಕನು); ಅನ್ಯೇ-ಇತರರು (ಲೌಕಿಕ ತಾಯಿತಂದೆಗಳು), ನಿಮಿತ್ತಮಾತ್ರಾಣಿ-(ಜೀವರ ಜನ್ಮದಲ್ಲಿ) ನಿಮಿತ್ತಮಾತ್ರರು (ಕಾರಣವಾಗುವ ನಿಮಿತ್ತವನ್ನೊದಗಿಸುವವರು); (ನಾನು) ಯಥಾಪುಣ್ಯಂ-ಅವರವರ ಪುಣ್ಯದಂತೆ, ಯಶಃಪ್ರದಃ-(ಅವರಿಗೆ) ಮಾತಾಪಿತೃಗಳೆಂಬ ಕೀರ್ತಿಯನ್ನು ಕೊಡುವವನು.

**ಪಾಲಕಸ್ತ್ವೇಕ ಏವಾಹಂ ಮಾತಾಪಿತ್ರಾದಿಷು ಸ್ಥಿತಃ ।**
**ಅನ್ಯಥಾ ಮಾತೃಗರ್ಭಸ್ಥೋ ಗರ್ಭೋ ಬೀಜಾದಿಕಂ ತಥಾ ॥ ೬ ॥**

**ಕಥಂ ವರ್ಧೇತ ಕಸ್ಯಾಪಿ ಯತ್ರ ನಾಸ್ತಿ ಪ್ರವೇಶನಂ ।**
**ಸಂಹಾರಕೋಽಪಿ ಸರ್ವೇಷಾಂ ಮೃತ್ಯುಕಾರಣಸಂಸ್ಥಿತಃ ॥ ೭ ॥**

**ಅಪಿ ಮೃತ್ಯೋರಹಂ ಮೃತ್ಯುಸ್ತತ್ತತ್ಕರ್ಮಾನುಸಾರತಃ ।**
**ಸ್ವದೇಹರಕ್ಷಕಾಃ ಸರ್ವೇ ನ ಮ್ರಿಯೇರನ್ನಿಜೇಚ್ಛಯಾ ॥ ೮ ॥**

---

ಸರ್ವರನ್ನೂ ಸೃಷ್ಟಿಸುವನೆಂಬ ಯಶಸ್ಸನ್ನು ನಿನಗೆ ಕೊಡುತ್ತೇನೆ; ನೀನೇ ಪಿತಾಮಹನೆಂದು ಸರ್ವರಿಂದ ಪೂಜಿತನಾಗುವಿ; ನೀನು ನಿಶ್ಚಿಂತನಾಗು (ಹೇಗೆ ಜಗತ್ಸೃಷ್ಟಿಕಾರ್ಯದಲ್ಲಿ ಸಮರ್ಥನಾದೇನೆಂಬ ಚಿಂತೆಯನ್ನು ಪರಿತ್ಯಜಿಸು)(೨-೪). ಸೃಷ್ಟರಾಗುವ ಎಲ್ಲ ಜೀವರಿಗೆ (ಎಲ್ಲ ಕಾಲದಲ್ಲಿಯೂ) ಲಕ್ಷ್ಮೀದೇವಿಯೇ ತಾಯಿಯು; ನಾನೇ ಬೀಜಪ್ರದನಾದ (ಗರ್ಭಾಧಾನ ಮಾಡುವ) ತಂದೆಯು;[1] ಲೋಕದಲ್ಲಿ ಮಾತಾಪಿತೃಗಳೆಂದು ಪ್ರಸಿದ್ಧರಾದ

---

1. ಬೀಜದಂತೆ ಅಂಕುರವಾದೊಡನೆ ನಾಶಹೊಂದುವ, ಕಾರಣನಲ್ಲ; ಜೀವರನ್ನು ಮಾತೃಗರ್ಭದಲ್ಲಿ ಸ್ಥಾಪಿಸುವ ಸ್ವತಂತ್ರ ನಿಮಿತ್ತಕಾರಣನು; ಶುಕ್ಲಶೋಣಿತಾದಿಗಳು ಉಪಾದಾನ ಕಾರಣಗಳು.

ಸರ್ವರ ರಕ್ಷಕನೂ ಸಂಹಾರಕರ್ತನೂ ತಾನೇ ಎಂದು ಹೇಳುತ್ತಾನೆ— ಶ್ರೀ ಹಯಗ್ರೀವ ಸ್ವಾಮಿ:—

ಮಾತಾಪಿತ್ರಾದಿಷು-ತಾಯಿತಂದೆಗಳಲ್ಲಿ ಸ್ಥಿತಃ-ಇರುವ (ನಿಂತು), ಏಕಃ-ಸ್ವತಂತ್ರನಾದ, ಅಹಂಏವ-ನಾನೇ, ಪಾಲಕಃ-ರಕ್ಷಕನು; ಅನ್ಯಥಾ-(ಸರ್ವಪ್ರಕಾರದಿಂದ ನಾನೇ ರಕ್ಷಕನಲ್ಲದಿದ್ದರೆ) ಹಾಗಲ್ಲದಿದ್ದರೆ, ಯತ್ರ-ಎಲ್ಲಿ ಕಸ್ಯಾಪಿ-ಯಾರದ್ದಾದರೂ, ಪ್ರವೇಶಃ-ಪ್ರವೇಶವು, ನಾಸ್ತಿ-ಇಲ್ಲವೋ, (ತತ್ರ-ಅಲ್ಲಿ ಗರ್ಭದಲ್ಲಿ), ಮಾತೃಗರ್ಭಸ್ಥಃ-ತಾಯಿಯ ಹೊಟ್ಟೆಯಲ್ಲಿರುವ, ಬೀಜಾದಿಕಂ-ಬಿತ್ತಿದ ಬೀಜವೂ, ತಥಾ-ಹಾಗೂ, ಗರ್ಭಃ-ಗರ್ಭವೂ, ಕಥಂ-ಹೇಗೆ, ವರ್ಧೇತ-ಬೆಳೆದೀತು (ವೃದ್ಧಿಯಾಗುತ್ತದೆ); ಮೃತ್ಯುಕಾರಣಸಂಸ್ಥಿತಃ-ಮರಣಕಾರಣದಲ್ಲಿ ಸ್ಥಿತನಾದ ನಾನೇ, ಸರ್ವೇಷಾಂ ಅಪಿ-ಎಲ್ಲರಿಗೂ, ಸಂಹಾರಕಃ-ಸಂಹಾರಕರ್ತನು; (ಅಷ್ಟೇಕೆ), ಮೃತ್ಯೋಃ ಅಪಿ-(ಮರಣಕಾರಣಳಾದ) ಮೃತ್ಯುದೇವತೆಗೆ ಸಹ, ಅಹಂ-ನಾನು, ಮೃತ್ಯುಃ-ಮೃತ್ಯುವು; ತತ್ತತ್ಕರ್ಮಾನುಸಾರತಃ-ಆಯಾ ಜೀವರ ಕರ್ಮಾನುಸಾರವಾಗಿ, (ಮೃತ್ಯುಃ-ಸಂಹಾರಕನೂ ನಾನೇ); ಸರ್ವೇ-ಎಲ್ಲ ಪ್ರಾಣಿಗಳು, ಸ್ವದೇಹರಕ್ಷಕಾಃ-ತಮ್ಮ ದೇಹಗಳನ್ನು ರಕ್ಷಿಸಿಕೊಳ್ಳುವವರೇ ಆಗಿರುತ್ತಾರೆ (ತಮ್ಮ ಶಕ್ತಿಯಿದ್ದಷ್ಟು ದೇಹವನ್ನು ಉಳಿಸಿಕೊಳ್ಳುವ ಇಚ್ಛೆ ಮತ್ತು ಪ್ರಯತ್ನ ಉಳ್ಳವರೇ ಆಗಿರುತ್ತಾರೆ); ನಿಜೇಚ್ಛಯಾ-ತಮ್ಮ ಇಚ್ಛೆಯಿಂದಲೇ, (ಸಾವನ್ನು ಅಪೇಕ್ಷಿಸಿ), ನ ಮ್ರಿಯೇರನ್-(ಯಾರೂ) ಸಾಯುವುದಿಲ್ಲ (ಆದ್ದರಿಂದ) ಜೀವರು ತಮ್ಮ ಮರಣಕ್ಕೆ ತಾವೇ ಕಾರಣರೆಂಬುದೂ ಯುಕ್ತವಾಗುವುದಿಲ್ಲ).

**ಅತೋಽಹಮೇವ ಸರ್ವೇಷಾಂ ಸಂಹರ್ತಾ ಚ ನಿಯೋಜಕಃ ।**
**ಅತ ಏವ ಹಿ ಸರ್ವೇಽಪಿ ನಾನಾಕರ್ಮಸ್ವನಿಚ್ಛಯಾ ॥ ೯ ॥**

---

ಸ್ತ್ರೀಪುರುಷರು, ನಿಮಿತ್ತಮಾತ್ರರು (ಪರಮಾತ್ಮನ ಕ್ರಿಯೊಳಗಿನ ಉಪಕರಣರು ಮಾತ್ರ); ಹೀಗಿದ್ದರೂ ಶ್ರೀಹರಿಯು ಅವರಿಗೆ ಅವರೇ ಹುಟ್ಟಿದ ಜೀವನ ಮಾತಾಪಿತೃಗಳೆಂಬ ಕೀರ್ತಿಯನ್ನಿತ್ತು, ಹಾಗೆ ವ್ಯವಹರಿಸಲ್ಪಡುವಂತೆ ಮಾಡುತ್ತಾನೆ(೫). ತಾಯಿತಂದೆಗಳಲ್ಲಿದ್ದು ಎಲ್ಲ ಪ್ರಕಾರದಿಂದ, ಸೃಷ್ಟರಾಗುವ ಜೀವರನ್ನು ರಕ್ಷಿಸಿ, ಪೋಷಿಸುವವನೂ ನಾನೇ; ಹಾಗಲ್ಲದಿದ್ದರೆ, ತಾಯಿಯ ಹೊಟ್ಟೆಯಲ್ಲಿ ಸ್ಥಾಪಿತವಾದ ಬೀಜವು ರಕ್ಷಿತವಾಗಿ, ಅದರಿಂದ ರೂಪಗೊಂಡ ಗರ್ಭವು ವೃದ್ಧಿಯಾಗುವುದು ಹೇಗೆ?—ಅಲ್ಲಿ ಯಾರಿಗೂ ಪ್ರವೇಶವಿಲ್ಲವಷ್ಟೆ! ಜೀವರಿಗೆ ಪ್ರಾಪ್ತವಾಗುವ ಮರಣದ ವಿವಿಧ ಕಾರಣಗಳಲ್ಲಿ ಸಹ ಇದ್ದು, ಸರ್ವರ ಸಂಹಾರಕನೂ ನಾನೇ; ಮೃತ್ಯುದೇವತೆಗೂ ನಾನು ಮೃತ್ಯುವು; ಸರ್ವ ಪ್ರಾಣಿಗಳನ್ನು ಅವರವರ ಕರ್ಮಾನುಸಾರವಾಗಿ ಮರಣವನ್ನು ಹೊಂದಿಸುವವನು ನಾನೇ; ಸ್ವೇಚ್ಛೆಯಿಂದ ಯಾರೂ ಮರಣವನ್ನು ಸ್ವಾಗತಿಸುವುದಿಲ್ಲ; ಎಲ್ಲರೂ ತಮ್ಮ

**ನಸ್ಯೋತಾ ವೃಷಭಾ ಯದ್ವತ್ ಪ್ರವರ್ತಂತೇ ತಥಾ ಸದಾ ।**
**ಅಜ್ಞಾನಿನೋ ಜ್ಞಾನಯುತಾನ್ ಜ್ಞಾನಿನೋ ಮೂಢಚೇತಸಃ ॥ ೧೦ ॥**

**ಕರೋಮಿ ಸ್ವೇಚ್ಛಯಾ ಬ್ರಹ್ಮನ್ ಬಧ್ನಾಮಿ ಭವಪಾಶತಃ ।**
**ಮೋಕ್ಷಯಾಮಿ ತಥಾ ಕಾಂಶ್ಚಿದಹಮೇವ ನ ಚಾಪರಃ ॥ ೧೧ ॥**

ಅತಃ-ಆದ್ದರಿಂದ (ಸರ್ವರಿಗೂ ಅನ್ಯೇಚ್ಛೆಯಿಂದಲೇ ಮರಣವು ಬರುವುದರಿಂದ), ಅಹಂ ಏವ-ಸ್ವತಂತ್ರನಾದ ನಾನೇ, ಸರ್ವೇಷಾಂ-ಸಕಲರ, ಸಂಹರ್ತಾ-ಸಂಹಾರಕನು; ಚ-ಮತ್ತು, ನಿಯೋಜಕಃ-(ನಾನೇ) ಸರ್ವರ ಸರ್ವಪ್ರವೃತ್ತಿಗಳಿಗೂ ಕಾರಣನು (ನಿಯಾಮಕನು); ಅತಏವ-ಹೀಗೆ ನಾನು ಸರ್ವರನ್ನು ಸರ್ವವಿಧ ಪ್ರವೃತ್ತಿಗಳಲ್ಲಿ ಪ್ರವರ್ತಿಸುವಂತೆ ಮಾಡುವ ಯೋಜಕನಾದ್ದರಿಂದ, ಸರ್ವೇ-ಎಲ್ಲರೂ, ಅನಿಚ್ಛಯಾ ಅಪಿ-ಇಚ್ಛೆ ಇಲ್ಲದಿದ್ದರೂ, ನಾನಾ ಕರ್ಮಸು-ವಿವಿಧಕರ್ಮಗಳಲ್ಲಿ ಯದ್ವತ್-ಹೇಗೆ, ನಸ್ಯೋತಾಃ-ಮೂಗುದಾಣದಿಂದ ಬಿಗಿಯಲ್ಪಟ್ಟ (ಪೋಣಿಸಲಾದ ನಾಸಿಕವುಳ್ಳ), ವೃಷಭಾಃ-ಎತ್ತುಗಳು, ಸದಾ-ಸರ್ವದಾ, ಪ್ರವರ್ತಂತೇ-(ಯಜಮಾನನ ಇಚ್ಛೆಯಂತೆ) ದುಡಿಯುತ್ತವೆಯೋ, ತಥಾ-ಹಾಗೆ, (ಪ್ರವರ್ತಂತೇ-ನನ್ನ ಪ್ರೇರಣೆಯಂತೆ ವರ್ತಿಸುತ್ತಾರೆ); ಬ್ರಹ್ಮನ್-ಹೇ ಬ್ರಹ್ಮ!, ಸ್ವೇಚ್ಛಯಾ-ನನ್ನ ಇಚ್ಛಾನುಸಾರವಾಗಿ, ಅಜ್ಞಾನಿನಃ-ಅಜ್ಞಾನಿಗಳನ್ನು ಜ್ಞಾನಯುತಾನ್-ಜ್ಞಾನವುಳ್ಳವರನ್ನಾಗಿಯೂ, ಜ್ಞಾನಿನಃ-ಜ್ಞಾನಿಗಳನ್ನು ಮೂಢಚೇತಸಃ-ಮೂಢರನ್ನಾಗಿಯೂ, ಕರೋಮಿ-ಮಾಡುತ್ತೇನೆ; ತಥಾ-ಹಾಗೆಯೇ (ಸ್ವೇಚ್ಛಾನುಸಾರ), ಕಾಂಶ್ಚಿತ್-ಕೆಲವರನ್ನು ಭವಪಾಶತಃ-

---

ದೇಹಗಳನ್ನು ರಕ್ಷಿಸಿಕೊಳ್ಳುವ ಇಚ್ಛೆ ಮತ್ತು ಪ್ರಯತ್ನವುಳ್ಳವರೇ ಆಗಿರುತ್ತಾರೆ-ಆದರೂ ಮರಣವು (ದೇಹವಿಯೋಗವು) ತಪ್ಪದಲ್ಲ(೬-೮). ಹೀಗೆ, ಅನ್ಯೇಚ್ಛೆಯಿಂದ ಪ್ರಾಪ್ತವಾಗುವ ಮರಣವು, ಸ್ವತಂತ್ರನಾದ ನನ್ನ ಇಚ್ಛೆಯಿಂದಲೇ ಒದಗುವುದರಿಂದ, ಸರ್ವರ ಸಂಹಾರಕನು ನಾನೇ ಎಂದು ತಿಳಿ; ಇಷ್ಟು ಮಾತ್ರವಲ್ಲ, ನಾನೇ ಸರ್ವರ ಸರ್ವ ಪ್ರವೃತ್ತಿಗಳ ಪ್ರವರ್ತಕನೂ, ನಿಯಾಮಕನೂ ಆಗಿದ್ದೇನೆ; ಆದ್ದರಿಂದ ಮೂಗಿನಲ್ಲಿ ಪೋಣಿಸಿದ ಹಗ್ಗವುಳ್ಳ ಎತ್ತುಗಳು, ಯಜಮಾನನ ಅಧೀನವಾಗಿ, ಆತನ ಇಚ್ಛೆಯಂತೆ ದುಡಿಯುವಂತೆ, ಸಕಲರೂ ತಮ್ಮ ಇಚ್ಛೆಯಿಲ್ಲದಿದ್ದರೂ ನಾನಾ ಕರ್ಮಗಳಲ್ಲಿ ನನ್ನ ಇಚ್ಛೆಯಂತೆ ಪ್ರವರ್ತಿಸುತ್ತಾರೆ; ನಾನು ಸ್ವೇಚ್ಛಾನುಸಾರವಾಗಿ[1] ಅಜ್ಞಾನಿಗಳನ್ನು ಜ್ಞಾನಿಗಳನ್ನಾಗಿಯೂ, ಜ್ಞಾನಿಗಳನ್ನು ಮೂಢರನ್ನಾಗಿಯೂ ಮಾಡುತ್ತೇನೆ; ಕೆಲವರನ್ನು ಭವಪಾಶದಿಂದ ಕಟ್ಟುತ್ತೇನೆ—ಮತ್ತೆ ಕೆಲವರನ್ನು ಆ ಪಾಶದಿಂದ ಬಿಡುಗಡೆಮಾಡುತ್ತೇನೆ

1 ಆಯಾ ಜೀವರ ಪೂರ್ವಕರ್ಮ ಮತ್ತು ಸ್ವರೂಪಯೋಗ್ಯತೆಯನ್ನು ಲಕ್ಷಿಸಿ, ಶ್ರೀಹರಿಯ ಇಚ್ಛೆಯು ನಿಯಮನಮಾಡುತ್ತದೆ.

ಭವಪಾಶದಿಂದ, ಬಧ್ನಾಮಿ-ಬಿಗಿಯುತ್ತೇನೆ; (ಕಾಂಶ್ಚಿತ್-ಮತ್ತೆ ಕೆಲವರನ್ನು), ಮೋಕ್ಷಯಾಮಿ-ಬಿಡುಗಡೆ ಮಾಡುತ್ತೇನೆ; ಅಹಂ ಏವ ನ ಚ ಅಪರಃ-ಇವೆಲ್ಲವನ್ನೂ ಮಾಡುವವನು ನಾನೇ-ಅನ್ಯರಾರೂ ಅಲ್ಲ.

**ಇಂದ್ರಿಯಾಣಾಂ ಚ ಯೇ ದೇವಾಃ ತೇಷಾಮಿಂದ್ರಿಯಸಂಸ್ಥಿತಃ ।**
**ಪ್ರವರ್ತಯಾಮಿ ಸರ್ವಾಸ್ತಾಸ್ತಥಾ ಯಜ್ಞಾಧಿದೇವತಾಃ ॥ ೧೨ ॥**

**ನಾನಾರೂಪಧರೋಽಹಂ ವೈ ತತ್ತದ್ದೇವೇಷು ಸಂಸ್ಥಿತಃ ।**
**ಯದಾ ದೇವಾ ಮಹಾಯಜ್ಞಾನ್ವಿತನ್ವಂತಿ ಸಹಸ್ರಶಃ ॥ ೧೩ ॥**

**ತದಾಹಮೇವ ಸರ್ವೇಷಾಂ ಯಜ್ಞಭೋಕ್ತಾ ಭವಾಮಿ ವೈ ।**

ಯೇ-ಯಾರು, ಇಂದ್ರಿಯಾಣಾಂ-ಇಂದ್ರಿಯಗಳ, ದೇವಾಃ(ಅಭಿಮಾನಿ) ದೇವತೆಗಳೋ, ತೇಷಾಂ-ಅವರ (ಆ ದೇವತೆಗಳ), ಇಂದ್ರಿಯಸಂಸ್ಥಿತಃ-ಇಂದ್ರಿಯಗಳಲ್ಲಿದ್ದು ತಾಃ ಸರ್ವಾಃ(ದೇವತಾಃ)-ಆ ಎಲ್ಲರನ್ನೂ ಪ್ರವರ್ತಯಾಮಿ-ಪ್ರವರ್ತಿಸುವಂತೆ ಮಾಡುತ್ತೇನೆ. ತಥಾ-(ಇದರಂತೆ) ಹಾಗೆಯೇ, ಯಜ್ಞಾಧಿ ದೇವತಾಃ-ಯಜ್ಞದಲ್ಲಿ ಅಧಿಕೃತರಾದ ದೇವತೆಗಳನ್ನೂ (ಪ್ರವರ್ತಿಸುವಂತೆ ಮಾಡು ತ್ತೇನೆ); ಅಹಂ ವೈ-ನಾನೇ, ನಾನಾರೂಪಧರಃ-ನಾನಾರೂಪಗಳನ್ನು ಧರಿಸಿ (ಸ್ವೇಚ್ಛೆಯಿಂದ ನಾನಾರೂಪಗಳಿಂದ), ತತ್ತದ್ದೇವೇಷು-ಆಯಾ ದೇವತೆಗಳಲ್ಲಿ ಸಂಸ್ಥಿತಃ-(ನಿಯಾಮಕನಾಗಿ), ಅಂತರ್ಯಾಮಿಯಾಗಿರುತ್ತೇನೆ; ಯದಾ-ಯಾವಾಗ, ದೇವಾಃ-ದೇವತೆಗಳು, ಸಹಸ್ರಶಃ-ಸಹಸ್ರಾರು (ಅಸಂಖ್ಯ), ಮಹಾಯಜ್ಞಾನ್-ಮಹಾಯಜ್ಞ ಗಳನ್ನು ವಿತನ್ವಂತಿ-ಮಾಡುವರೋ, ತದಾ-ಆಗೆಲ್ಲಾ, ಅಹಂ ಏವಂ-ನಾನೇ, ಸರ್ವೇಷಾಂ-ಅವರೆಲ್ಲರ, ಯಜ್ಞಭೋಕ್ತಾ-ಯಜ್ಞವನ್ನು (ಯಜ್ಞಫಲವನ್ನು) ಭೋಗಿಸು ವವನು, ಭವಾಮಿ- ಆಗುತ್ತೇನೆ; ವೈ-ಹೀಗೆಂಬುದು (ನಾನೇ ಸರ್ವಯಜ್ಞಭೋಕ್ತ ನೆಂಬುದು) ವೇದಸಿದ್ಧವಾಗಿದೆ.

---

(ಸರ್ವರ ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳಿಗೂ ನಾನೇ ಕಾರಣನಾಗಿದ್ದೇನೆ) (೯-೧೧). ಸಕಲ ಜೀವರಲ್ಲಿರುವ ಇಂದ್ರಿಯಾಭಿಮಾನಿ ದೇವತೆಗಳ ಇಂದ್ರಿಯಗಳಲ್ಲಿ ಸಹ ನಾನೇ ನಿಯಾಮಕನಾಗಿ ನಿಂತು, ಅವರನ್ನು ತಂತಮ್ಮ ಕಾರ್ಯಗಳಲ್ಲಿ ಪ್ರವೃತ್ತಿಸುವಂತೆ ಮಾಡುತ್ತೇನೆ; ಯಜ್ಞಾಧಿದೇವತೆಗಳಲ್ಲಿ (ಅಗ್ನಿ ಮೊದಲಾದ ಸಕಲ ಯಜ್ಞ ಸಾಮಗ್ರಿಗಳಲ್ಲಿಯೂ, ನನ್ನ ಪೂಜಾರೂಪದ ಸಕಲ ಕರ್ಮಗಳ ಪ್ರೇರಕರೂ ಅಭಿಮಾನಿಗಳೂ ಆದ ದೇವತೆಗಳಲ್ಲಿಯೂ) ನಾನೇ ಸ್ಥಿತನಾಗಿ, ಅವರು ಸ್ವಸ್ವಕಾರ್ಯಗಳಲ್ಲಿ ಪ್ರವೃತ್ತರಾಗುವಂತೆ ಮಾಡುತ್ತೇನೆ; ಎಲ್ಲ ದೇವತೆಗಳಲ್ಲಿ ನಾನೇ ನಾನಾ ರೂಪಗಳಿಂದ ಅಂತರ್ಯಾಮಿಯಾಗಿ ನೆಲಸಿದ್ದು, ಅವರಿಂದ ಆಚರಿಸಲ್ಪಡುವ ಅಸಂಖ್ಯ

**ಅಹಮಗ್ನಿರಹಂ ಭಾನುರಹಂ ಸೋಮೋ ಬೃಹಸ್ಪತಿಃ ॥ ೧೪ ॥**

**ಬ್ರಹ್ಮಾ ವಾಯುಸ್ತಥಾ ರುದ್ರೋ ವರುಣೋ ಮಿತ್ರ ಏವ ಚ ।**
**ಇಂದ್ರಾಶ್ವಿನೌ ಚ ವಸವೋ ವಿಶ್ವೇದೇವಾಹಮೇವ ತು ॥ ೧೫ ॥**

**ಯಜಮಾನೋ ಹ ವಿಶ್ಚಾಹಂ ಸರ್ವಃ ಸರ್ವಸ್ಥಿತತ್ವತಃ ।**

ಅಹಂ-ನಾನೇ, ಅಗ್ನಿಃ-ಅಗ್ನಿಯು; ಅಹಂ-ನಾನೇ, ಭಾನುಃ-ಸೂರ್ಯನು; ಅಹಂ-ನಾನೇ, ಸೋಮಃ-ಚಂದ್ರನು, ಬೃಹಸ್ಪತಿಃ-ಬೃಹಸ್ಪತಿಯು; ತಥಾ-ಹಾಗೂ (ನಾನೇ), ಬ್ರಹ್ಮಾ-ಬ್ರಹ್ಮನು, ವಾಯುಃ-ವಾಯುದೇವನು, ರುದ್ರಃ-ರುದ್ರನು, ವರುಣಃ-ವರುಣನು, ಮಿತ್ರಃ-ಮಿತ್ರನೂ, ಏವ ಚ-(ನಾನೇ) ಆಗಿರುವೆನು; ಇಂದ್ರಾಶ್ವಿನೌ-ಇಂದ್ರನೂ ಅಶ್ವಿನೀ ದೇವತೆಗಳೂ, ವಸವಃ-(ಅಷ್ಟ) ವಸುಗಳೂ, ವಿಶ್ವೇದೇವಾಃ-ವಿಶ್ವೇದೇವತೆಗಳೂ, ಅಹಂ ಏವ ತು-ನಾನೇ ಆಗಿರುವೆನು; ಅಹಂ-ನಾನು, ಯಜಮಾನಃ-(ಯಜ್ಞದ) ಯಜಮಾನನೂ, ಚ-ಮತ್ತು, ಹವಿಃ-ಹವಿಸ್ಸೂ ಅಹಂ-ನಾನೇ; ಸರ್ವಸ್ಥಿತತ್ವತಃ-ಸರ್ವರಲ್ಲಿ ಇರುವೆನಾದ್ದರಿಂದ, ಅಹಂ-ನಾನು, ಸರ್ವಃ-ಸರ್ವನು (ಸರ್ವಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುವವನು ನಾನೇ).

**ಸೂರ್ಯೋ ನ ಜಾಯತೇ ಯಾವತ್ತಾವತ್ ಸೂರ್ಯೋಽಹಮೇವ ತು ॥**

**ಜಾತೇ ಸೂರ್ಯೇಽಹಮೇವಾತ್ರ ಸ್ಥಿತೋ ಲೋಕಪ್ರಕಾಶಕಃ ।**
**ನಕ್ಷತ್ರಾಣ್ಯಹಮೇವಾಸ್ಮಿ ಗ್ರಹಾಃ ಸರ್ವೇಽಪ್ಯಹಂ ತಥಾ ॥ ೧೬ ॥**

ಯಾವತ್-ಎಲ್ಲಿಯವರೆಗೆ, ಸೂರ್ಯಃ-ಸೂರ್ಯನು, ನ ಜಾಯತೇ-ಸೃಷ್ಟನಾಗಿರುವುದಿಲ್ಲವೋ, ತಾವತ್-ಅಲ್ಲಿಯವರೆಗೆ, ಸೂರ್ಯಃ ತು-ಸೂರ್ಯನಾದರೋ (ಜಗತ್ತನ್ನು ಪ್ರಕಾಶಗೊಳಿಸುವವನು), ಅಹಂ ಏವ-ನಾನೇ (ಆಗಿರುತ್ತೇನೆ);

---

ಮಹಾಯಜ್ಞಗಳ ಫಲಭೋಕ್ತನೂ ಆಗಿದ್ದೇನೆ—ನಾನೇ ಸರ್ವಯಜ್ಞಭೋಕ್ತನು (ಸರ್ವಸತ್ಕರ್ಮಫಲಭೋಕ್ತನು). (೧೨-೧೩.). ನಾನೇ ಅಗ್ನಿಯು; ನಾನೇ ಸೂರ್ಯನು; ನಾನೇ ಚಂದ್ರನು, ಬೃಹಸ್ಪತಿಯು, ಬ್ರಹ್ಮದೇವನು, ವಾಯುದೇವನು, ರುದ್ರನು, ವರುಣನು, ಮಿತ್ರನು, ಇಂದ್ರನು, ಅಶ್ವಿನೀದೇವತೆಗಳು, ಅಷ್ಟ ವಸುಗಳು, (ದಶ) ವಿಶ್ವೇದೇವತೆಗಳು; ನಾನೇ ಯಜಮಾನನೂ, ಹವಿಸ್ಸೂ ಆಗಿರುವೆನು; ಸರ್ವಾಂತರ್ಯಾಮಿಯಾಗಿದ್ದು ಅಗ್ನಿ ಮೊದಲಾದ ಸರ್ವಶಬ್ದಗಳಿಂದ ಮುಖ್ಯವಾಚ್ಯನಾದ್ದರಿಂದ ಸರ್ವನೆನಿಸಿರುವೆನು ಮತ್ತು (ಸರ್ವವಸ್ತುಗಳ ಸತ್ತಾ, ಪ್ರಮಿತಿ, ಪ್ರವೃತ್ತಿಗಳು—ಅಸ್ತಿತ್ವ-ಜ್ಞಾನ-ಕ್ರಿಯೆಗಳು ನನ್ನ ಅಧೀನಗಳಾದ್ದರಿಂದ) ಆ ಎಲ್ಲವೂ ನನ್ನ ನಾಮಗಳೇ (ಆ ಎಲ್ಲ

ಸೂರ್ಯೇ-ಸೂರ್ಯನು, ಜಾತೇ-ಹುಟ್ಟುತ್ತಿರಲಾಗಿ, ಅಹಂಏವ-ನಾನೇ, ಅತ್ರ-ಅಲ್ಲಿ (ಅವನಲ್ಲಿ), ಸ್ಥಿತಃ-ನಿಂತವನಾಗಿ, ಲೋಕಪ್ರಕಾಶಕಃ-ಜಗತ್ತನ್ನು ಪ್ರಕಾಶಗೊಳಿಸುವವನು (ಆಗುತ್ತೇನೆ-ಜಗತ್ಪ್ರಕಾಶಕನು ಆಗಲೂ ನಾನೇ-ಸೂರ್ಯನಲ್ಲ); ಅಹಮೇವ-ನಾನೇ, ನಕ್ಷತ್ರಾಣಿ-ನಕ್ಷತ್ರಗಳೂ (ಅವುಗಳ ಅಂತಃಸ್ಥಿತನೂ), ಅಸ್ಮಿ-ಆಗಿದ್ದೇನೆ; ತಥಾ- ಹಾಗೆಯೇ, ಸರ್ವೇ ಅಪಿ ಗ್ರಹಾಃ-ಎಲ್ಲಾ ಗ್ರಹಗಳೂ, ಅಹಂ-ನಾನೇ (ಆಗಿರುವೆನು- ಗ್ರಹಗಳಲ್ಲಿದ್ದು ಗ್ರಹಕಾರ್ಯಗಳನ್ನು ಮಾಡಿ, ಅವರಿಂದ ಮಾಡಿಸುವವನೂ ನಾನೇ!).

**ಅತೋ ಗ್ರಹಾಣಾಂ ಸರ್ವೇಷಾಮಹಮೇವ ಫಲಪ್ರದಃ ।**
**ಯೋ ಯಃ ಪುಣ್ಯವಶಾದ್ದೇವೋ ಯದಾ ದೇಹಂ ನಿಜಂ ಲಭೇತ್ ॥ ೧೮ ॥**

**ತಾವತ್ತತ್ಕಾರ್ಯಕರ್ತಾಹಂ ಜಾತೇ ತಸ್ಮಿನ್ ಹಿ ತತ್ಸ್ಥಿತಃ ।**
**ಪುನಃ ಸರ್ವಂ ಕರೋಮ್ಯೇವ ಸ ಜಾನಾತಿ ಸ್ವಯಂ ಕೃತಂ ॥ ೧೯ ॥**

ಅತಃ-ಆದ್ದರಿಂದ, ಸರ್ವೇಷಾಂ-ಸಕಲ, ಗ್ರಹಾಣಾಂ-ಗ್ರಹಗಳ, ಫಲಪ್ರದಃ-ಫಲಗಳನ್ನು ಕೊಡುವವನು, ಅಹಂ ಏವ-ನಾನೇ; ಯಃ ಯಃ-ಯಾವ ಯಾವ, ದೇವಃ-ದೇವತೆಯು, ಪುಣ್ಯವಶಾತ್-ತನ್ನ ಪುಣ್ಯಫಲದಿಂದ, ಯದಾ-ಯಾವಾಗ, ನಿಜಂ-ತನ್ನ ದೇಹಂ-ದೇಹವನ್ನು, ಲಭೇತ್-ಹೊಂದುತ್ತಾನೆಯೋ, ತಾವತ್-

---

ವಸ್ತುಗಳಿಂದ ಅತ್ಯಂತ ಭಿನ್ನನೇ ಆಗಿರುವೆನು) (೧೪-೧೫). ಸೂರ್ಯನ ಉತ್ಪತ್ತಿಯಾಗುವವರೆಗೆ, ಲೋಕಪ್ರಕಾಶಕ ಸೂರ್ಯನ ಕಾರ್ಯವನ್ನು ನಿರ್ವಹಿಸುವವನು ನಾನೇ; ಸೂರ್ಯನ ಸೃಷ್ಟಿಯಾದ ನಂತರ ಸಹ, ಅವನಲ್ಲಿ ನಿಂತು ಜಗತ್ತನ್ನು ಪ್ರಕಾಶಗೊಳಿಸುವವನು ನಾನೇ; ನಾನೇ ನಕ್ಷತ್ರಗಳು[1]-ಗ್ರಹಗಳು (ಅವೆಲ್ಲವುಗಳ ಕಾರ್ಯಗಳನ್ನು, ಅವರಲ್ಲಿದ್ದು ಮಾಡಿ ಮಾಡಿಸುವವನು ನಾನೇ) (೧೬-೧೭). ಹೀಗಿರುವುದರಿಂದ, ಸೂರ್ಯಾದಿ ಸಕಲ ಗ್ರಹಗಳಿಂದ ದೊರೆಯುವ ಫಲಗಳನ್ನು ಕೊಡುವವನು ನಾನೇ, ಎಂದು ತಿಳಿ; ಯಾವ ದೇವತೆಯು ತನ್ನ ಪುಣ್ಯಕರ್ಮದ ಪ್ರಭಾವದಿಂದ, ತನ್ನ (ಸ್ವಯೋಗ್ಯ) ದೇಹವನ್ನು ಹೊಂದುವನೋ ಆವರೆಗೆ,

---

1. 'ಅಂತರ್ಯಾಮಿಣಮೀಶೇಶಂ ಅಪೇಕ್ಷ್ಯಾಹಂ ತ್ವಮಿತ್ಯಪಿ ।
ಇಮೇ ಶಬ್ದಾಃ ಪ್ರಯುಜ್ಯಂತೇ ನತಿಭೇದೇಷು ವಸ್ತುಷು ।' (ಭಾಷ್ಯ)
ಎಂಬ ಭಾಷ್ಯೋದಾಹೃತ ಪ್ರಮಾಣವು, 'ಅಹಂ, ತ್ವಂ, ಮೊದಲಾದ ಶಬ್ದಗಳು ಅಂತರ್ಯಾಮಿಯನ್ನು ನಿರೂಪಿಸಲು ಪ್ರಯೋಗಿಸಲ್ಪಡುತ್ತವೆ—ಅಭೇದವನ್ನು ತಿಳಿಸಲಿಕ್ಕಲ್ಲ' ಎಂದು ಹೇಳುತ್ತದೆ. ಆದ್ದರಿಂದ ಇಲ್ಲಿ 'ನಾನೇ ನಕ್ಷತ್ರ, ನಾನೇ ಗ್ರಹಗಳು' ಎಂದರೆ, ಅವುಗಳಲ್ಲಿದ್ದು ನಿಯಾಮಕನಾಗಿರುತ್ತೇನೆಂಬ ಅರ್ಥವನ್ನೇ ತಿಳಿಯಬೇಕು.

ಅಲ್ಲಿಯವರೆಗೆ, ಅಹಂ-ನಾನು, ತತ್ಕಾರ್ಯಕರ್ತಾ-ಆ ದೇವತೆಯ ಕರ್ತವ್ಯವನ್ನು ನಿರ್ವಹಿಸುವವನು, ಅಹಂ-ನಾನು; ತಸ್ಮಿನ್-ಆ ದೇವತೆಯು, ಜಾತೇ-ಹುಟ್ಟುತ್ತಿರಲಾಗಿ (ದೇಹವನ್ನು ಹೊಂದುತ್ತಿರಲು), ತತ್ರಿಸ್ಥಿತಃ-ಅವನಲ್ಲಿದ್ದು ಪುನಃ-ಮತ್ತೆ ಸರ್ವಂ-ಎಲ್ಲವನ್ನೂ ಕರೋಮಿ ಏವ-ನಾನೇ ಮಾಡುತ್ತೇನೆ; ಹಿ-ಹೀಗೆಂಬುದು ಶಾಸ್ತ್ರಸಿದ್ಧವಿದ್ದರೂ, ಸಃ-ಆ ದೇವತೆಯು (ಅಜ್ಞಾನಾದಿ ದೋಷರಹಿತರಾದ ಬ್ರಹ್ಮಾದಿ ಋಜುಗಣದ ಜೀವರ ವಿನಹ ಅನ್ಯರು), ಸ್ವಯಂ ಕೃತಂ-(ಅದನ್ನು) ತಾನೇ (ಸ್ವತಂತ್ರನಾಗಿ) ಮಾಡಿದ್ದೆಂದು, ಜಾನಾತಿ-ತಿಳಿಯುತ್ತಾನೆ.

**ಯದಾಹಮೇವ ತಂ ದೇವಂ ಬೋಧಯಾಮಿ ತದೈವ ತು ।**
**ಜಾನಾತಿ ಸ್ವಸ್ಥಿತಂ ಮಾಂ ಸ ನಾನ್ಯಥಾ ತು ಕದಾಚನ ॥ ೨೦ ॥**

**ಏವಂ ಮಮ ವಶೇ ಸರ್ವಮಹಂ ಕಸ್ಯಾಪಿ ನೋ ವಶಃ ।**
**ಸರ್ವವಸ್ತುಷು ಯಾ ಶಕ್ತಿಃ ಸಾ ಮದೀಯೈವ ನಾನ್ಯಥಾ ॥ ೨೧ ॥**

ಯದಾ-ಯಾವಾಗ, ಅಹಂ ಏವ-ಸ್ವೇಚ್ಛೆಯಿಂದಲೇ ನಾನು, ತಂ-ಆ, ದೇವಂ-ದೇವತೆಯನ್ನು (ದೇವಸ್ವಭಾವದ ಮುಕ್ತಿಯೋಗ್ಯಜೀವನನ್ನು), ಬೋಧಯಾಮಿ-ಎಚ್ಚರಿಸುತ್ತೇನೆಯೋ, ತದಾ ಏವ-ಆಗ ಮಾತ್ರ, ಸಃ-ಆತನು, ಸ್ವಸ್ಥಿತಂ-ತನ್ನಲ್ಲಿರುವ (ಸ್ವತಂತ್ರಕರ್ತನಾದ), ಮಾಂ-ನನ್ನನ್ನು, ಜಾನಾತಿ-ತಿಳಿಯುತ್ತಾನೆ; ಅನ್ಯಥಾ-ಹಾಗಲ್ಲದಿದ್ದರೆ (ನಾನೇ ತಿಳಿಸಿಕೊಡದಿದ್ದರೆ—ಆ ಜ್ಞಾನವನ್ನುಂಟುಮಾಡದಿದ್ದರೆ, ಕದಾಚನ ನ ತು-ಎಂದೂ ತಿಳಿಯುವುದೇ ಇಲ್ಲ, ಏವಂ-ಹೀಗೆ, ಸರ್ವಂ-ಎಲ್ಲರೂ (ಎಲ್ಲವೂ), ಮಮ-ನನ್ನ, ವಶೇ-ವಶದಲ್ಲಿ(ಇರುತ್ತದೆ); ಅಹಂ-ನಾನು, ಕಸ್ಯ ಅಪಿ-ಯಾರೊಬ್ಬರ, ವಶಃ-ವಶನೂ, ನೋ-ಅಲ್ಲವೇ ಅಲ್ಲ, ಸರ್ವವಸ್ತುಷು-ಸಕಲಪದಾರ್ಥಗಳಲ್ಲಿ (ಚೇತನಾಚೇತನ ವಸ್ತುಗಳಲ್ಲಿ), ಯಾ ಶಕ್ತಿ-ಯಾವ ಶಕ್ತಿಯೋ, ಸಾ-ಅದು, ಮದೀಯಾ ಏವ-ನನ್ನದೇ ಆಗಿದೆ (ನನ್ನ ಅಧೀನವೇ); ಅನ್ಯಥಾ ನ-ಬೇರೆಯಲ್ಲ.

---

ಆತನಿಂದಾಗಬೇಕಾದ ಕಾರ್ಯಗಳನ್ನು ನಾನೇ ನಿರ್ವಹಿಸುತ್ತೇನೆ; ಆ ದೇವತೆಯು ತನ್ನ ದೇಹವನ್ನು ಹೊಂದಿದ ನಂತರ, ಅಲ್ಲಿಯೂ ಅಂತರ್ಯಾಮಿಯಾಗಿ ನಾನೇ ನಿಂತು, ಆಯಾ ಕಾರ್ಯಗಳನ್ನು ಮಾಡುತ್ತೇನೆ; ಆದರೂ, ಆ ದೇವತೆಯು (ಅಜ್ಞಾನವಶರಾದ ಸಕಲ ಮುಕ್ತಿಯೋಗ್ಯ ಸ್ವರೂಪದ ಜೀವರೂ ಸಹ), ಆ ಕಾರ್ಯಗಳನ್ನು ತಾನೇ ಮಾಡಿದ್ದೆಂದು ತಿಳಿಯುತ್ತಾನೆ (೧೮-೧೯). ಸ್ವೇಚ್ಛೆಯಿಂದ ನಾನು ಯಾವಾಗ ಆ ದೇವತೆಯನ್ನು ಎಚ್ಚರಿಸುವೆನೋ, ಆಗ ಮಾತ್ರ ತನ್ನೊಳಗಿರುವ ನನ್ನನ್ನು (ಸ್ವತಂತ್ರ ಕರ್ತನೆಂದು) ತಿಳಿಯುತ್ತಾನೆ—ಅನ್ಯಥಾ ಎಂದೂ ತಿಳಿಯುವುದೇ ಇಲ್ಲ. ಹೀಗೆ

**ಮಯ್ಯೈವ ದತ್ತಂ ಸ್ವಾತಂತ್ರ್ಯಂ ಕೇವಲೇಷ್ವಪಿ ಸರ್ವಸು ।**
**ತಾವನ್ಮಾತ್ರೇಣ ಸಂಮುಗ್ಧಂ ಸ್ವಾತಂತ್ರ್ಯಂ ಮನ್ಯತೇ ನಿಜಂ ॥ ೨೨ ॥**

**ಸ್ವಾತಂತ್ರ್ಯೇಽಪಹೃತೇ ಪಶ್ಚಾಜ್ಜಾನಂತಿ ಪರತಂತ್ರತಾಂ ।**

ಕೇವಲೇಷು-ಕೇವಲರಾದ (ಅಸ್ವತಂತ್ರರೇ ಆದ), ಸರ್ವಸು-ಸರ್ವಜೀವರಲ್ಲಿ ಮಯಾ ಏವ-ನನ್ನಿಂದಲೇ, ಸ್ವಾತಂತ್ರ್ಯಂ-ಸ್ವತಂತ್ರವೆಂಬ ನನ್ನ ಗುಣವು, ದತ್ತಂ-ಕೊಡಲ್ಪಟ್ಟಿದೆ; (ನನ್ನ ಸ್ವಾತಂತ್ರ್ಯವು-ಸ್ವತಂತ್ರಾಂಶವು-ತರಭಿನ್ನನಾದ ನನ್ನ ಅಂಶವೇ; ಜೀವರಲ್ಲಿ ಸ್ಥಾಪಿತವಾಗಿದೆ-ಇಡಲ್ಪಟ್ಟಿದೆ); ತಾವನ್ಮಾತ್ರೇಣ-ಅಷ್ಟು ಮಾತ್ರದಿಂದ, ಸಂಮುಗ್ಧಃ-(ಜೀವನು) ಮೋಹಗೊಂಡು, (ಅಜ್ಞಾನವಶನಾಗಿ), ಸ್ವಾತಂತ್ರ್ಯಂ-ಆ ಸ್ವಾತಂತ್ರ್ಯವನ್ನು ನಿಜಂ-ತನ್ನದೆಂದು (ತಾನೇ ಸ್ವತಂತ್ರನೆಂದು), ಮನ್ಯತೇ-ತಿಳಿಯುತ್ತಾನೆ; ಸ್ವಾತಂತ್ರ್ಯೇ-ಆ ಸ್ವತಂತ್ರಾಂಶವು, ಅಪಹೃತೇ-ಹಿಂತೆಗೆದುಕೊಳ್ಳಲ್ಪಡುತ್ತಿರಲು, ಪಶ್ಚಾತ್-ಅನಂತರ, ಪರತಂತ್ರತಾಂ-(ತಮ್ಮ) ಪರಾಧೀನತ್ವವನ್ನು, ಜಾನಂತಿ-(ಜೀವರು) ತಿಳಿಯುತ್ತಾರೆ.

**ಜ್ಞಾನಿನೋಽಪಿ ಹಿ ಮನ್ಯಂತೇ ಮನ್ಮಾಯಾಮುಷ್ಟಚೇತನಾಃ ॥ ೨೩ ॥**

**ಸ್ವಾತಂತ್ರ್ಯಂ ಸ್ವಶರೀರಾದೌ ಕಿಮು ಜ್ಞಾನವಿವರ್ಜಿತಾಃ ।**

---

ಚೇತನಾಚೇತನಾತ್ಮಕವಾದ ಸಕಲಜಗತ್ತೂ (ಸರ್ವವಸ್ತುಗಳೂ) ನನ್ನ ವಶದಲ್ಲಿವೆ—ನಾನು ಮಾತ್ರ ಯಾರ ವಶನೂ ಅಲ್ಲ. ಆ ಎಲ್ಲ ವಸ್ತುಗಳ ಸ್ವಭಾವಸಿದ್ಧ ಶಕ್ತಿಗಳೂ ಸಹ (ಸ್ವರೂಪಧರ್ಮಗಳು ಸಹ) ನನ್ನ ಅಧೀನಗಳು—ಅವೆಲ್ಲವೂ ನನ್ನ ಶಕ್ತಿಯಿಂದಲೇ ಕಾರ್ಯಶಕ್ತಿಯನ್ನು ಹೊಂದುತ್ತವೆ (೨೦-೨೧). ಸಕಲ ಜೀವರಲ್ಲಿ ನನ್ನ ಸ್ವಾತಂತ್ರ್ಯಾಂಶವನ್ನು ಇಟ್ಟಿದ್ದೇನೆ (ನನ್ನ ಸ್ವಾತಂತ್ರ್ಯವನ್ನು ಅವರಿಗೆ ಕೊಟ್ಟಿದ್ದೇನೆ)[1]

---

1. 'ಮಯ್ಯೈವ ದತ್ತಂ ಸ್ವಾತಂತ್ರ್ಯಂ ಕೇವಲೇಷ್ವಪಿ ಕರ್ಮಸು ।
ತಾವನ್ಮಾತ್ರೇಣ ಸಂಮುಗ್ಧಾಃ ಸ್ವಾತಂತ್ರ್ಯಂ ಮನ್ಯತೇ ನಿಜಂ ।'

—ಎಂಬ ಪಾಠದಂತೆ, ಕೇವಲೇಷು ಕರ್ಮಸು—ಕೇವಲ ಕರ್ಮ ಮಾಡುವುದರಲ್ಲಿ (ಫಲದಲ್ಲಿ ಅಲ್ಲ) ಸ್ವಾತಂತ್ರ್ಯವು ಕೊಡಲ್ಪಟ್ಟಿದೆ, ಎಂಬ ಅರ್ಥವು ತೋರುತ್ತದೆ. ಸ್ವಾತಂತ್ರ್ಯದ ಕೊಡೋಣವೆಂದರೆ, 'ತಥಾ ಚ ಸ್ವಾತಂತ್ರ್ಯದಾನಂ ನಾಮ ತದ್ರೂಪೇಣ ಜೀವಪ್ರವೇಶಃ' (ಛಲಾರಿ)—ಶ್ರೀಹರಿಯು ತನ್ನ ಸ್ವಾತಂತ್ರ್ಯಾದಿ ಸರ್ವಗುಣಗಳಿಂದ ಅತ್ಯಂತ ಅಭಿನ್ನವೇ ಆದ್ದರಿಂದಲೂ, ಸ್ವಾಂಶಗಳು ಪರಸ್ಪರವಾಗಿಯೂ, ಮೂಲರೂಪದಿಂದ ಸಹ ಅಭಿನ್ನಗಳೇ ಆದ್ದರಿಂದಲೂ, ಸ್ವಾತಂತ್ರ್ಯಾಂಶವೆಂಬುದು ಪರಮಾತ್ಮನ ಒಂದು, ಆತನ ಇಚ್ಛೆಯಿಂದ ಅಭಿವ್ಯಕ್ತವಾದ, ರೂಪವಿಶೇಷವೇ ಸರಿ—ಅದನ್ನು ಜೀವರಿಗೆ ಕೊಡುವುದೆಂದರೆ ಆ ರೂಪದಿಂದ ಜೀವಪ್ರವೇಶವೆಂದರ್ಥ. ಈ ರೂಪದಿಂದ ತಾನೇ ಸರ್ವವ್ಯಾಪಾರಗಳನ್ನು ಮಾಡಿ ಪರಾಧೀನರಾದ ಜೀವರಿಂದ ಮಾಡಿಸುತ್ತಾನೆಂದು ತಿಳಿಯಬೇಕು.

ಜ್ಞಾನಿನಃ ಅಪಿ-ಜ್ಞಾನಿಗಳೂ ಸಹ, ಮನ್ಮಾಯಾಮುಷ್ಟಚೇತನಾಃ-ನನ್ನ ಇಚ್ಛೆಯಿಂದಲೇ ಮೋಹಿತವಾದ ಬುದ್ಧಿಯುಳ್ಳವರಾಗಿ, ಸ್ವಶರೀರಾದೌ-ತಮ್ಮ ಶರೀರ ಮೊದಲಾದವುಗಳಲ್ಲಿ ಸ್ವಾತಂತ್ರ್ಯಂ-ಸ್ವಾತಂತ್ರ್ಯವನ್ನು (ತಮ್ಮ ಇಚ್ಛಾನುಸಾರ ಉಪಯೋಗಿಸಿಕೊಳ್ಳುವ ಸ್ವಾತಂತ್ರ್ಯವುಳ್ಳವರೆಂದು) ಮನ್ಯಂತೇ-ತಿಳಿಯುತ್ತಾರೆ; ಜ್ಞಾನವಿವರ್ಜಿತಾಃ-ಜ್ಞಾನವಿಲ್ಲದವರು, ಕಿಮು-(ಮೋಹದಿಂದ) ತಾವೇ ಸ್ವತಂತ್ರರೆಂದು ತಿಳಿಯುತ್ತಾರೆಂದು ಹೇಳಲೇನು? (ಸ್ವತಂತ್ರರೆಂದೇ ತಿಳಿಯುತ್ತಾರೆ).

**ತ್ವಾಮಾರಭ್ಯ ತೃಣಂ ಯಾವಜ್ಜಗತ್ಸ್ಥಾವರಜಂಗಮಮ್ ॥ ೨೪ ॥**
**ಮಮ ಶಕ್ತಿಂ ವಿನಾ ಬ್ರಹ್ಮನ್ ಸ್ಪಂದಿತುಂ ನೈವ ಶಕ್ಯತೇ ।**

ತ್ವಾಂ-ನಿನ್ನನ್ನು ಆರಭ್ಯ-ಆರಂಭಿಸಿ, ತೃಣಂ ಯಾವತ್-ತೃಣಪರ್ಯಂತವಾದ, ಸ್ಥಾವರಜಂಗಮಮ್-ಸ್ಥಾವರಜಂಗಮರೂಪದ, ಜಗತ್-ಜಗತ್ತು ಮಮ-ನನ್ನ ಶಕ್ತಿಂ ವಿನಾ-ಶಕ್ತಿಯನ್ನು ಬಿಟ್ಟು (ನನ್ನ ಶಕ್ತಿಯಿಂದಲ್ಲದೇ), ಬ್ರಹ್ಮನ್-ಹೇ ಬ್ರಹ್ಮ, ಸ್ಪಂದಿತುಂ-ಚಲಿಸುವುದಕ್ಕೆ (ಅಲ್ಲಾಡುವುದಕ್ಕೆ ಸಹ), ನೈವ ಶಕ್ಯತೇ-ಸಮರ್ಥವಲ್ಲ.

**ಕಾಲೇ ಕಾಲೇ ತು ಯಾ ಬುದ್ಧಿಃ ಸರ್ವದೇಹಿಷು ಜಾಯತೇ ॥ ೨೫ ॥**
**ಉತ್ಪಾದಯಾಮ್ಯಹಂ ತಾಂ ವೈ ತತ್ತತ್ಕರ್ಮಾನುಸಾರತಃ ।**

ಸರ್ವದೇಹಿಷು-ದೇಹಧಾರಿಗಳಾದ ಸಕಲ ಪ್ರಾಣಿಗಳಲ್ಲಿ ಕಾಲೇ ಕಾಲೇ-ಕಾಲಕಾಲದಲ್ಲಿ (ಆಯಾ ಕಾಲದಲ್ಲಿ), ಯಾ ಬುದ್ಧಿಃ-ಯಾವ ಬುದ್ಧಿಯು, ಜಾಯತೇ-ಹುಟ್ಟುತ್ತದೆಯೋ, ತಾಂ-ಆ ಬುದ್ಧಿಯನ್ನು ತತ್ತತ್ಕರ್ಮಾನುಸಾರತಃ-ಅವರವರ ಕರ್ಮಾನುಸಾರವಾಗಿ, ಅಹಂ ವೈ-ನಾನೇ (ಅಂತರ್ಯಾಮಿಯಾದ ನಾನೇ), ಉತ್ಪಾದಯಾಮಿ-ಹುಟ್ಟಿಸುತ್ತೇನೆ (ಉಂಟುಮಾಡುತ್ತೇನೆ).

---

—ಅಷ್ಟುಮಾತ್ರದಿಂದ ಅಜ್ಞಾನವಶನಾದ ಜೀವನು ಮೋಹಗೊಂಡು, ಆ ಸ್ವಾತಂತ್ರ್ಯವನ್ನು ತನ್ನದೆಂದೇ ತಿಳಿಯುತ್ತಾನೆ; ನಾನು ಅದನ್ನು ಹಿಂದಕ್ಕೆ ತೆಗೆದುಕೊಂಡಾಗ ಜೀವರು ತಮ್ಮ ಪರಾಧೀನತ್ವವನ್ನು (ಪರಾಧೀನರೆಂದು) ತಿಳಿಯುತ್ತಾರೆ (೨೨). ಜ್ಞಾನಿಗಳು ಸಹ (ಶಾಸ್ತ್ರಪಂಡಿತರು ಮತ್ತು ಅಪರೋಕ್ಷ ಜ್ಞಾನಿಗಳೂ) ನನ್ನಿಂದಲೇ ಮೋಹಿತವಾದ ಬುದ್ಧಿಯುಳ್ಳವರಾಗಿ, ತಮ್ಮ ಶರೀರಾದಿಗಳು ತಮ್ಮ ಅಧೀನವೆಂದೂ, ತಮ್ಮ ಇಚ್ಛಾನುಸಾರ ಉಪಯೋಗಿಸಿಕೊಳ್ಳಬಹುದೆಂದೂ, ತಿಳಿಯುತ್ತಾರೆ; ಜ್ಞಾನವಿಹೀನರು ಹಾಗೆ ತಾವೇ ಸ್ವತಂತ್ರರೆಂದು ತಿಳಿಯುತ್ತಾರೆಂದು ಹೇಳಲೇನಿದೆ! (೨೩). ಹೇ ಬ್ರಹ್ಮದೇವ! ನಿನ್ನಿಂದ ಆರಂಭಿಸಿ ತೃಣಪರ್ಯಂತವಾದ, ಸ್ಥಾವರ ಜಂಗಮ ಜಗತ್ತು (ಚರಾಚರ ಜಗತ್ತು), ನನ್ನ ಶಕ್ತಿ ಇಲ್ಲದೇ ಅಲ್ಲಾಡುವುದಕ್ಕೆ ಸಹ ಅಸಮರ್ಥವಾದುದು[1]. (೨೪). ದೇಹಧಾರಿಗಳಾದ

---

1. 'ತೇನ ವಿನಾ ತೃಣಮಪಿ ನ ಚಲತಿ', ಎಂದು ಶ್ರುತಿಯು ಘೋಷಿಸುತ್ತದೆ.

ಬುದ್ಧ್ಯಾ ಪ್ರವರ್ತತೇ ಕಾರ್ಯೇ ಸುಖಾರ್ಥೀ ಸರ್ವ ಏವ ಹಿ ॥ ೨೬ ॥

ದುಃಖಂ ಚ ಲಭತೇ ತಸ್ಮಾತ್ ಸಾ ಮಾಯಾ ಮಮ ನಾನ್ಯಥಾ ।
ಕದಾಚಿಲ್ಲಭತೇ ಸೌಖ್ಯಂ ಪ್ರವೃತ್ತೋಽಯಂ ನಿಜೇಚ್ಛಯಾ ॥ ೨೭ ॥

ಮದಿಚ್ಛಯೈವ ತದ್ವಿದ್ಧಿ ಯಥಾ ದುಃಖಮಯತ್ನತಃ ।

ಸರ್ವಃ ಏವ-ಎಲ್ಲರೂ, ಕಾರ್ಯೇ-ಕಾರ್ಯದಲ್ಲಿ ಸುಖಾರ್ಥೀ-ಸುಖದಲ್ಲಿ ಅಪೇಕ್ಷೆಯುಳ್ಳವರಾಗಿಯೇ (ಪ್ರತಿಯೊಬ್ಬನೂ ಸುಖಕ್ಕಾಗಿಯೇ ಕಾರ್ಯದಲ್ಲಿ), ಬುದ್ಧ್ಯಾ-ಬುದ್ಧಿಪೂರ್ವಕವಾಗಿ (ತನ್ನ ಬುದ್ಧಿಯನ್ನು ಉಪಯೋಗಿಸಿಕೊಂಡು), ಪ್ರವರ್ತತೇ-ಪ್ರವೃತ್ತನಾಗುತ್ತಾನೆ; ದುಃಖಂ ಚ-ದುಃಖವನ್ನೇ, ಲಭತೇ-ಹೊಂದುತ್ತಾನೆ; ತಸ್ಮಾತ್-ಆದ್ದರಿಂದ, ಸಾ-ಅದು (ಹೀಗೆ ಇಚ್ಛೆಗೆ ವಿರುದ್ಧವಾದ ಫಲವು ಸ್ವಯತ್ನಕ್ಕೆ ದೊರೆಯುವುದೆಂಬುದು), ಮಮ-ನನ್ನ ಮಾಯಾ-ಇಚ್ಛೆಯು (ಇಚ್ಛಾಧೀನ ವಾದುದು), ಅನ್ಯಥಾ ನ-ಬೇರೆಯಲ್ಲ; ಕದಾಚಿತ್-ಒಂದೊಂದು ಕಾಲದಲ್ಲಿ ನಿಜೇಚ್ಛಯಾ-ತನ್ನ ಇಚ್ಛೆಯಿಂದಲೇ, ಪ್ರವೃತ್ತ-ಯತ್ನಿಸಿದ, ಅಯಂ-ಈ ಜೀವನು, ಸೌಖ್ಯಂ-ಸುಖವನ್ನು ಲಭತೇ-ಹೊಂದುತ್ತಾನೆ; ತತ್-ಹಾಗೆ ಒಂದು ವೇಳೆ ಸುಖ ದೊರೆಯುವುದು, ಯಥಾ-ಹೇಗೆ, ಅಯತ್ನತಃ-ಯತ್ನಮಾಡದಿದ್ದರೂ, ದುಃಖಂ-ದುಃಖವೋ (ದುಃಖವು ಲಭಿಸುವುದೋ), (ಹಾಗೆ), ಮದಿಚ್ಛಯಾ ಏವ-ನನ್ನ ಇಚ್ಛೆಯಿಂದಲೇ ಎಂದು, ವಿದ್ಧಿ-ತಿಳಿ.

ಏವಂ ರೂಪಸಹಸ್ರಾಣಿ ಸೃಷ್ಟಿಕಾಲೇ ಸ್ವಲೀಲಯಾ ॥ ೨೮ ॥

ವಿತತ್ಯ ಸರ್ವರೂಪೇಷು ಕ್ರೀಡಾಮ್ಯೇಕೋಽಹಮೇವ ಹಿ ।
ಅಂತೇ ಸಂಹೃತ್ಯ ಸರ್ವಾಣಿ ನಿಜಾಂ ಪ್ರಕೃತಿಮಾಸ್ಥಿತಃ ॥ ೨೯ ॥

---

ಸಕಲಜೀವರಲ್ಲಿ ಕಾಲಕಾಲಕ್ಕೆ ಹುಟ್ಟುವ ಬುದ್ಧಿಯನ್ನೂ ಅವರವರ ಕರ್ಮಾನುಸಾರವಾಗಿ ಉತ್ಪಾದಿಸುತ್ತೇನೆ(೨೫). ಎಲ್ಲರೂ ಸುಖಾಪೇಕ್ಷಿಗಳಾಗಿಯೇ, ಬುದ್ಧಿಪೂರ್ವಕವಾಗಿ ಕಾರ್ಯದಲ್ಲಿ ತೊಡಗುತ್ತಾರೆ; ಆದರೆ ದುಃಖವನ್ನೇ ಹೊಂದುತ್ತಾರೆ; ಹೀಗೆ ತಮ್ಮ ಇಚ್ಛೆಗೂ ಯತ್ನಕ್ಕೂ ವಿರುದ್ಧವಾದ ದುಃಖರೂಪದ ಫಲವು ಲಭಿಸುವುದು ನನ್ನ ಇಚ್ಛೆಯಿಂದಲೇ—ಬೇರೆಯಲ್ಲ; ಒಂದೊಂದು ವೇಳೆ ತಾನು ಇಚ್ಛಿಸಿದಂತೆ ಸುಖ ದೊರೆಯುವುದೂ ಉಂಟು—ದುಃಖಕ್ಕಾಗಿ ಯಾರೂ ಯತ್ನಿಸದಿದ್ದರೂ ದುಃಖವು ಲಭಿಸುವಂತೆ, (ಅದು ಹೇಗೆ ನನ್ನ ಇಚ್ಛೆಯಿಂದ ದೊರೆಯುವುದೋ ಹಾಗೆ), ಈ ಸುಖಪ್ರಾಪ್ತಿಯೂ ನನ್ನ ಇಚ್ಛೆಯಿಂದಲೇ, ಎಂದು ತಿಳಿ (೨೬-೨೭). ಸೃಷ್ಟಿಕಾಲದಲ್ಲಿ

**ಗುಣಸಾಮ್ಯೇಽಖಿಲಂ ಕ್ಷಿಪ್ತ್ವಾ ಮೋದೇ ಸ್ವಾನಂದರೂಪತಃ ।**

ಏವಂ-ಹೀಗೆ (ಈ ಹಿಂದೆ ಹೇಳಿದಂತೆ), ಸೃಷ್ಟಿಕಾಲೇ-ಸೃಷ್ಟಿಕಾಲದಲ್ಲಿ (ಸೃಷ್ಟಿ ಪ್ರಲಯಗಳ ಮಧ್ಯಕಾಲದಲ್ಲಿ) ಸ್ವಲೀಲಯಾ-ಇಚ್ಛಾನುಸಾರ ಕ್ರೀಡೆಯಿಂದ, ರೂಪಸಹಸ್ರಾಣಿ-ಅಸಂಖ್ಯರೂಪಗಳನ್ನು ವಿತತ್ಯ-ವಿಸ್ತರಿಸಿ, (ಅಂತರ್ಯಾಮಿ ರೂಪಗಳಿಂದ ಸಕಲ ಜಗತ್ತನ್ನು ವ್ಯಾಪಿಸಿ), ಸರ್ವರೂಪೇಷು-ಸರ್ವರೂಪಗಳಲ್ಲಿ ಅಹಂ-ನಾನು, ಏಕ ಏವ-ಅಭಿನ್ನನಾದ ಒಬ್ಬನೇ ಆಗಿದ್ದು ಕ್ರೀಡಾಮಿ-ಕ್ರೀಡಿಸುತ್ತೇನೆ; ಅಂತೇ-ಕೊನೆಗೆ, ಸರ್ವಾಣಿ-ಎಲ್ಲವನ್ನೂ ಸಂಹೃತ್ಯ-ನಾಶಮಾಡಿ (ಸೆಳೆದುಕೊಂಡು), ನಿಜಾಂ-ನನ್ನ ಪ್ರಕೃತಿಂ-ಸ್ವಭಾವವನ್ನು (ಮೂಲರೂಪವನ್ನು), ಆಸ್ಥಿತಃ-ಹೊಂದಿದವನಾಗಿ; ಗುಣಸಾಮ್ಯೇ-ಪ್ರಲಯಕಾಲದಲ್ಲಿ ಅಖಿಲಂ-ಜಗತ್ತೆಲ್ಲವನ್ನೂ ಕ್ಷಿಪ್ತ್ವಾ-ವಿಸರ್ಜಿಸಿ (ನನ್ನ ಉದರದಲ್ಲಿ ಸೂಕ್ಷ್ಮರೂಪದಿಂದ ಹಾಕಿಕೊಂಡು), ಸ್ವಾನಂದರೂಪತಃ-ಪೂರ್ಣಾನಂದ ಸ್ವರೂಪನಾಗಿ, ಮೋದೇ-ಆನಂದಿಸುತ್ತೇನೆ.

**ತಸ್ಮಾದಹಂ ತ್ವಯಿ ಸ್ಥಿತ್ವಾ ತ್ವತ್ತೋ ಜಾತೇಷು ಸರ್ವಶಃ ॥ ೩೦ ॥**

**ಸ್ಥಿತ್ವಾ ಕಾರ್ಯಾಣಿ ಸರ್ವಾಣಿ ಕರಿಷ್ಯಾಮಿ ಕಥಂ ತ್ವಿತಿ ।**
**ಪಶ್ಯ ಬ್ರಹ್ಮನ್ ಸದೈವ ತ್ವಂ ಸರ್ವದಾ ಸರ್ವವಸ್ತುಷು ॥ ೩೧ ॥**

ತಸ್ಮಾತ್-ಆದ್ದರಿಂದ (ನನ್ನ ಲೀಲೆಯು ಈ ಪ್ರಕಾರವಾದುದರಿಂದ), ಅಹಂ-ನಾನು, ತ್ವಯಿ-ನಿನ್ನಲ್ಲಿ ಸ್ಥಿತ್ವಾ-ಇದ್ದು (ಸರ್ವಜಗತ್ತನ್ನು ಸೃಷ್ಟಿಮಾಡಿ), ತ್ವತ್ತಃ-ನಿನ್ನಿಂದ, ಜಾತೇಷು-ಉತ್ಪನ್ನವಾದ, ಸರ್ವಶಃ-ಎಲ್ಲದರಲ್ಲಿಯೂ, ಸ್ಥಿತ್ವಾ-ಇದ್ದು ಸರ್ವಾಣಿ ಕಾರ್ಯಾಣಿ-ಎಲ್ಲ ಕಾರ್ಯಗಳನ್ನೂ (ನಿನ್ನಿಂದಲೂ, ನಿನ್ನಿಂದ ಸೃಷ್ಟವಾದ ಸಮಸ್ತ ಜಗತ್ತಿನಿಂದಲೂ ಆಗುವ ಸರ್ವ ಕಾರ್ಯಗಳನ್ನು), ಕಥಂ-ಹೇಗೆ (ಯಾವ

---

ಸ್ವೇಚ್ಛೆಯಿಂದ ಕ್ರೀಡಿಸಲುದ್ಯುಕ್ತನಾಗಿ, ಸರ್ವವಸ್ತುಗಳ (ತದಾಕಾರಕ, ತನ್ನಾಮಕ) ಅನಂತ ಅಂತರ್ಯಾಮಿ ರೂಪಗಳಿಂದ ಸಹ, ಸರ್ವವನ್ನೂ ವ್ಯಾಪಿಸಿ, ಸರ್ವರೂಪಗಳಿಂದ ಅಭಿನ್ನನಾದ ನಾನೊಬ್ಬನೇ ಯಥೇಚ್ಛವಾಗಿ ಕ್ರೀಡಿಸಿ ಪ್ರಲಯಕಾಲ ಬರಲು, ಎಲ್ಲವನ್ನೂ ನಾಶಗೊಳಿಸಿ ನನ್ನ ಅನಂತರೂಪಗಳನ್ನು ಮೂಲರೂಪದೊಂದಿಗೆ ಐಕ್ಯಗೊಳಿಸಿ, ಪ್ರಲಯಕಾಲದಲ್ಲಿ[1], ಪೂರ್ಣಾನಂದ ಸ್ವರೂಪನೇ ಆದ ನಾನು, ವಿಶ್ವವನ್ನೇ ಉದರದಲ್ಲಿಟ್ಟುಕೊಂಡು, ಸುಖಿಸುತ್ತ (ಸ್ವರೂಪಾನಂದವನ್ನು ಭೋಗಿಸುತ್ತ) ವಿರಾಜಮಾನನಾಗಿರುತ್ತೇನೆ (೨೮-೨೯).

---

1. ಗುಣಸಾಮ್ಯವೇ ಪ್ರಲಯವು; ಗುಣವೈಷಮ್ಯವು ಸೃಷ್ಟಿ. ಈ ಶಬ್ದಗಳ ವಿವರಣೆಯನ್ನು ಹಿಂದಿನ ಅಧ್ಯಾಯಗಳಿಂದ ತಿಳಿಯಬೇಕು.

ಪ್ರಕಾರದಿಂದ), ಕರಿಷ್ಯಾಮಿ ತು-ಮಾಡುತ್ತೇನೆಂಬುದನ್ನೇ, ಪಶ್ಯ-ತಿಳಿ; ತ್ವಂ-ನೀನು, ಸರ್ವದಾ-ಎಲ್ಲ ಕಾಲದಲ್ಲಿ ಸರ್ವವಸ್ತುಷು-(ಚೇತನಾಚೇತನ) ಸಕಲವಸ್ತುಗಳಲ್ಲಿ ಸದಾ ಏವ-ನಿರಂತರವಾಗಿಯೇ, ಬ್ರಹ್ಮನ್-ಹೇ ಬ್ರಹ್ಮ, (ಪಶ್ಯ-ನೋಡುವವನಾಗು), (ಸರ್ವತ್ರಸ್ಥಿತನಾಗಿ ಸರ್ವವನ್ನೂ ಮಾಡುವವನು, ನಾನೇ ಎಂಬುದನ್ನು ನೋಡಿ ತಿಳಿ).

**ಯ ಇದಂ ಮಮ ಮಾಹಾತ್ಮ್ಯಂ ಭಕ್ತ್ಯಾ ಪರಮಯಾ ಯುತಃ ।**
**ಶೃಣುಯಾಚ್ಛ್ರಾವಯೇದ್ವಾಪಿ ಮಯಿ ಭಕ್ತಿಂ ಸ ವಿಂದತಿ ॥ ೩೨ ॥**

ಯಃ-ಯಾವ ಅಧಿಕಾರಿ ಜೀವನು, ಮಮ-ನನ್ನ, ಇದಂ-ಈ, ಮಾಹಾತ್ಮ್ಯಂ-ಮಹಾತ್ಮ್ಯೆಯನ್ನು ಪರಮಯಾ-ಉತ್ಕೃಷ್ಟವಾದ, ಭಕ್ತ್ಯಾ-ಭಕ್ತಿಯಿಂದ, ಯುತಃ-ಕೂಡಿದವನಾಗಿ (ಅತಿಶಯವಾದ ಭಕ್ತಿಭಾವದಿಂದ), ಶೃಣುಯಾತ್-ಶ್ರವಣ ಮಾಡುವನೋ, ಶ್ರಾವಯೇತ್‌ವಾಪಿ-(ಅನ್ಯಭಕ್ತರಿಗೆ) ಶ್ರವಣಮಾಡಿಸುವನೋ, ಸಃ-ಆತನು, ಮಯಿ-ನನ್ನಲ್ಲಿ, ಭಕ್ತಿಂ(ಅಪರೋಕ್ಷ) ಜ್ಞಾನಕ್ಕೆ ಸಾಕ್ಷಾತ್ ಸಾಧನವಾದ ನಿಶ್ಚಲವಾದ) ಭಕ್ತಿಯನ್ನು ವಿಂದತಿ-ಹೊಂದುತ್ತಾನೆ.

**ಜ್ಞಾನಯಜ್ಞೋ ಮಯ್ಯೈವೋಕ್ತೋ ಮತ್ಕಥಾಶ್ರವಣಂ ಹಿ ತತ್ ।**
**ಮದ್ಭಕ್ತಾನಾಂ ತಥಾ ಬ್ರಹ್ಮನ್ನೇನ ಸ್ಯಾದ್ಬ್ರಹ್ಮದರ್ಶನಂ ॥ ೩೩ ॥**

---

ನನ್ನ ವಿಚಿತ್ರಲೀಲೆಯು ಈ ಪ್ರಕಾರವಾದುದರಿಂದ, ನಿನ್ನಲ್ಲಿಯೂ, ನಿನ್ನಿಂದ ಸೃಷ್ಟವಾದ ಸಕಲ ವಸ್ತುಗಳಲ್ಲಿಯೂ, ನಾನೇ ನಿಂತು (ಅಂತರ್ಯಾಮಿ ರೂಪಗಳಿಂದ ನೆಲಸಿ), ಸಕಲ ಕಾರ್ಯಗಳನ್ನೂ ಹೇಗೆ ನಾನೇ ನಿರ್ವಹಿಸುತ್ತೇನೆಂಬುದನ್ನು, ಹೇ ಬ್ರಹ್ಮದೇವ! (ನನ್ನ ಅನುಗ್ರಹದಿಂದ) ಸರ್ವದಾ ಸರ್ವತ್ರ ನನ್ನನ್ನು ನೋಡಿ ತಿಳಿ[1](೩೦-೩೧). ಯಾವ ಅಧಿಕಾರಿ ಜೀವನು, ಈ ನನ್ನ ಮಹಿಮೆಯನ್ನು ಅತ್ಯಂತ

1. ಬ್ರಹ್ಮದೇವನು ಶ್ರೀಹರಿಯ ವಿಶೇಷಾನುಗ್ರಹದಿಂದ ವಿಶ್ವವ್ಯಾಪ್ತಗಳಾದ ಶ್ರೀಹರಿಯ ಅನಂತರೂಪಗಳ ಸಾಕ್ಷಾತ್ಕಾರವುಳ್ಳ ದೇವೋತ್ತಮನು. 'ಬ್ರಹ್ಮನ್, ಸರ್ವದಾ ಸರ್ವವಸ್ತುಷು ಸ್ಥಿತ್ವಾ ಕಥಂ ಕರಿಷ್ಯಾಮಿ ಇತಿ ಪಶ್ಯ' ಎಂಬ ಅನ್ವಯವನ್ನೂ ತಿಳಿಯಬೇಕು; ಬ್ರಹ್ಮದೇವನು ಬ್ರಹ್ಮಾಂಡದಲ್ಲಿ ಸರ್ವತ್ರ (ಅಣು ಮೊದಲಾದ ಸಕಲ ವಸ್ತುಗಳಲ್ಲಿ) ವ್ಯಾಪ್ತನಾಗಿದ್ದು ಶ್ರೀಹರಿಯೊಂದಿಗೆ ಶ್ರೀಹರಿಯಿಂದ ಮಾಡಲ್ಪಡುವ ಸರ್ವ ವ್ಯಾಪಾರವನ್ನೂ ಕಾಣುತ್ತಾನೆ ಮತ್ತು ತಾನೂ ಮಾಡುತ್ತಾನೆ.

'ಯಾನಿ ಯಾನೀಹ ಕರ್ಮಾಣಿ ಜಗತಿ ಸ್ಯೂ ರಮಾಪತೇಃ ।
ಪ್ರಾಯಃ ಪ್ರಾಣಾಧಿಪೇನಾಪಿ ಸಮುಸ್ಸಾನ್ತಿ ನ ಸಂಶಯಃ ॥'

–ಜಗದ್ವಿಷಯದಲ್ಲಿ ಸ್ವತಂತ್ರನಾದ ಶ್ರೀ ನಾರಾಯಣನು ನಿರ್ವಹಿಸುವ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳೆಂಬ ಎಲ್ಲ ಕರ್ಮಗಳನ್ನೂ, ವಾಯುದೇವನು ಆತನೊಬ್ಬನ ಅಧೀನನಾಗಿ, ತಾನೂ ನಿರ್ವಹಿಸುತ್ತಾನೆ; ಶ್ರೀಹರಿಯು ಈ ಎಲ್ಲವನ್ನೂ ಮುಖ್ಯಪ್ರಾಣನ ದ್ವಾರವೇ ಮಾಡುತ್ತಾನೆ.

ಜ್ಞಾನಯಜ್ಞಃ-ಜ್ಞಾನಯಜ್ಞವೆಂದು, ಮಯಾ ಏವ-ನನ್ನಿಂದಲೇ, ಪ್ರೋಕ್ತಃ ಹೇಳಲ್ಪಟ್ಟಿದೆ; ತತ್-ಅದು (ಆ ಯಜ್ಞವೆಂಬುದು), ಮತ್ಕಥಾಶ್ರವಣಂ ಹಿ-ನನ್ನ ಮಹಿಮೆಗಳ ಶ್ರವಣರೂಪವಾದುದೇ ಸರಿ; [1]ಬ್ರಹ್ಮನ್-ಹೇ ಬ್ರಹ್ಮದೇವ! ಮದ್ಭಕ್ತಾನಾಂ-ನನ್ನ ಭಕ್ತರಿಗೆ, ಯೇನ-ಆ ಶ್ರವಣದಿಂದ, ತಥಾ-ಹಾಗೆ (ಸ್ವಯೋಗ್ಯವಾದ), ಬ್ರಹ್ಮದರ್ಶನಂ-ನನ್ನ ಸಾಕ್ಷಾದ್ದರ್ಶನವು, ಸ್ಯಾತ್-ಆಗುತ್ತದೆ (ಲಭಿಸುತ್ತದೆ).

**ಯಮಾಂಶ್ಚ ನಿಯಮಾಂಶ್ಚಾಪಿ ಋತ್ವಿಜಃ ಪ್ರಾಪ್ಯ ಯತ್ನತಃ ।**
**ಕಾಮಕ್ರೋಧಾದಿಕಾನ್ ಹಿತ್ವಾ ವಿರಕ್ತ್ಯಾ ವಜ್ರಕಲ್ಪಯಾ ॥ ೩೪ ॥**
**ಮಯ್ಯಗ್ನೌ ಜುಹುಯಾದಾದೌ ಮನಃ ಸೋಮಂ ತತಃ ಪರಂ ।**
**ಬುದ್ಧ್ಯೈವಾಧ್ವರ್ಯುಣಾ ಯುಕ್ತಃ ಸುನುಯಾತ್ತದ್ವಿಚಕ್ಷಣಃ ॥ ೩೫ ॥**

ಶ್ರೀವಿಷ್ಣುಕಥಾಶ್ರವಣರೂಪಜ್ಞಾನಯಜ್ಞದ ಸ್ವರೂಪವನ್ನು ಯಜ್ಞಾಂಗಗಳ ವಿಭಾಗನಿರೂಪಣದಿಂದ ವಿವರಿಸುತ್ತಾರೆ:—

---

ಭಕ್ತಿಯಿಂದ ಶ್ರವಣಮಾಡುವನೋ ಮತ್ತು ಅನ್ಯಭಕ್ತರಿಗೆ ಶ್ರವಣ ಮಾಡಿಸುವನೋ, ಆತನು, ನನ್ನ ಸಾಕ್ಷಾತ್ ದರ್ಶನಕ್ಕೆ ಕಾರಣವಾಗುವ ನಿಶ್ಚಲ ಭಕ್ತಿಯನ್ನು ನನ್ನಲ್ಲಿ ಹೊಂದುತ್ತಾನೆ(೩೨). ನನ್ನ ಭಕ್ತರು ಸ್ವಯೋಗ್ಯವಾದ ನನ್ನ ಸಾಕ್ಷಾದ್ದರ್ಶನವನ್ನು ಪಡೆಯಲು ಸಾಧನವಾದ ಜ್ಞಾನಯಜ್ಞವನ್ನು ನಾನೇ ಹೇಳಿದ್ದೇನೆ; ಆ ಜ್ಞಾನಯಜ್ಞವೆಂಬುದು ನನ್ನ ಮಹಿಮೆಗಳ ಶ್ರವಣರೂಪವಾದುದೇ—ಬೇರೆಯಲ್ಲ (೩೩). ಕಾಮಕ್ರೋಧಾದಿ ಅರಿಗಳನ್ನು (ಶತ್ರುಗಳನ್ನು) ನಿಗ್ರಹಿಸಿ, ದೃಢವಾದ ವೈರಾಗ್ಯವುಳ್ಳವನಾಗಿ, ಜ್ಞಾನಯಜ್ಞದ ಯಜಮಾನನಾದ ಅಧಿಕಾರಿಯು, ಪ್ರಯತ್ನಪೂರ್ವಕವಾಗಿ ಯಮನಿಯಮಗಳೆಂಬ[2] ಋತ್ವಿಜರನ್ನು ದೊರಕಿಸಿಕೊಳ್ಳಬೇಕು; ಆರಂಭದಲ್ಲಿ

---

1. ಭಗವತ್ಕಥಾಶ್ರವಣವೇ ಜ್ಞಾನಯಜ್ಞವು; ಯಜ್ಞವೆಂದರೆ ವಿಷ್ಣುಪೂಜೆಯು; ಶ್ರೀವಿಷ್ಣುವಿನ ಮಹಿಮೆಗಳ ಶ್ರವಣವೇ ಆತನ ಸಂಪ್ರೀತಿಯನ್ನು ದೊರಕಿಸುವ, ಆತನ ಪೂಜೆಯು. ಶ್ರವಣವೆಂದರೆ, ಗುರುಮುಖದಿಂದ ಅರ್ಥಜ್ಞಾನಪೂರ್ವಕವಾಗಿ ಗ್ರಹಿಸುವುದು (ತಿಳಿಯುವುದು); ನನ್ನ ಕಥಾಶ್ರವಣದಂತೆ, ನನ್ನ ಭಕ್ತರ ಕಥಾಶ್ರವಣವೂ ಜ್ಞಾನಯಜ್ಞವೇ—ಅದೂ ನನ್ನ ಮಹಿಮೆಗಳಿಂದ ಕೂಡಿದುದೇ ಆಗಿರುತ್ತದೆ—ನನ್ನ ಭಕ್ತರ ಮಹಿಮೆಯು ನನ್ನ ಮಹಿಮೆಯೇ ಸರಿ; ಈ ಅರ್ಥವನ್ನೂ ಯೋಗ್ಯಾನ್ವಯದಿಂದ, ಈ ಶ್ಲೋಕದಿಂದಲೇ ತಿಳಿಯಬಹುದಾಗಿದೆ.

2. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳೆಂಬುವು ಯೋಗದ ಅಷ್ಟಾಂಗಗಳು. ಯಮ ನಿಯಮಗಳು ಹತ್ತು ಹತ್ತು ವಿಧವಾಗಿವೆ; ಯಮಗಳು ಯಾವುವೆಂದರೆ:—ಬ್ರಹ್ಮಚರ್ಯ, ದಯಾ, ಕ್ಷಾಂತಿ, ದಾನ, ಸತ್ಯ, ಅಕಲ್ಕತೆ, ಅಹಿಂಸಾ, ಅಸ್ತೇಯ, ಮಾಧುರ್ಯ, ದಮ, ಇವು ಹತ್ತು, ಶರೀರವನ್ನು ಬ್ರಹ್ಮಸಾಕ್ಷಾತ್ಕಾರಕ್ಕೆ ಸಿದ್ಧಗೊಳಿಸಲು ಆವಶ್ಯಕವಾದ ನಿತ್ಯಕರ್ಮಗಳು. ನಿಯಮಗಳು ಯಾವುವೆಂದರೆ:—ಶೌಚ, ಇಜ್ಯಾ, ತಪ, ದಾನ, ಸ್ವಾಧ್ಯಾಯ, ಉಪಸ್ಥೇಂದ್ರಿಯನಿಗ್ರಹ, ವ್ರತ, ಮೌನ, ಉಪವಾಸ, ಸ್ನಾನ ಇವು ಹತ್ತು ಯಮಗಳನ್ನು ಸ್ಥಿರಪಡಿಸುವ ಕರ್ಮಗಳು.

ವಿಚಕ್ಷಣಃ-ಕುಶಲನಾದ ಯಜಮಾನನು (ಯಜ್ಞಕರ್ತನು), ವಜ್ರಕಲ್ಪಯಾ-ವಜ್ರಸದೃಶವಾದ (ಅತ್ಯಂತ ದೃಢವಾದ), ವಿರಕ್ತ್ಯಾ-ವೈರಾಗ್ಯದಿಂದ, ಕಾಮ ಕ್ರೋಧಾದಿಕಾನ್-ಕಾಮಕ್ರೋಧಾದಿಗಳನ್ನು(ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಆರು ಶತ್ರುಗಳನ್ನು), ಹಿತ್ವಾ-ನಿಗ್ರಹಿಸಿ (ತೊರೆದು), ಯತ್ನತಃ-ಯತ್ನಪೂರ್ವಕ, ಯಮಾನ್-ಯಮಗಳನ್ನು ಅಪಿ-ಮತ್ತು ನಿಯಮಾನ್-ನಿಯಮಗಳನ್ನೂ, ಋತ್ವಿಜಃ-ಋತ್ವಿಜರನ್ನಾಗಿ, ಪ್ರಾಪ್ಯ-ಹೊಂದಿ, ಅದೌ-ಮೊದಲಿಗೆ, ಮಯಿ-ನನ್ನಲ್ಲಿ(ಶ್ರೀವಿಷ್ಣುವೆಂಬ), ಅಗ್ನೌ-ಅಗ್ನಿಯಲ್ಲಿ ಮನಃಸೋಮಂ-ಮನಸ್ಸೆಂಬ ಸೋಮಲತೆಯನ್ನು ಜುಹುಯಾತ್-ಹೋಮಮಾಡಬೇಕು; ತತಃ ಪರಂ-ಆ ನಂತರ, ಬುದ್ಧ್ಯೈವ-ಬುದ್ಧಿಯೆಂಬ, ಅಧ್ವರ್ಯುಣಾ-ಅಧ್ವರ್ಯುವಿನಿಂದ, ಯುಕ್ತಃ-ಸಹಿತನಾಗಿ (ಕೂಡಿ), ತತ್-ಆ ಜ್ಞಾನಯಜ್ಞವನ್ನು ಸುಸುಯಾತ್-(ಯಜ್ಞವನ್ನು) ಮುಂದರಿಸಬೇಕು.

**ವಿವೇಕೋಪಲಸಂಘೃಷ್ಟಂ ತತಃ ತ್ರಿಷವಣಂ ಮನಃ ।**
**ರಸಂ ಮುಂಚತಿ ಸಂಶುದ್ಧಂ ಮದ್ಭಕ್ತ್ಯಾಖ್ಯಮನುತ್ತಮಂ ॥ ೩೬ ॥**

**ಜುಹುಯಾನ್ಮತ್ತದೇಽಗ್ನೌ ತು ಶೇಷಂ ಪೀತ್ವಾ ಚ ಮಾದ್ಯತಿ ।**
**ಆನಂದಾತ್ ಸಾಮಗಾನಾನಿ ಕೃತ್ವಾ ಕೃತ್ವಾ ಚ ಮೋದತೇ ॥ ೩೭ ॥**

ತತಃ-ನಂತರ (ಜ್ಞಾನಯಜ್ಞವು ಮುಂದರಿಯಲು) ತ್ರಿಷವಣಂ-ಮೂರೂ

---

ಶ್ರೀವಿಷ್ಣುನಾಮಕ ಅಗ್ನಿಯಲ್ಲಿ ಮನಸ್ಸೆಂಬ ಸೋಮಲತೆಯನ್ನು ಹೋಮಮಾಡಬೇಕು (ಮನಸ್ಸನ್ನು ಶ್ರೀವಿಷ್ಣುವಿನಲ್ಲಿ ನ್ಯಾಪಿಸಬೇಕು); ಆ ನಂತರ, ಬುದ್ಧಿಯೆಂಬ ಅಧ್ವರ್ಯುವಿನಿಂದ ಕೂಡಿಕೊಂಡು,[1] ವಿಚಕ್ಷಣನಾದ ಯಜಮಾನನು ಯಜ್ಞವನ್ನು ಮುಂದರಿಸಬೇಕು (೩೪-೩೫). ಅಗ್ನಿಯಲ್ಲಿ ಅರ್ಪಿಸಿದ (ಕಾಯಿಸಿದ) ಸೋಮಲತೆಯು ವಿವೇಕವೆಂಬ ಶಿಲೆಯಿಂದ ಮೂರು ಸವನಗಳಲ್ಲಿ ಮಾಡಬೇಕಾದ ಅಗ್ನಿಕಾರ್ಯಗಳೆಂಬ ಸಂಘಟ್ಟನದಿಂದ (ಮರ್ದನಮಾಡಲ್ಪಟ್ಟು), ಶುದ್ಧವೂ ಅತ್ಯುತ್ತಮವೂ ಆದ ಭಕ್ತಿಯೆಂಬ ರಸವನ್ನು ಸ್ರವಿಸುತ್ತದೆ(ಕೊಡುತ್ತದೆ); ಭಕ್ತಿಯೆಂಬ ಆ ಸೋಮರಸವನ್ನು ನನ್ನ (ಶ್ರೀವಿಷ್ಣುವಿನ) ಸ್ವರೂಪವೆಂಬ ಅಗ್ನಿಯಲ್ಲಿ ಹೋಮಿಸಿ (ಅರ್ಪಿಸಿ), ಅವಶಿಷ್ಟರಸವನ್ನು ಪಾನಮಾಡಿ, (ಹೃದಯದಲ್ಲಿ ತುಂಬಿಕೊಂಡು) ಆನಂದೋದ್ರೇಕವೆಂಬ ಅಮಲೇರಿ,

1. ಹೋತೃ—ಋಗ್ವೇದಮಂತ್ರಗಳನ್ನುಚ್ಚರಿಸುತ್ತ ಹವಿಸ್ಸುಗಳನ್ನು ಅಗ್ನಿಯಲ್ಲಿ ಅರ್ಪಿಸುವವನು; ಉದ್ಗಾತೃ—ಸಾಮವೇದಮಂತ್ರಗಳನ್ನು ಗಾನಮಾಡುವವನು; ಅಧ್ವರ್ಯು—ಯಜುರ್ವೇದಮಂತ್ರಗಳನ್ನು ಉಚ್ಚರಿಸುವವನು—ಈತನು, ಭೂಮಿಯನ್ನು ಅಳತೆಮಾಡಿ, ಕಟ್ಟೆಯನ್ನು ಹಾಕಿ, ನೀರು, ಸಮಿತ್ತುಗಳು, ಪಾತ್ರೆಗಳು ಮೊದಲಾದ ಸಲಕರಣೆಗಳನ್ನು ಸಿದ್ಧಗೊಳಿಸಿ, ಮುಂದಿನ ಯಜ್ಞಕಾರ್ಯಗಳಲ್ಲಿ ಯಜಮಾನನಿಗೆ ಸಹಾಯಕನಾಗಿ ವರ್ತಿಸುತ್ತಾನೆ

ಸವನಗಳಲ್ಲಿ (ಪ್ರಾತಃ-ಮಧ್ಯಾಹ್ನ-ಸಾಯಂಕಾಲಗಳಲ್ಲಿ ಮಾಡುವ ಅಗ್ನಿಕಾರ್ಯಗಳು 'ಸವನ'ಗಳೆನಿಸುತ್ತವೆ); ವಿವೇಕೋಪಲಸಂಘೃಷ್ಟಂ-ವಿವೇಕವೆಂಬ ಕಲ್ಲಿನಿಂದ ಕುಟ್ಟಲ್ಪಟ್ಟ ಮನಃ-ಮನಸ್ಸೆಂಬ ಸೋಮಲತೆಯು, ಸಂಶುದ್ಧಂ-ಅತಿಶುದ್ಧವಾದ, ಅನುತ್ತಮಂ-ಶ್ರೇಷ್ಠವಾದ, ಮದ್ಭಕ್ತ್ಯಾಖ್ಯಂ-ನನ್ನಲ್ಲಿ ಭಕ್ತಿಯೆಂಬ, ರಸಂ-ರಸವನ್ನು(ಸೋಮರಸವನ್ನು), ಮುಂಚತಿ-ಬಿಡುತ್ತದೆ(ಹಿಂಡುತ್ತದೆ-ಸೂಸುತ್ತದೆ-ಕೊಡುತ್ತದೆ); (ಅದನ್ನು) ಮತ್ಸದೇ-ನನ್ನ ಸ್ವರೂಪವೆಂಬ, ಅಗ್ನೌ-ಅಗ್ನಿಯಲ್ಲಿ, ಜುಹುಯಾತ್-ಹೋಮಮಾಡಿ(ಅರ್ಪಿಸಿ), ಶೇಷಂ-ಅವಶಿಷ್ಟರಸವನ್ನು, ಪೀತ್ವಾ-ಪಾನಮಾಡಿ (ಕುಡಿದು-ಭಕ್ತಿಭಾವವನ್ನು ತನ್ನಲ್ಲಿ ತುಂಬಿಕೊಂಡು), ಮಾದ್ಯತಿ ಚ-ಮದಿಸುತ್ತಾನೆ (ಆನಂದದ ಉದ್ರೇಕವೆಂಬ ಅಮಲು ಏರುತ್ತದೆ); ಆನಂದಾತ್-ಆನಂದದಿಂದ, ಸಾಮಗಾನಾನಿ-ಸಾಮಗಾನಗಳನ್ನು, ಕೃತ್ವಾ-ಮಾಡಿ(ಮಾಡುತ್ತ), ಕೃತ್ವಾ ಚ-ಮತ್ತೆ ಮತ್ತೆ ಗಾನಮಾಡುತ್ತ ಮೋದತೇ-ಆನಂದಿಸುತ್ತಾನೆ.[1]

**ಅನುಭೂಯ ತಮಾನಂದಂ ಹೃದ್ಯಾಲಿಂಗಿತಮತ್ತನುಃ ।**
**ಬಾಹ್ಯಂ ಕಿಂಚಿನ್ನ ಜಾನಾತಿ ಸ್ವದೇಹಸ್ಯಾಪಿ ಚೇಷ್ಟಿತಂ ॥ ೩೮ ॥**

ಹೃದ್ಯಾಲಿಂಗಿತಮತ್ತನುಃ-ಹೃದಯಸ್ಥಿತನಾದ (ಅಲ್ಲಿ ದರ್ಶನವಿತ್ತ) ನನ್ನ ರೂಪವನ್ನು ಆಲಿಂಗಿಸಿದ ನನ್ನ ಭಕ್ತನು, ತಂ-ಆ, ಆನಂದಂ-(ದರ್ಶನ, ಆಲಿಂಗನಗಳಿಂದ

---

ಮತ್ತೆ ಮತ್ತೆ ಗಾನಮಾಡುತ್ತ (ಶ್ರೀವಿಷ್ಣುಪ್ರಸನ್ನತೆಯಿಂದ ದೊರೆತ ಮೋಕ್ಷಪದವನ್ನು ಸೇರಿ, ಅಲ್ಲಿ 'ಏತತ್ಸಾಮಗಾಯನ್ ಆಸ್ತೇ' ಇತ್ಯಾದಿ ವೇದವು ಹೇಳುವಂತೆ ಸಾಮವೇದಗಾನದಲ್ಲಿ ಮಗ್ನನಾಗಿ), ಆನಂದಿಸುತ್ತಾನೆ; ಇದು ಜ್ಞಾನಯಜ್ಞವನ್ನಾಚರಿಸುವ ಕ್ರಮ ಮತ್ತು ಅದರಿಂದ ದೊರೆಯುವ ಫಲ (೩೬-೩೭).

ಶ್ರೀವಿಷ್ಣುವಿನಲ್ಲಿ ಭಕ್ತಿಯೆಂಬ ಸೋಮರಸವನ್ನು ಅರ್ಪಿಸಿ, ಹೋಮಶೇಷ ಪಾನದಿಂದ ಅಮಲೇರಿ ಗಾನಾದಿಗಳಲ್ಲಿ ತೊಡಗಿದ ಭಕ್ತನು, ಸ್ವಹೃದಯದಲ್ಲಿ ಶ್ರೀಹರಿದರ್ಶನವನ್ನು ಪಡೆದು ಆ ದಿವ್ಯರೂಪವನ್ನು ಆಲಂಗಿಸಿ, ಬಾಹ್ಯ ಜಗತ್ತನ್ನೂ ತನ್ನ

---

1. ಜ್ಞಾನಯಜ್ಞದ ಫಲವು ಮೋಕ್ಷವೇ ಎಂದು ಸೂಚಿಸಲಾಗಿದೆ. ಶ್ರೀಹರಿಮಹಿಮೆಗಳ ಶ್ರವಣಾದಿರೂಪದ ಯಜ್ಞವೇ ಜ್ಞಾನಯಜ್ಞವು. ಆ ಯಜ್ಞದಲ್ಲಿ ಮನಸ್ಸು ಸೋಮಲತೆ—ಅದನ್ನು ಬಿಸಿಮಾಡಿ ವಿವೇಕವೆಂಬ ಶಿಲೆಯಿಂದ ಘಟ್ಟನೆ ಮಾಡಿದರೆ ದೊರೆಯುವ ರಸವೇ ಭಕ್ತಿಯೆಂಬ ಸೋಮರಸವು; ವಿಷ್ಣುಸ್ವರೂಪವೆಂಬ ಅಗ್ನಿಯಲ್ಲಿ ಈ ಸೋಮರಸವನ್ನು ಹೋಮಮಾಡಿ ಅವಶಿಷ್ಟ ರಸವನ್ನು (ಹೋಮಶೇಷವನ್ನು) ಪಾನಮಾಡಿದ ಭಕ್ತನು, ಹೃದಯದಲ್ಲಿ ತುಂಬಿದ ಭಕ್ತಿಭಾವವುಳ್ಳವನಾಗುತ್ತಾನೆ—ಅದರಿಂದ ಆನಂದದ ಅಮಲೇರುತ್ತದೆ. ಶ್ರೀಹರಿಯ ಸಾಕ್ಷಾತ್ಕಾರದಿಂದ ದೊರೆತ ಆನಂದೋದ್ರೇಕದಿಂದ ಉನ್ಮಾದಿಯಂತಾಗುತ್ತಾನೆ; ಅಂತ್ಯದಲ್ಲಿ ಮೋಕ್ಷವನ್ನೂ ಹೊಂದಿ ನಿತ್ಯಾನಂದವನ್ನು ಅನುಭವಿಸುತ್ತಾನೆ.

ದೊರೆಯುವ ದಿವ್ಯಾನಂದ ವಿಶೇಷವನ್ನು) ಆನಂದವನ್ನು, ಅನುಭೂಯ- ಅನುಭವಿಸಿ, ಬಾಹ್ಯಂ-(ತನ್ನ) ಹೊರಗಿರುವ, ಕಿಂಚಿತ್- ಯಾವುದೊಂದು ವಸ್ತುವನ್ನೂ, ಅಪಿ- ಮತ್ತು (ಅಷ್ಟೇಕೆ), ದೇಹಸ್ಯ-(ತನ್ನ) ದೇಹದ, ವಿಚೇಷ್ಟಿತಂ- ಚೇಷ್ಟೆಯನ್ನೂ (ಕ್ರಿಯೆಗಳನ್ನೂ), ನ ಜಾನಾತಿ- ತಿಳಿಯುವುದಿಲ್ಲ (ಪರವಶನಾಗಿ ಸ್ವದೇಹಾದಿಬಾಹ್ಯಜ್ಞಾನಶೂನ್ಯನೇ ಆಗಿರುತ್ತಾನೆ).

**ಆಯಾತೋಽಯಂ ಕದಾ ದೇಹೋ ಗತೋ ವಾಪಿ ಕಥಂ ಪುನಃ ।**
**ಇತ್ಯೇವಮಪಿ ನೋ ವೇತ್ತಿ ಕಿಂ ಪುನಃ ಕ್ಷುದ್ರಚೇಷ್ಟಿತಂ ॥ ೬೯ ॥**

ಅಯಂ ದೇಹಃ- ಈ ದೇಹವು, ಕದಾ- ಯಾವಾಗ, ಆಯಾತಃ - ಬಂದಿತು; ವಾ- ಅಥವಾ, ಗತಃ ಅಪಿ- ಹೋದದ್ದಾದರೂ (ಕಳೆದುಹೋದ- ಗತಿಸಿದ ದೇಹವಾದರೂ), ಪುನಃ- ತಿರಿಗಿ, ಕಥಂ- ಹೇಗೆ, (ಆಯಾತಃ - ಬಂದಿತು), ಇತ್ಯೇದಪಿ- ಇದನ್ನು ಸಹ, ನೋ ವೇತ್ತಿ- (ಆ ಪರವಶನಾದ ಭಕ್ತನು) ತಿಳಿಯುವುದಿಲ್ಲ ಕ್ಷುದ್ರಚೇಷ್ಟಿತಂ- ಅಲ್ಪಕ್ರಿಯೆಗಳನ್ನು (ಚಲನ, ಗಮನಾದಿ ತುಚ್ಛವ್ಯಾಪಾರಗಳನ್ನು) ಕಿಂ ಪುನಃ- ತಿಳಿಯುವುದಿಲ್ಲವೆಂದು ಹೇಳಲೇನಿದೆ?

**ಏವಮಂತಃ ಸುಪಕ್ವೋಽಯಂ ಸರ್ವತ್ರಾಪಿ ಬಹಿಃ ಸದಾ ।**
**ಸರ್ವವಸ್ತುಷು ಮಾಮೇವ ಪಶ್ಯತ್ಯೇವ ಚ ನಾನ್ಯಥಾ ॥ ೭೦ ॥**

ಏವಂ- ಹೀಗೆ, ಅಯಂ- ಈ ಜ್ಞಾನಿಯು (ಅಪರೋಕ್ಷವನ್ನು ಪಡೆದ ಭಕ್ತನು),

---

ದೇಹದ ಚೇಷ್ಟೆಗಳನ್ನೂ ತಿಳಿಯದ ಅವಸ್ಥೆಯನ್ನು ಹೊಂದುತ್ತಾನೆ(೬೮). ಸ್ವಹೃದಯದಲ್ಲಿ ದರ್ಶನವಿತ್ತ ಶ್ರೀಹರಿಯ ದರ್ಶನ, ಆಲಿಂಗನಗಳುಳ್ಳ ಭಕ್ತನು, ತನ್ನ ದೇಹವು ಬಂದುದು ಹೇಗೆ, ಮತ್ತು ಯಾವಾಗ ಅಥವಾ ಗತಿಸಿದ ದೇಹವು ಪುನಃ ಬಂದುದು ಹೇಗೆ, ಎಂಬುದನ್ನು ಸಹ ತಿಳಿಯನು;[1] ಹೀಗಿರಲು, ದೇಹದ ಕ್ಷುದ್ರಕ್ರಿಯೆಗಳನ್ನು ತಿಳಿಯುವುದೇ ಇಲ್ಲ (ಆ ಭಕ್ತನ ಗಮನಕ್ಕೆ ಬರುವುದೇ ಇಲ್ಲವೆಂದು) ಎಂದು ಹೇಳಬೇಕಾಗಿಲ್ಲ (ಆತನ ಪರವಶತೆಯು ಅಷ್ಟು ಗಾಢವಾಗಿರುವುದು). (೬೯). ಹೀಗೆ, ನನ್ನ ದರ್ಶನವನ್ನು ಪಡೆದ ಭಕ್ತನು, ಪ್ರಾಕೃತಬಂಧತ್ಯಾಗಕ್ಕೆ ಅವಶ್ಯಕವಾದ ಪರಿಪಕ್ವತೆಯನ್ನು ಹೊಂದಿ, ಬಾಹ್ಯ ಜಗತ್ತಿನ

---

1. ಅಪರೋಕ್ಷಜ್ಞಾನಿಯು, ಅಸಂಪ್ರಜ್ಞಾತ ಸಮಾಧಿಯಲ್ಲಿರುವಾಗ, ತನ್ನ ದೇಹದ (ಸ್ಥೂಲಶರೀರದ) ಪರಿವೆ ಸಹ ಆತನಿಗೆ ಇರುವುದಿಲ್ಲ; ಕದಾಚಿತ್ ಸಮಾಧಿಯಿಂದ ಎಚ್ಚತ್ತಾಗ, ದೇಹಾಭಿಮಾನವು ತೋರಿ (ಇದು ನನ್ನ ದೇಹವೆಂಬ ಅನುಭವವುಂಟಾಗಿ), ಹೋದ ದೇಹವು ಪುನಃ ಬಂದದ್ದು ಹೇಗೆಂಬ ಬುದ್ಧಿಭ್ರಮರೂಪದ ಅನುಭವವೂ ಆಗುವುದುಂಟು; ಅಥವಾ ಆ ಹಿಂದಿನ ದೇಹವು ತೊಲಗಿಹೋದರೂ, ಪುನಃ ಈ ದೇಹದಲ್ಲಿ ಹೇಗೆ ಬಂದೆನೆಂದು ತನ್ನ ಕರ್ಮಗತಿಯನ್ನು ಚಿಂತಿಸುವುದೂ ಉಂಟು.

ಅಂತಃ-ಒಳಗೆ, ಸುಪಕ್ವಃ-ಪಕ್ವಭಕ್ತನಾಗಿದ್ದು (ಬಾಹ್ಯಾಂತಃಕರಣವು-ಪ್ರಾಕೃತ ಮನಸ್ಸು ಪರಿಪಕ್ವವಾಗಿ ದಹಿಸಿಹೋಗುವ ಕಾಲವು ಸಮೀಪವಾಗಿದ್ದು), ಬಹಿಃ-ಹೊರಗೆ (ಜಗತ್ತಿನಲ್ಲಿ), ಸದಾ-ಎಲ್ಲ ಕಾಲದಲ್ಲಿ ಸರ್ವತ್ರ ಅಪಿ-ಎಲ್ಲ ಕಡೆಯೂ, ಸರ್ವವಸ್ತುಷು-ಎಲ್ಲ ವಸ್ತುಗಳಲ್ಲಿಯೂ, ಮಾಂ ಏವ-ನನ್ನನ್ನೇ, ಪಶ್ಯತಿ-ನೋಡುತ್ತಾನೆ; ಅನ್ಯಥಾ ನ-ಬೇರೆಯಲ್ಲ(ಸರ್ವವಸ್ತುಗಳ ಸತ್ತಾ ಪ್ರಮಿತಿ ಪ್ರವೃತ್ತಿಗಳು ನನ್ನ ಅಧೀನಗಳೆಂದು ತಿಳಿಯುತ್ತಾನೆ ಮತ್ತು ಅಲ್ಲಿರುವ ನನ್ನ ನಿಯಾಮಕರೂಪಗಳನ್ನೂ, ತಾರತಮ್ಯದಲ್ಲಿ ಉತ್ತಮರಾದ ದೇವಾದಿ ಜೀವರು ಕಾಣುತ್ತಾರೆ).

ಜೀವನ್ಮುಕ್ತಃ ಸ ಏವಾತ್ರ ಯಾವತ್ ಪ್ರಾರಬ್ಧಸಂಕ್ಷಯಃ ।
ನಿವೃತ್ತಾಶೇಷಪಾಪ್ಮಾಸೌ ಕ್ರಿಯಮಾಣೈರಲೇಪಭಾಕ್ ॥ ೪೧ ॥

ಸಃ ಏವ-ಹೀಗೆ ನನ್ನನ್ನು ಸಂದರ್ಶಿಸಿದ ಭಕ್ತನೇ, ಜೀವನ್ಮುಕ್ತಃ-ಜೀವನ್ಮುಕ್ತ ನೆನಿಸುತ್ತಾನೆ (ಜೀವಿಸಿದ್ದರೂ ಸ್ಥೂಲಭೌತಿಕ ದೇಹದಲ್ಲಿದ್ದರೂ ಮುಕ್ತ ಸದೃಶನೇ ಆದ್ದರಿಂದಲೂ ಕರ್ಮಲೇಪರಹಿತನಾದ್ದರಿಂದಲೂ, ಮುಕ್ತನೆನಿಸುತ್ತಾನೆ); ಅತ್ರ-ಆ ಶರೀರದಲ್ಲಿ (ಭೌತಿಕದೇಹದಲ್ಲಿ), ಪ್ರಾರಬ್ಧಸಂಕ್ಷಯಃ ಯಾವತ್-ಪ್ರಾರಬ್ಧಕರ್ಮವು ನಷ್ಟವಾಗುವವರೆಗೆ (ಬ್ರಹ್ಮದರ್ಶನಕಾಲದಲ್ಲಿ ಫಲ ಕೊಡಲು ಆರಂಭವಾಗಿರುವ ಕರ್ಮದ ಪೂರ್ಣಫಲಭೋಗ ಮುಗಿಯುವವರೆಗೆ), ಇದ್ದು ಅಸೌ-ಈ ಭಕ್ತನು, ನಿವೃತ್ತಾಶೇಷಪಾಪ್ಮಾ-(ಶ್ರೀವಿಷ್ಣುಸಾಕ್ಷಾತ್ಕಾರದಿಂದ) ನಷ್ಟವಾದ ಸಕಲ ಪಾಪಗಳುಳ್ಳವನೂ,

---

ಸರ್ವವಸ್ತುಗಳಲ್ಲಿ ಅಂತರ್ನಿಯಾಮಕನಾದ ನನ್ನನ್ನೇ ಕಾಣುತ್ತಾನೆ; (ಉತ್ತಮ ದೇವಾದಿ ಜೀವರು) ಸರ್ವವಸ್ತುಗತ ಭಗವದ್ರೂಪಗಳನ್ನು ಸಹ ಯಥಾಯೋಗ್ಯವಾಗಿ ಕಾಣುತ್ತಾರೆ (೪೦). ಹೀಗೆ ನನ್ನನ್ನು ಸ್ವಹೃದಯದಲ್ಲಿ ಸಂದರ್ಶಿಸಿದ ಅಪರೋಕ್ಷಜ್ಞಾನಿಯು, ಜೀವನ್ಮುಕ್ತನೆಂದು ಕರೆಯಲ್ಪಡುತ್ತಾನೆ—ಅವನು ಜೀವಿಸಿದ್ದರೂ (ಪ್ರಾರಬ್ಧಕರ್ಮ ಭೋಗಕ್ಕಾಗಿ ಪ್ರಾಕೃತ ದೇಹದಲ್ಲಿದ್ದರೂ) ಮುಕ್ತ ಸದೃಶನಾಗಿರುವನಾದ್ದರಿಂದ, ಜೀವನ್ಮುಕ್ತನೆಂಬ ಅನ್ವರ್ಥನಾಮವುಳ್ಳವನಾಗಿರುತ್ತಾನೆ; ಪ್ರಾರಬ್ಧ ಭೋಗವು ತೀರುವವರೆಗೆ, ಅದರ ಭೋಗಕಾಲದಲ್ಲಿ ಮಾಡುವ ಆತನ ಯಾವ ಕರ್ಮಗಳೂ ಲೇಪಿಸುವುದಿಲ್ಲ—ಸುಖದುಃಖರೂಪ ಐಹಿಕಫಲ ಪ್ರಾಪಕಗಳಾಗುವುದಿಲ್ಲ; ಹಿಂದಿನ (ದರ್ಶನಕಾಲದಲ್ಲಿ ಸಂಚಿತರಾಶಿಯೊಳಗಿನ) ಸಕಲಪಾಪಗಳೂ ದರ್ಶನದಿಂದ ನಷ್ಟವಾಗಿರುತ್ತವೆ—ಅತ ಏವ ಆತನಿಗೆ ಸಾಂಸಾರಿಕ ದುಃಖಗಳೇ ಇರಲು ಶಕ್ಯವಿಲ್ಲ; ನಿತ್ಯನಿರಭಿಮಾನದಿಂದ (ಅಹಂಮಮಕಾರ ರಹಿತನಾಗಿ) ಶ್ರೀಹರಿಯನ್ನೇ ಅನನ್ಯನಾಗಿ ಶರಣು ಹೊಂದಿ ಸುಖದಿಂದಿರುತ್ತಾನೆ(೪೧). ಪ್ರಾರಬ್ಧಕರ್ಮವು ಭೋಗದಿಂದ ನಷ್ಟವಾದ ನಂತರ, ಅಪರೋಕ್ಷಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆ; ಅದೇ ಪರಮ

ಕ್ರಿಯಮಾಣೈಃ-(ಪ್ರಾರಬ್ಧಕರ್ಮಭೋಗಕಾಲದಲ್ಲಿ) ಮಾಡಲಾಗುವ (ಆಗಾಮಿ) ಕರ್ಮಗಳಿಂದ, ಅಲೇಪಭಾಕ್-ಲೇಪವಿಲ್ಲದವನಾಗಿಯೂ (ಪುನಃ ದೇಹಪ್ರಾಪ್ತಿ ಮತ್ತು ಸುಖದುಃಖಗಳಿಗೆ ಕಾರಣವಾಗುವ ಕರ್ಮಲೇಪವಿಲ್ಲದವನೂ), (ಆಗಿರುತ್ತಾನೆ).

**ಮುಕ್ತಕರ್ಮಾ ಲಭೇನ್ಮುಕ್ತಿಂ ತತೋ ನಾವರ್ತತೇ ಪುನಃ ।**
**ಅಯಂ ಹಿ ಪರಮೋ ಲಾಭೋ ಯನ್ಮದ್ಭಕ್ತಸ್ಯ ದರ್ಶನಂ ॥ ೪೨ ॥**

ಮುಕ್ತಕರ್ಮಾ-ಪ್ರಾರಬ್ಧಕರ್ಮದಿಂದ ಮುಕ್ತನಾದ, ಅಪರೋಕ್ಷಜ್ಞಾನಿಯು, ಮುಕ್ತಿಂ-ಮೋಕ್ಷವನ್ನು, ಲಭೇತ್-ಹೊಂದುತ್ತಾನೆ; ತತಃ-ಆ ನಂತರ, ಪುನಃ-ಮತ್ತೆ ನಾವರ್ತತೇ-(ಸಂಸಾರಕ್ಕೆ) ಹಿಂದಿರುಗಿ ಬರುವುದಿಲ್ಲ; ಯತ್-ಯಾವ, ಮದ್ಭಕ್ತಸ್ಯ ದರ್ಶನಂ-ನನ್ನ ಭಕ್ತನಿಗೆ ದೊರೆಯುವ ನನ್ನ ದರ್ಶನವೋ, ಅಯಂ ಹಿ-ಅದೇ, ಪರಮಲಾಭಃ-ಉತ್ಕೃಷ್ಟವಾದ ಫಲವು (ಮಹಾಪುರುಷಾರ್ಥವು).

**ತತ್ರಾಪಿ ಮತ್ಕಥಾಲಾಪೋ ಯತೋ ಮುಕ್ತಿರವಾಪ್ಯತೇ ।**
**ಶ್ರೂಯಮಾಣಂ ಹರೇತ್ ಪಾಪಂ ಮನಸೋ ನಿರ್ವೃತಿಂ ಪುನಃ ॥ ೪೩ ॥**

**ವಿತನೋತ್ಯಖಿಲಾನ್ ಭವಾನ್ ಪ್ರಕಾಶಯತಿ ಯತ್ಪರಂ ।**
**ಮತ್ಕಥಾಶ್ರವಣಂ ಬ್ರಹ್ಮನ್ ತಸ್ಮಾತ್ ಕೋ ವಿರಜೇತ್ ಪುಮಾನ್ ॥ ೪೪ ॥**

ಯತಃ-ಯಾವ ಜೀವನ್ಮುಕ್ತಾವಸ್ಥೆಯಿಂದ, ಮುಕ್ತಿಃ-ಮೋಕ್ಷವು, ಅವಾಪ್ಯತೇ-ಹೊಂದಲ್ಪಡುತ್ತದೆಯೋ, ತತ್ರ ಅಪಿ-ಅಲ್ಲಿ ಸಹ (ಆ ಅವಸ್ಥೆಯಲ್ಲಿ-ಪ್ರಾರಬ್ಧ ಭೋಗ ಕಾಲದಲ್ಲಿ ಸಹ), ಮತ್ಕಥಾಲಾಪಃ-ನನ್ನ ಮಹಿಮಾಕೀರ್ತನವು; ಶ್ರೂಯಮಾಣಂ-ಶ್ರವಣಮಾಡಲ್ಪಟ್ಟು, ಪಾಪಂ-(ಸಂಭವಿಸಬಹುದಾದ ಕ್ಷುದ್ರ ಪಾಪಗಳನ್ನು) ಪಾಪವನ್ನು, ಹರೇತ್-ನಾಶಗೊಳಿಸುತ್ತದೆ; ಪುನಃ-ಮತ್ತು ಮನಸಃ- ಮನಸ್ಸಿಗೆ,

---

ಪುರುಷಾರ್ಥವು; ನನ್ನ ಭಕ್ತನಿಗೆ ಲಭಿಸುವ ನನ್ನ ಸಾಕ್ಷಾದ್ದರ್ಶನವೇ ಪರಮ ಲಾಭವು—ಅದರಿಂದಲೇ ಮೋಕ್ಷವು(೪೨). ಜೀವನ್ಮುಕ್ತಾವಸ್ಥೆಯನ್ನು ಮೀರಿದ ನಂತರವೇ ಮೋಕ್ಷವನ್ನು ಹೊಂದುವ ಜ್ಞಾನಿಯು, ಆ ಅವಸ್ಥೆಯಲ್ಲಿ ಸಹ ಶ್ರೀಹರಿಕಥಾ ಶ್ರವಣಾದಿಗಳಲ್ಲಿ ಆಸಕ್ತನಾಗಿರುತ್ತಾನೆ; ಜೀವನ್ಮುಕ್ತಾವಸ್ಥೆಯಲ್ಲಿ ಪ್ರಮಾದಾದಿಗಳಿಂದ ಸಂಭವಿಸಬಹುದಾದ ಕ್ಷುದ್ರಪಾಪಗಳನ್ನು ಪರಿಹರಿಸಿ, ಕಥಾಶ್ರವಣವು ಜ್ಞಾನಿಯ ಮನಸ್ಸಿಗೆ ಅಲೌಕಿಕವಾದ ಆನಂದವನ್ನುಂಟುಮಾಡುತ್ತದೆ; ಇಷ್ಟು ಮಾತ್ರವಲ್ಲ; ಸ್ವಯೋಗ್ಯಭಗವದ್ಗುಣಗಳ ಪೂರ್ಣವಿಕಾಸವನ್ನು (ಧ್ಯಾನದಲ್ಲಿ ಅತಿಸ್ಪಷ್ಟಗುಣೋಪಸಂಹಾರ ಸಾಮರ್ಥ್ಯವನ್ನು). ನಿಶ್ಚಲಭಕ್ತಿಯನ್ನು ದೊರಕಿಸುತ್ತದೆ (ಆದ್ದರಿಂದ ಜ್ಞಾನಿಗಳೂ ಶ್ರೀಹರಿಮಹಿಮೆಗಳ ಶ್ರವಣಾದಿಗಳಲ್ಲಿ ವಿಶೇಷವಾಗಿ ಆಸಕ್ತರಾಗಿರುತ್ತಾರೆ). (೪೩-೪೪).

ನಿರ್ವೃತಿಂ-ಆನಂದವನ್ನು, ವಿತನೋತಿ-ಉಂಟುಮಾಡುತ್ತದೆ; ಅಖಿಲಾನ್- (ಸ್ವಯೋಗ್ಯ ವಾದ) ಸಕಲ, ಭಾವಾನ್-ಶ್ರೀಹರಿಗುಣಗಳನ್ನು, ಪ್ರಕಾಶಯತಿ- ಪ್ರಕಾಶಗೊಳಿಸುತ್ತದೆ (ಅಪರೋಕ್ಷಾನಂತರದ ಶ್ರೀಹರಿಮಹಿಮೆಗಳ ಶ್ರವಣಾದಿಗಳಿಂದ, ಆ ಜ್ಞಾನಿಯು ತನ್ನ ಯೋಗ್ಯತಾನುಗುಣವಾದ ಭಗವದ್ಗುಣಗಳ ಪೂರ್ಣವಿಕಾಸವನ್ನೂ, ನಿಶ್ಚಂಚಲಭಕ್ತಿಯನ್ನೂ ಪಡೆಯುತ್ತಾನೆ); ಮತ್ಕಥಾಶ್ರವಣಾಂ-ನನ್ನ ಮಹಿಮೆಗಳ (ನಿರಂತರ) ಶ್ರವಣವು, ಯತ್‌ಪರಂ-ಯಾವ ಕಾರಣದಿಂದ ಹೀಗೆ ಶ್ರೇಷ್ಠವಾದುದೋ, ತಸ್ಮಾತ್-ಆ ಕಾರಣದಿಂದ, (ತಸ್ಮಾತ್-ಅದರಿಂದ, ಆ ಶ್ರವಣದಿಂದ), ಕಃ-ಯಾವ, ಪುಮಾನ್-ಪುರುಷನು (ವಿವೇಕಿ ಮಾನವನು), ವಿರಜೇತ್-ವಿರಕ್ತನಾದಾನು? (ಶ್ರವಣವನ್ನು ತ್ಯಜಿಸುತ್ತಾನೆ?—ವಿವೇಕಿಗಳೆಲ್ಲರೂ ಸರ್ವದಾ ಜೀವನ್ಮುಕ್ತಾವಸ್ಥೆಯಲ್ಲಿ ಸಹ ಶ್ರವಣಾದಿಗಳಲ್ಲಿ ಆಸಕ್ತರಾಗಿರುತ್ತಾರೆ.

**ಶ್ರೇಯಸಾಂ ಯನ್ನ ಪಾತ್ರಂ ಸ್ಯಾತ್ಪಾತ್ರಂ ದುಃಖಸ್ಯ ಯೋ ಭವೇತ್**
**ಸ ಏವ ವಿರಜೇನ್ಮೂಢೋ ಮತ್ಕಥಾಶ್ರವಣಾನ್ನರಃ ॥ ೪೫ ॥**

**ಅತೋ ಹಿ ಪೌರುಷೇ ದೇಹೇ ಸ್ಥಿತಃ ಸ್ವೋದ್ಧರಣೇ ರತಃ ।**
**ಸ ನಿತ್ಯಂ ಶೃಣುಯಾತ್ ಭಕ್ತ್ಯಾ ಮದ್ಭಕ್ತೋ ಮತ್ಕಥಾಃ ಶುಭಾಃ ॥ ೪೬ ॥**

(ಯಾರು) ಶ್ರೇಯಸಾಂ-ಸುಖಾದಿ ಶ್ರೇಯಸ್ಸುಗಳಿಗೆ, ಯತ್-ಯಾವ ಕಾರಣದಿಂದ, ಪಾತ್ರಂ ನ ಸ್ಯಾತ್-ಪಾತ್ರನಲ್ಲವೋ (ಅರ್ಹನಲ್ಲವೋ), (ಮತ್ತು), ಯಃ-ಯಾವನು, ದುಃಖಸ್ಯ-ದುಃಖಕ್ಕೆ, ಪಾತ್ರಂ-ಪಾತ್ರನು, ಭವೇತ್-ಆಗಿರುವನೋ, ಸಃ ನರಃ-ಆ ಮನುಷ್ಯನು, ಮತ್ಕಥಾಶ್ರವಣಾತ್-ನನ್ನ ಕಥಾಶ್ರವಣದಿಂದ, ವಿರಜೇತ್-ಆಸಕ್ತಿಯಿಲ್ಲದವನಾಗುತ್ತಾನೆ(ವಿರಕ್ತನಾಗುತ್ತಾನೆ-ತ್ಯಜಿಸುತ್ತಾನೆ); ಸ ಏವ ಮೂಢಃ-ಅವನೇ ಅತ್ಯಂತ ಮೂರ್ಖನು; ಅತಃ-ಆದ್ದರಿಂದ, ಪೌರುಷೇದೇಹೇ-ಮನುಷ್ಯದೇಹದಲ್ಲಿ, ಸ್ಥಿತಃ-(ಜನ್ಮವನ್ನು ಹೊಂದಿ) ಇರುವ, ಸ್ವೋದ್ಧರಣೇ-ಆತ್ಮೋದ್ಧಾರದಲ್ಲಿ, ರತಃ-ಆಸಕ್ತಿಯುಳ್ಳ, ಸಃ ಮದ್ಭಕ್ತಃ-ಆ ನನ್ನ ಭಕ್ತನು, ನಿತ್ಯಂ-ನಿತ್ಯವೂ,

---

ದುಃಖಾನುಭವಕ್ಕೆ ಯಾರು ಪಾತ್ರನೋ (ಯೋಗ್ಯನೋ-ಅರ್ಹನೋ), ಮತ್ತು ಯಾವನು ಸುಖಕ್ಕೆ ಪಾತ್ರನಲ್ಲವೋ (ಇಹಪರಗಳ ಸುಖಕ್ಕೆ ಅರ್ಹನಲ್ಲವೋ), ಅವನು ಮಾತ್ರ—ಅಂಥ ಅಯೋಗ್ಯ ಮನುಷ್ಯನು ಮಾತ್ರ, ನನ್ನ ಕಥಾಶ್ರವಣವನ್ನು ಪರಿತ್ಯಜಿಸುತ್ತಾನೆ; ಆದ್ದರಿಂದ, ಮನುಷ್ಯ ದೇಹವನ್ನು ಹೊಂದಿ ಆತ್ಮೋದ್ಧಾರದಲ್ಲಿ ಆಸಕ್ತನಾದ ವಿವೇಕಿಯು, (ನನ್ನ ಭಕ್ತನು), ನಿತ್ಯವೂ ಭಕ್ತಿಯಿಂದ, ಶುಭಪ್ರದಗಳಾದ ನನ್ನ ಮಹಿಮೆಗಳನ್ನು ಶ್ರವಣ ಮಾಡಬೇಕು(೪೫-೪೬). ಕಥಾಶ್ರವಣದಿಂದ ಇಹಪರಗಳ ಉತ್ತಮಗತಿಗಳೂ, ಮೋಕ್ಷವೂ ಸಹ (ಸಕಲವಿಧ ಶ್ರೇಯಸ್ಸುಗಳೂ) ಲಭಿಸುತ್ತವೆ;

ಶುಭಾಃ-ಮಂಗಳಪ್ರದಗಳಾದ, ಮತ್ಕಥಾಃ-ನನ್ನ ಮಹಿಮೆಗಳನ್ನು ಭಕ್ತ್ಯಾ ಭಕ್ತಿಯಿಂದ (ಶ್ರದ್ಧೆಯಿಂದ), ಶೃಣುಯಾತ್-ಶ್ರವಣ ಮಾಡತಕ್ಕದ್ದು

**ಐಹಿಕಾಮುಷ್ಮಿಕಂ ಮೋಕ್ಷಂ ತೇನೈವ ಸಕಲಂ ಲಭೇತ್ ।**
**ದಿವಸೇ ಷಷ್ಟಿನಾಡೀಕೇ ಮುಹೂರ್ತಮಪಿ ನಿತ್ಯಶಃ ॥ ೪೭ ॥**

**ಸಂಕೋಚ್ಯ ಸರ್ವಕರ್ಮಾಣಿ ಮಮ ಶ್ರವಣಮಾಚರೇತ್ ।**
**ತೇನ ಸಾರ್ಥಕತಾಂ ಯಾತಿ ತದ್ದಿನಂ ತೇನ ಸಂಸೃತಿಃ ।**
**ಸಾರ್ಥಕ್ಯಂ ಯಾತಿ ಜೀವಾನಾಮನ್ಯಥಾ ದುರ್ದಿನಂ ಸದಾ ॥ ೪೮ ॥**

ತೇನ ಏವ-ನಿತ್ಯ ಶ್ರೀಹರಿಕಥಾಶ್ರವಣದಿಂದಲೇ (ತಲ್ಲಭ್ಯವಾದ ಅಪರೋಕ್ಷ ಜ್ಞಾನದಿಂದಲೇ), ಐಹಿಕಾಮುಷ್ಮಿಕಂ-ಇಹಪರಗಳನ್ನೂ (ಈ ಲೋಕದ ಮತ್ತು ಸ್ವರ್ಗಾದಿ ಪರಲೋಕಗಳ ಸುಖಸಂಪದಾದಿಗಳನ್ನೂ), ಮೋಕ್ಷಂ-ಮೋಕ್ಷವನ್ನೂ, ಸಕಲಂ-ಈ ಎಲ್ಲ ಫಲಗಳನ್ನೂ ಲಭೇತ್-ಹೊಂದುತ್ತಾನೆ; (ಅತಃ-ಆದ್ದರಿಂದ), ಷಷ್ಟಿನಾಡೀಕೇ- ಅರವತ್ತು ಘಳಿಗೆಗಳುಳ್ಳ, ದಿವಸೇ-ದಿವಸದಲ್ಲಿ ನಿತ್ಯಶಃ-ಪ್ರತಿನಿತ್ಯವೂ, ಮುಹೂರ್ತಂ ಅಪಿ-ಒಂದು ಮುಹೂರ್ತ (೨ ಘಳಿಗೆ) ಪರ್ಯಂತವಾದರೂ, ಸರ್ವಕರ್ಮಾಣಿ-ಎಲ್ಲ ಕರ್ಮಗಳನ್ನೂ ಸಂಕೋಚ್ಯ-ಸಂಕೋಚ ಮಾಡಿ (ಕರ್ತವ್ಯಕರ್ಮಗಳನ್ನು ಸಂಕ್ಷೇಪದಿಂದ ಬಿಡದಂತೆ ಆಚರಿಸಿ, ಕಾಲವನ್ನುಳಿಸಿ), ಮಮ-ನನ್ನ ಶ್ರವಣಂ-ಕಥಾಶ್ರವಣವನ್ನು ಆಚರೇತ್-ಆಚರಿಸಬೇಕು; ತೇನ-ಅದರಿಂದ (ಕಥಾಶ್ರವಣದಿಂದ), ತದ್ದಿನಂ-ಆ ದಿನವು, ಸಾರ್ಥಕತಾಂ-ಸಫಲತ್ವವನ್ನು ಯಾತಿ-ಹೊಂದುತ್ತದೆ; ತೇನ- ಅದರಿಂದಲೇ, ಜೀವಾನಾಂ-ಜೀವರ, ಸಂಸೃತಿಃ-ಆ ಜನ್ಮವು, ಸಾರ್ಥಕ್ಯಂ-ಸಾರ್ಥಕ್ಯವನ್ನು ಯಾತಿ-ಹೊಂದುತ್ತದೆ; ಅನ್ಯಥಾ-ಹಾಗಲ್ಲದಿದ್ದರೆ, (ಶ್ರವಣರಹಿತವಾದರೆ), ಸದಾ-ಯಾವಾಗಲೂ, (ಅಂತಹ ದಿನವು) ದುರ್ದಿನಂ-ದುರ್ದಿನವೇ ಸರಿ (ವ್ಯರ್ಥ ಕಳೆದ ದಿನವೇ).

ವಿಷ್ಣು ಮಹಿಮೋಪವರ್ಣನವೆಂಬ ೧೨ನೇ ಅಧ್ಯಾಯವು ಮುಗಿದುದು.

---

ಆದ್ದರಿಂದ ೬೦ ಘಳಿಗೆಗಳುಳ್ಳ ಒಂದು ದಿನದಲ್ಲಿ ಅವಶ್ಯಕರ್ತವ್ಯವಾದ ಕರ್ಮಗಳನ್ನು ಸಂಕೋಚಗೊಳಿಸಿ, ಒಂದು ಮುಹೂರ್ತವನ್ನಾದರೂ, ನಿತ್ಯವೂ ನನ್ನ ಮಹಿಮೆಗಳನ್ನು ಶ್ರವಣಮಾಡಬೇಕು; ಹಾಗೆ ಮಾಡುವುದರಿಂದ, ಆ ದಿನವೂ, ಆ ಜನ್ಮವೂ ಸಾರ್ಥಕವಾಗುತ್ತವೆ; ಕಥಾಶ್ರವಣಮಾಡದ ದಿನವು ದುರ್ದಿನವೇ ಸರಿ; ವ್ಯರ್ಥಮಾಡಿಕೊಂಡ ದಿನವಾದುದರಿಂದ ಅದನ್ನು ಜ್ಞಾನಿಗಳು ದುರ್ದಿನವೆನ್ನುವರು (೪೭-೪೮).

೧೨ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೧೩

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ-

**ಭೋಗೇನ ಸುಖದುಃಖಾನಾಂ ಜಾಯತೇ ಕರ್ಮಣಾಂ ಕ್ಷಯಃ ।**
**ಭೋಗೋ ಹಿ ಸುಖದುಃಖಾನಾಂ ಜ್ಞಾನಮೇವ ನ ಚಾನ್ಯಥಾ ॥ ೧ ॥**

**ಏವಂ ಚ ಜ್ಞಾನಹೀನಾನಾಂ ಸಾರಾಸಾರಮಜಾನತಾಂ ।**
**ಪಶುಬಾಲವರಾಕಾದಿದೇಹಿನಾಂ ಕರ್ಮಸಂಕ್ಷಯಃ ॥ ೨ ॥**

**ಸುವಸ್ತ್ರಹೇಮಮಾಣಿಕ್ಯಚಾಮರಾದಿಪರಿಷ್ಕರೈಃ ।**
**ದುರ್ವಸ್ತ್ರಕಾಷ್ಠಪಾಷಾಣಧಾರಣಾದಿಭಿರಪ್ಯುತ ॥ ೩ ॥**

**ಜಾಯತೇ ವಾ ನ ವೇತ್ಯತ್ರ ಸಂಶಯೋ ಮಮ ಜಾಯತೇ ।**

ಅರ್ಥ:—ಸುಖದುಃಖಾನಾಂ-ಸುಖದುಃಖಗಳ, ಭೋಗೇನ-ಅನುಭವದಿಂದ, ಕರ್ಮಣಾಂ-ಕರ್ಮಗಳ, ಕ್ಷಯಃ-ನಾಶವು, ಜಾಯತೇ-ಉಂಟಾಗುತ್ತದೆ; ಸುಖದುಃಖಾನಾಂ-ಸುಖದುಃಖಗಳ, ಜ್ಞಾನಂ ಏವ-ಜ್ಞಾನವೇ, ಭೋಗಃ ಹಿ-ಭೋಗವಷ್ಟೆ (ಅನುಭವವೆಂದು ಕರೆಯಲ್ಪಡುವುದಷ್ಟೆ); ಅನ್ಯಥಾ-(ಭೋಗವು) ಬೇರೆ ಪ್ರಕಾರವಾದುದು, ನ ಚ-ಅಲ್ಲವೇ ಅಲ್ಲ; ಏವಂ ಚ-ಹೀಗಿರುವುದರಿಂದ (ಕರ್ಮಭೋಗ



ತಾತ್ಪರ್ಯ :—ಸುಖದುಃಖಗಳ ಭೋಗದಿಂದ, ಜೀವರ ಕರ್ಮಗಳು ನಾಶಹೊಂದುತ್ತವೆಯಷ್ಟೆ; ಸುಖದುಃಖಾದಿ ಜ್ಞಾನವೇ ಅವುಗಳ ಭೋಗವೆನಿಸುತ್ತದೆ—ಬೇರೆಯಲ್ಲ; ಹೀಗಿರುವಾಗ, ಸಾರಾಸಾರಗಳ ವಿವೇಕಜ್ಞಾನಶೂನ್ಯರಾದ, ಪಶುಗಳು, ಬಾಲಕರು, ಕೃಪಾಪಾತ್ರರಾದ ಕೆಲವು ದುರ್ದೈವಿಗಳಿಗೆ, ಸುಖದುಃಖಭೋಗಕಾರಣಗಳೆಂಬ, ಸುವಸ್ತ್ರ (ಪೀತಾಂಬರಾದಿ), ಸುವರ್ಣರತ್ನನಿರ್ಮಿತ ಆಭರಣಗಳು, ಚಾಮರಾದಿ ಪರಿಕರಗಳು ಮತ್ತು ಚೀರವಸ್ತ್ರಧಾರಣ, ಕಲ್ಲುಕಟ್ಟಿಗೆಗಳನ್ನು ಹೊರುವುದು ಮೊದಲಾದವುಗಳಿಂದ, ಅವರ ಪುಣ್ಯಪಾಪರೂಪದ ಕರ್ಮಗಳು ನಷ್ಟವಾಗುವುವೋ ಹೇಗೆ, ಎಂಬಲ್ಲಿ ನನಗೆ ಸಂದೇಹವುಂಟಾಗುತ್ತದೆ[1] (೧-೩).

---

೧. ಸಂದೇಹವು ಬ್ರಹ್ಮದೇವನಿಗೆ ಬಂದುದಲ್ಲ—ಆತನು ಸರ್ವದಾ ನಿಸ್ಸಂಶಯವಾದ ಯಥಾರ್ಥಜ್ಞಾನವುಳ್ಳವನು; ಅನ್ಯರ ಉಪಕಾರಕ್ಕಾಗಿ ಪ್ರಶ್ನಿಸುತ್ತಾನೆಂದು ತಿಳಿಯಬೇಕು; ಪ್ರಶ್ನೆಯು ದಾರ್ಢ್ಯಾರ್ಥಪರವೆಂದು ತಿಳಿದರೂ ಬಾಧಕವಿಲ್ಲ.

ಮತ್ತು ಕರ್ಮಕ್ಷಯಗಳ ಅರ್ಥವು ಹೀಗಿರುವುದರಿಂದ), ಸಾರಾಸಾರಮಜಾನತಾಂ-ಸಾರ ಅಸಾರಗಳೆಂಬ ವಿವೇಕವಿಲ್ಲದ, ಜ್ಞಾನಹೀನಾನಾಂ-ಅಜ್ಞಾನಿಗಳಾದ, ಪಶುಬಾಲವರಾಕಾದಿದೇಹಿನಾಂ-ಪಶು, ಬಾಲ, ಮೊದಲಾದ ದುರ್ದೈವಿಗಳಾದ ಜೀವರಿಗೆ, ಸುವಸ್ತ್ರಹೇಮಮಾಣಿಕ್ಯಚಾಮರಾದಿಪರಿಷ್ಕರೈಃ-ಬೆಲೆಬಾಳುವ (ಒಳ್ಳೆಯ) ವಸ್ತ್ರಗಳು, ಸುವರ್ಣ, ರತ್ನ, ಚಾಮರಾದಿ (ಸುಖಸಾಧನ) ಸಾಮಗ್ರಿಗಳಿಂದಲೂ, ಉತ-ಹಾಗೂ, ದುರ್ವಸ್ತ್ರಕಾಷ್ಠಪಾಷಾಣಧಾರಣಾದಿಭಿಃ ಅಪಿ-(ಕೆಟ್ಟ) ಅಲ್ಪಗಳಾದ ಹರಿದ ಬಟ್ಟೆಗಳನ್ನು ಧರಿಸುವುದು, ಕಟ್ಟಿಗೆ, ಕಲ್ಲುಗಳನ್ನು ಹೊರುವುದು ಮುಂತಾದವುಗಳಿಂದಲೂ, ಕರ್ಮಸಂಕ್ಷಯಃ-(ಅವರ ಪುಣ್ಯಪಾಪರೂಪದ) ಕರ್ಮಗಳ ನಾಶವು, ಜಾಯತೇ-ಉಂಟಾಗುವುದೋ, ವಾ-ಅಥವಾ, ನ ವಾ-ಇಲ್ಲವೋ, ಇತಿ ಅತ್ರ-ಹೀಗೆಂಬ ವಿಷಯದಲ್ಲಿ ಸಂಶಯಃ-ಸಂದೇಹವು, ಮಮ-ನನಗೆ, ಜಾಯತೇ-(ಆ ಪಶು ಮೊದಲಾದವರಿಗೆ ಆ ಸುಖ ದುಃಖಪ್ರಾಪಕಗಳೆಂಬ ವಸ್ತುಗಳ ವಿವೇಕಜ್ಞಾನವೇ ಇರುವುದಿಲ್ಲವಾದ್ದರಿಂದ), ಉಂಟಾಗುತ್ತದೆ (ಈ ಸಂಶಯವನ್ನು ಪರಿಹರಿಸು, ತಂದೇ!)

**ಶ್ರೀ ಹಯಗ್ರೀವ ಉವಾಚ—**

ಶ್ರೀಹಯಗ್ರೀವದೇವನು ಪುರುಷನಾಮಕಪ್ರಶ್ನವನ್ನು ಕುರಿತು ಹೇಳುತ್ತಾನೆ:—

**ಸುಖಸ್ಯ ವಾಥ ದುಃಖಸ್ಯ ಕಾರಣಂ ಯಸ್ಯ ಯದ್ಭವೇತ್ ॥ ೪ ॥**

**ವಸ್ತ್ರಾದಿ ತತ್ತು ಜೀವಾನಾಂ ಭೋಗದಂ ಕರ್ಮಣಃ ಕ್ಷಯಂ ।**
**ತೇನ ಸಂಜಾಯತೇ ನೂನಂ ಸರ್ವಥಾ ನಾತ್ರ ಸಂಶಯಃ ॥ ೫ ॥**

ಯತ್-ಯಾವ, ವಸ್ತ್ರಾದಿ-ವಸ್ತ್ರಾದಿ ವಸ್ತುವು, ಸುಖಸ್ಯ-ಸುಖಕ್ಕಾಗಲಿ, ಅಥವಾ-ಅಥವಾ, ದುಃಖಸ್ಯ-ದುಃಖಕ್ಕಾಗಲಿ, ಕಾರಣಂ-ಕಾರಣವಾದುದು, ಯಸ್ಯ-ಯಾರಿಗಾದರೂ, ಭವೇತ್-ಆದರೆ(ಆಗುವುದಾದರೆ), ತತ್-ಅದು (ಆ ವಸ್ತುವು),

---

ಶ್ರೀ ಹಯಗ್ರೀವನು ಹೇಳುತ್ತಾನೆ:—ಯಾವ ವಸ್ತ್ರಾಭರಣಾದಿಗಳಿಂದ ಯಾರಿಗೆ ಸುಖದುಃಖರೂಪದ ಭೋಗವು ದೊರೆಯುತ್ತದೆಯೋ, ಅವರ ಪುಣ್ಯ ಪಾಪಕರ್ಮಗಳ ಕ್ಷಯವಾಗುತ್ತದೆಂಬಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಆ ವಸ್ತುಗಳನ್ನು ಧರಿಸುವ, ಅಜ್ಞಾನಿಗಳಾದ ಪಶು, ಶಿಶು ಮೊದಲಾದವರಿಗೇ (ಆ ಜೀವರಿಗೇ) ಅವರ ಕರ್ಮದ ನಾಶವಾಗುತ್ತದೆಂಬ ನಿಯಮವಿಲ್ಲ(೪-೫).

ಬೆಳ್ಳಿ, ಭಂಗಾರದ ಒಡವೆಗಳನ್ನು ಧರಿಸುವುದರಿಂದ ದೊರೆಯುವ ಸುಖವಿಶೇಷವನ್ನು ತಿಳಿಯದ ಬಾಲಕರೇ ಮೊದಲಾದ ಕೆಲವರಲ್ಲಿ ಪೂರ್ವಕರ್ಮದ ನಾಶವು ತಾರತಮ್ಯಾನುಗುಣವಾಗಿ ಕಂಡುಬರುತ್ತದೆ; ಆ ಬಾಲಕರನ್ನು ನೋಡಿ

ಜೀವಾನಾಂ-ಜೀವರಿಗೆ, ಭೋಗದಂ ತು-ಭೋಗಪ್ರದವಾದಂತೆಯೇ, ತೇನ-ಅದರಿಂದ, ಕರ್ಮಣಃ-ಕರ್ಮದ, ಕ್ಷಯಂ-ನಾಶವು, ನೂನಂ-ನಿಶ್ಚಯವಾಗಿಯೂ, ಸಂಜಾಯತೇ-ಉಂಟಾಗುತ್ತದೆ; ಸರ್ವಥಾ-ಯಾವ ಪ್ರಕಾರದಿಂದಲೂ, ಅತ್ರ-ಈ ವಿಷಯದಲ್ಲಿ(ಕರ್ಮಕ್ಷಯಕ್ಕೆ ಕಾರಣವಾಗುತ್ತೆಂಬಲ್ಲಿ), ನ ಸಂಶಯಃ-ಸಂಶಯವಿಲ್ಲ.

**ಬಾಲಾದೀನಾಂ ತು ಕೇಷಾಂಚಿತ್ ಹೇಮರೂಪ್ಯಾದ್ಯಲಂಕೃತಿಃ ।**
**ದೃಶ್ಯತೇ ತಾರತಮ್ಯೇನ ತದ್ವಿಶೇಷಮಜಾನತಾಂ ॥ ೬ ॥**

ಹೇಮರೂಪ್ಯಾದ್ಯಲಂಕೃತಿಃ-ಭಂಗಾರ ಬೆಳ್ಳಿ ಮೊದಲಾದವುಗಳ ಆಭರಣಗಳು, ತದ್ವಿಶೇಷಂ-ಅವುಗಳಿಂದ (ತಮಗೆ) ಪ್ರಾಪ್ತವಾದ ವಿಶೇಷವನ್ನು ಅಜಾನತಾಂ-ತಿಳಿಯಲಾರದವರಾದ, ಕೇಷಾಂಚಿತ್-ಕೆಲವು, ಬಾಲಾದೀನಾಂ-ಬಾಲಕರೇ ಮೊದಲಾದವರಿಗೆ, (ತತ್-ಕರ್ಮದ ನಾಶವೆಂಬುದು), ತಾರತಮ್ಯೇನ-(ಅವರ ಜ್ಞಾನಾಜ್ಞಾನಗಳ ಹಾಗೂ ಸಂದರ್ಭವಿಶೇಷಗಳ) ತಾರತಮ್ಯವನ್ನು ಅನುಸರಿಸಿ, ದೃಶ್ಯತೇ-ಕಂಡುಬರುತ್ತದೆ.

**ನ ಜ್ಞಾನಂ ಜಾಯತೇ ತೇಷಾಂ ದ್ರಷ್ಟೄಣಾಂ ಪ್ರೇಮತೋಽಥವಾ ।**
**ರೋಷತೋ ವಾ ಪಿತೃಭ್ರಾತೃಮಾತ್ರಾದೀನಾಂ ದ್ವಿಷಾಂ ತಥಾ ॥ ೭ ॥**

**ತೇಷಾಮೇವ ಹಿ ಭೋಗಃ ಸ ವಿಜ್ಞೇಯಃ ಸುವಿಚಕ್ಷಣೈಃ ।**

ತೇಷಾಂ-ಅವರಿಗೆ (ಆ ಬಾಲಾದಿ ಕೆಲವರಿಗೆ), ಜ್ಞಾನಂ-(ಆ ಒಡವೆಗಳ ಸಂಬಂಧವಾದ) ಜ್ಞಾನವು, ನ ಜಾಯತೇ-ಉಂಟಾಗುವುದಿಲ್ಲ (ಅವರಿಗೆ ಕರ್ಮಕ್ಷಯವಿಲ್ಲ); ಪ್ರೇಮತಃ-ಪ್ರೀತಿಯಿಂದ, ದ್ರಷ್ಟೄಣಾಂ-(ಆ ಬಾಲಾದಿಗಳನ್ನು) ನೋಡುವ, ಪಿತೃಭ್ರಾತೃಮಾತ್ರಾದೀನಾಂ-ತಂದೆ, ಸಹೋದರ, ತಾಯಿ ಮೊದಲಾದ

---

ಆನಂದಿಸುವ ಮಾತಾಪಿತೃಗಳೇ ಮೊದಲಾದವರಿಗೆ, ಅವರ ಕರ್ಮದ (ಪುಣ್ಯದ) ನಾಶ (ಕ್ಷಯ)ವಾಗುತ್ತದೆಂಬುದು ಸ್ಪಷ್ಟವೇ (೬). ವಸ್ತ್ರಾಭರಣಗಳಿಂದ ಅಲಂಕೃತರಾದ ಬಾಲಕರು, ಗಜ ಅಶ್ವಾದಿ ಪಶು ಮೊದಲಾದವುಗಳನ್ನು ಪ್ರೇಮದಿಂದ ನೋಡುವ ಅವುಗಳ ತಂದೆ, ತಾಯಿ ಮೊದಲಾದ ಬಂಧುಜನರಿಗೆ (ಅಥವಾ ಪಶ್ವಾದಿಗಳ ಯಜಮಾನರಿಗೆ), ಅಥವಾ ಅವರನ್ನು(ಬಾಲಾದಿಗಳನ್ನು) ದ್ವೇಷಿಸುವ ಅನ್ಯರಿಗೆ ಮಾತ್ರ, ಅಲಂಕೃತರಾದ ಬಾಲಕಾದಿಗಳ ದರ್ಶನವು ಭೋಗವೆನಿಸುತ್ತದೆ; ಪ್ರೇಮಿಗಳಿಗೆ ತಮ್ಮ ಪುಣ್ಯದ ವ್ಯಯವೂ ದ್ವೇಷಿಗಳಿಗೆ ಪಾಪದ ನಾಶವೂ, ಏವಂಚ, ಅವರ ಕರ್ಮಕ್ಷಯವಾಗುತ್ತದೆಂದು ತಿಳಿಯಬೇಕು; ವಿವೇಕಿಗಳು, ವಸ್ತ್ರಾಲಂಕಾರಾದಿಗಳ ಭೋಗದಿಂದ ಆಗುವ ಕರ್ಮಕ್ಷಯವನ್ನು ಹೀಗೆ ವಿಮರ್ಶಿಸಿ ನಿರ್ಧರಿಸಿಕೊಳ್ಳಬೇಕು (೭). ಇನ್ನೇನೆಂದರೆ, ಕೆಲವು ಬಾಲಕಾದಿಗಳಿಗೆ ವಸ್ತ್ರಾಲಂಕಾರಾದಿಗಳ ಭೋಗವು,

ವರಿಗೆ, ಅಥವಾ, ರೋಷತಃ-ಕ್ರೋಧದಿಂದ (ಸಿಟ್ಟಿನಿಂದ), ದ್ರಷ್ಟೄಣಾಂ-ನೋಡುವ, ತೇಷಾಂ-ಅವರ, ದ್ವಿಷಾಂ ಏವ-ದ್ವೇಷಿಗಳಿಗೆ (ಆ ಬಾಲಾದಿಗಳ ಅಥವಾ ಅವರ ತಂದೆತಾಯಿಗಳ ದ್ವೇಷಿಗಳಿಗೆ) ಮಾತ್ರವೇ, ಸಃ ಭೋಗ-ಆ ಭೋಗವು(ವಸ್ತ್ರಒಡವೆಗಳ ಭೋಗವೆಂದು), ಸುವಿಚಕ್ಷಣೈಃ-ವಿವೇಕಿಗಳಿಂದ, ವಿಜ್ಞೇಯಃ-ತಿಳಿಯಲ್ಪಡತಕ್ಕದ್ದು.

**ದೃಶ್ಯತೇ ಭೋಗವೈಚಿತ್ರ್ಯಂ ಬಾಲಾದಿಷ್ವಪಿ ಕೇಷುಚಿತ್ ॥ ೮ ॥**

**ತತ್ರಾಪಿ ಕಾರಣಂ ಬ್ರಹ್ಮನ್ ಬ್ರುವೇ ತಚ್ಛ್ರದ್ಧಯಾ ಶೃಣು ।**
**ದಂಭಾದಿನಾ ಬಹಿಶ್ಚಿತ್ತಂ ಕೃತಂ ಕರ್ಮ ಶುಭಾಶುಭಂ ॥ ೯ ॥**

**ತತ್ಫಲಂ ಜಾಯತೇ ತಾದೃಕ್ ಜೀವಾನಾಂ ಬಾಹ್ಯಮೇವ ಹಿ ।**
**ಯಥಾ ಹಯಗಜಾದೀನಾಂ ನೃಪೈರ್ಹೇಮಾದಿಭೂಷಣೈಃ ॥ ೧೦ ॥**

**ಅಲಂಕೃತಾನಾಂ ಜಾಯೇತ ದರ್ಶನಸ್ಪರ್ಶನಾದಿನಾ ।**
**ನೃಪಾದೀನಾಂ ತಥಾ ಸರ್ವಮೂಹನೀಯಂ ವಿಪಶ್ಚಿತಾ ॥ ೧೧ ॥**

ಕೇಷುಚಿತ್-ಕೆಲವು, ಬಾಲಾದಿಷು ಅಪಿ-ಬಾಲಕರೇ ಮೊದಲಾದವರಲ್ಲಿ ಸಹ, ಭೋಗವೈಚಿತ್ರ್ಯಂ-ವಸ್ತ್ರಾಭರಣಾದಿಗಳ ವಿವಿಧ ಪ್ರಕಾರದ ಅನುಭವವು, ದೃಶ್ಯತೇ-ಕಂಡುಬರುತ್ತದೆ; ಬ್ರಹ್ಮನ್-ಹೇ ಬ್ರಹ್ಮ!, ತತ್ರಾಪಿ-ಆ ವಿಷಯದಲ್ಲಿ ಸಹ, ಕಾರಣಂ-ಕಾರಣವನ್ನು (ವಿವಿಧಭೋಗಜ್ಞಾನಕ್ಕೆ ಕಾರಣವನ್ನು), ಬ್ರುವೇ-ಹೇಳುತ್ತೇನೆ; ತತ್-ಅದನ್ನು, ಶ್ರದ್ಧಯಾ-ಆದರದಿಂದ (ವಿಶ್ವಾಸಮಾಡಿ-ನಂಬಿಕೆಯನ್ನಿಟ್ಟು), ಶೃಣು-ಕೇಳು; ದಂಭಾದಿನಾ-ಡಂಭಾದಿಗಳಿಂದ (ತನಗೆ ಆಧಿಕ್ಯವನ್ನು ದೊರಕಿಸಿಕೊಳ್ಳುವ ಸ್ವಾರ್ಥದಿಂದ), ಬಹಿಶ್ಚಿತ್ತಂ-(ಮಾಡುವ ಕರ್ಮದಲ್ಲಿ) ಮನಸ್ಸನ್ನಿಡದೇ (ಮನಸ್ಸಿಲ್ಲದೇ,

---

ಕೆಲಮಟ್ಟಿಗೆ, ಅನ್ಯರ ಲಾಲನಾದಿ ವಿವಿಧ ಪ್ರಕಾರದಿಂದ ಆಗುವುದೂ ಉಂಟು; ಅದಕ್ಕೆ ಕಾರಣವೇನೆಂದರೆ—ಕೆಲವು ಜೀವರು, ತಾವು ಮಾಡುವ ಶುಭಾಶುಭ ಕರ್ಮಗಳನ್ನು ಮನಃಪೂರ್ವಕವಾಗಿ ಅಲ್ಲದೇ ಬಾಹ್ಯಚಿತ್ತರಾಗಿ ತೋರಿಕೆಗಾಗಿ ಮಾಡುತ್ತಾರೆ; ಅಂಥ ಕರ್ಮಗಳ ಫಲವು ಸಹ ಬಾಹ್ಯವಾಗಿಯೇ (ಪೂರ್ಣವಾಗಿ ಅನುಭವಕ್ಕೆ ಬರದೇ, ಹೊರಹೊರಗೆ, ಅಲ್ಪವಾಗಿ (Superficial) ತೋರುವುದೂ ಉಂಟು; ಸುವರ್ಣಾದಿ ಒಡವೆಗಳಿಂದಲೂ (ಪೀತಾಂಬರಾದಿ ವಸ್ತ್ರಗಳಿಂದಲೂ) ಅಲಂಕರಿಸಲ್ಪಟ್ಟ, ಅಶ್ವ ಗಜ ಮೊದಲಾದ ಪಶುಜಾತಿಯ ಜೀವರಿಗೆ, ರಾಜರು ತಮ್ಮನ್ನು ನೋಡಿ, ಬೆನ್ನು ಚಪ್ಪರಿಸಿ, ಆರೋಹಣ ಮಾಡಿದರೆ, ಒಂದು ಮಟ್ಟದ ಸುಖವಿಶೇಷವಾಗುತ್ತದೆ; ಆ ಅನುಭವವು ನೇರವಾಗಿ ವಸ್ತ್ರಾಭರಣಾದಿಗಳಿಂದ ಜನ್ಯವಲ್ಲವಾದರೂ (ಅವುಗಳ ಜ್ಞಾನಮಾತ್ರದಿಂದ ಹುಟ್ಟಿದುದಲ್ಲವಾದರೂ) ತನ್ನಿಮಿತ್ತವಾದ ಸುಖವಿಶೇಷವೇ ಅಲ್ಲವೇ? (ಅವುಗಳಿಂದಾದ

ತೋರಿಕೆಗಾಗಿ ಅಥವಾ ಉದಾಸೀನತೆಯಿಂದ), ಕೃತಂ-ಮಾಡಲ್ಪಟ್ಟ, ಶುಭಾಶುಭಂ-ಪುಣ್ಯಪಾಪರೂಪದ, ಕರ್ಮ-ಕರ್ಮವು (ಇದ್ದರೆ), ತತ್ಫಲಂ-ಅದರ ಫಲವು, ಜೀವಾನಾಂ-(ಆ ಕರ್ಮಕರ್ತೃಗಳಾದ) ಜೀವರಿಗೆ, ತಾದೃಕ್-ಅದರಂತೆಯೇ (ಕರ್ಮದಂತೆಯೇ), ಬಾಹ್ಯಂ ಏವ-ಹೊರಗೆ ಹೊರಗೇ(ಪೂರ್ಣವಾಗಿ ಅನುಭವಕ್ಕೆ ಬರದಂತೆ), ಜಾಯತೇ-ಉಂಟಾಗುತ್ತದೆ; ಯಥಾ-ಹೇಗೆ(ಬಾಹ್ಯಭೋಗಪ್ರಕಾರವು ಹೇಗೆಂದರೆ), ನೃಪೈಃ-ರಾಜರಿಂದ, ಹೇಮಾದಿಭೂಷಣೈಃ-ಭಂಗಾರದ ಸರ ಮೊದಲಾದ ಒಡವೆಗಳಿಂದ, ಅಲಂಕೃತಾನಾಂ-ಅಲಂಕರಿಸಲ್ಪಟ್ಟ ಹಯಗಜಾದೀನಾಂ-ಕುದುರೆ ಆನೆ ಮೊದಲಾದ ಪಶುಗಳಿಗೆ, ನೃಪಾದೀನಾಂ-ರಾಜಾದಿಗಳ, ದರ್ಶನಸ್ಪರ್ಶನಾದಿನಾ-ನೋಡುವಿಕೆ ಮತ್ತು ಸ್ಪರ್ಶಿಸಲ್ಪಡುವಿಕೆ, ಮುಂತಾದ್ದರಿಂದ (ರಾಜಾದಿಗಳು ಅಲಂಕೃತ ಹಯಗಜಾದಿಗಳನ್ನು ಸಮೀಪಕ್ಕೆ ಬಂದು ನೋಡಿ, ಅವುಗಳನ್ನು ಮುಟ್ಟಿ ಮೈಚಪ್ಪರಿಸಿದರೆ, ಜಾಯತೇ-(ಸುಖವಿಶೇಷದ ಅನುಭವವು) ಉಂಟಾಗುವುದೋ, ತಥಾ-ಹಾಗೆ(ಬಾಲಾದಿಗಳಿಗೂ ಕಿಂಚಿತ್ ಭೋಗದಿಂದ ಅಲ್ಪಸುಖವೂ, ಅನ್ಯರ ಲಾಲನೆಗಳಿಂದ ಆಗುವುದುಂಟು); ಸರ್ವಂ-ಎಲ್ಲವೂ (ಭೋಗಕ್ಕೆ ಸಂಬಂಧಿಸಿದ ವಿಷಯವೂ), ವಿಪಶ್ಚಿತಾ-ವಿವೇಕಿಯಿಂದ, ಊಹನೀಯಂ-ಊಹಿಸಲ್ಪಡಬೇಕು.

**ತಸ್ಮಾತ್ ಯಜ್ಜ್ಞಾನಪೂರ್ವಂ ತು ತಥಾ ಭಕ್ತ್ಯಾ ಸಮನ್ವಿತಂ ।**
**ಸಾಂಗಂ ವಿಷ್ಣ್ವರ್ಪಿತಂ ಕರ್ಮ ಸೂತೇ ಸಾಧುಫಲಾನಿ ತತ್ ॥ ೧೨ ॥**

ತಸ್ಮಾತ್-ಆದ್ದರಿಂದ (ಕರ್ಮಫಲಭೋಗಪ್ರಕಾರವು ಹೀಗಿರುವುದರಿಂದ), ಯತ್‌ಕರ್ಮ-ಯಾವ ಕರ್ಮವು, ಜ್ಞಾನಪೂರ್ವಂ-ಜ್ಞಾನಪೂರ್ವಕವಾದುದೋ (ಶ್ರೀಹರಿಯೇ ತನ್ನಲ್ಲಿದ್ದು ಮಾಡಿ, ಅಸ್ವತಂತ್ರನಾದ ನನ್ನಿಂದ ಮಾಡಿಸುತ್ತಾನೆಂಬ ಅನುಸಂಧಾನದಿಂದಲೂ), ತಥಾ-ಹಾಗೂ, ಭಕ್ತ್ಯಾ-ಭಕ್ತಿಯಿಂದ, ಸಮನ್ವಿತಂ-ಕೂಡಿದುದೂ, ಸಾಂಗಂ-(ವಿಧ್ಯುಕ್ತ) ಅಂಗಗಳಿಂದ ಸಹಿತವಾಗಿ ಆಚರಿಸಲ್ಪಟ್ಟದ್ದೂ ವಿಷ್ಣ್ವರ್ಪಿತಂ-ಶ್ರೀವಿಷ್ಣುವಿನಲ್ಲಿ ಅರ್ಪಿಸಲ್ಪಟ್ಟದ್ದೂ ಆದುದೋ, ತತ್-ಅದು (ಆ

---

ಬಾಹ್ಯಫಲವೇ ಸರಿ); ಸುಖದುಃಖಭೋಗವಿಷಯದಲ್ಲಿ ಹೀಗೆಯೇ ಬಾಲಕರೇ ಮೊದಲಾದವರ ವಿಷಯದಲ್ಲಿ ಸುಖಾದಿಗಳ ಭೋಗವೈವಿಧ್ಯವನ್ನೂ, ಅದಕ್ಕೆ ಕಾರಣವಾದ ಪುಣ್ಯಪಾಪಗಳ ಕ್ಷಯವನ್ನೂ, ವಿವೇಕಿಯು ಊಹಿಸಿ ತಿಳಿಯಬೇಕು (೮-೧೧). ಕರ್ಮಫಲಭೋಗವೂ ತನ್ನಿಮಿತ್ತಕ ಕರ್ಮಕ್ಷಯವೂ ಈ ಪ್ರಕಾರವಾಗಿರುವುದರಿಂದ, ಜ್ಞಾನಪೂರ್ವಕವಾಗಿಯೂ, ಭಕ್ತಿಭಾವದಿಂದಲೂ, ಸಾಂಗವಾಗಿ ಆಚರಿಸಲ್ಪಟ್ಟು, ಶ್ರೀವಿಷ್ಣುವಿನಲ್ಲಿ ಅರ್ಪಿತವಾದುದೂ ಆದ ಕರ್ಮವೇ, ಸುಖಪ್ರದಗಳಾದ ಒಳ್ಳೆಯ ಫಲವನ್ನು ಉತ್ಪಾದಿಸುತ್ತದೆಂದು ತಿಳಿಯಬೇಕು (೧೨). ಯಾವ ಕರ್ಮವು ಶ್ರದ್ಧೆಯಿಲ್ಲದೆಯೂ, ಮನಃಪೂರ್ವಕವಾಗಿ ಅಲ್ಲದೆಯೂ, ಆಚರಿಸಲ್ಪಡುತ್ತದೆಯೋ,

ಕರ್ಮವು), ಸಾಧುಫಲಾನಿ-ಒಳ್ಳೆ ಫಲಗಳನ್ನು (ಸುಖಪ್ರದವಾದ ಫಲಗಳನ್ನು) ಸೂತೇ-ಹುಟ್ಟಿಸುತ್ತದೆ.

ಅಶ್ರದ್ಧಯಾ ತು ಯತ್ಕರ್ಮ ಬಾಹ್ಯಚಿತ್ತೇನ ದೇಹಿನಾಂ ।
ನ ಸಮ್ಯಕ್ ಫಲದಂ ತತ್ಸ್ಯಾತ್ಕೃತಂ ಪುಣ್ಯಮಪಿ ಸ್ಮೃ ಹ ॥ ೧೩ ॥

ಅಶ್ರದ್ಧಯಾ-ಶ್ರದ್ಧೆಯಿಲ್ಲದೇ, ಬಾಹ್ಯಚಿತ್ತೇನ-ಮನಃಪೂರ್ವಕವಾಗಿ ಅಲ್ಲದೇ, ಕೃತಂ-ಮಾಡಲ್ಪಟ್ಟ ಯತ್‌ಕರ್ಮ-ಯಾವ ಕರ್ಮವೋ, ತತ್-ಅದು, ಪುಣ್ಯಂ ಅಪಿ-ಪುಣ್ಯಕರ್ಮವೇ ಆಗಿದ್ದರೂ, ದೇಹಿನಾಂ-ಜೀವರಿಗೆ, ಸಮ್ಯಕ್-ಪೂರ್ಣವಾದ, ಫಲದಂ-ಫಲವನ್ನು ಕೊಡತಕ್ಕದ್ದು ನ ಸ್ಯಾತ್-ಆಗುವುದಿಲ್ಲ.

ಉದ್ವಿಜೇತ್ಸರ್ವಥಾ ಸಾಧುರ್ಮನಸಾ ಪಾಪಕರ್ಮಣಃ ।
ಪುಣ್ಯಕರ್ಮಣಿ ಸಕ್ತಃ ಸ್ಯಾದ್ವಿಪರೀತೋ ವಿಪರ್ಯಯೇ ॥ ೧೪ ॥

ಸಾಧುಃ-ಸಜ್ಜನನು (ಸುಜೀವಿಯು), ಪಾಪಕರ್ಮಣಃ-ಪಾಪಕರ್ಮದಿಂದ, ಮನಸಾ-ಮನಸ್ಸಿನಿಂದ ಸಹ (ಅದರ ವಿಷಯಕ ಆಲೋಚನೆಯಿಂದ ಸಹ), ಉದ್ವಿಜೇತ್-ಭಯಪಡಬೇಕು; ಸರ್ವಥಾ-ಸರ್ವಪ್ರಕಾರದಿಂದ (ಮನಸ್ಸಿನಿಂದ ಸಹ), ಪುಣ್ಯಕರ್ಮಣಿ-ಪುಣ್ಯ ಕರ್ಮದಲ್ಲಿ ಸಕ್ತಃ-ಆಸಕ್ತನಾದವನು (ತೊಡಗಿದವನು), ಸ್ಯಾತ್-ಆಗಬೇಕು; ವಿಪರ್ಯಯೇ-ತದ್ವಿರುದ್ಧವಾದ (ಪಾಪ) ಕರ್ಮದಲ್ಲಿ ವಿಪರೀತಃ-ಆಸಕ್ತನಾಗಬಾರದು(ತದ್ವಿರುದ್ಧವಾಗಿ ನಡೆದುಕೊಳ್ಳಬೇಕು).

ದೇವತಾಗುರುವಿಪ್ರಾಣಾಮವಜ್ಞಾನಾಚ್ಚ ಗರ್ವತಃ ।
ಪುಣ್ಯಕ್ಷಯೋ ಭವೇತ್ ಪುಂಸಾಂ ಪಾಪವೃದ್ಧಿಶ್ಚ ಜಾಯತೇ ॥ ೧೫ ॥
ಅಸ್ಯೈವ ವೈಪರೀತ್ಯೇನ ಫಲೇ ಸ್ಯಾತ್ ವಿಪರೀತತಾ ॥ ೧೬ ॥

ಪುಂಸಾಂ-ಜನರಿಗೆ, ಗರ್ವತಃ-ಗರ್ವದಿಂದ, ದೇವತಾಗುರುವಿಪ್ರಾಣಾಂ-ದೇವ,

---

ಅದು, ಪುಣ್ಯಕರ್ಮವೇ ಆದರೂ, ಜೀವರಿಗೆ ಪೂರ್ಣವಾದ ತನ್ನ ಫಲವನ್ನು (ಸುಖಾದಿ ಭೋಗವನ್ನು) ಕೊಡುವುದಿಲ್ಲ (೧೩). ಸಜ್ಜನರು ಪಾಪಕರ್ಮದಿಂದ ಭಯಪಡಬೇಕು; ಮನಸ್ಸಿನಿಂದ ಸಹ ಪಾಪಕರ್ಮವನ್ನು ಚಿಂತಿಸುವುದಕ್ಕೂ ಹೆದರಬೇಕು; ಪುಣ್ಯ ಕರ್ಮಗಳನ್ನಾಚರಿಸುವುದರಲ್ಲಿ ಆಸಕ್ತನಾಗಬೇಕು-ಹಾಗೆಯೇ ಪಾಪಕರ್ಮಗಳನ್ನು ಅವುಗಳ ಚಿಂತೆಯನ್ನೂ ಬಿಡುವುದರಲ್ಲಿ ಯತ್ನಶೀಲನಾಗಿರಬೇಕು—ಮಾಡುವುದರಲ್ಲಿ ಆದರವಿರಕೂಡದು (೧೪). ಗರ್ವದಿಂದ ದೇವ, ಗುರು, ಬ್ರಾಹ್ಮಣರನ್ನು ಅಪಮಾನ ಮಾಡುವುದರಿಂದ (ಕಡೆಗಣಿಸುವುದರಿಂದ), ಪುಣ್ಯನಾಶವೂ ಪಾಪವೃದ್ಧಿಯೂ ಆಗುತ್ತದೆ; ಇದರ ವಿರುದ್ಧವಾಗಿ ಅವರನ್ನು ಯಥಾಯೋಗ್ಯವಾಗಿ ಸನ್ಮಾನಿಸುವುದರಿಂದ, ಪಾಪಕ್ಷಯವೂ ಪುಣ್ಯವೃದ್ಧಿಯೂ ಲಭಿಸುತ್ತದೆ (೧೫-೧೬). ಹೀಗೆ ಸಕಲ ಶಾಸ್ತ್ರಗಳ

ಗುರು, ಬ್ರಾಹ್ಮಣರ, ಅವಜ್ಞಾನಾತ್-ಅಪಮಾನದಿಂದ, ಪುಣ್ಯಕ್ಷಯಃ-ಪುಣ್ಯನಾಶವು, ಭವೇತ್-ಸಂಭವಿಸುತ್ತದೆ; ಚ-ಮತ್ತು ಪಾಪವೃದ್ಧಿಃ-ಪಾಪದ ಅಭಿವೃದ್ಧಿಯೂ, ಜಾಯತೇ ಚ-ತಪ್ಪದೇ ಉಂಟಾಗುತ್ತದೆ; ಅಸ್ಯ ಏವ-ಇದರ, ವೈಪರೀತ್ಯೇನ- ವಿಪರೀತದಿಂದ (ದೇವ ಗುರು ವಿಪ್ರರನ್ನು ಸನ್ಮಾನಿಸುವುದರಿಂದ ಪಾಪಕ್ಷಯವೂ ಪುಣ್ಯವೃದ್ಧಿಯೂ), ಫಲೇ-(ಅದರಿಂದ ದೊರೆಯುವ) ಫಲದಲ್ಲಿ ವಿಪರೀತತಾ- ವಿಪರೀತವೇ (ವಿರುದ್ಧ ಫಲವೇ), ಸ್ಯಾತ್-ಉಂಟಾಗುತ್ತದೆ.

**ಇತಿ ಸಂಕ್ಷೇಪತಃ ಸರ್ವಂ ತವಾಗ್ರೇ ಕಥಿತಂ ಮಯಾ ।**

**ರಹಸ್ಯಂ ಸರ್ವಶಾಸ್ತ್ರಾಣಾಂ ಕಿಮನ್ಯತ್ ಶ್ರೋತುಮಿಚ್ಛಸಿ ॥ ೧೭ ॥**

ಇತಿ-ಹೀಗೆ, ತವ ಅಗ್ರೇ-ನಿನ್ನ ಮುಂದೆ, ಮಯಾ-ನನ್ನಿಂದ, ಸರ್ವ ಶಾಸ್ತ್ರಾಣಾಂ-ಸಕಲಶಾಸ್ತ್ರಗಳ, ಸರ್ವಂ ರಹಸ್ಯಂ-ಎಲ್ಲ ರಹಸ್ಯವೂ (ಗೋಪ್ಯ ಪ್ರಮೇಯಗಳೂ) ಸಂಕ್ಷೇಪತಃ-ಸಂಕ್ಷೇಪವಾಗಿ, ಕಥಿತಂ-ಹೇಳಲ್ಪಟ್ಟಿತು; ಅನ್ಯತ್ ಕಿಂ-ಬೇರೆ ಏನನ್ನು, ಶ್ರೋತುಂ-ಕೇಳಲಿಕ್ಕೆ, ಇಚ್ಛಸಿ-ಅಪೇಕ್ಷಿಸುವಿ?

ಭೋಗವಿವೇಕವೆಂಬ ೧೩ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೧೪

ಶ್ರೀವೇದವ್ಯಾಸಾಯ ನಮಃ

**ಬ್ರಹ್ಮೋವಾಚ–**

**ಇಮೇ ನಾನಾವಿಧಾ ಜೀವಾಃ ನಾನಾಕಾರಾಸ್ತು ಸರ್ವಶಃ ।**

**ಕಥಂ ಮೋಕ್ಷಂ ಪ್ರಾಪ್ನುವಂತಿ ನಿರ್ಬದ್ಧಾನಾದಿಕರ್ಮಣಾ ॥ ೧ ॥**

**ಅರ್ಥ:**—ಅನಾದಿಕರ್ಮಣಾ-ಅನಾದಿಕರ್ಮದಿಂದ, ನಿರ್ಬದ್ಧಾಃ-ಬದ್ಧರಾದ (ಬಲವಾಗಿ ಬಂಧಿಸಲ್ಪಟ್ಟಿರುವ), ಇಮೇ-ಈ, ನಾನಾಕಾರಾಃ-ವಿವಿಧವಾದ ಆಕಾರಗಳುಳ್ಳ, ನಾನಾವಿಧಾಃ-ಬಹುವಿಧರಾದ, ಜೀವಾಃ-ಜೀವರು, ಕಥಂ-ಹೇಗೆ ಸರ್ವಶಃ-ಎಲ್ಲರೂ, ಮೋಕ್ಷಂ-ಮೋಕ್ಷವನ್ನು ಪ್ರಾಪ್ನುವಂತಿ-ಹೊಂದುತ್ತಾರೆ?

---

ರಹಸ್ಯವನ್ನು ಸಂಕ್ಷೇಪವಾಗಿ, ಸರ್ವವನ್ನೂ ನಿನಗೆ ಹೇಳಿದ್ದೇನೆ—ಬೇರೇನನ್ನು ಕೇಳಲಿಚ್ಛಿಸುವಿ? ಹೇ ಬ್ರಹ್ಮ! (೧೭).

೧೩ನೇ ಅಧ್ಯಾಯವು ಮುಗಿದುದು.

ಅಧ್ಯಾಯ ೧೪

**ತಾತ್ಪರ್ಯ:**—ಬ್ರಹ್ಮದೇವನು ಕೇಳುತ್ತಾನೆ:—ಅನಾದಿಕರ್ಮದಿಂದ ಬಂಧಿತರಾಗಿರುವ, ನಾನಾ ಆಕಾರವುಳ್ಳ, ವಿವಿಧ ಜೀವರೆಲ್ಲರೂ, ಹೇಗೆ ಮೋಕ್ಷವನ್ನು

ಹಯಗ್ರೀವ ಉವಾಚ—

ಅನಾದಿಕರ್ಮಣಾ ಬದ್ಧಾ ವಿಚಿತ್ರೇಣಾಮುನಾಖಿಲಾಃ ।
ಜೀವಾ ಭ್ರಮಂತಿ ಸಂಸಾರೇ ಯಾವತ್ಕರ್ಮಕ್ಷಯೋ ಭವೇತ್ ॥ ೨ ॥

ಅಮುನಾ-ಈ, ವಿಚಿತ್ರೇಣ-ವಿವಿಧವಾದ, ಅನಾದಿಕರ್ಮಣಾ-ಅನಾದಿ ಕರ್ಮದಿಂದ, ಬದ್ಧಾಃ-ಬದ್ಧರಾದ, ಅಖಿಲಾಃ-ಸಮಸ್ತರಾದ, ಜೀವಾಃ-ಜೀವರು, ಯಾವತ್-ಎಲ್ಲಿಯವರೆಗೆ, ಕರ್ಮಕ್ಷಯಃ-ಕರ್ಮದ ನಾಶವು, ಭವೇತ್-ಆಗುವುದೋ, (ತಾವತ್-ಅಲ್ಲಿಯವರೆಗೆ), ಸಂಸಾರೇ-ಸಂಸಾರದಲ್ಲಿ ಭ್ರಮಂತಿ-ಸುತ್ತುತ್ತಾರೆ.

ಭೋಗಾದಿನ್ನೈವ ನೋ ಕರ್ತುಂ ಶಕ್ಯೋ ವೈ ಕರ್ಮಣಾಂ ಕ್ಷಯಃ ।
ಯತ ಏಕ ಶರೀರಸ್ಥಃ ಶರೀರಾಣಾಂ ಸಹಸ್ರಶಃ ॥ ೩ ॥

ಲಕ್ಷಶಃ ಕೋಟಿಶಶ್ಚಾಪಿ ಕಾರಣಾನಿ ಕರೋತ್ಯಯಂ ।
ಯೇ ಹಿ ಜೀವಾಃ ಶರೀರಸ್ಥಾ ಯೋಗ್ಯಾ ವಿಧಿನಿಷೇಧಯೋಃ ॥ ೪ ॥

ಬ್ರಹ್ಮವಿಟ್‌ಕ್ಷತ್ರಿಯಾದ್ಯಾಶ್ಚ ಜ್ಞಾನಿನಃ ಪಾಪಭೀರವಃ ।
ತೇಽಪಿ ಕುರ್ವಂತ್ಯಹರಹರ್ನಿಜಬಂಧಕರಾಣಿ ವೈ ॥ ೫ ॥

ಕಾರಣಾನೀಹ ಕರ್ಮಾಣಿ ದೇಹಾನಾಂ ದಶಕಸ್ಯ ಹಿ ।
ವಕ್ತವ್ಯಂ ಕಿಮು ಜೀವಾನಾಂ ಕರ್ಮಾಣಿ ಸ್ವೈರಚಾರಿಣಾಂ ॥ ೬ ॥

ಭೋಗಾದಿನಾ ಏವ-ಭೋಗ ಮುಂತಾದ್ದರಿಂದಲೇ, ಕರ್ಮಣಾಂ-ಕರ್ಮಗಳ, ಕ್ಷಯಃ-ನಾಶವು, ಕರ್ತುಂ-ಮಾಡುವುದಕ್ಕೆ, ನೋ ಶಕ್ಯಃ-ಸಾಧ್ಯವಲ್ಲವು; ವೈ-

---

ಹೊಂದುತ್ತಾರೆ?(೧). ...ಹಯಗ್ರೀವನು ಹೇಳುತ್ತಾನೆ:—ಅನಾದಿ ಕರ್ಮವು ವಿಚಿತ್ರವಾದುದು—ವಿವಿಧವಾದುದು (ಪ್ರತಿ ಜೀವನ ಕರ್ಮವೂ ಭಿನ್ನಭಿನ್ನವಾಗಿಯೇ ಇರುತ್ತದೆ—ಎಲ್ಲರ ಅನಾದಿ ಕರ್ಮವೂ ಏಕಪ್ರಕಾರವಾಗಿರುವುದಿಲ್ಲ); ಸಮಸ್ತ ಜೀವರೂ, ಅವರವರ ಕರ್ಮವು ಪೂರ್ಣವಾಗಿ ನಾಶವಾಗುವವರೆಗೆ, ಸಂಸಾರದಲ್ಲಿ ಸುತ್ತುತ್ತಿರುವರು (೨). ಕರ್ಮನಾಶವನ್ನು ಅವುಗಳ ಫಲವನ್ನು ಭೋಗಿಸುವುದರ ಮೂಲಕ ಸಾಧಿಸಲೆತ್ನಿಸುವುದು, ಅಶಕ್ಯಕಾರ್ಯವು; ಶಾಸ್ತ್ರಗಳ ವಿಧಿನಿಷೇಧಗಳನ್ನು ಪಾಲಿಸಲಿಕ್ಕೂ, ಅವುಗಳ ಫಲಗಳನ್ನು ಹೊಂದಲಿಕ್ಕೂ, ಅರ್ಹರಾದ ಬ್ರಾಹ್ಮಣ, ವೈಶ್ಯ ಮೊದಲಾದ ವರ್ಣದ ಜೀವರೂ ಸಹ ಒಂದೊಂದು ದೇಹದಲ್ಲಿರುವಾಗ, ಜ್ಞಾನಿಗಳೂ ಪಾಪಭೀರುಗಳೂ ಆಗಿ, ಸ್ವವಿಹಿತ ಕರ್ಮಗಳನ್ನು ಮಾಡುವಾಗ, ದಿನ ಒಂದಕ್ಕೆ ಹತ್ತು

ಹೀಗೆಂಬುದು ಯುಕ್ತಿಯಿಂದಲೂ ಸಿದ್ಧವೇ ಆಗುತ್ತದೆ; ಯತಃ-ಏಕೆಂದರೆ, ಏಕಶರೀರಸ್ಥಃ- ಒಂದು ಶರೀರದಲ್ಲಿರುವವನು, ಸಹಸ್ರಶಃ-ಸಾವಿರಾರು, ಲಕ್ಷಶಃ- ಲಕ್ಷಗಳ, ಕೋಟಿಶಃ ಅಪಿ- ಕೋಟಿಗಳಷ್ಟು ಸಹ, ಶರೀರಾಣಾಂ-(ಹೊಸ) ಶರೀರಗಳ, ಕಾರಣಾನಿ- ಕಾರಣಗಳನ್ನು, ಅಯಂ- ಆ ಜೀವನು, ಕರೋತಿ- ಮಾಡುತ್ತಾನೆ; (ಹೀಗೆ ಅಸಂಖ್ಯವಾದ ಹೊಸ ದೇಹಗಳನ್ನು ಹೊಂದಲು ಕಾರಣವಾಗುವ ಕರ್ಮಗಳನ್ನು ಒಂದು ಶರೀರದಲ್ಲಿರುವಾಗ ಅನಿವಾರ್ಯವಾಗಿ ಸಾಧಿಸಿಕೊಳ್ಳುವವರು ಯಾರೆಂದರೆ), ಯೇ ಜೀವಾಃ- ಯಾವ ಜೀವರು, ಶರೀರಸ್ಥಾಃ- ದೇಹದಲ್ಲಿದ್ದು, ವಿಧಿನಿಷೇಧಯೋಃ- ವಿಧಿ ನಿಷೇಧಗಳಿಗೆ, ಯೋಗ್ಯಾಃ- ಅರ್ಹರಾಗಿರುವ, ಬ್ರಹ್ಮವಿಟ್‌ಕ್ಷತ್ರಿಯಾದ್ಯಾಃ- ಬ್ರಾಹ್ಮಣ, ವೈಶ್ಯ, ಕ್ಷತ್ರಿಯ ಮೊದಲಾದ (ವಿಧಿನಿಷೇಧಾಚರಣನಿಯಮಬದ್ಧರಾದ), ಜ್ಞಾನಿನಃ- ಜ್ಞಾನಿಗಳೂ, ಪಾಪಭೀರವಃ- ಪಾಪಭೀತಿಯುಳ್ಳವರೂ ಆಗಿರುವರೋ, ತೇ ಅಪಿ- ಅವರು ಸಹ, ಅಹರಹಃ- ಪ್ರತಿನಿತ್ಯವೂ, ನಿಜಬಂಧಕರಾಣಿ- ತಮ್ಮ ಬಂಧನಕ್ಕೆ ಕಾರಣವಾಗುವ, ದೇಹಾನಾಂ- ದೇಹಗಳ, ದಶಕಸ್ಯ- ಹತ್ತಕ್ಕೆ (ಹತ್ತು ಜನ್ಮಗಳಿಗೆ), ಕಾರಣಾನಿ- ಕಾರಣಗಳನ್ನೊದಗಿಸುವ, ಕರ್ಮಾಣಿ- ಕರ್ಮಗಳನ್ನು ಕುರ್ವಂತಿ- ಮಾಡುತ್ತಾರೆ; ಸ್ವೈರಚಾರಿಣಾಂ-(ಮನುಷ್ಯರಾಗಿ ಹುಟ್ಟಿ) ಸ್ವೇಚ್ಛಾಚಾರಿಗಳಾದ, ಜೀವಾನಾಂ- ಜೀವರುಗಳ, ಕರ್ಮಾಣಿ- ಕರ್ಮಗಳನ್ನು, ಕಿಮು- ಏನು (ಎಷ್ಟು ಜನ್ಮಗಳಿಗೆ ಕಾರಣವಾಗುವ ಕರ್ಮಗಳನ್ನು ಒಂದೊಂದು ದಿನದಲ್ಲಿಯೂ, ಒಂದೊಂದು ದೇಹದಲ್ಲಿಯೂ ಆಚರಿಸುತ್ತಾರೆಂಬುದನ್ನು), ವಕ್ತವ್ಯಂ- ಹೇಳತಕ್ಕದ್ದು? (ಹೇಳಬೇಕಾಗಿಲ್ಲ; ಅಸಂಖ್ಯಜನ್ಮಗಳಿಗೆ ಕಾರಣವಾಗುವ ಕರ್ಮಗಳು ಅದರಿಂದ ಸಂಭವಿಸುತ್ತವೆ).

**ಪ್ರಾಯೋ ವಿಕರ್ಮನಿಷ್ಠಾ ಹಿ ಚೇತನಾಃ ಸಾತ್ವಿಕಾ ಅಪಿ ।**
**ರಾಜಸಾಸ್ತಾಮಸಾಸ್ತತ್ರ ವಿಕರ್ಮಸ್ಥಾ ಇದಂ ಕಿಮು ॥ ೭ ॥**

ಸಾತ್ವಿಕಾಃ- ಸಾತ್ವಿಕರಾದ, ಚೇತನಾಃ ಅಪಿ- ಜೀವರೂ ಸಹ, ಪ್ರಾಯಃ- ಬಹುವಾಗಿ, ವಿಕರ್ಮನಿಷ್ಠಾಃ- ವಿಕರ್ಮ (ವಿಹಿತಕರ್ಮವಿರುದ್ಧಕರ್ಮ)ಗಳಲ್ಲಿ ಆಸಕ್ತರಾಗುತ್ತಾರೆ;

---

ಜನ್ಮಗಳನ್ನೆತ್ತಲು ಕಾರಣವಾಗುವಷ್ಟು ಪಾಪಪುಣ್ಯಗಳನ್ನು ಸಂಪಾದಿಸುತ್ತಾರೆ; ಒಂದು ಜನ್ಮದಲ್ಲಿ ಸಹಸ್ರಶಃ, ಲಕ್ಷಶಃ, ಕೋಟಿಶಃ ಶರೀರಗಳನ್ನು ಹೊಂದಲು ಬೇಕಾದಷ್ಟು ಕಾರಣಗಳನ್ನು ಸಂಪಾದಿಸಿರುತ್ತಾರೆ; ಹೀಗಿರುವಾಗ, ವಿಧಿನಿಷೇಧಗಳನ್ನು ದುರ್ಲಕ್ಷಿಸಿ, ಸ್ವೇಚ್ಛಾಚಾರಿಗಳಾದ ಜೀವರು ಅಸಂಖ್ಯ ಜನ್ಮಗಳನ್ನೆತ್ತಲು ಅವಶ್ಯಕವಾಗುವಷ್ಟು ಕಾರಣಗಳನ್ನು ಸಂಪಾದಿಸುತ್ತಾರೆಂದು ಹೇಳಲೇನಿದೆ? (ಆದ್ದರಿಂದ ಭೋಗದಿಂದ ಕರ್ಮಕ್ಷಯವನ್ನು ಸಾಧಿಸಿ, ನಂತರ ಸಂಸಾರದಿಂದ ಮುಕ್ತರಾಗಬಹುದೆಂಬುದು ಅಸಾಧ್ಯವೇ ಸರಿ (೩-೬). ಸಾತ್ವಿಕರಾದ ಜೀವರು ಸಹ ಬಂಧಕವಾದ ವಿಕರ್ಮಗಳಲ್ಲಿ ಆಸಕ್ತರಾಗುತ್ತಾರೆ; ಹೀಗಿರಲು, ರಾಜಸ ತಾಮಸ ಜೀವರು ವಿರುದ್ಧ ಕರ್ಮಗಳಲ್ಲಿ

ಹಿ-ಆದ್ದರಿಂದ, ತತ್ರ-ಚೇತನರ ಮಧ್ಯದಲ್ಲಿ ರಾಜಸಾಃ-ರಾಜಸರೂ, ತಾಮಸಾಃ-ತಾಮಸರೂ, ವಿಕರ್ಮಸ್ಥಾಃ-ವಿಕರ್ಮಗಳ ಆಚರಣೆಯಲ್ಲಿರುತ್ತಾರೆಂಬ, ಇದಂ-ಈ ಅಂಶವನ್ನು, ಕಿಮು-ಹೇಳಲೇನಿದೆ?

ಜೀವಮಾನೋ ಹಿ ಜೀವೋ ಯಂ ಪೂರ್ವೋಕ್ತೇನ ಪ್ರಕಾರತಃ ।
ಯಾವತ್ಸ್ವದೇಹಪಾತಸ್ಯಾತ್ತಾವತ್ಕರ್ಮ ಮಹಾಚಲಾನ್ ॥ ೮ ॥

ಕರೋತಿ ಯೇಷಾಂ ಭೋಗಾರ್ಥಂ ಬಹು ಜನ್ಮಾನ್ಯವಾಪ್ನುಯಾತ್
ಸ್ಥಾವರಂ ಜಂಗಮಂ ಯಾವಚ್ಚಂದ್ರಸೂರ್ಯಾದಿಕಂ ತಥಾ ॥ ೯ ॥

ಪೂರ್ವೋಕ್ತೇನ-ಹಿಂದೆ ಹೇಳಿದ, ಪ್ರಕಾರತಃ-ಪ್ರಕಾರದಿಂದ, ಅಯಂ-ಈ ಜೀವಃ-ಜೀವನು, ಜೀವಮಾನಃ-ಜೀವಿಸುವನಾಗಿ (ಕರ್ಮಗಳನ್ನು ಮಾಡುತ್ತ ಬಾಳುವನಾಗಿ), ಸ್ವದೇಹಪಾತಃ-ತನ್ನ ದೇಹವು ಬಿದ್ದು ಹೋಗುವುದು (ಮರಣವು), ಯಾವತ್ ಸ್ಯಾತ್-ಯಾವಾಗ ಆಗುತ್ತದೆಯೋ, ತಾವತ್-ಅಷ್ಟರಲ್ಲಿ ಕರ್ಮ ಮಹಾಚಲಾನ್-ಕರ್ಮದ ಮಹಾಪರ್ವತಗಳನ್ನೇ, ಕರೋತಿ-ಮಾಡುತ್ತಾನೆ (ಮಾಡಿರುತ್ತಾನೆ); ಯೇಷಾಂ-ಯಾವ ಕರ್ಮರಾಶಿಗಳ, ಭೋಗಾರ್ಥಂ-ಭೋಗಕ್ಕಾಗಿ, ಸ್ಥಾವರಂ-(ವೃಕ್ಷಾದಿ) ಸ್ಥಾವರವೂ, ಜಂಗಮಂ-(ಪಶು, ಮಾನವಾದಿ) ಜಂಗಮವೂ ಆದ, (ಚಲಿಸುವುದು) ಬಹು ಜನ್ಮಾನಿ-ಅನೇಕ ಜನ್ಮಗಳನ್ನು, ತಥಾ-ಹಾಗೂ, ಚಂದ್ರ ಸೂರ್ಯಾದಿಕಂ ಯಾವತ್-ಚಂದ್ರಸೂರ್ಯರಿರುವವರೆಗೆ (ಅಷ್ಟು ದೀರ್ಘಕಾಲ), ಆಪ್ನುಯಾತ್-ಹೊಂದುತ್ತಾನೆ (ಹೊಂದಲೇಬೇಕಾಗುತ್ತದೆ).

ಪ್ರಯಾತಿ ನಾಶಂ ತತ್ರಾಪಿ ಕರ್ಮಶೇಷೋಽವಶಿಷ್ಯತೇ ।
ಯೇನ ಬದ್ಧೋ ವಿಚಿತ್ರಾಣಿ ತತ್ತತ್ಕರ್ಮಾನುಸಾರತಃ ॥ ೧೦ ॥

ತೃಣಗುಲ್ಮಲತಾದೀನಿ ಶರೀರಾಣಿ ಸಮಶ್ನುತೇ ।

ತತ್ರಾಪಿ-ಅಲ್ಲಿಯೂ, (ಹಾಗೆ ಭೋಗದಿಂದ ಕರ್ಮವು ನಾಶವಾಗುವುದರಲ್ಲಿ ಸಹ), ನಾಶಂ-(ಕರ್ಮವು) ನಾಶವನ್ನು ಪ್ರಯಾತಿ-ಹೊಂದುತ್ತದಾದರೂ,

---

ಆಸಕ್ತರಾಗುತ್ತಾರೆಂದು ಹೇಳಬೇಕಾದ್ದಿಲ್ಲ (೭). ಹಿಂದೆ ಹೇಳಿದಂತೆ ಜೀವನವನ್ನು ನಡೆಸುವ ಈ ಸಂಸಾರಿ ಜೀವನು, ತನ್ನ ದೇಹಪಾತವಾಗುವುದರೊಳಗೆ, ಮಹಾಪರ್ವತಗಳಂತಿರುವ ಕರ್ಮರಾಶಿಗಳನ್ನೇ ಮಾಡುತ್ತಾನೆ; ಈ ಕರ್ಮಗಳನ್ನು ಭೋಗಿಸಲಿಕ್ಕಾಗಿ, ಸೂರ್ಯ ಚಂದ್ರರಿರುವವರೆಗೆ, ಸ್ಥಾವರ ಜಂಗಮ ಯೋನಿಗಳಲ್ಲಿ ಅಸಂಖ್ಯ ಜನ್ಮಗಳನ್ನೆತ್ತಬೇಕಾಗುತ್ತದೆ (೮-೯). ಕರ್ಮವು, ಭೋಗದಿಂದ ನಿಶ್ಶೇಷವಾಗಿ ಕ್ಷಯವಾಗುವುದಿಲ್ಲ—

ಕರ್ಮಶೇಷಃ- ಕರ್ಮಶೇಷವು, ಅವಶಿಷ್ಯತೇ- ಉಳಿಯುತ್ತದೆ (ನಿಶ್ಶೇಷವಾಗಿ ನಾಶವಾಗುವುದಿಲ್ಲ); ಯೇನ- ಯಾವ ಕರ್ಮಶೇಷದಿಂದ, ಬದ್ಧಃ- ಬಂಧಿತನಾದ ಜೀವನು, ತತ್ತತ್- ಆಯಾ, ಕರ್ಮಾನುಸಾರತಃ- ಕರ್ಮಾನುಸಾರವಾಗಿ, ವಿಚಿತ್ರಾಣಿ- ವಿವಿಧಗಳಾದ, ತೃಣಗುಲ್ಮಲತಾದೀನಿ- ತೃಣ(ಹುಲ್ಲು), ಗುಲ್ಮ (ಪೊದೆ), ಲತೆ(ಬಳ್ಳಿ) ಮೊದಲಾದ, ಶರೀರಾಣಿ- ದೇಹಗಳನ್ನು ಸಮಶ್ನುತೇ- ಹೊಂದುತ್ತಾನೆ.

ಶೀತವಾತಾತಪಂ ವರ್ಷಂ ಛೇದಭೇದವಿಮೋಹಜಂ ॥ ೧೦ ॥

ಅನುಭೂಯ ಸದಾ ದುಃಖಂ ಜಂಗಮೇಷು ಪ್ರಜಾಯತೇ ।
ಕ್ರಿಮಿಕೀಟಮೃಗವ್ಯಾಲವೃಕವ್ಯಾಘ್ರದ್ವಿಜನ್ಮನಾಂ ॥ ೧೨ ॥

ಯಾದಸಾಂ ಚ ಶರೀರಾಣಿ ಗೋಽಶ್ವಮಾಹಿಷಕಾದಿನಃ ।
ಭುಕ್ತಕ್ರಮೇಣ ಮಾನುಷ್ಯಂ ಪ್ರಾಪ್ಯ ಪಾರ್ವತಿಕೋ ಭವೇತ್ ॥ ೧೩ ॥

ಶೀತವಾತಾತಪಂ- ಚಳಿ, ಗಾಳಿ, ಬಿಸಿಲುಗಳನ್ನೂ, ವರ್ಷಂ- ಮಳೆಯನ್ನೂ, ಛೇದಭೇದವಿಮೋಹಜಂ- ಕತ್ತರಿಸುವುದು, ತುಂಡರಿಸುವುದು ಮೊದಲಾದ ಅಸಹನೀಯ ಅನುಭವಗಳಿಂದ ಉಂಟಾಗುವ, ದುಃಖಂ- ದುಃಖವನ್ನು, ಸದಾ- ನಿರಂತರವಾಗಿ, ಅನುಭೂಯ- (ತೃಣಾದಿದೇಹಗಳಲ್ಲಿ) ಅನುಭವಿಸಿ, ಜಂಗಮೇಷು- ಜಂಗಮ(ಸಂಚರಿಸಲು ಶಕ್ತಿಯುಳ್ಳ) ದೇಹಗಳಲ್ಲಿ, ಪ್ರಜಾಯತೇ- ಹುಟ್ಟುತ್ತಾನೆ; (ಆ ಜಂಗಮ ಯೋನಿಗಳಲ್ಲಿ), ಕ್ರಿಮಿಕೀಟಮೃಗವ್ಯಾಲವೃಕವ್ಯಾಘ್ರದ್ವಿಜನ್ಮನಾಂ- ಕ್ರಿಮಿ (ಕೃಮಿ- ಸಣ್ಣಹುಳ), ಕೀಟ(ಸೊಳ್ಳೆ, ನೊಣ ಮೊದಲಾದ ಹಾರುವ ಕ್ಷುದ್ರ ಪ್ರಾಣಿಗಳು), ಮೃಗ(ಜಿಂಕೆ ಮೊದಲಾದವು), ವ್ಯಾಲ(ಸರ್ಪ), ವೃಕ(ತೋಳ), ವ್ಯಾಘ್ರ(ಹುಲಿ), ದ್ವಿಜ(ಪಕ್ಷಿ) ಮೊದಲಾದ ಜನ್ಮಗಳ, ಚ- ಮತ್ತು, ಯಾದಸಾಂ- ಜಲಚರ(ಮತ್ಸ್ಯ

---

ಕರ್ಮಶೇಷವು ಉಳಿಯುತ್ತದೆ; ತತ್ಫಲವಾಗಿ, ಹುಲ್ಲು, ಪೊದೆ, ಬಳ್ಳಿ ಮೊದಲಾದ ಸ್ಥಾವರದೇಹಗಳನ್ನು ಆಯಾ ಕರ್ಮಾನುಗುಣವಾಗಿ ಜೀವನು, ಹೊಂದುತ್ತಾನೆ (೧೦). ಆ ತೃಣಾದಿ ಸ್ಥಾವರ ದೇಹಗಳಲ್ಲಿ ಚಳಿ, ಗಾಳಿ, ಬಿಸಿಲು, ಮಳೆ ಮೊದಲಾದವುಗಳನ್ನೂ, ಕತ್ತರಿಸುವುದು, ಕಡಿಯುವುದು ಮೊದಲಾದ ದುಃಖಗಳನ್ನು ಸದಾ ಅನುಭವಿಸಿ, ಜಂಗಮ ದೇಹಗಳಲ್ಲಿ ಹುಟ್ಟುತ್ತಾನೆ; ಜಂಗಮ ದೇಹಗಳಲ್ಲಿಯೂ ಮೊದಲು, ಕೃಮಿಕೀಟಾದಿ ದೇಹಗಳನ್ನೂ, ನಂತರ ಕ್ರಮವಾಗಿ, ಮೃಗ, ಸರ್ಪ, ತೋಳ, ಹುಲಿ, ಪಕ್ಷಿ ಮೊದಲಾದ ದೇಹಗಳನ್ನೂ, ಜಲಚರಪ್ರಾಣಿದೇಹಗಳನ್ನೂ, ಹಸು ಕುದುರೆ ಎಮ್ಮೆ ಮುಂತಾದ ದೇಹಗಳನ್ನೂ ಹೊಂದಿ, ಅಲ್ಲಲ್ಲಿ ಕರ್ಮಶೇಷದ ಫಲಗಳನ್ನು ಭೋಗಿಸಿ, ನಂತರ ಮನುಷ್ಯದೇಹವನ್ನು ಹೊಂದಿದರೂ, ಅಲ್ಲಿಯೂ ಗುಡ್ಡಗಾಡಿನ ಕೀಳುಜಾತಿಯಲ್ಲಿ

ಮೊದಲಾದ) ಪ್ರಾಣಿಗಳು. ಗೋಽಶ್ವಮಾಹಿಷಕಾದಿನಃ-ಗೋ(ಹಸು), ಅಶ್ವ (ಕುದುರೆ), ಮಾಹಿಷ (ಎಮ್ಮೆ) ಮೊದಲಾದ, ಶರೀರಾಣಿ-ದೇಹಗಳನ್ನು ಭುಕ್ತ್ವಾಕ್ರಮೇಣ-ಕ್ರಮದಿಂದ (ಕ್ರಿಮಿಯಿಂದ ಆರಂಭಿಸಿ ಉತ್ಕ್ರಮದಿಂದ) ಭೋಗಿಸಿ, ಮಾನುಷ್ಯಂ-ಮನುಷ್ಯದೇಹವನ್ನು, ಪ್ರಾಪ್ಯ-ಹೊಂದಿ, ಪಾರ್ವತೀಕಃ-ಗುಡ್ಡಗಾಡಿನ (ಅಸಂಸ್ಕೃತ) ಕೀಳುಮನುಷ್ಯನು, ಭವೇತ್-ಆಗುತ್ತಾನೆ.

**ವಸಂತೇ ಯೇ ಹಿ ಪರ್ಣಾನಿ ಭಕ್ಷಂತಿ ಪಶುಮಾಂಸಕಂ ।**
**ಕಂದಮೂಲಫಲಾದೀನಿ ಮುಕ್ತಾ ವಿಧಿನಿಷೇಧತಃ ॥ ೧೪ ॥**

**ಉಪಸ್ಥಜೈಹ್ವ್ಯಮಾತ್ರಜ್ಞಾವಿಶೇಷಜ್ಞಾನವರ್ಜಿತಾಃ ।**
**ಶೀತವಾತಾತಪಸಹಾ ಪಶುಪ್ರಾಯಾ ಕುದೇಹಿನಃ ॥ ೧೫ ॥**

**ಕಿರಾತಮ್ಲೇಂಛಶಬರಪುಲಿಂದಾ ಬರ್ಬರಾದಯಃ ।**
**ದಸ್ಯವಃ ಪಾಪನಿರತಾಃ ಪಾರ್ವತೀಯಾ ಹಿ ತೇಽಖಿಲಾಃ ॥ ೧೬ ॥**

ಪಾರ್ವತೀಯರು ಯಾರೆಂದರೆ:—

ಯೇ-ಯಾರು (ಯಾವ ಮನುಷ್ಯರು), ವಸಂತೇ-ವಸಂತಕಾಲದಲ್ಲಿ ಪರ್ಣಾನಿ-ಎಲೆಗಳನ್ನೂ (ಅಥವಾ, ಪರ್ಣಾನಿ-ಎಲೆಗಳನ್ನು ಆಶ್ರಯಿಸಿ, ತಿಂದು, ಜೀವಿಸುವರೋ). ಕಂದಮೂಲಫಲಾದೀನಿ-ಕಂದಮೂಲ (ಗಡ್ಡೆಗೆಣಸು) ಮೊದಲಾದ ಫಲಗಳನ್ನೂ (ಮತ್ತು ಸದಾ-ಇವುಗಳೊಂದಿಗೆ). ಪಶುಮಾಂಸಕಂ-ಪಶುಗಳ ಮಾಂಸವನ್ನೂ ವಿಧಿನಿಷೇಧತಃ-ವಿಧಿನಿಷೇಧಗಳಿಂದ, ಮುಕ್ತಾಃ-ನಿರ್ಬಂಧವಿಲ್ಲದವರಾಗಿ (ಬದ್ಧರಲ್ಲದೇ), ಭಕ್ಷಂತಿ-ತಿನ್ನುವರೋ, ವಿಶೇಷ ಜ್ಞಾನವರ್ಜಿತಾಃ-ವಿಶೇಷ ಜ್ಞಾನವಿಲ್ಲದೇ, ಉಪಸ್ಥಜೈಹ್ವ್ಯಮಾತ್ರಜ್ಞಾಃ-ಉಪಸ್ಥ (ಗುಹ್ಯೇಂದ್ರಿಯ) ಮತ್ತು ಜಿಹ್ವೆ (ರಸನೇಂದ್ರಿಯ-

---

ಹುಟ್ಟುತ್ತಾನೆ (೧೧-೧೩.). ಪಾರ್ವತಿಕರು ಯಾರೆಂದರೆ:—ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತ ಗಡ್ಡೆಗೆಣಸು ಮೊದಲಾದ ಫಲಗಳನ್ನೂ, ಮೃಗಗಳಂತೆ ತೃಣಪರ್ಣಾದಿಗಳನ್ನೂ ವಿಧಿನಿಷೇಧಗಳ ನಿರ್ಬಂಧವಿಲ್ಲದೇ, ಪಶ್ವಾದಿ ಪ್ರಾಣಿಗಳನ್ನು ಸಂಹರಿಸಿ, ಅವುಗಳ ಮಾಂಸವನ್ನೂ ತಿನ್ನುತ್ತ, ಪಾಪಪುಣ್ಯಾದಿ ಯಾವ ವಿಶೇಷ ಜ್ಞಾನವೂ ಇಲ್ಲದೇ ಕೇವಲ ಶಿಶ್ನೋದರಪರಾಯಣರಾಗಿ (ಉಪಸ್ಥಜಿಹ್ವೆಗಳನ್ನು ತೃಪ್ತಿಗೊಳಿಸುವುದರಲ್ಲಿ ಮಾತ್ರ ಆಸಕ್ತರಾಗಿ) ಚಳಿ ಗಾಳಿ ಬಿಸಿಲುಗಳನ್ನು ಸಹಿಸಿಕೊಂಡು, ಪಶುಪ್ರಾಯರಾಗಿ ವಾಸಿಸುವ, ತುಚ್ಛವಾದ ದೇಹವುಳ್ಳ, (ಮಾನವದೇಹವನ್ನು ಸದುಪಯೋಗಮಾಡಿಕೊಳ್ಳಲು ಅಸಮರ್ಥರಾದ), ಬರ್ಬರ, ಕಿರಾತ, ಮ್ಲೇಂಛ, ಶಬರ, ಪುಲಿಂದ ಮೊದಲಾದ ನಾಮಗಳುಳ್ಳ, ಚೌರ್ಯ ಮೊದಲಾದ ದುಷ್ಟವೃತ್ತಿಗಳಲ್ಲಿರುವ ಸಮಸ್ತರೂ ಪಾರ್ವತೀಯ

ನಾಲಿಗೆ)ಗಳ ಜ್ಞಾನಮಾತ್ರವುಳ್ಳವರೋ (ಅವುಗಳನ್ನು ತೃಪ್ತಿಗೊಳಿಸುವುದರಲ್ಲಿ ಮಾತ್ರ ಆಸಕ್ತರಾಗಿರುವವರೋ), ಶೀತವಾತಾತಪಸಹಾಃ-ಚಳಿ, ಗಾಳಿ, ಬಿಸಿಲುಗಳನ್ನು ಸಹಿಸಲು ಸಮರ್ಥರಾಗಿ, ಪಶುಪ್ರಾಯಾಃ-ಪಶುಗಳನ್ನೇ ಬಹುವಾಗಿ ಹೋಲುವ, ಕುದೇಹಿ ನಃ-ತುಚ್ಛವಾದ (ಪುರುಷಾರ್ಥಸಾಧಕವಲ್ಲದ) ದೇಹಗಳುಳ್ಳ, ಬರ್ಬರಾದಯಃ-ಬರ್ಬರರೇ ಮೊದಲಾದ, ಕಿರಾತಮ್ಲೇಂಛಶಬರಪುಲಿಂದಾಃ- ಕಿರಾತರು, ಮ್ಲೇಂಛರು, ಶಬರರು, ಪುಲಿಂದರು (ವ್ಯಾಧರು) ಮೊದಲಾದ, ದಸ್ಯವಃ-ದಸ್ಯುಗಳೆಂಬ (ಚೌರ್ಯಾದಿ ವೃತ್ತಿಗಳುಳ್ಳ), ಪಾಪನಿರತಾಃ-ಪಾಪಕರ್ಮಗಳಲ್ಲಿ ತೊಡಗಿರುವ, (ಪಾರ್ವತೀಯಾಃ-ಗುಡ್ಡಗಾಡಿನಲ್ಲಿ ವಾಸಿಸುವ ಮನುಷ್ಯರೋ), ತೇ-ಆ, ಅಖಿಲಾಃ-ಸಮಸ್ತರೂ, ಪಾರ್ವತೀಯಾಃ-ಪಾರ್ವತೀಯರೆನಿಸುವರು.

**ತತಃ ಕಾಲೇನ ತದ್ಭೋಗಾಜ್ಜಾಯತೇ ಶುಭಯೋನಿಷು ।**
**ವಿಧೇರ್ವಾಪಿ ನಿಷೇಧಸ್ಯ ವಿಷಯಾ ಬ್ರಾಹ್ಮಣಾದಯಃ ॥ ೧೭ ॥**

ತತಃ-ನಂತರ(ಪಾರ್ವತೀಯದೇಹವಾದ ನಂತರ), ತದ್ಭೋಗಾತ್-ಅದರ ಭೋಗದಿಂದ), (ಮುಂದೆ), ಕಾಲೇನ-ಕಾಲಗತಿಯಿಂದ (ಕಾಲನಾಮಕ ಶ್ರೀಹರಿಯ ಸಂಕಲ್ಪದಂತೆ), ಶುಭಯೋನಿಷು-ಪುಣ್ಯಯೋನಿಗಳಲ್ಲಿ ಪುಣ್ಯಸಾಧಕ ದೇಹಗಳಲ್ಲಿ ಜಾಯತೇ-ಜನ್ಮ ಪಡೆಯುತ್ತಾನೆ; (ಶುಭದೇಹಗಳು ಯಾವುವೆಂದರೆ), ವಿಧೇಃ-ವಿಧಿಯ, (ಕರ್ತವ್ಯಗಳನ್ನು ವಿಧಿಸುವ), ವಾ ಅಪಿ-ಮತ್ತು ಸಹ, ನಿಷೇಧಸ್ಯ-ನಿಷೇಧದ (ಮಾಡತಕ್ಕದ್ದಲ್ಲವೆಂದು ಹೇಳುವ) ನಿಯಮಗಳಿಗೆ, ವಿಷಯಾಃ-ವಿಷಯಗಳಾದ (ವಿಧಿ ನಿಷೇಧಗಳ ಸಂಬಂಧವುಳ್ಳ-ಆ ನಿಯಮಗಳಿಗೆ ಒಳಪಡುವ), ಬ್ರಾಹ್ಮಣಾದಯಃ-ಬ್ರಾಹ್ಮಣ ಮೊದಲಾದ ವರ್ಣಗಳಿಗೆ ಸೇರುವ ದೇಹಗಳು.

**ತತ್ರಾಪಿ ಕ್ರಮತಃ ಪ್ರಾಪ್ಯ ತ್ರೈವರ್ಣ್ಯಂ ಸಂಸೃತೌ ಭ್ರಮನ್ ।**
**ಯದಿ ಕುರ್ಯಾದ್ದುರಾಚಾರಂ ತತೋ ನರಕಮಾಪ್ನುಯಾತ್ ॥ ೧೮ ॥**

ತತ್ರಾಪಿ-ಅಲ್ಲಿಯೂ (ಬ್ರಾಹ್ಮಣಾದಿ ವರ್ಣಯುಕ್ತ ದೇಹಗಳನ್ನು ಹೊಂದುವುದರಲ್ಲಿ) ಸಹ, ಕ್ರಮತಃ-ಕ್ರಮವಾಗಿ (ಶೂದ್ರದೇಹದಿಂದ ವೈಶ್ಯದೇಹವನ್ನೂ ಅಥವಾ

---

ರೆನಿಸುತ್ತಾರೆ(೧೪-೧೬). ಭೋಗದಿಂದ ಕರ್ಮಕ್ಷಯವನ್ನು ದೊರಕಿಸಲಾರದ ಆ ಜೀವನು, ಪಾರ್ವತೀಯನಾಗಿ ಹುಟ್ಟಿ ಆ ದೇಹದಿಂದ ತನ್ನ ಕರ್ಮವನ್ನು ಭೋಗಿಸಿದ ನಂತರ, ಶ್ರೀಹರಿಸಂಕಲ್ಪಾನುಸಾರವಾಗಿ, ಶುಭದೇಹಗಳನ್ನು ಹೊಂದುತ್ತಾನೆ; ವಿಧಿ ನಿಷೇಧಗಳಿಗೆ ಒಳಪಟ್ಟ ಬ್ರಾಹ್ಮಣಾದಿ ವರ್ಣಗಳಿಗೆ ಸೇರಿದ ದೇಹಗಳೇ ಶುಭದೇಹಗಳು(೧೭). ಹೀಗೆ ವರ್ಣಯುಕ್ತದೇಹಗಳಲ್ಲಿ (ಶೂದ್ರಾದಿಗಳಲ್ಲಿ ಹುಟ್ಟಿ)

ಮೊದಲಾದ) ಪ್ರಾಣಿಗಳ, ಗೋಽಶ್ವಮಾಹಿಷಕಾದಿನಃ- ಗೋ(ಹಸು), ಅಶ್ವ (ಕುದುರೆ), ಮಾಹಿಷ (ಎಮ್ಮೆ) ಮೊದಲಾದ, ಶರೀರಾಣಿ-ದೇಹಗಳನ್ನು ಭುಕ್ತ್ವಕ್ರಮೇಣ-ಕ್ರಮದಿಂದ (ಕ್ರಿಮಿಯಿಂದ ಆರಂಭಿಸಿ ಉತ್ಕ್ರಮದಿಂದ) ಭೋಗಿಸಿ, ಮಾನುಷ್ಯಂ-ಮನುಷ್ಯದೇಹವನ್ನು ಪ್ರಾಪ್ಯ-ಹೊಂದಿ, ಪಾರ್ವತಿಕಃ-ಗುಡ್ಡಗಾಡಿನ (ಅಸಂಸ್ಕೃತ) ಕೀಳುಮನುಷ್ಯನು, ಭವೇತ್-ಆಗುತ್ತಾನೆ.

**ವಸಂತೇ ಯೇ ಹಿ ಪರ್ಣಾನಿ ಭಕ್ಷಂತಿ ಪಶುಮಾಂಸಕಂ ।**
**ಕಂದಮೂಲಫಲಾದೀನಿ ಮುಕ್ತಾ ವಿಧಿನಿಷೇಧತಃ ॥ ೧೪ ॥**

**ಔಪಸ್ಥ್ಯಜೈಹ್ವ್ಯಮಾತ್ರಜ್ಞಾವಿಶೇಷಜ್ಞಾನವರ್ಜಿತಾಃ ।**
**ಶೀತವಾತಾತಪಸಹಾ ಪಶುಪ್ರಾಯಾ ಕುದೇಹಿನಃ ॥ ೧೫ ॥**

**ಕಿರಾತಮ್ಲೇಂಛಶಬರಪುಲಿಂದಾ ಬರ್ಬರಾದಯಃ ।**
**ದಸ್ಯವಃ ಪಾಪನಿರತಾಃ ಪಾರ್ವತೀಯಾ ಹಿ ತೇಽಖಿಲಾಃ ॥ ೧೬ ॥**

ಪಾರ್ವತೀಯರು ಯಾರೆಂದರೆ:—

ಯೇ- ಯಾರು (ಯಾವ ಮನುಷ್ಯರು), ವಸಂತೇ-ವಸಂತಕಾಲದಲ್ಲಿ ಪರ್ಣಾನಿ-ಎಲೆಗಳನ್ನೂ (ಅಥವಾ, ಪರ್ಣಾನಿ-ಎಲೆಗಳನ್ನು ಆಶ್ರಯಿಸಿ, ತಿಂದು, ಜೀವಿಸು ವರೋ), ಕಂದಮೂಲಫಲಾದೀನಿ-ಕಂದಮೂಲ (ಗಡ್ಡೆಗೆಣಸು) ಮೊದಲಾದ ಫಲಗಳನ್ನೂ (ಮತ್ತು ಸದಾ-ಇವುಗಳೊಂದಿಗೆ), ಪಶುಮಾಂಸಕಂ-ಪಶುಗಳ ಮಾಂಸವನ್ನೂ, ವಿಧಿ ನಿಷೇಧತಃ-ವಿಧಿನಿಷೇಧಗಳಿಂದ, ಮುಕ್ತಾಃ-ನಿರ್ಬಂಧವಿಲ್ಲದವರಾಗಿ (ಬದ್ಧರಲ್ಲದೇ), ಭಕ್ಷಂತಿ-ತಿನ್ನುವರೋ, ವಿಶೇಷ ಜ್ಞಾನವರ್ಜಿತಾಃ-ವಿಶೇಷ ಜ್ಞಾನವಿಲ್ಲದೇ, ಔಪಸ್ಥ್ಯ ಜೈಹ್ವ್ಯಮಾತ್ರಜ್ಞಾಃ-ಉಪಸ್ಥ (ಗುಹ್ಯೇಂದ್ರಿಯ) ಮತ್ತು ಜಿಹ್ವೆ (ರಸನೇಂದ್ರಿಯ-

---

ಹುಟ್ಟುತ್ತಾನೆ (೧೧-೧೩). ಪಾರ್ವತಿಕರು ಯಾರೆಂದರೆ:—ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತ ಗಡ್ಡೆಗೆಣಸು ಮೊದಲಾದ ಫಲಗಳನ್ನೂ, ಮೃಗಗಳಂತೆ ತೃಣಪರ್ಣಾದಿಗಳನ್ನೂ, ವಿಧಿ ನಿಷೇಧಗಳ ನಿರ್ಬಂಧವಿಲ್ಲದೇ, ಪಕ್ಷ್ಯಾದಿ ಪ್ರಾಣಿಗಳನ್ನು ಸಂಹರಿಸಿ, ಅವುಗಳ ಮಾಂಸವನ್ನೂ ತಿನ್ನುತ್ತ ಪಾಪಪುಣ್ಯಾದಿ ಯಾವ ವಿಶೇಷ ಜ್ಞಾನವೂ ಇಲ್ಲದೇ ಕೇವಲ ಶಿಶ್ನೋದರಪರಾಯಣರಾಗಿ (ಉಪಸ್ಥಜಿಹ್ವೆಗಳನ್ನು ತೃಪ್ತಿಗೊಳಿಸುವುದರಲ್ಲಿ ಮಾತ್ರ ಆಸಕ್ತರಾಗಿ) ಚಳಿ ಗಾಳಿ ಬಿಸಿಲುಗಳನ್ನು ಸಹಿಸಿಕೊಂಡು, ಪಶುಪ್ರಾಯರಾಗಿ ವಾಸಿಸುವ, ತುಚ್ಛವಾದ ದೇಹವುಳ್ಳ, (ಮಾನವದೇಹವನ್ನು ಸದುಪಯೋಗಮಾಡಿಕೊಳ್ಳಲು ಅಸಮರ್ಥರಾದ), ಬರ್ಬರ, ಕಿರಾತ, ಮ್ಲೇಂಛ, ಶಬರ, ಪುಲಿಂದ ಮೊದಲಾದ ನಾಮಗಳುಳ್ಳ, ಚೌರ್ಯ ಮೊದಲಾದ ದುಷ್ಪ್ರವೃತ್ತಿಗಳಲ್ಲಿರುವ ಸಮಸ್ತರೂ ಪಾರ್ವತೀಯ

ನಾಲಿಗೆ)ಗಳ ಜ್ಞಾನಮಾತ್ರವುಳ್ಳವರೋ (ಅವುಗಳನ್ನು ತೃಪ್ತಿಗೊಳಿಸುವುದರಲ್ಲಿ ಮಾತ್ರ ಆಸಕ್ತರಾಗಿರುವವರೋ), ಶೀತವಾತಾತಪಸಹಾಃ-ಚಳಿ, ಗಾಳಿ, ಬಿಸಿಲುಗಳನ್ನು ಸಹಿಸಲು ಸಮರ್ಥರಾಗಿ, ಪಶುಪ್ರಾಯಾಃ-ಪಶುಗಳನ್ನೇ ಬಹುವಾಗಿ ಹೋಲುವ, ಕುದೇಹಿ ನಃ-ತುಚ್ಛವಾದ (ಪುರುಷಾರ್ಥಸಾಧಕವಲ್ಲದ) ದೇಹಗಳುಳ್ಳ, ಬರ್ಬರಾದಯಃ-ಬರ್ಬರರೇ ಮೊದಲಾದ, ಕಿರಾತಮ್ಲೇಂಛಶಬರಪುಲಿಂದಾಃ- ಕಿರಾತರು, ಮ್ಲೇಂಛರು, ಶಬರರು, ಪುಲಿಂದರು (ವ್ಯಾಧರು) ಮೊದಲಾದ, ದಸ್ಯವಃ-ದಸ್ಯುಗಳೆಂಬ (ಚೌರ್ಯಾದಿ ವೃತ್ತಿಗಳುಳ್ಳ), ಪಾಪನಿರತಾಃ-ಪಾಪಕರ್ಮಗಳಲ್ಲಿ ತೊಡಗಿರುವ, (ಪಾರ್ವತೀಯಾಃ-ಗುಡ್ಡಗಾಡಿನಲ್ಲಿ ವಾಸಿಸುವ ಮನುಷ್ಯರೋ), ತೇ-ಆ, ಅಖಿಲಾಃ-ಸಮಸ್ತರೂ, ಪಾರ್ವತೀಯಾಃ-ಪಾರ್ವತೀಯರೆನಿಸುವರು.

**ತತಃ ಕಾಲೇನ ತದ್ಭೋಗಾಜ್ಜಾಯತೇ ಶುಭಯೋನಿಷು ।**
**ವಿಧೇರ್ವಾಪಿ ನಿಷೇಧಸ್ಯ ವಿಷಯಾ ಬ್ರಾಹ್ಮಣಾದಯಃ ॥ ೧೭ ॥**

ತತಃ-ನಂತರ(ಪಾರ್ವತೀಯದೇಹವಾದ ನಂತರ), ತದ್ಭೋಗಾತ್-ಅದರ ಭೋಗದಿಂದ), (ಮುಂದೆ), ಕಾಲೇನ-ಕಾಲಗತಿಯಿಂದ (ಕಾಲನಾಮಕ ಶ್ರೀಹರಿಯ ಸಂಕಲ್ಪದಂತೆ), ಶುಭಯೋನಿಷು-ಪುಣ್ಯಯೋನಿಗಳಲ್ಲಿ ಪುಣ್ಯಸಾಧಕ ದೇಹಗಳಲ್ಲಿ ಜಾಯತೇ-ಜನ್ಮ ಪಡೆಯುತ್ತಾನೆ; (ಶುಭದೇಹಗಳು ಯಾವುವೆಂದರೆ), ವಿಧೇಃ-ವಿಧಿಯ, (ಕರ್ತವ್ಯಗಳನ್ನು ವಿಧಿಸುವ), ವಾ ಅಪಿ-ಮತ್ತು ಸಹ, ನಿಷೇಧಸ್ಯ-ನಿಷೇಧದ (ಮಾಡತಕ್ಕದ್ದಲ್ಲವೆಂದು ಹೇಳುವ) ನಿಯಮಗಳಿಗೆ, ವಿಷಯಾಃ-ವಿಷಯಗಳಾದ (ವಿಧಿ ನಿಷೇಧಗಳ ಸಂಬಂಧವುಳ್ಳ-ಆ ನಿಯಮಗಳಿಗೆ ಒಳಪಡುವ), ಬ್ರಾಹ್ಮಣಾದಯಃ-ಬ್ರಾಹ್ಮಣ ಮೊದಲಾದ ವರ್ಣಗಳಿಗೆ ಸೇರುವ ದೇಹಗಳು.

**ತತ್ರಾಪಿ ಕ್ರಮತಃ ಪ್ರಾಪ್ಯ ತ್ರೈವರ್ಣ್ಯಂ ಸಂಸೃತೌ ಭ್ರಮನ್ ।**
**ಯದಿ ಕುರ್ಯಾದ್ದುರಾಚಾರಂ ತತೋ ನರಕಮಾಪ್ನುಯಾತ್ ॥ ೧೮ ॥**

ತತ್ರಾಪಿ-ಅಲ್ಲಿಯೂ (ಬ್ರಾಹ್ಮಣಾದಿ ವರ್ಣಯುಕ್ತ ದೇಹಗಳನ್ನು ಹೊಂದುವುದರಲ್ಲಿ) ಸಹ, ಕ್ರಮತಃ-ಕ್ರಮವಾಗಿ (ಶೂದ್ರದೇಹದಿಂದ ವೈಶ್ಯದೇಹವನ್ನೂ ಅಥವಾ

---

ರೆನಿಸುತ್ತಾರೆ(೧೪-೧೬). ಭೋಗದಿಂದ ಕರ್ಮಕ್ಷಯವನ್ನು ದೊರಕಿಸಲಾರದ ಆ ಜೀವನು, ಪಾರ್ವತೀಯನಾಗಿ ಹುಟ್ಟಿ ಆ ದೇಹದಿಂದ ತನ್ನ ಕರ್ಮವನ್ನು ಭೋಗಿಸಿದ ನಂತರ, ಶ್ರೀಹರಿಸಂಕಲ್ಪಾನುಸಾರವಾಗಿ, ಶುಭದೇಹಗಳನ್ನು ಹೊಂದುತ್ತಾನೆ; ವಿಧಿ ನಿಷೇಧಗಳಿಗೆ ಒಳಪಟ್ಟ ಬ್ರಾಹ್ಮಣಾದಿ ವರ್ಣಗಳಿಗೆ ಸೇರಿದ ದೇಹಗಳೇ ಶುಭದೇಹಗಳು(೧೭). ಹೀಗೆ ವರ್ಣಯುಕ್ತದೇಹಗಳಲ್ಲಿ (ಶೂದ್ರಾದಿಗಳಲ್ಲಿ ಹುಟ್ಟಿ)

ಅನುಲೋಮಾದಿ ದೇಹಗಳಿಂದ ಶೂದ್ರದೇಹವನ್ನೂ ಇತ್ಯಾದಿ ಕ್ರಮದಿಂದ), ತ್ರೈವರ್ಣ್ಯಂ-ಬ್ರಾಹ್ಮಣ, ಕ್ಷತ್ರಿಯ, ವೈಶ್ಯಗಳೆಂಬ ಮೂರು ವರ್ಣಗಳ ದೇಹವನ್ನು ಪ್ರಾಪ್ಯ-ಹೊಂದಿ (ಆ ವರ್ಣಗಳಲ್ಲಿ ಹುಟ್ಟಿ), ಸಂಸೃತೌ-ಸಂಸಾರದಲ್ಲಿ ಭ್ರಮನ್-ಸುತ್ತುವವನಾಗಿ, ಯದಿ-ಒಂದು ವೇಳೆ, ದುರಾಚಾರಂ-ದುರಾಚಾರವನ್ನು ಕುರ್ಯಾತ್-ಮಾಡಿದರೆ, (ನಿಷಿದ್ಧಗಳಾದ ದುಷ್ಕರ್ಮಗಳನ್ನು ಆಚರಿಸಿದರೆ), ತತಃ-ಅಲ್ಲಿಂದ (ಆ ಬ್ರಾಹ್ಮಣಾದಿ ದೇಹವನ್ನು ಬಿಟ್ಟು), ನರಕಂ-ನರಕವನ್ನು ಆಪ್ನುಯಾತ್-ಹೊಂದುತ್ತಾನೆ.

ಭುಕ್ತ್ವಾ ಕರ್ಮಾರ್ಜಿತಾನ್ ಲೋಕಾನ್ ನಿರಯಾನ್ ಬಹು ವತ್ಸರಂ ।
ಕರ್ಮಶೇಷೇಣ ಭೂಯಃ ಸ ಸ್ಥಾವರಾದಿಷು ಜಾಯತೇ ॥ ೧೯ ॥

ಬಹುವತ್ಸರಂ-ಬಹುವರ್ಷಗಳವರೆಗೆ, ಕರ್ಮಾರ್ಜಿತಾನ್-ತನ್ನ ದುಷ್ಕರ್ಮದಿಂದ ಸಂಪಾದಿತವಾದ, ನಿರಯಾನ್ ಲೋಕಾನ್-ನರಕಲೋಕಗಳನ್ನು (ಸ್ಥಾನ ವಿಶೇಷಗಳನ್ನು), ಭುಕ್ತ್ವಾ-ಭೋಗಿಸಿ(ಅಲ್ಲಿನ ದುಃಖಗಳನ್ನು ಅನುಭವಿಸಿ), ಕರ್ಮಶೇಷೇಣ-ಕರ್ಮಶೇಷದಿಂದ (ಅವಶಿಷ್ಟವಾದ ಪಾಪದ ಫಲವಾಗಿ,[1] ಭೂಯಃ-ಮತ್ತೆ ಸಃ-ಆ ಜೀವನು, ಸ್ಥಾವರಾದಿಷು-ಸ್ಥಾವರ (ತೃಣ ಲತಾದಿ) ದೇಹಗಳಲ್ಲಿ, ಜಾಯತೇ-ಹುಟ್ಟುತ್ತಾನೆ.

ಪೂರ್ವೋಕ್ತೇನ ಕ್ರಮೇಣಾಸೌ ಪ್ರಾಪ್ಯ ತ್ರೈವರ್ಣಿಕಾದಿಕಂ ।
ಭ್ರಮನ್ನಾಸ್ತೇ ಸ ಸಂಸಾರೇ ತತ್ರ ಮೋಕ್ಷಕಥಾ ಕುತಃ ॥ ೨೦ ॥

---

ಬಂದು, ಕ್ರಮವಾಗಿ ತ್ರೈವರ್ಣ್ಯವನ್ನು) ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಲ್ಲಿ ಹುಟ್ಟಿ ಸಂಸಾರದಲ್ಲಿ ಸುತ್ತುತ್ತಿರುವಾಗ, ದುರಾಚಾರವುಳ್ಳವನಾದರೆ, ಅಲ್ಲಿಂದ (ಆ ದೇಹದಿಂದ) ನರಕವನ್ನು ಹೊಂದುತ್ತಾನೆ(೧೮). ತನ್ನ ದುಷ್ಕರ್ಮದಿಂದ ಸಂಪಾದಿತವಾದ ನರಕಸ್ಥಾನಗಳಲ್ಲಿ ಬಹುವರ್ಷಗಳವರೆಗೆ ದುಃಖವನ್ನುಂಡು, ಕರ್ಮಶೇಷದಿಂದ ಮತ್ತೆ ಸ್ಥಾವರ ದೇಹಾದಿಗಳನ್ನು ಹೊಂದುತ್ತಾನೆ(೧೯). ಅಲ್ಲಿಂದ ಮುಂದೆ, ಈ ಮೊದಲು ಹೇಳಿದ ಕ್ರಮದಿಂದ, ಬ್ರಾಹ್ಮಣಾದಿ ದೇಹವನ್ನು ಹೊಂದಿ, ಸಂಸಾರದಲ್ಲಿ ಸುತ್ತುತ್ತಿರುವನು;

---

೧. ಯಾವ ಕರ್ಮದ ಫಲಭೋಗಕ್ಕಾಗಿ ನರಕಸ್ಥಾನವನ್ನು ಹೊಂದಿರುವನೋ, ಅಲ್ಲಿ ಅದೇ ಕರ್ಮದ ಅವಶಿಷ್ಟ ಫಲದುಃಖಕ್ಕಾಗಿ ಇರಲು (ದುಃಖವನ್ನು ಅನುಭವಿಸಲು) ಅವಕಾಶವಿಲ್ಲದಾಗ, ಅಲ್ಲಿಂದ ಭೂಮಿಯಲ್ಲಿ ಸ್ಥಾವರಾದಿ (ಅಜ್ಞಾನಪ್ರಚುರ) ದೇಹಗಳನ್ನು ಹೊಂದಿಸಲ್ಪಡುತ್ತಾನೆ. ಇದರಂತೆಯೇ ಪುಣ್ಯಶೇಷಕ್ಕೆ ಸ್ವರ್ಗಾದಿ ಸ್ಥಾನಗಳಿಂದ, ಮನುಷ್ಯನಾಗಿ ಶುದ್ಧ ಮನಸ್ಕ ಶ್ರೀಮಂತರಲ್ಲಿ ಜನ್ಮವನ್ನು ಹೊಂದುತ್ತಾನೆ.

ಅಸೌ-ಈ(ಸ್ಥಾವರಜನ್ಮವನ್ನು ಹೊಂದಿದ) ಜೀವನು, ಪೂರ್ವೋಕ್ತೇನ-ಹಿಂದೆ ಹೇಳಲಾದ, ಕ್ರಮೇಣ-ಕ್ರಮದಿಂದ, ತ್ರೈವರ್ಣಕಾದಿಕಂ-ಬ್ರಾಹ್ಮಣಾದಿ ದೇಹವನ್ನು, ಪ್ರಾಪ್ಯ-ಹೊಂದಿ, ಸಃ-ಆತನು, ಸಂಸಾರೇ-ಸಂಸಾರದಲ್ಲಿ ಭ್ರಮನ್-ಸುತ್ತುತ್ತ ಆಸ್ತೇ-ಇರುತ್ತಾನೆ; ತತ್ರ-ಹೀಗಿರುವಲ್ಲಿ ಮೋಕ್ಷಕಥಾ-ಮೋಕ್ಷದ ವಾರ್ತೆಯು(ಮಾತು), ಕುತಃ-ಎಲ್ಲಿಂದ ಬರಬೇಕು? (ಅದಕ್ಕೆ ಅವಕಾಶವೇ ಇರುವುದಿಲ್ಲ).

ಶುಭಯೋನಿಸ್ಥಿತೋ ಜೀವೋ ಯದಿ ಕರ್ಮ ಶುಭಂ ಚರೇತ್ ।
ತದಾ ಸ ಸ್ವರ್ಗತಿಂ ಪ್ರಾಪ್ಯ ಕರ್ಮಶೇಷಸ್ತತಶ್ಚ್ಯುತಃ ॥ ೨೧ ॥

ಪುನಃ ಶುಭೇಷು ದೇಹೇಷು ಸ್ಥಿತ್ವಾ ಸತ್ಕರ್ಮನಿಷ್ಠಿತಃ ।
ದಯಾದಾನರತಃ ಶ್ರೀಮಾನ್ ದೇವತಾತಿಥಿಪೂಜಕಃ ॥ ೨೨ ॥

ಸ್ವಕರ್ಮಣಾರ್ಜಿತಾನ್ ದೇಹಾನ್ ಶುಭಯೋನಿನ್ ಪುನಃಪುನಃ ।
ಪ್ರಾಪ್ಯ ತ್ರಿದಿವಭೂಮಿಷ್ಠಃ ಪ್ರಾಯೋ ಭ್ರಮತಿ ಸಂಸೃತೌ ॥ ೨೩ ॥

ಶುಭಯೋನಿಸ್ಥಿತಃ-ಶುಭದೇಹದಲ್ಲಿ (ಬ್ರಾಹ್ಮಣಾದಿ ಯೋನಿಯಲ್ಲಿ ಜನಿಸಿ) ಸ್ಥಿತನಾದ, ಜೀವಃ-ಜೀವನು, ಶುಭಂ ಕರ್ಮ-ಪುಣ್ಯಕರ್ಮವನ್ನು ಯದಿ ಚರೇತ್-ಮಾಡಿದರೆ, ತದಾ-ಆಗ(ಆ ದೇಹವನ್ನು ಬಿಟ್ಟ ನಂತರ), ಸ್ವರ್ಗತಿಂ-ಸ್ವರ್ಗಲೋಕವನ್ನು, ಪ್ರಾಪ್ಯ-ಹೊಂದಿ, ತತಃ-ಅಲ್ಲಿಂದ, ಕರ್ಮಶೇಷಃ-ಕರ್ಮ(ಪುಣ್ಯ) ಶೇಷವುಳ್ಳವನಾಗಿ, ಚ್ಯುತಃ-ಕೆಳಗೆ(ಭೂಮಿಗೆ) ಬಿದ್ದು ಪುನಃ-ಮತ್ತೆ ಶುಭೇಷು-ಪುಣ್ಯಕರಗಳಾದ (ಪವಿತ್ರವಾದ), ದೇಹೇಷು-(ಬ್ರಾಹ್ಮಣಾದಿ) ದೇಹಗಳಲ್ಲಿ ಸ್ಥಿತ್ವಾ-ಇದ್ದು ಸತ್ಕರ್ಮನಿಷ್ಠಿತಃ-ಸತ್ಕರ್ಮ(ಪುಣ್ಯ)ಗಳಲ್ಲಿ ಆಸಕ್ತನಾಗಿ, ಶ್ರೀಮಾನ್-

---

ಹೀಗಿರುವಲ್ಲಿ ಕರ್ಮಕ್ಷಯದಿಂದ ಮೋಕ್ಷವೆಂಬ ಮಾತು ದೂರದಲ್ಲಿಯೇ ಉಳಿಯುತ್ತದೆ—ಅದರ ಪ್ರಸ್ತಾಪಕ್ಕೆ ಸಹ ಅವಕಾಶವಿರುವುದಿಲ್ಲ(೨೦).

ಬ್ರಾಹ್ಮಣಾದಿ ಶುಭದೇಹಗಳಲ್ಲಿ ಜನಿಸಿದ ಜೀವನು, (ದುರಾಚಾರಿಯಾಗದೇ) ಸತ್ಕರ್ಮಗಳನ್ನು ಮಾಡಿದರೆ, ಸ್ವರ್ಗಲೋಕವನ್ನು ಹೊಂದಿ, ಅಲ್ಲಿ ನಾನಾ ಸುಖಗಳನ್ನನುಭವಿಸಿ, ಪುಣ್ಯಶೇಷದಿಂದ (ಇನ್ನೂ ಕೆಲವು ಕಾಲ ಅಲ್ಲಿ ಸುಖಭೋಗವನ್ನು ಹೊಂದಲು ಸಾಕಷ್ಟು ಪುಣ್ಯವಿಲ್ಲದ ಕಾರಣ, ಅಥವಾ ಪ್ರಧಾನ ಪುಣ್ಯಕರ್ಮದ ಪ್ರಭಾವರೂಪದ ಅವಾಂತರಫಲದಿಂದ) ಭೂಮಿಯಲ್ಲಿ ಬ್ರಾಹ್ಮಣಾದಿ ಶುಭದೇಹಗಳನ್ನು ಹೊಂದುತ್ತಾನೆ; ಆ ದೇಹದಲ್ಲಿದ್ದು ಪುನಃ ಸತ್ಕರ್ಮಗಳನ್ನಾಚರಿಸುತ್ತಾನೆ; ಶ್ರೀಮಂತನೂ ಆಗಿದ್ದು ಸತ್ಪಾತ್ರರಲ್ಲಿ ಯಥೇಚ್ಛವಾಗಿ ದಾನಮಾಡಿ, ದೇವತೆಗಳನ್ನೂ ಅತಿಥಿಗಳನ್ನೂ ಪೂಜಿಸಿ, ಈ ತನ್ನ ಸತ್ಕರ್ಮಗಳ ಫಲರೂಪವಾದ ಶುಭದೇಹಗಳನ್ನು

ಶ್ರೀಮಂತನೂ, ದಯಾದಾನರತಃ-ದಯಾವಂತನೂ ದಾನಪರನೂ ಆಗಿ, ದೇವತಾತಿಥಿಪೂಜಕಃ-ದೇವತೆಗಳನ್ನೂ ಅತಿಥಿಗಳನ್ನೂ ಪೂಜಿಸುತ್ತ ಸ್ವಕರ್ಮಣಾ-ತನ್ನ ಕರ್ಮದಿಂದ, ಅರ್ಜಿತಾನ್-ಸಂಪಾದಿಸಿದ, ಶುಭಯೋನೀನ್-ಶುಭಯೋನಿಗಳ (ಬ್ರಾಹ್ಮಣಾದಿ ಯೋನಿಗಳ), ದೇಹಾನ್-ದೇಹಗಳನ್ನು ಪುನಃಪುನಃ-ಮತ್ತೆಮತ್ತೆ ಪ್ರಾಪ್ಯ-ಹೊಂದಿ, ಪ್ರಾಯಃ-ಬಹುವಾಗಿ, ತ್ರಿದಿವ ಭೂಮಿಷ್ಠಃ-ಸ್ವರ್ಗ ಮತ್ತು ಭೂಲೋಕಗಳಲ್ಲಿರುತ್ತ ಸಂಸೃತೌ-ಸಂಸಾರದಲ್ಲಿ ಭ್ರಮತಿ-ಸುತ್ತುತ್ತಾನೆ.

**ಈಷತ್ ಪಾಪಸ್ಯ ಯೋಗೇನ ಕದಾಚಿನ್ನರಕೇ ಸ್ಥಿತಃ ।**
**ಕುಯೋನಿಸ್ಥಃ ಕದಾಚಿತ್ ಸ್ಯಾತ್ ಪುನಃ ಸ್ಯಾತ್ ಶುಭಯೋನಿಗಃ ॥ ೨೪ ॥**

ಈಷತ್ ಪಾಪಸ್ಯ-ಅಲ್ಪವಾದ ಪಾಪದ, ಯೋಗೇನ-ಸಂಭವದಿಂದ(ಸಂಬಂಧದಿಂದ), ಕದಾಚಿತ್-ಒಂದೊಂದು ವೇಳೆ, ನರಕೇ-ನರಕದಲ್ಲಿ, ಸ್ಥಿತಃ-ಇದ್ದು (ನರಕ ದುಃಖವನ್ನು ಭೋಗಿಸಿ), ಕದಾಚಿತ್-ಮತ್ತೊಂದು ವೇಳೆ (ನರಕವಾಸದ ನಂತರ), ಕುಯೋನಿಸ್ಥಃ-ದುರ್ಯೋನಿಗಳಲ್ಲಿದ್ದು(ಹೀನಮಾನವ ದೇಹಗಳಲ್ಲಿ ಇದ್ದು), ಪುನಃ-ಮತ್ತೆ ಶುಭಯೋನಿಗಃ-(ಬ್ರಾಹ್ಮಣಾದಿ) ಶುಭದೇಹವನ್ನು ಹೊಂದಿದವನು, ಸ್ಯಾತ್-ಆಗುತ್ತಾನೆ.

**ಯೋ ಹಿ ಸ್ಯಾದ್ರಾಜಸೋ ಜೀವಸ್ತಾಮಸೋ ವಾ ಕಥಂಚನ ।**
**ಕದಾಚಿತ್ ಸೋಽಪಿ ಲಭತೇ ಸತ್ಕರ್ಮಾನುಷ್ಠಿತೇರ್ಬಲಾತ್ ॥ ೨೫ ॥**

**ಸ್ವರ್ಗಂ ವಾಪಿ ಶುಭಾಂ ಯೋನಿಂ ಪುನಃ ಪಾಪಾತ್ಕುಯೋನಿಜಃ ।**
**ಏವಂ ಸರ್ವೇ ಇಮೇ ಜೀವಾ ಮನ್ಮಾಯಾಚಕ್ರಸಂಸ್ಥಿತಾಃ ॥ ೨೬ ॥**

---

ಹೊಂದುತ್ತ ಬಹುವಾಗಿ ಪುನಃಪುನಃ ಸ್ವರ್ಗಭೂಲೋಕಗಳನ್ನು ಹೊಂದುತ್ತ ಸಂಸಾರದಲ್ಲಿ ಸುತ್ತುತ್ತಾನೆ (೨೦-೨೩). ಹೀಗೆ ಸುತ್ತುವ ಜೀವನು, ಸಾತ್ವಿಕಸ್ವರೂಪನೇ ಆದರೂ, ಒಂದೊಂದು ವೇಳೆ, ಅಲ್ಪಪಾಪಗಳನ್ನೂ ಆಚರಿಸಿ, ಅದರ ಫಲವಾಗಿ ನರಕದುಃಖವನ್ನೂ ಅನುಭವಿಸಿ, ಪಶು ಪಕ್ಷಿ ಮೊದಲಾದ ಕುಯೋನಿಗಳಲ್ಲಿಯೂ ಹೀನ (ಪಾರ್ವತೀಯಾದಿ) ಮಾನವದೇಹಗಳಲ್ಲಿಯೂ, ಬಂದು (ಜನಿಸಿ) ನಂತರ ಕ್ರಮವಾಗಿ ಬ್ರಾಹ್ಮಣಾದಿ ಶುಭದೇಹಗಳನ್ನು ಹೊಂದಿ ಸಾಧನಮಾರ್ಗದಲ್ಲಿ ಮುಂದರಿಯುತ್ತಾನೆ (೨೪). ಇನ್ನು ರಾಜಸ, ತಾಮಸ ಸ್ವಭಾವದ ಜೀವರೂ ಸಹ ಕೆಲವು ವೇಳೆ, ಶ್ರಮಸಾಧ್ಯ ಸತ್ಕರ್ಮಗಳನ್ನು (ಒಳ್ಳೆಯವರ ಸಹವಾಸಾದಿಗಳ ಪ್ರಭಾವಕ್ಕೊಳಗಾಗಿ), ಮಾಡುವುದುಂಟು; ಆಗ, ಆ ಸತ್ಕರ್ಮದ ಫಲವಾಗಿ ಸ್ವರ್ಗಸ್ಥಾನವನ್ನೂ (ಸುಖಭೋಗ ಪ್ರದೇಶಗಳಲ್ಲಿ ಸುಖವನ್ನೂ) ಹೊಂದಿ, ಬ್ರಾಹ್ಮಣಾದಿ ಶುಭದೇಹಗಳಲ್ಲಿ ಹುಟ್ಟುತ್ತಾರೆ;

**ಭ್ರಮಂತಿ ಸಂಸೃತೌ ಬ್ರಹ್ಮನ್ ಕರ್ಮಬಂಧಾತ್ ಪುನಃ ಪುನಃ ।**
**ನ ಹಿ ಮೋಕ್ಷಕಥಾ ತತ್ರ ಯಾವನ್ನ ಮದನುಗ್ರಹಃ ॥ ೨೭ ॥**

ಯಃ- ಯಾವ, ಜೀವಃ- ಜೀವನು, ರಾಜಸಃ- ರಾಜಸಸ್ವಭಾವದವನು, ವಾ- ಅಥವಾ, ತಾಮಸಃ- ತಾಮಸಸ್ವಭಾವದವನು, ಸ್ಯಾತ್- ಆಗಲಿ, ಸಃ ಅಪಿ- ಅವನೂ ಸಹ, ಕಥಂಚಿತ್- (ಸಹವಾಸಾದಿ) ಯಾವುದೋ ಕಾರಣದಿಂದ, ಕದಾಚಿತ್- ಒಂದೊಂದು ವೇಳೆ, ಸತ್ಕರ್ಮಾನುಷ್ಠಿತೇಃ- ಸತ್ಕರ್ಮಾನುಷ್ಠಾನದ (ಧರ್ಮಾಚರಣೆಯ), ಬಲಾತ್- ಪ್ರಭಾವದಿಂದ, ಸ್ವರ್ಗಂ- ಸ್ವರ್ಗವಾಸವನ್ನೂ, ಶುಭಾಂ- ಶುಭವಾದ (ಪವಿತ್ರವಾದ), ಯೋನಿಂ- (ಬ್ರಾಹ್ಮಣಾದಿ) ದೇಹವನ್ನು ವಾ ಅಪಿ- ಆಗಲಿ, ಲಭತೇ- ಹೊಂದುತ್ತಾನೆ; ಪುನಃ- ಮತ್ತೂ, ಪಾಪಾತ್- ಪಾಪ ಕರ್ಮಾಚರಣೆಯಿಂದ, ಕುಯೋನಿಜಃ- ನೀಚದೇಹಗಳಲ್ಲಿ ಹುಟ್ಟುವವನು (ಆಗುತ್ತಾನೆ); ಏವಂ- ಹೀಗೆ, ಇಮೇ- ಈ, ಸರ್ವೇ- ಎಲ್ಲ ಜೀವಾಃ- ಜೀವರೂ, ಮನ್ಮಾಯಾಚಕ್ರಸಂಸ್ಥಿತಾಃ- ನನ್ನ (ಮಾಯಾ) ಸಂಕಲ್ಪವೆಂಬ (ಪ್ರಾಕೃತದೇಹಗಳಲ್ಲಿ ಸುತ್ತುವ) ಚಕ್ರದಲ್ಲಿರುತ್ತ, ಬ್ರಹ್ಮನ್- ಹೇ ಬ್ರಹ್ಮದೇವ!, ಕರ್ಮಬಂಧಾತ್- (ತಂತಮ್ಮ) ಕರ್ಮದಿಂದ ಬಂಧಿತರಾಗಿ, ಪುನಃಪುನಃ- ಮತ್ತೆ ಮತ್ತೆ ಸಂಸೃತೌ- ಸಂಸಾರದಲ್ಲಿ, ಭ್ರಮಂತಿ- ಸುತ್ತುತ್ತಾರೆ; ತತ್ರ- ಹೀಗಿರುವಲ್ಲಿ, ಯಾವತ್- ಎಲ್ಲಿಯವರೆಗೆ, ಮದನುಗ್ರಹಃ- ನನ್ನ ಪ್ರಸಾದವು (ಈ ಜೀವನನ್ನು ಸಂಸಾರಚಕ್ರದಿಂದ ವಿಮೋಚನೆಮಾಡುವೆನೆಂಬ ಸಂಕಲ್ಪರೂಪದ ಅನುಗ್ರಹವು), ನ- ಇಲ್ಲವೋ (ಅಲ್ಲಿಯವರೆಗೆ), ಮೋಕ್ಷಕಥಾ- ಮೋಕ್ಷದ ಮಾತು, ನ ಹಿ- ಇಲ್ಲವೇ ಇಲ್ಲ.

**ಪುಣ್ಯಕರ್ಮಣಿ ವಿಘ್ನಾನಿ ಕುರ್ವಂತೀಮೇ ಮಮಾಜ್ಞಯಾ ।**
**ದೇವಾಶ್ಚ ರಾಕ್ಷಸಾಶ್ಚಾಪಿ ಯೇ ಚಾನ್ಯೇ ಕ್ರೂರಯೋನಯಃ ॥ ೨೮ ॥**

ಮಮ- ನನ್ನ ಆಜ್ಞಯಾ- ಆಜ್ಞೆಯಿಂದ, ರಾಕ್ಷಸಾಃ- ರಾಕ್ಷಸರೂ, ಇಮೇ- ಈ, ದೇವಾಶ್ಚ- (ತತ್ತ್ವಾಭಿಮಾನಿ) ದೇವತೆಗಳು ಸಹ, ಅಪಿ- ಮತ್ತು ಯೇ ಅನ್ಯೇ- ಯಾವ ಇತರ, ಕ್ರೂರಯೋನಯಃ- ಕ್ರೂರದೇಹಿಗಳೋ (ಪಿಶಾಚಾದಿ) ಅವರೂ ಸಹ, ಪುಣ್ಯಕರ್ಮಣಿ-

ಅಲ್ಲಿ ಪುನಃ ಪಾಪಕರ್ಮಗಳನ್ನಾಚರಿಸಿ, ಹೀನದೇಹಗಳಲ್ಲಿ ಜನಿಸುತ್ತಾರೆ; ಹೀಗೆ ಸರ್ವ ಜೀವರೂ ನನ್ನ ಸಂಕಲ್ಪಾನುಸಾರವಾಗಿ, ನನ್ನ ಅಧೀನವಾದ ಪ್ರಕೃತಿಯ ಬಂಧವೆಂಬ ಚಕ್ರದಲ್ಲಿ ಸಿಕ್ಕು, ಸ್ವಸ್ವಕರ್ಮಗಳೆಂಬ ಬಂಧನಕ್ಕೊಳಗಾಗಿ, ಪುನಃಪುನಃ ಸಂಸಾರದಲ್ಲಿ ಸುತ್ತುತ್ತಾರೆ; (ದೇಹದಿಂದ ಅನ್ಯದೇಹವನ್ನು ಮೇಲಿಂದ ಮೇಲೆ ಹೊಂದುತ್ತ ಸಂಸಾರವೆಂಬ ಚಕ್ರದಲ್ಲಿ ಸುತ್ತುತ್ತಾರೆ); ಈ ಚಕ್ರದಿಂದ, ಬಿಡುಗಡೆಯು, ನನ್ನ ಪ್ರಸಾದವಿಲ್ಲದೇ, ಎಂದೂ, ಯಾರಿಗೂ ದೊರೆಯುವುದಿಲ್ಲ. ಅವರಿಗೆ ಮೋಕ್ಷದ ಪ್ರಸ್ತಾಪ ಸಹ ಜೀವರಿಂದ ದೂರಾಗಿರುತ್ತದೆ (೨೫-೨೭).

ಪುಣ್ಯಕರ್ಮದಲ್ಲಿ (ಪುಣ್ಯಕರ್ಮಗಳ ಆಚರಣೆಗೆ), ವಿಘ್ನಾನಿ-(ಬಹು ವಿಧದ) ವಿಘ್ನಗಳನ್ನು ಕುರ್ವಂತಿ-ಮಾಡುತ್ತಾರೆ. ಏಕೆಂದರೆ—

**ಜೀವಕರ್ಮಾನುಸಾರೇಣ ಶುಭಸ್ಯಾಪ್ಯಶುಭಸ್ಯ ವಾ ।**
**ಯೋಜಯೇ ಕರ್ಮಣಃ ಸಿದ್ಧಿಂ ಘಾತಯೇ ವಾ ಪರಸ್ಪರಂ ॥ ೨೯ ॥**

(ಅಹಂ-ನಾನು), ಜೀವಕರ್ಮಾನುಸಾರೇಣ-(ಜೀವರ) ಪೂರ್ವಕರ್ಮಾನುಸಾರವಾಗಿ, ಶುಭಸ್ಯ-ಶುಭವಾದ, ವಾ-ಅಥವಾ, ಅಶುಭಸ್ಯ-ಅಶುಭವಾದ, ಕರ್ಮಣಃ-ಕರ್ಮಕ್ಕೆ, ಸಿದ್ಧಿಂ-ಸಿದ್ಧಿಯನ್ನು (ಕ್ರಿಯಾಪೂರ್ತಿಯನ್ನು ಮತ್ತು ಫಲವನ್ನೂ), ಯೋಜಯೇ-ಯೋಜನೆಮಾಡುತ್ತೇನೆ(ಹೊಂದಿಸುತ್ತೇನೆ), ವಾ-ಅಥವಾ, ಪರಸ್ಪರಂ-ಅನ್ಯೋನ್ಯವಾಗಿ (ಪಾಪದಿಂದ ಪುಣ್ಯವನ್ನೂ ಪುಣ್ಯದಿಂದ ಪಾಪವನ್ನೂ), ಘಾತಯೇ-ನಷ್ಟಗೊಳಿಸುತ್ತೇನೆ (ಕ್ಷೀಣವಾಗುವಂತೆ ಮಾಡುತ್ತೇನೆ).

**ಅನಾದ್ಯನಂತಕಾಲಂ ಹಿ ಕುರ್ವನ್ನೇವಂ ಸದೈವ ತು ।**
**ಕ್ರೀಡಾಮಿ ಲೀಲಯಾ ಬ್ರಹ್ಮನ್ ಕಸ್ಯಚಿನ್ನ ವಶೇ ಸ್ಥಿತಃ ॥ ೩೦ ॥**

---

ದೇವತೆಗಳೂ, ರಾಕ್ಷಸರೂ ಮತ್ತು ಅನ್ಯಕ್ರೂರಪ್ರಾಣಿಗಳೂ, ನನ್ನಾಜ್ಞೆಯಿಂದ,[1] ಪುಣ್ಯಕರ್ಮಗಳ ಆಚರಣೆಗೆ ವಿಘ್ನಗಳನ್ನು ಉಂಟುಮಾಡುತ್ತಾರೆ (ವಿರೋಧಿಸಿ ಕರ್ಮಪೂರ್ತಿಯಾಗದಂತೆ ಮಾಡುತ್ತಾರೆ); ಏಕೆಂದರೆ, ಕರ್ಮಕರ್ತೃಗಳಾದ ಜೀವರ ಪೂರ್ವಕರ್ಮಾನುಸಾರವಾಗಿ, ಅವರ ಶುಭಾಶುಭ ಕರ್ಮಗಳಿಗೆ ಸಿದ್ಧಿಯನ್ನೂ (ಕರ್ಮಪೂರ್ತಿಯನ್ನೂ ಫಲವನ್ನೂ) ಮತ್ತು(ಅಥವಾ), ಪುಣ್ಯಪಾಪಗಳನ್ನು(ಅವುಗಳ ಫಲಗಳನ್ನು) ಅನ್ಯೋನ್ಯವಾಗಿ, ಕ್ಷೀಣಿಸುವಂತೆ ಅಥವಾ ನಷ್ಟಗೊಳ್ಳುವಂತೆಯೂ, ನಾನೇ ಮಾಡುತ್ತೇನೆ (೨೮-೨೯). ಹೀಗೆ ಜೀವರುಗಳ ಕರ್ಮಪೂರ್ತಿಗೂ, ಫಲಸಿದ್ಧಿಗೂ ನಾನೇ

1. ಶ್ರೀಹರಿಯು ವಿಘ್ನಕಾರಿಗಳನ್ನು ಒಳಗಿದ್ದು ಪ್ರೇರಿಸುವುದೇ ಆತನ ಆಜ್ಞೆಯು; ಪುಣ್ಯಜೀವಿಗಳ ಪುಣ್ಯಕರ್ಮಗಳು ಆ ಕಾಲದಲ್ಲಿ ಪೂರ್ಣಗೊಳ್ಳತಕ್ಕದ್ದಲ್ಲವೆಂದೂ ಅವುಗಳಿಗೆ ಪೂರ್ಣಫಲ ದೊರಕತಕ್ಕದ್ದಲ್ಲವೆಂದೂ, ಕರ್ಮಕರ್ತೃಗಳ ಪೂರ್ವಕರ್ಮಗಳನ್ನು ಬಲ್ಲ ಸರ್ವಜ್ಞನಾದ ಶ್ರೀಹರಿಯು ತಿಳಿದು, ಪುಣ್ಯಕರ್ಮಗಳಲ್ಲಿ ವಿಘ್ನ ಮಾಡುವಂತೆ ಅನ್ಯರನ್ನು ಪ್ರೇರಿಸುತ್ತಾನೆ; ಈ ವಿಘ್ನಕಾರ್ಯವನ್ನು ಬೇರೆ ಕಾರಣಗಳಿಂದಲೂ ಮಾಡಿಸುವುದುಂಟು; ಧ್ರುವರಾಜನ ತಪಸ್ಸಿಗೆ ದೇವತೆಗಳು, ಸಿಂಹ, ಶಾರ್ದೂಲ, ಸರ್ಪಾದಿ ರೂಪಗಳಿಂದ ವಿಘ್ನಮಾಡಿದರು. ಧ್ರುವರಾಜನಿಗೆ ಲೋಕೋತ್ತರ ಯಶಸ್ಸನ್ನು ಅನುಗ್ರಹಿಸುವುದೂ, ಆತನ ಕರ್ಮಾನುಸಾರವಾದ ತನ್ನ ಪ್ರತ್ಯಕ್ಷದರ್ಶನರೂಪದ ಮಹಾಫಲವನ್ನು ಸಕಾಲದಲ್ಲಿ ದೊರಕಿಸುವುದೂ, ದೇವತೆಗಳಿಂದ ಮಾಡಿಸಿದ ವಿಘ್ನಗಳ ಉದ್ದೇಶವಾಗಿದೆ. ಭಗವದ್ಭಕ್ತನಾದ ಧ್ರುವರಾಜನ ಕೀರ್ತಿಯನ್ನು ಲೋಕದಲ್ಲಿ ಪ್ರಸಾರವಾಗುವಂತೆ ಮಾಡಿದ ಶ್ರೀಹರಿಪ್ರೀತಿಕರವಾದ ವಿಘ್ನಕರ್ಮದಿಂದ ದೇವತೆಗಳೂ ಮಹಾಪುಣ್ಯವನ್ನೇ ಹೊಂದಿದರು

ಬ್ರಹ್ಮನ್-ಹೇ ಬ್ರಹ್ಮ!, ಅನಾದ್ಯನಂತಕಾಲಂ ಹಿ-ಅನಾದಿಕಾಲದಿಂದ ಅನಂತ ಭವಿಷ್ಯತ್‌ಕಾಲದವರೆಗೆ ಸಹ, ಸದಾ ಏವ-ಎಲ್ಲ ಕಾಲದಲ್ಲಿ (ನಿರಂತರವಾಗಿ), ಏವಂ-ಹೀಗೆ, ಕುರ್ವನ್-ಮಾಡುವವನಾಗಿ (ಜೀವರಿಂದ ಯಥಾಯೋಗ್ಯ ಶುಭಾಶುಭ ಕರ್ಮಗಳನ್ನು ಮಾಡಿಸಿ, ಫಲಗಳನ್ನು ಕೊಡುತ್ತಾ), ಲೀಲಯಾ-ಲೀಲೆಯಿಂದ (ಶ್ರಮಲೇಶರಹಿತನಾಗಿ), ಕ್ರೀಡಾಮಿ-ಕ್ರೀಡಿಸುತ್ತೇನೆ(ವಿಹರಿಸುತ್ತೇನೆ); ಕಸ್ಯಚಿತ್‌ವಶೇ-ಯಾರೊಬ್ಬರ ವಶದಲ್ಲಿ ನ ಸ್ಥಿತಃ-ಇರುವವನಲ್ಲ (ಸ್ವೇಚ್ಛಾನುಸಾರ ಸ್ವತಂತ್ರನಾಗಿ ಎಲ್ಲವನ್ನೂ ನಿಯಮನ ಮಾಡುತ್ತೇನೆ).

**ತಸ್ಮಾದ್ಭೋಗಾದಿನಾ ಕೋಽಪಿ ಕ್ಷೇಪ್ತುಂ ಕರ್ಮ ನ ಶಕ್ಯತೇ ।**
**ತಸ್ಮಾನ್ಮಾಂ ಶರಣಂ ಯಾಯಾನ್ಮುಮುಕ್ಷಾ ಯಸ್ಯ ಜಾಯತೇ ॥ ೩೧ ॥**

ತಸ್ಮಾತ್-ಆದ್ದರಿಂದ (ಪೂರ್ವೋಕ್ತ ಕರ್ಮವಿವೇಕಜ್ಞಾನದಿಂದ), ಕಃ ಅಪಿ-ಯಾರೊಬ್ಬನೂ, ಭೋಗಾದಿನಾ-ಕರ್ಮಗಳ ಫಲವನ್ನು ಭೋಗಿಸುವುದೇ ಮೊದಲಾದ ಉಪಾಯಗಳಿಂದ, ಕರ್ಮ-ಕರ್ಮವನ್ನು ಕ್ಷೇಪ್ತುಂ-ಕಳೆದುಕೊಳ್ಳುವುದಕ್ಕೆ, ನ ಶಕ್ಯತೇ-ಸಮರ್ಥನಾಗುವುದಿಲ್ಲ ತಸ್ಮಾತ್-ಆದ್ದರಿಂದ, ಯಸ್ಯ-ಯಾರಿಗೆ, ಮುಮುಕ್ಷಾ-ಮೋಕ್ಷಾಪೇಕ್ಷೆಯು, ಜಾಯತೇ-ಉಂಟಾಗುವುದೋ, (ಸಃ-ಅವನು), ಮಾಂ-ನನ್ನನ್ನು ಶರಣಂ ಯಾಯಾತ್-ಶರಣುಹೊಂದಬೇಕು (ಆಶ್ರಯಿಸಬೇಕು); (ಅನ್ಯಮಾರ್ಗವಿಲ್ಲ).

**ಯತಃ ಪೂರ್ವಾಣಿ ಕರ್ಮಾಣಿ ಭೋಕ್ತುಂ ಪ್ರಾರಬ್ಧಕಾನಿ ಚ ।**
**ಪ್ರಾಪ್ತೇ ಶರೀರೇ ಕುರ್ವಂತಿ ನಿತ್ಯಂ ಕರ್ಮಾಣ್ಯನೇಕಶಃ ॥ ೩೨ ॥**

ಕರ್ಮವನ್ನು ಭೋಗಿಸಿ ಕಳೆದುಕೊಂಡು, ಮುಕ್ತನಾಗುವುದು ಏಕೆ ಅಶಕ್ಯವೆಂದರೆ:—

ಯತಃ-ಏಕೆಂದರೆ(ನನ್ನನ್ನೇ ಏಕೆ ಶರಣುಹೊಂದಬೇಕೆಂದರೆ), ಪ್ರಾರಬ್ಧಕಾನಿ-(ಫಲವನ್ನು ಕೊಡಲು) ಆರಂಭವಾಗಿರುವ, ಪೂರ್ವಾಣಿ-ಹಿಂದಿನ, ಕರ್ಮಾಣಿ-

---

ಸ್ವತಂತ್ರಕಾರಣನಾಗಿ, ಹೇ ಬ್ರಹ್ಮದೇವ! ಅನಾದ್ಯನಂತಕಾಲದಲ್ಲಿ ಸಹ, ನಿರಂತರವಾಗಿ ಅನಂತಾನಂತ ಜೀವರನ್ನು ನಿಯಮಿಸುತ್ತ ಶ್ರಮಲೇಶರಹಿತನಾಗಿ, ಸ್ವೇಚ್ಛಾನುಸಾರ ವಿಹರಿಸುತ್ತೇನೆ (೩೦). ಆದ್ದರಿಂದ, ಸರ್ವಪ್ರಕಾರದಿಂದ, ಸರ್ವಜೀವರ ಸರ್ವಕರ್ಮನಿಯಾಮಕನಾದ, ನನ್ನನ್ನೇ ಶರಣುಹೊಂದಬೇಕು; ಕರ್ಮಗಳನ್ನು ಅವುಗಳ ಫಲವನ್ನು ಭೋಗಿಸಿ, ಕಳೆದುಕೊಳ್ಳಲು ಯಾವನೊಬ್ಬನೂ ಶಕ್ತನಲ್ಲ(೩೧). ಏಕೆಂದರೆ, ಪೂರ್ವದ ಪ್ರಾರಬ್ಧಕರ್ಮಗಳನ್ನು ಅನುಭವಿಸಲಿಕ್ಕಾಗಿ ಪ್ರಾಪ್ತವಾದ ಶರೀರದಲ್ಲಿ ಜೀವರು, ನಿತ್ಯವೂ, ಅನೇಕ ವಿಧದ ಕರ್ಮಗಳನ್ನು ಮಾಡುತ್ತಾರೆ(೩೨) ಹೀಗೆ ಮಾಡುವ

ಕರ್ಮಗಳನ್ನು, ಭೋಕ್ತುಂ-ಭೋಗಿಸಲಿಕ್ಕೆ, ಪ್ರಾಪ್ತೇ-ದೊರೆತಿರುವ, ಶರೀರೇ-ಶರೀರದಲ್ಲಿ, ನಿತ್ಯಂ-ಪ್ರತಿದಿನವೂ (ಸದಾ), ಅನೇಕಶಃ-ಬಹುಪ್ರಕಾರದ, ಕರ್ಮಾಣಿ-ಕರ್ಮಗಳನ್ನು ಕುರ್ವಂತಿ-ಮಾಡುತ್ತಾರೆ.

ಹೀಗೆ ಆ ಶರೀರದಲ್ಲಿದ್ದು ಮಾಡುವ ಕರ್ಮಗಳು ಏನಾಗುತ್ತವೆಂದರೆ:—

**ಕ್ರೀಯಮಾಣಾನಿ ತಾನಿ ಸ್ಯುರಶುಭಾನಿ ಶುಭಾನಿ ಚ ।**
**ತಾನ್ಯೇವ ಪರತಃ ಕಾಲೇ ಸಂಚಿತಾನಿ ಭವಂತಿ ಹಿ ॥ ೩೨ ॥**

ಕ್ರೀಯಮಾಣಾನಿ-(ಹಾಗೆ) ಮಾಡಲ್ಪಡುವ, ತಾನಿ-ಆ ಕರ್ಮಗಳು; ಅಶುಭಾನಿ-ಅಶುಭಗಳೂ (ಪಾಪಗಳೂ), ಚ-ಹಾಗೂ, ಶುಭಾನಿ-ಶುಭಗಳೂ (ಪುಣ್ಯಗಳೂ), ಸ್ಯುಃ-ಆಗಿರುತ್ತವೆ; ತಾನಿ ಏವ-ಅವುಗಳೇ, ಪರತಃ ಕಾಲೇ-ಆ ನಂತರದ ಕಾಲದಲ್ಲಿ ಸಂಚಿತಾನಿ-ಸಂಚಿತಕರ್ಮಗಳು (ಮುಂದೆ ಫಲಭೋಗಕ್ಕೆ ಕಾರಣವಾಗುವುವು), ಭವಂತಿ ಹಿ-ಆಗುತ್ತವೆ, ಎಂಬುದು ನಿಶ್ಚಯವು.

**ಸಂಚಿತಾನಿ ಚ ಕಾಲೇನ ಲಾಭಾಚ್ಚ ಸಹಕಾರಿಣಃ ।**
**ಫಲೋನ್ಮುಖಾನಿ ಜಾಯಂತೇ ತಾನಿ ಪ್ರಾರಬ್ಧಾನಿ ತು ॥ ೩೪ ॥**

**ತೇಷಾಂ ಫಲಸ್ಯ ಭೋಗಾಯ ಧ್ರಿಯಮಾಣಶರೀರಕಂ ।**
**ಪುನಃ ಕರೋತಿ ಕರ್ಮಾಣಿ ಸ್ಯಾದೇವಂ ತು ಪುನಃಪುನಃ ॥ ೩೫ ॥**

**ಕರ್ಮಣಾಂ ಹಿ ಪ್ರವಾಹೋಯಮೇವಮೇವಾದಿಕಾಲತಃ ।**
**ಬಧ್ವಾ ಭ್ರಾಮಯತೇ ಜೀವಾನ್ಸದಾಪರೋಕ್ಷವರ್ಜಿತಾನ್ ॥ ೩೬ ॥**

ಸಂಚಿತಾನಿ-ಈ ಸಂಚಿತಕರ್ಮಗಳು (ಪ್ರಾರಬ್ಧಕರ್ಮಭೋಗಕ್ಕಾಗಿ ಹೊಂದಿದ ದೇಹದಿಂದ ಮಾಡಿದ ಕರ್ಮಗಳು ಕೂಡಿಬಿದ್ದು—ಸಂಚಿತಗಳಾಗಿ), ಕಾಲಾತ್-

---

ಶುಭಾಶುಭ(ಪುಣ್ಯಪಾಪ) ಕರ್ಮಗಳು, (ಅವುಗಳು ಸಂಭವಿಸಿದ ನಂತರ) ಮುಂದೆ, ಸಂಚಿತಕರ್ಮಗಳಾಗುತ್ತವೆ—ಅವುಗಳೇ ಕಾಲಾಂತರದಲ್ಲಿ ಪ್ರಾರಬ್ಧರೂಪದಿಂದ ಜೀವರನ್ನು ತಮ್ಮ ಫಲಭೋಗದಲ್ಲಿ ತೊಡಗಿಸುತ್ತವೆ(೩೩). ಸಂಚಿತಗಳಾದ ಈ ಕರ್ಮಗಳು ಕಾಲಗತಿಯಿಂದಲೂ ಸಹಕಾರಿ ಕಾರಣಗಳಿಂದಲೂ, ಫಲವನ್ನು ಕೊಡಲು ಉದ್ಯುಕ್ತವಾಗುತ್ತವೆ—ಎಂದರೆ ಅವೇ ಪ್ರಾರಬ್ಧಕರ್ಮಗಳೆನಿಸುತ್ತವೆ; ಅವುಗಳ ಫಲವನ್ನು ಅನುಭವಿಸಲು ಹೊಂದಿದ ಶರೀರದಿಂದ ಜೀವನು ಪುನಃ ಕರ್ಮಗಳನ್ನು ಮಾಡುತ್ತಾನೆ (ಅವು ಸಂಚಿತಗಳಾಗಿ ಮುಂದೆ ಅವೇ ಪ್ರಾರಬ್ಧವಾಗಿ, ತಮ್ಮ ಫಲಭೋಗಕ್ಕಾಗಿ

ಕಾಲಗತಿಯಿಂದಲೂ, ಚ-ಮತ್ತು ಸಹಕಾರಿಣಃ-ಸಹಕಾರಿ ಕಾರಣದ (ತನ್ನ ಫಲಾಭಿವ್ಯಕ್ತಿಗೆ ಸಹಾಯಕವಾದ ಕಾರಣದ), ಲಾಭಾತ್-ಲಾಭದಿಂದಲೂ, ಫಲೋನ್ಮುಖಾನಿ-ಫಲವನ್ನು ಕೊಡಲು ಉದ್ಯುಕ್ತವಾದವುಗಳು. ಜಾಯಂತೇ-ಆಗುತ್ತವೆ; ತಾನಿ ತು-ಅವುಗಳೇ, ಪ್ರಾರಬ್ಧಕಾನಿ-ಪ್ರಾರಬ್ಧಕರ್ಮಗಳೆನಿಸುತ್ತವೆ. ತೇಷಾಂ-ಆ ಕರ್ಮಗಳ, ಫಲಸ್ಯ-ಫಲದ, ಭೋಗಾಯ-ಭೋಗಕ್ಕಾಗಿ (ಅನುಭವಿಸಲಿಕ್ಕೆ), ಶರೀರಕಂ-ಶರೀರವನ್ನು ಧ್ರಿಯಾಮಾಣಃ-ಧರಿಸಿದ ಜೀವನು, ಪುನಃ-ಮತ್ತೆ ಕರ್ಮಾಣಿ-ಕರ್ಮಗಳನ್ನು ಕರೋತಿ-ಮಾಡುತ್ತಾನೆ; ಏವಂ-ಹೀಗೆ, ಪುನಃಪುನಃ-ಮತ್ತೆಮತ್ತೆ ಸ್ಯಾತ್ ತು-ಆಗುತ್ತಲೇ ಇರುತ್ತದೆ; ಏವಮೇವ-ಹೀಗೆಯೇ, ಅನಾದಿಕಾಲತಃ-ಅನಾದಿಕಾಲದಿಂದ, ಅಯಂ-ಈ, ಕರ್ಮಣಾಂ-ಕರ್ಮಗಳ, ಪ್ರವಾಹಃ-ಪ್ರವಾಹವು, ಮದಾಪರೋಕ್ಷವರ್ಜಿತಾನ್-ನನ್ನ ಅಪರೋಕ್ಷಜ್ಞಾನರಹಿತರಾದ(ಸಾಕ್ಷಾದ್ದರ್ಶನವನ್ನು ಹೊಂದದ), ಜೀವಾನ್-ಜೀವರನ್ನು ಬಧ್ವಾ-ಬಂಧಿಸಿ, ಭ್ರಾಮಯತೇ-(ಸಂಸಾರದಲ್ಲಿ) ಸುತ್ತಿಸುತ್ತದೆ.

**ಏವಂ ತೇ ಕರ್ಮಣಾಂ ಬಂಧಪ್ರಕಾರಃ ಕಥಿತೋ ವಿಧೇ ।**
**ಜ್ಞಾತ್ವೈವಂ ಮುಕ್ತಯೇ ಪ್ರಾಜ್ಞಃ ಕುರ್ಯಾದ್ಯತ್ನಮತಂದ್ರಿತಃ ॥ ೩೭ ॥**

ವಿಧೇ-ಹೇ ಬ್ರಹ್ಮ!, ಏವಂ-ಹೀಗೆ, ತೇ-ನಿನಗೋಸ್ಕರ, ಕರ್ಮಣಾಂ-ಕರ್ಮಗಳ, ಬಂಧಪ್ರಕಾರಃ-ಬಂಧಿಸುವ ಪ್ರಕಾರವು, ಕಥಿತಃ-ಹೇಳಲ್ಪಟ್ಟಿತು; ಪ್ರಾಜ್ಞಃ-ವಿವೇಕಿಯು, ಏವಂ-ಹೀಗೆ(ಕರ್ಮಬಂಧವನ್ನು), ಜ್ಞಾತ್ವಾ-ತಿಳಿದು, ಅತಂದ್ರಿತಃ-ಆಲಸ್ಯರಹಿತನಾಗಿ, ಮುಕ್ತಯೇ-ಮೋಕ್ಷಾರ್ಥವಾಗಿ, ಯತ್ನಂ-ಯತ್ನವನ್ನು, ಕುರ್ಯಾತ್-ಮಾಡತಕ್ಕದ್ದು.

ಕರ್ಮಬಂಧಪ್ರಕಾರವರ್ಣನವೆಂಬ ೧೪ನೇ ಅಧ್ಯಾಯವು ಮುಗಿದುದು.

---

ದೇಹಾಂತರವನ್ನು ಹೊಂದಿಸುತ್ತವೆ); ಹೀಗೆಯೇ ಪುನಃ ಪುನಃ ನಡೆಯುತ್ತಲೇ ಇರುತ್ತದೆ; ಅನಾದಿಕಾಲದಿಂದ, ಈ ಕರ್ಮಗಳ ಪ್ರವಾಹವು, ನನ್ನ ಸಾಕ್ಷಾತ್ಕಾರವಾಗುವವರೆಗೆ, ಜೀವರನ್ನು (ಅಪರೋಕ್ಷವಿಲ್ಲದ ಜೀವರನ್ನು), ಬಂಧಿಸಿ, ಸಂಸಾರದಲ್ಲಿ ಸುತ್ತಿಸುತ್ತದೆ(೩೪-೩೬). ಕರ್ಮಬಂಧ ಪ್ರಕಾರವನ್ನು ಹೀಗೆ ತಿಳಿದು ವಿವೇಕಿಯು, ಆಲಸ್ಯರಹಿತನಾಗಿ, ನನ್ನ ಅಪರೋಕ್ಷಕ್ಕಾಗಿ (ಕರ್ಮಬಂಧದ ಬಿಡುಗಡೆಗಾಗಿ— ಮೋಕ್ಷಕ್ಕಾಗಿ) ಯತ್ನಿಸತಕ್ಕದ್ದು(೩೭).

೧೪ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೧೫

ಶ್ರೀ ವೇದವ್ಯಾಸಾಯ ನಮಃ

**ಬ್ರಹ್ಮೋವಾಚ—**

**ಯದಿ ತ್ವಂ ಸರ್ವಜೀವಾನಾಂ ಕರ್ಮ ಕಾರಯಸೇಽಚ್ಯುತ ।**
**ಕಥಂ ತರ್ಹಿ ಫಲಂ ತೇಷಾಂ ಜಾಯತೇ ತದ್ವದಸ್ವ ಮೇ ॥ ೧ ॥**

**ಅರ್ಥ:**—ಅಚ್ಯುತ-ಹೇ ವಿಷ್ಣೋ!, ತ್ವಂ-ನೀನು, ಸರ್ವಜೀವಾನಾಂ-ಸಮಸ್ತಜೀವರ, ಕರ್ಮ-ಕರ್ಮವನ್ನು ಯದಿ ಕಾರಯಸೇ-ಮಾಡುವಿಯಾದರೆ, (ನೀನೇ ಮಾಡಿ ಜೀವರಿಂದ ಮಾಡಿಸುವಿಯಾದರೆ), ತರ್ಹಿ-ಆಗ, ಫಲಂ-ಕರ್ಮಫಲವು, ತೇಷಾಂ-ಜೀವರಿಗೆ, ಕಥಂ-ಹೇಗೆ, ಜಾಯತೇ-ಉಂಟಾಗುತ್ತದೆ? ತತ್-ಅದನ್ನು (ಮಾಡುವವನು ನೀನು-ಫಲವನ್ನು ಅನುಭವಿಸುವವನು ಜೀವನು, ಹೇಗೆ ಯುಕ್ತವಾಗುತ್ತದೆಂಬುದನ್ನು), ಮೇ-ನನಗೋಸ್ಕರ, ವದಸ್ವ-ಹೇಳುವವನಾಗು.

**ರಾಜಾಜ್ಞಯಾ ಕೃತಂ ಪಾಪಂ ಕರ್ಮಪುಣ್ಯಮಥಾಪಿ ವಾ ।**
**ಫಲಭಾಕ್ ತತ್ರ ರಾಜಾಸ್ತಿ ನ ಪ್ರೇಷ್ಯೇ ದೃಶ್ಯತೇ ಫಲಂ ॥ ೨ ॥**

ರಾಜಾಜ್ಞಯಾ-ರಾಜನ ಅಪ್ಪಣೆಯಿಂದ, ಪಾಪಂ-ಪಾಪವೂ, ಅಥಾಪಿ ವಾ-ಅಥವಾ, ಮತ್ತು ಪುಣ್ಯಂ-ಪುಣ್ಯವೂ, ಕರ್ಮ-(ಆದ) ಕರ್ಮವು, ಕೃತಂ (ಚೇತ್)-ಮಾಡಲ್ಪಟ್ಟರೆ, ತತ್ರ-ಅಲ್ಲಿ (ಆ ಪಾಪಪುಣ್ಯವಿಷಯದಲ್ಲಿ), ಫಲಭಾಕ್-ಫಲಭಾಗಿಯು, ರಾಜಾಅಸ್ತಿ-ರಾಜನೇ ಆಗಿರುತ್ತಾನೆ; ಪ್ರೇಷ್ಯೇ-(ಕರ್ಮವನ್ನು ಮಾಡಿದ) ದೂತನಲ್ಲಿ ಫಲಂ-ಫಲವು, ನ ದೃಶ್ಯತೇ-ಕಂಡುಬರುವುದಿಲ್ಲ.

---

ಅಧ್ಯಾಯ ೧೫

ಬ್ರಹ್ಮದೇವನು ಪ್ರಶ್ನಿಸುತ್ತಾನೆ:—

**ತಾತ್ಪರ್ಯ:**—ಹೇ ಪ್ರಭೋ!, ಸಮಸ್ತ ಜೀವರ ಕರ್ಮವನ್ನು ನೀನೇ ಮಾಡುವಿಯಾದರೆ (ನೀನೇ ಮಾಡಿ ಜೀವರಿಂದ ಮಾಡಿಸುವಿಯಾದರೆ), ಆ ಕರ್ಮಫಲವು ಜೀವರಿಗೆ ಏಕೆ ಉಂಟಾಗುತ್ತದೆ; ಕರ್ಮಮಾಡುವವನೊಬ್ಬನು—ಅದರ ಫಲವನ್ನು ಉಣ್ಣುವವನು ಅನ್ಯನೆಂಬುದು ಯುಕ್ತಿಯುಕ್ತವಾಗುವುದಿಲ್ಲವಷ್ಟೆ! ಈ ಸಂಶಯವನ್ನು ಪರಿಹರಿಸುವ ಉತ್ತರವನ್ನು ದಯಪಾಲಿಸು(೧). ರಾಜನಿಂದ ಆಜ್ಞಪ್ತನಾದ ದೂತನು ಮಾಡುವ ಪುಣ್ಯಪಾಪರೂಪದ ಕರ್ಮದ ಫಲಕ್ಕೆ ರಾಜನೇ ಭಾಗಿಯಾಗುತ್ತಾನೆ—ದೂತನು ಫಲಭಾಗಿಯಾಗುವುದು ಎಲ್ಲಿಯೂ ಕಂಡಿಲ್ಲ(೨). ಈ

ರಾಜ್ಞಾ ಹತೋಽಯಂ ದುರ್ವೃತ್ತೋ ರಾಜ್ಞಾ ಸಂವರ್ಧಿತೋ ಹ್ಯಯಂ ।
ಇತ್ಯೇವಂ ವ್ಯವಹಾರೋಽಸ್ತಿ ನ ನಾಮ್ನಾ ಭೃತಕಸ್ಯ ಹಿ ॥ ೩ ॥

ಜಿತಂ ರಾಜ್ಯಂ ನೃಪೇಣೇದಂ ಹಾರಿತಂ ರಾಜ್ಯಮಿತ್ಯಪಿ ।
ಕೀರ್ತ್ಯಾದಿ ಜಾಯತೇ ರಾಜ್ಞಸ್ತನ್ನಿಯುಕ್ತಸ್ಯ ನೈವ ತತ್ ॥ ೪ ॥

ಹೀಗೆ ರಾಜನೇ ಫಲಭಾಗಿಯಾಗುವುದು ಯುಕ್ತಿಯುಕ್ತವೂ ಆಗಿದೆ, ಎನ್ನುತ್ತಾರೆ:—

ಅಯಂ-ಈ, ದುರ್ವೃತ್ತಃ-ದುಷ್ಟನು, ರಾಜ್ಞಾ-ರಾಜನಿಂದ, ಹತಃ-ಸಂಹರಿಸಲ್ಪಟ್ಟನು(ನಿಗ್ರಹಿಸಲ್ಪಟ್ಟನು), ಅಯಂ-ಈತನು, ರಾಜ್ಞಾ-ರಾಜನಿಂದ, ಸಂವರ್ಧಿತಃ-ಅಭಿವೃದ್ಧಿ ಹೊಂದಿಸಲ್ಪಟ್ಟನು, ಇತ್ಯೇವಂ-ಹೀಗೆಂದೇ, ವ್ಯವಹಾರಃ-ವ್ಯವಹಾರವು (ಜನರು ಆಡಿಕೊಳ್ಳುವುದು), ಅಸ್ತಿ-ಲೋಕಸಿದ್ಧವಾಗಿದೆ; ಭೃತಕಸ್ಯ-ಭೃತ್ಯನ, ನಾಮ್ನಾ-ಹೆಸರಿನಿಂದ, ನ ಹಿ-(ಈ ನಿಗ್ರಹಾನುಗ್ರಹಗಳು ಆದವೆಂದು) ವ್ಯವಹಾರವಿಲ್ಲ (ಯದ್ಯಪಿ ನಿಗ್ರಹಾನುಗ್ರಹಗಳಿಗೆ ಕಾರಣವಾದ ರಾಜಾಜ್ಞೆಯನ್ನು ಆಚರಿಸುವವನು ರಾಜಭೃತ್ಯನೇ ಆಗಿರುವನು); ಇದಂ ರಾಜ್ಯಂ-ಈ ರಾಜ್ಯವು, ನೃಪೇಣ-ರಾಜನಿಂದ, ಜಿತಂ-ಜಯಿಸಲ್ಪಟ್ಟಿತು; ರಾಜ್ಯಂ-ರಾಜ್ಯವು, ಹಾರಿತಂ-ಅಪಹರಿಸಲ್ಪಟ್ಟಿತು, ಇತ್ಯಪಿ- ಹೀಗೆಂದೇ, ರಾಜ್ಞಃ-ರಾಜನಿಗೆ, ಕೀರ್ತ್ಯಾದಿ-ಕೀರ್ತಿ ಮೊದಲಾದುದು, ಜಾಯತೇ- ಉಂಟಾಗುತ್ತದೆ; ತನ್ನಿಯುಕ್ತಸ್ಯ-ಅವನಿಂದ (ರಾಜನಿಂದ) ಆಜ್ಞಪ್ತನಾದವನಿಗೆ (ಸೇನಾಧಿಕಾರಿ ಮೊದಲಾದವರಿಗೆ, ತತ್-ಆ ಕೀರ್ತ್ಯಾದಿಗಳು, ನೈವ-ಅಲ್ಲವೇ ಅಲ್ಲ ('ಯಥಾ ರಾಜಾ ಜಯೀತ್ಯಪಿ'-ಸೇನೆಯು ಗೆದ್ದರೂ, ರಾಜನೇ ಗೆದ್ದನೆಂದು ವ್ಯವಹಾರವಷ್ಟೆ).

ಜೀವೋ ಹಿ ಶ್ವಸಿತಿ ಶ್ವಾಸಮೋಕ್ಷೇಽಪಿ ನ ಪ್ರಭುಃ ಸ್ವಯಂ ।
ಕಥಂ ತಸ್ಯ ಸುಖಂ ದುಃಖಂ ತತ್ಫಲಂ ಪುಣ್ಯಪಾಪಯೋಃ ॥ ೫ ॥

---

ದುಷ್ಟನು ರಾಜನಿಂದ ಹತನಾದನು ಅಥವಾ ನಿಗ್ರಹಿಸಲ್ಪಟ್ಟನು, ಸತ್ಪ್ರಜೆಯು ರಾಜನಿಂದ ಅಭಿವೃದ್ಧನಾದನು (ಸಂಪದಾದಿಗಳನ್ನು ಪಡೆದನು), ಎಂಬುದಾಗಿಯೇ ವ್ಯವಹಾರ ವಿರುತ್ತದೆ—ರಾಜನ ನಿಗ್ರಹ, ಅನುಗ್ರಹರೂಪದ ಆಜ್ಞೆಗಳನ್ನು ಪಾಲಿಸಿ ಅದರಂತೆ ನಡೆದ (ಕಾರ್ಯಗಳನ್ನು ನಿರ್ವಹಿಸಿದ) ಭೃತ್ಯನ ಹೆಸರಿನಿಂದ (ನಾಮವನ್ನು ಎತ್ತಿನುಡಿದು) ಯಾರೂ ವ್ಯವಹರಿಸುವುದಿಲ್ಲ. ಈ ರಾಜ್ಯವನ್ನು ರಾಜನು ಗೆದ್ದನು ಅಥವಾ ಕಳೆದುಕೊಂಡನು ಅಥವಾ ಅಪಹರಿಸಿದನೆಂಬ ಮೊದಲಾದ ಕೀರ್ತಿ ಅಪಕೀರ್ತಿಗಳು ರಾಜನಿಗಲ್ಲದೇ, ಆ ಕಾರ್ಯದಲ್ಲಿ ರಾಜನಿಂದ ನಿಯೋಜಿಸಲ್ಪಟ್ಟ ಸೇನೆ ಅಥವಾ ಸೇನಾಧಿಕಾರಿಗಲ್ಲವೇ ಅಲ್ಲ—ರಾಜ ಗೆದ್ದನು, ರಾಜನೇ ಸೋತನೆಂದೇ ವ್ಯವಹಾರ ವಿರುತ್ತದೆ(೩.-೪). ಜೀವನು ಉಸಿರಾಡುತ್ತಾನಷ್ಟೆ ಆದರೆ ತಾನೇ ಸ್ವತಂತ್ರನಾಗಿ ಉಸಿರು

**ಸ್ವತಂತ್ರೋಽಪಿ ತ್ವಮೇವೇಶ ಶುಭಂ ವಾಪ್ಯಥವಾ ಶುಭಂ ।**
**ಕರ್ಮ ಕಾರಯಸೇ ಜೀವಾನ್ ಕಥಂ ತೇ ಫಲಭೋಗಿನಃ ॥ ೬ ॥**

**ಸಂಶಯಂ ನುದ ದೇವೇಶ ಯೇನ ಸ್ಯಾದ್ವಿಮಲಂ ಮನಃ ।**

ಜೀವಃ- ಜೀವನು, ಶ್ವಸಿತಿ ಹಿ- ಉಸಿರಾಡುತ್ತಾನಷ್ಟೆ. ಸ್ವಯಂ- ತಾನೇ ಸ್ವತಂತ್ರನಾಗಿ, ಶ್ವಾಸಮೋಕ್ಷೇ ಅಪಿ- ಉಸಿರನ್ನು ಬಿಡುವುದರಲ್ಲಿ ಸಹ( ಉಚ್ಛ್ವಾಸ ನಿಶ್ವಾಸಗಳಲ್ಲಿ), ನ ಪ್ರಭುಃ-ಸಮರ್ಥನಲ್ಲ ; ತಸ್ಯ-ಹೀಗಿರುವ ಜೀವನಿಗೆ (ಪೂರ್ಣ ಅಸ್ವತಂತ್ರನಾದ- ಪರಾಧೀನನಾದ ಜೀವನಿಗೆ), ಪುಣ್ಯಪಾಪಯೋಃ- ಪುಣ್ಯಪಾಪಗಳ, ಸುಖಂ- ಸುಖರೂಪದ, ದುಃಖಂ- ದುಃಖರೂಪದ, ತತ್ಫಲಂ- ಕರ್ಮದ ಫಲವು; ಕಥಂ- ಹೇಗೆ? (ಯುಕ್ತವಾಗುತ್ತದೆ- ಸಲ್ಲುತ್ತದೆ- ಯೋಗ್ಯವೆನಿಸುತ್ತದೆ); ಈಶ- ಹೇ ಪ್ರಭೋ!, ತ್ವಂ ಏವಂ- ನೀನೇ, ಸ್ವತಂತ್ರಃ- ಸ್ವತಂತ್ರನು, ಅಪಿ- ಆಗಿರುತ್ತೀ; ಶುಭಂ- ಪುಣ್ಯವನ್ನೂ ವಾ- ಅಥವಾ, ಅಶುಭಂ ಅಪಿ- ಪಾಪವನ್ನೂ ಸಹ, (ತ್ವಂ ಏವ- ನೀನೇ), ಕರ್ಮ- ಕರ್ಮವನ್ನು ಜೀವಾನ್- ಜೀವರನ್ನು ನಿಮಿತ್ತಮಾಡಿ( ಜೀವರಿಂದ) ಕಾರಯಸೇ- ಮಾಡಿ ಮಾಡಿಸುತ್ತೀ; ತೇ- ಆ( ನಿನ್ನ ಅಧೀನರಾದ) ಜೀವರು, ಕಥಂ- ಹೇಗೆ, ಫಲಭೋಗಿನಃ-(ಕರ್ಮಗಳ) ಫಲವನ್ನು ಅನುಭವಿಸುವವರು (ಆಗುತ್ತಾರೆ?); ದೇವೇಶ- ಹೇ ದೇವಾದಿ ಸರ್ವನಿಯಾಮಕ! ದೇವಶ್ರೇಷ್ಠ!, ಸಂಶಯಂ-(ನನ್ನ ಈ) ಸಂಶಯವನ್ನು, ನುದ- ನಾಶಗೊಳಿಸು (ಪರಿಹರಿಸು); ಯೇನ- ಯಾವುದರಿಂದ (ಸಂಶಯಪರಿಹಾರದಿಂದ), ಮನಃ- ಮನಸ್ಸು( ನನ್ನ- ಅನ್ಯಶ್ರೋತೃಗಳ ಮನಸ್ಸು), ವಿಮಲಂ- ನಿರ್ಮಲವಾದುದು (ಸಂಶಯರೂಪದ ಮಲನಾಶದಿಂದ ಶುದ್ಧವಾದುದು- ನಿಶ್ಚಯಜ್ಞಾನವುಳ್ಳದ್ದು), ಸ್ಯಾತ್- ಆಗುತ್ತದೆಯೋ ( ಆ ಉತ್ತರವನ್ನು ದಯಪಾಲಿಸು).

**ಶ್ರೀ ಹಯಗ್ರೀವ ಉವಾಚ—**

**ಅನಾದೀನೀಹ ಕರ್ಮಾಣಿ ಜೀವಾನಾಂ ಕಥಿತಾನಿ ತೇ ॥ ೭ ॥**

---

ತೆಗೆದುಕೊಂಡು ಬಿಡುವುದರಲ್ಲಿ ಸಮರ್ಥನಲ್ಲ; ಹೀಗೆ ಉಸಿರಾಡಲಿಕ್ಕೂ ಶಕ್ತನಲ್ಲದ ಅಸ್ವತಂತ್ರನಾದ ಜೀವನಿಗೆ ಪುಣ್ಯಪಾಪಗಳ ಫಲಭೋಗವು ಹೇಗೆ ಯೋಗ್ಯವಾಗುತ್ತದೆ? ಶುಭಾಶುಭಗಳಾದಿಯಾಗಿ ಸರ್ವವನ್ನೂ ಜೀವರಿಂದ (ನೀನು ಮಾಡಿ) ಮಾಡಿಸುವ ಸ್ವತಂತ್ರಪ್ರಭುವು ನೀನೇ ಆಗಿರುವಿ; ನಿನ್ನ ಅಧೀನರಾಗಿ ನೀನು ಮಾಡಿಸಿದ್ದನ್ನು ಮಾಡಿದ ಜೀವರು ಪುಣ್ಯ ಪಾಪಗಳ ಸುಖದುಃಖರೂಪದ ವಿವಿಧಫಲಗಳನ್ನು ಅನುಭವಿಸಲು ಕಾರಣವೇನು? ಹೇ ದೇವೋತ್ತಮ! ಈ ನನ್ನ ಸಂಶಯವನ್ನು ಪರಿಹರಿಸಿ, ಮನಸ್ಸನ್ನು ನಿರ್ಮಲಗೊಳಿಸು—ಸಂಶಯವನ್ನು ತೊರೆದು ನಿಶ್ಚಯಜ್ಞಾನದಿಂದ ಶಾಂತವಾಗುವಂತೆ ಉಪದೇಶಿಸಿ ಅನುಗ್ರಹಿಸು(೫-೬). ಹೇ ಬ್ರಹ್ಮದೇವ! ಸಂಸಾರದಲ್ಲಿ ಸುತ್ತುವ ಸಮಸ್ತ

**ಅನಾದಿತೋಽಪ್ಯಹಂ ಬ್ರಹ್ಮನ್ನಿಯಂತಾ ಸರ್ವದೇಹಿನಾಂ ।**

ಶ್ರೀ ಹಯಗ್ರೀವನು ಹೇಳುತ್ತಾನೆ:—

ಇಹ- ಈ ಸಂಸಾರದಲ್ಲಿ ಸುತ್ತುವ, ಜೀವಾನಾಂ- ಜೀವರ, ಕರ್ಮಾಣಿ- ಕರ್ಮಗಳು, ಅನಾದೀನಿ- ಅನಾದಿಯಾದವುಗಳೆಂದು, ತೇ- ನಿನಗೆ, ಕಥಿತಾನಿ- ಹೇಳಲ್ಪಟ್ಟವೆಯಷ್ಟೆ! ಬ್ರಹ್ಮನ್- ಹೇ ಬ್ರಹ್ಮ!, ಅಹಂ- ನಾನು, ಅನಾದಿತಃ ಅಪಿ- ಅನಾದಿಕಾಲದಿಂದಲೂ, ಸರ್ವದೇಹಿನಾಂ- ಸಮಸ್ತ ಜೀವರ, ನಿಯಂತಾ- ನಿಯಾಮಕನು.

**ಸಾತ್ವಿಕಾದಿವಿಭೇದೇನ ಜೀವಾ ನಿಗದಿತಾಃ ಪುರಾ ॥ ೮ ॥**

**ಸ್ವಭಾವ ಏವ ತೇಷಾಂ ಸ ಕರ್ಮಣಾಮಪಿ ಚಿತ್ರತಾ ।**

ಪುರಾ- ಈ ಹಿಂದೆ (ಅನಾದಿಕಾಲದಿಂದ), ಜೀವಾಃ- ಜೀವರು, ಸಾತ್ವಿಕಾದಿ ವಿಭೇದೇನ- ಸಾತ್ವಿಕ ಮೊದಲಾದ ಭೇದದಿಂದ (ಭೇದವುಳ್ಳವರೆಂದು), ನಿಗದಿತಾಃ- ಹೇಳಲ್ಪಟ್ಟಿರುವರು; ಸಃ- ಆ ಭೇದವು, ತೇಷಾಂ- ಜೀವರ, ಸ್ವಭಾವಃ ಏವ- ಸ್ವಭಾವವೇ( ಆಗಿದೆ); (ತೇಷಾಂ- ಅವರ), ಕರ್ಮಣಾಂ ಅಪಿ- ಕರ್ಮಗಳಿಗೆ ಸಹ, ಚಿತ್ರತಾ- ವೈವಿಧ್ಯವು (ಸಹಜವೇ ಸರಿ).

**ಮದ್ಭಕ್ತಿಃ ಸಾತ್ವಿಕಾಂಶೇಷು ಮದ್ದ್ವೇಷಸ್ತಾಮಸೇಷ್ವಪಿ ॥ ೯ ॥**

**ನೈಸರ್ಗಿಕಮಿದಂ ಪ್ರೋಕ್ತಂ ಕದಾಚಿತ್ತದ್ವಿಪರ್ಯಯಃ ।**
**ಆಗಂತುಕೋ ಭವೇತ್ಕರ್ಮ ಸಹಕಾರ್ಯನುಸಾರತಃ ॥ ೧೦ ॥**

ಸಾತ್ವಿಕಾಂಶೇಷು- ಸಾತ್ವಿಕವಿಭಾಗದ ಜೀವರಲ್ಲಿ, ಮದ್ಭಕ್ತಿಃ- ನನ್ನಲ್ಲಿ ಭಕ್ತಿಯೂ, ತಾಮಸೇಷ್ವಪಿ- ತಾಮಸಜೀವರಲ್ಲಿ ಆದರೂ, ಮದ್ದ್ವೇಷಃ- ನನ್ನಲ್ಲಿ ದ್ವೇಷವೂ, ಇದಂ- ಎಂಬುದು (ಸ್ವಾಭಾವಿಕವೆಂಬುದು), ನೈಸರ್ಗಿಕಂ- ಅವರವರ ಸ್ವರೂಪಕ್ಕೆ

---

ಜೀವರ ಕರ್ಮಗಳು ಅನಾದಿಯಾದವುಗಳು; ನಾನು ಅನಾದಿಯಿಂದ ಸರ್ವರ ನಿಯಾಮಕನೂ ಆಗಿದ್ದೇನೆ (೭). ಜೀವರು ಸಾತ್ವಿಕಾದಿ ಭೇದದಿಂದ, ಭಿನ್ನರೆಂದು ಈ ಹಿಂದೆ ನಿರೂಪಿತವಾಗಿರುವುದಷ್ಟೆ ಆ ಭೇದವು (ತ್ರೈವಿಧ್ಯವು) ಅವರ ಸ್ವರೂಪಸಿದ್ಧವೇ ಆದುದು; ಆದ್ದರಿಂದ ಅವರ ಕರ್ಮಗಳಿಗೆ ಸಹ ವಿಚಿತ್ರತೆಯು (ವೈವಿಧ್ಯವು) ಸಹಜವೇ ಆದುದು(೮). ಸಾತ್ವಿಕಜೀವರಲ್ಲಿ ನನ್ನ ಭಕ್ತಿಯೂ, ತಾಮಸರಲ್ಲಿ ನನ್ನ ದ್ವೇಷವೂ ಅವರ ಸ್ವರೂಪಧರ್ಮಗಳೇ ಆಗಿರುತ್ತವೆ; ಒಂದೊಂದು ವೇಳೆ ಅನ್ಯ ಸಹಕಾರಿ ಕಾರಣಗಳ ಪ್ರಭಾವಾನುಸಾರವಾಗಿ, ಸ್ವಭಾವಧರ್ಮಕ್ಕೆ ವಿರುದ್ಧವಾದ, ಆಗಂತುಕ (ಅಸ್ವಾಭಾವಿಕ) ಕರ್ಮಗಳೂ ಸಂಭವಿಸುವುದುಂಟು (೯-೧೦). ಈ ಆಗಂತುಕ ಕರ್ಮಗಳಿಗೆ

ಸಹಜವಾದುದೇ, ಕದಾಚಿತ್-ಒಂದೊಂದು ವೇಳೆ, ತದ್ವಿಪರ್ಯಯಃ-ಸ್ವರೂಪಕ್ಕೆ ವಿರುದ್ಧವಾದ, ಕರ್ಮ-ಕರ್ಮವು, ಸಹಕಾರ್ಯನುಸಾರತಃ-ಸಹಕಾರಿ ಕಾರಣಗಳ ಪ್ರಾಬಲ್ಯಕ್ಕೆ ಅನುಗುಣವಾಗಿ, ಆಗಂತುಕಃ-ಆಗಂತುಕವಾಗಿ, ಭವೇತ್-ಸಂಭವಿಸುತ್ತದೆ.

**ತಥಾ ತೇಷಾಂ ಮಯಿ ಪ್ರೀತಿರ್ದ್ವೇಷೋವಾಪಿ ಭವೇದ್ವಿಧೇ ।**
**ತಥಾ ಫಲಂ ಭವೇತ್ತೇಷಾಂ ಮತ್ತ ಏವ ಚ ನಾನ್ಯತಃ ॥ ೧೧ ॥**

ತೇಷಾಂ-ಅವರಿಗೆ (ಆ ಜೀವರಿಗೆ), ತಥಾ-ಹಾಗೆ(ಆಗಂತುಕ ಕರ್ಮಾನುಸಾರವಾಗಿ), ಮಯಿ-ನನ್ನಲ್ಲಿ, ಪ್ರೀತಿಃ-ಭಕ್ತಿಯೂ, ದ್ವೇಷಃ ವಾಪಿ-ಅಥವಾ ದ್ವೇಷವಾಗಲಿ, ವಿಧೇ-ಹೇ ಬ್ರಹ್ಮ!, ಭವೇತ್-(ತಾತ್ಕಾಲಿಕವಾಗಿ) ಉಂಟಾಗುತ್ತದೆ; ತೇಷಾಂ-ಅವರಿಗೆ, ತಥಾ-ಆ ಪ್ರೀತಿ ದ್ವೇಷಗಳಿಗನುಸಾರವಾಗಿ, ಫಲಂ-(ಅವರ ಕರ್ಮಗಳ) ಫಲವೂ, ಭವೇತ್-ಉಂಟಾಗುತ್ತದೆ; ಮತ್ತಃ ಏವ ಚ-(ಫಲವು) ನನ್ನಿಂದಲೇ (ಲಭಿಸುತ್ತದೆ); ಅನ್ಯತಃ ನ-ಬೇರೆ ಯಾರಿಂದಲೂ ಅಲ್ಲ.

**ದೇವಾದಿಷ್ವಪ್ಯಹಂ ಸ್ಥಿತ್ವಾ ಫಲಂ ತೇಭ್ಯೋ ದದಾಮಿ ಹಿ ।**
**ತತ್ತತ್ಕಾಲಪರಿಚ್ಛಿನ್ನಂ ತತ್ತತ್ಕರ್ಮಾನುಸಾರತಃ ॥ ೧೨ ॥**

ದೇವಾದಿಷು ಅಪಿ-(ಆಯಾ ಜೀವರಿಂದ ಆರಾಧಿಸಲ್ಪಡುವ) ದೇವತೆಗಳಲ್ಲಿಸಹ, ಅಹಂ-ನಾನು, ಸ್ಥಿತ್ವಾ-ನಿಂತು(ಅಂತರ್ಯಾಮಿಯಾದ ನಾನೇ), ತೇಭ್ಯಃ-(ಆಯಾ) ಜೀವರಿಗೆ, ತತ್ತತ್ಕರ್ಮಾನುಸಾರತಃ-ಆಯಾ ಕರ್ಮಾನುಸಾರವಾಗಿ, ತತ್ತತ್ಕಾಲಪರಿಚ್ಛಿನ್ನಂ-ಆಯಾ ಕಾಲವಿಶೇಷಗಳನ್ನನುಸರಿಸಿದ (ಭಿನ್ನಗಳಾದ), ಫಲಂ-ಫಲವನ್ನು, ದದಾಮಿ-ಕೊಡುತ್ತೇನೆ.

**ಮಾಮುದ್ದಿಶ್ಯ ಕೃತಂ ಯತ್ತು ಸಕಾಮಂ ತತ್ತಥೈವ ಹಿ ।**
**ನಿಷ್ಕಾಮಂ ಯದ್ಭವೇತ್ಕರ್ಮ ತದೇವಾನಂತಮುಚ್ಯತೇ ॥ ೧೩ ॥**

---

ಅನುಗುಣವಾದ ತಾತ್ಕಾಲಿಕ ಪ್ರೀತಿದ್ವೇಷಗಳೂ ಉಂಟಾಗುತ್ತವೆ; ಇವುಗಳಿಗೆ ಅನುಸಾರವಾಗಿಯೇ ತಮ್ಮ ಕರ್ಮಗಳ ಫಲವನ್ನೂ ನನ್ನಿಂದಲೇ ಪಡೆಯುತ್ತಾರೆ; ಫಲಪ್ರದನು ನಾನೇ—ಅನ್ಯರಾರೂ ಅಲ್ಲ(೧೧). ಅನ್ಯದೇವತೆಗಳನ್ನು ಆರಾಧಿಸುವ ಜೀವರಿಗೆ ದೊರೆಯುವ ಫಲಗಳಾದರೂ, ನನ್ನಿಂದಲೇ; ಆ ದೇವತೆಗಳಲ್ಲಿ ನಾನೇ ನಿಂತು ಪೂಜಕನ ಅಭೀಷ್ಟಗಳನ್ನು ಕೊಡುತ್ತೇನೆ; ಕಾಲಾನುಗುಣವಾದ ಕರ್ಮಾನುಸಾರವಾದ ಫಲಗಳನ್ನು ಆ ದೇವತೆಗಳ ಅಂತರ್ಯಾಮಿಯಾದ ನಾನೇ ಕೊಡುತ್ತೇನೆ—ದೇವತೆಗಳು ಜೀವರಿಗೆ ಫಲದಾನದಲ್ಲಿ ಸ್ವತಂತ್ರರಲ್ಲ(೧೨). ನನ್ನನ್ನು ಆರಾಧಿಸುವ ಜೀವರು, ಫಲಕಾಮನೆಯಿಂದ ಕರ್ಮಗಳನ್ನು ಮಾಡಿದರೆ, ಆ ಫಲಗಳನ್ನು ಪಡೆಯುತ್ತಾರೆ;

ಯತ್-ಯಾವ ಕರ್ಮವು, ಸಕಾಮಂ-ಫಲಾಪೇಕ್ಷೆಯಿಂದ, ಮಾಂ-ನನ್ನನ್ನು ಉದ್ದಿಶ್ಯ-ಕುರಿತು (ನನ್ನಿಂದ ಫಲವನ್ನು ಹೊಂದಲಿಚ್ಛಿಸಿ ನನ್ನನ್ನು ಉದ್ದೇಶಿಸಿ), ಕೃತಂ-ಮಾಡಲ್ಪಡುವುದೋ, ತತ್-ಅದು(ಆ ಕರ್ಮವು), ತಥಾ ಏವ ಹಿ-ಹಾಗೆಯೇ (ಫಲವುಳ್ಳದ್ದೇ) ಆಗುತ್ತದೆ; ಯತ್ ಕರ್ಮ-ಯಾವ ಕರ್ಮವು, ನಿಷ್ಕಾಮಂ ಭವೇತ್-ನಿಷ್ಕಾಮವಾದುದೋ (ಫಲೇಚ್ಛೆಯಿಲ್ಲದೇ ಕೇವಲ ನನ್ನ ಪ್ರೀತ್ಯರ್ಥವಾಗಿ ಆಚರಿಸಲ್ಪಡುವುದೋ), ತತ್ ಏವ-ಅದೇ, ಅನಂತಂ-ಅನಂತವೆಂದು (ಅಪರಿಮಿತವೂ ಶಾಶ್ವತವೂ ಎಂದು), ಉಚ್ಯತೇ-ಹೇಳಲ್ಪಡುತ್ತದೆ.

**ಮಧ್ಯಮಾಸ್ತತ್ರ ಯೇ ಭಕ್ತಾ ಮೋಕ್ಷಕಾಮಾ ಭಜಂತಿ ಮಾಂ ।**
**ಏಕಾಂತಿನೋ ಹ್ಯುತ್ತಮಾಸ್ತೇ ಮದರ್ಥಂ ಮೋಕ್ಷಕಾಂಕ್ಷಿಣಃ ॥ ೧೪ ॥**

ತತ್ರ-ಅವರಲ್ಲಿ(ನನ್ನನ್ನು ಆರಾಧಿಸುವ ಜೀವರಲ್ಲಿ), ಯೇ-ಯಾರು, ಮಾಂ-ನನ್ನನ್ನು, ಮೋಕ್ಷಕಾಮಾಃ-ಮೋಕ್ಷವನ್ನು ಅಪೇಕ್ಷಿಸಿ ಸೇವಿಸುವರೋ (ಮೋಕ್ಷವೆಂಬ ಫಲಕ್ಕಾಗಿ ಸೇವಿಸುವರೋ), (ತೇ-ಅವರು), ಮಧ್ಯಮಾಃ-ಮಧ್ಯಮ ಭಕ್ತರು; ಏಕಾಂತಿನಃ-ಏಕಾಂತ ಭಕ್ತರು (ಸೋಮಪಾನಾರ್ಹ ದೇವತೆಗಳು), ಮದರ್ಥಂ-ನನಗಾಗಿ, ಮೋಕ್ಷಕಾಂಕ್ಷಿಣಃ-ಮೋಕ್ಷವನ್ನು ಇಚ್ಛಿಸುತ್ತಾರೆ (ಸುಖಕ್ಕಾಗಿ ಅಲ್ಲ); ತೇ-ಅವರು, ಉತ್ತಮಾಃ ಹಿ-ಉತ್ತಮ ಭಕ್ತರೆಂಬುದು ಸತ್ಯವು.

**ಯಥಾ ಸುಖೇ ಭವೇತ್ ಪ್ರೀತಿಃ ನಿರುಪಾಧಿಸ್ತಥಾ ಮಯಿ ।**
**ಏಕಾಂತಿನಾಂ ಭವೇತ್ ಪ್ರೀತಿರ್ಮೋಕ್ಷಸ್ತೇಷಾಂ ಮದರ್ಥಕಃ ॥ ೧೫ ॥**

**ಅಜ್ಞಾನಲೇಶರಹಿತಾಃ ಕರ್ಮಬಂಧವಿನಿರ್ಗತಾಃ ।**
**ಕದಾ ಭೂತ್ವಾ ಹರೇರೂಪಂ ದ್ರಕ್ಷ್ಯಾಮಃ ಸರ್ವದೈವ ಹಿ ॥ ೧೬ ॥**

---

ನಿಷ್ಕಾಮರಾಗಿ ಕೇವಲ ನನ್ನ ಪ್ರೀತಿಗಾಗಿಯೇ ಕರ್ಮಗಳನ್ನಾಚರಿಸುವವರು, ಅಪರಿಮಿತವೂ, ಶಾಶ್ವತವೂ ಆದ ಫಲಗಳನ್ನು ಹೊಂದುತ್ತಾರೆ[1] (೧೩).

ಮೋಕ್ಷಕ್ಕಾಗಿ ನನ್ನನ್ನು ಸೇವಿಸುವ ಭಕ್ತರು, ಮಧ್ಯಮರು; ನನಗಾಗಿ (ನನ್ನ ನಿರಂತರ ಸೇವೆಗಾಗಿ) ಮೋಕ್ಷವನ್ನು ಸ್ವೀಕರಿಸುವವರು, ಏಕಾಂತ ಭಕ್ತರು—ಅವರೇ ಉತ್ತಮ ಭಕ್ತರು(೧೪). ಸುಖಸಾಧಕಭೋಗ್ಯವಸ್ತುಗಳು, ಸುಖಕ್ಕಾಗಿ ಬೇಕು—ಆದರೆ ಸುಖವೇಕೆ

---

1. ಕೇವಲ ಭಗವತ್ಪ್ರೀತಿಗಾಗಿ ಕರ್ಮಗಳನ್ನು ಆಚರಿಸಿ, ಭಕ್ತಿಯಿಂದ ಅರ್ಚಿಸುವವರು ಉತ್ತಮಾಧಿಕಾರಿಗಳಾದ ದೇವತೆಗಳು—ಅವರೇ ನಿಷ್ಕಾಮ ಭಕ್ತರು; ಫಲಾಪೇಕ್ಷೆಯಿಂದ ನನ್ನನ್ನು ಸೇವಿಸುವವರು(ಸಕಾಮರು) ಅಧಮಭಕ್ತರು; ಮೋಕ್ಷವನ್ನು ಅಪೇಕ್ಷಿಸಿ, ಸೇವಿಸುವವರು ಮಧ್ಯಮಭಕ್ತರು—ಈ ತ್ರೈವಿಧ್ಯವು ಮುಂದಿನ ಶ್ಲೋಕಗಳಲ್ಲಿ ಪ್ರಸಕ್ತವಾಗಿದೆ.

ಇತಿ ಬುದ್ಧ್ವಾ ಯತಂತೇ ತೇ ಮೋಕ್ಷಾಯ ನ ಸುಖಾಯ ಚ ।
ಅನ್ಯೇ ಸಂಸಾರತಾಪೇನ ಸಂತಪ್ತಾ ವಿಮುಮುಕ್ಷವಃ ॥ ೧೭ ॥

ವಿಚಿತ್ವಾ ಮೋಕ್ಷದಾತಾರಂ ಭಜಂತೇ ಮಧ್ಯಮಾ ಹಿ ತೇ ।
ಏತೇಭ್ಯೋ ಭಕ್ತಿಹೀನಾ ಯೇ ತೇಽಧಮಾ ಇತಿ ಕೀರ್ತಿತಾಃ ॥ ೧೮ ॥

ಭಗವದ್ಭಕ್ತರಲ್ಲಿರುವ ತ್ರೈವಿಧ್ಯವನ್ನು ಸಂಗ್ರಹಿಸಿ ನಿರೂಪಿಸುತ್ತಾರೆ:

ಯಥಾ-ಹೇಗೆ, ಸುಖೇ-ಸುಖಾನುಭವದಲ್ಲಿ ಪ್ರೀತಿಃ-ಪ್ರೀತಿಯು, ನಿರುಪಾಧಿಃ-ಉಪಾಧಿ ಇಲ್ಲದೇ (ನಿಮಿತ್ತವಿಲ್ಲದೇ), ಭವೇತ್-ಉಂಟಾಗುವುದೋ, ತಥಾ-ಹಾಗೆ(ನಿರ್ವ್ಯಾಜವಾದ), ಪ್ರೀತಿಃ-ಪ್ರೀತಿಯು(ಆದರವು—ಬೇಕೆಂಬ ಇಚ್ಛೆಯು), ಮಯಿ-ನನ್ನಲ್ಲಿ ಏಕಾಂತಿನಾಂ-ಏಕಾಂತ ಭಕ್ತರಿಗೆ, ಭವೇತ್-ಉಂಟಾಗುತ್ತದೆ; ತೇಷಾಂ-ಅವರಿಗೆ, ಮೋಕ್ಷಃ-ಮೋಕ್ಷವು, ಮದರ್ಥಕಃ-ನನ್ನ ಪ್ರಾಪ್ತಿಗಾಗಿಯೇ (ಅವರಿಗೆ ನಾನೇ ಪುರುಷಾರ್ಥನು); ತೇ-ಅವರು(ಏಕಾಂತ ಭಕ್ತರು), ಅಜ್ಞಾನಲೇಶರಹಿತಾಃ-ಅಜ್ಞಾನಾದಿದೋಷಲೇಶರಹಿತರಾಗಿ, ಕರ್ಮಬಂಧವಿನಿರ್ಗತಾಃ-ಕರ್ಮಬಂಧದಿಂದ (ಸಂಸಾರದಿಂದ) ಹೊರಗೆ ಬಂದವರು (ಬಿಡುಗಡೆಯನ್ನು ಹೊಂದಿದವರು), ಕದಾ-ಯಾವಾಗ(ಎಂದು), ಭೂತ್ವಾ-ಆಗಿ, ಸರ್ವದಾ ಏವ-ಸರ್ವಕಾಲದಲ್ಲಿಯೂ, ಹರೇಃ-ಶ್ರೀಹರಿಯ, ರೂಪಂ-ರೂಪವನ್ನು ದ್ರಕ್ಷ್ಯಾಮಃ-ನೋಡುವೆವು, ಇತಿ

---

ಬೇಕೆಂಬ ಪ್ರಶ್ನೆಗೆ ಉತ್ತರವಿಲ್ಲ ಎಂದರೆ, ಸುಖವು ಅನ್ಯಕಾರಣಗಳ ಅವಶ್ಯಕತೆಯಿಲ್ಲದೇ ಪುರುಷಾರ್ಥವಾಗಿರುವುದು—ಸರ್ವಾಪೇಕ್ಷಿತವಾಗಿರುತ್ತದೆ; ಹೀಗೆಯೇ, (ಸುಖಪ್ರಾಪ್ತಿ ವಿಷಯದಲ್ಲಿ ನಿರ್ವ್ಯಾಜವಾದ ಆದರವು ಸರ್ವರಿಗೂ ಇರುವಂತೆ); ಏಕಾಂತಿಗಳೆಂದು ಕರೆಯಲ್ಪಡುವ ಉತ್ತಮ ಭಕ್ತರಿಗೆ, ನನ್ನ ಪ್ರಾಪ್ತಿವಿಷಯದಲ್ಲಿಯೂ ಅನ್ಯೋಪಾಧಿಗಳಿಲ್ಲದ ಆದರವಿರುತ್ತದೆ—ನನಗಾಗಿಯೇ ನನ್ನ ಪ್ರಾಪ್ತಿಯನ್ನು ಆದರಿಸುತ್ತಾರೆ—ಸುಖಕ್ಕಾಗಿ ಅಲ್ಲ—ಇದರ ಲಾಭವೇ ಮೋಕ್ಷವು; ಮಧ್ಯಮಭಕ್ತರೆಂಬುವ ಬೇರೆ ಕೆಲವು ಜೀವರು, ವಿವಿಧ ಸಂಸಾರಕ್ಲೇಶಗಳಿಂದ ದುಃಖಿತರಾಗಿ, ಅಜ್ಞಾನಾದಿದೋಷಗಳಿಲ್ಲದೇ, ಕರ್ಮಬಂಧನದಿಂದ ಮುಕ್ತರಾಗಿ, ಸರ್ವದಾ ಶ್ರೀಹರಿಯ ರೂಪವನ್ನು ನೋಡುತ್ತ ಆನಂದಿಸುವ ಸ್ಥಿತಿಯನ್ನು, ಎಂದಿಗೆ ಪಡೆಯುವೆವೋ, ಎಂದು ಚಿಂತಿಸುತ್ತ ಮೋಕ್ಷಕ್ಕಾಗಿ ಯತ್ನಿಸುತ್ತಾರೆ; ದುಃಖರಾಹಿತ್ಯ ಸುಖಪ್ರಾಪ್ತಿಗಳು ಇವರ ಪುರುಷಾರ್ಥ; ಇಂಥ ಸ್ಥಿತಿಯನ್ನು ತಮಗೆ ದೊರಕಿಸುವ ಪ್ರಭುವನ್ನು, ವಿಚಾರದಿಂದ ತಿಳಿದು ಆತನನ್ನು ಸೇವಿಸುತ್ತಾರೆ; ಇವರಕಿಂತ ಕಡಿಮೆ ಭಕ್ತಿಯುಳ್ಳವರು (ನನ್ನ ಮಹಿಮಾಜ್ಞಾನ—ತಜ್ಜನ್ಯಪ್ರೇಮ ಮತ್ತು ನನ್ನ ಸೇವೆಯಲ್ಲಿ ಆದರ, ಇವುಗಳಲ್ಲಿ ಕೆಳಮಟ್ಟದ ಜೀವರು) ಅಧಮಭಕ್ತರೆನಿಸುತ್ತಾರೆ (೧೫-೧೮). ಸ್ವತಂತ್ರನು ನಾನೊಬ್ಬನೇ ಆದ್ದರಿಂದ, ಸರ್ವರ

ಬದ್ಧ್ವಾ-ಹೀಗೆಂಬ ಮನಸ್ಸಿನಿಂದ, ಮೋಕ್ಷಾಯ-ಮೋಕ್ಷಕ್ಕೋಸ್ಕರ, ಯತಂತೇ-ಯತ್ನಮಾಡುತ್ತಾರೆ; ಸುಖಾಯ-(ಮೋಕ್ಷದಲ್ಲಿ ದೊರೆಯುವ) ಸುಖಕ್ಕಾಗಿ, ನ ಚ-ಅಲ್ಲ ಅನ್ಯೇ-ಇತರರು (ಈ ಉತ್ತಮರಾದ ಏಕಾಂತಿಗಳಲ್ಲದ ಕೆಲವರು), ಸಂಸಾರತಾಪೇನ-ಸಂಸಾರದಲ್ಲಿನ ನಾನಾ ದುಃಖಗಳಿಂದ, ಸಂತಪ್ತಾಃ-ಸಂತಪ್ತರಾಗಿ (ಅನುಭವಿಸಲಶಕ್ತರಾಗಿ), ವಿಮುಮುಕ್ಷವಃ-ನಿಃಶೇಷವಾಗಿ ಬಿಡುಗಡೆ ಹೊಂದುವ ಇಚ್ಛೆಯಿಂದ, ವಿಚಿತ್ಯ-ವಿಚಾರಮಾಡಿ, ಮೋಕ್ಷದಾತಾರಂ-ಮೋಕ್ಷವನ್ನು ಕೊಡುವ ಪ್ರಭುವನ್ನು ಭಜಂತಿ-ಸೇವಿಸುತ್ತಾರೆ; ತೇ-ಅವರು, ಮಧ್ಯಮಾಃ ಹಿ-ಮಧ್ಯಮಭಕ್ತರೆಂದು ಪ್ರಸಿದ್ಧರು; ಏತೇಭ್ಯಃ-ಇವರುಗಳಿಂದ(ಈ ಮಧ್ಯಮಭಕ್ತರಗಿಂತ), ಭಕ್ತಿಹೀನಾಃ-ಕಡಿಮೆ ಭಕ್ತಿಯುಳ್ಳ ತೇ-ಆ ಇತರ ಜೀವರು, ಅಧಮಾಃ-ಅಧಮಭಕ್ತರು, ಇತಿ-ಎಂದು, ಕೀರ್ತಿತಾಃ-ಹೇಳಲ್ಪಟ್ಟಿರುವರು.

ಮುಖ್ಯಕರ್ತಾ ಸ್ವತಂತ್ರತ್ವಾತ್ಸರ್ವೇಷಾಂ ಕರ್ಮಣಾಮಹಂ ।
ನ ಕಿಂಚಿನ್ಮದೃತೇ ಕಿಂಚಿತ್ ಕರ್ಮ ಯತ್ಕರ್ತುಮೀಹತೇ ॥ ೧೯ ॥

ಅಹಂ-ನಾನು, ಸ್ವತಂತ್ರತ್ವಾತ್-ಸ್ವತಂತ್ರನಾದ್ದರಿಂದ, ಸರ್ವೇಷಾಂ-(ಚೇತನಾಚೇತನ) ಸರ್ವಜಗತ್ತಿನ, ಕರ್ಮಣಾಂ-ಕರ್ಮಗಳ (ವ್ಯಾಪಾರಗಳ-ಕ್ರಿಯೆಗಳ), ಮುಖ್ಯಕರ್ತಾ-ಮುಖ್ಯಕರ್ತನು; ಮದೃತೇ-ನನ್ನನ್ನು ಬಿಟ್ಟು (ನಾನಿಲ್ಲದೇ), ಕಿಂಚಿತ್-ಯಾವ ವಸ್ತುವೂ, ಯತ್‌ಕರ್ತುಂ ಈಹತೇ-ಯಾವುದನ್ನು ಮಾಡಲುದ್ಯುಕ್ತವಾಗುತ್ತದೆಯೋ, ಕಿಂಚಿತ್‌ಕರ್ಮ-ಆ ಅಲ್ಪಕ್ರಿಯೆಯನ್ನೂ ನ(ಕುರುತೇ)-ಮಾಡಲಾರದು (ತೇನ ವಿನಾ ತೃಣಮಪಿ ನ ಚಲತಿ-ಸ್ವತಂತ್ರನಾದ ಶ್ರೀಹರಿಯನ್ನು ಬಿಟ್ಟು ಒಂದು ಹುಲ್ಲುಕಡ್ಡಿಯೂ ಸಹ ಅಲ್ಲಾಡುವುದಿಲ್ಲ-ಚಲಿಸುವುದಿಲ್ಲ ಎಂಬ ಶ್ರುತ್ಯರ್ಥವನ್ನೇ ಹೇಳಲಾಗಿದೆ).

ಸ್ಥಿತ್ವಾ ಭಕ್ತಶರೀರಾದೌ ಸ್ವಯಮೇವ ಸಮರ್ಚಯೇ ।
ಅತೋ ವಿಪ್ರತಮಂ ಪ್ರಾಹುಶ್ಚಿತ್ರಕರ್ಮಮಹಾಮಿತಿ ॥ ೨೦ ॥

---

ಸರ್ವಕರ್ಮಕರ್ತನು—ಮುಖ್ಯಕರ್ತನು, ನಾನೇ ಆಗಿದ್ದೇನೆ; ನನ್ನನ್ನುಳಿದು, ಈ ಜಗತ್ತಿನಲ್ಲಿ ಯಾರೊಬ್ಬನೂ (ಯಾವುದೊಂದು ತೃಣಾದಿ ಕ್ಷುದ್ರಪದಾರ್ಥವೂ ಸಹ), ಚಲಿಸುವ ಮುಂತಾದ ಅತ್ಯಲ್ಪಕ್ರಿಯೆಗಳನ್ನೂ ಮಾಡಲು ಶಕ್ತವಲ್ಲ; ಸ್ವೇಚ್ಛಾನುಸಾರವಾದ ಕರ್ಮಗಳು ಯಾವ ವಸ್ತುವಿನಿಂದಲೂ ಸಂಭವಿಸುವುದಿಲ್ಲ—ನನ್ನ ಇಚ್ಛಾನುಸಾರವಾದ ಇಚ್ಛೆಯು ಮಾತ್ರ (ಅದರಂತೆ ನಾನು ಮಾಡಿದಾಗ ಮಾತ್ರ) ಸಫಲವಾಗಿ ಕಾರ್ಯರೂಪಕ್ಕೆ ಬರುತ್ತದೆ (೧೯). ಭಕ್ತರ ದೇಹಗಳಲ್ಲಿ (ಮನ ಆದಿ ಇಂದ್ರಿಯಗಳಲ್ಲಿ ಮತ್ತು ನನ್ನ ಪೂಜಾಸಾಧನ ವಸ್ತುಗಳಲ್ಲಿ ಸಹ), ನಾನೇ ಇದ್ದು ಬ್ರಾಹ್ಮಣ, ಗುರು ಮೊದಲಾದ ವಿವಿಧ

ಭಕ್ತಶರೀರಾದೌ-ಭಕ್ತರ ಶರೀರಾದಿಗಳಲ್ಲಿ(ಮನ ಮೊದಲಾದ ಇಂದ್ರಿಯಗಳಲ್ಲಿ ಸಹ), ಸ್ಥಿತ್ವಾ-ಇದ್ದವನಾಗಿ(ನೆಲಸಿ), ಸ್ವಯಂ ಏವ-ನಾನೇ,(ಸ್ವಯಂ-ಗುರ್ವಾದಿ ಅನ್ಯತ್ರಸ್ಥಿತನಾದ ನನ್ನನ್ನೇ), ಸಮರ್ಚಯೇ-ಅರ್ಚಿಸುತ್ತೇನೆ (ಪೂಜಿಸುತ್ತೇನೆ); ಅತಃ-ಆದ್ದರಿಂದ (ಹೀಗೆ ನನ್ನನ್ನು ನಾನೇ ಪೂಜಿಸಿಕೊಳ್ಳುವುದರಿಂದ), (ನನ್ನನ್ನು), ವಿಪ್ರತಮಂ-ಪೂಜ್ಯವಸ್ತುಗಳಲ್ಲಿ ಶ್ರೇಷ್ಠನೆಂದೂ, ಚಿತ್ರಕರ್ಮಮಹಾಂ-ಚಿತ್ರವಿಚಿತ್ರ ರೂಪದ ನಾನಾ ಕರ್ಮಗಳಿಂದ ಪೂಜಿಸಲ್ಪಡುವವನೆಂದೂ, ಇತಿ-ಈ ಮೊದಲಾದ ಶಬ್ದಗಳಿಂದ, ಪ್ರಾಹುಃ-(ಜ್ಞಾನಿಗಳು) ಕರೆಯುತ್ತಾರೆ.[1]

**ಹವಿಷಾ ವಾ ವೃಧಾನೋಽಹಂ ಯಜೇದ್ದ್ಯಾಂ ಪೃಥಿವೀಮುತ ।**
**ಏವಂ ಹಿ ಶ್ರುತಯಃ ಸ್ಮೃತಾ ಬಹುಶೋ ವರ್ಣಯಂತಿ ಮಾಂ ॥ ೨೧ ॥**

ಅಹಂ-ನಾನು, ಹವಿಷಾ-(ನನಗೆ ಅರ್ಪಿಸಲಾಗುವ) ಹವಿಸ್ಸಿನಿಂದ, ವೃಧಾನಃ-ವೃದ್ಧಿಹೊಂದುವೆನು(ಭಕ್ತನ ವಿಷಯದಲ್ಲಿ ನನ್ನ ಪ್ರಸನ್ನತೆಯು ಅಧಿಕವಾಗುತ್ತದೆ); ದ್ಯಾಂ-ಅಂತರಿಕ್ಷವನ್ನೂ, ಉತ-ಹಾಗೂ, ಪೃಥಿವೀಂ-ಪೃಥಿವಿಯನ್ನೂ(ತದ್ಗತ ನನ್ನ

ಅಧಿಷ್ಠಾನಗಳಲ್ಲಿ(ಸ್ಥಾನವಿಶೇಷಗಳಲ್ಲಿಯೂ, ಭಕ್ತನ ಯೋಗ್ಯತಾನುಸಾರವಾಗಿ ಸರ್ವತ್ರ ಸಹ) ಸ್ಥಿತನಾದ ನನ್ನನ್ನೇ, ನಾನು ಪೂಜೆಮಾಡಿಕೊಳ್ಳುತ್ತೇನೆ;[2] (ನನ್ನ ಜೊತೆಗೆ, ಪರಾಧೀನ ಕರ್ತನಾದ, ನಾನು ಮಾಡಿದ ಪೂಜಾದಿ ಕರ್ಮಗಳನ್ನು ತಾನೂ ಮಾಡಿ, ಆ ಕರ್ಮಗಳ ಯಥಾಯೋಗ್ಯ ಫಲಗಳನ್ನು ಪಡೆಯುತ್ತಾನೆ); ಈ ಕಾರಣದಿಂದ ಜ್ಞಾನಿಗಳು ನನ್ನನ್ನು ವಿಪ್ರತಮನೆಂದೂ, ಚಿತ್ರಕರ್ಮಮಹನೆಂದೂ ಕರೆಯುತ್ತಾರೆ(೨೦). ಭಕ್ತನು ಅರ್ಪಿಸುವ ಹವಿಸ್ಸುಗಳಿಂದ, (ಪೂಜಾದ್ರವ್ಯಾದಿಗಳಿಂದ) ನಾನು ಪ್ರವೃದ್ಧನಾಗುವ (ಅಧಿಕ ಪ್ರಸನ್ನನಾಗುವ) ಸ್ವಭಾವದವನು; ಪೃಥಿವೀ ಮತ್ತು ಅಂತರಿಕ್ಷಗಳನ್ನು ವ್ಯಾಪಿಸಿರುವ ನನ್ನ

---

1. 'ನಿಷುಸೀದ ಗಣಪತೇ ಗಣೇಷುತ್ವಾಮಾಹುರ್ವಿಪ್ರತಮಂ ಕವೀನಾಂ । ನ ಋತೇ ತ್ವತ್ಕ್ರಿಯತೇ ಕಿಂ ಚ ನಾರೇ ಮಹಾಮರ್ಕಂ ಮಘವಂ ಚಿತ್ರಮರ್ಚ ॥ ಎಂಬ ಶ್ರುತ್ಯರ್ಥವನ್ನೇ ಈ ಶ್ಲೋಕವು ವಿವರಿಸುತ್ತದೆ. ವಿಪ್ರತಮಂ—ಚಿತ್ರಮರ್ಚ—ಮಹಾಂ, ಈ ಶಬ್ದಗಳ ಅರ್ಥಗಳು ಶ್ಲೋಕಾರ್ಥಭಾಗದಲ್ಲಿರುವಂತಿವೆ. ಶ್ರೀವಿಷ್ಣುಪೂಜಾಕ್ರಮದಲ್ಲಿ ಅಭಿಷೇಕ ಮಾಡುವ ಮೊದಲು, ಉಚ್ಚರಿಸಬೇಕಾದ ವೇದಮಂತ್ರವಿದು. ತನ್ನ ಪೂಜೆಯನ್ನು (ಉತ್ತಮ ಪೂಜ್ಯನಾದ ತನ್ನನ್ನು ತಾನೇ ಪೂಜಿಸಿಕೊಳ್ಳುವನೆಂಬ ಅನುಸಂಧಾನವಿರಬೇಕಾದ ಅವಶ್ಯಕತೆಯನ್ನು ಸೂಚಿಸುತ್ತದೆ.)

2. 'ಪ್ರಕ್ರಮತ್ ಸ್ವಸತ್ಕೃತಂ ಪುರುಷೇಷು ಧೀಷು ತು ಬಹಿರಂತರ ಸಚ್ಚರಸೇ । ತವ ಪುರುಷವಂದತ್ಯಖಿಲಶಕ್ತಿಧೃತಃ ಸ್ವಕೃತಂ ॥'—(ಭಾಗ. ೧೦-೮೭-೨೧)—ಎಂಬಲ್ಲಿ ತನ್ನ ರೂಪಗಳಿಂದಲೇ ತನ್ನ ಇತರ ರೂಪಗಳನ್ನು ಪೂಜಿಸಿಕೊಳ್ಳುವನೆಂಬ ಮಹಿಮೆಯು ಉಕ್ತವಾಗಿದೆ. ಸತ್ಕರ್ಮ-ಅಸತ್ಕರ್ಮಗಳೆಲ್ಲವನ್ನೂ ಮಾಡುತ್ತಾನೆಂಬ ಅನುಸಂಧಾನವನ್ನು ತಂದುಕೊಳ್ಳುವುದು, ಸಜ್ಜನರಿಗೆ ಮಹಾಸಾಧನದಿಂದ ಮಾತ್ರ ಸಾಧ್ಯ.

ರೂಪವಿಶೇಷಗಳನ್ನೂ). ಯಜೇತ್-ಪೂಜಿಸತಕ್ಕದ್ದು; ಏವಂ-ಹೀಗೆ, ಸ್ಮಿತಾಃ-ಪರಿಶುದ್ಧಗಳಾದ(ನಿರ್ದುಷ್ಟ ಪ್ರಮಾಣಗಳಾದ), ಬಹುಶಃ-ಅನೇಕ, ಶ್ರುತಯಃ-ಶ್ರುತಿಗಳು, ಮಾಂ-ನನ್ನನ್ನು (ನನ್ನ ಮಹಿಮೆಯನ್ನು), ವರ್ಣಯಂತಿ-ವರ್ಣಿಸುತ್ತವೆ.[1]

ತಥಾಪಿ ಕರ್ಮಣಾಂ ಭೋಗೋ ಯಥಾ ಜೀವೇಷು ಜಾಯತೇ ।
ತಥಾ ಪ್ರಕಾರಂ ವಕ್ಷ್ಯಾಮಿ ಶೃಣುಷ್ವ ಸುಸಮಾಹಿತಃ ॥ ೨೨ ॥

ತಥಾಪಿ-ಹೀಗಿದ್ದಾಗ್ಯೂ (ನಾನೇ ಸರ್ವಕರ್ತನಾದರೂ), ಕರ್ಮಣಾಂ-ಕರ್ಮಗಳ, ಭೋಗಃ-ಫಲಾನುಭವವು, ಯಥಾ-ಹೇಗೆ, ಜೀವೇಷು-ಜೀವರಲ್ಲಿ ಜಾಯತೇ-ಉಂಟಾಗುತ್ತದೆ, ತಥಾಪ್ರಕಾರಂ-ಆ ಪ್ರಕಾರವನ್ನು ವಕ್ಷ್ಯಾಮಿ-ಹೇಳುತ್ತೇನೆ; ಸುಸಮಾಹಿತಃ-ಸಮಾಧಾನಮನಸ್ಕನಾಗಿ (ಏಕಾಗ್ರಮನಸ್ಸಿನಿಂದ), ಶೃಣುಷ್ವ-ಕೇಳುವವನಾಗು.

ಸ್ವಾತಂತ್ರ್ಯಂ ಯೋ ಮಮ ಗುಣಃ ತಂ ಭಕ್ತೇಷು ಯಥಾಕ್ರಮಂ ।
ದತ್ತ್ವೇಂದ್ರಿಯಗುಣಾಧೀಶಾನ್ ಭವದಾದೀನ್ ಕರೋಮ್ಯಹಂ ॥ ೨೩ ॥

ತಥಾಪಿ ಕಲಿಮುಖ್ಯಾನಾಂ ದತ್ತ್ವಾ ಕಿಂಚಿತ್ ಸ್ವತಂತ್ರತಾಂ ।
ಬುಧ್ಯಾದಿಷು ನಿಯೋಜ್ಯೈವ ನಾನಾಜೀವಾನ್ ಸೃಜಾಮ್ಯಹಂ ॥ ೨೪ ॥

ಜೀವೋಽಪಿ ಕಿಂಚಿತ್ ಸ್ವಾತಂತ್ರ್ಯಂ ಮದ್ದತ್ತಮುಪತಿಷ್ಠತೇ ।
ಯೇ ನಾಯಂ ಭಕ್ಷಯತ್ಯನ್ನಂ ದೇಹಚೇಷ್ಟಾಸ್ತಥೇತರಾಃ ॥ ೨೫ ॥

---

ವ್ಯಾಪ್ತರೂಪಗಳನ್ನೂ ನಾನು ಪೂಜಿಸಿ, ಪೂಜೆಗೊಳ್ಳುತ್ತೇನೆ, ಎಂದು ತಿಳಿದು ಅಧಿಕಾರಿಯು ಪೂಜಿಸತಕ್ಕದ್ದೆಂದು, ನಿರ್ದುಷ್ಟಪ್ರಮಾಣಗಳಾದ ಪವಿತ್ರ ಶ್ರುತಿಗಳು, ಬಹುವಿಧವಾಗಿ ನನ್ನನ್ನು ವರ್ಣಿಸುತ್ತವೆ (೨೧). ಹೀಗೆ ನಾನೇ ಸರ್ವಕರ್ತನಾದರೂ, ಜೀವಶರೀರಾದಿಗಳಲ್ಲಿದ್ದು ನಾನು ಮಾಡುವ ಕರ್ಮಗಳ ಭೋಗವು, ಜೀವರಿಗೆ ಏಕೆ ಮತ್ತು ಹೇಗೆ ಉಂಟಾಗುತ್ತವೆಂಬುದನ್ನು ನಿರೂಪಿಸುತ್ತೇನೆ; ಒಂದೇ ಮನಸ್ಸಿನಿಂದ ಕೇಳುವವನಾಗು(೨೨).

ಸ್ವಾತಂತ್ರ್ಯವೆಂಬುದು ನನ್ನಲ್ಲಿ ಮಾತ್ರವಿರುವ ಗುಣವು; ಅದು ಅನಂತ—ಅಪಾರ; ಅದರಲ್ಲಿ ಏಕದೇಶವನ್ನು ತೆಗೆದು, ಯಥಾಯೋಗ್ಯವಾಗಿ ವಿಭಾಗಿಸಿ, ನನ್ನ ಭಕ್ತರಾದ ದೇವತೆಗಳಲ್ಲಿ ಅವರ ತಾರತಮ್ಯಾನುಸಾರವಾಗಿ ಸ್ಥಾಪಿಸುತ್ತೇನೆ; (ನನ್ನ ಗುಣವು ನನ್ನಿಂದ

---

1. 'ಯ ಉ ತ್ರಿಧಾತು ಪೃಥಿವೀಮುತದ್ಯಾಮೇಕೋ ದಧಾರ ಭುವನಾನಿ ವಿಶ್ವಾ' 'ಇಂದ್ರಾವಿಷ್ಣೂ ಹವಿಷಾವಾವೃಧಾನಾ' ಇತ್ಯಾದಿ ವಿಷ್ಣುಸೂಕ್ತದ ವಾಕ್ಯಗಳು ಇಲ್ಲಿ ಪ್ರಸಕ್ತವಾಗಿವೆ.

**ಕರೋತಿ ಯಾವತ್ ಸ್ವಾತಂತ್ರ್ಯಂ ತಸ್ಮಿನ್ ಅಪಹೃತೇ ಮಯಾ ।**
**ನ ಕಿಂಚಿತ್ ಶಕ್ನುತೇ ಕರ್ತುಂ ತತೋ ವೇತ್ತಿ ಪರಾತ್ಮತಾಂ ॥ ೨೬ ॥**

ಯಃ-ಯಾವ, ಮಮ-ನನ್ನ ಗುಣಾಃ-ಗುಣವಾದ, ಸ್ವಾತಂತ್ರ್ಯಂ-ಸ್ವಾತಂತ್ರ್ಯವೋ, ತಂ-ಅದನ್ನು ಭಕ್ತೇಷು-ನನ್ನ ಭಕ್ತರಲ್ಲಿ ಯಥಾಕ್ರಮಂ-(ಅವರ) ತಾರತಮ್ಯ ವನ್ನನುಸರಿಸಿ, ದತ್ವಾ-ಕೊಟ್ಟು(ಇಟ್ಟು), ಭವದಾದೀನ್-(ಹೇ ಬ್ರಹ್ಮ) ನೀನೇ ಮೊದಲಾದವರನ್ನು ಇಂದ್ರಿಯಗುಣಾಧೀಶಾನ್-ಇಂದ್ರಿಯ ವ್ಯಾಪಾರಗಳ ನಿಯಾಮಕ ರನ್ನಾಗಿ (ಜೀವನ ಶರೀರಾದಿಗಳಲ್ಲಿ ಇಂದ್ರಿಯಾಭಿಮಾನಿಗಳನ್ನಾಗಿ), ಅಹಂ-ನಾನು, ಕರೋಮಿ-ಮಾಡುತ್ತೇನೆ; ತಥಾಪಿ-ಹೀಗಿದ್ದರೂ (ದೇವತೆಗಳಿಗೆ ಹೀಗೆ ಅಧಿ ಕಾರವನ್ನಿತ್ತರೂ), ಕಲಿಮುಖ್ಯಾನಾಂ-ಕಲಿಯೇ ಮೊದಲಾದ ದೈತ್ಯರಿಗೂ, ಕಿಂಚಿತ್-ಸ್ವಲ್ಪಭಾಗ, ಸ್ವತಂತ್ರತಾಂ-ಸ್ವಾತಂತ್ರ್ಯವನ್ನು ದತ್ವಾ-ಕೊಟ್ಟು (ಅಲ್ಪಭಾಗದ ಸ್ವಾತಂತ್ರ್ಯವನ್ನು ಅವರಲ್ಲಿಯೂ ಇಟ್ಟು), ಬುದ್ಧ್ಯಾದಿಷು-ಬುದ್ಧಿ ಮೊದಲಾದ ತತ್ವಗಳಲ್ಲಿ ನಿಯೋಜ್ಯ ಏವ-(ಈ ದೇವ ದೈತ್ಯರನ್ನು ಯೋಜನೆ ಮಾಡಿಯೇ, ಅಹಂ-ನಾನು, ನಾನಾ ಜೀವಾನ್-ಸಮಸ್ತ ಜೀವರನ್ನು ಸೃಜಾಮಿ-ಸೃಷ್ಟಿಸುತ್ತೇನೆ; ಜೀವಃ ಅಪಿ-ಜೀವನೂ ಸಹ, ಮದ್ದತ್ತಂ-ನನ್ನಿಂದ ಕೊಡಲ್ಪಟ್ಟ ಕಿಂಚಿತ್-ಅಲ್ಪ ಸ್ವಾತಂತ್ರ್ಯಂ-ಸ್ವಾತಂತ್ರ್ಯವನ್ನು ಅವತಿಷ್ಠತೇ-ಹೊಂದಿರುತ್ತಾನೆ; ಯೇನ-ಯಾವುದರಿಂದ (ಯಾವ ಸ್ವಾತಂತ್ರ್ಯಾಂಶವನ್ನು ಆಶ್ರಯಿಸಿ), ಅಯಂ-ಈ ಜೀವನು, ಅನ್ನಂ-ಅನ್ನವನ್ನು ಭಕ್ಷಯತಿ-ತಿನ್ನುತ್ತಾನೆ; ಇತರಾಃ-ಬೇರೆ, ಚೇಷ್ಟಾಃ-ಕ್ರಿಯೆಗಳನ್ನು ಯಾವತ್‌ಸ್ವಾತಂತ್ರ್ಯಂ-ಆ ಸ್ವಾತಂತ್ರ್ಯದ ಅಂಶವಿರುವವರೆಗೆ, ಕರೋತಿ-ಮಾಡುತ್ತಾನೆ; ಮಯಾ-ನನ್ನಿಂದ, ತಸ್ಮಿನ್-ಆ

---

ಅಭಿನ್ನವಾದ್ದರಿಂದ, ನಾನೇ ಅವರಲ್ಲಿ ಒಂದು ಅಂಶದಿಂದ ನಿಲ್ಲುತ್ತೇನೆಂದರ್ಥ); ಹೇ ಬ್ರಹ್ಮದೇವ! ನೀನೇ ಮೊದಲಾದವರನ್ನು ಜೀವಶರೀರಾದಿಗಳಲ್ಲಿ ಇಂದ್ರಿಯಾದಿ ತತ್ವಗಳಿಗೆ ಅಧಿಕಾರಿಗಳನ್ನಾಗಿ ಮಾಡುತ್ತೇನೆ; ಹಾಗೂ ಕಲಿ ಮೊದಲಾದ ದೈತ್ಯಜೀವರಲ್ಲಿ ಸಹ ಅಲ್ಪಸ್ವಾತಂತ್ರ್ಯಾಂಶವನ್ನು ಸ್ಥಾಪಿಸಿ, ಬುದ್ಧಿ ಮೊದಲಾದ ತತ್ವಗಳಿಗೆ ನಿಮ್ಮೊಡನೆ ಅವರನ್ನು ಅಭಿಮಾನಿಗಳನ್ನಾಗಿ ಯೋಜನೆ ಮಾಡಿ, ಜೀವರನ್ನು ಸೃಷ್ಟಿಮಾಡುತ್ತೇನೆ—ಅವರವರ ಕರ್ಮಾನುಸಾರವಾದ ಸ್ಥೂಲದೇಹಗಳನ್ನು ಹೊಂದಿಸುತ್ತೇನೆ; ಆ ದೇಹದಲ್ಲಿರುವ ಜೀವನೂ ಸಹ ನನ್ನ ಅಲ್ಪಸ್ವಾತಂತ್ರ್ಯಾಂಶದಿಂದ ಯುಕ್ತನಾಗಿರುತ್ತಾನೆ—ಅದರಿಂದಲೇ (ಅದರ ಪ್ರಭಾವದಿಂದಲೇ) ಅನ್ನವನ್ನು ಭಕ್ಷಿಸುತ್ತಾನೆ; ಇತರ ನಾನಾ ಚೇಷ್ಟೆಗಳನ್ನೂ ಮಾಡುತ್ತಾನೆ; ಈ ಎಲ್ಲ ಅವನ ಚೇಷ್ಟೆಗಳೂ ನನ್ನ ಸ್ವಾತಂತ್ರ್ಯಾಂಶವಿರುವವರೆಗೆ ಮಾತ್ರ—ಅದನ್ನು ನಾನು ಹಿಂತೆಗೆದುಕೊಂಡಾಗ ಯಾವ ಕ್ರಿಯೆಯನ್ನು ಸಾಧಿಸಲೂ ಅಸಮರ್ಥನಾಗುತ್ತಾನೆ—ಆಗ ತನ್ನ ಪರಾಧೀನತೆಯನ್ನು ಅರಿಯುತ್ತಾನೆ(೨೩-೨೬).

ಸ್ವಾತಂತ್ರ್ಯದ ಅಂಶವು, ಅಪಹೃತೇ-ಹಿಂದೆಗೆದುಕೊಳ್ಳಲ್ಪಡಲು (ಅಪಹರಿಸಲ್ಪಡುತ್ತಿರಲು), ಕಿಂಚಿತ್-ಅಲ್ಪಕ್ರಿಯೆಯನ್ನೂ(ಏನನ್ನು), ಕರ್ತುಂ-ಮಾಡಲಿಕ್ಕೂ, ನ ಶಕ್ನುತೇ-ಶಕ್ತನಾಗುವುದಿಲ್ಲ ತತಃ-ಆಗ(ಆದರಿಂದ), ಪರಾತ್ಮತಾಂ-(ತನ್ನ) ಪರಾಧೀನತೆಯನ್ನು ವೇತ್ತಿ-ತಿಳಿಯುತ್ತಾನೆ.

ಬುದ್ಧ್ಯಾದಿನೈವ ಕುರುತೇ ಪುಣ್ಯಂ ವಾ ಪಾಪಮೇವ ವಾ ।
ತತ್ರ ಪುಣ್ಯಫಲಂ ದೇವೇ ತತ್ತದಿಂದ್ರಿಯಯಂತರಿ ॥ ೨೭ ॥

ಯಥಾ ಸ್ವಾತಂತ್ರ್ಯಮಾಪ್ನೋತಿ ಜೀವೇ ಸ್ವಲ್ಪಂ ಭವೇತ್ತತಃ ।
ಯತ್ತು ಪಾಪಫಲಂ ಕರ್ಮ ತತ್ತದಿಂದ್ರಿಯಯಂತರಿ ॥ ೨೮ ॥

ಕಲ್ಯಾದಿದೈತ್ಯನಿವಹೇ ಯಥಾ ಸ್ವಾತಂತ್ರ್ಯಮೇವ ಹಿ ।
ತಸ್ಮಾಜ್ಜೀವೇ ಸ್ವಲ್ಪಮೇವ ಪಾಪಂ ತೇನೈವ ಪಾತ್ಯತೇ ॥ ೨೯ ॥

ನಾನಾ ದುಃಖೇಷು ಜೀವೋಽಯಂ ಸುಖೇಷ್ವಪಿ ಸುಕರ್ಮಣಃ ।

ಬುದ್ಧ್ಯಾದಿನಾ ಏವ-(ಜೀವನು) ಬುದ್ಧಿಪೂರ್ವಕವಾಗಿಯೇ, ಪುಣ್ಯಂ ವಾ- ಪುಣ್ಯ ಕರ್ಮವನ್ನಾಗಲಿ, ಪಾಪಂ ಏವ ವಾ-ಪಾಪವನ್ನೇ ಆಗಲಿ, ಕುರುತೇ-ಮಾಡುತ್ತಾನಷ್ಟೆ ತತ್ರ-ಅದರಲ್ಲಿ ಪುಣ್ಯಫಲಂ-ಪುಣ್ಯಫಲವು, ತತ್ತದಿಂದ್ರಿಯಯಂತರಿ-(ಯಾವ ಇಂದ್ರಿಯಗಳಿಂದ ಆಯಾ ಪುಣ್ಯಕರ್ಮಗಳು ಸಂಭವಿಸಿರುತ್ತವೆಯೋ) ಆಯಾ ಇಂದ್ರಿಯಾಭಿಮಾನಿಯಾದ, ದೇವೇ-ದೇವತೆಯಲ್ಲಿ(ಸೇರುತ್ತದೆ); ಯಥಾಸ್ವಾತಂತ್ರ್ಯಂ-ಆಯಾ ದೇವತೆಗಳ ಸ್ವಾತಂತ್ರ್ಯಾಂಶವನ್ನನುಸರಿಸಿ (ಅವರಲ್ಲಿರುವ ನನ್ನ ಸ್ವಾತಂತ್ರ್ಯಾಂಶಕ್ಕನುಗುಣವಾಗಿ), ಆಪ್ನೋತಿ-(ಆಯಾ ದೇವತೆಯು) ಹೊಂದುತ್ತಾನೆ;

---

ಜೀವನು, ನಾನಾ ಪುಣ್ಯಪಾಪರೂಪದ ಕರ್ಮಗಳನ್ನು ಬುದ್ಧಿಪೂರ್ವಕವಾಗಿ ಮಾಡುತ್ತಾನೆ; ಅವುಗಳಲ್ಲಿ ಪುಣ್ಯಫಲವು, ಯಾವ ಇಂದ್ರಿಯಗಳಿಂದ ಅದು (ಪುಣ್ಯಕರ್ಮವು) ಸಂಭವಿಸಿರುತ್ತದೆಯೋ ಆಯಾ ಇಂದ್ರಿಯಾಭಿಮಾನಿದೇವತೆಗಳಿಗೆ, ಅವರಲ್ಲಿಸ್ಥಾಪಿತವಾದ ನನ್ನ ಸ್ವಾತಂತ್ರ್ಯಾಂಶದ ಮೊತ್ತವನ್ನನುಸರಿಸಿ, ಸಲ್ಲುತ್ತದೆ; ಆದ್ದರಿಂದ ಜೀವನಿಗೆ ಪುಣ್ಯದ ಪೂರ್ಣಫಲ ದೊರೆಯುವುದಿಲ್ಲ—ಅಲ್ಪಮಾತ್ರ (ಜೀವನಲ್ಲಿರುವ ನನ್ನ ಸ್ವಾತಂತ್ರ್ಯಾಂಶದಷ್ಟುಮಾತ್ರ) ಲಭಿಸುತ್ತದೆ; ಹೀಗೆಯೇ ಪಾಪದ ಫಲವೂ ಕಲ್ಯಾದಿ ದೈತ್ಯಸಮೂಹದಲ್ಲಿ ವಿಭಾಗದಿಂದ ಸೇರಿ, ಅಲ್ಪಫಲವು ಜೀವನಿಗೆ ಬರುತ್ತದೆ; ಹೀಗೆ ತನ್ನ ಭಾಗಕ್ಕೆ ಬರುವ ಪುಣ್ಯಪಾಪಗಳ ಅಲ್ಪಫಲದಿಂದಲೇ, ಜೀವನು ನಾನಾ ಸುಖದುಃಖಗಳನ್ನು ಅನುಭವಿಸುತ್ತಾನೆ; ನಾನಾ ಸುಖದುಃಖಗಳಿಗೆ ಭಾಗಿಯಾಗಿ ಮಾಡಲ್ಪಡುತ್ತಾನೆ (೨೭-೨೯). ಪುಣ್ಯಫಲವು ಸುಖವೇ; ನಾನೇ ಆ ಫಲದ

ತತಃ-ಈ ಕಾರಣದಿಂದ, ಜೀವೇ-ಜೀವನಲ್ಲಿ ಸ್ವಲ್ಪಂ-ಸ್ವಲ್ಪ ಪುಣ್ಯಫಲವೇ, ಭವೇತ್-ಲಭಿಸುತ್ತದೆ (ಜೀವನಲ್ಲಿರುವ ಸ್ವಾತಂತ್ರ್ಯದ ಅಂಶದಷ್ಟು ಪುಣ್ಯಫಲವು ಲಭಿಸುತ್ತದೆ), ಯತ್ ತು ಕರ್ಮ-ಯಾವ ಕರ್ಮವಾದರೂ, ಪಾಪಫಲಂ-ಪಾಪರೂಪದ ಫಲವುಳ್ಳದ್ದೋ, ತತ್-ಅದು (ಆ ಪಾಪಫಲವು), ತತ್ತದಿಂದ್ರಿಯಯಂತರಿ-ಆಯಾ ಇಂದ್ರಿಯಾಭಿಮಾನಿಯಾದ, ಕಲ್ಯಾದಿ ದೈತ್ಯನಿವಹೇ-ಕಲಿ ಮೊದಲಾದ ದೈತ್ಯಸಮೂಹದಲ್ಲಿ ಯಥಾ ಸ್ವಾತಂತ್ರ್ಯಂ ಏವ-(ಅವರಲ್ಲಿ ಸ್ಥಾಪಿತವಾದ) ಸ್ವಾತಂತ್ರ್ಯಾಂಶದಂತೆ, (ಸೇರುತ್ತದೆ); ಹಿ-ಯಾವ ಕಾರಣದಿಂದ ಪುಣ್ಯಪಾಪಗಳ ಫಲಗಳು ಹೀಗೆ ಇಂದ್ರಿಯಾಭಿಮಾನಿಗಳಾದ ದೇವ ದೈತ್ಯರನ್ನು ಸೇರುತ್ತವೆಯೋ, ತಸ್ಮಾತ್-ಆ ಕಾರಣದಿಂದ, ಜೀವನಲ್ಲಿ ಸ್ವಲ್ಪಂ ಏವ-ಸ್ವಲ್ಪವೇ, ಪಾಪಂ-ಪಾಪಫಲವು(ಸೇರುತ್ತದೆ), ತೇನ ಏವ-ಅದರಿಂದಲೇ (ಅಷ್ಟು ಅಲ್ಪಫಲದಿಂದಲೇ), ಅಯಂ-ಈ, ಜೀವಃ-ಜೀವನು, ನಾನಾದುಃಖೇಷು-ವಿವಿಧ ಬಹುದುಃಖಗಳಲ್ಲಿ ಪಾತ್ಯತೇ-ಬೀಳಿಸಲ್ಪಡುತ್ತಾನೆ(ಬೀಳುತ್ತಾನೆ); ಸುಕರ್ಮಣಃ-ಪುಣ್ಯಕರ್ಮದ ಫಲದಿಂದ, ಸುಖೇಷು ಅಪಿ-ನಾನಾ ವಿಧದ ಸುಖಗಳಲ್ಲಿ ಸಹ, (ಪಾತ್ಯತೇ-ಹಾಕಲ್ಪಡುತ್ತಾನೆ).

**ಸುಖಂ ಪುಣ್ಯಫಲಂ ಯಸ್ಮಾತ್ತದ್ಭೋಕ್ತಾಹಂ ತು ಮುಖ್ಯತಃ ॥ ೩೦ ॥**

**ದುಃಖಂ ಪಾಪಫಲಂ ಯತ್ತತ್ತನ್ಮೇ ದೂರಾದ್ವಿನಶ್ಯತಿ ।**
**ಯಥಾ ನಾಲೋಕತೇ ಸೂರ್ಯಸ್ತಮೋ ಲೇಶಮಪಿ ಕ್ವಚಿತ್ ॥ ೩೧ ॥**

**ತಥಾ ದುಃಖಸ್ಯ ಲೇಶೋಽಪಿ ಕರ್ಹಿಚಿನ್ನ ಮಯೀಕ್ಷ್ಯತೇ ।**
**ಯಥಾ ಕ್ಷುದ್ರಃ ಪಿಪೀಲಾದಿಸ್ತೋಷಂ ಯಾತ್ಯಲ್ಪಭಕ್ಷತಃ ॥ ೩೨ ॥**

ಮುಖ್ಯಭೋಕ್ತನು; ಪಾಪದ ಫಲವು ದುಃಖವೇ, ಅದು ನನ್ನನ್ನು ಸಮೀಪಿಸಲು ಸಹ ಸಾಧ್ಯವಿಲ್ಲದೇ ದೂರದಲ್ಲಿಯೇ ನಾಶವಾಗುತ್ತದೆ; ಪ್ರಕಾಶಸ್ವರೂಪನಾದ ಸೂರ್ಯನು ಕತ್ತಲೆಯನ್ನು ನೋಡಬಹುದೇ? ಕತ್ತಲೆಯು ಅವನನ್ನು ಸಮೀಪಿಸಲು ಸಾಧ್ಯವೇ ಇಲ್ಲ—ಅದರಂತೆ, ಸುಖಸ್ವರೂಪನಾದ (ಸ್ವತಂತ್ರನೂ ಪೂರ್ಣಾನಂದಸ್ವರೂಪನೂ ಆದ) ನನ್ನ ಸಮೀಪಕ್ಕೆ ಬರಲು, ದುಃಖಕ್ಕೆ ಅವಕಾಶವೇ ಇಲ್ಲ—ಆದ್ದರಿಂದ ದುಃಖಲೇಶದ ಅನುಭವವೆಂಬುದು ನನಗೆ ಎಂದಿಗೂ ಇಲ್ಲ; ಆದ್ದರಿಂದ ದುಃಖವು ಜೀವನಿಗೆ ಸರಿ; ಯದ್ಯಪಿ, ಜೀವನ ಭಾಗಕ್ಕೆ ಪಾಪಫಲದಲ್ಲಿ ಅಲ್ಪಾಂಶ ಮಾತ್ರ ಬರುತ್ತದೆ—ಪುಣ್ಯದ ಫಲವೂ ಅಲ್ಪವೇ; ಇರುವೆ ಮೊದಲಾದ ಕ್ಷುದ್ರಪ್ರಾಣಿಗಳು ಅಲ್ಪಘಾತದಿಂದ (ಸಣ್ಣಪೆಟ್ಟಿನಿಂದ) ಮರಣವನ್ನೇ ಹೊಂದುತ್ತವೆ; ಅಲ್ಪವಾದ ಆಹಾರಭಕ್ಷಣೆಯಿಂದ ಸಂತೃಪ್ತವಾಗುತ್ತವೆ; ಹೀಗೆಯೇ ಜೀವನು, ಅಲ್ಪಸುಖದಿಂದ, ಬಹುಸುಖಿಯಾಗುತ್ತಾನೆ—ಅಲ್ಪದುಃಖದಿಂದ ದುಃಖಪೀಡಿತನೂ ಆಗುತ್ತಾನೆ

**ಮ್ರಿಯತೇ ಚಾಲ್ಪಘಾತೇನ ತಥಾ ಜೀವಸ್ಯ ಜಾಯತೇ ।**
**ಸ್ವಲ್ಪಾದೇವ ಸುಖಾವಾಪ್ತಿಃ ಸ್ವಲ್ಪದುಃಖಾಚ್ಚ ಪೀಡನಂ ॥ ೩೩ ॥**

ಸುಖಂ-ಸುಖವು, ಯಸ್ಮಾತ್-ಯಾವ ಕಾರಣದಿಂದ, ಪುಣ್ಯಫಲಂ-ಪುಣ್ಯ ಫಲವೋ, ತತ್-(ಆ ಕಾರಣದಿಂದ) ಅದರ, ಭೋಕ್ತಾ-ಭೋಕ್ತನು(ಭೋಗಿಸುವವನು), ಮುಖ್ಯತಃ-ಮುಖ್ಯವಾಗಿ, ಅಹಂ ತು-ನಾನೇ (ಆಗಿರುವೆನು); ಯತ್-ಯಾವ ಕಾರಣದಿಂದ, ದುಃಖಂ-ದುಃಖವು, ಪಾಪಫಲಂ-ಪಾಪದ ಫಲವೋ, ತತ್-ಅದು (ದುಃಖವು), ಮೇ-ನನ್ನ(ನನ್ನಿಂದ), ದೂರಾತ್-ದೂರದಲ್ಲಿಯೇ, ವಿನಶ್ಯತಿ-ನಾಶವಾಗುತ್ತದೆ; ಯಥಾ-ಹೇಗೆ, ಸೂರ್ಯಃ-ಸೂರ್ಯನು, ಕ್ವಚಿತ್-ಎಂದೂ(ಅಲ್ಪವನ್ನು ಸಹ), ತಮೋಲೇಶಃ-ಕತ್ತಲೆಯ ಸೆಲೆಯನ್ನು (ಅಂಶವನ್ನೂ), ನ ಆಲೋಕತೇ-ಕಾಣುವುದಿಲ್ಲವೋ, ತಥಾ-ಹಾಗೆ(ಅದರಂತೆ), ಕರ್ಹಿಚಿತ್-ಎಂದೂ, ದುಃಖಸ್ಯ-ದುಃಖದ, ಲೇಶಃ ಅಪಿ-ಅತ್ಯಲ್ಪಾಂಶವೂ ಸಹ, ಮಯಾ-ನನ್ನಿಂದ, ನ ಈಕ್ಷತೇ-ಕಾಣಲ್ಪಡುವುದಿಲ್ಲ. ಜೀವಸ್ಯ-ಜೀವನಿಗಾದರೋ, ಯಥಾ-ಹೇಗೆ, ಕ್ಷುದ್ರಃ-ಕ್ಷುದ್ರವಾದ(ಅಲ್ಪವಾದ-ಕೀಳಾದ), ಪಿಪೀಲಾದಿಃ-ಇರುವೆ ಮೊದಲಾದುದು, ಅಲ್ಪಭಕ್ಷತಃ-ಅತ್ಯಲ್ಪ ಆಹಾರದಿಂದ, ತೋಷಂ-ಸಂತೋಷವನ್ನು(ತೃಪ್ತಿಯನ್ನು), ಯಾತಿ-ಹೊಂದುತ್ತದೆಯೋ, ಚ-ಮತ್ತು ಅಲ್ಪಘಾತೇನ-ಸಣ್ಣಪೆಟ್ಟಿನಿಂದ, ಮ್ರಿಯತೇ-ಸಾಯುವುದೋ, ತಥಾ-ಹಾಗೆ, ಸ್ವಲ್ಪಾತ್ ಏವ-ಅಲ್ಪಸುಖದಿಂದಲೇ, ಸುಖಾವಾಪ್ತಿಃ-ಅತಿಶಯ ಸುಖದ ಲಾಭವೂ, ಚ-ಮತ್ತು ಸ್ವಲ್ಪದುಃಖಾತ್-ಅಲ್ಪದುಃಖದಿಂದ, ಪೀಡನಂ-ಹಿಂಸೆಯೂ (ಅತಿ ದುಃಖವೂ), ಜಾಯತೇ-ಉಂಟಾಗುತ್ತದೆ.

---

(೩೦-೩೩). ಜೀವರು ಹೀಗೆ ಅಲ್ಪಸುಖದುಃಖಗಳ ಅನುಭವಪಾತ್ರರೆಂಬುದನ್ನು ತಿಳಿದೇ, ದೈತ್ಯರು ಸುರರನ್ನು ಸಹ ಪೀಡಿಸುತ್ತಾರೆ;[1] ಸುರರು ಅವರ ಹಿಂಸೆಯನ್ನು ಎರಡು ಕಾರಣಗಳಿಂದ ಸಹನೆಮಾಡುತ್ತಾರೆ; ಅವು ಯಾವುವೆಂದರೆ:—ಒಂದು, ತಮ್ಮನ್ನು

---

1. ದೈತ್ಯರು ಸುರರನ್ನು ಪೀಡಿಸುವರೆಂಬ ಪ್ರಮೇಯದಲ್ಲಿ ಅಡಗಿರುವ ಸೂಕ್ಷ್ಮ ವಿಶೇಷವನ್ನು ಸ್ಪಷ್ಟವಾಗಿ ಗ್ರಹಿಸುವುದು ಅವಶ್ಯಕ. 'ಸುರ'ರನ್ನು 'ಪೀಡಯಂತಿ', ಎಂಬ ಶಬ್ದಗಳು ತತ್ತ್ವಾಭಿಮಾನಿ ದೇವತೆಗಳನ್ನು ವ್ಯಾವರ್ತಿಸುತ್ತವೆ. ಉತ್ತಮ ದೇವತೆಗಳೂ, ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರರೂ ಆದ ತತ್ತ್ವಾಭಿಮಾನಿ ದೇವತೆಗಳನ್ನು ಪೀಡಿಸುವ ಸಾಮರ್ಥ್ಯವು ಯಾವ ದೈತ್ಯರಿಗೂ ಇಲ್ಲ. ಆದರೆ ಕಾಲವಿಶೇಷಗಳಲ್ಲಿ, ಆ ದೇವತೆಗಳ (ಮೂಲರೂಪ ಮತ್ತು ಅವತಾರರೂಪಗಳಲ್ಲಿ) ಪ್ರಾರಬ್ಧ ಕರ್ಮ ಭೋಗಸೂಚಕವಾಗಿ, ಕಲ್ಯಾದಿ ದೈತ್ಯರು, ಅವರಲ್ಲಿ (ಅವರ ಮನಸ್ಸು ಬುದ್ಧ್ಯಾದಿಗಳಲ್ಲಿ) ಆವಿಷ್ಟರಾಗಿ, ಭಗವದ್ವಿಷಯಕ ಅಜ್ಞಾನಾದಿಗಳಿಗೆ ಕಾರಣರಾಗುತ್ತಾರೆ (ಪ್ರಾಣದೇಹಗತ ತತ್ತ್ವಗಳಿಗೆ, ಅಂಶದಿಂದಿದ್ದು ಅಭಿಮಾನಿಗಳಾಗಿ ಭಗವದಾಜ್ಞೆಯನ್ನು ಪಾಲಿಸುವ ತತ್ತ್ವಾಭಿಮಾನಿಗಳಿಗೆ ಕಲ್ಯಾವೇಶವಿಲ್ಲ). ಇಲ್ಲಿ ಪ್ರಸಕ್ತರಾದ ಸುರರು, ಎಂದರೆ ದೇವಯೋನಿಯಲ್ಲಿ

ಏತಯೋರ್ಬಲತೋ ದೈತ್ಯಾಃ ಪೀಡಯಂತಿ ಸುರಾನಪಿ ।
ತತ್ತೇಷಾಂ ತಪಸೋ ಹಾನ್ಯೈ ಮತ್ಪ್ರೀತ್ಯರ್ಥಂ ಸಹಂತ್ಯಪಿ ॥ ೩೪ ॥

ಏತಯೋಃ-ಈ ಪುಣ್ಯಪಾಪಗಳ, ಬಲತಃ-ಬಲದಿಂದ, (ಹೀಗೆ ಜೀವರು ಅಲ್ಪ ಸುಖದುಃಖಗಳ ಭೋಗದಿಂದಲೇ ಅತ್ಯಂತ ದುಃಖಿಗಳೆಂದು ಭಾವಿಸುವರೆಂಬ ತತ್ತ್ವವನ್ನು ತಿಳಿದೇ), ದೈತ್ಯಾಃ-ದೈತ್ಯರು, ಸುರಾನ್ ಅಪಿ-ದೇವತೆಗಳನ್ನು ಸಹ, ಪೀಡಯಂತಿ-ಪೀಡಿಸುತ್ತಾರೆ; ತೇಷಾಂ-ಆ ದೈತ್ಯರ, ತಪಸಃ-ತಪಸ್ಸಿನ (ದುಷ್ಟ ತಪಶ್ಶಕ್ತಿಯ), ಹಾನ್ಯೈ-ನಾಶಕ್ಕಾಗಿಯೂ, ಅಪಿ-ಮತ್ತು ಮತ್ಪ್ರೀತ್ಯರ್ಥಂ-ನನ್ನ ಪ್ರೀತಿಗಾಗಿಯೂ, ತತ್-ಅದನ್ನು(ದೈತ್ಯರ ಪೀಡೆಯನ್ನು), ಸಹಂತಿ-(ಸುರರು) ಸಹಿಸಿಕೊಳ್ಳುತ್ತಾರೆ.

ತತಃ ಕ್ರೀಡನಕಾ ಏತೇ ಸರ್ವೇ ಜೀವಗಣಾ ಮಮ ।
ಸಂಸಾರೇಽಪ್ಯಥವಾ ಮುಕ್ತೌ ತೇನ ಬ್ರಹ್ಮನ್ನಿಯಂ ಸ್ಥಿತಿಃ ॥ ೩೫ ॥

ತತಃ-ಆದ್ದರಿಂದ (ಸರ್ವಕರ್ತನೂ, ಸರ್ವಶುಭಫಲಭೋಕ್ತನೂ ನಾನೇ ಆದ್ದರಿಂದ), ಏತೇ-ಈ, ಸರ್ವೇ-ಎಲ್ಲ ಜೀವಗಣಾಃ-ಜೀವಸಮುದಾಯಗಳು, ಮಮ-ನನ್ನ ಕ್ರೀಡನಕಾಃ-ಆಟದ ಸಾಮಾನುಗಳು (ಕ್ರೀಡಾ ಉಪಕರಣಗಳು), ತೇನ-ಈ ಕಾರಣದಿಂದ, ಬ್ರಹ್ಮನ್-ಹೇ ಬ್ರಹ್ಮ, ಸಂಸಾರೇ-ಸಂಸಾರದಲ್ಲಿ ಅಥವಾ-ಅಥವಾ, ಮುಕ್ತೌ ಅಪಿ-ಮುಕ್ತಿಯಲ್ಲಿಯೂ, ಇಯಂ-ಇದೇ, ಸ್ಥಿತಿಃ-ಇರತಕ್ಕದ್ದು (ವಸ್ತುಸ್ಥಿತಿಯು-ಜೀವರು ಸದಾ ಸರ್ವತ್ರ ನನ್ನ ಅಧೀನರೇ-ಕೈ ಗೊಂಬೆಗಳೇ ಸರಿ).

ಪೀಡಿಸುವುದರಿಂದ ಆ ದೈತ್ಯರ ತಪಸ್ಸು ನಷ್ಟವಾಗಲೆಂದು; ಎರಡು, ಅವರ ಅಂತರ್ಯಾಮಿಯಾಗಿ ನಿಂತು ಅವರ ದ್ವಾರಾ ಶ್ರೀಹರಿಯೇ ಕೊಡುತ್ತಿರುವ ಈ ಹಿಂಸೆಯನ್ನು ಅನುಭವಿಸುವುದೂ, ಶ್ರೀಹರಿಪ್ರೀತಿಕರವೆಂದು(೩೪). ವಸ್ತುಸ್ಥಿತಿಯು ಹೀಗಿರುವುದರಿಂದ, ಈ ಜೀವಸಮುದಾಯಗಳೆಲ್ಲವೂ ನನ್ನ ಕ್ರೀಡೋಪಕರಣಗಳು ಮಾತ್ರ-ಪೂರ್ಣ ಅಸ್ವತಂತ್ರರು-ನನ್ನ ಇಚ್ಛಾನುಸಾರ ಮಾತ್ರ ಪ್ರವೃತ್ತಿಸುವವರು;

ಜನ್ಮತಾಳಿರುವ ಸಾಮಾನ್ಯ ದೇವತೆಗಳು—ಪ್ರಾಯಃ ಅಜಾನಾದಿಗಳೇ ಮೊದಲಾದವರು. ಇವರನ್ನು ಹಿಂಸಿಸಿ, ತಮ್ಮ ತಪಃಶಕ್ತಿಯನ್ನು ಕಳೆದುಕೊಳ್ಳುತ್ತಾರೆ; ದೈತ್ಯರ ದುಷ್ಟತಪಃಶಕ್ತಿಯು, ಲೋಕಪೀಡಾಕಾರಕವಾದುದು; ಅದರ ವ್ಯಯವಾಗುವುದೂ ಒಂದು ದೃಷ್ಟಿಯಿಂದ ಲೋಕಹಿತಸಾಧಕವೇ; ಸಾತ್ತ್ವಿಕಜೀವರು (ಮುಕ್ತಿಯೋಗ್ಯರು), ಸುಖದುಃಖಗಳೆಲ್ಲವೂ ತಮಗೆ ಸ್ವತಂತ್ರ ಶ್ರೀಹರಿಯಿಂದಲೇ ದತ್ತವಾದವುಗಳೆಂಬ ಜ್ಞಾನವುಳ್ಳವರಾಗಿ, ದುಃಖಾನುಭವವೂ (ಅಸುರದತ್ತ ಹಿಂಸೆಯನ್ನು ಸಹಿಸುವುದೂ) ಶ್ರೀಹರಿಪ್ರೀತಿಗೆ ಕಾರಣವೆಂದೇ ತಿಳಿಯುತ್ತಾರೆ; ಹೀಗೆ ತಿಳಿದು ದುಃಖವನ್ನು ಅನುಭವಿಸುವುದು, ಈ ಜೀವರಿಗೆ ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತದೆಂದು ಬ್ರಹ್ಮತರ್ಕದ ವಚನವಿದೆ.

**ಮದ್ಭಕ್ತ್ಯಾ ಸುಕೃತಂ ಕರ್ಮ ವರ್ಧತೇ ಪಾಪಮನ್ಯಥಾ ।**
**ಮದ್ದ್ವೇಷಾತ್ಪಾಪಕರ್ಮೈವಂ ವರ್ಧತೇ ಪುಣ್ಯಮನ್ಯಥಾ ॥ ೩೬ ॥**

ಮದ್ಭಕ್ತ್ಯಾ-ನನ್ನಲ್ಲಿ ಮಾಡುವ ಭಕ್ತಿಯಿಂದ, ಸುಕೃತಂ ಕರ್ಮ-ಪುಣ್ಯ ಕರ್ಮವು, ವರ್ಧತೇ-ವೃದ್ಧಿಹೊಂದುತ್ತದೆ; ಪಾಪಂ-ಪಾಪಕರ್ಮವು, ಅನ್ಯಥಾ-ಹ್ರಾಸವಾಗುತ್ತದೆ (ಪುಣ್ಯಕರ್ಮಗಳು ವೃದ್ಧಿಹೊಂದುತ್ತವೆ—ಮೇಲಿಂದ ಮೇಲೆ ಸಂಭವಿಸುತ್ತವೆ; ಪಾಪಕರ್ಮಗಳ ಘಟನೆಯು ಕಡಿಮೆಯಾಗುತ್ತದೆ); (ಇದಕ್ಕೆ ವಿರುದ್ಧವಾಗಿ), ಮದ್ದ್ವೇಷಾತ್-ನನ್ನ ದ್ವೇಷದಿಂದ, ಏವಂ-ಹೀಗೆ (ಪುಣ್ಯದಂತೆ), ಪಾಪಕರ್ಮ-ಪಾಪಕರ್ಮವು, ವರ್ಧತೇ-ಬೆಳೆಯುತ್ತದೆ, (ಪಾಪಕರ್ಮಗಳು ಹೆಚ್ಚಾಗಿ ಸಂಭವಿಸುತ್ತವೆ); ಪುಣ್ಯಂ-ಪುಣ್ಯವು, ಅನ್ಯಥಾ-(ವಿರುದ್ಧವಾಗಿ) ಕಡಿಮೆಯಾಗುತ್ತದೆ.

**ಬೀಜಾದ್ಬೀಜಮಿತಿನ್ಯಾಯಾದನಾದೇರೇವ ಕರ್ಮಣಃ ।**
**ಕರೋಮಿ ಕರ್ಮಣಾ ವೃದ್ಧಿಂ ಕ್ಷಯಂ ಭೋಗಾದಿನಾ ತಥಾ ॥ ೩೭ ॥**

---

ಹೀಗೆಂಬುದು ಸಂಸಾರಾವಸ್ಥೆಯಲ್ಲಿರುವಾಗ ಮಾತ್ರವಲ್ಲ—ಮುಕ್ತಿಯಲ್ಲಿ ಸಹ, ಸಮಸ್ತ ಜೀವರು, ಸರ್ವಪ್ರಕಾರದಿಂದ ನನ್ನ ಅಧೀನರೇ ಆಗಿರುವರು(೩೫). ಈ ಪ್ರಕಾರದ ನನ್ನ ಮಹಿಮಾಜ್ಞಾನದಿಂದ ಉತ್ಪನ್ನವಾದ ನನ್ನ ಪ್ರೇಮವೆಂಬ ಭಕ್ತಿಯುಳ್ಳವನಾದರೆ, ನನ್ನ ಪ್ರೀತ್ಯರ್ಥವಾಗಿ ಭಕ್ತನು ಪುಣ್ಯಕರ್ಮಗಳನ್ನು ಅಧಿಕವಾಗಿ ಮಾಡತೊಡಗುತ್ತಾನೆ; ಪಾಪಕರ್ಮಗಳು ಕಡಿಮೆಯಾಗುತ್ತವೆ;[1] ಇದಕ್ಕೆ ವಿರುದ್ಧವಾಗಿ ನನ್ನಲ್ಲಿ ದ್ವೇಷವುಳ್ಳ ಜೀವನು ಪಾಪಕರ್ಮಗಳನ್ನೇ ಹೆಚ್ಚಾಗಿ ಮಾಡುತ್ತಾನೆ—ಪುಣ್ಯಕರ್ಮಗಳು ಕಡಿಮೆಯಾಗುತ್ತವೆ(೩೬). ಕರ್ಮಕ್ಕೆ ಬೀಜದಿಂದ ಬೀಜವೆಂಬ (ಬೀಜವೃಕ್ಷ) ನ್ಯಾಯವು ಅನ್ವಯಿಸುತ್ತದೆ; ಕ್ರಿಯಮಾಣಕರ್ಮಗಳಿಂದ (ಕರ್ಮದಿಂದ) ಕರ್ಮವೃದ್ಧಿಯೂ,

---

1. 'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥' (ಭಾಗ.)
ಮತ್ತು 'ಜೀವಾಭೇದೋನಿರ್ಗುಣತ್ವಂ ಅಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವ ವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾಮತಾಃ ॥ (ಭಾರತ ತಾತ್ಪರ್ಯ)
ಇಲ್ಲಿ ಹೇಳಿರುವಂತೆ, ಭಕ್ತಿಯೂ ನವವಿಧ—ದ್ವೇಷವೂ ನವವಿಧ. ಭಕ್ತಿಯಿಂದ ಪುಣ್ಯಕರ್ಮಗಳ ವೃದ್ಧಿಯೂ, ದ್ವೇಷದಿಂದ ಪಾಪಕರ್ಮಗಳ ವೃದ್ಧಿಯೂ ಸಂಭವಿಸುತ್ತವೆ; ಹಾಗೆಯೇ ಕ್ರಮವಾಗಿ, ಪಾಪಹ್ರಾಸ ಮತ್ತು ಪುಣ್ಯಹ್ರಾಸಗಳೂ ಸಂಭವಿಸುತ್ತವೆಂಬುದನ್ನು ಗಮನಿಸಬೇಕು. ಉದಾಹೃತಶ್ಲೋಕಗಳ ಅರ್ಥವನ್ನು ಅನ್ಯತ್ರ ವಿವರಿಸಲಾಗಿದೆ. ೬ನೇ ಅಧ್ಯಾಯದ ೨೫-೨೭ನೇ ಶ್ಲೋಕಗಳ ತಾತ್ಪರ್ಯವನ್ನು ನೋಡಿರಿ.

ಜೀವಕರ್ಮಾಖಿಲಂ ಜ್ಞಾತ್ವಾ ಕಾರಯಾಮಿ ಶುಭಾಶುಭೇ ।
ದದಾಮಿ ಸುಖದುಃಖೇ ಚ ನ ಮೇ ಲೇಪೋಽಸ್ತಿ ಕಸ್ಯಚಿತ್ ॥ ೩೮ ॥

ಅನಾದೇಃ-ಅನಾದಿಯಾದ, ಕರ್ಮಣಾಃ-ಕರ್ಮಕ್ಕೆ, ಬೀಜಾತ್-ಬೀಜದಿಂದ, ಬೀಜಂ-ಬೀಜವು, ಇತಿನ್ಯಾಯಾತ್-ಎಂಬ ನ್ಯಾಯವು(ಬೀಜದಿಂದ ವೃಕ್ಷವೂ, ವೃಕ್ಷದಿಂದ ಬೀಜವೂ ಎಂಬಂತೆ) ಅನ್ವಯಿಸುವುದರಿಂದ, (ಅನಾದೇಃ ಕರ್ಮಣಃ ಏವ-ಅನಾದಿಕರ್ಮಕ್ಕೇನೆ), ಕರ್ಮಣಾ-ಕರ್ಮದಿಂದ, ವೃದ್ಧಿಂ-ವೃದ್ಧಿಯನ್ನೂ, ತಥಾ-ಹಾಗೂ, ಭೋಗಾದಿನಾ-ಭೋಗ ಮೊದಲಾದ್ದರಿಂದ, ಕ್ಷಯಂ-ನಾಶವನ್ನೂ (ಹ್ರಾಸವನ್ನೂ), ಕರೋಮಿ-ಮಾಡುತ್ತೇನೆ; ಅಖಿಲಂ-ಸಮಸ್ತವಾದ, ಜೀವಕರ್ಮ-ಜೀವಕರ್ಮವನ್ನೂ (ಎಲ್ಲ ಜೀವರ ಎಲ್ಲ ಕರ್ಮಗಳನ್ನೂ ಪ್ರತ್ಯೇಕವಾಗಿ), ಜ್ಞಾತ್ವಾ-ತಿಳಿದು, ಶುಭಾಶುಭೇ-ಶುಭಾಶುಭಗಳನ್ನು(ಪುಣ್ಯ ಪಾಪಕರ್ಮಗಳನ್ನು), ಕಾರಯಾಮಿ-(ಜೀವರಿಂದ) ಮಾಡಿಸುತ್ತೇನೆ; ಚ-ಮತ್ತು, ಸುಖದುಃಖೇ-(ಕ್ರಮವಾಗಿ ಪುಣ್ಯಪಾಪಗಳಿಗೆ) ಸುಖದುಃಖಗಳನ್ನು, ದದಾಮಿ-ಕೊಡುತ್ತೇನೆ (ಜೀವರು ಅನುಭವಿಸುವಂತೆ ಮಾಡುತ್ತೇನೆ); ಮೇ-ನನಗೆ, ಕಸ್ಯಚಿತ್-ಯಾವುದೊಂದರ (ಪುಣ್ಯದ ಅಥವಾ ಪಾಪದ), ಲೇಪಃ-ಸಂಬಂಧವು, ನ ಅಸ್ತಿ-ಇರುವುದಿಲ್ಲ.

ಯೋ ಯಥಾ ಮಾಂ ಭಜೇಜ್ಜೀವಃ ತಥೈವ ಫಲಮಾಪ್ನುಯಾತ್ ।
ನ ಮೇ ದ್ವೇಷ್ಯೋಽಥವಾ ಮಿತ್ರಂ ನ ಲಾಭೋ ಮಿತ್ರತೋ ಮಮ ॥ ೩೯

ನ ಹಾನಿಃ ಶತ್ರುತಃ ಕ್ವಾಪಿ ಸರ್ವೋತ್ಕೃಷ್ಟಸ್ಯ ಸರ್ವದಾ ।
ರಾಜಾಜ್ಞಯಾಪಿ ಯೇ ಭೃತ್ಯಾಃ ಶುಭಂ ವಾಪ್ಯಥವಾಶುಭಂ ॥ ೪೦ ॥

---

ಭೋಗದಿಂದ ಕರ್ಮಕ್ಷಯವೂ ಸಂಭವಿಸುತ್ತದೆ; ಸಕಲ ಜೀವರ (ಪ್ರತಿಯೊಬ್ಬ ಜೀವನ) ಎಲ್ಲ ಕರ್ಮಗಳನ್ನೂ ತಿಳಿದ ನಾನು, ತದನುಸಾರವಾಗಿ ಅವರಿಂದ ಪುಣ್ಯಪಾಪ ಕರ್ಮಗಳನ್ನು ಮಾಡಿಸುತ್ತೇನೆ; ಮತ್ತು ಪುಣ್ಯಪಾಪಗಳ ಫಲಗಳಾದ ಸುಖದುಃಖಗಳ ಅನುಭವವನ್ನೂ(ಭೋಗವನ್ನೂ) ಕೊಡುತ್ತೇನೆ; ಉಭಯವಿಧದ ಕರ್ಮಗಳ ಲೇಪವೇ ನನಗಿಲ್ಲ—ಅವುಗಳ ಫಲವು ನನಗೆ ಸಂಬಂಧವಿಲ್ಲ(೩೭-೩೮). ಸರ್ವಜೀವರಿಂದ, ಪುಣ್ಯಪಾಪರೂಪದ ಸಮಸ್ತಕರ್ಮಗಳನ್ನು ನಾನೇ ಮಾಡಿಸುವವನಾದರೂ, ಆಯಾ ಜೀವರು ಮಾಡುವ ನನ್ನ ಸೇವೆಯನ್ನನುಸರಿಸಿ, ಅವರಿಗೆ ಸುಖದುಃಖರೂಪದ ಫಲಗಳನ್ನು ಕೊಡುತ್ತೇನೆ; ಜೀವರು ಮಾಡುವ ಸೇವಾರೂಪದ ಕರ್ಮಗಳನ್ನು ಮಾಡಿಸುವವನೂ ನಾನೇ; ಅವರವರ ಪೂರ್ವಕರ್ಮ ಹಾಗೂ ಯೋಗ್ಯತೆಯನ್ನು ಲಕ್ಷಿಸಿ ಮಾಡಿಸುತ್ತೇನೆ; ಈ ಕಾರಣದಿಂದ ಭಿನ್ನಜೀವರ ಕರ್ಮಗಳು ಭಿನ್ನವಾಗಿಯೇ ಇರುತ್ತವೆ;

**ಕುರ್ವಂತಿ ತೇ ಫಲಂ ತೇಷಾಂ ಯಥಾಯೋಗ್ಯಂ ಪ್ರಜಾಯತೇ ।**
**ತಥಾ ಜಯೇ ಪರಾಜಿತ್ಯಾಂ ನೃಪಸ್ಯಾಜ್ಞಾನುಸಾರಿಣಾಂ ॥ ೪೧ ॥**

ಯಃ ಜೀವಃ-ಯಾವ ಜೀವನು, ಮಾಂ-ನನ್ನನ್ನು ಯಥಾ-ಹೇಗೆ, ಭಜೇತ್-ಸೇವಿಸುತ್ತಾನೆಯೋ, ತಥಾ ಏವ-ಹಾಗೆಯೇ (ಸೇವಾನುಸಾರವಾಗಿಯೇ), ಫಲಂ-ಫಲವನ್ನು ಆಪ್ನುಯಾತ್-ಹೊಂದುತ್ತಾನೆ; ಮೇ-ನನಗೆ, ದ್ವೇಷ್ಯಃ-ದ್ವೇಷಪಾತ್ರನು (ದ್ವೇಷಿಸಲ್ಪಡತಕ್ಕವನು), ನ-ಇಲ್ಲ ಅಥವಾ, ಮಿತ್ರಂ-ಮಿತ್ರನೂ, ನ-ಇಲ್ಲ ಮಮ-ನನಗೆ, ಮಿತ್ರತಃ-ಮಿತ್ರನಿಂದ, ನ ಲಾಭಃ-(ಯಾವ) ಲಾಭವೂ ಇಲ್ಲ ಶತ್ರುತಃ-ಶತ್ರುವಿನಿಂದ, ಕ್ವಾಪಿ-ಎಲ್ಲಿಯೂ, ಸರ್ವದಾ-ಯಾವ ಕಾಲದಲ್ಲಿಯೂ, ಸರ್ವೋತ್ಕೃಷ್ಟಸ್ಯ-ಸರ್ವೋತ್ತಮನಾದ(ಮಮ-ನನಗೆ), ಹಾನಿಃ-ನಷ್ಟವು, ನ-ಇಲ್ಲ ಯೇ ಭೃತ್ಯಾಃ ಅಪಿ-ಯಾವ ಭೃತ್ಯರು ಸಹ, (ಸೇವಕರು), ರಾಜಾಜ್ಞಯಾ-ರಾಜನ ಆಜ್ಞೆಯಿಂದ, ಶುಭಂ ವಾ-ಶುಭವನ್ನಾಗಲಿ (ಒಳ್ಳೆಯದನ್ನಾಗಲಿ), ಅಥವಾ ಅಶುಭಂ-ಅಥವಾ ಅಶುಭವನ್ನಾಗಲಿ (ಕೆಟ್ಟದ್ದನ್ನಾಗಲಿ), ಕುರ್ವಂತಿ-ಮಾಡುತ್ತಾರೋ, ತೇ-ಅವರು (ಆ ಭೃತ್ಯರು), ತೇಷಾಂ-ಆ ಶುಭಾಶುಭಕರ್ಮಗಳ, ಯಥಾಯೋಗ್ಯಂ-ಯೋಗ್ಯವಾದ ಸಂದರ್ಭೋಚಿತವಾದ, ಫಲಂ-ಫಲವನ್ನು ಪ್ರಜಾಯತೇ-ಹೊಂದುತ್ತಾರೆ; (ತೇಷಾಂ-ಆ ರಾಜಭೃತ್ಯರಿಗೆ, ತೇಷಾಂ-ಆ ಕರ್ಮಗಳ, ಫಲಂ-ಫಲವು, ಪ್ರಜಾಯತೇ-ಉಂಟಾಗುತ್ತದೆ; ಯಥಾಯೋಗ್ಯಂ-(ಭೃತ್ಯರ) ಯೋಗ್ಯತಾನುಗುಣವಾಗಿ, ಫಲವು ದೊರೆಯುತ್ತದೆ); ತಥಾ-ಹೀಗೆಯೇ, ನೃಪಸ್ಯ-ರಾಜನ, ಆಜ್ಞಾನುಸಾರಿಣಾಂ-ಆಜ್ಞಾನುವರ್ತಿಗಳಿಗೆ, ಜಯೇ-(ಶತ್ರು) ಜಯದಲ್ಲಿ ಪರಾಜಿತ್ಯಾಂ-ಪರಾಜಯದಲ್ಲಿ (ಯಥಾಯೋಗ್ಯವಾದ ಫಲವು ದೊರೆಯುತ್ತದೆ).

**ದೃಷ್ಟಾದೃಷ್ಟಫಲಾವಾಪ್ತಿರ್ವ್ಯವಹಾರೇಽಪಿ ದೃಶ್ಯತೇ ।**
**ಅತೋ ಯದ್ಯನ್ಮಯಾ ಪ್ರೋಕ್ತಂ ತತ್ತಥೈವ ಚ ನ ಚಾನ್ಯಥಾ ॥ ೪೨ ॥**

---

ಕರ್ಮಗಳನ್ನು ಮಾಡಿಸುವವನು ನಾನಾದರೂ, ಜೀವರೇ ಅವುಗಳ ಫಲವನ್ನು ಅನುಭವಿಸುತ್ತಾರೆಂಬುದು ಯುಕ್ತಿ ವಿರುದ್ಧವಲ್ಲ; ಪರಾಧೀನಕರ್ತರಾದ್ದರಿಂದ ಅವರೇ ಫಲಭಾಗಿಗಳು—ಸ್ವತಂತ್ರನಾದ ನಾನಲ್ಲ[1] ಲೋಕದಲ್ಲಿ ಭೃತ್ಯರು ರಾಜಾಜ್ಞೆಯಿಂದ ಮಾಡುವ ಶುಭಾಶುಭ ಕರ್ಮಗಳ ಫಲವನ್ನು ಅವರ ಯೋಗ್ಯತಾನುಸಾರವಾಗಿ, ಹೊಂದುತ್ತಾರೆಂಬುದು ಎಲ್ಲರಿಗೂ ತಿಳಿದಿದೆ; ಶತ್ರುಗಳ ಮೇಲೆ ರಾಜನು ನಡೆಸುವ ಯುದ್ಧದಲ್ಲಿ ದೊರೆಯುವ ಜಯ-ಪರಾಜಯಗಳನ್ನನುಸರಿಸಿ, ಯುದ್ಧದಲ್ಲಿ

1. ಶ್ರೀಹರಿಯು ಸರ್ವಶುಭ ಫಲಭೋಕ್ತನಾದರೂ, ದುಃಖಾದಿ ಅಶುಭ ಫಲವು ಆತನಿಗಿಲ್ಲ. ಇಲ್ಲಿ ಇದೇ ಅಧ್ಯಾಯ ೩೧ನೇ ಶ್ಲೋಕವನ್ನು ನೋಡಿರಿ.

ದೃಷ್ಟಾದೃಷ್ಟಫಲಾವಾಪ್ತಿ:- ದೃಷ್ಟವಾದ (ಕಣ್ಣಿಗೆ ಕಾಣುವ) ಮತ್ತು ಅದೃಷ್ಟವಾದ (ಕಾಣದಿರುವ), ಫಲಗಳ ಪ್ರಾಪ್ತಿಯು (ಕರ್ಮಗಳಿಗೆ), ವ್ಯವಹಾರೇ ಅಪಿ- ವ್ಯವಹಾರದಲ್ಲಿ ಸಹ, ದೃಶ್ಯತೇ- ಕಂಡುಬರುತ್ತದೆ; ಅತಃ- ಆದ್ದರಿಂದ (ಕರ್ಮಗಳಿಗೆ ದೃಷ್ಟಾದೃಷ್ಟಫಲಗಳು ಇರುವುದರಿಂದ), ಯದ್ಯತ್- ಯಾವುಯಾವುದು (ಪುಣ್ಯಪಾಪಗಳ ವಿಷಯದಲ್ಲಿ), ಮಯಾ- ನನ್ನಿಂದ, ಪ್ರೋಕ್ತಂ- (ಇಲ್ಲಿ) ಹೇಳಲಾಗಿದೆಯೋ, ತಥಾ ಏವ ಚ- ಅದೆಲ್ಲವೂ ಹಾಗೆಯೆ ಸರಿ; ಅನ್ಯಥಾ ನ ಚ- ಬೇರೆ ವಿಧವಾಗಿ ಅಲ್ಲವೇ ಅಲ್ಲ.

ಅನ್ಯಥಾ ಮನುತೇ ಯಸ್ತು ನರಕಂ ಪಿತೃಭಿರ್ವ್ರಜೇತ್ ।
ಇತಿ ತೇ ಸರ್ವಮಾಖ್ಯಾತಂ ಬ್ರಹ್ಮನ್ ಯತ್ತ್ವಂ ಪೃಷ್ಟವಾನಸಿ ॥ ೪೩ ॥

ಯತ್ಕಿಂಚಿದನ್ಯತ್ ಶ್ರೋತವ್ಯಂ ತದಪ್ಯತ್ರೈವ ಪಶ್ಯ ಭೋ ।
ಮಯಾ ಗೀತಮಿದಂ ಬ್ರಹ್ಮನ್ನರ್ಥಾ: ಸರ್ವೇಽಪ್ಯತಸ್ತವ ॥ ೪೪ ॥

ವಿದಿತಾ ಸ್ಯುರ್ನ ಚಾಪೀಷದಜ್ಞಾತಮವಶಿಷ್ಯತೇ ।

ಯಃ ತು- ಯಾವನಾದರೆ, ಅನ್ಯಥಾ- ಬೇರೆ ವಿಧವಾಗಿ, ಮನುತೇ- (ಪುಣ್ಯಪಾಪವಿಷಯಕ ಪ್ರಮೇಯಗಳನ್ನು ನಾನು ನಿರೂಪಿಸಿರುವುದಕ್ಕೆ ವಿರುದ್ಧವಾಗಿ) ತಿಳಿಯುವನೋ, (ಅವನು), ಪಿತೃಭಿಃ- (ತನ್ನ) ಪಿತೃಗಳೊಂದಿಗೆ, ನರಕಂ- ನರಕವನ್ನು

---

ರಾಜಾಜ್ಞೆಯಿಂದ ಪ್ರವೃತ್ತರಾದ ಸೈನಿಕರೂ, ಸೇನಾನಾಯಕರೂ ಯಥಾಯೋಗ್ಯವಾದ ಸನ್ಮಾನ—ಅಪಮಾನಗಳನ್ನು ಹೊಂದುವುದು ಕಂಡಿರೆ(೩೯-೪೧). ಶುಭಾಶುಭಕರ್ಮಗಳಿಗೆ, ದೃಷ್ಟಾದೃಷ್ಟಫಲಪ್ರಾಪ್ತಿಯು, ವ್ಯವಹಾರದಲ್ಲಿ ಸಹ ಕಂಡಿರೆ (ಜ್ಞಾನಿಗಳು ಸ್ವರ್ಗಾದಿ ಅದೃಷ್ಟಫಲಗಳನ್ನೂ ಹೇಳುತ್ತಾರೆ—ಈಗ ಮಾಡುವ ಕೃಷ್ಯಾದಿ ಕರ್ಮಗಳ ಫಲವು ಈಗ ಕಾಣದೇ ಕಾಲಾಂತರದಲ್ಲಿ ರೂಪಾಂತರದಿಂದ ಗೋಚರಿಸುತ್ತವೆ); ಆದ್ದರಿಂದ, ಪುಣ್ಯಪಾಪಗಳ ವಿಷಯದಲ್ಲಿ ನನ್ನಿಂದ ಉಕ್ತವಾದುದೆಲ್ಲವೂ ಯಥಾರ್ಥವೇ (ಸತ್ಯವೇ) ಆದುದು—ಬೇರೆಯಲ್ಲ(೪೨). ಯಾರು, ಈ ವಿಷಯಕ ಪ್ರಮೇಯಗಳನ್ನು ನನ್ನ ಉಕ್ತಿಗೆ ವಿರುದ್ಧವಾಗಿ ತಿಳಿಯುವನೋ, ಆತನು, ತನ್ನ ಪಿತೃಗಳೊಂದಿಗೆ ನರಕಕ್ಕೆ ಬೀಳುತ್ತಾನೆ; ಹೇ ಬ್ರಹ್ಮದೇವ! ನೀನು ಕೇಳಿದುದೆಲ್ಲವನ್ನೂ ಹೇಳಿ ಆಯಿತು—ಬೇರೆ ಏನಾದರೂ ಕೇಳುವುದಿದ್ದರೆ, ಆ ಎಲ್ಲ ಪ್ರಶ್ನೆಗಳಿಗೂ ಪರಿಹಾರವನ್ನು ಈ ನಿರೂಪಣೆಯಲ್ಲಿಯೇ, ಕಾಣುವಿ; ಆದ್ದರಿಂದ, ನೀನು ಕೇಳಿದ ಮತ್ತು ಕೇಳಬೇಕೆಂದಿಚ್ಛಿಸುವ ಸರ್ವ ಪ್ರಶ್ನೆಗಳನ್ನು ಉತ್ತರಿಸುವೆನು; ನಿನ್ನ ಸರ್ವಜ್ಞತ್ವಪರಿಪೂರ್ಣತೆಗೆ, ಯಾವ ನ್ಯೂನತೆಯೂ ಉಂಟಾಗಲವಕಾಶವಿಲ್ಲ—ನೀನು ತಿಳಿಯಬೇಕಾದುದು(ನಿನಗೆ ತಿಳಿಯದುದು) ಅಲ್ಪವೂ ಉಳಿದಿರುವುದಿಲ್ಲ(೪೩-೪೪). ಶ್ರೀವಿಷ್ಣುವು ಹೇಳುತ್ತಾನೆ:—ನನ್ನ ಮತ್ತೊಂದು

ಪ್ರಜೇತ್-ಹೊಂದುತ್ತಾನೆ. ಇತಿ-ಹೀಗೆ, ಬ್ರಹ್ಮನ್-ಹೇ ಬ್ರಹ್ಮ!, ಯತ್-ಯಾವುದನ್ನು ಕುರಿತು, ಪೃಷ್ಟವಾನ್ ಅಸಿ-(ನನ್ನನ್ನು) ಪ್ರಶ್ನಿಸಿದವನಾದೆಯೋ, ಸರ್ವಂ-ಆ ಎಲ್ಲವೂ, ತೇ-ನಿನಗೆ, ಆಖ್ಯಾತಂ-ಹೇಳಲ್ಪಟ್ಟಿತು; ಯತ್ಕಿಂಚಿತ್ ಅನ್ಯತ್-ಬೇರೆ ಯಾವುದಾದರೂ, ಶ್ರೋತವ್ಯಂ-ಕೇಳತಕ್ಕದ್ದು ಇದ್ದರೂ, ಭೋ-ಹೇ ಬ್ರಹ್ಮ!, ತದಪಿ-ಅದನ್ನೂ ಸಹ, ಅತ್ರೈವ-ಇಲ್ಲಿಯೇ (ಈವರೆಗೆ ಮಾಡಿದ ನಿರೂಪಣೆಯಲ್ಲಿಯೇ), ಪಶ್ಯ-ನೋಡು(ತಿಳಿ); ಅತಃ-ಆದ್ದರಿಂದ, ಬ್ರಹ್ಮನ್-ಹೇ ಬ್ರಹ್ಮ!, ಮಯಾ-ನನ್ನಿಂದ, ಗೀತಂ-ಉಪದೇಶಿಸಲ್ಪಟ್ಟ (ಹೇಳಲಾದ-ಪ್ರಶಂಸಿಸಲಾದ), ಇದಂ-ಈ ನಿರೂಪಣೆಯು, ಸರ್ವೇ ಅಪಿ-ಎಲ್ಲವೂ, ಅರ್ಥಾಃ-ಅರ್ಥಗಳುಳ್ಳದ್ದು (ನೀನು ಕೇಳಬೇಕಾದ ಇತರ ಸರ್ವಪ್ರಶ್ನೆಗಳ ಪರಿಹಾರರೂಪವಾದುದು) ಆಗಿದೆ; ಅತಃ-ಆದ್ದರಿಂದ, ತವ-ನಿನಗೆ, (ಸರ್ವೇಪಿ ಅರ್ಥಾಃ-ಎಲ್ಲ ಅರ್ಥಗಳೂ, ಸರ್ವಜ್ಞತ್ವಪ್ರಾಪಕ ಪ್ರಯೋಜನಗಳೂ), ವಿದಿತಾಃ ಸ್ಯುಃ-ತಿಳಿದವುಗಳೇ ಆದವು; ಅಜ್ಞಾತಂ-ತಿಳಿಯದುದು, ಈಷತ್ ಅಪಿ-ಅಲ್ಪವೂ ಸಹ, ನ ಚ ಅವಶಿಷ್ಯತೇ-ಉಳಿದಿರುವುದಿಲ್ಲ.

ಶ್ರೀವಿಷ್ಣುರುವಾಚ—

ಬ್ರಹ್ಮಾಣಮಿತ್ಯುದೀರ್ಯಾಥ ಹಯಗ್ರೀವೋಽಥ ಮತ್ತನುಃ ।
ಪಸ್ಪರ್ಶ ಪಾಣಿನಾ ಮೂರ್ಧ್ನಿ ಬ್ರಹ್ಮಾಣಂ ಪ್ರಾಣಮೇವ ಚ ॥ ೪೫ ॥

ಬ್ರಹ್ಮಪ್ರಾಣೌ ಸಪತ್ನೀಕೌ ಭಕ್ತ್ಯಾ ತಂ ನೇಮತುಸ್ತದಾ ।
ಕೃತಕೃತ್ಯಂ ಸ್ವಮಾತ್ಮಾನಂ ಮತ್ವಾ ವಿಧಿರುವಾಚ ಹ ॥ ೪೬ ॥

ಧನ್ಯೋಽಹಂ ಕೃತಕೃತ್ಯೋಽಹಂ ಶ್ರುತ್ವಾ ತ್ವದ್ಗೀತಮುತ್ತಮಂ ।
ಅಜ್ಞಾನತಮಸೋ ನಾಶಾದ್ವಿಜ್ಞಾನಾರ್ಕೋಽಧುನೋದಿತಃ ॥ ೪೭ ॥

ರೂಪನೇ ಆದ ಶ್ರೀಹಯಗ್ರೀವನು, ಹೀಗೆಂದು ಹೇಳಿ, ಬ್ರಹ್ಮವಾಯುಗಳ ತಲೆಯಲ್ಲಿ ತನ್ನ ಹಸ್ತವನ್ನಿಟ್ಟು ಅನುಗ್ರಹಿಸಿದನು; ಪತ್ನಿಸಮೇತರಾದ ಅವರಿಬ್ಬರೂ ಭಕ್ತಿಯಿಂದ ನಮಸ್ಕರಿಸಿದರು; ಬ್ರಹ್ಮದೇವನು, ಹೇ ಪ್ರಭೋ! ಹಯಗ್ರೀವ! ನಾನು ಧನ್ಯನು—ಕೃತಕೃತ್ಯನಾದೆನು; ನಿನ್ನ ಶ್ರೇಷ್ಠವಾದ ಉಪದೇಶವನ್ನು ಕೇಳಿ ಅಜ್ಞಾನವೆಂಬ ಕತ್ತಲೆಯು ಅಡಗಿ ವಿಜ್ಞಾನವೆಂಬ ಸೂರ್ಯನು ಉದಯಿಸಿದನು;[1] ಎಂದು ಹೇಳಿ

[1] ಬ್ರಹ್ಮ, ವಾಯು ಮೊದಲಾದ ಋಜುಗಣದವರಿಗೆ ಕತ್ತಲೆಯಂತಿರುವ ಭಾವರೂಪ ಅಜ್ಞಾನವಿಲ್ಲ—ಅವರು ಅನಾದ್ಯಪರೋಕ್ಷವುಳ್ಳ ಮತ್ತು ಪರೋಕ್ಷಜ್ಞಾನಪೂರ್ತಿಯುಳ್ಳ ಸರ್ವಜ್ಞರು. ಭಗವಸ್ಮಹಿಮೆಗಳ ಜ್ಞಾನಾಭಾವವೆಂಬ (ಅಭಾವ ರೂಪದ) ಅಜ್ಞಾನವಿದೆ—ಇದು, ಇವರಿಗಿಂತ ಕಡಿಮೆ ಪದವಿಯವರಲ್ಲಿ ಲಕ್ಷ್ಮೀದೇವಿಗೆ ಸಹ ಇದೆ. ಬ್ರಹ್ಮಾದಿಗಳು ಅನಾದಿಯಿಂದ ಸರ್ವಜ್ಞರೇ ಆದರೂ, ಆ ಸರ್ವಜ್ಞತೆಯ ಪರಿಪೂರ್ಣತೆಯನ್ನು ಹೊಂದುವುದಕ್ಕಾಗಿ ಶ್ರೀವಿಷ್ಣುವಿನಿಂದ

**ಇತಿ ಬ್ರುವಾಣೇ ತಸ್ಮಿನ್ ಸ ಹಯಗ್ರೀವಸ್ತಿರೋದಧೇ ।**
**ಗೀತಂ ಹಯಗ್ರೀವಸ್ಯೇದಂ ಯೋ ಭಕ್ತ್ಯಾ ಪಠತೇ ನರಃ ॥ ೪೮ ॥**

**ಸ ಕರ್ತಾ ಸರ್ವಯಜ್ಞಾನಾಂ ಇಹಾಮುತ್ರ ಚ ಶಂ ಲಭೇತ್ ॥ ೪೯ ॥**

ಅಥ-ಅನಂತರ, ಬ್ರಹ್ಮಾಣಂ-ಬ್ರಹ್ಮದೇವನಿಗೆ(ಬ್ರಹ್ಮನನ್ನು ಉದ್ದೇಶಿಸಿ), ಇತಿ-ಹೀಗೆ, ಉದೀರ್ಯ-ಹೇಳಿ, ಮತ್ತನುಃ-ನನ್ನ ಸ್ವರೂಪನೇ ಆದ, ಹಯಗ್ರೀವಃ-ಶ್ರೀ ಹಯಗ್ರೀವನು (ಆ ರೂಪದಿಂದ ಪ್ರತ್ಯಕ್ಷನಾಗಿ ಉಪದೇಶಿಸಿದ ನಾನು), ಅಥ-ಪುನಃ, ಬ್ರಹ್ಮಾಣಂ-ಬ್ರಹ್ಮನನ್ನೂ, ಪ್ರಾಣಂ ಏವ ಚ-ವಾಯುದೇವನನ್ನೂ (ಸೂತ್ರನಾಮಕ ಮುಖ್ಯಪ್ರಾಣನನ್ನೂ), ಪಾಣಿನಾ-ಕೈಯಿಂದ (ಹಸ್ತದಿಂದ), ಮೂರ್ಧ್ನಿ-ಶಿರಸ್ಸಿನಲ್ಲಿ ಪಸ್ಪರ್ಶ-ಸ್ಪರ್ಶಿಸಿದನು; ತದಾ-ಆಗ, ಸಪತ್ನೀಕೌ-ಪತ್ನೀಸಮೇತರಾದ (ಸರಸ್ವತೀ ಭಾರತಿಯರಿಂದ ಸಹಿತರಾದ), ಬ್ರಹ್ಮಪ್ರಾಣೌ-ಬ್ರಹ್ಮವಾಯುಗಳಿಬ್ಬರೂ, ಭಕ್ತ್ಯಾ-ಭಕ್ತಿಯಿಂದ, ತಂ-ಶ್ರೀಹಯಗ್ರೀವನನ್ನು ನೇಮತುಃ ನಮಸ್ಕರಿಸಿದರು; ವಿಧಿಃ-ಬ್ರಹ್ಮನು, ಸ್ವಂ ಆತ್ಮಾನಂ-(ತನ್ನನ್ನು) ತನ್ನ ಸ್ವರೂಪವನ್ನು, ಕೃತಕೃತ್ಯಂ-ಕೃತಕೃತ್ಯನನ್ನಾಗಿ (ಪೂರ್ಣನನ್ನಾಗಿ), ಮತ್ವಾ-ತಿಳಿದು, ಉವಾಚ ಹ-ಮಾತನಾಡಿದನಷ್ಟೇ![1] (ಏನು ಹೇಳಿದನೆಂದರೆ), ಧನ್ಯಃಅಹಂ-ನಾನು ಧನ್ಯನು (ಸರ್ವಾಭೀಷ್ಟವನ್ನು ಹೊಂದಿದವನು), ಕೃತಕೃತ್ಯಃಅಹಂ-ನಾನು ಕೃತಕೃತ್ಯನು (ಮಾಡಬೇಕಾದುದನ್ನೆಲ್ಲ ಮಾಡಿ ಮುಗಿಸಿದವನು—ಮಾಡತಕ್ಕದ್ದೇನೂ ಉಳಿಯದಿರುವವನು); ಉತ್ತಮಂ-ಶ್ರೇಷ್ಠವಾದ, ತ್ವದ್ಗೀತಂ-ನಿನ್ನ ಉಪದೇಶವನ್ನು, ಶ್ರುತ್ವಾ-ಕೇಳಿ, ಅಜ್ಞಾನ ತಮಸಃ-ಅಜ್ಞಾನವೆಂಬ ಅಂಧಕಾರದ, ನಾಶಾತ್-ನಾಶದಿಂದ, ಅಧುನಾ-ಈಗ, ವಿಜ್ಞಾನಾರ್ಕಃ-ವಿಶೇಷಜ್ಞಾನವೆಂಬ ಸೂರ್ಯನು, ಉದಿತಃ-ಉದಯಿಸಿದನು; ತಸ್ಮಿನ್-ಆತನು(ಬ್ರಹ್ಮದೇವನು),

---

ಸಾಷ್ಟಾಂಗವೆರಗಲು, ಶ್ರೀ ಹಯಗ್ರೀವನು ತನ್ನ ಆ ರೂಪವನ್ನು ಅದೃಶ್ಯಗೊಳಿಸಿದನು; ಶ್ರೀ ಹಯಗ್ರೀವರೂಪದಿಂದ ಶ್ರೀ ಮಹಾವಿಷ್ಣುವು ಬ್ರಹ್ಮಾದಿಗಳಿಗೆ ಮಾಡಿದ ಈ ಗೀತೆಯನ್ನು (ಪರಮಸುತ್ತ್ಯವಾದ ಈ ಉಪದೇಶವನ್ನೊಳಗೊಂಡ ಈ ಗ್ರಂಥದ ಈ ಅಧ್ಯಾಯಗಳನ್ನು)

---

ವೇದಾದಿ ಶಾಸ್ತ್ರರಹಸ್ಯ ವಿಶೇಷಗಳನ್ನು ಕೇಳುತ್ತಾರೆ. ಇವರ ಶಾಸ್ತ್ರಶ್ರವಣವನ್ನು ಶ್ರೀಸುಮಧ್ವವಿಜಯದಲ್ಲಿ ಮೊದಲೇ ಸಂಪತ್‌ಪೂರ್ಣವಾದ ದ್ವಾರಕಾಪುರಿಯನ್ನು ಮತ್ತೆ ಮತ್ತೆ ವಿಶೇಷ ಸಂಪತ್ತಿನಿಂದ ಶ್ರೀಕೃಷ್ಣನು ತುಂಬಿ, ಸಂವರ್ಧಿತವನ್ನಾಗಿ ಮಾಡಿದಂತೆ, ಎಂಬ ಉಪಮಾನದಿಂದ ವಿವರಿಸಲಾಗಿದೆ. ಆದ್ದರಿಂದ 'ಅಜ್ಞಾನವೆಂಬ ಅಂಧಕಾರ' ಎಂಬುದಕ್ಕೆ ಅಭಾವರೂಪ ಅಜ್ಞಾನವೆಂಬರ್ಥವನ್ನೂ, 'ವಿಜ್ಞಾನವೆಂಬ ಸೂರ್ಯೋದಯ' ಎಂಬುದಕ್ಕೆ, ಪೂರ್ಣಜ್ಞಾನದ ವಿಶೇಷ ಪರಿಪೂರ್ತಿ' ಎಂಬರ್ಥವನ್ನೂ ತಿಳಿಯಬೇಕು.

1. ಉಪದೇಶಗೊಂಡ ಪುರುಷನಾಮಕ ಬ್ರಹ್ಮನು ಏನು ಹೇಳಿದನೆಂಬುದು ಈಗ ಮಾಯಾದೇವಿಯಲ್ಲಿ ವಾಸುದೇವರೂಪನಾದ ನನ್ನಿಂದ ಪುನಃ ಹುಟ್ಟಿದ ನಿನಗೆ ಗೊತ್ತಿರಬೇಕಷ್ಟೆ.

ಇತಿಬ್ರುವಾಣೇ(ಸತಿ)-ಹೀಗೆ ನುಡಿಯುತ್ತಿರಲು, ಸಃ-ಹಯಗ್ರೀವನು-ಆ ಹಯಗ್ರೀವ ರೂಪೀ ಶ್ರೀವಿಷ್ಣುವು, ತಿರೋದಧೇ-ಅಂತರ್ಧಾನವನ್ನು ಹೊಂದಿದನು (ಅದೃಶ್ಯ ನಾದನು), ಯಃ ನರಃ-ಯಾವ ಮನುಷ್ಯನು, ಹಯಗ್ರೀವಸ್ಯ-ಶ್ರೀ ಹಯಗ್ರೀವನ, ಇದಂ ಗೀತಂ-ಈ ಉಪದೇಶದ ನಿರೂಪಣೆಯನ್ನು ಭಕ್ತ್ಯಾ-ಭಕ್ತಿಯಿಂದ, ಪಠತೇ-ಪಠನಮಾಡುತ್ತಾನೆಯೋ, ಸಃ-ಅವನು, ಸರ್ವಯಜ್ಞಾನಾಂ-ಸಕಲಯಜ್ಞಗಳ (ಸರ್ವವಿಧದ ವಿಷ್ಣುಪೂಜೆಗಳ) ಕರ್ತಾ-ಮಾಡಿದವನೇ ಸರಿ; ಇಹ-ಇಹದಲ್ಲಿಯೂ, ಚ-ಮತ್ತು ಅಮುತ್ರ-ಪರಲೋಕದಲ್ಲಿಯೂ, ಶಂ-ಸುಖವನ್ನು ಲಭೇತ್-ಹೊಂದುತ್ತಾನೆ.

ಭಗವಂತನ ಸ್ವಾತಂತ್ರ್ಯವರ್ಣನವೆಂಬ ೧೫ನೆಯ ಅಧ್ಯಾಯವು ಮುಗಿದುದು.

## ಅಧ್ಯಾಯ ೧೬

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

**ಅಂತರ್ಹಿತೇ ಹಯಗ್ರೀವೇ ಲಬ್ಧಜ್ಞಾನಾಸ್ತು ತೇಽಖಿಲಾಃ ।**
**ಸೃಷ್ಟವಂತಃ ಕಥಂ ಜೀವಾಂಸ್ತನ್ಮೇ ವಿಸ್ತರತೋ ವದ ॥ ೧ ॥**

---

ಯಾರು ಭಕ್ತಿಪೂರ್ವಕ ಪಠನಮಾಡುವರೋ, ಅವರು ಸಕಲಯಜ್ಞಗಳನ್ನಾಚರಿಸಿದವರೇ ಸರಿ; ಇಹಪರಗಳಲ್ಲಿ ಸುಖವನ್ನೇ ತಪ್ಪದೇ ಹೊಂದುತ್ತಾರೆ (೪೫-೪೯).

೧೫ನೇ ಅಧ್ಯಾಯವು ಮುಗಿದುದು

### ಅಧ್ಯಾಯ ೧೬

**ತಾತ್ಪರ್ಯ:**—ಬ್ರಹ್ಮನು ಕೇಳುತ್ತಾನೆ;[1]—ಶ್ರೀ ಹಯಗ್ರೀವರೂಪನಾದ ಭಗವಂತನು ಅದೃಶ್ಯನಾದಮೇಲೆ, ಸ್ವಸಂತ್ಯಪ್ತಿಕರವಾದ ಜ್ಞಾನವನ್ನು ಆತನ ಉಪದೇಶದಿಂದ ಪಡೆದ ಬ್ರಹ್ಮನು, ಸೂಕ್ಷ್ಮಸೃಷ್ಟಿಯಲ್ಲಿ ತಾನು ಮತ್ತಿತರರು ಹೇಗೆ

---

1. ಹಯಗ್ರೀವರೂಪದಿಂದ ಈವರೆಗೆ ಉಪದೇಶಮಾಡಿದ ಭಗವಂತನು ಆ ರೂಪವನ್ನು ತಿರೋಧಾನಗೊಳಿಸಿದನೆಂದು ಶ್ರೀವಿಷ್ಣುವು ಹೇಳಿದ ನಂತರ ಬ್ರಹ್ಮನು ಶ್ರೀವಿಷ್ಣುವನ್ನು ಸೂಕ್ಷ್ಮಸೃಷ್ಟಿಯ ವಿವರವನ್ನು ತಿಳಿಯಲು ಪ್ರಶ್ನಿಸುತ್ತಾನೆ. ಇಲ್ಲಿ ಅಧ್ಯಾಯ ೧, ಶ್ಲೋಕ ೧೬-೧೭ನ್ನು ನೋಡಿರಿ. ಮೊದಲು ಮಹತತ್ತ್ವದಿಂದ ಸೃಷ್ಟನಾದ ಪುರುಷನಾಮಕ ಬ್ರಹ್ಮನು, ಶ್ರೀವಿಷ್ಣುವನ್ನು ಪ್ರಶ್ನೆಮಾಡಿದ್ದಾನೆ. ಮುಂದೆ, ಆ ಪುರುಷನನ್ನು, ವಾಸುದೇವನು ನುಂಗಿ, ಮಾಯಾದೇವಿಯಲ್ಲಿ

**ಮಹತತ್ತ್ವವಿಭಾಗೇನ ಚತ್ವಾರೋ ನಿರ್ಮಿತಾಃ ಕಥಂ ।**
**ತದಪ್ಯಾಖ್ಯಾಹಿ ಭಗವನ್ ಕೃಪಯಾ ಭೂತಭಾವನ ॥ ೨ ॥**

ಬ್ರಹ್ಮದೇವನು ಮಾತನಾಡುತ್ತಾನೆ—

**ಅರ್ಥ:**—ಹಯಗ್ರೀವೇ-ಶ್ರೀಹಯಗ್ರೀವದೇವನು, ಅಂತರ್ಹಿತೇ-ಅದೃಶ್ಯನಾಗುತ್ತಿರಲು, ಲಬ್ಧಜ್ಞಾನಾಃ-ತಮಗೆ ತೃಪ್ತಿಕರವಾದ ಜ್ಞಾನವನ್ನು ಪಡೆದ (ಸರ್ವಜ್ಞತ್ವ ವಿಶೇಷವನ್ನು ಹೊಂದಿದ), ತೇ ಅಖಿಲಾಃ-ಆ ಎಲ್ಲರೂ (ಶ್ರೀಹಯಗ್ರೀವನಿಂದ ಸಕಲ ವೇದಾದಿಶಾಸ್ತ್ರಗಳ ಉಪದೇಶವನ್ನು ಪಡೆದ ಬ್ರಹ್ಮ, ವಾಯು, ಸರಸ್ವತೀ ಮತ್ತು ಭಾರತೀ ಇವರುಗಳು), ಕಥಂ-ಹೇಗೆ (ಯಾವ ಪ್ರಕಾರವಾಗಿ, ಜೀವಾನ್-ಜೀವರನ್ನು ಸೃಷ್ಟವಂತಃ-ಸೃಷ್ಟಿಮಾಡಿದವರಾದರು, ತತ್-ಅದನ್ನು ಮೇ-ನನಗೆ, ವಿಸ್ತರತಃ-ವಿಸ್ತಾರವಾಗಿ, ವದ-ಹೇಳು; ಚತ್ವಾರಃ-ಈ ನಾಲ್ವರು, ಮಹತತ್ತ್ವವಿಭಾಗೇನ-ಮಹತತ್ತ್ವದ ಅಂಶಗಳಿಂದ, ಕಥಂ-ಹೇಗೆ, ನಿರ್ಮಿತಾಃ-ಸೃಷ್ಟರಾದರು; ತದಪಿ-ಅದನ್ನು ಸಹ, ಭಗವನ್-ಹೇ ವಿಷ್ಣೋ!, ಭೂತಭಾವನ-ಸರ್ವರ ಸೃಷ್ಟಿಕರ್ತನಾದ ಹೇ ಸ್ವಾಮಿ!, ಕೃಪಯಾ-ಕೃಪೆಮಾಡಿ, ಆಖ್ಯಾಹಿ-ಹೇಳು.

**ಮಹತತ್ತ್ವವಿಭಾಗೋರ್ಧಃ ಶತಧಾ ಚ ವಿಭಾಜಿತಃ ।**
**ಪುರುಷಸ್ತ್ರಿಂಶತಾಭಾಗೈಃ ಪಂಚವಿಂಶತಿಭಿಸ್ತತಃ ॥ ೩ ॥**

**ಪ್ರಕೃತಿರ್ನಿರ್ಮಿತಾ ಸೂತ್ರಮಷ್ಟಾವಿಂಶತಿಭಾಗಕೈಃ ।**
**ವಾಗ್ದೇವೀ ಸಪ್ತದಶಭಿರ್ಭಾಗೈಃ ಸೃಷ್ಟಾಭವತ್ಪುರಾ ॥ ೪ ॥**

---

ಸೃಷ್ಟರಾದರೆಂಬುದನ್ನು ತಿಳಿಯಲಪೇಕ್ಷಿಸಿ, (ಸೂಕ್ಷ್ಮಸೃಷ್ಟಿಯಲ್ಲಿ ಸೃಷ್ಟನಾದ ಬ್ರಹ್ಮನು) ಶ್ರೀವಿಷ್ಣುವನ್ನು ಪ್ರಶ್ನಿಸುತ್ತಾನೆ; ಬ್ರಹ್ಮನು, ವಾಯುವೂ ಮತ್ತು ಅವನ ಪತ್ನಿಯರೂ ಮಹತತ್ತ್ವದ ಎಷ್ಟೆಷ್ಟು ಅಂಶ(ಭಾಗ)ಗಳಿಂದ ಹೇಗೆ ಸೃಷ್ಟರಾದರು ಮತ್ತು ಅವರು, ಜೀವರನ್ನು ಹೇಗೆ ಸೃಷ್ಟಿಸಿದರು, ಎಂಬುದನ್ನು ಕೃಪೆ ಮಾಡಿ, ಹೇಳು, ಪ್ರಭೋ!(೧-೨). ಶ್ರೀವಿಷ್ಣುವು ಹೇಳುತ್ತಾನೆ—ಸೃಷ್ಟವಾದ ಮಹತತ್ತ್ವದಲ್ಲಿ ಅರ್ಧಭಾಗವು ೧೦೦ ಭಾಗಗಳಾಗಿ ವಿಭಾಗಿಸಲ್ಪಟ್ಟಿತು; ಅದರಲ್ಲಿ ೩೦ ಭಾಗಗಳಿಂದ ಪುರುಷನಾಮಕ ಬ್ರಹ್ಮನೂ, ೨೫ ಭಾಗಗಳಿಂದ ಪ್ರಕೃತಿನಾಮಕ ಸರಸ್ವತೀದೇವಿಯೂ, ೨೮ ಭಾಗಗಳಿಂದ

---

ಪುನಃ ಬ್ರಹ್ಮನನ್ನು ಹುಟ್ಟಿಸಿ, ಅವನ ಇಚ್ಛಾನುಸಾರ, ವಾಯುದೇವನನ್ನೂ, ಅವರಿಬ್ಬರ ಪತ್ನಿಯರಾಗಲು ಸರಸ್ವತೀ ಭಾರತಿಯರನ್ನೂ ಸೃಷ್ಟಿಸಿ, ಆ ನಾಲ್ವರಿಗೆ ಶ್ರೀ ಹಯಗ್ರೀವ ರೂಪದಿಂದ, ವೇದಾದಿ ಶಾಸ್ತ್ರಗಳನ್ನು ಉಪದೇಶಿಸಿದನೆಂಬ ವೃತ್ತಾಂತವು ಈವರೆಗೆ (೧೫ನೇ ಅಧ್ಯಾಯ ಪೂರ್ಣ) ನಿರೂಪಿತವಾಗಿದೆ. ಈಗ ಪುನಃ, ಪುರುಷನಾಮಕ (ಮೊದಲು ಮಹತತ್ತ್ವದ ಸೃಷ್ಟಿಯ ನಂತರ ಹುಟ್ಟಿದ) ಬ್ರಹ್ಮನು ಶ್ರೀವಿಷ್ಣುವನ್ನು ಕೇಳುತ್ತಾನೆ—ಹಿಂದಿನ ಸಂಭಾಷಣೆ ಮುಂದರಿಯುತ್ತದೆ.

ಮಹತತ್ತ್ವವಿಭಾಗಃ-ಮಹತತ್ತ್ವದ ವಿಭಾಗವಾದ, ಅರ್ಧಃ-ಅರ್ಧವು (ಸೃಷ್ಟವಾದ ಮಹತತ್ತ್ವದಲ್ಲಿ ಅರ್ಧಭಾಗವು), ಶತಧಾ ಚ-ನೂರು ಭಾಗಗಳಾಗಿಯೂ, ವಿಭಾಜಿತಃ-ವಿಭಾಗಿಸಲ್ಪಟ್ಟಿತು; ತ್ರಿಂಶತಾಭಾಗೈಃ-೩೦ ಭಾಗಗಳಿಂದ, ಪುರುಷಃ-ಪುರುಷನಾಮಕ ಬ್ರಹ್ಮನು(ಸೃಷ್ಟನಾದನು); ತತಃ-ನಂತರ, ಪಂಚವಿಂಶತಿಭಿಃ-೨೫ ಭಾಗಗಳಿಂದ, ಪ್ರಕೃತಿಃ-ಪ್ರಕೃತಿನಾಮಕಳಾದ ಸರಸ್ವತಿಯೂ, ನಿರ್ಮಿತಾ-ಸೃಷ್ಟಿಸಲ್ಪಟ್ಟಳು; ಅಷ್ಟಾವಿಂಶತಿಭಾಗಕೈಃ-೨೮ ಭಾಗಗಳಿಂದ, ಪುರಾ-ಮೊದಲು, ಸೂತ್ರಂ-ಸೂತ್ರನಾಮಕ ವಾಯುದೇವನನ್ನು (ಸೃಜಿಸಿ), ವಾಗ್ದೇವೀ-ವಾಣೀದೇವಿಯು (ಭಾರತಿಯು), ಸಪ್ತದಶಭಿಃ-೧೭ ಭಾಗಗಳಿಂದಲೂ, ಅಭವತ್-ಸೃಷ್ಟಳಾದಳು.

**ಸೃಷ್ಟ್ಯಾದೌ ಪುರುಷೋ ಜಜ್ಞೇ ತೇನಾದ್ಯಬ್ರಹ್ಮಸಂಜ್ಞಿತಃ ।**
**ಓತತ್ವಾತ್ಸರ್ವಜೀವೇಷು ಸೂತ್ರಂ ಪ್ರಾಣ ಇತೀರಿತಃ ॥ ೫ ॥**

ಸೃಷ್ಟ್ಯಾದೌ-ಸೃಷ್ಟಿಯ ಆರಂಭದಲ್ಲಿ (ಮೊದಲು), ಪುರುಷಃ-ಪುರುಷನು (ತನ್ನಾಮಕಬ್ರಹ್ಮನು), ಜಜ್ಞೇ-ಜನಿಸಿದನು; ತೇನ-ಈ ಕಾರಣದಿಂದ, ಆದ್ಯಬ್ರಹ್ಮಸಂಜ್ಞಿತಃ-'ಆದ್ಯಬ್ರಹ್ಮ'ನೆಂಬ ಹೆಸರುಳ್ಳವನಾದನು; ಸರ್ವಜೀವೇಷು-ಸಕಲಜೀವರಲ್ಲಿ ಓತತ್ವಾತ್-ತುಂಬಿಕೊಂಡಿರುವುದರಿಂದ (ವ್ಯಾಪಿಸಿ ಅವರನ್ನು ಧರಿಸಿರುವುದರಿಂದ), ಪ್ರಾಣಃ-ಪ್ರಾಣನು(ವಾಯುದೇವನು), ಸೂತ್ರಂ-ಸೂತ್ರನು, ಇತಿ-ಎಂದು, ಈರಿತಃ-ಹೇಳಲ್ಪಡುತ್ತಾನೆ.

**ಸ ತು ವರ್ಷದ್ವಯಾದೂರ್ಧ್ವಂ ಜಜಾನ ಬ್ರಹ್ಮಜನ್ಮನಃ ।**
**ಪ್ರಾಣತ್ವೇನ ಸ್ಥಿತಸ್ತಾವದಹಮೇವ ಹಿ ಪೂರುಷೇ ॥ ೬ ॥**

**ಪುರುಷಾಧಿಷ್ಠಿತೇ ಪ್ರಾಣೇ ಜಾತೇ ಪ್ರಾಣೋಽವಿಶದ್ವಿಭಿಂ ।**
**ಅನ್ಯೋನ್ಯಂ ಸಂಭೃತಾವೇತೌ ಸರ್ವಜೀವೇಷು ಸಂಸ್ಥಿತೌ ॥ ೭ ॥**

---

ಸೂತ್ರನಾಮಕ ವಾಯುದೇವನೂ, ೧೭ ಭಾಗಗಳಿಂದ ವಾಣೀ(ಭಾರತೀ)ದೇವಿಯೂ ಸೃಷ್ಟರಾದರು (೩-೪). ಸೃಷ್ಟಿಯ ಆರಂಭದಲ್ಲಿ ಪುರುಷನು ಮೊದಲು ಹುಟ್ಟಿದ್ದರಿಂದ, ಆತನು 'ಆದ್ಯಬ್ರಹ್ಮ'ನೆಂಬ ಹೆಸರುಳ್ಳವನಾದನು; ಸಮಸ್ತಜೀವರಲ್ಲಿ ವ್ಯಾಪ್ತನಾಗಿ, ಅವರನ್ನು, ಸೂತ್ರವು ಮಣಿಗಳೊಳಗೆ ಪೋಣಿಸಲ್ಪಟ್ಟು ಮಣಿಗಳಿಗೆ ಆಶ್ರಯವಾಗಿದ್ದು ಅವುಗಳನ್ನು ಧರಿಸುವಂತೆ, ಧರಿಸಿರುವುದರಿಂದ ಮುಖ್ಯಪ್ರಾಣನು, 'ಸೂತ್ರ'ನೆಂದು ಕರೆಯಲ್ಪಡುತ್ತಾನೆ(೫). ಪುರುಷನು(ಬ್ರಹ್ಮನು) ಜನಿಸಿದ ಎರಡು ವರ್ಷದ ನಂತರ ಸೂತ್ರನು (ಪ್ರಾಣನು) ಹುಟ್ಟಿದನು; ಅವರೆಗೆ, ನಾನೇ ಪುರುಷದೇಹದಲ್ಲಿ ನಿಂತು ಪ್ರಾಣನಿಂದಾಗಬೇಕಾದ ಕಾರ್ಯಗಳನ್ನು ನಾನೇ ನಿಗ್ರಹಿಸುತ್ತಿದ್ದೆನು;

ಸಃ-ಆ ಸೂತ್ರನಾಮಕವಾಯುದೇವನು(ಮುಖ್ಯಪ್ರಾಣನು), ಬ್ರಹ್ಮಜನ್ಮನಃ-ಆದ್ಯಬ್ರಹ್ಮನ ಜನ್ಮದಿಂದ, ವರ್ಷದ್ವಯಾತ್ ಊರ್ಧ್ವಂ-ಎರಡು ವರ್ಷಗಳ ಮೇಲೆ, ಜಜಾನ-ಹುಟ್ಟಿದನು; ತಾವತ್-ಅಲ್ಲಿಯವರೆಗೆ (ಆ ಎರಡು ವರ್ಷಗಳ ಕಾಲ), ಅಹಂಏವ-ನಾನೇ, ಪೂರುಷೇ-ಪುರುಷನಾಮಕಬ್ರಹ್ಮನಲ್ಲಿ ಪ್ರಾಣತ್ವೇನ-ಪ್ರಾಣನಾಗಿ (ಮುಖ್ಯಪ್ರಾಣನ ಕಾರ್ಯವನ್ನು ಅಲ್ಲಿ ನಿರ್ವಹಿಸುತ್ತ), ಸ್ಥಿತಃ-ಇದ್ದೆನು; ಪುರುಷಾಧಿಷ್ಠೇ-ಪುರುಷನಲ್ಲಿರಬೇಕಾದ(ಪುರುಷನಲ್ಲಿ—ಆ ಅಧಿಷ್ಠಾನದಲ್ಲಿ-ಸ್ಥಾನದಲ್ಲಿ ಇರಬೇಕಾದ), ಪ್ರಾಣೇ-ಪ್ರಾಣನು (ಸೂತ್ರನಾಮಕ ವಾಯುದೇವನು), ಜಾತೇ(ಸತಿ) ಹುಟ್ಟುತ್ತಿರಲು, ಪ್ರಾಣಃ-ಆ ಪ್ರಾಣಶಬ್ದವಾಚ್ಯನಾದ 'ಸೂತ್ರ'ನು, ವಿಧಿಂ- ಪುರುಷನನ್ನು (ಬ್ರಹ್ಮನನ್ನು), ಅವಿಶತ್-ಪ್ರವೇಶಿಸಿದನು; ಸರ್ವಜೀವೇಷು-ಸಮಸ್ತ ಜೀವರಲ್ಲಿ ಸಂಸ್ಥಿತೌ-ಇರುವವರಾದ, ಏತೌ-ಈ ಉಭಯರು, ಅನ್ಯೋನ್ಯಂ-ಪರಸ್ಪರ (ಒಬ್ಬರಿಗೊಬ್ಬರು), ಸಂಭೃತೌ-ಪೂರಕರು(ಧಾರಕರು—ಆಶ್ರಯರು) ಆಗಿದ್ದಾರೆ.

**ಶೀರ್ಯೇತ್ಪ್ರಾಣಂ ವಿನಾ ಬ್ರಹ್ಮಾ ಮ್ರಿಯೇತ್ಪ್ರಾಣೋ ವಿಧಿಂ ವಿನಾ ।**
**ಜಜ್ಞಾತೇ ಪ್ರಕೃತೀಶ್ರದ್ಧೇ ವಾಯೋರ್ವರ್ಷತ್ರಯಾತ್ಪರಂ ॥ ೮ ॥**

ಬ್ರಹ್ಮಾ-ಬ್ರಹ್ಮನು, ಪ್ರಾಣಂ ವಿನಾ-ಪ್ರಾಣನನ್ನು ಬಿಟ್ಟು (ಪ್ರಾಣನ ಹೊರತು—ಪ್ರಾಣನಿಲ್ಲದೇ), ಶೀರ್ಯೇತ್-ನಷ್ಟನಾಗುತ್ತಾನೆ; ವಿಧಿಂ ವಿನಾ-ಬ್ರಹ್ಮನಿಲ್ಲದೇ, ಪ್ರಾಣಃ-ಪ್ರಾಣನು (ವಾಯುದೇವನು), ಮ್ರಿಯೇತ್-ಮೃತನಾಗುವನು(ಹೀಗೆ ಅನ್ಯೋನ್ಯವಾಗಿ ಒಬ್ಬರಲ್ಲಿ ಮತ್ತೊಬ್ಬರಿದ್ದು ಪ್ರಾಣಧಾರಕರಾಗಿದ್ದಾರೆ); ವಾಯೋಃ-ವಾಯುದೇವನ, ವರ್ಷತ್ರಯಾತ್ಪರಂ-ಮೂರು ವರ್ಷದ ನಂತರ (ಸೂತ್ರನು ಹುಟ್ಟಿದ ಮೂರು ವರ್ಷದ ಮೇಲೆ), ಪ್ರಕೃತೀಶ್ರದ್ಧೇ-ಸರಸ್ವತೀ ಮತ್ತು ಭಾರತೀದೇವಿಯರು (ಪ್ರಕೃತೀ ಶುದ್ಧೇ ಎಂದೂ ಪಾಠವಿದೆ; ಆಗ ಶುದ್ಧೇ-ಶುಃಖಾಜ್ಞಾನಾದಿ ದೋಷರಹಿತರಾದ (ಪರಮಶುದ್ಧರಾದ-ಪವಿತ್ರಸ್ವರೂಪರಾದ) ಪ್ರಕೃತೀ-ಪ್ರಕೃತಿಶಬ್ದವಾಚ್ಯರಾದ ವಾಣೀ ಭಾರತೀಯರು), ಜಜ್ಞಾತೇ-ಹುಟ್ಟಿದರು.

---

ಪುರುಷನಲ್ಲಿರಬೇಕಾದ ಸೂತ್ರನ ಜನ್ಮವಾದೊಡನೆಯೇ, ಆತನು ಬ್ರಹ್ಮನ ದೇಹವನ್ನು ಪ್ರವೇಶಿಸಿದನು; ಸರ್ವಜೀವರಲ್ಲಿರುವವರಾದ ಇವರಿಬ್ಬರೂ, ಪರಸ್ಪರ ಆಶ್ರಯರೂ ಆಗಿದ್ದಾರೆ(೬-೭). ಇವರು ಅನ್ಯೋನ್ಯವಾಗಿ ಹೇಗೆ ಆಶ್ರಯರೆಂದರೆ, ಪ್ರಾಣನಿಲ್ಲದೇ ಬ್ರಹ್ಮನು ನಷ್ಟನಾಗುತ್ತಾನೆ (ಆತನ ದೇಹವು ಕೊಳೆಯುತ್ತದೆ); ಬ್ರಹ್ಮನಿಲ್ಲದೇ (ತನ್ನೊಳಗಿಲ್ಲದೇ) ಪ್ರಾಣನು (ವಾಯುದೇವನೂ) ಮೃತನಾಗುತ್ತಾನೆ; ವಾಯುದೇವನು ಹುಟ್ಟಿದ ಮೂರು ವರ್ಷದ ನಂತರ ಸರಸ್ವತೀ ಭಾರತಿಯರು ಹುಟ್ಟಿದರು(೮). ಈ ಉಭಯರ ಪುತ್ರರು, ವೈಕಾರಿಕ, ತೈಜಸ, ತಾಮಸಗಳೆಂಬ ತ್ರಿವಿಧ ಅಹಂಕಾರ ತತ್ತ್ವಗಳ

ವೈಕಾರಿಕಾದ್ಯಹಂಕಾರದಲಾನಿ ತ್ರೀಣ್ಯತಃ ಪರಂ ।
ಮಿಶ್ರೀಕೃತ್ಯ ತದಂಶೇನ ತಯೋಃ ಪುತ್ರೌ ವಿನಿರ್ಮಿತೌ ॥ ೯ ॥

ಪ್ರಕೃತ್ಯಾಂ ಪುರುಷಾಜ್ಜೀವಃ ಕಾಲೋ ವಾಗ್ವಾಯುಯೋಗತಃ ।
ಸರ್ಪಾಕಾರೋಽಭವಜ್ಜೀವಃ ಕಾಲೋಽಭೂತ್ಪಕ್ಷಿರೂಪಧೃಕ್ ॥ ೧೦ ॥

ವೈಕಾರಿಕಾದ್ಯಹಂಕಾರದಲಾನಿ-ವೈಕಾರಿಕ, ತೈಜಸ, ತಾಮಸಗಳೆಂಬ ಅಹಂಕಾರ ತತ್ತ್ವದ ದಳಗಳಾದ, ತ್ರೀಣಿ-ಮೂರನ್ನೂ, ಮಿಶ್ರೀಕೃತ್ಯ-ಮಿಶ್ರಗೊಳಿಸಿ, ಅತಃ ಪರಂ-ಅಲ್ಲಿಂದ ಮುಂದೆ, ತದಂಶೇನ-ಆ ಮಿಶ್ರಿತ ಅಹಂಕಾರತತ್ತ್ವದ ಒಂದು ಭಾಗದಿಂದ, ತಯೋಃ-ಅವರಿಬ್ಬರ (ಸರಸ್ವತೀ ಭಾರತಿಯರ), ಪುತ್ರೌ-ಇಬ್ಬರು ಮಕ್ಕಳು (ಶೇಷ-ಗರುಡರು), ವಿನಿರ್ಮಿತೌ-ಸೃಷ್ಟಿಸಲ್ಪಟ್ಟರು; ಪುರುಷಾತ್-ಪುರುಷನಾಮಕ ಬ್ರಹ್ಮನಿಂದ, ಪ್ರಕೃತ್ಯಾಂ-ಪ್ರಕೃತಿನಾಮಕ ಸರಸ್ವತೀದೇವಿಯಲ್ಲಿ ಜೀವಃ-ಜೀವಶಬ್ದವಾಚ್ಯನಾದ ಶೇಷ ದೇವನೂ, ವಾಗ್ವಾಯುಯೋಗತಃ-ವಾಣೀ(ಭಾರತೀ) ವಾಯುದೇವರ ಸಂಯೋಗ ದಿಂದ, ಕಾಲಃ-ಕಾಲನಾಮಕ ಗರುಡನೂ, (ಅವರಲ್ಲಿ) ಜೀವಃ-ಜೀವನು(ಶೇಷನು), ಸರ್ಪಾಕಾರಃ-ಸರ್ಪಾಕಾರನೂ, ಅಭವತ್-ಆದನು; ಕಾಲಃ-ಕಾಲನು, ಪಕ್ಷಿರೂಪಧೃಕ್-ಪಕ್ಷಿರೂಪವುಳ್ಳವನು, ಅಭೂತ್-ಆದನು.

ಪ್ರಕೃತೇರ್ಜನ್ಮತೋ ವರ್ಷದ್ವಯಾದೇತೌ ಬಭೂವತುಃ ।
ಯೇ ನಿರ್ಮಿತಾಃ ಪುರಾ ದೇಹಾ ಮಹತತ್ತ್ವಾದಿಭಿರ್ಮಯಾ ॥ ೧೧ ॥

ತೇಷಾಮುಪಚಯಾದ್ಯರ್ಥಂ ಮಹತತ್ತ್ವಾದಿರಾಶಯಃ ।
ಕಾರಿತಾ ವಿಧಿಸೂತ್ರಾಭ್ಯಾಂ ಪೃಥಕ್ ಪೂರ್ವವದೇವ ಹಿ ॥ ೧೨ ॥

---

ಮಿಶ್ರಣವಾದ ಅಹಂಕಾರ ತತ್ತ್ವದಿಂದ ಸೃಷ್ಟರಾದರು; ಪ್ರಕೃತಿನಾಮಕ ಸರಸ್ವತೀದೇವಿ ಮತ್ತು ಪುರುಷನಾಮಕ ಬ್ರಹ್ಮ ಇವರಿಂದ ಜೀವನಾಮಕ ಶೇಷನೂ, ವಾಣೀ(ಭಾರತೀ) ಮತ್ತು ವಾಯುದೇವ, ಇವರಿಂದ, ಕಾಲನಾಮಕ ಗರುಡನೂ ಹುಟ್ಟಿದರು; ಶೇಷನು ಸರ್ಪಾಕಾರನೂ, ಗರುಡನು ಪಕ್ಷಿರೂಪಧರನೂ ಆದರು (ಆ ರೂಪಗಳಿಂದ ಜನಿಸಿದರು) (೯-೧೦).

ಸರಸ್ವತೀದೇವಿಯ ಜನ್ಮದ ನಂತರ ಎರಡು ವರ್ಷಗಳ ಮೇಲೆ, ಈ ಶೇಷ-ಗರುಡರು ಹುಟ್ಟಿದರು; ಬ್ರಹ್ಮವಾಯುಗಳ ದೇಹನಿರ್ಮಾಣಕಾಲದಲ್ಲಿ ಈ ಹಿಂದೆ ಹೇಳಿರುವಂತೆ, ಮಹದಾದಿತತ್ತ್ವಗಳನ್ನು ಬಹುಭಾಗಗಳನ್ನಾಗಿ ಮಾಡಿ (ತತ್ತ್ವದ ಅರ್ಧಭಾಗವನ್ನು ೧೦೦ ಭಾಗಗಳನ್ನಾಗಿ ಮಾಡಿ ೩೦ ಭಾಗಗಳಿಂದ ಪುರುಷನನ್ನೂ ಇತ್ಯಾದಿ) ನಾನಾ ದೇಹಗಳನ್ನು ನಾನೇ ನಿರ್ಮಿಸಿದೆನಷ್ಟೆ ಆ ದೇಹಗಳ

ಏತೌ-ಈ ಇಬ್ಬರು (ಜೀವಕಾಲರು ಅಥವಾ ಶೇಷಗರುಡರು), ಪ್ರಕೃತೇಃ-ಪ್ರಕೃತಿಯ ಸರಸ್ವತೀದೇವಿಯ), ಜನ್ಮತಃ-ಜನ್ಮದಿಂದ, ವರ್ಷದ್ವಯಾತ್-ಎರಡು ವರ್ಷಗಳನಂತರ, ಬಭೂವತುಃ-ಹುಟ್ಟಿದರು; ಮಯಾ-ನನ್ನಿಂದ, ಪುರಾ-ಪೂರ್ವದಲ್ಲಿ, ಯೇ-ಯಾವ, ದೇಹಾಃ-ದೇಹಗಳು, ಮಹತತ್ತ್ವಾದಿಭಿಃ-ಮಹತತ್ತ್ವ ಮೊದಲಾದ ತತ್ತ್ವಗಳಿಂದ, ನಿರ್ಮಿತಾಃ-ಸೃಜಿಸಲ್ಪಟ್ಟವೋ, ತೇಷಾಂ-ಆ ದೇಹಗಳ, ಉಪಚಯಾರ್ಥರ್ಥಂ-ಉಪಚಯ(ವೃದ್ಧಿ-ಬೆಳೆಯುವುದು), ಮೊದಲಾದ ಉಪಯೋಗಕ್ಕಾಗಿ, ಮಹತತ್ತ್ವಾದಿರಾಶಯಃ-ಮಹತತತ್ತ್ವ ಮೊದಲಾದ ತತ್ತ್ವಗಳ ರಾಶಿಗಳು, ಪೂರ್ವವತ್-ಹಿಂದೆ ಹೇಳಿದಂತೆ, ವಿಧಿಸೂತ್ರಾಭ್ಯಾಂ-ಬ್ರಹ್ಮವಾಯುಗಳಿಗೆ (ಅವರ ದೇಹಗಳಿಗೆ), ಪೃಥಕ್-ಪ್ರತ್ಯೇಕಿಸಿ (ಬೇರೆ ಬೇರೆ ಅಂಶ—ಭಾಗಗಳಾಗಿ), ಕಾರಿತಾಃ-ಮಾಡಲ್ಪಟ್ಟವು; ಏವ ಹಿ-ಈ ಕಾರಣದಿಂದಲೇ ತತ್ತ್ವಗಳ ವಿಭಾಗ ಅಥವಾ ರಾಶಿಗಳ ನಿರ್ಮಾಣವೆಂಬುದು ಪ್ರಮಾಣಸಿದ್ಧವಾದುದು.

ಪಾರ್ಥಿವೋದಕತೇಜೋಭಿರ್ದೇಹಾನಾಂ ವರ್ಧನಂ ಯಥಾ ।
ತತ್ತತ್ತತ್ತ್ವಸ್ಯ ಯೋಗೇನ ಕಾಲಾನುಗ್ರಹತಸ್ತಥಾ ॥ ೧೩ ॥

ಬ್ರಹ್ಮಾದೀನಾಂ ದೇಹವೃದ್ಧಿರ್ಬಭೂವಾತಃಪರಂ ತಥಾ ।
ಯಥಾ ಮೃಜ್ಜಲತೇಜೋಭಿರ್ವೃಕ್ಷಾದೇರ್ವರ್ಧನಂ ಭವೇತ್ ॥ ೧೪ ॥

ತಥೈವ ಗುಣಸಂಬಂಧಾತ್ತತ್ತ್ವವೃದ್ಧಿಃ ಪ್ರಜಾಯತೇ ।

---

ಉಪಚಯಾರ್ಥವಾಗಿ (ವೃದ್ಧಿಗಾಗಿ), ಮಿಕ್ಕ ತತ್ತ್ವಭಾಗಗಳು (ಮಹತತ್ತ್ವದ ಅರ್ಧಭಾಗ ಇತ್ಯಾದಿ) ಪ್ರತ್ಯೇಕಿಸಿ, ಇರಿಸಲಾಗಿದೆ(೧೧-೧೨). ಪೃಥಿವೀ, ಜಲ, ತೇಜೋಂಶಗಳಿಂದ, ಭೌತಿಕದೇಹಗಳು ಹೇಗೆ ಬೆಳೆಯುತ್ತವೆಯೋ, ಹಾಗೆಯೇ, ಬ್ರಹ್ಮಾದಿಗಳ ದೇಹಗಳು ಸೃಷ್ಟವಾದ ನಂತರ (ಅಲ್ಲಿಂದ ಮುಂದೆ), ಯಾವ ದೇವತೆಯ ದೇಹವು ಯಾವ ತತ್ತ್ವಗಳಿಂದ ನಿರ್ಮಿತವಾದುದೋ, ಆಯಾ ತತ್ತ್ವಾಂಶಗಳ ಸಂಯೋಗದಿಂದ ಮತ್ತು ಕಾಲಗತಿಯಿಂದಲೂ (ಕಾಲನಾಮಕ ಶ್ರೀಹರಿಯ ಅನುಗ್ರಹದಿಂದಲೂ) ಅಭಿವೃದ್ಧಿ ಹೊಂದುತ್ತವೆ (ಬೆಳೆದು ದೊಡ್ಡವಾಗುತ್ತವೆ); ಈ ತತ್ತ್ವಗಳಾದರೂ, ಸತ್ತ್ವಾದಿಗುಣ ಸಂಬಂಧದಿಂದ,[1] ಮಣ್ಣು, ನೀರು, ಸೂರ್ಯಪ್ರಕಾಶಾದಿಗಳಿಂದ ಗಿಡಮರಗಳು ಬೆಳೆಯುವಂತೆ, ವೃದ್ಧಿಗೊಳ್ಳುತ್ತವೆ(೧೩-೧೪). ಶೇಷಗರುಡರ ಜನ್ಮದ ನಂತರ,

1. ಅಹಂಕಾರ ತತ್ತ್ವದ ಒಂದು ಭಾಗಕ್ಕೆ ಸತ್ತ್ವಗುಣಯೋಗದಿಂದ ವೈಕಾರಿಕವೂ, ರಜೋಗುಣಯೋಗದಿಂದ ಇನ್ನೊಂದು ಭಾಗವು ತೈಜಸವೂ, ತಮೋಗುಣಯೋಗದಿಂದ ಮತ್ತೊಂದು ಭಾಗವು ತಾಮಸವೂ ಆಗಿ, ಅಹಂಕಾರ ತತ್ತ್ವವು ವಿಭಕ್ತವಾಗಿ ವೃದ್ಧಿಹೊಂದುವಂತೆ ಗುಣಗಳ ಸಂಬಂಧದಿಂದ ತತ್ತ್ವವೃದ್ಧಿಯನ್ನು ತಿಳಿಯಬೇಕು.

ಯಥಾ- ಹೇಗೆ, ಪಾರ್ಥಿವೋದಕತೇಜೋಭಿಃ-ಪೃಥಿವೀ, ಜಲ, ಅಗ್ನಿಗಳ ಅಂಶಗಳಿಂದ, ದೇಹಾನಾಂ- ಭೌತಿಕದೇಹಗಳ, ವರ್ಧನಂ- ವೃದ್ಧಿಯೋ (ಬೆಳವಣಿಗೆಯೋ), ತಥಾ- ಹಾಗೆಯೇ, ತತ್ತತ್ತತ್ತಸ್ಯ- ಆಯಾ ತತ್ತ್ವದ, ಯೋಗೇನ- ಸಂಬಂಧದಿಂದ, ತಥಾ- ಹಾಗೂ, ಕಾಲಾನುಗ್ರಹತಃ- ಕಾಲನಿಯಾಮಕ (ಕಾಲನಾಮಕ ಶ್ರೀವಿಷ್ಣುವಿನ) ಅನುಗ್ರಹದಿಂದ, ಅತಃ ಪರಂ- ದೇಹಗಳು ಸೃಷ್ಟವಾದ ನಂತರ, ಬ್ರಹ್ಮಾದೀನಾಂ- ಬ್ರಹ್ಮಾದಿಗಳ (ಬ್ರಹ್ಮ, ವಾಯು, ಸರಸ್ವತೀ, ಭಾರತೀ, ಶೇಷ, ಗರುಡ ಇತ್ಯಾದಿ ಜೀವರ), ದೇಹವೃದ್ಧಿಃ- ದೇಹಗಳ ವೃದ್ಧಿಯು (ಬ್ರಹ್ಮಾದಿ ನಾಲ್ವರ ದೇಹಗಳು ಮಹತತ್ತ್ವಾಂಶಗಳಿಂದಲೂ, ಶೇಷಗರುಡರ ದೇಹಗಳು ಅಹಂಕಾರ ತತ್ತ್ವಾಂಶಗಳಿಂದಲೂ), ಬಭೂವ- ಆಯಿತು(ದೇಹಗಳು ಬೆಳೆದವು); ಯಥಾ- ಹೇಗೆ, ಮೃಜ್ಜಲತೇಜೋಭಿಃ- ಪೃಥಿವೀ, ಜಲ, ತೇಜಸ್ಸುಗಳಿಂದ(ಅವುಗಳ ಅಂಶಗಳಿಂದ), ವೃಕ್ಷಾದೇಃ- ವೃಕ್ಷ ಮೊದಲಾದವುಗಳ, ವರ್ಧನಂ- ಬೆಳೆಯುವುದು, ಭವೇತ್- ಆಗುತ್ತದೆಯೋ, ತಥಾ ಏವ- ಹಾಗೆಯೇ, ಗುಣಸಂಬಂಧಾತ್- ಸತ್ತ್ವಾದಿಗುಣಗಳ ಸಂಬಂಧದಿಂದ, ತತ್ತ್ವವೃದ್ಧಿಃ- ತತ್ತ್ವಗಳ ವೃದ್ಧಿಯು, ಪ್ರಜಾಯತೇ- ಉಂಟಾಗುತ್ತದೆ.

**ಅತೋಪಚಯಮಾಪನ್ನಾ ಪ್ರಕೃತಿಸ್ತ್ರಿವಿಧಾಭವತ್ ॥ ೧೫ ॥**

**ಸತ್ತ್ವಾದಿಗುಣಯೋಗೇನ ಗಾಯತ್ರೀ ಚ ಸರಸ್ವತೀ ।**
**ಸಾವಿತ್ರೀತಿ ಚ ತಾಸ್ವೇಕೋ ಬ್ರಹ್ಮಾ ವೀರ್ಯಮವಾಸೃಜತ್ ॥ ೧೬ ॥**

**ತಾಭ್ಯೋ ವಿನಿಃಸೃತಂ ತತ್ತು ಮಿಶ್ರೀಭೂತಂ ತಥಾಭವತ್ ।**

ಇಲ್ಲಿಂದ ಮುಂದೆ ಬ್ರಹ್ಮವಾಯುಗಳಿಂದಾಗುವ ವಿಚಿತ್ರ ವಿವಿಧ ಸೃಷ್ಟಿಯನ್ನು ನಿರೂಪಿಸಲಾಗುತ್ತದೆ—

ಅಥ- ಅನಂತರ (ಶೇಷಗರುಡರು ಜನಿಸಿದನಂತರ), ಸತ್ತ್ವಾದಿಗುಣಯೋಗೇನ- ಸತ್ತ್ವಾದಿಗುಣಸಂಬಂಧದಿಂದ, ಉಪಚಯಂ- ಉಪಚಯವನ್ನು (ವೃದ್ಧಿಯನ್ನು), ಆಪನ್ನಾ- ಹೊಂದಿದ, ಪ್ರಕೃತಿಃ- ಪ್ರಕೃತಿಯು (ಬ್ರಹ್ಮಪತ್ನಿಯು-ಸರಸ್ವತೀದೇವಿಯು), ಗಾಯತ್ರೀ- ಗಾಯತ್ರೀ, ಚ- ಮತ್ತು, ಸರಸ್ವತೀ- ಸರಸ್ವತೀ, ಸಾವಿತ್ರೀ ಚ- ಹಾಗೂ ಸಾವಿತ್ರೀ, ಇತಿ- ಎಂಬುದಾಗಿ (ಆ ನಾಮಗಳುಳ್ಳವಳಾಗಿ), ತ್ರಿವಿಧಾ- ಮೂರು

ಪ್ರಕೃತಿನಾಮಕ ಬ್ರಹ್ಮಪತ್ನಿಯು, ಸತ್ತ್ವಾದಿ ಗುಣಗಳ ಸಂಬಂಧದಿಂದ ಉಪಚಯಗೊಂಡ, ಗಾಯತ್ರೀ, ಸರಸ್ವತೀ, ಸಾವಿತ್ರೀ ಎಂಬ ಮೂರು ದೇಹಗಳನ್ನು ಸ್ವೀಕರಿಸಿ, ತನ್ನಾಮಕ ಮೂರು ರೂಪಗಳಿಂದ ಪತಿಯನ್ನು ಸೇವಿಸಿದಳು; ಬ್ರಹ್ಮದೇವನು ಆಕೆಯಲ್ಲಿ (ಮೂರು ರೂಪಗಳಲ್ಲಿ) ವೀರ್ಯಾಧಾನ ಮಾಡಿದನು; ಅದು ಆಕೆಯ ವೀರ್ಯದೊಂದಿಗೆ ಮಿಶ್ರಿತವಾಗಿ ಗರ್ಭಧಾರಣವಾಯಿತು(೧೫-೧೬). ಶೇಷದೇವನು ಹುಟ್ಟಿದ ಒಂದು

ರೂಪಗಳುಳ್ಳವಳು, ಅಭವತ್-ಆದಳು; ಏಕಃ-ಈ ಮೂರು ರೂಪಗಳ ಒಬ್ಬ ಪತಿಯಾದ, ಬ್ರಹ್ಮಾ-ಬ್ರಹ್ಮದೇವನು, ತಾಸು-ಅವರಲ್ಲಿ (ಆ ಮೂರು ರೂಪಗಳಲ್ಲಿ), ವೀರ್ಯಂ-ವೀರ್ಯವನ್ನು ಅವಾಸೃಜತ್-ಸ್ಥಾಪಿಸಿದನು (ಒಳಗಿಟ್ಟನು); ತತ್ತು-ಆ ವೀರ್ಯವಾದರೂ, ತಾಭ್ಯಃ-ಅವರಿಂದ (ಸರಸ್ವತ್ಯಾದಿ ಆ ಮೂರು ರೂಪಗಳ ದೆಶೆಯಿಂದ), ತಥಾ-ಹಾಗೆ, ವಿನಿಸ್ಸೃತಂ-ಸ್ರವಿಸಲಾದ ವೀರ್ಯವೂ, ಮಿಶ್ರೀಭೂತಂ-ಮಿಶ್ರಭಾವವನ್ನು (ಕೂಡಿಕೊಂಡದ್ದು), ಅಭವತ್-(ಹೊಂದಿತು) ಆಯಿತು.

**ಜೀವೋತ್ಪತ್ತೇರ್ವರ್ಷಮಾತ್ರಾದೇಕಸ್ಮಾಜ್ಜಜ್ಞಿವಾನ್ ವಿಧಿಃ ॥ ೧೭ ॥**

**ದ್ವಿತೀಯೇ ನ ತು ಮಾರ್ಗೇಣ ಪ್ರಾಣೋಽಭೂತ್ ಸೂತ್ರನಾಮಕಃ ।**

ಜೀವೋತ್ಪತ್ತೇಃ-ಶೇಷದೇವನ ಜನ್ಮದ (ಹುಟ್ಟಿದ), ವರ್ಷಮಾತ್ರಾತ್-ಒಂದೇ ವರ್ಷದನಂತರ, ಏಕಸ್ಮಾತ್-ಒಬ್ಬಾಕೆಯಿಂದ (ಗಾಯತ್ರೀ ಮೊದಲಾದ ಮೂವರು ಭಾರ್ಯರಲ್ಲಿ ಉಕ್ತಕ್ರಮದಿಂದ ಒಬ್ಬಳಲ್ಲಿ), ವಿಧಿಃ-ಬ್ರಹ್ಮದೇವನು, ಜಜ್ಞಿವಾನ್-ಹುಟ್ಟಿದನು; ದ್ವಿತೀಯೇನ-ಎರಡನೆಯ, ಮಾರ್ಗೇಣ-ಮಾರ್ಗದಿಂದ (ಮತ್ತೊಬ್ಬ ಭಾರ್ಯಳಲ್ಲಿ), ಸೂತ್ರನಾಮಕಃ-ಸೂತ್ರನಾಮವುಳ್ಳ, ಪ್ರಾಣಃ-ಮುಖ್ಯಪ್ರಾಣನು (ವಾಯು ದೇವನು), ಅಭೂತ್-ಆದನು(ಹುಟ್ಟಿದನು).

**ಮಹತ್ತತ್ತ್ವಶರೀರೌ ತೌ ತತೋ ಬ್ರಹ್ಮಸುತಃ ಶಿವಃ ॥ ೧೮ ॥**

---

ವರ್ಷದ ನಂತರವೇ, ತನ್ನ ಮೂರು ಭಾರ್ಯರ ಮಧ್ಯದಲ್ಲಿ ಒಬ್ಬಳಿಂದ, ಬ್ರಹ್ಮನೇ (ವಿಧಿಯು) ಹುಟ್ಟಿದನು; ಎರಡನೇ ಭಾರ್ಯಳಿಂದ, ಸೂತ್ರನಾಮಕ ವಾಯುದೇವನು (ಮುಖ್ಯಪ್ರಾಣನು) ಹುಟ್ಟಿದನು (೧೭). ಈ ವಿಧಿಪ್ರಾಣರಿಬ್ಬರೂ, ಮಹತತ್ತ್ವಾಂಶದ ಶರೀರದಿಂದ ಹುಟ್ಟಿದರು (ಅವರ ದೇಹಗಳು ಮಹತ್ತತ್ತ್ವದಿಂದ ನಿರ್ಮಿತವಾದವುಗಳು). ಈ ಉಭಯರ ಜನ್ಮವಾದ ನಂತರ ಬ್ರಹ್ಮಪುತ್ರನಾದ ಶಿವನು, ಅನಂತನಾಮಕನಾಗಿ ಅಹಂಕಾರ ತತ್ತ್ವಾಂಶದಿಂದ[1] ನಿರ್ಮಿತವಾದ ದೇಹವುಳ್ಳವನಾಗಿ, ಮೂರನೆಯ ಭಾರ್ಯಳಿಂದ ಜನಿಸಿದನು (೧೮). ಸೂತ್ರನಾಮಕ ವಾಯುದೇವನ ಮಗನಾಗಿ,

1. ಅಹಂಕಾರ ತತ್ತ್ವದ ಪ್ರಭೇದವಾದ ವೈಕಾರಿಕ ಅಹಂಕಾರ ತತ್ತ್ವಾಂಶದ ದೇಹವುಳ್ಳವನಾಗಿ ಶಿವನು ಬ್ರಹ್ಮಪತ್ನಿಯಲ್ಲಿ ಹುಟ್ಟಿದನು; ಬ್ರಹ್ಮವಾಯುಗಳು, ಬ್ರಹ್ಮಭಾರ್ಯರಲ್ಲಿಯೇ ಜನಿಸಿದರೆಂಬುದು ದೇವತೆಗಳು ವಿಚಿತ್ರಜನ್ಮಗಳುಳ್ಳವರೆಂಬುದನ್ನು ತೋರಿಸುತ್ತದೆ. ವಾಸುದೇವನು, ತನ್ನ ಪತ್ನಿಯಾದ ಮಾಯಾದೇವಿಯಲ್ಲಿ ತಾನೇ ಬ್ರಹ್ಮ, ವಿಷ್ಣು ಮಹೇಶ್ವರನಾಮಕನಾಗಿ ಹುಟ್ಟಿದಂತೆ, ಬ್ರಹ್ಮನು, ತನ್ನ ಪತ್ನಿಯರಲ್ಲಿ ತಾನೇ ರೂಪಾಂತರದಿಂದ ಜನಿಸಿದನೆಂದು ತಿಳಿಯಬೇಕು. ಇದರಂತೆಯೇ ಮುಂದಿನ ಶ್ಲೋಕಗಳಲ್ಲಿ ಶಿವನು ಶೇಷನಿಂದ ಹುಟ್ಟಿದನೆಂದೂ ಹೇಳಲಾಗಿದೆ. ದೇವತೆಗಳು ಲೋಕವಿಲಕ್ಷಣವಾದ ಜನ್ಮಗಳುಳ್ಳವರೆಂದು ತಿಳಿಯಬೇಕು. 'ಆತ್ಮಾವೈ ಪುತ್ರನಾಮಾಸೀತ್' ಎಂಬ ಶ್ರುತ್ಯುಕ್ತ 'ತಾನೇ ತನ್ನ ಮಗನಾದನು' ಎಂಬ

**ತಥೈವಾನಂತನಾಮಾಸೀದಹಂಕಾರಸ್ಯ ಭಾಗತಃ ।**

ತೌ- ಆ ಇಬ್ಬರು (ವಿಧಿ ಮತ್ತು ಪ್ರಾಣರು), ಮಹತತ್ತ್ವಶರೀರೌ- ಮಹತತ್ತ್ವದಿಂದಾದ ಶರೀರವುಳ್ಳವರಾದರು; ತತಃ- ಆ ನಂತರ, ಬ್ರಹ್ಮಸುತಃ- ಬ್ರಹ್ಮಪುತ್ರನಾದ, ಶಿವಃ- ಶಿವನು, ತಥಾಏವ- ಹಾಗೆಯೇ (ಬ್ರಹ್ಮನ ಮೂರನೇ ಭಾರ್ಯೆಳಿಂದ), ಅಹಂಕಾರಸ್ಯ- ಅಹಂಕಾರತತ್ತ್ವದ, ಭಾಗತಃ- ಅಂಶದಿಂದ (ನಿರ್ಮಿತವಾದ ದೇಹವುಳ್ಳವನಾಗಿ), ಅನಂತನಾಮಾ- ಅನಂತ, ಎಂಬ ನಾಮವುಳ್ಳವನಾಗಿ, ಆಸೀತ್- ಆದನು (ಹುಟ್ಟಿದನು).

**ಸೂತ್ರಾಚ್ಚ ತೈಜಸಾದ್ರುದ್ರಃ ತಾಮಸೋನಂತಜಃ ಶಿವಃ . ॥ ೧೯ ॥**

**ಬಭೂವೈವಂ ತ್ರಿಧಾ ರುದ್ರೋ ಭೇದೈರ್ವೈಕಾರಿಕಾದಿಭಿಃ ।**

ಸೂತ್ರಾತ್- ಸೂತ್ರನಾಮಕ ವಾಯುದೇವನಿಂದ, ತೈಜಸಾತ್- ತೈಜಸಾಹಂಕಾರದಿಂದ (ತನ್ನಿರ್ಮಿತದೇಹವುಳ್ಳವನಾಗಿ), ರುದ್ರಃ- ರುದ್ರನು(ಹುಟ್ಟಿದನು); ಅನಂತಜಃ- ಶೇಷನಿಂದ ಹುಟ್ಟಿದ, ತಾಮಸಃ- ತಾಮಸಾಹಂಕಾರದೇಹವುಳ್ಳವನು, ಶಿವಃ- ಶಿವನು (ಆದನು); ಏವಂ- ಹೀಗೆ (ಈ ಪ್ರಕಾರವಾಗಿ), ರುದ್ರಃ- ರುದ್ರನು, ವೈಕಾರಿಕಾದಿಭಿಃ- ವೈಕಾರಿಕ, ತೈಜಸ, ತಾಮಸಗಳೆಂಬ, ಭೇದೈಃ- ಭೇದಗಳಿಂದ (ತ್ರಿವಿಧ ಅಹಂಕಾರ ತತ್ತ್ವಾಂಶಗಳ ದೇಹಗಳುಳ್ಳವನಾಗಿ), ತ್ರಿಧಾ- ಮೂರು ರೂಪಗಳುಳ್ಳವನು, ಬಭೂವ- ಆದನು.

**ಸತ್ತ್ವಾಧಿಕ್ಯೇನ ರುದ್ರೋಽಸೌ ವೈಕಾರಿಕತನುಃ ಪುನಃ ॥ ೨೦ ॥**

---

ತೈಜಸಾಹಂಕಾರ ನಿರ್ಮಿತ ದೇಹದಿಂದ ರುದ್ರನು, ಜನಿಸಿದನು; ಮತ್ತು ಶೇಷದೇವನಿಂದ ತಾಮಸಾಹಂಕಾರದ ದೇಹವುಳ್ಳವನಾಗಿ, ಶಿವನೇ ಜನಿಸಿದನು; ಹೀಗೆ ವೈಕಾರಿಕಾದಿ ಭೇದದಿಂದ ತ್ರಿವಿಧವಾದ ಅಹಂಕಾರಾಂಶನಿರ್ಮಿತ ದೇಹಗಳಲ್ಲಿ ಮೂರು ರೂಪಗಳುಳ್ಳವನಾದನು(೧೯). ಈ ರುದ್ರನೇ ವೈಕಾರಿಕ ದೇಹದಲ್ಲಿ ಸತ್ತ್ವಗುಣದ ಅಧಿಕ್ಯವಿರುವುದರಿಂದ, ತಾನು ಮುಂದಿನ ದೇವತೆಗಳ ದೇಹವನ್ನು ಸೃಷ್ಟಿ ಮಾಡುತ್ತಾನಾಗಿ, ವಿಷ್ಣುವೆಂದು (ಕೆಲವು) ಶಾಸ್ತ್ರಭಾಗಗಳಲ್ಲಿ ಹೇಳಲ್ಪಡುತ್ತಾನೆ; ಹಾಗೂ, ರಜೋಗುಣದ ಅಧಿಕ್ಯವುಳ್ಳ ತೈಜಸಾಹಂಕಾರ ದೇಹದಿಂದ ಬ್ರಹ್ಮನೆಂದೂ, ತಮೋಗುಣದ ಅಧಿಕ್ಯದಿಂದ,

---

ನುಡಿಗೆ ಇಂತಹ ಉತ್ತಮಾಧಿಕಾರಿಗಳೂ ಸರ್ವೋತ್ತಮನಾದ ಶ್ರೀಹರಿಯೂ ನಿದರ್ಶನರಾಗುತ್ತಾರೆ. ಕೆಳಕೆಳಗೆ ಇಳಿಯುವಂತೆ, ಅಲ್ಲದಲ್ಲಿ ತಂದೆಯಲ್ಲಿರುವ ಕೆಲವು ಗುಣಗಳು ಮಾತ್ರ ಮಗನಲ್ಲಿ ಕಂಡುಬರುತ್ತದೆ—ತಂದೆಯೇ ಮಗನೆಂಬುದಕ್ಕೆ ಈ ಅಲ್ಪಾಂತರ ಸಾರ್ಥಕ್ಯವನ್ನು ಮಾತ್ರ ತಿಳಿಯಬೇಕು.

ಮರುದ್ಗುರುಃ ಶಚೀಶುಕ್ರೋಽನಿರುದ್ಧಾದ್ಯಾಃ ಪರೇಽಪಿ ಚ ।
ತತೋ ವಾಯುಃ ಶಚೀಸೂರ್ಯೌ ಯಮೋಽಥ ವರುಣೋಽನಲಃ ॥೨೩

ಅನ್ಯೇಽಪ್ಯಾದಿತ್ಯರುದ್ರಾದ್ಯಾ ವಸವೋ ಧನದಾದಯಃ ।
ಸ್ವಧಾ ಸ್ವಾಹಾ ಬುಧೋ ಭೌಮ ಉಷೋಷಃ ಶನಿಪುಷ್ಕರೌ ॥ ೨೪ ॥

ಗಂಧರ್ವಾಃ ಪಿತರೋಽಭೂವನ್ ಸೂಕ್ಷ್ಮರೂಪಾಸ್ತು ತೇಽಖಿಲಾಃ ।
ತೈಜಸಾಹಂಕೃತೇರಾಸನ್ ಜ್ಞಾನಕರ್ಮೇಂದ್ರಿಯಾಣಿ ಚ ॥ ೨೫ ॥

ವೈಕಾರಿಕಾನ್ಮನೋ ಜಜ್ಞೇ ತಾಮಸಾದ್ಭೂತಪಂಚಕಃ ।
ಶಬ್ದಾದ್ಯಾ ವಿಷಯಾಃ ಪಂಚ ತತ್ರಾವಿಷ್ಟಾಸ್ತು ದೇವತಾಃ ॥ ೨೬ ॥

---

ಇವರು, ವೈಕಾರಿಕಾಹಂಕಾರ ನಿರ್ಮಿತ ದೇಹವುಳ್ಳ ಉಮಾರೂಪದಿಂದ, ವೈಕಾರಿಕಾಹಂಕಾರಾಂಶಗಳಿಂದ ಯುಕ್ತವಾದ ದೇಹವುಳ್ಳವರಾದರು; ಇವರಂತೆ, ವೈಕಾರಿಕಾಹಂಕಾರ ತತ್ತ್ವದಿಂದ ಉತ್ಪನ್ನರಾದ ಇತರ ತತ್ತ್ವಾಭಿಮಾನಿ ದೇವತೆಗಳು ಯಾರೆಂದರೆ:—ಅಹಂಕಾರಿಕ ಪ್ರಾಣ, ಬೃಹಸ್ಪತಿ, ಶಚೀ, ಅನಿರುದ್ಧ ಮೊದಲಾದ ದೇವತೆಗಳೂ, ಶುಕ್ರನೂ, ಪ್ರವಹವಾಯು, ಚಂದ್ರ, ಸೂರ್ಯ, ಯಮ, ವರುಣ, ಅಗ್ನಿ ಇತರ ಆದಿತ್ಯರೂ, ರುದ್ರಗಣದವರೂ, ವಸುಗಳೂ,[1] ಕುಬೇರ ಮೊದಲಾದವರೂ, ಸ್ವಧಾಸ್ವಾಹಾದೇವಿಯರೂ, ಬುಧ, ಮಂಗಳ, ಉಷಾ, ಉಷೆಯರು, ಶನಿ, ಪುಷ್ಕರ,

1. 'ಅನ್ಯೇಽಪ್ಯಾದಿತ್ಯರುದ್ರಾದ್ಯಾಃ' ಎಂಬಲ್ಲಿ ಉಳಿದ ಆದಿತ್ಯ ರುದ್ರ ಮೊದಲಾದವರು, ಎಂದರೆ, ಸೋಮಪಾನಕ್ಕಾಗಿ ಆಹ್ವಾನಾರ್ಹರಾದ ಶತಸ್ಥ ದೇವತೆಗಳಲ್ಲಿ ಬೇರ ಕಕ್ಷ್ಯಗಳಲ್ಲಿ ಉಕ್ತರಾದವರನ್ನು ಬಿಟ್ಟು ಇತರರೆಂದರ್ಥ; ಆದಿತ್ಯರು ೧೨ ಮಂದಿ; ಇವರಲ್ಲಿ ಸೂರ್ಯ(ವಿವಸ್ವಾನ್) ಶಕ್ರ (ಇಂದ್ರ) ಮತ್ತು ವರುಣ ಇವರು ಮೊದಲು ಹೇಳಲ್ಪಟ್ಟಿದ್ದಾರೆ—ಈ ಮೂವರೂ ದ್ವಾದಶಾದಿತ್ಯರಲ್ಲಿದ್ದಾರೆ. ವಿಷ್ಣುವೂ ಆದಿತ್ಯರಲ್ಲಿದ್ದಾನೆ. ಮೇಷಾದಿ(ಚೈತ್ರಾದಿ) ಮಾಸಗಳಲ್ಲಿ ಒಂದೊಂದು ತಿಂಗಳಲ್ಲಿ ಒಬ್ಬೊಬ್ಬ ದೇವತೆಯು ಸೂರ್ಯಮಂಡಲಸ್ಥನಾಗಿ ಆ ಸ್ಥಾನದ ಕಾರ್ಯಗಳನ್ನು ನಿರ್ವಹಿಸುತ್ತಾನೆ; ವಿವಸ್ವಾನ್, ಶಕ್ರ, ವಿಷ್ಣು ವರುಣ ಇವರನ್ನುಳಿದು, ಮಿಕ್ಕ ೮ ಜನರು ಯಾರೆಂದರೆ:—ಭಗ, ಧಾತಾ, ಸವಿತೃ, ಅರ್ಯಮಾ, ಪೂಷಾ, ತ್ವಷ್ಟಾ ಮಿತ್ರ, ಪರ್ಜನ್ಯ;

ಮುಖ್ಯರುದ್ರದೇವನನ್ನೊಳಗೊಂಡು ರುದ್ರಗಣದಲ್ಲಿ ೧೧ ರುದ್ರರಿರುವರು; ಉಳಿದ ೧೦ ಜನ ರುದ್ರರು ಯಾರೆಂದರೆ:—ರೈವತ, ಓಜ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನಿ, ಬಹುರೂಪ, ಮಹಾನ್;

ಅಷ್ಟವಸುಗಳಲ್ಲಿ ಅಗ್ನಿಯೂ(ಅನಲ) ಸೇರಿದ್ದಾನೆ; ಈತನನ್ನುಳಿದು ಮಿಕ್ಕ ೭ ಜನ ವಸುಗಳು ಯಾರೆಂದರೆ:—ದ್ರೋಣ, ಪ್ರಾಣ, ಧ್ರುವ, ದೋಷ, ಅರ್ಕ, ದ್ಯು, ವಿಭಾವಸು;

**ವಿಷ್ಣುರಿತ್ಯಪಿ ಶಾಸ್ತ್ರೇಷು ಗೀಯತೇ ದೇವದೇಹಸೃಕ್ ।**
**ತಥಾ ರಜಸ್ತಮೋ ಯೋಗಾದಸಾವೇವ ವಿಧಿರ್ಹರಃ ॥ ೨೧ ॥**

ಅಸೌ- ಈ (ತ್ರಿರೂಪಗಳುಳ್ಳ) ರುದ್ರಃ-ರುದ್ರನು, ಪುನಃ-ಮತ್ತು (ವಿಶೇಷವೇನೆಂದರೆ), ವೈಕಾರಿಕತನುಃ-ವೈಕಾರಿಕಾಹಂಕಾರದ ದೇಹವುಳ್ಳವನಾಗಿ, ಸತ್ವಾಧಿಕ್ಯೇನ-ಸತ್ವಗುಣದ ಆಧಿಕ್ಯದಿಂದ(ಅಹಂಕಾರ ತತ್ವದ ಮೂರು ಭಾಗಗಳಲ್ಲಿ ಸತ್ವಗುಣದಿಂದ ಉಪಚಯಗೊಂಡದ್ದು ವೈಕಾರಿಕ, ರಜೋಗುಣದ ಮಿಶ್ರಣದಿಂದಾದುದು, ತೈಜಸ ಮತ್ತು ತಮೋಗುಣದ ಸೇರುವಿಕೆಯಿಂದಾದುದು, ತಾಮಸವೆಂದು ಹೇಳಲಾಗಿರುವುದರಿಂದ), ಎಂದರೆ ಸತ್ವಗುಣವು ಹೆಚ್ಚು ಇರುವ ನಿಮಿತ್ತದಿಂದ, ದೇವದೇಹಸೃಕ್-(ಮುಂದಿನ) ದೇವತೆಗಳ ದೇಹಗಳನ್ನು ಸೃಷ್ಟಿಮಾಡುವವನಾಗಿ (ಮಾಡುವುದರಿಂದ), ಶಾಸ್ತ್ರೇಷು-ಶಾಸ್ತ್ರಗಳಲ್ಲಿ ವಿಷ್ಣುಃ ಇತ್ಯಪಿ-ವಿಷ್ಣುವೆಂದೂ, ಗೀಯತೇ-ಹೇಳಲ್ಪಡುತ್ತಾನೆ; ತಥಾ-ಹಾಗೆಯೇ, ರಜಸ್ತಮೋಯೋಗಾತ್-ರಜೋಗುಣ ಮತ್ತು ತಮೋಗುಣಗಳ ಆಧಿಕ್ಯದಿಂದ, ಅಸೌಏವ-ಈತನೇ(ರುದ್ರನೇ), ವಿಧಿಃ-ವಿಧಿ(ಬ್ರಹ್ಮ), ಹರಃ-ಹರ(ಮಹೇಶ್ವರ) ಎಂದೂ (ಗೀಯತೇ-ಹೇಳಲ್ಪಡುತ್ತಾನೆ).

**ವೈಕಾರಿಕಾದಿಭಾಗೇನ ತ್ರಿವಿಧಾ ಬುದ್ಧಿರಪ್ಯಭೂತ್ ।**
**ತತೋ ಬುದ್ಧೌ ವಿಷ್ಣುಯೋಗಾತ್ ಶಕ್ರಪ್ರದ್ಯುಮ್ನಕೌ ಸುತೌ ॥ ೨೨ ॥**

ವೈಕಾರಿಕಾದಿಭಾಗೇನ-ವೈಕಾರಿಕ, ತೈಜಸ, ತಾಮಸಗಳೆಂಬ ತ್ರಿವಿಧ ಅಹಂಕಾರ ತತ್ವಾಂಶಗಳಿಂದ, ಬುದ್ಧಿಃಅಪಿ-ಬುದ್ಧಿತತ್ವದ ಅಭಿಮಾನಿಯಾದ ಉಮಾದೇವಿಯೂ ಸಹ, ತ್ರಿವಿಧಾ-ಮೂರು ರೂಪಗಳುಳ್ಳವಳು, ಅಭೂತ್-ಆದಳು(ತ್ರಿರೂಪನಾದ ಪತಿಸೇವಾರ್ಥವಾಗಿ); ತತಃ-ಆ ನಂತರ (ಮುಂದೆ), ಬುದ್ಧೌ-ಉಮೆಯಲ್ಲಿ ವಿಷ್ಣುಯೋಗಾತ್-ವಿಷ್ಣುನಾಮಕ ರುದ್ರನ ಯೋಗದಿಂದ, ಶಕ್ರಪ್ರದ್ಯುಮ್ನಕೌ-ಇಂದ್ರಕಾಮರೆಂಬ, ಸುತೌ-ಪುತ್ರರೂ(ಹುಟ್ಟಿದರು).

---

ತಾಮಸಾಹಂಕಾರ ದೇಹನಿಮಿತ್ತವಾಗಿ, ಮಹೇಶ್ವರನೆಂದೂ (ಹೀಗೆ, ವಿಷ್ಣು-ಬ್ರಹ್ಮ-ಮಹೇಶ್ವರನೆಂಬ ನಾಮಗಳಿಂದಲೂ) ಕರೆಯಲ್ಪಡುತ್ತಾನೆ (೨೦-೨೧). ಮನಸ್ತತ್ವದ ಪ್ರಭೇದವಾದ ಬುದ್ಧಿಗೆ (ಆ ತತ್ವಕ್ಕೆ) ಅಭಿಮಾನಿಯಾದ ರುದ್ರಪತ್ನಿ ಉಮಾದೇವಿಯೂ, ವೈಕಾರಿಕಾದಿ ಭೇದದಿಂದ, ತ್ರಿವಿಧವಾಗಿರುವ ಅಹಂಕಾರ ತತ್ವಾಂಶಗಳಿಂದ ರಚಿತವಾದ ದೇಹಗಳನ್ನು ಹೊಂದಿ, ಪತಿಸೇವಾರ್ಥವಾಗಿ ಮೂರು ರೂಪಗಳನ್ನು ಹೊಂದಿದಳು; ನಂತರ ಈಕೆಯಲ್ಲಿ ವಿಷ್ಣುನಾಮಕ ರುದ್ರನ ಯೋಗದಿಂದ, ಇಂದ್ರಕಾಮರೆಂಬ, ಮಕ್ಕಳು ಹುಟ್ಟಿದರು (೨೨).

ಮರುದ್ಗುರುಃ ಶಚೀಶುಕ್ರೋಽನಿರುದ್ಧಾದ್ಯಾಃ ಪರೇಽಪಿ ಚ ।
ತತೋ ವಾಯುಃ ಶಚೀಸೂರ್ಯೌ ಯಮೋಽಥ ವರುಣೋಽನಲಃ ॥೨೩

ಅನ್ಯೇಽಪ್ಯಾದಿತ್ಯರುದ್ರಾದ್ಯಾ ವಸವೋ ಧನದಾದಯಃ ।
ಸ್ವಧಾ ಸ್ವಾಹಾ ಬುಧೋ ಭೌಮ ಉಷೋಽಷಃ ಶನಿಪುಷ್ಕರೌ ॥ ೨೪ ॥

ಗಂಧರ್ವಾಃ ಪಿತರೋಽಭೂವನ್ ಸೂಕ್ಷ್ಮರೂಪಾಸ್ತು ತೇಽಖಿಲಾಃ ।
ತೈಜಸಾಹಂಕೃತೇರಾಸನ್ ಜ್ಞಾನಕರ್ಮೇಂದ್ರಿಯಾಣಿ ಚ ॥ ೨೫ ॥

ವೈಕಾರಿಕಾನ್ಮನೋ ಜಜ್ಞೇ ತಾಮಸಾದ್ಭೂತಪಂಚಕಃ ।
ಶಬ್ದಾದ್ಯಾ ವಿಷಯಾಃ ಪಂಚ ತತ್ತ್ವಾವಿಷ್ಟಾಸ್ತು ದೇವತಾಃ ॥ ೨೬ ॥

---

ಇವರು, ವೈಕಾರಿಕಾಹಂಕಾರ ನಿರ್ಮಿತ ದೇಹವುಳ್ಳ ಉಮಾರೂಪದಿಂದ, ವೈಕಾರಿಕಾಹಂಕಾರಾಂಶಗಳಿಂದ ಯುಕ್ತವಾದ ದೇಹವುಳ್ಳವರಾದರು; ಇವರಂತೆ, ವೈಕಾರಿಕಾಹಂಕಾರ ತತ್ತ್ವದಿಂದ ಉತ್ಪನ್ನರಾದ ಇತರ ತತ್ತ್ವಾಭಿಮಾನಿ ದೇವತೆಗಳು ಯಾರೆಂದರೆ:—ಅಹಂಕಾರಿಕ ಪ್ರಾಣ, ಬೃಹಸ್ಪತಿ, ಶಚೀ, ಅನಿರುದ್ಧ ಮೊದಲಾದ ದೇವತೆಗಳೂ, ಶುಕ್ರನೂ, ಪ್ರವಹವಾಯು, ಚಂದ್ರ, ಸೂರ್ಯ, ಯಮ, ವರುಣ, ಅಗ್ನಿ ಇತರ ಆದಿತ್ಯರೂ, ರುದ್ರಗಣದವರೂ, ವಸುಗಳೂ,[1] ಕುಬೇರ ಮೊದಲಾದವರೂ, ಸ್ವಧಾಸ್ವಾಹಾದೇವಿಯರೂ, ಬುಧ, ಮಂಗಳ, ಉಷಾ, ಉಷೆಯರು, ಶನಿ, ಪುಷ್ಕರ,

---

1. 'ಅನ್ಯೇಽಪ್ಯಾದಿತ್ಯರುದ್ರಾದ್ಯಾಃ' ಎಂಬಲ್ಲಿ ಉಳಿದ ಆದಿತ್ಯ ರುದ್ರ ಮೊದಲಾದವರು, ಎಂದರೆ, ಸೋಮಪಾನಕ್ಕಾಗಿ ಆಹ್ವಾನಾರ್ಹರಾದ ಶತಸ್ಥ ದೇವತೆಗಳಲ್ಲಿ ಬೇರ ಕಕ್ಷ್ಯಗಳಲ್ಲಿ ಉಕ್ತರಾದವರನ್ನು ಬಿಟ್ಟು ಇತರರೆಂದರ್ಥ; ಆದಿತ್ಯರು ೧೨ ಮಂದಿ; ಇವರಲ್ಲಿ ಸೂರ್ಯ(ವಿವಸ್ವಾನ್) ಶಕ್ರ (ಇಂದ್ರ) ಮತ್ತು ವರುಣ ಇವರು ಮೊದಲು ಹೇಳಲ್ಪಟ್ಟಿದ್ದಾರೆ—ಈ ಮೂವರೂ ದ್ವಾದಶಾದಿತ್ಯರಲ್ಲಿದ್ದಾರೆ. ವಿಷ್ಣುವೂ ಆದಿತ್ಯರಲ್ಲಿದ್ದಾನೆ. ಮೇಷಾದಿ(ಚೈತ್ರಾದಿ) ಮಾಸಗಳಲ್ಲಿ ಒಂದೊಂದು ತಿಂಗಳಲ್ಲಿ ಒಬ್ಬೊಬ್ಬ ದೇವತೆಯು ಸೂರ್ಯಮಂಡಲಸ್ಥನಾಗಿ ಆ ಸ್ಥಾನದ ಕಾರ್ಯಗಳನ್ನು ನಿರ್ವಹಿಸುತ್ತಾನೆ; ವಿವಸ್ವಾನ್, ಶಕ್ರ, ವಿಷ್ಣು ವರುಣ ಇವರನ್ನುಳಿದು, ಮಿಕ್ಕ ೮ ಜನರು ಯಾರೆಂದರೆ:—ಭಗ, ಧಾತಾ, ಸವಿತೃ, ಅರ್ಯಮಾ, ಪೂಷಾ, ತ್ವಷ್ಟಾ ಮಿತ್ರ, ಪರ್ಜನ್ಯ;

ಮುಖ್ಯರುದ್ರದೇವನನ್ನೊಳಗೊಂಡು ರುದ್ರಗಣದಲ್ಲಿ ೧೧ ರುದ್ರರಿರುವರು; ಉಳಿದ ೧೦ ಜನ ರುದ್ರರು ಯಾರೆಂದರೆ:—ರೈವತ, ಓಜ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನಿ, ಬಹುರೂಪ, ಮಹಾನ್;

ಅಷ್ಟವಸುಗಳಲ್ಲಿ ಅಗ್ನಿಯೂ(ಅನಲ) ಸೇರಿದ್ದಾನೆ; ಈತನನ್ನುಳಿದು ಮಿಕ್ಕ ೭ ಜನ ವಸುಗಳು ಯಾರೆಂದರೆ:—ದ್ರೋಣ, ಪ್ರಾಣ, ಧ್ರುವ, ದೋಷ, ಅರ್ಕ, ದ್ಯು, ವಿಭಾವಸು;

ಮರುತ್-ಅಹಂಕಾರಿಕ ಪ್ರಾಣ, ಗುರುಃ-ಬೃಹಸ್ಪತಿ, ಶಚೀ-ಶಚೀದೇವಿ, ಶುಕ್ರಃ-ಶುಕ್ರನು, ಅನಿರುದ್ಧಾದ್ಯಾಃ-ಅನಿರುದ್ಧ(ಕಾಮಪುತ್ರ)ನೇ ಮೊದಲಾದ ದೇವತೆಗಳು, ಚ-ಮತ್ತು, ಪರೇ ಅಪಿ-ಇತರ ದೇವತೆಗಳೂ ಸಹ; ತತಃ-ಮುಂದೆ, ವಾಯುಃ-ಪ್ರವಹವಾಯುವೂ, ಶಶೀಸೂರ್ಯೌ-ಚಂದ್ರಸೂರ್ಯರೂ, ಯಮಃ-ಯಮ ದೇವನೂ, ವರುಣಃ-ವರುಣನೂ, ಅನಲಃ-ಅಗ್ನಿಯೂ, ಅಪಿ-ಮತ್ತು, ಅನ್ಯೇ-ಇತರ, ಆದಿತ್ಯರುದ್ರಾದ್ಯಾಃ-ದ್ವಾದಶಾದಿತ್ಯರಲ್ಲಿ ಉಳಿದವರೂ, ಏಕಾದಶ ರುದ್ರರಲ್ಲಿ ಇತರರೂ, ವಸವಃ-ಅಷ್ಟವಸುಗಳಲ್ಲಿ (ಅಗ್ನಿಯನ್ನು ಬಿಟ್ಟು) ಇತರ ವಸುಗಳೂ, ಧನದಾದಯಃ-ಕುಬೇರ ಮೊದಲಾದವರೂ, ಸ್ವಧಾ-ಸ್ವಧೆಯು, ಸ್ವಾಹಾ-ಸ್ವಾಹೆಯೂ (ಇಬ್ಬರೂ ಅಗ್ನಿಭಾರ್ಯರು), ಬುಧಃ-ಬುಧನೂ, ಭೌಮಃ-ಮಂಗಳನೂ, ಉಷಾ-ಉಷೆಯೂ (ಅಶ್ವಿನೀದೇವತೆಗಳ ಭಾರ್ಯಳು), ಉಷಃ-ಉಷಃಕಾಲಾಭಿಮಾನಿ ತನ್ನಾಮಕ ದೇವತೆಯೂ (ಅಥವಾ ಉಷೋಷಾ ಎಂಬ ಪಾಠದಲ್ಲಿ ಮೊದಲಿನ ಉಷಾ ಎಂಬುದಕ್ಕೆ ಅನಿರುದ್ಧ (ಕಾಮಪುತ್ರ)ನ ಪತ್ನಿ ಉಷೆಯನ್ನು ಗ್ರಹಿಸಬೇಕು); ಶನಿಪುಷ್ಕರೌ-ಶನಿಪುಷ್ಕರರೂ; ಗಂಧರ್ವಾಃ-ಗಂಧರ್ವರೂ, ಪಿತರಃ-ಪಿತೃದೇವತೆಗಳೂ, ಅಭೂವನ್-(ವೈಕಾರಿಕ ಅಹಂಕಾರದಿಂದ—ತನ್ನಿರ್ಮಿತ ದೇಹವುಳ್ಳ, ಉಮಾದೇವಿ ಯಿಂದ), ಹುಟ್ಟಿದರು; ತೇ ಅಖಿಲಾಃ-ಅವರೆಲ್ಲರೂ, ಸೂಕ್ಷ್ಮರೂಪಾಃ ತು-ಸೂಕ್ಷ್ಮ ರೂಪಗಳಿಂದಲೇ ಜನಿಸಿದರು; ತೈಜಸಾಹಂಕೃತೇಃ-ತೈಜಸಾಹಂಕಾರದಿಂದ, ಜ್ಞಾನ ಕರ್ಮೇಂದ್ರಿಯಾಣಿ ಚ-ಜ್ಞಾನೇಂದ್ರಿಯಗಳು (ಚಕ್ಷುರಾದಿ) ಕರ್ಮೇಂದ್ರಿಯಗಳೂ ಸಹ (ಹಸ್ತಪಾದಾದಿ), ಆಸನ್-ಹುಟ್ಟಿದವು; ವೈಕಾರಿಕಾತ್-ವೈಕಾರಿಕ ಅಹಂಕಾರದಿಂದ, ಮನಃ-ಮನಸ್ಸೂ (ಮನಸ್ತತ್ತ್ವವೂ-ಮೇಲೆ ಹೇಳಿದಂತೆ ಸೂಕ್ಷ್ಮರೂಪಗಳಿಂದ ಹುಟ್ಟಿದ ದೇವತೆಗಳೊಂದಿಗೆ), ಜಜ್ಞೇ-ಹುಟ್ಟಿತು; ತಾಮಸಾತ್-ತಾಮಸಾಹಂಕಾರದಿಂದ, ಭೂತ ಪಂಚಕಂ-ಪೃಥಿವ್ಯಾದಿ ಪಂಚಭೂತಗಳು, ಶಬ್ದಾದ್ಯಾಃ-ಶಬ್ದಾದಿ, ವಿಷಯಾಃ ಪಂಚ-ಪಂಚತನ್ಮಾತ್ರೆಗಳೂ (ಹುಟ್ಟಿದವು); ತತ್ರ-ಅವುಗಳಲ್ಲಿ (ಇಂದ್ರಿಯಗಳು, ಪಂಚಭೂತಗಳು ಮತ್ತು ತನ್ಮಾತ್ರೆಗಳಲ್ಲಿ), ದೇವತಾಃ ತು-ಪೂರ್ವೋಕ್ತ ದೇವತೆಗಳು, ಆವಿಷ್ಟಾಃ-ಪ್ರವೇಶಿಸಿದರು.

---

ಗಂಧರ್ವರು, ಪಿತೃದೇವತೆಗಳೂ ಸೂಕ್ಷ್ಮರೂಪದಿಂದ ಜನಿಸಿದರು; ವೈಕಾರಿಕ ಅಹಂಕಾರದಿಂದಲೇ ಮನಸ್ತತ್ತ್ವವೂ ಉತ್ಪನ್ನವಾಯಿತು; ತೈಜಸಾಹಂಕಾರದಿಂದ (ತನ್ನಿರ್ಮಿತದೇಹವುಳ್ಳ ಉಮೆಯಿಂದ), ಜ್ಞಾನೇಂದ್ರಿಯಗಳು ಐದು ಮತ್ತು ಐದು ಕರ್ಮೇಂದ್ರಿಯಗಳೂ ಹುಟ್ಟಿದವು; ತಾಮಸಾಹಂಕಾರದಿಂದ (ತನ್ನಿರ್ಮಿತ ದೇಹವುಳ್ಳ ಉಮೆಯಿಂದ), ಪೃಥಿವೀ ಮೊದಲಾದ ಪಂಚಭೂತಗಳೂ, ಶಬ್ದಾದಿ ಪಂಚತನ್ಮಾತ್ರೆಗಳೂ ಜನಿಸಿದವು; ಇಂದ್ರಿಯಗಳು ಮತ್ತು ಪಂಚಭೂತಾದಿಗಳಲ್ಲಿ ವೈಕಾರಿಕ ಅಹಂಕಾರದಿಂದ ಹುಟ್ಟಿದ ದೇಹಗಳುಳ್ಳ ಪೂರ್ವೋಕ್ತ ದೇವತೆಗಳು ಪ್ರವಿಷ್ಟರಾದರು(೨೩-೨೬). ನಾನೂ

**ಬಹುಧಾ ಜಾಯಮಾನೋಹಂ ತತ್ರಾಪಿ ಪ್ರಾವಿಶಂ ಕ್ರಮಾತ್ ।**
**ಬ್ರಹ್ಮಣೋ ದಶ ವರ್ಷೇಷು ಸೃಷ್ಟಿರೇವಮಜಾಯತ ॥ ೨೭ ॥**

ಅಹಂ-ನಾನು (ಶ್ರೀವಿಷ್ಣುವು), ಬಹುಧಾ-ಬಹುರೂಪಗಳಿಂದ, ಜಾಯಮಾನಃ-ಉದ್ಭವಿಸಿ (ಪ್ರಕಟನಾಗಿ), ತತ್ರಾಪಿ-ಈ ಎಲ್ಲ ದೇವತೆಗಳಲ್ಲಿ ಸಹ, ಕ್ರಮಾತ್-ಕ್ರಮವಾಗಿ (ತಾರತಮ್ಯವನ್ನನುಸರಿಸಿ), ಪ್ರಾವಿಶಂ-ಪ್ರವೇಶಿಸಿದೆನು; ಬ್ರಹ್ಮಣಃ-ಬ್ರಹ್ಮನ, ದಶವರ್ಷೇಷು-ಹತ್ತು ವರ್ಷಗಳಲ್ಲಿ, ಏವಂ-ಹೀಗೆ, ಸೃಷ್ಟಿಃ-ಸೃಷ್ಟಿಯು, ಅಜಾಯತ-ಉಂಟಾಯಿತು (ನಡೆಯಿತು-ಮುಂದರಿಯಿತು).

**ಏತಸ್ಮಿನ್ನಂತರೇ ಪ್ರಾಣಾಚ್ಛಕ್ರಾದ್ಯಾ ಅಪಿ ಜಜ್ಞಿರೇ ।**
**ವಾಜಪೇಯಾಶ್ವಮೇಧಾದಿಯಜ್ಞಾನಾಂ ದೇವತಾ ಅಪಿ ॥ ೨೮ ॥**

**ಸುನಂದನಂದಪ್ರಮುಖಾ ಮಮ ಯೇ ಪಾರ್ಷದಾಃ ಸುರಾಃ ।**
**ತೇ ಸರ್ವೇ ಬ್ರಹ್ಮಣೋ ಜಾತಾಃ ವಿಷ್ವಕ್ಸೇನೋ ಮರುತ್ಸುತಃ ॥ ೨೯ ॥**

**ಏವಂ ವಿಲಸಿತಂ ಬ್ರಹ್ಮನ್ ಪ್ರಕೃತೇಃ ಪ್ರಾಕೃತಸ್ಯ ಚ ।**
**ಜೀವಾನಾಂ ದೇಹಯೋಗೇನ ಸೃಷ್ಟಿರೇವಂವಿಧೋಚ್ಯತೇ ॥ ೩೦ ॥**

ಏತಸ್ಮಿನ್-ಈ, ಅಂತರೇ-ಅವಧಿಯಲ್ಲಿಯೇ, ಪ್ರಾಣಾತ್-ಮುಖ್ಯಪ್ರಾಣನಿಂದ, ಶಕ್ರಾದ್ಯಾಃ-ಇಂದ್ರಾದಿಗಳು, ಅಪಿ-ಸಹ, ಜಜ್ಞಿರೇ-ಹುಟ್ಟಿದರು; ಅಪಿ-ಮತ್ತು ವಾಜಪೇಯಾಶ್ವಮೇಧಾದಿಯಜ್ಞಾನಾಂ-ವಾಜಪೇಯ, ಅಶ್ವಮೇಧ ಮೊದಲಾದ ಯಜ್ಞಗಳ, ದೇವತಾಃ-ದೇವತೆಗಳೂ (ಅಭಿಮಾನಿಗಳೂ), (ಜಜ್ಞಿರೇ-ಉತ್ಪನ್ನರಾದರು); ಯೇ-ಯಾವ, ಮಮ-ನನ್ನ, ಪಾರ್ಷದಾಃ-ದ್ವಾರಪಾಲಕರಾದ(ಸೇವಕರಾದ), ಸುನಂದನಂದಪ್ರಮುಖಾಃ-ಸುನಂದ, ನಂದ ಮೊದಲಾದ, ಸುರಾಃ-ದೇವತೆಗಳೂ, ಮರುತ್ಸುತಃ-ವಾಯುದೇವನ ಮಗನಾದ, ವಿಷ್ವಕ್ಸೇನಃ-ವಿಷ್ವಕ್ಸೇನನೂ, ತೇ

---

ಸಹ ಬಹುರೂಪಗಳನ್ನು ಸ್ವೀಕರಿಸಿ, ಅಲ್ಲಿ (ತತ್ತ್ವಗಳಲ್ಲಿ ಮತ್ತು ತತ್ತ್ವಾಭಿಮಾನಿ ದೇವತೆಗಳಲ್ಲಿ) ಪ್ರವೇಶಿಸಿದೆನು; ಈ ಪ್ರಕಾರದಿಂದ ಸೃಷ್ಟಿಯು, ಬ್ರಹ್ಮದೇವನ ಮೊದಲಿನ ಹತ್ತು ವರ್ಷಗಳಲ್ಲಿ ನಡೆಯಿತು (೨೭). ಇದೇ ಅವಧಿಯಲ್ಲಿ ಮುಖ್ಯಪ್ರಾಣನಿಂದ (ವಾಯುದೇವನಿಂದ) ಇಂದ್ರಾದಿಗಳೂ ಜನಿಸಿದರು; ವಾಜಪೇಯ, ಅಶ್ವಮೇಧಾದಿ ಯಜ್ಞಗಳ ಅಭಿಮಾನಿದೇವತೆಗಳೂ ಹುಟ್ಟಿದರು; ಹಾಗೂ ಬ್ರಹ್ಮದೇವನಿಂದ, ಸುನಂದನಂದ ಮೊದಲಾದ ನನ್ನ ದ್ವಾರಪಾಲಕರೂ, ವಾಯುವಿನ ಮಗನಾದ ವಿಷ್ವಕ್ಸೇನನೂ, ಹುಟ್ಟಿದರು; ಹೇ ಬ್ರಹ್ಮದೇವ! ಪ್ರಕೃತಿ ಮತ್ತು ಪ್ರಕೃತಿವಿಕಾರಗಳಾದ ಸತ್ತ್ವಾದಿ ಗುಣಗಳಿಂದ ಮತ್ತು ಮಹದಾದಿತತ್ತ್ವಗಳಿಂದ ಸೃಷ್ಟಿಯು, ಪ್ರಚುರವಾಗಿ ಬೆಳೆಯಿತು; ಜೀವರಿಗೆ,

ಸರ್ವೇ-ಅವರೆಲ್ಲರೂ, ಬ್ರಹ್ಮಣಃ-ಬ್ರಹ್ಮನಿಂದ (ಬ್ರಹ್ಮದೇವನಿಂದ), ಜಾತಾಃ-ಹುಟ್ಟಿದರು; ಬ್ರಹ್ಮನ್-ಹೇ ಬ್ರಹ್ಮ!, ಏವಂ-ಹೀಗೆ, ಪ್ರಕೃತೇಃ-ಪ್ರಕೃತಿಯ, ಚ-ಮತ್ತು ಪ್ರಾಕೃತಸ್ಯ-ಪ್ರಕೃತಿವಿಕಾರಗಳ, ಸೃಷ್ಟಿಃ-ಸೃಷ್ಟಿಯು, ವಿಲಸಿತಂ-ವಿಕಾಸಗೊಂಡಿತು (ವಿಸ್ತಾರವಾಯಿತು); ಏವಂ-ಹೀಗೆಯೇ (ಹಿಂದೆ ಹೇಳಿರಂತೆ), ಜೀವಾನಾಂ-ಜೀವರಿಗೆ, ದೇಹಯೋಗೇನ-ಪ್ರಾಕೃತದೇಹಸಂಬಂಧರಿಂದ (ದೇಹಯೋಗವೆಂಬ) (ಸೃಷ್ಟಿಃ-ಸೃಷ್ಟಿಯೂ), ಏವಂ ವಿಧಃ-ಈ ವಿಧವಾದುದೆಂದು, ಉಚ್ಯತೇ-ಹೇಳಲ್ಪಡುತ್ತದೆ.

ಸೂಕ್ಷ್ಮಸೃಷ್ಟಿಕಥನವೆಂಬ ೧೬ನೇ ಅಧ್ಯಾಯವು ಮುಗಿರುದು.

## ಅಧ್ಯಾಯ ೧೭

ಶ್ರೀ ವೇದವ್ಯಾಸಾಯ ನಮಃ

**ಬ್ರಹ್ಮೋವಾಚ—**

**ಪ್ರಕೃತಿಃ ಕತಿಧಾ ಪ್ರೋಕ್ತಾ ಪ್ರಾಕೃತಂ ಚಾಪಿ ಕಿಂ ವಿಧಂ ।**
**ಅಪ್ರಾಕೃತಂ ಚ ಕತಿಧಾ ತನ್ಮೇ ವಿಸ್ತರತೋ ವದ ॥ ೧ ॥**

ಅರ್ಥ:—ಬ್ರಹ್ಮನು ಪ್ರಶ್ನಿಸುತ್ತಾನೆ:—ಪ್ರಕೃತಿಃ-ಪ್ರಕೃತಿಯು, ಕತಿಧಾ-ಎಷ್ಟು ಪ್ರಕಾರ (ವಿಧ)ವೆಂದು, ಪ್ರೋಕ್ತಾ-ಹೇಳಲಾಗುತ್ತದೆ? ಪ್ರಾಕೃತಂ ಚ ಅಪಿ-ಮತ್ತು ಪ್ರಾಕೃತವೆಂಬುದು ಸಹ, ಕಿಂ ವಿಧಂ-ಯಾವ ವಿಧವಾದುದು? ಚ-ಮತ್ತು ಅಪ್ರಾಕೃತಂ-ಅಪ್ರಾಕೃತವು, ಕತಿಧಾ-ಎಷ್ಟು ವಿಧವು? ತತ್-ಅದನ್ನು (ಆ ಎಲ್ಲವನ್ನೂ), ವಿಸ್ತರತಃ-ವಿಸ್ತಾರವಾಗಿ, ವದ-ಹೇಳು.

---

ಪ್ರಾಕೃತದೇಹಸಂಬಂಧವೇ ಸೃಷ್ಟಿಯೆಂದು ಹೇಳಲ್ಪಡುತ್ತದೆ (ಜೀವಸ್ವರೂಪಗಳು ಅನಾದಿ ನಿತ್ಯವಾದುವು); ಜೀವರ ಸೃಷ್ಟಿಯೂ ಈ ಪ್ರಕಾರವಾಗಿ ನಡೆಯಿತು (೨೮-೩೦).

೧೬ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೧೭

ತಾತ್ಪರ್ಯ:—ಬ್ರಹ್ಮದೇವನು ಪ್ರಶ್ನಿಸುತ್ತಾನೆ—ಪ್ರಕೃತಿಯು ಎಷ್ಟು ವಿಧವೆಂದು ಹೇಳಲ್ಪಡುತ್ತದೆ? ಪ್ರಾಕೃತವೆಂಬುದು ಯಾವ ವಿಧವಾದುದು? ಅಪ್ರಾಕೃತವೆಂಬುದು ಎಷ್ಟು ವಿಧವೆಂಬ ಈ ಎಲ್ಲವನ್ನೂ ವಿಸ್ತಾರವಾಗಿ ಹೇಳು, ಸ್ವಾಮಿ!(೧). ಇಲ್ಲದ ವಸ್ತುವು ಎಲ್ಲಿ ತೋರುವುದಿಲ್ಲವೋ, ಆ ಜ್ಞಾನವು (ಯಾವ ಜ್ಞಾನದಲ್ಲಿ ಇಲ್ಲದ ವಸ್ತುವು ತೋರುವುದಿಲ್ಲವೋ—ಅನಾರೋಪಿತವೋ, ಅದು) ಯಥಾರ್ಥವೆನಿಸುತ್ತದೆ; ಅದೇ

ಶ್ರೀ ಭಗವಾನುವಾಚ—

**ಅವಿದ್ಯಮಾನೋ ಯೋ ಯತ್ರ ಸೋಽರ್ಥೋ ನೋ ಯತ್ರ ಭಾಸತೇ ।**
**ಯಥಾರ್ಥಮಿತಿ ತಜ್ಞಾನಂ ಸಾ ಪ್ರಮಾ ಪರಿಕೀರ್ತಿತಾ ॥ ೨ ॥**

ಯಃ ಅರ್ಥಃ-ಯಾವ ವಸ್ತುವು, ಯತ್ರ-ಎಲ್ಲಿ, ಅವಿದ್ಯಮಾನಃ-ಇಲ್ಲವೋ, ಸಃ ಅರ್ಥಃ-ಆ ವಸ್ತುವು, ಯತ್ರ-ಎಲ್ಲಿ ನೋಭಾಸತೇ-ತೋರುವುದಿಲ್ಲವೋ (ಇದ್ದುದೇ ತೋರುವುದಲ್ಲದೇ ಇಲ್ಲದುದಲ್ಲ); ತತ್-ಆ, ಜ್ಞಾನಂ-ಜ್ಞಾನವು, ಯಥಾರ್ಥಂ ಇತಿ-ಯಥಾರ್ಥವೆಂದೂ, ಸಾ-ಅದು, ಪ್ರಮಾ-ಪ್ರಮಾಣವೆಂದೂ, ಪರಿಕೀರ್ತಿತಾ-ಹೇಳಲ್ಪಡುತ್ತದೆ.

**ತಯಾ ಯದಾ ಕದಾಪಿ ಸ್ಯಾದಸ್ತೀತಿ ವಿಷಯೋ ಹಿ ಯತ್ ।**
**ತತ್ಪ್ರಮೇಯಮಿತಿ ಪ್ರೋಕ್ತಂ ಚೇತನಂ ಚಾಪ್ಯಚೇತನಂ ॥ ೩ ॥**

ತಯಾ-ಆ ಪ್ರಮೆಯಿಂದ (ಜ್ಞಾನದಿಂದ), ಯದಾ ಕದಾಪಿ ಸ್ಯಾತ್-ಯಾವಾಗಲೇ ಆಗಲಿ, ಯತ್-ಯಾವುದು, ಅಸ್ತಿಇತಿ-ಇದೆ ಎಂದು, ವಿಷಯಃ-ಗ್ರಹಿಸಲ್ಪಡುತ್ತದೆಯೋ (ಜ್ಞಾನಕ್ಕೆ ವಿಷಯವಾಗುತ್ತದೆಯೋ), ತತ್-ಅದು (ಆ ವಿಷಯವು), ಪ್ರಮೇಯಂ ಇತಿ-ಪ್ರಮೇಯವೆಂದು, ಪ್ರೋಕ್ತಂ-ಹೇಳಲ್ಪಡುತ್ತದೆ; (ಅದು), ಚೇತನಂ-ಚೇತನವೂ, ಅಪಿ-ಮತ್ತು ಅಚೇತನಂ-ಅಚೇತನವೂ (ಆಗಿರಬಹುದು).

**ಜಾನಾತೀಚ್ಛತಿ ಯೋ ಯತ್ನಂ ಕುರುತೇ ಚೇತನೋ ಹಿ ಸಃ ।**
**ತದ್ವಿಹೀನಂ ತದನ್ಯತ್ ಸ್ಯಾಚ್ಚೇತನೋ ಪ್ರಾಕೃತೋ ಮತಃ ॥ ೪ ॥**

ಯಃ-ಯಾವ ವಸ್ತುವು, ('ಅಸ್ತಿ' ಎಂಬ ಜ್ಞಾನಕ್ಕೆ ವಿಷಯವಾಗುವ ಪದಾರ್ಥವು), ಜಾನಾತಿ-ತಿಳಿಯುತ್ತದೆಯೋ, ಇಚ್ಛತಿ-ಇಚ್ಛಿಸುತ್ತದೆಯೋ, ಯತ್ನಂ-ಯತ್ನವನ್ನು

---

ಪ್ರಮಾಣವು (ಆ ಜ್ಞಾನದಿಂದ ಗ್ರಹಿಸಲಾದುದು ಸತ್ಯವೇ) (೨). 'ಅಸ್ತಿ' (ಇದೆ) ಎಂಬ ಜ್ಞಾನಕ್ಕೆ ಗೋಚರಿಸುವುದು, ಎಲ್ಲಿ, ಯಾವ ಕಾಲದಲ್ಲಾಗಲಿ, ಪ್ರಮೇಯವೆನಿಸುತ್ತದೆ. (ಜ್ಞಾನಕ್ಕೆ ವಿಷಯವಾದೊಡನೆ, ಇದೆ ಎಂಬ ಜ್ಞಾನ ಯಾವುದರಿಂದ ಉತ್ಪನ್ನವಾಗುವುದೋ, ಅದು ಪ್ರಮೇಯವು; ಅದು ಚೇತನ ಮತ್ತು ಅಚೇತನವೆಂದು ಎರಡು ವಿಧವು (೩). ಯಾವ ವಸ್ತುವು, ಜ್ಞಾನ (ತಿಳಿಯುವುದು), ಇಚ್ಛೆ (ಬೇಕು, ಬೇಡವೆಂಬ ಅಪೇಕ್ಷೆ), ಯತ್ನ (ಕ್ರಿಯಾಶಕ್ತಿ) ಗಳನ್ನುಳ್ಳದ್ದೋ, ಅದು, ಚೇತನವೆನಿಸುತ್ತದೆ; ಈ ಶಕ್ತಿಗಳಿಂದ ರಹಿತವಾದುದು (ಜ್ಞಾನ, ಇಚ್ಛಾ, ಯತ್ನಗಳಿಲ್ಲದುದು), ಚೇತನಭಿನ್ನವಾದುದು ಅಚೇತನವು); ಚೇತನ ಪದಾರ್ಥವೇ ಅಪ್ರಾಕೃತವೆನಿಸುತ್ತದೆ(೪). ಚೇತನವಸ್ತುವು, ಎರಡು ವಿಧವಾಗಿರುತ್ತದೆ; ಸ್ವತಂತ್ರವೆಂದೂ ಅಸ್ವತಂತ್ರವೆಂದೂ

ಕುರುತೇ-ಮಾಡುತ್ತದೆಯೋ (ಜ್ಞಾನ, ಇಚ್ಛೆ ಮತ್ತು ಪ್ರಯತ್ನಗಳುಳ್ಳದ್ದೋ-ಈ ಶಕ್ತಿಗಳುಳ್ಳದ್ದೋ), ಸಃ-ಅದೇ, ಚೇತನಃ-ಚೇತನವು; ಹಿ-ಚೇತನಲಕ್ಷಣವು ಹೀಗೆಯೇ ಸರಿ); ತದ್ವಿಹೀನಂ-ಇವುಗಳಿಂದ (ಜ್ಞಾನ, ಇಚ್ಛಾ, ಪ್ರಯತ್ನಗಳಿಂದ) ರಹಿತವಾದುದು, ತದನ್ಯತ್-ಅದರಿಂದ (ಚೇತನದಿಂದ) ಭಿನ್ನವಾದುದು, ಸ್ಯಾತ್-ಆಗುತ್ತದೆ, (ಅಚೇತನವೆನಿಸುತ್ತದೆ); ಚೇತನಃ-ಚೇತನವು, ಅಪ್ರಾಕೃತಃ-ಅಪ್ರಾಕೃತವೆಂದು, ಮತಃ-ತಿಳಿಯಲ್ಪಟ್ಟಿದೆ.

**ಸ್ವತಂತ್ರಃ ಪರತಂತ್ರಶ್ಚ ದ್ವಿಧಾ ಚೇತನ ಇಷ್ಯತೇ ।**
**ಯಸ್ಯ ನಾಸ್ತಿ ನಿಯಂತಾನ್ಯಃ ಸ ಸ್ವತಂತ್ರೋಽನ್ಯಥೇತರಃ ॥ ೫ ॥**

ಸ್ವತಂತ್ರಃ-ಸ್ವತಂತ್ರವಾದುದು, ಚ-ಮತ್ತು ಪರತಂತ್ರಃ-ಪರತಂತ್ರವಾದುದು, (ಎಂದು), ಚೇತನಃ-ಚೇತನವಸ್ತುವು, ದ್ವಿಧಾ-ಎರಡು ಪ್ರಕಾರವೆಂದು, ಇಷ್ಯತೇ-ಹೇಳಲಾಗುತ್ತದೆ (ಅಂಗೀಕೃತವಾಗಿದೆ); ಯಸ್ಯ-ಯಾವ ಚೇತನಕ್ಕೆ, ಅನ್ಯಃ-(ತನ್ನಿಂದ ಭಿನ್ನನಾದ) ಮತ್ತೊಬ್ಬ ಚೇತನನು, ನಿಯಂತಾ-ನಿಯಾಮಕನಾದವನು, ನಾಸ್ತಿ-ಇಲ್ಲವೋ, ಸಃ-ಅವನು, ಸ್ವತಂತ್ರಃ-ಸ್ವತಂತ್ರನು; (ತನಗೆ ತಾನೇ ನಿಯಾಮಕನು-ಸ್ವೇಚ್ಛೆಯಂತೆ ವರ್ತಿಸುವವನು); ಅನ್ಯಥಾ-ಹಾಗಲ್ಲದವನು, ಇತರಃ-ಅಸ್ವತಂತ್ರನು.

**ಅಹಮೇವ ಸ್ವತಂತ್ರೋಽನ್ಯನ್ಮದಧೀನಂ ತತೋಽಖಿಲಂ ।**
**ಅತ್ರಾಮುಕಂ ಚ ನಾಸ್ತೀತಿ ಪ್ರತೀತಿವಿಷಯೋ ಹಿ ಯಃ ॥ ೬ ॥**

**ಅಭಾವೋಽಯಂ ತದನ್ಯೋ ಹಿ ಭಾವ ಇತ್ಯಭಿಧೀಯತೇ ।**
**ಚೇತನಾಚೇತನಂ ಭಾವಃ ಸ್ಯಾದಭಾವೇಽಪ್ಯಚೇತನಃ ॥ ೭ ॥**

---

ಚೇತನವು ದ್ವಿವಿಧ; ಯಾವ ಚೇತನಕ್ಕೆ ಮತ್ತೊಬ್ಬನು ನಿಯಾಮಕನಿಲ್ಲವೋ (ಆಳುವ ಸ್ವಾಮಿಯಿಲ್ಲವೋ) ಅದು (ಅವನು) ಸ್ವತಂತ್ರಚೇತನವು; ಹಾಗಲ್ಲದುದು ಪರತಂತ್ರವು (೫). ನಾನೊಬ್ಬನೇ (ಶ್ರೀವಿಷ್ಣುವೇ) ಸ್ವತಂತ್ರನು; ಆದ್ದರಿಂದ ನನ್ನಿಂದ ಭಿನ್ನವಾದ ಸಮಸ್ತವೂ, ಪರತಂತ್ರವು—ಆ ಎಲ್ಲವೂ ಸ್ವತಂತ್ರನಾದ ನನ್ನ ಅಧೀನವಾದುದು;[1] ಯಾವುದೊಂದು ವಸ್ತುವು, 'ಇಲ್ಲಿ ಇಲ್ಲ', ಎಂಬ ಜ್ಞಾನಕ್ಕೆ ವಿಷಯವಾಗುತ್ತದೆಯೋ,

---

1. ಸ್ವತಂತ್ರವಸ್ತುವು ಒಂದೇ ಇರಬೇಕಲ್ಲದೇ, ಎರಡು ಅಥವಾ ಅಧಿಕ ಸಂಖ್ಯೆಯ ಸ್ವತಂತ್ರವಸ್ತುಗಳಿರಲು ಸಾಧ್ಯವೇ ಇಲ್ಲವೆಂಬ ನಿರ್ಣಯವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು, ತಮ್ಮ 'ಅನುವ್ಯಾಖ್ಯಾನ' ಗ್ರಂಥದಲ್ಲಿ ಬಹು ಯುಕ್ತಿಗಳಿಂದಲೂ, ಪ್ರಮಾಣಗಳಿಂದಲೂ, ವಿಸ್ತಾರವಾಗಿ ಸಾಧಿಸಿ ನಿರೂಪಿಸಿದ್ದಾರೆ. ಗುರುಮುಖೇನ ಆ ಗ್ರಂಥಭಾಗವನ್ನು ಅಧ್ಯಯನ ಮಾಡಿ ತಿಳಿಯಬಹುದು.

ಅಹಂ ಏವ-ನಾನು ಮಾತ್ರ, ಸ್ವತಂತ್ರಃ-ಸ್ವತಂತ್ರನು; ತತಃ-ಆದ್ದರಿಂದ, ಅನ್ಯತ್ ಅಖಿಲಂ-ಬೇರೆ ಎಲ್ಲವೂ (ನನ್ನಿಂದ ಭಿನ್ನವಾದುದೆಲ್ಲವೂ), ಮದಧೀನಂ-ನನ್ನ ಅಧೀನವು; ಅತ್ರ-ಇಲ್ಲಿ, ಅಮುಕಂ-ಇದು (ಯಾವುದೊಂದು ವಸ್ತುವು), ನಾಸ್ತಿ ಇತಿ ಚ-ಇಲ್ಲವೆಂಬುದಾಗಿಯೇ, ಯಃ-ಯಾವುದು, ಪ್ರತೀತಿವಿಷಯಃ-ಜ್ಞಾನವಿಷಯವಾಗುತ್ತದೆಯೋ, ಅಯಂ-ಅದು, ಅಭಾವಃ-ಅಭಾವವೆನಿಸುತ್ತದೆ; ತದನ್ಯಃ ಹಿ-ಅದರಿಂದ (ಅಭಾವದಿಂದ), ಭಿನ್ನವಾದುದೇ, ಭಾವಃ-ಭಾವವಸ್ತುವು, ಇತಿ-ಎಂದು, ಅಭಿಧೀಯತೇ-ಕರೆಯಲ್ಪಡುತ್ತದೆ; ಚೇತನಾಚೇತನಂ-ಚೇತನ ಮತ್ತು ಅಚೇತನ ವಸ್ತು ಸಮುದಾಯವು, ಭಾವಃ-ಭಾವರೂಪವಾದುದು; ಅಭಾವಃ-ಅಭಾವವು, ಅಚೇತನಃ-ಅಚೇತನವು, ಸ್ಯಾತ್-ಆಗಿರುತ್ತದೆ; ಹಿ-ಸಂಶಯಕ್ಕೆಡೆಯಿಲ್ಲ(ಅಭಾವಕ್ಕೆ ಜ್ಞಾನಾದಿಗಳಿಲ್ಲ).

**ನಾಶೋ ಯಸ್ಯ ಭವೇತ್ತತ್ಸ್ಯಾದನಿತ್ಯಂ ನಿತ್ಯಮನ್ಯತಃ ॥ ೮ ॥**

**ಚೇತನೋ ನಿತ್ಯ ಏವ ಸ್ಯಾತ್ತದನ್ಯದ್ದ್ವಿವಿಧಂ ಮತಂ ।**
**ಅಚೇತನೈವ ಪ್ರಕೃತಿರ್ನಿತ್ಯೈವ ಪರಿಕೀರ್ತಿತಾ ॥ ೯ ॥**

ಯಸ್ಯ-ಯಾವ ವಸ್ತುವಿಗೆ, ನಾಶಃ-ನಾಶವು, ಭವೇತ್-ಉಂಟಾಗುತ್ತದೆಯೋ, ತತ್-ಅದು, ಅನಿತ್ಯಂ-ಅನಿತ್ಯವು, ಸ್ಯಾತ್-ಎನಿಸುತ್ತದೆ; ಅನ್ಯತಃ-ಅದರಿಂದ ಭಿನ್ನವಾದ್ದರಿಂದ, ನಿತ್ಯಂ-(ಭಿನ್ನವಾದುದು-ಅನಿತ್ಯವಲ್ಲದುದು) ನಿತ್ಯವೆನಿಸುತ್ತದೆ; ಚೇತನಃ-ಚೇತನವು, ನಿತ್ಯಃ ಏವ-ನಿತ್ಯವೇ, ಸ್ಯಾತ್-ಆಗಿದೆ; ತದನ್ಯತ್-ಚೇತನದಿಂದ ಭಿನ್ನವಾದುದು (ಅಚೇತನವು), ದ್ವಿವಿಧಂ-ಎರಡು ವಿಧವೆಂದು, ಮತಂ-ತಿಳಿಯಲ್ಪಟ್ಟಿದೆ; ಅಚೇತನಾ ಏವ-ಅಚೇತನವೇ ಆದ, ಪ್ರಕೃತಿಃ-ಪ್ರಕೃತಿಯು, ನಿತ್ಯಾ ಏವ-ನಿತ್ಯವೆಂದೇ, ಪರಿಕೀರ್ತಿತಾ-ಹೇಳಲ್ಪಡುತ್ತದೆ.

**ಸತ್ತ್ವಂ ಶುದ್ಧಂ ತಮಃ ಶುದ್ಧಂ ಆಕಾಶಃ ಕಾಲ ಏವ ಚ ।**
**ಅಕಾರಾದ್ಯಾಸ್ತಥಾ ವರ್ಣಾ ವಾಚೋ ವೇದಾತ್ಮಿಕಾಸ್ತಥಾ ॥ ೧೦ ॥**

---

ಅದು ಅಭಾವವೆನಿಸುತ್ತದೆ—ಅದರಿಂದ (ಅಭಾವದಿಂದ) ಭಿನ್ನವಾದುದು ಭಾವವೆನಿಸುತ್ತದೆ; ಭಾವವು, ಚೇತನ ಮತ್ತು ಅಚೇತನವೆಂದು, ಎರಡು ವಿಧ (ಚೇತನ-ಅಚೇತನವಸ್ತುಗಳೆಲ್ಲವೂ ಭಾವಪದಾರ್ಥಗಳು); ಅಭಾವವು, ಅಚೇತನವೇ ಸರಿ—ಸಂಶಯಕ್ಕೆ ಕಾರಣವಿಲ್ಲ(೬-೭). ಯಾವ ವಸ್ತುವು ನಾಶವುಳ್ಳದ್ದೋ ಅದು ಅನಿತ್ಯವು; ಅನಿತ್ಯವಲ್ಲದ್ದು ನಿತ್ಯವೆನಿಸುತ್ತದೆ; ಚೇತನವು ನಿತ್ಯವಾದುದು—ಅಚೇತನವು ದ್ವಿವಿಧವು; ಅಚೇತನವೇ ಆದ ಪ್ರಕೃತಿಯು ನಿತ್ಯವೆಂದೇ ಹೇಳಲ್ಪಡುತ್ತದೆ (ಮೂಲಪ್ರಕೃತಿಯು ನಿತ್ಯ—ಅದರ ವಿಕಾರಗಳು ಅನಿತ್ಯಗಳು): (೮-೯).

**ಇತ್ಯಾದಿ ಪ್ರಕೃತಿರ್ನಿತ್ಯಾ ನಾನಾಭೇದಸಮನ್ವಿತಾ ।**

ಶುದ್ಧಂ-ಶುದ್ಧವಾದ, ಸತ್ತ್ವಂ-ಸತ್ತ್ವಗುಣವೂ, ಶುದ್ಧಂ-ಶುದ್ಧವಾದ, ತಮಃ-ತಮೋಗುಣವೂ, ಆಕಾಶಃ-ನಿತ್ಯಾಕಾಶವೂ (ಅವ್ಯಾಕೃತಾಕಾಶವೂ), ಕಾಲಃ ಏವ ಚ-(ಪ್ರವಾಹರೂಪದ) ಕಾಲವೂ ಸಹ, ತಥಾ-ಹಾಗೂ, ಅಕಾರಾದ್ಯಾಃ-ಅಕಾರವೇ ಮೊದಲಾದ, ವರ್ಣಾಃ-ವರ್ಣಗಳೂ, ತಥಾ-ಮತ್ತು ವೇದಾತ್ಮಿಕಾಃ-ವೇದರೂಪದ, ವಾಚಃ-ನುಡಿಗಳೂ (ಪದವಾಕ್ಯರೂಪಗಳಿಂದಿರುವ ಶಬ್ದಗಳೂ), ಇತ್ಯಾದಿ ಈ ಮೊದಲಾದ, ನಾನಾಭೇದಸಮನ್ವಿತಾ-ಬಹು ಭೇದಗಳಿಂದ ಕೂಡಿದ, ಪ್ರಕೃತಿಃ-ಪ್ರಕೃತಿಯು, ನಿತ್ಯಾ-ನಿತ್ಯವಾದುದು.

---

ಮೂಲಪ್ರಕೃತಿಯು ನಿತ್ಯವಾದುದು; ಅದು ಬಹುಭೇದವುಳ್ಳದ್ದು (ಬಹುಪ್ರಕಾರಗಳುಳ್ಳದ್ದು); ಶುದ್ಧಸತ್ತ್ವ, ಶುದ್ಧತಮ, ಅವ್ಯಾಕೃತಾಕಾಶ, ಪ್ರವಾಹರೂಪದ ಕಾಲ, 'ಅ'ಕಾರಾದಿ ವರ್ಣಗಳು, (ವೇದಸ್ವರೂಪದಿಂದಿರುವ) ಪದವಾಕ್ಯ ಸಮೂಹರೂಪದ ವೇದ, ಇತ್ಯಾದಿಗಳು ಪ್ರಕೃತಿಯ ವಿವಿಧರೂಪಗಳು—ಇವೆಲ್ಲವೂ ನಿತ್ಯ;[1](೧೦).

1. ವಿಶ್ವಸೃಷ್ಟಿಯಲ್ಲಿ ಮೂಲಪ್ರಕೃತಿಯ ಒಂದು ಭಾಗ ಮಾತ್ರ ಉಪಯೋಗಿಸಲ್ಪಡುತ್ತದೆ—ಅಪಾರವಾದ ಅನಂತ ಪ್ರಕೃತಿಯು ಪೂರಾ ಉಪಯೋಗಿಸಲ್ಪಡುವುದಿಲ್ಲ—ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಮೂಲಪ್ರಕೃತಿಯ ಭಾಗವಾದ ಸತ್ತ್ವಗುಣವೂ ಮತ್ತು ತಮೋಗುಣವೂ, ಶುದ್ಧಸತ್ತ್ವ ಮತ್ತು ಶುದ್ಧತಮೋಗುಣಗಳೆಂದು ವ್ಯವಹರಿಸಲ್ಪಡುತ್ತವೆ. ಅವ್ಯಾಕೃತಾಕಾಶವು ಪರಮಾಕಾಶವೆಂದೂ ಕರೆಯಲ್ಪಡುತ್ತದೆ; ವರ್ಣಗಳೂ, ವೇದ, ಪರಮಾಕಾಶ, ಕಾಲ ಇತ್ಯಾದಿಗಳನ್ನು ಪ್ರಕೃತಿಯ ಪ್ರಭೇದಗಳೆಂದು ಇಲ್ಲಿ ನಿರೂಪಿಸುವುದನ್ನು, ಮೂಲಪ್ರಕೃತಿಯಂತೆ, (ಶುದ್ಧಸತ್ತ್ವಾದಿಗಳಂತೆ) ಅನಾದಿನಿತ್ಯವೆಂಬ ವಿವಕ್ಷೆಯಿಂದ ಹೇಳಲಾಗಿದೆ ಎಂದು ತಿಳಿಯಬೇಕು. ದರ್ಪಣವು (ಕನ್ನಡಿಯು) ತನ್ನ ದರ್ಪಣಾತ್ವಕ್ಕೆ ಹಾನಿ ಇಲ್ಲದಂತೆ, ಪ್ರತಿಬಿಂಬಕ್ಕೆ ಉಪಾದಾನಕಾರಣವಾಗುವಂತೆ, ಕಾಲಪ್ರವಾಹಕ್ಕೂ ಮತ್ತು ಕಾಲಾಂಶಗಳಿಗೂ ಪ್ರಕೃತಿಯು ಉಪಾದಾನಕಾರಣವಾಗುವುದೆಂಬ ಒಂದು ಅಭಿಪ್ರಾಯವೂ ಇದೆ; ಮತ್ತು ಒಂದೇ ಕನ್ನಡಿಯು, ತನ್ನೊಳಗೆ ಮೂಡುವ ಬಹುವಸ್ತುಗಳ ಪ್ರತಿಬಿಂಬಗಳಿಗೆ ಉಪಾದಾನ ಕಾರಣವಾಗುವಂತೆ, ಪ್ರಕೃತಿಯು, ಆಕಾಶ, ವರ್ಣಾದಿ ರೂಪಗಳಿಂದ ತನ್ನ ಸ್ವರೂಪಕ್ಕೆ (ಪ್ರಕೃತಿತ್ವಕ್ಕೆ) ಹಾನಿಯಿಲ್ಲದಂತೆ ಸ್ವಯಂ ನಿತ್ಯಗಳಾದ ಬಹುರೂಪಗಳಿಂದ ಸ್ಥಿತವೆಂದು ಭಾವಿಸಲೂಬಹುದೆಂದು ತೋರುತ್ತದೆ. ಸತತ್ತ್ವರತ್ನಮಾಲಾ ಅಚೇತನ ಪ್ರಕರಣದ, ೧೯ನೇ ಶ್ಲೋಕದ ಅಡಿಟಿಪ್ಪಣಿಯನ್ನು ಇಲ್ಲಿ ನೋಡಬಹುದು; 'ಕಾಲಾಂಶಾನಾಂ ಅನಿತ್ಯತ್ವೇ ಕಾರಣಂ ವಾಚ್ಯಂ ಇತಿಚೇತ್ ಸತ್ಯಂ। ಉಪಾದನಂ ಪ್ರಕೃತಿರೇವ।' ಎಂಬ ಸುಧಾವಾಕ್ಯದ ವಿಮರ್ಶೆಯಲ್ಲಿ ಈ ಪ್ರಮೇಯವು ಪ್ರಸಕ್ತವಾಗಿದೆ; ಚಿಂತನೀಯ ಪ್ರಮೇಯವಿದು. ಹೀಗಿರುವ ಪ್ರಕೃತಿಯು ನಿತ್ಯವೆಂದರೆ, ಮೂಲರೂಪದಿಂದ ನಿತ್ಯವೆಂದೂ ಅದರ ವಿಕಾರಗಳಾದ ಮಹದಾದಿ (ಪೃಥಿವ್ಯಾದಿ)ಗಳು ಅನಿತ್ಯಗಳೆಂದೂ, ಆದ್ದರಿಂದ ಪ್ರಕೃತಿಯು 'ನಿತ್ಯಾನಿತ್ಯ'ವೆಂದು ತಿಳಿಯಬೇಕು. ಹೀಗೆಯೇ ಕಾಲವೂ ನಿತ್ಯಾನಿತ್ಯ-ಪ್ರವಾಹರೂಪದ ಮಹಾಕಾಲವು ನಿತ್ಯ-ಕ್ಷಣಾದಿ ಕಾಲಾಂಶಗಳು ಅನಿತ್ಯ.

ಅನಂತಾಸನವೈಕುಂಠನಾರಾಯಣಪುರೇಷು ಯೇ ॥ ೧೧ ॥

ಶ್ರೀಭಾಗಾಃ ಶುದ್ಧಸತ್ತ್ವಸ್ಥಾಃ ಪದ್ಮಶಂಖಾಂಬರಾದಿ ಚ ।
ಕಿರೀಟಕಟಕಾದ್ಯಾ ಯೇಪ್ಯಲಂಕಾರಾ ಮಮ ಶ್ರಿಯಃ ॥ ೧೨ ॥

ಇತ್ಯಾದ್ಯಾ ಸತ್ತ್ವರೂಪಾಃ ಸ್ಯುಃ ನಿತ್ಯಾನಾದಯ ಏವ ತೇ ।
ಸತ್ತ್ವಾಧಿಕಸ್ತು ಭೂಭಾಗೋ ದುರ್ಗಾಭಾಗಸ್ತಮೋಧಿಕಃ ॥ ೧೩ ॥

ವೈಕುಂಠಾದಿ ತ್ರಿಕೇಯೋಸ್ತಿ ಸರ್ಗೇ ಸರ್ಗೇಥ ಜಾಯತೇ ।
ಅಮುಕ್ತಾಸ್ತತ್ರ ನಂದಂತಿ ಸ ನಶ್ಯತಿ ಲಯೇ ಲಯೇ ॥ ೧೪ ॥

ಅನಂತಾಸನವೈಕುಂಠನಾರಾಯಣಪುರೇಷು- ಅನಂತಾಸನ, ವೈಕುಂಠ, ನಾರಾಯಣಪುರ(ಶ್ವೇತದ್ವೀಪ)ಗಳಲ್ಲಿ ಯೇ-ಯಾವ, ಶ್ರೀಭಾಗಾಃ-ಶ್ರೀಭಾಗಗಳೋ, (ಅವು), ಶುದ್ಧಸತ್ತ್ವಸ್ಥಾಃ-ಶುದ್ಧಸತ್ತ್ವಗುಣದಲ್ಲಿವೆ; ಪದ್ಮಶಂಖಾಂಬರಾದಿ ಚ-ಪದ್ಮ, ಶಂಖ, ವಸ್ತ್ರ ಮೊದಲಾದ (ಅಲ್ಲಿನ ವಸ್ತುಗಳೂ), ಮಮ-ನನ್ನ ಶ್ರಿಯಃ-ಶ್ರೀದೇವಿಯ, ಕಿರೀಟಕಟಕಾದ್ಯಾಃ-ಕಿರೀಟ, ಕಡಗ ಮೊದಲಾದ, ಯೇ-ಯಾವ, ಅಲಂಕಾರಾಃ-ಅಲಂಕಾರ(ಭೂಷಣ)ಗಳೋ, ಅಪಿ-ಅವೂ ಸಹ, ಇತ್ಯಾದ್ಯಾಃ-ಇವೆ ಮೊದಲಾದ (ಶ್ರೀಭಾಗ ವೈಕುಂಠಾದಿಗಳಲ್ಲಿರುವ) ವಸ್ತುಗಳೂ, ಸತ್ತ್ವರೂಪಾಃ-ಶುದ್ಧಸತ್ತ್ವದ ಸ್ವರೂಪಗಳೇ, ಸ್ಯುಃ- ಆಗಿರುತ್ತವೆ;[1] ತೇ- ಅವೆಲ್ಲವೂ, ನಿತ್ಯಾನಾದಯಃ-ನಿತ್ಯವೂ ಅನಾದಿಯೂ ಆದವುಗಳು; ಭೂಭಾಗಃ- ಅನಂತಾಸನಾದಿ ಲೋಕಗಳ) ಭೂಭಾಗವು, ಸತ್ತ್ವಾಧಿಕಃ-

ಅನಂತಾಸನ, ವೈಕುಂಠ, ನಾರಾಯಣಪುರ (ಶ್ವೇತದ್ವೀಪ)ಗಳಲ್ಲಿರುವ ಶ್ರೀಭಾಗವೂ, ಅಲ್ಲಿರುವ ಪದ್ಮ, ಶಂಖ, ವಸ್ತ್ರ ಮೊದಲಾದ ವಸ್ತುಗಳೂ, ಕಿರೀಟ, ಕಡಗಾದಿ ಅಲಂಕಾರಗಳೂ, ನನ್ನ (ಶ್ರೀವಿಷ್ಣುವಿನ) ಮತ್ತು ಶ್ರೀದೇವಿಯ, ವಸ್ತ್ರಾಭರಣಾದಿ ಸರ್ವವೂ, ಶುದ್ಧಸತ್ತ್ವಾತ್ಮಕವಾದವುಗಳೇ ಆಗಿದ್ದು ಅನಾದಿ ನಿತ್ಯಗಳಾಗಿರುತ್ತವೆ; ಅನಂತಾಸನಾದಿ ಲೋಕಗಳಲ್ಲಿರುವ ಭೂಭಾಗವು ಸತ್ತ್ವಗುಣ ಪ್ರಚುರವಾದುದು; ದುರ್ಗಾಭಾಗವು ತಮೋಗುಣಾಧಿಕ್ಯವುಳ್ಳದ್ದು; ಈ ಮೂರು ಲೋಕಗಳಲ್ಲಿರುವ ಭೂದುರ್ಗಾಭಾಗಗಳು ಪ್ರತಿಸೃಷ್ಟಿಯಲ್ಲಿ(ಬ್ರಹ್ಮಾಂಡವು, ಮಹಾಪ್ರಲಯಕಾಲದ ನಂತರ, ಸೃಷ್ಟವಾದಾಗ) ಸೃಷ್ಟವಾಗುತ್ತವೆ; ಅಲ್ಲಿ(ಈ ಭಾಗಗಳಲ್ಲಿ) ಲಿಂಗಭಂಗವನ್ನು ಹೊಂದಿರದ ಅಮುಕ್ತರು(ಮುಕ್ತಿಯೋಗ್ಯ ಜೀವರು) ನಾನಾ ಭೋಗಗಳನ್ನು ಅನುಭವಿಸುತ್ತಾ ಸುಖಿಸುತ್ತಿರುತ್ತಾರೆ; ಈ ಭಾಗಗಳು ಪ್ರತಿ ಮಹಾಪ್ರಲಯದಲ್ಲಿ ನಾಶವಾಗುತ್ತವೆ(೧೧-೧೪)

1. ಶುದ್ಧಸತ್ತ್ವಾತ್ಮಕ ಶ್ರೀಭಾಗಗಳು ಅಪ್ರಾಕೃತವೆಂದೂ ಹೇಳಲ್ಪಡುತ್ತವೆ. ಇಲ್ಲಿ ಇದೇ ಅಧ್ಯಾಯದ (ಮುಂದಿನ) ೧೬-೧೯ ಮತ್ತು ೩೦ನೇ ಶ್ಲೋಕಭಾಗಗಳನ್ನೂ ನೋಡಿರಿ.

ಸತ್ವಗುಣಪ್ರಚುರವಾದುದು; ದುರ್ಗಾಭಾಗಃ-(ಅಲ್ಲಿರುವ) ದುರ್ಗಾಭಾಗವು, ತಮೋಧಿಕಃ-ತಮೋಗುಣಪ್ರಚುರವಾದುದು; ವೈಕುಂಠಾದಿತ್ರಿಕೇ-ವೈಕುಂಠಾದಿ ಮೂರರಲ್ಲಿ (ಮೂರು ಲೋಕಗಳಲ್ಲಿ), ಯಃ-ಯಾವುದು(ಭೂಭಾಗ-ದುರ್ಗಾಭಾಗವು), ಅಸ್ತಿ-ಇದೆಯೋ, ಸರ್ಗೇಸರ್ಗೇ-ಪ್ರತಿ ಸೃಷ್ಟಿಯಲ್ಲಿ(ಮಹಾ ಪ್ರಳಯದ ನಂತರ ಜಗತ್ತಿನ ಸೃಷ್ಟಿಯಾಗುವಾಗ), ಅಥ-ಪುನಃ ಪುನಃ, ಜಾಯತೇ-ಹುಟ್ಟುತ್ತದೆ(ಸೃಷ್ಟಿಸಲ್ಪಡುತ್ತದೆ); ತತ್ರ-ಅಲ್ಲಿ(ಆ ಭೂದುರ್ಗಾಭಾಗಗಳಲ್ಲಿ), ಅಮುಕ್ತಾಃ-ಅಮುಕ್ತರಾದವರು(ಲಿಂಗಭಂಗವನ್ನು ಹೊಂದದ ಸುಜೀವರು-ಮುಕ್ತಿಯೋಗ್ಯರು), ನಂದಂತಿ-(ನಾನಾ ಭೋಗಗಳಿಂದ) ಸುಖಿಸುತ್ತಿರುವರು; ಸಃ-ಅದು (ಆ ಭೂದುರ್ಗಾಭಾಗವು), ಲಯೇ ಲಯೇ-ಪ್ರತಿ ಪ್ರಳಯದಲ್ಲಿ, ನಶ್ಯತಿ-ನಷ್ಟ ಹೊಂದುತ್ತದೆ.

**ಅಂಧಂತಮಸ್ತಮಃ ಶುದ್ಧಂ ಚಕ್ರಾದೀನ್ಯಾಯುಧಾನಿ ಚ ।**
**ರಜೋ ರಾಗೇಣ ತೇಷು ಸ್ಯಾತ್ಕಾಲೇ ಕಾಲೇ ಪ್ರದೀಪ್ತತಾ ॥ ೧೫ ॥**

ಅಂಧಂತಮಃ-ಅಂಧತಮಸ್ಸು ತಮಃಶುದ್ಧಂ-ಶುದ್ಧತಮೋಗುಣಾತ್ಮಕವಾದುದು; ಚ-ಹಾಗೂ, ಚಕ್ರಾದೀನಿ-ಚಕ್ರವೇ ಮೊದಲಾದ, ಆಯುಧಾನಿ-ಆಯುಧಗಳೂ (ಶುದ್ಧಂ

---

ಅಂಧತಮಸ್ಸು(ನಿತ್ಯನರಕಲೋಕವು) ಶುದ್ಧತಮೋಗುಣಾತ್ಮಕವಾದುದು; ಹಾಗೂ ಚಕ್ರಾದಿ ಆಯುಧಗಳೂ ತಮೋಗುಣಾತ್ಮಕವೇ—ಅವುಗಳಲ್ಲಿ ರಜೋಗುಣದ ರಾಗದಿಂದ ಆಗಾಗ ಪ್ರಕಾಶವೂ ಉಂಟಾಗುತ್ತದೆ[1](೧೫). ಶುದ್ಧಸತ್ವದಲ್ಲಿಯೂ ಶ್ರೀಭಾಗ

---

1. ಇಲ್ಲಿ ಪ್ರಸಕ್ತವಾಗಿರುವ ಚಕ್ರಾದಿ ಆಯುಧಗಳು ದ್ವಿವಿಧವೆಂದು ತಿಳಿಯಬೇಕು; ಮುಕ್ತ ಲೋಕಗಳಲ್ಲಿರುವ ಶ್ರೀವಿಷ್ಣುವು ಧರಿಸುವ ಚಕ್ರಾದಿಗಳು ಶ್ರೀವಿಷ್ಣುವಿನ ಸ್ವರೂಪಾತ್ಮಕವೇ—ಚಿದಾನಂದರೂಪಗಳೇ. ಅಮುಕ್ತಲೋಕಗಳಲ್ಲಿ(ಸೃಷ್ಟಿಕಾಲದಲ್ಲಿ) ಶ್ರೀಹರಿಯು ಧರಿಸುವ ಚಕ್ರಾದಿ ಆಯುಧಗಳು, ಕಿರೀಟಾದಿ ಆಭರಣಗಳೂ, ಬಹುಪ್ರಕಾರವಾದವು; ಸ್ವರೂಪಾತ್ಮಕಗಳಾದ ಆಭರಣ ಆಯುಧಾದಿಗಳೊಂದಿಗೆ ಲಕ್ಷ್ಮ್ಯಾತ್ಮಕ ಆಭರಣ ಆಯುಧಾದಿಗಳನ್ನು ಶ್ರೀಹರಿಯು ಸದಾ ಧರಿಸಿರುವನು—ಮುಕ್ತಲೋಕಗಳಲ್ಲಿ ಸಹ ಹೀಗೆಯೇ ಉಭಯಾತ್ಮಕವನ್ನೂ ಧರಿಸಿರುತ್ತಾನೆ; ಅಮುಕ್ತಲೋಕಗಳಲ್ಲಿ ಕಾಲವಿಶೇಷಗಳಲ್ಲಿ ಲಕ್ಷ್ಮ್ಯಾತ್ಮಕವಾದವುಗಳನ್ನು ಧರಿಸುವನು—ಕಾಮ, ಅನಿರುದ್ಧಾದಿಗಳಿಂದ ಅಭಿಮನ್ಯವಾದ ಪ್ರಾಕೃತ ಚಕ್ರಾದಿಗಳನ್ನೂ ಧರಿಸುವುದುಂಟು. 'ಕಿರೀಟಾದ್ಯಾ ಅಪಿ ಹರೇರ್ದ್ವಿಧಾ ಸಂತಿ ನ ಸಂಶಯಃ ಸ್ವರೂಪಾಖ್ಯಸ್ವರೂಪಾಖ್ಯ...' (ಬ್ರಹ್ಮಕಾಂಡ) ಇತ್ಯಾದಿ ವಾಕ್ಯಗಳು, ಉಕ್ತಪ್ರಮೇಯವನ್ನು ನಿರೂಪಿಸುತ್ತವೆ. ಈ ಪ್ರಾಕೃತ ಚಕ್ರಾದಿ ಆಯುಧಗಳು ಶುದ್ಧ ತಮೋಗುಣನಿರ್ಮಿತವಾದವುಗಳು—ಇವುಗಳಲ್ಲಿ ಕಾಲಕಾಲಕ್ಕೆ ಉಂಟಾಗಿರುವ ಪ್ರಜ್ವಲನೆಯು ರಜೋಗುಣಸಮೀಪ್ಯನಿಮಿತ್ತವಾದುದೆಂದು ತಿಳಿಯಬೇಕು. ವೈಕುಂಠಾದಿ ಶ್ರೀಭಾಗಗಳು ಶುದ್ಧಸತ್ವಾತ್ಮಕವಾಗಿದ್ದು ಅಲ್ಲಿ ವಾಸಿಸುವ ಸಾರೂಪ್ಯ ಮುಕ್ತರೂ, ವಿಷ್ಣುಪಾರ್ಷದರೂ ಧರಿಸಿರುವ ಚಕ್ರಾದಿಗಳು ಶುದ್ಧ ಸತ್ವಾತ್ಮಕವೇ ಸರಿ—ಶ್ರೀಭಾಗದಲ್ಲಿ ತಮೋಗುಣಕ್ಕೆ ಸ್ಥಾನವಿಲ್ಲ.

ತಮ-ಶುದ್ಧತಮೋಗುಣಾತ್ಮಕವಾದವುಗಳೇ); ರಜೋರಾಗೇಣ-ರಜೋ ಗುಣದ ಕೆಂಪುವರ್ಣ(ರಾಗ)ದಿಂದ, ತೇಷು-ಅವುಗಳಲ್ಲಿ (ಚಕ್ರಾದಿಗಳಲ್ಲಿ), ಕಾಲೇಕಾಲೇ-ಕಾಲಕಾಲಕ್ಕೆ (ಆಗಾಗ), ಪ್ರದೀಪ್ತತಾ-ಪ್ರಕಾಶವು, ಸ್ಯಾತ್-ಉಂಟಾಗುತ್ತದೆ.

ಸ್ವಭಾವಾದ್ವಿವಿಧಾಕಾರಾಃ ಸತ್ವೇ ತಮಸಿ ದೃಶ್ಯತೇ ।
ಅತಃ ಪರ್ವತವೃಕ್ಷಾದಿಸುವರ್ಣಾದಿಜಲಾದಿಷು ॥ ೧೬ ॥

ಸತ್ವಭಾಗೇ ತಮೋಭಾಗೇ ನಾನಾವಸ್ತೂಪಲಂಭನಂ ।
ಅತೋಽಸ್ತ್ಯಾಸ್ತಿ ತಮೋರಾಶಿಃ ಸತ್ವರಾಶಿಸ್ತಥಾಪರಾ ॥ ೧೭ ॥

ತಾಭ್ಯಾಂ ಪ್ರಜಾಯತೇ ಸೃಷ್ಟಿಕಾಲೇ ಪೂರ್ವೋಕ್ತವದ್ರಜಃ ।
ಪ್ರಲಯೇ ವಿಶತೇ ಸತ್ವಂ ಸತ್ವೇ ತಮಸಿ ವೈ ತಮಃ ॥ ೧೮ ॥

ಗುಣಾದ್ವಿತ್ವೇನ ಸಾಮ್ಯಂ ಸ್ಯಾತ್ ಸ್ಥಿತಿರಿತ್ಥಂ ಪುನಃಪುನಃ ।
ಯತ್ ಪ್ರಕೃತ್ಯೈಕ್ಯತಾಂ ಯಾಯಾತ್ ತತ್ಸಾಕ್ಯತಮಿತೀರ್ಯತೇ ॥ ೧೯ ॥

ಸತ್ವೇ-ಶುದ್ಧಸತ್ವದಲ್ಲಿಯೂ (ತದಾತ್ಮಕವಾದ ವೈಕುಂಠಾದಿ ಶ್ರೀಭಾಗದಲ್ಲಿಯೂ), ತಮಸಿ-ಶುದ್ಧತಮಸ್ಸಿನಲ್ಲಿಯೂ(ತದಾತ್ಮಕವಾದ ಅಂಧತಮಸ್ಸಿನಲ್ಲಿಯೂ), ಸ್ವಭಾವಾತ್-ಸ್ವಭಾವದಿಂದಲೇ(ಅವುಗಳ ಸ್ವಭಾವದಿಂದಲೇ), ವಿವಿಧಾಕಾರಾಃ-ನಾನಾ ಆಕಾರಗಳು, ದೃಶ್ಯತೇ-ಕಂಡುಬರುತ್ತವೆ; ಅತಃ-ಆದ್ದರಿಂದಲೇ, ಪರ್ವತವೃಕ್ಷಾದಿಸುವರ್ಣಾದಿ ಜಲಾದಿಷು-ಪರ್ವತ, ಗಿಡ ಮರ ಮೊದಲಾದುವು, ಸುವರ್ಣಾದಿಗಳು, ಜಲ ಮೊದಲಾದವು, ಇವುಗಳಲ್ಲಿ ಸತ್ವಭಾಗೇ-ಸತ್ವಭಾಗದಲ್ಲಿಯೂ, ತಮೋಭಾಗೇ-ತಮೋಭಾಗದಲ್ಲಿಯೂ (ವೈಕುಂಠಾದಿಗಳ ಸತ್ವಾಧಿಕ ತಮೋಧಿಕಭಾಗಗಳಾದ ಭೂದುರ್ಗಾಭಾಗಗಳಲ್ಲಿ), ನಾನಾವಸ್ತೂಪಲಂಭನಂ-ವಿವಿಧ ವಸ್ತುಗಳ(ದೊರೆಯುವಿಕೆಯು) ಅನುಭವವು(ಯುಕ್ತವಾಗುತ್ತದೆ); ಅತಃ-ಇದರಿಂದ(ವೈಕುಂಠಾದಿಗಳ ವಿವಿಧ

---

ವೈಕುಂಠಾದಿಗಳಲ್ಲಿ) ಶುದ್ಧತಮಸ್ಸಿನಲ್ಲಿಯೂ (ಅಂಧತಮಸ್ಸಿನಲ್ಲಿಯೂ), ಆ ಗುಣಗಳ ಸ್ವಭಾವದಿಂದಲೇ ವಿವಿಧಾಕಾರಗಳು ಉಪಪನ್ನವಾಗುತ್ತವೆ; ಇದೇ ಕಾರಣದಿಂದಲೇ, ಸತ್ವಾಧಿಕವುಳ್ಳ ವೈಕುಂಠಾದಿ ತ್ರಿಧಾಮಗಳ ಭೂಭಾಗಗಳಲ್ಲಿ ಮತ್ತು ತಮೋಧಿಕ ದುರ್ಗಾಭಾಗಗಳಲ್ಲಿ ಸಹ, ಪರ್ವತ, ವೃಕ್ಷಾದಿಗಳಲ್ಲಿ ಸುವರ್ಣ ಜಲಾದಿಗಳಲ್ಲಿ ವಿವಿಧ ಆಕಾರದ ನಾನಾ ವಸ್ತುಗಳಿದ್ದು ಅಲ್ಲಿನ ಪ್ರಜೆಗಳ ಅನುಭವಗೋಚರವಾಗುವುದೂ ಯುಕ್ತವೇ ಆಗುತ್ತದೆ; ಶುದ್ಧಸತ್ವಾತ್ಮಕವಾದ ವೈಕುಂಠಾದಿ ಶ್ರೀಭಾಗದಲ್ಲಿ ಸತ್ವಗುಣವು ಶುಕ್ಲವರ್ಣದ್ದಾದರೂ, ವಿವಿಧವರ್ಣಗಳ ವಿವಿಧಾಕಾರಗಳ ಗಿಡ ಲತೆ ಗುಲ್ಮ ಫಲಪುಷ್ಪಾದಿಗಳು ಮುಕ್ತರಿಗೂ (ಶುದ್ಧಸತ್ವ ತಮೋಗುಣಗಳ ಈ ಸ್ವಭಾವದಿಂದಲೇ)

ಭಾಗಗಳಲ್ಲಿ ಮತ್ತು ಅಂಧಕಮಸ್ಸಿನಲ್ಲಿ ಇರುವುದರಿಂದ), ಅನ್ಯಾ-ಭಿನ್ನವಾದ (ಬೇರೆಯಾದ), ತಮೋರಾಶಿಃ-ತಮೋಗುಣದ ರಾಶಿಯೂ, ತಥಾಪರಾ-ಮತ್ತು ಪ್ರತ್ಯೇಕವಾದ, ಸತ್ವರಾಶಿಃ-ಸತ್ವಗುಣದ ರಾಶಿಯೂ, ಅಸ್ತಿ-ಇರುತ್ತದೆ; ತಾಭ್ಯಾಂ-ಇವುಗಳಿಂದ(ಈ ಎರಡು ರಾಶಿಗಳಿಂದ), ಸೃಷ್ಟಿಕಾಲೇ-ಸೃಷ್ಟಿಕಾಲದಲ್ಲಿ ಪೂರ್ವೋಕ್ತವತ್-(ಹಿಂದೆ ಹೇಳಿದಂತೆ), ರಜಃ-ರಜೋಗುಣವು(ಸತ್ವಗುಣ-ತಮೋಗುಣಗಳ ಮಿಶ್ರಣದಿಂದ), ಪ್ರಜಾಯತೇ-ಹುಟ್ಟುತ್ತದೆ; ಪ್ರಲಯೇ-ಪ್ರಲಯಕಾಲದಲ್ಲಿ ಸತ್ವಂ-(ಸೃಷ್ಟಿಯಲ್ಲಿ ಉಪಯೋಗಿಸಲಾದ) ಸತ್ವರಾಶಿಯು, ಸತ್ವೇ-(ಸತ್ವರಾಶಿಯಲ್ಲಿ) ಸತ್ವದಲ್ಲಿಯೂ, ತಮಃ-ತಮೋಗುಣವು, ತಮಸಿ-ತಮೋರಾಶಿಯಲ್ಲಿಯೂ, ವಿಶತೇ-ಪ್ರವೇಶಿಸುತ್ತದೆ; (ಸೇರುತ್ತದೆ—ಸೃಷ್ಟಿಕಾಲದಲ್ಲಿ ಸತ್ವಾದಿ ಮೂರು ಗುಣಗಳಿಂದ ನಿರ್ಮಿತವಾದ ಪಂಚಭೂತಾದಿ ತತ್ವಗಳು ಲಯಹೊಂದಿ ಅವುಗಳಲ್ಲಿದ್ದ ಸತ್ವಗುಣಭಾಗವು ಸತ್ವರಾಶಿಯಾಗಿ ನಿಲ್ಲುತ್ತದೆ; ತಮೋಗುಣಾಂಶವು ತಮೋರಾಶಿಯಾಗಿ ನಿಲ್ಲುತ್ತದೆ; ರಜೋಗುಣವು ತನ್ನಲ್ಲಿರುವ ಸತ್ವಾಂಶ ಮತ್ತು ತಮೋ ಅಂಶಗಳಾಗಿ ಬೇರ್ಪಟ್ಟು ಆಯಾ ರಾಶಿಯಲ್ಲಿ ಸೇರುತ್ತದೆ—ಸತ್ವತಮಗಳೆಂಬ ಎರಡೇ ರಾಶಿಗಳು ಉಳಿಯುತ್ತವೆ); ಗುಣದ್ವಿತ್ವೇನ-(ಹೀಗೆ) ಎರಡು ಗುಣಗಳಿಂದ, ಸಾಮ್ಯಂಸ್ಯಾತ್-ಸಾಮ್ಯಸ್ಥಿತಿ ಯೆನಿಸುತ್ತದೆ; (ಗುಣಸಾಮ್ಯವು ಲಯ—ಮೂರು ಗುಣಗಳಾಗಿ ಮಹದಾದಿ ತತ್ವಗಳ ಉತ್ಪತ್ತಿಗೆ ಕಾರಣವಾಗುವುದು ಗುಣವೈಷಮ್ಯ—ಅದೇ ಸೃಷ್ಟಿಯು); ಇತ್ಥಂ-ಈ ಪ್ರಕಾರದ, ಸ್ಥಿತಿಃ-ಸ್ಥಿತಿಯು, ಪುನಃಪುನಃ-ಪ್ರತಿ ಸೃಷ್ಟಿಲಯಗಳಲ್ಲಿಯೂ, ಸ್ಯಾತ್-

---

ಭೋಗಾರ್ಥವಾಗಿ ಲಭಿಸುತ್ತವೆ; ಶುದ್ಧಸತ್ವ, ಶುದ್ಧತಮೋಗುಣಗಳಿಂದ ಭಿನ್ನವಾದ, ಸತ್ವತಮೋರಾಶಿಗಳು ಮೂಲಪ್ರಕೃತಿಯಲ್ಲಿವೆ; ಈ ಎರಡುಗುಣರಾಶಿಗಳಿಂದ, ಈ ಹಿಂದೆ ಹೇಳಿದಂತೆ (ಅವುಗಳ ಮಿಶ್ರಣದಿಂದ) ರಜೋಗುಣವು ಹುಟ್ಟುತ್ತದೆ; ಪ್ರಲಯಕಾಲದಲ್ಲಿ ಈ ಮೂರು ಗುಣಗಳಿಂದ ಸೃಷ್ಟವಾದ ನಾನಾ ವಸ್ತುಗಳು, ಸತ್ವತಮಗಳೆಂಬ ಎರಡು ರಾಶಿಮಾತ್ರವಾಗಿ ಉಳಿಯುತ್ತವೆ; ಇದೇ ಗುಣಸಾಮ್ಯವು (ಗುಣವೈಷಮ್ಯವೇ, ಮೂರಾಗಿ ನಾನಾ ವಸ್ತುಗಳ ಉತ್ಪತ್ತಿಗೆ ಕಾರಣವಾಗುವುದೇ, ಸೃಷ್ಟಿಯು); ಹೀಗೆ ಪ್ರತಿ ಸೃಷ್ಟಿ ಪ್ರಲಯದಲ್ಲಿಯೂ ಗುಣವೈಷಮ್ಯ ಸಾಮ್ಯಗಳು ಸಂಭವಿಸುತ್ತವೆ; ಲಯಕಾಲದಲ್ಲಿ ಅವಶಿಷ್ಟವಾದ ಸತ್ವತಮೋರಾಶಿಗಳು ಮೂಲಪ್ರಕೃತಿಯೊಂದಿಗೆ ಐಕ್ಯವನ್ನು ಹೊಂದುತ್ತವೆ;[1] ಹೀಗೆ ಸೃಷ್ಟಿಗೆ ಕಾರಣವಾಗುವ ಸತ್ವ ತಮೋರಾಶಿಗಳು, ಪ್ರಾಕೃತ

---

1. ಮೂಲಪ್ರಕೃತಿಯೇ ಗುಣಾತ್ಮಕವೆಂದು ಹೇಳುವುದು. ಈ ವಿವಕ್ಷೆಯಿಂದಲೇ, ಗುಣಗಳಿಗೆ ಲಯವಿಲ್ಲ—ಐಕ್ಯವನ್ನು ಹೊಂದುತ್ತವೆ. ಸೃಷ್ಟಿಕಾಲ ಪ್ರಾಪ್ತವಾಗಲು, ಮೂಲಪ್ರಕೃತಿಯ ಅತ್ಯಲ್ಪವಿಕಾರದಿಂದ ಸತ್ವತಮೋಗುಣಗಳು ವ್ಯಕ್ತವಾಗಿ, ಅವುಗಳ ಮಿಶ್ರಣದಿಂದ ರಜೋಗುಣವೂ ಸಿದ್ಧವಾಗಿ, ಸೃಷ್ಟಿಯು ಮುಂದರಿಯುತ್ತದೆ. ಪ್ರಲಯಕಾಲದಲ್ಲಿ ಸತ್ವ-ತಮಗಳೆಂಬ ಎರಡು

ಉಂಟಾಗುತ್ತದೆ; ಯತ್ - ಯಾವುದು(ಪ್ರಲಯ ಕಾಲದಲ್ಲಿ ಉಳಿಯುವ ಸತ್ತ್ವ-ತಮೋ ಗುಣಗಳು), ಪ್ರಕೃತ್ಯಾ-ಮೂಲಪ್ರಕೃತಿಯಿಂದ, ಐಕ್ಯತಾಂ-ಐಕ್ಯವನ್ನು ಯಾಯಾತ್- ಹೊಂದುತ್ತದೆಯೋ, ತತ್-ಅದು, ಪ್ರಾಕೃತಂ ಇತಿ-ಪ್ರಾಕೃತವೆಂದು(ಪ್ರಾಕೃತ ಸತ್ತ್ವ-ಪ್ರಾಕೃತ ತಮೋಗುಣ ಎಂದು), ಈರ್ಯತೇ-ಹೇಳಲ್ಪಡುತ್ತದೆ.

**ಅನಿತ್ಯಮೇವ ಯತ್ಪ್ರೋಕ್ತಂ ಸಾದ್ಯನಾದೀತಿ ತದ್ದ್ವಿಧಾ ।**
**ಆಕಾಶವಾಯುತೇಜೋಂಬುಭೂತಾನಾಂ ಪಂಚಕಂ ತ್ವಿದಂ ॥ ೨೦ ॥**

ಯತ್-ಯಾವುದು, ಅನಿತ್ಯಂ ಏವ-ಅನಿತ್ಯವೆಂದೇ, ಪ್ರೋಕ್ತಂ-ಹೇಳಲ್ಪಟ್ಟಿತೋ, ತತ್-ಅದು, ಸಾದ್ಯನಾದೀತಿ-ಸಾದಿ(ಆದಿಯುಳ್ಳದ್ದು) ಅನಾದಿ (ಆದಿರಹಿತವು) ಎಂದು, ದ್ವಿವಿಧಾ-ಎರಡು ಪ್ರಕಾರವಾಗಿದೆ; ಆಕಾಶವಾಯುತೇಜೋಂಬುಭೂತಾನಾಂ-ಆಕಾಶ, ವಾಯು, ತೇಜಸ್ಸು, ಜಲಗಳೆಂಬ ಭೂತಗಳ, ಪಂಚಕಂ ತು-(ಪೃಥಿವಿಯೂ ಸೇರಿ) ಐದರ ಸಮೂಹವಾದರೋ, ಇದಂ-ಸಾದಿಯಾದುದು(ಉತ್ಪತ್ತಿಯುಳ್ಳ ಅನಿತ್ಯವಸ್ತುಗಳು).

**ಏತದ್ಬೀಜಾನಿ ತನ್ಮಾತ್ರಾಃ ಕ್ರಮಾತ್ಪಂಚೇರಿತಾಸ್ತ್ವಿಮಾಃ ।**
**ಶಬ್ದಃ ಸ್ಪರ್ಶೋಽಥ ರೂಪಂ ಚ ರಸೋ ಗಂಧಶ್ಚ ಪಂಚಮಃ ॥ ೨೧ ॥**

ಏತದ್ಬೀಜಾನಿ-ಈ ಪಂಚಭೂತಗಳಿಗೆ ಕಾರಣವಾದವುಗಳು, ತನ್ಮಾತ್ರಾಃ-ತನ್ಮಾತ್ರೆ ಗಳು; ಕ್ರಮಾತ್-(ಆಕಾಶಾದಿ) ಕ್ರಮದಿಂದ, ಇಮಾಃ-ಈ ತನ್ಮಾತ್ರೆಗಳು, ಪಂಚ- ಐದೆಂದು, ಈರಿತಾಃ-ಹೇಳಲ್ಪಡುತ್ತವೆ; (ಅವು ಯಾವುವೆಂದರೆ), ಶಬ್ದಃ-ಶಬ್ದವು, ಸ್ಪರ್ಶಃ-

---

ಸತ್ತ್ವ ತಮೋಗುಣಗಳೆಂದು ಹೇಳಲ್ಪಡುತ್ತವೆ. ಈ ವಿವಕ್ಷೆಯಿಂದ, ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಶುದ್ಧಸತ್ತ್ವ, ಶುದ್ಧತಮೋಗುಣಗಳನ್ನು ಅಪ್ರಾಕೃತಗುಣಗಳೆಂದೂ ವ್ಯವಹರಿಸಬಹುದು. ಈ ಶುದ್ಧಗುಣಗಳ ಸ್ವಭಾವದಿಂದ, ಬಹುವಿಧವಸ್ತುಗಳು ತದಾತ್ಮಕಲೋಕಭಾಗಗಳಲ್ಲಿ ದೊರೆಯುತ್ತವೆ(೧೬-೧೯). ಅನಿತ್ಯವೆಂದು ಈ ಹಿಂದೆ (ಈ ಅಧ್ಯಾಯದ ೮-೯ನೇ ಶ್ಲೋಕಗಳನ್ನು ನೋಡಿರಿ) ಹೇಳಲಾದ ವಸ್ತುವು, ಸಾದಿ-ಅನಾದಿ ಎಂಬ ಭೇದದಿಂದ ಎರಡುವಿಧವಾಗಿದೆ; ಅದರಲ್ಲಿ ಆಕಾಶ, ವಾಯು, ಅಗ್ನಿ(ತೇಜಸ್ಸು), ಜಲ, ಪೃಥಿವಿಗಳೆಂಬ ಪಂಚಭೂತಗಳು ಸಾದಿ ಅನಿತ್ಯಗಳು—ಉತ್ಪತ್ತಿಯುಳ್ಳವು—

---

ಗುಣಗಳು ಮಾತ್ರ ಮೂಲ ಪ್ರಕೃತಿಯಲ್ಲಿದ್ದರೂ, ಪ್ರಕೃತಿಯನ್ನು ತ್ರಿಗುಣಾತ್ಮಕವೆಂದು ಕರೆಯಲು, ಕಾರಣವೇನೆಂದರೆ—ಸತ್ತ್ವಗುಣ ಮತ್ತು ತಮೋಗುಣವು ಏಕತ್ರ ಸೇರಿದ್ದರೂ, ಕ್ಷೀರನೀರಯಂತೆ ಮಿಶ್ರಗೊಂಡು ರಜೋಗುಣದ ಉತ್ಪತ್ತಿಯಾಗದಿದ್ದರೂ, ಅವುಗಳ ಸಾಮೀಪ್ಯದಿಂದ, ಅವು ಸೇರುವ ಅಲ್ಪವಿಭಾಗದಲ್ಲಿ ರಜೋಗುಣಧರ್ಮವಾದ ರಾಗವು (ಕೆಂಪುವರ್ಣವು) ತೋರುವುದರಿಂದ ಪ್ರಕೃತಿಯು, ತ್ರಿಗುಣಾತ್ಮಕವೆಂಬ ವ್ಯವಹಾರ ಯುಕ್ತವಾಗುತ್ತದೆ.

ಸ್ಪರ್ಶವು, ಅಥ-ನಂತರ, ರೂಪಂ ಚ-ರೂಪವೂ, ರಸಃ-ರಸವೂ, ಗಂಧಶ್ಚ ಪಂಚಮಃ-ಮತ್ತು ಐದನೆಯದಾದ ಗಂಧವು.

**ಏತನ್ನಾಮಕಮೇವಸ್ಯಾದ್ವಿಷಯಾಣಾಂ ಚ ಪಂಚಕಂ ।**
**ತದ್ ಜ್ಞಾಪಕಾನಿ ಪಂಚೈವ ಕ್ರಮಾತ್ ಜ್ಞಾನೇಂದ್ರಿಯಾಣಿ ತು ॥ ೨೨ ॥**

ವಿಷಯಾಣಾಂ-ವಿಷಯಗಳ, ಪಂಚಕಂ ಚ-ಐದರ ಸಮೂಹವು ಸಹ, ಏತನ್ನಾಮಕಂ ಏವ-ಇದೇ ನಾಮವುಳ್ಳದ್ದು (ಶಬ್ದ ಮೊದಲಾದ ತನ್ಮಾತ್ರೆಗಳ ಹೆಸರುಗಳುಳ್ಳದ್ದೇ), ಸ್ಯಾತ್-ಆಗುತ್ತದೆ; ಜ್ಞಾನೇಂದ್ರಿಯಾಣಿ ತು-ಜ್ಞಾನೇಂದ್ರಿಯಗಳೂ, ಪಂಚ-ಐದು(ಶ್ರೋತ್ರಾದಿಗಳು), ಕ್ರಮಾತ್-ಕ್ರಮವಾಗಿ, ತದ್‌ಜ್ಞಾಪಕಾನಿ ಏವ-ಆ ವಿಷಯಗಳ ಜ್ಞಾನವನ್ನುಂಟುಮಾಡುವವುಗಳೇ (ಆಗಿವೆ).

---

ನಾಶವುಳ್ಳವೂ ಆಗಿವೆ(೨೦). ಈ ಆಕಾಶಾದಿ ಪಂಚಭೂತಗಳಿಗೆ ಕಾರಣವಾದವುಗಳು ಪಂಚತನ್ಮಾತ್ರೆಗಳೆಂದು ಹೇಳಲ್ಪಡುತ್ತವೆ:[1] ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬುವೇ ಈ ಐದು ತನ್ಮಾತ್ರೆಗಳು(೨೧). ಈ ತನ್ಮಾತ್ರೆಗಳ ನಾಮದಿಂದಲೇ, ಆಯಾ ಗುಣಗಳುಳ್ಳ ವಸ್ತುಗಳು(ವಿಷಯಗಳು) ಕರೆಯಲ್ಪಡುತ್ತವೆ; ಆ ವಸ್ತುಗಳ ಜ್ಞಾನವನ್ನುಂಟುಮಾಡಿಕೊಡುವವುಗಳೇ ಜ್ಞಾನೇಂದ್ರಿಯಗಳು; ತನ್ಮಾತ್ರೆಗಳು ಐದು—ವಿಷಯಗಳೂ ಐದು—ಜ್ಞಾನೇಂದ್ರಿಯಗಳೂ ಐದೇ; ಶಬ್ದಾದಿ ಪಂಚವಿಷಯಗಳು

---

1. ಪಂಚಭೂತಗಳ ಉತ್ಪತ್ತಿಗೆ ಕಾರಣಗಳಾದ ಅವುಗಳ ಸೂಕ್ಷ್ಮರೂಪಗಳೇ ತನ್ಮಾತ್ರೆಗಳು; ಶಬ್ದದಿಂದ ಆಕಾಶವೂ, ಆಕಾಶದಿಂದ ಸ್ಪರ್ಶವೂ, ಸ್ಪರ್ಶದಿಂದ ವಾಯುವೂ, ವಾಯುವಿನಿಂದ ರೂಪವೂ, ಅದರಿಂದ ತೇಜಸ್ಸೂ ಅದರಿಂದ ರಸವೂ, ರಸದಿಂದ ಜಲವೂ, ಜಲದಿಂದ ಗಂಧವೂ, ಗಂಧದಿಂದ ಪೃಥ್ವಿಯೂ ಉತ್ಪನ್ನವಾಗುತ್ತವೆ; ಇದಕ್ಕೆ ವಿರುದ್ಧಕ್ರಮದಿಂದ ಇವುಗಳ ಲಯವೂ ಸಂಭವಿಸುತ್ತದೆ.

'ಧಾನಾ ಭೂಮೌ ಪ್ರಲೀಯಂತೇ ಭೂಮಿರ್ಗಂಧೇ ಪ್ರಲೀಯತೇ ।
ಅಪ್ಸು ಪ್ರಲೀಯತೇ ಗಂಧ ಆಪಶ್ಚ ಸ್ವಗುಣೇ ರಸೇ ।
ಲೀಯತೇ ಜ್ಯೋತಿಷಿ ರಸೋ ಜ್ಯೋತೀರೂಪೇ ಪ್ರಲೀಯತೇ ।
ರೂಪಂ ವಾಯೌ ಸ ಚ ಸ್ಪರ್ಶೇ ಲೀಯತೇ ಸೋಽಪಿ ಚಾಂಬರೇ ।
ಅಂಬರಂ ಶಬ್ದತನ್ಮಾತ್ರೇ....।' ಇತ್ಯಾದಿ (ಭಾಗವತ)

ವಾಕ್ಯಗಳು, ಪಂಚಭೂತಗಳ ಲಯಕ್ರಮವನ್ನು ನಿರೂಪಿಸುತ್ತವೆ. ಕಾರ್ಯಗಳು ಕಾರಣಗಳಲ್ಲಿ ಲಯಹೊಂದುವುದರಿಂದ, ಗಂಧಾದಿ ತನ್ಮಾತ್ರೆಗಳು ಪೃಥಿವ್ಯಾದಿಗಳಿಗೆ ಕಾರಣವೆಂದು ಸಿದ್ಧವಾಗುತ್ತದೆ; ಗಂಧವು ಜಲದಲ್ಲಿ ಲಯಹೊಂದುವುದೆಂದು ಹೇಳಿರುವುದರಿಂದ ಜಲದಿಂದ ಗಂಧವೂ, ಗಂಧದಿಂದ ಪೃಥ್ವಿಯೂ ಹುಟ್ಟುತ್ತವೆಂದೂ ಸಿದ್ಧವಾಗುತ್ತದೆ; ಹೀಗೆಯೇ ಇತರ ತತ್ತ್ವಗಳ ವಿಷಯಕ್ಕೂ ತಿಳಿಯಬೇಕು. ಶಬ್ದಾದಿಗಳು ಕ್ರಮವಾಗಿ ಆಕಾಶಾದಿಗಳ ಗುಣಗಳೂ (ಧರ್ಮವೂ) ಆಗಿವೆ. ಆದ್ದರಿಂದ ಪಂಚತನ್ಮಾತ್ರೆಗಳು ಪಂಚಭೂತಗಳಿಗೆ ಬೀಜಗಳೆಂದು ಹೇಳಲ್ಪಡುತ್ತವೆ.

**ಶ್ರೋತ್ರಂ ತ್ವಕ್ ನಯನಂ ಜಿಹ್ವಾ ನಾಸಿಕಾ ಪಂಚಮೀ ಸ್ಮೃತಾ ।**
**ಹಾನೋಪಾದಾನಗಮನವಚನೋತ್ಸರ್ಜನಾನಿ ಚ ॥ ೨೩ ॥**

**ಕರ್ಮಾಣಿ ತೇಷಾಂ ಸಿದ್ಧ್ಯರ್ಥಂ ಹಸ್ತೌ ಪಾದೌ ತಥೈವ ವಾಕ್ ।**
**ಉಪಸ್ಥಂ ಪಾಯುರಿತ್ಯೇವ ಪಂಚ ಕರ್ಮೇಂದ್ರಿಯಾಣಿ ತು ॥ ೨೪ ॥**

ಶ್ರೋತ್ರಂ-ಶ್ರವಣ(ಕಿವಿ), ತ್ವಕ್-ಚರ್ಮ, ನಯನಂ-ಕಣ್ಣು, ಜಿಹ್ವಾ-ನಾಲಿಗೆ, ನಾಸಿಕಾ-ನಾಸಿಕವು(ಮೂಗು), ಪಂಚಮೀ-ಐದನೆಯದೆಂದು, ಸ್ಮೃತಾ-ತಿಳಿಯಲ್ಪಡುತ್ತದೆ; ಹಾನೋಪಾದಾನಗಮನವಚನೋತ್ಸರ್ಜನಾನಿ ಚ-ಬಿಡುವುದು ಹಿಡಿಯುವುದು ಕೈಗಳು (ಹಸ್ತ), ಗಮನ-ಕಾಲುಗಳು (ಪಾದಗಳು), ಮಾತನಾಡುವುದು(ವಾಕ್), (ಉತ್ಸರ್ಜನಾನಿ-ಮಲಮೂತ್ರಗಳನ್ನು ವಿಸರ್ಜನೆ ಮಾಡುವ) ಗುದಉಪಸ್ಥಗಳೂ; ತೇಷಾಂ-ಅವುಗಳ(ಹಸ್ತಪಾದಾದಿಗಳ), ಕರ್ಮಾಣಿ-ಕರ್ಮಗಳು, ಸಿದ್ಧ್ಯರ್ಥಂ-ಸಿದ್ಧಿಸಲಿಕ್ಕಾಗಿ, ಹಸ್ತೌ-ಕೈಗಳು, ಪಾದೌ-ಕಾಲುಗಳು, ತಥಾ ಏವ-ಹಾಗೆಯೇ, ವಾಕ್-ವಾಗಿಂದ್ರಿಯವೂ, ಉಪಸ್ಥಂ-ಗುಹ್ಯೇಂದ್ರಿಯವೂ, ಪಾಯುಃ-ಗುದವೂ, ಇತ್ಯೇವ-ಹೀಗೆಂದು, ಕರ್ಮೇಂದ್ರಿಯಾಣಿ-ಕರ್ಮೇಂದ್ರಿಯಗಳು, ಪಂಚ-ಐದು (ಇರುತ್ತವೆ).

**ವಿಷಾಮನುಗ್ರಹಾರ್ಥಾಯ ತಥಾ ಸ್ಮೃತ್ಯಾದಿಹೇತವೇ ।**
**ಸಂಕಲ್ಪಾತ್ಮವಿಕಲ್ಪಾತ್ಮಮನ ಏಕಾದಶಂ ಸ್ಮೃತಂ ॥ ೨೫ ॥**

---

ಕ್ರಮವಾಗಿ ಪಂಚಜ್ಞಾನೇಂದ್ರಿಯಗಳಿಂದ ಗ್ರಹಿಸಲ್ಪಡುತ್ತವೆ[1](೨೨). ಆ ಜ್ಞಾನೇಂದ್ರಿಯಗಳು, ಶ್ರೋತ್ರ (ಶ್ರವಣಶಕ್ತಿ-ಶಬ್ದ), ತ್ವಕ್(ಸ್ಪರ್ಶ), ನಯನ(ಕಣ್ಣು-ರೂಪ), ಜಿಹ್ವಾ (ನಾಲಿಗೆ-ರಸ), ನಾಸಿಕಾ(ಘ್ರಾಣ-ಗಂಧ), ಎಂದು ಐದು; ಹಿಡಿವುದು-ಬಿಡುವುದು, ಸಂಚರಿಸುವುದು, ಮಾತನಾಡುವುದು, ಮಲವಿಸರ್ಜನೆ, ಮೂತ್ರವಿಸರ್ಜನೆಗಳನ್ನು ಮಾಡುವುದೆಂಬ ಕರ್ಮಗಳ ಸಿದ್ಧಿಗಾಗಿ (ಈ ಕಾರ್ಯಗಳು ನಡೆಯಲಿಕ್ಕಾಗಿ) ಹಸ್ತ ಪಾದ, ವಾಕ್, ಗುದ, ಉಪಸ್ಥಗಳೆಂಬ ಕರ್ಮೇಂದ್ರಿಯಗಳು ಐದೂ, ಇರುತ್ತವೆ (೨೩-೨೪). ಜ್ಞಾನ ಕರ್ಮೇಂದ್ರಿಯಗಳೆಂಬ ಈ ಹತ್ತು ಇಂದ್ರಿಯಗಳ ಸಹಾಯಾರ್ಥ

---

1. ಒಂದಕ್ಕಿಂತ ಅಧಿಕವಾದ ತನ್ಮಾತ್ರೆಗಳುಳ್ಳ ವಿಷಯಗಳು, ಆಯಾ ತನ್ಮಾತ್ರೆಗಳನ್ನು ವಿಷಯೀಕರಿಸುವ ಒಂದಕ್ಕಿಂತ ಹೆಚ್ಚಾದ ಜ್ಞಾನೇಂದ್ರಿಯಗಳಿಂದಲೂ ಗ್ರಹಿಸಲ್ಪಡುತ್ತವೆ. ಉದಾ:—ರೂಪ-ಗಂಧಗಳುಳ್ಳ ವಸ್ತುವು, ಕಣ್ಣು ಮತ್ತು ನಾಸಿಕ(ಘ್ರಾಣ)ಗಳಿಂದ ಗ್ರಹಿಸಲ್ಪಡುತ್ತದೆ; ಕೇವಲ ಶಬ್ದಾತ್ಮಕವಾದುದು, ಶ್ರೋತ್ರೇಂದ್ರಿಯಕ್ಕೆ ಮಾತ್ರ ಗೋಚರಿಸುತ್ತದೆ—ಅನ್ಯಜ್ಞಾನೇಂದ್ರಿಯಗಳು ಯಾವುವೂ ಗ್ರಹಿಸಲಾರವು; ಇತ್ಯಾದಿ.

ಏಷಾಂ-ಈ ಹತ್ತು ಇಂದ್ರಿಯಗಳು, ಅನುಗ್ರಹಾರ್ಥಾಯ-ಅನುಗ್ರಹಕ್ಕಾಗಿ (ಸಹಾಯಾರ್ಥವಾಗಿ), ತಥಾ-ಮತ್ತು ಸ್ಮೃತ್ಯಾದಿ ಹೇತವೇ-ಸ್ಮರಣಾದಿ ವ್ಯಾಪಾರ ಕ್ಕೋಸ್ಕರ. (ಪೂರ್ವಾನುಭವಗಳನ್ನು ಜ್ಞಾಪಿಸಿಕೊಡಲು ಅವಶ್ಯಕವಾದ ಸಂಸ್ಕಾರ ಯುಕ್ತವಾದ), ಸಂಕಲ್ಪಾತ್ಮ ವಿಕಲ್ಪಾತ್ಮ ಮನಃ-ಸಂಕಲ್ಪವಿಕಲ್ಪರೂಪದ (ಇದನ್ನು ಮಾಡುವೆನು, ಎಂಬ ಮೊದಲಾದ ವಿವಿಧ ಸಂಕಲ್ಪಗಳನ್ನು ಮಾಡುವ ಮತ್ತು ಬಿಡುವ ಶಕ್ತಿಯುಳ್ಳ) ಮನಸ್ಸು ಏಕಾದಶಂ-ಹನ್ನೊಂದನೆಯದೆಂದು, ಸ್ಮೃತಂ-ತಿಳಿಯಲ್ಪಡುತ್ತದೆ.

**ಏಕಾದಶೇಂದ್ರಿಯಾಣ್ಯೇವಂ ತನ್ಮಾತ್ರಾ ಪಂಚಕಂ ತಥಾ ।**
**ಷೋಡಶೈವ ಕಲಾಃ ಪ್ರೋಕ್ತಾ ಲಿಂಗದೇಹಸ್ತದಾತ್ಮಕಃ ॥ ೨೬ ॥**

ಏವಂ-ಹೀಗೆ, ಏಕಾದಶೇಂದ್ರಿಯಾಣಿ-ಹನ್ನೊಂದು ಇಂದ್ರಿಯಗಳೂ, ತಥಾ-ಹಾಗೂ, ತನ್ಮಾತ್ರಾ ಪಂಚಕಂ-ತನ್ಮಾತ್ರೆಗಳ ಐದು, ಷೋಡಶ ಏವ-ಹದಿನಾರು ಮಾತ್ರ, ಕಲಾಃ-ಕಲೆಗಳೆಂದು, ಪ್ರೋಕ್ತಾಃ-ಹೇಳಲ್ಪಡುತ್ತವೆ; ಲಿಂಗದೇಹಃ-ಲಿಂಗದೇಹವು, ತದಾತ್ಮಕಃ-(ಈ ಹದಿನಾರು ಕಲೆಗಳಿಂದ, ತತ್ವಾಂಶಗಳಿಂದ-ಸೂಕ್ಷ್ಮ ಭಾಗಗಳಿಂದ), ಇವುಗಳಿಂದ ರಚಿತವಾದ ಸ್ವರೂಪವುಳ್ಳದ್ದೆಂದು, (ತಿಳಿಯಲ್ಪಟ್ಟಿದೆ).

**ಸರ್ವೇಷಾಮಪಿ ಜೀವಾನಾಮಮುಕ್ತಾನಾಂ ಭವೇದಯಂ ।**
**ಬ್ರಹ್ಮಾದಿತತ್ವದೇವಾನಾಂ ಮಹತತ್ತ್ವಾದಿರೂಪಕಃ ॥ ೨೭ ॥**

ಅಮುಕ್ತಾನಾಂ-ಅಮುಕ್ತರಾದ (ಮೋಕ್ಷವನ್ನು ಹೊಂದಿರದ), ಸರ್ವೇಷಾಂ-ಸಕಲ, ಜೀವಾನಾಂ ಅಪಿ-ಜೀವರಿಗೆ ಸಹ, ಅಯಂ-ಈ ಲಿಂಗದೇಹವು (ಹದಿನಾರು ಕಲೆಗಳುಳ್ಳದ್ದು), ಭವೇತ್-ಆಗಿರುತ್ತದೆ; ಬ್ರಹ್ಮಾದಿ ತತ್ವದೇವಾನಾಂ-ಬ್ರಹ್ಮ ಮೊದಲಾದ ತತ್ವಾಭಿಮಾನಿ ದೇವತೆಗಳಿಗೆ, ಮಹತತ್ತ್ವಾದಿರೂಪಕಃ-ಮಹತತ್ತ್ವವೇ ಮೊದಲಾದ

---

ವಾಗಿ (ಅವುಗಳಿಂದಾಗುವ ವಿವಿಧ ಕರ್ಮಗಳನ್ನು ನಡೆಸಲಿಕ್ಕೂ), ಪೂರ್ವಾನುಭವಗಳನ್ನು ಜ್ಞಾಪಿಸಿಕೊಡಲು ಕಾರಣವಾದ ಸಂಸ್ಕಾರಗಳನ್ನು ತನ್ನಲ್ಲಿಟ್ಟುಕೊಂಡು ಅವುಗಳ ಸ್ಮರಣೆಯನ್ನು ಕಾಲಕಾಲಕ್ಕೆ ಉಂಟುಮಾಡಿಕೊಡುವ, ಹಾಗೂ, ವಿವಿಧ ಸಂಕಲ್ಪಗಳನ್ನು ಮಾಡಲು ಮತ್ತು ಬಿಡಲು ಶಕ್ತವಾದ, ಮನಸ್ಸನ್ನು ಹನ್ನೊಂದನೆಯ ಇಂದ್ರಿಯವೆಂದು ಜ್ಞಾನಿಗಳು ತಿಳಿಯುತ್ತಾರೆ(೨೫). ಹೀಗಿರುವ ಹನ್ನೊಂದು ಮನ ಮೊದಲಾದ ಇಂದ್ರಿಯಗಳ ಹಾಗೂ ಪಂಚತನ್ಮಾತ್ರೆಗಳ ಕಲೆಗಳು (ಈ ಹದಿನಾರರ ಸೂಕ್ಷ್ಮಾಂಶಗಳಿಂದ) ರಚಿತವಾದುದು, ಲಿಂಗದೇಹವು (೨೬). ಈ ಹದಿನಾರು ಕಲೆಗಳ ಲಿಂಗದೇಹವು, ಸಮಸ್ತ ಜೀವರಿಗೆ ಇದ್ದು ಅದು ಅವರ ಸ್ವರೂಪದೇಹವನ್ನು ಆಚ್ಛಾದಿಸಿರುತ್ತದೆ; ಬ್ರಹ್ಮಾದಿ ತತ್ವಾಭಿಮಾನಿ ದೇವತೆಗಳಿಗೆ, ಲಿಂಗದೇಹವು ಮಹತತ್ತ್ವವೇ ಮೊದಲಾದ ತತ್ವಗಳ ಸೂಕ್ಷ್ಮ ಕಲೆಗಳಿಂದ, ನಿರ್ಮಿತವಾದುದಾಗಿರುತ್ತದೆ(೨೭). ಅಲ್ಲಿಯೂ (ಬ್ರಹ್ಮಾದಿ ತಾತ್ವಿಕರ

ತತ್ತ್ವಾಂಶಗಳಿಂದ ಆದ(ಲಿಂಗದೇಹಃ-ಲಿಂಗದೇಹವು, ಅಸ್ತಿ-ಇರುತ್ತದೆ, ಎಂದು ಮುಂದಿನ ಶ್ಲೋಕದಿಂದ ಅನ್ವಯ).[1]

**ಲಿಂಗದೇಹೋಸ್ತಿ ತತ್ರಾಪಿ ಕಲಾಃ ಸೂಕ್ಷ್ಮಾಸ್ತು ಷೋಡಶ ।**
**ಅನಾದಿಲಿಂಗದೇಹೋಽಯಂ ಸಾಕ್ಷಾದ್ದರ್ಶನತೋ ಮಮ ॥ ೨೮ ॥**

**ಪ್ರಾರಬ್ಧಾನಾಂ ಕ್ಷಯೇ ಜಾತೇ ನಶ್ಯತ್ಯೇವ ನ ಸಂಶಯಃ ।**

ತತ್ರಾಪಿ-ಬ್ರಹ್ಮಾದಿ ತಾತ್ತ್ವಿಕ ದೇವತೆಗಳಲ್ಲಿ ಸಹ, ಸೂಕ್ಷ್ಮಾಃ-ಸೂಕ್ಷ್ಮಗಳಾದ, ಷೋಡಶಕಲಾಃ-ಹದಿನಾರು ಕಲೆಗಳು, ತು-ಇರುತ್ತವೆಯಷ್ಟೆ;[2] ಅಯಂ-ಈ, ಅನಾದಿಲಿಂಗದೇಹಃ-ಅನಾದಿಯಾದ ಲಿಂಗದೇಹವು, ಮಮ-ನನ್ನ ಸಾಕ್ಷಾದ್ದರ್ಶನತಃ-ಪ್ರತ್ಯಕ್ಷದರ್ಶನದಿಂದ, ಪ್ರಾರಬ್ಧಾನಾಂ-ಪ್ರಾರಬ್ಧಕರ್ಮಗಳ, ಕ್ಷಯೇ-ನಾಶವು, ಜಾತೇ-ಉಂಟಾಗುತ್ತಿರಲು, ನಶ್ಯತಿ ಏವ-ನಾಶವನ್ನು ಹೊಂದುತ್ತದೆ, ನ ಸಂಶಯಃ-ಸಂಶಯವಿಲ್ಲ (ನಿಶ್ಚಯವು).

**ಸತ್ತ್ವಭಾಗಸ್ತು ಸತ್ತ್ವೇ ಸ್ಯಾಲ್ಲೀನಸ್ತಮಸಿ ತಾಮಸಃ ॥ ೨೯ ॥**

**ಅತಃ ಪ್ರಾಕೃತಮೇತತ್ಸ್ಯಾತ್ಸಾಂತಂ ಚಾನಾದಿಮತ್ ಸ್ಮೃತಂ ।**

ಲಿಂಗದೇಹಗಳಲ್ಲಿ ಸಹ) ಪೂರ್ವೋಕ್ತ ಷೋಡಶಕಲೆಗಳು, ಸೂಕ್ಷ್ಮಾಂಶಗಳಿಂದ ಇರುತ್ತವೆ; ಹೀಗಿರುವ ಲಿಂಗದೇಹವು, (ಸರ್ವರಿಗೂ) ಅನಾದಿಯಾದುದು; ನನ್ನ ಸಾಕ್ಷಾದ್ದರ್ಶನವಾದ ನಂತರ, ಪ್ರಾರಬ್ಧಕರ್ಮದ ನಾಶವಾದೊಡನೆ, ಈ ಲಿಂಗದೇಹವೂ ನಾಶಹೊಂದುತ್ತದೆ—ಸಂಶಯವಿಲ್ಲ(೨೮). ಲಿಂಗದೇಹವು ನಾಶಹೊಂದಿದಾಗ ಅದರ ರಚನೆಯಲ್ಲಿ ಸೇರಿದ ಸತ್ತ್ವಗುಣಾಂಶವು ಸತ್ತ್ವರಾಶಿಯಲ್ಲಿಯೂ, ತಮೋಗುಣಾಂಶವು

---

1. ಬ್ರಹ್ಮದೇವನ ಲಿಂಗದೇಹವೂ ಷೋಡಶಕಲಾತ್ಮಕವೇ ಆದರೂ, ಮಹತ್ತತ್ತ್ವದಿಂದಲೇ ಉಕ್ತವಾದ ೧೬ ಕಲೆಗಳೂ ಉತ್ಪನ್ನಗಳಾದ್ದರಿಂದ, ಅವುಗಳಿಂದ ಅತ್ಯಂತ ಸೂಕ್ಷ್ಮವೂ ಮೂಲಭೂತವೂ ಆದ ಮಹತ್ತತ್ತ್ವರೂಪವಾದುದೇ ಆತನ ಲಿಂಗದೇಹವೆಂದು ಹೇಳಲ್ಪಡುತ್ತದೆ; ಮಹತ್ತತ್ತ್ವವನ್ನುಳಿದು ಇತರ ತತ್ತ್ವಾಂಶಗಳು ಬ್ರಹ್ಮದೇವನ ಲಿಂಗದೇಹರಚನೆಯಲ್ಲಿ ಸೇರಿದ್ದರೂ, ಅವು ಕಾರ್ಯಾಸಮರ್ಥಗಳಾಗಿ, ಆಚ್ಛಾದಾರಕರಂತೆ ಬದ್ಧಿರುತ್ತವೆ; ಹೀಗೆಯೇ, ಬ್ರಹ್ಮದೇವನಿಂದ ಕೆಳಗಿನ ಕಕ್ಷೆಗಳಲ್ಲಿರುವ ಇತರ ರುದ್ರೇಂದ್ರಾದಿ ತತ್ತ್ವಾಭಿಮಾನಿಗಳ ಲಿಂಗದೇಹಗಳು ಸಹ, ಅಹಂಕಾರ ತತ್ತ್ವಾದಿಗಳ ಕಲೆಗಳಿಂದ ನಿರ್ಮಿತಗಳಾಗಿದ್ದು ಕೆಳಗಿನ ತತ್ತ್ವಗಳ ಕಲೆಗಳು ಕಾರ್ಯಾಸಮರ್ಥಗಳಾಗಿದ್ದು ತದಭಿಮಾನಿಗಳು ಆಚ್ಛಾದಾರಕರಾಗಿ ಮಾತ್ರ ಇರುತ್ತಾರೆಂದು ತಿಳಿಯಬೇಕು; ತತ್ತ್ವಾಭಿಮಾನಿದೇವತೆಗಳೆಲ್ಲರ ಲಿಂಗದೇಹಗಳನ್ನೂ ಅದರಿಂದಾಗುವ ಕಾರ್ಯಗಳನ್ನೂ ಪ್ರಧಾನವಾಗಿ ಮುಖ್ಯಪ್ರಾಣನೇ ನಿರ್ವಹಿಸುತ್ತಾನೆಂದು ಹೇಳಲಾಗುತ್ತದೆ.

2. ಹಿಂದಿನ ಶ್ಲೋಕದ ಟಿಪ್ಪಣಿಯನ್ನು ನೋಡಿರಿ.

ಸತ್ತ್ವಭಾಗಃ ತು-(ಈ ಲಿಂಗದೇಹರಚನೆಯಲ್ಲಿ ಉಪಾದಾನವಾಗಿ ಉಪಯೋಗಿಸಲಾದ) ಸತ್ತ್ವಗುಣದ ಅಂಶವು, ಸತ್ತ್ವೇ-ಸತ್ತ್ವಗುಣದಲ್ಲಿಯೂ, ತಾಮಸಃ-ತಮೋಗುಣವು, ತಮಸಿ-ತಮೋಗುಣದಲ್ಲಿಯೂ,[1] ಲೀನಃ ಸ್ಯಾತ್-ಅಡಗುತ್ತದೆ (ಪ್ರವೇಶಿಸುತ್ತದೆ); ಅತಃ-ಈ ಕಾರಣದಿಂದ, ಏತತ್-ಈ ಲಿಂಗದೇಹವು, ಪ್ರಾಕೃತಂ ಸ್ಯಾತ್-ಪ್ರಾಕೃತವೆಂದು ಹೇಳಲ್ಪಡುತ್ತದೆ; ಚ-ಮತ್ತು ಸಾಂತಂ-ನಾಶವುಳ್ಳದುದೂ, ಅನಾದಿಮತ್-ಅನಾದಿತ್ವವುಳ್ಳದುದೂ, ಸ್ಮೃತಂ-(ಎಂದು) ತಿಳಿಯಲಾಗುತ್ತದೆ.

**ಯಥಾ ವ್ರೀಹ್ಯಾದಿಧಾನ್ಯಾನಾಂ ಪಶುವೃಕ್ಷಾದಿದೇಹಿನಾಂ ॥ ೩೦ ॥**

**ತತ್ತದ್ಬೀಜಾನುಸಾರೇಣ ಮೃತ್ತೇಜೋ ಜಲಯೋಗತಃ ।**
**ಯಥಾ ನಾನಾವಿಧಾವೃದ್ಧಿಸ್ತಥೈಷಾಂ ಮಹದಾದಿನಾಂ ॥ ೩೧ ॥**

ಯಥಾ-ಹೇಗೆ, ವ್ರೀಹ್ಯಾದಿ ಧಾನ್ಯಾನಾಂ-ಭತ್ತ(ಅಕ್ಕಿ) ಮುಂತಾದ ಧಾನ್ಯಗಳಿಗೆ, ಪಶುವೃಕ್ಷಾದಿದೇಹಿನಾಂ-ಪಶು ವೃಕ್ಷ ಮೊದಲಾದ ದೇಹಗಳುಳ್ಳ ಪ್ರಾಣಿಗಳಿಗೆ, ತತ್ತದ್ಬೀಜಾನುಸಾರೇಣ-ಆಯಾ(ಧಾನ್ಯದ) ಬೀಜಸ್ವಭಾವವನ್ನನುಸರಿಸಿ, ಮೃತ್ತೇಜೋ ಜಲಯೋಗತಃ-ಪೃಥ್ವಿ(ಮಣ್ಣು) ತೇಜಸ್ಸು(ಸೂರ್ಯಕಿರಣಾದಿ), ಜಲ(ನೀರು) ಗಳ ಸಂಬಂಧದಿಂದ, ಯಥಾ-ಯಾವ ಪ್ರಕಾರದ, ನಾನಾವಿಧಾವೃದ್ಧಿಃ-ಬಹುವಿಧವಾದ

---

ತಮೋರಾಶಿಯಲ್ಲಿಯೂ ಅಡಗುತ್ತವೆ; ಹೀಗೆ, ಸೃಷ್ಟಿಯಲ್ಲಿ ಉಪಯೋಗಿಸಲಾದ ಮೂಲಪ್ರಕೃತಿಯ ಏಕದೇಶವಾದ ಸತ್ತ್ವತಮೋಗುಣಗಳು ಸಾಮ್ಯಾವಸ್ಥೆಯನ್ನು ಹೊಂದಿದಾಗ, (ಎಂದರೆ ಪ್ರಳಯಕಾಲದಲ್ಲಿ) ಅವುಗಳಲ್ಲಿ ಲಿಂಗದೇಹಗಳ ಸತ್ತ್ವ ತಮೋಗುಣಗಳೂ ಸೇರುವುದರಿಂದ, ಲಿಂಗದೇಹವು ಪ್ರಾಕೃತವೆನಿಸುತ್ತದೆ; ಅದು ಅನಾದಿಯಾದರೂ ನಾಶವುಳ್ಳದ್ದು(೨೯). ಹೇಗೆ ಅಕ್ಕಿ ಮುಂತಾದ ಧಾನ್ಯಗಳಿಗೂ ಪ್ರಾಣಿಗಳ ಪಶು ವೃಕ್ಷಾದಿ ದೇಹಗಳಿಗೂ, ಆಯಾ ಬೀಜಾನುಸಾರವಾಗಿ ಮತ್ತು ಮಣ್ಣು-ಜಲ-ಸೂರ್ಯರಶ್ಮಿ ಮೊದಲಾದವುಗಳ ಸಂಯೋಗದಿಂದ, ವಿವಿಧವಾದ ಬೆಳವಣಿಗೆಯು ಕಂಡುಬರುತ್ತದೆಯೋ, ಹಾಗೆ ಮಹದಾದಿ ತತ್ತ್ವಗಳಿಗೂ ಅಭಿವೃದ್ಧಿಯುಂಟಾಗುತ್ತದೆ(೩೦-೩೧). ಈ

---

1. ಲಿಂಗದೇಹದ ಷೋಡಶಕಲೆಗಳು ತ್ರಿಗುಣಗಳ ವಿಕಾರಗಳಾದ ಮಹತ್ತತ್ತ್ವ, ಅಹಂಕಾರತತ್ತ್ವ ಮೊದಲಾದವುಗಳಿಂದ ಆದವುಗಳು; ಲಿಂಗದೇಹದ ನಾಶವೆಂದರೆ, ಅದರ ರಚನೆಯಲ್ಲಿ ಸೇರಿರುವ ಸತ್ತ್ವ-ತಮೋಗುಣಾಂಶಗಳು (ರಜೋಗುಣದ ಸತ್ತ್ವ-ತಮೋಭಾಗಗಳು ಸಹ), ಸೃಷ್ಟಿಯಲ್ಲಿ ಉಪಯೋಗಿಸಲಾದ ಗುಣಗಳು, ಸಾಮ್ಯಾವಸ್ಥೆಯನ್ನು ಹೊಂದಿದಾಗ (ಪ್ರಲಯಕಾಲದಲ್ಲಿ), ಆ ಸತ್ತ್ವತಮೋಗುಣರಾಶಿಯಲ್ಲಿ ಲೀನವಾಗುವುವೆಂದರ್ಥ. ಈ ಕಾರಣದಿಂದ ಲಿಂಗದೇಹವು ಪ್ರಾಕೃತವೆಂದು ಹೇಳಲಾಗುತ್ತದೆ. (ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ) ಶುದ್ಧಸತ್ತ್ವತಮಗಳು ಅಪ್ರಾಕೃತಗಳೆನಿಸುತ್ತವೆ. ಇಲ್ಲಿ ತಾತ್ಪರ್ಯ ೧೬-೧೯ ನೋಡಿರಿ.

ವೃದ್ಧಿಯೋ(ಬೆಳವಣಿಗೆಯು ಸಂಭವಿಸುತ್ತದೆಯೋ), ತಥಾ-ಹಾಗೆ, ಏಷಾಂ-ಈ, ಮಹದಾದಿನಾಂ-ಮಹದಾದಿ ತತ್ತ್ವಗಳಿಗೆ(ವೃದ್ಧಿಯುಂಟಾಗುತ್ತದೆ).

ತಥಾತಥಾಭಿವೃದ್ಧ್ಯರ್ಥಂ ತತ್ತತ್ತತ್ತ್ವಸ್ಯ ಸರ್ಜನಂ ।
ಸೃಷ್ಟ್ಯಾದೌ ಕ್ರಿಯತೇಽವಶ್ಯಂ ಪೂರ್ವೋಕ್ತವಿಧಿನಾ ತತಃ ॥ ೩೨ ॥

ವ್ಯುತ್ಕ್ರಮಾತ್ಪ್ರಲಯಸ್ತೇಷಾಂ ಪ್ರಕೃತೌ ಜಾಯತೇ ಪುನಃ ।
ಸಾದಿಸಾಂತಮಿದಂ ಪ್ರೋಕ್ತಂ ಪ್ರಾಕೃತಂ ತವ ಸನ್ನಿಧೌ ॥ ೩೩ ॥

ತಥಾ-ಹಾಗೆ, ತಥಾ-ವಿವಿಧವಾದ, ಅಭಿವೃದ್ಧ್ಯರ್ಥಂ-ಅಭಿವೃದ್ಧಿಗಾಗಿ, ಅವಶ್ಯಂ-ಅವಶ್ಯಕವಾದ, ತತ್ತತ್ತತ್ತ್ವಸ್ಯ-ಆಯಾ(ಮಹದಾದಿ) ತತ್ತ್ವಗಳ, ಸರ್ಜನಂ-ಸೃಷ್ಟಿಯು, ಸೃಷ್ಟ್ಯಾದೌ-ಸೃಷ್ಟಿಯ ಪ್ರಾರಂಭದಲ್ಲಿ, ಪೂರ್ವೋಕ್ತ ವಿಧಿನಾ-ಹಿಂದೆ ಹೇಳಿರುವಂತೆ, ಕ್ರಿಯತೇ-ಮಾಡಲ್ಪಡುತ್ತದೆ; ತತಃ-ಆ ಸೃಷ್ಟಿಕ್ರಮದಿಂದ, ವ್ಯುತ್ಕ್ರಮಾತ್-ವಿರುದ್ಧಕ್ರಮದಿಂದ (ಮೊದಲು ಸೃಷ್ಟವಾದುದು, ನಂತರ ಸೃಷ್ಟವಾದ ತತ್ತ್ವದ ನಾಶದ ನಂತರ ಎಂಬುವ ಕ್ರಮದಿಂದ), ತೇಷಾಂ-ಆ ತತ್ತ್ವಗಳ ಪ್ರಲಯಃ-ಪ್ರಲಯವು, ಜಾಯತೇ-ಉಂಟಾಗುತ್ತದೆ; ಪುನಃ-ಮತ್ತೆ(ಮೊದಲು ಸೃಷ್ಟವಾದ ತತ್ತ್ವವು), ಪ್ರಕೃತೌ-ಪ್ರಕೃತಿಯಲ್ಲಿ (ಜಾಯತೇ-ಹುಟ್ಟುತ್ತದೆ-ಸೇರಿಕೊಳ್ಳುತ್ತದೆ); ತವ ಸನ್ನಿಧೌ-(ಹೇ ಬ್ರಹ್ಮ!) ನಿನ್ನೆದುರಿಗೆ, ಇದಂ-ಈ, ಪ್ರಾಕೃತಂ-ಪ್ರಕೃತಿನಿರ್ಮಿತವಾದ, ಸಾದಿಸಾಂತಂ-ಆದಿಯುಳ್ಳದುದೂ ಅಂತವುಳ್ಳದುದೂ (ಪ್ರಕೃತಿಯಿಂದ ಉತ್ಪನ್ನವಾಗುವುದೂ, ನಾಶವುಳ್ಳದ್ದೂ) ಆದ ವಸ್ತು ಸಮುದಾಯವು, ಪ್ರೋಕ್ತಂ-ಹೇಳಲ್ಪಟ್ಟಿತು.

ಪ್ರಕೃತಿಪ್ರಾಕೃತಾದಿವಿಭಾಗಕಥನವೆಂಬ ೧೭ನೇ ಅಧ್ಯಾಯವು ಮುಗಿದುದು.

---

ತತ್ತ್ವಗಳ ಅಭಿವೃದ್ಧಿಗಾಗಿಯೇ ಸೃಷ್ಟ್ಯಾರಂಭದಲ್ಲಿ ಆಯಾ ತತ್ತ್ವಗಳು ಹಿಂದೆ ಹೇಳಿದಂತೆ ಸೃಷ್ಟವಾಗುತ್ತವೆ;[1] ಪ್ರಲಯಕಾಲದಲ್ಲಿ, ಈ ತತ್ತ್ವಗಳು, ಸೃಷ್ಟಿಕ್ರಮಕ್ಕೆ ವಿರುದ್ಧವಾದ ಕ್ರಮದಿಂದ, ಲಯಹೊಂದುತ್ತವೆ; ಹೇ ಬ್ರಹ್ಮದೇವ! ನಿನಗಾಗಿ, ನಿತ್ಯವಾದ ಪ್ರಕೃತಿ, ಮತ್ತು ಉತ್ಪತ್ತಿನಾಶಗಳುಳ್ಳ ಪ್ರಾಕೃತ ತತ್ತ್ವಗಳನ್ನು ನಿರೂಪಿಸಿರುವೆನು(೩೨-೩೩).

೧೭ನೇ ಅಧ್ಯಾಯವು ಮುಗಿದುದು.

1. ಮಹದಾದಿ ತತ್ತ್ವಗಳು ಸೃಷ್ಟವಾದಮೇಲೆ ಅವುಗಳಲ್ಲಿ (ತ್ರಿವಿಧಾಹಂಕಾರತತ್ತ್ವ ಮೊದಲಾದವುಗಳಲ್ಲಿ ಸಹ) ಅರ್ಧಭಾಗವನ್ನು ಮಾತ್ರ ದೇವಾದಿಗಳ ದೇಹನಿರ್ಮಾಣಕ್ಕಾಗಿ ಉಪಯೋಗಿಸಿ, ಉಳಿದರ್ಧವು ಅವರ ದೇಹವೃದ್ಧಿಗಾಗಿ ಆಯಾ ತತ್ತ್ವಗಳು (ಯಾವ ದೇವತೆಯ ದೇಹವು ಯಾವ ತತ್ತ್ವದಿಂದ ನಿರ್ಮಿತವೋ ಆ ತತ್ತ್ವಾಂಶಗಳು ಅದರ ವೃದ್ಧಿಗಾಗಿ) ಉಪಯೋಗಿಸಲಾಗುತ್ತವೆ.

# ಅಧ್ಯಾಯ ೧೮

ಶ್ರೀವೇದವ್ಯಾಸಾಯ ನಮಃ

**ಶೌನಕ ಉವಾಚ—**

ಸೃಷ್ಟ್ಯಾದೌ ನಿರ್ಮಿತೋ ಬ್ರಹ್ಮಾ ತತಸ್ತತ್ತ್ವಾದಿದೇವತಾಃ ।
ಕ್ರಮೇಣ ನಿರ್ಮಿತಾಃ ಸೂತ ವಿಷ್ಣುನಾ ಪ್ರಭವಿಷ್ಣುನಾ ॥ ೧ ॥

ತತತ್ತತ್ತ್ವಾದಿದೇವಸ್ಯ ಯಾವತ್ ಪ್ರಜನನಂ ಭವೇತ್ ।
ತಾವತ್ ಪೂರ್ವಸ್ಯ ದೇವಸ್ಯ ಕಥಂ ತತ್ತ್ವಪ್ರವರ್ತನಂ ॥ ೨ ॥

ಕಥಂ ವಾ ಸ್ವೋಚ್ಚದೇವೇಷು ನೀಚಾನಾಂ ತತ್ತ್ವವೃತ್ತಿತಾ ।
ಏಷ ನಃ ಸಂಶಯೋ ವಿದ್ವಂಸ್ತ್ವಯಾಛೇದ್ಯೋ ಯಥಾತಥಂ ॥ ೩ ॥

**ಅರ್ಥ:—**ಸೂತ-ಹೇ ಸೂತರೇ!, ಸೃಷ್ಟ್ಯಾದೌ-ಸೃಷ್ಟಿಯ ಆರಂಭದಲ್ಲಿ (ಮೊದಲಿಗೆ), ಬ್ರಹ್ಮಾ-ಬ್ರಹ್ಮನು, ನಿರ್ಮಿತಃ-ಸೃಷ್ಟಿಸಲ್ಪಟ್ಟನು; ತತಃ-ಆ ನಂತರ, ಪ್ರಭವಿಷ್ಣುನಾ-ಸರ್ವಸೃಷ್ಟಿಶಕ್ತನಾದ, ವಿಷ್ಣುನಾ-ಶ್ರೀವಿಷ್ಣುವಿನಿಂದ, ತತ್ತ್ವಾದಿ ದೇವತಾಃ-ತತ್ತ್ವಾಭಿಮಾನಿ ದೇವತೆಗಳು, ಕ್ರಮೇಣ-ಕ್ರಮವಾಗಿ(ಸರಸ್ವತೀ ಭಾರತಿಯರು-ನಂತರ ಗರುಡ ಶೇಷ ರುದ್ರರು ಇತ್ಯಾದಿ ತಾರತಮ್ಯಕ್ರಮದಿಂದ), ನಿರ್ಮಿತಾಃ-ಸೃಷ್ಟರಾದರಷ್ಟೆ ತತತ್ತತ್ತ್ವಾದಿದೇವಸ್ಯ-ಆಯಾ ತತ್ತ್ವದ ಅಭಿಮಾನಿದೇವತೆಯ, ಪ್ರಜನನಂ-ಉತ್ಪತ್ತಿಯು, ಯಾವತ್‌ಭವೇತ್-ಯಾವಾಗ ಉಂಟಾಗುವುದೋ, ತಾವತ್-ಅಲ್ಲಿಯವರೆಗೆ, ಪೂರ್ವಸ್ಯ-ಮೊದಲಿನ(ಮೊದಲು ಹುಟ್ಟಿದ), ದೇವಸ್ಯ-ದೇವತೆಯ, ತತ್ತ್ವಪ್ರವರ್ತನಂ-(ದೇಹದಲ್ಲಿರುವ) ತತ್ತ್ವಾಂಶಗಳ ಪ್ರವರ್ತನೆಯು(ಪ್ರವೃತ್ತಿಯುಂಟಾಗುವುದು), ಕಥಂ-ಹೇಗೆ(ಯಾರಿಂದ ಆಗುತ್ತದೆ?); ಸ್ವೋಚ್ಚದೇವೇಷು-ತಮಗಿಂತ ಉತ್ತಮರಾದ ದೇವತೆಗಳ ದೇಹದಲ್ಲಿ, ನೀಚಾನಾಂ-ಕನಿಷ್ಠರಾದ (ಕೆಳಗಿನ ತತ್ತ್ವಗಳ

---

## ಅಧ್ಯಾಯ ೧೮

**ತಾತ್ಪರ್ಯ:—**ಶೌನಕರು ಪ್ರಶ್ನಿಸುತ್ತಾರೆ:—ಹೇ ಸೂತ! ಜಗತ್ಸೃಷ್ಟಿಯನ್ನು ಲೀಲೆಯಿಂದ ನಿರ್ವಹಿಸುವ ಶ್ರೀಮಹಾವಿಷ್ಣುವು, ಮೊದಲಿಗೆ ಬ್ರಹ್ಮದೇವನನ್ನು ಸೃಷ್ಟಿಮಾಡಿ, ನಂತರ ಕ್ರಮವಾಗಿ, ಇತರ ತತ್ತ್ವಾಭಿಮಾನಿ ದೇವತೆಗಳನ್ನು ಸೃಷ್ಟಿಮಾಡಿದನಷ್ಟೆ ಆಯಾ ತತ್ತ್ವದ ಅಭಿಮಾನಿ ದೇವತೆಯು ಹುಟ್ಟುವವರೆಗೆ, ಆ ಮೊದಲು ಹುಟ್ಟಿದ (ಬ್ರಹ್ಮ ಮೊದಲಾದವರ) ದೇಹಗತ ತತ್ತ್ವಗಳ ಪ್ರವರ್ತನೆಯು ಹೇಗೆ ನಡೆಯುತ್ತದೆ— ಯಾರಿಂದ ಆಗುತ್ತದೆ? ಮತ್ತು ಉತ್ತಮ ದೇವತೆಗಳ ದೇಹಗಳಲ್ಲಿರುವ ತತ್ತ್ವಗಳನ್ನು

ಅಭಿಮಾನಿಗಳಾದ) ದೇವತೆಗಳ, ತತ್ತ್ವವೃತ್ತಿತಾ-(ಆ ತತ್ತ್ವಗಳು ಪ್ರವರ್ತಿಸುವಂತೆ ಮಾಡುವುದು) ಪ್ರವರ್ತಕತ್ವವು, ಕಥಂ-ಹೇಗೆ ಯುಕ್ತವಾಗುತ್ತದೆ?; ವಿದ್ವನ್-ಹೇ ಜ್ಞಾನಿಯಾದ ಸೂತಾಚಾರ್ಯ! ನಃ-ನಮ್ಮಗಳ, ಏಷಃ-ಈ, ಸಂಶಯಃ-ಸಂಶಯವು, ತ್ವಯಾ-ನಿಮ್ಮಿಂದ, ಯಥಾತಥಂ-ಇದ್ದಂತೆ ವಿಷಯನಿರೂಪಣೆ ಮಾಡಿ (ಯಥಾರ್ಥ ಉಪದೇಶದಿಂದ), ಛೇದ್ಯಃ-ಪರಿಹರಿಸಲ್ಪಡಬೇಕು(ಕತ್ತರಿಸಲ್ಪಡತಕ್ಕದ್ದು).

**ಸೂತ ಉವಾಚ—**

**ಮುಖ್ಯತಃ ಸರ್ವತತ್ತ್ವಾನಾಂ ಚೇಷ್ಟಕೋ ಹರಿರೇಕಲಃ ।**
**ಯಥಾ ಸಚಿವರಾಹಿತ್ಯೇ ನೃಪತಿಃ ಸ್ವಯಮೇವ ತತ್ ॥ ೪ ॥**

**ಕಾರ್ಯಂ ಕರೋತಿ ವಾ ಕೈಶ್ಚಿದನ್ಯೈಃ ಸಚಿವಭೃತ್ಯಕೈಃ ।**
**ತಥಾ ಸರ್ವೇಷು ತತ್ತ್ವೇಷು ಸ್ವಯಮೇವ ಸ್ಥಿತೋ ಹರಿಃ ॥ ೫ ॥**

**ಉದ್ಬೋಧ್ಯ ನಿರ್ಮಮೇ ಸೃಷ್ಟೇರಾದೌ ಬ್ರಹ್ಮಾಣಮೇವ ಹಿ ।**

ಮುಖ್ಯತಃ-ಮುಖ್ಯವಾಗಿ, ಸರ್ವತತ್ತ್ವಾನಾಂ-ಎಲ್ಲ ತತ್ತ್ವಗಳ, ಚೇಷ್ಟಕಃ-ಪ್ರವರ್ತಕನು(ನಿಯಾಮಕನು), ಹರಿಃ-ಶ್ರೀಹರಿಯು, ಏಕಲಃ-ಒಬ್ಬನೇ(ಸ್ವತಂತ್ರನಾದ ತಾನೊಬ್ಬನೇ); ಯಥಾ-ಹೇಗೆ, ಸಚಿವರಾಹಿತ್ಯೇ-ಸಚಿವರಿಲ್ಲದಾಗ, ನೃಪತಿಃ-ರಾಜನು, ಸ್ವಯಂ ಏವ-ತಾನೇ, ವಾ-ಅಥವಾ, ಸಚಿವಭೃತ್ಯಕೈಃ-ಸಚಿವಭೃತ್ಯರಾದ, ಅನ್ಯೈಃ-

---

ಅವುಗಳ ಅಭಿಮಾನಿಗಳಾದ ಕನಿಷ್ಠ (ಅವರ) ದೇವತೆಗಳು ಹೇಗೆ ನಿಯಾಮಕರಾಗಿ ಪ್ರವೃತಿಗೊಳಿಸುತ್ತಾರೆ? (ಉದಾ:—ಬ್ರಹ್ಮನ ಚಕ್ಷುರಿಂದ್ರಿಯದ ಪ್ರವೃತ್ತಿಯು, ಸೂರ್ಯನ ಜನ್ಮವಾಗುವವರೆಗೆ ಯಾರಿಂದ ನಡೆಯುತ್ತದೆ? ಇತ್ಯಾದಿ); ಹೇ ವಿದ್ವನ್, ಸೂತ! ಈ ನಮ್ಮ ಸಂಶಯವನ್ನು ಯಥಾರ್ಥೋಪದೇಶದಿಂದ, ಪರಿಹರಿಸು—ಈ ವಿಷಯಕವಾದ ಸತ್ಯವನ್ನು ತಿಳಿಯಲು ಉತ್ಸುಕರಾಗಿದ್ದೇವೆ(೧-೩). ಸೂತನು ಹೇಳುತ್ತಾನೆ:— ಸಕಲ ತತ್ತ್ವಗಳ ಚೇಷ್ಟಕನು (ಪ್ರವರ್ತಕನು) ಮುಖ್ಯವಾಗಿ, ಸ್ವತಂತ್ರನಾದ ಶ್ರೀಹರಿಯೇ ಆಗಿದ್ದಾನೆ; ರಾಜನು, ಸಚಿವರಿಲ್ಲದಾಗ, ಅವರಿಂದ ಆಗಬೇಕಾದ ಕಾರ್ಯಗಳನ್ನು ಸ್ವಯಂ ತಾನೇ, ಅಥವಾ ಅವರೆಗೆ ನೇಮಕರಾದ ಸಚಿವ ಭೃತ್ಯರಿಂದ (ಉದಾ:—ಇಂದ್ರನ ಕಣ್ಣುಗಳ ಚೇಷ್ಟೆಯನ್ನು ಅಭಿಮಾನಿಯಾದ ಸೂರ್ಯನು ಇನ್ನೂ ಹುಟ್ಟದಿದ್ದರೂ, ಬ್ರಹ್ಮನ ಭೃತ್ಯರಾದ ಗರುಡಾದಿಗಳಿಂದ ಮಾಡಿಸುವಂತೆ), ನಿರ್ವಹಿಸುತ್ತಾನೆ (ತಾನೇ ಮಾಡುತ್ತಾನೆ ಅಥವಾ ಅನ್ಯರಿಂದ ಮಾಡಿಸುತ್ತಾನೆ); ಯಾವ ಸಚಿವರೂ ಸಚಿವಭೃತ್ಯರೂ ಹುಟ್ಟದ ಕಾಲದಲ್ಲಿ (ಮೊದಲಿಗೆ) ಬ್ರಹ್ಮದೇವನನ್ನು ಹುಟ್ಟಿಸುವಾಗ, ಆತನ ದೇಹಗತ ಸಕಲ ತತ್ತ್ವಗಳ ಚೇಷ್ಟಕನಾಗಿ ತಾನೇ ನಿಂತು, ಆತನನ್ನು ಸೃಷ್ಟಿಸಿದನು (೪-೫).

ಇತರರಿಂದ, ತತ್ಕಾರ್ಯಂ- ಆ ಕಾರ್ಯವನ್ನು (ಮುಂದೆ ಆ ಸ್ಥಾನಕ್ಕೆ ಬರುವ ಸಚಿವನು ಮಾಡಬೇಕಾದುದನ್ನು), ಕರೋತಿ-ಮಾಡುತ್ತಾನೆಯೋ (ನಿರ್ವಹಿಸುತ್ತಾನೆಯೋ), ತಥಾ-ಹಾಗೆ, ಹರಿಃ-ಶ್ರೀಹರಿಯು, ಸರ್ವೇಷು-(ಬ್ರಹ್ಮದೇಹದ) ಎಲ್ಲ ತತ್ತ್ವೇಷು-(ಮನ ಆದಿ ಇಂದ್ರಿಯಗಳಲ್ಲಿ ಸಹ), ಸ್ವಯಂ ಏವ-ತಾನೇ, ಸ್ಥಿತಃ-ನಿಂತು, ಉದ್ಯೋಧ್ಯ-(ಅವುಗಳನ್ನು ಕಾರ್ಯೋನ್ಮುಖವಾಗಿ ಮಾಡಿ) ಚೇಷ್ಟಿಸಿ (ಪ್ರವೃತ್ತಿಸಿ), ಸೃಷ್ಟೇಃ-ಸೃಷ್ಟಿಯ, ಆದೌ-ಮೊದಲಿಗೆ, ಬ್ರಹ್ಮಾಣಂ ಏವ-ಬ್ರಹ್ಮನನ್ನೇ, ನಿರ್ಮಮೇ-ಸೃಷ್ಟಿಸಿದನು; ಹಿ-ಹೀಗೆಂಬುದು ಶ್ರುತಿಸಿದ್ಧವು.

ಯದ್ಯತ್ ಸೃಜತಿ ವಿಶ್ವಾತ್ಮಾ ತತ್ರಾತ್ರಾವಿಶತಿ ಸ್ವಯಂ ॥ ೬ ॥

ಅತೋ ಬ್ರಹ್ಮಾಣಮಾವಿಶ್ಯ ತತ್ತತ್ತತ್ವಮಚೀಕ್ಲೃಪತ್ ।
ಜಾತೇ ಜಾತೇ ತತ್ತ್ವದೇವೇ ತತ್ತತ್ತತ್ತ್ವಂ ನಿಯೋಜಯೇತ್ ॥ ೭ ॥

ವಿಶ್ವಾತ್ಮಾ-ಜಗದೊಡೆಯನಾದ ಶ್ರೀವಿಷ್ಣುವು, ಯದ್ಯತ್-ಯಾವುಯಾವುದನ್ನು ಸೃಜತಿ-ಸೃಷ್ಟಿಮಾಡುತ್ತಾನೆಯೋ, ತತ್ರತತ್ರ-ಅಲ್ಲಲ್ಲಿ (ಆಯಾ ವಸ್ತುಗಳಲ್ಲಿ), ಸ್ವಯಂ-ತಾನೇ, ಆವಿಶತಿ-ಪ್ರವೇಶಿಸುತ್ತಾನೆ; ಅತಃ-ಹೀಗಿರುವುದರಿಂದ, ಬ್ರಹ್ಮಾಣಂ-(ತನ್ನಿಂದ ಮೊದಲು ಸೃಷ್ಟನಾದ) ಬ್ರಹ್ಮನನ್ನು ಆವಿಶ್ಯ-(ತಾನು) ಪ್ರವೇಶಿಸಿ, ತತ್‌ತತ್-ಆಯಾ, ತತ್ತ್ವಂ-ತತ್ತ್ವವನ್ನು ಅಚೀಕ್ಲೃಪತ್-(ತಾನೇ) ನಿಯಮನಮಾಡಿದನು; ತತ್ತ್ವದೇವೇ-ತತ್ತ್ವಾಭಿಮಾನಿದೇವತೆಯು, ಜಾತೇಜಾತೇ-ಹುಟ್ಟಿಹುಟ್ಟಿದಂತೆ (ತಾತ್ತ್ವಿಕದೇವತೆಗಳ ಜನ್ಮವಾದಂತೆ), ತತ್ತತ್ತತ್ತ್ವಂ-ಆಯಾ ತತ್ತ್ವವನ್ನು (ಅವರವರ ಅಧಿಕಾರಕ್ಕೊಳಪಟ್ಟ ತತ್ತ್ವಗಳನ್ನು), ನಿಯೋಜಯೇತ್-(ಅವರೊಂದಿಗೆ) ಯೋಜನೆ ಮಾಡುತ್ತಾನೆ. (ಆಯಾ ದೇವತೆಗಳನ್ನು ಆಯಾ ತತ್ತ್ವಗಳಲ್ಲಿ ಪ್ರವೇಶಗೊಳಿಸುತ್ತಾನೆ—ಅವರಿಗೆ ತಾನೇ ಎಲ್ಲ ತತ್ತ್ವಗಳ ನಿಯಾಮಕನಾಗಿರುತ್ತಾನೆ).

ಏವಮೇವಾಧಿಕೇ ದೇವೇ ತತ್ತ್ವದೇವೇಷು ವೈ ಹರಿಃ ।
ಅನ್ಯೇನಾಧಿಕದೇವೇನ ಸ್ವಯಂ ಚಾಪಿ ಪ್ರವರ್ತಯೇತ್ ॥ ೮ ॥

---

ಸರ್ವಾಂತರ್ಯಾಮಿಯಾದ ಶ್ರೀವಿಷ್ಣುವು, ತನ್ನಿಂದ ಸೃಷ್ಟವಾದ ಸರ್ವವನ್ನೂ ತಾನು ಮೊದಲು ಪ್ರವೇಶಿಸುತ್ತಾನೆ; ಮೊದಲು ಸೃಷ್ಟನಾದ ಬ್ರಹ್ಮದೇಹವನ್ನು ತಾನೇ ಪ್ರವೇಶಿಸಿ, ಆ ದೇಹಗತವಾದ ಮಹದಾದಿ ಎಲ್ಲ ತತ್ತ್ವಗಳ ಪ್ರವರ್ತಕನಾದನು; ತಾತ್ತ್ವಿಕದೇವತೆಗಳು ಹೇಗೆ ಹೇಗೆ ಉತ್ಪನ್ನರಾದರೋ (ಯಾವ ಯಾವ ಕಾಲದಲ್ಲಿ ಹುಟ್ಟಿದರೋ ಆಗಾಗ), ಹಾಗೆ ಅವರನ್ನು ಅವರವರ ಅಧಿಕಾರಕ್ಕೆ ಒಳಪಟ್ಟ ತತ್ತ್ವಗಳಲ್ಲಿ ಪ್ರವೇಶಗೊಳಿಸುತ್ತಾನೆ (೬-೭). ದೇವಶ್ರೇಷ್ಠನಾದ ಬ್ರಹ್ಮದೇವನಲ್ಲಿ ತಾನೇ ಆತನ ಮನ ಮೊದಲಾದ ತತ್ತ್ವಗಳ ಪ್ರವರ್ತಕನಾಗಿದ್ದು ಕೆಳಗಿನ ಇತರ ತತ್ತ್ವಾಭಿಮಾನಿಗಳ ಉತ್ಪತ್ತಿಯಾಗುತ್ತಿರಲು,

ಏವಂ ಏವ-ಹೀಗೆಯೇ, ಅಧಿಕದೇವೇ-ಉತ್ತಮ ದೇವತೆಯಲ್ಲಿ, ತತ್ತ್ವದೇವೇಷು ಚ-ತತ್ತ್ವಾಭಿಮಾನಿದೇವತೆಗಳಲ್ಲಿಯೂ ಸಹ, ಹರಿಃ-ಶ್ರೀವಿಷ್ಣುವು, ಸ್ವಯಂ-ತಾನೇ, ಅಪಿ ಚ-ಮತ್ತು, ಅನ್ಯೇನ-ಮತ್ತೊಬ್ಬ, ಅಧಿಕದೇವೇನ-(ತತ್ತ್ವಾಭಿಮಾನಿಯೇ ಆದ ಆ ದೇವತೆಗಿಂತ) ಶ್ರೇಷ್ಠನಾದ ದೇವತೆಯಿಂದ, (ಕ್ರಮವಾಗಿ), ಪ್ರವರ್ತಯೇತ್-(ಆಯಾ ದೇವತೆಯ ದೇಹಗತ ತತ್ತ್ವಗಳನ್ನು) ಪ್ರವೃತ್ತಿಸುವಂತೆ ಮಾಡುತ್ತಾನೆ.

**ನಿರ್ಮಿತಾಸ್ತತ್ತ್ವದೇವಾಸ್ತೇ ಪರಸ್ಪರಮವೀವದನ್ ।**
**ಕೋನು ಶ್ರೇಷ್ಠೋಽಸ್ಮಾಸು ಭವೇದಹಂ ವಾ ಶ್ರೇಷ್ಠ ಇತ್ಯಪಿ ॥ ೯ ॥**

ನಿರ್ಮಿತಾಃ-ಸೃಷ್ಟರಾದ, ತೇ-ಆ, ತತ್ತ್ವದೇವಾಃ-ತತ್ತ್ವದೇವತೆಗಳು, ಪರಸ್ಪರಂ-ಅನ್ಯೋನ್ಯವಾಗಿ (ತಮ್ಮತಮ್ಮಲ್ಲಿ), ಅವೀವದನ್-ವಾದಮಾಡಿಕೊಂಡರು; (ವಿವಾದ ವೇನೆಂದರೆ), ಅಸ್ಮಾಸು-ನಮ್ಮಲ್ಲಿ (ತತ್ತ್ವಾಭಿಮಾನಿಗಳಾದ ನಮ್ಮೆಲ್ಲರ ಮಧ್ಯದಲ್ಲಿ), ಕೋನು(ಕಃ ನು)-ಯಾರಾದರೆ, ಶ್ರೇಷ್ಠಃ-ಉತ್ತಮನು, ಭವೇತ್-ಆಗಿರುತ್ತಾನೆ? ಅಹಂ ವಾ-ನಾನೇ, ಶ್ರೇಷ್ಠಃ-ಶ್ರೇಷ್ಠನು, ಇತ್ಯಪಿ-ಹೀಗೆಂದು ಸಹ (ಪರಸ್ಪರ ವಾದಮಾಡಿದರು).

**ಸಪ್ರಾಣಾಸ್ತೇ ತತೋ ಜಗ್ಮುರ್ಬ್ರಹ್ಮಾಣಾಂ ವಿಷ್ಣುಮೇವ ಚ ।**
**ತದಾಜ್ಞಯಾವದದ್ಬ್ರಹ್ಮಾ ಪ್ರಾಣಾದ್ಯಾಸ್ತತ್ತ್ವದೇವತಾಃ ॥ ೧೦ ॥**

ಸಪ್ರಾಣಾಃ-ಮುಖ್ಯಪ್ರಾಣನಿಂದ ಸಹಿತರಾದ, ತೇ-ಆ ದೇವತೆಗಳು, ಬ್ರಹ್ಮಾಣಂ-ಬ್ರಹ್ಮದೇವನನ್ನು ವಿಷ್ಣುಂ ಏವ ಚ-ಶ್ರೀವಿಷ್ಣುವನ್ನು ಸಹ ಕುರಿತು (ಅವರಿಬ್ಬರ ಬಳಿ), ಜಗ್ಮುಃ-ಹೋದರು; ಬ್ರಹ್ಮಾ-ಬ್ರಹ್ಮದೇವನು, ತದಾಜ್ಞಯಾ-ಆ ವಿಷ್ಣುವಿನ ಆಜ್ಞೆಯಿಂದ, ಪ್ರಾಣಾದ್ಯಾಃ-ಮುಖ್ಯಪ್ರಾಣನೇ ಮೊದಲಾದ, ತತ್ತ್ವದೇವತಾಃ-ತತ್ತ್ವದೇವತೆಗಳನ್ನು ಕುರಿತು, ಅವದತ್-ಮಾತನಾಡಿದನು.

---

ಬ್ರಹ್ಮದೇಹದ ಆಯಾ ತತ್ತ್ವಗಳಲ್ಲಿ ಅವರನ್ನು ಪ್ರವೇಶಗೊಳಿಸುತ್ತಾನಲ್ಲದೇ, ರುದ್ರೇಂದ್ರಾದಿಗಳು ಸೃಷ್ಟರಾಗಲು ಅವರ ಚಕ್ಷುರಾದಿ ಇಂದ್ರಿಯಗಳನ್ನು ಕ್ರಮವಾಗಿ ಬ್ರಹ್ಮ-ರುದ್ರಾದಿಗಳಿಂದ ಪ್ರವರ್ತಿಸುವಂತೆ (ಸೂರ್ಯಾದಿ ಆ ಅಭಿಮಾನಿಗಳು ಸೃಷ್ಟರಾಗುವವರೆಗೆ) ಮಾಡುತ್ತಾನೆ (೮). ಮುಂದೆ ಕ್ರಮವಾಗಿ ಎಲ್ಲ ತತ್ತ್ವಾಭಿಮಾನಿ ದೇವತೆಗಳೂ ಸೃಷ್ಟರಾದರು; ಅವರೆಲ್ಲರೂ, ತಮ್ಮೊಳಗೆ ಯಾರು ಶ್ರೇಷ್ಠನೆಂಬ ವಿಷಯದಲ್ಲಿ ಪರಸ್ಪರ ವಿವಾದ ಮಾಡಿಕೊಂಡು, ನಾನೇ ಸರ್ವಶ್ರೇಷ್ಠನೆಂದು ಪ್ರತಿಯೊಬ್ಬರೂ ವಾದಿಸಲಾರಂಭಿಸಿದರು (೯). ಅವರೆಲ್ಲರೂ, ತಮ್ಮ ವಿವಾದದ ತೀರ್ಮಾನಕ್ಕಾಗಿ, ಮುಖ್ಯಪ್ರಾಣದೇವರ ಸಹಿತರಾಗಿ, ಬ್ರಹ್ಮ ಮತ್ತು ಶ್ರೀವಿಷ್ಣುವಿನ ಬಳಿ ಹೋದರು; ಅದನ್ನು ತಿಳಿದು ಬ್ರಹ್ಮದೇವನು, ಶ್ರೀವಿಷ್ಣುವಿನ ಆಜ್ಞೆಯಿಂದ, ಮುಖ್ಯಪ್ರಾಣಾದಿ ತತ್ತ್ವಾಭಿಮಾನಿ ದೇವತೆಗಳನ್ನು ಕುರಿತು ಈ ಮುಂದಿನಂತೆ ಹೇಳಿದನು (೧೦). ನಿಮ್ಮಲ್ಲಿ ಯಾವಾತನು. ಈ

**ಅಯಂ ಹಿ ಪೌರುಷೋ ದೇಹೋ ಗತೇ ಯಸ್ಮಿನ್ ಪತೇತ್ ಪುನಃ ।**
**ಉತ್ತಿಷ್ಠೇತ್ ಯತ್ಪ್ರವೇಶೇ ಚ ಸ ಏವ ಶ್ರೇಷ್ಠ ತಾಮಿಯಾತ್ ॥ ೧೧ ॥**

ಅಯಂ-ಈ, ಪೌರುಷಃ-ಪುರುಷಾಕಾರದ (ಮಹತತ್ತ್ವದಿಂದ ಸೃಷ್ಟವಾದ ಪುರುಷನಾಮಕ), ದೇಹಃ-ದೇಹವು, ಯಸ್ಮಿನ್-ಯಾರು (ನಿಮ್ಮಲ್ಲಿ ಯಾವಾತನು), ಗತೇ-ಹೊರಗೆ ಬರುತ್ತಿರಲು, ಪತೇತ್-ಬೀಳುತ್ತದೆಯೋ (ನಿಶ್ಚೇಷ್ಟಿತವಾಗುತ್ತದೆಯೋ), ಪುನಃ-ತಿರುಗಿ (ಮತ್ತೆ), ಯತ್ಪ್ರವೇಶೇಸ-ಯಾವಾತನ ಪ್ರವೇಶದಿಂದ, ಉತ್ತಿಷ್ಠೇತ್-ಎದ್ದು ನಿಲ್ಲುತ್ತದೆಯೋ (ಚೇಷ್ಟಿಸುವುದೋ), ಸ ಏವ-ಆತನೇ, ಶ್ರೇಷ್ಠತಾಂ-(ನಿಮ್ಮೆಲ್ಲರಲ್ಲಿ) ಶ್ರೇಷ್ಠತ್ವವನ್ನು, ಇಯಾತ್-ಹೊಂದುತ್ತಾನೆ (ಆತನೇ ಶ್ರೇಷ್ಠನು).

**ತತಸ್ತಥೇತಿ ತೈರುಕ್ತೋ ಏಕೈಕೋ ಗತವಾಂಸ್ತತಃ ।**
**ತತಃ ಕಾರ್ಯವಿಹೀನೋಽಭೂದ್ದೇಹೋ ನೈವ ಪಪಾತ ಸಃ ॥ ೧೨ ॥**

ತತಃ-ಅನಂತರ (ಬ್ರಹ್ಮನು ಹೀಗೆ ಹೇಳಲು), ತೈಃ-ಆ ತತ್ತ್ವದೇವತೆಗಳಿಂದ, ತಥೇತಿ-ಹಾಗೆಯೇ ಆಗಲೆಂದು, ಉಕ್ತಃ-ಹೇಳಲ್ಪಟ್ಟಿತು (ಬ್ರಹ್ಮದೇವನ ಪರೀಕ್ಷೆಗೆ ಒಪ್ಪಿದರು); ತತಃ-ಆಮೇಲೆ, (ತತಃ-ಆ ಪುರುಷದೇಹದಿಂದ), ಏಕೈಕಃ-ಒಬ್ಬೊಬ್ಬಾತನೇ, ಗತವಾನ್-ಹೊರಗೆ ಹೋದನು; ತತಃ-ಅದರಿಂದ, ದೇಹಃ-ಆ ಪುರುಷದೇಹವು, ಕಾರ್ಯವಿಹೀನಃ-(ಆ ದೇವತೆಯು) ಕಾರ್ಯವಿಲ್ಲದ್ದು (ಸೂರ್ಯ ದೇವನು ಹೊರಗೆ ಹೋಗಲು ಕಣ್ಣು ಕಾಣದುದು ಇತ್ಯಾದಿ), ಅಭೂತ್-ಆಯಿತು; ಸಃ-ಆ ದೇಹವು, ನೈವ ಪಪಾತ-ಬೀಳಲಿಲ್ಲ (ನಿಶ್ಚೇಷ್ಟಿತವಾಗಲಿಲ್ಲ).

**ಗತೇಷ್ವಪಿ ಚ ಸರ್ವೇಷು ತಥೈವಾವಸ್ಥಿತೋ ಹಿ ಸಃ ।**
**ಪ್ರಾಣೇ ಗತೇಽಪತಚ್ಚೇಷ್ಟಂ ವ್ಯಶೀರ್ಯತ ತತಃ ಪುನಃ ॥ ೧೩ ॥**

---

ಪುರುಷದೇಹದಿಂದ ಹೊರಗೆ ಬಂದಾಗ, ಈ ದೇಹವು ನಿಶ್ಚೇಷ್ಟಿತವಾಗಿ ಬೀಳುವುದೋ ಮತ್ತು ಯಾರ ಪ್ರವೇಶದಿಂದ, ಅದು ಚೇಷ್ಟಾಯುಕ್ತವಾಗಿ ಎದ್ದುನಿಲ್ಲುವುದೋ, ಆತನೇ ನಿಮ್ಮಲ್ಲಿ ಶ್ರೇಷ್ಠನೆಂದು ತಿಳಿಯಿರಿ (೧೧). ಬ್ರಹ್ಮದೇವನು, ಹೀಗೆ ಹೇಳಿದುದನ್ನು ಸರ್ವರೂ ಅಂಗೀಕರಿಸಿದರು; ಆ ಪುರುಷದೇಹದಿಂದ, ಒಬ್ಬೊಬ್ಬರಾಗಿ ಹೊರಗೆ ಬಂದರು; ಒಬ್ಬೊಬ್ಬ ದೇವತೆಯು ಹೊರಗೆ ಬಂದಂತೆ, ಆಯಾ ದೇವತಾಭಿಮನ್ಯವಾದ ತತ್ತ್ವದ ವ್ಯಾಪಾರವು ನಿಂತಿತು; ಆದರೆ ದೇಹವು ನಿಶ್ಚೇಷ್ಟಿತವಾಗಿ ಬೀಳಲಿಲ್ಲ (೧೨). ಎಲ್ಲ ದೇವತೆಗಳು ಹೊರಗೆ ಬಂದರೂ, ಆ ದೇಹವು ಹಾಗೆಯೇ ನಿಂತಿತ್ತು; ಮುಖ್ಯಪ್ರಾಣನು ಹೊರಗೆ ಬಂದೊಡನೆ, ಕೆಳಗೆ ಬಿತ್ತು ಮತ್ತು ನಂತರ ಕ್ರಮವಾಗಿ ನಶಿಸಲೂ ಆರಂಭಿಸಿತು (೧೩). ಮುಖ್ಯಪ್ರಾಣನು ದೇಹವನ್ನು ಬಿಟ್ಟ ನಂತರ ದೇಹವು ಕೊಳೆಯಲು

ಸರ್ವೇಷು- ಎಲ್ಲ ದೇವತೆಗಳು, ಗತೇಷು ಅಪಿ- ಆ ದೇಹವನ್ನು ಬಿಟ್ಟು ಹೊರಗೆ ಹೋದರೂ ಸಹ, ಸಃ- ಆ ದೇಹವು, ತಥಾ ಏವ- ಹಾಗೆಯೇ (ಮೊದಲಿನಂತೆ), ಅವಸ್ಥಿತಃ- ನಿಂತಿದ್ದಿತು; ಪ್ರಾಣೇ- ಮುಖ್ಯಪ್ರಾಣನು, ಗತೇ- ಹೊರಗೆ ಹೋಗುತ್ತಿರಲು, ಶೀಘ್ರಂ- ಶೀಘ್ರವಾಗಿ (ಬೇಗನೇ- ತತ್ಕಾಲದಲ್ಲಿ), ಅಪತತ್- (ಆ ದೇಹವು) ಕೆಳಗೆ ಬಿದ್ದಿತು; ತತಃ- ಆ ನಂತರ, ಪುನಃ- ಮತ್ತೆ ವ್ಯಶೀರ್ಯತ- ನಶಿಸಲು (ಕೊಳೆಯಲು) ಆರಂಭಿಸಿತು.

ಶರೀರಮಿತಿ ತಂ ಪ್ರಾಹುಃ ಪುನರ್ದಾರ್ಢ್ಯಾಯ ತೇಽಖಿಲಾಃ ।
ಏಕೈಕಶಃ ಪ್ರವಿವಿಶುಸ್ತೇ ದೇಹಂ ಸರ್ವಶೋಽಪಿ ವಾ ॥ ೧೪ ॥

ನೈವೋತ್ತಸ್ಥೌ ತದಾ ದೇಹಃ ತತಃ ಪ್ರಾಣೋಽವಿಶತ್ ಪ್ರಭುಃ ।
ಪ್ರವಿಷ್ಟಮಾತ್ರ ಉತ್ತಸ್ಥೌ ಪ್ರಾಣೇ ದೇಹೋಽಥ ತೇಽಖಿಲಾಃ ॥ ೧೫ ॥

ಪ್ರಾಣಂ ಕ್ಷಮಾಪಯಾಮಾಸುಃ ಸ್ಪರ್ಧಮಾನಾ ವೃಥಾ ವಯಂ ।
ಪ್ರತಿವಾದರತಾ ಭೂಮಾನ್ ತ್ವಯಾ ನಾಥ ವಿಮೋಹಿತಾಃ ॥ ೧೬ ॥

(ತತಃ- ಆ ಕಾರಣದಿಂದ), ತ್ವಂ- ಆ ದೇಹವನ್ನು ಶರೀರಂ ಇತಿ- ಶರೀರವೆಂದು, ಪ್ರಾಹುಃ- ಹೇಳುತ್ತಾರೆ (ಜ್ಞಾನಿಗಳು ಕರೆಯುವರು); ತೇ ಅಖಿಲಾಃ- ಆ ಎಲ್ಲರೂ, ಪುನಃ- ಮತ್ತೆ ದಾರ್ಢ್ಯಾಯ- (ಮುಖ್ಯಪ್ರಾಣನೇ ತಮ್ಮಲ್ಲಿ ಶ್ರೇಷ್ಠನೆಂಬುದನ್ನು) ದೃಢಪಡಿಸಿಕೊಳ್ಳಲಿಕ್ಕಾಗಿ, ಏಕೈಕಶಃ- ಒಬ್ಬೊಬ್ಬರಾಗಿ, ದೇಹಂ- ದೇಹವನ್ನು ತೇ- ಅವರು, ಸರ್ವಶಃ- ಸರ್ವರೂ, ಪ್ರವಿವಿಶುಃ- ಪ್ರವೇಶಿಸಿದರು; ತದಾ ಅಪಿ- ಆಗ ಸಹ (ಹಾಗೆ ಅವರೆಲ್ಲರೂ ಪ್ರವೇಶಿಸಿದರೂ), ದೇಹಃ- ದೇಹವು, ನ ಏವ ಉತ್ತಸ್ಥೌ- ಮೇಲೇಳಲೇ ಇಲ್ಲ (ಯಾವ ಚೇಷ್ಟೆಯೂ ಇಲ್ಲದೇ ಹಾಗೆಯೇ[1] ಬಿದ್ದಿತ್ತು); ತತಃ- ಆ ನಂತರ,

---

ಆರಂಭಿಸುವುದರಿಂದಲೇ, ಅದನ್ನು ಶರೀರ(ಶೃ—ಕೊಳೆಯುವುದು)ವೆಂದು ಕರೆಯುವರು; ಪುನಃ ತಮ್ಮಲ್ಲಿ ಯಾರು ಶ್ರೇಷ್ಠನೆಂಬುದರ ದಾರ್ಢ್ಯಕ್ಕಾಗಿ, ಆ ಎಲ್ಲರೂ ಒಬ್ಬೊಬ್ಬರಾಗಿ ದೇಹವನ್ನು ಪ್ರವೇಶಿಸಿದರು; ಆದರೂ ಯಾರ ಪ್ರವೇಶದಿಂದಲೂ ಮೇಲೇಳಲೇ ಇಲ್ಲ (ನಿಶ್ಚೇಷ್ಟಿತವಾಗಿಯೇ ಬಿದ್ದುಕೊಂಡಿತ್ತು); ಸಮರ್ಥನಾದ ಮುಖ್ಯಪ್ರಾಣನು ಪ್ರವೇಶಿಸಿದೊಡನೆ, ದೇಹವು ಚೇಷ್ಟಾಯುಕ್ತವಾಗಿ ಎದ್ದುನಿಂತಿತು; ಆಗ

---

1. ಒಬ್ಬೊಬ್ಬನ ಪ್ರವೇಶದಿಂದ ಆಯಾ ಒಂದೊಂದು ತತ್ತ್ವವೂ ಚೇಷ್ಟಿಸಲಿಲ್ಲ; ಸೂರ್ಯನ ಪ್ರವೇಶದಿಂದ, ಮುಖ್ಯಪ್ರಾಣನ ಪ್ರವೇಶವಿಲ್ಲದೇ, ಆ ದೇಹದ ಕಣ್ಣಿನ ನೋಡುವ ವ್ಯಾಪಾರವೂ ನಡೆಯಲಿಲ್ಲ—ಹೀಗೆ ಎಲ್ಲ ತತ್ತ್ವಗಳೂ ನಿಶ್ಚೇಷ್ಟಿತವಾಗಿದ್ದುವೆಂದು ತಿಳಿಯಬೇಕು; ಈ ಯಾರ ಪ್ರವೇಶವೂ ಇಲ್ಲದೇ ಮುಖ್ಯಪ್ರಾಣನೊಬ್ಬನ ಪ್ರವೇಶದಿಂದ, ಎಲ್ಲವೂ ಚೇಷ್ಟಿಸಿ, ದೇಹವು ಎದ್ದುನಿಂತ ಅನ್ವಪರೀಕ್ಷೆಯೂ ಉಪನಿಷತ್ತುಗಳಲ್ಲಿ ಉಕ್ತವಾಗಿದೆ.

ಪ್ರಭುಃ-ಸಮರ್ಥನಾದ, ಪ್ರಾಣಃ-ಮುಖ್ಯಪ್ರಾಣನು, ಆವಿಶತ್-(ಆ ದೇಹವನ್ನು) ಪ್ರವೇಶಿಸಿದನು; ಪ್ರಾಣೇ-ಮುಖ್ಯಪ್ರಾಣನು, ಪ್ರವಿಷ್ಟಮಾತ್ರೇ-ಪ್ರವಿಷ್ಟನಾದ ಮಾತ್ರದಿಂದ, ದೇಹಃ-ದೇಹವು, ಉತ್ತಸ್ಥೌ-ಮೇಲೆದ್ದಿತು(ಚೇಷ್ಟಾಯುಕ್ತವಾಯಿತು); ಅಥ-ಹೀಗಾದ ನಂತರ, ತೇ-ಆ, ಅಖಿಲಾಃ-ಸರ್ವದೇವತೆಗಳೂ, ಪ್ರಾಣಂ-ಮುಖ್ಯಪ್ರಾಣನನ್ನು, ಕ್ಷಮಾಪಯಾಮಾಸುಃ-ಕ್ಷಮೆಯನ್ನು ಯಾಚಿಸಿದರು; ಭೂಮನ್-ಹೇ ಗುಣಪೂರ್ಣ! ಮುಖ್ಯಪ್ರಾಣ! ವಯಂ-ನಾವು, ವೃಥಾ-ವ್ಯರ್ಥವಾಗಿ, ಸ್ಪರ್ಧಮಾನಾಃ-ನಿನ್ನೊಂದಿಗೆ ನಾವೇ ಶ್ರೇಷ್ಠರೆಂದು ಸ್ಪರ್ಧಿಸುವರಾಗಿ, ತ್ವಯಾ-ನಿನ್ನಿಂದ (ನಿನ್ನೊಡನೆ), ಪ್ರತಿವಾದರತಾಃ-ವಿರುದ್ಧವಾದದಲ್ಲಿ ತೊಡಗಿ, ನಾಥ-ಹೇ ಪ್ರಭೋ!, ವಿಮೋಹಿತಾಃ-ಮೋಹವಶರಾದೆವು.

ಅಥ ತ್ವಮಸಿ ನೋ ನಾಥಸ್ತ್ವದ್ದಾಸಾ ಅಖಿಲಾ ವಯಂ ।
ಇತ್ಥಮಾಸೀತ್ ಪುರಾ ವೃತ್ತಂ ತತೋ ದೇಹೇಷು ಸರ್ವಶಃ ॥ ೧೭ ॥

ಸಪ್ತ ಸಪ್ತ ಸಂಖ್ಯಾಕೈರ್ಮರುದ್ಭಿಃ ಪರಿವಾರಿತಃ ।
ಸೂತ್ರಂ ಪ್ರಾಣಃ ಸ್ಥಾವರೇಷು ಜಂಗಮೇಷು ವಿಶೇಷತಃ ॥ ೧೮ ॥

ಜಾಗ್ರತ್ತಿಷ್ಠತಿ ಸರ್ವೇಷು ಸ್ವಪತ್ಸ್ವಪಿ ಸದಾ ಪ್ರಭುಃ ।

ಅಥ-ಈ ಮುಂದೆ(ಈ ಪರೀಕ್ಷೆಯಿಂದ ನಮ್ಮ ಮೋಹವು ಪರಿಹೃತವಾಯಿತು), ತ್ವಂ-ನೀನು, ನಃ-ನಮಗೆ, ನಾಥಃ-ಸ್ವಾಮಿಯು, ಅಸಿ-ಆಗಿರುತ್ತೀ, ಅಖಿಲಾಃ-ಸಮಸ್ತರಾದ, ವಯಂ-ನಾವು, ತ್ವದ್ದಾಸಾಃ-ನಿನ್ನ ದಾಸರಾಗಿದ್ದೇವೆ; (ನೀನೇ ನಮ್ಮ

---

ಸಕಲತತ್ತ್ವದೇವತೆಗಳೂ ಮುಖ್ಯಪ್ರಾಣನ ಕ್ಷಮೆಯನ್ನು ಪ್ರಾರ್ಥಿಸಿ ಹೀಗೆ ವಿಜ್ಞಾಪಿಸಿಕೊಂಡರು. 'ಹೇ ಗುಣಪೂರ್ಣ! ಪ್ರಭೋ! ಮುಖ್ಯಪ್ರಾಣ! ನಾವು ವ್ಯರ್ಥವಾಗಿ ನಿನ್ನೊಡನೆ ಸ್ಪರ್ಧಿಸಿ, ನಾವೇ ಶ್ರೇಷ್ಠರೆಂದು ನಿನ್ನ ವಿರುದ್ಧ ವಾದಿಸಿ, ಮೋಹಿತರಾದೆವು(೧೪-೧೬). ಈಗ ನಮ್ಮ ಮೋಹವು, ಪರಿಹೃತವಾಯಿತು; ನೀನೇ ನಮ್ಮೆಲ್ಲರ ಸ್ವಾಮಿಯು—ನಾವೆಲ್ಲರೂ ನಿನ್ನ ದಾಸರು', ಎಂದು. ಹೀಗೆ ನಡೆದ ಪೂರ್ವವೃತ್ತಾಂತವು, ಮುಖ್ಯಪ್ರಾಣನೇ ಸಕಲತತ್ತ್ವದೇವತೆಗಳಲ್ಲಿ ಶ್ರೇಷ್ಠನೆಂಬುದನ್ನು ಸಾಧಿಸಿರುತ್ತದೆ; ಹೀಗೆ ಸರ್ವಶ್ರೇಷ್ಠನಾದ ಮುಖ್ಯಪ್ರಾಣನು, ೪೯ ಮರುದ್ಗಣದ ದೇವತೆಗಳಿಂದ ಪರಿವೃತನಾಗಿ(ಸೇವಿಸಲ್ಪಡುತ್ತ), ಸ್ಥಾವರ ಜಂಗಮ ರೂಪದ ಸರ್ವಪ್ರಾಣಿದೇಹಗಳಲ್ಲಿದ್ದು ಸರ್ವರ ಸರ್ವಚೇಷ್ಟಾಪ್ರದನಾಗಿರುತ್ತಾನೆ; ಸರ್ವಾಧಾರನಾಗಿದ್ದಾನೆ—ಸರ್ವರೂ ನಿದ್ರಿಸುವಾಗ ಸಹ, ಮುಖ್ಯಪ್ರಾಣನು, ಆ ಎಲ್ಲರ ದೇಹಗಳಲ್ಲಿ ಜಾಗೃತನಾಗಿಯೇ ಇರುತ್ತಾನೆ (೧೭-೧೮). ಇಷ್ಟು ಮಾತ್ರವಲ್ಲ! ಜೀವರಿಗೆ

ಪ್ರಭು-ನಾವೆಲ್ಲ ನಿನ್ನ ಭೃತ್ಯರು, ಎಂಬುದನ್ನು ತಿಳಿದೆವು); ಇತ್ಥಂ-ಹೀಗೆ, ಪುರಾವೃತ್ತಂ-ಪೂರ್ವದಲ್ಲಿ ನಡೆದುದು, ಆಸೀತ್-ಆಯಿತು; ತತಃ-ಆದ್ದರಿಂದ, ಸರ್ವಶಃ-ಸಮಸ್ತ ದೇಹೇಷು-ದೇಹಗಳಲ್ಲಿ ಪ್ರಾಣಃ-ಮುಖ್ಯಪ್ರಾಣನು, ಸಪ್ತಸಪ್ತ ಸಂಖ್ಯಾಕೈಃ-೪೯ ಸಂಖ್ಯೆಯಲ್ಲಿರುವ, ಮರುದ್ಭಿಃ-ಮರುತ್ತರೆಂಬ ವಾಯುಗಣದವರಿಂದ, ಪರಿವಾರಿತಃ-ಪರಿವೃತನಾಗಿ(ಸೇವಿಸಲ್ಪಡುತ್ತ), ಸ್ಥಾವರೇಷು-ವೃಕ್ಷಾದಿ ಸ್ಥಾವರ(ಸಂಚಾರ ವಿಲ್ಲದ) ಜೀವರಲ್ಲಿ ವಿಶೇಷತಃ-ವಿಶೇಷವಾಗಿ, ಜಂಗಮೇಷು-ಜಂಗಮ(ಸಂಚಾರವುಳ್ಳ) ಜೀವರಲ್ಲಿ ಸೂತ್ರಂ-(ಮಣಿಗಳಿಗೆ ಅವುಗಳನ್ನು ಧರಿಸಿರುವ ಸೂತ್ರದಂತೆ) ಆಧಾರನಾಗಿರುವನು; ಸರ್ವೇಷು-ಎಲ್ಲರೂ, ಸ್ವಪತ್ಸು ಅಪಿ-ನಿದ್ರಿಸುತ್ತಿದ್ದರೂ, ಸದಾ-ಯಾವಾಗಲೂ, ಪ್ರಭುಃ-ಮುಖ್ಯಪ್ರಾಣನು, ಜಾಗ್ರತ್ತಿಷ್ಠತಿ-ಜಾಗೃತನಾಗಿ (ಎಚ್ಚರನಾಗಿಯೇ) ಇರುತ್ತಾನೆ.[1]

**ಪ್ರವೇಶಯೇದಯಂ ಜೀವಾನ್ ನಾನಾದೇಹಾನ್ ಸ್ವಕರ್ಮಣಾ ॥ ೧೯ ॥**

---

ಅವರವರ ಕರ್ಮಾನುಸಾರವಾಗಿ ಸಿದ್ಧವಾದ ನಾನಾ ದೇಹಗಳನ್ನು ಹೊಂದಿಸುವವನೂ, ಈತನೇ; ಪ್ರತಿ ದೇಹದಲ್ಲಿ ಜೀವನೊಂದಿಗೆ, ಆಯುಷ್ಯವು ಮುಗಿಯುವವರೆಗೂ ಇದ್ದು ಆ ದೇಹವನ್ನು ವೃದ್ಧಿಗೊಳಿಸಿ, ರಕ್ಷಿಸಿ, ಆಯುಷ್ಯವು ಮುಗಿದೊಡನೆ, ಆ ದೇಹದಿಂದ ಜೀವನನ್ನು ಹಿಡಿದುಕೊಂಡು, ಶ್ರೀಹರಿಯನ್ನು ಮುಂದಿಟ್ಟುಕೊಂಡು ಹೊರಟು, ಅನ್ಯತ್ರ ಕರೆದೊಯ್ಯುತ್ತಾನೆ; ಜೀವಶರೀರಗಳ ಜಠರದಲ್ಲಿ (ಪ್ರಾಣ-ಅಪಾನರೂಪಗಳಿಂದ)[2] ಇರುತ್ತ ಚತುರ್ವಿಧವಾದ ಅನ್ನಗಳನ್ನು ಪಚನಮಾಡಿ, ಅನ್ನರಸಗಳನ್ನು ರೂಪಾಂತರಗೊಳಿಸಿ, ದೇಹದ ನಾನಾ ಅಂಗಗಳಿಗೆ ಮುಟ್ಟಿಸಿ, ಜೀವರು,

---

1. ಮುಖ್ಯಪ್ರಾಣನು ಪ್ರಳಯಕಾಲದಲ್ಲಿ ಸಹ ಪ್ರತಿಭಾತ ಪರಾವರನು; ಆತನಿಗೆ ಅಜ್ಞಾನಕಾರ್ಯಗಳಾದ ಸಂಶಯ ವಿಪರ್ಯಯಗಳಾಗಲಿ, ನಿದ್ರಾವಸ್ಥೆಯಾಗಲಿ, ಎಂದಿಗೂ ಇಲ್ಲ.

2. ಶ್ರೀಹರಿಯೇ ವೈಶ್ವಾನರನಾಮಕನಾಗಿ ಜಠರದಲ್ಲಿದ್ದು ಚತುರ್ವಿಧ ಅನ್ನಗಳನ್ನು ಪಚನಮಾಡುವ ಮುಖ್ಯಕರ್ತನು; ಅದರೂ ಮುಖ್ಯಪ್ರಾಣನ, ಪ್ರಾಣ-ಅಪಾನಗಳೆಂಬ ರೂಪಗಳಿಂದಲೇ ಆ ವ್ಯಾಪಾರವನ್ನು ಮಾಡಿಸುವೆನೆಂಬ ಸತ್ಯಸಂಕಲ್ಪವುಳ್ಳವನು. 'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ । ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥' (ಗೀತಾ) ಎಂಬಲ್ಲಿ ಈ ಪ್ರಮೇಯವು ನಿರೂಪಿತವಾಗಿದೆ. ಶ್ರೀಹರಿಯ ಪರಮಾನುಗ್ರಹಪಾತ್ರನಾದ ಶ್ರೀಮುಖ್ಯಪ್ರಾಣದೇವನು, ಅನಂತರೂಪಿಯಾಗಿ, ಶ್ರೀಹರಿಯೊಂದಿಗೆ ಜಗತ್ತಿನಲ್ಲಿ ವ್ಯಾಪಿಸಿದ್ದಾನೆ. 'ಯಾನಿ ಯಾನೀಹ ಕರ್ಮಾಣಿ ಜಗತಿ ಸ್ಯುರ್ಮಹಾಪತೇಃ । ಪ್ರಾಯಃ ಪ್ರಾಣಾಧಿಪೇತಾನಿ ಸಮಸ್ತಾನಿ ನ ಸಂಶಯಃ ॥' ಎಂಬ (ಸತ್ತತ್ತ್ವರತ್ನಮಾಲಾ) ವಾಕ್ಯವು, ಜಗತ್ಸಂಬಂಧವಾಗಿ ಸ್ವತಂತ್ರನಾದ ಶ್ರೀಹರಿಯು ನಿರ್ವಹಿಸುವ ಎಲ್ಲ ಕರ್ಮಗಳನ್ನು, ಆತನೊಬ್ಬನ ಅಧೀನನಾಗಿ ತಾನೂ ನಿರ್ವಹಿಸುತ್ತಾನೆಂದು, ಮುಖ್ಯಪ್ರಾಣನ ಅದ್ಭುತಮಹಿಮೆಯನ್ನು ನಿರೂಪಿಸುತ್ತದೆ.

**ನಿರ್ಮಿತಾನ್ಯಾವದಾಯುಷ್ಕಂ ವರ್ಧಯಿತ್ವಾ ತತೋಂತತಃ ।**
**ಪ್ರಯಾತಿ ಜೀವಮಾದಾಯ ಮಹೇಶ್ವರಪುರಸ್ಸರಃ ॥ ೨೦ ॥**

**ಅಯಂ ಹಿ ಜಾಠರೋ ಭೂತ್ವಾ ಪಚತ್ಯನ್ನಾನಿ ದೇಹಿನಾಂ ।**
**ಅಂಗಾನಿ ವರ್ಧಯತ್ಯೇಷು ಪ್ರಾಪಯಿತ್ವಾ ಸ್ವಪತ್ಸ್ವಪಿ ॥ ೨೧ ॥**

**ತತ್ತದನ್ನರಸಂ ಪಶ್ಚಾದ್ವಿಕರೋತ್ಯಯಮೇವ ಹಿ ।**

ಮುಖ್ಯಪ್ರಾಣನ ಮಹಿಮೆಯನ್ನೇ ವಿಸ್ತರಿಸುತ್ತಾರೆ:—

ಅಯಂ-ಈತನೇ(ಈ ಮುಖ್ಯಪ್ರಾಣನೇ), ಸ್ವಕರ್ಮಣಾ-ತಮ್ಮ ಕರ್ಮದಿಂದ, ನಿರ್ಮಿತಾನ್-ನಿರ್ಮಿತವಾದ(ಕರ್ಮಫಲರೂಪವಾದ), ನಾನಾ ದೇಹಾನ್-ವಿವಿಧ ದೇಹಗಳನ್ನು, ಜೀವಾನ್-ಜೀವರನ್ನು ಪ್ರವೇಶಯೇತ್-ಪ್ರವೇಶ ಮಾಡಿಸುತ್ತಾನೆ (ಜೀವರನ್ನು, ದೇಹಗಳನ್ನು ಹೊಂದುವಂತೆ ಮಾಡುತ್ತಾನೆ); ಯಾವತ್ ಆಯುಷ್ಕಂ-(ಆಯಾ ಜೀವರ) ಆಯುಷ್ಯ ಮುಗಿಯುವ ಪರ್ಯಂತ, ವರ್ಧಯಿತ್ವಾ-ಬೆಳೆಸಿ ರಕ್ಷಿಸಿಕೊಂಡು ಬಂದು, ಅಂತತಃ-ಕೊನೆಗೆ, ಜೀವಂ-ಜೀವನನ್ನು ಆದಾಯ-ತೆಗೆದುಕೊಂಡು, ತತಃ-ಆ ದೇಹದಿಂದ (ಆಯುಷ್ಯ ಮುಗಿದ ದೇಹದಿಂದ), ಮಹೇಶ್ವರ ಪುರಃಸರಃ-ಶ್ರೀಹರಿಯನ್ನು ಮುಂದಿಟ್ಟುಕೊಂಡು, ಪ್ರಯಾತಿ-ಪ್ರಯಾಣಮಾಡುತ್ತಾನೆ (ಬಿಟ್ಟು ಹೊರಡುತ್ತಾನೆ); ಅಯಂ ಹಿ-ಈ ಮುಖ್ಯಪ್ರಾಣನೇ, ಜಾಠರಃ-ಜಠರದಲ್ಲಿ (ಹೊಟ್ಟೆಯಲ್ಲಿ), ಭೂತ್ವಾ-ಇರುವವನಾಗಿ, ದೇಹಿನಾಃ-ದೇಹಧಾರಿಗಳಾದ ಜೀವರ, ಅನ್ನಾನಿ-(ಭೋಜನಮಾಡುವ ವಿವಿಧ) ಅನ್ನಗಳನ್ನು (ಭಕ್ಷ್ಯ-ಭೋಜ್ಯ-ಲೇಹ್ಯ-ಪೇಯಗಳೆಂಬ ನಾಲ್ಕು ವಿಧದ ಆಹಾರವಸ್ತುಗಳನ್ನು), ಪಚತಿ-ಪಚನ ಮಾಡುತ್ತಾನೆ; ಏಷು-ಜೀವರು, ಸ್ವಪತ್ಸು ಅಪಿ-ನಿದ್ರಿಸುತ್ತಿದ್ದರೂ, ಪಶ್ಚಾತ್-ನಂತರ (ಪಚನಮಾಡಿದ ನಂತರ, ತತ್ತದನ್ನರಸಂ-ಆಯಾ ಆಹಾರದ ರಸವನ್ನು, ವಿಕರೋತಿ-ವಿಕಾರಗೊಳಿಸಿ (ರೂಪಾಂತರ-ರಕ್ತಮಾಂಸಾದಿ ಪರಿವರ್ತಿಸಿ), ಪ್ರಾಪಯಿತ್ವಾ-(ಜೀವರಿಗೆ ಆಯಾ ವಿಕೃತ ಅನ್ನರಸಗಳನ್ನು) ಹೊಂದಿಸಿ (ದೇಹದ ಅಂಗಗಳಲ್ಲಿ ಸೇರಿಸಿ), ಅಯಂ ಏವ-ಈತನೇ, ಅಂಗಾನಿ(ದೇಹದ) ಅವಯವಗಳನ್ನು, ವರ್ಧಯತಿ-ಬೆಳೆಯುವಂತೆ ಮಾಡುತ್ತಾನೆ.

**ಜನಯತ್ಯಪ್ಯಯಂ ರೋಗಾನ್ ಜೀವಕರ್ಮಾನುಸಾರತಃ ॥ ೨೨ ॥**

---

ನಿದ್ರಿಸುತ್ತಿರುವಾಗ ಸಹ ಸತತವಾಗಿ ಜಾಗೃತನಾಗಿದ್ದು ಈ ವ್ಯಾಪಾರವನ್ನು ಮಾಡಿ, ದೇಹದ ಅವಯವಗಳನ್ನು ಪುಷ್ಟಿಗೊಳಿಸುತ್ತಾನೆ(೧೯-೨೦). ಜೀವರ ಕರ್ಮಾನುಸಾರವಾಗಿ, ಜೀವದೇಹಗಳಲ್ಲಿ ರೋಗಗಳನ್ನು ಹುಟ್ಟಿಸಿ, ಸ್ವಯಂ ತಾನೇ (ತನ್ನ

**ಶಮಯತ್ಯೌಷಧದ್ವಾರಾ ಸ ಏವ ಸ್ವಯಮೇವ ವಾ ।**
**ಕಾಲೇ ಕಾಲೇ ಸುಖಂ ದುಃಖಂ ದದಾತ್ಯೇಷೋಽಖಿಲಾಧಿಪಃ ॥ ೨೩ ॥**

**ಬಲಂ ಜ್ಞಾನಂ ಧೃತಿರ್ಬುದ್ಧಿರ್ಭಕ್ತಿಶ್ರದ್ಧಾತ ಏವ ಹಿ ।**
**ಪ್ರಾಣಸ್ಯಾಸ್ಯಾಪಿ ಸ ಪ್ರಾಣಃ ಶ್ರೀವಿಷ್ಣುಃ ಸಕಲೇಶ್ವರಃ ॥ ೨೪ ॥**

ಅಯಂ-ಈ ಮುಖ್ಯಪ್ರಾಣನೇ, ಜೀವಕರ್ಮಾನುಸಾರತಃ-ಜೀವರ ಕರ್ಮಾನುಸಾರವಾಗಿ, ರೋಗಾನ್ ಅಪಿ-ರೋಗಗಳನ್ನು ಜನಯತಿ-ಉಂಟುಮಾಡುತ್ತಾನೆ; ಸಃ ಏವ-ಆತನೇ, ಸ್ವಯಂ-ತಾನೇ, ವಾ-ಅಥವಾ, ಔಷಧದ್ವಾರಾ-ಔಷಧಗಳಿಂದ(ಔಷಧಿಗಳಲ್ಲಿದ್ದು), (ಕರ್ಮಾನುಸಾರತಃ-ಜೀವಕರ್ಮಾನುಸಾರವಾಗಿ), ಶಮಯತಿ-(ರೋಗಗಳನ್ನು) ನಾಶಗೊಳಿಸುತ್ತಾನೆ; ಕಾಲೇ ಕಾಲೇ-(ಕರ್ಮಾನುಸಾರ) ಆಯಾ ಕಾಲದಲ್ಲಿ ಸುಖಂ ದುಃಖಂ-ಸುಖವನ್ನು ದುಃಖವನ್ನು ಏಷಃ-ಈ, ಅಖಿಲಾಧಿಪಃ-ಸರ್ವಾಧಿಕಾರಿಯಾದ ಮುಖ್ಯಪ್ರಾಣನು, ದದಾತಿ-(ಜೀವರಿಗೆ) ಕೊಡುತ್ತಾನೆ(ಭೋಗಿಸುವಂತೆ ಮಾಡುತ್ತಾನೆ); ಬಲಂ-ಬಲವೂ(ದೇಹಶಕ್ತಿಯೂ), ಜ್ಞಾನಂ-ಜ್ಞಾನವೂ, ಧೃತಿಃ-ಧೈರ್ಯವೂ, ಬುದ್ಧಿಃ-ವಿವೇಕವೂ, ಭಕ್ತಿ-ಭಗವದ್ಭಕ್ತಿಯೂ, ಶ್ರದ್ಧಾ-ಶ್ರದ್ಧೆಯೂ, ಅತಃ ಏವ ಹಿ-ಈತನಿಂದಲೇ ಉಂಟಾಗುತ್ತವೆಂದು ಶಾಸ್ತ್ರಸಿದ್ಧವು; ಅಸ್ಯ-ಈ ವಿಧ ಮಹಿಮೆಗಳುಳ್ಳ, ಪ್ರಾಣಸ್ಯ ಅಪಿ-ಮುಖ್ಯಪ್ರಾಣನಿಗೂ, ಸಕಲೇಶ್ವರಃ-ಸರ್ವಜಗತ್ತಿನ ಸ್ವತಂತ್ರ ನಿಯಾಮಕನೂ ಸರ್ವಶಕ್ತನೂ ಆದ, ಶ್ರೀವಿಷ್ಣುಃ-ಶ್ರೀವಿಷ್ಣುವೇ, ಪ್ರಾಣಃ- ಪ್ರಾಣನು (ಚೇಷ್ಟಕನು) (ಮುಖ್ಯಪ್ರಾಣನಿಗೂ ಸರ್ವಶಕ್ತಿಪ್ರದನು).

**ವಿಶ್ವಸಾಕ್ಷೀ ಜಗದ್ಧಾತಾ ದಯಾಲುರ್ಭಕ್ತವತ್ಸಲಃ ।**
**ಹೃದಿಸ್ಥಃ ಸರ್ವಜೀವಾನಾಂ ಸ ಹರಿಃ ಸ ಶಿವಃ ಸ್ಮೃತಃ ॥ ೨೫ ॥**

---

ಅನುಗ್ರಹಮಾತ್ರದಿಂದ) ಅಥವಾ ಔಷಧಿಗಳ ದ್ವಾರಾ (ಔಷಧಿಗಳಲ್ಲಿದ್ದು) ರೋಗಗಳನ್ನು ಪರಿಹರಿಸುತ್ತಾನೆ; ಕರ್ಮಾನುಸಾರವಾಗಿ, ಕಾಲಕಾಲಕ್ಕೆ ಜೀವರಿಗೆ, ಸುಖದುಃಖಗಳ ಭೋಗವನ್ನುಂಟುಮಾಡುವಾತನೂ, ಸರ್ವಾಧಿಪನಾದ ಈತನೇ; ಸರ್ವರಿಗೂ, ಬಲ-ಜ್ಞಾನ-ಧೈರ್ಯ-ಬುದ್ಧಿ (ವಿವೇಕ), ಭಕ್ತಿ ಶ್ರದ್ಧೆಗಳೂ ಸಹ ಈತನಿಂದಲೇ ಲಭಿಸುತ್ತವೆ; ಈ ಪ್ರಕಾರದ ಮಹಾಮಹಿಮನಾದ ಮುಖ್ಯಪ್ರಾಣದೇವನಿಗೆ ಚೇಷ್ಟಕನೂ ಸರ್ವಶಕ್ತಿಪ್ರದನೂ ಆದವನು (ಪ್ರಾಣನಿಗೆ ಪ್ರಾಣನು) ಸರ್ವೇಶ್ವರನಾದ ಶ್ರೀ ಮಹಾವಿಷ್ಣುವೇ ಆಗಿದ್ದಾನೆ(೨೨-೨೪). ಈತನೇ ಸರ್ವಜ್ಞನು, ಜಗದ್ಧಾರಣಪೋಷಣಕರ್ತನು, ದಯಾಲುವು, ಭಕ್ತವತ್ಸಲನು, ಸರ್ವಜೀವರ ಹೃದಯದಲ್ಲಿರುತ್ತಾನೆ; ಆತನೇ ಹರಿಯು, ಆತನೇ ಶಿವನು, ಬ್ರಹ್ಮ ಪರಮಾತ್ಮ ಪರಬ್ರಹ್ಮನೆಂದೂ ಕರೆಯಲ್ಪಡುತ್ತಾನೆ; ಚಂದ್ರ, ಸೂರ್ಯ, ಅನಿಲ(ವಾಯು), ಅನಲ(ಅಗ್ನಿ), ಮುನಿ, ಇಂದ್ರ, ವರುಣ, ರುದ್ರ,

**ನಿರ್ಮಿತಾನ್ಯಾವದಾಯುಷ್ಯಂ ವರ್ಧಯಿತ್ವಾ ತತೋಽಂತತಃ ।**
**ಪ್ರಯಾತಿ ಜೀವಮಾದಾಯ ಮಹೇಶ್ವರಪುರಸ್ಸರಃ ॥ ೨೦ ॥**

**ಅಯಂ ಹಿ ಜಾಠರೋ ಭೂತ್ವಾ ಪಚತ್ಯನ್ನಾನಿ ದೇಹಿನಾಂ ।**
**ಅಂಗಾನಿ ವರ್ಧಯತ್ಯೇಷು ಪ್ರಾಪಯಿತ್ವಾ ಸ್ವಪತ್ಸ್ವಪಿ ॥ ೨೧ ॥**

**ತತ್ತದನ್ನರಸಂ ಪಶ್ಚಾದ್ವಿಕರೋತ್ಯಯಮೇವ ಹಿ ।**

ಮುಖ್ಯಪ್ರಾಣನ ಮಹಿಮೆಯನ್ನೇ ವಿಸ್ತರಿಸುತ್ತಾರೆ:—

ಅಯಂ-ಈತನೇ(ಈ ಮುಖ್ಯಪ್ರಾಣನೇ), ಸ್ವಕರ್ಮಣಾ-ತಮ್ಮ ಕರ್ಮದಿಂದ, ನಿರ್ಮಿತಾನ್-ನಿರ್ಮಿತವಾದ(ಕರ್ಮಫಲರೂಪವಾದ), ನಾನಾ ದೇಹಾನ್-ವಿವಿಧ ದೇಹಗಳನ್ನು, ಜೀವಾನ್-ಜೀವರನ್ನು ಪ್ರವೇಶಯೇತ್-ಪ್ರವೇಶ ಮಾಡಿಸುತ್ತಾನೆ (ಜೀವರನ್ನು ದೇಹಗಳನ್ನು ಹೊಂದುವಂತೆ ಮಾಡುತ್ತಾನೆ); ಯಾವತ್ ಆಯುಷ್ಯಂ-(ಆಯಾ ಜೀವರ) ಆಯುಷ್ಯ ಮುಗಿಯುವ ಪರ್ಯಂತ, ವರ್ಧಯಿತ್ವಾ-ಬೆಳೆಸಿ ರಕ್ಷಿಸಿಕೊಂಡು ಬಂದು, ಅಂತತಃ-ಕೊನೆಗೆ, ಜೀವಂ-ಜೀವನನ್ನು, ಆದಾಯ-ತೆಗೆದುಕೊಂಡು, ತತಃ-ಆ ದೇಹದಿಂದ (ಆಯುಷ್ಯ ಮುಗಿದ ದೇಹದಿಂದ), ಮಹೇಶ್ವರ ಪುರಃಸರಃ-ಶ್ರೀಹರಿಯನ್ನು ಮುಂದಿಟ್ಟುಕೊಂಡು, ಪ್ರಯಾತಿ-ಪ್ರಯಾಣಮಾಡುತ್ತಾನೆ (ಬಿಟ್ಟು ಹೊರಡುತ್ತಾನೆ); ಅಯಂ ಹಿ-ಈ ಮುಖ್ಯಪ್ರಾಣನೇ, ಜಾಠರಃ-ಜಠರದಲ್ಲಿ (ಹೊಟ್ಟೆಯಲ್ಲಿ), ಭೂತ್ವಾ-ಇರುವವನಾಗಿ, ದೇಹಿನಾಃ-ದೇಹಧಾರಿಗಳಾದ ಜೀವರ, ಅನ್ನಾನಿ-(ಭೋಜನಮಾಡುವ ವಿವಿಧ) ಅನ್ನಗಳನ್ನು (ಭಕ್ಷ್ಯ-ಭೋಜ್ಯ-ಲೇಹ್ಯ-ಪೇಯಗಳೆಂಬ ನಾಲ್ಕು ವಿಧದ ಆಹಾರವಸ್ತುಗಳನ್ನು), ಪಚತಿ-ಪಚನ ಮಾಡುತ್ತಾನೆ; ಏಷು-ಜೀವರು, ಸ್ವಪತ್ಸು ಅಪಿ-ನಿದ್ರಿಸುತ್ತಿದ್ದರೂ, ಪಶ್ಚಾತ್-ನಂತರ (ಪಚನಮಾಡಿದ ನಂತರ, ತತ್ತದನ್ನರಸಂ-ಆಯಾ ಆಹಾರದ ರಸವನ್ನು, ವಿಕರೋತಿ-ವಿಕಾರಗೊಳಿಸಿ (ರೂಪಾಂತರ-ರಕ್ತಮಾಂಸಾದಿ ಪರಿವರ್ತಿಸಿ), ಪ್ರಾಪಯಿತ್ವಾ-(ಜೀವರಿಗೆ ಆಯಾ ವಿಕೃತ ಅನ್ನರಸಗಳನ್ನು) ಹೊಂದಿಸಿ (ದೇಹದ ಅಂಗಗಳಲ್ಲಿ ಸೇರಿಸಿ), ಅಯಂ ಏವ-ಈತನೇ, ಅಂಗಾನಿ(ದೇಹದ) ಅವಯುವಗಳನ್ನು ವರ್ಧಯತಿ-ಬೆಳೆಯುವಂತೆ ಮಾಡುತ್ತಾನೆ.

**ಜನಯತ್ಯಪ್ಯಯಂ ರೋಗಾನ್ ಜೀವಕರ್ಮಾನುಸಾರತಃ ॥ ೨೨ ॥**

---

ನಿದ್ರಿಸುತ್ತಿರುವಾಗ ಸಹ ಸತತವಾಗಿ ಜಾಗ್ರತನಾಗಿದ್ದು ಈ ವ್ಯಾಪಾರವನ್ನು ಮಾಡಿ, ದೇಹದ ಅವಯವಗಳನ್ನು ಪುಷ್ಟಿಗೊಳಿಸುತ್ತಾನೆ(೧೯-೨೧). ಜೀವರ ಕರ್ಮಾನುಸಾರವಾಗಿ, ಜೀವದೇಹಗಳಲ್ಲಿ ರೋಗಗಳನ್ನು ಹುಟ್ಟಿಸಿ, ಸ್ವಯಂ ತಾನೇ (ತನ್ನ

ಶಮಯತ್ಯೌಷಧದ್ವಾರಾ ಸ ಏವ ಸ್ವಯಮೇವ ವಾ ।
ಕಾಲೇ ಕಾಲೇ ಸುಖಂ ದುಃಖಂ ದದಾತ್ಯೇಷೋಽಖಿಲಾಧಿಪಃ ॥ ೨೩ ॥

ಬಲಂ ಜ್ಞಾನಂ ಧೃತಿರ್ಬುದ್ಧಿರ್ಭಕ್ತಿಶ್ರದ್ಧಾತ ಏವ ಹಿ ।
ಪ್ರಾಣಸ್ಯಾಸ್ಯಾಪಿ ಸ ಪ್ರಾಣಃ ಶ್ರೀವಿಷ್ಣುಃ ಸಕಲೇಶ್ವರಃ ॥ ೨೪ ॥

ಅಯಂ-ಈ ಮುಖ್ಯಪ್ರಾಣನೇ, ಜೀವಕರ್ಮಾನುಸಾರತಃ-ಜೀವರ ಕರ್ಮಾನುಸಾರವಾಗಿ, ರೋಗಾನ್ ಅಪಿ-ರೋಗಗಳನ್ನು, ಜನಯತಿ-ಉಂಟುಮಾಡುತ್ತಾನೆ; ಸಃ ಏವ-ಆತನೇ, ಸ್ವಯಂ-ತಾನೇ, ವಾ-ಅಥವಾ, ಔಷಧದ್ವಾರಾ-ಔಷಧಗಳಿಂದ(ಔಷಧಿಗಳಲ್ಲಿದ್ದು), (ಕರ್ಮಾನುಸಾರತಃ-ಜೀವಕರ್ಮಾನುಸಾರವಾಗಿ), ಶಮಯತಿ-(ರೋಗಗಳನ್ನು) ನಾಶಗೊಳಿಸುತ್ತಾನೆ; ಕಾಲೇ ಕಾಲೇ-(ಕರ್ಮಾನುಸಾರ) ಆಯಾ ಕಾಲದಲ್ಲಿ ಸುಖಂ ದುಃಖಂ-ಸುಖವನ್ನು ದುಃಖವನ್ನು, ಏಷಃ-ಈ, ಅಖಿಲಾಧಿಪಃ-ಸರ್ವಾಧಿಕಾರಿಯಾದ ಮುಖ್ಯಪ್ರಾಣನು, ದದಾತಿ-(ಜೀವರಿಗೆ) ಕೊಡುತ್ತಾನೆ(ಭೋಗಿಸುವಂತೆ ಮಾಡುತ್ತಾನೆ); ಬಲಂ-ಬಲವೂ(ದೇಹಶಕ್ತಿಯೂ), ಜ್ಞಾನಂ-ಜ್ಞಾನವೂ, ಧೃತಿಃ-ಧೈರ್ಯವೂ, ಬುದ್ಧಿ-ವಿವೇಕವೂ, ಭಕ್ತಿ-ಭಗವಕ್ತಿಯೂ, ಶ್ರದ್ಧಾ-ಶ್ರದ್ಧೆಯೂ, ಅತಃ ಏವ ಹಿ-ಈತನಿಂದಲೇ ಉಂಟಾಗುತ್ತವೆಂದು ಶಾಸ್ತ್ರಸಿದ್ಧವು; ಅಸ್ಯ-ಈ ವಿಧ ಮಹಿಮೆಗಳುಳ್ಳ, ಪ್ರಾಣಸ್ಯ ಅಪಿ-ಮುಖ್ಯಪ್ರಾಣನಿಗೂ, ಸಕಲೇಶ್ವರಃ-ಸರ್ವಜಗತ್ತಿನ ಸ್ವತಂತ್ರ ನಿಯಾಮಕನೂ ಸರ್ವಶಕ್ತನೂ ಆದ, ಶ್ರೀವಿಷ್ಣುಃ-ಶ್ರೀವಿಷ್ಣುವೇ, ಪ್ರಾಣಃ- ಪ್ರಾಣನು (ಚೇಷ್ಟಕನು) (ಮುಖ್ಯಪ್ರಾಣನಿಗೂ ಸರ್ವಶಕ್ತಿಪ್ರದನು).

ವಿಶ್ವಸಾಕ್ಷೀ ಜಗದ್ಧಾತಾ ದಯಾಲುರ್ಭಕ್ತವತ್ಸಲಃ ।
ಹೃದಿಸ್ಥಃ ಸರ್ವಜೀವಾನಾಂ ಸ ಹರಿಃ ಸ ಶಿವಃ ಸ್ಮೃತಃ ॥ ೨೫ ॥

---

ಅನುಗ್ರಹಮಾತ್ರದಿಂದ) ಅಥವಾ ಔಷಧಿಗಳ ದ್ವಾರಾ (ಔಷಧಿಗಳಲ್ಲಿದ್ದು) ರೋಗಗಳನ್ನು ಪರಿಹರಿಸುತ್ತಾನೆ; ಕರ್ಮಾನುಸಾರವಾಗಿ, ಕಾಲಕಾಲಕ್ಕೆ ಜೀವರಿಗೆ, ಸುಖದುಃಖಗಳ ಭೋಗವನ್ನುಂಟುಮಾಡುವಾತನೂ, ಸರ್ವಾಧಿಪನಾದ ಈತನೇ; ಸರ್ವರಿಗೂ, ಬಲ-ಜ್ಞಾನ-ಧೈರ್ಯ-ಬುದ್ಧಿ (ವಿವೇಕ), ಭಕ್ತಿ ಶ್ರದ್ಧೆಗಳೂ ಸಹ ಈತನಿಂದಲೇ ಲಭಿಸುತ್ತವೆ; ಈ ಪ್ರಕಾರದ ಮಹಾಮಹಿಮನಾದ ಮುಖ್ಯಪ್ರಾಣದೇವನಿಗೆ ಚೇಷ್ಟಕನೂ ಸರ್ವಶಕ್ತಿಪ್ರದನೂ ಆದವನು (ಪ್ರಾಣನಿಗೆ ಪ್ರಾಣನು) ಸರ್ವೇಶ್ವರನಾದ ಶ್ರೀ ಮಹಾವಿಷ್ಣುವೇ ಆಗಿದ್ದಾನೆ(೨೨-೨೪). ಈತನೇ ಸರ್ವಜ್ಞನು, ಜಗದ್ಧಾರಣಪೋಷಣಕರ್ತನು, ದಯಾಲುವು, ಭಕ್ತವತ್ಸಲನು, ಸರ್ವಜೀವರ ಹೃದಯದಲ್ಲಿರುತ್ತಾನೆ; ಆತನೇ ಹರಿಯು, ಆತನೇ ಶಿವನು, ಬ್ರಹ್ಮ, ಪರಮಾತ್ಮ, ಪರಬ್ರಹ್ಮನೆಂದೂ ಕರೆಯಲ್ಪಡುತ್ತಾನೆ; ಚಂದ್ರ, ಸೂರ್ಯ, ಅನಿಲ(ವಾಯು), ಅನಲ(ಅಗ್ನಿ), ಮುನಿ, ಇಂದ್ರ, ವರುಣ, ರುದ್ರ,

**ಬ್ರಹ್ಮೇತಿ ಪರಮಾತ್ಮೇತಿ ಪರಬ್ರಹ್ಮೇತಿ ಗೀಯತೇ ।**
**ತತ್ತದ್ಗುಣಾನುಸಾರೇಣ ಚಂದ್ರಸೂರ್ಯೋಽನಿಲೋಽನಲಃ ॥ ೨೬ ॥**

**ಮುನಿರಿಂದ್ರಶ್ಚ ವರುಣೋ ರುದ್ರ ಉಗ್ರಃ ಪ್ರಜಾಪತಿಃ ।**
**ಹಿರಣ್ಯಗರ್ಭಃ ಸವಿತಾ ಸುಪರ್ಣೋ ಯಜ್ಞ ಈಶ್ವರಃ ॥ ೨೭ ॥**

**ಇತ್ಯಾದ್ಯನಂತನಾಮಾಸಾವೇಕ ಏವ ಮಹೇಶ್ವರಃ ।**
**ಸರ್ವಜನ್ಮಾದಿಕೃದ್ವೇದ್ಯೈಃ ಸರ್ವೈರ್ವಿಷ್ಣುರುದೀರ್ಯತೇ ॥ ೨೮ ॥**

ಶ್ರೀವಿಷ್ಣುವಿನ ಮಹಿಮೆಯನ್ನು ಸಂಕ್ಷೇಪವಾಗಿ ನಿರೂಪಿಸುತ್ತಾರೆ:—

ವಿಶ್ವಸಾಕ್ಷೀ-(ಆ ಮುಖ್ಯಪ್ರಾಣನಿಗೂ ಪ್ರಾಣನಾದ ಶ್ರೀಹರಿಯು) ಸರ್ವಜ್ಞನು; ಜಗದ್ಧಾತಾ-ಜಗತ್ತನ್ನು ಧಾರಣಮಾಡಿ ಪೋಷಣೆಮಾಡುವವನು; ದಯಾಲುಃ-ದಯಾಪೂರ್ಣನು; ಭಕ್ತವತ್ಸಲಃ-ಭಕ್ತಪ್ರಿಯನು(ಭಕ್ತರನ್ನು ಪ್ರೀತಿಸುವವನು); ಸರ್ವಜೀವಾನಾಂ-ಸಕಲ ಜೀವರ, ಹೃದಿಸ್ಥಃ-ಹೃದಯದಲ್ಲಿರುವವನು; ಸಃ ಹರಿಃ-ಆತನೇ ಶ್ರೀಹರಿಯು; ಸಃ ಶಿವಃ-ಆತನೇ ಶಿವನು, ಸ್ಮೃತಃ-(ಎಂದು ಜ್ಞಾನಿಗಳಿಂದ) ತಿಳಿಯಲ್ಪಟ್ಟಿರುವನು; ತತ್ತದ್ಗುಣಾನುಸಾರೇಣ-(ಆಯಾ ನಾಮಗಳಿಂದ ಬೋಧ್ಯವಾದ) ಗುಣಾನುಸಾರವಾಗಿ, ಬ್ರಹ್ಮ ಇತಿ-ಬ್ರಹ್ಮನೆಂದೂ, ಪರಮಾತ್ಮಾ ಇತಿ-ಪರಮಾತ್ಮನೆಂದೂ, ಪರಬ್ರಹ್ಮ ಇತಿ-ಪರಬ್ರಹ್ಮನೆಂದೂ, ಗೀಯತೇ-ಹೇಳಲ್ಪಡುತ್ತಾನೆ; ಚಂದ್ರಸೂರ್ಯೋಽನಿಲೋಽನಲಃ-ಚಂದ್ರ, ಸೂರ್ಯ, ಅನಿಲ(ವಾಯು), ಅನಲ-(ಅಗ್ನಿ) ಎಂದೂ ಮುನಿಃ-ಮುನಿಯು, ಇಂದ್ರಶ್ಚ-ಇಂದ್ರನೂ, ವರುಣಃ-ವರುಣನು, ರುದ್ರಃ-ರುದ್ರನು, ಉಗ್ರಃ-ಉಗ್ರನು, ಪ್ರಜಾಪತಿಃ-ಪ್ರಜಾಪತಿಯು, ಹಿರಣ್ಯಗರ್ಭಃ-ಹಿರಣ್ಯಗರ್ಭನು, ಸವಿತಾ-ಸವಿತೃವೂ, ಸುಪರ್ಣಃ-ಸುಪರ್ಣನು, ಯಜ್ಞನು,

ಉಗ್ರ, ಪ್ರಜಾಪತಿ, ಹಿರಣ್ಯಗರ್ಭ, ಸವಿತೃ, ಸುಪರ್ಣ, ಯಜ್ಞ, ಈಶ್ವರ, ಇತ್ಯಾದಿ ಅನಂತನಾಮಗಳುಳ್ಳವನು;[1] ಆಯಾ ನಾಮಗಳಿಂದ ಹೇಳಲ್ಪಡುವ ಗುಣಗಳನ್ನು ನಿರವಧಿಕವಾಗಿ(ಅನಂತವಾಗಿ) ಶ್ರೀವಿಷ್ಣುವು ಹೊಂದಿರುವುದರಿಂದ (ಆಯಾ ಗುಣಾನುಸಾರವಾದ) ಅನಂತನಾಮಗಳುಳ್ಳ ಅನಂತಗುಣಪೂರ್ಣನಾಗಿದ್ದಾನೆ; ಈತನೇ ಸ್ವತಂತ್ರನಾದ ಸರ್ವೋತ್ತಮನಾದ ಮಹೇಶ್ವರನು (ಸರ್ವಸ್ವಾಮಿಯು—ಸರ್ವನಿಯಾಮಕನು); ಸಕಲ ಜಗತ್ತಿನ ಸೃಷ್ಟಿ ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಲ್ಲವುಗಳ ಸ್ವತಂತ್ರಕರ್ತನೆಂದು, ಸಮಸ್ತವೇದಗಳಿಂದ, ಈತನೇ (ಶ್ರೀಮಹಾವಿಷ್ಣುವೇ)

1. ಮುಂದಿನ ೪೨ನೇ ಅಧ್ಯಾಯದಲ್ಲಿ ಭಗವನ್ನಾಮ ನಿರ್ವಚನವು ಪ್ರಸಕ್ತವಾಗಲಿದೆ; ನಾಮಬೋಧ್ಯಗುಣಗಳನ್ನು ಅಲ್ಲಿ ನೋಡಿರಿ.

ಈಶ್ವರಃ- ಈಶ್ವರನು, (ಎಂದೂ ತತ್ತದ್ಗುಣಾನುಸಾರೇಣ, ಗೀಯತೇ- ಆಯಾ ನಾಮಗಳಿಂದ ಬೋಧ್ಯವಾದ ಗುಣಗಳನ್ನು ಅನಂತವಾಗಿ ತಾನು ಹೊಂದಿರುವುದರಿಂದ, ಆಯಾ ನಾಮಗಳುಳ್ಳವನಾಗಿರುತ್ತಾನೆ); ಅಸೌ- ಈ ವಿಷ್ಣುವು, ಇತ್ಯಾದಿ- ಇವೇ ಮೊದಲಾದ ಅನಂತನಾಮಾ- ಅನಂತನಾಮಗಳುಳ್ಳವನು, ಏಕ ಏವ- ಒಬ್ಬನೇ (ಅನಂತ ನಾಮಗಳುಳ್ಳವನು ಮತ್ತೊಬ್ಬನಿಲ್ಲ); ಮಹೇಶ್ವರಃ- ಆತನೇ ಮಹೇಶ್ವರನು(ಸರ್ವರ ಮಹಾಸ್ವಾಮಿಯು); ಸರ್ವಜನ್ಮಾದಿಕೃತ್- ಸರ್ವಜಗತ್ತಿನ ಸೃಷ್ಟಿ ಮೊದಲಾದವುಗಳ ಕರ್ತನು; ಸರ್ವೈಃ- ಸಮಸ್ತ ವೇದೈಃ- ವೇದಗಳಿಂದ, ವಿಷ್ಣುಃ- ಈ ವಿಷ್ಣುವೇ, ಉದೀರ್ಯತೇ- (ಮುಖ್ಯವಾಗಿ) ಹೇಳಲ್ಪಡುತ್ತಾನೆ (ಸಕಲವೇದಗಳ ಮಹಾ ತಾತ್ಪರ್ಯವೂ ಶ್ರೀವಿಷ್ಣುವಿನ ಗುಣೋತ್ಕರ್ಷವನ್ನು ತಿಳಿಸುವುದೇ ಆಗಿದೆ).

**ಸಂತಪ್ತಸ್ತ್ರಿವಿಧೈಸ್ತಾಪೈರ್ಭಗ್ನಃ ಸಂಸಾರವಾರಿಧೌ ।**
**ತಮೇವ ಶರಣಂ ಯಾಯಾದ್ಭಕ್ತ್ಯಾನನ್ಯಧಿಯಾ ನರಃ ॥ ೨೯ ॥**

**ತಸ್ಮಾದೇವ ಲಭೇನ್ಮೋಕ್ಷಂ ಸಂತುಷ್ಟಾದ್ದೃಢಭಕ್ತಿತಃ ।**
**ಮಯೇತ್ಥಂ ಕಥಿತೋ ವಿಪ್ರಾಃ ಪ್ರಾಣಸ್ಯ ಚ ಹರೇರಪಿ ।**
**ಮಹಿಮಾ ಸರ್ವವೇದಾನಾಂ ಮುಖ್ಯೋಽರ್ಥೋಽಯಂ ಶ್ರುತೋಽಸ್ತಿ ವಃ ॥**

ತ್ರಿವಿಧೈಃ- ಮೂರು ವಿಧದ(ಆಧ್ಯಾತ್ಮಿಕ, ಆಧಿದೈವಿಕ ಅಧಿಭೂತಗಳೆಂಬ ಮೂರು ಪ್ರಕಾರದ), ತಾಪೈಃ- ತಾಪಗಳಿಂದ, ಸಂತಪ್ತಃ- ಬೆಂದು(ದುಃಖಿಸಿ), ಸಂಸಾರವಾರಿಧೌ- ಸಂಸಾರಸಾಗರದಲ್ಲಿ ಭಗ್ನಃನರಃ- ನಷ್ಟನಾದ ಮನುಷ್ಯನು, ಅನನ್ಯಧಿಯಾ- ಅನನ್ಯವಾದ ಮನಸ್ಸಿನಿಂದ (ಅನ್ಯರನಾಶ್ರಯಿಸದೆ), ತಮೇವ- ಆ ವಿಷ್ಣುವನ್ನೇ, ಶರಣಂ- ಆಶ್ರಯನನ್ನಾಗಿ, ಯಾಯಾತ್- ಹೊಂದಬೇಕು (ಶರಣುಹೊಂದಬೇಕು); ದೃಢಭಕ್ತಿತಃ- ದೃಢವಾದ ಭಕ್ತಿಯಿಂದ, ಸಂತುಷ್ಟಾತ್- ಪ್ರಸನ್ನನಾದ, ತಸ್ಮಾತ್ ಏವ- ಆತನಿಂದಲೇ, ಮೋಕ್ಷಂ- ಮೋಕ್ಷವನ್ನು ಲಭೇತ್- ಹೊಂದುತ್ತಾನೆ; ವಿಪ್ರಾಃ- ಹೇ ಶೌನಕಾದಿ ಋಷಿಗಳೇ!,

---

ಹೇಳಲ್ಪಡುತ್ತಾನೆ(೨೫-೨೮). ತ್ರಿವಿಧತಾಪಗಳಿಂದ ಸಂತಪ್ತನಾಗಿ, ಸಂಸಾರ ಸಮುದ್ರದಲ್ಲಿ ನಷ್ಟನಾದ (ಮಾರ್ಗತಪ್ಪಿ ಮುಳುಗುತ್ತಿರುವ) ಮನುಷ್ಯನು,[1] ಅನನ್ಯವಾಗಿ ಭಕ್ತಿಯಿಂದ ಆ ಶ್ರೀಮಹಾವಿಷ್ಣುವನ್ನೇ ಶರಣುಹೊಂದಬೇಕು; ಸುಪ್ರೀತನಾದ ಆತನಿಂದಲೇ ಮೋಕ್ಷವನ್ನು ಹೊಂದಬೇಕಲ್ಲದೇ ಅನ್ಯೋಪಾಯವಿಲ್ಲ ಹೇ ಶೌನಕಾದಿಗಳೇ!, ಹೀಗೆ ನಾನು ನಿಮ್ಮಗಳೆದುರಿನಲ್ಲಿ ಮುಖ್ಯಪ್ರಾಣ, ಹಾಗೂ ಶ್ರೀಹರಿಯ ಮಹಿಮೆಯನ್ನು

1. ತಾಪತ್ರಯಗಳೆಂಬುವು ಯಾವುವೆಂಬುದರ ವಿವರಣೆಗಾಗಿಯೇ ಮುಂದಿನ ೧೯ನೇ ಅಧ್ಯಾಯವು ಪ್ರವೃತ್ತವಾಗಲಿದೆ. ಅಲ್ಲಿ ಈ ಸಂಬಂಧದ ವಿಸ್ತಾರವಾದ ವಿವರಣೆಯನ್ನು ಕಾಣುತ್ತೀರಿ.

ಇತ್ಥಂ-ಹೀಗೆ, ಮಯಾ-ನನ್ನಿಂದ, ಪ್ರಾಣಸ್ಯ-ಮುಖ್ಯಪ್ರಾಣನ, ಚ-ಮತ್ತು ಹರೇಃಅಪಿ-ಶ್ರೀವಿಷ್ಣುವಿನದ್ದೂ ಆದ, ಮಹಿಮಾ-ಮಹಿಮೆಯು, ಕಥಿತಃ-ಹೇಳಲ್ಪಟ್ಟಿತು; ವಃ-ನಿಮಗೆ, ಸರ್ವವೇದಾನಾಂ-ಸಕಲವೇದಗಳ, ಅಯಂ-ಈ, ಮುಖ್ಯೋರ್ಥಃ-ಮುಖ್ಯವಾದ ತಾತ್ಪರ್ಯವು, ಶ್ರುತಃ-ಶ್ರವಣಮಾಡಲ್ಪಟ್ಟದ್ದು ಅಸ್ತಿ-ಆಗಿದೆ.

ಪ್ರಾಣೇಶ್ವರಮಹಿಮಾವರ್ಣನವೆಂಬ ೧೮ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೧೯

ಶ್ರೀ ವೇದವ್ಯಾಸಾಯ ನಮಃ

ಹಾರೀತ ಉವಾಚ—

ಕಥಂ ಸೂತ ಮಹಾಭಾಗ ತ್ರಿವಿಧಸ್ತಾಪ ಉಚ್ಯತೇ ।
ಕಥಂ ಹಿ ಶರಣಂ ಯಾಯಾದ್ಧರಿಂ ವೈ ಭಕ್ತವತ್ಸಲಂ ॥ ೧ ॥

ಕಥಂ ತಸ್ಯ ಪ್ರಸಾದಃ ಸ್ಯಾತ್ ಪ್ರಸನ್ನಃ ಕಿಂ ಪ್ರಯಚ್ಛತಿ ।
ಭಕ್ತಿರ್ನಾಮ ಕಥಂ ತಸ್ಯ ದಾರ್ಢ್ಯಂ ಚಾಪಿ ಕಥಂ ಸ್ಮೃತಂ ॥ ೨ ॥

ಏತನ್ನೋ ಬ್ರೂಹಿ ಶುಶ್ರೂಷೂನ್ ಶ್ರದ್ದಧಾನಾನ್ ಮಹಾಮತೇ ।

ಶೌನಕಾದಿಗಳ ಪರವಾಗಿ ಹಾರೀತರು ಪ್ರಶ್ನಿಸುತ್ತಾರೆ—

ಅರ್ಥ:—ಮಹಾಭಾಗ-ಮಹಾಪುಣ್ಯಶಾಲಿಯಾದ, ಸೂತ-ಹೇ ಸೂತ! ತ್ರಿವಿಧಃ-ಮೂರು ವಿಧಧ, ತಾಪಃ-ದುಃಖವು, ಕಥಂ-ಯಾವ ಪ್ರಕಾರವೆಂದು, ಉಚ್ಯತೇ-

---

(ಯಥಾಮತಿ) ವಿವರಿಸಿರುತ್ತೇನೆ; ನಿಮ್ಮಿಂದ ಸಕಲ ವೇದಗಳ ಮುಖ್ಯಾರ್ಥವು ಶ್ರವಣಮಾಡಿದಂತಾಯಿತು(೨೯-೩೦).

೧೮ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೧೯

ತಾತ್ಪರ್ಯ:—ಶ್ರೋತೃವೃಂದದಲ್ಲಿದ್ದ ಹಾರೀತರು(ಋಷಿಗಳು) ಪ್ರಶ್ನೆಮಾಡು ತ್ತಾರೆ:—ಹೇ ಸೂತ! ಭಾಗ್ಯಶಾಲಿಯೇ! ತ್ರಿವಿಧ ತಾಪಗಳೆಂಬುವು ಯಾವುವು—ಯಾವ ಪ್ರಕಾರವಾಗಿರುತ್ತವೆ? ಭಕ್ತವತ್ಸಲನಾದ ಶ್ರೀಹರಿಯನ್ನು ಹೇಗೆ ಶರಣುಹೊಂದಬೇಕು? ಆತನು ಹೇಗೆ ಪ್ರಸನ್ನನಾಗುತ್ತಾನೆ? ಪ್ರಸನ್ನನಾದ ಶ್ರೀವಿಷ್ಣುವಿನಿಂದ ದೊರೆಯುವ

ಹೇಳಲಾಗುತ್ತರೆ; ಭಕ್ತವತ್ಸಲಂ-ಭಕ್ತರಲ್ಲಿ ವಾತ್ಸಲ್ಯವುಳ್ಳ, ಹರಿಂ-ಶ್ರೀವಿಷ್ಣುವನ್ನು ಕಥಂ ಹಿ-ಹೇಗೆ (ಶಾಸ್ತ್ರೋಕ್ತವಾದ ಯಾವ ಪ್ರಕಾರದಿಂದ), ಶರಣಂ ಯಾಯಾತ್-ಶರಣುಹೊಂದಬೇಕು? ತಸ್ಯ-ಆ ವಿಷ್ಣುವಿನ, ಪ್ರಸಾದಃ-ಪ್ರಸಾದವು(ಅನುಗ್ರಹವು), ಕಥಂ-ಹೇಗೆ, ಸ್ಯಾತ್-ಆಗುವುದು?(ದೊರೆಯುತ್ತದೆ): ಪ್ರಸನ್ನಃ-ಸಂತುಷ್ಟನಾದ ವಿಷ್ಣುವು, ಕಿಂ-ಏನನ್ನು ಪ್ರಯಚ್ಛತಿ-ಕೊಡುತ್ತಾನೆ? ತಸ್ಯ-ಆತನ, ಭಕ್ತಿರ್ನಾಮ-ಭಕ್ತಿ ಎಂಬುದು, ಕಥಂ-ಯಾವ ಪ್ರಕಾರವಾದುದು? ದಾರ್ಢ್ಯಂ ಚ-ಅದರ ದಾರ್ಢ್ಯವು; ಕಥಂ-ಹೇಗೆಂದು(ಹೇಗೆ ದೊರೆಯುವುದೆಂದು), ಸ್ಮೃತಂ-ತಿಳಿಯಲ್ಪಟ್ಟಿದೆ? ಏತತ್ ಅಪಿ-ಈ ಎಲ್ಲವನ್ನು ಕೂಡ, ಮಹಾಮತೇ-ಹೇ ಮಹಾಪ್ರಾಜ್ಞನಾದ ಸೂತಾಚಾರ್ಯ!, ಶ್ರದ್ದಧಾನಾನ್-ಶ್ರದ್ಧೆಯುಳ್ಳ, ಶುಶ್ರೂಷೂನ್-ಕೇಳಲಿಚ್ಛಿಸುತ್ತಿರುವ, ನಃ-ನಮ್ಮಗಳಿಗೆ, ಬ್ರೂಹಿ-ಹೇಳುವವನಾಗು.

ಸೂತ ಉವಾಚ—

**ತಾಪೋ ಹಿ ಪ್ರೋಚ್ಯತೇ ದುಃಖಂ ತತ್ತು ಸ್ಯಾತ್ತ್ರಿವಿಧಂ ಪುನಃ ॥ ೩ ॥**

**ಆಧ್ಯಾತ್ಮಿಕಂ ಚಾಧಿಭೂತಮಾಧಿದೈವಿಕಮೇವ ಚ ।**
**ಆತ್ಮಾ ಮನಸ್ತು ತಸ್ಯೈವ ಜಾತಂ ಯದಪರಾದತಃ ॥ ೪ ॥**

**ಧನಪುತ್ರಗೃಹಕ್ಷೇತ್ರಕಲತ್ರಾದೇಃ ಪ್ರಿಯಸ್ಯ ಯತ್ ।**
**ವಿಘಾತಾದೇಸ್ತಥಾನಿಷ್ಟಪ್ರಾಪ್ತೇಶ್ಚಾಪ್ಯತಿಚಿಂತಯಾ ॥ ೫ ॥**

**ಅಸೂಯಯಾಭಿಮಾನೇನ ದುಃಸ್ವಪ್ನಾಚ್ಚ ವೃಥಾ ಭಯಾತ್ ।**
**ಸ್ವಸ್ಥಸ್ಯಾಪಿ ಹಿ ಯದ್ದುಃಖಂ ತದಾಧ್ಯಾತ್ಮಿಕಮುಚ್ಯತೇ ॥ ೬ ॥**

ಸೂತನು ಹೇಳುತ್ತಾನೆ—

ದುಃಖಂಹಿ-ದುಃಖವೇ, ತಾಪಃ-'ತಾಪ'ವೆಂದು, ಪ್ರೋಚ್ಯತೇ-ಹೇಳಲ್ಪಡುತ್ತದೆ; ತತ್ತು-ಆ ತಾಪವೇ, ಪುನಃ-ಮತ್ತೆ ಆಧ್ಯಾತ್ಮಿಕಂ-ಆಧ್ಯಾತ್ಮಿಕವೆಂದೂ, ಆಧಿಭೂತಂ ಚ-ಆಧಿ

---

ಫಲವಾವುದು? ಆತನಲ್ಲಿ ಮಾಡಬೇಕಾದ ಭಕ್ತಿಯು ಹೇಗಿರಬೇಕು ಮತ್ತು ಭಕ್ತಿದಾರ್ಢ್ಯವು ಹೇಗೆ (ಯಾವ ಉಪಾಯದಿಂದ ಲಭಿಸುತ್ತದೆ? ಈ ಎಲ್ಲವನ್ನೂ ಶ್ರದ್ಧೆಯಿಂದ ಶ್ರವಣಮಾಡಲುತ್ಸುಕರಾಗಿರುವ ನಮಗೆ, ಕೃಪೆಮಾಡಿ, ಹೇಳು(೧-೨). ಸೂತನು ಹೇಳುತ್ತಾನೆ:—ದುಃಖವೇ ತಾಪವೆಂದು ಕರೆಯಲ್ಪಡುತ್ತದೆ; ಅದು ತ್ರಿವಿಧವಾದುದು; ಆಧ್ಯಾತ್ಮಿಕ, ಆಧಿಭೂತ, ಆಧಿದೈವಿಕವೆಂಬುದೇ ಆ ಮೂರು ಪ್ರಕಾರದ ತಾಪಗಳು; ಮನಸ್ಸೇ ಆತ್ಮವೆಂದು ಹೇಳಲ್ಪಡುತ್ತದೆ; ಆ ಮನಸ್ಸಿಗೆ, ನಾನಾ ಅಪರಾಧಗಳಿಂದ, (ಕಾಲ ವಿಶೇಷಗಳಲ್ಲಿ) ಪರಿಪರಿಯ ದುಃಖಗಳುಂಟಾಗುತ್ತವೆ;

ಭೂತವೆಂದೂ, ಆಧಿದೈವಿಕಂ ಏವ ಚ- ಆಧಿದೈವಿಕವೆಂದೂ, ತ್ರಿವಿಧಂ-ತ್ರಿವಿಧವಾದುದು (ಮೂರು ಪ್ರಕಾರವಾದುದು), ಸ್ಯಾತ್-ಆಗಿರುತ್ತದೆ; ಮನಃ ತು-ಮನಸ್ಸೇ, ಆತ್ಮಾ-ಆತ್ಮವೆಂಬುದು; ತಸ್ಯ ಏವ-ಅದಕ್ಕೆ, ಯದಪರಾಧತಃ-ಯಾವ (ಪಾಪಕರ್ಮ ಮೊದಲಾದ) ಅಪರಾಧದಿಂದ, ಜಾತಂ-ಉತ್ಪನ್ನವಾದ, ಪ್ರಿಯಸ್ಯ-ತನಗೆ ಪ್ರಿಯವಾದ, ಧನಪುತ್ರಗೃಹಕ್ಷೇತ್ರಕಲತ್ರಾದೇಃ-ಧನ, ಪುತ್ರ, ಮನೆ, ಹೊಲ, ಹೆಂಡತಿ ಮೊದಲಾದವುಗಳ, ವಿನಾಶಾದೇಃ-ವಿನಾಶಾದಿಗಳಿಂದಲೂ, ತಥಾ-ಹಾಗೂ, ಅನಿಷ್ಟಪ್ರಾಪ್ತೇಃ-ಅನಿಷ್ಟವುಂಟಾಗುವುದರಿಂದಲೂ, (ಉಂಟಾಗುವ), ಅತಿಚಿಂತಯಾ-ಅಧಿಕ ಚಿಂತೆಯಿಂದಲೂ, ಅಸೂಯಯಾ-(ಇತರರ) ಅಸೂಯೆಯಿಂದಲೂ, ಅಭಿಮಾನೇನ-(ಅಹಂಮಮಕಾರಜನ್ಯರಾಗದ್ವೇಷಗಳೆಂಬ) ಅಭಿಮಾನದಿಂದಲೂ, ದುಃಸ್ವಪ್ನಾತ್-ದುಃಸ್ವಪ್ನಕಾರಣದಿಂದಲೂ, ವೃಥಾಭಯಾತ್-ವ್ಯರ್ಥವಾದ ಭಯದಿಂದಲೂ (ಭಯದಿಂದ ದುಃಖಪರಿಹಾರವಾಗುವುದಿಲ್ಲವಾದ್ದರಿಂದ ವ್ಯರ್ಥಭಯವು), ಸ್ವಸ್ಥಸ್ಯ ಅಪಿ-ಸುಖದಿಂದಿರುವವನಿಗೆ ಸಹ, ಯತ್-ಯಾವ, ದುಃಖಂ-(ಮನಸ್ಸಿಗೆ ಉಂಟಾಗುವ) ದುಃಖವೋ, ತತ್-ಅದು(ಆ ದುಃಖವು), ಆಧ್ಯಾತ್ಮಿಕಂ-ಆಧ್ಯಾತ್ಮಿಕತಾಪವೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಭೂತಾನಿ ಪ್ರಾಣಿನಃ ಪ್ರೋಕ್ತಾಸ್ತಥಾಕಾಶಾದಿಪಂಚಕಂ ।**
**ಸರ್ಪವ್ಯಾಘ್ರವರಾಹಾದೇಸ್ತಸ್ಕರಾದೇರ್ನೃಪಾದಪಿ ॥ ೭ ॥**

**ಸ್ವದೇಹೇ ಸ್ವಪ್ರಿಯಸ್ಯಾಪಿ ಪುತ್ರಾದೇಃ ಪೀಡನಾದ್ಭವೇತ್ ।**
**ದುಃಖಂ ತಥೈವ ವಿಸ್ಫೋಟಹಿಕ್ಕಾಕಾಸಜ್ವರಾದಿನಾ ॥ ೮ ॥**

---

ಪಾಪಕರ್ಮಗಳ ಫಲವಾಗಿ, ತನಗೆ ಪ್ರಿಯವಾದ ಧನ, ಪುತ್ರ, ಗೃಹ, ಕ್ಷೇತ್ರ, ಭಾರ್ಯಾದಿಗಳಿಗೆ ನಾಶವಾಗಲಿ, ಅನಿಷ್ಟವಾಗಲಿ ಉಂಟಾಗಿ ಅತಿಚಿಂತೆಯಿಂದ ಮನಸ್ಸಿಗೆ ತಾಪ ಉಂಟಾಗುತ್ತದೆ; ಅನ್ಯರ ವಿಷಯದಲ್ಲಿ ಅಸೂಯೆಪಡುವುದರಿಂದಲೂ, ರಾಗದ್ವೇಷರೂಪದ ಅಭಿಮಾನದಿಂದಲೂ, ದುಃಸ್ವಪ್ನ ವ್ಯರ್ಥಭಯಾದಿಗಳಿಂದಲೂ, ಸುಖದಿಂದಿರುವವನಿಗೆ ಸಹ ಯಾವ ದುಃಖವುಂಟಾಗುವುದೋ ಆ ದುಃಖವು, ಆಧ್ಯಾತ್ಮಿಕವೆಂದು ತಿಳಿಯಬೇಕು(೩-೬). ಆಕಾಶಾದಿಗಳೂ (ಆಕಾಶ, ವಾಯು, ತೇಜಸ್ಸು ಜಲ ಮತ್ತು ಪೃಥ್ವಿಗಳೂ). ಪ್ರಾಣಿಗಳೂ 'ಭೂತ'ಗಳೆಂದು ಕರೆಯಲ್ಪಡುತ್ತವೆ; ಭೂತಗಳಿಂದ ಮತ್ತು ಸರ್ಪ, ವ್ಯಾಘ್ರ, ವರಾಹ, ಮೊದಲಾದ ಪ್ರಾಣಿಗಳಿಂದ ಅಥವಾ ಕಳ್ಳ, ರಾಜ ಮೊದಲಾದವರಿಂದ, ತನಗಾಗಲಿ, ತನಗೆ ಪ್ರಿಯರಾದ ಪುತ್ರಾದಿಗಳಿಗಾಗಲಿ ಉಂಟಾಗುವ ಹಿಂಸೆಯಿಂದ ತನ್ನ ಭೌತಿಕದೇಹದಲ್ಲಿ ಉಂಟಾಗುವ ದುಃಖವು ಆಧಿಭೌತಿಕ ತಾಪವು; ಹಾಗೂ ತನ್ನ (ಭೌತಿಕ) ದೇಹದಲ್ಲಿ ಸಂಭವಿಸುವ, ಸಿಡಿತ, ಬಿಕ್ಕು,

**ಭೌತಿಕೇಷ್ವಿಹ ದೇಹೇಷು ಜಾಯತೇ ದುಃಖಮುಲ್ಬಣಂ ।**
**ತದಾಧಿಭೌತಿಕಂ ನಾಮ ದೃಶ್ಯತೇಽಖಿಲ ಜಂತುಷು ॥ ೯ ॥**

ಪ್ರಾಣಿನಃ- ಪ್ರಾಣಿಗಳು, ತಥಾ- ಹಾಗೂ, ಆಕಾಶಾದಿಪಂಚಕಂ- ಆಕಾಶಾದಿ ಐದು, ಭೂತಾನಿ- ಭೂತಗಳಿಂದು, ಪ್ರೋಕ್ತಾಃ- ಹೇಳಲ್ಪಡುತ್ತವೆ; ಸರ್ಪವ್ಯಾಘ್ರವರಾಹಾದೇಃ- ಸರ್ಪ, ಹುಲಿ, ಹಂದಿ ಮೊದಲಾದ(ಹಿಂಸ್ರ) ಪ್ರಾಣಿಗಳಿಂದ, ತಸ್ಕರಾದೇಃ- ಕಳ್ಳರೇ ಮೊದಲಾದವರಿಂದ, ಅಪಿ- ಮತ್ತು ನೃಪಾತ್- ರಾಜನಿಂದಲೂ, ಸ್ವದೇಹೇ- ತನ್ನ ದೇಹದಲ್ಲಿ ದುಃಖಂಭವೇತ್- ದುಃಖವುಂಟಾದರೆ, ಅಪಿ- ಮತ್ತು ಪುತ್ರಾದೇಃ- ಪುತ್ರರೇ ಮೊದಲಾದ, ಸ್ವಪ್ರಿಯಸ್ಯ- ತನ್ನ ಪ್ರೀತಿಪಾತ್ರರಿಗೆ, ಪೀಡನಾತ್- ಪೀಡೆ (ಹಿಂಸೆ) ಯುಂಟಾಗುವುದರಿಂದ, (ದುಃಖಂಭವೇತ್- ದುಃಖವುಂಟಾದರೆ), ತಥೈವ- ಹಾಗೂ (ಇವು ಅಲ್ಲದೇ), ವಿಸ್ಫೋಟಹಿಕ್ಕಾಕಾಸಜ್ವರಾದಿನಾ- ತಲೆಸಿಡಿಯುವುದು, ಬಿಕ್ಕು, ಉಬ್ಬಸ, ಜ್ವರ ಮೊದಲಾದ್ದರಿಂದ, ಯತ್- ಯಾವ, ಉಲ್ಬಣಂ- ಉಗ್ರವಾದ, ದುಃಖಂ- ದುಃಖವು, ಇಹ- ಈ, ಭೌತಿಕೇಷು- ಪೃಥಿವ್ಯಾದಿಪಂಚಭೂತಗಳಿಂದಾದ, ದೇಹೇಷು- ದೇಹಗಳಲ್ಲಿ ಜಾಯತೇ- ಉಂಟಾಗುತ್ತದೆಯೋ, ತತ್- ಅದು(ಆ ದುಃಖವು), ಆಧಿ ಭೌತಿಕಂನಾಮ- ಆಧಿಭೌತಿಕವೆಂಬ ತಾಪವು; ಅಖಿಲಜಂತುಷು- ಸಮಸ್ತ ಪ್ರಾಣಿಗಳಲ್ಲಿ ದೃಶ್ಯತೇ- ಕಂಡುಬರುತ್ತದೆ (ಈ ತಾಪವು ಸರ್ವಾನುಭವಸಿದ್ಧವಿದೆ).

**ದೃಷ್ಟಕಾರಣಹೀನಂ ಯಜ್ಜಾಯತೇ ದೈವಯೋಗತಃ ।**
**ಅಕಸ್ಮಾನ್ಮರಣಾದ್ಯಚ್ಚ ಮಹಾಮಾರುತವೃಷ್ಟಯಃ ॥ ೧೦ ॥**

**ದುರ್ಭಿಕ್ಷಂ ಮಾರಕವಹ್ನಿವ್ಯಾಧ್ಯಾದ್ಯಾ ಈತಯಸ್ತು ಯಾಃ ।**
**ಬಹುಸಾಧಾರಣಾ ಲೋಕೇ ದೃಶ್ಯಂತೇ ಜಂತುಪೀಡಕಾಃ ॥ ೧೧ ॥**

---

ಉಬ್ಬಸ, ಜ್ವರಾದಿಗಳಿಂದಾಗುವ ಪರಿಪರಿಯ ತೀವ್ರ ದುಃಖಗಳೂ ಆಧಿಭೌತಿಕ ತಾಪಗಳೇ; ಈ ವಿಧ ದುಃಖಗಳು ಸಮಸ್ತ ಪ್ರಾಣಿಗಳಲ್ಲಿ ಕಂಡುಬರುತ್ತವೆ; ಈ ತಾಪವು ಸಮಸ್ತ ಪ್ರಾಣಿಗಳಿಗೆ ಸಮಾನವಾಗಿದೆ—ಎಲ್ಲರ ಅನುಭವಸಿದ್ಧವಾಗಿದೆ(೭-೯). ಪ್ರತ್ಯಕ್ಷ ತೋರುವ ಯಾವ ಕಾರಣವೂ ಇಲ್ಲದೇ, ಕೇವಲ ದೈವಯೋಗದಿಂದ, ಅದೃಷ್ಟನಿಯಾಮಕನಾದ ಶ್ರೀಹರಿಯಿಂದ ಕರ್ಮಾನುಸಾರವಾಗಿ ವ್ಯಕ್ತಿಗಳಿಗೂ, ಪ್ರಜಾಸಮುದಾಯಗಳಿಗೂ ಪ್ರಾಪ್ತವಾಗುವ ಮೃತ್ಯುವಿನಿಂದಲೂ, ಜಗತ್ತಿನಲ್ಲಿ ಸಾಮಾನ್ಯವಾಗಿ ಆಗಾಗ ಸಂಭವಿಸುವ, ಬಿರುಗಾಳಿ, ಮಹಾವೃಷ್ಟಿ ದುರ್ಭಿಕ್ಷ ಮಾರಕ, ಅಗ್ನಿ ನಾನಾ ರೋಗಾದಿ ಪ್ರಾಣಿಗಳಿಗೊದಗುವ ಉಪದ್ರವಗಳು, ಇತ್ಯಾದಿಗಳಿಂದ ಉಂಟಾಗುವ ದುಃಖವು ಆಧಿದೈವಿಕ ತಾಪವೆನಿಸುತ್ತದೆ; ಈ ಮೂರು ತಾಪಗಳನ್ನು ಅನುಭವಿಸದ ಯಾವುದೊಂದು ಪ್ರಾಣಿಯೂ ಇಲ್ಲ (೧೦-೧೨). ಆದ್ದರಿಂದ ಯಾರನ್ನು

ತೇಭ್ಯೋ ಯಜ್ಜಾಯತೇ ದುಃಖಮಾಧಿದೈವಿಕಮೇವ ತತ್ ।
ನ ಹಿ ಕಶ್ಚಿತ್ತಥಾಜಂತುರ್ನಾನುಭೂತಾ ಇಮೇ ತ್ರಯಃ ॥ ೧೨ ॥

ಯತ್-ಯಾವುದು (ಯಾವ ದುಃಖವು), ದೃಷ್ಟಕಾರಣಹೀನಂ-ತೋರುವ ಯಾವ ಕಾರಣವಿಲ್ಲದುದೋ, ದೈವಯೋಗತಃ-ದೈವಪ್ರಭಾವದಿಂದ (ಅದೃಷ್ಟಯೋಗದಿಂದ-ಪೂರ್ವಕರ್ಮಾನುಸಾರವಾಗಿ ತನಗೂ ಅಥವಾ ಜೀವಸಮುದಾಯಗಳ ಅದೃಷ್ಟಫಲವಾಗಿ ಸಾರ್ವಜನಿಕರಿಗೂ) ಸಂಭವಿಸುವ, ಅಕಸ್ಮಾತ್-(ದೃಷ್ಟಕಾರಣವಿಲ್ಲದೇ) 'ಅ'ಕಾರವಾಚ್ಯ ಶ್ರೀವಿಷ್ಣುವಿನಿಂದ ಒದಗುವ, ಮರಣಾತ್-ಮೃತ್ಯುವಿನಿಂದಲೂ, (ಮತ್ತು), ಯಾಃ-ಯಾವ, ಲೋಕೇ-ಜಗತ್ತಿನಲ್ಲಿ ಬಹುಸಾಧಾರಣಾಃ-ಸಾಮಾನ್ಯವಾಗಿ (ಆಗಾಗ ಸಂಭವಿಸುವ), ಮಹಾಮಾರುತವೃಷ್ಟಯಃ-ಬಿರುಗಾಳಿ, ಮಳೆಗಳು, ದುರ್ಭಿಕ್ಷಂ-ದುರ್ಭಿಕ್ಷವೂ (ಕ್ಷಾಮಕಾಲವೂ), ಮಾರಕವಹ್ನಿವ್ಯಾಧ್ಯಾದ್ಯಾಃ-ಮಾರಕ (ಪ್ಲೇಗು, ಕಾಲರ ಮೊದಲಾದವು), (ಕಾಡ್ಗಿಚ್ಚು ಮೊದಲಾದ) ಅಗ್ನಿ ನಾನಾರೋಗಾದಿ, ಜಂತುಪೀಡಕಾಃ-ಪ್ರಾಣಿಗಳಿಗೆ ಬರುವ ಉಪದ್ರವಗಳು (ಹಿಂಸೆಗಳು), ದೃಶ್ಯಂತೇ-ಕಾಣುತ್ತವೆಯೋ (ಸರ್ವಾನುಭವಸಿದ್ಧವಾಗಿವೆಯೋ), ತೇಭ್ಯಃ-ಅವುಗಳಿಂದಲೂ, ಜಾಯತೇ-ಉಂಟಾಗುವ, ಯತ್-ಯಾವ(ದುಃಖವೋ), ತತ್-ಅದು, ಆಧಿದೈವಿಕಂ ಏವ-ಆಧಿದೈವಿಕತಾಪವು; ತಥಾ-ಹಾಗಿರುವ, ಇಮೇ ತ್ರಯಃ-ಈ ಮೂರು ತಾಪಗಳು, ನ ಅನುಭೂತಾಃ-ಅನುಭವಿಸಲ್ಪಡದಿರುವ, ಕಶ್ಚಿತ್-ಯಾವುದೊಂದು, ಜಂತುಃ-ಪ್ರಾಣಿಯೂ, ನಹಿ-ಇಲ್ಲವೇ ಇಲ್ಲ.

ಯೇನ ಸ್ಯುಸ್ತತ ಏತೇಭ್ಯೋ ಮುಕ್ತ್ಯೈ ತಂ ಶರಣಂ ವ್ರಜೇತ್ ।
ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ ॥ ೧೩ ॥

ಶರಣಾಗತಿರೇಷಾಸ್ಯಾದ್ವಿಷ್ಣೌ ಮೋಕ್ಷಫಲಪ್ರದಾ ।

ತತಃ-ಆದ್ದರಿಂದ, ಏತೇಭ್ಯಃ-ಈ ತಾಪತ್ರಯಗಳಿಂದ (ಮುಕ್ತಿಯು), ಯೇನ-ಯಾರಿಂದ, ಸ್ಯುಃ-ಆಗುತ್ತದೆಯೋ, ತಂ-ಆತನನ್ನು, ಮುಕ್ತ್ಯೈ-ಮೋಕ್ಷಕ್ಕಾಗಿ

---

ಆಶ್ರಯಿಸುವುದರಿಂದ, ಈ ತಾಪತ್ರಯಗಳಿಂದ ಬಿಡುಗಡೆಯಾಗುವುದೋ, ಆತನನ್ನೇ ಶರಣುಹೊಂದಬೇಕು; ತಪ್ಪದೇ ರಕ್ಷಿಸುವನೆಂಬ ದೃಢವಾದ ನಂಬಿಕೆಯೂ, ತಾನು ಸರ್ವದಾ ಆತನ ಭೃತ್ಯನೇ ಎಂಬ ನಿರಂತರ ಭಾವನೆಯೂ, ಶರಣಾಗತಿಯೆನಿಸುತ್ತದೆ. ಈ ರೂಪದ ಶರಣಾಗತಿಯನ್ನು ಶ್ರೀವಿಷ್ಣುವಿನಲ್ಲಿ ಹೊಂದಿದರೆ, ಅದು, ಪರಮ ಪುರುಷಾರ್ಥವಾದ (ನಿತ್ಯಾನಂದ ಸ್ಥಿತಿ ರೂಪದ) ಮೋಕ್ಷವನ್ನೇ ದೊರಕಿಸುತ್ತದೆ(೧೩).
ಪ್ರಿಯವ್ರತ, ಧ್ರುವ, ಉತ್ತಾನಪಾದ, ಪ್ರಹ್ಲಾದ, ಯಯಾತಿ, ಮಾಂಧಾತಾ, ನಲ, ಪೃಥು,

(ಅಥವಾ ಏತೇಭ್ಯಃ ಮುಕ್ತ್ಯೈ-ಇವುಗಳಿಂದ ಮುಕ್ತನಾಗಲು), ಶರಣಂ ವ್ರಜೇತ್-ಶರಣು ಹೊಂದಬೇಕು (ಆಶ್ರಯಿಸಬೇಕು); ರಕ್ಷತಿ-ರಕ್ಷಿಸುತ್ತಾನೆ, ಇತ್ಯೇವ-ಹೀಗೆಂಬ, ವಿಶ್ವಾಸಃ-ದೃಢವಾದ ನಂಬಿಕೆಯೂ, ಅಹಂ-ನಾನು, ತದೀಯಃ-ಆತನಿಗೆ ಸೇರಿದವನೇ (ಆತನ ಭೃತ್ಯನೇ-ದಾಸನೇ), ಇತಿ-ಹೀಗೆಂಬ, ಸ್ಮೃತಿಃ[1]-ಸಂತತಸ್ಮರಣೆಯೂ, ಏಷಾ-ಈ ಉಭಯಾತ್ಮಕಭಾವನೆಯು, ಶರಣಾಗತಿಃ-ಶರಣಾಗತಿಯು (ಆಶ್ರಯವನ್ನು ಹೊಂದುವುದು), ಸ್ಯಾತ್-ಆಗುತ್ತದೆ (ಈ ಭಾವನೆಯೇ ಶರಣಾಗತಿಯೆನಿಸುತ್ತದೆ); ವಿಷ್ಣೌ-ಶ್ರೀವಿಷ್ಣುವಿನಲ್ಲಿ (ಏಷಾ-ಈ ಶರಣಾಗತಿಯು), ಮೋಕ್ಷಫಲಪ್ರದಾ-ಮೋಕ್ಷವೆಂಬ ಪರಮಪುರುಷಾರ್ಥವನ್ನೇ ದೊರಕಿಸುತ್ತದೆ.

ಪ್ರಿಯವ್ರತಧ್ರುವೋತ್ತಾನಪಾದಪ್ರಹ್ಲಾದನಾಹುಷಾಃ ॥ ೧೪ ॥

ಮಾಂಧಾತೃನಲವೈನ್ಯಾದ್ಯಾಃ ಕಾರ್ತವೀರ್ಯಗಯಾದಯಃ ।
ಇಕ್ಷ್ವಾಕುರಘುಪಾರ್ಥಾದ್ಯಾಃ ಸಗರೋ ಭರತಾದಯಃ ॥ ೧೫ ॥

ಮಹಾಬಲಾ ಮಹಾವೀರ್ಯಾಃ ಸಾರ್ವಭೌಮಾಃ ಸಹಸ್ರಶಃ ।
ದೀರ್ಘಾಯುಷೋ ದಕ್ಷದೇಹಾ ಮಹಾಸಕಲಸಂಪದಾಃ ॥ ೧೬ ॥

ಯತ್ರೋದ್ವಿಗ್ನಾ ಇಮೇ ತಾಪೈಃ ಪ್ರಯಾತಾ ಶರಣಂ ಹರಿಂ ।
ತತ್ರ ಸ್ವಲ್ಪಾಯುಷೋ ಮರ್ತ್ಯಾ ಮಂದಭಾಗ್ಯಾ ಹ್ಯುಪದ್ರುತಾಃ ॥ ೧೭ ॥

ನ ಯಾಂತಿ ಶರಣಂ ವಿಷ್ಣುಂ ನ ಜಾನೇ ದುರ್ಮತಿಂ ನೃಣಾಂ ।
ಭಾಗ್ಯಮಾಂದ್ಯಮಿದಂ ಚೈಷಾಂ ವರ್ಣಯಾಮಃ ಕಿಯದ್ವಯಂ ॥ ೧೮ ॥

ಪ್ರಿಯವ್ರತ ಧ್ರುವೋತ್ತಾನಪಾದ ಪ್ರಹ್ಲಾದ ನಾಹುಷಾಃ-ಪ್ರಿಯವ್ರತ, ಧ್ರುವ, ಉತ್ತಾನಪಾದ, ಪ್ರಹ್ಲಾದ, ಯಯಾತಿ; (ಈ ರಾಜರು); ಮಾಂಧಾತೃನಲ ವೈನ್ಯಾದ್ಯಾಃ-ಮಾಂಧಾತಾ, ನಲ, ಪೃಥು ಚಕ್ರವರ್ತಿ, ಮೊದಲಾದವರು ; ಕಾರ್ತವೀರ್ಯ ಗಯಾದಯಃ-ಕಾರ್ತವೀರ್ಯಾರ್ಜುನ, ಗಯ ಮೊದಲಾದವರು;

ಕಾರ್ತವೀರ್ಯ (ಅರ್ಜುನ-ಕೃತವೀರ್ಯನ ಮಗ), ಗಯ, ಇಕ್ಷ್ವಾಕು, ರಘು, ಪಾರ್ಥ, ಈ ಮುಂತಾದ ರಾಜ, ಮಹಾರಾಜ, ಚಕ್ರವರ್ತಿಗಳು, ಮಹಾಬಲಿಷ್ಠರೂ, ಮಹಾಪರಾಕ್ರಮಿಗಳೂ, ಸಾರ್ವಭೌಮರೂ, ದೀರ್ಘಾಯುಗಳೂ, ದೃಢಕಾಯರೂ,

1. ಶ್ರೀಹರಿಯೇ ರಕ್ಷಕನೆಂಬ ದೃಢವಿಶ್ವಾಸದಿಂದ, ಭಕ್ತನು ಸಕಲ ವಿಪತ್ತುಗಳನ್ನು ಎದುರಿಸಿ ಜಯಶೀಲನಾಗುತ್ತಾನೆಂಬ, ಆಶ್ವಾಸನಾರೂಪದ ಅರ್ಥವುಳ್ಳ ಈ ವಾಕ್ಯವು, ಶ್ರೀಮನ್ಮಧ್ವಾಚಾರ್ಯರಿಂದ ತಮ್ಮ 'ಶ್ರೀಮದ್ಭಗವದ್ಗೀತಾ ತಾತ್ಪರ್ಯ'ದಲ್ಲಿ ಉದಾಹೃತವಾಗಿದೆ.

ಇಕ್ಷ್ವಾಕುರಘುಪಾರ್ಥಾದ್ಯಾಃ- ಇಕ್ಷ್ವಾಕು, ರಘು, ಅರ್ಜುನ, (ಮಧ್ಯಮಪಾಂಡವ), ಈ ಮೊದಲಾದವರು, ಮಹಾಬಲಾಃ-ಮಹಾಬಲಿಷ್ಠರೂ, ಮಹಾವೀರ್ಯಾಃ-ಮಹಾಪರಾಕ್ರಮಿಗಳೂ, ಸಾರ್ವಭೌಮಾಃ-ಸಾರ್ವಭೌಮರೂ (ಚಕ್ರವರ್ತಿಗಳೂ), ದೀರ್ಘಾಯುಷಃ- ದೀರ್ಘಾಯುಗಳೂ, (ಬಹುಕಾಲ ಜೀವಿಸಿರುವವರೂ), ದೃಢದೇಹಾಃ-ದೇಹದಾರ್ಢ್ಯ ವುಳ್ಳವರೂ, ಮಹಾಸಕಲಸಂಪದಾಃ-ಮಹಾ ಸರ್ವ ಸಂಪದ್ಯುಕ್ತರೂ, ಸಹಸ್ರಶಃ-(ಅದ) ಸಾವಿರಾರು ಪ್ರಸಿದ್ಧ ಪುರುಷರಾದ, ಇಮೇ-ಈ ಎಲ್ಲರೂ, ಯತ್ರ-ಯಾವ ಸಂಸಾರದಲ್ಲಿ ತಾಪೈಃ-(ತ್ರಿವಿಧ) ತಾಪಗಳಿಂದ, ಉದ್ವಿಗ್ನಾಃ-ನೊಂದವರಾಗಿ, ಹರಿಂ-ಶ್ರೀವಿಷ್ಣುವನ್ನು ಶರಣಂಪ್ರಯಾತಾಃ-ಶರಣು ಹೊಂದಿದರೋ, ತತ್ರ-ಅಂತಹ ಸಂಸಾರದಲ್ಲಿ (ತಾಪಗಳಿಂದ ಕೂಡಿದ ಸಂಸಾರದಲ್ಲಿದ್ದೂ ಸಹ), ಮಂದಭಾಗ್ಯಾಃ-ಮಂದಭಾಗ್ಯರೂ (ಅಲ್ಪಪುಣ್ಯವುಳ್ಳವರೂ) ಉಪದ್ರುತಾಃ-ನಾನಾ ದುಃಖಪೀಡಿತರೂ, ಅಲ್ಪಾಯುಷಃ- ಅಲ್ಪಾಯುಗಳೂ (ಆದ), ಮರ್ತ್ಯಾಃ-ಮನುಷ್ಯರು, ವಿಷ್ಣುಂ-ಶ್ರೀವಿಷ್ಣುವನ್ನು ಶರಣಂ ನ ಯಾಂತಿ-ಶರಣು ಹೊಂದುವುದಿಲ್ಲ; ನೃಣಾಂ-(ಈ ಅಲ್ಪ) ಮನುಷ್ಯರ, ದುರ್ಮತಿಂ- ದುರ್ಬುದ್ಧಿಯನ್ನು (ಅವಿವೇಕವನ್ನು), ನ ಜಾನೇ-ತಿಳಿಯಲಾರೆನು; ವಯಂ-ನಾವು, (ನೀವು, ನಾನು ಎಲ್ಲರೂ ಸೇರಿ), ಏಷಾಂ-ಇವರ, ಇದಂ-ಈ, ಭಾಗ್ಯಮಾಂದ್ಯಂ- ಪುಣ್ಯದ ಅಲ್ಪತೆಯನ್ನು ಕಿಯತ್-ಎಷ್ಟು ವರ್ಣಯಾಮಃ-ವರ್ಣಿಸೋಣ (ವರ್ಣಿಸಲು ಸಾಧ್ಯವಿಲ್ಲ—ಅತ್ಯಲ್ಪವೇ ಸರಿ).[1]

**ತ್ಯಜಂತಿ ವಿಷಯಾ ಏನಾನ್ನ ತ್ಯಜಂತಿ ಚ ತಾನಮೀ ।**
**ಸಮೃದ್ಧಂ ರಾಜ್ಯಮುತ್ಸೃಜ್ಯ ಯೋಷಿತ್ಪುತ್ರಾದಿಸಂಪದಃ ॥ ೧೯ ॥**

---

ಸಂಪದ್ಯುಕ್ತರೂ ಆಗಿದ್ದರು; ಇಂತಹ ಸಹಸ್ರಾರು ಪ್ರಸಿದ್ಧಪುರುಷರೆಲ್ಲರೂ, ಸಾಂಸಾರಿಕ (ತ್ರಿವಿಧ) ತಾಪತ್ರಯಗಳಿಂದ ನೊಂದು,[2] ಶ್ರೀಹರಿಯನ್ನು ಅನನ್ಯರಾಗಿ ಶರಣುಹೊಂದಿದರು; ಅವರಂತೆಯೇ ಸಂಸಾರದಲ್ಲಿ ಬಿದ್ದು ತಾಪತ್ರಯಗಳಿಂದ ಸಂತಪ್ತರಾದರೂ, ಅವಿವೇಕಿಗಳೂ, ಮಂದಭಾಗ್ಯರೂ ಆದ ಅಲ್ಪಾಯುಷಿಗಳಾದ ಕ್ಷುದ್ರಮನುಷ್ಯರು ಶ್ರೀವಿಷ್ಣುವನ್ನು ಶರಣುಹೊಂದುವುದಿಲ್ಲ— ಇವರು ಮಹಾಮೂಢರಾದ ಮಂದಭಾಗ್ಯರೇ ಸರಿ(೧೭-೧೮). ಈ ಮಂದಭಾಗ್ಯರನ್ನು ವಿಷಯಗಳು (ಭೋಗ್ಯವಸ್ತುಗಳು), ಭೋಗಿಸಿ ಸುಖಪಡಲು ಅವಶ್ಯಕವಾದ ಪುಣ್ಯದ

1. ಕಿಯತ್—ಸ್ವಲ್ಪ ಮಾತ್ರ ವರ್ಣಿಸುತ್ತೇವೆ—ಮುಂದಿನ ಶ್ಲೋಕಗಳಿಂದ, ಎಂದೂ ಅರ್ಥವನ್ನು ತಿಳಿಯಬಹುದು.

2. ಶ್ಲೋಕ ೧೨ನ್ನು ನೋಡಿ—ತಾಪತ್ರಯಗಳು ಯಥಾಯೋಗ್ಯವಾಗಿ ಪ್ರಾಣಿಮಾತ್ರರಿಗೆ ಉಂಟು—ರಾಜಾದಿಗಳಿಗೆ ಅತ್ಯಲ್ಪ.

**ಯಾತಾಸ್ತೇ ಶರಣಂ ವಿಷ್ಣುಂ ತಪಸಾ ವನಮಾಸ್ಥಿತಾಃ ।**
**ಇಮೇ ಹಿ ದುರ್ಭಗಾ ಮರ್ತ್ಯಾಃ ಸರ್ವಸಂಪದ್ವಿವರ್ಜಿತಾಃ ॥ ೨೦ ॥**

**ನಿಜೈರ್ಲೋಕೈಃ ಪರಿತ್ಯಕ್ತಾಃ ಸುಹೃದ್ಭಾರ್ಯಾಸುತಾದಿಭಿಃ ।**
**ಅನಶ್ನುವಾನಾಃ ಕ್ಷುಧಿತಾ ಅನ್ನಮಪ್ಯಾತ್ಮವಾಂಛಯಾ ॥ ೨೧ ॥**

**ಕುತೋ ವಾಸಃ ಕುತಃ ಶಯ್ಯಾ ಭೋಗಾಶ್ಚ ಸ್ವಪ್ನದುರ್ಲಭಾಃ ।**
**ದೈವೇನಾಪಿ ಹೃತಾನರ್ಥಾನ್ ವಾಂಛಂತ್ಯೇತೇ ಪುನಃ ಪುನಃ ॥ ೨೨ ॥**

**ವಾಂಛಂತೋ ಹಿ ಮೃತಾಃ ಪ್ರಾಯಃ ಕೇಚಿತ್ ಪ್ರಾಪ್ಯಾಪಿ ವಾಂಛಿತಂ ।**
**ಅಸೂಯೇರ್ಷಾದಿಭಿರ್ದೋಷೈರ್ಲಬ್ಧಸ್ಥೈರ್ಯಸ್ಯ ಚಿಂತಯಾ ॥ ೨೩ ॥**

**ದಂದಹ್ಯಮಾನಾ ಅನಿಶಂ ವಿಮೂಢಾ ಬದ್ಧಮತ್ಸರಾಃ ।**
**ಭುಂಜಂತೇ ವಿಷವದ್ಭೋಗಾನ್ ಯತ್ನಲಬ್ಧಾನಪಿ ಸ್ಫುಟಂ ॥ ೨೪ ॥**

ಮಂದಭಾಗ್ಯರ ಅಲ್ಪಮನುಷ್ಯರ ತಾಪತ್ರಯಗಳ ಆಧಿಕ್ಯವನ್ನು ಸ್ವಲ್ಪ ವಿಸ್ತರಿಸುತ್ತಾರೆ—

ಏನಾನ್- ಈ ಮಂದಭಾಗ್ಯರನ್ನು ವಿಷಯಾಃ- ವಿಷಯಗಳು( ಭೋಗ್ಯ ವಸ್ತುಗಳು), ತ್ಯಜಂತಿ- ಬಿಟ್ಟುಹೋಗುತ್ತವೆ; ಅಮೀ- ಈ ಜನರು, ತಾನ್- ಅವುಗಳನ್ನು (ವಿಷಯಗಳನ್ನು), ನ ತ್ಯಜಂತಿ- ತೊರೆಯುವುದಿಲ್ಲ ಸಮೃದ್ಧಂ- ಸಮೃದ್ಧವಾದ, ರಾಜ್ಯಂ- ರಾಜ್ಯವನ್ನೂ, ಯೋಷಿತ್‌ಪುತ್ರಾದಿಸಂಪದಃ- ಸ್ತ್ರೀಜನ, ಪುತ್ರಾದಿಸಂಪತ್ತುಗಳನ್ನೂ ಉತ್ಸೃಜ್ಯ- ತೊರೆದು, ತೇ- ಆ(ಪೂರ್ವೋಕ್ತ) ಪ್ರಸಿದ್ಧ ರಾಜಾದಿಗಳು, ವಿಷ್ಣುಂ- ವಿಷ್ಣುವನ್ನು, ಶರಣಂ ಯಾತಾಃ- ಆಶ್ರಯನನ್ನಾಗಿ ಹೊಂದಿದರು; ತಪಸಾ- ತಪಸ್ಸಿನಿಂದ

---

ಅಭಾವದಿಂದ, ತಾವೇ ತೊರೆದುಹೋಗುತ್ತವೆ—ಅವರು ಸ್ವೇಚ್ಛೆಯಿಂದ ಅವುಗಳನ್ನು ತ್ಯಜಿಸುವುದಿಲ್ಲ; ಪ್ರಿಯವ್ರತಾದಿ ರಾಜರುಗಳಾದರೋ, ಸಮೃದ್ಧವಾದ ರಾಜ್ಯವನ್ನೂ ಪತ್ನೀಪುತ್ರಾದಿ ಸಕಲ ಸಂಪತ್ತುಗಳನ್ನೂ ವಿವೇಕದಿಂದ ತ್ಯಜಿಸಿ, ಶ್ರೀವಿಷ್ಣುವನ್ನು ಶರಣುಹೊಂದಿ, ತಪಸ್ಸಿಗಾಗಿ ವನವನ್ನು ಹೊಂದಿದರು; ಮಂದಭಾಗ್ಯರಾದ ಈ ಮನುಷ್ಯರು, ಅಲ್ಪಾಯುಗಳು—ಯಾವ ವಿಧವಾದ ಸಂಪತ್ತೂ ಇಲ್ಲದವರು; ಬಂಧು ಭಾರ್ಯಾ ಪುತ್ರಾದಿಗಳು ತಾವೇ ಇವರನ್ನು ತ್ಯಜಿಸುತ್ತಾರೆ—ಹಸಿವೆಯಿಂದ ಪೀಡಿತರಾದರೂ, ಉಣಲಿಕ್ಕೆ ಅನ್ನ ಸಹ ಇಲ್ಲದ ಇವರಿಗೆ, ಮನೆ ಎಲ್ಲಿಂದ ಬರಬೇಕು—ಹಾಸಿಗೆ ಬಟ್ಟೆಗಳೆಲ್ಲಿ!—ಎಲ್ಲವೂ ಅವರಿಗೆ ಸ್ವಪ್ನದಲ್ಲಿ ಸಹ ದುರ್ಲಭಗಳು; ದೈವವೇ (ಇವರ ಅದೃಷ್ಟಪ್ರೇರಕನಾದ ಶ್ರೀಹರಿಯೇ) ಇವರ ವಿಷಯಭೋಗಗಳನ್ನು

(ತಪೋಯುಕ್ತರಾಗಿ), ವನಂ-ವನವನ್ನು ಆಸ್ಥಿತಾಃ-ಆಶ್ರಯಿಸಿ ನಿಂತರು; ದುರ್ಭಗಾಃ-ದುರ್ಭಾಗ್ಯರಾದ, ಇಮೇ-ಈ, ಮರ್ತ್ಯಾಃ-ಮನುಷ್ಯರಾದರೋ, ಸರ್ವಸಂಪದ್ವಿವರ್ಜಿತಾಃ-ಪೂರ್ಣವಾಗಿ ಸಂಪದ್ರಹಿತರಾಗಿ, ಸುಹೃದ್ದಾರ್ಯಾ-ಸುತಾದಿಭಿಃ- ಬಂಧು, ಮಿತ್ರ, ದಾರಾಸುತಾದಿಗಳೆಂಬ, ನಿಜೈಃ-ತಮ್ಮವರೆಂಬ, ಲೋಕೈಃ-ಜನರಿಂದ, ಪರಿತ್ಯಕ್ತಾಃ-ಬಿಡಲ್ಪಟ್ಟವರಾಗಿ(ತ್ಯಜಿಸಲ್ಪಟ್ಟು), ಕ್ಷುದಿತಾಃ-ಹಸಿದರೂ (ಕ್ಷುಧೆಯಿಂದ ಪೀಡಿತರಾದರೂ), ಆತ್ಮವಾಂಛಯಾ-ತಮ್ಮ ಇಚ್ಛೆಯಂತೆ, ಅನ್ನಂ ಅಪಿ-ಅನ್ನವನ್ನೂ ಸಹ, ಅನಶ್ನುವಾನಾಃ-ತಿನ್ನದೇ (ತಿನ್ನಲು ದೊರೆಯದೇ), ಇರುವ, ಕುತಃ ವಾಸಃ-ಎಲ್ಲಿಯ ಮನೆ, ಕುತಃ ಶಯ್ಯಾ-ಎಲ್ಲಿಯ ಹಾಸಿಗೆ, ಭೋಗಾಃ ಚ-ಇತರ ಭೋಗಸಾಮಗ್ರಿಗಳು, ಸ್ವಪ್ನದುರ್ಲಭಾಃ-ಸ್ವಪ್ನದಲ್ಲಿ ಸಹ ದುರ್ಲಭಗಳಾಗಿವುಳ್ಳ, ಏತೇ-ಈ ಮಂದಭಾಗ್ಯರು, ದೈವೇನ ಅಪಿ-ಅದೃಷ್ಟದಿಂದಲೇ, (ತಾವೇ ತ್ಯಜಿಸಬೇಕಾದವುಗಳನ್ನು), ಹೃತಾನ್-ಅಪಹರಿಸಲಾದ, ಅರ್ಥಾನ್-ಭೋಗಸಾಮಗ್ರಿಗಳನ್ನು ಪುನಃಪುನಃ-ಮತ್ತೆಮತ್ತೆ ವಾಂಛಂತಿ-ಆಶಿಸುತ್ತಾರೆ; ಪ್ರಾಯಃ-ಬಹಳವಾಗಿ, ಕೇಚಿತ್-ಕೆಲವರು, ವಾಂಛಂತಃ-ಆಶೆಪಡುವವರಾಗಿಯೇ ಇದ್ದು (ಅಪೂರ್ಣವಾದ ಆಶೆಗಳುಳ್ಳವರಾಗಿಯೇ), ಮೃತಾಃ-ಮರಣ ಹೊಂದುವರು; ಕೇಚಿತ್-ಮತ್ತೆ ಕೆಲವರು, ವಾಂಛಿತಂ-ಅಪೇಕ್ಷಿತ ವಸ್ತುಗಳನ್ನು ಪ್ರಾಪ್ಯ ಅಪಿ-ಹೊಂದಿದರೂ ಸಹ, ಅಸೂಯೇರ್ಷ್ಯಾದಿಭಿಃ-ಅಸೂಯೆ, ಈರ್ಷ್ಯ ಮೊದಲಾದ, ದೋಷೈಃ-ದೋಷಗಳಿಂದ (ದೋಷಯುಕ್ತ ಯತ್ನಗಳಿಂದ), ಲಬ್ಧಸ್ಯೈರ್ಯಸ್ಯ-ದೊರೆತ ಆ ವಸ್ತುಗಳು ಸ್ಥಿರವಾಗಿರಬೇಕೆಂಬ, ಚಿಂತಯಾ-ಚಿಂತೆಯಿಂದ, ಅನಿಶಂ-ನಿರಂತರವಾಗಿ, ದಂದಹ್ಯಮಾನಾಃ-ದಹಿಸಲ್ಪಟ್ಟು (ತಪಿಸುತ್ತ), ಬದ್ಧಮತ್ಸರಾಃ-(ಅಧಿಕ ವಸ್ತುಗಳುಳ್ಳ ಅನ್ಯರನ್ನು ನೋಡಿ) ಮತ್ಸರಗ್ರಸ್ತರಾಗಿ, ವಿಮೂಢಾಃ-ಈ ಮೂರ್ಖರು, ಯತ್ನಲಬ್ಧಾನ್ ಅಪಿ-ಬಹು ಪ್ರಯತ್ನದಿಂದ ದೊರಕಿದವುಗಳಾಗಿದ್ದರೂ, ಭೋಗಾನ್-ಆ ಭೋಗ್ಯ ವಸ್ತುಗಳನ್ನು ಸ್ಫುಟಂ-ಸ್ಪಷ್ಟವಾಗಿ(ಎಲ್ಲರಿಗೂ ತಿಳಿದಿರುವಂತೆ), ವಿಷವತ್-ವಿಷದಂತೆ,[1] (ಆತ್ಮನಾಶಕರಗಳಾದ ಆ ವಿಷಯಗಳನ್ನು), ಭುಂಜಂತೇ-ಭೋಗಿಸುತ್ತಾರೆ. (ವಿಷದಂತೆ-

---

ಅಪಹರಿಸುತ್ತಿದ್ದರೂ, ಅವರು ಮತ್ತೆ ಮತ್ತೆ ಅವುಗಳನ್ನೇ ಆಶಿಸುತ್ತಾರೆ; ಕೆಲವರು, ತಮ್ಮ ಆಸೆಗಳು ಫಲಿಸುವ ಮೊದಲೇ ಮೃತರಾಗುತ್ತಾರೆ— ಮತ್ತಿತರರು, ಅಸೂಯೆ, ಈರ್ಷೆ ಮೊದಲಾದ ದುರ್ಭಾವಯುಕ್ತವಾದ ಯತ್ನಗಳಿಂದ, ಬಹು ಪ್ರಯತ್ನಪಟ್ಟು ಕೆಲವು ಭೋಗ್ಯವಸ್ತುಗಳನ್ನು ಸಂಪಾದಿಸಿದರೂ, ಅವು ತಮ್ಮಲ್ಲಿ ಸ್ಥಿರವಾಗಿ ಹೇಗೆ ನಿಂತಾವೆಂಬ ನಿರಂತರ ಚಿಂತೆಯಿಂದ, ಸಂತಪ್ತರಾಗಿ, ಮತ್ಸರಗ್ರಸ್ತರಾದ ಈ ಮೂಢರು (ಅವಿವೇಕಿಗಳು),

---

1. 'ವಿಷಂ ಯಾಪಯಂತೀತಿ ವಿಷಯಾಃ' ಎಂದು, ಗೀತಾವಿವೃತ್ತಿಯಲ್ಲಿ 'ವಿಷಯ' ಶಬ್ದವನ್ನು ನಿರ್ವಚನ ಮಾಡಲಾಗಿದೆ.

ಅನಿಷ್ಟವಾದವುಗಳಂತೆ, ಕಷ್ಟದಿಂದ ಪುನಃ ದೊರೆಯಲಾರವೆಂಬ ಶಂಕೆಯಿಂದ, ಭೋಗಿಸುತ್ತಾರೆಂಬ ಅರ್ಥವನ್ನೂ ತಿಳಿಯಬಹುದು).

ಈದೃಶೇಷ್ವಪಿ ಭೋಗೇಷು ಕಾಲೇನ ವಿಹತೇಷ್ವಪಿ ।
ಸ್ಮೃತ್ವಾ ಸ್ಮೃತ್ವಾ ತಪತ್ಯೇಷ ದಾರಿದ್ರ್ಯಾದಪಿ ಭೂರಿಶಃ ॥ ೨೫ ॥

ನ ಹಿ ವಂಧ್ಯಾಽಶ್ನುತೇ ದುಃಖಂ ಯಥಾ ಹಿ ಮೃತಪುತ್ರಿಣೀ ।
ನ ದರಿದ್ರಸ್ತಥಾ ದುಃಖೀ ಲಬ್ಧಕ್ಷೀಣಧನೋ ಯಥಾ ॥ ೨೬ ॥

ಈದೃಶೇಷು- ಹೀಗಿರುವ, ಭೋಗೇಷು ಅಪಿ- ಭೋಗಗಳು, ಕಾಲೇನ- ಕಾಲಗತಿಯಿಂದ (ಶ್ರೀಹರೀಚ್ಛೆಯಿಂದ) ವಿಹತೇಷು ಅಪಿ- ನಷ್ಟ ಹೊಂದುತ್ತಿರುವಲ್ಲಿ ಸಹ, ಏಷಃ- ಈ ವಿವೇಕರಹಿತ ಜೀವನು, ಸ್ಮೃತ್ವಾ ಸ್ಮೃತ್ವಾ- ಮತ್ತೆ ಮತ್ತೆ ಆ ಭೋಗಗಳನ್ನು ಸ್ಮರಿಸಿಕೊಂಡು, ಭೂರಿಶಃ- ಅತಿಶಯವಾಗಿ, ತಪತಿ- ತಪಿಸುತ್ತಾನೆ (ದುಃಖಪಡುತ್ತಾನೆ); ಯಥಾ- ಹೇಗೆ, ಮೃತಪುತ್ರಿಣೀ- ಮರಣಹೊಂದಿದ ಪುತ್ರನುಳ್ಳ ಸ್ತ್ರೀಯು, (ಪುತ್ರಮರಣದಿಂದ, ಸ್ತ್ರೀಯು), ದುಃಖಂ- ದುಃಖವನ್ನು ಅಶ್ನುತೇ- ಅನುಭವಿಸುವಳೋ, ತಥಾ- ಆ ಪ್ರಕಾರದ (ದುಃಖವನ್ನು), ವಂಧ್ಯಾ- (ಪುತ್ರನನ್ನೇ ಕಾಣದ) ಬಂಜೆಯು, ನ ಅಶ್ನುತೇ ಹಿ- ಅನುಭವಿಸುವುದಿಲ್ಲ (ಇದು ಲೋಕಾನುಭವಸಿದ್ಧವಾದುದು); ತಥಾ- ಹೀಗೆಯೇ, ಲಬ್ಧಕ್ಷೀಣಧನಃ ಯಥಾ- ಹೊಂದಿದ ಧನವನ್ನು ಕಳೆದುಕೊಂಡವನು ಹೇಗೆ (ದುಃಖಿ- ದುಃಖವುಳ್ಳವನೋ), ತಥಾದುಃಖೀ- ಆ ಪ್ರಕಾರದ ದುಃಖವುಳ್ಳವನು, ದರಿದ್ರಃ ನ- ದರಿದ್ರನು (ಧನವನ್ನೇ ಕಾಣದವನು) ಆಗುವುದಿಲ್ಲ; ಹಿ- ಇದೂ ಸಿದ್ಧವೇ.

ಯದ್ವದೇವೇಹ ತಥಾ ಸ್ವರ್ಗೇ ಭೋಗ ಇತ್ಯವಧಾರ್ಯತಾಂ ।
ದೃಶ್ಯಂತೇ ಕತಿಚಿಲ್ಲೋಕೇ ಯತ್ನತೋ ಲಬ್ಧವಾಂಛಿತಾಃ ॥ ೨೭ ॥

---

ಆ ವಸ್ತುಗಳನ್ನು ವಿಷದಂತೆ (ತಮ್ಮ ನಾಶಕ್ಕಾಗಿಯೇ) ಭೋಗಿಸುತ್ತಾರೆ(೧೯-೨೪). ವಿಷಯಭೋಗದಲ್ಲಿ ಆಸಕ್ತನಾದ ಜೀವನು, ಕಾಲಗತಿಯಿಂದ ಆ ಭೋಗಗಳು ನಷ್ಟಹೊಂದಿದರೂ, ಪುನಃಪುನಃ ಅವುಗಳನ್ನು ಸ್ಮರಿಸುತ್ತಾ ದುಃಖಿಸುತ್ತಾನೆ; ಪುತ್ರವತಿಯಾದ ಸ್ತ್ರೀಯು, ಪುತ್ರನ ಮರಣದಿಂದ ದುಃಖಿಸುವಂತೆ, ಬಂಜೆಯಾದ ಸ್ತ್ರೀಯು ದುಃಖಿಸುವುದಿಲ್ಲ—ಧನವಂತನು ತನ್ನ ಧನವು ನಷ್ಟವಾದಾಗ ದುಃಖಿಸುವಂತೆ ಹುಟ್ಟುದರಿದ್ರನು ದುಃಖಿಸಲಾರನಷ್ಟೆ(೨೫-೨೬). ಇಹಲೋಕದ ಭೋಗಗಳಂತೆ ಸ್ವರ್ಗಲೋಕದ ಭೋಗಗಳೂ, ವಿಷಯಾನುಭವರೂಪವಾದವುಗಳೆಂದು (ಅತ ಏವ ನಶ್ವರವಾದವುಗಳೆಂದು) ಸರ್ವ ಮುಮುಕ್ಷುಗಳು ನಿಸ್ಸಂಶಯವಾಗಿ ತಿಳಿಯಬೇಕು; ಈ

**ಅಪೂರ್ಣಭೋಗವಾಂಛಾಸ್ತೇ ಯಾಂತಿ ಕಾಲವಶಂ ನರಾಃ ।**
**ನೇನೀಯಮಾನಾಃ ಕಾಲೇನ ಕ್ರೋಶಂತ್ಯಪಿ ವಿಚೇತಸಃ ॥ ೨೮ ॥**

ಇಹ- ಈ (ಭೂ)ಲೋಕದಲ್ಲಿ ಯಥಾಭೋಗಃ-ಭೋಗವು ಯಾವ ವಿಧವಾದುದೋ, ಸ್ವರ್ಗೇ-ಸ್ವರ್ಗಲೋಕದಲ್ಲಿ ತಥಾಏವ- ಅದೇ ವಿಧವಾದುದು (ವಿಷಯಾನುಭವರೂಪವಾದುದು), ಇತಿ-ಹೀಗೆಂದು, ಅವಧಾರ್ಯತಾಂ- ನಿಶ್ಚಯವಾಗಿ (ಸರ್ವರಿಂದ) ತಿಳಿಯಲ್ಪಡಲಿ; ಲೋಕೇ-ಇಹದಲ್ಲಿ ಯತ್ನತಃ-(ಜೀವರ) ಯತ್ನದಿಂದ, ಲಬ್ಧವಾಂಛಿತಾಃ- ದೊರೆಯುವ ಅಪೇಕ್ಷಿತ ವಸ್ತುಗಳು, ಕತಿಚಿತ್-ಕೆಲವು, ದೃಶ್ಯಂತೇ-ಕಂಡುಬರುತ್ತವೆ; ತೇ ನರಾಃ-ಆ ಮನುಷ್ಯರು (ಸ್ವಪ್ರಯತ್ನದಿಂದ ಅಭೀಷ್ಟಗಳು ದೊರೆಯುವುವೆಂದು ತಿಳಿಯುವ ಮೂಢರು), ಅಪೂರ್ಣ ಭೋಗವಾಂಛಾಃ-ತಮ್ಮ ಭೋಗೇಚ್ಛೆಯನ್ನು ಪೂರ್ಣಗೊಳಿಸಲು ಅಸಮರ್ಥರಾಗಿ, ಕಾಲವಶಂ- ಮೃತ್ಯುವಶವನ್ನು (ಮರಣವನ್ನು), ಯಾಂತಿ-ಹೊಂದುತ್ತಾರೆ; ವಿಚೇತಸಃ-ವಿಮೂಢರಾದ ಈ ಜನರು, ಕಾಲೇನ- ಮೃತ್ಯುವಿನಿಂದ, ನೇನೀಯಮಾನಾಃ-ಎಳೆದೊಯ್ಯಲ್ಪಡುವವರಾಗಿ, ಅಪಿ- ಕ್ರೋಶಂತಿ- ಮತ್ತೆ ಕಿರಿಚುತ್ತಾರೆ (ರೋದನ ಮಾಡುತ್ತಾರೆ).

**ಮಮ ಪುತ್ರಾಃ ಸ್ತ್ರಿಯೋ ಮೇ ಮೇ ಧನಂ ಹಾಹಾ ವ್ಯಥಾಗತಂ ।**
**ಹಾಹಾ ಸುತಾ ಮೇ ಶಿಶವೋ ಯೋಷಿತೋ ಯೌವನೇ ಸ್ಥಿತಾಃ ॥ ೨೯ ॥**

**ವೃಥಾ ಪ್ರಯಾಂತಿ ಗೇಹಾನಿ ರಚಿತಾನ್ಯತಿಯತ್ನತಃ ।**
**ಅಹೋ ಚಿತ್ರಮಹೋ ಚಿತ್ರಂ ಮ್ರಿಯಮಾಣೋಽಪ್ಯಯಂ ನರಃ ॥ ೩೦ ॥**

**ಚಿಂತಾಂ ವಹತಿ ಪುತ್ರಾದೇರ್ಮಹಾಮೋಹಸ್ಯ ಜೃಂಭಿತಂ ।**

---

ಲೋಕದಲ್ಲಿ ಜೀವಯತ್ನದಿಂದ ಕೆಲವು ಭೋಗೇಚ್ಛೆಗಳು ಸಿದ್ಧಿಸುತ್ತವೆಂದು ತೋರುತ್ತವೆ—ಆದರೆ ಆ ಭೋಗಲಾಭವು ಶ್ರೀಹರೀಚ್ಛೆಯಿಂದಲೇ ಲಭಿಸುತ್ತವೆಂದರಿಯದ ಮೂಢರು, ತಮ್ಮ ಇಚ್ಛೆಗಳನ್ನು ಪೂರ್ಣಮಾಡಿಕೊಳ್ಳುವ ಮೊದಲೇ ಮೃತ್ಯುವಶರಾಗುತ್ತಾರೆಂಬುದು ಅನುಭವ ಸಿದ್ಧವಾಗಿದೆ; ಮೃತ್ಯುವಿನಿಂದ ಒಯ್ಯಲ್ಪಡುವಾಗ ಸಹ, ವಿಷಯಭೋಗಚಿಂತೆಯಿಂದ ನಾನಾಪ್ರಕಾರವಾಗಿ ರೋದನಮಾಡುವುದೂ ಕಂಡಿದೆ(೨೭-೨೮). ನನ್ನ ಪುತ್ರರು, ಪತ್ನಿಯರು, ಇನ್ನು ನನಗಿಲ್ಲವೇ! ಅಯ್ಯೋ! ಅಯ್ಯೋ! ನನ್ನ ಧನವು (ಕೂಡಿಟ್ಟ ಹಣವು) ನನಗಿಲ್ಲವೇ! ಹಾ! ಹಾ! ನನ್ನ ಮಕ್ಕಳು, ಶಿಶುಗಳನ್ನು ಬಿಟ್ಟು ಹೋಗಬೇಕೆ! ನನ್ನ ಸ್ತ್ರೀಯರು ಯುವತಿಯರಾಗಿರುವರಲ್ಲ! ಬಹುಪ್ರಯಾಸದಿಂದ ನಾನು ನಿರ್ಮಿಸಿದ ಮನೆಗಳು ವ್ಯರ್ಥವಾಗುತ್ತವೆಯಲ್ಲ! ನನ್ನ ಭೋಗಕ್ಕೆ ಇನ್ನು ಮುಂದಿಲ್ಲವೇ! ಮೃತನಾಗುತ್ತಿರುವ ಈ

ಮೂಢನ ರೋದನ ಪ್ರಕಾರವನ್ನು ನಿರೂಪಿಸುತ್ತಾರೆ—

ಮಮ-ನನ್ನ ಪುತ್ರಾಃ-ಪುತ್ರರು(ಮಕ್ಕಳು), ಸ್ತ್ರಿಯಃ-ಪತ್ನಿಯರು, ಮೇ ಮೇ-ನನ್ನವರು, ನನ್ನವರು (ಅಥವಾ ನನಗಿರಲಿ, ನನಗಿರಲಿ); (ಮಮ-ನನ್ನ), ಧನಂ-ಐಶ್ವರ್ಯವು, ವೃಥಾಗತಂ-ವ್ಯರ್ಥವಾಗುವುದಲ್ಲಾ! (ಇನ್ನು ಮುಂದೆ ನಾನು ಭೋಗಿಸುವಂತಿಲ್ಲ); ಹಾಹಾ-ಅಯ್ಯೋ!!, ಮೇ-ನನ್ನ, ಸುತಾಃ-ಮಕ್ಕಳು, ಶಿಶವಃ-ಶಿಶುಗಳು(ಆಗಿದ್ದಾರೆ), ಯೋಷಿತಃ-(ನನ್ನ) ಸ್ತ್ರೀಯರು, ಯೌವನೇ-ತಾರುಣ್ಯದಲ್ಲಿ ಸ್ಥಿತಾಃ-ಇರುವವರಲ್ಲಾ! ಹಾಹಾ-ಅಯ್ಯೋ!!, ಅತಿಯತ್ನತಃ-ಬಹುಪ್ರಯಾಸದಿಂದ, ನಿರ್ಮಿತಾನಿ-ನಿರ್ಮಿಸಿರ (ಕಟ್ಟಿಸಿದ), ಗೇಹಾನಿ-ಮನೆಗಳು, ವೃಥಾಪ್ರಯಾಂತಿ-ವ್ಯರ್ಥವಾಗುತ್ತವೆ (ನಾನು ಭೋಗಿಸುವಂತಿಲ್ಲವೇ!), ಅಯಂ-ಈ, ನರಃ-ಮನುಷ್ಯನು, ಮ್ರಿಯಮಾಣಃ ಅಪಿ-ಮರಣ ಹೊಂದುವುದರಲ್ಲಿದ್ದರೂ (ಮುಂದಿನ ಕ್ಷಣದಲ್ಲಿ ಸಾಯುತ್ತಲಿದ್ದರೂ), ಪುತ್ರಾದೇಃ-ಪುತ್ರಾದಿಗಳ, ಚಿಂತಾಂ-ಚಿಂತೆಯನ್ನು ವಹತಿ-ವಹಿಸುತ್ತಾನೆ; ಅಹೋ ಚಿತ್ರಂ-ಆಶ್ಚರ್ಯವು! ಅಹೋ ಚಿತ್ರಂ-ಮಹಾಶ್ಚರ್ಯವು! ಮಹಾಮೋಹಸ್ಯ-ಅಹಂಮಮಕಾರರೂಪ ಅಭಿಮಾನದ! ಜೃಂಭಿತಂ-ವಿಜೃಂಭಣೆಯು (ವಿಲಾಸವು).

ಕ್ವತ್ಯ: ಪುತ್ರಃ ಕುತತ್ಯಾಸ್ತ್ವಂ ಕುತಸ್ತ್ಯಾ ಯೋಷಿತಾದಯಃ ॥ ೩೧ ॥

ಮೃತೋ ನಾವರ್ತತೇ ಕೋಽಪಿ ನ ಪುನರ್ದರ್ಶನಂ ತತಃ ।
ಕುತೋ ಬಧ್ನಾತ್ಯಯಂ ಚಿತ್ತಂ ನೀಯಮಾನೋ ಯಮಾಲಯಂ ॥ ೩೨ ॥

ಯತ್ಕ್ರಿಯಾರ್ಥಮಯಂ ಚಕ್ರೇ ಪಾಪೇನಾಪಿ ಧನಾರ್ಜನಂ ।
ಬುಭುಜೇ ವಿಷಯಾಂ ದುಷ್ಪ್ರಾನ್ ಸೋಽಪಿ ದೇಹೋತ್ರ ಸಂಸ್ಥಿತಃ ॥ ೩೩ ॥

ಕಿಂ ಪುನಸ್ತನಯಾ ನಾರ್ಯೋ ಧನವಾಜಿಗಜಾದಯಃ ।
ಪುಣ್ಯಪಾಪಸಹಾಯೋಽಯಮೇಕ ಏವ ಹಿ ಗಚ್ಛತಿ ॥ ೩೪ ॥

---

ಮನುಷ್ಯನು, ಪುತ್ರಾದಿಗಳ ಚಿಂತೆಯನ್ನು ವಹಿಸುತ್ತಾನೆಯಲ್ಲವೇ! ಇದಲ್ಲವೇ ಮಹಾಮೋಹದ ವಿಜೃಂಭಣೆಯು! ಆಶ್ಚರ್ಯವು! ಮಹಾಶ್ಚರ್ಯವು!(೨೯-೩೦).
ಮಗನೆಲ್ಲಿಯವನು? ನೀನೆಲ್ಲಿಯವ—ನಿನ್ನ ಪತ್ನಿ ಮೊದಲಾದವರು ಎಲ್ಲಿಯವರು (ಬೇರೆ ಬೇರೆ ಬಂದು ಇಲ್ಲಿ ಸೇರಿದ್ದೀರಿ, ಮತ್ತೆ ಬೇರೆಯಾಗುತ್ತೀರಿ); ಮೃತನು ಈ ದೇಹಕ್ಕೆ ಪುನಃ ಬರುವುದಿಲ್ಲ—ಆದ್ದರಿಂದ ಅವರ ಪುನರ್ದರ್ಶನವು ಇಲ್ಲವೇ ಇಲ್ಲ. ಯಮಲೋಕಕ್ಕೆ ಕರೆದೊಯ್ಯಲ್ಪಡುವ, ಈ ಮೂಢನು ಈ ಚಿಂತೆಯಿಂದ ಮನಸ್ಸನ್ನೇಕೆ ತಾಪಗೊಳಿಸುತ್ತಾನೆಯೋ, ಆಶ್ಚರ್ಯವು; ಯಾರನ್ನು ಸಂತೋಷಗೊಳಿಸಲು,

ಪುತ್ರಃ- ಪುತ್ರನು, ಕ್ವತ್ಯಃ- ಎಲ್ಲಿಯವನು?, ತ್ವಂ- ನೀನು, ಕುತಸ್ತ್ಯಾಃ- ಎಲ್ಲಿದ್ದವನು?, ಯೋಷಿದಾದಯಃ-(ನಿನ್ನವರೆಂಬ) ಪತ್ನಿ ಮೊದಲಾದವರು, ಕುತಸ್ತ್ಯಾ- ಎಲ್ಲಿಯವರು? ಕಃ ಅಪಿ- ಯಾರೊಬ್ಬನೂ, ಮೃತಃ- ಮರಣಹೊಂದಿ, ನ ಆವರ್ತತೇ- ತಿರಿಗಿ ಬರುವುದಿಲ್ಲ (ಈ ದೇಹಕ್ಕೆ ಬರುವುದಿಲ್ಲ); ತತಃ- ಆದ್ದರಿಂದ, (ತತಃ- ಮರಣ ಹೊಂದಿದಮೇಲೆ), ಪುನಃ- ಮತ್ತೆ ದರ್ಶನಂ ನ-(ಅವರ ಯಾರೊಬ್ಬರ) ದರ್ಶನವೂ ಇಲ್ಲ (ಹೀಗಿರಲು), ಯಮಾಲಯಂ- ಯಮಲೋಕವನ್ನು ಕುರಿತು, ನೀಯಮಾನಃ- ಒಯ್ಯಲ್ಪಡುತ್ತಿರುವ, ಅಯಂ- ಈ ಮನುಷ್ಯನು, ಕುತಃ- ಏತಕ್ಕಾಗಿ, ಚಿತ್ತಂ- ತನ್ನ ಮನಸ್ಸನ್ನು ಬಧ್ನಾತಿ-(ಅವುಗಳಲ್ಲಿ ಪುತ್ರಾದಿ ವಸ್ತುಗಳಲ್ಲಿ), ಬಂಧನ ಮಾಡುತ್ತಾನೆ (ಅವುಗಳಿಗಾಗಿ ಏಕೆ ಚಿಂತಿಸುತ್ತಾನೆ- ದುಃಖಿಸುತ್ತಾನೆ?); ಯತ್ಪ್ರಿಯಾರ್ಥಂ- ಯಾರ (ಪತ್ನೀಪುತ್ರಾದಿಗಳ) ಪ್ರೀತಿಗಾಗಿ (ಯಾರನ್ನು ಸಂತೋಷಗೊಳಿಸಲಿಕ್ಕಾಗಿ), ಅಯಂ- ಈ ಮನುಷ್ಯನು, ಪಾಪೇನ ಅಪಿ- ಪಾಪಗಳನ್ನು ಮಾಡಿಯೂ, ಧನಾರ್ಜನಂ- ಧನ ಸಂಪಾದನೆಯನ್ನು ಚಕ್ರೇ- ಮಾಡಿದನೋ, (ಅವರೂ), (ಯಾವುದರಿಂದ), ದುಷ್ಟಾನ್- ಅಯೋಗ್ಯವಾದ, ವಿಷಯಾನ್- ವಿಷಯಗಳನ್ನು (ಭೋಗಗಳನ್ನು) ಬುಭುಜೇ- ಭೋಗಿಸಿದನೋ, ಸೋಽಪಿ ದೇಹಃ- ಆ ದೇಹವೂ ಸಹ, ಅತ್ರ- ಇಲ್ಲಿಯೇ, ಸಂಸ್ಥಿತಃ- ಇರುವುದು (ಆಗುತ್ತವೆ); ತನಯಾಃ- ಮಕ್ಕಳು, ನಾರ್ಯಃ- ಸ್ತ್ರೀಯರು, ಧನವಾಜಿಗಜಾದಯಃ- ಧನ, ಅಶ್ವ, ಗಜ ಮೊದಲಾದವುಗಳು, ಕಿಂ ಪುನಃ-(ಇಲ್ಲಿಯೇ ಉಳಿಯುತ್ತವೆಂದು) ಹೇಳಲೇನಿದೆ? ಅಯಂ- ಈ ಜೀವನು, ಪುಣ್ಯಪಾಪಸಹಾಯಃ- ತನ್ನ ಪುಣ್ಯಪಾಪಕರ್ಮಗಳಿಂದ ಮಾತ್ರ ಕೂಡಿ, ಏಕಏವ- ಒಬ್ಬನೇ, ಗಚ್ಛತಿ-(ಪರಲೋಕವನ್ನು ಕುರಿತು- ಅನ್ಯದೇಹವನ್ನು ಕುರಿತು), ಗಚ್ಛತಿ- ಹೋಗುತ್ತಾನೆ.

ವೃಥಾ ಪಶ್ಚಾತ್ತಪತ್ಯೇಷ ಭುಂಜಾನೋ ನಿರಯಾನ್ ಬಹೂನ್ ।
ಪ್ರಯಾಂತಿ ಪುತ್ರದಾರಾದ್ಯಾಃ ಸ್ವಸ್ವಕರ್ಮಾರ್ಜಿತಾ ಗತೀಃ ॥ ೩೫ ॥

ಏಷಃ- ಈ ಮೂಢಮನುಷ್ಯನು, ಬಹೂನ್- ಅನೇಕ, ನಿರಯಾನ್- ನರಕಗಳನ್ನೂ

---

ಪಾಪಕೃತ್ಯಗಳಿಂದ ಧನವನ್ನು ಸಂಪಾದಿಸಿದನೋ ಆ ಸತಿ ಸುತಾದಿಗಳಾಗಲಿ, ಯಾವ ದೇಹದಿಂದ ದುರ್ವಿಷಯಗಳನ್ನು ಭೋಗಿಸಿದನೋ ಆ ದೇಹವಾಗಲಿ, ತನ್ನೊಂದಿಗೆ ಬರುವುದಿಲ್ಲ ಪತ್ನೀಪುತ್ರಾದಿಗಳಾಗಲಿ, ಗಜ, ಅಶ್ವ, ಧನಾದಿಗಳಾಗಲಿ ಎಲ್ಲವೂ ಇಲ್ಲಿಯೇ ಉಳಿಯುತ್ತವೆ; ಈ ಎಲ್ಲವನ್ನೂ ಅನುಭವಿಸಿದ ದೇಹವೂ ಉಳಿಯುತ್ತದೆ; ಪುಣ್ಯಾಪಾಪಗಳಿಂದ ಸಹಿತನಾದ ಜೀವನೊಬ್ಬನೇ ಈ ದೇಹವನ್ನು ಬಿಟ್ಟು ಪ್ರಯಾಣಮಾಡುತ್ತಾನೆ (೩೦-೩೪).

ಸತಿ ಸುತ ಧನಾದಿಗಳಿಗಾಗಿ ಚಿಂತಿಸಿ ವ್ಯಥೆಪಡುತ್ತ ಮರಣಸಮಯದಲ್ಲಿ

(ಪಶುವೃಕ್ಷಾದಿ ಅಜ್ಞಯೋನಿಗಳನ್ನು) ಭುಂಜಾನಃ-ಭೋಗಿಸಲಿರುವವನಾದರೂ, ವೃಥಾ-ವ್ಯರ್ಥವಾಗಿ, ಪಶ್ಚಾತ್ತಪತಿ-ಚಿಂತಿಸಿ ದುಃಖಿಸುತ್ತಾನೆ; ಪುತ್ರದಾರಾದ್ಯಾಃ-(ಈತನ) ಮಕ್ಕಳು, ಹೆಂಡಿರು ಮುಂತಾದವರು, ಸ್ವಸ್ವಕರ್ಮಾರ್ಜಿತಾಃ-ತಂತಮ್ಮ ಕರ್ಮಗಳಿಂದ ಸಂಪಾದಿತವಾದ, ಗತೀಃ-ಗತಿಗಳನ್ನು (ಸ್ಥಾನಗಳನ್ನು-ದೇಹಗಳನ್ನು), ಪ್ರಯಾಂತಿ-ಹೊಂದುತ್ತಾರೆ.

**ದಾನಂ ಪುಣ್ಯಂ ಕೃತಂ ಚೇತ್ಸ್ಯಾದನೇನಾಸ್ಮಿನ್ ಹಿ ಜನ್ಮನಿ ।**
**ತರ್ಹ್ಯೇವ ಕಿಂಚಿತ್ ಭುಂಕ್ತೇಽಸೌ ವಿಷಯಾಂಶ್ಚಂಚಲಾನಪಿ ॥ ೩೬ ॥**

**ತತ್ರಾಪಿ ದುಃಖಮೇವಾಂತೇ ಪೂರ್ವೋಕ್ತವಿಧಯಾಭವೇತ್ ।**

ಅನೇನ-ಈತನಿಂದ (ಹೀಗೆ ಸತಿಸುತಾದಿಗಳ ಅಭಿಮಾನಯುಕ್ತನಾದ ಪುರುಷನಿಂದ) ದಾನಂ-ದಾನವೂ, ಪುಣ್ಯಂ-ಪುಣ್ಯವೂ, ಕೃತಂ-ಮಾಡಲ್ಪಟ್ಟದ್ದು ಸ್ಯಾತ್ ಚೇತ್-ಇದ್ದುದಾದರೆ, ತರ್ಹಿಏವ-ಆಗ ಮಾತ್ರ, ಅಸ್ಮಿನ್-ಈ, ಜನ್ಮನಿ-ಜನ್ಮದಲ್ಲಿ ಅಸೌ-ಈತನು, ಚಂಚಲಾನ್-ಅಸ್ಥಿರಗಳಾದ (ನಶ್ವರವಾದ), ವಿಷಯಾನ್-ವಿಷಯಗಳನ್ನು (ಭೋಗಗಳನ್ನು), ಕಿಂಚಿತ್ ಅಪಿ-ಸ್ವಲ್ಪವಾದರೂ, ಭುಂಕ್ತೇ-ಭೋಗಿಸುತ್ತಾನೆ; ತತ್ರಾಪಿ-ಅಲ್ಲಿಯೂ ಸಹ, ಪೂರ್ವೋಕ್ತವಿಧಯಾ-ಹಿಂದೆ ಹೇಳಿದ ಪ್ರಕಾರದಿಂದ (ಮರಣಕಾಲದ ಚಿಂತೆ, ವ್ಯಥೆ, ರೋದನಾದಿಗಳಿಂದ), ಅಂತೇ-ಕೊನೆಗೆ (ಮರಣಕಾಲದಲ್ಲಿ), ದುಃಖಂ ಏವ-ದುಃಖವೇ, ಭವೇತ್-ಉಂಟಾಗುತ್ತದೆ.

**ಯಥೈವ ಧೂರ್ತಾ ದುರ್ಮಂತ್ರೈರ್ಮೋಹಯಿತ್ವಾ ಮನೋ ನೃಣಾಂ ॥**
**ತಥೈವಂ ಸಸ್ಮಿತಾಪಾಂಗೈರ್ವಿಲಾಸೈರ್ವಿವಿಧೈಸ್ತ್ರಿಯಃ ।**
**ಯೂನಾಂ ಮನಾಂಸಿ ಸಂಮೋಹ್ಯ ಸರ್ವಸ್ವಾನಿ ಹರಂತ್ಯಹೋ ॥ ೩೮ ॥**

---

ರೋದಿಸುವ ಈ ಮೂಢಮನುಷ್ಯನು, ತಾನು ಬಹು ನಿರಯಗಳನ್ನು ಭೋಗಿಸಲು ಹೊರಟಿದ್ದರೂ, ಅನ್ಯರಿಗಾಗಿ ವ್ಯಥೆಪಡುತ್ತಾನೆ. ಆಶ್ಚರ್ಯವು! ಈತನ ಪುತ್ರದಾರಾದಿಗಳು, ಸ್ವಸ್ವಕರ್ಮಾರ್ಜಿತ ಗತಿಗಳನ್ನು ಹೊಂದಲಿರುತ್ತಾರೆ (೩.೫). ಧನಭಾರ್ಯಸುತಾದಿಗಳಲ್ಲಿ ಅಭಿಮಾನವುಳ್ಳ ಪುರುಷನು, ಪೂರ್ವದಲ್ಲಿ ಆಚರಿಸಿದ ಪುಣ್ಯವಿದ್ದರೆ ಮಾತ್ರ, ಈ ದೇಹದಲ್ಲಿ ಚಂಚಲವಾದ ಕೆಲವು ವಿಷಯಭೋಗಗಳನ್ನು ಪಡೆಯುತ್ತಾನೆ; ಹೀಗೆ ಪಡೆದು ಭೋಗಿಸಿದರೂ, ಅಂತ್ಯಕ್ಕೆ, ಈ ಹಿಂದೆ ನಿರೂಪಿಸಿದ ಚಿಂತೆ, ರೋದನಾದಿಗಳಿಂದ, ದುಃಖವೇ ಉಂಟಾಗುತ್ತದೆ (೩೬). ವಂಚಕರು ದುರ್ಮಂತ್ರಗಳಿಂದ ಮನುಷ್ಯರ ಮನಸ್ಸನ್ನು ಮೋಹಗೊಳಿಸಿ, ಅವರ ಸರ್ವಸ್ವವನ್ನೂ ಅಪಹರಿಸುವಂತೆ, ಸ್ತ್ರೀಯರು, ತಮ್ಮ ಹಾಸಯುಕ್ತಕಟಾಕ್ಷಗಳಿಂದಲೂ, ವಿವಿಧ

ಯಥಾ- ಹೇಗೆ, ಧೂರ್ತಾಃ-ವಂಚಕರು(ಮೋಸಗಾರರು), ನೃಣಾಂ- ಮನುಷ್ಯರ, ಮನಃ- ಮನಸ್ಸನ್ನು, ದುರ್ಮಂತ್ರೈಃ-ದುಷ್ಟಮಂತ್ರಗಳಿಂದ (ದುರಾಲೋಚನೆಗಳಿಂದ), ಮೋಹಯಿತ್ವಾ-ಮೋಹಗೊಳಿಸಿ, ಸರ್ವಸ್ವಾನಿ-ಸರ್ವಸ್ವವನ್ನು (ಅವರ ಎಲ್ಲ ವಸ್ತುಗಳನ್ನು), ಹರಂತಿ- ಅಪಹರಿಸುತ್ತಾರೆಯೋ, ತಥಾ- ಹಾಗೆಯೇ, ಸ್ತ್ರಿಯಃ-ಸ್ತ್ರೀಯರು (ಕುಟಿಲಸ್ತ್ರೀಯರು), ಸಸ್ಮಿತಾಪಾಂಗೈಃ-ಮಂದಹಾಸಯುಕ್ತವಾದ ತಮ್ಮ ಕಡೆಗಣ್ಣ ನೋಟಗಳಿಂದಲೂ, ವಿವಿಧೈಃ-ನಾನಾ ವಿಧದ, ವಿಲಾಸೈಃ-ವಿಲಾಸಗಳಿಂದಲೂ (ಹಾವಭಾವಾದಿಗಳಿಂದಲೂ), ಯೂನಾಂ- ಯುವಕರ, ಮನಾಂಸಿ- ಮನಸ್ಸುಗಳನ್ನು ಸಂಮೋಹ್ಯ- ಮೋಹಗೊಳಿಸಿ, ಸರ್ವಸ್ವಾನಿ ಹರಂತಿ- ಸರ್ವವನ್ನೂ ಅಪಹರಿಸುತ್ತಾರೆ; ಅಹೋ- ಆಶ್ಚರ್ಯವು (ಸ್ತ್ರೀಯರ ಸಾಮರ್ಥ್ಯವು ಅದ್ಭುತವು!).

**ತಥೈವ ಚಟುಲಾಲಾಪೈರ್ಮುಗ್ಧಕ್ರೀಡನಕೈರಪಿ ।**
**ಬಾಲಾ ವಿಮೋಹ್ಯ ಚೇತಾಂಸಿ ಹರಂತ್ಯಸ್ಮಾದ್ಧನಾನ್ಯಹೋ ॥ ೩೯ ॥**

**ವೃಥೈವ ಕೇಚಿದಾಸಕ್ತಾಃ ಪ್ರಿಯಾಣ್ಯೇಷಾಂ ಹಿ ಕುರ್ವತೇ ।**

ತಥಾಏವ-ಹಾಗೆಯೇ, ಬಾಲಾಃ-ಮಕ್ಕಳು, ಮುಗ್ಧಕ್ರೀಡನಕೈಃ-ಮುದ್ದಾದ ಆಟಗಳಿಂದಲೂ, ಚಟುಲಾಲಾಪೈಃಅಪಿ-ಮನೋಹರವಾದ ತೊದಲು ನುಡಿಗಳಿಂದಲೂ ಸಹ, ಚೇತಾಂಸಿ-ಮನಸ್ಸುಗಳನ್ನು, ವಿಮೋಹ್ಯ- ಮೋಹಗೊಳಿಸಿ, ಅಸ್ಮಾತ್- ಈ ಮೋಹಿತ ಪುರುಷನಿಂದ, ಧನಾನಿ-ಧನಗಳನ್ನು, ಹರಂತಿ-ಸೆಳೆಯುತ್ತವೆ(ಅಪಹರಿಸುತ್ತವೆ); ಅಹೋ-ಆಶ್ಚರ್ಯವು!, ಕೇಚಿತ್-ಕೆಲವರು, ವೃಥಾಏವ-ವ್ಯರ್ಥವಾಗಿ, ಆಸಕ್ತಾಃ- (ಬಾಲಾದಿಗಳಲ್ಲಿ) ಆಸಕ್ತರಾಗಿ, ಏಷಾಂ-ಇವರಿಗೆ, ಪ್ರಿಯಾಣಿ-ಪ್ರೀತಿಗೆ ಕಾರಣವಾದ ಕರ್ಮಗಳನ್ನು ಕುರ್ವತೇ-ಮಾಡುತ್ತಾರೆ; ಹಿ- ಲೋಕಸಿದ್ಧವು.

**ಯತ್ರ ಯತ್ರ ಮನೋತ್ಯರ್ಥಮಯಂ ಬಧ್ನಾತಿ ದುರ್ಮತಿಃ ॥ ೪೦ ॥**

**ಮಾ ಭೂದನಿಷ್ಟಮಸ್ಯೇತಿ ಚಿಂತಯಾ ತಪ್ಯತೇಽನಿಶಂ ।**
**ಖಿದ್ಯತ್ಯಪ್ರಿಯಸಂಪ್ರಾಪ್ತೌ ಪ್ರಿಯಸ್ಯಾಪಿ ವಿಯೋಗತಃ ॥ ೪೧ ॥**

---

ವಿಲಾಸಗಳಿಂದಲೂ, ಯುವಕರ ಮನಸ್ಸುಗಳನ್ನು ಮೋಹಿಸಿ ಅವರ ಸರ್ವಸ್ವವನ್ನೂ (ವಿವೇಕವನ್ನೇ) ಅಪಹರಿಸುತ್ತಾರೆ; ಆಶ್ಚರ್ಯವು!(೩೭-೩೮). ಇದರಂತೆಯೇ, ಬಾಲಕರು, ತಮ್ಮ ತೊದಲ್ನುಡಿಗಳಿಂದಲೂ, ಮನೋಹರವಾದ ಆಟಪಾಟಗಳಿಂದಲೂ, ಮನಸ್ಸನ್ನು ಸೆಳೆದು ಮೋಹಿಸುತ್ತಾರೆ; ಇದರಿಂದ ಮೋಹಿತರಾದ ಪುರುಷರು ಬಾಲಕರಿಗೆ ಸಂತೋಷಪಡಿಸುವುದಕ್ಕಾಗಿ ನಾನಾ ಯತ್ನಗಳನ್ನು ಮಾಡಿ ವಿಶೇಷ ಧನವ್ಯಯವನ್ನು ಮಾಡುತ್ತಾರೆ; ಆಶ್ಚರ್ಯವು!(೩೯). ಈ ವಿಧದ ಮೂಢನು, ಯಾವ ಯಾವ ವಸ್ತುವಿನಲ್ಲಿ

ತಥೈವ ಚಿಂತಯಾಪ್ಯೇಷಾಮನಿಶಂ ದುಃಖಭಾಗಯಂ ।
ನ ಜಾನೇಽಯಂ ಕದಾ ತೇಭ್ಯೋ ಲಭತೇ ಸುಖವಿಪ್ರುಷಃ ॥ ೪೨ ॥

ಅಯಂ-ಈ, ದುರ್ಮತಿಃ-ಮೂಢನು, ಯತ್ರ ಯತ್ರ-ಯಾವ ಯಾವ ವಸ್ತುವಿನಲ್ಲಿ ಮನಃ-ಮನಸ್ಸನ್ನು ಅತ್ಯರ್ಥಂ-ಅತಿಶಯವಾಗಿ, ಬಧ್ನಾತಿ-ಸಿಲುಕಿಸುತ್ತಾನೋ (ಬಂಧನ ಮಾಡಿಕೊಳ್ಳುತ್ತಾನೋ), ಅಸ್ಯ-ಇದಕ್ಕೆ (ಇವನಿಗೆ), ಅನಿಷ್ಟಂ-ಅನಿಷ್ಟವು (ಕೆಡಕು), ಮಾ ಭೂತ್-ಆಗದಿರಲಿ, ಇತಿ ಚಿಂತಯಾ-ಎಂಬ ಚಿಂತೆಯಿಂದ, ಅನಿಶಂ-ಸದಾ, ತಪ್ಯತೇ-ವ್ಯಥೆಪಡುತ್ತಾನೋ (ತಾನು ಆಸಕ್ತನಾದ ಈತನಿಗೆ), ಅಪ್ರಿಯಸಂಪ್ರಾಪ್ತೌ-ಅಪ್ರಿಯವಾದುದು ಬಂದೊದಗುವುದರಿಂದ, ಪ್ರಿಯಸ್ಯ-ಪ್ರಿಯವಾದುದರ, ವಿಯೋಗತಃ ಅಪಿ-ವಿಯೋಗದಿಂದ (ಬಿಟ್ಟುಹೋಗುವುದರಿಂದ) ಸಹ, ವಿದ್ಯತಿ-ದುಃಖಿಸುತ್ತಾನೆ; ತಥೈವ-ಹಾಗೂ, ಅಯಂ-ಈತನು, ಏಷಾಂ-ಇವುಗಳ (ತನ್ನವೆಂಬ ಆ ವಸ್ತುಗಳ), ಚಿಂತಯಾ-ಚಿಂತೆಯಿಂದ, ಅನಿಶಂ-ನಿರಂತರವಾಗಿ, ದುಃಖಭಾಕ್-ದುಃಖಭಾಗಿಯೇ ಸರಿ.

ಪುರಾ ಹಿ ಭರತೋ ರಾಜಾ ತ್ಯಕ್ತ್ವಾ ರಾಜ್ಯಂ ಸಮೃದ್ಧಿಮತ್ ।
ಸಕ್ತೋ ಹರಿಣಶಾವೇ ಭೂತ್ವಾತೋ ಭೂದ್ವಿಸ್ಮೃತಿರ್ಹರೇಃ ॥ ೪೩ ॥

ನೋಪದ್ರವೇಯುಸ್ತಂ ಶಾವಂ ವೃಕಾದ್ಯಾ ಕ್ರೂರಜಂತವಃ ।
ಬುಭುಕ್ಷಾ ವಾ ಪಿಪಾಸಾ ವಾ ನ ತಂ ಬಾಧೇತ ಕರ್ಹಿಚಿತ್ ॥ ೪೪ ॥

---

ತನ್ನ ಮನಸ್ಸನ್ನು ಅತಿಶಯವಾಗಿ (ಅಭಿಮಾನದಿಂದ) ಬಂಧನಮಾಡಿಕೊಳ್ಳುವನೋ ಮತ್ತು ಯಾವ ವಸ್ತುವಿಗೆ ಸ್ವಲ್ಪವೂ ಅನಿಷ್ಟವಾಗದಿರಲೆಂಬ ಸಂತತ ಚಿಂತೆಯಿಂದ, ವ್ಯಥೆಪಡುತ್ತಾನೆಯೋ, ಆ ವಸ್ತುವಿಗೆ ಅಪ್ರಿಯಪ್ರಾಪ್ತಿಯಿಂದಲೂ ಪ್ರಿಯವಿಯೋಗದಿಂದಲೂ, ದುಃಖವೇ ಅಧಿಕವಾಗುತ್ತದೆ; ಮತ್ತು ತನ್ನವೆಂಬ ಆ ವಸ್ತುಗಳ ಚಿಂತೆಯಿಂದ ಆತನು ನಿರಂತರ ದುಃಖಭಾಗಿಯೇ ಆಗುತ್ತಾನೆ(೪೦-೪೨). ಪೂರ್ವದಲ್ಲಿ ಭರತ ಚಕ್ರವರ್ತಿಯು ಸಂಪದಭಿವೃದ್ಧವಾದ ರಾಜ್ಯವನ್ನು ಪರಿತ್ಯಾಗ ಮಾಡಿ, ತಪಸ್ಸಿನಿಂದ ಶ್ರೀಹರಿಪ್ರಸನ್ನತೆಯನ್ನು ಸಂಪಾದಿಸಲು, ಅರಣ್ಯಕ್ಕೆ ಹೋದನು; ಅಲ್ಲಿ(ನದೀಪ್ರವಾಹದಲ್ಲಿ ತೇಲುತ್ತ ಬಂದು ತನ್ನ ಕೈಸೇರಿದ) ಒಂದು ಜಿಂಕೆಮರಿಯಲ್ಲಿ ಆಸಕ್ತನಾದನು; ಅದನ್ನು ತೋಳ ಮುಂತಾದ ಕ್ರೂರಮೃಗಗಳು ಪೀಡಿಸದಿರಲಿ—ಅದಕ್ಕೆ ಹಸಿವೆ ನೀರಡಿಕೆಗಳ ಬಾಧೆಯು ಎಂದೂ ಆಗದಿರಲಿ, ಎಂಬ ಚಿಂತೆಯಲ್ಲಿ ಸದಾ ಮಗ್ನನಾದನು; ಇದರಿಂದ, ಸ್ನಾನಾದಿ (ಸ್ನಾನ, ಸಂಧ್ಯಾ, ವಿಷ್ಣುಪೂಜೆ, ಧ್ಯಾನಾದಿ) ಕರ್ಮಗಳಲ್ಲಿ ಒಂದು ವೇಳೆಯೂ ಶ್ರೀಹರಿಯನ್ನು ಸ್ಮರಿಸುತ್ತಿರಲಿಲ್ಲ; ಪೂರ್ಣವಾಗಿ ಹರಿಣಶಾವದ ಸ್ನೇಹವಶನಾದನು

**ಇತ್ಯೇವಂ ಸತತಂ ಚಿಂತಾಮಗ್ನಃ ಸ್ನಾನಾದಿಕರ್ಮಸು ।**
**ನ ಸಸ್ಮಾರ ಹರಿಂ ಜಾತು ವೃಥಾ ಸ್ನೇಹನಿಯಂತ್ರಿತಃ ॥ ೪೫ ॥**

ಪುರಾ-ಪೂರ್ವದಲ್ಲಿ, ರಾಜಾಭರತಃ-ರಾಜನಾದ ಭರತನು, ಸಮೃದ್ಧಿಮತ್-ಸಮೃದ್ಧವಾದ, ರಾಜ್ಯಂ-ರಾಜ್ಯವನ್ನು ತ್ಯಕ್ತ್ವಾ-ತ್ಯಜಿಸಿ (ತಪಸ್ಸಿಗಾಗಿ ಅರಣ್ಯಕ್ಕೆ ಬಂದು), ಹರಿಣಶಾವೇ-ಜಿಂಕೆಮರಿಯಲ್ಲಿ ಸಕ್ತಃ-ಆಸಕ್ತನು, ಅಭೂತ್-ಆದನು; ತತಃ-ಅದರಿಂದ (ಅನ್ಯವಸ್ತುವಿನ ಅಭಿಮಾನದಿಂದ), ಹರೇಃ-ಶ್ರೀಹರಿಯ, ವಿಸ್ಮೃತಿಃ- ವಿಸ್ಮರಣೆಯೇ (ಮರೆವು), ಅಭೂತ್-ಉಂಟಾಯಿತು; ತಂ ಶಾವಂ-ಆ ಜಿಂಕೆಮರಿಯನ್ನು ವೃಕಾದ್ಯಾಃ-ತೋಳ ಮೊದಲಾದ, ಕ್ರೂರಜಂತವಃ-ಕ್ರೂರಪ್ರಾಣಿಗಳು, ನ ಉಪದ್ರೇಯುಃ-ವಿಪತ್ತನ್ನುಂಟುಮಾಡದಿರಲಿ; ತಂ-ಅದನ್ನು, ಬುಭುಕ್ಷಾ ವಾ-ಹಸಿವೆಯಾಗಲಿ, ಪಿಪಾಸಾ ವಾ-ನೀರಡಿಕೆಯಾಗಲಿ, ಕರ್ಹಿಚಿತ್-ಎಂದೂ, ನ ಬಾಧೇತ-ಬಾಧಿಸದಿರಲಿ(ಪೀಡಿಸದಿರಲಿ); ಇತ್ಯೇವಂ-ಹೀಗೆಂದು, ಸತತಂ-ಯಾವಾಗಲೂ, ಚಿಂತಾಮಗ್ನಃ-ಚಿಂತೆಯಲ್ಲಿ ಮುಳುಗಿದವನಾಗಿ, ಸ್ನಾನಾದಿಕರ್ಮಸು-ಸ್ನಾನಾದಿ ಕರ್ಮಗಳಲ್ಲಿ(ಆ ಕರ್ಮಗಳನ್ನಾಚರಿಸುವಾಗ), ಹರಿಂ-ಶ್ರೀಹರಿಯನ್ನು ಜಾತು-ಒಂದು ವೇಳೆಯಾದರೂ, ನ ಸಸ್ಮಾರ-ಸ್ಮರಿಸುತ್ತಲೇ ಇರಲಿಲ್ಲ ವೃಥಾ-ವ್ಯರ್ಥವಾಗಿ, ಸ್ನೇಹನಿಯಂತ್ರಿತಃ-(ಜಿಂಕೆಮರಿಯಲ್ಲಿನ) ಪ್ರೀತಿಯಿಂದ ನಿಯತನಾದನು (ಸದಾ ಆ ಪ್ರೀತಿಯ ವಶನಾಗಿ ಅನ್ಯಚಿಂತೆಯೇ ಇಲ್ಲದವನಾದನು).

**ಧ್ಯಾಯನ್ನೇವ ತಮೇವಾಂತೇ ಜಹೌ ಪ್ರಾಣಾಂಸ್ತತಃ ಪರಂ ।**
**ಮೃತದೇಹಮಸೌ ಪ್ರಾಪ್ತಸ್ತತ್ರೇಮೇ ಮಾನವಾಃ ಕಥಂ ॥ ೪೬ ॥**

**ಗೃಹಕ್ಷೇತ್ರಸುತಸ್ತ್ರೀಷು ಸಕ್ತಾಃ ಸುಖಮವಾಪ್ನುಯುಃ ।**
**ಕಥಂ ವಾ ಸ್ವಹಿತಾರ್ಥಾಯ ಕುರ್ವೀರನ್ ಪುಣ್ಯಕರ್ಮ ಚ ॥ ೪೭ ॥**

(೪೬.-೪೭). ತನ್ನ ಮರಣಕಾಲದಲ್ಲಿ ಸಹ ಆ ಜಿಂಕೆಯ ಮರಿಯನ್ನೇ ಚಿಂತಿಸುತ್ತ ದೇಹತ್ಯಾಗಮಾಡಿ, ಈ ಭರತರಾಜನು, ಜಿಂಕೆಯಾಗಿಯೇ ಹುಟ್ಟಿದನು;[1] ಅನ್ಯಾಸಕ್ತಿಯ ಫಲವು ಹೀಗಿರಲು, ಮನೆ, ಹೊಲ ಮಕ್ಕಳು ಹೆಂಡಿರು, ಮೊದಲಾದವುಗಳಲ್ಲಿ ಮಮತ್ವಬುದ್ಧಿಯುಳ್ಳ ಅತ್ಯಾಸಕ್ತರಾದ ಮಾನವರು, ಸುಖವನ್ನು ಹೇಗೆ ಪಡೆಯುವರು? ತಮ್ಮ ಹಿತಸಾಧಕವಾದ ಪುಣ್ಯಕರ್ಮಗಳನ್ನು ಹೇಗೆ ಆಚರಿಸಬಲ್ಲರು? ಹೇಗೆ ತಾನೇ,

1. 'ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇವರಂ । ತಂ ತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಃ ।' (ಗೀತೆ) ಈ ನಿಯಮಕ್ಕೆ ಭರತನ ಗತಿಯು ನಿದರ್ಶನವಾಗಿರ; ಭಗವದನ್ಯತ್ರ ಆಸಕ್ತಿಯು ಅಂತ್ಯಸ್ಮರಣೆಗೂ ಕಾರಣವಾಗಿ, ಸಂಸಾರಬಂಧಕ್ಕೆ ಹೇತುವಾಗುತ್ತದೆಯಲ್ಲದೇ, ಅದರ ಬಿಡುಗಡೆಗಲ್ಲ.

**ಕಥಂ ವಾ ಸ್ವಸ್ಯ ಮುಕ್ತ್ಯರ್ಥಂ ಸ್ಮರೇಯುರ್ವಿಷ್ಣುಮೀಶ್ವರಂ ।**

ಅಂತೇ-(ಭರತನು ತನ್ನ) ಮರಣಕಾಲದಲ್ಲಿ ತಂ ಏವ-ಆ ಜಿಂಕೆಯ ಮರಿಯನ್ನೇ, ಧ್ಯಾಯನ್ ಏವ-ಚಿಂತಿಸುತ್ತಲೇ, ಪ್ರಾಣಾನ್-ಪ್ರಾಣಗಳನ್ನು ಜಹೌ-ಬಿಟ್ಟನು; ತತಃ ಪರಂ-ಆ ನಂತರ, ಅಸೌ-(ಈ ತಪಸ್ಸಿಗೆ ಬಂದ) ಭರತನು, ಮೃಗದೇಹಂ-ಜಿಂಕೆಯ ದೇಹವನ್ನು ಪ್ರಾಪ್ತಃ-ಹೊಂದಿದನು; ತತ್ರ-(ಭಗವದಿತರವಸ್ತುಗಳಲ್ಲಿ ಆಸಕ್ತನಾಗುವುದರ ಫಲವು) ಹೀಗಿರುವಲ್ಲಿ ಇಮೇ-ಈ, ಮಾನವಾಃ-(ಸಂಸಾರದಲ್ಲಿ ಆಸಕ್ತರಾದ) ಮನುಷ್ಯರು, ಗೃಹಕ್ಷೇತ್ರಸುತಸ್ತ್ರೀಷು-ಮನೆ, ಹೊಲ, ಮಕ್ಕಳು, ಹೆಂಡಿರುಗಳಲ್ಲಿ ಸಕ್ತಾಃ-(ಮಮತ್ವಬುದ್ಧಿಯಿಂದ) ಆಸಕ್ತರಾಗಿ, ಕಥಂ-ಹೇಗೆ, ಸುಖಂ-(ಅಪೇಕ್ಷಿತವಾದ) ಸುಖವನ್ನು ಆಪ್ನುಯುಃ-ಹೊಂದುವರು? (ಶಕ್ಯವಲ್ಲ); ಸ್ವಹಿತಾರ್ಥಾಯ-ತಮ್ಮ ಹಿತಕ್ಕಾಗಿ ಅವಶ್ಯಕವಾದ, ಪುಣ್ಯಕರ್ಮ-ಪುಣ್ಯಕರ್ಮವನ್ನು, ಕಥಂ ವಾ-ಹೇಗೆ ತಾನೇ, ಕುರ್ವೀರನ್-ಮಾಡಿಯಾರು? (ಮಾಡಲು ಶಕ್ತರಾಗಬಹುದು?); ಸ್ವಸ್ಯ-ತನ್ನ ಮುಕ್ತ್ಯರ್ಥಂ-ಮೋಕ್ಷಕ್ಕಾಗಿ(ಸಂಸಾರದಿಂದ ಬಿಡುಗಡೆಯನ್ನು ಹೊಂದಲು); ಈಶ್ವರಂ-ಪ್ರಭುವಾದ, ವಿಷ್ಣುಂ-ಶ್ರೀವಿಷ್ಣುವನ್ನು ಕಥಂ ವಾ-ಹೇಗೆ ತಾನೇ, ಸ್ಮರೇಯುಃ-ಸ್ಮರಿಸುವರು? (ವಿಷಯಾಸಕ್ತರಿಗೆ ಹರಿಸ್ಮರಣೆಯು ದೂರವೇ ಸರಿ).

**ಧ್ಯಾಯತೋ ಮನಸಾ ವಿಷ್ಣುರ್ಮೋಚಯೇತ್ಕರ್ಮಬಂಧತಃ ॥ ೪೮ ॥**

**ದದಾತ್ಯಪ್ಯೈಹಿಕೇಷ್ಟಾನಿ ತಾದೃಶಂ ಹಿ ಮನೋ ನೃಣಾಂ ।**
**ಹ್ರೀಯತೇ ಸುತಭಾರ್ಯಾದ್ಯೈರನ್ಯೈರ್ದುರ್ವಿಷಯೈಸ್ತಥಾ ॥ ೪೯ ॥**

ಮನಸಾ-ಮನಸ್ಸಿನಿಂದ, ಧ್ಯಾಯತಃ-ಚಿಂತಿಸುವ (ಸಂತತ ಸ್ಮರಿಸುವ) ಮಾನವನಿಗೆ,

---

ಮೋಕ್ಷಕ್ಕಾಗಿ ನಿರಂತರ ಹರಿಸ್ಮರಣೆಯಲ್ಲಿ ಶಕ್ತರಾದಾರು? ವಿಷಯಾಸಕ್ತರು ಮೋಕ್ಷವಿದೂರರೇ ಸರಿ(೪೬-೪೭). ಅನ್ಯಾಸಕ್ತನಾಗದೇ ಶ್ರೀಹರಿಧ್ಯಾನದಲ್ಲಿ ತೊಡಗಿದ ಮನುಷ್ಯನನ್ನು ಶ್ರೀವಿಷ್ಣುವು ಕರ್ಮಬಂಧದಿಂದ (ಸಂಸಾರದಿಂದ) ಮುಕ್ತನನ್ನಾಗಿ ಮಾಡುತ್ತಾನೆ—ಐಹಿಕವಾದ ಅಭೀಷ್ಟಗಳನ್ನೂ ಕೊಡುತ್ತಾನೆ; ಹೀಗೆ ಇಹಪರಸುಖವನ್ನು ಸಾಧಿಸಲು ಸಮರ್ಥವಾದ ಮನಸ್ಸು ಸುತ್ತಾದಿಗಳಲ್ಲಿ ಮಮತ್ವಪೂರ್ವಕವಾದ ಅತ್ಯಾಸಕ್ತಿಯಿಂದಲೂ, ದುರ್ವಿಷಯಗಳ ಸೇವನೆಯಿಂದಲೂ,[1] ಅನ್ಯತ್ರ

---

1. ಸತಿ ಸುತಾದಿಗಳಲ್ಲಿ ಸತ್ಕರ್ಮಾನುಷ್ಠಾನಗಳಿಗೂ, ದೇವ ಬ್ರಾಹ್ಮಣ ಪೂಜಾದಿ ಸದ್ಧರ್ಮಾಚರಣೆಗಳಿಗೂ ಉಪಯುಕ್ತವಾಗುವಷ್ಟು ಆಸಕ್ತಿಯನ್ನು ಮಾತ್ರ ಹೊಂದಿರಬೇಕು; ಶ್ರೀಹರ್ಯಧೀನರಾದ ಅವರಲ್ಲಿ ಮಾಮಕರೆಂಬ ಬುದ್ಧಿಯನ್ನು ಹೊಂದುವುದೂ, ದುರ್ವಿಷಯಾಸಕ್ತಿಯಷ್ಟೆ (ನಿಷಿದ್ಧ ವಿಷಯಗಳ ಸೇವನೆಯಷ್ಟೇ) ಅನರ್ಥಕಾರಕವು.

ವಿಷ್ಣುಃ-ಶ್ರೀವಿಷ್ಣುವು, ಕರ್ಮಬಂಧತಃ-ಕರ್ಮಬಂಧನದಿಂದ, ಮೋಚಯೇತ್-ಮೋಕ್ಷವನ್ನು ಕೊಡುತ್ತಾನೆ (ಬಿಡುಗಡೆಯನ್ನು ಹೊಂದಿಸುತ್ತಾನೆ); ಐಹಿಕೇಷ್ಟಾನಿ-ಇಹಲೋಕದ ಅಭೀಷ್ಟಗಳನ್ನು, ಅಪಿ-ಸಹ(ಕೇವಲ ಪರಗತಿಯನ್ನು ಮಾತ್ರವಲ್ಲ), ದದಾತಿ-ಕೊಡುತ್ತಾನೆ; ನೃಣಾಂ-ಮನುಷ್ಯರ ತಾದೃಶಂ-ಈ ವಿಧವಾದ ಪ್ರಭಾವವುಳ್ಳ (ಹರಿಸ್ಮರಣೆಯಿಂದ ಮೋಕ್ಷವನ್ನೇ ದೊರಕಿಸಲು ಸಮರ್ಥವಾದ), ಮನಃ-ಮನಸ್ಸು ಸುತಭಾರ್ಯಾದ್ಯೈಃ-ಮಕ್ಕಳು, ಹೆಂಡಿರು ಮುಂತಾದವರಿಂದಲೂ, ತಥಾ-ಹಾಗೂ, ಅನ್ಯೈಃ-ಇತರ, ದುರ್ವಿಷಯೈಃ-ದುಷ್ಟವಿಷಯಗಳ ಸೇವನದಿಂದಲೂ, ಹ್ರಿಯತೇ-ಅಪಹರಿಸಲ್ಪಡುತ್ತದೆ (ಹರಿಚಿಂತನಮಾರ್ಗದಿಂದ ಅಪಹೃತವಾಗುತ್ತದೆ).

**ದಸ್ಯವೋ ಹಿ ವರಂ ತೇಭ್ಯೋ ಧನಮಾತ್ರಾಪಹಾರಿಣಃ ।**
**ಏವಮೇತೇ ಹಿ ವಿಷಯಾ ಐಹಿಕಾಮುಷ್ಮಿಕಾದಮುಂ ॥ ೫೦ ॥**

**ಮುಷ್ಣಂತಿ ಸುಖತೋ ದುಃಖಂ ದದತ್ಯುಭಯತಃ ಸ್ಫುಟಂ ।**

ಧನಮಾತ್ರಾಪಹಾರಿಣಃ-ಧನವನ್ನು ಮಾತ್ರ ಅಪಹರಿಸುವ, ದಸ್ಯವಃ-ಕಳ್ಳರು, ತೇಭ್ಯಃ-(ಸಂಸಾರದಲ್ಲಿ ಸಿಕ್ಕಿಸಿ ನಾನಾ ದುಃಖಗಳಿಗೆ ಕಾರಣರಾಗುವ) ಅವರಕಿಂತ (ಸತಿ ಪುತ್ರರಕಿಂತ), ವರಂ ಹಿ-ಉತ್ತಮರೆಂಬುದು ಸ್ಪಷ್ಟ ಏವಂ-ಇದರಂತೆಯೇ (ಭಾರ್ಯಾ ಪುತ್ರಾದಿಗಳಂತೆಯೇ), ಏತೇ-ಈ, ವಿಷಯಾಃ-ವಿಷಯಗಳೂ (ಇಂದ್ರಿಯಗಳ ದ್ವಾರಾ ಜೀವನನ್ನು ವಿಷಯಾಸಕ್ತನನ್ನಾಗಿ ಮಾಡಿ ಸಂಸಾರಬಂಧಕ್ಕೆ ಕಾರಣವಾಗುವ ವಿಷಯಗಳೂ ಸಹ), ಅಮುಂ-ಈ ಜೀವನನ್ನು (ಮನುಷ್ಯನನ್ನು) ಐಹಿಕಾಮುಷ್ಮಿಕಾತ್-(ಶ್ರೀಹರಿಚಿಂತನೆಯಿಂದ ಇತರತ್ರ), ಸೆಳೆಯಲ್ಪಡುತ್ತರೆ (೪೮-೪೯). ಭಾರ್ಯಾ ಪುತ್ರಾದಿಗಳಕಿಂತ, ಕಳ್ಳರು ಮೇಲು; ಏಕೆಂದರೆ, ಅವರು ಧನವನ್ನು ಮಾತ್ರ ಕದಿಯುತ್ತಾರೆ—ಇವರಾದರೋ ಪುರುಷನನ್ನು ಕರ್ಮಬಂಧನದಲ್ಲಿ ಸಿಕ್ಕಿಸಿ ಇಹಪರಗಳೆರಡರಲ್ಲಿಯೂ ಸುಖದಿಂದ ವಂಚಿತನಾಗುವಂತೆ, ಮಾಡುತ್ತಾರೆ; ಭಾರ್ಯಾಪುತ್ರಾದಿಗಳಂತೆ ಇಂದ್ರಿಯಭೋಗ ಸಾಮಗ್ರಿಗಳು ಸಹ, ಪುರುಷನನ್ನು ವಿಷಯಾಸಕ್ತನನ್ನಾಗಿ ಮಾಡಿ, ಇಹಪರಸುಖರಹಿತರನನ್ನಾಗಿಸುವುದು ಮಾತ್ರವಲ್ಲ—ನಿಶ್ಚಯವಾಗಿ ಉಭಯತ್ರ ದುಃಖಕ್ಕೇ ಕಾರಣವಾಗುತ್ತವೆ.[1](೫೦). ದುಃಖಸಮುದ್ರವಾದ

1. ವಿಷಯಾಸಕ್ತನಿಗೆ ವೈರಾಗ್ಯವಿಲ್ಲ—ಅದಿಲ್ಲದೇ ಜ್ಞಾನವಿಲ್ಲ—ಆದ್ದರಿಂದ ಸುಖವೂ ಇಲ್ಲ, ಸಂಸಾರವು ದುಃಖಪ್ರಚುರವಾದುದು—ವಿಷಯಸುಖವು ಕ್ಷುದ್ರ ಮತ್ತು ನಶ್ವರ—ಅಪೇಕ್ಷಿತ ಸುಖದ ಭ್ರಮ ಮಾತ್ರ—ದುಃಖವನ್ನೇ ಪರಿಣಾಮದಲ್ಲಿ ಉಳ್ಳದ್ದು 'ವಿಷಯೇಂದ್ರಿಯ ಸಂಯೋಗಾತ್ ಯತ್ತದಗ್ರೇಽಮೃತೋಪಮಂ। ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ॥' (ಗೀತೆ)

ಇಹಪರಗಳೆರಡರ, ಸುಖತಃ-ಸುಖದಿಂದ, ಮುಷ್ಣಂತಿ-ವಂಚಿಸುತ್ತವೆ (ಹೊಂದದಂತೆ ಮಾಡುತ್ತವೆ); ಸ್ಫುಟಂ-ಸ್ಪಷ್ಟವಾಗಿ(ನಿಶ್ಚಯವಾಗಿ), ಉಭಯತಃ-ಇಹಪರಗತಿಗಳಿಂದ, ದುಃಖಂ-ದುಃಖವನ್ನೇ, ದದತಿ-(ಈ ಅನ್ಯಾಸಕ್ತಿಯು) ಕೊಡುತ್ತದೆ.

ಇತ್ಥಂ ಬಹುಲದುಃಖೇಽಸ್ಮಿನ್ ಸಂಸಾರೇ ಸುಖವಿಪ್ರುಷಿ ॥ ೫೧ ॥

ಸಕ್ತೋ ಭವತಿ ಮೂಢಾತ್ಮಾ ವಿದ್ವಾನುದ್ವಿಜತೇಽಮುತಃ ।
ಏವಂ ಜಾನಂತಿ ಮುನಯಸ್ತಾಪಾನ್ನಾನಾವಿಧಾನಿಮಾನ್ ।
ಸಂಸಾರೇಽನುಭವಂತೋಽಪಿ ನ ವಿಂದತಿ ವಿಮೋಹಿತಾಃ ॥ ೫೨ ॥

ಇತ್ಥಂ-ಹೀಗೆ, ಬಹುಲದುಃಖೇ-ನಾನಾ ದುಃಖಗಳುಳ್ಳ, ಅಸ್ಮಿನ್-ಈ, ಸುಖವಿಪ್ರುಷಿ-ಸುಖದ ಬಿಂದು (ತುಂತುರುಹನಿ) ಮಾತ್ರವುಳ್ಳ, ಸಂಸಾರೇ-ಸಂಸಾರದಲ್ಲಿ ಮೂಢಾತ್ಮಾ-ಮೂಢನಾದವನು, ಸಕ್ತಃ-ಆಸಕ್ತನು, ಭವತಿ-ಆಗುತ್ತಾನೆ; ವಿದ್ವಾನ್-ಜ್ಞಾನಿಯು, ಅಮುತಃ-ಇದರಿಂದ(ಸಂಸಾರದಿಂದ), ಉದ್ವಿಜತೇ-ಭಯಪಡುತ್ತಾನೆ; ಮುನಯಃ-ಜ್ಞಾನಿಗಳು, ನಾನಾವಿಧಾನ್-ಬಹುಪ್ರಕಾರದ, ಇಮಾನ್-ಈ, ತಾಪಾನ್-ತಾಪಗಳನ್ನು (ದುಃಖಗಳನ್ನು), ಏವಂ-ಹೀಗೆ (ಉಕ್ತರೀತಿಯಲ್ಲಿ ಆಧ್ಯಾತ್ಮಿಕಾದಿ ತ್ರಿವಿಧವೆಂದು), ಜಾನಂತಿ-ತಿಳಿಯುತ್ತಾರೆ; ಮೋಹಿತಾಃ-ಬುದ್ಧಿಮೋಹವುಳ್ಳ (ಅಜ್ಞಾನಿಗಳು), ಸಂಸಾರೇ-ಸಂಸಾರದಲ್ಲಿ ಅನುಭವಂತಃ ಅಪಿ-(ಈ ತಾಪಗಳನ್ನು) ಅನುಭವಿಸುತ್ತಿದ್ದರೂ, ನ ವಿಂದಂತಿ-(ಅವುಗಳ ಕಾರಣಗಳನ್ನೂ ಮತ್ತು ಪರಿಹಾರೋಪಾಯಗಳನ್ನೂ) ತಿಳಿಯುವುದಿಲ್ಲ; (ಅಥವಾ), ಮುನಯಃ-ಜ್ಞಾನಿಗಳು, ಜಾನಂತಿ-(ತಾಪತ್ರೈವಿಧ್ಯವನ್ನೂ ಅವುಗಳ ಪರಿಹಾರಗಳನ್ನೂ) ತಿಳಿಯುತ್ತಾರೆ. ಸಂಸಾರೇ-ಸಂಸಾರದಲ್ಲಿ ಅನುಭವಂತಃ ಅಪಿ-(ಅವುಗಳನ್ನು ತಾವೂ) ಅನುಭವಿಸುತ್ತಿದ್ದರೂ, ವಿಮೋಹಿತಾಃ-ಮೋಹವುಳ್ಳವರಾಗಿ, ನ ವಿಂದಂತಿ[1]-(ಅವುಗಳು ದುಃಖವನ್ನು) ಹೊಂದುವುದಿಲ್ಲ (ತಾಪತ್ರಯಗಳು

---

ಸಂಸಾರದಲ್ಲಿ ನಶ್ವರವಾದ ಸುಖಬಿಂದುಗಳು (ತುಂತುರುಹನಿಗಳು) ಮಾತ್ರ ಇರುತ್ತವೆ; ಸರ್ವಾಪೇಕ್ಷಿತವಾದುದು ನಿರ್ದುಃಖ ನಿತ್ಯಸುಖವೇ ಆದ್ದರಿಂದ, ಜ್ಞಾನಿಯು ಸಂಸಾರದಿಂದ ಭಯಪಡುತ್ತಾನೆ—ಮೂಢನು ಮಾತ್ರ ಅದರಲ್ಲಿ ಆಸಕ್ತನಾಗುತ್ತಾನೆ; ಸಂಸಾರತಾಪಗಳನ್ನು ಹೀಗೆ (ಈ ಅಧ್ಯಾಯದಲ್ಲಿ ಈ ಹಿಂದೆ ನಿರೂಪಿಸಿದಂತೆ)

---

1. 'ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥' (ಗೀತಾ) —ಸಮದುಃಖಸುಖಗಳುಳ್ಳ ಧೀರನನ್ನು ಮಾತ್ರಾಸ್ಪರ್ಶಗಳು, ವ್ಯಥೆಗೊಳಿಸುವುದಿಲ್ಲ; ಆ ಧೀರನೇ ಮೋಕ್ಷಕ್ಕೆ ಅರ್ಹನಾಗುತ್ತಾನೆಂದು ಹೇಳಲಾಗಿದೆ; ದುಃಖವು ನಿತ್ಯವಲ್ಲ—ಪರಮ ಶ್ರೇಯಸ್ಸಿಗೆ ಸಾಧನೆಯೂ ಅಲ್ಲ—ನಮ್ಮ ಇಚ್ಛಾಪ್ರಯತ್ನಗಳಿಂದ ಉಂಟಾಗುವುದಲ್ಲ; ಹಾಗೆಯೇ ಸುಖವೂ

ಯಥಾಯೋಗ್ಯವಾಗಿ ಸರ್ವಪ್ರಾಣಿಗಳಿಗೂ ಉಂಟು—ಆದರೆ ಜ್ಞಾನಿಯು, ಸುಖದುಃಖಸಮನಾದ್ದರಿಂದ, ಅವುಗಳ ದುಃಖಪ್ರದಗಳಾಗದಂತೆ, ಜ್ಞಾನಬಲದಿಂದ, ವಿಫಲಗೊಳಿಸುತ್ತಾನೆ).

ತಾಪತ್ರಯವರ್ಣನವೆಂಬ ೧೯ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೨೦

ಶ್ರೀ ವೇದವ್ಯಾಸಾಯ ನಮಃ

**ಗೋಭಿಲ ಉವಾಚ—**

**ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಸುತಃ ಶಿಶುಃ ।**
**ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ॥ ೧ ॥**

**ಅರ್ಥ:—**ವೃದ್ಧೌ-ವೃದ್ಧರಾದ, ಮಾತಾಪಿತರೌ-ತಾಯಿತಂದೆಗಳು, ಚ-ಮತ್ತು ಸಾಧ್ವೀ-ಗುಣವಂತೆಯಾದ, ಭಾರ್ಯಾ—ಹೆಂಡತಿಯೂ, ಶಿಶುಃ-ಶಿಶುವಾದ (ಬಾಲಕನಾದ), ಸುತಃ-ಮಗನೂ, ಅಕಾರ್ಯಶತಂ-ನೂರಾರು ಅಕಾರ್ಯಗಳನ್ನು ಕೃತ್ವಾಅಪಿ-ಮಾಡಿಯಾದರೂ, ಭರ್ತವ್ಯಾಃ-ರಕ್ಷಿಸಲ್ಪಡತಕ್ಕವರು, (ಎಂದು), ಮನುಃ-ಮನುವು, ಅಬ್ರವೀತ್-ಹೇಳಿದನು.

---

ಆಧ್ಯಾತ್ಮಿಕಾದಿ ಭೇದದಿಂದ ತ್ರಿವಿಧವೆಂದೂ, ನಿರಂತರ ಹರಿಸ್ಮರಣೆಯೇ ಅದರ ಪರಿಹಾರಕ್ಕೆ ಪ್ರಧಾನೋಪಾಯವೆಂದೂ, ಮುನಿಗಳು ತಿಳಿಯುತ್ತಾರೆ; ಈ ತಾಪಗಳನ್ನು ತಾವೂ ಅನುಭವಿಸಿದರೂ ಸಹ, ದುಃಖದಿಂದ ಏಹತರಾಗುವುದಿಲ್ಲ(೫೧-೫೨).

೧೯ನೇ ಅಧ್ಯಾಯವು ಮುಗಿದುದು.

**ತಾತ್ಪರ್ಯ:—**ವೃದ್ಧರಾದ ಮಾತಾಪಿತೃಗಳನ್ನು ಸುಗುಣೆಯಾದ ಭಾರ್ಯೆಳನ್ನೂ ಚಿಕ್ಕವಯಸ್ಸಿನ ಮಕ್ಕಳನ್ನೂ ಅನೇಕ ವಿಧದ ಅಕಾರ್ಯಗಳನ್ನು ಮಾಡಿಯಾದರೂ ರಕ್ಷಣೆ

---

(ವಿಷಯೇಂದ್ರಿಯ ಸನ್ನಿಕರ್ಷದಿಂದಾಗುವ ಸುಖವೂ), ನಿತ್ಯವಲ್ಲ—ಮೋಕ್ಷಸಾಧಕವಲ್ಲ—ಜೀವನ ಅಧೀನವೂ ಇಲ್ಲ; ಹೀಗೆ ತಿಳಿಯುವುದೇ ಮತ್ತು ತಿಳಿದು ವಿಷಯಜನ್ಯ ಸುಖದುಃಖಗಳಿಂದಾಗುವ ಹಿಗ್ಗುಕುಗ್ಗುಗಳೆಂಬ ಚಿತ್ತವಿಕಾರವನ್ನು ಅಡಗಿಸುವ ಪ್ರಯತ್ನವುಳ್ಳವನು, ಸಮದುಃಖ ಸುಖಿಯು —ಅತನೇ ಧೀರನು.

**ಚತ್ವಾರಿ ತೇ ತಾತ ಗೃಹೇ ವಸಂತು**
**ಸದಾನುಷಕ್ತಸ್ಯ ಗೃಹಸ್ಥಧರ್ಮೇ ।**
**ವೃದ್ಧೋ ಜ್ಞಾತಿರವಸನ್ನಃ ಕುಲೀನಃ**
**ಸಖಾ ದರಿದ್ರೋ ಭಗಿನೀ ಚಾನಪತ್ಯಾ ॥ ೨ ॥**

ತಾತ-ಹೇ ಪ್ರಿಯನೇ!, ತೇ-ನಿನ್ನ ಗೃಹೇ-ಮನೆಯಲ್ಲಿ (ಕುಟುಂಬದಲ್ಲಿ), ಸದಾ-ಯಾವಾಗಲೂ, ಗೃಹಸ್ಥಧರ್ಮೇ-ಗೃಹಸ್ಥಧರ್ಮದಲ್ಲಿ ಅನುಷಕ್ತಸ್ಯ-ಆದರ ಪೂರ್ವಕ ಆಸಕ್ತನಾದ (ನಿನ್ನ ಕುಟುಂಬದಲ್ಲಿ), ಚತ್ವಾರಿ-(ಈ ಮುಂದೆ ಹೇಳುವ) ನಾಲ್ಕು ವಿಧದ ಜನರು, ವಸಂತು-ವಾಸ ಮಾಡಲಿ(ನಿನ್ನಿಂದ ರಕ್ಷಿತರಾಗಲಿ); (ಅವರಾರೆಂದರೆ) ವೃದ್ಧಃ-ವೃದ್ಧನಾದ, ಜ್ಞಾತಿಃ-ದಾಯಾದಿಯು; ಅವಸನ್ನಃ-ದರಿದ್ರನಾದ (ಹೊಟ್ಟೆಗಿಲ್ಲದ), ಕುಲೀನಃ-ಸದ್ವಂಶದಲ್ಲಿ ಜನಿಸಿದವನು (ಸತ್ಕುಲ ಪ್ರಸೂತನು), ದರಿದ್ರಃ-ಬಡವನಾದ, ಸಖಾ-ಸ್ನೇಹಿತನು, ಅನಪತ್ಯಾ-ಮಕ್ಕಳಿಲ್ಲದ (ಪೋಷಕರಿಲ್ಲದ), ಭಗಿನೀ-ಸಹೋದರಿಯು; (ಇವರೇ ಆ ನಾಲ್ವರು).

**ಋತುಸ್ನಾತಾಂ ತು ಯೋ ನಾರೀಂ ಸನ್ನಿಧೌ ನೋಪಗಚ್ಛತಿ ।**
**ಘೋರಾಯಾಂ ಭ್ರೂಣಹತ್ಯಾಯಾಂ ಯುಜ್ಯತೇ ನಾತ್ರ ಸಂಶಯಃ ॥ ೩ ॥**

ಯಃ-ಯಾರು, ಋತುಸ್ನಾತಾಂ-ಋತುಸ್ನಾತಳಾದ, ನಾರೀಂ-ಸ್ತ್ರೀಯನ್ನು (ಭಾರ್ಯಳನ್ನು), ಸನ್ನಿಧೌ-ಸಾಮೀಪ್ಯವಿದ್ದರೂ, ನೋಪಗಚ್ಛತಿ-ಭೋಗಿಸುವುದಿಲ್ಲವೋ (ಆತನು), ಘೋರಾಯಾಂ-ಘೋರವಾದ, ಭ್ರೂಣಹತ್ಯಾಯಾಂ-ಭ್ರೂಣಹತ್ಯೆಯಲ್ಲಿ(ತನ್ನಾಮಕ ಪಾಪಕರ್ಮದಲ್ಲಿ), ಯುಜ್ಯತೇ-ಕೂಡಿಸಲ್ಪಡುತ್ತಾನೆ (ಆ

---

ಮಾಡತಕ್ಕದ್ದೆಂದು ಮನುವು(ಧರ್ಮಶಾಸ್ತ್ರದಲ್ಲಿ) ಹೇಳಿದ್ದಾನೆ(೧). ಗೃಹಸ್ಥಧರ್ಮದಲ್ಲಿ ಆಸಕ್ತಿಯುಳ್ಳ ಪುರುಷನು, ತನ್ನ ಕುಟುಂಬದವರಲ್ಲದಿದ್ದರೂ, ವೃದ್ಧನಾದಜ್ಞಾತಿಯನ್ನೂ, ಹೊಟ್ಟೆಗಿಲ್ಲದ(ನಷ್ಟನಾದ) ಸತ್ಕುಲ ಪ್ರಸೂತನಾದ ವ್ಯಕ್ತಿಯನ್ನೂ, ದರಿದ್ರನಾದ ಸ್ನೇಹಿತನನ್ನೂ, ಮಕ್ಕಳಿಲ್ಲದ(ಹಿತರಕ್ಷಕರಿಲ್ಲದ) ಸಹೋದರಿಯನ್ನೂ ತನ್ನೊಂದಿಗೆ ಇಟ್ಟುಕೊಂಡು ಅವರನ್ನು ಪೋಷಿಸಬೇಕು(೨) ಯಾವನು, ಋತುಸ್ನಾತಳಾದ ತನ್ನ ಭಾರ್ಯಳು ಸಮೀಪದಲ್ಲಿರಲು, ಆಕೆಯನ್ನು ಭೋಗಿಸುವುದಿಲ್ಲವೋ(ಅನ್ಯಬಾಧಕ

---

1. 'ಅಪ್ಯಕಾರ್ಯಶತಂ ಕೃತ್ವಾ'-ಎಂಬಲ್ಲಿ 'ಕಾರ್ಯಶತಂ ಅಕೃತ್ವಾಪಿ'. ಎಂಬರ್ಥವನ್ನು ತಿಳಿಯಬೇಕೆಂದು ಕೆಲವರ ಅಭಿಪ್ರಾಯ; ಅಕಾರ್ಯವೆಂದರೆ ಮಾಡಬಾರದ ನೀಚ ಕೃತ್ಯಗಳು— ಕಾರ್ಯಶತಂ ಎಂದರೆ ಅವಶ್ಯವಾಗಿ ಮಾಡಬೇಕಾದ ನೂರಾರು ಕರ್ತವ್ಯಗಳನ್ನು (ಅಕೃತ್ವಾಪಿ) ಬಿಟ್ಟಾದರೂ, ಅವರ ರಕ್ಷಣೆಯಲ್ಲಿ ನಿರತನಾಗಬೇಕೆಂಬ ಯೋಗ್ಯವಾದ ಅರ್ಥವು ಲಭಿಸುತ್ತದೆ.

ಪಾಪವುಳ್ಳವನಾಗುತ್ತಾನೆ); ಅತ್ರ-ಈ ವಿಷಯದಲ್ಲಿ (ಈ ಪಾಪಕ್ಕೆ ಗುರಿಯಾಗುತ್ತಾನೆಂಬಲ್ಲಿ), ನ ಸಂಶಯಃ-ಸಂದೇಹವಿಲ್ಲ.

**ರವಿಗ್ರಹೇ ಕುರುಕ್ಷೇತ್ರೆ ಮೇಷಕೃಷ್ಣಾಜಿನಾದಿಕಂ ।**
**ಚಾಂಡಾಲಾತ್ ಪ್ರತಿಗೃಹ್ಯಾಪಿ ಯಜೇತಾವಶ್ಯಕೈರ್ಮಖೈಃ ॥ ೪ ॥**

ಕುರುಕ್ಷೇತ್ರೇ-(ಧರ್ಮಕ್ಷೇತ್ರವಾದ) ಕುರುಕ್ಷೇತ್ರದಲ್ಲಿ, ರವಿಗ್ರಹೇ-ಸೂರ್ಯಗ್ರಹಣವಿರುತ್ತಿರಲು, ಮೇಷಕೃಷ್ಣಾಜಿನಾದಿಕಂ-ಕುರಿ, ಜಿಂಕೆ ಮೊದಲಾದವುಗಳ ಚರ್ಮವನ್ನು, ಚಂಡಾಲಾತ್-ಚಂಡಾಲನಿಂದಾದರೂ, ಪ್ರತಿಗೃಹ್ಯ-ಸ್ವೀಕರಿಸಿ, ಅಪಿ-ಆದರೂ, ಆವಶ್ಯಕೈಃ-ಅವಶ್ಯಕವಾದ, ಮಖೈಃ-ಯಜ್ಞಾದಿಗಳಿಂದ, ಯಜೇತ-(ಪರಮಾತ್ಮನನ್ನು) ಪೂಜಿಸಬೇಕು.

**ಇತ್ಯಾದಿ ನಾನಾಶಾಸ್ತ್ರೇಷು ಯೇಷಾಮುಕ್ತಂ ಹಿ ಪೋಷಣಂ ।**
**ಆವಶ್ಯಕಂ ತ್ವಯಾ ತೇಷಾಂ ಪಾಪಮೂಲತ್ವಮೀರಿತಂ ॥ ೫ ॥**

**ದೃಶ್ಯತೇ ಪ್ರತ್ಯವಾಯೋಽಪಿ ಭಾರ್ಯಾಸಂಗಮಕುರ್ವತಃ ।**
**ಪ್ರಜಾವೃದ್ಧಿಃ ಪ್ರಿಯಾಸಂಗಸ್ತ್ವಯಾ ದುಃಖದ ಈರಿತಃ ॥ ೬ ॥**

**ಜ್ಯೋತಿಷ್ಟೋಮಾದಯೋ ಯಜ್ಞಾಃ ಪ್ರೋಕ್ತಾಸ್ತ್ವಾವಶ್ಯಕಾ ಇತಿ ।**
**ಫಲಂ ಸ್ವರ್ಗಃ ಶ್ರುತಂ ಯೇಷಾಂ ತ್ವಯಾ ತೇಽಪಿ ನಿರಾಕೃತಾಃ ॥ ೭ ॥**

---

ಸಂದರ್ಭಗಳಿಲ್ಲದೇ ಇರುವಾಗ), ಆತನು ಭ್ರೂಣಹತ್ಯಾದೋಷ(ಪಾಪ)ವನ್ನು ಹೊಂದುತ್ತಾನೆ-ಸಂಶಯವಿಲ್ಲ(೩). ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣ ಪ್ರಾಪ್ತವಾಗಲು, ಚಂಡಾಲನಿಂದಾದರೂ, ಕುರಿಚರ್ಮ ಅಥವಾ ಕೃಷ್ಣಾಜಿನ(ಜಿಂಕೆಯ ಚರ್ಮ) ಮೊದಲಾದುವನ್ನು ಸ್ವೀಕರಿಸಿ(ದಾನವಾಗಿ ಪಡೆದು), ಆ ಪರ್ವಕಾಲದಲ್ಲಿ ಅವಶ್ಯವಾಗಿ ಆಚರಿಸಬೇಕಾದ ಯಜ್ಞಾದಿ ಪೂಜೆಗಳನ್ನು ಮಾಡಬೇಕು(೪). ಇತ್ಯಾದಿಯಾಗಿ ವಿವಿಧ ಧರ್ಮಶಾಸ್ತ್ರಗಳು ಕುಟುಂಬ ಪೋಷಣೆಯು ಅವಶ್ಯಕವೆಂದು ಹೇಳುತ್ತಿರಲು, ಹೇಸೂತ! ನೀನು ಕುಟುಂಬ ಪೋಷಣೆಯಲ್ಲಿ ಆಸಕ್ತಿ ವಹಿಸುವುದನ್ನು ಪಾಪಮೂಲವೆಂದು ಹೇಳುತ್ತಿರುವಿ; ಭಾರ್ಯಳ ಸಂಗಮಾಡದಿರುವುದನ್ನು ದೋಷವೆಂದು ಧರ್ಮಶಾಸ್ತ್ರವು ಹೇಳುತ್ತಿರಲು ನೀನು, ಸ್ತ್ರೀಸಂಗವನ್ನೂ ಪ್ರಜಾಭಿವೃದ್ಧಿಯನ್ನೂ ದುಃಖಪ್ರದವೆಂದು ಹೇಳುತ್ತಿರುವಿ; ಶಾಸ್ತ್ರಗಳು ಜ್ಯೋತಿಷ್ಟೋಮಾದಿ ಯಾಗಗಳನ್ನಾಚರಿಸುವುದು ಕರ್ತವ್ಯವೆಂದೂ, ಮತ್ತು ಸ್ವರ್ಗಪ್ರಾಪ್ತಿಯು ಅವುಗಳ ಫಲವೆಂದೂ, ಹೇಳುತ್ತಿರಲು, (ಈ ಫಲಗಳಿಗಾಗಿ) ಅವುಗಳ ಆಚರಣೆಯನ್ನು ನೀನು ನಿರಾಕರಿಸುತ್ತಿರುವಿ;

**ಕಥಮತ್ರ ವಿಧೇಯಂ ಸ್ಯಾನ್ನಿವೃತ್ತೇನ ಮುಮುಕ್ಷುಣಾ ।**
**ತದ್ಯಾಥಾತಥ್ಯತೋ ಬ್ರೂಹಿ ವಯಂ ಶುಶ್ರೂಷವೋ ಯತಃ ॥ ೮ ॥**

ಇತ್ಯಾದಿ-ಹೀಗೆ ಮುಂತಾಗಿ, ನಾನಾಶಾಸ್ತ್ರೇಷು-ವಿವಿಧ ಶಾಸ್ತ್ರಗಳಲ್ಲಿ, ಯೇಷಾಂ-ಯಾರ (ಯಾವ ಕುಟುಂಬವರ್ಗದವರು ಮತ್ತು ಇತರರ), ಪೋಷಣಂ-ಪೋಷಣೆಯು, ಆವಶ್ಯಕಂ-ಕರ್ತವ್ಯವೆಂದು, ಉಕ್ತಂ-ಹೇಳಲ್ಪಟ್ಟಿದೆಯೋ, ತ್ವಯಾ-ನಿನ್ನಿಂದ, ತೇಷಾಂ-ಆ ಜನರ ಪೋಷಣೆಗಳಿಗೆ (ಪೋಷಣೆಯಲ್ಲಿ ಆಸಕ್ತನಾಗುವುದಕ್ಕೆ), ಪಾಪಮೂಲತ್ವಂ-ಪಾಪಕಾರಣತ್ವವು, ಈರಿತಂ-ಹೇಳಲ್ಪಟ್ಟಿತು; ಭಾರ್ಯಾಸಂಗಂ-ಪತ್ನಿಯ ಸಂಗವನ್ನು ಅಕುರ್ವತಃ-ಮಾಡದವನಿಗೆ, ಪ್ರತ್ಯವಾಯಃ ಅಪಿ-ದೋಷವೂ ಸಹ, ದೃಶ್ಯತೇ-ಕಂಡುಬರುತ್ತದೆ; ಪ್ರಿಯಾಸಂಗಃ-ಪತ್ನಿಯ ಸಂಗವೂ, ಪ್ರಜಾವೃದ್ಧಿಃ-ಸಂತತಿಯ ವೃದ್ಧಿಯೂ, ತ್ವಯಾ-ನಿನ್ನಿಂದ, ದುಃಖದಃ-ದುಃಖವನ್ನು ಕೊಡತಕ್ಕದ್ದೆಂದು, ಈರಿತಃ-ಹೇಳಲ್ಪಟ್ಟಿತು; ಜ್ಯೋತಿಷ್ಟೋಮಾದಯಃ-ಜ್ಯೋತಿಷ್ಟೋಮ ಮೊದಲಾದ, ಯಜ್ಞಾಃ-ಯಜ್ಞಗಳು, ಆವಶ್ಯಕಾಃ ಇತಿ ತು-ಅವಶ್ಯಕರ್ತವ್ಯಗಳೆಂದೇ, ಪ್ರೋಕ್ತಾಃ-ಹೇಳಲ್ಪಟ್ಟಿವೆ; ಯೇಷಾಂ-ಯಾವ ಈ ಯಜ್ಞಗಳಿಗೆ, ಸ್ವರ್ಗಃ-ಸ್ವರ್ಗಲೋಕಪ್ರಾಪ್ತಿಯು, ಫಲಂ-ಫಲವೆಂದು, ಶ್ರುತಂ-ಶ್ರುತಿಗಳಿಂದ ತಿಳಿದುಬರುತ್ತವೆಯೋ, ತೇ ಅಪಿ-ಆ ಯಜ್ಞಗಳೂ ಸಹ, ತ್ವಯಾ-ನಿನ್ನಿಂದ, ನಿರಾಕೃತಾಃ-ನಿರಾಕರಿಸಲ್ಪಟ್ಟವು; ಅತ್ರ-ಈ ವಿಷಯದಲ್ಲಿ, ನಿವೃತ್ತೇನ-ಕರ್ಮಫಲಾಶೆಯನ್ನು ತೊರೆದ, ಮುಮುಕ್ಷುಣಾ-ಮೋಕ್ಷಾಪೇಕ್ಷೆಯುಳ್ಳವನಿಂದ, ಕಥಂ-ಹೇಗೆ, ವಿಧೇಯಂ ಸ್ಯಾತ್-ಮಾಡತಕ್ಕದ್ದು ಯುಕ್ತವಾಗುತ್ತದೆ; ಯತಃ-ಯಾವ ಕಾರಣದಿಂದ, ವಯಂ-ನಾವು, ಶುಶ್ರೂಷವಃ-ಕೇಳಬೇಕೆಂಬ ಇಚ್ಛೆಯುಳ್ಳವರೋ, ತತ್-ಆದ್ದರಿಂದ, ಯಾಥಾತಥ್ಯತಃ-ಯಥಾರ್ಥವಾಗಿ(ಸತ್ಯವಾಗಿ) ಇದ್ದಂತೆ, ಬ್ರೂಹಿ-ಹೇಳುವವನಾಗು.

**ಸೂತ ಉವಾಚ—**

**ಪಿತಾ ದೇವೋ ಮನುಷ್ಯಾಣಾಂ ಮಾತಾ ತಸ್ಮಾದ್ದಶಾಧಿಕಾ ।**
**ಸಖಾ ಹಿ ಪರಮೋ ಜಾಯಾ ಜನ್ಮಜ್ಯೋತಿಃ ಸುತಃ ಸ್ಮೃತಃ ॥ ೯ ॥**

---

ಕರ್ಮಫಲಾಶಾ ರಹಿತನಾದ ಮೋಕ್ಷಾಪೇಕ್ಷಿಯು ಈ ವಿಷಯಗಳಲ್ಲಿ ಹೇಗೆ ನಡೆದುಕೊಳ್ಳತಕ್ಕದ್ದು, ಶಾಸ್ತ್ರವಿಹಿತಗಳಾದ ಪೂರ್ವೋಕ್ತ ಮೊದಲಾದ ಕರ್ಮಗಳನ್ನು ಆಚರಿಸತಕ್ಕದ್ದೇ ಅಥವಾ ಅಲ್ಲವೇ, ಎಂಬುದರ ನಿರ್ಣಯಾತ್ಮಕವಾದ(ಸತ್ಯವನ್ನು) ಯಥಾರ್ಥವನ್ನು, ತಿಳಿಯಬ್ಬಯಸುವ ನಮಗೆ ಹೇಳುವನಾಗು (೫-೮). ಮನುಷ್ಯರಿಗೆ ತಂದೆಯು ದೇವನು; ತಾಯಿಯು ಆತನಿಂದ ಹತ್ತರಷ್ಟು ಅಧಿಕ ದೇವತೆಯು; ಹೆಂಡತಿ ಅತ್ಯುತ್ತಮ ಸಖಳು; ಸುತನು ಬಾಳಿನ ಬೆಳಕು; ತಾಯಿತಂದೆಗಳ ಹಾಗೂ ತನ್ನ ಇತರ

ಅನ್ಯೇಪ್ಯನಾಥಾ ಯೇತ್ರ ಸ್ಯುಃ ಪಿತೃಮಾತೃಸ್ವಬಾಂಧವಾಃ ।
ಸುಹೃದೋಂಧದೀನಬಧಿರಮೂಕವ್ಯಂಗಾಶ್ಚ ರೋಗಿಣಃ ॥ ೧೦ ॥

ಅತಿಥ್ಯಭಾಗ್ಯತಾ ವಿಪ್ರಾ ದಾಸದಾಸೀಪಶುವ್ರಜಾಃ ।
ಏತೇ ಪೋಷ್ಯಾ ಗೃಹಸ್ಥಸ್ಯ ಯಾವತ್ ಸ್ಯಾಚ್ಛಕ್ತಿವೈಭವಂ ॥ ೧೧ ॥

ಮನುಷ್ಯಾಣಾಂ-ಮನುಷ್ಯರಿಗೆ, ಪಿತಾ-ತಂದೆಯು, ದೇವಃ-ದೇವನು (ಪೂಜ್ಯ ದೇವತೆಯು); ತಸ್ಮಾತ್-ಅತನಿಗಿಂತ, ಮಾತಾ-ತಾಯಿಯು, ದಶಾಧಿಕಾ-ದಶಗುಣಾಧಿಕಳು (ಹತ್ತರಷ್ಟು ಅಧಿಕ ಪೂಜ್ಯದೇವತೆಯು); ಜಾಯಾ-ಹೆಂಡತಿಯು, ಪರಮಃಸಖಾ-ಶ್ರೇಷ್ಠ ಮಿತ್ರಳು (ಮರಣದವರೆಗೆ ಜೊತೆಗಿದ್ದು ಸುಖದುಃಖಗಳಲ್ಲಿ ಸಮಭಾಗಿಯಾಗುವವಳು); ಸುತಃ-ಮಗನು, ಜನ್ಮಜ್ಯೋತಿಃ-ಜೀವನ ಜ್ಯೋತಿಯು (ಬಾಳಿನ ಬೆಳಕು), ಸ್ಮೃತಃ-(ಎಂದು) ತಿಳಿಯಲ್ಪಟ್ಟಿರುವನು; ಅನ್ಯೇ-ಇತರರಾದ, ಪಿತೃಮಾತೃ ಸ್ವಬಾಂಧವಾಃ-ತಂದೆ, ತಾಯಿ ಮತ್ತು ತನ್ನ ಬಂಧುಗಳು, ಯೇ-ಯಾರು, ಅನಾಥಾಃ-ಸ್ಯುಃ-ಅನಾಥರಾಗಿರುವರೋ; ಅಂಧದೀನಬಧಿರಮೂಕವ್ಯಂಗಾಃ-ಕುರುಡ, ದೀನ(ದರಿದ್ರ), ಕಿವುಡ, ಮೂಕ ಮೊದಲಾದ ಅಂಗಹೀನರೂ, ಚ-ಮತ್ತು ರೋಗಿಣಃ-ರೋಗಗ್ರಸ್ತರೂ, (ಆದ), ಸುಹೃದಃ-ಸ್ನೇಹವರ್ಗದ (ಆಪ್ತರೂ) ಜನರೂ, ಅತಿಥ್ಯಭಾಗ್ಯತಾಃ-ಅತಿಥಿ ಅಭ್ಯಾಗತರೂ, ವಿಪ್ರಾಃ-ಬ್ರಾಹ್ಮಣರೂ (ಅತಿಥಿ ಅಭ್ಯಾಗತರಾದ ಬ್ರಾಹ್ಮಣರೂ), ದಾಸದಾಸೀ ಪಶುವ್ರಜಾಃ-ದಾಸದಾಸೀ (ಪುರುಷ ಸ್ತ್ರೀಭೃತ್ಯ) ಮತ್ತು ಪಶುವರ್ಗದವರು; ಏತೇ-ಈ ಎಲ್ಲರೂ, ಶಕ್ತಿವೈಭವಂ-ಶಕ್ತಿಸಾಮರ್ಥ್ಯಗಳು, ಯಾವತ್ ಸ್ಯಾತ್-ಇರುವಷ್ಟು ಗೃಹಸ್ಥಸ್ಯ-ಗೃಹಸ್ಥನಿಗೆ, ಪೋಷ್ಯಾಃ-ಪೋಷಿಸಲ್ಪಡತಕ್ಕವರೇ (ಗೃಹಸ್ಥಾಶ್ರಮಿಯು ಈ ಎಲ್ಲರನ್ನೂ ಯಥಾಶಕ್ತಿ ಪೋಷಿಸತಕ್ಕದ್ದೇ ಸರಿ).

ಆಶ್ರಮಾಣಾಂ ಹಿ ಸರ್ವೇಷಾಮಾಶ್ರಯೋಽಯಂ ಗೃಹಾಶ್ರಮಃ ।
ದ್ವಾರಂ ಸ್ವರ್ಗಸ್ಯ ಮೋಕ್ಷಸ್ಯ ನರಕಸ್ಯಾಪ್ಯಯಂ ಸ್ಮೃತಃ ॥ ೧೨ ॥

ಅಯಂ-ಈ, ಗೃಹಾಶ್ರಮಃ-ಗೃಹಸ್ಥಾಶ್ರಮವು, ಸರ್ವೇಷಾಂ-ಎಲ್ಲ ಆಶ್ರಮಾಣಾಂ-

---

ಬಂಧುಜನರಲ್ಲಿ ಮತ್ತು ಆಪ್ತರಲ್ಲಿ ಯಾರು ಕುರುಡ-ದರಿದ್ರ-ಕಿವುಡ-ಮೂಕಾದಿ ಅಂಗಹೀನರೋ ಮತ್ತು ರೋಗಗ್ರಸ್ತರೂ ಆಗಿರುವರೋ ಅವರೆಲ್ಲರೂ, ಮತ್ತು ಅತಿಥಿ ಅಭ್ಯಾಗತರೂ, ಬ್ರಾಹ್ಮಣರೂ, ದಾಸದಾಸೀಜನರೂ, ಗೋ ಮೊದಲಾದ ಪಶುವರ್ಗವೂ, ಗೃಹಸ್ಥನಿಂದ, ತನ್ನ ಶಕ್ತಿ ಸಂಪತ್ತುಗಳಿದ್ದಷ್ಟು ಪೋಷಿಸಲ್ಪಡಬೇಕು (೯-೧೧). ಗೃಹಾಶ್ರಮವು, ಎಲ್ಲಾ ಆಶ್ರಮಗಳ ಆಶ್ರಯವಾಗಿದೆ; ಅದು ಸ್ವರ್ಗ, ಮೋಕ್ಷಗಳಿಗೂ, ನರಕಕ್ಕೆ ಸಹ, ದ್ವಾರವೆಂದು ಜ್ಞಾನಿಗಳು ತಿಳಿಯುತ್ತಾರೆ(೧೨). ಧನಾದಿ

ಆಶ್ರಮಗಳ, ಆಶ್ರಯಃ-ಆಶ್ರಯವು; ಸ್ವರ್ಗಸ್ಯ-ಸ್ವರ್ಗದ, ಮೋಕ್ಷಸ್ಯ-ಮೋಕ್ಷದ, ಅಪಿ-ಮತ್ತು ನರಕಸ್ಯ-ನರಕದ, ದ್ವಾರಂ-ದ್ವಾರವೆಂದು, ಸ್ಮೃತಃ-ತಿಳಿಯಲ್ಪಡುತ್ತದೆ.

**ಯೋವಜಾನಾತಿ ಶಕ್ತೋಪಿ ದ್ವೇಷಾಲ್ಲೋಭಾನ್ಮದಾದಪಿ ।**
**ಪೂರ್ವೋಕ್ತಪೋಷ್ಯಾನ್ ಸಂಪ್ರೇಯಾನ್ ಮೃತೋ ನಿರಯಮುಲ್ಬಣಂ ॥ ೧೩ ॥**

**ಅಕೀರ್ತಿಂ ಲಭ್ಯತೇ ಜೀವನ್ನಕೀರ್ತೇರ್ಮರಣಂ ವರಂ ।**
**ನೈವ ಗೃಹ್ಣಂತಿ ನಾಮಾಸ್ಯ ಯೋಪಕೀರ್ತ್ಯೇಹ ಜೀವತಿ ॥ ೧೪ ॥**

ಯಃ-ಯಾರು, ಶಕ್ತಃ ಅಪಿ-(ಸಂಪದಾದಿಗಳಿಂದ) ಶಕ್ತನಾಗಿದ್ದರೂ, ದ್ವೇಷಾತ್-ದ್ವೇಷದಿಂದ, ಲೋಭಾತ್-ಲೋಭದಿಂದ (ಬುದ್ಧಿಸಂಕೋಚ ಅಥವಾ ಜಿಪುಣತನದಿಂದ), ಅಪಿ-ಮತ್ತು ಮದಾತ್-ಗರ್ವದಿಂದ, ಸಂಪ್ರೇಯಾನ್-ಪ್ರೀತಿಯಿಂದ ಕಾಣಬೇಕಾದ, ಪೂರ್ವೋಕ್ತ ಪೋಷ್ಯಾನ್-ಈ ಮೊದಲು ಹೇಳಿದ ಪೋಷ್ಯ (ತನ್ನ ಪೋಷಣೆಗೆ ಅರ್ಹರಾದ) ವರ್ಗದವರನ್ನು, ಅವಜಾನಾತಿ-ತಿರಸ್ಕರಿಸುತ್ತಾನೆಯೋ (ಪೋಷಣೆಮಾಡದೇ ತಿರಸ್ಕಾರಯುಕ್ತವಾಗಿ ಕಾಣುತ್ತಾನೆಯೋ) (ಸಃ-ಆತನು), ಅಕೀರ್ತಿಂ ಅಪಕೀರ್ತಿಯನ್ನೂ ಮೃತಃ-ಮೃತನಾಗಿ, ಉಲ್ಬಣಂ-ಉಗ್ರವಾದ, ನಿರಯಂ-ನರಕವನ್ನೂ, ಲಭತೇ-ಹೊಂದುತ್ತಾನೆ; ಜೀವನ್-ಬದುಕಿದ್ದರೂ, ಅಕೀರ್ತೇಃ-ಅಕೀರ್ತಿಗಿಂತ, ಮರಣಂ-ಮರಣವೇ (ಸಾಯುವುದೇ), ವರಂ-ಮೇಲು (ಉತ್ತಮವು); ಯಃ-ಯಾರು, ಇಹ-ಇಲ್ಲಿ (ಈ ದೇಹದಲ್ಲಿ ಅಥವಾ ಈ ಲೋಕದಲ್ಲಿ), ಅಕೀರ್ತ್ಯಾ-ಅಕೀರ್ತಿಯಿಂದ (ಅಪಕೀರ್ತಿಯನ್ನು ಹೊಂದಿ), ಜೀವತಿ-ಬದುಕಿರುವನೋ, ಅಸ್ಯ-ಈತನ, ನಾಮ-ಹೆಸರನ್ನು ನೈವಗೃಹ್ಣಂತಿ-ಯಾರೂ ತೆಗೆದುಕೊಳ್ಳುವುದಿಲ್ಲ (ಉಚ್ಚರಿಸುವುದಿಲ್ಲ).

**ಧಿಕ್ ತಸ್ಯ ಜೀವಿತಂ ಯಸ್ಯ ನಾಮ ನ ಸ್ತುವತೇ ಜನಃ ।**
**ಯದಿ ಸ್ವಾರ್ಜಿತವಿತ್ತೇನ ಪುಷ್ಣೀಯಾನ್ನಿಜಪೋಷ್ಯಕಾನ್ ॥ ೧೫ ॥**

---

ಸಾಧನಗಳಿದ್ದೂ (ಶಕ್ತನಾದರೂ) ಪ್ರೀತಿಯಿಂದ ಪೋಷಿಲ್ಪಡಲರ್ಹರೆಂದು ಈ ಹಿಂದೆ ಹೇಳಲಾದ ಪೋಷ್ಯವರ್ಗದವರನ್ನು ದ್ವೇಷದಿಂದಾಗಲಿ, ಲೋಭದಿಂದಾಗಲಿ, ಅಥವಾ ಗರ್ವದಿಂದಾಗಲಿ ಪೋಷಿಸದೇ ತಿರಸ್ಕಾರಬುದ್ಧಿಯಿಂದ, ಕರ್ತವ್ಯಚ್ಯುತನಾದರೆ, ಅಂಥವನು, ಇಹದಲ್ಲಿ ಅಪಕೀರ್ತಿಯನ್ನು ಪಡೆಯುತ್ತಾನಲ್ಲದೇ ಮರಣಾನಂತರ, ತೀವ್ರವಾದ ನರಕಗಳನ್ನೇ ಹೊಂದುತ್ತಾನೆ; ಬದುಕಿದ್ದರೂ, ಅವನು, ವ್ಯರ್ಥಜೀವಿಸುತ್ತಾನೆ—ಅವನಿಗೆ ಮರಣವೇ ಮೇಲು; ಹಾಗೆ ಅಪಕೀರ್ತಿಯನ್ನು ಹೊಂದಿದವನ ಹೆಸರನ್ನು ಸಹ ಯಾರೂ ಉಚ್ಚರಿಸುವುದಿಲ್ಲ (೧೩-೧೪). ಶಕ್ತನಾದರೂ

**ಸಕ್ತಚೇತಾ ಹಿ ಭೋಗೇಷು ಸ್ವರ್ಗಲೋಕಮವಾಪ್ನುಯಾತ್ ।**
**ಅಸಕ್ತಚೇತಾ ಭೋಗೇಷು ವಿಷ್ಣುಭಕ್ತಿಪರಾಯಣಃ ॥ ೧೬ ॥**

**ಕ್ರಮೇಣ ಪ್ರಾಪ್ನುಯಾನ್ಮೋಕ್ಷಂ ತತೋ ನಾವರ್ತತೇ ಪುನಃ ।**

ಯಸ್ಯ-ಯಾವಾತನ, ನಾಮ-ಹೆಸರನ್ನು ಜನಾಃ-ಜನರು, ನ ಸ್ತುವತೇ-ಸ್ತುತಿಸುವುದಿಲ್ಲವೋ, ತಸ್ಯ-ಆತನ, ಜನ್ಮ-ಜೀವಿತವು (ಹುಟ್ಟು) ಧಿಕ್-ತುಚ್ಛವು (ವ್ಯರ್ಥವು-ನಿಂದ್ಯವು); (ಆದ್ದರಿಂದ ಪೋಷ್ಯವರ್ಗವನ್ನು ಶಕ್ತನಾದರೂ ಪೋಷಿಸದೇ ಜನರಲ್ಲಿ ಅಪಕೀರ್ತಿಯನ್ನು ಹೊಂದಬಾರದು). ನಿಜಪೋಷ್ಯಜನಾನ್-ತನ್ನಿಂದ ಪೋಷ್ಯರಾದವರನ್ನು, ಸ್ವಾರ್ಜಿತ ವಿತ್ತೇನ-ತಾನು ಸಂಪಾದಿಸಿದ ಧನಾದಿ ಸಂಪತ್ತಿನಿಂದ, ಪುಷ್ಣೀಯಾತ್-ಪೋಷಣೆ ಮಾಡಿ, ಯದಿ-ಒಂದುವೇಳೆ, ಭೋಗೇಷು-ವಿಷಯಭೋಗದಲ್ಲಿ ಸಕ್ತಚೇತಾಃ ಹಿ-ಆಸಕ್ತವಾದ ಚಿತ್ತವುಳ್ಳವನಾದರೂ, ಸ್ವರ್ಗಲೋಕಂ-ಸ್ವರ್ಗಲೋಕವನ್ನು ಅವಾಪ್ನುಯಾತ್-ಹೊಂದುತ್ತಾನೆ; ಭೋಗೇಷು-ವಿಷಯಭೋಗಗಳಲ್ಲಿ ಅಸಕ್ತಚೇತಾಃ-ಪ್ರವೇಶಿಸದ ಮನಸ್ಸುಳ್ಳವನಾಗಿ, ವಿಷ್ಣು ಭಕ್ತಿಪರಾಯಣಃ-ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವನು, (ಯದಿ-ಆದರೆ) ಕ್ರಮೇಣ-ಕ್ರಮವಾಗಿ (ಜ್ಞಾನಾದಿ ದ್ವಾರಾ), ಮೋಕ್ಷಂ-ಮೋಕ್ಷವನ್ನು ಪ್ರಾಪ್ನುಯಾತ್-ಹೊಂದುತ್ತಾನೆ; ತತಃ-ಅಲ್ಲಿಂದ (ಮುಕ್ತಿಯಿಂದ), ಪುನಃ-ಮತ್ತೆ ನ ಆವರ್ತತೇ-ತಿರುಗಿ ಸಂಸಾರಕ್ಕೆ ಬರುವುದಿಲ್ಲ.

**ಮನ ಏವ ಹಿ ಸರ್ವೇಷಾಂ ಬಂಧನಂ ಮೋಕ್ಷಕಂ ತಥಾ ॥ ೧೭ ॥**

**ವಿಷಯಾಸಂಗಿ ಬಂಧಾಯ ತದ್ವಿರಕ್ತಂ ವಿಮುಕ್ತಯೇ ।**

ಸರ್ವೇಷಾಂ-ಎಲ್ಲರಿಗೂ, ಮನಃ ಏವ-ಮನಸ್ಸೇ, ಬಂಧನಂ-ಕಟ್ಟು (ಬಂಧಕಾರಣವು), ತಥಾ-ಮತ್ತು ಮೋಕ್ಷಕಂ-ಬಿಡುಗಡೆಯು (ಮೋಚನೆಯು) (ಮುಕ್ತಿ

---

ಪೋಷ್ಯವರ್ಗವನ್ನು ಪೋಷಿಸಿ ತನ್ನ ಕರ್ತವ್ಯವನ್ನು ನಿರ್ವಹಿಸದೆ, ಅಪಕೀರ್ತಿಯನ್ನು ಪಡೆದವನ ಜನ್ಮಕ್ಕೆ ಧಿಕ್ಕಾರವು—ಯಾವಾತನ ನಾಮವನ್ನು ಜನರು ಪ್ರಶಂಸಿಸಿ ಮಾತನಾಡುವುದಿಲ್ಲವೋ ಆತನ ಹುಟ್ಟು ವ್ಯರ್ಥವೇ ಸರಿ; ಸ್ವಯಾರ್ಜಿತಧನದಿಂದ ತನ್ನ ಪೋಷ್ಯವರ್ಗದವರನ್ನು ಪೋಷಿಸುತ್ತ ತಾನೂ ವಿಷಯಭೋಗದಲ್ಲಿ ಆಸಕ್ತನಾಗಿದ್ದವನು, ಸ್ವರ್ಗ ಲೋಕವನ್ನು ಹೊಂದುತ್ತಾನೆ- ಒಂದು ಪಕ್ಷ ವಿಷಯಾಸಕ್ತಿಯನ್ನು ತ್ಯಜಿಸಿ, ಹರಿಭಕ್ತಿಪರಾಯಣನಾದರೆ, ಕ್ರಮವಾಗಿ, ಜ್ಞಾನ, ಭಕ್ತಿ ದೃಢವೈರಾಗ್ಯಾದಿಗಳನ್ನು ಹೊಂದಿ, ಮೋಕ್ಷವನ್ನೇ ಹೊಂದುತ್ತಾನೆ; ಅಲ್ಲಿಂದ ತಿರುಗಿ ಸಂಸಾರದಲ್ಲಿ ಬರುವುದಿಲ್ಲ (೧೫-೧೬). ಸಂಸಾರದಲ್ಲಿ ಬಂಧಿಸಲ್ಪಡುವುದಕ್ಕೂ, ಅದರಿಂದ ಮುಕ್ತನಾಗುವುದಕ್ಕೂ,

ಕಾರಣವೂ ಆಗಿದೆ); ಹಿ-ಹೀಗಿರುವುದರಿಂದ, ವಿಷಯಾಸಂಗಿ-ವಿಷಯಗಳಲ್ಲಿ ಆಸಕ್ತವಾದ ಮನಸ್ಸು (ವಿಷಯಸಂಗವುಳ್ಳ ಮನಸ್ಸು), ಬಂಧಾಯ-ಬಂಧಕ್ಕೂ, ತದ್ವಿರಕ್ತಂ-ವಿಷಯಸಂಗವಿಲ್ಲದ ಮನಸ್ಸು, ವಿಮುಕ್ತಯೇ-ಮುಕ್ತಿಗೂ (ಕಾರಣವಾಗುತ್ತದೆ).[1]

**ಭೋಗಬುದ್ಧ್ಯಾ ಹಿ ಯಃ ಸ್ತ್ರೀಷು ಸಕ್ತಃ ಪಿತ್ರಾದಿಕೇಷ್ವಥ ॥ ೧೮ ॥**
**ಉದಾಸೀನೋಽಥವಾ ದ್ವೇಷೀ ಸ ಘೋರನರಕಂ ವ್ರಜೇತ್ ।**

ಯಃ-ಯಾವಾತನು, ಭೋಗ ಬುದ್ಧ್ಯಾ-ಭೋಗಮಾಡುವ ಮನಸ್ಸಿನಿಂದ, ಸ್ತ್ರೀಷು-ಸ್ತ್ರೀಜನರಲ್ಲಿ ಸಕ್ತಃ-ಆಸಕ್ತನಾಗಿದ್ದು, ಅಥ-ಮತ್ತೆ ಪಿತ್ರಾದಿಕೇಷು-ತಂದೆ ಮೊದಲಾದ ಪೋಷ್ಯರಲ್ಲಿ ಉದಾಸೀನಃ-ಉದಾಸೀನನಾಗಿರುವನೋ (ಅವರ ರಕ್ಷಣಕಾರ್ಯಗಳನ್ನು ವಹಿಸುವುದಿಲ್ಲವೋ), ಅಥವಾ, ದ್ವೇಷೀ-(ಅವರನ್ನು) ದ್ವೇಷಿಸುವನೋ, ಸಃ-ಆತನು, ಘೋರ ನರಕಂ-ಘೋರವಾದ (ಉಗ್ರವಾದ) ನರಕವನ್ನು, ವ್ರಜೇತ್-ಹೊಂದುತ್ತಾನೆ.

**ಯಶ್ಚ ಸ್ತ್ರೀಷ್ವಪಿ ವೈಷಮ್ಯಂ ಕುರ್ಯಾತ್ ಸ್ನೇಹವಿಶೇಷತಃ ।**
**ಸೋಽಪಿ ಪಾಪಮವಾಪ್ನೋತಿ ವೈಷಮ್ಯಂ ಪಾಪಸಾಧನಂ ॥ ೧೯ ॥**

ಚ-ಮತ್ತು, ಯಃ-ಯಾರು, ಸ್ತ್ರೀಷು ಅಪಿ-ತನ್ನ ಸ್ತ್ರೀಯರ (ಭಾರ್ಯೆಯರ) ಮಧ್ಯದಲ್ಲಿಯೂ, ಸ್ನೇಹವಿಶೇಷತಃ-ಪ್ರೀತಿವಿಶೇಷದಿಂದ, ವೈಷಮ್ಯಂ-ವ್ಯತ್ಯಾಸವನ್ನು (ಪಕ್ಷಪಾತವನ್ನು), ಕುರ್ಯಾತ್-ಮಾಡುವನೋ, ಸಃ ಅಪಿ-ಆತನೂ ಸಹ, ಪಾಪಂ-ಪಾಪವನ್ನು, ಅವಾಪ್ನೋತಿ-ಹೊಂದುತ್ತಾನೆ; ವೈಷಮ್ಯಂ-ವೈಷಮ್ಯವು, ಪಾಪಸಾಧನಂ-ಪಾಪಕ್ಕೆ ಕಾರಣವು.

---

ಮನುಷ್ಯರಿಗೆ (ಅವರವರ) ಮನಸ್ಸೇ ಕಾರಣವು; ಮನಸ್ಸು ವಿಷಯ ಭೋಗದಲ್ಲಿ ಆಸಕ್ತವಾದರೆ, ಬಂಧಕ್ಕೆ ಕಾರಣವಾಗುತ್ತದೆ; ವಿಷಯಾಸಕ್ತಿಯಿಂದ ರಹಿತವಾದರೆ (ವಿಷಯಾಶೆಯನ್ನು ತೊರೆದರೆ) ಮೋಕ್ಷಕ್ಕೆ ಕಾರಣವಾಗುತ್ತದೆ(೧೭). ಯಾರು ಭೋಗಲಾಲಸೆಯಿಂದ ಸ್ತ್ರೀಯರಲ್ಲಿ (ಸ್ತ್ರೀ ಶಬ್ದವು ಭೋಗಯೋಗ್ಯದುರ್ವಿಷಯ ವಾಚಕವು) ಆಸಕ್ತನಾಗಿ, ತಂದೆ ಮೊದಲಾದ ಪೋಷ್ಯವರ್ಗದವರಲ್ಲಿ ಉದಾಸೀನನಾಗುವನೋ ಅಥವಾ ದ್ವೇಷಮಾಡುವನೋ, ಆತನು ಘೋರ ನರಕವನ್ನೇ ಹೊಂದುತ್ತಾನೆ) (೧೮). ಸ್ವಭಾರ್ಯೆಯರ ಮಧ್ಯದಲ್ಲಿ ಯಾರು, ಪ್ರೀತಿವಿಶೇಷದಿಂದ, ವೈಷಮ್ಯವುಳ್ಳವನಾಗುತ್ತಾನೆಯೋ, ಆತನೂ ಪಾಪವನ್ನು ಹೊಂದುತ್ತಾನೆ; ವೈಷಮ್ಯವು ಪಾಪ ಸಾಧನವು(ಸಮತ್ವವು ಪುಣ್ಯ ಸಾಧನವು) (೧೯). ತನ್ನ ಸ್ತ್ರೀಯರಲ್ಲಿಯೇ ಆಗಲಿ,

1. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂಬ ಪ್ರಸಿದ್ಧ ವಾಕ್ಯದ ಅಭಿಪ್ರಾಯವನ್ನೇ ಇಲ್ಲಿ ಹೇಳಲಾಗಿದೆ.

**ಸಕ್ತಚೇತಾ ಹಿ ಭೋಗೇಷು ಸ್ವರ್ಗಲೋಕಮವಾಪ್ನುಯಾತ್ ।**
**ಅಸಕ್ತಚೇತಾ ಭೋಗೇಷು ವಿಷ್ಣುಭಕ್ತಿಪರಾಯಣಃ ॥ ೧೬ ॥**

**ಕ್ರಮೇಣ ಪ್ರಾಪ್ನುಯಾನ್ಮೋಕ್ಷಂ ತತೋ ನಾವರ್ತತೇ ಪುನಃ ।**

ಯಸ್ಯ- ಯಾವಾತನ, ನಾಮ- ಹೆಸರನ್ನು, ಜನಃ- ಜನರು, ನ ಸ್ತುವತೇ- ಸ್ತುತಿಸುವುದಿಲ್ಲವೋ, ತಸ್ಯ- ಆತನ, ಜನ್ಮ- ಜೀವಿತವು (ಹುಟ್ಟು) ಧಿಕ್- ತುಚ್ಛವು (ವ್ಯರ್ಥವು- ನಿಂದ್ಯವು); (ಆದ್ದರಿಂದ ಪೋಷ್ಯವರ್ಗವನ್ನು ಶಕ್ತನಾದರೂ ಪೋಷಿಸದೇ ಜನರಲ್ಲಿ ಅಪಕೀರ್ತಿಯನ್ನು ಹೊಂದಬಾರದು), ನಿಜಪೋಷ್ಯಕಾನ್- ತನ್ನಿಂದ ಪೋಷ್ಯರಾದವರನ್ನು ಸ್ವಾರ್ಜಿತ ವಿತ್ತೇನ- ತಾನು ಸಂಪಾದಿಸಿದ ಧನಾದಿ ಸಂಪತ್ತಿನಿಂದ, ಪುಷ್ಣೀಯಾತ್- ಪೋಷಣೆ ಮಾಡಿ, ಯದಿ- ಒಂದುವೇಳೆ, ಭೋಗೇಷು- ವಿಷಯ ಭೋಗದಲ್ಲಿ, ಸಕ್ತಚೇತಾಃ ಹಿ- ಆಸಕ್ತವಾದ ಚಿತ್ತವುಳ್ಳವನಾದರೂ, ಸ್ವರ್ಗಲೋಕಂ- ಸ್ವರ್ಗಲೋಕವನ್ನು, ಅವಾಪ್ನುಯಾತ್- ಹೊಂದುತ್ತಾನೆ; ಭೋಗೇಷು- ವಿಷಯ ಭೋಗಗಳಲ್ಲಿ, ಅಸಕ್ತಚೇತಾಃ- ಪ್ರವೇಶಿಸದ ಮನಸ್ಸುಳ್ಳವನಾಗಿ, ವಿಷ್ಣು ಭಕ್ತಿ ಪರಾಯಣಃ- ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವನು, (ಯದಿ- ಆದರೆ) ಕ್ರಮೇಣ- ಕ್ರಮವಾಗಿ (ಜ್ಞಾನಾದಿ ದ್ವಾರಾ), ಮೋಕ್ಷಂ- ಮೋಕ್ಷವನ್ನು ಪ್ರಾಪ್ನುಯಾತ್- ಹೊಂದುತ್ತಾನೆ; ತತಃ- ಅಲ್ಲಿಂದ (ಮುಕ್ತಿಯಿಂದ), ಪುನಃ- ಮತ್ತೆ ನ ಆವರ್ತತೇ- ತಿರುಗಿ ಸಂಸಾರಕ್ಕೆ ಬರುವುದಿಲ್ಲ.

**ಮನ ಏವ ಹಿ ಸರ್ವೇಷಾಂ ಬಂಧನಂ ಮೋಕ್ಷಕಂ ತಥಾ ॥ ೧೭ ॥**

**ವಿಷಯಾಸಂಗಿ ಬಂಧಾಯ ತದ್ವಿರಕ್ತಂ ವಿಮುಕ್ತಯೇ ।**

ಸರ್ವೇಷಾಂ- ಎಲ್ಲರಿಗೂ, ಮನಃ ಏವ- ಮನಸ್ಸೇ, ಬಂಧನಂ- ಕಟ್ಟು (ಬಂಧ ಕಾರಣವು), ತಥಾ- ಮತ್ತು ಮೋಕ್ಷಕಂ- ಬಿಡುಗಡೆಯು (ಮೋಚನೆಯ) (ಮುಕ್ತಿ

---

ಪೋಷ್ಯವರ್ಗವನ್ನು ಪೋಷಿಸಿ ತನ್ನ ಕರ್ತವ್ಯವನ್ನು ನಿರ್ವಹಿಸದೆ, ಅಪಕೀರ್ತಿಯನ್ನು ಪಡೆದವನ ಜನ್ಮಕ್ಕೆ ಧಿಕ್ಕಾರವು— ಯಾವಾತನ ನಾಮವನ್ನು ಜನರು ಪ್ರಶಂಸಿಸಿ ಮಾತನಾಡುವುದಿಲ್ಲವೋ ಆತನ ಹುಟ್ಟು ವ್ಯರ್ಥವೇ ಸರಿ; ಸ್ವಯಾರ್ಜಿತಧನದಿಂದ ತನ್ನ ಪೋಷ್ಯವರ್ಗದವರನ್ನು ಪೋಷಿಸುತ್ತ ತಾನೂ ವಿಷಯಭೋಗದಲ್ಲಿ ಆಸಕ್ತನಾಗಿದ್ದವನು, ಸ್ವರ್ಗ ಲೋಕವನ್ನು ಹೊಂದುತ್ತಾನೆ- ಒಂದು ಪಕ್ಷ ವಿಷಯಾಸಕ್ತಿಯನ್ನು ತ್ಯಜಿಸಿ, ಹರಿಭಕ್ತಿಪರಾಯಣನಾದರೆ, ಕ್ರಮವಾಗಿ, ಜ್ಞಾನ, ಭಕ್ತಿ ದೃಢವೈರಾಗ್ಯಾದಿಗಳನ್ನು ಹೊಂದಿ, ಮೋಕ್ಷವನ್ನೇ ಹೊಂದುತ್ತಾನೆ; ಅಲ್ಲಿಂದ ತಿರುಗಿ ಸಂಸಾರದಲ್ಲಿ ಬರುವುದಿಲ್ಲ (೧೫-೧೬). ಸಂಸಾರದಲ್ಲಿ ಬಂಧಿಸಲ್ಪಡುವುದಕ್ಕೂ, ಅದರಿಂದ ಮುಕ್ತನಾಗುವುದಕ್ಕೂ,

ಕಾರಣವೂ ಆಗಿದೆ); ಹಿ-ಹೀಗಿರುವುದರಿಂದ, ವಿಷಯಾಸಂಗಿ-ವಿಷಯಗಳಲ್ಲಿ ಆಸಕ್ತವಾದ ಮನಸ್ಸು (ವಿಷಯಸಂಗವುಳ್ಳ ಮನಸ್ಸು), ಬಂಧಾಯ-ಬಂಧಕ್ಕೂ, ತದ್ವಿರಕ್ತಂ-ವಿಷಯಸಂಗವಿಲ್ಲದ ಮನಸ್ಸು ವಿಮುಕ್ತಯೇ-ಮುಕ್ತಿಗೂ (ಕಾರಣವಾಗುತ್ತದೆ).[1]

**ಭೋಗಬುದ್ಧ್ಯಾ ಹಿ ಯಃ ಸ್ತ್ರೀಷು ಸಕ್ತಃ ಪಿತ್ರಾದಿಕೇಷ್ವಥ ॥ ೧೮ ॥**
**ಉದಾಸೀನೋಽಥವಾ ದ್ವೇಷೀ ಸ ಘೋರನರಕಂ ವ್ರಜೇತ್ ।**

ಯಃ-ಯಾವಾತನು, ಭೋಗ ಬುದ್ಧ್ಯಾ-ಭೋಗಮಾಡುವ ಮನಸ್ಸಿನಿಂದ, ಸ್ತ್ರೀಷು-ಸ್ತ್ರೀಜನರಲ್ಲಿ ಸಕ್ತಃ-ಆಸಕ್ತನಾಗಿದ್ದು ಅಥ-ಮತ್ತೆ ಪಿತ್ರಾದಿಕೇಷು-ತಂದೆ ಮೊದಲಾದ ಪೋಷ್ಯರಲ್ಲಿ ಉದಾಸೀನಃ-ಉದಾಸೀನನಾಗಿರುವನೋ (ಅವರ ರಕ್ಷಣಕಾರ್ಯಗಳನ್ನು ಲಕ್ಷಿಸುವುದಿಲ್ಲವೋ), ಅಥವಾ, ದ್ವೇಷೀ-(ಅವರನ್ನು) ದ್ವೇಷಿಸುವನೋ, ಸಃ-ಆತನು, ಘೋರ ನರಕಂ-ಘೋರವಾದ (ಉಗ್ರವಾದ) ನರಕವನ್ನು, ವ್ರಜೇತ್-ಹೊಂದುತ್ತಾನೆ.

**ಯಶ್ಚ ಸ್ತ್ರೀಷ್ವಪಿ ವೈಷಮ್ಯಂ ಕುರ್ಯಾತ್ ಸ್ನೇಹವಿಶೇಷತಃ ।**
**ಸೋಽಪಿ ಪಾಪಮವಾಪ್ನೋತಿ ವೈಷಮ್ಯಂ ಪಾಪಸಾಧನಂ ॥ ೧೯ ॥**

ಚ-ಮತ್ತು, ಯಃ-ಯಾರು, ಸ್ತ್ರೀಷು ಅಪಿ-ತನ್ನ ಸ್ತ್ರೀಯರ (ಭಾರ್ಯರ) ಮಧ್ಯದಲ್ಲಿಯೂ, ಸ್ನೇಹವಿಶೇಷತಃ-ಪ್ರೀತಿವಿಶೇಷದಿಂದ, ವೈಷಮ್ಯಂ-ವ್ಯತ್ಯಾಸವನ್ನು (ಪಕ್ಷಪಾತವನ್ನು), ಕುರ್ಯಾತ್-ಮಾಡುವನೋ, ಸಃ ಅಪಿ-ಆತನೂ ಸಹ, ಪಾಪಂ-ಪಾಪವನ್ನು ಅವಾಪ್ನೋತಿ-ಹೊಂದುತ್ತಾನೆ; ವೈಷಮ್ಯಂ-ವೈಷಮ್ಯವು, ಪಾಪಸಾಧನಂ-ಪಾಪಕ್ಕೆ ಕಾರಣವು.

---

ಮನುಷ್ಯರಿಗೆ (ಅವರವರ) ಮನಸ್ಸೇ ಕಾರಣವು; ಮನಸ್ಸು ವಿಷಯ ಭೋಗದಲ್ಲಿ ಆಸಕ್ತವಾದರೆ, ಬಂಧಕ್ಕೆ ಕಾರಣವಾಗುತ್ತದೆ; ವಿಷಯಾಸಕ್ತಿಯಿಂದ ರಹಿತವಾದರೆ (ವಿಷಯಾಶೆಯನ್ನು ತೊರೆದರೆ) ಮೋಕ್ಷಕ್ಕೆ ಕಾರಣವಾಗುತ್ತದೆ(೧೭). ಯಾರು ಭೋಗಲಾಲಸೆಯಿಂದ ಸ್ತ್ರೀಯರಲ್ಲಿ (ಸ್ತ್ರೀ ಶಬ್ದವು ಭೋಗಯೋಗ್ಯದುರ್ವಿಷಯ ವಾಚಕವು) ಆಸಕ್ತನಾಗಿ, ತಂದೆ ಮೊದಲಾದ ಪೋಷ್ಯವರ್ಗದವರಲ್ಲಿ ಉದಾಸೀನನಾಗುವನೋ ಅಥವಾ ದ್ವೇಷಮಾಡುವನೋ, ಆತನು ಘೋರ ನರಕವನ್ನೇ ಹೊಂದುತ್ತಾನೆ) (೧೮). ಸ್ವಭಾರ್ಯರ ಮಧ್ಯದಲ್ಲಿ ಯಾರು, ಪ್ರೀತಿವಿಶೇಷದಿಂದ, ವೈಷಮ್ಯವುಳ್ಳವನಾಗುತ್ತಾನೆಯೋ, ಆತನೂ ಪಾಪವನ್ನು ಹೊಂದುತ್ತಾನೆ; ವೈಷಮ್ಯವು ಪಾಪ ಸಾಧನವು(ಸಮತ್ವವು ಪುಣ್ಯ ಸಾಧನವು) (೧೯). ತನ್ನ ಸ್ತ್ರೀಯರಲ್ಲಿಯೇ ಆಗಲಿ,

---

1. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂಬ ಪ್ರಸಿದ್ಧ ವಾಕ್ಯದ ಅಭಿಪ್ರಾಯವನ್ನೇ ಇಲ್ಲಿ ಹೇಳಲಾಗಿದೆ.

**ಯಥಾಯೋಗಂ ತು ಯಃ ಸರ್ವಾನ್ ಯಥಾಹಾರಂ ಯಥಾ ವಯಃ ।**

**ಯಥಾಕ್ರಮಂ ಯಥಾನ್ಯಾಯಂ ಯಥಾಶಕ್ತಿ ಚ ಯೋ ಭವೇತ್ ।**
**ಸರ್ವೇಷ್ವಪಿ ವ್ರಜತ್ಯೇವ ಸ್ವರ್ಗಂ ನಾನಾವಿಧಂ ನರಃ ॥ ೨೧ ॥**

**ಕೀರ್ತಿಂ ಚ ಲಭತೇ ಲೋಕೇ ತತಃ ಸ್ಯಾತ್ ಪುಣ್ಯವರ್ಧನಂ ।**
**ಅನ್ಯಥಾ ನಿರಯಂ ಗಚ್ಛೇದಪಕೀರ್ತಿಂ ಚ ವಿಂದತಿ ॥ ೨೨ ॥**

**ಯಾವದತ್ರ ಭವೇತ್ಕೀರ್ತಿಃ ಪಾಪಕೀರ್ತಿಶ್ಚ ದೇಹಿನಾಂ ।**
**ಸ್ವರ್ಗಂ ವಾ ನರಕಂ ತಾವದವಾಪ್ನೋತಿ ನ ಸಂಶಯಃ ॥ ೨೩ ॥**

ಯಃ- ಯಾವಾತನು, ಸರ್ವಾನ್- ಎಲ್ಲರನ್ನೂ (ತನ್ನಿಂದ ಪೋಷ್ಯರಾದವರೆಲ್ಲರನ್ನೂ ತನ್ನ ಸ್ತ್ರೀಯರೇ ಮೊದಲಾದ ತನ್ನೊಂದಿಗಿರುವ ಎಲ್ಲರನ್ನೂ) ಯಥಾಯೋಗಂ- ಅವರವರ ಯೋಗ್ಯತೆಯಂತೆ (ಯುಕ್ತವಾಗುವಂತೆ), ಯಥಾಹಾರಂ- ಯೋಗ್ಯವಾದ ಆಹಾರವುಳ್ಳವನೂ (ಆಹಾರವನ್ನು ಒದಗಿಸುವನೂ), ಯಥಾವಯಃ- ವಯೋನುಗುಣವೂ, ಯಥಾಕ್ರಮಂ-ತರತಮಭಾವಯುಕ್ತವೂ, ಯಥಾನ್ಯಾಯಂ- ಧರ್ಮಾನುಸಾರಿಯೂ, ಚ- ಮತ್ತು ಯಥಾಶಕ್ತಿ-ಶಕ್ತ್ಯನುಸಾರಿಯೂ, ಭವೇತ್- ಆಗಿರುವನೋ (ಆಗಿ ಅವರ ವಿಷಯದಲ್ಲಿ ನಡೆದುಕೊಳ್ಳುತ್ತಾನೆಯೋ), ನರಃ-(ಹಾಗಿರುವ ಆತನು) ಆ ಮನುಷ್ಯನು, ನಾನಾವಿಧಂ- ಬಹುವಿಧವಾದ, ಸ್ವರ್ಗಂ-ಸ್ವರ್ಗವನ್ನು (ಸುಖವನ್ನೂ), ವ್ರಜತಿ ಏವ- ನಿಶ್ಚಯವಾಗಿ ಹೊಂದುತ್ತಾನೆ; ಲೋಕೇ- ಲೋಕದಲ್ಲಿ (ಈ ಲೋಕದ ಜನರಲ್ಲಿ), ಕೀರ್ತಿಂ ಚ- ಕೀರ್ತಿಯನ್ನೂ ಲಭತೇ- ಹೊಂದುತ್ತಾನೆ; ತತಃ- ಅದರಿಂದ (ಕೀರ್ತಿಯಿಂದ), ಪುಣ್ಯವರ್ಧನಂ-

---

ತನ್ನಿಂದ ಪೋಷ್ಯರಾದ ತಂದೆ ತಾಯಿ ಮೊದಲಾದವರಲ್ಲಾಗಲಿ, ಅವರವರ ಯೋಗ್ಯತೆಯನ್ನರಿತು, ತಾರತಮ್ಯಾನುಸಾರವಾಗಿ, ವಯೋನುಗುಣವಾದ ಆಹಾರಾದಿ ವಿಷಯಗಳಲ್ಲಿ ತನ್ನ ಶಕ್ತ್ಯನುಸಾರವಾಗಿ, ಧರ್ಮಶಾಸ್ತ್ರಕ್ಕೆ ವಿರೋಧವಾಗದ ರೀತಿಯಲ್ಲಿ ಯಾರು ನಡೆದುಕೊಳ್ಳುವನೋ, ಆ ಮನುಷ್ಯನು ಬಹುವಿಧ ಸ್ವರ್ಗವನ್ನು(ವಿವಿಧಸುಖ ಭೋಗವನ್ನು) ಹೊಂದುತ್ತಾನೆ— ಲೋಕದಲ್ಲಿ ಒಳ್ಳೆಯ ಕೀರ್ತಿಯನ್ನೂ ಹೊಂದುತ್ತಾನೆ; ಕೀರ್ತಿಯಿಂದ ಪುಣ್ಯವು ಬೆಳೆಯುತ್ತದೆ. ಹಾಗೆ ನಡೆದುಕೊಳ್ಳದಿದ್ದರೆ, ಅಪಕೀರ್ತಿಯನ್ನು ಹೊಂದುತ್ತಾನೆ; ಜೀವರ ಕೀರ್ತಿ ಅಪಕೀರ್ತಿಗಳು ಎಷ್ಟು ಕಾಲಪರ್ಯಂತ ಈ ಲೋಕದಲ್ಲಿರುತ್ತದೆಯೋ ಅವರೆಗೆ (ಕ್ರಮವಾಗಿ) ಸ್ವರ್ಗ ನರಕಗಳ ವಾಸವನ್ನು ಪಡೆಯುತ್ತಾರೆ; ನಿಶ್ಚಯವು(೨೦-೨೩). ಅನಿತ್ಯವಾದ ಈ ದೇಹದ ಫಲವು, ಈ ಲೋಕದಲ್ಲಿ ಮೂರೆಂದು ಹೇಳಲಾಗುತ್ತದೆ; ಸಂತತಿ, ಕೀರ್ತಿ ಮತ್ತು ಇಹಪರಗತಿಗಳಿಗೆ

ಪುಣ್ಯದ ಅಭಿವೃದ್ಧಿಯು, ಸ್ಯಾತ್-ಆಗುತ್ತವೆ (ಪುಣ್ಯವು ಬೆಳೆಯುತ್ತದೆ); ಅನ್ಯಥಾ-ಹಾಗಲ್ಲದಿದ್ದರೆ (ಹಾಗೆ ನಡೆದುಕೊಂಡು ತನ್ನ ಕರ್ತವ್ಯವನ್ನು ನಿರ್ವಹಿಸದಿದ್ದರೆ), ನಿರಯಂ-ನರಕವನ್ನು ಗಚ್ಛೇತ್-ಹೊಂದುತ್ತಾನೆ; ಚ-ಮತ್ತು ಅಪಕೀರ್ತಿಂ-ಅಪಕೀರ್ತಿಯನ್ನೂ (ಪಾಪಿಯೆಂಬ ಕೀರ್ತಿಯನ್ನೂ), ಏಂದತಿ-ಹೊಂದುತ್ತಾನೆ; ಅತ್ರ-ಈ ಲೋಕದಲ್ಲಿ ದೇಹಿನಾಂ-ಜೀವರುಗಳ, ಕೀರ್ತಿಃ-ಕೀರ್ತಿಯು, ಯಾವತ್-ಎಲ್ಲಿಯವರಿಗೆ (ಎಷ್ಟುಕಾಲದವರೆಗೆ), ಭವೇತ್-ಇರುವುದೋ, ಚ-ಹಾಗೆಯೇ, ಪಾಪಕೀರ್ತಿಃ-ಅಪಕೀರ್ತಿಯೂ (ಎಲ್ಲಿಯವರೆಗೋ), ತಾವತ್-ಅಷ್ಟುಕಾಲದವರೆಗೆ, ಸ್ವರ್ಗಂ-ಸ್ವರ್ಗವನ್ನೂ ವಾ-ಅಥವಾ, ನರಕಂ-ನರಕವನ್ನಾಗಲಿ, ಅವಾಪ್ನೋತಿ-ಹೊಂದುತ್ತಾನೆ; ನ ಸಂಶಯಃ-ಸಂದೇಹವಿಲ್ಲ (ನಿಶ್ಚಯವು).

**ಅನಿತ್ಯಸ್ಯೇಹ ದೇಹಸ್ಯ ಫಲಂ ತ್ರಿತಯಮೀರಿತಂ ।**
**ಐಹಿಕಂ ಸಂತತಿಂ ಕೀರ್ತಿಃ ಕರ್ಮ ಚಾಮುಷ್ಮಿಕಂ ಸ್ಮೃತಂ ॥ ೨೪ ॥**

ಇಹ-ಈ ಲೋಕವಲ್ಲಿ ಅನಿತ್ಯಸ್ಯ-ಅನಿತ್ಯವಾದ, ದೇಹಸ್ಯ-ದೇಹದ, ಫಲಂ-ಫಲವು, ತ್ರಿತಯಂ-ಮೂರು ವಿಧವೆಂದು, ಈರಿತಂ-ಹೇಳಲ್ಪಟ್ಟಿದೆ; (ಯಾವುದೆಂದರೆ) ಸಂತತಿಃ-ಸಂತಾನವು, ಕೀರ್ತಿಃ-ಕೀರ್ತಿಯು, ಚ-ಮತ್ತು ಐಹಿಕಂ-ಇಹಕ್ಕೂ, ಆಮುಷ್ಮಿಕಂ-ಪರ(ಲೋಕ)ಕ್ಕೂ ಸಾಧನವಾಗುವ, ಕರ್ಮ-ಕರ್ಮವು, ಸ್ಮೃತಂ-(ಎಂದು) ಜ್ಞಾನಿ ವಚನವಿದೆ.

**ಸಮೀಚೀನಾಸಮೀಚೀನತಯಾ ತದ್ದ್ವಿವಿಧಂ ಮತಂ ।**
**ಶುಭಂ ಚಾಪ್ಯಶುಭಂ ತೇನ ದೇಹಿನಾ ಪ್ರಾಪ್ಯತೇ ಫಲಂ ॥ ೨೫ ॥**

ತತ್-ಅದು (ನಶ್ವರದೇಹಸಾಧ್ಯವಾದ ಆ ಮೂರೂ ಫಲವು), ಸಮೀಚೀನಾಸಮೀಚೀನತಯಾ-ಒಳ್ಳೆಯದು, ಕೆಟ್ಟದ್ದೆಂಬ ರೂಪದಿಂದ, ದ್ವಿವಿಧಂ-

---

ಸಾಧಕವಾಗುವ ಕರ್ಮಗಳೆಂಬುವೇ ಆ ಮೂರು(ದೇಹದಿಂದ ಸಂಪಾದಿಸಲಾಗುವ ಫಲಗಳು) (೨೪). ಈ ಫಲಗಳು ಒಳ್ಳೆಯದು-ಕೆಟ್ಟದ್ದೆಂಬ ಭೇದದಿಂದ ಎರಡು ಪ್ರಕಾರವಾಗಿರುತ್ತದೆ; ಇದರಿಂದ, (ದೇಹದಿಂದ ಈ ಫಲತ್ರಯ ರೂಪ) ಫಲಸಂಪಾದಕನಾದ ಜೀವನು, ಕ್ರಮವಾಗಿ, ಶುಭ (ಸುಖ), ಅಶುಭ (ದುಃಖ) ಪ್ರದಗಳಾದ ಮುಖ್ಯ ಫಲವನ್ನು ಹೊಂದುತ್ತಾನೆ. (ಸಂತತಿ, ಕೀರ್ತಿ ಮತ್ತು ಕರ್ಮಗಳು ಅನಿತ್ಯ ದೇಹದಿಂದ ಹುಟ್ಟಿದ ಫಲಗಳಾದರೆ, ಅವು ಜೀವನಿಗೆ ಸುಖ ದುಃಖರೂಪದ ತಮ್ಮ ಫಲವನ್ನು (ಜೀವ ಭೋಗ್ಯ ಮುಖ್ಯ ಫಲವನ್ನು) ದೊರಕಿಸುತ್ತವೆ) (೨೫). ಪತ್ನೀ ಪುತ್ರ ಧನಾದಿ ಸರ್ವ ವಸ್ತುಗಳಲ್ಲಿ ಶ್ರೀ ವಿಷ್ಣುವಿನ ಪೂರ್ಣವಶತ್ವವನ್ನು ಚಿಂತಿಸಿ

ಎರಡು ಪ್ರಕಾರವೆಂದು, ಮತಂ-ತಿಳಿಯಲ್ಪಡುತ್ತದೆ; ತೇನ-ಆದರಿಂದ—ಆ ದ್ವಿರೂಪ ಫಲದಿಂದ, ದೇಹಿನಾ-ಜೀವನಿಂದ (ಆ ಫಲಸಂಪಾದಕನಿಂದ), ಶುಭಂ-ಮಂಗಳವೂ (ಸುಖಪ್ರದವೂ), ಅಪಿಚ-ಮತ್ತೂ ಅಶುಭಂ-ಅಮಂಗಲವೂ (ದುಃಖಪ್ರದವೂ), ಫಲಂ-(ಆದ) ಮುಖ್ಯಫಲವು, ಪ್ರಾಪ್ಯತೇ-ಹೊಂದಲ್ಪಡುತ್ತದೆ.

ಭಾವಯಿತ್ವಾ ತು ಸರ್ವೇಷು ಯೋಷಿತ್ ಪುತ್ರಧನಾದಿಷು ।
ಸ್ವೀಯತ್ವಂ ಪರಮಂ ವಿಷ್ಣೋಸ್ತದ್ಭಕ್ತ್ಯಾ ತಾನ್ ಭಜತ್ಯಪಿ ॥ ೨೬ ॥

ಸಂಗಮೇ ತುಷ್ಯತೇ ನೈವ ವಿಯೋಗೇ ನೈವ ಶುಷ್ಯತಿ ।
ಉದಾಸೀನತಯಾ ಸ್ಥಿತ್ವಾ ಯೋ ಗೃಹೇಷು ಗೃಹಾಶ್ರಮೀ ॥ ೨೭ ॥

ಶ್ರವಣಂ ಮನನಂ ಧ್ಯಾನಂ ಯೋ ಹರೇಃ ಸತತಂ ಚರೇತ್ ।
ಮನಸ್ತತ್ರೈವ ಬಧ್ನೀಯಾನ್ನೈವಾನಿತ್ಯೇಷು ಕರ್ಹಿಚಿತ್ ॥ ೨೮ ॥

ವಿರಕ್ತಃ ಸರ್ವಕಾಮೇಭ್ಯಃ ಸ್ವವರ್ಣಾಶ್ರಮ ಕರ್ಮಕೃತ್ ।
ಸರ್ವತ್ರ ಪಶ್ಯೇದ್ಯೋ ವಿಷ್ಣುಂ ಸ ಸಾಕ್ಷಾದ್ದರಿಮೀಕ್ಷತೇ ॥ ೨೯ ॥

ಯೋಷಿತ್ ಪುತ್ರಧನಾದಿಷು-ಹೆಂಡತಿ ಮಕ್ಕಳು, ಧನ ಮೊದಲಾದ, ಸರ್ವೇಷು-ಎಲ್ಲವಸ್ತುಗಳಲ್ಲಿ, ವಿಷ್ಣೋಃ-ಶ್ರೀವಿಷ್ಣುವಿನ, ಪರಮಂ-ಉತ್ಕೃಷ್ಟವಾದ (ಅನ್ಯಾಸಾಧಾರಣವಾದ-ಅನ್ಯರಲ್ಲಿಲ್ಲದ) ಸ್ವೀಯತ್ವಂ-ಸ್ವೀಯತ್ವವನ್ನು (ಸ್ವವಶಗಳೆಂಬುದನ್ನು), ಭಾವಯಿತ್ವಾ-ಚಿಂತಿಸಿ (ನಿರಂತರಸ್ಮರಿಸುತ್ತ), ಭಕ್ತ್ಯಾ-ಭಕ್ತಿಯಿಂದ, ತಾನ್-ಅವುಗಳನ್ನು (ಪತ್ನೀ ಪುತ್ರ ಧನಾದಿಗಳನ್ನು), ಭಜತಿ ಅಪಿ-ಸೇವಿಸಿದರೂ ಸಹ, ಯಃ ಗೃಹಾಶ್ರಮೀ-ಯಾವ ಗೃಹಸ್ಥಾಶ್ರಮದಲ್ಲಿರುವ ಪುರುಷನು, ಗೃಹೇಷು-ಗೃಹದಲ್ಲಿ (ವನಾದಿಗಳಿಗೆ

---

(ನಿರಂತರವಾದ ಸ್ಮರಣೆಯುಳ್ಳವನಾಗಿ-ಆ ಎಲ್ಲವೂ ಪೂರ್ಣವಾಗಿ ಶ್ರೀವಿಷ್ಣುವಿನ ಸ್ವಾಮ್ಯಕ್ಕೊಳಪಟ್ಟವುಗಳೆಂಬ ಅನುಸಂಧಾನದಿಂದ) ಅವುಗಳನ್ನು ಭೋಗಿಸಿದರೂ, ವಿಷ್ಣುಭಕ್ತನಾದ ಗೃಹಸ್ಥಾಶ್ರಮಿಯು, ಅವುಗಳಲ್ಲಿ ಆಸಕ್ತನಾಗುವುದಿಲ್ಲ; ಅವುಗಳೊಂದಿಗೆ ವಾಸಿಸುತ್ತಿದ್ದರೂ, ಅವುಗಳ ಸಂಗದಿಂದ ಹರ್ಷಿಸುವುದಿಲ್ಲ(ಹಿಗ್ಗುವುದಿಲ್ಲ)— ಅವುಗಳ ವಿಯೋಗದಿಂದ ದುಃಖಿಸುವುದಿಲ್ಲ(ಕುಗ್ಗುವುದಿಲ್ಲ); ಹೀಗೆ ಅನುಸಂಧಾನವಿಟ್ಟುಕೊಂಡು ಅವುಗಳನ್ನು ಭೋಗಿಸುವ, ಗೃಹಸ್ಥನಾದ ಪುರುಷನು ಶ್ರೀಹರಿ ಮಹಿಮೆಗಳ ಶ್ರವಣ, ಮನನ, ಧ್ಯಾನಗಳಲ್ಲಿಯೇ ತನ್ನ ಮನಸ್ಸನ್ನು ಕಟ್ಟಿಹಾಕಿ, ಅನ್ಯ ವಿಷಯಾಭಿಲಾಷೆಗಳನ್ನು ತೊರೆದು ವಿರಕ್ತನಾಗಿ ಸ್ವವರ್ಣಾಶ್ರಮೋಚಿತ ಕರ್ಮಗಳನ್ನು ಆಚರಿಸುತ್ತ ಸರ್ವತ್ರ ಶ್ರೀವಿಷ್ಣುವನ್ನೇ ನೋಡಿದರೆ (ಸರ್ವನಿಯಾಮಕನೆಂಬ ಅನುಸಂಧಾನಯುಕ್ತನಾದರೆ), ಶೀಘ್ರದಲ್ಲಿ ಶ್ರೀಹರಿಯ ಸಾಕ್ಷಾದ್ದರ್ಶನವನ್ನು ಪಡೆಯುತ್ತಾನೆ. (ಶ್ರೀವಿಷ್ಣುವಿನ ಪ್ರತ್ಯಕ್ಷ

ಹೋಗದೇ ಗೃಹದಲ್ಲಿಯೇ ಅವುಗಳೊಂದಿಗೆ), ಉದಾಸೀನತಯಾ- ಉದಾಸೀನನಾಗಿ (ಅವುಗಳಲ್ಲಿ ಆಸಕ್ತನಾಗದೇ), ಸ್ಥಿತ್ವಾ-ಇದ್ದು ಸಂಗಮೇ-(ಅವುಗಳ) ಸಂಗಮದಿಂದ (ಸಂಬಂಧವನ್ನಿಟ್ಟುಕೊಂಡಿರುವುದರಿಂದ), ನ ತುಷ್ಯತೇ ಏವ- ಹರ್ಷಿಸುವುದಿಲ್ಲ(ಅಧಿಕ ತೃಪ್ತಿಯನ್ನು ಪಡೆಯುವುದಿಲ್ಲ); ವಿಯೋಗೇ- (ಅವುಗಳ) ವಿಯೋಗದಿಂದ(ಅವುಗಳ ಸಂಗ ತಪ್ಪುವುದರಿಂದ), ನ ಶುಷ್ಯತಿ ಏವ- ಶೋಕಿಸುವುದೂ ಇಲ್ಲ; (ಮನಸ್ಸು ಬಾಡುವುದಿಲ್ಲ- ಒಣಗುವುದಿಲ್ಲ- ನಿರುತ್ಸಾಹವನ್ನು ಹೊಂದುವುದಿಲ್ಲ), ಯಃ- ಯಾವನು (ಗೃಹಸ್ಥನು), ಹರೇಃ-ಶ್ರೀಹರಿಯ, ಶ್ರವಣಂ-(ಕಥಾ)ಶ್ರವಣವನ್ನು, ಮನನಂ-(ಶ್ರುತ ಮಹಿಮೆಗಳ) ಮನನವನ್ನು, ಧ್ಯಾನಂ(ಮನನಲಬ್ಧ ನಿಶ್ಚಯಜ್ಞಾನದಿಂದ) ಧ್ಯಾನವನ್ನು ಸತತಂ-ನಿತ್ಯವೂ, ಚರೇತ್-ಆಚರಿಸುವನೋ (ಮತ್ತು) ಮನಃ-ಮನಸ್ಸನ್ನು, ತತ್ರ ಏವ-ಶ್ರೀಹರಿಯಲ್ಲಿಯೇ, ಬಧ್ನೀಯಾತ್-ಬಂಧನಮಾಡುತ್ತಾನೆಯೋ, ಕರ್ಹಿಚಿತ್- ಎಂದೂ, ಅನಿತ್ಯೇಷು-ಅನಿತ್ಯ ವಸ್ತುಗಳಲ್ಲಿ (ಪೂರ್ವೋಕ್ತಧನಾದಿಗಳಲ್ಲಿ), ನೈವ (ಬಧ್ನೀಯಾತ್)-(ತನ್ನ ಮನಸ್ಸನ್ನು) ಇಡುವುದಿಲ್ಲವೋ, ಸರ್ವಕಾಮೇಭ್ಯಃ- ಸಮಸ್ತವಿಷಯಾಭಿಲಾಷೆಗಳಿಂದ, ವಿರಕ್ತಃ- ವಿರಕ್ತನಾಗಿ, ಸ್ವವರ್ಣಾಶ್ರಮಕರ್ಮಕೃತ್-ತನ್ನ ವರ್ಣಕ್ಕೂ ಆಶ್ರಮಕ್ಕೂ ಉಚಿತವಾದ ಕರ್ಮಗಳನ್ನು ಮಾಡುವವನಾಗಿ, ವಿಷ್ಣುಂ- ಶ್ರೀವಿಷ್ಣುವನ್ನು, ಯಃ-ಯಾರು, ಸರ್ವತ್ರ-ಎಲ್ಲೆಲ್ಲಿಯೂ, ಪಶ್ಯೇತ್-ಕಾಣುತ್ತಾನೆಯೋ, ಸಃ-ಆತನು, ಹರಿಂ-ಶ್ರೀಹರಿಯನ್ನು, ಸಾಕ್ಷಾತ್-ಪ್ರತ್ಯಕ್ಷವಾಗಿ, ಈಕ್ಷತೇ-ಕಾಣುತ್ತಾನೆ (ನೋಡುತ್ತಾನೆ).

ಲಭೇತಾಪಿ ತತೋ ಮುಕ್ತಿಂ ವಿಮುಕ್ತಃ ಕರ್ಮಬಂಧತಃ ।
ಸೃಷ್ಟ್ಯಾದೌ ವಿಷ್ಣುನಾ ಪೂರ್ವಂ ವಿಹಿತಂ ಸೃಷ್ಟಿಹೇತವೇ ॥ ೩೦ ॥

ಪುಂಸ್ತ್ರೀಯೋಗೇನ ಮಿಥುನಂ ನಾವಜಾನೀತ ತತ್ ಸ್ತ್ರಿಯಂ ।

ತತಃ-(ಸಾಕ್ಷಾದ್ದರ್ಶನದಿಂದ) ಅದರಿಂದ, ಕರ್ಮ ಬಂಧತಃ-ಕರ್ಮ ಬಂಧನ ದಿಂದ, ವಿಮುಕ್ತಃ-ಬಿಡುಗಡೆ ಹೊಂದಿ, ಮುಕ್ತಿಂ-ಮೋಕ್ಷವನ್ನು ಲಭೇತ-ಹೊಂದುತ್ತಾನೆ; ಸೃಷ್ಟ್ಯಾದೌ-ಸೃಷ್ಟಿಯ ಪ್ರಾರಂಭದಲ್ಲಿ ಪೂರ್ವಂ-ಮೊದಲಿಗೆ, ಸೃಷ್ಟಿ ಹೇತವೇ- ಸೃಷ್ಟ್ಯರ್ಥವಾಗಿ (ಪ್ರಜಾಭಿವೃದ್ಧಿಗಾಗಿ), ಪುಂಸ್ತ್ರೀಯೋಗೇನ-ಪುರುಷ ಸ್ತ್ರೀಸಂಬಂಧ

---

ದರ್ಶನವನ್ನು ಹೊಂದುತ್ತಾನೆ—ಅಪರೋಕ್ಷ ಜ್ಞಾನಿಯಾಗುತ್ತಾನೆ (೨೬-೨೯). ಅಪರೋಕ್ಷದರ್ಶನದಿಂದ, ಕರ್ಮ ಬಂಧದ ವಿಮುಕ್ತಿಯೂ, ಮೋಕ್ಷವೂ ತಪ್ಪದೇ ದೊರೆಯುತ್ತದೆ; ಸೃಷ್ಟಿಯ ಆರಂಭದಲ್ಲಿ ಮೊದಲಿಗೆ, ಶ್ರೀವಿಷ್ಣುವಿನಿಂದ ಪ್ರಜಾಭಿ ವೃದ್ಧ್ಯರ್ಥವಾಗಿ, ಪುರುಷ ಸ್ತ್ರೀಸಂಬಂಧರೂಪದ ಮಿಥುನೀಭಾವವು, ಯೋಗ್ಯ ವೆಂದು ವಿಧಿಸಲ್ಪಟ್ಟಿತು; ಆದ್ದರಿಂದ, ಪುರುಷನು ಸ್ತ್ರೀಯನ್ನು ಕೀಳಾಗಿ ಕಾಣಬಾರದು, (೩೦).

ರಿಂದ, ಮಿಥುನಂ-ಕೂಡುವಿಕೆಯು (ಪರಸ್ಪರ ಅಂಗಸಂಗವನ್ನು ಹೊಂದುವುದೆಂಬ ಮಿಥುನೀಭಾವವು), ವಿಹಿತಂ-ವಿಹಿತವಾಗಿದೆ (ಯೋಗ್ಯವೆಂದು ವಿಧಿಸಲ್ಪಟ್ಟಿದೆ); ತತ್-(ತಸ್ಮಾತ್-ಆದ್ದರಿಂದ), ಸ್ತ್ರಿಯಂ-ಸ್ತ್ರೀಯನ್ನು ನ ಅವಜಾನೀತ-ಕೀಳೆಂದು ಭಾವಿಸ ಕೂಡದು.

**ಯದೇತಲ್ಲೋಹಿತಂ ಸ್ತ್ರೀಣಾಮೃತುಕಾಲೇ ಪ್ರಜಾಯತೇ ॥ ೩೧ ॥**

**ವಹ್ನಿರ್ಹಿ ದೈವತಂ ತತ್ರ ಬಿಭತ್ಸೇತ ತತೋ ನ ತತ್ ।**
**ಯಚ್ಚ ರೇತೋ ಮನುಷ್ಯಾಣಾಂ ಸೂರ್ಯಸ್ತತ್ರಾಧಿದೈವತಾ ॥ ೩೨ ॥**

**ಬೀಭತ್ಸೇತ ತತೋ ನೈತತ್ತದ್ಯೋಗಾದ್ದೇಹಸಂತತಿಃ ।**

ಸ್ತ್ರೀಣಾಂ-ಸ್ತ್ರೀಯರಿಗೆ, ಋತುಕಾಲೇ-ಋತುಕಾಲದಲ್ಲಿ (ಗರ್ಭಧಾರಣ ಯೋಗ್ಯಕಾಲಾವಧಿಯಲ್ಲಿ).[1] ಯತ್-ಯಾವ, ಏತತ್-ಈ, ಲೋಹಿತಂ-ಶೋಣಿತವು (ವೀರ್ಯಮಿಶ್ರಿತ ರಕ್ತವು-ಸ್ತ್ರೀ ಕುಸುಮವು), ಪ್ರಜಾಯತೇ-ಉಂಟಾಗುತ್ತದೆಯೋ, ತತ್ರ-ಅಲ್ಲಿ ವಹ್ನಿಃ-ಅಗ್ನಿಯು, ದೈವತಂ-ಅಭಿಮಾನಿ ದೇವತೆಯು, ಹಿ-(ಹೀಗೆಂಬುದು ಶಾಸ್ತ್ರಸಿದ್ಧವು); ತತಃ-ಈ ಕಾರಣದಿಂದ, ತತ್-ಅದನ್ನು ನಬೀಭತ್ಸೇತ-ಅಸಹ್ಯವೆಂದು ಭಾವಿಸಕೂಡದು. ಮನುಷ್ಯಾಣಾಂ-ಪುರುಷರ, ಯತ್-ಯಾವ, ರೇತಃ ಚ-ರೇತಸ್ಸು ಸಹ, ತತ್ರ-ಅಲ್ಲಿ ಸೂರ್ಯಃ-ಸೂರ್ಯನು, ಅಧಿದೇವತಾ-ಅಭಿಮಾನಿದೇವತೆಯು; ತತಃ-ಆದ್ದರಿಂದ, ಏತತ್-ಇದನ್ನು ನ ಬೀಭತ್ಸೇತ-ಅಸಹ್ಯವೆಂದು ಚಿಂತಿಸಬಾರದು; ತದ್ಯೋಗಾತ್-ಇವುಗಳ (ಲೋಹಿತ ರೇತಸ್ಸುಗಳ) ಕೂಡುವಿಕೆಯಿಂದ, ದೇಹಸಂತತಿಃ-ದೇಹರೂಪದ ಸಂತಾನವು (ದೇಹಸಹಿತ ಜೀವನ ಉತ್ಪತ್ತಿಯು (ಸಿದ್ಧವಾಗುತ್ತದೆ).

**ಸ್ವರ್ಗಾದ್ವಾ ನರಕಾದ್ವಾಪಿ ಲೋಕಾದ್ವಾಪಿ ಯತಃ ಕುತಃ ॥ ೩೩ ॥**

---

ಸ್ತ್ರೀಯರಿಗೆ ಗರ್ಭಧಾರಣಯೋಗ್ಯಕಾಲದಲ್ಲಿ ಹುಟ್ಟುವ ಶೋಣಿತವನ್ನು ಅಸಹ್ಯವೆಂದು ಭಾವಿಸಕೂಡದು—ಅದರ ಅಭಿಮಾನಿದೇವತೆಯು, ಅಗ್ನಿದೇವನು; ಅದರಂತೆ, ಪುರುಷರ ರೇತೋವಿಷಯದಲ್ಲಿ ಸಹ ಅಸಹ್ಯಭಾವನೆಯನ್ನು ಹೊಂದಬಾರದು—ಅದರ ಅಭಿಮಾನಿಯು, ಸೂರ್ಯದೇವನು; ಈ ಶುಕ್ರ (ಪುರುಷರೇತಸ್ಸು) ಶೋಣಿತಗಳ ಯೋಗದಿಂದಲೇ, ದೇಹವುಳ್ಳ ಸಂತಾನದ ಉತ್ಪತ್ತಿಯಾಗುತ್ತದೆ (ದೇಹಗಳ ಪರಂಪರೆಯು ಸಿದ್ಧವಾಗುತ್ತದೆ) (೩೧-೩೨). ಜೀವನು ಸ್ವರ್ಗದಿಂದಾಗಲಿ,

1. ಬಹಿಷ್ಠೆಯರು ೩ ದಿನಗಳ ಅವಧಿ ಕಳೆದನಂತರ ಸ್ನಾನಮಾಡಿ, 'ಋತುಸ್ನಾತೆ'ರಾಗಿ, ೧೬ನೇ ದಿನದ ಪರ್ಯಂತ ಗರ್ಭಧಾರಣಕ್ಕೆ ಅರ್ಹರಾಗಿರುವರು. 'ಋತುಃ ಸ್ವಾಭಾವಿಕಃ ಸ್ತ್ರೀಣಾಂ ರಾತ್ರಯಃ ಷೋಡಶ ಸ್ಮೃತಾಃ' ಇತ್ಯಾದಿ ವಾಕ್ಯಗಳು ಈ ವಿಷಯವನ್ನು ಪ್ರಸ್ತಾಪಿಸುತ್ತವೆ.

**ಕರ್ಮಶೇಷಯುತೋ ಜೀವಸ್ತತ್ತತ್ಕರ್ಮಾನುಸಾರತಃ ।**
**ಯಮದೂತ್ಯೈರಪ್ರಮತ್ತೈಃ ಸ್ವನ್ನಪಾನಾದಿಯೋಗತಃ ॥ ೩೪ ॥**

**ಪ್ರವೇಶ್ಯತೇ ಪಿತುರ್ದೇಹೇ ರೇತಃ ಸಂಕ್ರಮತೇ ಕ್ರಮಾತ್ ।**
**ತತಃ ಕಾಲೇ ವಿಶೇನ್ಮಾತುರ್ಗರ್ಭೇ ಲೋಹಿತಯೋಗತಃ ॥ ೩೫ ॥**

ಸ್ವರ್ಗಾತ್ ವಾ-ಸ್ವರ್ಗಲೋಕದಿಂದಾಗಲಿ, ನರಕಾತ್ ವಾಪಿ-ನರಕಲೋಕದಿಂದಲೇ ಆಗಲಿ, ಯತಃ ಕುತಃ-ಯಾವ ದಿಕ್ಕಿನ ಯಾವ ಲೋಕದಿಂದಲೇ ಆಗಲಿ, ಜೀವಃ-ಜೀವನು, ಕರ್ಮಶೇಷಯುತಃ-ಕರ್ಮಶೇಷದಿಂದ ಯುಕ್ತನಾಗಿ (ಆಯಾ ಲೋಕದಲ್ಲಿ ಅನುಭವಿಸಲಾದ ಪುಣ್ಯಪಾಪ ಕರ್ಮಗಳ ಅವಶಿಷ್ಟಭಾಗದಿಂದ) ತತ್ತತ್ಕರ್ಮಾನುಸಾರತಃ-ಆಯಾಕರ್ಮಶೇಷಾನುಸಾರವಾಗಿ, ಅಪ್ರಮತ್ತೈಃ-ಜಾಗರೂಕರಾದ, ಯಮದೂತ್ಯೈಃ-ಯಮಾದಿ ಅಧಿಕಾರಿಗಳ ದೂತರಿಂದ, ಸ್ವನ್ನಪಾನಾದಿಯೋಗತಃ-ಅನ್ನಪಾನಾದಿಗಳ ಸಂಯೋಗದಿಂದ (ಅವುಗಳಲ್ಲಿ ಸೇರಿಸಲ್ಪಟ್ಟು), ಪಿತುಃ-ತಂದೆಯ (ತಂದೆಯಾಗಲಿರುವ ಪುರುಷನ), ದೇಹೇ-ದೇಹದಲ್ಲಿ ಪ್ರವೇಶ್ಯತೇ-ಪ್ರವೇಶಿಸಲ್ಪಡುತ್ತಾನೆ, ಕ್ರಮಾತ್-ಕ್ರಮವಾಗಿ (ಅನ್ನಪಾನಾದಿಗಳಿಂದ ಕ್ರಮದಿಂದ ರಕ್ತಾದಿ ದ್ವಾರಾ), ರೇತಃ-(ಪುರುಷನ) ರೇತಸ್ಸನ್ನು ಸಂಕ್ರಮತೇ-ಸೇರುತ್ತಾನೆ; ತತಃ-ನಂತರ (ಅಲ್ಲಿಂದ), ಕಾಲೇ-ಕಾಲ ಪ್ರಾಪ್ತವಾಗಲು, (ಶ್ರೀಹರೀಚ್ಛೆಯಿಂದ ಮಾತೃಗರ್ಭ ಪ್ರವೇಶ ಕಾಲವು ಒದಗಲು), ಲೋಹಿತಯೋಗತಃ-ಲೋಹಿತಸಂಬಂಧದಿಂದ, ಮಾತುಃ-ತಾಯಿಯ (ಮಾತೃವಾಗಲಿರುವ ಸ್ತ್ರೀಯ) ಗರ್ಭದಲ್ಲಿ ವಿಶೇತ್- ಪ್ರವೇಶಿಸುತ್ತಾನೆ.

**ಜಾಯತೇ ದೈವಯೋಗೇನ ಕಲಿಲಂ ತು ತಯೋರ್ದ್ವಯೋಃ ।**
**ಪೃಥಿವೀಜಲಸಂಯುಕ್ತಂ ಪಕ್ವಂ ವಹ್ನ್ಯರ್ಕತೇಜಸಾ ॥ ೩೬ ॥**

**ಘನೀಭೂತೇ ತತಸ್ತಸ್ಮಿನ್ ರೇತಸಾಸ್ತ್ರಾಂ ವಿನಿರ್ಮಿತಿಃ ।**
**ರುಧಿರಾತ್ ಸ್ನಾಯುಮಾಂಸಾದಿನಿರ್ಮಾಣಂ ಕುರುತೇ ಹರಿಃ ॥ ೩೭ ॥**

---

ನರಕದಿಂದಾಗಲಿ ಅಥವಾ ಬೇರೆ ಯಾವ ದಿಕ್ಕಿನ ಯಾವ ಲೋಕದಿಂದಾಗಲಿ, ಅಲ್ಲಿ ಅನುಭವಿಸುತ್ತಿದ್ದ ಕರ್ಮಶೇಷದಿಂದ, ಆಯಾ ಕರ್ಮಶೇಷಾನುಸಾರವಾಗಿ, ಯಮಾದಿ ದೇವದೂತರಿಂದ, ಪುರುಷನ ಅನ್ನಪಾನಾದಿಗಳ ದ್ವಾರಾ, ತಂದೆಯ ದೇಹದಲ್ಲಿ ಪ್ರವೇಶಿಸಲ್ಪಡುತ್ತಾನೆ; ಅಲ್ಲಿ ಕ್ರಮವಾಗಿ (ಅನ್ನಾದಿಗಳ ಪರಿಣಾಮಕ್ರಮದಿಂದ) ಪುರುಷರೇತಸ್ಸನ್ನು ಸೇರುತ್ತಾನೆ; ಯಥಾಕಾಲದಲ್ಲಿ ಸ್ತ್ರೀಶೋಣಿತಸಂಬಂಧದಿಂದ ಮಾತೃಗರ್ಭವನ್ನು ಸೇರುತ್ತಾನೆ(೩೩-೩೫).

ಲೋಹಿತ ರೇತಸ್ಸುಗಳ ಸಂಯೋಗದಿಂದ, ಶ್ರೀಹರೀಚ್ಛಾನುಸಾರವಾಗಿ, ಕಲಿಲವು

ತಯೋಃ-ಆ, ದ್ವಯೋಃ-ಎರಡರ ದೆಶೆಯಿಂದ (ಶುಕ್ರಶೋಣಿತಗಳೆರಡರ ಮೇಳನದಿಂದ), ದೈವಯೋಗೇನ-ಅದೃಷ್ಟಪ್ರೇರಕನಾದ ಶ್ರೀಹರೀಚ್ಛೆಯಿಂದ (ಶ್ರೀಹರಿಯ ಶಕ್ತಿಯಿಂದಲೇ), ಕಲಿಲಂ ತು-ಕಲಿಲವು (ಲೇಹ್ಯದಂತಿರುವ ಮಿಶ್ರಣವು), ಜಾಯತೇ-ಉಂಟಾಗುತ್ತದೆ; ತಸ್ಮಿನ್-ಆ ಕಲಿಲವು, ಪೃಥಿವೀಜಲಸಂಯುಕ್ತಂ-ಪೃಥಿವೀಜಲಗಳೊಂದ ಕೂಡಿ (ಭೂಜಲಭಾಗಗಳೊಡನೆ ಸೇರಿ), ವಹ್ನ್ಯರ್ಕತೇಜಸಾ-ಅಗ್ನಿ ಸೂರ್ಯರ ಸಾಮರ್ಥ್ಯದಿಂದ (ಶುಕ್ರಶೋಣಿತಗಳ ಅಭಿಮಾನಿಗಳಾದ ಸೂರ್ಯಾಗ್ನಿ ದೇವತೆಗಳ ತೇಜಸ್ಸಿನಿಂದ), ಪಕ್ವಂ-ಪಕ್ವವಾಗಿ (ಪಾಕಮಾಡಲ್ಪಟ್ಟು), ಘನೀಭೂತೇ (ಸತಿ)-ಘನೀಭಾವಹೊಂದುತ್ತಿರಲು (ಗಟ್ಟಿಯಾಗಲು), ರೇತಸಾ-ರೇತಸ್ಸಿನಿಂದ, ಅಸ್ಥ್ನಾಂ-ಅಸ್ಥಿಗಳ, ನಿರ್ಮಿತಿಃ-ನಿರ್ಮಾಣವು (ಆಗುತ್ತದೆ); ರುಧಿರಾತ್-ರಕ್ತದಿಂದ (ಲೋಹಿತದಿಂದ), ಸ್ನಾಯುಮಾಂಸಾದಿ-ಸ್ನಾಯು (ಮಾಂಸವನ್ನು ಮಾಂಸಖಂಡವನ್ನಾಗಿ ರೂಪಿಸುವದು), ಮಾಂಸ ಮೊದಲಾದ, ನಿರ್ಮಾಣಂ-ರಚನೆಯನ್ನು, ಹರಿಃ-ಶ್ರೀಹರಿಯು, ಕುರುತೇ-ಮಾಡುತ್ತಾನೆ.

**ಸ ಹಿ ಪ್ರಾಣಸಖಾ ದೇಹೇ ತಿಷ್ಠನ್ ರಚಯತೇಽಖಿಲಂ ।**
**ಯೋಷಿತ್ಸ್ಯಾಲ್ಲೋಹಿತಾಧಿಕ್ಯೇ ವೀರ್ಯಾಧಿಕ್ಯೇ ಪುಮಾನ್ ಭವೇತ್ ॥**
**ತೃತೀಯಮನ್ಯಥಾಭಾವೇ ವ್ಯಂಗ್ಯಃ ಸ್ಯಾತ್ಪೂರ್ವಕರ್ಮತಃ ।**
**ಅಂಗಾನಾಂ ನ್ಯೂನತಾಧಿಕ್ಯೇ ಗೌರಶ್ಯಾಮಾದಿಕೇ ತಥಾ ॥ ೩೯ ॥**

ಸಃ-ಆ ಶ್ರೀಹರಿಯು, ಪ್ರಾಣಸಖಾ-ಮುಖ್ಯಪ್ರಾಣನೊಂದಿಗೆ, ದೇಹೇ-ದೇಹದಲ್ಲಿ ತಿಷ್ಠನ್-ಇರುತ್ತ (ಮುಖ್ಯಪ್ರಾಣನ ಸಹಕಾರವನ್ನು ಸ್ವೇಚ್ಛೆಯಿಂದ ಆತನ

---

ಉತ್ಪನ್ನವಾಗುತ್ತದೆ; ಅದು, ಅಭಿಮಾನಿಗಳಾದ ಅಗ್ನಿ ಸೂರ್ಯರ ಪ್ರಭಾವದಿಂದ, ಭೂಜಲಭಾಗಗಳೊಡನೆ ಸೇರಿ, ಪಕ್ವಗೊಂಡು ಘನೀಭೂತವಾಗುತ್ತದೆ (ಹೆಪ್ಪುಗಟ್ಟಿಗಟ್ಟಿ ಪದಾರ್ಥವಾಗುತ್ತದೆ); ತದ್ಗತವಾದ ರೇತಸ್ಸಿನಿಂದ ಅಸ್ಥಿಗಳನ್ನೂ ಲೋಹಿತದಿಂದ, ಸ್ನಾಯು ಮಾಂಸಾದಿಗಳನ್ನು ಶ್ರೀಹರಿಯು ನಿರ್ಮಾಣಮಾಡುತ್ತಾನೆ(೩೬-೩೭). ಮಾತೃಗರ್ಭದಲ್ಲಿರುವ ಪಿಂಡದ(ಮುಂದೆ ಶಿಶುವಾಗಿ ಜನಿಸುವ ದೇಹದ) ರಚನೆಯನ್ನು ಸ್ವತಂತ್ರವಾಗಿ(ಅಸಹಾಯಕವಾಗಿ) ಮಾಡಲು ಸಮರ್ಥನೇ ಆಗಿದ್ದರೂ, ಶ್ರೀಹರಿಯು, ಆ ದೇಹದಲ್ಲಿ ಮುಖ್ಯಪ್ರಾಣದೇವನೊಂದಿಗೆ ನಿಂತು, ದೇಹರಚನಾದಿ ಎಲ್ಲವನ್ನೂ ಆತನ ದ್ವಾರಾ ತಾನು ಮಾಡಿ ಮಾಡಿಸುತ್ತಾನೆ; ಲೋಹಿತ ರೇತಸ್ಸುಗಳಲ್ಲಿ ಲೋಹಿತವು ಅಧಿಕ ವಾಗಿದಲ್ಲಿ ಆ ಪಿಂಡವು ಸ್ತ್ರೀ(ಹೆಣ್ಣು) ದೇಹವಾಗಿ ರೂಪಗೊಳ್ಳುತ್ತದೆ; ರೇತಸ್ಸು ಅಧಿಕ ವಾಗಿದ್ದರೆ, ಗಂಡುದೇಹವಾಗುತ್ತದೆ; ಹಾಗಲ್ಲದೇ ಎರಡೂ ಸಮವಾಗಿದ್ದರೆ ಮೂರನೇ ವಿಧ(ನಪುಂಸಕ)ವಾಗುತ್ತದೆ; ಮತ್ತು ಆ ದೇಹವು ಆ ದೇಹಗತ ಜೀವನ

ಅನುಗ್ರಹಕ್ಕಾಗಿ ಸ್ವೀಕರಿಸಿ); ಅಖಿಲಂ-(ಈ) ಸಮಸ್ತಕಾರ್ಯಗಳನ್ನು ರಚಯತೇ-ಮಾಡಿಸುತ್ತಾನೆ; ಲೋಹಿತಾಧಿಕ್ಯೇ-ಲೋಹಿತದ ಅಧಿಕ್ಯದಿಂದ (ಅಧಿಕವಾಗಿದ್ದರೆ), ಯೋಷಿತ್‌ಸ್ಯಾತ್-(ಮಾತೃಗತಗರ್ಭಪಿಂಡವು)ಸ್ತ್ರೀಯಾಗುತ್ತದೆ; ವೀರ್ಯಾಧಿಕ್ಯೇ-ಶುಕ್ರವು (ಪುರುಷರೇತಸ್ಸು) ಅಧಿಕವಾಗಿದ್ದರೆ, ಪುಮಾನ್ ಭವೇತ್-ಪುರುಷನಾಗುತ್ತದೆ; ಅನ್ಯಥಾಭಾವೇ-(ಅವುಗಳಲ್ಲಿ ಲೋಹಿತವೀರ್ಯಗಳಲ್ಲಿ) ಬೇರೆ ರೀತಿಯಿಲ್ಲದಿದ್ದರೆ (ವ್ಯತ್ಯಾಸವಿಲ್ಲದಿದ್ದರೆ-ಸಮತ್ವವಿದ್ದರೆ), ತೃತೀಯಂ-ಮೂರನೆಯ (ನಪುಂಸಕ)ದೇಹವಾಗುತ್ತದೆ; ಪೂರ್ವಕರ್ಮತಃ-ಪೂರ್ವಕರ್ಮದಿಂದ (ಅದರ ಫಲವಾಗಿ), ವ್ಯಂಗಃ-ವ್ಯತ್ಯಸ್ತವಾದ ಅಂಗವುಳ್ಳದ್ದು (ಅಂಗವಿಹೀನವಾದುದು-ಕಣ್ಣು, ಕೈ, ಕಾಲುಗಳಿಲ್ಲದ್ದು), ಸ್ಯಾತ್-ಆಗುತ್ತದೆ; ಅಂಗಾನಾಂ-(ಹಸ್ತಪಾದಾದಿ) ಅಂಗಗಳ, ನ್ಯೂನತಾಧಿಕ್ಯೇ-ಊನತೆ ಮತ್ತು ಅಧಿಕ್ಯಗಳ ವಿಷಯದಲ್ಲಿಯೂ, ಗೌರಶ್ಯಾಮಾದಿಕೇ-ಗೌರ, ಶ್ಯಾಮಾದಿ (ಶುಭ್ರವರ್ಣ-ಸ್ವರ್ಣವರ್ಣ ಅಥವಾ ಕಪ್ಪುವರ್ಣ ಮೊದಲಾದ) ವರ್ಣವುಳ್ಳದ್ದಾಗುವುದರಲ್ಲಿಯೂ ತಥಾ-ಹೀಗೆಯೇ (ಪೂರ್ವಕರ್ಮಾನುಸಾರವೆಂದೇ) ತಿಳಿಯಬೇಕು.

**ಮಾತುರನ್ನರಸಾಂಶೇನ ವರ್ಧಮಾನತನುಸ್ತತಃ ।**
**ಕಾಲೇ ನಿರ್ಯಾತಿ ದೇಹೋಽಯಂ ಯೋನಿಯಂತ್ರಪ್ರಪೀಡಿತಃ ॥ ೪೦ ॥**

ತತಃ-ಆ ಮುಂದೆ, ಮಾತುಃ-ತಾಯಿಯ, ಅನ್ನರಸಾಂಶೇನ-ಅನ್ನರಸದ ಒಂದಂಶದಿಂದ, ವರ್ಧಮಾನತನುಃ-ಬೆಳೆದ ದೇಹವುಳ್ಳದ್ದಾಗಿ, ಅಯಂ ದೇಹಃ-(ಮಾತೃಗರ್ಭದಲ್ಲಿದ್ದ) ಈ ದೇಹವು, ಯೋನಿಯಂತ್ರಪ್ರಪೀಡಿತಃ-ಸ್ತ್ರೀಜನನೇಂದ್ರಿಯವನ್ನು ನಿಯಂತ್ರಿಸುವ ಶಕ್ತಿಯಿಂದ (ಪೀಡಿತನಾಗಿ) ತಳ್ಳಲ್ಪಟ್ಟು, ಕಾಲೇ-(ಭಗವದಿಚ್ಛೆಯಂತೆ) ಪ್ರಸವಕಾಲ ಪ್ರಾಪ್ತವಾಗುತ್ತಿರಲು, ನಿರ್ಯಾತಿ-ಹೊರಗೆ ಬರುತ್ತದೆ.

**ವಿಸಂಜ್ಞೋ ಜಾಯತೇ ಪೂರ್ವಂ ಲಬ್ಧಸಂಜ್ಞಶ್ಚ ರೋದಿತಿ ।**
**ತತೋ ಯಜ್ಞಾಯತೇ ದೇಹೇ ಸರ್ವಸ್ತಜ್ಜ್ಞಾಯತೇಽಖಿಲಂ ॥ ೪೧ ॥**

---

ಪೂರ್ವಕರ್ಮಾನುಗುಣವಾಗಿ, ಅಂಗವಿಹೀನವೂ ಆಗುತ್ತದೆ; ಅದರ ಹಸ್ತಪಾದಾದಿ ಅಂಗಗಳಲ್ಲಿನ ನ್ಯೂನತಾಧಿಕ್ಯಗಳಿಗೂ (ಹೆಚ್ಚು ಕಡಿಮೆ ವ್ಯತ್ಯಾಸಗಳಿಗೂ), ದೇಹದ ಹೊಂಬಣ್ಣ ಕಪ್ಪುವರ್ಣ ಮುಂತಾದ ಭೇದಗಳಿಗೂ, ಪೂರ್ವಕರ್ಮಗಳೇ ಕಾರಣವೆಂದು ತಿಳಿಯಬೇಕು (೩೮-೩೯). ಆ ಮುಂದೆ ತಾಯಿಯು ಉಣ್ಣುವ ಅನ್ನರಸಾಂಶದಿಂದ, ಆ ಮಾತೃಗರ್ಭದಲ್ಲಿರುವ ಪಿಂಡವು ಬೆಳೆಯುತ್ತದೆ; ಪ್ರಸವಕಾಲ ಪ್ರಾಪ್ತವಾಗಲು, ಸ್ತ್ರೀ ಜನನೇಂದ್ರಿಯವನ್ನು ನಿಯಂತ್ರಿಸುವ ಶಕ್ತಿಯಿಂದ (ಸೂತಿಕಾ ವಾಯುವಿನಿಂದ) ತಳ್ಳಲ್ಪಟ್ಟು ಆ ದೇಹವು ಹೊರಗೆ ಬರುತ್ತದೆ(೪೦). ಹುಟ್ಟಿದ ಶಿಶುವಿಗೆ

ಪೂರ್ವಂ-ಮೊದಲು (ಹುಟ್ಟಿದ ಕ್ಷಣದಲ್ಲಿ), ವಿಸಂಜ್ಞ-ಎಚ್ಚರವಿಲ್ಲದವನಾಗಿ, ಜಾಯತೇ-(ಆ ದೇಹಿಯು) ಹುಟ್ಟುತ್ತಾನೆ; ಚ-ಮತ್ತು, ಲಬ್ಧಸಂಜ್ಞ-ಎಚ್ಚರ ಬಂದು (ಪ್ರಜ್ಞೆಯುಂಟಾಗಲು), ರೋದಿತಿ-ಅಳುತ್ತಾನೆ; ತತಃ-ಆ ನಂತರ, ಯತ್-ಯಾವದು (ಏನು), ದೇಹೇ-ಆ ದೇಹದಲ್ಲಿ, ಜಾಯತೇ-ಉಂಟಾಗುತ್ತದೆಯೋ (ಆ ದೇಹದಿಂದ ಏನೇನು ನಡೆಯುತ್ತದೆಯೋ), ತತ್ ಅಖಿಲಂ-ಆ ಎಲ್ಲವೂ, ಸರ್ವೈಃ-ಎಲ್ಲರಿಂದ, ಜ್ಞಾಯತೇ-ತಿಳಿಯಪಡುತ್ತದೆ.

**ಇತ್ಥಂ ಹಿ ಜಾಯತೇ ಸೃಷ್ಟಿಸ್ತತೋ ದೇಹಸ್ಯ ವೃದ್ಧಯೇ ।**
**ಮಾಯಯಾ ಸೃಜತಿ ಸ್ನೇಹಂ ಮಾತ್ರಾದೀನಾಂ ಶಿಶೌ ಕ್ರಮಾತ್ ॥೪೨॥**

ಸೃಷ್ಟಿಃ-(ಮಾನವನ)ಉತ್ಪತ್ತಿಯು, ಇತ್ಥಂ-ಈ ಪ್ರಕಾರದಿಂದ, ಜಾಯತೇ ಹಿ-ಆಗುತ್ತದೆಂಬುದು (ಪ್ರಮಾಣಸಿದ್ಧವು); ತತಃ-ಅಲ್ಲಿಂದ ಮುಂದೆ, ದೇಹಸ್ಯ-(ಹುಟ್ಟಿದ) ದೇಹದ, ವೃದ್ಧಯೇ-ವೃದ್ಧಿಗಾಗಿ, ಕ್ರಮಾತ್-ಕ್ರಮದಿಂದ (ದಿನೇ ದಿನೇ), ಮಾತ್ರಾದೀನಾಂ-ತಾಯಿ ಮೊದಲಾದವರಿಗೆ (ಬಂಧುಜನರಿಗೆ), ಶಿಶೌ-(ಆ) ಮಗುವಿನಲ್ಲಿ ಸ್ನೇಹಂ-ಪ್ರೀತಿಯನ್ನು ಮಾಯಯಾ-ಸ್ವೇಚ್ಛೆಯಿಂದ (ತನ್ನ ಅಧೀನವಾದ ಅವಿದ್ಯೆಯಿಂದ), ಸೃಜತಿ-(ಶ್ರೀಹರಿಯು) ಹುಟ್ಟಿಸುತ್ತಾನೆ.

**ಯಥಾ ಯಥಾ ವರ್ಧತೇಽಯಂ ತಥಾ ಸ್ನೇಹೋಽಪಿ ವರ್ಧತೇ ।**
**ಗುಣಾಧಿಕ್ಯೇ ವಿಶೇಷೇಣ ಯಥಾ ಸ್ನೇಹಂ ಚ ವಿಂದತಿ ॥ ೪೩ ॥**

**ಯಸ್ಯ ಯಸ್ಯ ಯಥಾ ಸ್ನೇಹೋ ಯತ್ರ ಯತ್ರ ಚ ವಸ್ತುನಿ ।**
**ತೇನ ತೇನ ತಥಾ ವಿದ್ಯೇತ್ ಸ್ನೇಹೋ ದುಃಖಸ್ಯ ಕಾರಣಂ ॥ ೪೪ ॥**

ಅಯಂ-ಈ ಶಿಶುದೇಹವು, ಯಥಾ ಯಥಾ-ಹೇಗೆ ಹೇಗೆ, ವರ್ಧತೇ-ಬೆಳೆಯುತ್ತದೆಯೋ, ತಥಾ-ಹಾಗೆ ಹಾಗೆ(ಅಷ್ಟಷ್ಟು), ಸ್ನೇಹಃ ಅಪಿ-

---

ಎಚ್ಚರವಿರುವುದಿಲ್ಲ; ಮರುಕ್ಷಣದಲ್ಲಿ ಪ್ರಜ್ಞೆ ಬಂದು, ಅಳುವುದಕ್ಕೆ ಆರಂಭಿಸುತ್ತದೆ; ಆ ನಂತರ ಆ ಶಿಶುದೇಹದಿಂದಾಗುವ ಎಲ್ಲ ವ್ಯಾಪಾರಗಳೂ (ಚೇಷ್ಟೆಗಳೂ) ಸರ್ವರಿಗೂ ತಿಳಿಯುತ್ತವೆ(೪೧). ಮಾನವನ ಉತ್ಪತ್ತಿಯು ಈ ಪ್ರಕಾರವೆಂಬುದು ಪ್ರಮಾಣಸಿದ್ಧವಿದೆ; ಹೀಗೆ ಹುಟ್ಟಿದ ಶಿಶುವಿನ ಅಭಿವೃದ್ಧಿಗಾಗಿ, ಅದರ ತಾಯಿ ಮೊದಲಾದ ಬಾಂಧವರಲ್ಲಿ ಶ್ರೀಹರಿಯು, ತನ್ನ ಇಚ್ಛೆಯಂತೆ (ತನ್ನ ಅಧೀನವಾದ ಅವಿದ್ಯೆಯನ್ನು ನಿಮಿತ್ತೀಕರಿಸಿ) ಆ ಶಿಶುವಿನಲ್ಲಿ ದಿನದಿನಕ್ಕೂ ಹೆಚ್ಚುವ(ತಮ್ಮದೆಂಬ) ಅಭಿಮಾನವನ್ನು(ವಿಶೇಷ ಪ್ರೀತಿಯನ್ನು) ಹುಟ್ಟಿಸುತ್ತಾನೆ(೪೨). ಮಗುವು ಬೆಳೆದಂತೆ ಬಂಧುವರ್ಗದವರ ಸ್ನೇಹವೂ (ಪ್ರೀತಿಯೂ-ಅಭಿಮಾನವೂ) ಬೆಳೆಯುತ್ತದೆ; ಶಿಶುವು (ರೂಪಲಾವಣ್ಯಾದಿ)

ಅಭಿಮಾನವೂ(ಪ್ರೀತಿಯೂ) ಸಹ, ವರ್ಧತೇ-ಹೆಚ್ಚುತ್ತದೆ; ಗುಣಾಧಿಕ್ಯೇ-(ಶಿಶುವಿನಲ್ಲಿ ರೂಪಾದಿಗುಣಗಳು ಹೆಚ್ಚಾಗಿ ಇದ್ದಂತೆ) ಗುಣದ ಅಧಿಕ್ಯವಿದ್ದಲ್ಲಿ ವಿಶೇಷೇಣ-ಅಧಿಕವಾಗಿ (ಸ್ನೇಹವೂ ಹೆಚ್ಚುತ್ತದೆ); ಚ-ಮತ್ತು ಯಥಾ ಸ್ನೇಹಂ-ಪ್ರೀತಿಯ ಪ್ರಮಾಣಾನುಸಾರವಾಗಿ (ಪ್ರೀತಿಯು ಹೆಚ್ಚಾಗಿದ್ದಷ್ಟೂ), ಖಿದ್ಯತಿ-(ತಾಯಿ ಮೊದಲಾದ ಬಂಧುವರ್ಗವು) ದುಃಖಸಂಭವಕ್ಕೆ ಗುರಿಯಾಗುತ್ತದೆ (ಶಿಶುವಿಗೆ ಉಂಟಾಗುವ ಅಲ್ಪಕಷ್ಟಗಳಿಂದ ಸಹ ತಾವು ಅಧಿಕವಾಗಿ ದುಃಖಿಸುತ್ತಾರೆ); ಯಸ್ಯ ಯಸ್ಯ-ಯಾರುಯಾರಿಗೆ, ಯತ್ರ ಯತ್ರ ಚ ವಸ್ತುನಿ-ಯಾವ ಯಾವ ವಸ್ತುವಿನಲ್ಲಿ ಯಥಾ ಸ್ನೇಹಃ-ಎಷ್ಟೆಷ್ಟು ಪ್ರೀತಿಯೋ (ಸ್ನೇಹವಿರುತ್ತದೆಯೋ), ತೇನ ತೇನ-ಅದರಿಂದ (ಆ ಸ್ನೇಹದ ಅಳತೆಯಂತೆ), ತಥಾ-ಅಷ್ಟಷ್ಟು (ಹೆಚ್ಚಾಗಿ), ಖಿದ್ಯೇತ್-ದುಃಖಪಡುತ್ತಾನೆ; ಸ್ನೇಹಃ-ಸ್ನೇಹವೇ (ಅಭಿಮಾನವೇ), ದುಃಖಸ್ಯ-ದುಃಖಕ್ಕೆ, ಕಾರಣಂ-ಕಾರಣವು.

**ಯಾವತಾ ದೇಹಯಾತ್ರಾಸ್ಯಾತ್ತಾವದೇವ ಸುತಾದಿಷು ।**
**ಕುರ್ವೀತ ಸ್ನೇಹಮಾಧಿಕ್ಯಾದ್ದುಃಖಾಧಿಕ್ಯಮವಾಪ್ನುಯಾತ್ ॥ ೪೫ ॥**

ಹೀಗೆ ಅಭಿಮಾನವು ದುಃಖಕ್ಕೆ ಪ್ರಧಾನಕಾರಣವಾಗಿರುವುದರಿಂದ, ವಿವೇಕಿಯ ಕರ್ತವ್ಯವನ್ನು ಸೂಚಿಸುತ್ತಾರೆ:—

ಸುತಾದಿಷು-ಪುತ್ರಾದಿಗಳಲ್ಲಿ ಯಾವತಾ-ಎಷ್ಟರಿಂದ (ಎಷ್ಟು ಪ್ರೀತಿ ಮಾಡುವದರಿಂದ), ದೇಹಯಾತ್ರಾ-ಬಾಳಿನ ಕಾರ್ಯಗಳು, ಸ್ಯಾತ್-ನಡೆಯುವುದೋ, ತಾವತ್ ಏವ-ಅಷ್ಟು ಮಾತ್ರ, ಸ್ನೇಹಂ-ಪ್ರೀತಿಯನ್ನು ಕುರ್ವೀತ-ಮಾಡಬೇಕು; ಆಧಿಕ್ಯಾತ್-ಅದಕ್ಕಿಂತ ಹೆಚ್ಚಾದ ಅಭಿಮಾನವನ್ನು ಹೊಂದುವದರಿಂದ (ಪ್ರೀತಿಸುವದರಿಂದ), ದುಃಖಾಧಿಕ್ಯಂ-ಹೆಚ್ಚಾದ ದುಃಖವನ್ನೇ ಅವಾಪ್ನುಯಾತ್-(ಮಾನವನು) ಹೊಂದುತ್ತಾನೆ.

---

ಗುಣಾಢ್ಯವಾಗಿದ್ದರೆ, ಪ್ರೀತಿಯೂ ಅಧಿಕವಾಗುತ್ತದೆ; ಪ್ರೀತಿಯ ಪ್ರಮಾಣಾನುಸಾರವಾಗಿ ದುಃಖಕ್ಕೂ ಎಡೆಯಾಗುತ್ತದೆ; ಯಾರು ಯಾರಿಗೆ ಯಾವ ಯಾವ ವಸ್ತುವಿನಲ್ಲಿ ಎಷ್ಟು ಸ್ನೇಹವಿರುತ್ತದೆಯೋ, ಆ ಸ್ನೇಹದಿಂದ (ಅದೇ ಕಾರಣವಾಗಿ), ಅಷ್ಟು (ಸ್ನೇಹದ ಅಳತೆಯಿಂತೆ ಹೆಚ್ಚು ಹೆಚ್ಚಾಗಿ) ಆತನು ದುಃಖಿಸಬೇಕಾಗುತ್ತದೆ—ಅಭಿಮಾನವೇ ದುಃಖಕ್ಕೆ ಮುಖ್ಯಕಾರಣವು(ತಾನು ಸ್ನೇಹವಿಟ್ಟಿರುವ ವಸ್ತುವಿಗೆ ಪ್ರಾಪ್ತವಾಗುವ ಕಷ್ಟನಷ್ಟಗಳಿಂದ, ತಪ್ಪದೇ ದುಃಖಿಸಬೇಕಾಗುತ್ತದೆ) (೪೩-೪೪). ಜೀವನದ ಕಾರ್ಯಗಳು (ಕುಟುಂಬ ಯಾತ್ರೆಯು) ನಡೆಯಲು ಅವಶ್ಯವಾದಷ್ಟು ಮಾತ್ರ ಸತಿ ಸುತಾದಿಗಳಲ್ಲಿ ಪ್ರೀತಿಯನ್ನು(ಅಭಿಮಾನವನ್ನು) ಹೊಂದಿರಬೇಕು; ಅದಕ್ಕಿಂತ ಅಧಿಕವಾದ ಸ್ನೇಹದಿಂದ, ಅಧಿಕವಾದ ದುಃಖವನ್ನೇ ಹೊಂದಬೇಕಾಗುತ್ತದೆ(೪೫).

**ಮನೋ ಹಿ ಪರಮಂ ನೃಣಾಂ ಯೇನ ಸ್ಯಾದ್ಬ್ರಹ್ಮದರ್ಶನಂ ।**
**ತಾದೃಶಂ ತು ಮನಃ ಸ್ನೇಹಾತ್ ಭೃಶಂ ಯಾತಿ ಕ್ಷಣೇ ಕ್ಷಣೇ ॥ ೪೬ ॥**

ನೃಣಾಂ-ಮಾನವರಿಗೆ, ಮನಃ-ಮನಸ್ಸು ಪರಮಂ ಹಿ-ಶ್ರೇಷ್ಠವಾದ ವಸ್ತುವು; ಯೇನ-ಅದರಿಂದಲೇ, ಬ್ರಹ್ಮದರ್ಶನಂ-ಭಗವಂತನ ಪ್ರತ್ಯಕ್ಷದರ್ಶನವೂ, ಸ್ಯಾತ್-ಆಗುತ್ತದೆ (ದೊರೆಯುತ್ತದೆ); ತಾದೃಶಂ-ಹೀಗಿರುವ (ಅತ್ಯುಪಯುಕ್ತವಾದ), ಮನಃ ತು-ಮನಸ್ಸಾದರೋ, ಸ್ನೇಹಾತ್-(ಸತಿಸುತಾದಿಗಳ) ಸ್ನೇಹದಿಂದ, ಕ್ಷಣೇಕ್ಷಣೇ-ಪ್ರತಿಕ್ಷಣದಲ್ಲಿಯೂ, ಭೃಶಂ-ಅತಿಶಯವನ್ನು (ಸ್ನೇಹಬಂಧದ ಆಧಿಕ್ಯವನ್ನು), ಯಾತಿ-ಹೊಂದುತ್ತದೆ.

**ಅನಿತ್ಯತ್ವಾದ್ವಿನಾಶಾದಿಸಂಭೂತೇಶ್ಚಿಂತಯಾನಿಶಂ ।**
**ತಥೈವ ಸ್ವನ್ನಪಾನಾದೇಶ್ಚಿಂತಯಾ ಪ್ರಿಯವಸ್ತುನಃ ॥ ೪೭ ॥**

**ಪರೋಕ್ಷೇಪ್ಯಪರೋಕ್ಷೇಪಿ ಯಥಾ ಸ್ನೇಹಂ ಹಿ ಖಿದ್ಯತಿ ।**

ಅನಿತ್ಯತ್ವಾತ್-(ಆ ಪ್ರೀತಿಸುವ ವಸ್ತುಗಳು) ಅನಿತ್ಯವಾದ್ದರಿಂದ, ವಿನಾಶಾದಿಸಂಭೂತೇಃ-(ಅವುಗಳಿಗೆ) ವಿನಾಶಾದಿಗಳು ಸಂಭವಿಸುವುದರ, ಅನಿಶಂ-ನಿರಂತರ, ಚಿಂತಯಾ-ಚಿಂತೆಯಿಂದ, ತಥಾ-ಮತ್ತು ಪ್ರಿಯವಸ್ತುನಃ-ಪ್ರೀತಿ ವಿಷಯವಾದ ವಸ್ತುವಿನ, ಸ್ವನ್ನಪಾನಾದೇಃ-ಯೋಗ್ಯವಾದ ಅನ್ನಪಾನಾದಿಗಳ, ಚಿಂತಯಾ ಏವ-ಚಿಂತೆಯಿಂದಲೂ, ಪರೋಕ್ಷೇ ಅಪಿ-ಪರೋಕ್ಷದಲ್ಲಿಯೂ (ವಸ್ತುವು ಎದುರಿಗೆ ಇಲ್ಲದಾಗಲೂ), ಅಪರೋಕ್ಷೇ ಅಪಿ-ಎದುರಿಗಿರುವಾಗಲೂ (ಪ್ರಿಯವಸ್ತುವನ್ನು ಕಾಣುತ್ತಿರುವಾಗ ಮತ್ತು ಕಾಣದಿರುವಾಗ ಸಹ), ಯಥಾ ಸ್ನೇಹಂ-ಪ್ರೀತಿಯ ಗಾಢತೆಯನ್ನನುಸರಿಸಿ, ಖಿದ್ಯತಿ-ಚಿಂತಾಕುಲನಾಗುತ್ತಾನೆ (ವ್ಯಥೆಪಡುತ್ತಾನೆ).

---

ಮನಸ್ಸೆಂಬುದು ಮಾನವನಿಗೆ ದೈವದತ್ತವಾದ ಶ್ರೇಷ್ಠ ಸಾಧನವು; ಅದರಿಂದ ಬ್ರಹ್ಮದರ್ಶನವನ್ನೇ (ಭಗವಂತನ ಪ್ರತ್ಯಕ್ಷದರ್ಶನವನ್ನೇ) ಹೊಂದಬಹುದು; ಹೀಗೆ ಸಮರ್ಥವಾದ ಮನಸ್ಸು ಅನ್ಯವಸ್ತುಗಳ ಸ್ನೇಹದಿಂದ, ಕ್ಷಣಕ್ಷಣದಲ್ಲಿ ಅತಿಶಯವಾದ ಬಂಧನಕ್ಕೊಳಗಾಗುತ್ತದೆ (ಸತಿಸುತಾದಿಗಳ ವ್ಯಾಮೋಹವು ವಿಜೃಂಭಿಸುತ್ತದೆ(೪೬). ಪ್ರೀತಿಗೆ ವಿಷಯವಾದ ವಸ್ತುಗಳು ಅಶಾಶ್ವತವಾದವುಗಳು— ಅವುಗಳಿಗೆ ಸಂಭವಿಸುವ (ಸಂಭವಿಸಬಹುದಾದ) ವಿನಾಶಾದಿಗಳ(ಕಷ್ಟನಷ್ಟಗಳ) ಚಿಂತೆಯಿಂದಲೂ, ಅವುಗಳಿಗೆ ಯಥಾಯೋಗ್ಯವಾದ ಅನ್ನಪಾನಾದಿಗಳನ್ನೊದಗಿಸುವ (ರಕ್ಷಣೆಯ) ಚಿಂತೆಯಿಂದಲೂ, ಅವು ಕಣ್ಣಮುಂದಿರುವಾಗಲೂ, ಇಲ್ಲದಿರುವಾಗಲೂ, ಅವುಗಳಲ್ಲಿ ಹೊಂದಿರುವ ಪ್ರೀತಿಯ ಗಾಢತೆಯನ್ನನುಸರಿಸಿ, ತಪ್ಪದೇ ದುಃಖಿಸುತ್ತಾನೆ(ವ್ಯಥೆಪಡುತ್ತಾನೆ)(೪೭). ದೇಹದಲ್ಲಿ ಅಹಂಕಾರವೂ, ದೇಹಸಂಬಂಧಿಗಳಲ್ಲಿ ಮಮಕಾರವೂ ಸರ್ವಾವಸ್ಥೆಗಳಲ್ಲಿ

**ಅಹಂತಾ ಸರ್ವದಾ ದೇಹೇ ಮಮತಾ ದೇಹಯೋಗಿಷು ॥ ೪೮ ॥**

**ಸದಾ ಜಾಗರ್ತಿ ತೇನಾಯಂ ಪ್ರಾಯೋ ದುಃಖಂ ಸಮಶ್ನುತೇ ।**
**ಸುಖವಿಪ್ರುಷಿ ಸಕ್ತೋಽಯಂ ವೇತ್ತಿ ನೋ ದುಃಖಸಾಗರಂ ॥ ೪೯ ॥**

**ತಸ್ಮಾದ್ದುಃಖಸ್ಯ ಹಾನಾಯ ನಾತಿಸ್ನೇಹಮಿಹಾಚರೇತ್ ।**
**ಸಹಸಾ ನೈವ ಶಕ್ನೋತಿ ಸ್ನೇಹಂ ತ್ಯಕ್ತುಮಶೇಷತಃ ॥ ೫೦ ॥**

**ದೇಹಾದಿಷು ತತಃ ಪ್ರಾಜ್ಞೋ ವಿರಜೇತ ಶನೈಃ ಶನೈಃ ।**

ದೇಹೇ-ದೇಹದಲ್ಲಿ ಅಹಂತಾ-ನಾನೆಂಬ ಭಾವವೂ, (ದೇಹವೇ ಆತ್ಮವೆಂಬ ಬುದ್ಧಿಯೂ, ಅದರಿಂದ, ಅಪೇಕ್ಷಿತವಾದ ಸುಖವನ್ನು ನಾನೇ ಸಾಧಿಸಿಕೊಳ್ಳಲು ಶಕ್ತನೆಂಬ ಸ್ವತಂತ್ರ ಕರ್ತೃತ್ವಾಭಿಮಾನವೂ 'ಅಹಂಕಾರ'ವೆನಿಸುತ್ತದೆ), ದೇಹಯೋಗಿಷು-ದೇಹದ ಸಂಬಂಧವುಳ್ಳವರಲ್ಲಿ (ಪತ್ನೀಪುತ್ರಾದಿಗಳಲ್ಲಿ), ಮಮತಾ-ನನ್ನವರೆಂಬ (ನನ್ನ ಅಧೀನರೆಂಬ) ಬುದ್ಧಿಯೂ (ನನ್ನ ವಶದಲ್ಲಿರುವ ನನ್ನ ಹಿತಸಾಧಕರೆಂಬ ಬುದ್ಧಿಯೂ), ಸರ್ವದಾ-ಸರ್ವಾವಸ್ಥೆಗಳಲ್ಲಿ ಸದಾ-ಯಾವಾಗಲೂ, ಜಾಗರ್ತಿ-ಎದ್ದಿರುತ್ತದೆ (ಜಾಗೃತವಾಗಿರುತ್ತದೆ); ತೇನ-ಅದರಿಂದ (ಈ ಅಹಂ ಮಮಕಾರಗಳಿಂದ), ಅಯಂ-ಈ ಮಾನವನು (ಜೀವನು), ಪ್ರಾಯಃ-ಬಹಳವಾಗಿ, ದುಃಖಂ-ದುಃಖವನ್ನು ಸಮಶ್ನುತೇ-ಅನುಭವಿಸುತ್ತಾನೆ; ಅಯಂ-ಈ ಜೀವನು (ಅಹಂಮಮಕಾರವುಳ್ಳವನು), ಸುಖವಿಪ್ರುಷಿ-ಸುಖಬಿಂದುಮಾತ್ರದಲ್ಲಿ ಸಕ್ತಃ-ಆಸಕ್ತನಾಗಿ, ದುಃಖಸಾಗರಂ-ದುಃಖಸಮುದ್ರವನ್ನು (ದುಃಖಸಮುದ್ರದಲ್ಲಿಯೇ ತಾನಿರುವನೆಂಬುದನ್ನು), ನೋ ವೇತ್ತಿ-ತಿಳಿಯುವುದಿಲ್ಲ; ತಸ್ಮಾತ್-ಆದ್ದರಿಂದ, ದುಃಖಸ್ಯ-ದುಃಖದ, ಹಾನಾಯ-ನಾಶಕ್ಕಾಗಿ (ಪರಿಹಾರಕ್ಕಾಗಿ), ಅತಿಸ್ನೇಹಂ-(ಸತಿಸುತಾದಿಗಳಲ್ಲಿ) ಅತಿಸ್ನೇಹವನ್ನು

---

ನಿರಂತರವಾಗಿ ಇದ್ದೇ ಇರುತ್ತದೆ—ಆ ಭಾವವು ಜಾಗ್ರತವಾಗಿಯೇ ಇರುತ್ತದೆ; ಈ ಕಾರಣದಿಂದಲೇ ದೇಹಿಯು(ಜೀವನು) ಪ್ರಾಯಃ ದುಃಖವನ್ನು ಅನುಭವಿಸುತ್ತಾನೆ; ಬಿಂದುಮಾತ್ರ (ಅಲ್ಪ-ಕ್ಷುದ್ರ) ಸುಖದಲ್ಲಿ ಆಸಕ್ತನಾಗಿ ತಾನು ದುಃಖಸಮುದ್ರದಲ್ಲಿರುವುದನ್ನು ಮರೆಯುತ್ತಾನೆ; ಆದ್ದರಿಂದ ದುಃಖಪರಿಹಾರಕ್ಕಾಗಿ ದೇಹ, ಪತ್ನೀ, ಸುತಾದಿಗಳಲ್ಲಿ ಅತಿಸ್ನೇಹವನ್ನು ತ್ಯಜಿಸಬೇಕು; ಆ ಸ್ನೇಹವನ್ನು ಸಹಸಾ (ಇದ್ದಕ್ಕಿಂತೆ-ಇಚ್ಛಿಸುವ ಮಾತ್ರದಿಂದ) ತ್ಯಜಿಸುವುದು ಸಾಧ್ಯವಲ್ಲ; ಆ ಸ್ನೇಹವನ್ನು ಕ್ರಮವಾಗಿ (ಮಹಾಪ್ರಯತ್ನದಿಂದ) ಪೂರ್ಣವಾಗಿ ತ್ಯಜಿಸಿ, (ವಿವೇಕಿಯಾದವನು) ವಿರಕ್ತನಾಗಬೇಕು (೪೮-೫೦). ದೇಹ, ಪತ್ನೀ, ಪುತ್ರಾದಿಗಳಲ್ಲಿ (ಮೆಲ್ಲಮೆಲ್ಲಗೆ-ಕ್ರಮವಾಗಿ) ವೈರಾಗ್ಯವು ಹುಟ್ಟುತ್ತ ಹೋದಂತೆ (ಅಭಿಮಾನವೆಂಬ ಕಟ್ಟು ಸಡಿಲವಾಗುತ್ತ ಸಾಗಿದಂತೆ), ತನ್ನ ಮನಸ್ಸನ್ನು ಸಂಸಾರಿ ಜೀವನು, ಶ್ರೀವಿಷ್ಣುವಿನ ಪಾದಕಮಲದಲ್ಲಿ

(ಜೀವನಯಾತ್ರೆಗೆ ಅವಶ್ಯಕವಾದುದಕ್ಕಿಂತ ಅಧಿಕವಾಗಿ), ಇಹ-ಈ ವಸ್ತುಗಳಲ್ಲಿ ನ ಆಚರೇತ್-ಮಾಡಕೂಡದು; ಸ್ನೇಹಂ-ಈ ಸ್ನೇಹವನ್ನು ಅಶೇಷತಃ-ಪೂರ್ಣವಾಗಿ, ತ್ಯಕ್ತುಂ-ಬಿಡಲಿಕ್ಕೆ (ಅಭಿಮಾನವನ್ನು ತ್ಯಜಿಸಲು), ಸಹಸಾ-ಸುಲಭವಾಗಿ (ಇಚ್ಛಿಸುವ ಮಾತ್ರದಿಂದ); ನೈವ ಶಕ್ನೋತಿ-ಶಕ್ತನಾಗುವದಿಲ್ಲ(ಕಷ್ಟದಿಂದ ಮಾತ್ರ ಸಾಧ್ಯವಾಗುತ್ತದೆ); ತತಃ-ಆದ್ದರಿಂದ, ಪ್ರಾಜ್ಞ-ವಿವೇಕಿಯು, ದೇಹಾದಿಷು-ದೇಹಾದಿಗಳಲ್ಲಿ (ಸ್ವದೇಹ ಪತ್ನೀಪುತ್ರಾದಿಗಳಲ್ಲಿ), ಶನೈಃ ಶನೈಃ-ಮೆಲ್ಲಮೆಲ್ಲಗೆ (ನಿಧಾನವಾಗಿ), ವಿರಜೇತ-ವಿರಕ್ತನಾಗಬೇಕು.

ಯಥಾ ಯಥಾ ವಿರಕ್ತೋಽಯಂ ಜಾಯೇತಾತ್ಮಸುತಾದಿಭಿಃ ॥ ೫೧ ॥

ತಥಾತಥಾ ನಿಬಧ್ನೀತ ಮನೋ ವಿಷ್ಣುಪದಾಂಬುಜೇ ।
ಲಭೇತಾಥ ನಿಜಾನಂದಸಂದೋಹಾನುಭವಂ ತಥಾ ॥ ೫೨ ॥

ಗ್ರಾಸೇ ಗ್ರಾಸೇ ಯಥಾ ಪುಷ್ಟಿಸ್ತುಷ್ಟಿರ್ನಾಶಃ ಕ್ಷುಧೋಽಪಿ ಚ ।
ಕಾಲೇ ಕಾಲೇ ತ್ರಯಂ ತ್ವೇತದ್ಭುಂಜಾನಸ್ಯ ಭವೇದಿಹ ॥ ೫೩ ॥

ಅಯಂ-ಈತನು (ಸಂಸಾರಿ ಜೀವನು), ಆತ್ಮಸುತಾದಿಭಿಃ-ದೇಹ, ಸುತಾದಿಗಳಿಂದ (ಅಥವಾ ತನ್ನ ಪುತ್ರದಾರಾದಿಗಳಿಂದ), ಯಥಾ ಯಥಾ-ಹೇಗೆ ಹೇಗೆ (ಎಷ್ಟೆಷ್ಟು), ವಿರಕ್ತಃ-ವಿರಕ್ತನು (ಅಭಿಮಾನವನ್ನು ತ್ಯಜಿಸಿರವನು), ಜಾಯೇತ-ಆಗುತ್ತಾನೋ, ತಥಾ ತಥಾ-ಹಾಗೆ ಹಾಗೆ (ಅಷ್ಟಷ್ಟು), ವಿಷ್ಣುಪದಾಂಬುಜೇ-ಶ್ರೀವಿಷ್ಣುವಿನ ಪಾದಕಮಲದಲ್ಲಿ ಮನಃ-(ತನ್ನ) ಮನಸ್ಸನ್ನು, ನಿಬಧ್ನೀತ-ಬಂಧನಮಾಡಬೇಕು (ಬಿಗಿದು ನಿಲ್ಲಿಸಬೇಕು); ಅಥ-ನಂತರ (ಹಾಗೆ ಮನಸ್ಸನ್ನು ಶ್ರೀವಿಷ್ಣುಪಾದದಲ್ಲಿ ಬಂಧಿಸುವುದರಿಂದ),

---

ಸ್ಥಾಪಿಸುತ್ತ ಹೋಗಬೇಕು— ಶ್ರೀಹರಿಯ ಪಾದಕಮಲದಲ್ಲಿ ಮನಸ್ಸನ್ನು ಬಂಧಿಸಬೇಕು; ಈ ಪ್ರಯತ್ನದಲ್ಲಿ ಮುಂದರಿದಂತೆ(ವಿಷ್ಣುಪಾದಧ್ಯಾನವು ಸ್ಥಿರವಾಗುತ್ತ ಸಾಗಿದಂತೆ) ಕ್ರಮೇಣ ತನ್ನ ಪೂರ್ಣಾನಂದದ ಅನುಭವವನ್ನೂ ಪಡೆಯುತ್ತಾನೆ; ಹೀಗೆ ವೈರಾಗ್ಯ, ಧ್ಯಾನ (ಅಥವಾ ಸಂತತ ಹರಿಸ್ಮರಣ) ಮತ್ತು ಆನಂದಾನುಭವಗಳೆಂಬ ಈ ಮೂರೂ (ಒಂದಕ್ಕೊಂದು ಪೂರಕವಾಗಿದ್ದು), ಏಕಕಾಲದಲ್ಲಿ ವೃದ್ಧಿಯಾಗುತ್ತ ಹೋಗುತ್ತವೆ; ಹಸಿದು ಭೋಜನ ಮಾಡುವ ಪುರುಷನಿಗೆ ಒಂದೊಂದು ತುತ್ತು ಅನ್ನವನ್ನು (ಆಹಾರವನ್ನು) ನುಂಗುವುದರಿಂದ, ಪುಷ್ಟಿ (ದೇಹಶಕ್ತಿ) ತುಷ್ಟಿ(ತೃಪ್ತಿಯೆಂಬ ಮನೋಭಾವ) ಮತ್ತು ಕ್ಷುಧೆಯ ನಾಶ (ಹಸಿವೆ ಕಡಿಮೆಯಾಗುವುದು), ಎಂಬ ಮೂರೂ ಫಲಗಳು ಅನುಭವಕ್ಕೆ ಬರುವಂತೆ, ವೈರಾಗ್ಯಾದಿ ಮೂರೂ ಬೆಳೆಯುತ್ತ ಹೋಗುತ್ತವೆಂದು ತಿಳಿಯಬೇಕು (೫೧-೫೩). ನಿತ್ಯ (ಸಂಧ್ಯಾದಿ), ನೈಮಿತ್ತಿಕ (ಶ್ರಾದ್ಧಾದಿ) ಕರ್ಮಗಳನ್ನು ತಪ್ಪದೇ ಆಚರಿಸಿ,

ನಿಜಾನಂದಸಂದೋಹಾನುಭವಂ-ಸ್ವರೂಪಯೋಗ್ಯತಾನುಗುಣವಾದ ಆನಂದಪೂರ್ತಿಯನ್ನು (ಪೂರ್ಣಾನಂದವನ್ನು), ಲಭೇತ-ಹೊಂದುತ್ತಾನೆ; ಯಥಾ- ಹೇಗೆ, ಗ್ರಾಸೇ ಗ್ರಾಸೇ-ಪ್ರತಿ ತುತ್ತಿನಲ್ಲಿ ಕಾಲೇ ಕಾಲೇ-ಆಯಾ (ತುತ್ತಿನ) ಕಾಲದಲ್ಲಿ (ಪ್ರತಿ ತುತ್ತಿನಿಂದ-ಅಷ್ಟು ಆಹಾರವನ್ನು ನುಂಗುವದರಿಂದ), ಭುಂಜಾನಸ್ಯ-ಭೋಜನಮಾಡುವವನಿಗೆ (ಉಣ್ಣುವವನಿಗೆ), ಪುಷ್ಟಿಃ-(ದೇಹ)ಪುಷ್ಟಿಯೂ, ತುಷ್ಟಿಃ-ತೃಪ್ತಿಯೂ, ಅಪಿ ಚ-ಮತ್ತೂ ಕೂಡ, ಕ್ಷುಧಃ-ಹಸಿವೆಯ, ನಾಶಃ-ನಾಶವೂ, ಏತತ್ ತ್ರಯಂ-ಈ ಮೂರೂ (ಏಕಕಾಲದಲ್ಲಿ-ಒಂದೊಂದು ತುತ್ತಿನಿಂದಲೂ), ಇಹ-ಇಲ್ಲಿ (ಈ ದೇಹದಲ್ಲಿ) ಅನುಭವಸಿದ್ಧವಾಗಿರುವಂತೆ), ಭವೇತ್-ಉಂಟಾಗುವದೋ, ತಥಾ-ಹಾಗೆಯೇ, ಏತತ್ ತ್ರಯಂ-ವೈರಾಗ್ಯ, ಧ್ಯಾನ, ಆನಂದಗಳೆಂಬ ಮೂರೂ-ಉಂಟಾಗುತ್ತವೆ; ದೊರೆಯುತ್ತವೆ.

**ನಿತ್ಯಂ ನೈಮಿತ್ತಿಕಂ ಕರ್ಮ ಕೃತ್ವಾ ವಿಷ್ಣೌ ಸಮರ್ಪಯೇತ್ ।**
**ನೈವ ತದ್ಬೀಜತಾಂ ಯಾತಿ ಭ್ರಾಷ್ಟ್ರಕ್ವಥಿತಧಾನ್ಯವತ್ ॥ ೫೪ ॥**

ನಿತ್ಯಂ-ನಿತ್ಯವೂ (ಪ್ರತಿನಿತ್ಯ ತಪ್ಪದೇ ಆಚರಿಸಬೇಕಾದ), ನೈಮಿತ್ತಿಕಂ-ನೈಮಿತ್ತಿಕವೂ (ಪಿತೃಶ್ರಾದ್ಧಾದಿಗಳಂತೆ) ನಿಮಿತ್ತಾಂತರಗಳಿಂದ ಆಚರಿಸಲ್ಪಡಬೇಕಾದುದೂ), ಕರ್ಮ-(ಆದ) ಕರ್ಮವನ್ನು ಕೃತ್ವಾ-(ತಪ್ಪದೇ) ಮಾಡಿ, ವಿಷ್ಣೌ-ಶ್ರೀವಿಷ್ಣುವಿನಲ್ಲಿ ಸಮರ್ಪಯೇತ್-ಸಮರ್ಪಿಸಬೇಕು; ತತ್-ಅದು (ಹೀಗೆ ಅರ್ಪಿತವಾದುದು), ಭ್ರಾಷ್ಟ್ರಕ್ವಥಿತಧಾನ್ಯವತ್-ಬಾಂಡ್ಲೆಯಲ್ಲಿ ಹುರಿದ ಬೀಜಗಳಂತೆ (ಬೇಯಿಸಿದ ಧಾನ್ಯದ ಕಾಳುಗಳಂತೆ), ಬೀಜತಾಂ-ಬೀಜತ್ವವನ್ನು (ಬೀಜಕ್ಕಾಗಿ ಉಪಯೋಗಿಸಲ್ಪಡುವ ಅರ್ಹತೆಯನ್ನು), ನೈವ ಯಾತಿ-ಸರ್ವಥಾ ಹೊಂದುವದಿಲ್ಲ (ಆ ಬೀಜವು ಬಿತ್ತಿದರೆ ಅಂಕುರಿಸುವದೇ ಇಲ್ಲ).

**ಕಾಮ್ಯಕರ್ಮವಿಕರ್ಮಭ್ಯಾಂ ಮುಕ್ತಚೇತಾಃ ಶನೈಃಶನೈಃ ।**
**ಹರಿಧ್ಯಾನಾಗ್ನಿನಾ ಧ್ಯಾನಾತ್ ಕ್ರಮಾಚ್ಛುದ್ಧಮನಾ ಅಪಿ ॥ ೫೫ ॥**

---

ತನ್ನ ಸರ್ವಕರ್ಮಗಳನ್ನೂ ಶ್ರೀವಿಷ್ಣುವಿನಲ್ಲಿ ಸಮರ್ಪಿಸಬೇಕು; ಹೀಗೆ ಅರ್ಪಿತವಾದ ಕರ್ಮವು ಹುರಿದ (ಬೇಯಿಸಿದ) ಬೀಜದಂತೆ, ನಿರ್ವೀರ್ಯವಾಗುತ್ತದೆ; ಪುನಃ ಅಂಕುರಿಸುವುದಿಲ್ಲ (ಕರ್ಮವು ಮತ್ತೊಂದು ಕರ್ಮಕ್ಕೂ ಅದು ಇನ್ನೊಂದು ಕರ್ಮಕ್ಕೂ ಕಾರಣವಾಗಿ ಜೀವನು ಕರ್ಮಪರಂಪರೆಯಲ್ಲಿ ಸಿಕ್ಕು ಸುತ್ತುತ್ತಾನೆ. ಅದರಿಂದ ತಪ್ಪಿಸಿಕೊಳ್ಳಲು, ಕರ್ಮವೆಂಬ ಬೀಜವು ಪುನಃ ಅಂಕುರಿಸದಂತೆ ಮಾಡಲು, ಶ್ರೀವಿಷ್ಣುವಿನಲ್ಲಿ ಅರ್ಪಿಸುವುದೇ ಉಪಾಯವಾಗಿದೆ (೫೪). ಹೀಗೆ ಕರ್ಮಗಳನ್ನು ಶ್ರೀವಿಷ್ಣುವಿನಲ್ಲಿ ಸಮರ್ಪಿಸುವ ಜೀವನು, ಕ್ರಮವಾಗಿ (ಯತ್ನಪೂರ್ವಕ)

ಹರಿಧ್ಯಾನಾಗ್ನಿನಾ-ಶ್ರೀಹರಿಯ ಧ್ಯಾನವೆಂಬ ಅಗ್ನಿಯಿಂದ, ಶನೈಃಶನೈಃ-ಮೆಲ್ಲ ಮೆಲ್ಲನೆ (ಕ್ರಮವಾಗಿ), ಕಾಮ್ಯಕರ್ಮವಿಕರ್ಮಭ್ಯಾಂ-ಕಾಮ್ಯಕರ್ಮ(ಫಲಾಶೆಯಿಂದ ಮಾಡುವ ಕರ್ಮ), ವಿಕರ್ಮ-(ವಿರುದ್ಧ-ವಿಹಿತವಲ್ಲದ-ನಿಷಿದ್ಧವಾದ ಕರ್ಮ)ಗಳಿಂದ, ಮುಕ್ತಚೇತಾಃ-ಬಿಡಲ್ಪಟ್ಟ ಮನಸ್ಸುಳ್ಳವನಾಗಿ, ಧ್ಯಾನಾತ್-ಶ್ರೀಹರಿಧ್ಯಾನದಿಂದ, ಕ್ರಮಾತ್-ಕ್ರಮವಾಗಿ, ಶುದ್ಧಮನಾಃ ಅಪಿ-ಪರಿಶುದ್ಧಾಂತಃಕರಣನೂ (ಭವತಿ-ಆಗುತ್ತಾನೆ).

**ಜಾತಾಪರೋಕ್ಷಧೀರ್ವಿಷ್ಣೋಃ ಪರಮಂ ಸಾಮ್ಯಮೇತ್ಯಥ ।**
**ಮುಕ್ತಸಂಸಾರಬಂಧೋಽಸೌ ಬದ್ಧಾನನ್ಯಾನ್ ಪ್ರಪಶ್ಯತಿ ॥ ೫೬ ॥**

(ಧ್ಯಾನಾತ್-ಹಿಂದಿನ ಶ್ಲೋಕದಿಂದ ಆವರ್ತನೆ-ಶುದ್ಧಮನಸ್ಸಿನಿಂದ ಧ್ಯಾನಿಸುವುದರಿಂದ), ಅಥ-ನಂತರ (ಧ್ಯಾನವು ಸಿದ್ಧಿಸಿದ ನಂತರ—ಸಮಾಧಿಸ್ಥನಾದಾಗ), ವಿಷ್ಣೋಃ-ಶ್ರೀವಿಷ್ಣುವಿನ, ಜಾತಾಪರೋಕ್ಷಧೀಃ-ಸಾಕ್ಷಾದ್ದರ್ಶನವುಳ್ಳ ಮನಸ್ಸುಳ್ಳವನಾಗಿ (ಶ್ರೀಹರಿಯ ಪ್ರತ್ಯಕ್ಷದರ್ಶನದಿಂದ) ವಿಷ್ಣೋಃ-(ಆವರ್ತನೆಯಿಂದ) ಶ್ರೀವಿಷ್ಣುವಿನ, ಪರಮಂ-ಉತ್ತಮವಾದ, ಸಾಮ್ಯಂ-ಸಾಮ್ಯವನ್ನು, ಏತಿ-ಹೊಂದುತ್ತಾನೆ (ಮುಕ್ತನಾಗುತ್ತಾನೆ); ಅಸೌ-ಈ, ಮುಕ್ತಸಂಸಾರಬಂಧಃ-ಸಂಸಾರಬಂಧವಿಲ್ಲದ ಮುಕ್ತಜೀವನು, ಬದ್ಧಾನ್-ಸಂಸಾರಬದ್ಧರಾದ, ಅನ್ಯಾನ್-ಇತರರನ್ನು (ಅನ್ಯಜೀವರನ್ನು), ಪ್ರಪಶ್ಯತಿ-ನೋಡುತ್ತಾನೆ.

---

ಕಾಮ್ಯಕರ್ಮಗಳನ್ನೂ ವಿಕರ್ಮ(ವಿರುದ್ಧ- ನಿಷಿದ್ಧಕರ್ಮ)ಗಳನ್ನೂ ತ್ಯಜಿಸುತ್ತ ಹೋಗಿ, ಹರಿಧ್ಯಾನವೆಂಬ(ಸಂತತ ಸ್ಮರಣರೂಪದ) ಅಗ್ನಿಯಿಂದ, ಈ ವಿಧ ಕರ್ಮಗಳ ಆಲೋಚನೆ ಸಹ ಬಾರದಂತೆ ಮನಸ್ಸನ್ನು ಶುದ್ಧಗೊಳಿಸಿಕೊಳ್ಳುತ್ತಾನೆ; ಅದರಿಂದ ಶ್ರೀಹರಿಯ ಪ್ರತ್ಯಕ್ಷದರ್ಶನಕ್ಕೆ ಅವಶ್ಯವಾದ ನಿರಂತರ ಧ್ಯಾನಕ್ಕೆ ಅರ್ಹನಾಗುತ್ತಾನೆ (೫೫). ಧ್ಯಾನಸಿದ್ಧವಾದಾಗ, ಸಮಾಧಿಸ್ಥನಾಗಿ, ಶ್ರೀಹರಿಯ ಪ್ರತ್ಯಕ್ಷದರ್ಶನವನ್ನು ಹೊಂದುತ್ತಾನೆ; (ಅಥ) ಪ್ರಾರಬ್ಧಭೋಗಾನಂತರ, ಮುಕ್ತನಾಗುತ್ತಾನೆ—ಶ್ರೀಹರಿಯು ಸಾಮ್ಯವನ್ನು ಹೊಂದುತ್ತಾನೆ[1] ಹೀಗೆ ಮುಕ್ತನಾದ ಜೀವನು, ಸಂಸಾರದಲ್ಲಿ ಬದ್ಧರಾಗಿರುವ ಅನ್ಯರನ್ನು ನೋಡುತ್ತಾನೆ[2] (೫೬). ಅನಿತ್ಯವಾದ ದೇಹಾದಿಗಳಲ್ಲಿಯೇ ಬದ್ಧವಾದ ಮನಸ್ಸುಳ್ಳವನಿಗೂ, ವಿಷಯ ಭೋಗಾಸಕ್ತನಾದವನಿಗೂ (ಅಥವಾ ದೇಹವೇ ತಾನೆಂದೂ

---

1. '...ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।' ಎಂದು (ಗೀತೆಯಲ್ಲಿ) ಹೇಳಿದಂತೆ, ಮುಕ್ತನಿಗೆ, ಸೃಷ್ಟಿಕಾಲದಲ್ಲಿ ಪುನಃ ಹುಟ್ಟದಿರುವುದು, ಪ್ರಲಯದಲ್ಲಿ ನಷ್ಟವಾಗದಿರುವುದೆಂಬ ಅಂಶಗಳಲ್ಲಿ ಮಾತ್ರ ಶ್ರೀಹರಿಸಾಮ್ಯವನ್ನು ತಿಳಿಯಬೇಕು.

2. ಮುಕ್ತರು ಅನ್ಯರನ್ನು ನೋಡುವರೆಂಬುದರಿಂದ ಅಮುಕ್ತಜೀವರಿಂದ ತುಂಬಿದ ಜಗತ್ತು (ಸಂಸಾರವು) ಸತ್ಯವೆಂದೇ ಸಿದ್ಧವಾಗುತ್ತದೆ.

**ಅನಿತ್ಯೇ ಬದ್ಧಚಿತ್ತಸ್ಯ ನಿತ್ಯಂ ಸಕ್ತವತಃ ಸ್ವಯಂ ।**
**ಯುಕ್ತಏವೋಭಯಭ್ರಂಶೋ ಅಧಃಪಾತಃ ಫಲಂ ಸ್ಫುಟಂ ॥ ೫೭ ॥**

ಅನಿತ್ಯೇ-ಅನಿತ್ಯವಾದ ದೇಹಾದಿಗಳಲ್ಲಿ, ಬದ್ಧಚಿತ್ತಸ್ಯ-ಆಸಕ್ತವಾದ ಮನಸ್ಸುಳ್ಳವನಿಗೂ, ಸ್ವಯಂ-ಸಾಕ್ಷಾತ್ತಾಗಿ(ಸ್ವೇಚ್ಛೆಯಿಂದಲೇ), ನಿತ್ಯಂ-ಸದಾ, ಸಕ್ತವತಃ-(ದೇಹ ಸಂಬಂಧವಾದ ವಸ್ತುಗಳಲ್ಲಿ) ವಿಷಯಭೋಗಗಳಲ್ಲಿ ಆಸಕ್ತನಾದವನಿಗೂ, ಉಭಯಭ್ರಂಶಃ-ಇಹಪರಗಳೆಂಬ ಎರಡರಿಂದ ಭ್ರಷ್ಟನಾಗುವಿಕೆಯು, ಯುಕ್ತ ಏವ- ಯುಕ್ತವೇ (ಯೋಗ್ಯವಾದುದೇ) ಸರಿ; ಅಧಃಪಾತಃ-ಅಧೋಗತಿಯು (ನರಕದಲ್ಲಿ ಬೀಳುವುದು), ಸ್ಫುಟಂ ಫಲಂ-ಸುಸ್ಪಷ್ಟವಾಗಿ ದೊರೆಯುವ ಫಲವು.

**ಬಂಧಾಯ ವಿಷಯಾಸಕ್ತಿರ್ದುಃಖಾಯಾಪಿ ಹಿ ಸಾ ಭವೇತ್ ।**
**ತಸ್ಮಾದಸಕ್ತೋ ದೇಹಾದೌ ಯದೃಚ್ಛಾಲಾಭತುಷ್ಟಧೀಃ ॥ ೫೮ ॥**

ತಾನೇ ಸ್ವತಂತ್ರಕರ್ತನೆಂದೂ ತಿಳಿದು, ಪತ್ನೀ ಪುತ್ರಾದಿಗಳು ತನ್ನ ವಶವೆಂದು ಭ್ರಮಿಸಿರುವ, ಅಹಂ-ಮಮಕಾರಗಳುಳ್ಳ ಜೀವನಿಗೆ ಇಹಪರಗಳಲ್ಲಿ ಸುಖವಿಲ್ಲ—ದೊರೆಯುವ ಆತ್ಯಂತಿಕ ಫಲವಾದರೋ, ನಿತ್ಯದುಃಖಾನುಭವದ ಅಧೋಗತಿಯೇ ಸರಿ (ನಿಶ್ಚಯವು) (೫೭). ವಿಷಯ ಭೋಗಾಸಕ್ತಿಯು ಸಂಸಾರಬಂಧನಕ್ಕೆ (ನಾನಾ ಯೋನಿಗಳಲ್ಲಿ ಸುತ್ತುವುದಕ್ಕೆ) ಮಾತ್ರ ಕಾರಣವಾಗುವುದಿಲ್ಲ—ಅದು ದುಃಖಪ್ರದವೂ ಆಗುತ್ತದೆ;[1] ಆದ್ದರಿಂದ ದೇಹಾದಿಗಳಲ್ಲಿ ಅಹಂ-ಮಮಕಾರಗಳೆಂಬ ಅಭಿಮಾನವನ್ನು ತ್ಯಜಿಸಬೇಕು; ಶ್ರೀಹರೀಚ್ಛೆಯಿಂದ, ತನ್ನ ಪೂರ್ವಕರ್ಮಾನುಸಾರವಾಗಿ, (ಕೃಪಾಸಮುದ್ರನಾದ ಆತನ ಇಚ್ಛೆಯಂತೆ) ಪ್ರಾಪ್ತವಾಗುವ ಸುಖಾದಿ ನಾನಾ ಅನುಭವಗಳಿಂದ ಸಂತುಷ್ಟನಾಗಿರಬೇಕು; ಸುಖದುಃಖಾದಿ ಭೋಗಗಳು ಶ್ರೀವಿಷ್ಣುವಿನ ಸ್ವತಂತ್ರವಾದ ಇಚ್ಛಾಧೀನಗಳೆಂದು ಸದಾ ತಿಳಿದು, ಸುಖವಾದಾಗ ಹಿಗ್ಗ (ಹರ್ಷಿಸ) ಕೂಡದು; ದುಃಖವಾದಾಗ ಅತೃಪ್ತನಾಗಿ ಕುಗ್ಗಬಾರದು—ಮತ್ತೇನೆಂದರೆ, ದುಃಖದ

1. ವಿಷಯಭೋಗಗಳಿಂದ ಲಭಿಸುವ ಸುಖವು, ಅಲ್ಪ ಮತ್ತು ಕ್ಷಣಿಕವೆಂದು ಮಾತ್ರವಲ್ಲ—ಪರಿಣಾಮದಲ್ಲಿ ದುಃಖದಾಯಕವೂ ಆದುದು. 'ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ। ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ॥ (ಗೀತೆ) ಮತ್ತು 'ವಿಷಯೇಂದ್ರಿಯ ಸಂಯೋಗಾತ್ ಯತ್ತದಗ್ರೇಽಮೃತೋಪಮಂ । ಪರಿಣಾಮೇ ವಿಷಮಿವ...' (ಗೀತೆ), ಈ ವಾಕ್ಯಗಳಿಂದ, ವಿಷಯಸುಖವು ದುಃಖವೇ ಅಂತ್ಯದಲ್ಲಿ ಉಳ್ಳದ್ದೆಂದು (ದುಃಖಶಿರಸ್ಕವೆಂದು) ಶ್ರೀಕೃಷ್ಣನು ಸ್ಪಷ್ಟವಾಗಿ ಉಪದೇಶಿಸಿರುವನು. ಆದ್ದರಿಂದ, ವಿಷಯ ಭೋಗದಿಂದ ಸುಖವೆಂದೂ, ದುಃಖಕ್ಕೆ ಅನ್ಯಕಾರಣವಿರುವುವೆಂದೂ ತಿಳಿಯುವುದು, ಭ್ರಮೆಯು—ವಿಷಯಭೋಗವೇ ದುಃಖಕ್ಕೂ ಕಾರಣವು; ಸಾಕ್ಷಾತ್ತಾಗಿಯೂ ಅದೃಷ್ಟನಿರ್ಮಾಣ ದ್ವಾರೇಣ ಸಹ ಕಾರಣವೆಂದು ತಿಳಿಯಬೇಕು.

**ಪೂರ್ವಕರ್ಮಾರ್ಜಿತಾನ್ ಭೋಗಾನ್ ಭುಂಜಾನಶ್ಚ ಕ್ಷಣೇ ಕ್ಷಣೇ ।**
**ವಿಷ್ಣುಮಾಯಾಮಿದಂ ಪಶ್ಯನ್ನ ಹೃಷ್ಯತಿ ನ ತುಷ್ಯತಿ ॥ ೫೯ ॥**

ವಿಷಯಾಸಕ್ತಿಃ-ವಿಷಯಭೋಗಲಾಲಸೆಯು, ಬಂಧಾಯ-ಬಂಧನಕ್ಕಾಗಿ (ಸಂಸಾರಬಂಧವೆಂಬ ಫಲವುಳ್ಳದ್ದು), ಭವೇತ್-ಆಗುತ್ತದೆ; ಸಾ-ಅದು (ವಿಷಯಾಸಕ್ತಿಯು), ದುಃಖಾಯ ಅಪಿ-ದುಃಖಕ್ಕೂ, (ಭವೇತ್-ಕಾರಣವಾಗುತ್ತದೆ); ತಸ್ಮಾತ್-ಈ ಕಾರಣದಿಂದ, ದೇಹಾದೌ-ದೇಹಾದಿಗಳಲ್ಲಿ ಅಸಕ್ತಿಃ-ಅಭಿಮಾನವನ್ನು ತ್ಯಜಿಸಿ, ಯದೃಚ್ಛಾಲಾಭಸಂತುಷ್ಟಧೀಃ-ಶ್ರೀಹರೀಚ್ಛೆಯಿಂದ ಪ್ರಾಪ್ತವಾದ ವಸ್ತುಗಳಿಂದ ತೃಪ್ತವಾದ ಮನಸ್ಸುಳ್ಳವನಾಗಿ, ಪೂರ್ವಕರ್ಮಾರ್ಜಿತಾನ್-ಪೂರ್ವಕರ್ಮಗಳಿಂದ ಸಂಪಾದಿತವಾದ, ಭೋಗಾನ್-ಭೋಗಗಳನ್ನು (ಸುಖದುಃಖಾದಿಗಳನ್ನು), ಭುಂಜಾನಃ-ಭೋಗಿಸುತ್ತ, ಕ್ಷಣೇ ಕ್ಷಣೇ-ಪ್ರತಿಕ್ಷಣದಲ್ಲಿಯೂ (ಸದಾ), ಇದಂ-ಈ ಸಂಸಾರವನ್ನು, ವಿಷ್ಣುಮಾಯಾಂ-(ಸ್ವಕರ್ಮಾನುಸಾರವಾಗಿ) ಶ್ರೀವಿಷ್ಣುವಿನ ಇಚ್ಛೆಯಿಂದ ಪ್ರಾಪ್ತವಾದುದನ್ನಾಗಿ, ಪಶ್ಯನ್-ತಿಳಿದವನು, ನ ಹೃಷ್ಯತಿ-(ಸುಖಾನುಭವದಿಂದ) ಹರ್ಷಪಡುವುದಿಲ್ಲ ನ ತುಷ್ಯತಿ-(ದುಃಖಾನುಭವದಿಂದ) ತೃಪ್ತನೂ ಆಗುವುದಿಲ್ಲ (ದುಃಖಪರಿಹಾರಕ್ಕಾಗಿ ವಿಷ್ಣುಪ್ರಸನ್ನತೆಯನ್ನು ಪಡೆಯಲು ಸತತವಾಗಿ ಯತ್ನಿಸುತ್ತಾನೆ); (ಶುಷ್ಯತಿ ಎಂಬ ಬೇರೆ ಪಾಠದಂತೆ, ದುಃಖಿಸುವುದಿಲ್ಲ).

**ಕಾರ್ಯಾಕಾರ್ಯವಿಧಿಂ ಸಮ್ಯಕ್ ಶಾಸ್ತ್ರದೃಷ್ಟ್ಯಾ ಕರೋತಿ ಚ ।**
**ಸ್ವತಂತ್ರತಾಂ ಹರೇಃ ಪಶ್ಯನ್ ಸರ್ವಸ್ಯ ತದಧೀನತಾಂ ॥ ೬೦ ॥**

---

ಆತ್ಯಂತಿಕ ನಿವೃತ್ತಿಗಾಗಿ ಅವಶ್ಯಕವಾದ ವಿಷ್ಣುಪ್ರಸನ್ನತೆಯನ್ನು ಪಡೆಯಲು ಯತ್ನಿಸಬೇಕು (೫೮-೫೯). ಮುಮುಕ್ಷುವಾದ ಜೀವನು, ಕಾರ್ಯಾಕಾರ್ಯ ವಿಧಿಯನ್ನು[1] ತಿಳಿದು ಆಪ್ರಕಾರದ ಶುದ್ಧವಾದ ಆಚರಣೆಯುಳ್ಳವನಾಗಿರುತ್ತಾನೆ; ಆತನು ಶ್ರೀಹರಿಯು ಸ್ವತಂತ್ರನೆಂದೂ, ಇತರ ಸರ್ವಜಗತ್ತೂ ಆತನ ಅಧೀನವೆಂದೂ, ತಿಳಿದು, ಶ್ರೀಹರಿಯು ಸರ್ವತ್ರ ಸ್ಥಿತನಾಗಿದ್ದು ಸರ್ವನಿಯಾಮಕನೆಂಬ ಜ್ಞಾನವುಳ್ಳವನಾಗಿರುತ್ತಾನೆ; ಈ ಜ್ಞಾನದ ಫಲವಾಗಿ ವಿಷಯಾಸಕ್ತನಾಗಿ ಮೋಹಗೊಳ್ಳುವುದಿಲ್ಲ ಯೋಗ್ಯಕಾಲದಲ್ಲಿ ಯೋಗ್ಯವಾದ ಸ್ತ್ರ್ಯಾದಿ ವಿಷಯಗಳನ್ನೂ ಭೋಗಿಸುತ್ತಾನೆ— ತನ್ನ ಭಾರ್ಯಳಲ್ಲಿ ಅನಿಷಿದ್ಧ ಕಾಲಗಳಲ್ಲಿ

---

1. 'ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ' ಎಂಬ (ಗೀತೆಯಲ್ಲಿ) ಶ್ರೀಕೃಷ್ಣನ ಉಪದೇಶವೇ ಇದು; 'ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ ।' ಎಂದೂ-ಕಾರ್ಯವಾವುದು, ಅಕಾರ್ಯವಾವುದು (ಯಾವುದನ್ನು ಮಾಡಬೇಕು ಯಾವುದನ್ನು ಬಿಡಬೇಕು) ಎಂಬುದನ್ನು ನಿಶ್ಚಯಿಸಲು ನಿನಗೆ, ಶಾಸ್ತ್ರವೇ ಪ್ರಮಾಣವೆಂದೂ (ಸ್ವಬುದ್ಧಿಯಿಂದ ನಿರ್ಣಯಿಸಿಕೊಳ್ಳಕೂಡದೆಂದೂ) ಅಲ್ಲಿಯೇ ಅರ್ಜುನನನ್ನು ಎಚ್ಚರಿಸಿದ್ದಾನೆ.

**ತದ್ವ್ಯಾಪ್ತಿಮಪಿ ಸರ್ವತ್ರ ಪಶ್ಯನ್ನೈವ ವಿಮುಹ್ಯತಿ ।**
**ತದಾಜ್ಞೈವೇತಿ ವಿಜ್ಞಾಯ ಕಾಲೇ ಯಾಯಾತ್ ಸ್ವಯೋಷಿತಂ ॥ ೬೧ ॥**

**ತಸ್ಯೈವ ಪೋಷ್ಯಾ ದೇಹಾದ್ಯಾಃ ಮತ್ವೇತ್ಥಂ ಪೋಷಯೇಚ್ಚ ತಾನ್ ।**
**ಲಿಪ್ಯತೇ ನ ಚ ಪಾಪೇನ ಪದ್ಮಪತ್ರಮಿವಾಂಭಸಾ ॥ ೬೨ ॥**

ಈ ಯತ್ನದ ಪ್ರಕಾರವನ್ನು ನಿರೂಪಿಸುತ್ತಾರೆ:—

(ಮುಮುಕ್ಷುವು), ಶಾಸ್ತ್ರದೃಷ್ಟ್ಯಾ-ಶಾಸ್ತ್ರಗಳ ಪ್ರಕಾರ, ಕಾರ್ಯಾಕಾರ್ಯ ವಿಧಿಂ-ಕಾರ್ಯ, ಅಕಾರ್ಯಗಳ ವಿಧಾನವನ್ನು (ತಿಳಿದು), ಸಮ್ಯಕ್-ಆ ಪ್ರಕಾರ (ಚನ್ನಾಗಿ-ಶುದ್ಧವಾಗಿ), ಕರೋತಿ-ಆಚರಿಸುತ್ತಾನೆ; ಚ-ಮತ್ತು ಹರೇಃ-ಶ್ರೀಹರಿಗೆ, ಸ್ವತಂತ್ರತಾಂ-ಸ್ವತಂತ್ರತ್ವವನ್ನೂ, ಸರ್ವಸ್ಯ-(ಆತನಿಂದ ಭಿನ್ನವಾದ) ಎಲ್ಲಕ್ಕೂ, (ಸಕಲ ಜಗತ್ತಿಗೆ). ತದಧೀನತಾಂ-ಶ್ರೀಹರಿಯ ಅಧೀನತ್ವವನ್ನೂ, ಪಶ್ಯನ್-ತಿಳಿಯುವವನಾಗಿ, ಅಪಿ-ಮತ್ತು, ಸರ್ವತ್ರ-ಎಲ್ಲೆಲ್ಲಿಯೂ, ತದ್ವ್ಯಾಪ್ತಿಂ-ಶ್ರೀಹರಿಯ ವ್ಯಾಪ್ತಿಯನ್ನು ಪಶ್ಯನ್-ತಿಳಿಯುವವನಾಗಿ, ನ ಮುಹ್ಯತಿ ಏವ-ಮೋಹಗೊಳ್ಳುವುದೇ ಇಲ್ಲ (ಬಂಧಕವಾದ ಅಭಿಮಾನಕ್ಕೆ ಒಳಗಾಗುವದಿಲ್ಲ); ತದಾಜ್ಞಾ ಏವ-ಶ್ರೀಹರಿಯ ಆಜ್ಞೆಯೇ, ಇತಿ-ಎಂದು, ವಿಜ್ಞಾಯ-ತಿಳಿದು, ಸ್ವಯೋಷಿತಂ-ತನ್ನ ಸ್ತ್ರೀಯನ್ನು (ಭಾರ್ಯಳನ್ನು), ಕಾಲೇ-ಯೋಗ್ಯಕಾಲದಲ್ಲಿ ಯಾಯಾತ್-ಹೊಂದಬೇಕು (ಭೋಗಿಸಬೇಕು); ಪೋಷ್ಯಾಂ-(ತನ್ನಿಂದ) ಪೋಷಿಸಲ್ಪಡಬೇಕಾದ, ದೇಹಾದ್ಯಾಃ-ದೇಹಾದಿಗಳು, ತಸ್ಯ ಏವ-ಆ ಶ್ರೀಹರಿಗೆ ಸೇರಿದವುಗಳೇ (ಆತನವೇ), ಇತ್ಥಂ-ಹೀಗೆಂದು, ಮತ್ವಾ-ತಿಳಿದು, ತಾನ್-ಅವುಗಳನ್ನು (ದೇಹ, ಸತೀ, ಸುತ, ಪಶು ಭೃತ್ಯಾದಿಗಳನ್ನು), ಪೋಷಯೇತ್-ರಕ್ಷಿಸತಕ್ಕದ್ದು; ಅಂಭಸಾ-ನೀರಿನಿಂದ, ಪದ್ಮಪತ್ರಂ ಇವ-ಕಮಲಪತ್ರದಂತೆ, ಪಾಪೇನ-(ಹೀಗೆ ಮಾಡಿದರೆ) ಯಾವ ಪಾಪದಿಂದಲೂ, ನ ಲಿಪ್ಯತೇ ಚ-ಲೇಪಿಸಲ್ಪಡುವದೇ ಇಲ್ಲ

---

ಶ್ರೀಹರಿಯ ಆಜ್ಞೆಯೆಂದೇ ಭಾವಿಸಿ, ರಮಿಸುತ್ತಾನೆ; ತನ್ನ ದೇಹವೇ ಮೊದಲಾದ, ಸಮಸ್ತ ವಸ್ತುಗಳೂ ಪೂರ್ಣವಾಗಿ, ಶ್ರೀಹರಿಯ ಸ್ವಾಮ್ಯಕ್ಕೆ ಒಳಪಟ್ಟವುಗಳೆಂದು ತಿಳಿದು, ಅವುಗಳ ಪೋಷಣೆಯನ್ನು ಶ್ರೀಹರಿಯ ಆಜ್ಞೆಯೆಂದೇ ಮಾಡುತ್ತಾನೆ (ಮೋಕ್ಷಾಪೇಕ್ಷಿಯಾದವನು, ಈ ವಿಧವಾದ ಆಚರಣೆ ಮತ್ತು ಅನುಸಂಧಾನಗಳುಳ್ಳವನಾಗಿರಬೇಕು); ಇದರಿಂದ, ಯಾವ ಪಾಪವೂ ಆತನನ್ನು ಸ್ಪರ್ಶಿಸುವುದಿಲ್ಲ—ಜಲವು ಕಮಲಪತ್ರಕ್ಕೆ ಅಂಟದಂತೆ ನಿರ್ಲಿಪ್ತನಾಗಿರುತ್ತಾನೆ; ಪಾಪಲೇಪವಿಲ್ಲದ್ದರಿಂದ, ಆತನಿಗೆ ದುಃಖವಿಲ್ಲ; ಎಲ್ಲ ದುಃಖಗಳೂ ಪಾಪವೇ ಮೂಲವಾಗಿ ಉಳ್ಳವುಗಳು. ಈ ವಿಧ ಜೀವನದಿಂದ ಆತ್ಯಂತಿಕ ದುಃಖನಿವೃತ್ತಿಯನ್ನು ಸಾಧಿಸುವುದು ಶಕ್ಯವಾಗುತ್ತದೆ (೬೦-೬೨). ಶ್ರೀಹರಿಯ ಸರ್ವಸ್ವಾಮಿತ್ವ, ಸರ್ವತ್ರವ್ಯಾಪ್ತಿತ್ವಾದಿ ಜ್ಞಾನವುಳ್ಳವನು, ಕಮಲಪತ್ರದಂತೆ ನಿರ್ಲಿಪ್ತ

(ಇದರಿಂದ ಪಾಪಲೇಪಾಭಾವದಿಂದ, ಪಾಪವೇ ಮೂಲಕಾರಣವಾಗಿ ಉಳ್ಳ ಸರ್ವದುಃಖಗಳ ನಿವೃತ್ತಿಯಾಗುತ್ತದೆ.

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।**
**ವಿದೇಹೋ ಜನಕಃ ಪೂರ್ವಂ ಶುಕಾತ್ ಶೃಣ್ವನ್ ಹರೇಃ ಕಥಾಃ ॥ ೬೩ ॥**

**ಸಕ್ತಚೇತಾ ನ ಚಾಜ್ಞಾಸೀತ್ಸ್ವಾನ್ನಪಾನಾದಿ ಕಂಚನ ।**
**ತಾದೃಶಂ ತನ್ಮನೋ ಜ್ಞಾತ್ವಾ ತಮೇವೇಕ್ಷ್ಯ ಜಗೌ ಕಥಾಂ ॥ ೬೪ ॥**

ಅತ್ರ-ಈ ವಿಷಯದಲ್ಲಿ (ಈ ವಿಧ ಜ್ಞಾನವುಳ್ಳವನು ಕಮಲಪತ್ರದಂತೆ ನಿರ್ಲಿಪ್ತನಾಗಿರುವನೆಂಬಲ್ಲಿ), ಇಮಂ-ಈ, ಪುರಾತನಂ-ಪುರಾತನವಾದ(ಹಿಂದಿನ ಕಾಲದ), ಇತಿಹಾಸಂ-ಇತಿಹಾಸವನ್ನು (ಚರಿತ್ರೆಯನ್ನು-ವೃತ್ತಾಂತವನ್ನು), ಉದಾಹರಂತಿ-(ಜ್ಞಾನಿಗಳು) ನಿದರ್ಶನವಾಗಿ ನಿರೂಪಿಸುತ್ತಾರೆ; ಪೂರ್ವಂ-ಪೂರ್ವಕಾಲದಲ್ಲಿ, ವಿದೇಹಃ ಜನಕಃ-ವಿದೇಹನಾದ ಜನಕನು (ವಿದೇಹದೇಶಾಧಿಪತಿ ಜನಕರಾಜನು), ಶುಕಾತ್-ಶುಕಾಚಾರ್ಯರಿಂದ, ಹರೇಃ-ಶ್ರೀಹರಿಯ, ಕಥಾಃ-ಚರಿತ್ರೆಗಳನ್ನು (ಮಹಿಮೆಗಳನ್ನು ಪ್ರತಿಪಾದಿಸುವ ಪ್ರವಚನಗಳನ್ನು), ಶೃಣ್ವನ್-ಶ್ರವಣಮಾಡುವವನಾಗಿ, ಸಕ್ತಚೇತಾಃ-(ಕಥಾಶ್ರವಣದಲ್ಲಿಯೇ) ನೆಟ್ಟ ಮನಸ್ಸುಳ್ಳವನಾಗಿ, ಸ್ವಾನ್ನಪಾನಾದಿ-ತನ್ನ ಅನ್ನಪಾನಾದಿಗಳನ್ನು, ಚ-ಮತ್ತು, ಕಂಚನ-ಬೇರೇನನ್ನೂ, ನ ಅಜ್ಞಾಸೀತ್-ತಿಳಿಯುತ್ತಿರಲಿಲ್ಲ ತಾದೃಶಂ-ಈ ಪ್ರಕಾರವಾದ, ತನ್ಮನಃ-ಆತನ ಮನಸ್ಸನ್ನು, ಜ್ಞಾತ್ವಾ-ತಿಳಿದು, (ಶ್ರೀ ಶುಕರು) ತಂ ಏವ-ಆತನನ್ನೇ, ಈಕ್ಷ್ಯ-ದೃಷ್ಟಿಸಿ ನೋಡುತ್ತ, ಕಥಾಂ-ಚರಿತ್ರೆಯನ್ನು ಜಗೌ-ಹೇಳುತ್ತಿದ್ದರು.

**ಅಪಾಹಸನ್ನಿಥೋ ಲೋಕಾ ಯೇಽನ್ಯೇಽತ್ರ ಸಮಾಗತಾಃ ।**
**ಅಯಂ ರಾಜೇತಿ ಲೋಭೇನ ತಸ್ಯೈವ ಮುಖಮುನ್ಮುಖಃ ॥ ೬೫ ॥**

---

ನಾಗಿರುವನೆಂಬ ವಿಷಯದಲ್ಲಿ, ಜ್ಞಾನಿಗಳು ಒಂದು ಹಿಂದಿನ ಇತಿಹಾಸವನ್ನು ನಿದರ್ಶನವಾಗಿ ನಿರೂಪಿಸುತ್ತಾರೆ; ಅದೇನೆಂದರೆ:- ಪೂರ್ವದಲ್ಲಿ ವಿದೇಹದೇಶಾಧಿಪತಿಯಾದ ಜನಕನು, ಶುಕಾಚಾರ್ಯರ ಮುಖದಿಂದ ಶ್ರೀಹರಿಯ ಕಥಾಲಾಪವನ್ನು ಶ್ರವಣ ಮಾಡುತ್ತಿದ್ದನು; ಕಥಾಶ್ರವಣದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ ಬೇರೇನನ್ನೂ ತಿಳಿಯುತ್ತಿರಲಿಲ್ಲ— ತನ್ನ ಅನ್ನಪಾನಾದಿಗಳನ್ನೂ ಚಿಂತಿಸುತ್ತಿರಲಿಲ್ಲ; ಈ ವಿಧ ಏಕಾಗ್ರತೆಯುಳ್ಳ ಆತನ ಮನಸ್ಸನ್ನು ತಿಳಿದು, ಶ್ರೀಶುಕರು, ಆತನ ಮುಖವನ್ನೇ ನೋಡುತ್ತ ಕಥಾನುವಾದಮಾಡುತ್ತಿದ್ದರು (೬೩-೬೪). ಕಥಾಶ್ರವಣಕ್ಕಾಗಿ ಅಲ್ಲಿ ಸೇರಿದ್ದ ಇತರ ಜನರು, ಶ್ರೀಶುಕರು, ವಿರಕ್ತರೆಂದು ಪ್ರಸಿದ್ಧರಾದರೂ, ರಾಜನಾದ್ದರಿಂದ, ಸ್ವಾರ್ಥದ

ಶುಕಃ ಶ್ರಾವಯತೇ ಗಾಥಾಂ ವೀತರಾಗೋಽಪಿ ನಾನ್ಯಥಾ ।

ಅತ್ರ- ಅಲ್ಲಿ (ಶ್ರೀ ಶುಕರು ಕಥಾಸುವಾರ ಮಾಡುವಲ್ಲಿ), ಯೇ ಅನ್ಯೇ ಸಮಾಗತಾಃ ಲೋಕಾಃ- ಸೇರಿದ್ದ ಇತರ ಜನರು, ಅಯಂ- ಈ ಜನಕನು, ರಾಜಾ- ರಾಜನು, ಇತಿ ಲೋಭೇನ- ಎಂಬ ಲೋಭದಿಂದ (ಸ್ವಪ್ರಯೋಜನದ ಆಶೆಯಿಂದ), ತಸ್ಯ ಏವ ಮುಖಂ- ಆತನ ಮುಖವನ್ನೇ, ಉನ್ಮುಖಃ- ನೋಡುವ ಮುಖವುಳ್ಳವರಾಗಿ, ಶುಕಃ- ಶುಕಾಚಾರ್ಯರು, ವೀತರಾಗಃ ಅಪಿ- ವಿರಕ್ತರಾದರೂ, ಗಾಥಾಂ- ಕಥೆಯನ್ನು ಶ್ರಾವಯತೇ- ಶ್ರವಣಮಾಡಿಸುತ್ತಾರೆ; ಅನ್ಯಥಾ ನ- ಬೇರೆ ಕಾರಣದಿಂದ ಅಲ್ಲವೇ ಅಲ್ಲ (ಎಂದು), ಮಿಥಃ- ಪರಸ್ಪರವಾಗಿ, ಅಪಾಹಸತ್- ಅಪಹಾಸದಿಂದ ಮಾತನಾಡಿಕೊಂಡರು. (ಈ ಅಭಿಪ್ರಾಯಸೂಚಕ ಮಂದಹಾಸವುಳ್ಳವರಾದರು.

ತದ್ವಿದಿತ್ವಾ ಸ್ವಜನ್ಮಾಯಾಂ ಮಹಾಯೋಗೇಶ್ವರಃ ಶುಕಃ ॥ ೬೬ ॥

ಮಿಥಿಲಾಯಾಮಭೂದ್ವಹ್ನಿ ಸಹಸಾऽದಹತ ಗೃಹಾನ್ ।
ತತ್ಪ್ರದೇಶಗೃಹಾನ್ ಶ್ರುತ್ವಾ ವಿಹ್ವಲಾ ದುದ್ರುವುರ್ಜನಾಃ ॥ ೬೭ ॥

ವಹ್ನಿರ್ಹಿ ಸರ್ವತೋ ದಿಕ್ಷು ಪ್ರಜಜ್ವಾಲಾಖಿಲಾನ್ ಗೃಹಾನ್ ।
ತತತ್ತ್ರದೇಶಸದ್ಮಾನೋ ದುದ್ರುವುಸ್ತೇಽಖಿಲಾ ಜನಾಃ ॥ ೬೮ ॥

ತದ್ವಿದಿತ್ವಾ-(ಅಪಹಾಸಕರ) ಆ ಅಭಿಪ್ರಾಯವನ್ನು ತಿಳಿದು, ಮಹಾಯೋಗೇಶ್ವರಃ- ಮಹಾಯೋಗಸಾಮರ್ಥ್ಯವುಳ್ಳ, ಶುಕಃ- ಶ್ರೀಶುಕರು, ಮಾಯಾಂ- ಮಾಯೆಯನ್ನು (ಯೋಗಶಕ್ತಿಯನ್ನು), ಅಸೃಜತ್- ಪ್ರಕಟಿಸಿದರು; (ಆದರಿಂದ), ಮಿಥಿಲಾಯಾಂ- ಮಿಥಿಲಾನಗರದಲ್ಲಿ, ಸಹಸಾ- ದೃಷ್ಟಕಾರಣವಿಲ್ಲದೇ (ಅಕಾರಣವಾಗಿ- ಯೋಗಶಕ್ತಿಯ ಪ್ರಭಾವದಿಂದ), ವಹ್ನಿಃ- ಅಗ್ನಿಯು, ಅಭೂತ್- ಹುಟ್ಟಿತು; ಗೃಹಾನ್- ಮನೆಗಳನ್ನು

---

ಆಶೆಯಿಂದ ಆತನ ಮುಖವನ್ನೇ ನೋಡುತ್ತ (ನಾವೆಲ್ಲರಿದ್ದರೂ, ಒಬ್ಬರನ್ನೂ ಗಮನಿಸದೆ) ಕಥಾಸುವಾದ ಮಾಡುತ್ತಿದ್ದಾರೆ, ಎಂಬುದಾಗಿ ಪರಸ್ಪರ ಅಭಿಪ್ರಾಯಪಟ್ಟುಕೊಂಡರು- ಅಪಹಾಸಮಾಡಿದರು (೬೫). ಇದನ್ನು ತಿಳಿದ ಅದ್ಭುತಯೋಗಸಾಮರ್ಥ್ಯವುಳ್ಳ ಶ್ರೀಶುಕರು, ತಮ್ಮ ಶಕ್ತಿಯನ್ನು ಪ್ರಯೋಗಿಸಿದರು; ಇದ್ದಕ್ಕಿದಂತೆ (ದೃಷ್ಟಕಾರಣವಿಲ್ಲದೇ) ಮಿಥಿಲಾನಗರದಲ್ಲಿ ಅಗ್ನಿಯುಂಟಾಯಿತು; ಮನೆಗಳೆಲ್ಲವನ್ನೂ ದಹಿಸಲಾರಂಭಿಸಿತು. ಆ ಪ್ರದೇಶದ ಮನೆಗಳವರೆಲ್ಲರೂ ಭಯದಿಂದ ಓಡಿಹೋದರು; ಅಗ್ನಿಯು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿ, ಎಲ್ಲ ಗೃಹಗಳನ್ನೂ ದಹಿಸಿತು; ಕಥಾಶ್ರವಣದಲ್ಲಿದ್ದ ಜನರೂ, ಆಯಾ ಪ್ರದೇಶದಲ್ಲಿದ್ದ ತಂತಮ್ಮ ಗೃಹಗಳ ರಕ್ಷಣೆಗಾಗಿ ಧಾವಿಸಿದರು (೬೬-೬೮). ಕಥಾವಕ್ತೃಗಳಾದ ಶ್ರೀಶುಕರು, ಶ್ರವಣಮಾಡುತ್ತಿದ್ದ ರಾಜನಾದ ಜನಕನು, ಈ

ಅದಹತ-ದಹಿಸಿತು; ಜನಾಃ-(ಶ್ರವಣದಲ್ಲಿ ಕೂತಿದ್ದ) ಸಭೆಯ ಜನರು, ತತ್ಪ್ರದೇಶಗೃಹಾನ್-ಆ ಪ್ರದೇಶದ (ತಮ್ಮ ಗೃಹಗಳಿದ್ದ ಪ್ರದೇಶದ) ಗೃಹಗಳನ್ನು (ಸುಡುತ್ತಿರುವುದನ್ನು), ಶ್ರುತ್ವಾ-ಕೇಳಿ, ವಿಹ್ವಲಾತ್-ಭಯದಿಂದ, (ಚಂಚಲ ಮನಸ್ಕರಾಗಿ, ಅಲ್ಲಿ ಕೂಡಲಾರದೇ), ದುದ್ರುವುಃ-ಓಡಿಹೋದರು; ವಹ್ನಿಃ ಹಿ-ಅಗ್ನಿಯಾದರೋ, ಸರ್ವತಃ-ಎಲ್ಲ ದಿಕ್ಕು-ದಿಕ್ಕುಗಳಲ್ಲಿದ್ದ ಅಖಿಲಾನ್-ಸಮಸ್ತ ಗೃಹಾನ್-ಗೃಹಗಳನ್ನೂ ಪ್ರಜಜ್ವಾಲ-ಸುಟ್ಟಿತು; ತತ್ತತ್ ಪ್ರದೇಶಸದ್ಮಾನಃ-ಆಯಾ ಪ್ರದೇಶದಲ್ಲಿ(ನಗರದ ಆಯಾ ಭಾಗದ) ಮನೆಗಳುಳ್ಳ, ತೇ-ಆ, ಅಖಿಲಾ ಜನಾಃ-ಎಲ್ಲ ಜನರೂ (ಶ್ರೋತೃಗಳೆಲ್ಲರೂ), ದುದ್ರುವುಃ-ಓಡಿಹೋದರು.

**ಶುಕೋ ವಕ್ತಾ ನೃಪಃ ಶ್ರೋತಾ ದ್ವಾವೇವಾಸಾಂಬಭೂವತುಃ ।**
**ತದಾಮಾತ್ಯಗಣಾ ಭೂಪಮಭ್ಯೇತ್ಯೋಚ್ಚೈಃ ಪ್ರಚುಕ್ರುಶುಃ ॥ ೬೯ ॥**

ವಕ್ತಾ-ಹೇಳುವ (ಪ್ರವಚನಕರ್ತನಾದ), ಶುಕಃ-ಶ್ರೀಶುಕರು, ಶ್ರೋತಾ-ಕೇಳುವ (ಶ್ರವಣಮಾಡುತ್ತಿದ್ದ), ನೃಪಃ-ರಾಜನು (ಜನಕನು), ದ್ವೌ ಏವ-ಇಬ್ಬರು ಮಾತ್ರ, ಆಸಾಂಬಭೂವತುಃ-(ಅಲ್ಲಿ) ಕೂತಿದ್ದರು; ತದಾ-ಆಗ, ಅಮಾತ್ಯಗಣಾಃ-ಅಮಾತ್ಯರ ಸಮೂಹಗಳು (ನಾನಾ ಅಧಿಕಾರದಲ್ಲಿದ್ದ ರಾಜಕೀಯ ಜನರು), ಭೂಪಂ-ರಾಜನನ್ನು ಅಭ್ಯೇತ್ಯ-ಸಮೀಪಿಸಿ, ಉಚ್ಚೈಃ-ಗಟ್ಟಿಯಾಗಿ (ದೊಡ್ಡ ಧ್ವನಿಯಿಂದ), ಪ್ರಚುಕ್ರುಶುಃ-ಕೂಗಿದರು (ದುಃಖದಿಂದ ರೋದನಮಾಡಿದರು).

**ರಾಜನ್ ಸರ್ವಾ ಪುರೀ ದಗ್ಧಾ ಹಸ್ತಿನೋ ಮಂದಿರಾ ಅಪಿ ।**
**ಕೋಶಾಗಾರಾಣಿ ಶುದ್ಧಾಂತಾ ನ ಕಿಂಚಿದವಶೇಷಿತಂ ॥ ೭೦ ॥**

**ಕಿಂ ವಯಂ ಶರಣಂ ಯಾಮಃ ಕಿಂ ಬ್ರೂಮಃ ಕಿಂ ಚ ಕುರ್ಮಹೇ ।**
**ಸಕುಟುಂಬಾ ವಯಂ ದಗ್ಧಾ ಹಾಹಾ ಪಶ್ಯತ ವೈಶಸಂ ॥ ೭೧ ॥**

---

ಉಭಯರು ಮಾತ್ರ ಆ ಸಭೆಯಲ್ಲಿ ಉಳಿದರು; ಅಗ್ನಿಯು ನಗರವನ್ನೇ ದಹಿಸುತ್ತಿದ್ದರೂ, ಕಥಾನಿರೂಪಣ ಮತ್ತು ಶ್ರವಣದಲ್ಲಿ ತೊಡಗಿದ್ದರು; ಆಗ ರಾಜನ ಸಮೀಪಕ್ಕೆ ಅಧಿಕಾರಿವರ್ಗದ ಜನರು ಬಂದು (ಅಮಾತ್ಯರು-ರಾಜಕಾರ್ಯಗಳನ್ನು ನಿರ್ವಹಿಸುವುದಲ್ಲಿ ರಾಜನಿಗೆ ಸಹಾಯಕ ಅಧಿಕಾರಿಗಳು), ದೊಡ್ಡ ಧ್ವನಿಯಿಂದ ಕೂಗಿಕೊಳ್ಳಲಾರಂಭಿಸಿದರು (ದುಃಖಜನಿತವಾದ ಉದ್ವೇಗದಿಂದ ವಿಲಾಪಿಸಿದರು) (೬೯). ಹೇ, ಮಹಾರಾಜ!, ನಗರವೆಲ್ಲ ಸುಟ್ಟುಹೋಗುತ್ತಿದೆ; ಅಗ್ನಿಯು, ಅರಮನೆಯವರೆಗೂ ಬರುತ್ತಿದೆ; ಗಜಾಗಾರ, ಕೋಶಾಗಾರಗಳು ದಹಿಸಹೋದವು; ಯಾವ ಭಾಗವೂ ಉಳಿದಿಲ್ಲ; ರಾಜರಾದ ತಾವು ಹೀಗೆ ಕೂತರೆ, ನಾವು ಯಾರನ್ನು ಶರಣುಹೊಂದೋಣ; ಏನು

ನ ಹೀದೃಶಂ ಪುರಾ ಕ್ವಾಪಿ ದೃಷ್ಟಂ ವಾ ಶ್ರುತಮಪ್ಯಹೋ ।
ವಿನಾ ಕಲ್ಪಾಂತಮೇಷೋಽಗ್ನಿಃ ಕಲ್ಪಾಂತ ಇವ ದೀಪ್ಯತಿ ॥ ೭೨ ॥

ಅಯಂ ಶುಕೋ ಮಹಾಯೋಗೀ ತ್ವಂ ಚ ರಾಜಾ ಮಹಾನಸಿ ।
ತಥಾ ವಿಧೇಹಿ ಯೇನ ಸ್ಯಾತ್ ಶಿಷ್ಟಾನಾಮವಶೇಷಣಂ ॥ ೭೩ ॥

ರಾಜನ್-ಹೇ ರಾಜನೇ!, ಸರ್ವಾ ಪುರೀ-ನಗರವೆಲ್ಲವೂ, ದಗ್ಧಾ-ಸುಟ್ಟು ಹೋಯಿತು; ಹಸ್ತಿನಃ-ಆನೆಗಳ, ಮಂದಿರಾಃ ಅಪಿ-ಗೃಹಗಳೂ (ಗಜಾಗಾರಗಳೂ), (ದಗ್ಧಾಃ-ದಹಿಸಿಹೋದವು); ಕೋಶಾಗಾರಾಣಿ-ಕೋಶಾಗಾರಗಳೂ, ಶುದ್ಧಾಂತಾಃ-ಪೂರ್ಣವಾಗಿ ನಷ್ಟವಾದವು; ಕಿಂಚಿತ್-ಯಾವದೊಂದೂ, ನ ಅವಶೇಷಿತಂ-ಉಳಿಯಲಿಲ್ಲ; ವಯಂ-ನಾವು, ಕಂ-ಯಾರನ್ನು, ಶರಣಂ ಯಾಮಃ-ಶರಣುಹೊಂದೋಣ (ಆಶ್ರಯಿಸೋಣ); ಕಿಂ-ಏನನ್ನು ಬ್ರೂಮಃ-ಹೇಳೋಣ; ಚ-ಮತ್ತು ಕಿಂ-ಏನನ್ನು ಕುರ್ಮಹೇ-ಮಾಡೋಣ; ಸಕುಟುಂಬಾಃ-ಕುಟುಂಬಸಹಿತರಾಗಿ, ವಯಂ-ನಾವು, ದಗ್ಧಾಃ-ದಹಿಸಲ್ಪಡುತ್ತಿರುವೆವು; ಹಾಹಾ-ಅಯ್ಯೋ!, ವೈಶಸಂ-ಈ ವಿನಾಶವನ್ನು (ಘೋರವಾದ ಹಿಂಸೆಯನ್ನು), ಪಶ್ಯತ-ನೋಡು; ಪುರಾ-ಹಿಂದೆ, ಕ್ವಾಪಿ-ಎಂದೂ (ಎಲ್ಲಿಯೂ), ಕಲ್ಪಾಂತಂ ವಿನಾ-ಪ್ರಳಯಕಾಲವನ್ನು ಹೊರತು, ಈದೃಶಂ-ಈ ವಿಧದ ಅಗ್ನಿಯು, ನ ದೃಷ್ಟಂ-ಕಾಣಲಿಲ್ಲವು; ವಾ-ಅಥವಾ, ಶ್ರುತಂ ಅಪಿ (ನ)-ಕೇಳಿಯೂ ಇಲ್ಲವು; ಅಹೋ-ಆಶ್ಚರ್ಯವು!, ಏಷಃ ಅಗ್ನಿಃ-(ನಗರವನ್ನು ದಹಿಸುತ್ತಿರುವ) ಈ ಅಗ್ನಿಯು, ಕಲ್ಪಾಂತಃ ಇವ-ಪ್ರಲಯಕಾಲದಂತೆ, ದೀಪ್ಯತಿ-ಪ್ರಜ್ವಲಿಸುತ್ತಿದೆ; ಅಯಂ-ಈ, ಶುಕಃ-ಶುಕರು, ಮಹಾಯೋಗೀ-ಮಹಾಯೋಗಿಗಳು; ತ್ವಂ-ನೀನು, ಮಹಾನ್ ರಾಜಾ ಚ-ಮಹಾರಾಜನೂ, ಅಸಿ-ಆಗಿರುವಿ; ಯೇನ-ಯಾವುದರಿಂದ (ಯಾವ ಉಪಾಯದಿಂದ), ಶಿಷ್ಟಾನಾಂ-ಸಜ್ಜನರ, ಅವಶೇಷಣಂ-ಉಳಿಯುವಿಕೆಯು (ರಕ್ಷಣೆಯು), ಸ್ಯಾತ್-ಆಗುತ್ತದೆಯೋ, ತಥಾ-ಹಾಗೆ, ವಿಧೇಹಿ-ಆಜ್ಞಾಪಿಸು.

---

ಮಾಡೋಣ; ಯಾರಿಗೆ (ಪ್ರಜೆಗಳಿಗೆ) ಏನು ಹೇಳೋಣ; ಕುಟುಂಬಸಹಿತರಾಗಿ ದಹಿಸಲ್ಪಡುತ್ತಿರುವರಲ್ಲ! ಈ ವಿನಾಶವನ್ನು ನೋಡು, ರಾಜನ್!. ಹಿಂದೆಲ್ಲಿಯೂ ಈ ವಿಧವಾದ ಅಗ್ನಿಯನ್ನು ನಾವು ಕಾಣಲಿಲ್ಲ—ಪ್ರಳಯಾಗ್ನಿಯ ವಿನಹ, ಕೇಳಲೂ ಇಲ್ಲ; ಅಗ್ನಿಯು ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಿದೆ; ನೀನು ಮಹಾರಾಜ, ಈ ಶುಕರು ಯೋಗೀಶ್ವರರು; ಸತ್ಪ್ರಜೆಗಳು ರಕ್ಷಿತರಾಗುವ ಉಪಾಯವನ್ನು ತಿಳಿದು ಆಜ್ಞಾಪಿಸು(೭೦-೭೩). ಅಮಾತ್ಯಾದಿಗಳ ಈ ಮಾತುಗಳನ್ನು ಕೇಳಿ, ರಾಜಾ ಜನಕನು ಹೇಳುತ್ತಾನೆ:—ನಾವು (ನಾನು ಮತ್ತು ಶ್ರೀಶುಕರು) ಶ್ರೀವಿಷ್ಣುಭಕ್ತರೆಂಬುದು ನಿಮ್ಮೆಲ್ಲರಿಗೂ ಸಮ್ಮತವೇ ಆಗಿದೆ; ಹೀಗಿರುವಾಗ ಶ್ರೀವಿಷ್ಣುವಿನಲ್ಲಿ ನಮಗಿರುವ

ಅದಹತ-ದಹಿಸಿತು; ಜನಾಃ-(ಶ್ರವಣದಲ್ಲಿ ಕೂತಿದ್ದ) ಸಭೆಯ ಜನರು, ತತ್ಪ್ರದೇಶಗೃಹಾನ್-ಆ ಪ್ರದೇಶದ (ತಮ್ಮ ಗೃಹಗಳಿದ್ದ ಪ್ರದೇಶದ) ಗೃಹಗಳನ್ನು (ಸುಡುತ್ತಿರುವುದನ್ನು), ಶ್ರುತ್ವಾ-ಕೇಳಿ, ವಿತ್ರಸಾತ್-ಭಯದಿಂದ, (ಚಂಚಲ ಮನಸ್ಕರಾಗಿ, ಅಲ್ಲಿ ಕೂಡಲಾರರೇ), ದುದ್ರುವುಃ-ಓಡಿಹೋದರು; ವಹ್ನಿಃ ಹಿ-ಅಗ್ನಿಯಾದರೋ, ಸರ್ವತಃ-ಎಲ್ಲ ದಿಕ್ಕು-ದಿಕ್ಕುಗಳಲ್ಲಿದ್ದ ಅಖಿಲಾನ್-ಸಮಸ್ತ ಗೃಹಾನ್-ಗೃಹಗಳನ್ನೂ ಪ್ರಜಜ್ವಾಲ-ಸುಟ್ಟಿತು; ತತ್ರತತ್ ಪ್ರದೇಶಸದ್ಮಾನಿ-ಆಯಾ ಪ್ರದೇಶದಲ್ಲಿ(ನಗರದ ಆಯಾ ಭಾಗದ) ಮನೆಗಳುಳ್ಳ, ತೇ-ಆ, ಅಖಿಲಾ ಜನಾಃ-ಎಲ್ಲ ಜನರೂ (ಶ್ರೋತೃಗಳೆಲ್ಲರೂ), ದುದ್ರುವುಃ-ಓಡಿಹೋದರು.

**ಶುಕೋ ವಕ್ತಾ ನೃಪಃ ಶ್ರೋತಾ ದ್ವಾವೇವಾಸಾಂಬಭೂವತುಃ ।**
**ತದಾಮಾತ್ಯಗಣಾ ಭೂಪಮಭ್ಯೇತ್ಯೋಚ್ಚೈಃ ಪ್ರಚುಕ್ರುಶುಃ ॥ ೬೯ ॥**

ವಕ್ತಾ-ಹೇಳುವ (ಪ್ರವಚನಕರ್ತನಾದ), ಶುಕಃ-ಶ್ರೀಶುಕರು, ಶ್ರೋತಾ-ಕೇಳುವ (ಶ್ರವಣಮಾಡುತ್ತಿದ್ದ), ನೃಪಃ-ರಾಜನು (ಜನಕನು), ದ್ವೌ ಏವ-ಇಬ್ಬರು ಮಾತ್ರ, ಆಸಾಂಬಭೂವತುಃ-(ಅಲ್ಲಿ) ಕೂತಿದ್ದರು; ತದಾ-ಆಗ, ಅಮಾತ್ಯಗಣಾಃ-ಅಮಾತ್ಯರ ಸಮೂಹಗಳು (ನಾನಾ ಅಧಿಕಾರದಲ್ಲಿದ್ದ ರಾಜಕೀಯ ಜನರು), ಭೂಪಂ-ರಾಜನನ್ನು ಅಭ್ಯೇತ್ಯ-ಸಮೀಪಿಸಿ, ಉಚ್ಚೈಃ-ಗಟ್ಟಿಯಾಗಿ (ದೊಡ್ಡ ಧ್ವನಿಯಿಂದ), ಪ್ರಚುಕ್ರುಶುಃ-ಕೂಗಿದರು (ದುಃಖದಿಂದ ರೋದನಮಾಡಿದರು).

**ರಾಜನ್ ಸರ್ವಾ ಪುರೀ ದಗ್ಧಾ ಹಸ್ತಿನೋ ಮಂದಿರಾ ಅಪಿ ।**
**ಕೋಶಾಗಾರಾಣಿ ಶುದ್ಧಾಂತಾ ನ ಕಿಂಚಿದವಶೇಷಿತಂ ॥ ೭೦ ॥**

**ಕಂ ವಯಂ ಶರಣಂ ಯಾಮಃ ಕಿಂ ಬ್ರೂಮಃ ಕಿಂ ಚ ಕುರ್ಮಹೇ ।**
**ಸಕುಟುಂಬಾ ವಯಂ ದಗ್ಧಾ ಹಾಹಾ ಪಶ್ಯತ ವೈಶಸಂ ॥ ೭೧ ॥**

---

ಉಭಯರು ಮಾತ್ರ ಆ ಸಭೆಯಲ್ಲಿ ಉಳಿದರು; ಅಗ್ನಿಯು ನಗರವನ್ನೇ ದಹಿಸುತ್ತಿದ್ದರೂ, ಕಥಾನಿರೂಪಣ ಮತ್ತು ಶ್ರವಣದಲ್ಲಿ ತೊಡಗಿದ್ದರು; ಆಗ ರಾಜನ ಸಮೀಪಕ್ಕೆ ಅಧಿಕಾರಿವರ್ಗದ ಜನರು ಬಂದು (ಅಮಾತ್ಯರು-ರಾಜಕಾರ್ಯಗಳನ್ನು ನಿರ್ವಹಿಸುವುದರಲ್ಲಿ ರಾಜನಿಗೆ ಸಹಾಯಕ ಅಧಿಕಾರಿಗಳು), ದೊಡ್ಡ ಧ್ವನಿಯಿಂದ ಕೂಗಿಕೊಳ್ಳಲಾರಂಭಿಸಿದರು (ದುಃಖಜನಿತವಾದ ಉದ್ವೇಗದಿಂದ ವಿಲಾಪಿಸಿದರು) (೬೯). ಹೇ, ಮಹಾರಾಜ!, ನಗರವೆಲ್ಲ ಸುಟ್ಟುಹೋಗುತ್ತಿದೆ; ಅಗ್ನಿಯು, ಅರಮನೆಯವರೆಗೂ ಬರುತ್ತಿದೆ; ಗಜಾಗಾರ, ಕೋಶಾಗಾರಗಳು ದಹಿಸಿಹೋದವು; ಯಾವ ಭಾಗವೂ ಉಳಿದಿಲ್ಲ ರಾಜರಾದ ತಾವು ಹೀಗೆ ಕೂತರೆ, ನಾವು ಯಾರನ್ನು ಶರಣುಹೊಂದೋಣ; ಏನು

**ನ ಹೀದೃಶಂ ಪುರಾ ಕ್ವಾಪಿ ದೃಷ್ಟಂ ವಾ ಶ್ರುತಮಪ್ಯಹೋ ।**
**ವಿನಾ ಕಲ್ಪಾಂತಮೇಷೋಗ್ನಿಃ ಕಲ್ಪಾಂತ ಇವ ದೀಪ್ಯತಿ ॥ ೭೨ ॥**

**ಅಯಂ ಶುಕೋ ಮಹಾಯೋಗೀ ತ್ವಂ ಚ ರಾಜಾ ಮಹಾನಸಿ ।**
**ತಥಾ ವಿಧೇಹಿ ಯೇನ ಸ್ಯಾತ್ ಶಿಷ್ಟಾನಾಮವಶೇಷಣಂ ॥ ೭೩ ॥**

ರಾಜನ್-ಹೇ ರಾಜನೇ!, ಸರ್ವಾ ಪುರೀ-ನಗರವೆಲ್ಲವೂ, ದಗ್ಧಾ-ಸುಟ್ಟು ಹೋಯಿತು; ಹಸ್ತಿನಃ-ಆನೆಗಳ, ಮಂದಿರಾಃ ಅಪಿ-ಗೃಹಗಳೂ (ಗಜಾಗಾರಗಳೂ), (ದಗ್ಧಾಃ-ದಹಿಸಿಹೋದವು); ಕೋಶಾಗಾರಾಣಿ-ಕೋಶಾಗಾರಗಳೂ, ಶುದ್ಧಾಂತಾಃ-ಪೂರ್ಣವಾಗಿ ನಷ್ಟವಾದವು; ಕಿಂಚಿತ್-ಯಾವದೊಂದೂ, ನ ಅವಶೇಷಿತಂ-ಉಳಿಯಲಿಲ್ಲ; ವಯಂ-ನಾವು, ಕಂ-ಯಾರನ್ನು ಶರಣಂ ಯಾಮಃ-ಶರಣುಹೊಂದೋಣ (ಆಶ್ರಯಿಸೋಣ); ಕಿಂ-ಏನನ್ನು ಬ್ರೂಮಃ-ಹೇಳೋಣ; ಚ-ಮತ್ತು ಕಿಂ-ಏನನ್ನು ಕುರ್ಮಹೇ-ಮಾಡೋಣ; ಸಕುಟುಂಬಾಃ-ಕುಟುಂಬಸಹಿತರಾಗಿ, ವಯಂ-ನಾವು, ದಗ್ಧಾಃ-ದಹಿಸಲ್ಪಡುತ್ತಿರುವೆವು; ಹಾಹಾ-ಅಯ್ಯೋ!, ವೈಶಸಂ-ಈ ವಿನಾಶವನ್ನು (ಘೋರವಾದ ಹಿಂಸೆಯನ್ನು), ಪಶ್ಯತ-ನೋಡು; ಪುರಾ-ಹಿಂದೆ, ಕ್ವಾಪಿ-ಎಂದೂ (ಎಲ್ಲಿಯೂ), ಕಲ್ಪಾಂತಂ ವಿನಾ-ಪ್ರಳಯಕಾಲವನ್ನು ಹೊರತು, ಈದೃಶಂ-ಈ ವಿಧದ ಅಗ್ನಿಯು, ನ ದೃಷ್ಟಂ-ಕಾಣಲಿಲ್ಲವು; ವಾ-ಅಥವಾ, ಶ್ರುತಂ ಅಪಿ (ನ)-ಕೇಳಿಯೂ ಇಲ್ಲವು; ಅಹೋ-ಆಶ್ಚರ್ಯವು!, ಏಷಃ ಅಗ್ನಿಃ-(ನಗರವನ್ನು ದಹಿಸುತ್ತಿರುವ) ಈ ಅಗ್ನಿಯು, ಕಲ್ಪಾಂತಃ ಇವ-ಪ್ರಲಯಕಾಲದಂತೆ, ದೀಪ್ಯತಿ-ಪ್ರಜ್ವಲಿಸುತ್ತಿದೆ; ಅಯಂ-ಈ, ಶುಕಃ-ಶುಕರು, ಮಹಾಯೋಗೀ-ಮಹಾಯೋಗಿಗಳು; ತ್ವಂ-ನೀನು, ಮಹಾನ್ ರಾಜಾ ಚ-ಮಹಾರಾಜನೂ, ಅಸಿ-ಆಗಿರುವಿ; ಯೇನ-ಯಾವುದರಿಂದ (ಯಾವ ಉಪಾಯದಿಂದ), ಶಿಷ್ಟಾನಾಂ-ಸಜ್ಜನರ, ಅವಶೇಷಣಂ-ಉಳಿಯುವಿಕೆಯು (ರಕ್ಷಣೆಯು), ಸ್ಯಾತ್-ಆಗುತ್ತದೆಯೋ, ತಥಾ-ಹಾಗೆ, ವಿಧೇಹಿ-ಆಜ್ಞಾಪಿಸು.

---

ಮಾಡೋಣ; ಯಾರಿಗೆ (ಪ್ರಜೆಗಳಿಗೆ) ಏನು ಹೇಳೋಣ; ಕುಟುಂಬಸಹಿತರಾಗಿ ದಹಿಸಲ್ಪಡುತ್ತಿರುವರಲ್ಲ! ಈ ವಿನಾಶವನ್ನು ನೋಡು, ರಾಜನ್!, ಹಿಂದೆಲ್ಲಿಯೂ ಈ ವಿಧವಾದ ಅಗ್ನಿಯನ್ನು ನಾವು ಕಾಣಲಿಲ್ಲ—ಪ್ರಳಯಾಗ್ನಿಯ ವಿನಹ, ಕೇಳಲೂ ಇಲ್ಲ; ಅಗ್ನಿಯು ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಿದೆ; ನೀನು ಮಹಾರಾಜ, ಈ ಶುಕರು ಯೋಗೀಶ್ವರರು; ಸತ್ಪ್ರಜೆಗಳು ರಕ್ಷಿತರಾಗುವ ಉಪಾಯವನ್ನು ತಿಳಿದು ಆಜ್ಞಾಪಿಸು(೭೦-೭೩). ಅಮಾತ್ಯಾದಿಗಳ ಈ ಮಾತುಗಳನ್ನು ಕೇಳಿ, ರಾಜಾ ಜನಕನು ಹೇಳುತ್ತಾನೆ:—ನಾವು (ನಾನು ಮತ್ತು ಶ್ರೀಶುಕರು) ಶ್ರೀವಿಷ್ಣುಭಕ್ತರೆಂಬುದು ನಿಮ್ಮೆಲ್ಲರಿಗೂ ಸಮ್ಮತವೇ ಆಗಿದೆ; ಹೀಗಿರುವಾಗ ಶ್ರೀವಿಷ್ಣುವಿನಲ್ಲಿ ನಮಗಿರುವ

ತೇಷಾಮಿತ್ಥಂ ವಚಃ ಶ್ರುತ್ವಾ ತಾನುವಾಚ ಸ ಭೂಪತಿಃ ।
ಭಕ್ತತ್ವೇನ ಮಹಾವಿಷ್ಣೋರ್ಯುಷ್ಮಾಕಂ ಸಂಮತಾ ವಯಂ ॥ ೭೪ ॥

ತತ್ಕಥಂ ವಿಪ್ರಿಯಂ ತಸ್ಯ ಕುರ್ಮೋ ಭಕ್ತಿವಿರೋಧಿಕೃತ್ ।
ಭಕ್ತಿರ್ಹಿ ಪರಮಃ ಸ್ನೇಹೋ ವಿಪ್ರಿಯಾಚರಣಾತ್ಕಥಂ ॥ ೭೫ ॥

ಅನಪಾಯೋ ಭವೇತ್ತಸ್ಮಾನ್ನೇಚ್ಛಾಮೋ ವಿಪ್ರಿಯಂ ಹರೇಃ ।
ಸ ಏಕಃ ಸೃಜತೇ ವಿಶ್ವಂ ಪಾಲಯತ್ಯಪಿ ಹಂತಿ ಚ ॥ ೭೬ ॥

ತೇಷಾಂ-ಆ ಅಮಾತ್ಯಾದಿ ಅಧಿಕಾರಿಗಳ, ಇತ್ಥಂ-ಈ ಪ್ರಕಾರದ, ವಚಃ-ಮಾತುಗಳನ್ನು ಶ್ರುತ್ವಾ-ಕೇಳಿ, ಸಃ-ಆ, ಭೂಪತಿಃ-ರಾಜನು, ತಾನ್-ಅವರನ್ನು ಕುರಿತು, ಉವಾಚ-ಮಾತನಾಡಿದನು (ಹೇಳಿದನು); (ಏನೆಂದರೆ), ವಯಂ-ನಾವು, ಮಹಾವಿಷ್ಣೋ-ಮಹಾವಿಷ್ಣುವಿನ, ಭಕ್ತತ್ವೇನ-ಭಕ್ತರೆಂಬುದಾಗಿ, ಯುಷ್ಮಾಕಂ-ನಿಮ್ಮೆಲ್ಲರಿಗೆ, ಸಂಮತಾಃ-ಸಮ್ಮತರಾಗಿದ್ದೇವೆ; ತಸ್ಯ-ಆತನಿಗೆ (ಶ್ರೀವಿಷ್ಣುವಿಗೆ), ವಿಪ್ರಿಯಂ-ಅಪ್ರಿಯವೂ, ಭಕ್ತಿವಿರೋಧಿಕೃತ್-ಭಕ್ತಿಗೆ ವಿರುದ್ಧವೂ (ಆದ), ತತ್ ಕರ್ಮ-ಆ (ಅಗ್ನಿಯನ್ನು ಉಪಶಮನಗೊಳಿಸುವ) ಕರ್ಮವನ್ನು, ಕಥಂ-ಹೇಗೆ, ಕುರ್ಮಃ-ಮಾಡುವೆವು; ಭಕ್ತಿ-ಭಕ್ತಿಯು, ಪರಮಃ ಸ್ನೇಹಃ-ಉತ್ಕೃಷ್ಟವಾದ ಪ್ರೀತಿಯು, ವಿಪ್ರಿಯಾಚರಣಾತ್-(ಪರಮಸಖನಿಗೆ) ಅಪ್ರಿಯವನ್ನಾಚರಿಸುವುದರಿಂದ, ಕಥಂ-ಹೇಗೆ, ಅನಪಾಯಃ-ಅಪಾಯದ ಪರಿಹಾರವು, ಭವೇತ್-ಉಂಟಾಗುತ್ತದೆ?; ತಸ್ಮಾತ್-ಆದ್ದರಿಂದ, ಹರೇಃ-ಶ್ರೀಹರಿಗೆ, ವಿಪ್ರಿಯಂ-ಅಪ್ರಿಯವಾದುದನ್ನು, ನ ಇಚ್ಛಾಮಃ-ನಾವು ಇಚ್ಛಿಸುವುದಿಲ್ಲ (ಮನಸಾ ಸಹಾ ಚಿಂತಿಸುವುದಿಲ್ಲ); ಸಃ ಏಕಃ-(ಸ್ವತಂತ್ರನಾದ) ಆತನೇ, ವಿಶ್ವಂ-ಜಗತ್ತನ್ನು ಸೃಜತೇ-ಸೃಷ್ಟಿಸುತ್ತಾನೆ; ಪಾಲಯತಿ-ರಕ್ಷಿಸುತ್ತಾನೆ; ಅಪಿ-ಮತ್ತು ಹಂತಿ ಚ-(ಸಂಹಾರವನ್ನು) ನಾಶವನ್ನು ಮಾಡುತ್ತಾನೆ.

---

ಭಕ್ತಿಯನ್ನು ವಿರೋಧಿಸಿ, ಆತನಿಗೆ ಅಪ್ರಿಯವಾದ, ಈ ಅಗ್ನಿಯನ್ನು ಉಪಶಮನಗೊಳಿಸುವ, ಕರ್ಮವನ್ನು ಹೇಗೆ ಆಚರಿಸುವೆವು? ಉತ್ಕೃಷ್ಟವಾದ ಸ್ನೇಹವೇ ಭಕ್ತಿಯು; ಶ್ರೀಹರಿಗೆ ಅಪ್ರಿಯವಾದುದನ್ನು (ಆತನ ಇಚ್ಛೆಗೆ ವಿರುದ್ಧವಾದುದನ್ನು) ಆಚರಿಸುವುದರಿಂದ ಈ ವಿಪತ್ತಿನಿಂದ ಪಾರಾಗುವುದು ಹೇಗೆ ಸಾಧ್ಯವಾದೀತು? ಆದ್ದರಿಂದ ಈ ಅಗ್ನ್ಯುಪಶಾಮಕವ್ಯಾಪಾರವನ್ನು ಮನಸ್ಸಿನಿಂದ ಸಹ ಚಿಂತಿಸಲಾರೆವು; ಸ್ವತಂತ್ರನಾದ ಶ್ರೀವಿಷ್ಣುವೇ ವಿಶ್ವವನ್ನು ಸೃಜಿಸುತ್ತಾನೆ; ಪಾಲಿಸುತ್ತಾನೆ ಮತ್ತು ನಾಶಮಾಡುವವನೂ ಆತನೇ ಆಗಿದ್ದಾನೆ (೭೪-೭೬). ಶ್ರೀಹರಿಯು, ಯಾವಯಾವ ಕಾಲದಲ್ಲಿ ಏನೇನನ್ನು ಇಚ್ಛಿಸುವನೋ, ಆಯಾ ಕಾಲದಲ್ಲಿ ಅದನ್ನು ಮಾಡುತ್ತಾನೆ; ಈಗ ಮಿಥಿಲಾನಗರದಹನವೇ ಆತನ ಇಚ್ಛೆಯಾಗಿದ್ದರೆ, ಅಲ್ಲಿರುವ ಎಲ್ಲ ಪ್ರಜೆಗಳ

**ಯದ್ಯದ್ಯದಾ ಯದಾ ವಾಂಛೇತತ್ತತ್ಕುರ್ಯಾತ್ತದಾತದಾ ।**
**ಇದಾನೀಂ ಯದಿ ತಸ್ಯೇಚ್ಛಾ ಮಿಥಿಲಾ ದಹನೇ ಹರೇಃ ॥ ೭೭ ॥**

**ತತ್ರಸ್ಥಾನಾಂ ಚ ಸಂಹಾರಸ್ತದೇವೇಷ್ಟಂ ಹಿ ನಃ ಪರಂ ।**
**ಅನಂತಂ ಬ್ರೂತಮಾವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ ॥ ೭೮ ॥**

**ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚನ ದಹ್ಯತಿ ।**
**ನ ಹ್ಯಸ್ಮಾಕಂ ಸ್ವದೇಹೇऽಪಿ ಮನಾಕ್ ಸ್ವಾತಂತ್ರ್ಯಮೀಕ್ಷ್ಯತೇ ॥ ೭೯ ॥**

**ತತ್ಕಥಂ ವಹ್ನಿಶಾಂತ್ಯರ್ಥಂ ಧೃಷ್ಟಂ ತತ್ಕುರ್ಮಹೇ ವಯಂ ।**

ಯದಾ ಯದಾ-ಯಾವ ಯಾವ ಕಾಲದಲ್ಲಿ, ಯದ್ಯತ್-ಯಾವುಯಾವುದನ್ನು ವಾಂಛೇತ್-ಇಚ್ಛೆಸುವನೋ, ತದಾ ತದಾ-ಆಯಾ ಕಾಲದಲ್ಲಿ ತತ್ತತ್-ಅದನ್ನು ಕುರ್ಯಾತ್-ಮಾಡುತ್ತಾನೆ; ಇದಾನೀಂ-ಈಗ, ಮಿಥಿಲಾದಹನೇ-ಮಿಥಿಲಾನಗರ ದಹನದಲ್ಲಿ ತಸ್ಯ-ಆ(ಸ್ವತಂತ್ರನಾದ), ಹರೇಃ-ಶ್ರೀಹರಿಯ, ಯದಿ ಇಚ್ಛಾ-ಇಚ್ಛೆಯಿರುವುದಾದರೆ, ತತ್ರಸ್ಥಾನಾಂ-ಅಲ್ಲಿರುವ (ನಗರದಲ್ಲಿರುವ) ಪ್ರಜೆಗಳ, ಸಂಹಾರಃ-ಸಂಹಾರವು, ಚ-ಆತನಿಂದ ಇಚ್ಛಿತವಾದರೆ, ನಃ-ನಮಗೂ, ತದೇವ-ಅದೇ, ಪರಂ ಇಷ್ಟಂ-ಅತ್ಯಪೇಕ್ಷಿತವಾದುದು; ವಿತ್ತಂ-(ಅಗ್ನಿಯಿಂದ ನಷ್ಟವಾಗುವ) ಸಂಪತ್ತನ್ನು, ಅನಂತಂ-ಅನಂತ(ಅಪಾರ-ಅತ್ಯಧಿಕ)ವೆಂದು, ಮಾ ಬ್ರೂತ-ಹೇಳಬೇಡಿರಿ; ಯಸ್ಯ ಮೇ-ಯಾರ ಭೃತ್ಯನಾದ ನನಗೆ (ನನ್ನದೆಂಬ), ಕಿಂಚನ-ಯಾವುದೂ (ಅಲ್ಪವೂ), ನ ಅಸ್ತಿ-ಇರುವುದಿಲ್ಲ (ಎಲ್ಲವೂ ಸರ್ವಸ್ವಾಮಿಯಾದ ಆ ಶ್ರೀಹರಿಯದೇ-ನನ್ನದೆಂಬ ಲೇಶವೂ ಇಲ್ಲ); ಮಿಥಿಲಾಯಾಂ-ಮಿಥಿಲಾನಗರವು, ದೀಪ್ತಾಯಾಂ-ಪ್ರಜ್ವಲಿಸುತ್ತಿರಲು, (ಉರಿಯುತ್ತಿರಲು), ಮೇ-ನನ್ನ ಕಿಂಚನ-ಯಾವ ವಸ್ತುವೂ, ನ ದಹ್ಯತಿ-

---

ಸಂಹಾರವೂ ಆತನಿಗೆ ಅಪೇಕ್ಷಿತವಾಗಿದ್ದರೆ, ನಮಗೂ ಅದು ಅತ್ಯಂತ ಇಷ್ಟವೇ ಸರಿ; ಅಗ್ನಿಯಿಂದ ಅಪಾರವಾದ ಧನಾದಿಸಂಪತ್ತಿನ ವಿನಾಶವಾಗುತ್ತದೆನ್ನಬೇಡಿರಿ; ಆತನ ಸೇವಕನಾದ ನನ್ನದೆಂಬ ಯಾವ ಅಲ್ಪವಸ್ತುವೂ ಇಲ್ಲ; ಮಿಥಿಲಾನಗರಿಯು ದಹಿಸಿಹೋದರೆ, ನನ್ನದೆಂಬ (ನನ್ನ ಸ್ವಾಮ್ಯಕ್ಕೊಳಪಟ್ಟ)ಯಾವುದೊಂದು ಅಲ್ಪವಸ್ತುವೂ ದಹಿಸುವುದಿಲ್ಲ; ನಮ್ಮದೆಂಬ ಈ ದೇಹದಲ್ಲಿ ಸಹ ನಮಗೆ ಅತ್ಯಲ್ಪವಾದ ಸ್ವಾತಂತ್ರ್ಯವೂ ಇರುವುದಿಲ್ಲ; ಇದನ್ನು ತಿಳಿದ ನಾನು, ಅಗ್ನಿಯನ್ನು ಉಪಶಮನಗೊಳಿಸುವ, (ಶ್ರೀಹರೀಚ್ಛೆಗೆ ವಿರೋಧವಾದ) ಧಾರ್ಷ್ಟ್ಯಕರ್ಮವನ್ನು ಹೇಗೆ ತಾನೆ ಕೈಗೊಳ್ಳುವೆನು? ಅದಕ್ಕಾಗಿ ನಿಶ್ಚಯವಾಗಿ ಯತ್ನಿಸುವುದಿಲ್ಲ (೭೭-೭೯). ಯಾವ ಪ್ರಾಣಿಗೂ ಅದರ ದೇಹವು ತನ್ನ ಇಚ್ಛೆಯಿಂದ ದೊರಕುವುದಿಲ್ಲ; ತನ್ನ ಇಚ್ಛೆಯಿದ್ದಷ್ಟು ಕಾಲ, ಅದು ಅಲ್ಲಿ

ಸುಡುತ್ತಿರುವುದಿಲ್ಲ; ಅಸ್ಮಾಕಂ-ನಮಗೆ, ಸ್ವದೇಹೇಽಪಿ-ನಮ್ಮದೆಂಬ ದೇಹದಲ್ಲಿ ಸಹ, ಮನಾಕ್-ಅತ್ಯಲ್ಪವಾದ, ಸ್ವಾತಂತ್ರ್ಯಂ-ಸ್ವಾತಂತ್ರ್ಯವು (ಸ್ವಾಮಿತ್ವವು-ಸ್ವೇಚ್ಛಾನುಸಾರ ಅದನ್ನು ನಡೆಸಿಕೊಳ್ಳುವ ಸಾಮರ್ಥ್ಯವು), ನ ಈಕ್ಷ್ಯತೇ-ಕಾಣುವುದಿಲ್ಲ ತತ್-ಆದ್ದರಿಂದ, ವಹ್ನಿಶಾಂತ್ಯರ್ಥಂ-ಬೆಂಕಿಯನ್ನು ಆರಿಸುವುದಕ್ಕಾಗಿ, ವಯಂ-ನಾವು, ಧೃಷ್ಟಂ ತತ್-ಧಾರ್ಷ್ಟ್ಯ(ಸಾಹಸಕರ್ಮ)ವನ್ನು ಕಥಂ-ಹೇಗೆ, ಕುರ್ಮಹೇ-ಮಾಡುವೆವು? (ಮಾಡಲಾರೆವು).

ನ ಹ್ಯಯಂ ಸ್ವೇಚ್ಛಯಾ ದೇಹಃ ಪ್ರಾಪ್ಯತೇ ಸರ್ವಜಂತುಭಿಃ ॥ ೮೦ ॥

ತಿಷ್ಠತಿ ಸ್ವೇಚ್ಛಯಾ ನೈವ ನ ಪ್ರಯಾತಿ ನಿಜೇಚ್ಛಯಾ ।
ಸ್ವಯಮತ್ತಿ ಸ್ವಕಾಂ ಜಿಹ್ವಾಂ ಸುಪ್ತೋ ಯಾತಿ ವದತ್ಯಪಿ ॥ ೮೧ ॥

ನಿಜಶ್ವಾಸವಿಮೋಕ್ಷೇಽಪಿ ನ ಹ್ಯಸ್ಯಾಸ್ತಿ ಸ್ವತಂತ್ರತಾ ।

ಅಯಂ-ಈ, ದೇಹಃ-ದೇಹವು, ಸರ್ವಜಂತುಭಿಃ-ಎಲ್ಲ ಪ್ರಾಣಿಗಳಿಂದ (ಅವರವರ ದೇಹಗಳು), ಸ್ವೇಚ್ಛಯಾ-ತನ್ನ ಇಚ್ಛೆಯಿಂದ, ನ ಪ್ರಾಪ್ಯತೇ-ಹೊಂದಲ್ಪಡುವುದಿಲ್ಲ; ಹಿ-ಹೀಗೆಂಬುದು ಎಲ್ಲರ ಅನುಭವಸಿದ್ಧವಷ್ಟೆ; (ಜೀವಃ-ಜೀವನು), ಸ್ವೇಚ್ಛಯಾ-ತನ್ನ ಇಚ್ಛೆಯಿಂದ, ನೈವ ತಿಷ್ಠತಿ-(ಆ ದೇಹದಲ್ಲಿ) ಇರುವುದಿಲ್ಲ (ಮತ್ತು), ನಿಜೇಚ್ಛಯಾ-ತನ್ನ ಇಚ್ಛೆಯಿಂದ, ನ ಪ್ರಯಾತಿ-(ಆ ದೇಹವನ್ನು ಬಿಟ್ಟು) ಹೊರಡುವುದೂ ಇಲ್ಲ; (ಅಥವಾ) ದೇಹವು ಜೀವನ ಇಚ್ಛೆಯಂತೆ ಇರುವುದಿಲ್ಲ (ಮತ್ತು) ಬೇಡವೆಂದರೆ ಹೋಗುವುದೂ ಇಲ್ಲ; ಸ್ವಯಂ-ತಾನೇ (ಜೀವನು ತನ್ನ ಇಚ್ಛೆಯಿಲ್ಲದೇ), ಸ್ವಕಾಂ-ತನ್ನ, ಜಿಹ್ವಾಂ-ನಾಲಿಗೆಯನ್ನು, ಅತ್ತಿ-ತಿನ್ನುತ್ತಾನೆ (ತನ್ನ ಹಲ್ಲುಗಳಿಂದ ಕಚ್ಚುತ್ತಾನೆ); ಸುಪ್ತಃ-ಮಲಗಿದ್ದವನು, ಯಾತಿ-(ತನ್ನ ಇಚ್ಛೆಯಿಲ್ಲದೇ) ನಡೆದಾಡುತ್ತಾನೆ; ಅಪಿ-ಮತ್ತು, ವದತಿ-ಮಾತನಾಡುತ್ತಾನೆ; ನಿಜಶ್ವಾಸಮೋಕ್ಷೇಽಪಿ-ಉಸಿರಾಡುವುದರಲ್ಲಿ ಸಹ, ಅಸ್ಯ-ಈ ಜೀವನಿಗೆ, ಸ್ವತಂತ್ರತಾ-ಸ್ವಾತಂತ್ರ್ಯವು, ನಾಸ್ತಿ ಹಿ-ಇಲ್ಲವೆಂಬುದೂ ಸಿದ್ಧವೇ.

---

ಇರುವುದೂ ಇಲ್ಲ ಮತ್ತು ಇಚ್ಛಾನುಸಾರ (ಬೇಡವಾದಾಗ) ಅದು ತೊಲಗುವುದೂ ಇಲ್ಲ; ಜೀವನು ತನ್ನ ನಾಲಿಗೆಯನ್ನು ತಾನೇ (ಇಚ್ಛಿಸದಿದ್ದರೂ)ಕಚ್ಚುತ್ತಾನೆ; ಮಲಗಿರುವ ಪುರುಷನು ತನ್ನ ಇಚ್ಛೆಯಿಲ್ಲದೆ (ತನಗೆ ತಿಳಿಯದೇ)ಎದ್ದುಹೋಗುತ್ತಾನೆ, ಮಾತನಾಡುತ್ತಾನೆ, ಶ್ವಾಸಬಿಡುವುದರಲ್ಲಿ ಸಹ ಜೀವನು ಸ್ವತಂತ್ರನಲ್ಲವೆಂಬುದು ಸರ್ವಾನುಭವಸಿದ್ಧವಾಗಿದೆ (೮೦-೮೧). ಶ್ರೀಹರಿಯು ಸ್ವಾಮ್ಯಕ್ಕೆ ಒಳಪಟ್ಟು ದೇಹಧನಾದಿಸಕಲ ವಸ್ತುಗಳಲ್ಲಿ ಮನುಷ್ಯರು ಹೊಂದಿರುವ ಅಹಂಮಮಕಾರಗಳನ್ನು ಏನೆಂದು ನಾವು ವರ್ಣಿಸಬಹುದು! ಮಾನವನ ಈ ಧಾರ್ಷ್ಟ್ಯವು (ಶ್ರೀಹರಿಯ

**ಅಹೋ ಧಾರ್ಷ್ಟ್ಯಮಹೋ ಧಾರ್ಷ್ಟ್ಯಂ ಕಿಂ ವಯಂ ವರ್ಣಯಾಮಹೇ ।**
**ಮಹೇಶ್ವರಸ್ಯ ವಸ್ತೂನಾಂ ಯದಹಂ ಮಮತಾ ನೃಣಾಂ ।**

ಮಹೇಶ್ವರಸ್ಯ-ಶ್ರೀಹರಿಯ, ವಸ್ತೂನಾಂ-(ದೇಹ ಧನಾದಿ) ವಸ್ತುಗಳ (ವಸ್ತುಗಳಲ್ಲಿ), ಯತ್-ಯಾವ, ನೃಣಾಂ-ಮನುಷ್ಯರ, ಅಹಂ ಮಮತಾ-ಅಹಂ ಮಮಕಾರವೋ (ನಾನು ನನ್ನದೆಂಬ ಬುದ್ಧಿಯೋ), (ತತ್-ಅದನ್ನು), ವಯಂ-ನಾವು, ಕಿಂ ವರ್ಣಯಾಮಃ-ಏನೆಂದು ವರ್ಣಿಸೋಣ!, ಅಹೋ ಧಾರ್ಷ್ಟ್ಯಂ-ಈ (ಮನುಷ್ಯನ) ಧೈರ್ಯವು (ಶ್ರೀಹರಿಯ ವಸ್ತುಗಳನ್ನು ತನ್ನದೆಂದು ತಿಳಿಯುವ ಸಾಹಸವು) ಅತ್ಯಾಶ್ಚರ್ಯವೇ ಸರಿ.

---

ಸ್ವಾಮ್ಯವನ್ನು ವಿರೋಧಿಸುವ ಈ ಧೈರ್ಯವು—ಸಾಹಸವು) ಅತ್ಯಾಶ್ಚರ್ಯವೇ ಸರಿ (೮೨). ಕಟ್ಟಿಗೆ ಗೊಂಬೆಯಂತಿದೆ-ಪ್ರಾಣದೇಹ; ಜೀವನಿಂದ ವಿಯೋಗಿಸಲ್ಪಟ್ಟಾಗ, ಮಲವೋ (ಅನ್ಯಪ್ರಾಣಿಗಳು ಭಕ್ಷಿಸಿದರೆ, ಅಥವಾ ಕೊಳೆತುಹೋದರೆ), ಭಸ್ಮವೋ (ಸುಟ್ಟರೆ), ಆಗುತ್ತದೆ; ಹೀಗಿರುವ ಜಡದೇಹವು ಪರಾಧೀನವೂ ಆಗಿದೆ; ಜಡವೂ, ಪರಾಧೀನವೂ ಆದ ಇಂತಹ ದೇಹದಲ್ಲಿ ಅಹಂಬುದ್ಧಿಯನ್ನು ಹೊಂದುವುದೂ, ಶ್ರೀಹರೀಚ್ಛಾಧೀನವಾದ ಉತ್ಪತ್ತಿ ವೃದ್ಧಿ ವಿನಾಶಾದಿಗಳುಳ್ಳ ಈ ದೇಹಗಳೂ, ಅವುಗಳನ್ನಾಶ್ರಯಿಸಿರುವ, ತಾನೂ ಪತ್ನೀಪುತ್ರಾದಿಗಳೆಂಬ ಜೀವರೂ, ತನ್ನ ಅಧೀನರೆಂದು ತಿಳಿಯುವುದೂ (ಸ್ವವಶರೆಂಬ ಮಮತ್ವಬುದ್ಧಿಯನ್ನು ಹೊಂದುವುದೂ), ವಸ್ತುಸ್ಥಿತಿಗೆ ವಿರುದ್ಧವಾದುದು;[1] ಅಜ್ಞಾನಿಗಳ ಈ ಅಹಂಮಮಕಾರಗಳು ಆಶ್ಚರ್ಯವೇ ಸರಿ (೮೩.-೮೪). ಪ್ರತ್ಯಕ್ಷ ತೋರುವ ಮತ್ತು ಶಾಸ್ತ್ರಗಳಿಂದ ಕೇಳಿಬರುವ (ಇಹಪರಲೋಕಾತ್ಮಕವಾದ) ಎಲ್ಲವೂ (ಜಗತ್ತೆಲ್ಲವೂ), ಶ್ರೀಹರಿಯ ಆವಾಸವಾಗಿದೆ-

---

1. ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ । ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ । ...ಸ ಏವ ಗೋಖರಃ ॥ (ಭಾಗವತ): —ವಾತ, ಪಿತ್ತ ಶ್ಲೇಷ್ಮಗಳಿಂದ ಕೂಡಿದ ಜಡದೇಹವೇ ತಾನೆಂದು ತಿಳಿಯುವವನೂ (ದೇಹ ಮತ್ತು ಇತರರನ್ನು ಭಿನ್ನವಸ್ತುಗಳೆಂದು ತಿಳಿಯದವನೂ), ಭಾರ್ಯಾದಿ ಸ್ವಜನರು ತನ್ನವರೆಂಬ (ತನ್ನ ಅಧೀನರೆಂಬ) ಅಭಿಮಾನವುಳ್ಳವನೂ, ಜಡಪ್ರತಿಮೆಗಳೇ ಪೂಜಾರ್ಹಗಳೆಂದು ತಿಳಿಯುವವನೂ, ಮೂರ್ಖನೇ (ಕತ್ತೆಯೇ) ಸರಿ; ಎಂದೂ, 'ತನುವೆ ತಾನೆಂಬುವನು ಸತಿಸುತಾದಿಗಳೆನ್ನವೆಂಬುವ...' ಇತ್ಯಾದಿ ಹರಿಕಥಾಮೃತಸಾರದಲ್ಲಿಯೂ ಇಲ್ಲಿ ಉಕ್ತವಾಗಿರುವ ಪ್ರಮೇಯವೇ ಪ್ರತಿಪಾದಿಸಲ್ಪಟ್ಟಿದೆ. ತನ್ನ ಪರಾಧೀನತೆಯ ಅನುಭವವು ಸದಾ ಉಂಟಾಗುತ್ತಿದ್ದರೂ, ತಾನು ಸ್ವತಂತ್ರನೆಂದು ತಿಳಿಯುವುದೂ (ಸ್ವತಂತ್ರಕರ್ತೃತ್ವವನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದೂ), 'ಅಹಂಕಾರ'ವೇ: ಜಡದೇಹವೇ ತಾನೆಂದು ತಿಳಿಯುವುದೂ 'ಅಹಂಕಾರ'ವೆಂದು ವ್ಯವಹರಿಸಲ್ಪಡುತ್ತದೆ. ದೇಹಗಳು ಮತ್ತು ದೇಹಿಗಳಾದ ಜೀವಚೇತನರು ಸಹ, ಸರ್ವಪ್ರಕಾರದಿಂದ ಸ್ವತಂತ್ರನಾದ ಶ್ರೀಹರಿಯ ಅಧೀನರೇ ಆಗಿರುವರೆಂಬುದು ಉಕ್ತಪ್ರಮೇಯದ ಮುಖ್ಯಭಾವ.

**ಕಾಷ್ಠಾದಿಪುತ್ತಲೀಪ್ರಾಯೋ ವಿಡ್ಭಸ್ಮಪರಿಪಾಕವಾನ್ ॥ ೮೩ ॥**

**ದೇಹೋಽಯಂ ದೃಶ್ಯತೇ ತಸ್ಮಿನ್ ಪರತಂತ್ರೇಽಪ್ಯಹಂಮತಿಃ ।**
**ಉತ್ಪದ್ಯಂತೇ ವಿವರ್ಧಂತೇ ನಶ್ಯಂತ್ಯಪಿ ಹರೀಚ್ಛಯಾ ॥ ೮೪ ॥**
**ತತ್ರ ಸ್ತ್ರೀದೇಹಪುತ್ರಾದೌ ಮಮತಾಽಜ್ಞಾನಿನಾಮಹೋ ।**

ಅಯಂ-ಈ, ದೇಹಃ-ದೇಹವು, ಕಾಷ್ಠಾದಿಪುತ್ತಲೀಪ್ರಾಯಃ-ಕಟ್ಟಿಗೆ ಮೊದಲಾದ್ದರಿಂದ ಮಾಡಿದ ಗೊಂಬೆಯಂತೆ; ವಿಡ್ಭಸ್ಮಪರಿಪಾಕವಾನ್-ಮಲ ಅಥವಾ ಬೂದಿಯ ರೂಪವನ್ನು ಹೊಂದತಕ್ಕದ್ದು; ದೃಶ್ಯತೇ-(ಹೀಗೆಂಬುದು) ಪ್ರತ್ಯಕ್ಷಸಿದ್ಧವಾಗಿದೆ; ಪರತಂತ್ರೇ-ಪರಾಧೀನವಾದ, ತಸ್ಮಿನ್-ಆ ದೇಹದಲ್ಲಿ ಅಹಂಮತಿಃ-ನಾನೆಂಬ ಬುದ್ಧಿಯು, ದೃಶ್ಯತೇ-(ಲೋಕದ ಜನರಲ್ಲಿ) ಕಂಡುಬರುತ್ತದೆ; ಹರೀಚ್ಛಯಾ-ಶ್ರೀಹರಿಯ ಇಚ್ಛೆಯಿಂದ, (ಈ ದೇಹಗಳು), ಉತ್ಪದ್ಯಂತೇ-ಹುಟ್ಟುತ್ತವೆ, ವಿವರ್ಧಂತೇ-ಬೆಳೆಯುತ್ತವೆ, ಅಪಿ-ಮತ್ತು ನಶ್ಯಂತಿ-ನಾಶವಾಗುತ್ತವೆ; ತತ್ರ-ಹೀಗೆ ಸರ್ವಥಾ ಶ್ರೀಹರೀಚ್ಛಾಧೀನವಾದ, ಸ್ತ್ರೀದೇಹಪುತ್ರಾದೌ-ಪತ್ನೀಪುತ್ರದೇಹಾದಿಗಳಲ್ಲಿ ಅಜ್ಞಾನಿನಾಂ-ಅಜ್ಞಜನರ, ಮಮತಾ-ಮಮತ್ವ ಬುದ್ಧಿಯು, ಅಹೋ-ಆಶ್ಚರ್ಯವು.

**ಈಶಾವಾಸ್ಯಮಿದಂ ಸರ್ವಂ ದೃಶ್ಯತೇ ಶ್ರೂಯತೇಽಪಿ ಯತ್ ॥ ೮೫ ॥**

**ತೇನ ದತ್ತೇನ ಪುಷ್ಯೇತ ವೃಥಾ ತೃಷ್ಣಾನ್ಯವಸ್ತುನಿ ।**
**ದದಾತ್ವೇಷ ಹರತ್ವೇಷ ಜೀವಯತ್ವೇಷ ಹ ಸ್ವಯಂ ॥ ೮೬ ॥**
**ಯದ್ಯಸ್ಯ ಮಹಾವಿಷ್ಣೋಃ ಪ್ರಿಯಂ ಶ್ರೇಷ್ಠತಮಂ ಮಮ ।**

ಯತ್-ಯಾವುದು, ದೃಶ್ಯತೇ-ಕಾಣಲ್ಪಡುತ್ತದೆಯೋ, ಅಪಿ-ಮತ್ತು ಶ್ರೂಯತೇ-(ಶಾಸ್ತ್ರಗಳಲ್ಲಿ) ಕೇಳಲ್ಪಡುತ್ತದೆಯೋ, ಇದಂ ಸರ್ವಂ-ಈ ಎಲ್ಲವೂ, ಈಶಾವಾಸ್ಯಂ-ಶ್ರೀಹರಿಯ ವಾಸಯೋಗ್ಯವಾದುದು; (ಇಹಪರಲೋಕಗಳನ್ನೊಳಗೊಂಡ, ವಿಶ್ವವು

---

ಆತನಿಲ್ಲದ ವಸ್ತುವಿಲ್ಲ-ಸ್ಥಳವಿಲ್ಲ. ವಿಶ್ವವ್ಯಾಪ್ತನೂ, ವಿಶ್ವನಿಯಾಮಕನೂ ಆದ ಶ್ರೀಹರಿಯು ಕೊಟ್ಟದ್ದರಿಂದ ಮಾತ್ರ ತೃಪ್ತನಾಗಬೇಕು; ಅನ್ಯರ ವಸ್ತುಗಳನ್ನು ಆಶಿಸುವುದು ವ್ಯರ್ಥ-ಅವು ಯಾವುವೂ (ಆತನೇ ಕೊಡದ ನಮಗೆ ಲಭಿಸುವುದೇ ಇಲ್ಲ); ಶ್ರೀಹರಿಯು ತನ್ನ ಇಚ್ಛೆಯಂತೆ ಕೊಡಲಿ, ನಾಶಮಾಡಲಿ ಅಥವಾ ಉಳಿಸಲಿ; ನನಗೆ ಅತಿ ಪ್ರಿಯನಾದ ಶ್ರೀಮಹಾವಿಷ್ಣುವಿಗೆ ಇಷ್ಟವಾದುದೇ (ಆತನ ಇಚ್ಛೆಗೆ ಬಂದುದೇ) ನನಗೂ ಇಷ್ಟತಮವು (ಶ್ರೀಹರೀಚ್ಛೆಯಿಂದಲೇ ರಚಿಸುತ್ತಿರುವ ಈ ಅಗ್ನಿಯನ್ನು ಆರಿಸುವುದರಲ್ಲಿ ನಾನು ಪ್ರಯತ್ನನಾಗಲಾರೆನು)(೮೫-೮೬). ನಿಮ್ಮ ಮಾತುಗಳನ್ನು ಕೇಳುವುದರಲ್ಲಿ ಹೋದ ಕಾಲವು ಗತಿಸಿಯೇ ಹೋಯಿತು- ತಿರುಗಿ ಬರುವದಿಲ್ಲ; ನನ್ನ ಆಯುಷ್ಯದ ಬಹುಭಾಗವು

ಶ್ರೀಹರಿಯ ಆವಾಸವಾಗಿರೆ-ವಾಸಸ್ಥಾನವಾಗಿರೆ-ಶ್ರೀಹರಿಯು ಸರ್ವತ್ರ ಇದ್ದಾನೆ); ತೇನ-ಆತನಿಂದ (ಶ್ರೀಹರಿಯಿಂದ), ದತ್ತೇನ-(ನಮ್ಮ ಉಪಭೋಗಕ್ಕಾಗಿ) ಕೊಡಲ್ಪಟ್ಟದ್ದರಿಂದ, ಪುಷ್ಯೇತ-ಪೂರ್ಣರಾಗಬೇಕು (ತೃಪ್ತರಾಗಬೇಕು); ಅನ್ಯ ವಸ್ತುನಿ-(ಅನ್ಯರಿಗೆ ದತ್ತವಾದ) ಅನ್ಯರ ವಸ್ತುವಿನಲ್ಲಿ ತೃಷ್ಣಾ-ಆಶೆಯು, ವೃಥಾ-ವ್ಯರ್ಥವು; ಏಷಃ-ಶ್ರೀಹರಿಯು (ಇಚ್ಛಾಮೂರ್ತಿಯು-ಸತ್ಯಸಂಕಲ್ಪನು), ಸ್ವಯಂ-ತಾನೇ (ತನ್ನ ಇಚ್ಛೆಯಂತೆ), ದದಾತು-ಕೊಡಲಿ, ಏಷಃ-ಈತನು, ಹರತು-ಅಪಹರಿಸಲಿ (ತೆಗೆದು ಕೊಳ್ಳಲಿ), ಏಷಃ-ಈತನೇ, ಜೀವಯತು-ಉಳಿಸಲಿ (ಬದುಕಿಸಲಿ), ಮತ್ಪ್ರಿಯಸ್ಯ-ನನಗೆ ಪ್ರಿಯನಾದ, ಮಹಾವಿಷ್ಣೋಃ-ಶ್ರೀಮಹಾವಿಷ್ಣುವಿಗೆ, ಪ್ರಿಯಂ-ಪ್ರಿಯವಾದುದು (ಇಷ್ಟವಾದುದು), ಮಮ-ನನಗೆ, ಶ್ರೇಷ್ಠತಮಂ-ಪ್ರಿಯತಮವು (ಅತಿಶಯವಾಗಿ ಅಪೇಕ್ಷಿತವು).

**ಗತಂ ಗತಮಿದಂ ಹಾಹಾ ಮಮಾಯುರ್ನ ವೃಥಾ ಭವೇತ್ ॥ ೮೭ ॥**

**ಅಂತರಾಯೋ ಭವೇನ್ನಾತ್ರ ದುರ್ಲಭೇ ಶ್ರವಣೇ ಹರೇಃ ।**

ಹಾಹಾ-ಅತಿದುಃಖಕರವು! ಇದಂ-ಈ ಕ್ಷಣವು (ಅಮಾತ್ಯರ ಗುಣ ಕೇಳುವುದರಲ್ಲಿ ಹೋದ ಕಾಲವು), ಗತಂ ಗತಂ-ಕಳೆದುಹೋಯಿತು); ಮಮ-ನನ್ನ, ಆಯುಃ-ಆಯುಷ್ಯವು (ಅದರ ಎಷ್ಟು ಭಾಗವೂ), ವೃಥಾ-ವ್ಯರ್ಥವಾದುದು, ನ ಭವೇತ್-ಆಗದಿರಲಿ; ಅತ್ರ-ಆಯುಷ್ಯದಲ್ಲಿ (ಅಥವಾ ಇಲ್ಲಿ-ಈಗ ಶ್ರೀಶುಕರೇ ಬಂದಿರುವಾಗ), ದುರ್ಲಭೇ-(ಅನ್ಯತ್ರ) ದುರ್ಲಭವಾದ (ಅನ್ಯದೇಹಗಳಲ್ಲಿ ದೊರೆಯದ), ಹರೇಃ-ಶ್ರೀಹರಿಯ, ಶ್ರವಣೇ-(ಮಹಿಮೆಗಳ) ಶ್ರವಣದಲ್ಲಿ, ಅಂತರಾಯಃ-ವಿಘ್ನವು, ಮಾ ಭವೇತ್-ಉಂಟಾಗದಿರಲಿ (ಅಗ್ನಿಯನ್ನು ಉಪಶಮನಗೊಳಿಸುವ ಕಾರ್ಯದಲ್ಲಿ ಪ್ರವೃತ್ತರಾಗುವುದರಿಂದ ಕಥಾಶ್ರವಣಕ್ಕೆ ವಿಘ್ನವಾಗದಿರಲಿ).

**ಯಃ ಸದಾ ಸರ್ವಕಾಲೇಷು ಸರ್ವೇಚ್ಛಾನಾಂ ಚ ಪೂರಕಃ ॥ ೮೮ ॥**

---

ವ್ಯರ್ಥವಾಗದಿರಲಿ; ಮನುಷ್ಯದೇಹದಲ್ಲಿ ಸಹ ದುರ್ಲಭವಾದ (ಮಹಾಪುಣ್ಯದಿಂದ ಮಾತ್ರ ಲಭಿಸುವ) ಶ್ರೀಹರಿಯ ಕಥಾಶ್ರವಣದಲ್ಲಿ ಯಾವ ವಿಘ್ನವೂ ಉಂಟಾಗದಿರಲಿ; ಆದ್ದರಿಂದ ನಿಮ್ಮ ಪ್ರಾರ್ಥನೆಯಂತೆ ನಗರವನ್ನು ಅಗ್ನಿಯಿಂದ ರಕ್ಷಿಸುವ ಕಾರ್ಯದಲ್ಲಿ ಪ್ರವೃತ್ತನಾಗಲಾರೆನು(೮೭). ಅನಾದ್ಯನಂತಕಾಲದಲ್ಲಿ ಜೀವನ ನಿತ್ಯಸಖನಾಗಿಯೂ, ಜೀವನ ಸರ್ವಾಪೇಕ್ಷಿತಗಳನ್ನು ಪೂರ್ಣಗೊಳಿಸುವವನೂ, ಆಗಿರುವ ಶ್ರೀಹರಿಗೆ (ಗೃಹಾದಿ) ಸಂಪತ್ತುಗಳ ಚಿಂತೆಯಿಲ್ಲ-ಅಥವಾ ಅವುಗಳ ನಾಶದ ಚಿಂತೆಯೂ ಇಲ್ಲ. ಆತನು ಭಕ್ತಿಯುಕ್ತನಾದ ಮನಸ್ಸಿನಿಂದ(ಧ್ಯಾನದಿಂದ)ಮಾತ್ರ ಸೇವ್ಯನಾಗಿರುತ್ತಾನೆ; ಈಗ ನನ್ನ

**ಯದ್ವಿನಾಶಸ್ಯ ಚಿಂತಾ ನೋ ನ ಚಿಂತಾ ಯಸ್ಯ ಸಂಪದಾಂ ।**
**ಮನೋಮಾತ್ರೇಣ ಯಃ ಸೇವ್ಯಸ್ತದ್ಧ್ಯಾನಾಧಿಕೃತಂ ಮನಃ ॥ ೮೯ ॥**

ಯಃ-ಯಾವಾತನು (ಶ್ರೀಹರಿಯು), ಸರ್ವಕಾಲೇಷು-ಸದಾ (ಅನಾದ್ಯನಂತ ಕಾಲದಲ್ಲಿ ಸಹ), ಸಖಾ-ಸಖನೋ (ಜೀವನ ನಿತ್ಯಸಖನಾಗಿರುವನೋ-ತಪ್ಪದೆ ಅವನೊಡನೆ ಇರುವನೋ), ಚ-ಮತ್ತು ಸರ್ವೇಪ್ಸಾನಾಂ-(ಜೀವನ) ಸರ್ವಾಪೇಕ್ಷೆಗಳ, ಪೂರಕಃ-(ಪೂರಕನೋ) ಪೂರ್ಣಗೊಳಿಸುವವನೋ, ಯಸ್ಯ-ಯಾವಾತಗೆ, ಸಂಪದಾಂ-(ಗೃಹಾದಿ) ಐಶ್ವರ್ಯಗಳ, ಚಿಂತಾ-ಚಿಂತೆಯು, ನ-ಇಲ್ಲವೋ (ಸಂಪದಾದಿಗಳ ಪ್ರಾಪ್ತಿಗಾಗಿ ಚಿಂತೆ ಇಲ್ಲವೋ), ಯದ್ವಿನಾಶಸ್ಯ-(ಸಂಪದಗಳ) ಯಾವುಗಳ ನಾಶದ, (ನಾಶವಾಗುವುದೆಂಬ), ಚಿಂತಾ-ಚಿಂತೆಯು, ನೋ-ಇಲ್ಲವೋ, ಯಃ-ಯಾವಾತನು, ಮನೋಮಾತ್ರೇಣ-ಮನಸ್ಸಿನಿಂದಲೇ ಭಕ್ತಿಭಾವದಿಂದ ತುಂಬಿದ ಮನಸ್ಸಿನಿಂದ ಮಾತ್ರ), ಸೇವ್ಯಃ-ಸೇವಿಸಲ್ಪಡತಕ್ಕವನೋ, ಮನಃ-(ನನ್ನ) ಮನಸ್ಸು, ತದ್ಧ್ಯಾನಾಧಿಕೃತಂ-ಆತನ ಧ್ಯಾನಯುಕ್ತವಾದುದು (ಆತನ ಧ್ಯಾನಕ್ಕೆ ಮಾತ್ರ ಆಶ್ರಯಸ್ಥಾನವಾಗಿದೆ), ಆಗಿದೆ.

**ಕದಾಚಿನ್ಮಲಿತ್ಯೈಃ ಕ್ಷುದ್ರೈರನಿತ್ಯೈಃ ಕಾರ್ಯಬಂಧುಭಿಃ ।**
**ವೃಥಾ ಪಾಪಕರೈರ್ನಿತ್ಯಂ ಸಂಪದಾಮಪಹಾರಕೈಃ ॥ ೯೦ ॥**

**ಪ್ರಕಾಶತಸ್ಕರೈರ್ನಿತ್ಯಂ ಹ್ರಿಯತೇಽಸ್ಮಾತ್ಕಿಮದ್ಭುತಂ ।**
**ನಿತ್ಯಾನಂದಹರೇ ವಿಷ್ಣೋ ಪ್ರಿಯ ಪ್ರೇಷ್ಠತಮೋಽಸಿ ಮೇ ॥ ೯೧ ॥**

**ಯದ್ಯದಿಚ್ಛಸಿ ತತ್ತನ್ನಃ ಪರಮಿಷ್ಟತಮಂ ಭವೇತ್ ।**
**ಇತಿ ಬ್ರುವತಿ ರಾಜೇಂದ್ರೇ ಸರ್ವೇಽಮಾತ್ಯಗಣಾಸ್ತು ತೇ ॥ ೯೨ ॥**

**ಜಜ್ವಲುರ್ವಹ್ನಿನಾನೇನ ತತೋ ಜ್ವಾಲಾ ನೃಪಂ ಶುಕಂ ।**
**ಪಸ್ಪರ್ಶ ನ ಚಚಾಲಾಸೌ ಸ್ವಾಸನಾದೀಷದಪ್ಯಹೋ ॥ ೯೩ ॥**

---

ಮನಸ್ಸು ಆತನ ಧ್ಯಾನದಲ್ಲಿ ಆಸಕ್ತವಾಗಿದೆ(೮೮-೮೯). ಋಣಾನುಬಂಧಿಗಳೆಂಬ, ಕ್ಷುದ್ರರಾದ ಬಂಧುಜನರು(ಪತಿಸುತಾದಿಗಳು), ಅಲ್ಪಕಾಲ ಮಾತ್ರ, ಈ ಸಂಸಾರದಲ್ಲಿ ನಮ್ಮೊಂದಿಗೆ ಮಿಳಿತರಾಗಿರುತ್ತಾರೆ; ಇವರು ವ್ಯರ್ಥವಾದ ಪಾಪಕರ್ಮಗಳನ್ನಾಚರಿಸುತ್ತ ನಮ್ಮ ಧನಾದಿಸಂಪತ್ತನ್ನು ಅಪಹರಿಸುತ್ತಾರೆ; ಪ್ರಸಿದ್ಧ ಹಗಲುಕಳ್ಳರಂತಿರುವ ಇವರು ನಿತ್ಯವೂ ನಮ್ಮ ಸಂಪತ್ತನ್ನು ನಾಶಗೊಳಿಸುತ್ತಿರುವರು; ಯಾರೂ ಇವರಿಂದ ಸ್ವಸಂಪದಾದಿಗಳನ್ನು ರಕ್ಷಿಸಿಕೊಳ್ಳುವುದಿಲ್ಲ ಇದಕ್ಕಿಂತ ಆಶ್ಚರ್ಯವೇನಿದೆ? ಹೀಗಿದ್ದೂ ಶ್ರೀಹರೀಚ್ಛೆಯಿಂದ ಅಗ್ನಿದೇವನು ನಾಶಗೊಳಿಸುತ್ತಿರುವ ಗೃಹಧನಾದಿಗಳನ್ನು

**ದೇಹೇ ಚಟಚಟಾಶಬ್ದೇ ಜಾಯಮಾನೇಽಪಿ ವಹ್ನಿನಾ ।**
**ನಾಮುಂಚದ್ಧರಿಪಾದಾಬ್ಜಂ ಮನಸಾ ಜನಕೋ ನೃಪಃ ॥ ೯೪ ॥**

ಸಂಪದಾದಿಗಳು ಅಗ್ನಿಯಿಂದ ಮಾತ್ರವಲ್ಲ, ಅನ್ಯರಿಂದಲೂ ಅಪಹರಿಸಲ್ಪಡುತ್ತವೆ—ಆದ್ದರಿಂದ ಸಹ ದುಃಖಕ್ಕೆ (ಕಾತರಗೊಳ್ಳುವುದಕ್ಕೆ) ಕಾರಣವಿಲ್ಲೆಂದು, ರಾಜನು ಹೇಳುತ್ತಾನೆ:—

ಕದಾಚಿತ್-ಕಾಲವಿಶೇಷದಲ್ಲಿ ಮಾತ್ರ (ಯಾವುದೋ ಒಂದು ಕಾಲದಲ್ಲಿ), ಮಿಲಿತೈಃ-(ನಮ್ಮೊಡನೆ) ಸೇರಿರುವ, ಕಾರ್ಯಬಂಧುಭಿಃ-ಕರ್ಮನಿಮಿತ್ತವಾಗಿ ಬಂಧುಗಳಾಗಿರುವ (ಋಣಾನುಬಂಧದಿಂದ ಬಂಧುವರ್ಗದಲ್ಲಿ ಬಂದಿರುವ), ಅನಿತ್ಯೈಃ-ಅಶಾಶ್ವತರಾದ (ಅವರ ಆಯುಷ್ಯ ಮುಗಿದೊಡನೆ ನಮ್ಮನ್ನು ಬಿಟ್ಟುಹೋಗುವ), ನಿತ್ಯಂ-ನಿತ್ಯವೂ, ಪಾಪಕರ್ಮೈಃ-ಪಾಪಕರ್ಮಗಳಲ್ಲಿ ಆಸಕ್ತರಾದ, ಸಂಪದಾಂ-(ನಮ್ಮ ಧನಾದಿ) ಸಂಪತ್ತುಗಳ, ಅಪಹಾರಕೈಃ-ಅಪಹರಿಸುವವರಾದ, ಕ್ಷುದ್ರೈಃ-ಕ್ಷುಲ್ಲಕರಾದ (ಅಲ್ಪರಾದ), ಪ್ರಕಾಶತಸ್ಕರೈಃ-ಪ್ರತ್ಯಕ್ಷಚೋರರಿಂದ (ಹಗಲುಗಳ್ಳರಿಂದ), ನಿತ್ಯಂ-ನಿತ್ಯವೂ, ಹ್ರಿಯತೇ-(ನಮ್ಮ ಧನಾದಿಗಳು) ಅಪಹರಿಸಲ್ಪಡುತ್ತವೆ (ನಾಶಗೊಳ್ಳುತ್ತವೆ); ಅಸ್ಮಾತ್-ಇದಕ್ಕಿಂತ, ಕಿಂ-ಯಾವುದು, ಅದ್ಭುತಂ-ಆಶ್ಚರ್ಯವು? (ಈ ನಾಶವನ್ನು ಉಪಶಮನಗೊಳಿಸುವುದಕ್ಕೆ ಯಾರು ಯತ್ನಿಸುತ್ತಾರೆ?): ನಿತ್ಯಾನಂದಹರೇ-ನಿತ್ಯಾನಂದಸ್ವರೂಪನಾದ ಶ್ರೀಹರೇ !, (ಅಥವಾ, ಹೇ ನಿತ್ಯಾನಂದ ! ಹೇ ಹರೇ !), ವಿಷ್ಣೋ-ಹೇ ವಿಷ್ಣೋ!, ಪ್ರಿಯಂ-ಹೇ ಪ್ರಿಯ!, ಮೇ-ನನಗೆ, ಪ್ರೇಷ್ಠತಮಃ ಅಸಿ-(ನೀನು) ಪ್ರಿಯತಮನು ಆಗಿರುವಿ; ಯತ್ ಯತ್-ಯಾವ ಯಾವುದನ್ನು ಇಚ್ಛಸಿ-ಇಚ್ಛಿಸುವೆಯೋ, ತತ್ತತ್-ಅದರದೇ, ನಃ-ನಮಗೆ, ಪರಂ-ಶ್ರೇಷ್ಠವಾದ, ಇಷ್ಟತಮಂ-

---

ರಕ್ಷಿಸಿಕೊಳ್ಳಲು ಯತ್ನಿಸಬೇಕೇ ? 'ಹೇ ಹರೇ | ವಿಷ್ಣೋ ! ನಿತ್ಯಾನಂದ ಸ್ವರೂಪ ! ಪ್ರಿಯತಮ ! ನೀನೇ ನನಗೆ ಇಷ್ಟತಮನಾಗಿರುವಿ; ನಿನಗೆ ಇಷ್ಟವಾದುದೇ ನನಗೆ (ಅತ್ಯಂತ ಹಿತಕರವಾದ್ದರಿಂದ) ನನಗೆ ಇಷ್ಟತಮವು;' ಹೀಗೆ ಜನಕರಾಜನು ನುಡಿಯುತ್ತಿರಲು, ಆ ಅಗ್ನಿಯಿಂದ ಆಗುತ್ತಿದ್ದ ನಾಶವನ್ನು ಪರಿಹರಿಸುವ ಸಾಧನವನ್ನು ತಿಳಿಯಲು ಬಂದಿದ್ದ ಆ ಮಂತ್ರಿ ಮೊದಲಾದ ಅಧಿಕಾರಿವರ್ಗದ ಜನರೆಲ್ಲರೂ ಅಗ್ನಿಜ್ವಾಲೆಗೆ ಸಿಕ್ಕಿದರು; ಮುಂದೆ ಅಗ್ನಿಜ್ವಾಲೆ ರಾಜನನ್ನೂ ಶ್ರೀಶುಕರನ್ನೂ ಸ್ಪರ್ಶಿಸಿತು; ಆದರೂ, ರಾಜನು ಕೂತ ಸ್ಥಳದಿಂದ ಚಲಿಸಲಿಲ್ಲ; ಆಶ್ಚರ್ಯ! ಅಗ್ನಿಯು, ಆತನ ದೇಹವನ್ನು ದಹಿಸುವುದರಿಂದ, 'ಚಟ ಚಟ' ವೆಂಬ ಶಬ್ದವೂ ಉಂಟಾಯಿತು; ಆದರೂ ಜನಕರಾಜನು ಶ್ರೀಹರಿಪಾದಕಮಲಧ್ಯಾನವನ್ನು ಬಿಡಲಿಲ್ಲ-ಶ್ರೀಹರಿಯ ಧ್ಯಾನದಲ್ಲಿಯೇ ಆಸಕ್ತನಾಗಿದ್ದನು(೯೦-೯೪). ವಿಷ್ಣುಭಕ್ತನಾದ ಆ ಜನಕರಾಜನ ಮನೋನಿಶ್ಚಯವನ್ನು ತಿಳಿದು, ಯೋಗೀಶ್ವರರಾದ ಶ್ರೀಶುಕರು, ತಮ್ಮ ಯೋಗಶಕ್ತಿಯಿಂದ ನಿರ್ಮಿತವಾದ ಆ

**ಯದ್ವಿನಾಶಸ್ಯ ಚಿಂತಾ ನೋ ನ ಚಿಂತಾ ಯಸ್ಯ ಸಂಪದಾಂ ।**
**ಮನೋಮಾತ್ರೇಣ ಯಃ ಸೇವ್ಯಸ್ತದ್ಧ್ಯಾನಾಧಿಕೃತಂ ಮನಃ ॥ ೮೯ ॥**

ಯಃ-ಯಾವಾತನು (ಶ್ರೀಹರಿಯು), ಸರ್ವಕಾಲೇಷು-ಸದಾ (ಅನಾದ್ಯನಂತ ಕಾಲದಲ್ಲಿ ಸಹ), ಸಖಾ-ಸಖನೋ (ಜೀವನ ನಿತ್ಯಸಖನಾಗಿರುವನೋ-ತಪ್ಪದೆ ಅವನೊಡನೆ ಇರುವನೋ), ಚ-ಮತ್ತು ಸರ್ವೇಷ್ಟಾನಾಂ-(ಜೀವನ) ಸರ್ವಾಪೇಕ್ಷೆಗಳ, ಪೂರಕಃ-(ಪೂರಕನೋ) ಪೂರ್ಣಗೊಳಿಸುವವನೋ, ಯಸ್ಯ-ಯಾವಾತಗೆ, ಸಂಪದಾಂ-(ಗೃಹಾದಿ) ಐಶ್ವರ್ಯಗಳ, ಚಿಂತಾ-ಚಿಂತೆಯು, ನ-ಇಲ್ಲವೋ (ಸಂಪದಾದಿಗಳ ಪ್ರಾಪ್ತಿಗಾಗಿ ಚಿಂತೆ ಇಲ್ಲವೋ), ಯದ್ವಿನಾಶಸ್ಯ-(ಸಂಪದಗಳ) ಯಾವುಗಳ ನಾಶದ, (ನಾಶವಾಗುವುದೆಂಬ), ಚಿಂತಾ-ಚಿಂತೆಯು, ನೋ-ಇಲ್ಲವೋ, ಯಃ-ಯಾವಾತನು, ಮನೋಮಾತ್ರೇಣ-ಮನಸ್ಸಿನಿಂದಲೇ ಭಕ್ತಿಭಾವದಿಂದ ತುಂಬಿದ ಮನಸ್ಸಿನಿಂದ ಮಾತ್ರ), ಸೇವ್ಯಃ-ಸೇವಿಸಲ್ಪಡತಕ್ಕವನೋ, ಮನಃ-(ನನ್ನ) ಮನಸ್ಸು, ತದ್ಧ್ಯಾನಾಧಿಕೃತಂ-ಆತನ ಧ್ಯಾನಯುಕ್ತವಾದುದು (ಆತನ ಧ್ಯಾನಕ್ಕೆ ಮಾತ್ರ ಆಶ್ರಯಸ್ಥಾನವಾಗಿದೆ), ಆಗಿದೆ.

**ಕದಾಚಿನ್ಮಿಲಿತೈಃ ಕ್ಷುದ್ರೈರನಿತ್ಯೈಃ ಕಾರ್ಯಬಂಧುಭಿಃ ।**
**ವೃಥಾ ಪಾಪಕರೈರ್ನಿತ್ಯಂ ಸಂಪದಾಮಪಹಾರಕೈಃ ॥ ೯೦ ॥**

**ಪ್ರಕಾಶತಸ್ಕರೈರ್ನಿತ್ಯಂ ಹ್ರಿಯತೇಽಸ್ಮಾಕಮದ್ಭುತಂ ।**
**ನಿತ್ಯಾನಂದಹರೇ ವಿಷ್ಣೋ ಪ್ರಿಯ ಪ್ರೇಷ್ಠತಮೋಽಪಿ ಮೇ ॥ ೯೧ ॥**

**ಯದ್ಯದಿಚ್ಛಸಿ ತತ್ತನ್ನಃ ಪರಮಿಷ್ಟತಮಂ ಭವೇತ್ ।**
**ಇತಿ ಬ್ರುವತಿ ರಾಜೇಂದ್ರೇ ಸರ್ವೇಽಮಾತ್ಯಗಣಾಸ್ತು ತೇ ॥ ೯೨ ॥**

**ಜಜ್ವಲುರ್ವಹ್ನಿನಾನೇನ ತತೋ ಜ್ವಾಲಾ ನೃಪಂ ಶುಕಂ ।**
**ಪಸ್ಪರ್ಶ ನ ಚಚಾಲಾಸೌ ಸ್ವಾಸನಾದೀಷದಸ್ಯತೋ ॥ ೯೩ ॥**

---

ಮನಸ್ಸು ಆತನ ಧ್ಯಾನದಲ್ಲಿ ಆಸಕ್ತವಾಗಿದೆ(೮೮-೮೯). ಋಣಾನುಬಂಧಿಗಳೆಂಬ ಕ್ಷುದ್ರರಾದ ಬಂಧುಜನರು(ಪತಿಸುತಾದಿಗಳು), ಅಲ್ಪಕಾಲ ಮಾತ್ರ, ಈ ಸಂಸಾರದಲ್ಲಿ ನಮ್ಮೊಂದಿಗೆ ಮಿಳಿತರಾಗಿರುತ್ತಾರೆ; ಇವರು ವ್ಯರ್ಥವಾದ ಪಾಪಕರ್ಮಗಳನ್ನಾಚರಿಸುತ್ತ ನಮ್ಮ ಧನಾದಿಸಂಪತ್ತನ್ನು ಅಪಹರಿಸುತ್ತಾರೆ; ಪ್ರಸಿದ್ಧ ಹಗಲುಕಳ್ಳರಂತಿರುವ ಇವರು ನಿತ್ಯವೂ ನಮ್ಮ ಸಂಪತ್ತನ್ನು ನಾಶಗೊಳಿಸುತ್ತಿರುವರು; ಯಾರೂ ಇವರಿಂದ ಸ್ವಸಂಪದಾದಿಗಳನ್ನು ರಕ್ಷಿಸಿಕೊಳ್ಳುವುದಿಲ್ಲ ಇದಕ್ಕಿಂತ ಆಶ್ಚರ್ಯವೇನಿದೆ? ಹೀಗಿದ್ದೂ ಶ್ರೀಹರೀಚ್ಛೆಯಿಂದ ಅಗ್ನಿದೇವನು ನಾಶಗೊಳಿಸುತ್ತಿರುವ ಗೃಹಧನಾದಿಗಳನ್ನು

**ದೇಹೇ ಚಟಚಟಾಶಬ್ದೇ ಜಾಯಮಾನೇಽಪಿ ವಹ್ನಿನಾ ।**
**ನಾಮುಂಚದ್ಧರಿಪಾದಾಬ್ಜಂ ಮನಸಾ ಜನಕೋ ನೃಪಃ ॥ ೯೪ ॥**

ಸಂಪದಾದಿಗಳು ಅಗ್ನಿಯಿಂದ ಮಾತ್ರವಲ್ಲ, ಅನ್ಯರಿಂದಲೂ ಅಪಹರಿಸಲ್ಪಡುತ್ತವೆ—ಆದ್ದರಿಂದ ಸಹ ದುಃಖಕ್ಕೆ (ಕಾತರಗೊಳ್ಳುವುದಕ್ಕೆ) ಕಾರಣವಿಲ್ಲೆಂದು, ರಾಜನು ಹೇಳುತ್ತಾನೆ:—

ಕದಾಚಿತ್-ಕಾಲವಿಶೇಷದಲ್ಲಿ ಮಾತ್ರ (ಯಾವುದೋ ಒಂದು ಕಾಲದಲ್ಲಿ), ಮಿಲಿತೈಃ-(ನಮ್ಮೊಡನೆ) ಸೇರಿರುವ, ಕಾರ್ಯಬಂಧುಭಿಃ-ಕರ್ಮನಿಮಿತ್ತವಾಗಿ ಬಂಧುಗಳಾಗಿರುವ (ಋಣಾನುಬಂಧದಿಂದ ಬಂಧುವರ್ಗದಲ್ಲಿ ಬಂದಿರುವ), ಅನಿತ್ಯೈಃ-ಅಶಾಶ್ವತರಾದ (ಅವರ ಆಯುಷ್ಯ ಮುಗಿದೊಡನೆ ನಮ್ಮನ್ನು ಬಿಟ್ಟುಹೋಗುವ), ನಿತ್ಯಂ-ನಿತ್ಯವೂ, ಪಾಪಕರ್ಮೈಃ-ಪಾಪಕರ್ಮಗಳಲ್ಲಿ ಆಸಕ್ತರಾದ, ಸಂಪದಾಂ-(ನಮ್ಮ ಧನಾದಿ) ಸಂಪತ್ತುಗಳ, ಅಪಹಾರಕೈಃ-ಅಪಹರಿಸುವವರಾದ, ಕ್ಷುದ್ರೈಃ-ಕ್ಷುಲ್ಲಕರಾದ (ಅಲ್ಪರಾದ), ಪ್ರಕಾಶತಸ್ಕರೈಃ-ಪ್ರತ್ಯಕ್ಷಚೋರರಿಂದ (ಹಗಲುಗಳ್ಳರಿಂದ), ನಿತ್ಯಂ-ನಿತ್ಯವೂ, ಹ್ರಿಯತೇ-(ನಮ್ಮ ಧನಾದಿಗಳು) ಅಪಹರಿಸಲ್ಪಡುತ್ತವೆ (ನಾಶಗೊಳ್ಳುತ್ತವೆ); ಅಸ್ಮಾತ್-ಇದಕ್ಕಿಂತ, ಕಿಂ-ಯಾವುದು, ಅದ್ಭುತಂ-ಆಶ್ಚರ್ಯವು? (ಈ ನಾಶವನ್ನು ಉಪಶಮನಗೊಳಿಸುವುದಕ್ಕೆ ಯಾರು ಯತ್ನಿಸುತ್ತಾರೆ?): ನಿತ್ಯಾನಂದಹರೇ-ನಿತ್ಯಾನಂದಸ್ವರೂಪನಾದ ಶ್ರೀಹರೇ !, (ಅಥವಾ, ಹೇ ನಿತ್ಯಾನಂದ ! ಹೇ ಹರೇ !), ವಿಷ್ಣೋ-ಹೇ ವಿಷ್ಣೋ!, ಪ್ರಿಯಂ-ಹೇ ಪ್ರಿಯ!, ಮೇ-ನನಗೆ, ಪ್ರೇಷ್ಠತಮಃ ಅಸಿ-(ನೀನು) ಪ್ರಿಯತಮನು ಆಗಿರುವಿ; ಯತ್ ಯತ್-ಯಾವ ಯಾವುದನ್ನು, ಇಚ್ಛಸಿ-ಇಚ್ಛಿಸುವೆಯೋ, ತತ್ತತ್-ಅದದೇ, ನಃ-ನಮಗೆ, ಪರಂ-ಶ್ರೇಷ್ಠವಾದ, ಇಷ್ಟತಮಂ-

---

ರಕ್ಷಿಸಿಕೊಳ್ಳಲು ಯತ್ನಿಸಬೇಕೇ ? 'ಹೇ ಹರೇ ! ವಿಷ್ಣೋ ! ನಿತ್ಯಾನಂದ ಸ್ವರೂಪ ! ಪ್ರಿಯತಮ ! ನೀನೇ ನನಗೆ ಇಷ್ಟತಮನಾಗಿರುವಿ; ನಿನಗೆ ಇಷ್ಟವಾದುದೇ ನನಗೆ (ಅತ್ಯಂತ ಹಿತಕರವಾದ್ದರಿಂದ) ನನಗೆ ಇಷ್ಟತಮವು;' ಹೀಗೆ ಜನಕರಾಜನು ನುಡಿಯುತ್ತಿರಲು, ಆ ಅಗ್ನಿಯಿಂದ ಆಗುತ್ತಿದ್ದ ನಾಶವನ್ನು ಪರಿಹರಿಸುವ ಸಾಧನವನ್ನು ತಿಳಿಯಲು ಬಂದಿದ್ದ ಆ ಮಂತ್ರಿ ಮೊದಲಾದ ಅಧಿಕಾರಿವರ್ಗದ ಜನರೆಲ್ಲರೂ ಅಗ್ನಿಜ್ವಾಲೆಗೆ ಸಿಕ್ಕಿದರು; ಮುಂದೆ ಅಗ್ನಿಜ್ವಾಲೆ ರಾಜನನ್ನೂ ಶ್ರೀಶುಕರನ್ನೂ ಸ್ಪರ್ಶಿಸಿತು; ಆದರೂ, ರಾಜನು ಕೂತ ಸ್ಥಳದಿಂದ ಚಲಿಸಲಿಲ್ಲ; ಆಶ್ಚರ್ಯ! ಅಗ್ನಿಯು, ಅವನ ದೇಹವನ್ನು ದಹಿಸುವುದರಿಂದ, 'ಚಟ ಚಟ'ವೆಂಬ ಶಬ್ದವೂ ಉಂಟಾಯಿತು; ಆದರೂ ಜನಕರಾಜನು ಶ್ರೀಹರಿಪಾದಕಮಲಧ್ಯಾನವನ್ನು ಬಿಡಲಿಲ್ಲ-ಶ್ರೀಹರಿಯ ಧ್ಯಾನದಲ್ಲಿಯೇ ಆಸಕ್ತನಾಗಿದ್ದನು(೯೦-೯೪). ವಿಷ್ಣುಭಕ್ತನಾದ ಆ ಜನಕರಾಜನ ಮನೋನಿಶ್ಚಯವನ್ನು ತಿಳಿದು, ಯೋಗೀಶ್ವರರಾದ ಶ್ರೀಶುಕರು, ತಮ್ಮ ಯೋಗಶಕ್ತಿಯಿಂದ ನಿರ್ಮಿತವಾದ ಆ

ಅತ್ಯಪೇಕ್ಷಿತವಾದುದು, ಭವೇತ್-ಆಗಲಿ (ಆಗಿರುತ್ತದೆ); ರಾಜೇಂದ್ರೇ-ರಾಜಶ್ರೇಷ್ಠನಾದ ಜನಕನು, ಇತಿ-ಹೀಗೆ, ಬ್ರುವತಿ (ಸತಿ)-ಹೇಳುತ್ತಿರಲು, ತೇ-ಆ (ಅಗ್ನಿಯ ವಿನಾಶವನ್ನು ವಿಜ್ಞಾಪಿಸಿಕೊಳ್ಳುತ್ತಿದ್ದ), ಅಮಾತ್ಯಗಣಾಃ-ಅಧಿಕಾರಿವರ್ಗದ ಜನರು (ಅಮಾತ್ಯಜನರು), ಸರ್ವೇ-ಎಲ್ಲರೂ, ಅನೇನ-ಈ, ವಹ್ನಿನಾ-ಅಗ್ನಿಯಿಂದ, ಜಜ್ವಲುಃ-ಉರಿದರು (ದಹಿಸಲ್ಪಟ್ಟರು); ತತಃ-ನಂತರ, ಜ್ವಾಲಾ-(ಅಗ್ನಿ) ಜ್ವಾಲೆಯು, ನೃಪಂ-ರಾಜನನ್ನೂ, ಶುಕಂ-ಶ್ರೀಶುಕರನ್ನೂ, ಪಸ್ಪರ್ಶ-ಮುಟ್ಟಿತು; ಅಸೌ-ಈ ರಾಜನು, ಸ್ವಾಸನಾತ್-ತನ್ನ ಆಸನದಿಂದ(ಸ್ಥಾನದಿಂದ), ಈಷತ್ ಅಪಿ-ಸ್ವಲ್ಪವೂ ಸಹ, ನ ಚಚಾಲ-ಚಲಿಸಲಿಲ್ಲ ಅಹೋ-ಆಶ್ಚರ್ಯವು! ವಹ್ನಿನಾ-ಅಗ್ನಿಯಿಂದ, ದೇಹೇ-(ತನ್ನ) ದೇಹದಲ್ಲಿ ಚಟ ಚಟಾಶಬ್ದೇ-'ಚಟಚಟ' ಎಂಬ ಶಬ್ದವು, ಜಾಯಮಾನೇ ಅಪಿ-ಉಂಟಾಗುತ್ತಿದ್ದರೂ, ನೃಪಃ ಜನಕಃ-ಜನಕ ರಾಜನು, ಹರಿಪಾದಾಬ್ಜಂ-ಶ್ರೀಹರಿಪಾದಕಮಲವನ್ನು ಮನಸಾ-ಮನಸ್ಸಿನಿಂದ, ನ ಅಮುಂಚತ್-ಬಿಡಲಿಲ್ಲ (ಶ್ರೀಹರಿಯನ್ನು ಧ್ಯಾನಿಸುತ್ತಲೇ ಇದ್ದನು).

**ವಿದಿತ್ವಾ ತಸ್ಯ ದಾರ್ಢ್ಯಂ ತದ್ವಿಷ್ಣುಭಕ್ತಸ್ಯ ಭೂಪತೇಃ ।**
**ಮಾಯಾಂ ನ್ಯವಾರಯದ್ಯೋಗೀ ಪಸ್ಪರ್ಶೇ ಪ್ರಾಣಿನಾ ನೃಪಂ ॥ ೯೫ ॥**

ತಸ್ಯ-ಆ, ವಿಷ್ಣುಭಕ್ತಸ್ಯ-ವಿಷ್ಣುಭಕ್ತನಾದ, ಭೂಪತೇಃ-ರಾಜನ, ದಾರ್ಢ್ಯಂ-ಮನೋದಾರ್ಢ್ಯವನ್ನು (ಸ್ಥೈರ್ಯವನ್ನು), ವಿದಿತ್ವಾ-ತಿಳಿದು, (ಕಂಡು), ಯೋಗೀ-ಯೋಗಿಗಳಾದ ಶ್ರೀಶುಕರು, ಮಾಯಾಂ-ಮಾಯೆಯನ್ನು (ಯೋಗಶಕ್ತಿಯಿಂದ ತಾವು ನಿರ್ಮಿಸಿದ ಅಗ್ನಿಯನ್ನು), ನ್ಯವಾರಯತ್-ನಿವಾರಿಸಿದರು (ಇಲ್ಲದಂತೆ ಮಾಡಿದರು); ನೃಪಂ-ರಾಜಾ ಜನಕನನ್ನು, ಪಾಣಿನಾ-ತಮ್ಮ ಹಸ್ತದಿಂದ, ಪಸ್ಪರ್ಶೇ-ಮುಟ್ಟಿದರು (ರಾಜನನ್ನು ಸ್ಪರ್ಶಮಾಡಿ, ಮುಂದೆ ನಿರೂಪಿಸುವಂತೆ ನುಡಿದರು).

**ಧನ್ಯ ಧನ್ಯ ಮಹಾರಾಜ ಬದ್ಧಚಿತ್ತೇ ಹರೌ ತ್ವಯಿ ।**
**ನಾದ್ಭುತಂ ತ್ವಾದೃಶೈಶ್ಚೀರ್ಣಂ ಪ್ರಹ್ಲಾದಾದಿಭಿರೀದೃಶಂ ॥ ೯೬ ॥**

---

ಅಗ್ನಿಯನ್ನು ನಿವಾರಿಸಿದರು; ತಮ್ಮ ಹಸ್ತದಿಂದ ರಾಜನನ್ನು ಸ್ಪರ್ಶಿಸಿ,(ತಮ್ಮ ಅಮೃತಹಸ್ತವನ್ನು ರಾಜನ ಭುಜದಮೇಲಿಟ್ಟು), ಈ ಮುಂದೆ ನಿರೂಪಿಸುವಂತೆ ಮಾತನಾಡಿದರು(೯೫). ಹೇ ಮಹಾರಾಜ! ನೀನು ಪರಮಧನ್ಯನು; ಶ್ರೀಹರಿಯಲ್ಲಿಯೇ ಸ್ಥಾಪಿತವಾದ ಚಿತ್ತವುಳ್ಳ ನಿನ್ನಲ್ಲಿ ಇದೇನೂ (ಈ ಪ್ರಕಾರದ ನಿರ್ಮಮತ್ವಭಾವವು) ಆಶ್ಚರ್ಯವಲ್ಲ; ನಿನ್ನ ಸದೃಶರಾದ ಪ್ರಹ್ಲಾದಾದಿ ವಿಷ್ಣು ಭಕ್ತರೂ ಈ ವಿಧವಾದ ಅದ್ಭುತಕಾರ್ಯಗಳನ್ನು ಮಾಡಿರುವರು. ಹೀಗೆಯೇ ಶ್ರೀಹರಿಯಲ್ಲಿ ದೃಢಭಕ್ತಿಯುಳ್ಳ ಇತರ ಹರಿಭಕ್ತರು, ಕೇವಲ ಶ್ರೀಹರಿಯನ್ನು ಹೊಂದಲಿಕ್ಕಾಗಿಯೇ (ಸುಖಾರ್ಥವಾಗಿ

**ಅನ್ಯೇಽಪಿ ಹರಿಭಕ್ತಾ ಯೇ ತದ್ವದ್ದೃಢಸೌಹೃದಾಃ ।**
**ತಮೇವೇಷ್ಟಂ ಪ್ರಪದ್ಯಂತೇ ತದರ್ಥಂ ಮೋಕ್ಷವಾಂಛಕಾಃ ॥ ೯೭ ॥**

ಮಹಾರಾಜ-ಹೇ ಮಹಾರಾಜ!, ಧನ್ಯ ಧನ್ಯ-ನೀನೇ ಪರಮಧನ್ಯನು; ಹರೌ-ಶ್ರೀಹರಿಯಲ್ಲಿ, ಬದ್ಧಚಿತ್ತೇ-ಸ್ಥಾಪಿತವಾದ ಮನಸ್ಸುಳ್ಳ, ತ್ವಯಿ-ನಿನ್ನಲ್ಲಿ, ಅದ್ಭುತಂ ನ-(ನೀನು ತೋರಿದ ಮನಃಸ್ಥೈರ್ಯವು) ಆಶ್ಚರ್ಯವಲ್ಲ; ತ್ವಾದೃಶೈಃ-ನಿನ್ನಂತಿರುವ (ವಿಷ್ಣುಭಕ್ತರಾದ), ಪ್ರಹ್ಲಾದಾದಿಭಿಃ-ಪ್ರಹ್ಲಾದನೇ ಮೊದಲಾದವರಿಂದ, ಈದೃಶಂ-ಈ ಪ್ರಕಾರದ ಅದ್ಭುತಕಾರ್ಯವು, ಚೀರ್ಣಂ-ಮಾಡಲ್ಪಟ್ಟಿದೆ; ಅನ್ಯೇಽಪಿ-ಇತರರಾದ, ಯೇ-ಯಾವ, ಹರಿಭಕ್ತಾಃ-ವಿಷ್ಣುಭಕ್ತರೋ, (ಅವರು) ತದ್ವದ್ದೃಢಸೌಹೃದಾಃ-ಶ್ರೀಹರಿಯಲ್ಲಿ ಸ್ಥಾಪಿತವಾದ ದೃಢಭಕ್ತಿಯುಳ್ಳವರಾಗಿ, ತದರ್ಥಂ-ಆತನಿಗಾಗಿಯೇ (ಶ್ರೀವಿಷ್ಣು ಪ್ರಾಪ್ತಿಗಾಗಿಯೇ-ಸುಖಾರ್ಥವಾಗಿ ಅಲ್ಲದೇ ಆತನನ್ನು ಹೊಂದಲಿಕ್ಕಾಗಿಯೇ), ಮೋಕ್ಷವಾಂಛಕಾಃ-ಮೋಕ್ಷವನ್ನು ಅಪೇಕ್ಷಿಸುವವರಾಗಿ, ಇಷ್ಟಂ-ತಮಗೆ ಪ್ರಿಯತಮನಾದ, ತಂ ಏವ-ಆ ಶ್ರೀವಿಷ್ಣುವನ್ನೇ, ಪ್ರಪದ್ಯಂತೇ-ಹೊಂದುತ್ತಾರೆ. (ಇವರೇ ಏಕಾಂತಭಕ್ತರು—ಅವರಿಗೆ ಶ್ರೀಹರಿಯು ಪುರುಷಾರ್ಥಸ್ವರೂಪನು—ಮೋಕ್ಷದಲ್ಲಿ ದೊರೆಯುವ ಸುಖವಲ್ಲ).

**ಅಥವಾ ಮಧ್ಯಮಾಸ್ತೇ ತು ಮೋಕ್ಷಾರ್ಥಂ ಹರಿಭಕ್ತಯಃ ।**
**ವಿಷಯೈರ್ಬದ್ಧಚಿತ್ತಾಸ್ತೇ ದ್ವೇಷಮತ್ಸರತತ್ಪರಾಃ ॥ ೯೮ ॥**

---

ಅಲ್ಲದೇ), ಮೋಕ್ಷವನ್ನು ಅಪೇಕ್ಷಿಸಿ, ತಮಗೆ ಪ್ರಿಯತಮನಾದ ಶ್ರೀಹರಿಯನ್ನು ಹೊಂದುತ್ತಾರೆ[1] (೯೬-೯೭). ಇವರೇ ಉತ್ತಮ ಭಕ್ತರು; ಮೋಕ್ಷವೆಂಬ ಪುರುಷಾರ್ಥವನ್ನು ಹೊಂದುವುದಕ್ಕಾಗಿ ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡುವವರು, ಮಧ್ಯಮಭಕ್ತರು; ಸಂಸಾರಾವಸ್ಥೆಯಲ್ಲಿರುವಾಗ, ವಿಷಯಗಳಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿ, ತನ್ನಿಮಿತ್ತವಾದ ಪರಸ್ಪರ ದ್ವೇಷಾಸೂಯೆಗಳಿಂದ ಪರವಿತ್ತ ಪರಸ್ತ್ರೀ ಅಪಹಾರ

---

1. ಏಕಾಂತಭಕ್ತರಿಗೆ ಶ್ರೀನಾರಾಯಣನೇ ಪುರುಷಾರ್ಥನು—ಅವರು ಅನ್ಯದೇನನ್ನೂ ಅಪೇಕ್ಷಿಸುವುದಿಲ್ಲ. 'ಏಕಾಂತಿನಾಂ ನ ಕಸ್ಯಚಿತ್ ಅರ್ಥೋ ನಾರಾಯಣೋ ದೇವಃ' ಎಂಬಲ್ಲಿ ಹೀಗೆ ಹೇಳಲಾಗಿದೆ; 'ಏಕಾಂತಭಕ್ತಾಸ್ತು ಪ್ರೀತಿಮಾತ್ರೋದ್ದೇಶ್ಯಾಸ್ತಥಾ ಹರೇಃ' ಎಂಬಲ್ಲಿ (ಸತತ್ತ್ವರತ್ನಮಾಲಾ). ಶ್ರೀಹರಿಯ ಪ್ರೀತಿಯನ್ನು ಮಾತ್ರ ಕೋರುವವರೆಂದೂ, 'ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ । ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವ ಗೃಹ್ಣತೇ॥' (ಭಾಗ-ತಾತ್ಪರ್ಯ) ಎಂಬಲ್ಲಿ 'ಏಕಾಂತಭಕ್ತರು, ತಮ್ಮ ಸೇವಾ ಉಪಾಸನಾದಿಗಳ ಫಲವಾಗಿ ಶ್ರೀಹರಿಯು ಸಾಯುಜ್ಯಮೋಕ್ಷವನ್ನು ಕೊಟ್ಟರೂ, ಇಚ್ಛಿಸುವುದಿಲ್ಲ; ಆದರೆ ತಮ್ಮ ಸ್ವಾಮಿಯ ಆಜ್ಞೆಯನ್ನು ಪಾಲಿಸಲಿಕ್ಕಾಗಿ ಸ್ವೀಕರಿಸುತ್ತಾರೆಂದೂ ಹೇಳಲಾಗಿದೆ.

**ಪರೇಷಾಂ ವಿತ್ತದಾರಾದೇರ್ಹರಣೋಪಾಯಚಿಂತಕಾಃ ।**
**ವೃಥಾ ಮಾನಾ ವೃಥಾ ಜ್ಞಾನಾ ವೃಥಾ ಪಂಡಿತಮಾನಿನಃ ॥ ೯೯ ॥**
**ದೇಹೇಽಹಂಬುದ್ಧಯೋ ಮೂಢಾ ಧನಾದೌ ಮಮಬುದ್ಧಯಃ ।**
**ಪ್ರಾಪ್ನುವಂತಿ ನ ತತ್ಸೌಖ್ಯಂ ಹರಿಚಿಂತನಜಂ ಮಹತ್ ॥ ೧೦೦ ॥**

**ಮೋಕ್ಷಾರ್ಥಂ**-ಮೋಕ್ಷವನ್ನು ಹೊಂದಲಿಕ್ಕಾಗಿ, ಹರಿಭಕ್ತಯಃ-ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡುವ, ತೇ ತು-ಪುರುಷರಾದರೋ, (ಅಥವಾ-ಏಕಾಂತ ಭಕ್ತರ ನಂತರದ), ಮಧ್ಯಮಾಃ-ಮಧ್ಯಮವರ್ಗದ ಭಕ್ತರು (ಆಗಿರುತ್ತಾರೆ); ದ್ವೇಷಮತ್ಸರ ತತ್ಪರಾಃ-ದ್ವೇಷ, ಅಸೂಯೆಗಳುಳ್ಳವರಾಗಿ, ವಿಷಯೈಃ-ವಿಷಯಗಳಿಂದ, ಬದ್ಧಚಿತ್ತಾಃ-ಬದ್ಧವಾದ ಮನಸ್ಸುಳ್ಳ, ತೇ-ಅನ್ಯರು, ಪರೇಷಾಂ-ಇತರರ, ವಿತ್ತದಾರಾದೇಃ-ವಿತ್ತದಾರಾದಿಗಳ (ಧನ, ಸ್ತ್ರೀ ಮೊದಲಾದವುಗಳ), ಹರಣೋಪಾಯಚಿಂತಕಾಃ-ಅಪಹರಿಸುವ ಮಾರ್ಗವನ್ನು ಚಿಂತಿಸುತ್ತ (ಸಂಸಾರಾವಸ್ಥೆಯಲ್ಲಿ), ವೃಥಾಮಾನಾಃ-ವ್ಯರ್ಥವಾದ ಅಭಿಮಾನವುಳ್ಳವರೂ, ವೃಥಾಜ್ಞಾನಾಃ-ವ್ಯರ್ಥವಾದ ಜ್ಞಾನವುಳ್ಳವರೂ, ವೃಥಾಪಂಡಿತಮಾನಿನಃ-ವ್ಯರ್ಥವಾಗಿ ತಮ್ಮನ್ನು ಪಂಡಿತರೆಂದು (ಜ್ಞಾನಿಗಳೆಂದು) ತಿಳಿಯುವವರೂ (ಆದ), ಮೂಢಾಃ-ಅಜ್ಞಾನಿಗಳು, ದೇಹೇ-(ಪ್ರಾಕೃತ)ದೇಹದಲ್ಲಿ ಅಹಂಬುದ್ಧಯಃ-'ನಾನು' ಎಂಬ ಜ್ಞಾನವುಳ್ಳವರಾಗಿ, ಧನಾದೌ-ಧನಾದಿ(ವಸ್ತು)ಗಳಲ್ಲಿ ಮಮಬುದ್ಧಯಃ-'ನನ್ನವು' ಎಂಬ ಬುದ್ಧಿಯುಳ್ಳವರಾಗಿ, (ಹೀಗೆ ಅಹಂಮಮಕಾರ ಗಳುಳ್ಳವರಾಗಿ), ಹರಿಚಿಂತನಜಂ-ಶ್ರೀಹರಿಯ ನಿರಂತರಸ್ಮರಣೆಯಿಂದ ಲಭ್ಯವಾದ (ಹರಿಧ್ಯಾನದಿಂದ ಉಂಟಾಗುವ), ತತ್-ಆ (ಮಧ್ಯಮ, ಉತ್ತಮಾಧಿಕಾರಿಗಳು ಹೊಂದುವ), ಮಹತ್‌ಸೌಖ್ಯಂ-ಮಹಾಸುಖವನ್ನು (ಮಹಾನಂದವನ್ನು), ನ ಪ್ರಾಪ್ನುವಂತಿ-ಹೊಂದುವುದಿಲ್ಲ.

**ಕ್ಷಣೇ ಕ್ಷಣೇ ಪ್ರಪದ್ಯಂತೇ ತಾಪಂ ಯದ್ಯಪಿ ದುರ್ಧಿಯಃ ।**
**ನ ವಿಂದಂತಿ ಮಹಾವಿಷ್ಣೋರ್ಮಾಯಾಮುಷಿತಚೇತನಾಃ ॥ ೧೦೧ ॥**

---

ಮಾರ್ಗಚಿಂತಕರಾಗಿ ವ್ಯರ್ಥವಾದ ಅಭಿಮಾನದಿಂದ, ವ್ಯರ್ಥಜ್ಞಾನವುಳ್ಳವರಾದರೂ, ತಾವೇ ಪಂಡಿತರೆಂಬ ದುರಭಿಮಾನಯುಕ್ತರಾಗಿ, ನಶ್ವರವಾದ ಭೌತಿಕದೇಹವೇ ತಾನೆಂದೂ, ಧನಾದಿವಸ್ತುಗಳು ತಮ್ಮವೆಂದೂ ಭ್ರಮಿಸಿ (ಅಹಂಮಮಕಾರ ಗಳಿಗೊಳಗಾಗಿ), ವರ್ತಿಸುವ ಜನರು ಅಧಮಭಕ್ತರೆನಿಸುವರು; ಶ್ರೀಹರಿಧ್ಯಾನಜನ್ಯವಾದ ಮಹತ್ಸುಖವನ್ನು (ಉತ್ತಮ, ಮಧ್ಯಮ ಭಕ್ತರು ಹೊಂದುವ ಮಹಾನಂದವನ್ನು), ಇವರು ಹೊಂದುವದಿಲ್ಲ(೯೮-೧೦೦).

ಬುದ್ಧಿಮೋಹವುಳ್ಳ ಈ ಅಲ್ಪಾಧಿಕಾರಿಗಳು ಪ್ರತಿಕ್ಷಣವೂ ಸಂಸಾರದಲ್ಲಿ ದುಃಖವನ್ನೇ

ಈದೃಶಾ ಅಪಿ ಕಾಲೇನ ಬಾಹ್ಯಭಕ್ತ್ಯಾಪಿ ಸಂಸ್ಕೃತಾಃ ।
ಜನ್ಮಜನ್ಮಾಂತರಾಭ್ಯಾಸಾತ್ ಯುಕ್ತಚಿತ್ತಾಃ ಶನೈಃಶನೈಃ ॥ ೧೦೨ ॥

ಮಧ್ಯಮೋತ್ತಮಭಾವೇನ ಯಾಂತಿ ವಿಷ್ಣೋಃ ಪರಂಪದಂ ।
ಮುಕುಂದೇ ವಿಮುಖಾ ಯೇ ತು ಸರ್ವಥಾ ಬಾಹ್ಯಕೋಽಪಿ ಚ ॥೧೦೩॥

ಶಶಶೃಂಗಾಯತೇ ತೇಷಾಂ ಕಿಂವದಂತ್ಯಪಿ ಮೋಕ್ಷತಃ ।
ಇತಿ ಬ್ರುವತಿ ಯೋಗೀಂದ್ರೇ ಸ ತತ್ರಾಗ್ನಿರದೃಶ್ಯತ ॥ ೧೦೪ ॥

ಮಂದಧಿಯಃ-ದುರ್ಬುದ್ಧಿಗಳಾದ ಈ ಅಧಮಭಕ್ತರು, ಕ್ಷಣೇಕ್ಷಣೇ-ಪ್ರತಿ ಕ್ಷಣದಲ್ಲಿ ತಾಪಂ-(ಸಾಂಸಾರಿಕ) ದುಃಖವನ್ನು ಪ್ರಪದ್ಯಂತೇ-ಹೊಂದುತ್ತಾರೆ; ಯದ್ಯಪಿ-ಹೀಗಿದ್ದರೂ, ಮಹಾವಿಷ್ಣೋಃ-ಶ್ರೀಮಹಾವಿಷ್ಣುವಿನ, ಮಾಯಾಮುಷಿತ ಚೇತನಾಃ-ಮಾಯಾಶಕ್ತಿಯಿಂದ ಮೋಹಿತವಾದ ಬುದ್ಧಿಯುಳ್ಳವರಾಗಿ, ನ ವಿಂದಂತಿ-(ಧ್ಯಾನಜನ್ಯ ಮಹತ್ಸುಖವನ್ನು) ತಿಳಿಯುವುದಿಲ್ಲ (ಹೊಂದುವುದಿಲ್ಲ); ಈದೃಶಾಃ ಅಪಿ-ಹೀಗಿರುವ ಅಧಮಭಕ್ತರೂ ಸಹ, ಕಾಲೇನ-ಬಹುಕಾಲದ ನಂತರ (ಕಾಲನಿಯಾಮಕ, ಕಾಲನಾಮಕ ಶ್ರೀಹರಿಯಿಂದ), ಬಾಹ್ಯಭಕ್ತ್ಯಾ ಅಪಿ-ಬಾಹ್ಯಭಕ್ತಿಯಿಂದ ಸಹ (ಆಂತರಿಕವಲ್ಲದ-ಸುಸ್ಥಿರವಲ್ಲದ-ನಿಶ್ಚಯಜ್ಞಾನದಿಂದ ಹುಟ್ಟಿರದ ಭಕ್ತಿಯುಳ್ಳವರಾಗಿ), ಸಂಸ್ಕೃತಾಃ-ಸಂಸ್ಕಾರವನ್ನು ಹೊಂದಿ ಶನೈಃಶನೈಃ-ಕ್ರಮವಾಗಿ, ಜನ್ಮಜನ್ಮಾಂತರಾಭ್ಯಾಸಾತ್-ಬಹುಜನ್ಮಗಳ ಅಭ್ಯಾಸದಿಂದ, ಯುಕ್ತಚಿತ್ತಾಃ-ಶ್ರೀಹರಿಯಲ್ಲಿ ಕೂಡಿದ ಮನಸ್ಸುಳ್ಳವರಾಗಿ (ಶ್ರೀಹರಿ ಪ್ರಾಪ್ತಿಯ ಯೋಗವನ್ನು ಹೊಂದಿ), ಮಧ್ಯಮೋತ್ತಮಭಾವೇನ-(ತಂತಮ್ಮ

---

ಅನುಭವಿಸುತ್ತಾರೆ; ಹೀಗಿದ್ದರೂ ವಿಷ್ಣುಮಾಯಾಮೋಹಿತರಾದ ಈ ಜನರು, ಹರಿಧ್ಯಾನದಿಂದ ದೊರೆಯುವ ಸುಖವನ್ನು ತಿಳಿಯುವುದಿಲ್ಲ. ಇವರೂ ಬಹುಕಾಲದ ನಂತರ, ಶ್ರೀಹರಿಯಲ್ಲಿ ಆಂತರಿಕವಲ್ಲದ (ಗಾಢವಾಗಿರದ) ಚಂಚಲ(ಬಾಹ್ಯ)ಭಕ್ತಿಯ ಪ್ರಭಾವದಿಂದ ಉಂಟಾದ ಸಂಸ್ಕಾರದಿಂದ, ಬಹುಜನ್ಮಗಳ ಅಭ್ಯಾಸಬಲದಿಂದ ಶ್ರೀಹರಿಯಲ್ಲಿ ತಮ್ಮ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸಿ, ಸ್ವಸ್ವರೂಪಗಳನ್ನನುಸರಿಸಿದ ಶ್ರೇಷ್ಠಭಕ್ತಿಯನ್ನು ಹೊಂದಿ, ಶ್ರೀಹರಿಪ್ರಸಾದದಿಂದ ಮುಕ್ತರಾಗುತ್ತಾರೆ. ವೈಕುಂಠಾದಿಮುಕ್ತಸ್ಥಾನಗಳನ್ನು ಕಾಲಕ್ರಮದಲ್ಲಿ ಹೊಂದುತ್ತಾರೆ; ಯಾರು, ಸರ್ವಥಾ ಭಕ್ತಿರಹಿತರಾಗಿರುವರೋ (ಯಾವ ಪ್ರಕಾರದ, ಬಾಹ್ಯ ಅಥವಾ ಆಂತರಿಕವಾದ ಯಾವ ಭಕ್ತಿಯೂ ಎಂದಿಗೂ ಇಲ್ಲದೇ), ಶ್ರೀಹರಿಗೆ ವಿಮುಖರಾಗಿರುವರೋ, ಆ ಹರಿದ್ವೇಷಿಗಳಿಗೆ ಮೋಕ್ಷವು, ಶಶವಿಷಾಣದಂತೆ, ಅಪ್ರಾಪ್ಯವಾದುದೇ ಸರಿ; ಅಷ್ಟುಮಾತ್ರವಲ್ಲ, ನಿತ್ಯದುಃಖರೂಪದ ತಮಸ್ಸನ್ನೇ ಹೊಂದುತ್ತಾರೆ. ಯೋಗೀಶ್ವರರಾದ ಶ್ರೀಶುಕರು ಹೀಗೆ ಹೇಳುತ್ತಿರಲು, ಅಲ್ಲಿ ಅಗ್ನಿಯು ಅದೃಶ್ಯವಾಯಿತು(೧೦೧-೧೦೪).

ಸ್ವರೂಪದಂತೆ) ಮಧ್ಯಮ ಅಥವಾ ಉತ್ತಮರ ಭಕ್ತಿಯನ್ನು ಹೊಂದಿ, ವಿಷ್ಣೋಃ-ಶ್ರೀವಿಷ್ಣುವಿನ, ಪರಂಪದಂ-ಪರಮಪದವನ್ನು (ವೈಕುಂಠಾದಿ ಮುಕ್ತಸ್ಥಾನಗಳನ್ನು), ಯಾಂತಿ-ಹೊಂದುತ್ತಾರೆ; ಯೇ ತು-ಯಾರು, ಸರ್ವಥಾ-ಸರ್ವಪ್ರಕಾರದಿಂದ, ಚ-ಮತ್ತು ಬಾಹ್ಯತಃ ಅಪಿ-ಬಾಹ್ಯರಿಂದ ಸಹ (ಆಂತರಿಕವಾಗಿಯೂ), ಮುಕುಂದೇ-ಮೋಕ್ಷಪ್ರದನಾದ ಶ್ರೀಹರಿಯಲ್ಲಿ ವಿಮುಖಾಃ-ದ್ವೇಷವುಳ್ಳವರೋ, ತೇಷಾಂ-ಅವರಿಗೆ (ಆ ಹರಿದ್ವೇಷಿಗಳಿಗೆ), ಶಶಶೃಂಗಾಯತೇ-(ಮೋಕ್ಷವು—ಧ್ಯಾನಜನ್ಯ ಮಹತ್ಸುಖವು) ಮೊಲದ ಕೊಂಬಿನಂತೆಯೇ (ಶಶವಿಷಾಣಾದಿ ಅಸತ್ಯ ವಸ್ತುಗಳಂತೆ) ಅಪ್ರಾಪ್ಯವೇ ಸರಿ; ಅಪಿ-ಮತ್ತೇನೆಂದರೆ, ಮೋಕ್ಷತಃ-ಸುಖರೂಪವಾದ ಮೋಕ್ಷದ ದೆಸೆಯಿಂದ, ಕಿಂವದಂತಿ-(ದೂರದ ವಾರ್ತೆಯೂ ಇಲ್ಲದ) ಕನಿಷ್ಠವಾದ (ನಿತ್ಯನರಕವೇ) ತಮಸ್ಸೇ ಗತಿ ಎಂದು ಹೇಳಲಡುತ್ತದೆ; ಯೋಗೀಂದ್ರೇ-ಯೋಗೀಶ್ವರರಾದ ಶ್ರೀ ಶುಕರು, ಇತಿ ಬ್ರುವತಿ(ಸತಿ)-ಹೀಗೆ ಹೇಳುತ್ತಿರಲು, ತತ್ರ-ಅಲ್ಲಿ ಅಗ್ನಿಃ-ಬೆಂಕಿಯು, ನ ಅದೃಶ್ಯತ-ಕಾಣಲಿಲ್ಲ(ಮಾಯವಾಯಿತು).

**ಸರ್ವೇ ಪರಸ್ಪರಂ ದೃಷ್ಟ್ವಾ ಕಿಂ ಕಿಂ ಜಾತಂ ಮಹದ್ಭುತಂ ।**
**ವಿಸ್ಮಿತಾ ಜಹಸುಃ ಕೇಚಿತ್ ಧ್ಯಾಯಂತಃ ಕೇಚಿದಾಸಿರೇ ॥ ೧೦೫ ॥**

ಸರ್ವೇ-(ಅಲ್ಲಿದ್ದ) ಎಲ್ಲರೂ, ಪರಸ್ಪರಂ-ಒಬ್ಬರನ್ನೊಬ್ಬರು (ಪರಸ್ಪರ), ದೃಷ್ಟ್ವಾ-ನೋಡಿಕೊಂಡು, ಕಿಂ ಕಿಂ ಜಾತಂ-ಏನಾಯಿತೆಂದೂ, ಮಹದ್ಭುತಂ-ಅತ್ಯಾಶ್ಚರ್ಯವೆಂದೂ, ವಿಸ್ಮಿತಾಃ-ಚಕಿತರಾಗಿ (ಅದ್ಭುತವನ್ನು ಕಂಡು), ಕೇಚಿತ್-ಕೆಲವರು, ಜಹಸುಃ-ನಕ್ಕರು (ಉರಿಯುತ್ತಿದ್ದ ಅಗ್ನಿಯು ಮಾಯಾವಾದುದನ್ನು ಕಂಡು ನಗೆಯಾಡಿದರು); ಕೇಚಿತ್-ಮತ್ತೆ ಕೆಲವರು, ಧ್ಯಾಯಂತಃ-(ಶ್ರೀಶುಕರ ಯೋಗಶಕ್ತಿಯನ್ನು) ಚಿಂತಿಸುತ್ತ ಆಸಿರೇ-ನಿಂತರು.

**ವಹ್ನಿಂ ದೃಷ್ಟ್ವಾ ಪುರಾ ಯೇ ತು ದುದ್ರುವುರ್ಭಯವಿಹ್ವಲಾಃ ।**
**ಯೋಗೀಂದ್ರಂ ತೇ ಸಮಾಗಮ್ಯ ಲಜ್ಜಿತಾ ನೇಮಿರೇ ಜನಾಃ ॥ ೧೦೬ ॥**

---

ಇದನ್ನು ಕಂಡು, ಅಲ್ಲಿದ್ದ ಜನರು ಪರಸ್ಪರ ಒಬ್ಬರನ್ನೊಬ್ಬರು ನೋಡುತ್ತ ಇದೇನದ್ಭುತವು! ಅಗ್ನಿಯೇ, ಇಲ್ಲವಲ್ಲ! ಏನಾಯಿತು? ಎಂದು ಕೆಲವರು ನಕ್ಕರು-ಮತ್ತೆ ಕೆಲವರು, ಶ್ರೀಶುಕರ ಯೋಗಸಾಮರ್ಥ್ಯವನ್ನು ಚಿಂತಿಸುತ್ತ ಏನೂ ತೋಚದವರಂತೆ ನಿಂತರು(೧೦೫).

ಅಗ್ನಿಯನ್ನು ಕಂಡು, ಭಯದಿಂದ ಚಂಚಲಚಿತ್ತರಾಗಿ (ಸಭೆಯನ್ನು ಬಿಟ್ಟು) ಓಡಿ ಹೋದವರೆಲ್ಲರೂ, ಶ್ರೀಶುಕರ ಸಮೀಪಕ್ಕೆ ಧಾವಿಸಿ, ಲಜ್ಜಿತರಾಗಿ ನಮಸ್ಕರಿಸಿದರು (೧೦೬). ಶ್ರೀಶುಕರು, ಮಂದಹಾಸದಿಂದ ಕೂಡಿ, ಅವರನ್ನು 'ನಮ್ಮ ಕಥಾ

ಯೇ ತು- ಯಾವ ಜನರು, ಪುರಾ- ಮೊದಲು (ಅಗ್ನಿಯು ಪ್ರಜ್ವಲಿಸುತ್ತಿರುವಾಗ), ವಹ್ನಿಂ- ಅಗ್ನಿಯನ್ನು ದೃಷ್ಟ್ವಾ- ಕಂಡು, ಭಯವಿಹ್ವಲಾಃ- ಭಯದಿಂದ (ತಮ್ಮ ಗೃಹಾದಿಗಳು ದಹಿಸಿಹೋಗುವುವೆಂಬ ಭಯದಿಂದ) ಚಂಚಲಮನಸ್ಕರಾಗಿ, ದುದ್ರುವುಃ- (ಪ್ರವಚನ ಸ್ಥಳದಿಂದ) ಓಡಿಹೋಗಿದ್ದರೋ, ತೇ ಜನಾಃ- ಆ ಜನರು, ಯೋಗೀಂದ್ರಂ- ಶ್ರೀಶುಕರನ್ನು (ಹೊಂದಿ ಅವರ ಸಮೀಪಕ್ಕೆ ಬಂದು), ಲಜ್ಜಿತಾಃ- (ತಾವು ಶ್ರೀಶುಕರಮೇಲೆ ಮಾಡಿದ ಆರೋಪಣೆಯಿಂದ) ಲಜ್ಜಿತರಾಗಿ (ನಾಚಿ), ನೇಮಿರೇ- ನಮಸ್ಕರಿಸಿದರು.

**ಶುಕೋ ವಿಹಸ್ಯ ತಾನ್ ಪ್ರಾಹ ಕೋ ನು ಶ್ರೋತಾ ಮತೋಽತ್ರ ವಃ ।**
**ಊಚುಸ್ತೇ ಭಗವಾನ್ ವಕ್ತಾ ಶ್ರೋತಾಽಯಂ ಜನಕೋನೃಪಃ ॥೧೦೭॥**

**ವಯಂ ವಿಮೂಢಾ ಸಂಸಾರೇ ಮಗ್ನಚಿತ್ತಾ ಕ್ಷಮಸ್ವ ಭೋ ।**

ಶುಕಃ- ಶ್ರೀಶುಕರು, ವಿಹಸ್ಯ- ನಕ್ಕು, ತಾನ್- (ಓಡಿಹೋಗಿದ್ದ) ಆ ಜನರನ್ನು ಕುರಿತು, ಅತ್ರ- ಕಥಾಶ್ರವಣದಲ್ಲಿ, ವಃ- ನಿಮ್ಮಗಳಿಗೆ, ಕಃ- ಯಾರು, ನು- ನಿಶ್ಚಯವಾಗಿ, ಶ್ರೋತಾ- (ಮುಖ್ಯ) ಶ್ರವಣಮಾಡುವಾತನೆಂದು (ಮುಖ್ಯಶ್ರೋತೃವೆಂದು), ಮತಃ- ಸಮ್ಮತನಾಗಿದ್ದಾನೆ (ಎಂದು), ಪ್ರಾಹ- ನುಡಿದರು; ತೇ- ಆ ಜನರು, ಭಗವನ್ ವಕ್ತಾ- ಪೂಜ್ಯರಾದತಾವೇ, ವಕ್ತಾ- ವಕ್ತೃಗಳು; ಅಯಂ ನೃಪಃ- ಈ ರಾಜನಾದ, ಜನಕಃ- ಜನಕನು, ಶ್ರೋತಾ- ಶ್ರೋತೃವು (ಶ್ರವಣಮಾಡುವಾತನು); ಸಂಸಾರೇ- ಸಂಸಾರದಲ್ಲಿ, ಮಗ್ನಚಿತ್ತಾಃ- ಮುಳುಗಿದ ಮನಸ್ಸುಳ್ಳ, ವಯಂ- ನಾವು, ವಿಮೂಢಾಃ- ಮೂರ್ಖರು(ಜ್ಞಾನಶೂನ್ಯರು); ಪ್ರಭೋ- ಹೇ ಸ್ವಾಮಿ!, ಕ್ಷಮಸ್ವ- ಕ್ಷಮಿಸಿರಿ (ಸ್ವಾರ್ಥಬುದ್ಧಿಯಿಂದ ರಾಜನ ಮುಖವನ್ನೇ ನೋಡುತ್ತ ಹೇಳುವಿರೆಂದು ಮಾಡಿದ ದುಷ್ಟವಾದ ಆರೋಪಣೆಯ ಅಪರಾಧವನ್ನು ಕ್ಷಮಿಸಿರಿ), (ಎಂದು) ಊಚುಃ- ವಿಜ್ಞಾಪಿಸಿಕೊಂಡರು.

**ಇತ್ಥಮಾಸೀತ್ ಪುರಾವೃತ್ತಂ ಭವದ್ಭ್ಯಃ ಕಥಿತಂ ಮಯಾ ॥ ೧೦೮ ॥**

---

ಪ್ರವಚನವನ್ನು ಶ್ರವಣಮಾಡುವವರಲ್ಲಿ ಮುಖ್ಯ(ಪ್ರಧಾನ) ಶ್ರೋತೃ- ಯಾರೆಂದು ನಿಮ್ಮ ಅಭಿಪ್ರಾಯ?' ಎಂದು ಕೇಳಿದರು; ಅದಕ್ಕೆ ಆ ಜನರು, 'ತಾವೇ ವಕ್ತೃಗಳು(ವಕ್ತಾರರಲ್ಲಿ ಶ್ರೇಷ್ಠರು); ಈ ನಮ್ಮ ಜನಕರಾಜನೇ ಪ್ರಧಾನ ಶ್ರೋತೃವು (ಆತನಂತೆ ಏಕಮನಸ್ಕರಾಗಿ ಕೇಳುವ ದೀಕ್ಷೆಯುಳ್ಳವರು, ನಮ್ಮಲ್ಲಿ ಯಾರೂ ಇಲ್ಲ)' ಎಂದು ವಿಜ್ಞಾಪಿಸಿಕೊಂಡರು; ಮತ್ತು ತಾವು ಸ್ವಾರ್ಥಬುದ್ಧಿಯಿಂದ ರಾಜನ ಮುಖವನ್ನೇ ನೋಡುತ್ತ ಹೇಳುವಿರೆಂದು ತಿಳಿದುದು, ನಮ್ಮ ಮಹಾಪರಾಧವಾಗಿದೆ—ದಯಮಾಡಿ ಕ್ಷಮಿಸಿರೆಂದು ಪ್ರಾರ್ಥಿಸಿದರು (೧೦೭). ಹೀಗೆ ಪೂರ್ವದಲ್ಲಿನಡೆದುದನ್ನು ನಿಮಗೋಸ್ಕರ ಹೇಳಿರುವೆನೆಂದು ಸೂತರು ಗೋಭಿಲಾದಿ ಋಷಿಗಳಿಗೆ ತಿಳಿಸಿ, ಪೂರ್ವಪ್ರಸಕ್ತ ವಿಷಯವನ್ನು ಮುಂದರಿಸುತ್ತಾರೆ:

**ತಸ್ಮಾಚ್ಛಾಸ್ತ್ರೇಣ ವಿಹಿತಂ ಕುರ್ಯಾನ್ನಿಂದ್ಯಂ ಪರಿತ್ಯಜೇತ್ ।**

ಪುರಾವೃತ್ತಂ-ಪೂರ್ವದಲ್ಲಿ ನಡೆದುದು (ವೃತ್ತಾಂತವು), ಇತ್ಥಂ-ಹೀಗೆ (ಈವರೆಗೆ ನಿರೂಪಿಸಿದಂತೆ), ಆಸೀತ್-ಆಯಿತು; ಮಯಾ-ನನ್ನಿಂದ, ಭವದ್ಭ್ಯಃ-ನಿಮಗೋಸ್ಕರ, ಕಥಿತಂ-ಹೇಳಲ್ಪಟ್ಟಿತು; ತಸ್ಮಾತ್-ಆದ್ದರಿಂದ, ಶಾಸ್ತ್ರೇಣ-ಶಾಸ್ತ್ರದಿಂದ, ವಿಹಿತಂ-ವಿಹಿತವಾದುದನ್ನು (ಯೋಗ್ಯವೆಂದು ವಿಧಿಸಲ್ಪಟ್ಟದ್ದನ್ನು), ಕುರ್ಯಾತ್-ಮಾಡಬೇಕು; ನಿಂದ್ಯಂ-ನಿಂದಿಸಲ್ಪಟ್ಟದ್ದನ್ನು (ನಿಷೇಧವಾದುದನ್ನು), ಪರಿತ್ಯಜೇತ್-ಬಿಡಬೇಕು.

**ಅನಿಷಿದ್ಧಂ ಭವೇದ್ಯಚ್ಚ ರಾಗಪ್ರಾಪ್ತಂ ಚರೇದಪಿ ॥ ೧೦೯ ॥**

**ಅಸಕ್ತಚೇತಾಃ ಸತತಂ ವ್ಯವಹಾರಂ ಸಮಾಚರೇತ್ ।**

**ಆಸಕ್ತಿರೇವ ದೋಷೋತ್ರ ಯಯಾ ದುಃಖಂ ಸಮೇತ್ಯಯಂ ॥ ೧೧೦ ॥**

ಯಚ್ಚ-ಯಾವುದೊಂದು ವಿಷಯವು (ಭೋಗ್ಯವಸ್ತುವು), ಅನಿಷಿದ್ಧಂ-ನಿಷೇಧ ಮಾಡಲ್ಪಡದುದು, ಭವೇತ್-ಆದುದಾದರೆ, ರಾಗಪ್ರಾಪ್ತಂ-ಪ್ರೀತಿಪೂರ್ವಕ ಬಂದ(ತನಗೆ ಇಚ್ಛಿತವಾಗಿ ದೊರೆತ) ವಿಷಯವನ್ನು ಚರೇತ್ ಅಪಿ-ಭೋಗಿಸಬಹುದು (ಅದರಿಂದ ಪಾಪವಿಲ್ಲ); ಸತತಂ-ಸದಾ, ಅಸಕ್ತಚೇತಾಃ-ಆಸಕ್ತಿಯನ್ನು ತೊರೆದು, ವ್ಯವಹಾರಂ-(ವಸ್ತುಗಳೊಂದಿಗೆ) ವ್ಯವಹಾರವನ್ನು (ತನ್ನ ವಿವಿಧ ಪ್ರವೃತ್ತಿಯನ್ನು), ಚರೇತ್-ನಡೆಸಬೇಕು; ಅತ್ರ-ಈ ವಿಷಯದಲ್ಲಿ(ಜಗದ್ವಸ್ತುಗಳೊಡನೆ ವ್ಯವಹರಿಸುವುದರಲ್ಲಿ), ಯಯಾ-ಯಾವುದರ ನಿಮಿತ್ತವಾಗಿ, ಅಯಂ-ಈ ಜೀವನು, ದುಃಖಂ-ದುಃಖವನ್ನು, ಸಮೇತಿ-ಹೊಂದುವನೋ, (ಆ) ಆಸಕ್ತಿಃ ಏವ-ಆಸಕ್ತಿಯೇ (ಆಶಾರೂಪದ ಸಂಗವನ್ನು ಹೊಂದುವುದೇ), ದೋಷಃ-ದೋಷವು (ಅಪರಾಧವು-ಪಾಪಕಾರಣವು).

---

ಆದ್ದರಿಂದ[1] ಕಾರ್ಯ-ಅಕಾರ್ಯಗಳನ್ನು ಶಾಸ್ತ್ರಗಳಿಂದ ತಿಳಿದು, ಶ್ರೀಹರಿಯೇ ಸ್ವತಂತ್ರನೆಂದೂ, ಸರ್ವವೂ ಆತನ ಅಧೀನವೆಂದೂ ನಿಶ್ಚಯಿಸಿಕೊಂಡು (ಜನಕರಾಜನಂತೆ ಭಗವದಧೀನತ್ವವನ್ನು ತಿಳಿದು, ಮಮತ್ವಬುದ್ಧಿಯನ್ನು ತ್ಯಜಿಸಿ), ಶಾಸ್ತ್ರಗಳಲ್ಲಿ ವಿಧಿಸಿದುದನ್ನು ಆಚರಿಸಬೇಕು—ನಿಷೇಧಿಸಿರುವುದನ್ನು ತ್ಯಜಿಸಬೇಕು(೧೦೮). ತನಗೆ ಇಚ್ಛಿತವಾದ ವಸ್ತುವು, ತಾನಾಗಿ ದೊರೆತರೆ, ಅದು ನಿಷಿದ್ಧವಾದುದಲ್ಲದಿದ್ದರೆ, ಭೋಗಿಸಬೇಕು—ಅದರಿಂದ ದೋಷವಿಲ್ಲ—ಶ್ರೀವಿಷ್ಣುವಿನ ಆಜ್ಞೆಯನ್ನು ಉಲ್ಲಂಘಿಸಿದಂತಾಗುವುದಿಲ್ಲ; ಜಗದ್ವಸ್ತುಗಳೊಡನೆ, ಜೀವನು, ಸರ್ವದಾ, ಆಸಕ್ತಿಯನ್ನು ತೊರೆದು ವ್ಯವಹರಿಸಬೇಕು—ದುಃಖಕ್ಕೆ ಕಾರಣವಾದುದು ಆಸಕ್ತಿಯು, ಅನಾಸಕ್ತಿಯೇ

1 ಇಲ್ಲಿ, ಇದೇ ಅಧ್ಯಾಯದ ೬೨ನೇ ಶ್ಲೋಕಭಾಗವನ್ನು ನೋಡಿರಿ.

ಉಕ್ತಪ್ರಮೇಯವನ್ನು ನಿದರ್ಶನದಿಂದ ಸ್ಪಷ್ಟಗೊಳಿಸುತ್ತಾರೆ :—

**ಉತ್ತಮೋ ಬ್ರಹ್ಮಚಾರೀ ಸ್ಯಾದೃತೌ ಗಚ್ಛನ್ ಸ್ವಯೋಷಿತಂ ।**
**ಅನಿಷಿದ್ಧದಿನೇ ಗಚ್ಛನ್ ಮಧ್ಯಮಃ ಪರಿಕೀರ್ತಿತಃ ॥ ೧೧೧ ॥**

**ಅಕಾಲೇ ತಾಂ ವ್ರಜೇತ್ ಜ್ಞೇಯೋ ಬ್ರಹ್ಮಚಾರ್ಯಧಮೋ ಗೃಹೀ ।**

ಗೃಹೀ-ಗೃಹಸ್ಥಾಶ್ರಮದಲ್ಲಿರುವ ಪುರುಷನು, ಸ್ವಯೋಷಿತಂ-ತನ್ನ ಭಾರ್ಯೆಳನ್ನು, ಋತೌ-ಋತುಸ್ನಾತಳಾದಾಗ, ಗಚ್ಛನ್-ಭೋಗಿಸುವವನಾಗಿ, ಉತ್ತಮಃ-ಶ್ರೇಷ್ಠನಾದ, ಬ್ರಹ್ಮಚಾರೀ-ಬ್ರಹ್ಮಚಾರಿಯು, ಸ್ಯಾತ್-ಆಗುತ್ತಾನೆ (ಎಂದು ಕರೆಯಲ್ಪಡುತ್ತಾನೆ); (ಆತನೇ) ಅನಿಷಿದ್ಧದಿನೇ-ನಿಷೇಧಿಸಲ್ಪಡದ ದಿನಗಳಲ್ಲಿ, ಗಚ್ಛನ್-(ಆಕೆಯೊಡನೆ) ರಮಿಸಿ, ಮಧ್ಯಮಃ-ಮಧ್ಯಮ ಬ್ರಹ್ಮಚಾರಿಯು, ಪರಿಕೀರ್ತಿತಃ-ಎನಿಸುತ್ತಾನೆ; ತಾಂ-ಆಕೆಯನ್ನೇ (ತನ್ನ ಪತ್ನಿಯನ್ನೇ), ಅಕಾಲೇ-ಅಯೋಗ್ಯ (ನಿಷಿದ್ಧ ತಿಥಿ ಕಾಲಗಳಲ್ಲಿ), ವ್ರಜೇತ್-ಹೊಂದಿದರೆ (ಭೋಗಿಸಿದರೆ), ಅಧಮಃ-ಕನಿಷ್ಠನಾದ, ಬ್ರಹ್ಮಚಾರೀ-ವ್ರಜೇತ್-ಹೊಂದಿದರೆ (ಭೋಗಿಸಿದರೆ), ಅಧಮಃ-ಕನಿಷ್ಠನಾದ, ಬ್ರಹ್ಮಚಾರೀ-ಬ್ರಹ್ಮಚಾರಿಯು, ಜ್ಞೇಯಃ-(ಎಂದು) ತಿಳಿಯಲ್ಪಡುವನು (ತಿಳಿಯಬೇಕು).

**ನಿತ್ಯನೈಮಿತ್ತಿಕಂ ಕರ್ಮ ಪ್ರತ್ಯವಾಯಭಿಯಾ ಚರೇತ್ ॥ ೧೧೨ ॥**

**ನ ಕುರ್ಯಾತ್ ಕಾಮ್ಯಕರ್ಮಾಣಿ ವಿಷ್ಣುಭಕ್ತಿಪರಾಯಣಃ ।**
**ನಿತ್ಯಕಾಮ್ಯಾನಿ ಯಾನಿ ಸ್ಯುರಗ್ನಿಹೋತ್ರಮುಖಾನಿ ತು ॥ ೧೧೩ ॥**

---

(ಸಂಗವೇ) ದೋಷವು (ದುಃಖಕಾರಣವಾದ ಪಾಪವು) (೧೦೯-೧೧೦). ಯದ್ಯಪಿ ಸ್ತ್ರೀಭೋಗವು ರಾಗಪ್ರಾಪ್ತವಾದುದು—ಇಚ್ಛಿಸಿ ಅನುಭವಿಸುವುದರಿಂದಲೇ ಸುಖಪ್ರದವಾಗುವುದು; ಸ್ವಪತ್ನಿಯೊಡನೆ, ಋತುಸ್ನಾತಳಾದನಂತರ ಭೋಗಿಸುವುದು ವಿಧಿನಿಯತವಾದ ಕರ್ತವ್ಯವಾಗಿದೆ; ನಿಷಿದ್ಧವಲ್ಲದ ಅನ್ಯಕಾಲಗಳಲ್ಲಿ ಸಹ ಆಕೆಯೊಡನೆ ಭೋಗಿಸಬಹುದು; ಆಕೆಯನ್ನೇ ಅಕಾಲದಲ್ಲಿ ಸಹ (ನಿಷಿದ್ಧದೇಶಕಾಲ, ತಿಥ್ಯಾದಿಗಳಲ್ಲಿ ಸಹ) ಭೋಗಿಸಲು ಅವಕಾಶವಿರುತ್ತದೆಯಷ್ಟೆ; ಈ ಮೂವರೂ ಸ್ವಸ್ತ್ರೀಸಂಗವುಳ್ಳವರಾದರೂ (ಗೃಹಸ್ಥಾಶ್ರಮಿಗಳಾದರೂ—ಪರಸ್ತ್ರೀಸಂಗವಿಲ್ಲದ್ದರಿಂದ ಬ್ರಹ್ಮಚಾರಿಗಳೆಂದು ವ್ಯವಹರಿಸಲ್ಪಡುತ್ತಾರೆ; ಅವರಲ್ಲಿ ಕರ್ತವ್ಯವೆಂದು ಋತುಕಾಲದಲ್ಲಿ ಭೋಗಿಸುವವನು ಉತ್ತಮಬ್ರಹ್ಮಚಾರಿಯು; ಅನಿಷಿದ್ಧವಾದ ಇತರ ಕಾಲಗಳಲ್ಲಿ ಭೋಗಿಸುವವನು ಮಧ್ಯಮಬ್ರಹ್ಮಚಾರಿಯು; ಸ್ವಸ್ತ್ರೀಯನ್ನೇ ಅಕಾಲದಲ್ಲಿ ಸಹ ಭೋಗಿಸಿದರೂ ಆ ಗೃಹಸ್ಥನ ಬ್ರಹ್ಮಚರ್ಯಕ್ಕೆ ಹಾನಿಯಿಲ್ಲ—ಅಕಾಲ ಭೋಗಿಯು ಅಧಮಬ್ರಹ್ಮಚಾರಿಯೆನಿಸುತ್ತಾನೆ (೧೧೧). ನಿತ್ಯನೈಮಿತ್ತಿಕ ಕರ್ಮಗಳನ್ನು (ನಿತ್ಯ-ನಿತ್ಯವೂ ತಪ್ಪದೇ ಮಾಡಬೇಕಾದ

**ತತ್ಕಾಮನಿರಪೇಕ್ಷಃ ಸಂಸ್ತಾನಿ ಕುರ್ಯಾದ್ಯಥಾವಿಧಿ ।**

ನಿತ್ಯನೈಮಿತ್ತಿಕಂ ಕರ್ಮ-ನಿತ್ಯನೈಮಿತ್ತಿಕ ಕರ್ಮಗಳನ್ನು, ಪ್ರತ್ಯವಾಯಭಿಯಾ-(ಮಾಡದಿದ್ದರೆ ಪಾಪವೆಂಬ) ದೋಷಭಯದಿಂದ, ಚರೇತ್-ಆಚರಿಸಬೇಕು; ವಿಷ್ಣುಭಕ್ತಿಪರಾಯಣಃ-ವಿಷ್ಣುಭಕ್ತಿಯಲ್ಲಿ ಆಸಕ್ತನಾದವನು, ಕಾಮ್ಯಕರ್ಮಾಣಿ-ಕಾಮ್ಯಕರ್ಮಗಳನ್ನು (ಫಲೋದ್ದೇಶದಿಂದ ಆಚರಿಸುವ ಕರ್ಮಗಳನ್ನು), ನ ಕುರ್ಯಾತ್-ಮಾಡಬಾರದು; ಅಗ್ನಿಹೋತ್ರಮುಖಾನಿ-ಅಗ್ನಿಹೋತ್ರ ಮೊದಲಾದ, ಯಾನಿ-ಯಾವ, ನಿತ್ಯಕಾಮ್ಯಾನಿ-(ನಿಯಮೇನ) ಸ್ವಭಾವದಿಂದಲೇ ಕಾಮ್ಯಕರ್ಮಗಳು, ಸ್ಯುಃ-ಇರುತ್ತವೆಯೋ (ಆ ಕರ್ಮಗಳ ಸಂಕಲ್ಪಾದಿಗಳು ಸೂಚಿಸುವಂತೆ, ಅವು ಫಲಾಪೇಕ್ಷಾಯುಕ್ತ ಕರ್ಮಗಳಾದರೂ), ತಾನಿ-ಅವುಗಳನ್ನು, ತತ್ಕಾಮ ನಿರಪೇಕ್ಷಃ ಸನ್-ಆ ಫಲಗಳ ಅಪೇಕ್ಷೆಯಿಲ್ಲದವನಾಗಿ, ಯಥಾವಿಧಿ-ವಿಧ್ಯುಕ್ತ ಕ್ರಮದಿಂದ, ಕುರ್ಯಾತ್-ಮಾಡತಕ್ಕದ್ದು.

**ಪುರಾ ಹಿ ಮುದ್ಗಲಾಯೇಂದ್ರಸ್ತುಷ್ಟಸ್ತತ್ತಪಸಾವದತ್ ॥ ೧೧೪ ॥**

**ಯಾಹಿ ಸ್ವರ್ಗಮಿದಂ ಪಶ್ಯ ವಿಮಾನಂ ಶೀಘ್ರಮಾರುಹ ।**

ಕಾಮ್ಯಕರ್ಮಗಳಿಂದ ಲಭಿಸುವ ಸ್ವರ್ಗಾದಿ ಫಲಗಳನ್ನು ವಿಷ್ಣುಭಕ್ತನು ಅಪೇಕ್ಷಿಸುವುದಿಲ್ಲವೆಂಬಲ್ಲಿ ಮುದ್ಗಲಋಷಿಯ ನಿದರ್ಶನವನ್ನು ಉದಹರಿಸುತ್ತಾರೆ.

ಪುರಾ-ಪೂರ್ವದಲ್ಲಿ, ಮುದ್ಗಲಾಯ-ಮುದ್ಗಲ ಋಷಿಗೋಸ್ಕರ, ತಪಸಾ-(ಆ ಋಷಿಯ) ತಪಸ್ಸಿನಿಂದ, ತುಷ್ಟಃ-ಸಂತೃಪ್ತನಾದ, ಇಂದ್ರಃ-ಇಂದ್ರನು; ಶೀಘ್ರಂ-ಬೇಗನೇ, ಇದಂ-ಈ, ವಿಮಾನಂ-ವಿಮಾನವನ್ನು, ಪಶ್ಯ-ನೋಡು; ಆರುಹ-ಏರು(ಹತ್ತಿಕೋ);

---

ಸ್ನಾನಸಂಧ್ಯಾದಿಕರ್ಮಗಳು, ನೈಮಿತ್ತಿಕ-ಕಾಲವಿಶೇಷಗಳಲ್ಲಿ ಕಾರಣವಿಶೇಷಗಳಿಂದ ಆಚರಿಸಬೇಕಾದ ಶ್ರಾದ್ಧ-ಗ್ರಹಣಾದಿನಿಮಿತ್ತವುಳ್ಳ ಕರ್ಮಗಳು), ಬಿಡುವುದರಿಂದ, ದೋಷವುಂಟೆಂಬ ಭಯದಿಂದಲಾದರೂ ಆಚರಿಸಲೇಬೇಕು; ವಿಷ್ಣುಭಕ್ತಿ ಪರಾಯಣನಾದ ಭಕ್ತನು, ಕಾಮ್ಯ(ಫಲಾಶೆಯಿಂದ ಮಾಡುವ) ಕರ್ಮಗಳನ್ನು ಮಾಡಬಾರದು; ನಿತ್ಯಕಾಮ್ಯ (ನಿಯಮೇನ—ತಪ್ಪದೇ ಫಲೋದ್ದೇಶದಿಂದಲೇ ಆಚರಿಸಲಾಗುವ ಅಗ್ನಿಹೋತ್ರಾದಿ) ಕರ್ಮಗಳನ್ನು ಸಹ (ದೇವಋಷಿಪಿತೃಋಣ ವಿಮೋಚನಾರ್ಥವೆಂದು ಆಚರಿಸುವವುಗಳನ್ನು ಸಹ) ಆ ಫಲಗಳ ಆಕಾಂಕ್ಷೆಯನ್ನು ತ್ಯಜಿಸಿ, ವಿಧ್ಯುಕ್ತವಾಗಿ ಆಚರಿಸಬೇಕು—ಇದು ಉತ್ತಮಭಾಗವತನ ವೈಶಿಷ್ಟ್ಯವು (೧೧೨-೧೧೩). ವಿಷ್ಣುಭಕ್ತನು ಸ್ವರ್ಗಾದಿಫಲಗಳನ್ನು ಇಚ್ಛಿಸುವುದಿಲ್ಲವೆಂಬಲ್ಲಿ ಈ ಮುಂದೆ ಹೇಳುವ ಇತಿಹಾಸವನ್ನು ಕೇಳಿರಿ—ಪೂರ್ವದಲ್ಲಿ ತಪಸ್ಸಿನಿಂದ ತುಷ್ಟನಾದ

ಸ್ವರ್ಗಂ-ಸ್ವರ್ಗವನ್ನು ಕುರಿತು, ಯಾಹಿ-ಹೊರಡುವನಾಗು; (ಎಂದು), ಅವದತ್-ಹೇಳಿದನು, ಹಿ-ಇದು ಪ್ರಸಿದ್ಧವು.

**ಮುದ್ಗಲ ಉವಾಚ-**

**ದೇವೇಂದ್ರ ಕೇ ಗುಣಾಃ ಸ್ವರ್ಗೇ ತಾನ್ಮೇ ವದ ತತಃಪರಂ ॥ ೧೧೫ ॥**

**ಇದಂ ವಿಮಾನಮಾರುಹ್ಯ ಯಾಮಿ ತ್ವಂ ಯತ್ರ ನೇಷ್ಯಸಿ ।**

ಮುದ್ಗಲನು ಹೇಳಿದನು:—ದೇವೇಂದ್ರ-ಹೇ ಇಂದ್ರದೇವ; ಸ್ವರ್ಗೇ-ಸ್ವರ್ಗದಲ್ಲಿ, ಕೇ ಗುಣಾಃ-ಯಾವ ಗುಣಗಳಿವೆ, ತಾನ್-ಅವುಗಳನ್ನು, ಮೇ-ನನಗೆ, ವದ-ಹೇಳು; ತತಃಪರಂ-ಆ ನಂತರ, ಇದಂ-ಈ, ವಿಮಾನಂ-ವಿಮಾನವನ್ನು ಆರುಹ್ಯ-ಹತ್ತಿ(ಏರಿ), ಯಾಮಿ-ಹೊರಡುತ್ತೇನೆ(ಬರುತ್ತೇನೆ); ತ್ವಂ-ನೀನು, ಯತ್ರ-ಎಲ್ಲಿಗೆ, ನೇಷ್ಯಸಿ-ಕರೆದೊಯ್ಯುವೆಯೋ (ಅಲ್ಲಿಗೆ ಬರುತ್ತೇನೆ).

**ಇಂದ್ರ ಉವಾಚ—**

**ಸ್ವರ್ಗೇ ನಾನಾವಿಧಾ ಭೋಗಾಃ ಪ್ರಾಸಾದಾಃ ಸುಮನೋಹರಾಃ ।**
**ರಮ್ಯೋದ್ಯಾನಾನಿ ಸುಂದರ್ಯೋ ದಿವ್ಯಾ ಅಪ್ಸರಸಶ್ಚ ತಂ ॥ ೧೧೬ ॥**

---

ಇಂದ್ರನು,[1] ಮುದ್ಗಲ ಋಷಿಗಳನ್ನು, ಈ ವಿಮಾನವನ್ನು ಆರೋಹಣಮಾಡಿ ಸ್ವರ್ಗಕ್ಕೆ ನಡೆಯಿರಿ, ಎಂದು ಆಹ್ವಾನಿಸಿದನು(೧೧೪). ಮುದ್ಗಲರು ಆಗ ಇಂದ್ರನನ್ನು 'ಸ್ವರ್ಗದಲ್ಲಿರುವ ಗುಣಗಳಾವುವೆಂಬುದನ್ನು ಮೊದಲು ಹೇಳು, ನಂತರ ವಿಮಾನವನ್ನೇರಿ ನಿನ್ನೊಡನೆ ಬರುತ್ತೇನೆ—ನಿನ್ನ ಇಚ್ಛೆ ಬಂದಲ್ಲಿಗೆ ಕರೆದೊಯ್ಯುವಿಯಂತೆ' ಎಂದು ಹೇಳಿದರು(೧೧೫). ಇಂದ್ರನು ಸ್ವರ್ಗದ ಗುಣಗಳನ್ನು ಹೇಳುತ್ತಾನೆ:—ಸ್ವರ್ಗಭೋಗಗಳು ಬಹುವಿಧವಾಗಿವೆ; ಅಲ್ಲಿ ಮನೋಹರವಾದ ಪ್ರಾಸಾದಗಳೂ, ರಮ್ಯವಾದ ಉದ್ಯಾನಗಳೂ ಇರುತ್ತವೆ; ಸುಂದರಿಯರಾದ ದಿವ್ಯ ಅಪ್ಸರಸ್ತ್ರೀಯರು,[2] ತಮ್ಮ ಸ್ತನ, ನಾಭಿಗಳನ್ನು ಪ್ರದರ್ಶಿಸುವ ನಾನಾ ಹಾವ-ಭಾವಗಳಿಂದಲೂ, ನೃತ್ಯ, ವಾದ್ಯ, ಗೀತೆಗಳಿಂದಲೂ, ನಾನಾ ವಿಲಾಸಗಳಿಂದಲೂ ಸ್ವರ್ಗವಾಸಿಗಳನ್ನು ಸಂತೋಷಗೊಳಿಸುತ್ತಾರೆ; ಈ ವಿಧ ನರ್ತನಾದಿಗಳು ನಡೆಯುವ ಗೃಹಾದಿಗಳು, ಇಳಿಬಿಟ್ಟಿರುವ ಮುತ್ತಿನಹಾರಗಳಿಂದ ಶೋಭಿಸುತ್ತ ಹವಳ ಸ್ಫಟಿಕಾದಿ ಶ್ರೇಷ್ಠ

---

1. ಮುದ್ಗಲರು ಸ್ವರ್ಗಪ್ರಾಪ್ತಿಗಾಗಿ ಇಂದ್ರನನ್ನು ಕುರಿತು ತಪಸ್ಸು ಮಾಡಲಿಲ್ಲ; ಇಂದ್ರ-ಮುದ್ಗಲ ಸಂವಾದದಿಂದ ಸಜ್ಜನರನ್ನು ಎಚ್ಚರಿಸಲು, ಶ್ರೀಹರಿಯು ಇಂದ್ರನನ್ನು ಕಳುಹಿಸಿದನು.

2. ನಿಯತಪತಿರಹಿತರಾದ, ಪರಸ್ತ್ರೀಯೆಂಬ ಭೀತಿಗೆ ಕಾರಣವಿಲ್ಲದೇ ಭೋಗಿಸಲವಕಾಶವುಳ್ಳ ದೇವಲೋಕದ ಸ್ತ್ರೀಯರು, ಅಪ್ಸರೆಯರು.

**ತತ್ಕಾಮನಿರಪೇಕ್ಷಃ ಸಂಸ್ತಾನಿ ಕುರ್ಯಾದ್ಯಥಾವಿಧಿ ।**

ನಿತ್ಯನೈಮಿತ್ತಿಕಂ ಕರ್ಮ-ನಿತ್ಯನೈಮಿತ್ತಿಕ ಕರ್ಮಗಳನ್ನು ಪ್ರತ್ಯವಾಯಭಿಯಾ-(ಮಾಡದಿದ್ದರೆ ಪಾಪವೆಂಬ) ದೋಷಭಯದಿಂದ, ಚರೇತ್-ಆಚರಿಸಬೇಕು; ವಿಷ್ಣುಭಕ್ತಿಪರಾಯಣಃ-ವಿಷ್ಣುಭಕ್ತಿಯಲ್ಲಿ ಆಸಕ್ತನಾದವನು, ಕಾಮ್ಯಕರ್ಮಾಣಿ-ಕಾಮ್ಯಕರ್ಮಗಳನ್ನು (ಫಲೋದ್ದೇಶದಿಂದ ಆಚರಿಸುವ ಕರ್ಮಗಳನ್ನು), ನ ಕುರ್ಯಾತ್-ಮಾಡಬಾರದು; ಅಗ್ನಿಹೋತ್ರಮುಖಾನಿ-ಅಗ್ನಿಹೋತ್ರ ಮೊದಲಾದ, ಯಾನಿ-ಯಾವ, ನಿತ್ಯಕಾಮ್ಯಾನಿ-(ನಿಯಮೇನ) ಸ್ವಭಾವದಿಂದಲೇ ಕಾಮ್ಯಕರ್ಮಗಳು, ಸ್ಯುಃ-ಇರುತ್ತವೆಯೋ (ಆ ಕರ್ಮಗಳ ಸಂಕಲ್ಪಾದಿಗಳು ಸೂಚಿಸುವಂತೆ, ಅವು ಫಲಾಪೇಕ್ಷಾಯುಕ್ತ ಕರ್ಮಗಳಾದರೂ), ತಾನಿ-ಅವುಗಳನ್ನು ತತ್ಕಾಮ ನಿರಪೇಕ್ಷಃ ಸನ್-ಆ ಫಲಗಳ ಅಪೇಕ್ಷೆಯಿಲ್ಲದವನಾಗಿ, ಯಥಾವಿಧಿ-ವಿಧ್ಯುಕ್ತ ಕ್ರಮದಿಂದ, ಕುರ್ಯಾತ್-ಮಾಡತಕ್ಕದ್ದು.

**ಪುರಾ ಹಿ ಮುದ್ಗಲಾಯೇಂದ್ರಸ್ತುಷ್ಟಸ್ತತ್ತಪಸಾವದತ್ ॥ ೧೧೪ ॥**

**ಯಾಹಿ ಸ್ವರ್ಗಮಿದಂ ಪಶ್ಯ ವಿಮಾನಂ ಶೀಘ್ರಮಾರುಹ ।**

ಕಾಮ್ಯಕರ್ಮಗಳಿಂದ ಲಭಿಸುವ ಸ್ವರ್ಗಾದಿ ಫಲಗಳನ್ನು ವಿಷ್ಣುಭಕ್ತನು ಅಪೇಕ್ಷಿಸುವುದಿಲ್ಲವೆಂಬಲ್ಲಿ ಮುದ್ಗಲಋಷಿಯ ನಿದರ್ಶನವನ್ನು ಉದಹರಿಸುತ್ತಾರೆ.

ಪುರಾ-ಪೂರ್ವದಲ್ಲಿ, ಮುದ್ಗಲಾಯ-ಮುದ್ಗಲ ಋಷಿಗೋಸ್ಕರ, ತಪಸಾ-(ಆ ಋಷಿಯ) ತಪಸ್ಸಿನಿಂದ, ತುಷ್ಟಃ-ಸಂತೃಪ್ತನಾದ, ಇಂದ್ರಃ-ಇಂದ್ರನು; ಶೀಘ್ರಂ-ಬೇಗನೇ, ಇದಂ-ಈ, ವಿಮಾನಂ-ವಿಮಾನವನ್ನು, ಪಶ್ಯ-ನೋಡು; ಆರುಹ-ಏರು(ಹತ್ತಿಕೋ);

---

ಸ್ನಾನಸಂಧ್ಯಾದಿಕರ್ಮಗಳು, ನೈಮಿತ್ತಿಕ-ಕಾಲವಿಶೇಷಗಳಲ್ಲಿ ಕಾರಣವಿಶೇಷಗಳಿಂದ ಆಚರಿಸಬೇಕಾದ ಶ್ರಾದ್ಧ-ಗ್ರಹಣಾದಿನಿಮಿತ್ತವುಳ್ಳ ಕರ್ಮಗಳು), ಬಿಡುವುದರಿಂದ, ದೋಷವುಂಟೆಂಬ ಭಯದಿಂದಲಾದರೂ ಆಚರಿಸಲೇಬೇಕು; ವಿಷ್ಣುಭಕ್ತಿ ಪರಾಯಣನಾದ ಭಕ್ತನು, ಕಾಮ್ಯ(ಫಲಾಶಯಿಂದ ಮಾಡುವ) ಕರ್ಮಗಳನ್ನು ಮಾಡಬಾರದು; ನಿತ್ಯಕಾಮ್ಯ (ನಿಯಮೇನ—ತಪದೇ ಫಲೋದ್ದೇಶದಿಂದಲೇ ಆಚರಿಸಲಾಗುವ ಅಗ್ನಿಹೋತ್ರಾದಿ) ಕರ್ಮಗಳನ್ನು ಸಹ (ದೇವಋಷಿಪಿತೃಋಣ ವಿಮೋಚನಾರ್ಥವೆಂದು ಆಚರಿಸುವವುಗಳನ್ನು ಸಹ) ಆ ಫಲಗಳ ಆಕಾಂಕ್ಷೆಯನ್ನು ತ್ಯಜಿಸಿ, ವಿಧ್ಯುಕ್ತವಾಗಿ ಆಚರಿಸಬೇಕು—ಇದು ಉತ್ತಮಭಾಗವತನ ವೈಶಿಷ್ಟ್ಯವು (೧೧೨-೧೧೩). ವಿಷ್ಣುಭಕ್ತನು ಸ್ವರ್ಗಾದಿಫಲಗಳನ್ನು ಇಚ್ಛಿಸುವುದಿಲ್ಲವೆಂಬಲ್ಲಿ ಈ ಮುಂದೆ ಹೇಳುವ ಇತಿಹಾಸವನ್ನು ಕೇಳಿರಿ—ಪೂರ್ವದಲ್ಲಿ ತಪಸ್ಸಿನಿಂದ ತುಷ್ಟನಾದ

ಸ್ವರ್ಗಂ-ಸ್ವರ್ಗವನ್ನು ಕುರಿತು, ಯಾಹಿ-ಹೊರಡುವನಾಗು; (ಎಂದು), ಅವದತ್-ಹೇಳಿದನು. ಹಿ-ಇದು ಪ್ರಸಿದ್ಧವು.

**ಮುದ್ಗಲ ಉವಾಚ-**

**ದೇವೇಂದ್ರ, ಕೇ ಗುಣಾಃ ಸ್ವರ್ಗೇ ತಾನ್ಮೇ ವದ ತತಃಪರಂ ॥ ೧೧೫ ॥**

**ಇದಂ ವಿಮಾನಮಾರುಹ್ಯ ಯಾಮಿ ತ್ವಂ ಯತ್ರ ನೇಷ್ಯಸಿ ।**

ಮುದ್ಗಲನು ಹೇಳಿದನು:—ದೇವೇಂದ್ರ-ಹೇ ಇಂದ್ರದೇವ; ಸ್ವರ್ಗೇ-ಸ್ವರ್ಗದಲ್ಲಿ, ಕೇ ಗುಣಾಃ-ಯಾವ ಗುಣಗಳಿವೆ, ತಾನ್-ಅವುಗಳನ್ನು, ಮೇ-ನನಗೆ, ವದ-ಹೇಳು; ತತಃಪರಂ-ಆ ನಂತರ, ಇದಂ-ಈ, ವಿಮಾನಂ-ವಿಮಾನವನ್ನು ಆರುಹ್ಯ-ಹತ್ತಿ(ಏರಿ), ಯಾಮಿ-ಹೊರಡುತ್ತೇನೆ(ಬರುತ್ತೇನೆ); ತ್ವಂ-ನೀನು, ಯತ್ರ-ಎಲ್ಲಿಗೆ, ನೇಷ್ಯಸಿ-ಕರೆದೊಯ್ಯುವೆಯೋ (ಅಲ್ಲಿಗೆ ಬರುತ್ತೇನೆ).

**ಇಂದ್ರ ಉವಾಚ—**

**ಸ್ವರ್ಗೇ ನಾನಾವಿಧಾ ಭೋಗಾಃ ಪ್ರಾಸಾದಾಃ ಸುಮನೋಹರಾಃ ।**

**ರಮ್ಯೋದ್ಯಾನಾನಿ ಸುಂದರ್ಯೋ ದಿವ್ಯಾ ಅಪ್ಸರಸಸ್ತಥಾ ॥ ೧೧೬ ॥**

---

ಇಂದ್ರನು,[1] ಮುದ್ಗಲ ಋಷಿಗಳನ್ನು, ಈ ವಿಮಾನವನ್ನು ಆರೋಹಣಮಾಡಿ ಸ್ವರ್ಗಕ್ಕೆ ನಡೆಯಿರಿ, ಎಂದು ಆಹ್ವಾನಿಸಿದನು(೧೧೪). ಮುದ್ಗಲರು ಆಗ ಇಂದ್ರನನ್ನು 'ಸ್ವರ್ಗದಲ್ಲಿರುವ ಗುಣಗಳಾವುವೆಂಬುದನ್ನು ಮೊದಲು ಹೇಳು, ನಂತರ ವಿಮಾನವನ್ನೇರಿ ನಿನ್ನೊಡನೆ ಬರುತ್ತೇನೆ—ನಿನ್ನ ಇಚ್ಛೆ ಬಂದಲ್ಲಿಗೆ ಕರೆದೊಯ್ಯುವಿಯಂತೆ' ಎಂದು ಹೇಳಿದರು(೧೧೫). ಇಂದ್ರನು ಸ್ವರ್ಗದ ಗುಣಗಳನ್ನು ಹೇಳುತ್ತಾನೆ:—ಸ್ವರ್ಗಭೋಗಗಳು ಬಹುವಿಧವಾಗಿವೆ; ಅಲ್ಲಿ ಮನೋಹರವಾದ ಪ್ರಾಸಾದಗಳೂ, ರಮ್ಯವಾದ ಉದ್ಯಾನಗಳೂ ಇರುತ್ತವೆ; ಸುಂದರಿಯರಾದ ದಿವ್ಯ ಅಪ್ಸರಸ್ತ್ರೀಯರು,[2] ತಮ್ಮ ಸ್ತನ, ನಾಭಿಗಳನ್ನು ಪ್ರದರ್ಶಿಸುವ ನಾನಾ ಹಾವ-ಭಾವಗಳಿಂದಲೂ, ನೃತ್ಯ, ವಾದ್ಯ, ಗೀತೆಗಳಿಂದಲೂ, ನಾನಾ ವಿಲಾಸಗಳಿಂದಲೂ ಸ್ವರ್ಗವಾಸಿಗಳನ್ನು ಸಂತೋಷಗೊಳಿಸುತ್ತಾರೆ; ಈ ವಿಧ ನರ್ತನಾದಿಗಳು ನಡೆಯುವ ಗೃಹಾದಿಗಳು, ಇಳಿಬಿಟ್ಟಿರುವ ಮುತ್ತಿನಹಾರಗಳಿಂದ ಶೋಭಿಸುತ್ತ ಹವಳ ಸ್ಫಟಿಕಾದಿ ಶ್ರೇಷ್ಠ

---

1. ಮುದ್ಗಲರು ಸ್ವರ್ಗಪ್ರಾಪ್ತಿಗಾಗಿ ಇಂದ್ರನನ್ನು ಕುರಿತು ತಪಸ್ಸು ಮಾಡಲಿಲ್ಲ; ಇಂದ್ರ-ಮುದ್ಗಲ ಸಂವಾದದಿಂದ ಸಜ್ಜನರನ್ನು ಎಚ್ಚರಿಸಲು, ಶ್ರೀಹರಿಯು ಇಂದ್ರನನ್ನು ಕಳುಹಿಸಿದನು.

2. ನಿಯತಪತಿರಹಿತರಾದ, ಪರಸ್ತ್ರೀಯೆಂಬ ಭೀತಿಗೆ ಕಾರಣವಿಲ್ಲದೇ ಭೋಗಿಸಲರ್ಹರಾದ ವೇಶ್ಯ ದೇವಲೋಕದ ಸ್ತ್ರೀಯರು, ಅಪ್ಸರೆಯರು.

**ತತ್ಕಾಮನಿರಪೇಕ್ಷಃ ಸಂಸ್ತಾನಿ ಕುರ್ಯಾದ್ಯಥಾವಿಧಿ ।**

ನಿತ್ಯನೈಮಿತ್ತಿಕಂ ಕರ್ಮ-ನಿತ್ಯನೈಮಿತ್ತಿಕ ಕರ್ಮಗಳನ್ನು ಪ್ರತ್ಯವಾಯಭಯಾ-(ಮಾಡದಿದ್ದರೆ ಪಾಪವೆಂಬ) ದೋಷಭಯದಿಂದ, ಚರೇತ್-ಆಚರಿಸಬೇಕು; ವಿಷ್ಣುಭಕ್ತಿಪರಾಯಣಃ-ವಿಷ್ಣುಭಕ್ತಿಯಲ್ಲಿ ಆಸಕ್ತನಾದವನು, ಕಾಮ್ಯಕರ್ಮಾಣ-ಕಾಮ್ಯಕರ್ಮಗಳನ್ನು (ಫಲೋದ್ದೇಶದಿಂದ ಆಚರಿಸುವ ಕರ್ಮಗಳನ್ನು), ನ ಕುರ್ಯಾತ್-ಮಾಡಬಾರದು; ಅಗ್ನಿಹೋತ್ರಮುಖಾನಿ-ಅಗ್ನಿಹೋತ್ರ ಮೊದಲಾದ, ಯಾನಿ-ಯಾವ, ನಿತ್ಯಕಾಮ್ಯಾನಿ-(ನಿಯಮೇನ) ಸ್ವಭಾವದಿಂದಲೇ ಕಾಮ್ಯಕರ್ಮಗಳು, ಸ್ಯುಃ-ಇರುತ್ತವೆಯೋ (ಆ ಕರ್ಮಗಳ ಸಂಕಲ್ಪಾದಿಗಳು ಸೂಚಿಸುವಂತೆ, ಅವು ಫಲಾಪೇಕ್ಷಾಯುಕ್ತ ಕರ್ಮಗಳಾದರೂ), ತಾನಿ-ಅವುಗಳನ್ನು ತತ್ಕಾಮ ನಿರಪೇಕ್ಷಃ ಸನ್-ಆ ಫಲಗಳ ಅಪೇಕ್ಷೆಯಿಲ್ಲದವನಾಗಿ, ಯಥಾವಿಧಿ-ವಿಧ್ಯುಕ್ತ ಕ್ರಮದಿಂದ, ಕುರ್ಯಾತ್-ಮಾಡತಕ್ಕದ್ದು.

**ಪುರಾ ಹಿ ಮುದ್ಗಲಾಯೇಂದ್ರಸ್ತುಷ್ಟಸ್ತತ್ತಪಸಾವದತ್ ॥ ೧೧೪ ॥**

**ಯಾಹಿ ಸ್ವರ್ಗಮಿದಂ ಪಶ್ಯ ವಿಮಾನಂ ಶೀಘ್ರಮಾರುಹ ।**

ಕಾಮ್ಯಕರ್ಮಗಳಿಂದ ಲಭಿಸುವ ಸ್ವರ್ಗಾದಿ ಫಲಗಳನ್ನು ವಿಷ್ಣುಭಕ್ತನು ಅಪೇಕ್ಷಿಸುವುದಿಲ್ಲವೆಂಬಲ್ಲಿ ಮುದ್ಗಲಋಷಿಯ ನಿದರ್ಶನವನ್ನು ಉದಹರಿಸುತ್ತಾರೆ.

ಪುರಾ-ಪೂರ್ವದಲ್ಲಿ ಮುದ್ಗಲಾಯ-ಮುದ್ಗಲ ಋಷಿಗೋಸ್ಕರ, ತಪಸಾ-(ಆ ಋಷಿಯ) ತಪಸ್ಸಿನಿಂದ, ತುಷ್ಟಃ-ಸಂತೃಪ್ತನಾದ, ಇಂದ್ರಃ-ಇಂದ್ರನು; ಶೀಘ್ರಂ-ಬೇಗನೇ, ಇದಂ-ಈ, ವಿಮಾನಂ-ವಿಮಾನವನ್ನು ಪಶ್ಯ-ನೋಡು; ಆರುಹ-ಏರು(ಹತ್ತಿಕೋ);

---

ಸ್ನಾನಸಂಧ್ಯಾದಿಕರ್ಮಗಳು, ನೈಮಿತ್ತಿಕ-ಕಾಲವಿಶೇಷಗಳಲ್ಲಿ ಕಾರಣವಿಶೇಷಗಳಿಂದ ಆಚರಿಸಬೇಕಾದ ಶ್ರಾದ್ಧ-ಗ್ರಹಣಾದಿನಿಮಿತ್ತವುಳ್ಳ ಕರ್ಮಗಳು), ಬಿಡುವುದರಿಂದ, ದೋಷವುಂಟೆಂಬ ಭಯದಿಂದಲಾದರೂ ಆಚರಿಸಲೇಬೇಕು; ವಿಷ್ಣುಭಕ್ತಿ ಪರಾಯಣನಾದ ಭಕ್ತನು, ಕಾಮ್ಯ(ಫಲಾಶೆಯಿಂದ ಮಾಡುವ) ಕರ್ಮಗಳನ್ನು ಮಾಡಬಾರದು; ನಿತ್ಯಕಾಮ್ಯ (ನಿಯಮೇನ—ತಪ್ಪದೇ ಫಲೋದ್ದೇಶದಿಂದಲೇ ಆಚರಿಸಲಾಗುವ ಅಗ್ನಿಹೋತ್ರಾದಿ) ಕರ್ಮಗಳನ್ನು ಸಹ (ದೇವಋಷಿಪಿತೃಋಣ ವಿಮೋಚನಾರ್ಥವೆಂದು ಆಚರಿಸುವವುಗಳನ್ನು ಸಹ) ಆ ಫಲಗಳ ಆಕಾಂಕ್ಷೆಯನ್ನು ತ್ಯಜಿಸಿ, ವಿಧ್ಯುಕ್ತವಾಗಿ ಆಚರಿಸಬೇಕು—ಇದು ಉತ್ತಮಭಾಗವತನ ವೈಶಿಷ್ಟ್ಯವು (೧೧೨-೧೧೩). ವಿಷ್ಣುಭಕ್ತನು ಸ್ವರ್ಗಾದಿಫಲಗಳನ್ನು ಇಚ್ಛಿಸುವುದಿಲ್ಲವೆಂಬಲ್ಲಿ ಈ ಮುಂದೆ ಹೇಳುವ ಇತಿಹಾಸವನ್ನು ಕೇಳಿರಿ—ಪೂರ್ವದಲ್ಲಿ ತಪಸ್ಸಿನಿಂದ ತುಷ್ಟನಾದ

ಸ್ವರ್ಗಂ-ಸ್ವರ್ಗವನ್ನು ಕುರಿತು, ಯಾಹಿ-ಹೊರಡುವನಾಗು; (ಎಂದು), ಅವದತ್-ಹೇಳಿದನು, ಹಿ-ಇದು ಪ್ರಸಿದ್ಧವು.

**ಮುದ್ಗಲ ಉವಾಚ-**

**ದೇವೇಂದ್ರ ಕೇ ಗುಣಾಃ ಸ್ವರ್ಗೇ ತಾನ್ಮೇ ವದ ತತಃಪರಂ ॥ ೧೧೫ ॥**

**ಇದಂ ವಿಮಾನಮಾರುಹ್ಯ ಯಾಮಿ ತ್ವಂ ಯತ್ರ ನೇಷ್ಯಸಿ ।**

ಮುದ್ಗಲನು ಹೇಳಿದನು:—ದೇವೇಂದ್ರ-ಹೇ ಇಂದ್ರದೇವ; ಸ್ವರ್ಗೇ-ಸ್ವರ್ಗದಲ್ಲಿ, ಕೇ ಗುಣಾಃ-ಯಾವ ಗುಣಗಳಿವೆ, ತಾನ್-ಅವುಗಳನ್ನು, ಮೇ-ನನಗೆ, ವದ-ಹೇಳು; ತತಃಪರಂ-ಆ ನಂತರ, ಇದಂ-ಈ, ವಿಮಾನಂ-ವಿಮಾನವನ್ನು ಆರುಹ್ಯ-ಹತ್ತಿ(ಏರಿ), ಯಾಮಿ-ಹೊರಡುತ್ತೇನೆ(ಬರುತ್ತೇನೆ); ತ್ವಂ-ನೀನು, ಯತ್ರ-ಎಲ್ಲಿಗೆ, ನೇಷ್ಯಸಿ-ಕರೆದೊಯ್ಯುವೆಯೋ (ಅಲ್ಲಿಗೆ ಬರುತ್ತೇನೆ).

**ಇಂದ್ರ ಉವಾಚ—**

**ಸ್ವರ್ಗೇ ನಾನಾವಿಧಾ ಭೋಗಾಃ ಪ್ರಾಸಾದಾಃ ಸುಮನೋಹರಾಃ ।**

**ರಮ್ಯೋದ್ಯಾನಾನಿ ಸುಂದರ್ಯೋ ದಿವ್ಯಾ ಅಪ್ಸರಸಶ್ಚ ತಂ ॥ ೧೧೬ ॥**

---

ಇಂದ್ರನು,[1] ಮುದ್ಗಲ ಋಷಿಗಳನ್ನು, ಈ ವಿಮಾನವನ್ನು ಆರೋಹಣಮಾಡಿ ಸ್ವರ್ಗಕ್ಕೆ ನಡೆಯಿರಿ, ಎಂದು ಆಹ್ವಾನಿಸಿದನು(೧೧೪). ಮುದ್ಗಲರು ಆಗ ಇಂದ್ರನನ್ನು 'ಸ್ವರ್ಗದಲ್ಲಿರುವ ಗುಣಗಳಾವುವೆಂಬುದನ್ನು ಮೊದಲು ಹೇಳು, ನಂತರ ವಿಮಾನವನ್ನೇರಿ ನಿನ್ನೊಡನೆ ಬರುತ್ತೇನೆ—ನಿನ್ನ ಇಚ್ಛೆ ಬಂದಲ್ಲಿಗೆ ಕರೆದೊಯ್ಯುವಿಯಂತೆ' ಎಂದು ಹೇಳಿದರು(೧೧೫). ಇಂದ್ರನು ಸ್ವರ್ಗದ ಗುಣಗಳನ್ನು ಹೇಳುತ್ತಾನೆ:—ಸ್ವರ್ಗಭೋಗಗಳು ಬಹುವಿಧವಾಗಿವೆ; ಅಲ್ಲಿ ಮನೋಹರವಾದ ಪ್ರಾಸಾದಗಳೂ, ರಮ್ಯವಾದ ಉದ್ಯಾನಗಳೂ ಇರುತ್ತವೆ; ಸುಂದರಿಯರಾದ ದಿವ್ಯ ಅಪ್ಸರಸ್ತ್ರೀಯರು,[2] ತಮ್ಮ ಸ್ತನ, ನಾಭಿಗಳನ್ನು ಪ್ರದರ್ಶಿಸುವ ನಾನಾ ಹಾವ-ಭಾವಗಳಿಂದಲೂ, ನೃತ್ಯ, ವಾದ್ಯ, ಗೀತೆಗಳಿಂದಲೂ, ನಾನಾ ವಿಲಾಸಗಳಿಂದಲೂ ಸ್ವರ್ಗವಾಸಿಗಳನ್ನು ಸಂತೋಷಗೊಳಿಸುತ್ತಾರೆ; ಈ ವಿಧ ನರ್ತನಾದಿಗಳು ನಡೆಯುವ ಗೃಹಾದಿಗಳು, ಇಳಿಬಿಟ್ಟಿರುವ ಮುತ್ತಿನಹಾರಗಳಿಂದ ಶೋಭಿಸುತ್ತ, ಹವಳ ಸ್ಫಟಿಕಾದಿ ಶ್ರೇಷ್ಠ

---

1. ಮುದ್ಗಲರು ಸ್ವರ್ಗಪ್ರಾಪ್ತಿಗಾಗಿ, ಇಂದ್ರನನ್ನು ಕುರಿತು ತಪಸ್ಸು ಮಾಡಲಿಲ್ಲ; ಇಂದ್ರ-ಮುದ್ಗಲ ಸಂವಾದದಿಂದ ಸಜ್ಜನರನ್ನು ಎಚ್ಚರಿಸಲು, ಶ್ರೀಹರಿಯು ಇಂದ್ರನನ್ನು ಕಳುಹಿಸಿದನು.

2. ನಿಯತಪತಿರಹಿತರಾದ, ಪರಸ್ತ್ರೀಯೆಂಬ ಭೀತಿಗೆ ಕಾರಣವಿಲ್ಲದೇ ಭೋಗಿಸಲವಕಾಶವುಳ್ಳ ದೇವಲೋಕದ ಸ್ತ್ರೀಯರು, ಅಪ್ಸರೆಯರು.

**ರಮಯಂತಿ ವಿಲಾಸೈಃ ಸ್ತ್ರೀಃ ಕುಚನಾಭಿಪ್ರದರ್ಶನೈಃ ।**
**ಮುಕ್ತಾದಾಮವಿಚಿತ್ರೇಷು ರತ್ನಕುಟ್ಟಿಮಭೂಮಿಷು ॥ ೧೧೭ ॥**

**ದಿವ್ಯಕಸ್ತೂರಿಪಂಕಾದ್ಯೈರ್ಧೂಪೈರ್ನಾನಾವಿಧೈರಪಿ ।**
**ವಿಚಿತ್ರೈಃ ಕುಸುಮೈಶ್ಚಾಪಿ ಭವನೇಷು ಸುಗಂಧಿಷು ॥ ೧೧೮ ॥**

**ನೃತ್ಯವಾದಿತ್ರಗೀತಾನಿ ಕುರ್ವಂತೀಭಿಸ್ತದಿಚ್ಛಯಾ ।**
**ಮಂಚೇಷು ಕ್ರೀಡಮಾನೋಽಸೌ ಕಾಮಚಾರೋ ದಿವಾನಿಶಂ ॥ ೧೧೯ ॥**

**ಕಾಮಭಕ್ಷ್ಯಃ ಕಾಮಭೋಗಃ ಸ್ವರ್ಗಾ ಇತ್ಯಾದಯೋ ಗುಣಾಃ ।**

ಸ್ವರ್ಗೇ-ಸ್ವರ್ಗದಲ್ಲಿ, ನಾನಾ ವಿಧಾಃ-ಬಹುವಿಧಗಳಾದ, ಭೋಗಾಃ-ಭೋಗ್ಯ ವಸ್ತುಗಳೂ, ಸುಮನೋಹರಾಃ-ಅತ್ಯಂತ ಮನೋಹರಗಳಾದ, ಪ್ರಾಸಾದಾಃ-ಪ್ರಾಸಾದಗಳು (ಉಪ್ಪರಿಗೆಯುಳ್ಳ ವಿಶಾಲ ಗೃಹಗಳು), ರಮ್ಯೋದ್ಯಾನಾನಿ-ರಮ್ಯವಾದ ಉದ್ಯಾನಗಳು, ದಿವ್ಯಾಃ-ದೇವಲೋಕದ, ಸುಂದರ್ಯಃ-ಸುಂದರಿಯರಾದ, ಅಪ್ಸರಸಃ ಚ-ಅಪ್ಸರಸ್ತ್ರೀಯರು ಸಹ, ತಂ-ಆ ಸ್ವರ್ಗವಾಸಿಯನ್ನು ರಮಯಂತಿ-ಆನಂದಪಡಿಸುತ್ತವೆ; ಮುಕ್ತಾದಾಮ ವಿಚಿತ್ರೇಷು-ಮುತ್ತಿನಹಾರಗಳಿಂದ ವಿಚಿತ್ರಗಳಾದ, ರತ್ನಕುಟ್ಟಿಮಭೂಮಿಷು-(ಹವಳವೇ ಮೊದಲಾದ) ರತ್ನದ ನೆಲಕಟ್ಟುಗಳುಳ್ಳ, ದಿವ್ಯಕಸ್ತೂರಿಪಂಕಾದ್ಯೈಃ-ದೇವಲೋಕದ (ವಿಲಕ್ಷಣವಾದ) ಕಸ್ತೂರಿಮಿಶ್ರಿತ ಜಲದಿಂದಲೂ, ಅಪಿ-ಮತ್ತು, ನಾನಾವಿಧೈಃ-ವಿವಿಧವಾದ, ಧೂಪೈಃ-ಧೂಪಗಳಿಂದಲೂ, ವಿಚಿತ್ರೈಃ-ವಿವಿಧಗಳಾದ, ಕುಸುಮೈಃ ಚ ಅಪಿ-ಪುಷ್ಪಗಳಿಂದ ಸಹ, ಸುಗಂಧಿಷು-ಪರಿಮಳಗಂಧಪೂರ್ಣವಾದ, ಭವನೇಷು-ಮಂದಿರಗಳಲ್ಲಿ, ಸ್ತ್ರೀಃ-ತಮ್ಮ ಕುಚನಾಭಿಪ್ರದರ್ಶನೈಃ-ಸ್ತನಗಳನ್ನೂ ನಾಭಿಪ್ರದೇಶವನ್ನೂ ಪ್ರದರ್ಶನಮಾಡುವ, ವಿಲಾಸೈಃ-ಹಾವಭಾವಗಳಿಂದ, ನೃತ್ಯವಾದಿತ್ರಗೀತಾನಿ-ನರ್ತನ, ವಾದ್ಯ, ಗೀತೆಗಳನ್ನು ಕುರ್ವಂತೀಭಿಃ-ಮಾಡುತ್ತಿರುವ ಸ್ತ್ರೀಯರಿಂದ ಕೂಡಿ, ತದಿಚ್ಛಯಾ-ಆ ಸ್ತ್ರೀಯರ

---

ಶಿಲೆಗಳಿಂದ ನಿರ್ಮಿತವಾದ ನೆಲಕಟ್ಟುಳ್ಳವಾಗಿರುತ್ತವೆ; ದಿವ್ಯಕಸ್ತೂರಿಯಿಂದ ಪೂರ್ಣವಾದ ಜಲದಿಂದ ಸೇಚಿತವಾಗಿ, ವಿವಿಧ ಧೂಪಗಳಿಂದಲೂ ಸುಗಂಧ ಪರಿಮಳಯುಕ್ತ ವಿಚಿತ್ರ ಪುಷ್ಪಗಳಿಂದಲೂ ಮನೋಹರವಾಗಿರುತ್ತವೆ; ನೃತ್ಯಗಾನಾದಿಗಳಿಂದ ಸ್ವರ್ಗವಾಸಿಗಳಾದ ಪುರುಷರನ್ನು ತಮ್ಮ ಇಚ್ಛಾನುಸಾರವಾಗಿ, ಮಂಚಗಳಲ್ಲಿ (ಪರ್ಯಂಕಸ್ಥಿತ ಶಯ್ಯಾಗಳಲ್ಲಿ)ರಮಿಸಿ, ಸಂತೋಷಗೊಳಿಸುತ್ತಾರೆ; ಸ್ವರ್ಗವಾಸಿಯು, ಹಗಲುರಾತ್ರಿಗಳ ಭೇದವಿಲ್ಲದೇ ಸದಾ ಕಾಮಾಚಾರಿಯಾಗಿ, ಕಾಮಭಕ್ಷನಾಗಿರುತ್ತಾನೆ; ಇವೇ ಮೊದಲಾದ ಗುಣಗಳು ಸ್ವರ್ಗದಲ್ಲಿರುತ್ತವೆ (೧೧೬-೧೧೯). ಮುದ್ಗಲಮುನಿಗಳು

ಇಚ್ಛೆಯಂತೆ, ಮಂಚೇಷು-ಮಂಚಗಳಲ್ಲಿ (ಮೃದುಶಯ್ಯಾಯುಕ್ತ ಪರ್ಯಂಕಗಳಲ್ಲಿ), ಕ್ರೀಡಮಾನಃ-ಕ್ರೀಡಿಸುವ, ಅಸೌ-ಈ ಸ್ವರ್ಗವಾಸಿಯು, ದಿವಾನಿಶಂ-ಹಗಲುರಾತ್ರಿಗಳಲ್ಲಿ (ಸದಾ), ಕಾಮಚಾರಃ-ಸ್ವೇಚ್ಛಾನುಸಾರ ವರ್ತಿಸುತ್ತ, ಕಾಮಭಕ್ಷಃ-ಇಚ್ಛಿತ ಭೋಜನ ವುಳ್ಳವನೂ, ಕಾಮಭೋಗಃ-ಇಚ್ಛಿತ ಸುಖಗಳನ್ನು ಅನುಭವಿಸುವವನು (ಆಗಿರುತ್ತಾನೆ); ಸ್ವರ್ಗೇ-ಸ್ವರ್ಗದಲ್ಲಿ ಇತ್ಯಾದಯಃ-ಈ ಮೊದಲಾದ, ಗುಣಾಃ-ಗುಣಗಳು (ಇರುತ್ತವೆ).

**ಮುದ್ಗಲ ಉವಾಚ—**

**ಸ್ವರ್ಗಸ್ಯ ದೇವದೇವೇಂದ್ರ ಯಥಾ ವೈವರ್ಣಿತಾ ಗುಣಾಃ ।**
**ತಥೈವ ತತ್ರ ಯೇ ದೋಷಾಸ್ತಾನ್ ವರ್ಣಯಿತುಮರ್ಹಸಿ ॥ ೧೨೦ ॥**

ದೇವದೇವೇಂದ್ರ-ದೇವಶ್ರೇಷ್ಠನಾದ ಹೇ ಇಂದ್ರ!, ಯಥಾ-ಹೇಗೆ, ಸ್ವರ್ಗಸ್ಯ-ಸ್ವರ್ಗದ, ಗುಣಾಃ-ಗುಣಗಳು, ವರ್ಣಿತಾಃ-ವರ್ಣಿಸಲ್ಪಟ್ಟವೋ, ತಥಾ ಏವ-ಹಾಗೆಯೇ (ಅದೇ ಪ್ರಕಾರವಾಗಿ), ತತ್ರ-ಅಲ್ಲಿ (ಸ್ವರ್ಗದಲ್ಲಿ), ಯೇ ದೋಷಾಃ-ಯಾವ ದೋಷಗಳೋ, ತಾನ್-ಅವುಗಳನ್ನು, ವರ್ಣಯಿತುಂ-ವರ್ಣಿಸುವುದಕ್ಕೆ, ಅರ್ಹಸಿ-ಸಮರ್ಥನಾಗಿರುವಿ (ಅವುಗಳನ್ನು ನಿರೂಪಿಸುವುದು ಉಚಿತವಾಗಿದೆ).

**ಇಂದ್ರ ಉವಾಚ—**

**ದೋಷಾಣಾಂ ಹಿ ತ್ರಯಂ ಸ್ವರ್ಗೇ ಯಾಥಾತಥ್ಯೇನ ವಚ್ಮಿ ತೇ ।**
**ಪ್ರಾಜ್ಞೋ ನೈವಾನೃತಂ ಬ್ರೂಯಾನ್ನಾನೃತಾತ್ಪಾತಕಂ ಪರಂ ॥ ೧೨೧ ॥**

ಸ್ವರ್ಗೇ-ಸ್ವರ್ಗದಲ್ಲಿ ದೋಷಾಣಾಂ-ದೋಷಗಳು, ತ್ರಯಂ-ಮೂರು, ಹಿ-ಇವೆ ಎಂದು ಪ್ರಸಿದ್ಧವು; ತೇ-ನಿನಗೋಸ್ಕರ, ಯಾಥಾತಥ್ಯೇನ-(ಅವುಗಳನ್ನು) ಇದ್ದಂತೆ (ಸತ್ಯವಾಗಿ), ವಚ್ಮಿ-ಹೇಳುತ್ತೇನೆ; ಪ್ರಾಜ್ಞಃ-ವಿವೇಕಿಯು (ಬುದ್ಧಿವಂತನು), ಅನೃತಂ-ಸುಳ್ಳನ್ನು, ನೈವ ಬ್ರೂಯಾತ್-ಹೇಳಲೇಕೂಡದು; ಅನೃತಾತ್-ಸುಳ್ಳಿನಿಂದ, ಪರಂ-ಅಧಿಕವಾದ, ಪಾತಕಂ-ಪಾಪವು, ನ-ಇಲ್ಲ.

---

ಕೇಳುತ್ತಾರೆ:—ಹೇ ದೇವೇಂದ್ರ! ಸ್ವರ್ಗದ ಗುಣಗಳನ್ನು ಹೇಗೆ ವರ್ಣಿಸಿದೆಯೋ, ಹಾಗೆ, ಅಲ್ಲಿರುವ ದೋಷಗಳನ್ನೂ ಹೇಳುವವನಾಗು (೧೨೦). ಇಂದ್ರನು ಹೇಳುತ್ತಾನೆ:—ಸ್ವರ್ಗದಲ್ಲಿ ಮೂರು ದೋಷಗಳಿವೆ; ಅವುಗಳನ್ನು ನಿಮಗೋಸ್ಕರ ಸತ್ಯವಾಗಿ ತಿಳಿಸುತ್ತೇನೆ. ವಿವೇಕಿಯು ಸುಳ್ಳನ್ನು ಹೇಳಬಾರದು—ಸುಳ್ಳಿಗಿಂತ ಅಧಿಕವಾದ ಪಾಪವಿಲ್ಲ (೧೨೧) ಆ ದೋಷಗಳು ಯಾವುವೆಂದರೆ:—ಸ್ವರ್ಗದಲ್ಲಿ ಪುರುಷನು (ಜೀವನು) ತಾನು ಹಿಂದೆ ಮಾಡಿದ ಪುಣ್ಯಕರ್ಮದ ಫಲವನ್ನು ಮಾತ್ರ ಅನುಭವಿಸುತ್ತಾನೆ-ಹೊಸ ಪುಣ್ಯವನ್ನು ಸಂಪಾದಿಸುವುದಿಲ್ಲ (ಅದಕ್ಕೆ ಅಲ್ಲಿ ಅವಕಾಶವಿಲ್ಲ

**ಭುಜ್ಯತೇ ಕೃತಮೇವಾತ್ರ ಕಿಂಚಿನ್ನೈವಾರ್ಜತೇ ನವಂ ।**
**ದೃಷ್ಟ್ವಾ ಹಿ ಸ್ವಾಧಿಕಾನ್ ಭೋಗಾನಸೂಯಾ ಜಾಯತೇ ಭೃಶಂ ॥೧೨೨॥**

**ಬಹುಕಾಲಂ ಭುಕ್ತಭೋಗೋ ನ ತೃಪ್ತಿಮಧಿಗಚ್ಛತಿ ।**
**ಅತೃಪ್ತ ಏವ ಭೋಗೇಷು ಕ್ಷೀಣೇ ಪುಣ್ಯೇ ಪತತ್ಯಧಃ ॥ ೧೨೩ ॥**

ಅತ್ರ-ಸ್ವರ್ಗದಲ್ಲಿ ಕೃತಮೇವ-ಮಾಡಿದ್ದನ್ನೇ (ಭೂಲೋಕದಲ್ಲಿ-ಕರ್ಮಭೂಮಿಯಲ್ಲಿ ಮಾಡಿದ ಪುಣ್ಯಫಲವನ್ನೇ), ಭುಜ್ಯತೇ-ಭೋಗಿಸುತ್ತಾನೆ; ನವಂ-ಹೊಸದಾದ, ಕಿಂಚಿತ್-ಏನನ್ನೂ (ಯಾವುದನ್ನೂ), ನೈವ ಅರ್ಜತೇ-ಸಂಪಾದಿಸುವುದಿಲ್ಲ; ಸ್ವಾಧಿಕಾನ್-ತನಗಿಂತ ಅಧಿಕವಾದ (ಅಧಿಕ ಪುಣ್ಯವಂತರು ಅನುಭವಿಸುವ), ಭೋಗಾನ್-ಭೋಗಗಳನ್ನು, ದೃಷ್ಟ್ವಾ-ಕಂಡು, ಭೃಶಂ-ಹೆಚ್ಚಾದ, ಅಸೂಯಾ-ಅಸೂಯೆಯು, ಜಾಯತೇ-ಉಂಟಾಗುತ್ತದೆ; ಬಹುಕಾಲಂ-ದೀರ್ಘಕಾಲಪರ್ಯಂತ, ಭುಕ್ತಭೋಗಃ-ಭೋಗಿಸಿದ ಸುಖವುಳ್ಳವನಾದರೂ, ತೃಪ್ತಿಂ-ತೃಪ್ತಿಯನ್ನು, ನ ಅಧಿಗಚ್ಛತಿ-ಹೊಂದುವುದಿಲ್ಲ; ಭೋಗೇಷು-ಭೋಗಗಳಲ್ಲಿ ಅತೃಪ್ತ ಏವ-ಅತೃಪ್ತನಾಗಿಯೇ (ತೃಪ್ತನಾಗದೆ ಇರುವಾಗಲೇ), ಪುಣ್ಯೇ-ಪುಣ್ಯವು, ಕ್ಷೀಣೇ-ನಷ್ಟವಾಗುತ್ತಿರಲು, ಅಧಃ-ಕೆಳಗೆ (ಭೂಲೋಕಕ್ಕೆ), ಪತತಿ-ಬೀಳುತ್ತಾನೆ.

**ಮುದ್ಗಲ ಉವಾಚ—**

**ನೇದೃಶಂ ಸ್ವರ್ಗಮಿಚ್ಛಾಮಿ ಕಾಮಂ ಗಚ್ಛ ದಿವಸ್ಪತೇ ।**
**ತದಾದಿಶ ಯಥಾ ನ ಸ್ಯಾಜ್ಜಾತುಕಾಲಭಯಂ ಸುಖೇ ॥ ೧೨೪ ॥**

ಈದೃಶಂ-ಈ ವಿಧವಾದ (ದೋಷಗಳುಳ್ಳ), ಸ್ವರ್ಗಂ-ಸ್ವರ್ಗವನ್ನು ನ ಇಚ್ಛಾಮಿ-ನಾನು ಅಪೇಕ್ಷಿಸುವುದಿಲ್ಲ; ದಿವಸ್ಪತೇ-ಹೇ ಸ್ವರ್ಗಾಧಿಪತೇ ಇಂದ್ರ! ಕಾಮಂ-ನಿನ್ನ ಇಷ್ಟಾನುಸಾರ, ಗಚ್ಛ-ಹೋಗುವನಾಗು; (ಆದರೆ, ಹೊರಡುವ ಮುನ್ನ),

---

ಅದು ಕರ್ಮಭೂಮಿಯಲ್ಲ-ಭೋಗಭೂಮಿಯು); ಅಧಿಕ ಪುಣ್ಯವಂತರು ಅನುಭವಿಸುವ ಅಧಿಕ ಭೋಗಗಳನ್ನು ನೋಡಿ ಅಸೂಯೆ ಹುಟ್ಟುತ್ತದೆ; ಬಹುಕಾಲ ವಿವಿಧ ಭೋಗಗಳನ್ನು ಅನುಭವಿಸಿದರೂ, ತೃಪ್ತಿಯುಂಟಾಗುವುದಿಲ್ಲ—ಅಷ್ಟರಲ್ಲಿ ಆತನ ಪುಣ್ಯವು ನಷ್ಟವಾಗುತ್ತದೆ; ಅತೃಪ್ತನಾಗಿಯೇ ಕೆಳಗಿನ ಲೋಕಕ್ಕೆ ಬೀಳುತ್ತಾನೆ (೧೨೨-೧೨೩). ಆಗ ಮುದ್ಗಲನು, ಈ ಪ್ರಕಾರದ ದೋಷವುಳ್ಳ ಸ್ವರ್ಗವನ್ನು ನಾನು ಇಚ್ಛಿಸುವುದಿಲ್ಲ; ನಿನ್ನ ವಿಮಾನದಲ್ಲಿ ನಿನ್ನ ಇಚ್ಛಾನುಸಾರ ಹೊರಡು; ಆದರೆ, ಸುಖಭೋಗದಲ್ಲಿ ಕಾಲಭಯವು (ಕಾಲ ಗತಿಸುವುದರಿಂದ ನಷ್ಟವಾಗುವುದೆಂಬ ಭಯವು, ಅಥವಾ ಮರಣಾದಿಗಳಿಂದ ಭೋಗಿಸುವ ಆ ದೇಹದ ವಿಯೋಗದಿಂದ

ಸುಖೇ-ಸುಖಾನುಭವದಲ್ಲಿ, ಜಾತು-ಎಂದಿಗೂ, ಕಾಲಭಯಂ-ಕಾಲದಿಂದ (ನಷ್ಟವಾಗುವುದೆಂಬ) ಭೀತಿಯು, ಯಥಾ-ಹೇಗೆ (ಯಾವ ಸಾಧನದಿಂದ), ನ ಸ್ಯಾತ್-ಉಂಟಾಗುವುದಿಲ್ಲವೋ, ತತ್-ಅದನ್ನು ಆದಿಶ-ತಿಳಿಸು (ಉಪದೇಶಿಸು).

**ನ ಹ್ಯಸೂಯಾದಯೋ ದೋಷಾ ಬಾಧೇರನ್ ಮಮ ಮಾನಸಂ ।**
**ತಾದೃಶಂ ಯದಿ ಜಾನಾಸಿ ತದುಪಾಯಂ ವದಸ್ವ ಮೇ ॥ ೧೨೫ ॥**

ಮಮ-ನನ್ನ ಮಾನಸಂ-ಮನಸ್ಸನ್ನು (ಆಲೋಚನೆಗಳನ್ನು), ಅಸೂಯಾದಯಃ-ಅಸೂಯೆಯೇ ಮೊದಲಾದ, ದೋಷಾಃ-ದೋಷಗಳು, ನ ಹಿ ಬಾಧೇರನ್-ಸರ್ವಥಾ ಬಾಧಿಸದಿರುವ (ಮನಸ್ಸನ್ನು ಪೀಡಿಸದಿರುವ) ತಾದೃಶಂ-ಅಂತಹ, ಉಪಾಯಂ-ಸಾಧನವನ್ನು ಯದಿ ಜಾನಾಸಿ-ನೀನು ತಿಳಿದಿರುವೆಯಾದರೆ, ತತ್-ಅದನ್ನು, ಮೇ-ನನಗೆ, ವದಸ್ವ-ಹೇಳುವನಾಗು.

**ಇಂದ್ರ ಉವಾಚ—**

**ಅಯಜಂತ ಪುರಾ ದೇವಾಃ ವಿಷ್ಣುಂ ಯಜ್ಞೇನ ಭೂರಿಶಃ ।**
**ತೇ ಧರ್ಮಾಃ ಪ್ರಥಮಾ ಆಸಂಸ್ತೇ ಪ್ರಾಪುಸ್ತತ್ಪದಂ ಹರೇಃ ॥ ೧೨೬ ॥**

ಇಂದ್ರನು ಶ್ರುತ್ಯುಕ್ತಸಾಧನೆಗಳನ್ನು ಸಂಗ್ರಹಿಸಿ ನಿರೂಪಿಸುತ್ತಾನೆ:—

ಪುರಾ-ಪೂರ್ವದಲ್ಲಿ (ಹಿಂದೆ), ದೇವಾಃ-ದೇವತೆಗಳು, ಭೂರಿಶಃ-ಬಹುವಾಗಿ, ಯಜ್ಞೇನ-ಯಜ್ಞದಿಂದ, ವಿಷ್ಣುಂ-ಶ್ರೀವಿಷ್ಣುವನ್ನು ಅಯಜಂತ-ಪೂಜಿಸಿದರು; ತೇ-

---

ಉಂಟಾಗುವ ಭಯವು) ಎಂದಿಗೂ ಉಂಟಾಗದಿರುವುದು ಹೇಗೆಂಬುದನ್ನು (ಯಾವ ಉಪಾಯದಿಂದ ಎಂಬುದನ್ನು), ಉಪದೇಶಿಸುವ ಉಪಕಾರಮಾಡು (೧೨೪). ಮತ್ತು ನನ್ನ ಆಲೋಚನೆಗಳಲ್ಲಿ ಅಸೂಯಾದಿ ದೋಷಗಳು ಎಂದೂ ಪ್ರವೇಶಿಸಿ ನನ್ನನ್ನು ಪೀಡಿಸದಿರಬೇಕು; ಹೀಗೆ ನನ್ನ ಮನಸ್ಸನ್ನು ಸ್ವಸ್ಥವಾಗಿಡಲು ಅವಶ್ಯಕವಾದ ಸಾಧನವನ್ನು ನೀನು ತಿಳಿದಿರುವೆಯಾದರೆ, ಆ ಉಪಾಯವನ್ನು ನನಗೆ ತಿಳಿಸು (೧೨೫). ಇಂದ್ರನು, ವೇದೋಕ್ತಮೋಕ್ಷಸಾಧನೆಗಳನ್ನು ಸಂಗ್ರಹಿಸಿ ನಿರೂಪಿಸುತ್ತಾನೆ:—ಪೂರ್ವದಲ್ಲಿ ದೇವತೆಗಳು, ಶ್ರೀಮಹಾವಿಷ್ಣುವನ್ನು ಯಜ್ಞದಿಂದ, ವಿಶೇಷವಾಗಿ ಪೂಜಿಸಿದರು; ಅವರಿಂದ ಅನುಷ್ಠಿತವಾದ ಯಜ್ಞಗಳು, ಪ್ರಥಮಧರ್ಮಗಳೆನಿಸಿದವು; ಶ್ರೇಷ್ಠವಾದ ಯಜ್ಞಗಳೆಂಬ ಸಾಧನೆಯಿಂದ, ಆ ದೇವತೆಗಳು ವಿಷ್ಣುಪದವನ್ನೇ (ಮೋಕ್ಷವನ್ನೇ) ಹೊಂದಿದರು (೧೨೬). ಸಂಸಾರ ಬಂಧದಿಂದ ಮುಕ್ತರಾಗಿ, ದೇವತೆಗಳು ಹೊಂದಿದ ಸ್ಥಾನವೇ ವಿಷ್ಣುಪದವು; ಅಪೇಕ್ಷಿತ ನಿತ್ಯಸುಖರೂಪದ ಸಿದ್ಧಿಯನ್ನು ಸಾಧಿಸಿದ ಆ ದೇವತೆಗಳು, ಅಲ್ಲಿದ್ದು ಶ್ರೀವಿಷ್ಣುವಿನ (ಶ್ರೀವಿಷ್ಣುವಿನಿಂದ ನಡೆಯುವ) ಜಗತ್ತಿನ

ಅವುಗಳು (ದೇವಾನುಷ್ಠಿತ ಯಜ್ಞಗಳು), ಪ್ರಥಮಾಃ-ಶ್ರೇಷ್ಠವಾದ, ಧರ್ಮಾಃ-ಧರ್ಮಗಳು, (ವಿಷ್ಣುಪ್ರಾಪ್ತಿಸಾಧನಗಳು), ಆಸನ್-ಆದುವು (ಅಗ್ರಸ್ಥಾನವನ್ನು ಹೊಂದಿದವು); ತೇ-ಆ ದೇವತೆಗಳು, ಹರೇಃ-ಶ್ರೀಹರಿಯ, ತತ್ಪದಂ-ಸ್ವರೂಪವನ್ನು (ಸಾಯುಜ್ಯ ಮೋಕ್ಷವನ್ನು ಅಥವಾ ವೈಕುಂಠಾದಿ(ಪದ)ಸ್ಥಾನಗಳನ್ನು), ಪ್ರಾಪುಃ-ಹೊಂದಿದರು.

**ದೇವಾಃ ಸಾಧ್ಯಾಃ ಸಂತಿ ಯತ್ರ ಮುಕ್ತಾಃ ಸಂಸಾರಬಂಧನಾತ್ ।**
**ಪಶ್ಯಂತಿ ಸತತಂ ವಿಷ್ಣೋರ್ಲೋಕೇ ಸೃಷ್ಟ್ಯಾದಿಕಾಃ ಕ್ರಿಯಾಃ ॥ ೧೨೭ ॥**

ಸಾಧ್ಯಾಃ-(ಹೀಗೆ) ವಿಷ್ಣುಪದವನ್ನು ಸಾಧಿಸಿದ, ದೇವಾಃ-ದೇವತೆಗಳು, ಸಂಸಾರಬಂಧನಾತ್-ಸಂಸಾರಬಂಧನದಿಂದ, ಮುಕ್ತಾಃ-ಬಿಡುಗಡೆ ಹೊಂದಿ, ಯತ್ರ-ಎಲ್ಲಿ (ಯಾವ ಮುಕ್ತಸ್ಥಾನಗಳಲ್ಲಿ), ಸಂತಿ-ಇರುತ್ತಾರೆಯೋ, (ಅದೇ ವಿಷ್ಣುಪದವು); (ಅವರು-ಆ ಮುಕ್ತದೇವತೆಗಳು), ಲೋಕೇ-ಜಗತ್ತಿನಲ್ಲಿ, ಸತತಂ-ನಿರಂತರವಾದ, ವಿಷ್ಣೋಃ-ಶ್ರೀವಿಷ್ಣುವಿನ, ಸೃಷ್ಟ್ಯಾದಿಕ್ರಿಯಾಃ-ಸೃಷ್ಟಿ ಮೊದಲಾದ (ಸ್ಥಿತಿನಿಯಮನಾದಿ) ಕ್ರಿಯೆಗಳನ್ನು, ಪಶ್ಯಂತಿ-ನೋಡುತ್ತಾರೆ.

**ವೈರಾಗ್ಯಂ ಪ್ರಥಮೋ ಯಜ್ಞಃ ಶ್ರವಣಂ ಮನನಂ ತಥಾ ।**
**ಧ್ಯಾನಂ ಚ ಕ್ರಮಶೋ ಯಜ್ಞಾಃ ಪ್ರಥಮಾ ಇತಿ ಕೀರ್ತಿತಾಃ ॥ ೧೨೮ ॥**

---

ಸೃಷ್ಟ್ಯಾದಿ ವ್ಯಾಪಾರಗಳನ್ನು ನಿರಂತರವಾಗಿ ನೋಡುತ್ತಾರೆ[1] (೧೨೭-೧೨೮). ಶ್ರುತ್ಯುಕ್ತವಾದ ಪ್ರಥಮ ಮತ್ತು ಯಜ್ಞ ಶಬ್ದಗಳ ರಹಸ್ಯಾರ್ಥಗಳನ್ನು ಇಂದ್ರನು ಮುದ್ಗಲ ಋಷಿಗಳಿಗೆ ವಿವರಿಸುತ್ತಾನೆ:— ವಿಷಯಾಸಕ್ತಿ ತ್ಯಾಗವೆಂಬ ವೈರಾಗ್ಯವನ್ನು ಸಂಪಾದಿಸುವುದು, ಶ್ರೇಷ್ಠವಾದ ವಿಷ್ಣುಪೂಜೆಯು (ಪ್ರಥಮಯಜ್ಞವು—ಮೋಕ್ಷ

1. ೨೬, ೧೨೭, ೧೨೮ನೇ ಶ್ಲೋಕಗಳು, ಪುರುಷಸೂಕ್ತದ ಈ ಮುಂದಿನ ಮಂತ್ರದ ಅರ್ಥವನ್ನೇ ನಿರೂಪಿಸುತ್ತವೆ:—

"ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸ ಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥" ಯಜ್ಞದಿಂದ, ಯಜ್ಞಪುರುಷನಾದ ಶ್ರೀ ನಾರಾಯಣನನ್ನು ಪೂಜಿಸಿದರು; ಆ ಧರ್ಮಗಳು (ಯಜ್ಞನಾಮಕ ವಿಷ್ಣುಪೂಜಾವಿಶೇಷಗಳು) ಸರ್ವಶ್ರೇಷ್ಠವೆನಿಸಿದವು; ಅದರಿಂದ, ದೇವತೆಗಳು, ನಿತ್ಯಸುಖವುಳ್ಳ ಮೋಕ್ಷವನ್ನು ಮಹಿಮಾವಂತರಾಗಿ ಹೊಂದಿದರು; ಅಲ್ಲಿ ಹಿಂದೆ ಮುಕ್ತರಾದ ದೇವತೆಗಳು ಸಹ ಇರುತ್ತಾರೆ.

ಜಗತ್ಸೃಷ್ಟ್ಯಾದಿಗಳನ್ನು ಮುಕ್ತದೇವತೆಗಳು ಸಾಕ್ಷಾತ್ತಾಗಿ ಕಾಣುವುದರಿಂದ, ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ—ಮುಕ್ತಪ್ರತ್ಯಕ್ಷವು ಶ್ರೇಷ್ಠ ಪ್ರಮಾಣವು-ಅವರ ಜ್ಞಾನವು ಸರ್ವದಾ ಯಥಾರ್ಥವೇ ಆಗಿರುತ್ತದೆ.

**ಪುರುಷಾರ್ಥೇಷು ಸರ್ವೇಷು ಮೋಕ್ಷೋ ಹಿ ಪ್ರಥಮೋ ಯತಃ ।**
**ತತ್ಸಾಧನತ್ವಾದೇತೇಷು ಪ್ರಥಮತ್ವಮುದೀರ್ಯತೇ ॥ ೧೨೯ ॥**

**ಮಾರ್ಗಪ್ರದರ್ಶನಾಲ್ಲೋಕೇ ದೇವಾಸ್ತೇ ಪ್ರಥಮಾ ಮತಾಃ ।**
**ಧ್ಯಾನಸಂಶೋಧಿತಂ ಚಿತ್ತಂ ಸ್ವಪ್ರಕಾಶೇಽನಲೇ ಹರೌ ॥ ೧೩೦ ॥**

**ಜುಹುವುರ್ದೇವತಾಃ ಪೂರ್ವಾ ಯಜ್ಞೋಽಸೌ ಪ್ರಥಮಸ್ತತಃ ।**
**ಅತಃ ಪ್ರಥಮಯಜ್ಞೇನ ಸರ್ವೇಷಾಂ ಪ್ರಥಮಃ ಹರಿಃ ॥ ೧೩೧ ॥**

**ಆರಾಧಯಿತ್ವಾ ಪ್ರಥಮಂ ಪುರುಷಾರ್ಥಮವಾಪ್ನುಹಿ ॥ ೧೩೨ ॥**

ಶ್ರುತ್ಯುಕ್ತ 'ಪ್ರಥಮ'ಶಬ್ದದ ಸ್ವಾರಸ್ಯವಾದ ಗೂಢಾರ್ಥವನ್ನು ಇಂದ್ರನು ವಿವರಿಸುತ್ತಾನೆ:—

ವೈರಾಗ್ಯಂ-ವೈರಾಗ್ಯವು, ಪ್ರಥಮಃ-ಮೊದಲಿನ (ಮತ್ತು ಶ್ರೇಷ್ಠವಾದ), ಯಜ್ಞ-ಯಜ್ಞವು (ವಿಷ್ಣುಪೂಜೆಯು); ತಥಾ-ಹಾಗೂ, ಶ್ರವಣಂ-ಭಗವತ್ಕಥಾ ಶ್ರವಣವೂ (ಗುರುಮುಖದಿಂದ ಸಚ್ಛಾಸ್ತ್ರಶ್ರವಣವೂ), ಮನನಂ-ವಿಮರ್ಶಾತ್ಮಕ ಚಿಂತನವೂ, ಧ್ಯಾನಂ-(ನಿಶ್ಚಯಜ್ಞಾನಪ್ರವರ್ತಕ) ಶ್ರೀಹರಿಧ್ಯಾನವೂ, ಚ-ಸಹ, ಕ್ರಮಶಃ-ಕ್ರಮವಾಗಿ

---

ಪ್ರಾಪಕ, ಶ್ರೀವಿಷ್ಣುಪೂಜೆಯಲ್ಲಿ ಮೊದಲಿನ ಪೂಜೆಯು; ಆ ನಂತರ (ವೈರಾಗ್ಯವನ್ನು ಸಾಧಿಸಿಕೊಂಡು) ಸ್ವಯೋಗ್ಯಗುರುಮುಖದಿಂದ ಶ್ರೀವಿಷ್ಣುಮಹಿಮೆಗಳ (ಸಚ್ಛಾಸ್ತ್ರಗಳ ಶ್ರವಣವನ್ನು ಮಾಡಬೇಕು; ನಂತರ ಮನನ (ವಿಮರ್ಶಾತ್ಮಕ ಚಿಂತನ), ಧ್ಯಾನ (ಮಹಿಮಾಜ್ಞಾನಸಹಿತವಾದ ಶ್ರೀಹರಿಯ ದಿವ್ಯರೂಪದ ಧ್ಯಾನ)ಗಳನ್ನು ಆಚರಿಸಬೇಕು; ಇವು, ಕ್ರಮವಾಗಿ ಒಂದಕ್ಕಿಂತ ಮತ್ತೊಂದು ಶ್ರೇಷ್ಠವಾದ ಯಜ್ಞಗಳೇ ಆಗಿವೆ; ಆದ್ದರಿಂದ ಇವುಗಳೂ 'ಪ್ರಥಮ'ಗಳೆಂದೇ ಕರೆಯಲ್ಪಡುತ್ತವೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ (ಸರ್ವಾಭೀಷ್ಟಫಲಗಳಲ್ಲಿ) ಮೋಕ್ಷವು ಶ್ರೇಷ್ಠವಾದುದು (ಪ್ರಥಮವು); ವೈರಾಗ್ಯ, ಶ್ರವಣಾದಿಗಳು, ಮೋಕ್ಷಸಾಧನಗಳಾದ್ದರಿಂದ, ಅವೂ 'ಪ್ರಥಮ'ಗಳೆನಿಸಿವೆ; ದೇವತೆಗಳು ಮೊದಲಿಗೆ ಯಜ್ಞದಿಂದ ಮೋಕ್ಷವನ್ನು ಸಾಧಿಸಿ, ಮಾರ್ಗಪ್ರದರ್ಶಕರಾದ್ದರಿಂದ ಅವರೂ 'ಪ್ರಥಮ'ರೆನಿಸಿರುವರು; ಅವರು ಆಚರಿಸಿದ ಯಜ್ಞವೂ 'ಪ್ರಥಮ'ವೆನಿಸಿತು; ಏಕೆಂದರೆ, ಆ ದೇವತೆಗಳು ಸ್ವಪ್ರಕಾಶನಾದ ಶ್ರೀಹರಿಯೆಂಬ ಅಗ್ನಿಯಲ್ಲಿ ಧ್ಯಾನದಿಂದ ಪರಿಶುದ್ಧವಾದ ಮನಸ್ಸೆಂಬ ಹವಿಸ್ಸನ್ನು (ಚಿತ್ತವನ್ನು ಹೋಮಿಸಿದರು) ಸಮರ್ಪಿಸಿದರು; ಈ ಕಾರಣದಿಂದ ಧ್ಯಾನಯಜ್ಞವು 'ಪ್ರಥಮ'ವೆನಿಸಿದೆ. ಆದ್ದರಿಂದ, ಹೇ ಮುದ್ಗಲ! ಸಕಲ ಪುರುಷಾರ್ಥಗಳಲ್ಲಿ

(ಒಂದಕ್ಕಿಂತ ಮತ್ತೊಂದು ಶ್ರೇಷ್ಠವಾದ) ಯಜ್ಞಾಃ- ಯಜ್ಞಗಳು; ಪ್ರಥಮಾಃ ಇತಿ-(ಈ ಎಲ್ಲವೂ) 'ಪ್ರಥಮ'ಗಳೆಂದು, ಕೀರ್ತಿತಾಃ-ಪ್ರಸಿದ್ಧವಾಗಿವೆ; ಯತಃ-ಯಾವ ಕಾರಣದಿಂದ, ಸರ್ವೇಷು-ಎಲ್ಲಾ ಪುರುಷಾರ್ಥೇಷು-ಪುರುಷಾರ್ಥಗಳಲ್ಲಿ(ಜೀವರಿಗೆ ಅಭೀಷ್ಟಗಳಾದ ಫಲಗಳಲ್ಲಿ), ಮೋಕ್ಷಃ-ಮೋಕ್ಷವು, ಪ್ರಥಮಃ ಹಿ-ಶ್ರೇಷ್ಠವೆಂದು ಪ್ರಸಿದ್ಧವಾಗಿದೆಯೋ, ತತ್ಸಾಧನತ್ವಾತ್-ಆ ಪುರುಷಾರ್ಥಕ್ಕೆ (ಮೋಕ್ಷಕ್ಕೆ) ಸಾಧನವಾದ್ದರಿಂದ, ಏತೇಷು-ಇವುಗಳಲ್ಲಿ(ಶ್ರವಣಾದಿಗಳಲ್ಲಿ), ಪ್ರಥಮತ್ವಂ-'ಪ್ರಥಮ'ವೆಂಬ ಲಕ್ಷಣವು, ಉದೀರ್ಯತೇ-ಹೇಳಲ್ಪಡುತ್ತದೆ; ತೇ-ಆ(ಪೂರ್ವದಲ್ಲಿ ಯಜ್ಞವನ್ನಾಚರಿಸಿ ಮುಕ್ತರಾದ), ದೇವಾಃ-ದೇವತೆಗಳು, ಮಾರ್ಗಪ್ರದರ್ಶನಾತ್-(ಮೋಕ್ಷ)ಮಾರ್ಗವನ್ನು ತೋರಿಸಿಕೊಟ್ಟ ಕಾರಣದಿಂದ, ಲೋಕೇ-ಜಗತ್ತಿನಲ್ಲಿ, ಪ್ರಥಮಾಃ-ಪ್ರಥಮರೆಂದು, ಮತಾಃ-ತಿಳಿಯಲ್ಪಟ್ಟಿರುವರು; ಪೂರ್ವಾಃ-ಹಿಂದಿನ, ದೇವತಾಃ-ದೇವತೆಗಳು, ಧ್ಯಾನಸಂಶೋಧಿತಂ-ಧ್ಯಾನದಿಂದ ಪರಿಶುದ್ಧಗೊಳಿಸಲಾದ, ಚಿತ್ತಂ-(ತಮ್ಮ) ಮನಸ್ಸನ್ನು ಸ್ವಪ್ರಕಾಶೇ-ಸ್ವಪ್ರಕಾಶನಾದ (ಪ್ರಕಾಶಸ್ವರೂಪನಾದ-ಅನ್ಯಪ್ರಕಾಶಾಶ್ರಯರಹಿತನಾದ), ಹರೌ-ಶ್ರೀಹರಿಯೆಂಬ, ಅನಲೇ-ಅಗ್ನಿಯಲ್ಲಿ, ಜುಹುವುಃ-ಹೋಮಿಸಿದರು(ಮನಸ್ಸೆಂಬ ಹವಿಸ್ಸನ್ನು ಸಮರ್ಪಿಸಿದರು); ತತಃ-ಆ ಕಾರಣದಿಂದ, ಅಸೌ-ಈ, ಯಜ್ಞಃ-ಯಜ್ಞವು, ಪ್ರಥಮಃ-'ಪ್ರಥಮ'ವೆನಿಸಿತು; ಅತಃ-ಹೀಗಿರುವುದರಿಂದ, ಪ್ರಥಮಯಜ್ಞೇನ-ಪ್ರಥಮಯಜ್ಞದಿಂದ (ಶುದ್ಧವಾದ ಮನಸ್ಸನ್ನು ಶ್ರೀಹರಿಯಲ್ಲಿ ಸ್ಥಾಪಿಸುವುದೆಂಬ ಧ್ಯಾನರೂಪಯಜ್ಞದಿಂದ), ಸರ್ವೇಷಾಂ-ಸರ್ವರಿಗೆ (ಲಕ್ಷ್ಮೀಬ್ರಹ್ಮಾದಿಸರ್ವರಿಗೆ), ಪ್ರಥಮಂ-ಪ್ರಧಾನನಾದ (ಸರ್ವೋತ್ತಮನಾದ), ಹರಿಂ-ಶ್ರೀಹರಿಯನ್ನು ಆರಾಧಯಿತ್ವಾ-ಆರಾಧಿಸಿ (ಪೂಜಿಸಿ-ಪ್ರಸನ್ನೀಕರಿಸಿ), ಪ್ರಥಮಂ-ಮೊದಲಿನ (ಶ್ರೇಷ್ಠವಾದ), ಪುರುಷಾರ್ಥಂ-ಪುರುಷಾರ್ಥವಾದ ಮೋಕ್ಷವನ್ನು, ಅವಾಪ್ನುಹಿ- ಹೊಂದುವನಾಗು, ಹೇ ಮುದ್ಗಲ!

**ಸೂತ ಉವಾಚ—**

> **ಇತ್ಯಾದಿಶ್ಯ ಮುನಿಂ ಶಕ್ರಃ ಸಮಿಯಾಯ ನಿಜಂ ಪದಂ ।**
> **ಮುದ್ಗಲೋಽಪಿ ತಥಾ ಕೃತ್ವಾ ಫಲಂ ಲೇಭೇ ತಥೈವ ಸಃ ॥ ೧೩೩ ॥**

---

ಪ್ರಥಮವಾದ ಮೋಕ್ಷವನ್ನು ಸರ್ವೋತ್ತಮನಾದ (ಲಕ್ಷ್ಮೀಬ್ರಹ್ಮಾದಿಗಳಿಗೂ ಪ್ರಥಮನಾದ) ಶ್ರೀಹರಿಯನ್ನು ಆರಾಧಿಸಿ, ಹೊಂದುವವನಾಗು (೧೨೯-೧೩೨). ಹೀಗೆ, ದೇವೇಂದ್ರನು ಮುದ್ಗಲಋಷಿಗಳಿಗೆ ಉಪದೇಶಿಸಿ ತನ್ನ ಸ್ಥಾನವನ್ನು ಕುರಿತು ಹೊರಟುಹೋದನು; ಮುದ್ಗಲಋಷಿಗಳಾದರೋ, ಇಂದ್ರನ ಉಪದೇಶದಂತೆ ಧ್ಯಾನಯಜ್ಞದಿಂದ (ಪ್ರಥಮಯಜ್ಞದಿಂದ) ಶ್ರೀಹರಿಯನ್ನು ಪ್ರಸನ್ನೀಕರಿಸಿಕೊಂಡು, ಉಕ್ತವಾದ ಮೋಕ್ಷವೆಂಬ ಫಲವನ್ನು ಹೊಂದಿದನು; ಆ ಮುಕ್ತಲೋಕದಲ್ಲಿ ಶ್ರೀವಿಷ್ಣುವು

**ಯತ್ರ ತತ್ಪರಮಂ ವಿಷ್ಣೋಃ ಪದಂ ಲೋಕೇ ಮಹೀಯತೇ ।**
**ಅಧಿಷ್ಠಿತಂ ಸುಕೃತಿಭಿಃ ದೇವೈಸ್ತತ್ರಾಮೃತೋಽಭವತ್ ॥ ೧೩೪ ॥**

**ನ ನ್ಯವರ್ತತ ಲೋಕೇಽಸ್ಮಿನ್ ವಿಮುಕ್ತಃ ಕರ್ಮಬಂಧತಃ ।**

ಶಕ್ರಃ- ಇಂದ್ರನು, ಇತಿ- ಹೀಗೆ, ಮುನಿಂ- ಮುದ್ಗಲಋಷಿಯನ್ನು, ಆದಿಶ್ಯ- ಉಪದೇಶಿಸಿ (ಆಜ್ಞಾಪಿಸಿ- ಕಾಲಭಯವಿಲ್ಲದ ನಿತ್ಯಸುಖದಸಾಧನವನ್ನು ಉಪದೇಶಿಸಿ), ನಿಜಂ ಪದಂ- ತನ್ನ ಸ್ಥಾನವನ್ನು (ಸ್ವರ್ಗವನ್ನು- ಅಮರಾವತಿಯನ್ನು), ಸಮಿಯಾಯ- ಹೊಂದಿದನು; ಮುದ್ಗಲಃ ಅಪಿ- ಮುದ್ಗಲನೂ ಸಹ, ತಥಾ- ಹಾಗೆ (ಧ್ಯಾನಯಜ್ಞವನ್ನು), ಕೃತ್ವಾ- ಮಾಡಿ, ಸಃ- ಆತನು, ತಥಾ ಏವ- (ಇಂದ್ರನು ಹೇಳಿದ) ಅದೇ ವಿಷ್ಣುಪದ ಪ್ರಾಪ್ತಿರೂಪದ, ಫಲಂ- ಫಲವನ್ನು, ಲೇಭೇ- ಹೊಂದಿದನು; (ಆ ವಿಷ್ಣುಪದವಾವುದೆಂದರೆ). ಯತ್ರ ಲೋಕೇ- ಎಲ್ಲಿ (ಯಾವ ವೈಕುಂಠಾದಿ ಲೋಕದಲ್ಲಿ), ವಿಷ್ಣೋಃ- ಶ್ರೀವಿಷ್ಣುವಿನ, ಪರಮಂ- ಸರ್ವೋತ್ಕೃಷ್ಟವಾದ, ತತ್ ಪದಂ- ಆ ಜ್ಞಾನಾನಂದಾತ್ಮಕ ಸ್ವರೂಪವು, ಮಹೀಯತೇ- (ಸದಾ) ವಿರಾಜಸುತ್ತಿರುವುದೋ, (ಮತ್ತು), ಸುಕೃತಿಭಿಃ- ಮಹಾಭಾಗ್ಯಶಾಲಿಗಳಾದ, ದೇವೈಃ- ದೇವತೆಗಳಿಂದ (ಮುಕ್ತ ದೇವತೆಗಳಿಂದ), ಅಧಿಷ್ಠಿತಂ- ಆಶ್ರಯಿಸಲ್ಪಟ್ಟದೆಯೋ, ತತ್ರ- ಅಲ್ಲಿ (ಆ ಲೋಕದಲ್ಲಿ), ಅಮೃತಃ- ಮುಕ್ತನು, ಅಭವತ್- ಆದನು; ಕರ್ಮಬಂಧತಃ- ಕರ್ಮಬಂಧದಿಂದ, ವಿಮುಕ್ತಃ- ವಿಶೇಷವಾಗಿ ಮುಕ್ತನಾಗಿ (ಬಂಧಲೇಶರಹಿತನಾಗಿ), ಅಸ್ಮಿನ್ ಲೋಕೇ- ಈ ಭೂಲೋಕದಲ್ಲಿ ನ ನ್ಯವರ್ತತ- ತಿರುಗಿ ಬರಲಿಲ್ಲ (ಪುನಃ ಹುಟ್ಟಲಿಲ್ಲ).

**ಜ್ಯೋತಿಷ್ಟೋಮಾದಯೋ ಯಜ್ಞಾಃ ಪ್ರೋಕ್ತಾ ಆವಶ್ಯಕಾ ಇತಿ ॥ ೧೩೫॥**

**ದ್ವಿಜಾತೀನಾಂ ತತಃ ಕಾರ್ಯಾ ನಿಷ್ಕಾಮೇನೈವ ತೇಽಖಿಲಾಃ ।**

ದ್ವಿಜಾತೀನಾಂ- ದ್ವಿಜರಿಗೆ (ಬ್ರಾಹ್ಮಣ- ಕ್ಷತ್ರಿಯ- ವೈಶ್ಯವರ್ಣದವರಿಗೆ), ಜ್ಯೋತಿಷ್ಟೋಮಾದಯಃ- ಜ್ಯೋತಿಷ್ಟೋಮವೇ ಮೊದಲಾದ, ಯಜ್ಞಾಃ- ಯಜ್ಞಗಳು, ಆವಶ್ಯಕಾಃ-

---

ತನ್ನ ದಿವ್ಯ ಅಪ್ರಾಕೃತರೂಪದಿಂದ ಸದಾ ವಿರಾಜಮಾನನಾಗಿರುತ್ತಾನೆ ಮತ್ತು ಅಲ್ಲಿ ಮುಕ್ತದೇವತೆಗಳು ಸುಖದಿಂದ ವಾಸಿಸುತ್ತಾರೆ; ಸಂಸಾರಕ್ಕೆ ತಿರಿಗಿ ಬರದ, ಇಂತಹ ಕರ್ಮಬಂಧಲೇಶವಿಲ್ಲದ, ಸ್ಥಾನವನ್ನು ಹೊಂದಿ, ಮುದ್ಗಲಋಷಿಗಳು ಮುಕ್ತರಾದರು (೧೩೨-೧೩೪). ದ್ವಿಜರಿಗೆ, ಜ್ಯೋತಿಷ್ಟೋಮವೇ ಮೊದಲಾದ ಯಜ್ಞಗಳು ಕರ್ತವ್ಯವೆಂದು ಹೇಳಲ್ಪಟ್ಟಿವೆ; ಆದ್ದರಿಂದ ಆ ಎಲ್ಲವನ್ನೂ (ಯಜ್ಞಾದಿ ವಿಷ್ಣುಪೂಜಾತ್ಮಕ ವೇದೋಕ್ತಕರ್ಮಗಳನ್ನು), ಫಲಾಶೆಯನ್ನು ತ್ಯಜಿಸಿ, ಅವಶ್ಯವಾಗಿ ಆಚರಿಸಬೇಕು (೧೩೫). ಕರ್ಮಾಚರಣೆಯಿಂದ ಚಿತ್ತಶುದ್ಧಿಯೂ, ಅದರಿಂದ ಜ್ಞಾನೋದಯವೂ,

ಅವಶ್ಯವಾಗಿ ಆಚರಿಸಲ್ಪಡತಕ್ಕವುಗಳು, ಇತಿ-ಎಂದು, ಪ್ರೋಕ್ತಾಃ-ಹೇಳಲ್ಪಟ್ಟವೆ; ತತಃ-ಆದ್ದರಿಂದ, ತೇ-ಆ, ಅಖಿಲಾಃ-ಎಲ್ಲ ಯಜ್ಞಾದಿವಿಷ್ಣುಪೂಜಾಕರ್ಮಗಳು, ನಿಷ್ಕಾಮೇನ ಏವ-ಫಲಾಶಾರಹಿತರಾಗಿಯೇ (ಫಲಾಶೆಯನ್ನು ಬಿಟ್ಟು ಕೇವಲ ಶ್ರೀವಿಷ್ಣುಪ್ರೀತ್ಯರ್ಥವಾಗಿ), ಕಾರ್ಯಾಃ-ಮಾಡಲರ್ಹಗಳೇ ಸರಿ.

**ಕರ್ಮಣಾ ಶುದ್ಧಚಿತ್ತತ್ವಾದ್ಭವೇದ್ಜ್ಞಾನೋದಯೋ ನೃಣಾಂ ॥ ೧೩೬ ॥**
**ತೇನ ಪಶ್ಯಂತಿ ಸರ್ವೇಶಂ ತೇನ ಮುಕ್ತಿರವಾಪ್ಯತೇ ।**

ನೃಣಾಂ-ಮಾನುಷ್ಯದೇಹದಲ್ಲಿರುವ ಜೀವರಿಗೆ, ಕರ್ಮಣಾ-(ವಿಧ್ಯುಕ್ತ ಕರ್ಮಗಳ) ಆಚರಣೆಯಿಂದ, ಶುದ್ಧಚಿತ್ತತ್ವಾತ್-ಚಿತ್ತಶುದ್ಧಿದ್ವಾರಾ(ಅಂತಃಕರಣಶುದ್ಧಿಯು ದೊರೆಯುವುದರಿಂದ), ಜ್ಞಾನೋದಯಃ-ತತ್ತ್ವಜ್ಞಾನದ ಉದಯವು, ಭವೇತ್-ಉಂಟಾಗುತ್ತದೆ; ತೇನ-ಅದರಿಂದ (ಜ್ಞಾನದ ಮಹಿಮೆಯಿಂದ), ಸರ್ವೇಶಂ-ಸರ್ವನಿಯಾಮಕನಾದ (ಸರ್ವಸ್ವಾಮಿಯಾದ) ಶ್ರೀಹರಿಯನ್ನು, ಪಶ್ಯಂತಿ-(ಪ್ರತ್ಯಕ್ಷ) ಕಾಣುತ್ತಾರೆ (ಅಪರೋಕ್ಷಜ್ಞಾನಲಾಭವಾಗುತ್ತದೆ); ತೇನ-ಅದರಿಂದ (ಬ್ರಹ್ಮಸಾಕ್ಷಾತ್ಕಾರದಿಂದ), ಮುಕ್ತಿಃ-ಮೋಕ್ಷವು, ಅವಾಪ್ಯತೇ-ಹೊಂದಲ್ಪಡುತ್ತದೆ (ದೊರಕುತ್ತದೆ).

**ಪ್ರತ್ಯವಾಯೋ ಭವೇತ್ಕರ್ಮತ್ಯಾಗತಸ್ತೇನ ಮಾನಸಂ ॥ ೧೩೭ ॥**
**ಮಲಿನೀಭೂಯ ಪಾಪೇಷು ಸರ್ವದೈವ ವಿಷಜ್ಜತೇ ।**
**ತೇನಾಪ್ನೋತಿ ಮಹದ್ದುಃಖಮಧೋಽಧಃ ಕ್ರಮಶೋ ವ್ರಜೇತ್ ॥ ೧೩೮ ॥**

ಕರ್ಮತ್ಯಾಗತಃ-(ವಿಹಿತಗಳಾದ ಯಜ್ಞಾದಿ) ಕರ್ಮಗಳನ್ನು ಬಿಡುವುದರಿಂದ (ಆಚರಿಸದಿದ್ದರೆ), ಪ್ರತ್ಯವಾಯಃ-ದೋಷವು, ಭವೇತ್-ಉಂಟಾಗುತ್ತದೆ; ತೇನ-ಆದರಿಂದ (ಕರ್ಮತ್ಯಾಗದಿಂದ), ಮಾನಸಂ-ಮನಸ್ಸಿನ ವ್ಯಾಪಾರವು (ಮನಸ್ಸು), ಮಲಿನೀಭೂಯ-ಮಲಿನವಾಗಿ (ಅಶುದ್ಧವಾಗಿ), ಸರ್ವದಾ-ಸದಾ, ಪಾಪೇಷು ಏವ-ಪಾಪಕರ್ಮಗಳಲ್ಲಿಯೇ, ವಿಷಜ್ಜತೇ-ಆಸಕ್ತವಾಗುತ್ತದೆ; ತೇನ-ಆದರಿಂದ (ಹಾಗೆ ಮನಸ್ಸು ಪಾಪಾಚರಣೆಯಲ್ಲಿ ಆಸಕ್ತವಾದರೆ), ಮಹದ್ದುಃಖಂ-ಮಹಾ ದುಃಖವನ್ನು ಆಪ್ನೋತಿ-(ಜೀವನು-ದೇಹಿಯು) ಹೊಂದುತ್ತಾನೆ; ಕ್ರಮಶಃ-ಕ್ರಮವಾಗಿ (ಹೀಗೆಯೇ

---

ತಪ್ಪದೇ ದೊರಕುತ್ತವೆ; ಜ್ಞಾನದಿಂದ ಸರ್ವಸ್ವಾಮಿಯಾದ ಶ್ರೀಹರಿಯ ಸಾಕ್ಷಾದ್ದರ್ಶನವು ಲಭಿಸುತ್ತದೆ—ಆದರಿಂದ ಜ್ಞಾನಿಯು ಮೋಕ್ಷವೆಂಬ ಪ್ರಥಮಪುರುಷಾರ್ಥವನ್ನು ಹೊಂದುತ್ತಾನೆ (೧೩೬). ವಿಹಿತ ಯಜ್ಞಾದಿಕರ್ಮಗಳನ್ನು ತ್ಯಜಿಸುವುದರಿಂದ, ಮನಸ್ಸು ಅಶುದ್ಧವಾಗಿ ಪಾಪದಲ್ಲಿ ಆಸಕ್ತವಾಗುತ್ತದೆ; ಸರ್ವದಾ ಪಾಪಚಿಂತನೆಯಿಂದ, ಮಹಾ ದುಃಖವನ್ನು ಹೊಂದಿ, ದೇಹಿಯು ಕ್ರಮವಾಗಿ ನೀಚಗತಿಯನ್ನು ಹೊಂದುತ್ತಾನೆ

ಮುಂದರಿದು), ಅಧೋಧಃ-ಕೆಳಕೆಳಗಿನ (ನೀಚ ನೀಚ) ಗತಿಗಳನ್ನು ಪ್ರಜೇತ್-ಹೊಂದುತ್ತಾನೆ.

**ಇತ್ಥಂ ವಃ ಕಥಿತಂ ವಿಪ್ರಾಃ ರಹಸ್ಯಂ ಪರಮಾದ್ಭುತಂ ।**

**ಶ್ರುತಂ ದ್ವೈಪಾಯನಮತಂ ಮಯಾ ಶುಕಮುಖಾತ್ ಪುರಾ ॥ ೧೩೯ ॥**

ವಿಪ್ರಾಃ-ಹೇ ಗೋಭಿಲಾದಿ ವಿಪ್ರರೇ !, ಇತ್ಥಂ-ಈ ಪ್ರಕಾರವಾಗಿ, ವಃ-ನಿಮಗೋಸ್ಕರ, ಪರಮಾದ್ಭುತಂ-ಅತ್ಯಾಶ್ಚರ್ಯಕರವಾದ, ರಹಸ್ಯಂ-ಗೋಪ್ಯ ಪ್ರಮೇಯವು, ಕಥಿತಂ-ಹೇಳಲ್ಪಟ್ಟಿತು; ಮಯಾ-ನನ್ನಿಂದ, ಪುರಾ-ಹಿಂದೆ, ಶುಕಮುಖಾತ್-ಶ್ರೀಶುಕರ ಮುಖದಿಂದ, ದ್ವೈಪಾಯನಮತಂ-ಶ್ರೀಬಾದರಾಯಣರ (ನಿರ್ಣಯರೂಪದ) ಈ ರಹಸ್ಯವು, ಶ್ರುತಂ-ಶ್ರವಣಮಾಡಲಾಗಿತ್ತು (ಅದನ್ನೇ ನಿಮಗೆ ವರ್ಣಿಸಿದ್ದೇನೆ).

ಎರಕ್ತ ಮುಮುಕ್ಷುವಿನ ಕರ್ತವ್ಯನಿರೂಪಣವೆಂಬ
೨೦ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೨೧

ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

**ಅನಾದಿಕರ್ಮಣಾ ಬದ್ಧಾನ್ ಲಿಂಗಮಾತ್ರ ಶರೀರಿಣಃ ।**

**ವೀಕ್ಷ್ಯ ತದ್ಬಂಧಮೋಕ್ಷಾಯ ಸಿಸೃಕ್ಷುರ್ಭಗವಾನಭೂತ್ ॥ ೧ ॥**

ಭಗವಾನ್-ಷಡ್ಗುಣೈಶ್ವರ್ಯಪೂರ್ಣನಾದ ಶ್ರೀವಿಷ್ಣುವು, ಅನಾದಿ ಕರ್ಮಣಾ ಬದ್ಧಾನ್-ಅನಾದಿಕರ್ಮದಿಂದ ಬದ್ಧರಾದ, ಲಿಂಗಮಾತ್ರಶರೀರಿಣಃ-ಲಿಂಗಶರೀರವನ್ನು ಮಾತ್ರ ಉಳ್ಳವರಾದ ಜೀವರನ್ನು, ವೀಕ್ಷ್ಯ-ನೋಡಿ (ಅವರಲ್ಲಿ ಕೃಪಾದೃಷ್ಟಿಯನ್ನು ಬೀರಿ),

---

(೧೩೭-೧೩೮). ಹೇ ಗೋಭಿಲಾದಿ ವಿಪ್ರರೇ! ನಾನು ಈ ಹಿಂದೆ ಶ್ರೀಶುಕರಿಂದ ಶ್ರವಣಮಾಡಿದ, ಶ್ರೀದ್ವೈಪಾಯನರ ನಿರ್ಣಯವನ್ನೊಳಗೊಂಡ, ಅದ್ಭುತರಹಸ್ಯ ಪ್ರಮೇಯವನ್ನು ನಿಮಗಾಗಿ ನಿರೂಪಿಸಿರುತ್ತೇನೆ (೧೩೯).

೨೦ನೇ ಅಧ್ಯಾಯವು ಮುಗಿದುದು.

**ಅಧ್ಯಾಯ ೨೧**

**ತಾತ್ಪರ್ಯ—**ಸೂತರು ಹೇಳಿದರು:—ಸರ್ವಪೂಜ್ಯನೂ, ಷಡ್ಗುಣೈಶ್ವರ್ಯ ಪೂರ್ಣನೂ ಆದ ಶ್ರೀವಿಷ್ಣುವು, ಅನಾದಿಕರ್ಮಬದ್ಧರಾಗಿ, ಲಿಂಗದೇಹಮಾತ್ರ ಯುಕ್ತರಾದ ಜೀವರನ್ನು ಕೃಪಾದೃಷ್ಟಿಯಿಂದ ನೋಡಿ, ಅವರ ಬಂಧವಿಮೋಚನೆಗಾಗಿ, ಸೃಷ್ಟಿಮಾಡುವ ಇಚ್ಛೆಯನ್ನು ಹೊಂದಿದನು (೧). ಪಶು ವೃಕ್ಷ ಮೊದಲಾದ ನಾನಾ

ತದ್ಬಂಧಮೋಕ್ಷಾಯ- ಆ ಬಂಧರಿಂದ ಮುಕ್ತರನ್ನಾಗಿ ಮಾಡಲು. ಸಿಸೃಕ್ಷು-ಸೃಷ್ಟಿಯಲ್ಲಿ ಇಚ್ಛೆಯುಳ್ಳವನು (ಜಗತ್ತಿನ ಸೃಷ್ಟಿಯನ್ನು ಕೈಗೊಳ್ಳುವ ಇಚ್ಛೆಯುಳ್ಳವನು), ಅಭೂತ್- ಆದನು.

ಸೃಷ್ಟ್ವಾಪಿ ವಿವಿಧಾನ್ ದೇಹಾನ್ ಪಶುವೃಕ್ಷಾದಿರೂಪಿಣಃ ।
ನಾತಿತೃಪ್ತ ಇವಾಸ್ರಾಕ್ಷೀನ್ಮಾನುಷಂ ದೇಹಮುತ್ತಮಂ ॥ ೨ ॥

ಪಶುವೃಕ್ಷಾದಿರೂಪಿಣಃ-ಪಶು, ವೃಕ್ಷಾದಿರೂಪಗಳುಳ್ಳ, ವಿವಿಧಾನ್-ಬಹು ಪ್ರಕಾರದ, ದೇಹಾನ್-ಪ್ರಾಣಿದೇಹಗಳನ್ನು ಸೃಷ್ಟ್ವಾ ಅಪಿ-ಸೃಷ್ಟಿಮಾಡಿದರೂ ಕೂಡ, ಅತಿತೃಪ್ತಃ ನ- ಪೂರ್ಣತೃಪ್ತನಾಗಲಿಲ್ಲವೋ, ಇವ- ಎಂಬಂತೆ, ಉತ್ತಮಂ- ಶ್ರೇಷ್ಠವಾದ, ಮಾನುಷಂ ದೇಹಂ- ಮನುಷ್ಯದೇಹವನ್ನು, ಅಸ್ರಾಕ್ಷೀತ್- ಸೃಷ್ಟಿ ಮಾಡಿದನು (ಶ್ರೀಹರಿಯು ನಿರ್ಮಿಸಿದನು).

ಆಹಾರೋ ಮೈಥುನಂ ನಿದ್ರಾ ಇತ್ಯಾದಿ ನಿಖಿಲೇಷ್ವಪಿ ।
ಬಂಧಮೋಕ್ಷಪ್ರದಂ ಜ್ಞಾನಂ ಮಾನುಷೇಷ್ವೇವ ಜಾಯತೇ ॥ ೩ ॥

ಆಹಾರಃ- ಆಹಾರವು, ಮೈಥುನಂ- ರತಿಕ್ರೀಡೆಯೂ, ನಿದ್ರಾ- ನಿದ್ರೆಯೂ, ಇತ್ಯಾದಿ- ಈ ಮೊದಲಾದುವು, ನಿಖಿಲೇಷು ಅಪಿ- ಎಲ್ಲ ಪ್ರಾಣಿದೇಹಗಳಲ್ಲಿಯೂ, (ದೊರೆಯುತ್ತವೆ); (ಆದರೆ), ಬಂಧಮೋಕ್ಷಪ್ರದಂ- ಬಂಧಮೋಕ್ಷಗಳನ್ನು ಕೊಡುವ ಶ್ರೀಹರಿಯ, ಜ್ಞಾನಂ- ಜ್ಞಾನವು, (ಬಂಧಮೋಕ್ಷಗಳನ್ನು ಹೊಂದಿಸುವ, ಎಂದರೆ, ತಮಸ್ಸು ಮತ್ತು ಮೋಕ್ಷಗಳಿಗೆ ಕಾರಣವಾಗುವ ಜ್ಞಾನವು), ಮಾನುಷೇಷು ಏವ- ಮನುಷ್ಯ ದೇಹಗಳಲ್ಲಿ ಮಾತ್ರ, ಜಾಯತೇ- ಉಂಟಾಗುತ್ತದೆ.

ಸುಖವಿಪ್ರುಷಿ ದೇಹೇಸ್ಮಿನ್ಮಹಾದುಃಖೈಃ ಪ್ರಪೂರಿತೇ ।
ತಿಷ್ಠಂತೋಪಿ ನರಾಃ ಕೇಚಿನ್ನಾಸ್ತ್ಯೇವೇಶ್ವರ ಇತ್ಯಪಿ ॥ ೪ ॥

---

ರೂಪದ ನಾನಾ ಪ್ರಾಣಿದೇಹಗಳನ್ನು ಸೃಜಿಸಿದನು; ಆದರಿಂದ ಅತೃಪ್ತನಂತಾಗಿ,[1] ಉತ್ತಮವಾದ ಮನುಷ್ಯದೇಹವನ್ನು ಸೃಷ್ಟಿಮಾಡಿದನು (೨). ಆಹಾರ, ಮೈಥುನ, ನಿದ್ರಾದಿಗಳು ಇತರ ಎಲ್ಲ ದೇಹಗಳಲ್ಲಿ ದೊರೆಯುತ್ತವೆ; ಆದರೆ ಸಂಸಾರಬಂಧದಿಂದ ಮುಕ್ತನಾಗಲು ಅವಶ್ಯಕವಾದ ಜ್ಞಾನವು ಮನುಷ್ಯದೇಹಗಳಲ್ಲಿ ಮಾತ್ರವೇ ದೊರೆಯುತ್ತದೆ (೩). ಈ ಮನುಷ್ಯದೇಹದಲ್ಲಿ ತುಚ್ಛವೂ ನಶ್ವರವೂ (ಕ್ಷಣಿಕವೂ) ಆದ ಸುಖಬಿಂದುಗಳು (ತುಂತುರುಗಳು) ಮಾತ್ರವಿರುತ್ತವೆ—ಮಹಾ ದುಃಖಗಳಿಂದಲೇ ತುಂಬಿರುತ್ತದೆ; ಹೀಗಿರುವ ನಶ್ವರದೇಹದಲ್ಲಿದ್ದರೂ, ಕೆಲವರು (ಸೃಷ್ಟ್ಯಾದಿ ಕರ್ತನೂ ಸರ್ವಸ್ವಾಮಿಯೂ ಆದ) ಈಶ್ವರನೇ (ಶ್ರೀಹರಿಯೇ—ಪರಮಾತ್ಮನೇ) ಇಲ್ಲವೆಂದು

1. 'ನಾತಿ ತೃಪ್ತ ಇವ'—ಎಂಬುದರಿಂದ, ಎಲ್ಲ ದೇಹಗಳಲ್ಲಿ ಜೀವರು ಸ್ವಯೋಗ್ಯ ಸಾಧನೆಗಳನ್ನು ಮಾಡಿಕೊಂಡು ತನ್ನನ್ನು ಹೊಂದಲು, ಮನುಷ್ಯದೇಹವೇ ಶ್ರೇಷ್ಠವೆಂದು ಸೂಚಿತವಾಗಿದೆ.

**ಅಹಮೇವೇಶ್ವರ ಇತಿ ಕೇಚಿತ್ ಪ್ರಾಹುರಿಹೋದ್ಧತಾಃ ।**
**ಇದಂ ನ ಸತ್ಯಂ ಮಿಥ್ಯೈವೇತ್ಯಾದಿ ನಾನಾ ಪ್ರಚಕ್ಷತೇ ॥ ೫ ॥**

ಸುಖವಿಪ್ರುಷಿ-ಸುಖಬಿಂದು (ಅತ್ಯಲ್ಪ ಮತ್ತು ತುಚ್ಛವಾದುದು) ಮಾತ್ರವುಳ್ಳ, (ಮತ್ತು) ಮಹಾದುಃಖೈಃ-ಮಹಾದುಃಖಗಳಿಂದ, ಪ್ರಪೂರಿತೇ-ತುಂಬಿರುವ, ಅಸ್ಮಿನ್ ದೇಹೇ ಅಪಿ-ಈ ಮನುಷ್ಯದೇಹದಲ್ಲಿ ಸಹ, ತಿಷ್ಠಂತಃ-ಇರುವ, ಕೇಚಿತ್-ಕೆಲವು, ನರಾಃ-ಮನುಷ್ಯರು, ಈಶ್ವರಃ-ಈಶ್ವರನು (ಸರ್ವನಿಯಾಮಕ ಶ್ರೀವಿಷ್ಣುವು) ನಾಸ್ತಿ ಏವ-ಇಲ್ಲವೇ ಇಲ್ಲ, ಇತ್ಯಪಿ-ಎಂಬುದಾಗಿಯೂ, ಕೇಚಿತ್-ಮತ್ತೆ ಕೆಲವರು, ಉದ್ಧತಾಃ-ಉನ್ಮಾರ್ಗಿಗಳು (ದುರಹಂಕಾರಿಗಳು), ಅಹಂ ಏವ-ನಾನೇ, ಈಶ್ವರಃ-ಈಶ್ವರನು, ಇತಿ-ಎಂದೂ, ಇದಂ-ಈ (ಅನುಭವಸಿದ್ಧವಾದ ಜಗತ್ತು), ಸತ್ಯಂ ನ ಸತ್ಯವಲ್ಲ; ಮಿಥ್ಯಾ ಏವ-ಮಿಥ್ಯೆಯೇ, ಇತ್ಯಾದಿ-ಎಂದೂ, ನಾನಾ-ಬಹುವಿಧವಾಗಿ, ಪ್ರಚಕ್ಷತೇ-ತಿಳಿಯುತ್ತಾರೆ (ಪ್ರತಿಪಾದಿಸುತ್ತಾರೆ).

**ತೇಷಾಂ ಮತನಿರಾಕೃತ್ಯೈ ದಾರಿದ್ರ್ಯಂ ಚಾಪ್ಯನಿತ್ಯತಾಂ ।**
**ಆಧಿವ್ಯಾಧ್ಯಾದಿಸಿದ್ಧ್ಯರ್ಥಂ ವಿವೇಕಾಯ ಸತಾಂ ನೃಣಾಂ ॥ ೬ ॥**

---

ಭ್ರಮಿಸುತ್ತಾರೆ; ಮತ್ತೆ ಕೆಲವು ಉದ್ಧತರು, ತಾನೇ ಈಶ್ವರನೆಂದೂ, ಜಗತ್ತು ಮಿಥ್ಯೆ (ಸುಳ್ಳು)[1] ಎಂದೂ, ನಾನಾಪ್ರಕಾರವಾಗಿ ತಿಳಿದು ಪ್ರತಿಪಾದಿಸುತ್ತಾರೆ (೪-೫). ಈ ದುರ್ವಾದಿಗಳ ನಿರಾಕರಣೆಗಾಗಿಯೂ, ಸಜ್ಜನರಿಗೆ ವಿವೇಕಜ್ಞಾನವನ್ನು ದೊರಕಿಸುವುದಕ್ಕಾಗಿ ಸಹ, ಜಗದೀಶನಾದ ಶ್ರೀವಿಷ್ಣುವು, ಬಡತನವನ್ನೂ ದೇಹದ ಅನಿತ್ಯತ್ವವನ್ನೂ ನಿರ್ಮಿಸಿದನು—ದಾರಿದ್ರ್ಯವು ಆಧಿಗೆ (ನಿರಂತರವಾದ ಮನೋರೋಗಕ್ಕೆ) ಕಾರಣವಾಗುತ್ತದೆ; ದೇಹದ ನಾನಾ ರೋಗಗಳು, ಅನಿತ್ಯತ್ವಕ್ಕೆ (ದೇಹದ ನಶ್ವರತ್ವಕ್ಕೆ) ಕಾರಣವಾಗುತ್ತವೆ; ಇವು ಕ್ರಮವಾಗಿ, ಉದ್ಧತರಾದ ತಮೋಯೋಗ್ಯ ಜೀವರಿಗೆ ನಿತ್ಯಬಂಧನರೂಪದ ಅಂಧತಮಸ್ಸಿಗೂ, ಮುಕ್ತಿಯೋಗ್ಯಜೀವರಿಗೆ (ವೈರಾಗ್ಯದ್ವಾರಾ)

---

1. ಶುಕ್ತಿರಜತದಂತೆ, ರಜ್ಜುಸರ್ಪದಂತೆ, ಜಗತ್ತು ತ್ರಿಕಾಲದಲ್ಲಿಯೂ ಇರದ (ಅಸ್ತಿತ್ವವೇ ಇಲ್ಲದ) ತೋರುವ ಕಾಲದಲ್ಲಿ ಮಾತ್ರ 'ಇದೆ' ಎಂಬ ವ್ಯವಹಾರಕ್ಕೆ ಎಡೆಗೊಡುವ, ಸುಳ್ಳಾದ ವಸ್ತುವು (ಅಸತ್ಯ ಪದಾರ್ಥವೇ) ಮಿಥ್ಯೆ ಎನಿಸುತ್ತದೆಂದು ಮಾಯಾವಾದಿಗಳು ಹೇಳುತ್ತಾರೆ. ಇದನ್ನು 'ವ್ಯಾವಹಾರಿಕ ಸತ್ಯ'ವೆಂದು ಕರೆದು ಸತ್ಯವನ್ನು ಪಾರಮಾರ್ಥಿಕ—ವ್ಯಾವಹಾರಿಕವೆಂದು ಎರಡು ವಿಧವಾಗಿ ನಿರೂಪಿಸಿ, ವಿವೇಕಿಗಳನ್ನು ವಂಚಿಸಲೆತ್ನಿಸುತ್ತಾರೆ. ಅವರ ವ್ಯಾವಹಾರಿಕ ಸತ್ಯವೆನ್ನುವುದು, ತ್ರಿಕಾಲದಲ್ಲಿ (ಭೂತ-ಭವಿಷ್ಯತ್, ವರ್ತಮಾನ ಕಾಲಗಳಲ್ಲಿ) ಇಲ್ಲದ ಅಸತ್ಯವಸ್ತುವೇ ಆಗಿದೆ—'ವ್ಯಾವಹಾರಿಕ ಸತ್ಯ'ವೆಂಬ ಶಬ್ದಪ್ರಯೋಗವು ಕೇವಲ ಸಾಂಕೇತಿಕವೆಂದು ಕಂಡುಬರುತ್ತದೆ. ಅಸತ್ಯವನ್ನೇ ಸತ್ಯವೆಂದು ಕರೆದರೆ, ಅದು ಸತ್ಯವಾದೀತೇ? ಮಾಯಾವಾದಿಗಳ, ಮಿಥ್ಯಾತ್ವದ

ತದ್ಬಂಧಮೋಕ್ಷಾಯ- ಆ ಬಂಧದಿಂದ ಮುಕ್ತರನ್ನಾಗಿ ಮಾಡಲು, ಸಿಸೃಕ್ಷುಃ-ಸೃಷ್ಟಿಯಲ್ಲಿ ಇಚ್ಛೆಯುಳ್ಳವನು (ಜಗತ್ತಿನ ಸೃಷ್ಟಿಯನ್ನು ಕೈಗೊಳ್ಳುವ ಇಚ್ಛೆಯುಳ್ಳವನು), ಅಭೂತ್- ಆದನು.

**ಸೃಷ್ಟ್ವಾಪಿ ವಿವಿಧಾನ್ ದೇಹಾನ್ ಪಶುವೃಕ್ಷಾದಿರೂಪಿಣಃ ।**
**ನಾತಿತೃಪ್ತ ಇವಾಸ್ರಾಕ್ಷೀನ್ಮಾನುಷಂ ದೇಹಮುತ್ತಮಂ ॥ ೨ ॥**

ಪಶುವೃಕ್ಷಾದಿರೂಪಿಣಃ-ಪಶು, ವೃಕ್ಷಾದಿರೂಪಗಳುಳ್ಳ, ವಿವಿಧಾನ್- ಬಹು ಪ್ರಕಾರದ, ದೇಹಾನ್- ಪ್ರಾಣದೇಹಗಳನ್ನು, ಸೃಷ್ಟ್ವಾ ಅಪಿ-ಸೃಷ್ಟಿಮಾಡಿದರೂ ಕೂಡ, ಅತಿತೃಪ್ತಃ ನ- ಪೂರ್ಣತೃಪ್ತನಾಗಲಿಲ್ಲವೋ, ಇವ- ಎಂಬಂತೆ, ಉತ್ತಮಂ- ಶ್ರೇಷ್ಠವಾದ, ಮಾನುಷಂ ದೇಹಂ- ಮನುಷ್ಯದೇಹವನ್ನು ಅಸ್ರಾಕ್ಷೀತ್- ಸೃಷ್ಟಿ ಮಾಡಿದನು (ಶ್ರೀಹರಿಯು ನಿರ್ಮಿಸಿದನು).

**ಆಹಾರೋ ಮೈಥುನಂ ನಿದ್ರಾ ಇತ್ಯಾದಿ ನಿಖಿಲೇಷ್ವಪಿ ।**
**ಬಂಧಮೋಕ್ಷಪ್ರದಂ ಜ್ಞಾನಂ ಮಾನುಷೇಷ್ವೇವ ಜಾಯತೇ ॥ ೩ ॥**

ಆಹಾರಃ- ಆಹಾರವು, ಮೈಥುನಂ- ರತಿಕ್ರೀಡೆಯೂ, ನಿದ್ರಾ- ನಿದ್ರೆಯೂ, ಇತ್ಯಾದಿ- ಈ ಮೊದಲಾದುವು, ನಿಖಿಲೇಷು ಅಪಿ- ಎಲ್ಲ ಪ್ರಾಣದೇಹಗಳಲ್ಲಿಯೂ, (ದೊರೆಯುತ್ತವೆ); (ಆದರೆ), ಬಂಧಮೋಕ್ಷಪ್ರದಂ- ಬಂಧಮೋಕ್ಷಗಳನ್ನು ಕೊಡುವ ಶ್ರೀಹರಿಯ, ಜ್ಞಾನಂ- ಜ್ಞಾನವು, (ಬಂಧಮೋಕ್ಷಗಳನ್ನು ಹೊಂದಿಸುವ, ಎಂದರೆ, ತಮಸ್ಸು ಮತ್ತು ಮೋಕ್ಷಗಳಿಗೆ ಕಾರಣವಾಗುವ ಜ್ಞಾನವು), ಮಾನುಷೇಷು ಏವ- ಮನುಷ್ಯ ದೇಹಗಳಲ್ಲಿ ಮಾತ್ರ, ಜಾಯತೇ- ಉಂಟಾಗುತ್ತದೆ.

**ಸುಖವಿಪ್ರುಷಿ ದೇಹೇಽಸ್ಮಿನ್ಮಹಾದುಃಖೈಃ ಪ್ರಪೂರಿತೇ ।**
**ತಿಷ್ಠಂತೋಽಪಿ ನರಾಃ ಕೇಚಿನ್ನಾಸ್ತ್ಯೇವೇಶ್ವರ ಇತ್ಯಪಿ ॥ ೪ ॥**

---

ರೂಪದ ನಾನಾ ಪ್ರಾಣದೇಹಗಳನ್ನು ಸೃಜಿಸಿದನು; ಆದರಿಂದ ಅತೃಪ್ತನಂತಾಗಿ,[1] ಉತ್ತಮವಾದ ಮನುಷ್ಯದೇಹವನ್ನು ಸೃಷ್ಟಿಮಾಡಿದನು (೨). ಆಹಾರ, ಮೈಥುನ, ನಿದ್ರಾದಿಗಳು ಇತರ ಎಲ್ಲ ದೇಹಗಳಲ್ಲಿ ದೊರೆಯುತ್ತವೆ; ಆದರೆ ಸಂಸಾರಬಂಧದಿಂದ ಮುಕ್ತನಾಗಲು ಅವಶ್ಯಕವಾದ ಜ್ಞಾನವು ಮನುಷ್ಯದೇಹಗಳಲ್ಲಿ ಮಾತ್ರವೇ ದೊರೆಯುತ್ತದೆ (೩). ಈ ಮನುಷ್ಯದೇಹದಲ್ಲಿ ತುಚ್ಛವೂ ನಶ್ವರವೂ (ಕ್ಷಣಿಕವೂ) ಆದ ಸುಖಬಿಂದುಗಳು (ತುಂತುರುಗಳು) ಮಾತ್ರಎರುತ್ತವೆ—ಮಹಾ ದುಃಖಗಳಿಂದಲೇ ತುಂಬಿರುತ್ತದೆ; ಹೀಗಿರುವ ನಶ್ವರದೇಹದಲ್ಲಿದ್ದರೂ, ಕೆಲವರು (ಸೃಷ್ಟ್ಯಾದಿ ಕರ್ತನೂ ಸರ್ವಸ್ವಾಮಿಯೂ ಆದ) ಈಶ್ವರನೇ (ಶ್ರೀಹರಿಯೇ—ಪರಮಾತ್ಮನೇ) ಇಲ್ಲವೆಂದು

---

1. 'ನಾತಿ ತೃಪ್ತ ಇವ'—ಎಂಬುದರಿಂದ, ಎಲ್ಲ ದೇಹಗಳಲ್ಲಿ ಜೀವರು ಸ್ವಯೋಗ್ಯ ಸಾಧನೆಗಳನ್ನು ಮಾಡಿಕೊಂಡು ತನ್ನನ್ನು ಹೊಂದಲು, ಮನುಷ್ಯದೇಹವೇ ಶ್ರೇಷ್ಠವೆಂದು ಸೂಚಿತವಾಗಿದೆ.

**ಅಹಮೇವೇಶ್ವರ ಇತಿ ಕೇಚಿತ್ ಪ್ರಾಹುರಿಹೋದ್ಧತಾಃ ।**
**ಇದಂ ನ ಸತ್ಯಂ ಮಿಥ್ಯೈವೇತ್ಯಾದಿ ನಾನಾ ಪ್ರಚಕ್ಷತೇ ॥ ೫ ॥**

ಸುಖವಿಪ್ರುಷಿ-ಸುಖಬಿಂದು (ಅತ್ಯಲ್ಪ ಮತ್ತು ತುಚ್ಛವಾದುದು) ಮಾತ್ರವುಳ್ಳ, (ಮತ್ತು) ಮಹಾದುಃಖೈಃ-ಮಹಾದುಃಖಗಳಿಂದ, ಪ್ರಪೂರಿತೇ-ತುಂಬಿರುವ, ಅಸ್ಮಿನ್ ದೇಹೇ ಅಪಿ-ಈ ಮನುಷ್ಯದೇಹದಲ್ಲಿ ಸಹ, ತಿಷ್ಠಂತಃ-ಇರುವ, ಕೇಚಿತ್-ಕೆಲವು, ನರಾಃ-ಮನುಷ್ಯರು, ಈಶ್ವರಃ-ಈಶ್ವರನು (ಸರ್ವನಿಯಾಮಕ ಶ್ರೀವಿಷ್ಣುವು) ನಾಸ್ತಿ ಏವ-ಇಲ್ಲವೇ ಇಲ್ಲ, ಇತ್ಯಪಿ-ಎಂಬುದಾಗಿಯೂ, ಕೇಚಿತ್-ಮತ್ತೆ ಕೆಲವರು, ಉದ್ಧತಾಃ-ಉನ್ಮಾರ್ಗಿಗಳು (ದುರಹಂಕಾರಿಗಳು), ಅಹಂ ಏವ-ನಾನೇ, ಈಶ್ವರಃ-ಈಶ್ವರನು, ಇತಿ-ಎಂದೂ, ಇದಂ-ಈ (ಅನುಭವಸಿದ್ಧವಾದ ಜಗತ್ತು), ಸತ್ಯಂ ನ ಸತ್ಯವಲ್ಲ; ಮಿಥ್ಯಾ ಏವ-ಮಿಥ್ಯೆಯೇ, ಇತ್ಯಾದಿ-ಎಂದೂ, ನಾನಾ-ಬಹುವಿಧವಾಗಿ, ಪ್ರಚಕ್ಷತೇ-ತಿಳಿಯುತ್ತಾರೆ (ಪ್ರತಿಪಾದಿಸುತ್ತಾರೆ).

**ತೇಷಾಂ ಮತನಿರಾಕೃತ್ಯೈ ದಾರಿದ್ರ್ಯಂ ಚಾಪ್ಯನಿತ್ಯತಾಂ ।**
**ಆಧಿವ್ಯಾಧ್ಯಾದಿಸಿದ್ಧ್ಯರ್ಥಂ ವಿವೇಕಾಯ ಸತಾಂ ನೃಣಾಂ ॥ ೬ ॥**

---

ಭ್ರಮಿಸುತ್ತಾರೆ; ಮತ್ತೆ ಕೆಲವು ಉದ್ಧತರು, ತಾನೇ ಈಶ್ವರನೆಂದೂ, ಜಗತ್ತು ಮಿಥ್ಯೆ (ಸುಳ್ಳು)[1] ಎಂದೂ, ನಾನಾಪ್ರಕಾರವಾಗಿ ತಿಳಿದು ಪ್ರತಿಪಾದಿಸುತ್ತಾರೆ (೪-೫). ಈ ದುರ್ವಾದಿಗಳ ನಿರಾಕರಣೆಗಾಗಿಯೂ, ಸಜ್ಜನರಿಗೆ ವಿವೇಕಜ್ಞಾನವನ್ನು ದೊರಕಿಸುವುದಕ್ಕಾಗಿ ಸಹ, ಜಗದೀಶನಾದ ಶ್ರೀವಿಷ್ಣುವು, ಬಡತನವನ್ನೂ, ದೇಹದ ಅನಿತ್ಯತ್ವವನ್ನೂ ನಿರ್ಮಿಸಿದನು—ದಾರಿದ್ರ್ಯವು ಆಧಿಗೆ (ನಿರಂತರವಾದ ಮನೋರೋಗಕ್ಕೆ) ಕಾರಣವಾಗುತ್ತದೆ; ದೇಹದ ನಾನಾ ರೋಗಗಳು, ಅನಿತ್ಯತ್ವಕ್ಕೆ (ದೇಹದ ನಶ್ವರತ್ವಕ್ಕೆ) ಕಾರಣವಾಗುತ್ತವೆ; ಇವು ಕ್ರಮವಾಗಿ, ಉದ್ಧತರಾದ ತಮೋಯೋಗ್ಯ ಜೀವರಿಗೆ ನಿತ್ಯಬಂಧನರೂಪದ ಅಂಧತಮಸ್ಸಿಗೂ, ಮುಕ್ತಿಯೋಗ್ಯಜೀವರಿಗೆ (ವೈರಾಗ್ಯದ್ವಾರಾ)

---

1. ಶುಕ್ತಿರಜತದಂತೆ, ರಜ್ಜುಸರ್ಪದಂತೆ, ಜಗತ್ತು ತ್ರಿಕಾಲದಲ್ಲಿಯೂ ಇರದ (ಅಸ್ತಿತ್ವವೇ ಇಲ್ಲದ) ತೋರುವ ಕಾಲದಲ್ಲಿ ಮಾತ್ರ 'ಇದೆ' ಎಂಬ ವ್ಯವಹಾರಕ್ಕೆ ಎಡೆಗೊಡುವ, ಸುಳ್ಳಾದ ವಸ್ತುವು (ಅಸತ್ಯ ಪದಾರ್ಥವೇ) ಮಿಥ್ಯೆ, ಎನಿಸುತ್ತದೆಂದು ಮಾಯಾವಾದಿಗಳು ಹೇಳುತ್ತಾರೆ. ಇದನ್ನು 'ವ್ಯಾವಹಾರಿಕ ಸತ್ಯ'ವೆಂದು ಕರೆದು ಸತ್ಯವನ್ನು ಪಾರಮಾರ್ಥಿಕ—ವ್ಯಾವಹಾರಿಕವೆಂದು ಎರಡು ವಿಧವಾಗಿ ನಿರೂಪಿಸಿ, ವಿವೇಕಿಗಳನ್ನು ವಂಚಿಸಲೆತ್ನಿಸುತ್ತಾರೆ. ಅವರ ವ್ಯಾವಹಾರಿಕ ಸತ್ಯವೆನ್ನುವುದು, ತ್ರಿಕಾಲದಲ್ಲಿ (ಭೂತ-ಭವಿಷ್ಯತ್, ವರ್ತಮಾನ ಕಾಲಗಳಲ್ಲಿ) ಇಲ್ಲದ ಅಸತ್ಯವಸ್ತುವೇ ಆಗಿದೆ—'ವ್ಯಾವಹಾರಿಕ ಸತ್ಯ'ವೆಂಬ ಶಬ್ದಪ್ರಯೋಗವು ಕೇವಲ ಸಾಂಕೇತಿಕವೆಂದು ಕಂಡುಬರುತ್ತದೆ. ಅಸತ್ಯವನ್ನೇ ಸತ್ಯವೆಂದು ಕರೆದರೆ, ಅದು ಸತ್ಯವಾದೀತೇ? ಮಾಯಾವಾದಿಗಳ, ಮಿಥ್ಯಾತ್ವದ

**ಸೃಷ್ಟವಾನ್ ಜಗದೀಶೋಽಸೌ ಬಂಧಮೋಕ್ಷಾಯ ದೇಹಿನಾಂ ।**

ಜಗದೀಶಃ-ಜಗನ್ನಿಯಾಮಕನೂ ಸ್ವತಂತ್ರಸರ್ವಕರ್ತನೂ ಆದ, ಅಸೌ-ಈ ಶ್ರೀವಿಷ್ಣುವು, ತೇಷಾಂ-ಆ ದುರ್ವಾದಿಗಳ, ಮತನಿರಾಕೃತ್ಯೈ-ಮತವನ್ನು (ಅಪಪ್ರಚಾರವನ್ನು) ನಿರಾಕರಿಸುವುದಕ್ಕಾಗಿಯೂ, ಸತಾಂ-ಸಜ್ಜನರಾದ (ಸ್ವರೂಪದಿಂದ ಶುದ್ಧರಾದ), ನೃಣಾಂ-ಮನುಷ್ಯರಿಗೆ, ವಿವೇಕಾಯ-ವಿವೇಕ ದೊರೆಯಲಿಕ್ಕೂ (ಯಥಾರ್ಥದ-ಸತ್ಯದ ಜ್ಞಾನ ಉಂಟಾಗಲಿಕ್ಕೂ, ದೇಹಿನಾಂ-ಜೀವರಿಗೆ, ಬಂಧಮೋಕ್ಷಾಯ-ಬಂಧಮೋಕ್ಷಗಳನ್ನು (ತಮಸ್ಸು ಮತ್ತು ಸಸ್ಸೃತಿಯನ್ನು ದೊರಕಿಸುವುದಕ್ಕಾಗಿ, ಆಧಿವ್ಯಾಧಿಸಿದ್ಧ್ಯರ್ಥಂ-(ವೈರಾಗ್ಯಜನಕವೂ ದುಃಖಜನಕವೂ ಆದ), ಆಧಿ-(ಮನೋರೋಗ) ವ್ಯಾಧಿ (ದೇಹರೋಗ)ಗಳ, ಉತ್ಪತ್ತಿಗೆ ಕಾರಣಗಳಾದ, ದಾರಿದ್ರ್ಯಂ-ದಾರಿದ್ರ್ಯವನ್ನೂ (ಮನೋರೋಗಕ್ಕೆ ಕಾರಣವಾಗುವ ಬಡತನವನ್ನೂ), ಅನಿತ್ಯತಾಂ ಚ ಅಪಿ-ಅನಿತ್ಯತ್ವವನ್ನೂ (ನಶ್ವರತ್ವವನ್ನೂ ಇದಕ್ಕೆ ಕಾರಣವಾಗುವ ದೇಹರೋಗಾದಿಗಳನ್ನೂ), ಸೃಷ್ಟವಾನ್-ನಿರ್ಮಿಸಿದನು.

**ದುರ್ಲಭೋ ಮಾನುಷೋ ದೇಹಃ ಸಂಸಾರೇ ಭ್ರಮತಾಂ ನೃಣಾಂ ॥೭॥**
**ಜ್ಞೇಯೋಽಯಂ ಪರಮಃ ಪೋತಃ ಸಂಸಾರಾರ್ಣವತಾರಣೇ ।**

ಸಂಸಾರೇ-ಸಂಸಾರದಲ್ಲಿ ಭ್ರಮತಾಂ-ಸುತ್ತುತ್ತಿರುವ, ನೃಣಾಂ-ಜೀವರಿಗೆ (ಜ್ಞಾನಾಧಿಕಾರಿ ಚೇತನರಿಗೆ), ಮಾನುಷಃ-ಮನುಷ್ಯರೂಪದ (ಪುರುಷಾಕಾರದ), ದೇಹಃ-ದೇಹವು, ದುರ್ಲಭಃ-ಬಹುಕಷ್ಟದಿಂದ ಲಭಿಸತಕ್ಕದ್ದು ಅಯಂ-ಇದು (ಈ

---

ನಿತ್ಯಸುಖರೂಪದ ಮೋಕ್ಷಕ್ಕೂ ಕಾರಣವಾಗುತ್ತದೆ (೬). ಹೀಗಿರುವ ಈ ಮನುಷ್ಯದೇಹವು, ಸಂಸಾರದಲ್ಲಿ ಸುತ್ತುತ್ತಿರುವ ಜ್ಞಾನಯೋಗ್ಯರಾದ ಜೀವರಿಗೆ, ಅತ್ಯಂತ ದುರ್ಲಭವಾದುದು— ಪೂರ್ವಪುಣ್ಯಫಲರೂಪವಾಗಿ ಬಹು ಯೋನಿಗಳಲ್ಲಿ ಸುತ್ತಿದ ನಂತರ ದೊರೆಯುತ್ತದೆ; ಇದು, ಸಂಸಾರವೆಂಬ ಸಮುದ್ರವನ್ನು ದಾಟಲು, ಭದ್ರವಾದ ನೌಕೆಯಂತಿದೆ, ಎಂಬುದನ್ನು ಮರೆಯಬಾರದು (೭). ಸಂಸಾರಮೋಚನೆಗೆ ಶ್ರೇಷ್ಠ ಸಾಧನವಾದ ಈ ದೇಹವನ್ನು ಹೊಂದಿ, ಅದು ಬಿದ್ದುಹೋಗುವುದರೊಳಗಾಗಿ ತತ್ತ್ವಜ್ಞಾನನಿಶ್ಚಯವನ್ನು ದೊರಕಿಸಿಕೊಳ್ಳಬೇಕು; ಇಲ್ಲದಿದ್ದರೆ, ಮಹಾ ಅನರ್ಥಕರವಾದ

---

ಪರಿಷ್ಕಾರವನ್ನು ನೋಡಿರಿ: 'ನಾಸ್ತಿ ನಾಸೀನ್ನ ಭವಿಷ್ಯತಿ ಪಶ್ಚಾದಾತ್ಮ ಜ್ಞಾನ ವಿಷಯತ್ವಂ ಮಿಥ್ಯಾತ್ವಂ'—ಎಂದರೆ, ಇಲ್ಲ-ಇರಲಿಲ್ಲ-ಇರುವುದಿಲ್ಲವೆಂಬ ಪ್ರಕಾರದ ಜ್ಞಾನಕ್ಕೆ ವಿಷಯವಾಗುವುದೇ (ಗೋಚರಿಸುವಿಕೆಯೇ) ಮಿಥ್ಯಾತ್ವವು. ಈ ಪ್ರಮೇಯದ ವಿಸ್ತಾರವನ್ನು ಶ್ರೀಮದಾಚಾರ್ಯರ 'ಪ್ರಪಂಚ ಮಿಥ್ಯಾತ್ವಾನುಮಾನಖಂಡನ' ವೆಂಬ ಗ್ರಂಥದಿಂದಲೂ ಟೀಕಾ ಟಿಪ್ಪಣಿಗಳಿಂದಲೂ,

ದೇಹವು), ಸಂಸಾರಾರ್ಣವತಾರಣೇ-ಸಂಸಾರ ಸಮುದ್ರವನ್ನು ದಾಟುವುದರಲ್ಲಿ ಪರಮಃ-ಶ್ರೇಷ್ಠವಾದ, ಪೋತಃ-ನೌಕೆಯೆಂದು, ಜ್ಞೇಯಃ-ತಿಳಿಯತಕ್ಕದ್ದು.

ಯದಿ ವಿಂದೇದಿಹಜ್ಞಾನಂ ತರ್ಹ್ಯೇವಾಮೃತತಾಂ ವ್ರಜೇತ್ ॥ ೮ ॥
ಅನ್ಯಥಾತ್ಮವಿಘಾತೀ ಸ್ಯಾದುದ್ದಾರೂಢಸ್ಯ ಪಾತನಾತ್ ।

ಇಹ-ಈ ಮಾನುಷ್ಯದೇಹದಲ್ಲಿ ಜ್ಞಾನಂ-ಶ್ರೀಹರಿತತ್ತ್ವಜ್ಞಾನವನ್ನು ಯದಿ ವಿಂದೇತ್-ದೊರಕಿಸಿಕೊಂಡರೆ (ಹೊಂದಿದರೆ), ತರ್ಹಿ ಏವ-ಆಗಮಾತ್ರವೇ, ಅಮೃತತಾಂ-ಅಮೃತತ್ವ (ಮೋಕ್ಷ)ವನ್ನು ವ್ರಜೇತ್-ಹೊಂದುತ್ತಾನೆ; ಅನ್ಯಥಾ-ಹಾಗಲ್ಲದಿದ್ದರೆ (ಜ್ಞಾನವನ್ನು ಸಂಪಾದಿಸದಿದ್ದರೆ), ದುರಾರೂಢಸ್ಯ-ಕಷ್ಟದಿಂದ ಹತ್ತಿಬಂದ, ಎತ್ತರವಾದ ಸ್ಥಾನದಿಂದ, ಪಾತನಾತ್-ಕೆಳಗೆ ಬೀಳುವುದರಿಂದ (ಹೇಗೆ ಮಹಾ ಅನರ್ಥವೋ-ಆತ್ಮನಾಶವೋ), (ಹಾಗೆ), ಆತ್ಮವಿಘಾತೀ-ಆತ್ಮಹಾನಿಯನ್ನು ಮಾಡಿಕೊಂಡವನು), ಸ್ಯಾತ್-ಆಗುತ್ತಾನೆ

ಯಥಾ ಸ್ವಾದುಫಲೇ ತ್ಯಾಜ್ಯಂ ತ್ವಗಸ್ಥ್ಯಾದಿ ವಿಲೋಕ್ಯತೇ ॥ ೯ ॥
ರಸಾದಿ ಗೃಹ್ಯತೇ ಸುಜ್ಞೈಃ ತಥಾ ಪರ್ಯೇತ ಸಂಸೃತೌ ।

ಯಥಾ-ಹೇಗೆ, ಸ್ವಾದುಫಲೇ-ರುಚಿಯಾದ ಫಲದಲ್ಲಿ (ಹಣ್ಣಿನಲ್ಲಿ), ತ್ಯಾಜ್ಯಂ-ತ್ಯಜಿಸಲು ಯೋಗ್ಯವಾದ (ತ್ಯಜಿಸಬೇಕಾದ), ತ್ವಗಸ್ಥ್ಯಾದಿ-ಸಿಪ್ಪೆ ಬೀಜಗಳು (ಚರ್ಮ ಮತ್ತು ಅಸ್ಥಿಗಳಂತಿರುವ ಭಾಗಗಳು), ವಿಲೋಕ್ಯತೇ-ಕಂಡುಬರುತ್ತವೆಯೋ, (ಮತ್ತು) ಸುಜ್ಞೈಃ-ವಿವೇಕಿಗಳಿಂದ, ರಸಾದಿ-(ಸಾರಭೂತವಾದ) ರಸಾದಿಗಳು, ಗೃಹ್ಯತೇ-ಸ್ವೀಕರಿಸಲ್ಪಡುವುವೋ, ತಥಾ-ಹಾಗೆ, ಸಂಸೃತೌ-ಸಂಸಾರದಲ್ಲಿ

ಉನ್ನತ ಶಿಖರದಿಂದ ಪತನಹೊಂದಿದಂತೆ, ಆತ್ಮಹಾನಿಯನ್ನೇ ಮಾಡಿಕೊಳ್ಳುತ್ತಾನೆ' (೮). ರಸವತ್ತಾದ ರುಚಿಕರ ಹಣ್ಣಿನಲ್ಲಿ ವಿವೇಕಿಗಳು ಹೇಗೆ, ತ್ಯಾಜ್ಯವಾದ ಸಿಪ್ಪೆ ಬೀಜಗಳನ್ನು ಬಿಟ್ಟು, ರಸವನ್ನೇ ಆಸ್ವಾದಿಸುವರೋ, ಹಾಗೆ ಸಂಸಾರದಲ್ಲಿ ಸಾರವನ್ನು ಮಾತ್ರ ಗ್ರಹಿಸುವ ಪ್ರವೃತ್ತಿಯನ್ನು ಹೊಂದಬೇಕು (೯). ಸಂಸಾರಿಯು, ವ್ಯವಹಾರಗಳಲ್ಲಿ ಆಸಕ್ತಿಯನ್ನೂ ಕರ್ಮಗಳ ಆಚರಣೆಯಲ್ಲಿ ಫಲಾಶೆಯನ್ನೂ ತ್ಯಜಿಸಬೇಕು;—ಶ್ರೀಹರೀಚ್ಛೆಯಿಂದ

1. 'ಇಹಚೇದವೇದೀದಥ ಸತ್ಯಮಸ್ತಿ । ನ ಚೇದಿಹಾವೇದೀನ್ಮಹತೀ ವಿನಷ್ಟಿಃ । ಭೂತೇಷು ಭೂತೇಷು ವಿಚಿತ್ಯ ಧೀರಾಃ । ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥'' (ಕೇಲವಾರ ಉಪನಿಷತ್) —ಈ ಬ್ರಾಹ್ಮಣಾದಿ ಮನುಷ್ಯದೇಹದಲ್ಲಿ ಪರಬ್ರಹ್ಮನನ್ನು ತಿಳಿದರೆ ಮಾತ್ರ (ಸತ್ಯ) ಮಂಗಳವು (ಮೋಕ್ಷವು) ದೊರೆಯುತ್ತದೆ; ಹಾಗೆ ಅಲ್ಲಿ (ಆ ದೇಹದಲ್ಲಿ) ಬ್ರಹ್ಮಜ್ಞಾನವನ್ನು ಸಂಪಾದಿಸದಿದ್ದರೆ (ತಿಳಿಯದಿದ್ದರೆ), ಮಹಾ ಅನರ್ಥವಿದೆ. ವಿವೇಕಿಗಳು ಸರ್ವಭೂತಗಳಲ್ಲಿ ಸನ್ನಿಹಿತನಾದ ಪರಮಾತ್ಮನನ್ನು ತಿಳಿದು, ಈ ದೇಹದಿಂದ ಹೊರಟು ಮುಕ್ತರಾಗುತ್ತಾರೆ; ಈ ಉಪನಿಷದರ್ಥವನ್ನೇ ಇಲ್ಲಿ

ಸಹ (ಜೀವನದಲ್ಲಿ-ಬಾಳಿನಲ್ಲಿ), ವರ್ತೇತ-ವರ್ತಿಸಬೇಕು (ಸಾರವನ್ನೇ ಗ್ರಹಿಸಬೇಕು).[1]

**ಆಸಕ್ತಿರ್ವ್ಯವಹಾರೇಷು ತ್ಯಾಜ್ಯಾ ಕರ್ಮಸು ಕಾಮ್ಯತಾ ॥ ೧೦ ॥**
**ಸುಖಂ ವರ್ತೇತ ಸಂಸಾರೇ ಯದೃಚ್ಛಾಲಾಭತೋಷತಃ ।**

ಸಂಸಾರದಲ್ಲಿ ತ್ಯಾಜ್ಯವಾದುದನ್ನು ನಿರ್ದೇಶಿಸುತ್ತಾರೆ—

ವ್ಯವಹಾರೇಷು-ವ್ಯವಹಾರಗಳಲ್ಲಿ (ಕುಟುಂಬಭರಣಾದಿ ನಾನಾ ಲೌಕಿಕ ಕಾರ್ಯನಿರ್ವಹಣೆಯಲ್ಲಿ), ಆಸಕ್ತಿ-ಆಸಕ್ತಿಯು, ತ್ಯಾಜ್ಯಾ-ತ್ಯಜಿಸಲ್ಪಡತಕ್ಕದ್ದು; ಕರ್ಮಸು-ಕರ್ಮಗಳಲ್ಲಿ, ಕಾಮ್ಯತಾ-ಫಲಾಶೆಯು, (ತ್ಯಾಜ್ಯಾ-ಬಿಡತಕ್ಕದ್ದು); ಸಂಸಾರೇ-ಬಾಳಿನಲ್ಲಿ ಯದೃಚ್ಛಾಲಾಭತೋಷತಃ-ಯದೃಚ್ಛಾಲಾಭಸಂತುಷ್ಟನಾಗಿ (ಶ್ರೀಹರೀಚ್ಛೆಯಿಂದ ದೊರೆತುದರಿಂದಲೇ ತೃಪ್ತನಾಗಿ), ಸುಖಂ-ಸುಖದಿಂದ, ವರ್ತೇತ-ಇರಬೇಕು.

**ಇದಾನೀಮುಪ್ಯತೇ ಯದ್ಧಿ ನೇದಾನೀಂ ತತ್ಫಲಂ ಭವೇತ್ ॥ ೧೧ ॥**
**ಕಿಂತು ಪೂರ್ವೋಪ್ತಧಾನ್ಯಾದೇರಿದಾನೀಂ ಫಲಮಶ್ನುತೇ ।**
**ಇದಾನೀಮುಪ್ತಬೀಜಸ್ಯ ಫಲಂ ಕಾಲೇನ ಲಪ್ಸ್ಯತೇ ॥ ೧೨ ॥**
**ತಥಾತ್ರ ಸಂಸ್ಕೃತೌ ತಿಷ್ಠಂಶ್ಚಿಂತಯೇತ್ ಪಾರಲೌಕಿಕಂ ।**
**ಐಹಿಕಂ ತು ಭವೇತ್ ಪೂರ್ವಕರ್ಮಣಾಂ ಪರಿಪಾಕತಃ ॥ ೧೩ ॥**

ಯದೃಚ್ಛೆಯಿಂದ ಲಭಿಸುವ ಫಲಗಳು (ಸುಖಾದಿಸಾಧನಗಳು), ಪೂರ್ವ ಕರ್ಮಾನುಸಾರವಾಗಿ ದೊರೆಯುತ್ತವೆಂಬಲ್ಲಿ ಸಯುಕ್ತಿಕ ನಿದರ್ಶನವನ್ನು ತೋರಿಸು ತ್ತಾರೆ—

ಯತ್-ಯಾವುದು (ಯಾವ ಬೀಜವು), ಇದಾನೀಂ-ಈಗ, ಉಪ್ಯತೇ-ಬಿತ್ತಲಾಗುತ್ತದೆಯೋ, ತತ್-ಅದು, ಇದಾನೀಂ-ಈಗಲೇ, ಫಲಂ-ಫಲಕೊಡುವುದು

---

ದೊರತದ್ದರಿಂದ ಮಾತ್ರ ತೃಪ್ತನಾಗಿ ಸುಖದಿಂದಿರಬೇಕು (೧೦). ಈಗ ಬಿತ್ತಿದ ಬೀಜವು ಈಗಲೇ ಫಲ ಕೊಡುವುದಿಲ್ಲ ಕಿಂತು, ಹಿಂದೆ ಬಿತ್ತಿದ ಧಾನ್ಯಗಳೇ ಈಗ ಫಲ ಕೊಡುತ್ತವೆ; ಯಾವುದೇ ಬೀಜವನ್ನು ಈಗ ಬಿತ್ತಿದರೆ ಕಾಲಾಂತರದಲ್ಲಿ ಫಲಕೊಡುವುದಷ್ಟೆ! ಇದೇ ಕ್ರಮದಿಂದ (ನಮ್ಮ) ಯತ್ನಗಳು (ಕರ್ಮಗಳು). ಫಲಪ್ರದಗಳಾಗುತ್ತವೆಂದು ತಿಳಿದು, ಪೂರ್ವಕರ್ಮಗಳ ಪರಿಪಾಕದಿಂದ ಐಹಿಕ (ಈ ದೇಹದಲ್ಲಿ ಅನುಭವಿಸುವ) ಫಲಗಳು (ಫಲದಾತನಾದ ಶ್ರೀಹರೀಚ್ಛಾನುಸಾರ) ದೊರೆಯುತ್ತವೆಂದು ತಿಳಿದು, ಸಂಸಾರದಲ್ಲಿ

1. 'ಅಸಾರೇ ಖಲು ಸಂಸಾರೇ ಸಾರಾತ್ಸಾರತರೋ ಹರಿಃ।' (ಕೃಷ್ಣಾಮೃತಸಾರ). ಅಸಾರವಾದ ಸಂಸಾರದಲ್ಲಿ, ಸಾರಭೂತವಾದ ವಸ್ತುಗಳಲ್ಲಿ, ಸಾರತಮ (ಉತ್ತಮ ಸಾರ) ವಸ್ತುವೆಂದರೆ ಶ್ರೀಹರಿಯೇ—ಆತನನ್ನೇ ಗ್ರಹಿಸಬೇಕು-ತಿಳಿಯಬೇಕು.

(ಫಲವುಳ್ಳದ್ದು), ನ ಭವೇತ್-ಆಗುವುದಿಲ್ಲ; ಕಿಂತು-ಮತ್ತೇನೆಂದರೆ, ಪೂರ್ವೋಪ್ತ ಧಾನ್ಯಾದೇಃ-ಹಿಂದೆ ಬಿತ್ತಿದ ಧಾನ್ಯಗಳ (ಬೀಜಗಳ), ಫಲಂ-ಫಲವು, ಇದಾನೀಂ-ಈಗ, ಅಶ್ನುತೇ-ಭೋಗಿಸಲ್ಪಡುತ್ತದೆ (ಉಣ್ಣಲಾಗುತ್ತದೆ); ಇದಾನೀಂ-ಈಗ, ಉಪ್ತಬೀಜಸ್ಯ-ಬಿತ್ತಿದ ಬೀಜದ, ಫಲಂ-ಫಲವು, ಕಾಲೇನ-ಕೆಲವು ಕಾಲದ ನಂತರ, ಲಪ್ಸ್ಯತೇ-ಹೊಂದಲ್ಪಡುತ್ತದೆ; ತಥಾ-ಹೀಗೆಯೇ (ಇದೇ ಕ್ರಮದಿಂದ ಕರ್ಮಫಲಗಳು ದೊರೆಯುವುವೆಂಬ ನಿಶ್ಚಯದಿಂದ), ಸಂಸೃತೌ-ಸಂಸಾರದಲ್ಲಿ, ಅತ್ರ-ಈ ಮನುಷ್ಯ ಶರೀರದಲ್ಲಿ, ತಿಷ್ಠನ್-ಇರುವವನಾಗಿ, ಪಾರಲೌಕಿಕಂ- ಪಾರಲೋಕದ ಫಲವನ್ನು (ಮರಣಾನಂತರ ಪರಲೋಕದಲ್ಲಿ ಸುಖವನ್ನು ದೊರಕಿಸಿಕೊಳ್ಳುವ ಮಾರ್ಗವನ್ನು), ಚಿಂತಯೇತ್-ಆಲೋಚಿಸಬೇಕು; ಐಹಿಕಂ ತು-ಈ ದೇಹದಲ್ಲಿ (ಲೋಕದಲ್ಲಿ) ದೊರೆಯುವ ಫಲವಾದರೋ, ಪೂರ್ವ ಕರ್ಮಣಾಂ-ಹಿಂದಿನ (ಪ್ರಾಯೇಣ ಜನ್ಮಾಂತರದ) ಕರ್ಮಗಳ, ಪರಿಪಾಕತಃ- ಪಕ್ವಫಲರೂಪದಿಂದ, ಭವೇತ್-ಉಂಟಾಗುತ್ತದೆ.

**ಕೇಚಿತ್ ರಾಜಕುಲೋತ್ಪನ್ನಾ ಜಾಯಂತೇ ಬಾಲ್ಯತೋ ನೃಪಾಃ ।**
**ಕೇಚಿತ್ ಪಿತ್ರಾರ್ಜಿತೇ ದ್ರವ್ಯೇ ತಸ್ಮಾದುತ್ಪತ್ತಿಮಾತ್ರತಃ ॥ ೧೪ ॥**
**ಜಾಯಂತೇ ಸ್ವಾಮಿನೋ ಲೋಕೇ ಕೇಚಿತ್ ಹೀನಕುಲೋದ್ಭವಾಃ ।**
**ಜಾಯಂತೇ ಸತ್ಕುಲೇ ಕೇಚಿತ್ ಕೇಚಿತ್ ಪಶ್ವಾದಿಯೋನಯಃ ॥ ೧೫ ॥**
**ಗರ್ಭಾಂಧಾಃ ಗರ್ಭಖಂಜಾಶ್ಚ ಸುರೂಪಾಶ್ಚ ಕುರೂಪಿಣಃ ।**
**ಇತ್ಥಂ ನಾನಾವಿಧಾಭಾವಾ ನೇದಾನೀಂತನ ಯತ್ನತಃ ॥ ೧೬ ॥**
**ಯಥಾ ಭವಂತಿ ಸರ್ವೇಽಪಿ ತಥಾ ಜ್ಞೇಯಾ ವಿವೇಕತಃ ।**

ಈಗಿನ ಯತ್ನದಿಂದಲ್ಲದೇ ಪೂರ್ವಜನ್ಮದ ಕರ್ಮಗಳೇ ಕಾರಣವಾಗಿ ಉಳ್ಳ ಕೆಲವು ಫಲಗಳನ್ನು (ಫಲವಾಗಿ ಪ್ರಾಪ್ತವಾಗುವ ಪರಿಸ್ಥಿತಿಗಳನ್ನು) ನಿರ್ದೇಶಿಸಿ, ಪೂರ್ವಕರ್ಮಗಳ ಪ್ರಭಾವದಿಂದಲೇ ಎಲ್ಲವೂ ಸಂಭವಿಸುತ್ತವೆಂದು ತಿಳಿಯಬೇಕೆನ್ನುತ್ತಾರೆ :—

---

ದೃಢಚಿತ್ತನಾಗಿ ಬಾಳ್ವೆಯನ್ನು ನಡೆಸುತ್ತ, ಪರಲೋಕಗಳಲ್ಲಿ ಸದ್ಗತಿಗಾಗಿ ಚಿಂತಿಸಬೇಕು (೧೧-೧೩). ಈ ಮಾನುಷ್ಯದೇಹದಲ್ಲಿರುವ ಜೀವರನ್ನೇ ಲಕ್ಷಿಸಿರಿ; ಕೆಲವರು ರಾಜವಂಶದಲ್ಲಿ ಹುಟ್ಟಿ ಜನ್ಮದಿಂದ ರಾಜತ್ವವನ್ನು ಹೊಂದುತ್ತಾರೆ; ಕೆಲವರು ಶ್ರೀಮಂತರಲ್ಲಿ ಹುಟ್ಟಿ ಹುಟ್ಟುತ್ತಲೇ (ಜನ್ಮಮಾತ್ರದಿಂದ) ಪಿತ್ರಾರ್ಜಿತ ಸಂಪತ್ತಿಗೆ ಅಧಿಕಾರಿಗಳಾಗುತ್ತಾರೆ; ಕೆಲವರು ನೀಚಕುಲದಲ್ಲಿ ಹುಟ್ಟಿದರೆ, ಮತ್ತೆ ಕೆಲವರು ಸತ್ಕುಲದಲ್ಲಿ ಹುಟ್ಟಿ ಸುಪೂಜಿತರಾಗುತ್ತಾರೆ; ಕೆಲವರು ಪಶ್ವಾದಿಗಳ

ಕೇಚಿತ್-ಕೆಲವರು, ರಾಜಕುಲೋತ್ಪನ್ನಾಃ-ರಾಜವಂಶದಲ್ಲಿ ಹುಟ್ಟಿದವರು, ಬಾಲ್ಯತಃ-ಬಾಲ್ಯದಿಂದಲೇ (ಶಿಶುತನದಿಂದ ಸಹ), ನೃಪಾಃ-ರಾಜರು, ಜಾಯಂತೇ-ಆಗುತ್ತಾರೆ (ಜನ್ಮದಿಂದಲೇ ರಾಜತ್ವವುಳ್ಳವರಾಗುತ್ತಾರೆ); ಕೇಚಿತ್-ಮತ್ತೆ ಕೆಲವರು, ತಸ್ಮಾತ್-ಈ, ಉತ್ಪತ್ತಿ ಮಾತ್ರತಃ-ಜನ್ಮಮಾತ್ರದಿಂದ, ಪಿತ್ರಾರ್ಜಿತೇ-ಪಿತ್ರಾರ್ಜಿತವಾದ (ಹಿಂದಿನ ಹಿರಿಯರು ಸಂಪಾದಿಸಿದ), ದ್ರವ್ಯೇ-ಧನಾದಿವಿಷಯದಲ್ಲಿ ಸ್ವಾಮಿನಃ-ಸ್ವಾಮಿತ್ವವುಳ್ಳವರು (ಯಜಮಾನರು), ಜಾಯಂತೇ-ಆಗುತ್ತಾರೆ; ಲೋಕೇ-ಈ ಲೋಕದಲ್ಲಿ, ಕೇಚಿತ್-ಕೆಲವರು, ಹೀನಕುಲೋದ್ಭವಾಃ-ನೀಚಕುಲದಲ್ಲಿ ಜನ್ಮವುಳ್ಳವರಾಗಿಯೂ, ಕೇಚಿತ್-ಮತ್ತೆ ಕೆಲವರು, ಸತ್ಕುಲೇ-ಸತ್ಕುಲದಲ್ಲಿಯೂ, ಕೇಚಿತ್-ಮತ್ತೆ ಕೆಲವರು, ಪಶ್ವಾದಿಯೋನಯಃ-ಪಶ್ವಾದಿ ದೇಹಗಳುಳ್ಳವರಾಗಿಯೂ, ಜಾಯಂತೇ-ಹುಟ್ಟುತ್ತಾರೆ; (ಕೇಚಿತ್-ಕೆಲವರು), ಗರ್ಭಾಂಧಾಃ-(ಮಾತೃಗರ್ಭದಲ್ಲಿರುವಾಗಲೇ) ಹುಟ್ಟುತ್ತಲೇ ಕುರುಡರು; ಗರ್ಭಖಂಜಾಶ್ಚ-ಹುಟ್ಟುತ್ತಲೇ ಒಂದು ಕಣ್ಣುಳ್ಳವರು (ಅಥವಾ ಕುಂಟರು); ಸುರೂಪಾಶ್ಚ-(ಕೆಲವರು) ಸುಂದರರು; ಕುರೂಪಿಣಃ- (ಕೆಲವರು) ಕುರೂಪಿಗಳು; ಇತ್ಥಂ-ಹೀಗಿರುವ, ನಾನಾವಿಧಾಃ-ಬಹುವಿಧದ, ಭಾವಾಃ-ಭಾವಗಳು (ಪರಿಸ್ಥಿತಿಗಳು), ಇದಾನೀಂತನ-ಈಗಿನ, ಯತ್ನತಃ-ಯತ್ನದಿಂದ, ನ-ಆದವುಗಳಲ್ಲ, ಸರ್ವೇಪಿ-ಈ ಎಲ್ಲವೂ (ಎಲ್ಲ ವೈವಿಧ್ಯವೂ), ಯಥಾ ಭವಂತಿ-ಹೇಗೆ ಉಂಟಾಗು ತ್ತವೆಯೋ, ತಥಾ-ಹಾಗೆ (ಅವುಗಳ ಸತ್ಯವಾದ ಕಾರಣವನ್ನು), ವಿವೇಕತಃ-ವಿವೇಕದಿಂದ (ಶಾಸ್ತ್ರಾನುಭವಗಳ ವಿಮರ್ಶೆಯಿಂದ), ಜ್ಞೇಯಾಃ-ತಿಳಿಯಲ್ಪಡಬೇಕು.

ಪಚನಂ ಗಮನಂ ಭಕ್ಷ್ಯಂ ಭುಕ್ತಿರಿತ್ಯಾದಿಕರ್ಮಸು ॥ ೧೭ ॥
ದೃಶ್ಯತೇ ಯತ್ನಸಾಧ್ಯತ್ವಂ ದೈವಂ ತತ್ರಾಪಿ ಚಿಂತಯೇತ್ ।
ಕರ್ತುಮಿಚ್ಛಾವಿಘಾತಾದ್ಯೈರ್ಲಿಂಗೈಃ ಸಮ್ಯಗ್ವಿವೇಕಿನಾ ॥ ೧೮ ॥

---

ದೇಹಗಳನ್ನು ಹೊಂದುತ್ತಾರೆ; ಕೆಲವರು ಜನ್ಮಾಂಧರು (ಹುಟ್ಟುಕುರುಡರು); ಕೆಲವರು ಕುಂಟರು—ಕೆಲವರು ಸುರೂಪಿಗಳಾದರೆ ಮತ್ತೆ ಕೆಲವರು ಕುರೂಪಿಗಳಾಗಿರುತ್ತಾರೆ; ಈ ವಿಧದ ನಾನಾಭಾವಗಳು (ಅವಸ್ಥೆಗಳು), ಈಗ ಆ ಜೀವರು ನಡೆಸಿದ ಯತ್ನದಿಂದಾದುದಲ್ಲವೆಂಬುದು ಸ್ಪಷ್ಟವಿದೆ; ಹಾಗಾದರೆ ಇವು ಹೇಗೆ ಉಂಟಾದವು, ಎಂಬುದರ ಸತ್ಯವಾದ ಮೂಲಕಾರಣವನ್ನು ವಿವೇಕಿಯಾದವನು, ಅನುಭವ ಮತ್ತು ಶಾಸ್ತ್ರಗಳ ವಿಮರ್ಶೆಯಿಂದ ನಿರ್ಣಯಿಸಿಕೊಂಡು ತಿಳಿಯಬೇಕು (೧೪-೧೬). ಪಚನ, ಗಮನ, ಭಕ್ಷಣ, ಭುಕ್ತಿ (ತಿನ್ನುವುದು) ಮೊದಲಾದ ಕರ್ಮಗಳಲ್ಲಿ ಇವು ಜೀವರ ಯತ್ನದಿಂದ ಸಾಧ್ಯವಾದುವೆಂಬ ಭಾವವು (ಜ್ಞಾನವು) ತೋರುತ್ತದೆ; ಆದರೆ ಈ ಕರ್ಮಗಳು ಸಂಭವಿಸುವುದರಲ್ಲಿ ಸಹ

ಯತ್ನಸಾಧ್ಯಗಳೆಂದು ತೋರುವ ಕೃತಿಗಳಲ್ಲಿ ಸಹ ಅದೃಷ್ಟ (ಪೂರ್ವಕರ್ಮ) ಪ್ರೇರಕನಾದ ಶ್ರೀಹರಿಯ ವ್ಯಾಪಾರವನ್ನು ಚಿಂತಿಸಬೇಕೆನ್ನುತ್ತಾರೆ :—

ಪಚನಂ-(ಆಹಾರ) ಪಚನ, ಗಮನಂ-ಸಂಚರಿಸುವುದು, ಭಕ್ಷ್ಯಂ-ಅಗಿದು ತಿನ್ನುವುದು, ಭುಕ್ತಿಃ-ಉಣ್ಣುವುದು (ಅನ್ನದಂತೆ), ಇತ್ಯಾದಿಕರ್ಮಸು-ಈ ಮೊದಲಾದ ಕರ್ಮಗಳಲ್ಲಿ ಯತ್ನಸಾಧ್ಯತ್ವಂ-(ಜೀವನ ಈಗಿನಕಾಲದ) ಯತ್ನಸಾಧ್ಯತ್ವವು (ಯತ್ನದಿಂದಲೇ ಆಗುವೆಂಬ ಭಾವವು), ದೃಶ್ಯತೇ-ಕಂಡುಬರುತ್ತದೆ (ಅನುಭವಕ್ಕೆ ಬರುತ್ತದೆ); (ಆದರೆ), ತತ್ರಾಪಿ-ಅಲ್ಲಿ ಸಹ(ಈ ಕರ್ಮಗಳಲ್ಲಿ ಸಹ), ದೈವಂ-ದೈವವನ್ನು (ಅದೃಷ್ಟ ಪ್ರೇರಕ ಶ್ರೀಹರಿಯ ಕರ್ತೃತ್ವವನ್ನು), ಚಿಂತಯೇತ್-ಚಿಂತಿಸಬೇಕು (ಜೀವನ ಯತ್ನ ಮಾತ್ರದಿಂದ ಆಗುದಲ್ಲವೆಂಬ ಅನುಸಂಧಾನವಿರಬೇಕು); ಕರ್ತುಮಿಚ್ಛಾ- ವಿಘಾತಾದ್ಯೈಃ-ಮಾಡಬೇಕೆಂಬ ಜೀವನ ಇಚ್ಛೆಗೆ ಉಂಟಾಗುವ ವಿಘಾತಾದಿ (ತನ್ನ ಇಚ್ಛೆಯು ನಡೆಯದಂತೆ ಆಗಿ, ಮಾಡಬೇಕೆಂದಿದ್ದ ಕರ್ಮವು ಆಗದಿದ್ದಾಗ), ಲಿಂಗೈಃ-(ಈ ಮೊದಲಾದ) ಚಿಹ್ನೆ (ಲಿಂಗ-ಲಕ್ಷಣ) ಗಳಿಂದ, ಸಮ್ಯಕ್-ಚೆನ್ನಾಗಿ (ಯುಕ್ತಿಯುಕ್ತವಾಗಿ), ವಿವೇಕಿನಾ-ವಿವೇಕವುಳ್ಳವನಿಂದ, (ದೈವಂ ಚಿಂತಯೇತ್- ಅಲ್ಲಿಯೂ ಅದೃಷ್ಟಕಾರಣತ್ವವನ್ನು ತಿಳಿಯಬೇಕು).

**ಪೂರ್ವದೇಹವಿನಾಶೋಽಪಿ ತತ್ತತ್ಕರ್ಮಫಲಾಶನಾತ್ ।**
**ಜೀವೋ ಹಿ ದೇಹತೋ ಭಿನ್ನಃ ಯಥಾತ್ರಾಪಿ ವಿಲೋಕ್ಯತೇ ॥ ೧೯ ॥**
**ಯಥಾವಸ್ಥಿತದೇಹಸ್ಯ ಚೇಷ್ಟಾಹಾನಿವಿಲೋಕನಾತ್ ।**
**ವ್ಯವಹಾರೋ ಮೃತ ಇತಿ ಸ ಯದ್ಗಮನತೋ ಭವೇತ್ ॥ ೨೦ ॥**
**ಯತ್ಸ್ಥಿತೌ ವಿವಿಧಾ ಚೇಷ್ಟಾ ಭವೇಯುರಶನಾದಯಃ ।**
**ಸ ಏವ ಜೀವಃ ಸೋಽಸ್ತ್ಯತ್ರ ಸ್ವೇಚ್ಛಯಾ ನಾವತಿಷ್ಠತೇ ॥ ೨೧ ॥**

---

ಅದೃಷ್ಟಪ್ರೇರಕನಾದ ಶ್ರೀಹರಿಯ ಕರ್ತೃತ್ವವಿರೆ—ಈ ಕರ್ಮಗಳನ್ನು ಆಯಾ ಜೀವರ ಪೂರ್ವಕರ್ಮಾನುಸಾರವಾಗಿಯೇ ಶ್ರೀಹರಿಯು ಮಾಡಿ, ಜೀವರಿಂದ ಮಾಡಿಸುತ್ತಾನೆಂದು ತಿಳಿಯಬೇಕು; ಒಂದು ಕರ್ಮವನ್ನು ಮಾಡಬೇಕೆಂಬ ಜೀವೇಚ್ಛೆಯು ಅನೇಕವೇಳೆ ನಡೆಯುವುದಿಲ್ಲ—ತೋರುವ ಯಾವ ಕಾರಣವೂ ಇಲ್ಲದೇ ಆ ಇಚ್ಛೆಗೆ ವಿಘಾತವುಂಟಾಗುತ್ತದೆ; ಈ ಮೊದಲಾದ ಅನುಭವಗೋಚರವಾಗುವ ನಿದರ್ಶನಗಳಿಂದ, ಪಚನಾದಿ ಕರ್ಮಗಳಲ್ಲಿ ದೈವದ ಕೈವಾಡವಿರುತ್ತದೆಂದು ವಿವೇಕಿಸಿ ತಿಳಿಯಬೇಕು (೧೭-೧೮). ಪೂರ್ವಕರ್ಮಗಳ ಸಂಭವಕ್ಕೆ ಕಾರಣವಾದ ದೇಹದ ನಾಶವು ಸಹ, ಆ ದೇಹಕ್ಕೆ ಕಾರಣವಾದ ಆ ಪೂರ್ವಕರ್ಮದ ಫಲಭೋಗಾ ನಂತರವೇ ಎಂದು ತಿಳಿಯಬೇಕು; ಹೇಗೆ ಈ

**ಸ್ವೇಚ್ಛಯಾ ನ ಪ್ರಯಾತ್ಯಸ್ಮಾಜ್ಜೀವತೋಽಪಿ ಪರಾತ್ಮತಾಂ ।**
**ದೃಷ್ಟ್ವೈವಂ ಪರತಂತ್ರತ್ವಮಸ್ಯ ಜ್ಞೇಯಂ ವಿಪಶ್ಚಿತಾ ॥ ೨೨ ॥**

ಪೂರ್ವದೇಹವಿನಾಶಃ-(ಪೂರ್ವಕರ್ಮಸಂಭವಕ್ಕೆ ಕಾರಣವಾದ) ಹಿಂದಿನ (ಈ ಜೀವನ) ದೇಹದ ನಾಶವು, ಅಪಿ-ಸಹ, (ಈ ದೇಹದಂತೆಯೇ), ತತ್ತತ್ಕರ್ಮ ಫಲಾಶನಾತ್-(ಆ ದೇಹಕ್ಕೂ ಅದರಿಂದ ಸಂಭವಿಸುವ ವಿವಿಧ ಕರ್ಮಗಳಿಗೂ ಕಾರಣವಾದ) ಕರ್ಮದ ಭೋಗದಿಂದಲೇ (ಎಂದು ತಿಳಿಯಬೇಕು); ಯಥಾ-ಹೇಗೆ, ಜೀವಃಅಪಿ-(ಆ ಹಿಂದಿನ ದೇಹವನ್ನು ಬಿಟ್ಟುಬಂದ) ಜೀವನೂ, ದೇಹತಃ-ದೇಹದಿಂದ, ಭಿನ್ನಃ-ಬೇರೆಯಾದವನೋ (ಭಿನ್ನನೋ), ಅತ್ರ ಅಪಿ-ಈ ದೇಹದಲ್ಲಿ ಸಹ, (ತಥಾ-ಹಾಗೆಯೇ), ವಿಲೋಕ್ಯತೇ-(ಭಿನ್ನನೆಂದೇ) ಕಂಡುಬರುತ್ತಾನೆ; ಯಥಾವಸ್ಥಿತದೇಹಸ್ಯ-ಎಂದಿನಂತೆ ಇದ್ದ ದೇಹದ, ಚೇಷ್ಟಾಹಾನಿ ವಿಲೋಕನಾತ್-ಚೇಷ್ಟೆಗಳು ನಿಂತುಹೋಗುವುದನ್ನು ಕಾಣುವುದರಿಂದ, ಸಃ-ಆತನು, ಮೃತಃ ಇತಿ-ಮೃತನಾದನು (ಸತ್ತನು) ಎಂಬ, ವ್ಯವಹಾರಃ-ವ್ಯವಹಾರವು (ನಡವಳಿಕೆ ಮತ್ತು ನುಡಿ), ಯದ್ಗಮನತಃ-ಯಾವ ವಸ್ತುವು (ಆ ದೇಹವನ್ನು) ಬಿಟ್ಟು ಹೋದುದರಿಂದ, ಭವೇತ್-ಉಂಟಾಗುತ್ತದೆಯೋ, ಯತ್ ಸ್ಥಿತೌ-ಯಾವುದು ಇರುವಲ್ಲಿ ಅಶನಾದಯಃ- ಉಣ್ಣುವುದೇ ಮೊದಲಾದ (ತಿನ್ನುವ ಮೊದಲಾದ), ವಿವಿಧಾಃ-ನಾನಾವಿಧದ, ಚೇಷ್ಟಾಃ-ಕ್ರಿಯೆಗಳು; ಭವೇಯುಃ-(ಆ ದೇಹದಿಂದ) ಸಂಭವಿಸುತ್ತವೆಯೋ; ಸಃ ಏವ-ಅವನೇ (ಆ ವಸ್ತುವೇ), ಜೀವಃ-ಜೀವವೆಂಬುದು (ಆಗಿರುತ್ತದೆ); ಸಃ ಅಪಿ-ಅವನಾದರೋ, ಅತ್ರ-ಈ ದೇಹದಲ್ಲಿ, ಸ್ವೇಚ್ಛಯಾ-ತನ್ನ ಇಚ್ಛಾನುಸಾರ, ನ ಅವತಿಷ್ಠತೇ-ಇರುವುದಿಲ್ಲ; ಅಸ್ಮಾತ್-ಈ ದೇಹದಿಂದ, ಸ್ವೇಚ್ಛಯಾ-ತನ್ನ ಇಚ್ಛಾನುಸಾರ, ನ ಪ್ರಯಾತಿ-ಬಿಟ್ಟುಹೋಗುವುದಿಲ್ಲ; ಜೀವತಃ ಅಪಿ-ಜೀವಿಸುತ್ತಿದ್ದರೂ (ಈ ದೇಹದಲ್ಲಿದ್ದಾಗ ಸಹ) ಆತನ, ಪರಾತ್ಮತಾಂ-ಪರಾಧೀನತೆಯನ್ನು, ದೃಷ್ಟ್ವಾ-ಕಂಡು (ಅನುಭವದಿಂದ ತಿಳಿದು), ವಿಪಶ್ಚಿತಾ-

---

ದೇಹದಲ್ಲಿ ದೇಹಭಿನ್ನನಾದ ಜೀವನು ಇರುತ್ತಾನೆಂದು ಕಂಡುಬರುತ್ತದೆಯೋ, ಹಾಗೆಯೇ ಹಿಂದಿನ ದೇಹವನ್ನೂ, ದೇಹಭಿನ್ನನಾದ ಜೀವನು ಬಿಟ್ಟುಬಂದಿರುವನೆಂದು ತಿಳಿಯಬೇಕು; ಎಂದಿನಂತಿದ್ದ ದೇಹವು, ಚೇಷ್ಟಾವಿಹೀನಾಗುತ್ತದೆ—ಅದರ ಸರ್ವಕ್ರಿಯೆಗಳು ನಿಲ್ಲುತ್ತವೆ; ಆಗ 'ಅವನು' ಮೃತನಾದನೆಂದು ವ್ಯವಹರಿಸಲಾಗುತ್ತದೆ; ಯಾವ ವಸ್ತುವು ಆ ದೇಹವನ್ನು ಬಿಟ್ಟುಹೋದ್ದರಿಂದ ಸತ್ತನೆಂಬ ವ್ಯವಹಾರವೋ, ಮತ್ತು ಯಾವುದು ಆ ದೇಹದಲ್ಲಿದ್ದರೆ, ಊಟಮಾಡುವ ಮುಂತಾದ ನಾನಾ ಕ್ರಿಯೆಗಳು ಸಂಭವಿಸುತ್ತವೆಯೋ, ಅದೇ (ಅವನೇ) 'ಜೀವ'ವೆಂಬುದು; ಅವನಾದರೋ ಪರಾಧೀನನು; ತನ್ನ ಇಚ್ಛೆಯಂತೆ ಆ ದೇಹದಲ್ಲಿರುವುದಿಲ್ಲ ಅಥವಾ ಇಚ್ಛಾನುಸಾರ, ಅದನ್ನು ಬಿಟ್ಟು ಹೋಗುವುದೂ ಇಲ್ಲ; ಆ ದೇಹದಲ್ಲಿದ್ದಾಗ ಸಹ ತನ್ನ ಪರಾಧೀನತೆಯನ್ನು

ವಿವೇಕಿಯಾದವನಿಂದ, ಅಸ್ಯ-(ಈ ದೇಹಭಿನ್ನನಾದ) ಜೀವನ, ಪರತಂತ್ರತ್ವಂ-ಪರಾಧೀನತ್ವವು, ಜ್ಞೇಯಂ-ತಿಳಿಯಲ್ಪಡತಕ್ಕದ್ದು.

**ಯಃ ಪರೋಽತ್ರ ಸ ಏವೇಶಃ ಸ ವಿಷ್ಣುಃ ಸ ಶಿವೋ ಹರಿಃ ।**
**ಬ್ರಹ್ಮಾ ಚ ಸವಿತಾ ಶಕ್ರಃ ಸೂರ್ಯಚಂದ್ರಾದಿನಾಮಭಿಃ ॥ ೨೩ ॥**
**ಅನೇಕೈರಪ್ಯನಂತೈಶ್ಚ ತತ್ತದ್ಗುಣವಿಶೇಷತಃ ।**
**ಸ್ತೂಯತೇ ಭಗವಾನೇಕಃ ಸ್ತ್ರೀರೂಪೋ ಹಿ ಕ್ವಚಿತ್ ಕ್ವಚಿತ್ ॥ ೨೪ ॥**
**ಲಕ್ಷ್ಮೀ ಸರಸ್ವತೀಂದ್ರಾಣೀ ಗಾಯತ್ರೀತ್ಯಾದಿನಾಮಭಿಃ ।**
**ನಾನಾ ಲಿಂಗೋಽನೇಕರೂಪೋ ವೇದೇಷು ಸ್ತೂಯತೇ ಹರಿಃ ॥ ೨೫ ॥**

ಅತ್ರ-ಈ ದೇಹದಲ್ಲಿ, ಯಃ ಪರಃ-ಯಾವಾತನು ಜೀವಭಿನ್ನನೂ ಉತ್ತಮನೂ (ನಿಯಾಮಕನೂ) ಆಗಿರುವನೋ, ಸ ಏವ-ಆತನೇ, ಈಶಃ-ಈಶ್ವರನು; ಸಃ ವಿಷ್ಣುಃ-ಆತನೇ ವಿಷ್ಣುವು; ಸಃ ಶಿವಃ-ಆತನೇ ಶಿವನು, ಹರಿಃ-ಹರಿಯೂ ಅವನೇ; ಬ್ರಹ್ಮಾ ಚ-ಬ್ರಹ್ಮನೂ, ಸವಿತಾ-ಸವಿತೃವೂ(ಸೂರ್ಯನೂ), ಶಕ್ರಃ-ಇಂದ್ರನೂ (ಆಗಿದ್ದಾನೆ); ಸೂರ್ಯಚಂದ್ರಾದಿ-ಸೂರ್ಯ ಚಂದ್ರ ಮೊದಲಾದ, ಅನೇಕೈಃ-ಬಹು, ನಾಮಭಿಃ-ನಾಮಗಳಿಂದ, ಅನಂತೈಃ ಅಪಿ-ಅಸಂಖ್ಯ ನಾಮಗಳಿಂದಲೂ, ತತ್ತದ್ಗುಣವಿಶೇಷತಃ-ಆಯಾ ನಾಮಗಳಿಂದ ಬೋಧ್ಯವಾದ (ಹೇಳಲ್ಪಡುವ) ಗುಣ ವಿಶೇಷಗಳಿಂದ, (ಆ ಗುಣಗಳೆಲ್ಲವನ್ನೂ ನಿರವಧಿಕವಾಗಿಯೂ ಪೂರ್ಣವಾಗಿಯೂ ಉಳ್ಳವನೆಂದು), ಏಕಃ-ಸ್ವತಂತ್ರನಾದ, ಭಗವಾನ್-ಭಗವಂತನು (ಜಗತ್ಪೂಜ್ಯನಾದ ಶ್ರೀಹರಿಯು), ಸ್ತೂಯತೇ-ಸ್ತುತಿಸಲ್ಪಡುತ್ತಾನೆ; ಕ್ವಚಿತ್ ಕ್ವಚಿತ್-ಕೆಲವು (ತನ್ನ ಇಚ್ಛೆಯಂತೆ ಪ್ರಕಟಗೊಳಿಸ ಲಾಗುವ ಹಲವು), ಸ್ತ್ರೀರೂಪಃ-ಸ್ತ್ರೀರೂಪವುಳ್ಳವನೂ, ಹಿ-ಆಗಿರುವನೆಂದು ಶ್ರುತಿಪ್ರಸಿದ್ಧವಿದೆ; ನಾನಾಲಿಂಗಃ-ವಿವಿಧ ಸಲ್ಲಕ್ಷಣಗಳುಳ್ಳ, ಅನೇಕರೂಪಃ-ಅನೇಕ (ಅಸಂಖ್ಯ) ರೂಪಗಳುಳ್ಳ, ಹರಿಃ-ಶ್ರೀಹರಿಯು,

---

ಪ್ರತಿಕ್ಷಣವೂ ಅನುಭವಿಸುತ್ತಾನೆ; ಆದ್ದರಿಂದ ವಿವೇಕಿಯು, ದೇಹಭಿನ್ನನಾದ ಜೀವನು ಪರಾಧೀನನೆಂಬ ನಿಶ್ಚಯವುಳ್ಳವನಾಗಬೇಕು (೧೯-೨೨).

ದೇಹದಲ್ಲಿದ್ದು ಜೀವಭಿನ್ನನೂ ಉತ್ತಮನೂ ಆಗಿದ್ದು ಯಾರು ಪರಶಬ್ದ ವಾಚ್ಯನಾಗಿ, ಜೀವನನ್ನು ತನ್ನ ವಶದಲ್ಲಿಟ್ಟುಕೊಂಡು ಆತನ ಸಕಲ ಕ್ರಿಯಾದಿಗಳನ್ನು ನಿಯಮಿಸುವನೋ, ಆತನೇ ಈಶನು—ಜೀವನನ್ನು ಆಳುವ ಸ್ವಾಮಿಯು; ಆತನೇ ವಿಷ್ಣುವು, ಶಿವನು, ಹರಿಯು, ಬ್ರಹ್ಮ-ಸವಿತೃ-ಶಕ್ರಾದಿ ನಾಮಗಳುಳ್ಳವನು; ಸೂರ್ಯ ಚಂದ್ರಾದಿ ಅನಂತನಾಮಗಳಿಂದ ಬೋಧ್ಯವಾದ ಸಕಲ ಗುಣಗಳನ್ನು ಪೂರ್ಣವಾಗುಳ್ಳವನು (ನಿರವಧಿಕವಾಗಿ ತನ್ನಲ್ಲಿ ಉಳ್ಳವನು) ಎಂದು ಈತನೇ, ಈ ಸ್ವತಂತ್ರ ಪ್ರಭುವಾದ ಭಗವಂತನೇ (ಪೂರ್ಣೈಶ್ವರ್ಯಾದಿ ಗುಣಸ್ವರೂಪನೆಂದು)

ಲಕ್ಷ್ಮೀ-ಲಕ್ಷ್ಮೀ, ಸರಸ್ವತೀಂದ್ರಾಣಿ-ಸರಸ್ವತೀ ಮತ್ತು ಶಚೀ, ಗಾಯತ್ರೀತ್ಯಾದಿ-ಗಾಯತ್ರೀ ಮೊದಲಾದ, ನಾಮಭಿಃ-ನಾಮಗಳಿಂದ, ವೇದೇಷು-ವೇದಗಳಲ್ಲಿ ಸ್ತೂಯತೇ-ಸ್ತುತಿಸಲ್ಪಡುತ್ತಾನೆ.

**ಸ ಏವ ಕ್ರೀಡನಾರ್ಥಾಯ ಜೀವಾನಾಂ ಗತಿಹೇತವೇ ।**
**ದೇಹಯೋಗೇನ ಸಂಸೃಜ್ಯ ತೇಷು ಚಾಪ್ಯವಿಶತ್ ಸ್ವಯಂ ॥ ೨೬ ॥**

ಸಃ ಏವ-ಆ (ಸ್ವತಂತ್ರ) ಶ್ರೀಹರಿಯೇ, ಕ್ರೀಡನಾರ್ಥಾಯ-ಲೀಲೆಯಿಂದ (ಕ್ರೀಡೆಗಾಗಿ), ಜೀವಾನಾಂ-ಜೀವರಿಗೆ, ಗತಿಹೇತವೇ-(ಅವರವರ) ಗತಿಗಳನ್ನು ಹೊಂದಿಸಲಿಕ್ಕಾಗಿ, ದೇಹಯೋಗೇನ-ದೇಹಸಂಬಂಧದಿಂದ, ಸಂಸೃಜ್ಯ-ಸೃಷ್ಟಿ ಮಾಡಿ,[1] ತೇಷು-ಆ ದೇಹಗಳಲ್ಲಿ ಸ್ವಯಂ ಅಪಿ-ತಾನೂ ಸಹ(ಜೀವನೊಂದಿಗೆ), ಅವಿಶತ್-ಪ್ರವೇಶಿಸಿದನು.

**ಬ್ರಹ್ಮಾಣಂ ಚ ತಥಾ ಪ್ರಾಣಂ ತಥಾನ್ಯಾಸ್ತತ್ವದೇವತಾಃ ।**
**ದೇಹೇ ನಿಯೋಜಯಾಂಚಕ್ರೇ ತಥಾ ಕಲ್ಯಾದಿಕಾಸುರಾನ್ ॥ ೨೭ ॥**

ದೇಹೇ-ಆ ದೇಹದಲ್ಲಿ ಬ್ರಹ್ಮಾಣಂ-ಬ್ರಹ್ಮದೇವನನ್ನೂ, ತಥಾ-ಹಾಗೂ, ಪ್ರಾಣಂ ಚ-ಮುಖ್ಯಪ್ರಾಣನನ್ನೂ, ತಥಾ-ಮತ್ತು ಅನ್ಯಾಃ-ಇತರ, ತತ್ವದೇವತಾಃ-ತಾತ್ವಿಕ ದೇವತೆಗಳನ್ನೂ (ತತ್ವಾಭಿಮಾನಿಗಳನ್ನೂ), ತಥಾ-ಮತ್ತು ಕಲ್ಯಾದಿಕಾಸುರಾನ್-ಕಲಿ ಮೊದಲಾದ ಅಸುರರನ್ನೂ (ತಾತ್ವಿಕದೈತ್ಯರನ್ನೂ), ನಿಯೋಜಯಾಂಚಕ್ರೇ-(ತಮ್ಮಿಂದ

---

ವೇದಗಳಿಂದ ಸ್ತುತಿಸಲ್ಪಟ್ಟಿರುವನು; ಈತನು (ಶ್ರೀಹರಿಯು—ಸ್ವತಂತ್ರಪ್ರಭುವು), ಅನಂತ ಸ್ತ್ರೀರೂಪಗಳುಳ್ಳವನೂ ಆಗಿದ್ದಾನೆ—ತನ್ನ ಇಚ್ಛಾನುಸಾರ ಆಗಾಗ ಕೆಲವು ಸ್ತ್ರೀರೂಪಗಳನ್ನು ಪ್ರಕಟಗೊಳಿಸುತ್ತಾನೆ; ಲಕ್ಷ್ಮೀ, ಸರಸ್ವತೀ, ಶಚೀ, ಗಾಯತ್ರೀ ಮೊದಲಾದ ನಾಮಗಳಿಂದ ಸಹ ಈತನೇ ವೇದಗಳಲ್ಲಿ ಪ್ರತಿಪಾದ್ಯನಾಗಿ ಸ್ತುತಿಸಲ್ಪಟ್ಟಿದ್ದಾನೆ (೨೩.-೨೫). ಕ್ರೀಡೆಗಾಗಿಯೂ, ಜೀವರಿಗೆ ಅವರವರ ಗತಿಗಳನ್ನು ಹೊಂದಿಸಲಿಕ್ಕಾಗಿಯೂ, ಶ್ರೀಹರಿಯು, ಸ್ವರೂಪದಿಂದ ನಿತ್ಯರಾದ ಜೀವರನ್ನು ದೇಹಸಂಬಂಧದಿಂದ ಸೃಷ್ಟಿಮಾಡಿ (ಅವರಿಗೆ ದೇಹಯೋಗವೇ ಸೃಷ್ಟಿಯು), ಆ ದೇಹಗಳಲ್ಲಿ ಜೀವರೊಂದಿಗೆ ತಾನೂ ಪ್ರವೇಶಿಸುತ್ತಾನೆ—ಶ್ರೀಹರಿಯು, ಜೀವನ ನಿತ್ಯಸಖನು—ಸದಾ ಅವನೊಟ್ಟಿಗೆ ಇರುತ್ತಾನೆ(೨೬). ಆ ದೇಹದಲ್ಲಿ ಬ್ರಹ್ಮದೇವ, ಮುಖ್ಯಪ್ರಾಣ, ಮತ್ತು ಇತರ ತತ್ವಾಭಿಮಾನಿ ದೇವತೆಗಳನ್ನೂ ಮತ್ತು ತತ್ವಾಭಿಮಾನಿಗಳಾದ ಕಲಿ ಮೊದಲಾದ ದೈತ್ಯರನ್ನೂ ತಂತಮ್ಮ ತತ್ವಗಳಲ್ಲಿದ್ದು ಪ್ರೇರಣೆ ಮಾಡುವ ಕಾರ್ಯಗಳಲ್ಲಿ ನಿಯೋಜಿಸಿದನು(೨೭). ರಾಜನು ತನ್ನ ಸ್ವಾತಂತ್ರ್ಯವನ್ನು ಹೇಗೆ

---

1. ಸ್ವರೂಪದಿಂದ ನಿತ್ಯರಾದ ಜೀವರಿಗೆ, ದೇಹಯೋಗವೇ ಸೃಷ್ಟಿಯು; ದೇಹಯೋಗವೇ (ದೇಹದ ಸಂಬಂಧವನ್ನು ಹೊಂದುವುದೇ) ಜನ್ಮ. ದೇಹವಿಯೋಗವೇ ಮರಣವು.

ಅಭಿಮನ್ಯಮಾನವಾದ ತತ್ವಗಳನ್ನು ಪ್ರೇರಿಸುವ ಕಾರ್ಯಗಳಲ್ಲಿ) ನಿಯೋಜಿಸಿದನು.

**ಸ್ವಾತಂತ್ರ್ಯಂ ವ್ಯಭಜತ್ತೇಷು ತಥಾ ಜೀವೇಷು ಭಾಗಶಃ ।**
**ಯಥಾ ರಾಜಾ ನಿಜಾಮಾತ್ಯಾನ್ ದತ್ವಾ ಸ್ವಾತಂತ್ರ್ಯಮಾತ್ಮನಃ ॥ ೨೮ ॥**
**ಕಾರ್ಯೇ ನಿಯೋಜ್ಯ ತತ್ರತ್ಯಾನ್ ಗುಣದೋಷಾಂಶ್ಚ ಪೃಚ್ಛತಿ ।**

ಯಥಾ-ಹೇಗೆ, ರಾಜಾ-ರಾಜನು, ಆತ್ಮನಃ-ತನ್ನ ಸ್ವಾತಂತ್ರ್ಯಂ-ಸ್ವಾತಂತ್ರ್ಯ ವನ್ನು ದತ್ವಾ-ಕೊಟ್ಟು (ಅವರಲ್ಲಿ ಸ್ಥಾಪಿಸಿ), ಅಮಾತ್ಯಾನ್-ಅಮಾತ್ಯರನ್ನು (ಮಂತ್ರಿ ಮೊದಲಾದ ಅಧಿಕಾರಿಗಳನ್ನು), ಕಾರ್ಯೇ-ಕಾರ್ಯದಲ್ಲಿ ನಿಯೋಜ್ಯ-ನಿಯೋಜಿಸಿ (ಸೇರಿಸಿ), ತತ್ರತ್ಯಾನ್-ಅಲ್ಲಿರುವ (ಅಲ್ಲಿದ್ದು ಕಾರ್ಯಗಳನ್ನು ನಿರ್ವಹಿಸುವ), ಗುಣದೋಷಾನ್ ಚ-(ಅವರ) ಗುಣದೋಷಗಳನ್ನು ಪೃಚ್ಛತಿ-ಕೇಳುತ್ತಿರುವನೋ (ಹಾಗೆ), ತೇಷು- ಅವರಲ್ಲಿ (ತತ್ವಾಭಿಮಾನಿ ದೇವದೈತ್ಯರಲ್ಲಿ), ತಥಾ-ಮತ್ತು ಜೀವೇಷು-ಜೀವರಲ್ಲಿ ಸಹ, ಸ್ವಾತಂತ್ರ್ಯಂ-(ತನ್ನ) ಸ್ವಾತಂತ್ರ್ಯವನ್ನು, ಭಾಗಶಃ-ವಿಭಾಗದಿಂದ, ವ್ಯಭಜತ್-ಹಂಚಿ ಕೊಟ್ಟನು (ಸ್ವಾತಂತ್ರ್ಯದ ಅಂಶಗಳನ್ನು ಸ್ಥಾಪಿಸಿದನು).

**ತತ್ತತ್ಕಾರ್ಯಕೃತೌ ಶಕ್ತಿಃ ಸ್ವಾತಂತ್ರ್ಯಂ ಹಿ ಪರಂ ಸ್ಮೃತಂ ॥ ೨೯ ॥**
**ಶಕ್ತ್ಯಾ ಸ್ವದತ್ತಯಾಮಾತ್ಯೈಃ ಕೃತೇ ಕಾರ್ಯೇ ಸ ತುಷ್ಯತಿ ।**
**ಸತ್ಯಾಂ ಶಕ್ತೌ ಕಾರ್ಯನಾಶೇ ಸ್ವಾಜ್ಞಾಮುಲ್ಲಂಘ್ಯ ವರ್ತತೇ ॥ ೩೦ ॥**
**ಕುಪಿತ್ವಾ ದಂಡಯೇದೇವಂ ಯಥಾ ಕ್ರೀಡತ್ಯಯಂ ಹರಿಃ ।**

---

ಅಮಾತ್ಯರೇ ಮೊದಲಾದ ಅಧಿಕಾರಿಗಳಲ್ಲಿ ಸ್ಥಾಪಿಸಿ, ಅವರನ್ನು ತಂತಮ್ಮ ಕಾರ್ಯಗಳಲ್ಲಿ (ಅವರಿಗೆ ನಿಯತವಾದ—ವಿಧಿಸಲ್ಪಟ್ಟ ಕಾರ್ಯಗಳಲ್ಲಿ) ಯೋಜನೆ ಮಾಡಿ, ಅವರ ಕಾರ್ಯನಿರ್ವಹಣೆಯ ಗುಣದೋಷಗಳನ್ನು ವಿಚಾರಿಸಿಕೊಳ್ಳುತ್ತಿರುವನೋ, ಹಾಗೆ, ಶ್ರೀಹರಿಯು, ತನ್ನ ಸ್ವಾತಂತ್ರ್ಯವನ್ನು ಆ (ಪೂರ್ವೋಕ್ತ ತತ್ವಾಭಿಮಾನಿ) ದೇವದೈತ್ಯರಲ್ಲಿಯೂ ಮತ್ತು ಜೀವರಲ್ಲಿಯೂ ವಿಭಾಗದಿಂದ ಸ್ಥಾಪಿಸಿ (ವಿಭಾಗಿಸಿ ಇಟ್ಟು)[1] ಜೀವರಿಂದಾಗಬೇಕಾದ ಕರ್ಮಗಳನ್ನು ವ್ಯವಸ್ಥೆಗೊಳಿಸಿದನು(೨೮). ಸ್ವಾಧೀನವಾದ ಸರ್ವಜಗತ್ತಿನ ಸಕಲಜೀವರಿಂದ ಆಗುವ ಸರ್ವಕಾರ್ಯಗಳನ್ನು ಮಾಡುವ ಸಾಮರ್ಥ್ಯವೇ ಉತ್ತಮ ಸ್ವಾತಂತ್ರ್ಯವೆಂದು ಜ್ಞಾನಿಗಳು ತಿಳಿಯುತ್ತಾರೆ; ತನ್ನಿಂದ ಕೊಡಲ್ಪಟ್ಟ ಶಕ್ತಿಯಿಂದ, ಕಾರ್ಯವನ್ನು ಯೋಗ್ಯವಾಗಿ ನಿರ್ವಹಿಸಿದ ಅಮಾತ್ಯರ ವಿಷಯದಲ್ಲಿ

---

1. ಶ್ರೀಹರಿಯೊಬ್ಬನೇ ಸ್ವತಂತ್ರನು; ಆತನ ಸ್ವಾತಂತ್ರ್ಯವೆಂಬ ಗುಣವು (ಧರ್ಮವು) ಆತನಿಂದ ಅಭಿನ್ನವಾದುದು-ಅದು ಸ್ವರೂಪಾತ್ಮಕವಾದುದೇ; ಅದನ್ನು ವಿಭಾಗಿಸಿ ಅನ್ಯರಿಗೆ ಕೊಡುವುದೆಂದರೆ, ತನ್ನ ಸ್ವಾತಂತ್ರ್ಯದ ಅಂಶಗಳನ್ನು ಅವರಲ್ಲಿ ಸ್ಥಾಪಿಸುವುದು (ಇಡುವುದು)

ನಿಯಂತೃತ್ವೇನ ಸರ್ವತ್ರ ತಿಷ್ಠಂ ಜೀವೇಷು ಸರ್ವದಾ ॥ ೩೧ ॥

ತತ್ತತ್ಕಾರ್ಯಕೃತೌ-ಆಯಾ ಕಾರ್ಯಗಳನ್ನು (ತನ್ನ ಅಧೀನನಾದ ಸರ್ವ ಜಗತ್ತಿನಲ್ಲಿರುವ ಸರ್ವರ ಆಯಾ ಕಾರ್ಯಗಳನ್ನು ಮಾಡುವುದರಲ್ಲಿ), ಶಕ್ತಿಃ-(ಇರುವ) ಸಾಮರ್ಥ್ಯವು, ಪರಂ-ಉತ್ಕೃಷ್ಟವಾದ, ಸ್ವಾತಂತ್ರ್ಯಂ-ಸ್ವಾತಂತ್ರ್ಯವು, ಸ್ಮೃತಂ-(ಎಂದು ಜ್ಞಾನಿಗಳಿಂದ) ತಿಳಿಯಲ್ಪಡುತ್ತದೆ; ಸ್ವದತ್ತಯಾ-ತನ್ನಿಂದ ಕೊಡಲ್ಪಟ್ಟ ಶಕ್ತ್ಯಾ-ಶಕ್ತಿಯಿಂದ, ಅಮಾತ್ಯೈಃ-ಅಮಾತ್ಯರಿಂದ, ಕಾರ್ಯೇ-ಕಾರ್ಯವು, ಕೃತೇ(ಸತಿ)-ಮಾಡಲ್ಪಡುತ್ತಿರಲು, ಸಃ-ಆ ರಾಜನು, ತುಷ್ಯತಿ-ಸಂತುಷ್ಟನಾಗುತ್ತಾನೆ; ಶಕ್ತೌ-ಶಕ್ತಿಯು, ಸತ್ಯಾಂ-ಇದ್ದರೂ ಸಹ, ಕಾರ್ಯನಾಶೇ-ಕಾರ್ಯನಾಶವಾಗುತ್ತಿರಲು, ಸ್ವಾಜ್ಞಾಂ-ತನ್ನ ಆಜ್ಞೆಯನ್ನು ಉಲ್ಲಂಘ್ಯ-ಉಲ್ಲಂಘಿಸಿ (ಮೀರಿ), ವರ್ತತೇ-ವರ್ತಿಸುತ್ತಾನೆ (ಉಲ್ಲಂಘಿಸಿದಂತೆಯೇ ಸರಿ); ಯಥಾ-ಹೇಗೆ, ಕುಪಿತ್ವಾ-ಕುಪಿತನಾಗಿ, ದಂಡಯೇತ್-(ರಾಜನು) ಶಿಕ್ಷಿಸುವನೋ, ಏವಂ-ಹೀಗೆಯೇ, ಅಯಂ-ಈ, ಹರಿಃ-ಶ್ರೀಹರಿಯು, ಸರ್ವದಾ-ಎಲ್ಲ ಕಾಲದಲ್ಲಿ, ಸರ್ವತ್ರ- ಎಲ್ಲೆಲ್ಲಿಯೂ, ತಿಷ್ಠನ್-ಇರುವವನಾಗಿ, ಜೀವೇಷು-ಜೀವರಲ್ಲಿ (ಬ್ರಹ್ಮಾದಿ ಸರ್ವ ಜೀವರಲ್ಲಿ), ನಿಯಂತೃತ್ವೇನ-ನಿಯಾಮಕನಾಗಿ, ಕ್ರೀಡಯತಿ-ಕ್ರೀಡಿಸುತ್ತಾನೆ (ಆಯಾ ಜೀವರ

---

ರಾಜನು ತೃಪ್ತನಾಗುತ್ತಾನೆ; ಶಕ್ತಿಯಿದ್ದರೂ ಕಾರ್ಯಹಾನಿ ಮಾಡಿದರೆ, ತನ್ನ ಆಜ್ಞೆಯನ್ನು ಉಲ್ಲಂಘಿಸಿದ ಆ ಅಧಿಕಾರಿಗಳ ವಿಷಯಕ್ಕೆ ಕುಪಿತನಾಗಿ, ಯೋಗ್ಯವಾದ ಶಿಕ್ಷೆಯನ್ನು ವಿಧಿಸುತ್ತಾನೆ; ಹೀಗೆಯೇ ಸರ್ವಸ್ವತಂತ್ರನಾದ ಶ್ರೀಹರಿಯೂ ಸಹ, ಸದಾ ಸರ್ವತ್ರ ನೆಲೆಸಿದ್ದು ಸಕಲ ಜೀವರಲ್ಲಿ ನಿಯಾಮಕನಾಗಿ ತಾನೇ ಇದ್ದು ಎಲ್ಲವನ್ನೂ ಮಾಡಿ, ಜೀವರಿಂದ ಮಾಡಿಸಿ, ಕ್ರೀಡಿಸುತ್ತಾನೆ (೨೯-೩೧). ಶ್ರೀಹರಿಯು, ಅಪಾರವಾದ ತನ್ನ ಸ್ವಾತಂತ್ರ್ಯಗುಣದಲ್ಲಿ ಒಂದಂಶವನ್ನು ತೆಗೆದುಕೊಂಡು, ಅದರಲ್ಲಿ ೧/೨ ಭಾಗವನ್ನು ತಾನಿಟ್ಟುಕೊಂಡು, ಉಳಿದ ಅರ್ಧದಲ್ಲಿ ಅರ್ಧವನ್ನು (೧/೪ ಭಾಗವನ್ನು) ನೂರು

---

ಎಂದರ್ಥ; ಶ್ರೀಹರಿಯಲ್ಲಿ ಅಂಶ-ಅಂಶಿಗಳ ಭೇದವೇ ಇಲ್ಲ. ಶ್ರೀಹರಿಯು ತನ್ನ ಅನಂತಾಂಶಗಳಿಂದಲೂ, ಒಂದೊಂದಂಶದಿಂದಲೂ ಅತ್ಯಂತ ಅಭಿನ್ನನು. ಆತನ ಅಂಶಮೂಲರೂಪಗಳಲ್ಲಿ ಯಾವ ವಿಶೇಷವೂ ಇಲ್ಲ. 'ಸ್ವಾತಂತ್ರ್ಯದಾನಂ ನಾಮ ತದ್ರೂಪೇಣ ಜೀವ ಪ್ರವೇಶಃ' (ಛಲಾರಿ) ಮತ್ತು 'ದತ್ತಸ್ವಾತಂತ್ರ್ಯಸಾಮರ್ಥ್ಯಾ ವೈ ಹರೇರೀಶೇನ ಸರ್ವದಾ । ಪ್ರೇರಿತ ಕರ್ಮಕುರ್ವಾಣಾಃ...' (ಪ್ರಕಾಶ ಸಂಹಿತಾ) ಮತ್ತು 'ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥' ಇತ್ಯಾದಿ ಬಹುಪ್ರಮಾಣಗಳು, ದತ್ತಸ್ವಾತಂತ್ರ್ಯನಾಮಕ, (ಸ್ವೇಚ್ಛೆಯಿಂದ ಆವಿರ್ಭೂತಗಳಾದ-ಪ್ರಕಟವಾದ) ಸ್ವಾತಂತ್ರ್ಯಾಂಶಗಳಿಂದಲೇ ಸಾಧ್ಯವಾದ ಜೀವನಿಷ್ಠ ಕರ್ಮಕರಣಶಕ್ತಿಯು ಅಭಿವ್ಯಕ್ತವಾಗಲೆಂಬ ಶ್ರೀಹರಿಸಂಕಲ್ಪವೇ ಸ್ವಾತಂತ್ರ್ಯದಾನವು; ತಾನೇ ತನ್ನ ಸ್ವಾತಂತ್ರ್ಯಾಂಶಗಳನ್ನು ಜೀವಾದಿಗಳಲ್ಲಿ ಸ್ಥಾಪಿಸಿ, ಅಲ್ಲಿದ್ದು ಅವರಿಂದ ವಿವಿಧ ಕರ್ಮಗಳನ್ನು ಮಾಡಿಸುವನು; ಎಂದು ಮುಂತಾಗಿ ಹೇಳುತ್ತವೆ.

ಯೋಗ್ಯತಾನುಸಾರವಾಗಿ, ಸರ್ವಕರ್ಮಪ್ರೇರಕನಾಗಿ, ಜೀವರಿಂದ ಮಾಡಿಸುತ್ತ ತಾನೂ ಅವರೊಂದಿಗೆ ಮಾಡುತ್ತಾನೆ—ಇದು ಸತ್ಯಸಂಕಲ್ಪನ ಲೀಲೆಯು).

**ಸ್ವಸ್ಮಿನ್ನರ್ಧಂ ಸ್ವತಂತ್ರತ್ವಂ ಸಮಾಧಾಯ ತದರ್ಧಕಂ ।**
**ವಿಭಜ್ಯ ಶತಧಾ ಭೂಯೋಽಷ್ಟಾಚತ್ವಾರಿಂಶದಂಶಕಾನ್ ॥ ೩೨ ॥**
**ಪ್ರಾಣೇ ಸ್ವಾತಂತ್ರ್ಯಮಾಧಾಯ ದ್ವಿಪಂಚಾಶತ್ತು ವೇಧಸಿ ।**

ಸ್ವಸ್ವಾತಂತ್ರ್ಯವನ್ನು ವಿಭಾಗಿಸಿ, ತದಂಶಗಳನ್ನು ಅನ್ಯರಲ್ಲಿ ಇಟ್ಟ ವಿವರವನ್ನು ನಿರೂಪಿಸಿರುತ್ತಾರೆ :—

ಸ್ವಸ್ಮಿನ್-ತನ್ನಲ್ಲಿ ಸ್ವತಂತ್ರತ್ವಂ-ಸ್ವತಂತ್ರಗುಣಾಂಶದ (ಸ್ವತಂತ್ರಗುಣವು ಅಪಾರವಾದುದು-ಅದರಲ್ಲಿ ಏಕದೇಶದ-ಒಂದಂಶದ), ಅರ್ಧಂ-ಅರ್ಧಭಾಗವನ್ನು ಸಮಾಧಾಯ-ಇಟ್ಟುಕೊಂಡು, ತದರ್ಧಕಂ-ಉಳಿದರ್ದರಲ್ಲಿ ಅರ್ಧವನ್ನು (ಅರ್ಧದ ಅರ್ಧವೆಂದರೆ ಕಾಲುಭಾಗವನ್ನು), ಶತಧಾ-ನೂರು ಭಾಗವಾಗಿ, ವಿಭಜ್ಯ-ವಿಭಾಗಿಸಿ, ಭೂಯಃ-ಮತ್ತೆ ಅಷ್ಟಾಚತ್ವಾರಿಂಶದಂಶಕಾನ್-ನಲವತ್ತೆಂಟು (ಅಂಶಗಳನ್ನು) ಭಾಗಗಳನ್ನು ಪ್ರಾಣೇ-ಮುಖ್ಯಪ್ರಾಣನಲ್ಲಿ (ವಾಯುದೇವನಲ್ಲಿ), ಆಧಾಯ-ಇಟ್ಟು, ದ್ವಿಪಂಚಾಶತ್ ಸ್ವಾತಂತ್ರ್ಯಂ-ಐವತ್ತೆರಡು ಅಂಶಸ್ವಾತಂತ್ರ್ಯವನ್ನು ವೇಧಸಿ ತು-ಚತುರ್ಮುಖಬ್ರಹ್ಮನಲ್ಲಿಯೇ (ಇಟ್ಟನು).

**ಪಾದಂ ಚತುರ್ಥಂ ಶತಧಾ ವಿಭಜ್ಯ ದಶಭಾಗಕಾನ್ ॥ ೩೩ ॥**
**ಜೀವೇ ಸ್ವಾತಂತ್ರ್ಯಮಾಧಾಯ ತತೋ ವಿಂಶತಿಭಾಗಕಾನ್ ।**
**ಅಹಂಕಾರಾತ್ಮಕೇ ರುದ್ರೇ ತಥಾ ಬುದ್ಧೌ ನಿಧಾಯ ಚ ॥ ೩೪ ॥**
**ಮನೋದೇವೇ ತತಃ ಶಕ್ರೇ ಭಾಗಾನ್ ಪಂಚದಶೈವ ತು ।**
**ತತ್ವದೇವೇ ದಶಾಂಶಾಂಶ್ಚ ಸ್ವಾತಂತ್ರ್ಯಂ ನಿದಧೇ ಹರಿಃ ॥ ೩೫ ॥**

---

ವಿಭಾಗಗಳನ್ನಾಗಿ ಮಾಡಿದನು; ಈ ನೂರು (೧೦೦) ವಿಭಕ್ತಾಂಶಗಳಲ್ಲಿ ೪೮ ಅಂಶಗಳನ್ನು ಶ್ರೀ ಮುಖ್ಯಪ್ರಾಣನಲ್ಲಿ ಇಟ್ಟನು; ಉಳಿದ ೫೨ ಅಂಶಗಳನ್ನು ವಿಧಿಯಲ್ಲಿ (ಬ್ರಹ್ಮದೇವನಲ್ಲಿ) ಇಟ್ಟನು (೩೨). ಅವಶಿಷ್ಟ೧/೪ ಭಾಗದ ಸ್ವಾತಂತ್ರ್ಯಾಂಶವನ್ನು ಪುನಃ ೧೦೦ ಭಾಗಗಳನ್ನಾಗಿ ವಿಭಾಗಿಸಿ, ಅವುಗಳಲ್ಲಿ ೧೦ ಅಂಶಗಳನ್ನು (ಭಾಗಗಳನ್ನು) ಜೀವನಲ್ಲಿಯೂ, ೨೦ ಅಂಶಗಳನ್ನು ಅಹಂಕಾರಾಭಿಮಾನಿ ರುದ್ರದೇವ ಮತ್ತು ಬುದ್ಧ್ಯಭಿಮಾನಿ ಉಮಾದೇವಿಯಲ್ಲಿ ಸಹ ಸ್ಥಾಪಿಸಿದನು; ನಂತರ ಮನೋಭಿಮಾನಿಯಾದ ಇಂದ್ರನಲ್ಲಿ ೧೫ ಅಂಶಗಳನ್ನೂ, ಇತರ ತತ್ತ್ವಾಭಿಮಾನಿ ದೇವತೆಗಳಲ್ಲಿ (ಸಾಮೂಹಿಕವಾಗಿ) ೧೦ ಅಂಶಗಳನ್ನೂ, ಉಳಿದ ೪೫ ಅಂಶಗಳನ್ನು ಕಲಿ ಮೊದಲಾದ ತತ್ತ್ವಾಭಿಮಾನಿ ದೈತ್ಯ ಸ ಮೂ ಹ ದ ಲ್ಲಿ ಯೂ (ಅವರವರ ಗುಣ ತಾರತಮ್ಯ

**ಪಂಚಚತ್ವಾರಿಂಶದಂಶಾನ್ ಕಲಿಮುಖ್ಯೇಷ್ವಧಾತ್ ಸ್ವಯಂ ।**
**ವಿಷ್ಣೋಃ ಪರೋ ನ ಚಾನ್ಯೋಽಸ್ತಿ ಸ್ವತಂತ್ರಃ ಕೋಽಪಿ ಚೇತನಃ ॥ ೩೬ ॥**

ಚತುರ್ಥಾಂ-(ನಾಲ್ಕರ) ೧/೪ನೇ, ಪಾದಂ-ಭಾಗದ, ಸ್ವಾತಂತ್ರ್ಯಂ-ಸ್ವಾತಂತ್ರ್ಯವನ್ನು, ಶತಧಾ-ನೂರು ಭಾಗಗಳನ್ನಾಗಿ, ವಿಭಜ್ಯ-ಭಾಗಿಸಿ, ದಶಭಾಗಾನ್-(ಆ ನೂರರಲ್ಲಿ) ೧೦ ಭಾಗಗಳನ್ನು ಜೀವೇ-ಜೀವನಲ್ಲಿ ಆಧಾಯ-ಇಟ್ಟು, ತತಃ-ನಂತರ, ವಿಂಶತಿಭಾಗಾನ್-೨೦ ಭಾಗಗಳನ್ನು, ಅಹಂಕಾರಾತ್ಮಕೇ-ಅಹಂಕಾರ ತತ್ವದ ಅಭಿಮಾನಿಯಾದ, ರುದ್ರೇ-ರುದ್ರನಲ್ಲಿಯೂ, ತಥಾ-ಹಾಗೂ, ಬುದ್ಧೌ ಚ-ಬುದ್ಧಿತತ್ವದ ಅಭಿಮಾನಿಯಾದ ಪಾರ್ವತಿಯಲ್ಲಿ ಸಹ, ನಿಧಾಯ-ಇಟ್ಟು, ತತಃ-ನಂತರ, ಮನೋದೇವೇ-ಮನೋಭಿಮಾನಿಯಾದ, ಶಕ್ರೇ-ಇಂದ್ರನಲ್ಲಿ, ಪಂಚದಶಭಾಗಾನ್ ಏವ-೧೫ ಭಾಗಗಳನ್ನೇ, ಚ-ಮತ್ತು ತತ್ವದೇವೇ-ಅನ್ಯ ತತ್ವಾಭಿಮಾನಿ ದೇವತೆಗಳ ಸಮೂಹದಲ್ಲಿ, ದಶಾಂಶಾನ್-೧೦ ಭಾಗಗಳನ್ನೂ, ತು-ಈ ಪ್ರಕಾರದಿಂದ, ಸ್ವಾತಂತ್ರ್ಯಂ (ತನ್ನ) ಸ್ವಾತಂತ್ರ್ಯವನ್ನು, ಹರಿಃ-ಶ್ರೀಹರಿಯು, ನಿದಧೇ-ಸ್ಥಾಪಿಸಿದನು; ಕಲಿಮುಖ್ಯೇಷು-ಕಲಿ ಮೊದಲಾದ ತತ್ವಾಭಿಮಾನಿ ದೈತ್ಯರಲ್ಲಿ ಪಂಚಚತ್ವಾರಿಂಶದಂಶಾನ್-೪೫ ಭಾಗಗಳನ್ನು, ಸ್ವಯಂ-ಶ್ರೀಹರಿಯು, ಅಧಾತ್-ಸ್ಥಾಪಿಸಿದನು; ವಿಷ್ಣೋಃ ಶ್ರೀವಿಷ್ಣುವಿನಿಂದ, ಪರಃ-ಭಿನ್ನನಾದ, ಕೋಽಪಿ-ಯಾವನೊಬ್ಬ, ಅನ್ಯಃ-ಮತ್ತೊಬ್ಬ ಚೇತನಃ-ಚೇತನನು, ಸ್ವತಂತ್ರಃ-ಸ್ವತಂತ್ರನು, ನ ಅಸ್ತಿ-ಇಲ್ಲವು.

**ಸ ಏವಾಹಂ ತದುತ್ಕರ್ಷ ಜ್ಞಾಪಕಂ ತತ್ಪ್ರಮಾಣಕಂ ।**
**ತಸ್ಯ ನಿಂದಾ ತದೀಯಸ್ಯ ಭಕ್ತಸ್ಯಾಪಿ ವಿನಿಂದನಂ ॥ ೩೭ ॥**
**ಶಂಖಚಕ್ರಾದಿತಲ್ಲಿಂಗಧಾರಿಣಾಂ ದ್ವೇಷಣಂ ತಥಾ ।**
**ಏವಮಾದಿರ್ಹರೇರ್ದ್ವೇಷಸ್ತತ್ಕಾರೀ ದೈತ್ಯ ಉಚ್ಯತೇ ॥ ೩೮ ॥**

ತತ್ವಾಭಿಮಾನಿ ದೈತ್ಯಲಕ್ಷಣಗಳನ್ನು ನಿರೂಪಿಸುತ್ತಾರೆ :—

---

ಕ್ರಮಾನುಸಾರವಾಗಿ), ಶ್ರೀಹರಿಯು, ಸ್ವೇಚ್ಛೆಯಿಂದಲೇ ಸ್ಥಾಪಿಸಿದನು; ಶ್ರೀವಿಷ್ಣು ಭಿನ್ನ
ಯಾವ ಚೇತನನೂ ಸ್ವತಂತ್ರನಲ್ಲ—ಶ್ರೀವಿಷ್ಣುವೇ ಏಕೈಕ ಸ್ವತಂತ್ರ ಚೇತನನು(೩೩-೩೬).

ಆ ವಿಷ್ಣುವೇ (ಸ್ವತಂತ್ರನು) ನಾನೆಂಬುದೂ, ಆತನ ಸ್ವಾತಂತ್ರ್ಯಾದಿ ಗುಣೋತ್ಕರ್ಷವನ್ನೂ, ಅದನ್ನು ಪ್ರತಿಪಾದಿಸುವ ವೇದಾದಿ ಪ್ರಮಾಣಗಳನ್ನೂ ನಿಂದಿಸುವುದೂ, ವಿಷ್ಣುಭಕ್ತರನ್ನು ನಿಂದಿಸುವುದೂ, ಶಂಖಚಕ್ರಾದಿ ವಿಷ್ಣುಲಾಂಛನಗಳನ್ನು ಧರಿಸುವವರನ್ನು ದ್ವೇಷಿಸುವುದೂ, ಈ ಮೊದಲಾದವುಗಳು ಶ್ರೀಹರಿಯ ದ್ವೇಷಗಳು—ಈ ವಿಧ ದ್ವೇಷಮಾಡುವ ಸ್ವಭಾವವುಳ್ಳವನು ದೈತ್ಯನು(೩೭-೩೮).
ದೈತ್ಯರಲ್ಲಿ ಕಲಿಯೇ ಪ್ರಧಾನನು—ಅತ್ಯಂತ ನೀಚನು; ದೈತ್ಯಗಣಕ್ಕೆ ಸೇರಿದ ಅನ್ಯರು

ಅಹಂ- ನಾನು(ಜೀವನು), ಸಃ ಏವ- ಆ ಶ್ರೀವಿಷ್ಣುವೇ (ಎಂದು ತಿಳಿಯುವುದು); ತದುತ್ಕರ್ಷಜ್ಞಾಪಕಂ- ಆತನ ಉತ್ಕರ್ಷವನ್ನು (ಸರ್ವೋತ್ತಮತ್ವವನ್ನು ಅಥವಾ ಗುಣಪೂರ್ಣತ್ವವನ್ನು) ತಿಳಿಸುವ, ತತ್ಪ್ರಮಾಣಕಂ- ಪ್ರಮಾಣಗಳನ್ನು(ವೇದಾದಿಗಳನ್ನು), ವಿನಿಂದನಂ- ನಿಂದಿಸುವುದು, ತಸ್ಯ- ಆ ಮಹಾವಿಷ್ಣುವಿನ, ನಿಂದಾ- ನಿಂದೆಯು; ತದೀಯಸ್ಯ- ಅವನ ಭೃತ್ಯನಾದ (ವೈಷ್ಣವನಾದ), ಭಕ್ತಸ್ಯ- ಭಕ್ತನ, ವಿನಿಂದನಂ- ನಿಂದಿಸುವುದು; ತಥಾ- ಹಾಗೂ, ಶಂಕಚಕ್ರಾದಿತಲ್ಲಿಂಗ ಧಾರಿಣಾಂ- ಶಂಖ, ಚಕ್ರ ಮೊದಲಾದ ವಿಷ್ಣುಚಿಹ್ನೆಗಳನ್ನು ಧರಿಸುವವರ, ದ್ವೇಷಣಂ- ದ್ವೇಷಮಾಡುವುದು; ಏವಮಾದಿ- ಇವೇ ಮೊದಲಾದವು, ಹರೇಃ- ಶ್ರೀಹರಿಯ, ದ್ವೇಷಃ- ದ್ವೇಷವು (ಎನಿಸುತ್ತದೆ); ತತ್ಕಾರೀ- ದ್ವೇಷಮಾಡುವವನು, ದೈತ್ಯಃ- ದೈತ್ಯನು, (ಎಂದು), ಉಚ್ಯತೇ- ಹೇಳಲ್ಪಡುತ್ತಾನೆ.

**ದೈತ್ಯೇಷ್ವಪಿ ಕಲಿರ್ಮುಖ್ಯಸ್ತತೋಽನ್ಯೇ ತದ್ಗಣಾಃ ಪರೇ ।**
**ಕಾಮಕ್ರೋಧಾದಿಕಾನ್ ದೋಷಾನಾಕ್ರಮ್ಯಾತ್ರ ಸಮಾಸತೇ ॥ ೩೯ ॥**

ದೈತ್ಯೇಷು ಅಪಿ- ದೈತ್ಯರಲ್ಲಿಯೂ, ಕಲಿಃ- ಕಲಿಯು, ಮುಖ್ಯಃ- ಪ್ರಧಾನನು (ಅತ್ಯಂತ ನೀಚನು); ತತಃ- ಅವನಿಂದ, ಅನ್ಯೇ- ಭಿನ್ನರಾದ, ತದ್ಗಣಾಃ- ಅವನ ಗುಂಪಿಗೆ (ದೈತ್ಯಗಣಕ್ಕೆ) ಸೇರಿದ ದೈತ್ಯರು, ಪರೇ- ಇತರರು, ಕಾಮಕ್ರೋಧಾದಿಕಾನ್- ಕಾಮಕ್ರೋಧಾದಿ, ದೋಷಾನ್- ದೋಷಗಳನ್ನು[1], ಆಕ್ರಮ್ಯ- ಆಕ್ರಮಿಸಿ, ಅತ್ರ- ಅಲ್ಲಿ ಸಮಾಸತೇ- (ದುಷ್ಪ್ರೇರಣೆ ಮಾಡುತ್ತ) ಇರುವರು.

**ದಂಭೋ ಮಾನೋ ಮದೋ ಹಿಂಸಾ ಪಾರುಷ್ಯಂ ಕಪಟಾನೃತೇ ।**
**ಜಾಯಂತೇ ತಮಸೋ ವೃದ್ಧ್ಯೇ ಕಲಿಸ್ತತ್ರಾಧಿದೇವತಾ ॥ ೪೦ ॥**

ದಂಭಃ- ದಂಭವು (ಇಲ್ಲದ ಗುಣಪ್ರದರ್ಶನ), ಮಾನಃ- ದುರಭಿಮಾನ, ಮದಃ- ಮದ, ಹಿಂಸಾ- ಪರಪೀಡನೆ, ಪಾರುಷ್ಯಂ- ನಿಷ್ಠುರವರ್ತನೆ, ಕಪಟಾನೃತೇ-

---

ಕಾಮಕ್ರೋಧಾದಿ ಮನೋಭಾವಗಳನ್ನು ಆಕ್ರಮಿಸಿ, ಆ ದೋಷಗಳ ನಿಯಾಮಕರೂ ಪ್ರೇರಕರೂ ಆಗಿರುತ್ತಾರೆ (೩೯). ದಂಭ, ಅಭಿಮಾನ, ಮದ, ಹಿಂಸೆ, ನಿಷ್ಠುರತೆ, ಕಪಟತ್ವ, ಸುಳ್ಳು, (ಇವು) ಈ ಭಾವನೆಗಳು (ದುರ್ಗುಣಗಳು) ತಮೋಗುಣವು ಅಭಿವೃದ್ಧಿ ಹೊಂದಿದಾಗ ಸಂಭವಿಸುತ್ತವೆ; ಈ ಮನಃಪ್ರವೃತ್ತಿಗಳಿಗೆ ಕಲಿಯು ಪ್ರಧಾನ ಪ್ರೇರಕನು (೪೦). ತಾಮಸಾಹಾರವನ್ನು ಸೇವಿಸುವುದರಿಂದ, ತಾಮಸರ ಸಹವಾಸದಿಂದ, ಮತ್ತು ತಾಮಸ ಸ್ವಭಾವದಿಂದ ತಮೋಗುಣದ ಅಭಿವೃದ್ಧಿಯು

---

1. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಜೀವರದೇಹದಲ್ಲಿರುವ ಅಂತಃಶತ್ರುಗಳು; ಇವು ಸಜ್ಜನರಲ್ಲಿ ಅಥವಾ ದುರ್ವಿಷಯಗಳಲ್ಲಿ ಪ್ರವೃತ್ತಿಸಿದರೆ ಮಹಾ ಅನರ್ಥ ಕಾರಣಗಳಾಗುತ್ತವೆ; ಹೀಗೆ ಅನರ್ಥಕಾರಣವಾಗುವಂತೆ ಪ್ರೇರಿಸುವವರು- ದೈತ್ಯಾಭಿಮಾನಿಗಳು.

**ಪಂಚಚತ್ವಾರಿಂಶದಂಶಾನ್ ಕಲಿಮುಖ್ಯೇಷ್ವಧಾತ್ಸ್ವಯಂ ।**

**ವಿಷ್ಣೋಃ ಪರೋ ನ ಚಾನ್ಯೋಽಸ್ತಿ ಸ್ವತಂತ್ರಃ ಕೋಽಪಿ ಚೇತನಃ ॥ ೩೬ ॥**

ಚತುರ್ಥಂ-(ಉಳಿದ) ೧/೪ನೇ, ಪಾದಂ-ಭಾಗದ, ಸ್ವಾತಂತ್ರ್ಯಂ-ಸ್ವಾತಂತ್ರ್ಯವನ್ನು, ಶತಧಾ-ನೂರು ಭಾಗಗಳನ್ನಾಗಿ, ವಿಭಜ್ಯ-ಭಾಗಿಸಿ, ದಶಭಾಗಕಾನ್-(ಆ ನೂರರಲ್ಲಿ) ೧೦ ಭಾಗಗಳನ್ನು ಜೀವೇ-ಜೀವನಲ್ಲಿ ಆಧಾಯ-ಇಟ್ಟು, ತತಃ-ನಂತರ, ವಿಂಶತಿಭಾಗಕಾನ್-೨೦ ಭಾಗಗಳನ್ನು ಅಹಂಕಾರಾತ್ಮಕೇ-ಅಹಂಕಾರ ತತ್ತ್ವದ ಅಭಿಮಾನಿಯಾದ, ರುದ್ರೇ-ರುದ್ರನಲ್ಲಿಯೂ, ತಥಾ-ಹಾಗೂ, ಬುದ್ಧೌ ಚ-ಬುದ್ಧಿತತ್ತ್ವದ ಅಭಿಮಾನಿಯಾದ ಪಾರ್ವತಿಯಲ್ಲಿ ಸಹ, ನಿಧಾಯ-ಇಟ್ಟು, ತತಃ-ನಂತರ, ಮನೋದೇವೇ-ಮನೋಭಿಮಾನಿಯಾದ, ಶಕ್ರೇ-ಇಂದ್ರನಲ್ಲಿ ಪಂಚದಶಭಾಗಾನ್ ಏವ-೧೫ ಭಾಗಗಳನ್ನೇ, ಚ-ಮತ್ತು ತತ್ತ್ವದೇವೇ-ಅನ್ಯ ತತ್ತ್ವಾಭಿಮಾನಿ ದೇವತೆಗಳ ಸಮೂಹದಲ್ಲಿ ದಶಾಂಶಾನ್-೧೦ ಭಾಗಗಳನ್ನೂ, ತು-ಈ ಪ್ರಕಾರದಿಂದ, ಸ್ವಾತಂತ್ರ್ಯಂ-(ತನ್ನ) ಸ್ವಾತಂತ್ರ್ಯವನ್ನು ಹರಿಃ-ಶ್ರೀಹರಿಯು, ನಿದಧೇ-ಸ್ಥಾಪಿಸಿದನು; ಕಲಿಮುಖ್ಯೇಷು-ಕಲಿ ಮೊದಲಾದ ತತ್ತ್ವಾಭಿಮಾನಿ ದೈತ್ಯರಲ್ಲಿ ಪಂಚಚತ್ವಾರಿಂಶತ್ ಅಂಶಾನ್-೪೫ ಭಾಗಗಳನ್ನು ಸ್ವಯಂ-ಶ್ರೀಹರಿಯು, ಅಧಾತ್-ಸ್ಥಾಪಿಸಿದನು; ವಿಷ್ಣೋಃ-ಶ್ರೀವಿಷ್ಣುವಿನಿಂದ, ಪರಃ-ಭಿನ್ನನಾದ, ಕೋಽಪಿ-ಯಾವನೊಬ್ಬ, ಅನ್ಯಃ-ಮತ್ತೊಬ್ಬ, ಚೇತನಃ-ಚೇತನನು, ಸ್ವತಂತ್ರಃ-ಸ್ವತಂತ್ರನು, ನ ಅಸ್ತಿ-ಇಲ್ಲವು.

**ಸ ಏವಾಹಂ ತದುತ್ಕರ್ಷ ಜ್ಞಾಪಕಂ ತತ್ಪ್ರಮಾಣಕಂ ।**

**ತಸ್ಯ ನಿಂದಾ ತದೀಯಸ್ಯ ಭಕ್ತಸ್ಯಾಪಿ ವಿನಿಂದನಂ ॥ ೩೭ ॥**

**ಶಂಕಚಕ್ರಾದಿತಲ್ಲಿಂಗಧಾರಿಣಾಂ ದ್ವೇಷಣಂ ತಥಾ ।**

**ಏವಮಾದಿರ್ಹರೇರ್ದ್ವೇಷಸ್ತತ್ಕಾರೀ ದೈತ್ಯ ಉಚ್ಯತೇ ॥ ೩೮ ॥**

ತತ್ತ್ವಾಭಿಮಾನಿ ದೈತ್ಯಲಕ್ಷಣಗಳನ್ನು ನಿರೂಪಿಸುತ್ತಾರೆ :—

---

ಕ್ರಮಾನುಸಾರವಾಗಿ), ಶ್ರೀಹರಿಯು, ಸ್ವೇಚ್ಛೆಯಿಂದಲೇ ಸ್ಥಾಪಿಸಿದನು; ಶ್ರೀವಿಷ್ಣು ಭಿನ್ನ ಯಾವ ಚೇತನನೂ ಸ್ವತಂತ್ರನಲ್ಲ—ಶ್ರೀವಿಷ್ಣುವೇ ಏಕೈಕ ಸ್ವತಂತ್ರ ಚೇತನನು(೩೩-೩೬).

ಆ ವಿಷ್ಣುವೇ (ಸ್ವತಂತ್ರನು) ನಾನೆಂಬುದೂ, ಆತನ ಸ್ವಾತಂತ್ರ್ಯಾದಿ ಗುಣೋತ್ಕರ್ಷವನ್ನೂ, ಅದನ್ನು ಪ್ರತಿಪಾದಿಸುವ ವೇದಾದಿ ಪ್ರಮಾಣಗಳನ್ನೂ ನಿಂದಿಸುವುದೂ, ವಿಷ್ಣುಭಕ್ತರನ್ನು ನಿಂದಿಸುವುದೂ, ಶಂಖಚಕ್ರಾದಿ ವಿಷ್ಣುಲಾಂಛನಗಳನ್ನು ಧರಿಸುವವರನ್ನು ದ್ವೇಷಿಸುವುದೂ, ಈ ಮೊದಲಾದವುಗಳು ಶ್ರೀಹರಿಯ ದ್ವೇಷಗಳು—ಈ ವಿಧ ದ್ವೇಷಮಾಡುವ ಸ್ವಭಾವವುಳ್ಳವನು ದೈತ್ಯನು(೩೭-೩೮). ದೈತ್ಯರಲ್ಲಿ ಕಲಿಯೇ ಪ್ರಧಾನನು—ಅತ್ಯಂತ ನೀಚನು; ದೈತ್ಯಗಣಕ್ಕೆ ಸೇರಿದ ಅನ್ಯರು,

**ಪಂಚಚತ್ವಾರಿಂಶದಂಶಾನ್ ಕಲಿಮುಖ್ಯೇಷ್ವದಾತ್ ಸ್ವಯಂ ।**
**ವಿಷ್ಣೋಃ ಪರೋ ನ ಚಾನ್ಯೋಽಸ್ತಿ ಸ್ವತಂತ್ರಃ ಕೋಽಪಿ ಚೇತನಃ ॥ ೩೬ ॥**

ಚತುರ್ಥಂ-(ಉಳಿದ) ೧/೪ನೇ, ಪಾದಂ-ಭಾಗದ, ಸ್ವಾತಂತ್ರ್ಯಂ-ಸ್ವಾತಂತ್ರ್ಯವನ್ನು ಶತಧಾ-ನೂರು ಭಾಗಗಳನ್ನಾಗಿ, ವಿಭಜ್ಯ-ಭಾಗಿಸಿ, ದಶಭಾಗಕಾನ್-(ಆ ನೂರರಲ್ಲಿ) ೧೦ ಭಾಗಗಳನ್ನು ಜೀವೇ-ಜೀವನಲ್ಲಿ ಆಧಾಯ-ಇಟ್ಟು ತತಃ-ನಂತರ, ವಿಂಶತಿಭಾಗಕಾನ್-೨೦ ಭಾಗಗಳನ್ನು ಅಹಂಕಾರಾತ್ಮಕೇ-ಅಹಂಕಾರ ತತ್ತ್ವದ ಅಭಿಮಾನಿಯಾದ, ರುದ್ರೇ-ರುದ್ರನಲ್ಲಿಯೂ, ತಥಾ-ಹಾಗೂ, ಬುದ್ಧೌ ಚ-ಬುದ್ಧಿತತ್ತ್ವದ ಅಭಿಮಾನಿಯಾದ ಪಾರ್ವತಿಯಲ್ಲಿ ಸಹ, ನಿಧಾಯ-ಇಟ್ಟು ತತಃ-ನಂತರ, ಮನೋದೇವೇ-ಮನೋಭಿಮಾನಿಯಾದ, ಶಕ್ರೇ-ಇಂದ್ರನಲ್ಲಿ ಪಂಚದಶಭಾಗಾನ್ ಏವ-೧೫ ಭಾಗಗಳನ್ನೇ, ಚ-ಮತ್ತು ತತ್ತ್ವದೇವೇ-ಅನ್ಯ ತತ್ತ್ವಾಭಿಮಾನಿ ದೇವತೆಗಳ ಸಮೂಹದಲ್ಲಿ ದಶಾಂಶಾನ್-೧೦ ಭಾಗಗಳನ್ನೂ ತು-ಈ ಪ್ರಕಾರದಿಂದ, ಸ್ವಾತಂತ್ರ್ಯಂ-(ತನ್ನ) ಸ್ವಾತಂತ್ರ್ಯವನ್ನು ಹರಿಃ-ಶ್ರೀಹರಿಯು, ನಿದಧೇ-ಸ್ಥಾಪಿಸಿದನು; ಕಲಿಮುಖ್ಯೇಷು-ಕಲಿ ಮೊದಲಾದ ತತ್ತ್ವಾಭಿಮಾನಿ ದೈತ್ಯರಲ್ಲಿ ಪಂಚಚತ್ವಾರಿಂಶತ್ ಅಂಶಾನ್-೪೫ ಭಾಗಗಳನ್ನು ಸ್ವಯಂ-ಶ್ರೀಹರಿಯು, ಅಧಾತ್-ಸ್ಥಾಪಿಸಿದನು; ವಿಷ್ಣೋಃ-ಶ್ರೀವಿಷ್ಣುವಿನಿಂದ, ಪರಃ-ಭಿನ್ನನಾದ, ಕೋಽಪಿ-ಯಾವನೊಬ್ಬ, ಅನ್ಯಃ-ಮತ್ತೊಬ್ಬ, ಚೇತನಃ-ಚೇತನನು, ಸ್ವತಂತ್ರಃ-ಸ್ವತಂತ್ರನು, ನ ಅಸ್ತಿ-ಇಲ್ಲವು.

**ಸ ಏವಾಹಂ ತದುತ್ಕರ್ಷ ಜ್ಞಾಪಕಂ ತತ್ಪ್ರಮಾಣಕಂ ।**
**ತಸ್ಯ ನಿಂದಾ ತದೀಯಸ್ಯ ಭಕ್ತಸ್ಯಾಪಿ ವಿನಿಂದನಂ ॥ ೩೭ ॥**
**ಶಂಖಚಕ್ರಾದಿತಲ್ಲಿಂಗಧಾರಿಣಾಂ ದ್ವೇಷಣಂ ತಥಾ ।**
**ಏವಮಾದಿರ್ಹರೇರ್ದ್ವೇಷಸ್ತತ್ಕಾರೀ ದೈತ್ಯ ಉಚ್ಯತೇ ॥ ೩೮ ॥**

ತತ್ತ್ವಾಭಿಮಾನಿ ದೈತ್ಯಲಕ್ಷಣಗಳನ್ನು ನಿರೂಪಿಸುತ್ತಾರೆ :—

---

ಕ್ರಮಾನುಸಾರವಾಗಿ), ಶ್ರೀಹರಿಯು, ಸ್ವೇಚ್ಛೆಯಿಂದಲೇ ಸ್ಥಾಪಿಸಿದನು; ಶ್ರೀವಿಷ್ಣು ಭಿನ್ನ ಯಾವ ಚೇತನನೂ ಸ್ವತಂತ್ರನಲ್ಲ—ಶ್ರೀವಿಷ್ಣುವೇ ಏಕೈಕ ಸ್ವತಂತ್ರ ಚೇತನನು(೩೩-೩೬).

ಆ ವಿಷ್ಣುವೇ (ಸ್ವತಂತ್ರನು) ನಾನೆಂಬುದೂ, ಆತನ ಸ್ವಾತಂತ್ರ್ಯಾದಿ ಗುಣೋತ್ಕರ್ಷವನ್ನೂ, ಅದನ್ನು ಪ್ರತಿಪಾದಿಸುವ ವೇದಾದಿ ಪ್ರಮಾಣಗಳನ್ನೂ ನಿಂದಿಸುವುದೂ, ವಿಷ್ಣುಭಕ್ತರನ್ನು ನಿಂದಿಸುವುದೂ, ಶಂಖಚಕ್ರಾದಿ ವಿಷ್ಣುಲಾಂಛನಗಳನ್ನು ಧರಿಸುವವರನ್ನು ದ್ವೇಷಿಸುವುದೂ, ಈ ಮೊದಲಾದವುಗಳು ಶ್ರೀಹರಿಯ ದ್ವೇಷಗಳು—ಈ ವಿಧ ದ್ವೇಷಮಾಡುವ ಸ್ವಭಾವವುಳ್ಳವನು ದೈತ್ಯನು(೩೭-೩೮). ದೈತ್ಯರಲ್ಲಿ ಕಲಿಯೇ ಪ್ರಧಾನನು—ಅತ್ಯಂತ ನೀಚನು; ದೈತ್ಯಗಣಕ್ಕೆ ಸೇರಿದ ಅನ್ಯರು,

ಅಹಂ- ನಾನು(ಜೀವನು), ಸಃ ಏವ- ಆ ಶ್ರೀವಿಷ್ಣುವೇ (ಎಂದು ತಿಳಿಯುವುದು); ತದುತ್ಕರ್ಷಜ್ಞಾಪಕಂ- ಆತನ ಉತ್ಕರ್ಷವನ್ನು (ಸರ್ವೋತ್ತಮತ್ವವನ್ನು ಅಥವಾ ಗುಣಪೂರ್ಣತ್ವವನ್ನು) ತಿಳಿಸುವ, ತತ್ಪ್ರಮಾಣಕಂ- ಪ್ರಮಾಣಗಳನ್ನು (ವೇದಾದಿಗಳನ್ನು), ವಿನಿಂದನಂ- ನಿಂದಿಸುವುದು, ತಸ್ಯ- ಆ ಮಹಾವಿಷ್ಣುವಿನ, ನಿಂದಾ- ನಿಂದೆಯು; ತದೀಯಸ್ಯ- ಅವನ ಭೃತ್ಯನಾದ (ವೈಷ್ಣವನಾದ), ಭಕ್ತಸ್ಯ- ಭಕ್ತನ, ವಿನಿಂದನಂ- ನಿಂದಿಸುವುದು; ತಥಾ- ಹಾಗೂ, ಶಂಕಚಕ್ರಾದಿತಲ್ಲಿಂಗ ಧಾರಿಣಾಂ- ಶಂಖ, ಚಕ್ರ ಮೊದಲಾದ ವಿಷ್ಣುಚಿಹ್ನೆಗಳನ್ನು ಧರಿಸುವವರ, ದ್ವೇಷಣಂ- ದ್ವೇಷಮಾಡುವುದು; ಏವಮಾದಿ- ಇವೇ ಮೊದಲಾದವು, ಹರೇಃ- ಶ್ರೀಹರಿಯ, ದ್ವೇಷಃ- ದ್ವೇಷವು (ಎನಿಸುತ್ತದೆ); ತತ್ಕಾರೀ- ದ್ವೇಷಮಾಡುವವನು, ದೈತ್ಯಃ- ದೈತ್ಯನು, (ಎಂದು), ಉಚ್ಯತೇ- ಹೇಳಲ್ಪಡುತ್ತಾನೆ.

**ದೈತ್ಯೇಷ್ವಪಿ ಕಲಿರ್ಮುಖ್ಯಸ್ತತೋಽನ್ಯೇ ತದ್ಗಣಾಃ ಪರೇ ।**
**ಕಾಮಕ್ರೋಧಾದಿಕಾನ್ ದೋಷಾನಾಕ್ರಮ್ಯಾತ್ರ ಸಮಾಸತೇ ॥ ೩೯ ॥**

ದೈತ್ಯೇಷು ಅಪಿ- ದೈತ್ಯರಲ್ಲಿಯೂ, ಕಲಿಃ- ಕಲಿಯು, ಮುಖ್ಯಃ- ಪ್ರಧಾನನು (ಅತ್ಯಂತ ನೀಚನು); ತತಃ- ಅವನಿಂದ, ಅನ್ಯೇ- ಭಿನ್ನರಾದ, ತದ್ಗಣಾಃ- ಅವನ ಗುಂಪಿಗೆ (ದೈತ್ಯಗಣಕ್ಕೆ) ಸೇರಿದ ದೈತ್ಯರು, ಪರೇ- ಇತರರು, ಕಾಮಕ್ರೋಧಾದಿ ಕಾನ್- ಕಾಮಕ್ರೋಧಾದಿ, ದೋಷಾನ್- ದೋಷಗಳನ್ನು[1], ಆಕ್ರಮ್ಯ- ಆಕ್ರಮಿಸಿ, ಅತ್ರ- ಇಲ್ಲಿ, ಸಮಾಸತೇ- (ದುಷ್ಪ್ರೇರಣೆ ಮಾಡುತ್ತ) ಇರುವರು.

**ದಂಭೋ ಮಾನೋ ಮದೋ ಹಿಂಸಾ ಪಾರುಷ್ಯಂ ಕಪಟಾನೃತೇ ।**
**ಜಾಯಂತೇ ತಮಸೋ ವೃದ್ಧೇ ಕಲಿಸ್ತತ್ರಾಧಿದೇವತಾ ॥ ೪೦ ॥**

ದಂಭಃ- ದಂಭವು (ಇಲ್ಲದ ಗುಣಪ್ರದರ್ಶನ), ಮಾನಃ- ದುರಭಿಮಾನ, ಮದಃ- ಮದ, ಹಿಂಸಾ- ಪರಪೀಡನೆ, ಪಾರುಷ್ಯಂ- ನಿಷ್ಠುರವರ್ತನೆ, ಕಪಟಾನೃತೇ-

---

ಕಾಮಕ್ರೋಧಾದಿ ಮನೋಭಾವಗಳನ್ನು ಆಕ್ರಮಿಸಿ, ಆ ದೋಷಗಳ ನಿಯಾಮಕರೂ ಪ್ರೇರಕರೂ ಆಗಿರುತ್ತಾರೆ (೩೯). ದಂಭ, ಅಭಿಮಾನ, ಮದ, ಹಿಂಸೆ, ನಿಷ್ಠುರತೆ, ಕಪಟತ್ವ, ಸುಳ್ಳು, (ಇವು) ಈ ಭಾವನೆಗಳು (ದುರ್ಗುಣಗಳು) ತಮೋಗುಣವು ಅಭಿವೃದ್ಧಿ ಹೊಂದಿದಾಗ ಸಂಭವಿಸುತ್ತವೆ; ಈ ಮನಃಪ್ರವೃತ್ತಿಗಳಿಗೆ ಕಲಿಯು ಪ್ರಧಾನ ಪ್ರೇರಕನು (೪೦). ತಾಮಸಾಹಾರವನ್ನು ಸೇವಿಸುವುದರಿಂದ, ತಾಮಸರ ಸಹವಾಸದಿಂದ, ಮತ್ತು ತಾಮಸ ಸ್ವಭಾವದಿಂದ ತಮೋಗುಣದ ಅಭಿವೃದ್ಧಿಯು

---

1. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ಜೀವದೇಹದಲ್ಲಿರುವ ಅಂತಃಶತ್ರುಗಳು; ಇವು ಸಜ್ಜನರಲ್ಲಿ ಅಥವಾ ದುರ್ವಿಷಯಗಳಲ್ಲಿ ಪ್ರವೃತ್ತಿಸಿದರೆ ಮಹಾ ಅನರ್ಥ ಕಾರಣಗಳಾಗುತ್ತವೆ; ಹೀಗೆ ಅನರ್ಥಕಾರಣವಾಗುವಂತೆ ಪ್ರೇರಿಸುವವರು- ದೈತ್ಯಾಭಿಮಾನಿಗಳು.

ವಂಚಕತನ ಮತ್ತು ಸುಳ್ಳು, (ಇವುಗಳು), ತಮಸಃ-ತಮೋಗುಣದ, ವೃದ್ಧೇ-ಆಧಿಕ್ಯವಿದ್ದಾಗ, (ತಮೋಗುಣಕಾರ್ಯವು ವೃದ್ಧಿಹೊಂದಿದಾಗ), ಜಾಯಂತೇ-ಉಂಟಾಗುತ್ತವೆ (ಸಂಭವಿಸುತ್ತವೆ); ತತ್ರ-ಇವುಗಳನ್ನು ಪ್ರೇರಿಸುವುದರಲ್ಲಿ ಕಲಿಃ-ಕಲಿಯು, ಅಧಿದೇವತಾ-ಅಧಿದೇವತೆಯು (ಪ್ರಧಾನಪ್ರೇರಕನು).

**ತಾಮಸಾನ್ನಸ್ಯ ಭೋಗೇನ ತಾಮಸಾನಾಂ ಚ ಸಂಗತೇಃ ।**
**ತಾಮಸೇನ ಸ್ವಭಾವೇನ ತಮೋವೃದ್ಧಿಃ ಪ್ರಜಾಯತೇ ॥ ೪೧ ॥**

ತಮೋವೃದ್ಧಿಯ ನಿಮಿತ್ತಗಳನ್ನು ವಿವರಿಸುತ್ತಾರೆ :—

ತಾಮಸಾನ್ನಭೋಗೇನ-ತಾಮಸಾಹಾರಸೇವನೆಯಿಂದ (ನಿಷಿದ್ಧವಸ್ತುಗಳ ಭೋಗದಿಂದ), ತಾಮಸಾನಾಂ-ತಮೋಯೋಗ್ಯರಾದ (ತಾಮಸ) ಜೀವರ, ಸಂಗತೇಃ-ಸಹವಾಸದಿಂದ, ಮತ್ತು ತಾಮಸೇನ ಸ್ವಭಾವೇನ-ತಾಮಸಸ್ವಭಾವದಿಂದ, ತಮೋವೃದ್ಧಿಃ-ತಮೋ (ಗುಣದ) ವೃದ್ಧಿಯು (ಆಧಿಕ್ಯವು), ಪ್ರಜಾಯತೇ-ಉಂಟಾಗುತ್ತದೆ.[1]

**ಏವಂ ಸಾತ್ತ್ವಿಕಯೋಗೇನ ಸತ್ತ್ವವೃದ್ಧಿಃ ಪ್ರಜಾಯತೇ ।**
**ತದಾ ದ್ವೇಷಿಪ್ರತೀಪತ್ವಂ ಭಕ್ತಿಶ್ಚಾಪಿ ಹರೌ ಭವೇತ್ ॥ ೪೨ ॥**

ಸತ್ತ್ವವೃದ್ಧಿಯ ನಿಮಿತ್ತಗಳನ್ನೂ ನಿರೂಪಿಸುತ್ತಾರೆ:—

ಏವಂ-ಇದೇ ರೀತಿಯಲ್ಲಿ ಸಾತ್ತ್ವಿಕಯೋಗೇನ-ಸಾತ್ತ್ವಿಕಸಹವಾಸದಿಂದ (ಸಾತ್ತ್ವಿಕ ಆಹಾರ-ಸಾತ್ತ್ವಿಕ ಸ್ವಭಾವಗಳಿಂದ), ಸತ್ತ್ವವೃದ್ಧಿಃ-ಸತ್ತ್ವಗುಣದ ವೃದ್ಧಿಯು, ಪ್ರಜಾಯತೇ-ಉಂಟಾಗುತ್ತದೆ; ತದಾ-ಆಗ (ಸತ್ತ್ವವೃದ್ಧಿಯಾದಾಗ), ಹರೌ- ಶ್ರೀಹರಿಯಲ್ಲಿ ಭಕ್ತಿಃ-ಭಕ್ತಿಯೂ, ಅಪಿ-ಮತ್ತು (ಅದರೊಡನೆಯೇ), ದ್ವೇಷಿಪ್ರತೀಪತ್ವಂ-ಹರಿದ್ವೇಷಿಗಳ ದ್ವೇಷವೂ (ಹರಿಭಕ್ತದ್ವೇಷಿಗಳ ವಿರೋಧವೂ), ಭವೇತ್-ಉಂಟಾಗುತ್ತವೆ.

---

ಸಂಭವಿಸುತ್ತದೆ(೪೧). ಸಾತ್ತ್ವಿಕಾಹಾರಸೇವನೆಯಿಂದ, ಸಾತ್ತ್ವಿಕರ ಸಹವಾಸದಿಂದ ಮತ್ತು ಸಾತ್ತ್ವಿಕ ಸ್ವಭಾವದಿಂದ, ಸತ್ತ್ವಗುಣದ ವೃದ್ಧಿಯುಂಟಾಗುತ್ತದೆ; ಆಗ ಹರಿಭಕ್ತಿಯೂ, ಹರಿದ್ವೇಷಿಗಳ ಮತ್ತು ಹರಿಭಕ್ತದ್ವೇಷಿಗಳ ವಿರೋಧವೂ (ದ್ವೇಷವೂ) ಉಂಟಾಗುತ್ತವೆ (೪೨).

ಮತ್ತು ವೈರಾಗ್ಯ, ಕ್ಷಮೆ, ಸತ್ಯ, ಮೃದುತ್ವ, ದಯೆ ಮೊದಲಾದ ಯಾವ ಸದ್ಗುಣಗಳಿಂದ ಶ್ರೀಪತಿಯಾದ ಮಹಾವಿಷ್ಣುವು ಪೂರ್ಣವಾಗಿ ಪ್ರಸನ್ನನಾಗುವನೋ, ಅವು ಉಂಟಾಗುತ್ತವೆ (೪೩). ಹೀಗೆ ಪೂರ್ಣ ಅಸ್ವತಂತ್ರನಾದ ಜೀವನು, ಸ್ವಾತಂತ್ರ್ಯದ

1. 'ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ । ಶ್ರದ್ಧಾಮಯೋಽಯಂ ಪುರುಷಃ ಯೋ ಯಚ್ಛ್ರದ್ಧಃ ಸ ಏವ ಸಃ ॥' (ಗೀತಾ)—ದೇಹಿಗಳ ಶ್ರದ್ಧೆಯು ಸಾತ್ತ್ವಿಕ, ರಾಜಸ, ತಾಮಸವೆಂದು

ವೈರಾಗ್ಯಂ ಚ ಕ್ಷಮಾ ಸತ್ಯಮಾನೃಶಂಸ್ಯಂ ದಯಾದಯಃ ।
ಜಾಯಂತೇ ಹಿ ಗುಣಾಃ ಸಮ್ಯಕ್ ಶ್ರೀಪತಿರ್ಯೈಃ ಪ್ರಸೀದತಿ ॥ ೪೩ ॥

ಸತ್ತ್ವವೃದ್ಧಿಯಿಂದ ಉಂಟಾಗುವ ಸದ್ಭಾವನೆ (ಸದ್ಗುಣ)ಗಳನ್ನು ನಿರೂಪಿಸುತ್ತಾರೆ:—

ವೈರಾಗ್ಯಂ-ವೈರಾಗ್ಯವೂ, ಚ-ಮತ್ತು, ಕ್ಷಮಾ-ಕ್ಷಮೆ, ಸತ್ಯಂ-ಸತ್ಯ, ಆನೃಶಂಸ್ಯಂ-ಮೃದುತ್ವ (ನಿಷ್ಠುರರಾಹಿತ್ಯ), ದಯಾದಯಃ-ದಯೆ ಮೊದಲಾದ, ಗುಣಾಃ-ಸದ್ಗುಣಗಳು, ಜಾಯಂತೇ-ಉಂಟಾಗುತ್ತವೆ; ಯೈಃ-ಆ (ಯಾವ) ಸದ್ಗುಣಗಳಿಂದ, ಶ್ರೀಪತಿಃ-ಲಕ್ಷ್ಮೀಪತಿಯಾದ ಶ್ರೀವಿಷ್ಣುವು, ಸಮ್ಯಕ್-ಪೂರ್ಣವಾಗಿ, ಪ್ರಸೀದತಿ-ಪ್ರಸನ್ನನಾಗುತ್ತಾನೆ.

ಸ್ವಾತಂತ್ರ್ಯ ಲೇಶದಾನೇನ ಜೀವನ್ ಶ್ವಸತಿ ಜೃಂಭತೇ ।
ಭುಂಕ್ತೇ ಗಿಲತಿ ಪಾನಾದಿ ಕರೋತ್ಯಪಿ ಚ ಗಚ್ಛತಿ ॥ ೪೪ ॥
ಹಿನಸ್ತಿ ಪಾತಿ ಚ ಬ್ರೂತೇ ತಿಷ್ಠತ್ಯುಪವಿಶತ್ಯಪಿ ।
ಅಹಂಕಾರಸಮಾವಿಷ್ಟಃ ಸರ್ವಕರ್ತೇತಿ ಮನ್ಯತೇ ॥ ೪೫ ॥
ಅಜ್ಞಾನೇನ ವಿಮೂಢಾತ್ಮಾ ನ ಜಾನಾತಿ ಪರಾತ್ಮತಾಂ ।
ವಿಧೀನಾಂ ಚ ನಿಷೇಧಾನಾಂ ಪಾತ್ರಂ ತಸ್ಮಾದಯಂ ಸ್ಮೃತಃ ॥ ೪೬ ॥

---

ಅಲ್ಪಾಂಶ ದಾನದಿಂದಲೇ ಜೀವಿಸಿ ಉಸಿರಾಡುತ್ತಾನೆ; ಆಕಳಿಸುತ್ತಾನೆ-ತಿನ್ನುತ್ತಾನೆ-ನುಂಗುತ್ತಾನೆ-ಕುಡಿಯುತ್ತಾನೆ; ಈ ಮುಂತಾದುದನ್ನು ಮಾಡುತ್ತಾನೆ; ನಿಲ್ಲುತ್ತಾನೆ-ಕೂಡುತ್ತಾನೆ-ತಿರುಗಾಡುತ್ತಾನೆ (ಓಡ್ಯಾಡುತ್ತಾನೆ-ಸಂಚರಿಸುತ್ತಾನೆ); ಮಾತನಾಡುತ್ತಾನೆ; ಹಿಂಸಿಸುತ್ತಾನೆ-ರಕ್ಷಿಸುತ್ತಾನೆ; ಹೀಗಿದ್ದರೂ (ಶ್ರೀಹರಿದತ್ತ ಸ್ವಾತಂತ್ರ್ಯಲೇಶದಿಂದಲೇ ಎಲ್ಲವೂ ಸಂಭವಿಸುತ್ತಿದ್ದರೂ) ಅಹಂಕಾರಯುಕ್ತನಾಗಿ, ತಾನೇ ಸ್ವತಂತ್ರಕರ್ತನೆಂದು ತಿಳಿಯುತ್ತಾನೆ; ಅಜ್ಞಾನದಿಂದ ಮೋಹಿತವಾದ ಬುದ್ಧಿಯುಳ್ಳವನಾಗಿ, ತನ್ನ ಪರಾಧೀನತೆಯನ್ನು ತಿಳಿಯುವುದಿಲ್ಲ; ಹೀಗೆ ಪರಾಧೀನನಾದ್ದರಿಂದಲೇ (ಪರಾಧೀನಕರ್ತೃತ್ವವುಳ್ಳವನಾಗಿದ್ದು ಸ್ವತಂತ್ರನಲ್ಲದಿದ್ದರೂ ಸ್ವತಂತ್ರನೆಂದು ತಿಳಿಯುವುದರಿಂದಲೇ), ಅಜ್ಞಾ

---

ತ್ರಿವಿಧವಾಗಿರುವುದು; ಶ್ರದ್ಧೆಯು ಜೀವಸ್ವರೂಪಾನುರೂಪವಾಗಿರುತ್ತದೆ; ಜೀವನಾದರೂ ಶ್ರದ್ಧಾಸ್ವರೂಪವೇ ಆಗಿದ್ದಾನೆ; ಆದ್ದರಿಂದ ಯಾರು ಯಾವ ಶ್ರದ್ಧೆಯುಳ್ಳವನೋ, ಆತನು ಅದೇ ಸ್ವರೂಪವುಳ್ಳವನೆಂದು ತಿಳಿಯತಕ್ಕದ್ದು. 'ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ । ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥' (ಗೀತಾ). ಪಾಕಮಾಡಿದ ಮೇಲೆ ಒಂದು ಯಾಮ ಗತಿಸಿದ ಪದಾರ್ಥವು, ಮೊದಲು ಸ್ವಾದುರಸವುಳ್ಳದ್ದಾಗಿದ್ದು ನಂತರ ಭಿನ್ನರಸವುಳ್ಳದ್ದಾಗುವ ವಸ್ತು, ದುರ್ಗಂಧವುಳ್ಳದ್ದು, ದಿನ ಕಳೆದ ಪಕ್ವವಸ್ತು (ತಂಗಳು), ಎಂಜಲು (ಅನ್ಯರು ಉಂಡುಬಿಟ್ಟದ್ದು), ಅಪವಿತ್ರವಾದುದು, ಈ ಎಲ್ಲವೂ ತಾಮಸರಿಗೆ ಪ್ರಿಯವಾದ ಆಹಾರಗಳು.

ಜೀವನ ಪರಾಧೀನಕರ್ತೃತ್ವವನ್ನು ನಿರೂಪಿಸುತ್ತಾರೆ :—

ಸ್ವಾತಂತ್ರ್ಯಲೇಶದಾನೇನ-ಸ್ವಾತಂತ್ರ್ಯದ ಅಲ್ಪಾಂಶದಾನದಿಂದಲೇ, ಜೀವನ-(ಜೀವನು) ಬದುಕಿ (ದೇಹದಲ್ಲಿ ನಿಂತು), ಶ್ವಸಿತಿ-ಉಸಿರಾಡುತ್ತಾನೆ; ಜೃಂಭತೇ-ಆಕಳಿಸುತ್ತಾನೆ; (ಇವೇ ಮೊದಲಾದ ಕೃತಿಗಳು ಜೀವನ ಇಚ್ಛಾ ಪ್ರಯತ್ನಗಳಿಲ್ಲದೇ ನಡೆಯುತ್ತವೆ); ಭುಂಕ್ತೇ-ತಿನ್ನುತ್ತಾನೆ, ಗಿಲತಿ-ನುಂಗುತ್ತಾನೆ, ಪಾನಾದಿ ಕರೋತಿ-ಪಾನಾದಿಗಳನ್ನು ಮಾಡುತ್ತಾನೆ; (ಇತ್ಯಾದಿ ಅಲ್ಪಯತ್ನಸಾಧ್ಯಗಳೆಂದು ತೋರುವ ಕ್ರಿಯೆಗಳು); ಅಪಿ ಚ-ಮತ್ತೂ ಸಹ, (ಯತ್ನಸಾಧ್ಯಗಳೆಂಬ), ಗಚ್ಛತಿ-ಸಂಚಾರ ಮಾಡುತ್ತಾನೆ; ಹಿನಸ್ತಿ-(ಅನ್ಯರನ್ನು) ಹಿಂಸಿಸುತ್ತಾನೆ; ಪಾತಿ-ರಕ್ಷಿಸುತ್ತಾನೆ; ಬ್ರೂತೇ-ಮಾತನಾಡುತ್ತಾನೆ; (ಇವುಗಳನ್ನೂ ಮಾಡುತ್ತಾನೆ); ತಿಷ್ಠತಿ-ನಿಲ್ಲುತ್ತಾನೆ; ಉಪವಿಶತಿ-ಕೂಡುತ್ತಾನೆ; (ಈ ಮೊದಲಾದ ಯತ್ನ ಹಾಗೂ ಅಲ್ಪಯತ್ನಸಾಧ್ಯಗಳೂ, ಅನಿಚ್ಛೆಯಿಂದಲೇ ನಡೆಯುವುವೂ ಆದ ಕಾರ್ಯಗಳನ್ನು), ಅಹಂಕಾರಸಮಾವಿಷ್ಟಃ- ಅಹಂಕಾರ ಪ್ರವೇಶದಿಂದ (ಇಲ್ಲದ ಸ್ವಾತಂತ್ರ್ಯವನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದರಿಂದ), ಸರ್ವಕರ್ತಾ-ಎಲ್ಲವನ್ನೂ ತಾನೇ ಮಾಡುವವನು, ಇತಿ ಮನ್ಯತೇ-ಎಂದು ತಿಳಿಯುತ್ತಾನೆ; ಅಜ್ಞಾನೇನ-ಅಜ್ಞಾನದಿಂದ, ವಿಮೂಢಾತ್ಮಾ-ಮೋಹಿತವಾದ ಬುದ್ಧಿಯುಳ್ಳವನಾಗಿ, ಪರಾತ್ಮತಾಂ-(ತನ್ನ) ಪರಾಧೀನತೆಯನ್ನು ನ ಜಾನಾತಿ-ತಿಳಿಯುವುದಿಲ್ಲ (ಹೀಗೆ ಮೋಹಿತನಾದುದರಿಂದಲೇ), ತಸ್ಮಾತ್-ಪರಾಧೀನಕರ್ತನಾದ್ದರಿಂದಲೇ, ಅಯಂ-ಜೀವನು, ವಿಧೀನಾಂ-ವಿಧಿಗಳಿಗೆ, ಚ-ಮತ್ತು ನಿಷೇಧಾನಾಂ-ನಿಷೇಧಗಳಿಗೆ, ಪಾತ್ರಂ-ಪಾತ್ರನೆಂದು (ವಿಧಿನಿಷೇಧಗಳ ಫಲಗಳಿಗೆ ಪಾತ್ರನೆಂದು), ಸ್ಮೃತಃ-ತಿಳಿಯಲ್ಪಟ್ಟಿರುವನು (ಜ್ಞಾನಿಗಳಿಂದ ನಿರ್ಣಯಿಸಲ್ಪಟ್ಟಿರುವನು).

**ಪುಣ್ಯಂ ಕರ್ಮಾಥವಾ ಪಾಪಂ ಯಜ್ಜೀವೋ ವಿದಧಾತ್ಯಯಂ ।**
**ಸ್ವಾತಂತ್ರ್ಯಮನುಸೃತ್ಯೈವ ತತ್ಫಲೇ ಭಾಗಕಲ್ಪನಂ ॥ ೪೭ ॥**

ವಿಧಿನಿಷೇಧಪಾತ್ರನಾದ ಜೀವನಿಗೆ ಪುಣ್ಯಪಾಪಗಳಲ್ಲಿ ದೊರೆಯುವ ಫಲಭಾಗವನ್ನು ನಿರೂಪಿಸುತ್ತಾರೆ :—

ಪುಣ್ಯಂ ಕರ್ಮ-ಪುಣ್ಯಕರ್ಮವನ್ನಾಗಲಿ, ಅಥವಾ ಪಾಪಂ-ಪಾಪವನ್ನಾಗಲಿ, ಯತ್-ಯಾವುದನ್ನು ಅಯಂ-ಈ, ಜೀವಃ-ಜೀವನು, ವಿದಧಾತಿ-ಮಾಡುತ್ತಾನೆಯೋ, ತತ್ಫಲೇ-ಅದರ ಫಲದಲ್ಲಿ-ಸ್ವಾತಂತ್ರ್ಯಂ-(ಅವನಲ್ಲಿ ಸ್ಥಾಪಿತವಾದ-ದತ್ತವಾದ)

---

ಜೀವನು, ವಿಧಿನಿಷೇಧಗಳಿಗೆ ಪಾತ್ರನೆಂದು ಹೇಳಲ್ಪಡುತ್ತಾನೆ—ಮತ್ತು ವಿಧಿನಿಷೇಧಗಳ ಫಲಗಳಿಗೆ ಭಾಗಿಯೆಂದು ಹೇಳಲ್ಪಟ್ಟಿರುವನು (೪೪-೪೬). ಜೀವನು ಮಾಡುವ, ಪುಣ್ಯವಾಗಲಿ ಪಾಪವಾಗಲಿ, ಯಾವುದೇ ಕರ್ಮಫಲದಲ್ಲಿ ಜೀವನಿಗೆ ಕೊಡಲ್ಪಟ್ಟಿರುವ ಸ್ವಾತಂತ್ರ್ಯಭಾಗವನ್ನು ಅನುಸರಿಸಿಯೇ, ಫಲವನ್ನು ತಿಳಿಯಬೇಕು (೪೭). ಜೀವನಿಂದ

ಸ್ವಾತಂತ್ರ್ಯಾಂಶವನ್ನು ಅನುಸೃತ್ಯ ಏವ-ಅನುಸರಿಸಿಯೇ, ಭಾಗಕಲ್ಪನಂ-ಭಾಗವನ್ನು ತಿಳಿಯಬೇಕು.

ದೈತ್ಯಾನಾಂ ತತ್ರ ನೈವಾಸ್ತಿ ಪುಣ್ಯಕರ್ಮ ವಿಭಾಗಕಃ ।
ಪುಣ್ಯಭಾಗಂ ಹರತ್ಯೇಷಾಂ ಸ್ವಯಮೇವ ಜನಾರ್ದನಃ ॥ ೪೮ ॥
ಬ್ರಹ್ಮಾದಿಕೇಷು ಪುಣ್ಯಸ್ಯ ಯಥಾಭಾಗಂ ಭವೇತ್ ಫಲಂ ।
ಪ್ರತ್ಯೇಕಂ ತು ತತೋಽಪ್ಯರ್ಧಂ ಸ್ವಯಂ ಹರತಿ ಕೇಶವಃ ॥ ೪೯ ॥

ತತ್ರ-ಕರ್ಮಫಲಭಾಗದಲ್ಲಿ ದೈತ್ಯಾನಾಂ-ದೈತ್ಯರಿಗೆ (ದೈತ್ಯಾಭಿಮಾನಿಗಳಿಗೆ), ಪುಣ್ಯಕರ್ಮವಿಭಾಗಕಃ-ಪುಣ್ಯಕರ್ಮಫಲದ ಭಾಗವು, ನಾಸ್ತಿ ಏವ-ಇಲ್ಲವೇ ಇಲ್ಲ ಏಷಾಂ-ಈ ದೈತ್ಯರ, ಪುಣ್ಯಭಾಗಂ-(ಅವರಲ್ಲಿ ಸ್ಥಾಪಿತವಾದ ಸ್ವಾತಂತ್ರ್ಯಾಂಶಕ್ಕನು ಗುಣವಾದ) ಪುಣ್ಯಫಲದ ಭಾಗವನ್ನು ಜನಾರ್ದನಃ-ಶ್ರೀಹರಿಯು, ಸ್ವಯಂ ಏವ-ತಾನೇ, ಹರತಿ-ತೆಗೆದುಕೊಳ್ಳುತ್ತಾನೆ; ಬ್ರಹ್ಮಾದಿಕೇಷು-ಬ್ರಹ್ಮಾದಿತತ್ತ್ವಾಭಿಮಾನಿದೇವತೆಗಳಲ್ಲಿ ಪುಣ್ಯಸ್ಯ-ಪುಣ್ಯಕರ್ಮದ, ಯಥಾಭಾಗಂ-ಅವರಲ್ಲಿರುವ ಸ್ವಾತಂತ್ರ್ಯಾಂಶವನ್ನನುಸರಿಸಿದ, ಫಲಂ-ಫಲವು, ಭವೇತ್-ಉಂಟಾಗುತ್ತದೆ (ಬ್ರಹ್ಮಾದಿಗಳಿಗೆ ದೊರೆಯುತ್ತದೆ); ತತಃ ಅಪಿ-(ಬ್ರಹ್ಮಾದಿಗಳಿಗೆ ದೊರೆಯುವ) ಪುಣ್ಯಫಲಭಾಗ

ಸಂಭವಿಸುವ ಪುಣ್ಯ ಕರ್ಮಫಲದಲ್ಲಿ ದೈತ್ಯಾಭಿಮಾನಿಗಳಿಗೆ ಭಾಗವೇನೂ ದೊರೆಯುವುದಿಲ್ಲ[1] ಅವರ (ದೈತ್ಯರ) ಸ್ವಾತಂತ್ರ್ಯಾಂಶಕ್ಕನುಗುಣವಾದ ಫಲವನ್ನೂ ಶ್ರೀಹರಿಯೇ ತೆಗೆದುಕೊಳ್ಳುತ್ತಾನೆ; ಬ್ರಹ್ಮಾದಿ ತಾತ್ತ್ವಿಕದೇವತೆಗಳಲ್ಲಿ ಅವರವರ ಸ್ವಾತಂತ್ರ್ಯಾಂಶದಷ್ಟು ಫಲಭಾಗವು, ಹೋಗಿ ಸೇರುತ್ತದೆ; ಇದರಲ್ಲಿ ಸಹ (ತನ್ನ ಅರ್ಧಭಾಗವಲ್ಲದೇ) ಪ್ರತ್ಯೇಕ ಅರ್ಧಭಾಗದ ಫಲವನ್ನು ಶ್ರೀಹರಿಯೇ ಪಡೆಯುತ್ತಾನೆ (೪೮-೪೯). ಈ ತಾತ್ತ್ವಿಕದೇವತೆಗಳಾದರೂ, ತಮ್ಮಲ್ಲಿ ಶ್ರೀಹರಿಯು ಇಟ್ಟಿರುವಷ್ಟು ಸ್ವಾತಂತ್ರ್ಯಾಂಶಗಳಿಗೆ ಮಾತ್ರ ಸರಿಯಾದ ಪುಣ್ಯಫಲವನ್ನು ಹೊಂದುವುದರೊಂದಿಗೆ, ತಮಗಿಂತ ಅವರರೂ, ಕೆಳತತ್ತ್ವಗಳ ಅಭಿಮಾನಿಗಳೂ ಆದ ದೇವತೆಗಳಲ್ಲಿ ತಾವೂ

1. ಪುಣ್ಯ ಪಾಪಗಳೆಂಬ ಉಭಯಾತ್ಮಕ ಕರ್ಮಪ್ರೇರಕರೂ ತಾತ್ತ್ವಿಕದೇವತೆಗಳೇ, ಪಾಪ ಕರ್ಮದಲ್ಲಿ ಸಹ ದೈತ್ಯಾಭಿಮಾನಿಗಳು, ತಾತ್ತ್ವಿಕದೇವತೆಗಳಂತೆ, ಶ್ರೀಹರಿಯ ವಿಶೇಷಾನುಗ್ರಹಕ್ಕೆ ಪಾತ್ರರಾಗಿ, ಜೀವರಿಂದ ಕಾಲಕಾಲಕ್ಕೆ ಮಾಡಿಸಬೇಕಾದ ಕರ್ಮಗಳಲ್ಲಿ ಪ್ರೇರಿಸುವ ಸರ್ವಜ್ಞತ್ವವನ್ನುಳ್ಳವರಲ್ಲ. ದೇವತೆಗಳೇ ಪಾಪಕರ್ಮಗಳಿಗೂ ಪ್ರೇರಕರಾಗಿದ್ದರೂ, ದೈತ್ಯರಲ್ಲಿರುವ ಸ್ವಾತಂತ್ರ್ಯಾಂಶಪ್ರಮಾಣದ ದುಃಖರೂಪವಾದ ಪಾಪಫಲವು, ಅವರಿಗೆ ಲಭಿಸುವಂತಾಗಲು, ದೇವತೆಗಳು ಅವರ ದ್ವಾರಾ ಪಾಪ ಪ್ರೇರಕರಾಗುತ್ತಾರೆ; ಶ್ರೀಹರಿಯ ಆಜ್ಞಾಪರಿಪಾಲಕರಾದ್ದರಿಂದ ಪುಣ್ಯಪಾಪ ಉಭಯ ಪ್ರೇರಕರಾದರೂ, ದೇವತೆಗಳಿಗೆ ಪಾಪಫಲಲೇಪವಿಲ್ಲ. (ಸತ್ತತ್ತ್ವರತ್ನ ಮಾಲಾ—ಸಂಪುಟ ೧, ಕರ್ಮಯೋಗ್ಯ ಪ್ರಕರಣವನ್ನು ನೋಡಬಹುದು).

ದಿಂದ ಸಹ, ಪ್ರತ್ಯೇಕಂ-ಪ್ರತ್ಯೇಕವಾಗಿ (ಸ್ವಾತಂತ್ರ್ಯದಲ್ಲಿ ಅರ್ಧಭಾಗವನ್ನು ತಾನಿಟ್ಟುಕೊಂಡಿರುವುದರಿಂದ ತನ್ನಲ್ಲಿ ಸೇರುವ ಅರ್ಧಫಲವನ್ನಲ್ಲದೇ, ಬ್ರಹ್ಮಾದಿ ಗಳಲ್ಲಿ ತಾನೇ ನಿಂತು ಅವರಿಂದ ಪ್ರೇರಕವ್ಯಾಪಾರವನ್ನು ಮಾಡಿಸುವುದರಿಂದ, ಪ್ರತ್ಯೇಕವಾಗಿ ಅವರ ಫಲದಲ್ಲಿ ಸಹ), ಅರ್ಧಂ-ಅರ್ಧ ಭಾಗವನ್ನು ಕೇಶವಃ- ಶ್ರೀವಿಷ್ಣುವು, ಸ್ವಯಂ-ತಾನೇ, ಹರತಿ- ತೆಗೆದುಕೊಳ್ಳುತ್ತಾನೆ.

ನೀಚನೀಚೇಷು ದೇವೇಷು ಭವತ್ಯುಚ್ಚಸ್ವತಂತ್ರತಾ ।
ತೇನ ತದ್ದೇಹತತ್ತತ್ವಸ್ವಾತಂತ್ರ್ಯಮಧಿಕಂ ಭವೇತ್ ॥ ೫೦ ॥

ನೀಚನೀಚೇಷು-ಕೆಳಕೆಳಗಿನವರಾದ (ತಾರತಮ್ಯದಲ್ಲಿ ಅವರರಾದ), ದೇವೇಷು-ತಾತ್ವಿಕದೇವತೆಗಳಲ್ಲಿ, ಉಚ್ಚಸ್ವತಂತ್ರತಾ-ಉತ್ತಮರ (ಮೇಲಿನ ತತ್ವಾಭಿಮಾನಿಗಳ) ಸ್ವಾತಂತ್ರ್ಯವೂ, ಭವತಿ-ಇರುತ್ತದೆ (ಕೆಲಸಮಾಡುತ್ತದೆ); ತೇನ-ಆ ಕಾರಣದಿಂದ, ತದ್ದೇಹತತ್ತತ್ವಸ್ವಾತಂತ್ರ್ಯಂ-ಆ ದೇಹಗತ ಆಯಾ ತತ್ವಗಳ ಮೇಲಿನ ಸ್ವಾತಂತ್ರ್ಯವು, ಅಧಿಕಂ-(ಉತ್ತಮರಿಗೆ) ಅಧಿಕವಾಗಿಯೇ, ಭವೇತ್-ಇರುತ್ತದೆ.

ಸ್ವೋಚ್ಚೇ ನೀಚಸ್ಯ ನಾಸ್ತ್ಯೇವ ಸ್ವಾತಂತ್ರ್ಯಂ ತೇನ ಕರ್ಮಣಃ ।
ತತ್ರ ದೈವೀಯ ತತ್ವಸ್ಯ ಫಲಭಾಗುಚ್ಚ ಏವ ಹಿ ॥ ೫೦ ॥

ಸ್ವೋಚ್ಚೇ-ತಮಗಿಂತ ಉತ್ತಮ ದೇವತೆಗಳಲ್ಲಿ, ನೀಚಸ್ಯ-ಅವರ ದೇವತೆಗೆ, , ಸ್ವಾತಂತ್ರ್ಯಂ-(ಉತ್ತಮದೇಹಗತವಾದ ತನ್ನ ಅಧಿಕಾರಕ್ಕೆ ಒಳಪಟ್ಟ ತತ್ವವನ್ನು ನಿಯಮಿಸುವುದರಲ್ಲಿ) ಸ್ವಾತಂತ್ರ್ಯವು, ನಾಸ್ತಿ ಏವ-(ಆ ತತ್ವವು ಉತ್ತಮ ದೇಹದಲ್ಲಿದ್ದು ತಾನು ಅಲ್ಲಿದ್ದರೂ ಸಹ) ಇಲ್ಲವೇ ಇಲ್ಲ; ತೇನ-ಆ ಕಾರಣದಿಂದ, ತತ್ರ-ಅಲ್ಲಿ (ಉತ್ತಮರ ದೇಹದಲ್ಲಿ), ದೈವೀಯತತ್ವಸ್ಯ-(ಯಾವುದೊಂದು) ದೇವಾಭಿಮನ್ಯತತ್ವದ, ಕರ್ಮಣಃ- ಕರ್ಮದ(ಮನ ಆದಿ, ಚಕ್ಷುರಾದಿ ತತ್ವಗಳಿಂದ ಸಂಭವಿಸುವ ಕರ್ಮದ), ಫಲಭಾಕ್- ಫಲಭಾಗಿಯು, ಉಚ್ಚಃ ಏವ-ಉತ್ತಮ ದೇವತೆಯೇ ಸರಿ.

---

ನಿಯಾಮಕರಾಗಿರುವುದರಿಂದ, ಅವರಿಗೆ (ಆ ಕೆಳಗಿನ ದೇವತೆಗಳಿಗೆ) ಬರುವ ಪುಣ್ಯಭಾಗದಲ್ಲಿ ಸಹ ತಮ್ಮ ಭಾಗವನ್ನು ಹೊಂದುತ್ತಾರೆ. ಉತ್ತಮದೇವತೆಗಳ ಸ್ವಾತಂತ್ರ್ಯಾಂಶವು, ಅವರ (ನೀಚ) ತತ್ವಗಳ ನಿಯಾಮಕರೂ ಆಗಿ, ಆ ತತ್ವದೇವತೆಗಳಲ್ಲಿದ್ದು ಕೆಲಸ ಮಾಡುವುದರಿಂದ, ಅಧಿಕವಾಗಿ, ಅಧಿಕ ಫಲಕ್ಕೆ ಭಾಗಿಗಳನ್ನಾಗಿ ಮಾಡುತ್ತದೆ (೫೦). ಅಧಮದೇವತೆಯಿಂದ ಅಭಿಮನ್ಯವಾದ ತತ್ವಗಳು, ಉತ್ತಮ ದೇವತೆಗಳ ದೇಹದಲ್ಲಿಯೂ ಇರುತ್ತವೆ—ಆದರೆ ಅವುಗಳ ಅಭಿಮಾನಿಗಳು, ಅವರ ದೇಹದಲ್ಲಿ ಆಚ್ಛಾಧಾರಕರಾಗಿರುತ್ತಾರಲ್ಲದೇ, ನಿಯಾಮಕರಾಗಿರುವುದಿಲ್ಲ ಆದ್ದರಿಂದ, ಕೆಳತತ್ವಗಳಿಂದಾಗುವ ಕರ್ಮಫಲಕ್ಕೆ, ಉತ್ತಮ ದೇವತೆಯೇ

**ಪ್ರಾಣೇ ಪ್ರಾಣೋ ಹರಿಃ ಸಾಕ್ಷಾತ್ ಬ್ರಹ್ಮಣಿ ದ್ರುಹಿಣೋ ಹರಿಃ ।**
**ತೇನ ತದ್ಭಾಗಭೋಕ್ತಾ ಸ ಹರಿರೇವ ನ ಸಂಶಯಃ ॥ ೫೨ ॥**

ಉಕ್ತನ್ಯಾಯವನ್ನು ವಾಯುಬ್ರಹ್ಮರಲ್ಲಿ ಅತಿದೇಶಮಾಡಿ ನಿರ್ಣಯವನ್ನು ಹೇಳುತ್ತಾರೆ :—

ಪ್ರಾಣೇ-ಮುಖ್ಯಪ್ರಾಣನಲ್ಲಿ (ಆತನ ದೇಹದಲ್ಲಿ), ಸಾಕ್ಷಾತ್-ಸ್ವಯಂ (ತಾನೇ), ಹರಿಃ-ಹರಿಯು, ಪ್ರಾಣಃ-ಸರ್ವಚೇಷ್ಟಕನು, (ಎಲ್ಲ ತತ್ತ್ವದೇವತೆಗಳ ಕಾರ್ಯವನ್ನೂ ತಾನೇ ನಿರ್ವಹಿಸುತ್ತಾನೆ); ಬ್ರಹ್ಮಣಿ-ಬ್ರಹ್ಮದೇವನಲ್ಲಿ (ಆತನ ದೇಹದಲ್ಲಿ), ದ್ರುಹಿಣಃ-ದ್ರುಹಿಣ (ಬ್ರಹ್ಮ)ನಾಮಕ, ಹರಿಃ-ಶ್ರೀಹರಿಯು, (ಪ್ರಾಣಃ-ಸರ್ವಚೇಷ್ಟಕನು); ತೇನ-ಈ ಕಾರಣದಿಂದ, ತದ್ಭಾಗಭೋಕ್ತಾ-ಸಕಲತತ್ತ್ವಾಭಿಮಾನಿಗಳ ಫಲಭಾಗಕ್ಕೆ ಪಾತ್ರನು (ಬ್ರಹ್ಮವಾಯುಗಳ ಸಕಲ ಪುಣ್ಯಕರ್ಮಗಳ ಫಲಭೋಕ್ತನು), ಸಃ-ಆ (ಸರ್ವಪ್ರೇರಕನೂ ಸ್ವತಂತ್ರನೂ ಆದ), ಹರಿಃ ಏವ-ಶ್ರೀಹರಿಯೇ ಸರಿ, ನ ಸಂಶಯಃ-ಸಂಶಯವಿಲ್ಲ.

**ಬ್ರಹ್ಮಣಿ ಪ್ರಾಣಶಕ್ತಿಸ್ತು ಪ್ರಾಣೇಪಿ ಬ್ರಹ್ಮಶಕ್ತಿತಾ ।**
**ಜೀವೇಷ್ವಿವ ಯಥಾಭಾಗಂ ವಿಜ್ಞೇಯಾ ಹರಿಶಾಸನಾತ್ ॥ ೫೩ ॥**

ಬ್ರಹ್ಮಣಿ-ಬ್ರಹ್ಮನ ದೇಹದಲ್ಲಿ, ಪ್ರಾಣಶಕ್ತಿಃ-ಮುಖ್ಯಪ್ರಾಣನ ಶಕ್ತಿಯೂ (ಆತನಲ್ಲಿ ಶ್ರೀಹರಿಯು ಸ್ಥಾಪಿಸಿರುವ ೪೮ ಸ್ವಾತಂತ್ರ್ಯಾಂಶಗಳ ಶಕ್ತಿಯೂ), ಪ್ರಾಣೇ-ಮುಖ್ಯಪ್ರಾಣನ ದೇಹದಲ್ಲಿ, ಬ್ರಹ್ಮಶಕ್ತಿತಾ-ಬ್ರಹ್ಮನ ಶಕ್ತಿಯೂ (ಬ್ರಹ್ಮನಲ್ಲಿಡಲಾದ ೫೦ ಸ್ವಾತಂತ್ರ್ಯಾಂಶಗಳ ಶಕ್ತಿಯೂ), ಜೀವೇಷು ಇವ-ಜೀವರಲ್ಲಿ ಹೇಗೋ ಹಾಗೆ, ಯಥಾಭಾಗಂ-(ಅವರಿಗೆ

---

ಭಾಗಿಯಾಗುತ್ತಾನೆ. (ಉದಾ:—ರುದ್ರದೇವನ ದೇಹದಲ್ಲಿ ಚಕ್ಷುರಾದಿಗಳಲ್ಲಿ ಸೂರ್ಯಾದಿ ತಾತ್ತ್ವಿಕರು ಇದ್ದರೂ, ಅವುಗಳಿಂದಾಗುವ ಕರ್ಮಫಲವನ್ನು ರುದ್ರನಿಗೂ ಉತ್ತಮನಾದ ಬ್ರಹ್ಮದೇವನೇ ಹೊಂದುತ್ತಾನೆ—ಕೆಳಗಿನ ತಾತ್ತ್ವಿಕದೇವತೆಗಳು ರುದ್ರದೇಹದಿಂದ ಸಂಭವಿಸುವ ಕರ್ಮಗಳ ಫಲವನ್ನು ಹೊಂದುವುದಿಲ್ಲ) (೫೧). ಮುಖ್ಯಪ್ರಾಣನ ದೇಹದಲ್ಲಿ ಸರ್ವಪ್ರೇರಕನಾದ ಶ್ರೀಹರಿಯೇ ಸಕಲ ತತ್ತ್ವಪ್ರೇರಕನಾಗಿರುವನು; ಹಾಗೆಯೇ ಬ್ರಹ್ಮದೇವನಲ್ಲಿ ದ್ರುಹಿಣನಾಮಕನಾದ ಸಾಕ್ಷಾತ್ ಶ್ರೀಹರಿಯೇ ಸರ್ವತಾತ್ತ್ವಿಕದೇವತೆಗಳ ನಿಯಮನ ವ್ಯಾಪಾರವನ್ನು ಮಾಡುತ್ತಾನೆ; ಆದ್ದರಿಂದ ತತ್ತ್ವಾಭಿಮಾನಿ ದೇವತೆಗಳಿಗೆ ತಮ್ಮ ಸ್ವಾತಂತ್ರ್ಯಾಂಶಗಳ ಪ್ರಮಾಣದಂತೆ ಸೇರಬೇಕಾದ ಪೂರ್ಣಫಲಕ್ಕೆ ಶ್ರೀಹರಿಯೇ ಭಾಗಿಯಾಗಿದ್ದಾನೆ— ಈ ವಿಷಯದಲ್ಲಿ ಯಾವ ಸಂಶಯಕ್ಕೂ ಅವಕಾಶವಿಲ್ಲ (೫೨). ಸ್ವಾತಂತ್ರ್ಯ ಗುಣಾಂಶದ ೧/೪ ಭಾಗವನ್ನು ೧೦೦ ಅಂಶಗಳನ್ನಾಗಿ ವಿಭಾಗಿಸಿ, ಅದರಲ್ಲಿ ೧೦ ಅಂಶಗಳನ್ನು ಜೀವನಲ್ಲಿಟ್ಟನಷ್ಟೆ; ಅನ್ಯಜೀವರಲ್ಲಿ ಫಲವಿತರಣೆಯಾಗುವಂತೆ (ಜೀವರ ಸ್ವಾತಂತ್ರ್ಯಾಂಶದಷ್ಟು ಭಾಗದ ಫಲ

ಕೊಡಬೇಕಾದ ಸ್ವಾತಂತ್ರ್ಯಾಂಶಗಳನ್ನನುಸರಿಸಿ, ಕರ್ಮಫಲಭಾಗವನ್ನು) ತಮ್ಮ ಸ್ವಾತಂತ್ರ್ಯಾಂಶಕ್ಕನುಗುಣವಾಗಿ, ಹರಿಶಾಸನಾತ್-ಶ್ರೀಹರಿಯ ಆಜ್ಞೆಯಿಂದ, ಏಷ್ಯೇಯಾ- (ಹೊಂದಿಸಲ್ಪಡುತ್ತದೆಂದು) ತಿಳಿಯಬೇಕು.

ಈಶಸ್ವಾತಂತ್ರ್ಯಭಾಗೇಷು ಮಾಯಾಭಾಗಸ್ತೃತೀಯಕಃ ।
ಸಾ ಹಿ ಸರ್ವಜಗನ್ಮಾತಾ ಮೂಲಪ್ರಕೃತಿದೇವತಾ ॥ ೫೪ ॥

ಈಶಸ್ವಾತಂತ್ರ್ಯಭಾಗೇಷು-(ಶ್ರೀಹರಿಯು ತನಗಾಗಿ ಇಟ್ಟುಕೊಂಡನೆಂದು ಈ ಹಿಂದೆ ಹೇಳಿರುವ) ತನ್ನ ಸ್ವಾತಂತ್ರ್ಯದ ಅಂಶಗಳಲ್ಲಿ ಮಾಯಾಭಾಗಃ-ಶ್ರೀ ಲಕ್ಷ್ಮೀದೇವಿಯ ಭಾಗವು, ತೃತೀಯಕಃ-೧/೩ ಭಾಗವಾಗಿರುತ್ತದೆ; (ಶ್ರೀಹರಿಯು ತನ್ನ ಅಪಾರಸ್ವಾತಂತ್ರ್ಯಗುಣದಲ್ಲಿ ಒಂದಂಶವನ್ನು (ಅತ್ಯಲ್ಪಭಾಗವನ್ನು) ಪ್ರತ್ಯೇಕಿಸಿ, ಅದರಲ್ಲಿ ೧/೨ ಭಾಗವನ್ನು ತಾನಿಟ್ಟುಕೊಂಡು, ಉಳಿದ ಅರ್ಧದಲ್ಲಿ ಅರ್ಧವನ್ನು (೧/೪ ಭಾಗವನ್ನು) ೧೦೦ ಭಾಗಗಳನ್ನಾಗಿ ಮಾಡಿ ಬ್ರಹ್ಮವಾಯುಗಳಲ್ಲಿಯೂ, ಉಳಿದ (೧/೪) ಭಾಗವನ್ನು ೧೦೦ ಭಾಗಮಾಡಿ, ತತ್ತ್ವದೇವತೆಗಳಲ್ಲಿಯೂ, ಜೀವರಲ್ಲಿಯೂ, ತತ್ತ್ವದೈತ್ಯರಲ್ಲಿಯೂ ಸ್ಥಾಪಿಸಿದನೆಂದು ಹಿಂದೆ ಹೇಳಿರುವುದರಿಂದ, ಇಲ್ಲಿ ತನ್ನ ಅರ್ಧಭಾಗವನ್ನು ಇತರ ಪಾದಗಳಂತೆ ೨೦೦ ಅಂಶಗಳುಳ್ಳದ್ದೆಂದು ತಿಳಿದರೆ, ರಮಾದೇವಿಯ ಭಾಗವು ಅದರಲ್ಲಿ೧/೩ನೇ ಭಾಗವೆಂದರೆ ೬೬-೨/೩ ಅಥವಾ ೬೭ ಭಾಗಗಳೆಂದು ಪ್ರಾಪ್ತವಾಗುತ್ತದೆ—ಇದರ ವಿಸ್ತಾರವು ಮುಂದೆ ಬರಲಿರುವ ಮತ್ತೊಂದು ಅಧ್ಯಾಯದಲ್ಲಿ ಪ್ರಸಕ್ತವಾಗಲಿದೆ); ಸಾ-ಆ ಶ್ರೀಲಕ್ಷ್ಮೀದೇವಿಯೇ, ಮೂಲಪ್ರಕೃತಿ ದೇವತಾ-ಮೂಲ ಜಡಪ್ರಕೃತಿಯ ನಿಯಾಮಕಳು ಮತ್ತು ಸರ್ವಜಗನ್ಮಾತಾ- ಸಕಲ(ಚೇತನಾಚೇತನಾತ್ಮಕ) ಜಗತ್ತಿನ ತಾಯಿಯು.

---

ಮಾತ್ರ ಜೀವರಿಗೆ ದೊರೆಯುವಂತೆ), ಮುಖ್ಯ ಪ್ರಾಣ (ವಾಯುದೇವ) ಮತ್ತು ಬ್ರಹ್ಮದೇವನು, ತಮ್ಮಲ್ಲಿ ಶ್ರೀಹರಿಯಿಂದ ಸ್ಥಾಪಿತವಾದ ೪೮ ಮತ್ತು ೫೦ ಅಂಶಗಳಷ್ಟು ಫಲಭಾಗಕ್ಕೆ ಮಾತ್ರ ಭಾಗಿಗಳಾಗುತ್ತಾರೆ; ತಮ್ಮ ದೇಹಗಳಿಂದ ನಡೆಯುವ (ಪ್ರಾಣಬ್ರಹ್ಮರ ಪ್ರೇರಣೆಯಿಂದಾಗಬೇಕಾದ) ಕರ್ಮಗಳನ್ನು ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಶ್ರೀಹರಿಯೇ ಅವರಲ್ಲಿದ್ದು ಮಾಡಿಸುವುದರಿಂದ, ವಾಯುಬ್ರಹ್ಮರು ಸಮರಾದ್ದರಿಂದ, ಉಚ್ಚಪ್ರೇರಕನಾದ ಶ್ರೀಹರಿಯೇ ಹೊಂದುತ್ತಾನೆ (೫೩). ಶ್ರೀಹರಿಯು (ಇದೇ ಅಧ್ಯಾಯದ ೩೨ನೇ ಶ್ಲೋಕವನ್ನು ನೋಡಿರಿ) ತನ್ನಲ್ಲಿಟ್ಟುಕೊಂಡ ೧/೨ ಭಾಗದ ಸ್ವಾತಂತ್ರ್ಯದಲ್ಲಿ ೧/೩ನೇ ಭಾಗವು ಶ್ರೀ ಲಕ್ಷ್ಮೀಭಾಗವು; ಆಕೆಯೇ ಮೂಲ ಜಡ ಪ್ರಕೃತಿಯ ಅಭಿಮಾನಿಯು—ನಿಯಾಮಕಳು (ಪ್ರಕೃತಿಶಬ್ದವಾಚ್ಯಳೂ ಆಗಿದ್ದಾಳೆ); ಆಕೆಯೇ ಚೇತನಾಚೇತನ ಸಕಲ ಜಗತ್ತಿನ ತಾಯಿಯು (ಜನನಿಯು— ಹಡೆಯುವವಳು) (೫೪). ಜೀವ ಕೃತ ಪುಣ್ಯಕರ್ಮದ ಫಲವೇ ಸುಖವು;

**ಪುಣ್ಯಕರ್ಮಫಲಂ ಜ್ಞೇಯಂ ಸುಖಂ ತಚ್ಚ ಹರೌ ಭವೇತ್ ।**
**ಕ್ಷೀರಾಬ್ಧೌ ಪತಿತಂ ತೋಯಂ ಯಥಾ ಕ್ಷೀರತ್ವಮಶ್ನುತೇ ॥ ೫೫ ॥**
**ಜೀವಕರ್ಮಸುಖಂ ತದ್ವದ್ಧರಾವಾನಂದತಾಂ ಭಜೇತ್ ।**
**ಸುಖಮೂರ್ತಿರಯಂ ವಿಷ್ಣುರಿತಿ ಶ್ರುತಿಷು ಗೀಯತೇ ॥ ೫೬ ॥**

ಪುಣ್ಯಕರ್ಮಫಲಂ-(ಬ್ರಹ್ಮಾದಿ ಜೀವರು ಆಚರಿಸುವ) ಪುಣ್ಯಕರ್ಮಫಲವನ್ನು ಸುಖಂ-ಸುಖವೆಂದು, ಜ್ಞೇಯಂ-ತಿಳಿಯತಕ್ಕದ್ದು; ತತ್ ಚ-ಆ ಸುಖವಾದರೋ, ಹರೌ-(ಸರ್ವಸುಖಭೋಕ್ತನಾದ) ಶ್ರೀಹರಿಯಲ್ಲಿ ಭವೇತ್-ಆಗುತ್ತದೆ (ಸೇರುತ್ತದೆ); ಕ್ಷೀರಾಬ್ಧೌ-ಕ್ಷೀರಸಮುದ್ರದಲ್ಲಿ ಪತಿತಂ-ಬಿದ್ದ ತೋಯಂ-ಜಲವು, ಯಥಾ-ಹೇಗೆ, ಕ್ಷೀರತ್ವಂ-ಕ್ಷೀರಭಾಗವನ್ನು ಅಶ್ನುತೇ-ಹೊಂದುವುದೋ, ತದ್ವತ್-ಅದರಂತೆ, ಜೀವಕರ್ಮಸುಖಂ-ಜೀವಕರ್ಮಫಲವಾದ ಸುಖವು, ಹರೌ-ಶ್ರೀಹರಿಯಲ್ಲಿ ಆನಂದತಾಂ-ಆನಂದರೂಪವನ್ನೇ, ಭಜೇತ್-ಹೊಂದುತ್ತದೆ; ಅಯಂ-ಈ, ವಿಷ್ಣುಃ-ಶ್ರೀವಿಷ್ಣುವು, ಸುಖಮೂರ್ತಿಃ-ಆನಂದಸ್ವರೂಪನು, ಇತಿ-ಎಂದು, ಶ್ರುತಿಷು-ವೇದಗಳಲ್ಲಿ ಗೀಯತೇ-ಸ್ತುತ್ಯನಾಗಿದ್ದಾನೆ.

**ಪ್ರಿಯಮಸ್ಯ ಶಿರೋ ಮೋದೋ ದಕ್ಷಿಣಃ ಪಕ್ಷ ಉಚ್ಯತೇ ।**
**ಪ್ರಮೋದ ಉತ್ತರಃ ಪಕ್ಷ ಆತ್ಮಾನಂದ ಇತೀರಿತಃ ॥ ೫೭ ॥**

ಅಸ್ಯ-ಈ ನಾರಾಯಣನ, ಶಿರಃ-ಶಿರಸ್ಸು ಪ್ರಿಯಂ-ಪ್ರಿಯನಾಮಕವಾದುದು (ಪ್ರಿಯವೇ-ಮುಕ್ತಪ್ರಾಪ್ಯವಾದ 'ಪ್ರಿಯ'ನಾಮಕ ಸುಖದ ನಿಯಾಮಕವಾದುದರಿಂದ, ಪ್ರಿಯನಾಮಕವು); ದಕ್ಷಿಣಃ ಪಕ್ಷಃ-ಬಲಭುಜವು, ಮೋದಃ-(ವಿಷಯಭೋಗಜನ್ಯ ಸುಖವಿಶೇಷ) ಮೋದನಾಮಕವು; (ಎಂದು ಉಚ್ಯತೇ-ಹೇಳಲ್ಪಡುತ್ತದೆ; ಉತ್ತರಃಪಕ್ಷ-ಎಡಭುಜವು, ಪ್ರಮೋದಃ-(ಪ್ರಕೃಷ್ಟವಿಷಯ ಭೋಗಜನ್ಯ ಸುಖವು) ಪ್ರಮೋದ ನಾಮಕವು; ಆತ್ಮಾ-ಮಧ್ಯದೇಹವು, ಆನಂದಃ-ಆನಂದ

---

ಪುಣ್ಯಕರ್ಮಗಳ ಪ್ರಧಾನ ಫಲಭೋಕ್ತನಾದ ಶ್ರೀಹರಿಯೇ ಅದನ್ನೂ ಭೋಗಿಸುತ್ತಾನೆ; ಕ್ಷೀರಸಮುದ್ರದಲ್ಲಿ ಬಿದ್ದ ಜಲವು, ಕ್ಷೀರತ್ವವನ್ನೇ ಹೊಂದುವಂತೆ, ಜೀವಕರ್ಮಫಲವಾದ ಸುಖವು, ಶ್ರೀಹರಿಯಲ್ಲಿ ಆನಂದರೂಪವೇ ಆಗುತ್ತದೆ;[1] ಶ್ರುತಿಗಳು ಶ್ರೀವಿಷ್ಣುವು ಆನಂದಸ್ವರೂಪನೆಂದು ಹೇಳುತ್ತವೆ (೫೫-೫೬).

ಆನಂದಸ್ವರೂಪನಾದ ಶ್ರೀಹರಿಯ ಶಿರಸ್ಸು ಪ್ರಿಯವೆಂದೂ, ಬಲಭುಜವು

---

1. ಸುಖಸ್ವರೂಪನಾದ ಶ್ರೀಹರಿಯಲ್ಲಿ ಈ ಸುಖಭೋಗವು ಯಾವ ಪ್ರಕಾರದ ವೃದ್ಧಿಯನ್ನೂ ಉಂಟುಮಾಡುವುದಿಲ್ಲ. ಜಲಬಿಂದುವಿನಂತೆ ಅಲ್ಪವೂ, ಶ್ರೀಹರಿ ಸ್ವರೂಪವೆಂಬ ಆನಂದ ಸಮುದ್ರದಿಂದ ವಿಲಕ್ಷಣವೂ ಆದ, ಜೀವಕರ್ಮ ಫಲರೂಪದ ಸುಖವು, ಶ್ರೀಹರಿಯ ಅಚಿಂತ್ಯ ಶಕ್ತಿಯ ಪ್ರಭಾವದಿಂದ, ಆನಂದತ್ವವನ್ನೇ ಹೊಂದುತ್ತದೆ.

ನಾಮಕವು (ಪ್ರಚುರವಾದ ಆನಂದದಲ್ಲಿದ್ದು ತನ್ನಿಯಾಮಕವಾದುದು); ಇತಿ- ಎಂದು, ಈರಿತಃ-(ಶ್ರುತಿಗಳಲ್ಲಿ) ಹೇಳಲಾಗಿದೆ.

**ವಸ್ತುವಿಜ್ಞಾನಜಂ ಸೌಖ್ಯಮಾನಂದ ಇತಿ ಕೀರ್ತಿತಃ ।**
**ಮೋದೋ ವಿಷಯಜಂ ಸೌಖ್ಯಂ ತತ್ರ ಯಸ್ತು ವಿಶೇಷತಃ ॥ ೫೮ ॥**
**ಯಸ್ಮಾದ್ವಿಶೇಷತಃ ಸೌಖ್ಯಂ ಪ್ರಮೋದಃ ಸ ಪ್ರಕೀರ್ತಿತಃ ।**
**ಉಪಕಾರೇ ಕೃತೇ ಯಸ್ಮಾತ್ ಸುಖಂ ತತ್ಪ್ರಿಯಮುಚ್ಯತೇ ॥ ೫೯ ॥**

ಮೋದಾದಿಶಬ್ದಾರ್ಥಗಳನ್ನು ವಿವರಿಸುತ್ತಾರೆ:—

ವಸ್ತುವಿಜ್ಞಾನಜಂ ಸೌಖ್ಯಂ-ವಸ್ತುವನ್ನು ವಿಶೇಷವಾಗಿ ತಿಳಿಯುವುದರಿಂದ

---

ಮೋದವೆಂದೂ, ಎಡಭುಜವು ಪ್ರಮೋದವೆಂದೂ, ಮಧ್ಯದೇಹವು (ಆತ್ಮಾ), ಆನಂದವೆಂದೂ, ಹೇಳಲ್ಪಡುತ್ತವೆ[1] (೫೭). ಯಾವುದೊಂದು ಆನಂದವು ಪದಾರ್ಥವಿಜ್ಞಾನದಿಂದ ಉಂಟಾಗುವುದೋ, ಅದೇ ಆನಂದವೆಂದು ಕರೆಯಲ್ಪಡು

1. 'ಸ ವಾ ಏಷ ಪುರುಷ ವಿಧ ಏವ । ತಸ್ಯ ಪುರುಷ ವಿಧತಾಂ । ಅನ್ವಯಂ ಪುರುಷ ವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ॥'—ಎಂಬ ತೈತ್ತಿರಿಯೋಪನಿಷತ್ತಿನ ದ್ವಿತೀಯವಲ್ಲಿಯಲ್ಲಿ ಆನಂದಮಯ ಕೋಶದಲ್ಲಿರುವ ನಾರಾಯಣ ರೂಪವನ್ನು ವರ್ಣಿಸಲಾಗಿದೆ; ಅದನ್ನೇ ಸಂಗ್ರಹಿಸಿ ಈ ಶ್ಲೋಕವು ನಿರೂಪಿಸುತ್ತದೆ. ಉಪನಿಷದ್ವಾಕ್ಯದ ಅರ್ಥವೇನೆಂದರೆ:—ಸ ವಾ ಏಷ ಪುರುಷ ವಿಧ—ಈ ಆನಂದಮಯ ಕೋಶದಲ್ಲಿರುವ ನಾರಾಯಣನು ಪುರುಷಾಕಾರನೇ ಆಗಿದ್ದಾನೆ; ತಸ್ಯ—ಈ ನಾರಾಯಣನ, ಪುರುಷ ವಿಧತಾಂ ಅನು—ಪುರುಷಾಕಾರವನ್ನನುಸರಿಸಿ, ಅಯಂ—(ವಿಜ್ಞಾನ ಮಯ ಕೋಶದಲ್ಲಿದ್ದ) ಈ ವಾಸುದೇವನು, ಪುರುಷವಿಧಃ— ಪುರುಷಾಕಾರನು; ತಸ್ಯ—ಆ ನಾರಾಯಣನ, ಶಿರಃ—ಶಿರಸ್ಸು ಪ್ರಿಯಂ ಏವ—ಪ್ರಿಯನಾಮಕವಾದುದೇ; ದಕ್ಷಿಣಃ ಪಕ್ಷ— ಬಲಭುಜವು, ಮೋದಃ—ಮೋದನಾಮಕವು; ಉತ್ತರಃ ಪಕ್ಷ—ಎಡಭುಜವು, ಪ್ರಮೋದಃ— ಪ್ರಮೋದನಾಮಕವು; ಆತ್ಮಾ—ಮಧ್ಯದೇಹವು, ಆನಂದಃ—ಆನಂದನಾಮಕವು; ಪುಚ್ಛಂ-ಪುಚ್ಛ ವೆನಿಸುವ, ಪ್ರತಿಷ್ಠಾ—ಪಾದವು, ಬ್ರಹ್ಮ—ಬ್ರಹ್ಮನಾಮಕವು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂದು ಐದು ಮನುಷ್ಯದೇಹಗತ ಕೋಶಗಳು; ಅವುಗಳಲ್ಲಿ ಆಯಾ ಹೆಸರುಳ್ಳ, ಶ್ರೀ ನಾರಾಯಣನ, ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ, ವಾಸುದೇವ, ನಾರಾಯಣಗಳೆಂಬ ರೂಪಗಳಿವೆ. ಈ ಎಲ್ಲ ರೂಪಗಳು ಒಂದರಿಂದ ಒಂದು (ಪರಸ್ಪರ) ಅಭಿನ್ನಗಳೇ ಆದರೂ, ವಿಜ್ಞಾನಮಯ ಕೋಶದಲ್ಲಿರುವ ವಾಸುದೇವನಿಂದ ಭಿನ್ನವಾದ ರೂಪದಿಂದ, ವಾಸುದೇವಾಂತರ್ಗತನಾಗಿ ನಾರಾಯಣನಿರುವನು. 'ವಿಜ್ಞಾನಮಯಾತ್ ಅನ್ಯೋಽಂತರ ಆತ್ಮಾನಂದಮಯಃ'—ಎಂಬಲ್ಲಿ ಇದೇ ಉಪನಿಷತ್ತಿನ ವಾಕ್ಯವು ಈ ಪ್ರಮೇಯವನ್ನು ಹೇಳಿದೆ—ಪ್ರಿಯ, ಮೋದ, ಪ್ರಮೋದ, ಆನಂದಾದಿ ಶಬ್ದಗಳು, ಸುಖ ಪ್ರಭೇದಗಳನ್ನು ನಿರೂಪಿಸುತ್ತವೆ; ಭಕ್ತರಿಗೆ ಜ್ಞಾನಾನಂದಾದಿಗಳನ್ನು ಸ್ವಯೋಗ್ಯಪೂರ್ಣಗಳನ್ನಾಗಿ

ದೊರೆಯುವ ಸುಖವು, ಆನಂದಃ- ಆನಂದವು, ಇತಿ ಕೀರ್ತಿತಃ- ಎಂದು ಹೇಳಲ್ಪಡುತ್ತದೆ; ವಿಷಯಜಂ- ವಿಷಯಭೋಗದಿಂದ ಉಂಟಾಗುವ, ಸೌಖ್ಯಂ- ಸುಖಾನುಭವವು, ಮೋದಃ- ಮೋದವೆಂದೂ, ತತ್ರ- ಅದರಲ್ಲಿಯೂ (ವಿಷಯ ಭೋಗದಲ್ಲಿಯೂ), ವಿಶೇಷತಃ- ವಿಶೇಷವಿಷಯದಿಂದ (ಪ್ರಕೃಷ್ಟವಿಷಯಗಳಿಂದ), ಯಸ್ತು- ಯಾವ ಭೋಗವೋ, ವಿಶೇಷತಃ- ಅಧಿಕವಾದ, ಯತ್ಸೌಖ್ಯಂ- ಯಾವ ಸುಖವು, ಸ್ಯಾತ್- ಉಂಟಾಗುವುದೋ, ಸಃ- ಅದು (ಆ ಸುಖವಿಶೇಷವು), ಪ್ರಮೋದಃ- ಪ್ರಮೋದವೆಂದೂ, ಪ್ರಕೀರ್ತಿತಃ- ಹೇಳಲ್ಪಡುತ್ತದೆ; ಉಪಕಾರೇ- (ಪರರಿಗೆ) ಉಪಕಾರವು, ಕೃತೇ (ಸತಿ)- ಮಾಡಲ್ಪಡುತ್ತಿರಲು, ಯತ್ಸುಖಂ- ಯಾವ ಸುಖವು, ಸ್ಯಾತ್- ಆಗುತ್ತದೆಯೋ, ತತ್- ಅದು, ಪ್ರಿಯಂ- ಪ್ರಿಯವೆಂದು, ಉಚ್ಯತೇ- ಹೇಳಲ್ಪಡುತ್ತದೆ.

ಭೂಮಿಸ್ಥಿತಂ ಜಲಂ ನೇತುಮಬ್ಧಿಂ ಪ್ರತಿ ನ ಯತ್ನತೇ ।
ಸ್ವಭಾವೇನ ಗತೇ ತಸ್ಮಿನ್ ಸಮುದ್ರೋ ನೈವ ವರ್ಧತೇ ॥ ೬೦ ॥
ನ್ಯೂನತಾ ತದಭಾವೇ ಚ ತದ್ವದ್ವಿಷ್ಣೋಃ ಸುಖಸ್ಯ ಚ ।
ಸ್ವಾನಂದಾನಂತಪೂರ್ಣಾಬ್ಧೇಃ ಸ್ವಭಾವಾದಾಗತೇ ಸುಖೇ ॥ ೬೧ ॥
ನಾಧಿಕ್ಯಂ ತದಭಾವಾದ್ವಾ ಸುಖನ್ಯೂನತ್ವಮಿಷ್ಯತೇ ।

---

ತ್ಪರ್ಯ—ವಿಶ್ವಗತ ಸರ್ವವಸ್ತು ವಿಷಯಕವಾದ ಅಶೇಷ ವಿಶೇಷಜ್ಞಾನವುಳ್ಳ ಸರ್ವಜ್ಞನಾದ ಶ್ರೀಹರಿಯೇ ಮುಖ್ಯವಾಗಿ ಆನಂದವುಳ್ಳವನು; ವಿಷಯಭೋಗಜನ್ಯ ಸುಖವು ಮೋದವೆನಿಸುತ್ತದೆ; ಉತ್ತಮ ವಿಷಯಗಳ ಭೋಗದಿಂದ ಉಂಟಾಗುವ ಅಧಿಕ ಸುಖವು ಪ್ರಮೋದವು; ಪರರಿಗೆ ಉಪಕಾರ ಮಾಡುವುದರಿಂದ ಲಭಿಸುವ ಆನಂದವು ಪ್ರಿಯವೆನಿಸುತ್ತದೆ (ಮುಕ್ತರಿಗೆ ಅತಿ ಪ್ರಿಯವಾದ ಸುಖವಿಶೇಷಗಳನ್ನು ಲೀಲೆಯಿಂದ ದೊರಕಿಸುವುದರಿಂದಲೂ, ಮುಕ್ತರ ಸುಖವಿಶೇಷಕ್ಕೆ ನಿಯಾಮಕನಾದ್ದರಿಂದಲೂ, ನಾರಾಯಣನ ಶಿರಸ್ಸು ಪ್ರಿಯನಾಮಕವು; ದೇವಾದಿ ಉತ್ತಮ ಮುಕ್ತರಿಂದ, ಪ್ರಾಪ್ಯಗಳಾದ ಸಕಲ ಪ್ರಿಯವಸ್ತುಗಳಲ್ಲಿ ಸಹ ನಾರಾಯಣನಿರುವುದರಿಂದ, ಆತನು ಪ್ರಿಯನಾಮಕನು) (೫೮-೫೯). ಶ್ರೀಹರಿಯು ಆನಂದಸಮುದ್ರನು (ಆನಂದಸ್ವರೂಪನೇ ಆದ ಆತನೂ ಅಪಾರವ್ಯಾಪ್ತಿಯುಳ್ಳವನು): ಭೂಭಾಗದ ಜಲವನ್ನು ಸಮುದ್ರಕ್ಕೆ ಒಯ್ಯಲು ಯಾರೂ ಯತ್ನಿಸುವುದಿಲ್ಲ— ಸ್ವಭಾವದಿಂದಲೇ ಎಲ್ಲ ಜಲವೂ ಸಮುದ್ರವನ್ನೇ ಸೇರುತ್ತದೆ;

---

ಮಾಡುವುದರಿಂದ, ಶ್ರೀನಾರಾಯಣನ ಪಾದವು, ಬ್ರಹ್ಮಶಬ್ದವಾಚ್ಯವಾದುದು. ಶ್ರೀಹರಿಯ ರೂಪಗಳಲ್ಲಿ ಪರಸ್ಪರ ಯಾವ ಭೇದವೂ ವಿಶೇಷವೂ ಇಲ್ಲದಿದ್ದರೂ, ಒಂದು ರೂಪದಿಂದ ದೇಹದಂತೆಯೂ ಒಂದು ರೂಪದಿಂದ ದೇಹಿಯಂತೆಯೂ ತೋರಿಸಿಕೊಳ್ಳುತ್ತಾ ಅನ್ನಮಯಾದಿ ಐದು ರೂಪಗಳಿಂದ ಇರುತ್ತಾನೆ.

ನಾಮಕವು (ಪ್ರಚುರವಾದ ಆನಂದದಲ್ಲಿದ್ದು ತನ್ನಿಯಾಮಕವಾದುದು); ಇತಿ- ಎಂದು, ಈರಿತಃ-(ಶ್ರುತಿಗಳಲ್ಲಿ) ಹೇಳಲಾಗಿದೆ.

ವಸ್ತುವಿಜ್ಞಾನಜಂ ಸೌಖ್ಯಮಾನಂದ ಇತಿ ಕೀರ್ತಿತಃ ।
ಮೋದೋ ವಿಷಯಜಂ ಸೌಖ್ಯಂ ತತ್ರ ಯಸ್ತು ವಿಶೇಷತಃ ॥ ೫೮ ॥
ಯಸ್ತ್ವದ್ವಿಶೇಷತಃ ಸೌಖ್ಯಂ ಪ್ರಮೋದಃ ಸ ಪ್ರಕೀರ್ತಿತಃ ।
ಉಪಕಾರೇ ಕೃತೇ ಯಸ್ಮಾತ್ ಸುಖಂ ತತ್ಪ್ರಿಯಮುಚ್ಯತೇ ॥ ೫೯ ॥

ಮೋದಾದಿಶಬ್ದಾರ್ಥಗಳನ್ನು ವಿವರಿಸುತ್ತಾರೆ:—

ವಸ್ತುವಿಜ್ಞಾನಜಂ ಸೌಖ್ಯಂ-ವಸ್ತುವನ್ನು ವಿಶೇಷವಾಗಿ ತಿಳಿಯುವುದರಿಂದ

---

ಮೋದವೆಂದೂ, ಎಡಭುಜವು ಪ್ರಮೋದವೆಂದೂ, ಮಧ್ಯದೇಹವು (ಆತ್ಮಾ), ಆನಂದವೆಂದೂ, ಹೇಳಲ್ಪಡುತ್ತವೆ[1] (೫೭). ಯಾವುದೊಂದು ಆನಂದವು ಪದಾರ್ಥವಿಜ್ಞಾನದಿಂದ ಉಂಟಾಗುವುದೋ, ಅದೇ ಆನಂದವೆಂದು ಕರೆಯಲ್ಪಡು

---

1. 'ಸ ವಾ ಏಷ ಪುರುಷ ವಿಧ ಏವ । ತಸ್ಯ ಪುರುಷ ವಿಧತಾಂ । ಅನ್ವಯಂ ಪುರುಷ ವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ॥'—ಎಂಬ ತೈತ್ತಿರೀಯೋಪನಿಷತ್ತಿನ ದ್ವಿತೀಯವಲ್ಲಿಯಲ್ಲಿ ಆನಂದಮಯ ಕೋಶದಲ್ಲಿರುವ ನಾರಾಯಣ ರೂಪವನ್ನು ವರ್ಣಿಸಲಾಗಿದೆ; ಅದನ್ನೇ ಸಂಗ್ರಹಿಸಿ ಈ ಶ್ಲೋಕವು ನಿರೂಪಿಸುತ್ತದೆ. ಉಪನಿಷದ್ವಾಕ್ಯದ ಅರ್ಥವೇನೆಂದರೆ:—ಸ ವಾ ಏಷ ಪುರುಷ ವಿಧಃ—ಆ ಆನಂದಮಯ ಕೋಶದಲ್ಲಿರುವ ನಾರಾಯಣನು ಪುರುಷಾಕಾರನೇ ಆಗಿದ್ದಾನೆ; ತಸ್ಯ—ಆ ನಾರಾಯಣನ, ಪುರುಷ ವಿಧತಾಂ ಅನು—ಪುರುಷಾಕಾರವನ್ನನುಸರಿಸಿ, ಅಯಂ—(ವಿಜ್ಞಾನಮಯ ಕೋಶದಲ್ಲಿದ್ದ) ಈ ವಾಸುದೇವನು, ಪುರುಷವಿಧಃ— ಪುರುಷಾಕಾರನು; ತಸ್ಯ—ಆ ನಾರಾಯಣನ, ಶಿರಃ—ಶಿರಸ್ಸು ಪ್ರಿಯಂ ಏವ—ಪ್ರಿಯನಾಮಕವಾದುದೇ; ದಕ್ಷಿಣಃ ಪಕ್ಷಃ—ಬಲಭುಜವು, ಮೋದಃ—ಮೋದನಾಮಕವು; ಉತ್ತರಃ ಪಕ್ಷಃ—ಎಡಭುಜವು, ಪ್ರಮೋದಃ—ಪ್ರಮೋದನಾಮಕವು; ಆತ್ಮಾ—ಮಧ್ಯದೇಹವು, ಆನಂದಃ—ಆನಂದನಾಮಕವು; ಪುಚ್ಛಂ-ಪುಚ್ಛವೆನಿಸುವ, ಪ್ರತಿಷ್ಠಾ—ಪಾದವು, ಬ್ರಹ್ಮ—ಬ್ರಹ್ಮನಾಮಕವು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂದು ಐದು ಮನುಷ್ಯದೇಹಗತ ಕೋಶಗಳು; ಅವುಗಳಲ್ಲಿ ಆಯಾ ಹೆಸರುಳ್ಳ, ಶ್ರೀ ನಾರಾಯಣನ, ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ, ವಾಸುದೇವ, ನಾರಾಯಣಗಳೆಂಬ ರೂಪಗಳಿವೆ. ಈ ಎಲ್ಲ ರೂಪಗಳು ಒಂದರಿಂದ ಒಂದು (ಪರಸ್ಪರ) ಅಭಿನ್ನಗಳೇ ಆದರೂ, ವಿಜ್ಞಾನಮಯ ಕೋಶದಲ್ಲಿರುವ ವಾಸುದೇವನಿಂದ ಭಿನ್ನವಾದ ರೂಪದಿಂದ, ವಾಸುದೇವಾಂತರ್ಗತನಾಗಿ ನಾರಾಯಣನಿರುವನು. 'ವಿಜ್ಞಾನಮಯಾತ್ ಅನ್ಯೋಽಂತರ ಆತ್ಮಾನಂದಮಯಃ'—ಎಂಬಲ್ಲಿ ಇದೇ ಉಪನಿಷತ್ತಿನ ವಾಕ್ಯವು ಈ ಪ್ರಮೇಯವನ್ನು ಹೇಳಿದೆ—ಪ್ರಿಯ, ಮೋದ, ಪ್ರಮೋದ, ಆನಂದಾದಿ ಶಬ್ದಗಳು, ಸುಖ ಪ್ರಭೇದಗಳನ್ನು ನಿರೂಪಿಸುತ್ತವೆ; ಭಕ್ತರಿಗೆ ಜ್ಞಾನಾನಂದಾದಿಗಳನ್ನು ಸ್ವಯೋಗ್ಯಪೂರ್ಣಗಳನ್ನಾಗಿ

ದೊರೆಯುವ ಸುಖವು, ಆನಂದಃ- ಆನಂದವು, ಇತಿ ಕೀರ್ತಿತಃ- ಎಂದು ಹೇಳಲ್ಪಡುತ್ತದೆ; ವಿಷಯಜಂ- ವಿಷಯಭೋಗದಿಂದ ಉಂಟಾಗುವ, ಸೌಖ್ಯಂ- ಸುಖಾನುಭವವು, ಮೋದಃ- ಮೋದವೆಂದೂ, ತತ್ರ- ಅದರಲ್ಲಿಯೂ (ವಿಷಯ ಭೋಗದಲ್ಲಿಯೂ), ವಿಶೇಷತಃ- ವಿಶೇಷವಿಷಯದಿಂದ (ಪ್ರಕೃಷ್ಟವಿಷಯಗಳಿಂದ), ಯಸ್ತು- ಯಾವ ಭೋಗವೋ, ವಿಶೇಷತಃ- ಅಧಿಕವಾದ, ಯತ್ಸೌಖ್ಯಂ- ಯಾವ ಸುಖವು, ಸ್ಯಾತ್- ಉಂಟಾಗುವುದೋ, ಸಃ- ಅದು (ಆ ಸುಖವಿಶೇಷವು), ಪ್ರಮೋದಃ- ಪ್ರಮೋದವೆಂದೂ, ಪ್ರಕೀರ್ತಿತಃ- ಹೇಳಲ್ಪಡುತ್ತದೆ; ಉಪಕಾರೇ- (ಪರರಿಗೆ) ಉಪಕಾರವು, ಕೃತೇ (ಸತಿ)- ಮಾಡಲ್ಪಡುತ್ತಿರಲು, ಯತ್ಸುಖಂ- ಯಾವ ಸುಖವು, ಸ್ಯಾತ್- ಆಗುತ್ತದೆಯೋ, ತತ್- ಅದು, ಪ್ರಿಯಂ- ಪ್ರಿಯವೆಂದು, ಉಚ್ಯತೇ- ಹೇಳಲ್ಪಡುತ್ತದೆ.

ಭೂಮಿಸ್ಥಿತಂ ಜಲಂ ನೇತುಮಬ್ಧಿಂ ಪ್ರತಿ ನ ಯತ್ನತೇ ।
ಸ್ವಭಾವೇನ ಗತೇ ತಸ್ಮಿನ್ ಸಮುದ್ರೋ ನೈವ ವರ್ಧತೇ ॥ ೬೦ ॥
ನ್ಯೂನತಾ ತದಭಾವೇ ಚ ತದ್ವದ್ವಿಷ್ಣೋಃ ಸುಖಸ್ಯ ಚ ।
ಸ್ವಾನಂದಾನಂತಪೂರ್ಣಾಬ್ಧೇಃ ಸ್ವಭಾವಾದಾಗತೇ ಸುಖೇ ॥ ೬೧ ॥
ನಾಧಿಕ್ಯಂ ತದಭಾವಾದ್ವಾ ಸುಖನ್ಯೂನತ್ವಮಿಷ್ಯತೇ ।

---

ತ್ತದೆ—ವಿಶ್ವಗತ ಸರ್ವವಸ್ತು ವಿಷಯಕವಾದ ಅಶೇಷ ವಿಶೇಷಜ್ಞಾನವುಳ್ಳ ಸರ್ವಜ್ಞನಾದ ಶ್ರೀಹರಿಯೇ ಮುಖ್ಯವಾಗಿ ಆನಂದವುಳ್ಳವನು; ವಿಷಯಭೋಗಜನ್ಯ ಸುಖವು ಮೋದವೆನಿಸುತ್ತದೆ; ಉತ್ತಮ ವಿಷಯಗಳ ಭೋಗದಿಂದ ಉಂಟಾಗುವ ಅಧಿಕ ಸುಖವು ಪ್ರಮೋದವು; ಪರರಿಗೆ ಉಪಕಾರ ಮಾಡುವುದರಿಂದ ಲಭಿಸುವ ಆನಂದವು ಪ್ರಿಯವೆನಿಸುತ್ತದೆ (ಮುಕ್ತರಿಗೆ ಅತಿ ಪ್ರಿಯವಾದ ಸುಖವಿಶೇಷಗಳನ್ನು ಲೀಲೆಯಿಂದ ದೊರಕಿಸುವುದರಿಂದಲೂ, ಮುಕ್ತರ ಸುಖವಿಶೇಷಕ್ಕೆ ನಿಯಾಮಕನಾದ್ದರಿಂದಲೂ, ನಾರಾಯಣನ ಶಿರಸ್ಸು ಪ್ರಿಯನಾಮಕವು; ದೇವಾದಿ ಉತ್ತಮ ಮುಕ್ತರಿಂದ, ಪ್ರಾಪ್ಯಗಳಾದ ಸಕಲ ಪ್ರಿಯವಸ್ತುಗಳಲ್ಲಿ ಸಹ ನಾರಾಯಣನಿರುವುದರಿಂದ, ಆತನು ಪ್ರಿಯನಾಮಕನು) (೫೮-೫೯). ಶ್ರೀಹರಿಯು ಆನಂದಸಮುದ್ರನು (ಆನಂದಸ್ವರೂಪನೇ ಆದ ಆತನೂ ಅಪಾರವ್ಯಾಪ್ತಿಯುಳ್ಳವನು); ಭೂಭಾಗದ ಜಲವನ್ನು ಸಮುದ್ರಕ್ಕೆ ಒಯ್ಯಲು ಯಾರೂ ಯತ್ನಿಸುವುದಿಲ್ಲ— ಸ್ವಭಾವದಿಂದಲೇ ಎಲ್ಲ ಜಲವೂ ಸಮುದ್ರವನ್ನೇ ಸೇರುತ್ತದೆ;

---

ಮಾಡುವುದರಿಂದ, ಶ್ರೀನಾರಾಯಣನ ಪಾದವು, ಬ್ರಹ್ಮಶಬ್ದವಾಚ್ಯವಾದುದು. ಶ್ರೀಹರಿಯ ರೂಪಗಳಲ್ಲಿ ಪರಸ್ಪರ ಯಾವ ಭೇದವೂ ವಿಶೇಷವೂ ಇಲ್ಲದಿದ್ದರೂ, ಒಂದು ರೂಪದಿಂದ ದೇಹದಂತೆಯೂ ಒಂದು ರೂಪದಿಂದ ದೇಹಿಯಂತೆಯೂ ತೋರಿಸಿಕೊಳ್ಳುತ್ತಾ ಅನ್ನಮಯಾದಿ ಐದು ರೂಪಗಳಿಂದ ಇರುತ್ತಾನೆ.

ಶ್ರೀಹರಿಯ ಆನಂದಪೂರ್ಣತ್ವವನ್ನು ಸಮುದ್ರದೃಷ್ಟಾಂತದಿಂದ ವಿಶದ ಗೊಳಿಸುತ್ತಾರೆ :—

ಭೂಮಿಸ್ಥಿತಂ-ಭೂಮಿಯಲ್ಲಿರುವ (ಭೂಭಾಗದಲ್ಲಿರುವ), ಜಲಂ-ನೀರನ್ನು ಅಬ್ಧಿಂ ಪ್ರತಿ-ಸಮುದ್ರದ ಕಡೆಗೆ, ನೇತುಂ-ತೆಗೆದೊಯ್ಯಲು, ನ ಯತ್ನತೇ-(ಯಾರಿಂದಲೂ) ಯಾವ ಯತ್ನವೂ ಮಾಡಲಡುವುದಿಲ್ಲ ತಸ್ಮಿನ್-ಆ ಜಲವು, ಸ್ವಭಾವೇನ-ಸ್ವಭಾವಸಿದ್ಧವಾದ ತನ್ನ ಗತಿಯಿಂದ, ಗತೇ(ಸತಿ)-(ಸಮುದ್ರವನ್ನು) ಸೇರುತ್ತಿರಲು (ಸೇರಿದರೆ), ಸಮುದ್ರಃ-ಸಮುದ್ರವು, ನ ವರ್ಧತೇ ಏವ-ವೃದ್ಧಿಯನ್ನು ಹೊಂದುವುದೇ ಇಲ್ಲ; ತದಭಾವೇ-ಅದಿಲ್ಲದಿದ್ದರೆ (ಜಲವು ಬಂದು ಸೇರದಿದ್ದರೆ), ನ್ಯೂನತಾ ಚ-ಕೊರತೆಯೂ(ಹ್ರಾಸವೂ), (ನೈವ-ಇಲ್ಲವಷ್ಟೆ); ತದ್ವತ್-ಅದರಂತೆ, ಸ್ವಾನಂದಾನಂತಪೂರ್ಣಾಬ್ಧೇಃ-ಸ್ವಾನಂದವೆಂಬ ಅನಂತಸುಖದಿಂದ ಪೂರ್ಣವಾದ ಸಮುದ್ರದಂತಿರುವ, ವಿಷ್ಣೋಃ-ಶ್ರೀವಿಷ್ಣುವಿನ, ಸುಖಸ್ಯ-ಸುಖಕ್ಕೆ, ಸುಖೇ-ಸುಖವು (ಸುಖವೆಂಬ ಜಲವು), ಸ್ವಭಾವಾತ್-ಸಹಜವಾಗಿಯೇ (ಸರ್ವಭೋಕ್ತನಾದ್ದರಿಂದ ಸ್ವಾಭಾವಿಕವಾಗಿ), ಆಗತೇ (ಸತಿ)-ಬಂದು ಸೇರಿದರೆ, (ಸುಖಸ್ಯ-ಆತನ ಸುಖವೆಂಬ ಸಮುದ್ರಕ್ಕೆ, ಆಧಿಕ್ಯಂ ನ-ವೃದ್ಧಿಯೂ ಇಲ್ಲ, ತದಭಾವಾತ್-ಅದಿಲ್ಲದಿದ್ದರೆ, ಸುಖನ್ಯೂನತ್ವಂ ವಾ-ಸುಖದ ಕೊರತೆ (ಹ್ರಾಸ) ಆಗಲಿ, (ನ) ಇಷ್ಯತೇ-ಇಲ್ಲವೆಂದು ಹೇಳಲಾಗುತ್ತದೆ.

ದೇಹವೃಕ್ಷೇ ಸಮಾಸೀನೌ ಸಖಾಯೌ ಪಕ್ಷಿಣೌ ಚಿರಂ || ೬೨ ||
ತಯೋರ್ಮಧ್ಯೇ ತು ಯೋ ಜ್ಯಾಯಾಂಸ್ತಸ್ಯ ಸ್ವಾದ್ವೇವ ಪಿಪ್ಪಲಂ |
ಇತಿ ಪ್ರಾಹ ಶ್ರುತಿಃ ಸಾಕ್ಷಾತ್ ಸಾರಭೋಕ್ತಾ ಹರಿಸ್ತತಃ || ೬೩ ||

ಶ್ರೀಹರಿಯ ಶುಭಫಲ (ಸುಖ) ಭೋಕ್ತೃತ್ವವನ್ನು ಶ್ರುತ್ಯರ್ಥನಿದರ್ಶನ ಪೂರ್ವಕ ನಿರೂಪಿಸುತ್ತಾರೆ :—

---

ಅದರಿಂದ ಸಮುದ್ರಕ್ಕೆ ವೃದ್ಧಿಯೂ ಇಲ್ಲ—ಹಾಗೆ ಸಮುದ್ರವನ್ನು ಸೇರದಿದ್ದರೆ ಯಾವ ಕೊರತೆಯೂ ಇಲ್ಲ. ಹೀಗೆಯೇ, ಶ್ರೀಹರಿಯ ಸುಖವು ಅಪಾರವಾದ ಆನಂದಸಾಗರವಾಗಿದೆ; ಸರ್ವಶುಭ ಭೋಕ್ತನಾದ ಶ್ರೀಹರಿಗೆ, ಭೋಗದಿಂದಾಗುವ ಸುಖವು ಬಂದು ಸೇರುವುದರಿಂದ, ಸುಖದ ಆಧಿಕ್ಯವಾಗಲಿ, ಅದಿಲ್ಲದಿದ್ದರೆ ಸುಖದ ನ್ಯೂನತೆಯಾಗಲಿ ಇಲ್ಲವೇ ಇಲ್ಲ. ಸ್ವಾಭಾವಿಕವಾಗಿಯೇ ವಿಶ್ವಗತಸರ್ವಶುಭ ಭೋಗಜನ್ಯ ಸುಖವು ಶ್ರೀಹರಿಯನ್ನು ಹೊಂದುತ್ತದೆ—ಆತನು ನಿತ್ಯವೂ ಆನಂದಸಮುದ್ರನೇ ಆಗಿರುತ್ತಾನೆ (೬೦-೬೧). ದೇಹವೆಂಬ ವೃಕ್ಷದಲ್ಲಿ ಅನಾದಿಸಖರಾದ (ಜೊತೆಯಲ್ಲಿರುವ) ಜೀವ, ಈಶ್ವರರೆಂಬ ಎರಡು ಪಕ್ಷಿಗಳು ವಾಸಿಸುತ್ತಿವೆ; ಉಭಯರಲ್ಲಿ ಶ್ರೇಷ್ಠನಾದ ಈಶ್ವರನು, ದೇಹದಿಂದ ಸಂಭವಿಸುವ ಶುಭಾಶುಭರೂಪ ಕರ್ಮಗಳ

ದೇಹವೃಕ್ಷೇ-ಶರೀರವೆಂಬ ವೃಕ್ಷದಲ್ಲಿ ಚಿರಂ-ಅನಾದಿಕಾಲದಿಂದ, ಸಖಾಯೌ - ಸಖರಾದ (ಕೂಡಿಕೊಂಡಿರುವ) - ಜೊತೆಯಲ್ಲಿಯೇ ಇರುವ), ಪಕ್ಷಿಣೌ-(ಜೀವ, ಈಶ್ವರರೆಂಬ) ಎರಡು ಪಕ್ಷಿಗಳು, ಸಮಾಸೀನೌ-ಇರುತ್ತವೆ; ತಯೋಃ ಮಧ್ಯೇ-ಇವರಿಬ್ಬರ ಮಧ್ಯದಲ್ಲಿ ಯಃ-ಯಾವಾತನು, ಜ್ಯಾಯಾನ್-ಶ್ರೇಷ್ಠನೋ, ತಸ್ಯ ತು-ಅವನಿಗೆ ಮಾತ್ರ, ಪಿಪ್ಪಲಂ-ಕರ್ಮಫಲವು (ದೇಹದಿಂದಾಗುವ ಕರ್ಮಗಳ ಫಲವು), ಸ್ವಾದು ಏವ-ರುಚಿಕರವಾದುದೇ (ಶುಭಕರ್ಮಗಳ ಫಲವಾದ ಸುಖವು ಮಾತ್ರ); (ಕನಿಷ್ಠನಾದ ಅಲ್ಪಜೀವನಿಗೆ ಉಭಯಾತ್ಮಕ ಕರ್ಮಗಳ ಸುಖದುಃಖ ರೂಪಫಲದ ಲೇಪವಿದೆ—ಹಿಗ್ಗು ಕುಗ್ಗುಗಳಿಂದ ಅಥವಾ ಹರ್ಷ ಶೋಕಗಳೆಂಬ ನಶ್ವರ ಫಲವನ್ನೇ ರುಚಿಕರವೆಂದು ಭೋಗಿಸುತ್ತಾನೆ); ಇತಿ-ಹೀಗೆ (ಜೀವೇಶ್ವರರ ವೈಲಕ್ಷಣ್ಯವನ್ನು), ಸಾಕ್ಷಾತ್ ಶ್ರುತಿಃ-ಸ್ವಯಂ (ಪರಮ ಪ್ರಮಾಣವಾದ) ವೇದವೇ,

---

ಫಲದಲ್ಲಿ ಶುಭವಾದುದರ ಸಾರವನ್ನು ಮಾತ್ರ ಭೋಗಿಸುತ್ತಾನೆ;[1] ಹೀಗೆಂದು ಸ್ವತಃ ಪ್ರಮಾಣವೂ ಅಪೌರುಷೇಯವೂ ಆದ ಶ್ರುತಿಯೇ ಸಾರುತ್ತದೆ; ಆದ್ದರಿಂದ ಶ್ರೀಹರಿಯು ಸಾರಭೋಕ್ತನು—ಸರ್ವ ಶುಭಕರ್ಮಗಳ ಸುಖರೂಪದ ಫಲವನ್ನು ಮಾತ್ರ ಭೋಗಿಸುತ್ತಾನೆಂದು ಸಿದ್ಧವಾಗುತ್ತದೆ (೬೨-೬೩).

1. ಪ್ರಸಕ್ತವಾದ ಅಥರ್ವಣೋಪನಿಷತ್ತಿನ ವಾಕ್ಯವು ಹೀಗಿದೆ:—
'ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ ॥'
ಇದರ ಅರ್ಥ:—ಯಾವ ಕಾಲಕ್ಕೂ ವಿಯೋಗ ಹೊಂದದ ನಿತ್ಯಸಖರಾದ ಜೀವೇಶ್ವರರೆಂಬ ಎರಡು ಪಕ್ಷಿಗಳು ದೇಹವೆಂಬ ವೃಕ್ಷವನ್ನು ಆಲಿಂಗಿಸಿಕೊಂಡಿರುತ್ತವೆ; ಅವರಲ್ಲಿ ಅನ್ಯನಾದ (ಈಶ್ವರಭಿನ್ನನಾದ) ಜೀವನು, ದೇಹಜನಿತ ಕರ್ಮಫಲವನ್ನು (ಅರುಚಿಯಾದ್ದನ್ನೇ) ರುಚಿಕರವೆಂದು ತಿನ್ನುತ್ತಾನೆ; ಈಶ್ವರನು (ಮತ್ತೊಬ್ಬನು) ಪಾಪಫಲವನ್ನು ಸ್ವೀಕರಿಸದೇ, (ಶುಭಫಲದ ಆವಶ್ಯಕತೆಯಿಲ್ಲದೇ) ನಿತ್ಯ ವಿರಾಜಿಸುತ್ತಾನೆ. ಪ್ರಕೃತ ಶ್ಲೋಕದಲ್ಲಿ (ಜ್ಯಾಯಾನ್) ಶ್ರೇಷ್ಠನಾದ ಈಶ್ವರನು (ಪಿಪ್ಪಲಂ) ಕರ್ಮಫಲವನ್ನು (ಸ್ವಾದು) ರುಚಿಕರವಾದುದನ್ನು ಭೋಗಿಸುತ್ತಾನೆಂಬುದರ ಅರ್ಥವಿಶೇಷವನ್ನು ಈ ಉಪನಿಷತ್ತಿನ ಭಾಷ್ಯಾನುಸಾರವಾಗಿ ತಿಳಿಯಬೇಕು. ಭಾಷ್ಯದಲ್ಲಿ 'ತಯೋರನ್ಯಃ ಪಿಪ್ಪಲಂ...' ಇತ್ಯಾದಿ ಶ್ರುತಿಯನ್ನು ಉದಹರಿಸಿ, 'ಜೀವಾದ್ಯಮೇವನಾತ್ತಿ ಭಗವಾನ್ಸ್ತು ನಾತ್ತ್ಯೇವ।' ಎಂದು (ಜೀವನು ಭೋಗಿಸುವುದನ್ನೇ ಭೋಗಿಸುವುದಿಲ್ಲ-ಭಗವಂತನು ಭೋಗಿಸುವುದೇ ಇಲ್ಲವೆಂದಲ್ಲ), ಹೀಗೆ, 'ಸ್ವಾತಂತ್ರ್ಯೇಣೈವ ಭೋಕ್ತೃತ್ವಾತ್ ದುಃಖಾಭೋಗಾಚ್ಚ ಸರ್ವದಾ। ಅಭೋಕ್ತಾ ಚೈವ ಭೋಕ್ತಾ ಚ ಭಗವಾನ್ ವಿಷ್ಣುರವ್ಯಯಃ॥' ಎಂಬ (ತತ್ವಸಾರ) ವಾಕ್ಯವನ್ನು ತೋರಿಸಿದ್ದಾರೆ. ಇದರ ತಾತ್ಪರ್ಯ:—'ಅನಶ್ನನ್' ಎಂಬುದಕ್ಕೆ ಅಸಾರವಾದ ಪುಣ್ಯಫಲವನ್ನೂ, ಸರ್ವ ಪಾಪಫಲವನ್ನೂ ಸ್ವೀಕರಿಸುವುದಿಲ್ಲವೆಂದರ್ಥ—ಸಾರವನ್ನೂ ಭೋಗಿಸುವುದಿಲ್ಲವೆಂದರ್ಥವಲ್ಲ; ಸ್ವತಂತ್ರ ಸರ್ವಭೋಕ್ತನಾದ್ದರಿಂದ ಭೋಕ್ತನೆಂದೂ, ದುಃಖ (ಅಸಾರ)ಗಳನ್ನು ಭೋಗಿಸುವುದಿಲ್ಲವಾದ್ದರಿಂದ ಅಭೋಕ್ತನೆಂದೂ ಹೇಳಲ್ಪಡುತ್ತಾನೆ.

ಶ್ರೀಹರಿಯ ಆನಂದಪೂರ್ಣತ್ವವನ್ನು ಸಮುದ್ರದೃಷ್ಟಾಂತದಿಂದ ವಿಶದಗೊಳಿಸುತ್ತಾರೆ :—

ಭೂಮಿಸ್ಥಿತಂ-ಭೂಮಿಯಲ್ಲಿರುವ (ಭೂಭಾಗದಲ್ಲಿರುವ), ಜಲಂ-ನೀರನ್ನು ಅಬ್ಧಿಂ ಪ್ರತಿ-ಸಮುದ್ರದ ಕಡೆಗೆ, ನೇತುಂ-ತೆಗೆದೊಯ್ಯಲು, ನ ಯತ್ನತೇ-(ಯಾರಿಂದಲೂ) ಯಾವ ಯತ್ನವೂ ಮಾಡಲ್ಪಡುವುದಿಲ್ಲ ತಸ್ಮಿನ್-ಆ ಜಲವು, ಸ್ವಭಾವೇನ-ಸ್ವಭಾವಸಿದ್ಧವಾದ ತನ್ನ ಗತಿಯಿಂದ, ಗತೇ(ಸತಿ)-(ಸಮುದ್ರವನ್ನು) ಸೇರುತ್ತಿರಲು (ಸೇರಿದರೆ), ಸಮುದ್ರಃ-ಸಮುದ್ರವು, ನ ವರ್ಧತೇ ಏವ-ವೃದ್ಧಿಯನ್ನು ಹೊಂದುವುದೇ ಇಲ್ಲ ತದಭಾವೇ-ಅದಿಲ್ಲದಿದ್ದರೆ (ಜಲವು ಬಂದು ಸೇರದಿದ್ದರೆ), ನ್ಯೂನತಾ ಚ-ಕೊರತೆಯೂ(ಹ್ರಾಸವೂ), (ನೈವ-ಇಲ್ಲವಷ್ಟೆ); ತದ್ವತ್-ಅದರಂತೆ, ಸ್ವಾನಂದಾನಂತಪೂರ್ಣಾಬ್ಧೇಃ-ಸ್ವಾನಂದವೆಂಬ ಅನಂತಸುಖದಿಂದ ಪೂರ್ಣವಾದ ಸಮುದ್ರದಂತಿರುವ, ವಿಷ್ಣೋಃ-ಶ್ರೀವಿಷ್ಣುವಿನ, ಸುಖಸ್ಯ-ಸುಖಕ್ಕೆ, ಸುಖೇ-ಸುಖವು (ಸುಖವೆಂಬ ಜಲವು), ಸ್ವಭಾವಾತ್-ಸಹಜವಾಗಿಯೇ (ಸರ್ವಭೋಕ್ತನಾದ್ದರಿಂದ ಸ್ವಾಭಾವಿಕವಾಗಿ), ಆಗತೇ (ಸತಿ)-ಬಂದು ಸೇರಿದರೆ, (ಸುಖಸ್ಯ-ಆತನ ಸುಖವೆಂಬ ಸಮುದ್ರಕ್ಕೆ, ಆಧಿಕ್ಯಂ ನ-ವೃದ್ಧಿಯೂ ಇಲ್ಲ ತದಭಾವಾತ್-ಅದಿಲ್ಲದಿದ್ದರೆ, ಸುಖನ್ಯೂನತ್ವಂ ವಾ-ಸುಖದ ಕೊರತೆ (ಹ್ರಾಸ) ಆಗಲಿ, (ನ) ಇಷ್ಯತೇ-ಇಲ್ಲವೆಂದು ಹೇಳಲಾಗುತ್ತದೆ.

**ದೇಹವೃಕ್ಷೇ ಸಮಾಸೀನೌ ಸಖಾಯೌ ಪಕ್ಷಿಣೌ ಚಿರಂ ॥ ೬೨ ॥**
**ತಯೋರ್ಮಧ್ಯೇ ತು ಯೋ ಜ್ಯಾಯಾಂಸ್ತಸ್ಯ ಸ್ವಾದ್ವೇವ ಪಿಪ್ಪಲಂ ।**
**ಇತಿ ಪ್ರಾಹ ಶ್ರುತಿಃ ಸಾಕ್ಷಾತ್ ಸಾರಭೋಕ್ತಾ ಹರಿಸ್ತತಃ ॥ ೬೩ ॥**

ಶ್ರೀಹರಿಯ ಶುಭಫಲ (ಸುಖ) ಭೋಕ್ತೃತ್ವವನ್ನು ಶ್ರುತ್ಯರ್ಥನಿದರ್ಶನ ಪೂರ್ವಕ ನಿರೂಪಿಸುತ್ತಾರೆ :—

---

ಅದರಿಂದ ಸಮುದ್ರಕ್ಕೆ ವೃದ್ಧಿಯೂ ಇಲ್ಲ—ಹಾಗೆ ಸಮುದ್ರವನ್ನು ಸೇರದಿದ್ದರೆ ಯಾವ ಕೊರತೆಯೂ ಇಲ್ಲ ಹೀಗೆಯೇ, ಶ್ರೀಹರಿಯ ಸುಖವು ಅಪಾರವಾದ ಆನಂದಸಾಗರವಾಗಿದೆ; ಸರ್ವಶುಭ ಭೋಕ್ತನಾದ ಶ್ರೀಹರಿಗೆ, ಭೋಗದಿಂದಾಗುವ ಸುಖವು ಬಂದು ಸೇರುವುದರಿಂದ, ಸುಖದ ಆಧಿಕ್ಯವಾಗಲಿ, ಅದಿಲ್ಲದಿದ್ದರೆ ಸುಖದ ನ್ಯೂನತೆಯಾಗಲಿ ಇಲ್ಲವೇ ಇಲ್ಲ ಸ್ವಾಭಾವಿಕವಾಗಿಯೇ ವಿಶ್ವಗತಸರ್ವಶುಭ ಭೋಗಜನ್ಯ ಸುಖವು ಶ್ರೀಹರಿಯನ್ನು ಹೊಂದುತ್ತದೆ—ಆತನು ನಿತ್ಯವೂ ಆನಂದಸಮುದ್ರನೇ ಆಗಿರುತ್ತಾನೆ (೬೦-೬೧). ದೇಹವೆಂಬ ವೃಕ್ಷದಲ್ಲಿ ಅನಾದಿಸಖರಾದ (ಜೊತೆಯಲ್ಲಿರುವ) ಜೀವ, ಈಶ್ವರರೆಂಬ ಎರಡು ಪಕ್ಷಿಗಳು ವಾಸಿಸುತ್ತಿವೆ; ಉಭಯರಲ್ಲಿ ಶ್ರೇಷ್ಠನಾದ ಈಶ್ವರನು, ದೇಹದಿಂದ ಸಂಭವಿಸುವ ಶುಭಾಶುಭರೂಪ ಕರ್ಮಗಳ

ದೇಹವೃಕ್ಷೇ-ಶರೀರವೆಂಬ ವೃಕ್ಷದಲ್ಲಿ ಚಿರಂ-ಅನಾದಿಕಾಲದಿಂದ, ಸಖಾಯೌ - ಸಖರಾದ (ಕೂಡಿಕೊಂಡಿರುವ) - ಜೊತೆಯಲ್ಲಿಯೇ ಇರುವ), ಪಕ್ಷಿಣೌ-(ಜೀವ, ಈಶ್ವರರೆಂಬ) ಎರಡು ಪಕ್ಷಿಗಳು, ಸಮಾಸೀನೌ-ಇರುತ್ತವೆ; ತಯೋಃ ಮಧ್ಯೇ-ಇವರಿಬ್ಬರ ಮಧ್ಯದಲ್ಲಿ ಯಃ-ಯಾವಾತನು, ಜ್ಯಾಯಾನ್-ಶ್ರೇಷ್ಠನೋ, ತಸ್ಯ ತು-ಅವನಿಗೆ ಮಾತ್ರ, ಪಿಪ್ಪಲಂ-ಕರ್ಮಫಲವು (ದೇಹದಿಂದಾಗುವ ಕರ್ಮಗಳ ಫಲವು), ಸ್ವಾದು ಏವ-ರುಚಿಕರವಾದುದೇ (ಶುಭಕರ್ಮಗಳ ಫಲವಾದ ಸುಖವು ಮಾತ್ರ); (ಕನಿಷ್ಠನಾದ ಅಲ್ಪಜೀವನಿಗೆ ಉಭಯಾತ್ಮಕ ಕರ್ಮಗಳ ಸುಖದುಃಖ ರೂಪಫಲದ ಲೇಪವಿದೆ—ಹಿಗ್ಗು ಕುಗ್ಗುಗಳೆಂದ ಅಥವಾ ಹರ್ಷ ಶೋಕಗಳೆಂಬ ನಶ್ವರ ಫಲವನ್ನೇ ರುಚಿಕರವೆಂದು ಭೋಗಿಸುತ್ತಾನೆ); ಇತಿ-ಹೀಗೆ (ಜೀವೇಶ್ವರರ ವೈಲಕ್ಷಣ್ಯವನ್ನು), ಸಾಕ್ಷಾತ್ ಶ್ರುತಿಃ-ಸ್ವಯಂ (ಪರಮ ಪ್ರಮಾಣವಾದ) ವೇದವೇ,

---

ಫಲದಲ್ಲಿ ಶುಭವಾದುದರ ಸಾರವನ್ನು ಮಾತ್ರ ಭೋಗಿಸುತ್ತಾನೆ;[1] ಹೀಗೆಂದು ಸ್ವತಃ ಪ್ರಮಾಣವೂ ಅಪೌರುಷೇಯವೂ ಆದ ಶ್ರುತಿಯೇ ಸಾರುತ್ತದೆ; ಆದ್ದರಿಂದ ಶ್ರೀಹರಿಯು ಸಾರಭೋಕ್ತನು—ಸರ್ವ ಶುಭಕರ್ಮಗಳ ಸುಖರೂಪದ ಫಲವನ್ನು ಮಾತ್ರ ಭೋಗಿಸುತ್ತಾನೆಂದು ಸಿದ್ಧವಾಗುತ್ತದೆ (೬೨-೬೩).

---

1. ಪ್ರಸಕ್ತವಾದ ಅಥರ್ವಣೋಪನಿಷತ್ತಿನ ವಾಕ್ಯವು ಹೀಗಿದೆ:—

'ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ॥'

ಇದರ ಅರ್ಥ:—ಯಾವ ಕಾಲಕ್ಕೂ ವಿಯೋಗ ಹೊಂದದ ನಿತ್ಯಸಖರಾದ ಜೀವೇಶ್ವರರೆಂಬ ಎರಡು ಪಕ್ಷಿಗಳು ದೇಹವೆಂಬ ವೃಕ್ಷವನ್ನು ಆಲಿಂಗಿಸಿಕೊಂಡಿರುತ್ತವೆ; ಅವರಲ್ಲಿ ಅನ್ಯನಾದ (ಈಶ್ವರಭಿನ್ನನಾದ) ಜೀವನು, ದೇಹಜನಿತ ಕರ್ಮಫಲವನ್ನು (ಅರುಚಿಯಾದ್ದನ್ನೇ) ರುಚಿಕರವೆಂದು ತಿನ್ನುತ್ತಾನೆ; ಈಶ್ವರನು (ಮತ್ತೊಬ್ಬನು) ಪಾಪಫಲವನ್ನು ಸ್ವೀಕರಿಸದೇ, (ಶುಭಫಲದ ಅವಶ್ಯಕತೆಯಿಲ್ಲದೇ) ನಿತ್ಯ ವಿರಾಜಿಸುತ್ತಾನೆ. ಪ್ರಕೃತ ಶ್ಲೋಕದಲ್ಲಿ (ಜ್ಯಾಯಾನ್) ಶ್ರೇಷ್ಠನಾದ ಈಶ್ವರನು (ಪಿಪ್ಪಲಂ) ಕರ್ಮಫಲವನ್ನು (ಸ್ವಾದು) ರುಚಿಕರವಾದುದನ್ನು ಭೋಗಿಸುತ್ತಾನೆಂಬುದರ ಅರ್ಥವಿಶೇಷವನ್ನು ಈ ಉಪನಿಷತ್ತಿನ ಭಾಷ್ಯಾನುಸಾರವಾಗಿ ತಿಳಿಯಬೇಕು. ಭಾಷ್ಯದಲ್ಲಿ 'ತಸ್ಯೇದಾಹುಃ ಪಿಪ್ಪಲಂ...' ಇತ್ಯಾದಿ ಶ್ರುತಿಯನ್ನು ಉದಹರಿಸಿ, 'ಜೀವಾದ್ಯಮೇವನಾಶ್ನಾತಿ ಭಗವಾನ್ನತು ನಾಶ್ನಾತ್ಯೇವ।' ಎಂದು (ಜೀವನು ಭೋಗಿಸುವುದನ್ನೇ ಭೋಗಿಸುವುದಿಲ್ಲ-ಭಗವಂತನು ಭೋಗಿಸುವುದೇ ಇಲ್ಲವೆಂದಲ್ಲ), ಹೇಳಿ, 'ಸ್ವಾತಂತ್ರ್ಯೇಣೈವ ಭೋಕ್ತೃತ್ವಾತ್ ದುಃಖಾಭೋಗಾಚ್ಚ ಸರ್ವದಾ। ಅಭೋಕ್ತಾ ಚೈವ ಭೋಕ್ತಾ ಚ ಭಗವಾನ್ ವಿಷ್ಣುರವ್ಯಯಃ॥' ಎಂಬ (ತತ್ತ್ವಸಾರ) ವಾಕ್ಯವನ್ನು ತೋರಿಸಿದ್ದಾರೆ. ಇದರ ತಾತ್ಪರ್ಯ:—'ಅನಶ್ನನ್' ಎಂಬುದಕ್ಕೆ ಅಸಾರವಾದ ಪುಣ್ಯಫಲವನ್ನೂ ಸರ್ವ ಪಾಪಫಲವನ್ನೂ ಸ್ವೀಕರಿಸುವುದಿಲ್ಲವೆಂದರ್ಥ—ಸಾರವನ್ನೂ ಭೋಗಿಸುವುದಿಲ್ಲವೆಂದರ್ಥವಲ್ಲ. ಸ್ವತಂತ್ರ ಸರ್ವಭೋಕ್ತನಾದ್ದರಿಂದ ಭೋಕ್ತನೆಂದೂ, ದುಃಖ (ಅಸಾರ)ಗಳನ್ನು ಭೋಗಿಸುವುದಿಲ್ಲವಾದ್ದರಿಂದ ಅಭೋಕ್ತನೆಂದೂ ಹೇಳಲ್ಪಡುತ್ತಾನೆ.

ಪ್ರಾಹ-ಹೇಳುತ್ತದೆ; ತತಃ-ಆದ್ದರಿಂದ, ಹರಿಃ-ಶ್ರೀಹರಿಯು, ಸಾರಭೋಕ್ತಾ-ಶುಭ ಸಾರವನ್ನು ಮಾತ್ರ ಭೋಗಿಸುವವನಾಗಿದ್ದಾನೆ.

**ಪಾಪಂ ಕರ್ಮ ತು ಯತ್ಕಿಂಚಿತ್ ಜೀವತೋ ಜಾಯತೇ ದ್ವಿಜಾಃ ।**
**ಯಥಾ ಭಾಗಂ ತತ್ರ ದೈತ್ಯಾ ಜೀವಾಶ್ಚಾಪಿ ವಿಭಾಗತಃ ॥ ೬೪ ॥**

'ದ್ವಾ ಸುಪರ್ಣಾ' ಶ್ರುತ್ಯರ್ಥವನ್ನೇ ವಿವರಿಸುತ್ತಾ ಶ್ರೀಹರಿಗೆ ಪಾಪಕರ್ಮ ಫಲಲೇಶಸ್ಪರ್ಶವೂ ಇಲ್ಲವೆಂದು ಹೇಳಿ, ಫಲಭಾಗಿಗಳಾರೆಂಬುದನ್ನು ಹೇಳುತ್ತಾರೆ:—

ದ್ವಿಜಾಃ-ಹೇ ಋಷಿಗಳೇ!, ಜೀವತಃ-ದೇಹಿಯಿಂದ (ಜೀವನಿಂದ), ಯತ್ಕಿಂಚಿತ್-ಯಾವುದೊಂದು, ಪಾಪಂ ಕರ್ಮ-ಪಾಪಕರ್ಮವು, ಜಾಯತೇ-ಉಂಟಾಗುತ್ತದೆಯೋ, ತತ್ರ-ಅದರ ಫಲವಾದ ದುಃಖಭೋಗದಲ್ಲಿ ದೈತ್ಯಾಃ-ದೈತ್ಯಾಭಿಮಾನಿಗಳೂ (ಮನಃಪ್ರೇರಕರಾದ ಕಾಲನೇಮ್ಯಾದಿ ದೈತ್ಯರೂ), ಜೀವಾಃ ಚ-ಜೀವರೂ ಸಹ (ಆಯಾ ದೇಹಾಭಿಮಾನಿಯಾದ ಜೀವನೂ), ಯಥಾಭಾಗಂ- (ಈ ಹಿಂದೆ ನಿರೂಪಿಸಿದ ಸ್ವಾತಂತ್ರ್ಯಾಂಶಗಳ) ವಿಭಾಗಕ್ಕನುಗುಣವಾಗಿ (ಭಾಗಿಗಳಾಗುತ್ತಾರೆ).

**ತಮಃ ಸೂರ್ಯಂ ಯಥಾ ನೈವ ಪಶ್ಯೇತ್ತದ್ವದ್ಧರಿಂ ನ ಹಿ ।**
**ಪಾಪಂ ಕರ್ಮ ನಿರೀಕ್ಷೇತ ದೂರಾದೇವ ವಿನಶ್ಯತಿ ।**
**ಬ್ರಹ್ಮಾದಿ ದೇವಭಾಗಾಂಸ್ತು ತೂಲವದ್ದಹತೇ ಹರಿಃ ॥ ೬೫ ॥**

ದೈತ್ಯಾಭಿಮಾನಿಗಳಿಂದ ಮತ್ತು ಜೀವನಿಂದ ಹೊಂದಲ್ಪಡದ ಪಾಪಫಲ ಭಾಗದ ಗತಿಯನ್ನು ನಿರೂಪಿಸುತ್ತಾರೆ :—

ಯಥಾ-ಹೇಗೆ, ತಮಃ-ಅಂಧಕಾರವು, ಸೂರ್ಯಂ-ಸೂರ್ಯನನ್ನು ನೈವ ಪಶ್ಯೇತ್-ಕಾಣಲಾರದೋ, ತದ್ವತ್-ಅದರಂತೆ, ಪಾಪಂ ಕರ್ಮ-ಪಾಪ ಕರ್ಮವು, ಹರಿಂ-ಶ್ರೀಹರಿಯನ್ನು ನ ನಿರೀಕ್ಷೇತ-ನೋಡಲಾರದು; ಹಿ-ಏಕೆಂದರೆ, ದೂರಾತ್ ಏವ-ದೂರದಲ್ಲಿಯೇ, ವಿನಶ್ಯತಿ-ನಾಶವಾಗುತ್ತದೆ; ಬ್ರಹ್ಮಾದಿ ದೇವಭಾಗಾನ್ ತು-ಬ್ರಹ್ಮಾದಿತತ್ತ್ವದೇವತೆಗಳ ಸ್ವಾತಂತ್ರ್ಯಾಂಶಗಳಿಗೆ ಸರಿಯಾದ ಪಾಪಫಲಾಂಶಗಳನ್ನು ಹರಿಃ-ಶ್ರೀಹರಿಯು, ತೂಲವತ್-(ಅಗ್ನಿಕಣವು) ಹತ್ತಿಯನ್ನೆಂಬಂತೆ, ದಹತೇ-ದಹಿಸುತ್ತಾನೆ.

---

ದೇಹಿಯಾದ ಜೀವನಿಂದ ಸಂಭವಿಸುವ ಯಾವುದೊಂದು ಪಾಪಕರ್ಮದ ಫಲವನ್ನು, ಆಯಾ ದೇಹಗತ ಜೀವರೂ ಮತ್ತು ಮನ ಮೊದಲಾದ ಇಂದ್ರಿಯ ಪ್ರೇರಕ ಕಾಲನೇಮ್ಯಾದಿ ದೈತ್ಯರೂ, ತಂತಮ್ಮಲ್ಲಿ ಸ್ಥಾಪಿತವಾದ ಸ್ವಾತಂತ್ರ್ಯಾಂಶಗಳ ವಿಭಾಗಕ್ಕನುಗುಣವಾಗಿ, ಪಡೆಯುತ್ತಾರೆ (೬೪). ಅಂಧಕಾರವು (ಕತ್ತಲೆಯು) ಸೂರ್ಯನನ್ನು ಹೇಗೆ ಕಾಣಲಾರದೋ ಹಾಗೆ, ಪಾಪಫಲವು (ದುಃಖವು) ಶ್ರೀಹರಿಯನ್ನು ಎಂದೂ ಎದುರಿಸಲಾರದು—ದೂರದಲ್ಲಿಯೇ ನಾಶವಾಗಿಹೋಗುತ್ತದೆ;

**ತದಾಜ್ಞಯಾ ಪ್ರವೃತ್ತತ್ವಾನ್ನ ತೇಷಾಮಪರಾಧನಂ ।**
**ಚತುಃಶತೇಷು ಭಾಗೇಷು ದಶಾಂಶಾ ಜೀವಶಕ್ತತಾ ॥ ೬೬ ॥**
**ಪುಣ್ಯಪಾಪಫಲಂ ತಾವತ್ ಅಸ್ಯ ಸ್ಯಾದಿತಿ ನಿಶ್ಚಿತಂ ।**

ತತ್ತ್ವದೇವತೆಗಳಿಗೆ ಪಾಪಫಲಾಂಶವು ದೊರೆಯದಂತೆ ಶ್ರೀಹರಿಯು ಅವರನ್ನು ರಕ್ಷಿಸಲು ಕಾರಣವನ್ನು ಹೇಳುತ್ತಾರೆ :—

ತದಾಜ್ಞಯಾ-ಶ್ರೀಹರಿಯ ಆಜ್ಞೆಯಂತೆ, ಪ್ರವೃತ್ತತ್ವಾತ್-(ಪಾಪಚೋದನೆಯಲ್ಲಿ) ಅವರು ಪ್ರವೃತ್ತರಾದ್ದರಿಂದ, ತೇಷಾಂ-ತತ್ತ್ವದೇವತೆಗಳಿಗೆ, ಅಪರಾಧನಂ-ಅಪರಾಧವು, ನ-ಇಲ್ಲ (ಅದ್ದರಿಂದ ಅದರ ಫಲಭಾಗವೂ ಇಲ್ಲ); ಚತುಃಶತೇಷು-(೪೦೦) ನಾಲ್ಕುನೂರು, ಭಾಗೇಷು-ಅಂಶಗಳಲ್ಲಿ (ಸ್ವಾತಂತ್ರ್ಯಾಂಶಗಳಲ್ಲಿ), ಜೀವಶಕ್ತತಾ-ಜೀವನ ಸಾಮರ್ಥ್ಯವು, ದಶಾಂಶಾ-೧೦ ಅಂಶಗಳಷ್ಟು ಮಾತ್ರ (ಆಗಿರುತ್ತದೆ); ಅಸ್ಯ-ಈ ಜೀವನಿಗೆ, ಪುಣ್ಯಪಾಪಫಲಂ-ಪುಣ್ಯಪಾಪಗಳ ಫಲವು, ತಾವತ್-ಅಷ್ಟುಭಾಗ ಮಾತ್ರ (೧/೪೦ ಭಾಗ ಮಾತ್ರ), ಸ್ಯಾತ್-ಉಂಟು, ಇತಿ-ಹೀಗೆಂಬುದು, ನಿಶ್ಚಿತಂ-ನಿಶ್ಚಯವು.

**ತಾವದೇವಾಲಮೇತಸ್ಯ ಕ್ಷುದ್ರತ್ವಾದಲ್ಪಶಕ್ತಿತಃ ॥ ೬೭ ॥**
**ಯಥಾ ಹಿ ದೃಶ್ಯತೇ ಲೋಕೇ ಪಿಪೀಲಮಶಕಾದಯಃ ।**
**ಅಲ್ಪೇನೈವ ಹಿ ತುಷ್ಯಂತಿ ವ್ಯಥಂತೇ ಚಾಲ್ಪದುಃಖತಃ ॥ ೬೮ ॥**

ಏತಸ್ಯ-ಈ ಜೀವನಿಗೆ, ಅಲ್ಪಶಕ್ತಿತಃ-ಅಲ್ಪಶಕ್ತಿಯುಳ್ಳವನಾದ್ದರಿಂದಲೂ, ಕ್ಷುದ್ರತ್ವಾತ್-ತುಚ್ಛನಾದ್ದರಿಂದಲೂ, ತಾವತ್ ಏವ-ಅಷ್ಟು (ಅಲ್ಪಭಾಗದ ಪುಣ್ಯಪಾಪದ)

---

ಬ್ರಹ್ಮಾದಿ ತತ್ತ್ವಾಭಿಮಾನಿ ದೇವತೆಗಳ ಸ್ವಾತಂತ್ರ್ಯಾಂಶಗಳ ಭಾಗವನ್ನನುಸರಿಸಿ, ಪಾಪಕರ್ಮಫಲವು ಅವರಿಗೆ ಸೇರುವುದಿಲ್ಲ ಅದನ್ನು ಶ್ರೀಹರಿಯು, ಅಗ್ನಿಯು ಹತ್ತಿಯನ್ನು ದಹಿಸುವಂತೆ, ದಹಿಸಿಬಿಡುತ್ತಾನೆ. ಯದ್ಯಪಿ, ತತ್ತ್ವಾಭಿಮಾನಿ ದೇವತೆಗಳೇ ಪುಣ್ಯಪಾಪಗಳು ಭಯಪ್ರೇರಕರಾದರೂ, ಅವರು ಶ್ರೀಹರಿಯ ಆಜ್ಞೆಯಂತೆ ತಾತ್ವಿಕ ದೈತ್ಯರ ದ್ವಾರಾ ಪಾಪಕರ್ಮಪ್ರೇರಕರು. ಇಲ್ಲಿ ಇದೇ ಅಧ್ಯಾಯದ ೪೮-೪೯ನೇ ಶ್ಲೋಕಗಳ ಟಿಪ್ಪಣಿಯನ್ನು ನೋಡಿರಿ (೬೫). ಪಾಪಕರ್ಮದ ಪ್ರೇರಕರೂ ಆದ ತತ್ತ್ವದೇವತೆಗಳು, ಆ ಜೀವಪ್ರೇರಕ ಕಾರ್ಯದಲ್ಲಿ ಶ್ರೀಹರಿಯ ಆಜ್ಞೆಯಿಂದಲೇ (ಆಜ್ಞೆಯನ್ನು ಪಾಲಿಸುತ್ತಿರುವೆವೆಂಬ ಜ್ಞಾನದಿಂದಲೇ) ಪ್ರವೃತ್ತರಾಗುವುದರಿಂದ, ಅವರದೇನೂ ಅಪರಾಧವಿಲ್ಲ—ಆದ್ದರಿಂದ ಪಾಪಫಲಾಂಶಕ್ಕೂ ಭಾಗಿಗಳಲ್ಲ ಶ್ರೀಹರಿಯು ಸ್ಥಾಪಿಸಿದ ಸ್ವಾತಂತ್ರ್ಯಾಂಶಗಳಲ್ಲಿ ೪೦೦ರಲ್ಲಿ೧೦ ಅಂಶಗಳು ಮಾತ್ರ ಜೀವನ ಕ್ರಿಯಾಶಕ್ತಿ ಪ್ರಾಕಟ್ಯಕ್ಕೆ ಕಾರಣವಾಗುವುದರಿಂದ, ಜೀವನ ಸಾಮರ್ಥ್ಯವು ಅಷ್ಟುಮಾತ್ರ;

ಫಲವೇ. ಅಲ್ಪ-ಸ್ವಲ್ಪ; ಯಥಾ-ಹೇಗೆ, ಲೋಕೇ-ಲೋಕದಲ್ಲಿ ಪಿಪೀಲಿಕಾದಯಃ-ಇರುವೆ, ಸೊಳ್ಳೆ ಮೊದಲಾದವು (ಕ್ಷುದ್ರ ಜಂತುಗಳು). ಅಲ್ಪಸುಖಾತ್-ಅಲ್ಪ (ಸುಖ)ದಿಂದಲೇ. ತುಷ್ಯಂತಿ-ತೃಪ್ತವಾಗುತ್ತವೆ (ಎಂಬುದೂ), ಚ-ಮತ್ತು ಅಲ್ಪದುಃಖಾತ್-ಅಲ್ಪದುಃಖದಿಂದಲೇ. ವೃಧ್ಯಂತೇ-ಬಹುವಾಗಿ ವೃದ್ಧಿಪಡುತ್ತವೆ (ಎಂಬುದೂ), ದೃಶ್ಯತೇ ಹಿ-ಕಂಡುಬರುವಂತೆ (ಜೀವರ ಅಲ್ಪಯೋಗ್ಯತೆಗಳೇ ಅವರ ತೃಪ್ತಿ ವೃದ್ಧಿಗಳಿಗೆ ಕಾರಣವಾಗುತ್ತವೆ).

ಪುಣ್ಯಂ ಕರ್ಮಸಹಾಯಾ ಯೇ ಪುಣ್ಯಾತ್ಮಾನಸ್ತು ಯೇ ಪರಾಃ ।
ದೈತ್ಯಭಾಗಗತಾತ್ಪುಣ್ಯಾತ್ತದ್ಯೋಗ್ಯಾಂಶಂ ದದಾತಿ ಹರಿಃ ॥ ೬೯ ॥
ಪಾಪಕರ್ಮಸಹಾಯಾ ಯೇ ಪಾಪಾತ್ಮಾನಸ್ತು ಯೇ ಪರಾಃ ।
ದೇವಭಾಗಗತಾತ್ಪಾಪಾತ್ತದ್ಯೋಗ್ಯಾಂಶಂ ದದಾತಿ ಹರಿಃ ॥ ೭೦ ॥
ಯಥಾಯೋಗ್ಯಂ ಯಥಾಯತ್ನಂ ಸಹಾಯೇಭ್ಯೋ ವಿಧೀಯತೇ ।
ಪುಣ್ಯಪಾಪಫಲಂ ವಿಷ್ಣುಃ ವಿಷ್ಣುನಾ ಪ್ರಭವಿಷ್ಣುನಾ ॥ ೭೧ ॥

ತತ್ತ್ವದೇವ ದೈತ್ಯರ ಸ್ವಾತಂತ್ರ್ಯಾಂಶಗಳಂತೆ, ಅವರಿಗೆ ಸಲ್ಲುವ ಪುಣ್ಯಪಾಪ

---

ಪಾಪಪುಣ್ಯ ಫಲದಲ್ಲಿ ಅಷ್ಟು ಭಾಗಕ್ಕೆ (೪೦೦ರಲ್ಲಿ ೧೦ ಭಾಗ ಅಂದರೆ ೧/೪೦ ಭಾಗಕ್ಕೆ) ಮಾತ್ರ ಅರ್ಹನಾಗುತ್ತಾನೆಂಬುದು ನಿಶ್ಚಿತವು (೬೬).

ಅಲ್ಪಶಕ್ತಿಯುತನಾದ ಕ್ಷುದ್ರಜೀವನಿಗೆ ಈ ಅಲ್ಪಫಲವೇ ಸಾಕಾಗುತ್ತದೆ; ಲೋಕದಲ್ಲಿ ಇರುವೆ ಸೊಳ್ಳೆ ಮೊದಲಾದ ಅಲ್ಪಜಂತುಗಳನ್ನು ಲಕ್ಷಿಸುವುದರಿಂದ, ಹೀಗೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ: ಅವು ಅಲ್ಪಸುಖದಿಂದ ಪೂರ್ಣ ತೃಪ್ತಿಗೊಳ್ಳುತ್ತವೆ ಮತ್ತು ಅತ್ಯಲ್ಪದುಃಖದಿಂದ ಬಹುವಾಗಿ (ಅತ್ಯಧಿಕವಾಗಿ) ವೃದ್ಧಿಪಡುತ್ತವೆಯಷ್ಟೆ (೬೭-೬೮). ಪುಣ್ಯಕರ್ಮಗಳಿಗೆ ಸಹಾಯ ಮಾಡುವ ಪುಣ್ಯಾತ್ಮರಿಗೆ, ದೈತ್ಯ ಸ್ವಾತಂತ್ರ್ಯಕ್ಕೆ ಸೇರಬೇಕಾದ ಪುಣ್ಯದಿಂದ ಒಂದಂಶವನ್ನು ತೆಗೆದು, ಶ್ರೀಹರಿಯು ಮುಟ್ಟಿಸುತ್ತಾನೆ; ಹೀಗೆಯೇ ಪಾಪಕರ್ಮಗಳಿಗೆ ಸಹಾಯ ಮಾಡುವ ಪಾಪಾತ್ಮರಿಗೆ, ದೇವಭಾಗದಲ್ಲಿ (ತತ್ತ್ವದೇವತೆಗಳಿಗೆ ಅವರ ಸ್ವಾತಂತ್ರ್ಯಾಂಶದಷ್ಟು ಸೇರಬೇಕಾದ ಪಾಪದಲ್ಲಿ) ಒಂದಂಶವನ್ನು ಸೇರಿಸುತ್ತಾನೆ (ತತ್ತ್ವದೇವತೆಗಳಿಗೆ ಪಾಪಭಾಗವು ಎಷ್ಟು ಮಾತ್ರವೂ ಸೇರದಂತೆ, ಆ ಪಾಪವನ್ನು ದಯೆಯಿಂದ ರಕ್ಷಿಸುತ್ತಾನೆ—ಇಲ್ಲಿ ಹಿಂದಿನ ಟೀಕೆ ಕೋಷ್ಠಭಾಗವನ್ನು ನೋಡಿರಿ); ಹೀಗೆ, ಪುಣ್ಯ ಪಾಪಗಳ ಫಲಾಂಶಗಳನ್ನು ಸಮರ್ಥನೂ (ಸರ್ವನಿಯಾಮಕ ಸ್ವತಂತ್ರಪ್ರಭುವೂ) ಆದ ಶ್ರೀವಿಷ್ಣುವೇ, ಸಹಾಯಕರ ಯೋಗ್ಯತೆಯನ್ನೂ ಸಹಾಯಮಾಡುವುದರಲ್ಲಿ ಅವರು ಮಾಡುವ ಯತ್ನಗಳನ್ನೂ ಲಕ್ಷ್ಯಿಸಿ ತದನುಗುಣವಾಗಿ ಸಹಾಯಕರಿಗೆ ಮುಟ್ಟಿಸುತ್ತಾನೆ (೬೯-೭೦). ಪುಣ್ಯಪಾಪಕರ್ಮಗಳು

ಫಲಭಾಗಗಳನ್ನು ಅವರಿಗೆ ಹೊಂದಿಸಿ, ಅವರಿಗೆ ಸಲ್ಲಬೇಕಾಗುವ (ಕ್ರಮದಿಂದ) ಪಾಪಪುಣ್ಯಾಂಶಗಳಲ್ಲಿ ಕೆಲವು ಭಾಗವನ್ನು ಸಹಾಯಕರಿಗೆ ಕೊಡುತ್ತಾನೆಂದು ಹೇಳುತ್ತಾರೆ :—

ಯೇ- ಯಾವ, ನರಾಃ- ಮನುಷ್ಯರು, ಪುಣ್ಯಕರ್ಮಸಹಾಯಾಃ- (ಅನ್ಯರ) ಪುಣ್ಯ ಕರ್ಮಗಳಿಗೆ ಸಹಾಯಮಾಡುವರೋ, ಯೇ ತು- ಯಾರಾದರೆ, ಪುಣ್ಯಾತ್ಮಾನಃ- ಪುಣ್ಯಕರ್ಮಗಳಲ್ಲಿಯೇ ಆಸಕ್ತವಾದ ಮನಸ್ಸುಳ್ಳವರೋ, ತೇಭ್ಯಃ- ಅವರಿಗೆ, ಹರಿಃ- ಶ್ರೀಹರಿಯು, ದೈತ್ಯಭಾಗಗತಾತ್- ದೈತ್ಯಭಾಗದ, ಪುಣ್ಯಾತ್- ಪುಣ್ಯದಿಂದ, ಅಂಶಂ- ಒಂದಂಶವನ್ನು, ದದತೇ- ಕೊಡುತ್ತಾನೆ; ಯೇ- ಯಾರು, ಪಾಪಕರ್ಮ ಸಹಾಯಾಃ- ಪಾಪಕರ್ಮಸಹಾಯಕರೋ, ಯೇ ನರಾಃ- ಯಾವ ಮನುಷ್ಯರು, ಪಾಪಾತ್ಮಾನಃ- ಪಾಪದಲ್ಲಿ ಆಸಕ್ತವಾದ ಮನಸ್ಸುಳ್ಳವರೋ, ತೇಭ್ಯಃ- ಅವರಿಗೆ, ದೇವಭಾಗಗತಾತ್- ದೇವಭಾಗದ, ಪಾಪಾತ್- ಪಾಪದಿಂದ, ಅಂಶಂ- ಅಂಶವನ್ನು (ಭಾಗವನ್ನು), ದದತೇ- ಕೊಡುತ್ತಾನೆ; (ಈ ಪುಣ್ಯಪಾಪಾಂಶಗಳಲ್ಲಿ ಸಹಾಯಕರಿಗೆ ಹೊಂದಿಸುವುದರ ಮಿತಿಯನ್ನು ಹೇಗೆ ತಿಳಿಯಬೇಕೆಂದರೆ), ಪ್ರಭವಿಷ್ಣುನಾ- (ಸೃಷ್ಟ್ಯಾದಿಗಳಿಗೆ ಕಾರಣನಾದ) ಅಚಿಂತ್ಯಶಕ್ತ್ಯುಪೇತನಾದ, ವಿಷ್ಣುನಾ- ಶ್ರೀಮಹಾವಿಷ್ಣು ವಿನಿಂದ, ವಿಪ್ರಾಃ- ಹೇ ಋಷಿಗಳೇ!, ಪುಣ್ಯಪಾಪಫಲಂ- ಪುಣ್ಯಪಾಪಫಲವು, ಸಹಾಯೇಷು- ಸಹಾಯಕರಲ್ಲಿ, ಯಥಾಯೋಗಂ- ಯೋಗ್ಯತೆಯನ್ನನುಸರಿಸಿ, ಯಥಾ ಯತ್ನಂ- (ಆ ಸಹಾಯಕರ) ಯತ್ನಾನುಸಾರವಾಗಿ, ವಿಧೀಯತೇ- ವಿಧಿಸಲ್ಪಡುತ್ತದೆ (ಈ ನಿಯಮಾನುಸಾರ ಹೊಂದಿಸಲ್ಪಡುತ್ತದೆ).

**ಮತಿರುತ್ಪದ್ಯತೇ ತಾದೃಕ್ ವ್ಯವಸಾಯೋ ಹಿ ತಾದೃಶಃ ।**
**ಸಹಾಯಾಸ್ತಾದೃಶಾ ಏವ ಯಾದೃಶೀ ಭವಿತವ್ಯತಾ ॥ ೭೨ ॥**

ಪುಣ್ಯಪಾಪಕರ್ಮಗಳಿಗೆ ಅನ್ಯಜೀವರ ಸಹಾಯಗಳು ದೊರೆಯುವ ಪ್ರಕಾರವನ್ನು ವಿಶದಗೊಳಿಸುತ್ತಾರೆ :—

ಯಾದೃಶೀ- ಯಾವ ಪ್ರಕಾರದ, ಭವಿತವ್ಯತಾ- (ಪುಣ್ಯಪಾಪಗಳ) ಸಂಘಟನೆಯೋ (ಹೇಗಾಗತಕ್ಕದ್ದಿದೆಯೋ), ತಾದೃಕ್- ಆ ವಿಧದ, ಮತಿಃ- ಬುದ್ಧಿಯು, ಉತ್ಪದ್ಯತೇ- ಉಂಟಾಗುತ್ತದೆ (ಕರ್ಮಕರ್ತನಿಗೂ ಸಹಾಯಕರಿಗೂ ಎಂದು ತಿಳಿಯ ಬೇಕು); ವ್ಯವಸಾಯಃ- ಯತ್ನವೂ, ತಾದೃಶಃ ಹಿ- ಆ ಪ್ರಕಾರವಾದುದೇ (ಆಗಿರುತ್ತದೆ);

---

ಹೇಗೆ ಸಂಭವಿಸಲಿವೆಯೋ, ಅದರಂತೆ, ಅವುಗಳ ಘಟನೆಗೆ ಅವಶ್ಯಕವಾದ ಮತಿಯೂ, ಯತ್ನಗಳೂ, ಸಹಾಯಗಳೂ, ಯಥಾಯೋಗ್ಯವಾಗಿ, ಕರ್ತೃಗಳಿಗೂ ಸಹಾಯಕರಿಗೂ ಉಂಟಾಗುತ್ತವೆ (೭೨). ತಾತ್ತ್ವಿಕದೈತ್ಯರಲ್ಲಿ ಇಡಲ್ಪಟ್ಟವುಗಳೆಂದು ಈ ಹಿಂದೆ ಹೇಳಲಾದ ೪೫ ಸ್ವಾತಂತ್ರ್ಯಾಂಶಗಳು, ಈ ಲೋಕದಲ್ಲಿರುವ ಮನುಷ್ಯದೇಹಿಗಳಲ್ಲಿ ಮಾತ್ರವೆಂದು

ಫಲವೇ, ಅಲಂ-ಸಾಕು; ಯಥಾ-ಹೇಗೆ, ಲೋಕೇ-ಲೋಕದಲ್ಲಿ ಪಿಪೀಲಮಶಕಾದಯಃ-ಇರುವೆ, ಸೊಣ ಮೊದಲಾದವು (ಕ್ಷುದ್ರ ಜಂತುಗಳು), ಅಲ್ಪೇನಏವ-ಅಲ್ಪ (ಸುಖ)ದಿಂದಲೇ, ತುಷ್ಯಂತಿ-ತೃಪ್ತವಾಗುತ್ತವೆ (ಎಂಬುದೂ), ಚ-ಮತ್ತು ಅಲ್ಪದುಃಖತಃ-ಅಲ್ಪದುಃಖದಿಂದಲೇ, ವ್ಯಥಂತೇ-ಬಹುವಾಗಿ ವ್ಯಥೆಪಡುತ್ತವೆ (ಎಂಬುದೂ), ದೃಶ್ಯತೇ ಹಿ-ಕಂಡುಬರುವಂತೆ (ಜೀವರ ಅಲ್ಪಭೋಗಗಳೇ ಅವರ ತೃಪ್ತಿ ವ್ಯಥೆಗಳಿಗೆ ಕಾರಣವಾಗುತ್ತವೆ).

ಪುಣ್ಯಂ ಕರ್ಮಸಹಾಯಾ ಯೇ ಪುಣ್ಯಾತ್ಮಾನಸ್ತು ಯೇ ನರಾಃ ।
ದೈತ್ಯಭಾಗಗತಾತ್ಪುಣ್ಯಾತ್ತೇಭ್ಯೋಽಂಶಂ ದದತೇ ಹರಿಃ ॥ ೬೯ ॥
ಪಾಪಕರ್ಮಸಹಾಯಾ ಯೇ ಪಾಪಾತ್ಮಾನಸ್ತು ಯೇ ನರಾಃ ।
ದೇವಭಾಗಗತಾತ್ಪಾಪಾತ್ತೇಭ್ಯೋಽಂಶಂ ದದತೇ ಹರಿಃ ॥ ೭೦ ॥
ಯಥಾಯೋಗಂ ಯಥಾಯತ್ನಂ ಸಹಾಯೇಷು ವಿಧೀಯತೇ ।
ಪುಣ್ಯಪಾಪಫಲಂ ವಿಪ್ರಾಃ ವಿಷ್ಣುನಾ ಪ್ರಭವಿಷ್ಣುನಾ ॥ ೭೧ ॥

ತತ್ತದೇವ ದೈತ್ಯರ ಸ್ವಾತಂತ್ರ್ಯಾಂಶಗಳಂತೆ, ಅವರಿಗೆ ಸಲ್ಲುವ ಪುಣ್ಯಪಾಪ

---

ಪಾಪಪುಣ್ಯ ಫಲದಲ್ಲಿ ಅಷ್ಟು ಭಾಗಕ್ಕೆ (೪೦೦ರಲ್ಲಿ ೧೦ ಭಾಗ ಅಂದರೆ ೧/೪೦ ಭಾಗಕ್ಕೆ) ಮಾತ್ರ ಅರ್ಹನಾಗುತ್ತಾನೆಂಬುದು ನಿಶ್ಚಿತವು (೬೬).

ಅಲ್ಪಶಕ್ತಿಯುತನಾದ ಕ್ಷುದ್ರಜೀವನಿಗೆ ಈ ಅಲ್ಪಫಲವೇ ಸಾಕೆನಿಸುತ್ತದೆ; ಲೋಕದಲ್ಲಿ ಇರುವೆ ಸೊಣ ಮೊದಲಾದ ಅಲ್ಪಜಂತುಗಳನ್ನು ಲಕ್ಷಿಸುವುದರಿಂದ, ಹೀಗೆಂಬುದು ಸ್ಪಷ್ಟವಾಗಿ ಸಿದ್ಧವಾಗುತ್ತದೆ; ಅವು ಅಲ್ಪಸುಖದಿಂದ ಪೂರ್ಣ ತೃಪ್ತಿಗೊಳ್ಳುತ್ತವೆ ಮತ್ತು ಅತ್ಯಲ್ಪದುಃಖದಿಂದ ಬಹುವಾಗಿ (ಅತ್ಯಧಿಕವಾಗಿ) ವ್ಯಥೆಪಡುತ್ತವೆಯಷ್ಟೆ (೬೭-೬೮). ಪುಣ್ಯಕರ್ಮಗಳಿಗೆ ಸಹಾಯ ಮಾಡುವ ಪುಣ್ಯಾತ್ಮರಿಗೆ, ದೈತ್ಯ ಸ್ವಾತಂತ್ರ್ಯಾಂಶಕ್ಕೆ ಸೇರಬೇಕಾದ ಪುಣ್ಯದಿಂದ ಒಂದಂಶವನ್ನು ತೆಗೆದು, ಶ್ರೀಹರಿಯು ಮುಟ್ಟಿಸುತ್ತಾನೆ; ಹೀಗೆಯೇ ಪಾಪಕರ್ಮಗಳಿಗೆ ಸಹಾಯ ಮಾಡುವ ಪಾಪಾತ್ಮರಿಗೆ, ದೇವಭಾಗದಲ್ಲಿ (ತತ್ತದೇವತೆಗಳಿಗೆ ಅವರ ಸ್ವಾತಂತ್ರ್ಯಾಂಶದಷ್ಟು ಸೇರಬೇಕಾದ ಪಾಪದಲ್ಲಿ) ಒಂದಂಶವನ್ನು ಸೇರಿಸುತ್ತಾನೆ; (ತತ್ತದೇವತೆಗಳಿಗೆ ಪಾಪಭಾಗವು ಎಷ್ಟು ಮಾತ್ರವೂ ಸೇರದಂತೆ, ಆ ಪಾಪವನ್ನು ದಹಿಸಿ ರಕ್ಷಿಸುತ್ತಾನೆ—ಇಲ್ಲಿ ಹಿಂದಿನ ೬೫ನೇ ಶ್ಲೋಕಭಾಗವನ್ನು ನೋಡಿರಿ); ಹೀಗೆ, ಪುಣ್ಯ ಪಾಪಗಳ ಫಲಾಂಶಗಳನ್ನು ಸಮರ್ಥನೂ (ಸರ್ವನಿಯಾಮಕ ಸ್ವತಂತ್ರಪ್ರಭುವೂ) ಆದ ಶ್ರೀವಿಷ್ಣುವೇ, ಸಹಾಯಕರ ಯೋಗ್ಯತೆಯನ್ನೂ ಸಹಾಯಮಾಡುವುದರಲ್ಲಿ ಅವರು ಮಾಡುವ ಯತ್ನಗಳನ್ನೂ ಲಕ್ಷಿಸಿ, ತದನುಗುಣವಾಗಿ ಸಹಾಯಕರಿಗೆ ಮುಟ್ಟಿಸುತ್ತಾನೆ (೬೯-೭೧). ಪುಣ್ಯಪಾಪಕರ್ಮಗಳು

ಫಲಭಾಗಗಳನ್ನು ಅವರಿಗೆ ಹೊಂದಿಸಿ, ಅವರಿಗೆ ಸಲ್ಲಬೇಕಾಗುವ (ಕ್ರಮದಿಂದ) ಪಾಪಪುಣ್ಯಾಂಶಗಳಲ್ಲಿ ಕೆಲವು ಭಾಗವನ್ನು ಸಹಾಯಕರಿಗೆ ಕೊಡುತ್ತಾನೆಂದು ಹೇಳುತ್ತಾರೆ :—

ಯೇ- ಯಾವ, ನರಾಃ- ಮನುಷ್ಯರು, ಪುಣ್ಯಕರ್ಮಸಹಾಯಾಃ-(ಅನ್ಯರ) ಪುಣ್ಯ ಕರ್ಮಗಳಿಗೆ ಸಹಾಯಮಾಡುವವರೋ, ಯೇ ತು- ಯಾರಾದರೆ, ಪುಣ್ಯಾತ್ಮಾನಃ- ಪುಣ್ಯಕರ್ಮಗಳಲ್ಲಿಯೇ ಆಸಕ್ತವಾದ ಮನಸ್ಸುಳ್ಳವರೋ, ತೇಭ್ಯಃ- ಅವರಿಗೆ, ಹರಿಃ- ಶ್ರೀಹರಿಯು, ದೈತ್ಯಭಾಗಗತಾತ್- ದೈತ್ಯಭಾಗದ, ಪುಣ್ಯಾತ್- ಪುಣ್ಯದಿಂದ, ಅಂಶಂ- ಒಂದಂಶವನ್ನು ದದತೇ- ಕೊಡುತ್ತಾನೆ; ಯೇ- ಯಾರು, ಪಾಪಕರ್ಮ ಸಹಾಯಾಃ- ಪಾಪಕರ್ಮಸಹಾಯಕರೋ, ಯೇ ನರಾಃ- ಯಾವ ಮನುಷ್ಯರು, ಪಾಪಾತ್ಮಾನಃ- ಪಾಪದಲ್ಲಿ ಆಸಕ್ತವಾದ ಮನಸ್ಸುಳ್ಳವರೋ, ತೇಭ್ಯಃ- ಅವರಿಗೆ, ದೇವಭಾಗಗತಾತ್- ದೇವಭಾಗದ, ಪಾಪಾತ್- ಪಾಪದಿಂದ, ಅಂಶಂ- ಅಂಶವನ್ನು (ಭಾಗವನ್ನು), ದದತೇ- ಕೊಡುತ್ತಾನೆ; (ಈ ಪುಣ್ಯಪಾಪಾಂಶಗಳಲ್ಲಿ ಸಹಾಯಕರಿಗೆ ಹೊಂದಿಸುವುದರ ಮಿತಿಯನ್ನು ಹೇಗೆ ತಿಳಿಯಬೇಕೆಂದರೆ), ಪ್ರಭವಿಷ್ಣುನಾ- (ನ್ವವ್ಯಾಪಾರಿಗಳಿಗೆ ಕಾರಣನಾದ) ಅಚಿಂತ್ಯಶಕ್ತ್ಯುಪೇತನಾದ, ವಿಷ್ಣುನಾ- ಶ್ರೀಮಹಾವಿಷ್ಣು ವಿನಿಂದ, ವಿಪ್ರಾಃ- ಹೇ ಋಷಿಗಳೇ!, ಪುಣ್ಯಪಾಪಫಲಂ- ಪುಣ್ಯಪಾಪಫಲವು, ಸಹಾಯೇಷು- ಸಹಾಯಕರಲ್ಲಿ, ಯಥಾಯೋಗಂ- ಯೋಗ್ಯತೆಯನ್ನನುಸರಿಸಿ, ಯಥಾ ಯತ್ನಂ- (ಆ ಸಹಾಯಕರ) ಯತ್ನಾನುಸಾರವಾಗಿ, ವಿಧೀಯತೇ- ವಿಧಿಸಲ್ಪಡುತ್ತದೆ (ಈ ನಿಯಮಾನುಸಾರ ಹೊಂದಿಸಲ್ಪಡುತ್ತದೆ).

**ಮತಿರುತ್ಪದ್ಯತೇ ತಾದೃಕ್ ವ್ಯವಸಾಯೋ ಹಿ ತಾದೃಶಃ ।**
**ಸಹಾಯಾಸ್ತಾದೃಶಾ ಏವ ಯಾದೃಶೀ ಭವಿತವ್ಯತಾ ॥ ೭೨ ॥**

ಪುಣ್ಯಪಾಪಕರ್ಮಗಳಿಗೆ ಅನ್ಯಜೀವರ ಸಹಾಯಗಳು ದೊರೆಯುವ ಪ್ರಕಾರವನ್ನು ವಿಶದಗೊಳಿಸುತ್ತಾರೆ :—

ಯಾದೃಶೀ- ಯಾವ ಪ್ರಕಾರದ, ಭವಿತವ್ಯತಾ- (ಪುಣ್ಯಪಾಪಗಳ) ಸಂಘಟನೆಯೋ (ಹೇಗಾಗತಕ್ಕದ್ದಿದೆಯೋ), ತಾದೃಕ್- ಆ ವಿಧದ, ಮತಿಃ- ಬುದ್ಧಿಯು, ಉತ್ಪದ್ಯತೇ- ಉಂಟಾಗುತ್ತದೆ (ಕರ್ಮಕರ್ತನಿಗೂ ಸಹಾಯಕರಿಗೂ ಎಂದು ತಿಳಿಯ ಬೇಕು); ವ್ಯವಸಾಯಃ- ಯತ್ನವೂ, ತಾದೃಶಃ ಹಿ- ಆ ಪ್ರಕಾರವಾದುದೇ (ಆಗಿರುತ್ತದೆ);

---

ಹೇಗೆ ಸಂಭವಿಸಲಿವೆಯೋ, ಅದರಂತೆ, ಅವುಗಳ ಘಟನೆಗೆ ಅವಶ್ಯಕವಾದ ಮತಿಯೂ, ಯತ್ನಗಳೂ, ಸಹಾಯಗಳೂ, ಯಥಾಯೋಗ್ಯವಾಗಿ, ಕರ್ತೃಗಳಿಗೂ ಸಹಾಯಕರಿಗೂ ಉಂಟಾಗುತ್ತವೆ (೭೨). ತಾತ್ವಿಕದೈತ್ಯರಲ್ಲಿ ಇಡಲ್ಪಟ್ಟವುಗಳೆಂದು ಈ ಹಿಂದೆ ಹೇಳಲಾದ ೪೫ ಸ್ವಾತಂತ್ರ್ಯಾಂಶಗಳು, ಈ ಲೋಕದಲ್ಲಿರುವ ಮನುಷ್ಯದೇಹಿಗಳಲ್ಲಿ ಮಾತ್ರವೆಂದು

ಸಹಾಯಾಃ-(ಆ ಕರ್ಮಕ್ಕೆ ದೊರೆಯುವ) ಸಹಾಯಗಳೂ, ತಾದೃಶಾಃ ಏವ-ಅದಕ್ಕನುಗುಣವಾದುದೇ (ಆ ಪ್ರಕಾರ ಅಥವಾ ವಿಧವಾದುದೇ) ಆಗಿರುತ್ತವೆ.

**ಪಂಚಚತ್ವಾರಿಂಶತೋ ಯೇ ದೈತ್ಯಾನಾಂ ಪರಿಕೀರ್ತಿತಾಃ ।**

**ಸ್ವಾತಂತ್ರ್ಯಾಂಶಾಸ್ತೇ ಚ ಲೋಕೇ ಜ್ಞೇಯಾ ಮಾನುಷದೇಹಿಷು ॥ ೭೩ ॥**

ತಾತ್ತ್ವಿಕದೈತ್ಯರ ಸ್ವಾತಂತ್ರ್ಯಾಂಶಗಳು ಉತ್ತರೋತ್ತರ (ಉತ್ತಮರಲ್ಲಿ) ಹ್ರಾಸಗೊಳ್ಳುತ್ತವೆಂಬ ನಿಯಮವನ್ನು ಹೇಳುತ್ತಾರೆ :—

ಯೇ-ಯಾವ, ದೈತ್ಯಾನಾಂ-ದೈತ್ಯರಿಗೆ, ಪರಿಕೀರ್ತಿತಾಃ-(ಈ ಹಿಂದೆ) ಹೇಳಲ್ಪಟ್ಟ, ಪಂಚಚತ್ವಾರಿಂಶತಃ-೪೫ ಅಂಶಗಳ, ಸ್ವಾತಂತ್ರ್ಯಾಂಶಾಃ-ಸ್ವಾತಂತ್ರ್ಯದ ಅಂಶಗಳೋ, ತೇ-ಅವು (ಆ ಸ್ವಾತಂತ್ರ್ಯಾಂಶಗಳು), ಲೋಕೇ-ಈ ಲೋಕದಲ್ಲಿ, ಮಾನುಷದೇಹಿಷು-ಮಾನುಷ್ಯದೇಹದಲ್ಲಿರುವರಲ್ಲಿ ಚ-ಮಾತ್ರವೇ, ಜ್ಞೇಯಾಃ- ತಿಳಿಯಲ್ಪಡತಕ್ಕದ್ದು.

**ತದಾರಭ್ಯ ಯಥಾನಂದವೃದ್ಧಿಸ್ತದ್ವಾಸ್ರ ಉಚ್ಯತೇ ।**

**ತೇ ಭಾಗಾಸ್ತತ್ತ್ವದೇವೇಷು ವಿಜ್ಞೇಯಾ ಸ್ಯುರ್ಯಥಾಕ್ರಮಂ ॥ ೭೪ ॥**

**ದೈತ್ಯಸ್ವಾತಂತ್ರ್ಯಭಾಗಾನಾಮೇವಂ ಜ್ಞೇಯಃ ಪರಃ ಕ್ಷಯಃ ।**

**ಶತಾನಂದೇಥ ತೇ ಭಾಗಾ ವಿಜ್ಞೇಯಾ ಪರಮಾತ್ಮನಿ ॥ ೭೫ ॥**

ತದಾರಭ್ಯ-ಮನುಷ್ಯದೇಹಿಗಳಿಂದ ಆರಂಭಿಸಿ, ಯಥಾ-ಹೇಗೆ (ಯಾವ ಕ್ರಮದಿಂದ), ಆನಂದವೃದ್ಧಿಃ-ಆನಂದದ (ಸ್ವರೂಪಾನಂದದ) ವೃದ್ಧಿಯಾಗುತ್ತದೆಯೋ (ತಾರತಮ್ಯದಲ್ಲಿ ಮೇಲೆಮೇಲಿನವರ ದೇಹದಲ್ಲಿ ತದ್ವಾಸಃ-(ತಥಾ-ಆ ಕ್ರಮದಿಂದ) ದೈತ್ಯಸ್ವಾತಂತ್ರ್ಯಾಂಶಗಳ ಹ್ರಾಸವು, ಉಚ್ಯತೇ-ಹೇಳಲ್ಪಡುತ್ತದೆ; ತೇ ಭಾಗಾಃ-ಹೀಗೆ ಹ್ರಾಸಗೊಳ್ಳುವ ಸ್ವಾತಂತ್ರ್ಯಾಂಶಗಳು, ಯಥಾಕ್ರಮಂ-ತಾರತಮ್ಯಾನುಸಾರವಾಗಿ, ತತ್ತ್ವದೇವೇಷು-ತಾತ್ತ್ವಿಕದೇವತೆಗಳಲ್ಲಿ ಜ್ಞೇಯಾಃ-(ಎಂದು) ತಿಳಿಯಬೇಕು; ಏವಂ-ಹೀಗೆಯೇ, ದೈತ್ಯ ಸ್ವಾತಂತ್ರ್ಯಭಾಗಾನಾಂ-ದೈತ್ಯ ಸ್ವಾತಂತ್ರ್ಯಾಂಶಗಳಿಗೆ, ಪರಃ - ಉತ್ತರೋತ್ತರ, ಕ್ಷಯಃ - ಕ್ಷಯವನ್ನು (ನ್ಯೂನತೆ - ಕೊರತೆ), ಜ್ಞೇಯಃ-(ತಿಳಿಯಲ್ಪಡತಕ್ಕದ್ದು) ತಿಳಿಯಬೇಕು; ಅಥ-ನಂತರ (ಹೀಗೆ ತಾರತಮ್ಯದಲ್ಲಿ ಕೊನೆಯ ಹಂತವನ್ನು ಮುಟ್ಟಲು), ಶತಾನಂದೇ-(ಅಲ್ಲಿರುವ) ಬ್ರಹ್ಮದೇವನಲ್ಲಿ ತೇ

---

ತಿಳಿಯಬೇಕು (೭೩). ಅಲ್ಲಿಂದ ಆರಂಭಿಸಿ, ತಾರತಮ್ಯಕ್ರಮದಿಂದ, ಹೇಗೆ ಹೇಗೆ ಉತ್ತಮರಲ್ಲಿ ಆನಂದದ ವೃದ್ಧಿಯಿರುವುದೋ, ಹಾಗೆ ಹಾಗೆ, ದೈತ್ಯಸ್ವಾತಂತ್ರ್ಯಾಂಶಗಳು ಹ್ರಾಸಗೊಳ್ಳುತ್ತವೆ; ಆ ಸ್ವಾತಂತ್ರ್ಯಾಂಶಗಳು ತತ್ತ್ವದೇವತೆಗಳಲ್ಲಿ ಕಡಿಮೆಯಾಗುತ್ತವೆ; ಹೀಗೆಯೇ ಉತ್ತರೋತ್ತರ ದೈತ್ಯಸ್ವಾತಂತ್ರ್ಯಾಂಶಗಳು ಕ್ಷಯಗೊಳ್ಳುತ್ತ ಜೀವೋತ್ತಮನಾದ ಬ್ರಹ್ಮದೇವನ ದೇಹದಲ್ಲಿ ಅವು ಇರುವುದೇ ಇಲ್ಲ; ಆ ಎಲ್ಲ ಸ್ವಾತಂತ್ರ್ಯಾಂಶಗಳೂ

ಭಾಗಾಃ-(ಮನುಷ್ಯರಲ್ಲಿ ಇಡಲಾಗಿದ್ದ ೪೫ ಸ್ವಾತಂತ್ರ್ಯಾಂಶಗಳು, ಕ್ರಮದಿಂದ) ಆ ಸ್ವಾತಂತ್ರ್ಯಾಂಶಗಳು, ಪರಮಾತ್ಮನಿ-ಪರಮಾತ್ಮನಲ್ಲಿಯೇ, ವಿಜ್ಞೇಯಾಃ-ತಿಳಿಯಲ್ಪಡಬೇಕು (ಬ್ರಹ್ಮನಲ್ಲಿ ದೈತ್ಯಸ್ವಾತಂತ್ರ್ಯಾಂಶಗಳಿಲ್ಲವೇ ಇಲ್ಲ).

**ಮಹತ್ತತ್ತ್ವೇ ತಮೋಲೇಶಯೋಗಾತ್ ಬ್ರಹ್ಮಣಿ ಕರ್ಹಿಚಿತ್ ।**
**ಅಜ್ಞಾನಭಯಲೇಶಸ್ಯ ಸಂಭೂತಿರವಲೋಕ್ಯತೇ ॥ ೭೬ ॥**

ಮಹತತ್ತ್ವೇ-(ಬ್ರಹ್ಮದೇವನ ದೇಹವು ಮಹತತ್ತ್ವನಿರ್ಮಿತವಾದುದಾದ್ದರಿಂದ) ಮಹತತ್ತ್ವದಲ್ಲಿ, ತಮೋಲೇಶಯೋಗಾತ್-ತಮೋಗುಣದ ಅತ್ಯಲ್ಪಭಾಗವು ಸೇರಿರುವುದರಿಂದ, ಬ್ರಹ್ಮಣಿ-ಬ್ರಹ್ಮನಲ್ಲಿ ಕರ್ಹಿಚಿತ್-ಒಮ್ಮೊಮ್ಮೆ (ಯಾವುದೋ ಕಾಲ ವಿಶೇಷ

---

ಪರಮಾತ್ಮನಲ್ಲಿಯೇ ಇರುವುವೆಂದು ತಿಳಿಯಬೇಕು[1] (೭೪-೭೫). ಬ್ರಹ್ಮದೇವನ ದೇಹವು ಮಹತತ್ತ್ವನಿರ್ಮಿತವಾದುದು; ಮಹತತ್ತ್ವದಲ್ಲಿ ಅಲ್ಪಾಂಶ ತಮೋಗುಣವೂ ಸೇರಿದೆ; ಇದರಿಂದಾಗಿ, ಬ್ರಹ್ಮನಲ್ಲಿ ಒಂದೊಂದು ಕಾಲದಲ್ಲಿ ಅಜ್ಞಾನ ಭಯ ಲೇಶಗಳ ಉತ್ಪತ್ತಿಯು ಕಂಡುಬರುತ್ತದೆ (೭೬). ಬ್ರಹ್ಮದೇವನು ಸಮಸ್ತ ದೇವತೆಗಳಲ್ಲಿ ಪ್ರಧಾನನು—ದೇವಶ್ರೇಷ್ಠನು; ಆತನಿಂದ ಸಹಿತರಾಗಿಯೇ, ಸಂಸಾರದಿಂದ ಬಿಡುಗಡೆಯನ್ನು ಹೊಂದಿದ ಸರ್ವರೂ, ಮೋಕ್ಷವನ್ನು ಪಡೆಯುತ್ತಾರೆ—ಆತನನ್ನು ಬಿಟ್ಟು ಯಾರಿಗೂ, ಸ್ವಯಂ ವಿಷ್ಣುಪದ ಪ್ರಾಪ್ತಿಯಿಲ್ಲವೆಂಬುದು ಶ್ರುತಿಸಿದ್ಧವಾಗಿದೆ (೭೭). ದೈತ್ಯರಲ್ಲಿ (ತಮೋಯೋಗ್ಯ ಜೀವ ದೇಹಗಳಲ್ಲಿ), ತತ್ತ್ವಾಭಿಮಾನಿ ದೇವತೆಗಳೂ, ಬ್ರಹ್ಮವಾಯುಗಳೂ, ಶ್ರೀವಿಷ್ಣುವೂ ಇದ್ದಾರೆ—ಪೂರ್ವದಲ್ಲಿ ಹೇಳಿದ

1. ಸ್ವಾತಂತ್ರ್ಯಾಂಶಗಳ ವಿಭಾಗದಲ್ಲಿ ಹೇಳಲಾದಂತೆ, ೧/೪ನೇ ಭಾಗದಲ್ಲಿ ೧೦೦ ಭಾಗಗಳನ್ನು ಮಾಡಿ, ಅದರಲ್ಲಿ ಕಲ್ಯಾದಿ ದೈತ್ಯರಲ್ಲಿ ೪೫ ಭಾಗಗಳನ್ನು ಶ್ರೀಹರಿಯು ಇಟ್ಟನಷ್ಟೆ. ಹೀಗೆ ಇಡಲ್ಪಟ್ಟ ಅಂಶಗಳಲ್ಲಿ ತತ್ತದ್ದೈತ್ಯರಲ್ಲಿ ಯಾರು ಯಾರಲ್ಲಿ ಎಷ್ಟೆಷ್ಟು ಅಂಶಗಳೆಂಬ ಒಳವಿಭಾಗವು ನಿರೂಪಿತವಾಗಿಲ್ಲ. ತಾರತಮ್ಯದಲ್ಲಿ ಮುಕ್ತಿಯೋಗ್ಯರಾದ ಮನುಷ್ಯೋತ್ತಮರನ್ನು ಆರಂಭಿಸಿ, ಮೇಲೆ ಮೇಲೆ ಹೋದಂತೆ, ಪಾಪಕರ್ಮಪ್ರೇರಕರಲ್ಲಿ ಅಸಮರ್ಥರಾದ ಆಲ್ಪದೈತ್ಯರು ನಿರ್ವ್ಯಾಪಾರರಾಗಿರುತ್ತಾರೆ; ಅವರ ಸ್ವಾತಂತ್ರ್ಯಾಂಶದಿಂದ ಏನೂ ಕಾರ್ಯವಾಗುವುದಿಲ್ಲ; ಜೀವೋತ್ತಮನಾದ ವಿರಿಂಚನಲ್ಲಿ ಯಾವ ದೈತ್ಯರಿಗೆ ಏನೂ ಕೆಲಸವಿಲ್ಲ; ಹೀಗಿರುವುದರಿಂದ ತಾರತಮ್ಯದಲ್ಲಿ ಉತ್ತಮರಾದ ದೇವತೆಗಳ ದೇಹದಲ್ಲಿ (ಅಂಶಗಳಿಂದ ಇತರರ ದೇಹದಲ್ಲಿರುವ ದೇವಾಂಶಗಳಿಗೆ ಅಲ್ಲ), ದೈತ್ಯ ಸ್ವಾತಂತ್ರ್ಯಾಂಶಗಳ ವ್ಯಾಪಾರವು ಹ್ರಾಸಗೊಳ್ಳುತ್ತ ತತ್ತದ್ದೇವಸ್ವಾತಂತ್ರ್ಯಾಂಶಗಳು ಅಧಿಕವಾಗಿ ಕಾರ್ಯಪರವಾಗಿರುತ್ತವೆ. ಬ್ರಹ್ಮದೇವನಲ್ಲಿ (ಸೂರ್ಯಾದಿ) ತತ್ತ್ವದೇವತೆಗಳಿಗೆ ಸಹ ಸ್ವಾತಂತ್ರ್ಯಾಂಶದಂತೆ ಪುಣ್ಯಫಲವೂ ದೊರೆಯುವುದಿಲ್ಲ— ಆ ಸ್ವಾತಂತ್ರ್ಯಾಂಶಗಳ ಸ್ವತಂತ್ರಕಾರ್ಯವಿಲ್ಲವಾದ್ದರಿಂದ; ಪೂರ್ಣ ಪುಣ್ಯಫಲಕ್ಕೆ ಶ್ರೀಹರಿಯೇ ಭಾಗಿಯು; ಬ್ರಹ್ಮದೇವನಾದರೋ ತನ್ನಲ್ಲಿದ್ದವಾದ ೫೦ ಅಂಶಗಳಷ್ಟು ಫಲಕ್ಕೆ ಭಾಗಿಯು. (ಇಲ್ಲಿ ಇದೇ ಅಧ್ಯಾಯದ ೫೨-೫೩ನೇ ಶ್ಲೋಕಗಳ ತಾತ್ಪರ್ಯವನ್ನು ಗಮನಿಸಿರಿ.)

ದಲ್ಲಿ), ಅಜ್ಞಾನಭಯಲೇಶಸ್ಯ-ಅತ್ಯಲ್ಪ ಅಜ್ಞಾನಭಯಗಳ, ಸಂಭೂತಿಃ- (ಬಾಹ್ಯಾಂತಃ ಕರಣದಲ್ಲಿ) ಮೂಡುವುದು (ಹುಟ್ಟುವುದು). ಅವಲೋಕ್ಯತೇ- ಕಂಡುಬರುತ್ತದೆ.[1]

**ಮುಖ್ಯೋ ಹಿ ಸರ್ವದೇವಾನಾಂ ಬ್ರಹ್ಮೈವ ಪರಿಕೀರ್ತಿತಃ ।**

**ತೇನೈವ ಸಹ ಗಚ್ಛಂತಿ ಮುಕ್ತಾ ವಿಷ್ಣುಪದಂ ಹಿ ತತ್ ॥ ೭೭ ॥**

ಬ್ರಹ್ಮೈವ-ಬ್ರಹ್ಮದೇವನೇ, ಸರ್ವದೇವಾನಾಂ-ಸಕಲ ದೇವತೆಗಳಲ್ಲಿ ಮುಖ್ಯಃ-ಪ್ರಮುಖನು (ಶ್ರೇಷ್ಠನು), (ಎಂದು), ಪರಿಕೀರ್ತಿತಃ-ವಿಶೇಷಶಾಸ್ತ್ರ ಪ್ರಸಿದ್ಧಿಯುಳ್ಳವನು; ಮುಕ್ತಾಃ-ಸಂಸಾರದಿಂದ ಮುಕ್ತರಾದ ಸಮಸ್ತಜೀವರೂ, ತತ್-ಆ (ವೇದಸಿದ್ಧ), ವಿಷ್ಣುಪದಂ-ವೈಕುಂಠಾದಿಮುಕ್ತಧಾಮವನ್ನು (ಶ್ರೀವಿಷ್ಣು ಪ್ರಾಪ್ತಿರೂಪವಾದ ಮುಕ್ತಿಯನ್ನು), ತೇನ-ಆ ಬ್ರಹ್ಮದೇವನಿಂದ, ಸಹೈವ-ಕೂಡಿಕೊಂಡೇ, ಗಚ್ಛಂತಿ-ಹೊಂದುತ್ತಾರೆ (ಸರ್ವರೂ ಬ್ರಹ್ಮಸಹಿತರಾಗಿಯೇ ಮುಕ್ತಿಯನ್ನು ಪಡೆಯುತ್ತಾರೆ).

**ದೈತ್ಯೇಷು ತತ್ತ್ವದೇವಾನಾಂ ಸ್ವಾತಂತ್ರ್ಯಂ ಭಾಗಶೋಽಸ್ತಿ ಹಿ ।**

**ಬ್ರಹ್ಮಣಸ್ತಾಥ ವಾಯೋಶ್ಚ ವಿಷ್ಣೋರಪಿ ತಥೈವ ಹಿ ॥ ೭೮ ॥**

**ಪುಣ್ಯಕರ್ಮವಿಭಾಗಸ್ತು ದೇವಾನಾಂ ಭಾಗಶೋ ಭವೇತ್ ।**

**ಪಾಪಕರ್ಮವಿಭಾಗಸ್ತು ತತ್ತ್ವದೈತ್ಯೇಷು ಭಾಗಶಃ ॥ ೭೯ ॥**

ದೈತ್ಯಜೀವರಿಂದ ಸಂಭವಿಸುವ ಪುಣ್ಯಪಾಪಫಲಗಳ ವಿಭಾಗವನ್ನು ನಿರೂಪಿಸುತ್ತಾರೆ :—

ದೈತ್ಯೇಷು-ದೈತ್ಯರಲ್ಲಿ (ತಮೋಯೋಗ್ಯ ಅಥವಾ ತಾಮಸಜೀವರಲ್ಲಿ), ತತ್ತ್ವದೇವಾನಾಂ-ತತ್ತ್ವಾಭಿಮಾನಿ ದೇವತೆಗಳ, ಸ್ವಾತಂತ್ರ್ಯಂ-ಸ್ವಾತಂತ್ರ್ಯವು, ಭಾಗಶಃ-ಸ್ವಾತಂತ್ರ್ಯಾಂಶಗಳುಳ್ಳವರೇ, ಈ ಎಲ್ಲರೂ; ದೈತ್ಯಜೀವರಿಂದ ಸಂಭವಿಸುವ ಪುಣ್ಯಕರ್ಮಫಲದಲ್ಲಿ ತಾತ್ತ್ವಿಕ ದೇವತೆಗಳಿಗೆ ತಮ್ಮಲ್ಲಿರುವ ಸ್ವಾತಂತ್ರ್ಯಾಂಶಗಳಷ್ಟು ಪ್ರಮಾಣದಲ್ಲಿ ಭಾಗವು ದೊರೆಯುತ್ತದೆ; ಹೀಗೆಯೇ, ಅವರು ಮಾಡುವ ಪಾಪಕರ್ಮಗಳ ಫಲದಲ್ಲಿ ತತ್ತ್ವದೈತ್ಯರಲ್ಲಿರುವ ಸ್ವಾತಂತ್ರ್ಯಾಂಶಗಳಂತೆ, ತತ್ತ್ವದೈತ್ಯರಿಗೆ ಭಾಗವು ಸಲ್ಲುತ್ತದೆ (೭೮-೭೯). ತತ್ತ್ವದೈತ್ಯರ ದೇಹಗಳಲ್ಲಿ ಸಂಭವಿಸುವ, ಎಲ್ಲ

1. 'ಬ್ರಹ್ಮಾ ನಿರಭಿಮಾನಿತ್ವಾತ್ ಶಾರೀರೋಽಪ್ಯಶರೀರವಾನ್' ಇತ್ಯಾದಿ ಪ್ರಮಾಣಗಳು, ಬ್ರಹ್ಮದೇವನು, ಪ್ರಾಕೃತ ಶರೀರವುಳ್ಳವನಾದರೂ, ಅಶರೀರಿಯೇ ಸರಿ, ಎಂದು ಸಾರುತ್ತವೆ; 'ಅಜ್ಞಾನಂ ತು ಚತುರ್ವಾರಂ ದ್ವಿವಾರಂ ಭಯಮೇವ ಚ । ಶೋಕೋಽಪಿ ತಾವಾನ್...' ಇತ್ಯಾದಿ ಹೇಳಲ್ಪಡುವ ಅಜ್ಞಾನ ಭಯ ಶೋಕಾದಿಗಳು, ದಗ್ಧ ವಸ್ತ್ರದಂತೆ, ಆತನ ಬಾಹ್ಯಮನಸ್ಸಿನಲ್ಲಿ ಕ್ಷಣಾರ್ಧಕಾಲ ತೋರಿ, ಸ್ವರೂಪದಲ್ಲಿ ಯಾವ ದುಃಖವನ್ನೂ ಉಂಟುಮಾಡದೇ, ಆ

(ಹಿಂದೆ ನಿರೂಪಿಸಿದಂತೆ) ಅಂಶತಃ-(ಅಂಶಗಳು), ಅಸ್ತಿ ಹಿ-ಇರುತ್ತವೆ (ಪ್ರಮಾಣಸಿದ್ಧವೇ); ಬ್ರಹ್ಮಣಃ ಚ-ಬ್ರಹ್ಮದೇವನ, ವಾಯೋಃ ಚ-ಮತ್ತು ವಾಯುದೇವನ, ತಥಾ ಏವ-ಹಾಗೆಯೇ, ವಿಷ್ಣೋಃ ಅಪಿ-ಶ್ರೀವಿಷ್ಣುವಿನ ಸ್ವಾತಂತ್ರ್ಯ ಭಾಗಗಳೂ (ಇರುತ್ತವೆ); ಪುಣ್ಯಕರ್ಮವಿಭಾಗಃ ತು-ಪುಣ್ಯಕರ್ಮ ಫಲವಿಭಾಗ ವಾದರೂ, ದೇವಾನಾಂ- ದೇವತೆಗಳ (ತತ್ವದೇವತೆಗಳ), ಭಾಗಶಃ-ಸ್ವಾತಂತ್ರ್ಯಾಂಶ ಗಳಂತೆ, ಭವೇತ್-ಆಗುತ್ತದೆ; ಪಾಪಕರ್ಮವಿಭಾಗಃ ತು-ಪಾಪಫಲವಿಭಾಗವೂ, ಭಾಗಶಃ - (ದೈತ್ಯಸ್ಥಾಪಿತ) ಸ್ವಾತಂತ್ರ್ಯಾಂಶಗಳನ್ನನುಸರಿಸಿ, ತತ್ವದೈತ್ಯೇಷು-ತಾತ್ವಿಕದೈತ್ಯ ರಲ್ಲಿ (ಭವೇತ್-ಸೇರುತ್ತದೆ).

ತತ್ವದೈತ್ಯೇಷು ಯತ್ಪಾಪಂ ತದ್ಭಾಗೀ ಕಲಿರೇವ ಹಿ ।
ಕಲೌ ನಾಸ್ತಿ ಹಿ ದೇವಾನಾಂ ಸ್ವಾತಂತ್ರ್ಯಂ ಬ್ರಹ್ಮಣಾ ವಿನಾ ॥ ೮೦ ॥
ತಥಾ ಪ್ರಾಣಂ ವಿನಾ ವಿಷ್ಣೋರಪಿ ಸ್ವಾತಂತ್ರ್ಯಮೀಕ್ಷ್ಯತೇ ।
ತತ್ವದೈತ್ಯವಿಭಾಗಾಸ್ತು ಕಲಾವೇವ ಭವಂತಿ ಹಿ ॥ ೮೧ ॥
ತೇನಾತಿಪಾಪೀ ದುಷ್ಟಾತ್ಮಾ ಸ್ವೀಯೈಃ ಪರಿವೃತೋಽಖಿಲೈಃ ।
ಗತ್ವಾ ನಿತ್ಯತಮೋ ದ್ವಾರಿ ವಿಷ್ಣುದ್ವೇಷಾದ್ವತಿಷ್ಠತೇ ॥ ೮೨ ॥

ತತ್ವದೈತ್ಯೇಷು-ತಾತ್ವಿಕದೈತ್ಯರ ಸ್ವದೇಹಗಳಲ್ಲಿ (ಅನ್ಯದೇಹಗಳಲ್ಲಿರುವ ಅವರ ಪಾಪಫಲಕ್ಕೂ, ಕಲಿಯೇ ಪೂರ್ಣಭಾಗಿಯಾಗಿರುತ್ತಾನೆ (ತತ್ವದೇವತೆಗಳು, ಎಂದೂ, ಎಲ್ಲಿಯೂ ಪಾಪಫಲಭಾಗಿಗಳಲ್ಲ); ಕಲಿಯಲ್ಲಿ ಬ್ರಹ್ಮ, ಮುಖ್ಯಪ್ರಾಣ ಮತ್ತು ಶ್ರೀವಿಷ್ಣುವೂ ತಂತಮ್ಮ ಸ್ವಾತಂತ್ರ್ಯಾಂಶಗಳ ಪ್ರಮಾಣದ ಪ್ರಭಾವವುಳ್ಳವರಾಗಿ ವರ್ತಿಸುತ್ತಾರೆ; ಕಲಿಯಲ್ಲಿ ಆಜ್ಞಾಧಾರಕರಾಗಿರುವ ಅನ್ಯತತ್ವದೈತ್ಯರ ಪಾಪ ಫಲಾಂಶಗಳೆಲ್ಲವೂ, ಕಲಿಗೇ ಸೇರುತ್ತವೆ; (ತಾತ್ವಿಕದೇವತೆಗಳಿಗೇ ಇಲ್ಲದಿರುವಾಗ, ಬ್ರಹ್ಮಾದಿಗಳಿಗೆ ಪಾಪಫಲಾಂಶದ ಯೋಗವಿರಬಹುದೆಂಬ ಶಂಕೆಗೆ ಅವಕಾಶವೇ ಇಲ್ಲ); ಹೀಗೆ ಪೂರ್ಣಪಾಪ ಫಲಭಾಗಿಯಾದ ಕಲಿಯು, ದುಷ್ಟಸ್ವರೂಪನೂ, ವಿಷ್ಣುದ್ವೇಷಿಯೂ

ಮನೋವಿಕಾರಗಳು ಅಲ್ಲಿಯೇ ನಷ್ಟವಾಗುತ್ತವೆ; ಬ್ರಹ್ಮದೇವನು ಮಾಡದುದನ್ನು ಮುಂದಿನವರು ಯಾರೂ ಎಂದೂ ಮಾಡುವುದಿಲ್ಲವಾದ್ದರಿಂದಲೂ (ಮುಂದಿನ ಪ್ರಕೆಗಳಲ್ಲಿ ಅಜ್ಞಾನ ಭಯಾದಿಗಳ ಸಿದ್ಧಿಗಾಗಿಯೂ), ಕೇವಲ ಶ್ರೀಹರಿಪ್ರೀತ್ಯರ್ಥವಾಗಿಯೂ, ಅಲ್ಪತಮ ಅಜ್ಞಾನ ಭಯಾದಿ ಮನೋವಿಕಾರವು, ತೋರುತ್ತವೆ; ಬ್ರಹ್ಮದೇವನಿಗೆ ಮುಕ್ತ ವೈಲಕ್ಷಣ್ಯವನ್ನು ಸಾಧಿಸಿಕೊಡಲಿಕ್ಕೂ (ಬದ್ಧಜೀವರ ವರ್ಗಕ್ಕೆ ಸೇರುವರೆಂಬುದನ್ನು ನಿದರ್ಶನಮಾಡಲಿಕ್ಕೂ), ಮಹತತ್ವಗತ ಅತ್ಯಲ್ಪತಮೋಂಶವನ್ನು ನಿಮಿತ್ತೀಕರಿಸಿ ತ್ರಿಗುಣಾಭಿಮಾನಿ ಶ್ರೀ ಲಕ್ಷ್ಮೀದೇವಿಯೇ, ಬಾಹ್ಯಾಂತಃ ಕರಣಗಳಲ್ಲಿ ಅಲ್ಪಭಯಾದಿ ದುಃಖವಿಕಾರಗಳನ್ನುಂಟುಮಾಡುವಳೆಂದು ತಿಳಿಯಬೇಕು.

ಅಂಶಗಳಲ್ಲಿ ಅಲ್ಲ), ಯತ್ಪಾಪಂ-ಯಾವ ಪಾಪಕರ್ಮವು ಸಂಭವಿಸುವುದೋ, ತದ್ಭಾಗೀ-ಅದರ ಪೂರ್ಣಫಲಭಾಗಿಯು, ಕಲಿಃ ಏವ-ಕಲಿಯೇ ಸರಿ; ಕಲೌ-ಕಲಿಯಲ್ಲಿ (ಕಲಿಯ ಸ್ವದೇಹದಲ್ಲಿ), ಬ್ರಹ್ಮಣಾ ವಿನಾ-ಬ್ರಹ್ಮದೇವನನ್ನುಳಿದು, ತಥಾ-ಹಾಗೂ, ಪ್ರಾಣಂ ವಿನಾ-ಮುಖ್ಯಪ್ರಾಣನನ್ನೂ, ವಿಷ್ಣೋಃ ಅಪಿ-ಶ್ರೀ ವಿಷ್ಣುವನ್ನೂ (ಬಿಟ್ಟು), ದೇವಾನಾಂ-ತತ್ತ್ವದೇವತೆಗಳಿಗೆ, ಸ್ವಾತಂತ್ರ್ಯಂ-ಸ್ವಾತಂತ್ರ್ಯವು, ನಾಸ್ತಿ-ಇಲ್ಲವು; ಸ್ವಾತಂತ್ರ್ಯಂ-(ಆದರೆ ಬ್ರಹ್ಮ, ಪ್ರಾಣ, ವಿಷ್ಣುಗಳಲ್ಲಿ) ಸ್ವಾತಂತ್ರ್ಯವು, ಈಕ್ಷ್ಯತೇ-ಉಂಟೆಂದು ತಿಳಿಯುತ್ತದೆ. ತತ್ತ್ವದೈತ್ಯ ವಿಭಾಗಾಃ ತು-(ಕಲಿಯಲ್ಲಿ ಅನ್ಯತತ್ತ್ವದೈತ್ಯರು ಆತನ ಆಜ್ಞಾಧಾರಕರಾಗಿರುತ್ತಾರಾದ್ದರಿಂದ), ತತ್ತ್ವದೈತ್ಯರ ಪಾಪಫಲಭಾಗಗಳೆಲ್ಲವೂ, ಕಲೌ-ಕಲಿಯಲ್ಲಿ ಏವ-ಮಾತ್ರ, ಭವಂತಿ ಹಿ- ಉಂಟೆಂದು ಪ್ರಮಾಣಸಿದ್ಧವು (ಕಲಿಗೇ ಸಲ್ಲುತ್ತವೆ); ತೇನ-ಇದರಿಂದ (ಹೀಗೆ ಪಾಪಫಲಸರ್ವಕ್ಕೆ ಪಾತ್ರನಾದ್ದರಿಂದ), ಅತಿಪಾಪ್ಮಾ-ಅತ್ಯಂತ ಪಾಪಿಯಾದ, ದುಷ್ಟಾತ್ಮಾ- ಪಾಪಸ್ವರೂಪನಾದ, ವಿಷ್ಣುದ್ವೇಷ್ಟಾ-ವಿಷ್ಣುದ್ವೇಷಿಯಾದ ಕಲಿಯು, ಅಖಿಲೈಃ-ಸಮಸ್ತರಾದ, ಸ್ವೀಯೈಃ-ತನ್ನವರಾದ ಇತರ ದೈತ್ಯರಿಂದ, ಪರಿವೃತಃ- ಕೂಡಿದವನಾಗಿ, ಗತ್ವಾ-(ಸ್ವದೇಹದಿಂದ) ಹೋಗಿ, ನಿತ್ಯ ತಮೋದ್ವಾರಿ- ನಿತ್ಯನರಕದ (ಅಂಧತಮಸ್ಸಿನ) ದ್ವಾರದಲ್ಲಿ ಅವತಿಷ್ಠತೇ-ನಿಲ್ಲುತ್ತಾನೆ.

**ವಾಯೋರ್ಗದಾಪ್ರಹಾರೇಣ ತೇ ಹಿ ಕಲ್ಯಾದಯೋಽಖಿಲಾಃ ।**
**ಭಿನ್ನಲಿಂಗಾಃ ಪತಂತ್ಯಂಧೇ ಪುನರಾವರ್ತಿವರ್ಜಿತೇ ॥ ೮೩ ॥**

ಅಖಿಲಾಃ-ಸಮಸ್ತರಾದ, ತೇ-ಆ, ಕಲ್ಯಾದಯಃ-ಕಲಿ ಮೊದಲಾದವರು, ವಾಯೋಃ-ಶ್ರೀವಾಯುದೇವನ, ಗದಾಪ್ರಹಾರೇಣ-ಗದಾಪ್ರಹಾರದಿಂದ (ಗದೆಯಿಂದ ತಾಡಿತರಾಗಿ), ಭಿನ್ನಲಿಂಗಾಃ-ಲಿಂಗದೇಹಭಂಗ(ನಾಶ)ವನ್ನು ಹೊಂದಿದವರಾಗಿ, ಪುನರಾವರ್ತಿವರ್ಜಿತೇ-ತಿರುಗಿ ಬರುವ ವಾರ್ತೆಯೇ ಇಲ್ಲದ (ಅಲ್ಲಿಂದ ಹೊರಗೆ

---

ಆದ್ದರಿಂದ, ತನ್ನವರಾದ ಅನ್ಯದೈತ್ಯರಿಂದ ಪರಿವೃತನಾಗಿ, ಅಂಧತಮಸ್ಸಿನ (ನಿತ್ಯನರಕದ) ದ್ವಾರದಲ್ಲಿ ಸ್ವದೇಹವನ್ನು ಬಿಟ್ಟು ಬಂದು ನಿಲ್ಲುತ್ತಾನೆ (೮೦-೮೨). ಆಗ ಕಲ್ಯಾದಿ ಸಮಸ್ತ ದೈತ್ಯರೂ, ವಾಯುದೇವನ ಗದಾಪ್ರಹಾರದಿಂದ ಲಿಂಗಭಂಗವನ್ನು ಹೊಂದಿ (ಲಿಂಗದೇಹಗಳನ್ನು ಕಳೆದುಕೊಂಡು) ಪುನರಾವರ್ತಿರಹಿತವಾದ ಅಂಧತಮಸ್ಸಿನಲ್ಲಿ ಬೀಳುತ್ತಾರೆ (ಕಲಿಯು, ಲಿಂಗಭಂಗವನ್ನು ಹೊಂದಿದ ತನ್ನವರೊಂದಿಗೆ ನಿತ್ಯನರಕದಲ್ಲಿ ಬೀಳುತ್ತಾನೆ) (೮೩). ಆ ವಜ್ರನಾಮಕ ನರಕವು, ಅಲ್ಲಿ ಬಿದ್ದ ಸರ್ವರಿಗೂ ಅವರ ಸ್ವರೂಪಭೂತವಾದ ಚಕ್ಷುರಾದಿ ಪಂಚೇಂದ್ರಿಯಗಳಿಗೆ ಕೇವಲ ದುಃಖವನ್ನೇ ಕೊಡುವ, ಅತ್ಯುಗ್ರವಾದ ನರಕವು; ಮಹಾಪ್ರಲಯಕಾಲದಲ್ಲಿ ಲಿಂಗಭಂಗವನ್ನು ಹೊಂದಿದ ಸಜ್ಜನರಿಂದ (ಮುಕ್ತಿಯೋಗ್ಯರಾದ ದೇವಸ್ವಭಾವರ ಜೀವರಿಂದ) ಕೂಡಿ, ತಾನೇ

ಬರುವುದು ಯಾವ ಕಾಲಕ್ಕೂ ಇಲ್ಲದ), ಅಂಧೇ-ಅಂಧಕಾರದಲ್ಲಿ (ಕಗ್ಗತ್ತಲಿನ ನಿತ್ಯನರಕದಲ್ಲಿ), ಪತಂತಿ-ಬೀಳುತ್ತಾರೆ.

ಅನಾದ್ಯನಂತೇ ವವ್ರೇಽಸ್ಮಿನ್ ಪಂಚಕಷ್ಟೇತಿದಾರುಣೇ ।
ಯಥಾ ಬ್ರಹ್ಮಾ ವ್ರಜತ್ಯೇಕಃ ಪರಾಂತೇ ಮುಕ್ತಸಜ್ಜನೈಃ ॥ ೮೪ ॥
ತಥೈವ ದುರ್ಜನೈಃ ಸಾಕಂ ಪರಾಂತೇ ಕಲಿರೇಕಲಃ ।
ತಮೋಂಧಂ ಯಾತಿ ನೈಕೋಽಪಿ ಕದಾಪಿ ಬಹಿರಾವ್ರಜೇತ್ ॥ ೮೫ ॥

ಅನಾದ್ಯನಂತೇ-ಉತ್ಪತ್ತಿನಾಶಗಳಿಲ್ಲದ (ನಿತ್ಯವಾದ), ಪಂಚಕಷ್ಟೇ-ಪಂಚೇಂದ್ರಿಯಗಳಿಗೆ ಕೇವಲ ದುಃಖವೇ ದೊರೆಯುವ, ಅತಿದಾರುಣೇ-ಅತ್ಯಂತ ಉಗ್ರವಾದ, ಅಸ್ಮಿನ್-ಈ, ವವ್ರೇ-ನರಕದಲ್ಲಿ ಪರಾಂತೇ-ಮಹಾಪ್ರಲಯ ಕಾಲದಲ್ಲಿ (ಪರನಾಮಕ ಬ್ರಹ್ಮದೇವನ ೧೦೦ ವರ್ಷದ ಆಯುಷ್ಯವು ಮುಗಿಯುತ್ತಿರಲು), ಏಕಲಃ-ದೈತ್ಯಪ್ರಧಾನನಾದ, ಕಲಿಃ-ಕಲಿಯು, ಯಥಾ-ಹೇಗೆ, ಪರಾಂತೇ-ಪ್ರಳಯ ಕಾಲದಲ್ಲಿ ಮುಕ್ತಸಜ್ಜನೈಃ-ಮುಕ್ತಸುಜೀವರಿಂದ ಕೂಡಿ, ಬ್ರಹ್ಮಾ-ಬ್ರಹ್ಮದೇವನು, ಏಕಃ-ಪ್ರಧಾನನಾಗಿ (ಮುಂದೆ ನಿಂತು), ವ್ರಜತಿ-(ಶ್ರೀಹರಿಯನ್ನು ಹೊಂದು ತ್ತಾನೆಯೋ) ಪ್ರವೇಶಿಸುತ್ತಾನೆಯೋ, ತಥಾ ಏವ-ಹಾಗೆಯೇ, ದುರ್ಜನೈಃ ಸಾಕಂ-ದುರ್ಜೀವರಿಂದ ಕೂಡಿ, ತಮೋಂಧಂ-ಅಂಧ ತಮಸ್ಸನ್ನು ಯಾತಿ-ಹೊಂದುತ್ತಾನೆ; ಏಕೋಽಪಿ-(ಅವರಲ್ಲಿ) ಯಾರೊಬ್ಬನೂ, ಕದಾಪಿ-ಎಂದೂ, ಬಹಿಃ-(ಅಂಧತಮಸ್ಸಿನಿಂದ) ಹೊರಗೆ, ನ ಆವ್ರಜೇತ್-ಬರುವುದಿಲ್ಲ.

ಯೇ ಸ್ಯುರ್ವಿಧಿನಿಷೇಧೇಭ್ಯೋ ಬಹಿರ್ಭೂತಾಽಗದಾದಯಃ ।
ತೇಷಾಂ ಸುಖಸ್ಯ ಭೋಕ್ತಾರೋ ವಿಷ್ಣ್ವಾದ್ಯಾ ಭಾಗಶೋಽಖಿಲಾಃ ॥೮೬॥
ದುಃಖಸ್ಯ ತತ್ತದ್ದೈತ್ಯಾಸ್ಸ್ಯುರ್ಜೀವಸ್ತೂಭಯಭಾಗ್ಭವೇತ್ ।
ಏವಂ ವಿಧಿನಿಷೇಧಾನಾಂ ಪಾತ್ರಂ ಜೀವಂ ಪ್ರಕಲ್ಪ್ಯ ಸಃ ॥ ೮೭ ॥
ಉಪಾದಿಶನ್ನಿಜಾಜ್ಞೇತಿ ಹರಿಃ ಸಾಕ್ಷಾತ್ ಶ್ರುತಿಸ್ಮೃತೀ ।

---

ಮುಂದಾಗಿ ನಿಂತು ಬ್ರಹ್ಮದೇವನು, ಪರಬ್ರಹ್ಮನನ್ನು (ಪರಮಾತ್ಮನ ಉದರವನ್ನು) ಪ್ರವೇಶಿಸುವಂತೆ, ಪ್ರಧಾನನಾದ ಕಲಿಯು, ದುರ್ಜನರಿಂದ (ತಮೋಯೋಗ್ಯ ಜೀವರಿಂದ) ಕೂಡಿ, ಅಂಧತಮಸ್ಸನ್ನು ಪ್ರವೇಶಿಸುತ್ತಾನೆ; ಅಲ್ಲಿ ಪ್ರವೇಶಿಸಿದವರಾರೂ, ಎಂದೂ ಅಲ್ಲಿಂದ ಹೊರಗೆ ಬರುವುದೇ ಇಲ್ಲ (೮೪-೮೫). ವಿಧಿನಿಷೇಧ ನಿಯಮಗಳಿಂದ ಬದ್ಧವಲ್ಲದ ಔಷಧಾದಿ ಸೇವನೆಯಿಂದ ಜನ್ಯವಾಗುವ ಸುಖವನ್ನು ವಿಭಾಗದಿಂದ (ಸ್ವಾತಂತ್ರ್ಯಾಂಶಗಳಂತೆ ವಿಭಾಗದಿಂದ) ವಿಷ್ಣು ಮೊದಲಾದ ತತ್ತ್ವದೇವತೆಗಳು ಸ್ವೀಕರಿಸುತ್ತಾರೆ; ತಜ್ಜನ್ಯ ದುಃಖದ ಭೋಗವು ತತ್ತದ್ದೈತ್ಯರಿಗೆ ಯೋಗ್ಯ

ವಿಧಿನಿಷೇಧೇಭ್ಯಃ ಬಹಿರ್ಭೂತಾಃ- ವಿಧಿನಿಷೇಧಗಳಿಂದ ಹೊರಗಿರುವ (ವಿಧಿನಿಷೇಧಗಳಿಗೊಳಪಡದ), ಯೇ- ಯಾವ, ಅಗದಾದಯಃ- ರೋಗಚಿಕಿತ್ಸಕ ವನಸ್ಪತಿ ರಸಾಯನಾದಿಗಳೋ, ತೇಷಾಂ- ಅವುಗಳ ಸೇವನೆಯ (ಅವುಗಳನ್ನು ಸೇವಿಸುವುದರಿಂದ ಉಂಟಾಗುವ), ಸುಖಸ್ಯ- ಸುಖದ, ಭೋಕ್ತಾರಃ- ಭೋಕ್ತೃಗಳು, ವಿಷ್ಣ್ವಾದ್ಯಾಃ- ಶ್ರೀವಿಷ್ಣುವೇ ಮೊದಲಾದ, ಅಖಿಲಾಃ- ಸರ್ವತತ್ತ್ವದೇವತೆಗಳೂ, ಭಾಗಶಃ-(ಅವರವರ ಸ್ವಾತಂತ್ರ್ಯಾಂಶಗಳಂತೆ) ವಿಭಾಗದಿಂದ ಭೋಗಿಸುವವರು, (ಆಗಿರುತ್ತಾರೆ); ದುಃಖಸ್ಯ - (ಅವುಗಳ ಸೇವನೆಯಿಂದುಂಟಾಗುವ) ದುಃಖದ, (ಭೋಕ್ತಾರಃ- ಭೋಕ್ತೃಗಳು), (ದುಃಖವನ್ನು ಭೋಗಿಸುವವರು), ದೈತ್ಯಾಃ- ತತ್ತ್ವ ದೈತ್ಯರು, ಸ್ಯುಃ- ಆಗಿರುತ್ತಾರೆ; ಜೀವಃ ತು- ಜೀವನಾದರೋ, ಉಭಯಭಾಕ್- ಸುಖದುಃಖ ಗಳೆರಡಕ್ಕೂ ಭಾಗಿಯು, ಭವೇತ್- ಆಗುತ್ತಾನೆ; ಏವಂ- ಹೀಗೆ, ಜೀವಂ- ಜೀವನನ್ನು ವಿಧಿನಿಷೇಧಾನಾಂ- ವಿಧಿನಿಷೇಧಗಳ, ಪಾತ್ರಂ- ಪಾತ್ರನನ್ನಾಗಿ, (ವಿಧಿನಿಷೇಧಾತ್ಮಕ ನಿಯಮಗಳಿಗೂ, ಆ ನಿಯಮಗಳು ಅನ್ವಯಿಸದಿರುವ ವಸ್ತುಗಳ ಸೇವನೆಯಿಂದ ಲಭ್ಯವಾದ ಸುಖದುಃಖಗಳಿಗೂ ಪಾತ್ರನನ್ನಾಗಿ), ಪ್ರಕಲ್ಪ್ಯ- ಗೊತ್ತುಮಾಡಿ (ನಿಯಮಿಸಿ), ಸಃ ಹರಿಃ- ಸ್ವತಂತ್ರನಾದ ಶ್ರೀಹರಿಯು, ಸಾಕ್ಷಾತ್- ಸ್ವಯಂ, ಶ್ರುತಿಸ್ಮೃತೀ- ಶ್ರುತಿಸ್ಮೃತಿಗಳನ್ನು ನಿಜಾಜ್ಞೇತಿ- ತನ್ನ ಆಜ್ಞೆಗಳೆಂದು, ಉಪಾದಿಶತ್- ಉಪದೇಶಿಸಿದನು.

**ಸ್ವಾಮಾತ್ಯೇಷು ಯಥಾ ರಾಜಾ ಯಥಾ ಸ್ವಾತಂತ್ರ್ಯಮೀಕ್ಷ್ಯತೇ ॥ ೮೮ ॥**
**ಕಾರ್ಯಸಿದ್ಧಿಂ ಕಾರ್ಯಹಾನಿಂ ತಥಾಯಂ ಪುರುಷೋತ್ತಮಃ ।**

---

ವಿಭಾಗದಿಂದ ಸಲ್ಲುತ್ತದೆ (ವಿಧಿನಿಷೇಧಗಳನ್ನಾಚರಿಸುವುದರಿಂದ ಉಂಟಾಗುವ ಸುಖಾದಿಗಳ ಭೋಗವಿಷಯವು ಮುಂದಿನ ಅಧ್ಯಾಯಗಳಲ್ಲಿ ವಿಸ್ತಾರವಾಗಿ ಪ್ರಸಕ್ತವಾಗಲಿದೆ); ಏವಂಚ, ಜೀವನನ್ನು ವಿಧಿನಿಷೇಧಗಳಿಗೆ (ಮಾಡು, ಬಿಡು ಎಂಬ ನಿಯಮಗಳಿಗೆ) ಪಾತ್ರನನ್ನಾಗಿ ಮಾಡಿ (ಅವುಗಳಂತೆ ನಡೆದುಕೊಳ್ಳುವುದರಿಂದ, ಸಂಭವಿಸುವ ಫಲಗಳಿಗೆ ಜೀವನನ್ನು ಗುರಿಮಾಡಿ), ಸ್ವತಂತ್ರನಾದ ಶ್ರೀಹರಿಯು, ವಿಧಿ ನಿಷೇಧಗಳ ಜ್ಞಾನಾರ್ಥವಾಗಿ, ತನ್ನ ಆಜ್ಞೆಗಳೆಂದು, ಶ್ರುತಿಸ್ಮೃತಿಗಳನ್ನು ಸ್ವಯಂ ಉಪದೇಶಿಸಿದನು (೮೬-೮೭). ರಾಜನು, ಅಮಾತ್ಯ ಮೊದಲಾದ ಅಧಿಕಾರಿಗಳಿಗೆ ತನ್ನ ಸ್ವಾತಂತ್ರ್ಯದ ಅಂಶಗಳನ್ನಿತ್ತು ಅದರ ಯೋಗ್ಯ ವಿನಿಯೋಗದಿಂದ, ಅವರಿಗೆ ವಹಿಸಲಾಗಿರುವ ಕಾರ್ಯಗಳ ಸಿದ್ಧಿಹಾನಿಗಳನ್ನು ನಿರೀಕ್ಷಿಸಿ (ಅದಕ್ಕನುಸಾರವಾಗಿ) ಫಲಪ್ರದನಾಗುವಂತೆ, ಶ್ರೀಹರಿಯೂ, ಜೀವರಲ್ಲಿ ತನ್ನ ಸ್ವಾತಂತ್ರ್ಯಾಂಶವನ್ನಿಟ್ಟು ಅದರ ವಿನಿಯೋಗದಿಂದ ತನ್ನ ಆಜ್ಞೆಗಳನ್ನು ಪಾಲಿಸಿ ಸಾಧಿಸುವ ಕಾರ್ಯಸಿದ್ಧಿಹಾನಿಗಳನ್ನು ಗಮನಿಸಿ, ತದನುಸಾರ ಫಲಪ್ರದನಾಗುತ್ತಾನೆ (೮೮). ಜೀವನು ಯಥಾಶಕ್ತಿ

ರಾಜಾ-ರಾಜನು, ಸ್ವಾಮಾತ್ಯೇಷು-ತನ್ನ ಅಮಾತ್ಯರಲ್ಲಿ ಯಥಾ-ಹೇಗೆ, ಯಥಾಸ್ವಾತಂತ್ರ್ಯಂ-(ತನ್ನಿಂದ ಕೊಡಲ್ಪಟ್ಟ) ಸ್ವಾತಂತ್ರ್ಯಕ್ಕನುಸಾರವಾದ, ಕಾರ್ಯಸಿದ್ಧಿಂ-ಕಾರ್ಯಸಿದ್ಧಿಯನ್ನೂ, ಕಾರ್ಯಹಾನಿಂ-ಕಾರ್ಯಹಾನಿಯನ್ನೂ (ಅಸಿದ್ಧಿಯನ್ನೂ), ಈಕ್ಷ್ಯತೇ-ಗಮನಿಸುತ್ತಾನೆಯೋ (ನಿರೀಕ್ಷಿಸುತ್ತಾನೋ-ಸಿದ್ಧಿ-ಅಸಿದ್ಧಿಗಳನ್ನು ಅಪೇಕ್ಷಿಸುವನೋ), ತಥಾ-ಹಾಗೆ, ಅಯಂ-ಈ, ಪುರುಷೋತ್ತಮಃ-ಶ್ರೀಹರಿಯೂ (ಜೀವರಲ್ಲಿ ಸ್ವಾತಂತ್ರ್ಯಾಂಶಗಳನ್ನಿತ್ತು, ಜೀವನಿಂದಾಗುವ ಕಾರ್ಯಸಿದ್ಧಿ ಹಾನಿಗಳನ್ನು ಅಪೇಕ್ಷಿಸಿ, ಅವುಗಳ ಫಲಕ್ಕೆ ಜೀವನನ್ನು ಭಾಗಿಯಾಗಿ ಮಾಡುತ್ತಾನೆ).

**ಯಸ್ಯ ಸ್ಯಾದ್ಯಾವತೀ ಶಕ್ತಿಃ ಶಾರೀರೀ ಧನಜಾಪಿ ವಾ ॥ ೮೯ ॥**
**ಪುಣ್ಯಾಪಾಪನಿವೃತ್ತಿಂ ಚ ತಾವತ್ಕುರ್ಯಾದ್ಧರಿಂ ಸ್ಮರನ್ ।**

ಯಸ್ಯ-ಯಾರಿಗೆ, ಶಾರೀರೀ-ಶರೀರ(ದೇಹ) ಸಂಬಂಧವಾದ, ಧನಜಾ ಅಪಿ ವಾ-ಧನದಿಂದ ಉಂಟಾದುದಾಗಲಿ, ಶಕ್ತಿಃ-ಸಾಮರ್ಥ್ಯವು, ಯಾವತೀ-ಎಷ್ಟು ಸ್ಯಾತ್-ಇರುತ್ತದೆಯೋ, ತಾವತ್-ಅಷ್ಟು ಪ್ರಮಾಣದಿಂದ (ಶಕ್ತಿಯಿದ್ದಷ್ಟು), ಪುಣ್ಯಾಪಾಪನಿವೃತ್ತಿಂ-ಪುಣ್ಯಾಪಾಪಗಳ ನಿವೃತ್ತಿಯನ್ನು (ಕರ್ಮಬಂಧಪರಿಹಾರವನ್ನು), ಹರಿಂ-ಶ್ರೀಹರಿಯನ್ನು ಸ್ಮರನ್-ಸ್ಮರಿಸಿ, ಕುರ್ಯಾತ್ ಚ-ಮಾಡತಕ್ಕದ್ದೇ ಸರಿ (ಶ್ರೀಹರಿದತ್ತವಾದ ಶರೀರಶಕ್ತಿಯನ್ನು ಮತ್ತು ದ್ರವ್ಯಶಕ್ತಿಯನ್ನು (ಯಥಾಶಕ್ತಿ) ಶ್ರೀಹರಿಸ್ಮರಣಪೂರ್ವಕ ವಿನಿಯೋಗಿಸಿ, ಕರ್ಮಬಂಧದ ಬಿಡುಗಡೆಗಾಗಿ ಯತ್ನಿಸಲೇಬೇಕು).

**ಅಜ್ಞಾನಾದಥವಾ ಧಾರ್ಷ್ಟ್ಯಾತ್ತಸ್ಯಾಂ ಶಕ್ತಾವಪಿ ಸ್ಫುಟಂ ॥ ೯೦ ॥**
**ಪುಣ್ಯಕರ್ಮ ನ ಕುರ್ಯಾದ್ಯಃ ಪಾಪಂ ಪರಿಹರೇನ್ನ ವಾ ।**
**ಸ ದಂಡ್ಯೋ ಜಾಯತೇ ವಿಷ್ಣೋರ್ನರಕಾನ್ ಪ್ರತಿಪದ್ಯತೇ ॥ ೯೧ ॥**

ಅಜ್ಞಾನಾತ್-ಅಜ್ಞಾನದಿಂದಾಗಲಿ, ಅಥವಾ, ಧಾರ್ಷ್ಟ್ಯಾತ್-ಧೀಮಾತನ

---

ಕರ್ಮಬಂಧದಿಂದ ಮುಕ್ತನಾಗಲು ಯತ್ನಿಸಬೇಕು; ಆ ಯತ್ನವು ಶ್ರೀಹರಿದತ್ತವಾದ ದೇಹಶಕ್ತಿ ದ್ರವ್ಯಶಕ್ತಿಗಳಿದ್ದಷ್ಟು ನಡೆಯಬೇಕು (ಆ ಶಕ್ತಿಗಳನ್ನು ಅದಕ್ಕಾಗಿಯೇ ವಿನಿಯೋಗಿಸಬೇಕು); ಸಂಸಾರದಿಂದ ಮುಕ್ತನಾಗಲು, ಪುಣ್ಯಾಪಾಪಗಳೆರಡರ (ಕರ್ಮದ) ಬಂಧವೇ ಕಡಿದುಹೋಗಬೇಕು—ಅದಕ್ಕಾಗಿ ಶ್ರೀಹರಿಸ್ಮರಣಪೂರ್ವಕವಾದ ಯತ್ನವು ಅತ್ಯವಶ್ಯಕ (೮೯). ಯಾರು, ಶಕ್ತಿಯಿದ್ದರೂ ಸಹ, ಅಜ್ಞಾನದಿಂದಾಗಲಿ, ಧೀಮಾತನದಿಂದಾಗಲಿ, ಪುಣ್ಯಕರ್ಮಗಳನ್ನು ಆಚರಿಸುವುದಿಲ್ಲವೋ ಮತ್ತು ಪಾಪಗಳನ್ನು ಪರಿಹರಿಸಿಕೊಳ್ಳುವುದಿಲ್ಲವೋ (ಪಾಪಕರ್ಮಗಳ ಆಚರಣೆಯನ್ನು ಯತ್ನಪೂರ್ವಕ ತ್ಯಜಿಸಿ, ಸಂಭವಿಸಿದ ಪಾಪಗಳ ಪರಿಹಾರಕ್ಕಾಗಿ ಪ್ರಾಯಶ್ಚಿತ್ತಾದಿಗಳನ್ನು

ದಿಂದಾಗಲಿ, (ದುರಹಂಕಾರಜನ್ಯ ಧೈರ್ಯವು ಧಾರ್ಷ್ಟ್ಯವು); ಯಃ-ಯಾರು, ಸ್ಫುಟಂ-ಸ್ಪಷ್ಟವಾಗಿ, ಶಕ್ತೌ ಅಪಿ-ಶಕ್ತಿಯೂ ಸಹ, ಸತ್ಯಾಂ-ಇರುತ್ತಿರಲು, ಪುಣ್ಯಕರ್ಮ-ಪುಣ್ಯಕರ್ಮವನ್ನು ನ ಕುರ್ಯಾತ್-ಆಚರಿಸುವುದಿಲ್ಲವೋ, ವಾ-ಅಥವಾ (ಮತ್ತು), ಪಾಪಂ-ಪಾಪವನ್ನು ನ ಪರಿಹರೇತ್-ಪರಿಹರಿಸಿಕೊಳ್ಳುವುದಿಲ್ಲವೋ, ವಿಷ್ಣೋಃ (ಸಕಾಶಾತ್)-ಶ್ರೀವಿಷ್ಣುವಿನಿಂದ, ಸಃ-ಆತನು, ದಂಡ್ಯಃ-ಶಿಕ್ಷಾರ್ಹನು, ಜಾಯತೇ-ಆಗುತ್ತಾನೆ; ನರಕಾನ್-ನರಕಗಳನ್ನೂ (ಯಾತನಾ ಲೋಕಗಳನ್ನೂ), ಪ್ರತಿಪದ್ಯತೇ-ಹೊಂದುತ್ತಾನೆ.

ತಸ್ಮಾದ್ಯದ್ವಿಹಿತಂ ಕರ್ಮ ಕೃತ್ವಾ ತತ್ಕೇಶವೇಽರ್ಪಯೇತ್ ।
ತಸ್ಮಿನ್ನನರ್ಪಿತಂ ಯತ್ತು ತದ್ವಿಲುಂಪಂತಿ ರಾಕ್ಷಸಾಃ ॥ ೯೨ ॥
ಯಥಾ ಹ್ಯನಾಥೋ ವೃಕ್ಷಾದಿಃ ಪೀಡ್ಯತೇ ನಿಖಿಲೈರಪಿ ।
ರಾಜ್ಞಾ ಪರಿಗೃಹೀತೋ ಯಸ್ತಂ ನ ಪಶ್ಯಂತಿ ಕೇಚನ ॥ ೯೩ ॥

ತಸ್ಮಾತ್-ಆದ್ದರಿಂದ, ಯತ್‌ಕರ್ಮ-ಯಾವ ಕರ್ಮವು, ವಿಹಿತಂ-ಶಾಸ್ತ್ರದಿಂದ ವಿಧಿಸಲ್ಪಟ್ಟಿರುವುದೋ, ತತ್-ಅದನ್ನು, ಕೃತ್ವಾ, ಆಚರಿಸಿ, ಕೇಶವೇ-ಶ್ರೀಹರಿಯಲ್ಲಿ ಅರ್ಪಯೇತ್-ಅರ್ಪಿಸಬೇಕು; ತಸ್ಮಿನ್-ಆತನಲ್ಲಿ (ಶ್ರೀವಿಷ್ಣುವಿನಲ್ಲಿ), ಯತ್-ಯಾವುದು, ಅನರ್ಪಿತಂ-ಅರ್ಪಿಸಲ್ಪಟ್ಟಿಲ್ಲವೋ, ತತ್-ಆ ಕರ್ಮವನ್ನು (ಕರ್ಮಫಲವನ್ನು), ರಾಕ್ಷಸಾಃ-ರಾಕ್ಷಸರು, ವಿಲುಂಪಂತಿ-ಅಪಹರಿಸುತ್ತಾರೆ; ಯಥಾ- ಹೇಗೆಂದರೆ, ಅನಾಥಃ-ನಾಥರಿಲ್ಲದ (ಸ್ವಾಮಿರಹಿತ), ವೃಕ್ಷಾದಿಃ-ವೃಕ್ಷ ಮೊದಲಾದವುಗಳು (ಫಲಮರಗಳೇ ಮೊದಲಾದ ಯಜಮಾನರಿಲ್ಲದ ವಸ್ತುಗಳು), ನಿಖಿಲೈಃ ಅಪಿ-ಸಮಸ್ತರಿಂದ (ಸಾರ್ವಜನಿಕರಿಂದ), ಪೀಡ್ಯತೇ-ಪೀಡಿಸಲ್ಪಡುತ್ತವೆ; ಯಃ-ಯಾವ

---

ಮಾಡಿಕೊಳ್ಳುವುದಿಲ್ಲವೋ), ಆತನು ಶ್ರೀವಿಷ್ಣುವಿನ ಶಿಕ್ಷೆಗೆ ಅರ್ಹನಾಗುತ್ತಾನೆ ಮತ್ತು ನರಕಲೋಕಗಳನ್ನೂ ಹೊಂದುತ್ತಾನೆ (೯೦-೯೧). ಆದ್ದರಿಂದ, ವಿವೇಕಿಯು, ವಿಹಿತಕರ್ಮಗಳನ್ನಾಚರಿಸಿ ಶ್ರೀವಿಷ್ಣುವಿಗೆ ಅರ್ಪಿಸಬೇಕು; ಅನರ್ಪಿತವಾದ ಕರ್ಮಗಳನ್ನು (ಕರ್ಮಫಲಗಳನ್ನು) ರಾಕ್ಷಸರು ಅಪಹರಿಸುತ್ತಾರೆ; ಹೇಗೆಂದರೆ—ಒಡೆಯರಿಲ್ಲದ (ಅನಾಥ) ವೃಕ್ಷಾದಿಗಳನ್ನು ಸರ್ವರೂ ಪೀಡಿಸುತ್ತಾರೆ; ಯಾರ ಸ್ವಾಮ್ಯಕ್ಕೂ ಒಳಪಡದ ಫಲವೃಕ್ಷಗಳನ್ನು ಸರ್ವರೂ ಆಕ್ರಮಿಸಿ, ನಾಶಗೊಳಿಸುತ್ತಾರೆ—ರಾಜನಿಂದ ಸ್ವೀಕೃತವಾದ (ರಾಜನಿಗೆ ಸೇರಿದ ವೃಕ್ಷಾದಿ) ವಸ್ತುಗಳನ್ನು ಯಾರೂ ಕಣ್ಣೆತ್ತಿ ನೋಡಲಂಜುತ್ತಾರೆ; ಇದು ಲೋಕಾನುಭವಸಿದ್ಧವು; ಇದರಂತೆ ವಿಷ್ಣುವಿನಲ್ಲಿ ಅರ್ಪಿಸಲ್ಪಡದ (ಆತನ ವಶಕ್ಕೆ ಒಪ್ಪಿಸದ) ಕರ್ಮವು, ಅನಾಥವೃಕ್ಷಾದಿಯಂತೆ, ಎಂದು ತಿಳಿಯಬೇಕು (೯೨-೯೩). ಶಾಸ್ತ್ರಗಳಿಂದ ನಿಷೇಧಿಸಲ್ಪಟ್ಟ (ಮಾಡತಕ್ಕದ್ದಲ್ಲವೆಂದು ಹೇಳಲಾದ) ಕರ್ಮಗಳನ್ನು ಶ್ರೀಹರಿಯ ಆಜ್ಞೆಯೆಂದು ತಿಳಿದು, ದೂರದಿಂದಲೇ

ವೃಕ್ಷಾದಿಗಳು, ರಾಜ್ಞಾ-ರಾಜನಿಂದ, ಪರಿಗೃಹೀತಃ-ಸ್ವೀಕೃತವಾದರೆ (ರಾಜನು ತನ್ನ ವಶಕ್ಕೆ ತೆಗೆದುಕೊಂಡರೆ), ತಂ-ಅದನ್ನು (ಆ ವಸ್ತುಗಳನ್ನು), ಕೇಚನ-ಯಾರೊಬ್ಬರೂ, ನ ಪಶ್ಯಂತಿ-(ರಾಜಭಯದಿಂದ ಕಣ್ಣಿನಿಂದ ಸಹ ನೋಡುವುದಿಲ್ಲ—ಆ ವೃಕ್ಷಾದಿಗಳಿಗೆ ಯಾವ ಪೀಡೆಯೂ ಇರುವುದಿಲ್ಲ); ಹಿ ಲೋಕಾನುಭವಸಿದ್ಧ ಈ ದೃಷ್ಟಾಂತದಂತೆ ವಿಷ್ಣ್ವರ್ಪಿತ, ಅನರ್ಪಿತ ಕರ್ಮಫಲಗಳನ್ನು ತಿಳಿಯಬೇಕು.

ಹರೇರಾಜ್ಞೇತಿ ಮನ್ವಾನೋ ನಿಷಿದ್ಧಂ ದೂರತಸ್ತ್ಯಜೇತ್ ।
ಪ್ರಮಾದಾತ್ಸಂಕಟಾದ್ಧಾರ್ಷ್ಟ್ಯಾದ್ಯದಿ ಕುರ್ವೀತ ಪಾತಕಂ ॥ ೯೪ ॥
ಪ್ರಾಯಶ್ಚಿತ್ತಂ ಚರೇತ್ತಸ್ಯ ನಾನಿಷ್ಟಂ ಜಾಯತೇ ತತಃ ।

(ವಿವೇಕಿಯು), ಹರೇಃ-ಶ್ರೀಹರಿಯ, ಆಜ್ಞಾ-ಆಜ್ಞೆಯು, ಇತಿ-ಎಂದು, ಮನ್ವಾನಃ-ತಿಳಿದು, ನಿಷಿದ್ಧಂ-ನಿಷೇಧಿಸಲ್ಪಟ್ಟ ಕರ್ಮವನ್ನು, ದೂರತಃ-ದೂರದಿಂದಲೇ, ತ್ಯಜೇತ್-ಬಿಡಬೇಕು (ನಿಷಿದ್ಧಾಚರಣೆಯನ್ನು ಮನಸ್ಸಿನಿಂದ ಸಹ ಚಿಂತಿಸಕೂಡದು); ಪ್ರಮಾದಾತ್-ಪ್ರಮಾದದಿಂದ (ತನ್ನ ಕೈಮೀರಿದ ಕಾರಣಗಳಿಂದ ಅನಿಚ್ಛಿತವಾಗಿ), ಸಂಕಟಾತ್-ಸಂಕಟದಿಂದ (ಮಹದ್ದುಃಖವು ಅನಿವಾರ್ಯವೆಂದು ತಿಳಿದು), ಧಾರ್ಷ್ಟ್ಯಾತ್-ಧಾರ್ಷ್ಟ್ಯದಿಂದ (ನಿಷಿದ್ಧವನ್ನಾಚರಿಸುವುದರಿಂದ ಯಾವ ಅನಿಷ್ಟವೂ ಸಂಭವಿಸಲಾರದೆಂಬ ತಪ್ಪು ಧೈರ್ಯದಿಂದ), ಪಾತಕಂ-(ನಿಷಿದ್ಧಾಚರಣರೂಪದ) ಪಾಪವನ್ನು, ಯದಿ ಕುರ್ವೀತ-ಒಂದು ವೇಳೆ ಆಚರಿಸಿದರೆ, ತಸ್ಯ-ಅದಕ್ಕೆ (ಪರಿಹಾರಕ್ಕಾಗಿ), ಪ್ರಾಯಶ್ಚಿತ್ತಂ-ಪ್ರಾಯಶ್ಚಿತ್ತವನ್ನು (ಪಾಪಮಾರ್ಜನಕರ್ಮವನ್ನು), ಚರೇತ್-ಆಚರಿಸಬೇಕು; ತತಃ-ಹಾಗೆ ಮಾಡುವುದರಿಂದ (ಆ ಪಾಪದಿಂದ), ಅನಿಷ್ಟಂ-ಅನಿಷ್ಟವು (ದುಃಖರೂಪದ ಫಲವು), ನ ಜಾಯತೇ-ಉಂಟಾಗುವುದಿಲ್ಲ.

---

ತ್ಯಜಿಸಬೇಕು; ಪ್ರಮಾದದಿಂದಾಗಲಿ, ಸಂಕಟಾವಸ್ಥೆಯಲ್ಲಾಗಲಿ, ಧಾರ್ಷ್ಟ್ಯದಿಂದಾಗಲಿ (ನಿಷಿದ್ಧ) ಪಾತಕವನ್ನಾಚರಿಸಿದರೆ, ಅದರ ಪರಿಹಾರಕ್ಕಾಗಿ, ಶಾಸ್ತ್ರೋಕ್ತ ಪ್ರಾಯಶ್ಚಿತ್ತವನ್ನು ಆಚರಿಸಬೇಕು—ಹಾಗೆ ಮಾಡಿದರೆ, ಅದು ಅನಿಷ್ಟಪ್ರದವಾಗುವುದಿಲ್ಲ (೯೪). ಮಿಶ್ರಸ್ವಭಾವದ ಬಹುಪ್ರಕಾರದ ಪಾಪಗಳ ನಿವೃತ್ತಿಯನ್ನು ಅಪೇಕ್ಷಿಸುವವನು, ಶ್ರೀಹರಿಯನ್ನೇ ಶರಣುಹೊಂದಬೇಕು; ಕೃಪಾಸಮುದ್ರನಾದ ಆತನು, ಬಹುಪಾಪಗಳನ್ನು ಪರಿಹರಿಸುತ್ತಾನಲ್ಲದೇ, ಮಹತ್ತರವಾದ (ಗುರು—ಭಾರವಾದ, ಮಹಾದುಃಖಕ್ಕೆ ಕಾರಣವಾಗುವ) ಪಾಪಗಳನ್ನು (ಲಘು-ಹಗುರ-ಅಲ್ಪ) ಫಲಪ್ರಾಪಕಗಳನ್ನಾಗಿ ಸಹ ಮಾಡುತ್ತಾನೆ (೯೫). ಶ್ರುತಿಸ್ಮೃತಿಪುರಾಣಗಳು ಹೇಳುವ ವಿಷಯಕ್ಕೆ ಆಯುರ್ವೇದವೇ ನಿದರ್ಶನವು; ಅಪಥ್ಯಮಾಡುವುದರಿಂದ ರೋಗವುಂಟಾಗುತ್ತದೆ;

**ಸಂಕೀರ್ಣನಾನಾವಿಧಪಾತಕಾನಾಂ**
**ನಿವೃತ್ತಿಮೀಪ್ಸುಃ ಶರಣಂ ವ್ರಜೇದ್ಧರಿಂ ।**
**ದಯಾಲುರೇತಾನಿ ನಿಬರ್ಹ್ಯ ಶೀಘ್ರಂ**
**ಗುರೂಣಿ ಪಾಪಾನಿ ಲಘೂಕರೋತಿ ॥ ೯೫ ॥**

ಸಂಕೀರ್ಣನಾನಾವಿಧಪಾತಕಾನಾಂ-ಮಿಶ್ರಸ್ವಭಾವದ (ಒಂದಕ್ಕಿಂತ ಹೆಚ್ಚಾಗಿ ಸೇರಿರ) ಬಹುಪ್ರಕಾರದ ಪಾಪಗಳ, ನಿವೃತ್ತಿಂ-ಪರಿಹಾರವನ್ನು, ಈಪ್ಸುಃ-ಇಚ್ಛಿಸುವವನು, ಹರಿಂ-ಶ್ರೀಹರಿಯನ್ನು, ಶರಣಂ ವ್ರಜೇತ್-ಆಶ್ರಯವನ್ನು ಹೊಂದಬೇಕು (ಶರಣುಹೊಂದಬೇಕು); ದಯಾಲುಃ-ದಯಾಪೂರ್ಣಹೃದಯವುಳ್ಳ ಶ್ರೀಹರಿಯು, ಏತಾನಿ-ಈ ಬಹುವಿಧ ಪಾಪಗಳನ್ನು, ನಿಬರ್ಹ್ಯ-ಕಿತ್ತೊಗೆದು (ನಿವಾರಿಸಿ), ಶೀಘ್ರಂ-ಬೇಗನೆ, ಗುರೂಣಿ-ಮಹತ್ತಾದ (ದೊಡ್ಡ), ಪಾಪಾನಿ-ಪಾಪಗಳನ್ನೂ ಲಘೂಕರೋತಿ-ಅಲ್ಪವಾಗಿ (ಅಲ್ಪಫಲವುಳ್ಳವುಗಳನ್ನಾಗಿ) ಮಾಡುತ್ತಾನೆ.

**ಶ್ರುತಿಸ್ಮೃತಿಪುರಾಣೋಕ್ತಿಷ್ವಾಯುರ್ವೇದೋ ನಿದರ್ಶನಂ ।**
**ಅಪಥ್ಯಾಜ್ಜಾಯತೇ ರೋಗಃ ಪಥ್ಯಾದೌಷಧಸೇವನಾತ್ ॥ ೯೬ ॥**
**ರೋಗನಾಶಃ ಸ್ಫುಟಂ ದೃಷ್ಟೋ ರಸಾಯನನಿಷೇವಣಾತ್ ।**
**ಜಾಯತೇ ವಪುಷೋ ದಾರ್ಢ್ಯಂ ಯಥಾದೇಹಂ ಯಥಾವಯಃ ॥೯೭॥**
**ತಥಾ ಯಥಾ ಪ್ರಕೃತಿಕಂ ಜೀವಾನಾಂ ಜಾಯತೇ ಫಲಂ ।**

ಶ್ರುತಿಸ್ಮೃತಿಪುರಾಣೋಕ್ತಿಷು-ಶ್ರುತಿ (ವೇದ), ಸ್ಮೃತಿ (ಧರ್ಮಶಾಸ್ತ್ರಾದಿಗಳು), ಪುರಾಣಗಳು, ಹೇಳುವ ಮಾತುಗಳು ಸತ್ಯವೆಂಬಲ್ಲಿ ಆಯುರ್ವೇದಃ-ಆಯುರ್ವೇದವು (ರೋಗಚಿಕಿತ್ಸೆಯ ಶಾಸ್ತ್ರವು), ನಿದರ್ಶನಂ-ದೃಷ್ಟಾಂತವಾಗುತ್ತದೆ:

ಪಥ್ಯವನ್ನು ಅನುಸರಿಸಿ, ಔಷಧವನ್ನು ಸೇವಿಸುವುದರಿಂದ, ರೋಗನಾಶವಾಗುತ್ತದೆ—ಇದು ಸರ್ವಾನುಭವಸಿದ್ಧವಾಗಿದೆ (ಪ್ರಾಯಶ್ಚಿತ್ತಾದಿಗಳಿಂದ ಪಾಪದ ಪರಿಹಾರವಾಗುವುದೆಂಬಲ್ಲಿ ನಿದರ್ಶನವು): ರಸಾಯನ ಸೇವನೆಯಿಂದ, ವಯೋನುಗುಣವಾಗಿಯೂ, ದೇಹಸ್ವಭಾವಕ್ಕನುಗುಣವಾಗಿಯೂ, ದೇಹವು ದೃಢವಾಗುತ್ತದೆ (ಪುಷ್ಟವಾಗಿ ವಾರ್ಧಕ್ಯಲಕ್ಷಣಗಳ ಪರಿಹಾರವೂ ಕಂಡುಬರುತ್ತದೆ); ಹೀಗೆಯೇ, ಜೀವಸ್ವಭಾವ ಧರ್ಮಗಳನ್ನನುಸರಿಸಿ, ಅವರ ಕರ್ಮಗಳೂ ಫಲಕೊಡುತ್ತವೆ (ಒಂದು ಕರ್ಮದಿಂದ ಎಲ್ಲ ಜೀವರಿಗೆ ಏಕಪ್ರಕಾರವಾದ ಫಲವು ದೊರೆಯುವುದಿಲ್ಲ) (೯೬-೯೭). ಬ್ರಹ್ಮದೇವನು ಜಗತ್ತಿನಲ್ಲಿ ಸೃಷ್ಟಿಕಾರ್ಯವನ್ನು ನಿಯಮಿಸುವಾತನು; ಪಾಲನದೇವತೆಯು (ಪ್ರಾಣಿಗಳ ರಕ್ಷಣಕರ್ತೃತ್ವ ನಿಯಾಮಕನು), ಶ್ರೀವಿಷ್ಣುವು; ಸಕಲ ಪಾಲನಕರ್ತೃಕವು ಪಾಲಕನಿಗೆ ಪಾಲ್ಯ

(ಹೇಗೆಂದರೆ), ಅಪಥ್ಯಾತ್-ಅಪಥ್ಯಭೋಜನಾದಿಗಳಿಂದ (ಪಥ್ಯನಿಯಮಗಳನ್ನು ತ್ಯಜಿಸುವುದರಿಂದ), ರೋಗಃ-ರೋಗವು, ಜಾಯತೇ-ಉಂಟಾಗುತ್ತದೆ; ಪಥ್ಯಾತ್-ಪಥ್ಯವನ್ನು ನಡೆಸಿ, ಔಷಧಸೇವನಾತ್-ಔಷಧವನ್ನು ಸೇವಿಸುವುದರಿಂದ, ರೋಗನಾಶಃ-ರೋಗದ ನಾಶವು, ಸ್ಫುಟಂ-ಅನುಭವಸಿದ್ಧವಾಗಿ, ದೃಷ್ಟಃ-ಕಂಡಿದೆ; ರಸಾಯನನಿಷೇವಣಾತ್-ವಿಶಿಷ್ಟ ರಸಾಯನಗಳನ್ನು ಸೇವಿಸುವುದರಿಂದ, ಯಥಾದೇಹಂ-ದೇಹಸ್ಥಿತಿಯಂತೆ (ಪ್ರಕೃತಿಗನುಗುಣವಾಗಿ), ಯಥಾವಯಃ-ವಯೋನುಗುಣವಾಗಿ, ವಪುಷಃ-ದೇಹದ, ದಾರ್ಢ್ಯಂ-ದಾರ್ಢ್ಯವು, ಜಾಯತೇ-ಉಂಟಾಗುತ್ತದೆ; ತಥಾ-ಹೀಗೆಯೇ, ಜೀವಾನಾಂ- ಜೀವರ, ಯಥಾಪ್ರಕೃತಿಕಂ-ಸ್ವಭಾವಗಳನ್ನನುಸರಿಸಿ,[1] ಫಲಂ-(ಕರ್ಮಗಳ) ಫಲವೂ, (ಜೀವಾನಾಂ- ಜೀವರಿಗೆ), ಜಾಯತೇ-ದೊರಕುತ್ತದೆ.

ಬ್ರಹ್ಮಾ ಹಿ ಸೃಷ್ಟಿದೇವೋತ್ರ ವಿಷ್ಣುಃ ಪಾಲನದೇವತಾ ॥ ೯೮ ॥

---

ನಲ್ಲಿರುವ ಸ್ನೇಹದಿಂದಲೇ ಸಾಧ್ಯವಾಗಿದೆ; ಈ ಸ್ನೇಹವು ವಿಷ್ಣುಮಾಯೆಯಿಂದ, ಉತ್ಪಾದಿಸಲಾಗುತ್ತದೆ; ಶ್ರೀವಿಷ್ಣುವು ತನ್ನ ಇಚ್ಛಾಧೀನವಾದ ತ್ರಿಗುಣಾತ್ಮಕ ಪ್ರಕೃತಿಯನ್ನೂ ತನ್ನಿಯಾಮಕ (ಚಿತ್‌ಪ್ರಕೃತಿ) ಶ್ರೀಲಕ್ಷ್ಮೀದೇವಿಯನ್ನೂ ಪ್ರವೃತ್ತಿಸಿ, ಮಾಯಾನಾಮಕ ತನ್ನ ಇಚ್ಛೆಯಿಂದಲೇ ಪಾಲನೆಗೆ ಅವಶ್ಯಕವಾದ ಸ್ನೇಹವನ್ನು— ಅಭಿಮಾನವನ್ನು ಪ್ರಾಣಿಗಳಲ್ಲಿ ಉಂಟುಮಾಡುತ್ತಾನೆ (೯೭). ಈ ಸ್ನೇಹದಿಂದಲೇ, ಸಕಲ ಪ್ರಾಣಿವರ್ಗದಲ್ಲಿ ಸಕಲ ಪ್ರಾಣಿಗಳ ಸರ್ವಪ್ರಕಾರದ ವೃದ್ಧಿಯು (ದೇಹಾದಿಗಳ ವೃದ್ಧಿಯು), ಮಾತ್ರ ಮೊದಲಾದವರ ಮೂಲಕ ಉಂಟಾಗುತ್ತಿರುವುದು ಕಂಡುಬರುತ್ತದೆ; ಆದ್ದರಿಂದ (ಈ ವಿಷ್ಣುಮಾಯಾನಿರ್ಮಿತವಾದ) ಈ ಸ್ನೇಹವನ್ನು ಪರಿತ್ಯಜಿಸಕೂಡದು (೯೯). ಬ್ರಹ್ಮಚರ್ಯಾದಿ ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠವಾದುದು; ಕುಟುಂಬದ ಯಜಮಾನನಾದ ಗೃಹಸ್ಥನು, ತಾಯಿ, ತಂದೆ, ಮಕ್ಕಳು, ಪತ್ನಿಯರೇ ಮೊದಲಾದ ತನ್ನಿಂದ ಪೋಷ್ಯರಾದ ಸಮಸ್ತರನ್ನೂ, ಅವರವರ ವಯಸ್ಸು, ದೇಹಸ್ಥಿತಿ ಮೊದಲಾದ ಪರಿಸ್ಥಿತಿಗಳಿಗನುಸಾರವಾಗಿ, ಕಾಲೋಚಿತವಾದ ತನ್ನ ಕೃತಿಗಳಿಂದ ಯಥಾಶಕ್ತಿ ಉಪಚರಿಸಿ

---

1. ದೇಹದ (ಪ್ರಕೃತಿ) ಸ್ವಭಾವದಂತೆ, ರಸಾಯನಾದಿಗಳು ಪುಷ್ಟಿಯನ್ನೂ ದೇಹಶಕ್ತಿಯನ್ನೂ ದೊರಕಿಸುತ್ತವೆ—ಅದರಂತೆ, ಆಚರಿಸುವ ಕರ್ಮಗಳು (ಬಾಹ್ಯದೃಷ್ಟಿಗೆ) ಏಕಪ್ರಕಾರವಾಗಿದ್ದರೂ, ಆ ಕರ್ಮಗಳು ಸಾತ್ತ್ವಿಕಾದಿ ಜೀವಸ್ವಭಾವಗಳನ್ನನುಸರಿಸಿ (ಸ್ವರೂಪಯೋಗ್ಯತೆಯಂತೆ) ಫಲಗಳನ್ನು ಕೊಡುತ್ತವೆ. ದುರ್ಯೋಧನಾದಿಗಳ ಯಜ್ಞಾದಿಕರ್ಮಫಲಗಳ ರೀತಿಯಿಂದ ವಿಲಕ್ಷಣವೂ, ಉತ್ಕೃಷ್ಟವೂ, ಅಧಿಕವೂ ಆದ ಫಲಗಳನ್ನು ಧರ್ಮರಾಜಾದಿಗಳು ತಮ್ಮ ಯಜ್ಞಾದಿಗಳಿಂದ ಹೊಂದಿದಂತೆ.

**ಸರ್ವೇಷಾಂ ಪಾಲನಂ ಸ್ನೇಹಾತ್ ಸ್ನೇಹೋ ಮಾಯಾ ಹಿ ವೈಷ್ಣವೀ ।**

ಅತ್ರ-ಈ ಜಗತ್ತಿನಲ್ಲಿ, ಸೃಷ್ಟಿರ್ದೇವಃ-ಸೃಷ್ಟಿನಿಯಾಮಕದೇವನು, ಬ್ರಹ್ಮಾ-ಬ್ರಹ್ಮ ದೇವನು; ಪಾಲನದೇವತಾ-ಪಾಲನಕರ್ತವ್ಯನಿಯಾಮಕನು, ವಿಷ್ಣುಃ-ಶ್ರೀವಿಷ್ಣುವು; ಸರ್ವೇಷಾಂ-ಎಲ್ಲರ, ಪಾಲನಂ-ರಕ್ಷಣೆಯು, ಸ್ನೇಹಾತ್-ಸ್ನೇಹದಿಂದ (ಪಾಲಕನಿಗೆ ಪಾಲ್ಯರಾದವರಲ್ಲಿರುವ ಸ್ನೇಹದಿಂದ), ಸ್ನೇಹಃ-(ಆ) ಸ್ನೇಹವೆಂಬುದು, ವೈಷ್ಣವೀ-ಶ್ರೀವಿಷ್ಣುವಿನ, ಮಾಯಾ-ಮಾಯೆಯು (ಮಾಯಾ-ಇಚ್ಛೆ, ಶಕ್ತಿ ಮತ್ತು ಚಿದಚಿತ್ ಪ್ರಕೃತಿಃ-ಜಡಪ್ರಕೃತಿ ಮತ್ತು ತದಭಿಮಾನಿ ಶ್ರೀಮಹಾಲಕ್ಷ್ಮೀದೇವಿ); ಹಿ-ಈ ನಿಯಮವು ಶಾಸ್ತ್ರಪ್ರಸಿದ್ಧ.

**ಅತಃ ಸರ್ವೇಷು ಭೂತೇಷು ಮಾತ್ರಾದಿಸ್ನೇಹತೋಽಖಿಲಾ ॥ ೯೯ ॥**

**ಜಂತೂನಾಂ ದೃಶ್ಯತೇ ವೃದ್ಧಿಸ್ತತೋ ನೈನಂ ಪರಿತ್ಯಜೇತ್ ।**

ಅತಃ-ಈ ಕಾರಣದಿಂದ, ಸರ್ವೇಷು-ಸಕಲ, ಭೂತೇಷು-ಪ್ರಾಣಿಗಳಲ್ಲಿ ಅಖಿಲಾ- ಸಮಸ್ತವಾದ, ವೃದ್ಧಿಃ-ವೃದ್ಧಿಯು, ಮಾತ್ರಾದಿಸ್ನೇಹತಃ-ಮಾತೃ(ತಾಯಿ) ಮೊದಲಾದವರ ಸ್ನೇಹದಿಂದ, ಜಂತೂನಾಂ-(ಅನ್ಯ) ಪ್ರಾಣಿಗಳಿಗೆ, ದೃಶ್ಯತೇ-ಕಂಡುಬರುತ್ತದೆ; ತತಃ-ಆದ್ದರಿಂದ, ಏನಂ-ಈ ಸ್ನೇಹವನ್ನು, ನ ಪರಿತ್ಯಜೇತ್-ಬಿಡಬಾರದು.

**ಆಶ್ರಮಾಣಾಂ ಚ ಸರ್ವೇಷಾಂ ವರಿಷ್ಠೋಽಯಂ ಗೃಹಾಶ್ರಮಃ ॥ ೧೦೦**

**ಮಾತಾಪಿತೃಸುತಸ್ತ್ರ್ಯಾದೌ ಪೋಷ್ಯವರ್ಗೇಽಖಿಲೇಽಪಿ ಚ ।**

**ಯಥಾವಯೋ ಯಥಾಯೋಗ್ಯಂ ಯಥಾಕಾಲಂ ಯಥಾಕೃತಿ ॥ ೧೦೧ ॥**

**ಯಥಾಶಕ್ತಿ ಭಜೇತ್ ಸರ್ವಾಂಸ್ತೇನೈವ ಶುಭಮಶ್ನುತೇ ।**

---

ಸೇವಿಸಬೇಕು; ಹೀಗೆ ಮಾಡುವುದರಿಂದ ಆತನು ಶುಭವನ್ನೇ ಹೊಂದುತ್ತಾನೆ; ಪುಣ್ಯವನ್ನೂ, ಇಹಪರಗಳ ಸುಖವನ್ನೂ, ಶ್ರೀಹರಿಪ್ರೀತಿಯನ್ನೂ (ಕುಟುಂಬರಕ್ಷಣೆಯು ಭಗವದಾಜ್ಞೆಯೆಂದು ತಿಳಿದು, ಪಾಲನಕಾರ್ಯವನ್ನು ನಿರ್ವಹಿಸುವುದರಿಂದ ಶ್ರೀಹರಿಪ್ರೀತಿಯನ್ನೂ) ಹೊಂದುತ್ತಾನೆ; ದ್ರವ್ಯಲೋಭದಿಂದಾಗಲಿ ದ್ವೇಷಾದಿ ಭಾವನೆಗಳಿಂದಾಗಲಿ, ಪೋಷ್ಯವರ್ಗವನ್ನು ಯಥೋಚಿತವಾಗಿ ಕಾಪಾಡದಿದ್ದಲ್ಲಿ ನಿಶ್ಚಯವಾಗಿ (ಭಗವಂತನ ಆಜ್ಞೆಯನ್ನು ಉಲ್ಲಂಘಿಸಿದ ಮಹಾ ಅಪರಾಧಕ್ಕೆ ಗುರಿಯಾಗಿ) ನರಕದಲ್ಲಿ ಬೀಳುತ್ತಾನೆ; ಹೀಗೆ ತನ್ನ ಕರ್ತವ್ಯವನ್ನು ನಿರ್ವಹಿಸುವುದರಲ್ಲಿ ಪೋಷ್ಯವರ್ಗದಲ್ಲಿ ಆಸಕ್ತನಾಗಬಾರದು (ಅಹಂ ಮಮಕಾರಗಳೆಂಬ ಅಭಿಮಾನವನ್ನು ಹೊಂದಬಾರದು); ಆದರೂ ಪೂರ್ಣಾಭಿಮಾನಪುಳ್ಳವನಂತೆ, ನಡೆದುಕೊಳ್ಳಬೇಕು (ಇದರಿಂದ ಶ್ರೀಹರಿಸೇವೆಯನ್ನು ಸಲ್ಲಿಸಿದ ಫಲ ದೊರೆಯುತ್ತದೆ) (೧೦೦-೧೦೩).

**ನೈವಂ ಕುರ್ಯಾದ್ದ್ರವ್ಯಲೋಭಾದ್ಯದಿ ದ್ವೇಷಾದಿನಾಥವಾ ॥ ೧೦೨ ॥**

**ತದಾ ತತ್ಪ್ರೀತಿಹಾನೇನ ನರಕೇ ಪತತಿ ಧ್ರುವಂ ।**

**ಅನಾಸಕ್ತಃ ಸಕ್ತ ಇವ ಸ್ನೇಹಂ ಸರ್ವತ್ರ ದರ್ಶಯೇತ್ ॥ ೧೦೩ ॥**

ಸರ್ವೇಷಾಂ-ಎಲ್ಲ ಆಶ್ರಮಾಣಾಂ-ಆಶ್ರಮಗಳ (ಮಧ್ಯದಲ್ಲಿ), (ಬ್ರಹ್ಮಚರ್ಯಾದಿ ಆಶ್ರಮಗಳಲ್ಲಿ), ಅಯಂ-ಈ, ಗೃಹಾಶ್ರಮಃ-ಗೃಹಸ್ಥಾಶ್ರಮವು, ವರಿಷ್ಠಃ-ಶ್ರೇಷ್ಠವಾದುದು; ಮಾತಾಪಿತೃಸುತಸ್ತ್ರ್ಯಾದೌ-ತಾಯಿ, ತಂದೆ, ಮಕ್ಕಳು, ಸ್ತ್ರೀಯರು (ಭಾರ್ಯಾದಿ) ಮೊದಲಾದ, ಅಖಿಲೇ-ಸಕಲ, ಪೋಷ್ಯವರ್ಗೇ-ಪಾಲ್ಯವರ್ಗದಲ್ಲಿ ಯಥಾವಯಂ-ಅವರವರ (ಯಜಮಾನನ ರಕ್ಷಣೆಗೆ ಅರ್ಹರೆಂದು ಶ್ರೀಹರಿಯಿಂದ ವಹಿಸಲ್ಪಟ್ಟಿರುವವರ) ವಯೋನುಗುಣವಾಗಿ (ಶೈಶವ, ವಾರ್ಧಕ್ಯಾದಿ ಅವಸ್ಥೆಗಳನ್ನನು ಸರಿಸಿ), ಯಥಾಯೋಗ್ಯಂ-ಯಥಾಯೋಗ್ಯವಾಗಿ (ಅವರವರಿಗೆ ಯೋಗ್ಯವಾಗುವಂತೆ), ಯಥಾಕಾಲಂ-ಕಾಲೋಚಿತವಾಗಿ, ಯಥಾಕೃತಿ-ಯೋಗ್ಯಕೃತಿಗಳಿಂದ, ಯಥಾಶಕ್ತಿ-(ತನ್ನ ದೇಹದ್ರವ್ಯಾದಿ) ಶಕ್ತಿಯಿದ್ದಷ್ಟು ಸರ್ವಾನ್-ಎಲ್ಲರನ್ನೂ ಭಜೇತ್-ಸೇವಿಸಬೇಕು (ಉಪಚರಿಸಿ ಪಾಲಿಸಬೇಕು); ತೇನೈವ-ಅದರಿಂದಲೇ, ಶುಭಂ-ಶುಭವನ್ನು (ಪುಣ್ಯವನ್ನು, ಶ್ರೀಹರಿಪ್ರೀತಿಯನ್ನು), ಅಶ್ನುತೇ-ಹೊಂದುತ್ತಾನೆ; ದ್ರವ್ಯಲೋಭಾತ್-ದ್ರವ್ಯಲೋಭದಿಂದ, ಅಥವಾ, ದ್ವೇಷಾದಿನಾ-ದ್ವೇಷಾದಿಭಾವದಿಂದ, ಯದಿ-ಒಂದು ಪಕ್ಷದಲ್ಲಿ ಏವಂ-ಹೀಗೆ (ರಕ್ಷಣೆಯನ್ನು) ಪಾಲನೆಯನ್ನು ನ ಕುರ್ಯಾತ್-ಮಾಡದಿದ್ದರೆ, ತದಾ-ಆಗ, ತತ್ಪ್ರೀತಿಹಾನೇನ-ಅವರ (ಪೋಷ್ಯವರ್ಗ

---

ಗೃಹಸ್ಥಾಶ್ರಮಿಯು, ಪೋಷ್ಯವರ್ಗದ ರಕ್ಷಣೆ ಮೊದಲಾದುದೆಲ್ಲವೂ, ಶ್ರೀಹರೀಚ್ಛಾಧೀನವೆಂದು ತಿಳಿದು, ಆ ಕರ್ತವ್ಯನಿರ್ವಹಣೆಗಾಗಿ ಆತನನ್ನೇ ಶರಣುಹೊಂದಬೇಕು; ವಿಧ್ಯುಕ್ತವಾದ ಗೃಹಾಶ್ರಮೋಚಿತ ಕರ್ಮಗಳನ್ನು ಫಲಾಶಾರಹಿತನಾಗಿ, ಆಚರಿಸಬೇಕು—ನಿಷಿದ್ಧಕರ್ಮಗಳನ್ನು ತ್ಯಜಿಸಬೇಕು; ಶ್ರೀಹರೀಚ್ಛೆಯಿಂದ ದೊರೆತದ್ದರಿಂದ ಸಂತುಷ್ಟನಾಗಿ ಜೀವಿತವನ್ನು ನಡೆಸಬೇಕು; ಅನಿಷಿದ್ಧವಾದ ವಸ್ತುಗಳನ್ನು ಮಾತ್ರ ಸೇವಿಸಬೇಕು; ಕುಟುಂಬಭರಣಕ್ಕಾಗಿ ಯಥೋಚಿತವಾಗಿ ಯತ್ನಿಸಬೇಕು— ಪರರಿಗೆ ದುಃಖವನ್ನು ಕೊಡದೇ, ದುರ್ಜನರ ಆಶ್ರಯವನ್ನು ಹೊಂದದೇ, ತನ್ನನ್ನು (ತನ್ನ ದೇಹಾದಿಗಳನ್ನು) ಅತ್ಯಾಯಾಸಗೊಳಿಸದೇ, ಯತ್ನಿಸಿ, ಅದರಿಂದ ದೊರೆಯುವ ಅಲ್ಪವನ್ನೇ ಬಹು ಎಂದು ಭಾವಿಸಿ ತೃಪ್ತನಾಗಬೇಕು (೧೦೪-೧೦೬). ಈಗ ಮಾಡುವ ಕರ್ಮಗಳು ಈಗಲೇ ಫಲ ಕೊಡುವುದಿಲ್ಲ—ಹಿಂತು, ಫಲವು ಭವಿಷ್ಯತ್ಕಾಲದಲ್ಲಿ ಲಭಿಸುತ್ತದೆ; ಯತ್ನ ಮಾಡಿದಾಗ ತತ್ಕಾಲದಲ್ಲಿ ದೊರೆಯುವ ಫಲವನ್ನು ಆ ಯತ್ನದ ಫಲವೆಂದು ತಿಳಿಯಕೂಡದು; ಫಲಪ್ರಾಪ್ತಿ ವಿಷಯದಲ್ಲಿ, ಯತ್ನವು ಪೂರ್ವಕರ್ಮದ ಫಲವನ್ನು ಅಭಿವ್ಯಕ್ತಗೊಳಿಸುವ ಸಾಧನ ಮಾತ್ರವೆಂದು ತಿಳಿಯಲ್ಪಟ್ಟಿದೆ; ಆದ್ದರಿಂದ ಆಗ

**ಸರ್ವೇಷಾಂ ಪಾಲನಂ ಸ್ನೇಹಾತ್ ಸ್ನೇಹೋ ಮಾಯಾ ಹಿ ವೈಷ್ಣವೀ ।**

ಅತ್ರ-ಈ ಜಗತ್ತಿನಲ್ಲಿ, ಸೃಷ್ಟಿದೇವಃ-ಸೃಷ್ಟಿನಿಯಾಮಕದೇವನು, ಬ್ರಹ್ಮಾ-ಬ್ರಹ್ಮದೇವನು; ಪಾಲನದೇವತಾ-ಪಾಲನಕರ್ತೃವ್ಯನಿಯಾಮಕನು, ವಿಷ್ಣುಃ-ಶ್ರೀವಿಷ್ಣುವು; ಸರ್ವೇಷಾಂ-ಎಲ್ಲರ, ಪಾಲನಂ-ರಕ್ಷಣೆಯು, ಸ್ನೇಹಾತ್-ಸ್ನೇಹದಿಂದ (ಪಾಲಕನಿಗೆ ಪಾಲ್ಯರಾದವರಲ್ಲಿರುವ ಸ್ನೇಹದಿಂದ), ಸ್ನೇಹಃ-(ಆ) ಸ್ನೇಹವೆಂಬುದು, ವೈಷ್ಣವೀ-ಶ್ರೀವಿಷ್ಣುವಿನ, ಮಾಯಾ-ಮಾಯೆಯು (ಮಾಯಾ-ಇಚ್ಛೆ, ಶಕ್ತಿ ಮತ್ತು ಚಿದಚಿತ್ ಪ್ರಕೃತಿ=ಜಡಪ್ರಕೃತಿ ಮತ್ತು ತದಭಿಮಾನಿ ಶ್ರೀಮಹಾಲಕ್ಷ್ಮೀದೇವಿ); ಹಿ-ಈ ನಿಯಮವು ಶಾಸ್ತ್ರಪ್ರಸಿದ್ಧ.

**ಅತಃ ಸರ್ವೇಷು ಭೂತೇಷು ಮಾತ್ರಾದಿಸ್ನೇಹತೋಽಖಿಲಾ ॥ ೯೯ ॥**

**ಜಂತೂನಾಂ ದೃಶ್ಯತೇ ವೃದ್ಧಿಸ್ತತೋ ನೈನಂ ಪರಿತ್ಯಜೇತ್ ।**

ಅತಃ-ಈ ಕಾರಣದಿಂದ, ಸರ್ವೇಷು-ಸಕಲ, ಭೂತೇಷು-ಪ್ರಾಣಿಗಳಲ್ಲಿ ಅಖಿಲಾ- ಸಮಸ್ತವಾದ, ವೃದ್ಧಿಃ-ವೃದ್ಧಿಯು, ಮಾತ್ರಾದಿಸ್ನೇಹತಃ-ಮಾತೃ(ತಾಯಿ) ಮೊದಲಾದವರ ಸ್ನೇಹದಿಂದ, ಜಂತೂನಾಂ-(ಅಸ್ಯ) ಪ್ರಾಣಿಗಳಿಗೆ, ದೃಶ್ಯತೇ-ಕಂಡುಬರುತ್ತದೆ; ತತಃ-ಆದ್ದರಿಂದ, ಏನಂ-ಈ ಸ್ನೇಹವನ್ನು ನ ಪರಿತ್ಯಜೇತ್-ಬಿಡಬಾರದು.

**ಆಶ್ರಮಾಣಾಂ ಚ ಸರ್ವೇಷಾಂ ವರಿಷ್ಠೋಽಯಂ ಗೃಹಾಶ್ರಮಃ ॥ ೧೦೦**

**ಮಾತಾಪಿತೃಸುತಸ್ತ್ರ್ಯಾದೌ ಪೋಷ್ಯವರ್ಗೇಽಖಿಲೇಪಿ ಚ ।**

**ಯಥಾವಯೋ ಯಥಾಯೋಗ್ಯಂ ಯಥಾಕಾಲಂ ಯಥಾಕೃತಿ ॥ ೧೦೧ ॥**

**ಯಥಾಶಕ್ತಿ ಭಜೇತ್ ಸರ್ವಾಂಸ್ತೇನೈವ ಶುಭಮಶ್ನುತೇ ।**

---

ಸೇವಿಸಬೇಕು; ಹೀಗೆ ಮಾಡುವುದರಿಂದ ಆತನು ಶುಭವನ್ನೇ ಹೊಂದುತ್ತಾನೆ; ಪುಣ್ಯವನ್ನೂ, ಇಹಪರಗಳ ಸುಖವನ್ನೂ, ಶ್ರೀಹರಿಪ್ರೀತಿಯನ್ನೂ (ಕುಟುಂಬರಕ್ಷಣೆಯು ಭಗವದಾಜ್ಞೆಯೆಂದು ತಿಳಿದು, ಪಾಲನಕಾರ್ಯವನ್ನು ನಿರ್ವಹಿಸುವುದರಿಂದ ಶ್ರೀಹರಿಪ್ರೀತಿಯನ್ನೂ) ಹೊಂದುತ್ತಾನೆ; ದ್ರವ್ಯಲೋಭದಿಂದಾಗಲಿ ದ್ವೇಷಾದಿ ಭಾವನೆಗಳಿಂದಾಗಲಿ, ಪೋಷ್ಯವರ್ಗವನ್ನು ಯಥೋಚಿತವಾಗಿ ಕಾಪಾಡದಿದ್ದಲ್ಲಿ ನಿಶ್ಚಯವಾಗಿ (ಭಗವಂತನ ಆಜ್ಞೆಯನ್ನು ಉಲ್ಲಂಘಿಸಿದ ಮಹಾ ಅಪರಾಧಕ್ಕೆ ಗುರಿಯಾಗಿ) ನರಕದಲ್ಲಿ ಬೀಳುತ್ತಾನೆ; ಹೀಗೆ ತನ್ನ ಕರ್ತವ್ಯವನ್ನು ನಿರ್ವಹಿಸುವುದರಲ್ಲಿ ಪೋಷ್ಯವರ್ಗದಲ್ಲಿ ಆಸಕ್ತನಾಗಬಾರದು (ಅಹಂ ಮಮಕಾರಗಳೆಂಬ ಅಭಿಮಾನವನ್ನು ಹೊಂದಬಾರದು); ಆದರೂ ಪೂರ್ಣಾಭಿಮಾನವುಳ್ಳವನಂತೆ, ನಡೆದುಕೊಳ್ಳಬೇಕು (ಇದರಿಂದ ಶ್ರೀಹರಿಸೇವೆಯನ್ನು ಸಲ್ಲಿಸಿದ ಫಲ ದೊರೆಯುತ್ತದೆ) (೧೦೦-೧೦೩).

**ನೈವಂ ಕುರ್ಯಾದ್ದ್ರವ್ಯಲೋಭಾದ್ಯದಿ ದ್ವೇಷಾದಿನಾಥವಾ ॥ ೧೧೨ ॥**
**ತದಾ ತತ್ಸ್ಥಿತಿಹಾನೇನ ನರಕೇ ಪತತಿ ಧ್ರುವಂ ।**
**ಅನಾಸಕ್ತಃ ಸಕ್ತ ಇವ ಸ್ನೇಹಂ ಸರ್ವತ್ರ ದರ್ಶಯೇತ್ ॥ ೧೧೩ ॥**

ಸರ್ವೇಷಾಂ-ಎಲ್ಲ ಆಶ್ರಮಾಣಾಂ-ಆಶ್ರಮಗಳ (ಮಧ್ಯದಲ್ಲಿ), (ಬ್ರಹ್ಮ ಚರ್ಯಾದಿ ಆಶ್ರಮಗಳಲ್ಲಿ), ಅಯಂ-ಈ, ಗೃಹಾಶ್ರಮಃ-ಗೃಹಸ್ಥಾಶ್ರಮವು, ವರಿಷ್ಠಃ-ಶ್ರೇಷ್ಠವಾದುದು; ಮಾತಾಪಿತೃಸುತಸ್ತ್ರ್ಯಾದೌ-ತಾಯಿ, ತಂದೆ, ಮಕ್ಕಳು, ಸ್ತ್ರೀಯರು (ಭಾರ್ಯಾದಿ) ಮೊದಲಾದ, ಅಖಿಲೇ-ಸಕಲ, ಪೋಷ್ಯವರ್ಗೇ-ಪಾಲ್ಯವರ್ಗದಲ್ಲಿ ಯಥಾವಯಂ-ಅವರವರ (ಯಜಮಾನನ ರಕ್ಷಣೆಗೆ ಅರ್ಹರೆಂದು ಶ್ರೀಹರಿಯಿಂದ ವಹಿಸಲ್ಪಟ್ಟಿರುವವರ) ವಯೋನುಗುಣವಾಗಿ (ಶೈಶವ, ವಾರ್ಧಕ್ಯಾದಿ ಅವಸ್ಥೆ ಗಳನ್ನನು ಸರಿಸಿ), ಯಥಾಯೋಗ್ಯಂ-ಯಥಾಯೋಗ್ಯವಾಗಿ (ಅವರವರಿಗೆ ಯೋಗ್ಯ ವಾಗುವಂತೆ), ಯಥಾಕಾಲಂ-ಕಾಲೋಚಿತವಾಗಿ, ಯಥಾಕೃತಿ-ಯೋಗ್ಯಕೃತಿ ಗಳಿಂದ, ಯಥಾಶಕ್ತಿ-(ತನ್ನ ದೇಹದ್ರವ್ಯಾದಿ) ಶಕ್ತಿಯಿದ್ದಷ್ಟು ಸರ್ವಾನ್-ಎಲ್ಲರನ್ನೂ ಭಜೇತ್-ಸೇವಿಸಬೇಕು (ಉಪಚರಿಸಿ ಪಾಲಿಸಬೇಕು); ತೇನೈವ-ಅದರಿಂದಲೇ, ಶುಭಂ-ಶುಭವನ್ನು (ಪುಣ್ಯವನ್ನು ಶ್ರೀಹರಿಪ್ರೀತಿಯನ್ನು), ಅಶ್ನುತೇ-ಹೊಂದುತ್ತಾನೆ; ದ್ರವ್ಯಲೋಭಾತ್-ದ್ರವ್ಯಲೋಭದಿಂದ, ಅಥವಾ, ದ್ವೇಷಾದಿನಾ-ದ್ವೇಷಾದಿಭಾವ ದಿಂದ, ಯದಿ-ಒಂದು ಪಕ್ಷದಲ್ಲಿ ಏವಂ-ಹೀಗೆ (ರಕ್ಷಣೆಯನ್ನು) ಪಾಲನೆಯನ್ನು ನ ಕುರ್ಯಾತ್-ಮಾಡದಿದ್ದರೆ, ತದಾ-ಆಗ, ತತ್ಸ್ಥಿತಿಹಾನೇನ-ಅವರ (ಪೋಷ್ಯವರ್ಗ

---

ಗೃಹಸ್ಥಾಶ್ರಮಿಯು, ಪೋಷ್ಯವರ್ಗದ ರಕ್ಷಣೆ ಮೊದಲಾದುದೆಲ್ಲವೂ, ಶ್ರೀಹರೀಚ್ಛಾಧೀನವೆಂದು ತಿಳಿದು, ಆ ಕರ್ತವ್ಯನಿರ್ವಹಣೆಗಾಗಿ ಆತನನ್ನೇ ಶರಣುಹೊಂದಬೇಕು; ವಿಧ್ಯುಕ್ತವಾದ ಗೃಹಾಶ್ರಮೋಚಿತ ಕರ್ಮಗಳನ್ನು ಫಲಾಶಾರಹಿತನಾಗಿ, ಆಚರಿಸಬೇಕು—ನಿಷಿದ್ಧಕರ್ಮಗಳನ್ನು ತ್ಯಜಿಸಬೇಕು; ಶ್ರೀಹರೀಚ್ಛೆಯಿಂದ ದೊರೆತದ್ದರಿಂದ ಸಂತುಷ್ಟನಾಗಿ ಜೀವಿತವನ್ನು ನಡೆಸಬೇಕು; ಅನಿಷಿದ್ಧವಾದ ವಸ್ತುಗಳನ್ನು ಮಾತ್ರ ಸೇವಿಸಬೇಕು; ಕುಟುಂಬಭರಣಾಕ್ಕಾಗಿ ಯಥೋಚಿತವಾಗಿ ಯತ್ನಿಸಬೇಕು— ಪರರಿಗೆ ದುಃಖವನ್ನು ಕೊಡದೇ, ದುರ್ಜನರ ಆಶ್ರಯವನ್ನು ಹೊಂದದೇ, ತನ್ನನ್ನು (ತನ್ನ ದೇಹಾದಿಗಳನ್ನು) ಅತ್ಯಾಯಾಸಗೊಳಿಸದೇ, ಯತ್ನಿಸಿ, ಅದರಿಂದ ದೊರೆಯುವ ಅಲ್ಪವನ್ನೇ ಬಹು ಎಂದು ಭಾವಿಸಿ ತೃಪ್ತನಾಗಬೇಕು (೧೦೪-೧೦೬). ಈಗ ಮಾಡುವ ಕರ್ಮಗಳು ಈಗಲೇ ಫಲ ಕೊಡುವುದಿಲ್ಲ—ಕಿಂತು, ಫಲವು ಭವಿಷ್ಯತ್ಕಾಲದಲ್ಲಿ ಲಭಿಸುತ್ತದೆ; ಯತ್ನ ಮಾಡಿದಾಗ ತತ್ಕಾಲದಲ್ಲಿ ದೊರೆಯುವ ಫಲವನ್ನು ಆ ಯತ್ನದ ಫಲವೆಂದು ತಿಳಿಯಕೂಡದು; ಫಲಪ್ರಾಪ್ತಿ ವಿಷಯದಲ್ಲಿ ಯತ್ನವು ಪೂರ್ವಕರ್ಮದ ಫಲವನ್ನು ಅಭಿವ್ಯಕ್ತಗೊಳಿಸುವ ಸಾಧನ ಮಾತ್ರವೆಂದು ತಿಳಿಯಲ್ಪಟ್ಟಿದೆ; ಆದ್ದರಿಂದ ಆಗ

ದವರ) ಸ್ಥಿತಿಗೆ ಹಾನಿಯುಂಟಾಗಿ (ಪಾಲನೆಯಲ್ಲಿ ಕೊರತೆಯುಂಟಾಗಿ), ನರಕೇ-ನರಕದಲ್ಲಿ ಧ್ರುವಂ-ನಿಶ್ಚಯವಾಗಿಯೂ, ಪತತಿ-(ಈ ಕರ್ತವ್ಯದಿಂದ ಚ್ಯುತನಾದ ಯಜಮಾನನು) ಬೀಳುತ್ತಾನೆ; ಅನಾಸಕ್ತಃ-(ಪೋಷ್ಯವರ್ಗದವರಲ್ಲಿ) ಆಸಕ್ತಿಯನ್ನು ಹೊಂದದೆ (ನನ್ನವರು, ನಾನು ರಕ್ಷಕ, ಇತ್ಯಾದಿ ಅಹಂಮಮಕಾರ ರೂಪದ ಅಭಿಮಾನವನ್ನು ಬೆಳೆಸಿಕೊಳ್ಳದೇ—ತನ್ನ ಕರ್ತವ್ಯನಿರ್ವಹಣೆಗೆ ಅವಶ್ಯಕ ವಾದಷ್ಟು ಮಾತ್ರ ಆಸಕ್ತಿಯನ್ನು ಹೊಂದಿ), ಸಕ್ತಃ ಇವ-(ಅವರಲ್ಲಿ) ಆಸಕ್ತನಾದವನಂತೆ (ಪೂರ್ಣಾಭಿಮಾನವುಳ್ಳವನಂತೆ), ಸ್ನೇಹಂ-ಸ್ನೇಹವನ್ನು, ಸರ್ವತ್ರ-ಎಲ್ಲರಲ್ಲಿ ಮತ್ತು ಎಲ್ಲ ವಿಷಯಗಳಲ್ಲಿ, ದರ್ಶಯೇತ್-ನಡೆದುಕೊಳ್ಳಬೇಕು.

ವಿಷ್ಣೋರ್ಮಾಯೇತಿ ಮನ್ವಾನಸ್ತಮೇವ ಶರಣಂ ವ್ರಜೇತ್ ।
ಉದಾಸೀನತಯಾ ತಿಷ್ಠನ್ ಗೃಹೇಷು ಗೃಹಮೇಧಿನಃ ॥ ೧೦೪ ॥
ಕುರ್ವಾಣೋ ವಿಧಿವತ್ಕರ್ಮ ನಿಷಿದ್ಧಾನಿ ಪರಿತ್ಯಜೇತ್ ।
ಅನಿಷಿದ್ಧಾನ್ ಭಜೇದ್ಭೋಗಾನ್ ಯದೃಚ್ಛಾಲಬ್ಧಜೀವನಃ ॥ ೧೦೫ ॥
ಅಕೃತ್ವಾ ಪರಸಂತಾಪಮಗತ್ವಾ ಖಲಮಂದಿರಂ ।
ಅಕ್ಲೇಶಯಿತ್ವಾ ಚಾತ್ಮಾನಂ ಯತ್ಸ್ವಲ್ಪಮಪಿ ತದ್ಬಹು ॥ ೧೦೬ ॥

ಗೃಹಸ್ಥಧರ್ಮಗಳನ್ನೇ ವಿಸ್ತರಿಸುತ್ತಾರೆ :—

ವಿಷ್ಣೋಃ-ಶ್ರೀವಿಷ್ಣುವಿನ, ಮಾಯಾ ಇತಿ-ಇಚ್ಛಾಧೀನವೆಂದು, ಮನ್ವಾನಃ-ತಿಳಿದವನಾಗಿ, ತಂ ಏವ-ಆತನನ್ನೇ, ಶರಣಂ ವ್ರಜೇತ್-ಶರಣುಹೊಂದಬೇಕು; ಗೃಹಮೇಧಿನಃ-ಗೃಹಸ್ಥಾಶ್ರಮಿಯು, ಗೃಹೇಷು-ಕರ್ತವ್ಯಗಳಲ್ಲಿ (ಧರ್ಮಗಳಲ್ಲಿ), ತಿಷ್ಠನ್-ಇರುವವನಾಗಿ, ವಿಧಿವತ್ಕರ್ಮ-ವಿಧ್ಯುಕ್ತವಾದ ಕರ್ಮಗಳನ್ನು, ಉದಾಸೀನ ತಯಾ-ಇಹಪರ ಫಲಾಪೇಕ್ಷೆಯಿಲ್ಲದೇ, ಕುರ್ವಾಣಃ-ಮಾಡುತ್ತ, ನಿಷಿದ್ಧಾನಿ-ನಿಷೇಧಿ ಸಲ್ಪಟ್ಟಿರುವ ಕರ್ಮಗಳನ್ನು, ಪರಿತ್ಯಜೇತ್-ಬಿಡತಕ್ಕದ್ದು; ಯದೃಚ್ಛಾಲಬ್ಧಜೀವನಃ-ಭಗವದಿಚ್ಛೆಯಿಂದ ದೊರೆತದ್ದರಲ್ಲಿ ಜೀವನವನ್ನು ಸಾಗಿಸುತ್ತ, ಅನಿಷಿದ್ಧಾನ್-ನಿಷಿದ್ಧವಲ್ಲದ, ಭೋಗಾನ್-ಭೋಗಗಳನ್ನು (ವಸ್ತುಗಳನ್ನು), ಭಜೇತ್-ಸೇವಿಸ ತಕ್ಕದ್ದು (ಉಪಜೀವನಕ್ಕಾಗಿ ಅತ್ಯಾಯಾಸಪಡದೇ ಮಾಡಬೇಕಾದ ಯತ್ನವು ಹೇಗಿರಬೇಕೆಂದರೆ), ಪರಸಂತಾಪಂ-ಪರಹಿಂಸೆಯನ್ನು (ದುಃಖವನ್ನು), ಅಕೃತ್ವಾ-

ದೊರೆತ ಫಲವು, ವಸ್ತುತಃ ಪೂರ್ವಕರ್ಮದ ಫಲವೇ, ಈಗಿನ ಯತ್ನದಿಂದ ಪ್ರತ್ಯಕ್ಷವಾಯಿತೆಂದು ತಿಳಿಯಬೇಕು; ಧನಾದಿಗಳ ಸಂಪಾದನೆಗಾಗಿ, ಮನುಷ್ಯನು, ಮಿತಿಮೀರಿದ ಯತ್ನವನ್ನು ಮಾಡಬಾರದು—ಹಾಗೆ ಅತಿಯತ್ನದಲ್ಲಿ ತೊಡಗುವುದರಿಂದ, ಬುದ್ಧಿಭ್ರಮವೂ, ಮನಸ್ಸಿನ ಪರಿತಾಪವೂ ಉಂಟಾಗುತ್ತದೆ; ಈ ಕಾರಣಗಳಿಂದ, ವಿವೇಕಿಯು, ಭವಿಷ್ಯತ್ಕಾಲದಲ್ಲಿ ಸುಖಕ್ಕೆ ಕಾರಣವಾಗುವ, ಮತ್ತು

ಮಾಡದೇ, ಖಲಮಂದಿರಂ-ದುರ್ಜನರ ಮನೆಗಳಿಗೆ, ಅಗತ್ವಾ-ಹೋಗದೇ, ಆತ್ಮಾನಂ-ತನ್ನನ್ನು ಅಕ್ಲೇಶಯಿತ್ವಾ-ಆತ್ಯಾಯಾಸಗೊಳಿಸದೇ, ಯತ್ ಸ್ವಲ್ಪಂ ಅಪಿ-ದೊರೆತದ್ದು (ದ್ರವ್ಯಾದಿಗಳು) ಎಷ್ಟು ಸ್ವಲ್ಪವಾದರೂ, ತತ್ ಬಹು-ಅದನ್ನೇ ಬಹಳವೆಂದು ತಿಳಿದು (ಸಂತುಷ್ಟನಾಗಬೇಕು).

ಇದಾನೀಂತನಯತ್ನೇನ ನೇದಾನೀಂ ಲಭ್ಯತೇ ಫಲಂ ।
ಪೂರ್ವಕರ್ಮಫಲಸ್ಯಾತ್ರ ಯತ್ನೋಽಭಿವ್ಯಂಜಕಃ ಸ್ಮೃತಃ ॥ ೧೦೭ ॥

ನಾತಿಯತ್ನಂ ಪ್ರಕುರ್ವೀತ ದ್ರವ್ಯಾದೇರಾರ್ಜನೇ ನರಃ ।
ಯೇನ ಸ್ಯಾದ್ಬುದ್ಧಿವೈಕಲ್ಯಂ ಪರಿತಾಪೋ ಮನಸ್ಯಪಿ ॥ ೧೦೮ ॥

ಇಹ ಜನ್ಮನಿ ತತ್ಕುರ್ಯಾತ್ ಕರ್ಮ ಪ್ರಾಜ್ಞಃ ಸದೈವ ಹಿ ।
ಯೇನಾಗ್ರೇ ಲಭ್ಯತೇ ಸೌಖ್ಯಂ ಯಥಾ ವಿಷ್ಣುಃ ಪ್ರಸೀದತಿ ॥ ೧೦೯ ॥

ಯದೃಚ್ಛಾಲಾಭಸಂತುಷ್ಟನಾಗಿರಬೇಕಾದುದರ ಕಾರಣವನ್ನು ನಿರೂಪಿಸುತ್ತಾರೆ:—

ಇದಾನೀಂತನಯತ್ನೇನ-ಈಗ ಮಾಡುವ ಯತ್ನದಿಂದ, ಇದಾನೀಂ-ಈಗಲೇ, ಫಲಂ-ಫಲವು, ನ ಲಭ್ಯತೇ-ದೊರೆಯುವುದಿಲ್ಲ ಅತ್ರ-ಫಲಪ್ರಾಪ್ತಿ ವಿಷಯದಲ್ಲಿ ಯತ್ನಃ-(ಮಾಡುವ) ಯತ್ನವು, ಪೂರ್ವಕರ್ಮಫಲಸ್ಯ-ಹಿಂದಿನ ಕರ್ಮಫಲದ, ಅಭಿವ್ಯಂಜಕಃ-ಅಭಿವ್ಯಕ್ತಿಗೆ (ಪ್ರಕಟವಾಗುವುದಕ್ಕೆ) ಕಾರಣವೆಂದು, ಸ್ಮೃತಃ-

---

ಶ್ರೀವಿಷ್ಣುಪ್ರೀತಿಯನ್ನು ದೊರಕಿಸುವ ಕರ್ಮಗಳನ್ನೇ, ಈ ಜನ್ಮದಲ್ಲಿ ಸದಾ ಆಚರಿಸಬೇಕು (೧೦೭-೧೦೯). ಶ್ರೀವಿಷ್ಣುವು ಪ್ರೀತನಾದರೆ, ದೊರೆಯದ ಅಭೀಷ್ಟವಿಲ್ಲ—ಸಕಲ ಪುರುಷಾರ್ಥಗಳೂ ಸಿದ್ಧಿಸುತ್ತವೆ; ಶ್ರೀನಿಕೇತನನು (ಲಕ್ಷ್ಮೀಪತಿಯು) ಪ್ರಸನ್ನನಾದರೆ, ದೊರೆಯದುದು ಯಾವುದಿದೆ? ಆತನ ಪ್ರಸಾದದಿಂದ (ಪ್ರೀತಿಗೆ ಪಾತ್ರರಾದ್ದರಿಂದಲೇ), ಬ್ರಹ್ಮಾದಿ ದೇವತೆಗಳು ಸರ್ವದಾ ಸರ್ವ ಮನೋರಥಗಳನ್ನು ಹೊಂದಿರುವರು; ಈ ಕಾರಣದಿಂದ ಸರ್ವಪ್ರಯತ್ನದಿಂದ ಶ್ರೀಹರಿಯ ನಿತ್ಯಸ್ಮರಣೆಯುಳ್ಳವರಾಗಬೇಕು; ಆತನೇ ಸರ್ವೋತ್ತಮನೆಂಬ ಜ್ಞಾನನಿಶ್ಚಯವನ್ನು ಸಂಪಾದಿಸಿ, ನಿರಂತರವಾದ ಹರಿಧ್ಯಾನದಲ್ಲಿ ತೊಡಗಬೇಕು; ಸರ್ವಾಧಿಕನೆಂಬ (ಸ್ವಾತ್ಮಾತ್ಮೀಯ ಸಮಸ್ತ ವಸ್ತುಗಳಿಗಿಂತ ಪ್ರಿಯನೆಂಬ) ಸಂತತ ಚಿಂತನೆಯು ಸ್ನೇಹದಿಂದ ಮಾತ್ರ ಸಾಧ್ಯವಾದುದು—ಒಂದು ದೃಷ್ಟಿಯಿಂದ ಅದೇ ಸ್ನೇಹವು; ಈ ಸ್ನೇಹವೇ ಭಕ್ತಿಯೆಂದು ಹೇಳಲ್ಪಡುತ್ತದೆ; ಈ ಭಕ್ತಿಯನ್ನು ಶ್ರೀವಿಷ್ಣುವಿನಲ್ಲಿ ಮಾಡಿದ್ದಾದರೆ, ಅದರಿಂದ ಮೋಕ್ಷರೂಪದ ಶ್ರೇಷ್ಠಪುರುಷಾರ್ಥವೇ ಲಭಿಸುತ್ತದೆ (೧೧೦-೧೧೧).

ತಿಳಿಯಲಟ್ಟದೆ[1]; ನರಃ-ಮನುಷ್ಯನು, ದ್ರವ್ಯಾದೇಃ-ಧನಾದಿಗಳ, ಅರ್ಜನೇ-ಸಂಪಾದನೆಗಾಗಿ, ಅತಿಯತ್ನಂ-ಅತಿಯತ್ನವನ್ನು (ಮಿತಿಮೀರಿದ ಯತ್ನವನ್ನು), ನ ಪ್ರಕುರ್ವೀತ-ಮಾಡಬಾರದು; ಯೇನ-ಯಾವುದರಿಂದ (ಅದರಿಂದ), ಬುದ್ಧಿ ವೈಕಲ್ಯಂ-ಬುದ್ಧಿ ಚಾಂಚಲ್ಯವೂ, ಅಪಿ-ಮತ್ತು ಮನಸಿ-ಮನಸ್ಸಿನಲ್ಲಿ ಪರಿತಾಪಃ-ಅತಿಶಯವಾದ ತಾಪವೂ, ಸ್ಯಾತ್-ಉಂಟಾಗುತ್ತದೆ; ಪ್ರಾಜ್ಞಃ-ವಿವೇಕಿಯು, ಯೇನ-ಯಾವುದರಿಂದ (ಯಾವ ಕರ್ಮದಿಂದ), ಅಗ್ರೇ-ಮುಂದೆ (ಭವಿಷ್ಯತ್ಕಾಲದಲ್ಲಿ), ಸೌಖ್ಯಂ-ಸುಖವು, ಲಭ್ಯತೇ-ದೊರೆಯುತ್ತದೆಯೋ, ಮತ್ತು ಯಥಾ-ಹೇಗೆ (ಆ ಕರ್ಮಗಳನ್ನು ಹೇಗೆ ಮಾಡುವುದರಿಂದ), ವಿಷ್ಣುಃ-ಶ್ರೀವಿಷ್ಣುವು, ಪ್ರಸೀದತಿ-ಪ್ರಸನ್ನನಾಗುವನೋ, ತತ್ ಕರ್ಮ-(ಅಂಥ) ಕರ್ಮವನ್ನೇ, ಇಹ ಜನ್ಮನಿ-ಈ ಜನ್ಮದಲ್ಲಿ ಸದಾ ಏವ-ಸರ್ವದಾ, ಕುರ್ಯಾತ್-ಮಾಡಬೇಕು.

ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ।
ಬ್ರಹ್ಮಾದ್ಯಾ ಯತ್ಪ್ರಸಾದೇನ ಸದಾ ಲಬ್ಧಮನೋರಥಾಃ ॥ ೧೧೦ ॥
ತಸ್ಮಾತ್ಸರ್ವಪ್ರಯತ್ನೇನ ಚಿಂತಯೇತ್ಸತತಂ ಹರಿಂ ।
ಮತ್ವಾ ಸರ್ವೇಶ್ವರತ್ವೇನ ಸ್ನೇಹಃ ಸರ್ವಾಧಿಕೋ ಹಿ ಯಃ ॥ ೧೧೧ ॥
ಭಕ್ತಿರಿತ್ಯುಚ್ಯತೇ ಸಾ ಚೇದ್ವಿಷ್ಣೌ ಮೋಕ್ಷಫಲಪ್ರದಾ ।

ಶ್ರೀಹರಿಯು ಪ್ರೀತನಾದರೆ ಅಲಭ್ಯವಾದುದು ಯಾವುದೊಂದೂ ಇಲ್ಲವಾದ್ದರಿಂದ, ಶ್ರೀಹರಿಯಲ್ಲಿ ಭಕ್ತಿಯನ್ನು ಸಾಧಿಸಬೇಕೆನ್ನುತ್ತಾರೆ :—

ಶ್ರೀನಿಕೇತನೇ-ಲಕ್ಷ್ಮೀನಿಲಯನಾದ (ಸಂಪದಭಿಮಾನಿಯಾದ ಶ್ರೀಲಕ್ಷ್ಮಿಗೂ ಆಶ್ರಯನಾದ), ಭಗವತಿ-ಭಗವಂತನು, ಪ್ರಸನ್ನೇ-ಪ್ರಸನ್ನನಾದರೆ, ಅಲಭ್ಯಂ-ದೊರೆ

---

ಶ್ರೀಹರಿದತ್ತವಾದುದು, ಅದು ದುಃಖವೇ ಆದರೂ, ನನಗೆ ಶ್ರೇಯಸ್ಕರವು; ಹೀಗೆ ಮಹಾ ವಿಪತ್ತಿನಲ್ಲಿ ಮುಳುಗಿದಾಗ ಸಹ, ದೃಢವಾದ ನಿಶ್ಚಯವುಳ್ಳವನೇ, ದೃಢಭಕ್ತನು; ಆತನೇ ಮರಣಾನಂತರ ಉತ್ತಮಗತಿಯನ್ನು ಹೊಂದುತ್ತಾನೆ—ಲಿಂಗಭಂಗವನ್ನೂ ಮೋಕ್ಷಸುಖವನ್ನೂ ಹೊಂದುತ್ತಾನೆ (೧೧೨-೧೧೩). ಹರಿಭಕ್ತನು, ಯಾವ ಕಾಲದಲ್ಲಿ ದುಃಖವನ್ನು ಹೊಂದುತ್ತಾನೆಯೋ, ಆಗ (ದುಃಖಪ್ರಾಪ್ತವಾದಾಗಲೆಲ್ಲ), 'ಸಹಸ್ರ (ಅಸಂಖ್ಯ) ಅಪರಾಧಗಳನ್ನು ಮಾಡುವ ನನ್ನ ಮೇಲೆ ಕೃಪೆಮಾಡಿ, ಇದಕ್ಕಿಂತ ಅಧಿಕವಾದ

---

1. ಜೀವಸ್ವರೂಪಯೋಗ್ಯತೆ ಮತ್ತು ಪೂರ್ವಕರ್ಮಗಳಿಗನುಸಾರವಾಗಿ, ಶ್ರೀಹರಿಯಿಂದ ಪ್ರಾಪ್ತವಾಗುವ ಫಲವನ್ನು ಪುರುಷಪ್ರಯತ್ನವು ಅಭಿವ್ಯಕ್ತಿಗೊಳಿಸುತ್ತದೆ. ಕರ್ಮಪ್ರವೃತ್ತಿಗೆ 'ಸ್ವಭಾವಾಖ್ಯಾಯೋಗ್ಯತಾ ಯಾ ಹಠಾಖ್ಯಾ ಯಾ ಅನಾದಿಸಿದ್ಧಾ ಸರ್ವಜೀವೇಷು ನಿತ್ಯಾ । ಸಾ ಕಾರಣಾ ಪ್ರಥಮಂ ತು ದ್ವಿತೀಯಮನಾದಿಕರ್ಮೈವ ತಥಾ ತೃತೀಯಃ । ಜೀವಪ್ರಯತ್ನಃ

ಯದ ಅಭೀಷ್ಟವು, ಕಿಂ-ಯಾವುದಿದೆ? (ಸರ್ವಾಭೀಷ್ಟಗಳೂ ಸಿದ್ಧಿಸುತ್ತವೆ); ಯತ್ಪ್ರಸಾದೇನ-(ಯಾವಾತನ) ಆ ಶ್ರೀಹರಿಯ ಪ್ರಸಾದದಿಂದ, ಬ್ರಹ್ಮಾದ್ಯಾಃ-ಬ್ರಹ್ಮಾದಿದೇವಶ್ರೇಷ್ಠರೂ, ಸದಾ-ಸರ್ವದಾ, ಲಬ್ಧಮನೋರಥಾಃ-ಹೊಂದಿದ ಅಭೀಷ್ಟಗಳುಳ್ಳವರಾಗಿರುವರು; ತಸ್ಮಾತ್-ಆದ್ದರಿಂದ, ಸರ್ವಪ್ರಯತ್ನೇನ-ಸರ್ವ ಪ್ರಕಾರದಿಂದ ಯತ್ನಿಸಿ, ಹರಿಂ-ಶ್ರೀಹರಿಯನ್ನು, ಸರ್ವೇಶ್ವರತ್ವೇನ-ಸರ್ವಸ್ವಾಮಿ ಭಾವದಿಂದ, ಮತ್ವಾ-ತಿಳಿದು, ಸತತಂ-ನಿರಂತರವಾಗಿ, ಚಿಂತಯೇತ್-ಸ್ಮರಿಸುತ್ತಿರ ಬೇಕು; ಹಿ-ಏಕೆಂದರೆ, ಯಃ ಸರ್ವಾಧಿಕಃ-ಯಾವ ಸರ್ವಾಧಿಕವಾದ, ಸ್ನೇಹಃ-ಸ್ನೇಹವೋ, (ಅದೇ), ಭಕ್ತಿಃ ಭಕ್ತಿಯು; ಇತಿ-ಎಂದು, ಉಚ್ಯತೇ-ಹೇಳಲ್ಪಡುತ್ತದೆ; ಸಾ-ಆ ಸ್ನೇಹವು, ವಿಷ್ಣೌ ಚೇತ್-ಶ್ರೀವಿಷ್ಣುವಿನಲ್ಲಿ ಮಾಡಲ್ಪಟ್ಟರೆ, ಮೋಕ್ಷ ಫಲಪ್ರದಾ-ಮೋಕ್ಷವೆಂಬ ಮಹಾಪುರುಷಾರ್ಥವನ್ನೇ ದೊರಕಿಸುತ್ತದೆ.

ಪ್ರಕರೋತಿ ಹರಿರ್ಯದ್ವತ್ ದುಃಖಮಪ್ಯುತ್ತಮಂ ಮಮ ॥ ೧೧೨ ॥

---

ದುಃಖಕ್ಕೆ ಅರ್ಹನಾದ ನನಗೆ, ದಯಾಳುವಾದ ಶ್ರೀಹರಿಯು, ಅಲ್ಪದುಃಖವನ್ನು ಮಾತ್ರ ಕೊಡುತ್ತಿರುವನು; ಮಹಾ ದುಃಖವನ್ನು ಹ್ರಾಸಗೊಳಿಸಿ (ಕಡಿಮೆ ಮಾಡಿ) ನನ್ನಿಂದ ಭೋಗಮಾಡಿಸುತ್ತಿರುವನು—ಅನ್ಯಥಾ ಅಲ್ಲವೇ ಅಲ್ಲ', ಎಂಬ

---

ಪೌರುಷಾಖ್ಯಸ್ತದೇತತ್ ತ್ರಯಂ ವಿಷ್ಣೋರ್ವಶಗಂ ಸದೈವ ।' (ಭಾ.ತಾತ್ಪರ್ಯ ನಿರ್ಣಯ) —'ಹಠವೆಂದು ಕರೆಯಲ್ಪಡುವ ಅನಾದಿಸಿದ್ಧವಾದ ಜೀವಸ್ವರೂಪವು, ಜೀವರ ನಾನಾವಿಧ ಕರ್ಮ ಪ್ರವೃತ್ತಿಗೆ ಮೊದಲನೆಯ ಕಾರಣವು; ಅನಾದಿಕರ್ಮವು ಎರಡನೆಯ ಕಾರಣವು; ಪೌರುಷವೆಂದು ಕರೆಯಲಾಗುವ ಜೀವಪ್ರಯತ್ನವು ಮೂರನೆಯ ಕಾರಣವು; ಈ ಮೂರೂ ಸದಾ ಶ್ರೀಹರಿಯ ವಶದಲ್ಲಿರುವುವು' ಎಂದು ಹೇಳಿ, ಮುಂದೆ ಅಲ್ಲಿಯೇ, 'ಹಠಾಚ್ಚ ಕರ್ಮಾಣಿ ಭವಂತಿ ಕರ್ಮಜೋ ಯತ್ನೋ ಯತೋ ಹಠಕರ್ಮಪ್ರಯೋಕ್ತಾ । ವಿನಾ ಯತ್ನಂ ಸ ಹಠೋ ನಾಪಿ ಕರ್ಮಫಲಪ್ರದೋ ವಾಸುದೇವೋಽಖಿಲಸ್ಯ॥'—ಜೀವಯತ್ನದ ನ್ಯಾಸವನ್ನು ನಿರ್ದೇಶಿಸಲಾಗಿದೆ. ಸ್ವರೂಪಯೋಗ್ಯತೆ ಯಿಂದ ಪೂರ್ವಕರ್ಮಗಳು ಸಂಭವಿಸಿರುತ್ತವೆ; ಕರ್ಮಾನುಸಾರವಾಗಿ (ಈಗಿನ) ಯತ್ನವು ನಡೆಯುತ್ತದೆ; ಯತ್ನವಿಲ್ಲದೆ ಹಠವಾಗಲಿ, ಕರ್ಮವಾಗಲಿ ಫಲಪ್ರದವಾಗುವುದಿಲ್ಲ (ಕೇವಲ ಅವುಗಳಿಂದ ವಾಸುದೇವನು ಫಲ ಕೊಡುವುದಿಲ್ಲ); 'ಯತ್ನೋ ಯತೋ ಹಠ ಕರ್ಮ ಪ್ರಯೋಕ್ತಾ ಇತ್ಯತ್ರ ಯತಃ ಯತ್ನಃ ಹಠಕರ್ಮಣೋಃ ಫಲಪ್ರಯೋಕ್ತೇತಿ ಮಧ್ಯಮಪದಲೋಪೀ ಸಮಾಸಃ ಅತಃ ಯತ್ನಂ ವಿನಾ ಹಠೋಽಪಿ ನ ಫಲಪ್ರದಃ ಕರ್ಮಾಪಿ ಫಲಪ್ರದಂ ನೇತ್ಯುತ್ತರಪದಾಕರ್ಷಣೇನ ಯೋಜನಾ ।' ಎಂದು (ಭಾವಪ್ರಕಾಶಿಕೆಯಲ್ಲಿ ಶ್ರೀ ವಾದಿರಾಜರು) ಸ್ಪಷ್ಟಪಡಿಸಿರುವಂತೆ, ಶ್ರೀಹರಿಯ ಅಧೀನವಾಗಿಯೇ ನಡೆಯುವ ಜೀವಯತ್ನವೇ ಫಲಾಭಿವ್ಯಕ್ತಿಯ ಕಾರಣವೆಂದು ಸಿದ್ಧವಾಗುತ್ತದೆ. 'ಹಠಕರ್ಮಪ್ರಯೋಕ್ತಾ ಎಂಬಲ್ಲಿ ಹಠಕರ್ಮಣೋಃ ಫಲಪ್ರಯೋಕ್ತಾ ಎಂದು ಫಲಶಬ್ದದ ಲೋಪದಿಂದಾದ ಸಮಾಸಪದವೆಂದು ತಿಳಿಯಬೇಕು' ಎಂದು ಉದಾಹೃತವಾಕ್ಯದ ಅರ್ಥವು.

**ಮಹಾವಿಪತ್ತಿಮಗ್ನಸ್ಯ ಯಸ್ಯ ನಿಶ್ಚಯ ಈದೃಶಃ ।**
**ಸ ಏವ ದೃಢಭಕ್ತಃ ಸ್ಯಾತ್ತೇನಾಂತೇ ಸುಖಮಶ್ನುತೇ ॥ ೧೧೩ ॥**

ದೃಢಭಕ್ತಿಯ ಲಕ್ಷಣವನ್ನು ನಿರೂಪಿಸುತ್ತಾರೆ :—

ಹರಿಃ-ಶ್ರೀಹರಿಯು, ಯದ್ಯತ್-ಯಾವಯಾವುದನ್ನು ಪ್ರಕರೋತಿ-ಮಾಡು ತ್ತಾನೆಯೋ, (ನನ್ನ ಭೋಗಕ್ಕೆ ಕೊಡುತ್ತಾನೆಯೋ), ದುಃಖಂ ಅಪಿ-(ಅದು) ದುಃಖವೇ ಆದರೂ (ದುಃಖಕರವಾದರೂ), ಮಮ-ನನಗೆ, ಉತ್ತಮಂ-ಶ್ರೇಷ್ಠವು (ಶ್ರೇಯಸ್ಕರವು); ಮಹಾವಿಪತ್ತಿಮಗ್ನಸ್ಯ-ಮಹಾವಿಪತ್ತಿನಲ್ಲಿ ಮುಳುಗಿರುವ, ಯಸ್ಯ-ಯಾವ (ಸಂಸಾರಿ) ಜೀವನಿಗೆ, ಈದೃಶಃ-ಈ ವಿಧವಾದ, ನಿಶ್ಚಯಃ-ನಿಶ್ಚಯವೋ (ದೃಢವಾದ ವಿಶ್ವಾಸವಿರುವುದೋ), ಸಃ ಏವಃ-ಅವನೇ, ದೃಢಭಕ್ತಃ-ದೃಢಭಕ್ತನು, ಸ್ಯಾತ್-ಎನಿಸುತ್ತಾನೆ; ತೇನ-ಆತನಿಂದ (ದೃಢಭಕ್ತನಿಂದ), ಅಂತೇ-(ಪ್ರಳಯ ಕಾಲಕ್ಕೆ) ಮರಣಾನಂತರ, ಸುಖಂ-(ಮೋಕ್ಷವು) ಸುಖಸ್ವರೂಪವು, ಅಶ್ನುತೇ-ಹೊಂದ ಲ್ಪಡುತ್ತದೆ.

**ಯಚ್ಚ ದುಃಖಮಯಂ ಕಾಲೇ ಪ್ರಾಪ್ನುವೀತ ತದೈವ ಹಿ ।**
**ಭಾವಯೇದ್ಭಕ್ತಿಮಾನ್ ವಿಷ್ಣೌ ಏತಸ್ಮಾದಧಿಕಂ ಮಮ ॥ ೧೧೪ ॥**
**ಭಾವ್ಯಂ ದುಃಖಂ ದಯಾಲುರ್ಮೇ ಭೋಜಯತ್ಯಲ್ಪಮೇವ ಹಿ ।**
**ಅಪರಾಧಸಹಸ್ರಾಣಾಂ ಕರ್ತಾರಂ ದಯಯಾ ಹರಿಃ ॥ ೧೧೫ ॥**
**ಅಲ್ಪೀಕೃತ್ಯೈವ ದುಃಖಾನಿ ಭೋಜಯತ್ಯೇವ ನಾನ್ಯಥಾ ।**
**ಇತ್ಥಂ ಮಹಾವಿಪನ್ಮಗ್ನೋ ನ ಚಲೇದ್ಧರಿಭಕ್ತಿತಃ ॥ ೧೧೬ ॥**

---

ಭಾವನೆಯುಳ್ಳವ ನಾಗಬೇಕು; ಹೀಗೆ ಮಹಾ ವಿಪತ್ತಿನಲ್ಲಿ ಬಿದ್ದಿದ್ದರೂ, ಹರಿಭಕ್ತಿಯನ್ನು ಬಿಡದವನೇ ದೃಢಭಕ್ತನು—ಆತನೇ ಮುಕ್ತಿಗೆ ಪಾತ್ರನು (೧೧೪-೧೧೬). ದುಃಖದಲ್ಲಿರುವವನು ಅಧಿಕದುಃಖವುಳ್ಳವರನ್ನು ನೋಡಬೇಕು; ಸುಖಿಯು ತನಗಿಂತ ಅಧಿಕ ಸುಖವುಳ್ಳವರನ್ನು ನೋಡಬೇಕು; ಅಭಿಮಾನ (ಅಹಂಮಮಕಾರಗಳು) ಶೋಕಗಳಿಂದ ತನ್ನನ್ನು (ತನ್ನ ಮನಸ್ಸನ್ನು) ದೂರವಿಡಬೇಕು—ಮಾನ ಶೋಕಗಳಿಗೆ ಒಳಗಾಗದಂತೆ ವರ್ತಿಸಬೇಕು; ದುರಭಿಮಾನವುಳ್ಳ ಪುರುಷನು, ಮೂಢನಾಗಿ ಗುರುಗಳನ್ನು ಸಹ ತಿರಸ್ಕರಿಸುತ್ತಾನೆ—ಅಪಮಾನಗೊಳಿಸುತ್ತಾನೆ; ದುರ್ವಿಷಯ ಭೋಗದಲ್ಲಿ ಪ್ರವೃತ್ತನಾಗಿ, ಗರ್ವದಿಂದ ಅಂಧನಾಗಿ ಶ್ರೀಹರಿಯನ್ನು ಮರೆಯುತ್ತಾನೆ; ಈ ವಿಧ ದುರಭಿಮಾನ, ಮದಾಂಧತೆಗಳು, ವಿಷಯಭೋಗಾಸಕ್ತಿಯಿಂದಲೂ, ತಾನು ಸುಖೀ ಎಂಬ ಭಾವನೆಯಿಂದಲೂ, ಉಂಟಾಗುತ್ತವೆ; ಆದ್ದರಿಂದ ತನಗಿಂತ ಅಧಿಕ ಸುಖಿಗಳನ್ನು (ಶ್ರೀಮಂತರನ್ನು) ಗಮನಿಸಿ, ಆತ್ಮಾಭಿಮಾನವೆಂಬ ಗರ್ವವನ್ನು ತ್ಯಜಿಸಬೇಕು

**ಸ ಏವ ದೃಢಭಕ್ತಃ ಸ್ಯಾತ್ ಪಾತ್ರಂ ಮುಕ್ತೇಃ ಸ ಏವ ಹಿ ।**

ದೃಢಭಕ್ತಿಯುಳ್ಳವನೇ ಮೋಕ್ಷಕ್ಕೆ ಅರ್ಹನೆಂದು ಹೇಳುತ್ತಾರೆ :—

ವಿಷ್ಣೌ-ಶ್ರೀವಿಷ್ಣುವಿನಲ್ಲಿ ಭಕ್ತಿಮಾನ್-ಭಕ್ತಿಯುಳ್ಳ, ಅಯಂ-ಈತನು (ಈ ದೃಢಭಕ್ತನು), ಯದ್ಯತ್ ದುಃಖಂ-ಯಾವ ಯಾವ ದುಃಖವನ್ನು, ಕಾಲೇ-ಕಾಲಕಾಲಕ್ಕೆ, ಪ್ರಾಪ್ನುವೀತ-ಹೊಂದುವನೋ, ತದಾ ಏವ-ಆಗಾಗ, ಮಮ-ನನಗೆ, ಏತಸ್ಮಾತ್-ಇದಕ್ಕಿಂತ, ಅಧಿಕಂ-ಅಧಿಕವಾದ, ಭಾವ್ಯಂ-ಉಂಟಾಗಬೇಕಾಗಿದ್ದ ದುಃಖಂ-ದುಃಖವನ್ನು, ದಯಾಲುಃ-ಕೃಪಾಳುವಾದ, ಶ್ರೀಹರಿಯು, ಅಲ್ಪಂ ಏವ-ಸ್ವಲ್ಪವನ್ನೇ, ಮೇ-ನನಗೆ, ಭೋಜಯತಿ-ಉಣಿಸುತ್ತಿರುವನು, (ಎಂದು), ಭಾವಯೇತ್-ಚಿಂತಿಸಬೇಕು; ಹರಿಃ-ಶ್ರೀಹರಿಯು, ದಯಯಾ-ಕೃಪೆಮಾಡಿ, ದುಃಖಾನಿ-ದುಃಖಗಳನ್ನು (ನನ್ನ ಕರ್ಮಾನುಸಾರ ಈಗ ಭೋಗಿಸಲಿದ್ದ ಮಹಾದುಃಖಗಳನ್ನು), ಅಲ್ಪೀಕೃತ್ಯ ಏವ-ಹ್ರಾಸಗೊಳಿಸಿ (ಕಡಿಮೆಮಾಡಿಯೇ), ಭೋಜಯತಿ-ಭೋಗಿಸುವಂತೆ ಮಾಡುತ್ತಿರುವನು; ಅನ್ಯಥಾ-ಬೇರೇನೂ, ನ-ಅಲ್ಲ ಇತ್ಥಂ-ಹೀಗೆ, ಮಹಾವಿಪನ್ಮಗ್ನಃ-ಮಹಾದುಃಖದಲ್ಲಿ ಮಗ್ನನಾದರೂ, ಹರಿಭಕ್ತಿತಃ-ಹರಿಭಕ್ತಿಯಿಂದ, ನ ಚಲೇತ್-ಚಲಿಸಕೂಡದು (ಸ್ಥಿರವಾದ ಭಕ್ತಿಯುಳ್ಳವನೇ ಆಗಿರಬೇಕು); ಸಃ ಏವ-ಆತನೇ, ದೃಢಭಕ್ತಃ-ದೃಢಭಕ್ತನು, ಸ್ಯಾತ್-ಎನಿಸುವನು; ಮುಕ್ತೇಃ-ಮೋಕ್ಷಕ್ಕೆ, ಪಾತ್ರಂ-ಅರ್ಹನು, ಸಃ ಏವ-ಆತನೇ; ಹಿ-ಹೀಗೆಂಬುದು ಶಾಸ್ತ್ರಸಿದ್ಧವು.

**ದುಃಖೀ ದುಃಖಾಧಿಕಾನ್ ಪಶ್ಯೇತ್ ಸುಖೀ ಪಶ್ಯೇತ್ಸುಖಾಧಿಕಾನ್ ॥೧೧೭**

**ಆತ್ಮಾನಂ ಮಾನಶೋಕಾಭ್ಯಾಂ ಸತತಂ ವಿನಿವರ್ತಯೇತ್ ।**

**ಅವಜಾನಾತಿ ಮೂಢಾತ್ಮಾ ಮಾನೇನಾಯಂ ಗುರೂನಪಿ ॥ ೧೧೮ ॥**

**ಪ್ರವರ್ತತೇ ದುಷ್ಟಭೋಗೇ ಮದಾಂಧೋ ವಿಸ್ಮರೇದ್ಧರಿಂ ।**

**ತಸ್ಮಾತ್ಸುಖಾಧಿಕಾನ್ ಪಶ್ಯನ್ ಸ್ವಸ್ಮಿನ್ ಗರ್ವಂ ಪರಿತ್ಯಜೇತ್ ॥ ೧೧೯ ॥**

ಸಾಧಕನ ಬಾಳಿನ ನೀತಿಯನ್ನು (ಜೀವಿತಕ್ರಮವನ್ನು) ಚಿತ್ರಿಸಿ, ಉಪದೇಶಿಸುತ್ತಾರೆ :—

ದುಃಖೀ-ದುಃಖವುಳ್ಳ ಸಾಧಕನು, ದುಃಖಾಧಿಕಾನ್-(ತನಗಿಂತ) ಅಧಿಕ ದುಃಖಿಗಳನ್ನು, ಪಶ್ಯೇತ್-ನೋಡಬೇಕು; ಸುಖೀ-ಸುಖಿಯು, ಸುಖಾಧಿಕಾನ್-ಅಧಿಕ

---

(೧೧೭-೧೧೯). ತನಗಿಂತ ಅಧಿಕ ದುಃಖವುಳ್ಳವರನ್ನು ಕಂಡು, ತನ್ನ ದುಃಖವು ಅತ್ಯಲ್ಪವೆಂಬ ಭಾವನೆಯನ್ನು ಈ ಹಿಂದೆ ನಿರೂಪಿಸಿದ ಅನುಸಂಧಾನದಿಂದ, ಹೊಂದದ ದುಃಖಿಯು, ಅಧಿಕವಾದ ಸುಖವುಳ್ಳವರನ್ನು ನೋಡಿ, ಅಸೂಯೆಯನ್ನೂ ಈರ್ಷೆಯನ್ನೂ ಹೊಂದುತ್ತಾನೆ (೧೨೦). ಪರರ ಸುಖವನ್ನು ಸಹಿಸದಿರುವುದು,

ಸುಖವುಳ್ಳವರನ್ನು ಪಶ್ಯೇತ್-ನೋಡಬೇಕು; ಆತ್ಮಾನಂ-ತನ್ನನ್ನು (ತನ್ನ ಮನಸ್ಸನ್ನು), ಮಾನಶೋಕಾಭ್ಯಾಂ-ಅಭಿಮಾನಶೋಕಗಳಿಂದ, ಸತತಂ-ಸದಾ, ವಿನಿವರ್ತಯೇತ್-ನಿವಾರಿಸಿಕೊಳ್ಳಬೇಕು; ಅಯಂ-ಈ (ಹಾಗೆ ಮಾಡದ-ಎಚ್ಚರ ವಹಿಸದ) ಮನುಷ್ಯನು, ಮೂಢಾತ್ಮಾ-ಮೂಢನಾಗಿ (ಮೋಹಿತವಾದ ಬುದ್ಧಿಯುಳ್ಳವನಾಗಿ), ಗುರೂನ್ ಅಪಿ-ಗುರುಗಳನ್ನು ಸಹ (ಗೌರವಪಾತ್ರರಾದ ಉತ್ತಮರನ್ನು), ಅವಜಾನಾತಿ-ಕೀಳಾಗಿ ಕಾಣುತ್ತಾನೆ; ದುಷ್ಟಭೋಗೇ-ದುರ್ವಿಷಯಗಳ ಭೋಗದಲ್ಲಿ ಪ್ರವರ್ತತೇ-ಪ್ರವರ್ತಿಸುತ್ತಾನೆ; ಮದಾಂಧಃ-ಗರ್ವದಿಂದ ಕುರುಡನಂತಾಗಿ, ಹರಿಂ-ಶ್ರೀಹರಿಯನ್ನು ವಿಸ್ಮರೇತ್-ಮರೆಯುತ್ತಾನೆ; ತಸ್ಮಾತ್- ಆದ್ದರಿಂದ, ಸುಖಾಧಿಕಾನ್-ತನಗಿಂತ ಅಧಿಕ ಸುಖದಲ್ಲಿರುವವರನ್ನು ಪಶ್ಯನ್-ನೋಡಿ, ಸ್ವಸ್ಮಿನ್-ತನ್ನಲ್ಲಿ ಗರ್ವಂ-(ತಾನೇ ಸುಖಿಯೆಂದು ತಿಳಿಯುವುದರಿಂದ ಉದ್ಭವಿಸುವ) ಗರ್ವವನ್ನು ಪರಿತ್ಯಜೇತ್-ಬಿಡಬೇಕು.

**ಆತ್ಮಾನಂ ದುಃಖಿನಂ ಮತ್ವಾ ಯದಿ ಪಶ್ಯೇತ್ಸುಖಾಧಿಕಂ ।**
**ತದಾಽಸೂಯಾಂ ಕರೋತ್ಯೇಷ ಈರ್ಷ್ಯಾಂ ಚಾಪಿ ಕರೋತ್ಯಯಂ ॥ ೧೨೦ ॥**

ಆತ್ಮಾನಂ-ತನ್ನನ್ನು, ದುಃಖಿನಂ-ದುಃಖಿಯೆಂದು, ಮತ್ವಾ-ತಿಳಿದು, ಸುಖಾಧಿಕಂ-ಅಧಿಕ ಸುಖವುಳ್ಳವರನ್ನು ಯದಿ ಪಶ್ಯೇತ್-ನೋಡಿದ್ದಾದರೆ, ತದಾ-ಆಗ, ಏಷಃ- ಈತನು (ತನ್ನನ್ನು ದುಃಖೀ ಎಂದು ಭಾವಿಸಿಕೊಂಡವನು), ಅಸೂಯಾಂ- ಅಸೂಯೆಯನ್ನು ಕರೋತಿ-ಮಾಡುತ್ತಾನೆ; ಈರ್ಷ್ಯಾಂ ಚ ಅಪಿ-ಈರ್ಷ್ಯೆಯನ್ನು ಸಹ, ಅಯಂ- ಈತನು, ಕರೋತಿ-ಮಾಡುತ್ತಾನೆ (ಹೊಂದುತ್ತಾನೆ).

**ಪರಸೌಖ್ಯಾಸಹಿಷ್ಣುತ್ವಮಸೂಯೇತಿ ನಿಗದ್ಯತೇ ।**
**ಪರದುಃಖಂ ಸುಖಂ ಯಸ್ಯ ಸಾ ಹೀರ್ಷ್ಯೇತಿ ನಿಗದ್ಯತೇ ॥ ೧೨೧ ॥**

ಅಸೂಯೆ ಮತ್ತು ಈರ್ಷ್ಯೆಗಳ ಸ್ವರೂಪವನ್ನು ನಿರೂಪಿಸುತ್ತಾರೆ:—

ಪರಸೌಖ್ಯಾಸಹಿಷ್ಣುತ್ವಂ-ಪರರ ಸುಖವನ್ನು ಕಂಡು ಸಹಿಸದಿರುವುದು, ಅಸೂಯಾ

---

ಅಸೂಯೆಯು; ಪರರ ದುಃಖವನ್ನು ತಿಳಿದು ಸಂತೋಷಿಸುವುದು (ಹರ್ಷಪಡುವುದು—ಸುಖವನ್ನು ಹೊಂದುವುದು) ಈರ್ಷ್ಯೆಯು (೧೨೧). ತನಗಿಂತ ಸುಖಾಧಿಕನನ್ನೂ, ಆರೋಗ್ಯವಂತನನ್ನೂ, ವ್ಯಾಕುಲಚಿತ್ತನನ್ನೂ ಕಂಡ ಒಡನೆಯೆ, ಯಾವಾತನು ಶ್ರೀಹರಿಯನ್ನು ಸ್ಮರಿಸುವುದಿಲ್ಲವೋ (ಆ ಎಲ್ಲರ ಅವರವರ ಸ್ಥಿತಿಗಳಿಗೆ ಶ್ರೀಹರಿಯೇ ಸ್ವತಂತ್ರ ಕಾರಣನೆಂದು ತಿಳಿದು, ಕರ್ಮಾನುಸಾರ ಸುಖದುಃಖಪ್ರಾಪಕನೆಂಬ ಮಹಿಮೆಯನ್ನು ಸ್ಮರಿಸುವುದಿಲ್ಲವೋ) ಆತನು, ವಿಸ್ಮರಣೆಯ

ಇತಿ-ಅಸೂಯೆಯೆಂದು, ನಿಗದ್ಯತೇ-ಹೇಳಲ್ಪಡುತ್ತದೆ; ಯಸ್ಯ- ಯಾರಿಗೆ, ಪರದುಃಖಂ-ಪರರ ದುಃಖವು, ಸುಖಂ-ಸುಖವೋ (ಸಂತೋಷ ಜನಕವೋ), ಸಾ-ಅದು (ಆ ಭಾವನೆಯು), ಈರ್ಷಾ-ಈರ್ಷೆಯೆಂದು, ನಿಗದ್ಯತೇ- ಹೇಳಲ್ಪಡುತ್ತದೆ.

**ಸುಖಾಧಿಕಂ ವಿಲೋಕ್ಯೈವ ಶೋಕಾಕುಲಮನಾಮಯಂ ।**

**ನ ಕುರ್ಯಾತ್ಸ್ಮರಣಂ ವಿಷ್ಣೋಃ ಪ್ರಾಪ್ನುಯಾನ್ನಿರಯಂ ತತಃ ॥ ೧೨೨ ॥**

ಸುಖಾಧಿಕಂ-ಸುಖಾಧಿಕನನ್ನೂ, ಅನಾಮಯಂ-ನಿರೋಗಿಯನ್ನೂ (ಆರೋಗ್ಯ ವಂತನನ್ನೂ), ಶೋಕಾಕುಲಂ-ವ್ಯಾಕುಲಚಿತ್ತನನ್ನೂ, ವಿಲೋಕ್ಯ ಏವ-ನೋಡುವ ಮಾತ್ರದಿಂದ (ಕಂಡ ಒಡನೆಯೇ), ವಿಷ್ಣೋಃ-ಶ್ರೀವಿಷ್ಣುವಿನ, ಸ್ಮರಣಂ-ಸ್ಮರಣೆಯನ್ನು (ಈ ಎಲ್ಲರೂ ಶ್ರೀಹರಿಚಿತ್ತಾನುಸಾರವಾದ ಅವಸ್ಥೆಗಳಲ್ಲಿರುವರೆಂಬ ಚಿಂತೆಯನ್ನು), ನ ಕುರ್ಯಾತ್-ಮಾಡದಿದ್ದರೆ, ತತಃ-ಅದರಿಂದ (ಆ ಶ್ರೀಹರಿವಿಸ್ಮರಣೆಯಿಂದ), ನಿರಯಂ-ನರಕವನ್ನು (ಅಧೋಗತಿಯನ್ನು), ಪ್ರಾಪ್ನುಯಾತ್- ಹೊಂದುತ್ತಾನೆ.

**ಸ್ಮರ್ತವ್ಯಃ ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತುಚಿತ್ ।**

**ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ ॥ ೧೨೩ ॥**

ಶ್ರೀಹರಿಸ್ಮರಣೆ ವಿಸ್ಮರಣೆಗಳ ಸ್ಥಾನವನ್ನು ನಿರೂಪಿಸುತ್ತಾರೆ :—

ವಿಷ್ಣುಃ-ಶ್ರೀವಿಷ್ಣುವು, ಸತತಂ-ನಿರಂತರವಾಗಿ, ಸ್ಮರ್ತವ್ಯಃ-ಸ್ಮರಿಸಲ್ಪಡಬೇಕು; ಜಾತುಚಿತ್-ಕ್ಷಣಮಾತ್ರವೂ (ಎಂದೂ), ನ ವಿಸ್ಮರ್ತವ್ಯಃ-ಸ್ಮರಣರಹಿತನಾಗಿರತಕ್ಕದ್ದಲ್ಲ (ಮರೆಯಲ್ಪಡಬಾರದು); ಸರ್ವೇ-ಎಲ್ಲ, ವಿಧಿನಿಷೇಧಾಃ-ವಿಧಿ ನಿಷೇಧಗಳು, ಏತಯೋಃ-ಇವುಗಳ (ಈ ಸ್ಮರಣೆ ವಿಸ್ಮರಣೆಗಳ), ಕಿಂಕರಾಃ-ಅಧೀನಗಳು, ಸ್ಯುಃ-ಆಗಿರುತ್ತವೆ.

**ಸರ್ವದಾ ಯಃ ಸ್ಮರೇದ್ವಿಷ್ಣುಂ ಸರ್ವತ್ರಾಪಿ ತಮೀಕ್ಷಯೇತ್ ।**

**ವಿಧೀನಾಮಪಿ ಸರ್ವೇಷಾಂ ಸ ಕರ್ತೇತಿ ನಿಬೋಧತ ॥ ೧೨೪ ॥**

ಯಃ-ಯಾವಾತನು, ಸರ್ವದಾ-ನಿರಂತರವಾಗಿ, ವಿಷ್ಣುಂ-ಶ್ರೀವಿಷ್ಣುವನ್ನು ಸ್ಮರೇತ್-ಸ್ಮರಿಸುವನೋ, ಅಪಿ-ಮತ್ತು, ತಂ-ಆತನನ್ನು (ಶ್ರೀವಿಷ್ಣುವನ್ನು), ಸರ್ವತ್ರ-ಎಲ್ಲೆಲ್ಲಿಯೂ, ಈಕ್ಷಯೇತ್-ಕಾಣುವನೋ (ಆತನ ಸ್ವತಂತ್ರ ಕರ್ತೃತ್ವವನ್ನು ತಿಳಿಯುವನೋ), ಸಃ-ಅವನು, ಸರ್ವೇಷಾಂ-ಎಲ್ಲ ವಿಧೀನಾಂ-ವಿಧಿಗಳ, ಕರ್ತಾ-ಕರ್ತನು (ಆಚರಿಸಿದವನು), ಇತಿ-ಎಂದು, ನಿಬೋಧತ-ತಿಳಿ.

---

ಫಲವಾಗಿ ನಿರಯವನ್ನೇ (ಅಧೋಗತಿಯನ್ನೇ) ಹೊಂದುತ್ತಾನೆ (೧೨೨). ಶ್ರೀವಿಷ್ಣುಸ್ಮರಣೆಯು ಸರ್ವದಾ ಇರಬೇಕು—ಕ್ಷಣಮಾತ್ರವೂ ಸ್ಮರಣ ರಹಿತನಾಗಿರತಕ್ಕದ್ದಲ್ಲ; ಸಕಲ ವಿಧಿನಿಷೇಧಗಳು ಈ ಸ್ಮರಣೆವಿಸ್ಮರಣೆಗಳ ಅಧೀನ

ಯಸ್ತ್ವಹಂಕಾರದುಷ್ಟಾತ್ಮಾ ಮತ್ಸರೀ ಹರಿವಿಸ್ಮೃತಿಃ ।
ನಿಷೇಧಾನಾಂ ಸ ಸರ್ವೇಷಾಂ ಕರ್ತಾ ಪರಮ ಉಚ್ಯತೇ ॥ ೧೨೫ ॥

ಯಸ್ತು- ಯಾವನಾದರೆ, ಅಹಂಕಾರದುಷ್ಟಾತ್ಮಾ- ಅಹಂಕಾರದೂಷಿತವಾದ ಮನಸ್ಸುಳ್ಳವನೋ (ತಾನೇ ಕರ್ತನೆಂಬ ಅಭಿಮಾನವುಳ್ಳವನೋ), ಮತ್ಸರೀ- ಮತ್ಸರಿಯೂ (ಶ್ರೀಹರಿಯಂತೆ ತಾನೂ ಸ್ವತಂತ್ರಕರ್ತನೆಂಬ ವಿರೋಧಭಾವನೆಯುಳ್ಳವನೂ), ಹರಿವಿಸ್ಮೃತಿಃ- ಶ್ರೀಹರಿಸ್ಮರಣವಿಲ್ಲದವನೂ (ಆಗಿರುವನೋ), ಸಃ- ಆತನು, ಸರ್ವೇಷಾಂ- ಎಲ್ಲ ನಿಷೇಧಾನಾಂ- ನಿಷೇಧಗಳ, ಪರಮಃ- ಅತಿಶಯವಾದ, ಕರ್ತಾ- ಕರ್ತನು, (ಎಂದು), ಉಚ್ಯತೇ- (ಅವನೇ ಸರ್ವನಿಷಿದ್ಧಕರ್ಮಕರ್ತನೆಂದು) ಹೇಳಲ್ಪಡುತ್ತಾನೆ.

ಯಸ್ತು ಪೂರ್ವೋಕ್ತಭಕ್ತಃ ಸ್ಯಾತ್ ದ್ವೇಷ್ಟಾ ಚ ಹರಿವಿದ್ವಿಷಾಂ ।
ಸ ಏವೋತ್ತಮತಾಂ ಯಾತಿ ವಿಷ್ಣುಭಕ್ತೇಷು ನಾನ್ಯಥಾ ॥ ೧೨೬ ॥

ಏತನ್ಮಧ್ಯತಯಾ ಮಧ್ಯೋ ನೀಚತ್ವಾನ್ನೀಚ ಇತ್ಯಪಿ ।
ವಿಷ್ಣುದ್ವೇಷಾಧಿಕತ್ವೇನ ತಾಮಸಾಧಿಕ್ಯನಿರ್ಣಯಃ ॥ ೧೨೭ ॥

ಔದಾಸೀನ್ಯೇನ ಮಧ್ಯತ್ವಮೇವಂ ಜೀವಪರೀಕ್ಷಣಂ ।

ಸಾತ್ತ್ವಿಕಜೀವತ್ರೈವಿಧ್ಯವನ್ನೂ, ಜೀವಸಾಮಾನ್ಯತ್ರೈವಿಧ್ಯವನ್ನೂ ಸಂಗ್ರಹಿಸಿ ನಿರೂಪಿಸುತ್ತಾರೆ :—

---

ವಾಗಿರುತ್ತವೆ' (೧೨೩). ಯಾರು ಸರ್ವದಾ ಹರಿಸ್ಮರಣೆಯುಕ್ತನಾಗಿ, ಸರ್ವತ್ರ ಆತನ ಸ್ವತಂತ್ರ ಕರ್ತೃತ್ವವನ್ನು ತಿಳಿಯುವನೋ, ಅವನು, ಸರ್ವ ವಿಧಿಗಳನ್ನು ಆಚರಿಸಿದವನೆಂದು (ಶ್ರೀಹರಿಯ ಆಜ್ಞಾಪಾಲಕನೆಂದು) ಹೇಳಲ್ಪಡುತ್ತಾನೆ (೧೨೪). ಇದರ ವಿರುದ್ಧವಾಗಿ, ಯಾರು ತಾನೇ ಕರ್ತನೆಂಬ ಅಹಂಕಾರದೂಷಿತ ಮನಸ್ಸುಳ್ಳವನಾಗಿ, ಮತ್ಸರಯುಕ್ತನೂ, ಹರಿಸ್ಮರಣರಹಿತನೂ ಆಗಿರುವನೋ, ಆತನೇ ಸಕಲ ನಿಷೇಧಗಳನ್ನಾಚರಿಸಿದವನೆನಿಸುತ್ತಾನೆ (೧೨೫). ಸತತ ಹರಿಸ್ಮರಣಯುಕ್ತನಾಗಿರುವ ಮುಂತಾದ ಲಕ್ಷಣವುಳ್ಳವನಾಗಿ, ಹರಿದ್ವೇಷಿಗಳನ್ನು ದ್ವೇಷಿಸುವ ಹರಿಭಕ್ತನೇ ವಿಷ್ಣುಭಕ್ತರಲ್ಲಿ

---

1. 'ಶ್ರುತಿ ಸ್ಮೃತೀ ಹರೇರಾಜ್ಞೆ'— ಶ್ರುತಿ ಸ್ಮೃತಿಗಳು ವಿಧಿನಿಷೇಧರೂಪ ಶ್ರೀಹರಿಯ ಆಜ್ಞೆಯನ್ನೇ ನಿರೂಪಿಸುತ್ತವೆ. ಅವಶ್ಯಕರ್ತವ್ಯವಾದುದೇ ವಿಧಿಯು—ವಿಧಿಪಾಲನೆಯಿಂದಲೇ ಶ್ರೀಹರಿಪ್ರೀತಿಯು; ಯತ್ನಪೂರ್ವಕ ತ್ಯಜಿಸಬೇಕಾದ ಕರ್ಮಗಳೇ ನಿಷೇಧಗಳು—ನಿಷೇಧ ಪರಿತ್ಯಾಗದಿಂದಲೂ ಶ್ರೀಹರಿಪ್ರೀತಿಯೇ ದೊರೆಯುತ್ತದೆ; ನಿಷೇಧಕರಣದಿಂದ ಸ್ವಾಮಿಯ ಆಜ್ಞೆಯನ್ನು ಉಲ್ಲಂಘಿಸಿದ ಅಪರಾಧಿಯಾಗಿ ದಂಡ್ಯನಾಗುತ್ತಾನೆ. ಹರಿಸ್ಮರಣಪೂರ್ವಕ

ಯಃ ತು- ಯಾರೊಬ್ಬನೇ ಆಗಲಿ, ಪೂರ್ವೋಕ್ತಭಕ್ತಃ- ಈ ಹಿಂದೆ ನಿರೂಪಿಸಲಾದ ಹರಿಭಕ್ತಿಯುಳ್ಳವನೂ, ಹರಿವಿದ್ವಿಷಾಂ- ಶ್ರೀಹರಿದ್ವೇಷಿಗಳ, ದ್ವೇಷ್ಟಾ ಚ- ದ್ವೇಷಿಯೂ ಸಹ, ಸ್ಯಾತ್- ಆಗಿರುವನೋ, ಸಃ ಏವ- ಅತನೇ, ವಿಷ್ಣುಭಕ್ತೇಷು- ವಿಷ್ಣುಭಕ್ತರಲ್ಲಿ ಉತ್ತಮತಾಂ- ಉತ್ತಮತ್ವವನ್ನು (ಶ್ರೇಷ್ಠತ್ವವನ್ನು), ಯಾತಿ- ಹೊಂದುತ್ತಾನೆ (ಅತನೇ ಶ್ರೇಷ್ಠನು); ಅನ್ಯಥಾ ನ- ಬೇರೆಯಲ್ಲ (ಅನ್ಯಪ್ರಕಾರದಿಂದ ಉತ್ತಮತ್ವವನ್ನು ನಿಶ್ಚಯಿಸತಕ್ಕದ್ದಲ್ಲ); ಏತನ್ಮಧ್ಯತಯಾ- ಈ ವಿಷ್ಣುಭಕ್ತಿಯ ಮಧ್ಯಮತ್ವದಿಂದ (ಹರಿಭಕ್ತಿ ಮತ್ತು ಹರಿದ್ವೇಷಿಗಳ ದ್ವೇಷ, ಇವುಗಳಲ್ಲಿ ಉತ್ತಮನಿಗಿಂತ ಕಡಿಮೆಯಾದವನು), ಮಧ್ಯಃ- ಮಧ್ಯಮಭಕ್ತನು; ನೀಚತ್ವಾತ್- (ಈ ಲಕ್ಷಣಗಳ) ನೀಚತ್ವದಿಂದ, ನೀಚಃ- ಭಕ್ತರಲ್ಲಿ ನೀಚನು (ಕಡೆಯವನು- ಕನಿಷ್ಠನು), ಇತ್ಯಪಿ- ಹೀಗೆಂದು (ತಿಳಿಯತಕ್ಕದ್ದು); ವಿಷ್ಣುದ್ವೇಷಾಧಿಕತ್ವೇನ- ವಿಷ್ಣುದ್ವೇಷದಲ್ಲಿರುವ ಅಧಿಕ್ಯದಿಂದ, ತಾಮಸಾಧಿಕ್ಯನಿರ್ಣಯಃ- ತಾಮಸರಲ್ಲಿ (ತಮೋಯೋಗ್ಯ ಜೀವರಲ್ಲಿ) ಅಧಿಕ್ಯವನ್ನು (ತಾರತಮ್ಯವನ್ನು) ನಿರ್ಣಯಿಸಿಕೊಳ್ಳಬೇಕು; ಔದಾಸೀನ್ಯೇನ- ಉದಾಸೀನ ಭಾವದಿಂದ (ಭಕ್ತಿದ್ವೇಷಗಳ ವಿಷಯಕ್ಕೆ ಉದಾಸೀನರಾಗಿರುವ ಲಕ್ಷಣದಿಂದ), ಮಧ್ಯಮತ್ವಂ- ಮಧ್ಯವರ್ಗದವ ನೆಂಬುದನ್ನೂ (ಮಿಶ್ರಸ್ವಭಾವದ ನಿತ್ಯಸಂಸಾರಿಗಳೆಂಬ ವರ್ಗಕ್ಕೆ ಸೇರಿದವನೆಂದೂ), (ನಿಶ್ಚಯಿಸಿಕೊಳ್ಳಬೇಕು); ಏವಂ- ಹೀಗೆ (ಹರಿಭಕ್ತಿ ಹರಿದ್ವೇಷ, ಹರಿಭಕ್ತದ್ವೇಷ,

---

(ಮುಕ್ತಿಯೋಗ್ಯ ಸಾತ್ವಿಕ ಜೀವರಲ್ಲಿ) ಶ್ರೇಷ್ಠನು; ಈ ಲಕ್ಷಣಗಳಿಂದ (ಹರಿಭಕ್ತಿ ಮತ್ತು ಹರಿಭಕ್ತ ದ್ವೇಷಗಳಲ್ಲಿ) ಮಧ್ಯಮನಾದವನು, ಮಧ್ಯಮಭಕ್ತನು; ಕನಿಷ್ಠನಾದವನು, ಕನಿಷ್ಠಭಕ್ತನು; ತಾಮಸ ಜೀವರಲ್ಲಿ (ತಮೋಯೋಗ್ಯರಲ್ಲಿ) ಹರಿದ್ವೇಷ (ಮತ್ತು ಹರಿಭಕ್ತದ್ವೇಷ)ಗಳ ಅಧಿಕ್ಯ ನ್ಯೂನತೆಗಳಿಂದ, ತಾರತಮ್ಯಗಳನ್ನು ತಿಳಿಯಬೇಕು; ಭಕ್ತಿದ್ವೇಷಗಳ ವಿಷಯದಲ್ಲಿ ಉದಾಸೀನರಾಗಿರುವ (ನಿಶ್ಚಯಜ್ಞಾನವಿಲ್ಲದೇ ಸಂಶಯಗ್ರಸ್ತರಾಗಿ, ತದನುಗುಣವಾದ ಪ್ರವೃತ್ತಿಗಳುಳ್ಳ) ಜೀವರೇ ಮಧ್ಯಮರು—

---

ಕರ್ಮಮಾಡುವುದೆಂದರೆ, ತಾನೇ ಮಾಡಿ ಮಾಡಿಸುವ ಸ್ವತಂತ್ರಕರ್ತನು, ಶ್ರೀಹರಿಯೆಂಬ ಜ್ಞಾನಪೂರ್ವಕ ವಿಹಿತಕರ್ಮಗಳನ್ನಾಚರಿಸುವುದು; ಈ ಶ್ರೀಹರಿಸ್ವಾತಂತ್ರ್ಯದ ಅನುಸಂಧಾನ ವಿಲ್ಲದೇ ಆಚರಿಸುವುದೇ ಅತನ ವಿಸ್ಮರಣೆಯು; ಹೀಗಿರುವುದರಿಂದ ನಿರಂತರ ಹರಿಸ್ಮರಣೆಯುಳ್ಳ ವರ ಎಲ್ಲ ಕರ್ಮಗಳು ವಿಹಿತಕರ್ಮಗಳೇ ಆಗಿರುತ್ತವೆ; ಶ್ರೀಹರಿಯನ್ನು ಮರೆತು ಮಾಡುವು ದೆಲ್ಲವೂ ನಿಷಿದ್ಧಾಚರಣೆಯೇ ಸರಿ. ಈ ವಿವಕ್ಷೆಯಿಂದ ವಿಧಿನಿಷೇಧಗಳೆಲ್ಲವೂ ಹರಿಸ್ಮರಣೆ ವಿಸ್ಮರಣೆ ಗಳ ಅಧೀನಗಳೆಂದು (ಶಂಕರ- ದಾಸರಂತೆ ಅತ್ಯಂತ ಪರಾಧೀನಗಳೆಂದು), ಹೇಳಲಾಗಿದೆ. ನಿರಂತರ ಹರಿಸ್ಮರಣೆಯುಳ್ಳಿದ್ದು ವಿಹಿತಕರ್ಮಗಳನ್ನು ತ್ಯಾಗಮಾಡಿದರೆ ಅಥವಾ ನಿಷಿದ್ಧವನ್ನಾಚರಿಸಿ ದರೆ, ವಿಧಿಯನ್ನು ಪಾಲಿಸಿದಂತೆ, ಎಂದರ್ಥವಲ್ಲ. ನಿರಂತರ ಹರಿಸ್ಮರಣೆಯುಳ್ಳವನು ಎಂದೂ, ಹರಿಯಾಜ್ಞೆಯನ್ನು (ವಿಧಿಯನ್ನು) ಮೀರಿ ನಡೆಯುವುದೇ ಇಲ್ಲ—ಮತ್ತು ವಿಧ್ಯುಕ್ತಕರ್ಮವನ್ನು ಹರಿಸ್ಮರಣರಹಿತನಾಗಿ ಆಚರಿಸಿದರೆ, ಅದು ವಿಧ್ಯುಕ್ತಕರ್ಮವೂ ಅಲ್ಲ.

ಉದಾಸೀನತೆಗಳಿಂದ), ಜೀವಪರೀಕ್ಷಣಂ- ಜೀವರನ್ನು ಪರೀಕ್ಷಿಸಬೇಕು (ಅವರ ಸ್ವರೂಪವನ್ನು ಅರಿಯಬೇಕು-ಅರಿತು ಅವರೊಡನೆ ಯಥಾಯೋಗ್ಯವಾಗಿ ವ್ಯವಹರಿಸಬೇಕು).

**ಶ್ರುತಿಸ್ಮೃತಿಪುರಾಣಾನಾಮಿತ್ಥಂ ವಃ ಪರಿಕೀರ್ತಿತಃ ॥ ೧೨೮ ॥**
**ಶುಶ್ರೂಷುಭ್ಯೋ ಮಯಾ ಭಕ್ತ್ಯಾ ನಿರ್ಣಯೋ ವ್ಯಾಸಸಂಮತಃ ।**
**ಸಂವಾದಮಿದಮಸ್ಮಾಕಂ ಶೃಣುಯಾತ್ ಕಥಯೇತ ವಾ ॥ ೧೨೯ ॥**
**ಸ ಯಾತಿ ಪರಮಂ ವಿಷ್ಣೋರ್ಭಕ್ತಿಂ ಮುಕ್ತಿಂ ವ್ರಜೇತ್ತತಃ ॥ ೧೩೦ ॥**

ಇತ್ಥಂ- ಈ ಪ್ರಕಾರದಿಂದ, ಭಕ್ತ್ಯಾ-ಭಕ್ತಿಯಿಂದ, ಶುಶ್ರೂಷುಭ್ಯಃ-ಕೇಳಲಿಚ್ಛಿಸಿದ, ವಃ-ನಿಮಗೋಸ್ಕರ, ಮಯಾ-ನನ್ನಿಂದ, (ಭಕ್ತ್ಯಾ-ಭಕ್ತಿಪೂರ್ವಕವಾಗಿ, ಹರಿಭಕ್ತಿಪೂರಿತ ಮನಸ್ಸಿನಿಂದ), ವ್ಯಾಸಸಂಮತಃ-ಶ್ರೀಬಾದರಾಯಣರಿಗೆ ಸಮ್ಮತವಾದ, ಶ್ರುತಿಸ್ಮೃತಿ ಪುರಾಣಾನಾಂ-ಶ್ರುತಿ, ಸ್ಮೃತಿ, ಪುರಾಣಗಳ, ನಿರ್ಣಯಃ- ನಿರ್ಣಯವು, ಪರಿಕೀರ್ತಿತಃ-ಹೇಳಲ್ಪಟ್ಟಿತು; ಇದಂ-ಈ (ಈವರೆಗೆ ನಡೆದ), ಅಸ್ಮಾಕಂ-ನಮ್ಮಗಳ, ಸಂವಾದಂ-ಸಂವಾದವನ್ನು (ತತ್ತ್ವಜ್ಞಾನಾರ್ಥವಾಗಿ ನಡೆದ ಪ್ರಶ್ನೋತ್ತರರೂಪದ

---

ಮಿಶ್ರಸ್ವಭಾವದ ಜೀವರು, ನಿತ್ಯಸಂಸಾರಿಗಳೆಂದೂ ಕರೆಯಲ್ಪಡುವರು; ಜೀವರನ್ನು ಹೀಗೆ (ಈ ಲಕ್ಷಣಗಳಿಂದ) ಪರೀಕ್ಷಿಸಿ ಅವರ ಸ್ವಭಾವಗಳನ್ನು (ತ್ರಿವಿಧರಲ್ಲಿ ಯಾವ ವರ್ಗದವರೆಂಬುದನ್ನು) ತಿಳಿಯಬೇಕು—ತಿಳಿದು ಅವರೊಡನೆ ಯಥೋಚಿತವಾದ ವ್ಯವಹಾರಗಳನ್ನಿಟ್ಟುಕೊಳ್ಳಬೇಕು[1] (೧೨೬-೧೨೭). ಹೀಗೆ ಶ್ರುತಿಸ್ಮೃತಿ ಪುರಾಣಗಳ, ಶ್ರೀಬಾದರಾಯಣರಿಗೆ ಸಮ್ಮತವಾದ, ನಿರ್ಣಯಗಳನ್ನು (ನಿಶ್ಚಿತ ಪ್ರಮೇಯಗಳನ್ನು), ಭಕ್ತಿಯಿಂದ ಶ್ರವಣಮಾಡಲಿಚ್ಛಿಸಿದ ನಿಮಗೋಸ್ಕರವಾಗಿ, ನಿರೂಪಿಸಿರುವೆನು; ನಮ್ಮಲ್ಲಿ ಪರಸ್ಪರ ತತ್ತ್ವನಿಶ್ಚಯಕ್ಕಾಗಿ ನಡೆದ, ಈ ಸಂವಾದವನ್ನು ಯಾವಾತನು, ಶ್ರವಣ ಮಾಡುವನೋ ಅಥವಾ, ಅನ್ಯರಿಗೆ ಹೇಳುವನೋ, ಆತನೇ ಶ್ರೀಹರಿಯಲ್ಲಿ ಶ್ರೇಷ್ಠ ಭಕ್ತಿಯನ್ನೂ ಅದರಿಂದ, ಮುಕ್ತಿಯನ್ನೂ ಹೊಂದುತ್ತಾನೆ (೧೨೮-೧೩೦).

ನಿ೧ನೇ ಅಧ್ಯಾಯವು ಮುಗಿದುದು.

---

1. ಗೀತೆಯು ೧೬ನೇ ಅಧ್ಯಾಯವು ಜೀವತ್ರೈವಿಧ್ಯವನ್ನೂ, ಜಿಜ್ಞಾಸಾಧಿಕರಣ ಬ್ರಹ್ಮಸೂತ್ರ ಭಾಷ್ಯವು, ಅಧಿಕಾರಿತ್ರೈವಿಧ್ಯನಿರೂಪಣೆಯಲ್ಲಿ ಹಂಭಕರ ತ್ರೈವಿಧ್ಯವನ್ನೂ ವಿಸ್ತರಿಸುತ್ತವೆ. ಈ ಗ್ರಂಥ ದಲ್ಲಿ ಮುಂದಿನ ಅಧ್ಯಾಯಗಳಲ್ಲಿ ಸಹ ಪ್ರಸಕ್ತವಾಗಲಿದೆ, ಅಲ್ಲಿ ವಿಶೇಷಾಂಶಗಳ ನಿರೂಪಣೆಯನ್ನು ಕಾಣಬಹುದು.

ಭಾಷಣಗಳನ್ನು), (ಯಃ-ಯಾರು), ಶೃಣುಯಾತ್- ಕೇಳುವನೋ, ವಾ-ಅಥವಾ, ಕಥಯೇತ-ಹೇಳುವನೋ, ಸಃ-ಅವನು, ವಿಷ್ಣೋಃ- ಶ್ರೀವಿಷ್ಣುಪ್ರಸಾದದಿಂದ (ಅಥವಾ ವಿಷ್ಣುವಿನ), ಪರಮಂ-ಶ್ರೇಷ್ಠವಾದ, ಭಕ್ತಿಂ-ಭಕ್ತಿಯನ್ನೂ, ತತಃ-ಅದರಿಂದ (ಆ ಭಕ್ತಿಯಿಂದ), ಮುಕ್ತಿಂ-ಮೋಕ್ಷವನ್ನೂ ವ್ರಜೇತ್- ಹೊಂದುತ್ತಾನೆ.

ಜೀವರಿಗೆ ಸ್ವಾತಂತ್ರ್ಯದಾನ ಮತ್ತು ತಾತ್ವಿಕದೇವದೈತ್ಯರಲ್ಲಿ ಹಾಗೂ
ಜೀವರಲ್ಲಿ ಕರ್ಮಫಲವಿಭಾಗ ನಿರೂಪಣವೆಂಬ
೨೧ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೨೨

ಶ್ರೀ ವೇದವ್ಯಾಸಾಯ ನಮಃ

**ಶೌನಕ ಉವಾಚ—**

**ಅಥ ಪ್ರಸ್ತುತಮಾಚಕ್ಷ್ವ ಯಥಾ ಸ ಬ್ರಹ್ಮಣೇ ಹರಿಃ ।**
**ಉಕ್ತವಾನ್ ಪ್ರಥಮಾಂ ಸೃಷ್ಟಿಂ ಸೂತ ಶುಶ್ರೂಷವೋ ವಯಂ ॥ ೧ ॥**

**ಅರ್ಥ:**—ಅಥ-ಈ ಮುಂದೆ, ಪ್ರಸ್ತುತಂ-ಪ್ರಸಕ್ತವಾದ ಪ್ರಮೇಯವನ್ನು ಯಥಾ-ಹೇಗೆ, ಹರಿಃ-ಶ್ರೀಹರಿಯು, ಬ್ರಹ್ಮಣೇ-ಬ್ರಹ್ಮದೇವನಿಗೋಸ್ಕರ, ಉಕ್ತವಾನ್-ಹೇಳಿದನೋ, (ತಥಾ-ಹಾಗೆ), ಆಚಕ್ಷ್ವ-ಹೇಳುವವನಾಗು; ಸೂತ- ಹೇ ಸೂತಾಚಾರ್ಯ! ವಯಂ-ನಾವು, ಪ್ರಥಮಾಂ ಪ್ರಧಾನವಾದ (ವಾಸುದೇವ ಮತ್ತು ಸಂಕರ್ಷಣರೂಪಗಳಿಂದಾದ ಈ ಹಿಂದೆ ನಿರೂಪಿಸಿದ ಸೂಕ್ಷ್ಮ ಸೃಷ್ಟಿಗಳಿಂದ ಮುಂದಿನದಾದ), ಸೃಷ್ಟಿಂ-ಸೃಷ್ಟಿಯನ್ನು ಶುಶ್ರೂಷವಃ-ಕೇಳಲಿಚ್ಛೆಯುಳ್ಳವರಾಗಿದ್ದೇವೆ.

---

## ಅಧ್ಯಾಯ ೨೨

**ತಾತ್ಪರ್ಯ:**—ಶೌನಕನು ಮಾತನಾಡುತ್ತಾನೆ:—ಶ್ರೀಹರಿಯು, (ಶ್ರೀವಿಷ್ಣುವು) ಬ್ರಹ್ಮದೇವನಿಗೋಸ್ಕರ, ಸೃಷ್ಟಿಕ್ರಮ ನಿರೂಪಣೆಯಲ್ಲಿ ಮುಂದೆ ಪ್ರಸಕ್ತವಾದ ಯಾವ ವಿಷಯವನ್ನು ಹೇಳಿದನೋ, ಕೇಳಲಪೇಕ್ಷಿಸುವ ನಮಗೆ, ಆ ಪ್ರಧಾನ ಸೃಷ್ಟಿಯನ್ನು ಹೇಳಿರಿ (೧). ಸೂತಾಚಾರ್ಯನು ಹೇಳುತ್ತಾನೆ:— ಮೊದಲಿಗೆ ಶ್ರೀವಾಸುದೇವನಿಂದ ನಡೆದ ಸೃಷ್ಟಿ ಮತ್ತು ನಂತರ ಶ್ರೀಸಂಕರ್ಷಣನಿಂದ ನಡೆದ ಸೂಕ್ಷ್ಮಸೃಷ್ಟಿ ಇವುಗಳನ್ನು ನಿರೂಪಿಸಿ ಮುಂದೆ ನಡೆದ, (ಶ್ರೀಪ್ರದ್ಯುಮ್ನನಿಂದ ನಡೆದ) ಸೃಷ್ಟಿಯನ್ನು ಶ್ರೀವಿಷ್ಣುವು ವಿವರಿಸಿದನು (೨). ಬ್ರಹ್ಮದೇವನಿಗೆ ಹನ್ನೊಂದನೆಯ ವರ್ಷವು ಆರಂಭವಾಗುತ್ತಿರಲು, ಪ್ರದ್ಯುಮ್ನರೂಪನಾದ ಶ್ರೀವಿಷ್ಣುವು, ಸಕಲ ಜೀವರನ್ನೂ ಸರ್ವದೇವಾಂಶರನ್ನೂ ತೆಗೆದು

**ಸೂತ ಉವಾಚ—**

**ವಾಸುದೇವಾತ್ತು ಯಾ ಸೃಷ್ಟಿಸ್ತಥಾ ಸಂಕರ್ಷಣಾದಪಿ ।**
**ಯಾ ಪೂರ್ವಮಭವತ್ಸೂಕ್ಷ್ಮಾ ತತೋಽಗ್ರೇಽಕಥಯದ್ಧರಿಃ ॥ ೨ ॥**

ವಾಸುದೇವಾತ್ ತು-ಶ್ರೀವಾಸುದೇವನಿಂದಲೇ, ಯಾ-ಯಾವ, ಸೃಷ್ಟಿಃ-ಸೃಷ್ಟಿಯೋ, ತಥಾ-ಹಾಗೂ, ಸಂಕರ್ಷಣಾತ್ ಅಪಿ-ಶ್ರೀಸಂಕರ್ಷಣನಿಂದಲೂ, ಯಾ-ಯಾವ, ಸೂಕ್ಷ್ಮಾ-ಸೂಕ್ಷ್ಮವಾದ (ಸೃಷ್ಟಿಃ-ಸೃಷ್ಟಿಯು), ಪೂರ್ವಂ-ಪೂರ್ವದಲ್ಲಿ ಅಭವತ್- ಉಂಟಾಯಿತೋ (ಸಂಭವಿಸಿತೋ), ತತಃ-ಆದರಿಂದ, ಅಗ್ರೇ- ಮುಂದೆ, ಹರಿಃ- ಶ್ರೀಹರಿಯು, ಅಕಥಯತ್-(ಆದ ಸೃಷ್ಟಿಯನ್ನು) ಹೇಳಿದನು.

**ಶ್ರೀಭಗವಾನುವಾಚ—**

**ತತ ಏಕಾದಶೇ ವರ್ಷೇ ಪ್ರಾರಬ್ಧೇ ಬ್ರಹ್ಮಣೋ ಹ್ಯಯಂ ।**
**ಪ್ರಗೃಹ್ಯ ಸರ್ವದೇವಾಂಶಾನ್ ಜೀವಾಂಶ್ಚಾಪ್ಯಖಿಲಾನಪಿ ॥ ೩ ॥**
**ಪ್ರದ್ಯುಮ್ನರೂಪಃ ಸ್ವಾಂಗೇಷು ಬೀಜತ್ವೇನಾಸೃಜತ್ತತಃ ।**
**ತಸ್ಯ ವಾಮಾಂಗಮಭವತ್ ಕೃತಿರ್ದೇವೀ ತತಃ ಸ್ವಯಂ ॥ ೪ ॥**
**ಅರ್ಧನಾರೀಕದೇಹೋಽಸಾವರ್ಧನಾರಾಯಣೋಽಭವತ್ ।**
**ತಸ್ಯ ದಕ್ಷಿಣಭಾಗೇಭ್ಯಃ ಪುರುಷಾ ಜಜ್ಞಿರೇಽಖಿಲಾಃ ॥ ೫ ॥**
**ಚತುರ್ವರ್ಣವಿಭೇದೇನ ನಾರ್ಯೋ ವಾಮಾಂಗತೋಽಭವನ್ ।**

**ಶ್ರೀವಿಷ್ಣುವು ನುಡಿದನು:—**

ತತಃ-ಆ ಮುಂದೆ, ಬ್ರಹ್ಮಣಃ-ಬ್ರಹ್ಮದೇವನ, ಏಕಾದಶೇ ವರ್ಷೇ-

---

ತನ್ನ ದೇಹದ ವಿವಿಧವಾದ ಅಂಗಗಳಲ್ಲಿ ಬೀಜರೂಪದಿಂದ ಸ್ಥಾಪಿಸಿದನು; (ಈ ಮುಂದೆ ನಿರೂಪಿಸುವ ಪ್ರದ್ಯುಮ್ನಸೃಷ್ಟಿಗೆ) ಈ ಜೀವರು ಬೀಜಪ್ರಾಯರಾದರು; ಅಂಕುರಿಸಿ ಕಿಂಚಿತ್ ಉಪಚಯಗೊಂಡ ಲಿಂಗದೇಹಗಳುಳ್ಳವರಾದರು; ಮುಂದೆ, ಈ ಪ್ರದ್ಯುಮ್ನನ ಎಡಭಾಗದ ದೇಹವು, ಸ್ತ್ರೀರೂಪವನ್ನು ಹೊಂದಿತು; ಪ್ರದ್ಯುಮ್ನನ ಭಾರ್ಯೆಳಾದ ಕೃತೀನಾಮಕ ಶ್ರೀಲಕ್ಷ್ಮೀದೇವಿಯೇ ಎಡಭಾಗವಾದಳು; ಸ್ವಯಂಪ್ರದ್ಯುಮ್ನನು ಅರ್ಧ ಸ್ತ್ರೀರೂಪವುಳ್ಳ ಅರ್ಧನಾರಾಯಣನಾದನು; ಆ ರೂಪದ ಬಲಭಾಗದ ಅವಯವಗಳಿಂದ ಪುರುಷಜೀವರೂ, ಎಡಭಾಗಗಳಿಂದ ನಾರಿಯರೂ (ಸ್ತ್ರೀಜೀವರೂ) ಹುಟ್ಟಿದರು (೩-೫). ಮುಖದ ಬಲಭಾಗಗಳಿಂದ ಬ್ರಹ್ಮ, ಅಗ್ನಿ, ವರುಣಾದಿ ದೇವತೆಗಳೂ, ಮರೀಚಿಯೇ ಮೊದಲಾದ ಋಷಿಗಳೂ, ಸ್ವರೂಪದಿಂದಲೇ

ಹನ್ನೊಂದನೆಯ ವರ್ಷವು, ಪ್ರಾರಬ್ಧೇ-ಪ್ರಾರಂಭವಾಗುತ್ತಿರಲು,[1] ಅಯಂ-ಈ ಶ್ರೀಹರಿಯು, ಸರ್ವದೇವಾಂಶಾನ್-ಸರ್ವದೇವತೆಗಳ ಅಂಶಗಳನ್ನೂ, ಅಖಿಲಾನ್-ಸರ್ವ, ಜೀವಾನ್ ಚ-ಜೀವರನ್ನೂ ಸಹ, ಪ್ರಗೃಹ್ಯ-ತೆಗೆದುಕೊಂಡು, ಪ್ರದ್ಯುಮ್ನ ರೂಪಃ-ಪ್ರದ್ಯುಮ್ನರೂಪನಾದ ತಾನು, ಸ್ವಾಂಗೇಷು-ತನ್ನ ಅಂಗಗಳಲ್ಲಿ (ಚಿದಾನಂದಾತ್ಮಕ ದೇಹದ ನಾನಾಭಾಗಗಳಲ್ಲಿ), ಬೀಜತ್ವೇನ-ಬೀಜರೂಪದಿಂದ, ಅಸೃಜತ್-(ಆ ಸಕಲ ಜೀವರನ್ನೂ), ಸೃಷ್ಟಿಮಾಡಿದನು; (ಲಿಂಗದೇಹಯುಕ್ತರಾದ ಆ ಜೀವರು ಬೀಜರೂಪ ದಿಂದಿದ್ದು ಅತ್ಯಲ್ಪವಿಕಾರದಿಂದ, ಅಂಕುರಗಳಂತೆ ಉಪಚಯ ಗೊಂಡರು); ತತಃ-ಹೀಗೆ ತನ್ನಲ್ಲಿ ಅವರನ್ನು ಸ್ಥಾಪಿಸಿದ ನಂತರ, ಕೃತಿರ್ದೇವೀ-(ಆ ಪ್ರದ್ಯುಮ್ನರೂಪನ ಭಾರ್ಯಳಾದ) ಕೃತೀನಾಮಕ ಲಕ್ಷ್ಮೀದೇವಿಯು, ತಸ್ಯ-ಆ ಪ್ರದ್ಯುಮ್ನನ, ವಾಮಾಂಗಂ- ವಾಮಾಂಗಳು (ಎಡಪಾರ್ಶ್ವದ ದೇಹರೂಪಳು), ಅಭವತ್-ಆದಳು; ತತಃ-ನಂತರ, ಅಸೌ-ಈ ಪ್ರದ್ಯುಮ್ನನು, ಸ್ವಯಂ-ತಾನು, ಅರ್ಧನಾರೀಕದೇಹಃ-ಅರ್ಧ ಸ್ತ್ರೀದೇಹವುಳ್ಳ, ಅರ್ಧನಾರಾಯಣಃ-ಅರ್ಧ ನಾರಾಯಣನು (ಬಲಭಾಗ ಪುರುಷಾಕಾರವುಳ್ಳವನು), ಅಭವತ್-ಆದನು; ತಸ್ಯ-ಈತನ (ಅರ್ಧನಾರಾಯಣನ), ದಕ್ಷಿಣಭಾಗೇಭ್ಯಃ- ಬಲಭಾಗದ ಅಂಗಗಳಿಂದ (ಅವಯವಗಳಿಂದ), ಅಖಿಲಾಃ-ಸಮಸ್ತರಾದ, ಪುರುಷಾಃ-ಪುರುಷರು (ಪುರುಷ ಜೀವರು), ಚತುರ್ವರ್ಣ ವಿಭೇದೇನ-ಬ್ರಾಹ್ಮಣಾದಿಭೇದದಿಂದ, ಜಜ್ಞಿರೇ-ಹುಟ್ಟಿದರು; ನಾರ್ಯಃ-ಸ್ತ್ರೀಜೀವರು, ವಾಮಾಂಗತಃ-ಎಡಭಾಗದ ಅವಯವಗಳಿಂದ (ವರ್ಣಭೇದಯುಕ್ತರಾಗಿ), ಅಭವನ್-ಹುಟ್ಟಿದರು.

ಮುಖದಕ್ಷಿಣಭಾಗೇಭ್ಯೋ ಬ್ರಹ್ಮಾಗ್ನಿವರುಣಾದಯಃ ॥ ೬ ॥
ಋಷಯೋಽಪಿ ಮರೀಚ್ಯಾದ್ಯಾ ಯೇ ಚ ವಿಪ್ರಾಃ ಸ್ವರೂಪತಃ ।
ಜೀವಾಸ್ತೇಽಪಿ ವಿನಿರ್ಜಗ್ಮುಸ್ತೇ ವಿಪ್ರಾ ಮುಖಜನ್ಮತಃ ॥ ೭ ॥

---

ಬ್ರಾಹ್ಮಣವರ್ಣಕ್ಕೆ ಸೇರಿದ, ಇತರ ಜೀವರೂ ಹುಟ್ಟಿದರು; ಪ್ರದ್ಯುಮ್ನರೂಪೀ ಶ್ರೀಹರಿಯ ಮುಖದಿಂದ ಹುಟ್ಟಿದರಾದ್ದರಿಂದ, ಈ ಎಲ್ಲರೂ ಬ್ರಾಹ್ಮಣರೇ, (ಬ್ರಹ್ಮ ಅಗ್ನಿ ಮೊದಲಾದ ದೇವತೆಗಳೂ, ಋಷ್ಯಾದಿ ಇತರರೆಲ್ಲರೂ, ಬ್ರಾಹ್ಮಣವರ್ಣದವರೆಂದು ತಿಳಿಯಬೇಕು); ಬ್ರಾಹ್ಮಣವರ್ಣದ ಮುಖ್ಯಾಭಿಮಾನಿ ದೇವತೆಯು, ಬ್ರಹ್ಮದೇವನೇ; ಸ್ವರೂಪದಿಂದ ಬ್ರಾಹ್ಮಣ ಸ್ತ್ರೀಜೀವರಾದ, ಮುಖದಿಂದ ಹುಟ್ಟಿದವರ ಪತ್ನಿಯರೆಲ್ಲರೂ, ಪ್ರದ್ಯುಮ್ನನ (ಅರ್ಧ ನಾರಾಯಣನ) ಮುಖದ ಎಡಭಾಗಗಳಿಂದ ಉತ್ಪನ್ನರಾದರು

---

1. ಈ ಹಿಂದ ೨ನೇ ಅಧ್ಯಾಯದಲ್ಲಿ ಪುರುಷನಾಮಕ ಬ್ರಹ್ಮನ ಉತ್ಪತ್ತಿಯು ವಾಸುದೇವನಿಂದ ಮಾಯಾದೇವಿಯಲ್ಲಿ ಆದ ವಿಷಯವು ಹೇಳಲ್ಪಟ್ಟಿದೆ. ಈಗ ಸೃಷ್ಟ್ಯರ್ಥವಾಗಿ ನಿರ್ಮಿತನಾದ ಬ್ರಹ್ಮನಿಗೆ ೧೧ನೇ ವರ್ಷವು ಆರಂಭವಾಗಿದೆ.

**ಬ್ರಹ್ಮಾ ಬ್ರಾಹ್ಮಣವರ್ಣಸ್ಯ ಮುಖ್ಯೋ ದೇವಃ ಪ್ರಕೀರ್ತಿತಃ ।**
**ಬ್ರಹ್ಮಾದೀನಾಂ ತು ಯಾಃ ಪತ್ನ್ಯಃ ಸ್ತ್ರೀಜೀವಾ ಬ್ರಹ್ಮಜಾತಯಃ ॥ ೮ ॥**
**ತಾ ಜಾತಾ ವಾಮಭಾಗೇಭ್ಯೋ ಮುಖಸ್ಯಾಸ್ಯಾರ್ಧರೂಪಿಣಃ ।**

ಮುಖದಕ್ಷಿಣಭಾಗೇಭ್ಯಃ-ಮುಖದ ಬಲಭಾಗಗಳಿಂದ, ಬ್ರಹ್ಮಾಗ್ನಿವರುಣಾದಯಃ-ಬ್ರಹ್ಮ ಅಗ್ನಿ ವರುಣ ಮೊದಲಾದ ದೇವತೆಗಳೂ, ಮರೀಚ್ಯಾದ್ಯಾಃ-ಮರೀಚಿ ಮೊದಲಾದ, ಋಷಯಃ ಅಪಿ-ಋಷಿಗಳೂ, ಯೇ ಚ-ಯಾರು, ಸ್ವರೂಪತಃ-ಸ್ವರೂಪದಿಂದಲೇ, ವಿಪ್ರಾಃ-ಬ್ರಾಹ್ಮಣವರ್ಣದವರೋ, ತೇಪಿ ಜೀವಾಃ-ಆ ಜೀವರೂ ಕೂಡ, ವಿನಿರ್ಜಗ್ಮುಃ-ಹೊರಗೆ ಬಂದರು (ಉತ್ಪನ್ನರಾದರು); ಮುಖಜನ್ಮತಃ-(ಈ ಅರ್ಧನಾರಾಯಣನಾದ) ಪ್ರದ್ಯುಮ್ನನ ಮುಖದಿಂದ ಹುಟ್ಟಿದ್ದರಿಂದ, ತೇ-ಈ ಎಲ್ಲರೂ, ವಿಪ್ರಾಃ-ಬ್ರಾಹ್ಮಣರೇ ಸರಿ; ಬ್ರಹ್ಮಾ-ಬ್ರಹ್ಮದೇವನು, ಬ್ರಾಹ್ಮಣವರ್ಣಸ್ಯ-ಬ್ರಾಹ್ಮಣವರ್ಣದ, ಮುಖ್ಯಃ ದೇವಃ-ಮುಖ್ಯಾಭಿಮಾನಿ ದೇವತೆಯು, ಪ್ರಕೀರ್ತಿತಃ-(ಎಂದು) ಪ್ರಸಿದ್ಧನಾದನು; ಬ್ರಹ್ಮಾದೀನಾಂ-ಬ್ರಹ್ಮಾದಿಗಳ (ಮುಖಭಾಗಗಳಿಂದ ಹುಟ್ಟಿದ), ಯಾಃ ಪತ್ನ್ಯಃ-ಯಾವ ಸ್ತ್ರೀಯರೋ (ಭಾರ್ಯರೋ), ಸ್ತ್ರೀಜೀವಾಃ-ಆ ಸ್ತ್ರೀಜೀವರು, ಬ್ರಹ್ಮ ಜಾತಯಃ-(ಸ್ವರೂಪದಿಂದ ಸಹ) ಬ್ರಾಹ್ಮಣ ವರ್ಣದವರು; ತಾಃ-ಆ ಸ್ತ್ರೀಯರು, ಅರ್ಧರೂಪಿಣಃ-ಅರ್ಧನಾರೀ ನಾರಾಯಣ ರೂಪನಾದ, ಅಸ್ಯ-ಈ ಪ್ರದ್ಯುಮ್ನನ, ಮುಖಸ್ಯ-ಮುಖದ, ವಾಮಭಾಗೇಭ್ಯಃ-ಎಡಭಾಗಗಳಿಂದ (ಮುಖದಲ್ಲಿರುವ ಕಣ್ಣು ಕಿವಿ, ಮೂಗು ಮುಂತಾದ ಭಾಗಗಳಿಂದ), ಜಾತಾಃ-ಉತ್ಪನ್ನರಾದರು.

**ಭುಜಾದ್ದಕ್ಷಿಣತೋ ವಾಯುರುದ್ರಶೇಷಗರುತ್ಮತಃ ॥ ೯ ॥**
**ಇಂದ್ರಪ್ರದ್ಯುಮ್ನಚಂದ್ರಾರ್ಕವಸುರುದ್ರಾದಯೋ ಪರೇ ।**
**ಮರುತಃ ಕ್ಷತ್ರವರ್ಣತ್ವಾಜ್ಜಜ್ಞಿರೇ ಕ್ಷತ್ರಜೀವಕಾಃ ॥ ೧೦ ॥**
**ಸರ್ವಾಶ್ಚ ತತ್ಸ್ತ್ರಿಯೋ ವಾಮಾದ್ಭುಜಾದ್ವಿಷ್ಣೋರ್ವಿನಿಸ್ಸೃತಾಃ ।**

---

(೬-೮). ಪ್ರದ್ಯುಮ್ನನ ಬಲಭುಜದಿಂದ, ವಾಯು (ಮುಖ್ಯ ವಾಯುದೇವ) ರುದ್ರ, ಶೇಷ, ಗರುಡರೂ, ಇಂದ್ರ, ಕಾಮ, ಚಂದ್ರ, ಸೂರ್ಯ, ವಸುಗಳು, (ಏಕಾದಶರುದ್ರರಲ್ಲಿ ರುದ್ರನನ್ನುಳಿದು) ಅನ್ಯರುದ್ರರೇ ಮೊದಲಾದವರು; (ಮುಖ್ಯ ವಾಯುದೇವನ ವಿನಹ) ಉಳಿದ ೪೯ ವಾಯುಗಳು (ಮರುತ್ತರು) ಕ್ಷತ್ರಿಯಜೀವರೇ ಆದ್ದರಿಂದ, ಈ ಎಲ್ಲರೂ ಉತ್ಪನ್ನರಾದರು; ಇವರೆಲ್ಲರ ಭಾರ್ಯರು ಶ್ರೀವಿಷ್ಣುವಿನ (ಪ್ರದ್ಯುಮ್ನನ) ಎಡಭುಜದಿಂದ ಸೃಷ್ಟರಾದರು. ಮುಖ್ಯ ವಾಯುವೇ ಕ್ಷತ್ರಿಯ ವರ್ಣಾಭಿಮಾನಿ ದೇವತೆಯು; ಸುರರೆಲ್ಲರೂ ಪ್ರಾಯಃ ಕ್ಷತ್ರಿಯ ವರ್ಣದವರು

**ಕ್ಷತ್ರದೇವಃ ಪರೋ ವಾಯುಃ ಪ್ರಾಯೇಣ ಕ್ಷತ್ರಿಯಾಃ ಸುರಾಃ ॥ ೧೧ ॥**

ದಕ್ಷಿಣತಃ- ಬಲಭಾಗದ, ಭುಜಾತ್-ಭುಜದಿಂದ (ಬಾಹುವಿನಿಂದ), ಕ್ಷತ್ರಜೀವಕಾಃ-ಕ್ಷತ್ರವರ್ಣದವರಾದ, ವಾಯುರುದ್ರಶೇಷಗರುತ್ಮತಃ-ವಾಯು, ರುದ್ರ, ಶೇಷ, ಗರುಡರೂ, ಇಂದ್ರಪ್ರದ್ಯುಮ್ನಚಂದ್ರಾರ್ಕವಸುರುದ್ರಾದಯಃ-ಇಂದ್ರ, ಕಾಮ, ಚಂದ್ರ, ಸೂರ್ಯ, ವಸು, (ಏಕಾದಶರುದ್ರರಲ್ಲಿ) ಇತರ ರುದ್ರರೂ, ಪರೇ-ಇತರ, ಮರುತಃ-ಮರುತ್ತರೂ, ಕ್ಷತ್ರವರ್ಣತ್ವಾತ್-ಕ್ಷತ್ರಿಯವರ್ಣದವರಾದ್ದರಿಂದ, ಜಜ್ಞಿರೇ-ಹುಟ್ಟಿದರು; ವಿಷ್ಣೋಃ-ಶ್ರೀವಿಷ್ಣುವಿನ (ಪ್ರದ್ಯುಮ್ನನ), ವಾಮಾತ್‌ಭುಜಾತ್- ಎಡಭುಜದಿಂದ, ತತ್ಸ್ತ್ರಿಯಃ-(ಈ ಮೇಲೆ ನಿರೂಪಿಸಿದ ಪುರುಷರ) ಪತ್ನಿಯರು, ವಿನಿಃಸೃತಾಃ-ಸೃಷ್ಟರಾದರು; ಪರಃ ವಾಯುಃ-ಮುಖ್ಯ ವಾಯುದೇವನು, ಕ್ಷತ್ರದೇವಃ-ಕ್ಷತ್ರಿಯ ವರ್ಣಾಭಿಮಾನಿಯು; ಸುರಾಃ- ದೇವತೆಗಳು, ಪ್ರಾಯೇಣ- ಬಹುವಾಗಿ, ಕ್ಷತ್ರಿಯಾಃ-ಕ್ಷತ್ರಿಯವರ್ಣದವರು.

**ಕುಬೇರೋ ದೇವಗಂಧರ್ವಾ ದಸ್ರಾದ್ಯಾ ವೈಶ್ಯವರ್ಣಕಾಃ ।**
**ವೈಶ್ಯಜೀವಾಃ ಪರೇ ವಿಷ್ಣೋರೂರೋರ್ದಕ್ಷಿಣತೋಽಭವನ್ ॥ ೧೨ ॥**
**ನಾರ್ಯಶ್ಚ ತಾದೃಶಾ ವಾಮಾದೂರೋರ್ಜಾತಾಃ ಪ್ರಜಾಪತೇಃ ।**
**ಕುಬೇರೋ ವೈಶ್ಯವರ್ಣಸ್ಯ ದೇವತಾ ಪರಮೋಚ್ಯತೇ ॥ ೧೩ ॥**

ಕುಬೇರಃ-ಕುಬೇರನೂ, ದೇವಗಂಧರ್ವಾಃ-ದೇವಗಂಧರ್ವರೂ, ದಸ್ರಾದ್ಯಾಃ-ದಸ್ರರೇ (ಅಶ್ವಿನೀದೇವತೆಗಳೇ) ಮೊದಲಾದವರು, ವೈಶ್ಯವರ್ಣಕಾಃ-ವೈಶ್ಯವರ್ಣದವರು; (ಇವರು) ಪರೇ-ಇತರರಾದ, ವೈಶ್ಯಜೀವಾಃ-ವೈಶ್ಯಜೀವರು; ವಿಷ್ಣೋಃ-ಶ್ರೀಪ್ರದ್ಯುಮ್ನನ, ದಕ್ಷಿಣತಃ-ಬಲಭಾಗದ, ಊರೋಃ-ತೊಡೆಯಿಂದ, ಅಭವನ್-ಹುಟ್ಟಿದರು; ತಾದೃಶಾಃ-ಅದೇ ವೈಶ್ಯವರ್ಣದವರಾದ, ನಾರ್ಯಃ-ಸ್ತ್ರೀಯರೂ, ಚ-ಸಹ, ಪ್ರಜಾಪತೇಃ-ಪ್ರಜಾಪತಿಯ (ಪ್ರಜೆಗಳನ್ನು ಉತ್ಪಾದಿಸುವುದರಲ್ಲಿ ತೊಡಗಿದ ಪ್ರದ್ಯುಮ್ನನ), ವಾಮಾತ್-ಎಡಭಾಗದ, ಊರೋಃ-ತೊಡೆಯಿಂದ, ಜಾತಾಃ ಹುಟ್ಟಿದರು; ಕುಬೇರಃ-ಕುಬೇರನು, ವೈಶ್ಯವರ್ಣಸ್ಯ-ವೈಶ್ಯವರ್ಣದ, ಪರಮಾದೇವತಾ-ಮುಖ್ಯಾಭಿಮಾನಿ ದೇವನೆಂದು, ಉಚ್ಯತೇ-ಹೇಳಲ್ಪಡುತ್ತಾನೆ.

---

(೯-೧೧). ವೈಶ್ಯವರ್ಣದವರಾದ, ಕುಬೇರ, ದೇವಗಂಧರ್ವರು, ಅಶ್ವಿನೀದೇವತೆಗಳೇ ಮುಂತಾದ ವೈಶ್ಯಜೀವರೆಲ್ಲರೂ ಪ್ರದ್ಯುಮ್ನನ ಬಲತೊಡೆಯಿಂದ ಉತ್ಪನ್ನರಾದರು; ವೈಶ್ಯವರ್ಣದ ಸ್ತ್ರೀಯರು (ಕುಬೇರಾದಿಗಳ ಭಾರ್ಯರು), ಪ್ರದ್ಯುಮ್ನನ ಎಡತೊಡೆಯಿಂದ, ಹುಟ್ಟಿದರು; ಕುಬೇರನು, ವೈಶ್ಯವರ್ಣದ ಮುಖ್ಯಾಭಿಮಾನಿದೇವತೆಯೆಂದು ಹೇಳಲ್ಪಡುತ್ತಾನೆ (೧೨-೧೩). ಯಮನೂ, ಮನುಷ್ಯ ಗಂಧರ್ವರೂ, ಹಾಗೂ

**ಯಮೋ ಮಾನುಷಗಂಧರ್ವಾಸ್ತಥೈವಾಜಾನದೇವತಾಃ ।**
**ಶನಿಪುಷ್ಕರಯಕ್ಷಾದ್ಯಾ ಯಮದೂತಾಶ್ಚ ಸರ್ವಶಃ ॥ ೧೪ ॥**
**ಚಿತ್ರಶ್ಚ ಚಿತ್ರಗುಪ್ತಶ್ಚ ಬಂದಿವೇತಾಲಕಿನ್ನರಾಃ ।**
**ವಿದ್ಯಾಧರಾದಯೋ ಯೇನ್ಯೇ ಶೂದ್ರವರ್ಣಾಃ ಸಮಸ್ತಶಃ ॥ ೧೫ ॥**
**ಶೂದ್ರಜೀವಾಸ್ತಥಾ ಸರ್ವೇ ಜಾತಾಸ್ತದ್ದಕ್ಷಿಣಾಂಘ್ರಿತಃ ।**
**ಸ್ತ್ರಿಯಸ್ತಾದೃಶರೂಪಾಸ್ತು ತಥೈವಾಪ್ಸರಸಾಂ ಗಣಾಃ ॥ ೧೬ ॥**
**ಜಜ್ಞಿರೇ ವಾಮತಃ ಪಾದಾದ್ಯಮಃ ಶೂದ್ರಾಧಿದೇವತಾ ।**
**ಯಮಸ್ಯಾನ್ಯದ್ಧಿ ಯದ್ರೂಪಂ ಧರ್ಮಃ ಸ ಬ್ರಾಹ್ಮಣಃ ಸ್ಮೃತಃ ॥ ೧೭ ॥**

ಯಮಃ- ಯಮದೇವನೂ, ಮಾನುಷಗಂಧರ್ವಾಃ- ಮನುಷ್ಯಗಂಧರ್ವರೂ, ತಥೈವ- ಹಾಗೆಯೇ, ಅಜಾನದೇವತಾಃ- ಅಜಾನದೇವತೆಗಳೂ, ಶನಿಪುಷ್ಕರ ಯಕ್ಷಾದ್ಯಾಃ- ಶನಿ, ಪುಷ್ಕರ, ಯಕ್ಷರೇ ಮೊದಲಾದವರೂ, ಸರ್ವಶಃ-ಸಮಸ್ತ ಯಮದೂತಾಃ ಚ- ಯಮದೂತರೂ, ಚಿತ್ರಃ-ಚಿತ್ರನೂ, ಚಿತ್ರಗುಪ್ತಃ ಚ-ಚಿತ್ರಗುಪ್ತನೂ, ಬಂದಿವೇತಾಲ ಕಿನ್ನರಾಃ- ಬಂದಿ, ಬೇತಾಲ, ಕಿನ್ನರರೂ, ವಿದ್ಯಾಧರಾ ದಯಃ-ವಿದ್ಯಾಧರರೇ ಮುಂತಾದ, ಯೇ- ಯಾವ, ಅನ್ಯೇ-ಇತರ, ಶೂದ್ರವರ್ಣಾಃ-ಶೂದ್ರವರ್ಣದವರಾದ, ಸರ್ವೇ- ಎಲ್ಲ ಶೂದ್ರಜೀವಾಃ-ಶೂದ್ರ ಜೀವರು, ಸಮಸ್ತಶಃ-ಎಲ್ಲರೂ, ತದ್ದಕ್ಷಿಣಾಂಘ್ರಿತಃ- ಪ್ರದ್ಯುಮ್ನನ ಬಲಪಾದದಿಂದ, ಜಾತಾಃ-ಹುಟ್ಟಿದರು; ತಾದೃಶರೂಪಾಃ- ಈ ಶೂದ್ರರ ಸಮಾನರೂಪರಾದ, ಸ್ತ್ರಿಯಃ-ಸ್ತ್ರೀಯರೂ (ಅದೇ ಶೂದ್ರವರ್ಣದವರಾದ ಅವರ ಭಾರ್ಯರೂ), ತಥಾ

---

ಅಜಾನಜದೇವತೆಗಳೂ,[1] ಶನಿ, ಪುಷ್ಕರ ಮತ್ತು ಯಕ್ಷಾದಿಗಳು, ಹಾಗೂ ಸಮಸ್ತ ಯಮದೂತರೂ, ಚಿತ್ರ ಮತ್ತು ಚಿತ್ರಗುಪ್ತರೂ ಬಂದಿ, ಬೇತಾಲ,[2] ಕಿನ್ನರರೂ, ವಿದ್ಯಾಧರರೇ ಮೊದಲಾದ, ಶೂದ್ರವರ್ಣಕ್ಕೆ ಸೇರುವ ಸಮಸ್ತ ಶೂದ್ರಜೀವರೂ, ಪ್ರದ್ಯುಮ್ನನ ಬಲಪಾದದಿಂದ ಹುಟ್ಟಿದರು; ಅವರ ಪತ್ನಿಯರೂ ಮತ್ತು ಇತರ ಶೂದ್ರವರ್ಣಕ್ಕೆ ಸೇರಿದ ದೇವಯೋನಿಯ ಸ್ತ್ರೀಜೀವರೂ, ಪ್ರದ್ಯುಮ್ನನ ಎಡಪಾದದಿಂದ ಹುಟ್ಟಿದರು; ಅಪ್ಸರಾ ಸ್ತ್ರೀಯರೆಲ್ಲರೂ ಶೂದ್ರವರ್ಣದವರೇ; ಅವರೆಲ್ಲರೂ ಎಡಪಾದದಿಂದಲೇ ಉತ್ಪನ್ನರಾದರು; ಯಮದೇವನೇ ಶೂದ್ರ ವರ್ಣಾಧಿದೇವತೆಯು;

---

1. ತತ್ತ್ವಾಭಿಮಾನಿದೇವತೆಗಳಂತೆ ವೇದಗಳಲ್ಲಿ ನಾಮ ನಿರ್ದೇಶಮಾಡಲ್ಪಡದ, ದೇವ ಯೋನಿಯಲ್ಲಿ ಜನಿಸಿದವರೂ (ದೇವಕುಲೋತ್ಪನ್ನರೂ) ಆದ ಅಪ್ರಸಿದ್ಧ ದೇವತೆಗಳು.

2. ವಂದಿ (ಬಂದಿ)=ಸ್ತುತಿಪಾಠಕ; ವೇತಾಲ= ಪಿಶಾಚಾದಿ ಅಥವಾ ದ್ವಾರಪಾಲಕ

ಏವ-ಹಾಗೆಯೇ, ಅಪ್ಸರಸಾಂ-ಅಪ್ಸರಾಸ್ತ್ರೀಯರ, ಗಣಾಃ-ಸಮೂಹಗಳೂ, ವಾಮತಃ-ಎಡಭಾಗದ, ಪಾದಾತ್-ಪಾದದಿಂದ, ಜಜ್ಞಿರೇ-ಹುಟ್ಟಿದರು; ಯಮಃ-ಯಮದೇವನು, ಶೂದ್ರಾಧಿದೇವತಾ-ಶೂದ್ರ ವರ್ಣಾಭಿಮಾನಿಯು; ಯಮಸ್ಯ-ಯಮನ, ಅನ್ಯತ್-ಬೇರೊಂದು, ಯದ್ರೂಪಂ-ಯಾವ ರೂಪವು, ಧರ್ಮಃ ಹಿ-ಧರ್ಮ ಎಂಬ ನಾಮದಿಂದ ಪ್ರಸಿದ್ಧವೋ, ಸಃ-ಅದು (ಆ ರೂಪದ ಯಮನು), ಬ್ರಾಹ್ಮಣನೆಂದು, ಸ್ಮೃತಃ-ತಿಳಿಯಲ್ಪಟ್ಟಿರುವನು.

**ಪಿತರೋ ಬ್ರಾಹ್ಮಣಾ ಏವ ಕ್ಷತ್ರಿಯಾ ಮನವಃ ಸ್ಮೃತಾಃ ।**
**ಕರ್ಮದೇವಾಸ್ತಥಾ ಚಾನ್ಯೇ ನಿಖಿಲಾಶ್ಚಕ್ರವರ್ತಿನಃ ॥ ೧೮ ॥**
**ಕ್ಷತ್ರಿಯಾ ಏವ ತೇ ಪ್ರೋಕ್ತಾ ರಾಕ್ಷಸಾ ಅಪಿ ಶೌರ್ಯತಃ ।**
**ಕ್ಷತ್ರಿಯೇಷ್ವೇವ ಗಣ್ಯಂತೇ ತತಸ್ತೇ ಭುಜತೋಽಭವನ್ ॥ ೧೯ ॥**

ಪಿತರಃ-ಪಿತೃದೇವತೆಗಳು, ಬ್ರಾಹ್ಮಣಾಃ ಏವ-ಬ್ರಾಹ್ಮಣರೇ ಸರಿ; ಮನವಃ-ಮನುಗಳು (ಸ್ವಾಯಂಭುವಾದಿಗಳು), ಕ್ಷತ್ರಿಯಾಃ-ಕ್ಷತ್ರಿಯರೆಂದು, ಸ್ಮೃತಾಃ-ತಿಳಿಯಲ್ಪಡುವರು; ಕರ್ಮದೇವಾಃ-ಕರ್ಮಜದೇವತೆಗಳು, ತಥಾ ಚ-ಹಾಗೂ, ಅನ್ಯೇ-ಇತರ, ನಿಖಿಲಾಃ-ಸಮಸ್ತ, ಚಕ್ರವರ್ತಿನಃ-ಚಕ್ರವರ್ತಿಗಳು, ಕ್ಷತ್ರಿಯಾಃ ಏವ-ಕ್ಷತ್ರಿಯರೇ ಎಂದು, ತೇ ಪ್ರೋಕ್ತಾಃ-ಅವರೆಲ್ಲ ಹೇಳಲ್ಪಡುತ್ತಾರೆ; ರಾಕ್ಷಸಾಃ ಅಪಿ-ರಾಕ್ಷಸರೂ ಸಹ, ಶೌರ್ಯತಃ-ಶೌರ್ಯಗುಣದಿಂದ, ಕ್ಷತ್ರಿಯತ್ವೇನ-ಕ್ಷತ್ರಿಯ ವರ್ಣದವರೆಂದೇ, ಗಣ್ಯಂತೇ-ತಿಳಿಯಲ್ಪಡುತ್ತಾರೆ (ಕ್ಷತ್ರಿಯರಲ್ಲಿಯೇ ಎಣಿಸಲ್ಪಡುತ್ತಾರೆ); ತತಃ-ಆದ್ದರಿಂದ, ತೇ-ಅವರೂ ಸಹ, ಭುಜತಃ-(ಪ್ರದ್ಯುಮ್ನನ) ಭುಜದಿಂದಲೇ, ಅಭವನ್-ಹುಟ್ಟಿದರು.

**ಪಶು ತಿರ್ಯಕ್ ಪಕ್ಷಿವೃಕ್ಷತೃಣಗುಲ್ಮಾದಯೋಽಖಿಲಾಃ ।**

---

ಆತನ ಇನ್ನೊಂದು ಧರ್ಮನಾಮಕರೂಪವು ಬ್ರಾಹ್ಮಣನೆಂದು[1] ಪ್ರಸಿದ್ಧನಾಗಿರುವನು (೧೪-೧೭). ಪಿತೃದೇವತೆಗಳು ಬ್ರಾಹ್ಮಣರೇ; ಮನ್ವಂತರಾಧಿಪತಿಗಳೆಲ್ಲರೂ ಕ್ಷತ್ರಿಯರು;

---

1. ಜೀವರು ಸ್ವರೂಪದಲ್ಲಿ ಸಹ ಬ್ರಾಹ್ಮಣಾದಿ ವರ್ಣಗಳಿಗೆ ಸೇರಿರುತ್ತಾರೆ; ದೇವತೆಗಳ ಉತ್ಪತ್ತಿಯನ್ನು (ಪ್ರದ್ಯುಮ್ನನಾಮಕ ಅರ್ಧನಾರೀ ನಾರಾಯಣನ ಅವಯವಗಳಿಂದ ಉತ್ಪತ್ತಿಯನ್ನು) ನಿರೂಪಿಸುವಲ್ಲಿ 'ಕ್ಷತ್ರಿಯಜೀವಾಃ, ವೈಶ್ಯಜೀವಾಃ', ಇತ್ಯಾದಿಯಾಗಿ, ಜೀವಸ್ವರೂಪವಿವಕ್ಷೆಯಿಂದಲೇ ಪ್ರಾಧಾನ್ಯವಾಗಿ ಹೇಳಲಾಗಿದೆ; ದೇವತೆಗಳು ಸರ್ವವರ್ಣಾಶ್ರಮಧರ್ಮಗಳನ್ನು ಆಚರಿಸುವುದರಲ್ಲಿ ಅಧಿಕಾರವುಳ್ಳವರು—ಅರ್ಹರೆಂದರ್ಥ; ಹೀಗಿದ್ದರೂ, ಸ್ವರೂಪವಿವಕ್ಷೆಯನ್ನು ಬಿಟ್ಟೂ ಸಹ, ಬ್ರಾಹ್ಮಣಾದಿ ವರ್ಣಗಳ ಅಭಿಮಾನಿಗಳಾದವರನ್ನು ಆಯಾ ವರ್ಣದವರೆಂದು ನಿರೂಪಿಸುವುದೂ ಯುಕ್ತವೇ ಆಗುತ್ತದೆ. ಉದಾ:—ವಾಯುದೇವನು ಕ್ಷತ್ರಿಯನು; ಕ್ಷತ್ರಿಯ

**ಜೀವಾ ಪುಂಸ್ತ್ರೀವಿಭೇದೇನ ರೋಮಭ್ಯೋ ನಿಸ್ಸೃತಾ ಇಮೇ ॥ ೨೦ ॥**

ಪಶುತಿರ್ಯಕ್‌ಪಕ್ಷಿವೃಕ್ಷತೃಣಗುಲ್ಮಾದಯಃ-ಪಶು, ಮೂಢಜಂತುಗಳು, ಪಕ್ಷಿ ವೃಕ್ಷ ತೃಣ, ಗುಲ್ಮ ಮೊದಲಾದ, ಅಖಿಲಾಃ-ಸಮಸ್ತ ಜೀವಾಃ-ಜೀವರೂ, ಪುಂಸ್ತ್ರೀವಿಭೇದೇನ-ಪುರುಷಸ್ತ್ರೀಭೇದದಿಂದ (ಪ್ರದ್ಯುಮ್ನನ ಬಲ ಎಡ ಭಾಗಗಳ), ರೋಮಭ್ಯಃ-ರೋಮಗಳಿಂದ, ಇಮೇ-ಈ ಜೀವರು, ನಿಸ್ಸೃತಾಃ-ಸೃಷ್ಟಿಸಲ್ಪಟ್ಟರು.

**ಸತ್ತ್ವಾದೀನಾಂ ಗುಣಾನಾಂ ಯತ್ಪೂರ್ವಂ ರಾಶಿತ್ರಯಂ ಮಯಾ ।**
**ಪ್ರೋಕ್ತಂ ತಸ್ಯೋಕ್ತರೀತ್ಯೈವ ಕಾಲೇನೋಪಚಿತಸ್ಯ ಹಿ ॥ ೨೧ ॥**
**ಪ್ರವೃದ್ಧ್ಯಾ ಮಹದಾದೀನಾಂ ಸೃಷ್ಟಿಃ ಸರ್ವೇತಿ ಬುಧ್ಯತಾಂ ।**
**ಪ್ರಾಕೃತೇನೈವ ದೇಹೇನ ವ್ಯತಿರಿಕ್ತೇನ ಲಿಂಗತಃ ॥ ೨೨ ॥**
**ಯೋಗಃ ಸೃಷ್ಟಿರಿತಿ ಪ್ರೋಕ್ತಾ ಸೂಕ್ಷ್ಮಸ್ಥೂಲಾದಿಭೇದತಃ ।**

ಮಯಾ-ನನ್ನಿಂದ, ಪೂರ್ವಂ-ಈ ಮೊದಲು, ಸತ್ತ್ವಾದೀನಾಂ-ಸತ್ತ್ವ ಮೊದಲಾದ, ಗುಣಾನಾಂ-ಗುಣಗಳ, ಯತ್-ಯಾವ, ರಾಶಿತ್ರಯಂ-ರಾಶಿತ್ರಯವು (ಮೂರು ರಾಶಿಗಳೆಂದು), ಪ್ರೋಕ್ತಂ-ಹೇಳಲ್ಪಟ್ಟಿತೋ, ಉಕ್ತರೀತ್ಯಾ ಏವ-ಪೂರ್ವೋಕ್ತ

---

ಕರ್ಮಜ ದೇವತೆಗಳು ಮತ್ತು ಚಕ್ರವರ್ತಿಗಳು[1] ಸಹ ಕ್ಷತ್ರಿಯರು; ಶೌರ್ಯಗುಣ ನಿಮಿತ್ತದಿಂದ, ರಾಕ್ಷಸರೂ ಕ್ಷತ್ರಿಯರೆಂದೇ ಗಣನೆ ಮಾಡಲ್ಪಡುತ್ತಾರೆ; ಈ ಎಲ್ಲರೂ ಪ್ರದ್ಯುಮ್ನನ ಭುಜದಿಂದಲೇ ಹುಟ್ಟಿದರು (೧೮-೧೯). ಪಶು, ಇತರ ಮೂಢ ಜಂತುಗಳು, ಪಕ್ಷಿ ವೃಕ್ಷ ತೃಣ, ಗುಲ್ಮ (ಪೊದೆ) ಮೊದಲಾದ ಸಮಸ್ತಜೀವರೂ, ಪ್ರದ್ಯುಮ್ನನ ದೇಹದ ಬಲಭಾಗದಿಂದ ಪುರುಷರೂ, ಎಡಭಾಗದಿಂದ ಸ್ತ್ರೀಯರೂ ಎಂಬ ಕ್ರಮದಿಂದ, ಪ್ರದ್ಯುಮ್ನನ ರೋಮಗಳಿಂದ ಸೃಷ್ಟರಾದರು (೨೦). ಹೀಗೆ

---

ವರ್ಣದ ಅಭಿಮಾನಿಯು (ಆ ವರ್ಣಧರ್ಮಗಳ ಆಚರಣೆಯನ್ನು ನಿಯಂತ್ರಿಸುವ ಅಧಿದೇವತೆಯು); ಬ್ರಹ್ಮಪದವಿಯಿಂದ ಮುಕ್ತನಾಗುತ್ತಾನೆ—ಸ್ವರೂಪದಲ್ಲಿ ಬ್ರಾಹ್ಮಣನೇ. ಇತ್ಯಾದಿ ವಿವೇಕದಿಂದ ಉಕ್ತಪ್ರಮೇಯಗಳನ್ನು ಯಥೋಚಿತವಾಗಿ ಗ್ರಹಿಸಬೇಕು. ಯಮನ ರೂಪದ್ವಯಗಳ ವಿಷಯಕ ವರ್ಣವಿಶೇಷವನ್ನೂ ಹೀಗೆಯೇ, ನಿಯಾಮಕನೆಂಬ ವಿವಕ್ಷೆಯಿಂದ ಹೇಳಲಾಗಿದೆ, ಎಂದು ತಿಳಿಯಬೇಕು.

1. ದೇವತೆಗಳು ತ್ರಿವಿಧರು; ದೇವತೆಗಳು, ಕರ್ಮಜದೇವತೆಗಳು ಮತ್ತು ಆಜಾನಜರೆಂದು; ಆದಿಸೃಷ್ಟಿಯಲ್ಲಿ ದೇವತ್ವವಿಶಿಷ್ಟರು ತಾತ್ತ್ವಿಕ ದೇವತೆಗಳು; ಬ್ರಹ್ಮಾಂಡದಲ್ಲಿ ಕರ್ಮಮಾಡಿ ದೇವತ್ವವನ್ನು ಹೊಂದಲರ್ಹರು (ಬಲಿಯು, ಮುಂದಿನ ಇಂದ್ರನಾಗುವಂತೆ); ಅನಾಖ್ಯಾತರಾಗಿದ್ದು ದೇವಕುಲದಲ್ಲಿ ಉತ್ಪನ್ನರಾದವರು, ಆಜಾನಜರು. ಮುಕ್ತಿಯೋಗ್ಯ ಜೀವರಲ್ಲಿ ಮನುಷ್ಯೋತ್ತಮರಗಿಂತ ತಾರತಮ್ಯದಲ್ಲಿ ಮೇಲಿನ ಕಕ್ಷ್ಯದಲ್ಲಿರುವ ಜೀವಗಣವು ಚಕ್ರವರ್ತಿಜೀವಗಣವೆಂದು ಕರೆಯಲ್ಪಡುತ್ತದೆ.

ಪ್ರಕಾರದಿಂದಲೇ, ಕಾಲೇನ-ಕಾಲಗತಿಯಿಂದ (ಕಾಲರೂಪನಾದ ನನ್ನಿಂದ), ಉಪಚಿತಸ್ಯ-ಉಪಚಯಗೊಂಡ (ಸ್ಥೂಲಭಾವವನ್ನು ಹೊಂದಿದ), ತಸ್ಯ—ಆ ರಾಶಿತ್ರಯದ, ಪ್ರವೃದ್ಧ್ಯಾ-ಪ್ರವೃದ್ಧಿಯಿಂದ, ಮಹದಾದೀನಾಂ-ಮಹತತ್ತ್ವವೇ ಮೊದಲಾದವುಗಳ, ಸರ್ವಾ ಸೃಷ್ಟಿಃ-ಎಲ್ಲಾ ಸೃಷ್ಟಿಯು, ಇತಿ-ಎಂದು, ಬುಧ್ಯತಾಂ-ತಿಳಿಯಲ್ಪಡಲಿ (ತಿಳಿಯತಕ್ಕದು); ಲಿಂಗತಃ-ಲಿಂಗದೇಹದಿಂದ, ಅತಿರಿಕ್ತೇನ-ಭಿನ್ನವಾದ, ಪ್ರಾಕೃತೇನ ಏವ-ಪ್ರಕೃತಿನಿರ್ಮಿತವೇ ಆದ, ದೇಹೇನ-ದೇಹದಿಂದ, ಯೋಗಃ-ಸಂಬಂಧವು (ಲಿಂಗಸಹಿತಜೀವನಿಗೆ ಪ್ರಾಕೃತ ದೇಹಸಂಬಂಧವೇ), ಸೂಕ್ಷ್ಮಸ್ಥೂಲಭೇದತಃ-ಸೂಕ್ಷ್ಮ ಮತ್ತು ಸ್ಥೂಲಗಳೆಂಬ ವ್ಯತ್ಯಾಸದಿಂದ, ಸೃಷ್ಟಿಃ-ಸೃಷ್ಟಿಯು, ಇತಿ-ಎಂದು, ಪ್ರೋಕ್ತಾ-ಹೇಳಲ್ಪಡುತ್ತದೆ.

**ಯಥಾಯಥಾ ಘನಂ ವಸ್ತು ತತ್ಸ್ಥೂಲಮಿತಿ ಕೀರ್ತ್ಯತೇ ॥ ೨೩ ॥**
**ಸೂಕ್ಷ್ಮತ್ವಂ ತದಭಾವೇನ ಪರಿಮಾಣಂ ನ ಕಾರಣಂ ।**

ಸೂಕ್ಷ್ಮಸ್ಥೂಲಗಳ ಲಕ್ಷಣವನ್ನು ನಿರೂಪಿಸುತ್ತಾರೆ :—

ವಸ್ತು-(ಯಾವುದೊಂದು) ಪದಾರ್ಥವು, ಯಥಾಯಥಾ-ಹೇಗೆ ಹೇಗೆ (ಎಷ್ಟೆಷ್ಟು), ಘನಂ-ಘನವಾಗಿರುವುದೋ, ತತ್-ಅದು, ಸ್ಥೂಲಂ ಇತಿ-ಸ್ಥೂಲವೆಂಬುದಾಗಿ, ಕೀರ್ತ್ಯತೇ-ಹೇಳಲ್ಪಡುತ್ತದೆ; ತದಭಾವೇನ-ಅದರ (ಘನತ್ವದ) ಅಭಾವದಿಂದ, ಸೂಕ್ಷ್ಮತ್ವಂ-ಸೂಕ್ಷ್ಮತ್ವವು (ಎಂದು ತಿಳಿಯಬೇಕು); ಪರಿಮಾಣಂ-ಪರಿಮಾಣವು (ವಸ್ತುವಿನ ವಿಸ್ತಾರದ ಅಳತೆಯು), ನ ಕಾರಣಂ-(ಸ್ಥೂಲಸೂಕ್ಷ್ಮಗಳ ನಿರ್ಣಯದಲ್ಲಿ) ಕಾರಣವಲ್ಲ.

**ಅರ್ಧನಾರೀರೂಪಧರಾ ದೇವಪ್ರದ್ಯುಮ್ನತೋ ಮಯಾ ॥ ೨೪ ॥**

---

ಸರ್ವಜೀವರು ಸೃಷ್ಟರಾದರೆಂದರೆ, ಜೀವಸ್ವರೂಪಗಳೇ ಸೃಷ್ಟವಾದುವೆಂದರ್ಥವಲ್ಲ (ಜೀವ ಸ್ವರೂಪಗಳು ಅನಾದಿ ಮತ್ತು ನಿತ್ಯ); ಕಿಂತು, ಅಮುಕ್ತ ಜೀವರಿಗೆ ಅನಾದಿಯಿಂದಿರುವ ಲಿಂಗದೇಹದಿಂದ ಭಿನ್ನವಾದ ಪ್ರಾಕೃತ ದೇಹದ ಸಂಬಂಧವೇ—ಅದು ಸೂಕ್ಷ್ಮವಾಗಿರಬಹುದು ಅಥವಾ ಸ್ಥೂಲವಾಗಿರಬಹುದು—ಸೃಷ್ಟಿಯು; ಈ ಮೊದಲು ಹೇಳಿದ ಸತ್ವಾದಿಗುಣಗಳ ರಾಶಿತ್ರಯಗಳು, ಕಾಲ ನಾಮಕನಾದ ನನ್ನಿಂದಲೇ ಉಪಚಯಗೊಂಡು ಅವುಗಳ ವೃದ್ಧಿಯಿಂದ, ಮಹದಾದಿ ಸಕಲ ತತ್ವಗಳ ಸೃಷ್ಟಿಯು ಆಗುತ್ತದೆ; ಈ ತತ್ವಗಳಿಂದ ನಿರ್ಮಿತವಾದ, ದೇಹಗಳೇ ಸೂಕ್ಷ್ಮ ಮತ್ತು ಸ್ಥೂಲಗಳೆಂಬ ಭೇದದಿಂದ ಇರುತ್ತವೆ; ಅವುಗಳ ಸಂಬಂಧವನ್ನು ಜೀವರಿಗೆ ಉಂಟುಮಾಡುವುದೇ ಜೀವರ ಸೃಷ್ಟಿಯು (೨೧-೨೨). ಯಾವ ವಸ್ತುವು ಘನತ್ವ (gross)ವುಳ್ಳದ್ದೋ ಅದು ಸ್ಥೂಲವು; ಘನತ್ವವಿಲ್ಲದುದು ಸೂಕ್ಷ್ಮವಾದುದು (subtle); ಸ್ಥೂಲ ಸೂಕ್ಷ್ಮತ್ವವನ್ನು

**ಬ್ರಹ್ಮವಿಂಶತಿವರ್ಷೇಷು ಸೃಷ್ಟಿರ್ಜಾತಾ ನಿರೂಪಿತಾ ।**

ಅರ್ಧನಾರೀರೂಪಧರಾತ್-ಅರ್ಧನಾರೀರೂಪಧರನಾದ, ಪ್ರದ್ಯುಮ್ನತಃ-ಪ್ರದ್ಯುಮ್ನನಿಂದ, ಬ್ರಹ್ಮವಿಂಶತಿವರ್ಷೇಷು-ಬ್ರಹ್ಮದೇವನ (ಹತ್ತರಿಂದ) ಇಪ್ಪತ್ತು ವರ್ಷಗಳಲ್ಲಿ ಜಾತಾ-ಆದ (ಉಂಟಾದ), ಸೃಷ್ಟಿಃ-ಸೃಷ್ಟಿಯು, ಮಯಾ ಏವ- ನನ್ನಿಂದಲೇ, ನಿರೂಪಿತಾ-ನಿರೂಪಿಸಲ್ಪಟ್ಟಿತು.

**ಏವಂ ನಾನಾವಿಧೈರ್ಜೀವೈರ್ನಾನಾರೂಪಧರೈರ್ಹರಿಃ ॥ ೨೫ ॥**

**ಚಿಕ್ರೀಡೇ ಸ್ವೇಚ್ಛಯಾ ಕಾಲೇ ಸ್ವಾನಂದಪೂರಿಪೂರಿತಃ ।**

ಕಾಲೇ-ಆ ಕಾಲದಲ್ಲಿ ಏವಂ-ಹೀಗೆ, ನಾನಾರೂಪಧರೈಃ-ವಿವಿಧರೂಪಗಳುಳ್ಳ, ನಾನಾವಿಧೈಃ-ನಾನಾವಿಧದ (ಜೀವಗಣಗಳಿಗೆ ಸೇರಿದ), ಜೀವೈಃ-ಜೀವರಿಂದ, ಸ್ವಾನಂದಪರಿಪೂರಿತಃ-ಸ್ವಾನಂದಪೂರ್ಣನಾದ ಶ್ರೀಹರಿಯು, ಸ್ವೇಚ್ಛಯಾ-ಸ್ವೇಚ್ಛಾನುಸಾರ, ಚಿಕ್ರೀಡೇ-ಕ್ರೀಡಿಸಿದನು.

**ಉಕ್ತೋ ಯೋ ವರ್ಣನಿರ್ದೇಶೋ ದೇವಾನಾಂ ವಿಸ್ತರಾನ್ಮಯಾ ॥೨೬॥**

**ನಿಯಾಮಕಃ ಸ ನೈತೇಷಾಮಾಚಾರಸ್ಯ ಕಥಂಚನ ।**

**ಸರ್ವವರ್ಣಾಶ್ರಮಾಚಾರಾಃ ಪ್ರತ್ಯವಾಯಸಮುಜ್ಝಿತಾಃ ॥ ೨೭ ॥**

ದೇವತೆಗಳಿಗೆ ವರ್ಣನಿರ್ದೇಶಮಾಡಿರುದು, ಅವರ ಆಚಾರಗಳನ್ನು ನಿಯಮಿಸತಕ್ಕದ್ದಲ್ಲವೆನ್ನುತ್ತಾರೆ :—

ದೇವಾನಾಂ-ದೇವತೆಗಳ (ಬ್ರಹ್ಮಾದಿದೇವತೆಗಳ), ಯಃ-ಯಾವ, ವರ್ಣನಿರ್ದೇಶಃ-ಬ್ರಾಹ್ಮಣಾದಿವರ್ಣದವರೆಂಬ ಹೇಳೋಣವು (ವರ್ಣನಿರೂಪಣವು),

---

ನಿಶ್ಚಯಿಸುವುದರಲ್ಲಿ ಪರಿಮಾಣವು (size or measure) ಕಾರಣವಲ್ಲ[1] (೨೩). ಬ್ರಹ್ಮದೇವನ ೧೦ ರಿಂದ ೨೦ ವರ್ಷಗಳಲ್ಲಿ ಅರ್ಧನಾರೀ ರೂಪನಾದ ಪ್ರದ್ಯುಮ್ನನಿಂದ ನಡೆದ ಸೃಷ್ಟಿಯು, ನನ್ನಿಂದ ಈ ಪರ್ಯಂತ ನಿರೂಪಿಸಲಾಯಿತು (೨೪). ಸ್ವಾನಂದ ಪರಿಪೂರ್ಣನಾದ ಶ್ರೀಪ್ರದ್ಯುಮ್ನರೂಪೀ ಶ್ರೀವಿಷ್ಣುವು, ಆ ಕಾಲದಲ್ಲಿ ತನ್ನ ಇಚ್ಛಾನುಸಾರ ಕ್ರೀಡಿಸುವವನಾಗಿ, ನಾನಾ ರೂಪಗಳನ್ನು ಧರಿಸಿರುವ, ವಿವಿಧ ಜೀವರನ್ನು ಸೃಷ್ಟಿ ಮಾಡಿದನು (೨೫). ಶ್ರೀವಿಷ್ಣುವೇ ಹೇಳುತ್ತಾನೆ:— ಬ್ರಹ್ಮಾದಿದೇವತೆಗಳ ಬ್ರಾಹ್ಮಣಾದಿ ವರ್ಣಗಳನ್ನು ನಿರೂಪಿಸಿದ ಮಾತ್ರದಿಂದ, ಅವರು ಆಯಾ ವರ್ಣಗಳಿಗೆ ವಿಹಿತವಾದ

---

1. ಸರ್ವತ್ರವ್ಯಾಪ್ತನಾದ ಪರಮಾತ್ಮನು ಸೂಕ್ಷ್ಮತಮನು; ಇರುವೆಯ ದೇಹವು ಅತಿ ಚಿಕ್ಕದಾದರೂ (atomic) ಸ್ಥೂಲವು; ಜಗತ್ತಿಗೆ ಸ್ವೇಚ್ಛೆಯಿಂದ ತೋರಗೊಡುವ ವಿಸ್ತಾರವಾದ ರೂಪಗಳು ಸ್ಥೂಲರೂಪಗಳೆಂದೂ ಶಾಸ್ತ್ರಗಳಲ್ಲಿ ವ್ಯವಹರಿಸಲಾಗಿದೆ. (ಸ್ಥೂಲರೂಪವನ್ನು ಮನಸ್ಸಿನಲ್ಲಿ ಧ್ಯಾನದಲ್ಲಿ ನಿಲ್ಲಿಸುವುದನ್ನು ಅಭ್ಯಾಸ ಮಾಡಿಕೊಂಡು, ನಂತರ ಸೂಕ್ಷ್ಮರೂಪೋಪಾಸನೆ

ಮಯಾ-ನನ್ನಿಂದ, ವಿಸ್ತರಾತ್-ವಿಸ್ತಾರವಾಗಿ, ಉಕ್ತಃ-ಹೇಳಲ್ಪಟ್ಟಿತೋ, ಸಃ-ಅದು (ಆ ವರ್ಣನಿರ್ದೇಶವು), ಏತೇಷಾಂ-ಇವರ (ದೇವತೆಗಳ), ಆಚಾರಸ್ಯ-ಆಚರಣೆಯ, ನಿಯಾಮಕಃ-ನಿಯಮಿಸತಕ್ಕದ್ದು (ಆಯಾ ವರ್ಣದ ಆಚರಣೆಗಳನ್ನೇ ಅವರು ಅನುಷ್ಠಾನಮಾಡತಕ್ಕದ್ದು), ಕಥಂಚನ-ಎಷ್ಟರಮಟ್ಟಿಗೂ, ನ-ಅಲ್ಲ (ಆಯಾ ವರ್ಣದ ದೇವತೆಗಳು ಆಯಾ ವರ್ಣಧರ್ಮಗಳನ್ನೇ ಆಚರಿಸುತ್ತಾರೆಂಬ- ಆಚರಿಸಬೇಕೆಂಬ ನಿಯಮವಿಲ್ಲ); (ಏಕೆಂದರೆ) (ದೇವತೆಗಳು) ಸರ್ವವರ್ಣಾಶ್ರಮ ಆಚಾರಾಃ-ಎಲ್ಲ ವರ್ಣಗಳ ಮತ್ತು ಎಲ್ಲ ಆಶ್ರಮಗಳ ಆಚಾರದಲ್ಲಿ ಅಧಿಕಾರವುಳ್ಳವರು, ಮತ್ತು ಪ್ರತ್ಯವಾಯಸಮುಜ್ಝಿತಾಃ-ಪ್ರತ್ಯವಾಯವಿಲ್ಲದವರು (ಭಿನ್ನ ವರ್ಣಾಶ್ರಮಧರ್ಮಗಳನ್ನು ಆಚರಿಸಿದರೂ ದೋಷಲೇಪವಿಲ್ಲದವರು).

**ಅಪರೋಕ್ಷವಿದೋ ವಿಷ್ಣೋರ್ಭಕ್ತಾ ಏಕಾಂತಿನೋ ಮಮ ।**
**ಅಪರೋಕ್ಷಂ ವಿನಾ ವಿಷ್ಣೋರ್ನಹಿ ದೇವತ್ವಮಾಪ್ಯತೇ ॥ ೨೮ ॥**

**ತಸ್ಮಾದ್ದೇವಪದಾರೂಢಾಃ ನಿಶ್ಚಯಾದಪರೋಕ್ಷಿಣಃ ।**
**ಸ್ವಾರಾಧಕಾನಾಮಿಷ್ಟಾನಿ ಪೂರಯಂತಿ ಮಮಾಜ್ಞಯಾ ॥ ೨೯ ॥**

ದೇವತೆಗಳಿಗೆ ಭಿನ್ನವರ್ಣಾಶ್ರಮಾಚಾರದಿಂದ ಪ್ರತ್ಯವಾಯವಿಲ್ಲವೆಂಬಲ್ಲಿ ಯುಕ್ತಿಯನ್ನು ನಿರೂಪಿಸುತ್ತಾರೆ :—

(ಈ ದೇವತೆಗಳು), ವಿಷ್ಣೋಃ-ಶ್ರೀವಿಷ್ಣುಸ್ವರೂಪನೇ ಆದ, ಮಮ-ನನ್ನ ಅಪರೋಕ್ಷವಿದಃ-ಅಪರೋಕ್ಷಜ್ಞಾನವುಳ್ಳವರು, ಏಕಾಂತಿನಃ ಭಕ್ತಾಃ-ಏಕಾಂತ ಭಕ್ತರು;

---

ಆಚರಣೆಗಳಲ್ಲಿಯೇ ನಿಷ್ಠರಾಗಬೇಕೆಂಬ ನಿಯಮವಿಲ್ಲ; ದೇವತೆಗಳು ಸರ್ವವರ್ಣಾಶ್ರಮಗಳ ಆಚಾರಗಳುಳ್ಳವರು; ಒಂದು ವರ್ಣದವರು ಅಥವಾ ಆಶ್ರಮದವರು ಅನ್ಯವರ್ಣ ಅಥವಾ ಆಶ್ರಮ ಧರ್ಮಗಳನ್ನು ಆಚರಿಸುವುದರಿಂದ,

---

ಯಲ್ಲಿ ತೊಡಗಬೇಕೆಂಬ ಮುಂತಾದ ಸಂದರ್ಭಗಳಲ್ಲಿ ಈ ಅರ್ಥದಲ್ಲಿ ಸ್ಥೂಲಶಬ್ದದ ಪ್ರಯೋಗವು ಕಂಡುಬರುತ್ತದೆ. ಅಲ್ಲಿ ಪ್ರಾದೇಶ (ಚೋಟುದ್ದದ) ಪರಿಮಿತಿಯಿಂದ ಆರಂಭಿಸಿ, ವಿಶ್ವವ್ಯಾಪ್ತ ವಿಸ್ತಾರವಾದ ರೂಪಗಳು, ಸ್ಥೂಲಗಳೆಂದೂ, ಜೀವಾಂತರ್ಯಾಮಿ ಬಿಂಬರೂಪವು ಸೂಕ್ಷ್ಮವೆಂದೂ ಹೇಳಲಾಗಿದೆ. 'ಭೂರ್ದ್ವೀಪ ವರ್ಷಸರಿದದ್ರಿನಭಃ ಸಮುದ್ರ ಪಾತಾಳದಿಂಗ್ನರಕ ಭಾಗಣಲೋಕ ಸಂಸ್ಥಂ। ಗೀತಂ ಮಯಾ ತವನೃಪಾದ್ಭುತಮೀಶ್ವರಸ್ಯ ಸ್ಥೂಲಂ ವಪುಃ ಸಕಲಜೀವ ನಿಕಾಯಧಾಮ್ನಃ ॥' (ಭಾಗವತ) ಹೀಗಿದ್ದರೂ ಸ್ಥೂಲಸೂಕ್ಷ್ಮ ಶಬ್ದಗಳ ಪ್ರಯೋಗಬಾಹುಳ್ಯದಿಂದ ಅತೀಂದ್ರಿಯ ವಸ್ತುಗಳು ಸೂಕ್ಷ್ಮವೆಂದೂ, ಇಂದ್ರಿಯಗೋಚರವಾಗುವುವು ಸ್ಥೂಲವೆಂದೂ ಸಾಮಾನ್ಯವಾಗಿ ತಿಳಿಯಬಹುದಾಗಿದೆ. ಪಂಚಭೂತಗಳು ಸ್ಥೂಲಗಳು; ಇವು ಮೇಲಿನ ಅಹಂಕಾರಾದಿ ತತ್ತ್ವಗಳಿಂದ ವಿಕಾರ ಹೊಂದಿದ ವಸ್ತುಗಳು—ಕಾರಣತತ್ತ್ವಗಳು ಅತೀಂದ್ರಿಯಗಳು—ಸೂಕ್ಷ್ಮಗಳು.

ವಿಷ್ಣೋಃ-ಶ್ರೀವಿಷ್ಣುವಿನ, ಅಪರೋಕ್ಷಂ ವಿನಾ-ಅಪರೋಕ್ಷವಿಲ್ಲದೇ, ಹಿ-ಯಾವ ಕಾರಣದಿಂದ, ದೇವತ್ವಂ-ದೇವಪದವನ್ನು ನ ಆಪ್ಯತೇ-ಹೊಂದಿಲ್ಲವೋ, ತಸ್ಮಾತ್-ಆದ್ದರಿಂದ, ದೇವಪದಾರೂಢಾಃ-ದೇವಪದಗಳನ್ನು ಏರಿದ ದೇವತೆಗಳು (ಪ್ರಾಪ್ತಪದ ರಾದ-ತತ್ತ್ವನಿಯಾಮಕ ಅಧಿಕಾರಸ್ಥಾನಗಳಿಗೆ ಅರ್ಹರಾದ ಬ್ರಹ್ಮಾದಿಗಳು), ನಿಶ್ಚಯಾತ್-ನಿಸ್ಸಂಶಯವಾಗಿ, ಅ ಪ ರೋ ಕ್ಷಿ ಣಃ-ಅಪರೋಕ್ಷಜ್ಞಾನಿಗಳೇ ಸರಿ; (ಇವರು), ಮಮಾಜ್ಞಯಾ-ನನ್ನ ಆಜ್ಞೆಯಿಂದ, ಸ್ವಾರಾಧಕಾನಾಂ-ತಮ್ಮನ್ನು ಆರಾಧಿಸುವ (ಅಥವಾ ಸ್ವಶಬ್ದವಾಚ್ಯನಾದ ಶ್ರೀವಿಷ್ಣುವನ್ನು ಆರಾಧಿಸುವ) ಭಕ್ತರ, ಇಷ್ಟಾನಿ-ಅಭೀಷ್ಟಗಳನ್ನು ಪೂರಯಂತಿ-ಪೂರ್ಣಗೊಳಿಸುತ್ತಾರೆ.

**ತದ್ದೇವಾನ್ನಾವಜಾನೀಯಾನ್ಮದ್ಭಕ್ತಸ್ತಾನ್ ಕಥಂಚನ ।**
**ಸೋಪಾನಭೂತಾ ಮತ್ಪ್ರಾಪ್ತೌ ಮತ್ಪರೀವಾರತೋಽಖಿಲಾಃ ॥ ೩೦ ॥**
**ಅಂತರಾಯೋ ಹಿ ಮದ್ಭಕ್ತೌ ಭವೇದುತ್ತಮಕೋಪತಃ ।**
**ತಸ್ಮಾದ್ಯಥಾಗುಣಂ ಸೇವ್ಯಾಃ ರಮಾಬ್ರಹ್ಮಾದಯೋಽಖಿಲಾಃ ॥ ೩೧ ॥**
**ತೇನ ನಿರ್ವಿಘ್ನಮಾಪ್ನೋತಿ ಮತ್ಪದಂ ನೇದಮನ್ಯಥಾ ॥ ೩೨ ॥**

ತತ್ತ್ವಾಭಿಮಾನಿ ದೇವತೆಗಳ ಮಹಿಮೆಯನ್ನೇ ವಿವರಿಸುತ್ತಾರೆ :—

(ಶ್ರೀವಿಷ್ಣುವೇ ಮುಂದುವರಿದು ಹೇಳುತ್ತಾನೆ) ತತ್-ಆದ್ದರಿಂದ, ಮದ್ಭಕ್ತಃ-ನನ್ನ ಭಕ್ತನು, ತಾನ್ ದೇವಾನ್-ಆ ಬ್ರಹ್ಮಾದಿದೇವತೆಗಳನ್ನು, ಕಥಂಚನ-ಯಾವ ರೀತಿ

---

ಅವರಿಗೆ ಯಾವ ದೋಷವೂ ಇಲ್ಲ (೨೬-೨೭). ಈ ದೇವತೆಗಳೆಲ್ಲರೂ, ನನ್ನ (ಶ್ರೀವಿಷ್ಣುವಿನ) ಅಪರೋಕ್ಷ ಜ್ಞಾನವುಳ್ಳವರು ಮತ್ತು ಏಕಾಂತಭಕ್ತರು;[1] ಅಪರೋಕ್ಷವಿಲ್ಲದೇ ಯಾರೂ ದೇವತ್ವವನ್ನು ಹೊಂದುವುದಿಲ್ಲ— ಆದ್ದರಿಂದ ಪದಾಧಿರೂಢರಾದ ದೇವತೆಗಳೆಲ್ಲರೂ ಅಪರೋಕ್ಷಿಗಳೇ ಎಂಬಲ್ಲಿ ಯಾವ ಸಂಶಯವೂ ಇಲ್ಲ ಅವರು, ನನ್ನ ಸೇವಿಸುವ ಎಲ್ಲ ಭಕ್ತರ ಅಭೀಷ್ಟಗಳನ್ನು ನನ್ನಾಜ್ಞೆಯಿಂದಲೇ ಸಲ್ಲಿಸುತ್ತಾರೆ

1. ಭಕ್ತಿಯೋಗದ ಫಲವೆಂದು ಶ್ರೀಹರಿಯು ಮೋಕ್ಷವನ್ನು ಕೊಟ್ಟರೆ ಫಲತ್ವೇನ ಸ್ವೀಕರಿಸದವರು ಏಕಾಂತಭಕ್ತರು—ಶ್ರೀಹರಿಯ ಆಜ್ಞಾತ್ವೇನ ಸ್ವೀಕರಿಸುತ್ತಾರೆ. 'ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ । ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವ ಗೃಹ್ಣತೇ ॥' (ಭಾಗ-ತಾತ್ಪರ್ಯ) ಎಂದು ಶ್ರುತೀಯ ತಾತ್ಪರ್ಯದಲ್ಲಿ ಏಕಾಂತಭಕ್ತರ ಮಹಿಮೆಯು ಉಕ್ತವಾಗಿದೆ. ಶ್ರೀಹರಿಪ್ರೀತಿ ಮಾತ್ರವನ್ನು ಇಚ್ಛಿಸಿ, ಭಕ್ತಿಯಿಂದ ಆರಾಧಿಸುವ, ಸೋಮಪಾನಾರ್ಹರಾದ ದೇವತೆಗಳೂ ಅವರ ಭಾರ್ಯಾದಿ ಪರಿವಾರ ದೇವತೆಗಳೂ ಏಕಾಂತಭಕ್ತರು. 'ಏಕಾಂತಭಕ್ತಾಸ್ತೇ ಪ್ರೀತಿಮಾತ್ರೋದ್ದೇಶ್ಯಸ್ಥಹರೇಃ। ಸರ್ವೇಚ ಸೋಮಪಾಃ ಪ್ರೋಕ್ತಾಃ ಸಭಾರ್ಯಾಸ್ತದಿವೌಕಸಃ (ಸತತ್ತ್ವರತ್ನಮಾಲಾ) 'ನೈವ ದೈವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ'—(ಭಾಷ್ಯ) ದೇವಪದವನ್ನು ಹೊಂದಿರುವರೆಲ್ಲರೂ ಬ್ರಹ್ಮದರ್ಶನವುಳ್ಳವರೇ—ಅದಿಲ್ಲದವರಿಗೆ ದೇವಪದವಿಲ್ಲ.

ಯಿಂದಲೂ, ನ ಅವಜಾನೀಯಾತ್-ಕೀಳಾಗಿ ತಿಳಿಯಕೂಡದು (ಯಥಾಯೋಗ್ಯವಾದ ಪೂಜ್ಯಭಾವನೆಯುಳ್ಳವರಾಗಬೇಕು); ಅಖಿಲಾಃ-ಅವರೆಲ್ಲರೂ, ಮತ್ಪರೀವಾರತಃ-ನನ್ನ ಪರಿವಾರದವರಾದ್ದರಿಂದ, ಮತ್ಪ್ರಾಪ್ತೌ-ನನ್ನನ್ನು ಹೊಂದುವುದರಲ್ಲಿ ಸೋಪಾನ ಭೂತಾಃ-ಸೋಪಾನ(ಮೆಟ್ಟಿಲು) ಭೂತರಾಗಿರುವರು (ಉನ್ನತಸ್ಥಾನಕ್ಕೇರಲು ಸೋಪಾನಗಳಂತೆ, ಈ ದೇವತೆಗಳ ಅನುಗ್ರಹವೂ, ಭಕ್ತರು ನನ್ನನ್ನು ಸೇರಲು, ಅವಶ್ಯಕವಾಗಿದೆ); ಉತ್ತಮಕೋಪತಃ-ಉತ್ತಮರ (ತಮಗಿಂತ ಉತ್ತಮರ) ಕೋಪದಿಂದ, ಮದ್ಭಕ್ತೌ-ನನ್ನಲ್ಲಿ ಮಾಡುವ ಭಕ್ತಿಯಲ್ಲಿ ಅಂತರಾಯಃ- ವಿಘ್ನವು, ಭವೇತ್-ಆಗುತ್ತದೆ; (ಭಕ್ತನ ಭಕ್ತಿಪ್ರವಾಹವು ನಿರಂತರವಾಗಿರಲು, ಈ ದೇವತೆಗಳ ಪ್ರಸಾದವೂ ಅವಶ್ಯಕ; ಅವರು ಕುಪಿತರಾದರೆ, ಭಕ್ತಿಧಾರೆಯಲ್ಲಿ ವಿಚ್ಛಿತ್ತಿಯುಂಟಾಗುತ್ತದೆ); ತಸ್ಮಾತ್-ಆದ್ದರಿಂದ, ರಮಾಬ್ರಹ್ಮಾದಯಃ ಅಖಿಲಾಃ-ರಮಾಬ್ರಹ್ಮಾದಿ (ನನ್ನ ಪರಿವಾರದವರು) ಎಲ್ಲರೂ, ಯಥಾಗುಣಂ-ಅವರ ಗುಣತಾರತಮ್ಯವನ್ನನುಸರಿಸಿ, ಸೇವ್ಯಾಃ-ಸೇವಿಸಲ್ಪಡಬೇಕು; ತೇನ-ಅದರಿಂದ, ಮತ್ಪದಂ-ನನ್ನ ಸ್ಥಾನವನ್ನು (ಮೋಕ್ಷವನ್ನು), ನಿರ್ವಿಘ್ನಂ-ಯಾವ ವಿಘ್ನವೂ ಇಲ್ಲದೇ, ಆಪ್ನೋತಿ-ಹೊಂದುತ್ತಾನೆ; ಇದಂ-ಈ ಪ್ರಮೇಯವು, ಅನ್ಯಥಾ ನ-ಬೇರೆ ವಿಧವಲ್ಲ (ಇದೇ ಯಥಾರ್ಥವು).

ಪ್ರದ್ಯುಮ್ನ ಸೃಷ್ಟಿಕಥನವೆಂಬ ೨೨ನೇ ಅಧ್ಯಾಯವು ಮುಗಿದುದು.

---

(೨೮-೨೯). ನನ್ನ ಭಕ್ತರಾದ ದೇವತೆಗಳನ್ನು ಯಾವ ವಿಧದಿಂದಲೂ ಅಪೂಜ್ಯಭಾವನೆಯಿಂದ ನೋಡಕೂಡದು (ಅವರಲ್ಲಿ ತಿರಸ್ಕಾರ ಭಾವನೆಯನ್ನು ಹೊಂದಬಾರದು); ಇವರೆಲ್ಲರೂ ನನ್ನ ಪರಿವಾರದವರಾಗಿದ್ದು ಭಕ್ತರು ನನ್ನ ಸ್ಥಾನಕ್ಕೇರಲು ಮೆಟ್ಟಲು (ಸೋಪಾನ)ಗಳಂತೆ, ಸಾಧನ ಭೂತರಾಗಿದ್ದಾರೆ; ಸ್ವೋತ್ತಮರು ಕುಪಿತರಾದರೆ, ಭಕ್ತನ ಭಕ್ತಿಧಾರೆಗೆ ವಿಚ್ಛಿತ್ತಿಯುಂಟಾಗುತ್ತದೆ; ಭಕ್ತನಿಗೆ ನನ್ನಲ್ಲಿ ಸಂತತ ಭಕ್ತಿಧಾರೆಯುಂಟಾಗಲು, ನನ್ನ ಪರಿವಾರದ ದೇವತೆಗಳ ಅನುಗ್ರಹವೂ ಅವಶ್ಯಕವಾದುದು; ಆದ್ದರಿಂದ, ರಮಾಬ್ರಹ್ಮಾದಿಗಳೆಲ್ಲರೂ, ಅವರ ಗುಣತಾರತಮ್ಯಾನುಗುಣವಾಗಿ, ಮುಮುಕ್ಷುಗಳಿಂದ ಸೇವ್ಯರೇ ಆಗಿದ್ದಾರೆ; ಆ ಎಲ್ಲರ ಅನುಗ್ರಹ ಪೂರ್ವಕವಾದ ನನ್ನ ಪ್ರಸಾದದಿಂದಲೇ ನಿರ್ವಿಘ್ನವಾಗಿ ಮೋಕ್ಷವು ದೊರೆಯುತ್ತದೆ; ಮೋಕ್ಷಕ್ಕೆ ಅನ್ಯೋಪಾಯವಿಲ್ಲ(೩೦-೩೨).

೨೨ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೨೩

## ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

**ಯಥಾ ಶಾಲ್ಯಾದಿಧಾನ್ಯಾನಾಂ ಗೃಹೀತ್ವಾ ಬೀಜಜಾಂಕುರಾನ್ ।**
**ವಪಂತಿ ಕರ್ಷಕಾಸ್ತದ್ವದನಿರುದ್ಧೋಽಸೃಜಜ್ಜಗತ್ ॥ ೧ ॥**
**ಅಥಾಚಚಕ್ಷೇ ಭಗವಾನ್ ಜಾತಾಂ ಸೃಷ್ಟಿಮತಃಪರಂ ।**
**ಯಾನಿರುದ್ಧಾದಭೂಚ್ಛಾಂತೇಃ ಸ್ಥೂಲಾ ಬ್ರಹ್ಮಾಂಡತೋ ಬಹಿಃ ॥ ೨ ॥**

ಸೂತಾಚಾರ್ಯನು ಹೇಳುತ್ತಾನೆ:—

ಕರ್ಷಕಾಃ-ರೈತರು (ವ್ಯವಸಾಯಗಾರರು), ಯಥಾ-ಹೇಗೆ, ಶಾಲ್ಯಾದಿ ಧಾನ್ಯಾನಾಂ-ಭತ್ತ ಮೊದಲಾದ ಧಾನ್ಯಗಳ, ಬೀಜಜಾಂಕುರಾನ್-ಅಂಕುರಿಸಿದ ಬೀಜಗಳನ್ನು ಗೃಹೀತ್ವಾ-ತೆಗೆರುಕೊಂಡು, ವಪಂತಿ-(ಅನ್ಯತ್ರ ಭೂಮಿಯಲ್ಲಿ) ಬಿತ್ತುವರೋ, ತದ್ವತ್-ಅದರರಂತೆ, ಅನಿರುದ್ಧಃ-ಅನಿರುದ್ಧನು, ಜಗತ್-ಜಗತ್ತನ್ನು ಅಸೃಜತ್-ಸೃಷ್ಟಿಸಿದನು; ಅಥ-ನಂತರ (ಪ್ರದ್ಯುಮ್ನನಿಂದಾದ ಸೃಷ್ಟಿಯನ್ನು ನಿರೂಪಿಸಿದ ನಂತರ), ಭಗವಾನ್-ಶ್ರೀವಿಷ್ಣುವು, ಅತಃಪರಂ-ಅಲ್ಲಿಂದ ಮುಂದೆ, ಜಾತಾಂ-ಉಂಟಾದ, ಅನಿರುದ್ಧಾತ್-ಅನಿರುದ್ಧನಿಂದ, ಶಾಂತೇಃ-ಶಾಂತೀದೇವಿಯ ದೆಶೆ ಯಿಂದ (ಶಾಂತೀದೇವಿಯ ದ್ವಾರಾ), ಬ್ರಹ್ಮಾಂಡತಃ-ಬ್ರಹ್ಮಾಂಡದಿಂದ, ಬಹಿಃ- ಹೊರಗೆ (ಬ್ರಹ್ಮಾಂಡಸೃಷ್ಟಿಗೆ ಮೊದಲು), ಯಾ ಸ್ಥೂಲಾ-ಯಾವ (ಕಿಂಚಿತ್) ಸ್ಥೂಲಸೃಷ್ಟಿಯೋ, (ತಾಂ) ಸೃಷ್ಟಿಂ-ಆ ಸೃಷ್ಟಿಯನ್ನು ಆಚಚಕ್ಷೇ-ಹೇಳಿದನು.

---

### ಅಧ್ಯಾಯ ೨೩

**ತಾತ್ಪರ್ಯ:**—ಅನಿರುದ್ಧನಿಂದಾದ ಸೃಷ್ಟಿಯನ್ನು ನಿರೂಪಿಸಲಾಗುತ್ತದೆ. ಹೇಗೆ, ಭತ್ತ ಮೊದಲಾದ ಧಾನ್ಯಗಳ, ಅಂಕುರಿಸಿದ ಬೀಜಗಳನ್ನು (ಬೀಜಾಂಕುರಗಳನ್ನು) ರೈತನೇ, ತೆಗೆದುಕೊಂಡು, ಭೂಮಿಯಲ್ಲಿ ನೆಟ್ಟು ಬೆಳೆಸುತ್ತಾನೆಯೋ, ಹಾಗೆ ಅನಿರುದ್ಧನು ಜಗತ್ತನ್ನು ಸೃಷ್ಟಿಸಿದನು; ಶ್ರೀವಿಷ್ಣುವು, ಬ್ರಹ್ಮಾಂಡ ನಿರ್ಮಾಣಕ್ಕಿಂತ ಮೊದಲು, ಅನಿರುದ್ಧನಿಂದ ಸಂಭವಿಸಿದ ಸೃಷ್ಟಿಯನ್ನು ಮುಂದೆ (ಪ್ರದ್ಯುಮ್ನನಿಂದಾದ ಸೃಷ್ಟಿಯನಂತರ) ನಿರೂಪಿಸಿದನು; ಅದು, ಅನಿರುದ್ಧ ಭಾರ್ಯಳಾದ ಶಾಂತೀದೇವಿ ಯಿಂದಾಯಿತು—**ಕಿಂಚಿತ್** ಸ್ಥೂಲವಾದುದು (೧-೨). ಈ ಮೊದಲು ವಾಸುದೇವನಿಂದ ಹುಟ್ಟಿದ ಪುರುಷನಾಮಕ ಬ್ರಹ್ಮದೇವನಿಗೆ ೨೧ನೇ ವರ್ಷವು ಆರಂಭವಾಗುತ್ತಿರಲು, ಪ್ರದ್ಯುಮ್ನನಿಂದ ಸೃಷ್ಟರಾದ ಸಮಸ್ತ ಜೀವರನ್ನು ತೆಗೆದುಕೊಂಡು, ಅನಿರುದ್ಧನು ತನ್ನ ಉದರದಲ್ಲಿಟ್ಟುಕೊಂಡು, ನಂತರ ತನ್ನ ಭಾರ್ಯಳಾದ

ಶ್ರೀ ಭಗವಾನುವಾಚ—

ಪುರುಷಸ್ಯೈಕವಿಂಶೇಽಬ್ದೇ ಪ್ರಾರಬ್ಧೇ ಸೋಽನಿರುದ್ಧಕಃ ।
ಜಾತಾನ್ ಪ್ರದ್ಯುಮ್ನತಃ ಸರ್ವಾನ್ ಜೀವಾನಾದಾಯ ಲೀಲಯಾ ॥ ೩॥
ನಿಧಾಯ ಸ್ವೋದರೇ ಪಶ್ಚಾಚ್ಛಾಂತ್ಯಾಮಾಧತ್ತ ಸರ್ವಶಃ ।
ಮೂಲಪ್ರಕೃತಿರೂಪಾ ಸಾ ಗುಣತ್ರಯನಿಯಾಮಿಕಾ ॥ ೪ ॥
ಉಪಚಿತ್ಯ ಮಹತ್ತತ್ತ್ವಂ ಭಾಗೈಃ ಪೂರ್ವವದೇವ ಹಿ ।
ಬ್ರಹ್ಮಾಣಮಸೃಜತ್ ಪ್ರಾಣಂ ಸಾವಿತ್ರೀಂ ಭಾರತೀಂ ತಥಾ ॥ ೫ ॥

ಸಃ-ಆ (ಮೂಲನಾರಾಯಣನಿಂದ ಪ್ರಕಟನಾದ), ಅನಿರುದ್ಧಕಃ-ಅನಿರುದ್ಧನು, ಪುರುಷಸ್ಯ-(ವಾಸುದೇವರೂಪದಿಂದ ಸೃಷ್ಟನಾದ) ಪುರುಷನಾಮಕ ಬ್ರಹ್ಮದೇವನ, ಏಕವಿಂಶೇ ಅಬ್ದೇ-ಇಪ್ಪತ್ತೊಂದನೆಯ ವರ್ಷವು, ಪ್ರಾರಬ್ಧೇ-ಆರಂಭವಾಗುತ್ತಿರಲು, ಪ್ರದ್ಯುಮ್ನತಃ-ಪ್ರದ್ಯುಮ್ನನಿಂದ, ಜಾತಾನ್-ಹುಟ್ಟಿದ (ಸೃಷ್ಟರಾದ), ಸರ್ವಾನ್‌ಜೀವಾನ್ - ಎಲ್ಲ ಜೀವರನ್ನೂ (ಬ್ರಹ್ಮಾದಿಸರ್ವರನ್ನೂ), ಲೀಲಯಾ-ಲೀಲೆಯಿಂದ (ಅನಾಯಾಸವಾಗಿ-ಆನಂದದಿಂದ), ಆದಾಯ-ತೆಗೆದುಕೊಂಡು, ಸ್ವೋದರೇ-ತನ್ನ ಉದರದಲ್ಲಿ ನಿಧಾಯ-ಇಟ್ಟು ಪಶ್ಚಾತ್-ನಂತರ ಸರ್ವಶಃ-ಆ ಎಲ್ಲರನ್ನೂ, ಶಾಂತ್ಯಾಂ-ಶಾಂತೀದೇವಿಯಲ್ಲಿ ಆಧತ್ತ-ಸ್ಥಾಪಿಸಿದನು; ಸಾ-ಆ ಶಾಂತೀದೇವಿಯು, ಮೂಲಪ್ರಕೃತಿರೂಪಾ-ಮೂಲಪ್ರಕೃತಿಯ ಅಭಿಮಾನಿಯಾದ, ಗುಣತ್ರಯನಿಯಾಮಿಕಾ-ಸತ್ತ್ವಾದಿಗುಣಗಳ ನಿಯಾಮಕಳಾದ ಶ್ರೀಲಕ್ಷ್ಮೀದೇವಿಯೇ; (ಸಾ-ಆಕೆಯು), ಪೂರ್ವವತ್-ಈ ಹಿಂದೆ ಮಾಡಿದಂತೆ, ಮಹತ್ತತ್ತ್ವಂ-ಮಹತ್ತತ್ತ್ವವನ್ನು ಉಪಚಿತ್ಯ-ವೃದ್ಧಿಗೊಳಿಸಿ (ಕಿಂಚಿತ್ ಸ್ಥೂಲಗೊಳಿಸಿ), ಭಾಗೈಃ- ಅದರ ಅಂಶಗಳಿಂದ, ಬ್ರಹ್ಮಾಣಂ-ಬ್ರಹ್ಮನನ್ನೂ, ಪ್ರಾಣಂ-ಮುಖ್ಯಪ್ರಾಣ (ವಾಯುದೇವ)ನನ್ನೂ, ತಥಾ-ಹಾಗೆಯೇ, ಸಾವಿತ್ರೀಂ-ಸಾವಿತ್ರಿಯನ್ನೂ, ಭಾರತೀಂ-ಭಾರತಿಯನ್ನೂ ಅಸೃಜತ್-ಸೃಷ್ಟಿಮಾಡಿದಳು.

---

ಶಾಂತೀದೇವಿಯಲ್ಲಿ ಸ್ಥಾಪಿಸಿದನು; ಸತ್ತ್ವಾದಿಗುಣನಿಯಾಮಕಳೂ, ಮೂಲಪ್ರಕೃತ್ಯಭಿಮಾನಿಯೂ ಆದ ಈಕೆಯು, ಮಹತ್ತತ್ತ್ವವನ್ನು ಉಪಚಯಗೊಳಿಸಿ, ಅದರ ವಿವಿಧ ಭಾಗಗಳಿಂದ, ಬ್ರಹ್ಮದೇವ ಮುಖ್ಯಪ್ರಾಣರನ್ನು ಹಾಗೂ ಸಾವಿತ್ರೀ ಭಾರತಿಯರನ್ನು (ಪ್ರಸವಿಸಿದಳು) ಸೃಷ್ಟಿಮಾಡಿದಳು (೩-೫). ನಂತರ ಬ್ರಹ್ಮದೇವನು, ಅಹಂಕಾರ ತತ್ತ್ವಾತ್ಮಕವಾದ ವೀರ್ಯವನ್ನು ತನ್ನ ಭಾರ್ಯರಲ್ಲಿ ಸ್ಥಾಪಿಸಿದನು; ಅದು ಎರಡಾಗಿ ವಿಭಕ್ತವಾಗಿ, ಒಂದರಿಂದ ಅನಂತನೂ ಮತ್ತೊಂದರಿಂದ ಶಿವನೂ, ಹುಟ್ಟಿದರು (೬). ಬ್ರಹ್ಮಪುತ್ರನಾದ ಈ ಅನಂತನಿಂದ ಸಹ ರುದ್ರನು ಮತ್ತೊಂದು ರೂಪದಿಂದ

ತತೋ ಬ್ರಹ್ಮಾಸೃಜದ್ವೀರ್ಯಮಹಂಕಾರಾತ್ಮಕಂ ಸ್ತ್ರಿಯಾಂ ।
ದ್ವಿಧಾಭೂತಾತ್ತತಸ್ತಸ್ಮಾದನಂತಶ್ಚ ತಥಾ ಶಿವಃ ॥ ೬ ॥

ತತಃ-ನಂತರ, ಬ್ರಹ್ಮಾ-ಬ್ರಹ್ಮದೇವನು, ಸ್ತ್ರಿಯಾಂ-(ತನ್ನ ಭಾರ್ಯಳಾದ) ಸಾವಿತ್ರಿಯಲ್ಲಿ, ಅಹಂಕಾರಾತ್ಮಕಂ-ಅಹಂಕಾರತತ್ವಾತ್ಮಕವಾದ, ವೀರ್ಯಂ-ವೀರ್ಯವನ್ನು, ಅಸೃಜತ್-ಸೃಷ್ಟಿಸಿದನು (ಸ್ಥಾಪಿಸಿದನು); ದ್ವಿಧಾಭೂತಾತ್-ಎರಡುವಿಧ ರೂಪವನ್ನು ಹೊಂದಿದ, ತಸ್ಮಾತ್-ಅದರಿಂದ (ಆ ವೀರ್ಯದಿಂದ), ತತಃ- ಮುಂದೆ, ಅನಂತಃ- ಶೇಷನೂ (ಅನಂತನಾಮಕನೂ), ತಥಾ-ಮತ್ತು ಶಿವಃ ಚ-ಶಿವನೂ (ಉತ್ಪನ್ನರಾದರು).

ಅನಂತಾದಪ್ಯಭೂದ್ರುದ್ರಸ್ತಾಮಸಃ ಸ ಪ್ರಕೀರ್ತಿತಃ ।
ತೈಜಸಾಹಂಕೃತೇರ್ಭಾಗ್ಯೈಃ ಪ್ರಾಪ್ತೋಽಪಿ ನಿಜಯೋಷಿತಿ ॥ ೭ ॥

ಉತ್ಸೃಜ್ಯ ವೀರ್ಯಮಸೃಜತ್ಸರುದ್ರಂ ತೈಜಸಾಭಿದಂ ।
ಏವಂ ತ್ರಿರೂಪಃ ಸ ಶಿವೋ ಯೋಗಮಾಯಾಮುಪಾಶ್ರಿತಃ ॥ ೮ ॥

ಏಕತ್ವಮಭಜತ್ಸೋಽಥ ವಾಮಾಂಗಂ ಸ್ತ್ರೀಮಕಲ್ಪಯತ್ ।
ಸೋಽನನೃತ್ಯಚ್ಚಿರಮಾನಂದಾದರ್ಧನಾರೀನರೇಶ್ವರಃ ॥ ೯ ॥

ಅನಂತಾತ್ ಅಪಿ-(ಹೀಗೆ ಬ್ರಹ್ಮನಿಂದ ಜನಿಸಿದ) ಅನಂತನಿಂದ ಸಹ, ರುದ್ರಃ-ರುದ್ರನು, ಅಭೂತ್-(ಮತ್ತೊಂದು ರೂಪದಿಂದ) ಹುಟ್ಟಿದನು; ಸಃ- ಆತನು,

---

ಜನಿಸಿದನು—ಈತನೇ ತಾಮಸ ನಾಮಕನು; ನಂತರ ಬ್ರಹ್ಮದೇವನು ಪುನಃ ತನ್ನ ಭಾರ್ಯಳಲ್ಲಿ ತೈಜಸಾಹಂಕಾರ ತತ್ವಾಂಶಗಳ ರೂಪದ ವೀರ್ಯವನ್ನು ಸ್ಥಾಪಿಸಿದನು; ಆಗ ತೈಜಸನಾಮಕರುದ್ರನು, ಮತ್ತೊಂದು ರೂಪದಿಂದ ಹುಟ್ಟಿದನು;[1] ಹೀಗೆ ತ್ರಿರೂಪನಾದ ಶಿವನು, ತನ್ನ ಯೋಗಶಕ್ತಿಯಿಂದ ಒಂದೇ ರೂಪವುಳ್ಳವನಾಗಿ, ಆ ಏಕರೂಪದ ಎಡಭಾಗದ ದೇಹವನ್ನು ಸ್ತ್ರೀಯನ್ನಾಗಿ ಮಾಡಿಕೊಂಡು, ಅರ್ಧನಾರೀ ನರೇಶ್ವರನಾಗಿ, ಆನಂದದಿಂದ ಬಹುಕಾಲ ನರ್ತನ ಮಾಡಿದನು (೭-೯). ಅರ್ಧನಾರೀನರೇಶ್ವರನಾದ ಶಿವನು, ವೈಕಾರಿಕಾದಿ (ಪೂರ್ವೋಕ್ತ) ಭೇದದಿಂದ, ಪುನಃ ಪ್ರತ್ಯೇಕವಾದ ಮೂರು ರೂಪಗಳನ್ನು ಹೊಂದಿದನು; ಬುದ್ಧ್ಯಭಿಮಾನಿಯಾದ ತನ್ನ ಪತ್ನಿ ಉಮಾದೇವಿಯನ್ನೂ

---

1. ಮೊದಲಿಗೆ ಬ್ರಹ್ಮನಿಂದ ಅನಂತನೊಡನೆ ಹುಟ್ಟಿದ ಶಿವನು, ವೈಕಾರಿಕನು; ವೈಕಾರಿಕ, ತೈಜಸ, ತಾಮಸಾಂಶಗಳಿಂದ ಹುಟ್ಟಿದ ತ್ರಿರೂಪನಾದ ಶಿವನು, ವೈಕಾರಿಕ, ತೈಜಸ, ತಾಮಸನೆಂದೇ ಕರೆಯಲ್ಪಡುತ್ತಾನೆ.

ತಾಮಸಃ-ತಾಮಸ (ರುದ್ರ)ನೆಂದೇ, ಪ್ರಕೀರ್ತಿತಃ-ಹೇಳಲ್ಪಟ್ಟಿರುವನು; ಪ್ರಾಪ್ತಃ ಅಪಿ-(ಬ್ರಹ್ಮನು) ಹೊಂದಲ್ಪಟ್ಟವನಾಗಿ (ಭಾರ್ಯೆಳಿಂದ ಹೊಂದಲ್ಪಟ್ಟು) ಪುನಃ, ನಿಜಯೋಷಿತಿ-ತನ್ನ ಸ್ತ್ರೀಯಲ್ಲಿ(ಸಾವಿತ್ರಿಯಲ್ಲಿ), ತೈಜಸಾಹಂಕೃತೇಃ-ತೈಜಸಾಹಂಕಾರದ, ಭಾಗೈ-ಅಂಶಗಳಿಂದ, ವೀರ್ಯಂ-ವೀರ್ಯವನ್ನು, ಉತ್ಸೃಜ್ಯ-ಬಿಟ್ಟು (ಸ್ಥಾಪಿಸಿ), ತೈಜಸಾಭಿದಂ-ತೈಜಸನೆಂಬ ನಾಮವುಳ್ಳ, ರುದ್ರಂ-ರುದ್ರನನ್ನು, ಅಸೃಜತ್-ಸೃಷ್ಟಿಮಾಡಿದನು; ಏವಂ-ಹೀಗೆ, ತ್ರಿರೂಪಃ-(ಮೊದಲಿಗೆ ಬ್ರಹ್ಮನಿಂದ ವೈಕಾರಿಕಾ ಹಂಕಾರದ ಅಂಶಗಳಿಂದ ಜನಿಸಿದ 'ಶಿವ'ನು, ಅನಂತರದಿಂದ ಹುಟ್ಟಿದ ತಾಮಸನು ಮತ್ತು ಪುನಃ ಬ್ರಹ್ಮನಿಂದ ತೈಜಸಾಂಶಗಳಿಂದ ಹುಟ್ಟಿದ ತೈಜಸನು, ಹೀಗೆ) ಮೂರು ರೂಪಗಳುಳ್ಳ, ಸಃ ಶಿವಃ-ಆ ಶಿವನು, ಯೋಗಮಾಯಾಂ-ಯೋಗ ಶಕ್ತಿಯನ್ನು ಉಪಾಶ್ರಿತಃ-ಉಪಯೋಗಿಸಿ, ಏಕತ್ವಂ-ಒಂದೇ ರೂಪವನ್ನು ಅಭಜತ್-ತಾಳಿದನು; ಅಥ-ನಂತರ, ಸಃ-ಆ ಶಿವನು, ವಾಮಾಂಗಂ-ತನ್ನ ದೇಹದ ಎಡಭಾಗವನ್ನು ಸ್ತ್ರೀಂ(ಸ್ತ್ರಿಯಂ)-ಸ್ತ್ರೀಯನ್ನಾಗಿ, ಅಕಲ್ಪಯತ್-(ಯೋಗಶಕ್ತಿಯಿಂದಲೇ) ಮಾಡಿಕೊಂಡನು; ಸಃ-ಆತನು, ಅರ್ಧನಾರೀನರೇಶ್ವರಃ- ಅರ್ಧ ನಾರೀನರೇಶ್ವರನಾಗಿ, ಆನಂದಾತ್-ಆನಂದದಿಂದ, ಚಿರಂ-ಬಹುಕಾಲ, ಅನೃತ್ಯತ್-ನರ್ತನಮಾಡಿದನು.

**ವೈಕಾರಿಕಾದಿಭೇದೇನ ತ್ರಿರೂಪಃ ಸೋಽಭವತ್ ಪೃಥಕ್ ।**
**ಬುದ್ಧಿರೂಪಾಮುಮಾಂ ಭಾರ್ಯಾಂ ತಥೈವ ವಿದಧೇ ತ್ರಿಧಾ ॥ ೧೦ ॥**
**ವೈಕಾರಿಕಃ ಸತ್ವಗುಣಾದ್ವಿಷ್ಣುರಿತ್ಯಭಿಧೀಯತೇ ।**
**ತೈಜಸೋ ರಾಜಸತ್ವೇನ ಬ್ರಹ್ಮೇತಿ ಪರಿಕೀರ್ತಿತಃ ॥ ೧೧ ॥**
**ತಾಮಸಸ್ತು ತಮೋಯೋಗಾದ್ರುದ್ರ ಇತ್ಯಭಿಧೀಯತೇ ।**
**ಸಪತ್ನೀಕೈಶ್ಚತುರೂಪೈರ್ಬ್ರಹ್ಮಣೋ ವರ್ಷಮೇಕಕಂ ॥ ೧೨ ॥**
**ಸಮಾಧಿಸ್ಥೋಽಭಜದ್ವಿಷ್ಣುಂ ಮಹದ್ವೈರಾಗ್ಯಮಾಸ್ಥಿತಃ ।**

ಸಃ-ಅರ್ಧನಾರೀನರೇಶ್ವರನು, ವೈಕಾರಿಕಾದಿಭೇದೇನ-ವೈಕಾರಿಕ, ತೈಜಸ, ತಾಮಸ ಭೇದದಿಂದ, ಪೃಥಕ್-ಬೇರೆಯಾದ, ತ್ರಿರೂಪಃ-ಮೂರು ರೂಪಗಳುಳ್ಳವನು,

---

ಆ ಮೂರು ರೂಪಗಳ ಪತ್ನಿಯಾಗಲು, ತ್ರಿರೂಪಳನ್ನಾಗಿ ಮಾಡಿದನು; (ವೈಕಾರಿಕ ಅಹಂಕಾರ ತತ್ತ್ವಾಂಶದಿಂದ ಜನಿಸಿದ) ವೈಕಾರಿಕನಾಮಕ ಶಿವನು, ವಿಷ್ಣುವೆಂಬ ನಾಮವುಳ್ಳವನಾದನು; ತೈಜಸಾಹಂಕಾರಾಂಶದಿಂದ ಜನಿಸಿ, ತೈಜಸನಾಮಕನಾದ ರುದ್ರನು, ಬ್ರಹ್ಮನೆನಿಸಿದನು; ಹೀಗೆಯೇ ತಾಮಸನಾಮಕನು ರುದ್ರನೆಂದೇ ಪ್ರಸಿದ್ಧನಾದನು; ಹೀಗೆ ಪತ್ನೀ ಸಹಿತಗಳಾದ ನಾಲ್ಕು ರೂಪಗಳಿಂದ, ಬ್ರಹ್ಮದೇವನ ಒಂದು ವರ್ಷಕಾಲದವರೆಗೆ, ಮಹಾವೈರಾಗ್ಯವನ್ನಾಶ್ರಯಿಸಿ, ಸಮಾಧಿಸ್ಥನಾಗಿ,

**ತತೋ ಬ್ರಹ್ಮಾಸೃಜದ್ವೀರ್ಯಮಹಂಕಾರಾತ್ಮಕಂ ಸ್ತ್ರಿಯಾಂ ।**
**ದ್ವಿಧಾಭೂತಾತ್ತತಸ್ತಸ್ಮಾದನಂತಶ್ಚ ತಥಾ ಶಿವಃ ॥ ೬ ॥**

ತತಃ-ನಂತರ, ಬ್ರಹ್ಮಾ-ಬ್ರಹ್ಮದೇವನು, ಸ್ತ್ರಿಯಾಂ-(ತನ್ನ ಭಾರ್ಯಳಾದ) ಸಾವಿತ್ರಿಯಲ್ಲಿ, ಅಹಂಕಾರಾತ್ಮಕಂ-ಅಹಂಕಾರತತ್ತ್ವಾತ್ಮಕವಾದ, ವೀರ್ಯಂ-ವೀರ್ಯವನ್ನು, ಅಸೃಜತ್-ಸೃಷ್ಟಿಸಿದನು (ಸ್ಥಾಪಿಸಿದನು); ದ್ವಿಧಾಭೂತಾತ್-ಎರಡುವಿಧ ರೂಪವನ್ನು ಹೊಂದಿದ, ತಸ್ಮಾತ್-ಅದರಿಂದ (ಆ ವೀರ್ಯದಿಂದ), ತತಃ- ಮುಂದೆ, ಅನಂತಃ- ಶೇಷನೂ (ಅನಂತನಾಮಕನೂ), ತಥಾ-ಮತ್ತು ಶಿವಃ ಚ-ಶಿವನೂ (ಉತ್ಪನ್ನರಾದರು).

**ಅನಂತಾದಪ್ಯಭೂದ್ರುದ್ರಸ್ತಾಮಸಃ ಸ ಪ್ರಕೀರ್ತಿತಃ ।**
**ತೈಜಸಾಹಂಕೃತೇರ್ಭಾರ್ಗ್ಯೈಃ ಪ್ರಾಪ್ತೋಽಪಿ ನಿಜಯೋಷಿತಿ ॥ ೭ ॥**

**ಉತ್ಸೃಜ್ಯ ವೀರ್ಯಮಸೃಜತ್ಸರುದ್ರಂ ತೈಜಸಾಭಿದಂ ।**
**ಏವಂ ತ್ರಿರೂಪಃ ಸ ಶಿವೋ ಯೋಗಮಾಯಾಮುಪಾಶ್ರಿತಃ ॥ ೮ ॥**

**ಏಕತ್ವಮಭಜತ್ತೋಽಥ ವಾಮಾಂಗಂ ಸ್ತ್ರೀಮಕಲ್ಪಯತ್ ।**
**ಸೋಽನೃತ್ಯಚ್ಚಿರಮಾನಂದಾದರ್ಧನಾರೀನರೇಶ್ವರಃ ॥ ೯ ॥**

ಅನಂತಾತ್ ಅಪಿ-(ಹೀಗೆ ಬ್ರಹ್ಮನಿಂದ ಜನಿಸಿದ) ಅನಂತನಿಂದ ಸಹ, ರುದ್ರಃ-ರುದ್ರನು, ಅಭೂತ್-(ಮತ್ತೊಂದು ರೂಪದಿಂದ) ಹುಟ್ಟಿದನು; ಸಃ- ಆತನು,

---

ಜನಿಸಿದನು—ಈತನೇ ತಾಮಸ ನಾಮಕನು; ನಂತರ ಬ್ರಹ್ಮದೇವನು ಪುನಃ ತನ್ನ ಭಾರ್ಯಳಲ್ಲಿ ತೈಜಸಾಹಂಕಾರ ತತ್ತ್ವಾಂಶಗಳ ರೂಪದ ವೀರ್ಯವನ್ನು ಸ್ಥಾಪಿಸಿದನು; ಆಗ ತೈಜಸನಾಮಕರುದ್ರನು, ಮತ್ತೊಂದು ರೂಪದಿಂದ ಹುಟ್ಟಿದನು;[1] ಹೀಗೆ ತ್ರಿರೂಪನಾದ ಶಿವನು, ತನ್ನ ಯೋಗಶಕ್ತಿಯಿಂದ ಒಂದೇ ರೂಪವುಳ್ಳವನಾಗಿ, ಆ ಏಕರೂಪದ ಎಡಭಾಗದ ದೇಹವನ್ನು ಸ್ತ್ರೀಯನ್ನಾಗಿ ಮಾಡಿಕೊಂಡು, ಅರ್ಧನಾರೀ ನರೇಶ್ವರನಾಗಿ, ಆನಂದದಿಂದ ಬಹುಕಾಲ ನರ್ತನ ಮಾಡಿದನು (೭-೯). ಅರ್ಧನಾರೀನರೇಶ್ವರನಾದ ಶಿವನು, ವೈಕಾರಿಕಾದಿ (ಪೂರ್ವೋಕ್ತ) ಭೇದದಿಂದ, ಪುನಃ ಪ್ರತ್ಯೇಕವಾದ ಮೂರು ರೂಪಗಳನ್ನು ಹೊಂದಿದನು; ಬುದ್ಧ್ಯಭಿಮಾನಿಯಾದ ತನ್ನ ಪತ್ನಿ ಉಮಾದೇವಿಯನ್ನೂ

---

1. ಮೊದಲಿಗೆ ಬ್ರಹ್ಮನಿಂದ ಅನಂತನೊಡನೆ ಹುಟ್ಟಿದ ಶಿವನು, ವೈಕಾರಿಕನು; ವೈಕಾರಿಕ, ತೈಜಸ, ತಾಮಸಾಂಶಗಳಿಂದ ಹುಟ್ಟಿದ ತ್ರಿರೂಪನಾದ ಶಿವನು, ವೈಕಾರಿಕ, ತೈಜಸ, ತಾಮಸನೆಂದೇ ಕರೆಯಲ್ಪಡುತ್ತಾನೆ.

ತಾಮಸಃ-ತಾಮಸ (ರುದ್ರ)ನೆಂದೇ, ಪ್ರಕೀರ್ತಿತಃ-ಹೇಳಲ್ಪಟ್ಟಿರುವನು; ಪ್ರಾಪ್ತ ಅಪಿ-(ಬ್ರಹ್ಮನು) ಹೊಂದಲ್ಪಟ್ಟವನಾಗಿ (ಭಾರ್ಯಳಿಂದ ಹೊಂದಲ್ಪಟ್ಟು) ಪುನಃ ನಿಜಯೋಷಿತಿ-ತನ್ನ ಸ್ತ್ರೀಯಲ್ಲಿ(ಸಾವಿತ್ರಿಯಲ್ಲಿ), ತೈಜಸಾಹಂಕೃತೇಃ-ತೈಜಸಾಹಂಕಾರದ, ಭಾಗೈ-ಅಂಶಗಳಿಂದ, ವೀರ್ಯಂ-ವೀರ್ಯವನ್ನು ಉತ್ಸೃಜ್ಯ-ಬಿಟ್ಟು (ಸ್ಥಾಪಿಸಿ), ತೈಜಸಾಭಿದಂ-ತೈಜಸನೆಂಬ ನಾಮವುಳ್ಳ, ರುದ್ರಂ-ರುದ್ರನನ್ನು ಅಸೃಜತ್-ಸೃಷ್ಟಿಮಾಡಿದನು; ಏವಂ-ಹೀಗೆ, ತ್ರಿರೂಪಃ-(ಮೊದಲಿಗೆ ಬ್ರಹ್ಮನಿಂದ ವೈಕಾರಿಕಾ ಹಂಕಾರದ ಅಂಶಗಳಿಂದ ಜನಿಸಿದ 'ಶಿವ'ನು, ಅನಂತರನಿಂದ ಹುಟ್ಟಿದ ತಾಮಸನು ಮತ್ತು ಪುನಃ ಬ್ರಹ್ಮನಿಂದ ತೈಜಸಾಂಶಗಳಿಂದ ಹುಟ್ಟಿದ ತೈಜಸನು, ಹೀಗೆ) ಮೂರು ರೂಪಗಳುಳ್ಳ, ಸಃ ಶಿವಃ-ಆ ಶಿವನು, ಯೋಗಮಾಯಾಂ-ಯೋಗ ಶಕ್ತಿಯನ್ನು ಉಪಾಶ್ರಿತಃ-ಉಪಯೋಗಿಸಿ, ಏಕತ್ವಂ-ಒಂದೇ ರೂಪವನ್ನು ಅಭಜತ್-ತಾಳಿದನು; ಅಥ-ನಂತರ, ಸಃ-ಆ ಶಿವನು, ವಾಮಾಂಗಂ-ತನ್ನ ದೇಹರ ಎಡಭಾಗವನ್ನು ಸ್ತ್ರೀಂ(ಸ್ತ್ರಿಯಂ)-ಸ್ತ್ರೀಯನ್ನಾಗಿ, ಅಕಲ್ಪಯತ್-(ಯೋಗಶಕ್ತಿಯಿಂದಲೇ) ಮಾಡಿಕೊಂಡನು; ಸಃ-ಆತನು, ಅರ್ಧನಾರೀನರೇಶ್ವರಃ- ಅರ್ಧ ನಾರೀನರೇಶ್ವರನಾಗಿ, ಆನಂದಾತ್-ಆನಂದದಿಂದ, ಚಿರಂ-ಬಹುಕಾಲ, ಅನೃತ್ಯತ್-ನರ್ತನಮಾಡಿದನು.

**ವೈಕಾರಿಕಾದಿಭೇದೇನ ತ್ರಿರೂಪಃ ಸೋಽಭವತ್ ಪೃಥಕ್ ।**
**ಬುದ್ಧಿರೂಪಾಮುಮಾಂ ಭಾರ್ಯಾಂ ತಥೈವ ವಿದಧೇ ತ್ರಿಧಾ ॥ ೧೦ ॥**
**ವೈಕಾರಿಕಃ ಸತ್ವಗುಣಾದ್ವಿಷ್ಣುರಿತ್ಯಭಿಧೀಯತೇ ।**
**ತೈಜಸೋ ರಾಜಸತ್ವೇನ ಬ್ರಹ್ಮೇತಿ ಪರಿಕೀರ್ತಿತಃ ॥ ೧೧ ॥**
**ತಾಮಸಸ್ತು ತಮೋಯೋಗಾದ್ರುದ್ರ ಇತ್ಯಭಿಧೀಯತೇ ।**
**ಸಪತ್ನೀಕೈಶ್ಚತೂರೂಪೈರ್ಬ್ರಹ್ಮಣೋ ವರ್ಷಮೇಕಕಂ ॥ ೧೨ ॥**
**ಸಮಾಧಿಸ್ಥೋಽಭಜದ್ವಿಷ್ಣುಂ ಮಹದ್ವೈರಾಗ್ಯಮಾಸ್ಥಿತಃ ।**

ಸಃ-ಅರ್ಧನಾರೀನರೇಶ್ವರನು, ವೈಕಾರಿಕಾದಿಭೇದೇನ-ವೈಕಾರಿಕ, ತೈಜಸ, ತಾಮಸ ಭೇದದಿಂದ, ಪೃಥಕ್-ಬೇರೆಯಾದ, ತ್ರಿರೂಪಃ-ಮೂರು ರೂಪಗಳುಳ್ಳವನು,

---

ಆ ಮೂರು ರೂಪಗಳ ಪತ್ನಿಯಾಗಲು, ತ್ರಿರೂಪಳನ್ನಾಗಿ ಮಾಡಿದನು; (ವೈಕಾರಿಕ ಅಹಂಕಾರ ತತ್ವಾಂಶದಿಂದ ಜನಿಸಿದ) ವೈಕಾರಿಕನಾಮಕ ಶಿವನು, ವಿಷ್ಣುವೆಂಬ ನಾಮವುಳ್ಳವನಾದನು; ತೈಜಸಾಹಂಕಾರಾಂಶದಿಂದ ಜನಿಸಿ, ತೈಜಸನಾಮಕನಾದ ರುದ್ರನು, ಬ್ರಹ್ಮನೆನಿಸಿದನು; ಹೀಗೆಯೇ ತಾಮಸನಾಮಕನು ರುದ್ರನೆಂದೇ ಪ್ರಸಿದ್ಧನಾದನು; ಹೀಗೆ ಪತ್ನೀ ಸಹಿತಗಳಾದ ನಾಲ್ಕು ರೂಪಗಳಿಂದ, ಬ್ರಹ್ಮದೇವನ ಒಂದು ವರ್ಷಕಾಲದವರೆಗೆ, ಮಹಾವೈರಾಗ್ಯವನ್ನಾಶ್ರಯಿಸಿ, ಸಮಾಧಿಸ್ಥನಾಗಿ,

ಅಭವತ್-ಆದನು; ಬುದ್ಧಿರೂಪಾಂ-ಬುದ್ಧ್ಯಭಿಮಾನಿಯಾದ, ಭಾರ್ಯಾಂ-ಭಾರ್ಯಳಾದ, ಉಮಾಂ-ಉಮಾದೇವಿಯನ್ನೂ, ತಥಾ ಏವ-ಹಾಗೆಯೇ (ತನ್ನಂತೆಯೇ), ತ್ರಿಧಾ-ಮೂರು ರೂಪಗಳುಳ್ಳವಳನ್ನಾಗಿ, ವಿದಧೇ-ಮಾಡಿದನು; ವೈಕಾರಿಕಃ- ವೈಕಾರಿಕರುದ್ರನು, ಸತ್ತ್ವಗುಣಾತ್-ಸತ್ತ್ವಗುಣಾಧಿಕ್ಯದಿಂದ (ಅಹಂಕಾರ ತತ್ತ್ವದ ಸತ್ತ್ವಾಧಿಕಾಂಶದಿಂದ ಜನಿಸಿದ ಪ್ರಯುಕ್ತ), ವಿಷ್ಣುಃ ಇತಿ-ವಿಷ್ಣುವೆಂದು, ಅಭಿಧೀಯತೇ- ಕರೆಯಲ್ಪಡುತ್ತಾನೆ (ನಾಮವುಳ್ಳವನಾಗುತ್ತಾನೆ); ತೈಜಸಃ-ತೈಜಸ ರುದ್ರನು, ರಾಜಸತ್ತ್ವೇನ-ರಜೋಗುಣಾಧಿಕ್ಯದಿಂದ) ಬ್ರಹ್ಮ ಇತಿ ಪರಿಕೀರ್ತಿತಃ-ಬ್ರಹ್ಮನೆಂದು ಹೇಳಲ್ಪಡುತ್ತಾನೆ; ತಾಮಸಃ ತು-ತಾಮಸರುದ್ರನಾದರೋ, ತಮೋಯೋಗಾತ್-ತಮೋಗುಣಾಧಿಕ್ಯದಿಂದ, ರುದ್ರಃ ಇತಿ-ರುದ್ರನೆಂದು, ಅಭಿಧೀಯತೇ-ಕರೆಯಲ್ಪಡುತ್ತಾನೆ; ಸಪತ್ನೀಕೈಃ-ಪತ್ನೀಸಹಿತಗಳಾದ, ಚತುರೂಪೈಃ-ನಾಲ್ಕು ರೂಪಗಳಿಂದ, (ಅರ್ಧನಾರೀನರೇಶ್ವರ ಮತ್ತು ಮೂರು ಪ್ರತ್ಯೇಕ ರೂಪಗಳಿಂದ ಸಹ), ಬ್ರಹ್ಮಣಃ-ಬ್ರಹ್ಮದೇವನ, ಏಕಕಂ ವರ್ಷಂ-ಒಂದು ವರ್ಷಕಾಲ, ಮಹದ್ವೈರಾಗ್ಯಂ-ಮಹಾವೈರಾಗ್ಯವನ್ನು ಆಸ್ಥಿತಃ-ಹೊಂದಿದವನಾಗಿ, ಸಮಾಧಿಸ್ಥಃ-ಸಮಾಧಿಯಲ್ಲಿ ನಿಂತು, ವಿಷ್ಣುಂ-ಶ್ರೀಮಹಾವಿಷ್ಣುವನ್ನು ಅಭಜತ್- ಉಪಾಸಿಸಿದನು (ಧ್ಯಾನಿಸಿದನು).

**ತತಃ ಪ್ರಸನ್ನೋ ಭಗವಾನ್ ಪ್ರತ್ಯಕ್ಷೀಭೂಯ ಭೂರಿಶಃ ॥ ೧೩ ॥**
**ತಸ್ಮೈ ವರಾನ್ ದದೌ ಪ್ರೀತ್ಯಾ ಸರ್ವೇಷಾಂ ಜನಿತಾ ಭವಾನ್ ।**
**ಅಹಂ ತ್ವತ್ತೋ ಭವಿಷ್ಯಾಮಿ ಕಿಮುತಾನ್ಯೇ ಸುರಾದಯಃ ॥ ೧೪ ॥**
**ತವ ಪೂಜಾಪರಾ ನಿತ್ಯಂ ತವ ಚಾದೇಶಕಾರಿಣಃ ।**
**ತ್ವಯೋಪದಿಷ್ಟಮಾರ್ಗೇಣ ಮಾಮುಪೇಷ್ಯಂತಿ ಸರ್ವಶಃ ॥ ೧೫ ॥**

ತತಃ-ಹೀಗೆ ತಪಸ್ಸನ್ನಾಚರಿಸಿದ್ದರಿಂದ, ಪ್ರಸನ್ನಃ-ಪ್ರಸನ್ನನಾದ, ಭಗವಾನ್-ಶ್ರೀಮಹಾವಿಷ್ಣುವು, ಪ್ರತ್ಯಕ್ಷೀಭೂಯ-ಪ್ರತ್ಯಕ್ಷನಾಗಿ, ತಸ್ಮೈ-ರುದ್ರನಿಗೆ, ಪ್ರೀತ್ಯಾ-ಪ್ರೀತಿಯಿಂದ (ಆದರಪೂರ್ವಕ), ಭೂರಿಶಃ-ಉದಾರವಾದ, ವರಾನ್-ವರಗಳನ್ನು

ಶ್ರೀಮಹಾವಿಷ್ಣುವನ್ನು ಧ್ಯಾನಿಸಿದನು (ತಪಸ್ಸಿನಿಂದ ಆರಾಧಿಸಿದನು) (೧೦-೧೨). ರುದ್ರದೇವನ ತಪಸ್ಸಿನಿಂದ ಪ್ರಸನ್ನನಾದ ಶ್ರೀಮಹಾವಿಷ್ಣುವು ಪ್ರತ್ಯಕ್ಷನಾಗಿ, ಆದರದಿಂದ ಅನೇಕ ವರಗಳನ್ನಿತ್ತನು; ಅವು ಯಾವುವೆಂದರೆ:—ನೀನು ಸರ್ವರ ಜನಕನಾಗು; ನಾನೂ ಸಹ ನಿನ್ನಿಂದ (ಒಂದು ರೂಪದಿಂದ) ಹುಟ್ಟುತ್ತೇನೆ; ನಾನೇ ಹುಟ್ಟಲು ಇತರ ದೇವಾದಿಗಳು ನಿನ್ನಿಂದ ಜನಿಸುವರೆಂದು ಹೇಳಲೇನು? ಹೀಗೆ ಹುಟ್ಟಿದವರೆಲ್ಲರೂ ನಿನ್ನನ್ನು ಆರಾಧಿಸುತ್ತ ನಿನ್ನ ಆಜ್ಞಾಕಾರಿಗಳಾಗಿರುತ್ತಾರೆ; ನಿನ್ನಿಂದ ಜ್ಞಾನೋಪದೇಶವನ್ನು ಪಡೆದು, ನೀನು ಉಪದೇಶ ಮಾಡಿದ ಮಾರ್ಗದಿಂದ, ಎಲ್ಲರೂ, ನನ್ನನ್ನು ಹೊಂದುತ್ತಾರೆ

ದದೌ-ಕೊಟ್ಟನು; (ಆ ವರಗಳಾವುವೆಂದರೆ), ಭವಾನ್-ನೀನು, ಸರ್ವೇಷಾಂ- ಸಕಲರ, ಜನಿತಾ-ಉತ್ಪಾದಕನು (ಹುಟ್ಟಿಸುವವನು), (ಆಗುವಿ); ಅಹಂ-ನಾನು, ತ್ವತ್ತಃ-ನಿನ್ನ ದೆಶೆಯಿಂದ, ಭವಾಮಿ-ಜನಿಸುತ್ತೇನೆ; ಅನ್ಯೇ-ಇತರರಾದ, ಸುರಾದಯಃ-ದೇವತೆಗಳೇ ಮೊದಲಾದವರು, ಕಿಮುತ-(ಹೇಳತಕ್ಕದ್ದೇನು) ನಿನ್ನಿಂದ ಜನಿಸುತ್ತಾರೆಂದು ಹೇಳುವ ಕಾರಣವಿಲ್ಲ (ನಿನ್ನಿಂದ ಹುಟ್ಟುವ ಸಮಸ್ತ ದೇವತೆಗಳೂ), ನಿತ್ಯಂ-ಸರ್ವದಾ, ತವಪೂಜಾಪರಾಃ-ನಿನ್ನನ್ನು ಪೂಜಿಸುವುದರಲ್ಲಿ ಆಸಕ್ತರಾಗಿ, ತವ-ನಿನ್ನ, ಆದೇಶಕಾರಿಣಃ ಚ-ಆಜ್ಞೆಯನ್ನು ಪಾಲಿಸತಕ್ಕವರೂ (ಆಗಿ), ತ್ವಯಾ-ನಿನ್ನಿಂದ, ಉಪದಿಷ್ಟ ಮಾರ್ಗೇಣ-ಉಪದಿಷ್ಟವಾದ ಮಾರ್ಗದಿಂದ (ನಿನ್ನ ಉಪದೇಶದಂತೆ ನಡೆದು), ಸರ್ವಶಃ-ಎಲ್ಲರೂ ಮಾಂ-ನನ್ನನ್ನು, ಉಪೇಷ್ಯಂತಿ- ಹೊಂದುತ್ತಾರೆ.

**ಇತ್ಥಂ ನಾನಾಪ್ರೀತಿವಾಗ್ಭಿಸ್ತೋಷಯಿತ್ವಾ ಮಹೇಶ್ವರಂ ।**
**ಪ್ರವಿಶ್ಯಾಥ ತಮೇವಾಶು ಸೃಷ್ಟವಾನಖಿಲಂ ಜಗತ್ ॥ ೧೬ ॥**

ಇತ್ಥಂ-ಹೀಗೆ, ನಾನಾಪ್ರೀತಿವಾಗ್ಭಿಃ-ಬಹು ಪ್ರೀತಿಯುಕ್ತ ನುಡಿಗಳಿಂದ (ವರ ದಾನಾದಿಗಳಿಂದ), ಮಹೇಶ್ವರಂ-ಮಹೇಶ್ವರನನ್ನು (ರುದ್ರನನ್ನು), ತೋಷಯಿತ್ವಾ-ಸಂತೋಷಗೊಳಿಸಿ, ಅಥ-ನಂತರ, ಆಶು-ಶೀಘ್ರವಾಗಿ, ತಂ ಏವ-ಆತನನ್ನೇ (ಮಹೇಶ್ವರನನ್ನೇ), ಪ್ರವಿಶ್ಯ-ಪ್ರವೇಶಿಸಿ (ಆತನಲ್ಲಿ ನಿಂತು-ಆತನ ದ್ವಾರಾ), ಅಖಿಲಂ-ಸಮಸ್ತ, ಜಗತ್-ಜಗತ್ತನ್ನೂ, ಸೃಷ್ಟವಾನ್-(ಶ್ರೀವಿಷ್ಣುವು) ಸೃಷ್ಟಿಸಿದನು.

**ಇಂದ್ರೋ ವಿಷ್ಣೂ ರವಿರ್ಧಾತಾ ಪೂಷಾ ತ್ವಷ್ಟಾರ್ಯಮಾ ಭಗಃ ।**
**ಮಿತ್ರೋ ವರುಣಪರ್ಜನ್ಯೌ ಸವಿತಾ ದ್ವಾದಶೋ ಮತಃ ॥ ೧೭ ॥**

ಮಹೇಶ್ವರನ ದ್ವಾರಾ ಶ್ರೀಮಹಾವಿಷ್ಣುವಿನಿಂದ ಸೃಷ್ಟರಾದವರು ಯಾರೆಂದರೆ:—

ಇಂದ್ರಃ-ಇಂದ್ರ, ವಿಷ್ಣುಃ-ವಿಷ್ಣುವು, ರವಿಃ-ರವಿಯು, ಧಾತಾ-ಧಾತೃ, ಪೂಷಾ-ಪೂಷನು, ತ್ವಷ್ಟಾ-ತ್ವಷ್ಟೃ, ಅರ್ಯಮಾ-ಅರ್ಯಮನು, ಭಗಃ-ಭಗನು, ಮಿತ್ರಃ-ಮಿತ್ರನು, ವರುಣಪರ್ಜನ್ಯೌ-ವರುಣ ಮತ್ತು ಪರ್ಜನ್ಯರು, ಸವಿತಾ-ಸವಿತೃ ನಾಮಕನು, ದ್ವಾದಶೋ-(ದ್ವಾದಶಾದಿತ್ಯರಲ್ಲಿ) ಹನ್ನೆರಡನೆಯವನು, ಎಂದು, ಮತಃ- ತಿಳಿಯಲ್ಪಟ್ಟಿದ್ದಾನೆ; [ಹೀಗೆ ದ್ವಾದಶ (೧೨) ಆದಿತ್ಯರು].

---

(೧೩-೧೫). ಹೀಗೆ ವರದಾನಾದಿ ಪ್ರೀತಿಯುಕ್ತ ನುಡಿಗಳಿಂದ, ಶ್ರೀಮಹಾವಿಷ್ಣುವು, ಮಹೇಶ್ವರನನ್ನು ಸಂತೋಷಪಡಿಸಿ, ಶೀಘ್ರವಾಗಿ ಆತನನ್ನೇ ಪ್ರವೇಶಿಸಿದನು—ಅಲ್ಲಿದ್ದು ಆತನ ದ್ವಾರಾ ಸಮಸ್ತ ಜಗತ್ತನ್ನು ಸೃಷ್ಟಿ ಮಾಡಿದನು (೧೬). ಮಹೇಶ್ವರನಿಂದ ಸೃಷ್ಟರಾದವರು ಯಾರು ಯಾರೆಂದರೆ:—ಇಂದ್ರ, ವಿಷ್ಣು ರವಿ, ಧಾತೃ, ಪೂಷಾ, ತ್ವಷ್ಟೃ, ಅರ್ಯಮಾ, ಭಗ, ಮಿತ್ರ, ವರುಣ, ಪರ್ಜನ್ಯ, ಸವಿತೃ, ಎಂಬ (ಹನ್ನೆರಡು) ದ್ವಾದಶಾದಿತ್ಯರು (೧೨ ಮಾಸಗಳಲ್ಲಿ ಮಾಸಕ್ಕೊಬ್ಬರಂತೆ, ಸೂರ್ಯಮಂಡಲಸ್ಥಿತರಾಗಿ,

**ಅಜೈಕಪಾದಹಿರ್ಬುಧ್ನೀ ರುದ್ರೋ ವಾಮೋ ವೃಷಾಕಪಿಃ ।**
**ಮಹೇಶೋ ರೈವತೋ ಭೀಮೋ ಘೋರಸ್ತತ್ಪುರುಷೋ ಭವಃ ॥ ೧೮ ॥**
**ಏವಮೇಕಾದಶ ಪ್ರೋಕ್ತಾ ರುದ್ರಾಃ ಪ್ರಲಯಕಾರಿಣಃ ।**

ಅಜೈಕಪಾತ್-ಅಜೈಕಪಾದನು, ಅಹಿರ್ಬುಧ್ನೀ-ಅಹಿರ್ಬುಧ್ನಿಯು, ರುದ್ರಃ-ರುದ್ರನು, ವಾಮಃ-ವಾಮದೇವ, ವೃಷಾಕಪಿಃ-ವೃಷಾಕಪಿಯು, ಮಹೇಶಃ- ಮಹೇಶನು, ರೈವತಃ-ರೈವತನು, ಭೀಮಃ-ಭೀಮನು, ಘೋರಃ-ಘೋರನು, ತತ್ಪುರುಷಃ-ತತ್ಪುರುಷನು, ಭವಃ-ಭವನು; ಏವಂ-ಹೀಗೆ, ಪ್ರಲಯಕಾರಿಣಃ- ಜಗತ್ಪ್ರಲಯದಲ್ಲಿ ಶ್ರೀಹರಿಯ ಆಜ್ಞೆಯಂತೆ ಭಾಗವಹಿಸುವ, ರುದ್ರಾಃ-ರುದ್ರರು, ಏಕಾದಶ-ಹನ್ನೊಂದು ಮಂದಿ, (ಎಂದು), ಪ್ರೋಕ್ತಾಃ-ಹೇಳಲ್ಪಟ್ಟಿರುವರು.

**ಧ್ರುವಃ ಪ್ರಾಣೋ ದ್ಯುನಾಮಾಽರ್ಕೋ ವಹ್ನಿರ್ದೋಷೋ ವಸುರ್ಧರಃ ॥ ೧೯ ॥**
**ವಸವೋಽಷ್ಟಾವಿಮೇ ಪ್ರೋಕ್ತಾಃ ಸಹಾಯಾ ಜಾತವೇದಸಃ ।**

ಧ್ರುವಃ-ಧ್ರುವ, ಪ್ರಾಣಃ-ಪ್ರಾಣ, ದ್ಯುನಾಮಾ-ದ್ಯು ಎಂಬ ಹೆಸರುಳ್ಳವನು, ಅರ್ಕಃ-ಅರ್ಕ, ವಹ್ನಿ-ವಹ್ನಿ (ಅಗ್ನಿ), ದೋಷಃ-ದೋಷನು, ವಸುಃ-ವಸು, ಧರಃ-ಧರನು (ಎಂದು), ವಸವಃ-ವಸುಗಳು, ಅಷ್ಟೌ-ಎಂಟು ಮಂದಿ (ಇರುವರು); ಇಮೇ-ಇವರು, ಜಾತವೇದಸಃ-ಅಗ್ನಿಯ, ಸಹಾಯಾಃ-ಸಹಾಯಕರೆಂದು, ಪ್ರೋಕ್ತಾಃ-ಹೇಳಲ್ಪಟ್ಟಿರುವರು.

**ಸತ್ಯೋ ವಸುಃ ಕ್ರತುರ್ದಕ್ಷಃ ಕಾಮಃ ಕಾಲೋ ಧನುರ್ಧರಃ ॥ ೨೦ ॥**
**ಪುರೂರವಾ ಆರ್ದ್ರವಶ್ಚ ವಿಶ್ವೇದೇವಾ ದಶ ಸ್ಮೃತಾಃ ।**

ಸತ್ಯಃ-ಸತ್ಯ, ವಸುಃ-ವಸು, ಕ್ರತುಃ-ಕ್ರತು, ದಕ್ಷಃ-ದಕ್ಷ ಕಾಮಃ-ಕಾಮ, ಕಾಲಃ-ಕಾಲ, ಧನುಃ-ಧನು, ಧರಃ-ಧರ, ಪುರೂರವಾಃ-ಪುರೂರವ, ಆರ್ದ್ರವಃ ಚ-ಆರ್ದ್ರವನೂ ಸಹ, ದಶ-ಹತ್ತುಮಂದಿ, ವಿಶ್ವೇದೇವಾಃ-ವಿಶ್ವೇದೇವತೆಗಳೆಂದು, ಸ್ಮೃತಾಃ-ತಿಳಿಯಲ್ಪಟ್ಟಿರುವರು.

---

ನಾರಾಯಣನನ್ನು ಅಂತರ್ಯಾಮಿಯಾಗಿ ಉಳ್ಳವರಾಗಿ, ಕಾರ್ಯನಿರ್ವಾಹಕರಾಗಿರುವರು); (೧೭). ಮತ್ತು ಅಜೈಕಪಾದ, ಅಹಿರ್ಬುಧ್ನೀ, ರುದ್ರ, ವಾಮ, ವೃಷಾಕಪಿ, ಮಹೇಶ, ರೈವತ, ಭೀಮ, ಘೋರ, ತತ್ಪುರುಷ ಮತ್ತು ಭವ ಎಂಬ ಹನ್ನೊಂದು ಮಂದಿ, (ಏಕಾದಶರುದ್ರರು)—ರುದ್ರಶಬ್ದವಾಚ್ಯರು; ಮಹಾಸಾಮರ್ಥ್ಯವುಳ್ಳ ಇವರು ಜಗತ್ಪ್ರಲಯಕಾರಕರು (೧೮). ಧ್ರುವ, ಪ್ರಾಣ, ದ್ಯು, ಅರ್ಕ, ವಹ್ನಿ ದೋಷ, ವಸು, ಧರ, ಎಂದು ವಸುಗಳು ಎಂಟು ಮಂದಿ. ಈ ಎಲ್ಲರೂ ಅಗ್ನಿದೇವನಿಗೆ (ಇತರಲ್ಲೊಬ್ಬನಾದ ಪ್ರಧಾನಾಗ್ನಿಗೆ) ಸಹಾಯಕರೆಂದು ಹೇಳಲ್ಪಟ್ಟಿರುವರು(೧೯). ಸತ್ಯ, ವಸು, ಕ್ರತು, ದಕ್ಷ

ಪ್ರಾಣೋಽಪಾನಸ್ತಥಾ ವ್ಯಾನ ಉದಾನಶ್ಚ ಸಮಾನಕಃ ॥ ೨೧ ॥
ನಾಗಶ್ಚ ಕೃಕಲಃ ಕೂರ್ಮೋ ದೇವದತ್ತೋ ಧನಂಜಯಃ ।
ಪ್ರವಹೋ ವಿವಹಃ ಶಂಯುಃ ಸಂವಹಶ್ಚ ಪರಾವಹಃ ॥ ೨೨ ॥
ಉದ್ವಹಶ್ಚಾವಹಃ ಶಂಕುಃ ಕಾಲಃ ಶ್ವಾಸೋಽನಲೋಽನಿಲಃ ।
ಪ್ರತಿಭಃ ಕುಮುದಃ ಕಾಂತಃ ಶುಚಿಃ ಶ್ವೇತೋಽಜಿತೋ ಗುರುಃ ॥ ೨೩ ॥
ಝುಂಝಾಪ್ರವರ್ತಕಃ ಕೀಲೋಽದಿತಿಃ ಸೌಮ್ಯಃ ಕಪಿರ್ಜಡಃ ।
ಮಂಡೂಕಃ ಸಂತತಃ ಸಿದ್ಧೋ ರಕ್ತಃ ಕೃಷ್ಣಃ ಪಿಕಃ ಶುಕಃ ॥ ೨೪ ॥
ಯತಿರ್ಭೀಮೋ ಹನುಃ ಪಿಂಗೋಽಹಂ ಪ್ರಾಣಃ ಕಂಪನಸ್ತಥಾ ।
ಸಪ್ತಸಪ್ತಕಸಂಖ್ಯಾಕಾ ಮರುತೋಽಮೀ ಪ್ರಕೀರ್ತಿತಾಃ ॥ ೨೫ ॥

ಪ್ರಾಣಃ-ಪ್ರಾಣನು, ಅಪಾನಃ-ಅಪಾನ, ತಥಾ-ಮತ್ತು ವ್ಯಾನಃ-ವ್ಯಾನನು, ಉದಾನಃ-ಉದಾನ, ಚ-ಮತ್ತು ಸಮಾನಕಃ-ಸಮಾನನು; ನಾಗಃ-ನಾಗ, ಚ- ಮತ್ತು ಕೃಕಲಃ-ಕೃಕಲನು, ಕೂರ್ಮಃ-ಕೂರ್ಮನು, ದೇವದತ್ತಃ-ದೇವದತ್ತನು, ಧನಂಜಯಃ-ಧನಂಜಯ (ಈ ದಶಪ್ರಾಣರೂ); ಪ್ರವಹಃ-ಪ್ರವಹನು, ವಿವಹಃ-ವಿವಹನು, ಶಂಯುಃ-ಶಂಯುವು, ಸಂವಹಃ-ಸಂವಹನೂ, ಚ-ಮತ್ತು ಪರಾವಹಃ-ಪರಾವಹನೂ, ಉದ್ವಹಃ-ಉದ್ವಹನು, ಚ-ಮತ್ತು ಆವಹಃ-ಆವಹನೂ, ಶಂಕುಃ-ಶಂಕು, ಕಾಲಃ-ಕಾಲ, ಶ್ವಾಸಃ-ಶ್ವಾಸವಾಯುವು, ಅನಿಲಃ-ವಾಯುದೇವನು, ಅನಲಃ-ಅನಲನು, ಪ್ರತಿಭಃ-ಪ್ರತಿಭನೂ, ಕುಮುದಃ-ಕುಮುದನೂ, ಕಾಂತಃ- ಕಾಂತ, ಶುಚಿಃ-ಶುಚಿ, ಶ್ವೇತಃ-ಶ್ವೇತ, ಅಜಿತಃ-ಅಜಿತನೂ, ಗುರುಃ-ಗುರುವೂ, ಝುಂಝಾಪ್ರವರ್ತಕಃ-ಝುಂಝಾವಾತನು, ಕೀಲಃ-ಕೀಲನೂ, ಅದಿತಿಃ-ಅದಿತಿ,

---

ಕಾಮ, ಕಾಲ, ಧನು, ಧರ,[1] ಪುರೂರವ ಮತ್ತು ಆರ್ದ್ರವ, ಹೀಗೆ ಹತ್ತು ಮಂದಿ ವಿಶ್ವೇದೇವತೆಗಳೆನಿಸುವರು (೨೦).

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೂ; ನಾಗ, ಕೃಕಲ, ಕೂರ್ಮ, ದೇವದತ್ತ, ಧನಂಜಯರೂ; ಪ್ರವಹ, ವಿವಹ, ಶಂಯು, ಸಂವಹ, ಪರಾವಹರೂ; ಉದ್ವಹ, ಆವಹ, ಶಂಕು, ಕಾಲ, ಶ್ವಾಸ, ಅನಲ, ಅನಿಲರೂ; ಪ್ರತಿಭ, ಕುಮುದ, ಕಾಂತ, ಶುಚಿ, ಶ್ವೇತ, ಅಜಿತ, ಗುರುಗಳೂ; ಝುಂಝಾ, ಪ್ರವರ್ತಕ, ಕೀಲ, ಅದಿತಿ, ಸೌಮ್ಯ, ಕಪಿ, ಜಡರೂ; ಮಂಡೂಕ, ಸಂತತ, ಸಿದ್ಧ, ರಕ್ತ, ಕೃಷ್ಣ, ಪಿಕ, ಶುಕರೂ; ಮತ್ತು ಯತಿ, ಭೀಮ, ಹನು, ಪಿಂಗ, ಅಹಂಪ್ರಾಣ, ಕಂಪನರೂ, ಹೀಗೆ ೪೯ ಮಂದಿ, ಮರುತ್ತರೆಂದು

1. ಧನು ಮತ್ತು ಧರ, ಎಂಬುವರ ಸ್ಥಾನದಲ್ಲಿ ಧೂರಿ ಮತ್ತು ಲೋಚನ ಎಂಬಿಬ್ಬರನ್ನು (ಭಿನ್ನನಾಮಕರನ್ನು) ಅನ್ಯತ್ರ ಹೇಳಲಾಗಿದೆ.

**ಅಜೈಕಪಾದಹಿರ್ಬುಧ್ನೀ ರುದ್ರೋ ವಾಮೋ ವೃಷಾಕಪಿಃ ।**
**ಮಹೇಶೋ ರೈವತೋ ಭೀಮೋ ಘೋರಸ್ತತ್ಪುರುಷೋ ಭವಃ ॥ ೧೮ ॥**
**ಏವಮೇಕಾದಶ ಪ್ರೋಕ್ತಾ ರುದ್ರಾಃ ಪ್ರಲಯಕಾರಿಣಃ ।**

ಅಜೈಕಪಾತ್-ಅಜೈಕಪಾದನು, ಅಹಿರ್ಬುಧ್ನೀ-ಅಹಿರ್ಬುಧ್ನಿಯು, ರುದ್ರಃ-ರುದ್ರನು, ವಾಮಃ-ವಾಮದೇವ, ವೃಷಾಕಪಿಃ-ವೃಷಾಕಪಿಯು, ಮಹೇಶಃ- ಮಹೇಶನು, ರೈವತಃ-ರೈವತನು, ಭೀಮಃ-ಭೀಮನು, ಘೋರಃ-ಘೋರನು, ತತ್ಪುರುಷಃ-ತತ್ಪುರುಷನು, ಭವಃ-ಭವನು; ಏವಂ-ಹೀಗೆ, ಪ್ರಲಯಕಾರಿಣಃ- ಜಗತ್ಪ್ರಲಯದಲ್ಲಿ ಶ್ರೀಹರಿಯ ಆಜ್ಞೆಯಂತೆ ಭಾಗವಹಿಸುವ, ರುದ್ರಾಃ-ರುದ್ರರು, ಏಕಾದಶ-ಹನ್ನೊಂದು ಮಂದಿ, (ಎಂದು), ಪ್ರೋಕ್ತಾಃ-ಹೇಳಲ್ಪಟ್ಟಿರುವರು.

**ಧ್ರುವಃ ಪ್ರಾಣೋ ದ್ಯುನಾಮಾऽರ್ಕೋ ವಹ್ನಿರ್ದೋಷೋ ವಸುರ್ಧರಃ ॥ ೧೯ ॥**
**ವಸವೋऽಷ್ಟಾವಿಮೇ ಪ್ರೋಕ್ತಾಃ ಸಹಾಯಾ ಜಾತವೇದಸಃ ।**

ಧ್ರುವಃ-ಧ್ರುವ, ಪ್ರಾಣಃ-ಪ್ರಾಣ, ದ್ಯುನಾಮಾ-ದ್ಯು ಎಂಬ ಹೆಸರುಳ್ಳವನು, ಅರ್ಕಃ-ಅರ್ಕ, ವಹ್ನಿ-ವಹ್ನಿ (ಅಗ್ನಿ), ದೋಷಃ-ದೋಷನು, ವಸುಃ-ವಸು, ಧರಃ-ಧರನು (ಎಂದು), ವಸವಃ-ವಸುಗಳು, ಅಷ್ಟೌ-ಎಂಟು ಮಂದಿ (ಇರುವರು); ಇಮೇ-ಇವರು, ಜಾತವೇದಸಃ-ಅಗ್ನಿಯ, ಸಹಾಯಾಃ-ಸಹಾಯಕರೆಂದು, ಪ್ರೋಕ್ತಾಃ-ಹೇಳಲ್ಪಟ್ಟಿರುವರು.

**ಸತ್ಯೋ ವಸುಃ ಕ್ರತುರ್ದಕ್ಷಃ ಕಾಮಃ ಕಾಲೋ ಧನುರ್ಧರಃ ॥ ೨೦ ॥**
**ಪುರೂರವಾ ಆರ್ದ್ರವಶ್ಚ ವಿಶ್ವೇದೇವಾ ದಶ ಸ್ಮೃತಾಃ ।**

ಸತ್ಯಃ-ಸತ್ಯ, ವಸುಃ-ವಸು, ಕ್ರತುಃ-ಕ್ರತು, ದಕ್ಷಃ-ದಕ್ಷ ಕಾಮಃ-ಕಾಮ, ಕಾಲಃ-ಕಾಲ, ಧನುಃ-ಧನು, ಧರಃ-ಧರ, ಪುರೂರವಾಃ-ಪುರೂರವ, ಆರ್ದ್ರವಃ ಚ-ಆರ್ದ್ರವನೂ ಸಹ, ದಶ-ಹತ್ತುಮಂದಿ, ವಿಶ್ವೇದೇವಾಃ-ವಿಶ್ವೇದೇವತೆಗಳೆಂದು, ಸ್ಮೃತಾಃ-ತಿಳಿಯಲ್ಪಟ್ಟಿರುವರು.

---

ನಾರಾಯಣನನ್ನು ಅಂತರ್ಯಾಮಿಯಾಗಿ ಉಳ್ಳವರಾಗಿ, ಕಾರ್ಯನಿರ್ವಾಹಕರಾಗಿರುವರು); (೧೭). ಮತ್ತು ಅಜೈಕಪಾದ, ಅಹಿರ್ಬುಧ್ನೀ, ರುದ್ರ, ವಾಮ, ವೃಷಾಕಪಿ, ಮಹೇಶ, ರೈವತ, ಭೀಮ, ಘೋರ, ತತ್ಪುರುಷ ಮತ್ತು ಭವ ಎಂಬ ಹನ್ನೊಂದು ಮಂದಿ, (ಏಕಾದಶರುದ್ರರು)—ರುದ್ರಶಬ್ದವಾಚ್ಯರು; ಮಹಾಸಾಮರ್ಥ್ಯವುಳ್ಳ ಇವರು ಜಗತ್ಪ್ರಲಯಕಾರಕರು (೧೮). ಧ್ರುವ, ಪ್ರಾಣ, ದ್ಯು, ಅರ್ಕ, ವಹ್ನಿ, ದೋಷ, ವಸು, ಧರ, ಎಂದು ವಸುಗಳು ಎಂಟು ಮಂದಿ. ಈ ಎಲ್ಲರೂ ಅಗ್ನಿದೇವನಿಗೆ (ಇವರಲ್ಲೊಬ್ಬನಾದ ಪ್ರಧಾನಾಗ್ನಿಗೆ) ಸಹಾಯಕರೆಂದು ಹೇಳಲ್ಪಟ್ಟಿರುವರು(೧೯). ಸತ್ಯ, ವಸು, ಕ್ರತು, ದಕ್ಷ

ಪ್ರಾಣೋಽಪಾನಸ್ತಥಾ ವ್ಯಾನ ಉದಾನಶ್ಚ ಸಮಾನಕಃ ॥ ೨೧ ॥
ನಾಗಶ್ಚ ಕೃಕಲಃ ಕೂರ್ಮೋ ದೇವದತ್ತೋ ಧನಂಜಯಃ ।
ಪ್ರವಹೋ ವಿವಹಃ ಶಂಯುಃ ಸಂವಹಶ್ಚ ಪರಾವಹಃ ॥ ೨೨ ॥
ಉದ್ವಹಶ್ಚಾವಹಃ ಶಂಕುಃ ಕಾಲಃ ಶ್ವಾಸೋಽನಲೋಽನಿಲಃ ।
ಪ್ರತಿಭಃ ಕುಮುದಃ ಕಾಂತಃ ಶುಚಿಃ ಶ್ವೇತೋಜಿತೋ ಗುರುಃ ॥ ೨೩ ॥
ಝುಂಝೂಪ್ರವರ್ತಕಃ ಕೀಲೋಽದಿತಿಃ ಸೌಮ್ಯಃ ಕಪಿರ್ಜಡಃ ।
ಮಂಡೂಕಃ ಸಂತತಃ ಸಿದ್ಧೋ ರಕ್ತಃ ಕೃಷ್ಣಃ ಪಿಕಃ ಶುಕಃ ॥ ೨೪ ॥
ಯತಿರ್ಭೀಮೋ ಹನುಃ ಪಿಂಗೋಽಹಂ ಪ್ರಾಣಃ ಕಂಪನಸ್ತಥಾ ।
ಸಪ್ತಸಪ್ತಕಸಂಖ್ಯಾಕಾ ಮರುತೋಽಮೀ ಪ್ರಕೀರ್ತಿತಾಃ ॥ ೨೫ ॥

ಪ್ರಾಣಃ-ಪ್ರಾಣನು, ಅಪಾನಃ-ಅಪಾನ, ತಥಾ-ಮತ್ತು ವ್ಯಾನಃ-ವ್ಯಾನನು, ಉದಾನಃ-ಉದಾನ, ಚ-ಮತ್ತು ಸಮಾನಕಃ-ಸಮಾನನು; ನಾಗಃ-ನಾಗ, ಚ- ಮತ್ತು ಕೃಕಲಃ-ಕೃಕಲನು, ಕೂರ್ಮಃ-ಕೂರ್ಮನು, ದೇವದತ್ತಃ-ದೇವದತ್ತನು, ಧನಂಜಯಃ-ಧನಂಜಯ (ಈ ದಶಪ್ರಾಣರೂ); ಪ್ರವಹಃ-ಪ್ರವಹನು, ವಿವಹಃ-ವಿವಹನು, ಶಂಯುಃ-ಶಂಯುವು, ಸಂವಹಃ-ಸಂವಹನೂ, ಚ-ಮತ್ತು ಪರಾವಹಃ-ಪರಾವಹನೂ, ಉದ್ವಹಃ-ಉದ್ವಹನು, ಚ-ಮತ್ತು ಆವಹಃ-ಆವಹನೂ, ಶಂಕುಃ-ಶಂಕು, ಕಾಲಃ-ಕಾಲ, ಶ್ವಾಸಃ-ಶ್ವಾಸವಾಯುವು, ಅನಿಲಃ-ವಾಯುದೇವನು, ಅನಲಃ-ಅನಲನು, ಪ್ರತಿಭಃ-ಪ್ರತಿಭನೂ, ಕುಮುದಃ-ಕುಮುದನೂ, ಕಾಂತಃ- ಕಾಂತ, ಶುಚಿಃ-ಶುಚಿ, ಶ್ವೇತಃ-ಶ್ವೇತ, ಅಜಿತಃ-ಅಜಿತನೂ, ಗುರುಃ-ಗುರುವೂ, ಝುಂಝೂಪ್ರವರ್ತಕಃ-ಝುಂಝೂವಾತನು, ಕೀಲಃ-ಕೀಲನೂ, ಅದಿತಿಃ-ಅದಿತಿ,

---

ಕಾಮ, ಕಾಲ, ಧನು, ಧರ,[1] ಪುರೂರವ ಮತ್ತು ಆರ್ದ್ರವ, ಹೀಗೆ ಹತ್ತು ಮಂದಿ ವಿಶ್ವೇದೇವತೆಗಳೆನಿಸುವರು (೨೦).

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೂ; ನಾಗ, ಕೃಕಲ, ಕೂರ್ಮ, ದೇವದತ್ತ ಧನಂಜಯರೂ; ಪ್ರವಹ, ವಿವಹ, ಶಂಯು, ಸಂವಹ, ಪರಾವಹರೂ; ಉದ್ವಹ, ಆವಹ, ಶಂಕು, ಕಾಲ, ಶ್ವಾಸ, ಅನಲ, ಅನಿಲರೂ; ಪ್ರತಿಭ, ಕುಮುದ, ಕಾಂತ, ಶುಚಿ, ಶ್ವೇತ, ಅಜಿತ, ಗುರುಗಳೂ; ಝುಂಝೂ, ಪ್ರವರ್ತಕ, ಕೀಲ, ಅದಿತಿ, ಸೌಮ್ಯ, ಕಪಿ, ಜಡರೂ; ಮಂಡೂಕ, ಸಂತತ, ಸಿದ್ಧ ರಕ್ತ ಕೃಷ್ಣ ಪಿಕ, ಶುಕರೂ; ಮತ್ತು ಯತಿ, ಭೀಮ, ಹನು, ಪಿಂಗ, ಅಹಂಪ್ರಾಣ, ಕಂಪನರೂ, ಹೀಗೆ ೪೯ ಮಂದಿ, ಮರುತ್ತರೆಂದು

1. ಧನು ಮತ್ತು ಧರ, ಎಂಬುವರ ಸ್ಥಾನದಲ್ಲಿ ಧೂರಿ ಮತ್ತು ಲೋಚನ ಎಂಬಿಬ್ಬರನ್ನು (ಭಿನ್ನನಾಮಕರನ್ನು) ಅನ್ಯತ್ರ ಹೇಳಲಾಗಿದೆ.

ಸೌಮ್ಯಃ-ಸೌಮ್ಯನು, ಕಪಿಃ-ಕಪಿ, ಜಡಃ-ಜಡನೂ, ಮಂಡೂಕಃ-ಮಂಡೂಕನೂ, ಸಂತತಃ-ಸಂತತನೂ, ಸಿದ್ಧಃ-ಸಿದ್ಧ ರಕ್ತಃ-ರಕ್ತ ಕೃಷ್ಣಃ-ಕೃಷ್ಣ ಪಿಕಃ-ಪಿಕನೂ, ಶುಕಃ-ಶುಕನೂ, ಯತಿಃ-ಯತಿ, ಭೀಮಃ-ಭೀಮ, ಹನುಃ-ಹನು, ಪಿಂಗಃ-ಪಿಂಗ, ಅಹಂ ಪ್ರಾಣಃ-ಅಹಂಪ್ರಾಣ, ತಥಾ-ಹಾಗೂ, ಕಂಪನಃ-ಕಂಪನನೂ, ಅಮೀ-ಈ, ಸಪ್ತಸಪ್ತಕ ಸಂಖ್ಯಾಕಾಃ-೪೯ ಸಂಖ್ಯೆಯುಳ್ಳಿರುವ ಮಂದಿಯು (ದೇವತೆಗಳು), ಮರುತಃ-ಮರುತ್ತರೆಂದು, ಪ್ರಕೀರ್ತಿತಾಃ-ಹೇಳಲ್ಪಟ್ಟಿರುವರು.

ನಾಸತ್ಯದಸ್ರೌ ಋಭವಸ್ತ್ರಯಃ ಪಿತೃಪತಿತ್ರಯಂ ।
ದ್ಯಾವಾ ಭೂಮೀ ಗುರುಶ್ಚೈತೇ ಸೋಮಪಾ ಅಖಿಲಾ ಅಪಿ ॥ ೨೬ ॥
ಕುಬೇರೋ ವಿಘ್ನಪಃ ಕಾಮೋ ನಿರ್ಋತಿಶ್ಚಂದ್ರಮಾ ಯಮಃ ।
ಗಂಧರ್ವಾ ಋಷಯೋ ಯಕ್ಷಾಃ ಸಿದ್ಧಾದ್ಯಾಃ ನಿಖಿಲಾ ಅಪಿ ॥ ೨೭ ॥
ಅನ್ಯೇಽಪಿ ಪುರುಷಾ ಯೇಷಾಂ ದೇವವರ್ಗಾಶ್ಚ ಸರ್ವಶಃ ।
ಜಜ್ಞಿರೇ ಕ್ರಮಶಸ್ತಸ್ಮಾದರ್ಧನಾರೀ ನರೇಶ್ವರಾತ್ ॥ ೨೮ ॥

ನಾಸತ್ಯದಸ್ರೌ-ನಾಸತ್ಯ ಮತ್ತು ದಸ್ರರೆಂಬ (ಅವಳಿ) ಅಶ್ವಿನೀದೇವತೆಗಳು, ಋಭವಃ-ಋಭುಗಳೆಂಬ, ತ್ರಯಃ-ಮೂವರೂ, ಪಿತೃಪತಿತ್ರಯಂ-ಪಿತೃಪತಿಗಳೆಂಬ ಮೂವರು, ದ್ಯಾವಾಭೂಮೀ-ದ್ಯು ಮತ್ತು ಭೂಮಿಗಳು (ದ್ಯಾವಾಪೃಥಿವೀ), ಗುರುಃ ಚ-ಗುರುವೂ (ಬೃಹಸ್ಪತಿ), ಏತೇ ಅಖಿಲಾಃ ಅಪಿ-ಈ ಸಮಸ್ತರೂ, ಸೋಮಪಾಃ-ಪ್ರಸಿದ್ಧರಾದ ದೇವತೆಗಳು[1] (೨೦-೨೩). ನಾಸತ್ಯದಸ್ರರೆಂಬ ಅಶ್ವಿನಿದೇವತೆಗಳು (ಯಮಳರು-ಉಭಯರೂ ಅಶ್ವಿನೀದೇವತೆಗಳೆಂಬ ನಾಮವುಳ್ಳವರು), ಋಭುಗಣ

1. ೪೯ ಮರುತ್ತರೆಂದು ಪ್ರಸಿದ್ಧವಾದ ಗಣಕ್ಕೆ ಸೇರಿದ ದೇವತೆಗಳು (ಮರುದ್ಗಣದವರು) ವಾಯುಗಳೆಂದೂ ಕರೆಯಲ್ಪಡುತ್ತಾರೆ. ಈ ೪೯ ಮರುತ್ತರಲ್ಲಿ ಒಂದೊಂದರಲ್ಲಿ ಏಳು ಜನರಂತೆ, ಏಳು ಗಣಗಳಿರುವುವೆಂದೂ, ಅವು, (೧) ಆವಹಗಣ (ಭೂಮಿಯಿಂದ ಮೇಘಮಂಡಲದ ವರೆಗೂ), (೨) ಪ್ರವಹಗಣ (ಮೇಘಮಂಡಲದಿಂದ ಸೂರ್ಯಮಂಡಲದವರೆಗೂ), (೩) ಉದ್ವಹಗಣ (ಸೂರ್ಯಮಂಡಲದಿಂದ ಚಂದ್ರಮಂಡಲದವರೆಗೂ), (೪) ಸಂವಹಗಣ (ಚಂದ್ರನಿಂದ ನಕ್ಷತ್ರ ಮಂಡಲದವರೆಗೂ), (೫) ವಿವಹಗಣ (ನಕ್ಷತ್ರಮಂಡಲದಿಂದ ಗ್ರಹ ಮಂಡಲದವರೆಗೂ), (೬) ಪರಾವಹಗಣ (ಗ್ರಹಮಂಡಲದಿಂದ ಋಷಿಮಂಡಲದವರೆಗೂ) (೭) ಪರಿವಹಗಣ (ಋಷಿಮಂಡಲದಿಂದ ಧ್ರುವಮಂಡಲದವರೆಗೂ), ಆಕಾಶದಲ್ಲಿರುವ ಗ್ರಹ ನಕ್ಷತ್ರಾದಿಗಳ ಸಂಚಾರಾದಿಗಳನ್ನು ನಿಯಂತ್ರಿಸುವ ಶಕ್ತಿಗಳಿಗೆ ಅಭಿಮಾನಿ ದೇವತೆಗಳೆಂದು, (ತಾರತಮ್ಯ ಸಂಗ್ರಹ—ಉಮರ್ಜೀಯ ಇತ್ಯಾದಿ) ಗ್ರಂಥಾಂತರಗಳಲ್ಲಿ ನಿರೂಪಿಸಲಾಗಿದೆ. ಮತ್ತು ಈ ಏಳು ಗಣಗಳಿಗೆ ಸೇರಿದವರ ನಾಮಗಳನ್ನೂ ಭಿನ್ನಭಿನ್ನವಾಗಿ ಹೇಳಲಾಗಿದೆ. ಈ ಮರುತ್ತಗಳ ಪೈಕಿ ಕೆಲವರಿಗೆ, ಸದಾಶಿವ, ವಿರೂಪಾಕ್ಷ ಮೊದಲಾದ ರುದ್ರರ ನಾಮಗಳೂ ಇರುವುವೆಂದೂ ತಿಳಿದುಬರುತ್ತದೆ.

ಸೋಮಪಾನಾರ್ಹರು; (ಮತ್ತು), ಕುಬೇರಃ-ಕುಬೇರನು, ವಿಘ್ನಪಃ-(ವಿಘ್ನೇಶ) ಗಣಪತಿಯು, ಕಾಮಃ-ಕಾಮನು, ನಿರ್ಋತಿಃ-ನಿರ್ಋತಿಯು, ಚಂದ್ರಮಾಃ- ಚಂದ್ರನು, ಯಮಃ- ಯಮನೂ, ಗಂಧರ್ವಾಃ-ಗಂಧರ್ವರು, ಋಷಯಃ-ಋಷಿಗಳು, ಯಕ್ಷಾಃ-ಯಕ್ಷರೂ, ಸಿದ್ಧಾದ್ಯಾಃ-ಸಿದ್ಧರೇ ಮೊದಲಾದವರು, ನಿಖಿಲಾಃ ಅಪಿ- ಈ ಎಲ್ಲರೂ, ದೇವವರ್ಗಾಃ-ದೇವತೆಗಳ ಗುಂಪಿಗೆ (ದೇವತಾಗಣಗಳಿಗೆ) ಸೇರಿದವರು; ಯೇಷಾಂ-ಈ ಯಾವ ವರ್ಗದ ಮಧ್ಯದಲ್ಲಿ ಅನ್ಯೇ ಅಪಿ-ಇನ್ನೂ ಇತರರಾದ, ಸರ್ವಶಃ-ಸಕಲ, ಪುರುಷಾಃ-ಪುರುಷರೋ, (ಆ ಎಲ್ಲರೂ), ಕ್ರಮಶಃ-ಕ್ರಮವಾಗಿ (ಬಲಭಾಗದಿಂದ ಪುರುಷರೂ, ಎಡಭಾಗದಿಂದ ಸ್ತ್ರೀಯರೂ, ಎಂಬ ಕ್ರಮದಿಂದ), ತಸ್ಮಾತ್-ಆ, ಅರ್ಧನಾರೀನರೇಶ್ವರಾತ್-ಅರ್ಧನಾರೀ ನರೇಶ್ವರನಿಂದ, ಜಜ್ಞಿರೇ-ಹುಟ್ಟಿದರು.

**ಕರ್ಣಾಭ್ಯಾಂ ಜಜ್ಞಿರೇ ತಸ್ಯ ವಾಸುಕ್ಯಾದ್ಯಖಿಲೋರಗಾಃ ।**
**ತೇಷು ಶ್ರೇಷ್ಠತರಾ ಯೇ ತು ತೇ ತದ್ರೂಪಣತಾಂ ಗತಾಃ ॥ ೨೯ ॥**

ತಸ್ಯ-ಆತನ (ಅರ್ಧನಾರೀನರೇಶ್ವರನ), ಕರ್ಣಾಭ್ಯಾಂ-ಕರ್ಣಗಳಿಂದ, ವಾಸುಕ್ಯಾದಿ-ವಾಸುಕಿಯೇ ಮೊದಲಾದ, ಅಖಿಲೋರಗಾಃ-ಸಮಸ್ತ ಉರಗರು (ಸರ್ಪಗಳು), ಜಜ್ಞಿರೇ-ಹುಟ್ಟಿದರು; ತೇಷು-ಅವರಲ್ಲಿ ಯೇ-ಯಾರು, ಶ್ರೇಷ್ಠ

---

ರವರೂ (ಈ) ಮೂವರೂ, ಪಿತೃಪತಿಗಳು ಮೂವರು, ದ್ಯು ಮತ್ತು ಪೃಥಿವೀ ಅಭಿಮಾನಿಗಳು ಬೃಹಸ್ಪತಿ ಮೊದಲಾದವರೆಲ್ಲ ಸೋಮಪಾನಾರ್ಹರು;[1] ಮತ್ತು ಕುಬೇರ, ವಿಘ್ನೇಶ, ಕಾಮ, ನಿರ್ಋತಿ, ಚಂದ್ರ, ಯಮ, ಗಂಧರ್ವರು, ಋಷಿಗಳು, ಯಕ್ಷರು, ಸಿದ್ಧರು, ಇವರೇ ಮೊದಲಾದ ದೇವತಾಗಣದ ಜೀವರ ಮಧ್ಯದಲ್ಲಿ ಪುರುಷರೆಲ್ಲರೂ,

1. ಋಭುಗಣದವರೆಂಬುವ ೧೦೦೦ ಜನರಿರುವರು; ಸೋಮಪಾನಾರ್ಹರಲ್ಲಿ ಸೇರದ ಅನ್ಯರು ಕರ್ಮಜದೇವತೆಗಳ ತಾರತಮ್ಯಕಕ್ಷ್ಯದಲ್ಲಿ ಸೇರುತ್ತಾರೆ; ಇವರು, ದೇವಯಾನ, ಪಿತೃಯಾನ, ಮಾರ್ಗಸ್ಥ ಅರ್ಚಿರಾದಿ, ಧೂಮಾದಿ ಮಾರ್ಗಗಳಲ್ಲಿ ದೊರೆಯುವ ಲೋಕಗಳಿಗೆ ಅಭಿಮಾನಿಗಳಾಗಿರುತ್ತಾರೆ. ಸೋಮಪಾನಾರ್ಹರೆಂದರೆ, ಯಜ್ಞಾದಿಗಳಲ್ಲಿ ಸೋಮರಸಪಾನಕ್ಕಾಗಿ ವೇದಮಂತ್ರಗಳಿಂದ ನಾಮೋಚ್ಚಾರಣಪೂರ್ವಕ ಆಹ್ವಾನಿಸಲ್ಪಡತಕ್ಕವರು; ಯದ್ಯಪಿ, ಆ ದೇವತೆಗಳ ಭಾರ್ಯರೇ ಮೊದಲಾದ ಪರಿವಾರದ ದೇವತೆಗಳೂ ಸಹ ಸೋಮಪಾನದಲ್ಲಿ ಅರ್ಹರೇ ಆಗಿರುವರು; ಆದರೂ ಸೋಮಪಾನಾರ್ಹರೆಂಬ 'ಶತಸ್ಥ'ರೆಂಬುವರು ೧೦೦ ದೇವತೆಗಳಿದ್ದಾರೆ. ಅವರು ಯಾರೆಂದರೆ:—೧-ಮುಖ್ಯವಾಯು, ೮-ವಸುಗಳು; ೧೧-ರುದ್ರರು; ೪೯-ಮರುತ್ತರು; ೧೦-ವಿಶ್ವೇದೇವತೆಗಳು; ೩-ಪಿತೃಗಳು; ೧-ಋಭು; ೨-ದ್ಯು ಮತ್ತು ಪೃಥಿವೀ ಅಭಿಮಾನಿಗಳಾದ ಇಂದ್ರಪತ್ನಿಯಾದ ಸ್ವರ್ಗಾಭಿಮಾನಿ ಶ್ರೀನಾಮಕಳು ಮತ್ತು ಪೃಥಿವ್ಯಭಿಮಾನಿ, ವರಾಹಭಾರ್ಯಳಾದ ಧರಾದೇವಿ; ೨-ಅಶ್ವಿನೀ ದೇವತೆಗಳು; ೧-ಬೃಹಸ್ಪತಿ; ೧೨-ಆದಿತ್ಯರು; ಒಟ್ಟು ೧೦೦.

ಪಿತೃಪತಿಗಳು ೩ ಜನ—ವಸು, ರುದ್ರ, ಆದಿತ್ಯ ನಾಮಕರು.

ತರಾಃ-ಶ್ರೇಷ್ಠರಾಗಿದ್ದರೋ, ತೇ-ಅವರು, ತದ್ಭೂಷಣತಾಂ-ಆ ಈಶ್ವರನ ಭೂಷಣತ್ವ ವನ್ನು (ಅಲಂಕಾರತ್ವವನ್ನು-ಆಭರಣರೂಪರು), ಗತಾಃ-ಹೊಂದಿದರು (ಆದರು).

**ಮುಖಾದ್ವಿನಿಸ್ಸೃತಾಸ್ತಸ್ಯ ವೃಷಾ ಗಾವೋಽಶ್ವಹಸ್ತಿನಃ ।**

**ಅರಣ್ಯಾಃ ಪಶವೋ ಗ್ರಾಮ್ಯಾಃ ಸರ್ವೇ ನಾಭೇರ್ವಿನಿರ್ಗತಾಃ ॥ ೩೦ ॥**

ತಸ್ಯ-ಆತನ, ಮುಖಾತ್-ಮುಖದಿಂದ, (ವೃಷಾಃ-ವೃಷಭಗಳು, ಗಾವಃ-ಗೋವುಗಳು), ವೃಷಾ ಗಾವೋಽಶ್ವಹಸ್ತಿನಃ-ವೃಷಭ, ಗೋ, ಅಶ್ವ, ಗಜಗಳು, ವಿನಿಃಸೃತಾಃ-ಹೊರಗೆ ಹಾಕಲ್ಪಟ್ಟವು (ಸೃಷ್ಟಿಸಲ್ಪಟ್ಟವು); ನಾಭೇ-ನಾಭಿಯಿಂದ, ಸರ್ವೇ-ಎಲ್ಲ ಅರಣ್ಯಾಃ-ಅರಣ್ಯದಲ್ಲಿರುವ, ಗ್ರಾಮ್ಯಾಃ-ಗ್ರಾಮದಲ್ಲಿರುವ, ಪಶವಃ-ಪಶುಗಳು, ವಿನಿರ್ಗತಾಃ-ಸೃಷ್ಟವಾದವು.

**ಅನ್ಯೇ ಕ್ಷುದ್ರಾಶ್ಚ ತಿರ್ಯಂಚೋ ಗುಹ್ಯಾದಸ್ಯ ವಿನಿಃಸೃತಾಃ ।**

**ಮನುಷ್ಯಾ ವಸವೋ ಜಾತಾ ದೈತ್ಯಾ ಯೇ ರಾಕ್ಷಸಾಸ್ತಥಾ ॥ ೩೧ ॥**

**ಮೇಢ್ರಾತ್ ಪ್ರಜಜ್ಞಿರೇ ತಸ್ಯ ವೃಕ್ಷಗುಲ್ಮಲತಾದಯಃ ।**

**ಅಧೋಂಗೇಭ್ಯೋಽಖಿಲಾ ಜಾತಾ ಏವಂ ಸೃಷ್ಟ್ವಾ ಮಹೇಶ್ವರಃ ॥೩೨ ॥**

**ಸಾಕ್ಷಾತ್ ಪರಂಪರಾಭೇದಾನ್ನಾರೀಪುರುಷಭೇದತಃ ।**

**ವಾಮದಕ್ಷಿಣಭಾಗೇಭ್ಯೋ ಮುಮುದೇ ಬಹುವತ್ಸರಂ ॥ ೩೩ ॥**

ಅಸ್ಯ-ಈತನ (ಮಹೇಶ್ವರನ), ಗುಹ್ಯಾತ್-ಗುಹ್ಯೇಂದ್ರಿಯದಿಂದ, ಅನ್ಯೇ- ಇತರ, ಕ್ಷುದ್ರಾಃ-ಕ್ಷುದ್ರ (ಅಲ್ಪ)ಗಳಾದ, ತಿರ್ಯಂಚಃ-ಕೀಳುಪ್ರಾಣಿಗಳು (ಪಶ್ವಾದಿಗಳು), ವಿನಿಸ್ಸೃತಾಃ-ಸೃಷ್ಟವಾದವು; ಮನುಷ್ಯಾಃ-ಮನುಷ್ಯರೂ, ವಸವಃ-ವಸುಗಳೂ (ಅಷ್ಟವಸು

---

ಅರ್ಧನಾರೀಶ್ವರನ ಬಲಭಾಗದಿಂದಲೂ, ಸ್ತ್ರೀಯರು ಎಡಭಾಗದಿಂದಲೂ, ಎಂಬ ಕ್ರಮದಿಂದ, ಜನಿಸಿದರು (೨೬-೨೮). ಅರ್ಧನಾರೀನರೇಶ್ವರನ ಕರ್ಣಗಳಿಂದ ವಾಸುಕಿ ಮೊದಲಾದ ಸಕಲ ಉರಗರೂ ಜನಿಸಿದರು; ಅದರಲ್ಲಿ ಶ್ರೇಷ್ಠರಾದವರು, ಆತನ (ಅರ್ಧನಾರೀನರೇಶ್ವರನ) ಭೂಷಣಗಳಾದರು (ಆಭರಣಗಳಾಗಿ ಉಪಯೋಗಿಸಲ್ಪಟ್ಟರು) (೨೯). ಆತನ ಮುಖದಿಂದ, ಎತ್ತು, ಹಸು, ಕುದುರೆ, ಆನೆ ಮೊದಲಾದವುಗಳು, ಹುಟ್ಟಿದವು; ಅರಣ್ಯ ಗ್ರಾಮಗಳಲ್ಲಿರುವ ಸಕಲ ಪಶುಗಳೂ, ಆತನ ನಾಭಿಯಿಂದ ಸೃಷ್ಟವಾದವು (೩೦). ಆತನ ಗುಹ್ಯೇಂದ್ರಿಯದಿಂದ ಇತರ ಕ್ಷುದ್ರಪಶ್ವಾದಿ ಪ್ರಾಣಿಗಳು ಹುಟ್ಟಿದವು; ಮನುಷ್ಯರೂ, ವಸುಗಳೂ (ಅಥವಾ ರತ್ನಾದಿಗಳೂ), ದೈತ್ಯರೂ, ರಾಕ್ಷಸರೂ, ಶಿಶ್ನದಿಂದ ಹುಟ್ಟಿದರು; ದೇಹದ ಅಧೋಭಾಗದ ಅಂಗಗಳಿಂದ, ಸಮಸ್ತ ವೃಕ್ಷ ಗುಲ್ಮಲತಾದಿಗಳು ಹುಟ್ಟಿದವು; ಹೀಗೆ, ತಾನೇ ಸಾಕ್ಷಾತ್ತಾಗಿ ಮತ್ತು ತನ್ನಿಂದ ಸೃಷ್ಟವಾದ್ದರಿಂದ ಅನ್ಯವನ್ನೂ (ಪರಂಪರೆಯಿಂದಲೂ), ವಾಮ ದಕ್ಷಿಣ ಭಾಗಗಳಿಂದ

ಗಳನ್ನುಳಿದು ಇತರ ಅಗ್ನಿಗಳು[1] ಅಥವಾ ನಾನಾ ಮುತ್ತು ರತ್ನಾದಿಗಳು), ತಥಾ-ಹಾಗೂ, ಯೇ-ಯಾವ (ಪ್ರಸಿದ್ಧರಾದ), ದೈತ್ಯಾಃ-ದೈತ್ಯರೂ, ರಾಕ್ಷಸಾಃ-ರಾಕ್ಷಸರೂ, ಮೇಢ್ರಾತ್-ಶಿಶ್ನದಿಂದ, ಪ್ರಜಜ್ಞಿರೇ-ಹುಟ್ಟಿದರು; ತಸ್ಯ-ಆತನ, ಅಧೋಂಗೇಭ್ಯಃ-ಕೆಳಭಾಗದ ಅವಯವಗಳಿಂದ (ಜಂಘ, ಪಾದ ಮೊದಲಾದವುಗಳಿಂದ) ವೃಕ್ಷಗುಲ್ಮಲತಾದಯಃ-ವೃಕ್ಷಗುಲ್ಮಲತಾದಿಗಳು, ಅಖಿಲಾಃ-ಎಲ್ಲವೂ, ಜಾತಾಃ-ಹುಟ್ಟಿದವು; ಏವಂ-ಹೀಗೆ, ಮಹೇಶ್ವರಃ-ಮಹೇಶ್ವರನು, ಸಾಕ್ಷಾತ್-ತಾನೇ (ಸ್ವಯಂ), (ಮತ್ತು), ಪರಂಪರಾಭೇದಾತ್-ಪರಂಪರೆಯೆಂಬ ಭೇದದಿಂದ (ತಾನು ಸೃಷ್ಟಿ ಮಾಡಿದ್ದರಿಂದ ಮತ್ತೊಂದು ಹೀಗೆ ಪರಂಪರೆಯಿಂದ), (ಹಾಗೂ), ನಾರೀ ಪುರುಷಭೇದತಃ- ಸ್ತ್ರೀಪುರುಷ ಭೇದದಿಂದ, ವಾಮದಕ್ಷಿಣಭಾಗೇಭ್ಯಃ-(ತನ್ನ ದೇಹದ) ಎಡಬಲಭಾಗಗಳಿಂದ, ಸೃಷ್ಟ್ವಾ-(ಬಹುವಿಧವಾಗಿ) ಸೃಷ್ಟಿಮಾಡಿ, ಬಹುವತ್ಸರಂ-ಬಹುವರ್ಷಗಳ ಕಾಲ, ಮುಮುದೇ-ಹರ್ಷಿಸಿದನು.

**ದಶ ಪಂಚ ಚ ವರ್ಷಾಣಿ ಸಾ ಸೃಷ್ಟಿರಭವತ್ತದಾ ।**
**ತದಾನೀಮಭವತ್ ಸೂತ್ರಾದ್ಗರುಡಃ ಪಕ್ಷಿರೂಪಧೃಕ್ ॥ ೩೪ ॥**

ಸಾ ಸೃಷ್ಟಿಃ-ಆ ಮಹೇಶ್ವರನ ಸೃಷ್ಟಿಯು (ಅಂತಃಪ್ರವಿಷ್ಟನಾದ ಶ್ರೀವಿಷ್ಣುವಿನಿಂದಾದ ಸೃಷ್ಟಿಯು), ತದಾ-ಆಗ, ದಶಪಂಚ ಚ ವರ್ಷಾಣಿ-(ಬ್ರಹ್ಮದೇವನ) ೧೫ ವರ್ಷಗಳು, (ಅಷ್ಟುಕಾಲ), ಅಭವತ್-ನಡೆಯಿತು; ತದಾನೀಂ-ಆಗಲೇ, ಸೂತ್ರಾತ್-ಸೂತ್ರನಾಮಕ ವಾಯುದೇವನಿಂದ, ಗರುಡಃ-ಗರುಡನು, ಪಕ್ಷಿರೂಪ ಧೃಕ್-ಪಕ್ಷಿರೂಪವನ್ನು ಧರಿಸಿ, ಅಭವತ್-ಹುಟ್ಟಿದನು.

**ಸ್ವಯಮೇವಾಭವಚ್ಛೇಷೋಽನಂತನಾಮೋರಗಾಕೃತಿಃ ।**
**ಅಂತೇ ಚರಮಕಲ್ಪಸ್ಯ ರಾಕ್ಷಸಾಸ್ತೇ ಮದಾಕುಲಾಃ ॥ ೩೫ ॥**

---

ಸ್ತ್ರೀಪುರುಷರೆಂಬ ಭೇದದಿಂದಲೂ ಬಹುವಿಧ ಸೃಷ್ಟಿಯನ್ನು ಮಾಡುತ್ತ ಬಹುವರ್ಷಗಳ ಕಾಲ ಆನಂದಿಸಿದನು (೩೦-೩೩). ಈ ಮಹೇಶ್ವರನ ಸೃಷ್ಟಿಯು ೧೫ ವರ್ಷಗಳ ಕಾಲ ನಡೆಯಿತು; ಆಗಲೇ (ಈ ಸೃಷ್ಟಿಯು ನಡೆದಾಗಲೇ) ಸೂತ್ರನಿಂದ (ತನ್ನಾಮಕ ವಾಯುದೇವನಿಂದ) ಪಕ್ಷಿ ರೂಪವನ್ನು ಧರಿಸಿದ ಗರುಡನೂ ಜನಿಸಿದನು (೩೪). ಸ್ವಯಂ ಶೇಷದೇವನು, ಅನಂತನಾಮಕನಾಗಿ ಸರ್ಪಾಕಾರದಿಂದ ಜನಿಸಿದನು; ಆ ೧೫

---

1. ಅಗ್ನಿಗಳೆಲ್ಲರೂ ವಸುನಾಮಕರು; ಪ್ರಧಾನಾಗ್ನಿಯ ಮಕ್ಕಳು, ಪಾವಕ, ಪವಮಾನ, ಶುಚಿ ಎಂಬ ಮೂವರು; ಇವರ ಸಂತತಿಯಲ್ಲಿ ಪುತ್ರಪೌತ್ರಾದಿಗಳು ೪೫ ಅಗ್ನಿಗಳಿರುವರು; ಈ ಎಲ್ಲರೂ, ವಿವಿಧ ವಿಧ್ಯುಕ್ತ ಕರ್ಮಗಳಲ್ಲಿ ಉಪಯೋಗಿಸಲ್ಪಡುವ ಜಡಾಗ್ನಿಗಳಿಗೆ, ಒಬ್ಬೊಬ್ಬರು ಒಂದೊಂದು ಅಗ್ನಿಗೆ ಅಭಿಮಾನಿದೇವತೆಯಾಗಿರುವರು. ಈ ಅಗ್ನಿಸಂತತಿಯೂ, ಅವರ ಕಾರ್ಯಗಳೂ ಮತ್ಸ್ಯ ಪುರಾಣದಲ್ಲಿ ವಿಸ್ತರಿಸಲ್ಪಟ್ಟಿವೆ.

ಬಭಕ್ಷುರ್ಮಾನುಷಾನ್ ಸರ್ವಾನ್ ಪಶುಪಕ್ಷಿಮೃಗಾದಿಕಾನ್ ।
ಜಲಸ್ಥಲಚರಾನ್ ಕ್ಷುದ್ರಾನ್ ಮಹಾವಾತೇನ ಚ ದ್ರುಮಾಃ ॥ ೩೬ ॥
ಏಕೀಭೂತಾಸ್ತತೋ ವಹ್ನಿರ್ದದಾಹಾಥಾಽಖಿಲಾಃ ಸುರಾಃ ।
ರಾಕ್ಷಸಾನ್ ಜಘ್ನಿರೇ ತೇಽಥ ದೈತ್ಯಾನ್ ಶರಣಮಾಯಯುಃ ॥ ೩೭ ॥

ಶೇಷಃ-ಶೇಷದೇವನು, ಸ್ವಯಮೇವ-ತಾನೇ (ಸಾಕ್ಷಾತ್ತಾಗಿ-ಅನ್ಯಾಧಿಷ್ಠಾನ ವಿಲ್ಲದೇ), ಅನಂತನಾಮಾ-ಅನಂತನೆಂಬ ಹೆಸರುಳ್ಳವನಾಗಿ, ಉರಗಾಕೃತಿಃ-ಸರ್ಪಾಕಾರನಾಗಿ, ಅಭವತ್-ಹುಟ್ಟಿದನು; ಚರಮಕಲ್ಪಸ್ಯ-(೧೫ ವರ್ಷಗಳ ಕಾಲ ನಡೆದ, ಮಹೇಶ್ವರನ ದ್ವಾರದ ಸೃಷ್ಟಿಯ) ಕಡೆಯದಿನ ಕಲ್ಪದ, ಅಂತೇ-ಕಡೆಯ ಭಾಗದಲ್ಲಿ, ಮದಾಕುಲಾಃ-ಮದೋನ್ಮತ್ತರಾದ, ತೇ ರಾಕ್ಷಸಾಃ-ಆ ರಾಕ್ಷಸರು, ಸರ್ವಾನ್-ಸಮಸ್ತ ಮಾನುಷಾನ್-ಮನುಷ್ಯರನ್ನೂ, ಪಶುಪಕ್ಷಿ ಮೃಗಾದಿಕಾನ್-ಪಶುಪಕ್ಷಿಮೃಗಾದಿಗಳನ್ನೂ, ಕ್ಷುದ್ರಾನ್-ನೀಚಯೋನಿಯ, ಜಲಸ್ಥಲಚರಾನ್- ಜಲಚರ, ಭೂಚರ ಪ್ರಾಣಿಗಳನ್ನೂ, ಬಭಕ್ಷುಃ-ಭಕ್ಷಿಸಿದರು; ಮಹಾವಾತೇನ-ಚಂಡಮಾರುತದಿಂದ, ದ್ರುಮಾಃ ಚ-ವೃಕ್ಷಗಳೂ ಸಹ, ಏಕೀಭೂತಾಃ-ರಾಶಿರಾಶಿಯಾದವು; ತತಃ-ನಂತರ, ವಹ್ನಿಃ-ಅಗ್ನಿಯು, ದದಾಹ-(ಅವುಗಳನ್ನು) ದಹಿಸಿದನು; ಅಥ-ಆ ನಂತರ, ಅಖಿಲಾಃ-ಸಮಸ್ತರಾದ, ಸುರಾಃ-ದೇವತೆಗಳು, ರಾಕ್ಷಸಾನ್-ರಾಕ್ಷಸರನ್ನು, ಜಘ್ನಿರೇ-ಮೇಲೆ ಬಿದ್ದು ಹೊಡೆದರು; ತೇ-ಅವರು, ಅಥ-ನಂತರ, ದೈತ್ಯಾನ್-ದೈತ್ಯರನ್ನು, ಶರಣಂ ಆಯಯುಃ-ಶರಣುಹೊಂದಿದರು.

ದೈತ್ಯಾಶ್ಚ ರಾಕ್ಷಸಾಃ ಸರ್ವೇ ಯುದ್ಧ್ಯಂತೋ ದೇವತೈಃ ಸಹ ।
ಹತಾನಿ ಪತಿತಾಸ್ತೇಷಾಂ ವಾಯುರ್ದೇಹಾನಶೋಷಯತ್ ॥ ೩೮ ॥
ದದಾಹಾಥಾಗ್ನಿರುನ್ನದ್ಧೋ ನಿಃಶೇಷಮಭವತ್ತತಃ ।

ಸರ್ವೇ-ಎಲ್ಲ, ದೈತ್ಯಾಃ-ದೈತ್ಯರೂ, ಚ-ಮತ್ತು, ರಾಕ್ಷಸಾಃ-ರಾಕ್ಷಸರೂ, ದೇವತೈಃ ಸಹ-ದೇವತೆಗಳೊಡನೆ, ಯುಧ್ಯಂತಃ-ಯುದ್ಧಮಾಡಿ, ಹತಾಃ-ಸಂಹರಿಸಲ್ಪಟ್ಟು, ನಿಪತಿತಾಃ-ಕೆಡವಲ್ಪಟ್ಟರು; ತೇಷಾಂ-ಅವರೆಲ್ಲರ, ದೇಹಾನ್-ದೇಹಗಳನ್ನು, ವಾಯುಃ-ವಾಯುವು, ಅಶೋಷಯತ್-ಶೋಷಣೆಮಾಡಿದನು (ಒಣಗಿಸಿದನು); ಅಥ-ಆ

---

ವರ್ಷಗಳ ಕಡೆಯ ದಿನಕಲ್ಪದಲ್ಲಿ ಉನ್ಮತ್ತರಾದ ರಾಕ್ಷಸರು, ಮನುಷ್ಯರನ್ನೂ, ಪಶುಪಕ್ಷಿ ಮೃಗಾದಿ, ಜಲಚರ, ಭೂಚರಗಳಾದ ಸಮಸ್ತಗಳನ್ನೂ, ಕ್ಷುದ್ರರಾದ ಇತರ ಜಂತುಗಳನ್ನೂ ತಿಂದುಹಾಕಿದರು (ಭಕ್ಷಣದಿಂದ ನಾಶಪಡಿಸಿದರು); ಮಹಾ ಬಿರುಗಾಳಿಯಿಂದ ವೃಕ್ಷಗಳೆಲ್ಲವೂ ಬೇರುಸಹಿತ ಕಿತ್ತು, ರಾಶಿರಾಶಿಯಾಗಿ ಬಿದ್ದವು; ನಂತರ ಅಗ್ನಿಯು ಅದೆಲ್ಲವನ್ನೂ ದಹಿಸಿದನು; ಆಗ ದೇವತೆಗಳೆಲ್ಲರೂ ರಾಕ್ಷಸರನ್ನು ಘಾತಿಸಿದರು;

ನಂತರ, ಅಗ್ನಿಃ-ಅಗ್ನಿಯು, ಉನ್ನದ್ಧಃ-ಪ್ರವೃದ್ಧನಾಗಿ, ದದಾಹ-ದಹಿಸಿದನು; ತತಃ-ಅದರಿಂದ, ನಿಃಶೇಷಂ-ಏನೂ ಉಳಿಯದಂತೆ, ಅಭವತ್-ಆಯಿತು.

**ಷಟ್‌ತ್ರಿಂಶೇಥ ತತೋ ವರ್ಷೇ ಬ್ರಹ್ಮಣಃ ಸಮುಪಸ್ಥಿತೇ ॥ ೩೯ ॥**
**ಸ್ರಕ್ಷ್ಯನ್ ಬ್ರಹ್ಮಾಂಡಮವದತ್ ಸ ಶಾಂತಿಂ ತ್ರಿಗುಣಾತ್ಮಿಕಾಂ ।**

ಅಥ-ನಂತರ, ಬ್ರಹ್ಮಣಃ-ಬ್ರಹ್ಮದೇವನ, ಷಟ್‌ತ್ರಿಂಶೇ-ಮೂವತ್ತಾರನೇ, ವರ್ಷೇ-ವರ್ಷವು, ಸಮುಪಸ್ಥಿತೇ-ಆರಂಭವಾಗುತ್ತಿರಲು, ಬ್ರಹ್ಮಾಂಡಂ-ಬ್ರಹ್ಮಾಂಡವನ್ನು ಸ್ರಕ್ಷ್ಯನ್-ಸೃಷ್ಟಿಮಾಡಲಿಚ್ಛಿಸಿ, ಸಃ-ಶ್ರೀವಿಷ್ಣುವು, ತ್ರಿಗುಣಾತ್ಮಿಕಾಂ-ಸತ್ವಾದಿ ತ್ರಿಗುಣಾಭಿಮಾನಿಯಾದ, ಶಾಂತಿಂ-ಶಾಂತೀದೇವಿಯನ್ನು (ಶ್ರೀಲಕ್ಷ್ಮೀದೇವಿಯನ್ನು), ಅವದತ್-ಆಜ್ಞಾಪಿಸಿದನು.

**ಅಂಡಾಕೃತಿಂ ಸುಸತ್ತ್ವೇನ ಪ್ರಥಮಾಂ ಬಹಿರಾವೃತಿಂ ॥ ೪೦ ॥**
**ತನ್ಮಧ್ಯೇ ರಜಸಾ ಚಕ್ರೇ ದ್ವಿತೀಯಾಮಾವೃತಿಂ ತು ಸಾ ।**
**ತದಂತಸ್ತಮಸಾಸ್ರಾಕ್ಷೀತ್ ತೃತೀಯಾವರಣಂ ತು ಸಾ ॥ ೪೧ ॥**

ಸಾ-ಆ ಶಾಂತೀದೇವಿಯು, (ಅನಿರುದ್ಧನ ಆಜ್ಞೆಯಂತೆ), ಅಂಡಾಕೃತಿಂ-ಅಂಡಾಕಾರದ, ಪ್ರಥಮಾ-ಮೊದಲಿನ, ಬಹಿರಾವೃತಿಂ-(ಬ್ರಹ್ಮಾಂಡದ) ಹೊರಗಿನ ಆವರಣವನ್ನು ಸುಸತ್ತ್ವೇನ-ಸತ್ವಗುಣದಿಂದಲೂ, ತನ್ಮಧ್ಯೇ-ಆ ಮಧ್ಯದಲ್ಲಿ (ಸತ್ವ ತಮೋಗುಣಗಳ ಮಧ್ಯದಲ್ಲಿ), ರಜಸಾ-ರಜೋಗುಣದಿಂದ, ದ್ವಿತೀಯಾಂ-ಎರಡನೆಯ, ಆವೃತಿಂ-ಆವರಣವನ್ನೂ, ಚಕ್ರೇ-ನಿರ್ಮಿಸಿದಳು; ತದಂತಃ-ಅದರ ತುದಿಯಲ್ಲಿ ತಮಸಾ-ತಮೋಗುಣದಿಂದ, ತೃತೀಯಾಂ-ಮೂರನೆಯ, ಆವರಣಂ-ಆವರಣವನ್ನು ಸಾ-ಶಾಂತೀದೇವಿಯು, ಅಸ್ರಾಕ್ಷೀತ್-ನಿರ್ಮಿಸಿದಳು.

---

ಅವರೆಲ್ಲರೂ ದೈತ್ಯರನ್ನು ಶರಣು ಹೊಂದಿದರು (೩೫-೩೭). ದೈತ್ಯನೂ ರಾಕ್ಷಸರೂ ಸೇರಿ ದೇವತೆಗಳೊಡನೆ ಯುದ್ಧ ಮಾಡಿದರು—ಸಮಸ್ತರೂ ಹತರಾಗಿಬಿದ್ದರು. ಅವರ ದೇಹಗಳನ್ನೆಲ್ಲಾ ವಾಯುದೇವನು ಶೋಷಣೆ ಮಾಡಿದನು; ನಂತರ ಅಗ್ನಿಯು ಪ್ರಜ್ವಲಿಸಿ, ಅವೆಲ್ಲವನ್ನೂ ದಹಿಸಿದನು—ಎಲ್ಲವೂ ನಾಶವಾಗಿ ಏನೂ ಉಳಿಯಲಿಲ್ಲ (೩೮). ನಂತರ, ಬ್ರಹ್ಮದೇವನ ೩೬ನೇ ವರ್ಷವು ಆರಂಭವಾಗುತ್ತಿರಲು, ಶ್ರೀವಿಷ್ಣುವು ಬ್ರಹ್ಮಾಂಡವನ್ನು ಸೃಷ್ಟಿಮಾಡಲಿಚ್ಛಿಸಿ, ತನ್ನ ಭಾರ್ಯಳೂ (ಅನಿರುದ್ಧ ರೂಪನಾದ ತನ್ನ ಪತ್ನಿಯೂ) ಸತ್ವಾದಿಗುಣಾಭಿಮಾನಿಯೂ ಆದ ಶಾಂತೀದೇವಿಯನ್ನು ಆಜ್ಞಾಪಿಸಿದನು (೩೯). ಆಕೆಯು, ಆಜ್ಞಾನುಸಾರವಾಗಿ, ಮುಂದೆ ಸ್ಪಷ್ಟವಾಗಲಿರುವ ಬ್ರಹ್ಮಾಂಡದ ಬಹಿರಾವರಣವಾಗಿ, ಅಂಡಾಕಾರದ ಮೊದಲನೆಯ ಆವರಣವನ್ನು ಸತ್ವಗುಣದಿಂದಲೂ, ನಂತರ, ರಜೋಗುಣದಿಂದ, ಎರಡನೆಯ ಆವರಣವನ್ನೂ

ತತೋಽನಿರುದ್ಧನಾಮಾಸೌ ಬ್ರಹ್ಮಾಣಂ ವ್ಯನಿಯೋಜಯತ್ ।
ಮಹತತ್ತ್ವೇನಾವರಣಂ ಕುರುಷ್ವೇತ್ಯಥ ಸೋಽಕರೋತ್ ॥ ೪೨ ॥
ಅಹಂಕಾರಾವೃತಿಂ ರುದ್ರಶ್ಚಕಾರಾಥ ತದಾಜ್ಞಯಾ ।
ಆಕಾಶೇನಾವೃತಿಂ ಶಕ್ರಃ ಕಾರಯಾಮಾಸ ವಿಘ್ನಪಾತ್ ॥ ೪೩ ॥
ಮರುತಾ ಪ್ರವಹೇಣಾಥ ವಾತಾವರಣಮಾತನೋತ್ ।
ತೈಜಸಾವರಣಂ ಚಕ್ರೇ ಜಾತವೇದಾಸ್ತದಾಜ್ಞಯಾ ॥ ೪೪ ॥
ತದಂತರ್ವರುಣೋ ದೇವೋ ವಿತೇನೇ ಸಲಿಲೋಚ್ಚಯಂ ।
ತತ್ರೈಕದೇಶೇ ವಿದಧೇ ಧರಾದೇವೀ ಭುವಂ ತತಃ ॥ ೪೫ ॥
ಅಸಂಸೃಷ್ಟಾನಿ ತತ್ತ್ವಾನಿ ಕ್ರಮಾದೇವಂ ಪ್ರಜಜ್ಞಿರೇ ।
ಬ್ರಹ್ಮಣೋ ದಶವರ್ಷೇ ತು ಪಶ್ಚಾದ್ಬ್ರಹ್ಮಾಂಡನಿರ್ಮಿತಿಃ ॥ ೪೬ ॥

ತತಃ- ಆ ನಂತರ, ಅಸೌ- ಈ, ಅನಿರುದ್ಧನಾಮಾ- ಅನಿರುದ್ಧನಾಮಕ ಶ್ರೀವಿಷ್ಣುವು, ಮಹತತ್ತ್ವೇನ- ಮಹತತ್ತ್ವದಿಂದ, ಆವರಣಂ- ಆವರಣವನ್ನು ಕುರುಷ್ವ- ನಿರ್ಮಾಣ ಮಾಡು, ಇತಿ- ಎಂದು, ಬ್ರಹ್ಮಾಣಂ- ಬ್ರಹ್ಮನನ್ನು ವ್ಯನಿಯೋಜಯತ್- ಆಜ್ಞಾಪಿಸಿದನು; ಅಥ- ನಂತರ, ಸಃ- ಬ್ರಹ್ಮದೇವನು, ಅಕರೋತ್- (ಆ ಆವರಣವನ್ನು) ನಿರ್ಮಿಸಿದನು; ತದಾಜ್ಞಯಾ- ಆತನ (ಅನಿರುದ್ಧನ) ಆಜ್ಞೆಯಿಂದ, ರುದ್ರಃ- ರುದ್ರನು, ಅಥ- (ಮಹತತ್ತ್ವಾವರಣದ) ನಂತರ, ಅಹಂಕಾರಾವೃತಿಂ- ಅಹಂಕಾರ ತತ್ತ್ವದ ಆವರಣವನ್ನು, ಚಕಾರ- ಮಾಡಿದನು; ಶಕ್ರಃ- ಇಂದ್ರನು, ವಿಘ್ನಪಾತ್- ವಿಘ್ನೇಶನಿಂದ, ಆಕಾಶೇನ ಆವೃತಿಂ- ಆಕಾಶದ ಆವರಣವನ್ನು ಕಾರಯಾಮಾಸ- ಮಾಡಿಸಿದನು; ಅಥ- ಆ ಮುಂದೆ (ಆಕಾಶಾವರಣದ ಕೆಳಗೆ), ವಾತಾವರಣಂ- ವಾಯುವಿನ ಆವರಣವನ್ನು

---

ಕೊನೆಯದಾಗಿ ತಮೋಗುಣದಿಂದ ಮೂರನೆಯ ಆವರಣವನ್ನೂ ನಿರ್ಮಿಸಿದಳು (೪೦-೪೧). ಸತ್ತ್ವಾದಿ ಗುಣಾವರಣಗಳ ನಿರ್ಮಾಣದ ನಂತರ, ಶ್ರೀಅನಿರುದ್ಧನು, ಬ್ರಹ್ಮದೇವನನ್ನು ಆಜ್ಞಾಪಿಸಿ, ಆತನಿಂದ ಅಭಿಮನ್ಯವಾದ ಮಹತತ್ತ್ವದಿಂದ, ಮಹತತ್ತ್ವಾವರಣವನ್ನು ನಿರ್ಮಾಣ ಮಾಡಿಸಿದನು; ರುದ್ರದೇವನಿಂದ, ಹೀಗೆಯೇ ಅಹಂಕಾರತತ್ತ್ವಾವರಣವನ್ನೂ, ಅದರೊಳಗೆ (ಕೆಳಗೆ), ಇಂದ್ರನ ದ್ವಾರಾ ವಿಘ್ನೇಶನಿಗೆ ಆಜ್ಞಾಪಿಸಿ, ಆಕಾಶತತ್ತ್ವದ ಆವರಣವನ್ನು ಮಾಡಿಸಿದನು; ಶ್ರೀಅನಿರುದ್ಧನು, ಪ್ರವಹವಾಯುವಿನಿಂದ, ಆಕಾಶದ ಕೆಳಗೆ ವಾಯ್ವಾವರಣವನ್ನು ಮಾಡಿಸಿ, ಮುಂದೆ ಕ್ರಮವಾಗಿ, ಅಗ್ನಿದೇವನಿಂದ ತೈಜಸಾವರಣವನ್ನೂ, ವರುಣನಿಂದ ಜಲಾವರಣವನ್ನೂ, ಆ ಜಲರಾಶಿಯ ಒಂದು ಭಾಗದಲ್ಲಿ ಧರಾದೇವಿಯಿಂದ ಭೂಮಿಯನ್ನು ನಿರ್ಮಿಸಿ ಅದರ ಆವರಣವನ್ನೂ ನಿರ್ಮಾಣ ಮಾಡಿಸಿದನು; ಹೀಗೆ ಅಸಂಸೃಷ್ಟ ಪ್ರಾಕೃತ ತತ್ತ್ವಗಳ

ಪ್ರವಹೇಣಮರುತಾ- ಪ್ರವಹವಾಯುವಿನಿಂದ, ಆತನೋತ್ - ಮಾಡಿಸಿದನು; ತದಾಜ್ಞಯಾ- ಅನಿರುದ್ಧನ ಆಜ್ಞೆಯಿಂದಲೇ, ಜಾತವೇದಾಃ- ಅಗ್ನಿಯು, ತೈಜಸಾವರಣಂ- ಅಗ್ನಿಯ ಆವರಣವನ್ನು ಚಕ್ರೇ-ಮಾಡಿದನು; ತದಂತಃ- ಅದರೊಳಗೆ (ಅದರ ಕೆಳಗೆ- ಒಳಭಾಗದಲ್ಲಿ), ವರುಣಃ ದೇವಃ-ವರುಣ ದೇವನು, ಸಲಿಲೋಚ್ಚಯಂ- ಜಲರಾಶಿಯನ್ನು (ಜಲಾವರಣವನ್ನು), ವಿತೇನೇ- ನಿರ್ಮಿಸಿದನು; ತತ್ರ- ಆ ಜಲಾವರಣದ, ಏಕದೇಶೇ- ಒಂದು ಭಾಗದಲ್ಲಿ, ಧರಾದೇವೀ- ಧರಾದೇವಿಯು, ತತಃ-ನಂತರ, ಭುವಂ- ಭೂ ಆವರಣವನ್ನು ವಿದಧೇ- ಮಾಡಿದಳು; ಏವಂ- ಹೀಗೆ, ಕ್ರಮಾತ್-ಕ್ರಮದಿಂದ, ಅಸಂಸೃಷ್ಟಾನಿ- ಸಂಸೃಷ್ಟವಾಗದ (ಸೂಕ್ಷ್ಮ ರೂಪದ- ಬ್ರಹ್ಮಾಂಡ ನಿರ್ಮಾಣದಲ್ಲಿ ಉಪಯೋಗಿಸಲ್ಪಡದ), ತತ್ತ್ವಾನಿ- ಜಡತತ್ತ್ವಗಳು (ಬ್ರಹ್ಮಾಂಡದ ಆವರಣಗಳು), ಬ್ರಹ್ಮಣಃ- ಬ್ರಹ್ಮದೇವನ, ದಶವರ್ಷೇ- ಹತ್ತುವರ್ಷಗಳಲ್ಲಿ (ಹತ್ತು ವರ್ಷಗಳ ಕಾಲದಲ್ಲಿ), ಪ್ರಜಜ್ಞಿರೇ- ಜನಿಸಿದವು (ಸೃಷ್ಟವಾದವು); ಪಶ್ಚಾತ್- ಆ ನಂತರ, ಬ್ರಹ್ಮಾಂಡ ನಿರ್ಮಿತಿಃ- ಬ್ರಹ್ಮಾಂಡದ ನಿರ್ಮಾಣವು (ಆಯಿತು).

ಅನಿರುದ್ಧಸೃಷ್ಟಿನಿರೂಪಣವೆಂಬ ೨೩ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೨೪

ಶ್ರೀವೇದವ್ಯಾಸಾಯ ನಮಃ

ಭಗವಾನುವಾಚ—

ತತ್ತ್ವೈರುಪಚಿತೈರೇವಂ ಸ್ಥೂಲೈರಾವರಣಾನಿ ಸಃ ।
ವಿಧಾಯ ಸಲಿಲೇ ತಸ್ಮಿನ್ನವಿಶನ್ಮಾಯಯಾ ಸಹ ॥ ೧ ॥
ಚಿಕ್ರೀಡೇऽತ ಜಲೇ ತತ್ರ ಭೂಭಾಗೇ ಸಲಿಲಾವೃತೇ ।

---

ಉತ್ಪತ್ತಿಯೂ, ಅವುಗಳಿಂದ ಮುಂದೆ ನಿರ್ಮಾಣವಾಗಲಿರುವ ಬ್ರಹ್ಮಾಂಡದ, ಅಂಡಾಕಾರದ ಆವರಣಗಳೂ, ನಿರ್ಮಿತವಾದವು—ಈ ಆವರಣ ನಿರ್ಮಾಣ ಕಾರ್ಯವು ಬ್ರಹ್ಮದೇವನ ಹತ್ತು ವರ್ಷಗಳ ಕಾಲಾವಧಿಯಲ್ಲಿ ನಡೆಯಿತು (೪೨-೪೬).

೨೩ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೨೪

ತಾತ್ಪರ್ಯ:—ಅನಿರುದ್ಧ ರೂಪದಿಂದ, ಈ ಮೊದಲು ನಿರೂಪಿಸಿದಂತೆ ಕಿಂಚಿತ್ ಸ್ಥೂಲಭಾವವನ್ನು ಹೊಂದಿದ, ಅಭಿವೃದ್ಧವಾದ, ಅಸಂಸೃಷ್ಟ ತತ್ತ್ವಗಳಿಂದ ಬ್ರಹ್ಮಾಂಡದ

**ವಾಸುದೇವೋಽಖಿಲೈರ್ಜೀವೈರ್ದೇವಾಂಶೈರಖಿಲೈರ್ಯುತಃ ॥ ೨ ॥**

ಬ್ರಹ್ಮದೇವನ ಪ್ರಥಮಪರಾರ್ಧದ (೫೦ ವರ್ಷಗಳ) ಕಡೆಯ ದಿನವಾದ ಪಾದ್ಮಕಲ್ಪದಲ್ಲಿ ನಡೆದ ಸೃಷ್ಟಿಯನ್ನು ಈ ಅಧ್ಯಾಯದಿಂದ ನಿರೂಪಿಸುತ್ತಾರೆ:—

ಅರ್ಥ:—ಸಃ-ಆ ಶ್ರೀವಿಷ್ಣುವು (ಅನಿರುದ್ಧರೂಪನು), ಏವಂ-ಪೂರ್ವೋಕ್ತ ರೀತಿಯಲ್ಲಿ ಉಪಚಿತೈಃ-ವೃದ್ಧಿಗೊಳಿಸಲ್ಪಟ್ಟ ಸ್ಥೂಲೈಃ-(ಕಿಂಚಿತ್) ಅಲ್ಪವಾಗಿ ಸ್ಥೂಲತ್ವವನ್ನು ಹೊಂದಿದ, ಸೂಕ್ಷ್ಮಗಳಾದ ಅಸಂಸೃಷ್ಟಗಳಾದ, ತತ್ತ್ವೈಃ-ಮಹದಾದಿ ತತ್ತ್ವಗಳಿಂದ, ಆವರಣಾನಿ-(ಬ್ರಹ್ಮಾಂಡದ ನಿರ್ಮಾಣಕ್ಕೆ) ಆವರಣಗಳನ್ನು ವಿಧಾಯ-ನಿರ್ಮಿಸಿ, ತಸ್ಮಿನ್ ಸಲಿಲೇ-ಬಾಹ್ಯಾವರಣವಾದ ಜಲದಲ್ಲಿ ಮಾಯಯಾ ಸಹ-ಶ್ರೀಲಕ್ಷ್ಮೀದೇವಿಯೊಡನೆ, ಆವಿಶತ್-ಪ್ರವೇಶಿಸಿದನು; ಅಥ-ಪ್ರವೇಶಮಾಡಿದ ನಂತರ, ತತ್ರ-ಅಲ್ಲಿ ಜಲೇ-ಜಲದಲ್ಲಿ ಸಲಿಲಾವೃತೇ-ಜಲದಿಂದ ಸುತ್ತುವರಿಯಲ್ಪಟ್ಟ ಭೂಭಾಗೇ- ಭೂಭಾಗದಲ್ಲಿ ವಾಸುದೇವಃ-ವಾಸುದೇವ ರೂಪದಿಂದ (ಮಾಯಾದೇವಿಯೊಡನೆ), ದೇವಾಂಶೈಃ-ದೇವಾಂಶರಾದ, ಅಖಿಲೈಃ-ಸಮಸ್ತರಿಂದಲೂ, ಅಖಿಲೈಃ-ಸಮಸ್ತ ಜೀವೈಃ- ಜೀವರಿಂದಲೂ, ಯುತಃ-ಕೂಡಿದವನಾಗಿ, ಚಿಕ್ರೀಡೇ-ಕ್ರೀಡಿಸಿದನು.

**ವರ್ಷದ್ವಯೇ ವ್ಯತೀತೇಽಥ ಸಾ ಮಾಯಾ ತ್ರಿವಿಧಾಽಭವತ್ ।**
**ಸತ್ತ್ವಾದಿಗುಣಭೇದೇನ ಶ್ರೀಭೂದುರ್ಗೇತಿ ನಾಮಿಕಾ ॥ ೩ ॥**
**ವರ್ಷಮೇಕಂ ತಯಾ ಸಮ್ಯಗಾರಾಧಿತಪದಾಂಬುಜಃ ।**
**ವಾಸುದೇವಃ ಸ ಭಗವಾನ್ ತ್ರಿಧಾ ಜಜ್ಞೇ ಸ್ವಯಂ ತತಃ ॥ ೪ ॥**

ವರ್ಷದ್ವಯೇ-ಎರಡು ವರ್ಷಗಳು, ವ್ಯತೀತೇ-ಕಳೆಯುತ್ತಿರಲು, ಅಥ- ನಂತರ, ಸಾ ಮಾಯಾ - ಆ ಮಾಯಾದೇವಿಯು, ಸತ್ತ್ವಾದಿಗುಣಭೇದೇನ - ಸತ್ತ್ವಾದಿ ಗುಣನಿಯಾಮಕಭೇದದಿಂದ, ಶ್ರೀಭೂದುರ್ಗೇತಿ-ಶ್ರೀ, ಭೂ ಮತ್ತು ದುರ್ಗಾ ಎಂಬ,

---

ಆವರಣಗಳನ್ನು ಸಿದ್ಧಗೊಳಿಸಿ, ಜಲಾವರಣದಲ್ಲಿ ಜಲಾವೃತವಾದ ಆವರಣ ಭೂಭಾಗದಲ್ಲಿ ವಾಸುದೇವರೂಪನಾಗಿ ಮಾಯಾದೇವಿಯೊಡನೆ ಪ್ರವೇಶಿಸಿ; ಅಲ್ಲಿ ಸಮಸ್ತದೇವಾಂಶರಿಂದಲೂ, ಸಮಸ್ತಜೀವರಿಂದಲೂ ಕೂಡಿ, ಕ್ರೀಡಿಸಿದನು (೧-೨). ಹೀಗೆ ಕ್ರೀಡಿಸುತ್ತಿರುವಲ್ಲಿ ೨ ವರ್ಷಗಳು ಗತಿಸಿದವು; ಆಗ ಶ್ರೀ ಮಾಯಾದೇವಿಯು, ಸತ್ತ್ವಾದಿಗುಣತ್ರಯ ನಿಯಾಮಕಗಳಾದ, ಶ್ರೀ, ಭೂ, ದುರ್ಗಾನಾಮಕ ರೂಪಗಳಿಂದ ಮೂರು ಪ್ರಕಾರಳಾದಳು; ಆಕೆಯಿಂದ ಸೇವಿಸಲ್ಪಟ್ಟ ಪಾದಪದ್ಮಗಳುಳ್ಳ ಭಗವಾನ್ ವಾಸುದೇವನು, ಒಂದು ವರ್ಷಕಾಲ ಆಕೆಯಿಂದ ಆರಾಧಿತನಾಗಿ, ತಾನೂ ಮೂರು ರೂಪಗಳನ್ನು ಧರಿಸಿ, ವ್ಯಕ್ತವಾದನು (೩-೪). ಈ ಮೂರು ರೂಪಗಳು ವಿಷ್ಣು ಬ್ರಹ್ಮಾ

ನಾಮಿಕಾ- ನಾಮಗಳುಳ್ಳವಳಾಗಿ, ತ್ರಿಧಾ- ಮೂರೂ ಪ್ರಕಾರದಿಂದ, ಅಭವತ್ - ಆದಳು; ತಯಾ- ಆಕೆಯಿಂದ (ತ್ರಿರೂಪಳಾದ ಆಕೆಯಿಂದ), ಏಕಂ ವರ್ಷಂ- ಒಂದು ವರ್ಷಕಾಲ, ಸಮ್ಯಕ್ - ಚೆನ್ನಾಗಿ (ಆದರದಿಂದ), ಆರಾಧಿತ ಪದಾಂಬುಜಃ-ಸೇವಿಸಲ್ಪಟ್ಟ ಪಾದಕಮಲಗಳುಳ್ಳವನಾಗಿ, ಸಃ- ಆ, ಭಗವಾನ್-ಷಡ್ಗುಣೈಶ್ವರ್ಯಪೂರ್ಣನಾದ, ವಾಸುದೇವಃ-ವಾಸುದೇವನು, ತತಃ-ಮುಂದೆ (ನಂತರ), ಸ್ವಯಂ-ತಾನೇ, ತ್ರಿಧಾ-ಮೂರು ಪ್ರಕಾರನಾಗಿ, (ಮೂರು ರೂಪಗಳಿಂದ), ಜಜ್ಞೇ-ಜನಿಸಿದನು (ಪ್ರಕಟನಾದನು).

**ಶ್ರಿಯಾಂ ವಿಷ್ಣುರ್ಭುವಿ ಬ್ರಹ್ಮಾ ದುರ್ಗಾಯಾಂ ಬ್ರಹ್ಮಸಂಭವಃ ।**
**ಕರ್ತುಂ ಸೃಷ್ಟಿಮತಿಸ್ಥೂಲಾಂ ತತ್ವಸಂಸರ್ಗಮಾತನೋತ್ ॥ ೫ ॥**

ವಾಸುದೇವನು ಮೂರು ರೂಪಗಳಿಂದ ಜನಿಸಿದ ಪ್ರಕಾರವನ್ನು ನಿರೂಪಿಸುತ್ತಾರೆ :—

ಶ್ರಿಯಾಂ-(ವಾಸುದೇವನಿಂದ) ಶ್ರೀದೇವಿಯಲ್ಲಿ ವಿಷ್ಣುಃ-ವಿಷ್ಣುವೂ (ವಿಷ್ಣು ರೂಪನೂ), ಭುವಿ-ಭೂದೇವಿಯಲ್ಲಿ ಬ್ರಹ್ಮಾ-ಬ್ರಹ್ಮನೂ (ಬ್ರಹ್ಮರೂಪನೂ), ದುರ್ಗಾಯಾಂ-ದುರ್ಗಾದೇವಿಯಲ್ಲಿ ಬ್ರಹ್ಮಸಂಭವಃ-ಬ್ರಹ್ಮಪುತ್ರಮಹೇಶ್ವರನೂ (ಮಹೇಶ್ವರರೂಪನೂ), (ಸ್ವಯಂ ಜಜ್ಞೇ-ತಾನೇ ಹುಟ್ಟಿದನೆಂದು ಹಿಂದಿನ ಶ್ಲೋಕ ದಿಂದ ಅನ್ವಯವನ್ನು ತಿಳಿಯಬೇಕು); ಅತಿಸ್ಥೂಲಾಂ-ಅತಿಶಯಸ್ಥೂಲವಾದ, ಸೃಷ್ಟಿಂ-ಸೃಷ್ಟಿಯನ್ನು, ಕರ್ತುಂ-ಮಾಡುವುದಕ್ಕಾಗಿ, ತತ್ವಸಂಸರ್ಗಂ-ತತ್ವಗಳ ಸ್ಥೂಲಸೃಷ್ಟಿಯನ್ನೂ, ಆತನೋತ್-ಮಾಡಿದನು.

**ಸ ವಿಷ್ಣುಃ ಕಮಲಾಕಾಂತೋ ಲೀಲಯೈವ ತದಾ ಕ್ರಮಾತ್ ।**
**ಆಕಾಶೇ ಯೋಜಯಾಮಾಸ ಶತಾಂಶೇನ ಸಮೀರಣಂ ॥ ೬ ॥**

ಇಲ್ಲಿಂದ ಮುಂದೆ ಪಂಚಭೂತಗಳ ಸೃಷ್ಟಿಯನ್ನು ವಿವರಿಸುತ್ತಾರೆ :—

ಕಮಲಾಕಾಂತಃ-ಲಕ್ಷ್ಮೀಪತಿಯಾದ, ಸಃ-ಆ (ಶ್ರೀದೇವಿಯಲ್ಲಿ ಹುಟ್ಟಿದ),

---

ಮಹೇಶ್ವರ, ನಾಮಕವಾದವು; ವಾಸುದೇವನೇ ತನ್ನ ಭಾರ್ಯಳಾದ, ಶ್ರೀರೂಪಳಾದ ಮಾಯಾದೇವಿಯಲ್ಲಿ ವಿಷ್ಣುನಾಮಕನಾಗಿಯೂ, ಭೂದೇವಿಯಲ್ಲಿ ಬ್ರಹ್ಮನಾಮಕನಾಗಿಯೂ, ದುರ್ಗಾದೇವಿಯಲ್ಲಿ ಮಹೇಶ್ವರ (ಬ್ರಹ್ಮಸಂಭವ— ಬ್ರಹ್ಮಪುತ್ರ)ನಾಗಿಯೂ ಹುಟ್ಟಿದನು. (ಬ್ರಹ್ಮಮಹೇಶ್ವರ ರೂಪಗಳು, ಕ್ರಮವಾಗಿ ಬ್ರಹ್ಮದೇವ ಮತ್ತು (ರುದ್ರ) ಮಹೇಶ್ವರರ ಅಂತರ್ಯಾಮಿ (ವಿಷ್ಣು) ರೂಪಗಳು (೫). ಹೀಗೆ ಜನಿಸಿದ (ಪ್ರಕಟವಾದ) ಲಕ್ಷ್ಮೀಪತಿಯಾದ ಶ್ರೀವಿಷ್ಣುವು, ಕ್ರಮವಾಗಿ ಪಂಚ ಭೂತಗಳ ನಿರ್ಮಾಣಕ್ಕಾಗಿ, ಲೀಲೆಯಿಂದ, ಆಕಾಶದಲ್ಲಿ ೧/೧೦೦ ಭಾಗದ ವಾಯುವನ್ನು (ಶತಾಂಶವನ್ನು) ಸೇರಿಸಿದನು (೬). ಹೀಗೆ ವಾಯುಭಾಗ ಮಿಶ್ರಿತ

ವಿಷ್ಣುಃ-ಶ್ರೀವಿಷ್ಣುವು, ತದಾ-ಆಗ, (ತನ್ನ ಅವತಾರದ ನಂತರ-ವಿಷ್ಣುರೂಪವನ್ನು ಪ್ರಕಟಿಸಿದ ನಂತರ), ಕ್ರಮಾತ್-ಕ್ರಮದಿಂದ (ಮೊದಲಿಗೆ), ಆಕಾಶೇ-ಆಕಾಶದಲ್ಲಿ ಸಮೀರಣಂ-ವಾಯುವನ್ನು ಶತಾಂಶೇನ-ನೂರರಲ್ಲಿ ಒಂದು ಭಾಗದಿಂದ (೧/೧೦೦ರಷ್ಟು), ಲೀಲಯಾ ಏವ-ಲೀಲೆಯಿಂದಲೇ, ಯೋಜಯಾಮಾಸ-ಕೂಡಿಸಿದನು.

**ತಾದೃಶಾಕಾಶತೋ ವಾಯೌ ಶತಾಂಶಂ ಸಮಯೋಜಯತ ।**
**ಏವಂ ಹಿ ತೇಜಸೋ ವಾಯೌ ವಾಯೋಸ್ತೇಜಸಿ ಚಾರ್ಪಯತ್ ॥ ೭ ॥**

ತಾದೃಶಾಕಾಶತಃ-ಈ ವಿಧ ಆಕಾಶದಿಂದ (ವಾಯುವಿನಿಂದ ಕೂಡಿಸಲಾದ ಆಕಾಶದಿಂದ), ಶತಾಂಶಂ-೧/೧೦೦ ಭಾಗವನ್ನು ವಾಯೌ-ವಾಯುವಿನಲ್ಲಿ ಸಮಯೋಜಯತ-ಕೂಡಿಸಿದನು; ಏವಂ ಹಿ-ಹೀಗೆಯೇ, ತೇಜಸಃ-ತೇಜಸ್ಸಿನ (ಅಗ್ನಿಯ) ಶತಾಂಶವನ್ನು ವಾಯೌ-ವಾಯುವಿನಲ್ಲಿಯೂ, ವಾಯೋಃ-ಆ ವಾಯುವಿನ ಶತಾಂಶವನ್ನು ತೇಜಸಿ-ತೇಜಸ್ಸಿನಲ್ಲಿಯೂ, ಅರ್ಪಯತ್-ಕೂಡಿಸಿದನು.

**ಅಪಾಂ ತೇಜಸಿ ತೋಯೇ ಚ ತೇಜಸೋಂಶಮಯೋಜಯತ್ ।**
**ಭುವಸ್ತೋಯೇ ಜಲಸ್ಯಾಪಿ ಶತಾಂಶಂ ಭುವ್ಯಯೋಜಯತ್ ॥ ೮ ॥**

ಅಪಾಂ-ಜಲದ, (ಅಂಶವನ್ನು), ತೇಜಸಿ-ತೇಜಸ್ಸಿನಲ್ಲಿಯೂ, ತೇಜಸಃ-(ಆ ಮಿಶ್ರಿತ) ತೇಜಸ್ಸಿನ, ಅಂಶಂ-ಶತಾಂಶವನ್ನು ತೋಯೇ ಚ-ಜಲದಲ್ಲಿಯೂ, ಅಯೋಜಯತ್-ಸೇರಿಸಿದನು; ಭುವಃ-ಭೂತತ್ತ್ವದ (ಭೂಮಿಯ), (ಅಂಶವನ್ನು), ತೋಯೇ-ಜಲದಲ್ಲಿ (ಸೇರಿಸಿ), ಜಲಸ್ಯ ಅಪಿ-ಆ ಜಲದ, ಶತಾಂಶಂ-ಶತಾಂಶವನ್ನು ಭುವಿ-ಪೃಥ್ವಿಯಲ್ಲಿ ಅಯೋಜಯತ್-ಕೂಡಿಸಿದನು.

**ಏವಂ ಪಂಚಾಪಿ ಸಂಸೃಜ್ಯ ಭೂತಾನಿ ಸ ಮಹೇಶ್ವರಃ ।**
**ಆಪ್ಯತೈಜಸಭೌಮಾನಾಂ ಪದಾರ್ಥಾನಾಂ ಚ ಸೃಷ್ಟಯೇ ॥ ೯ ॥**
**ತ್ರಿವೃತಂ ತ್ರಿವೃತಂ ಚಕ್ರೇ ಪೃಥ್ವೀಸಲಿಲತೇಜಸಾಂ ।**

---

ಆಕಾಶದ ಶತಾಂಶವನ್ನು ವಾಯುವಿನಲ್ಲಿ ಸೇರಿಸಿದನು; ಹೀಗೆಯೇ ತೇಜಸ್ಸಿನ ಶತಾಂಶವನ್ನು ವಾಯುವಿನಲ್ಲಿಯೂ, ಈ ವಾಯುವಿನ ಶತಾಂಶವನ್ನು ತೇಜಸ್ಸಿನಲ್ಲಿಯೂ ಕೂಡಿಸಿದನು (೭). ಜಲದ ಶತಾಂಶವನ್ನು ತೇಜಸ್ಸಿನಲ್ಲಿ ಸೇರಿಸಿ, ಆ ಮಿಶ್ರಿತ ತೇಜಸ್ಸಿನ ಅಂಶವನ್ನು ಜಲದಲ್ಲಿಯೂ, ಹೀಗೆಯೇ, ಪೃಥ್ವಿಯ ಶತಾಂಶವನ್ನು ಜಲದಲ್ಲಿ ಸೇರಿಸಿ, ಅದರ ಶತಾಂಶವನ್ನು ಭೂತತ್ತ್ವದಲ್ಲಿ ಕೂಡಿಸಿದನು (೮). ಹೀಗೆ ಐದೂ ಭೂತಗಳನ್ನು ಪರಸ್ಪರ ಯೋಜನೆಯಿಂದ, ಆಕಾಶಾದಿ ಮೊದಲಿನ ಭೂತಗಳು ನಂತರದ ಭೂತಗಳಲ್ಲಿರುವಂತೆ ಅವುಗಳನ್ನು ವಿಶೇಷ ಸಂಸ್ಕಾರದಿಂದ ಸೃಷ್ಟಿಮಾಡಿ, ಆಪ್ಯ, ತೈಜಸ,

ಏವಂ- ಹೀಗೆ, ಪಂಚ- ಐದು (ಆಕಾಶಾದಿ), ಭೂತಾನಿ ಅಪಿ- ಭೂತಗಳನ್ನೂ ಸಂಸೃಜ್ಯ-(ಪರಸ್ಪರವಾಗಿ, ಮತ್ತು ಮೇಲಿನ ಎಲ್ಲ ಭೂತಗಳೂ ಕೆಳಗಿನ ಭೂತಗಳಲ್ಲಿರುವಂತೆ) ಸೃಷ್ಟಿಮಾಡಿ, ಸಃ-ಆ, ಮಹೇಶ್ವರಃ-ಶ್ರೀವಿಷ್ಣುವು,[1] ಆಪ್ಯತೈಜಸ ಭೌಮಾನಾಂ- ಆಪ್ಯ, ತೈಜಸ, ಭೌಮಾತ್ಮಕಗಳಾದ, ಪದಾರ್ಥಾನಾಂ-ವಸ್ತುಗಳ, ಸೃಷ್ಟಯೇ-ಸೃಷ್ಟಿಗಾಗಿ, ಪೃಥ್ವೀಸಲಿಲತೇಜಸಾಂ-ಭೂಜಲತೇಜಸ್ಸುಗಳ, ತ್ರಿವೃತಂ ತ್ರಿವೃತಂ-(ವಿವಿಧ ಪ್ರಮಾಣಗಳಲ್ಲಿ ಸೇರಿದ) ಮೂರು ಮೂರು ತತ್ತ್ವಗಳ ರಾಶಿ ಗಳನ್ನು, ಚಕ್ರೇ- ನಿರ್ಮಾಣಮಾಡಿದನು.

**ಚತ್ವಾರಃ ಪೃಥಿವೀಭಾಗಾಃ ಏಕಸ್ತೇಜಸ ಏವ ಹಿ ॥ ೧೦ ॥**
**ತ್ರಯೋಂಶಾಃ ಸಲಿಲಸ್ಯೈವಂ ಪಾರ್ಥಿವಂ ರಾಶಿಮಾತನೋತ್ ।**
**ಅಪಾಂ ಭಾಗಸ್ತು ಚತ್ವಾರಃ ಪಾರ್ಥಿವಾಂಶಾಸ್ತ್ರಯಸ್ತಥಾ ॥ ೧೧ ॥**
**ಏಕಸ್ತು ತೇಜಸೋ ಭಾಗೋ ರಾಶಿಮಾಪ್ಯಂ ಚಕಾರ ಸಃ ।**
**ಚತುರ್ಭಿಸ್ತೈಜಸೈರ್ಭಾಗೈಸ್ತ್ರಿಭಿಸ್ತೋಯಸ್ಯ ಭಾಗಕೈಃ ॥ ೧೨ ॥**
**ಭುವ ಏಕೇನ ಭಾಗೇನ ತೇಜೋರಾಶಿಂ ಸ ಸೃಷ್ಟವಾನ್ ।**

ತ್ರಿವೃತ್ಕರಣದಿಂದ ನಿರ್ಮಿತವಾದ ರಾಶಿಗಳನ್ನು ವರ್ಣಿಸುತ್ತಾರೆ :—

ಪೃಥಿವೀಭಾಗಾಃ- ಭೂತತ್ತ್ವದ ಅಂಶಗಳು, ಚತ್ವಾರಃ- ನಾಲ್ಕು, ತೇಜಸಃ- ತೇಜಸ್ಸಿನ ಅಂಶವು, ಏಕ ಏವ- ಒಂದೇ, ಸಲಿಲಸ್ಯ- ಜಲದ, ತ್ರಯಃ ಅಂಶಾಃ- ಮೂರು ಅಂಶಗಳು; ಏವಂ- ಹೀಗೆ (ಈ ಪ್ರಮಾಣದಲ್ಲಿ ಮಿಶ್ರಣಮಾಡಿ), ಪಾರ್ಥಿವಂ ರಾಶಿಂ- ಪಾರ್ಥಿವ ರಾಶಿಯನ್ನು, ಆತನೋತ್- ಮಾಡಿದನು; ಅಪಾಂ- ಜಲದ, ಭಾಗಃ ತು- ಭಾಗವಾದರೋ (ಅಂಶವು), ಚತ್ವಾರಃ- ನಾಲ್ಕು, ತಥಾ- ಮತ್ತು, ಪಾರ್ಥಿವಾಂಶಾಃ- ಪೃಥ್ವಿಯ ಅಂಶಗಳು, ತ್ರಯಃ- ಮೂರು, ತೇಜಸಃ ಭಾಗಃ- ತೇಜಸ್ಸಿನ ಭಾಗವು (ಅಂಶವು), ಏಕಃ- ಒಂದು,

---

ಭೌಮಗಳಾದ (ಜಲಾದಿ ತತ್ತ್ವಭಾಗವೇ ಪ್ರಚುರವಾಗಿವುಳ್ಳ) ವಸ್ತುಗಳನ್ನು ಸೃಷ್ಟಿಸುವುದಕ್ಕಾಗಿ, ಭೂ, ಜಲ, ತೇಜಸ್ತತ್ತ್ವಗಳನ್ನು ವಿವಿಧ ಪ್ರಮಾಣದಲ್ಲಿ ಮಿಶ್ರಣದಿಂದ, ಪ್ರತ್ಯೇಕ ರಾಶಿಗಳನ್ನು ನಿರ್ಮಿಸಿದನು (೯). ನಾಲ್ಕು ಪೃಥಿವೀ ಅಂಶಗಳು, ಒಂದು ತೇಜಸ್ಸಿನ ಅಂಶ ಮತ್ತು ಜಲದ ಮೂರು ಅಂಶಗಳೂವುಳ್ಳ 'ಪಾರ್ಥಿವ' ರಾಶಿಯನ್ನೂ; ನಾಲ್ಕು ಜಲಾಂಶಗಳು, ಪೃಥಿವೀ ಅಂಶಗಳು ಮೂರು, ಮತ್ತು ತೇಜೋಂಶ ಒಂದನ್ನೂವುಳ್ಳ 'ಆಪ್ಯ' ರಾಶಿಯನ್ನೂ, ಮತ್ತು ನಾಲ್ಕು ತೇಜೋಂಶಗಳು, ಮೂರು ಜಲಾಂಶಗಳು ಮತ್ತು ಒಂದು ಪೃಥಿವೀ ಅಂಶವೂ ಇರುವ ತೇಜೋರಾಶಿಯನ್ನೂ, ಶ್ರೀವಿಷ್ಣುವು, ನಿರ್ಮಿಸಿದನು

1. ಬ್ರಹ್ಮಾಂಡವನ್ನು ಸೃಷ್ಟಿಸಿದವನು ಶ್ರೀವಿಷ್ಣುವೇ—ಚತುರ್ಮುಖನಲ್ಲ; ಬ್ರಹ್ಮಾಂಡದೊಳಗಿನ ಸೃಷ್ಟಿಯನ್ನು ಬ್ರಹ್ಮದೇವನೇ (ಆತನ ದ್ವಾರವೇ ಶ್ರೀವಿಷ್ಣು) ಮಾಡುತ್ತಾನೆ.

(ಉಳ್ಳ), ಆಪ್ಯಂ ರಾಶಿಂ-ಆಪ್ಯ ರಾಶಿಯನ್ನು ಸಃ-ಆ ಶ್ರೀವಿಷ್ಣುವು, ಚಕಾರ-ಮಾಡಿದನು; ಚತುರ್ಭಿಃ-ನಾಲ್ಕು, ತೈಜಸ್ಯೈಃ-ತೇಜಸ್ಸಿನ, ಭಾಗ್ಯೈಃ-ಅಂಶಗಳಿಂದಲೂ, ತೋಯಸ್ಯ-ಜಲದ, ತ್ರಿಭಿಃ-ಮೂರು, ಭಾಗಕೈಃ-ಅಂಶಗಳಿಂದಲೂ, ಭುವಃ-ಭೂಮಿಯ (ಭೂತತ್ತ್ವದ), ಏಕೇನ-ಒಂದು, ಭಾಗೇನ-ಅಂಶದಿಂದಲೂ, ಸಃ-ಆ ವಿಷ್ಣುವು, ತೇಜೋರಾಶಿಂ-ತೇಜಸ್ಸಿನ ರಾಶಿಯನ್ನು ಸೃಷ್ಟವಾನ್-ನಿರ್ಮಿಸಿದನು.

**ಭೂತಪ್ರೇತಾದಿದೇಹಾನಾಂ ಸೃಷ್ಟ್ಯರ್ಥಮಥ ಚಾತನೋತ್ ॥ ೧೩ ॥**
**ಪಂಚಭಿರ್ಮಾರುತೈರ್ಭಾಗ್ಯೈ ಅಪ್ತೇಜಸಭುವಾಂ ತ್ರಿಭಿಃ ।**
**ವಾಯವೀಯಂ ಪೃಥಕ್ ರಾಶಿಮೇವಂ ರಾಶಿ ಚತುಷ್ಟಯಂ ॥ ೧೪ ॥**
**ಕಿಂಚಿನ್ನ್ಯೂನೇಽಬ್ದಯುಗಲೇ ಸೃಷ್ಟ್ವೈವ ಕ್ರಮಶೋ ಹರಿಃ ।**
**ಬ್ರಹ್ಮಾಂಡಂ ಸ್ರಷ್ಟುಕಾಮೋಥ ವಿಷ್ಣುರ್ಲಕ್ಷ್ಮೀಮಸೇವತ ॥ ೧೫ ॥**

ನಾಲ್ಕನೆಯ 'ವಾಯವೀ' ರಾಶಿಯ ನಿರ್ಮಾಣವನ್ನು ನಿರೂಪಿಸುತ್ತಾರೆ :—

ಅಥ-ನಂತರ, ಮಾರುತೈಃ-ವಾಯುವಿನ, ಪಂಚಭಿಃ-ಐದು, ಭಾಗ್ಯೈಃ-ಅಂಶಗಳಿಂದಲೂ, ಅಪ್ತೇಜಸಭುವಾಂತ್ರಿಭಿಃ-ಜಲ, ತೇಜಸ್ಸು ಭೂ ತತ್ತ್ವಗಳ (ಒಂದೊಂದರಂತೆ) ಮೂರು ಅಂಶಗಳಿಂದಲೂ, ಭೂತಪ್ರೇತಾದಿದೇಹಾನಾಂ-ಭೂತ ಪ್ರೇತ (ಪಿಶಾಚ) ಮೊದಲಾದ ದೇಹಗಳ, ಸೃಷ್ಟ್ಯರ್ಥಂ-ಸೃಷ್ಟಿಗಾಗಿ, ವಾಯವೀಯಂ- ವಾಯು ಪ್ರಚುರವಾದ, (ವಾಯವೀಯ, ಎಂಬ), ಪೃಥಕ್‌ರಾಶಿಂ-ಪ್ರತ್ಯೇಕರಾಶಿಯೊಂದನ್ನು ಆತನೋತ್-ನಿರ್ಮಿಸಿದನು; ಏವಂ-ಹೀಗೆ, ಕಿಂಚಿತ್ ನ್ಯೂನೇ-ಸ್ವಲ್ಪ ಕಡಿಮೆಯಾದ, ಅಬ್ದಯುಗಲೇ-ಎರಡು ವರ್ಷಗಳಲ್ಲಿ ರಾಶಿ ಚತುಷ್ಟಯಂ-ನಾಲ್ಕು ರಾಶಿಗಳನ್ನು ಕ್ರಮಶಃ - ಕ್ರಮವಾಗಿ, ಸೃಷ್ಟ್ವಾ - ನಿರ್ಮಾಣಮಾಡಿ, ಹರಿಃ - ಶ್ರೀವಿಷ್ಣುವು,

---

(೧೦-೧೨). ಭೂತ ಪ್ರೇತಾದಿ ದೇಹಗಳ ಸೃಷ್ಟಿಗಾಗಿ ವಾಯುವಿನ ಐದು ಅಂಶಗಳು ಮತ್ತು ಜಲ ತೇಜಸ್ಸು ಪೃಥ್ವಿಗಳ ಮೂರು ಅಂಶಗಳಿಂದ, 'ವಾಯವೀಯ' ರಾಶಿಯೊಂದನ್ನು ನಿರ್ಮಿಸಿದನು; ಹೀಗೆ ನಾಲ್ಕು ರಾಶಿಗಳ ನಿರ್ಮಾಣದಲ್ಲಿ ಎರಡು ವರ್ಷಗಳಿಗೆ ಸ್ವಲ್ಪ ಕಡಿಮೆಯಾದ ಕಾಲವು ಗತಿಸಿತು; ಕ್ರಮವಾಗಿ ಈ ರಾಶಿಗಳನ್ನು ನಿರ್ಮಿಸಿದನಂತರ, ಶ್ರೀವಿಷ್ಣುವು, ಬ್ರಹ್ಮಾಂಡವನ್ನು ನಿರ್ಮಿಸುವ ಇಚ್ಛೆಯುಳ್ಳವನಾಗಿ, ಶ್ರೀಲಕ್ಷ್ಮೀದೇವಿಯನ್ನು ಸೇರಿದನು-ಹೊಂದಿದನು (೧೩-೧೫). ತೈಜಸರಾಶಿಯಿಂದ ಶ್ರೀವಿಷ್ಣುವು, ಆಕೆಯ ಉದರದಲ್ಲಿ (ಗರ್ಭದಲ್ಲಿ), ಅಂಡವನ್ನು ನಿರ್ಮಿಸಿದನು; ಅದು ಸಮವೃತ್ತವುಳ್ಳ ಸುವರ್ಣಾತ್ಮಕ ಅಂಡವಾಯಿತು (೧೬). ಆಗ ಬ್ರಹ್ಮನಾಮಕ ಶ್ರೀಹರಿಯು, ಸಮಸ್ತಜೀವರನ್ನೂ ಸಕಲದೇವಾಂಶರನ್ನೂ ನುಂಗಿ (ತನ್ನ ಉದರದಲ್ಲಿಟ್ಟುಕೊಂಡು), ಮಹತತ್ತ್ವಾಭಿಮಾನಿಯಾದ ಬ್ರಹ್ಮದೇವನನ್ನು ಪ್ರವೇಶಿಸಿದನು; ಅಹಂಕಾರಾಭಿ

ಬ್ರಹ್ಮಾಂಡಂ-ಬ್ರಹ್ಮಾಂಡವನ್ನು ಸ್ರಷ್ಟುಕಾಮಃ-ನಿರ್ಮಾಣಮಾಡುವ ಇಚ್ಛೆಯುಳ್ಳವನಾಗಿ, ಅಥ-ನಂತರ, ವಿಷ್ಣುಃ-ಶ್ರೀವಿಷ್ಣುವು, ಲಕ್ಷ್ಮೀಂ-ಶ್ರೀಲಕ್ಷ್ಮೀದೇವಿಯನ್ನು ಅಸೇವತ-ಹೊಂದಿದನು (ಆಶ್ರಯಿಸಿದನು-ಆಕೆಯಿಂದ ಬ್ರಹ್ಮಾಂಡವನ್ನು ಸೃಷ್ಟಿಸಲು ಆಕೆಯನ್ನು ಸೇರಿದನು).

ನಿರ್ಮಮೇ ತೈಜಸಾದ್ರಾಶೇರಂಡಂ ತದುದರೇ ಹರಿಃ ।
ಸೌವರ್ಣಂ ತದಭೂತ್ತಸ್ಯಾ ಉದರೇ ಸಮವೃತ್ತಕಂ ॥ ೧೬ ॥

ಬ್ರಹ್ಮಾಂಡನಿರ್ಮಾಣವನ್ನು ನಿರೂಪಿಸುತ್ತಾರೆ :—

ಹರಿಃ-ಶ್ರೀವಿಷ್ಣುವು, ತೈಜಸಾತ್-ತೈಜಸ, ರಾಶೇಃ-ರಾಶಿಯಿಂದ, ತದುದರೇ-ಶ್ರೀಲಕ್ಷ್ಮೀದೇವಿಯ ಉದರದಲ್ಲಿ ಅಂಡಂ-ಅಂಡವನ್ನು ನಿರ್ಮಮೇ-ನಿರ್ಮಿಸಿದನು; ತತ್-ಆ ಅಂಡವು, ತಸ್ಯಾಃ-ಆ ದೇವಿಯ, ಉದರೇ-ಉದರದಲ್ಲಿ ಸಮವೃತ್ತಕಂ-ಸಮವೃತ್ತವುಳ್ಳ (ಉತ್ತರದಕ್ಷಿಣ-ಪೂರ್ವಪಶ್ಚಿಮಾದಿ ದಿಕ್ಕುಗಳಲ್ಲಿ ಸಮವಾದ ಅಳತೆಯುಳ್ಳ), ಸೌವರ್ಣಂ-ಸುವರ್ಣಾತ್ಮಕವಾದುದು, ಅಭೂತ್-ಆಯಿತು.

ತತೋ ಬ್ರಹ್ಮಾಖಿಲಾನ್ ಜೀವಾನ್ ದೇವಾಂಶಾನಪಿ ಸರ್ವಶಃ ।
ನಿಗೀರ್ಯ ಪ್ರವಿವೇಶಾಪಿ ಮಹತತ್ತ್ವತನುಂ ವಿಧಿಂ ॥ ೧೭ ॥
ಅಹಂಕಾರಾತ್ಮನಿ ಶಿವೇ ಸ ರುದ್ರೋಽವಿಶದೀಶ್ವರಂ ।
ವಿವೇಶಾಥಾಜ್ಞಯಾ ವಿಷ್ಣೋರಹಮಾತ್ಮಾ ಮಹತ್ತನುಂ ॥ ೧೮ ॥

ತತಃ-ನಂತರ, ಬ್ರಹ್ಮಾ-ಬ್ರಹ್ಮನು (ವಾಸುದೇವನಿಂದ ಮಾಯಾದೇವಿಯಲ್ಲಿ ಪ್ರಕಟನಾದ ಬ್ರಹ್ಮನಾಮಕ ಶ್ರೀಹರಿಯು), ಅಖಿಲಾನ್-ಸಮಸ್ತ ಜೀವಾನ್-ಜೀವರನ್ನೂ, ಅಪಿ-ಮತ್ತು ದೇವಾಂಶಾನ್-ದೇವಾಂಶ(ಜೀವ)ರನ್ನೂ ಸರ್ವಶಃ-ಎಲ್ಲರನ್ನೂ ನಿಗೀರ್ಯ-ನುಂಗಿ, ಮಹತತ್ತ್ವತನುಂ-ಮಹತತ್ತ್ವಾಭಿಮಾನಿಯಾದ, ವಿಧಿಂ- ವಿಧಿಯನ್ನು (ಬ್ರಹ್ಮದೇವನನ್ನು), ಪ್ರವಿವೇಶ-ಪ್ರವೇಶಿಸಿದನು; ಅಪಿ-ಮತ್ತು ಸಃ-ಆ (ಮಾಯಾದೇವಿಯಲ್ಲಿ ಪ್ರಕಟನಾದ), ರುದ್ರಃ-ರುದ್ರನಾಮಕ ಶ್ರೀಹರಿಯು,

---

ಮಾನಿಯಾದ ಶಿವನಲ್ಲಿ ರುದ್ರನಾಮಕನು (ಶ್ರೀಹರಿಯು) ಪ್ರವೇಶಿಸಿದನು; ಶ್ರೀವಿಷ್ಣುವಿನ ಆಜ್ಞೆಯಿಂದ, ಅಹಂಕಾರಾಭಿಮಾನಿಯಾದ ಈ (ಹೀಗೆ ರುದ್ರನಿಂದ ಪ್ರವಿಷ್ಟನಾದ) ಶಿವನು, ತನ್ನ ನಿಯಾಮಕನಾದ ಬ್ರಹ್ಮದೇವನನ್ನು ಪ್ರವೇಶಿಸಿದನು (೧೭-೧೮). ಸರ್ವಜೀವರಿಂದ ಕೂಡಿದ, ಆ ಬ್ರಹ್ಮದೇವನನ್ನು ತನ್ನ ಒಂದಂಶದಿಂದ, ಶ್ರೀವಿಷ್ಣುವು ಗ್ರಾಸಮಾಡಿದನು; ಪ್ರಕೃತ್ಯಭಿಮಾನಿಯಾದ ಶ್ರೀಲಕ್ಷ್ಮೀದೇವಿಯು, ಆ ಮೊದಲು ಸೃಷ್ಟರಾದ ಪಂಚಭೂತಗಳ ತ್ರಿವೃತ್‌ಕರಣದಿಂದಾದ ರಾಶಿಗಳನ್ನು ತನ್ನ ಉದರದಲ್ಲಿ ಸ್ಥಾಪನೆಮಾಡಿಕೊಂಡಳು (೧೯). ಆ ನಂತರ ಶ್ರೀವಿಷ್ಣುವು ಲಕ್ಷ್ಮೀ

ಅಹಂಕಾರಾತ್ಮನಿ- ಅಹಂಕಾರ ತತ್ತ್ವಾಭಿಮಾನಿಯಾದ, ಶಿವೇ- ಶಿವನಲ್ಲಿ(ರುದ್ರದೇವನಲ್ಲಿ), ಆವಿಶತ್- ಪ್ರವೇಶಿಸಿದನು; ಅಹಮಾತ್ಮಾ- ಅಹಂತತ್ತ್ವಾಭಿಮಾನಿಯಾದ ಈ ಶಿವನು, ವಿಷ್ಣೋಃ- ಶ್ರೀವಿಷ್ಣುವಿನ, ಆಜ್ಞಯಾ- ಆಜ್ಞೆಯಿಂದ, ಅಥ- ನಂತರ, ಈಶ್ವರಂ- (ತನ್ನ) ನಿಯಾಮಕನಾದ, ಮಹತ್ತನುಂ- ಬ್ರಹ್ಮದೇವನನ್ನು, ವಿವೇಶ- ಪ್ರವೇಶಿಸಿದನು.

**ತಮಂಶೇನಾಗ್ರಸದ್ವಿಷ್ಣುಃ ಸರ್ವಜೀವಗಣೈರ್ಯುತಂ ।**
**ಸಂಸೃಷ್ಟಾನಿ ಚ ಭೂತಾನಿ ರಾಶೀಭೂತಾನಿ ಯಾನಿ ಚ ॥ ೧೯ ॥**
**ತಾನ್ಯಪಿ ಸ್ವೋದರೇ ಚಕ್ರೇ ಲಕ್ಷ್ಮೀಃ ಪ್ರಕೃತಿದೇವತಾ ।**

ಸರ್ವಜೀವಗಣೈಃ- ಸಮಸ್ತಜೀವಗಣಗಳಿಂದ, ಯುತಂ- ಕೂಡಿದ, ತಂ- ಆ ಬ್ರಹ್ಮದೇವನನ್ನು (ಬ್ರಹ್ಮನಾಮಕ ಶ್ರೀಹರಿಯನ್ನು ಅಂತರ್ಯಾಮಿಯಾಗಿ ಉಳ್ಳ ಬ್ರಹ್ಮನನ್ನು), ವಿಷ್ಣುಃ- ಶ್ರೀವಿಷ್ಣುವು, ಅಂಶೇನ- (ತನ್ನ) ಒಂದಂಶದಿಂದ, ಅಗ್ರಸತ್- ಗ್ರಾಸಮಾಡಿದನು (ನುಂಗಿದನು); ಚ- ಮತ್ತು, ಯಾನಿ- ಯಾವ, ರಾಶೀಭೂತಾನಿ- (ತೈಜಸ, ಆಪ್ಯ, ಭೌಮಾದಿ) ರಾಶಿಗಳಾದ, ಭೂತಾನಿ- ಭೂತಗಳು (ಪಂಚಭೂತಗಳು), ಸಂಸೃಷ್ಟಾನಿ- ಸೃಷ್ಟವಾದವೋ, ತಾನಿ ಅಪಿ- ಅವುಗಳನ್ನು ಸಹ, ಪ್ರಕೃತಿ ದೇವತಾ- ಪ್ರಕೃತ್ಯಭಿಮಾನಿಯಾದ, ಲಕ್ಷ್ಮೀಃ- ಶ್ರೀಲಕ್ಷ್ಮೀದೇವಿಯು, ಸ್ವೋದರೇ- ತನ್ನ ಉದರದಲ್ಲಿ ಚಕ್ರೇ- ಮಾಡಿಕೊಂಡಳು (ಇಟ್ಟುಕೊಂಡಳು).

**ಅಥೋ ವಿವೇಶ ಬ್ರಹ್ಮಾಂಡಂ ಲಕ್ಷ್ಮ್ಯಾ ಸಹ ಮಹೇಶ್ವರಃ ॥ ೨೦ ॥**

ಅಥೋ- ನಂತರ, ಮಹೇಶ್ವರಃ- ಶ್ರೀವಿಷ್ಣುವು (ಮಹಾಸ್ವಾಮಿಯು), ಲಕ್ಷ್ಮ್ಯಾ ಸಹ- ಶ್ರೀಲಕ್ಷ್ಮೀಸಮೇತನಾಗಿ, ಬ್ರಹ್ಮಾಂಡಂ- ಬ್ರಹ್ಮಾಂಡವನ್ನು (ಲಕ್ಷ್ಮೀ ಉದರದಲ್ಲಿ ನಿರ್ಮಿತವಾದ ಸುವರ್ಣಾತ್ಮಕ ಅಂಡವನ್ನು), ವಿವೇಶ- ಪ್ರವೇಶಿಸಿದನು.

**ವೈಕುಂಠಮಾವಿಶಲ್ಲೋಕಂ ತತ್ರಾಪಶ್ಯನ್ನಿಜಾಕೃತೀಃ ।**
**ಉಪಾಸ್ಯಮಾನಾಃ ಸಂಸಾರಾನ್ಮುಕ್ತೈರ್ದೇವಗಣೈಃ ಸದಾ ॥ ೨೧ ॥**

(ಹಾಗೆ ಬ್ರಹ್ಮಾಂಡವನ್ನು ಪ್ರವೇಶಿಸಿದ ಶ್ರೀವಿಷ್ಣುವು), ವೈಕುಂಠ ಲೋಕಂ- (ಬ್ರಹ್ಮಾಂಡಸೃಷ್ಟಿಯಾದೊಡನೆ, ಬ್ರಹ್ಮಾಂಡದಲ್ಲಿ ಪ್ರಕಾಶಿತವಾದ) ವೈಕುಂಠಲೋಕವನ್ನು ಆವಿಶತ್- ಪ್ರವೇಶಿಸಿದನು; ತತ್ರ- ಅಲ್ಲಿ ಸಂಸಾರಾತ್- ಸಂಸಾರದಿಂದ, ಮುಕ್ತೈ- ಮುಕ್ತರಾದ, ದೇವಗಣೈಃ- ದೇವಸಮೂಹಗಳಿಂದ, ಸದಾ- ನಿರಂತರವೂ,

---

ಸಮೇತನಾಗಿ ಸುವರ್ಣಾತ್ಮಕ ಬ್ರಹ್ಮಾಂಡವನ್ನು ಪ್ರವೇಶಿಸಿದನು (೨೦). ಅಲ್ಲಿ ಬ್ರಹ್ಮಾಂಡವು ಸೃಷ್ಟಿಯಾದೊಡನೆ ಪ್ರಕಟವಾದ ವೈಕುಂಠಲೋಕವನ್ನು ಪ್ರವೇಶಿಸಿದನು; ಸಂಸಾರರಿಂದ ಮುಕ್ತರಾದ ದೇವಗಣಗಳಿಂದ (ಮುಕ್ತದೇವತೆಗಳಿಂದ), ಉಪಾಸಿಸಲ್ಪಡುತ್ತಿರುವ ತನ್ನ ಅಸಂಖ್ಯ ರೂಪಗಳನ್ನು ಅಲ್ಲಿ ಕಂಡನು (೨೧).

ಉಪಾಸ್ಯಮಾನಾಃ-ಸೇವಿಸಲ್ಪಡುವ (ಆರಾಧಿಸಲ್ಪಡುವ), ನಿಜಾಕೃತೀಃ-ತನ್ನ ರೂಪಗಳನ್ನು (ಮುಕ್ತರಿಗೆ ಸದಾ ದರ್ಶನವಿತ್ತು ಆನಂದವನ್ನೀಯುವ ತನ್ನ ಬಹುರೂಪಗಳನ್ನು), ಅಪಶ್ಯತ್-ಕಂಡನು.

ಸುದರ್ಶನಪರೀವೃತಾನ್ ಪ್ರಲಯಾಗ್ನಿಪಯಾಂಸ್ಯಪಿ ।
ನೈವ ಸ್ಪೃಶಂತಿ ಯಾಂಲ್ಲೋಕಾಂಚ್ಛಾಶ್ವತಾಸ್ತೇ ಹಿ ವೈಷ್ಣವಾಃ ॥ ೨೨ ॥

ಸುದರ್ಶನಪರೀವೃತಾನ್-ಸುದರ್ಶನಚಕ್ರದಿಂದ ಸುತ್ತುವರಿಯಲ್ಪಟ್ಟ (ಸರ್ವತಃ ರಕ್ಷಿಸಲ್ಪಟ್ಟ), ಯಾನ್ ಲೋಕಾನ್-ಯಾವ ಲೋಕಗಳನ್ನು ಪ್ರಲಯಾಗ್ನಿ ಪಯಾಂಸಿ ಅಪಿ-ಪ್ರಲಯಕಾಲದ ಅಗ್ನಿ ಮತ್ತು ಜಲಗಳು ಸಹ, ನ ಸ್ಪೃಶಂತಿ ಏವ- ಸ್ಪರ್ಶಿಸುವುದಿಲ್ಲವೋ (ಮುಟ್ಟುವುದಿಲ್ಲವೋ), ತೇ-ಆ ಲೋಕಗಳು, ಶಾಶ್ವತಾಃ- ನಿತ್ಯವಾದ, ವೈಷ್ಣವಾಃ ಹಿ- ವಿಷ್ಣುಲೋಕಗಳು (ಮುಕ್ತಸ್ಥಾನಗಳು) ಎಂದು ಪ್ರಸಿದ್ಧವು.

ಬ್ರಹ್ಮಾಂಡೇ ಜಲಪೂರ್ಣೇಽಪಿ ಜಲಲೇಶೋಽಪಿ ಯತ್ರ ನ ।
ತಾದೃಶಂ ರಮಣೀಯಂ ತದ್ವೈಕುಂಠಾಖ್ಯಂ ಪರಂಪದಂ ॥ ೨೩ ॥

ಬ್ರಹ್ಮಾಂಡೇ-ಬ್ರಹ್ಮಾಂಡವು (ಸೃಷ್ಟವಾದಾಗ, ಒಳಗಿನ ಲೋಕಾದಿಗಳ ಸೃಷ್ಟಿಗೆ ಪೂರ್ವದಲ್ಲಿ), ಜಲಪೂರ್ಣೇ ಅಪಿ-ಜಲದಿಂದ ತುಂಬಿದ್ದಾದರೂ, ಯತ್ರ-ಎಲ್ಲಿ ಜಲಲೇಶಃ ಅಪಿ-ಆ ಅತ್ಯಲ್ಪ ಜಲವೂ, ನ-ಇಲ್ಲವೋ, ತಾದೃಶಂ-ಹಾಗಿರುವ

---

ಸುದರ್ಶನದಿಂದ ಸುತ್ತಲೂ ರಕ್ಷಿತವಾದ ಯಾವ ಲೋಕಗಳು (ವೈಕುಂಠಾದಿ ಸ್ಥಾನವಿಶೇಷಗಳು) ಪ್ರಲಯಕಾಲದ ಅಗ್ನಿ ಅಥವಾ ಜಲಗಳಿಂದ ಸ್ಪರ್ಶಿಸಲ್ಪಡುವುದಿಲ್ಲವೋ, ಅವು, ಶಾಶ್ವತವಾದ (ನಾಶರಹಿತವಾದ),[1] ಮುಕ್ತಾವಾಸಗಳಾದ ವಿಷ್ಣುಲೋಕಗಳೆಂದು ಪ್ರಸಿದ್ಧವಾಗಿವೆ (೨೨). ಬ್ರಹ್ಮಾಂಡವು ಜಲದಿಂದ ತುಂಬಿದ್ದರೂ, ಅದರೊಳಗಿರುವ ವೈಕುಂಠ ಲೋಕದಲ್ಲಿ ಜಲಲೇಶವೂ ಇರುವುದಿಲ್ಲ; ಹೀಗಿರುವ ವೈಕುಂಠಲೋಕವು, ಅತಿ ರಮಣೀಯವಾದುದು; ಪರಮಪದವೆಂದು (ಅತ್ಯುತ್ಕೃಷ್ಟವಾದ, ದೋಷಲೇಶವಿಲ್ಲದ ಆನಂದ ಭೋಗಸ್ಥಾನವೆಂದು) ಪ್ರಸಿದ್ಧವಾಗಿದೆ

---

1. ಮಹಾಪ್ರಲಯದಲ್ಲಿ ಆವರಣ ಸಹಿತ ಬ್ರಹ್ಮಾಂಡವು ನಷ್ಟಹೊಂದಿ ಪರಮಾತ್ಮನ ಉದರದಲ್ಲಿ ಚೇತನಾಚೇತನ ಜಗತ್ತೆಲ್ಲವೂ ಸೂಕ್ಷ್ಮರೂಪದಿಂದ ಸ್ಥಿತವಾಗಿರುತ್ತದೆ. ಆಗ ನಿತ್ಯವಾದ ವೈಕುಂಠಲೋಕವೂ ಮುಕ್ತರೊಂದಿಗೆ ಶ್ರೀಹರಿಯ ಉದರದಲ್ಲಿರುತ್ತದೆ—ಮುಕ್ತರು, ಪುನಃ ಸೃಷ್ಟಿ ಕಾಲ ಬರುವವರೆಗೆ ಧ್ಯಾನಮಗ್ನರಾಗಿ ಸ್ವರೂಪಾನಂದ ಭೋಗದಲ್ಲಿರುತ್ತಾರೆ. ಪುನಃ ಬ್ರಹ್ಮಾಂಡದ ಸೃಷ್ಟಿಯಾದಾಗ, ಬ್ರಹ್ಮಾಂಡದೊಳಗೆ, ಸತ್ಯಲೋಕದ ಮೇಲ್ಭಾಗದಲ್ಲಿ ವೈಕುಂಠವು ಪ್ರಕಟವಾಗುತ್ತದೆ. 'ವೈಕುಂಠೋ ಕಲ್ಪಿತೋ ಯೇನ ಲೋಕೋ ಲೋಕನಮಸ್ಕೃತಃ।' ಎಂಬಲ್ಲಿ ತೋರುವ ವೈಕುಂಠದ ಉತ್ಪತ್ತಿಯನ್ನು, ಅವ್ಯಕ್ತರೂಪವನ್ನು ಹೊಂದಿ ಶ್ರೀಹರಿಯ ಉದರದಲ್ಲಿದ್ದುದರ ಪುನರ್ವ್ಯಕ್ತೀಕರಣವೆಂದು ತಿಳಿಯಬೇಕು.

(ಪ್ರಾಕೃತಜಲಾದಿಗಳ ಲೇಪವಿಲ್ಲದ-ಲಕ್ಷ್ಮ್ಯಾತ್ಮಕ ಮತ್ತು ಶುದ್ಧಸತ್ತ್ವಾತ್ಮಕ ವಸ್ತುಗಳು ಮಾತ್ರ ಇರುವ), ರಮಣೀಯಂ-ಮನೋಹರವಾದ (ಅತ್ಯಂತ ಶೃಂಗಾರಪೂರ್ಣವಾದ), ತತ್-ಅದು, ವೈಕುಂಠಾಖ್ಯಂ-ವೈಕುಂಠವೆಂಬ (ಶ್ವೇತದ್ವೀಪಾದಿ ಇತರ ಮುಕ್ತಲೋಕಗಳನ್ನೂ ಹೀಗೆಯೇ ತಿಳಿಯಬೇಕು), ಪರಂಪದಂ-ಉತ್ಕೃಷ್ಟವಾದ (ದೋಷಲೇಶವಿಲ್ಲದ) ಸ್ಥಾನವು. (ಅದನ್ನು ಲಕ್ಷ್ಮೀಸಮೇತನಾಗಿ ಶ್ರೀವಿಷ್ಣುವು ಪ್ರವೇಶಿಸಿದನೆಂದು ೨೧ನೇ ಶ್ಲೋಕದಿಂದ ಅನ್ವಯವನ್ನಾದರೂ ತಿಳಿಯಬಹುದು).

ಅತೀತ್ಯಾಧಃ ಸಮಾಗತ್ಯ ಶಿಶ್ಯೇ ಶ್ರಾಂತಇವಾಂಭಸಿ ।
ಚತುರ್ಯುಗಶತಂ ಪಶ್ಚಾತ್ ಉನ್ನಿದ್ರ ಇವ ಚಾಭವತ್ ॥ ೨೪ ॥
ಸಸರ್ಜ ಮಾರುತಂ ವಕ್ತ್ರಾತ್ ಸೋಽಶೋಷಯದಪೋಽಖಿಲಾಃ ।
ಸ ಹಿ ಸತ್ತ್ವಾತ್ಮಕೋ ವಾಯುರ್ಲಕ್ಷ್ಮ್ಯಾ ರೂಪಂ ನ ಚಾಪರಃ ॥ ೨೫ ॥

(ಶ್ರೀವಿಷ್ಣುವು ವೈಕುಂಠವನ್ನು), ಅತೀತ್ಯ-ದಾಟಿ, ಅಧಃ-ಕೆಳಭಾಗಕ್ಕೆ, ಸಮಾಗತ್ಯ-ಬಂದು (ಕೆಳಭಾಗವನ್ನು ಹೊಂದಿ). (ಅಲ್ಲಿನ) ಅಂಭಸಿ-ಜಲದಲ್ಲಿ (ಗರ್ಭೋದಕದಲ್ಲಿ-ಬ್ರಹ್ಮಾಂಡದಲ್ಲಿ ತುಂಬಿದ ಜಲದಲ್ಲಿ), ಶ್ರಾಂತಃ ಇವ-ಬಳಲಿದವನಂತೆ (ಆತನು ಸರ್ವದಾ ಶ್ರಮಲೇಶರಹಿತನು), ಚತುರ್ಯುಗಶತಂ-ಕೃತಾದಿ ಚತುರ್ಯುಗಗಳು ೧೦೦ ಆವರ್ತಿ ಸುತ್ತುವಷ್ಟು ಕಾಲ, ಶಿಶ್ಯೇ-ಮಲಗಿದನು; ಪಶ್ಚಾತ್-ಅಷ್ಟುಕಾಲದನಂತರ, ಉನ್ನಿದ್ರಃ ಇವ ಚ-ನಿದ್ರೆಯಿಂದ ಎದ್ದವನಂತೆಯೇ, ಅಭವತ್ - ಆದನು (ನಿತ್ಯಜಾಗೃತನಾದ ಶ್ರೀಹರಿಗೆ ನಿದ್ರೆ ಎಂಬುದು ಎಂದಿಗೂ ಇಲ್ಲ); ವಕ್ತ್ರಾತ್-(ತನ್ನ) ಮುಖದಿಂದ, ಮಾರುತಂ-ವಾಯುವನ್ನು, ಸಸರ್ಜ-ನಿರ್ಮಿಸಿದನು; ಸಃ - ಆ ವಾಯುವು, ಅಖಿಲಾಃ - ಸಮಸ್ತವಾದ, ಅಪಃ - ಜಲವನ್ನು ಅಶೋಷಯತ್-ಶೋಷಿಸಿದನು (ಒಣಗಿಸಿದನು); ಸಃ-ಆ, ಸತ್ತ್ವಾತ್ಮಕಃ-ಮಹಾ

---

—ಈ ಲೋಕವನ್ನೇ ಶ್ರೀವಿಷ್ಣುವು ಶ್ರೀಲಕ್ಷ್ಮೀಸಮೇತನಾಗಿ ಪ್ರವೇಶಿಸಿದುದು (೨೩). ಶ್ರೀವಿಷ್ಣುವು, ಅಲ್ಲಿಂದ (ವೈಕುಂಠದಿಂದ) ಕೆಳಗೆ ಬಂದು, ೧೦೦ ಚತುರ್ಯುಗಗಳಷ್ಟು ಕಾಲ, ಅಲ್ಲಿದ್ದ ಜಲರಾಶಿಯಲ್ಲಿ ಶ್ರಾಂತನಂತೆ ಮಲಗಿದನು; ನಂತರ ಎಚ್ಚತ್ತವನಂತೆ ಎದ್ದನು; ಎದ್ದು ತನ್ನ ಮುಖದಿಂದ ವಾಯುವನ್ನು ನಿರ್ಮಿಸಿದನು; ಆ ವಾಯುವು ಬ್ರಹ್ಮಾಂಡದಲ್ಲಿ ತುಂಬಿದ್ದ ಜಲವನ್ನೆಲ್ಲ ಶೋಷಿಸಿತು; ಈ ವಿಧ ಅಚಿಂತ್ಯ ಸಾಮರ್ಥ್ಯವುಳ್ಳ ವಾಯುವು, ಶ್ರೀಲಕ್ಷ್ಮೀದೇವಿಯ ರೂಪಾಂತರವೇ ಸರಿ—ಬೇರೆಯಲ್ಲ (೨೪-೨೫). ಹೀಗೆ ಜಲವನ್ನು ಶೋಷಿಸಿ, ಮುಕ್ತಸ್ಥಾನವಾದ ಶ್ವೇತದ್ವೀಪಕ್ಕೆ ಬಂದು, ಅಲ್ಲಿ ಬಹುಕಾಲ ಕ್ರೀಡಿಸಿದನು; ಅಲ್ಲಿಂದ ಅಂಧತಮಸ್ಸಿಗೆ ಬಂದನು; ಅಲ್ಲಿ ಆದ್ಯಂತಗಳಿಲ್ಲದ (ಅಪಾರವಾದ) ಅಥವಾ ಉತ್ಪತ್ತಿನಾಶರಹಿತವಾದ ಅಂಧಕಾರವು ತುಂಬಿದೆ; ಅಲ್ಲಿಗೆ

ಸಮರ್ಥವಾದ, ವಾಯುಃ-ವಾಯುವು, ಲಕ್ಷ್ಮ್ಯಾಃ-ಶ್ರೀಲಕ್ಷ್ಮೀದೇವಿಯ, ರೂಪಂ-ಒಂದು ರೂಪಾಂತರವೇ, ಅಪರಃ ನ ಚ-ಬೇರೆಯಲ್ಲ (ಆ ವಾಯುವು, ಭೂತವಾಯುವಾಗಲಿ, ವಾಯುದೇವನಾಗಲಿ, ಅಲ್ಲವೇ ಅಲ್ಲ).

ಶ್ವೇತದ್ವೀಪಮಥಾಗತ್ಯ ಚಿರಂ ಚಿಕ್ರೀಡ ತತ್ರ ಸಃ ।
ತತೋಂಧತಮ ಆಗತ್ಯ ದದೃಶೇ ಪಾಪಿನೋಖಿಲಾನ್ ॥ ೨೬ ॥
ಸದಾ ಸರ್ವೇಂದ್ರಿಯೈಃ ಕಷ್ಟಂ ಭುಂಜಾನಾನ್ ದ್ವೇಷತತ್ಪರಾನ್ ।
ತಮೋಽನಾರಂಭಣಂ ತತ್ತು ಬಹುಭೇದಮನಂತಕಂ ॥ ೨೭ ॥
ಯತ್ರ ಯಾತಾ ಬಹಿರ್ನೈವ ನಿಃಸರಂತಿ ಕದಾಚನ ।

ಸಃ-ಆ ವಿಷ್ಣುವು, ಅಥ-ನಂತರ, ಶ್ವೇತದ್ವೀಪಂ-ಶ್ವೇತದ್ವೀಪವನ್ನು ಕುರಿತು (ಶ್ವೇತದ್ವೀಪಕ್ಕೆ), ಆಗತ್ಯ-ಬಂದು, ಚಿರಂ-(ಅಲ್ಲಿ) ಬಹುಕಾಲ, ಚಿಕ್ರೀಡ-ಕ್ರೀಡಿಸಿದನು; ತತಃ-ಅಲ್ಲಿಂದ, ಅಂಧತಮಃ-ಅಂಧತಮಸ್ಸನ್ನು ಆಗತ್ಯ-ಹೊಂದಿ (ಅಲ್ಲಿಗೆ ಬಂದು), ಸದಾ-ನಿರಂತರವಾಗಿ, ಸರ್ವೇಂದ್ರಿಯೈಃ-ಎಲ್ಲ ಇಂದ್ರಿಯಗಳಿಂದ, ಕಷ್ಟಂ-ದುಃಖವನ್ನು ಭುಂಜಾನಾನ್-ಭೋಗಿಸುತ್ತಿರುವ, (ಹಾಗಿದ್ದರೂ), ದ್ವೇಷ ತತ್ಪರಾನ್-(ವಿಷ್ಣುವೈಷ್ಣವ) ದ್ವೇಷದಲ್ಲಿ ಆಸಕ್ತರಾದ, ಅಖಿಲಾನ್-ಸಮಸ್ತ ಪಾಪಿನಃ- ಪಾಪಿಗಳನ್ನು ದದೃಶೇ-ಕಂಡನು; ತತ್ ತು-ಅದಾದರೋ, ಬಹುಭೇದಂ-ಬಹುಭಿನ್ನ ನರಕಸ್ಥಾನಗಳುಳ್ಳ, ಅನಾರಂಭಣಂ-ಆದಿ ಇಲ್ಲದ, ಅನಂತಕಂ-ಅಂತ್ಯವಿಲ್ಲದ (ಮೊದಲು ಕೊನೆಗಳಿಲ್ಲದ), ಮತ್ತು ಯತ್ರ ಎಲ್ಲಿ ಯಾತಾಃ-ಹೋದವರು (ಯಾವುದನ್ನು ಪ್ರವೇಶಿಸಿದವರು), ಕದಾಚನ-ಎಂದಿಗೂ, ಬಹಿಃ-ಹೊರಗೆ, ನೈವ ನಿಃಸರಂತಿ-ಬರುವುದೇ ಇಲ್ಲವೋ, (ಅಂಥ), ತಮಃ-ಅಂಧಕಾರಯುಕ್ತವಾದ ನರಕವು (ಅಂಧತಮಸ್ಸೆಂಬುದು).

ತತೋಽನಂತಾಸನಂ ಗತ್ವಾ ವಿಚಚಾರ ನಿಜೇಚ್ಛಯಾ ॥ ೨೮ ॥
ರಮಮಾಣಃ ಕಿಯತ್ಕಾಲಂ ಪುನರ್ವೈಕುಂಠಮಾಗಮತ್ ।

---

ಪ್ರವೇಶ ಮಾಡಿದವರು ಎಂದೂ ಹೊರಗೆ ಬರುವುದಿಲ್ಲ ಆ ಅಂಧತಮಸ್ಸಿನಲ್ಲಿ ಸದಾ ಸರ್ವೇಂದ್ರಿಯಗಳಿಂದ ದುಃಖವನ್ನೇ ಭೋಗಿಸುತ್ತಿರುವ ಸಮಸ್ತ ಪಾಪಿಜೀವರನ್ನು (ಮುಕ್ತ ತಮೋಯೋಗ್ಯರನ್ನು—ಸಂಸಾರದಿಂದ ಮುಕ್ತರಾಗಿ ನಿತ್ಯನರಕದಲ್ಲಿ ಬಿದ್ದಿರುವ ಜೀವರನ್ನು) ಕಂಡನು (೨೬-೨೭). ಅಲ್ಲಿಂದ ಮುಂದೆ ಅನಂತಾಸನಕ್ಕೆ (ನಿತ್ಯವಾದ ಮುಕ್ತಲೋಕಕ್ಕೆ) ಹೋಗಿ, ಅಲ್ಲಿ ಕೆಲವು ಕಾಲ, ಸ್ವೇಚ್ಛೆಯಿಂದ ವಿಹಾರಮಾಡುತ್ತ ಸಂಚರಿಸಿದನು—ಮತ್ತೆ ವೈಕುಂಠಕ್ಕೆ ಹಿಂದಿರುಗಿದನು; ಅಷ್ಟರಲ್ಲಿ ಬ್ರಹ್ಮಾಂಡ ಹುಟ್ಟಿ ಒಂದು ಕಲ್ಪಕಾಲವು (ಬ್ರಹ್ಮದೇವನ ಒಂದು ಹಗಲು) ಮುಗಿಯಿತು; ಆಗ ದಿನಕಲ್ಪ

ತಾವದ್ಬ್ರಹ್ಮಾಂಡಕಲ್ಪಾಂತೋಽಭವತ್ ಪ್ರವವೃಧೇ ಜಲಂ ॥ ೨೯ ॥
ಯಾವದ್ವೈಕುಂಠಮಭವತ್ ಬ್ರಹ್ಮಾಂಡಂ ಜಲಪೂರಿತಂ ।
ಸುಷ್ವಾಪ ಸಲಿಲೇ ತತ್ರ ಯಾವತ್ಕಲ್ಪನಿಶಾ ಭವೇತ್ ॥ ೩೦ ॥

ತತಃ-ನಂತರ (ತಮಸ್ಸಿನಿಂದ ಮುಂದೆ), ಅನಂತಾಸನಂ-ಅನಂತಾಸನಕ್ಕೆ, ಗತ್ವಾ-ಹೋಗಿ (ಅನಂತಾಸನವನ್ನು ಹೊಂದಿ), ನಿಜೇಚ್ಛಯಾ-(ಶ್ರೀವಿಷ್ಣುವು) ಸ್ವೇಚ್ಛೆಯಿಂದ, ವಿಚಚಾರ-ಸಂಚರಿಸಿದನು; ಕಿಯತ್ ಕಾಲಂ-ಕೆಲವು ಕಾಲ, ರಮಮಾಣಃ-(ಅಲ್ಲಿ) ವಿಹರಿಸುವವನಾಗಿ, ಪುನಃ-ಮತ್ತೆ ವೈಕುಂಠಂ-ವೈಕುಂಠವನ್ನು ಆಗಮತ್-ಹೊಂದಿದನು; ತಾವತ್-ಅಷ್ಟರಲ್ಲಿ (ಆ ಕಾಲದಲ್ಲಿ), ಬ್ರಹ್ಮಾಂಡ ಕಲ್ಪಾಂತಃ-ಬ್ರಹ್ಮಾಂಡದ (ಅದರ ಉತ್ಪತ್ತಿಯ ನಂತರ) ಒಂದು ಕಲ್ಪದ ಅಂತ್ಯ ಕಾಲವು, ಅಭವತ್-ಆಯಿತು; ಜಲಂ-(ದಿನಕಲ್ಪ) ಪ್ರಲಯಜಲವು, ಪ್ರವವೃಧೇ- ವೃದ್ಧಿಗೊಂಡಿತು (ಬೆಳೆಯಿತು-ಪೂರ್ಣವಾಯಿತು); ಯಾವತ್ ವೈಕುಂಠಂ-ವೈಕುಂಠದವರೆಗೆ (ಅದರೊಳಗೆ ಅಲ್ಲ), ಬ್ರಹ್ಮಾಂಡಂ-ಬ್ರಹ್ಮಾಂಡವು, ಜಲಪೂರಿತಂ-ಜಲದಿಂದ ತುಂಬಿದುದು, ಅಭವತ್- ಆಯಿತು; ತತ್ರ ಸಲಿಲೇ-ಆ ಜಲದಲ್ಲಿ ಯಾವತ್ ಕಲ್ಪನಿಶಾ ಭವೇತ್-ಆ ದಿನಕಲ್ಪದ ರಾತ್ರಿಪರ್ಯಂತ (ರಾತ್ರಿಕಾಲ ಮುಗಿಯುವವರೆಗೆ), ಸುಷ್ವಾಪ-ಮಲಗಿದನು.

ಸಲ್ಲಾಲಯಂತೀ ತತ್ರಾಸೀತ್ತತ್ಪಾದೌ ಕಮಲಾ ಸತೀ ।
ಪುನರ್ಮಾರುತಮುತ್ಪಾದ್ಯ ಶೋಷಯಿತ್ವಾಖಿಲಂ ಜಲಂ ॥ ೩೧ ॥
ಪ್ರಕೃತ್ಯೋತ್ಪಾದಯಾಮಾಸ ತ್ರೀನ್ ಗುಣಾಂಸ್ತು ತತೋ ಮಹತ್ ।
ಮಹತೋಽಹಂಕೃತಿಂ ತಸ್ಮಾ ಮನೋಬುದ್ಧ್ಯಾದಿಕಾಂಸ್ತತಃ ॥ ೩೨ ॥

ತತ್ರ-ಅಲ್ಲಿ (ಹಾಗೆ ಶ್ರೀವಿಷ್ಣುವು ಜಲದಲ್ಲಿ ಶಯನಮಾಡಿದಾಗ), ಸತೀ-(ಆತನ) ಭಾರ್ಯಳಾದ, ಕಮಲಾ-ಶ್ರೀಲಕ್ಷ್ಮೀದೇವಿಯು, ತತ್ಪಾದೌ-ಆತನ ಪಾದಗಳನ್ನು

---

ಪ್ರಲಯಜಲವು[1] ವೃದ್ಧಿಗೊಂಡು, ವೈಕುಂಠದವರೆಗಿನ ಬ್ರಹ್ಮಾಂಡವು ಜಲಪೂರ್ಣವಾಯಿತು; ಶ್ರೀವಿಷ್ಣುವು ಆ ಜಲದಲ್ಲಿ ಕಲ್ಪಾಂತ್ಯದ ರಾತ್ರಿ ಕಾಲವು ಮುಗಿಯುವವರೆಗೆ ಮಲಗಿದನು (೨೮-೩೦).

---

1. ಬ್ರಹ್ಮಾಂಡದೊಳಗಿನ ಲೋಕಗಳ ಸೃಷ್ಟಿಯಾದ ನಂತರ, ದಿನಕಲ್ಪದ ಅವಸಾನದಲ್ಲಿ ಭೂಃ ಭುವಃ ಸ್ವಃಗಳೆಂಬ ಮೂರು ಲೋಕಗಳು ಮಾತ್ರ ನಷ್ಟಗೊಂಡು, ಮೇಲಿನ ಸತ್ಯಲೋಕದವರೆಗಿನ ಲೋಕಗಳೆಲ್ಲ ಇದ್ದಂತೆ ಇರುತ್ತವೆ; ಆಗ ಪ್ರಲಯಜಲವು ಬ್ರಹ್ಮಾಂಡವನ್ನೆಲ್ಲಾ ತುಂಬುವುದಿಲ್ಲ— ವೈಕುಂಠದವರೆಗೆ ಬರುವುದಿಲ್ಲ; ಈ ಅಂಶವನ್ನು ಇಲ್ಲಿ ಗಮನಿಸಬೇಕು. ಈವರೆಗೆ ಇನ್ನೂ ಲೋಕಗಳ ಸೃಷ್ಟಿಯಾಗಿರುವುದಿಲ್ಲ.

ಸಲ್ಲಾಲಯಂತೀ-ಲಾಲನೆಮಾಡುತ್ತಾ (ಪಾದಸೇವೆಯ ಆನಂದವನ್ನನುಭವಿಸುತ್ತ), ಆಸೀತ್-ಕೂತಿದ್ದಳು; ಪುನಃ-(ನಂತರ ಸೃಷ್ಟಿಕಾಲ ಬರಲು) ರಾತ್ರಿ ಕಳೆಯುತ್ತಿರಲು, ಮಾರುತಂ-ವಾಯುವನ್ನು ಉತ್ಪಾದ್ಯ-ಹುಟ್ಟಿಸಿ, ಅಖಿಲಂ ಜಲಂ- ಎಲ್ಲ ಜಲವನ್ನೂ ಶೋಷಯಿತ್ವಾ-ಶೋಷಣೆಮಾಡಿ, ಪ್ರಕೃತ್ಯಾ-ಪ್ರಕೃತಿಯಿಂದ, ತ್ರೀನ್ ಗುಣಾನ್-ಮೂರು ಗುಣಗಳನ್ನೂ ಚ-ಮತ್ತು ತತಃ-ಅದರಿಂದ (ತ್ರಿಗುಣಗಳಿಂದ), ಮಹತ್-ಮಹತತ್ತ್ವವನ್ನೂ ಮಹತಃ-ಮಹತತ್ತ್ವದಿಂದ, ಅಹಂಕೃತಿಂ-ಅಹಂಕಾರತತ್ತ್ವವನ್ನೂ ತಸ್ಮಾತ್-ಅದರಿಂದ, ಮನೋಬುದ್ಧ್ಯಾದಿಕಾನ್-ಮನಸ್ಸು ಬುದ್ಧಿ ಮೊದಲಾದವುಗಳನ್ನೂ ಉತ್ಪಾದಯಾಮಾಸ-ನಿರ್ಮಾಣಮಾಡಿದನು; (ತತಃ- ಮುಂದಿನ ಶ್ಲೋಕದಿಂದ ಅನ್ವಯವಾಗುತ್ತದೆ).

**ಪ್ರಾದುಶ್ಚಕ್ರೇಥ ಸಂಸ್ಪೃಷ್ಟಂ ಯದಾಕಾಶಂ ಬಹಿಃಕೃತಂ ।**
**ತತೋ ವಾಯುಂ ತತೋ ವಹ್ನಿಂ ತತ ಆಪೋ ಭುವಂ ತತಃ ॥ ೩೨ ॥**

**ತ್ರಿವೃದ್ರಾಶಿತ್ರಯಂ ವಾಯೋರಪಿ ರಾಶಿಂ ವ್ಯಸರ್ಜಯತ್ ।**

ಅಥ-ಅನಂತರ, ಬಹಿಃಕೃತಂ-ಬ್ರಹ್ಮಾಂಡದ ಹೊರಗೆ (ಬ್ರಹ್ಮಾಂಡನಿರ್ಮಾಣ ಪೂರ್ವದಲ್ಲಿ), ಯತ್ ಆಕಾಶಂ-ಯಾವ ಆಕಾಶವೋ, (ಅದು), ಸಂಸ್ಪೃಷ್ಟಂ-ಸ್ಥೂಲಭಾವದಿಂದ (ಮೊದಲಿನದು ಸೂಕ್ಷ್ಮವಾದ 'ಅಸಂಸ್ಪೃಷ್ಟ'ವೆಂಬ ಆಕಾಶ ತತ್ತ್ವವು), ಪ್ರಾದುಶ್ಚಕ್ರೇ-ಉತ್ಪಾದಿಸಿದನು; ತತಃ-ಅದರಿಂದ (ಸಂಸ್ಪೃಷ್ಟ ಆಕಾಶದಿಂದ), ವಾಯುಂ-ವಾಯುವನ್ನೂ ತತಃ-ಅದರಿಂದ, ವಹ್ನಿಂ-ಅಗ್ನಿ (ತೇಜಸ್ಸು) ಯನ್ನೂ ತತಃ-ಅದರಿಂದ, ಆಪಃ-ಜಲವನ್ನೂ ತತಃ-ಅದರಿಂದ, ಭುವಂ- ಪೃಥಿವಿಯನ್ನೂ (ಸಂಸ್ಪೃಷ್ಟಂ ಪ್ರಾದುಶ್ಚಕ್ರೇ-ಸ್ಥೂಲರೂಪಗಳಿಂದ ಈ ಆಕಾಶಾದಿ ಪಂಚಭೂತಗಳನ್ನು ಉತ್ಪಾದಿಸಿದನು); ತ್ರಿವೃದ್ರಾಶಿತ್ರಯಂ - (ಹಿಂದೆ ನಿರೂಪಿಸಲಾದ) ತ್ರಿವೃತ್ಕರಣಕ್ರಮದಿಂದ ತೈಜಸ, ಆಪ್ಯ, ಭೌಮಗಳೆಂಬ ಮೂರು ರಾಶಿಗಳನ್ನೂ

---

ಹಾಗೆ ಶ್ರೀಹರಿಯು ಮಲಗುತ್ತಿರಲು, ಭಾರ್ಯಳಾದ ಶ್ರೀಲಕ್ಷ್ಮೀದೇವಿಯು, ಆತನ ಪಾದಗಳನ್ನು ಸೇವಿಸುತ್ತ ಅವುಗಳನ್ನು ಲಾಲಿಸುವುದರಲ್ಲಿ ತೊಡಗಿದಳು; ರಾತ್ರಿ ಕಳೆಯಿತು—ಶ್ರೀಹರಿಯು, ಪುನಃ, ವಾಯುವನ್ನುತ್ಪಾದಿಸಿ, ಜಲವನ್ನೆಲ್ಲ ಶೋಷಣೆಮಾಡಿ, ಪ್ರಕೃತಿಯಿಂದ ಸತ್ತ್ವಾದಿ ತ್ರಿಗುಣಗಳನ್ನೂ ಅದರಿಂದ ಮಹತತ್ತ್ವವನ್ನೂ ಅದರಿಂದ ಅಹಂಕಾರ ತತ್ತ್ವವನ್ನೂ ಅದರಿಂದ ಮನಸ್ತತ್ತ್ವ ಬುದ್ಧ್ಯಾದಿಗಳನ್ನೂ ಸೃಷ್ಟಿಮಾಡಿದನು (೩೧-೩೨). ನಂತರ, ಬ್ರಹ್ಮಾಂಡದ ಹೊರಗೆ ಸೃಷ್ಟವಾದ ಅಸಂಸ್ಪೃಷ್ಟ ಆಕಾಶಾದಿ ತತ್ತ್ವಗಳನ್ನೂ ಸ್ಥೂಲರೂಪದಿಂದ ಸೃಷ್ಟಿಸಿದನು; ಇವು 'ಸಂಸ್ಪೃಷ್ಟ'ಗಳೆನಿಸುತ್ತವೆ; ಆಕಾಶದಿಂದ ವಾಯುವನ್ನೂ ಅದರಿಂದ, ಅಗ್ನಿಯನ್ನೂ ಅದರಿಂದ ಜಲವನ್ನೂ ಅದರಿಂದ ಭೂಮಿಯನ್ನೂ (ಪೃಥಿವೀತತ್ತ್ವವನ್ನೂ), ಕ್ರಮವಾಗಿ ಸೃಷ್ಟಿಮಾಡಿದನು; ಈ ಹಿಂದೆ

ಅಪಿ-ಮತ್ತು, ವಾಯೋಃ-ವಾಯುವೀಯ, ರಾಶಿಂ-ರಾಶಿಯನ್ನೂ, ವ್ಯಸರ್ಜಯತ್-ಸೃಷ್ಟಿಸಿದನು.

**ಅಥ ತನ್ನಾಭಿತೋ ಜಜ್ಞೇ ಕಲ್ಪಾದೌ ಪದ್ಮಮುತ್ತಮಂ ॥ ೩೪ ॥**
**ಪದ್ಮನಾಮಾಭವತ್ ಕಲ್ಪಃ ಪರಾರ್ಧಾಂತೇ ವಿಧೇಸ್ತು ಸಃ ।**
**ಉತ್ಪದ್ಯತೇ ಯತ್ ಪ್ರಥಮಂ ತನ್ನಾಮಾ ಕಲ್ಪ ಉಚ್ಯತೇ ॥ ೩೫ ॥**

ಅಥ-ನಂತರ, ತನ್ನಾಭಿತಃ-(ಜಲದಲ್ಲಿ ಶಯನಮಾಡಿದ) ಶ್ರೀವಿಷ್ಣುವಿನ ನಾಭಿಯಿಂದ, ಕಲ್ಪಾದೌ-(ಪುರುಷನಾಮಕ ಬ್ರಹ್ಮದೇವನ ಮೊದಲಿನ ೫೦ ವರ್ಷಗಳ-ಪರಾರ್ಧದ ಕಡೆಯ ದಿನದಲ್ಲಿ) ಆ ದಿನದ ಪ್ರಾರಂಭಕಾಲದಲ್ಲಿ ಉತ್ತಮಂ-ಶ್ರೇಷ್ಠವಾದ, ಪದ್ಮಂ-ಪದ್ಮವು, ಜಜ್ಞೇ-ಹುಟ್ಟಿತು; ಸಃ ಕಲ್ಪಃ-ಆ ಕಲ್ಪವು (ದಿನಕಲ್ಪವು), ವಿಧೇಃ-ಬ್ರಹ್ಮದೇವನ, ಪರಾರ್ಧಾಂತೇ-ಪರಾರ್ಧದ (ಪೂರ್ವಾರ್ಧದ ೫೦ ವರ್ಷಗಳ) ಕಡೆಯ ದಿನದಲ್ಲಿ, ಪದ್ಮನಾಮಾ ತು-ಪದ್ಮವೆಂಬ ನಾಮವುಳ್ಳದ್ದೇ (ಪಾದ್ಮಕಲ್ಪವೆಂದೇ, ಅಭವತ್-ಆಯಿತು; ಯತ್-ಯಾವುದು, ಪ್ರಥಮಂ-ಎಲ್ಲಕ್ಕೂ ಮೊದಲು, ಉತ್ಪದ್ಯತೇ-ಹುಟ್ಟುವುದೋ, ಕಲ್ಪಃ-ಆ ಕಲ್ಪವು, ತನ್ನಾಮಾ-ಆ ವಸ್ತುವಿನ ನಾಮವುಳ್ಳದ್ದೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಸ ವಿಷ್ಣುಃ ಪದ್ಮನಾಭಾಖ್ಯಃ ತನ್ನಾಭಿಕಮಲಾದಭೂತ್ ।**
**ಹಿರಣ್ಯಗರ್ಭನಾಮಾಸೌ ಸ ಜಾತೋ ದದೃಶೇ ದಿಶಃ ॥ ೩೬ ॥**

ಸಃ-ಆ (ನಾಭಿಯಿಂದ ಉತ್ಪನ್ನವಾದ ಪದ್ಮವುಳ್ಳ), ವಿಷ್ಣುಃ-ಶ್ರೀವಿಷ್ಣುವು, ಪದ್ಮನಾಭಾಖ್ಯಃ-ಪದ್ಮನಾಭನೆಂಬ ಹೆಸರುಳ್ಳವನು; ತನ್ನಾಭಿಕಮಲಾತ್-ಆತನ ನಾಭಿಕಮಲದಿಂದ, ಹಿರಣ್ಯಗರ್ಭನಾಮಾ-ಹಿರಣ್ಯಗರ್ಭನೆಂಬ ನಾಮವುಳ್ಳ, ಅಸೌ-ಈ ಬ್ರಹ್ಮದೇವನು, ಅಭೂತ್-ಹುಟ್ಟಿದನು; ಜಾತಃ-ಹುಟ್ಟಿದ, ಸಃ-ಆತನು, ದಿಶಃ-ದಿಕ್ಕುಗಳನ್ನು (ಸುತ್ತಲೂ), ದದೃಶೇ-ನೋಡಿದನು.

**ಚತುರ್ದಿಕ್ಷು ಚ ಚತ್ವಾರಿ ಮುಖಾನ್ಯಾಸನ್ಮಹಾತ್ಮನಃ ।**
**ಊರ್ಧ್ವಂ ಪ್ರಪಶ್ಯತಸ್ತಸ್ಯ ಹಯಾಕಾರಮಭೂನ್ಮುಖಂ ॥ ೩೭ ॥**

ಮಹಾತ್ಮನಃ-ಮಹಾತ್ಮನಾದ ಬ್ರಹ್ಮದೇವನಿಗೆ, ಚತುರ್ದಿಕ್ಷು-ಪೂರ್ವಾದಿ ನಾಲ್ಕು

---

ನಿರೂಪಿಸಲಾದ (ಸೂಕ್ಷ್ಮ ಸೃಷ್ಟಿಕ್ರಮದಲ್ಲಿ ಇದೇ ಅಧ್ಯಾಯದ ಶ್ಲೋಕ೯ ರಿಂದ ಮುಂದಿನ ಶ್ಲೋಕಗಳಲ್ಲಿ ಹೇಳಿರುವ) ತ್ರಿವೃತ್ಕರಣ ಕ್ರಮದಿಂದ, ತೈಜಸ, ಜಲ, ಭೌಮಗಳೆಂಬ ಮೂರು ರಾಶಿಗಳನ್ನೂ, ೪ನೇ ವಾಯು ವೀಯರಾಶಿಯನ್ನೂ (ಬ್ರಹ್ಮಾಂಡದೊಳಗೆ) ಸೃಷ್ಟಿ ಮಾಡಿದನು (೩೩). ನಂತರ ಪ್ರಾಪ್ತವಾದ, ಪುರುಷನಾಮಕ ಬ್ರಹ್ಮದೇವನ

ದಿಕ್ಕುಗಳಲ್ಲಿ ಚತ್ವಾರಿ ಮುಖಾನಿ ಚ-ನಾಲ್ಕು ಮುಖಗಳೇ, ಆಸನ್-ಆದವು (ಹುಟ್ಟಿಕೊಂಡವು); ಊರ್ಧ್ವಂ-ಮೇಲೆ, ಪಶ್ಯತಃ-ನೋಡತಕ್ಕ, ತಸ್ಯ-ಆತನಿಗೆ, ಹಯಾಕಾರಂ-ಅಶ್ವಾಕಾರದ, ಮುಖಂ-ಮುಖವು, ಅಭೂತ್-ಉದ್ಭವಿಸಿತು.

**ದಂಡಂ ಕಮಂಡಲುಂ ಚಾಕ್ಷಮಾಲಾಂ ಮುದ್ರಾಂ ಪ್ರಬೋಧಿನೀಂ ।**
**ದಧಾನಶ್ಚತುರೋ ಹಸ್ತಾನ್ ಗಲೇ ಯಜ್ಞೋಪವೀತಕಂ ॥ ೩೮ ॥**

**ಪದ್ಮಸ್ಯ ಕರ್ಣಿಕಾಮಧ್ಯೇ ನಿಷಣ್ಣಃ ಸ್ವಸ್ತಿಕಾಸನೇ ।**
**ಶುದ್ಧವಾಸೋದ್ವಯಧರಂ ವೀಕ್ಷಾಂಚಕ್ರೇಂಗಮಾತ್ಮನಃ ॥ ೩೯ ॥**

ದಂಡಂ ಕಮಂಡಲುಂ-ದಂಡಕಮಂಡಲುಗಳನ್ನೂ, ಚ-ಮತ್ತು ಅಕ್ಷ ಮಾಲಾಂ-ಅಕ್ಷ (ಪದ್ಮಾಕ್ಷ)ಮಾಲೆಯನ್ನೂ, ಪ್ರಬೋಧಿನೀಂ ಮುದ್ರಾಂ-ಜ್ಞಾನಮುದ್ರೆ

---

ಪೂರ್ವಪರಾರ್ಧದ (ಮೊದಲಿನ ೫೦ ವರ್ಷಗಳ) ಕಡೆಯ ದಿನಕಲ್ಪದ ಆರಂಭದಲ್ಲಿ ಶ್ರೀವಿಷ್ಣುವಿನ ನಾಭಿಯಿಂದ, ಉತ್ತಮವಾದ ಒಂದು ಪದ್ಮವು ಹುಟ್ಟಿತು;[1] ಈ ಕಾರಣದಿಂದ, ಪೂರ್ವಪರಾರ್ಧದ ಕಡೆಯ ದಿನವು 'ಪಾದ್ಮಕಲ್ಪ'ವೆಂಬ ನಾಮವನ್ನು ಹೊಂದಿತು; ಯಾವ ಕಲ್ಪದಲ್ಲಿ ಮೊದಲಿಗೆ ಯಾವ ವಸ್ತುವು ಹುಟ್ಟುತ್ತದೆಯೋ, ಆ

1. 'ಯತ್ರ ವಾಯ್ವಾದಿ ಪದ್ಮಾದಿ ರೂಪೇಣ ಪ್ರಕೃತಿಃ ಸ್ಥಿತಾ ।' (ಭಾಗ.ತಾ) ಎಂಬಲ್ಲಿ ಪ್ರಳಯಕಾಲದಲ್ಲಿ ವಾಯು, ಜಲ, ಪದ್ಮ ರೂಪಗಳಿಂದ ಲಕ್ಷ್ಮೀದೇವಿಯೇ ಇರುತ್ತಿದ್ದಳೆಂದು ವರ್ಣಿತವಾಗಿದೆ. 'ಲಕ್ಷ್ಮೀರ್ವೋದಕರೂಪೇಣ ಶಯ್ಯಾರೂಪೇಣ ಚಾಂಡಜ । ಆಸೀದ್ಗರ್ಭೋದಕೇ ಚೇತ್ಥಂ ನಾನ್ಯದಾಸೀತ್ಕಥಂಚನ ॥" ಎಂಬ (ಬ್ರಹ್ಮಾಂಡ) ವಾಕ್ಯವು, ಜಲದಲ್ಲಿ ಶಯನಮಾಡಿದ ಶ್ರೀಹರಿಗೆ, ಹೇ ಗರುಡ! ಲಕ್ಷ್ಮೀದೇವಿಯೇ, ಉದಕ, ಶಯ್ಯಾದಿ ರೂಪಗಳಿಂದ ಇರುವಳೆಂದೂ ಹೇಳುತ್ತದೆ ಮತ್ತು 'ತಸ್ಯ ನಾಭೇರಭೂತ್ಪದ್ಮಂ ಸೌವರ್ಣಂ ಭುವನಾಶ್ರಯಂ । ತತ್ಪ್ರಾಕೃತಂ ಚ ವಿಜ್ಞೇಯಂ ಭೂದೇವೀತ್ಯಭಿಮಾನಿನೀ ॥' ಎಂದು ಅಲ್ಲಿಯೇ (ಬ್ರಹ್ಮಾಂಡದಲ್ಲಿ) ಶ್ರೀಹರಿಯ ನಾಭಿಯಿಂದ ಉದ್ಭವಿಸಿದ ಸುವರ್ಣಾತ್ಮಕ ಪದ್ಮವು ಲೋಕಗಳಿಗೆ ಆಶ್ರಯವಾಗತಕ್ಕದ್ದೆಂದೂ, ಅದು, ಪ್ರಾಕೃತವೆಂದೂ ಭೂದೇವಿ (ಭೂರೂಪ ಲಕ್ಷ್ಮೀ)ಯಿಂದ ಅಭಿಮನ್ಯಮಾನವಾದುದೆಂದೂ ವರ್ಣಿತವಾಗಿದೆ. ಈ ವಿವಿಧ ವಾಕ್ಯಗಳಿಂದ ಏರ್ಪಡುವ ನಿರ್ಣಯವು ಹೀಗಿದೆ:— ಶ್ರೀಹರಿಯ ಕಿರೀಟಾದಿ ಆಭರಣಗಳು, ಚಕ್ರಾದಿ ಆಯುಧಗಳು, ಸ್ವಸ್ವರೂಪಾತ್ಮಕವಾದವುಗಳನ್ನು ಶ್ರೀಹರಿಯು ಸರ್ವದಾ ಧರಿಸಿರುತ್ತಾನೆ (ಅವನ ರೂಪದಿಂದ ಅವು ಅಭಿನ್ನಗಳೇ); ಬಹುರೂಪಗಳಿಂದ ತನ್ನನ್ನು ಸೇವಿಸಲು ಉತ್ಸುಕಳಾದ ಶ್ರೀ ಲಕ್ಷ್ಮೀರೂಪಗಳೇ ಆದ ಲಕ್ಷ್ಮ್ಯಾತ್ಮಕ ಆಯುಧಾಭರಣಗಳನ್ನು ಆಕೆಯ ಪ್ರೀತ್ಯರ್ಥವಾಗಿ ಶ್ರೀಹರಿಯು ಧರಿಸುತ್ತಾನೆ; ಸೃಷ್ಟಿಕಾಲದ ನಾಭಿಪದ್ಮ ಮೊದಲಾದ ವಸ್ತುಗಳನ್ನು ಲಕ್ಷ್ಮ್ಯಾತ್ಮಕವೆಂದು ನಿರೂಪಿಸುವ ವಾಕ್ಯಗಳಿಗೆ, ಲಕ್ಷ್ಮಿಯೇ ಅವುಗಳ ಏಕಮಾತ್ರ ಅಭಿಮಾನಿಯೆಂದೂ (ಅವಾಂತರಾಭಿಮಾನಿರಹಿತಗಳೆಂದೂ) ತಿಳಿಯಬೇಕು— ಆ ಎಲ್ಲರೂ, ನಾಭಿಪದ್ಮದಿಂದ ಬ್ರಹ್ಮನು ಹುಟ್ಟಿದಮೇಲೆ ಜನಿಸುತ್ತಾರೆ.

ಯನ್ನೂ ಗಲೇ-ಕಂಠದಲ್ಲಿ ಯಜ್ಞೋಪವೀತಕಂ-ಯಜ್ಞೋಪವೀತವನ್ನೂ ಚತುರಃ-ನಾಲ್ಕು, ಹಸ್ತಾನ್-ಕೈಗಳನ್ನೂ ದಧಾನಃ-ಧರಿಸಿದವನೂ, (ಇವುಗಳನ್ನುಳ್ಳವನೂ); ಪದ್ಮಸ್ಯ- ಕಮಲದ, ಕರ್ಣಿಕಾಮಧ್ಯೇ-ಕರ್ಣಿಕಾ ಮಧ್ಯದಲ್ಲಿ (ದಳಗಳ ಮಧ್ಯದಲ್ಲಿ), ಸ್ವಸ್ತಿಕಾಸನೇ-ಸ್ವಸ್ತಿಕಾಸನದಲ್ಲಿ ನಿಷಣ್ಣಃ-ಕುಳಿತಿರುವ, ಶುದ್ಧವಾಸೋದ್ವಯಧರಂ-ಶುದ್ಧವಾದ ಎರಡು ವಸ್ತ್ರಗಳನ್ನು ಧರಿಸಿರುವ, ಆತ್ಮನಃ-ತನ್ನ ಅಂಗಂ-ದೇಹವನ್ನು ವೀಕ್ಷಾಂಚಕ್ರೇ-ನೋಡಿದನು (ಗಮನಿಸಿದನು).

ತದಾ ವಿಷ್ಣ್ವಾಜ್ಞಯಾ ದುರ್ಗಾ ಜಲಬಿಂದುಭಿರನ್ವಿತಂ ।
ವಿಸಸರ್ಜ ಮಹಾವಾತಂ ತೇನಾಭೂತ್ಪೀಡಿತೋ ವಿಧಿಃ ॥ ೪೦ ॥
ತದಾ ಗಾಢಾಂಧಕಾರೇ ಸ್ವಮಸಹಾಯಂ ವಿಲೋಕ್ಯ ಸಃ ।
ಪೀಡ್ಯಮಾನೋ ವರ್ಷವಾತೈಃ ಕ್ಷಣಂ ಭೀತೋಽಸ್ಮರದ್ಧರಿಂ ॥ ೪೧ ॥

ತದಾ-ಆಗ (ಹೀಗೆ ತನ್ನ ದೇಹವನ್ನು ಬ್ರಹ್ಮನು ತಾನು ವೀಕ್ಷಿಸಿದಾಗ), ವಿಷ್ಣ್ವಾಜ್ಞಯಾಃ-ಶ್ರೀವಿಷ್ಣುವಿನ ಆಜ್ಞೆಯಿಂದ, ದುರ್ಗಾ-ದುರ್ಗಾರೂಪಳಾದ ಶ್ರೀಲಕ್ಷ್ಮೀದೇವಿಯು, ಜಲಬಿಂದುಭಿಃ-ಜಲಬಿಂದುಗಳಿಂದ, ಅನ್ವಿತಂ-ಕೂಡಿದ, ಮಹಾವಾತಂ-ಚಂಡಮಾರುತವನ್ನು (ಬಿರುಗಾಳಿಯನ್ನು), ವಿಸಸರ್ಜ-ಸೃಷ್ಟಿಸಿದಳು (ನಿರ್ಮಾಣಮಾಡಿ ಕಮಲಮಧ್ಯದಲ್ಲಿ ಕುಳಿತ ಬ್ರಹ್ಮದೇವನ ಮೇಲೆ ಬೀಸುವಂತೆ ಮಾಡಿದಳು); ತೇನ-ಅದರಿಂದ, ವಿಧಿಃ-ಬ್ರಹ್ಮದೇವನು, ಪೀಡಿತಃ-ಹಿಂಸಿಸಲ್ಪಟ್ಟವನು (ದುಃಖಿತನು), ಅಭೂತ್-ಆದನು; ತದಾ-ಆಗ, ಸಃ-ಆ ಬ್ರಹ್ಮದೇವನು, ಗಾಢಾಂಧಕಾರೇ-ಕಗ್ಗತ್ತಲಲ್ಲಿ ಅಸಹಾಯಂ-ಅನ್ಯಸಹಾಯರಹಿತನಾದ, ಸ್ವಂ- ತನ್ನನ್ನು ವಿಲೋಕ್ಯ-ನೋಡಿ, ವರ್ಷವಾತೈಃ-ಮಳೆಗಾಳಿಗಳಿಂದ, ಪೀಡ್ಯಮಾನಃ-ಪೀಡಿಸಲ್ಪಟ್ಟವನಾಗಿ, ಕ್ಷಣಂ-ಕ್ಷಣಕಾಲ, ಭೀತಃ-ಭಯಪಟ್ಟವನಾಗಿ, ಹರಿಂ-ಶ್ರೀಹರಿಯನ್ನು ಅಸ್ಮರತ್-ಸ್ಮರಿಸಿದನು.

---

ನಾಮದಿಂದ ಆ ಕಲ್ಪವು ವ್ಯವಹರಿಸಲ್ಪಡುತ್ತದೆಂಬುದು ಸಾಮಾನ್ಯ ನಿಯಮವಾಗಿದೆ (೩೪-೩೫). ಹೀಗೆ ಶ್ರೀವಿಷ್ಣುವಿನ ನಾಭಿಯಿಂದ ಪದ್ಮವು ಹುಟ್ಟಿದ್ದರಿಂದ, ಆತನು ಪದ್ಮನಾಭನೆಂಬ ನಾಮವುಳ್ಳವನಾದನು; ಹೀಗೆ ನಾಭಿಕಮಲದಿಂದ ಹುಟ್ಟಿದ ಈತನು (ಆ ಪದ್ಮವು ಸುವರ್ಣಾತ್ಮಕವಾದುದರಿಂದ) ಹಿರಣ್ಯಗರ್ಭನೆನಿಸಿದನು; ಪುರುಷನಾಮಕ ಬ್ರಹ್ಮದೇವನೇ ಇಲ್ಲಿ ಹುಟ್ಟಿ ಏಕಾಕಿಯಾಗಿದ್ದ ತಾನು ಎಲ್ಲ ದಿಕ್ಕುಗಳನ್ನು (ಸುತ್ತಲೂ) ನೋಡಿದನು (೩೬). ಈ ಮಹಾತ್ಮನಾದ ಬ್ರಹ್ಮದೇವನಿಗೆ, ಆಗ (ಹಾಗೆ ನೋಡಿದಾಗ) ಪೂರ್ವಾದಿ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಮುಖಗಳಾದವು; ತಲೆ ಎತ್ತಿ ಮೇಲೆ ನೋಡಲಾಗಿ, ಆತನಿಗೆ, ಮೇಲ್ಭಾಗದಲ್ಲಿ ಹಯಾಕಾರದ ಮತ್ತೊಂದು ಮುಖವಾಯಿತು (೩೭).

ತತಸ್ತಪತಪೇತ್ಯಾಸೀದಶರೀರೈವ ಭಾರತೀ ।
ಸಮಾಧಿಯೋಗಮಾಸ್ಥಾಯ ನಿರುಚ್ಛ್ವಾಸೋऽಭವತ್ತತಃ ॥ ೪೨ ॥
ದಧ್ಯಾವಾಂತರಮಾತ್ಮಾನಂ ಬ್ರಹ್ಮಾರೂಪಂ ಸದಾಶಿವಂ ।
ದಿವ್ಯವರ್ಷಾಯುತಂ ಪಶ್ಚಾದುತ್ಥಿತಃ ಸ ಸಮಾಧಿತಃ ॥ ೪೩ ॥
ಪ್ರೀತೋऽಥ ತಪಸಾ ತೇನ ಪದ್ಮನಾಭೋ ಹರಿಃ ಸ್ವಯಂ ।
ಕೌಮಾರಂ ರೂಪಮಾಸ್ಥಾಯ ನಿಜರೂಪಮದರ್ಶಯತ್ ॥ ೪೪ ॥

ತತಃ-ಆಗ (ಹರಿಸ್ಮರಣೆಯ ನಂತರ), ತಪತಪ ಇತಿ-ತಪ, ತಪ, ಎಂಬ, ಅಶರೀರಾ ಏವ-ಅಶರೀರವೇ ಆದ, ಭಾರತೀ-ವಾಣಿಯು, ಆಸೀತ್-ಆಯಿತು (ಕೇಳಿತು); ತತಃ-(ಈ ಅಶರೀರನುಡಿಯನ್ನು ಕೇಳಿದ) ನಂತರ, ಸಮಾಧಿ ಯೋಗಂ-ಏಕಾಗ್ರಧ್ಯಾನಸ್ಥಿತಿಯನ್ನು ಆಸ್ಥಾಯ-ಹೊಂದಿ, ಬ್ರಹ್ಮಾ-ಬ್ರಹ್ಮದೇವನು, ನಿರುಚ್ಛ್ವಾಸಃ-ಶ್ವಾಸನಿರೋಧವುಳ್ಳವನು, ಅಭವತ್-ಆದನು; ಸದಾಶಿವಂ-ನಿತ್ಯ ಮಂಗಲಸ್ವರೂಪರ, ರೂಪಂ-ರೂಪವುಳ್ಳ, ಅಂತರಂ-ತನ್ನ ಅಂತರ್ಯಾಮಿಯಾದ, ಆತ್ಮಾನಂ-ಪರಮಾತ್ಮನನ್ನು ದಿವ್ಯವರ್ಷಾಯುತಂ-ದೇವಮಾನದ೧೦,೦೦೦ ವರ್ಷಗಳ ಕಾಲ, ದಧ್ಯೌ-ಧ್ಯಾನಿಸಿದನು; ಪಶ್ಚಾತ್-ಆ ನಂತರ, ಸಃ-ಆ ಬ್ರಹ್ಮದೇವನು, ಸಮಾಧಿತಃ-ಧ್ಯಾನಮಗ್ನಾವಸ್ಥೆಯಿಂದ, ಉತ್ಥಿತಃ-ಎದ್ದನು (ಜಾಗೃತನಾದನು—ಬಾಹ್ಯಜ್ಞಾನವುಳ್ಳವನಾದನು); ಅಥ-ಆಗ (ಹೀಗೆ ಎಚ್ಚತ್ತಾಗ), ತೇನ-ಆತನ, ತಪಸಾ-ತಪಸ್ಸಿನಿಂದ,

---

ಹೀಗೆ ಪಂಚಮುಖಗಳುಳ್ಳ ಬ್ರಹ್ಮದೇವನು, ದಂಡಕಮಂಡಲುಗಳನ್ನೂ ಪದ್ಮಾಕ್ಷಮಾಲೆಯನ್ನೂ, ಕಂಠದಲ್ಲಿ ಯಜ್ಞೋಪವೀತವನ್ನೂ, ಜ್ಞಾನಮುದ್ರೆಯನ್ನೂ[1] ನಾಲ್ಕು ಹಸ್ತಗಳನ್ನು ಧರಿಸಿ, ಪದ್ಮದ ಕರ್ಣಿಕಾಮಧ್ಯದಲ್ಲಿ ಸ್ವಸ್ತಿಕಾಸನದಲ್ಲಿ[2] ಕೂತು, ಶುದ್ಧವಸ್ತ್ರದ್ವಯಗಳನ್ನೂ ಧರಿಸಿರುವ ತನ್ನ ದೇಹವನ್ನು ತಾನೇ ನೋಡಿಕೊಂಡನು (೩೮-೩೯). ಆಗ ಶ್ರೀವಿಷ್ಣುವಿನ ಆಜ್ಞೆಯಿಂದ, ದುರ್ಗಾದೇವಿಯು (ದುರ್ಗಾರೂಪಳಾದ ಶ್ರೀಲಕ್ಷ್ಮೀದೇವಿಯು), ಜಲಬಿಂದುಗಳಿಂದ ಕೂಡಿದ, (ಮಳೆಸಹಿತವಾದ) ಚಂಡಮಾರುತವನ್ನು (ಬಿರುಗಾಳಿಯನ್ನು) ಸೃಜಿಸಿದಳು; ಆದರಿಂದ ಬ್ರಹ್ಮದೇವನು

---

1. ಜ್ಞಾನಮುದ್ರೆ ಎಂಬುದು, ಉಪದೇಶ ಮಾಡುವ ಕಾಲದಲ್ಲಿ ಗುರುವು ತನ್ನ ಕೈಬೆರಳುಗಳನ್ನು ಹಿಡಿದಿರುವ ಒಂದು ವಿಶಿಷ್ಟ ಭಂಗಿ. ತರ್ಕಮುದ್ರೆ, ಅಭಯಹಸ್ತ ಇತ್ಯಾದಿಗಳು ವಿವಿಧ ಭಂಗಿಗಳು.

2. ಕಾಲುಗಳನ್ನು ನಿರ್ದಿಷ್ಟ ರೀತಿಯಲ್ಲಿ ಮಡಿಸಿಕೊಂಡು ಕೂಡುವ ವಿಧಾನಗಳು ನಾನಾ ಆಸನಗಳೆಂದು ವರ್ಣಿಸಲ್ಪಡುತ್ತವೆ; ಪದ್ಮಾಸನ, ಸ್ವಸ್ತಿಕಾಸನ ಇತ್ಯಾದಿ ವಿವರಗಳನ್ನು ಯೋಗಾಭ್ಯಾಸಕ್ಕೆ ಸಂಬಂಧಿಸಿದ ಗ್ರಂಥದಿಂದ ತಿಳಿಯಬಹುದು.

ಪ್ರೀತಃ-ತುಷ್ಟನಾದ, ಪದ್ಮನಾಭಃ ಹರಿಃ-ಪದ್ಮನಾಭನಾದ ಶ್ರೀಹರಿಯು, ಸ್ವಯಂ-ಸಾಕ್ಷಾತ್ತಾಗಿ (ತಾನೇ), ಕೌಮಾರಂ ರೂಪಂ- 'ಕುಮಾರ' ರೂಪವನ್ನು ಆಸ್ಥಾಯ-ಹೊಂದಿ, ನಿಜರೂಪಂ-ತನ್ನ ರೂಪವನ್ನು ಅದರ್ಶಯತ್-ತೋರಿಸಿದನು (ಬ್ರಹ್ಮನಿಗೆ ಪ್ರತ್ಯಕ್ಷನಾದನು.)

ತದಾ ಹಿರಣ್ಯಗರ್ಭೋಽಸೌ ವೀಕ್ಷ್ಯ ತಂ ಸಹಸೋತ್ಥಿತಃ ।
ಪ್ರಣತಃ ಪಾದಯೋಸ್ತಸ್ಯ ತೇನ ಚೋತ್ಥಾಪಿತಃ ಪುರಃ ॥ ೪೫ ॥

ತದಾ-ಆಗ, ಅಸೌ-ಈ, ಹಿರಣ್ಯಗರ್ಭಃ-ಬ್ರಹ್ಮದೇವನು, ತಂ-ಪ್ರತ್ಯಕ್ಷನಾದ ಶ್ರೀಹರಿಯನ್ನು ವೀಕ್ಷ್ಯ-ನೋಡಿ, ಸಹಸಾ-ಸಂಭ್ರಮದಿಂದ (ತಕ್ಷಣವೇ), ಉತ್ಥಿತಃ-

---

ಕಿಂಚಿತ್ ದುಃಖಿಯಾದನು; ಸುತ್ತಲೂ ಕಗ್ಗತ್ತಲು ಮುಸುಕಿತ್ತು; ಅಲ್ಲಿ ಅಸಹಾಯಕನಾಗಿ ಒಬ್ಬನೇ ಇದ್ದುದನ್ನು ಕಂಡು, ಮಳೆಗಾಳಿಗಳಿಂದ ಪೀಡಿತನಾಗಿ, ಕ್ಷಣಕಾಲ ಭಯಗ್ರಸ್ತನಾಗಿ ಶ್ರೀಹರಿಯನ್ನು ಸ್ಮರಿಸಿದನು[1] (೪೦-೪೧). ಆಗ, 'ತಪ-ತಪ' ಎಂಬ ಅಶರೀರವಾಣಿಯು ಕೇಳಿಸಿತು; ಬ್ರಹ್ಮದೇವನು ಧ್ಯಾನದಲ್ಲಿ ನಿಷ್ಠಿತನಾಗಿ,[2] ಶ್ವಾಸನಿರೋಧ ಮಾಡಿ, ನಿತ್ಯಮಂಗಲ ಸ್ವರೂಪವಾದ, ಸ್ವಾಂತರ್ಯಾಮಿಯಾದ ಶ್ರೀಹರಿಯನ್ನು ದೇವಮಾನದ

---

1. 'ಅಜ್ಞಾನಂ ತು ಚತುರ್ಭಾಗಂ ದ್ವಿಭಾಗಂ ಭಯಮೇವ ಚ ।' ಇತ್ಯಾದಿಗಳು ಹೇಳುವ, ಬ್ರಹ್ಮದೇವನಿಗೆ ಪ್ರಾಪ್ತವಾಗುವುವೆಂಬ, ಭಯಶೋಕಗಳ ವಿಶೇಷ ಪರಿಸ್ಥಿತಿಗಳಲ್ಲಿ, ಇಲ್ಲಿ ಪ್ರಸಕ್ತವಾಗಿರುವುದೂ, ಒಂದು. 'ದೇವಾನಾಂ ನೈವಕೇನಾಪಿ ದುಃಖಂ' (ಏಕಾದಶ ಭಾಗ-ತಾತ್ಪರ್ಯ) ಎಂಬಲ್ಲಿ ದೇವತೆಗಳಿಗೆ, ಪ್ರಬಲ ಪ್ರಾರಬ್ಧವೇ ಕಾರಣವಾಗಿ ಉಳ್ಳ ಅಸುರಾವೇಶದಿಂದಲ್ಲದೆ, ಬೇರಾವ ಕಾರಣದಿಂದಲೂ, ದುಃಖಾದಿಗಳಿಲ್ಲ. ಹೀಗಿರಲು, ಅಭಿಜ್ಞಾಪ್ರಕಾರ (ಅಸುರಾವೇಶವು ಎಂದಿಗೂ ಕೂಡದ) ಬ್ರಹ್ಮದೇವನಿಗೆ, ದುಃಖಪ್ರಾರಬ್ಧ ಸೂಕ್ಷ್ಮವೂ ಆಗಿರುವಾಗ, ಭಯದುಃಖಾದಿ ಗಳು ಸರ್ವಥಾ ಉಪಪನ್ನವಾಗುವುದಿಲ್ಲ. ವಾಯುಬ್ರಹ್ಮರು ಅಪರಿಮಿತ ಜ್ಞಾನಾನಂದಾದಿ ಗುಣಗಳಿಂದ ಸದಾ ಪೂರ್ಣರು; ಮುಂದೆ ಜನಿಸುವ ಪ್ರಜೆಗಳಲ್ಲಿ ಅಜ್ಞಾನ ಭಯಾದಿ ಸ್ವಭಾವ ಸಿದ್ಧಿಗಾಗಿ, (ಬ್ರಹ್ಮನು ಮಾಡದುದನ್ನು ಮುಂದೆ ಯಾರೂ ಎಂದೂ ಮಾಡುವುದಿಲ್ಲ), ದಗ್ಧ ವಸ್ತ್ರದಂತೆ ಕಾರ್ಯಾಸಮರ್ಥವಾದ ಅವರ ಬಾಹ್ಯಾಂತಃಕರಣದಲ್ಲಿ (ಮನಸ್ಸಿನಲ್ಲಿ). ಅತ್ಯಲ್ಪತಮ ಭಯಾದಿ ವಿಕಾರವು ಕ್ಷಣಾರ್ಧ ಕಾಲ ಮಾತ್ರ ಉದ್ಭವಿಸುತ್ತದೆ— ಅವರಿಗೆ ಅದರ ಭೋಗ ಸರ್ವಥಾ ಇಲ್ಲ—ಭಯಾದಿ ವಿಕಾರವುಳ್ಳವರಂತೆ ವಿಡಂಬನ ಮಾಡುತ್ತಾರೆ.

2. ಧಾರಣ, ಧ್ಯಾನ, ಸಮಾಧಿಗಳೆಂಬುವು, ಮನಸ್ಸಿನ ಸ್ಥಿತಿವಿಶೇಷಗಳು; ಒಂದು ವಸ್ತುವನ್ನು ಚಿಂತಿಸುತ್ತಿರುವ ಮನಸ್ಸು, ಪದೇಪದೇ ಅದನ್ನು ಬಿಟ್ಟು ಅನ್ಯತ್ರ ಹೋಗುತ್ತಿದ್ದರೆ (ಮಧ್ಯೆ ವಿಚ್ಛಿತ್ತಿಯುಂಟಾಗುತ್ತಿರುವ ಮನಃಸ್ಥಿತಿಯು) ಧಾರಣಾವಸ್ಥೆಯು; ಏಕಧಾರೆಯಂತೆ, ಮನಸ್ಸು ಏಕತ್ರ, ನಿರ್ದಿಷ್ಟಕಾಲದವರೆಗೆ, ನಿಂತರೆ, ಅದು ಧ್ಯಾನಾವಸ್ಥೆಯೆನಿಸುತ್ತದೆ; ಧ್ಯಾನಾವಸ್ಥೆಯು, ಯತ್ನವಿಲ್ಲದೆ (ಅಪ್ರಯಾಸದಿಂದ) ಏಕತ್ರ ನಿಂತರೆ, ಅದು ಸಮಾಧಿಯು.

ಎದ್ದನು; ತಸ್ಯ-ಶ್ರೀಹರಿಯ, ಪಾದಯೋಃ-ಪಾದಗಳಿಗೆ, ಪ್ರಣತಃ-ನಮಸ್ಕರಿಸುವವನು (ಆದನು); ತೇನ ಚ-ಶ್ರೀಹರಿಯಿಂದಲೇ, ಉತ್ಥಾಪಿತಃ-ಹಿಡಿದೆತ್ತಲ್ಪಟ್ಟನು.

**ಬದ್ಧಾಂಜಲಿಃ ಸ್ಥಿತೋ ಭೂತ್ವಾ ವೀಕ್ಷಂಸ್ತನ್ಮುಖಪಂಕಜಂ ।**

**ಉಪಾದಿಶತ್ತತೋ ವೇದಾನ್ ಸಾಂಗಾನ್ ಸೂತ್ರಾಣಿ ಚಾಗಮಾನ್ ॥ ೪೬**

**ಪಂಚರಾತ್ರಮುಖಾಂಸ್ತಸ್ಮೈ ತತೋಽಂತರ್ಧಾನಮಾಪ್ತವಾನ್ ।**

(ಪುರಃ-ಶ್ರೀಹರಿಯ ಎದುರಿನಲ್ಲಿ ಹಿಂದಿನ ಶ್ಲೋಕದ ಈ ಶಬ್ದವು ಇಲ್ಲಿ ಅನ್ವಯವಾಗುತ್ತದೆ). ಬದ್ಧಾಂಜಲಿಃ-ಅಂಜಲಿಬದ್ಧನಾಗಿ, ಸ್ಥಿತಃ-ನಿಂತವನು, ಭೂತ್ವಾ-ಆಗಿ, ತನ್ಮುಖಪಂಕಜಂ-ಶ್ರೀಹರಿಯ ಮುಖಪದ್ಮವನ್ನು, ವೀಕ್ಷನ್-ನೋಡುವವನು (ಆದನು): ತತಃ-ನಂತರ (ಶ್ರೀಹರಿಯು), ತಸ್ಮೈ-ಹೀಗೆ ನಿಂತ ಹಿರಣ್ಯಗರ್ಭನಿಗಾಗಿ, ಸಾಂಗಾನ್-ಅಂಗಸಹಿತವಾದ, ವೇದಾನ್-ವೇದಗಳನ್ನೂ, ಸೂತ್ರಾಣಿ-ಬ್ರಹ್ಮಸೂತ್ರಗಳನ್ನೂ ಚ-ಮತ್ತು ಪಂಚರಾತ್ರಮುಖಾನ್-ಪಂಚರಾತ್ರವೇ ಮೊದಲಾದವುಗಳನ್ನು, ಉಪಾದಿಶತ್-ಉಪದೇಶಿಸಿದನು; ತತಃ-ನಂತರ, ಅಂತರ್ಧಾನಂ-ಅಂತರ್ಧಾನವನ್ನು, ಆಪ್ತವಾನ್-ಹೊಂದಿದನು (ಅದೃಶ್ಯನಾದನು).

**ಅಧೀತಾಧ್ಯಯನಂ ಕುರ್ವಂಸ್ತಸ್ಥೌ ವರ್ಷಸಹಸ್ರಕಂ ॥ ೪೭ ॥**

**ಮತ್ವಾಥ ಶಕ್ತಮಾತ್ಮಾನಂ ವಿಶ್ವಸೃಷ್ಟೌ ಮನೋ ದಧೇ ।**

ಅಧೀತಾಧ್ಯಯನಂ-ಉಪದಿಷ್ಟವಾದ ವೇದಾದಿಗಳ ಅಧ್ಯಯನವನ್ನು (ಅಭ್ಯಾಸವನ್ನು), ಕುರ್ವನ್-ಮಾಡುತ್ತ, ವರ್ಷಸಹಸ್ರಕಂ-ಒಂದು ಸಾವಿರ ವರ್ಷಗಳವರೆಗೆ, ತಸ್ಥೌ-ನಿಂತನು(ಇದ್ದನು); ಅಥ-ಆಮೇಲೆ, ಆತ್ಮಾನಂ-ತನ್ನನ್ನು, ಶಕ್ತಂ-ಶಕ್ತನನ್ನಾಗಿ (ಸಮರ್ಥನೆಂದು), ಮತ್ವಾ-ತಿಳಿದು, ವಿಶ್ವಸೃಷ್ಟೌ-ಜಗತ್ಸೃಷ್ಟಿಯಲ್ಲಿ, ಮನಃ-ದಧೇ-ಮನಸ್ಸು ಮಾಡಿದನು.

---

ಹತ್ತು ಸಹಸ್ರ ವರ್ಷಗಳ ಕಾಲ, ಧ್ಯಾನಿಸಿದನು; ನಂತರ ಸಮಾಧಿಯಿಂದ ಬಹಿರ್ಮುಖನಾದನು; ಆತನ ತಪಸ್ಸಿನಿಂದ ಪ್ರೀತನಾದ ಪದ್ಮನಾಭರೂಪಿ ಶ್ರೀಹರಿಯು, ಕೌಮಾರ ರೂಪದಿಂದ[1] ಪ್ರತ್ಯಕ್ಷನಾಗಿ, ದರ್ಶನ ವನ್ನಿತ್ತನು (೪೨-೪೪)

ಹಿರಣ್ಯಗರ್ಭನು, ಸಂಭ್ರಮದಿಂದ ಮೇಲೆದ್ದು ಶ್ರೀಹರಿಯ ಪಾದಗಳಲ್ಲಿ ಶಿರವಿಟ್ಟು ನಮಸ್ಕರಿಸಿದನು; ಶ್ರೀಹರಿಯು ಆತನನ್ನು ಹಿಡಿದೆತ್ತಿದನು (೪೫). ಹಿರಣ್ಯಗರ್ಭನು ಅಂಜಲಿಬದ್ಧನಾಗಿ, ಶ್ರೀಹರಿಯ ಮುಖಪದ್ಮದಲ್ಲಿ ನೆಟ್ಟ ದೃಷ್ಟಿಯುಳ್ಳವನಾಗಿ,

1. ಇದು 'ಕುಮಾರ'ನಾಮಕ (ಸನತ್ಕುಮಾರನೆಂದೂ ಕರೆಯಲ್ಪಡುವ) ಶ್ರೀಹರಿಯ ಅವತಾರವು. ಸನಕಾದಿ ಬ್ರಹ್ಮಮಾನಸಪುತ್ರರಲ್ಲಿ ಒಬ್ಬನಾದ ಸನತ್ಕುಮಾರನು ಬೇರೆ. 'ಕುಮಾರ' ನಾಮಕನು ಕುಮಾರನ (ಬಾಲಕನ) ಆಕೃತಿಯುಳ್ಳವನೂ ಆಗಿದ್ದನು.

ಅವರ್ಧಯತ್ತತಃ ಪದ್ಮಮಧೋಮೂಲಂ ಸುವಿಸ್ತೃತಂ ॥ ೪೮ ॥
ಅಂಡಖರ್ಪರಮಾರಭ್ಯ ಯಾವದ್ವೈಕುಂಠಮೂಲಕಂ ।
ವವೃಧೇ ಕಕುಭೋ ವ್ಯಾಪ್ಯ ವಿಶ್ವಸ್ಥಿತ್ಯೈ ಚತುರ್ದಶ ॥ ೪೯ ॥

ತತಃ-(ಹೀಗೆ ಬ್ರಹ್ಮದೇವನು ಸಂಕಲ್ಪಿಸಿದ) ನಂತರ, ಪದ್ಮಂ-(ತಾನು ಸ್ಥಿತನಾಗಿದ್ದ ಕಮಲವು, ಅಧೋಮೂಲಂ-ಕೆಳಭಾಗದ ಬುಡದಲ್ಲಿದ್ದ ಅಂಡ ಖರ್ಪರಂ-ಬ್ರಹ್ಮಾಂಡದ ಖರ್ಪರ(ಚಿಪ್ಪು)ವನ್ನು ಆರಭ್ಯ-ಆರಂಭಿಸಿ (ಮೊದಲು ಮಾಡಿ), ವೈಕುಂಠಮೂಲಕಂ ಯಾವತ್-ವೈಕುಂಠದ ಮೂಲದ (ಬುಡದ)ವರೆಗೆ, ಸುವಿಸ್ತೃತಂ-ವಿಸ್ತಾರವಾಗಿ, ಕಕುಭಃ-ಆಕಾಶವನ್ನು ವ್ಯಾಪ್ಯ-ವ್ಯಾಪಿಸಿಕೊಂಡು, ಚತುರ್ದಶ-ಹದಿನಾಲ್ಕು, ವಿಶ್ವಸ್ಥಿತ್ಯೈ-ಲೋಕಗಳ ಸ್ಥಿತಿಗಾಗಿ (ಲೋಕಗಳಿಗೆ ಆಶ್ರಯವಾಗುವಂತೆ), ವವೃಧೇ-ವೃದ್ಧಿಗೊಂಡಿತು (ಪದ್ಮವು ವಿಸ್ತಾರವಾಗಿ ಹಬ್ಬಿತು).

ಭುವನಾನ್ಯಸೃಜತ್ತತ್ರ ಭೂಮೇಸ್ತು ಬಿಲಸಪ್ತಕಂ ।
ಭೂರ್ಭುವಸ್ಸ್ವರ್ಮಹರ್ಲೋಕಾಃ ಜನಲೋಕಸ್ತಪಸ್ತಥಾ ॥ ೫೦ ॥
ಸತ್ಯಲೋಕ ಇತಿ ಪ್ರಾಹುರ್ಭುವನಾನಿ ಚತುರ್ದಶ ।

ತತ್ರ-ಅಲ್ಲಿ(ಆ ಪದ್ಮದ ಆಶ್ರಯದಲ್ಲಿ), (ಬ್ರಹ್ಮನು); ಭುವನಾನಿ-ಲೋಕ ಗಳನ್ನು ಅಸೃಜತ್-ನಿರ್ಮಿಸಿದನು (ವ್ಯವಸ್ಥೆಗೊಳಿಸಿದನು); ಭೂಮೇಃ-ಭೂಮಿಯ, ಬಿಲಸಪ್ತಕಂ-ಒಳಭಾಗದಲ್ಲಿ ಗುಹೆಗಳಂತಿರುವ (ಪಾತಾಳಾದಿ) ಏಳು, ಭೂರ್ಭುವ ಸ್ಸ್ವರ್ಮಹರ್ಲೋಕಾಃ-ಭೂಲೋಕ, ಅಂತರಿಕ್ಷಲೋಕ, ಸ್ವರ್ಗಲೋಕ ಮತ್ತು ಮಹರ್ಲೋಕಗಳು, ಜನಲೋಕಃ-ಜನಲೋಕವೂ, ತಥಾ-ಹಾಗೂ, ತಪಃ- ತಪೋ ಲೋಕವೂ, ಸತ್ಯಲೋಕಃ-ಸತ್ಯಲೋಕವೂ, (ಹೀಗೆ), ಭುವನಾನಿ-ಲೋಕಗಳು,

---

ಎದುರಿಗೆ ನಿಂತನು; ಹೀಗೆ ನಿಂತ ಬ್ರಹ್ಮದೇವನಿಗೋಸ್ಕರ ಕುಮಾರನಾಮಕ ಶ್ರೀ ಅನಂತಪದ್ಮನಾಭನು, ಸಾಂಗವಾದ[1] ವೇದಗಳನ್ನೂ, ವೇದಾಂತ ಸೂತ್ರಗಳನ್ನೂ ಪಂಚರಾತ್ರಾದಿ ಆಗಮಗಳನ್ನೂ ಉಪದೇಶಿಸಿ ಅದೃಶ್ಯನಾದನು (೪೬). ಉಪದಿಷ್ಟ ವಿದ್ಯೆಗಳನ್ನು ಬ್ರಹ್ಮದೇವನು, ಒಂದು ಸಹಸ್ರ ವರ್ಷಗಳ ಕಾಲ ಅಧ್ಯಯನ ಮಾಡಿ, ಜಗತ್ಸೃಷ್ಟಿಯಲ್ಲಿ ಸಮರ್ಥನಾದೆನೆಂದು ಬಗೆದು, ಸೃಷ್ಟಿಕಾರ್ಯದಲ್ಲಿ ತೊಡಗಲು ಮನಸ್ಸು ಮಾಡಿದನು (ಸಂಕಲ್ಪಿಸಿದನು) (೪೭). ಆಗ, ಬ್ರಹ್ಮದೇವನು ಸ್ಥಿತನಾಗಿದ್ದ ಪದ್ಮನಾಭನ ನಾಭಿಕಮಲವು, ಕೆಳಭಾಗದ ಬ್ರಹ್ಮಾಂಡಖರ್ಪರವನ್ನಾರಂಭಿಸಿ, ಮೇಲ್ಭಾಗದಲ್ಲಿ (ಬ್ರಹ್ಮಾಂಡದಲ್ಲಿ ಮೇಲ್ಭಾಗದಲ್ಲಿ ಪ್ರಕಟವಾಗಿದ್ದ) ವೈಕುಂಠಲೋಕದ

---

1. ವೇದಾಂಗಗಳು—ವ್ಯಾಕರಣ, ನಿರುಕ್ತ, ಛಂದಸ್ಸು, ಶಿಕ್ಷಾ, ಕಲ್ಪ, ಜ್ಯೋತಿಷ, ಇವು ಆರು.

ಚತುರ್ದಶ-ಹದಿನಾಲ್ಕು, ಇತಿ-ಎಂದು, ಪ್ರಾಹುಃ-ಹೇಳುವರು (ಜ್ಞಾನಿಗಳು ತಿಳಿಯುತ್ತಾರೆ).

**ತದಾಧಾರಾರ್ಥಮಸೃಜದ್ವೈರಾಜಂ ದೇಹಮಾತ್ಮನಃ ॥ ೫೧ ॥**
**ಮಹದಾದ್ಯಖಿಲೈಸ್ತತ್ತ್ವೈರ್ನಿರ್ಮಿತಂ ವಿಶ್ವತೋಮುಖಂ ।**

ತದಾಧಾರಾರ್ಥಂ-ಈ ಲೋಕಗಳ ಆಧಾರಕ್ಕಾಗಿ, ಆತ್ಮನಃ-ಬ್ರಹ್ಮದೇವನ, ವೈರಾಜಂ-ವಿರಾಟ್ ಎಂಬ (ವೈರಾಜವೆಂದು ಕರೆಯಲ್ಪಡುವ), ದೇಹಂ-ದೇಹವನ್ನು ಭಗವಾನ್-ಶ್ರೀಹರಿಯು, ಅಸೃಜತ್-ನಿರ್ಮಿಸಿದನು; (ಹದಿನಾಲ್ಕು ಲೋಕಗಳನ್ನು ವ್ಯಾಪಿಸಿಕೊಂಡಿರುವ ಬೃಹದ್ದೇಹವನ್ನು ನಿರ್ಮಿಸಿದನು); (ಅದು), ಮಹದಾದಿ-ಮಹತತ್ತ್ವವೇ ಮೊದಲಾದ, ಅಖಿಲೈಃ-ಸಮಸ್ತ ತತ್ತ್ವೈಃ-ತತ್ತ್ವಗಳಿಂದ, ನಿರ್ಮಿತಂ-ನಿರ್ಮಿತವಾದುದು, (ಮತ್ತು), ವಿಶ್ವತೋಮುಖಂ-ವಿಶ್ವ ವ್ಯಾಪಕವಾದುದು.

**ತತ್ರೈವ ನಿದಧೇ ಸರ್ವಾನ್ ಜೀವಾನ್ ದೇವಾಂಶಕಾನಪಿ ॥ ೫೨ ॥**

ತತ್ರ ಏವ-ಆ ವೈರಾಜದೇಹದಲ್ಲಿಯೇ, ಸರ್ವಾನ್-ಸಮಸ್ತ ಜೀವಾನ್-ಜೀವರನ್ನೂ, ಅಪಿ-ಮತ್ತು ದೇವಾಂಶಕಾನ್-ದೇವಾಂಶರನ್ನೂ, ನಿದಧೇ-ಸ್ಥಾಪಿಸಿದನು; (ಸೃಷ್ಟಿಯಲ್ಲಿ ಬರಲಿದ್ದ ಸರ್ವಜೀವರನ್ನೂ ಆ ವೈರಾಜವೆಂಬ ದೇಹದಲ್ಲಿಟ್ಟನು).

**ವಿಧಾಯ ಪೌರುಷಂ ರೂಪಂ ಭಗವಾಂಸ್ತತ್ರ ಚಾವಿಶತ್ ।**
**ತೇನಾಭೂದ್ದೀಪ್ಯಮಾನಂ ತದ್ದಿಶಃ ಸರ್ವಾಃ ಪ್ರಕಾಶಿರೇ ॥ ೫೩ ॥**

ಭಗವಾನ್-ಶ್ರೀಹರಿಯು, ಪೌರುಷಂ-ಪುರುಷಾಕಾರದ (ಪುರುಷನಾಮಕ),

---

ಬುಡದವರೆಗೆ, ಗಗನವನ್ನು ವ್ಯಾಪಿಸಿ, ವಿಸ್ತಾರವಾಗಿ ಬೆಳೆಯಿತು; ಮುಂದೆ ನಿರ್ಮಿತವಾಗುವ ಲೋಕಗಳಿಗೆ ಆಧಾರಭೂತವಾಯಿತು (೪೮-೪೯). ಆ ಪದ್ಮದ ಆಶ್ರಯದಲ್ಲಿ ಬ್ರಹ್ಮನು ಲೋಕಗಳನ್ನು ನಿರ್ಮಿಸಿದನು; ಭೂಮಿಯ ಕೆಳಗಿರುವ ಪಾತಾಲಾದಿ ಸಪ್ತಲೋಕಗಳು,[1] ಭೂಃ, ಭುವಃ, ಸ್ವಃ, ಮಹಗಳೆಂಬ ನಾಲ್ಕು; ಮತ್ತು ಜನ, ತಪ, ಸತ್ಯಗಳೆಂಬ ಮೂರು, ಹೀಗೆ ಒಟ್ಟು ಹದಿನಾಲ್ಕು ಲೋಕಗಳೆಂದು ಜ್ಞಾನಿಗಳು ತಿಳಿಯುತ್ತಾರೆ (೫೦). ಈ ಹದಿನಾಲ್ಕು ಲೋಕಗಳಿಗೆ ಆಧಾರದಂತಿರುವ, ವಿರಾಟ್ ನಾಮಕವಾದ, ಒಂದು ದೇಹವನ್ನೂ ಶ್ರೀಹರಿಯು ನಿರ್ಮಿಸಿದನು; ಈ ದೇಹವು,

1. ಪಾತಾಲಾದಿ ಸಪ್ತ ಅಧೋಲೋಕಗಳು ಯಾವುವೆಂದರೆ:—ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ ಮತ್ತು ಪಾತಾಲ. ಭೂವಿವರಗಳಾದ ಇವು ಸಪ್ತ ಬಿಲಗಳೆಂದೂ ಕರೆಯಲ್ಪಡುತ್ತವೆ.

ರೂಪಂ-ರೂಪವನ್ನು ವಿಧಾಯ-ಮಾಡಿ(ಪ್ರಕಟಿಸಿ), ತತ್ರ-ಆ ವೈರಾಜದೇಹದಲ್ಲಿ ಆವಿಶತ್ ಚ-ಪ್ರವೇಶಿಸಿದನು; ತೇನ-ಈ ಕಾರಣದಿಂದ (ಪುರುಷನಾಮಕ ಶ್ರೀಹರಿಯ ಪ್ರವೇಶದಿಂದ), ತತ್-ಆ ದೇಹವು, ದೀಪ್ಯಮಾನಂ-ಪ್ರಕಾಶಿಸುವುದು, ಅಭೂತ್-ಆಯಿತು; ಸರ್ವಾನ್-ಸಮಸ್ತ ದಿಶಃ-ದಿಕ್ಕುಗಳನ್ನೂ ಚ-ಸಹ, ಕಾಶಿರೇ-ಪ್ರಕಾಶಗೊಳಿಸಿತು.

**ಸೋಽಸೃಜತ್ ಪ್ರಥಮಂ ಪ್ರಾಣಾದ್ವಾಯುಂ ವಾಚಃ ಸರಸ್ವತೀಂ ।**
**ತ್ರಿವಿಧಾಹಂಕೃತೇ ರುದ್ರಂ ತ್ರಿರೂಪಮಸೃಜತ್ತತಃ ॥ ೫೪ ॥**

ಸಃ-ಆ ವಿರಾಟ್‌ಪುರುಷನು (ವೈರಾಜದೇಹಪ್ರವಿಷ್ಟಶ್ರೀಹರಿಯು), (ತನ್ನ-ಆ

---

ಮಹದಾದಿ ಸಕಲ ತತ್ತ್ವಗಳಿಂದ ರಚಿತವಾದುದು[1] ಮತ್ತು ವಿಶ್ವವ್ಯಾಪಕವಾದುದು (೫೧). ಆ ವಿರಾಟ್ ದೇಹದಲ್ಲಿ ಸಮಸ್ತ ಜೀವರನ್ನೂ, ದೇವಾಂಶರನ್ನೂ ಸ್ಥಾಪಿಸಿದನು (೫೨). ಶ್ರೀಹರಿಯು ಪುರುಷನಾಮಕ (ಪುರುಷಾಕಾರದ) ರೂಪದಿಂದ ಆ ದೇಹವನ್ನು ಪ್ರವೇಶಿಸಿದನು; ಆ ಪ್ರವೇಶದಿಂದ ಆ ದೇಹವು ವಿಶೇಷವಾಗಿ ಪ್ರಕಾಶಿಸಿತು—ಮತ್ತು ಸಕಲ ದಿಕ್ಕುಗಳನ್ನು ಬೆಳಗಿತು—ಆ ದೇಹಕ್ಕೆ ವಿರಾಜವೆಂಬ ನಾಮವು, ಅನ್ವರ್ಥವಾಯಿತು (೫೩). ಪುರುಷನು, ವೈರಾಜದೇಹದಿಂದ, ಮೊದಲಿಗೆ, ಪ್ರಾಣದಿಂದ,

---

1. ಸತ್ಯಲೋಕಸ್ಥಿತವಾದ ಬ್ರಹ್ಮದೇವನ ದೇಹವು ಮಹತತ್ತ್ವಾತ್ಮಕವಾದುದು; ಬ್ರಹ್ಮಾಂಡದಲ್ಲಿ ವ್ಯಾಪ್ತವಾದ ಆತನ ವಿರಾಟ್‌ದೇಹವು ಸಕಲತತ್ತ್ವಗಳಿಂದ ರಚಿತವಾದುದು; ಒಂದು ವಿವಕ್ಷೆಯಿಂದ, ಮಹತತ್ತ್ವದಲ್ಲಿ ಅದರಿಂದಲೇ ಉತ್ಪನ್ನಗಳಾದ ಮುಂದಿನ ಎಲ್ಲ ತತ್ತ್ವಗಳೂ ಸೂಕ್ಷ್ಮರೂಪದಿಂದ ಇದ್ದೇ ಇವೆ. 'ಅಧಶ್ಚೋರ್ಧ್ವಂ ಪ್ರಸೃತಾಃ ತಸ್ಯ ಶಾಖಾಃ' (ಗೀತಾ)—ಎಂದರೆ, ತಸ್ಯ—ಆ ಜಗದಾಖ್ಯವೃಕ್ಷದ, ಶಾಖಾಃ—ಶಾಖಾಸ್ಥಾನೀಯವಾದ ಚೇತನಾಚೇತನ ರೂಪದ ಮಹದಹಂಕಾರಾದಿ ಪದಾರ್ಥಗಳು, ಅಧಃ—ತಮ್ಮಿಂದ ಹುಟ್ಟಿದ, ಆತಏವ, ತಮಗಿಂತ ಅಧಮವಾದ ಪ್ರಾಣಿಗಳ ಶರೀರಾದಿಗಳಲ್ಲಿಯೂ, ಊರ್ಧ್ವಂ ಚ—ತಮಗಿಂತ ಉತ್ಕೃಷ್ಟವಾದ್ದರಿಂದ ಊರ್ಧ್ವಶಬ್ದವಾಚ್ಯವೂ ತಮಗೆ ಕಾರಣಭೂತವೂ ಆದ ಪ್ರಕೃತಿಯಲ್ಲಿ ಸಹ, ಪ್ರಸೃತಾಃ—ಸೂಕ್ಷ್ಮರೂಪದಿಂದ ವ್ಯಾಪಿಸಿರುತ್ತವೆ. ಈ ಪ್ರಮಾಣದಂತೆ, ಕಾರ್ಯಗಳು, ತಮ್ಮ ಕಾರಣತತ್ತ್ವಗಳಲ್ಲಿ ಸೂಕ್ಷ್ಮರೂಪದಿಂದ ಇದ್ದೇ ಇರುತ್ತವೆ. ಆದ್ದರಿಂದ ಮಹತತ್ತ್ವದಲ್ಲಿ ಇತರ ಸಕಲ ತತ್ತ್ವಗಳೂ ಇವೆ. 'ಅಧಶ್ಚ ಮೂಲಾನ್ಯನುಸಂತತಾನಿ' (ಗೀತಾ) ಎಂಬಲ್ಲಿ ಮೂಲಗಳಾದ ಊರ್ಧ್ವಶಬ್ದವಾಚ್ಯವಾದ ಶ್ರೀವಿಷ್ಣು ಚಿತ್ ಪ್ರಕೃತಿ (ಶ್ರೀಲಕ್ಷ್ಮೀದೇವಿ) ಮತ್ತು ಅಚಿತ್ ಪ್ರಕೃತಿಗಳು (ತದ್ಗತಸತ್ತ್ವಾದಿ ಗುಣಗಳು), ಶಾಖೆಗಳಂತಿರುವ ಅಧಃಶಬ್ದವಾಚ್ಯಗಳಾದ ಮಹದಾದಿ ತತ್ತ್ವಗಳಲ್ಲಿ, ತತ್ತ್ವಾಭಿಮಾನಿ, ಮತ್ತು ಪ್ರಾಣ ಶರೀರಗಳಲ್ಲಿ ವ್ಯಾಪಿಸಿರುತ್ತವೆ. ವಿರಾಜವೆಂಬುದು ಬ್ರಹ್ಮನ ವ್ಯಾಪ್ತದೇಹ; ವೈರಾಜ—ಬ್ರಹ್ಮಸಂಬಂಧರ, ಎಂದರ್ಥ. ವಿರಾಜ್—ಪ್ರಕಾಶಿಸು ಎಂಬ ಧಾತು ನಿಷ್ಪನ್ನವಾದ ಶಬ್ದವಿದು—ಪ್ರಕಾಶಕ್ಕೆ ಕಾರಣವನ್ನು ಮುಂದಿನ ೫೩ನೇ ಶ್ಲೋಕವನ್ನು ನೋಡಿರಿ.

ದೇಹದಲ್ಲಿ ಸ್ಥಾಪಿಸಲ್ಪಟ್ಟಿದ್ದ ಪ್ರಾಣಾದಿತತ್ತ್ವಗಳನ್ನು ನಿಮಿತ್ತೀಕರಿಸಿ,[1] ಅವುಗಳಿಂದ ಈ ಮುಂದೆ ನಿರೂಪಿಸುವಂತೆ ಸೃಷ್ಟಿಯನ್ನು ಮಾಡಿದನು). ಪ್ರಥಮಂ-ಮೊದಲು, ಪ್ರಾಣಾತ್-ಪ್ರಾಣದಿಂದ, ವಾಯುಂ-ವಾಯುದೇವನನ್ನೂ, ವಾಚಃ-ವಾಗಿಂದ್ರಿಯದಿಂದ, ಸರಸ್ವತೀಂ-ವಾಣೀದೇವಿಯನ್ನೂ, ತತಃ-ನಂತರ, ತ್ರಿವಿಧಾಹಂಕೃತೇಃ- ವೈಕಾರಿಕ, ತೈಜಸ, ತಾಮಸಗಳೆಂಬ ಮೂರು ವಿಧ ಅಹಂಕಾರ ತತ್ತ್ವದಿಂದ, ತ್ರಿರೂಪಂ-ಮೂರು ರೂಪಗಳುಳ್ಳ, ರುದ್ರಂ-ರುದ್ರದೇವನನ್ನು ಅಸೃಜತ್-ಸೃಷ್ಟಿಸಿದನು.

ದೇವೀಮುಮಾಂ ವ್ಯಧಾದ್ಬುದ್ಧೇರಿಂದ್ರಂ ಚ ಮನಸಾಸೃಜತ್ ।
ಪ್ರದ್ಯುಮ್ನಂ ಚಾನಿರುದ್ಧಂ ಚ ಗುರುಂ ಶುಕ್ರಂ ಶಚೀಂ ಮನುಂ ॥ ೫೫ ॥
ದಕ್ಷಂ ಚಂದ್ರಮಸಂ ಚಾನ್ಯಾನ್ ವಸಿಷ್ಠಪ್ರಮುಖಾನ್ ಮುನೀನ್ ।
ದೇವರ್ಷೀನ್ನಾರದಾದೀಂಶ್ಚ ಮಾನಸಾದೇವ ಸೃಷ್ಟವಾನ್ ॥ ೫೬ ॥

ಬುದ್ಧೇಃ-ಬುದ್ಧಿಯಿಂದ, ಉಮಾಂದೇವೀಂ-ಉಮಾದೇವಿಯನ್ನೂ, ವ್ಯಧಾತ್-ಸೃಷ್ಟಿಸಿದನು; ಚ-ಮತ್ತು ಮನಸಾ-ಮನಸ್ಸಿನಿಂದ, ಇಂದ್ರಂ-ಇಂದ್ರದೇವನನ್ನು ಅಸೃಜತ್-ಸೃಷ್ಟಿಸಿದನು; ಪ್ರದ್ಯುಮ್ನಂ-ಕಾಮದೇವನನ್ನು ಚ-ಮತ್ತು ಅನಿರುದ್ಧಂ-ಅನಿರುದ್ಧನನ್ನೂ ಚ-ಹಾಗೂ, ಗುರುಂ-ಬೃಹಸ್ಪತಿಯನ್ನೂ ಶುಕ್ರಂ-ಶುಕ್ರನನ್ನೂ

ಶ್ರೀವಾಯುದೇವನನ್ನೂ, ವಾಗಿಂದ್ರಿಯದಿಂದ ಭಾರತೀದೇವಿಯನ್ನೂ, ವೈಕಾರಿಕ-ತೈಜಸ-ತಾಮಸಗಳೆಂಬ ತ್ರಿವಿಧ ಅಹಂಕಾರಗಳಿಂದ, ಮೂರು ರೂಪಗಳುಳ್ಳ ರುದ್ರದೇವನನ್ನೂ, ನಂತರ ಸೃಷ್ಟಿಸಿದನು (೫೪). ಬುದ್ಧಿಯಿಂದ ಉಮಾದೇವಿಯನ್ನೂ ಮನಸ್ಸಿನಿಂದ ಇಂದ್ರನನ್ನೂ ಸೃಷ್ಟಿಸಿದನು; ಪ್ರದ್ಯುಮ್ನ ಅನಿರುದ್ಧ, ಗುರು, ಶುಕ್ರ, ಶಚೀ, ಮನು, ದಕ್ಷ ಚಂದ್ರ ಮೊದಲಾದವರನ್ನೂ, ನಾರದಾದಿ ದೇವರ್ಷಿಗಳನ್ನೂ, ಇತರ ವಸಿಷ್ಠಾದಿ ಋಷಿಗಳನ್ನೂ, ಮಾನಸವೃತ್ತಿವಿಶೇಷಗಳಿಂದ, ಸೃಷ್ಟಿಮಾಡಿದನು (೫೫-೫೬).

1. ಇದೇ ಅಧ್ಯಾಯದ ೫೧-೫೨ನೇ ಶ್ಲೋಕಗಳಲ್ಲಿ ಹೇಳಿದಂತೆ ವೈರಾಜನೆಂಬ ಬ್ರಹ್ಮನ ದೇಹವು ಮಹದಾದಿ ಸಕಲ ತತ್ತ್ವಗಳಿಂದ ರಚಿತವಾದುದು; ಅದರಲ್ಲಿ ಸಮಸ್ತಜೀವರೂ, ದೇವಾಂಶರೂ ಸ್ಥಾಪಿಸಲ್ಪಟ್ಟರು; ವೈರಾಜವೆಂಬ ಆ ದೇಹವನ್ನು ಶ್ರೀಹರಿಯು, ಪುರುಷರೂಪದಿಂದ ಪ್ರವೇಶಿಸಿ, ಅಲ್ಲಿ ನಿಂತು, ಆ ದೇಹದ ಅವಯವ, ಇಂದ್ರಿಯಾದಿ(ತತ್ತ್ವ)ಗಳಿಗೂ, ದೇವಾಂಶಚೇತನರಿಗೂ ಸಂಯೋಗರೂಪದಿಂದ ಅವರ ಸೃಷ್ಟಿಯನ್ನು ಮಾಡುತ್ತಾನೆ; ಪುರುಷನಾಮಕ ಶ್ರೀಹರಿಯ (ಇಚ್ಛೆಯಿಂದ) ಈ ಪುರುಷದೇಹದಿಂದಾದ ಸೃಷ್ಟಿಯು, ಪುರುಷಸೂಕ್ತದಲ್ಲಿ ವರ್ಣಿತವಾಗಿದೆ. ತ್ರಿವಿಧಾಹಂಕಾರದಿಂದ ತ್ರಿರೂಪನಾದ ರುದ್ರನ ಸೃಷ್ಟಿಯಾಯಿತೆಂಬುದರಿಂದ, ಜಡತತ್ತ್ವಗಳಿಂದ, ಚೇತನರ ಸೃಷ್ಟಿಯೆಂಬರ್ಥವಲ್ಲ; ಕಿಂತು, ವೈರಾಜದೇಹಗತ ತತ್ತ್ವಗಳಿಗೂ, ತದಭಿಮಾನಿಗಳಿಗೂ ಸಂಬಂಧರೂಪದ ಸೃಷ್ಟಿಮಾತ್ರವು;— (ಜೀವರಿಗೆ ಸೃಷ್ಟಿಯೆಂಬುದು ಜಡದೇಹದಲ್ಲಿ ಅಭಿಮಾನವನ್ನುತ್ಪಾದಿಸಿ, ಅದರ ಭೋಗವನ್ನುಂಟು ಮಾಡುವುದಷ್ಟೆ!)

ಶಚೀಂ-ಶಚೀದೇವಿಯನ್ನೂ, ಮನುಂ-ಸ್ವಾಯಂಭುವ ಮನುವನ್ನೂ, ದಕ್ಷಂ-ದಕ್ಷ ಪ್ರಜಾಪತಿಯನ್ನೂ, ಚಂದ್ರಮಸಂ-ಚಂದ್ರದೇವನನ್ನೂ, ನಾರದಾದೀನ್-ನಾರದನೇ ಮೊದಲಾದ, ದೇವರ್ಷೀನ್-ದೇವರ್ಷಿಗಳನ್ನೂ, ಅನ್ಯಾನ್-ಇತರರಾದ, ವಸಿಷ್ಠ ಪ್ರಮುಖಾನ್- ವಸಿಷ್ಠನೇ ಮೊದಲಾದ, ಮುನೀನ್-ಋಷಿಗಳನ್ನೂ, ಚ-ಸಹ, ಮಾನಸಾದೇವ-ಮನಸ್ಸಿನಿಂದಲೇ (ಮನಸ್ಸಿನ ವಿವಿಧವೃತ್ತಿ ವಿಶೇಷಗಳನ್ನು ನಿಮಿತ್ತ ಮಾಡಿ, ಅವುಗಳಿಂದಲೇ), ಸೃಷ್ಟವಾನ್-ಸೃಷ್ಟಿಸಿದವನಾದನು.

ದಿಗ್ದೇವಾಃ ಶ್ರೋತ್ರತೋ ನೇತ್ರಾದ್ರವಿರಗ್ನಿರ್ಮುಖಾದಭೂತ್ ।
ವರ್ಣಶ್ರೇಷ್ಠೋऽಭವದ್ಬ್ರಹ್ಮಾ ಮುಖಾದೇವಾಸ್ಯ ವೇಧಸಃ ॥ ೫೭ ॥

ಶ್ರೋತ್ರತಃ-ಶ್ರವಣೇಂದ್ರಿಯದಿಂದ (ಇಂದ್ರಿಯಾಧಿಷ್ಠಾನ-ಗೋಳಕವಾದ ಕಿವಿಗಳಿಂದ), ದಿಗ್ದೇವಾಃ-ದಿಗ್ದೇವತೆಗಳೂ, ನೇತ್ರಾತ್-ಚಕ್ಷುರಿಂದ್ರಿಯದಿಂದ (ಕಣ್ಣಿನಿಂದ), ರವಿಃ-ಸೂರ್ಯನೂ (ಹುಟ್ಟಿದರು); ಮುಖಾತ್-ಮುಖದಿಂದ, ಅಗ್ನಿಃ-ಅಗ್ನಿದೇವನು, ಅಭೂತ್-ಜನಿಸಿದನು; ಅಸ್ಯ-ಈ, ವೇಧಸಃ-ವೈರಾಜ ಬ್ರಹ್ಮದೇಹದ, ಮುಖಾತ್ ಏವ-ಮುಖದಿಂದಲೇ, ವರ್ಣಶ್ರೇಷ್ಠಃ-ಬ್ರಾಹ್ಮಣಾದಿ ವರ್ಣಗಳಲ್ಲಿ ಶ್ರೇಷ್ಠನಾದ (ಬ್ರಾಹ್ಮಣಾಭಿಮಾನಿಯಾದ), ಬ್ರಹ್ಮಾ-ಬ್ರಹ್ಮದೇವನು, ಅಭವತ್-ಹುಟ್ಟಿದನು.

ಕ್ಷತ್ರದೇವೋऽಭವದ್ಬಾಹ್ವೋರೂರ್ವೋರ್ವೈಶ್ಯಾಧಿದೈವತಾ ।
ಶೂದ್ರವರ್ಣೋऽಭವತ್ಪದ್ಭ್ಯಾಂ ಧರ್ಮ ಆಸೀತ್ ಸ್ತನಾಂತರಾತ್ ॥ ೫೮

ಬಾಹ್ವೋಃ-ಭುಜಗಳಿಂದ, ಕ್ಷತ್ರದೇವಃ-ಕ್ಷತ್ರಿಯವರ್ಣಾಭಿಮಾನಿಯಾದ ವಾಯುದೇವನು, ಅಭವತ್-ಹುಟ್ಟಿದನು; ಊರ್ವೋಃ-ತೊಡೆಗಳಿಂದ, ವೈಶ್ಯಾಧಿದೈವತಾ-ವೈಶ್ಯವರ್ಣಾಭಿಮಾನಿ ದೇವತೆಯೂ, ಪದ್ಭ್ಯಾಂ-ಪಾದಗಳಿಂದ, ಶೂದ್ರವರ್ಣಃ-ಶೂದ್ರವರ್ಣವು (ಶೂದ್ರವರ್ಣಾಭಿಮಾನಿ ದೇವತೆಯೂ), ಅಭವತ್-ಹುಟ್ಟಿದನು; ಧರ್ಮಃ-ಯಮಧರ್ಮನು, ಸ್ತನಾಂತರಾತ್-ಸ್ತನಗಳ ಮಧ್ಯಪ್ರವೇಶದಿಂದ, ಆಸೀತ್-ಹುಟ್ಟಿದನು.

ಜಿಹ್ವಾಗ್ರಾದ್ವರುಣೋ ಜಜ್ಞೇ ನಾಸಿಕಾಭ್ಯಾಂ ತಥಾಶ್ವಿನೌ ।

---

ಶ್ರೋತ್ರದಿಂದ ದಿಗ್ದೇವತೆಗಳೂ, ನೇತ್ರದಿಂದ ಸೂರ್ಯನೂ, ಮುಖದಿಂದ ಅಗ್ನಿಯೂ ಹುಟ್ಟಿದರು; ವರ್ಣಶ್ರೇಷ್ಠನಾದ (ಬ್ರಾಹ್ಮಣ ವರ್ಣಾಭಿಮಾನಿಯಾದ) ಬ್ರಹ್ಮದೇವನೂ, ಈ ಪುರುಷಾಧಿಷ್ಠಿತ ಬ್ರಹ್ಮನ ದೇಹದಿಂದ (ವೈರಾಜದೇಹದಿಂದ), ಮುಖದಿಂದಲೇ ಹುಟ್ಟಿದನು (೫೭). ಕ್ಷತ್ರಿಯ ವರ್ಣಾಭಿಮಾನಿ ದೇವತೆಯು (ಶ್ರೀವಾಯುದೇವನು) ಭುಜಗಳಿಂದಲೂ, ವೈಶ್ಯವರ್ಣಾಭಿಮಾನಿಯು ತೊಡೆಗಳಿಂದಲೂ, ಶೂದ್ರ ವರ್ಣಾಭಿಮಾನಿಯು ಪಾದಗಳಿಂದಲೂ, ಹುಟ್ಟಿದರು; ಆ ವಿರಾಟ್ ದೇಹದ

ಗಣಪೋ ಧನದೋ ರುದ್ರಾ ಆದಿತ್ಯಾ ವಸವೋಽಖಿಲಾಃ ॥ ೫೯ ॥
ಮರುತೋ ದೇವಗಂಧರ್ವಾ ಮಾನುಷಾಃ ಪಿತರಸ್ತಥಾ ।
ನೈರ್ಋತೋ ನಿರ್ಋತಿರ್ಯಕ್ಷಾ ವಿದ್ಯಾಧರಮಹೋರಗಾಃ ॥ ೬೦ ॥
ಸರ್ವಾಂಗೇಭ್ಯೋಽಥ ರೋಮಭ್ಯೋ ನಖೇಭ್ಯೋ ಜಜ್ಞಿರೇಽಖಿಲಾಃ ।
ಏವಂ ದೇವಗಣಾಃ ಸೃಷ್ಟಾಃ ತಾತ್ವಿಕಾಶ್ಚಾಪ್ಯತಾತ್ವಿಕಾಃ ॥ ೬೧ ॥

ಜಿಹ್ವಾಗ್ರಾತ್-ನಾಲಿಗೆಯ ತುದಿಯಿಂದ, ವರುಣಃ-ವರುಣನು, ಜಜ್ಞೇ-ಹುಟ್ಟಿದನು; ತಥಾ-ಹಾಗೆಯೇ, ನಾಸಿಕಾಭ್ಯಾಂ-ಘ್ರಾಣಗಳಿಂದ, (ಮೂಗಿನ ಹೊಳ್ಳೆಗಳಿಂದ), ಅಶ್ವಿನೌ-ಅಶ್ವಿನೀದೇವತೆಗಳು (ಹುಟ್ಟಿದರು); ಗಣಪಃ-ಗಣಪತಿಯೂ, ಧನದಃ-ಕುಬೇರನೂ, ರುದ್ರಾಃ-ರುದ್ರರೂ (ಏಕಾದಶರುದ್ರರಲ್ಲಿ ಪ್ರಧಾನರುದ್ರನ ವಿನಹ ಇತರರು), ಆದಿತ್ಯಾಃ-ಆದಿತ್ಯರೂ (ದ್ವಾದಶಾದಿತ್ಯರಲ್ಲಿ ವಿಷ್ಣುವನ್ನುಳಿದು ಇತರರು), ವಸವಃ-(ಅಷ್ಟವಸುಗಳಲ್ಲಿ ಅಗ್ನಿಯನ್ನುಳಿದು ಇತರ) ವಸುಗಳೂ, ಅಖಿಲಾಃ-ಈ ಸಮಸ್ತರೂ, ಮರುತಃ-೪೯ ಮಂದಿ ಮರುತ್ತರೂ (ಮರುದ್ಗಣದವರೂ), ದೇವಗಂಧರ್ವಾಃ-ದೇವಗಂಧರ್ವರೂ, ಮಾನುಷಾಃ-ಮನುಷ್ಯರೂ, ತಥಾ-ಹಾಗೂ, ಪಿತರಃ-ಪಿತೃಗಳೂ, ನೈರ್ಋತಃ-ನಿರ್ಋತಿಗಳು, ನಿರ್ಋತಿಃ- (ನಿರ್ಋತಿಗಣಕ್ಕೆ ಅಧಿಪತಿಯಾದ) ನಿರ್ಋತಿಯೂ, ಯಕ್ಷಾಃ - ಯಕ್ಷರೂ, ವಿದ್ಯಾಧರ ಮಹೋರಗಾಃ-ವಿದ್ಯಾಧರರೂ, ಮಹೋರಗರೂ, ಅಖಿಲಾಃ-ಈ ಸಮಸ್ತರೂ, ಸರ್ವಾಂಗೇಭ್ಯಃ-(ವೈರಾಜದ) ಸರ್ವಾಂಗಗಳಿಂದಲೂ, ಅಥ-ಮತ್ತು ರೋಮಭ್ಯಃ-

---

ಸ್ತನಾಂತರಭಾಗದಿಂದ, ಧರ್ಮರಾಜನು ಜನಿಸಿದನು[1] (೫೮). ಜಿಹ್ವಾಗ್ರದಿಂದ ವರುಣದೇವನೂ, ನಾಸಿಕಗಳಿಂದ ಅಶ್ವಿನೀದೇವತೆಗಳೂ, ಹುಟ್ಟಿದರು; ಗಣಪತಿ, ಕುಬೇರ, ರುದ್ರರು, ಆದಿತ್ಯರು, ವಸುಗಳೂ, ಎಲ್ಲಮರುತ್ತರೂ, ದೇವ ಗಂಧರ್ವರೂ, ಮನುಷ್ಯರೂ, ಪಿತೃಗಳೂ, ನೈರ್ಋತರು ಮತ್ತು ನಿರ್ಋತಿಯೂ, ವಿದ್ಯಾಧರರೂ, ಮಹೋರಗರೂ, ಈ ಎಲ್ಲರೂ, ವಿರಾಟ್‌ಪುರುಷನ ರೋಮಗಳಿಂದಲೂ, ನಖಗಳಿಂದಲೂ, ಸರ್ವಾಂಗಗಳಿಂದಲೂ, ಜನಿಸಿದರು; ಹೀಗೆ ಆ ದೇಹದಿಂದ, ತಾತ್ವಿಕ ಅತಾತ್ವಿಕ ದೇವಗಣಗಳೆಲ್ಲವೂ ಸೃಷ್ಟಿಸಲ್ಪಟ್ಟರು (೫೯-೬೧).

---

1. ಯಮನಾಮಕ ಉಗ್ರರೂಪವೂ, ಧರ್ಮನಾಮಕ ಸೌಮ್ಯರೂಪವೂ ಎರಡೂ ಯಮ ಅಥವಾ ಯಮಧರ್ಮನೆಂದು ಕರೆಯಲ್ಪಡುವ ದೇವತೆಯ ರೂಪಗಳೇ. ಇವುಗಳ ಕಾರ್ಯವಿನೋದಗಳನ್ನು ಅನ್ಯತ್ರ ಈ ಗ್ರಂಥವೇ ವಿವರಿಸುತ್ತದೆ. ಯಮನೇ ಶೂದ್ರವರ್ಣಾಭಿಮಾನಿಯು ಯಮನೂ ಈ ಕಾರಣದಿಂದ ಶೂದ್ರವರ್ಣದವನೆಂದೇ ನಿರೂಪಿಸಲ್ಪಡುತ್ತಾನೆ. ಧರ್ಮನು ಬ್ರಾಹ್ಮಣನೆಂದು ಹೇಳಲ್ಪಟ್ಟಿರುತ್ತಾನೆ.

ರೋಮಗಳಿಂದಲೂ, ನಖೇಭ್ಯ-ನಖಗಳಿಂದಲೂ, ಜಜ್ಞಿರೇ-ಹುಟ್ಟಿದರು; ಏವಂ-ಹೀಗೆ, ತಾತ್ತ್ವಿಕಾಃ-ತಾತ್ತ್ವಿಕರೂ (ತತ್ತ್ವಾಭಿಮಾನಿಗಳೂ), ಚ-ಮತ್ತು, ಅತಾತ್ತ್ವಿಕಾಃ ಅಪಿ-ಅತಾತ್ತ್ವಿಕರೂ (ತತ್ತ್ವಾಭಿಮಾನಿಗಳಲ್ಲದವರೂ) ಆದ, ದೇವ ಗಣಾಃ-ದೇವತಾಗಣಗಳು, ಸೃಷ್ಟಾಃ-ಸೃಷ್ಟಿಸಲ್ಪಟ್ಟರು.

**ತೇಷು ಯೇ ತಾತ್ತ್ವಿಕಾ ದೇವಾ ತೇ ಪಸ್ಪರ್ಧುರ್ಮಿಥೋಽಖಿಲಾಃ ।**
**ಅಹಂ ಶ್ರೇಷ್ಠಸ್ತ್ವಹಂ ಶ್ರೇಷ್ಠ ಇತಿ ತಾನವದದ್ವಿಧಿಃ ॥ ೬೨ ॥**

ತೇಷು-ಹೀಗೆ ಸೃಷ್ಟರಾದವರಲ್ಲಿ ಯೇ-ಯಾರು, ತಾತ್ತ್ವಿಕಾಃ-ತತ್ತ್ವಾಭಿಮಾನಿಗಳೋ, ತೇ-ಆ, ದೇವಾಃ-ದೇವತೆಗಳು, ಅಖಿಲಾಃ-ಎಲ್ಲರೂ, ಮಿಥಃ-ಪರಸ್ಪರವಾಗಿ (ಒಬ್ಬರಿಗೊಬ್ಬರು), ಅಹಂ-ನಾನು, ಶ್ರೇಷ್ಠಃ-ಶ್ರೇಷ್ಠನು, ಅಹಂ ತು-ನಾನೇ, ಶ್ರೇಷ್ಠಃ-ಶ್ರೇಷ್ಠನು, ಇತಿ-ಹೀಗೆಂದು, ಪಸ್ಪರ್ಧುಃ-ಸ್ಪರ್ಧೆಮಾಡಿದರು; ವಿಧಿಃ- ಬ್ರಹ್ಮನು, ತಾನ್-ಅವರನ್ನು ಕುರಿತು, ಅವದತ್-ಹೇಳಿದನು.

**ಯಸ್ಮಿನ್ ಗತೇಽಪ್ಯಯಂ ದೇಹೋ ಪತೇದ್ಯಸ್ಯ ಪ್ರವೇಶತಃ ।**
**ಉತ್ತಿಷ್ಠೇತ್ ಸ್ಯಾತ್ಸ ಹಿ ಶ್ರೇಷ್ಠಃ ಕಿಂ ವೃಥಾ ಜಲ್ಪನೇನ ವಃ ॥ ೬೩ ॥**

ಯಸ್ಮಿನ್-ಯಾರು, ಗತೇ-ಹೋಗುತ್ತಿರಲಾಗಿ (ದೇಹದಿಂದ ಹೊರಗೆ ಬರುತ್ತಿರಲು), ಅಯಂ-ಈ, ದೇಹಃ-(ವೈರಾಜ)ದೇಹವು, ಪತೇತ್-ಬೀಳುವುದೋ (ಮತ್ತು), ಯಸ್ಯ-ಯಾರ, ಪ್ರವೇಶತಃ-ಪ್ರವೇಶದಿಂದ, ಉತ್ತಿಷ್ಠೇತ್-ಮೇಲೇಳುವುದೋ, ಸಃ-ಆತನೇ, ಶ್ರೇಷ್ಠಃ-ಉತ್ತಮನು (ನಿಮ್ಮೆಲ್ಲರಲ್ಲಿ ಶ್ರೇಷ್ಠನು), ಸ್ಯಾತ್ ಹಿ-ಆದವನೇ ಸರಿ.

**ಅಥ ಪ್ರಾಣೋಽವದತ್ತೇಷಾಂ ಯೂಯಂ ಸರ್ವೇಽಪಿ ಗಚ್ಛತ ।**
**ಕ್ರಮೇಣ ಯುಗಪದ್ವಾಪಿ ಕಸ್ಯ ಯಾನೇ ಪತತ್ಯಯಂ ॥ ೬೪ ॥**

---

ಹೀಗೆ ಸೃಷ್ಟರಾದ ಸಕಲರ ಮಧ್ಯದಲ್ಲಿ ಯಾರು ತತ್ತ್ವಾಭಿಮಾನಿದೇವತೆಗಳೋ ಅವರು, ತಂತಮ್ಮಲ್ಲಿ 'ನಾನು ಎಲ್ಲರಿಗಿಂತ ಶ್ರೇಷ್ಠನು, ನಾನೇ ಎಲ್ಲರಗಿಂತ ಶ್ರೇಷ್ಠನು' ಎಂಬುದಾಗಿ ಉತ್ತಮತ್ವಸ್ಪರ್ಧೆಯಿಂದ ವಿವಾದಮಾಡಿಕೊಂಡರು; ಇವರನ್ನು ಕುರಿತು, ಬ್ರಹ್ಮದೇವನು ಹೀಗೆ ನುಡಿದನು (೬೨). ಅದೆಂತೆನೆ:— ಈ (ವೈರಾಜ) ದೇಹವನ್ನು ನಿಮ್ಮಲ್ಲಿ ಯಾವಾತನು ಬಿಟ್ಟು ಹೊರಗೆ ಬಂದರೆ, ದೇಹವು ಬೀಳುವುದೋ ಮತ್ತು ಯಾರ ಪ್ರವೇಶದಿಂದ ಈ ದೇಹವು ಎದ್ದುನಿಲ್ಲುವುದೋ ಆತನೇ ನಿಮ್ಮಲ್ಲಿ ಶ್ರೇಷ್ಠನೆಂದು ತಿಳಿಯಿರಿ. (೬೩).

ಆಗ ಮುಖ್ಯಪ್ರಾಣನು, ಇತರ ದೇವತೆಗಳಿಗೆ ಹೀಗೆ ಹೇಳಿದನು, 'ನೀವುಗಳು, ಈ ದೇಹದಿಂದ, ಒಬ್ಬೊಬ್ಬರಾಗಿ ಆಗಲಿ ಅಥವಾ ಎಲ್ಲರೂ ಏಕಕಾಲದಲ್ಲಿಯಾಗಲಿ, ಹೊರಗೆ

**ಪಶ್ಯಾಮ ಇತಿ ತೇ ಜಗ್ಮುರ್ದೇಹೋ ನೈವಾಪತತ್ತತಃ ।**
**ಅಥ ಪ್ರಾಣೇ ಬಹಿರ್ಯಾತೇ ಸರ್ವೇ ತೇಽಪಿ ಬಹಿರ್ಗತಾಃ ॥ ೬೫ ॥**
**ತತ್ಕ್ಷಣಾದಪತದ್ದೇಹೋ ವ್ಯಶೀರ್ಯತ ತತೋಽಪಿ ಹಿ ।**
**ತತಃ ಪ್ರಭೃತಿ ದೇಹಸ್ಯ ಶರೀರಾಖ್ಯಾ ಬಭೂವ ಹ ॥ ೬೬ ॥**

ಅಥ-(ಬ್ರಹ್ಮದೇವನು ಹೀಗೆ ಹೇಳಿದ) ನಂತರ, ಪ್ರಾಣಃ-ಮುಖ್ಯಪ್ರಾಣನು (ಶ್ರೀವಾಯುದೇವನು),[1] ತೇಷಾಂ-(ಹಾಗೆ ವಿವಾದಮಾಡಿಕೊಂಡ ತತ್ತ್ವಾಭಿಮಾನಿ ದೇವತೆಗಳಿಗೆ) ಅವರಿಗೆ, ಯೂಯಂ-ನೀವು, ಸರ್ವೇ ಅಪಿ-ಎಲ್ಲರೂ, ಕ್ರಮೇಣ-ಕ್ರಮವಾಗಿ (ಒಬ್ಬೊಬ್ಬರಾಗಿ), ವಾ-ಅಥವಾ, ಯುಗಪತ್ ಅಪಿ-ಏಕದಾ ಆಗಲಿ (ಎಲ್ಲರೂ ಒಟ್ಟಾಗಿ), ಗಚ್ಛಥ-(ದೇಹದಿಂದ) ಹೊರಗೆ ಹೋಗಿರಿ; ಕಸ್ಯ-ಯಾರ, ಯಾನೇ-ಗಮನದಿಂದ (ಯಾರು ಹೊರಬೀಳುತ್ತಿರಲಾಗಿ), ಅಯಂ-ಈ ದೇಹವು, ಪತತಿ-ಬೀಳುವುದೋ, ಪಶ್ಯಾಮ-ನೋಡೋಣ, ಇತಿ-ಹೀಗೆಂದು, ಅವದತ್-ನುಡಿದನು; ತೇ-ಆ ದೇವತೆಗಳು, ಜಗ್ಮುಃ-(ದೇಹವನ್ನು ಬಿಟ್ಟು) ಹೊರಟರು; ತತಃ-ಅದರಿಂದ (ಒಬ್ಬೊಬ್ಬರಾಗಿಯೂ ಮತ್ತು ಒಟ್ಟಿಗೆ ಸಹ ಹೊರಬಿದ್ದರೂ), ದೇಹಃ-ದೇಹವು, ನೈವ ಅಪತತ್-ಬೀಳಲೇ ಇಲ್ಲ; ಅಥ-ನಂತರ, ಪ್ರಾಣೇ-ಮುಖ್ಯಪ್ರಾಣನು, ಬಹಿಃ-ಹೊರಗೆ, ಯಾತೇ(ಸತಿ)-ಹೋಗುತ್ತಿರಲು, ತೇ-ಆ ದೇವತೆಗಳು, ಸರ್ವೇ ಅಪಿ-ಎಲ್ಲರೂ ಸಹ, ಬಹಿಃ ಗತಾಃ-ದೇಹದಲ್ಲಿ ನಿಲ್ಲಲು ಅಸಮರ್ಥರಾಗಿ) ಹೊರಗೆ ಬಂದರು (ಹೊರಗೆ ಸೆಳೆಯಲ್ಪಟ್ಟರು); (ಮತ್ತು) ತತ್ಕ್ಷಣಾತ್-(ಮುಖ್ಯಪ್ರಾಣನು ಹೊರಬಿದ್ದ) ಕ್ಷಣಮಾತ್ರದಲ್ಲಿ (ಅದೇ ಕ್ಷಣದಲ್ಲಿ), ದೇಹಃ-ದೇಹವು, ಅಪತತ್-ಬಿದ್ದಿತು; ತತಃ-ನಂತರ, ವ್ಯಶೀರ್ಯತ ಅಪಿ-ನಾಶ ಹೊಂದಲೂ ಆರಂಭಿಸಿತು; (ಶೃ-decay ಎಂಬರ್ಥದ ಧಾತುನಿಷ್ಪನ್ನಶಬ್ದವಿದು); ಹಿ-ಹೀಗೆ ದೇಹವು ನಶಿಸುವುದರಿಂದ, ತತಃಪ್ರಭೃತಿ-ಅಲ್ಲಿಂದ ಮೊದಲು, ದೇಹಸ್ಯ-ದೇಹಕ್ಕೆ, ಶರೀರಾಖ್ಯಾ-ಶರೀರವೆಂಬ ಹೆಸರು, ಬಭೂವ ಹ-ಉಂಟಾಯಿತು.

---

ಹೊರಡಿರಿ; ಯಾರು (ಅಥವಾ ಎಲ್ಲರೂ) ಹೋಗುವುದರಿಂದ ದೇಹವು ಬೀಳುವುದೋ ನೋಡೋಣ'; ಆಗ, ಅವರು, ಹೇಳಿದ ಕ್ರಮದಿಂದ ಮತ್ತು ಏಕಕಾಲದಲ್ಲಿ ಸಹ ಹೊರಗೆ ಬಂದರು; ದೇಹವು ಬೀಳಲೇ ಇಲ್ಲ; ನಂತರ, ಮುಖ್ಯಪ್ರಾಣನು ಹೊರಗೆ ಬಂದನು, ತಕ್ಷಣದಲ್ಲಿ ದೇಹ ಬಿದ್ದಿತು—ಅಷ್ಟು ಮಾತ್ರವಲ್ಲ, ಆ ದೇವತೆಗಳು ಯಾರೂ ಆ ದೇಹದಲ್ಲಿ ನಿಲ್ಲಲು ಅಸಮರ್ಥರಾದರು (ಹೊರಗೆ ಸೆಳೆಯಲ್ಪಟ್ಟರು); (ಅವರು ಅಲ್ಲಿ ನಿಂತರೂ

---

1 ಪ್ರಾಣಗಳ ದೇಹಗತವಾದ ಶ್ರೀವಾಯುದೇವನ ರೂಪವು, ಸಾಮಾನ್ಯವಾಗಿ ಮುಖ್ಯ ಪ್ರಾಣನೆಂದು ವ್ಯವಹರಿಸಲ್ಪಡುತ್ತದೆ.

**ದೃಢನಿರ್ಣಯಕಾಮಾಸ್ತೇ ಪುನರೇವಾಪ್ಯವೀವದನ್ ।**
**ಯತ್ಪ್ರವೇಶಾದಯಂ ದೇಹ ಉತ್ತಿಷ್ಠೇತ್ಸವರೋ ಭವೇತ್ ॥ ೬೭ ॥**
**ಇತ್ಯಾವಿಶನ್ ಪುನಸ್ತತ್ರ ಕ್ರಮೇಣ ಯುಗಪಚ್ಚ ತೇ ।**
**ನೋತ್ತಸ್ಥಾವಥ ತತ್ರೈವ ಪ್ರಾಣೇ ವಿಷ್ಟೇ ಸ ಉತ್ಥಿತಃ ॥ ೬೮ ॥**
**ತತಃ ಕ್ಷಮಾಪಯಿತ್ವಾ ತೇ ಪ್ರಾಣಂ ಶ್ರೇಷ್ಠಮಚೀಕ್ಲೃಪನ್ ।**

ದೃಢನಿರ್ಣಯಕಾಮಾಃ-(ಹೀಗೆ ಮುಖ್ಯಪ್ರಾಣನ ಶ್ರೇಷ್ಠತ್ವವು ನಿರ್ಣಯವಾದರೂ) ಆ ನಿರ್ಣಯದ ದಾರ್ಢ್ಯವನ್ನು ಅಪೇಕ್ಷಿಸಿ, ಪುನಃ ಅಪಿ-ಮತ್ತೆ ಅವೀವದನ್ ಏವ-ವಾದಮಾಡಿದರು; ಯತ್ಪ್ರವೇಶಾತ್-ಯಾರ ಪ್ರವೇಶದಿಂದ, ಅಯಂ-ಈ, ದೇಹಃ-ದೇಹವು, ಉತ್ತಿಷ್ಠೇತ್-ಎದ್ದು ನಿಲ್ಲುವುದೋ, ಸಃ-ಆತನು, ವರಃ-ಶ್ರೇಷ್ಠನು, ಭವೇತ್-ಆಗುವನು; ಇತಿ-ಹೀಗೆ ನಿಶ್ಚಯಿಸಿ, ತತ್ರ-ಆ ದೇಹದಲ್ಲಿ ಪುನಃ-ಮತ್ತೆ ಕ್ರಮೇಣ-ಕ್ರಮವಾಗಿಯೂ (ಒಬ್ಬರ ನಂತರ ಒಬ್ಬರಂತೆ), ಚ-ಮತ್ತು ಯುಗಪತ್-ಏಕದಾ (ಎಲ್ಲರೂ ಒಟ್ಟಾಗಿ), ತೇ-ಆ ದೇವತೆಗಳು ಆವಿಶನ್-ಪ್ರವೇಶಿಸಿದರು; ನ ಉತ್ತಸ್ಥೌ-(ದೇಹವು) ಮೇಲೇಳಲಿಲ್ಲ; ಅಥ-ನಂತರ, ತತ್ರೈವ-ಆ ದೇಹದಲ್ಲಿ ಪ್ರಾಣೇ-ಮುಖ್ಯಪ್ರಾಣನು, ವಿಷ್ಟೇ (ಸತಿ)-ಪ್ರವೇಶಮಾಡಲು, ಸಃ-ಆ ದೇಹವು, ಉತ್ಥಿತಃ-ಮೇಲೆದ್ದಿತು; ತತಃ-(ಈ ಉಭಯ ಪರೀಕ್ಷಾಕಾಲದಲ್ಲಿ ಆ ದೇಹದಲ್ಲಿ ವಿಷ್ಣುಬ್ರಹ್ಮರು ಉದಾಸೀನರಾಗಿದ್ದರು) ಹೀಗೆ ಸಂಭವಿಸಿದ್ದರಿಂದ (ಈ ಕಾರಣದಿಂದ), ತೇ-ಆ ತತ್ತ್ವಾಭಿಮಾನಿಗಳೆಲ್ಲರೂ, ಕ್ಷಮಾಪಯಿತ್ವಾ-(ಮುಖ್ಯ ಪ್ರಾಣನ) ಕ್ಷಮೆಯನ್ನು

---

ದೇಹವನ್ನು ನಿಲ್ಲುವಂತೆ ಮಾಡಲು ಸಮರ್ಥರಲ್ಲವೆಂಬುದು, ಇದರಿಂದಲೂ ಸಿದ್ಧವಾಗುತ್ತದೆ); ದೇಹವು ಬಿದ್ದುದು ಮಾತ್ರವಲ್ಲ; ನಶಿಸಲು ಆರಂಭವಾಯಿತು; ಈ ಕಾರಣದಿಂದ ಅಲ್ಲಿಂದ ಮೊದಲುಮಾಡಿ, ದೇಹವು 'ಶರೀರ'ವೆಂಬ ಅನ್ವರ್ಥನಾಮವುಳ್ಳದ್ದಾಯಿತು (೬೪-೬೬). ಹೀಗೆ ಮುಖ್ಯಪ್ರಾಣನ ಶ್ರೇಷ್ಠತ್ವವು ಸಿದ್ಧವಾದರೂ, ಆ ನಿರ್ಣಯದ ಪುನರ್ನಿಶ್ಚಯವನ್ನು ಅಪೇಕ್ಷಿಸಿದ ಆ ದೇವತೆಗಳು ಪುನಃ ವಾದಮಾಡಿದರು; ನಂತರ, ಯಾರ ಪ್ರವೇಶದಿಂದ ಈ ದೇಹವು ಮೇಲೇಳುವುದೋ, ಆತನೇ ತಮ್ಮಲ್ಲಿ ಶ್ರೇಷ್ಠನೆಂದು ನಿಶ್ಚಯಿಸಿಕೊಂಡು, ಅವರು, ಕ್ರಮವಾಗಿಯೂ ಮತ್ತು ಏಕದಾ ಸಹ ಆ ದೇಹವನ್ನು ಪ್ರವೇಶಿಸಿದರು; ಆದರೂ ಆ ದೇಹವು ಮೇಲೇಳಲಿಲ್ಲ (ಚೇಷ್ಟಿಸಲಿಲ್ಲ); ಮುಖ್ಯಪ್ರಾಣನು ಪ್ರವೇಶಮಾಡಿದೊಡನೆ, ದೇಹವು ಮೇಲೆದ್ದಿತು; ಈ ಕಾರಣದಿಂದ, ಅವರೆಲ್ಲರೂ ಮುಖ್ಯಪ್ರಾಣನ ಕ್ಷಮೆಯನ್ನು ಯಾಚಿಸಿ ತಮಗೆಲ್ಲ ಅಧಿನಾಯಕನೆಂದು ಅಂಗೀಕರಿಸಿದರು (೬೭-೬೮).

ಕೇಳಿಕೊಂಡು, ಪ್ರಾಣಂ-ಮುಖ್ಯಪ್ರಾಣನನ್ನು, ಶ್ರೇಷ್ಠಂ- ತಮ್ಮೆಲ್ಲರಲ್ಲಿ ಶ್ರೇಷ್ಠನನ್ನಾಗಿ, ಅಚೀಕ್ಲೃಪನ್-ಮಾಡಿಕೊಂಡರು (ಅಂಗೀಕರಿಸಿದರು).

ಮರುದ್ಭಿಃ ಸಹ ಸ ಪ್ರಾಣಃ ಸ್ಥಿತಃ ಸರ್ವೇಷು ದೇಹಿಷು ॥ ೧೯ ॥
ಧತ್ತೇ ವ್ಯಾಪಾರಯತ್ಯೇತಾನ್ಮಾರಯತ್ಯಪಿ ನಿರ್ಗಮಾತ್ ।
ಉತ್ಥಿತೋ ಬ್ರಹ್ಮಣೋ ದೇಹೋ ದಧಾರ ಭುವನಾನ್ಯಸೌ ॥ ೨೦ ॥

ಸರ್ವೇಷು-ಎಲ್ಲ ದೇಹಿಷು-ದೇಹಿಗಳಲ್ಲಿ (ಜೀವಸಹಿತ ದೇಹಗಳಲ್ಲಿ), ಸಃ ಪ್ರಾಣಃ-ಆ (ಹೀಗೆ ಸರ್ವಶ್ರೇಷ್ಠನೆಂದು ನಿಶ್ಚಯಿಸಲ್ಪಟ್ಟ) ಮುಖ್ಯ ಪ್ರಾಣನು, ಮರುದ್ಭಿಃ ಸಹ-ಪ್ರಾಣರಿಂದ ಸಹಿತನಾಗಿ, ಸ್ಥಿತಃ-ಇದ್ದು ಏತಾನ್-ಈ ದೇಹಿಗಳನ್ನು ಧತ್ತೇ-ಧರಿಸುತ್ತಾನೆ; ವ್ಯಾಪಾರಯತಿ-ನಾನಾ ಚೇಷ್ಟೆಗಳನ್ನು ಮಾಡಿಸುತ್ತಾನೆ; ಅಪಿ-ಮತ್ತು ನಿರ್ಗಮಾತ್-(ತಾನು ದೇಹದಿಂದ) ಹೊರಗೆ ಹೋಗುವುದರಿಂದ, ಮಾರಯತಿ-ಕೊಲ್ಲುತ್ತಾನೆ; ಉತ್ಥಿತಃ-(ಮುಖ್ಯಪ್ರಾಣನ ಪ್ರವೇಶದಿಂದ) ಮೇಲೆದ್ದ ಅಸೌ-ಈ, ಬ್ರಹ್ಮಣಃ-ಬ್ರಹ್ಮದೇವನ, ದೇಹಃ-ದೇಹವು (ವೈರಾಜವೆಂಬ ದೇಹವು), ಭುವನಾನಿ-ಲೋಕಗಳನ್ನು (ಪೂರ್ವೋಕ್ತ ೧೪ ಲೋಕಗಳನ್ನು), ದಧಾರ-ಧರಿಸಿತು (ಆ ಲೋಕಗಳಿಗೆ ಆಶ್ರಯರೂಪವಾಯಿತು).

ಹಯವಕ್ತ್ರಸಮಂ ಯತ್ತು ಪಂಚಮಂ ವೇಧಸೋ ಮುಖಂ ।
ದುಃಶಬ್ದಮಕರೋತ್ತೇನ ಲಕ್ಷ್ಮೀರುದ್ವೇಗಮಾಪ್ಯತು ॥ ೨೧ ॥
ಧನುರ್ದತ್ವಾಥ ಬಾಣಂ ಚ ರುದ್ರಮಾಜ್ಞಾಪಯತ್ತದಾ ।
ಛಿಂದಿ ಶೀರ್ಷಮಿದಂ ಧಾತುಃ ಸ ತಥೈವ ತದಾಕರೋತ್ ॥ ೨೨ ॥

---

ಈ ಮುಖ್ಯಪ್ರಾಣನು, ದಶಪ್ರಾಣರಿಂದ[1] ಸಹಿತನಾಗಿ, ಸಕಲ ದೇಹಿಗಳಲ್ಲಿದ್ದು ಎಲ್ಲರನ್ನೂ ರಕ್ಷಿಸುತ್ತಾನೆ—ಅವರ ವಿವಿಧ ಚೇಷ್ಟೆಗಳಿಗೆ (ಕ್ರಿಯೆಗಳಿಗೆ) ಕಾರಣನಾಗುತ್ತಾನೆ (ತಾನೂ ಮಾಡಿ ಜೀವರಿಂದ ಮಾಡಿಸುತ್ತಾನೆ) ಮತ್ತು ತಾನು ದೇಹವನ್ನು ತ್ಯಜಿಸಿ ಹೊರಗೆ ಹೊರಡುವುದರಿಂದ, ಅವರನ್ನು ಕೊಲ್ಲುತ್ತಾನೆ; ಮುಖ್ಯಪ್ರಾಣನು ಹೊರಹೊರಟಾಗ ಮರಣವಾಗುತ್ತದೆ—ಜೀವನಿಗೆ ದೇಹವಿಯೋಗವಾಗುತ್ತದೆ (೧೯-೨೦). ಈ ಹಿಂದೆ ಹೇಳಲಾದ ಬ್ರಹ್ಮದೇವನ ಐದನೆಯ ಹಯಮುಖವು, ವೇದೋಚ್ಚಾರದಲ್ಲಿ ಅಪಶಬ್ದವನ್ನು ಮಾಡಿತು; ಅದನ್ನು ಸಹಿಸದ, ವೇದಾಭಿಮಾನಿ ಶ್ರೀಲಕ್ಷ್ಮೀದೇವಿಯು, ರುದ್ರನ ಕೈಗೆ ಧನುರ್ಬಾಣಗಳನ್ನಿತ್ತು ಆ ಶಿರಸ್ಸನ್ನು ಕತ್ತರಿಸೆಂದು ಆಜ್ಞಾಪಿಸಿದಳು; ಆಗ, ರುದ್ರದೇವನು ಬ್ರಹ್ಮದೇವನ ಐದನೇ ಹಯಾಕಾರದ ಮುಖವನ್ನು ಕತ್ತರಿಸಿದನು

1. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೆಂಬ ಪಂಚಪ್ರಾಣರು ಮತ್ತು ನಾಗ, ಕೂರ್ಮ, ಕೃಕಲ, ದೇವದತ್ತ ಧನಂಜಯರೆಂಬ ಉಪಪ್ರಾಣರು. ಹೀಗೆ ದಶಪ್ರಾಣರು.

ಈ ಅಧ್ಯಾಯದ ೩೭ನೇ ಶ್ಲೋಕೋಕ್ತ ಚರಿತ್ರೆಯನ್ನು ಮುಂದರಿಸುತ್ತಾರೆ :—

ಹಯವಕ್ತ್ರಸಮಂ-ಹಯಮುಖದಂತಿದ್ದ ಯತ್ ತು-ಯಾವ, ವೇಧಸಃ-ಬ್ರಹ್ಮದೇವನ, ಪಂಚಮಂ-ಐದನೆಯ, ಮುಖಂ-ಮುಖವೋ, (ಅದು), ದುಃಶಬ್ದಂ-ಅಪಶಬ್ದವನ್ನು (ಶಬ್ದಃ-ವೇದ; ವೇದೋಚ್ಚಾರದಲ್ಲಿ ಅಪಸ್ವರವನ್ನು), ಅಕರೋತ್-ಮಾಡಿತು; ತೇನ-ಅದರಿಂದ, ಲಕ್ಷ್ಮೀಃ-(ವೇದಮುಖ್ಯಾಭಿಮಾನಿಯಾದ) ಶ್ರೀಲಕ್ಷ್ಮೀದೇವಿಯು, ಉದ್ವೇಗಂ-ಅಸಹನೆಯನ್ನು, ಆಪ್ಪತು-ಹೊಂದಿಯೇ, ಅಥ-ಮುಂದೆ, ಧನುಃ-ಧನುಸ್ಸನ್ನೂ ಚ-ಮತ್ತು ಬಾಣಂ-ಬಾಣವನ್ನೂ ದತ್ವಾ-ಕೊಟ್ಟು ರುದ್ರಂ-ರುದ್ರನನ್ನು, ತದಾ-ಆಗ, ಧಾತುಃ-ಬ್ರಹ್ಮನ, ಇದಂ-ಈ ಅಶ್ವಾಕಾರದ, ಶೀರ್ಷಂ-ತಲೆಯನ್ನು ಛಿಂಧಿ-ಕತ್ತರಿಸು (ಎಂದು), ಆಜ್ಞಾಪಯತ್-ಆಜ್ಞಾಪಿಸಿದಳು; ಸಃ-ಆ ರುದ್ರನು, ತದಾ ಏವ-ಆಗಲೇ (ಆಜ್ಞೆಯಿತ್ತ ಕೂಡಲೆ), ತಥಾ-ಹಾಗೆ, ಅಕರೋತ್-ಮಾಡಿದನು (ಆ ತಲೆಯನ್ನು ಕತ್ತರಿಸಿದನು).[1]

ಜ್ವಲತ್ಕಾಲಾನಲಸಮಂ ತನ್ಮುಖಂ ರುದ್ರಮಾದ್ರವತ್ ।
ಭೀತೋಽಥ ಶರಣಂ ಪ್ರಾಪ ಲಕ್ಷ್ಮೀಂ ರುದ್ರೋಽಥ ವಿಹ್ವಲಃ ॥ ೭೩ ॥
ಸಾ ತತ್ಕರೇ ಕಪಾಲಂ ತದ್ದತ್ವಾ ವಿಷ್ಣುಪದಾಂಬುಭಿಃ ।
ಶಮಯಾಮಾಸ ತತ್ಪಾಪಂ ಧೌತಪಾಪ್ಮಾ ತತೋಽಭವತ್ ॥ ೭೪ ॥

ತನ್ಮುಖಂ-ಕತ್ತರಿಸಲ್ಪಟ್ಟ ಆ ಶಿರಸ್ಸು (ಹಯಮುಖವು), ಜಲತ್ಕಾಲಾನಲಸಮಂ-ಪ್ರಜ್ವಲಿಸುವ ಪ್ರಲಯಾಗ್ನಿಸಮವಾಗಿ, ರುದ್ರಂ-ರುದ್ರನನ್ನು, ಆದ್ರವತ್-ಬೆನ್ನುಹತ್ತಿತು (ಅಟ್ಟಿಸಿಕೊಂಡು ಬಂದಿತು); ಅಥ-ನಂತರ, ರುದ್ರಃ-ರುದ್ರನು, ವಿಹ್ವಲಃ-ದಿಕ್ಕು

(೭೧-೭೨). ಬ್ರಹ್ಮದೇವನ ಶಿರಸ್ಸನ್ನು ಕತ್ತರಿಸಲು, ಕತ್ತರಿಸಿದ ಆ ಮುಖವು (ಆ ಶಿರಸ್ಸು), ರುದ್ರದೇವನನ್ನು ಬೆನ್ನಟ್ಟಿ ಬಂತು (ಪೀಡಿಸಲು ಬಂದಿತು); ಭೀತನಾದ ರುದ್ರದೇವನು, ವಿಹ್ವಲಚಿತ್ತನಾಗಿ, ಶ್ರೀಲಕ್ಷ್ಮೀದೇವಿಯನ್ನೇ ಶರಣುಹೊಂದಿದನು; ಆಕೆಯು, ಆ ಛಿನ್ನಶಿರಸ್ಸನ್ನು ರುದ್ರನ ಕೈಯಲ್ಲಿತ್ತು ಗಂಗಾಜಲದಿಂದ, ಆ ಬ್ರಹ್ಮಹತ್ಯಾಪಾಪವನ್ನು

1. 'ಬ್ರಹ್ಮದ್ವಿಷೇಶರವೇ ಹಂತ ವಾ, ಉ' (ಅಂಭ್ರಣೀಸೂಕ್ತ). ಎಂಬಲ್ಲಿ ರುದ್ರನು ಬ್ರಹ್ಮ ಶಿರಸ್ಸನ್ನು ಛೇದಿಸಿದ ವಿಷಯವು ಪ್ರಸಕ್ತವಾಗಿದೆ. ರುದ್ರನು ಬ್ರಹ್ಮದ್ವೇಷಿಯಲ್ಲ—ದ್ವೇಷದಿಂದ ಶಿರಸ್ಸನ್ನು ಕತ್ತರಿಸಲಿಲ್ಲ. ಶ್ರೀಲಕ್ಷ್ಮೀದೇವಿಯು, ಬ್ರಹ್ಮಾದಿಗಳ ಪಾಲಕಳೂ; ನಿಯಾಮಕಳೂ ಎಂಬ ಆಕೆಯ ಮಹಿಮೆಯು, ಮಾತ್ರ ಸೂಚಿತವೆಂದು ತಿಳಿಯಬೇಕು. ದ್ವೇಷಿ, ಹಿಂಸಕ ಇತ್ಯಾದಿ ಶಬ್ದಗಳು, ರುದ್ರನು ಬ್ರಹ್ಮನಿಂದ ಅವರನೆಂದೂ, ದೋಷಸ್ಪರ್ಶವುಳ್ಳವನೆಂದೂ ತಿಳಿಸುತ್ತವೆ. ದುಃಶಬ್ದೋಚ್ಚಾರದಲ್ಲಿ ಬಹುಜಾಗ್ರತರಾಗಿರಬೇಕೆಂಬ ನೀತಿಯೂ ಬೋಧಿತವಾಗಿದೆ—ಸಜ್ಜನಲೋಕಕ್ಕೆ. ಈ ಚರಿತ್ರೆಯಿಂದ.

ತೋರದಂತಾಗಿ, ಭೀತಃ-ಹೆದರಿ, ಲಕ್ಷ್ಮೀಂ-ಶ್ರೀಲಕ್ಷ್ಮೀದೇವಿಯನ್ನೇ, ಶರಣಂ ಪ್ರಾಪ-ಶರಣು ಹೊಂದಿದನು; ಸಾ-ಶ್ರೀಲಕ್ಷ್ಮೀದೇವಿಯು, ತತ್ಕರೇ-ರುದ್ರನ ಕೈಯಲ್ಲಿ ತತ್-ಆ, ಕಪಾಲಂ-ಶಿರಸ್ಸನ್ನು (ಛಿನ್ನಶಿರಸ್ಸನ್ನು), ದತ್ವಾ-ಕೊಟ್ಟು ತತ್ ಪಾಪಂ-ಆ (ಬ್ರಹ್ಮಹತ್ಯಾ ರೂಪದ) ಪಾಪವನ್ನು ವಿಷ್ಣುಪದಾಂಬುಭಿಃ-ವಿಷ್ಣು ಪಾದೋದಕದಿಂದ (ಗಂಗಾಜಲದಿಂದ), ಶಮಯಾಮಾಸ-ಪರಿಹರಿಸಿದಳು (ನಿವೃತ್ತಿಗೊಳಿಸಿದಳು); ತತಃ-ಆ ನಂತರ (ಹೀಗೆ ಶ್ರೀಲಕ್ಷ್ಮೀದೇವಿಯಿಂದ ಅನುಗೃಹೀತನಾದಮೇಲೆ), ಧೌತಪಾಪ್ಮಾ- ಪಾಪರಹಿತನು, ಅಭವತ್-ಆದನು.

ಅಥ ಪಾದತಲೇನಾಧಃ ಸೃಷ್ಟ್ವಾ ಬ್ರಹ್ಮಾಂಡಖರ್ಪರಂ ।
ಆಕ್ರಮಚ್ಛಿರಸಾ ಸತ್ಯಲೋಕಪ್ರಾಂತಂ ಚತುರ್ಮುಖಃ ॥ ೭೫ ॥
ಪಾದಯೋರ್ಭೂಮಿಲೋಕಸ್ತು ನಾಭೌ ತು ಭುವರಾಶ್ರಿತಃ ।
ಸ್ವರ್ಲೋಕೋ ಹೃದಯೇ ವಾಸ್ಯ ಮಹರ್ಲೋಕೋಸ್ಯ ಜತ್ರುಣಿ ॥೭೬॥
ಜನಲೋಕೋಸ್ಯ ಕಂಠೋಽಭೂತ್ಸತ್ಯಂ ಶಿರಸಿ ಸಂಸ್ಥಿತಂ ।

ಪರಿಹರಿಸಿದಳು—ಶಿವನು, ಪಾಪರಹಿತನಾದನು[1] (೭೩-೭೪). ಸಕಲ ಲೋಕಾಧಾರವಾಗುವ ವೈರಾಜಾಖ್ಯ ದೇಹದ ಸೃಷ್ಟಿಯ ನಂತರ, ಅದರಲ್ಲಿ ಲೋಕಗಳ ಸೃಷ್ಟಿಯಾದುದನ್ನು ವಿವರಿಸುತ್ತಾರೆ:—ಪಾದತಲದಿಂದ ಕೆಳಗಿನ ಬ್ರಹ್ಮಾಂಡಖರ್ಪರ ಪರ್ಯಂತ ಪಾತಾಲಾದಿ ಲೋಕಗಳನ್ನು ಸೃಷ್ಟಿಸಿ, ತನ್ನ ಶಿರಸ್ಸಿನಿಂದ ಸತ್ಯಲೋಕದ ಉತ್ತರದ ಗಡಿಪ್ರದೇಶವನ್ನು ಚತುರ್ಮುಖನು, ಆಕ್ರಮಿಸಿದನು; ಆತನ ಪಾದಗಳಲ್ಲಿ

1. ಶ್ರೀಹರಿಯಿಂದ ಮಾತ್ರ ನಿಯತಳಾದ ಶ್ರೀಲಕ್ಷ್ಮೀದೇವಿಯು ತನ್ನಿಂದ ನಿಯಮ್ಯಗಳಾದ ಸತ್ವಾದಿ ಗುಣಗಳನ್ನು ನಿಮಿತ್ತ ಮಾಡಿ, ಬ್ರಹ್ಮಾದಿ ಸಕಲ ಜೀವರಾಶಿಯಿಂದ, ಅವರವರ ಯೋಗ್ಯತೆ ಮತ್ತು ಪೂರ್ವಕರ್ಮಾನುಸಾರವಾಗಿ, ಕಾಲಕಾಲಕ್ಕೆ ವಿವಿಧ ಕರ್ಮಗಳನ್ನು ಮಾಡಿಸುತ್ತಾಳೆ; ಹೀಗೆ ಸಕಲ ಜೀವರನ್ನು ಸ್ವಯೋಗ್ಯಕರ್ಮಗಳಲ್ಲಿ ಪ್ರೇರಿಸುವ ಲಕ್ಷ್ಮೀನಾರಾಯಣರು ದುಷ್ಕರ್ಮ ಪ್ರೇರಕರೂ ಆದರೂ, ಸ್ವಯಂ ಆ ಕರ್ಮಗಳಿಂದ, ನಿರ್ಲಿಪ್ತರಾಗಿದ್ದು ಜೀವರಿಗೆ ಅವುಗಳ ಫಲವನ್ನು ಅನುಭವಿಸುವಂತೆ ಮಾಡುವವರೂ, ಮತ್ತು ತಮ್ಮನ್ನು ಶರಣುಹೊಂದಿದವರ ದುಷ್ಕರ್ಮಗಳ ಫಲವಾದ ಪಾಪಗಳನ್ನು ಪರಿಹರಿಸುವವರೂ, ಆಗಿದ್ದಾರೆ—ಪ್ರಕೃತ, ಶ್ರೀಲಕ್ಷ್ಮೀದೇವಿಯೇ, ರುದ್ರನನ್ನು ಆಜ್ಞಾಪಿಸಿ, ಶಿರಚ್ಛೇದನರೂಪ, ಕರ್ಮವನ್ನು ಮಾಡಿಸಿ, ಅದರ ಪರಿಹಾರವನ್ನು ತಾನೇ ಮಾಡಿ ಅನುಗ್ರಹಿಸುತ್ತಾಳೆ. ಬ್ರಹ್ಮದೇವನು, ಬ್ರಾಹ್ಮಣನಾದ್ದರಿಂದ, ಆತನ ಶಿರಚ್ಛೇದನವು ಬ್ರಹ್ಮಹತ್ಯಾಪಾಪವನ್ನೇ ಉತ್ಪಾದಿಸಿತು; ಆ ಪಾಪವು ಘೋರರೂಪದಿಂದ ರುದ್ರನನ್ನು ಬೆನ್ನಟ್ಟಿತು. ವಿಷ್ಣುಪಾದೋದಕ ಮಹಾಮಹಿಮೆಯನ್ನು ಪ್ರಕಟಿಸಿ, ಶ್ರೀಲಕ್ಷ್ಮೀದೇವಿಯು, ಪ್ರಾರಬ್ಧಕರ್ಮಕಾರಣದಿಂದ ಘಟಿಸಿದ ಆ ಪಾಪಕೃತ್ಯದಿಂದ ರುದ್ರನನ್ನು ರಕ್ಷಿಸಿದಳು. ಕಾಶೀ ಕ್ಷೇತ್ರಕ್ಕೆ ಹೋಗಿ ರುದ್ರದೇವನು ಅಲ್ಲಿ ಗಂಗಾಸ್ನಾನದಿಂದ ಕೈಗೆ ಅಂಟಿದ್ದ ಬ್ರಹ್ಮಕಪಾಲವನ್ನು ತೊರೆದುಕೊಂಡ ಇತಿಹಾಸವು ಕೂರ್ಮಪುರಾಣದಲ್ಲಿ ವಿಸ್ತಾರವಾಗಿ ಉಕ್ತವಾಗಿದೆ.

ಅಥ- ಆ ನಂತರ (ಲೋಕಾಧಾರವಾದ ವೈರಾಜದೇಹವನ್ನು ನಿರ್ಮಿಸಿದ ನಂತರ), (ಆ ದೇಹದಿಂದ ವಿವಿಧಲೋಕಗಳ ಸೃಷ್ಟಿಯನ್ನು ವಿವರಿಸುತ್ತಾರೆ): ಪಾದತಲೇನ-(ಆ ದೇಹದ) ಪಾದಕೆಳಭಾಗದಿಂದ, ಬ್ರಹ್ಮಾಂಡಖರ್ಪರಂ- ಬ್ರಹ್ಮಾಂಡಖರ್ಪರದವರೆಗಿನ, ಅಧಃ-ಕೆಳಲೋಕವನ್ನು (ಪಾತಾಲಾದಿ ಅಧೋ ಲೋಕಗಳನ್ನು), ಸೃಷ್ಟ್ವಾ-ನಿರ್ಮಿಸಿ, ಚತುರ್ಮುಖಃ - ಬ್ರಹ್ಮದೇವನು, ಶಿರಸಾ - ತನ್ನ ಶಿರಸ್ಸಿನಿಂದ, ಸತ್ಯ ಲೋಕಪ್ರಾಂತಂ-ಸತ್ಯಲೋಕದ ತುದಿಯವರೆಗೂ, ಅಕ್ರಮತ್-ಅಕ್ರಮಿಸಿದನು;[1] ಪಾದಯೋಃ-(ಆ) ಪಾದಗಳಲ್ಲಿ ಭೂಮಿಲೋಕಃ- ಭೂಲೋಕವೂ, ನಾಭೌ-ನಾಭಿಯಲ್ಲಿ ಭುವಃ-ಭುವರ್ಲೋಕವೂ (ಅಂತರಿಕ್ಷ ಲೋಕವೂ), ಆಶ್ರಿತಃ-ಆಶ್ರಯಿಸಿಕೊಂಡಿವೆ; ತು-ಹೀಗೆಯೇ ಸರಿ; ಅಸ್ಯ-ಈತನ (ಈ ದೇಹದ), ಹೃದಯೇ-ವಕ್ಷಸ್ಥಳದಲ್ಲಿ ಸ್ವರ್ಲೋಕಃ-ಸ್ವರ್ಗಲೋಕವೂ, ಅಸ್ಯ-ಈತನ, ಜತ್ರುಣಿ-ಜತ್ರುಗಳಲ್ಲಿ (ಕಂಠದ ಕೆಳಭಾಗ ಮತ್ತು ಭುಜಗಳು ಸಂಧಿಸುವ ಪ್ರದೇಶ), ಮಹರ್ಲೋಕಃ-ಮಹರ್ಲೋಕವೂ, ಅಸ್ಯ-ಈತನ, ಕಂಠೇ- ಕಂಠದಲ್ಲಿ ಜನಲೋಕಃ-ಜನಲೋಕವೂ, (ಆಶ್ರಯಿಸಿವೆ); ಸತ್ಯಂ-ಸತ್ಯಲೋಕವು, ಶಿರಸಿ-ಈತನ ಶಿರಸ್ಸಿನಲ್ಲಿ ಸಂಸ್ಥಿತಂ-ಆಶ್ರಿತವಾದುದು, ಅಭೂತ್-ಆಯಿತು.

**ಏವಂ ತಂ ಪೌರುಷಂ ದೇಹಂ ಸೃಷ್ಟ್ವಾ ಬ್ರಹ್ಮಾಸುರೈಃ ಸಹ ॥ ೭೭ ॥**
**ಅದೃಷ್ಟ್ವಾನ್ಯಾಂಸ್ತು ಸಂಭಾರಾನ್ ಪುರುಷಾವಯವೈರ್ಹರಿಂ ।**
**ಕಾಲಸ್ಯಾವಯವೈರ್ಯಷ್ಟುಂ ಭಕ್ತ್ಯಾ ಸಂಭಾರಮಾತನೋತ್ ॥ ೭೮ ॥**

ಈ ಮುಂದೆ, ವೈರಾಜಾಖ್ಯಪುರುಷಾಕಾರದ (ಪುರುಷನಾಮಕ) ದೇಹದಿಂದ ಆಚರಿಸಲ್ಪಟ್ಟ ಪುರುಷಸೂಕ್ತೋಕ್ತ ದೇವಯಜ್ಞವು ನಿರೂಪಿಸಲ್ಪಡುತ್ತದೆ :—

ಬ್ರಹ್ಮಾ-ಬ್ರಹ್ಮದೇವನು, ಏವಂ-ಹೀಗೆ (ಈ ಹಿಂದೆ ಹೇಳಿದಂತೆ), ಪೌರುಷಂ

---

ಭೂಲೋಕವೂ, ನಾಭಿಯಲ್ಲಿ ಭುವರ್ಲೋಕವೂ, ಆಶ್ರಯ ಹೊಂದಿದವು; ವಕ್ಷಸ್ಥಲದಲ್ಲಿ ಸ್ವರ್ಗ ಲೋಕವೂ, ಜತ್ರುಪ್ರದೇಶದಲ್ಲಿ (ಕಂಠದ ಕೆಳಭಾಗದಲ್ಲಿ) ಮಹರ್ಲೋಕವೂ, ಕಂಠದಲ್ಲಿ ಜನಲೋಕವೂ, ಶಿರಸ್ಸಿನಲ್ಲಿ ಸತ್ಯಲೋಕವೂ (ಉಪಲಕ್ಷಣದಿಂದ ತಪೋಲೋಕವೂ) (ಉತ್ಪನ್ನಗಳಾಗಿ) ಆಶ್ರಯಿಸಿಕೊಂಡಿವೆ (೭೫-೭೬). ಈ ಹಿಂದೆ ಹೇಳಿದಂತೆ ಬ್ರಹ್ಮದೇವನು, ವೈರಾಜವೆಂಬ ಪುರುಷದೇಹವನ್ನು (ಪುರುಷನಾಮಕ

---

1. ವಿರಾಟ್‌ಪುರುಷದೇಹದ ನಾನಾ ಪಾದಾದಿ ಅವಯವಗಳಿಂದ, ಲೋಕಗಳು ಸೃಷ್ಟವಾಗಿ, ಆಯಾ ಅವಯವಗಳನ್ನು ಆಶ್ರಯಿಸಿಕೊಂಡಿರುತ್ತವೆ. ಉತ್ಪತ್ತಿಸ್ಥಾನಗಳೇ ಅವುಗಳ ಆಶ್ರಯ ಸ್ಥಾನಗಳು; ಬ್ರಹ್ಮಾಂತರ್ಯಾಮಿಯಾದ ಶ್ರೀಹರಿಯೇ ಲೋಕವಿಭಾಗಗಳನ್ನು ಕಲ್ಪಿಸಿ, ಬ್ರಹ್ಮನಿಗೆ ಸೃಷ್ಟಿಕರ್ತನೆಂಬ ಪ್ರಸಿದ್ಧಿಯನ್ನು ಅನುಗ್ರಹಿಸುತ್ತಾನೆ.

ದೇಹಂ-(ವೈರಾಜವೆಂಬ) ಪುರುಷದೇಹವನ್ನು, ಸೃಷ್ಟ್ವಾ-ನಿರ್ಮಿಸಿ,[1] ಸುರೈಃ ಸಹ-ದೇವತೆಗಳಿಂದ ಕೂಡಿಕೊಂಡು, ಅನ್ಯಾನ್-(ಪುರುಷದೇಹದಿಂದ ಭಿನ್ನವಾದ) ಇತರ, ಸಂಭಾರಾನ್-ಯಜ್ಞಸಾಮಗ್ರಿಗಳನ್ನು (ಶ್ರೀವಿಷ್ಣುಪೂಜೆಗೆ ಬೇಕಾಗುವ ಅನ್ಯಪೂಜಾ ದ್ರವ್ಯಗಳನ್ನು), ಅದೃಷ್ಟ್ವಾ-ಕಾಣದೇ, ಪುರುಷಾವಯವೈಃ-ಪುರುಷ ದೇಹದ ಅವಯವ ಗಳಿಂದ, ಕಾಲಾವಯವೈಃ - ಕಾಲಾವಯವಗಳಿಂದಲೂ, ಹರಿಂ-ಶ್ರೀಹರಿಯನ್ನು ಯಷ್ಟುಂ-ಪೂಜಿಸಲಿಕ್ಕೆ, (ಯಜ್ಞಸಂಭಾರಗಳನ್ನಾಗಿ ಉಪಯೋಗಿಸಿ, ಯಜ್ಞವನ್ನಾ ಚರಿಸಲು), ಸಂಭಾರಾನ್-ಅವುಗಳನ್ನೇ ಪೂಜಾಸಾಮಗ್ರಿಗಳನ್ನಾಗಿ, ಆತನೋತ್-ಮಾಡಿ ಕೊಂಡನು (ಉಪಯೋಗಿಸಿಕೊಂಡನು).

**ತಸ್ಮಿಂಸ್ತು ಪ್ರಥಮೇ ಯಜ್ಞೇ ವಸಂತಃ ಸಮಭೂತ್ ಘೃತಂ ।**
**ಸಮಿಧೋ ಗ್ರೀಷ್ಮ ಏವಾಸೀದ್ಧೇಮಂತಶ್ಚಾಭವಂಸ್ತಿಲಾಃ ॥ ೭೯ ॥**

ತಸ್ಮಿನ್-ಆ, ಪ್ರಥಮೇ-ಮೊದಲಿನ, ಯಜ್ಞೇ-(ದೇವತೆಗಳಿಂದ ಸಹಿತನಾಗಿ ಬ್ರಹ್ಮದೇವನು ಆಚರಿಸಿದ ಅತ್ಯಂತ ಶ್ರೇಷ್ಠವಾದ) ಆ ಯಜ್ಞದಲ್ಲಿ ವಸಂತಃ- ವಸಂತನು (ವಸಂತಋತುವಿನ ಅಭಿಮಾನಿಯಾದ ತನ್ನಾಮಕ ದೇವತೆಯು), ಘೃತಂ-ಆಜ್ಯ (ತುಪ್ಪ)ವಾದನು; ಗ್ರೀಷ್ಮಃ ಏವ-ಗ್ರೀಷ್ಮನೇ (ತನ್ನಾಮಕದೇವತೆಯೇ, ಮುಂದೆಯೂ ಹೀಗೆಯೇ ತಿಳಿಯಬೇಕು), ಸಮಿಧಃ-ಸಮಿತ್ತುಗಳು, ಆಸೀತ್- ಆದನು; ಹೇಮಂತಃ-ಹೇಮಂತನು, ತಿಲಾಃ-ಎಳ್ಳು, ಅಭವನ್-ಆದನು.

**ವರ್ಷಾದೇವೋಽಭವದ್ದರ್ಭಾಃ ಶರಚ್ಚರುರಜಾಯತ ।**
**ಶಿಶಿರೋ ಯವತಾಂ ಯಾತ ಇತಿ ಸ್ವಸ್ವಸ್ವಭಾವತಃ ॥ ೮೦ ॥**

ವರ್ಷಾದೇವೋ - ವರ್ಷರ್ತುದೇವತೆಯು, ದರ್ಭಾಃ - ದರ್ಭೆಗಳು,

ಶ್ರೀಹರಿಗೆ ಆವಾಸಸ್ಥಾನವಾದ ತನ್ನ ದೇಹವನ್ನು) ಸೃಷ್ಟಿಮಾಡಿ, ಯಜ್ಞವನ್ನಾಚರಿಸಿ, ತನ್ನ ಜನಕನಾದ ಶ್ರೀಹರಿಯನ್ನು ಪೂಜಿಸಲಿಚ್ಛಿಸಿದನು; ಪುರುಷದೇಹಭಿನ್ನವಾದ ಯಾವ ಪೂಜಾದ್ರವ್ಯಗಳನ್ನೂ (ಯಜ್ಞಸಂಭಾರಗಳನ್ನು) ಕಾಣದೇ, (ವಸಂತಾದಿ)

1. ಇಲ್ಲಿ ಇದೇ ಅಧ್ಯಾಯದ ೫೧ ರಿಂದ ೫೩ರವರೆಗಿನ ಶ್ಲೋಕಭಾಗಗಳನ್ನು ನೋಡಿರಿ. ವೈರಾಜವೆಂಬ ಈ ದೇಹವನ್ನು ಬ್ರಹ್ಮನಿಗಾಗಿ, ಮಹದಾದಿ ತತ್ತ್ವಗಳಿಂದ ಶ್ರೀಹರಿಯು ಸೃಷ್ಟಿಮಾಡಿ, ತಾನೇ ಆ ದೇಹದಲ್ಲಿ ಪುರುಷನಾಮಕನಾಗಿ ಪ್ರವೇಶಿಸಿ, ಅದರ ವಿವಿಧ ಅವಯವಗಳಿಂದ, ಲೋಕಗಳನ್ನೂ ದೇವಾದಿ ಪ್ರಜೆಗಳನ್ನೂ ನಿರ್ಮಿಸುತ್ತಾನೆ. ಈ ಅಧ್ಯಾಯದ ಅವಶಿಷ್ಟಭಾಗದಲ್ಲಿ ಈ ದೇಹದಿಂದಾದ ಸೃಷ್ಟಿಯ ವಿಸ್ತಾರವನ್ನು ಕಾಣಬಹುದು. (ಚೇಷ್ಟಿಸಿ—ಉಜ್ಜೀವಿಸಿ, ಎಂಬರ್ಥದಲ್ಲಿದ್ದ, ಸೃಷ್ಟ್ವಾ ಎಂಬುದು).

ಅಭವತ್-ಆದನು; ಶರತ್-ಶರದೃತು ದೇವತೆಯು, ಚರುಃ-ಚರುವು, ಅಜಾಯತ-ಆದನು; ಶಿಶಿರಃ-ಶಿಶಿರನು, ಯವತಾಂ-ಅಕ್ಕಿಯ (ಗೋಧಿ ಅಥವಾ ಇತರ ಧಾನ್ಯವಿಶೇಷದ) ಭಾವವನ್ನು ಯಾತಃ-ಹೊಂದಿದನು; ಇತಿ-ಹೀಗೆ, ಸ್ವಸ್ವ ಸ್ವಭಾವತಃ-ತಂತಮ್ಮ ಸ್ವಭಾವವನ್ನನುಸರಿಸಿ (ಯಜ್ಞಸಂಭಾರಗಳಾಗಿ ನಿಂತರು- ಆಸನ್, ಎಂದು ಮುಂದಿನ ಶ್ಲೋಕದಿಂದಲೂ ಅನ್ವಯವನ್ನು ಕಾಣಬಹುದು).

ಆಸನ್ ಪರಿಧಯಸ್ತಸ್ಯ ಗಾಯತ್ರ್ಯಾದೀನಿ ಸಪ್ತ ವೈ ।
ಛಂದಾಂಸ್ಯಥೈಕವಿಂಶತ್ಯಾ ದಾರುಭಿಶ್ಚೇಧ್ಮ ಆಬಭೌ ॥ ೮೧ ॥
ಪುರುಷಂ ಬರ್ಹಿಷಿ ಪ್ರೋಕ್ಷನ್ ಸಾಧ್ಯಾಶ್ಚ ಋಷಿಭಿಃ ಸಹ ।
ತೇನೇಜಿರೇಽಖಿಲಂ ವಿಷ್ಣುಂ ದದೃಶೇ ತೈಸ್ತದಾ ಹರಿಃ ॥ ೮೨ ॥

ತಸ್ಯ-ಆ ಯಜ್ಞದ ಅಗ್ನಿಗೆ, ಗಾಯತ್ರ್ಯಾದೀನಿ-ಗಾಯತ್ರೀ ಮೊದಲಾದ, ಸಪ್ತಛಂದಾಂಸಿ-ಏಳು ಛಂದಸ್ಸುಗಳೇ, ಪರಿಧಯಃ-ಪರಿಧಿಗಳು (ಅಗ್ನಿಯ ಸುತ್ತಲೂ ಇಡುವ ಮುತ್ತುಗದ ಕಡ್ಡಿಗಳಂತೆ), ಆಸನ್ ವೈ-ಆದುವಷ್ಟೆ ಅಥ-ಮತ್ತು ಏಕ ವಿಂಶತ್ಯಾ-೨೧ ಸಂಖ್ಯೆಯ, ದಾರುಭಿಃ ಚ-ಕಟ್ಟಿಗೆ ತುಂಡುಗಳಿಂದಲೋ ಎಂಬಂತೆ, ಇಧ್ಮಃ-ಸಮಿತ್ತು ಆಬಭೌ-ವಿರಾಜಿಸಿತು; (ಹೀಗಿರುವ ಯಜ್ಞಸಂಭಾರಗಳಿಂದ) ಋಷಿಭಿಃ ಸಹ-ಋಷಿಗಳಿಂದ ಸಹಿತರಾಗಿ, ಸಾಧ್ಯಾಃ ಚ-ಸಾಧ್ಯಗಣಗಳೂ ಸಹ, ಬರ್ಹಿಷಿ-ಯಜ್ಞದಲ್ಲಿ, ಪುರುಷಂ-ಪುರುಷನನ್ನೇ (ಪುರುಷಾಕಾರದ ವಿರಾಟ್ ದೇಹವನ್ನೇ), ಪ್ರೋಕ್ಷನ್ - (ಆಹುತಿಯನ್ನಾಗಿ) ಅರ್ಪಿಸಿದರು; ತೇನ - (ಪ್ರಥಮಜಾತನಾದ) ಬ್ರಹ್ಮದೇವನಿಂದ (ಆರಂಭಿಸಿ), ಅಖಿಲಂ-ಸಮಸ್ತವನ್ನೂ (ನಂತರ ಸೃಷ್ಟರಾದ ಇತರ

---

ಕಾಲಾವಯವಗಳಿಂದಲೂ, ಪುರುಷಾವಯವಗಳಿಂದಲೂ, ಯಜ್ಞವನ್ನಾಚರಿಸುವೆನೆಂದು ನಿಶ್ಚಯಿಸಿ, ಅವುಗಳನ್ನೇ ಯಜ್ಞಸಂಭಾರಗಳನ್ನಾಗಿ ಕಲ್ಪಿಸಿಕೊಂಡನು (ಉಪಯೋಗಿಸಿಕೊಂಡನು) (೭೭-೭೮). ಯಜ್ಞಗಳಲ್ಲಿ ಮೊದಲಿನದೂ, ಬ್ರಹ್ಮಾದಿ ದೇವತೆಗಳಿಂದ ಆಚರಿಸಲ್ಪಟ್ಟಿದ್ದರಿಂದ (ಪ್ರಥಮವೂ)[1] ಶ್ರೇಷ್ಠವೂ ಆದ ಆ ಯಜ್ಞದಲ್ಲಿ ಕಾಲವಿಭಾಗಗಳಾದ ವಸಂತಾದಿ ಋತುಗಳ ಅಭಿಮಾನಿದೇವತೆಗಳಾದ ವಸಂತಾದಿಗಳು, ವಿವಿಧ ಸಂಭಾರಗಳಾದರು (ತದ್ರೂಪರಾದರು—ಹಾಗೆ ಉಪಯೋಗಿಸಲ್ಪಟ್ಟರು); ವಸಂತನು ಘೃತವಾದನು, ಗ್ರೀಷ್ಮನು ಸಮಿತ್ತುಗಳಾದನು, ಹೇಮಂತನು ತಿಲವಾದನು, ವರ್ಷದೇವನು ದರ್ಭೆಯಾದನು, ಶರದೃತುದೇವನು ಚರುವಾದನು, ಮತ್ತು ಶಿಶಿರನು ಯವ (ಅಕ್ಕಿ) ಆದನು. ಹೀಗೆ, ತಂತಮ್ಮ ಸ್ವಭಾವಾನುಸಾರವಾದ ವಸ್ತುಗಳಾಗಿ

---

1. ಇಲ್ಲಿ 'ಪ್ರಥಮ' ಯಜ್ಞದ ವಿವರಣೆಗಾಗಿ ೨೦ನೇ ಅಧ್ಯಾಯದ ೧೨೫-೧೩೩ ಶ್ಲೋಕ ಭಾಗಗಳನ್ನು ಓದಿಕೊಳ್ಳಬಹುದು.

ದೇವಾದಿಗಳನ್ನೂ), ಅರ್ಚಿಸಿ, ವಿಷ್ಣುಂ-ಶ್ರೀವಿಷ್ಣುವನ್ನು ಈಜಿರೇ- ಪೂಜಿಸಿದರು (ಯಜ್ಞದಿಂದ ಸಂತೃಪ್ತಿಗೊಳಿಸಿದರು); ತೈಃ-ಅವರಿಂದ (ಎಲ್ಲ ದೇವಾದಿಗಳಿಂದ), ಹರಿಃ-ಶ್ರೀಹರಿಯು, ತದಾ-ಆಗ, ದದೃಶೇ-ಕಾಣಲ್ಪಟ್ಟನು (ಪ್ರತ್ಯಕ್ಷನಾಗಿ ದರ್ಶನವಿತ್ತನು).

ತಮಸ್ತುವನ್ ಪರಪ್ರೇಮ್ಣಾ ಬ್ರಹ್ಮಾದ್ಯಾಃ ಪೌರುಷೈರ್ಗುಣೈಃ ।

**ದೇವಾ ಊಚುಃ—**

ಅನಂತಶೀರ್ಷಾಸ್ಯಕರೋರುಪಾದಃ ಸರ್ವತ್ರದರ್ಶೀ ಪುರುಷಸ್ತ್ವಮೇಕಃ ।
ಸರ್ವಾಸಭಿವ್ಯಾಪ್ಯಜಗನ್ನಿದಾನಮಾದ್ಯಾಂ ಪರಾಂ ತ್ವಂ ಪ್ರಕೃತಿಂ ಸ್ಥಿತೋಽಸಿ ॥ ೮೩ ॥

ಬ್ರಹ್ಮಾದ್ಯಾಃ-ಬ್ರಹ್ಮಾದಿದೇವತೆಗಳು (ಯಜ್ಞಭಾಗಿಗಳಾದ ಸರ್ವರೂ), ಪರ ಪ್ರೇಮ್ಣಾ - ಶ್ರೇಷ್ಠಭಕ್ತಿಯುತರಾಗಿ, ಪೌರುಷೈಃ - ಪುರುಷಸೂಕ್ತಪ್ರತಿಪಾದ್ಯಗಳಾದ, ಗುಣೈಃ-ಮಹಿಮೆಗಳಿಂದ, ತಂ-(ಹಾಗೆ ಪ್ರತ್ಯಕ್ಷನಾದ) ಶ್ರೀಹರಿಯನ್ನು ಅಸ್ತುವನ್-ಸ್ತುತಿಸಿದರು.

---

ಯಜ್ಞಭಾಗಿಗಳಾದರು (೭೯-೮೦). ಯಜ್ಞಾಗ್ನಿಯ ಸುತ್ತಲಿರುವ ಪಲಾಶಾದಿ ಕಡ್ಡಿಗಳಂತೆ, ಗಾಯತ್ರೀ ಮೊದಲಾದ ಏಳು ಛಂದಸ್ಸುಗಳು (ಛಂದೋಭಿಮಾನಿದೇವತೆಗಳು).[1] ಆ ಯಜ್ಞದಲ್ಲಿ ನಿಂತರು; ೨೧ ದಾರುಗಳಿಂದ (ಕಟ್ಟಿಗೆ ತುಂಡುಗಳಂತೆ), ಸಮಿತ್ತುಗಳು (ಗ್ರೀಷ್ಮನು) ವಿರಾಜಿಸಿದನು; ಋಷಿಗಳಿಂದ ಸಹಿತರಾದ ಸಾಧ್ಯರೂ ಸಹ, ಯಜ್ಞದಲ್ಲಿ ಪುರುಷನನ್ನೇ (ವಿರಾಟ್ ದೇಹವನ್ನೇ) ಆಹುತಿಯನ್ನಾಗಿ ಪ್ರಾರಂಭಿಸಿ, ಸಕಲರೂ ಸ್ವಸ್ವದೇಹಗಳನ್ನು ಅರ್ಪಿಸಿದರು;[2] ಈ ವಿಧ ಸಮರ್ಪಣಾರೂಪ ಯಜ್ಞದಿಂದ

1. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ ತ್ರಿಷ್ಟುಪ್ ಮತ್ತು ಜಗತೀ ಎಂಬಿವು ಏಳು ಛಂದಸ್ಸುಗಳು. ಈ ಛಂದಸ್ಸುಗಳ ಮತ್ತು ಛಂದೋಭಿಮಾನಿಗಳ ಮಹಿಮೆಗಳು ಐತರೇಯ ಭಾಷ್ಯದಲ್ಲಿ ಉಕ್ತವಾಗಿವೆ. ಗಾಯತ್ರೀ—ಮಹಿಮೆಯ ಗಾನ ಮತ್ತು ಗಾಯಕ ರಕ್ಷಣ; ಉಷ್ಣಿಕ್—ತಪನಶಕ್ತಿ; ಅನುಷ್ಟುಪ್—ಅನುಕೂಲಸ್ತುತಿ (ಸ್ತುತಿಯನ್ನನುಸರಿಸಿ ಪ್ರಸನ್ನನಾಗುವಿಕೆ); ಬೃಹತೀ—ಪೂರ್ಣತ್ವ; ಪಂಕ್ತಿ—ಪಂಚರೂಪತ್ವ; ತ್ರಿಷ್ಟುಪ್—ಮೂರು ವೇದಗಳಿಂದ ಸ್ತುತ್ಯ; ಜಗತೀ—ಜಗದಾಶ್ರಯತ್ವ ಇತ್ಯಾದಿ.

2. ವೈರಾಜದಲ್ಲಿ (ಬ್ರಹ್ಮನ ದೇಹದಲ್ಲಿ) ಪುರುಷನಾಮಕ ಶ್ರೀಹರಿಯು ಪ್ರವಿಷ್ಟನಾಗಿ, ತನ್ನ ಜ್ಞಾನಾನಂದಮಯಗಳಾದ ಅವಯವಗಳಿಂದ, ಆ ವಿರಾಟ್‌ದೇಹದ ಅವಯವಗಳನ್ನೂ ವ್ಯಾಪಿಸಿ ನಿಂತನು. ಈ ವಿರಾಟ್‌ರೂಪದ ನಿರೂಪಣೆಯು ಪುರುಷ ಸೂಕ್ತದಲ್ಲಿ ಪ್ರಸಕ್ತವಾಗಿದೆ. ಪುರುಷ ಸೂಕ್ತದ ಋಷಿಯು ಅಂತರ್ಯಾಮಿ ನಾರಾಯಣನೇ; ಪುರುಷನಾಮಕ ನಾರಾಯಣನೇ ದೇವತೆ, ಮೊದಲಿನ ೧೫ ಮಂತ್ರಗಳ ಛಂದಸ್ಸು ಅನುಷ್ಟುಪ್—ಕೊನೆಯವು ತ್ರಿಷ್ಟುಪ್. ಹೀಗಿರುವ ಪುರುಷಸೂಕ್ತದಲ್ಲಿ ಉಕ್ತವಾದ ಬ್ರಹ್ಮಾದಿ ದೇವತೆಗಳಿಂದ ಆಚರಿಸಲ್ಪಟ್ಟ ಪ್ರಥಮ (ಶ್ರೇಷ್ಠವೂ ಆದ) ಯಜ್ಞವು, ಇಲ್ಲಿ ಸಂಗ್ರಹವಾಗಿ ನಿರೂಪಿಸಲ್ಪಟ್ಟಿದೆ.

ದೇವತೆಗಳು ಹೇಳುತ್ತಾರೆ :—

ತ್ವಂ-ನೀನು, ಅನಂತಶೀರ್ಷಾಸ್ಯಕರೋರುಪಾದಃ-ಅಸಂಖ್ಯ (ಸಹಸ್ರ) ತಲೆ (ಶೀರ್ಷ), ಮುಖ(ಆಸ್ಯ), ಕೈಗಳು, ತೊಡೆ, ಪಾದಗಳುಳ್ಳವನು (ಕರೋರು ಪಾದಃ); ಸರ್ವತ್ರದರ್ಶೀ - ಎಲ್ಲವನ್ನೂ ನೋಡುವವನು (ಸಹಸ್ರಾಕ್ಷಃ - ಅಸಂಖ್ಯ ನೇತ್ರಗಳುಳ್ಳವನು); ಏಕಃ-ಸರ್ವೋತ್ತಮನಾದ (ಸ್ವತಂತ್ರನಾದ), ಪುರುಷಃ-ಗುಣಪೂರ್ಣನು (ಪುರುಷನಾಮಕನು); ಸರ್ವಾನ್-ಎಲ್ಲವನ್ನೂ, ಅಭಿವ್ಯಾಪ್ಯ-ಒಳ ಹೊರಗೆ ವ್ಯಾಪಿಸಿ, ಜಗನ್ನಿದಾನಂ-ಜಗತ್ತನ್ನು ಧರಿಸಿರುವವನು; ತ್ವಂ-ನೀನು, ಆದ್ಯಾಂ-ಜಗತ್ಸೃಷ್ಟಿಯಲ್ಲಿ ಮೂಲಕಾರಣಳಾದ, ಪರಾಂ-ಉತ್ತಮಳಾದ, ಪ್ರಕೃತಿಂ-ಚಿತ್ಪ್ರಕೃತಿಯನ್ನೂ (ಪ್ರಕೃತ್ಯಭಿಮಾನಿಯಾದ ಶ್ರೀಲಕ್ಷ್ಮೀದೇವಿಯನ್ನೂ), (ಅಭಿವ್ಯಾಪ್ಯ-ವ್ಯಾಪಿಸಿ), ಸ್ಥಿತಃ ಅಸಿ-ಸ್ಥಿತನಾಗಿದ್ದೀ(ಇರುವಿ).

---

ಪ್ರಸನ್ನನಾದ ಶ್ರೀಹರಿಯು, ಪ್ರತ್ಯಕ್ಷನಾದನು; ಸರ್ವರೂ ಆತನ ದಿವ್ಯಸಂದರ್ಶನವನ್ನು ಪಡೆದು ಕೃತಾರ್ಥರಾದರು (೮೧-೮೨). ಹೀಗೆ ಪ್ರತ್ಯಕ್ಷನಾದ ಶ್ರೀಹರಿಯನ್ನು ಬ್ರಹ್ಮಾದಿ ದೇವತೆಗಳು ಪುರುಷಸೂಕ್ತ ಪ್ರತಿಪಾದ್ಯಮಹಿಮೆಗಳಿಂದ, ಬಹುಭಕ್ತಿಯುತರಾಗಿ ಸ್ತುತಿಸಿದರು; ದೇವತೆಗಳು ಹೀಗೆ ನುಡಿದರು:— ಹೇ ದೇವ! ನೀನು, ಅನಂತಶೀರ್ಷ, ಆಸ್ಯ, ಕರ, ಊರು, ಪಾದಗಳುಳ್ಳವನು; ಸರ್ವದಿಕ್ಕುಗಳಲ್ಲಿ ನೋಡುವ ಅಸಂಖ್ಯನೇತ್ರಗಳುಳ್ಳವನು; ಸ್ವತಂತ್ರನೂ ಸರ್ವೋತ್ತಮನೂ ಆದ ಪುರುಷನಾಮಕ

---

[1]'ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ । ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ । ತಸ್ಮಾದ್ಯಜ್ಞಾತ್ಸರ್ವ ಹುತಃ ಸಂಭೃತಂ ಪೃಷದಾಜ್ಯಂ । ಇತ್ಯಾದಿ ಮಂತ್ರಗಳ ವಿವರಣರೂಪವಾಗಿವೆ, ಈ ಶ್ಲೋಕಗಳು.

ಶ್ರೀವಾದಿರಾಜರು, ತಮ್ಮ ವ್ಯಾಖ್ಯಾನದಲ್ಲಿ ಇದು, ದೇವತೆಗಳಿಂದ, ಆಚರಿಸಲ್ಪಟ್ಟ ಮಾನಸ ಯಜ್ಞವೆಂದೂ ನಿರೂಪಿಸಿ, ಉತ್ತಮಾಧಿಕಾರಿಗಳು ಮಾನಸಯಜ್ಞದಲ್ಲಿ ಸ್ವಾತ್ಮಸಮರ್ಪಣೆ ಮಾಡುವ ಪ್ರಕಾರವನ್ನು ಸೂಚಿಸಿರುತ್ತಾರೆ; ಬ್ರಹ್ಮದೇವನು, ತನ್ನ ದೇಹವು ಸಂಪೂರ್ಣವಾಗಿ ಶ್ರೀವಿಷ್ಣುವಿನ ಅಧೀನವೆಂಬ ಭಾವದಿಂದ, ಅದನ್ನೂ ತನ್ನ ಸರ್ವಪರಿವಾರವನ್ನೂ, ಸ್ವಸ್ವರೂಪವನ್ನೂ (ನಿತ್ಯಾಧೀನನೆಂಬ ಭಾವದಿಂದ, ಸ್ವರೂಪವನ್ನೂ) ಅರ್ಪಿಸಿದನು; ಇತರ ದೇವಾದಿ ಯಜ್ಞದಲ್ಲಿ ಭಾಗವಹಿಸಿದವರೂ, ಸ್ವಸ್ವದೇಹಗಳನ್ನೂ (ತಮ್ಮಿಂದ ಅಭಿಮನ್ಯಮಾನವಾದ ವಸ್ತುಗಳನ್ನು) ಸ್ವಸ್ವರೂಪಗಳನ್ನೂ, ಸರ್ವಾತ್ಮನಾ ಪರಮಾತ್ಮನಲ್ಲಿ ಅರ್ಪಿಸಿದರು—ಇದೇ ಮುಖ್ಯವಾದ ಯಜ್ಞವು—ಮುಖ್ಯ ಫಲಪ್ರಾಪಕವಾದುದು. ವೇದೋಕ್ತವಾದ ಪ್ರಸಿದ್ಧ ಯಜ್ಞಸಂಭಾರಗಳ ಕೊರತೆಯಿದ್ದರೂ, ಸ್ವಾತ್ಮಾರ್ಪಣರೂಪದ ಶ್ರೇಷ್ಠ ಯಜ್ಞವನ್ನು ಆಚರಿಸಿ ಶ್ರೀವಿಷ್ಣು ಪ್ರಸನ್ನತೆಯನ್ನೂ, ಅದರಿಂದ ತಪ್ಪದೇ ಲಭಿಸುವ ಮೋಕ್ಷವನ್ನೂ ಹೊಂದಬಹುದೆಂಬುದನ್ನು ಪ್ರಸಕ್ತ ಶ್ಲೋಕಭಾಗಗಳಿಂದ ಉಪದೇಶಿಸಲಾಗಿದೆ.

**ತತೋಽಪಿ ದೂರಾದಮಿತಸ್ತ್ವಮೇಕೋ**
**ಭಾಸಿ ಸ್ವಧಾಮ್ನಾ ದಶದಿಕ್ಷು ಭೂಮನ್ ।**
**ಭೂತಂ ಭವಿಷ್ಯಚ್ಚ ವಿವರ್ತಮಾನಂ**
**ಸ್ಥೂಲಂ ಚ ಸೂಕ್ಷ್ಮಂ ಪ್ರವಿಶನ್ ಸದೈವ ॥ ೮೪ ॥**

ತತಃಅಪಿ- ಅದರಿಂದ ಸಹ (ಪ್ರಕೃತಿತತ್ತ್ವದಿಂದ ಸಹ), ದೂರಾತ್- ಅತಿಕ್ರಮಿಸಿದ (ಅದನ್ನೂ- ಲಕ್ಷ್ಮೀದೇವಿಯನ್ನೂ ಮೀರಿದ), ಅಮಿತಃ- ಅಪರಿಮಿತನು (ಅನಂತವ್ಯಾಪ್ತಿಯುಳ್ಳ), ತ್ವಂ-ನೀನು, ಏಕಃ- ಒಬ್ಬನೇ (ಸಮಾಧಿಕರಹಿತನು- ಅದ್ವಿತೀಯನು), ಸ್ವಧಾಮ್ನಾ-ನಿನ್ನ ಪ್ರಕಾಶದಿಂದ, ಭೂಮನ್-ಹೇ ಗುಣಪೂರ್ಣ!, ದಶದಿಕ್ಷು-ಹತ್ತು ದಿಕ್ಕುಗಳಲ್ಲಿ (ಸರ್ವತ್ರ), ಭಾಸಿ-ವಿರಾಜಮಾನನಾಗಿರುವಿ; ಭೂತಂ-ಹಿಂದೆ ಇದ್ದ ಭವಿಷ್ಯತ್-ಮುಂದೆ ಬರಲಿರುವ, ಚ-ಮತ್ತು ವಿವರ್ತಮಾನಂ-ಸುತ್ತುತ್ತಿರುವ ವಿಶ್ವದ (ವಿಶೇಷವಾಗಿ ಈಗಿರುತ್ತಿರುವ), ಸ್ಥೂಲಂ ಚ-ಸ್ಥೂಲವನ್ನೂ (ಸ್ಥೂಲವಸ್ತುಗಳನ್ನೂ), ಸೂಕ್ಷ್ಮಂಚ-ಸೂಕ್ಷ್ಮವನ್ನೂ (ಸೂಕ್ಷ್ಮ ವಸ್ತುಗಳನ್ನೂ), ಪ್ರವಿಶನ್-(ಬಾಹ್ಯದಲ್ಲಿ ಮಾತ್ರವಲ್ಲದೇ ಒಳಗೆ ಸಹ) ಪ್ರವಿಷ್ಟನಾಗಿ ವ್ಯಾಪಿಸಿ, ಸದಾ ಏವ-ಸರ್ವಕಾಲದಲ್ಲಿಯೂ, (ಭಾಸಿ-ವಿರಾಜಿಸುವಿ).

**ತದಾತ್ಮಭೂತೋ ಭ್ರಮತಾಂ ಚ ಮುಕ್ತಿಂ**
**ಯಾತಾಮಪೀಶೋಽಪಿ ನ ಹೀಯದೇವ ।**
**ನ ಹಿ ತ್ವದೀಯಾಂ ತ್ವಮತೋಽಪಿ ವೃದ್ಧೋಽ-**
**ನಂತೈರ್ಗುಣೈರೈಶ್ವರ್ಯೈರ್ಮಹಿಷ್ಠ ಇತಿ ಸ್ಮರಂತಿ ॥ ೮೫ ॥**

ತದಾತ್ಮಭೂತಃ-(ನಿನ್ನಿಂದ ಒಳಹೊರಗೆ ವ್ಯಾಪಿಸಲ್ಪಟ್ಟ) ವಿಶ್ವದ ಸ್ವಾಮಿಯೂ, ಅಸಿ-ಆಗಿರುವಿ; ಭ್ರಮತಾಂ-(ಸಂಸಾರದಲ್ಲಿ) ಸುತ್ತುತ್ತಿರುವ, ಚ-ಮತ್ತು ಮುಕ್ತಿಂ-ಮೋಕ್ಷವನ್ನು, ಯಾತಾಂ ಅಪಿ-ಹೊಂದಿದವರಿಗೂ ಸಹ, ಈಶಃ-ಸ್ವಾಮಿಯು (ಆಳುವ ಪ್ರಭುವೂ-ರಕ್ಷಕನೂ), ಅಸಿ-ಆಗಿರುವಿ; ಇಯದೇವ-ಇಷ್ಟುಮಾತ್ರವೇ, ನ ಹಿ-ಅಲ್ಲ; (ಇದಕ್ಕೂ ಅಧಿಕವಾದ ಮಹಿಮೆಯುಳ್ಳವನು); ತ್ವದೀಯಾಂ-ನಿನ್ನ ಮಹಿಮೆಯನ್ನು (ಉತ್ಕೃಷ್ಟತೆಯನ್ನು-ಸ್ಥಾನವನ್ನು ಅಥವಾ ನಿನ್ನ ಸಾಮ್ಯವನ್ನು), ನ ಹಿ- (ಹೊಂದಿರವನು

---

ಬ್ರಹ್ಮನು—ಗುಣಪೂರ್ಣನು; ಜಗದಾಧಾರನಾದ ನೀನು, ಸರ್ವವನ್ನೂ (ವಿಶ್ವವನ್ನೂ) ಪ್ರಕೃತ್ಯಭಿಮಾನಿಯಾದ ಶ್ರೀ ಮಹಾಲಕ್ಷ್ಮೀದೇವಿಯನ್ನೂ ಒಳಹೊರಗೆ ವ್ಯಾಪಿಸಿರುವಿ (೮೩). ನಿನ್ನ ವ್ಯಾಪ್ತಿಯು ಅಪರಿಮಿತವಾದುದು— ಲಕ್ಷ್ಮ್ಯಾದಿಗಳನ್ನೂ ಅತಿಕ್ರಮಿಸಿದುದು; ನೀನು, ಸ್ವಪ್ರಕಾಶದಿಂದಲೇ ಅದ್ವಿತೀಯನಾಗಿ, ದಶದಿಕ್ಕುಗಳಲ್ಲಿ ವಿರಾಜಿಸುವಿ; ಹೇ ಗುಣಪೂರ್ಣ! ನೀನು ತ್ರಿಕಾಲಗಳಲ್ಲಿ (ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿ) ಇರುವ

ಮತ್ತು ಹೊಂದಲರ್ಹನು) ಬೇರಾವನೂ ಇಲ್ಲ (ಹೀಗೆಂಬುದು ಶ್ರುತಿಸಿದ್ಧವು); ಅತಃ- ಈ ಕಾರಣದಿಂದ, ತ್ವಂ- ನೀನು, ಪೂರ್ಣಃ- ಪೂರ್ಣನು, ಅಸಿ- ಆಗಿರುವಿ; ಅನಂತೈಃ- ಅನಂತ (ಅಸಂಖ್ಯ) ಗಳಾದ, ಗುಣೈಃ- ಗುಣಗಳಿಂದ (ಪ್ರತಿಗುಣದಿಂದ ಸಹ), ಜ್ಯೇಷ್ಠಃ- ಶ್ರೇಷ್ಠನು (ಹಿರಿಯನು), ಇತಿ- ಎಂದು, ಸ್ಮರಂತಿ- (ಜ್ಞಾನಿಗಳು) ನಿನ್ನನ್ನು ನಿರಂತರವಾಗಿ ಧ್ಯಾನಿಸುತ್ತಾರೆ.

**ಯಸ್ಯೈಕದೇಶೋಽಂಡಮಿದಂ ಚ ವಿಶ್ವಂ**
**ಚಿದಾತ್ಮಕಂ ಚಾಪ್ಯಚಿದಾತ್ಮಕಂ ಚ ।**
**ಯತ್ಸಾಮನಮೇತತ್ಸಕಲಂ ತತೋಽಪಿ**
**ಧಾಮತ್ರಯಂ ಶಾಶ್ವತಮಾಹುರಾರ್ಯಾಃ ॥ ೮೬ ॥**

ಚಿದಾತ್ಮಕಂ- ಚೇತನಾತ್ಮಕವೂ (ಚೇತನರಿಂದ ತುಂಬಿದುದೂ), ಅಚಿದಾತ್ಮಕಂ ಚ- ಜಡಾತ್ಮಕವೂ (ಅಚೇತನಸ್ವರೂಪವೂ), ಆದ, ಇದಂ- ಈ (ಪ್ರತ್ಯಕ್ಷಸಿದ್ಧವಾದ), ವಿಶ್ವಂ- ಜಗತ್ತು ಚ- ಮತ್ತು ಅಂಡಂ- ಆವರಣಸಹಿತ ಬ್ರಹ್ಮಾಂಡವು, ಯಸ್ಯ-

---

ಸಮಸ್ತ ಸ್ಥೂಲಸೂಕ್ಷ್ಮವಸ್ತುಗಳನ್ನು ಪ್ರವೇಶಿಸಿ ಸರ್ವದಾ (ಅಂತಃಪ್ರವಿಷ್ಟನಾಗಿ—ಹೀಗೆ ಒಳಹೊರಗೆ ಸಹ) ವಿರಾಜಿಸುವಿ[1] (೮೪).

ನಿನ್ನಿಂದ ವ್ಯಾಪ್ತವಾದ ಸಕಲ ಜಗತ್ತಿನ ಸ್ವಾಮಿಯಾಗಿರುವಿ; ಸಂಸಾರದಲ್ಲಿ ಸುತ್ತುವ ಮತ್ತು ಮುಕ್ತರಾಗಿರುವ ಸಮಸ್ತ ಜೀವರನ್ನಾಳುವ ಪ್ರಭುವಾಗಿರುವಿ; ಇಷ್ಟು ಮಾತ್ರವಲ್ಲ—ಇದಕ್ಕೂ ಅಧಿಕವಾದ, ಯಾರೂ ಎಂದಿಗೂ ಹೇಳಿ ಮುಗಿಸಲಾಗದ ಅನಂತಮಹಿಮೋಪೇತನಾಗಿರುವಿ; ನಿನ್ನ ಸಮನೂ ಅಧಿಕನೂ ಆದವನು ಯಾರೊಬ್ಬನೂ ಇಲ್ಲ; ನೀನೇ ಪರಿಪೂರ್ಣನು; ಆದ್ದರಿಂದಲೇ ಜ್ಞಾನಿಗಳು, ನಿನ್ನನ್ನು ಅನಂತಗುಣಪರಿಪೂರ್ಣನಾದ ಸರ್ವೋತ್ತಮನೆಂದು ತಿಳಿಯುವರು—ತಿಳಿದು, ಹಾಗೆಂಬ ಸಂತತಸ್ಮರಣೆಯುಳ್ಳವರಾಗಿರುವರು; ಇದು ವೇದಸಿದ್ಧವು (೮೫). ಚೇತನಾಚೇತನಾತ್ಮಕವಾದ, ಪ್ರತ್ಯಕ್ಷಾದಿ ಪ್ರಮಾಣಪ್ರಮಿತವಾದ (ಸತ್ಯವಾದ) ಈ

---

1. ಶ್ರೀ ಮಹಾಲಕ್ಷ್ಮೀದೇವಿಯು ದೇಶಕಾಲಗಳನ್ನು ಅತಿಕ್ರಮಿಸಿದ ಮಹಿಮೆಯುಳ್ಳವಳು; ದೇಶಕಾಲಗಳಿಂದ ಶ್ರೀಹರಿಗೆ ಸಮವಾದ ವ್ಯಾಪ್ತಿಯುಳ್ಳವಳು; ಆದ್ದರಿಂದಲೇ 'ಸಮನಾ' ಎಂಬ ಪ್ರಸಿದ್ಧನಾಮವುಳ್ಳವಳು; ಶ್ರೀಹರಿಯು ಗುಣದಿಂದ ಶ್ರೀಲಕ್ಷ್ಮೀದೇವಿಯನ್ನೂ ಅತಿಕ್ರಮಿಸಿದ ವ್ಯಾಪ್ತಿಯುಳ್ಳವನು (ಗುಣತಃ ಸಮವ್ಯಾಪ್ತಿಯುಳ್ಳವಳಲ್ಲ—ಶ್ರೀಲಕ್ಷ್ಮೀ).

'ಸರ್ವತಃ ಪ್ರಕೃತಿಃ ಸೂಕ್ಷ್ಮಾ ಸರ್ವತೋಽಪಿ ಮಹೀಯಸೀ ।
ವಿವಂ ಕಾಲಾತಿಗಾ ದೇವೀ ವಿರುದ್ಧಾನಂತರೂಪಿಣೀ ॥'

'ವಿವಂ—ದೇಶಾತಿಕ್ರಮಣವತ್' (ಸ.ರ.ಮಾ)

'ಸಮನಾ ಚಾಸ್ಯತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ' (ಬ್ರಹ್ಮಸೂತ್ರ) ಇತ್ಯಾದಿ ಪ್ರಮಾಣಗಳು ಶ್ರೀ ಮಹಾಲಕ್ಷ್ಮೀದೇವಿಯ ಮಹಿಮೆಗಳನ್ನು ನಿರೂಪಿಸುತ್ತವೆ.

ಯಾವಾತನ (ಯಾವ ನಿನ್ನ), ಏಕದೇಶಃ-(ಅಪಾರವಾದ ವ್ಯಾಪ್ತಿಯುಳ್ಳ ನಿನ್ನ) ಒಂದು ಭಾಗವೋ, (ಅಲ್ಪಪ್ರದೇಶವನ್ನು ಆಕ್ರಮಿಸಿದೆಯೋ), ಚ-ಮತ್ತು ಏತತ್ ಸಕಲಂ- ಈ ಎಲ್ಲವೂ (ವಿಶ್ವವು), ಯತ್ಸ್ಥಾನಂ-ಯಾವ ನಿನ್ನ ವಾಸಸ್ಥಾನವೋ, ಅಪಿ-ಮತ್ತು ತತಃ- ಅದಕ್ಕಿಂತಲೂ (ಬ್ರಹ್ಮಾಂಡಕ್ಕಿಂತಲೂ), ಧಾಮತ್ರಯಂ-ವೈಕುಂಠ, ಶ್ವೇತ ದ್ವೀಪ, ಅನಂತಾಸನಗಳೆಂಬುವ ಮೂರು ನಿನ್ನ ಸ್ಥಾನಗಳನ್ನು, ಆರ್ಯಾಃ-ಜ್ಞಾನಿಗಳು, ಶಾಶ್ವತಂ-(ಪ್ರಲಯರಹಿತವಾದ) ನಿತ್ಯ (ನಿನ್ನ) ವಾಸಸ್ಥಾನಗಳೆಂದು, ಆಹುಃ-ಹೇಳುವರೋ, (ಅಂಥ ನೀನು ಪ್ರೀತನಾಗು, ಎಂದು ೮೮ನೇ ಶ್ಲೋಕದಿಂದ ಅನ್ವಯವನ್ನು ತಿಳಿಯಬೇಕು.

**ಯಸ್ಮಾದಯಂ ಸಾವರಣಾಂಡಕೋಶೋ**
**ವಿರಾಡಿದಂ ಬ್ರಹ್ಮಮುಖಂ ಚ ಜಜ್ಞೇ ॥ ೮೭ ॥**

ಯಸ್ಮಾತ್-(ಅನಂತವ್ಯಾಪ್ತಿಯುಳ್ಳ) ಯಾವ ನಿನ್ನಿಂದಲೇ, ಅಯಂ-ಈ, ಸಾವರಣಾಂಡಕೋಶಃ-ಬಹಿರಾವರಣಗಳಿಂದ ಸಹಿತವಾದ ಬ್ರಹ್ಮಾಂಡಕೋಶವೂ, ಚ-ಮತ್ತು ಇದಂ-ಈ, ಬ್ರಹ್ಮಮುಖಂ-ಬ್ರಹ್ಮನೇ ಪ್ರಧಾನವಾಗಿವುಳ್ಳ (ಹದಿನಾಲ್ಕು ಲೋಕಗಳಿಗೂ, ತತ್ರಸ್ಥದೇವಾದಿಪ್ರಜೆಗಳಿಗೂ ಉತ್ಪತ್ತಿ ಮತ್ತು ಆಶ್ರಯಸ್ಥಾನವಾದ), ವಿರಾಟ್-ವಿರಾಜನಾಮಕ ಬ್ರಹ್ಮನ (ವ್ಯಾಪ್ತವಾದ) ದೇಹವೂ, ಜಜ್ಞೇ-ಹುಟ್ಟಿದವು.

**ವಯಂ ಯೇನ ಸನಾಥಾ ಸ್ಮಃ ಸಂಸೃತಾವಪಿ ಮೋಚನೇ ।**
**ಸೋಽಸ್ತು ಪ್ರೀತೋಽಲಮಿತ್ಯೇವ ನ ಹೀಪ್ಸಂ ತಮೃತೇಽಸ್ತಿ ನಃ ॥ ೮೮ ॥**

ಯೇನ-ಯಾರಿಂದ, (ಬ್ರಹ್ಮಾಂಡ ಮತ್ತು ವಿರಾಟ್‌ದೇಹನಿರ್ಮಾತನಾದ ನಿನ್ನಿಂದ), ವಯಂ-ನಾವೆಲ್ಲರೂ, ಸನಾಥಾಃ ಸ್ಮಃ-ಸನಾಥರು ಆಗಿರುವೆವು; ಸಂಸೃತೌ-ಸಂಸಾರದಲ್ಲಿ ಅಪಿ-ಸಹ, ಮೋಚನೇ-ಮುಕ್ತರಾಗಿರಲು (ನಿರ್ಲಿಪ್ತರಾಗಿರಲು), (ಸನಾಥಾಃ ಸ್ಮಃ-ನಿನ್ನನ್ನೇ ನಾಥ-ರಕ್ಷಕನನ್ನಾಗಿ ಉಳ್ಳವರಾಗಿರುವೆವು); ಸಃ-ಈ ವಿಧ ಮಹಾತ್ಮ್ಯೆಯುಳ್ಳ ನಮ್ಮ ನಾಥನಾದ ಆತನು (ನೀನು), ಅಲಂ-ಚೆನ್ನಾಗಿ

---

ಜಗತ್ತೂ ಆವರಣಸಹಿತ ಬ್ರಹ್ಮಾಂಡವೂ, ನಿನ್ನ ಅಪಾರವ್ಯಾಪ್ತಿಯುಳ್ಳ ರೂಪದ ಏಕದೇಶವನ್ನು ಆಕ್ರಮಿಸಿ, ಸ್ಥಿತವಾಗಿದೆ; ಈ ವಿಶ್ವವು ನಿನ್ನ ಆವಾಸವಾಗಿದೆ; ವಿಶೇಷವಾಗಿ ಧಾಮತ್ರಯಗಳು (ವೈಕುಂಠಾದಿ ಮುಕ್ತಲೋಕಗಳು) ನಿನ್ನ ಶಾಶ್ವತ ಆವಾಸಗಳು ಮತ್ತು ಸ್ವಯಂ ನಾಶರಹಿತವಾದ ಲೋಕಗಳು (೮೬). ನಿನ್ನಿಂದಲೇ, ಈ ಆವರಣಸಹಿತ ಬ್ರಹ್ಮಾಂಡವೂ ಮತ್ತು 'ವಿರಾಟ್' ನಾಮಕ, ಬ್ರಹ್ಮದೇವನ ದೇಹವೂ, ೧೪ ಲೋಕಗಳ ಮತ್ತು ದೇವಾದಿ ಪ್ರಜೆಗಳ ಉತ್ಪತ್ತಿಸ್ಥಾನವೂ, ಆಶ್ರಯವೂ ಆದ, ಮಹದಾದಿ ತತ್ತ್ವನಿರ್ಮಿತ ಸ್ಥೂಲದೇಹವೂ ಹುಟ್ಟಿವೆ (೮೭). ಯಾವ ನಿನ್ನಿಂದ ನಾವೆಲ್ಲರೂ ಸನಾಥರಾಗಿರುವೆವೋ ಮತ್ತು ಯಾರು ಪ್ರೀತನಾಗುವುದರಿಂದ, ನಾವು ಸಂಸಾರದಿಂದ ಸಹ ಮುಕ್ತರಾಗುವೆವೋ,

(ಪೂರ್ಣವಾಗಿ), ಪ್ರೀತಃ-ಪ್ರೀತನು, ಅಸ್ತು-ಆಗಲಿ (ಸುಪ್ರೀತನಾಗು), ಇತ್ಯೇವ-ಇಷ್ಟುಮಾತ್ರವೇ (ನಮ್ಮ ಪ್ರಾರ್ಥನೆಯು) ಅಥವಾ (ಸಂಸೃತೌ ಮೋಚನೇ ಅಲಂ-ಸಂಸಾರದಲ್ಲಿ ಮುಕ್ತನಾಗಲು ನಿನ್ನ ಪ್ರೀತಿಯೊಂದೇ ಸಾಕು); ನಃ-ನಮಗೆ, ತಂ ಋತೇ-ಆತನನ್ನು ಬಿಟ್ಟು (ನಿನ್ನನ್ನುಳಿದು), ಇಷ್ಟಂ-ಇಷ್ಟವಾದುದು (ಅಥವಾ ನಿನ್ನ ಪ್ರಸನ್ನತೆಯ ವಿನಃ, ಅನ್ಯ ಇಚ್ಛೆಯು), ನ ಹಿ ಅಸ್ತಿ-ಇರುವುದೇ ಇಲ್ಲ.

**ಶ್ರೀಭಗವಾನುವಾಚ—**

> **ಅಥೋ ಸ ಭಗವಾನ್ ವಿಷ್ಣುರ್ವರಾನ್ ದತ್ವಾ ತದೀಪ್ಸಿತಾನ್ ।**
> **ಅಂತರ್ದಧೇ ನಿಜಂ ರೂಪಂ ದೇವಾಸ್ತೇನೈವ ಕರ್ಮಣಾ ॥ ೫೯ ॥**
> **ಯಾತಾ ಮುಕ್ತಿಂ ಸದಾನಂದಂ ಭುಂಜಾನಾಃ ಸರ್ವದಾಸತೇ ।**
> **ಯತ್ರ ಸ್ಥಾನೇಷು ಸರ್ವೇಽಪಿ ಸಾಧ್ಯಾ ದೇವಾಹ್ಯನಂತಶಃ ॥ ೬೦ ॥**
> **ಮೋದಂತೇಽಗ್ರೇಽಪಿ ಯಾಸ್ಯಂತಿ ತಥಾ ಕೃತ್ವಾ ಚ ತತ್ಪದಂ ।**

ಶ್ರೀವಿಷ್ಣುವು ಬ್ರಹ್ಮನಿಗೆ ಹೇಳುತ್ತಾನೆ:—

ಅಥೋ-ನಂತರ, (ಹೀಗೆ ದೇವತೆಗಳು ಸ್ತುತಿಸಿದ ನಂತರ), ಸಃ-ಆ (ಹಾಗೆ ಯಜ್ಞದಿಂದ ಪ್ರೀತನಾಗಿ ಪ್ರತ್ಯಕ್ಷನಾದ), ಭಗವಾನ್ ವಿಷ್ಣುಃ-ಸರ್ವಪೂಜ್ಯನಾದ ಶ್ರೀವಿಷ್ಣುವು, ತದೀಪ್ಸಿತಾನ್-ಅವರಿಂದ (ದೇವತೆಗಳಿಂದ) ಅಪೇಕ್ಷಿತವಾದ, ವರಾನ್-ವರಗಳನ್ನು ದತ್ವಾ-ಕೊಟ್ಟು, ನಿಜಂ ರೂಪಂ-ತನ್ನ ರೂಪವನ್ನು ಅಂತರ್ದಧೇ-ಅದೃಶ್ಯಗೊಳಿಸಿದನು; ದೇವಾಃ-ದೇವತೆಗಳು, ತೇನ ಕರ್ಮಣಾ ಏವ-ಯಜ್ಞರೂಪದ ಆ ಕರ್ಮದಿಂದಲೇ, ಮುಕ್ತಿಂ-ಮೋಕ್ಷವನ್ನು, ಯಾತಾಃ-ಹೊಂದಿದರು; ಸದಾನಂದಂ-ನಿತ್ಯಾನಂದವನ್ನು, ಭುಂಜಾನಾಃ-ಭೋಗಿಸುವವ ರಾಗಿ, ಸರ್ವದಾ-ನಿತ್ಯವೂ, ಯತ್ರಸ್ಥಾನೇಷು-ಯಾವ ಸ್ಥಾನಗಳಲ್ಲಿ, ಸರ್ವೇ-ಎಲ್ಲ ಸಾಧ್ಯಾಃ-ಮುಕ್ತರಾದ, ಅನಂತಶಃ-ಅಸಂಖ್ಯರಾದ, ದೇವಾಃ-ದೇವತೆಗಳು, (ಇರುವರೋ), (ತತ್ರ-ಅಲ್ಲಿ), ಆಸತೇ-ಇರುತ್ತಾರೆ; ಮೋದಂತೇ ಅಪಿ-ನಾನಾ ವಿಧ

---

ಅಂಥ ಮಹಾಮಹಿಮನಾದ ನೀನು ನಮ್ಮ ವಿಷಯಕ್ಕೆ ಸುಪ್ರೀತನಾಗು; ನಮಗೆ ಇದಕ್ಕಿಂತ ಇಷ್ಟವಾದುದು ಮತ್ತೊಂದಿಲ್ಲ (೫೮). ಹೀಗೆ ಸ್ತುತಿಸಿಕೊಳ್ಳಲ್ಪಟ್ಟ ಭಗವಾನ್ ಶ್ರೀಮಹಾವಿಷ್ಣುವು, ಆ ದೇವತೆಗಳಿಗೆ ಅಪೇಕ್ಷಿತ ವಾದ ವರಗಳನ್ನಿತ್ತು ಪ್ರತ್ಯಕ್ಷಗೊಳಿಸಿದ್ದ ತನ್ನ ರೂಪವನ್ನು ಅಂತರ್ಧಾನಗೊಳಿಸಿದನು; ಹೀಗೆ ಶ್ರೀವಿಷ್ಣುವಿನ ಸಂಪ್ರೀತಿಯನ್ನು ದೊರಕಿಸಿಕೊಂಡಿದ್ದರಿಂದಲೇ, ಆ ದೇವತೆ ಗಳು ಮೋಕ್ಷವನ್ನು ಹೊಂದಿದರು; ಮುಕ್ತರಾದ (ಹಿಂದಿನ) ಅಸಂಖ್ಯದೇವತೆ ಗಳೆಲ್ಲರೂ, ಯಾವ ಸ್ಥಾನಗಳಲ್ಲಿದ್ದು ವಿವಿಧ ಭೋಗಗಳಿಂದ, ನಿತ್ಯಾನಂದವನ್ನು ಸರ್ವದಾ ಅನುಭವಿಸುತ್ತಲಿರುವರೋ, ಆ ಸ್ಥಾನವನ್ನು ಹೊಂದಿ, ಅಲ್ಲಿ ನಿತ್ಯಾನಂದ ಭೋಜನವುಳ್ಳವರಾಗಿ ಸರ್ವದಾ ವಾಸಿಸುತ್ತಿರುವರು;

ಭೋಗಗಳನ್ನು (ಭೋಗಿಸುತ್ತಾರೆ); ತಥಾ-ಹಾಗೆ, ಕೃತ್ವಾ-ಯಜ್ಞದಿಂದ (ಉತ್ತಮ ವಿಷ್ಣುಪೂಜೆಯಿಂದ) ಶ್ರೀವಿಷ್ಣುವನ್ನು ಪ್ರಸನ್ನೀಕರಿಸಿಕೊಂಡು, ಅಗ್ರೇಪಿ-ಮುಂದೆಯೂ (ಮುಂಬರುವ ಪ್ರಜೆಗಳೂ), ತತ್ಪರಂ-ಆ (ಮುಕ್ತ)ಸ್ಥಾನವನ್ನು ಯಾಸ್ಯಂತಿ ಚ- ತಪ್ಪದೇ ಹೊಂದುತ್ತಾರೆ.

ಅಥ ತದ್ಯಜ್ಞತೋ ಜಜ್ಞೇ ಪೃಷದಾಜ್ಯಮಲೌಕಿಕಂ ॥ ೯೧ ॥
ಗ್ರಾಮ್ಯಾರಣ್ಯಾಶ್ಚ ವಾಯವ್ಯಾಃ ಪಶವಶ್ಚಾಪಿ ಜಜ್ಞಿರೇ ।
ತೈಸ್ತೈಃ ಸಾಧ್ಯಾಶ್ಚ ಮುನಯ ಈಜಿರೇ ವಿಷ್ಣುಮವ್ಯಯಂ ॥ ೯೨ ॥

ಅಥ-ಮುಂದೆ (ದೇವತೆಗಳು ನಡೆಸಿದ ಆ ಯಜ್ಞದಲ್ಲಿ), ಅಲೌಕಿಕಂ-ದಿವ್ಯವಾದ, ಪೃಷದಾಜ್ಯಂ-ಮೊಸರು ಬೆರೆಸಿದ ತುಪ್ಪವೂ, ತದ್ಯಜ್ಞತಃ-ಆ ಯಜ್ಞದಿಂದ (ಯಜ್ಞನಾಮಕ ನಾರಾಯಣನಿಂದ—ಯಾರ ಪ್ರೀತ್ಯರ್ಥವಾಗಿ ಆ ಯಜ್ಞವನ್ನು ಆಚರಿಸಿದರೋ ಆತನಿಂದ), ಜಜ್ಞೇ-ಹುಟ್ಟಿತು; ಗ್ರಾಮ್ಯಾರಣ್ಯಾಃ-ಗ್ರಾಮ್ಯಗಳೂ ಅರಣ್ಯಗಳೂ ಆದ, ವಾಯವ್ಯಾಃ-ವಾಯ್ವಾತ್ಮಕವೂ ಆದ, ಪಶವಃ ಚ ಅಪಿ-ಪಶುಗಳೂ ಸಹ, ಜಜ್ಞಿರೇ-ಉತ್ಪನ್ನವಾದವು; ಸಾಧ್ಯಾಃ-ಸಾಧ್ಯಗಣಗಳೂ, ಮುನಯಃ ಚ-ಋಷಿಗಳೂ, ತೈಃ ತೈಃ-(ಉತ್ಪನ್ನವಾದ) ಆಯಾ ವಸ್ತುಗಳಿಂದ, ಅವ್ಯಯಂ-ನಿತ್ಯನಿರ್ವಿಕಾರನಾದ, ವಿಷ್ಣುಂ-

ಮುಂದಿನ ಪ್ರಜೆಗಳೂ ಸಹ ಹೀಗೆ ಯಜ್ಞದಿಂದ (ಉತ್ತಮ ವಿಷ್ಣುಪೂಜೆಯಿಂದ) ಶ್ರೀವಿಷ್ಣುವಿನ ಸಂಪ್ರೀತಿಯನ್ನು ದೊರಕಿಸಿಕೊಂಡು, ಆ ಮುಕ್ತಸ್ಥಾನವನ್ನು ಹೊಂದಿ ನಿತ್ಯಸುಖಿಗಳಾಗುತ್ತಾರೆ (೮೯-೯೦). ಬ್ರಹ್ಮಾದಿಗಳು ಆಚರಿಸಿದ ಆ ಯಜ್ಞದಲ್ಲಿ ಯಜ್ಞನಾರಾಯಣನಿಂದಲೇ (ಪೃಷದಾಜ್ಯವು) ದಧಿಮಿಶ್ರಿತಘೃತವೂ ಉತ್ಪನ್ನವಾಯಿತು;[1] ಗ್ರಾಮದಲ್ಲಿರುವ ಮತ್ತು ಅರಣ್ಯದಲ್ಲಿರುವ ಪಶುಗಳೂ, ವಾಯ್ವಾತ್ಮಕ (ವಾಯುಪ್ರಚುರ) ದೇಹಗಳೂ (ಭೂತಾದಿಗಳ ದೇಹಗಳೂ) ಹುಟ್ಟಿದವು; ಸಾಧ್ಯರೂ ಋಷಿಗಳೂ, ಉತ್ಪನ್ನಗಳಾದ ಆ ಎಲ್ಲ ವಸ್ತುಗಳನ್ನೂ ಯಜ್ಞಪುರುಷ (ನಾರಾಯಣ)ನಿಗೇ ಸಮರ್ಪಿಸಿ,

೧. ದೇವತೆಗಳು ಯಾವ ಅಗ್ನಿಯಲ್ಲಿ ಎಲ್ಲವನ್ನೂ ಹೋಮಿಸಿದರೋ ಆ ಯಜ್ಞಪುರುಷ (ನಾರಾಯಣ)ನಿಂದಲೇ ಚೇತನಾಚೇತನಗಳ ಸೃಷ್ಟಿಯಾಯಿತು; ಚೇತನವೇ ಘೃತ; ಅಚೇತನವೇ ಮೊಸರು; ಈ ಮಿಶ್ರಜಗತ್ತೇ ಆಹುತಿಗೆ ಅವಶ್ಯಕವಾದ ಪೃಷದಾಜ್ಯ; ಅರಣ್ಯಪಶುಗಳು ತಪಸ್ವಿಗಳು; ಸಂಸಾರಿಗಳು (ಗೃಹಸ್ಥರು) ಗ್ರಾಮ್ಯಪಶುಗಳು; ವಾಯು ಮೊದಲಾದ ದೇವತೆಗಳಿಂದ ನಿಯಮ್ಯರಾದ ಈ ಎಲ್ಲರೂ, 'ವಾಯವ್ಯಾಃ' ವಾಯವ್ಯಪಶುಗಳು; ಈ ಎಲ್ಲ ಬಗೆಯ ಪಶುಗಳನ್ನು ಬ್ರಹ್ಮಾದಿ ದೇವತೆಗಳು, ಪರಮಪುರುಷನಾದ ಶ್ರೀವಿಷ್ಣುವಿನಲ್ಲಿ (ಜಗತ್ತೆಲ್ಲವೂ ಭಗವದಧೀನವೆಂಬ ಜ್ಞಾನಪೂರ್ವಕ) ಅರ್ಪಿಸಿದರು. ಇತ್ಯಾದಿಯಾಗಿ, ಪುರುಷಸೂಕ್ತದಲ್ಲಿ ನಿರೂಪಿತವಾದ ಯಜ್ಞವನ್ನು ಉಪಾಸನಾಮಾತ್ರಕ್ಕೆ ಶಕ್ತರಾದ ಉತ್ತಮಾಧಿಕಾರಿಗಳು, ಮಾನಸಯಜ್ಞಪರವಾಗಿ ಯೋಜನೆ ಮಾಡಿಕೊಳ್ಳಬೇಕಾಗಿರುತ್ತದೆ. ಇಲ್ಲಿ ಇದೇ ಅಧ್ಯಾಯದ ೮೧-೮೨ನೇ ಶ್ಲೋಕಭಾಗದ ಅಡಿಟಿಪ್ಪಣಿಯನ್ನು ನೋಡಬಹುದು.

(ಪೂರ್ಣವಾಗಿ), ಪ್ರೀತಃ-ಪ್ರೀತನು, ಅಸ್ತು-ಆಗಲಿ (ಸುಪ್ರೀತನಾಗು), ಇತ್ಯೇವ-ಇಷ್ಟುಮಾತ್ರವೇ (ನಮ್ಮ ಪ್ರಾರ್ಥನೆಯು) ಅಥವಾ (ಸಂಸೃತೌ ಮೋಚನೇ ಅಲಂ-ಸಂಸಾರದಲ್ಲಿ ಮುಕ್ತನಾಗಲು ನಿನ್ನ ಪ್ರೀತಿಯೊಂದೇ ಸಾಕು); ನಃ-ನಮಗೆ, ತಂ ಋತೇ-ಆತನನ್ನು ಬಿಟ್ಟು (ನಿನ್ನನ್ನುಳಿದು), ಇಷ್ಟಂ-ಇಷ್ಟವಾದುದು (ಅಥವಾ ನಿನ್ನ ಪ್ರಸನ್ನತೆಯ ವಿನಃ, ಅನ್ಯ ಇಚ್ಛೆಯು), ನ ಹಿ ಅಸ್ತಿ-ಇರುವುದೇ ಇಲ್ಲ.

**ಶ್ರೀಭಗವಾನುವಾಚ—**

**ಅಥೋ ಸ ಭಗವಾನ್ ವಿಷ್ಣುರ್ವರಾನ್ ದತ್ವಾ ತದೀಪ್ಸಿತಾನ್ ।**
**ಅಂತರ್ದಧೇ ನಿಜಂ ರೂಪಂ ದೇವಾಸ್ತೇನೈವ ಕರ್ಮಣಾ ॥ ೮೯ ॥**
**ಯಾತಾ ಮುಕ್ತಿಂ ಸದಾನಂದಂ ಭುಂಜಾನಾಃ ಸರ್ವದಾಸತೇ ।**
**ಯತ್ರ ಸ್ಥಾನೇಷು ಸರ್ವೇಽಪಿ ಸಾಧ್ಯಾ ದೇವಾಹ್ಯನಂತಶಃ ॥ ೯೦ ॥**
**ಮೋದಂತೇಽಗ್ರೇಪಿ ಯಾಸ್ಯಂತಿ ತಥಾ ಕೃತ್ವಾ ಚ ತತ್ಪದಂ ।**

ಶ್ರೀವಿಷ್ಣುವು ಬ್ರಹ್ಮನಿಗೆ ಹೇಳುತ್ತಾನೆ:—

ಅಥೋ-ನಂತರ, (ಹೀಗೆ ದೇವತೆಗಳು ಸ್ತುತಿಸಿದ ನಂತರ), ಸಃ-ಆ (ಹಾಗೆ ಯಜ್ಞದಿಂದ ಪ್ರೀತನಾಗಿ ಪ್ರತ್ಯಕ್ಷನಾದ), ಭಗವಾನ್ ವಿಷ್ಣುಃ-ಸರ್ವಪೂಜ್ಯನಾದ ಶ್ರೀವಿಷ್ಣುವು, ತದೀಪ್ಸಿತಾನ್-ಅವರಿಂದ (ದೇವತೆಗಳಿಂದ) ಅಪೇಕ್ಷಿತವಾದ, ವರಾನ್-ವರಗಳನ್ನು, ದತ್ವಾ-ಕೊಟ್ಟು, ನಿಜಂ ರೂಪಂ-ತನ್ನ ರೂಪವನ್ನು ಅಂತರ್ದಧೇ-ಅದೃಶ್ಯಗೊಳಿಸಿದನು; ದೇವಾಃ-ದೇವತೆಗಳು, ತೇನ ಕರ್ಮಣಾ ಏವ-ಯಜ್ಞರೂಪದ ಆ ಕರ್ಮದಿಂದಲೇ, ಮುಕ್ತಿಂ-ಮೋಕ್ಷವನ್ನು, ಯಾತಾಃ-ಹೊಂದಿದರು; ಸದಾನಂದಂ-ನಿತ್ಯಾನಂದವನ್ನು, ಭುಂಜಾನಾಃ-ಭೋಗಿಸುವವ ರಾಗಿ, ಸರ್ವದಾ-ನಿತ್ಯವೂ, ಯತ್ರಸ್ಥಾನೇಷು-ಯಾವ ಸ್ಥಾನಗಳಲ್ಲಿ, ಸರ್ವೇ-ಎಲ್ಲ ಸಾಧ್ಯಾಃ-ಮುಕ್ತರಾದ, ಅನಂತಶಃ-ಅಸಂಖ್ಯರಾದ, ದೇವಾಃ-ದೇವತೆಗಳು, (ಇರುವರೋ), (ತತ್ರ-ಅಲ್ಲಿ), ಆಸತೇ-ಇರುತ್ತಾರೆ; ಮೋದಂತೇ ಅಪಿ-ನಾನಾ ವಿಧ

---

ಅಂಥ ಮಹಾಮಹಿಮನಾದ ನೀನು ನಮ್ಮ ವಿಷಯಕ್ಕೆ ಸುಪ್ರೀತನಾಗು; ನಮಗೆ ಇದಕ್ಕಿಂತ ಇಷ್ಟವಾದುದು ಮತ್ತೊಂದಿಲ್ಲ (೮೮). ಹೀಗೆ ಸ್ತುತಿಸಿಕೊಳ್ಳಲ್ಪಟ್ಟ ಭಗವಾನ್ ಶ್ರೀಮಹಾವಿಷ್ಣುವು, ಆ ದೇವತೆಗಳಿಗೆ ಅಪೇಕ್ಷಿತ ವಾದ ವರಗಳನ್ನಿತ್ತು, ಪ್ರತ್ಯಕ್ಷಗೊಳಿಸಿದ್ದ ತನ್ನ ರೂಪವನ್ನು ಅಂತರ್ಧಾನಗೊಳಿಸಿದನು; ಹೀಗೆ ಶ್ರೀವಿಷ್ಣುವಿನ ಸಂಪ್ರೀತಿಯನ್ನು ದೊರಕಿಸಿಕೊಂಡಿದ್ದರಿಂದಲೇ, ಆ ದೇವತೆ ಗಳು ಮೋಕ್ಷವನ್ನು ಹೊಂದಿದರು; ಮುಕ್ತರಾದ (ಹಿಂದಿನ) ಅಸಂಖ್ಯದೇವತೆ ಗಳೆಲ್ಲರೂ, ಯಾವ ಸ್ಥಾನಗಳಲ್ಲಿದ್ದು ವಿವಿಧ ಭೋಗಗಳಿಂದ, ನಿತ್ಯಾನಂದವನ್ನು ಸರ್ವದಾ ಅನುಭವಿಸುತ್ತಲಿರುವರೋ, ಆ ಸ್ಥಾನವನ್ನು ಹೊಂದಿ, ಅಲ್ಲಿ ನಿತ್ಯಾನಂದ ಭೋಜನವುಳ್ಳವರಾಗಿ ಸರ್ವದಾ ವಾಸಿಸುತ್ತಿರುವರು;

ಭೋಗಗಳನ್ನು (ಭೋಗಿಸುತ್ತಾರೆ); ತಥಾ-ಹಾಗೆ, ಕೃತ್ವಾ-ಯಜ್ಞದಿಂದ (ಉತ್ತಮ ವಿಷ್ಣುಪೂಜೆಯಿಂದ) ಶ್ರೀವಿಷ್ಣುವನ್ನು ಪ್ರಸನ್ನೀಕರಿಸಿಕೊಂಡು, ಅಗ್ರೇಪಿ-ಮುಂದೆಯೂ (ಮುಂಬರುವ ಪ್ರಜೆಗಳೂ), ತತ್ಪರಂ-ಆ (ಮುಕ್ತ)ಸ್ಥಾನವನ್ನು ಯಾಸ್ಯಂತಿ ಚ- ತಪ್ಪದೇ ಹೊಂದುತ್ತಾರೆ.

ಅಥ ತದ್ಯಜ್ಞತೋ ಜಜ್ಞೇ ಪೃಷದಾಜ್ಯಮಲೌಕಿಕಂ ॥ ೯೧ ॥
ಗ್ರಾಮ್ಯಾರಣ್ಯಾಶ್ಚ ವಾಯವ್ಯಾಃ ಪಶವಶ್ಚಾಪಿ ಜಜ್ಞಿರೇ ।
ತೈಸ್ತೇ ಸಾಧ್ಯಾಶ್ಚ ಮುನಯ ಈಜಿರೇ ವಿಷ್ಣುಮವ್ಯಯಂ ॥ ೯೨ ॥

ಅಥ-ಮುಂದೆ (ದೇವತೆಗಳು ನಡೆಸಿದ ಆ ಯಜ್ಞದಲ್ಲಿ), ಅಲೌಕಿಕಂ-ದಿವ್ಯವಾದ, ಪೃಷದಾಜ್ಯಂ-ಮೊಸರು ಬೆರೆಸಿದ ತುಪ್ಪವೂ, ತದ್ಯಜ್ಞತಃ-ಆ ಯಜ್ಞದಿಂದ (ಯಜ್ಞನಾಮಕ ನಾರಾಯಣನಿಂದ—ಯಾರ ಪ್ರೀತ್ಯರ್ಥವಾಗಿ ಆ ಯಜ್ಞವನ್ನು ಆಚರಿಸಿದರೋ ಆತನಿಂದ), ಜಜ್ಞೇ-ಹುಟ್ಟಿತು; ಗ್ರಾಮ್ಯಾರಣ್ಯಾಃ-ಗ್ರಾಮ್ಯಗಳೂ ಅರಣ್ಯಗಳೂ ಆದ, ವಾಯವ್ಯಾಃ-ವಾಯ್ವಾತ್ಮಕವೂ ಆದ, ಪಶವಃ ಚ ಅಪಿ-ಪಶುಗಳೂ ಸಹ, ಜಜ್ಞಿರೇ-ಉತ್ಪನ್ನವಾದವು; ಸಾಧ್ಯಾಃ-ಸಾಧ್ಯಗಣಗಳೂ, ಮುನಯಃ ಚ-ಋಷಿಗಳೂ, ತೈಃ ತೈಃ-(ಉತ್ಪನ್ನವಾದ) ಆಯಾ ವಸ್ತುಗಳಿಂದ, ಅವ್ಯಯಂ-ನಿತ್ಯನಿರ್ವಿಕಾರನಾದ, ವಿಷ್ಣುಂ-

ಮುಂದಿನ ಪ್ರಜೆಗಳೂ ಸಹ ಹೀಗೆ ಯಜ್ಞದಿಂದ (ಉತ್ತಮ ವಿಷ್ಣುಪೂಜೆಯಿಂದ) ಶ್ರೀವಿಷ್ಣುವಿನ ಸಂಪ್ರೀತಿಯನ್ನು ದೊರಕಿಸಿಕೊಂಡು, ಆ ಮುಕ್ತಸ್ಥಾನವನ್ನು ಹೊಂದಿ ನಿತ್ಯಸುಖಿಗಳಾಗುತ್ತಾರೆ (೮೯-೯೦). ಬ್ರಹ್ಮಾದಿಗಳು ಆಚರಿಸಿದ ಆ ಯಜ್ಞದಲ್ಲಿ ಯಜ್ಞನಾರಾಯಣನಿಂದಲೇ (ಪೃಷದಾಜ್ಯವು) ದಧಿಮಿಶ್ರಿತಘೃತವೂ ಉತ್ಪನ್ನವಾಯಿತು;[1] ಗ್ರಾಮದಲ್ಲಿರುವ ಮತ್ತು ಅರಣ್ಯದಲ್ಲಿರುವ ಪಶುಗಳೂ, ವಾಯ್ವಾತ್ಮಕ (ವಾಯುಪ್ರಚುರ) ದೇಹಗಳೂ (ಭೂತಾದಿಗಳ ದೇಹಗಳೂ) ಹುಟ್ಟಿದವು; ಸಾಧ್ಯರೂ ಋಷಿಗಳೂ, ಉತ್ಪನ್ನಗಳಾದ ಆ ಎಲ್ಲ ವಸ್ತುಗಳನ್ನೂ ಯಜ್ಞಪುರುಷ (ನಾರಾಯಣ)ನಿಗೇ ಸಮರ್ಪಿಸಿ,

1. ದೇವತೆಗಳು ಯಾವ ಅಗ್ನಿಯಲ್ಲಿ ಎಲ್ಲವನ್ನೂ ಹೋಮಿಸಿದರೋ ಆ ಯಜ್ಞಪುರುಷ (ನಾರಾಯಣ)ನಿಂದಲೇ ಚೇತನಾಚೇತನಗಳ ಸೃಷ್ಟಿಯಾಯಿತು; ಚೇತನವೇ ಘೃತ; ಅಚೇತನವೇ ಮೊಸರು; ಈ ಮಿಶ್ರ ಜಗತ್ತೇ ಆಹುತಿಗೆ ಅವಶ್ಯಕವಾದ ಪೃಷದಾಜ್ಯ; ಅರಣ್ಯಪಶುಗಳು ತಪಸ್ವಿಗಳು; ಸಂಸಾರಿಗಳು (ಗೃಹಸ್ಥರು) ಗ್ರಾಮ್ಯಪಶುಗಳು; ವಾಯು ಮೊದಲಾದ ದೇವತೆಗಳಿಂದ ನಿಯಮ್ಯರಾದ ಈ ಎಲ್ಲರೂ, 'ವಾಯವ್ಯಾಃ' ವಾಯವ್ಯಪಶುಗಳು; ಈ ಎಲ್ಲ ಬಗೆಯ ಪಶುಗಳನ್ನು ಬ್ರಹ್ಮಾದಿ ದೇವತೆಗಳು, ಪರಮಪುರುಷನಾದ ಶ್ರೀವಿಷ್ಣುವಿನಲ್ಲಿ (ಜಗತ್ತೆಲ್ಲವೂ ಭಗವದಧೀನವೆಂಬ ಜ್ಞಾನಪೂರ್ವಕ) ಅರ್ಪಿಸಿದರು. ಇತ್ಯಾದಿಯಾಗಿ, ಪುರುಷಸೂಕ್ತದಲ್ಲಿ ನಿರೂಪಿತವಾದ ಯಜ್ಞವನ್ನು ಅನುಷ್ಠಾನಮಾಡಲು ಶಕ್ತರಾದ ಉತ್ತಮಾಧಿಕಾರಿಗಳು, ಮಾನಸಯಜ್ಞಪರವಾಗಿ ಯೋಜನೆ ಮಾಡಿಕೊಳ್ಳಬೇಕಾಗಿರುತ್ತದೆ. ಇಲ್ಲಿ ಇದೇ ಅಧ್ಯಾಯದ ೨೧-೨೨ನೇ ಶ್ಲೋಕಭಾಗದ ಅಡಿಟಿಪ್ಪಣಿಯನ್ನು ನೋಡಬಹುದು.

ಶ್ರೀವಿಷ್ಣುವನ್ನು ಈಜಿರೇ- ಪೂಜಿಸಿದರು (ಅವೆಲ್ಲವನ್ನೂ ಯಜ್ಞದಲ್ಲಿ ಸಮರ್ಪಿಸಿದರು).

ಋಚೋ ಯಜೂಂಷಿ ಸಾಮಾನಿ ದದೃಶುರ್ಮುನಯಸ್ತತಃ ।
ಜಜ್ಞಿರೇ ಛಂದಸಾಂ ದೇವಾ ಗಾವೋಽಜಾ ವಿಹಗಾದಯಃ ॥ ೯೩ ॥
ಅನ್ಯೇ ಚೋಭಯತೋ ದಂತಾಃ ತಥಾ ಪಂಚನಖಾಃ ಪರೇ ।
ಶಫದ್ವಯಾ ಏಕಶಫಾಃ ಶೃಂಗಿಣಃ ಶೃಂಗವರ್ಜಿತಾಃ ॥ ೯೪ ॥
ಗ್ರಾಮ್ಯಾರಣ್ಯಾಶ್ಚ ವಾಯವ್ಯಾಃ ಪಕ್ಷಿಣೋಽಂಬುಚರಾಸ್ತಥಾ ।
ಚತುಃಪಾದಾ ದ್ವಿಪಾದಾಶ್ಚ ಬಹುಪಾದಾಸ್ತಥಾ ಪರಃ ॥ ೯೫ ॥
ಕ್ಷುದ್ರಜಂತುಲತಾವೃಕ್ಷಗುಲ್ಮೌಷಧಿತೃಣಾದಿಕಾಃ ।
ಜಾತಾಸ್ತೇ ತ್ರಿವೃದಾಕಾರಾಃ ಸಂಯೋಗಾದ್ವ್ಯೋಮವಾತಯೋಃ ॥ ೯೬ ॥
ವಾಯುಭಾಗಾತಿರೇಕಶ್ಚ ನಿಕ್ಷಿಪ್ತಃ ಪಕ್ಷಿವೃಂದಕೇ ।
ತೇನೋತ್ಪ್ಲವನಶಕ್ತಾಸ್ತೇ ಪ್ರದೃಶ್ಯಂತೇ ವಿಯಚ್ಚರಾಃ ॥ ೯೭ ॥
ಅಖಿಲೇಷ್ವೇವ ಸೃಷ್ಟೇಷು ನೈವಾತ್ಮಪ್ರಯತ್ನೋ ವಿಧೇಃ ।

ಋಚಃ- ಋಗ್ವೇದಮಂತ್ರಗಳು, ಯಜೂಂಷಿ- ಯಜುರ್ವೇದಮಂತ್ರಗಳು, ಸಾಮಾನಿ- ಸಾಮವೇದಮಂತ್ರಗಳು, ಇವುಗಳನ್ನು, ತತಃ- ಆ ಯಜ್ಞಪುರುಷನಿಂದಲೇ (ಶ್ರೀವಿಷ್ಣುವಿನಿಂದಲೇ- ಆ ವಿರಾಡ್ರೂಪನಿಂದಲೇ), ಮುನಯಃ- ಋಷಿಗಳು, ದದೃಶುಃ- ಕಂಡರು (ಉಚ್ಚರಿತವಾಗಿ ಪ್ರಕಟವಾದವುಗಳನ್ನು ನೋಡಿದರು); (ತತಃ- ಆತನಿಂದಲೇ- ನಂತರ), ಛಂದಸಾಂ ದೇವಾಃ- ಛಂದೋಭಿಮಾನಿ ದೇವತೆ ಗಳೂ, ಗಾವಃ- ಗೋವುಗಳು, ಅಜಾಃ- ಮೇಕೆಗಳು, ವಿಹಗಾದಯಃ- ಪಕ್ಷಿಗಳೇ ಮೊದಲಾದ

---

ಆತನನ್ನು ಪೂಜಿಸಿದರು (೯೧-೯೨). ಮುಂದೆ, ಆ ವಿರಾಟ್‌ದೇಹದಿಂದ (ಅಲ್ಲಿದ್ದ ಪುರುಷ ನಾಮಕ ಶ್ರೀವಿಷ್ಣುವಿನಿಂದಲೇ) ಋಕ್, ಯಜು, ಸಾಮನಾಮಕ ವೇದ ಮಂತ್ರಗಳು ಉತ್ಪನ್ನವಾದವು (ಪ್ರಕಟವಾದವು)—ಋಷಿಗಳು (ಮಂತ್ರದ್ರಷ್ಟಾರರು) ಅವುಗಳನ್ನು ಕಂಡರು; ಗಾಯತ್ರ್ಯಾದಿ ವಿವಿಧ ಛಂದಸ್ಸುಗಳೂ ಹುಟ್ಟಿದವು (ಛಂದೋಭಿಮಾನಿ ದೇವತೆಗಳೂ ಹುಟ್ಟಿದರು); ಗೋವು, ಮೇಕೆ, ಪಕ್ಷಿಗಳು ಮತ್ತು ಇತರ ಕ್ಷುದ್ರಜಂತುಗಳೂ, ದವಡೆಯ ಮೇಲೆ ಕೆಳಗೆ ಸಹ ದಂತಗಳುಳ್ಳ ಬಲಿಷ್ಠ ಹಿಂಸ್ರಪ್ರಾಣಿಗಳೂ, ಪಂಚನಖಗಳುಳ್ಳ ಕಪಿ ಮೊದಲಾದ ಮೃಗಗಳೂ, ಎರಡು ಗೊರಸುಳ್ಳ ಮತ್ತು ಒಂದೇ ಗೊರಸುಳ್ಳ (ಗೋ-ಅಶ್ವಾದಿ ಪಶುಗಳೂ) ಪ್ರಾಣಿಗಳೂ, ಕೋಡುಳ್ಳ ಮತ್ತು ಕೋಡಿಲ್ಲದ ಪ್ರಾಣಿಗಳೂ, ಗ್ರಾಮಗಳಲ್ಲಿರುವ ಮತ್ತು ಕಾಡಿನಲ್ಲಿರುವ ಪ್ರಾಣಿಗಳೂ, ಪಿಶಾಚ, ಪಕ್ಷಿ ಮೊದಲಾದ ವಾಯವ್ಯದೇಹಗಳುಳ್ಳ ಪ್ರಾಣಿಗಳೂ, ನಾನಾ ಜಲಚರ ಪ್ರಾಣಿಗಳೂ, ಚತುಷ್ಪಾದ, ದ್ವಿಪಾದ, ಬಹುಪಾದ,

(ನಾನಾ ಪ್ರಾಣಿಗಳು) ಜಜ್ಞಿರೇ-ಹುಟ್ಟಿದವು; ಅನ್ಯೇ ಚ-ಇತರ ಪ್ರಾಣಿವರ್ಗಗಳಾದ, ಉಭಯತೋ ದಂತಾಃ-ಉಭಯತ್ರ (ದವಡೆಯ ಮೇಲೆ ಕೆಳಗೆ-ಎರಡು ಕಡೆಗಳಲ್ಲಿಯೂ) ಹಲ್ಲುಗಳುಳ್ಳ, ಪ್ರಾಣಿಗಳೂ, ತಥಾ-ಮತ್ತು ಪರೇ-ಅನ್ಯ, ಪಂಚನಖಾಃ-ಐದು ನಖಗಳುಳ್ಳ (ಶಾಖಾಮೃಗಾದಿ) ಪ್ರಾಣಿಗಳೂ, ಶಫದ್ವಯಾಃ-ಎರಡು ಗೊರಸುಳ್ಳವು (ಸೀಳಿದ ಗೊರಸುಳ್ಳವೂ), ಏಕಶಫಾಃ- ಒಂದೇ (ಸೀಳದ) ಗೊರಸುಳ್ಳ ಪ್ರಾಣಿಗಳೂ, ಶೃಂಗಿಣಃ-ಕೋಡುಗಳುಳ್ಳವು, ಶೃಂಗವರ್ಜಿತಾಃ-ಕೋಡುಗಳಿಲ್ಲದ ಪ್ರಾಣಿಗಳೂ, ಗ್ರಾಮ್ಯಾರಣ್ಯಾಃ ಚ- ಊರಿನಲ್ಲಿರುವ, ಮತ್ತು ಕಾಡಿನಲ್ಲಿರುವ ಪ್ರಾಣಿಗಳೂ, ವಾಯವ್ಯಾಃ-(ವಾಯುಪ್ರಚುರ ದೇಹದ), ಪಕ್ಷಿಣಃ-ಪಕ್ಷಿಗಳೂ, ತಥಾ-ಮತ್ತು ಅಂಬುಚರಾಃ-ಜಲಚರಪ್ರಾಣಿ ಗಳೂ, ಚತುಃಪಾದಾಃ-ನಾಲ್ಕು ಪಾದಗಳುಳ್ಳವೂ, ಚ-ಹಾಗೂ, ದ್ವಿಪಾದಾಃ-ಎರಡು ಪಾದವುಳ್ಳವೂ, ಬಹುಪಾದಾಃ-ಬಹುಪಾದಗಳುಳ್ಳ, ತಥಾ-ಹಾಗೂ, ಅಪಾದಾಃ- ಪಾದವೇ ಇಲ್ಲದ ಪ್ರಾಣಿಗಳೂ, (ಮತ್ತು), ಕ್ಷುದ್ರಜಂತುಲತಾವೃಕ್ಷಗುಲ್ಮೌಷಧಿತೃಣಾದಿಕಾಃ-ಕ್ರಿಮಿಕೀಟಾದಿಕ್ಷುಲ್ಲಕಪ್ರಾಣಿಗಳೂ, ಲತಾ, ವೃಕ್ಷ, ಗುಲ್ಮ, ನಾನಾ ಸಸ್ಯ, ತೃಣಾದಿ ಸ್ಥಾವರಪ್ರಾಣಿಗಳೂ ತ್ರಿವೃದಾಕಾರಾಃ-ಭೂ, ಜಲ, ಅಗ್ನಿಗಳಿಂದ ನಿರ್ಮಿತಗಳಾದ ಪ್ರಾಣಿಗಳೂ (ಪ್ರಾಣಿದೇಹಗಳೂ), ವ್ಯೋಮವಾತಯೋಃ- ಆಕಾಶವಾಯುಭಾಗಗಳ, ಸಂಯೋಗಾತ್-ಸಂಬಂಧದಿಂದ, ಜಾತಾಃ-ಉತ್ಪನ್ನ ವಾದವು; ವಾಯುಭಾಗಾತಿರೇಕಃ ಚ-(ಪಂಚಭೂತಾತ್ಮಕವಾದ ಈ ನಾನಾ ದೇಹಗಳಲ್ಲಿ) ವಾಯುಭಾಗವೇ ಪ್ರಚುರವಾದುದೇ ಆದ (ಪ್ರಾಣಿ ದೇಹಗಳ ನಿರ್ಮಾಣಕ್ಕಾಗಿ ವ್ಯವಸ್ಥೆಗೊಳಿಸಲಾದ ಪಂಚಭೂತ ಮಿಶ್ರಣರಾಶಿಗಳಲ್ಲಿ) ರಾಶಿಯು, ಪಕ್ಷಿವೃಂದಕೇ-ಪಕ್ಷಿಗಳ ವೃಂದದಲ್ಲಿ ನಿಕ್ಷಿಪ್ತಃ-ಇಡಲ್ಪಟ್ಟಿತು (ಆದರಿಂದ ಪಕ್ಷಿದೇಹಗಳ

---

ಅಪಾದಗಳಾದ ವಿವಿಧ ಪ್ರಾಣಿಗಳೂ, ನಾನಾ ಕ್ರಿಮಿಕೀಟಾದಿ ಕ್ಷುದ್ರಜಂತುಗಳೂ, ಲತಾ, ವೃಕ್ಷ, ಗುಲ್ಮ, ಸಸ್ಯ, ತೃಣಾದಿ ಸ್ಥಾವರ ಪ್ರಾಣಿಗಳೂ, ಮೂರು ಭೂತಗಳಿಂದ (ಭೌಮ-ಆಪ್ಯ-ತೈಜಸಗಳೆಂಬ) ನಿರ್ಮಿತವಾದ ದೇಹಗಳುಳ್ಳ ವಿವಿಧ ಪ್ರಾಣಿಗಳೂ,[1] ಆಕಾಶ ವಾಯ್ವಂಶಗಳನ್ನು ಹೊಂದಿರುವ ದೇಹಗಳುಳ್ಳ ಪ್ರಾಣಿಗಳೂ ಉತ್ಪನ್ನವಾದವು; ತಮ್ಮ ದೇಹರಚನೆಯಲ್ಲಿ ವಾಯುಭಾಗವು ಅಧಿಕವಾಗಿರುವುದರಿಂದಲೇ, ಪಕ್ಷಿಗಳು ಆಕಾಶದಲ್ಲಿ ಹಾರುವ ಸಾಮರ್ಥ್ಯವುಳ್ಳವಾಗಿರುತ್ತವೆ; ಹೀಗೆ ವಿವಿಧ ದೇಹಗಳುಳ್ಳ ಪ್ರಾಣಿಗಳು ಸೃಷ್ಟವಾದರೂ, ವೈರಾಜದೇಹಾಭಿಮಾನಿಯಾದ ಬ್ರಹ್ಮದೇವನ ಮನಸ್ಸಿಗೆ ತೃಪ್ತಿಯುಂಟಾಗಲಿಲ್ಲ (೯೩-೯೭). ಆಗ, ಮನುಷ್ಯಾಕಾರವುಳ್ಳ ಪುರುಷಸ್ತ್ರೀಯರು ಸೃಷ್ಟರಾದರು; ಈವರೆಗೆ ಸೃಷ್ಟವಾದ ಸಕಲ ಪ್ರಾಣಿಗಳ ಮಧ್ಯದಲ್ಲಿ ಇವರು ಜ್ಞಾನದಿಂದ ಅಧಿಕರಾದರು—ಅತ ಏವ ಇತರ ಎಲ್ಲ ಪ್ರಾಣಿಗಳೂ ಅವರ ವಶವಾದವು; ಬ್ರಾಹ್ಮಣಾದಿ

1. ಇಲ್ಲಿ ೨೩ನೇ ಅಧ್ಯಾಯದ ೫-೧೩ ಶ್ಲೋಕಭಾಗವನ್ನು ನೋಡಬಹುದು.

ನಿರ್ಮಾಣವಾಯಿತು, ಇತ್ಯಾದಿಯಾಗಿ ತಿಳಿಯಬೇಕು); ತೇನ-ಈ ಕಾರಣದಿಂದ (ಪಕ್ಷಿದೇಹಗಳಲ್ಲಿ ವಾಯುಭಾಗವು ಅಧಿಕವಾಗಿರುವುದರಿಂದ), ತೇ-ಅ, ವಿಯಚ್ಚರಾಃ-ಗಗನಸಂಚಾರಿಗಳಾದ ಪಕ್ಷಿಗಳು, ಉತ್ಪ್ಲವನಶಕ್ತಾಃ-ಹಾರುವ ಶಕ್ತಿಯುಳ್ಳವಾಗಿ, ಪ್ರದೃಶ್ಯಂತೇ-ಕಂಡುಬರುತ್ತವೆ; ಅಖಿಲೇಷು-ಈ ಸಮಸ್ತ ಪ್ರಾಣಿಗಳು, ಸೃಷ್ಟೇಷು ಏವ-ಸೃಷ್ಟಿ ಮಾಡಲ್ಪಟ್ಟರೂ ಸಹ, ವಿಧೇಃ-ಬ್ರಹ್ಮದೇವನ, ಮನಃ-ಮನಸ್ಸು ನೈವ ಅತೃಪ್ಯತ್-ತೃಪ್ತಿ ಹೊಂದಲಿಲ್ಲವು.

ತತೋ ಹಿ ಪುರುಷಾಕಾರಾ ನರಾ ನಾರ್ಯಶ್ಚ ನಿರ್ಮಿತಾಃ ॥ ೯೮ ॥
ತೇಷಾಂ ಜ್ಞಾನಾಧಿಕತ್ವೇನ ಸರ್ವೇ ತದ್ವಶತಾಂ ಗತಾಃ ।
ಪೌರುಷೇಣ ಹಿ ದೇಹೇನ ಚಾತುರ್ವರ್ಣ್ಯಾನುಲೋಮಿನಾ ॥ ೯೯ ॥
ತಥಾ ವಿಲೋಮಿನಾ ಚಾಪಿ ಸ್ವಸ್ವಯೋಗ್ಯತಯಾಖಿಲಾಃ ।
ಯಥಾಮತಿ ವಿಚಿನ್ವಂತಿ ಬ್ರಹ್ಮಣಸ್ತತ್ಪರಂ ಪದಂ ॥ ೧೦೦ ॥

ತತಃ-ನಂತರ (ಆದ್ದರಿಂದ ಮನಸ್ಸಿಗೆ ತೃಪ್ತಿಯಾಗದ ಕಾರಣ), ಪುರುಷಾಕಾರಾಃ-ಮನುಷ್ಯಾಕಾರವುಳ್ಳ, ನರನಾರ್ಯಶ್ಚ-ಪುರುಷಸ್ತ್ರೀಯರೂ, ನಿರ್ಮಿತಾಃ-ಸೃಜಿಸಲ್ಪಟ್ಟರು; ಹಿ-ಇದು ಅನಾದಿಯಿಂದ ಪ್ರಸಿದ್ಧವು; ತೇಷಾಂ-ಮನುಷ್ಯರ, ಜ್ಞಾನಾಧಿಕತ್ವೇನ-ಜ್ಞಾನಾಧಿಕ್ಯದಿಂದ (ಬುದ್ಧಿಬಲದಿಂದ), ಸರ್ವೇ-ಎಲ್ಲವೂ (ಅವರಿಗೆ ಸೃಷ್ಟವಾದ ಪ್ರಾಣಿಗಳೆಲ್ಲವೂ), ತದ್ವಶತಾಂ-ಅವರ (ಮಾನವರ) ವಶವನ್ನು, ಗತಾಃ-ಹೊಂದಿದವು; ಅಖಿಲಾಃ-ಸಕಲಪ್ರಾಣಿಗಳೂ, ಚಾತುರ್ವರ್ಣ್ಯಾನುಲೋಮಿನಾ-(ಬ್ರಾಹ್ಮಣಾದಿ) ನಾಲ್ಕು ವರ್ಣದ, ಮತ್ತು ಅನುಲೋಮದ, ತಥಾ-ಮತ್ತು, ವಿಲೋಮಿನಾ-ಪ್ರತಿಲೋಮದ, ಪೌರುಷೇಣ ದೇಹೇನ-ಪುರುಷ ದೇಹದಿಂದಲೇ, ಸ್ವಸ್ವಯೋಗ್ಯತಯಾ-ತಂತಮ್ಮ

---

ನಾಲ್ಕು ವರ್ಣಗಳಿಗೆ ಸೇರಿದ, ಅಥವಾ (ಮತ್ತು), ಅನುಲೋಮ, ಪ್ರತಿಲೋಮ ವರ್ಣದ ಪುರುಷದೇಹದಿಂದಲೇ, ಸಕಲ ಜೀವರೂ, ಸ್ವಯೋಗ್ಯತಾನುಸಾರವಾಗಿ, ಶ್ರೀವಿಷ್ಣುವಿನ ಪರಮಪದವನ್ನು ಯಥಾಮತಿ ವಿಚಾರಮಾಡಿ ತಿಳಿಯುತ್ತಾರೆ—ಹೊಂದುತ್ತಾರೆ (೯೮-೧೦೦). ಹೀಗೆ ಸ್ಥಾವರ ಜಂಗಮ ಪ್ರಾಣಿಗಳಲ್ಲಿ ಮನುಷ್ಯರೇ ಶ್ರೇಷ್ಠರಾದರು; ವಾಯ್ವಂಶವೇ ಅಧಿಕವಾಗಿ ಉಳ್ಳ (ಪ್ರಾಕೃತ) ರಾಶಿಯಿಂದ ಭೂತ ಪ್ರೇತ ಪಿಶಾಚಾದಿಗಳನ್ನು ಸೃಜಿಸಿದನು; ಈ ಪಿಶಾಚಾದಿಗಳ ದೇಹದಲ್ಲಿ ಪರಕಾಯಪ್ರವೇಶ, ನಾನಾ ರೂಪಗಳ ಧಾರಣ, ದೇಹಗಳನ್ನು ಸಂಕೋಚಗೊಳಿಸಿಕೊಳ್ಳುವುದೇ ಮೊದಲಾದ ನನ್ನ ಶಕ್ತಿಗಳು (ಸ್ವಭಾವಸಿದ್ಧಗಳಾದ ಈ ನನ್ನ ಅಪಾರ ಸಾಮರ್ಥ್ಯಗಳಲ್ಲಿ ಕಿಂಚಿತ್ಸದೃಶ

(ಸ್ವರೂಪ) ಯೋಗ್ಯತೆಗನುಗುಣವಾಗಿ, ಯಥಾಮತಿ - ತಂತಮ್ಮ ಜ್ಞಾನವಿದ್ದಷ್ಟು ಬ್ರಹ್ಮಣಃ- ಶ್ರೀವಿಷ್ಣುವಿನ (ಪರಬ್ರಹ್ಮನ), ತತ್ಪರಂ ಪದಂ- ಆ ಪರಮಪದವನ್ನು (ಬ್ರಹ್ಮ ಸ್ವರೂಪಜ್ಞಾನವನ್ನು ಅಥವಾ ಆತನ ನಿತ್ಯಸ್ಥಾನವನ್ನು), ವಿಚಿನ್ವಂತಿ- ಅರಸುತ್ತಾರೆ (ಜಿಜ್ಞಾಸೆಯಿಂದ ಹೊಂದಲು ಯತ್ನಿಸುತ್ತಾರೆ- ಹುಡುಕುತ್ತಾರೆ).

**ಇತಿ ತೇ ನಿಖಿಲಾಃ ಶ್ರೇಷ್ಠಾ ನರಾಃ ಸ್ಥಾವರಜಂಗಮೇ ।**

ಇತಿ- ಹೀಗೆ, ತೇ- ಆ (ಸೃಷ್ಟರಾದ), ನಿಖಿಲಾಃ- ಸಕಲ, ನರಾಃ- ಪುರುಷರೂ, ಸ್ಥಾವರಜಂಗಮೇ- ಸ್ಥಾವರಜಂಗಮಪ್ರಾಣಿವರ್ಗದಲ್ಲಿ ಶ್ರೇಷ್ಠಾಃ- ಶ್ರೇಷ್ಠರಾದರು.

**ಭೂತಪ್ರೇತಪಿಶಾಚಾದೀನ್ ವಾಯವೀಯೇನ ರಾಶಿನಾ ॥ ೧೦೧ ॥**

**ನಿರ್ಮಮೇಽಂತರ್ಹಿತಾ ಯಾ ಮೇ ಸಂಕೋಚಾದ್ಯಾಸ್ತು ಶಕ್ತಯಃ ।**

**ಪರಕಾಯಪ್ರವೇಶಶ್ಚ ನಾನಾರೂಪಧೃತಿಸ್ತಥಾ ॥ ೧೦೨ ॥**

**ತೇಷಾಂ ಸ್ವಭಾವದುಃಖಾನಿ ಕ್ಷುತ್ತೃಷಾಪರಿಪೀಡನಾತ್ ।**

**ಕಾದಾಚಿತ್ಕಂ ಸುಖಂ ತೇಷಾಂ ಸ್ವಭಾವಾದ್ದುಃಖಭೋಗಿನಃ ॥ ೧೦೩ ॥**

ವಾಯವೀಯೇನ- ವಾಯ್ವಂಶವೇ ಅಧಿಕವಾಗಿವುಳ್ಳ, ರಾಶಿನಾ- ರಾಶಿಯಿಂದ, ಭೂತಪ್ರೇತಪಿಶಾಚಾದೀನ್- ಭೂತ, ಪ್ರೇತ, ಪಿಶಾಚಿ ಮೊದಲಾದ ಪ್ರಾಣಿಗಳನ್ನು ನಿರ್ಮಮೇ- ಸೃಷ್ಟಿಮಾಡಿದನು; (ಬ್ರಹ್ಮದೇಹಪ್ರವಿಷ್ಟನಾಗಿ ಅದರಿಂದ ಸೃಷ್ಟಿಯನ್ನು ವಿಸ್ತರಿಸಿದ ವಿರಾಡ್ರೂಪಿ ಶ್ರೀವಿಷ್ಣುವು ಸೃಷ್ಟಿಸಿದನು); (ಭೂತಪ್ರೇತ ಪಿಶಾಚಾದಿ ದೇಹಗಳು ಎಂಥವೆಂದರೆ), ಪರಕಾಯಪ್ರವೇಶಃ- ಪರಕಾಯಪ್ರವೇಶವೂ (ಅನ್ಯರ ದೇಹದಲ್ಲಿ ಪ್ರವೇಶಿಸುವುದೂ), ತಥಾ- ಹಾಗೂ, ನಾನಾರೂಪಧೃತಿಃ- ನಾನಾರೂಪ ಗಳನ್ನು ತಾಳುವುದು (ವಿವಿಧರೂಪಗಳನ್ನು ಧರಿಸುವುದೂ), ಚ- ಮತ್ತು ಸಂಕೋಚಾದ್ಯಾಃ- (ರೂಪಗಳನ್ನು) ಸಂಕೋಚಗೊಳಿಸುವುದೇ ಮೊದಲಾದ (ಚಿಕ್ಕದಾಗಿ ಮಾಡಿಕೊಳ್ಳುವ ಮುಂತಾದ), ಯಾಃ- ಯಾವ, ಮೇ- ನನ್ನ, ಶಕ್ತಯಃ- ಶಕ್ತಿಗಳೋ, (ಅವು) ಅಂತರ್ಹಿತಾಃ- ಒಳಗೆ (ಆ ಪಿಶಾಚಾದಿ ದೇಹಗಳಲ್ಲಿ) ಸ್ಥಾಪಿಸಲ್ಪಟ್ಟಿವೆ; ತೇಷಾಂ- ಆ ಪಿಶಾಚಾದಿಗಳಿಗೆ, ಕ್ಷುತ್ತೃಷಾಪರಿಪೀಡನಾತ್- ಹಸಿವು ಬಾಯಾರಿಕೆಗಳ ಪೀಡೆಯಿಂದ, ಸ್ವಭಾವದುಃಖಾನಿ- ಸ್ವಾಭಾವಿಕದುಃಖಗಳು (ಉಂಟು), ಸ್ವಭಾವಾತ್- ದೇಹಸ್ವಭಾವ ದಿಂದಲೇ, ದುಃಖಭೋಗಿನಃ- ದುಃಖಾನುಭವವುಳ್ಳ, ತೇಷಾಂ- ಅವುಗಳಿಗೆ, ಸುಖಂ-

---

ಅಲ್ಪಶಕ್ತಿಗಳು) ಇಡಲ್ಪಟ್ಟಿವೆ; ಹಸಿವೆ ತೃಷೆಗಳಿಂದ ಪೀಡಿತವಾದ ಈ ಪಿಶಾಚಾದಿಗಳಿಗೆ ದೇಹ ಸ್ವಾಭಾವಿಕ ದುಃಖಗಳಿವೆ; ಸದಾ ದುಃಖಭೋಗವುಳ್ಳ ಇವರಿಗೆ ಯಾವಾಗಲೋ ಒಮ್ಮೊಮ್ಮೆ ಕ್ಷಣಕಾಲ ಅಲ್ಪಸುಖವು ಲಭಿಸುತ್ತದೆ (೧೦೧-೧೦೩). ಪಾರ್ಥಿವ (ಭೌಮ),

ಸುಖವು, ಕಾದಾಚಿತ್ಕಂ- ಯಾವಾಗಲೋ ಒಂದು ಕ್ಷಣಕಾಲ ಮಾತ್ರ (ದೊರೆಯುತ್ತದೆ).

**ಅನ್ಯೇ ತು ಪ್ರಾಣಿನಃ ಸೃಷ್ಟಾಸ್ತ್ರಿವೃದ್ರಾಶಿಭಿರೇವ ಹಿ ।**
**ವಿಧಾತಾ ತೈಜಸಾದ್ದೇವಾನ್ ಪಾರ್ಥಿವೇನ ತು ಮಾನವಾನ್ ॥ ೧೦೪ ॥**
**ತಥಾನ್ಯಾನಖಿಲಾನ್ ಜಂತೂನ್ ವಾರುಣಾನ್ ಜಲರಾಶಿತಃ ।**
**ವಿದಧೇಽಥಾಪಿ ಸಂಹೃತ್ಯ ಪುನಸ್ತೈಸ್ತೈಸ್ತಥಾ ತಥಾ ॥ ೧೦೫ ॥**
**ಸರ್ಜನಂ ಸರ್ವಜೀವಾನಾಂ ಬ್ರಹ್ಮಾಂತಾನಾಮಿಯಂ ಸ್ಥಿತಿಃ ।**
**ಏವಂ ಸೃಷ್ಟಿರಭೂತ್ತಸ್ಮಿನ್ ಪಾದ್ಮೇ ಕಲ್ಪೇ ಸ್ವಯಂಭುವಃ ॥ ೧೦೬ ॥**

ಅನ್ಯೇ-ಇತರ, ಪ್ರಾಣಿನಃ ತು-ಪ್ರಾಣಿಗಳಾದರೋ, ತ್ರಿವೃದ್ರಾಶಿಭಿಃ ಏವ- (ಭೌಮ, ಆಪ್ಯ, ತೈಜಸಗಳೆಂಬ) ಮೂರು ರಾಶಿಗಳಿಂದಲೇ, ಸೃಷ್ಟಾಃ-ಸೃಷ್ಟರಾದರು; ದೇವಾನ್-ದೇವತೆಗಳನ್ನು ತೈಜಸಾತ್-ತೈಜಸರಾಶಿಯಿಂದಲೂ, ಮಾನವಾನ್-ಮನುಷ್ಯರನ್ನು ಪಾರ್ಥಿವೇನ-ಭೌಮರಾಶಿಯಿಂದಲೂ, ತಥಾ-ಹಾಗೆಯೇ (ಭೌಮರಾಶಿಯಿಂದಲೇ), ಅನ್ಯಾನ್-ಇತರ, ಅಖಿಲಾನ್ ಜಂತೂನ್-ಸಮಸ್ತ ಪ್ರಾಣಿಗಳನ್ನು ಜಲರಾಶಿತಃ-ಆಪ್ಯರಾಶಿಯಿಂದಲೂ, ವಿಧಾತಾ-ಬ್ರಹ್ಮದೇವನು, ವಿದಧೇ-ಸೃಷ್ಟಿಮಾಡಿದನು; ಅಥಾಪಿ-ಹೀಗಿದ್ದರೂ, ಸಂಹೃತ್ಯ-(ಸೃಷ್ಟವಾದ ಎಲ್ಲವನ್ನೂ) ಸಂಹರಿಸಿ, ಪುನಃ-ಮತ್ತೆ (ತನ್ನ ರಾತ್ರಿ ಕಳೆದು ಹಗಲು ಪ್ರಾಪ್ತವಾದಾಗ), ತಥಾ ತಥಾ-ಪೂರ್ವದಲ್ಲಿ ಹೇಗೋ ಹಾಗೆ, ತೈಃ ತೈಃ-ಆಯಾ (ಪಾರ್ಥಿವಾದಿ) ರಾಶಿಗಳಿಂದ, ಬ್ರಹ್ಮಾಂತಾನಾಂ - ಬ್ರಹ್ಮದೇವನೇ ಕಡೆಯಾಗಿಉಳ್ಳ (ಅಥವಾ ಬ್ರಹ್ಮನಿಂದಲೇ ಗ್ರಾಸಮಾಡಲ್ಪಡುವ), ಸರ್ವಜೀವಾನಾಂ- ಸಕಲಜೀವರ, ಸರ್ಜನಂ- ಸೃಷ್ಟಿಯು (ನಡೆಯುತ್ತದೆ); ಇಯಂಸ್ಥಿತಿಃ-ಇದೇ ವಸ್ತುಸ್ಥಿತಿಯು (ಹೀಗೆಯೇ ಎಲ್ಲಾ ಕಾಲದಲ್ಲಿಯೂ ಸಂಭವಿಸುತ್ತದೆ); ಸ್ವಯಂಭುವಃ-ಬ್ರಹ್ಮದೇವನ ತಸ್ಮಿನ್-ಆ (ಹಿಂದೆ ಗತಿಸಿದ), ಪಾದ್ಮೇ ಕಲ್ಪೇ-ಪದ್ಮಕಲ್ಪದಲ್ಲಿ, ಏವಂ-ಈ ಪ್ರಕಾರದ, ಸೃಷ್ಟಿಃ-ಸೃಷ್ಟಿಯು, ಅಭೂತ್-ನಡೆಯಿತು.

**ದಿನಾಂತೇ ಸಂಜಿಹೀರ್ಷುಃ ಸ ವಹ್ನಿವಾತಾದಿವರ್ಷಣೈಃ ।**

---

ತೈಜಸ ಮತ್ತು (ಆಪ್ಯ) ಜಲರಾಶಿಗಳೆಂಬ ಮೂರು ಮೂರು ಭೂತಗಳಿಂದ ವ್ಯವಸ್ಥೆಗೊಳಿಸಲಾದ ಪ್ರಾಕೃತ ರಾಶಿಗಳಿಂದ, ಇತರ ಸಮಸ್ತ ಪ್ರಾಣಿಗಳೂ ಸೃಷ್ಟವಾದವು; ಬ್ರಹ್ಮದೇವನು, ತೈಜಸರಾಶಿಯಿಂದ, ದೇವತೆಗಳನ್ನೂ, ಭೌಮರಾಶಿಯಿಂದ ಮನುಷ್ಯಾದಿ ಇತರ ಸಮಸ್ತ ಪ್ರಾಣಿಗಳನ್ನೂ, ಜಲರಾಶಿಯಿಂದ ಸಕಲ ಜಲಚರ ಪ್ರಾಣಿಗಳನ್ನೂ ಸೃಷ್ಟಿಮಾಡಿದನು; ಹೀಗೆ ಸೃಷ್ಟವಾದ ಸರ್ವ ಪ್ರಾಣಿಗಳನ್ನೂ (ತನ್ನ ದಿನಾಂತ್ಯಪ್ರಲಯದಲ್ಲಿ) ಸಂಹರಿಸಿ, ಪುನಃ ದಿನಪ್ರಾರಂಭದಲ್ಲಿ (ಹಗಲು ಬರಲು), ಆಯಾ ರಾಶಿಗಳಿಂದ, ಹಿಂದಿನ ದಿನದಂತೆ, ಆಯಾ ಪ್ರಾಣಿವರ್ಗಗಳನ್ನೂ ತನ್ನ

**ಆಪ್ಲಾವ್ಯ ಪೃಥಿವೀಂ ಸರ್ವಾಂ ಮಜ್ಜಯಾಮಾಸ ಚಾಖಿಲಾನ್ ॥ ೧೦೭ ॥**
**ದೇವಾದೀನ್ ನಿಖಿಲಾನ್ ಪೀತ್ವಾ ಸತ್ಯಲೋಕೇಽಸ್ವಪದ್ವಿಧಿಃ ।**

ದಿನಾಂತೇ-(ಪಾದ್ಮಕಲ್ಪದ) ಹಗಲು ಮುಗಿಯುತ್ತಿರಲು, ಸಃ-ಆ ಬ್ರಹ್ಮದೇವನು, ಸಂಜಿಹೀರ್ಷುಃ(ಸೃಷ್ಟವಾದುದನ್ನು) ಸಂಹರಿಸಲಿಚ್ಛೆಯುಳ್ಳವನಾಗಿ, ವಹ್ನಿವಾತಾದಿ ವರ್ಷಣೈಃ-ಅಗ್ನಿ, ಗಾಳಿ, ಮಳೆಗಳಿಂದ, ಸರ್ವಾಂ-ಎಲ್ಲ ಪೃಥಿವೀಂ-ಭೂಮಿಯನ್ನು ಆಪ್ಲಾವ್ಯ-(ಅಗ್ನಿವಾಯುಗಳಿಂದ ಎಲ್ಲವನ್ನೂ ದಹಿಸಿ) ಮಳೆಯಿಂದ ತೊಳೆದು, ಅಖಿಲಾನ್-ಸಮಸ್ತವನ್ನೂ ಮಜ್ಜಯಾಮಾಸ-ಮುಳುಗಿಸಿದನು; ನಿಖಿಲಾನ್-ಸಮಸ್ತರಾದ, ದೇವಾದೀನ್-ದೇವಾದಿಪ್ರಾಣಿಗಳನ್ನು ಪೀತ್ವಾ-ಪಾನಮಾಡಿ, (ತನ್ನ ಹೊಟ್ಟೆಯಲ್ಲಿಟ್ಟುಕೊಂಡು), ವಿಧಿಃ-ಬ್ರಹ್ಮದೇವನು, ಸತ್ಯಲೋಕೇ-ಸತ್ಯಲೋಕದಲ್ಲಿ ಅಸ್ವಪತ್-ಮಲಗಿದನು.

**ಚರಾಚರಸ್ಯ ಸರ್ವಸ್ಯ ಪ್ರಲಯೋ ವ್ಯುತ್ಕ್ರಮಾತ್ ಸ್ಮೃತಃ ।**
**ಹರಿಸ್ತದಂತರಾ ರಿಲ್ಯೇ ಪ್ರಕೃತ್ಯಾ ಸಂಯುತಃ ಸ್ವಯಾ ।**
**ತತ್ವಾನ್ಯಪಿ ನಿಲೀನಾನಿ ವಿಧೇರಂಗೇಷು ಸರ್ವಶಃ ॥ ೧೦೯ ॥**

ಚರಾಚರಸ್ಯ-ಚರಾಚರವಾದ (ಜಂಗಮಸ್ಥಾವರಗಳಾದ), ಸರ್ವಸ್ಯ-ಎಲ್ಲದರ ಪ್ರಲಯಃ-ಪ್ರಲಯವು (ನಾಶವು), ವ್ಯುತ್ಕ್ರಮಾತ್-(ಸೃಷ್ಟಿಕ್ರಮಕ್ಕೆ) ವಿರುದ್ಧವಾದ ಕ್ರಮದಿಂದ (ಆಗುವುದೆಂದು), ಸ್ಮೃತಃ-(ಜ್ಞಾನಿಗಳಿಂದ) ತಿಳಿಯಲ್ಪಟ್ಟಿದೆ; ತದಂತರಾ-ಆ ಮಧ್ಯಕಾಲದಲ್ಲಿ (ಬ್ರಹ್ಮದೇವನ ರಾತ್ರಿಕಾಲದಲ್ಲಿ), ಹರಿಃ-ಶ್ರೀಹರಿಯು, ಸ್ವಯಾ-ತನ್ನವಳಾದ, ಪ್ರಕೃತ್ಯಾ-ಲಕ್ಷ್ಮೀದೇವಿಯಿಂದ, ಸಂಯುತಃ-ಕೂಡಿದವನಾಗಿ, ರಿಲ್ಯೇ-ಕ್ರೀಡಿಸಿದನು; ಸರ್ವಶಃ-ಎಲ್ಲ ತತ್ವಾನಿ-ತತ್ವಗಳು (ವಸ್ತುಗಳು ಅಥವಾ ದಿನಕಲ್ಪದಲ್ಲಿ

---

ಪರ್ಯಂತರಾದ ಜೀವರೆಲ್ಲರನ್ನೂ ಸೃಷ್ಟಿಮಾಡುತ್ತಾನೆ; ಇದು ಜಗತ್ತಿನ ಸೃಷ್ಟಿಸಂಹಾರಗಳ ಸ್ಥಿತಿಯು (ವ್ಯವಸ್ಥೆಯು); ಈವರೆಗೆ ನಿರೂಪಿಸಿದ ಕ್ರಮದಿಂದ, ಬ್ರಹ್ಮದೇವನ ಆ ದಿನದಲ್ಲಿ (ಪಾದ್ಮಕಲ್ಪನೆಂಬ ನಾಮವುಳ್ಳ ದಿನದಲ್ಲಿ), ಸೃಷ್ಟಿಯು ನಡೆಯಿತು (೧೦೪-೧೦೬). ಪಾದ್ಮಕಲ್ಪದ ಹಗಲು ಮುಗಿಯುತ್ತಿರಲು, ಬ್ರಹ್ಮದೇವನು, ಸೃಷ್ಟವಾದವುಗಳನ್ನು ಸಂಹರಿಸಲಿಚ್ಛಿಸಿ, ಸಮಸ್ತ ಪೃಥಿವಿಯನ್ನು ಅಗ್ನಿ, ವಾಯು, ಮಳೆಗಳಿಂದ ತೊಳೆದು ಎಲ್ಲ ಪ್ರಾಣಿಗಳನ್ನು ಜಲದಲ್ಲಿ ಮುಳುಗಿಸಿದನು; ದೇವಾದಿ ಸಮಸ್ತ ಜೀವರನ್ನು ಪಾನಮಾಡುವುದರ ಮೂಲಕ ತನ್ನ ಹೊಟ್ಟೆಗೆ ಸೇರಿಸಿಕೊಂಡು,

ಲಯಗೊಳ್ಳುವ ಭೂಃ, ಭುವಃ ಮತ್ತು ಸ್ವಃ, ಎಂಬ ಮೂರು ಲೋಕಗಳಲ್ಲಿದ್ದ ಪೃಥಿವ್ಯಾದಿ ತತ್ತ್ವಗಳು), ವಿಧೇಃ-ಬ್ರಹ್ಮದೇವನ, ಅಂಗೇಷು-ಅವಯವಗಳಲ್ಲಿ ನಿಲೀನಾನಿ-ಅಡಗಿದವು (ಸೂಕ್ಷ್ಮರೂಪದಿಂದ ಸೇರಿದವು).

ಪಾದ್ಮಕಲ್ಪಸೃಷ್ಟಿವರ್ಣನವೆಂಬ ೨೪ನೇ ಅಧ್ಯಾಯವು ಮುಗಿದುದು.

---

ಸತ್ಯಲೋಕದಲ್ಲಿ ಮಲಗಿದನು (೧೦೭). ಸಮಸ್ತ ಚರಾಚರವಸ್ತುಗಳ ಲಯವು, ಸೃಷ್ಟಿಕ್ರಮಕ್ಕೆ ವಿರುದ್ಧವಾದ ಕ್ರಮದಿಂದ (ನಂತರ ಹುಟ್ಟಿದ್ದು ಮೊದಲು, ಮೊದಲು ಉತ್ಪನ್ನವಾದುದು ಕಡೆಯಲ್ಲಿ) ನಡೆಯುತ್ತದೆ; ಬ್ರಹ್ಮದಿನಾಂತ್ಯಲಯದಲ್ಲಿ ಸ್ವಭಾರ್ಯಳಾದ ಶ್ರೀಲಕ್ಷ್ಮೀಸಮೇತನಾಗಿ ಶ್ರೀಹರಿಯು ಕ್ರೀಡಿಸುತ್ತ ವಿರಾಜಿಸುತ್ತಾನೆ; ನಷ್ಟಗೊಳ್ಳುವ ಭೂರ್ಭುವಸ್ವಃಗಳು ಮೂರು ಲೋಕಗಳ ನಿರ್ಮಾಣದಲ್ಲಿ ಉಪಯೋಗಿಸಲಾದ ಪ್ರಾಕೃತ ತತ್ತ್ವಗಳು, ಸೂಕ್ಷ್ಮರೂಪದಿಂದ ಬ್ರಹ್ಮದೇವನ ದೇಹದ ಅವಯವಗಳಲ್ಲಿ ಲೀನವಾಗುತ್ತವೆ (೧೦೮-೧೦೯).

೨೪ನೇ ಅಧ್ಯಾಯವು ಮುಗಿದುದು.

---

೧. ಬ್ರಹ್ಮದೇವನ ಪ್ರತಿ ದಿನಾಂತ್ಯದಲ್ಲಿ ಸಂಭವಿಸುವ ಪ್ರಲಯವು, ನೈಮಿತ್ತಿಕ ಲಯವೆನಿಸುತ್ತದೆ—ಬ್ರಹ್ಮದೇವನ ರಾತ್ರಿಪ್ರಯುಕ್ತ ನಡೆಯುತ ಲಯವಾದ್ದರಿಂದ, ಈ ನಾಮವು. ಆಗ ಭೂಃ, ಭುವಃ ಮತ್ತು ಸ್ವಃ, ಎಂಬ ಮೂರು ಲೋಕಗಳು ನಷ್ಟವಾಗುತ್ತವೆ. ಉಳಿದ ಲೋಕಗಳು ಬ್ರಹ್ಮದೇವನ ೧೦೦ ವರ್ಷಗಳವರೆಗೆ—ಪರನಾಮಕವಾದ ಆತನ ಆಯುಷ್ಯಪೂರ್ಣವಾಗುವ ವರೆಗೆ ಇದ್ದು ಆಗ ಸಂಭವಿಸುವ ಮಹಾಪ್ರಲಯದಲ್ಲಿ ನಷ್ಟವಾಗುತ್ತವೆ—ಅದು ಪ್ರಾಕೃತಿಕಲಯ ವೆಂದು ಕರೆಯಲ್ಪಡುತ್ತದೆ—ಬ್ರಹ್ಮಾಂಡವೇ ಲಯಗೊಳ್ಳುತ್ತದೆ; ಬ್ರಹ್ಮಾಂಡಸೃಷ್ಟಿಯಲ್ಲಿ ಉಪ ಯೋಗಿಸಲಾದ ಪ್ರಾಕೃತ ತತ್ತ್ವಗಳೆಲ್ಲವೂ ಮೂಲಪ್ರಕೃತಿಯನ್ನು ಸೇರುತ್ತವೆ. ನೈಮಿತ್ತಿಕ ಲಯದಲ್ಲಿ ಮೂರು ಲೋಕಗಳು ನಾಶವಾಗಲು, ಬ್ರಹ್ಮದೇವನು ಸತ್ಯಲೋಕದಲ್ಲಿ ಮಲಗುತ್ತಾನೆ—ಆಗಿನ ಪ್ರಲಯೋದಕದಲ್ಲಿ ಲಕ್ಷ್ಮೀಸಮೇತನಾಗಿ ಶ್ರೀವಿಷ್ಣುವು ಶಯನಮಾಡಿ, ವಿಹರಿಸುತ್ತ ವಿರಾಜಿಸುತ್ತಾನೆ. ಈ ಮೂರು ಲೋಕಗಳ ನಿರ್ಮಾಣದಲ್ಲಿ ಉಪಯೋಗಿಸಲ್ಪಟ್ಟ ಪ್ರಾಕೃತ ತತ್ತ್ವಾಂಶಗಳು ಬ್ರಹ್ಮದೇವನ ಅಂಗಗಳಲ್ಲಿ ಲೀನವಾಗುತ್ತವೆ. ಬ್ರಹ್ಮದೇವನಿಗೆ ಅಜ್ಞಾನಕಾರ್ಯವಾದ ನಿದ್ರೆಯಿಲ್ಲ—ಯೋಗ (ಧ್ಯಾನ) ನಿದ್ರೆಯಲ್ಲಿರುತ್ತಾನೆ. ಹೀಗಿರಲು ಶ್ರೀವಿಷ್ಣುವಿಗೆ ನಿದ್ರೆಯು ಸುತರಾಂ ಇಲ್ಲವೆಂಬುದು ಕೈಮುತ್ಯದಿಂದಲೂ ಸಿದ್ಧವಾಗುತ್ತದೆ.

## ಅಧ್ಯಾಯ ೨೫

ಶ್ರೀ ವೇದವ್ಯಾಸಾಯ ನಮಃ

ಶ್ರೀ ಭಗವಾನುವಾಚ—

ಏವಮಾದ್ಯವಿಧೇರ್ಯಾತೇ ಪರಾರ್ಧೇ ಪಾದ್ಮಕಲ್ಪತಃ ।
ದ್ವಿತೀಯಸ್ಯ ಪರಾರ್ಧಸ್ಯ ಪ್ರಥಮಃ ಕಲ್ಪ ಉಚ್ಯತೇ ॥ ೧ ॥

ಅಯಂ ಹಿ ಸರ್ವಕಲ್ಪಾನಾಂ ಶ್ವೇತವಾರಾಹಕಲ್ಪಕಃ ।
ಪ್ರೋಕ್ತಃ ಪ್ರಕೃತಭೂತೋಽತಃ ಸಂಕ್ಷೇಪಾದ್ವರ್ಣ್ಯತೇಽಧುನಾ ॥ ೨ ॥

ಅರ್ಥ: ಏವಂ-ಹೀಗೆ (ಹಿಂದಿನ ಅಧ್ಯಾಯಾಂತ್ಯದಲ್ಲಿ ನಿರೂಪಿಸಿದಂತೆ), ಪಾದ್ಮಕಲ್ಪತಃ-ಪಾದ್ಮಕಲ್ಪದಿಂದ (ಪಾದ್ಮಕಲ್ಪವು ಮುಗಿದುದರಿಂದ), ಆದ್ಯವಿಧೇಃ-ಆದ್ಯಬ್ರಹ್ಮನ, ಪರಾರ್ಧೇ-ಪರಾರ್ಧಕಾಲವು (ಮೊದಲಿನ ೫೦ ವರ್ಷಗಳ ಅವಧಿಯು), ಯಾತೇ-ಗತಿಸುತ್ತಿರಲು, ದ್ವಿತೀಯಸ್ಯ-ಎರಡನೆಯ, ಪರಾರ್ಧಸ್ಯ-ಪರಾರ್ಧದ, ಪ್ರಥಮಃ-ಮೊದಲಿನ, ಕಲ್ಪಃ-(ದಿನ) ಕಲ್ಪವು, ಉಚ್ಯತೇ-ಹೇಳಲ್ಪಡುತ್ತದೆ; ಅಯಂ-ಇದು (ಈ ಕಲ್ಪವು), ಸರ್ವಕಲ್ಪಾನಾಂ-ಎಲ್ಲ ಕಲ್ಪಗಳ ಮಧ್ಯದಲ್ಲಿ ಶ್ವೇತ ವಾರಾಹಕಲ್ಪಕಃ-ಶ್ವೇತವರಾಹಕಲ್ಪವೆಂದು, ಪ್ರೋಕ್ತಃ ಹಿ-ಪ್ರಸಿದ್ಧವಾಗಿ ಹೇಳಲ್ಪಟ್ಟಿದೆ; ಪ್ರಕೃತಭೂತಃ-(ಈ ಕಲ್ಪವೇ ಈಗ) ಪ್ರಕೃತವಾದುದು (ನಡೆದಿರುವುದು), ಅತಃ-ಆದ್ದರಿಂದ, ಅಧುನಾ-ಈಗ, ಸಂಕ್ಷೇಪಾತ್-ಸಂಕ್ಷೇಪವಾಗಿ, ವರ್ಣ್ಯತೇ-ವರ್ಣಿಸಲಾಗುತ್ತದೆ.

ಅವಶಿಷ್ಟೇಽಷ್ಟಮೇ ಭಾಗೇ ನಿಶಾಯಾಮುತ್ಥಿತೋ ವಿಧಿಃ ।
ಸಸ್ಮಾರ ಪದ್ಮನಾಭಂ ತಂ ಹೃದಿಸ್ಥಂ ಭಕ್ತಿಸಂಯುತಃ ॥ ೩ ॥

---

ಅಧ್ಯಾಯ ೨೫

ತಾತ್ಪರ್ಯ:—ಶ್ರೀವಿಷ್ಣುವು ಬ್ರಹ್ಮದೇವನಿಗೆ ಹೇಳುತ್ತಾನೆ:—ಹೀಗೆ ಪಾದ್ಮ ಕಲ್ಪದ ಪರಿಸಮಾಪ್ತಿಯಿಂದ, ಬ್ರಹ್ಮದೇವನ ಪ್ರಥಮ ಪರಾರ್ಧವು (ಮೊದಲಿನ ೫೦ ವರ್ಷಗಳ ಆಯುಷ್ಯವು) ಮುಗಿಯಿತು; ದ್ವಿತೀಯ ಪರಾರ್ಧದ ಮೊದಲಿನ ದಿನವು, ಎಲ್ಲ ಕಲ್ಪಗಳ ಮಧ್ಯದಲ್ಲಿ ಶ್ವೇತವರಾಹಕಲ್ಪವೆಂದು ಪ್ರಸಿದ್ಧವಾಗಿದೆ; ಆ ದ್ವಿತೀಯ ಪರಾರ್ಧದ ಮೊದಲಿನ ದಿನಕಲ್ಪವು ಈಗ ನಡೆಯುತ್ತಿರುವುದರಿಂದ ಅದನ್ನು ಸಂಕ್ಷೇಪವಾಗಿ ವರ್ಣಿಸುತ್ತೇನೆ (೧-೨). ಬ್ರಹ್ಮದೇವನು, ಆ ರಾತ್ರಿಯ ೧/೮ನೆ

ನಿಶಾಯಾಂ-(ಬ್ರಹ್ಮನ) ರಾತ್ರಿಕಾಲದಲ್ಲಿ ಅಷ್ಟಮೇ ಭಾಗೇ-೧/೮ ಭಾಗವು, ಅವಶಿಷ್ಟೇ-ಉಳಿದಿರುವಾಗ, ವಿಧಿಃ-ಬ್ರಹ್ಮದೇವನು, ಉತ್ಥಿತಃ-ಎದ್ದು ಹೃದಿಸ್ಥಂ-ಸ್ವಹೃದಯಸ್ಥಿತನಾದ, ತಂ-ಆ (ಹಿಂದಿನ ಕಲ್ಪದಲ್ಲಿ ನಾಭಿಯಿಂದ ತನ್ನನ್ನು ಹುಟ್ಟಿಸಿದ), ಪದ್ಮನಾಭಂ-ಶ್ರೀ ಪದ್ಮನಾಭರೂಪನಾದ ಶ್ರೀಹರಿಯನ್ನು ಭಕ್ತಿಸಂಯುತಃ-ಭಕ್ತಿಯಿಂದ, ಸಸ್ಮಾರ-ಸ್ಮರಿಸಿದನು.

**ತುಷ್ಟಾವಾಲೌಕಿಕೈಃ ಸ್ತೋತ್ರೈಃ ಸ ಪ್ರಸನ್ನೋ ನಿಜಂ ವಪುಃ ।**
**ತಸ್ಮೈ ಸಂದರ್ಶಯಾಮಾಸ ತತ್ರಾವಿಶ್ಯಾಸೃಜತ್ ಸ್ವಯಂ ॥ ೪ ॥**

**ಗ್ರಹಾನ್ ಸೂರ್ಯಾದಿಕಾನಾದಾವಶ್ವಿನ್ಯಾದ್ಯಾಶ್ಚ ತಾರಕಾಃ ।**
**ಮೇಷಾದೀಂಶ್ಚ ತಥಾ ರಾಶೀನ್ ಯೋಗಾನ್ ವಿಷ್ಕಂಭಕಾದಿಕಾನ್ ॥ ೫**

**ಸರ್ವರೂಪಃ ಸ್ವಯಂ ಭೂತ್ವಾ ಖೇಚರಾದಿಷ್ವಥಾಭ್ರಮತ್ ।**
**ಯಥಾ ತದ್ವಿದಿತಂ ಬ್ರಹ್ಮನ್ ಜ್ಯೋತಿಃಶಾಸ್ತ್ರೇ ತಥೈವ ಹಿ ॥ ೬ ॥**

ಅಲೌಕಿಕೈಃ-ದಿವ್ಯಗಳಾದ (ವೈದಿಕ), ಸ್ತೋತ್ರೈಃ-ಸ್ತೋತ್ರಗಳಿಂದ, ತುಷ್ಟಾವ-(ಸ್ತುತಿಸಿ) ಸಂತೋಷಪಡಿಸಿದನು; ಸಃ-ಆ ಭಗವಂತನು (ಪದ್ಮನಾಭನು), ಪ್ರಸನ್ನಃ-ಪ್ರಸನ್ನನಾಗಿ, ತಸ್ಮೈ-ಆತನಿಗೆ (ಬ್ರಹ್ಮದೇವನಿಗೆ), ನಿಜಂ-ತನ್ನ ವಪುಃ-ರೂಪವನ್ನು ಸಂದರ್ಶಯಾಮಾಸ-ತೋರಿಸಿದನು (ಅನಂತರಪ್ರರವಾರ ಸಂದರ್ಶನವನ್ನಿತ್ತನು); ಸ್ವಯಂ-ತಾನೇ (ಆ ರೂಪನು), ತತ್ರ-ಆ ಬ್ರಹ್ಮನಲ್ಲಿ ಆವಿಶ್ಯ-ಪ್ರವೇಶಿಸಿ, ಆದೌ-ಮೊದಲಿಗೆ, ಸೂರ್ಯಾದಿಕಾನ್-ಸೂರ್ಯನೇ ಮೊದಲಾದ, ಗ್ರಹಾನ್-ಗ್ರಹಗಳನ್ನೂ, ಚ-ಮತ್ತು ಅಶ್ವಿನ್ಯಾದ್ಯಾಃ-ಅಶ್ವಿನೀ (ಭರಣೀ ಕೃತ್ತಿಕಾ)

---

ಭಾಗವು ಉಳಿದಿರುವಾಗ, ಎದ್ದು ಭಕ್ತಿಯಿಂದ, ತನ್ನ ಹೃದಿಸ್ಥನಾದ ಶ್ರೀ ಪದ್ಮನಾಭನನ್ನು ಸ್ಮರಿಸಿದನು (೩). ಪ್ರತ್ಯಕ್ಷನಾದ ಭಗವಂತನನ್ನು ವೇದಮಂತ್ರಗಳಿಂದ ಸ್ತುತಿಸಿ ತುಷ್ಟಿಗೊಳಿಸಿದನು; ಪ್ರಸನ್ನನಾದ ಶ್ರೀಹರಿಯು, ಬ್ರಹ್ಮನಿಗೆ, ತನ್ನ ದಿವ್ಯರೂಪವನ್ನು ಪ್ರತ್ಯಕ್ಷಗೊಳಿಸಿ, ಆನಂದವನ್ನಿತ್ತು, ಆತನಲ್ಲಿ ತಾನೇ ಪ್ರವೇಶಿಸಿ, ಮೊದಲಿಗೆ ಆಕಾಶದಲ್ಲಿ ಸಂಚರಿಸುವ, ಗ್ರಹಾದಿಗಳನ್ನು ಸೃಷ್ಟಿಮಾಡಿದನು; ಸೂರ್ಯಾದಿ ಗ್ರಹಗಳನ್ನೂ ಅಶ್ವಿನ್ಯಾದಿ ನಕ್ಷತ್ರಗಳನ್ನೂ ಮೇಷಾದಿ ರಾಶಿಗಳನ್ನೂ ವಿಷ್ಕಂಭಕಾದಿ ಯೋಗಗಳನ್ನೂ ನಿರ್ಮಿಸಿ, ಆಯಾ ಗ್ರಹಾದಿ ಅಧಿದೇವತೆಗಳ ರೂಪನು ತಾನೇ ಆಗಿ, ಅವುಗಳಲ್ಲಿ ನಿಂತು, ಆಕಾಶದಲ್ಲಿ ಸಂಚರಿಸುತ್ತ ಸುತ್ತಿದನು; ಅವುಗಳ ಸಂಚಾರವು, ಜ್ಯೋತಿಃಶಾಸ್ತ್ರೋಕ್ತವಾದ ಕ್ರಮದಿಂದಲೇ ನಡೆಯಿತು (೪-೬). ಅಷ್ಟರಲ್ಲಿ ಬ್ರಹ್ಮಾಂಡದ ಅರ್ಧಭಾಗವನ್ನೇ ತುಂಬಿಕೊಂಡಿದ್ದ ಪ್ರಲಯಜಲವು, ಶ್ರೀಲಕ್ಷ್ಮೀರೂಪದ ವಾಯುವಿನಿಂದ

ಇತ್ಯಾದಿ, ತಾರಕಾಃ-ನಕ್ಷತ್ರಗಳನ್ನೂ, ತಥಾ-ಹಾಗೂ, ಮೇಷಾದೀನ್-ಮೇಷ (ವೃಷಭ) ಮೊದಲಾದ, ರಾಶೀನ್-ರಾಶಿಗಳನ್ನೂ, ವಿಷ್ಕಂಭಕಾದಿಕಾನ್-ವಿಷ್ಕಂಭಕ (ಪ್ರೀತಿ) ಮೊದಲಾದ, ಯೋಗಾನ್- ಯೋಗಗಳನ್ನೂ, ಅಸೃಜತ್-ನಿರ್ಮಿಸಿದನು; ಸ್ವಯಂ-ತಾನೇ, ಖೇಚರಾದಿಷು-ಗಗನಚಾರಿಗಳಾದ ಗ್ರಹಾದಿಗಳಲ್ಲಿ, ಸರ್ವರೂಪಃ-ಆ ಎಲ್ಲ ರೂಪನೂ ಆಗಿ (ಗ್ರಹಾದಿಗಳಲ್ಲಿ ತತ್ತದಭಿಮಾನಿ ದೇವತೆಗಳ ಸ್ಥಾನದಲ್ಲಿ ತಾನೇ ನಿಂತು), ಬ್ರಹ್ಮನ್-ಹೇ ಬ್ರಹ್ಮ! ಜ್ಯೋತಿಃಶಾಸ್ತ್ರೇ-ಜ್ಯೋತಿಷದಲ್ಲಿ, ಯಥಾ-ಹೇಗೆ, ತದ್ವಿದಿತಂ-(ಅವುಗಳ ಸಂಚಾರಕ್ರಮವು) ಹೇಳಲ್ಪಟ್ಟದೆಯೋ, ತಥಾ ಏವ-ಹಾಗೆಯೇ (ವ್ಯತ್ಯಾಸವಿಲ್ಲದೇ), ಅಥ-ಮುಂದೆ, ಅಭ್ರಮತ್-ಸುತ್ತಿದನು.

**ತಾವತ್ ಪ್ರಕೃತಿರೂಪೇಣ ವಾಯುನಾ ಶೋಷಿತಂ ಜಲಂ ।**
**ಬ್ರಹ್ಮಾಂಡಾರ್ಧಂ ಭವೇದ್ಯಾವಲ್ಲಯಕಾಲೋಗತಸ್ತತಃ ॥ ೭ ॥**

ಯಾವತ್-ಯಾವುದು, ಬ್ರಹ್ಮಾಂಡಾರ್ಧಂ-ಅರ್ಧ ಬ್ರಹ್ಮಾಂಡವೇ, ಭವೇತ್-ಆಗಿತ್ತೋ (ಆವರೆಗೆ ತುಂಬಿಕೊಂಡಿತ್ತೋ), ತಾವತ್-ಅಷ್ಟೂ ಜಲಂ-ಪ್ರಲಯಜಲವು, ಪ್ರಕೃತಿರೂಪೇಣ-ಲಕ್ಷ್ಮೀರೂಪದ, ವಾಯುನಾ-ವಾಯುವಿನಿಂದ (ಶ್ರೀಲಕ್ಷ್ಮೀದೇವಿಯೇ ವಾಯುರೂಪದಿಂದ), ಶೋಷಿತಂ-ಶೋಷಿಸಲ್ಪಟ್ಟಿತು (ಆರಿತು-ಒಣಗಿಹೋಯಿತು); ತತಃ-ಮುಂದೆ, ಲಯಕಾಲಃ-ಪ್ರಲಯಕಾಲವು (ರಾತ್ರಿಯು), ಗತಃ-ಕಳೆಯಿತು (ಮುಗಿಯಿತು).

**ಆದೌ ಹಿ ವಾಸರೋ ಭಾನೋಃ ಕಲ್ಪಸ್ಯಾಭೂತ್ ಪರೇ ಕ್ರಮಾತ್ ।**
**ಅಶ್ವಿನ್ಯಾದೌ ಸ್ಥಿತಾ ಸರ್ವೇ ಗ್ರಹಾಃ ಪಶ್ಚಾದ್ಯಥಾಗತಿ ॥ ೮ ॥**

ಕಲ್ಪಸ್ಯ ಆದೌ-ಕಲ್ಪದ ಆರಂಭದಲ್ಲಿ, ಭಾನೋಃ-ರವಿಯ, ವಾಸರಃ-ವಾರವು (ಆದಿತ್ಯವಾರವು), ಅಭೂತ್-ಆಗಿತ್ತು; ಪರೇ-ಇತರ ವಾರಗಳು, ಕ್ರಮಾತ್-(ಚಂದ್ರವಾರಾದಿ) ಕ್ರಮದಿಂದ (ಪ್ರವೃತ್ತವಾದವು); (ಹಾಗೆಯೇ); ಆದೌ-ಕಲ್ಪಾರಂಭ ಕಾಲದಲ್ಲಿ ಮೊದಲಿಗೆ, ಅಶ್ವಿನೀ-ಅಶ್ವಿನೀ ನಕ್ಷತ್ರವು, ಸ್ಥಿತಾ-ಇತ್ತು;

---

ಶೋಷಿಸಲ್ಪಟ್ಟಿತು; ಪ್ರಲಯಕಾಲವೂ ಮುಗಿಯಿತು (೭). ನೂತನ ಕಲ್ಪವು (ಶ್ವೇತವರಾಹಕಲ್ಪವು), ಭಾನುವಾರದಿಂದ ಆರಂಭವಾಯಿತು- ಚಂದ್ರವಾರಾದಿ ಇತರ ವಾರಗಳು ಕ್ರಮವಾಗಿ ಪ್ರವೃತ್ತವಾದವು; ಹಾಗೆಯೇ ಕಲ್ಪವು ಅಶ್ವಿನೀ ನಕ್ಷತ್ರದಿಂದ ಆರಂಭವಾಯಿತು— ಇತರ ನಕ್ಷತ್ರಗಳು ಮತ್ತು ಗ್ರಹಗಳು ಜ್ಯೋತಿಃಶಾಸ್ತ್ರೋಕ್ತಪ್ರಕಾರದ ಗತಿಗಳುಳ್ಳವಾದವು (೮). ಹೀಗೆ (ನನ್ನಿಂದ) ಶ್ರೀಹರಿಯಿಂದ ಅಧಿಷ್ಠಿತವಾದ ಗ್ರಹಾದಿಗಳು, ಮುಂದೆ ತಂತಮ್ಮ ಅಧಿಷ್ಠಾತೃಗಳಾದ ದೇವಾಂಶರು (ಸೂರ್ಯಾದಿ ದೇವತೆಗಳು) ಬಂದು ತಮ್ಮಲ್ಲಿ ನಿಲ್ಲುವವರೆಗೆ, ಹೀಗೆಯೇ (ಜ್ಯೋತಿಃಶಾಸ್ತ್ರೋಕ್ತಕ್ರಮ

(ನಕ್ಷತ್ರಗಳು ಮತ್ತು) ಸರ್ವೇ ಗ್ರಹಾಃ-ಗ್ರಹಗಳು, ಪಶ್ಚಾತ್-ನಂತರ (ಮುಂದೆ), ಯಥಾಗತಿ-ಜ್ಯೋತಿಷೋಕ್ತ ಕ್ರಮದಿಂದ (ಪ್ರವೃತ್ತವಾದವು).

**ಭ್ರಮಂತ್ಯದ್ಯಾಪಿ ಯಾವತ್ಸ್ಯಾದ್ದಿನಾಂತೋ ಹಿ ಸ್ವಯಂಭುವಃ ।**
**ಸೂರ್ಯಚಂದ್ರಾದಯೋ ಯೇನ್ಯೇ ಭವಿಷ್ಯಂತಃ ಸುರಾಂಶಕಾಃ ॥ ೯ ॥**

**ತಾಂಸ್ತಾಂ ತತ್ತತ್ಪದೇ ವಿಷ್ಣುರ್ನಿಧಾಯಾಥ ಸ್ವಯಂ ಪುನಃ ।**
**ತೇಷು ತೇಷು ಸ್ಥಿತೋ ಲೀಲಾಸ್ತತ್ತದ್ವದ್ವಿತನೋತ್ಯಜಃ ॥ ೧೦ ॥**

ಯೇ-ಯಾವ, ಅನ್ಯೇ-ಇತರರಾದ (ತನ್ನಿಂದ-ಶ್ರೀವಿಷ್ಣುವಿನಿಂದ ಭಿನ್ನರಾದ) ಸುರಾಂಶಕಾಃ-ದೇವತಾಂಶರಾದ (ದೇವತೆಗಳಾದ), ಸೂರ್ಯಚಂದ್ರಾದಯಃ-ಸೂರ್ಯಚಂದ್ರಾದಿಗಳು, ಭವಿಷ್ಯಂತಃ-ಮುಂದೆ (ಆ ಗ್ರಹಾದಿಗಳ ಅಧಿಷ್ಠಾತೃಗಳಾಗಿ) ಬರಲಿರುವರೋ, ತಾನ್‌ತಾನ್-ಅವರವರನ್ನು ವಿಷ್ಣುಃ-ಶ್ರೀವಿಷ್ಣುವು, ತತ್ತತ್‌ಪದೇ-ಆಯಾ (ಸೂರ್ಯಾದಿ) ಸ್ಥಾನಗಳಲ್ಲಿ ನಿಧಾಯ-ಸ್ಥಾಪಿಸಿ (ಇಟ್ಟು), ಅಥ-ನಂತರ, ಅಜಃ-ಉತ್ಪತ್ತ್ಯಾದಿ ದೋಷದೂರನಾದ, ಸ್ವಯಂ-ತಾನು, ತೇಷು ತೇಷು-ಆಯಾ (ಸೂರ್ಯಾದಿ) ದೇವತೆಗಳಲ್ಲಿ ಸ್ಥಿತಃ-ನಿಂತು (ಅಂತರ್ಯಾಮಿಯಾಗಿದ್ದು), ತತ್ತದ್ವತ್-ಅವರವರಂತೆ, ಲೀಲಾಃ-ವ್ಯಾಪಾರಗಳನ್ನು ಪುನಃ-ಮತ್ತೆ (ಹಿಂದೆ ತಾನೊಬ್ಬನೇ ಆ ವ್ಯಾಪಾರಗಳನ್ನು ಮಾಡುತ್ತಿದ್ದವನು, ನಂತರ ಅವರೊಂದಿಗೆ, ಅವರಲ್ಲಿದ್ದು), ವಿತನೋತಿ-ಮಾಡುತ್ತಾನೆ; (ಅವರು—ಆ ಸೂರ್ಯಾದಿಗಳು), ಅದ್ಯಾಪಿ—ಈಗಲೂ, (ಮತ್ತು) ಸ್ವಯಂಭುವಃ-ಬ್ರಹ್ಮದೇವನ, ದಿನಾಂತಃ ಯಾವತ್ ಸ್ಯಾತ್-ಹಗಲು ಮುಗಿಯುವವರೆಗೂ, ಭ್ರಮಂತಿ- ಸುತ್ತುತ್ತಿರುವರು.

**ಅಥ ಕಲ್ಪಾದಿಮೇ ಕಾಲೇ ಮಗ್ನಾಂ ವೀಕ್ಷ್ಯ ಜಲೇ ಭುವಂ ।**
**ಕುತ್ರ ಸ್ರಕ್ಷ್ಯಾಮಿ ಭೂತಾನೀತ್ಯೇವಂ ಚಿಂತಾಸಮಾಕುಲಃ ॥ ೧೧ ॥**

---

ದಿಂದ)ಸುತ್ತುತ್ತಿರುತ್ತವೆ; ನಂತರ ಶ್ರೀವಿಷ್ಣುವು ಆಯಾ ದೇವತೆಗಳನ್ನು ಅಲ್ಲಲ್ಲಿ ಸ್ಥಾಪಿಸಿ ಅವರಲ್ಲಿ ತಾನೂ ಪ್ರವಿಷ್ಟನಾಗಿ, ಅವರಿಂದ ನಡೆಯಬೇಕಾದ ಎಲ್ಲ ವ್ಯಾಪಾರಗಳನ್ನೂ ಅವರವರಂತೆ ಮಾಡುತ್ತಾನೆ; ಈ ಸೂರ್ಯಾದಿ ದೇವತೆಗಳು, ಬ್ರಹ್ಮದೇವನ ಹಗಲು ಮುಗಿಯುವವರೆಗೂ ಹೀಗೆಯೇ ಗಗನದಲ್ಲಿ ಸುತ್ತುತ್ತಿರುವರು (೯-೧೦). ಕಲ್ಪಾರಂಭದಲ್ಲಿ ಬ್ರಹ್ಮದೇವನು ಪ್ರಾಣಿಗಳನ್ನು ಸೃಷ್ಟಿಮಾಡಲಿಚ್ಛಿಸಿ, ಸೃಷ್ಟಿಗೆ ಬೇಕಾದ ಆಶ್ರಯಸ್ಥಾನವಾದ ಭೂಮಿಯು, ಜಲದಲ್ಲಿ ಮುಳುಗಿರುವುದನ್ನು ನೋಡಿ, ಚಿಂತೆಗೊಳಗಾದನು; ಎಲ್ಲಿ ಸೃಷ್ಟಿಮಾಡಬೇಕೆಂಬ ಚಿಂತೆಯಿಂದ, ಶ್ರೀವಿಷ್ಣುವನ್ನೇ ಸ್ಮರಿಸಿದನು; ಉತ್ಪತ್ತಿನಾಶರಹಿತನೂ, ಸರ್ವತ್ರವ್ಯಾಪ್ತನೂ ಆದ ತನ್ನ ಸ್ವಾಮಿಯನ್ನೇ ತನ್ನ

ಸಸ್ಮಾರ ಪರಮಂ ವಿಷ್ಣುಮನಾದಿನಿಧನಂ ವಿಭುಂ ।
ತತೋ ಹಿಮಾನೀಧವಲಃ ಸೂರ್ಯಕೋಟಿಸಮಪ್ರಭಃ ॥ ೧೨ ॥

ಪೂರಯನ್ ಗುರ್ಗುರಾರಾವೈರ್ಬ್ರಹ್ಮಾಂಡಮಚಲೋ ಯಥಾ ।
ನ ದದರ್ಶ ವಿಧಿಸ್ತಸ್ಯ ತೇಜಃ ಪ್ರತಿಹತೇಕ್ಷಣಃ ॥ ೧೩ ॥

ಸಮ್ಯಗ್ರೂಪಂ ಮೀಲಿತಾಕ್ಷೋ ಧ್ಯಾತ್ವಾ ದೇವಂ ತಮವ್ಯಯಂ ।
ತತ್ಪ್ರಸಾದಾಲ್ಲಬ್ಧಚಕ್ಷುರ್ವಾರಾಹಂ ರೂಪಮೈಕ್ಷತ ॥ ೧೪ ॥

ಅಥ-ಮುಂದೇನೆಂದರೆ (ಹೊಸ ದಿನವು ಆರಂಭವಾಗುತ್ತಿರಲು), ಕಲ್ಪಾದಿಮೇ-ಕಲ್ಪಾರಂಭದ, ಕಾಲೇ-ಕಾಲದಲ್ಲಿ ಭುವಂ-ಭೂಮಿಯನ್ನು ಜಲೇ-ಜಲದಲ್ಲಿ ಮಗ್ನಾಂ-ಮುಳುಗಿರುವುದನ್ನು ವೀಕ್ಷ್ಯ-ಕಂಡು, ಭೂತಾನಿ-ಪ್ರಾಣಿ

---

ಚಿಂತೆಯ ಪರಿಹಾರಕ್ಕಾಗಿ ಆಶ್ರಯಿಸಿದನು; ಭಕ್ತೋತ್ತಮನಾದ ಬ್ರಹ್ಮದೇವನಿಗೆ ಸ್ಮರಣಮಾತ್ರದಿಂದ, ದರ್ಶನವೀಯಲು ಸಂಕಲ್ಪಿಸಿ, ಶ್ರೀವಿಷ್ಣುವು ಶ್ವೇತವರಾಹ ರೂಪದಿಂದ ಎದುರಿಗೆ ಪ್ರತ್ಯಕ್ಷನಾದನು;[1] ಹಿಮದಂತೆ ಶ್ವೇತವರ್ಣವುಳ್ಳ ಆ ವರಾಹರೂಪವು ತನ್ನ ಸೂರ್ಯಕೋಟಿಸಮಪ್ರಭೆಯಿಂದ, ಬ್ರಹ್ಮದೇವನ ಕಣ್ಣುಗಳನ್ನು ಮುಚ್ಚಿಸಿತು; ತನ್ನ ಗುರ್ಗುರುಧ್ವನಿಯಿಂದ ಬ್ರಹ್ಮಾಂಡವನ್ನೇ ತುಂಬಿದ, ಆ ಅದ್ಭುತಾಕಾರದ ವರಾಹನನ್ನು ಕಣ್ತೆರೆದು ನೋಡಲಸಮರ್ಥನಾಗಿ, ಬ್ರಹ್ಮನು, ಕಣ್ಮುಚ್ಚಿ ಧ್ಯಾನಿಸಿದನು; ಧ್ಯಾನದಿಂದ ಪ್ರಸನ್ನನಾಗಿ ಶ್ರೀಹರಿಯು, ಬ್ರಹ್ಮನಿಗೆ ನೋಡುವ ಸಾಮರ್ಥ್ಯವನ್ನು ಕರುಣಿಸಿದನು; ಆಗ ಕಣ್ತೆರೆದು ಶ್ವೇತವರಾಹರೂಪದಿಂದ, ಪ್ರತ್ಯಕ್ಷನಾದ ಶ್ರೀವಿಷ್ಣುವಿನ ಸಂದರ್ಶನವನ್ನು ಪಡೆದನು (೧೧-೧೪). ಭಕ್ತಿಯಿಂದ ಸಾಷ್ಟಾಂಗ ನಮಸ್ಕರಿಸಿ, ಗದ್ಗದಸ್ವರದಿಂದ ಬ್ರಹ್ಮದೇವನು ಸ್ತುತಿಸಿದನು; ಅದೆಂತೆನೆ:- ಹೇ ಅದ್ಭುತ ವರಾಹ ! ವಿಶ್ವಭಾವನ ! ನಿತ್ಯಜಯಶಾಲಿಯಾಗಿ ವಿರಾಜಿಸುತ್ತಿರು; ಹೇ

---

1. 'ಇತ್ಯಭಿಧ್ಯಾಯತೋ ನಾಸಾವಿವರಾತ್ಸಹಸಾನಘ ।
ವರಾಹತೋಕೋ ನಿರಗಾದಂಗುಷ್ಠಪರಿಮಾಣಕಃ ॥' (ಭಾಗವತ)

ಇತ್ಯಾದಿಯಾಗಿ, ಯಜ್ಞವರಾಹರೂಪಿಯಾದ ಶ್ರೀಹರಿಯು, ಧ್ಯಾನಮಾಡುತ್ತ ಬ್ರಹ್ಮದೇವನ ನಾಸಾರಂಧ್ರದಿಂದ ಅಂಗುಷ್ಠಮಾತ್ರದ ವರಾಹಮರಿಯಾಗಿ ಅವತರಿಸಿ, ಕ್ಷಣಮಾತ್ರದಲ್ಲಿ ಬೃಹದಾಕಾರನಾಗಿ ಬೆಳೆದು ಜಲಪ್ರವೇಶ ಮಾಡಿದನೆಂದು ವರ್ಣಿತವಾಗಿದೆ. ಮುಂದೆ ರಸಾತಲಕ್ಕೆ ಮುಳುಗಿದ್ದ ಭೂಮಿಯನ್ನು ದಂಷ್ಟ್ರದ ಮೇಲಿಟ್ಟುಕೊಂಡು, ಮೇಲೇಳುತ್ತಿರುವಾಗ ಜಲಮಧ್ಯದಲ್ಲಿ ಯಜ್ಞವರಾಹನನ್ನು ಗದೆಯಿಂದ ತಾಡನಮಾಡಿ ತಡೆದ ಹಿರಣ್ಯಾಕ್ಷನು ವರಾಹನ ದಂಷ್ಟ್ರದಿಂದ ಹತನಾದನೆಂದೂ ಹೇಳಲಾಗಿದೆ. ಈ ಕಥಾಭಾಗದ ವಿಸ್ತಾರವನ್ನು ಅಧ್ಯಾಹಾರಮಾಡಿಕೊಂಡು, ಇಲ್ಲಿಯೂ ತಾತ್ಪರ್ಯವನ್ನು ತಿಳಿಯಬೇಕು.

ಗಳನ್ನು ಕುತ್ರ-ಎಲ್ಲಿ (ಯಾವ ಆಶ್ರಯಸ್ಥಾನದಲ್ಲಿ), ಸ್ರಕ್ಷ್ಯಾಮಿ-ಸೃಷ್ಟಿಮಾಡಲಿ, ಇತ್ಯೇವಂ-ಈ ಪ್ರಕಾರವಾರ, ಚಿಂತಾಸಮಾಕುಲಃ-ಚಿಂತೆಯಿಂದ ವ್ಯಾಕುಲಚಿತ್ತ ನಾಗಿ, (ಬ್ರಹ್ಮದೇವನು), ವಿಭುಂ-ಸರ್ವತ್ರವ್ಯಾಪ್ತನೂ, ಅನಾದಿನಿಧನಂ-ಜನನ ಮರಣರಹಿತನೂ, (ಆದಿ- ಉತ್ಪತ್ತಿ ನಿಧನಂ-ನಾಶ), ಪರಮಂ-ಸರ್ವೋತ್ತಮನೂ ಆದ, ವಿಷ್ಣುಂ-ಶ್ರೀವಿಷ್ಣುವನ್ನು ಸಸ್ಮಾರ-ಸ್ಮರಿಸಿದನು; ತತಃ-ನಂತರ (ಆ ಧ್ಯಾನ ಪ್ರಭಾವದಿಂದ), ಹಿಮಾನೀಧವಲಃ-ಹಿಮದಂತೆ ಶುಭ್ರ ವರ್ಣಯುತನೂ,

---

ಸರ್ವಯಜ್ಞಪೂಜ್ಯನೇ ! ವೇದೋಕ್ತ ಅನಂತಮೂರ್ತೇ !, ಪ್ರಭೋ ! ದುರ್ಜನ ಸಂಹಾರಕ ! ಜಯ ! ಜಯ !; ಹೇ ಕೋಟಿಬ್ರಹ್ಮಾಂಡ ಸೃಷ್ಟಿಕರ್ತನೇ ![1] ಸಜ್ಜನವತ್ಸಲ ! ಆರ್ತಜನ ದುಃಖಪರಿಹಾರಕ! ಪ್ರಸನ್ನನಾದೊಡನೆ ಸರ್ವಾಭೀಷ್ಟಗಳನ್ನು ಭಕ್ತರಿಗೆ ಸಲ್ಲಿಸುವ ಮಹಾಸ್ವಾಮಿಯೇ! ಸರ್ವವಿನಾಶಕ! ವಿಪದಾದಿ(ಚತುರ್ವಿಧ) ನಾಶರಹಿತ![2] ಸರ್ವೇಶ ! ಅನ್ಯಸ್ವಾಮಿರಹಿತನೇ ! ಸಕಲಪ್ರಾಣಿಗಳ ಸೃಷ್ಟಿಗಾಗಿಯೂ, ಅವರನ್ನು ಧರಿಸಲಿಕ್ಕೂ (ಅವರಿಗೆ ಆಶ್ರಯಸ್ಥಾನವಾಗಿರುವುದಕ್ಕಾಗಿಯೂ, ಅವರ ಜೀವಿತ

---

1. ಶ್ರೀಹರಿಯು ಅನಂತಕೋಟಿ ಬ್ರಹ್ಮಾಂಡನಾಯಕನು—ಅದ್ಭುತಮಹಿಮನು. ಯಾವುದೊಂದು ಕಾಲದಲ್ಲಿರುವುದು ಒಂದೇ ಬ್ರಹ್ಮಾಂಡವು; ಆದರೂ ಒಂದನ್ನೇ, ತನ್ನ ಅಚಿಂತ್ಯ ಸಾಮರ್ಥ್ಯದಿಂದ, ದೇಶಕಾಲಗಳನ್ನು ಅತಿಕ್ರಮಿಸುವ ತನ್ನ ಅದ್ಭುತಮಹಿಮೆಯಿಂದ, ತನ್ನ ಅನಂತ ರೂಪಗಳಲ್ಲಿಯೂ (ಒಂದೊಂದರಲ್ಲಿಯೂ) ಧರಿಸಿರುವನು; ಮತ್ತು ಭೂತಭವಿಷ್ಯತ್ಕಾಲಗಳ ಬ್ರಹ್ಮಾಂಡಗಳೂ ಅಸಂಖ್ಯವೇ ಆಗಿವೆ. ಈ ಕಾರಣಗಳಿಂದ, ಶ್ರೀಹರಿಯು ಕೋಟಿಬ್ರಹ್ಮಾಂಡ ಸೃಷ್ಟಿಕರ್ತನೆಂದು ಹೇಳಲ್ಪಡುತ್ತಾನೆ.

'ಶರೀರಾಣಾಂ ಬಹುತ್ವೇನ ಅತೀತಾನಗತೈಸ್ತಥಾ ।
ಅಸ್ಯೈವ ದೇವಕಾಯೇಷು ಪ್ರತಿಪ್ರತಿ ಚ ದರ್ಶನಾತ್ ।
ವಿಷ್ಣುಸಾಮರ್ಥ್ಯತೋಂಡಾನಾಂ ಬಹುತ್ವಂ ನಾನ್ಯಥಾ ಭವೇತ್ ॥ (ಗೀತಾ ತಾತ್ಪರ್ಯ)
ಮತ್ತು
'ಏಕಮಂಡಂ ಬಹುತ್ವೇನ ಪ್ರತ್ಯೇಕಂ ರೋಮಕೂಪಗಂ ।
ಬ್ರಹ್ಮಾಽಪಶ್ಯತ್ತಥಾತ್ಮಾನಂ ಹರೇಸ್ತೇಷು ಪೃಥಕ್ ಪೃಥಕ್ ।' (ಭಾರತ)

ವಚನಗಳು ಉಕ್ತಪ್ರಮೇಯವನ್ನು ಪ್ರಮಾಣೀಕರಿಸುತ್ತವೆ. ಭಾರತವಾಕ್ಯವು, ಶ್ರೀಹರಿಯು, ತನ್ನ ರೋಮಕೂಪಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಬ್ರಹ್ಮಾಂಡವನ್ನು ಧರಿಸಿದ್ದುದನ್ನು ಬ್ರಹ್ಮದೇವನು ಕಂಡನೆಂದು, ನಿರೂಪಿಸುತ್ತದೆ; ಹೀಗಿರುವ ಅನಂತರೂಪಗಳುಳ್ಳವನು ಶ್ರೀಹರಿಯು.

2. 'ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ ।
ನಾಶಶ್ಚತುರ್ವಿಧಃ ಪ್ರೋಕ್ತಃ....।'

ಇತ್ಯಾದಿ ಪ್ರಮಾಣಗಳು ಹೇಳುವಂತೆ, ಸ್ವರೂಪನಾಶ, ದೇಹನಾಶ, ದುಃಖಪ್ರಾಪ್ತಿ ಮತ್ತು ಅಪೂರ್ಣತ್ವ, ಎಂದು ನಾಶವು ನಾಲ್ಕು ವಿಧವಾದುದು; ಮೊದಲಿನ ನಾಶ ಜೀವರಿಗೂ ಇಲ್ಲ— ಆದರೆ ಇತರ ವಿಧ ನಾಶಗಳು ಎಲ್ಲ ಜೀವರಲ್ಲಿವೆ. ಶ್ರೀಹರಿಯಲ್ಲಿ ಈ ನಾಲ್ಕು ವಿಧ ನಾಶಗಳೂ ಇಲ್ಲ.

ಸೂರ್ಯಕೋಟಿ ಸಮಪ್ರಭಃ-ಅನಂತಸೂರ್ಯ ಪ್ರಕಾಶಸದೃಶ ಪ್ರಕಾಶವುಳ್ಳವನೂ, ಯಥಾ ಅಚಲಃ-ಪರ್ವತಾಕಾರವುಳ್ಳವನೂ (ಪರ್ವತದಂತೆ ಮಹಾಕಾಯನೂ), ಬ್ರಹ್ಮಾಂಡಂ-ಬ್ರಹ್ಮಾಂಡವನ್ನು ಗುರ್ಗುರಾರಾವೈಃ-ಗುರ್ಗುರ ಶಬ್ದದಿಂದ (ಗುರು ಗುರು ಎಂಬ ಧ್ವನಿಯಿಂದ), ಪೂರಯನ್-ತುಂಬುವವನೂ (ಆದ)—(ವರಾಹ ರೂಪನಾದ ಶ್ರೀಹರಿಯು ಪ್ರತ್ಯಕ್ಷನಾದನು); (ಕಂಡ ಕ್ಷಣವೇ ಬ್ರಹ್ಮದೇವನ ಕಣ್ಣುಗಳು ಮುಚ್ಚಿದವು) ವಿಧಿಃ-ಬ್ರಹ್ಮದೇವನು, ತಸ್ಯ-ಆ ವರಾಹನ, ತೇಜಃ ಪ್ರತಿಹತೇಕ್ಷಣಃ-ಪ್ರಕಾಶದಿಂದ ತೆರೆಯಲಾಗದ (ಪ್ರತಿಹತವಾದ—ನೋಡುವ ಸಾಮರ್ಥ್ಯವನ್ನು ಕಳೆದುಕೊಂಡ) ಕಣ್ಣುಗಳುಳ್ಳವನಾಗಿ, ರೂಪಂ-ಆ ರೂಪವನ್ನು ಸಮ್ಯಕ್-ಚನ್ನಾಗಿ, ನ ದದರ್ಶ-(ಸ್ಪಷ್ಟವಾಗಿ) ನೋಡಲಸಮರ್ಥನಾದನು; ಮೀಲಿತಾಕ್ಷಃ-ಕಣ್ಣು ಮುಚ್ಚಿ ಅವ್ಯಯಂ-ನಿರ್ವಿಕಾರನಾದ, ತಂದೇವಂ-ಆ ದೇವನನ್ನು ಧ್ಯಾತ್ವಾ-ಧ್ಯಾನಿಸಿ, ತತ್ಪ್ರಸಾದಾತ್-ಆತನ ಪ್ರಸಾದದಿಂದ, ಲಬ್ಧಚಕ್ಷುಃ-ಕಣ್ಣುಗಳನ್ನು ಪಡೆದು (ನೋಡುವ ಸಾಮರ್ಥ್ಯವನ್ನು ಹೊಂದಿ), ವಾರಾಹಂ ರೂಪಂ- ವರಾಹರೂಪವನ್ನು ಐಕ್ಷತ-(ಸ್ಪಷ್ಟವಾಗಿ) ನೋಡಿದನು.

ಭಕ್ತ್ಯಾ ಪ್ರಣಮ್ಯ ಸಾಷ್ಟಾಂಗಮಸ್ತೌಷೀದ್ಗದ್ಗದಸ್ವನಃ ।

ಬ್ರಹ್ಮೋವಾಚ—

ಜಯಾದ್ಭುತವರಾಹ ತ್ವಂ ಜಯ ವಿಶ್ವವಿಭಾವನ ।
ಯಜ್ಞ ಮೂರ್ತೇ ವೇದಮೂರ್ತೇ ಜಯ ದುಷ್ಟಾಂತಕ ಪ್ರಭೋ ॥೧೫॥

ಜಯಬ್ರಹ್ಮಾಂಡಕೋಟೀನಾಂ ಸ್ರಷ್ಟಃ ಸಜ್ಜನವತ್ಸಲ ।
ಜಯಾರ್ತಾರ್ತಿಹರ ಕ್ಷಿಪ್ರಂ ಜಯ ಸರ್ವಸ್ವದಾಯಕ ॥ ೧೬ ॥

ಅನಪಾಯಾಖಿಲಾಪಾಯ ನಿಖಿಲೇಶ ನಿರೀಶ್ವರ ।
ಉದ್ಧರಸ್ವ ಭುವಂ ಮಗ್ನಾಂ ಗಾಂ ಪಂಕಾದಿವ ಭೂತಯೇ ॥ ೧೭ ॥
ಸೃಷ್ಟಯೇ ಸರ್ವಭೂತಾನಾಂ ಧೃತಯೇ ಜೀವನಾಯ ಚ ॥ ೧೮ ॥

ಭಕ್ತ್ಯಾ-ಭಕ್ತಿಪೂರ್ವಕ, ಸಾಷ್ಟಾಂಗಂ-ಅಷ್ಟಾಂಗಸಹಿತನಾಗಿ, ಪ್ರಣಮ್ಯ-ನಮಸ್ಕರಿಸಿ, ಗದ್ಗದಸ್ವನಃ-ಗದ್ಗದಕಂಠನಾದ ಬ್ರಹ್ಮದೇವನು, ಅಸ್ತೌಷೀತ್-ಸ್ತುತಿಸಿದನು;

---

ಕ್ಕಾಗಿಯೂ(ವೃತ್ತಿಗಾಗಿ— ಉಪಜೀವನಕ್ಕಾಗಿಯೂ), ಅವಶ್ಯಕವಾದ, ಪ್ರಲಯಜಲದಲ್ಲಿ ಮುಳುಗಿರುವ ಭೂಮಿಯನ್ನು ಸರ್ವರ ಶ್ರೇಯಸ್ಸಿಗಾಗಿ, ಗೋವನ್ನು ಕೆಸರಿಂದ ಎತ್ತಿ ರಕ್ಷಿಸುವಂತೆ, ಮೇಲೆತ್ತಿತಂದು ಸ್ಥಾಪಿಸು, ಪ್ರಭೋ! (೧೫-೧೮). ಶ್ರೀವರಾಹದೇವ ನೆಂದನು:— 'ಹೇ ದೇವೋತ್ತಮನಾದ (ದೇವತೆಗಳಲ್ಲಿ ಶ್ರೇಷ್ಠನಾದ) ಬ್ರಹ್ಮದೇವ! ನಿನ್ನ ಸ್ತುತಿಯಿಂದ ಪ್ರೀತನಾಗಿರುವೆನು; ನಿನಗೆ ಪ್ರಿಯವನ್ನುಂಟುಮಾಡಲಿಕ್ಕಾಗಿ, ಮಹಾ

ಬ್ರಹ್ಮದೇವನು ನುಡಿದನು:— ಪ್ರಭೋ- ಹೇ ಪ್ರಭೋ !, ಅದ್ಭುತವರಾಹ- ಆಶ್ಚರ್ಯಕರ ವರಾಹರೂಪಿಯೇ!, ತ್ವಂ-ನೀನು, ಜಯ-ನಿತ್ಯಜಯಶಾಲಿಯಾಗಿ ವಿರಾಜಿಸು; ವಿಶ್ವವಿಭಾವನ-ಹೇ ಜಗತ್ಕರ್ತ! ಜಯ-(ನಿನಗೆ ಜಯಕಾರವು); ಯಜ್ಞಮೂರ್ತೇ- ಸರ್ವಯಜ್ಞದಲ್ಲಿ ಪೂಜ್ಯನಾದ, ವೇದಮೂರ್ತೇ-ವೇದಪ್ರತಿ ಪಾದ್ಯ ಅನಂತರೂಪನೇ!, ದುಷ್ಟಾಂತಕ-ದೈತ್ಯ ವಿನಾಶಕ!, ಜಯ-ನಿತ್ಯಜಯಶೀಲನಾಗಿ ವಿರಾಜಿಸು; ಬ್ರಹ್ಮಾಂಡ ಕೋಟೀನಾಂ-ಕೋಟಿ ಬ್ರಹ್ಮಾಂಡಗಳ, ಸ್ರಷ್ಟಃ-ಹೇ ಸೃಷ್ಟಿಕರ್ತ!, ಸಜ್ಜನವತ್ಸಲ-ಸಜ್ಜನ ಪ್ರೇಮಿಯೇ!, ಆರ್ತಾರ್ತಿಹರ-ದುಃಖಿಗಳ ದುಃಖಪರಿಹಾರಕ! ಜಯ-ಜಯಶಾಲಿಯಾಗು; ಕ್ಷಿಪ್ರಂ-ಶೀಘ್ರವಾಗಿ (ಪ್ರಸನ್ನನಾದೊಡನೆಯೇ), ಸರ್ವಸ್ವದಾಯಕ-ಸರ್ವಾಭೀಷ್ಟಗಳನ್ನು ಸಲ್ಲಿಸುವ ಹೇ ದಾತ!, ಜಯ-ನಿತ್ಯ ವಿರಾಜಿಸು; ಅಖಿಲಾಪಾಯ-ಹೇ ಸರ್ವವಿನಾಶಕ! (ಪ್ರಲಯಕಾರಕ!), ಅನಪಾಯ-ಹೇ ಅಪಾಯರಹಿತ! (ವಿಪದಾದಿ ಸಕಲ ದೋಷ ದೂರ!), ನಿಖಿಲೇಶ-ಹೇ ಸರ್ವಸ್ವಾಮಿ!), ನಿರೀಶ್ವರ-ಹೇ ಈಶ್ವರರಹಿತ! (ಅನ್ಯಸ್ವಾಮಿರಹಿತ ಸರ್ವಸ್ವತಂತ್ರನೇ!) ಸರ್ವಭೂತಾನಾಂ-ಸಕಲ ಪ್ರಾಣಿಗಳ, ಸೃಷ್ಟಯೇ-ಸೃಷ್ಟ್ಯರ್ಥವಾಗಿಯೂ, ಧೃತಯೇ-(ಸೃಷ್ಟರಾದ ಸರ್ವರನ್ನು) ಧರಿಸಲಿಕ್ಕೂ, ಚ-ಮತ್ತು, ಜೀವನಾಯ-(ಅವರ) ಜೀವನಕ್ಕಾಗಿಯೂ, ಮಗ್ನಾಂ- (ಪ್ರಲಯ ಜಲದಲ್ಲಿ) ಮುಳಗಿರುವ, ಭುವಂ-ಭೂಮಿಯನ್ನು ಭೂತಯೇ- (ಸರ್ವರ) ಶ್ರೇಯಸ್ಸಿಗಾಗಿ, ಪಂಕಾತ್-ಕೆಸರಿನಿಂದ, ಗಾಂ ಇವ-ಗೋವನ್ನು(ಎತ್ತಿ ರಕ್ಷಿಸುವಂತೆ), ಉದ್ಧರಸ್ವ-ಮೇಲೆತ್ತಿ ಸ್ಥಾಪಿಸು.

ಶ್ರೀ ವರಾಹ ಉವಾಚ—

ಪ್ರೀತೋಽಸ್ಮಿ ದೇವದೇವೇಶ ಬ್ರಹ್ಮನ್ ತ್ವತ್ಪ್ರಿಯಕಾಮ್ಯಯಾ ।
ಸ್ಥಾಪಯಿಷ್ಯೇ ಭುವಂ ಮಗ್ನಾಂ ಯಥಾಸ್ಥಾನಂ ಮಹಾಜಲಾತ್ ॥ ೧೯ ॥

ಅನಯಾ ತ್ವತ್ಕೃತಸ್ತುತ್ಯಾ ಯೇ ಭಕ್ತ್ಯಾ ಮಾಂ ಸ್ತುವಂತಿ ಹಿ ।
ತಾನುದ್ಧರಾಮಿ ನ ಚಿರಾನ್ಮಹಾಪದಿ ನಿಮಜ್ಜತಃ ॥ ೨೦ ॥

ದೇವದೇವೇಶ-ದೇವಶ್ರೇಷ್ಠನಾದ, ಬ್ರಹ್ಮನ್-ಹೇ ಬ್ರಹ್ಮದೇವ!, ಪ್ರೀತಃ-(ನಿನ್ನ

---

ಜಲದಲ್ಲಿ ಮುಳುಗಿರುವ ಭೂಮಿಯನ್ನು ಎತ್ತಿತಂದು, ಹಿಂದಿನ ಕಲ್ಪದಲ್ಲಿ (ದಿನದಲ್ಲಿ) ಇದ್ದಂತೆ ಸ್ಥಾಪಿಸುತ್ತೇನೆ; ನೀನು ಮಾಡಿದ ಈ ಸ್ತೋತ್ರವನ್ನು ಭಕ್ತಿಪೂರ್ವಕ ಪಠಿಸುವವರನ್ನು ಮಹಾವಿಪತ್ತುಗಳಿಂದ(ದುಃಖಸಾಗರದಿಂದ ಮೇಲೆತ್ತಿ) ರಕ್ಷಿಸುತ್ತೇನೆ.' (೧೯-೨೦). ಯಜ್ಞವರಾಹರೂಪನಾದ ಶ್ರೀಹರಿಯು ಹೀಗೆ ಹೇಳಿ, ಆ

ಸ್ತುತಿಯಿಂದ) ಪ್ರೀತನು, ಅಸ್ಮಿ-ಆಗಿರುವೆನು; ತ್ವತ್ಪ್ರಿಯಕಾಮ್ಯಯಾ-ನಿನ್ನ ಸಂತೋಷಕ್ಕಾಗಿ, ಮಗ್ನಾಂ-ಮುಳುಗಿರುವ, ಭುವಂ-ಭೂಮಿಯನ್ನು ಮಹಾಜಲಾತ್-ವ್ಯಾಪ್ತವಾದ (ಪ್ರಲಯ) ಜಲದಿಂದ, ಯಥಾಸ್ಥಾನಂ-(ಮೇಲೆತ್ತಿ) ಹಿಂದಿನ ಕಲ್ಪದಲ್ಲಿ (ನಿನ್ನ ಹಿಂದಿನ ಹಗಲಿನಲ್ಲಿ) ಇದ್ದಂತೆ, ಸ್ಥಾಪಯಿಷ್ಯೇ-ಸ್ಥಾಪನೆ ಮಾಡುತ್ತೇನೆ; ತ್ವತ್ಕೃತಯಾ-ನಿನ್ನಿಂದ ಮಾಡಲಾದ, ಅನಯಾ-ಈ, ಸ್ತುತ್ಯಾ-ಸ್ತುತಿಯಿಂದ, ಯೇ-ಯಾರು, ಭಕ್ತ್ಯಾ-ಭಕ್ತಿಯುತರಾಗಿ, ಮಾಂ-ನನ್ನನ್ನು ಸ್ತುವಂತಿ-ಸ್ತೋತ್ರ ಮಾಡುವರೋ, ಮಹಾಪದಿ-ಮಹಾ ವಿಪತ್ತುಗಳಲ್ಲಿ ಮಜ್ಜತಃ-ಮುಳುಗುತ್ತಿರುವ, ತಾನ್-ಅವರನ್ನು ನಚಿರಾತ್-ಶೀಘ್ರವಾಗಿ, ಉದ್ಧರಾಮಿ-ಉದ್ಧರಿಸುತ್ತೇನೆ (ಮೇಲೆತ್ತಿ ಹಿಡಿದು ರಕ್ಷಿಸುತ್ತೇನೆ).

ಶ್ರೀ ಭಗವಾನುವಾಚ—

ತತ್ರೋ ಯಜ್ಞವರಾಹೋಽಸೌ ನಿಮಜ್ಯಾತ್ರ ಮಹಾಜಲೇ ।
ಕ್ರೋಡರೂಪಧರಾ ತಾವದ್ಭೂತ್ವಾ ದೇವೀ ತದೈವ ಹಿ ॥ ೨೧ ॥

ವಿವೇಶ ತತ್ರ ತೇನಾಸೌ ಸ್ವಾತ್ಮಾರಾಮೇಣ ರೇಮೇ ಚಿರಂ ।
ತಾವದ್ಧಿರಣ್ಯಗರ್ಭಸ್ಯ ನಾಸಾಶ್ವಾಸಾದ್ವಿನಿರ್ಯಯೌ ॥ ೨೨ ॥

ಹಿರಣ್ಯಾಕ್ಷೋ ಮಹಾರೌದ್ರಸ್ತತ್ಕ್ಷಣಾತ್ಸಮಹಾನಭೂತ್ ।
ಮಹಾಬಲೋ ಮಹಾವೀರ್ಯಃ ಸೋಽಪಿ ತಸ್ಮಿನ್ ಮಹಾಜಲೇ ॥ ೨೩

---

ಮಹಾಪ್ರಲಯಜಲದಲ್ಲಿ ಮುಳುಗಿದನು;[1] ಅಷ್ಟರೊಳಗೆ, ಶ್ರೀಲಕ್ಷ್ಮೀದೇವಿಯೂ ವರಾಹರೂಪವನ್ನು ಧರಿಸಿ, ಆಗಲೇ, ತಾನೂ ಆ ಜಲದಲ್ಲಿ ಪ್ರವೇಶಿಸಿದಳು; ಸ್ವರಮಣನಾದ ಶ್ರೀ ವರಾಹರೂಪನಿಂದ ಕೂಡಿ, ಈಕೆಯು ಬಹುಕಾಲ, ಜಲದಲ್ಲಿ ವಿಹರಿಸಿದಳು; ಈ ಮಧ್ಯಕಾಲದಲ್ಲಿ ಬ್ರಹ್ಮದೇವನ ನಾಸಿಕದಿಂದ ಹೊರಡುವ ವಾಯುವಿನೊಡನೆ, ಉಗ್ರರೂಪಿಯಾದ ಹಿರಣ್ಯಾಕ್ಷನೆಂಬ ದೈತ್ಯನು, ಹೊರಗೆ

1. 'ರೂಪಂ ತವೈತನ್ನನು ದುಷ್ಕೃತಾತ್ಮನಾಂ ದುರ್ದರ್ಶನಂ ದೇವ ಯದಧ್ವರಾತ್ಮಕಂ ।
ಛಂದಾಂಸಿ ಯಸ್ಯ ತ್ವಚಿ ಬರ್ಹಿರೋಮಸ್ವಾಜ್ಯಂ ದೃಶಿ ತ್ವಂಘ್ರಿಷು ಚಾತುರ್ಹೋತ್ರಂ ॥...'
'ಸತ್ರಾಣಿ ಸರ್ವಾಣಿ ಶರೀರಸಂಧಿಸ್ತ್ವಂ ಸರ್ವಯಜ್ಞಕ್ರತುರಿಷ್ಟಿಬಂಧನಃ ॥'
ಇತ್ಯಾದಿ ಶ್ಲೋಕಗಳಿಂದ ಶ್ರೀಮದ್ಭಾಗವತವು, ದಾಡಿನಲ್ಲಿ ಭೂಮಿಯನ್ನು ಎತ್ತಿತಂದ, (ಹಿರಣ್ಯಾಕ್ಷನನ್ನು ಸಂಹರಿಸಿದ) ಆ ವರಾಹರೂಪವನ್ನು ಸಕಲ ಯಜ್ಞಾಂಗಗಳೇ ಅವಯವಗಳಾಗಿ ಉಳ್ಳವನೂ, ಸರ್ವಯಜ್ಞಪ್ರವರ್ತಕನೂ, ಯಜ್ಞಭೋಕ್ತನೂ, ಸರ್ವವಿದ್ಯೋಪದೇಶಕನೂ, ಎಂದು ಮುಂತಾಗಿ ಸ್ತುತಿಸುತ್ತದೆ. ಆದ್ದರಿಂದ ಈ ಶ್ವೇತವರಾಹನೇ ಯಜ್ಞವರಾಹನು; ಸರ್ವರ ಸರ್ವಪೂಜೆಗಳನ್ನು ಸ್ವೀಕರಿಸಿ, ಅನುಗ್ರಹಿಸುವಾತನು. ಯಜ್ಞಾದಿ ಕರ್ಮಾನುಷ್ಠಾನಕ್ಕೆ ಅವಶ್ಯಕವಾದ ಆಶ್ರಯಸ್ಥಾನವನ್ನು ದೊರಕಿಸಿಕೊಟ್ಟವನು.

**ಚಿಕ್ರೀಡ ಕತಿಚಿತ್ಕಾಲಂ ತತೋ ಲೀಲಾವಪುರ್ಹರಿಃ ।**
**ಮಗ್ನಾಂ ಭುವಂ ಸ್ವದಶನೇ ನಿಧಾಯೋದ್ಧರ್ತುಮೈಚ್ಛತ ॥ ೨೪ ॥**

ತತಃ-ನಂತರ (ಹೀಗೆ ಹೇಳಿದಮೇಲೆ), ಅಸೌ-ಈ ಪ್ರತ್ಯಕ್ಷನಾದ, ಯಜ್ಞವರಾಹಃ-ಯಜ್ಞವರಾಹನು, ಮಹಾಜಲೇ-ಮಹಾಜಲರಾಶಿಯಲ್ಲಿ, ನಿಮಜ್ಯ-ಮುಳುಗಿ, ಅತ್ರ-ಅಲ್ಲಿರುತ್ತಿರಲು, ತಾವತ್-ಅಷ್ಟರಲ್ಲಿ, ದೇವೀ-ಶ್ರೀಲಕ್ಷ್ಮೀದೇವೀಯು, ಕ್ರೋಡರೂಪಧರಾ - ವರಾಹರೂಪವನ್ನು(ತಾನೂ) ಧರಿಸಿದವಳು, ಭೂತ್ವಾ - ಆಗಿ, ತದೈವ ಹಿ-ಆಗಲೇ (ಯಜ್ಞವರಾಹನು ಜಲಪ್ರವೇಶ ಮಾಡಿದಾಗಲೇ), ತತ್ರ-ಅಲ್ಲಿ (ಜಲದಲ್ಲಿ), ವಿವೇಶ-ಪ್ರವೇಶಮಾಡಿದಳು; ಅಸೌ-ಈ ರಮಾದೇವಿಯು (ಕ್ರೋಡರೂಪಳು), ಸ್ವಾರಾಮೇಣ-ಸ್ವರಮಣನಾದ (ತನ್ನಿಂದ ತಾನೇ ಆನಂದಿಸುವ), ತೇನ-ಆತನಿಂದ (ಯಜ್ಞವರಾಹನಿಂದ ಕೂಡಿ), ಚಿರಂ-ಬಹುಕಾಲ, ರೇಮೇ-ವಿಹರಿಸಿದಳು); ತಾವತ್-ಅಷ್ಟರಲ್ಲಿ (ಆ ಕಾಲದಲ್ಲಿ), ಹಿರಣ್ಯಗರ್ಭಸ್ಯ-ಬ್ರಹ್ಮದೇವನ, ನಾಸಾಶ್ವಾಸಾತ್- ಮೂಗಿನಿಂದ ಹೊರಡುವ ಶ್ವಾಸವಾಯುವಿನಿಂದ,

---

ಬಂದನು;[1] ತಕ್ಷಣವೇ ಪರ್ವತಾಕಾರವಾಗಿ ಬೆಳೆದು, ಮಹಾ ಬಲಿಷ್ಠನೂ ಪರಾಕ್ರಮಿಯೂ ಆದ ಆತನು ಸಹ ಆ ಜಲರಾಶಿಯನ್ನು ಪ್ರವೇಶಿಸಿ ಸ್ವಲ್ಪಕಾಲ ಕ್ರೀಡಿಸುತ್ತಿದ್ದನು; ಆಗ ಲೀಲಾವರಾಹರೂಪಿಯಾದ ಶ್ರೀಹರಿಯು, ಜಲಮಗ್ನವಾದ ಭೂಮಿಯನ್ನು ತನ್ನ ಕೋರೆದಾಡಿನ ಮೇಲಿಟ್ಟುಕೊಂಡು, ಮೇಲೆತ್ತಿತರಲು, ಇಚ್ಛಿಸಿದನು

1. ಇಲ್ಲಿ ಇದೇ ಅಧ್ಯಾಯದ ಶ್ಲೋಕ (೧೧-೧೪) ಭಾಗದ ಅಡಿಟಿಪ್ಪಣಿಯನ್ನೂ ಓದಿಕೊಳ್ಳಬೇಕು. ೧೧ನೇ ಶ್ಲೋಕದಲ್ಲಿ ಪ್ರಜೆಗಳನ್ನು ಎಲ್ಲಿ ಸೃಷ್ಟಿಮಾಡಲಿ, ಎಂದು ಬ್ರಹ್ಮನು ಚಿಂತೆಗೊಳಗಾದನೆಂಬಲ್ಲಿ ಭಾಗವತೋಕ್ತವಾದ, ಆತನ ಪ್ರಲಯಜಲವನ್ನು ಪಾನಮಾಡಿದನೆಂಬ, ಪೂರ್ವಭಾವಿ ಪ್ರಯತ್ನವನ್ನೂ, ಆ ಪ್ರಯತ್ನವು ನಡೆಯದೇ ಪುನಃ ಜಲವು ಆವರಿಸಿತೆಂಬ ಕಥಾಂಶವನ್ನೂ, ಅಧ್ಯಾಹಾರದಿಂದ ತಿಳಿಯಬೇಕು. ಆದಿದೈತ್ಯನಾದ ಹಿರಣ್ಯಾಕ್ಷನೂ ಬ್ರಹ್ಮನಿಂದ ಹುಟ್ಟಿದವನೇ. 'ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ।'... ಇತ್ಯಾದಿ (ಭಾಗ-ತಾತ್ಪರ್ಯ) ವಾಕ್ಯಗಳು, ಬ್ರಹ್ಮನಿಂದ ಹುಟ್ಟಿದವನೆಂದು ಹೇಳುವುವಲ್ಲದೇ, ಅದೇ ಹಿರಣ್ಯಾಕ್ಷನು, ವಿಷ್ಣುಪಾರ್ಷದವನಾದ ವಿಜಯನಿಂದ ಅಭಿನ್ನನಾಗಿ ಜನಿಸಿದಾಗ, ಪುನಃ ವರಾಹರೂಪನಾದ ಶ್ರೀಹರಿಯಿಂದಲೇ, ಹತನಾದ ಕಥೆಯನ್ನು ನಿರೂಪಿಸುತ್ತವೆ. ಮೊದಲಿನ ಈ ಆದಿದೈತ್ಯ ಹಿರಣ್ಯಾಕ್ಷನೂ ಬ್ರಹ್ಮದೇವನ ಶ್ವಾಸದಿಂದ ಆ ಕಾಲದಲ್ಲಿ ಹೊರಬಿದ್ದನೆಂಬ ವಿಶೇಷವನ್ನೂ ತಿಳಿಯಬಹುದಾಗಿದೆ. ಭಾಗವತದಲ್ಲಿ ವರಾಹಾವತಾರದ ವಿಸ್ತಾರವಾದ ವರ್ಣನೆಯಿದೆ; ಇಲ್ಲಿ ಸಂಗ್ರಹವಾದ ನಿರೂಪಣೆಯಿದೆ. ಏವಂಚ, ಭಾಗವತಕ್ಕೂ ಈ ಗ್ರಂಥನಿರೂಪಣೆಗೂ ತೋರುವ ಆಪಾತತಃ ವಿರೋಧವು ಅಪರಿಹಾರ್ಯವಲ್ಲ ಮತ್ತು ಓದುಗರಲ್ಲಿ ಗ್ರಂಥದ ಪ್ರಾಮಾಣ್ಯ ವಿಷಯಕ ಸಂಶಯಹೇತುವಲ್ಲ ಎಂಬುದನ್ನು ಸ್ಪಷ್ಟವಾಗಿ ಲಕ್ಷಿಸಬೇಕು.

ಮಹಾರೌದ್ರಃ-ಮಹಾ ಉಗ್ರಸ್ವರೂಪನಾದ, ಹಿರಣ್ಯಾಕ್ಷಃ- ಹಿರಣ್ಯಾಕ್ಷನೆಂಬ ದೈತ್ಯನು, ವಿನಿರ್ಯಯೌ-ಹೊರಗೆ ಬಂದನು; ತತ್ಕ್ಷಣಾತ್- ಒಡನೆಯೇ, ಸಃ-ಆ ದೈತ್ಯನು, ಮಹಾನ್-ದೊಡ್ಡ ರೂಪವುಳ್ಳವನು, ಅಭೂತ್-ಆದನು; ಮಹಾಬಲಃ-ಮಹಾ ಬಲಶಾಲಿಯೂ, ಮಹಾವೀರ್ಯಃ-ಪರಮಾಕ್ರಮಿಯೂ, (ಆದ) ಸಃ ಅಪಿ-ಆತನೂ ಸಹ, ತಸ್ಮಿನ್-ಆ, ಮಹಾಜಲೇ, ಪ್ರಲಯಜಲದಲ್ಲಿ ಕತಿಚಿತ್‌ಕಾಲಂ-ಸ್ವಲ್ಪಕಾಲ, ಚಿಕ್ರೀಡ-ಕ್ರೀಡಿಸಿದನು; ತತಃ-ಆಗ (ಆ ನಂತರ), ಲೀಲಾವಪುಃ-ಕ್ರೀಡೆಗಾಗಿ ಆ ರೂಪವನ್ನು ಧರಿಸಿದ (ಪ್ರಕಟಿಸಿದ), ಹರಿಃ-ಶ್ರೀಹರಿಯು, ಮಗ್ನಾಂ-ಮುಳುಗಿದ್ದ ಭುವಂ-ಭೂಮಿಯನ್ನು ಸ್ವದಶನೇ- ತನ್ನ ಕೋರೆದಾಡಿನಲ್ಲಿ ನಿಧಾಯ-ಇಟ್ಟು ಉದ್ಧರ್ತುಂ-ಮೇಲೆ ತರಲು, ಐಚ್ಛತ-ಇಚ್ಛಿಸಿದನು.

ದಂತಸ್ಥಿತಮಹೀಪಂಕೋ ಯಾವದುನ್ಮಜ್ಜತಿ ಸ್ಮ ಸಃ ।
ತಾವದೇವಾಹನನ್ಮೂರ್ಧ್ನಿ ವರಾಹಸ್ಯ ಮಹಾಸುರಃ ॥ ೨೫ ॥

ಬಾಲಃ ಕ್ರೀಡನಕೇನೇವ ಕ್ರೀಡಿತ್ವಾ ಸಹ ತೇನ ಸಃ ।
ಜಘ್ನೇ ದಂಷ್ಟ್ರೈಕದೇಶೇನ ಮೃತಃ ಶಿಶ್ಯೇ ಜಲೇಥ ಸಃ ॥ ೨೬ ॥

ಸಃ-ಆ ವರಾಹನು, ಯಾವತ್-ಯಾವಾಗ, ದಂತಸ್ಥಿತಮಹೀಪಂಕಃ- ಕೋರೆದಾಡಿನಲ್ಲಿ ಕೆಸರಾದ ಭೂಮಿಯುಳ್ಳವನಾಗಿ, ಉನ್ಮಜ್ಜತಿ ಸ್ಮ-ಮೇಲೇಳುತ್ತಿದ್ದನೋ, ತಾವದೇವ-ಆಗಲೇ, ಮಹಾಸುರಃ-ಆ ಮಹಾದೈತ್ಯನು (ಹಿರಣ್ಯಾಕ್ಷನು), ವರಾಹಸ್ಯ-ವರಾಹನ, ಮೂರ್ಧ್ನಿ-ಶಿರಸ್ಸಿನಲ್ಲಿ ಅಹನತ್-(ಗದೆಯಿಂದ)[1] ಹೊಡೆದನು; ಸಃ-ಆ ವರಾಹನು, ತೇನ ಸಹ-ಆ ಮಹಾದೈತ್ಯನೊಂದಿಗೆ, ಕ್ರೀಡನಕೇನ- ಆಟದ ಸಾಮಗ್ರಿಯೊಂದಿಗೆ (ಬೊಂಬೆಗಳೊಂದಿಗೆ), ಬಾಲಃ ಇವ- ಬಾಲಕನು ಆಟವಾಡುವಂತೆ, ಕ್ರೀಡಿತ್ವಾ-(ಸ್ವಲ್ಪಕಾಲ) ಕ್ರೀಡಿಸಿ, ದಂಷ್ಟ್ರೈಕದೇಶೇನ-(ತನ್ನ) ಕೋರೆದಾಡಿನ ಒಂದು

---

(೨೧-೨೪). ಹಾಗೆ ಆ ವರಾಹಮೂರ್ತಿಯು ಭೂಮಿಯನ್ನು ತನ್ನ ದಂತದ ಮೇಲಿಟ್ಟುಕೊಂಡು (ಕೆಸರಾದ ಕೋರೆದಾಡುಳ್ಳವನಾಗಿ) ಮೇಲೆದ್ದು ಬಂದಾಗ ಆ ದೈತ್ಯನು ತನ್ನ ಗದೆಯಿಂದ, ವರಾಹನ ತಲೆಯಮೇಲೆ ಹೊಡೆದನು; ಆ ಶ್ರೀಹರಿಯು, ಆತನೊಡನೆ ಕೊಂಚಕಾಲ, ಬಾಲಕನು, ಬೊಂಬೆಯೊಡನೆ ಆಟವಾಡುವಂತೆ, ಕ್ರೀಡಿಸಿ, ತನ್ನ ಕೋರೆದಾಡಿನ ಒಂದು ಭಾಗದಿಂದ ತಾಡನಮಾಡಿದನು; ಅದರಿಂದ ಆ ದೈತ್ಯನು ಮೃತನಾಗಿ ಜಲದಲ್ಲಿ ಬಿದ್ದನು (೨೫-೨೬). ಆಗ, ಬ್ರಹ್ಮದೇವನು ಬಂದು ನಾನಾಪ್ರಕಾರದಿಂದ ಶ್ರೀಹರಿಯನ್ನು ಸ್ತುತಿಸಿ, ನಮಸ್ಕರಿಸಿದನು; ಬ್ರಹ್ಮನ ಪ್ರಾರ್ಥನೆಯನ್ನು

1. 'ತತ್ರಾಪಿ ದೈತ್ಯಂ ಗದಯಾಽಽಪತಂತಂ...' ಇತ್ಯಾದಿ (ಭಾಗವತ) ವಾಕ್ಯವು. ಹಿರಣ್ಯಾಕ್ಷನು, ಶ್ರೀವರಾಹನನ್ನು, ಗದಾಧಾರಿಯಾಗಿ ಎದುರಿಸಿದನೆಂದು ಹೇಳುತ್ತದೆ.

ಭಾಗದಿಂದ, ಜಘ್ನೇ-ಹೊಡೆದನು; ಅಥ-ಅದರಿಂದ (ಮುಂದೆ), ಸಃ-ಆ ದೈತ್ಯನು, ಮೃತಃ-ಮೃತನಾಗಿ, ಜಲೇ ನೀರಿನಲ್ಲಿ ಶಿಶ್ಯೇ-ಬಿದ್ದನು (ಜಲದಲ್ಲಿ ಸತ್ತುಬಿದ್ದನು).

**ತತೋ ಬ್ರಹ್ಮಾ ಸಮಭ್ಯೇತ್ಯ ಸ್ತುತ್ವಾ ಚ ವಿವಿಧೈಸ್ಸ್ತವೈಃ ।**
**ಪ್ರಣನಾಮಾಥ ದೇವೋಽಪಿ ತತ್ರೈವಾಂತರಧೀಯತ ॥ ೨೭ ॥**

ತತಃ-ನಂತರ (ಭೂಮಿಯನ್ನು ಮೇಲೆ ಸ್ಥಾಪಿಸುತ್ತಿರಲು), ಬ್ರಹ್ಮಾ-ಬ್ರಹ್ಮದೇವನು, ಸಮಭ್ಯೇತ್ಯ-ಸಮೀಪಕ್ಕೆ ಬಂದು, ವಿವಿಧೈಃ-ಬಹು ಪ್ರಕಾರದ, ಸ್ತೋತ್ರೈಃ-ಸ್ತೋತ್ರಗಳಿಂದ, ಸ್ತುತ್ವಾ-(ಶ್ರೀ ವರಾಹನನ್ನು) ಸ್ತುತಿಸಿ, ಪ್ರಣನಾಮ ಚ-ನಮಸ್ಕರಿಸಿದನು; ಅಥ-ಆಗ, ದೇವಃ ಅಪಿ-ಶ್ರೀಹರಿಯಾದರೋ, ತತ್ರ ಏವ-ಅಲ್ಲಿಂದಲೇ, ಅಂತರಧೀಯತ- ಅಂತರ್ಧಾನ ಹೊಂದಿದನು (ಅದೃಶ್ಯನಾದನು).

**ಬ್ರಹ್ಮಾಥ ಸಸೃಜೇ ಪೂರ್ವಂ ಮನಸಾ ಸನಕಾದಿಕಾನ್ ।**
**ಆಜ್ಞಾಪಿತಾಸ್ತು ತೇ ಸೃಷ್ಟೌ ನೈಚ್ಛನ್ ಬ್ರಹ್ಮಪರಾಯಣಾಃ ॥ ೨೮ ॥**

ಅಥ-ನಂತರ (ಶ್ರೀವರಾಹನು ಭೂಮಿಯನ್ನು ಸ್ಥಾಪಿಸಿದ ನಂತರ), ಬ್ರಹ್ಮಾ-ಬ್ರಹ್ಮದೇವನು, ಪೂರ್ವಂ-ಮೊದಲು, ಮನಸಾ-ಸಂಕಲ್ಪಮಾತ್ರದಿಂದ (ಮನಸ್ಸಿನಿಂದ) ಸನಕಾದಿಕಾನ್-ಸನಕಾದಿಗಳನ್ನು, ಸಸೃಜೇ-ಸೃಷ್ಟಿಸಿದನು; ತೇ-ಆ ಸನಕಾದಿಗಳು, ಸೃಷ್ಟೌ-ಪ್ರಜಾಸೃಷ್ಟಿಯಲ್ಲಿ, ಆಜ್ಞಾಪಿತಾಃ-ತಂದೆಯಾದ ಬ್ರಹ್ಮನಿಂದ ಆಜ್ಞಾಪಿಸಲ್ಪಟ್ಟರೂ, ಬ್ರಹ್ಮಪರಾಯಣಾಃ-ಪರಬ್ರಹ್ಮನಲ್ಲಿ ಆಸಕ್ತರಾದ್ದರಿಂದ, ನ ಐಚ್ಛನ್-(ಸೃಷ್ಟಿಯಲ್ಲಿ ತೊಡಗಲು) ಇಚ್ಛಿಸಲಿಲ್ಲ.

**ಸೃಷ್ಟೌ ಹಿ ಪುತ್ರಪೌತ್ರಾದೇರ್ಜನನಾನ್ಮರಣಾದಿತಃ ।**
**ಧಾರಣಾಧಾರಣಾಚ್ಚಾಪಿ ಚಿತ್ತಂ ವ್ಯಾಕುಲತಾಮಿಯಾತ್ ॥ ೨೯ ॥**

**ಚಿತ್ತೇ ವ್ಯಾಕುಲಿತೇ ಪುಂಸಾಂ ಸ್ತ್ರೀಣಾಂ ವಾಪಿ ಕುತಃ ಸುಖಂ ।**
**ಕುತ್ರ ವಾ ಚಿಂತನಂ ವಿಷ್ಣೋರ್ಮೋಕ್ಷಾಶಾಪಿ ಕುತಸ್ತರಾಂ ॥ ೩೦ ॥**

**ದುಃಖಾತ್ತಾಪಂ ಪ್ರಕುರ್ವಂತಿ ಪಾಪಾದ್ದುಃಖಮಿತಿ ಕ್ರಮಾತ್ ।**

---

ಸಲ್ಲಿಸಿರ ಶ್ರೀಹರಿಯು, ಅಂತರ್ಧಾನ ಹೊಂದಿದನು (೨೭). ಮುಂದೆ, ಬ್ರಹ್ಮದೇವನು, ತನ್ನ ಮನಸ್ಸಿನಿಂದ, ಸನಕಾದಿ ಪುತ್ರರನ್ನು ಸೃಷ್ಟಿಸಿದನು—ಪ್ರಜಾಸೃಷ್ಟಿಯಲ್ಲಿ ತೊಡಗಿರೆಂದು ಅವರನ್ನು ಆಜ್ಞಾಪಿಸಿದನು; ಹರಿಪರಾಯಣರಾದ ಅವರು ಸೃಷ್ಟಿಯಲ್ಲಿ ಪ್ರವೃತ್ತರಾಗಲು ಇಚ್ಛಿಸಲಿಲ್ಲ (೨೮). ಪುತ್ರಪೌತ್ರಾದಿ ಸಂತಾನವು ಬೆಳೆದರೆ, ಆ ಪ್ರಜೆಗಳ ರಕ್ಷಣೆ, ಅರಕ್ಷಣಾಗಳೇ ಮೊದಲಾದ ಕ್ಷೇಮಹಾನಿಗಳ ಚಿಂತೆಯಿಂದಲೂ, ಜನನ ಮರಣಾದಿ ಕಾರಣಗಳಿಂದಲೂ, ಮನಸ್ಸು ಸದಾ ಉದ್ವಿಗ್ನವಾಗಿರುತ್ತ, ಚಿತ್ತಶಾಂತಿಯಿಲ್ಲದೇ, ನಾನಾ

ನಿಮಗ್ನೋ ದುಃಖಪಾರಾಶೌ ಸಂಸಾರೇ ಸತತಂ ಪತೇತ್ ॥ ೩೧ ॥
ಇತ್ಯಾದ್ಯನೇಕದುಃಖೇಭ್ಯೋ ಭೀತಾ ಭಕ್ತಾಸ್ತಥಾ ಹರೌ ।
ಉತ್ಪನ್ನಯೋಗಿನಃ ಶಾಂತಾ ಬ್ರಹ್ಮಣ್ಯೇವ ಮನೋ ದಧುಃ ॥ ೩೨ ॥

ಸನಕಾದಿಗಳು ತಂದೆಯ ಆಜ್ಞೆಯನ್ನು ಪಾಲಿಸದಿರಲು ಕಾರಣವೆಂದು ಅವರ ಸ್ವಭಾವವನ್ನೂ, ತನ್ನಿಮಿತ್ತಕ ಆಲೋಚನಾಪ್ರಕಾರವನ್ನೂ ನಿರೂಪಿಸುತ್ತಾರೆ—

ಪುತ್ರಪೌತ್ರಾದೇಃ-ಪುತ್ರಪೌತ್ರಾದಿಗಳ (ಮಕ್ಕಳು ಮೊಮ್ಮಕ್ಕಳು ಮೊದಲಾದವರ), ಸೃಷ್ಟೌ-ಸೃಷ್ಟಿಯಾದಲ್ಲಿ (ಸಂತತಿಯು ಬೆಳೆದರೆ), ಜನನಾತ್-(ಸಂತಾನಗಳ) ಜನನದಿಂದಲೂ, ಮರಣಾದಿತಃ-ಮರಣ ಮೊದಲಾದ ಕಾರಣಗಳಿಂದಲೂ, ಚ-ಮತ್ತು ಧಾರಣಾಧಾರಣಾತ್ ಅಪಿ-(ಅವರ) ಕ್ಷೇಮಹಾನಿಗಳಿಂದ ಸಹ (ರಕ್ಷಣೆ, ಅರಕ್ಷಣೆಗಳ ಕಾರಣದಿಂದ ಸಹ), ಚಿತ್ತಂ-ಮನಸ್ಸು ವ್ಯಾಕುಲತಾಂ-ವ್ಯಾಕುಲವನ್ನು (ಕ್ಷೋಭೆಯನ್ನು-ಅಶಾಂತಿಯನ್ನು), ಇಯಾತ್-ಹೊಂದುತ್ತದೆ; ಚಿತ್ತೇ-ಮನಸ್ಸು ವ್ಯಾಕುಲಿತೇ-ವ್ಯಾಕುಲವನ್ನು ಹೊಂದಿದರೆ, ಪುಂಸಾಂ-ಪುರುಷರಿಗೆ, ಸ್ತ್ರೀಣಾಂ ವಾಪಿ-ಸ್ತ್ರೀಯರಿಗೇ ಆಗಲಿ, ಕುತಃ-ಎಲ್ಲಿಯ, ಸುಖಂ-ಸುಖವು;[1] ವಿಷ್ಣೋಃ-ಶ್ರೀವಿಷ್ಣುವಿನ, ಚಿಂತನಂ-ಧ್ಯಾನವು (ನಿರಂತರ ಸ್ಮರಣೆಯು), ಕುತ್ರ-ಎಲ್ಲಿ (ಇರಲು ಸಾಧ್ಯ?), ಮೋಕ್ಷಾಶಾ ಅಪಿ-ಮೋಕ್ಷದ ಆಶೆಯಾದರೂ, ಕುತಸ್ತರಾಂ- ಹೇಗೆ ಇರಲು ಅವಕಾಶವಾಗುತ್ತದೆ? (ಶ್ರೀಹರಿಯ ಸ್ಮರಣೆಗೇ ಅವಕಾಶವಿಲ್ಲದಿರಲು, ಮೋಕ್ಷದ ಆಶೆಯಂತೂ ದೂರವೇ ಉಳಿಯುತ್ತದೆ); ದುಃಖಾತ್-ದುಃಖದಿಂದ (ವ್ಯಾಕುಲತೆಯಿಂದ-ಅಶಾಂತಿಯಿಂದ).

---

ದುಃಖಗಳಿಗೆ ಗುರಿಯಾಗುತ್ತದೆ; ಹೀಗೆ ವ್ಯಾಕುಲಚಿತ್ತನಾದ ಪುರುಷನೇ ಆಗಲಿ ಸ್ತ್ರೀಯೇ ಆಗಲಿ ಸುಖವನ್ನು ಹೊಂದಲಾರನು; ಶ್ರೀವಿಷ್ಣು ಚಿಂತನದಲ್ಲಿ ಅಸಮರ್ಥನಾಗುತ್ತಾನೆ; ಶ್ರೀವಿಷ್ಣುವಿನ ಸಂತತ ಸ್ಮರಣೆ, ಧ್ಯಾನಾದಿರೂಪ ಚಿತ್ತಶಾಂತಿಯಿಂದಲೇ ಸಾಧ್ಯವಾದ, ಮೋಕ್ಷವೆಂಬ ಪರಮಪುರುಷಾರ್ಥವು ದೂರದಲ್ಲಿಯೇ ಉಳಿಯುತ್ತದೆ; ದುಃಖಪರಿಹಾರಕ್ಕೆಂದು, (ತಾನೇ ದುಃಖವನ್ನು ಪರಿಹರಿಸಿಕೊಳ್ಳುವನೆಂಬ ಸ್ವತಂತ್ರ ಕರ್ತೃತ್ವಾಭಿಮಾನದಿಂದ) ನಾನಾ ಪಾಪಗಳನ್ನಾಚರಿಸುತ್ತಾನೆ; ಪಾಪದಿಂದ ಪುನಃ ದುಃಖವೇ ಲಭಿಸುತ್ತದೆ; ಕ್ರಮವಾಗಿ ದುಃಖಸಮುದ್ರದಲ್ಲಿ ಮುಳುಗಿ, ನಿರಂತರವಾಗಿ ಸಂಸಾರದಲ್ಲಿಯೇ ಸುತ್ತಿಕೊಂಡಿರುತ್ತಾನೆ; ಹೀಗೆ ಸನಕಾದಿ ಬ್ರಹ್ಮಮಾನಸಪುತ್ರರು, ಸಂಸಾರದುಃಖದಿಂದ ಉದ್ವಿಗ್ನಗೊಂಡು, ಸ್ವಭಾವದಿಂದಲೇ ಭಗವನ್ನಿಷ್ಠ ಯೋಗಿಗಳಾ

1 'ಅಶಾಂತಸ್ಯ ಕುತಃ ಸುಖಂ' (ಗೀತಾ) ಮನಶ್ಶಾಂತಿ ಇಲ್ಲದವನಿಗೆ ಎಂದೂ ಸುಖವಿಲ್ಲ; ವಿಷಯಭೋಗದಿಂದಾಗುವ ಸುಖವು ತುಚ್ಛ ಮತ್ತು ಕ್ಷಣಿಕ. ಅಪೇಕ್ಷಿತ ಸುಖದ ಭ್ರಮೆ ಮಾತ್ರ-ಸದಾ ಮನಸ್ಸು ಅಧಿಕ ಭೋಗಾಶೆಯಿಂದ ಉದ್ವಿಗ್ನಸ್ಥಿತಿಯಲ್ಲಿಯೇ ಇರುತ್ತದೆ.

ಪಾಪಂ-(ಅದರ ಪರಿಹಾರಕ್ಕೆಂದು) ಪಾಪವನ್ನು ಪ್ರಕುರ್ವಂತಿ-(ಸಂಸಾರಿ ಜೀವರು) ಮಾಡುತ್ತಾರೆ; ಪಾಪಾತ್-ಪಾಪದಿಂದ, ದುಃಖಂ-ದುಃಖವು; ಇತಿ ಕ್ರಮಾತ್-ಈ ಕ್ರಮದಿಂದ, ದುಃಖವಾರಾಶೌ-ದುಃಖಸಮುದ್ರದಲ್ಲಿ ನಿಮಗ್ನಃ-(ಜೀವನು) ಮುಳುಗಿ, ಸತತಂ-ನಿರಂತರವಾಗಿ, ಸಂಸಾರೇ-ಸಂಸಾರದಲ್ಲಿಯೇ (ಜನನ ಮರಣಗಳಿಂದ ಬಹುದೇಹಗಳಲ್ಲಿ ಸುತ್ತುತ್ತ), ವಸೇತ್-ಇರುವವನಾಗಬೇಕಾಗುತ್ತದೆ; ಇತ್ಯಾದಿ-ಈ ಮೊದಲಾದ, ಅನೇಕ ದುಃಖೇಭ್ಯಃ-ಬಹು ದುಃಖಗಳಿಂದ, ಭೀತಾಃ-ಭೀತ ರಾದವರೂ, ತಥಾ-ಹಾಗೂ, ಹರೌ-ಶ್ರೀಹರಿಯಲ್ಲಿ ಭಕ್ತಾಃ-ಭಕ್ತರೂ, ಉತ್ಪನ್ನ ಯೋಗಿನಃ-ಹುಟ್ಟಿನಿಂದಲೇ (ಸ್ವಭಾವದಿಂದಲೇ) ಯೋಗಿಗಳೂ, ಶಾಂತಾಃ-ಶಾಂತ ಚಿತ್ತರೂ (ಭಗವನ್ನಿಷ್ಠ ಮನಸ್ಸುಳ್ಳ ವರೂ) ಆದ, (ಸನಕಾದಿಗಳು) ಅವರು, ಬ್ರಹ್ಮಣಿ ಏವ-ಪರಬ್ರಹ್ಮನಲ್ಲಿಯೇ (ಶ್ರೀವಿಷ್ಣುವಿನಲ್ಲಿಯೇ), ಮನಃ-ಮನಸ್ಸನ್ನು ದಧುಃ-ಸ್ಥಾಪಿಸಿದರು (ಪ್ರಜಾಸೃಷ್ಟಿಯಲ್ಲಿ—ಗೃಹಸ್ಥಧರ್ಮದಲ್ಲಿ ಪ್ರವೃತ್ತರಾಗಲಿಲ್ಲ).

**ನಿಯೋಗಾಕರಣಾತ್ ಸ್ವಸ್ಯ ಜಜ್ವಾಲ ಕುಪಿತೋ ವಿಧಿಃ ।**
**ನಾನೌಚಿತ್ಯಾತ್ ಶಶಾಪೈತಾಂಸ್ತತೋ ಭ್ರೂಮಧ್ಯತಃ ಸುತಃ ॥ ೩೩ ॥**

**ಕಾಲಾನಲಸಮಃ ಪ್ರೋದ್ಯನ್ ಬಾಲಃ ಪರಮಕೋಪನಃ ।**
**ಆರೋದೀತ್ ಕ್ರೋಧತೋ ಯಸ್ಮಾತ್ತತೋ ರುದ್ರ ಇತೀರಿತಃ ॥ ೩೪ ॥**

ಸನಕಾದಿಗಳ ನಂತರ ಸಂಭವಿಸಿದ ರುದ್ರದೇವನ ಉತ್ಪತ್ತಿಯನ್ನು ನಿರೂಪಿಸುತ್ತಾರೆ—

ಸ್ವಸ್ಯ-ತನ್ನ ನಿಯೋಗಾಕರಣಾತ್-ಆಜ್ಞೆಯನ್ನು ನಡೆಸದಿದ್ದ ಕಾರಣ, ವಿಧಿಃ-ಬ್ರಹ್ಮದೇವನು, ಕುಪಿತಃ-ಸಿಟ್ಟಾಗಿ, ಜಜ್ವಾಲ-ಉರಿದನು; ಏತಾನ್-(ಆಜ್ಞಾಭಂಗ ಮಾಡಿದ) ಸನಕಾದಿಗಳನ್ನು ಅನೌಚಿತ್ಯಾತ್-ಯೋಗ್ಯವಲ್ಲವೆಂಬ ಕಾರಣದಿಂದ, ನ ಶಶಾಪ-ಶಪಿಸಲಿಲ್ಲ (ಶಿಕ್ಷಾರೂಪದಿಂದ ಶಾಪ ಕೊಡಲಿಲ್ಲ); ತತಃ-(ಪ್ರಜ್ವಲಿಸುವ) ಆ ಕೋಪದಿಂದ, ಭ್ರೂಮಧ್ಯತಃ-(ಬ್ರಹ್ಮನ) ಭ್ರೂಮಧ್ಯದಿಂದ (ಹುಬ್ಬುಗಳ ನಡುವಿನ

---

ದ್ದರಿಂದ, ಪರಬ್ರಹ್ಮನಲ್ಲಿಯೇ ಮನಸ್ಸನ್ನು ಸ್ಥಾಪಿಸಿದರು; ಪ್ರಜಾಸೃಷ್ಟಿಕಾರ್ಯ ದಲ್ಲಿ—ಗೃಹಸ್ಥಧರ್ಮದಲ್ಲಿ ಪ್ರವೃತ್ತರಾಗಲಿಲ್ಲ (೨೯-೩೨). ಹುಟ್ಟಿದ ಈ ಮಕ್ಕಳು ತನ್ನ ಆಜ್ಞೆಯನ್ನು ಪಾಲಿಸದ ಕಾರಣ, ವಿಧಿಯು ಕೋಪದಿಂದ ಉರಿದನು; ಆದರೂ (ತನ್ನ ಮಕ್ಕಳಿಗೆ ತಾನೇ ಶಾಪಕೊಡುವುದು) ಉಚಿತವಲ್ಲೆಂದು ಭಾವಿಸಿ, ತನ್ನ ಆಜ್ಞಾಭಂಗದ ಅಪರಾಧಕ್ಕಾಗಿ ಅವರನ್ನು (ಯಾವ ವಿಧದಿಂದಲೂ) ಶಪಿಸಲಿಲ್ಲ; ಕುಪಿತನಾದ ಬ್ರಹ್ಮದೇವನ ಭ್ರೂಮಧ್ಯದಿಂದ, ಒಬ್ಬ ಬಾಲಕನು ಜನಿಸಿದನು; (ಬ್ರಹ್ಮದೇವನ ಮನಸ್ಸಿನ ಪ್ರಸನ್ನತೆ, ಕೋಪಾದಿ ಯಾವ ಭಾವವೂ ವ್ಯರ್ಥವಾಗತಕ್ಕದಲ್ಲ); ಆ ಬಾಲಕನು ಕಾಲಾಗ್ನಿ ಯಂತೆ ಪ್ರಕಾಶಿಸುತ್ತಿದ್ದನು—ಸ್ವಯಂ ಪರಮಕೋಪಿಷ್ಠನಾಗಿದ್ದನು; ಸಿಟ್ಟಿನಿಂದ

ಹಣೆಯಿಂದ), ಸುತಃ-ಮಗನು (ಜನಿಸಿದನು); ಬಾಲಃ-(ಹುಟ್ಟಿದ) ಬಾಲಕನು, ಕಾಲಾನಲಸಮಃ-ಪ್ರಲಯಾಗ್ನಿಯಂತೆ, ಪ್ರೋದ್ಯನ್-ಪ್ರಕಾಶಿಸುತ್ತ ಪರಮ ಕೋಪನಃ-ಅತಿಕೋಪಿಷ್ಠನು (ಆದನು); ಯಸ್ಮಾತ್-ಯಾವ ಕಾರಣದಿಂದ, ಕ್ರೋಧತಃ-ಸಿಟ್ಟಿನಿಂದ, ಆರೋದಿತ್-ಅಳುವವನಾದನೋ, ತತಃ(ತಸ್ಮಾತ್)-ಆ ಕಾರಣದಿಂದ, ರುದ್ರಃ ಇತಿ-ರುದ್ರನು ಎಂದು, ಈರಿತಃ-ಕರೆಯಲ್ಪಟ್ಟನು.

ನಾಶಾಮ್ಯತ್ಸಾಂತ್ವ್ಯಮಾನೋಽಪಿ ಸ ಯದಾ ದ್ರುಹಿಣಸ್ತದಾ ।
ಕೋಪಾಗ್ನಿಮೇಕಧಾ ಕೃತ್ವಾ ಲಲಾಟೇ ನಯನಂ ವ್ಯಧಾತ್ ॥ ೩೫ ॥

ಪಂಚಬಾಲಸಮೋಽರೋದೀರಿತಿ ಪಂಚಾಸ್ಯಮಾಪ್ನುಹಿ ।
ಇತಿ ಧಾತ್ರೋದಿತೇ ತಸ್ಯ ಪಂಚಾಸನ್ ವದನಾನ್ಯಥ ॥ ೩೬ ॥

ತಥೈವ ವರತಸ್ತಸ್ಯ ದಶಬಾಹುರಜಾಯತ ।

ರುದ್ರನ ರೂಪವನ್ನೂ ಅದಕ್ಕೆ ಕಾರಣವನ್ನೂ ಹೇಳುತ್ತಾರೆ—

ಯದಾ-ಯಾವಾಗ, ಸಃ-ಆ ರುದ್ರನು (ಬಾಲಕನು), ಸಾಂತ್ವ್ಯಮಾನಃ ಅಪಿ-ಸಮಾಧಾನಪಡಿಸಿದರೂ, ನ ಅಶಾಮ್ಯತ್-ಸುಮ್ಮನಾಗಲಿಲ್ಲವೋ, ತದಾ-ಆಗ, ದ್ರುಹಿಣಃ-ಬ್ರಹ್ಮದೇವನು, ಕೋಪಾಗ್ನಿಂ-ಕೋಪವೆಂಬ ಅಗ್ನಿಯನ್ನು ಏಕಧಾ ಕೃತ್ವಾ-ಒಂದೇ ಕಡೆ ಮಾಡಿ (ಕೇಂದ್ರೀಕರಿಸಿ), ಲಲಾಟೇ-(ಆ ಬಾಲಕನ) ಹಣೆಯಲ್ಲಿ ನಯನಂ-ಕಣ್ಣನ್ನು (ಮೂರನೆಯ ಕಣ್ಣನ್ನು), ವ್ಯಧಾತ್-ಮಾಡಿದನು; (ಮತ್ತು) ಪಂಚಬಾಲಸಮಃ-ಐದು ಬಾಲಕರಂತೆ, ಅರೋದೀಃ-ಅಳುವವನಾದಿ, ಇತಿ-ಈ

---

ಗಟ್ಟಿಯಾಗಿ ಕಿರಿಚಿದನು (ಅತ್ತನು); ಈ ಕಾರಣದಿಂದ (ರೋದನಮಾಡಿದ್ದರಿಂದ) 'ರುದ್ರ'ನೆಂದು ಕರೆಯಲ್ಪಟ್ಟನು (೩೩-೩೪).

ಬ್ರಹ್ಮನು ಎಷ್ಟು ವಿಧದಿಂದ ಸಮಾಧಾನಮಾಡಿದರೂ, ಬಾಲಕನು ಅಳುವನ್ನು ನಿಲ್ಲಿಸಲಿಲ್ಲ; ಆಗ, ತನ್ನ ಕೋಪಾಗ್ನಿಯಿಂದ ಜನಿಸಿದ ಆ ಬಾಲಕನ ಕೋಪವನ್ನು ಕೇಂದ್ರೀಕರಿಸಿ, ಆತನ ಹಣೆಯಲ್ಲಿ ಮೂರನೇ ಕಣ್ಣನ್ನು ನಿರ್ಮಿಸಿದನು; ಐದು ಬಾಲಕರಿಗೆ ಸಮನಾಗಿ ರೋದನಮಾಡಿದ ಕಾರಣ, ಐದು ಮುಖಗಳನ್ನು ಹೊಂದು, ಎಂದು ಬ್ರಹ್ಮನು ಹೇಳಲು, ಬಾಲಕನಿಗೆ ಐದು ಮುಖಗಳಾದವು ಮತ್ತು ಬ್ರಹ್ಮದತ್ತವಾದ ವರಬಲದಿಂದಲೇ, ಬಾಲಕನಿಗೆ ಹತ್ತು ಬಾಹುಗಳೂ ಉದ್ಭವಿಸಿದವು (೩೫-೩೬). ನಂತರ, ಬ್ರಹ್ಮದೇವನು, ಸಪ್ತರ್ಷಿಗಳನ್ನು ಸೃಷ್ಟಿಸಿದನು; ಮರೀಚಿ, ಭೃಗು, ಅಂಗಿರ, ಕ್ರತು, ಪುಲಸ್ತ್ಯ ಪುಲಹ ಮತ್ತು ವಸಿಷ್ಠ ಇವರೇ ಆ ಏಳು ಮಂದಿ ಋಷಿಗಳು (೩೭). ಬಲಹೆಬ್ಬೆಟ್ಟಿನಿಂದ ದಕ್ಷಪ್ರಜಾಪತಿಯನ್ನೂ, ಮನಸ್ಸಿನಿಂದ

ಕಾರಣದಿಂದ, ಪಂಚಾಸ್ಯಂ-ಐದು ಮುಖಗಳನ್ನು ಆಪ್ನುಹಿ-ಹೊಂದು, ಇತಿ-ಹೀಗೆಂದು, ಧಾತ್ರಾ-ಬ್ರಹ್ಮನಿಂದ, ಉದಿತೇ (ಸತಿ)-ಹೇಳಲ್ಪಡುತ್ತಿರಲು, ತಸ್ಯ-ಆತನಿಗೆ, ಅಥ-ಹೀಗೆ ಹೇಳಿರೊಡನೆಯೇ, ಪಂಚವದನಾನಿ-ಐದು ಮುಖಗಳು, ಆಸನ್-ಆದವು; ತಥಾ ಏವ-ಹಾಗೆಯೇ (ಮತ್ತು), ವರತಃ-ವರವಿತ್ತ ಕಾರಣದಿಂದ, ತಸ್ಯ-ರುದ್ರನಿಗೆ, ದಶಬಾಹುಃ-ಹತ್ತು ಭುಜಗಳು, ಅಜಾಯತ-ಹುಟ್ಟಿದವು.

ಅಥಾಸೃಜದೃಷೀನ್ ಸಪ್ತ ಮರೀಚಿರ್ಭೃಗುರಂಗಿದಾಃ ॥ ೩೭ ॥
ಕ್ರತುಃ ಪುಲಸ್ತ್ಯಃ ಪುಲಹೋ ವಸಿಷ್ಠಸ್ತೇಷು ಸಪ್ತಮಃ ।

ಬ್ರಹ್ಮದೇವನ ಮುಂದಿನ ಸೃಷ್ಟಿಯನ್ನು ವರ್ಣಿಸುತ್ತಾರೆ—

ಅಥ-ಮುಂದೆ (ನಂತರ), ಸಪ್ತ-ಏಳು, ಋಷೀನ್-ಋಷಿಗಳನ್ನು ಅಸೃಜತ್-(ಬ್ರಹ್ಮನು) ಸೃಷ್ಟಿಸಿದನು; ಮರೀಚಿಃ-ಮರೀಚಿಯು, ಭೃಗುಃ-ಭೃಗುವು, ಅಂಗಿರಾಃ-ಅಂಗಿರಸರು, ಕ್ರತುಃ-ಕ್ರತುವು, ಪುಲಸ್ತ್ಯ-ಪುಲಸ್ತ್ಯನು, ಪುಲಹಃ-ಪುಲಹನು, (ಮತ್ತು) ತೇಷು-ಅವರಲ್ಲಿ (ಸಪ್ತರ್ಷಿಗಳಲ್ಲಿ), ವಸಿಷ್ಠಃ-ವಸಿಷ್ಠನು, ಸಪ್ತಮಃ-ಏಳನೆಯವನು.

ದಕ್ಷಿಣಾಂಗುಷ್ಠತೋ ದಕ್ಷಂ ನಾರದಂ ಚಾಪಿ ಮಾನಸಂ ॥ ೩೮ ॥

ದಕ್ಷಿಣಾಂಗುಷ್ಠತಃ-ಬಲಭಾಗದ (ಕಾಲಿನ) ಹೆಬ್ಬೆಟ್ಟಿನಿಂದ, ದಕ್ಷಂ-ದಕ್ಷನನ್ನೂ ಚ-ಮತ್ತು ಮಾನಸಂ-ಮನಸ್ಸಿನಿಂದ ಆದ (ಹುಟ್ಟಿದ), ನಾರದಂ ಅಪಿ-ನಾರದನನ್ನೂ (ಬ್ರಹ್ಮದೇವನು ಸೃಷ್ಟಿಸಿದನು).

ಕೃತೇಷ್ವೇವಂ ಯದಾ ನಾಸೀತ್ಸೃಷ್ಟಿಪ್ರಾಚುರ್ಯಮೇವ ಯತ್ ।
ತತ್ತದ್ದಕ್ಷಿಣಭಾಗೇನ ಸೃಷ್ಟಃ ಸ್ವಾಯಂಭುವೋ ಮನುಃ ॥ ೩೯ ॥

ಏವಂ-ಹೀಗೆ, ಕೃತೇ ಅಪಿ-(ಸೃಷ್ಟಿಯನ್ನು) ಮಾಡಿದರೂ ಕೂಡ, ಯದಾ-ಯಾವಾಗ, ಸೃಷ್ಟಿಪ್ರಾಚುರ್ಯಂ-ಸೃಷ್ಟಿವಿಸ್ತಾರವು (ಅಭಿವೃದ್ಧಿಯು), ಯತ್-ಯಾವ ಕಾರಣದಿಂದ, ನ ಆಸೀತ್ ಏವ-ಆಗಲೇ ಇಲ್ಲವೋ, ತತ್-ಆ ಕಾರಣದಿಂದ, ತದ್ದಕ್ಷಿಣಾಭಾಗೇನ-(ತನ್ನ ದೇಹದ) ಬಲಪಾರ್ಶ್ವದಿಂದ, ಸ್ವಾಯಂಭುವಃ ಮನುಃ-ಸ್ವಾಯಂಭುವ ಮನುವು, ಸೃಷ್ಟಃ-ಸೃಷ್ಟಿಸಲ್ಪಟ್ಟನು.

---

ನಾರದನನ್ನೂ ಸೃಷ್ಟಿಮಾಡಿದನು (೩೮). ಹೀಗೆ ಸನಕಾದಿ ಪ್ರಜರನ್ನು ಸೃಷ್ಟಿಮಾಡಿದರೂ, ಸೃಷ್ಟಿಯು ವಿಸ್ತಾರವಾಗಿ ಹಬ್ಬಲಿಲ್ಲ ಆಗ, ತನ್ನ ದೇಹದ ದಕ್ಷಿಣಭಾಗದಿಂದ, ಬ್ರಹ್ಮದೇನು, ಸ್ವಾಯಂಭುವ ಮನುವನ್ನು ಸೃಷ್ಟಿಮಾಡಿದನು (೩೯). ಹಾಗೂ, ಎಡಭಾಗದಿಂದ ಪರಮ ಸುಂದರ ಸ್ತ್ರೀಯಾದ ಶತರೂಪಾದೇವಿಯನ್ನೂ ಸೃಷ್ಟಿಸಿದನು; ಆಕೆಯನ್ನು ಸ್ವಾಯಂಭುವ ಮನುವಿಗೆ ಕೊಟ್ಟು ಮದುವೆ ಮಾಡಿದನು; ಶತರೂಪಾದೇವಿಯಾದರೋ ದುಃಖಿತಳಂತೆ

ವಾಮೇನ ಶತರೂಪಾ ಚ ನಾರೀ ಪರಮಸುಂದರೀ ।
ತಾಂ ಯದಾ ಮನವೇ ಪ್ರಾದಾದ್ಬ್ರಹ್ಮಾ ಸಾರುದದಾರ್ತವತ್ ॥ ೪೦ ॥

ಚ-ಮತ್ತು (ಬಲಭಾಗದಿಂದ ಮನುವನ್ನು ಸೃಷ್ಟಿಸಿದ್ದಲ್ಲದೇ), ವಾಮೇನ-ಎಡ ಭಾಗದಿಂದ, ಪರಮಸುಂದರೀ-ಶ್ರೇಷ್ಠ ಸುಂದರಿಯಾದ, ಶತರೂಪಾ-ಶತರೂಪಾ ನಾಮಕಳಾದ, ನಾರೀ-ಸ್ತ್ರೀಯು, (ಸೃಷ್ಟಾ-ಸೃಷ್ಟಿಸಲ್ಪಟ್ಟಳು); ಬ್ರಹ್ಮಾ-ಬ್ರಹ್ಮದೇವನು, ಯದಾ-ಯಾವಾಗ, ತಾಂ-ಶತರೂಪಾದೇವಿಯನ್ನು ಮನವೇ-ಸ್ವಾಯಂಭುವ ಮನುವಿಗೆ, ಪ್ರಾದಾತ್-ವಿವಾಹಮಾಡಿಕೊಟ್ಟನೋ, (ಆಗ), ಸಾ-ಆಕೆಯು, ಆರ್ತವತ್-ದುಃಖಿಯಂತೆ, ಆರುದತ್-ರೋದನಮಾಡಿದಳು.

ವಯಂ ನಾರ್ಯೋಽಬಲಾಸ್ತಾತ್ ಸರ್ವದಾ ಪರತಂತ್ರಕಾಃ ।
ನ ಪಾರತಂತ್ರ್ಯಸದೃಶಂ ದುಃಖಮನ್ಯದ್ಧಿ ವಿದ್ಯತೇ ॥ ೪೧ ॥

ಬಾಲಾನಾಂ ಧಾರಣಂ ಗರ್ಭೇ ವರ್ಧನಂ ಚ ದಿನೇ ದಿನೇ ।
ರಕ್ತಮೂತ್ರಮಲಶ್ಲೇಷ್ಮಶೋಧನಂ ರೋದನಾದಿ ಚ ॥ ೪೨ ॥

ಸೋಢವ್ಯಂ ಕಥಮಸ್ಮಾಭಿರ್ಬಾಲಾನಾಂ ಸಂಭೃತೌ ಸದಾ ।
ಕದಾ ಸ್ವೋದರಪೂರ್ತಿಃ ಯತ್ನಪ್ರಮುಖಾನಿ ದಿನೇ ದಿನೇ ॥ ೪೩ ॥

ಸಕ್ತಾಶ್ಚಿತ್ತಾಸಮಾಧಾನೇ ಕದಾ ವಿಷ್ಣುಂ ಸ್ಮರೇಮಹಿ ।
ಇತ್ಯಾದ್ಯನೇಕಧಾ ಕ್ಲೇಶಾಃ ಸಂಸಾರಾಸಕ್ತಚೇತಸಾಂ ॥ ೪೪ ॥

ನಾರೀಣಾಂ ಚ ವಿಶೇಷೇಣ ಪ್ರೋಚ್ಯ ಚಕ್ರೇ ಮಹತ್ತಪಃ ।

ತಾತ-ಹೇ ತಂದೆ!, ನಾರ್ಯಃ-ಸ್ತ್ರೀಯರಾದ, ವಯಂ-ನಾವು, ಸರ್ವದಾ-ಸದಾ, ಅಬಲಾಃ-ಅಬಲೆಯರು (ಬಲಹೀನರು); ಪರತಂತ್ರಕಾಃ-ಅನ್ಯರಿಂದ ನಿಯಮ್ಯರು (ಅನ್ಯಾಧೀನರು); ಪಾರತಂತ್ರ್ಯಸದೃಶಂ-ಪರಾಧೀನತೆಗೆ ಸಮವಾದ, ದುಃಖಂ-ದುಃಖವು, ಅನ್ಯತ್-ಮತ್ತೊಂದು, ನ ವಿದ್ಯತೇ ಹಿ-ಇರುವುದಿಲ್ಲವೆಂಬುದು ಪ್ರಸಿದ್ಧವು (ಸರ್ವಾನುಭವಸಿದ್ಧವು); ಗರ್ಭೇ-ಗರ್ಭದಲ್ಲಿ (ಹೊಟ್ಟೆಯಲ್ಲಿ), ಬಾಲಾನಾಂ-ಮಕ್ಕಳ

---

ಅಳುವುದಕ್ಕಾರಂಭಿಸಿದಳು (ಸಂತೋಷಚಿತ್ತಳಾಗಿ ಮನುವಿನೊಂದಿಗೆ ಸಂಸಾರ ಮಾಡಲಿಚ್ಛಿಸಲಿಲ್ಲ) (೪೦). ಮತ್ತು ಹೇ ತಾತ! 'ಸ್ತ್ರೀಯರಾದ ನಾವು ಅಬಲೆಯರು, ಪರತಂತ್ರರು— ಪರಾಧೀನತೆಗೆ ಸದೃಶವಾದ ದುಃಖವಿಲ್ಲ; ಗರ್ಭದಲ್ಲಿ ಮಕ್ಕಳನ್ನು ಧಾರಣಮಾಡಬೇಕು; ದಿನೇ ದಿನೇ ಬೆಳೆಯುವ ಗರ್ಭಭಾರವನ್ನು ಸಹಿಸಿ, ಪ್ರಸವಿಸಿ,

(ಮಕ್ಕಳನ್ನು), ಧಾರಣಂ- ಧರಿಸುವುದು; ಚ-ಮತ್ತು ದಿನೇ ದಿನೇ-ದಿನದಿನಕ್ಕೂ, ವರ್ಧನಂ-(ಗರ್ಭವು) ಬೆಳೆಯುವುದು ಅಥವಾ (ಪ್ರಸವವಾದ ನಂತರ), (ವರ್ಧನಂ-ಶಿಶುಗಳನ್ನು ಬೆಳೆಸುವುದು); (ದಿನೇ ದಿನೇ-ಪ್ರತಿನಿತ್ಯವೂ), ಶಕೃನ್ಮೂತ್ರಮಲ ಶ್ಲೇಷ್ಮಶೋಧನಂ- (ಮಕ್ಕಳ) ಮಲಮೂತ್ರ, ಬೆವರು, ಕಫ ಇತ್ಯಾದಿಗಳನ್ನು ತೆಗೆದು ಶುದ್ಧಗೊಳಿಸುವುದು; ಚ-ಮತ್ತು ರೋದನಾದಿ-(ಅವುಗಳ) ಅಳುವುದು, ಹಠ ಮೊದಲಾದವುಗಳು, ಅಸ್ಮಾಭಿಃ-ನಮ್ಮಿಂದ (ಸ್ತ್ರೀಯರಿಂದ), ಕಥಂ-ಹೇಗೆ, ಸೋಢವ್ಯಂ - ಸಹಿಸತಕ್ಕದ್ದು (ಬಹುಕ್ಲೇಶವೇ ಸರಿ); ಸದಾ - ನಿರಂತರವಾಗಿ, ಬಾಲಾನಾಂ-ಮಕ್ಕಳ, ಸಂಭೃತೌ-ರಕ್ಷಣೆ ಮಾಡುವುದರಲ್ಲಿ, ಸ್ವೋದ್ಧರಣೇ-ನಮ್ಮ ಆತ್ಮೋದ್ಧಾರಕ್ಕಾಗಿ, ಕದಾ - ಯಾವಾಗ, ಯತ್ನಪ್ರಮುಖಾನಿ - ಯತ್ನಾದಿ ಸಾಧನಗಳು ಸಂಭವಿಸಬಲ್ಲವು?); ದಿನೇ ದಿನೇ-ಪ್ರತಿನಿತ್ಯವೂ, ಸಕ್ತಾಃ-(ಮಕ್ಕಳ ಪೋಷಣೆ ಮುಂತಾದ ಕಾರ್ಯಗಳಲ್ಲಿ) ಆಸಕ್ತರಾದ ನಾವು, ಚಿತ್ತಸಮಾಧಾನೇ- ಮನಃಶಾಂತಿಯೇ ಇಲ್ಲದಿರಲು, ವಿಷ್ಣುಂ-ಶ್ರೀವಿಷ್ಣುವನ್ನು ಕದಾ-ಯಾವಾಗ, ಸ್ಮರೇಮಹಿ- ಸ್ಮರಿಸೋಣ (ವಿಷ್ಣುಸ್ಮರಣೆಗೆ ಅವಕಾಶವೇ ಇರುವುದಿಲ್ಲ); ಸಂಸಾರಾಸಕ್ತ ಚೇತಸಾಂ - ಸಂಸಾರದಲ್ಲಿ ಆಸಕ್ತರಾದ ಜೀವರಿಗೆ, ವಿಶೇಷೇಣ - ವಿಶೇಷವಾಗಿ, ನಾರೀಣಾಂ - ಸ್ತ್ರೀಯರಿಗೆ, ಇತ್ಯಾದಿ ಅನೇಕಧಾ-ಈ ಮುಂತಾದ ಬಹುವಿಧದ, ಕ್ಲೇಶಾಃ-ಕ್ಲೇಶಗಳು (ಇರುತ್ತವೆ), (ಎಂದು), ಪ್ರೋಚ್ಯ- (ತಂದೆಯಾದ ಮನುವಿಗೆ) ಹೇಳಿ, ಮಹತ್ತಪಃ-ಮಹತ್ತಾದ ತಪಸ್ಸನ್ನು ಚಕ್ರೇ-(ಶತರೂಪಾದೇವಿಯು) ಆರಂಭಿಸಿದಳು.

---

ನಂತರ ಮಕ್ಕಳ ಪ್ರತಿನಿತ್ಯದ ರಕ್ಷಣೆ ಅಭಿವೃದ್ಧಿಗಳನ್ನು ಲಕ್ಷಿಸುತ್ತ ಅವುಗಳ ಮಲಮೂತ್ರಶ್ಲೇಷ್ಮಾದಿಗಳನ್ನು ತೆಗೆದು ಶುದ್ಧಮಾಡಬೇಕು; ಮಕ್ಕಳ ರೋದನಾದಿಗಳನ್ನು ಸಹಿಸಬೇಕು; ಈ ಎಲ್ಲವನ್ನೂ ಸಹಿಸಿಕೊಳ್ಳುವುದು ಸ್ತ್ರೀಯರಿಗೆ ಬಹು ಕ್ಲೇಶಕರವು; ಮಕ್ಕಳ ಪಾಲನೆ ಮತ್ತು ಅಭಿವೃದ್ಧಿಗಳನ್ನು ಪ್ರತಿನಿತ್ಯವೂ ಬಹು ಎಚ್ಚರದಿಂದ ನಿರ್ವಹಿಸಬೇಕು; ಇವುಗಳ ಮಧ್ಯದಲ್ಲಿ ತಮ್ಮ ಆತ್ಮೋದ್ಧಾರದ ಯತ್ನಾದಿಗಳಿಗೆಲ್ಲಿಂದ ಅವಕಾಶ ದೊರೆಯ ಬೇಕು? (ದೊರೆಯುವುದೇ ಇಲ್ಲ); ಸಂಸಾರದಲ್ಲಿ ಆಸಕ್ತವಾದ ಚಿತ್ತವುಳ್ಳವರಿಗೆ, ವಿಶೇಷವಾಗಿ ಸ್ತ್ರೀಯರಿಗೆ, ಚಿತ್ತಶಾಂತಿಯೇ ಇರುವುದಿಲ್ಲ—ಹೀಗಿರಲು ವಿಷ್ಣು ಸ್ಮರಣೆಗೆಡೆಯಿಲ್ಲ; ಎಂದು ಹೇಳಿ ಶತರೂಪಾದೇವಿಯು ಮಹತ್ತರವಾದ ತಪಸ್ಸಿಗೆ ಕುಳಿತಳು (೪೧-೪೪). ದೇವಮಾನವ ೧೦೦೦೦ ವರ್ಷಗಳ ಕಾಲ ಗತಿಸಿದರೂ, ತಪಸ್ಸಿನಲ್ಲಿದ್ದ ತನ್ನ ಮಗಳನ್ನು ನೋಡಲಪೇಕ್ಷಿಸಿ, ಕೃಪಾಪೂರ್ಣ ಮನಸ್ಸಿನಿಂದ, ಬ್ರಹ್ಮದೇವನು, ಅವಳ ಬಳಿ ಹೋದನು (೪೫). ತನ್ನಲ್ಲಿಗೆ ಬಂದ ತಂದೆಯನ್ನು ಕಂಡು, ಶತರೂಪಾದೇವಿಯು, ನಮಸ್ಕರಿಸಲು, ಬ್ರಹ್ಮದೇವನು ಇಚ್ಛಿತವರವನ್ನು ಬೇಡು, ಕೊಡುತ್ತೇನೆಂದನು; ತಪೋನಿಯಮಗಳಲ್ಲಿದ್ದ ಶತರೂಪಾದೇವಿಯು ಸಂಸಾರದಿಂದ

**ದಿವ್ಯವರ್ಷಸಹಸ್ರಂ ತಾಂ ತಪಸ್ಯಾಸಕ್ತಮಾನಸಾಂ ॥ ೪೫ ॥**
**ದ್ರಷ್ಟುಂ ಜಗಾಮ ಕೃಪಯಾವಿಷ್ಟಚೇತಾಃ ಪಿತಾಮಹಃ ।**

ದಿವ್ಯವರ್ಷಸಹಸ್ರಂ-ದೇವಮಾನದ ೧೦೦೦ ವರ್ಷಗಳವರೆಗೆ, ತಪಸಿ-ತಪಸ್ಸಿನಲ್ಲಿ ಆಸಕ್ತಮಾನಸಾಂ-ಆಸಕ್ತವಾದ ಮನಸ್ಸುಳ್ಳ, ತಾಂ-ಆಕೆಯನ್ನು (ಶತರೂಪಾದೇವಿಯನ್ನು), ದ್ರಷ್ಟುಂ-ನೋಡಲು, ಕೃಪಯಾವಿಷ್ಟಚೇತಾಃ-ಕೃಪಾಪೂರ್ಣ ಮನಸ್ಸುಳ್ಳ, ಪಿತಾಮಹಃ-ಬ್ರಹ್ಮದೇವನು, ಜಗಾಮ-(ಆಕೆಯ ಬಳಿಗೆ) ಹೋದನು.

**ದ್ರಷ್ಟ್ವಾ ತಂ ಪ್ರಣನಾಮೈಷಾ ಛಂದಿತಾ ತೇನ ಸಾ ವರೈಃ ॥ ೪೬ ॥**
**ವವ್ರೇ ಮುಕ್ತಿಂ ದೇಹಬಂಧಾತ್ ಶತರೂಪಾ ಧೃತವ್ರತಾ ।**

ತಂ-ಬ್ರಹ್ಮದೇವನನ್ನು ದೃಷ್ಟ್ವಾ-ಕಂಡು, ಸಾ-ಆ ಶತರೂಪಾದೇವಿಯು, ಪ್ರಣನಾಮ-ನಮಸ್ಕರಿಸಿದಳು; ತೇನ-ಆತನಿಂದ, ವರೈಃ-ವರಗಳಿಂದ, ಛಂದಿತಾ-ಸಂತೋಷಗೊಳಿಸಲ್ಪಟ್ಟು (ಇಚ್ಛಿತ ವರಗಳನ್ನು ಕೇಳೆಂದು ಹೇಳಲ್ಪಟ್ಟು), ಧೃತವ್ರತಾ-ವ್ರತವನ್ನು ಧರಿಸಿದ್ದ (ತಪಸ್ಸಂಬಂಧವಾದ ನಿಯಮಗಳಲ್ಲಿದ್ದ), ಶತರೂಪಾ-ಶತರೂಪಾದೇವಿಯು, ದೇಹಬಂಧಾತ್-ದೇಹಬಂಧದಿಂದ (ಸಂಸಾರದಿಂದ), ಮುಕ್ತಿಂ-ಮೋಕ್ಷವನ್ನು ವವ್ರೇ-ವರಿಸಿದಳು (ವರವನ್ನಾಗಿ ಕೇಳಿದಳು).

---

ಮುಕ್ತಿಯನ್ನೇ ಬೇಡಿದಳು (೪೬). ಆದರೆ, ಬ್ರಹ್ಮದೇವನು, ಸಂಸಾರದಲ್ಲಿದ್ದರೂ, ದೇಹಕೃತಕರ್ಮಬಂಧವಿರುವುದಿಲ್ಲವೆಂಬ ಆಶ್ವಾಸನೆಯನ್ನಿತ್ತನು— ದೇಹವು ಬಂಧಕವಾಗಕೂಡದು—ಆತ್ಮೋದ್ಧಾರಕ್ಕೆ ಆ ಗೃಹಕರ್ಮಗಳು ಪ್ರತಿಬಂಧವಾಗಕೂಡದೆಂಬ ವರವನ್ನೂ ಕೊಟ್ಟನು; ಅಲ್ಲಿಂದ ಮುಂದೆ, (ನಿನಗೆ ಮಾತ್ರವಲ್ಲ) ಎಲ್ಲ ಸ್ತ್ರೀಯರಿಗೂ ವಿವಿಧ ಗೃಹಕರ್ಮಗಳಲ್ಲಿ ಆಸಕ್ತರಾದರೂ (ತೊಡಗಿದ್ದರೂ), ಅಲ್ಪಶೌಚಾದಿಗಳಿಂದ ಶುದ್ಧಿಯುಂಟಾಗಲಿ[1]—ಹಾಗೂ, ಪತಿಸೇವೆ ಮತ್ತು ಶಿಶುಗಳ ಪರಿಚರ್ಯಾದಿಗಳನ್ನಾಗಲಿ ಅಥವಾ ಬೇರಾವ ಗೃಹಕರ್ಮಗಳನ್ನಾಗಲಿ, ಕೇಶವನನ್ನು ಸ್ಮರಿಸಿ ವಿಷ್ಣುಪೂಜೆಯೆಂದು ಸಂಕಲ್ಪಿಸಿ, ಆಚರಿಸುವುದರಿಂದ, ಬ್ರಾಹ್ಮಣರು ತಪಸ್ಸಿನಿಂದ ಪಡೆಯುವ ಮಹಾಸಿದ್ಧಿಯನ್ನೇ (ಮೋಕ್ಷವನ್ನೇ) ಹೊಂದಲಿ; ಮತ್ತು ಸ್ತ್ರೀಯರು ಅಸ್ವತಂತ್ರರಾದರೂ, ಅವರ ಪತಿಗಳೇ ಮೊದಲಾದ ಪುರುಷರು, ಅವರ ಮನಸ್ಸನ್ನು ಸದಾ ಅನುವರ್ತಿಸಲಿ, ಎಂಬ ವರಗಳನ್ನು ಅಪ್ರಾರ್ಥಿತನಾಗಿ, ಭಾವೀ ಸ್ತ್ರೀಲೋಕಕ್ಕೇ ಅನುಗ್ರಹಿಸಿದನು (೪೭-೫೦). ಸ್ತ್ರೀಯರನ್ನು ಮತ್ತೂ ಅನುಗ್ರಹಿಸುತ್ತ ಬ್ರಹ್ಮದೇವನು ಹೀಗೆ ಹೇಳಿದನು:—'ಸ್ತ್ರೀಯರ ಲೀಲಾ

---

1. ಶಾಸ್ತ್ರಗಳು, ಪುರುಷರಿಗೆ ವಿಧಿಸುವ ಮೃತ್ತಿಕಾಶೌಚಾದಿಗಳ ಸಂಖ್ಯೆಗಿಂತ ಕಡಿಮೆ ಸಂಖ್ಯೆಯ ಶೌಚವನ್ನು ಸ್ತ್ರೀಯರಿಗೆ ವಿಧಿಸುತ್ತವೆ.

ವಿಧಾತಾ ತಾಮಥೋವಾಚ ದೇಹಬಂಧೋ ನ ತೇ ಭವೇತ್ ।। ೪೭ ।।

ಅದ್ಯಪ್ರಭೃತಿ ನಾರೀಣಾಂ ಸಕ್ತಾನಾಂ ಗೇಹಕರ್ಮಸು ।
ಶೌಚೇನಾಲ್ಪೇನ ಶುದ್ಧಿಃ ಸ್ಯಾತ್ ಪತಿಶುಶ್ರೂಷಣಂ ಹಿ ಯತ್ ।। ೪೮ ।।

ಬಾಲಾದಿಪರಿಚರ್ಯಾ ಚ ಗೃಹಕರ್ಮ ತಥೇತರತ್ ।
ವಿಷ್ಣುಪೂಜೇತಿ ಸಂಕಲ್ಪ್ಯ ಸ್ಮರಂತ್ಯಃ ಕೇಶವಂ ಯದಿ ।। ೪೯ ।।

ಪ್ರಾಪ್ನುಯುರ್ಮಹತೀಂ ಸಿದ್ಧಿಂ ಯಥಾ ಹಿ ತಪಸಾ ದ್ವಿಜಾಃ ।
ತಾಸಾಂ ತು ಪಾರತಂತ್ರ್ಯೇಪಿ ಪತ್ಯಾದ್ಯಾಸ್ತನ್ಮನೋನುಗಾಃ ।। ೫೦ ।।

ಅಥ-ಆ ನಂತರ, ವಿಧಾತಾ-ಬ್ರಹ್ಮದೇವನು, ತೇ-ನಿನಗೆ, ದೇಹಬಂಧಃ-ದೇಹಬಂಧವು (ಸಂಸಾರಬಂಧವು-ವಿವಿಧ ದೇಹಗಳಲ್ಲಿ ಸುತ್ತುವುದೆಂಬ ಫಲರೂಪದ ಕರ್ಮಬಂಧವು, ನ ಭವೇತ್-ಉಂಟಾಗುವುದಿಲ್ಲ(ಎಂದು), ತಾಂ-ಮಗಳನ್ನು ಕುರಿತು, ಉವಾಚ-ಹೇಳಿದನು (ಮತ್ತೂ ಹೇಳಿದನು); ಅದ್ಯಪ್ರಭೃತಿ-ಇಂದಿನಿಂದ ಮುಂದೆ, ಗೃಹಕರ್ಮಸು-ಗೃಹಕರ್ಮಗಳಲ್ಲಿ (ನೀನು ವಿವರಿಸಿದ ಗರ್ಭಧಾರಣ, ಶಿಶುರಕ್ಷಣಾದಿ ಕರ್ಮಗಳಲ್ಲಿ), ಸಕ್ತಾನಾಂ-ಆಸಕ್ತರಾದ, ನಾರೀಣಾಂ-ಸ್ತ್ರೀಯರಿಗೆ, ಅಲ್ಪೇನ-ಸ್ವಲ್ಪ ಶೌಚೇನ-(ಮಣ್ಣು ನೀರಿನಿಂದ ಮಾಡಿಕೊಳ್ಳುವ) ಶೌಚಾದಿಗಳಿಂದಲೇ, ಶುದ್ಧಿಃ-ಶುದ್ಧಿಯು, ಸ್ಯಾತ್-ಆಗಲಿ (ಪುರುಷರಷ್ಟು ಶೌಚಾದಿಗಳು ಬೇಕಿಲ್ಲ); ಮತ್ತು ಯತ್-ಯಾವ, ಪತಿಶುಶ್ರೂಷಣಾಂ-ಪತಿಸೇವೆಯೂ, ಬಾಲಾದಿ ಪರಿಚರ್ಯಾ ಚ-ಶಿಶುಗಳ ವಿವಿಧ ಸೇವೆಗಳೂ, ತಥಾ-ಮತ್ತು ಇತರತ್ (ಇವುಗಳಿಂದ) ಬೇರೆಯಾದ, ಗೃಹಕರ್ಮ-ಗೃಹಕೃತ್ಯಗಳೋ (ಇವುಗಳನ್ನು ಕೇಶವಂ-ಶ್ರೀಹರಿಯನ್ನು ಸ್ಮರಂತ್ಯಃ-ಸ್ಮರಿಸಿ, ವಿಷ್ಣುಪೂಜಾ ಇತಿ-ಶ್ರೀವಿಷ್ಣುವಿನ ಪೂಜೆಯೆಂದು, ಸಂಕಲ್ಪ್ಯ-ಸಂಕಲ್ಪಿಸಿ (ಮನಸ್ಸಿನಲ್ಲಿ ಚಿಂತಿಸಿ), ಯದಿ (ಕುರ್ಯುಃ)-(ಸ್ತ್ರೀಯರು) ಮಾಡುವವರಾದರೆ, ಮಹತೀಂ- ಶ್ರೇಷ್ಠವಾದ, ಸಿದ್ಧಿಂ-ಸಿದ್ಧಿಯನ್ನು (ಮೋಕ್ಷವನ್ನು), ತಪಸಾ-ತಪಸ್ಸಿನಿಂದ, ದ್ವಿಜಾಃ-ಬ್ರಾಹ್ಮಣರು, ಯಥಾ-ಹೇಗೆ ಹೊಂದುವರೋ ಹಾಗೆ, ಪ್ರಾಪ್ನುಯುಃ- ಹೊಂದುತ್ತಾರೆ; ತಾಸಾಂ ತು-ಆ ಸ್ತ್ರೀಯರಿಗೆ, ಪಾರತಂತ್ರ್ಯೇಪಿ-ಪರಾಧೀನತ್ವವಿದ್ದರೂ, ಪತ್ಯಾದ್ಯಾಃ-(ಅವರ)ಪತಿಯೇ ಮೊದಲಾದ ವರು, ತನ್ಮನೋನುಗಾಃ-(ಅವರ-ಆ ಸ್ತ್ರೀಯರ) ಮನಸ್ಸನ್ನು ಅನುಸರಿಸುವವರು (ಆಗಿರುವರು).

---

ಕಟಾಕ್ಷಗಳಿಂದಲೂ, ಮಂದಹಾಸಯುಕ್ತ ಮುಖಗಳಿಂದಲೂ ಆಕರ್ಷಿತರಾಗಿ, ವಿದ್ವಾಂಸರೂ, ಬಲಿಷ್ಠರೂ ಆದ ಪುರುಷರು ಸಹ, ಸಹಜವಾಗಿ, ಮೋಹಿತರಾಗಲಿ; ಯೋಗಾರೂಢರೂ, ಸರ್ವಸಂಗಪರಿತ್ಯಾಗ ಮಾಡಿದ ವಿರಕ್ತರೂ, ಸ್ತ್ರೀಯರನ್ನು

ಲೀಲಾವಲೋಕನೈಃ ಸ್ಮೇರೈರ್ವದನೈರ್ಹೃತಚೇತಸಃ ।
ಸ್ವಭಾವಾದೇವ ಮುಗ್ಧಾಸ್ಸ್ಯುರ್ವಿದ್ವಾಂಸೋ ಬಲಿನೋಽಪಿ ವಾ ॥ ೫೧ ॥

ಯೋಗಾರೂಢಾ ವಿರಕ್ತಾ ಯೇ ತ್ಯಕ್ತಸರ್ವಪರಿಗ್ರಹಾಃ ।
ತೇಽಪಿ ನಾರೀಂ ವಿಲೋಕ್ಯೈವ ಮುಹ್ಯಂತು ಕಿಮುತಾಪರೇ ॥ ೫೨ ॥

ಲೀಲಾವಲೋಕನೈಃ-(ಸ್ತ್ರೀಯರು) ಕ್ರೀಡೆಗೋಸುಗ ಬೀರುವ ಕಟಾಕ್ಷಗಳಿಂದಲೂ (ವಿಲಾಸದ ನೋಟಗಳಿಂದಲೂ), ಸ್ಮೇರೈಃ - ಮಂದಹಾಸವುಳ್ಳ, ವದನೈಃ - ಮುಖಗಳಿಂದಲೂ, ಹೃತಚೇತಸಃ- ಅಪಹೃತವಾದ ಮನಸ್ಸುಳ್ಳ ಪುರುಷರು, ವಿದ್ವಾಂಸಃ- ಪಂಡಿತರೂ, ವಾ- ಅಥವಾ, ಬಲಿನಃ ಅಪಿ- ಬಲಶಾಲಿಗಳೂ ಸಹ (ಜ್ಞಾನಿಗಳು ಮತ್ತು ಪರಾಕ್ರಮಿಗಳೂ ಸಹ), ಸ್ವಭಾವಾದೇವ-ಸ್ವಭಾವವಾಗಿಯೇ (ಸಹಜವಾಗಿ), ಮುಗ್ಧಾಃ- ಮೋಹಿತರು, ಸ್ಯುಃ- ಆಗುತ್ತಾರೆ (ಆಗಲಿ); ಯೇ- ಯಾವ ಪುರುಷರು, ಯೋಗಾರೂಢಾ- ಧ್ಯಾನಸಿದ್ಧಿಯನ್ನು ಹೊಂದಿರುವರೋ, ತ್ಯಕ್ತಸರ್ವಪರಿಗ್ರಹಾಃ- ಸರ್ವಸಂಗತ್ಯಾಗಮಾಡಿದ, ವಿರಕ್ತಾಃ-ವಿರಕ್ತರೋ (ವೈರಾಗ್ಯ ಶಾಲಿಗಳೋ), ತೇ ಅಪಿ- ಅವರೂ ಸಹ, ನಾರೀಂ- ಸ್ತ್ರೀಯನ್ನು ವಿಲೋಕ್ಯ ಏವ- ನೋಡಿದ ಮಾತ್ರವೇ, ಮುಹ್ಯಂತು- ಮೋಹಗೊಳ್ಳಲಿ (ಮೋಹಗೊಳ್ಳುತ್ತಾರೆ); ಅಪರೇ-ಇತರರು, ಕಿಮುತ- (ಹಾಗೆ ಮೋಹಿತರಾಗುವರೆಂದು) ಹೇಳಲೇನು?

ಪರತಂತ್ರಾಃ ಸ್ವತಂತ್ರಾಸ್ತಾಃ ಸಬಲಾ ಅಬಲಾ ಅಪಿ ।
ಯಾಸಾಂ ಮನೋಽನುವರ್ತೇರನ್ ಜ್ಞಾನಿನೋಽಪಿ ಮಹಾಬಲಾಃ ॥ ೫೩ ॥

---

ನೋಡುವ ಮಾತ್ರದಿಂದ ಮೋಹಿತರಾಗಲಿ; ಇಂಥ ಪುರುಷರ ಪಾಡು ಹೀಗಾದಮೇಲೆ (ನನ್ನ ಮಾತುಗಳು ಎಂದೂ ಸುಳ್ಳಾಗುವುದಿಲ್ಲ—'ನ ಭಾರತೀ ಮೇಂಗ ಮೃಷೋಪಲಕ್ಷ್ಯತೇ' ಇತ್ಯಾದಿ ಭಾಗವತ ವಾಕ್ಯಗಳು ಹೇಳುವಂತೆ, ನನ್ನ ವಾಣಿಯು ಎಂದೂ ಅಸತ್ಯವಾಗವುದಿಲ್ಲವಾದ್ದರಿಂದ), ಅನ್ಯಪುರುಷರು ಮೋಹಿತರಾಗಿ, ನಾರಿಯರನ್ನು ಅನುಸರಣ ಮಾಡುವರೆಂದು ಹೇಳಲೇನು?' (೫೧-೫೨). ಜ್ಞಾನಿಗಳೂ, ಮಹಾಬಲಶಾಲಿಗಳೂ ಸಹ ಯಾರ ಮನೋಭಾವಗಳನ್ನೇ ಅನುಸರಿಸಿ ವರ್ತಿಸುವರೋ, ಆ ಸ್ತ್ರೀಯರು, ಅಸ್ವತಂತ್ರರಾದರೂ ಸ್ವತಂತ್ರರೇ ಸರಿ ಮತ್ತು ಅಬಲೆಯರಾದರೂ ಅವರೇ ಸಬಲರು (೫೩), ಮುಂದಿನ ಸ್ತ್ರೀಯರ ವಿಷಯದಲ್ಲಿ ಸಹ, ಅವರಿಗೆ ಈ ಹಿಂದೆ ಹೇಳಿದಂತೆ ವರಗಳನ್ನು ಕೊಟ್ಟಿರುವೆನಾದ್ದರಿಂದ, ನೀನು ಯಾವ ಚಿಂತೆಯನ್ನೂ ಮಾಡುವ ಕಾರಣವಿಲ್ಲ; ನಿನ್ನ ಆತ್ಮೋದ್ಧಾರದ ವಿಷಯದಲ್ಲಿ ಯೋಚಿಸುವ ಕಾರಣವಿಲ್ಲೆಂದು ಹೇಳಲೇನಿದೆ! ಆದ್ದರಿಂದ, ತಪಸ್ಸನ್ನು ನಿಲ್ಲಿಸು; ಗೃಹಧರ್ಮಗಳನ್ನು ಪಾಲಿಸು—ನಿನಗೆ ಮಂಗಲವಾಗಲಿ; ಸ್ವಾಯಂಭುವ ಮನುವಿನೊಂದಿಗೆ ಬಹುಕಾಲ ವಿಹರಿಸು—

ಮಹಾಬಲಾಃ-ಮಹಾಬಲಿಷ್ಠರೂ, ಜ್ಞಾನಿನಃ ಅಪಿ-ಜ್ಞಾನಿಗಳೂ ಸಹ, ಯಾಸಾಂ-ಯಾರ, ಮನಃ - ಮನೋಭಾವಗಳನ್ನು ಅನುವರ್ತೇರನ್ - ಅನುಸರಿಸುತ್ತಾರೆಯೋ, ತಾಃ-ಅವರು (ಸ್ತ್ರೀಯರು), ಪರತಂತ್ರಾಃ ಅಪಿ-ಪರಾಧೀನರಾದರೂ, ಸ್ವತಂತ್ರಾಃ-ಸ್ವತಂತ್ರರೇ; ಅಬಲಾಃ ಅಪಿ-ಅಬಲೆಯರಾದರೂ, ಸಬಲಾಃ-ಸಬಲರೇ ಸರಿ (ಪರತಂತ್ರರಾದರೂ ಸ್ವತಂತ್ರರಿದ್ದಂತೆಯೇ ಸರಿ—ದೇಹತಃ ಅಬಲೆಯರೆನಿಸಿದರೂ, ಅವರೇ ಬಲಿಷ್ಠರು).

ನೈವ ವತ್ಸೇ ತ್ವಯಾ ಕಾರ್ಯಾ ಭಾವಿಯೋಷಿತ್ಸು ಗೋಚರಾ ।
ಚಿಂತಾಣುರಪಿ ಕಿಂ ಬ್ರೂಯಾಂ ತವ ಸ್ವಾತ್ಮವಿಮೋಕ್ಷಣೇ ॥ ೫೪ ॥

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಮೋದಸ್ವ ಮನುನಾ ಚಿರಂ ।
ಅನುಭೂಯ ಮಹತ್ಸೌಖ್ಯಂ ಮೋಕ್ಷಂ ವ್ರಜ ಸಹಾಮುನಾ ॥ ೫೫ ॥

ಇತ್ಯುಕ್ತ್ವಾ ಪಾಣಿನಾ ತೇನ ದಯಯಾ ಸ್ಪರ್ಶಿತಾ ಸತೀ ।
ಉತ್ಥಾಯ ನತ್ವಾ ತಂ ದೇವಂ ಸಿಷೇವೇ ಪತಿಮಾತ್ಮನಃ ॥ ೫೬ ॥

ವತ್ಸೇ-ಹೇ ಮಗಳೇ! ಶತರೂಪಾದೇವಿ!, ತ್ವಯಾ-ನಿನ್ನಿಂದ, ಭಾವಿಯೋಷಿತ್ಸು-ಭಾವಿ (ಮುಂದೆ ಜನಿಸುವ) ಸ್ತ್ರೀಯರ ವಿಷಯದಲ್ಲಿ, ಗೋಚರಾ-ಮನೋವಿಷಯಕವಾದ, ಚಿಂತಾ-ಚಿಂತೆಯು, ಅಣುರಪಿ-ಸ್ವಲ್ಪವೂ ಸಹ, ನೈವ ಕಾರ್ಯಾ-ಮಾಡತಕ್ಕದ್ದಲ್ಲ (ಅವರಿಗೆ ಸಹ ಈ ಮೊದಲು ಹೇಳಿದಂತೆ ವರಗಳನ್ನು ನಾನು ಕೊಟ್ಟಿರುವೆನಾದ್ದರಿಂದ ಚಿಂತಿಸತಕ್ಕದ್ದಲ್ಲ); ತವ-ನಿನ್ನ ಸ್ವಾತ್ಮವಿಮೋಕ್ಷಣೇ- ಆತ್ಮೋದ್ಧಾರ ವಿಷಯದಲ್ಲಿ, ಕಿಂ ಬ್ರೂಯಾಂ - ಏನು ಹೇಳಲಿ (ಚಿಂತಿಸಬೇಕಾಗಿಲ್ಲವೆಂದು ಹೇಳಲೇನಿದೆ?); (ಆದ್ದರಿಂದ), ಉತ್ತಿಷ್ಠೋತ್ತಿಷ್ಠ-ಏಳು ಏಳು (ತಪಸ್ಸನ್ನು ನಿಲ್ಲಿಸು);

---

ಮಹತ್‌ಸೌಖ್ಯವನ್ನು ಅನುಭವಿಸಿ, ಅವನೊಡನೆ ಮೋಕ್ಷವನ್ನೂ ಹೊಂದು; ಬ್ರಹ್ಮದೇವನು ಹೀಗೆ ಹೇಳಿ, ದಯೆಯಿಂದ ಮಗಳ ಹಸ್ತಸ್ಪರ್ಶಮಾಡಿ, (ಕೈಹಿಡಿದು) ಮೇಲೆಬ್ಬಿಸಿದನು; ಶತರೂಪಾ ದೇವಿಯು ಬ್ರಹ್ಮದೇವನ ಅನುಗ್ರಹವಾಕ್ಯದಿಂದ ತೃಪ್ತಳಾಗಿ, ತಂದೆಯನ್ನು ನಮಸ್ಕರಿಸಿ (ಅತನ ಆಜ್ಞೆಯನ್ನು ಪಾಲಿಸಲು ಸಮ್ಮತಿಸಿ), ತನ್ನ ಪತಿಯಾದ ಮನುವನ್ನು ಸೇವಿಸಿದಳು (೫೪-೫೬). ಮನುವು, ಆಕೆಯಲ್ಲಿ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಗಂಡು ಮಕ್ಕಳನ್ನೂ ಆಕೂತಿ, ದೇವಹೂತಿ ಮತ್ತು ಪ್ರಸೂತಿಯರೆಂಬ ಪ್ರಸಿದ್ಧರಾದ ಮೂವರು ಹೆಣ್ಣುಮಕ್ಕಳನ್ನೂ ಪಡೆದನು (ಉತ್ಪಾದಿಸಿದನು) (೫೭). ಈ ಕನ್ಯಾಮಣಿಗಳು ಜನಿಸುವ ಪೂರ್ವದಲ್ಲಿ, ಬ್ರಹ್ಮದೇವನಿಂದ, ರುಚಿ ಮತ್ತು ಕರ್ದಮರೆಂಬ ಮಾನಸಪುತ್ರರು ಜನಿಸಿದ್ದರು;

ತೇ-ನಿನಗೆ, ಭದ್ರಂ-ಮಂಗಲವು (ಆಗಲಿ); ಮನುನಾ-(ನಿನ್ನ ಪತಿಯಾದ) ಸ್ವಾಯಂಭುವ ಮನುವಿನಿಂದ ಕೂಡಿ, ಚಿರಂ-ಬಹುಕಾಲದವರೆಗೆ, ಮೋದಸ್ವ-ಸುಖಿಸು; ಮಹತ್ಸೌಖ್ಯಂ-ಮಹಾಸುಖವನ್ನು ಅನುಭೂಯ-ಅನುಭವಿಸಿ, ಅಮುನಾ ಸಹ-ಅವನೊಡನೆ, ಮೋಕ್ಷಂ-ಮೋಕ್ಷವನ್ನು ವ್ರಜ-ಹೊಂದು; ಇತ್ಯುಕ್ತ್ವಾ-ಹೀಗೆ ಹೇಳಿ, ತೇನ-ಬ್ರಹ್ಮದೇವನಿಂದ, ಪಾಣಿನಾ-ಹಸ್ತದಿಂದ, ದಯಯಾ-ಕೃಪಾಪೂರ್ವಕ, ಸತೀ-ಸಾಧ್ವಿಯಾದ ಆ ಶತರೂಪಾದೇವಿಯು, ಸ್ಪರ್ಶಿತಾ-ಸ್ಪರ್ಶಿಸಲ್ಪಟ್ಟಳು (ಕೈಹಿಡಿದೆಬ್ಬಿಸಲ್ಪಟ್ಟಳು); ಉತ್ಥಾಯ-ಮೇಲೆದ್ದು ತಂ ದೇವಂ-ಆ ತನ್ನ ತಂದೆಯಾದ ಬ್ರಹ್ಮನನ್ನು ನತ್ವಾ-ನಮಸ್ಕರಿಸಿ (ಹಾಗೆ ಮಾಡುವ ತನ್ನ ಅನುಮತಿಯನ್ನು ಸೂಚಿಸಿ), ಆತ್ಮನಃ-ತನ್ನ ಪತಿಂ-ಪತಿಯನ್ನು(ಮನುವನ್ನು), ಸಿಷೇವೇ-ಸೇವಿಸಿದಳು.

**ಅಥ ತಸ್ಯಾಂ ಮನುಃ ಪುತ್ರೌ ದ್ವಾವೇವ ಸಮಜೀಜನತ್ ।**
**ಪ್ರಿಯವ್ರತಸ್ತಥೋತ್ತಾನಪಾದಃ ಕನ್ಯಾತ್ರಯಂ ತಥಾ ॥ ೫೭ ॥**

**ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ವಿಶ್ರುತಾಃ ।**

ಅಥ-ಮುಂದೆ (ಹೀಗೆ ಶತರೂಪಾದೇವಿಯು ಗೃಹಿಣೀಧರ್ಮವನ್ನು ಸ್ವೀಕರಿಸಿ ಪತಿಯನ್ನು ಸೇವಿಸುತ್ತಿರಲು), ಮನುಃ-ಸ್ವಾಯಂಭುವನು, ತಸ್ಯಾಂ-ಆಕೆಯಲ್ಲಿ ದ್ವೌಏವ-ಇಬ್ಬರೇ, ಪುತ್ರೌ-ಗಂಡುಮಕ್ಕಳನ್ನು, ಸಮಜೀಜನತ್-ಉತ್ಪಾದನೆ ಮಾಡಿದನು; (ಅವರೇ) ಪ್ರಿಯವ್ರತಃ-ಪ್ರಿಯವ್ರತನು, ತಥಾ-ಮತ್ತು ಉತ್ತಾನಪಾದಃ-ಉತ್ತಾನಪಾದನು (ಎಂಬುವರು); ತಥಾ-ಮತ್ತು ಆಕೂತಿಃ-ಆಕೂತಿ, ದೇವಹೂತಿಃ-ದೇವಹೂತಿ, ಚ-ಮತ್ತು ಪ್ರಸೂತಿಃ-ಪ್ರಸೂತಿ, ಇತಿ-ಹೀಗೆ, ವಿಶ್ರುತಾಃ-ಪ್ರಸಿದ್ಧರಾದ (ಪರಮಾತ್ಮನ ಅವತಾರಕ್ಷೇತ್ರರೂ ಅಶೇಷ ಪ್ರಜಾಸೃಷ್ಟಿಗೂ ಕಾರಣರಾಗಿ, ಪ್ರಸಿದ್ಧರಾಗುವ), ಕನ್ಯಾತ್ರಯಂ-ಮೂವರು ಕನ್ಯಾರತ್ನಗಳನ್ನೂ (ಉತ್ಪಾದಿಸಿದನು).

**ತಾವತ್ ಪ್ರಜಜ್ಞತುರ್ಧಾತುರ್ಮಾನಸೌ ರುಚಿಕರ್ದಮೌ ॥ ೫೮ ॥**

---

ಸ್ವಾಯಂಭುವ ಮನುವು, ಆಕೂತಿಯನ್ನು ರುಚಿಗೂ, ಪ್ರಸೂತಿಯನ್ನು ದಕ್ಷನಿಗೂ, ದೇವಹೂತಿಯನ್ನು ಕರ್ದಮನಿಗೂ ವಿವಾಹಮಾಡಿಕೊಟ್ಟು ಕೃತಕೃತ್ಯನಾದನು (೫೮). ಬ್ರಹ್ಮದೇವನಿಂದ ಸೃಷ್ಟರಾದ ಸಪ್ತರ್ಷಿಗಳಲ್ಲಿ ಒಬ್ಬರಾದ ಮರೀಚಿಗಳಿಂದ,ಕಶ್ಯಪನು ಹುಟ್ಟಿದನು; ಈತನಿಂದಲೇ ಜಗತ್ತಿನ ಸರ್ವ ಸ್ಥಾವರ ಜಂಗಮ ಪ್ರಾಣಿಗಳ ಉತ್ಪತ್ತಿಯಾಯಿತು; (ಜಂಗಮ ಸ್ಥಾವರ ಪ್ರಾಣಿಗಳೆಲ್ಲವೂ ಹುಟ್ಟಿ ಪ್ರಜಾಭಿವೃದ್ಧಿಯಾಯಿತು); ರುಚಿಯಿಂದ ಆಕೂತಿಯಲ್ಲಿ ಯಜ್ಞ ಮತ್ತು ದಕ್ಷಿಣಾನಾಮಕ ಅವಳಿಯ ಜನನವಾಯಿತು; ಇವರಿಬ್ಬರಲ್ಲಿ ನಾರಾಯಣನೇ ಗಂಡು—ಅವನೇ ಯಜ್ಞನಾಮಕನು; ಲಕ್ಷ್ಮೀದೇವಿಯೇ

**ಆಕೂತಿಂ ರುಚಯೇ ಪ್ರಾದಾದ್ದಕ್ಷಾಯಾಪಿ ಪ್ರಸೂತಿಕಾಂ ।**
**ದೇವಹೂತಿಂ ಕರ್ದಮಾಯ ಕೃತಕೃತ್ಯೋऽಭವನ್ಮನುಃ ॥ ೫೯ ॥**

ತಾವತ್-ಅಷ್ಟರೊಳಗೆ (ಕನ್ಯಾತ್ರಯರ ಜನನಕ್ಕೆ ಮೊದಲು), ಧಾತುಃ-ಬ್ರಹ್ಮದೇವನಿಂದ, ರುಚಿಕರ್ದಮೌ-ರುಚಿ ಮತ್ತು ಕರ್ದಮರೆಂಬ, ಮಾನಸೌ-ಮಾನಸಪುತ್ರರು, ಪ್ರಜಜ್ಞತುಃ-ಹುಟ್ಟಿದರು; ಮನುಃ-ಸ್ವಾಯಂಭುವ ಮನುವು, ರುಚಯೇ-ರುಚಿಗೆ, ಆಕೂತಿಂ-ಆಕೂತಿಯನ್ನೂ, ಅಪಿ-ಮತ್ತು ಪ್ರಸೂತಿಕಾಂ-ಪ್ರಸೂತಿಯನ್ನು ದಕ್ಷಾಯ-ದಕ್ಷನಿಗೂ,[1] ದೇವಹೂತಿಂ-ದೇವಹೂತಿಯನ್ನು ಕರ್ದಮಾಯ-ಕರ್ದಮನಿಗೂ, ಪ್ರಾದಾತ್-ವಿವಾಹಮಾಡಿಕೊಟ್ಟನು; ಕೃತಕೃತ್ಯಃ-(ಹೀಗೆ ಯೋಗ್ಯ ವರಗಳಿಗೆ ಕನ್ಯಾದಾನ ಮಾಡಿಕೊಟ್ಟು) ಕೃತಕೃತ್ಯನು (ಧನ್ಯನು), ಅಭವತ್-ಆದನು.

**ಮರೀಚೇಃ ಕಶ್ಯಪೋ ಜಜ್ಞೇ ಚರಾಚರಮಭೂತ್ತತಃ ।**
**ಆಕೂತ್ಯಾಂ ರುಚಿತೋ ಜಜ್ಞೇ ಯುಗ್ಮಂ ಯಜ್ಞಶ್ಚ ದಕ್ಷಿಣಾ ॥ ೬೦ ॥**

**ನಾರಾಯಣಶ್ಚ ಲಕ್ಷ್ಮೀಶ್ಚ ತಾ ಉಭೌ ದಂಪತೀ ತದಾ ।**

ಮರೀಚೇಃ-(ಸಪ್ತರ್ಷಿಗಳಲ್ಲಿ ಒಬ್ಬನಾದ) ಮರೀಚಿಯಿಂದ, ಕಶ್ಯಪಃ- ಕಶ್ಯಪನು, ಜಜ್ಞೇ-ಜನಿಸಿದನು; ತತಃ-ಆತನಿಂದ, ಚರಾಚರಂ-ಜಂಗಮಸ್ಥಾವರ ಪ್ರಾಣಜಗತ್ತು ಅಭೂತ್-ಉಂಟಾಯಿತು (ಆತನು ಜಗತ್ತಿನ ಸರ್ವಪ್ರಜಾವರ್ಗದ ಮೂಲಪುರುಷನಾದನು); ರುಚಿತಃ-ರುಚಿಯಿಂದ, ಆಕೂತ್ಯಾಂ-ಆಕೂತಿಯಲ್ಲಿ, ಯಜ್ಞಃ-ಯಜ್ಞನೂ, ದಕ್ಷಿಣಾ ಚ-ದಕ್ಷಿಣಾದೇವಿ ಸಹ, ಯುಗ್ಮಂ-ಅವಳಿಯಾಗಿ, ಜಜ್ಞೇ-ಅವತರಿಸಿದರು; ತದಾ-ಆಗ, ನಾರಾಯಣಶ್ಚ-ನಾರಾಯಣನೂ, ಲಕ್ಷ್ಮೀಶ್ಚ-ಲಕ್ಷ್ಮೀದೇವಿಯೂ, ತೌ

---

ಹೆಣ್ಣು—ದಕ್ಷಿಣಾ ನಾಮಕಳು. ಅವರಿಬ್ಬರೂ ಅನಾದಿ ದಂಪತಿಗಳಾದ್ದರಿಂದ, ನಿತ್ಯಾವಿಯೋಗಿಗಳು (೬೦). ಬ್ರಹ್ಮದೇವನ ಈ ಕಲ್ಪದ ಮೊದಲನೆಯ ಮನ್ವಂತರಾಧಿಪತಿಯಾದ ಸ್ವಾಯಂಭುಮನ್ವಂತರದಲ್ಲಿ ಈ ಯಜ್ಞನಾಮಕ ನಾರಾಯಣನು ಇಂದ್ರಪದವಿಯನ್ನು ಹೊಂದಿದನು; ಆಗ (ಆ ಮನ್ವಂತರದಲ್ಲಿ) 'ಯಾಮ'ನಾಮಕ ದೇವತೆಗಳು ಆತನನ್ನು ಉಪಾಸಿಸಿದರು (ಸೇವಿಸಿದರು) (೬೧). ಕರ್ದಮನಿಂದ ದೇವಹೂತಿಯಲ್ಲಿ ಕಪಿಲಋಷಿಯು ಹುಟ್ಟಿದನು; ಆತನೇ ಸಾಂಖ್ಯಯೋಗಶಾಸ್ತ್ರವನ್ನು ತನ್ನ ತಾಯಿಗೆ ಉಪದೇಶಿಸಿ, ಅದರ ನಿರ್ಮಾಣಕರ್ತನೂ ಪ್ರವರ್ತಕನೂ ಆದನು; ಆ

1. ಇದೇ ಅಧ್ಯಾಯದ ೩೮ನೇ ಶ್ಲೋಕವನ್ನು ನೋಡಿರಿ; ಬ್ರಹ್ಮನ ದಕ್ಷಿಣಾಂಗುಷ್ಠದಿಂದ, ದಕ್ಷನು ಮೊದಲೇ ಜನಿಸಿದ್ದನು.

ಉಭೌ-(ಆದ) ಅವರಿಬ್ಬರೂ, ದಂಪತೀ-ದಂಪತಿಗಳಾದರು (ನಿತ್ಯಾವಿಯೋಗಿಗಳಾದ ಅನಾದಿ ದಂಪತಿಗಳಿವರು—ಆಕೂತಿಯಲ್ಲಿ ಗಂಡು-ಹೆಣ್ಣು ಅವಳಿಯಾಗಿ ಅವತರಿಸಿದರು).

**ಸ್ವಾಯಂಭುವೇಽಂತರೇ ತಸ್ಮಿನ್ ಯಜ್ಞ ಐಂದ್ರಮಗಾತ್ಪದಂ ॥ ೬೧ ॥**
**ಯಾಮಾ ನಾಮ್ನಾ ತದಾ ದೇವಾ ಉಪಾಸಾಂಚಕ್ರಿರೇ ಚ ತಂ ।**

ತಸ್ಮಿನ್-ಆ, ಸ್ವಾಯಂಭುವೇಽಂತರೇ-ಸ್ವಾಯಂಭುವ ಮನ್ವಂತರದಲ್ಲಿ ಯಜ್ಞ-ಯಜ್ಞನಾಮಕ ನಾರಾಯಣನು, ಐಂದ್ರಂ ಪದಂ-ಇಂದ್ರಪದವಿಯನ್ನು ಅಗಾತ್-ಹೊಂದಿದನು; ತದಾ-ಆಗ, ನಾಮ್ನಾ-ಹೆಸರಿನಿಂದ, ಯಾಮಾಃ-ಯಾಮರೆಂಬ, ದೇವಾಃ-ದೇವತೆಗಳು, ತಂ ಚ-ಇಂದ್ರನನ್ನೇ, ಉಪಾಸಾಂಚಕ್ರಿರೇ- ಉಪಾಸಿಸಿದರು (ಸೇವಿಸಿದರು).

**ದೇವಹೂತ್ಯಾಂ ಕರ್ದಮೇನ ಜಜ್ಞೇ ಸ ಕಪಿಲೋ ಮುನಿಃ ॥ ೬೨ ॥**
**ಪ್ರಣೇತಾ ಸಾಂಖ್ಯಯೋಗಸ್ಯ ಯೋಽಶಿಕ್ಷನ್ಮಾತರಂ ನಿಜಾಂ ।**
**ಸೋಽಪಿ ನಾರಾಯಣಃ ಸಾಕ್ಷಾದಪರಾ ಮಾಮಕೀ ತನುಃ ॥ ೬೩ ॥**

ಕರ್ದಮೇನ-ಕರ್ದಮನಿಂದ, ದೇವಹೂತ್ಯಾಂ-ದೇವಹೂತಿಯಲ್ಲಿ ಸಃ-ಆ (ಪ್ರಸಿದ್ಧನಾದ), ಕಪಿಲಃ ಮುನಿಃ-ಕಪಿಲಋಷಿಯು, ಜಜ್ಞೇ-ಹುಟ್ಟಿದನು (ಅವತರಿಸಿದನು); ಯಃ-ಯಾವನು (ಕಪಿಲನು), ಸಾಂಖ್ಯಯೋಗಸ್ಯ-ಸಾಂಖ್ಯಯೋಗದ (ತನ್ನಾಮಕ ತತ್ತ್ವಶಾಸ್ತ್ರದ), ಪ್ರಣೇತಾ-ನಿರ್ಮಾಣಕರ್ತನೂ (ಆಗಿದ್ದು), ನಿಜಾಂ-ತನ್ನ ಮಾತರಂ-ತಾಯಿಯನ್ನು ಕುರಿತು (ದೇವಹೂತೀದೇವಿಗೆ), ಅಶಿಕ್ಷತ್- ಉಪದೇಶಿಸಿದನೋ, ಸಃ ಅಪಿ-ಆತನೂ ಸಹ (ಆ ಕಪಿಲಋಷಿಯೂ), ಸಾಕ್ಷಾತ್-ಸ್ವಯಂ, ನಾರಾಯಣಃ-ನಾರಾಯಣನೇ (ಆತನು), ಅಪರಾ- ಮತ್ತೊಂದು, ಮಾಮಕೀ-ನನ್ನದೇ ಆದ, ತನುಃ-ರೂಪವು.

---

ಕಪಿಲನೂ ಸಾಕ್ಷಾನ್ನಾರಾಯಣನೇ—ಹೇ ಬ್ರಹ್ಮನ್! ನನ್ನದೇ ಆದ ಮತ್ತೊಂದು ರೂಪವದು (೬೨-೬೩). ಸ್ವಾಯಂಭುವಮನು ಶತರೂಪಾದೇವಿಯರ ದಾಂಪತ್ಯದಿಂದ ಮುಂದೆ, ಸ್ತ್ರೀಪುರುಷರ ಮಿಥುನೀಭಾವದಿಂದ ಲೋಕದಲ್ಲಿ ಸ್ಥಾವರ ಜಂಗಮ ಸಕಲ ಪ್ರಾಣಿಗಳ ಉತ್ಪತ್ತಿಯು ಭರದಿಂದ ಸಾಗಿತು; ಭೂಮಿಯು ಪ್ರಾಣಿಗಳಿಂದ ತುಂಬಿಹೋಯಿತು; ಯಾರಿಗೂ ನಿಲ್ಲಲು (ಚಲಿಸಲು) ಸಹ ಅವಕಾಶವಿಲ್ಲದಂತೆ ನಿಬಿಡವಾಯಿತು. ಪರಸ್ಪರ ಸಂಹಾರಪ್ರಯತ್ನಗಳು ನಡೆದು, ಹೊಡೆದಾಟದ ಆರ್ತನಾದವು ಎಲ್ಲೆಲ್ಲಿಯೂ, ಕೇಳಬಂತು; ಯಾರಿಗೂ ಸ್ವಸ್ಥವಾಗಿ ಮಲಗಿ ನಿದ್ರಿಸುವ

**ತತಃ ಸೃಷ್ಟಿರಭೂಲ್ಲೋಕೇ ಇತರೇತರಸಂಭವಾ ।**
**ವ್ಯಾಪ್ತಾಭೂದಖಿಲಾ ಭೂಮಿಃ ಸ್ಪಂದಿತುಂ ಕೋಽಪಿ ನಾಶಕತ್ ॥ ೬೪ ॥**

**ಆರ್ತಸ್ವರೋ ಮಹಾನಾಸೀನ್ನಿಘ್ನತಾಮಿತರೇತರಂ ।**
**ನ ಕೋಽಪಿ ಸ್ವಪ್ತುಂ ಶೇಕೇತ್ರ ವಿಶ್ರಾಂತಿಂ ನಾಪಿ ಲಬ್ಧವಾನ್ ॥ ೬೫ ॥**

ತತಃ-ಅಲ್ಲಿಂದ ಮುಂದೆ, ಲೋಕೇ-ಜಗತ್ತಿನಲ್ಲಿ ಇತರೇತರಸಂಭವಾ-ಪರಸ್ಪರ (ಸ್ತ್ರೀಪುರುಷಮಿಥುನದಿಂದ) ಉಂಟಾದ, ಸೃಷ್ಟಿಃ-(ಪ್ರಜಾ) ಸೃಷ್ಟಿಯು, ಅಭೂತ್- ನಡೆಯಿತು; ಅಖಿಲಾ ಭೂಮಿಃ-ಸಮಸ್ತಭೂಮಿಯೂ, ವ್ಯಾಪ್ತಾ ಅಭೂತ್-ವ್ಯಾಪಿಸಲ್ಪಟ್ಟಿತು (ಪ್ರಜೆಗಳಿಂದ ತುಂಬಿಹೋಯಿತು); ಕಃ ಅಪಿ-ಯಾರೊಬ್ಬನೂ (ಯಾವುದೊಂದು ಪ್ರಾಣಿಯೂ), ಸ್ಪಂದಿತುಂ-ಚಲಿಸಲು ಸಹ, ನ ಅಶಕತ್-ಶಕ್ತನಾಗಲಿಲ್ಲ ('ಸ್ಕಂದಿತುಂ' ಎಂದು ಒಂದು ಪಾಠವಿದೆ; ಸ್ಕಂದಿತುಂ-ವೇಗದಿಂದ ಓಡಾಡಲು). (ಅಷ್ಟು ನಿಬಿಡವಾಗಿ ಭೂಮಿಯು ತುಂಬಿತು); ಇತರೇತರಂ-ಪರಸ್ಪರವಾಗಿ, ನಿಘ್ನತಾಂ-ಹೊಡೆದಾಡುವ (ಆಹಾರಾರ್ಥ ಸಂಹರಿಸಲು ಯತ್ನಿಸುವ) ಪ್ರಾಣಗಳ, ಆರ್ತಸ್ವರಃ- ದುಃಖಿ ಧ್ವನಿಯು, ಮಹಾನ್ ಆಸೀತ್-ಅತಿಯಾಗಿ ವೃದ್ಧಿಗೊಂಡಿತು; ಕೋಽಪಿ-ಯಾರೊಬ್ಬನೂ, ಅತ್ರ-ಇಲ್ಲಿ (ಭೂಮಿಯಲ್ಲಿ), ಸ್ವಪ್ತುಂ-ನಿದ್ರಿಸಲು, ನ ಶೇಕೇ-ಶಕ್ತನಾಗಲಿಲ್ಲ; ವಿಶ್ರಾಂತಿಂ-ವಿಶ್ರಾಂತಿಯನ್ನು, ಅಪಿ-ಸಹ (ನಿತ್ಯದ ಶ್ರಮಪರಿಹಾರಕ್ಕಾಗಿ ದೊರೆಯಬೇಕಾದ ನಿದ್ರೆಯನ್ನೂ), ನ ಲಬ್ಧವಾನ್-ಹೊಂದುವನಾಗಲಿಲ್ಲ.

**ಇತ್ಥಂ ಸಂಮರ್ದಮಾಲೋಕ್ಯ ಕುಪಿತೋ ದ್ರುಹಿಣೋಽಸೃಜತ್ ।**

---

ಅವಕಾಶವೂ ಇಲ್ಲದಂತಾಯಿತು; ಅತಿ ವಿವ ರೈನಂದಿನ ವಿಶ್ರಾಂತಿಯೂ ದೊರೆಯದಂಥ ಪರಿಸ್ಥಿತಿಯುಂಟಾಯಿತು (೬೪-೬೫). ಜಗತ್ತಿನ ಪ್ರಜೆಗಳ ಈ ಸ್ಥಿತಿಯನ್ನು ನೋಡಿ, ಬ್ರಹ್ಮದೇವನಿಗೆ ಕೋಪವುಂಟಾಯಿತು; ಆಗ, ಕಪ್ಪುವಸ್ತ್ರಧಾರಿಯೂ, ರಕ್ತಾಕ್ಷಿಯೂ, ನೀಲವರ್ಣದ ದೇಹಕಾಂತಿಯುಳ್ಳವಳೂ ವೀಣಾಪಾಣಿಯೂ, ಬಲಗೈಯಲ್ಲಿ ಕೊಡಲಿಯನ್ನು ಹಿಡಿದಿರುವವಳೂ, ಅತ್ಯುಗ್ರಸ್ವರೂಪಳೂ (ಕರಾಳಾಕೃತಿಯುಳ್ಳವಳೂ) ಆದ, ಸ್ತ್ರೀಯನ್ನು (ಮೃತ್ಯು ದೇವತೆಯನ್ನು) ಸೃಷ್ಟಿಮಾಡಿ, ಜಗತ್ತನ್ನು ತುಂಬಿರುವ ಈ ಎಲ್ಲರನ್ನು ಸಂಹರಿಸೆಂದು ಆಜ್ಞಾಪಿಸಿದನು; ಆ ದೇವತೆಯು, ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಧಾವಿಸಿ, ಪ್ರಜೆಗಳನ್ನು ಒಂದು ಕಡೆಯಿಂದ ಸಂಹರಿಸುತ್ತ ಬಂದಳು (೬೬-೬೭). ಆಗಲೂ ಪ್ರಜೆಗಳ ಆರ್ತನಾದವು ನಿಲ್ಲಲಿಲ್ಲ; ಮೊದಲಿಗಿಂತ (ಮೃತ್ಯುದೇವತೆಯನ್ನು ಸೃಷ್ಟಿಮಾಡುವ ಮೊದಲಿಗಿಂತ) ಅಧಿಕವೇ ಆಯಿತು; ಆಗ,

**ನಾರೀಂ ವೀಣಾಕರೀಂ ಶ್ಯಾಮಾಂ ಪಿಂಗಾಕ್ಷೀಂ ಕೃಷ್ಣವಾಸಸಂ ॥ ೬೬ ॥**

**ಪರಶುಂ ದಕ್ಷಿಣೇ ಹಸ್ತೇ ದಧಾನಾಮತಿದಾರುಣಾಂ ।**
**ಜಹಿ ಸರ್ವಾನಿತಿ ಪ್ರಾಹ ಸಾವಧೀದ್ರುಷಿತಾ ಜನಾನ್ ॥ ೬೭ ॥**

ಇತ್ಥಂ-ಈ ವಿಧದ, ಸಂಮರ್ದಂ-ನಿಬಿಡತೆಯನ್ನು (ಜನಸಾಂದ್ರತೆಯನ್ನು—ನುಗ್ಗಾಟವನ್ನು), ಆಲೋಕ್ಯ-ಕಂಡು, ಕುಪಿತಃ-ಸಿಟ್ಟಾದ, ದ್ರುಹಿಣಃ-ಬ್ರಹ್ಮದೇವನು, ವೀಣಾಕರೀಂ - ವೀಣೆಯನ್ನು ಕೈಯಲ್ಲಿ ಧರಿಸಿದ (ವೀಣಾಪಾಣಿಯೂ), ಕೃಷ್ಣವಾಸಸಂ - ಕಪ್ಪುವಸ್ತ್ರವನ್ನುಟ್ಟ, ಪಿಂಗಾಕ್ಷೀಂ - ಕೆಂಗಣ್ಣುಳ್ಳ (ಕೆಂಪು ಅಥವಾ ಕಂದುಬಣ್ಣದ ಕಣ್ಣುಗಳುಳ್ಳ), ಶ್ಯಾಮಾಂ-ನೀಲವರ್ಣದ ದೇಹಕಾಂತಿಯುಳ್ಳ, ದಕ್ಷಿಣೇ-ಬಲಭಾಗದ, ಹಸ್ತೇ-ಕೈಯಲ್ಲಿ ಪರಶುಂ-ಕೊಡಲಿಯನ್ನು ದಧಾನಾಂ-ಧರಿಸಿದ, ಅತಿದಾರುಣಾಂ-ಅತ್ಯುಗ್ರಳಾದ, ನಾರೀಂ-ಸ್ತ್ರೀಯನ್ನು ಅಸೃಜತ್-ಸೃಷ್ಟಿಸಿದನು; ಸರ್ವಾನ್-ಎಲ್ಲ ಪ್ರಜಾವರ್ಗವನ್ನೂ ಜಹಿ- ಸಂಹರಿಸುವ, ಇತಿ-ಎಂದು, ಪ್ರಾಹ-ಆಜ್ಞಾಪಿಸಿದನು; ಸಾ-ಆಕೆಯು, ರುಷಿತಾ-ಸಿಟ್ಟಿನಿಂದ ಧಾವಿಸಿದವಳಾಗಿ, ಜನಾನ್-ಪ್ರಜೆಗಳನ್ನು ಅವಧೀತ್-ಸಂಹರಿಸಿದಳು.

**ತದಾಪ್ಯಾರ್ತಸ್ವನೋ ಭೂಯಾನಭೂದ್ವೈ ರುದತಾಂ ಮಹತ್ ।**
**ತತಃ ಸಾ ಮೃತ್ಯುರಗಮದ್ಬ್ರಹ್ಮಾಣಂ ಶರಣಂ ತದಾ ॥ ೬೮ ॥**

**ನಾಹಂ ಸಮುತ್ಸಹೇ ದ್ರಷ್ಟುಂ ದುಃಖಿತಾನ್ ರುದತೋ ಜನಾನ್ ।**
**ಪ್ರಿಯೇ ಜನೇ ಮೃತೇ ತಾತ ಕ್ರೋಶತಸ್ತಸ್ಯ ಬಾಂಧವಾನ್ ॥ ೬೯ ॥**

**ಅತೋಧಿಕಾರಮೇನಂ ಮೇ ನ ಸಮಾದೇಷ್ಟುಮರ್ಹಸಿ ।**

---

ಮೃತ್ಯುದೇವತೆಯು ಬ್ರಹ್ಮನನ್ನು ಶರಣುಹೊಂದಿ ತನ್ನ ಭಯದುಃಖಗಳನ್ನು ಹೇಳಿಕೊಂಡಳು; ನನ್ನಿಂದ ಸಂಹೃತರಾದ ಪ್ರಜೆಗಳ (ಪ್ರಾಣಿಗಳ) ಪ್ರಿಯಜನರೂ ಬಂಧುಗಳೂ ಮತ್ತು ಇತರರೂ ದುಃಖದಿಂದ ರೋದನಮಾಡುವುದನ್ನೂ ಕಂಡು ನಾನು ಸಹಿಸಲಾರೆನು—ಆದ್ದರಿಂದ ನನ್ನನ್ನು ಈ ಕೊಲ್ಲುವ ಅಧಿಕಾರದಲ್ಲಿ ನಿಯಮಿಸಬೇಡ, ಎಂದು ಬೇಡಿಕೊಂಡಳು (೬೮-೬೯). ಆಗ ಬ್ರಹ್ಮದೇವನು, 'ಹೇ ಮಂಗಳಾಂಗಿ! ಈ ಕೆಲಸಕ್ಕಾಗಿಯೇ ನಿನ್ನನ್ನು ಸೃಷ್ಟಿಮಾಡಿದ್ದೇನೆ; ಜಗತ್ತಿನಲ್ಲಿರುವ ಪ್ರಜರು, ಕಾಲರೂಪಿಯಾದ ಶ್ರೀಹರಿಯಿಂದ ನಿರ್ದಿಷ್ಟವಾದ, ತಂತಮ್ಮ ಪೂರ್ವಕರ್ಮವಶರಾಗಿ ಮರಣವನ್ನು (ದೇಹವಿಯೋಗವನ್ನು) ಹೊಂದುವ ಕಾಲವು. ಪ್ರಾಪ್ತವಾಗಿರುತ್ತದೆಯಾದ್ದರಿಂದ, ನಿಮಿತ್ತಮಾತ್ರಳಾದ ನೀನು ಅವರನ್ನು ಸಂಹರಿಸುವುದರಿಂದ, ಯಾವ ಪಾಪವನ್ನೂ

ತದಾಪಿ-ಆಗಲೂ ಸಹ (ಹಿಂದಿನಂತೆ), ರುದತಾಂ-ರೋದನಮಾಡುವವರ, ಮಹತ್-ಅಧಿಕವಾದ, ಆರ್ತಸ್ವನಃ-ಆರ್ತನಾದವು (ದುಃಖಧ್ವನಿಯು, ಭೂಯಾನ್-ಹೆಚ್ಚಾಗಿ, ಅಭೂತ್-ಉಂಟಾಯಿತು; ತತಃ-ಆ ಕಾರಣದಿಂದ, ತದಾ-ಆಗ, ಸಾ ಮೃತ್ಯುಃ- ಆ ಮೃತ್ಯುದೇವತೆಯು, ಬ್ರಹ್ಮಾಣಂ-ಬ್ರಹ್ಮನನ್ನು, ಶರಣಂ ಅಗಮತ್-ಶರಣು ಹೊಂದಿದಳು; (ಮತ್ತು ಹೀಗೆ ಹೇಳಿಕೊಂಡಳು), ತಾತ-ಹೇ ತಂದೆ!, ಪ್ರಿಯೇ-ಪ್ರಿಯರಾದ, ಜನೇ-ಜನರು, ಮೃತೇ-ಸಾಯುತ್ತಿರಲು, ಕ್ರೋಶತಃ-ದುಃಖದಿಂದ ಕಿರಿಚುತ್ತಿರುವ, ತಸ್ಯ-ಆ ಮೃತನ, ಬಾಂಧವಾನ್-ಬಂಧುಜನರನ್ನೂ ರುದತಃ-ರೋದನಮಾಡುವ, ದುಃಖಿತಾನ್-ದುಃಖಿತರಾದ, ಜನಾನ್-ಇತರ ಜನರನ್ನೂ ದ್ರಷ್ಟುಂ-ನೋಡಲು, ಅಹಂ-ನಾನು, ನ ಸಮುತ್ಸಹೇ-ಇಚ್ಛಿಸುವುದಿಲ್ಲ (ಸಹಿಸಲಾರೆ); ಅತಃ-ಆದ್ದರಿಂದ, ಏನಂ-ಈ (ಪ್ರಜೆಗಳನ್ನು ಸಂಹರಿಸುವ), ಅಧಿಕಾರಂ-ಅಧಿಕಾರವನ್ನು ಮೇ-ನನಗೆ, ಸಮಾದೇಷ್ಟುಂ-ಕೊಡಲು (ಆಜ್ಞಾಪಿಸಲು-ನನ್ನನ್ನು ಈ ಕೆಲಸದಲ್ಲಿ ನೇಮಿಸಲು), ನ ಅರ್ಹಸಿ-ಯೋಗ್ಯನೆನಿಸುವುದಿಲ್ಲ(ಮನಸ್ಸುಮಾಡಬೇಡ).

ಪಿತಾಮಹ ಉವಾಚ—

ಏತದೇವ ವಿಧಾತುಂ ತ್ವಾಂ ಸೃಷ್ಟವಾನಸ್ಮಿ ಶೋಭನೇ ।
ನೋದ್ವೇಗಸ್ತು ತ್ವಯಾ ಕಾರ್ಯೋ ಮಾರಣೇ ಜಗತಃ ಸದಾ ॥ ೭೦ ॥

ತತ್ತತ್ಕರ್ಮವಶಾತ್ಕಾಲೇ ನಿರ್ದಿಷ್ಟಾ ಕಾಲರೂಪಿಣಾ ।
ಹರಿಣೈವ ತತೋ ಜಂತೂನ್ ಹತ್ವಾ ಪಾಪಂ ನ ತೇ ಭವೇತ್ ॥ ೭೧ ॥

ಅಂತೇ ತವಾಪಿ ಹಂತಾ ಸ ಹಂತಾಸ್ಮಾಕಮಪೀಶ್ವರಃ ।

---

ಹೊಂದುವುದಿಲ್ಲ ಶ್ರೀಹರಿಯೇ ಸರ್ವರ ಮುಖ್ಯಸಂಹಾರಕನೆಂಬುದನ್ನು ಮರೆಯಬೇಡ; ಅಂತ್ಯಕ್ಕೆ (ಸರ್ವರ ಸಂಹಾರವಾದಮೇಲೆ), ನಿನ್ನನ್ನಾದರೂ ಸಂಹರಿಸುವವನು ಶ್ರೀಹರಿಯೇ; ಅಷ್ಟೇಕೆ! ನಿನ್ನನ್ನು ಸೃಷ್ಟಿಸಿದ ನನ್ನನ್ನೂ, ನಿನಗಿಂತ ಉತ್ತಮರಾದ ರುದ್ರಾದಿಗಳನ್ನೂ ಸಂಹರಿಸುವವನು ಆತನೇ; ಶ್ರೀಹರಿಯು ರಂಗಸ್ಥಲದ ನಟನಂತೆ, ಜಗತ್ತಿನಲ್ಲಿ ಸ್ವೇಚ್ಛೆಯಿಂದ ಕ್ರೀಡಿಸುತ್ತಾನೆ; ಜಗತ್ತನ್ನು ಸೃಷ್ಟಿಸಿ ಸಂಹರಿಸುತ್ತಾನೆ—ನಿನ್ನನ್ನೂ, ಸಂಹಾರಕರೆಂಬ, ರುದ್ರ, ನಾನು, ಮೊದಲಾದವರನ್ನು ಸಂಹರಿಸುವವನು ಆ ಶ್ರೀಹರಿಯೇ; ನನ್ನ ಆಜ್ಞಾಪಾಲನರೂಪವಾದ, ನಿನ್ನ ಸಂಹಾರಕ ಕರ್ಮದಿಂದ ತುಷ್ಟನಾದ ಸರ್ವಸ್ವಾಮಿಯಾದ ಭಗವಂತನು,ನಿನಗೆ ಮೋಕ್ಷವನ್ನೇ ಅನುಗ್ರಹಿಸುತ್ತಾನೆ; ಭಯ ದುಃಖಾದಿ ಮನೋಕಶ್ಮಲವನ್ನು (ದೋಷವನ್ನು—ದೌರ್ಬಲ್ಯವನ್ನು) ತ್ಯಜಿಸು'; ಎಂದು ಹೇಳಿದನು(೭೦-೭೩).

ಕ್ರೀಡತೇ ನಟವಲ್ಲೋಕೇ ವಿಲುಂಪೇದ್ವರ್ತಯೇಜ್ಜಗತ್ ॥ ೭೨ ॥

ತ್ವದೀಯಕರ್ಮಣಾ ತೇನ ತುಷ್ಟಃ ಸ ಭಗವಾನ್ ಹರಿಃ ।
ಮುಕ್ತಿಂ ದಾಸ್ಯತಿ ವಿಶ್ವಾತ್ಮಾ ವ್ಯೇತು ತೇ ಭಯಕಶ್ಮಲಂ ॥ ೭೩ ॥

ಬ್ರಹ್ಮದೇವನು ಹೇಳುತ್ತಾನೆ—

ಶೋಭನೇ-ಹೇ ಮಂಗಳಾಂಗಿ!, ಏತತ್ ಏವ ವಿಧಾತುಂ-ಇದನ್ನು ಮಾಡಲಿಕ್ಕಾಗಿಯೇ (ಸಂಹಾರಕರ್ಮವನ್ನು ನಿರ್ವಹಿಸಲಿಕ್ಕಾಗಿಯೇ), ತ್ವಾಂ-ನಿನ್ನನ್ನು ಸೃಷ್ಟವಾನ್ ಅಸ್ಮಿ-ಸೃಷ್ಟಿಮಾಡಿದ್ದೇನೆ; ತ್ವಯಾ-ನಿನ್ನಿಂದ, ಸದಾ-ಎಲ್ಲ ಕಾಲದಲ್ಲಿ, ಜಗತಃ-ಜಗತ್ತಿನ (ಪ್ರಾಣಿಗಳ), ತತ್ತತ್ಕರ್ಮವಶಾತ್ - ಆಯಾ ಜೀವರ ಕರ್ಮಾನುಸಾರ, ಕಾಲರೂಪಿಣಾ-ಕಾಲನಿಯಾಮಕನಾದ (ಮುಖ್ಯಮಾರಕನಾದ), ಹರಿಣಾ ಏವ-ಶ್ರೀಹರಿಯಿಂದಲೇ, ನಿರ್ದಿಷ್ಟಾ-(ಮೃತಿಕಾಲವು) ಗೊತ್ತುಮಾಡಲ್ಪಟ್ಟಿರುತ್ತದೆ; (ಆದ್ದರಿಂದ), ಕಾಲೇ - ಆ ಕಾಲದಲ್ಲಿ, ಮಾರಣೇ - ಸಂಹರಿಸುವುದರಲ್ಲಿ ಉದ್ವೇಗಃ-ಮನೋವ್ಯಾಕುಲತೆಯು, ನ ಕಾರ್ಯಾ ತು (ಏವ) ಮಾಡಲ್ಪಡತಕ್ಕದ್ದಲ್ಲ; ತತಃ-ಆದ್ದರಿಂದ, ಜಂತೂನ್-ಪ್ರಾಣಿಗಳನ್ನು, ಹತ್ವಾ-(ಶ್ರೀಹರಿ ನಿಯಮಾನುಸಾರ) ಸಂಹರಿಸಿ, ತೇ-ನಿನಗೆ, ಪಾಪಂ-ಪಾಪವು (ಯಾವ ದೋಷವೂ), ನ ಭವೇತ್-ಉಂಟಾಗುವುದಿಲ್ಲ; ಅಂತೇ-ಕಡೆಯಲ್ಲಿ (ಕೊನೆಗೆ), ತಥಾಪಿ-ನಿನಗೂ ಸಹ, ಸಃ-ಆತನೇ (ಶ್ರೀಹರಿಯೇ), ಹಂತಾ-ಸಂಹಾರಕನು; ಅಸ್ಮಾಕಂ ಅಪಿ-ನಮಗೂ ಸಹ (ನಿನ್ನಿಂದ ಉತ್ತಮರಾದ ನಾನು ಮತ್ತು ರುದ್ರಾದಿಗಳೆಲ್ಲರಿಗೂ), ಹಂತಾ-ಸಂಹಾರಕನು; ಈಶ್ವರಃ-ಸರ್ವನಿಯಾಮಕನಾದ ಶ್ರೀಹರಿಯೇ; ಲೋಕೇ-ಜಗತ್ತಿನಲ್ಲಿ, ನಟವತ್-ನಟಪುರುಷನಂತೆ (ರಂಗಸ್ಥಳದ ವೇಷಧಾರಿಯಂತೆ), ಕ್ರೀಡತೇ-ಕ್ರೀಡಿಸುತ್ತಾನೆ;

---

ಬ್ರಹ್ಮನು ಹೀಗೆ ಹೇಳಲು, ಮೃತ್ಯುವು, ತನ್ನ ಕರ್ಮದಿಂದುಂಟಾಗುವ ಪರಪೀಡೆಯನ್ನು ಸ್ಮರಿಸಿ, ಭಯದುಃಖಸಂವಿಗ್ನಮಾನಸಳಾಗಿ, ರೋದನ ಮಾಡಿ, ಕಣ್ಣೀರು ಸುರಿಸಿದಳು; ಆಕೆಯ ಕಣ್ಣೀರಿನಿಂದ, ಜ್ವರವೇ ಮೊದಲಾದ ನಾನಾ ರೋಗಗಳು (ಅವುಗಳ ಅಭಿಮಾನಿಗಳು— ಅವಾಂತರ— ಅಸ್ವತಂತ್ರ ನಿಯಾಮಕ ಚೇತನರೂ) ಹುಟ್ಟಿದವು (೭೪). ಮೃತ್ಯುದೇವತೆಯ ರೋದನವನ್ನು ಕೇಳಿ, ಬ್ರಹ್ಮದೇವನು, ಆಕೆಯನ್ನು ಈ ಮುಂದಿನಂತೆ ನುಡಿದು, ಸಮಾಧಾನಗೊಳಿಸಿದನು; 'ಹೇ ಶುಭಾಂಗಿ! ದೇಹಶೋಷಣಕರವಾದ ಈ ಶೋಕವನ್ನು ಬಿಡು; ನಿನ್ನಿಂದ ಹುಟ್ಟಿದ ಈ ರೋಗಗಳು (ನಿನ್ನ ಮಕ್ಕಳು) ನಿನ್ನ ಸಂಹಾರ ಕಾರ್ಯದಲ್ಲಿ ಸಹಾಯಕರಾಗುತ್ತಾರೆ'; ಹೀಗೆ ಹೇಳಿ, ಕ್ಷಯವೆಂಬ ಜ್ವರವನ್ನು ರೋಗರಾಜ್ಯದಲ್ಲಿ ಪಟ್ಟಗಟ್ಟಿದನು (೭೫-೭೬). ಅಂದಿನಮೊದಲು, ವಿವಿಧವಾದ ರೋಗಗಳು ಸ್ಥಾವರ ಜಂಗಮ ಸರ್ವ

ಜಗತ್-ಜಗತ್ತನ್ನು ದರ್ಶಯೇತ್- ತೋರಿಸುತ್ತಾನೆ (ಸೃಷ್ಟಿಸುತ್ತಾನೆ), ವಿಲುಂಪೇತ್-ನಾಶವನ್ನೂ ಮಾಡುತ್ತಾನೆ; ಸಃ-ಆ, ಭಗವಾನ್- ಷಡ್ಗುಣೈಶ್ವರ್ಯಪೂರ್ಣನಾದ, ಹರಿಃ-ಶ್ರೀಹರಿಯು, ತೇನ-(ಆ) ಪ್ರಾಣಸಂಹಾರರೂಪದ, ತ್ವದೀಯಕರ್ಮಣಾ-ನಿನ್ನ ಕರ್ಮದಿಂದ, ತುಷ್ಟಃ- ಸಂತುಷ್ಟನಾಗಿ (ಪ್ರೀತನಾಗಿ), ವಿಶ್ವಾತ್ಮಾ-ಜಗತ್ಸ್ವಾಮಿಯಾದ ಆತನು, ಮುಕ್ತಿಂ- (ನಿನಗೆ) ಮೋಕ್ಷವನ್ನೂ ದಾಸ್ಯತಿ-ಕೊಡುತ್ತಾನೆ; ತೇ-ನಿನ್ನ ಭಯಕಶ್ಮಲಂ-ಪಾಪಭೀತಿಯೆಂಬ ಮನೋ ದೌರ್ಬಲ್ಯವು (ಪ್ರಾಣಗಳನ್ನು ಕೊಲ್ಲುವುದರಿಂದ ಪಾಪವೂ ತನ್ನಿಮಿತ್ತ ದುಃಖಾದಿ ದೋಷಗಳೂ ಪ್ರಾಪ್ತವಾಗುವುದೆಂಬ ಭಯವು), ವ್ಯೇತು-ಕಳೆಯಲಿ (ನಿನ್ನನ್ನು ಬಿಟ್ಟು ಹೋಗಲಿ— ಭಯವನ್ನು ತ್ಯಜಿಸು).

ಇತ್ಯುಕ್ತಾ ಸಾ ತದಾ ಬ್ರಹ್ಮನ್ ಮೃತ್ಯುಃ ಸಾರುದದುಚ್ಚಕೈಃ ।
ರುದಂತ್ಯಾ ಅಶ್ರುಣೋ ಜಾತಾ ರೋಗಾಃ ಸರ್ವೇ ಜ್ವರಾದಯಃ ॥೭೪॥

ಬ್ರಹ್ಮನ್-ಹೇ ಬ್ರಹ್ಮದೇವ! (ಶ್ರೀವಿಷ್ಣುವು ಬ್ರಹ್ಮನಿಗೆ ಉಪದೇಶಿಸುತ್ತಿದ್ದಾನೆಂಬ ಕಥಾಸಂದರ್ಭವನ್ನು ನೆನಪಿಡಬೇಕು), ಇತ್ಯುಕ್ತಾ-ಹೀಗೆ ಹೇಳಲ್ಪಟ್ಟ ಸಾ ಮೃತ್ಯುಃ-ಆ ಮೃತ್ಯುರೂಪಳಾದ, ಸಾ-ಆ ಸ್ತ್ರೀಯು, ಉಚ್ಚಕೈಃ-ಗಟ್ಟಿಯಾಗಿ, ಅರುದತ್-ರೋದನಮಾಡಿದಳು; ರುದಂತ್ಯಾಃ-ಅಳುತ್ತಿರುವ ಮೃತ್ಯುದೇವತೆಯ, ಅಶ್ರುಣಃ-ಕಣ್ಣೀರಿನಿಂದ, ಜ್ವರಾದಯಃ-ಜ್ವರ ಮೊದಲಾದ, ಸರ್ವೇ-ಎಲ್ಲ ರೋಗಾಃ-ರೋಗಗಳು (ರೋಗಾಭಿಮಾನಿಗಳು), ಜಾತಾಃ-ಹುಟ್ಟಿದವು.

ತಸ್ಯಾ ಆರ್ತಸ್ವರಂ ಶ್ರುತ್ವಾ ಸಾಂತ್ವಯತ್ತಾಂ ಪಿತಾಮಹಃ ।
ನೈವ ಭದ್ರೇ ತ್ವಯಾ ಕಾರ್ಯಾ ಶೋಕೋಽಯಂ ದೇಹಶೋಷಣಃ ॥೭೫॥

ಇಮೇ ರೋಗಾಸ್ತ್ವದುತ್ಪನ್ನಾಃ ಕರಿಷ್ಯಂತಿ ಸಹಾಯತಾಂ ।
ಇತ್ಯುಕ್ತ್ವಾ ಕ್ಷಯನಾಮಾನಂ ಜ್ವರಂ ರಾಜ್ಞೇಽಭ್ಯಷೇಚಯತ್ ॥ ೭೬ ॥

ತಸ್ಯಾಃ-ಆಕೆಯ, ಆರ್ತಸ್ವರಂ-ದುಃಖಧ್ವನಿಯನ್ನು ಶ್ರುತ್ವಾ-ಕೇಳಿ, ಪಿತಾಮಹಃ- ಬ್ರಹ್ಮದೇವನು, ತಾಂ-ಆಕೆಯನ್ನು ಅಸಾಂತ್ವಯತ್-ಸಮಾಧಾನ ಪಡಿಸಿದನು; ಮತ್ತು ಭದ್ರೇ-'ಹೇ ಮಂಗಳಾಂಗಿ!', ದೇಹಶೋಷಣಃ-ದೇಹವನ್ನು ಶೋಷಿಸುವ (ಒಣಗಿಸುವ—ಕೃಶಗೊಳಿಸುವ), ಅಯಂ-ಈ, ಶೋಕಃ-ಶೋಕವು,

ಪ್ರಾಣವರ್ಗದಲ್ಲಿ ವ್ಯಾಪಿಸಿ, ಆಯಾ ಜೀವರ ಕರ್ಮಾನುಸಾರ, ಕಾಲಕಾಲಕ್ಕೆ ಜ್ವರಾದಿಗಳ ಅಭಿವೃದ್ಧಿಗೆ ಕಾರಣವಾಗಿ, ಮರಣವನ್ನುಂಟುಮಾಡುತ್ತವೆ — ಅಥವಾ ನಾನಾ ಪ್ರಕಾರದಿಂದ ಪೀಡಿಸುತ್ತವೆ—ಹಿಂಸಿಸಿ ದುಃಖ ಪಡಿಸುತ್ತವೆ (೭೭). ರೋಗಗಳ ವೃದ್ಧಿಯನ್ನೂ ಅವುಗಳ ಮೂಲಕಾರಣಗಳನ್ನೂ ಪರಿಹರಿಸಲು ಅವಶ್ಯಕವಾದ ಔಷಧ್ಯಾದಿ

ತ್ವಯಾ- ನಿನ್ನಿಂದ, ನೈವ ಕಾರ್ಯಾ-ಮಾಡಲ್ಪಡತಕ್ಕದ್ದಲ್ಲ; ತ್ವದುತ್ಪನ್ನಾಃ-ನಿನ್ನಿಂದ ಹುಟ್ಟಿದ, ಇಮೇ-ಈ, ರೋಗಾಃ-ರೋಗಗಳು, ಸಹಾಯತಾಂ-(ನಿನಗೆ ಸಂಹಾರಕಾರ್ಯದಲ್ಲಿ) ಸಹಾಯವನ್ನು ಕರಿಷ್ಯತಿ - ಮಾಡುತ್ತವೆ;' ಇತ್ಯುಕ್ತ್ವಾ - ಹೀಗೆ ಹೇಳಿ, ಕ್ಷಯನಾಮಾನಂ- ಕ್ಷಯವೆಂಬ ಹೆಸರಿನ, ಜ್ವರಂ-ಜ್ವರವನ್ನು ರಾಜ್ಯೇ-(ರೋಗಗಳ) ರಾಜ್ಯದಲ್ಲಿ ಅಭ್ಯಷೇಚಯತ್- ಪಟ್ಟಗಟ್ಟಿದನು.

ತದಾಪ್ರಭೃತಿ ತೇ ರೋಗಾಃ ಸ್ಥಾವರೇ ಜಂಗಮೇಽಪಿ ಚ ।
ವ್ಯಾಪ್ಯ ತಸ್ಥುರಥೋ ತತ್ತತ್ಕರ್ಮಪಾಕೇನ ಕಾಲತಃ ॥ ೭೭ ॥

ಉಪಚಾಯಕಯೋಗೇನ ಘ್ನಂತಿ ವಾ ಪೀಡಯಂತ್ಯಪಿ ।

ತದಾಪ್ರಭೃತಿ- ಆ ಮೊದಲು (ಮುಂದಕ್ಕೆ), ತೇ ರೋಗಾಃ-ಆ ಜ್ವರಾದಿ ರೋಗಗಳು (ಜ್ವರಾದಿ ರೋಗಗಳ ಅಭಿಮಾನಿಗಳಾದ ಮೃತ್ಯುದೇವತೆಯ ಮಕ್ಕಳು), ಸ್ಥಾವರೇ-ಸ್ಥಾವರ (ಅಚರವೂ), ಜಂಗಮೇ ಅಪಿ-ಜಂಗಮ (ಚರವೂ) ಗಳೆಂಬ ಪ್ರಾಣವರ್ಗದಲ್ಲಿ (ವೃಕ್ಷಾದಿಗಳು ಸ್ಥಾವರಜೀವರು—ಪಶುಪಕ್ಷಿ ಮನುಷ್ಯಾದಿ ಗಳು ಜಂಗಮಜೀವರು), ವ್ಯಾಪ್ಯ-ವ್ಯಾಪಿಸಿ, ತಸ್ಥುಃ-ನಿಂತವು (ಉಭಯವರ್ಗದ ಪ್ರಾಣಿಗಳಿಗೂ ರೋಗಾದಿ ಉಪದ್ರವವೂ ಮತ್ತು ಮರಣವೂ ಉಂಟು); ಅಥೋ-ಆ ಮುಂದೆ ಹಾಗೆ ವ್ಯಾಪಿಸಿ ನಿಂತು), ತತ್ತತ್ಕರ್ಮಪಾಕೇನ- ಆಯಾ ಜೀವರ ಕರ್ಮಫಲಾನುಸಾರವಾಗಿ, ಕಾಲತಃ-ಕಾಲಗತಿಯಿಂದ, ಉಪಚಾಯಕಯೋಗೇನ-ಜ್ವರಾದಿಗಳ (ಅಪಥ್ಯಾದಿ) ವೃದ್ಧಿಯ ಕಾರಣದಿಂದ, ಘ್ನಂತಿ-(ಪ್ರಾಣಿಗಳನ್ನು) ಕೊಲ್ಲುತ್ತವೆ; ವಾ ಅಪಿ-ಮತ್ತು ಅಥವಾ, ಪೀಡಯಂತಿ-ಪೀಡಿಸುತ್ತವೆ.

ಉಪಚಾಯಕವತ್ತೇಷಾಂ ಪರಿಹಾರಾರ್ಥಮಪ್ಯಸೌ ॥ ೭೮ ॥

---

ಪದಾರ್ಥಗಳನ್ನು ಬ್ರಹ್ಮದೇವನು ನಿರ್ಮಾಣ ಮಾಡಿದನು; ಅವುಗಳ ಪ್ರಯೋಗಾದಿ ಜ್ಞಾನಾರ್ಥವಾಗಿ, ಮರೀಚ್ಯಾದಿಗಳಿಗೂ ಇತರ ಋಷಿಗಳಿಗೂ, ಬ್ರಹ್ಮದೇವನು ಆಯುರ್ವೇದವನ್ನು[1] ಉಪದೇಶ ಮಾಡಿದನು; ಈ ಉತ್ತಮವಾದ ರೋಗಚಿಕಿತ್ಸಾಶಾಸ್ತ್ರವು, ಲೋಕದಲ್ಲಿ ಶಿಷ್ಯಪರಂಪರೆಯಿಂದ ಪ್ರಾಪ್ತವಾಯಿತು; ಆ

1. ತನಗೆ ಸೃಷ್ಟ್ಯಾದಿಯಲ್ಲಿ ಶ್ರೀಹಯಗ್ರೀವನಿಂದ ಉಪದಿಷ್ಟವಾದ ಆಯುರ್ವೇದವನ್ನು ಋಷಿಗಳಿಗೆ ಉಪದೇಶಿಸಿದನು. ಅಧ್ಯಾಯ ೩-೧೦ನೇ ಶ್ಲೋಕವನ್ನು ನೋಡಿರಿ. ಕಾಲಗತಿಯಿಂದ, ಈ ಆಯುರ್ವೇದ ವಿದ್ಯೆಯು ಮಲಿನವಾದಾಗ, ಶ್ರೀಹರಿಯೇ ಧನ್ವಂತರಿನಾಮಕನಾಗಿ ಅವತರಿಸಿ ಆಯುರ್ವೇದವನ್ನು ಉಪದೇಶಿಸಿ, ಪ್ರವರ್ತಿಸಿದನು. ಈ ಪ್ರಮೇಯವು, ಶ್ರೀ ಭಾಗವತದಲ್ಲಿ ವರ್ಣಿತವಾಗಿದೆ.

ತತ್ತದ್ದ್ರವ್ಯಂ ವಿನಿರ್ಮಾಯ ತಜ್ಞಾನಾರ್ಥಂ ಉಪಾದಿಶತ್ ।
ಆಯುರ್ವೇದಮೃಷಿಭ್ಯಃ ಸಃ ಮರೀಚ್ಯಾದಿಭ್ಯ ಏವ ಹಿ ॥ ೭೯ ॥

ತೇಭ್ಯಃ ಪರಂಪರಾಪ್ರಾಪ್ತಂ ಚಿಕಿತ್ಸಾಶಾಸ್ತ್ರಮುತ್ತಮಂ ।
ತದಾ ಪ್ರಭೃತಿ ಲೋಕೋ ವೈ ಜನನಂ ಮರಣಂ ಮುಹುಃ ।
ರೋಗಾಸ್ತೇಷಾಂ ಪರೀಹಾರಾಃ ಪ್ರವೃತ್ತಾ ದೈವಯೋಗತಃ ॥ ೮೦ ॥

ಅಸೌ-ಈತನು (ಬ್ರಹ್ಮದೇವನು—ಕ್ಷಯರೋಗಕ್ಕೆ ಪಟ್ಟಗಟ್ಟಿದ ತಾನು), ಉಪಚಾಯಕವತ್-(ಜ್ವರಾದಿಗಳ) ವೃದ್ಧಿಯಂತೆ, ತೇಷಾಂ-ರೋಗಗಳ, ಪರಿಹಾರಾರ್ಥಂ ಅಪಿ-ಪರಿಹಾರಕ್ಕಾಗಿಯೂ (ರೋಗಗಳ ವೃದ್ಧಿಕಾರಣಗಳ ಪರಿಹಾರದಂತೆ, ರೋಗಗಳ ಪರಿಹಾರವನ್ನೂ ಸಾಧಿಸಲು), ತತ್ತದ್ದ್ರವ್ಯಂ-ಅದದಕ್ಕೆ ಅವಶ್ಯಕವಾದ ಪದಾರ್ಥಗಳನ್ನು (ಗಿಡಮೂಲಿಕೆ, ಲತಾ, ಓಷಧಾದಿಗಳನ್ನು), ವಿನಿರ್ಮಾಯ-ಸೃಷ್ಟಿಮಾಡಿ, ತಜ್ಞಾನಾರ್ಥಂ-ಅವುಗಳ (ಉಪಯೋಗದ) ಜ್ಞಾನಕ್ಕಾಗಿ, ಸಃ-ಬ್ರಹ್ಮನು, ಆಯುರ್ವೇದಂ-ಆಯುರ್ವೇದವನ್ನು ಮರೀಚ್ಯಾದಿಭ್ಯಃ-ಮರೀಚಿಯೇ ಮೊದಲಾದ, ಋಷಿಭ್ಯಃ ಏವ-ಋಷಿಗಳಿಗೋಸ್ಕರ, ಉಪಾದಿಶತ್-ಉಪದೇಶಿಸಿದನು; ತೇಭ್ಯಃ-ಅವರಿಂದ (ಋಷಿಗಳಿಂದ), ಉತ್ತಮಂ-ಶ್ರೇಷ್ಠವಾದ, ಚಿಕಿತ್ಸಾಶಾಸ್ತ್ರಂ-(ರೋಗ) ಚಿಕಿತ್ಸೆಯ ಶಾಸ್ತ್ರವು, ಪರಂಪರಾಪ್ರಾಪ್ತಂ-ಪರಂಪರೆಯಿಂದ (ಶಿಷ್ಯಸಂತತಿದ್ವಾರಾ) ಲೋಕದಲ್ಲಿ ಪ್ರಾಪ್ತವಾದುದು (ಆಯಿತು); ತದಾಪ್ರಭೃತಿ-ಆ ಮೊದಲು (ಅಲ್ಲಿಂದ ಮುಂದೆ), ದೈವಯೋಗತಃ-(ಜೀವರ) ಅದೃಷ್ಟಾನುಸಾರವಾಗಿ (ಅದೃಷ್ಟಪ್ರೇರಕನೂ ತತ್ಫಲಪ್ರದನೂ ಆದ ಶ್ರೀಹರಿಯ ಇಚ್ಛೆಯಂತೆ), ಲೋಕೇ-ಜಗತ್ತಿನಲ್ಲಿ ಮುಹುಃ-ಪುನಃ ಪುನಃ, ಜನನಂ-ಜನ್ಮವೂ, ಮರಣಂ-ಮರಣವೂ, ರೋಗಾಃ-ರೋಗಗಳೂ, ತೇಷಾಂ - ಅವುಗಳ (ರೋಗಗಳ), ಪರೀಹಾರಾಃ - ಪರಿಹಾರಗಳೂ, ಪ್ರವೃತ್ತಾಃ-ಪ್ರವೃತ್ತವಾಗಿವೆ (ನಡೆದು ಬಂದಿವೆ).

ಸ್ವಾಯಂಭುವಮನ್ವಂತರವರ್ಣನವೆಂಬ ೨೫ನೇ ಅಧ್ಯಾಯವು ಮುಗಿದುದು.

---

ಮೊದಲಿಂದ, ದೈವಯೋಗದಿಂದ, ಜೀವರಿಗೆ ಜನನ, ಮರಣ, ರೋಗಗಳೂ, ಅವುಗಳ ಪರಿಹಾರಗಳೂ ಪ್ರವೃತ್ತವಾಗಿವೆ; ಜನನ ಮರಣಗಳಂತೆ, ರೋಗಗಳೂ ಅವುಗಳ ಪರಿಹಾರಗಳೂ ಜೀವರ ಪೂರ್ವಕರ್ಮಾನುಸಾರವಾಗಿ ಸಂಭವಿಸುತ್ತವೆ- ಕೇವಲ ಅಪಥ್ಯ, ಔಷಧಿಗಳಿಂದಲ್ಲ (೭೮-೮೦).

೨೫ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೨೬

ಶ್ರೀ ವೇದವ್ಯಾಸಾಯ ನಮಃ

ಶ್ರೀ ಭಗವಾನುವಾಚ—

**ಯದಾರಭ್ಯ ಸೃಜದ್ಬ್ರಹ್ಮಾ ಮೃತ್ಯುಂ ಲೋಕವಧಾಯ ಹಿ ।**
**ತದಾರಭ್ಯ ವ್ಯಧಾಲ್ಲೋಕೇ ಧರ್ಮಾಧರ್ಮಾನುಶಾಸನಂ ॥ ೧ ॥**

ಅರ್ಥ:—ಬ್ರಹ್ಮಾ-ಬ್ರಹ್ಮದೇವನು, ಯದಾರಭ್ಯ-ಯಾವ ಕಾಲದಿಂದ, ಲೋಕವಧಾಯ-ಪ್ರಜೆಗಳ ಸಂಹಾರಕ್ಕಾಗಿ, ಮೃತ್ಯುಂ-ಮೃತ್ಯುದೇವತೆಯನ್ನು ಸೃಜತ್-ಸೃಷ್ಟಿಸುವನಾದನೋ, ತದಾರಭ್ಯ-ಆ ಕಾಲದಿಂದ, ಲೋಕೇ-ಲೋಕದಲ್ಲಿ (ಪ್ರಜೆಗಳನ್ನು ನಿಯಮಿಸಲಿಕ್ಕಾಗಿ), ಧರ್ಮಾಧರ್ಮಾನುಶಾಸನಂ - ಧರ್ಮ, ಅಧರ್ಮಗಳ (ಪುಣ್ಯ ಪಾಪಗಳ) ವಿಷಯಕವಾದ ಆಜ್ಞೆಯನ್ನು ವ್ಯಧಾತ್- ಮಾಡಿದನು (ನಿರ್ಮಿಸಿ ವಿಧಿಸಿದನು).

**ಸ್ವೈರಾಚಾರಾ ಜನಾಸ್ತಾವತ್ ಸ್ವೈರಮೈಥುನಭೋಜನಾಃ ।**
**ನಿಯಮ್ಯಾ ಹಿ ನಿಜಾಚಾರೇ ಯೇನ ನ ಸ್ಯಾದುಪಪ್ಲವಃ ॥ ೨ ॥**

ಧರ್ಮಾಧರ್ಮಗಳನ್ನು ಶಾಸನಮಾಡುವ ಅವಶ್ಯಕತೆಯೇನೆಂದರೆ—

ಸ್ವೈರಮೈಥುನಭೋಜನಾಃ-ಸ್ವೇಚ್ಛಾನುಸಾರ (ಲೈಂಗಿಕ ಪ್ರವೃತ್ತಿ) ಸ್ತ್ರೀಭೋಗ ಮತ್ತು ಭೋಜನ (ಆಹಾರ)ವುಳ್ಳ, ಸ್ವೈರಾಚಾರಾಃ-ಅನ್ಯ ಸರ್ವವಿಷಯಗಳಲ್ಲಿ ಸಹ ಸ್ವೇಚ್ಛೆಯಿಂದ ವರ್ತಿಸುವ, ಜನಾಃ ತಾವತ್-ಪ್ರಜೆಗಳಾದರೋ, ಯೇನ-ಯಾವುದ ರಿಂದ, ಉಪಪ್ಲವಃ-ದುಃಖಪ್ರದ ವಿಪತ್ತುಗಳು, ನ ಸ್ಯಾತ್-ಉಂಟಾಗುವುದಿಲ್ಲವೋ,

---

ಅಧ್ಯಾಯ ೨೬

ತಾತ್ಪರ್ಯ:—ಮೃತ್ಯುವನ್ನು ಪ್ರಜೆಗಳ ಸಂಹಾರಕ್ಕಾಗಿ, ಸೃಷ್ಟಿಮಾಡಿದ ಕಾಲವನ್ನಾರಂಭಿಸಿ, ಬ್ರಹ್ಮದೇವನು, ಪ್ರಜೆಗಳನ್ನು ನಿಯಮಿಸಲು ಅವಶ್ಯಕವಾದ ಧರ್ಮ ಮತ್ತು ಅಧರ್ಮಗಳ ವ್ಯವಸ್ಥೆಯನ್ನು ನಿರ್ಮಿಸಿ ತನ್ನ ಈ ಸಂಬಂಧ ಆಜ್ಞೆಯನ್ನು ಪ್ರಜೆಗಳಲ್ಲಿ ಪ್ರಸಾರಮಾಡಿದನು(೧). ಸ್ವೇಚ್ಛಾನುಸಾರವಾದ ಸ್ತ್ರೀ ಮೊದಲಾದ ವಿಷಯಭೋಗ ಮತ್ತು ಆಹಾರವುಳ್ಳ ಪ್ರಜೆಗಳೂ ಮತ್ತು ಅನ್ಯಸರ್ವವಿಷಯಗಳಲ್ಲಿ ಯಾವ ನಿಯಮಗಳೂ ಇಲ್ಲದೇ ಸ್ವೇಚ್ಛೆಯಿಂದ ವರ್ತಿಸುವ ಪ್ರಜೆಗಳೂ,

(ಅಂಥ), ನಿಜಾಚಾರೇ-ಸ್ವಯೋಗ್ಯ ಆಚಾರಗಳಲ್ಲಿ (ಸ್ವಧರ್ಮಾಚರಣೆಯಲ್ಲಿ), ನಿಯಮ್ಯಾಃ ಹಿ-ಬಂಧಿಸಲ್ಪಡಬೇಕಷ್ಟೆ! (ಬಲಾತ್ಕಾರದಿಂದ ಸ್ಥಾಪಿಸಲ್ಪಡಬೇಕಷ್ಟೆ).

**ಕಲ್ಪಭೇದಾಂಸ್ತತಶ್ಚಕ್ರೇ ಶಾಖಾಭೇದಾನುಸಾರತಃ ।**
**ಹಿಂಸಾಮೈಥುನಭಕ್ಷ್ಯಾದಿನಾನಾಚಾರಪ್ರದರ್ಶನಂ ॥ ೩ ॥**

**ಕರ್ತವ್ಯಂ ಚ ನ ಕರ್ತವ್ಯಮುದಾಸೀನಮಿತಿ ತ್ರಿಧಾ ।**
**ಉಪಾದಿ ಸಜ್ಜನಾನ್ ಕರ್ಮ ತದಾದೌ ಮನವೇಽವದತ್ ॥ ೪ ॥**

ತತಃ-ನಂತರ, ಶಾಖಾಭೇದಾನುಸಾರತಃ-(ವೇದ) ಶಾಖೆಗಳ ಭೇದಗಳನ್ನನುಸರಿಸಿ, ಕಲ್ಪಭೇದಾನ್-ವಿವಿಧ ನಿಬಂಧನೆಗಳನ್ನು ಚಕ್ರೇ-(ಬ್ರಹ್ಮದೇವನು) ನಿರ್ಮಿಸಿದನು (ಶ್ರೀವಿಷ್ಣುವಿನಿಂದ ತಾನು ಮೊದಲು ಶ್ರವಣ ಮಾಡಿದವುಗಳನ್ನೇ ಪ್ರಕಟಗೊಳಿಸಿದನು); ಹಿಂಸಾಮೈಥುನಭಕ್ಷ್ಯಾದಿ-ಪ್ರಾಣಹಿಂಸೆ, ಸ್ತ್ರೀಸಂಗ, ಆಹಾರಾದಿಗಳ, ನಾನಾಚಾರಪ್ರದರ್ಶನಂ-ವಿವಿಧ ಆಚಾರಗಳನ್ನು ಪ್ರದರ್ಶಿಸುವ, ಕರ್ತವ್ಯಂ-(ವಿಧಿ) ಕರ್ತವ್ಯ, ಚ-ಮತ್ತು ನ ಕರ್ತವ್ಯಂ-ನಿಷೇಧ(ಅಕರ್ತವ್ಯ), ಉದಾಸೀನಂ ಇತಿ-ಉದಾಸೀನ, ಎಂಬುದಾಗಿ, ತ್ರಿಧಾ-ಮೂರು ವಿಧವಾದ, ಕರ್ಮ-ಕರ್ಮವನ್ನು ಜನಾನ್-ಜನರನ್ನು ಕುರಿತು (ಜನರಿಗೆ), ಉಪಾದಿಶತ್-ಉಪದೇಶಮಾಡಿದನು; ತತ್-ಅದನ್ನು (ಕರ್ಮ ನಿಯಮಾವಳಿಯನ್ನು), ಆದೌ-ಮೊದಲಿಗೆ, ಮನವೇ-ಸ್ವಾಯಂಭುವ ಮನುವಿಗೆ, ಅವದತ್- ಹೇಳಿದನು.

**ಸರ್ವಾನ್ ಮುನೀನಥೋವಾಚ ಮನೂಕ್ತಂ ಹಿ ಹಿತಂ ಮಹತ್ ।**
**ಇತ್ಯುಕ್ತ್ವಾಂತರ್ದಧೇ ಬ್ರಹ್ಮಾ ತತಃ ಸ್ವಾಯಂಭುವೋ ಮನುಃ ॥ ೫ ॥**
**ಪ್ರಿಯವ್ರತೇಽಖಿಲಂ ರಾಜ್ಯಂ ದತ್ವಾಗತ್ತಾಪಸೇ ವನಂ ।**

ಸ್ವಧರ್ಮಾಚರಣೆಯಲ್ಲಿರುವಂತೆ, ಮಾಡಬೇಕಾದುದು ಅತ್ಯವಶ್ಯಕ; ಏಕೆಂದರೆ, ಹೀಗೆ ನಿಯಮಿಸಲ್ಪಟ್ಟ ಜನರು, ವಿವಿಧ ವಿಪತ್ತುಗಳಿಂದ ಪಾರಾಗುತ್ತಾರೆ(೨). ಬ್ರಹ್ಮದೇವನು, ಧರ್ಮಾಧರ್ಮಗಳನ್ನು ವ್ಯವಸ್ಥೆಗೊಳಿಸಲಿಕ್ಕಾಗಿ, (ವೇದ) ಶಾಖಾಭೇದಗಳನ್ನನುಸರಿಸಿ, ನಿಯಮಭೇದಗಳನ್ನು ನಿರ್ಮಿಸಿ, ಜನರಿಗೆ ಉಪದೇಶಿಸಿದನು; ಆ ನಿಯಮಾವಳಿಗಳು, ಪ್ರಾಣಹಿಂಸೆ, (ಪಶ್ವಾಲಂಭನಾದಿ ವೇದೋಕ್ತ ಹಿಂಸೆ ಮತ್ತು ಅನ್ಯ ಹಿಂಸಾಪ್ರಭೇದಗಳನ್ನು) ಸ್ತ್ರೀಸಂಗ, ಆಹಾರಾದಿ ಸಂಬಂಧ ವಿವಿಧ ಆಚಾರಗಳನ್ನೂ, ತತ್ಸಂಬಂಧವಾದ, ವಿಧಿ ನಿಷೇಧಗಳನ್ನೂ ಉದಾಸೀನಕರ್ಮಗಳನ್ನೂ ನಿರೂಪಿಸುತ್ತಿದ್ದವು; ಕರ್ಮಾಚರಣೆಯ ಈ ನಿಯಮಾವಳಿಯನ್ನು, ಮೊದಲಿಗೆ, ಸ್ವಾಯಂಭುವ ಮನುವಿಗೆ(ಮನ್ವಂತರಾಧಿಪತಿಗೆ) ಹೇಳಿದನು(೩-೪). ಮನೂಕ್ತಧರ್ಮಗಳೇ ನಮ್ಮ ಹಿತವನ್ನು ಸಾಧಿಸುತ್ತವೆಂದು ಎಲ್ಲ

ಅಥ-(ಹೀಗೆ ಮನುವಿಗೆ ಕರ್ಮಕಲ್ಪಗಳನ್ನು ಉಪದೇಶಿಸಿದ) ನಂತರ, ಸರ್ವಾನ್-ಎಲ್ಲ ಮುನೀನ್-ಋಷಿಗಳನ್ನು ಕುರಿತು, ಉವಾಚ-(ಬ್ರಹ್ಮದೇವನು) ಹೇಳಿದನು; ಮನೂಕ್ತಂ-ಮನುವು ಹೇಳುವ ಧರ್ಮಾಚರಣೆಯೇ ಮಹತ್ ಹಿತಂ-ಮಹಾ (ಅತಿಶಯವಾಗಿ) ಹಿತಸಾಧಕವು (ಆದ್ದರಿಂದ ಎಲ್ಲರೂ 'ಮನುಧರ್ಮ'ಗಳನ್ನೇ ಪಾಲಿಸಿರಿ; ಪ್ರಜೆಗಳಿಗೂ ಅದನ್ನೇ ಉಪದೇಶಿಸಿರಿ); ಇತ್ಯುಕ್ತ್ವಾ-ಹೀಗೆ ಹೇಳಿ, ಬ್ರಹ್ಮಾ-ಬ್ರಹ್ಮದೇವನು, ಅಂತರ್ದಧೇ-ಅಂತರ್ಧಾನ ಹೊಂದಿದನು; ತತಃ-ಮುಂದೆ, ಸ್ವಾಯಂಭುವಃ ಮನುಃ-ಸ್ವಾಯಂಭುವ ಮನುವು, ಅಖಿಲಂ ರಾಜ್ಯಂ-ಸಮಸ್ತ ರಾಜ್ಯವನ್ನು ಪ್ರಿಯವ್ರತೇ-(ಮಗನಾದ) ಪ್ರಿಯವ್ರತನಿಗೆ, ದತ್ವಾ-ಕೊಟ್ಟು ತಪಸೇ-ತಪಸ್ಸಾಚರಿಸಲು, ವನಂ ಆಗಾತ್-ಅರಣ್ಯವನ್ನು ಹೊಂದಿದನು.

**ತತ್ರ ವರ್ಷಶತಂ ತೇಪೇ ತಪಃ ಪರಮದುಷ್ಕರಂ ॥ ೬ ॥**

**ಜಾತಾನುರಾಗೋ ಗೋವಿಂದೇ ತುಷ್ಟಾವೋಪನಿಷದ್ಗಣೈಃ ।**

ತತ್ರ-ಅಲ್ಲಿ, ಪರಮದುಷ್ಕರಂ-ಅತ್ಯಂತ ಕಷ್ಟಸಾಧ್ಯವಾದ, ತಪಃ-ತಪಸ್ಸನ್ನು ವರ್ಷಶತಂ-ನೂರು ವರ್ಷಗಳ ಕಾಲ, ತೇಪೇ-ಆಚರಿಸಿದನು; ಗೋವಿಂದೇ- ವೇದ ಪ್ರತಿಪಾದ್ಯನಾದ ಶ್ರೀಹರಿಯಲ್ಲಿ, ಜಾತಾನುರಾಗಃ-ಉತ್ಪನ್ನವಾದ ಶ್ರೇಷ್ಠ ಭಕ್ತಿಯುಳ್ಳವನಾಗಿ, ಉಪನಿಷದ್ಗಣೈಃ-ಉಪನಿಷತ್ತುಗಳ ವಾಕ್ಯಸಮೂಹಗಳಿಂದ, ತುಷ್ಟಾವ-ಸ್ತುತಿಸಿದನು.

**ಸ್ತುವಂತಂ ಶಾಶ್ವತಂ ಬ್ರಹ್ಮ ದೃಷ್ಟ್ವಾ ತೇ ದೈತ್ಯರಾಕ್ಷಸಾಃ ॥ ೭ ॥**

**ಜಗ್ಮುರಭ್ಯದ್ರವಂಸ್ತಾವದ್ಯಜ್ಞನಾಮಾ ಯುತಃ ಸುರೈಃ ।**

**ತತ್ರಾವಿರ್ಭೂಯ ಸಪದಿ ಹತ್ವಾ ತಾನ್ ದೈತ್ಯರಾಕ್ಷಸಾನ್ ॥ ೮ ॥**

**ರರಕ್ಷ ನಿಜಭಕ್ತಂ ತಂ ಮನುಂ ಸ್ವಾಯಂಭುವಂ ಪ್ರಭುಃ ।**

---

ಮುನಿಗಳಿಗೆ ಉಪದೇಶಿಸಿ, ಬ್ರಹ್ಮದೇವನು ಅದೃಶ್ಯನಾದನು; ಮುಂದೆ ಸ್ವಾಯಂಭುವ ಮನುವು, ಮಗನಾದ ಪ್ರಿಯವ್ರತನಲ್ಲಿ ಸಮಸ್ತ ರಾಜ್ಯಭಾರವನಿಟ್ಟು, ತಪಸ್ಸಿಗಾಗಿ ವನವನ್ನು ಪ್ರವೇಶಿಸಿದನು(೫). ಅಲ್ಲಿ ಮನುವು, ಒಂದು ನೂರು ವರ್ಷಗಳ ಕಾಲ, ಅತಿ ಕಷ್ಟವಾದ ತಪಸ್ಸನ್ನಾಚರಿಸಿದನು; ಗೋವಿಂದನಲ್ಲಿ ಶ್ರೇಷ್ಠಭಕ್ತಿಯನ್ನು ಹೊಂದಿ ಉಪನಿಷದ್ವಾಕ್ಯಗಳಿಂದ, ಶ್ರೀಹರಿಯನ್ನು ಸ್ತುತಿಸಿದನು(೬). ಹೀಗೆ, ನಿತ್ಯನಿರ್ವಿಕಾರನಾದ ಪರಬ್ರಹ್ಮನ ಸ್ತುತಿಯಲ್ಲಿ ಆಸಕ್ತನಾದ ಮನುವನ್ನು ದೈತ್ಯರಾಕ್ಷಸರು, ತಿನ್ನಲಿಕ್ಕೆ ಬಂದರು; ಅಷ್ಟರೊಳಗೆ, ಮನುವಿನ ದೌಹಿತ್ರನಾಗಿ (ಆಕೂತಿಯ ಮಗನಾಗಿ) ಅವತರಿಸಿದ

ಸ್ತುತಸ್ತೇನಾಥ ಬಹುಧಾ ಧಾಮ ಸ್ವಮಗಮತ್ತತಃ ॥ ೯ ॥

ಸುನಂದಾಯಾಸ್ತಟೇ ತತ್ರ ಮನುರ್ಭಾರ್ಯಾ ಸಮನ್ವಿತಃ ।
ತಸ್ಥೌ ಧ್ಯಾಯನ್ ಪರಂಬ್ರಹ್ಮ ತಪಸೇ ಬದ್ಧಮಾನಸಃ ॥ ೧೦ ॥

ಶಾಶ್ವತಂ-ನಿತ್ಯನಿರ್ವಿಕಾರನಾದ, ಬ್ರಹ್ಮ-ಗುಣಪೂರ್ಣನಾದ ಶ್ರೀಹರಿಯನ್ನು ಸ್ತುವಂತಂ-ಸ್ತುತಿಸುತ್ತಿದ್ದ ಮನುವನ್ನು ದೃಷ್ಟ್ವಾ-ನೋಡಿ, ತೇ-ಆ (ಪ್ರಸಿದ್ಧ ಹರಿದ್ವೇಷಿಗಳಾದ), ದೈತ್ಯರಾಕ್ಷಸಾಃ-ದೈತ್ಯರೂ ರಾಕ್ಷಸರೂ, ಜಗ್ಧುಂ-ತಿನ್ನಲು, ಅಭ್ಯದ್ರವನ್-ನುಗ್ಗಿಬಂದರು; ತಾವತ್-ಅಷ್ಟರೊಳಗೆ, ಯಜ್ಞನಾಮಾ-ಯಜ್ಞನಾಮಕ ಶ್ರೀಹರಿಯು (ಮನುಪುತ್ರಿ ಆಕೂತಿಯ ಮಗನಾಗಿ ಅವತರಿಸಿದ್ದ ದೌಹಿತ್ರನು), ಸುರೈಃ-ದೇವತೆಗಳ ಪರಿವಾರದಿಂದ, ಯುತಃ-ಕೂಡಿಕೊಂಡು, ತತ್ರ-ಅಲ್ಲಿ ಆವಿರ್ಭೂಯ - ಪ್ರಕಟನಾಗಿ, ಸಪದಿ-ತತ್ಕಾಲದಲ್ಲಿ(ಶೀಘ್ರವಾಗಿ), ತಾನ್-ಆ, ದೈತ್ಯರಾಕ್ಷಸಾನ್ - ದೈತ್ಯರಾಕ್ಷಸರನ್ನು ಹತ್ವಾ-ಕೊಂದು, ತಂ-ಆ, ನಿಜಭಕ್ತಂ-ತನ್ನ ಭಕ್ತನಾದ, ಸ್ವಾಯಂಭುವಂ ಮನುಂ-ಸ್ವಾಯಂಭುವ ಮನುವನ್ನು ರರಕ್ಷ-ರಕ್ಷಿಸಿದನು; ಅಥ-ನಂತರ, ತೇನ-ಮನುವಿನಿಂದ, ಬಹುಧಾ-ಬಹುಪ್ರಕಾರ, ಸ್ತುತಃ-ಸ್ತುತಿಸಲ್ಪಟ್ಟವನಾಗಿ, ಪ್ರಭುಃ-ಸ್ವಾಮಿಯು (ಶ್ರೀಹರಿಯು—ಯಜ್ಞನಾಮಕ ನಾರಾಯಣನು), ತತಃ-ಅಲ್ಲಿಂದ, ಸ್ವಂಧಾಮ-ತನ್ನ ಸ್ಥಾನವನ್ನು ಅಗಮತ್- ಹೊಂದಿದನು; ಮನುಃ-ಮನುವಾದರೋ, ಭಾರ್ಯಾ ಸಮನ್ವಿತಃ-ಭಾರ್ಯೆ(ಶತ ರೂಪಾ)ಸಮೇತನಾಗಿ, ತಪಸೇ-ತಪಸ್ಸನ್ನು ಮುಂದರಿಸುವುದರಲ್ಲಿ (ತಪಸ್ಸಿಗಾಗಿ), ಬದ್ಧಮಾನಸಃ - ಮನೋನಿಶ್ಚಯವುಳ್ಳವನಾಗಿ, ಸುನಂದಾಯಾಃ-ಸುನಂದಾನದಿಯ, ತಟೇ-ತೀರದಲ್ಲಿ ಪರಂಬ್ರಹ್ಮ-ಪರಬ್ರಹ್ಮನನ್ನು ಧ್ಯಾಯನ್-ಧ್ಯಾನಿಸುವನಾಗಿ, ತಸ್ಥೌ-ನಿಂತನು (ವಾಸವನ್ನು ಮುಂದರಿಸಿದನು).

ಏಕದಾ ಸುಖಮಾಸೀನಂ ಮನುಂ ಸರ್ವೇ ಮುನೀಶ್ವರಾಃ ।
ಉಪಗಮ್ಯಾಬ್ರುವನ್ ವಾಕ್ಯಂ ತಸ್ಮಿನ್ ಸುಸ್ನಿಗ್ಧಚೇತಸಃ ॥ ೧೧ ॥

ಏಕದಾ-ಒಂದುವೇಳೆ, ಸರ್ವೇ-ಸಮಸ್ತ ಮುನೀಶ್ವರಾಃ-ಋಷಿಶ್ರೇಷ್ಠರು, ಸುಖಂ ಆಸೀನಂ-ಸುಖವಾಗಿ ಕುಳಿತಿದ್ದ ಮನುಂ-ಮನುವನ್ನು ಉಪಗಮ್ಯ-ಹೊಂದಿ

---

ಯಜ್ಞನಾಮಕ ನಾರಾಯಣನು, ದೇವತೆಗಳಿಂದ ಸಹಿತನಾಗಿ ಅಲ್ಲಿ ಪ್ರತ್ಯಕ್ಷನಾಗಿ, ಆ ದೈತ್ಯರಾಕ್ಷಸರನ್ನು ಸಂಹರಿಸಿ, ಸ್ವಭಕ್ತನಾದ ಸ್ವಾಯಂಭುವ ಮನುವನ್ನು ರಕ್ಷಿಸಿ, ಆತನಿಂದ ಬಹುವಿಧವಾಗಿ ಸ್ತುತಿಸಲ್ಪಟ್ಟು ಸ್ವಸ್ಥಾನಕ್ಕೆ ಹಿಂದಿರುಗಿದನು; ಮನುವಾದರೋ, ತಪಸ್ಸನ್ನು ಮುಂದುವರಿಸಲು ನಿಶ್ಚಯಿಸಿ, ಪತ್ನೀಸಮೇತನಾಗಿ, ಸುನಂದಾನದಿಯ ತೀರದಲ್ಲಿ ಪರಬ್ರಹ್ಮನ ಧ್ಯಾನದಲ್ಲಿ ಆಸಕ್ತನಾಗಿ, ಅಲ್ಲಿಯೇ ನಿಂತನು (೭-೧೦). ಒಂದು ದಿನ,

(ಮನುವಿನ ಸಮೀಪಕ್ಕೆ ಬಂದು), ತಸ್ಮಿನ್-ಆತನಲ್ಲಿ ಸುಸ್ನಿಗ್ಧಚೇತಸಃ- ಸ್ನೇಹಯುಕ್ತ ಮನಸ್ಸುಳ್ಳವರಾಗಿ, ವಾಕ್ಯಂ-ನುಡಿಯನ್ನು (ಮುಂದೆ ಹೇಳುವಂತೆ), ಅಬ್ರುವನ್-ನುಡಿದರು (ಮಾತನಾಡಿದರು).

ಋಷಯ ಊಚುः—

**ಪಿತಾಮಹೋಽಬ್ರವೀದಸ್ಮಾನ್ ಮನೂಕ್ತಂ ಹಿತಮಿತ್ಯುತ ।**
**ಅತೋ ಬ್ರೂಹ್ಯಖಿಲಾನ್ ಧರ್ಮಾನ್ ಯೇನ ವಿದ್ಮೋಽಖಿಲಂ ವಯಂ ॥**

ಅಸ್ಮಾನ್-ನಮ್ಮನ್ನು ಕುರಿತು (ನಮಗೆ), ಪಿತಾಮಹಃ-ಬ್ರಹ್ಮದೇವನು, ಮನೂಕ್ತಂ-ಮನೂಕ್ತವೇ (ನೀನು ಹೇಳಿದುದೇ), ಹಿತಂ-(ಸರ್ವರ) ಹಿತಸಾಧಕವು, ಇತ್ಯುತ-ಹೀಗೆಂಬ ನಿಶ್ಚಯವನ್ನು ಅಬ್ರವೀತ್-ಹೇಳಿದನು; ಅತಃ - ಆದ್ದರಿಂದ, ಯೇನ-ಯಾವುದರಿಂದ, ವಯಂ-ನಾವು, ಅಖಿಲಂ-ಸಮಸ್ತವನ್ನೂ ವಿದ್ಮಃ-ತಿಳಿಯುವೆವೋ, (ಅಂಥ) ಅಖಿಲಾನ್-ಸಮಸ್ತ ಧರ್ಮಾನ್-ಧರ್ಮಗಳನ್ನೂ ಬ್ರೂಹಿ-ಹೇಳುವವನಾಗು.

ಶ್ರೀ ಭಗವಾನುವಾಚ—

**ಅಥ ಶ್ರುತ್ವಾ ವಚಸ್ತೇಷಾಂ ಮುನೀನಾಂ ಸ್ನಿಗ್ಧಚೇತಸಾಂ ।**
**ಅವರ್ಣಯನ್ಮಹಾತೇಜಾ ಧರ್ಮಾನ್ನಾನಾವಿಧಾನ್ ಹಿತಾನ್ ॥ ೧೩ ॥**

**ಯಥೋಪದಿಷ್ಟವಾನ್ ಪೂರ್ವಂ ಬ್ರಹ್ಮಾ ಸರ್ವವಿದಾಂ ಪತಿಃ ।**

ಅಥ-ಆ ನಂತರ, ಸ್ನಿಗ್ಧಚೇತಸಾಂ-(ತನ್ನಲ್ಲಿ) ಸ್ನೇಹಯುಕ್ತವಾದ ಮನಸ್ಸುಳ್ಳ,

---

ತಪೋನುಷ್ಠಾನವನ್ನು ಮುಗಿಸಿ, ಸುಖಾಸೀನನಾಗಿದ್ದ ಮನುವಿನ ಸಮೀಪಕ್ಕೆ, ಎಲ್ಲ ಮುನೀಶ್ವರರೂ ಬಂದರು; ಮನುವಿನಲ್ಲಿ ಪೂಜ್ಯಭಾವನೆಯುಳ್ಳ ಅವರು, ಹೀಗೆ ವಿಜ್ಞಾಪಿಸಿಕೊಂಡರು (೧೧): 'ಮನೂಕ್ತಧರ್ಮಾಚರಣೆಗಳೇ ಸರ್ವರಿಗೆ ಶ್ರೇಷ್ಠಹಿತ ಸಾಧಕಗಳು; ಹೀಗೆಂದು ಬ್ರಹ್ಮದೇವನು ನಮ್ಮೆಲ್ಲರಿಗೆ ಹೇಳಿರುವನು; ಯಾವುದರ ಜ್ಞಾನದಿಂದ ನಾವು ಸರ್ವಹಿತಸಾಧಕಸರ್ವವನ್ನೂ ತಿಳಿದಂತಾಗುವುದೋ ಆ ಸಮಸ್ತ ಧರ್ಮಗಳನ್ನು ನಮಗೋಸ್ಕರ ನಿರೂಪಿಸುವನಾಗು' (೧೨). ಮುಂದಿನ ವೃತ್ತಾಂತವನ್ನು ಶ್ರೀವಿಷ್ಣುವು ಬ್ರಹ್ಮನಿಗೆ ನಿರೂಪಿಸುತ್ತಾನೆ:— ತನ್ನಲ್ಲಿ ಸ್ನೇಹಯುಕ್ತರಾದ ಋಷಿಗಳ ಮಾತನ್ನು ಕೇಳಿ, ಮಹಾಜ್ಞಾನಿಯಾದ ಮನುವು, ಸಕಲ ಪ್ರಜೆಗಳ ಹಿತಸಾಧಕವಾದ, ವಿವಿಧ ಧರ್ಮಗಳನ್ನು ಪೂರ್ವದಲ್ಲಿ ಬ್ರಹ್ಮದೇವನು ತನಗೆ ಉಪದೇಶಿಸಿದ ಕ್ರಮದಿಂದಲೇ, ವರ್ಣಿಸಿದನು (೧೩). ಹೇಳಲಾದ ಸರ್ವವನ್ನೂ ತಿಳಿದು, ಸಂತೋಷಿಸಿದ ಋಷಿಗಳು,

ತೇಷಾಂ-ಆ, ಮುನೀನಾಂ-ಋಷಿಗಳ, ವಚಃ-ಮಾತುಗಳನ್ನು ಶ್ರುತ್ವಾ-ಕೇಳಿ, ಮಹಾತೇಜಾಃ-ಮಹಾಜ್ಞಾನಿಯಾದ (ತೇಜಸ್ವಿಯಾದ) ಮನುವು, ಪೂರ್ವಂ- ಹಿಂದೆ, ಸರ್ವವಿದಾಂ ಪತಿಃ-ಸರ್ವಜ್ಞರಲ್ಲಿ ಶ್ರೇಷ್ಠನಾದ (ಋಷಿಪುಂಗವನಾದ), ಬ್ರಹ್ಮಾ-ಬ್ರಹ್ಮದೇವನು, ಯಥಾ-ಹೇಗೆ, ಉಪದಿಷ್ಟವಾನ್-(ತನಗೆ) ಉಪದೇಶ ಮಾಡಿದನೋ, (ತಥಾ-ಹಾಗೆ), ನಾನಾವಿಧಾನ್-ಬಹುವಿಧದ, ತಾನ್-ಆ, ಧರ್ಮಾನ್-ಧರ್ಮಗಳನ್ನು ಅವರ್ಣಯತ್-ವರ್ಣಿಸಿದನು.

ಅಥ ಸಂಜಾತಹರ್ಷಾಸ್ತೇ ಸರ್ವಂ ಜ್ಞಾತ್ವಾ ತದೀರಿತಂ ॥ ೧೪ ॥

ಸ್ಮರ್ತಾರೋಽಪಿ ಸ್ವಯಂ ಚಕ್ರುರ್ನಿಬಂಧಾನ್ ವೇದಮೂಲಕಾನ್ ।
ತತ್ರ ತತ್ರ ಶ್ರುತಾನರ್ಥಾನ್ ವಿಕ್ಷಿಪ್ತಾನೇಕತಃ ಕೃತಾನ್ ॥ ೧೫ ॥

ಜಗದುಃ ಸ್ವನಿಬಂಧೇಷು ಸ್ಮೃತಯಸ್ತಾ ಇತೀರಿತಾಃ ।
ವರ್ಣಾನಾಮಾಶ್ರಮಾಣಾಂ ಚ ತತ್ತದ್ಯುಗಗತಾನಪಿ ॥ ೧೬ ॥

ಧರ್ಮಾನ್ಯೇಭ್ಯೋಽವಗತ್ಯೈವ ಚರಂತ್ಯಾತ್ಮಹಿತಾರ್ಥಿನಃ ।
ಆದ್ಯಂ ಮನ್ವಂತರಂ ಬ್ರಹ್ಮನ್ ಇತ್ಥಮಾಸೀದ್ಧರಾತಲೇ ॥ ೧೭ ॥

ಅಥ-ಆ ನಂತರ, ತದೀರಿತಂ-ಮನುವಿನಿಂದ ಹೇಳಲ್ಪಟ್ಟ ಸರ್ವಂ- ಎಲ್ಲವನ್ನೂ ಜ್ಞಾತ್ವಾ-ತಿಳಿದು, ಸಂಜಾತಹರ್ಷಾಃ-ಸಂತೋಷವನ್ನು ಹೊಂದಿದ್ದ ತೇ-ಆ ಋಷಿಗಳು, ಸ್ವಯಂ-ತಾವು, ಸ್ಮರ್ತಾರಃ ಅಪಿ-(ಉಕ್ತಧರ್ಮಗಳ) ಸ್ಮರಣೆಯುಳ್ಳವರಾದರೂ, ನಿಬಂಧಾನ್-(ಧಾರ್ಮಿಕ) ನಿಯಮಗಳನ್ನು ಚಕ್ರುಃ- ರಚಿಸಿದರು; ಸ್ವನಿಬಂಧೇಷು-ತಮ್ಮ ನಿಬಂಧಗಳಲ್ಲಿ ವೇದಮೂಲಕಾನ್ - ವೇದದಲ್ಲಿ ಮೂಲವುಳ್ಳ (ವೇದೋಕ್ತವಾದ—ವೇದಾನುಸಾರಿಗಳಾದ), ತತ್ರ ತತ್ರ-ಅಲ್ಲಲ್ಲಿ ಶ್ರುತಾನ್-ಕೇಳಿದ

---

ಸ್ವಯಂ ಆ ಎಲ್ಲ ಧರ್ಮಗಳ ಸ್ಮರಣೆಯುಳ್ಳವರಾದರೂ, ಧಾರ್ಮಿಕ ನಿಬಂಧನೆಗಳನ್ನು ರಚಿಸಿದರು; ಅವುಗಳಲ್ಲಿ ವೇದೋಕ್ತವಾದ ಮತ್ತು ವೇದಾನುಸಾರಿಗಳಾದ, ತಮ್ಮಿಂದ ಶ್ರುತವಾದ ಮತ್ತು ಅಲ್ಲಲ್ಲಿ ವಿಕ್ಷಿಪ್ತವಾಗಿ ಹೇಳಲ್ಪಟ್ಟ ಅರ್ಥವಿಶೇಷಗಳನ್ನು ಏಕತ್ರ ಸಂಗ್ರಹಿಸಿ, ನಿರೂಪಿಸಿದರು; ಈ ನಿಬಂಧಗಳೇ ಸ್ಮೃತಿಗಳೆಂದು ಪ್ರಸಿದ್ಧವಾಗಿವೆ; ಇವುಗಳಿಂದ ಆಯಾ ಯುಗಯೋಗ್ಯಗಳಾದ ಧರ್ಮಗಳನ್ನು ವರ್ಣಾಶ್ರಮ ಧರ್ಮಗಳನ್ನು ತಿಳಿದು, ಆತ್ಮಹಿತೈಷಿಗಳು ಆಚರಿಸುತ್ತಾರೆ; ಹೇ ಬ್ರಹ್ಮ! ಭೂತಲದಲ್ಲಿ ಮೊದಲಿನ ಮನ್ವಂತರವು ಹೀಗೆ ನಡೆಯಿತು (೧೪-೧೭).

ಶಿ೬ನೇ ಅಧ್ಯಾಯವು ಮುಗಿದುದು.

(ವೇದಗಳಲ್ಲಿ ಹೇಳಲಾದ), ವಿಕ್ಷಿಪ್ತಾನ್- ಬೇರೆಬೇರೆಯಾಗಿ (ಸಂಬಂಧವಿಲ್ಲದಂತೆ) ಹೇಳಲ್ಪಟ್ಟ ಅರ್ಥಾನ್-ವಿಷಯಗಳನ್ನು (ಪ್ರಮೇಯಗಳನ್ನು), ಏಕತಃಕೃತಾನ್- ಏಕತ್ರಮಾಡಿ (ಒಂದು ಕಡೆಯಲ್ಲಿ ಸೇರಿಸಿ), ಜಗದುಃ-ಹೇಳಿದರು; ತಾಃ-ಅವುಗಳು (ಋಷಿಪ್ರೋಕ್ತ ಈ ನಿಬಂಧನೆಗಳು), ಸ್ಮೃತಯಃ-ಸ್ಮೃತಿಗಳು, ಇತಿ-ಎಂದು, ಈರಿತಾಃ-ಹೇಳಲ್ಪಡುತ್ತವೆ; ಯೇಭ್ಯಃ-ಯಾವುಗಳಿಂದ (ಈ ಸ್ಮೃತಿಗಳಿಂದ), ವರ್ಣಾಶ್ರಮಾಣಾಂ-ವರ್ಣಾಶ್ರಮಗಳ, ಚ-ಹಾಗೂ, ತತ್ತದ್ಯುಗಗತಾನ್ ಅಪಿ-ಆಯಾ ಯುಗಗಳಲ್ಲಿ (ಆಚರಣೆಗೆ) ಯೋಗ್ಯವಾದ, ಧರ್ಮಾನ್-ಧರ್ಮಗಳನ್ನು ಅವಗತ್ಯೈವ-ತಿಳಿದು, ಆತ್ಮಹಿತಾರ್ಥಿನಃ-ಸ್ವಹಿತವನ್ನು ಇಚ್ಛಿಸುವ ವಿವೇಕಿಗಳು, ಚರಂತಿ-ಆಚರಿಸುತ್ತಾರೆ; ಬ್ರಹ್ಮನ್-ಹೇ ಬ್ರಹ್ಮದೇವ !, ಧರಾತಲೇ-ಭೂಮಿಯಲ್ಲಿ ಆದ್ಯಂ-ಮೊದಲಿನ, ಮನ್ವಂತರಂ-ಮನ್ವಂತರವು, ಇತ್ಥಂ-ಹೀಗೆ, ಆಸೀತ್-ಆಯಿತು (ನಡೆಯಿತು).

ಮನ್ವಂತರಾನುವರ್ಣನವೆಂಬ ೨೬ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೨೭

ಶ್ರೀ ವೇದವ್ಯಾಸಾಯ ನಮಃ

ಶ್ರೀ ಭಗವಾನುವಾಚ—

ಸ್ವಾರೋಚಿಷೋ ಮನುರ್ನಾಮ ದ್ವಿತೀಯೋಗ್ನೇಃ ಸುತೋ ಮಹಾನ್ ।
ಋಷಿರ್ವೇದಶಿರಾನಾಮ ತುಷಿತಾ ತಸ್ಯ ಪತ್ನ್ಯಭೂತ್ ॥ ೧ ॥

ಅರ್ಥ:—ಮಹಾನ್-ಮಹಾತ್ಮನಾದ, ಅಗ್ನೇಃ-ಅಗ್ನಿದೇವನ, ಸುತಃ-ಮಗನಾದ, ಸ್ವಾರೋಚಿಷಃನಾಮ-ಸ್ವಾರೋಚಿಷನೆಂಬುವನು, ದ್ವಿತೀಯಃ-ಎರಡನೆಯ (ಈ ಶ್ವೇತವರಾಹಕಲ್ಪದ ಎರಡನೆಯ), ಮನುಃ-ಮನುವು; (ಈತನ ಅಧಿಕಾರಾವಧಿಯಲ್ಲಿ) ವೇದಶಿರಾಃ-ವೇದಶಿರಾ, ನಾಮ-ಎಂಬ ಒಬ್ಬ, ಋಷಿಃ-ಋಷಿಯಿದ್ದನು; ತಸ್ಯ-ಆತನ, ಪತ್ನೀ-ಭಾರ್ಯಳು, ತುಷಿತಾ-ತುಷಿತಾ, ಅಭೂತ್-ಆಗಿದ್ದಳು.

---

ಅಧ್ಯಾಯ ೨೭

ತಾತ್ಪರ್ಯ:—ಅಗ್ನಿದೇವನ ಮಗನಾದ ಸ್ವಾರೋಚಿಷನೆಂಬ ಮಹಾತ್ಮನು, ಈ ಕಲ್ಪದ ೨ನೇ ಮನು (ಮನ್ವಂತರಾಧಿಪತಿಯು) ಆದನು; ವೇದಾಶಿರಾ ಎಂಬ ಋಷಿಗೆ, ತುಷಿತಾನಾಮಕ ಭಾರ್ಯಳಿದ್ದಳು (೧). ಸಪ್ತರ್ಷಿಗಳಲ್ಲೊಬ್ಬನಾದ ವೇದಶಿರಸ್ಸೆಂಬ ಋಷಿಯ ಪತ್ನಿಯಾದ ತುಷಿತಳೆಂಬುವಳ ಜ್ಯೇಷ್ಠಪುತ್ರನೇ ರೋಚನನು; ಹಿಂದೆ ಸೂತ್ರನಾಮಕನಾದ ವಾಯುದೇವನಾದವನೇ ಈ ರೋಚನನು. ಈತನೇ ಇಂದ್ರ

ತಸ್ಯಾಂ ರೋಚನನಾಮಾಸೀತ್ ಜ್ಯೇಷ್ಠ ಇಂದ್ರಶ್ಚ ಸೋಽಭವತ್ ।
ಯಃ ಪುರಾ ಸೂತ್ರನಾಮಾಸೀತ್ಸ ಏವಾಯಮಿಹಾಭವತ್ ॥ ೨ ॥

ತಸ್ಮಾದನಂತರಂ ಚಾಹಮವತೀರ್ಣೋ ವಿಭುಃ ಸ್ವಯಂ ।
ಉಪೇಂದ್ರ ಇತಿ ತೇನಾಹಂ ವಿಶ್ರುತೋ ವಿದುಷಾಂ ಮುಖೇ ॥ ೩ ॥

ಮಮ ಪಶ್ಚಾತ್ತು ಯೇ ಜಾತಾ ತುಷಿತಾನಾಮ ದೇವತಾಃ ।

ತಸ್ಯಾಂ-ಆಕೆಯಲ್ಲಿ ರೋಚನನಾಮ-ರೋಚನನೆಂಬ, ಜ್ಯೇಷ್ಠಃ-ಹಿರಿಯ ಮಗನು, ಆಸೀತ್-ಇದ್ದನು; ಸಃ-ಆತನೇ, ಇಂದ್ರಃ-ಇಂದ್ರನು (ಸ್ವರ್ಗಲೋಕಾಧಿಪತಿಯು), ಅಭವತ್-ಆದನು; ಪುರಾ-ಪೂರ್ವದಲ್ಲಿ ಯಃ-ಯಾರು, ಸೂತ್ರನಾಮಾ - ಸೂತ್ರನಾಮಕನು (ವಾಯುದೇವನು), ಆಸೀತ್-ಆಗಿದ್ದನೋ, ಸ ಏವ-ಆತನೇ, ಇಹ ಈ ಮನ್ವಂತರದಲ್ಲಿ ಅಯಂ-ಈ ಇಂದ್ರನು, ಅಭವತ್- ಆದನು; ತಸ್ಮಾತ್-ಆತನ, ಅನಂತರಂ-ನಂತರ, (ರೋಚನನ ತಮ್ಮನು), ಸ್ವಯಂ ವಿಭುಃ-ಸಾಕ್ಷಾತ್ ವಿಷ್ಣುವಾದ, ಅಹಂ-ನಾನು, ಅವತೀರ್ಣಃ-ಅವತರಿಸಿದೆನು; ತೇನ-ಈ ಕಾರಣದಿಂದ (ಇಂದ್ರನ ತಮ್ಮನಾಗಿ ಅವತರಿಸಿದ ಕಾರಣ), ಅಹಂ-ನಾನು, ವಿದುಷಾಂ-ಜ್ಞಾನಿಗಳ, ಮುಖೇ - ಮುಖದಲ್ಲಿ ಉಪೇಂದ್ರ ಇತಿ-ಉಪೇಂದ್ರನೆಂದು, ವಿಶ್ರುತಃ-ಪ್ರಸಿದ್ಧನು (ಆದೆನು); ಮಮ-ನನ್ನ ಪಶ್ಚಾತ್ ತು-ನಂತರ; ಯೇ ಜಾತಾಃ-ಯಾರು (ಆ ತುಷಿತಳಿಂದ) ಜನಿಸಿದರೋ (ಅವರು), ತುಷಿತಾನಾಮ-ತುಷಿತರೆಂಬ, ದೇವತೆಗಳು (ಈ ಮನ್ವಂತರದಲ್ಲಿ ದೇವತೆ ಗಳಾದರು—ವಿಶಿಷ್ಟಾಧಿಕಾರವುಳ್ಳವರು ಆದರು).

---

ಪದವಿಗೆ ಬಂದನು; ಆತನ ತಮ್ಮನಾಗಿ ಸ್ವಯಂ ಶ್ರೀವಿಷ್ಣುವಾದ ನಾನೇ ಅವತರಿಸಿದೆನು; ಇಂದ್ರನ ತಮ್ಮನಾದ್ದರಿಂದ ಜ್ಞಾನಿಗಳು ನನ್ನನ್ನು ಉಪೇಂದ್ರನೆಂದು ಕರೆದರು; ನನ್ನ ನಂತರ ಜನಿಸಿದವರೇ ತುಷಿತ್ಯನಾಮಕರಾಗಿ, ಅಧಿಕೃತ ದೇವತೆಗಳ ಸ್ಥಾನವನ್ನು ಅಲಂಕರಿಸಿದರು[1] (೨-೩) ಮೂರನೆಯ ಮನ್ವಂತರದಲ್ಲಿ ಉತ್ತಮನೆಂಬಾತನು ಮನುವಾದನು; ಆಗ ಶ್ರೀವಿಷ್ಣುವಿನ (ವಿರಾಟ್ ಪುರುಷನ) ಸ್ತನದಿಂದ ಉತ್ಪನ್ನನಾದ ಧರ್ಮನೇ (ಯಮನೇ) ಇಂದ್ರನಾದನು (೪). ಧರ್ಮನೇ ತನ್ನ ಭಾರ್ಯೆಯಾದ ಸೂನೃತಾ ದೇವಿಯಲ್ಲಿ ಸತ್ಯಜಿತ್‌ನಾಮಕನಾಗಿ ಜನಿಸಿ, ಇಂದ್ರನಾದನು; ಅದೇ ಯಮಧರ್ಮನಿಂದ,

---

1. ಪ್ರತಿ ಮನ್ವಂತರದಲ್ಲಿ (ಬ್ರಹ್ಮದೇವನ ಪ್ರತಿದಿನ ಕಲ್ಪದಲ್ಲಿ ೧೪ ಮನುಗಳು ಆಗುತ್ತಾರೆ), ಮನು, ಇಂದ್ರ, ಋಷಿ, ದೇವತಾ, ಇತ್ಯಾದಿ ಅಧಿಕಾರಸ್ಥಾನಗಳನ್ನು ಅಲಂಕರಿಸುವ ವ್ಯಕ್ತಿಗಳು ಪ್ರತ್ಯೇಕವಿರುವರು; ಈ ವರಾಹಕಲ್ಪದ ೧೪ ಮನ್ವಂತರಗಳಲ್ಲಿ ಈ ಸ್ಥಾನಗಳಿಗೆ ಬರಲಿರುವವರನ್ನು ಮುಂದೆ ಕ್ರಮವಾಗಿ ವಿವರಿಸಲಾಗಿದೆ.

ತೃತೀಯೇ ತ್ವಂತರೇ ಬ್ರಹ್ಮನ್ ಉತ್ತಮೋ ನಾಮ ವೈ ಮನುಃ ॥ ೪ ॥
ಯಸ್ತನಾದಭವದ್ವಿಷ್ಣೋಃ ಸ ಧರ್ಮಸ್ತ್ವಿಂದ್ರತಾಂ ಗತಃ ।

ತೃತೀಯೇ-ಮೂರನೆಯ, ಅಂತರೇ ತು-ಮನ್ವಂತರದಲ್ಲಿಯಾದರೋ, ಬ್ರಹ್ಮನ್-ಹೇ ಬ್ರಹ್ಮದೇವ!, ಉತ್ತಮಃ ನಾಮ-ಉತ್ತಮನೆಂಬ, ಮನುಃ-ಮನುವು, ವೈ-ಪ್ರಸಿದ್ಧನಾದನು; ಯಃ-ಯಾವಾತನು, ವಿಷ್ಣೋಃ-ವಿರಾಟ್ ಪುರುಷನ, ಸ್ತನಾತ್-ಸ್ತನಪ್ರದೇಶದಿಂದ (ವಕ್ಷದಿಂದ), ಅಭವತ್-(ಪೂರ್ವದಲ್ಲಿ) ಜನಿಸಿದನೋ, ಸಃ-ಆ, ಧರ್ಮಃ ತು-ಧರ್ಮರಾಜನೇ (ಯಮನು), ಇಂದ್ರತಾಂ-ಇಂದ್ರತ್ವವನ್ನು (ಆ ಸ್ಥಾನವನ್ನು), ಗತಃ-ಹೊಂದಿದನು.

ಸತ್ಯಜಿನ್ನಾಮ ವಿಖ್ಯಾತೋ ಧರ್ಮಾದಜನಿ ಯಃ ಸ್ವಯಂ ॥ ೫ ॥
ಯಸ್ಯಾನುಜಜ್ಞಿರೇ ದೇವಾ ಮುನೇಃ ಸುತಪಸಃ ಸುತಾಃ ।
ಭದ್ರಾ ವೇದಶ್ರುತಾಃ ಸತ್ಯಾ ಧರ್ಮಾಶ್ಚಾಪ್ಯಭವನ್ಸ್ತತಃ ॥ ೬ ॥

ಸೂನೃತಾಯಾಂ ಸ ಧರ್ಮೋ ವೈ ಸತ್ಯಸೇನಮಜೀಜನತ್ ।
ಮಮೈವಾಂಶಂ ವದಂತ್ಯೇನಂ ಪಾರ್ಷ್ಣಿಗ್ರಾಹಂ ಮರುತ್ವತಃ ॥ ೭ ॥

ಶುಂಭದಾರುಣವಿಂದಾಖ್ಯೈ ರಾಕ್ಷಸೈರ್ಯಕ್ಷಸಂಗತೈಃ ।
ಪರಾಭೂತಂ ವಜ್ರಭೃತಂ ಯೋಽರಕ್ಷತ್ತಾನ್ನಿಹತ್ಯ ಚ ॥ ೮ ॥

ಪ್ರಮದೋ ವಿಮದಃ ಶಕ್ತಿರಿತ್ಯಾದ್ಯಾಃ ಸಪ್ತ ವೈ ದ್ವಿಜಾಃ ।
ವಸಿಷ್ಠತನಯಾ ಬ್ರಹ್ಮಂಸ್ತತ್ರಾಸನ್ ಧರ್ಮದೇಶಕಾಃ ॥ ೯ ॥

ಯಃ-ಯಾವ (ಯಮಧರ್ಮನು), ಸ್ವಯಂ-ತಾನೇ, ಧರ್ಮಾತ್-ಧರ್ಮನಿಂದ (ಸೂನೃತಾನಾಮಕ ಭಾರ್ಯೆಳಲ್ಲಿ), ಅಜನಿ-ಜನಿಸಿದನೋ (ಆತನೇ),

---

ಸೂನೃತೆಯಲ್ಲಿ ಸತ್ಯಸೇನನೂ ನಂತರ ಜನಿಸಿದನು; ಈ ಸತ್ಯಸೇನನನ್ನು ಜ್ಞಾನಿಗಳು, (ಇಂದ್ರನ ತಮ್ಮನಾದ ನನ್ನನ್ನು) ಶ್ರೀವಿಷ್ಣುವಿನ ಅವತಾರವೆಂದು ತಿಳಿಯುತ್ತಾರೆ; ಸತ್ಯಜಿತ್ ಜನಿಸಿದ ನಂತರ ಹುಟ್ಟಿದ, ಸುತಪಾನಾಮಕ ಋಷಿಯ ಮಕ್ಕಳಾದ, ಭದ್ರ, ಸತ್ಯ, ವೇದಶ್ರುತ, ಧರ್ಮ, ಎಂಬುವರು, ಆ ಮನ್ವಂತರದ ದೇವತೆಗಳಾದರು; ಯಕ್ಷ ರಾಕ್ಷಸರಿಂದ ಸಹಿತರಾದ ಶುಂಭ, ದಾರುಣ, ವಿಂದರೆಂಬ ದೈತ್ಯರಿಂದ ಪರಾಜಿತನಾದ ಇಂದ್ರನನ್ನು ರಕ್ಷಿಸಿ, ಸತ್ಯಸೇನನು ಈ ದೈತ್ಯರನ್ನು ಸಂಹರಿಸಿದನು; ಆ ಮನ್ವಂತರದಲ್ಲಿ

ಸತ್ಯಜಿನ್ನಾಮ-ಸತ್ಯಜಿತ್ ನಾಮವುಳ್ಳ, ವಿಖ್ಯಾತಃ-ಪ್ರಸಿದ್ಧನು (ಆತನೇ ಇಂದ್ರನಾದನು); ಯಸ್ಯ-ಯಾವಾತನ (ಇಂದ್ರನ), ಅನು-ನಂತರ, ಜಜ್ಞಿರೇ- ಹುಟ್ಟಿದರೋ, (ಆ) ಸುತಪಸಃ ಮುನೇಃ-ಸುತಪಾನಾಮಕ ಋಷಿಯ, ಸುತಾಃ-ಮಕ್ಕಳು (ಪುತ್ರರು), ಭದ್ರಾವೇದಶ್ರುತಾಃ ಸತ್ಯಾಧರ್ಮಾಶ್ಚಾಪಿ-ಭದ್ರ, ವೇದಶ್ರುತ, ಸತ್ಯ, ಧರ್ಮರೆಂಬುವರೇ, ಅತಃ-ಇಂದ್ರನಿಂದಲೇ, ಅಭವನ್- (ದೇವತೆಗಳ ಸ್ಥಾನವನ್ನು) ಹೊಂದಿದರು (ಆ ಮನ್ವಂತರದ ದೇವತೆಗಳಾದರು); ಸಃ ಧರ್ಮಃ- ಆ ಯಮಧರ್ಮನು, ಸೂನೃತಾಯಾಂ-(ತನ್ನ ಭಾರ್ಯಳಾದ) ಸೂನೃತೆಯಲ್ಲಿ, ಸತ್ಯಸೇನಂ-ಸತ್ಯಸೇನನನ್ನು ಅಜೀಜನತ್-ಉತ್ಪಾದಿಸಿದನು; ಮರುತ್ವತಃ-ಇಂದ್ರನ, ಪಾರ್ಷ್ಣಿಗ್ರಾಹಂ-ಹಿಂದಿನವನಾದ (ತಮ್ಮನಾದ- ಆತನ ಅನುಯಾಯಿಯಾದ), ಏನಂ-ಈತನನ್ನು (ಸತ್ಯಸೇನನನ್ನು), ಮಮ-ನನ್ನ, ಅಂಶಂ ಏವ-ಅಂಶವನ್ನೇ ಆಗಿ (ಅವತಾರವನ್ನಾಗಿ), ವದಂತಿ- (ಜ್ಞಾನಿಗಳು—ಪ್ರಮಾಣಗಳು) ಹೇಳುತ್ತವೆ; ಯಃ-ಯಾವನು (ಈ ಸತ್ಯಸೇನನು), ಯಕ್ಷಸಂಗತೈಃ-ಯಕ್ಷರಿಂದ ಕೂಡಿದ, ಶುಂಭದಾರುಣವಿಂದಾಖ್ಯೈಃ-ಶುಂಭ, ದಾರುಣ, ವಿಂದರೆಂಬ, ರಾಕ್ಷಸೈಃ-ರಾಕ್ಷಸರಿಂದ, ಪರಾಭೂತಂ-ಸೋಲಿಸಲ್ಪಟ್ಟ (ತಿರಸ್ಕರಿಸಲ್ಪಟ್ಟ), ವಜ್ರಭೃತಂ-ಇಂದ್ರನನ್ನು, ತಾನ್-ಅವರನ್ನು, ನಿಹತ್ಯ-ಸಂಹರಿಸಿ, ಅರಕ್ಷತ್-ರಕ್ಷಿಸಿದನು; ಪ್ರಮದಃ-ಪ್ರಮದನು, ವಿಮದಃ-ವಿಮದನು, ಶಕ್ತಿ-ಶಕ್ತಿಯು, ಇತ್ಯಾದ್ಯಾಃ- ಈ ಮೊದಲಾದ, ಸಪ್ತ-ಏಳು, ವಸಿಷ್ಠತನಯಾಃ- ವಸಿಷ್ಠರ ಮಕ್ಕಳು, ಬ್ರಹ್ಮನ್ - ಹೇ ಬ್ರಹ್ಮದೇವ !, ತತ್ರ - ಅಲ್ಲಿ (ಆ ಮನ್ವಂತರದಲ್ಲಿ), ಧರ್ಮದೇಶಕಾಃ - ಧರ್ಮೋಪದೇಶಕರಾದ, ದ್ವಿಜಾಃ - ಋಷಿಗಳು (ಸಪ್ತರ್ಷಿಗಳು), ಆಸನ್- ಆದರು.

---

ಪ್ರಮದ, ವಿಮದ, ಶಕ್ತಿ ಮೊದಲಾದ ವಸಿಷ್ಠರ ಏಳು ಮಕ್ಕಳು, ಧರ್ಮೋಪದೇಶಕರಾದ ಸಪ್ತರ್ಷಿಗಳಾದರು[1] (೫-೯).

ಈ ಸಪ್ತರ್ಷಿಗಳಾದ ವಸಿಷ್ಠಪುತ್ರರು, ಒಂದು ವೇಳೆ, ಸುಖಾಸೀನರಾದ ತಮ್ಮ ತಂದೆ ಬಳಿ ಸಾರಿ, ಮುನಿಶ್ರೇಷ್ಠರಾದ ವಸಿಷ್ಠರನ್ನು ಆದರಪೂರ್ವಕವಾಗಿ ಧರ್ಮಗಳ ಬಗ್ಗೆ ಪ್ರಶ್ನಿಸಿದರು; ಅವರು, ಮಕ್ಕಳ ಮುಂದೆ, ಸಮಸ್ತ ಧರ್ಮಗಳನ್ನು ನಿರೂಪಿಸಿದರು; ಅವರಿಂದ ಉಕ್ತವಾದ ಈ ಧರ್ಮನಿರೂಪಣೆಯು ವಸಿಷ್ಠಸ್ಮೃತಿಯೆಂದು ಪ್ರಸಿದ್ಧವಾಯಿತು; ಈ ಸಪ್ತ ಸಹೋದರರು, ಅಷ್ಟರಿಂದ ತೃಪ್ತರಾಗದೇ, ಯಾವ ಧರ್ಮಗಳನ್ನು ಆಚರಿಸುವುದರಿಂದ, ಮಾನವರು, ಸುಲಭವಾಗಿ ಮೋಕ್ಷವನ್ನು

1. ಮನುವಾದ ಉತ್ತಮನು, ಪ್ರಿಯವ್ರತನ ಮಗನು; 'ತೃತೀಯ ಉತ್ತಮೋನಾಮ ಪ್ರಿಯವ್ರತಸುತೋ ಮನುಃ ।' ಇತ್ಯಾದಿ (೮ನೇ ಸ್ಕಂಧ) ಶ್ರೀಭಾಗವತ ಶ್ಲೋಕಗಳು ಉಕ್ತವಾದ ತಾತ್ಪರ್ಯಾರ್ಥವನ್ನು ಸಮರ್ಥಿಸುತ್ತವೆ.

ತೇ ಸಪ್ತ ಭ್ರಾತರಸ್ತಾತಂ ವಸಿಷ್ಠಂ ಮುನಿಪುಂಗವಂ ।
ಏಕದಾ ಸುಖಮಾಸೀನಂ ಧರ್ಮಾನ್ ಪಪ್ರಚ್ಛುರಾದೃತಾಃ ॥ ೧೦ ॥
ಅವರ್ಣಯತ್ಪುರಸ್ತೇಷಾಂ ಸ ಧರ್ಮಾನಖಿಲಾನ್ಮುನಿಃ
ವಸಿಷ್ಠಸ್ಮೃತಿರಿತ್ಯುಕ್ತ್ವಾ ಪ್ರಥಿತಾಪ್ಯಥ ಸಾ ಭವತ್ ॥ ೧೧ ॥
ಭೂಯಸ್ತೇ ಮುನಯಸ್ತಂ ವೈ ಪಪ್ರಚ್ಛುಃ ಶ್ರೇಷ್ಠಧರ್ಮಕಾನ್ ।
ಕೃತ್ಯೈರ್ಯೈರ್ಲಭ್ಯತೇ ಮೋಕ್ಷೋ ನಾತಿಯತ್ನೇನ ಮಾನವೈಃ ॥ ೧೨ ॥

ಏಕದಾ-ಒಂದು ವೇಳೆ, ತೇ-ಆ, ಸಪ್ತಭ್ರಾತರಃ-ಏಳು ಸಹೋದರರು (ಸಪ್ತರ್ಷಿಗಳು), ತಾತಂ-ತಮ್ಮ ತಂದೆಯಾದ, ಮುನಿಪುಂಗವಂ-ಋಷಿಶ್ರೇಷ್ಠನಾದ, ವಸಿಷ್ಠಂ-ವಸಿಷ್ಠನನ್ನು, ಸುಖಮಾಸೀನಂ-ಸುಖಾಸೀನನಾಗಿರುವಾಗ, ಆದೃತಾಃ- ಆದರವುಳ್ಳವರಾಗಿ, ಧರ್ಮಾನ್-ಧರ್ಮಗಳನ್ನು ಪಪ್ರಚ್ಛುಃ-ಕೇಳಿದರು; ತೇಷಾಂ ಪುರಃ-ಅವರ ಸಮ್ಮುಖದಲ್ಲಿ, ಸಃ ಮುನಿಃ-ಆ ವಸಿಷ್ಠನು, ಧರ್ಮಾನ್-ಧರ್ಮಗಳನ್ನು ಅವರ್ಣಯತ್-ವರ್ಣಿಸಿದನು; ಅಥ-ಅಲ್ಲಿಂದ ಮುಂದೆ, ಇತ್ಯುಕ್ತ್ವಾ-ಹೀಗೆ ಹೇಳಲಾದ, ಸಾ-ಆ ಧರ್ಮನಿರೂಪಣೆಯು, ವಸಿಷ್ಠಸ್ಮೃತಿಃ-ವಸಿಷ್ಠಸ್ಮೃತಿಯು, ಅಭವತ್-ಆಯಿತು; ತೇ ಮುನಯಃ-ಆ ಸಪ್ತರ್ಷಿಗಳು, ಭೂಯಃ-ಪುನಃ, ತಂ-ಆ ವಸಿಷ್ಠನನ್ನು ಮಾನವೈಃ-ಮನುಷ್ಯರಿಂದ, ಕೃತ್ಯೈಃ-ಮಾಡಲ್ಪಟ್ಟ (ಆಚರಿಸಲ್ಪಟ್ಟ), ಯೈಃ-ಯಾವ ಧರ್ಮಗಳಿಂದ, ನಾತಿಯತ್ನೇನ-ಬಹು ಪ್ರಯತ್ನವಿಲ್ಲದೇ (ಸುಲಭವಾಗಿ), ಮೋಕ್ಷಃ-ಮೋಕ್ಷವು, ಲಭ್ಯತೇ-ದೊರೆಯುವುದೋ, ಶ್ರೇಷ್ಠ ಧರ್ಮಾನ್‌ವೈ-ಅಂಥ ಉತ್ತಮ ಧರ್ಮಗಳನ್ನೇ (ಕುರಿತು), ಪಪ್ರಚ್ಛುಃ-ಪ್ರಶ್ನೆ ಮಾಡಿದರು.

---

ಹೊಂದುವರೋ, ಆ ಶ್ರೇಷ್ಠಧರ್ಮಗಳನ್ನು ಉಪದೇಶಿಸಲು ಕೇಳಿದರು(೧೦-೧೨). ಆಗ ವಸಿಷ್ಠರು, ಹೀಗೆ ನುಡಿದರು:— 'ಸರ್ವಧರ್ಮಗಳಲ್ಲಿ ವೈಷ್ಣವಧರ್ಮಗಳು ಶ್ರೇಷ್ಠವಾದವುಗಳು; ಅವುಗಳನ್ನು ಅನುಷ್ಠಾನಮಾಡುವ ಮಾತ್ರದಿಂದ ಶ್ರೀವಿಷ್ಣುವು ಪ್ರೀತನಾಗುತ್ತಾನೆ; ಲಕ್ಷ್ಮೀಪತಿಯಾದ ಶ್ರೀವಿಷ್ಣುವು ಪ್ರಸನ್ನನಾದರೆ ಮೋಕ್ಷಾದಿ ಪುರುಷಾರ್ಥಗಳಲ್ಲಿ ದೊರೆಯದುದು (ಅಲಭ್ಯವಾದುದು) ಯಾವುದೂ ಇರುವುದಿಲ್ಲ; ಅಪೇಕ್ಷಿತ ಸರ್ವಸ್ವವೂ ಸಿದ್ಧವಾಗುತ್ತದೆ; ಹೀಗಿದ್ದರೂ, ಏಕಾಂತಭಕ್ತರು, ಶ್ರೀವಿಷ್ಣುವಿನಿಂದ ಏನನ್ನೂ ಅಪೇಕ್ಷಿಸುವುದಿಲ್ಲ[1]. ಅವರಿಗೆ ನಿತ್ಯಸುಖರೂಪದ ಮೋಕ್ಷಕ್ಕಿಂತಲೂ, ಗರುಡಧ್ವಜನಾದ ಶ್ರೀವಿಷ್ಣುವೇ ಪ್ರಿಯನು; ಶ್ರೀನಿಕೇತನನ ಪ್ರಸನ್ನತೆಯನ್ನು ದೊರಕಿಸುವ ಅಂಥ ವೈಷ್ಣವಧರ್ಮಗಳನ್ನು ಹೇಳುತ್ತೇನೆ—ಏಕಾಗ್ರತೆಯಿಂದ ಶ್ರವಣಮಾಡಿರಿ.'

---

1. ತಮ್ಮ ಭಕ್ತ್ಯಾದಿ ಸೇವೆಗಳ ಫಲರೂಪವಾಗಿ ಮೋಕ್ಷವನ್ನೇ ಕೊಟ್ಟರೂ ಸ್ವೀಕರಿಸುವುದಿಲ್ಲ; ಶ್ರೀಹರಿಯ ಆಜ್ಞೆಯಿಂದ ಮಾತ್ರ ಸ್ವೀಕರಿಸುತ್ತಾರೆ—ಏಕಾಂತ ಭಕ್ತರು—ದೇವತೆಗಳೇ ಅವರು.

**ವಸಿಷ್ಠ ಉವಾಚ—**

**ಸರ್ವೇಷ್ವಪಿ ಚ ಧರ್ಮೇಷು ಶ್ರೇಷ್ಠಾ ಧರ್ಮಾ ಹಿ ವೈಷ್ಣವಾಃ ।**
**ಯದನುಷ್ಠಿತಮಾತ್ರೇಣ ನರೋ ವಿಷ್ಣುಪ್ರಿಯೋ ಭವೇತ್ ॥ ೧೩ ॥**

**ಕಿಮಲಭ್ಯಂ ಸುತಾಸ್ತಸ್ಮಿನ್ ಪ್ರಸನ್ನೇ ಶ್ರೀನಿಕೇತನೇ ।**
**ನ ವಾಂಛಂತಿ ತಥಾಪ್ಯಸ್ಮಾದ್ಭಕ್ತಾ ಏಕಾಂತಿನಸ್ತು ಯೇ ॥ ೧೪ ॥**

**ಏಷಾಂ ನಿತ್ಯಸುಖಾನ್ಮೋಕ್ಷಾತ್ ಪ್ರೇಷ್ಠಂ ಶ್ರೀಗರುಡಧ್ವಜಃ ।**
**ತಾನಹಂ ಭವತೋ ವಕ್ಷ್ಯೇ ಶೃಣುಧ್ವಂ ಸುಸಮಾಹಿತಾಃ ॥ ೧೫ ॥**

ಸರ್ವೇಷು-ಎಲ್ಲ ಧರ್ಮೇಷು-ಧರ್ಮಗಳಲ್ಲಿ ಅಪಿ-ಸಹ, ವೈಷ್ಣವಾಃ ಧರ್ಮಾಃ-ವೈಷ್ಣವಧರ್ಮಗಳು, ಶ್ರೇಷ್ಠಾಃ ಹಿ-ಶ್ರೇಷ್ಠಗಳೆಂಬುದು ಶ್ರುತಿಪ್ರಸಿದ್ಧವು; ಯದನುಷ್ಠಾನಮಾತ್ರೇಣ-ಯಾವ (ಆ) ಧರ್ಮಗಳ ಅನುಷ್ಠಾನಮಾತ್ರದಿಂದ, ನರಃ - ಅಧಿಕಾರಿ ಮನುಷ್ಯನು, ವಿಷ್ಣುಪ್ರಿಯಃ-ಶ್ರೀವಿಷ್ಣುವಿನ ಪ್ರೀತಿಪಾತ್ರನು, ಭವೇತ್ - ಆಗುತ್ತಾನೆ; ಸುತಾಃ - ಹೇ ಪುತ್ರರೇ !, ತಸ್ಮಿನ್ - ಆ, ಶ್ರೀನಿಕೇತನೇ-ಶ್ರೀಲಕ್ಷ್ಮೀನಿಲಯನು, ಪ್ರಸನ್ನೇ(ಸತಿ)-ಪ್ರೀತನಾಗುತ್ತಿರಲು, ಅಲಭ್ಯಂ-ದೊರೆಯದ ವಸ್ತುವು (ಪುರುಷಾರ್ಥವು), ಕಿಂ-ಯಾವುದಿದೆ? (ಅಪೇಕ್ಷಿತ ಸರ್ವಸ್ವವೂ ಸಿದ್ಧವಾಗುತ್ತದೆ); ತಥಾಪಿ-ಹೀಗಿದ್ದರೂ, ಯೇ-ಯಾರು, ಏಕಾಂತಿನಃ ಭಕ್ತಾಃ-ಏಕಾಂತ ಭಕ್ತರೋ (ತೇ-ಅವರು), ಅಸ್ಮಾತ್-ಆತನಿಂದ (ಶ್ರೀಹರಿಯಿಂದ), ನ ವಾಂಛಂತಿ-ಏನನ್ನೂ ಅಪೇಕ್ಷಿಸುವುದಿಲ್ಲ; ಏಷಾಂ-ಈ ಏಕಾಂತ ಭಕ್ತರಿಗೆ, ನಿತ್ಯಸುಖಾತ್-ನಿತ್ಯಸುಖರೂಪದ, ಮೋಕ್ಷಾತ್-ಮೋಕ್ಷಕ್ಕಿಂತಲೂ, ಶ್ರೀಗರುಡ ಧ್ವಜಃ-ಶ್ರೀವಿಷ್ಣುವೇ, ಪ್ರೇಷ್ಠಂ-ಪ್ರಿಯವು; ತಾನ್-ಆ ವಿಷ್ಣುಧರ್ಮಗಳನ್ನು ಭವತಃ-ನಿಮಗೆ, ವಕ್ಷ್ಯೇ-ಹೇಳುತ್ತೇನೆ; ಸುಸಮಾಹಿತಾಃ-ಸಾವಧಾನಮನಸ್ಕರಾಗಿ (ಏಕಾಗ್ರಮನಸ್ಸಿನಿಂದ), ಶೃಣುಧ್ವಂ- ಶ್ರವಣಮಾಡಿರಿ.

**ಸ್ವಸ್ವಶಾಖೋಕ್ತಮಾರ್ಗೇಣ ಸಂಸ್ಕೃತೋ ದ್ವಿಜತಾಂ ಗತಃ ।**

---

(೧೩-೧೫). ವಸಿಷ್ಠರು ಹೇಳುತ್ತಾರೆ:—ಸ್ವಸ್ವವೇದಶಾಖೋಕ್ತ ಮಾರ್ಗದಿಂದ ಸಂಸ್ಕಾರಗಳನ್ನು ಹೊಂದಿದ ದ್ವಿಜನಾದ ಅಧಿಕಾರಿಯು ಉಪನಯನ ಸಂಸ್ಕಾರದಿಂದ ದ್ವಿಜತ್ವವನ್ನು ಪಡೆದು ಪಂಚರಾತ್ರೋಕ್ತಮಾರ್ಗದಿಂದ ವಿಷ್ಣುದೀಕ್ಷೆಯನ್ನು ಗ್ರಹಣ ಮಾಡಬೇಕು; ಲಕ್ಷ್ಮೀಸಮೇತನಾದ ಹಯಗ್ರೀವರೂಪೀ ಶ್ರೀವಿಷ್ಣುವು, ಬ್ರಹ್ಮದೇವನನ್ನು ಕುರಿತು ಈ ವಿಧಾನವನ್ನು(ದೀಕ್ಷಾಗ್ರಹಣವಿಧಾನವನ್ನು) ವಿವರವಾಗಿ ನಿರೂಪಿಸಿರುವನು;

**ಗೃಹ್ಣೀಯಾದ್ವೈಷ್ಣವೀಂ ದೀಕ್ಷಾಂ ಪಂಚರಾತ್ರೋಕ್ತಮಾರ್ಗತಃ ॥ ೧೬ ॥**

**ಯಥಾ ೭ ಭಗವಾನ್ ವಿಷ್ಣುಃ ಹಯಗ್ರೀವಸಮಾಕೃತಿಃ ।**
**ಜಗಾದ ವೇಧಸಂ ವತ್ಸಾಸ್ತಥಾ ಕುರ್ಯಾದ್ವಿಧಾನತಃ ॥ ೧೭ ॥**

ಸ್ವಸ್ವಶಾಖೋಕ್ತಮಾರ್ಗೇಣ-ತಂತಮ್ಮ ವೇದಶಾಖೆಯಲ್ಲಿ ಉಕ್ತವಾದ ವಿಧಿಯಂತೆ, ಸಂಸ್ಕೃತಃ-ಸಂಸ್ಕಾರಗಳನ್ನು ಹೊಂದಿ, ದ್ವಿಜತಾಂ-(ಉಪನಯನ ಸಂಸ್ಕಾರದಿಂದ) ದ್ವಿಜತ್ವವನ್ನು, ಗತಃ-ಹೊಂದಿದವನಾಗಿ, ಪಂಚರಾತ್ರೋಕ್ತ ಮಾರ್ಗತಃ - ಪಂಚರಾತ್ರಾಗಮದಲ್ಲಿ ಹೇಳಿರುವಂತೆ, ವೈಷ್ಣವೀಂ ದೀಕ್ಷಾಂ-ವಿಷ್ಣುದೀಕ್ಷೆಯನ್ನು, ಗೃಹ್ಣೀಯಾತ್-ಸ್ವೀಕರಿಸತಕ್ಕದ್ದು; ವತ್ಸಾಃ-ಹೇ ಪ್ರಿಯಪುತ್ರರೇ !, ಯಥಾ-ಹೇಗೆ, ಭಗವಾನ್ ವಿಷ್ಣುಃ-ಮಹೈಶ್ವರ್ಯಸಂಪನ್ನನಾದ ಶ್ರೀವಿಷ್ಣುವು, ಹಯಗ್ರೀವ ಸಮಾಕೃತಿಃ-ಅಶ್ವಮುಖ ಸದೃಶರೂಪವುಳ್ಳವನಾಗಿ (ಲಕ್ಷ್ಮೀಸಹಿತ ಹಯಗ್ರೀವರೂಪನಾದ ತಾನು), ವೇಧಸಂ-ಬ್ರಹ್ಮದೇವನನ್ನು ಉದ್ದೇಶಿಸಿ, ಜಗಾದ-ಹೇಳಿದನೋ, ತಥಾ-ಹಾಗೆ, ವಿಧಾನತಃ-ವಿಧಾನಪೂರ್ವಕವಾಗಿ, ಕುರ್ಯಾತ್-ಮಾಡತಕ್ಕದ್ದು (ಪಂಚರಾತ್ರೋಕ್ತವಾದ ವಿಧಿಯನ್ನೇ ಶ್ರೀ ಹಯಗ್ರೀವ ದೇವನೂ ಬ್ರಹ್ಮನಿಗೆ ಹೇಳಿರುವನು).

**ಉಷಃಕಾಲೇ ಸಮುತ್ಥಾಯ ಸ್ಮರೇಲ್ಲಕ್ಷ್ಮೀಪತಿಂ ಹರಿಂ ।**
**ಶೌಚಾದಿಪೂರ್ವಕಂ ಕುರ್ಯಾತ್ ಸ್ನಾನಂ ವಿಧಿವದಾದೃತಃ ॥ ೧೮ ॥**

ಇಲ್ಲಿಂದ ಮುಂದಿನ ಶ್ಲೋಕಗಳಲ್ಲಿ ದೀಕ್ಷಾಗ್ರಹಣವಿಧಿಯನ್ನೇ ವಿವರಿಸುತ್ತಾರೆ:—

ಉಷಃಕಾಲೇ-ಉಷಃಕಾಲದಲ್ಲಿ, ಸಮುತ್ಥಾಯ-ನಿದ್ರೆಯಿಂದ ಎಚ್ಚೆತ್ತು (ಎದ್ದು), ಲಕ್ಷ್ಮೀಪತಿಂ-ಲಕ್ಷ್ಮೀಪತಿಯಾದ, ಹರಿಂ-ಶ್ರೀಹರಿಯನ್ನು, ಸ್ಮರೇತ್-ಸ್ಮರಿಸಬೇಕು; ಆದೃತಃ-ಆದರಪೂರ್ವಕವಾಗಿ (ಶ್ರದ್ಧಾಭಕ್ತಿಗಳಿಂದ ಯುಕ್ತನಾಗಿ), ವಿಧಿವತ್-ವಿಧಿ ಪ್ರಕಾರ (ವಿದ್ಯುಕ್ತ ನಿಯಮಗಳನ್ನನುಸರಿಸಿ), ಶೌಚಾದಿಪೂರ್ವಕಂ-ಶೌಚಾದಿಗಳನ್ನು

---

ಆದರಂತೆ, ಹೇ ಪ್ರಿಯಪುತ್ರರೇ ! ದೀಕ್ಷೆಯನ್ನು ಸ್ವೀಕರಿಸತಕ್ಕದ್ದು (೧೬-೧೭). ಆ ವಿಧಾನದ ವಿವರವು ಹೀಗಿದೆ:—ದೀಕ್ಷಾಗ್ರಹಣದ ದಿನ, ಉಷಃಕಾಲದಲ್ಲಿ[1] ಎದ್ದು ವಿಧಿ ಪ್ರಕಾರ ಶೌಚಾದಿಗಳನ್ನು ಮಾಡಿಕೊಂಡು, ಸ್ನಾನಮಾಡಬೇಕು; ಈ ಶೌಚಾದಿಗಳನ್ನು ಶ್ರದ್ಧಾಭಕ್ತಿಪೂರ್ವಕವಾಗಿ ವಿಧ್ಯುಕ್ತಕರ್ಮವನ್ನು ಬಿಡದೇ ಆಚರಿಸತಕ್ಕದ್ದು (೧೮). ನಂತರ, ವಿಪ್ರನು ಮೂಲಮಂತ್ರದಿಂದ ಮೃತ್ತಿಕೆಯನ್ನು ಅಭಿಮಂತ್ರಿಸಿ ಎಡಗೈಯಲ್ಲಿಟ್ಟುಕೊಂಡು (ಬಲಗೈಯಿಂದ) ತನ್ನ ದೇಹದಲ್ಲಿ ೧೨ ಪುಂಡ್ರ

1. 'ಪಂಚ ಪಂಚ ಉಷಃಕಾಲ'—ಸೂರ್ಯೋದಯಕ್ಕೆ ಐದು ಘಳಿಗೆಯ ಪೂರ್ವದ ಕಾಲವು (ಹಿಂದಿನ ದಿನದ ೫೫ ಘಳಿಗೆ ಕಳೆದಿರಲು) ಉಷಃಕಾಲವೆನಿಸುತ್ತದೆ.

ಮೊದಲುಮಾಡಿಕೊಂಡು (ಮಲಮೂತ್ರವಿಸರ್ಜನೆ, ದಂತಧಾವನಾದಿ ವಿಧಿಗಳನ್ನಾಚರಿಸಿ), ಸ್ನಾನಂ-ಸ್ನಾನವನ್ನು ಕುರ್ಯಾತ್-ಮಾಡಬೇಕು.

ಆದಾಯ ಮೃತ್ಸ್ನಾಂ ವಾಮೇನ ಮೂಲಮಂತ್ರಾಭಿಮಂತ್ರಿತಾಂ ।
ಕುರ್ಯಾತ್ ದ್ವಾದಶ ಪುಂಡ್ರಾಣಿ ವಿಪ್ರಶ್ಚತ್ವಾರಿಬಾಹುಜಃ ॥ ೧೯ ॥

ವೈಶ್ಯಃ ಪುಂಡ್ರದ್ವಯಂ ಕುರ್ಯಾತ್ ಶೂದ್ರಾದ್ಯಾ ಅಪರೇಖಿಲಾಃ ।
ವೇದಾನಧಿಕೃತಾ ಯೇ ತು ಸರ್ವೇಷಾಮಪಿ ಯೋಷಿತಃ ॥ ೨೦ ॥

ಏಕಮೇವ ಪ್ರಕುರ್ವೀರನ್ ಲಲಾಟೇತೂರ್ಧ್ವಪುಂಡ್ರಕಂ ।

ವಿಪ್ರಃ-ಬ್ರಾಹ್ಮಣನು, ವಾಮೇನ-ಎಡಹಸ್ತದಿಂದ, ಮೂಲಮಂತ್ರಾಭಿಮಂತ್ರಿತಾಂ-ಮೂಲಮಂತ್ರದಿಂದ ('ಓಂ ನಮೋ ನಾರಾಯಣಾಯ' ಎಂಬ ಮಂತ್ರದಿಂದ) ಅಭಿಮಂತ್ರಿಸಿದ, ಮೃತ್ಸ್ನಾಂ-ಮೃತ್ತಿಕೆಯನ್ನು (ಗೋಪೀಚಂದನಾದಿ ಮೃತ್ತಿಕೆಯನ್ನು),[1] ಆದಾಯ-ತೆಗೆದುಕೊಂಡು, ದ್ವಾದಶಪುಂಡ್ರಾಣಿ-ಹನ್ನೆರಡು ಪುಂಡ್ರಗಳನ್ನು (ನಾಮಗಳನ್ನು), ಕುರ್ಯಾತ್-(ದೇಹದಲ್ಲಿ ಮಾಡಿಕೊಳ್ಳಬೇಕು) ಧರಿಸಬೇಕು; ಬಾಹುಜಃ-ಕ್ಷತ್ರಿಯನು, ಚತ್ವಾರಿ-ನಾಲ್ಕು ಪುಂಡ್ರಗಳನ್ನೂ (ಧರಿಸಬೇಕು); ವೈಶ್ಯಃ-ವೈಶ್ಯನು, ಪುಂಡ್ರದ್ವಯಂ-ಎರಡು ಪುಂಡ್ರಗಳನ್ನು ಕುರ್ಯಾತ್- ಧರಿಸಬೇಕು; ಶೂದ್ರಾದ್ಯಾಃ - ಶೂದ್ರಾದಿ, ವೇದಾನಧಿಕೃತಾಃ - ವೇದಾಧಿಕಾರವಿಲ್ಲದವರು,

---

(ನಾಮ)ಗಳನ್ನು (ಈ ಮುಂದೆ ವಿವರಿಸುವಂತೆ), ಧರಿಸಬೇಕು; ಕ್ಷತ್ರಿಯನು ನಾಲ್ಕು ಪುಂಡ್ರಗಳನ್ನೂ ವೈಶ್ಯನು ಎರಡು ಪುಂಡ್ರಗಳನ್ನೂ ಧರಿಸತಕ್ಕದ್ದು; ವೇದಾಧಿಕಾರವಿಲ್ಲದ ಶೂದ್ರಾದಿ ಇತರ ಸರ್ವರೂ ಮತ್ತು ಸಮಸ್ತ ಸ್ತ್ರೀಯರೂ ಹಣೆಯಲ್ಲಿ ಒಂದು ಊರ್ಧ್ವಪುಂಡ್ರವನ್ನು ಮಾತ್ರ ಧರಿಸತಕ್ಕದ್ದು(೧೯-೨೦). ವೈಶ್ಯನು ಹಣೆ ಮತ್ತು ಎದೆಯಮೇಲೆ ಎರಡು ಪುಂಡ್ರಗಳನ್ನೂ, ಕ್ಷತ್ರಿಯನು, ಇವೆರಡರೊಂದಿಗೆ ಎರಡೂ

---

1. 'ಅಂಗೇ ಯಸ್ಯ ಸದಾ ತಿಷ್ಠೇತ್ ಗೋಪೀಚಂದನಮುದ್ರಿಕಾ ।
ದ್ವಾರಕಾ ತಿಷ್ಠತೇ ತತ್ರ ಕೃಷ್ಣೇನ ಸಹಿತಾ ಕಲೌ ॥'
ಇತ್ಯಾದಿ (ಪದ್ಮಪುರಾಣ)ವಾಕ್ಯಗಳು, ನಾಮಮುದ್ರೆಗಳನ್ನು ಗೋಪೀಚಂದನಮೃತ್ತಿಕೆಯಿಂದ, ಧರಿಸತಕ್ಕದ್ದೆಂದು ವಿಧಿಸುತ್ತವೆ. ಮೃತ್ತಿಕೆಗಳಲ್ಲಿ (ವಿವಿಧ ಮಣ್ಣುಗಳಲ್ಲಿ) ಗೋಪೀಚಂದನವು ಶ್ರೇಷ್ಠವಾದುದು; ಇದರ ಮಹಿಮೆಯು, ದ್ವಾರಕಾಮಹಿಮೆಯನ್ನು ನಿರೂಪಿಸುವ, ಪದ್ಮಪುರಾಣ ಸ್ಕಂದ ಪುರಾಣಾದಿಗಳಲ್ಲಿ ವಿವರಿಸಲಾಗಿದೆ. ಅಸಂಖ್ಯಗೋಪಿಕಾಸ್ತ್ರೀಯರು ಭಕ್ತಿಪೂರ್ವಕ ಶ್ರೀಕೃಷ್ಣನಿಗೆ ಅರ್ಪಿಸುತ್ತಿದ್ದ ಗಂಧ (ಲೇಪನ) ಮಿಶ್ರವಾದ ದ್ವಾರಕಾಕ್ಷೇತ್ರದ ಶ್ವೇತಮೃತ್ತಿಕೆಯೇ ಗೋಪೀಚಂದನವೆಂದೂ, ಅದರಿಂದ ಲಿಪ್ತವಾದ ಸ್ಥಾನವಿಶೇಷಗಳು ದ್ವಾರಕಾಸದೃಶ ಪವಿತ್ರ ಕ್ಷೇತ್ರಗಳೆಂದೂ ಹೇಳಲಾಗಿದೆ.

ಯೇ-ಯಾರೋ, ಅಪಿ-ಮತ್ತು ಯೋಷಿತಃ-ಸ್ತ್ರೀಯರು, (ಈ ಎಲ್ಲರಿಗೂ), ಸರ್ವೇಷಾಂ-ಎಲ್ಲರಿಗೆ (ಎಲ್ಲರೂ) ಲಲಾಟೇ-ಹಣೆಯಲ್ಲಿ ಊರ್ಧ್ವಪುಂಡ್ರಕಂ-ಊರ್ಧ್ವ (ಮೇಲ್ಮುಖವಾದ) ಪುಂಡ್ರ (ನಾಮ)ವಾದ, ಏಕಂ ಏವ-ಒಂದನ್ನೇ, ಪ್ರಕುರ್ವೀರನ್-ಧರಿಸುತ್ತಾರೆ (ಧರಿಸತಕ್ಕದ್ದು ಎಂಬ ನಿಯಮವು ಅನ್ವಯಿಸುತ್ತದೆ).[1]

**ಲಲಾಟೇ ಹೃದಯೇ ವೈಶ್ಯೋ ಬಾಹ್ವೋರಪಿ ಚ ಬಾಹುಜಃ ॥ ೨೧ ॥**

**ಲಲಾಟೇ ಹೃದಯೇ ನಾಭೇರೂರ್ಧ್ವಂ ಕುಕ್ಷಿದ್ವಯೇ ಗಲೇ ।**

**ಕರ್ಣಮೂಲದ್ವಯೇ ಬಾಹ್ವೋಃ ಪೃಷ್ಠದೇಶೇ ಚ ಮೂರ್ಧನಿ ॥ ೨೨ ॥**

**ಏವಂ ಸ್ಥಾನದ್ವಾದಶಕೇ ವಿಪ್ರಃ ಪುಂಡ್ರಾಣಿ ಧಾರಯೇತ್ ।**

ವೈಶ್ಯಃ-ವೈಶ್ಯನು, ಲಲಾಟೇ-ಹಣೆಯಲ್ಲಿ ಹೃದಯೇ-(ಮತ್ತು) ಎದೆಯಲ್ಲಿ (ಹೀಗೆ ಎರಡು ಪುಂಡ್ರಗಳನ್ನೂ), ಬಾಹುಜಃ-ಕ್ಷತ್ರಿಯನು, ಬಾಹ್ವೋಃ ಅಪಿ ಚ-ಎರಡು ಭುಜಗಳಲ್ಲಿ ಸಹ (ನಾಲ್ಕನ್ನು ಧರಿಸತಕ್ಕದ್ದು); ವಿಪ್ರಃ-ಬ್ರಾಹ್ಮಣನು, ಲಲಾಟೇ-ಹಣೆಯಲ್ಲಿ ಹೃದಯೇ-ಎದೆಯ ಮೇಲೆ, ನಾಭೇಃ ಊರ್ಧ್ವಂ- ಹೊಕ್ಕಳಿನ

---

ಬಾಹುಗಳಲ್ಲಿ ಎರಡನ್ನೂ (ಒಟ್ಟು ನಾಲ್ಕನ್ನು) ಧರಿಸಬೇಕು; ಬ್ರಾಹ್ಮಣನು, ಲಲಾಟ(ಹಣೆ), ಹೃದಯ(ಎದೆ), ನಾಭಿಯ ಮೇಲ್ಭಾಗ,(ಹೊಕ್ಕಳ ಮೇಲ್ಭಾಗ ಹೊಟ್ಟೆಯ ಮೇಲೆ), ಎರಡು ಕುಕ್ಷಿಗಳು(ಹೊಟ್ಟೆಯ ಎಡಬಲಪಾರ್ಶ್ವಗಳು), ಗಲ(ಕಂಠ—ಕುತ್ತಿಗೆ), ಎರಡು ಕರ್ಣ ಮೂಲಗಳು (ಎಡ ಬಲ ಕಿವಿಗಳ ಕೆಳಭಾಗ), ಬಾಹುಗಳೆರಡು(ಎಡಬಲ ಭುಜಗಳು), ಬೆನ್ನು (ಬೆನ್ನಿನ ಕೆಳಭಾಗದಲ್ಲಿ ಟೊಂಕದ ಮೇಲೆ), ಶಿರಸ್ಸು(ನೆತ್ತಿ), ಹೀಗೆ ಹನ್ನೆರಡು ಸ್ಥಾನಗಳಲ್ಲಿ೧೨ ಪುಂಡ್ರಗಳನ್ನು ಧರಿಸಬೇಕು[2]

---

1. ಬ್ರಾಹ್ಮಣಸ್ತ್ರೀಯರು ಹಣೆ, ಕುತ್ತಿಗೆಯ ಎಡ ಬಲ ಪಾರ್ಶ್ವಗಳು, ಎರಡೂ ಮುಂಗೈಗಳ ಒಳಹೊರಭಾಗಗಳಲ್ಲಿ ಮತ್ತು ನಾಭಿ (ಹೊಕ್ಕಳು) ಪ್ರದೇಶದಲ್ಲಿ ಗದಾ ಮತ್ತು ನಾರಾಯಣಮುದ್ರೆಗಳನ್ನು ಧರಿಸಿಕೊಂಡು ಗುರುಮಂತ್ರಮಾಡಿಕೊಳ್ಳುವ ಸಂಪ್ರದಾಯವಿದೆ. ಸ್ತ್ರೀಯರು ಸಂಪ್ರದಾಯಜ್ಞರನ್ನು ವಿಚಾರಿಸಿ ಸತ್ಸಂಪ್ರದಾಯವನ್ನು ಅನುಸರಿಸಬೇಕು.

2. ವಿಪ್ರನು ದ್ವಾದಶಪುಂಡ್ರಗಳನ್ನು ಧರಿಸುವ ಸ್ಥಾನಗಳು ಪದ್ಮಪುರಾಣ, ಸ್ಕಾಂದಪುರಾಣ, ವಾಸಿಷ್ಠಸ್ಮೃತಿ, ಹಾರೀತಸ್ಮೃತಿ, ವಾರಾಹಪುರಾಣಾದಿಗಳಲ್ಲಿ ನಿರ್ದೇಶಿಸಲ್ಪಟ್ಟಿವೆ; ಆ ವಿವಿಧ ನಿರೂಪಣೆಗಳಲ್ಲಿ ಅಲ್ಪಭೇದಗಳೂ ಕಂಡುಬರುತ್ತವೆ. ಸಾಮಾನ್ಯವಾಗಿ ಹಾರೀತ ಸ್ಮೃತಿಯ ಈ ಮುಂದಿನ ವಾಕ್ಯಗಳನ್ನು ಆಧರಿಸಿ, 'ಆಹ್ನಿಕಪದ್ಧತಿ' ಮೊದಲಾದ ಸಂಗ್ರಾಹಕ ಗ್ರಂಥಗಳು ನಾಮಮುದ್ರೆಗಳ ಧಾರಣಕ್ರಮವನ್ನು ನಿರೂಪಿಸುತ್ತವೆ. 'ಲಲಾಟೇ ಕೇಶವಂ ವಿದ್ಯಾತ್ ನಾರಾಯಣಮಥೋದರೇ। ಮಾಧವಂ ಹೃದಯೇ (ಎದೆ) ವಿದ್ಯಾತ್ ಗೋವಿಂದಂ ಕಂಠಕೂಬರೇ (ಗಂಟಲು)॥ ಉದರೇ ದಕ್ಷಿಣೇ ಪಾರ್ಶ್ವೇ (ಬಲಕುಕ್ಷಿ) ವಿಷ್ಣುಂ ವಿದ್ಯಾತ್ತುಚಕ್ರಿಣಂ॥ ತತ್ಪಾರ್ಶ್ವೇ ಬಾಹುಮೂಲೇ ತು (ಬಲಭುಜ) ಧಾರಯನ್ ಮಧುಸೂದನಂ ॥ ತ್ರಿವಿಕ್ರಮಂ ಕಂಠದೇಶೇ

ಮೇಲ್ಭಾಗದ ಹೊಟ್ಟೆಯ ಮೇಲೆ, ಕುಕ್ಷಿದ್ವಯೇ-ಹೊಟ್ಟೆಯ ಎಡಬಲ ಪಾರ್ಶ್ವಗಳಲ್ಲಿ ಗಲೇ-ಕಂಠದಲ್ಲಿ ಕರ್ಣಮೂಲದ್ವಯೇ-ಕಿವಿಗಳೆರಡರ ಕೆಳಭಾಗದಲ್ಲಿ, ಬಾಹ್ವೋಃ-ಎರಡು ಭುಜಗಳಲ್ಲಿ, ಪೃಷ್ಠದೇಶೇ-ಬೆನ್ನಿನ ಕೆಳಭಾಗದಲ್ಲಿ ಮೂರ್ಧನಿ-ನೆತ್ತಿಯ ಮೇಲೆ, ಏವಂ-ಹೀಗೆ, ಸ್ಥಾನದ್ವಾದಶಕೇ-ಹನ್ನೆರಡು ಸ್ಥಾನಗಳಲ್ಲಿ ಪುಂಡ್ರಾಣಿ-ನಾಮಗಳನ್ನು ಧಾರಯೇತ್-ಧರಿಸತಕ್ಕದ್ದು.

ದಂಡಾಕಾರಂ ಲಲಾಟೇ ತು ಪದ್ಮಾಕಾರಂ ತು ವಕ್ಷಸಿ ॥ ೨೩ ॥

ಅನ್ಯೇ ಪ್ರದೀಪಕಲಿಕಾ ಸದೃಶಾ ವಿಷ್ಣುತತ್ಪರೈಃ ।
ವಿಪ್ರಕ್ಷತ್ರಿಯವಿಟ್ಶೂದ್ರಾ ವಿಷ್ಣುಭಕ್ತಿಪರಾಯಣಾಃ ॥ ೨೪ ॥

ಲಲಾಟೇನ್ಯೇಽಪಿ ಕುರ್ವೀರನ್ ಪುಂಡ್ರಂ ಹರಿಪದಾಕೃತಿ ।
ನಾಸಾಗ್ರಾತ್ಕೇಶಪರ್ಯಂತಂ ತನ್ಮಧ್ಯೇ ಹರಿಮಂದಿರಂ ॥ ೨೫ ॥

---

(೨೧-೨೨). ಲಲಾಟದಲ್ಲಿ ದಂಡದಂತಿರುವ ಪುಂಡ್ರವನ್ನೂ, ಎದೆಯಲ್ಲಿ ಪದ್ಮಾಕಾರದ ತಿಲಕವನ್ನೂ ಧರಿಸತಕ್ಕದ್ದು: ವಿಷ್ಣುಭಕ್ತರು ಇತರ ಎಲ್ಲ ತಿಲಕ (ನಾಮ) ಗಳನ್ನೂ ಚೂಪಾದ ತುದಿಯಿರುವ ದೀಪಜ್ವಾಲೆಗಳಂತೆ ಧರಿಸಬೇಕು; ವಿಷ್ಣುಭಕ್ತಿಪರಾಯಣರಾದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೂ ವರ್ಣಬಾಹಿರರಾದ ಇತರರೂ, ಲಲಾಟದಲ್ಲಿ (ದಂಡಾಕಾರವೆಂದರೆ) ವಿಷ್ಣುಪಾದದಂತಿರುವ ಪುಂಡ್ರವನ್ನು ನಾಸಾಗ್ರದಿಂದ (ತಲೆಯ) ಕೇಶಪರ್ಯಂತವಾಗಿ, ಧರಿಸಬೇಕು; ಆ ತಿಲಕ ಮಧ್ಯದಲ್ಲಿ ಹರಿಮಂದಿರವೆಂಬ ಅನುಸಂಧಾನದಿಂದ ಛಿದ್ರವನ್ನು ಮಾಡಿಕೊಳ್ಳಬೇಕು; ಇದರಿಂದ ಭಿನ್ನವಾದ ಛಿದ್ರರಹಿತ

---

(ಬಲಕಿವಿಯ ಕೆಳಗೆ) ವಾಮಪಾರ್ಶ್ವೇ ತು ವಾಮನಂ (ಎಡಕುಕ್ಷಿ) । ಶ್ರೀಧರಂ ವಾಮಬಾಹೌ ತು (ಎಡಭುಜ) ಹೃಷೀಕೇಶಂ ಗಲೇ ನ್ಯಸೇತ್ (ಎಡಕಿವಿ ಕೆಳಗೆ)॥ ಪೃಷ್ಠೇ (ಬೆನ್ನು ಬುಡ) ತು ಪದ್ಮನಾಭಂ ಚ ಕಕುದ್ದಾಮೋದರಂ ನ್ಯಸೇತ್ (ಶಿರಸ್ಸು) ॥ ಏವಂ ದ್ವಾದಶಮೂರ್ತೀನಾಂ ಸ್ಥಾನಾನ್ಯುಕ್ತಾನಿ ಸೂರಿಭಿಃ॥' ದ್ವಾದಶನಾಮಗಳನ್ನು ಧರಿಸುವಾಗ, ಕೇಶವಾದಿ ನಾಮಗಳನ್ನುಚ್ಚರಿಸಿ, ಸ್ಮರಿಸಬೇಕು. ಮುಂದೆ ಕ್ರಮವಾಗಿ, ಶಂಖಚಕ್ರಾದಿ ಮುದ್ರೆಗಳನ್ನು ಧಾರಣಮಾಡುವ ವಿಧಿಯೂ ಈ ಅಧ್ಯಾಯದಲ್ಲಿ ಪ್ರಸಕ್ತವಾಗುತ್ತದೆ. ಅಲ್ಲಿ ವಿವರಣಾರ್ಥವಾಗಿ ನಾಮಮುದ್ರೆಗಳ ಸ್ಥಾನಗಳನ್ನು ಗುರ್ತಿಸಿದ ಚಿತ್ರವನ್ನೇ ಕೊಡಲಾಗುತ್ತದೆ. ಶ್ರೀ ವಿಷ್ಣುರಹಸ್ಯವು ಪಂಚರಾತ್ರೋಕ್ತ ಮಾರ್ಗದಿಂದ ದೀಕ್ಷಾಗ್ರಹಣಪ್ರಕಾರವನ್ನು ನಿರೂಪಿಸುವುದರಿಂದ ಇಲ್ಲಿ ಉಕ್ತವಾಗಿರುವ ಕ್ರಮವೇ, ಸಂಪ್ರದಾಯಸ್ಥ ಜ್ಞಾನಿಗಳ ಅನುಷ್ಠಾನದಿಂದ ಸಹ, ಪರಮಗ್ರಾಹ್ಯವೆಂದು ತಿಳಿಯಬಹುದಾಗಿದೆ. (ಇದೇ ಅಧ್ಯಾಯದ ೧೬-೧೭ನೇ ಶ್ಲೋಕಗಳಲ್ಲಿ ಪಂಚರಾತ್ರೋಕ್ತ ವಿಧಿಯಿಂದ ದೀಕ್ಷೆಯನ್ನು ಸ್ವೀಕರಿಸಬೇಕೆಂದು ಹೇಳಿ, ಮುಂದೆ ೧೮ನೇ ಶ್ಲೋಕದಿಂದ, ಆ ಕ್ರಮವು, ಶ್ರೀ ಹಯಗ್ರೀವನು ಬ್ರಹ್ಮನಿಗೆ ಹೇಳಿದಂತೆ, ವಿವರಿಸಲ್ಪಟ್ಟಿರುತ್ತದೆ).

**ಅತೋಽನ್ಯತಿಲಕಂ ನೄಣಾಂ ವಿಷ್ಣುವಿದ್ವೇಷಕಾರಣಂ ।**
**ಊರ್ಧ್ವಪುಂಡ್ರಂ ತು ನಿಚ್ಛಿದ್ರಂ ಲಲಾಟೇ ಯಸ್ಯಕಸ್ಯಚಿತ್ ॥ ೨೬ ॥**
**ದೃಶ್ಯತೇ ತದ್ವಿಜಾನೀಯಾತ್ ಶುನಃಪಾದಂ ನ ಸಂಶಯಃ ।**

ಲಲಾಟೇ-ಹಣೆಯಲ್ಲಿ ದಂಡಾಕಾರಂ-ದಂಡದಂತೆ ಆಕಾರವುಳ್ಳ ಪುಂಡ್ರವನ್ನೂ ವಕ್ಷಸಿ-ಎದೆಯಮೇಲೆ, ಪದ್ಮಾಕಾರಂ-ಪದ್ಮ (ಕಮಲ)ದ ಆಕಾರವುಳ್ಳದ್ದನ್ನೂ (ಧರಿಸಬೇಕು); ಅನ್ಯೇ ತು-ಇತರ ಪುಂಡ್ರಗಳಾದರೋ, ಪ್ರದೀಪಕಲಿಕಾ-ಸದೃಶಾಃ-ದೀಪಜ್ವಾಲೆಯಂತಿದ್ದು ತುದಿಯು (ಮೇಲ್ಭಾಗವು) ಮೊಗ್ಗಿನ ತುದಿಯಂತೆ ಚೂಪಾದ ಆಕಾರವುಳ್ಳವುಗಳೂ (ಆಗಿರಬೇಕು) (ಈ ಆಕಾರವುಳ್ಳ ಪುಂಡ್ರಗಳನ್ನು ಧಾರಯೇತ್-ಧರಿಸಬೇಕು); ಈ ಸದೃಶಾಕಾರವುಳ್ಳ ಪುಂಡ್ರಗಳು, ವಿಷ್ಣುತತ್ಪರೈಃ- ವಿಷ್ಣುಭಕ್ತರಿಂದ (ಧರಿಸಲ್ಪಡತಕ್ಕದ್ದು); ವಿಷ್ಣುಭಕ್ತಿಪರಾಯಣಾಃ-ವಿಷ್ಣುಭಕ್ತಿಯಲ್ಲಿ ಆಸಕ್ತರಾದ, ವಿಪ್ರ ಕ್ಷತ್ರಿಯವಿಟ್‌ಶೂದ್ರಾಃ-ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೂ (ಸವರ್ಣಗಳೂ), ಅನ್ಯೇ ಅಪಿ-ಇತರರೂ ಸಹ (ಅನುಲೋಮ ಪ್ರತಿಲೋಮಾದಿಗಳು ಮತ್ತು ವರ್ಣ ಬಾಹಿರರೂ), ಲಲಾಟೇ-ಹಣೆಯಲ್ಲಿ ನಾಸಾಗ್ರಾತ್-ಮೂಗಿನ ತುದಿಯಿಂದ, ಕೇಶಪರ್ಯಂತಂ-ತಲೆಗೂದಲುವರೆಗೆ, ಹರಿಪದಾಕೃತಿ-ವಿಷ್ಣುಪಾದದಂತಿರುವ, ಪುಂಡ್ರಂ-ನಾಮವನ್ನು ಕುರ್ವೀರನ್-ಧರಿಸುತ್ತಾರೆ(ಧರಿಸಬೇಕು); ತನ್ಮಧ್ಯೇ-ಆ ಪುಂಡ್ರ ಮಧ್ಯದಲ್ಲಿ ಹರಿಮಂದಿರಂ-ಶ್ರೀಹರಿಮಂದಿರವನ್ನು (ಜ್ಞಾಪಕಾರ್ಥವಾಗಿ ಛಿದ್ರವನ್ನು) (ಕುರ್ವೀರನ್-ಮಾಡಿಕೊಳ್ಳಬೇಕು-ಒದ್ದೆಬಟ್ಟೆಯಿಂದ ಲಲಾಟಪುಂಡ್ರದ ಮಧ್ಯವನ್ನು

---

ಪುಂಡ್ರವು, ವಿಷ್ಣುವಿನಲ್ಲಿ ದ್ವೇಷಹುಟ್ಟಲು ಕಾರಣವಾಗುತ್ತದೆ; ಯಾರೊಬ್ಬರ ಹಣೆಯಲ್ಲಿ ಈ ವಿಧ ನಿಚ್ಛಿದ್ರ ಪುಂಡ್ರವು ಕಂಡುಬರುತ್ತದೆಯೋ, ಅದನ್ನು ನಾಯಿಯ ಪಾದವೆಂದು ತಿಳಿಯಬೇಕು—ಆ ಪುಂಡ್ರವು ಹರಿಮಂದಿರಸಹಿತವಾದ ಶ್ರೀವಿಷ್ಣು ಪಾದವಲ್ಲ ನಿಶ್ಚಯವು (೨೩-೨೬). ಊರ್ಧ್ವಪುಂಡ್ರವನ್ನು ಧರಿಸದ ಮುಖವು ಶ್ಮಶಾನದಂತೆ ಅಪವಿತ್ರವಾದುದು; ಅಂಥ ಮುಖವನ್ನು ನೋಡುವ ಮಾತ್ರದಿಂದ, ಸೂರ್ಯನನ್ನು ದರ್ಶನಮಾಡಿಕೊಂಡು, (ಸೂರ್ಯಾಂತರ್ಗತ ಶ್ರೀ ನಾರಾಯಣನನ್ನು ಸ್ಮರಿಸಿ) ಶುದ್ಧನಾಗಬೇಕು (೨೭). ಪ್ರತಿನಿತ್ಯವೂ ಸ್ನಾನಾನಂತರ ದ್ವಾದಶತಿಲಕಗಳನ್ನು ಧರಿಸಿ, ಅವುಗಳ ಮೇಲೆ ಮುದ್ರೆಗಳನ್ನೂ ಧರಿಸಬೇಕು; ಬಲಕಪಾಲದಲ್ಲಿ ಒಂದು, ಉದರದಲ್ಲಿ ಐದು, ಎದೆಯಲ್ಲಿ ಮೂರು, ಬಲಕುಕ್ಷಿಯಲ್ಲಿ ಎರಡು, ಬಲಸ್ತನದಲ್ಲಿ ಮೂರು, ಬಲಭುಜದಲ್ಲಿ ಎರಡು, ಬಲಕಿವಿಬುಡದಲ್ಲಿ (ಕುತ್ತಿಗೆಯಲ್ಲಿ) ಎರಡು, ಬಲಭುಜದಲ್ಲಿ ಒಂದು, ಹೀಗೆ ಚಕ್ರಮುದ್ರೆಗಳನ್ನು ಧರಿಸತಕ್ಕದ್ದು; ಚಕ್ರಚಿನ್ಹೆಗಳನ್ನು ಧರಿಸಿದ ನಂತರ, ಎಡಕಪಾಲದಲ್ಲಿ ಒಂದು, ಎಡಕುಕ್ಷಿಯಲ್ಲಿ ಎರಡು, ಎಡಸ್ತನದಲ್ಲಿ ಮೂರು, ಎಡಭುಜದಲ್ಲಿ ಎರಡು, ಎಡಕಿವಿಬುಡದಲ್ಲಿ ಎರಡು, ಬಲಭುಜದಲ್ಲಿ ಒಂದು, ಈ ರೀತಿ

ತಿದ್ದಿ ಛಿದ್ರಗೊಳಿಸಬೇಕು); ಅತಃ-ಈ ವಿಧ ಪುಂಡ್ರದಿಂದ, ಅನ್ಯತಿಲಕಂ-ಭಿನ್ನವಾದ ಪುಂಡ್ರವು (ತಿಲಕವು-ನಾಮವು), ನೃಣಾಂ-ಮಾನವರಿಗೆ, ವಿಷ್ಣುವಿದ್ವೇಷ ಕಾರಣಂ-ಶ್ರೀವಿಷ್ಣುವಿನಲ್ಲಿ ದ್ವೇಷಾಧಿಕ್ಯಕ್ಕೆ ಕಾರಣವಾಗುತ್ತದೆ; ಯಸ್ಯಕಸ್ಯಚಿತ್-ಯಾವನೊಬ್ಬನ (ಯಾರಾದರೊಬ್ಬನ), ಲಲಾಟೇ-ಹಣೆಯಲ್ಲಿ ನಿಚ್ಛಿದ್ರಂ-ಛಿದ್ರರಹಿತವಾದ, ಊರ್ಧ್ವಪುಂಡ್ರಂ-ನಾಮವು, ದೃಶ್ಯತೇ-ಕಂಡುಬರುವುದೋ, ತತ್-ಅದನ್ನು (ಆ ತಿಲಕವನ್ನು), ಶುನಃಪಾದಂ-ನಾಯಿಯ ಪಾದವೆಂದು, ವಿಜಾನೀಯಾತ್-ತಿಳಿಯತಕ್ಕದ್ದು ನ ಸಂಶಯಃ- ಸಂಶಯವಿಲ್ಲ

**ಊರ್ಧ್ವಪುಂಡ್ರವಿಹೀನಂ ತು ಶ್ಮಶಾನಸದೃಶಂ ಮುಖಂ ॥ ೨೭ ॥**

**ತದ್ದೃಷ್ಟ್ವೈವ ನರಸ್ತೂರ್ಣಮಾದಿತ್ಯಮವಲೋಕಯೇತ್ ।**

ಊರ್ಧ್ವಪುಂಡ್ರವಿಹೀನಂ-ಊರ್ಧ್ವಪುಂಡ್ರವಿಲ್ಲದ, ಮುಖಂ-ಮುಖವು, ಶ್ಮಶಾನಸದೃಶಂ-ಶ್ಮಶಾನಸದೃಶವು (ಅವರಂತೆ ಅಪವಿತ್ರವು); ನರಃ-ಮನುಷ್ಯನು, ತತ್-ಅಂಥ ಮುಖವನ್ನು ದೃಷ್ಟ್ವಾ ಏವ-ನೋಡಿದ ಮಾತ್ರದಿಂದ, ತೂರ್ಣಂ-ತಕ್ಷಣದಲ್ಲಿ ಆದಿತ್ಯಂ-ಸೂರ್ಯನನ್ನು ಅವಲೋಕಯೇತ್-ನೋಡಬೇಕು. (ಆದಿತ್ಯದರ್ಶನದಿಂದ ಶುದ್ಧನಾಗಬೇಕು).

**ಕುರ್ಯಾದಹರಹಃ ಪಶ್ಚಾತ್ತಿಲಕೋಪರಿ ಮುದ್ರಿಕಾಃ ॥ ೨೮ ॥**

**ಕಪೋಲೇ ದಕ್ಷಿಣೇ ಚಕ್ರಮುದರೇ ಪಂಚಚಕ್ರಕಂ ।**
**ಹೃದಿ ತ್ರೀಣಿ ದ್ವಯಂ ಪಾರ್ಶ್ವೇ ಸ್ತನೇ ತ್ರೀಣಿ ಭುಜೇ ದ್ವಯಂ ॥ ೨೯ ॥**

**ಕರ್ಣಮೂಲೇ ದ್ವಯಂ ಕಂಠೇ ವಾಮೇ ಬಾಹೌ ತಥೈಕಕಂ ।**
**ಅಥ ವಾಮೇ ಕಪೋಲೇ ತು ಶಂಖಮೇಕಂ ತು ಪಾರ್ಶ್ವಕೇ ॥ ೩೦ ॥**

**ದ್ವಯಂ ಸ್ತನೇ ತ್ರಯಂ ಬಾಹೌ ದ್ವಯಂ ಕರ್ಣೇಽಧರೇ ದ್ವಯಂ ।**
**ಏಕಂ ದಕ್ಷಿಣಬಾಹೌ ಸ್ಯಾದಥ ಕೌಮೋದಕೀಂ ಶೃಣು ॥ ೩೧ ॥**

---

ಶಂಖಮುದ್ರೆಗಳನ್ನು ಧರಿಸತಕ್ಕದ್ದು; ಗದಾಮುದ್ರೆಯ ಸ್ಥಾನಗಳನ್ನು ನಿರೂಪಿಸುವೆನು, ಕೇಳು; ಹಣೆಯಲ್ಲಿ ಒಂದು, ಎಡಕುಕ್ಷಿಯಲ್ಲಿ ಒಂದು, ಎಡಸ್ತನದಲ್ಲಿ ಒಂದು, ಎಡಭುಜದಲ್ಲಿ ಎರಡು, ಈ ರೀತಿ ಗದಾಮುದ್ರೆಗಳನ್ನು ಧರಿಸತಕ್ಕದ್ದು; ಹೃದಯದಲ್ಲಿ ಎರಡು ಪದ್ಮಮುದ್ರೆಗಳನ್ನು, ಬಲಕುಕ್ಷಿಯಲ್ಲಿ ಒಂದು, ಬಲಸ್ತನದಲ್ಲಿ ಒಂದು, ಬಲಭುಜದಲ್ಲಿ ಎರಡು, ಹೀಗೆ ಧರಿಸಬೇಕು; ನಾರಾಯಣ (ನಾಮ) ಮುದ್ರೆಯನ್ನು

ಏಕಾ ಲಲಾಟೇ ವಾಮೇ ತು ಪಾರ್ಶ್ವೇ ಚ ಸ್ತನದೇಶಕೇ ।
ಏಕೈಕಾ ಸವ್ಯಬಾಹೌ ತು ದ್ವಯಂ ಕಾರ್ಯಂ ಚ ಭಕ್ತಿತಃ ॥ ೩೨ ॥

ಅಥ ಪದ್ಮದ್ವಯಂ ವಕ್ಷಸ್ಥಿ ಲಕೇ ದಕ್ಷಪಾರ್ಶ್ವಕೇ ।
ಸ್ತನೇ ಚೈಕಂ ದ್ವಯಂ ಬಾಹೌ ನಾಮ ಸರ್ವತ್ರ ವಿನ್ಯಸೇತ್ ॥ ೩೩ ॥

ಅಹರಹಃ-ಪ್ರತಿದಿನವೂ, ಪಶ್ಚಾತ್-(ಸ್ನಾನಮಾಡಿ) ದ್ವಾದಶಪುಂಡ್ರಗಳನ್ನು ಧರಿಸಿದ ನಂತರ, ತಿಲಕೋಪರಿ-ಪುಂಡ್ರಗಳ ಮೇಲೆ, ಮುದ್ರಿಕಾಃ-ಮುದ್ರೆಗಳನ್ನು ಕುರ್ಯಾತ್-ಧರಿಸಬೇಕು (ಚಕ್ರಾದಿ ಮುದ್ರೆಗಳನ್ನು ಒತ್ತಿಕೊಳ್ಳಬೇಕು); ದಕ್ಷಿಣೇ-ಬಲಭಾಗದ, ಕಪೋಲೇ ಕಪಾಳದಲ್ಲಿ (ಕೆನ್ನೆಯ ಮೇಲ್ಭಾಗ), ಚಕ್ರಂ-ಚಕ್ರಮುದ್ರೆಯನ್ನೂ, ಉದರೇ-ಹೊಟ್ಟೆಯಮೇಲಿನ ನಾಮಗಳಲ್ಲಿ, ಪಂಚಚಕ್ರಕಂ-ಐದು ಚಕ್ರಮುದ್ರೆಗಳನ್ನೂ (ಕುರ್ಯಾತ್-ಧರಿಸತಕ್ಕದ್ದು); ಮತ್ತು ಹೃದಿ-ಎದೆಯಲ್ಲಿ ತ್ರೀಣಿ-ಮೂರು, ಪಾರ್ಶ್ವೇ (ಬಲಕುಕ್ಷಿಯಲ್ಲಿ) ಪಾರ್ಶ್ವದಲ್ಲಿ, ದ್ವಯಂ-ಎರಡು, ಸ್ತನೇ-(ಬಲ) ಸ್ತನಭಾಗದಲ್ಲಿ ತ್ರೀಣಿ-ಮೂರು, ಭುಜೇ-(ಬಲ) ಭುಜದಲ್ಲಿ ದ್ವಯಂ-ಎರಡು, ಕರ್ಣಮೂಲೇ-(ಬಲ) ಕಿವಿಬುಡದ, ಕಂಠೇ-ಕುತ್ತಿಗೆ ಮೇಲೆ, ದ್ವಯಂ-ಎರಡು, ತಥಾ-ಹಾಗೂ, ವಾಮೇ ಬಾಹೌ-ಎಡಭುಜದಲ್ಲಿ ಏಕಂ- ಒಂದು, (ಹೀಗೆ ಚಕ್ರಚಿಹ್ನೆಗಳನ್ನು ಧರಿಸತಕ್ಕದ್ದು); ಅಥ-ನಂತರ (ಚಕ್ರಮುದ್ರೆಯ ಧಾರಣಾನಂತರ), ವಾಮೇ- ಎಡಭಾಗದ, ಕಪೋಲೇ ತು-ಕಪಾಳದ ಮೇಲೆ (ಕೆನ್ನೆಯ ಮೇಲ್ಭಾಗ), ಏಕಂ-ಒಂದು, ಶಂಖಂ-ಶಂಖವನ್ನೂ ಪಾರ್ಶ್ವಕೇ-(ಎಡ) ಕುಕ್ಷಿಯಲ್ಲಿ ದ್ವಯಂ-ಎರಡನ್ನೂ ಸ್ತನೇ-(ಎಡ) ಸ್ತನಭಾಗದಲ್ಲಿ ತ್ರಯಂ- ಮೂರನ್ನೂ ಬಾಹೌ - (ಎಡ)ಭುಜದಲ್ಲಿ ದ್ವಯಂ - ಎರಡು ಶಂಖಮುದ್ರೆಗಳನ್ನೂ

---

ಸರ್ವತ್ರ (ಈ ಎಲ್ಲ ಸ್ಥಳಗಳಲ್ಲಿ) ಧರಿಸತಕ್ಕದ್ದು; ನಾಮಮುದ್ರೆಗಳನ್ನು ವಿಷ್ಣುಭಕ್ತಿಪೂರ್ವಕವಾದ ಮನಸ್ಸಿನಿಂದ (ಶ್ರೀವಿಷ್ಣುಸ್ಮರಣಪೂರ್ವಕ) ಧರಿಸಬೇಕು[1] (೨೮-೩೩).

ಕ್ಷತ್ರಿಯ, ವೈಶ್ಯ, ಶೂದ್ರರು, ಎಷ್ಟೆಷ್ಟು ಪುಂಡ್ರಗಳನ್ನು ಎಲ್ಲೆಲ್ಲಿ ಧರಿಸಬೇಕೆಂಬುದನ್ನು ಈ ಹಿಂದೆ ಹೇಳಲಾಗಿದೆ; ಈಗ ಅವರು ಧರಿಸಬೇಕಾದ ಮುದ್ರೆಗಳನ್ನು ವಿವರಿಸುತ್ತಾರೆ:— ಬಲಭುಜದಲ್ಲಿ ವಿಷ್ಣುಬಾಹುಮುದ್ರೆಯನ್ನೂ, ಸ್ತನಭಾಗದಲ್ಲಿ (ಬಲಸ್ತನದಲ್ಲಿ ಅಥವಾ ಉಭಯಸ್ತನಗಳ ಮೇಲೆ), ನಂದಕವೆಂಬ ವಿಷ್ಣುಖಡ್ಗ ಮುದ್ರೆಯನ್ನೂ, ಎದೆಯಲ್ಲಿ 'ಚರ್ಮ' ಮುದ್ರೆಯನ್ನೂ ಧರಿಸಬೇಕು; ನಂತರ

1. ಚಿತ್ರದಲ್ಲಿ ನಾಮಮುದ್ರೆಗಳ ಸ್ಥಾನಗಳನ್ನು ನಿರ್ದೇಶಿಸಲಾಗಿದೆ. ಚಿತ್ರವು ಈ ಶ್ಲೋಕಗಳ ಅರ್ಥ ತಾತ್ಪರ್ಯಗಳನ್ನು ಸ್ಪಷ್ಟಗೊಳಿಸುತ್ತದೆ.

ಕರ್ಣೇsಧರೇ-(ಎಡ) ಕಿವಿಬುಡದಲ್ಲಿ (ಕುತ್ತಿಗೆಯ ಮೇಲೆ), ದ್ವಯಂ-ಎರಡನ್ನೂ ದಕ್ಷಿಣಬಾಹೌ-ಬಲಭುಜದಲ್ಲಿ ಏಕಂ-ಒಂದನ್ನೂ ಸ್ಯಾತ್-ಧರಿಸತಕ್ಕದ್ದು ಅಥ-ಮುಂದೆ, ಕೌಮೋದಕೀಂ- (ಕೌಮೋದಕೀನಾಮ ವಿಷ್ಣುಗದೆಯ) ಗದಾಮುದ್ರೆಯ ಸ್ಥಾನಗಳನ್ನು (ಎಲ್ಲೆಲ್ಲಿ ಧರಿಸಬೇಕೆಂಬುದನ್ನು), ಶೃಣು-ಕೇಳು; ಲಲಾಟೇ-ಹಣೆಯಲ್ಲಿ ಏಕಾ-ಒಂದು (ಗದಾಚಿನ್ಹೆ); ವಾಮೇ ತು ಪಾರ್ಶ್ವೇ-ಎಡಕುಕ್ಷಿಯಲ್ಲಿ ಸ್ತನದೇಶಕೇ-ಎಡಸ್ತನ ಭಾಗದಲ್ಲಿ ಏಕೈಕಾ-ಒಂದೊಂದು (ಗದಾಮುದ್ರೆ); ಸವ್ಯಬಾಹೌ-ಎಡಭುಜದಲ್ಲಿ ದ್ವಯಂ-ಎರಡು, ಭಕ್ತಿತಃ-ಭಕ್ತಿಯಿಂದ, ಕಾರ್ಯಂ-ಧರಿಸತಕ್ಕದ್ದು; ಅಥ-ನಂತರ, ವೃಕ್ಷಸ್ಥಲಕೇ-ಎದೆಯ ನಾಮದಲ್ಲಿ ಪದ್ಮದ್ವಯಂ- ಎರಡು ಪದ್ಮಗಳನ್ನು (ಪದ್ಮಮುದ್ರೆಗಳನ್ನು) (ಹೊಂದಿರಬೇಕು); ದಕ್ಷಪಾರ್ಶ್ವಕೇ-ಬಲಕುಕ್ಷಿಯಲ್ಲಿ ಚ-ಮತ್ತು ಸ್ತನೇ-(ಬಲ) ಸ್ತನದಲ್ಲಿ ಏಕಂ-ಒಂದೊಂದನ್ನು ಬಾಹೌ-(ಬಲ) ಭುಜದಲ್ಲಿ ದ್ವಯಂ-ಎರಡನ್ನೂ ಚ-ಮತ್ತು ನಾಮ-ನಾಮವನ್ನು (ನಾರಾಯಣಮುದ್ರೆಯನ್ನು), ಸರ್ವತ್ರ-ಈ ಎಲ್ಲ ಸ್ಥಾನಗಳಲ್ಲಿ ವಿನ್ಯಸೇತ್-ಇಟ್ಟುಕೊಳ್ಳಬೇಕು (ಧರಿಸಬೇಕು).

ದಕ್ಷಿಣೇ ತು ಭುಜೇ ಬಾಹುಂ ಸ್ತನೇ ಖಡ್ಗಂ ಚ ನಂದಕಂ ।
ಹೃದಯೇ ಚರ್ಮ ಬಭ್ರಯಾದ್ವಾಮೇ ಶಾರ್ಙ್ಗಮಥೋ ಲಿಖೇತ್ ॥೩೪

ಶ್ರೀವತ್ಸಾಂಕಂ ಶ್ರಿಯೋ ವಾಸಂ ಭಾವಯೇದ್ದಕ್ಷಸವ್ಯಯೋಃ ।
ಏವಂ ಕ್ಷತ್ರಿಯವಿಟ್‌ಶೂದ್ರಾ ಧಾರಯೇಯುಶ್ಚ ಮುದ್ರಿಕಾಃ ॥ ೩೫ ॥

ದಕ್ಷಿಣೇ ತು-ಬಲಭಾಗದ, ಭುಜೇ-ಭುಜದಲ್ಲಿ ಬಾಹುಂ-(ವಿಷ್ಣು) ಬಾಹುವನ್ನು ಚಿನ್ಹೆಯನ್ನು ಸ್ತನೇ-ಸ್ತನಭಾಗದಲ್ಲಿ ನಂದಕಂ-'ನಂದಕ'ನಾಮವುಳ್ಳ (ವಿಷ್ಣು) ಖಡ್ಗಚಿನ್ಹೆಯನ್ನೂ (ಮುದ್ರೆಯನ್ನೂ), ಹೃದಯೇ-ಎದೆಯಮೇಲೆ, ಚರ್ಮ-

---

ಎಡಭುಜದಲ್ಲಿ ಶಾರ್ಙ್ಗನಾಮಕ ಧನುಸ್ಸನ್ನು ಮುದ್ರಿಸಿಕೊಳ್ಳಬೇಕು; ಎದೆಯ ಬಲಪಾರ್ಶ್ವಗಳಲ್ಲಿ ಶ್ರೀಲಕ್ಷ್ಮೀದೇವಿಯ ವಾಸಸ್ಥಾನಸೂಚಕವಾದ ಶ್ರೀವತ್ಸಚಿನ್ಹೆಯನ್ನು ಧರಿಸಬೇಕು; ಹೀಗೆ ಮುದ್ರೆಗಳನ್ನು ಕ್ಷತ್ರಿಯ ವೈಶ್ಯ ಶೂದ್ರ ವರ್ಣದ ವಿಷ್ಣುಭಕ್ತರು, ಧರಿಸತಕ್ಕದ್ದು[1] (೩೪-೩೫). ಕ್ಷತ್ರಿಯಪುರುಷನಿಂದ, ಅನ್ಯವರ್ಣ ಸ್ತ್ರೀಯಲ್ಲಿ ಹುಟ್ಟಿ ತಂದೆಯಂತೆ ಕ್ಷತ್ರಿಯಾಚಾರಗಳುಳ್ಳವರು ಕ್ಷತ್ರಿಯರಂತೆ ಮತ್ತು ಹೀಗೆಯೇ ವೈಶ್ಯನಿಂದ

---

1. ಕ್ಷತ್ರಿಯರು ಧರಿಸಬೇಕಾದ ನಾಮಮುದ್ರೆಗಳನ್ನು ತೋರಿಸುವ ಚಿತ್ರವನ್ನು ನೋಡಿ. ವೈಶ್ಯರೂ ಮತ್ತು ಶೂದ್ರರೂ ಆ ಚಿತ್ರದಲ್ಲಿರುವಂತೆ ಮುದ್ರೆಗಳನ್ನು ಧರಿಸಬೇಕು. ಆದರೆ ವೈಶ್ಯರಿಗೆ ಎಡ ಬಲ ಭುಜಗಳ ಮೇಲೆ ಪುಂಡ್ರಗಳಿಲ್ಲ—ಶೂದ್ರರಿಗೆ ಎದೆಯಮೇಲಿನ ಪುಂಡ್ರವೂ ಇಲ್ಲ—ಲಲಾಟದಲ್ಲಿನ ಊರ್ಧ್ವಪುಂಡ್ರ ಮಾತ್ರವುಂಟು.

ಚರ್ಮವನ್ನೂ (ಡಾಲು - ಎದುರಾಳಿಯ ಖಡ್ಗಘಾತವನ್ನು ತಡೆಯುವ ಆಯುಧವಿಶೇಷ), ಬಿಭೃಯಾತ್-ಧರಿಸತಕ್ಕದ್ದು; ಅಥ-ನಂತರ, ವಾಮೇ-ಎಡ ಭುಜದಲ್ಲಿ ಶಾರ್ಙ್ಗಂ-ಶಾರ್ಙ್ಗನಾಮಕ (ವಿಷ್ಣು) ಧನುಸ್ಸನ್ನೂ (ಅದರ ಮುದ್ರೆಯನ್ನೂ), ಲಿಖೇತ್ - ಮುದ್ರಿಸಿಕೊಳ್ಳಬೇಕು; ರಕ್ಷಸವ್ಯಯೋಃ - ಬಲ ಎಡಪಾರ್ಶ್ವಗಳಲ್ಲಿ ಶ್ರಿಯಃ-ಶ್ರೀಲಕ್ಷ್ಮೀದೇವಿಯ, ವಾಸಂ-ವಾಸಸೂಚಕವಾದ, ಶ್ರೀವತ್ಸಾಂಕಂ-ಶ್ರೀವತ್ಸ ಚಿನ್ಹೆಯನ್ನು ಭಾವಯೇತ್-ಭಾವಿಸತಕ್ಕದ್ದು (ಧರಿಸತಕ್ಕದ್ದು ಅಥವಾ ಚಿಂತಿಸತಕ್ಕದ್ದು); ಏವಂ-ಹೀಗೆ, ಕ್ಷತ್ರಿಯವಿಟ್‌ಶೂದ್ರಾಃ - ಕ್ಷತ್ರಿಯ ವೈಶ್ಯ ಶೂದ್ರರು, ಮುದ್ರಿಕಾಃ - ಮುದ್ರೆಗಳನ್ನು ಧಾರಯೇಯುಃ-ಧರಿಸಲರ್ಹರು (ಧರಿಸತಕ್ಕವರಾಗಬೇಕು).

**ಕ್ಷತ್ರಜಾಃ ಕ್ಷತ್ರಿಯಾಚಾರಾ ವೈಶ್ಯಜಾ ವೈಶ್ಯವತ್ತಥಾ ।**
**ಅನುಲೋಮಾಶ್ಚ ಕುಂಡಾದ್ಯಾ ವಿಪ್ರಜಾಶ್ಚ ತಥೈವ ಹಿ ॥ ೩೬ ॥**

**ಪ್ರತಿಲೋಮಾಃ ಸ್ತ್ರಿಯಃ ಸರ್ವಾಃ ಶೂದ್ರವತ್ತಿಲಕಾದಿಷು ।**
**ಏವಂ ವೈಷ್ಣವಚಿನ್ಹಾನಿ ಭಾವಯಿತ್ವಾ ನಿಜಾತ್ಮನಿ ॥ ೩೭ ॥**

**ಯಃ ಕುರ್ಯಾನ್ನಿತ್ಯಕರ್ಮಾಣಿ ಕೃತ್ವಾ ವಿಷ್ಣೌ ತಥಾರ್ಪಯೇತ್ ।**
**ತಸ್ಯೈವ ಸಫಲಂ ಜನ್ಮ ಮೃತೋ ವಿಷ್ಣುತ್ವಮಾಪ್ನುಯಾತ್ ॥ ೩೮ ॥**

ಕ್ಷತ್ರಜಾಃ-ಕ್ಷತ್ರಿಯಪುರುಷರಿಂದ ಜನಿಸಿದ, ಕ್ಷತ್ರಿಯಾಚಾರವುಳ್ಳ, ಅನುಲೋಮಾಃ-ಅನುಲೋಮಿಗಳೂ, ತಥಾ-ಮತ್ತು ವೈಶ್ಯಜಾಃ ವೈಶ್ಯವತ್-ವೈಶ್ಯಪುರುಷನಿಂದ ಜನಿಸಿದ (ವೈಶ್ಯಾಚಾರವುಳ್ಳ ಅನುಲೋಮಿಗಳೂ), (ಕ್ಷತ್ರಿಯರಂತೆ ಮತ್ತು ವೈಶ್ಯರಂತೆ ನಾಮಾದಿ ವಿಷ್ಣುಲಾಂಛನಗಳನ್ನು ಧರಿಸಬೇಕು); ವಿಪ್ರಜಾಶ್ಚ-ಬ್ರಾಹ್ಮಣರಿಂದ ಜನಿಸಿದ, ಕುಂಡಾದ್ಯಾ-ಕುಂಡಗೋಳಕರೂ, ತಥೈವ-ಮತ್ತು

---

ಹುಟ್ಟಿ ವೈಶ್ಯವರ್ಣಾಚಾರವುಳ್ಳವರು ವೈಶ್ಯರಂತೆಯೂ, ಈ ಅನುಲೋಮಿಗಳು ವೈಷ್ಣವಚಿನ್ಹೆಗಳನ್ನು ಧರಿಸಬೇಕು. ಬ್ರಾಹ್ಮಣ ಸ್ತ್ರೀಪುರುಷರಿಂದ ಹುಟ್ಟಿದ, ಕುಂಡಾದಿ (ಗೋಲಕ)ಗಳೂ ಎಲ್ಲ ಪ್ರತಿಲೋಮಿಗಳೂ (ಉತ್ತಮವರ್ಣದ ಸ್ತ್ರೀ ಮತ್ತು ನೀಚವರ್ಣದ ಪುರುಷನಿಂದ ಹುಟ್ಟಿದ) ಸರ್ವ ಸ್ತ್ರೀಯರೂ, ಶೂದ್ರರಂತೆ, ನಾಮಗಳನ್ನು ಧರಿಸಿ, ಉಕ್ತವಿಧದಿಂದ ವಿಷ್ಣುಮುದ್ರೆಗಳನ್ನು ಧರಿಸತಕ್ಕದ್ದು. ಹೀಗೆ ನಿತ್ಯದಲ್ಲಿ ವಿಷ್ಣುಲಾಂಛನಗಳನ್ನು ಧರಿಸಿ ಸ್ವಯೋಗ್ಯ ನಿತ್ಯಕರ್ಮಗಳನ್ನು ಆಚರಿಸಿ, ಶ್ರೀವಿಷ್ಣುವಿನಲ್ಲಿ ಸಮರ್ಪಿಸಬೇಕು; ಹೀಗೆ ಮಾಡುವುದರಿಂದಲೇ ಅವರ ಜನ್ಮ ಸಾರ್ಥಕವಾಗುತ್ತದೆ ಮತ್ತು ಮರಣಾನಂತರ ಶ್ರೀವಿಷ್ಣುತ್ವವನ್ನು (ಸಮಾನರೂಪಾದಿ ಜನನಮರಣರಾಹಿತ್ಯ ಮೊದಲಾದ ಸಮಾನ ಧರ್ಮಗಳನ್ನು) ಹೊಂದುತ್ತಾರೆ (೩೬-೩೮). ಪೇಶಸ್ಕರಿ

ಪ್ರತಿಲೋಮಾಃ-ಪ್ರತಿಲೋಮಿಗಳೂ, ಸರ್ವಾಃ-ಎಲ್ಲ ವರ್ಣಗಳ, (ಸಮಸ್ತರಾದ), ಸ್ತ್ರಿಯಃ-ಸ್ತ್ರೀಯರೂ, ತಿಲಕಾದಿಷು-ನಾಮಾದಿಗಳನ್ನು ಧರಿಸುವುದರಲ್ಲಿ ಶೂದ್ರವತ್-ಶೂದ್ರನಂತೆ, (ಆಚರಿಸತಕ್ಕದ್ದು); ಏವಂ-ಹೀಗೆ, ನಿಜಾತ್ಮನಿ-ತನ್ನ ದೇಹದಲ್ಲಿ ವೈಷ್ಣವಚಿನ್ಹಾನಿ - ವಿಷ್ಣುಲಾಂಛನಗಳನ್ನು ಭಾವಯಿತ್ವಾ-ಭಕ್ತಿಯಿಂದ ಧರಿಸಿ, ಯಃ-ಯಾರು, ನಿತ್ಯಕರ್ಮಾಣಿ - (ಸ್ವವಿಹಿತ) ನಿತ್ಯಕರ್ಮಗಳನ್ನು ಕೃತ್ವಾ- ಆಚರಿಸಿ, ವಿಷ್ಣೌ - ಶ್ರೀವಿಷ್ಣುವಿನಲ್ಲಿ ತಥಾ - ಹಾಗೆ (ಭಕ್ತಿಯಿಂದ), ಅರ್ಪಯೇತ್ - ಸಮರ್ಪಿಸುವನೋ, ತಸ್ಯ-ಆತನ, ಜನ್ಮ ಏವ-ಜನ್ಮವೇ, ಸಫಲಂ-ಸಫಲವು (ಸಾರ್ಥಕವು), ಮೃತಃ-(ಆತನು) ಮರಣಾನಂತರ, ವಿಷ್ಣುತ್ವಂ-ವಿಷ್ಣುಪದವನ್ನು (ಜನನ ಮರಣರಾಹಿತ್ಯಾದಿ, ಸಾರೂಪ್ಯಾದಿ ಸಮಾನ ಧರ್ಮವನ್ನು), ಆಪ್ನುಯಾತ್-ಹೊಂದುತ್ತಾನೆ.

**ಯೋ ಯಥಾ ಭಾವಯೇದ್ವಿಷ್ಣುಂ ಸರ್ವಪ್ರಾಣೇಶ್ವರಂ ಪ್ರಭುಂ ।**
**ತಥಾ ರೂಪಮವಾಪ್ನೋತಿ ಕೀಟಃ ಪೇಶಸ್ಕೃತೋ ಯಥಾ ॥ ೩೯ ॥**

ವಿಷ್ಣುತ್ವವನ್ನು ಹೊಂದುತ್ತಾನೆಂದು ಹೇಳಿದ ಅರ್ಥವನ್ನು ವಿವರಿಸುತ್ತಾರೆ—

ಯಃ-ಯಾರು (ಯಾವ ಜೀವನು), ಯಥಾ-ಯಾವ ಪ್ರಕಾರದಿಂದ, ಸರ್ವಪ್ರಾಣೇಶ್ವರಂ-ಸರ್ವಜೀವ ನಿಯಾಮಕನಾದ, ಪ್ರಭುಂ-ಮಹಾಸ್ವಾಮಿಯಾದ, ವಿಷ್ಣುಂ-ಶ್ರೀವಿಷ್ಣುವನ್ನು ಭಾವಯೇತ್-(ಸಂತತವಾಗಿ) ಚಿಂತಿಸು ತ್ತಾನೆಯೋ, ತಥಾ-ಆ ಪ್ರಕಾರದ, ರೂಪಂ-ರೂಪವನ್ನು (ಆಕಾರವನ್ನು).[1] ಅವಾಪ್ನೋತಿ-ಹೊಂದುತ್ತಾನೆ; ಕೀಟಃ-ಕೀಟವು (ಕ್ರಿಮಿವಿಶೇಷವು), ಪೇಶಸ್ಕೃತಃ- (ಕುರುಡಿಕುಠಾರವೆಂದು ಕರೆಯ

---

(ಕುರುಡಿಕುಠಾರ) ಎಂಬ ಹುಳದಿಂದ ಬಂಧನದಲ್ಲಿಡಲ್ಪಟ್ಟು, ಒಂದು ಕೀಟವು, ನಿರಂತರದಲ್ಲಿ ಭಯದಿಂದ, ಆ ಬಂಧಕನ ಉಗ್ರರೂಪವನ್ನು ನೋಡುತ್ತಾ ತನಗೆ ನಿತ್ಯವೂ ಆಹಾರವನ್ನು ಒದಗಿಸುತ್ತದೆಂಬ ಕಾರಣದಲ್ಲಿ ಅದರಲ್ಲಿ ಸ್ನೇಹವನ್ನು ಹೊಂದಿ, ಕಾಲಗತಿಯಿಂದ, ತಾನೂ ಪೇಶಸ್ಕಾರಿಯ ರೂಪವನ್ನೇ ಹೊಂದುತ್ತದೆ; ಅದರಂತೆ ವಿಷ್ಣು ಲಾಂಛನಗಳನ್ನು ನಿತ್ಯವೂ ತನ್ನ ದೇಹದಲ್ಲಿ ಧರಿಸುತ್ತ ಭಕ್ತಿಯಿಂದ ಆತನ ರೂಪವನ್ನೇ ಧ್ಯಾನಿಸುವ, ಜೀವನೂ, ಶ್ರೀವಿಷ್ಣುವಿನ ಸಮಾನರೂಪವನ್ನೇ ಹೊಂದುತ್ತಾನೆ; (ಮೃತನಾದ ಸಾರೂಪ್ಯಮುಕ್ತಿಯನ್ನೇ ಹೊಂದುವನೆಂದರ್ಥ) (೩೯).

---

1. ಪಕ್ವಭಕ್ತನು, ತನ್ನ ನಿಯತ ಗುರುವಿನಿಂದ ಉಪದಿಷ್ಟವಾದ ಸ್ವಬಿಂಬವನ್ನೇ (ಆ ರೂಪದ ಶ್ರೀಹರಿಯನ್ನೇ), ಸಂತತವಾಗಿ ಧ್ಯಾನಿಸುತ್ತಾನೆ ಮತ್ತು ಆ ರೂಪದ ಸಾಕ್ಷಾತ್ಕಾರವನ್ನೇ ಹೊಂದಿ, ಪ್ರತಿಬಿಂಬನಾದ ತನ್ನ ಸ್ವರೂಪದ ಆವಿರ್ಭಾವವನ್ನೇ ಹೊಂದುತ್ತಾನೆ—ಅದು ಬಿಂಬಸದೃಶಾಕಾರ ವುಳ್ಳದ್ದೇ ಆಗಿರುವುದು.

ಲ್ಪಡುವ) ಉಗ್ರಸ್ವಭಾವದ (ಪೇಶಸ್ಕಾರಿ ಎಂಬ) ಹಾರುವ ಹುಳದಿಂದ, ಯಥಾ-ಹೇಗೋ (ಅದರಲ್ಲಿನ ಭಯಭಕ್ತಿಗಳ ಪ್ರಭಾವದಿಂದ, ಕೀಟವು ಅದರ ಸಮಾನವಾದ ಆಕೃತಿಯನ್ನು ಹೊಂದುವಂತೆ), (ತಥಾ-ಹಾಗೆ, ಜೀವನೂ ಶ್ರೀವಿಷ್ಣುವಿನ ಯಥಾ ಯೋಗ್ಯವಾದ ಸಂತತರೂಪ ಧ್ಯಾನದಿಂದ, ಸಮಾನರೂಪವನ್ನೇ ಹೊಂದುತ್ತಾನೆ).

ಸಾಲೋಕ್ಯಂ ಚೈವ ಸಾರೂಪ್ಯಂ ಸಾಯುಜ್ಯಂ ಚ ಸಮೀಪತಾಂ ।
ಲಬ್ಧ್ವಾ ವಿಷ್ಣುಪ್ರಸಾದೇನ ಮುಕ್ತೋ ನಾವರ್ತತೇ ಪುನಃ ॥ ೪೦ ॥

ಸಾಲೋಕ್ಯಂ-ಸಾಲೋಕ್ಯವನ್ನು, ಸಾರೂಪ್ಯಂ ಚೈವ-ಸಾರೂಪ್ಯವನ್ನೇ ಆಗಲಿ, ಸಾಯುಜ್ಯಂ-ಸಾಯುಜ್ಯವನ್ನೂ, ಚ-ಹಾಗೂ, ಸಮೀಪತಾಂ-ಸಾಮೀಪ್ಯವನ್ನು (ಹಾಗೆ ವಿಷ್ಣುಲಾಂಛನಗಳನ್ನು ಧರಿಸಿ ಸ್ವವಿಹಿತ ಕರ್ಮಗಳನ್ನು ಭಕ್ತಿಯಿಂದ ಆಚರಿಸಿ, ವಿಷ್ಣ್ವರ್ಪಣ ಮಾಡಿದ ಜೀವನು, ಯಥಾಯೋಗ್ಯವಾದ ಮುಕ್ತಿಯನ್ನು), ವಿಷ್ಣುಪ್ರಸಾದೇನ-ಶ್ರೀವಿಷ್ಣುಪ್ರಸಾದದಿಂದ, ಲಬ್ಧ್ವಾ-ಹೊಂದಿ, ಮುಕ್ತಃ-ಮುಕ್ತನಾಗಿ, ಪುನಃ-ತಿರಿಗಿ, ನ ಆವರ್ತತೇ-(ಸಂಸಾರಕ್ಕೆ) ಬರುವುದಿಲ್ಲ.

ಪರೇಷಾಂ ಮರಣಂ ಜನ್ಮ ಕಾಲೇಕಾಲೇ ಸ ವೀಕ್ಷ್ಯತೇ ।
ಮೋದಮಾನೋಽನಿಶಂ ಲೋಕೇ ವೈಕುಂಠಾದೌ ನಿಜೇಚ್ಛಯಾ ॥ ೪೧॥

ಸಾಮಗಾಯನ್ನಿಜಾನಂದಪೂರ್ಣಾನಂದೋಹಮಿತ್ಯಪಿ ।
ಹಾವುಹಾವ್ವಮೃತಸ್ಯಾಹಂ ನಾಭಿರಿತ್ಯುಚ್ಚೈರ್ಗೃಣನ್ ॥ ೪೨ ॥

ಆಸ್ತೇ ಶಾಶ್ವತಲೋಕೇಷು ವೈಷ್ಣವೇಷು ಸದೈವ ಹಿ ।

ಸಾರೂಪ್ಯಮುಕ್ತಿಯು, ಸಾಲೋಕ್ಯ, ಸಾರೂಪ್ಯ, ಸಾಯುಜ್ಯ ಮತ್ತು ಸಾಮೀಪ್ಯ ಗಳೆಂಬ ಚತುರ್ವಿಧ ಮುಕ್ತಿಗಳಲ್ಲಿ ಒಂದು;[1] ವಿಷ್ಣ್ವರ್ಪಿತವಾದ ಸರ್ವಕರ್ಮಗಳುಳ್ಳ ವಿಷ್ಣುಭಕ್ತನು, ಇವುಗಳಲ್ಲಿ ಸ್ವಯೋಗ್ಯವಾದ ಮೋಕ್ಷವನ್ನು ಶ್ರೀವಿಷ್ಣುಪ್ರಸಾದದಿಂದ ಹೊಂದಿ, ಪುನಃ ಸಂಸಾರಕ್ಕೆ ಬರುವುದಿಲ್ಲ (೪೦). ವೈಕುಂಠಾದಿ ನಿತ್ಯಲೋಕಗಳಲ್ಲಿ ಸ್ಥಿತರಾದ ಮುಕ್ತಜೀವರು, ಸಂಸಾರಿಜೀವರಿಗೆ, ಕಾಲಕಾಲಕ್ಕೆ ಸಂಭವಿಸುವ ಜನನಮರಣ

1. ಸಾಲೋಕ್ಯವೇ ಮೊದಲಾದ ವಿವಿಧ ಮೋಕ್ಷಸ್ಥಿತಿಗಳು, ದೇಶವಿಶೇಷಗಳಲ್ಲಿ ಮಾತ್ರ ಇರುತ್ತವೆಂದು ತಿಳಿಯತಕ್ಕದ್ದಲ್ಲ; ಮುಕ್ತರಿರುವ ಎಲ್ಲ ಸ್ಥಾನಗಳಿಗೆ ಹರಿಲೋಕತ್ವವಿದೆ; ಭೂಲೋಕದಿಂದ ಆರಂಭಿಸಿ, ಅಂತರಿಕ್ಷಾದಿ, ಕ್ಷೀರಸಾಗರ (ಶ್ವೇತದ್ವೀಪ)ದವರೆಗಿನ ಸರ್ವಸ್ಥಾನಗಳಲ್ಲಿ ನಾಲ್ಕು ವಿಧ ಮುಕ್ತಿಗಳೂ, ಇರುತ್ತವೆ. 'ಸರ್ವಸ್ಥಾನೇಷ್ವಪಿ ಸಾಲೋಕ್ಯಾದ್ಯಸ್ತ್ಯೇವ। ಈಶ್ವರಸ್ಯ ಸರ್ವತ್ರಾವಸ್ಥಿತೇಃ...।' ಎಂಬ (ತತ್ವಪ್ರಕಾಶಿಕಾ) ವಾಕ್ಯವೂ, 'ಸಾಲೋಕ್ಯಂ ಚ ಸರೂಪತ್ವಂ, ಸಾಮೀಪ್ಯಂ ಯೋಗ ಏವ ಚ। ಇಮಾಮಾರಭ್ಯ ಸರ್ವತ್ರ ಯಾವತ್ಕ್ಷೀರಸಾಗರೇ।'

ಮುಕ್ತಜೀವರ ಸ್ಥಿತಿಪ್ರಕಾರವನ್ನು ನಿರೂಪಿಸುತ್ತಾರೆ—

ಪರೇಷಾಂ-ಅನ್ಯರಿಗೆ (ಪ್ರಾಕೃತದೇಹವುಳ್ಳ ಸಂಸಾರಿಗಳಿಗೆ), ಕಾಲೇಕಾಲೇ-ಕಾಲಕಾಲದಲ್ಲಿ (ಆಯಾ ಕಾಲದಲ್ಲಿ ಸಂಭವಿಸುವ), ಜನ್ಮ-ಜನನವನ್ನೂ, ಮರಣಂ-ಮರಣವನ್ನೂ, ಸಃ-ಆ ಮುಕ್ತನು (ಮುಕ್ತಜೀವ ಸಮುದಾಯವು), ವೀಕ್ಷ್ಯತೇ-ನೋಡುತ್ತರೆ; ನಿಜೇಚ್ಛಯಾ-ತನ್ನ ಇಚ್ಛಾನುಸಾರ, ವೈಕುಂಠಾದೌ-ವೈಕುಂಠವೇ ಮೊದಲಾದ, ಲೋಕೇ-ಲೋಕದಲ್ಲಿ, ಅನಿಶಂ-ನಿರಂತರವಾಗಿ, ಮೋದಮಾನಃ-(ನಾನಾ ಭೋಗಗಳಿಂದ) ಸುಖಿಸುತ್ತ ಸಾಮಗಾಯನ್-ಸಾಮವೇದವನ್ನು ಗಾನಮಾಡುವವನಾಗಿ, ನಿಜಾನಂದಪೂರ್ಣಃ-ಸ್ವಾನಂದಪರಿಪೂರ್ಣನು, ಅಹಂ-ನಾನು, ಇತಿ-ಹೀಗೆಂದೂ, ಅಪಿ—ಮತ್ತು ಹಾವುಹಾವು-ಭೂಮ್ಯಾದಿ ಸರ್ವ ಲೋಕಾಧಿ

---

ಗಳನ್ನು ನೋಡುತ್ತಾರೆ; ಮುಕ್ತಸ್ಥಾನಗಳಲ್ಲಿ ನಿರಂತರವೂ ಸ್ವೇಚ್ಛೆಯಿಂದ ವಿಹರಿಸುತ್ತ ಆನಂದಿಸುತ್ತಿರುವರು; ಮುಕ್ತರು, ಸ್ವಸ್ವರೂಪಸ್ಥಿತ ಪೂರ್ಣಾನಂದವುಳ್ಳವರಾಗಿ, ಆ ಜ್ಞಾನಪೂರ್ವಕ ಪ್ರವೃತ್ತಿಯುಳ್ಳವರಾಗಿ, 'ಹಾವು' ಇತ್ಯಾದಿ ಸಾಮಗಾನಮಾಡುತ್ತ ತಮ್ಮನ್ನು ಆನಂದಕೇಂದ್ರರೆಂದೇ ಭಾವಿಸುತ್ತ ಹಾಗೆ ಉಚ್ಚಕಂಠದಿಂದ ಉಚ್ಚರಿಸುತ್ತ ಶಾಶ್ವತವಾದ ವಿಷ್ಣುಲೋಕದಲ್ಲಿ ವಿಹರಿಸುತ್ತಾರೆ (೪೧-೪೨). ನಿಯತ ಪತಿಪತ್ನಿಯರಾದ (ದಂಪತಿಗಳಾದ), ಸ್ತ್ರೀಯರು (ಮುಕ್ತರಾಗಲಿರುವ ಪುರುಷರ ನಿಯತ ಭಾರ್ಯರು), ತಂತಮ್ಮ ಪತಿಗಳೊಂದಿಗೆ ಮುಕ್ತರಾಗಿ, ಶಾಶ್ವತ ವೈಕುಂಠಾದಿಲೋಕಗಳಲ್ಲಿ ಅವರೊಂದಿಗೆ

---

ಇತ್ಯಾದಿ (ಸ.ರ.ಮಾ) ವಾಕ್ಯಗಳೂ, ಮೇಲಿನ ಪ್ರಮೇಯವನ್ನು ನಿರೂಪಿಸುತ್ತವೆ. 'ಸ ಏವಾನ್ಯಸ್ವರೂಪೇಣ ಶಕ್ರಲೋಕಸಮೀಪಗಃ । ಯತೀನಾಂ ಧ್ರುವಲೋಕಸ್ಥೋ ವನಿನಾಂ ಮೇರುಮಧ್ಯಗಃ ।' ಇತ್ಯಾದಿ (ಭಾಗ-ತಾತ್ಪರ್ಯ) ವಾಕ್ಯಗಳು, ಮುಕ್ತರ ಸೇವಾ ಸ್ವೀಕಾರಾರ್ಥವಾಗಿ ವಿವಿಧ ರೂಪಗಳಿಂದ ವಿವಿಧ ಸ್ಥಾನಗಳಲ್ಲಿರುವನೆಂದೂ ಹೇಳಲಾಗಿದೆ. ಬ್ರಹ್ಮಾದಿ ಕೆಲವು ವಿಶಿಷ್ಟಾಧಿಕಾರಿಗಳು ಮಾತ್ರ, ವೈಕುಂಠಾದಿಲೋಕಗಳ ಶ್ರೀಭಾಗದಲ್ಲಿದ್ದು ಆನಂದಿಸುತ್ತಾರೆ. ಇವರೇ ಸಾಯುಜ್ಯಕ್ಕೆ ಮುಖ್ಯಾಧಿಕಾರಿಗಳು; ಅಪ್ರತೀಕಾಲಂಬನರೆಂಬ ದೇವತೆಗಳು ಸಾಮಾನ್ಯವಾಗಿ ಎಲ್ಲರೂ ಸಾಯುಜ್ಯ ಮುಕ್ತಿಗೆ ಅರ್ಹರು. ಚತುರ್ವಿಧ ಮುಕ್ತಿಗಳ ಸ್ವರೂಪವನ್ನು ಸಂಗ್ರಹವಾಗಿ ಹೀಗೆ ನಿರೂಪಿಸಬಹುದು:—

(೧) ಸಾಲೋಕ್ಯ—ಸರ್ವದಾ (ಇಚ್ಛಿಸಿದಾಗೆಲ್ಲ) ಶ್ರೀಹರಿದರ್ಶನದಿಂದ ಆನಂದಿಸುತ್ತ ಸ್ವೇಚ್ಛಾನುಸಾರ ಸೇವಿಸಲವಕಾಶವಿರುವ ಸ್ಥಿತಿ.

(೨) ಸಾರೂಪ್ಯ—ಶಂಖಚಕ್ರಾದಿಗಳಿಂದ ಶೋಭಿಸುವ ಚತುರ್ಬಾಹುಗಳಿಂದಲೂ, ವಿವಿಧ ಅಲಂಕಾರಗಳಿಂದಲೂ ಶ್ರೀವಿಷ್ಣುವಿಗೆ (ತಮ್ಮ ಪ್ರಭುವಿಗೆ) ಸದೃಶವಾದ ರೂಪವುಳ್ಳವರಾಗುವುದು.

(೩) ಸಾಮೀಪ್ಯ—ಪ್ರಸಿದ್ಧವಾದ ವೈಕುಂಠಾದಿ ತ್ರಿಧಾಮಗಳಲ್ಲಿರುವ ಶ್ರೀಹರಿಯು, ನಿತ್ಯಲಕ್ಷ್ಮೀಸಮೇತನಾಗಿ, ಸರ್ವಪ್ರಕಾರದಿಂದ ಆಕೆಯಿಂದ ಸೇವಿಸಲ್ಪಡುತ್ತ ವಾಸಿಸುವ, ಹರಿಪುರಗಳ ಸಮೀಪ ಪ್ರದೇಶಗಳಲ್ಲಿರುವಿಕೆ.

ಪತಿಯೇ ಮುಕ್ತಸ್ವಾಮಿಯು.[1] ಅಹಂ - ನಾನು, ಅಮೃತಸ್ಯ - ಮೌಕ್ತಿಕಾನಂದದ, ನಾಭಿಃ-ಕೇಂದ್ರನು, ಎಂದೂ, ಉಚ್ಚೈಃ-ಉಚ್ಚಕಂಠದಿಂದ, ಗೃಣನ್- ಉಚ್ಚರಿಸುತ್ತ ಸದಾ ಏವ-ಎಲ್ಲಕಾಲದಲ್ಲಿಯೂ, ವೈಷ್ಣವೇಷು-ಶ್ರೀವಿಷ್ಣುಪ್ರತ್ಯಕ್ಷನಿರುವ, ಶಾಶ್ವತಲೋಕೇಷು-ನಿತ್ಯಲೋಕಗಳಲ್ಲಿ ಆಸ್ತೇ-ಸ್ಥಿತನಾಗಿರುತ್ತಾನೆ.

'ನಾರ್ಯೋ ಯಾಃ ಪತಿಪತ್ನ್ಯಸ್ಸ್ಯುಸ್ತಾ ಅಪಿ ಸ್ವಪತಿಂ ಸದಾ ॥ ೪೩ ॥

ವಿಷ್ಣುಭಾವನಯಾರ್ಚಿತ್ವಾ ಸ್ವೀಯಂ ಶೀಲಮುಪಾಶ್ರಿತಾ ।
ಯಥಾಯೋಗಂ ತಥಾನ್ಯೇಷಾಂ ಚಿತ್ತಸಾಧನತತ್ಪರಾ ॥ ೪೪ ॥

ಯಾಃ-ಯಾವ, ನಾರ್ಯಃ-ಸ್ತ್ರೀಯರು, ಪತಿಪತ್ನ್ಯಃ-ದಂಪತಿಗಳು, ಸ್ಯುಃ-ಆಗಿರುವರೋ, ತಾಃಅಪಿ-ಅವರೂ ಸಹ, (ಪತಿಗಳೊಡನೆ ಮುಕ್ತರಾಗಿ ಶಾಶ್ವತಲೋಕಗಳಲ್ಲಿ ಆನಂದಿಸುವರು); (ಯಾವ ಸ್ತ್ರೀಯು) ಸದಾ-ನಿತ್ಯದಲ್ಲಿ, ಸ್ವಪತಿಂ-ತನ್ನ ಪತಿಯನ್ನು ವಿಷ್ಣುಭಾವನಯಾ-ಪರದೇವತೆಯಾದ ಶ್ರೀವಿಷ್ಣುವೆಂಬ ಭಕ್ತಿಯಿಂದ (ಪತ್ಯಂತರ್ಗತನಾದ ಶ್ರೀವಿಷ್ಣುವೇ ಪತಿಯ ಅಧಿಷ್ಠಾನದಲ್ಲಿದ್ದು ತನ್ನನ್ನು ಉದ್ಧರಿಸುವನೆಂಬ ಭಾವನೆಯಿಂದ), ಅರ್ಚಿತ್ವಾ-ಪೂಜಿಸಿ (ಸರ್ವಪ್ರಕಾರದಿಂದ ಸೇವಿಸಿ), ಸ್ವೀಯಂ-ತನ್ನ ಶೀಲಂ-ಸದ್ಗುಣಸ್ವಭಾವವನ್ನನುಸರಿಸಿದ ಸಚ್ಚಾರಿತ್ರ್ಯವನ್ನು

ಆನಂದದಿಂದ ನಿತ್ಯವಿಹರಿಸುತ್ತಾರೆ; ಮುಕ್ತಿಯೋಗ್ಯ ಸ್ವರೂಪದ ಸ್ತ್ರೀಜೀವರು, ತಮ್ಮ ಸ್ವಭಾವಾನುಗುಣವಾದ ಶೀಲವನ್ನು ಆಶ್ರಯಿಸಿ, ಪತಿಯನ್ನು ವಿಷ್ಣುವಿನಂತೆ ಭಕ್ತಿಯಿಂದ ಅರ್ಚಿಸಿ (ಪತ್ಯಂತರ್ಗತನಾದ ಶ್ರೀವಿಷ್ಣುವಿನಿಂದ ಪ್ರೇರಿತನಾಗಿ, ಚೇಷ್ಟಿಸುವ ತನ್ನ ಪತಿಯೇ ತನ್ನ ಸ್ವರೂಪೋದ್ಧಾರಕನೆಂಬ ಭಾವನೆಯಿಂದ) ಸೇವಿಸಿ, ಪತಿಯ ಅನುಬಂಧಿಗಳ

(೪) ಸಾಯುಜ್ಯ—'ಆರತ್ನೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ । ಗಚ್ಛೇಚ್ಚ ಹರಿಪಾದಾಭ್ಯಾಂ ಮುಕ್ತಸ್ಯೈಷಾ ಸ್ಥಿತಿರ್ಭವೇತ್।' ಇತ್ಯಾದಿ ವಾಕ್ಯಗಳು ವರ್ಣಿಸುವಂತೆ, ಸರ್ವದಾ ಶ್ರೀಹರಿಯ ಸ್ವರೂಪವನ್ನೇ ಆಶ್ರಯಿಸಿ, ಶ್ರೀಹರಿಯ ಕರಚರಣಾದಿಗಳನ್ನು ಪ್ರವೇಶಿಸಿದ ತಮ್ಮ ಅಂಗಗಳಿಂದಲೂ, ಶ್ರೀಹರಿಯ ಒಳಗೆ ಮತ್ತು ಹೊರಗೆ ಸಹ ಸ್ವೇಚ್ಛೆಯಿಂದ ಸ್ವಯೋಗ್ಯಭೋಗಗಳನ್ನು ಹೊಂದುವುದು.

ಈ ನಾಲ್ಕು ವಿಧ ಮುಕ್ತಿಗಳು ಶ್ರೀಹರೀಚ್ಛೆಯಿಂದ, ಯಥಾಯೋಗ್ಯವಾಗಿ, ಆಯಾ ಯೋಗ್ಯತೆಯ ಮುಕ್ತಜೀವರು ವಿಹರಿಸುವ ಸ್ಥಾನವಿಶೇಷಗಳಲ್ಲಿ ಸಹ ಉಪಲಬ್ಧವಾಗುತ್ತವೆ.

1. 'ಹಾವು, ಹಾ ಉ, ಔಹೋಯಿ' ಇತ್ಯಾದಿ ಆಪಾತತಃ ಅರ್ಥಶೂನ್ಯಗಳೆಂದು ತೋರುವ ಶಬ್ದಗಳು ಸಹ ಭಗವನ್ಮಹಿಮೆಗಳನ್ನು ಪ್ರತಿಪಾದಿಸುತ್ತವೆಂದು ಛಾಂದೋಗ್ಯೋಪನಿಷತ್ತು, ಅದರ ಭಾಷ್ಯಾದಿಗಳಿಂದ ತಿಳಿದುಬರುತ್ತದೆ; 'ಹೂಯತೇ ಅತ್ರಾಗ್ನಿಹೋತ್ರಾದಿರ್ಹಾವುಕಾರಸ್ತ್ವಯಂತತಃ' ಇತ್ಯಾದಿ (ಛಾಂ. ಭಾಷ್ಯ)ಗಳನ್ನು ಅಭ್ಯಸಿಸಿ ತಿಳಿಯಬೇಕು.

ಉಪಾಶ್ರಿತಾ-ಆಶ್ರಯಿಸಿರುವಳೋ, ತಥಾ-ಹಾಗೆಯೇ (ಪತಿಯನ್ನು ಸೇವಿಸು ವಂತೆಯೇ), ಯಥಾಯೋಗಂ-ಯಥೋಚಿತವಾಗಿ, ಅನ್ಯೇಷಾಂ-(ಪತಿಬಂಧು ಗಳಾದ) ಇತರರ, ಚಿತ್ತಸಾಧನತತ್ಪರಾ- ಮನೋನುವರ್ತಿಯಾಗಿರುವಳೋ; ಸಾಪಿ...ಇತ್ಯಾದಿ ಮುಂದಿನ ಶ್ಲೋಕದಿಂದ ಅನ್ವಯಪೂರ್ಣವಾಗುತ್ತದೆ).

ಸಾಪಿ ಸ್ವಪತಿನಾ ಸಾಕಂ ಲಭತೇ ಮುಕ್ತಿಮುತ್ತಮಾಂ ।
ಪತ್ಯೌ ಮೃತೇ ಸ್ವಯಂ ಗಚ್ಛೇತ್ತೇನ ಸಾಕಂ ತು ಪಂಚತಾಂ ॥ ೪೫ ॥

ಸಾ ಅಪಿ-ಆ ಸ್ತ್ರೀಯು ಸಹ, ಸ್ವಪತಿನಾ ಸಾಕಂ-ತನ್ನ ಪತಿಯೊಡನೆ, ಉತ್ತಮಾಂ-ಶ್ರೇಷ್ಠವಾದ, ಮುಕ್ತಿಂ-ಮೋಕ್ಷವನ್ನು ಲಭತೇ-ಹೊಂದುತ್ತಾಳೆ; ಪತ್ಯೌ-ಪತಿಯು, ಮೃತೇ-ಮರಣಹೊಂದುತ್ತಿರಲು, ಸ್ವಯಂ-ತಾನೂ, ತೇನ ಸಾಕಂ-ಆತನೊಂದಿಗೆ, ಪಂಚತಾಂ-ಪಂಚತ್ವ (ಮರಣ)ವನ್ನು ಗಚ್ಛೇತ್-ಹೊಂದತಕ್ಕದ್ದು.

ಧರ್ಮ ಏಷ ಪರೋ ನಾರ್ಯಾಸ್ತದಭಾವೇ ಜಿತೇಂದ್ರಿಯಾ ।
ಕೃಚ್ಛ್ರೋಪವಾಸನಿಯಮಪ್ರದಕ್ಷಿಣನಮಸ್ಕೃತೈಃ ॥ ೪೬ ॥

ತಪೋಭಿರನ್ಯೈರಾತ್ಮಾನಂ ಶೋಷಯಿತ್ವಾರ್ಚಯೇದ್ಧರಿಂ ।
ಕಂಚುಕೀಕಂಠಸೂತ್ರಾಭ್ಯಾಂ ಕಬರ್ಯಭ್ಯಂಗಭೂಷಣೈಃ ॥ ೪೭ ॥

ತಾಂಬೂಲಾಂಜನಗಂಧಾದ್ಯೈರನ್ಯೈಃ ಶೃಂಗಾರಭೂಷಣೈಃ ।
ಉಜ್ಝಿತಾ ನಿಖಿಲೈರ್ಭೋಗೈಃ ಶೌಚಾಚಾರರತಾ ಸದಾ ॥ ೪೮ ॥

---

ಚಿತ್ತಾನುಸಾರವಾಗಿ, ಯಥೋಚಿತವಾಗಿ, ವರ್ತಿಸಿ, ಪತಿಯೊಡನೆ, ಉತ್ತಮಗತಿಯನ್ನೇ (ಮುಕ್ತಿಯನ್ನು) ಹೊಂದುವರು; ಆದ್ದರಿಂದ ಮುಮುಕ್ಷುಗಳಾದ ಸ್ತ್ರೀಯರು, ನಿರಂತರ ಸೇವೆಯಿಂದ ಪತಿಪ್ರಸನ್ನತೆಯನ್ನು ಸಂಪಾದಿಸಿಕೊಂಡು, ಪತಿಯು ಮೃತನಾಗಲು ಆತನೊಂದಿಗೆ ತಾವೂ ದೇಹತ್ಯಾಗ ಮಾಡಬೇಕು[1] (೪೩-೪೫). ಯಾವ ಸ್ತ್ರೀಗಾದರೂ

1. ಮುಕ್ತಿಯಲ್ಲಿ ಸಹ ನಿತ್ಯ ಪತಿಪತ್ನಿಯರಾಗಿದ್ದು ನಿತ್ಯಾನಂದವನ್ನನುಭವಿಸುವ ಪುರುಷ ಸ್ತ್ರೀ ಜೀವರು, ನಿಯತ ದಂಪತಿಗಳೆನಿಸುವರು; ಸಂಸಾರಾವಸ್ಥೆಯಲ್ಲಿರುವಾಗ, ಪ್ರತಿ ಜನ್ಮದಲ್ಲಿ ಇವರು ದಂಪತಿಗಳಾಗಿಯೇ ಸೇರುವರೆಂಬ ನಿಯಮವಿಲ್ಲ; ಆದರೆ ಉಭಯರ ಮೋಕ್ಷಸಾಧನವು ಪೂರ್ತಿಗೊಂಡು, (ಮುಂದೆ ಈ ಸ್ಥೂಲಭೌತಿಕ ಶರೀರವನ್ನು ಹೊಂದದ ಅವಸ್ಥೆಯನ್ನು ಹೊಂದಿದಾಗ), ಚರಮದೇಹದಲ್ಲಿ ಬಂದಾಗ, ಈ ನಿಯತ ದಂಪತಿಗಳು ಸಾಮಾನ್ಯವಾಗಿ ಪತಿಪತ್ನಿಯರಾಗಿಯೇ ಸೇರಿರುತ್ತಾರೆ; ಚರಮದೇಹದಿಂದ ಪತಿಯು ವಿಯೋಗವನ್ನು ಹೊಂದಿದಾಗ, ಆತನ ಪತ್ನಿಯು ಸಹಗಮನದಿಂದ ದೇಹತ್ಯಾಗ ಮಾಡಿ, ಪತಿಲೋಕವನ್ನೇ ಸೇರುತ್ತಾಳೆ. ಹೀಗೆ ನಿಯತ ದಂಪತಿಗಳು ಪತಿಪತ್ನಿಯರಾಗಿ ಸೇರದಿರುವ ಜನ್ಮಗಳಲ್ಲಿ,

**ದೇವಸೇವಾಪರಾ ನಿತ್ಯಂ ಸತೀ ಬ್ರಾಹ್ಮಣಪೂಜಕಾ ।**
**ದೀಕ್ಷಾ ವೈಷ್ಣವಾನ್ ಮಂತ್ರಾನ್ ಸ್ತ್ರಿಯೋಗ್ಯಾನ್ ಧ್ಯಾನಪೂರ್ವಕಂ ॥ ೪೯ ॥**

**ಜಪಂತೀ ಲಭತೇ ಪುಣ್ಯಂ ಯತಿನೋ ವೈಷ್ಣವಾ ಯಥಾ ।**

ಏಷಃ-ಈ (ಪತಿಯೊಂದಿಗೆ ಸಹಗಮನವು), ನಾರ್ಯಾಃ-ಸ್ತ್ರೀಯಳ, ಪರಃ-ಉತ್ತಮವಾದ, ಧರ್ಮಃ-ಧರ್ಮವು; ತದಭಾವೇ-ಸಹಗಮನದ ಅಭಾವದಲ್ಲಿ (ಯಾವುದೇ ಕಾರಣದಿಂದ ಸ್ತ್ರೀಯು ಮೃತನಾದ ಪತಿಯೊಡನೆ ಸಹಗಮನ ಮಾಡದಿದ್ದರೆ—ತಾನೂ ದೇಹತ್ಯಾಗ ಮಾಡದಿದ್ದರೆ), ಜಿತೇಂದ್ರಿಯಾ-ಇಂದ್ರಿಯಗಳನ್ನು ನಿಗ್ರಹಿಸಿಕೊಂಡು, ಕೃಚ್ಛ್ರೋಪವಾಸನಿಯಮಪ್ರದಕ್ಷಿಣನಮಸ್ಕೃತೈಃ - ಕ್ಲೇಶಕರವಾದ ಉಪವಾಸ (ಕೃಚ್ಛ್ರನಾಮಕ ವ್ರತದಲ್ಲಿ ಆಚರಿಸುವ ಉಪವಾಸ), ಮತ್ತು ಅನ್ಯವ್ರತ ನಿಯಮಗಳು, ಪ್ರದಕ್ಷಿಣ ನಮಸ್ಕಾರಗಳು, ಇತ್ಯಾದಿಗಳಿಂದ, (ಮತ್ತು) ಅನ್ಯೈಃ- ಇತರ, ತಪೋಭಿಃ - ತಪಸ್ಸುಗಳಿಂದ, ಆತ್ಮಾನಂ - ದೇಹವನ್ನು, ಶೋಷಯಿತ್ವಾ - ಶೋಷಿಸಿ (ಒಣಗಿಸಿ—ಕೃಶಗೊಳಿಸಿ), ಹರಿಂ-ಶ್ರೀವಿಷ್ಣುವನ್ನು, ಅರ್ಚಯೇತ್ - ಸೇವಿಸತಕ್ಕದ್ದು; ಕಂಚುಕೀಕಂಠಸೂತ್ರಾಭ್ಯಾಂ-ಕಂಚುಕೀ (ಕುಪ್ಪಸ ಅಥವಾ ತೊಡುವ ಅಂಗಿ) ಕಂಠಸೂತ್ರ (ಕಂಠದಲ್ಲಿ ಧರಿಸುತ್ತಿದ್ದ ಮಂಗಲ ಸೂತ್ರ) ಗಳಿಂದ, ಕಬರ್ಯಭ್ಯಂಗಭೂಷಣೈಃ-ಹೆರಳು (ಕೇಶಾಲಂಕಾರ), ಅಭ್ಯಂಗ (ಎಣ್ಣೆಮಜ್ಜನ ಮಾಡಿಕೊಳ್ಳುವುದು), ಅಲಂಕಾರಗಳಿಂದ, ತಾಂಬೂಲಾಂಜನಗಂಧಾದ್ಯೈಃ- ತಾಂಬೂಲ, ಕಣ್ಣುಕಪ್ಪು (ಕಾಡಿಗೆ), ಗಂಧಾದಿಗಳಿಂದ,

---

ಇದೇ ಶ್ರೇಷ್ಠಧರ್ಮವು; ಯಾವುದೇ ಕಾರಣದಿಂದ ಸಹಗಮನ ಮಾಡದಿರುವ[1] ಸ್ತ್ರೀಯು, ವಿಧವೆಯರಿಗೆ ಯೋಗ್ಯವಾದ ಈ ಮುಂದಿನ ಧರ್ಮಗಳನ್ನಾಚರಿಸಿ, ಉತ್ತಮಗತಿಗೆ ಕಾರಣವಾಗುವ ಮಹಾಪುಣ್ಯವನ್ನು ಸಂಪಾದಿಸಿಕೊಳ್ಳಬೇಕು; ವಿಧವಾ ಸ್ತ್ರೀಯು ಜಿತೇಂದ್ರಿಯಳಾಗಿರ ಬೇಕು; ವಿಷಯಲಾಲಸೆಯನ್ನು ತೊರೆದು ದೃಢವೈರಾಗ್ಯವನ್ನು ದೊರಕಿಸಿಕೊಳ್ಳಲು ಅವಶ್ಯಕವಾದ, ದೇಹಶೋಷಣಕರಗಳಾದ,

ಪತಿಸ್ಥಾನದಲ್ಲಿದ್ದ ಪುರುಷನು, ಮೃತನಾಗಲು, ಆತನ ಪತ್ನಿಯು, ಸಹಗಮನ ಮಾಡದೇ ಇದ್ದಾಗ, ವೈಧವ್ಯಕ್ಕೆ ವಿಹಿತವಾದ ಧರ್ಮಗಳನ್ನು ಆಚರಿಸಿಕೊಂಡಿದ್ದು ಶ್ರೀವಿಷ್ಣುಪ್ರಸನ್ನತೆಗಾಗಿ ಯತ್ನಿಸಬೇಕು. ಈ ವಿಧವಾದ ಧರ್ಮಗಳನ್ನು ಮುಂದಿನ ಶ್ಲೋಕಭಾಗಗಳಿಂದ ವಿವರಿಸುತ್ತಾರೆ. ನಿಯತ ಪತಿಯನ್ನು ಹೊಂದದಿದ್ದ ಜನ್ಮದಲ್ಲಿ ಸಹ, ಪತ್ಯಂತರ್ಗತ ಪರಮಾತ್ಮನನ್ನು ಸೇವಿಸಿ, ಸಹಗಮನ ಮಾಡುವುದರಿಂದ, ಪತಿಲೋಕವನ್ನು (ನಿಯತ ಪತಿಸಮಾಗಮವನ್ನು) ಹೊಂದಲು ಅರ್ಹಳಾಗುತ್ತಾಳೆ.

1. ಪಾಂಡುರಾಜನು ಮೃತನಾದಾಗ, ಪುತ್ರರಕ್ಷಣಾರ್ಥವಾಗಿ, ಕುಂತೀದೇವಿಯು, ಋಷಿಗಳ ಅಭಿಮತದಿಂದ, ಸಹಗಮನ ಮಾಡದೇ ಉಳಿದಂತೆ ವಿಶೇಷ ಸಂದರ್ಭಗಳಲ್ಲಿ ಅಥವಾ

ಮತ್ತು ಅನ್ಯೈಃ-ಇತರ ವಿಧದ, ಶೃಂಗಾರಭೂಷಣೈಃ-ಶೃಂಗಾರದ ಒಡವೆಗಳಿಂದ (ದೇಹಕಾಂತಿಯನ್ನು ಹೆಚ್ಚಿಸುವ ಅಲಂಕಾರಗಳಿಂದಲೂ) (ಮತ್ತು) ನಿಖಿಲೈಃ-ಸಮಸ್ತ ಭೋಗೈಃ- ಭೋಗಗಳಿಂದಲೂ, ಉಜ್ಝಿತಾ-ರಹಿತಳಾಗಿ (ಈ ಎಲ್ಲವನ್ನೂ ತ್ಯಜಿಸಿ), ಸದಾ-ನಿತ್ಯವೂ, ಶೌಚಾಚಾರರತಾ- ಶೌಚಾದಿ ಆಚಾರಗಳನ್ನು ಬಿಡದೇ ಆಚರಿಸುವವಳಾಗಿ, ನಿತ್ಯಂ-ಪ್ರತಿದಿನವೂ, ದೇವಸೇವಾಪರಾ-ಶ್ರೀವಿಷ್ಣು ಮತ್ತು ಆತನ ಪರಿವಾರದ ದೇವತೆಗಳನ್ನು ಸೇವಿಸುವುದರಲ್ಲಿ ಆಸಕ್ತಳಾಗಿ, ಬ್ರಾಹ್ಮಣಪೂಜಕಾ-(ಶ್ರೀವಿಷ್ಣುವಿನ ಪ್ರತಿಮೆಗಳಾದ) ಬ್ರಾಹ್ಮಣರನ್ನು ಸೇವಿಸುತ್ತ ದೀಕ್ಷಿತಾ-ವಿಷ್ಣುದೀಕ್ಷೆಯನ್ನು ಹೊಂದಿ, ಸ್ವಯೋಗ್ಯಾನ್-ತನಗೆ ಉಚಿತವಾದ (ಗುರೂಪದಿಷ್ಟವಾದ), ವೈಷ್ಣವಾನ್ ಮಂತ್ರಾನ್-ಶ್ರೀವಿಷ್ಣುಮಂತ್ರಗಳನ್ನು, ಧ್ಯಾನಪೂರ್ವಕಂ-ಏಕಾಗ್ರಚಿತ್ತಳಾಗಿ, ಜಪಂತೀ-ಜಪಿಸುವವಳಾಗಿ), ಸತೀ-ಸಾಧ್ವಿಯು (ಸದ್ಗುಣಿಯಾದ ಸ್ತ್ರೀಯು), ವೈಷ್ಣವಾಃ-ವಿಷ್ಣುಭಕ್ತರಾದ, ಯತಿನಃ ಯಥಾ-ಸನ್ಯಾಸಿಗಳಂತೆ (ಯತ್ಯಾಶ್ರಮಿಗಳಂತೆ), ಪುಣ್ಯಂ-ಪುಣ್ಯವನ್ನು ಲಭತೇ-ಹೊಂದುತ್ತಾಳೆ.

ಸ್ವಸ್ವವರ್ಣಾಶ್ರಮಾಚಾರೈರ್ನರೈಯೋಷಿದ್ಭಿರೇವ ವಾ ॥ ೫೦ ॥

ಬ್ರಾಹ್ಮಣಾದಿಶ್ವಪಾಕಾಂತೈಃ ಪ್ರತಿಲೋಮಾನುಲೋಮಭಃ ।
ಕುಂಡಾದ್ಯೈರ್ಗೋಲಕೈರ್ವಾಪಿ ವೈದಿಕೈಸ್ತಾಂತ್ರಿಕೈರಪಿ ॥ ೫೧ ॥

---

ಕೃಚ್ಛ್ರ, ಉಪವಾಸಾದಿ[1] ನಿಯಮಗಳನ್ನು ಪಾಲಿಸಬೇಕು; ಪ್ರದಕ್ಷಿಣನಮಸ್ಕಾರಗಳಿಂದಲೂ, ಇತರ ತಪಸ್ಸುಗಳನ್ನು ಆಚರಿಸುವುದರಿಂದಲೂ,[2] ದೇಹವನ್ನು ದಂಡಿಸಿ, ಶ್ರೀವಿಷ್ಣುವನ್ನು ಪೂಜಾದಿಗಳಿಂದ ಸೇವಿಸಬೇಕು; ಕಂಚುಕೀ, ಕಂಠಸೂತ್ರಗಳನ್ನು ತ್ಯಜಿಸಬೇಕು; ಕೇಶಾಲಂಕಾರ, ಆಭರಣಗಳನ್ನು ಧರಿಸುವುದು, ಅಭ್ಯಂಗಸ್ನಾನಾದಿಗಳನ್ನು ಬಿಡಬೇಕು; ದೇಹಾದ್ಯಭಿಮಾನದಿಂದ ಸ್ವದೇಹ ತ್ಯಾಗಮಾಡದಿದ್ದಾಗ, ವಿಧವೆಯಾಗಿ ಉಳಿದ ಸ್ತ್ರೀಯು, ವಿಧವಾ ಧರ್ಮಗಳನ್ನು ಆಚರಿಸಿ, ಯತ್ಯಾಶ್ರಮವನ್ನು ಸ್ವೀಕರಿಸಿದ ಪುರುಷನಂತೆ, ಆ ಧರ್ಮಗಳ ಅನುಷ್ಠಾನದಿಂದ, ಪುಣ್ಯವನ್ನೇ ಪಡೆಯುತ್ತಾಳೆ.

1. ಕೃಚ್ಛ್ರ, ಚಾಂದ್ರಾಯಣ, ಪ್ರಾಜಪತ್ಯ ಮೊದಲಾದ ಪಾಪಪ್ರಾಯಶ್ಚಿತ್ತರೂಪದ ಉಪವಾಸಾದಿ ವ್ರತವಿಶೇಷಗಳಲ್ಲಿ ಕೃಚ್ಛ್ರವೂ ಒಂದು; ಬ್ರಹ್ಮಕಾಂಡ ಮೊದಲಾದ ಪುರಾಣಗಳಿಂದ, ವಿವಿಧ ಮಾಸಮಾಹಾತ್ಮೆಗಳಿಂದಲೂ ಇವುಗಳಿಗೆ ಸಂಬಂಧಿಸಿದ ನಿಯಮಾವಳಿಗಳನ್ನು ತಿಳಿಯಬೇಕು.

2. ತಪಸ್ಸು ತ್ರಿವಿಧ; 'ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ । ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ । ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ । ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥' (ಗೀತಾ)— ದೇವಬ್ರಾಹ್ಮಣರು, ಗುರುಗಳು ಮತ್ತು ಜ್ಞಾನಿಗಳನ್ನು ಅವರವರ ಯೋಗ್ಯತೆಯಂತೆ ಪೂಜಿಸುವುದು,

**ನಾಮಕೀರ್ತನಮುಖ್ಯೈಶ್ಚ ಯಜ್ಞೈರ್ದಾನೈಶ್ಚ ಶಕ್ತಿತಃ ।**
**ಯಥಾಧಿಕಾರಮನ್ಯೈಶ್ಚ ವಹ್ನಿಶುಶ್ರೂಷಣಾದಿಭಿಃ ॥ ೫೨ ॥**

**ಸತ್ಕರ್ಮಭಿಸ್ತಥಾ ಚಾನ್ಯೈಸ್ತೋಷಣೀಯೋ ರಮಾಪತಿಃ ।**
**ಏಷ ಏವ ಪರೋ ಧರ್ಮೋ ವೈಷ್ಣವಾನಾಮನುತ್ತಮಃ ॥ ೫೩ ॥**

ನರೈಃ-ಪುರುಷರು (ಪುರುಷರಿಂದ), ಸ್ವಸ್ವವರ್ಣಾಶ್ರಮಾಚಾರೈಃ-ತಂತಮ್ಮ ವರ್ಣಾಶ್ರಮೋಚಿತ ಧರ್ಮಗಳನ್ನು ಆಚರಿಸುವುದರಿಂದಲೂ, ಯೋಷಿದ್ಭಿಃ ಏವ-ಸ್ತ್ರೀಯರಿಂದಲೂ, ವಾ-ಮತ್ತು ಬ್ರಾಹ್ಮಣಾದಿ ಶ್ವಪಾಕಾಂತೈಃ-ಬ್ರಾಹ್ಮಣರೇ ಮೊದಲಾಗಿ ಚಂಡಾಲವರೆಗಿನ ಎಲ್ಲರಿಂದಲೂ, ಪ್ರತಿಲೋಮಾನುಲೋಮಭಿಃ-ಪ್ರತಿಲೋಮ, ಅನುಲೋಮ ಜಾತಿಯವರಿಂದಲೂ, ಅಪಿವಾ-ಮತ್ತೇನೆಂದರೆ, ಕುಂಡಾದ್ಯೈಃ-ಕುಂಡ ಮೊದಲಾದವರಿಂದಲೂ, ಗೋಲಕಾದ್ಯೈಃ-ಗೋಲಕಾದಿಗಳಿಂದಲೂ, ವೈದಿಕೈಃ-

---

ತಾಂಬೂಲ, ಕಾಡಿಗೆ, ಗಂಧಾದಿ, ದೇಹ ಸೌಂದರ್ಯವನ್ನು ಅತಿಶಯಗೊಳಿಸುವುವೆಂಬ ಸಮಸ್ತ ಭೋಗಸಾಮಗ್ರಿಗಳನ್ನು ತ್ಯಜಿಸಬೇಕು; ಶೌಚಾದಿ ಆಚಾರಗಳನ್ನು ತಪ್ಪದೇ ಪಾಲಿಸಬೇಕು; ದೇವಬ್ರಾಹ್ಮಣಪೂಜಕಳಾಗಿರಬೇಕು; ಯೋಗ್ಯ ಗುರುಗಳಿಂದ ವಿಷ್ಣುದೀಕ್ಷೆಯನ್ನು ಸ್ವೀಕರಿಸಿ, ಗುರೂಪದಿಷ್ಟ ವೈಷ್ಣವ ಮಂತ್ರಗಳನ್ನು ಏಕಾಗ್ರಚಿತ್ತಳಾಗಿ ಜಪಿಸಬೇಕು; ಸದ್ಗುಣಿಯಾಗಿರಬೇಕು; ಹೀಗೆ ಸದಾಚಾರಿಯಾದ ವಿಧವಾ ಸ್ತ್ರೀಯು, ವಿಷ್ಣುಭಕ್ತರಾದ ಯತಿಗಳಂತೆ, ಮಹಾಪುಣ್ಯವನ್ನೇ ಪಡೆಯುತ್ತಾಳೆ (೪೬-೪೯).

ಬ್ರಾಹ್ಮಣಾದಿ ಚಂಡಾಲಪರ್ಯಂತ, ಸಕಲ ಪುರುಷರೂ, ಸ್ತ್ರೀಯರೂ, ಪ್ರತಿಲೋಮ ಅನುಲೋಮ ವರ್ಣದವರೂ, ಕುಂಡಗೋಲಕಾದಿಗಳೂ, ವರ್ಣಸ್ಥರು, ಸ್ವಸ್ವವರ್ಣಾಶ್ರಮಗಳಿಗೆ ಉಚಿತವಾದ ಯಜ್ಞಾದಿಗಳಿಂದಲೂ, ಮತ್ತು ಸರ್ವರೂ

---

(ಮೃತ್ತಿಕಾಜಲಗಳಿಂದ) ಬಾಹ್ಯ ಮತ್ತು ಅಂತಃಶುದ್ಧಿಗಳೆಂಬ ಶೌಚವನ್ನಾಚರಿಸುವುದು, ಮನಸ್ಸು ಮತ್ತು ನುಡಿಗಳಂತೆ ನಡೆಯುವುದು, (ಆರ್ಜವ), ಅಹಿಂಸೆ—ಪ್ರಾಣಿಹಿಂಸೆಯನ್ನು ತ್ಯಜಿಸುವುದು, ಇವು ಶಾರೀರಕ (ದೇಹಸಂಬಂಧಿಯಾದ) ತಪಸ್ಸು; ಅನ್ಯರ ಮನಸ್ಸನ್ನು ನೋಯಿಸದಂತೆ ಮಾತನಾಡುವುದು, ಯಥಾರ್ಥ ಭಾಷಣ, ಪ್ರಿಯವೂ ಹಿತಕರವೂ ಆದ ನುಡಿ, ಗುರೂಪದಿಷ್ಟಮಾರ್ಗದಿಂದ ವೇದಗಳನ್ನು ಪುನಃ ಪುನಃ ಪಠನಮಾಡುವುದು; ಈ ಎಲ್ಲವೂ ವಾಙ್ಮಯದ ತಪಸ್ಸು; ಯತ್ನವಿಲ್ಲದೇ ಮನಸ್ಸು ವಿಷಯಗಳ ಕಡೆಗೆ ಧಾವಿಸದಿರುವುದು, ಸೌಮ್ಯತ್ವ (ಮಾನಸ ಕ್ರೌರ್ಯವನ್ನು ಬಿಡುವುದು), ಮೌನ—ಮನನಶೀಲನಾಗಿರುವುದು, ಶ್ರೀಹರಿಯಲ್ಲಿಯೇ ಮನಸ್ಸನ್ನು ಸ್ಥಾಪಿಸುವುದು (ಆತ್ಮವಿನಿಗ್ರಹ), ನಾನಾಕಾಮಗಳ ಪರಿತ್ಯಾಗ (ಭಾವಸಂಶುದ್ಧಿ) ಇವುಗಳು ಮಾನಸತಪಸ್ಸು. ಈ ತ್ರಿವಿಧ ತಪಸ್ಸುಗಳಲ್ಲಿ ಸ್ವಾಧ್ಯಾಯಾಭ್ಯಸನ ಮೊದಲಾದ ಸ್ತ್ರೀಯರಿಗೆ ಅಧಿಕಾರವಿಲ್ಲದ ಅಂಶಗಳನ್ನುಳಿದು, ಇತರ ಸರ್ವವನ್ನೂ ಸ್ತ್ರೀಯರೂ, ವಿಶೇಷವಾಗಿ ವಿಧವೆಯರೂ ಅನುಷ್ಠಾನಮಾಡಬೇಕು; ಇದನ್ನೇ ಇಲ್ಲಿ ಸಂಗ್ರಹವಾಗಿ ಹೇಳಿದ್ದಾರೆ.

ವೇದೋಕ್ತ ಕರ್ಮಾಧಿಕಾರಿಗಳಿಂದಲೂ, ತಾಂತ್ರಿಕೈಃ-ಸ್ಮೃತ್ಯುಕ್ತಕರ್ಮಗಳಲ್ಲಿ ಅಧಿಕೃತರಾದವರಿಂದಲೂ, ನಾಮಕೀರ್ತನಮುಖ್ಯೈಃ- ಶ್ರೀವಿಷ್ಣುನಾಮಸಂಕೀರ್ತನಾದಿಗಳಿಂದಲೂ, ಯಜ್ಞೈಃ-ಯಜ್ಞಗಳಿಂದಲೂ, ದಾನೈಃ ಚ-ದಾನಗಳಿಂದಲೂ, ಶಕ್ತಿತಃ-ತಂತಮ್ಮ ಶಕ್ತಿಯಿದ್ದಷ್ಟು (ಶಕ್ತ್ಯನುಸಾರವಾಗಿ), ಯಥಾಧಿಕಾರಂ-ತಂತಮ್ಮ ಅಧಿಕಾರಾನುಸಾರವಾಗಿ, ವಹ್ನಿಶುಶ್ರೂಷಣಾದಿಭಿಃ- ಅಗ್ನಿಸೇವೆಯೇ ಮೊದಲಾದ, ಸತ್ಕರ್ಮಭಿಃ-ವಿಧ್ಯುಕ್ತಕರ್ಮಗಳಿಂದಲೂ, ತಥಾ ಚ-ಹಾಗೂ, ಅನ್ಯೈಃ-ಇತರ ಸರ್ವ (ಮಾನವ)ರಿಂದ ಅಥವಾ ಇತರ ಸರ್ವಕ್ರಿಯೆಗಳಿಂದ, ಯಥಾಧಿಕಾರಂ ಸತ್ಕರ್ಮಭಿಃ-ತಂತಮ್ಮ ಅಧಿಕಾರಾನುಸಾರವಾದ , ಸತ್ಕರ್ಮಗಳಿಂದ—ಪುಣ್ಯ ಕರ್ಮಗಳಿಂದ, ರಮಾಪತಿಃ-ಲಕ್ಷ್ಮೀಪತಿಯಾದ ಶ್ರೀನಾರಾಯಣನು, ತೋಷಣೀಯಃ-ತೃಪ್ತಿಗೊಳಿಸಲ್ಪಡಬೇಕು; ಏಷಃ ಏವ-ಇದೇ, ಪರಃ ಧರ್ಮಃ-ಶ್ರೇಷ್ಠ ಧರ್ಮವು, ವೈಷ್ಣವಾನಾಂ-(ಸ್ವರೂಪದಿಂದ ವಿಷ್ಣುಭಕ್ತರಾದ) ಮುಕ್ತಿಯೋಗ್ಯ ಜೀವರಿಗೆ, ಅನುತ್ತಮಃ-ಅಧಿಕವಾದ ಧರ್ಮವು, ಮತ್ತೊಂದಿಲ್ಲ.

**ಸಾಂಗಂ ವಾಪ್ಯಂಗಹೀನಂ ವಾ ವಿಷ್ಣುಮುದ್ದಿಶ್ಯ ಕರ್ಮ ಯತ್ ।**
**ತದನಂತಫಲಂ ಪ್ರೋಕ್ತಂ ತಸ್ಯಾಪಾಯೋ ನ ವಿದ್ಯತೇ ॥ ೫೪ ॥**

ಯತ್-ಯಾವುದು, ವಿಷ್ಣುಂ-ಶ್ರೀವಿಷ್ಣುವನ್ನು ಉದ್ದಿಶ್ಯ-ಉದ್ದೇಶಿಸಿದ (ವಿಷ್ಣುಪ್ರೀತ್ಯರ್ಥವಾಗಿ ಆಚರಿಸಲಾದ), ಕರ್ಮ-ಕರ್ಮವೋ, ತತ್-ಅದು (ಆ ಕರ್ಮವು), ಸಾಂಗಂ-ಅಂಗಸಹಿತವಾದುದಾಗಲಿ (ಅಂಗಸಹಿತ ಆಚರಿಸಿದ ಪೂರ್ಣಕರ್ಮವಾಗಲಿ), ಅಂಗಹೀನಂ ವಾ ಅಪಿ-ಅಪೂರ್ಣವಾದುದೇ ಆಗಲಿ (ಅಂಗಭೂತವಾದ ಆಚಾರಗಳಿಲ್ಲದ ಅಪೂರ್ಣಕರ್ಮವಾಗಲಿ, ಅಥವಾ ಆರಂಭಿಸಿ ಪೂರ್ಣಗೊಳಿಸಲಾಗದೆ ಬಿಟ್ಟದ್ದಾಗಲಿ), ಅನಂತಫಲಂ-ನಾಶರಹಿತವಾದ ಮಹಾಫಲವುಳ್ಳದುದೆಂದು,

---

ತಂತಮ್ಮ ಅಧಿಕಾರಾನುಸಾರವಾಗಿ, ಮತ್ತು ಶಕ್ತ್ಯನುಸಾರ, ಶ್ರೀಹರಿನಾಮಸಂಕೀರ್ತನ, ದಾನ, ಅಗ್ನಿಕಾರ್ಯ, ಇತರ ವೇದೋಕ್ತ ಅಥವಾ ಸ್ಮೃತ್ಯುಕ್ತ ಕರ್ಮಗಳನ್ನು ಆಚರಿಸಿ, ಲಕ್ಷ್ಮೀಪತಿಯಾದ ಶ್ರೀನಾರಾಯಣನನ್ನು ಸಂತೃಪ್ತಿಗೊಳಿಸಬೇಕು;[1] ಅನ್ಯಸರ್ವ ಕ್ರಿಯೆಗಳನ್ನೂ ಶ್ರೀವಿಷ್ಣುವಿಗೆ ಅರ್ಪಿಸಿ, ಆತನ ಸಂಪ್ರೀತಿಯನ್ನು ಸಂಪಾದಿಸಬೇಕು; ಇದು ಸುಜೀವರಿಗೆ ಅಸದೃಶವಾದ ಶ್ರೇಷ್ಠ ಧರ್ಮವು (೫೦-೫೩). ಶ್ರೀವಿಷ್ಣುಪ್ರೀತ್ಯರ್ಥವಾಗಿ ಆಚರಿಸಲ್ಪಡುವ ಯಾವುದೇ ಕರ್ಮವು, ಸಾಂಗವಾಗಿರಲಿ ಅಥವಾ

---

1. ಶ್ರೀಹರಿಯು ನಿತ್ಯತೃಪ್ತನು; ಜೀವರು ಸಲ್ಲಿಸುವ ಪೂಜಾ ಸೇವಾದಿಗಳಿಂದ ಆತನಿಗೇನೂ ಆಗಬೇಕಾದುದಿಲ್ಲ; ಭಕ್ತನನ್ನು ಅನುಗ್ರಹಿಸಿ ಉದ್ಧರಿಸುವ ಇಚ್ಛೆಯುಂಟಾಗುವಂತೆ ಒಲಿಸಿಕೊಳ್ಳುವುದೇ ಆತನನ್ನು ಸಂತೃಪ್ತಿಗೊಳಿಸುವುದು.

ಪ್ರೋಕ್ತಂ-ಹೇಳಲ್ಪಡುತ್ತದೆ; ತಸ್ಯ ಅಪಾಯಃ-ಅದರ ನಾಶವು (ಫಲಾಭಾವವು), ನ ವಿದ್ಯತೇ-ಇಲ್ಲವೇ ಇಲ್ಲ.

**ಶನೈರ್ವೈರಾಗ್ಯಮಾಪನ್ನೋ ಧನಪುತ್ರಗೃಹಾದಿಷು ।**
**ಅಪಿ ಕರ್ಮಾಣಿ ಸಂಕೋಚ್ಯ ವಿಷ್ಣೋಃ ಶ್ರವಣಮಾಚರೇತ್ ॥ ೫೫ ॥**

**ಶ್ರುತಾರ್ಥಂ ಭಾವಯೇಚ್ಚಿತ್ತೇ ಭಕ್ತ್ಯಾ ಧ್ಯಾನಪರಾಯಣಃ ।**
**ಅತಿಪಕ್ವಕಷಾಯೋಽಸೌ ಕ್ಷೀಣಪಾಪಃ ಶನೈಃ ಶನೈಃ ॥ ೫೬ ॥**

**ಅನೇಕಜನ್ಮಸಂಸಿದ್ಧೋ ಲಭತೇ ಬ್ರಹ್ಮದರ್ಶನಂ ।**

ಶನೈಃ-ಕ್ರಮವಾಗಿ, ಧನಪುತ್ರಗೃಹಾದಿಷು-ಧನ, ಪುತ್ರ, ಭಾರ್ಯೆ ಮೊದಲಾದವುಗಳಲ್ಲಿ ವೈರಾಗ್ಯಂ-ವೈರಾಗ್ಯವನ್ನು (ಅನಾಸಕ್ತಿಯನ್ನು), ಆಪನ್ನಃ-ಹೊಂದಿದವನಾಗಿ, ಕರ್ಮಾಣಿ-ವಿಧ್ಯುಕ್ತಕರ್ಮಗಳನ್ನು ಸಂಕೋಚ್ಯ ಅಪಿ-ಸಂಕೋಚಮಾಡಿಯಾದರೂ, ವಿಷ್ಣೋಃ-ಶ್ರೀವಿಷ್ಣುವಿನ, ಶ್ರವಣಂ-(ಮಾಹಾತ್ಮ್ಯ) ಶ್ರವಣವನ್ನು ಆಚರೇತ್-ಮಾಡ ಬೇಕು; ಶ್ರುತಾರ್ಥಂ-ಶ್ರವಣ ಮಾಡಿದ ಅರ್ಥವಿಶೇಷಗಳನ್ನು ಚಿತ್ತೇ-ಮನಸ್ಸಿನಲ್ಲಿ ಭಾವಯೇತ್-ವಿಮರ್ಶೆ ಮಾಡಬೇಕು (ಮನನ ಮಾಡಬೇಕು); ಶನೈಃ ಶನೈಃ- ಮೆಲ್ಲಮೆಲ್ಲಗೆ (ಕ್ರಮವಾಗಿ), ಕ್ಷೀಣಪಾಪಃ-(ಮನನದಿಂದ ಸಂಶಯವಿಪರ್ಯಗಳಿಗೆ ಕಾರಣವಾದ ಪಾಪಗಳನ್ನು ಕಳೆದುಕೊಂಡು—ನಿಶ್ಚಯಜ್ಞಾನವನ್ನು ಹೊಂದಿ), ಭಕ್ತ್ಯಾ-ಭಕ್ತಿಯಿಂದ, ಧ್ಯಾನ

---

ಅಂಗಹೀನವಾಗಿರಲಿ[1] (ಪೂರ್ಣವಾಗಿರಲಿ—ಅಪೂರ್ಣವಾಗಿರಲಿ) ವ್ಯರ್ಥವಾಗುವುದಿಲ್ಲ—ಪರಂತು, ನಾಶರಹಿತವಾದ ಮಹಾಫಲವುಳ್ಳದ್ದಾಗುತ್ತದೆ— ಅದರ ಏಕಾಂಶವೂ (ಸಂಕಲ್ಪಾದಿಗಳೂ) ನಾಶವಾಗುವುದಿಲ್ಲ—ನಿರರ್ಥಕವಾಗುವುದಿಲ್ಲ(೫೪). ಹೀಗೆ ವಿಷ್ಣುಪ್ರೀತ್ಯರ್ಥವಾಗಿ ಕರ್ಮಗಳನ್ನಾಚರಿಸಿದ ಅಧಿಕಾರಿ ಜೀವನು, ಕ್ರಮವಾಗಿ, ಪತ್ನಿಪುತ್ರಧನಾದಿಗಳಲ್ಲಿ ವೈರಾಗ್ಯವನ್ನು ಹೊಂದಿ, ಕರ್ಮಗಳನ್ನು ಸಂಕೋಚ ಮಾಡಿಯಾದರೂ, ಶ್ರೀವಿಷ್ಣು ಕಥಾಶ್ರವಣವನ್ನು (ಮಹಿಮೆಗಳ ಶ್ರವಣವನ್ನು ಬಿಡದೇ ಮಾಡಬೇಕು) ಶ್ರವಣ ಮಾಡಿದ ಅರ್ಥವಿಶೇಷಗಳನ್ನು ಮನನಮಾಡಬೇಕು (ಮನಸ್ಸಿನಲ್ಲಿ ಚಿಂತಿಸುತ್ತ

---

1. ಸ್ನಾನ ಸಂಕಲ್ಪಾದಿಗಳು ವಿಷ್ಣುಪೂಜಾತ್ಮಕ ಕರ್ಮಗಳ ಅಂಗಗಳು. 'ಪ್ರಾರಂಭ ಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ ।' —ವೈಷ್ಣವಧರ್ಮವನ್ನು ಆರಂಭಿಸುವುದಾಗಲಿ, ಅದನ್ನು ಆಚರಿಸುವ ಇಚ್ಛೆಯನ್ನು ಹೊಂದುವುದಾಗಲಿ (ಸಂಕಲ್ಪಿಸುವುದಾಗಲಿ) ನಿಷ್ಫಲ (ಫಲವಿಲ್ಲದುದು) ಆಗುವುದಿಲ್ಲ—ಯಥೋಚಿತ ಫಲವೇ ದೊರೆಯುತ್ತದೆ; ಎಂಬರ್ಥದ ಪ್ರಮಾಣವಾಕ್ಯಗಳು ಇದನ್ನೇ ಹೇಳುತ್ತವೆ.

ಪರಾಯಣಃ-ಧ್ಯಾನಾಸಕ್ತನಾಗಿ, ಅಸೌ-ಈ ಅಧಿಕಾರಿ ಜೀವನು, ಅತಿಪಕ್ವ ಕಷಾಯಃ- ಬೆಂದುಹೋದ ಪಾಪಗಳುಳ್ಳವನಾಗಿ, ಅನೇಕಜನ್ಮಸಂಸಿದ್ಧಃ- ಬಹುಜನ್ಮಗಳಲ್ಲಿ ಧ್ಯಾನಸಿದ್ಧಿಯನ್ನು (ಧ್ಯಾನದ ಫಲವನ್ನು) ಹೊಂದಿ, ಬ್ರಹ್ಮದರ್ಶನಂ- ಶ್ರೀವಿಷ್ಣುವಿನ ಅಪರೋಕ್ಷವನ್ನು(ಸಾಕ್ಷಾದ್ದರ್ಶನವನ್ನು), ಲಭತೇ-ಹೊಂದುತ್ತಾನೆ.

ಪುಣ್ಯಪಾಪೇ ವಿಧೂಯಾಥ ಕ್ರಿಯಮಾಣೈರ್ನ ಲೇಪಭಾಕ್ ॥ ೫೭ ॥

ಭೋಗ್ಯೈಃ ಪ್ರಾರಬ್ಧನಾಶೇ ಚ ತ್ಯಕ್ತಲಿಂಗೋ ವ್ರಜೇದ್ಧರಿಂ ।

ಅಥ-(ಅಪರೋಕ್ಷಜ್ಞಾನವಾದ) ನಂತರ, ಪುಣ್ಯಪಾಪೇ-ಪುಣ್ಯಪಾಪಗಳನ್ನು (ಸಕಲ ಪಾಪಕರ್ಮಗಳನ್ನೂ ಅನಿಷ್ಟಪುಣ್ಯಗಳನ್ನೂ), ವಿಧೂಯ-ಕಳೆದುಕೊಂಡು (ಬ್ರಹ್ಮದರ್ಶನಪ್ರಭಾವದಿಂದ ನಾಶಹೊಂದಲು), ಕ್ರಿಯಮಾಣೈಃ-ಭಾವೀ ಕರ್ಮಗಳಿಂದ (ಆಗಾಮಿ-ಜ್ಞಾನೋತ್ತರಕಾಲದ ಕರ್ಮಗಳಿಂದ), ನ ಲೇಪಭಾಕ್-ಲೇಪಭಾಗಿಯಾಗದೇ (ಲಿಪ್ತನಾಗದೇ), ಭೋಗ್ಯೈಃ-ಭೋಗಗಳಿಂದ (ಸುಖದುಃಖಗಳ ಭೋಗದಿಂದ), ಪ್ರಾರಬ್ಧನಾಶೇ-(ಸಾಕ್ಷಾತ್ಕಾರಕಾಲದಲ್ಲಿ ಫಲ ಕೊಡಲು ಆರಂಭವಾದ) ಪ್ರಾರಬ್ಧಕರ್ಮವು ನಾಶವಾಗುತ್ತಿರಲು, ತ್ಯಕ್ತಲಿಂಗಃ- ಲಿಂಗದೇಹವನ್ನು ತ್ಯಜಿಸಿದವನಾಗಿ (ಲಿಂಗದೇಹವೂ ಅಕಾರ್ಯಕಾರಿಯಾಗಲು), ಹರಿಂ-ಶ್ರೀಹರಿಯನ್ನು ವ್ರಜೇತ್-ಹೊಂದುತ್ತಾನೆ (ವ್ಯಾಪ್ತೋಪಾಸಕರಾದ ದೇವಾದಿ ಉತ್ತಮಾಧಿಕಾರಿಗಳು ಅಮುಕ್ತ ವೈಕುಂಠಾದಿ ಸ್ಥಾನಗಳಲ್ಲಿ ಶ್ರೀಹರಿಯನ್ನು ಹೊಂದುತ್ತಾರೆ—ಅನ್ಯರು ಸತ್ಯಲೋಕಾದಿ ಸ್ಥಾನಗಳಲ್ಲಿ ಮಹಾಪ್ರಲಯ ಪರ್ಯಂತರ ಶ್ರೀಹರಿಧ್ಯಾನಾದಿಗಳಿಂದ, ದರ್ಶನದಿಂದ ಸಹ ಆನಂದಿಸುತ್ತಲಿದ್ದು ವಿರಜಾಸ್ನಾನದ ನಂತರ ಲಿಂಗದೇಹರಹಿತರಾಗಿ ಮುಕ್ತರಾಗುತ್ತಾರೆ).

ತಾದೃಶಂ ತತ್ಫಲಂ ಲಬ್ಧ್ವಾ ಮ್ರಿಯತೇ ಜಾಯತೇ ನ ಸಃ ॥ ೫೮ ॥

ಸ್ವಾನಂದತೃಪ್ತೋ ಲೋಕೇಷು ವೈಷ್ಣವೇಷು ಸ ಮೋದತೇ ।

ಸಃ-ಆ ಬ್ರಹ್ಮದರ್ಶಿಯು, ತಾದೃಶಂ-ಆ ಪ್ರಕಾರದ, ತತ್ಫಲಂ-ಜ್ಞಾನದ ಫಲವನ್ನು

---

ವಿಮರ್ಶೆಯಿಂದ ನಿಶ್ಚಯಜ್ಞಾನವನ್ನು ಹೊಂದಬೇಕು); ಮನನದಿಂದ ಕ್ರಮವಾಗಿ ಭಕ್ತಿಪೂರ್ವಕ ಶ್ರೀಹರಿಧ್ಯಾನದಲ್ಲಿ ತೊಡಗಬೇಕು; ಕ್ರಮವಾಗಿ ಪಾಪಗಳನ್ನು ಕಳೆದುಕೊಂಡು, ಸರ್ವ ಪಾಪಗಳೂ(ಅಪರೋಕ್ಷಕ್ಕೆ ವಿರೋಧಿಗಳಾದ ಪಾಪಗಳು)ಸುಟ್ಟುಹೋಗಲು, ಈ ಅಧಿಕಾರಿಯು, ಬಹುಜನ್ಮಗಳಲ್ಲಿ ಧ್ಯಾನಫಲವಾದ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುತ್ತಾನೆ(೫೫-೫೭). ಹೀಗೆ ಹರಿದರ್ಶನವನ್ನು ಪಡೆದ

ಲಬ್ಧ್ವಾ-ಹೊಂದಿ, ನ ಮ್ರಿಯತೇ-ಮರಣಹೊಂದುವುದಿಲ್ಲ ನ ಜಾಯತೇ-ಹುಟ್ಟುವುದಿಲ್ಲ; ಸ್ವಾನಂದ ತೃಪ್ತಃ-ತನ್ನ ಸ್ವರೂಪಾನಂದ ಭೋಗದಿಂದ ಸಂತೃಪ್ತನಾಗಿ, ವೈಷ್ಣವೇಷು-ಶ್ರೀವಿಷ್ಣುವು ಸದಾ ಸಂದರ್ಶನವನ್ನೀಯುವ, ಲೋಕೇಷು-ಲೋಕಗಳಲ್ಲಿ (ಸ್ಥಾನವಿಶೇಷಗಳಲ್ಲಿ), ಸಃ-(ಪ್ರಾರಬ್ಧಭೋಗವನ್ನು ಮುಗಿಸಿದ) ಆತನು, ಮೋದತೇ-(ಶ್ರೀಹರಿಧ್ಯಾನಾದಿಗಳಿಂದ) ಆನಂದಿಸುತ್ತಾನೆ.

**ಯೋ ದ್ವೇಷ್ಟಿ ಕೇಶವಂ ಮೂಢೋ ಭಕ್ತಂ ವಾ ತಸ್ಯ ಕರ್ಹಿಚಿತ್ ॥ ೫೯॥**

**ಸ ಚಿರಂ ನರಕೇ ಘೋರೇ ಪಚತೇ ನಾತ್ರ ಸಂಶಯಃ ।**

**ಯಃ ಸದ್ವೈವಾಚರೇದ್ದ್ವೇಷಂ ವಿಷ್ಣೋಃ ಸರ್ವೇಶ್ವರಸ್ಯ ಹಿ ॥ ೬೦ ॥**

**ಸ ಪತತ್ಯಂಧತಾಮಿಸ್ರೇ ತತೋ ನಾವರ್ತತೇ ಪುನಃ ।**

ಯಃ-ಯಾವ, ಮೂಢಃ-ಮೂರ್ಖನು (ಮಿಥ್ಯಾಜ್ಞಾನಿಯು), ಕೇಶವಂ-ಶ್ರೀವಿಷ್ಣುವನ್ನೂ, ವಾ-ಅಥವಾ, ತಸ್ಯ-ಆತನ, ಭಕ್ತಂ-ಭಕ್ತನನ್ನು, ಕರ್ಹಿಚಿತ್-ಯಾವ ಪ್ರಕಾರದಿಂದಾಗಲಿ, ದ್ವೇಷ್ಟಿ-ದ್ವೇಷಿಸುವನೋ, ಸಃ-ಆತನು, ಚಿರಂ-ಬಹುಕಾಲ (ನಿತ್ಯವೂ), ಘೋರೇ-ಘೋರವಾದ, ನರಕೇ-ನರಕದಲ್ಲಿ (ದುಃಖಪೂರ್ಣವಾದ ನಿತ್ಯನರಕದಲ್ಲಿ), ಪಚತೇ-ದಹಿಸಲ್ಪಡುತ್ತಾನೆ (ದುಃಖತಪ್ತನಾಗುತ್ತಾನೆ); ಅತ್ರ-ಈ

---

ಅಪರೋಕ್ಷಜ್ಞಾನಿಯ ಪಾಪಪುಣ್ಯರೂಪದ ವಿಶಿಷ್ಟಕರ್ಮಗಳೂ, ನಾಶವಾಗುತ್ತವೆ;[1] ಮುಂದೆ ಪ್ರಾರಬ್ಧ ಭೋಗಕಾಲದಲ್ಲಿ ಮಾಡುವ ಯಾವ ಕರ್ಮವೂ ಲೇಪಿಸುವುದಿಲ್ಲ; ಪ್ರಾರಬ್ಧ ಕರ್ಮದ ಫಲವಾದ ಸುಖದುಃಖಭೋಗಗಳನ್ನು ಅನುಭವಿಸುವುದರಿಂದ ಅದೂ ನಷ್ಟವಾಗುತ್ತದೆ; ನಂತರ ಲಿಂಗದೇಹವನ್ನು ತ್ಯಜಿಸಿ ಮುಕ್ತನಾಗುತ್ತಾನೆ(೫೮).

೧. ಅಪರೋಕ್ಷಜ್ಞಾನ ಕಾಲದ ಹಿಂದೆ ಶೇಖರವಾಗಿರುವ ಕರ್ಮಗಳು (ಅವುಗಳ ಫಲರೂಪಗಳಾದ ಪುಣ್ಯಪಾಪಗಳು) 'ಸಂಚಿತವು'; ಆ ಕಾಲದಲ್ಲಿ ಫಲ ಕೊಡಲಿಕ್ಕೆ ಆರಂಭವಾಗಿರುವ ಕರ್ಮವು 'ಪ್ರಾರಬ್ಧವು'; ಬ್ರಹ್ಮದರ್ಶನ ನಂತರ (ಪ್ರಾರಬ್ಧ ಭೋಗಕಾಲದಲ್ಲಿ) ಸಂಭವಿಸುವ ಕರ್ಮಗಳು, 'ಆಗಾಮಿ'. ಬ್ರಹ್ಮದರ್ಶನದಿಂದ ಪುಣ್ಯಪಾಪಗಳೆಲ್ಲವೂ, ಎಂದರೆ ಸಂಚಿತಕರ್ಮರಾಶಿ ಎಲ್ಲವೂ ನಷ್ಟವಾಗುತ್ತದೆಂಬಲ್ಲಿ ಈ ಮುಂದಿನ ವಿಶೇಷವನ್ನು ತಿಳಿಯಬೇಕು. ಸಂಚಿತಾದಿ ಕರ್ಮಗಳು ಪುಣ್ಯಪಾಪಗಳೆಂಬ ಉಭಯಸ್ವರೂಪವುಳ್ಳವು. ಶ್ರೀಹರಿದರ್ಶನದಿಂದ ಸಂಚಿತಪಾಪವೆಲ್ಲ ನಷ್ಟವಾಗುತ್ತವೆ, ಎಂದರೆ, ಜ್ಞಾನಿಜೀವನಿಗೆ ತಮ್ಮ ದುಃಖರೂಪದ ಫಲವನ್ನು ಕೊಡಲು ಅಸಮರ್ಥವಾಗುತ್ತದೆ. ಪುಣ್ಯವು ಅಕಾಮ್ಯ-ಕಾಮ್ಯವೆಂದು ಎರಡು ವಿಧ; ನಿಷ್ಕಾಮದಿಂದಾಚರಿಸಿದ ಸತ್ಕರ್ಮಗಳ ಫಲವೇ ಅಕಾಮ್ಯ ಪುಣ್ಯವು; ಈ ಅಕಾಮ್ಯಪುಣ್ಯವು, ಜ್ಞಾನೋದಯಕ್ಕೂ, ಸಾಕ್ಷಾತ್ಕಾರಕ್ಕೂ, ಬ್ರಹ್ಮದರ್ಶನದ ಸ್ಫುಟತ್ವಕ್ಕೂ ಕಾರಣವಾಗಿ, ಆ ಫಲಗಳನ್ನಿತ್ತು ಪರಿಸಮಾಪ್ತಿಗೊಳ್ಳುತ್ತವೆ; ಕಾಮ್ಯಪುಣ್ಯವೂ ಎರಡು ವಿಧ; ಅನಿಷ್ಟ ಮತ್ತು ಇಷ್ಟವೆಂದು; ಅನಿಷ್ಟಕಾಮ್ಯಪುಣ್ಯವೂ

ವಿಷಯದಲ್ಲಿ ನ ಸಂಶಯಃ-ಸಂಶಯವಿಲ್ಲ ಯಃ-ಯಾವಾತನು, ಸರ್ವೇಶ್ವರಸ್ಯ-ಸರ್ವಸ್ವಾಮಿಯಾದ, ವಿಷ್ಣೋಃ-ಶ್ರೀವಿಷ್ಣುವಿನ, ದ್ವೇಷಂ-ದ್ವೇಷವನ್ನು ಸದಾಏವ-ಸರ್ವದಾ, ಆಚರೇತ್-ಆಚರಿಸುವನೋ, ಸಃ-ಆತನು, ಅಂಧತಾಮಿಸ್ರೇ-ಅಂಧತಮಸ್ಸೆಂಬ ನಿತ್ಯನರಕದಲ್ಲಿ ಪತತಿ-ಬೀಳುವನು (ಎಂದು ಹೇಳಲೇನಿದೆ?), ತತಃ-ಅಲ್ಲಿಂದ, ಪುನಃ-ಮತ್ತೆ ನ ಆವರ್ತತೇ-ತಿರಿಗಿ ಬರುವುದಿಲ್ಲ (ಶ್ರೀಹರಿದ್ವೇಷವನ್ನು ಒಮ್ಮೆ ಮಾಡಿದ್ದೂ ತಮೋಯೋಗ್ಯ ಜೀವನು ತಮಸ್ಸಿನಲ್ಲಿ ಬೀಳುತ್ತಿರಲು, ಸದಾ ದ್ವೇಷಿಸುವವನು ಅಂಧತಮಸ್ಸಿನಲ್ಲಿ ಬೀಳುವನೆಂಬುದು ಕೈಮುತ್ಯನ್ಯಾಯದಿಂದಲೇ ಉಪಪನ್ನವಾಗುತ್ತದೆ. ಅಥವಾ, ಸ್ವರೂಪದಿಂದ ಸುಜೀವಿಯಾದವನು

---

ಬ್ರಹ್ಮದರ್ಶನದ ಈ ಪ್ರಕಾರದ ವಿಶಿಷ್ಟಫಲವನ್ನು ಹೊಂದಿದ ಜೀವನು, ಪುನಃ ಹುಟ್ಟುವುದಿಲ್ಲ—ಸಾಯುವುದೂ ಇಲ್ಲ (ಜನನ ಮರಣರೂಪದ ಸಂಸಾರಕ್ಕೆ ಬರುವುದಿಲ್ಲ); ಸ್ವಾನಂದಾನುಭವದಿಂದ ತೃಪ್ತನಾಗಿ ವಿಷ್ಣುಲೋಕಗಳಲ್ಲಿ

---

ಬ್ರಹ್ಮದರ್ಶನದಿಂದ ನಷ್ಟವಾಗುತ್ತದೆ; ಐಶ್ವರ್ಯದಾರಾಪುತ್ರಾದಿಗಳಿಗೆ ಕಾರಣವಾಗುವುದು ಅನಿಷ್ಟಕಾಮ್ಯವು—ಅದು ನಾಶವಾಗುತ್ತದೆ. ಇಷ್ಟಕಾಮ್ಯವೆಂಬುದು, ಸ್ವಭೋಗಕ್ಕಲ್ಲದ ಐಶ್ವರ್ಯಾದಿಗಳ ಪ್ರಾಪ್ತಿ, ನಾನಾ ಸಾಂಸಾರಿಕ ದುಃಖಗಳ ಪರಿಹಾರ ಸಾಮರ್ಥ್ಯಾದಿಗಳಿಗೆ ಕಾರಣವಾಗುತ್ತದೆ. ಈ ಇಷ್ಟಕಾಮ್ಯವನ್ನು ಜ್ಞಾನಿಯು ತನಗಾಗಿ ಉಪಯೋಗಿಸಿಕೊಳ್ಳದೇ, ಬಂಧುಮಿತ್ರರು ಮತ್ತು ಸ್ವಭಕ್ತಾದಿಗಳಿಗೆ ಸ್ವೇಚ್ಛೆಯಿಂದ ದಾನಮಾಡುವ ಸಾಮರ್ಥ್ಯವನ್ನು ಶ್ರೀಹರಿಯ ಅನುಗ್ರಹದಿಂದ ಪಡೆಯುತ್ತಾನೆ. 'ಅನಧೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ। ಕಿಮು ಪಾಪಂ ಪರಬ್ರಹ್ಮ ಜ್ಞಾನಿನೋ ನಾತ್ರ ಸಂಶಯಃ ॥'' (ಪಾದ್ಮ) ಮತ್ತು 'ತತ್ರ ಪುತ್ರಾದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ' (ಶ್ರುತಿ), ಈ ಮೊದಲಾದ ಭಾಷ್ಯಾದ್ಯುದಾಹೃತಪ್ರಮಾಣಗಳು ಉಕ್ತಪ್ರಮೇಯವನ್ನು ಸಮರ್ಥಿಸುತ್ತವೆ. ಉದಾಹೃತ ಶ್ರುತ್ಯರ್ಥವು ಹೀಗಿದೆ:—'ಜ್ಞಾನಿಯ ಇಷ್ಟಕಾಮ್ಯಪುಣ್ಯದ ಫಲವಾದ ಐಶ್ವರ್ಯಾದಿಗಳನ್ನು ಪುತ್ರರೂ, ಇತರ ಪುಣ್ಯಫಲಗಳನ್ನು ಮಿತ್ರಬಾಂಧವರೂ, ಪಾಪಫಲಗಳನ್ನು ದ್ವೇಷಿಗಳೂ ತೆಗೆದುಕೊಳ್ಳುತ್ತಾರೆ.' 'ಆಗಾಮಿ' ಕರ್ಮಗಳು ಸಾಮಾನ್ಯವಾಗಿ ಪುಣ್ಯರೂಪದವುಗಳೇ ಆಗಿರುತ್ತವೆ—ಜ್ಞಾನಿಯಿಂದ ಪಾಪಕರ್ಮಗಳು ಘಟಿಸುವುದು ಅಸಂಭವ; ಈ ಕರ್ಮಗಳ ಫಲಗಳು ಜ್ಞಾನಿ ಜೀವನು ಪುನಃ ಸಂಸಾರಕ್ಕೆ ಬರಲು ಕಾರಣಗಳಾಗುವುದಿಲ್ಲ; ಮೋಕ್ಷಾನಂದದ ವೃದ್ಧಿಗೂ ಅಲ್ಪಾಧಿಕಾರಿಗಳಾದ ಕೆಲವರಿಗೆ ಆನಂದಹ್ರಾಸಕ್ಕೂ ಕಾರಣವಾಗುತ್ತವೆ. ಲೇಪಿಸುವುದಿಲ್ಲವೆಂಬುದರ ಅರ್ಥವನ್ನು ಈ ವಿಶೇಷಗಳೊಂದಿಗೆ ಗ್ರಹಿಸಬೇಕು.

ಪ್ರಾರಬ್ಧಕರ್ಮವು ಭೋಗದಿಂದ ನಷ್ಟವಾದೊಡನೆ, ಲಿಂಗದೇಹದ ಭಂಗವಾಗುವುದಿಲ್ಲ—ಆದರೆ ಅದು ಪೂರ್ಣ ಅಕಾರ್ಯಕಾರಿಯಾಗುತ್ತದೆ—ತನ್ನ ಬಂಧಕಕಾರ್ಯದಲ್ಲಿ ಅಸಮರ್ಥವಾಗಿ ಇದ್ದೂ ಇಲ್ಲದಂತಾಗುತ್ತದೆ. ಮಹಾಪ್ರಲಯಾನಂತರ, ಬ್ರಹ್ಮದೇವನೊಂದಿಗೆ ವಿರಜಾನದೀ ಸ್ನಾನದಿಂದಲೇ ಅದರ ತ್ಯಾಗವೆಂದು ತಿಳಿಯಬೇಕು.

ಅಜ್ಞಾನಾದಿಗಳಿಂದ ಜೀವಾಭೇದಾದಿ ನವವಿಧ ದ್ವೇಷಗಳಲ್ಲಿ[1] ಯಾವುದೊಂದು ಪ್ರಕಾರದ ದ್ವೇಷವನ್ನು ಒಂದೊಂದು ವೇಳೆ ಮಾಡಿದರೂ, ಘೋರನರಕಕ್ಕೆ ಪಾತ್ರನಾಗುವನೆಂಬ ಅರ್ಥವನ್ನೂ ತಿಳಿಯಬಹುದು.)

**ಇತಿ ಪ್ರಾಧಾನ್ಯತೋ ವಿಪ್ರಾಃ ಧರ್ಮಾ ವೈಷ್ಣವಸಂಮತಾಃ ॥ ೬೧ ॥**

**ಸಂಕ್ಷೇಪತೋ ಮಯಾಖ್ಯಾತಾ ಯೈರ್ಮುಕ್ತೋ ಜಾಯತೇ ನರಃ ।**

ವಿಪ್ರಾಃ-ಹೇ ಋಷಿಗಳೇ !, ಇತಿ-ಹೀಗೆ (ಈವರೆಗೆ ನಿರೂಪಿಸಿದಂತೆ), ವೈಷ್ಣವಸಂಮತಾಃ-ವಿಷ್ಣುಭಕ್ತರಿಗೆ ಒಪ್ಪಿಗೆಯಾಗುವ (ಸಂತೃಪ್ತಿಯನ್ನುಂಟುಮಾಡುವ), (ಅಥವಾ ಶ್ರೀವಿಷ್ಣುಪ್ರೀತಿಕರಗಳೆಂದು ಜ್ಞಾನಿಗಳು ತಿಳಿದಿರುವ), ಧರ್ಮಾಃ-ಧರ್ಮಗಳು, ಪ್ರಾಧಾನ್ಯತಃ-ಮುಖ್ಯವಿವಕ್ಷೆಯಿಂದ (ಪ್ರಧಾನವಾದ ಧರ್ಮಗಳು), ಸಂಕ್ಷೇಪತಃ-ಸಂಕ್ಷೇಪವಾಗಿ, ಮಯಾ-ನನ್ನಿಂದ, ಆಖ್ಯಾತಾಃ-ಹೇಳಲ್ಪಟ್ಟವು; ಯೈಃ-ಯಾವ ಧರ್ಮಗಳಿಂದ (ಧರ್ಮಗಳ ಆಚರಣೆಯಿಂದ), ನರಃ-ಮನುಷ್ಯನು, ಮುಕ್ತಃ-ಮುಕ್ತನು, ಜಾಯತೇ-ಆಗುತ್ತಾನೆಯೋ (ಅವುಗಳನ್ನು ನಿರೂಪಿಸಿರುವೆನು).

---

ವಿರಾಜಮಾನರಾಗುತ್ತಾರೆ[2] (೫೮). ಆದರೆ, ಶ್ರೀವಿಷ್ಣುವನ್ನಾಗಲಿ, ವಿಷ್ಣುಭಕ್ತರನ್ನಾಗಲಿ, ಯಾವ ಅಜ್ಞಾನಿಯು ದ್ವೇಷಿಸುವನೋ, ಆತನು, ಘೋರವಾದ ನರಕದುಃಖಗಳನ್ನು ಅನುಭವಿಸುತ್ತಾನೆ—ಸಂಶಯವಿಲ್ಲ. ಯಾವಾತನು, ಸರ್ವೇಶ್ವರನಾದ ಶ್ರೀವಿಷ್ಣುವಿನ ದ್ವೇಷವನ್ನು ಸರ್ವದಾ ಮಾಡುತ್ತಾನೆಯೋ, ಆತನು ಅಂಧತಮಸ್ಸೆಂಬ ನಿತ್ಯನರಕದಲ್ಲಿ

---

1. 'ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇSಖಿಲಾ ಮತಾಃ ॥ (ಭಾ-ತಾ)

ಈ ಶ್ಲೋಕಗಳ ಅರ್ಥವಿವರಣೆಯನ್ನು ಈ ಹಿಂದೆ ನಿರೂಪಿಸಲಾಗಿರುವ ಭಾಗಗಳಿಂದ ತಿಳಿಯಬೇಕು. ಇದರಿಂದ ಸುಜೀವರು, ಶ್ರೀಹರಿದ್ವೇಷರೂಪದ ಮಿಥ್ಯಾಜ್ಞಾನದಿಂದ ಎಷ್ಟು ಭಯಪಟ್ಟು ಜಾಗರೂಕರಾಗಿರಬೇಕೆಂಬುದನ್ನು ತಿಳಿಯಬೇಕು.

2. ಹಿಂದಿನ ಶ್ಲೋಕದಲ್ಲಿ 'ಹರಿಂ ವ್ರಜೇತ್' ಎಂದು ಹೇಳಿದುದನ್ನು ಇಲ್ಲಿ ವಿವರಿಸಲಾಗಿದೆ. ಸರ್ವರಿಗೂ ಮಹಾಪ್ರಲಯಾನಂತರ, ಬ್ರಹ್ಮದೇವನೊಡನೆ ವಿರಜಾಸ್ನಾನಮಾಡುವುದರಿಂದ ಲಿಂಗಭಂಗವೂ, ನಂತರ ಆತನೊಂದಿಗೇ ಪರಬ್ರಹ್ಮಪ್ರಾಪ್ತಿಯೂ (ಮುಕ್ತಿಯೂ), ಲಭಿಸುತ್ತದೆ. ಆವರೆಗೆ, ಸಾಧನಪೂರ್ತಿಯಾದ ಜ್ಞಾನಿಜೀವರು, ಭೋಗದಿಂದ ಪ್ರಾರಬ್ಧವನ್ನೂ ಕಳೆದುಕೊಂಡು, ಸ್ವಯೋಗ್ಯತಾನುಸಾರವಾಗಿ ಜನಲೋಕಾದಿಗಳಲ್ಲಿಯೂ (ಅಪ್ರತೀಕಾಲಂಬನರು, ಅಮುಕ್ತ ವೈಕುಂಠಾದಿಗಳಲ್ಲಿಯೂ) ತೇಜೋವಿಶಿಷ್ಟದೇಹಗಳಿಂದ, ಹರಿಧ್ಯಾನ—ದರ್ಶನಾದಿಗಳಿಂದ ಸುಖಿಸುತ್ತ ಮಹಾಪ್ರಲಯಪರ್ಯಂತ ವಾಸಿಸುತ್ತಾರೆ.

ಶ್ರುತಿ ಸ್ಮೃತಿ ಪುರಾಣೇಭ್ಯೋ ನಾನಾಧರ್ಮಾಃ ಪೃಥಕ್ ಪೃಥಕ್ ॥ ೬೨ ॥
ವಿಜ್ಞೇಯಾ ನ ಹಿ ತೇ ವಕ್ತುಂ ಶಕ್ಯಂತೇ ಹ್ಯಲ್ಪಕಾಲತಃ ॥ ೬೩ ॥

ಶ್ರೀ ಭಗವಾನುವಾಚ—

ಜ್ಞಾತ್ವಾ ತಸ್ಯ ಮತಂ ಸರ್ವೇ ವಸಿಷ್ಠಸ್ಯ ಮಹಾತ್ಮನಃ ।
ಬದ್ಧಭಾವಾ ಮಯಿ ದೃಢಂ ನತ್ವಾ ತಂ ಜಗ್ಮುರಾಶ್ರಮಾನ್ ॥ ೬೪ ॥

ನಾನಾಧರ್ಮಾಃ-ವಿವಿಧ ಧರ್ಮಗಳು, ಪೃಥಕ್ ಪೃಥಕ್-ಬೇರೆಬೇರೆಯಾಗಿ ಶ್ರುತಿಸ್ಮೃತಿಪುರಾಣೇಭ್ಯಃ-ಶ್ರುತಿಸ್ಮೃತಿಪುರಾಣಗಳಿಂದ, ವಿಜ್ಞೇಯಾಃ-ತಿಳಿಯಲ್ಪಡ ತಕ್ಕವುಗಳು (ಆಗಿವೆ); ಅಲ್ಪಕಾಲತಃ-ಅಲ್ಪಕಾಲದಲ್ಲಿ ವಕ್ತುಂ-ಹೇಳಲು, ತೇ-ಅವುಗಳು (ಧರ್ಮಗಳು), ನ ಶಕ್ಯಂತೇ-ಸಾಧ್ಯವಾಗತಕ್ಕವುಗಳಲ್ಲ ಶ್ರೀವಿಷ್ಣುವು ಬ್ರಹ್ಮದೇವನಿಗೆ ಹೇಳುತ್ತಾನೆ:— ತಸ್ಯ-ಆ, ಮಹಾತ್ಮನಃ-ಮಹಾತ್ಮನಾದ, ವಸಿಷ್ಠಸ್ಯ- ವಸಿಷ್ಠರ, ಮತಂ-ಅಭಿಪ್ರಾಯವನ್ನು, ಸರ್ವೇ-ಎಲ್ಲರೂ (ಸಪ್ತರ್ಷಿಗಳ ಸ್ಥಾನದಲ್ಲಿದ್ದ ಆತನ ಮಕ್ಕಳಾದ ಪ್ರಮೋದಾದಿಗಳು), ಜ್ಞಾತ್ವಾ-ತಿಳಿದು, ಮಯಿ-ನನ್ನಲ್ಲಿ (ಶ್ರೀವಿಷ್ಣುವಿನಲ್ಲಿ), ದೃಢಂ-ದೃಢವಾಗಿ, ಬದ್ಧಭಾವಾಃ-ಬಿಗಿಯಲ್ಪಟ್ಟ ಭಕ್ತಿಯುಳ್ಳವರಾಗಿ (ಭಕ್ತಿಪಾಶಬಂಧಿತ ರಾಗಿ), ತಂ-ವಸಿಷ್ಠರನ್ನು ನತ್ವಾ-ನಮಸ್ಕರಿಸಿ, ಆಶ್ರಮಾನ್-(ತಂತಮ್ಮ) ಆಶ್ರಮಗಳನ್ನು ಕುರಿತು, ಜಗ್ಮುಃ-ಹೋದರು.

ಮನ್ವಂತರಾನುವರ್ಣನವೆಂಬ ೨೭ನೇ ಅಧ್ಯಾಯವು ಮುಗಿದುದು.

---

ಬೀಳುತ್ತಾನೆ; ಅಲ್ಲಿಂದ ಹಿಂದಿರುಗುವುದೇ ಇಲ್ಲ(೫೯-೬೦). ಹೇ ಪ್ರಮದಾದಿ ವಿಪ್ರರೇ! ಶ್ರೀ ವಿಷ್ಣುಭಕ್ತರಿಗೆ ಸಮ್ಮತವಾದ ಧರ್ಮಗಳನ್ನು (ವಿಷ್ಣುಪ್ರೀತಿಜನಕಗಳಾದ ಧರ್ಮಗಳನ್ನು), ಪ್ರಾಧಾನ್ಯವಿವಕ್ಷೆಯಿಂದ, ಸಂಕ್ಷೇಪವಾಗಿ ಹೇಳಿರುವೆನು; ಈ ಧರ್ಮಗಳನ್ನು ಆಚರಿಸಿ ಮಾನವನು ಮುಕ್ತನಾಗುವುದರಲ್ಲಿ ಸಂಶಯವಿಲ್ಲ (೬೧). ಶ್ರೀವಿಷ್ಣುಪ್ರೀತಿಸಂಪಾದಕ ವಿವಿಧ ಧರ್ಮಗಳನ್ನು ಬೇರೆ ಬೇರೆಯಾಗಿ ಅಲ್ಪಕಾಲದಲ್ಲಿ ವಿಸ್ತರಿಸಲು ಶಕ್ಯವಿಲ್ಲ ಈ ಶ್ರೇಷ್ಠ ಧರ್ಮಗಳನ್ನು ಶ್ರುತಿಸ್ಮೃತಿಪುರಾಣಾದಿಗಳಿಂದ (ಅವುಗಳ ಅಧ್ಯಯನಾದಿಗಳಿಂದ ಮಾತ್ರ) ತಿಳಿಯಬೇಕು; ಹೀಗೆಂದು, ಮಹಾತ್ಮರಾದ ವಸಿಷ್ಠರು, ತಮ್ಮ ಪುತ್ರರಾದ ಮತ್ತು ಆ ಮನ್ವಂತರದ ಸಪ್ತರ್ಷಿಗಳ ಸ್ಥಾನದಲ್ಲಿದ್ದ ಪ್ರಮದ, ವಿಮದ, ಶಕ್ತಿ ಮೊದಲಾದ ಋಷಿಗಳಿಗೆ ಉಪದೇಶಿಸಿದರೆಂದು ಹೇಳಿ, ಶ್ರೀವಿಷ್ಣುವು, 'ಬ್ರಹ್ಮದೇವನಿಗೆ ಮುಂದೆ ನಡೆದುದನ್ನು ಹೇಳುತ್ತಾನೆ:— ಮಹಾತ್ಮರಾದ ವಸಿಷ್ಠರ, ಮೋಕ್ಷಸಾಧಕ ಧರ್ಮಗಳ ಸಂಬಂಧವಾದ ನಿಶ್ಚಿತಾಭಿಪ್ರಾಯವನ್ನು ತಿಳಿದು, ತೃಪ್ತರಾದ ಆ ಪ್ರಮದಾದಿಗಳು, ಭಕ್ತ್ಯುದ್ರೇಕವನ್ನು ಹೊಂದಿ, ವಸಿಷ್ಠರನ್ನು ಕೃತಜ್ಞರಾಗಿ ನಮಸ್ಕರಿಸಿ ತಂತಮ್ಮ ಆಶ್ರಮಗಳಿಗೆ ತೆರಳಿದರು (೬೨-೬೪).

೨೭ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೨೮

ಶ್ರೀ ವೇದವ್ಯಾಸಾಯ ನಮಃ

ಶ್ರೀ ಭಗವಾನುವಾಚ—

**ಚತುರ್ಥಸ್ತಾಪಸೋ ನಾಮ್ನಾ ಹ್ಯುತ್ತಮಸ್ಯಾನುಜೋ ಮನುಃ ।**
**ಸ್ವಯಮೇವ ಹಿ ಯೋ ವಿಷ್ಣುರ್ಲೀಲಯಾ ಮನುತಾಂ ಗತಃ ॥ ೧ ॥**

ಅರ್ಥ:—ಉತ್ತಮಸ್ಯ-(೩ನೇ ಮನ್ವಂತರಾಧಿಪತಿಯಾದ) ಉತ್ತಮನ, ಅನುಜಃ-ತಮ್ಮನಾದ, ನಾಮ್ನಾ-ಹೆಸರಿನಿಂದ, ತಾಪಸಃ-ತಾಪಸನು, ಚತುರ್ಥಃ-ನಾಲ್ಕನೆಯ, ಮನುಃ-ಮನುವು (ಆದನು); ಯಃ-ಯಾವ ಈತನು, ಲೀಲಯಾ-ಕ್ರೀಡೆಗಾಗಿ, ಮನುತಾಂ-ಮನುತ್ವವನ್ನು (ಮನುವಿನ ಸ್ಥಾನವನ್ನು), ಗತಃ-ಹೊಂದಿದ, ಸ್ವಯಂ-ಸಾಕ್ಷಾತ್, ವಿಷ್ಣುಃ ಏವ-ಶ್ರೀವಿಷ್ಣುವೇ.

**ತಸ್ಯೇಮೇ ತನಯಾ ಜಾತಾ ವೃಷಾಖ್ಯಾತ್ಯಾದಯೋ ದಶ ।**
**ನಾಸತ್ಯೋ ವಿಶಿಖೋ ನಾಮ್ನಾ ಪ್ರಾಪ್ತ ಐಂದ್ರಪದಂ ಸುರಾಃ ॥ ೨ ॥**

**ಹರಿವೀರಾದಯಸ್ತತ್ರ ವಿಧೃತೇಸ್ತನಯಾಸ್ತು ತೇ ।**
**ತ ಏವ ವೈಧೃತಾ ನಾಮ ಧೃತಾ ವೇದಾಸ್ತು ಯೈಸ್ತದಾ ॥ ೩ ॥**

ತಸ್ಯ-ಆ ತಾಪಸ ಮನುವಿಗೆ, ಇಮೇ-ಈ, ವೃಷಖ್ಯಾತ್ಯಾದಯಃ-ವೃಷ, ಖ್ಯಾತಿ ಮೊದಲಾದವರಾದ, ದಶ-ಹತ್ತು ಮಂದಿ, ತನಯಾಃ-ಪುತ್ರರು, ಜಾತಾಃ- ಹುಟ್ಟಿದರು;

---

ಅಧ್ಯಾಯ ೨೮

ತಾತ್ಪರ್ಯ:—ಮೂರನೇ ಮನುವಾದ ಉತ್ತಮನ ಅನುಜನಾದ ತಾಪಸನೆಂಬುವನು, ನಾಲ್ಕನೇ ಮನುವಾದನು; ಕ್ರೀಡೆಗಾಗಿ ಮನುಪದವಿಗೆ ಬಂದ, ಸಾಕ್ಷಾತ್ ಶ್ರೀವಿಷ್ಣುವೇ ಈ ತಾಪಸನು[1](೧). ಈತನಿಗೆ(ತಾಪಸನಿಗೆ) ವೃಷ, ಖ್ಯಾತಿ

---

೧. ಹಾಹಾ ಹೂಹೂ ಗಂಧರ್ವರನ್ನು ದೇವಲರ ಶಾಪದಿಂದ ಮೋಚನೆಮಾಡಿದ, ಗಜೇಂದ್ರನಿಂದ ಸ್ತುತ್ಯನಾಗಿ ಪ್ರತ್ಯಕ್ಷನಾದವನೆಂದು ಮುಂದೆ ನಿರೂಪಿಸಲ್ಪಡುವ, ಶ್ರೀಹರಿಯು, 'ತಾಪಸಹರಿ' ಎಂದೂ ಹೇಳಲ್ಪಡುತ್ತಾನೆ. ಇದರಿಂದ ತಾಪಸಮನ್ವಂತರದಲ್ಲಿ ಹರಿಮೇಧಾ ಹರಿಣಿಯರೆಂಬ ಋಷಿದಂಪತಿಗಳಿಂದ ಅವತರಿಸಿದ 'ಹರಿ'ಯೇ ಚಕ್ರದಿಂದ ನಕ್ರಮುಖವನ್ನು ಸೀಳಿದ. 'ತಾಪಸ'ರೂಪದಿಂದ ಅಭಿನ್ನನಾದ ಶ್ರೀಹರಿಯೆಂದು ತಿಳಿಯಬೇಕು. ತಾಪಸನು (ಮನುವು) ಉತ್ತಮನ (ಹಿಂದಿನ ಮನ್ವಂತರಾಧಿಪತಿಯ) ಅನುಜನು—ಶ್ರೀವಿಷ್ಣುವಿನ ಅವತಾರರೂಪನೇ.

ನಾಮ್ನಾ-ಹೆಸರಿನಿಂದ, ವಿಶಿಖಃ-ವಿಶಿಖನೆಂಬ, ನಾಸತ್ಯಃ-ಅಶ್ವಿನೀ ದೇವತೆಯು,[1] ಐಂದ್ರಪದಂ-ಇಂದ್ರಪದವಿಯನ್ನು ಪ್ರಾಪ್ತಃ-ಹೊಂದಿದನು; ತತ್ರ-ಆ ಮನ್ವಂತರದಲ್ಲಿ ಹರಿವೀರಾದಯಃ-ಹರಿ, ವೀರ ಮೊದಲಾದವರು, ಸುರಾಃ- ದೇವತೆಗಳು (ಆದರು); ತೇ-ಅವರು (ಈ ದೇವತೆಗಳು), ವಿಧೃತೇಃ-ವಿಧೃತಿಯ, ತನಯಾಃ-ಪುತ್ರರು; ತದಾ-ಆ ಮನ್ವಂತರದಲ್ಲಿ, ಯೈಃ-ಯಾರಿಂದ, ವೇದಾಃ-ವೇದಗಳು, ಧೃತಾಃ ತು-ಧರಿಸಲ್ಪಟ್ಟವೋ (ರಕ್ಷಿಸಲ್ಪಟ್ಟವೋ), ತೇ ಏವ-ಅವರೇ, ವೈಧೃತಾಃ ನಾಮ-ವೈಧೃತರೆಂಬ ನಾಮವುಳ್ಳವರು.

**ಹರಿಮೇಧಾ ಋಷಿರ್ನಾಮ ತಸ್ಯ ಸ್ತ್ರೀ ಹರಿಣೀ ಸತೀ ।**
**ತಸ್ಯಾಂ ಜಜ್ಞೇ ಹರಿಃ ಸಾಕ್ಷಾದಹಮೇವ ಸುರೇಶ್ವರಃ ॥ ೪ ॥**

ಹರಿಮೇಧಾಃ-ಹರಿಮೇಧನೆಂಬ, ಋಷಿಃ-ಋಷಿಯು, ನಾಮ-ಪ್ರಸಿದ್ಧನು; ತಸ್ಯ-ಆತನಿಗೆ, ಹರಿಣೀ-ಹರಿಣೀ ಎಂಬಾಕೆಯು, ಸತೀಸ್ತ್ರೀ-ಧರ್ಮಪತ್ನಿಯು; ತಸ್ಯಾಂ-ಆಕೆಯಲ್ಲಿ, ಸಾಕ್ಷಾತ್ ಹರಿಃ-ಸ್ವಯಂ ಶ್ರೀಹರಿಯು, ಸುರೇಶ್ವರಃ-ದೇವೋತ್ತಮನಾದ, ಅಹಂ-ನಾನೇ (ಹರಿನಾಮಕನು), ಜಜ್ಞೇ-ಅವತರಿಸಿದನು.

**ಹೂಹೂಹಾಹಾಭಿಧೋ ದೇವಗಂಧರ್ವೌ ದೇವಲಂ ಮುನಿಂ ।**
**ಧ್ಯಾನಸ್ಥಿತಂ ವಿಲೋಕ್ಯೈತಂ ಗಂಗಾತೀರೇ ಯತೇಂದ್ರಿಯಂ ॥ ೫ ॥**

**ತತ್ರ ಹಾಹಾ ಗಜೋ ಭೂತ್ವಾ ಭೀಷಯಾಮಾಸ ತಂ ಮುನಿಂ ।**

---

ಮುಂತಾದ ದಶ (೧೦) ಪುತ್ರರಾದರು; ವಿಶಿಖ ಎಂಬ ನಾಮದಿಂದ ಅಶ್ವಿನೀದೇವತೆಗಳೇ ಇಂದ್ರಪದವಿಯನ್ನು ಹೊಂದಿದರು; ಆ ಮನ್ವಂತರದಲ್ಲಿ ಹರಿ, ವೀರ ಇವರೇ ಮೊದಲಾದವರು, ಅಧಿಕೃತದೇವತೆಗಳಾದರು; ಇವರೇ ವಿಧೃತಿಯ ಮಕ್ಕಳು— ಅತ ಏವ ವೈಧೃತರೆಂಬ ನಾಮವುಳ್ಳವರು; ಇವರು ಆ ಮನ್ವಂತರದಲ್ಲಿ ವೇದಗಳನ್ನು ಧರಿಸಿದ್ದರಿಂದ(ರಕ್ಷಣೆಮಾಡಿದ್ದರಿಂದ) ವೈಧೃತರೆಂಬ ಅನ್ವರ್ಥನಾಮವುಳ್ಳವರು (೨-೩). ಹರಿಮೇಧಾ ನಾಮಕ ಋಷಿಗೆ ಹರಿಣೀ ನಾಮಕಳಾದ ಧರ್ಮಪತ್ನಿ ಇದ್ದಳು; ಆಕೆಯಲ್ಲಿ(ಆಕೆಯನ್ನು ನಿಮಿತ್ತಮಾಡಿಕೊಂಡು), ದೇವಶ್ರೇಷ್ಠನಾದ ನಾನೇ (ಶ್ರೀವಿಷ್ಣುವೇ) ಆ ಮನ್ವಂತರದಲ್ಲಿ(ಹರಿ ಎಂಬ ನಾಮದಿಂದ ಇಂದ್ರಸಹಾಯಕನಾಗಿ)

---

1. ನಾಸತ್ಯ-ದಸ್ರರೆಂಬ ನಾಮವುಳ್ಳವರು ಅಶ್ವಿನೀದೇವತೆಗಳು; ಇವರು ಅವಳಿದೇವತೆಗಳು—ಉಭಯರೂ ಒಂದೇ ನಾಮವುಳ್ಳವರು—ಒಬ್ಬ ಭಾರ್ಯಳ (ಉಷಾದೇವಿಯ) ಪತಿಗಳು; ಇವರಿಬ್ಬರೂ ತಾಪಸಮನ್ವಂತರದಲ್ಲಿ ಇಂದ್ರಪದವಿಯನ್ನಾಳಿದರು. ಪಂಚಪಾಂಡವರು (ಧರ್ಮರಾಜಾದಿಗಳು) ಪಂಚೇಂದ್ರರೆಂದು ಹೇಳಲ್ಪಟ್ಟಿರುವವರು; ಮಹಾಭಾರತ ತಾತ್ಪರ್ಯ ನಿರ್ಣಯ ವಾಕ್ಯದಿಂದ ಇದು ಸಿದ್ಧವಾಗುತ್ತದೆ; ಇದರಿಂದ ಅಶ್ವಿನೀದೇವತೆಗಳ ಅವತಾರರಾದ ನಕುಲಸಹದೇವರಿಬ್ಬರೂ ಇಂದ್ರಪದವಿಯನ್ನಾಳಿದವರೆಂದೂ ಸಿದ್ಧವಾಗುತ್ತದೆ.

**ಹೂಹೂ ನಾಕ್ರಂ ವಪುಃ ಕೃತ್ವಾ ಜಲಸ್ಥೋ ಭೀಷಯಚ್ಚ ತಂ ॥ ೬ ॥**

ತಾಪಸನಾಮಕ ಶ್ರೀಹರಿಯ ಅವತಾರದಿಂದಾದ ಕಾರ್ಯವನ್ನು ವಿಸ್ತರಿಸುತ್ತಾರೆ—

ಹೂಹೂ-ಹೂಹೂ ಎಂಬುವ, ಹಾಹಾಭಿಧಃ-ಹಾಹಾ ಎಂಬ ನಾಮವುಳ್ಳ, ದೇವಗಂಧರ್ವೌ-ಇಬ್ಬರು ದೇವಗಂಧರ್ವರು, ಯತೇಂದ್ರಿಯಂ-ಇಂದ್ರಿಯಗಳನ್ನು ಜಯಿಸಿದವನೂ, ಗಂಗಾತೀರೇ-ಗಂಗಾನದೀ ದಡದಲ್ಲಿ ಧ್ಯಾನಸ್ಥಿತಂ-ಧ್ಯಾನದಲ್ಲಿದ್ದವನೂ (ಆದ), ಏತಂ-ಈ (ಪ್ರಸಿದ್ಧ), ದೇವಲಂ ಮುನಿಂ-ದೇವಲ ನಾಮಕ ಋಷಿಯನ್ನು ವಿಲೋಕ್ಯ-ನೋಡಿ, ತತ್ರ-ಅಲ್ಲಿ ಹಾಹಾ-ಹಾಹಾ ಎಂಬುವನು, ಗಜಃ-ಆನೆಯು, ಭೂತ್ವಾ-ಆಗಿ (ಆನೆಯ ರೂಪವನ್ನು ತಾಳಿ), ತಂ ಮುನಿಂ-ಆ ಋಷಿಯನ್ನು ಭೀಷಯಾಮಾಸ-ಹೆದರಿಸಿದನು; ಹೂಹೂ-ಹೂಹೂ ಎಂಬಾತನು, ನಾಕ್ರಂ ವಪುಃ-ನಕ್ರದೇಹವನ್ನು (ಮೊಸಳೆಯ ರೂಪವನ್ನು), ಕೃತ್ವಾ-ಮಾಡಿಕೊಂಡು (ಹೊಂದಿ), ಜಲಸ್ಥಃ-(ಗಂಗಾ) ಜಲದಲ್ಲಿದ್ದು ತಂ-ಆ ದೇವಲನನ್ನು ಭೀಷಯತ್ ಚ-ತಾನೂ ಸಹ-ಹೆದರಿಸಿದನು.

**ಏತಸ್ಯೋಭಯತಸ್ತೌ ತು ಕ್ರೂರಶಬ್ದೈಶ್ಚ ಫೂತ್ಕೃತೈಃ ।**
**ಅಸಿಂಚತಾಂ ಜಲೈಶ್ಚಾಪಿ ಮುನಿರ್ಧ್ಯಾನಚ್ಯುತೋಽಭವತ್ ॥ ೭ ॥**

ತೌ ತು-ಇವರಾದರೋ (ಹೂಹೂ ಹಾಹಾಗಳಾದರೋ), ಏತಸ್ಯ-ಈ ಋಷಿಯ (ದೇವಲನ), ಉಭಯತಃ-ಎರಡೂ ಕಡೆಗಳಿಂದ (ಭೂಮಿಯಲ್ಲಿ ಮತ್ತು ಜಲದಲ್ಲಿ ಸಹ), ಫೂತ್ಕೃತೈಃ-ಫೂತ್ಕಾರಗಳಿಂದಲೂ, ಕ್ರೂರಶಬ್ದೈಃ ಚ-ಭಯಂಕರ ಶಬ್ದಗಳಿಂದಲೂ, ಜಲೈಃ ಚ ಅಪಿ-ಜಲದಿಂದಲೂ, ಅಸಿಂಚತಾಂ-ಸೇಚನ ಮಾಡಿದರು (ಎರಚಿದರು); ಮುನಿಃ-ಋಷಿಯು, ಧ್ಯಾನಚ್ಯುತಃ-ನಷ್ಟ ಧ್ಯಾನವುಳ್ಳವನು, ಅಭವತ್-ಆದನು (ತಪೋಭಂಗವಾಗಿ ಎಚ್ಚತ್ತನು).

---

ಅವತರಿಸಿದನು(೪). ಹೂಹೂ ಹಾಹಾ ಎಂಬ ಈರ್ವರು ದೇವಗಂಧರ್ವರು, ಇಂದ್ರಿಯಗಳನ್ನು ನಿಗ್ರಹಿಸಿಕೊಂಡು, ಗಂಗಾತೀರದಲ್ಲಿ ಧ್ಯಾನದಲ್ಲಿ ಕೂತಿದ್ದ ದೇವಲಋಷಿಯನ್ನು ನೋಡಿದರು. ಸಮಿಪಕ್ಕೆ ಬಂದು, ಹಾಹಾ ಗಂಧರ್ವನು ಗಜರೂಪವನ್ನು ಹೊಂದಿ, ಆ ಮುನಿಯನ್ನು ಬೆದರಿಸಿದನು; ಹೂಹೂ ಎಂಬಾತನು ಮೊಸಳೆಯಾಗಿ ಗಂಗಾಜಲದಲ್ಲಿದ್ದು ತಾನೂ ಆ ಋಷಿಯನ್ನು ಹೆದರಿಸಿದನು (೫-೬). ಉಭಯ ಗಂಧರ್ವರೂ ಈ ಋಷಿಯ ಎರಡು ಕಡೆಗಳಿಂದಲೂ (ಭೂಮಿಯಲ್ಲಿ ಗಜ, ಜಲದಲ್ಲಿ ನಕ್ರ (ಮೊಸಳೆ) ಹೀಗೆ ಉಭಯಪಾರ್ಶ್ವಗಳಿಂದಲೂ) ಭಯಂಕರ ಶಬ್ದಗಳನ್ನೂ ಫೂತ್ಕಾರಗಳನ್ನೂ ಮಾಡುತ್ತ ಋಷಿಯ ಮೇಲೆ ಜಲವನ್ನು ಎರಚಿದರು; ಧ್ಯಾನಭಂಗವಾಗಿ ದೇವಲನು ಎಚ್ಚತ್ತನು (೭). ಎಚ್ಚತ್ತು ಗಜದಿಂದ

ಗಜಂ ದೃಷ್ಟ್ವಾ ವಿಶತ್ತೋಯೇ ತತ್ರ ನಕ್ರೇಣ ಭೀಷಿತಃ ।
ಜೀವಸಂಶಯಮಾಪನ್ನೋ ಮುನಿಃ ಸ್ಥಲಮುಪಾಗತಃ ॥ ೮ ॥

ದುದ್ರಾವ ವೇಗತೋ ಯಾವತ್ತತೋ ದಧ್ರೇ ಗಜಶ್ಚ ತಂ ।
ಧೃತ್ವಾ ಬ್ರಹ್ಮವಧಾದ್ಭೀತೋ ಲಾಲಯಾಮಾಸ ಶುಂಡಯಾ ॥ ೯ ॥

ಉಪರ್ಯಧಸ್ತಾದ್ಬಹುಶೋ ನೀತ್ವಾ ನೀತ್ವಾ ವ್ಯಲೋಡಯತ್ ।
ತಾವದ್ದಧ್ಯೌ ಮುನಿಸ್ತೌ ತು ಜ್ಞಾತ್ವಾ ನಕ್ರಂ ಶಶಾಪ ಸಃ ॥ ೧೦ ॥

ಮುನಿಃ-ದೇವಲಋಷಿಯು, ಗಜಂ-ಆನೆಯನ್ನು ದೃಷ್ಟ್ವಾ-ಕಂಡು, ತೋಯೇ-ಜಲದಲ್ಲಿ ಅವಿಶತ್-ಪ್ರವೇಶಿಸಿದನು; ತತ್ರ-ಅಲ್ಲಿ ನಕ್ರೇಣ-ಮೊಸಳೆಯಿಂದ, ಭೀಷಿತಃ-ಹೆದರಿಸಲ್ಪಟ್ಟು ಜೀವಸಂಶಯಂ-ಜೀವದಿಂದುಳಿಯುವ ಸಂಶಯವನ್ನು ಆಪನ್ನಃ-ಹೊಂದಿ, ಸ್ಥಲಂ-ಭೂಮಿಯನ್ನು ಉಪಾಗತಃ- ಹೊಂದಿದನು (ಮತ್ತೆ ಜಲದಿಂದ ದಡದಮೇಲೆ ಬಂದನು); ವೇಗತಃ-ವೇಗದಿಂದ, ದುದ್ರಾವ-(ಆನೆಯಿಂದ ತಪ್ಪಿಸಿಕೊಳ್ಳಲು) ಓಡಿದನು; ಯಾವತ್ ತತಃ- ಓಡುವಷ್ಟರಲ್ಲಿ ಗಜಃ ಚ-ಆನೆಯೂ ಓಡಿ, ತಂ-ಆತನನ್ನು ದಧ್ರೇ-ಹಿಡಿದುಕೊಂಡಿತು; ಧೃತ್ವಾ-(ಋಷಿಯನ್ನು) ಎತ್ತಿ ಹಿಡಿದು, ಬ್ರಹ್ಮವಧಾತ್-ಬ್ರಾಹ್ಮಣ ವಧೆಯಿಂದ (ಬ್ರಹ್ಮಹತ್ಯಾದೋಷದಿಂದ), ಭೀತಃ-ಹೆದರಿದ, ಆ ಗಜರಾಜನು, ಶುಂಡಯಾ-(ತನ್ನ) ಸೊಂಡಿಲದಿಂದ (ಶುಂಡಾದಂಡದಿಂದ), ಲಾಲಯಾಮಾಸ-ಓಲಾಡಿಸಿದನು (ತೂಗಿದನು); ಉಪರಿ - ಮೇಲೆ, ಅಧಸ್ತಾತ್ - ಕೆಳಗೆ, ಬಹುಶಃ - ಬಹಳವಾಗಿ (ಅನೇಕಾವರ್ತಿ), ನೀತ್ವಾ ನೀತ್ವಾ-ತೆಗೆದುಕೊಂಡು ಹೋಗುತ್ತ (ಎತ್ತಿಳಿಸಿ ಮಾಡುತ್ತ), ವ್ಯಲೋಡಯತ್-ತೂಗಿದನು; ತಾವತ್-ಅಷ್ಟರಲ್ಲಿ ಮುನಿಃ-ಋಷಿಯು, ದಧ್ಯೌ-ಧ್ಯಾನಿಸಿದನು; ತೌ ತು-ಅವರ (ಗಜ ಮತ್ತು ನಕ್ರಗಳ) ನಿಜಸ್ವರೂಪಗಳನ್ನು

---

ತಪ್ಪಿಸಿಕೊಳ್ಳಲು ಜಲದಲ್ಲಿಳಿದನು; ಅಲ್ಲಿದ್ದ ನಕ್ರವು ಭಯಗೊಳಿಸಿತು; ಪ್ರಾಣಸಂಶಯವನ್ನು ಹೊಂದಿದ ಆ ಋಷಿಯು ಪುನಃ ದಡವನ್ನೇರಿ ಬಂದನು ಮತ್ತು ವೇಗವಾಗಿ ಓಡಿದನು; ಗಜವು ಬೆನ್ನಟ್ಟಿ ಆತನನ್ನು ತನ್ನ ಸೊಂಡಿಲಿಂದ ಹಿಡಿದೆತ್ತಿ ಬ್ರಹ್ಮಹತ್ಯಾಭಯದಿಂದ ಕೊಲ್ಲದೇ, ಮೇಲೆ ಕೆಳಗೆ ತೂರಾಡುತ್ತ ಓಲಾಡಿಸಿತು; ಅಷ್ಟರಲ್ಲಿ ಋಷಿಯು ಧ್ಯಾನಿಸಿ, ಗಜನಕ್ರರೂಪದಿಂದ ತನ್ನನ್ನು ಹೆದರಿಸುತ್ತಿದ್ದ ಈ ಗಂಧರ್ವರ ನಿಜಸ್ವರೂಪವನ್ನು ತಿಳಿದನು; ಅವರೀರ್ವರಲ್ಲಿ ನಕ್ರರೂಪದಿಂದ ಹೂಹೂ ಗಂಧರ್ವನನ್ನು ಈ ಮುಂದೆ ಹೇಳುವಂತೆ ಶಪಿಸಿದನು (೮-೧೦). ಅರೇ ಹೂಹೂ! ನೀನು ನಕ್ರರೂಪವನ್ನು ಧರಿಸಿ, ನನ್ನನ್ನು ಭಯಗೊಳಿಸಿದೆಯಾದರಿಂದ, ಭೂಮಿಯಲ್ಲಿ ನಕ್ರನಾಗಿಯೇ

(ಅವರು ಯಾರೆಂಬುದನ್ನು). ಜ್ಞಾತ್ವಾ-ತಿಳಿದು, ಸಃ-ಆ ದೇವಲನು, ನಕ್ರಂ-(ಆ ಇಬ್ಬರಲ್ಲಿ) ಮೊಸಳೆಯಾಗಿದ್ದ ಹೂಹೂ ಗಂಧರ್ವನನ್ನು ಶಶಾಪ- ಶಪಿಸಿದನು.

**ದೇವಲ ಉವಾಚ—**

**ಯತಸ್ತ್ವಂ ನಕ್ರರೂಪೇಣ ಹೂಹೂಭೀಷಿತವಾನಸಿ ।**
**ನಕ್ರ ಏವ ನ ಸಂದೇಹಶ್ಚಿರಂ ಭುವಿ ಭವಿಷ್ಯಸಿ ॥ ೧೧ ॥**

ಹೂಹೂ-ಹೇ ಹೂಹೂ!, ಯತಃ-ಯಾವ ಕಾರಣದಿಂದ, ತ್ವಂ-ನೀನು, ನಕ್ರರೂಪೇಣ-ನಕ್ರರೂಪದಿಂದ, ಭೀಷಿತವಾನ್-ಭಯಗೊಳಿಸಿದವನು, ಅಸಿ-ಆದೆಯೋ, (ಆದರಿಂದ), ಚಿರಂ-ಶೀಘ್ರದಲ್ಲಿ ಭುವಿ-ಭೂಮಿಯಲ್ಲಿ ನಕ್ರಃ ಏವ-ಮೊಸಳೆಯೇ, ಭವಿಷ್ಯಸಿ-ಆಗುವಿ, ನ ಸಂದೇಹಃ-ಇದಕ್ಕೆ ಸಂಶಯವಿಲ್ಲ (ನಕ್ರನಾಗಿ ಜನಿಸು ಎಂದು ಶಪಿಸಿದನು).

**ಅರೇ ಹಾಹಾ ತ್ವಯಾ ಯಸ್ಮಾಲ್ಲಾಲಿತೋ ಗಜರೂಪಿಣಾ ।**
**ಭೀಷಿತಶ್ಚಾಪಿ ತೇನ ತ್ವಂ ರಾಜೇಂದ್ರದ್ಯುಮ್ನನಾಮಕಃ ॥ ೧೨ ॥**

**ಭೂತ್ವಾ ದ್ರವಿಡದೇಶೀಯೋ ವಿಷ್ಣುಭಕ್ತಿಪರಾಯಣಃ ।**
**ತತ್ರಾಪ್ಯವಜ್ಞಾಯ ಮುನಿಂ ಗಜತ್ವೇ ಶಾಪಮಾಪ್ಸ್ಯಸಿ ॥ ೧೩ ॥**

**ಭವಿಷ್ಯಸಿ ಗಜೇಂದ್ರಸ್ತ್ವಂ ಮಹಾವನಸಮಾಶ್ರಯಃ ।**

ಅರೇ ಹಾಹಾ-ಎಲೋ ಹಾಹಾ!, ಗಜರೂಪಿಣಾ-ಗಜರೂಪನಾದ, ತ್ವಯಾ-ನಿನ್ನಿಂದ, ಭೀಷಿತಶ್ಚಾಪಿ-ಭಯಗೊಳಿಸಲ್ಪಟ್ಟವನಾದರೂ, ಯಸ್ಮಾತ್-ಯಾವ ಕಾರಣದಿಂದ, ಲಾಲಿತಃ-(ನಾನು) ಓಲೈಸಿ ರಕ್ಷಿಸಲ್ಪಟ್ಟೆನೋ (ಸಂಹರಿಸಲ್ಪಡಲಿಲ್ಲವೋ),

---

ಜನಿಸುವನಾಗು—ಶೀಘ್ರದಲ್ಲಿ ನಿನಗೆ ಆ ಜನ್ಮವು ಬರುವುದರಲ್ಲಿ ಸಂದೇಹವಿಲ್ಲ(೧೧).

ಅರೇ ಹಾಹಾ! ನೀನು ಗಜರೂಪನಾಗಿ ಬಂದು, ನನ್ನನ್ನು ಭಯಪಡಿಸಿದೆಯಾದರೂ, ನಿನ್ನ ಸೊಂಡಿಲಿನಿಂದ ಎತ್ತಿ ತೂಗಾಡಿ, ಕೆಳಗಿಳಿಸಿ ರಕ್ಷಿಸಿದೆಯಾದ್ದರಿಂದ, ಇಂದ್ರದ್ಯುಮ್ನನೆಂಬ ಹೆಸರಿನ ರಾಜನಾಗಿ ಜನಿಸಿ, ದ್ರವಿಡದೇಶಾಧಿಪತಿಯಾಗಿ ವಿಷ್ಣುಭಕ್ತಿಪರಾಯಣನಾಗಿದ್ದು ಕಾಲಗತಿಯಿಂದ, ಅಗಸ್ತ್ಯಋಷಿಗಳನ್ನು ಅಪಮಾನಗೊಳಿಸಿ, ಅವರಿಂದ ಗಜನಾಗಿ ಜನಿಸೆಂದು ಶಾಪವನ್ನು ಹೊಂದುತ್ತೀ— ಆಗ ಮಹಾವನವನ್ನು ಆಶ್ರಯಿಸಿ, ಗಜಯೂಥಪತಿಯಾಗುವಿ ಎಂದನು(೧೨-೧೩). ಈ ಪ್ರಕಾರದ ಋಷಿಶಾಪವನ್ನು ಕೇಳಿದ ಆ ಗಂಧರ್ವರು, ದೇವಲಋಷಿಯನ್ನು ಪ್ರಸನ್ನೀಕರಿಸಿಕೊಳ್ಳಲು, ನೂರಾರು ನಮಸ್ಕಾರಗಳನ್ನು ಹಾಕಿ, ಮತ್ತೆ ಮತ್ತೆ

ತೇನ-ಆ ಕಾರಣದಿಂದ, ತ್ವಂ-ನೀನು, ಇಂದ್ರದ್ಯುಮ್ನನಾಮಕಃ-ಇಂದ್ರದ್ಯುಮ್ನನೆಂಬ ಹೆಸರಿನ, ರಾಜಾ-ರಾಜನು, ಭೂತ್ವಾ-ಆಗಿ (ಜನಿಸಿ), ದ್ರವಿಡದೇಶೀಯಃ-ದ್ರವಿಡದೇಶದ ಅರಸನೂ, ವಿಷ್ಣುಭಕ್ತಿಪರಾಯಣಃ-ವಿಷ್ಣುಭಕ್ತಿ ಪರಾಯಣನೂ ಆಗಿದ್ದು ತತ್ರಾಪಿ-ಆ ಜನ್ಮದಲ್ಲಿ ಸಹ, ಮುನಿಂ-ಋಷಿಯನ್ನು (ಅಗಸ್ತ್ಯರನ್ನು), ಅವಜ್ಞಾಯ-ಅಪಮಾನಗೊಳಿಸಿ, ಗಜತ್ವೇ-ಗಜಜನ್ಮವನ್ನು ಹೊಂದುವ ವಿಷಯ ದಲ್ಲಿ ಶಾಪಂ-ಶಾಪವನ್ನು, ಅವಾಪ್ಸ್ಯಸಿ-ಹೊಂದುವಿ; ಗಜೇಂದ್ರಃ-ಗಜರಾಜನಾದ, ತ್ವಂ-ನೀನು, ಮಹಾವನಸಮಾಶ್ರಯಃ-ಮಹಾವನವನ್ನು ಆಶ್ರಯಿಸುವವನು, ಭವಿಷ್ಯಸಿ-ಆಗುವಿ.

ಶ್ರೀ ಭಗವಾನುವಾಚ—

ಏವಂ ತೌ ಶಾಪಮಾಕರ್ಣ್ಯ ಪ್ರಸಾದಾಯ ಮುನಿಂ ಮುಹುಃ ॥ ೧೪ ॥
ಪ್ರಾರ್ಥಯಾಮಾಸತುರ್ಭೂಯಃ ಪ್ರಣಾಮಶತಪೂರ್ವಕಂ ।
ತತಃ ಪ್ರಸಾದಮಾಪನ್ನೋ ಮುನಿಸ್ತಾವಭ್ಯಭಾಷತ ॥ ೧೫ ॥

ತೌ-ಆ ಇಬ್ಬರೂ (ಹಾಹಾ ಹೂಹೂ ಗಂಧರ್ವರು), ಏವಂ-ಈ ಪ್ರಕಾರದ, ಶಾಪಂ-ಶಾಪವನ್ನು, ಆಕರ್ಣ್ಯ-ಕೇಳಿ, ಮುನಿಂ-ದೇವಲಋಷಿಯನ್ನು, ಪ್ರಸಾದಾಯ-ಪ್ರಸನ್ನನನ್ನಾಗಿ ಮಾಡಿಕೊಳ್ಳಲು, ಮುಹುಃ-ಪುನಃ ಪುನಃ, ಪ್ರಣಾಮಶತಪೂರ್ವಕಂ-ನೂರಾರು ನಮಸ್ಕಾರಗಳನ್ನು ಮಾಡಿ, ಭೂಯಃ-ವಿಶೇಷವಾಗಿ, ಪ್ರಾರ್ಥಯಾಮಾಸತುಃ-ಪ್ರಾರ್ಥಿಸಿದರು; ತತಃ-ಅದರಿಂದ, ಪ್ರಸಾದಂ-ಸಮಾಧಾನ ವನ್ನು (ಪ್ರಸನ್ನಚಿತ್ತವನ್ನು), ಆಪನ್ನಃ-ಹೊಂದಿದ, (ಪ್ರಸನ್ನನಾದ), ಮುನಿಃ-ಋಷಿಯು, ತೌ-ಅವರಿಬ್ಬರನ್ನು ಕುರಿತು, ಅಭ್ಯಭಾಷತ-ಮಾತನಾಡಿದನು.

ದೇವಲ ಉವಾಚ—

ಯದಾ ಸ್ಯಾದ್ಯುವಯೋರ್ಯೋಗೋ ದೈವಾತ್ಸರಸಿ ಕುತ್ರಚಿತ್ ।
ತದೈವ ಭಗವಚ್ಚಕ್ರಧಾರಣಾತ್ತಸ್ಯ ದರ್ಶನಾತ್ ॥ ೧೬ ॥

---

ಬೇಡಿಕೊಂಡರು; ಇದರಿಂದ ಪ್ರಸನ್ನನಾದ ಋಷಿಯು, ಅವರನ್ನು ಕುರಿತು ಹೀಗೆ ಮಾತನಾಡಿದನು (೧೪-೧೫). ಹೀಗೆ ನೀವು ಗಜ ಮತ್ತು ನಕ್ರರಾಗಿ ಜನಿಸಿದ ಬಹುಕಾಲದ ನಂತರ, ಒಂದಾನೊಂದು ಸರೋವರದಲ್ಲಿ ನಿಮ್ಮಿಬ್ಬರ ಸಮಾಗಮವಾಗುತ್ತದೆ; ಆಗಲೇ ದೈವಯೋಗದಿಂದ ನಿಮಗೆ ಶ್ರೀಹರಿದರ್ಶನವಾಗಿ, ಭಗವಚ್ಚಕ್ರದಿಂದ ದೇಹವಿಯೋಗವನ್ನು ಹೊಂದಿ, ನಿಮ್ಮ ಪೂರ್ವಕರ್ಮವೂ ನಶಿಸುವುದರಿಂದ, ಈ ನನ್ನ ಶಾಪದಿಂದಲೂ ಮುಕ್ತರಾಗುವಿರಿ (೧೬). ಶ್ರೀವಿಷ್ಣುವು ಬ್ರಹ್ಮನಿಗೆ ಹೇಳುತ್ತಾನೆ:—ಹೀಗೆ ಶಾಪಮೋಕ್ಷಪ್ರಕಾರವನ್ನೂ ಭಗವದ್ದರ್ಶನ

ಸ್ವಸ್ವಕರ್ಮಕ್ಷಯಾಚ್ಚಾಪಿ ಶಾಪಾನ್ಮೋಕ್ಷಮವಾಪ್ಸ್ಯಥಃ ।

ಕುತ್ರಚಿತ್-ಯಾವುದೊಂದು ಸ್ಥಾನದಲ್ಲಿ, ಸರಸಿ-ಸರೋವರದಲ್ಲಿ ದೈವಾತ್-ನಿಮ್ಮಗಳ ಅದೃಷ್ಟದಿಂದ (ಶ್ರೀಹರೀಚ್ಛೆಯಿಂದ), ಯುವಯೋಃ-ನಿಮ್ಮಗಳ, ಯೋಗಃ-ಸೇರುವಿಕೆಯು, ಯದಾ-ಯಾವಾಗ, ಸ್ಯಾತ್-ಉಂಟಾಗುವುದೋ, ತದಾ ಏವ-ಆಗಲೇ, ಭಗವಚ್ಚಕ್ರದಾರಣಾತ್-ಶ್ರೀವಿಷ್ಣುಚಕ್ರದಿಂದ ಸೀಳಲ್ಪಡುವ ಕಾರಣದಿಂದ, ಚ ಅಪಿ-ಮತ್ತು ತಸ್ಯ-ಭಗವಂತನ, ದರ್ಶನಾತ್-ದರ್ಶನದಿಂದಲೂ, ಸ್ವಸ್ವಕರ್ಮಕ್ಷಯಾತ್-ನಿಮ್ಮ ನಿಮ್ಮ ಕರ್ಮಕ್ಷಯದಿಂದಲೂ (ಪೂರ್ವಕರ್ಮನಾಶದಿಂದಲೂ), ಶಾಪಾತ್-(ನನ್ನ) ಶಾಪದಿಂದ, ಮೋಕ್ಷಂ-ಮುಕ್ತಿಯನ್ನು (ಬಿಡುಗಡೆಯನ್ನು), ಅವಾಪ್ಸ್ಯಥಃ-ಹೊಂದುವಿರಿ.

ಶ್ರೀ ಭಗವಾನುವಾಚ—

ತತೋಽಭಿವಾದ್ಯ ತೌ ವಿಪ್ರಂ ಜಗ್ಮತುರ್ವಾಸವಂ ಪ್ರತಿ ॥ ೧೭ ॥

ಹಾಹಾ ನಿವೇದಯಾಮಾಸ ತದ್ವೃತ್ತಮಖಿಲಂ ಸ್ವಕಂ ।
ಇಂದ್ರೋ ವ್ಯಗರ್ಹಯದ್ಭೂಯೋ ವಿಪ್ರಾವಜ್ಞಾನಹೇತುತಃ ॥ ೧೮ ॥

ತತಃ-ನಂತರ (ಹೀಗೆ ದೇವಲನಿಂದ ಶಾಪಮೋಕ್ಷವನ್ನು ತಿಳಿದ ನಂತರ), ತೌ-ಅವರೀರ್ವರೂ, ವಿಪ್ರಂ-ಋಷಿಯನ್ನು ಅಭಿವಾದ್ಯ-ನಮಸ್ಕರಿಸಿ, ವಾಸವಂ ಪ್ರತಿ-ಇಂದ್ರನ ಬಳಿಗೆ, ಜಗ್ಮತುಃ-ಹೋದರು; ಹಾಹಾ-ಹಾಹಾ ಎಂಬಾತನು, ಸ್ವಕಂ-ತಮ್ಮ ಅಖಿಲಂ ತದ್ವೃತ್ತಂ-ಈ ಎಲ್ಲ ನಡವಳಿಕೆಯನ್ನು, ನಿವೇದಯಾಮಾಸ- ವಿಜ್ಞಾಪಿಸಿದನು; ಇಂದ್ರಃ-ಇಂದ್ರನು, ವಿಪ್ರಾವಜ್ಞಾನಹೇತುತಃ-ಬ್ರಾಹ್ಮಣನೊಡನೆ ಅಗೌರವದಿಂದ ವರ್ತಿಸಿದ ಕಾರಣದಿಂದ, ಭೂಯಃ-ಅತಿಶಯವಾಗಿ, ವ್ಯಗರ್ಹಯತ್- ಸಿಟ್ಟುಮಾಡಿದನು (ಅವರನ್ನು ನಿಂದಿಸಿದನು).

ಜಾತಸ್ತದೈವ ಹೂಹೂ ಸಃ ತ್ರಿಕೂಟಗಿರಿಮಧ್ಯತಃ ।
ಸರಸಿ ಕ್ವಾಪಿ ನಕ್ರೋಽಭೂದ್ದಾಹೇಂದ್ರದ್ಯುಮ್ನತಾಂ ಗತಃ ॥ ೧೯ ॥

---

ವಾಗುವುದೆಂಬ ಮಹಾನಂದವಾರ್ತೆಯನ್ನೂ ತಿಳಿದನಂತರ ಆ ಗಂಧರ್ವರು ದೇವಲಋಷಿಯನ್ನು ನಮಸ್ಕರಿಸಿ, ಇಂದ್ರನ ಬಳಿ ಸಾರಿದರು ಮತ್ತು ನಡೆದುಹೋದ ತಮ್ಮ ಸಕಲ ವೃತ್ತಾಂತವನ್ನೂ ನಿವೇದಿಸಿದರು; (ದೇವಗಂಧರ್ವರು ಇಂದ್ರಭೃತ್ಯರು); ಹಾಹಾ ಎಲ್ಲವನ್ನು ವಿಜ್ಞಾಪಿಸಿದನು; ದೇವೇಂದ್ರನು ವಿಪ್ರನೊಡನೆ ಚೇಷ್ಟೆಮಾಡಿ ಅಗೌರವದಿಂದ ವರ್ತಿಸಿದ ಅವರನ್ನು ಬಹುವಾಗಿ ನಿಂದಿಸಿದನು (೧೭-೧೮). ಶಾಪವು ತತ್ಕಾಲದಲ್ಲಿ ಫಲಿಸಿತು; ಹೂಹೂ ಎಂಬುವನು, ತ್ರಿಕೂಟಗಿರಿಯ ಮಧ್ಯದಲ್ಲಿ

ತದಾ ಏವ-ತತ್ಕಾಲದಲ್ಲಿ(ವಿಪ್ರಶಾಪಪ್ರಭಾವದಿಂದ), ಸಃ ಹೂಹೂ-ಆ ಹೂಹೂ ಎಂಬುವನು, ತ್ರಿಕೂಟಗಿರಿಮಧ್ಯತಃ-ತ್ರಿಕೂಟಪರ್ವತ ಮಧ್ಯದ, ಕ್ವಾಪಿ-ಒಂದಾನೊಂದು, ಸರಸಿ-ಸರೋವರದಲ್ಲಿ, ನಕ್ರಃ-ಮೊಸಳೆಯು, ಅಭೂತ್-ಆದನು; ಹಾಹಾ-ಹಾಹಾನಾಮಕನು, ಇಂದ್ರದ್ಯುಮ್ನತಾಂ-ಇಂದ್ರದ್ಯುಮ್ನಭಾವವನ್ನು ಗತಃ-ಹೊಂದಿದನು (ಇಂದ್ರದ್ಯುಮ್ನನಾಗಿ ಹುಟ್ಟಿದನು).

**ಸ ತು ಮದ್ಭಕ್ತಿಮಾನಾಸ ಸದಾ ವಿಪ್ರಾರ್ಚನೇ ರತಃ ।**
**ಮನ್ಮುಖಂ ಭಾವಯಿತ್ವಾ ತಾನತೋಷಯದಹರ್ನಿಶಂ ॥ ೨೦ ॥**

**ಸದಾ ತೇಭ್ಯೋ ಮತ್ಕಥಾನಾಂ ಶ್ರವಣಂ ಕೃತವಾನ್ನೃಪಃ ।**

ಸ ತು-ಆತನಾದರೋ (ಇಂದ್ರದ್ಯುಮ್ನನು), ಮದ್ಭಕ್ತಿಮಾನ್-ನನ್ನಲ್ಲಿ ಭಕ್ತಿಯುಳ್ಳವನು, ಆಸ-ಆದನು; ಸದಾ-ಸರ್ವದಾ, ವಿಪ್ರಾರ್ಚನೇ-ಬ್ರಾಹ್ಮಣರನ್ನು ಪೂಜಿಸುವುದರಲ್ಲಿ, ರತಃ-ಆಸಕ್ತನಾದನು; ತಾನ್-ಅವರನ್ನು(ವಿಪ್ರರನ್ನು), ಮನ್ಮುಖಂ-ನನ್ನ ಮುಖವೆಂದು (ನನ್ನ ಮುಖದಿಂದ ಜನಿಸಿ, ನನ್ನ ಸ್ತುತಿಯೇ ಮುಖ್ಯವ್ಯಾಪಾರವಾಗುಳ್ಳವರಾದ್ದರಿಂದಲೂ, ನನ್ನ ಸನ್ನಿಧಾನಪಾತ್ರರಾದ್ದರಿಂದಲೂ ಅವರಲ್ಲಿ ನನ್ನನ್ನೇ ಕಾಣುತ್ತ), ಭಾವಯಿತ್ವಾ-(ವಿಪ್ರರಲ್ಲಿ ಶ್ರೀವಿಷ್ಣುವನ್ನೇ ಚಿಂತಿಸಿ, ಅಹರ್ನಿಶಂ-ಹಗಲು ರಾತ್ರಿಗಳಲ್ಲಿ (ಸರ್ವದಾ), ಅತೋಷಯತ್ - ಸಂತುಷ್ಟಿಗೊಳಿಸುತ್ತಿದ್ದನು; ತೇಭ್ಯಃ-ಅವರಿಂದ, ನೃಪಃ-ರಾಜನು (ಇಂದ್ರದ್ಯುಮ್ನನು), ಸದಾ-ನಿರಂತರವಾಗಿ, ಮತ್ಕಥಾನಾಂ-ನನ್ನ ಮಹಿಮೆಗಳ (ಚರಿತ್ರೆಗಳ), ಶ್ರವಣಂ-ಶ್ರವಣವನ್ನು ಕೃತವಾನ್-ಮಾಡುವವನು (ಆದನು)

**ಏಕದಾ ತದ್ಗೃಹಂ ಜಗ್ಮುರ್ಲೀಲಯಾ ಮುನಿಪುಂಗವಾಃ ॥ ೨೧ ॥**

**ಭೃಗ್ವಾದ್ಯಾಶ್ಚೀರವಸನಾ ದೀಪ್ತಾಗ್ನಯ ಇವಾಪರೇ ।**
**ಪೂಜಯಾಮಾಸ ತಾನ್ ಭಕ್ತ್ಯಾ ತಾನ್ಮುನೀನ್ ಸ ನೃಪೋತ್ತಮಃ ॥ ೨೨ ॥**

---

ಒಂದಾನೊಂದು ಸರೋವರದಲ್ಲಿ ಮೊಸಳೆಯಾಗಿ ಜನಿಸಿದನು ಮತ್ತು ಹಾಹಾ ಎಂಬುವನು ಇಂದ್ರದ್ಯುಮ್ನನೆಂಬ ನಾಮದಿಂದ ಜನಿಸಿದನು (೧೯). ಇಂದ್ರದ್ಯುಮ್ನನಾದರೂ ನನ್ನಲ್ಲಿ ಭಕ್ತಿಯುಳ್ಳವನಾದನು; ಸರ್ವದಾ ಬ್ರಾಹ್ಮಣರನ್ನು ಪೂಜಿಸುವುದರಲ್ಲಿ ಆಸಕ್ತಿ ವಹಿಸಿದನು; ನನ್ನ ವಿಶೇಷ ಸನ್ನಿಧಾನಪಾತ್ರರಾದ ವಿಪ್ರರನ್ನು ನನ್ನ ಮುಖವೆಂದೇ, ನನ್ನ ಪ್ರತಿರೂಪವೆಂದೇ(ಪ್ರತಿನಿಧಿಗಳೆಂದೇ) ಭಾವಿಸಿ, ನನ್ನಂತೆಯೇ ಅವರನ್ನು ಹಗಲುರಾತ್ರಿಗಳೆನ್ನದೆ, ಸಂತೋಷಗೊಳಿಸುತ್ತಿದ್ದನು; ಅವರಿಂದ ನಿತ್ಯವೂ ನನ್ನ (ಶ್ರೀವಿಷ್ಣುವಿನ) ಕಥಾಶ್ರವಣವನ್ನು ಆ ಇಂದ್ರದ್ಯುಮ್ನನು ಮಾಡುತ್ತಿರುವನಾದನು

**ವರಾಸನಸ್ಥಿತಾನ್ ತಾಂಸ್ತು ಪೂಜಾಸಂತುಷ್ಟಮಾನಸಾನ್ ।**
**ಪಪ್ರಚ್ಛ ವಿವಿಧಾನರ್ಥಾನ್ ಯಾನ್ ಜ್ಞಾತ್ವಾ ಸರ್ವವಿದ್ಭವೇತ್ ॥೨೩॥**

ಏಕದಾ-ಒಂದು ದಿನ, ತದ್ಗೃಹಂ-ಆತನ ಮನೆಗೆ (ಇಂದ್ರದ್ಯುಮ್ನರಾಜನ ಮನೆಗೆ), ಭೃಗ್ವಾದ್ಯಾಃ-ಭೃಗುಋಷಿಗಳೇ ಮೊದಲಾದ, ಮುನಿಪುಂಗವಾಃ-ಮುನಿಶ್ರೇಷ್ಠರು,ಲೀಲಯಾ-ಲೀಲೆಯಿಂದ (ಶ್ರೀಹರಿಲೀಲಾಮನಸ್ಕರಾಗಿ ಸಂಚರಿಸುತ್ತ), ಜಗ್ಮುಃ-ಹೋದರು (ಮನೆಗೆ ಬಂದರು); ಚೀರವಸನಾಃ-ನಾರು ಬಟ್ಟೆಗಳನ್ನು ಧರಿಸಿದ ಆ ಮುನಿಗಳು ಚೀರವಸನ-ಬಂಧಕಕರ್ಮರೂಪದ ಆಚ್ಛಾದನಾ ರಹಿತರು), ಅಪರೇ-ಅನ್ಯ, ದೀಪ್ತಾಗ್ನಯಃ-ಪ್ರಜ್ವಲಿಸುವ ಅಗ್ನಿಗಳೋ, ಇವ-ಎಂಬಂತೆ (ಇದ್ದರು); ತಾನ್‌ತಾನ್ ಮುನೀನ್-(ಅವರಲ್ಲಿ) ಪ್ರತಿಯೊಬ್ಬರನ್ನೂ (ಎಲ್ಲ ಋಷಿಗಳನ್ನೂ), ನೃಪೋತ್ತಮಃ-ರಾಜಶ್ರೇಷ್ಠನಾದ ಇಂದ್ರದ್ಯುಮ್ನನು, ಭಕ್ತ್ಯಾ-ಭಕ್ತಿಯಿಂದ, ಪೂಜಯಾಮಾಸ-ಅರ್ಚಿಸಿದನು; ಪೂಜಾಸಂತುಷ್ಟಮಾನಸಾನ್-(ರಾಜನ) ಪೂಜೆಯಿಂದ ಸಂತೋಷಚಿತ್ತರಾಗಿ, ವರಾಸನಸ್ಥಿತಾನ್-ಉತ್ತಮವಾದ ಆಸನಗಳಲ್ಲಿ ಕೂತಿದ್ದ ತಾನ್-ಆ ಭೃಗ್ವಾದಿ ಋಷಿಗಳನ್ನು ಕುರಿತು, ಯಾನ್-ಯಾವುಗಳನ್ನು ಜ್ಞಾತ್ವಾ-ತಿಳಿದು, ಸರ್ವವಿತ್-ಸರ್ವವನ್ನೂ ತಿಳಿದವನು, ಭವೇತ್-ಆಗುವನೋ (ಮಾನವನು ಸ್ವಯೋಗ್ಯಪೂರ್ಣಜ್ಞಾನಿಯೆನಿಸುವನೋ), ವಿವಿಧಾನ್-ಆ ನಾನಾ, ಅರ್ಥಾನ್-ಅರ್ಥವಿಶೇಷಗಳನ್ನು (ಪ್ರಮೇಯರಹಸ್ಯಗಳ ವಿಷಯಕ್ಕೆ), ಪಪ್ರಚ್ಛ-ಪ್ರಶ್ನಿಸಿದನು (ತನ್ನ ಸಂಶಯಗಳನ್ನು ವಿವರಿಸಿ ಪರಿಹಾರಗಳನ್ನು ಕೇಳಿದನು).

ಬ್ರಹ್ಮೋವಾಚ—

**ತೇ ಕೇಽರ್ಥಾಸ್ತೇನ ಯೇ ಪೃಷ್ಟಾ ಭೃಗ್ವಾದೀಂಸ್ತಾನ್ ವದಸ್ವ ಮೇ ।**
**ಯೇಷಾಂ ಶ್ರವಣತೋ ಯಾತಿ ನರಃ ಸರ್ವಜ್ಞತಾಂ ಕ್ಷಣಾತ್ ॥ ೨೪ ॥**

---

(೨೦). ಒಂದು ದಿನ, ಆತನ ಗೃಹಕ್ಕೆ ಯದೃಚ್ಛೆಯಿಂದ (ಶ್ರೀಹರಿಲೀಲಾಮನಸ್ಕರಾಗಿ ಸಂಚರಿಸುತ್ತ), ಭೃಗ್ವಾದಿ ಮುನಿಶ್ರೇಷ್ಠರು ಪ್ರಾಪ್ತರಾದರು; ನಾರುಮಡಿಗಳನುಟ್ಟು ಪ್ರಜ್ವಲಿಸುವ ಅನ್ಯ ಅಗ್ನಿಗಳಂತಿದ್ದ ಆ ತಪಸ್ವಿಗಳನ್ನು ಇಂದ್ರದ್ಯುಮ್ನರಾಜನು ಭಕ್ತಿಯಿಂದ ಪೂಜಿಸಿದನು; ಪೂಜೆಯಿಂದ ಸಂತುಷ್ಟರಾಗಿ ಶ್ರೇಷ್ಠವಾದ ಆಸನಗಳಲ್ಲಿ ಅವರೆಲ್ಲರೂ ಕೂಡುತ್ತಿರಲು, ಇಂದ್ರದ್ಯುಮ್ನನು, ಮಾನವನು ಯಾವ ಪ್ರಮೇಯರಹಸ್ಯಗಳನ್ನು ನಿಸ್ಸಂಶಯವಾಗಿ, ತಿಳಿಯುವುದರಿಂದ, ಸ್ವಯೋಗ್ಯಪೂರ್ಣಜ್ಞಾನಿಯಾಗುವನೋ, ಆ ವಿಷಯಕವಾದ ನಾನಾ ಪ್ರಶ್ನೆಗಳನ್ನು ಅವರ ಮುಂದಿಟ್ಟು ಅವುಗಳ ಪರಿಹಾರವನ್ನು ಪ್ರಾರ್ಥಿಸಿದನು (೨೦-೨೩). ಹೀಗೆ ಶ್ರೀವಿಷ್ಣುವು ಹೇಳಲು, ಬ್ರಹ್ಮದೇವನು ಮಾತನಾಡಿದನು:— ಹೇ ಪ್ರಭೋ! ಭೃಗ್ವಾದಿಗಳನ್ನು ಕುರಿತು ಮಾಡಿದ ಪ್ರಶ್ನೆಗಳು

ತಾನ್-ಆ, ಭೃಗ್ವಾದೀನ್-ಭೃಗು ಮೊದಲಾದವರನ್ನು ಕುರಿತು, ತೇನ-ಇಂದ್ರದ್ಯುಮ್ನನಿಂದ, ಯೇ-ಯಾವ, ಪೃಷ್ಟಾಃ-ಕೇಳಲ್ಪಟ್ಟ ಅರ್ಥಾಃ-ಅರ್ಥ ವಿಶೇಷಗಳೋ (ಪ್ರಶ್ನೆಗಳೋ), ತೇ-ಅವು, ಕೇ-ಯಾವುವು? (ತಾನ್- ಅವುಗಳನ್ನು), ಮೇ-ನನಗೆ, ವದಸ್ವ-ಹೇಳುವನಾಗು (ಹೇ ವಿಷ್ಣೋ!); ಯೇಷಾಂ- ಯಾವ ಅರ್ಥಗಳ, ಶ್ರವಣಾತಃ-ಶ್ರವಣದಿಂದ (ಜ್ಞಾನದಿಂದ), ನರಃ-ಮಾನವನು, ಸರ್ವಜ್ಞತಾಂ-(ಸ್ವಯೋಗ್ಯ) ಪೂರ್ಣಜ್ಞಾನವನ್ನು ಕ್ಷಣಾತ್-ತತ್ಕಾಲದಲ್ಲಿ ಯಾತಿ-ಹೊಂದುತ್ತಾನೆಯೋ (ಅವುಗಳನ್ನು ವಿವರಿಸು).

ಶ್ರೀ ಭಗವಾನುವಾಚ—

ಹಂತ ತೇ ಕಥಯಿಷ್ಯಾಮಿ ಸಂವಾದಂ ಪರಮಾದ್ಭುತಂ ।
ಪರಾವರಾಖಿಲಜ್ಞಾನಹೇತುಮಜ್ಞಾನನಾಶನಂ ॥ ೨೫ ॥

ನಾನಾವಿಧೇಷ್ವಿಹಾರ್ಥೇಷು ಶ್ರುತೇಷು ದ್ವಿಜಮುಖ್ಯತಃ ।
ಸಂಶಯಂ ಪ್ರಾಪ್ಯ ನೃಪತಿಃ ಭೃಗ್ವಾದೀನನ್ವಪೃಚ್ಛತ ॥ ೨೬ ॥

ಹಂತ-ಸಂತೋಷವು; ತೇ-ನಿನಗೆ, ಪರಮಾದ್ಭುತಂ-ಆಶ್ಚರ್ಯಕರವಾದ (ಪರಮರಹಸ್ಯಗಳನ್ನೊಳಗೊಂಡ), ಸಂವಾದಂ-(ಇಂದ್ರದ್ಯುಮ್ನ ಭೃಗು) ಸಂವಾದವನ್ನು (ಪ್ರಶ್ನೆ-ಪರಿಹಾರಗಳನ್ನು), ಕಥಯಿಷ್ಯಾಮಿ-ವರ್ಣಿಸುವೆನು; (ಆ ಸಂವಾದವು ಎಂಥದೆಂದರೆ), ಅಜ್ಞಾನನಾಶನಂ-ಅಜ್ಞಾನವನ್ನು ಕಳೆದು, ಪರಾವರಾಖಿಲ ಜ್ಞಾನಹೇತುಂ-ಪರಾವರ (ಉಚ್ಚ ನೀಚ) ಸಕಲ ಜಗತ್ತಿನ ಜ್ಞಾನವನ್ನು ದೊರಕಿಸುವುದು;

---

ಯಾವುವು? ಯದ್ವಿಷಯಕವಾದವುಗಳು, ಯಾವ ಅರ್ಥವಿಶೇಷಗಳನ್ನು ತಿಳಿಯುವುದರಿಂದ, ಮಾನವನು ತತ್ಕಾಲದಲ್ಲಿ ಸ್ವಯೋಗ್ಯಪೂರ್ಣಜ್ಞಾನವುಳ್ಳವನು (ಸರ್ವವೇತ್ತನು) ಆಗುವನೋ, ಅವುಗಳನ್ನು ನಿನ್ನಿಂದ ತಿಳಿಯಲಿಚ್ಛಿಸುತ್ತೇನೆ (೨೪). ಶ್ರೀವಿಷ್ಣುವು ಹೇಳುತ್ತಾನೆ:—ಹೇ ಬ್ರಹ್ಮದೇವ! ಸಂತೋಷ! ಆಗಲಿ, ನಿನಗೋಸ್ಕರ ಭೃಗು-ಇಂದ್ರದ್ಯುಮ್ನರ ಅದ್ಭುತವಾದ ರಹಸ್ಯಪ್ರಮೇಯಗಳನ್ನು ಪ್ರಕಾಶಗೊಳಿಸುವ ಸಂವಾದ ವನ್ನು ಹೇಳುತ್ತೇನೆ; ಅದು ಅಜ್ಞಾನವನ್ನು ಪರಿಹರಿಸಿ, ಪರಾವರ ಸಮಸ್ತ ವಸ್ತುವಿಷಯಕ ಜ್ಞಾನವನ್ನುಂಟುಮಾಡತಕ್ಕದ್ದು; ರಾಜನು ಅನ್ಯವಿಪ್ರಶ್ರೇಷ್ಠರಿಂದ ಶ್ರವಣಮಾಡಿದ ವಿವಿಧ ಅರ್ಥವಿಶೇಷಗಳಲ್ಲಿ ಸಂಶಯಗೊಂಡು, ಆ ಸಂಶಯ ಪರಿಹಾರಕ್ಕಾಗಿ ಭೃಗ್ವಾದಿಗಳನ್ನು ಪ್ರಶ್ನೆಮಾಡಿರುವನು; ಆದ್ದರಿಂದ ಈ ಸಂವಾದವು ಮಹತ್ವವಾದುದು (೨೫-೨೬).

೨೮ನೇ ಅಧ್ಯಾಯವು ಮುಗಿದುದು.

(ಪರಬ್ರಹ್ಮಾದಿ ಸರ್ವ ಜಗದ್ವಿಷಯಕವಾದ ನಿಸ್ಸಂಶಯ ಜ್ಞಾನಕ್ಕೆ ಕಾರಣವಾದುದು); ಈ ಸಂವಾದಕ್ಕೆ ಇಷ್ಟು ಪ್ರಾಮುಖ್ಯತೆ ಇರಲು ಕಾರಣವೇನೆಂದರೆ:—ನೃಪತಿಃ-ಇಂದ್ರದ್ಯುಮ್ನರಾಜನು, ದ್ವಿಜಮುಖ್ಯತಃ-ಬಹು ವಿಪ್ರಶ್ರೇಷ್ಠರಿಂದ, ಶ್ರುತೇಷು-ಶ್ರವಣ ಮಾಡಿದ, ನಾನಾವಿಧೇಷು-ಬಹುವಿಧವಾದ, ಅರ್ಥೇಷು-ವಿಷಯಗಳಲ್ಲಿ (ಪ್ರಮೇಯಗಳಲ್ಲಿ), ಸಂಶಯಂ-ಸಂಶಯವನ್ನು, ಪ್ರಾಪ್ಯ-ಹೊಂದಿ, ಇಹ-ಇಲ್ಲಿ ಭೃಗ್ವಾದೀನ್-ಭೃಗುಮುಖ್ಯರಾದ ಋಷಿಗಳನ್ನು ಅನ್ವಪೃಚ್ಛತ-ಆ (ಆ ಸಂಶಯಗಳ ಬಗ್ಗೆ) ಪ್ರಶ್ನೆಮಾಡಿದನು.

ಇಂದ್ರದ್ಯುಮ್ನೋಪಾಖ್ಯಾನವೆಂಬ ೨೮ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೨೯

ಶ್ರೀ ವೇದವ್ಯಾಸಾಯ ನಮಃ

ರಾಜೋವಾಚ—

ಉತ್ಪತ್ತಿ ಸ್ಥಿತಿಸಂಹಾರಾನ್ನಿಯತಿಂ ಜ್ಞಾನಮಾವೃತಿಂ ।
ಬಂಧಂ ಮೋಕ್ಷಂ ಚ ವಿಶ್ವಸ್ಯ ಕರೋತ್ಯೇವ ಸದಾ ಹರಿಃ ॥ ೧ ॥

ಇತಿ ಶ್ರುತಂ ಮಯಾ ವಿಪ್ರಾ ಬಹುಶೋ ಬಹುಧಾ ಬಹು ।
ನ ತೃಪ್ಯತಿ ತಥಾಪ್ಯತ್ರ ಮನಃ ಸಂಶಯಿತಂ ಹಿ ನಃ ॥ ೨ ॥

ಇಂದ್ರದ್ಯುಮ್ನನು ಮಾತನಾಡುತ್ತಾನೆ—

ಅರ್ಥ:—ವಿಶ್ವಸ್ಯ-(ಪ್ರಮಾಣಪವಿತ್ರವಾದ ಚೇತನಾಚೇತನಾತ್ಮಕ) ಜಗತ್ತಿನ, ಉತ್ಪತ್ತಿಸ್ಥಿತಿಸಂಹಾರಾನ್-ಸೃಷ್ಟಿ ಸ್ಥಿತಿ, ಲಯಗಳನ್ನೂ, ನಿಯತಿಂ-ನಿಯಮನವನ್ನೂ (ನಿಯಂತ್ರಣವನ್ನೂ-ತನ್ನ ಇಚ್ಛಾನುಸಾರ ಎಲ್ಲವನ್ನೂ ಚೇಷ್ಟಿಸುವಂತೆ ಮಾಡುವುದನ್ನೂ), ಜ್ಞಾನಂ-ಜ್ಞಾನವನ್ನೂ, ಆವೃತಿಂ-ಅಜ್ಞಾನವನ್ನೂ, ಬಂಧಂ-ಬಂಧನವನ್ನೂ (ಸಂಸಾರದಲ್ಲಿ ತೊಡಗಿಸುವುದನ್ನೂ), ಮೋಕ್ಷಂ ಚ-(ಸ್ವಸ್ವರೂಪ ನಿತ್ಯಸ್ಥಿತಿಯನ್ನೂ), ಮುಕ್ತಿಯನ್ನೂ ಸದಾ-ಎಲ್ಲ ಕಾಲಗಳಲ್ಲಿ, ಹರಿಃ ಏವ-ಶ್ರೀಹರಿಯೇ (ಸ್ವತಂತ್ರನಾಗಿ), ಕರೋತಿ-

---

ಅಧ್ಯಾಯ ೨೯

ತಾತ್ಪರ್ಯ:—ಇಂದ್ರದ್ಯುಮ್ನನು ಹೇಳುತ್ತಾನೆ:—ಪ್ರತ್ಯಕ್ಷಾದಿ ಪ್ರಮಾಣ ಸಿದ್ಧವಾದ ಈ ಚೇತನಾಚೇತನ ಸಕಲಜಗತ್ತಿನ, ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳನ್ನು ತ್ರಿಕಾಲಗಳಲ್ಲಿ ಶ್ರೀಹರಿಯೇ ಮಾಡುವನೆಂದು, ಬಹುಪ್ರಕಾರದ ನಿರೂಪಣೆಯನ್ನು ಬಹುವಾರ, ಬಹುವಿಪ್ರರ ಮುಖದಿಂದ ನಾನು

ಮಾಡುತ್ತಾನೆ; ಇತಿ-ಹೀಗೆಂದು, ವಿಪ್ರಾಃ-ಹೇ ಋಷಿಗಳೇ!, ಬಹುಶಃ-ಬಹಳವಾಗಿ, ಬಹುಧಾ-ಬಹು ಪ್ರಕಾರದಿಂದ, ಬಹು-ಪುನಃ ಪುನಃ, ಮಯಾ-ನನ್ನಿಂದ, ಶ್ರುತಂ-ಕೇಳಲ್ಪಟ್ಟಿದೆ; ತಥಾಪಿ-ಹೀಗಿದ್ದರೂ (ಬಹುಪರಿಯಿಂದ ಶ್ರವಣಮಾಡಿದ್ದರೂ), ನಃ-ನನ್ನ (ರಾಜತ್ವನಿಮಿತ್ತ ಬಹುವಚನ), ಮನಃ-ಮನಸ್ಸು ಸಂಶಯಿತಂ-ಸಂಶಯಗೊಂಡು, ನ ತೃಪ್ಯತಿ-ತೃಪ್ತಿಪಡುವುದಿಲ್ಲ (ಸಂಶಯಗಳು ಪರಿಹಾರವಾಗಿ ನಿಶ್ಚಯ ಜ್ಞಾನವುಂಟಾಗದೇ ತೃಪ್ತಿಹೊಂದುವುದಿಲ್ಲ).

ಭವಂತೋ ಹಿ ಮಹಾಪ್ರಾಜ್ಞಾಃ ಸದಾ ತತ್ತ್ವವಿವೇಕಿನಃ ।
ಅಟಂತಿ ಭಗವತ್ತತ್ತ್ವಪ್ರಕಾಶಾಯೈವ ಕೇವಲಂ ॥ ೩ ॥

ಸದಾ ಸಂತುಷ್ಟಮನಸಾಂ ನಿರೀಹಾಣಾಂ ಸತಾಮಿಹ ।
ಅನುಗ್ರಹಾಯೈವ ಭವೇತ್ ಪ್ರವೃತ್ತಿರ್ಮಗ್ನಚೇತಸಾಂ ॥ ೪ ॥

ಸದೈವ ಖಾದನೇ ಪಾನೇ ವ್ಯವಾಯೇ ವ್ಯಸನೇಷು ಚ ।
ನಾನಾವಿಧೇಷು ಚಾರ್ಥೇಷು ಧನಸಂಪ್ರಾಪ್ತಿಹೇತುಷು ॥ ೫ ॥

ಭವಂತಃ-ತಾವುಗಳು, ಮಹಾಪ್ರಾಜ್ಞಾಃ-ಮಹಾಜ್ಞಾನಿಗಳು; ಸದಾ-ನಿರಂತರವಾಗಿ, ತತ್ತ್ವವಿವೇಕಿನಃ-ತತ್ತ್ವವಿಚಾರಪರರು (ಆರವರು), ಕೇವಲಂ ಭಗವತ್ತತ್ತ್ವ ಪ್ರಕಾಶಾಯ ಏವ-ಭಗವತ್ತತ್ತ್ವಜ್ಞಾನ ದಾನಮಾಡಲಿಕ್ಕೆ ಮಾತ್ರವೇ, ಅಟಂತಿ-

---

ಶ್ರವಣಮಾಡಿರುವೆನು;[1] ಆದರೂ ನನ್ನ ಮನಸ್ಸಿನ ಸಂಶಯವು ಪರಿಹಾರವಾಗಿಲ್ಲ-ಮನಸ್ಸಿಗೆ ತೃಪ್ತಿಯಿಲ್ಲ (೧-೨). ಸದಾ ಭಗವತ್ತತ್ತ್ವವಿಚಾರಪರರೂ, ಮಹಾಪ್ರಾಜ್ಞರೂ ಆದ ತಮ್ಮಂಥವರು, ಕೇವಲ ತತ್ತ್ವಜ್ಞಾನೋಪದೇಶಾರ್ಥವಾಗಿಯೇ ಜಗತ್ತಿನಲ್ಲಿ ಸುತ್ತುತ್ತಾರೆ; ಧನಸಂಪಾದನೆಗೆ ಸಹಾಯಕವಾದ ವಿವಿಧ ಪ್ರಯತ್ನಗಳಲ್ಲಿಯೇ ಆಸಕ್ತರಾಗಿ, ತಿನ್ನುವುದು, ಕುಡಿಯುವುದು, ಸ್ತ್ರೀಭೋಗ ಇತ್ಯಾದಿ ವಿವಿಧ ದುಶ್ಚಟಗಳಿಗೆ ತುತ್ತಾಗಿ ಅವುಗಳಲ್ಲಿಯೇ ಮುಳುಗಿರುವ ಅಜ್ಞಾನಿಗಳ ಅನುಗ್ರಹಕ್ಕಾಗಿಯೇ, ಸದಾ ಸಂತೃಪ್ತಚಿತ್ತರೂ, ಆಶಾರಹಿತರೂ ಆದ ಸಜ್ಜನರ ಪ್ರವೃತ್ತಿಯು ಇರುತ್ತದೆಯಷ್ಟೆ! (ಸಜ್ಜನರು ಇದಕ್ಕಾಗಿಯೇ ವಿವಿಧ ವ್ಯವಹಾರಗಳಲ್ಲಿ ತೊಡಗುತ್ತಾರೆ) (೩-೫). ಜೀವಿತದಲ್ಲಿ ನಿರಾಶರಾದವರು (ಯಾವುದೊಂದನ್ನೂ ಸಾಧಿಸುವ ಆತ್ಮವಿಶ್ವಾಸವಿಲ್ಲದವರು), ಮತ್ತು ಕೇವಲ ಲೌಕಿಕ

---

1. ಸೃಷ್ಟಿ, ಸ್ಥಿತಿ, ಲಯ, ನಿಯಮನಗಳೆಂಬ ಮೊದಲಿನ ನಾಲ್ಕು, ಜಡಚೇತನಾತ್ಮಕ ಸಮಸ್ತ ವಿಶ್ವಕ್ಕೆ ಸ್ವತಂತ್ರನಾದ ಶ್ರೀಹರಿಯಿಂದಲೇ ಆಗುತ್ತವೆ; ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳೆಂಬ ಉಳಿದ ನಾಲ್ಕು, ಚೇತನಾತ್ಮಕ ಜಗತ್ತಿಗೆ (ಲಕ್ಷ್ಮೀಬ್ರಹ್ಮಾದಿ ಸಕಲಚೇತನ ಸಮುದಾಯಕ್ಕೆ) ಮಾತ್ರ ಅನ್ವಯಿಸುತ್ತವೆ. ಈ ವಿವೇಕದಿಂದ ಅಷ್ಟಕರ್ತೃತ್ವಗಳನ್ನು ಗ್ರಹಿಸಬೇಕು.

ಸಂಚರಿಸುತ್ತಾರೆ; (ಅವರ ಸಂಚಾರವು ಅಜ್ಞಾನಿಗಳಿಗೆ ಜ್ಞಾನವನ್ನುಂಟುಮಾಡಲಿಕ್ಕಾಗಿ ಮಾತ್ರವೆಂಬುದು ನಿಶ್ಚಿತವಾದುದು); ಧನಸಂಪ್ರಾಪ್ತಿಹೇತುಷು-ಧನಸಂಪಾದನೆಗಳ ಕಾರಣವಾಗುವ, ನಾನಾವಿಧೇಷು-ಬಹುವಿಧವಾದ, ಅರ್ಥೇಷು-ಅರ್ಥಗಳಲ್ಲಿಯೂ (ಉಪಯುಕ್ತ ಉದ್ಯಮಗಳಲ್ಲಿಯೂ), ಸದಾ-ಸರ್ವದಾ, ಖಾದನೇ- ತಿನ್ನುವುದರಲ್ಲಿ ಪಾನೇ- ಕುಡಿಯುವುದರಲ್ಲಿ ವ್ಯವಾಯೇ-ಸ್ತ್ರೀಭೋಗದಲ್ಲಿ ಚ-ಮತ್ತು ವ್ಯಸನೇಷು- ವಿವಿಧ ದುರಭ್ಯಾಸಗಳಲ್ಲಿ ಮಗ್ನಚೇತಸಾಂ-ಮುಳುಗಿದ (ಆಸಕ್ತವಾದ) ಮನಸ್ಸುಳ್ಳವರ, ಅನುಗ್ರಹಾಯ ಏವ-ಅನುಗ್ರಹಕ್ಕಾಗಿಯೇ, ಸದಾ-ಸರ್ವದಾ, ಸಂತುಷ್ಟಮನಸಾಂ- ಸಂತೋಷಚಿತ್ತರಾದ (ತೃಪ್ತರಾದ), ನಿರೀಹಾಣಾಂ-ಆಶಾರಹಿತರಾದ, ಸತಾಂ-ಸಾಧುಗಳ (ಜ್ಞಾನಿಗಳ), ಪ್ರವೃತ್ತಿಃ-ಪ್ರವೃತ್ತಿಯು, ಭವೇತ್-ಇರುತ್ತದೆ (ಅಜ್ಞ ಜನರ ಅನುಗ್ರಹಕ್ಕಾಗಿಯೇ ಜ್ಞಾನಿಗಳ ಸಂಚಾರಾದಿ ವ್ಯವಹರಣೆಗಳು).

**ಪ್ರಾಯೋ ನಿರಾಶಾಃ ಸಾಶಾಶ್ಚ ಕದಾಚಿತ್ ಕ್ವಚಿದೇವ ಹಿ ।**
**ವಿಕ್ಷಿಪ್ತಚಿತ್ತಾ ನೋ ಕುರ್ಯುರಾತ್ಮತತ್ತ್ವವಿವೇಚನಮ್ ॥ ೬ ॥**

ಪ್ರಾಯಃ-ಬಹುವಾಗಿ, ನಿರಾಶಾಃ-ನಿರಾಶರೂ, ಸಾಶಾಃಚ-(ವಿಷಯಗಳ) ಆಶೆಯುಳ್ಳವರೂ, ವಿಕ್ಷಿಪ್ತಚಿತ್ತಾಃ ಹಿ-ಅನ್ಯಾಸಕ್ತಮನಸ್ಸುಳ್ಳವರಾದ್ದರಿಂದ, ಕದಾಚಿತ್- ಯಾವುದೊಂದು ಸಮಯದಲ್ಲಿ ಕ್ವಚಿದೇವ-ಸ್ವಲ್ಪಮಾತ್ರವೂ, ಆತ್ಮತತ್ತ್ವವಿವೇಚನಂ- ಭಗವತತ್ತ್ವದ ವಿಚಾರವನ್ನು ನೋ ಕುರ್ಯುಃ-ಮಾಡುವುದಿಲ್ಲ.

**ಕಥಂ ತೇ ತ್ಯಕ್ತಸದ್ವೃತ್ತಾಃ ಸುಖಂ ರಾತ್ರಿಷು ಶೇರತೇ ।**
**ಮರಣಾಂತರಿತಾ ಯೇಷಾಂ ಭಾವಿನ್ಯೋಽಹಿ ಮಹಾಪದಃ ॥ ೭ ॥**

ತೇ-ಅವರು (ಆತ್ಮತತ್ತ್ವವಿವೇಚನರಹಿತರು), ತ್ಯಕ್ತಸದ್ವೃತ್ತಾಃ-ಸರ್ವ ಸದಾಚಾರಗಳನ್ನು ತ್ಯಜಿಸಿದವರಾಗಿ, ರಾತ್ರಿಷು-ರಾತ್ರಿಗಳಲ್ಲಿ (ಯಾವ ರಾತ್ರಿಯಲ್ಲಿಯೇ ಆಗಲಿ), ಕಥಂ-ಹೇಗೆ, ಸುಖಂ-ಸುಖವಾಗಿ, ಶೇರತೇ-ಮಲಗುತ್ತಾರೆ (ನಿದ್ರಿಸುತ್ತಾರೆ?); ಯೇಷಾಂ-ಯಾರಿಗೆ (ಅಂಥವರಿಗೆ), ಮರಣಾಂತರಿತಾಃ-ಮರಣಕ್ಕಿಂತ ಮಧ್ಯದ

---

ಆಶೆ-ಆಕಾಂಕ್ಷೆಗಳಲ್ಲಿಯೇ ಮಗ್ನರಾದವರೂ ಆದ ಏಕಾಗ್ರಮನಃಶೂನ್ಯರು, ಯಾವ ಕಾಲದಲ್ಲಿಯೂ ಎಷ್ಟು ಸ್ವಲ್ಪಮಟ್ಟಿಗೂ, ಭಗವತತ್ತ್ವದ ವಿವೇಚನೆಯನ್ನು ಕೈಗೊಳ್ಳುವುದಿಲ್ಲ; ಜಗತ್ತಿನಲ್ಲಿ ಬಹುಭಾಗದ ಜನರು ಹೀಗಿರುವವರು (೬). ಸದಾಚಾರಗಳನ್ನು ಪರಿತ್ಯಾಗಮಾಡಿ ಈ ಬಹುಭಾಗದ ಜನರು ಯಾವ ರಾತ್ರಿಯಲ್ಲಾಗಲಿ ತಾನೇ ಸುಖವಾಗಿ ನಿದ್ರಿಸಲು ಸಾಧ್ಯ? ಅಂಥವರಿಗೆ ಮರಣವೇ ಅಂತ್ಯವಾಗಿ ಉಳ್ಳ ಮಧ್ಯಕಾಲದಲ್ಲಿ (ಜೀವಿತಕಾಲದಲ್ಲಿ) ಅವರಿಂದ ಎದುರಿಸಲಾಗದ ಮಹಾಪತ್ತುಗಳೇ ಹೆಚ್ಚಾಗಿ

ಕಾಲದಲ್ಲಿ ಮಹಾಪದಃ-ಮಹಾ ಆಪತ್ತುಗಳು, ಭಾವಿನ್ಯಃ ಹಿ-ಸಂಭವಿಸುತ್ತವೆ (ನಿಶ್ಚಯವು).

ಪ್ರಾಯೇಣ ಮೈಥುನಾದೇವ ಜೀವಸೃಷ್ಟಿರ್ವಿಲೋಕ್ಯತೇ ।
ಜಲಭೂಬೀಜಸಂಯೋಗಾತ್ ಸ್ಥಾವರೋತ್ಪತ್ತಿರೀಕ್ಷ್ಯತೇ ॥ ೮ ॥

ಸ್ಥಿತಿಸಂಹಾರನಿಯತಿಜ್ಞಾನಾದ್ಯಖಿಲಮೇವ ಯತ್ ।
ಲೋಕಸ್ಯ ಲೋಕತೋ ಲೋಕೇ ಮುಕ್ತಃ ಕೋಽಪಿ ನ ದೃಶ್ಯತೇ ॥ ೯ ॥

ನಿಶ್ಚೇತುಂ ತತ್ಕಥಂ ಶಕ್ಯಂ ಜನ್ಮಾದ್ಯಸ್ಯ ತತೋ ಹರೇಃ ।
ನ ಹರಿರ್ದೃಶ್ಯತೇ ಕ್ವಾಪಿ ತಸ್ಮಾನ್ನಾನಾವಿಧಂ ಕಥಂ ॥ ೧೦ ॥

ಅವಿವೇಕಿಗಳ ಮಾತು ಹಾಗಿರಲಿ; ವಿಚಾರವಂತರಿಗೆ ಉಂಟಾಗುವ ಸಂಶಯಗಳನ್ನು ನೋಡಿರಿ—

ಜೀವಸೃಷ್ಟಿಃ-ಜೀವರುಗಳ ಉತ್ಪತ್ತಿಯು, ಪ್ರಾಯೇಣ-ಬಹುವಾಗಿ (ಸಾಮಾನ್ಯವಾಗಿ), ಮೈಥುನಾತ್‌ಏವ-ಪುರುಷಸ್ತ್ರೀಯರ ಸಂಗಮದಿಂದಲೇ, ವಿಲೋಕ್ಯತೇ-(ಲೋಕರಲ್ಲಿ) ಕಂಡುಬರುತ್ತದೆ; ಸ್ಥಾವರೋತ್ಪತ್ತಿಃ-ಸ್ಥಾವರಗಳಾದ ವೃಕ್ಷಾದಿಗಳ ಉತ್ಪತ್ತಿಯು, ಜಲಭೂಬೀಜಸಂಯೋಗಾತ್-ನೀರು, ಭೂಮಿ ಮತ್ತು ಬೀಜಗಳ ಸಂಯೋಗದಿಂದ, ಈಕ್ಷ್ಯತೇ-(ಎಂದು) ಕಂಡುಬರುತ್ತದೆ; ಯತ್-ಯಾವ, ಸ್ಥಿತಿಸಂಹಾರನಿಯತಿಜ್ಞಾನಾದಿ-ರಕ್ಷಣೆ, ಸಂಹಾರ, ನಿಯಮನ, ಜ್ಞಾನ ಮೊದಲಾದ, ಅಖಿಲಂ ಏವ-ಸಮಸ್ತವೋ, (ಆ ಎಲ್ಲವೂ), ಲೋಕೇ-ಲೋಕದಲ್ಲಿ ಲೋಕಸ್ಯ-ಲೋಕಕ್ಕೆ (ಎಲ್ಲರಿಗೂ), ಲೋಕತಃ-ಲೋಕದಿಂದಲೇ (ಲೋಕದ ಇತರರಿಂದಲೇ), (ಸಂಭವಿಸುವುದು ಕಂಡುಬರುತ್ತದೆ); ಮುಕ್ತಃ-ಮುಕ್ತನೆಂಬುವನು (ಈ ವಿವಿಧ ವ್ಯಾಪಾರಗಳಲ್ಲಿ ತೊಡಗದವನು), ಕಃ ಅಪಿ-ಯಾವನೊಬ್ಬನೂ, ನ ದೃಶ್ಯತೇ-

ಸಂಭವಿಸುತ್ತವೆ(೭). ಈ ಅವಿಚಾರಿಗಳ ಮಾತು ಹಾಗಿರಲಿ; ವಿಚಾರಶೀಲರಿಗೆ ಉಂಟಾಗುವ ಸಂಶಯಗಳನ್ನಾದರೂ ನೋಡಿರಿ; ಜೀವರುಗಳ ಉತ್ಪತ್ತಿಯು (ಸೃಷ್ಟಿಯು) ಸ್ತ್ರೀಪುರುಷರ ಸಂಗಮದಿಂದಲೇ ಲೋಕದಲ್ಲಿ ಕಂಡುಬರುತ್ತದೆ; ಇನ್ನು ವೃಕ್ಷಾದಿ ಸ್ಥಾವರಜಗತ್ತಿನ ಸೃಷ್ಟಿಯು, ಭೂಮಿ, ಬೀಜ ಮತ್ತು ಜಲಗಳ ಸಂಯೋಗದಿಂದ ಆಗುವುದೂ ಸಹ ಕಂಡಿದೆ; ಇನ್ನು ರಕ್ಷಣೆ, ಸಂಹಾರ, ನಿಯಂತ್ರಣ, ಜ್ಞಾನ ಮೊದಲಾದವುಗಳೆಲ್ಲವೂ ಲೋಕದವರಿಗೆ (ಪ್ರಾಣಿಗಳಿಗೆ) ಲೋಕದಿಂದ (ಇತರ ಪ್ರಾಣಿಗಳಿಂದ) ಆಗುತ್ತವೆಂಬುದೂ ಜಗತ್ತಿನಲ್ಲಿ ಕಂಡುಬರುತ್ತದೆ (ತಂದೆತಾಯಿಗಳು ರಕ್ಷಣೆಮಾಡುತ್ತಾರೆ; ಒಂದು ಪ್ರಾಣಿ ಮತ್ತೊಂದನ್ನು ಕೊಲ್ಲುತ್ತದೆ, ರಾಜನು ಪ್ರಜೆಗಳನ್ನು

ಕಾಣುವುದಿಲ್ಲ ತತಃ-ಆದ್ದರಿಂದ (ಹೀಗಿರುವುದರಿಂದ), ಅಸ್ಯ-ಈ ಜಗತ್ತಿನ, ಜನ್ಮಾದಿ-ಸೃಷ್ಟಿ ಮೊದಲಾದವುಗಳು, ಹರೇಃ-ಶ್ರೀಹರಿಯಿಂದಲೇ, (ಎಂದು), ತತ್-ಅದನ್ನು ಕಥಂ-ಹೇಗೆ, ನಿಶ್ಚೇತುಂ-ನಿಶ್ಚಯಿಸಲಿಕ್ಕೆ, ಶಕ್ಯಂ-ಶಕ್ಯವಾಗುತ್ತದೆ? (ಮೇಲಾಗಿ), ಹರಿಃ-ಶ್ರೀಹರಿಯು, ಕ್ವಾಪಿ-ಎಲ್ಲಿಯೂ, ನ ದೃಶ್ಯತೇ-ಕಾಣುವುದಿಲ್ಲ ತಸ್ಮಾತ್-ಆದ್ದರಿಂದ, ನಾನಾವಿಧಂ-ಬಹುಪ್ರಕಾರದ ಸೃಷ್ಟಿ ಮೊದಲಾದುದು, ತಸ್ಮಾತ್-ಆ ಶ್ರೀಹರಿಯಿಂದಲೇ, ಕಥಂ-(ಎಂದು) ಹೇಗೆ ಸಿದ್ಧವಾದೀತು?

ಸೃಷ್ಟ್ಯಾದಿ ಲೋಕ್ಯತೇ ಲೋಕೇ ನ ಹ್ಯಕಸ್ಮಾದನೇಕಧಾ ।
ನಾನಾವ್ಯಾಪಾರಸಂಸಕ್ತಾಃ ಕಥಂ ನಾನೇಹ ಜಾತಯಃ ॥ ೧೧ ॥

ಏಷಾಂ ವ್ಯಾಪಾರತೋ ಲೋಕೇ ಜಗತ್ಸೃಷ್ಟ್ಯಾದಿ ವೀಕ್ಷತೇ ।

ಅನೇಕಧಾ-ಬಹುವಿಧದ, ಸೃಷ್ಟ್ಯಾದಿ-ಉತ್ಪತ್ತಿ ಮೊದಲಾದವುಗಳು, ಲೋಕೇ-ಜಗತ್ತಿನಲ್ಲಿ ಅಕಸ್ಮಾತ್-ನಿರ್ನಿಮಿತ್ತವಾಗಿ, (ಕಾರಣವಿಲ್ಲದೇ), ನ ಲೋಕ್ಯತೇ-ಕಂಡು ಬರುವುದಿಲ್ಲ ಹಿ-ಯಾವ ಕಾರಣದಿಂದ, (ಎಂದರೆ), ಕಥಂ-(ಸೃಷ್ಟ್ಯಾದಿಗಳಿಗೆ ಕಾರಣಗಳಿಲ್ಲದಿದ್ದರೆ) ಹೇಗೆ, ಇಹ-ಈ ಲೋಕದಲ್ಲಿ ನಾನಾವ್ಯಾಪಾರಸಂಸಕ್ತಾ-ವಿವಿಧ ವ್ಯಾಪಾರಗಳಲ್ಲಿ (ಕೆಲಸಗಳಲ್ಲಿ), ಆಸಕ್ತರಾದ, ನಾನಾಜಾತಯಃ-ನಾನಾ ಕಸಬುಗಳುಳ್ಳ ಗುಂಪಿನ ಜನರು (ಜಾತಿಗಳು) (ಇರಲು ಸಾಧ್ಯವಾಗುತ್ತದೆ?); ಏಷಾಂ-ಈ ನಾನಾ ಜಾತಿಗಳ, ವ್ಯಾಪಾರತಃ-ಕ್ರಿಯೆಗಳಿಂದಲೇ, ಲೋಕೇ-ಜಗತ್ತಿನಲ್ಲಿ ಜಗತ್ಸೃಷ್ಟ್ಯಾದಿ-ಜಗತ್ತಿನ ವಸ್ತುಗಳ ಉತ್ಪತ್ತಿ ಮೊದಲಾದವುಗಳು, ವೀಕ್ಷ್ಯತೇ-ಕಂಡುಬರುತ್ತವೆ.

ಹಲಕಾಲಯುಗಾದೀನಾಂ ತುರೀವೇಮಾದಿನಾಮಪಿ ॥ ೧೨ ॥

ಕುಲಾಲಚಕ್ರದಂಡಾದೇರಭಾವೇ ಹಿ ಕಥಂ ನೃಣಾಂ ।
ಅನ್ನಾಚ್ಛಾದನಲಾಭಃ ಸ್ಯಾದನ್ಯನ್ನಾನಾವಿಧಂ ಕಥಂ ॥ ೧೩ ॥

---

ನಿಯಮನ ಮಾಡುತ್ತಾನೆ, ಇತ್ಯಾದಿ); ಈ ವಿಧ ಸೃಷ್ಟ್ಯಾದಿ ವ್ಯಾಪಾರಗಳಿಂದ ಮುಕ್ತನಾದವನು (ಅಥವಾ ಜನನ, ವೃದ್ಧಿ ಮರಣಾದಿಗಳಿಂದ ರಹಿತನಾದವನು—ಸಂಸಾರದಿಂದ ಮುಕ್ತನಾದನು) ಯಾರೂ ಕಾಣುವುದಿಲ್ಲ ಇವೆಲ್ಲವನ್ನೂ ನಿರ್ವಹಿಸುವ ನೆಂಬ ಶ್ರೀಹರಿಯಂತೂ ಯಾರಿಗೂ ಕಾಣಲಿಕ್ಕೆ ಸಿಗುವುದಿಲ್ಲ ಹೀಗಿರುವಾಗ ಜಗತ್ತಿಗೆ ಉತ್ಪತ್ತ್ಯಾದಿಗಳೆಲ್ಲವೂ ಶ್ರೀಹರಿಯಿಂದಲೇ ಸಂಭವಿಸುತ್ತವೆಂದು ಹೇಗೆ ನಿಶ್ಚಯಿಸಲು ಶಕ್ಯವಾಗುತ್ತದೆ ? (೮-೧೦). ವಿವಿಧ ವಸ್ತುಗಳಿಂದ ಕೂಡಿದ ಈ ಜಗತ್ತಿನ ವಿವಿಧ ಸೃಷ್ಟಿ ಮೊದಲಾದವುಗಳು, ಕಾರಣವಿಲ್ಲದೇ ಬಹುಪ್ರಕಾರವಾಗಿರುವುದಿಲ್ಲ ಬಹುಕಾರಣ ಗಳಿಲ್ಲದಿದ್ದರೆ ವಿವಿಧ ವ್ಯಾಪಾರಗಳಲ್ಲಿ (ಕರ್ಮಗಳಲ್ಲಿ) ಆಸಕ್ತರಾದ ನಾನಾ ಜಾತಿಗಳು,

**ಭೋಗಾರ್ಥಜಾತಂ ಲಭ್ಯೇತ ನಾನಾಶಿಲ್ಪಕರ್ತೃರ್ವಿನಾ ।**
**ಶಿಲ್ಪಾನ್ಯಪಿ ಕಥಂ ಲೋಕೇ ಪ್ರಥಿತಾನಿ ಗುರುಂ ವಿನಾ ॥ ೧೪ ॥**

**ಕಥಂ ಬಂಧಃ ಕಥಂ ಮೋಕ್ಷಃ ಕಥಂ ಜೀವಃ ಕಥಂ ಗತಿಃ ।**
**ಕಥಂ ಕರ್ಮೇತಿ ವಿದ್ವಾಂಸಃ ಕೃಪಯಾ ವಕ್ತುಮರ್ಹಥ ॥ ೧೫ ॥**

ಹಲಕಾಲಯುಗಾದೀನಾಂ-ನೇಗಿಲು, ದಂಡ, ನೊಗ ಮೊದಲಾದವುಗಳ, ಅಪಿ - ಹಾಗೂ, ತುರೀವೇಮಾದಿನಾಂ-ಲಳಿಕೆ ಮಗ್ಗಗಳ (Shuttle and loom), ಕುಲಾಲಚಕ್ರದಂಡಾದೇಃ-ಕುಂಬಾರನ ಚಕ್ರ, ದಂಡ ಮೊದಲಾದವುಗಳ, ಅಭಾವೇ-ಅಭಾವದಲ್ಲಿ (ಅವುಗಳಿಲ್ಲದಿದ್ದರೆ), ನೃಣಾಂ-ಮನುಷ್ಯರಿಗೆ, (ಬೇಕಾದ), ಅನ್ನಾಚ್ಛಾದನಲಾಭಃ-ಆಹಾರ ವಸ್ತ್ರಗಳ ಲಾಭವು, ಕಥಂ ಸ್ಯಾತ್-ಹೇಗಾದೀತು? ನಾನಾಶಿಲ್ಪಕರ್ತೃಃವಿನಾ-ವಿವಿಧ ಕಸಬುಗಳುಳ್ಳ ಜನರಿಲ್ಲದೇ (ಶಿಲ್ಪ-ಕೈಕೆಲಸ ಅಥವಾ ನಿಪುಣ ಕೆಲಸಗಾರ), ಅನ್ಯತ್-ಬೇರೆ, ನಾನಾವಿಧಂ-ಬಹುವಿಧದ, ಭೋಗಾರ್ಥ ಜಾತಂ-ಭೋಗ್ಯವಸ್ತುಸಮೂಹವು, ಕಥಂ-ಹೇಗೆ, ಲಭ್ಯೇತ-ದೊರೆಯಬಹುದು? ಶಿಲ್ಪಾನಿ ಅಪಿ-(ನಾನಾ ಶಿಲ್ಪಗಳಾದರೂ) ವಿವಿಧ ಕೃತಿಗಳಾದರೂ, ಗುರುಂ ವಿನಾ-ಗುರುವಿಲ್ಲದೇ (ಅವುಗಳನ್ನು ಕಲಿಸುವವನಿಲ್ಲದೇ), ಲೋಕೇ-ಲೋಕದಲ್ಲಿ ಕಥಂ-ಹೇಗೆ, ಪ್ರಥಿತಾನಿ-ವಿಸ್ತಾರಗೊಳ್ಳುತ್ತವೆ (ಬೆಳೆದು ಪ್ರಸಿದ್ಧಿ ಹೊಂದುತ್ತವೆ); (ಮೇಲಾಗಿ), ಕಥಂ ಬಂಧಃ-ಸಂಸಾರಬಂಧವು ಹೇಗೆ? ಕಥಂ ಮೋಕ್ಷಃ-ಅದರಿಂದ ಬಿಡುಗಡೆ ಹೇಗೆ? ಕಥಂ ಜೀವಃ-ಜೀವನು ಹೇಗೆ? (ಜನಿಸಿರುವನು), ಕಥಂ ಗತಿಃ-ಗತಿ

---

ಜಗತ್ತಿನಲ್ಲಿರಲು ಶಕ್ಯವಿಲ್ಲ. ಹೀಗೆ ನಾನಾ ಕರ್ಮಗಳಲ್ಲಿ ಆಸಕ್ತರಾದ ಈ ಜಾತಿ(ಗುಂಪಿನ) ಜನರಿಂದಲೇ ಜಗದ್ವಸ್ತುಗಳ ನಿರ್ಮಾಣಾದಿಗಳು ಕಂಡುಬರುತ್ತವೆ (೧೧). ನೇಗಿಲು, ದಂಡ (ಕೋಲು), ನೊಗ (yoke) ಗಳಿಲ್ಲದೇ ಧಾನ್ಯಗಳನ್ನು ರೈತನು ಬೆಳೆಯ ಬಹುದೇ ? (ಇಲ್ಲ); ತುರೀ ವೇಮಾದಿಗಳಿಲ್ಲದೇ (ಲಳಿಗೆ ಮಗ್ಗಗಳಿಲ್ಲದೇ) ಬಟ್ಟೆಗಳನ್ನು ನೇಯಬಹುದೇ(ಇಲ್ಲ); ಕುಂಬಾರನ ಚಕ್ರ, ದಂಡಾದಿಗಳಿಲ್ಲದೇ ಪಾತ್ರೆಗಳು (ಕುಂಭ ಮೊದಲಾದವು) ಸಿದ್ಧವಾಗಬಹುದೇ? (ಇಲ್ಲ); ಮತ್ತು ಇವುಗಳೊಂದಿಗೆ ನಾನಾಕೃತಿಗಳಲ್ಲಿ ನಿಪುಣರಾದ ವ್ಯಕ್ತಿಗಳು (ಶಿಲ್ಪಕರು) ಇಲ್ಲದಿದ್ದರೆ, ಅನ್ನವಸ್ತ್ರಗಳಾಗಲಿ, ಇತರ ಭೋಗ್ಯವಸ್ತುಗಳಾಗಲಿ ಹೇಗೆ ದೊರೆಯಬಹುದು? (ದೊರೆಯುವುದಿಲ್ಲ); ಗುರುವಿಲ್ಲದೇ ಶಿಲ್ಪಿಗಳು ಹೇಗೆ ಸಿದ್ಧರಾಗುವರು? (ಆಗುವುದಿಲ್ಲ); ಇದರಿಂದ, ಜಗದ್ವಸ್ತುಗಳು ಬಹುಕರ್ತೃಕವೆಂದು ತಿಳಿದುಬರುವುದಿಲ್ಲವೇ? ಆದ್ದರಿಂದ ಸೃಷ್ಟಿಮೊದಲಾದ ಸರ್ವವೂ ಒಬ್ಬ ಹರಿಯಿಂದ ಎಂಬುದು ಹೇಗೆ ಸಂಭಾವ್ಯವಾಗುತ್ತದೆ? ಮೇಲಾಗಿ ಬಂಧ ಮೋಕ್ಷಗಳೆಂಬುವು ಹೇಗೆ ಮತ್ತು ಯಾರಿಗೆ? ಜೀವನು ಹೇಗೆ ಈ

ಹೊಂದುವುದು ಹೇಗೆ? ಕಥಂ ಕರ್ಮ-(ಅದಕ್ಕೆ ಸಾಧಕವಾದ) ಕರ್ಮವು ಯಾವ ಪ್ರಕಾರವಾದುದು? ವಿದ್ವಾಂಸಃ-ಹೇ ಜ್ಞಾನಿಗಳೇ !, ಕೃಪಯಾ-ಕೃಪೆಮಾಡಿ, ವಕ್ತುಂ-ಹೇಳಲು, ಅರ್ಹಥ- ಸಮರ್ಥರಿದ್ದೀರಿ (ಹೇಳಿರಿ).

ಭೃಗುರುವಾಚ—

ಅಟತಾಮಿಹ ಲೋಕೇ ನೋ ನ ದೃಷ್ಟಃ ತ್ವಾದೃಶೋ ನರಃ ।
ಯಃ ಪೃಚ್ಛೇದಪಿ ತತ್ತ್ವಾರ್ಥಾನ್ ಕಿಮು ತತ್ತ್ವವಿವೇಚಕಃ ॥ ೧೬ ॥

ಭೃಗುಋಷಿಗಳು ಹೇಳುತ್ತಾರೆ—

ಲೋಕೇ-ಜಗತ್ತಿನಲ್ಲಿ ಅಟತಾಂ-ಸುತ್ತುತ್ತಿರುವ, ನಃ-ನಮಗೆ, ತ್ವಾದೃಶಃ ನರಃ-ನಿನ್ನಂತಹ ಮನುಷ್ಯನು, ನ ದೃಷ್ಟಃ-ಕಾಣಲಿಲ್ಲವು; ಯಃ-ಯಾರು, ತತ್ತ್ವಾರ್ಥಾನ್ ಅಪಿ-ತತ್ತ್ವವಿಚಾರಗಳನ್ನಾದರೂ, ಪೃಚ್ಛೇತ್-ಪ್ರಶ್ನೆ ಮಾಡಬಹುದೋ (ಅಂಥವನು ಕಾಣಲಿಲ್ಲ); ತತ್ತ್ವವಿವೇಚಕಃ-ತತ್ತ್ವವನ್ನು ತಿಳಿಯಲು (ಸತ್ಯವನ್ನು ತಿಳಿಯಲು) ವಿಮರ್ಶೆ ಮಾಡುವವನು, ಕಿಮು-(ಕಾಣಲಿಲ್ಲವೆಂದು) ಹೇಳತಕ್ಕದ್ದೇನಿದೆ ?

ವಾಸುದೇವಕಥಾಪ್ರಶ್ನಃ ಪುರುಷಾಂಸ್ತ್ರೀನ್ ಪುನಾತಿ ಹಿ ।
ವಕ್ತಾರಂ ಪೃಚ್ಛಕಂ ಶ್ರೋತೄಂಸ್ತತ್ಪಾದಸಲಿಲಂ ಯಥಾ ॥ ೧೭ ॥

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿತ್ತಂ ವೇತ್ತಿ ತತ್ತ್ವತಃ ॥ ೧೮ ॥

ವಾಸುದೇವಕಥಾಪ್ರಶ್ನಃ-ಶ್ರೀಹರಿಮಹಿಮೆಗಳ ವಿಷಯಕ ಪ್ರಶ್ನೆಯು, ತ್ರೀನ್ ಪುರುಷಾನ್-ಮೂರು ಪುರುಷರನ್ನು ಪುನಾತಿ ಹಿ-ಪವಿತ್ರಗೊಳಿಸುತ್ತದೆಂಬುದು

---

ಸಂಸಾರದಲ್ಲಿ ಬಂದಿರುವನು? ಅವನು, ಇದರಿಂದ ಮುಕ್ತನಾಗಿ, ತನ್ನ ನಿತ್ಯಗತಿಯನ್ನು ಹೊಂದುವುದು ಹೇಗೆ? ಇದಕ್ಕೆ ಸಾಧಕವಾದ ಕರ್ಮವಾವುದು? ಹೇ ಜ್ಞಾನಿಗಳೇ! ಈ ಎಲ್ಲವನ್ನೂ ಉತ್ತರಿಸಲು ಸಮರ್ಥರಾದ ನೀವು, ಕೃಪೆಮಾಡಿ, ಸರ್ಮಪಕವಾಗಿ ತಿಳಿಯಹೇಳಿರಿ.' (೧೨-೧೫).

ಹೀಗೆ ರಾಜನು ಪ್ರಶ್ನೆಮಾಡಲು, ಎಲ್ಲ ಋಷಿಗಳ ಪರವಾಗಿ ಭೃಗುಋಷಿಗಳು ಹೇಳುತ್ತಾರೆ:— 'ಹೇ ರಾಜ! ಲೋಕವನ್ನೇ ಸುತ್ತುತ್ತಿರುವ ನಮಗೆ ನಿನ್ನಂತಿರುವ ಮನುಷ್ಯನು ಎಲ್ಲಿಯೂ ಕಾಣಲಿಲ್ಲ; ತತ್ತ್ವಾರ್ಥಗಳನ್ನು ಕುರಿತು ಪ್ರಶ್ನೆಮಾಡುವವರೇ ಇಲ್ಲದಿರುವಾಗ, ನಿನ್ನಂತೆ ವಿವೇಚನೆಮಾಡಿ ಪ್ರಶ್ನೆಗಳನ್ನು ಕೇಳುವವರೆಲ್ಲಿಂದ ತರಬೇಕು? (೧೬). ಶ್ರೀ ವಾಸುದೇವನ ಮಹಿಮಾವಿಷಯಕ ಪ್ರಶ್ನೆಯು, ಕೇಳುವವನನ್ನೂ, ಹೇಳುವವನನ್ನೂ ಮತ್ತು ಶ್ರವಣಮಾಡುವ ಅನ್ಯರನ್ನೂ, ಗಂಗಾಜಲದಂತೆ

ಶಾಸ್ತ್ರಸಿದ್ಧವು; ವಕ್ತಾರಂ-(ಆ ಪ್ರಶ್ನೆಗೆ ಉತ್ತರವನ್ನು) ಹೇಳುವವನನ್ನು, ಪೃಚ್ಛಕಂ-ಪ್ರಶ್ನೆಮಾಡುವವನನ್ನು, ಶ್ರೋತೄನ್-(ಆ ಪ್ರಶ್ನೋತ್ತರಗಳನ್ನು) ಶ್ರವಣಮಾಡುವವರನ್ನು (ಪುನಾತಿ-ಪವಿತ್ರಗೊಳಿಸುತ್ತದೆ); ಯಥಾ-ಹೇಗೆಂದರೆ, ತತ್ಪಾದಸಲಿಲಂ(ಯಥಾ)-ಆತನ (ವಾಸುದೇವನ) ಪಾದಜಲದಂತೆ; (ಭಾಗೀರಥೀಜಲವು ಸ್ನಾನಾದಿಗಳಿಂದ ಸೇವಿಸುವ ಜನರನ್ನು ಪಾಪಗಳನ್ನು ಪರಿಹರಿಸಿ, ಶುದ್ಧಗೊಳಿಸುವಂತೆ); ಮನುಷ್ಯಾಣಾಂ ಸಹಸ್ರೇಷು-ಬಹುಮನುಷ್ಯರ ಮಧ್ಯದಲ್ಲಿ, ಕಶ್ಚಿತ್-(ಪುಣ್ಯವಂತನಾದ ಯಾವನೋ) ಒಬ್ಬನು, ಸಿದ್ಧಯೇ-(ನನ್ನ) ಜ್ಞಾನಾರ್ಥವಾಗಿ, ಯತತಿ-ಯತ್ನಿಸುತ್ತಾನೆ; ಯತತಾಂ ಅಪಿ-ಹೀಗೆ ಯತ್ನಿಸುವವರ ಮಧ್ಯದಲ್ಲಿ (ಕಶ್ಚಿತ್ ಸಿದ್ಧವಾನ್ ಭವತಿ-ಯಾರೋ ಒಬ್ಬನು ನನ್ನ ಮಹಾತ್ಮೆಯನ್ನು ತಿಳಿಯುತ್ತಾನೆ—ನನ್ನ ಜ್ಞಾನವನ್ನು ಹೊಂದುತ್ತಾನೆ); ಸಿದ್ಧಾನಾಂ ಅಪಿ-(ಹೀಗೆ) ನನ್ನ ಜ್ಞಾನವನ್ನು ಪಡೆದವರ ಮಧ್ಯದಲ್ಲಿ, ಕಶ್ಚಿತ್-ಯಾವನೊಬ್ಬನು ಮಾತ್ರ, ತಂ-ಆ ನನ್ನನ್ನು (ವಾಸುದೇವನನ್ನು), ತತ್ತ್ವತಃ-ಯಥಾರ್ಥವಾಗಿ (ಯೋಗ್ಯತಾನುಸಾರ ಚೆನ್ನಾಗಿ-ಪೂರ್ಣವಾಗಿ), ವೇತ್ತಿ-ತಿಳಿಯುತ್ತಾನೆ.

**ಸತ್ಯಮೇವ ತ್ವಯಾ ಪ್ರೋಕ್ತಂ ದೃಶ್ಯತೇ ಲೋಕತೋ ಮಿಥಃ ।**
**ಚರಾಚರಸ್ಯ ಸೃಷ್ಟ್ಯಾದಿಕರ್ಮ ಕ್ವ ಹರಿಃ ಪ್ರಭುಃ ॥ ೧೯ ॥**

**ತಥಾಪಿ ಫಲವೈಚಿತ್ರ್ಯಾದಸ್ವಾತಂತ್ರ್ಯಾಚ್ಚ ದೇಹಿನಾಂ ।**
**ಸದಾಗಮಾಚ್ಚ ವಿಜ್ಞೇಯಂ ಕರ್ಮಜೀವೇಶ್ವರಾದಿಕಂ ॥ ೨೦ ॥**

ತ್ವಯಾ-ನಿನ್ನಿಂದ, ಪ್ರೋಕ್ತಂ-ಹೇಳಲಾದುದು (ನಿನ್ನ ಪ್ರಶ್ನೆಯ ವಿವರಣೆಯೊಳಗೆ ಅಡಕವಾಗಿರುವ ಅಂಶಗಳು), ಸತ್ಯಮೇವ-ನಿಜವೇ ಸರಿ (ಪ್ರತ್ಯಕ್ಷ ಮತ್ತು ಅನುಮಾನಗೋಚರಗಳೇ); ಚರಾಚರಸ್ಯ-ಚರಾಚರ (ಸ್ಥಾವರ ಜಂಗಮಾತ್ಮಕ) ಜಗತ್ತಿನ,

---

ಪವಿತ್ರಗೊಳಿಸುತ್ತದೆ;[1] ಅಸಂಖ್ಯ(ಬಹು) ಮನುಷ್ಯರ ಮಧ್ಯದಲ್ಲಿ, ಒಬ್ಬ ಪುಣ್ಯವಂತನು ಮಾತ್ರ, ಶ್ರೀಹರಿಮಹಿಮೆಗಳ ಜ್ಞಾನಕ್ಕಾಗಿ ಯತ್ನಿಸುತ್ತಾನೆ; ಹಾಗೆ ಯತ್ನಿಸುವ ಸಹಸ್ರಾರು ಮನುಷ್ಯರಲ್ಲಿ ಭಾಗ್ಯಶಾಲಿಯಾದ ಒಬ್ಬನಿಗೆ ಮಾತ್ರ ನನ್ನ ಮಹಾತ್ಮೆಯ ಜ್ಞಾನವಾಗುತ್ತದೆ; ಹಾಗೆ ತಿಳಿದ ಬಹುಮಂದಿಯಲ್ಲಿ ಒಬ್ಬನು ಮಾತ್ರ ನನ್ನನ್ನು ಯಥಾರ್ಥವಾಗಿ (ಸ್ವಯೋಗ್ಯತಾನುಸಾರಪೂರ್ಣವಾಗಿ) ತಿಳಿಯುತ್ತಾನೆಂದು, ಆ ವಾಸುದೇವನೇ (ಶ್ರೀಕೃಷ್ಣನೇ ಗೀತೆಯಲ್ಲಿ)ಹೇಳಿರುವನು; ಆದ್ದರಿಂದ ಭಗವತ್ತತ್ತ್ವ ವಿಷಯಕವಾಗಿ

---

1. ಶ್ರೀಹರಿಪಾದಜಲವೇ ವಿಷ್ಣುಪಾದೋದ್ಭವಳಾದ ಗಂಗೆಯು; (ಸಾಲಗ್ರಾಮ ತೀರ್ಥಾದಿಗಳೂ ವಿಷ್ಣುಪಾದೋದಕವೇ ಸರಿ); ವಾಸುದೇವಕಥಾ ಪ್ರಶ್ನೆಯು, ಮೂರು ಪುರುಷರನ್ನು ಪಾವನಗೊಳಿಸಿದರೆ, ಗಂಗೆಯು ಸ್ವರ್ಗ, ಭೂ, ಪಾತಾಳಗಳೆಂಬ ಮೂರು ಲೋಕಗಳ ಪ್ರಜೆಗಳನ್ನು, ಅವರ ಪಾಪಗಳನ್ನು ಪರಿಹರಿಸಿ, ಪವಿತ್ರಗೊಳಿಸುತ್ತಾಳೆ.

ಸೃಷ್ಟ್ಯಾದಿ- ಉತ್ಪತ್ತಿ ಮೊದಲಾದುದು, ಮಿಥಃ-ಪರಸ್ಪರವಾಗಿ, ಲೋಕತಃ- ಜಗತ್ತಿನಿಂದಲೇ ಎಂದೂ (ಜಗತ್ತಿನಲ್ಲಿರುವ ವಸ್ತುಗಳಿಂದ ಪರಸ್ಪರ, ಆಗುತ್ತವೆಂದೂ), ಕರ್ಮ-ಕರ್ಮವು (ಪೂರ್ವಕರ್ಮವೆಂಬುದು—ಅಥವಾ ಶ್ರೀಹರಿಯ ಕರ್ಮವೆಂಬುದು), ಕ್ವ-ಎಲ್ಲಿ?, ಪ್ರಭುಃ-ಸಮರ್ಥನೆಂಬ (ಸೃಷ್ಟ್ಯಾದಿ ಸರ್ವವನ್ನೂ ನಿರ್ವಹಿಸುವ ಸಾಮರ್ಥ್ಯವುಳ್ಳವನೆಂಬ), ಹರಿಃ-ಶ್ರೀಹರಿಯು, ಕ್ವ-ಎಲ್ಲಿ? (ಎಂದೂ), ದೃಶ್ಯತೇ-ತೋರುತ್ತದೆ; ತಥಾಪಿ- ಹೀಗಿದ್ದರೂ, ಕರ್ಮಜೀವೇಶ್ವರಾದಿಕಂ-ಕರ್ಮ, ಜೀವ, ಈಶ್ವರಾದಿ ವಸ್ತುಗಳು (ಜಗತ್ತಿನ ಸೃಷ್ಟ್ಯಾದಿಗಳಲ್ಲಿ ಇವುಗಳ ಸ್ಥಾನವೂ), ದೇಹಿನಾಂ-ದೇಹಿಗಳ (ಶರೀರವುಳ್ಳ ಜೀವರ), ಅಸ್ವಾತಂತ್ರ್ಯಾತ್-ಪರಾಧೀನತೆಯಿಂದಲೂ (ಅನುಭವಸಿದ್ಧವಾದ ಅಸ್ವಾತಂತ್ರ್ಯದಿಂದಲೂ), ಚ-ಹಾಗೂ, ಫಲವೈಚಿತ್ರ್ಯಾತ್-ವಿವಿಧ ಫಲಪ್ರಾಪ್ತಿಯಿಂದಲೂ), (ಸಮಪ್ರಯತ್ನಾದಿಗಳುಳ್ಳ ಜೀವರಿಗೆ ದೊರೆಯುವ ಭಿನ್ನ ಭಿನ್ನ ಫಲಗಳಿಂದಲೂ), ಸದಾಗಮಾತ್ ಚ-(ಈ ಅನುಭವಗಳಿಂದ ಸಹಕೃತವಾದ ಅನುಮಾನಗಳಿಂದ ಸಹಪ್ರಮಾಣಗಳೆಂದು ಏರ್ಪಡುವ) ವೇದಾದಿ ಸದಾಗಮಗಳಿಂದಲೇ, ವಿಜ್ಞೇಯಂ-ನಿಸ್ಸಂಶಯವಾಗಿ ತಿಳಿಯಲ್ಪಡುತ್ತವೆ.

ಪದಂ ತತ್ಪರಮಂ ವಿಷ್ಣೋಃ ಸದಾ ಪಶ್ಯಂತಿ ಸೂರಯಃ ।
ಹೇತುಭಿಃ ಪಾರತಂತ್ರ್ಯಾದ್ಯೈರ್ದಿವಿ ಚಕ್ಷುರಿವಾತತಂ ॥ ೨೧ ॥

ನ ಹೀದಂ ಪ್ರಸರಚ್ಚಕ್ಷುರ್ದಿವಿ ಸೂರ್ಯಾದಿದರ್ಶನೇ ।
ವಿಲೋಕ್ಯ ತೇನ ಸಂಸ್ಪೃಷ್ಟಮರ್ಥಜ್ಞಾನಕ್ಷಮಂ ಭವೇತ್ ॥ ೨೨ ॥

ಅತಃ ಸೂರ್ಯಾದಿವಸ್ತೂನಾಂ ಜ್ಞಾನಾತ್ ಸ್ಯಾಚ್ಚಕ್ಷುಷೋ ದಿವಿ ।
ಪ್ರಸಾರ ಇತಿ ತದ್ವಚ್ಚ ಪಾರತಂತ್ರ್ಯಾದಿಹೇತುಭಿಃ ॥ ೨೩ ॥

ವಿಜ್ಞೇಯಃ ಪರಮೋ ವಿಷ್ಣುಸ್ತಸ್ಯೈವ ಶ್ರವಣೇನ ಚ ।
ಮನನಾತ್ ಧ್ಯಾನತಶ್ಚಾಪಿ ತುಷ್ಟಃ ಸಾಕ್ಷಾದ್ಭವೇತ್ ಕ್ರಮಾತ್ ॥ ೨೪ ॥

---

ಪ್ರಶ್ನೆಮಾಡುತ್ತಿರುವ ನೀನೇ ಪುಣ್ಯಶಾಲಿಯು (೧೭-೧೮). ಯದ್ಯಪಿ, ಪ್ರಶ್ನೆಯ ವಿವರಣಾರ್ಥ ನೀನು ಮಾಡಿದ ಅನುವಾದವು, ಪ್ರತ್ಯಕ್ಷಾನುಮಾನಗಳಿಂದ ನಿಜವೆಂದೇ ತೋರುತ್ತದೆ; ಚರಾಚರ ವಸ್ತುಗಳ ಸೃಷ್ಟಿ ಮೊದಲಾದವು, ಜಗದ್ವಸ್ತುಗಳಿಂದ ಪರಸ್ಪರವಾಗಿ (ಒಂದರಿಂದ ಒಂದಕ್ಕೆ) ಸಂಭವಿಸುತ್ತವೆಂದೂ, ಈ ಎಲ್ಲವೂ, ಎಲ್ಲವನ್ನೂ ನಿರ್ವಹಿಸಲು ಸಮರ್ಥನಾದ ಒಬ್ಬನಿಂದ(ಶ್ರೀಹರಿಯಿಂದ) ನಡೆಯುತ್ತವೆಂದು ಭಾವಿಸಲು, ಈ ಎಲ್ಲವೂ ಆತನ ಲೀಲೆಯೆಂದು ತಿಳಿಯಲು ಯಾವ ಪ್ರತ್ಯಕ್ಷ ನಿದರ್ಶನಗಳೂ ಕಾಣುವುದಿಲ್ಲವೆಂದೂ ತೋರುವುದು ನಿಜವೇ; ಆದರೆ, ಕರ್ಮ,

ಆತತಂ-ವ್ಯಾಪ್ತವಾದ, ಚಕ್ಷುಃ-ಚಕ್ಷುಸ್ಸು (ಚಕ್ಷುರಿಂದ್ರಿಯವು), ದಿವಿ ಇವ-ಆಕಾಶದಲ್ಲಿ ಹೇಗೋ ಹಾಗೆ, ಪಾರತಂತ್ರ್ಯಾದ್ಯೈಃ-ಪರಾಧೀನತ್ವಾದಿ, ಹೇತುಭಿಃ-ಹೇತುಗಳಿಂದ, ಸೂರಯಃ-ಜ್ಞಾನಿಗಳು (ಪೂರ್ಣಜ್ಞಾನಿಗಳಾದ ಮುಕ್ತರು), ವಿಷ್ಣೋಃ-ಶ್ರೀವಿಷ್ಣುವಿನ, ಪರಮಂ-(ರಮಾಬ್ರಹ್ಮಾದಿಗಳಿಂದ ಸಹ) ಉತ್ತಮವಾದ, ತತ್‌ಪದಂ-ಆ ಸ್ವರೂಪವನ್ನು ಸದಾ-ನಿತ್ಯದಲ್ಲಿಯೂ, ಪಶ್ಯಂತಿ- ನೋಡುತ್ತಾರೆ; ಇದಂ-ಈ, ದಿವಿ-ಆಕಾಶದಲ್ಲಿ ಪ್ರಸರತ್ ಚಕ್ಷುಃ-ವ್ಯಾಪ್ತವಾದ ಚಕ್ಷುರಿಂದ್ರಿಯವು, ಸೂರ್ಯಾದಿದರ್ಶನೇ-ಸೂರ್ಯಾದಿ ವಸ್ತುಗಳನ್ನು ನೋಡುವುದರಲ್ಲಿ, ನ ಹಿ (ಕ್ಷಮಂ)-ಸ್ವಯಂ ಶಕ್ತವಲ್ಲ; ತೇನ-ಆತನಿಂದ (ಈಶ್ವರನಿಂದ ಪ್ರೇರಿತವಾಗಿ), ಸಂಸ್ಪೃಷ್ಟಂ-(ಆತನಿಂದ) ಸ್ಪೃಷ್ಟವಾದ ಪದಾರ್ಥವನ್ನು ವಿಲೋಕ್ಯ-ನೋಡಿ, ಅರ್ಥಜ್ಞಾನಕ್ಷಮಂ-ವಸ್ತುವನ್ನು ತಿಳಿಯುವ ಶಕ್ತಿಯುಳ್ಳದ್ದು ಭವೇತ್-ಆಗುತ್ತದೆ; ಅತಃ-ಈ ಕಾರಣದಿಂದಲೂ, ಚ-ಮತ್ತು ಸೂರ್ಯಾದಿ ವಸ್ತೂನಾಂ-ಸೂರ್ಯಾದಿ ಪದಾರ್ಥಗಳ, ಜ್ಞಾನಾತ್-ಜ್ಞಾನದಿಂದ (ಆಕಾಶಗತ ವಸ್ತುಗಳನ್ನು ಗ್ರಹಿಸುವುದರಿಂದ), ದಿವಿ-ಆಕಾಶದಲ್ಲಿ, ಚಕ್ಷುಷಃ-ಚಕ್ಷುಸ್ಸಿನ, ಪ್ರಸಾರಃ-ವ್ಯಾಪ್ತಿಯು, ಸ್ಯಾತ್-ಸಿದ್ಧವಾಗುವುದು, ಇತಿ-ಎಂಬಂತೆ, ತದ್ವತ್- ಅದರಂತೆ, ಪಾರತಂತ್ರ್ಯಾದಿಹೇತುಭಿಃ-(ಜೀವರ) ಪರಾಧೀನತ್ವಾದಿ ಹೇತುಗಳಿಂದ, ವಿಷ್ಣುಃ- ಶ್ರೀವಿಷ್ಣುವು, ಪರಮಃ-ಸರ್ವೋತ್ತಮನೆಂದು, ವಿಜ್ಞೇಯಃ-ತಿಳಿಯಲ್ಪಡತಕ್ಕವನು (ಆಗಿರುತ್ತಾನೆ); ತಸ್ಯ ಏವ-ಅದೇ (ಹೀಗಿರುವ) ವಿಷ್ಣುವಿನ, ಶ್ರವಣೇನ-(ಮಾಹಾತ್ಮ್ಯ) ಶ್ರವಣದಿಂದಲೂ,

---

ಜೀವ, ಈಶ್ವರಾದಿಗಳ ಯಥಾರ್ಥ ಸ್ವರೂಪಜ್ಞಾನವು.[1] ಸರ್ವಾನುಭವಸಿದ್ಧವಾದ ಜೀವರ ಅಸ್ವಾತಂತ್ರ್ಯದಿಂದಲೂ, ಅವರ ನಾನಾ ಯತ್ನಗಳಿಗೆ ದೊರೆಯುವ ವಿವಿಧ ಫಲಗಳಿಂದಲೂ, ವೇದಾದಿ ಸದಾಗಮಗಳಿಂದಲೂ, ಸಿದ್ಧವಾಗುತ್ತದೆ (ನಿಶ್ಚಯವಾಗಿಯೂ ದೊರೆಯುತ್ತದೆ) (೧೯-೨೦). ಸೃಷ್ಟ್ಯಾದಿ ಕರ್ತನಾದ ಶ್ರೀಹರಿಯನ್ನು

1. 'ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ।' ಎಂದು, ಶ್ರೀಕೃಷ್ಣನು, ಕರ್ಮಶಬ್ದದ ಮುಖ್ಯಾರ್ಥವನ್ನು 'ಕಿಂ ಕರ್ಮ ಪುರುಷೋತ್ತಮ' ಎಂಬ ಅರ್ಜುನನ ಪ್ರಶ್ನೆಗೆ, ಉತ್ತರವಾಗಿ ಹೇಳಿದ್ದಾನೆ; ಭೂತ (ಜೀವರು) ಭಾವ (ಜಡಪದಾರ್ಥ)ಗಳ ಉತ್ಪತ್ತಿಯನ್ನು ಮಾಡುವ ವಿಶೇಷ ಸರ್ಜನಕ್ರಿಯೆಯು (ಈಶ್ವರನ ಸೃಷ್ಟಿವ್ಯಾಪಾರವು) ಕರ್ಮವೆಂದು ಹೇಳಿರುವನು; ಹಾಗೂ, 'ಜನ್ಮಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।' (ಗೀತಾ) ಎಂಬಲ್ಲಿ ಸಹ ಕರ್ಮವೆಂದರೆ, ಶ್ರೀಹರಿಯ ಜಗತ್ಸೃಷ್ಟ್ಯಾದಿ ಕರ್ಮಗಳೆಂದೇ ಹೇಳಲಾಗಿದೆ. ಆದ್ದರಿಂದ, 'ಕ್ವ ಕರ್ಮ' ಎಂಬಲ್ಲಿ ಸೃಷ್ಟ್ಯಾದಿಗಳು ಶ್ರೀಹರಿಕೃತವೆಂಬುದೆಲ್ಲಿ? ಎಂಬ ಅರ್ಥವನ್ನೂ ತಿಳಿಯಬೇಕು. 'ಕರ್ಮ ಜೀವೇಶ್ವರಾದಿಕಂ' ಎಂಬಲ್ಲಿ ಜೀವರ ಹಾಗೂ ಜಡಪದಾರ್ಥಗಳ ದೃಷ್ಟಿಯಲ್ಲಿ ನಿಮಿತ್ತಕಾರಣವಾದ, ಜೀವರ ಪೂರ್ವಕರ್ಮಗಳು. ಅಸ್ವತಂತ್ರರಾದ ಜೀವರು, ಸರ್ವನಿಯಾಮಕನಾದ ಸ್ವತಂತ್ರ ಶ್ರೀಹರಿ, ಇವುಗಳ ಪ್ರತ್ಯಕ್ಷಾನುಮಾನಗಳಿಂದ ಸಂಭಾವ್ಯವಾಗಿ ಕಂಡರೂ, ಸದಾಗಮಗಳಿಂದಲೇ ನಿಸ್ಸಂಶಯವಾಗಿ ಸಿದ್ಧವಾಗುತ್ತವೆಂದು ಹೇಳಲಾಗಿದೆ.

ಮನನಾತ್ ಚ-ಮನನದಿಂದಲೂ (ಅವುಗಳ ಯಥಾರ್ಥ್ಯವನ್ನು ವಿಮರ್ಶೆಯಿಂದ ನಿಶ್ಚಯಿಸಿ), ಧ್ಯಾನತಃ-ಧ್ಯಾನ ಮಾಡುವುದರಿಂದಲೂ, ತುಷ್ಟಃ-ಪ್ರೀತನಾಗಿ (ಪ್ರಸನ್ನನಾದ ಶ್ರೀವಿಷ್ಣುವು), ಕ್ರಮಾತ್-ಉಕ್ತಕ್ರಮದಿಂದ (ಶ್ರವಣ, ಮನನ, ಧ್ಯಾನಗಳಿಂದ), ಸಾಕ್ಷಾತ್ ಭವೇತ್-ಪ್ರತ್ಯಕ್ಷನಾಗುತ್ತಾನೆ.

ಯೈಃ ಸಾಕ್ಷಾತ್ಕೃತೋ ವಿಷ್ಣುರ್ಜಾಗ್ರವಾಂಸೋ ಹಿ ತೇ ಸ್ಮೃತಾಃ ।
ಯತ್ರ ಸುಪ್ತಂ ಜಗತ್ಸರ್ವಂ ತತ್ರ ಜಾಗರಿತಾ ಹಿ ತೇ ॥ ೨೫ ॥

ವಿಶೇಷೇಣ ಪ್ರಕೃಷ್ಟತ್ವಾದ್ವಿಪ್ರಾಸ್ತೇ ಹಿ ದಯಾಲವಃ ।
ಶುಶ್ರೂಷುಶ್ರದ್ದಧಾನೇಭ್ಯೋ ಬ್ರಹ್ಮದೀಪಂ ಪ್ರಕುರ್ವತೇ ॥ ೨೬ ॥

ಶುಶ್ರೂಷುಬೋಧನಾದೀನಾಂ ವ್ಯವಹಾರಾದ್ದರಿಸ್ತುತೇಃ ।
ಮನ್ಯುದೋಷಾದಿರಾಹಿತ್ಯಾನ್ ಜ್ಞೇಯಾಸ್ತೇ ಚ ವಿಮನ್ಯವಃ ॥ ೨೭ ॥

ಯೈಃ-ಯಾರಿಂದ, ವಿಷ್ಣುಃ-ಶ್ರೀಹರಿಯು, ಸಾಕ್ಷಾತ್ಕೃತಃ-ಸಾಕ್ಷಾತ್ಕರಿಸಿಕೊಳ್ಳಲ್ಪಟ್ಟಿರುವನೋ (ಶ್ರೀಹರಿಯನ್ನು ಪ್ರತ್ಯಕ್ಷ ಕಂಡಿರುವವರೇ), ತೇ-ಅವರು, ಜಾಗ್ರವಾಂಸಃ-ಜಾಗ್ರತರೆಂದು, ಸ್ಮೃತಾಃಹಿ-ಹೇಳಲ್ಪಡುವರೆಂದು ಶ್ರುತಿಸಿದ್ಧವು; ಹಿ-ಏಕೆಂದರೆ (ಇವರೇ ಜಾಗ್ರತರು ಹೇಗೆಂದರೆ), ಜಗತ್ಸರ್ವಂ-ಎಲ್ಲ ಜಗತ್ತು ಯತ್ರ-ಯಾವ ಶ್ರೀಹರಿಯ ವಿಷಯದಲ್ಲಿ ಸುಪ್ತಂ-ನಿದ್ರಿಸುತ್ತಿರುವುದೋ, ತತ್ರ-ಅಲ್ಲಿ (ಆತನಲ್ಲಿ), ತೇ-ಅವರು

---

ಪೂರ್ಣಜ್ಞಾನಿಗಳು (ಮತ್ತು ಮುಕ್ತರು) ರಮಾಬ್ರಹ್ಮಾದಿಗಳಿಂದ ಉತ್ತಮನಾದ ಸ್ವತಂತ್ರಪ್ರಭುವೆಂದು ಸರ್ವದಾ ತಿಳಿಯುತ್ತಾರೆ—ತಿಳಿದು ಆತನನ್ನು ನೋಡುತ್ತಿರುವರು;ತಮ್ಮ ಪರಾಧೀನತ್ವಾದಿ ಹೇತುಗಳಿಂದ, ಸ್ವತಂತ್ರನಾದ ಶ್ರೀಹರಿಯೆ ಸರ್ವೋತ್ತಮನೆಂದು ತಿಳಿದು, ಆತನ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣುತ್ತಾರೆ; ಚಕ್ಷುರಿಂದ್ರಿಯವು ಆಕಾಶದಲ್ಲಿ ವ್ಯಾಪಿಸಿ ಅಲ್ಲಿರುವ ಸೂರ್ಯಾದಿ ಪದಾರ್ಥಗಳನ್ನು ಗ್ರಹಿಸುತ್ತದೆ—ಆದರೆ ಅದರ ವ್ಯಾಪ್ತಿಯು ಪ್ರತ್ಯಕ್ಷ ತೋರುವುದಿಲ್ಲ- ವಸ್ತುಜ್ಞಾನದಿಂದ (ಜ್ಞಾನವಾದ ಕಾರಣದಿಂದ— ಹೇತುವಿನಿಂದ) ಚಕ್ಷುಸ್ಸಿನ ವ್ಯಾಪ್ತಿಯನ್ನು ನಿಶ್ಚಯಿಸುತ್ತೇವೆ; ಹೀಗೆಯೇ, ಜೀವರ ಅಸ್ವಾತಂತ್ರ್ಯ ಮತ್ತು ಫಲವೈಚಿತ್ರ್ಯಗಳೆಂಬ ಹೇತುಗಳಿಂದ, ಜ್ಞಾನಿಗಳು, ಸ್ವತಂತ್ರನಾದ ಶ್ರೀಹರಿಯ ಸ್ವರೂಪವನ್ನು ನಿಶ್ಚಯಿಸುತ್ತಾರೆ; ಮತ್ತು ಆತನ ಮಹಿಮೆಗಳ ಶ್ರವಣ, ಮನನ, ಧ್ಯಾನಗಳಿಂದ ಆತನ ಸಾಕ್ಷಾದ್ದರ್ಶನವನ್ನೂ ಆತನ ಪ್ರಸಾದದಿಂದಲೇ ಪಡೆಯುತ್ತಾರೆ; ಜೀವರು ಚಕ್ಷುರಿಂದ್ರಿಯದಿಂದ ಪದಾರ್ಥಗಳನ್ನು ಗ್ರಹಿಸುವುದರಲ್ಲಿ ಸಹ ಸ್ವತಂತ್ರರಲ್ಲ; ಆಕಾಶದಲ್ಲಿರುವ ಸೂರ್ಯಾದಿವಸ್ತುಜ್ಞಾನವೂ, ಅವುಗಳನ್ನು ಸೃಷ್ಟಿಮಾಡಿದ ಶ್ರೀಹರಿಪ್ರೇರಣೆಯಿಂದಲೇ

(ಶ್ರೀಹರಿದರ್ಶನವುಳ್ಳವರು), ಜಾಗರಿತಾಃ-ಜಾಗ್ರತರಾಗಿರುವರು (ಎಚ್ಚರವಾಗಿರುವರು); ತೇ ಹಿ-ಇವರುಗಳೇ (ಈ ಜಾಗ್ರವಾಂಸರೆಂಬ ಜ್ಞಾನಿಗಳೇ), ವಿಶೇಷೇಣ-ಅತಿಶಯವಾಗಿ, ಪ್ರಕೃಷ್ಟತ್ವಾತ್-ಉತ್ತಮರಾದ್ದರಿಂದ, ವಿಪ್ರಾಃ-'ವಿಪ್ರ'ರೆನಿಸುತ್ತಾರೆ; ದಯಾಲವಃ - ದಯಾಲುಗಳಾದ ಇವರು, ಶುಶ್ರೂಷು ಶ್ರದ್ಧಧಾನೇಭ್ಯಃ - ಸೇವಾಶ್ರದ್ಧೆಗಳುಳ್ಳವರಿಗೆ (ಶ್ರವಣದಲ್ಲಿ ಆಸಕ್ತರಾದವರಿಗೆ). ಬ್ರಹ್ಮದೀಪಂ-ಬ್ರಹ್ಮಜ್ಞಾನವನ್ನು (ಶ್ರೀಹರಿಸ್ವರೂಪಜ್ಞಾನವನ್ನು), ಪ್ರಕುರ್ವತೇ- ಉಂಟುಮಾಡುತ್ತಾರೆ (ಪ್ರಕಾಶಗೊಳಿಸುತ್ತಾರೆ-ಉಪದೇಶಿಸುತ್ತಾರೆ); ಶುಶ್ರೂಷು ಬೋಧನಾದೀನಾಂ-ಶ್ರವಣ ಯೋಗ್ಯರಿಗೆ ಉಪದೇಶಾದಿಗಳ, (ಮತ್ತು), ಹರಿ ಸ್ತುತೇ-ಶ್ರೀಹರಿಸ್ತುತಿಯ, ವ್ಯವಹಾರಾತ್-(ನಿತ್ಯ) ವ್ಯಾಪಾರವುಳ್ಳವರಾದ್ದರಿಂದಲೂ, ಮನ್ಯುದೋಷಾದಿ ರಾಹಿತ್ಯಾತ್-ಕೋಪಾದಿ ದೋಷರಹಿತರಾದ್ದರಿಂದಲೂ, ತೇ-ಅವರು, ವಿಮನ್ಯವಃ- 'ವಿಮನ್ಯು'ಗಳೆಂದು, ಜ್ಞೇಯಾಃ-ತಿಳಿಯಲ್ಪಡುತ್ತಾರೆ.

**ಅಚೇತನಾನಾಂ ಭೂತಾನಾಂ ನ ರಾಶಿಶ್ಚಿತ್ತಮಾಪ್ನುಯಾತ್ ।**
**ರಾಶೀಕರಣಮಪ್ಯೇಷಾಂ ದೃಶ್ಯತೇ ಚೇತನೇಚ್ಛಯಾ ॥ ೨೫ ॥**

ಅಚೇತನಾನಾಂ-ಜಡಗಳಾದ, ಭೂತಾನಾಂ-ವಸ್ತುಗಳ, ರಾಶಿಃ-ರಾಶಿಯು (ಜಡವಸ್ತುಗಳ ಮಿಶ್ರಣವು), ಚಿತ್ತಂ-ಚೇತನತ್ವವನ್ನು ನ ಆಪ್ನುಯಾತ್-

---

(ಆತನ ಶಕ್ತಿಯಿಂದಲೇ), ಲಭಿಸುತ್ತದೆ (೨೧-೨೪).[1] ಶ್ರೀವಿಷ್ಣುವಿನ ಸಾಕ್ಷಾದ್ದರ್ಶನವನ್ನು ಪಡೆದ ಈ ಸೂರಿಗಳೇ 'ಜಾಗ್ರವಾಂಸ'ರೆಂದು ಕರೆಯಲ್ಪಟ್ಟಿರುವರು; ಜಗತ್ತೆಲ್ಲವೂ ಯಾರ ವಿಷಯದಲ್ಲಿ ನಿದ್ರಿಸುತ್ತಿರುವುದೋ, ಆ ಶ್ರೀಹರಿಯ ವಿಷಯದಲ್ಲಿ ಇವರು ಸದಾ ಎಚ್ಚರಾಗಿರುವರು; ಆದ್ದರಿಂದಲೇ ಅವರು ನಿತ್ಯಜಾಗ್ರತರೆಂದು ಶ್ರುತಿಯಲ್ಲಿ

---

1. 'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ' ಎಂಬ (ಪುರುಷಸೂಕ್ತಗತ) ವೇದವಾಕ್ಯದ ವಿವರಣರೂಪವಾಗಿವೆ, ಈ ಶ್ಲೋಕಗಳು. ಈ ವಾಕ್ಯದ ವ್ಯಾಖ್ಯಾನವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ಋಗ್ಭಾಷ್ಯ ಗ್ರಂಥದಲ್ಲಿ ಹೀಗೆ ಮಾಡಿರುವರು:— 'ರಮಾಬ್ರಹ್ಮಶಿವಾದಿಭ್ಯೋ ಯದ್ವಿಷ್ಣೋಃ ಪರಮಂ ಪದಂ ನಿರ್ಮುಕ್ತಾಃ ಸಂಸಾರಾತ್ ಸೂರಯಃ ಸದಾ । ಚಕ್ಷುರ್ದಿವೀವ ವ್ಯಾಪ್ತಂ ಯದದೃಶ್ಯಂ ಫಲದರ್ಶಿತಂ...' ಇತ್ಯಾದಿ. ಇದರ ಭಾವಾರ್ಥ ಹೀಗಿದೆ:— ರಮಾ ಬ್ರಹ್ಮ ಶಿವಾದಿಗಳಿಂದ ಉತ್ತಮನಾದ ವಿಷ್ಣುವಿನ ಸ್ವರೂಪವನ್ನು ಸಂಸಾರದಿಂದ ಮುಕ್ತರಾದ ಜ್ಞಾನಿಗಳು (ಅವರೇ ಮುಖ್ಯ ಸೂರಿಗಳು) ಸದಾ ನೋಡುತ್ತಿರುವರು; ಆಕಾಶದಲ್ಲಿ ವ್ಯಾಪಿಸಿದ ಚಕ್ಷುಸ್ಸು ವ್ಯಾಪ್ತವಾಗಿದ್ದರೂ ಹೇಗೆ ಕಾಣುವುದಿಲ್ಲವೋ, ಮತ್ತು ಫಲದಿಂದ ಅದರ ವ್ಯಾಪ್ತಿಯು ಹೇಗೆ ಅನುಮಿತವಾಗುವುದೋ, ಹಾಗೆ, ಎಂಬ ದೃಷ್ಟಾಂತದಿಂದ, ಶ್ರುತಿಯ ತಾತ್ಪರ್ಯವನ್ನು ತಿಳಿಯಬೇಕು-ಫಲದಿಂದ ಎಂದರೆ ಚಕ್ಷುರಿಂದ್ರಿಯಕ್ಕೆ ಗೋಚರಿಸುವ ವಸ್ತುಜ್ಞಾನದಿಂದ, ಎಂದರ್ಥ. ಫಲದಿಂದ ವ್ಯಾಪ್ತಿಜ್ಞಾನ ಸಿದ್ಧವಾಗುತ್ತದೆ; ಫಲವೇ

ಹೊಂದುವುದಿಲ್ಲ. ಏಷಾಂ-(ಈ ಬಹು ಜಡವಸ್ತುಗಳ) ಇವುಗಳ, ರಾಶೀಕರಣಂ ಅಪಿ-ಒಟ್ಟುಗೂಡಿಸುವುದೂ ಸಹ (ಮಿಶ್ರಣವೂ ಸಹ), ಚೇತನೇಚ್ಛಯಾ-ಚೇತನನ ಇಚ್ಛೆಯಿಂದಲೇ, ದೃಶ್ಯತೇ-ಕಂಡುಬರುತ್ತದೆ; (ಜಡವಸ್ತುಗಳು—ವಿದ್ಯುದಾದಿ ಜಡಶಕ್ತಿಗಳು ಸಹ, ತಮಗೆ ತಾವೇ ಕೂಡಿಕೊಳ್ಳಲಾರವು).

ನ ಹಿ ತಂತುಮೃದಾದೀನಾಂ ಚೇತನೇಚ್ಛಾಂ ವಿನಾ ಕ್ವಚಿತ್ ।
ಪಟಾದಿನಿರ್ಮಿತಿರ್ದೃಷ್ಟಾ ದೇಹೇಽನ್ಯಶ್ಚೇತನಸ್ತತಃ ॥ ೨೯ ॥

ಚೇತನೇಚ್ಛಾಂ ವಿನಾ-ಚೇತನನ ಇಚ್ಛೆಯಿಲ್ಲದೇ, ಕ್ವಚಿತ್-ಎಲ್ಲಿಯೂ, ತಂತುಮೃದಾದೀನಾಂ-ನೂಲು, ಮೃತ್ತಿಕೆಗಳಿಗೆ, ಪಟಾದಿನಿರ್ಮಿತಿಃ-ಬಟ್ಟೆ ಮುಂತಾದ (ಕುಂಭ ಮೊದಲಾದ) ವಸ್ತುಗಳ ನಿರ್ಮಾಣವು, ನ ದೃಷ್ಟಾ-ಕಂಡಿಲ್ಲ. ತತಃ- ಆದ್ದರಿಂದ, ದೇಹೇ-ಶರೀರದಲ್ಲಿ, ಅನ್ಯಃ-ದೇಹಭಿನ್ನನಾದ, ಚೇತನಃ-ಚೇತನನು (ಇಚ್ಛಾದಿಗಳುಳ್ಳ ವಸ್ತುವು) (ಇರುವನೆಂದು ತಿಳಿಯುತ್ತದೆ).

ಅತ ಏವ ಹಿ ದೇಹೇಽಸ್ಮಿನ್ ಯಥಾವಚ್ಛಾಪ್ಯವಸ್ಥಿತೇ ।
ಸಹಸಾ ಜಾಯತೇ ಚೇಷ್ಟಾಹಾನಿಸ್ತಸ್ಮಾನ್ನ ತತ್ಸ್ಥಿತಿ ॥ ೩೦ ॥

---

ಪ್ರಸಿದ್ಧರಾಗಿರುವರು; ಅತಿಶಯವಾಗಿ ಪ್ರಕೃಷ್ಟವಾದ ಜ್ಞಾನವುಳ್ಳವರಾದ್ದರಿಂದ, ಅವರೂ ವಿಪ್ರರೆಂದೂ ಕರೆಯಲ್ಪಡುವರು; ದಯಾಲುಗಳಾದ ಇವರು, ಶ್ರವಣಶ್ರದ್ಧೆಯುಳ್ಳ ಅಧಿಕಾರಿಜೀವರಿಗೆ, ಬ್ರಹ್ಮಜ್ಞಾನವನ್ನು ಉಪದೇಶಿಸುವರು (ಶ್ರೀವಿಷ್ಣುಸ್ವರೂಪವನ್ನು ಪ್ರಕಾಶಗೊಳಿಸುತ್ತಾರೆ); ಹೀಗೆ ಜ್ಞಾನೋಪದೇಶ, ಶ್ರೀಹರಿಸ್ತುತಿಗಳೇ ನಿತ್ಯವ್ಯಾಪಾರವಾಗಿ

---

ಹೇತುವು, ವ್ಯಾಪ್ತಿಯು ಸಾಧ್ಯ; ಎಂಬುದಾಗಿ ವೇದವು, ಅನುಮಿತಿಯಿಂದ ಜ್ಞಾನಿಗಳು ಪರಮಾತ್ಮನನ್ನು ತಿಳಿದು, ಪ್ರತ್ಯಕ್ಷವಾಗಿ ಸಹ ಕಾಣುತ್ತಾರೆಂದು ಹೇಳುತ್ತದೆ. ಪ್ರಸಕ್ತವಾದ ಈ ಶ್ಲೋಕಗಳು, ಈ ಅನುಮಾನವನ್ನು ಸ್ಪಷ್ಟವಾಗಿ ನಿರೂಪಿಸಿ, ಅಸ್ವಾತಂತ್ರ್ಯಾದಿ ಹೇತುಗಳನ್ನು ತೋರಿಸಿ, ಆ ಹೇತುಗಳು ಲೋಕದಲ್ಲಿ ಸರ್ವಾನುಭವಸಿದ್ಧವೆಂದು ಹೇಳುತ್ತವೆ.

ಚಕ್ಷುರಿಂದ್ರಿಯಕ್ಕೆ ಅಭಿಮಾನಿ ದೇವತೆ, ಸೂರ್ಯನು; ಚಕ್ಷುಃ ಶಬ್ದವು ಸೂರ್ಯನನ್ನೂ ಸೂರ್ಯರಶ್ಮಿಗಳನ್ನೂ ಹೇಳುತ್ತದೆ; ರಶ್ಮಿ ಮತ್ತು ರಶ್ಮಿಯುಳ್ಳದ್ದು, ಇವುಗಳಿಗೆ ಅಭೇದವಿದೆ. ಸೂರ್ಯನು ಆಕಾಶದಲ್ಲಿ (ಸರ್ವತ್ರ) ವ್ಯಾಪ್ತನೆಂದರೆ, ತನ್ನ ರಶ್ಮಿಗಳ ಮೂಲಕವಷ್ಟೆ ರಶ್ಮಿಗಳು ಕಾಣದಿದ್ದರೂ, ಪದಾರ್ಥವು ಪ್ರಕಾಶಿತವಾದಾಗ ರಶ್ಮಿಯ ವ್ಯಾಪ್ತಿಯನ್ನು ತಿಳಿಯುತ್ತೇವೆ. ದೃಷ್ಟಾಂತದಿಂದ ಈ ಅರ್ಥವೂ ಸೂಚಿತವೆಂದು ತಿಳಿಯಬೇಕು. ಚಕ್ಷುರಿಂದ್ರಿಯವು ವ್ಯಾಪ್ತವಾದಂತೆ, ಎಂಬಲ್ಲಿ ತೇಜಸ್ಸಿನಿಂದ ವ್ಯಾಪ್ತವಾಗಿರುವಂತೆ, ಎಂಬರ್ಥವನ್ನು ತಿಳಿಯಬೇಕು. 'ಅಣವಶ್ಚ' ಎಂಬ (ಬ್ರಹ್ಮಸೂತ್ರದಲ್ಲಿ), ಇಂದ್ರಿಯಗಳೆಲ್ಲವೂ (ಚಕ್ಷುರಿಂದ್ರಿಯವೂ) ಅಣುಪರಿಮಾಣಗಳುಳ್ಳವೆಂದು ನಿರ್ಣಯಿಸಿ, ತೇಜಸ್ಸಿನಿಂದ ವ್ಯಾಪ್ತಗಳೆಂದೂ ಹೇಳಲಾಗಿದೆ.

(ಶ್ರೀಹರಿದರ್ಶನವುಳ್ಳವರು), ಜಾಗರಿತಾಃ-ಜಾಗೃತರಾಗಿರುವವರು (ಎಚ್ಚರವಾಗಿರುವವರು); ತೇ ಹಿ-ಇವರುಗಳೇ (ಈ ಜಾಗೃವಾಂಸರೆಂಬ ಜ್ಞಾನಿಗಳೇ), ವಿಶೇಷೇಣ-ಅತಿಶಯವಾಗಿ, ಪ್ರಕೃಷ್ಟತ್ವಾತ್-ಉತ್ತಮರಾದ್ದರಿಂದ, ವಿಪ್ರಾಃ-'ವಿಪ್ರ'ರೆನಿಸುತ್ತಾರೆ; ದಯಾಲವಃ - ದಯಾಲುಗಳಾದ ಇವರು, ಶುಶ್ರೂಷು ಶ್ರದ್ಧಧಾನೇಭ್ಯಃ - ಸೇವಾಶ್ರದ್ಧೆಗಳುಳ್ಳವರಿಗೆ (ಶ್ರವಣದಲ್ಲಿ ಆಸಕ್ತರಾದವರಿಗೆ), ಬ್ರಹ್ಮದೀಪಂ-ಬ್ರಹ್ಮಜ್ಞಾನವನ್ನು (ಶ್ರೀಹರಿಸ್ವರೂಪಜ್ಞಾನವನ್ನು), ಪ್ರಕುರ್ವತೇ- ಉಂಟುಮಾಡುತ್ತಾರೆ (ಪ್ರಕಾಶಗೊಳಿಸುತ್ತಾರೆ-ಉಪದೇಶಿಸುತ್ತಾರೆ); ಶುಶ್ರೂಷು ಬೋಧನಾದೀನಾಂ-ಶ್ರವಣ ಯೋಗ್ಯರಿಗೆ ಉಪದೇಶಾದಿಗಳ, (ಮತ್ತು), ಹರಿ ಸ್ತುತೇ-ಶ್ರೀಹರಿಸ್ತುತಿಯ, ವ್ಯವಹಾರಾತ್-(ನಿತ್ಯ) ವ್ಯಾಪಾರವುಳ್ಳವರಾದ್ದರಿಂದಲೂ, ಮನ್ಯುದೋಷಾದಿ ರಾಹಿತ್ಯಾತ್-ಕೋಪಾದಿ ದೋಷ ರಹಿತರಾದ್ದರಿಂದಲೂ, ತೇ-ಅವರು, ವಿಮನ್ಯವಃ- 'ವಿಮನ್ಯು'ಗಳೆಂದು, ಜ್ಞೇಯಾಃ-ತಿಳಿಯಲ್ಪಡುತ್ತಾರೆ.

**ಅಚೇತನಾನಾಂ ಭೂತಾನಾಂ ನ ರಾಶಿಶ್ಚಿತ್ವಮಾಪ್ನುಯಾತ್ ।**
**ರಾಶೀಕರಣಮಪ್ಯೇಷಾಂ ದೃಶ್ಯತೇ ಚೇತನೇಚ್ಛಯಾ ॥ ೨೮ ॥**

ಅಚೇತನಾನಾಂ-ಜಡಗಳಾದ, ಭೂತಾನಾಂ-ವಸ್ತುಗಳ, ರಾಶಿಃ-ರಾಶಿಯು (ಜಡವಸ್ತುಗಳ ಮಿಶ್ರಣವು), ಚಿತ್ವಂ-ಚೇತನತ್ವವನ್ನು ನ ಆಪ್ನುಯಾತ್-

---

(ಆತನ ಶಕ್ತಿಯಿಂದಲೇ), ಲಭಿಸುತ್ತದೆ (೨೧-೨೪).[1] ಶ್ರೀವಿಷ್ಣುವಿನ ಸಾಕ್ಷಾದ್ದರ್ಶನವನ್ನು ಪಡೆದ ಈ ಸೂರಿಗಳೇ 'ಜಾಗೃವಾಂಸ'ರೆಂದು ಕರೆಯಲ್ಪಟ್ಟಿರುವವರು; ಜಗತ್ತೆಲ್ಲವೂ ಯಾರ ವಿಷಯದಲ್ಲಿ ನಿದ್ರಿಸುತ್ತಿರುವುದೋ, ಆ ಶ್ರೀಹರಿಯ ವಿಷಯದಲ್ಲಿ, ಇವರು ಸದಾ ಎಚ್ಚರಾಗಿರುವವರು; ಆದ್ದರಿಂದಲೇ ಅವರು ನಿತ್ಯಜಾಗೃತರೆಂದು ಶ್ರುತಿಯಲ್ಲಿ

---

1. 'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ' ಎಂಬ (ಪುರುಷಸೂಕ್ತಗತ) ವೇದವಾಕ್ಯದ ವಿವರಣರೂಪವಾಗಿವೆ, ಈ ಶ್ಲೋಕಗಳು. ಈ ವಾಕ್ಯದ ವ್ಯಾಖ್ಯಾನವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ಋಗ್ಭಾಷ್ಯ ಗ್ರಂಥದಲ್ಲಿ ಹೀಗೆ ಮಾಡಿರುವರು:— 'ರಮಾಬ್ರಹ್ಮಶಿವಾದಿಭ್ಯೋ ಯದ್ವಿಷ್ಣೋಃ ಪರಮಂ ಪದಂ ನಿರ್ಮುಕ್ತಾಃ ಸಂಸಾರಾತ್ ಸೂರಯಃ ಸದಾ । ಚಕ್ಷುರ್ದಿವೀವ ವ್ಯಾಪ್ತಂ ಯದದೃಶ್ಯಂ ಫಲದರ್ಶಿತಂ...' ಇತ್ಯಾದಿ. ಇದರ ಭಾವಾರ್ಥ ಹೀಗಿದೆ:— ರಮಾ ಬ್ರಹ್ಮ ಶಿವಾದಿಗಳಿಂದ ಉತ್ತಮನಾದ ವಿಷ್ಣುವಿನ ಸ್ವರೂಪವನ್ನು, ಸಂಸಾರದಿಂದ ಮುಕ್ತರಾದ ಜ್ಞಾನಿಗಳು (ಅವರೇ ಮುಖ್ಯ ಸೂರಿಗಳು) ಸದಾ ನೋಡುತ್ತಿರುವವರು; ಆಕಾಶದಲ್ಲಿ ವ್ಯಾಪಿಸಿದ ಚಕ್ಷುಸ್ಸು ವ್ಯಾಪ್ತವಾಗಿದ್ದರೂ ಹೇಗೆ ಕಾಣುವುದಿಲ್ಲವೋ, ಮತ್ತು ಫಲದಿಂದ ಅದರ ವ್ಯಾಪ್ತಿಯು ಹೇಗೆ ಅನುಮಿತವಾಗುವುದೋ, ಹಾಗೆ, ಎಂಬ ದೃಷ್ಟಾಂತದಿಂದ, ಶ್ರುತಿಯ ತಾತ್ಪರ್ಯವನ್ನು ತಿಳಿಯಬೇಕು-ಫಲದಿಂದ ಎಂದರೆ ಚಕ್ಷುರಿಂದ್ರಿಯಕ್ಕೆ ಗೋಚರಿಸುವ ವಸ್ತುಜ್ಞಾನದಿಂದ, ಎಂದರ್ಥ. ಫಲದಿಂದ ವ್ಯಾಪ್ತಿಜ್ಞಾನ ಸಿದ್ಧವಾಗುತ್ತದೆ; ಫಲವೇ

ಹೊಂದುವುದಿಲ್ಲ; ಏಷಾಂ-(ಈ ಬಹು ಜಡವಸ್ತುಗಳ) ಇವುಗಳ, ರಾಶೀಕರಣಂ ಅಪಿ-ಒಟ್ಟುಗೂಡಿಸುವುದೂ ಸಹ (ಮಿಶ್ರಣವೂ ಸಹ). ಚೇತನೇಚ್ಛಯಾ-ಚೇತನನ ಇಚ್ಛೆಯಿಂದಲೇ, ದೃಶ್ಯತೇ-ಕಂಡುಬರುತ್ತದೆ; (ಜಡವಸ್ತುಗಳು—ವಿದ್ಯುದಾದಿ ಜಡಶಕ್ತಿಗಳು ಸಹ, ತಮಗೆ ತಾವೇ ಕೂಡಿಕೊಳ್ಳಲಾರವು).

**ನ ಹಿ ತಂತುಮೃದಾದೀನಾಂ ಚೇತನೇಚ್ಛಾಂ ವಿನಾ ಕ್ವಚಿತ್ ।**
**ಪಟಾದಿನಿರ್ಮಿತಿರ್ದೃಷ್ಟಾ ದೇಹೇಽನ್ಯಶ್ಚೇತನಸ್ತತಃ ॥ ೨೯ ॥**

ಚೇತನೇಚ್ಛಾಂ ವಿನಾ-ಚೇತನನ ಇಚ್ಛೆಯಿಲ್ಲದೇ, ಕ್ವಚಿತ್-ಎಲ್ಲಿಯೂ, ತಂತುಮೃದಾದೀನಾಂ-ನೂಲು, ಮೃತ್ತಿಕೆಗಳಿಗೆ, ಪಟಾದಿನಿರ್ಮಿತಿಃ-ಬಟ್ಟೆ ಮುಂತಾದ (ಕುಂಭ ಮೊದಲಾದ) ವಸ್ತುಗಳ ನಿರ್ಮಾಣವು, ನ ದೃಷ್ಟಾ-ಕಂಡಿಲ್ಲ ತತಃ- ಆದ್ದರಿಂದ, ದೇಹೇ-ಶರೀರದಲ್ಲಿ, ಅನ್ಯಃ-ದೇಹಭಿನ್ನನಾದ, ಚೇತನಃ-ಚೇತನನು (ಇಚ್ಛಾದಿಗಳುಳ್ಳ ವಸ್ತುವು) (ಇರುವನೆಂದು ತಿಳಿಯುತ್ತದೆ).

**ಅತ ಏವ ಹಿ ದೇಹೇಽಸ್ಮಿನ್ ಯಥಾವಚ್ಚಾಪ್ಯವಸ್ಥಿತೇ ।**
**ಸಹಸಾ ಜಾಯತೇ ಚೇಷ್ಟಾಹಾನಿಸ್ತಸ್ಮಾನ್ನ ತತ್ಸ್ಥಿತಿ ॥ ೩೦ ॥**

---

ಪ್ರಸಿದ್ಧರಾಗಿರುವರು; ಅತಿಶಯವಾಗಿ ಪ್ರಕೃಷ್ಟವಾದ ಜ್ಞಾನವುಳ್ಳವರಾದ್ದರಿಂದ, ಅವರೂ ವಿಪ್ರರೆಂದೂ ಕರೆಯಲ್ಪಡುವರು; ದಯಾಲುಗಳಾದ ಇವರು, ಶ್ರವಣಶ್ರದ್ಧೆಯುಳ್ಳ ಅಧಿಕಾರಿಜೀವರಿಗೆ, ಬ್ರಹ್ಮಜ್ಞಾನವನ್ನು ಉಪದೇಶಿಸುವರು (ಶ್ರೀವಿಷ್ಣುಸ್ವರೂಪವನ್ನು ಪ್ರಕಾಶಗೊಳಿಸುತ್ತಾರೆ); ಹೀಗೆ ಜ್ಞಾನೋಪದೇಶ, ಶ್ರೀಹರಿಸ್ತುತಿಗಳೇ ನಿತ್ಯವ್ಯಾಪಾರವಾಗಿ

---

ಹೇತುವು, ವ್ಯಾಪ್ತಿಯು ಸಾಧ್ಯ; ಎಂಬುದಾಗಿ ವೇದವು, ಅನುಮಿತಿಯಿಂದ ಜ್ಞಾನಿಗಳು ಪರಮಾತ್ಮನನ್ನು ತಿಳಿದು, ಪ್ರತ್ಯಕ್ಷವಾಗಿ ಸಹ ಕಾಣುತ್ತಾರೆಂದು ಹೇಳುತ್ತದೆ. ಪ್ರಸಕ್ತವಾದ ಈ ಶ್ಲೋಕಗಳು, ಈ ಅನುಮಾನವನ್ನು ಸ್ಪಷ್ಟವಾಗಿ ನಿರೂಪಿಸಿ, ಅಸ್ವಾತಂತ್ರ್ಯಾದಿ ಹೇತುಗಳನ್ನು ತೋರಿಸಿ, ಆ ಹೇತುಗಳು ಲೋಕದಲ್ಲಿ ಸರ್ವಾನುಭವಸಿದ್ಧವೆಂದು ಹೇಳುತ್ತವೆ.

ಚಕ್ಷುರಿಂದ್ರಿಯಕ್ಕೆ ಅಭಿಮಾನಿ ದೇವತೆ, ಸೂರ್ಯನು; ಚಕ್ಷುಃ ಶಬ್ದವು ಸೂರ್ಯನನ್ನೂ ಸೂರ್ಯರಶ್ಮಿಗಳನ್ನೂ ಹೇಳುತ್ತದೆ; ರಶ್ಮಿ ಮತ್ತು ರಶ್ಮಿಯುಳ್ಳದ್ದು ಇವುಗಳಿಗೆ ಅಭೇದವಿದೆ. ಸೂರ್ಯನು ಆಕಾಶದಲ್ಲಿ (ಸರ್ವತ್ರ) ವ್ಯಾಪ್ತನೆಂದರೆ, ತನ್ನ ರಶ್ಮಿಗಳ ಮೂಲಕವಷ್ಟೆ! ರಶ್ಮಿಗಳು ಕಾಣದಿದ್ದರೂ, ಪದಾರ್ಥವು ಪ್ರಕಾಶಿತವಾದಾಗ ರಶ್ಮಿಯ ವ್ಯಾಪ್ತಿಯನ್ನು ತಿಳಿಯುತ್ತೇವೆ. ದೃಷ್ಟಾಂತದಿಂದ ಈ ಅರ್ಥವೂ ಸೂಚಿತವೆಂದು ತಿಳಿಯಬೇಕು. ಚಕ್ಷುರಿಂದ್ರಿಯವು ವ್ಯಾಪ್ತವಾದಂತೆ, ಎಂಬಲ್ಲಿ ತೇಜಸ್ಸಿನಿಂದ ವ್ಯಾಪ್ತವಾಗಿರುವಂತೆ, ಎಂಬರ್ಥವನ್ನು ತಿಳಿಯಬೇಕು. 'ಅಣವಶ್ಚ' ಎಂಬ (ಬ್ರಹ್ಮಸೂತ್ರದಲ್ಲಿ), ಇಂದ್ರಿಯಗಳೆಲ್ಲವೂ (ಚಕ್ಷುರಿಂದ್ರಿಯವೂ) ಅಣುಪರಿಮಾಣಗಳುಳ್ಳವೆಂದು ನಿರ್ಣಯಿಸಿ, ತೇಜಸ್ಸಿನಿಂದ ವ್ಯಾಪ್ತಗಳೆಂದೂ ಹೇಳಲಾಗಿದೆ.

ಜಾಯತೇ ವ್ಯವಹಾರೋಽತ್ರ ತಸ್ಮಾದನ್ಯೋಽಸ್ತಿ ಚೇತನಃ ।
ಯೇನ ಸ್ಥಿತೇನ ದೇಹೇಽಸ್ಮಿನ್ ಜೀವತೀತಿ ಚ ಕಥ್ಯತೇ ॥ ೩೦ ॥

ಯೋ ಜಾನಾತಿ ಸುಖಂ ದುಃಖಂ ತದ್ಧೇತುಜ್ಞಾನತಶ್ಚ ಯಃ ।
ಪ್ರವೃತ್ತಿಂ ಚ ನಿವೃತ್ತಿಂ ಚೇಷ್ಟಾದ್ಯಾಚರತಿ ಸರ್ವದಾ ॥ ೩೧ ॥

ಮೃದಾದಿಜಡವಸ್ತೂನಾಂ ನೈತತ್ಸಂಭವಮರ್ಹತಿ ।
ಪಟಾದೌ ದರ್ಶನಾಭಾವಾತ್ತಸ್ಮಾಜ್ಜೀವೋಽನ್ಯ ಉಚ್ಯತೇ ॥ ೩೨ ॥

ಅತ ಏವ-ದೇಹಭಿನ್ನ ಚೇತನನಿರುವುದರಿಂದಲೇ, ಯಥಾವತ್ ಚ-ಯಾವ ಸ್ಥಿತಿಯಲ್ಲಿಯೇ ಆಗಲಿ, ಅವಸ್ಥಿತೇ-ಇರುವ, ಅಸ್ಮಿನ್ ದೇಹೇ-ಈ ದೇಹದಲ್ಲಿ ಸಹಸಾ-ಇದ್ದಕ್ಕಿದ್ದಂತೆ (ಹೊರಗಿನ ಬೇರಾವ ಕಾರಣಗಳೂ ಇಲ್ಲದೇ), ಚೇಷ್ಟಾ-ಚೇಷ್ಟೆಯು (ಕ್ರಿಯೆಯು), ಜಾಯತೇ-ಉಂಟಾಗುತ್ತದೆ; ತಸ್ಮಾತ್-ಅದರಿಂದ, ಹಾನಿಃ-ಇಲ್ಲದಿರುವಿಕೆಯು, (ಚೇಷ್ಟಾಹಾನಿಯು-ನಿಶ್ಚೇಷ್ಟತೆಯು), ಮೃತಃ ಇತಿ ತು-ಮೃತನಾದನೆಂದೇ, ವ್ಯವಹಾರಃ-ವ್ಯವಹಾರವು, ಅತ್ರ-ಈ ದೇಹವಿಷಯದಲ್ಲಿ ಜಾಯತೇ-ಉಂಟಾಗುತ್ತದೆ; ತಸ್ಮಾತ್-ಆದ್ದರಿಂದ, ಅನ್ಯಃ-ಭಿನ್ನನಾದ, ಚೇತನಃ-

---

ಉಳ್ಳವರಾದ್ದರಿಂದಲೂ, ಕೋಪಾದಿ ದೋಷ ರಹಿತರಾದ್ದರಿಂದಲೂ, ಇವರೇ 'ವಿಮನ್ಯವಃ') ಎಂದೂ ಹೇಳಲ್ಪಡುವರು (೨೫-೨೭).[1] ಜಗತ್ತಿನ ಜಡಚೇತನ ಪದಾರ್ಥಗಳು ಪರಸ್ಪರವಾಗಿ ಸೃಷ್ಟ್ಯಾದಿಗಳಿಗೆ ಕಾರಣವಾಗಲಾರವೆಂದು ಸಯುಕ್ತಿಕವಾಗಿ ಉಪಪಾದಿಸುತ್ತಾರೆ:— ಅಚೇತನ ಪದಾರ್ಥಗಳ ರಾಶಿಯು (ಗುಂಪು-ಮಿಶ್ರಣವು),

---

1. 'ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ'—ಎಂಬ, ಹಿಂದಿನ ಶ್ಲೋಕಗಳ ಅಡಿಟಿಪ್ಪಣಿಯಲ್ಲಿ ಉದಾಹರಿಸಿರುವ ಶ್ರುತಿಯ, ಮುಂದಿನ ವಾಕ್ಯವಾದ, ಈ ಶ್ರುತಿಯ ಅರ್ಥವಿವರಣೆಯೇ ಈ ಶ್ಲೋಕಗಳಲ್ಲಿ ಪ್ರಸಕ್ತವಾಗಿದೆ. ಈ ಶ್ರುತಿಯ ವ್ಯಾಖ್ಯಾನವಾದ ಋಗ್ಭಾಷ್ಯದ ವಾಕ್ಯವು ಹೀಗಿದೆ:— 'ಸಂದೀಪಯಂತಿ ವಿಜ್ಞಾನೈಃ ಸಂಸಾರಾತ್ ಪ್ರಾಪ್ತಜಾಗರಾಃ । ವಿಪನ್ಯವೋ ಜ್ಞಾನಿತಮಾಃ ವಿಷ್ಣೋರ್ಯತ್ತತ್ಪರಮಂ ಪದಂ ।'—ಇದರ ಭಾವಾರ್ಥವೇನೆಂದರೆ:— ನಿತ್ಯಜಾಗರಾವಸ್ಥೆಯಲ್ಲಿರುವ (ಸಂಸಾರದಿಂದ ಮುಕ್ತರಾದ) ಮುಖ್ಯಜ್ಞಾನಿಗಳು, ಶ್ರೀವಿಷ್ಣುವಿನ ಸರ್ವೋತ್ಕೃಷ್ಟಸ್ವರೂಪವನ್ನು, ವೇದಾದಿ ಜ್ಞಾನಸಾಧನಗಳಿಂದ, ತಿಳಿದಿರುತ್ತಾರೆ ಮತ್ತು ಅನ್ಯರಿಗೆ ಶ್ರೀಹರಿಸ್ವರೂಪವನ್ನು ಉಪದೇಶಿಸಿ ಪ್ರಕಾಶಗೊಳಿಸುತ್ತಾರೆ.

ಈ ಶ್ರುತಿವಾಕ್ಯದಲ್ಲಿ 'ವಿಪನ್ಯವಃ' ಎಂದಿದೆ; ಈ ಶ್ಲೋಕಭಾಗದಲ್ಲಿ 'ವಿಮನ್ಯವಃ' ಎಂದಿದೆ; 'ಮನ್ಯು' ಎಂಬುದಕ್ಕೆ ಕೋಪವೆಂಬರ್ಥವೂ ಇದೆ; ಜ್ಞಾನೋತ್ಸಾಹವೆಂಬರ್ಥವೂ ಇದೆ; ವಿಪನ್ಯವಃ—ವಿಶೇಷಜ್ಞಾನಿಗಳೆಂಬರ್ಥವೂ, (ಪನಜ್ಞಾನೇ) ಎಂಬ ಧಾತ್ವರ್ಥದಿಂದ ಸಿದ್ಧವಾಗುತ್ತದೆ; ಆದ್ದರಿಂದ ಕೋಪಾದಿ ದೋಷರಹಿತರೆಂಬ ಅರ್ಥದೊಂದಿಗೆ, ವಿಶೇಷ ಜ್ಞಾನಿಗಳೆಂಬರ್ಥ

ಚೇತನನು, ಅಸ್ತಿ-ಇರುವನು; ಅಸ್ಮಿನ್ ದೇಹೇ-ಈ ದೇಹದಲ್ಲಿ, ಯೇನ ಸ್ಥಿತೇನ-ಯಾರ ಇರುವಿಕೆಯಿಂರ, ಜೀವತಿ ಇತಿ-ಬದುಕಿದೆ ಎಂದು, ಕಥ್ಯತೇ-(ಈ ದೇಹವು) ಹೇಳಲ್ಪಡುತ್ತರೆ; ಯಃ-ಯಾವನು, ಸುಖಂ-ಸುಖವನ್ನೂ, ದುಃಖಂ-ಈ ದುಃಖವನ್ನೂ ಜಾನಾತಿ-ತಿಳಿಯುತ್ತಾನೆಯೋ, ಚ-ಮತ್ತು ಯಃ-ಯಾರು, ತದ್ಧೇತುಜ್ಞಾನತಃ-ಆ ಸುಖದುಃಖಕಾರಣಗಳ (ಸಾಧನಗಳ) ಜ್ಞಾನದಿಂದ, ಪ್ರವೃತ್ತಿಂ-ಪ್ರವೃತ್ತಿಯನ್ನೂ (ಯತ್ನವನ್ನೂ), ನಿವೃತ್ತಿಂ ಚ-ಬಿಡುವುದನ್ನೂ (ಯತ್ನತ್ಯಾಗವನ್ನೂ), ಇತ್ಯಾದಿ-ಈ ಮೊದಲಾದುದನ್ನು, ಸರ್ವದಾ-ಸದಾ, ಆಚರತಿ-ಆಚರಿಸುತ್ತಾನೆ (ಮಾಡುತ್ತಾನೆ) ಯೋ, (ಸಃ - ಅವನೇ ದೇಹ ಭಿನ್ನನಾದ, ಚೇತನಃ - ಚೇತನನು); ಮೃದಾದಿ ಜಡ ವಸ್ತೂನಾಂ-ಮಣ್ಣು ಮೊದಲಾದ ಜಡವಸ್ತುಗಳಿಗೆ ಏತತ್-ಇದು (ಪ್ರವೃತ್ತಿ ನಿವೃತ್ತಿ ಮತ್ತು ತತ್ಕಾರಣಗಳಾದ ಸುಖದುಃಖಗಳ ಅನುಭವವು), ಪಟಾದೌ-ಬಟ್ಟೆ ಮುಂತಾದ್ದರಲ್ಲಿ ದರ್ಶನಾಭಾವಾತ್-ಕಂಡಿಲ್ಲವಾದ್ದರಿಂದ, ಸಂಭವಂ-ಸಂಭವವನ್ನು (ಉಂಟಾಗುವಿಕೆಯನ್ನು), ನ ಅರ್ಹತಿ - ಹೊಂದುವುದಿಲ್ಲ (ಜಡವಸ್ತು ಈ ಅನುಭವ 'ಪ್ರವೃತ್ತ್ಯಾದಿಗಳ ಯೋಗ್ಯತೆಯಿಲ್ಲ); ತಸ್ಮಾತ್-ಆದ್ದರಿಂದ, ಜೀವಃ-ಜೀವನು, ಅನ್ಯಃ-ರೇಹಭಿನ್ನನೆಂದು, ಉಚ್ಯತೇ - ಹೇಳಲ್ಪಡುತ್ತಾನೆ.

**ಸೋಽಪಿ ನ ಸ್ವೇಚ್ಛಯಾ ದೇಹಂ ನಾಪ್ನುತೇ ನಾತ್ರ ತಿಷ್ಠತಿ ।**

---

ಚೇತನತ್ವವನ್ನು ಹೊಂದುವುದಿಲ್ಲ (ಜ್ಞಾನೇಚ್ಛಾದಿ ಕ್ರಿಯಾಶಕ್ತಿಯನ್ನು ಹೊಂದುವುದಿಲ್ಲ); ಅವುಗಳ ರಾಶೀಕರಣಕ್ಕೆ ಸಹ ಚೇತನನು ಅವಶ್ಯಕ (ತಮಗೆ ತಾವೇ ಕೂಡಿಕೊಳ್ಳಲಾರವು) ಎಂದು (ಪ್ರತ್ಯಕ್ಷದಿಂದಲೇ) ಕಂಡುಬರುತ್ತದೆ (೨೮). ಚೇತನನೊಬ್ಬನ ಇಚ್ಛೆಯಿಲ್ಲದೇ, ಕೇವಲ ನೂಲಿನಿಂದ ಬಟ್ಟೆಯಾಗಲೀ,ಮಣ್ಣಿನಿಂದ ಗಡಿಗೆಯಾಗಲಿ (ಈ ಮುಂತಾದ ಕಾರ್ಯಗಳು) ಎಲ್ಲಿಯೂ ಕಂಡಿಲ್ಲ; ಆದ್ದರಿಂದ ದೇಹದಲ್ಲಿ, ದೇಹಭಿನ್ನನಾದ, ಚೇತನನು (ಇಚ್ಛಾದಿ ಶಕ್ತಿಯುಳ್ಳ ವಸ್ತು) ಇರುವನೆಂದು ತಿಳಿಯುತ್ತದೆ (೨೯). ದೇಹದಲ್ಲಿ ದೇಹಭಿನ್ನನಾದ ಚೇತನನಿರುವುದರಿಂದಲೇ, ದೇಹವು ಯಾವ ಅವಸ್ಥೆಯಲ್ಲಿದ್ದರೂ, ಹೊರಗಿನ ಯಾವ ಕಾರಣವೂ ಇಲ್ಲದೇ (ಚಲನಾದಿ) ಚೇಷ್ಟೆಯು (ಕ್ರಿಯೆಗಳು) ಕಂಡುಬರುತ್ತದೆ; ಈ ಚೇಷ್ಟೆಯು ನಿಂತುಹೋದರೆ, ಆ ದೇಹವು ಮೃತದೇಹವೆಂಬ (ಶವವೆಂಬ) ವ್ಯವಹಾರಕ್ಕೆ ಗುರಿಯಾಗುತ್ತದೆ; ಚೇತನವಿರುವ ಪರ್ಯಂತ

---

ವನ್ನು 'ವಿಮನ್ಯವಃ' ಎಂಬುದಕ್ಕೆ ತಿಳಿಯಬಹುದು. ಶ್ರುತಿವಾಕ್ಯದಲ್ಲಿಯೇ 'ವಿಮನ್ಯವಃ' ಮತ್ತು 'ವಿಪನ್ಯವಃ' ಎಂಬ ಪಾಠಭೇದವೂ ಇರಲಿಕ್ಕೆ ಸಾಕು. ಜ್ಞಾನಿಗಳೇ ಜಾಗೃತರೆಂಬಲ್ಲಿ 'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ । ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥' ಎಂಬ (ಗೀತಾ) ವಾಕ್ಯವೂ ಪ್ರಮಾಣವಾಗಿದೆ.

**ಸ್ವಯಂ ಮುಂಚತಿ ನೈವಾಮುಂ ಕಿಂತು ಸರ್ವಂ ಪರೇಚ್ಛಯಾ ॥ ೩೪ ॥**

**ಯಃ ಪರಃ ಸ ಹರಿಃ ಸರ್ವಕರ್ತಾ ತದನುಮೀಯತೇ ।**

ಸ ಅಪಿ-(ದೇಹಭಿನ್ನನಾದ) ಆ ಜೀವನಾದರೂ, ಸ್ವೇಚ್ಛಯಾ-ತನ್ನ ಇಚ್ಛಾನುಸಾರ, ದೇಹಂ-ದೇಹವನ್ನು ನ ಅಪ್ನುತೇ-ಹೊಂದುವುದಿಲ್ಲ ಅತ್ರ-ದೇಹದಲ್ಲಿ ನ ತಿಷ್ಠತಿ-(ಸ್ವೇಚ್ಛೆಯಿಂದ) ನಿಲ್ಲುವುದಿಲ್ಲ ಅಮುಂ-ಈ ದೇಹವನ್ನು ಸ್ವಯಂ-ತಾನೇ (ಇಚ್ಛಿಸಿ), ನ ಮುಂಚತಿ-ಬಿಡುವುದಿಲ್ಲ ಕಿಂತು-ಮತ್ತೇನೆಂದರೆ, ಸರ್ವಂ-ಈ ಎಲ್ಲವೂ, ಪರೇಚ್ಛಯಾ—ಮತ್ತೊಬ್ಬನ ಇಚ್ಛೆಯಂತೆ (ನಡೆಯುತ್ತದೆ); ಯಃ ಪರಃ-ಯಾರು (ಈ) ಅನ್ಯನೋ, ಸಃ ಹರಿಃ-ಆತನೇ ಶ್ರೀಹರಿಯು; ಸರ್ವಕರ್ತಾ-ಸರ್ವಕರ್ತನು, ತತ್-(ತಸ್ಮಾತ್) ಈ ಕಾರಣದಿಂದ (ಜೀವನಿಗೆ ಎಲ್ಲವೂ ಅನ್ಯನಿಂದ ಸಂಭವಿಸುವುದರಿಂದಲೂ ಅಂಥವರು ಅನೇಕರೆಂಬುದು ಅಯುಕ್ತವಾದುದರಿಂದಲೂ), ಅನುಮೀಯತೇ-(ಸರ್ವಕರ್ತನೆಂದು) ಊಹಿಸಲಾಗುತ್ತದೆ.

**ನಹಿ ರೇತೋ ರಜೋ ಯೋಗಮಾತ್ರಾಜ್ಜಾಯಂತಿ ಜಂತವಃ ॥ ೩೫ ॥**

**ಯೋಗ ಯೇವಾಪ್ಯಸಂಭಾವ್ಯ ಈಶ್ವರೇಚ್ಛಾಂ ವಿನಾ ಸದಾ ।**
**ಕ್ವಚಿದುತ್ಪದ್ಯತೇ ಕಿಂಚಿದ್ಗೋಮಯಾದೇರ್ಯಥಾ ಕೃಮಿಃ ॥ ೩೬ ॥**

**ತತ್ರಾಪಿ ವೃಶ್ಚಿಕಾದೀನಾಂ ಪ್ರಭವೋ ನೈಕಧೇಕ್ಷ್ಯತೇ ।**

ರೇತೋ ರಜೋ ಯೋಗಮಾತ್ರಾತ್-ಪುರುಷರೇತಸ್ಸು ಮತ್ತು ಸ್ತ್ರೀಶೋಣಿತಗಳ ಯೋಗ (ಕೂಡುವಿಕೆ) ಮಾತ್ರದಿಂದ, ಜಂತವಃ-ಪ್ರಾಣಿಗಳು, ನ ಜಾಯಂತೇ-

---

ಬದುಕಿರುವುದೆಂದು ವ್ಯವಹರಿಸಲ್ಪಡುತ್ತದೆ; ಈ ದೇಹದಲ್ಲಿ ಯಾವುದು, ಸುಖದುಃಖಗಳನ್ನು ತಿಳಿದು ಅವುಗಳ ಪ್ರಾಪ್ತಿ ಮತ್ತು ನಿವೃತ್ತಿಗಾಗಿ, ಮಾಡಬೇಕಾದ ಸಾಧನಗಳನ್ನು ತಿಳಿದು, ಯತ್ನವನ್ನು ಮಾಡುವುದು, ಬಿಡುವುದು, ಎಂಬ ವ್ಯಾಪಾರದಲ್ಲಿ ತೊಡಗುತ್ತದೆಯೋ, ಅದೇ ಜೀವವೆನಿಸುತ್ತದೆ; ಮೃದಾದಿ ಜಡವಸ್ತುಗಳಿಗೆ, ಸುಖಾದಿಗಳ ಜ್ಞಾನವಾಗಲಿ, ಅದಕ್ಕಾಗಿ ಪ್ರವೃತ್ತಿಸುವುದಾಗಲಿ ಕಂಡುಬರುವುದಿಲ್ಲ ಮತ್ತು ಈ ಅನುಭವ ಮತ್ತು ಯತ್ನಾದಿಗಳಿಗೆ ಜಡವಸ್ತುಗಳು ಅರ್ಹಗಳಲ್ಲ; ಅತ ಏವ ಜೀವನು ದೇಹಭಿನ್ನನೇ ಸರಿ (೩೦-೩೩). ಈ ಜೀವನು, ತನ್ನ ಇಚ್ಛೆಯಿಂದ ತನ್ನ ದೇಹವನ್ನು ಹೊಂದುವುದಿಲ್ಲ ತನ್ನ ಇಚ್ಛೆಯಂತೆ (ಮತ್ತು ಇಚ್ಛೆ ಬರುವವರೆಗೂ) ಅಲ್ಲಿರುವುದಿಲ್ಲ ಜೀವನು ತನ್ನ ದೇಹವನ್ನು ತಾನೇ ಇಚ್ಛಿಸಿ ಬಿಡುವುದೂ ಇಲ್ಲ (ಎಂಥ ಹೀನವಾದರೂ ರೋಗಾದಿ ಗ್ರಸ್ತವಾದುದಾದರೂ ಆ ದೇಹವನ್ನು ಬಿಡಲು ಯಾರೂ ಇಚ್ಛಿಸುವುದಿಲ್ಲ); ಈ ಎಲ್ಲವೂ, (ದೇಹಪ್ರಾಪ್ತಿ ಅಲ್ಲಿರುವಿಕೆ, ಅದನ್ನು ತ್ಯಜಿಸುವುದು, ಎಲ್ಲವೂ) ಪರನಿಂದ (ಇನ್ನೊಬ್ಬ

ಹುಟ್ಟುವುದಿಲ್ಲ, ಹಿ-ಇದು ನಿಶ್ಚಯವು; ಈಶ್ವರೇಚ್ಛಾಂ-ಶ್ರೀಹರೀಚ್ಛೆಯನ್ನು ವಿನಾ-ಬಿಟ್ಟು ಸದಾ-ಎಲ್ಲ ಕಾಲದಲ್ಲಿ (ಸ್ತ್ರೀಪುರುಷರು ಕೂಡಿದ ಎಲ್ಲ ಕಾಲದಲ್ಲಿ), ಯೋಗಃ ಏವ-(ರೇತೋರಜಗಳ) ಯೋಗವೇ, ಅಸಂಭಾವ್ಯಃ-ಅಸಂಭಾವಿತವು (ಸಂಭವಿಸುವ ನಿಯಮವಿಲ್ಲ); ಕ್ವಚಿತ್-ಕೆಲವು ವೇಳೆ (ಕೆಲವು ಸ್ಥಾನವಿಶೇಷಗಳಲ್ಲಿ) (ಇವುಗಳ ಯೋಗವಿಲ್ಲದೆಯೂ), ಕಿಂಚಿತ್-ಕೆಲವು ಜಂತುಗಳು, ಗೋಮಯಾದೇಃ-ಗೋಮಯಾದಿ (ಶಗಣಿ, ಕೆಸರು ಮೊದಲಾದವು)ಗಳಿಂದ, ಯಥಾಕ್ರಮಿಃ-ಕ್ರಿಮಿಗಳು ಹುಟ್ಟುವಂತೆ, ಉತ್ಪದ್ಯತೇ-ಹುಟ್ಟುತ್ತವೆ; ತತ್ರಾಪಿ-ಅಲ್ಲಿಯೂ ಸಹ (ಗೋಮಯಾದಿಗಳಲ್ಲಿ ಸಹ), ನೈಕಧಾ-ವಿವಿಧವಾದ, ವೃಶ್ಚಿಕಾದೀನಾಂ-ಚೇಳು ಮೊದಲಾದವುಗಳ, ಪ್ರಭವಃ-ಉತ್ಪತ್ತಿಯು, ಈಕ್ಷ್ಯತೇ-ಕಂಡುಬರುತ್ತದೆ.

**ಉಪ್ತಮಪ್ಯತ್ರ ಯತ್ಕಿಂಚಿತ್ ನ ಪ್ರರೋಹತಿ ಚಾಂಕುರಂ ॥ ೩೭ ॥**

**ಅನುಪ್ತಂ ಜಾಯತೇ ಕ್ವಾಪಿ ತಚ್ಚ ನಾನಾವಿಧಂ ಪುನಃ ।**

ಅತ್ರ-ಇಲ್ಲಿ (ಭೂಮಿಯಲ್ಲಿ), ಯತ್ಕಿಂಚಿತ್-ಯಾವುದೊಂದು (ಬೀಜವು), ಉಪ್ತಂ ಅಪಿ-ಬಿತ್ತಲ್ಪಟ್ಟರೂ, ನ ಪ್ರರೋಹತಿ-ಬೆಳೆಯುವುದಿಲ್ಲ (ಅಂಕುರ ಸಹ ಹುಟ್ಟುವುದಿಲ್ಲ); ಕ್ವಾಪಿ-ಮತ್ತೆ ಅನ್ಯತ್ರ, ಅನುಪ್ತಂ-ಬಿತ್ತದಿದ್ದರೂ, ಅಂಕುರಂ- ಅಂಕುರವು, ಜಾಯತೇ-ಹುಟ್ಟುತ್ತದೆ; ಪುನಃ ತಚ್ಚ-ಮತ್ತು ಅದಾದರೋ, ನಾನಾವಿಧಂ- ಬಹು ವಿಧವಾಗಿರುತ್ತವೆ (ಯಾವ ಬೀಜವನ್ನೂ ಬಿತ್ತದೇ ನಾನಾವಿಧ ಸಸ್ಯಾದಿಗಳು ಹುಟ್ಟಿಕೊಳ್ಳುತ್ತವೆ).

**ನ ಹಿ ಶ್ವಾಸಮೋಕ್ಷೇಪಿ ಜೀವಸ್ವಾತಂತ್ರ್ಯಮೀಕ್ಷ್ಯತೇ ॥ ೩೮ ॥**

**ತಸ್ಮಾದಸ್ತೀಶ್ವರಃ ಕೋಪಿ ಯತಃ ಸೃಷ್ಟ್ಯಾದಿ ಚಾಸ್ಯ ಹಿ ।**

---

ಚೇತನನ ಇಚ್ಛಾನುಸಾರ) ನಡೆಯುತ್ತದೆ; ಈ ಪರನೇ ಶ್ರೀಹರಿಯು— ಆತನೇ ಸರ್ವಕರ್ತನು, ಎಂದು ತರ್ಕದಿಂದ ಸಹ ಸಿದ್ಧಿಸುತ್ತದೆ (೩೪). ಜೀವರ ಉತ್ಪತ್ತಿಯು (ದೇಹಪ್ರಾಪ್ತಿಯು) ಪುರುಷ ಸ್ತ್ರೀ ಸಂಗದಿಂದ ಆಗುವುದು ಕಂಡಿದೆ, ಎಂದರೆ, ಹೇಳುತ್ತಾರೆ:—ಶುಕ್ರಶ್ರೋಣಿತಯೋಗ ಮಾತ್ರದಿಂದ ಪ್ರಾಣಿಗಳು ಹುಟ್ಟುವುದಿಲ್ಲ; ಈಶ್ವರೇಚ್ಛೆಯಿಲ್ಲದೇ ಅವುಗಳ (ಶುಕ್ರ ಶೋಣಿತಗಳ) ಯೋಗವೂ(ಕೂಡುವಿಕೆಯೂ) ಸಹ ಸಂಭವಿಸುವುದಿಲ್ಲ; ಕೆಲವೆಡೆ ಕ್ರಿಮಿ ಮೊದಲಾದವುಗಳು ಗೋಮಯದಿಂದ ಹುಟ್ಟುತ್ತವೆ; (ಅಲ್ಲಿ ಪುರುಷ ಸ್ತ್ರೀ ಯೋಗವೇ ಇಲ್ಲ—ಶುಕ್ರಶೋಣಿತ ಯೋಗದ ಸಂಭವವೇ ಇಲ್ಲವಷ್ಟೆ); ಅಲ್ಲಿಯೂ ಸಹ (ಗೋಮಯಾದಿಗಳಲ್ಲಿ) ಚೇಳು ಮೊದಲಾದ ವಿವಿಧ ಪ್ರಾಣಿಗಳ ಉತ್ಪತ್ತಿಯು ಕಂಡುಬರುತ್ತದೆ(೩೫-೩೬). ಮತ್ತು ಭೂಮಿಯಲ್ಲಿ

ಶ್ವಾಸಮೋಕ್ಷೇ ಅಪಿ- ಉಸಿರುಬಿಡುವುದರಲ್ಲಿ ಸಹ, ಜೀವಸ್ವಾತಂತ್ರ್ಯಂ- ಜೀವನಿಗೆ ಸ್ವಾತಂತ್ರ್ಯವು (ಸ್ವೇಚ್ಛಾನುಸಾರ ಪ್ರವೃತ್ತಿಯು, ನ ಹಿ ಈಕ್ಷ್ಯತೇ- ಕಂಡುಬರುವುದಿಲ್ಲವಷ್ಟೆ (ಶ್ವಾಸವನ್ನು ಹೊರಗೆ ಬಿಡರೇ—ಅಥವಾ ಒಳಗೆ ತೆಗೆದುಕೊಳ್ಳರೇ ಕೂಡುವುದೇ-ತಟಸ್ಥನಾಗಿರುವುದೇ ನನ್ನ ಇಚ್ಛೆಯೆಂದು, ಯಾರಾದರೂ ಜೀವಿಸಬಲ್ಲರೇ ?); ತಸ್ಮಾತ್- ಆದ್ದರಿಂದ, ಯತಃ- ಯಾವಾತನಿಂದ, ಅಸ್ಯ- ಈ ಜಗತ್ತಿನ, ಸೃಷ್ಟ್ಯಾದಿ- ಸೃಷ್ಟಿ ಮೊದಲಾದುದೋ (ಆಗುತ್ತವೆಯೋ), ಕೋಪಿ ಈಶ್ವರಃ- ಯಾವನೊಬ್ಬ ಸರ್ವಕರ್ತನು (ಸರ್ವಶಕ್ತನು-ಸ್ವತಂತ್ರನು- ಸರ್ವನಿಯಾಮಕನು), ಅಸ್ತಿ- ಇರುತ್ತಾನೆ; ಇರಲೇಬೇಕೆಂದು ಸಿದ್ಧವಾಗುತ್ತದೆ).

ಪ್ರತ್ಯಕ್ಷೇಣಾನುಮಾನೇನ ಶಬ್ದೇನಾಪಿ ಪ್ರಜಾಯತೇ ॥ ೬೯ ॥

ನಿರ್ದೋಷೇಣಾರ್ಥವಿಜ್ಞಾನಂ ಸದೋಷೇಣ ವಿಪರ್ಯಯಃ ।
ಸಂಶಯೋ ನಾಪಿ ಜಾಯೇತ ಪ್ರವೃತ್ತಿಶ್ಚ ನಿವರ್ತತೇ ॥ ೭೦ ॥

ಜ್ಞಾನಾದೇವ ಭವೇನ್ನೃಣಾಂ ಜ್ಞಾನೇ ತದ್ಯತ್ನಮಾಚರೇತ್ ।

ನಿರ್ದೋಷೇಣ- ದೋಷವಿಲ್ಲದ, ಪ್ರತ್ಯಕ್ಷೇಣ- ಪ್ರತ್ಯಕ್ಷದಿಂದಲೂ, ಅನುಮಾನೇನ- ಅನುಮಾನದಿಂದಲೂ, ಅಪಿ- ಮತ್ತು ಶಬ್ದೇನ- ಆಗಮ (ವೇದಾದಿ ಸಚ್ಛಾಸ್ತ್ರ) ದಿಂದಲೂ, ಅರ್ಥವಿಜ್ಞಾನಂ- ಈಶ್ವರಾದಿ ಸಕಲ ವಸ್ತುಗಳ ಯಥಾರ್ಥ ಜ್ಞಾನವು, ಪ್ರಜಾಯತೇ- ಉಂಟಾಗುತ್ತದೆ; ಸದೋಷೇಣ-(ಇವು) ದೋಷಯುಕ್ತವಾದರೆ, ವಿಪರ್ಯಯಃ- ವಿರುದ್ಧವಾದ ಜ್ಞಾನವು (ಅನ್ಯಥಾಜ್ಞಾನ ಅಥವಾ . ಮಿಥ್ಯಾಜ್ಞಾನವು), ಪ್ರಜಾಯತೇ- ಉಂಟಾಗುತ್ತದೆ; (ಪ್ರಮಾಣಗಳು ನಿರ್ದುಷ್ಟಗಳಾಗಿದ್ದರೆ) ಸಂಶಯಃ ಅಪಿ- ಸಂಶಯಜ್ಞಾನವೂ ಸಹ, ನ ಜಾಯೇತ- ಹುಟ್ಟುವುದಿಲ್ಲ; ಚ- ಮತ್ತು ಪ್ರವೃತ್ತಿ-

---

ಬಿತ್ತಿದ ಬೀಜವು ಕೆಲವು ವೇಳೆ ಅಂಕುರಿಸುವುದಿಲ್ಲ; ಅನ್ಯತ್ರ ಬೇರೆ ಸ್ಥಾನವಿಶೇಷಗಳಲ್ಲಿ ಬಿತ್ತದಿದ್ದರೂ ಸಸ್ಯಾದಿಗಳು ಹುಟ್ಟುತ್ತವೆ—ಮತ್ತು ವಿಶೇಷವೇನೆಂದರೆ ಅವು ನಾನಾ ಪ್ರಕಾರವಾಗಿರುತ್ತವೆ(೬೭). ಇಷ್ಟುಮಾತ್ರವಲ್ಲ; ಜೀವನು ಉಸಿರುಬಿಡುವುದರಲ್ಲಿ ಸಹ ಸ್ವತಂತ್ರನಲ್ಲ (ಇತರ ನಾನಾಕ್ರಿಯೆಗಳಲ್ಲಿ ಅಸ್ವತಂತ್ರನೆಂದು ಹೇಳಲೇನಿದೆ?); (ಒಬ್ಬ ಜೀವನನ್ನು ಮತ್ತೊಬ್ಬನು ನಿಯಂತ್ರಿಸುವನೆಂದು ತಿಳಿಯುವುದು—ಅವನಿಗೆ ಮತ್ತೊಬ್ಬ ನಿಯಾಮಕನು—ಅವನಿಗೆ ಮತ್ತೊಬ್ಬ, ಹೀಗೆ ಅನವಸ್ಥಾದಿ ನಾನಾ ದೋಷಯುಕ್ತವಾಗುತ್ತದೆ); ಆದ್ದರಿಂದ ಈ ಜಗತ್ತಿನ ಸೃಷ್ಟ್ಯಾದಿಗಳನ್ನು ನಡೆಸುವ ಒಬ್ಬ ಈಶ್ವರನು ಇರುವನೆಂದು (ಇರಲೇಬೇಕೆಂದು) ಸಿದ್ಧವಾಗುತ್ತದೆ (೬೮). ಈ ವಿಧ ನಿಶ್ಚಯಜ್ಞಾನವು, ದೋಷವಿಲ್ಲದ ಪ್ರತ್ಯಕ್ಷ ಅನುಮಾನಗಳಿಂದಲೂ, ಸದಾಗಮಗಳಿಂದಲೂ ಲಭಿಸುತ್ತದೆ;

(ಸ್ವತಂತ್ರನೆಂಬ ಜ್ಞಾನದಿಂದ) ಯತ್ನಾದಿಗಳು, ನಿವರ್ತತೇ-ತೊಲಗುತ್ತವೆ (ಹಿಂದಿರುಗುತ್ತವೆ-ಸಂಭವಿಸುವುದಿಲ್ಲ); ನೃಣಾಂ- ಮನುಷ್ಯರಿಗೆ, (ಈ ವಿಧದ ಅನ್ಯಥಾಜ್ಞಾನಾದಿಗಳ ನಿವೃತ್ತಿಯು), ಜ್ಞಾನಾತ್ ಏವ-(ನಿರ್ದುಷ್ಟಪ್ರಮಾಣಜನ್ಯ) ಯಥಾರ್ಥಜ್ಞಾನದಿಂದಲೇ, ಭವೇತ್-ಉಂಟಾಗುತ್ತದೆ; ತತ್-ಆದ್ದರಿಂದ, ಜ್ಞಾನೇ-ಯಥಾರ್ಥಜ್ಞಾನಸಂಪಾದನೆಯಲ್ಲಿ ಯತ್ನಂ-ಪ್ರಯತ್ನವನ್ನು ಆಚರೇತ್-ಮಾಡಬೇಕು.

ಮಿತೋ ಪ್ರತ್ಯಕ್ಷತೋ ವೇತ್ತಿ ಮಿತಂ ವೇತ್ತ್ಯನುಮಾನತಃ ॥ ೪೦ ॥

ಸದಾಗಮೇನ ಸರ್ವಜ್ಞೋ ಜಾಯತೇ ಮಾನವೋ ಧ್ರುವಂ ।
ವೇದಾಶ್ಚ ಪಂಚರಾತ್ರಾಣಿ ಪ್ರಮಾಣಂ ಮುಖ್ಯಮೀರಿತಂ ॥ ೪೨ ॥

ಅವಿರುದ್ಧಾನಿ ಯಾನ್ಯೇಷಾಂ ಪುರಾಣಾನಿ ಚ ಕಾನಿಚಿತ್ ।
ಭಾರತಾದೀನಿ ಚಾನ್ಯಾನಿ ಪ್ರಮಾಣಾನೀತಿ ವೈ ವಿದುಃ ॥ ೪೩ ॥

ಪ್ರತ್ಯಕ್ಷತಃ-ಪ್ರತ್ಯಕ್ಷದಿಂದ, ಮಿತಂ-(ತಿಳಿಯಬೇಕಾದುದರ) ಅಲ್ಪಭಾಗವನ್ನು ವೇತ್ತಿ-(ಜಿಜ್ಞಾಸುಪುರುಷನು) ತಿಳಿಯುತ್ತಾನೆ (ಪರಿಮಿತಿಯುಳ್ಳ ಜ್ಞಾನವನ್ನು

---

ಪ್ರಮಾಣಗಳು ದೋಷಯುಕ್ತವಾದರೆ,[1] ಯಥಾರ್ಥ ಜ್ಞಾನಕ್ಕೆ ವಿರುದ್ಧವಾದ, ಅನ್ಯಥಾಜ್ಞಾನ, ಸಂಶಯಜ್ಞಾನಗಳೇ ಹುಟ್ಟುತ್ತವೆ; ಯಥಾರ್ಥಜ್ಞಾನದಿಂದ ಸಂಶಯವೂ, ತಾನೇ ಸ್ವತಂತ್ರನೆಂಬ ಬುದ್ಧಿಯಿಂದ ಪ್ರವೃತ್ತಿಯೂ (ಮಿಥ್ಯಾಜ್ಞಾನವೂ) ತೊಲಗುತ್ತವೆ; ಆದ್ದರಿಂದ ಯಥಾರ್ಥಜ್ಞಾನ (ತತ್ತ್ವಜ್ಞಾನ)ವನ್ನು ದೊರಕಿಸಿಕೊಳ್ಳುವುದಕ್ಕಾಗಿ ಎಲ್ಲ ಪ್ರಯತ್ನವನ್ನೂ ಮಾಡತಕ್ಕದ್ದು (೩೯-೪೦). ನಿರ್ದುಷ್ಟವಾದ ಪ್ರತ್ಯಕ್ಷಾದಿ ಮೂರು ಪ್ರಮಾಣಗಳಲ್ಲಿ ಪ್ರತ್ಯಕ್ಷದಿಂದಾದರೋ, ತಿಳಿಯಬೇಕಾದ ಅರ್ಥಗಳಲ್ಲಿ (ವಸ್ತುಗಳಲ್ಲಿ—

---

1. ಜ್ಞಾನಸಾಧನಗಳು, ಕೇವಲ ಪ್ರಮಾಣ ಮತ್ತು ಅನುಪ್ರಮಾಣಗಳೆಂದು ಎರಡು ವಿಧ; ಸಾಕ್ಷಿಜ್ಞಾನವು ಕೇವಲವೆನಿಸುತ್ತದೆ; ಪ್ರತ್ಯಕ್ಷ ಅನುಮಾನ, ಆಗಮಗಳೆಂದು ಅನುಪ್ರಮಾಣಗಳು ಮೂರು ವಿಧ. ಸಾಕ್ಷಿಜ್ಞಾನವು ಸುಖದುಃಖಾದಿಗಳನ್ನು ಗ್ರಹಿಸುತ್ತದೆ. ಅದು ಸರ್ವದಾ ಪ್ರಮಾಣವು; ಸಂಶಯಾಸ್ಪದವಾದ ಮನೋಜನ್ಯ ಪ್ರಮೇಯಗಳನ್ನು ಪರೀಕ್ಷಿಸಿಯೇ ಗ್ರಹಿಸುತ್ತದೆ—ಆಗ ಅದು ಯಥಾರ್ಥವೇ ಆಗಿರುತ್ತದೆ.

ಅನುಪ್ರಮಾಣಗಳಿಂದ ದೊರೆಯುವ ಜ್ಞಾನವು ಬಾಹ್ಯಜ್ಞಾನವೆನಿಸುತ್ತದೆ. ಪ್ರತ್ಯಕ್ಷಾದಿ ಮೂರರಲ್ಲಿ ಒಂದು, ಎರಡು, ಅಥವಾ ಮೂರರಿಂದಲೂ ಒಟ್ಟುಗೂಡಿ ಹುಟ್ಟುವ ಜ್ಞಾನವೂ ಬಾಹ್ಯಜ್ಞಾನವೇ; ಯಾವುದೊಂದರಲ್ಲಿ ದೋಷವಿದ್ದರೂ, ಹುಟ್ಟುವ ಜ್ಞಾನವು ಯಥಾರ್ಥವಾಗಿರುವುದಿಲ್ಲ. ಪ್ರತ್ಯಕ್ಷವು ದೋಷಯುಕ್ತವಾದರೆ, ಅರ್ಥವನ್ನು ಗ್ರಹಿಸುವ ಇಂದ್ರಿಯಗಳಲ್ಲಿ

ಪಡೆಯುತ್ತಾನೆ); ಅನುಮಾನತಃ-ಅನುಮಾನದಿಂದಲೂ, ಮಿತಂ-ಸ್ವಲ್ಪಭಾಗವನ್ನೇ, ವೇತ್ತಿ-ತಿಳಿಯುತ್ತಾನೆ; ಮಾನವಃ-ಮಾನವನು (ಜ್ಞಾನಾರ್ಥಿಯು), ಸದಾಗಮೇನ-ನಿರ್ದುಷ್ಟಗಳಾದ (ವೇದಾದಿ) ಆಗಮಗಳಿಂದ ಧ್ರುವಂ-ನಿಸ್ಸಂಶಯವಾಗಿ, ಸರ್ವಜ್ಞಃ-ಪೂರ್ಣಜ್ಞಾನಿಯು (ಸ್ವಯೋಗ್ಯಪೂರ್ಣ ಜ್ಞಾನವನ್ನು ಹೊಂದುವವನು), ಜಾಯತೇ-ಆಗುತ್ತಾನೆ; ವೇದಾಃ-ವೇದಗಳೂ, ಚ-ಮತ್ತು ಪಂಚರಾತ್ರಾಣಿ-ಪಂಚರಾತ್ರ ಆಗಮಗಳು, ಮುಖ್ಯಂ-ಮುಖ್ಯವಾದ, ಪ್ರಮಾಣಂ-ಪ್ರಮಾಣವೆಂದು, ಈರಿತಂ-ಹೇಳಲಾಗುತ್ತದೆ; ಏಷಾಂ-ಇವುಗಳಿಗೆ (ವೇದ ಮತ್ತು ಪಂಚರಾತ್ರಗಳಿಗೆ), ಅವಿರುದ್ಧಾನಿ-ವಿರೋಧವಿಲ್ಲದ, ಯಾನಿಕಾನಿಚಿತ್-ಯಾವ ಕೆಲವು, ಪುರಾಣಾನಿ-(ಸಾತ್ತ್ವಿಕ) ಪುರಾಣಗಳೋ, ಚ-ಮತ್ತು ಅನ್ಯಾನಿ-ಇತರ, ಭಾರತಾದೀನಿ-ಭಾರತವೇ ಮೊದಲಾದವುಗಳೋ (ರಾಮಾಯಣ, ಮತ್ತು ಸ್ಮೃತಿ ಗ್ರಂಥಗಳೋ), ಪ್ರಮಾಣಾನಿ-(ಅವೆಲ್ಲವೂ) ಪ್ರಮಾಣಗಳು, ಇತಿ-ಎಂದು, ವಿದುಃ-(ಜ್ಞಾನಿಗಳು) ತಿಳಿಯುವರು; ವೈ-ಪ್ರಸಿದ್ಧವು.

---

ಪ್ರಮೇಯಗಳಲ್ಲಿ), ಅಲ್ಪಭಾಗವನ್ನು ಮಾತ್ರ ತಿಳಿಯಬಹುದು; ಹಾಗೆಯೇ ಅನುಮಾನದಿಂದ ಸಹ ಸ್ವಲ್ಪವನ್ನೇ ತಿಳಿಯಬಹುದು; ಸದಾಗಮಗಳಿಂದಲಾದರೂ, ಮಾನವನು, ಸ್ವಯೋಗ್ಯಪೂರ್ಣಜ್ಞಾನವನ್ನು ನಿಶ್ಚಯವಾಗಿಯೂ ಪಡೆಯುತ್ತಾನೆ— ಸರ್ವಜ್ಞನಾಗುತ್ತಾನೆ; ಸದಾಗಮಗಳಲ್ಲಿ ವೇದಗಳು ಮತ್ತು ಪಂಚರಾತ್ರಗಳು ಪ್ರಧಾನವಾದವುಗಳು(ಮುಖ್ಯಪ್ರಮಾಣಗಳು); ಇವುಗಳಿಗೆ ವಿರೋಧವಿಲ್ಲದಂತೆ ವಿಷಯಗಳನ್ನು ಪ್ರತಿಪಾದಿಸುವ ಕೆಲವು ಪುರಾಣಗಳು ಮತ್ತು ಇತರ ಭಾರತಾದಿ ಆಗಮಗಳು ಸಹ ಪ್ರಮಾಣಗಳೆಂದು(ಯಥಾರ್ಥಜ್ಞಾನ ಸಾಧನಗಳೆಂದು), ಜ್ಞಾನಿಗಳು

---

(ಕಣ್ಣಿನಲ್ಲಿ ಕಾಚಕಾಮಲಾದಿಗಳಂತೆ) ದೋಷವಿರುವಿಕೆ; ಅರ್ಥದೋಷ, ಎಂದರೆ ವಸ್ತುವು ಅತಿ ಸಮೀಪ, ಅತಿ ದೂರ, ಅತಿ ಸೂಕ್ಷ್ಮ ಇತ್ಯಾದಿಯಾಗಿರುವಿಕೆ; ಇಂದ್ರಿಯಾರ್ಥಗಳ ಸನ್ನಿಕರ್ಷದಲ್ಲಿ ದೋಷವಿರುವುದು, ಇತ್ಯಾದಿಗಳು ಪ್ರತ್ಯಕ್ಷ ದೋಷಗಳೆನಿಸುತ್ತವೆ.

ಅನುಮಾನ ದೋಷಗಳು ಬಹುಪ್ರಕಾರವಾಗಿವೆ; ತಾರ್ಕಿಕರು ಈ ದೋಷಗಳನ್ನು ೨೩ ವಿಧವೆಂದು ತಿಳಿಯುತ್ತಾರೆ; ಇವೆಲ್ಲವೂ ವಿರೋಧ ಮತ್ತು ಅಸಂಗತಿಗಳೆಂಬ ೨ ಪ್ರಧಾನ ದೋಷಗಳಲ್ಲಿ ಅಡಕವಾಗುತ್ತವೆಂದು ತತ್ತ್ವವಾದಿಗಳ ಸಿದ್ಧಾಂತವಾಗಿದೆ; ವಿವರಗಳನ್ನು ಪ್ರಮಾಣಪದ್ಧತಿ ಮುಂತಾದ ತರ್ಕಶಾಸ್ತ್ರಗ್ರಂಥಗಳಿಂದ ತಿಳಿಯಬೇಕು.

ಆಗಮಗಳೆಂದರೆ (ಶಬ್ದವೆಂದರೆ) ವೇದಾದಿ ಶಾಸ್ತ್ರಗಳು; ಇವು, ಸದಾಗಮ ಮತ್ತು ದುರಾಗಮಗಳೆಂದು ಎರಡು ವಿಧ; ವೇದಗಳು ಮತ್ತು ತದನುಸಾರಿ ಆಗಮಗಳೆಲ್ಲವೂ ಸದಾಗಮಗಳು; ಅವು ಸರ್ವದಾ ನಿರ್ದುಷ್ಟಗಳೇ ಸರಿ; ದುರಾಗಮಗಳು ವೇದವಿರುದ್ಧವನ್ನು ಪ್ರತಿಪಾದಿಸುವುದರಿಂದ ದೋಷವುಳ್ಳವು; ವೇದಾದಿ ಸದಾಗಮಗಳಿಗೆ ದುರರ್ಥಗಳು ಕೆಲವರಿಗೆ ತೋರುವುದು, ಅವರ ಬುದ್ಧಿದೋಷದಿಂದ—ಆಗಮಗಳಲ್ಲಿರಬಹುದಾದ ದೋಷಗಳಿಂದಲ್ಲ. ಇತ್ಯಾದಿ ಪ್ರಮಾಣದೋಷಗಳನ್ನು ಆಳವಾದ ಶಾಸ್ತ್ರಾಭ್ಯಾಸದಿಂದಲೇ ತಿಳಿಯಬೇಕು.

**ಯದುಕ್ತಮತ್ರ ಕರ್ತವ್ಯಂ ತತ್ಕೃತ್ವಾ ಪುಣ್ಯವಾನ್ ಭವೇತ್ ।**
**ನಿಷಿದ್ಧಂ ಚೇತ್ಕೃತಂ ತೇನ ಪಾಪವಾನ್ ಜಾಯತೇ ಧ್ರುವಂ ॥ ೪೪ ॥**

ಅತ್ರ-(ಈ ಪ್ರಮಾಣಗ್ರಂಥಗಳಲ್ಲಿ) ಇಲ್ಲಿ, ಯದುಕ್ತಂ-ಯಾವುದು (ಕರ್ತವ್ಯವೆಂದು) ವಿಧಿಸಲಾಗಿದೆಯೋ, ತತ್-ಅದನ್ನು, ಕೃತ್ವಾ-ಮಾಡಿ, ಪುಣ್ಯವಾನ್-ಪುಣ್ಯವಂತನು, ಭವೇತ್-ಆಗುತ್ತಾನೆ; ತೇನ-ಆತನಿಂದ (ಆ ಪ್ರಮಾಣಗಳಂತೆ ನಡೆಯುವ ಮನುಷ್ಯನಿಂದ), ನಿಷಿದ್ಧಂ-(ಅಲ್ಲಿ) ನಿಷೇಧ ಮಾಡಿರುವುದು, ಕೃತಂ ಚೇತ್-ಮಾಡಲ್ಪಟ್ಟರೆ, (ಸಃ-ಆತನು) ಧ್ರುವಂ-ನಿಶ್ಚಯವಾಗಿ, ಪಾಪವಾನ್-ಪಾಪವಂತನು, ಜಾಯತೇ-ಆಗುತ್ತಾನೆ.

**ಯತ್ಸಮ್ಯಗಿತಿ ಲೋಕೇಽಸ್ಮಿನ್ ತದ್ಧಿ ಪುಣ್ಯಫಲಂ ಸ್ಮೃತಂ ।**
**ಯದಸಮ್ಯಕ್ ಚ ಪಾಪಸ್ಯ ಫಲಂ ತದವಧಾರ್ಯತಾಂ ॥ ೪೫ ॥**

ಅಸ್ಮಿನ್-ಈ, ಲೋಕೇ-ಲೋಕದಲ್ಲಿ, ಯತ್-ಯಾವುದು, ಸಮ್ಯಕ್ ಇತಿ-ಒಳ್ಳೆಯದೆಂದು (ಶುಭವೆಂದು) ತಿಳಿಯಲ್ಪಡುವುದೋ, ತತ್-ಅದು, ಪುಣ್ಯಫಲಂ-ಪುಣ್ಯದ ಫಲವೆಂದು, ಸ್ಮೃತಂ ಹಿ-ತಿಳಿಯಲ್ಪಟ್ಟಿದೆ; ಯತ್-ಯಾವುದು, ಅಸಮ್ಯಕ್ ಚ-ಕೆಟ್ಟದ್ದೆಂದೇ (ಹಾನಿಯೆಂದೇ-ಅಶುಭವೆಂದೇ), (ತಿಳಿಯಲ್ಪಡುವುದೋ), ತತ್-ಅದು, ಪಾಪಸ್ಯ-ಪಾಪದ, ಫಲಂ-ಫಲವೆಂದು, ಅವಧಾರ್ಯತಾಂ-ನಿಶ್ಚಯವಾಗಿ ತಿಳಿಯಲ್ಪಡಲಿ.

---

ತಿಳಿಯುತ್ತಾರೆ (೪೧-೪೩). ಈ ವೇದಾದಿ ಪ್ರಮಾಣಗಳಲ್ಲಿ (ಸದಾಗಮಗಳಲ್ಲಿ) ಉಕ್ತವಾದ ಕರ್ತವ್ಯಗಳೆಂಬ ವಿಧಿಗಳನ್ನು ಆಚರಿಸುವುದರಿಂದ, ಮಾನವನು, ಪುಣ್ಯವಂತನಾಗುತ್ತಾನೆ; ಹಾಗೆಯೇ ಅಲ್ಲಿ ನಿಷೇಧಿಸಲಾದ ಕೃತ್ಯಗಳನ್ನು ಆಚರಿಸಿ, ಪಾಪಭಾಗಿಯಾಗುತ್ತಾನೆ; ಲೋಕದಲ್ಲಿ ಒಳ್ಳೆಯದೆಂದು (ಶುಭವೆಂದು-ಸುಖವೆಂದು) ತಿಳಿಯಲ್ಪಡುವ ಎಲ್ಲದರ ಪ್ರಾಪ್ತಿಯೂ, ಪುಣ್ಯಫಲವೇ ಸರಿ; ಹಾಗೆಯೇ ಕೆಟ್ಟದ್ದೆಂಬ (ಹಾನಿ-ದುಃಖ) ಯಾವುದಿದೆಯೋ, ಅದೆಲ್ಲವೂ ಪಾಪದ ಫಲವು; ಹೀಗೆಂಬುದು ವಿವೇಕಿಗಳ ನಿಶ್ಚಯವು (೪೪-೪೫). ಪುಣ್ಯಪಾಪಗಳು ನಾನಾ ಪ್ರಕಾರವಾಗಿರುವುದರಿಂದಲೇ, ಅವುಗಳ ಫಲರೂಪವಾದ ಅನುಭವಗಳೂ ಲೋಕದಲ್ಲಿ ಕಂಡುಬರುತ್ತವೆ; ಅತ್ಯಂತ ಒಳ್ಳೆಯದು(ಶುಭ) ಎಂದರೆ, ಸುಖವೇ; ಹಾಗೆಯೇ ಇದು ಅನಿಷ್ಟವು, ಎಂಬ ಭಾವನೆಗೆ ಕಾರಣವಾದ, ಅತಿಶಯ ಕೆಟ್ಟದ್ದೆಂಬುದು (ಹಾನಿಯು), ದುಃಖವೇ; ಪುಣ್ಯಪಾಪಗಳ ಪ್ರಭಾವದಿಂದಲೇ, ಲೋಕದಲ್ಲಿ ಇಷ್ಟಪ್ರಾಪ್ತಿ(ಸುಖಪ್ರಾಪ್ತಿ) ಮತ್ತು ಅನಿಷ್ಟಪ್ರಾಪ್ತಿ(ದುಃಖಪ್ರಾಪ್ತಿ)ಗಳು ಉಂಟಾಗುತ್ತವೆ; ಆದ್ದರಿಂದ ಮಾನವನು, ಸದಾ ಪುಣ್ಯವನ್ನೇ ಆಚರಿಸಬೇಕು (೪೬-೪೭). ಕೇವಲ ಕರ್ಮವು, ಜಡವಾದ್ದರಿಂದ, ತಾನೇ

ತದ್ವೈಚಿತ್ರ್ಯಾತ್ಫಲೇಽಪಿ ಸ್ಯಾದ್ವೈಚಿತ್ರ್ಯಂ ಲೋಕದೃಷ್ಟಿತಃ ।
ಪರಂ ಸಮ್ಯಕ್ ಸುಖಂ ಲೋಕೇ ತತೋಽನಿಷ್ಟಸ್ಯ ಕಾರಣಂ ॥ ೪೬ ॥
ಅಸಮ್ಯಕ್ ಪರಮಂ ದುಃಖಂ ತತ್ಸಾಧನವಶಾದಿಹ ।
ಇಷ್ಟತಾನಿಷ್ಟತಾ ಲೋಕೇ ತಸ್ಮಾತ್ ಪುಣ್ಯಂ ಸದಾ ಚರೇತ್ ॥ ೪೭ ॥

ತದ್ವೈಚಿತ್ರ್ಯಾತ್-ಆ (ಪುಣ್ಯಪಾಪಗಳ) ವೈವಿಧ್ಯದಿಂದ, ಲೋಕದೃಷ್ಟಿತಃ-ಲೋಕದಲ್ಲಿ ಕಂಡುಬರುವ (ಜನಸಾಮಾನ್ಯ ದೃಷ್ಟಿಯಿಂದ ತೋರುವ), ವೈಚಿತ್ರ್ಯಂ-(ಪ್ರಜಾನುಭವಗಳ ವೈವಿಧ್ಯವು), ಫಲೇ ಅಪಿ-ಫಲದಲ್ಲಿ (ಜೀವರು ಭೋಗಿಸುವ ಫಲದಲ್ಲಿ) ಸಹ, ಸ್ಯಾತ್-ಉಂಟಾಗುತ್ತದೆ; ಲೋಕೇ-ಲೋಕದಲ್ಲಿ ಪರಂ-ಶ್ರೇಷ್ಠವಾದ, ಸಮ್ಯಕ್-ಒಳ್ಳೆಯದೆಂಬುದು, ಸುಖಂ-ಸುಖವೇ; ತತಃ-ಆದ್ದರಿಂದ, ಅನಿಷ್ಟಸ್ಯ-ಇಷ್ಟವಲ್ಲದ್ದೆಂಬುದಕ್ಕೆ, ಕಾರಣಂ-ಕಾರಣವಾದ, ಪರಮಂ-ಅಧಿಕವಾದ, ಅಸಮ್ಯಕ್-ಕೆಟ್ಟದ್ದೆಂಬುದು, ದುಃಖಂ-ದುಃಖವೇ; ಇಹ-ಈ ಲೋಕದಲ್ಲಿ (ಈ ಮಾನವದೇಹದಲ್ಲಿ), ತತ್ಸಾಧನವಶಾತ್-ಪುಣ್ಯಪಾಪಸಾಧನೆಗಳ ಪ್ರಭಾವದಿಂದ, ಇಷ್ಟತಾನಿಷ್ಟತಾ-ಇಷ್ಟ ಅನಿಷ್ಟಗಳ ಅನುಭವವು (ಉಂಟಾಗುತ್ತದೆ); ತಸ್ಮಾತ್-ಆ ಕಾರಣದಿಂದ, ಲೋಕೇ-ಜಗತ್ತಿನಲ್ಲಿ ಪುಣ್ಯಂ-ಪುಣ್ಯವನ್ನೇ (ಸದಾಗಮೋಕ್ತ ವಿಧಿಗಳನ್ನೇ), ಸದಾ-(ಮಾನವನು) ಸರ್ವದಾ, ಆಚರೇತ್-ಆಚರಿಸಬೇಕು.

ಕೇವಲಂ ನ ಹಿ ಕರ್ಮೈವ ಜಡತ್ವಾತ್ ಫಲದಂ ಭವೇತ್ ।
ಸ್ವತಂತ್ರಶ್ಚೇತನಸ್ತಸ್ಮಾದೀಶ್ವರಸ್ಯಾಪ್ಯಪೇಕ್ಷ್ಯತೇ ॥ ೪೮ ॥
ಸೋಽಪಿ ವೈಷಮ್ಯನೈರ್ಘೃಣ್ಯಪರಿಹಾರಾಯ ಕೇವಲಂ ।

---

ಫಲವನ್ನು ಕೊಡಲಾರದು; ಚೇತನನೇ ಫಲದಾನಶಕ್ತನು; ಆದ್ದರಿಂದ ಸ್ವತಂತ್ರಚೇತನನಾದ ಈಶ್ವರನನ್ನು ಕರ್ಮವು ಅಪೇಕ್ಷಿಸುತ್ತದೆ; ಈಶ್ವರನಾದರೂ, ತಾನು ತನ್ನಿಚ್ಛೆಬಂದಂತೆ ಫಲಗಳನ್ನು ಕೊಡಲು ಸಮರ್ಥನೂ ಮತ್ತು ಸ್ವತಂತ್ರನೂ ಆಗಿದ್ದರೂ, ಕರ್ಮ (ಜೀವ ಯೋಗ್ಯತೆ ಮೊದಲಾದವುಗಳನ್ನು) ನಿಮಿತ್ತಮಾಡಿ, ಫಲಕೊಡುತ್ತಾನೆ; ಇದರಿಂದ ಆತನಿಗೆ ಪಕ್ಷಪಾತ (ವೈಷಮ್ಯ—ಭೇದಬುದ್ಧಿ) ನೈರ್ಘೃಣ್ಯ (ನಿರ್ದಯತ್ವ) ಮೊದಲಾದ ದೋಷಗಳು ತಪ್ಪುತ್ತವೆ (೪೮-೪೯). ಹೀಗೆ ಕರ್ಮಾದಿಗಳನ್ನು ನಿಮಿತ್ತೀಕರಿಸಿಯೇ ಯಥಾಯೋಗ್ಯಫಲಗಳನ್ನು ಜೀವರಿಗೆ ಕೊಡುವೆನೆಂಬುದು, ಶ್ರೀಹರಿಯ ಅನಾದಿ ಸಂಕಲ್ಪವು; ಈ ಸಂಕಲ್ಪದಿಂದ ಚೋದಿತನಾಗಿ (ತದನುಸಾರ—ತತ್ಪ್ರಯುಕ್ತ) ಫಲಗಳನ್ನು ಕೊಡುವನೆಂಬುದು ಇಲ್ಲವಾದರೆ, ನೈರ್ಘೃಣ್ಯಾದಿ ದೋಷಗಳು ತಪ್ಪುವುದಿಲ್ಲ; ವೇದಾದಿ ಪ್ರಮಾಣಗಳು ಆತನನ್ನು ದೋಷವಿದೂರನೆಂದು ಸಾರುತ್ತವೆ;

**ಸ್ವತಂತ್ರೋಽಪಿ ಸಮರ್ಥೋಽಪಿ ಕರ್ಮಾದಿಕಮಪೇಕ್ಷತೇ ॥ ೪೯ ॥**

ಜಡತ್ವಾತ್-ಜಡವಾದ್ದರಿಂದ, ಕೇವಲಂ ಕರ್ಮ ಏವ-ಕರ್ಮಮಾತ್ರವೇ, ಫಲದಂ-ಫಲವನ್ನು ಕೊಡುವುದು, ನ ಭವೇತ್-ಆಗುವುದಿಲ್ಲ ಚೇತನಃ-ಚೇತನನು (ಜ್ಞಾನೇಚ್ಛಾ ಕ್ರಿಯಾಶಕ್ತಿಯುಳ್ಳವನು), ಸ್ವತಂತ್ರಃ-(ಫಲದಾನದಲ್ಲಿ) ಸ್ವತಂತ್ರನು (ಇಚ್ಛೆಯಂತೆ ಪ್ರವೃತ್ತಿಸಲು ಸಮರ್ಥನು) ಆಗಬಲ್ಲನು; ತಸ್ಮಾತ್-ಆದ್ದರಿಂದ, ಈಶ್ವರಸ್ಯ-(ಸ್ವತಂತ್ರಚೇತನನಾದ) ಈಶ್ವರನ (ಶ್ರೀಹರಿಯ), ಅಪಿ-(ಶಕ್ತಿಯನ್ನು) ಸಹ, ಅಪೇಕ್ಷ್ಯತೇ-(ಕರ್ಮವು) ಅಪೇಕ್ಷಿಸುತ್ತದೆ; ಸಃ ಅಪಿ-ಆತನಾದರೂ (ಶ್ರೀಹರಿಯು ಸ್ವತಂತ್ರನಾದರೂ), ವೈಷಮ್ಯನೈರ್ಘೃಣ್ಯಪರಿಹಾರಾಯ-ವೈಷಮ್ಯ ನೈರ್ಘೃಣ್ಯಗಳ (ಪಕ್ಷಪಾತ ನಿರ್ದಯತ್ವಾದಿ ದೋಷಗಳ) ಪರಿಹಾರಕ್ಕಾಗಿ (ಸ್ಪರ್ಶವಾಗದಿರಲು), ಸಮರ್ಥಃ ಅಪಿ-ತನ್ನ ಇಚ್ಛಾನುಸಾರವಾದ ಫಲಗಳನ್ನು (ಜೀವರಿಗೆ) ಕೊಡಲು (ಉಣಿಸಲು) ಸಮರ್ಥನಾದರೂ, ಕರ್ಮಾದಿಕಂ-ಕರ್ಮ ಮೊದಲಾದವುಗಳನ್ನು (ಪುಣ್ಯಾಪಾಪ ರೂಪದ ಪೂರ್ವಕರ್ಮಗಳನ್ನೂ ಆದಿಪದದಿಂದ ಜೀವಸ್ವರೂಪಯೋಗ್ಯತೆ ಮೊದಲಾದ ನಿಮಿತ್ತ ಕಾರಣಗಳನ್ನು), ಅಪೇಕ್ಷತೇ-ಅಪೇಕ್ಷಿಸುತ್ತಾನೆ.

**ಅನಾದಿಕಾಲತಸ್ತ್ವೇವಂ ಸಂಕಲ್ಪಾತ್ತಸ್ಯ ಚೋದನಾತ್ ।**
**ನ ಹಿ ಸ್ವಾತಂತ್ರ್ಯಭಂಗೋತ್ರ ಶಂಕನೀಯಃ ಕದಾಚನ ॥ ೫೦ ॥**

**ಅನ್ಯಥಾ ತತ್ರ ನಿರ್ದೋಷೇ ದೋಷಾಸ್ಸ್ಯುರ್ನೈರ್ಘೃಣಾದಯಃ ।**

ಅನಾದಿಕಾಲತಃ-ಅನಾದಿಕಾಲದಿಂದಲೂ, ತಸ್ಯ-ಶ್ರೀಹರಿಯ, ಏವಂ- ಹೀಗೆಯೇ (ಕರ್ಮಾದಿಗಳನ್ನು ಲಕ್ಷಿಸಿಯೇ ಫಲಕೊಡುವೆನೆಂಬ), ಸಂಕಲ್ಪಾತ್-ಸಂಕಲ್ಪವಿರುವುದರಿಂದ, ಚೋದನಾತ್-ತತ್ಪ್ರಯುಕ್ತ ಹಾಗೆ ಪ್ರವೃತ್ತಿಸುವುದರಿಂದ, ಕದಾಚನ-ಎಂದೂ, ಅತ್ರ-ಶ್ರೀಹರಿವಿಷಯದಲ್ಲಿ ಸ್ವಾತಂತ್ರ್ಯಭಂಗಃ-ಆತನ ಸ್ವಾತಂತ್ರ್ಯಕ್ಕೆ ಹಾನಿಯುಂಟಾಗುವುದೆಂದು, ನ ಹಿ ಶಂಕನೀಯಃ-ಸಂಶಯುಗೊಳ್ಳಬಾರದು;

---

ಹೀಗೆ ಕರ್ಮಾದಿಗಳನ್ನು ನಿಮಿತ್ತೀಕರಿಸಿ, ಫಲಕೊಡುವನೆಂಬುದರಿಂದ, ಶ್ರೀಹರಿಯ ಸ್ವಾತಂತ್ರ್ಯಕ್ಕೆ ಭಂಗಬರುವುದೆಂದು ಶಂಕಿಸಲು ಏನೂ ಕಾರಣವಿಲ್ಲ (೫೦). ಜಡಕರ್ಮವೇ ಫಲಕೊಡುತ್ತದೆಂದು, ಭಾವಿಸುವುದು, ಯುಕ್ತಿವಿರುದ್ಧವು; ವೇಗವಾಗಿ ಓಡುವ ಮೊದಲಾದ ತನ್ನ ಸಾಮರ್ಥ್ಯವನ್ನು ತನ್ನ ಮನೆಯಲ್ಲಿ ಪ್ರದರ್ಶಿಸಿದರೆ, ಯೋಗ್ಯವಾದ ಬಹುಮಾನ ದ್ರವ್ಯವನ್ನು ಹೊಂದುವುದಿಲ್ಲ ಶ್ರೀಮಂತನೆದುರು ಆ ಶಕ್ತಿಪ್ರದರ್ಶನಮಾಡಿದರೆ, ಆಗ ದ್ರವ್ಯಫಲಭಾಗಿಯಾಗುತ್ತಾನೆ (೫೧). ಹೀಗೆಯೇ ಕಳ್ಳತನ, ಪರಸ್ತ್ರೀ ಅಪಹರಣ ಮೊದಲಾದ ಪಾಪ ಕರ್ಮವೂ, ಜಡವಾದ್ದರಿಂದ, ಆ ಪಾಪಕ್ಕೆ ಯೋಗ್ಯವಾದ ಶಿಕ್ಷೆಯನ್ನು ಮಾಡಲು, ಅಶಕ್ತವೇ ಆಗಿರುತ್ತದೆ; ರಾಜನೇ

ಅನ್ಯಥಾ-ಹಾಗಲ್ಲದಿದ್ದರೆ (ಸ್ವತಂತ್ರನಾದರೂ ಕರ್ಮಾದಿಗಳನ್ನು ಲಕ್ಷಿಸಿ ಫಲ ಕೊಡದಿದ್ದರೆ), ನಿರ್ದೋಷೇ-ದೋಷ ವಿದೂರನಾದ ಶ್ರೀಹರಿಯಲ್ಲಿ, ನೈರ್ಘೃಣ್ಯಾ ದಯಃ-ನಿರ್ದಯತ್ವಾದಿ, ದೋಷಾಃ-ದೋಷಗಳು, ಸ್ಯುಃ-ಉಂಟಾಗು ತ್ತವೆ (ಭಿನ್ನಜೀವರು ಸುಖದುಃಖಾದಿ ವಿಭಿನ್ನ ಅನುಭವಗಳನ್ನು ಹೊಂದುವುದರಿಂದ, ಫಲಪ್ರದನಾದ ಶ್ರೀಹರಿಯು, ಪಕ್ಷಪಾತಿಯೂ ದಯಾಶೂನ್ಯನೂ ಎಂದು ಪ್ರಾಪ್ತವಾಗುತ್ತದೆ).

**ನ ಹಿ ಧಾವನ್ ಗೃಹೇ ಸ್ವೀಯೇ ಜಾಯತೇ ಚಾರ್ಥಲಾಭವಾನ್ ॥೫೦॥**

**ಧನಿ ನೋಗ್ರೇ ಯದಾ ಧಾವೇತ್ತದೈವ ಫಲಭಾಗ್ಭವೇತ್ ।**

ಸ್ವೀಯೇ-ತನ್ನದೇ ಆದ, ಗೃಹೇ-ಗೃಹದಲ್ಲಿ, ಧಾವನ್-ಓಡುವವನಾಗಿ (ತನ್ನ ಶಕ್ತಿಪ್ರದರ್ಶನಮಾಡುವವನಾಗಿ), ಅರ್ಥಲಾಭವಾನ್ - ದ್ರವ್ಯಲಾಭವುಳ್ಳವನು (ಬಹುಮಾನರೂಪ ದ್ರವ್ಯವನ್ನು ಪಡೆಯುವವನು), ನ ಹಿ ಜಾಯತೇ-ಆಗುವುದಿಲ್ಲ ವೆಂಬುದು ಸಿದ್ಧ; ಯದಾ-ಯಾವಾಗ, ಧನಿನಃ-ಶ್ರೀಮಂತನ, ಅಗ್ರೇ-ಎದುರಿಗೆ, ಧಾವೇತ್-ಓಡುತ್ತಾನೆಯೋ, ತದಾ ಏವ-ಆಗ ಮಾತ್ರ, ಫಲಭಾಕ್-ದ್ರವ್ಯಫಲ ಭಾಗಿಯು, ಭವೇತ್-ಆಗುತ್ತಾನೆ.

**ನ ಹಿ ಚೌರ್ಯಂ ಪಾರದಾರ್ಯಂ ಕರ್ಮಚಾನ್ಯಚ್ಚ ಪಾತಕಂ ॥ ೫೨ ॥**
**ಜಡತ್ವಾದ್ದಂಡನೇ ಶಕ್ತಂ ಕುರುತೇ ದಂಡಮೀಶ್ವರಃ ।**
**ಲೋಕೇಪಿ ಭೃತಕಂ ಸ್ವೀಯಂ ಧನಿಕಃ ಕಾರ್ಯಕಾರಕಂ ॥ ೫೩ ॥**
**ಧನೇನ ತೋಷಯೇನ್ನಾನ್ಯಂ ನಿಹಂತಿ ಚ ರಿಪುಂ ನಿಜಂ ।**
**ಕರ್ಮಾನುಸಾರೀ ಫಲದೋ ಲೋಕೇ ಸಮ ಇತೀರ್ಯತೇ ॥ ೫೪ ॥**

---

ಶಿಕ್ಷೆಯನ್ನು ವಿಧಿಸುತ್ತಾನೆ; ಧನಿಕನಾದವನು, ತನ್ನ ಕೆಲಸಗಳನ್ನು ಮಾಡುವ ಭೃತ್ಯನನ್ನು ಧನಾದಿಗಳನ್ನಿತ್ತು ಸಂತೋಷಪಡಿಸುತ್ತಾನೆ, ಅನ್ಯರನ್ನಲ್ಲ; ಶತ್ರುವನ್ನು ಸಂಹರಿಸುವನು; ಇದೇ ಲೋಕನೀತಿಯು; ಇದನ್ನನುಸರಿಸುವವನೇ(ಕರ್ಮಾನುಸಾರವಾಗಿ ಫಲಕೊಡುವವನೇ) 'ಸಮ' ನೆಂದು ಹೇಳಲ್ಪಡುತ್ತಾನೆ; ಈ ವಿಧದ ಸಮತ್ವವುಳ್ಳವನನ್ನೇ, ಪ್ರಜೆಗಳು ಪ್ರೀತಿಸು ತ್ತಾರೆ— ಸಮತ್ವ ಇಲ್ಲದ (ಚೋರಪಂಡಿತಾದಿ ಸರ್ವರನ್ನೂ ಏಕಪ್ರಕಾರವಾಗಿ ಮಾನ್ಯಮಾಡುವ) ವಿಷಮಪುರುಷನನ್ನು ಪ್ರೀತಿಸುವುದಿಲ್ಲ (ಆದರಿಸುವುದಿಲ್ಲ); ಹೀಗಿರಲು, ಸರ್ವಸ್ವಾಮಿಯಾದ ಶ್ರೀಹರಿಯು, ಸರ್ವಸಮನಲ್ಲದೇ, ವಿಷಮನು ಹೇಗಾದಾನು? ಆತನಲ್ಲಿ ವೈಷಮ್ಯವೆಂಬ ದೋಷವು, ಇರಲು ಶಕ್ಯವೇ ಇಲ್ಲ (೫೨-೫೫). ಹೀಗೆ ಸರ್ವಸಮನಾದ ಶ್ರೀಹರಿಯು, ಕರ್ಮಾನುಸಾರವಾದ ಫಲಗಳನ್ನು ಜೀವರಿಗೆ ಕೊಡಲು, ಶ್ರುತಿ ಸ್ಮೃತಿಗಳಲ್ಲಿ ಅವರ ಹಿತಸಾಧಕವಾದ

**ತತ್ರೈವ ರಜ್ಯತೇ ಲೋಕೋ ವಿಷಮೇ ಚ ವಿರಜ್ಯತೇ ।**
**ಸರ್ವಸ್ವಾಮೀ ಹರಿಸ್ತೇನ ಕಥಂ ವೈಷಮ್ಯಮರ್ಹತಿ ॥ ೫೫ ॥**

ಚೌರ್ಯಂ-ಕಳ್ಳತನ, ಪಾರದಾರ್ಯಂ-ಪರಸ್ತ್ರೀಗ್ರಹಣ, ಚ-ಮತ್ತು ಅನ್ಯತ್-ಬೇರೆಯಾದ, ಪಾತಕಂ ಕರ್ಮ-ಪಾಪಕರ್ಮವು, ಜಡತ್ವಾತ್-ಜಡವಾದ್ದರಿಂದ, ದಂಡನೆ-(ಅಪರಾಧಿಯನ್ನು) ಶಿಕ್ಷಿಸುವುದರಲ್ಲಿ ನ ಶಕ್ತಂ ಹಿ-ಸಮರ್ಥವಲ್ಲವಷ್ಟೆ !; ಈಶ್ವರಃ-ರಾಜನು, ದಂಡಂ-ಶಿಕ್ಷೆಯನ್ನು ಕುರುತೇ-ಮಾಡುತ್ತಾನೆ; ಅಪಿ-ಮತ್ತು ಲೋಕೇ-ಲೋಕದಲ್ಲಿ ಧನಿಕಃ-ಶ್ರೀಮಂತನು, ಕಾರ್ಯಕಾರಕಂ-ತನ್ನ ಸೇವಿಸುವ, ಸ್ವೀಯಂ-ತನ್ನ ಭೃತಕಂ-ಭೃತ್ಯನನ್ನು ಧನೇನ-ಧನದಿಂದ, ತೋಷಯೇತ್-ಸಂತೃಪ್ತಿಗೊಳಿಸುವವನು; ಅನ್ಯಂ-ಅನ್ಯರನ್ನು, ನ-ಅಲ್ಲ; ನಿಜಂ ರಿಪುಂ-ತನ್ನ ಶತ್ರುವನ್ನು (ವಿರೋಧಿಯನ್ನು), ನಿಹಂತಿ ಚ-ಸಂಹಾರವನ್ನೇ ಮಾಡುವನು; (ಆದ್ದರಿಂದ), ಲೋಕೇ-ಜಗತ್ತಿನಲ್ಲಿ ಕರ್ಮಾನುಸಾರೀ-ಕರ್ಮಾನುಸಾರವಾಗಿ, ಫಲದಃ-ಫಲವನ್ನು ಕೊಡುವವನೇ, ಸಮಃ-ಸಮನು, ಇತಿ ಈರ್ಯತೇ-ಎಂದು ಹೇಳಲ್ಪಡುತ್ತಾನೆ; ಲೋಕಃ-ಪ್ರಜೆಗಳು, ತತ್ರೈವ-ಅಂಥವನಲ್ಲಿಯೇ, ರಜ್ಯತೇ-ಅನುರಾಗಯುಕ್ತರಾಗುತ್ತಾರೆ; ವಿಷಮೇ-ವೈಷಮ್ಯವುಳ್ಳವನಲ್ಲಿ (ಈ ವಿಧ ಸಮತ್ವಕ್ಕೆ ವಿರೋಧವಾಗಿ ವರ್ತಿಸುವವನಲ್ಲಿ), ವಿರಜ್ಯತೇ-ಪ್ರೀತಿಸುವುದಿಲ್ಲ (ರಾಗರಹಿತರಾಗುತ್ತಾರೆ); ತೇನ-ಈ ಕಾರಣದಿಂದ, ಸರ್ವಸ್ವಾಮೀ-ಎಲ್ಲರ ಸ್ವಾಮಿಯಾದ, ಹರಿಃ-ಶ್ರೀಹರಿಯು, ಕಥಂ-ಹೇಗೆ, ವೈಷಮ್ಯಂ- ವೈಷಮ್ಯವನ್ನು (ದೋಷವನ್ನು), ಅರ್ಹತಿ-ಹೊಂದುವನು?

**ಶ್ರುತಿಸ್ಮೃತೀ ತು ತಸ್ಯಾಜ್ಞೇ ತತ್ರೋಕ್ತಂ ಪುಣ್ಯಮಾಚರೇತ್ ।**
**ಅರ್ಪಯೇತ್ತದ್ಧರೌ ಭಕ್ತ್ಯಾ ಸಂತುಷ್ಟಃ ಫಲದೋ ಭವೇತ್ ॥ ೫೬ ॥**

---

ನೆಂದು ಹೇಳಲ್ಪಡುತ್ತಾನೆ; ಈ ವಿಧದ ಸಮತ್ವವುಳ್ಳವನನ್ನೇ, ಪ್ರಜೆಗಳು ಪ್ರೀತಿಸುತ್ತಾರೆ—ಸಮತ್ವ ಇಲ್ಲದ (ಚೋರಪಂಡಿತಾದಿ ಸರ್ವರನ್ನೂ ಏಕಪ್ರಕಾರವಾಗಿ ಮಾನ್ಯಮಾಡುವ) ವಿಷಮಪುರುಷನನ್ನು ಪ್ರೀತಿಸುವುದಿಲ್ಲ (ಆದರಿಸುವುದಿಲ್ಲ); ಹೀಗಿರಲು, ಸರ್ವಸ್ವಾಮಿಯಾದ ಶ್ರೀಹರಿಯು, ಸರ್ವಸಮನಲ್ಲದೇ, ವಿಷಮನು ಹೇಗಾದಾನು? ಆತನಲ್ಲಿ ವೈಷಮ್ಯವೆಂಬ ದೋಷವು, ಇರಲು ಶಕ್ಯವೇ ಇಲ್ಲ (೫೨-೫೫). ಹೀಗೆ ಸರ್ವಸಮನಾದ ಶ್ರೀಹರಿಯು, ಕರ್ಮಾನುಸಾರವಾದ ಫಲಗಳನ್ನು ಜೀವರಿಗೆ ಕೊಡಲು, ಶ್ರುತಿ ಸ್ಮೃತಿಗಳಲ್ಲಿ ಅವರ ಹಿತಸಾಧಕವಾದ ಆಜ್ಞೆಗಳನ್ನು ನಿರೂಪಿಸಿದ್ದಾನೆ; ಅವುಗಳಲ್ಲಿ ವಿಧಿಸಲಾದ ಸತ್ಕರ್ಮಗಳನ್ನು ಆಚರಿಸಬೇಕು-ನಿಷೇಧಿಸಲ್ಪಟ್ಟವುಗಳನ್ನು ತ್ಯಜಿಸಬೇಕು; ವಿಧ್ಯುಕ್ತಕರ್ಮಗಳನ್ನಾಚರಿಸಿ, ಅವುಗಳನ್ನು ಭಕ್ತಿಯಿಂದ ಶ್ರೀಹರಿಗೆ ಸಮರ್ಪಿಸಬೇಕು; ಇದರಿಂದ

**ಅನರ್ಪಿತಂ ವೃಥಾ ಯಾತಿ ಯಥೋಪ್ತಂ ಬೀಜಮೂಷರೇ ।**
**ಏವಂ ತೇ ಕಥಿತಂ ರಾಜನ್ ದೇಹಜೀವೇಶನಿರ್ಣಯಃ ॥ ೫೭ ॥**
**ಸಂಕ್ಷೇಪಾತ್ಕರ್ಮನಿರ್ಣೀತಿರನ್ಯದಾಖ್ಯಾಮಿ ತಚ್ಛೃಣು ॥ ೫೮ ॥**

ಶ್ರುತಿಸ್ಮೃತೀ ತು-ಶ್ರುತಿಸ್ಮೃತಿಗಳೇ, ತಸ್ಯ-ಆತನ (ಶ್ರೀಹರಿಯ), ಆಜ್ಞೇ-ಆಜ್ಞೆಗಳು; ತತ್ಪ್ರೋಕ್ತಂ-ಅವುಗಳಲ್ಲಿ ಹೇಳಲ್ಪಟ್ಟ ಪುಣ್ಯಂ-ಪುಣ್ಯಕರ್ಮವನ್ನು ಆಚರೇತ್-ಆಚರಿಸತಕ್ಕದ್ದು (ಅವಶ್ಯಕರ್ತವ್ಯಗಳೆಂದು ವಿಧಿಸಲಾಗಿರುವ ಕರ್ಮಗಳನ್ನು ತಪ್ಪದೇ ಆಚರಿಸಬೇಕು); ತತ್-ಅದನ್ನು (ಆ ಪುಣ್ಯವನ್ನು), ಭಕ್ತ್ಯಾ-ಭಕ್ತಿಯಿಂದ, ಹರೌ-ಶ್ರೀಹರಿಯಲ್ಲಿ, ಅರ್ಪಯೇತ್-ಅರ್ಪಿಸಬೇಕು (ಪುಣ್ಯಫಲಗಳನ್ನು ತನಗಾಗಿ ಅಪೇಕ್ಷಿಸಕೂಡದು): ಸಂತುಷ್ಟಃ-(ಇದರಿಂದ) ಸಂತುಷ್ಟನಾದ ಶ್ರೀಹರಿಯು, ಫಲದಃ- ಫಲಪ್ರದನು (ಜ್ಞಾನ, ಭಕ್ತ್ಯತಿಶಯ ಮೊದಲಾದ ಅನುತ್ತಮ ಫಲಗಳನ್ನು ಕೊಡುವವನು), ಭವೇತ್-ಆಗುತ್ತಾನೆ; ಅನರ್ಪಿತಂ-(ಭಕ್ತಿಯಿಂದ) ಸಮರ್ಪಿಸಲ್ಪಡದ ಶುಭಕರ್ಮವು (ಪುಣ್ಯವು), ಊಷರೇ-ಸೌಳು (ಉಪ್ಪು) ಭೂಮಿಯಲ್ಲಿ, ಉಪ್ತಂ-ಬಿತ್ತಲಾದ, ಬೀಜಂ-ಬೀಜವು, ಯಥಾ-ಹೇಗೋ (ಹಾಗೆ), ವೃಥಾ-ವ್ಯರ್ಥವಾದುದು, ಯಾತಿ- ಆಗುತ್ತದೆ (ವ್ಯರ್ಥತೆಯನ್ನು ಹೊಂದುತ್ತದೆ); ಏವಂ-ಹೀಗೆ, ರಾಜನ್-ಹೇ ರಾಜನೇ!, ತೇ-ನಿನಗೋಸ್ಕರ, ಸಂಕ್ಷೇಪಾತ್-ಸಂಗ್ರಹವಾಗಿ, ದೇಹಜೀವೇಶನಿರ್ಣಯಃ-ದೇಹ, ಜೀವ, ಈಶ್ವರ ಇವರುಗಳ ಸಂಬಂಧವಾದ ನಿರ್ಣಯವೂ, ಕರ್ಮನಿರ್ಣೀತಿಃ-ಕರ್ಮಗಳ ಸಂಬಂಧವಾದ ನಿರ್ಣಯವೂ, ಕಥಿತಂ-ಹೇಳಲ್ಪಟ್ಟಿತು; ಅನ್ಯತ್-(ಬೇರೆ ಮುಖ್ಯರಹಸ್ಯವನ್ನು) ಕರ್ಮಕರ್ತೃತ್ವ ಮತ್ತು ಫಲವಿಭಾಗಗಳನ್ನೂ, ಆಖ್ಯಾಮಿ-ಹೇಳುತ್ತೇನೆ; ತತ್ ಶೃಣು-ಅದನ್ನು (ಆದರಿಂದ) ಕೇಳುವವನಾಗು.

ಇಂದ್ರದ್ಯುಮ್ನಭೃಗುಸಂವಾದವೆಂಬ ೨೯ನೇ ಅಧ್ಯಾಯವು ಮುಗಿದುದು.

---

ಪ್ರೀತನಾದ ಶ್ರೀಹರಿಯು ಅರ್ಪಿಸಲಾದ ಕರ್ಮಾನುಸಾರವಾದ, ಸ್ವಯೋಗ್ಯಜ್ಞಾನ ಭಕ್ತ್ಯಾದಿಫಲಗಳನ್ನು ಕೊಡುತ್ತಾನೆ; ಶ್ರೀಹರಿಯಲ್ಲಿ ಅರ್ಪಿಸಲ್ಪಡದ ಸತ್ಕರ್ಮಗಳು ಉಪ್ಪುಭೂಮಿಯಲ್ಲಿ ಬಿತ್ತಿದ ಬೀಜದಂತೆ, ವ್ಯರ್ಥವಾಗುತ್ತವೆ; ಹೇ ರಾಜನ್! ಹೀಗೆ, ದೇಹ, (ದೇಹಭಿನ್ನವಾದ) ಜೀವ, (ಸ್ವತಂತ್ರನಿಯಾಮಕನಾದ)ಈಶ್ವರ, ಇವರುಗಳನ್ನೂ ಕರ್ಮಾಚರಣೆಗೆ ಸಂಬಂಧಿಸಿದ ನಿರ್ಣಯವನ್ನೂ ನಿನಗಾಗಿ ಹೇಳಿದೆನು; ಮುಂದೆ ಜೀವಕರ್ತೃತ್ವ ಮತ್ತು ಫಲಭಾಗಿತ್ವ ವಿಷಯಕ ರಹಸ್ಯಗಳನ್ನು ನಿರೂಪಿಸುವೆನು— ಆದರರಿಂದ ಶ್ರವಣಮಾಡು (೫೭-೫೮).

೨೯ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೦

### ಶ್ರೀ ವೇದವ್ಯಾಸಾಯ ನಮಃ

**ಭೃಗುರುವಾಚ—**

**ಸ್ವತಂತ್ರಃ ಪರಮೋ ವಿಷ್ಣುರ್ಮಾಯಾ ತಸ್ಯಾಂಗಸಂಗಿನೀ ।**
**ಬ್ರಹ್ಮಾ ಪ್ರಾಣಶ್ಚ ಸಚಿವೌ ಸರ್ವಕರ್ಮಸು ತತ್ಪ್ರಿಯೌ ॥ ೧ ॥**

**ಅರ್ಥ:**—ಪರಮಃ-ಸರ್ವೋತ್ತಮನಾದ, ವಿಷ್ಣುಃ-ಶ್ರೀವಿಷ್ಣುವು, ಸ್ವತಂತ್ರಃ-ಸ್ವತಂತ್ರನು (ಅನ್ಯರಾರೂ ಸ್ವತಂತ್ರರಲ್ಲ); ಮಾಯಾ-ಮಾಯಾನಾಮಕಳಾದ ಶ್ರೀಲಕ್ಷ್ಮೀ ದೇವಿಯು, ತಸ್ಯ-ಆತನ (ಶ್ರೀವಿಷ್ಣುವಿನ), ಅಂಗಸಂಗಿನೀ-ಭಾರ್ಯಳು (ಆತನ ಅಂಗಸಂಗಕ್ಕೆ ಅರ್ಹಳಾದ ಏಕಮಾತ್ರ ಸ್ತ್ರೀಯು); ಬ್ರಹ್ಮಾ-ಚತುರ್ಮುಖ ಬ್ರಹ್ಮದೇವನೂ, ಚ-ಮತ್ತು ಪ್ರಾಣಃ-ಮುಖ್ಯಪ್ರಾಣನೂ, ಸರ್ವಕರ್ಮಸು-ಶ್ರೀವಿಷ್ಣುವಿನ ಸರ್ವಕರ್ಮಗಳಲ್ಲಿ ಸಚಿವೌ-ಸಹಾಯಕರು (ಜೊತೆಯಲ್ಲಿದ್ದು ಮಾಡುವವರು); ತತ್ಪ್ರಿಯೌ- ಶ್ರೀವಿಷ್ಣುವಿಗೆ ಪ್ರಿಯರು (ಶ್ರೀಲಕ್ಷ್ಮೀದೇವಿಯ ನಂತರ ಅತ್ಯಂತ ಪ್ರಿಯರು).

**ತ್ರಿವಿಧಾಹಂಕೃತಿಃ ಸಾಕ್ಷಾದ್ರುದ್ರೋಽಪಿ ಸಚಿವಃ ಸ್ಮೃತಃ ।**
**ಮನಸೋಽಧಿಪತಿಃ ಶಕ್ರೋಽರ್ಕಾದ್ಯಾ ಇಂದ್ರಿಯದೇವತಾಃ ॥ ೨ ॥**

ತ್ರಿವಿಧಾಹಂಕೃತಿಃ-(ವೈಕಾರಿಕ, ತೈಜಸ, ತಾಮಸಗಳೆಂಬ) ತ್ರಿವಿಧ ಅಹಂಕಾರ ತತ್ವಕ್ಕೆ ಅಭಿಮಾನಿಯಾದ, ಸಾಕ್ಷಾತ್-ಸ್ವಯಂ, ರುದ್ರಃ ಅಪಿ-ರುದ್ರದೇವನೂ ಸಹ,

---

### ಅಧ್ಯಾಯ ೩೦

**ತಾತ್ಪರ್ಯ:**—ಸರ್ವೋತ್ತಮನಾದ ಶ್ರೀವಿಷ್ಣುವೇ ಸ್ವತಂತ್ರನು; ಮಾಯಾ ದೇವಿಯು (ಶ್ರೀಲಕ್ಷ್ಮೀದೇವಿಯು) ಆತನ ಭಾರ್ಯಳು; ಬ್ರಹ್ಮದೇವ ಮತ್ತು ಮುಖ್ಯಪ್ರಾಣರು, ಸರ್ವಕರ್ಮಗಳಲ್ಲಿ ಶ್ರೀವಿಷ್ಣುವಿನೊಂದಿಗೆ ದುಡಿಯುವವರು ಮತ್ತು ಆತನಿಗೆ (ರಮಾನಂತರ) ಅತ್ಯಂತ ಪ್ರಿಯರು (೧). ತ್ರಿವಿಧ ಅಹಂಕಾರ ತತ್ವಾಭಿಮಾನಿ ರುದ್ರದೇವನೂ, ಶ್ರೀವಿಷ್ಣುವಿನ ಸಚಿವನೇ—ಕಾರ್ಯ ಸಹಾಯಕನೇ;[1] ಹೀಗೆಯೇ ಮನೋಭಿಮಾನಿ ಇಂದ್ರನೂ, ಸೂರ್ಯಾದಿ ಇತರ

---

1. ಶ್ರೀವಿಷ್ಣುವು ಈ ಎಲ್ಲ ಸಚಿವರನ್ನೂ (ಬ್ರಹ್ಮ ಪ್ರಾಣಾದಿ ಸರ್ವರನ್ನೂ) ಬಿಟ್ಟು ತಾನೇ ಸರ್ವಕರ್ಮಗಳನ್ನು ನಿರ್ವಹಿಸಲು ಶಕ್ತನಾದ ಸ್ವತಂತ್ರಕರ್ತನು; ಆದರೂ, ಈ ತತ್ವಾಭಿಮಾನಿಗಳನ್ನು ಅನುಗ್ರಹಿಸಲಿಕ್ಕಾಗಿ, ಅವರಿಂದ ಯಥಾಯೋಗ್ಯವಾದ ಸಹಕಾರವನ್ನು ಜಗತ್ಸೃಷ್ಟ್ಯಾದಿ ತನ್ನ ಕರ್ಮಗಳಲ್ಲಿ ಸೇವಾರೂಪದಿಂದ ಪಡೆಯುತ್ತಾನೆ.

ಸಚಿವಃ ಸ್ಮೃತಃ-(ಶ್ರೀವಿಷ್ಣುವಿಗೆ) ಸಚಿವ (ಕರ್ಮಸಹಾಯಕ)ನೆಂದು ಹೇಳಲ್ಪಡುತ್ತಾನೆ (ಬ್ರಹ್ಮಪ್ರಾಣರಂತೆ ಸರ್ವಕರ್ಮಗಳಲ್ಲಲ್ಲ); ಮನಸೋಧಿಪತಿಃ-ಮನೋಭಿಮಾನಿಯಾದ, ಶಕ್ರಃ-ಇಂದ್ರನೂ, ಇಂದ್ರಿಯ ದೇವತಾಃ-ಇಂದ್ರಿಯಾಭಿಮಾನಿ ದೇವತೆಗಳಾದ, ಅರ್ಕಾದ್ಯಾಃ-ಸೂರ್ಯಾದಿ ದೇವತೆಗಳೂ, (ಸಚಿವಾ ಏವ-ಮಿತವಾದ ತಂತಮ್ಮ ಕಾರ್ಯಗಳಲ್ಲಿ ಶ್ರೀವಿಷ್ಣುವಿನ ಸಹಾಯಕರೇ).

ಏವಮೇವ ಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ ।
ಬ್ರಹ್ಮವಚ್ಚ ಕಲಿಸ್ತೇಷಾಂ ಬಂಧಕೋಹಂಕೃತಿಃ ಸ್ಮೃತಃ ॥ ೩ ॥
ಮಧುಕೈಟಭಮುಖ್ಯಾಶ್ಚ ಶಂಬರಾದ್ಯಾ ಮನೋಧಿಗಾಃ ।
ಅನ್ಯೇಪಿ ದೇವದೈತ್ಯಾಸ್ತು ತತ್ತದಿಂದ್ರಿಯಮಾನಿನಃ ॥ ೪ ॥

ಏವಂ ಏವ - ಹೀಗೆಯೇ, ಸರ್ವದೇಹೇಷು - ಸಕಲ ಪ್ರಾಣಿ ದೇಹಗಳಲ್ಲಿ ಕಲ್ಯಾದ್ಯಾಃ-ಕಲಿ ಮೊದಲಾದ ದೈತ್ಯರು, ಸಂಸ್ಥಿತಾಃ-ಸ್ಥಿತರಾಗಿರುವರು; ತೇಷಾಂ-ಅವರಿಗೆ (ದೈತ್ಯರಿಗೆ), ಕಲಿಃ-ಕಲಿಯು, ಬ್ರಹ್ಮವತ್-(ದೇವತೆಗಳಿಗೆ ಹೇಗೆ ಬ್ರಹ್ಮದೇವನು ಅಧಿಪತಿಯೋ, ಶ್ರೇಷ್ಠನೋ, ಹಾಗೆ) ಬ್ರಹ್ಮನಂತಿರುವನು; ಮತ್ತು ಬಂಧಕಃ-ಬಂಧಕನಾದ, ಅಹಂಕೃತಿಃ-ಅಹಂಕಾರನೆಂದು (ಅಹಂಕಾರ ತತ್ವಾಭಿ

---

ಇಂದ್ರಿಯಾಭಿಮಾನಿ ದೇವತೆಗಳೂ ಶ್ರೀವಿಷ್ಣುವಿಗೆ ಯಥಾಯೋಗ್ಯ ಸಚಿವರೇ ಮತ್ತು ಪ್ರಿಯರೇ (೨). ಇಂದ್ರಿಯಾಭಿಮಾನಿ ದೇವತೆಗಳಂತೆಯೇ, ಕಲಿ ಮೊದಲಾದ ದೈತ್ಯರೂ ಸರ್ವರ ದೇಹಗಳಲ್ಲಿರುವರು; ದೇವಶ್ರೇಷ್ಠನು ಬ್ರಹ್ಮದೇವನು ಹೇಗೋ, ಹಾಗೆ, ದೈತ್ಯಾಧಿಪತಿಯು ಕಲಿಯು; ಕಲಿಯು ಅಹಂಕಾರ ತತ್ವಪರ್ಯಂತ ಪ್ರವೇಶವುಳ್ಳವನು; ಮಹತ್ತತ್ವದಲ್ಲಿ ಅಥವಾ ತನ್ನಿರ್ಮಿತ ಬ್ರಹ್ಮವಾಯು(ತತ್ಪತ್ನಿಯರ) ದೇಹದಲ್ಲಿಯಾಗಲಿ ಆತನ ಪ್ರವೇಶವಿಲ್ಲ-ಆ ತತ್ವದ ಮೇಲೆ ಅಥವಾ ಬ್ರಹ್ಮಾದಿಗಳ ಮೇಲೆ ಈತನ ಶಕ್ತಿಯು ಏನೂ ನಡೆಯದು; ಮಧು, ಕೈಟಭ ಮೊದಲಾದವರು ಮತ್ತು ಶಂಬರಾದಿ ದೈತ್ಯರು ಮನೋಭಿಮಾನಿಗಳು (ಮನಸ್ಸಿನ ದುಷ್ಟಪ್ರವೃತ್ತಿಗಳ ಪ್ರೇರಕರು);[1] ಇತರ ದೈತ್ಯರು, ಇತರ ಇಂದ್ರಿಯಗಳಿಗೆ, ದೇವತೆಗಳೊಂದಿಗೆ,

---

1. 'ತೇ ಹಿ ದುಷ್ಕಾಮದುರ್ಬುದ್ಧಿಶರೀರೇಂದ್ರಿಯಮಾನಿನಃ' (ಸ.ರ.ಮಾ) ಎಂಬ ಮೊದಲಾದ ಶ್ಲೋಕಭಾಗದಿಂದ, ದೈತ್ಯಾಭಿಮಾನಿಗಳು, ತಮ್ಮಿಂದ ಅಭಿಮನ್ಯಮಾನವಾದ ಮನ ಆದಿ ಇಂದ್ರಿಯಗಳ ದುಷ್ಟಪ್ರವೃತ್ತಿಗಳಿಗೆ ಮಾತ್ರ ಅಭಿಮಾನಿಗಳೆಂದು ನಿಶ್ಚಯಿಸಲಾಗಿದೆ. ಯದ್ಯಪಿ, ತತ್ವಾಭಿಮಾನಿದೇವತೆಗಳು, ದೇಹಾಭಿಮಾನಿಯಾದ ಜೀವನನ್ನು ಶ್ರೀ ವಾಸುದೇವನ ಆಜ್ಞೆಯಿಂದ, ಆತನ ಪೂರ್ವಕರ್ಮಾನುಸಾರವಾಗಿ, ಪುಣ್ಯಪಾಪಗಳಲ್ಲಿ ಪ್ರೇರಿಸುವರೆಂದೂ, ರಾಗದ್ವೇಷ ರಹಿತರಾಗಿ ಪ್ರೇರಿಸುವ, ಇವರಿಗೆ ಯಾವ ದೋಷವೂ ತಗಲುವುದಿಲ್ಲವೆಂದೂ, ಪ್ರತ್ಯುತ, ಶ್ರೀಹರಿಯ ಆಜ್ಞೆಯನ್ನು ಪಾಲಿಸಿದ್ದರಿಂದ, ತಮ್ಮ ಪ್ರೇರಕ ವ್ಯಾಪಾರವನ್ನು ಶ್ರೀಹರಿಪೂಜೆಯೆಂಬ

ಮಾನಿಯಾದ ರುದ್ರನನ್ನೂ ಕಾಲವಿಶೇಷಗಳಲ್ಲಿ ಬಂಧಿಸುವ-ಪ್ರವೇಶಿಸಿ ಪೀಡಿಸುವ) ಅಹಂಕಾರ ತತ್ತ್ವದ ನಿಯಾಮಕನೆಂದೂ, ಸ್ಮೃತಃ-ಹೇಳಲ್ಪಡುತ್ತಾನೆ; ಮಧುಕೈಟಭ ಮುಖ್ಯಾಃ-ಮಧು, ಕೈಟಭ ಮೊದಲಾದವರು, ಚ-ಮತ್ತು ಶಂಬರಾದ್ಯಾಃ-ಶಂಬರ ಮೊದಲಾದವರೂ, ಮನೋಧಿಗಾಃ-ಮನೋನಿಯಾಮಕರು (ಎಂದು ಹೇಳ ಲಾಗಿರುವರು); ಅನ್ಯೇ ಅಪಿ-ಇತರರಾದ, ದೇವದೈತ್ಯಾಃ-ದೇವತೆಗಳೊಡನೆ ಸ್ಥಿರರಾಗಿರುವ ದೈತ್ಯರೂ (ದೇವತೆಗಳೊಂದಿಗೆ), ತತ್ತದಿಂದ್ರಿಯಮಾನಿನಃ-ಆಯಾ (ಚಕ್ಷುರಾದಿ) ಇಂದ್ರಿಯಾಭಿಮಾನಿಗಳು; (ದುಷ್ಟವ್ಯಾಪಾರಗಳಲ್ಲಿ ಇಂದ್ರಿಯಾಭಿಮಾನಿ ದೇವತೆಗಳ ಅನುಮತಿಯಿಂದ ಪ್ರೇರಕರು).

ಸ್ವತಂತ್ರೋಽಪಿ ಹರಿಃ ಸೃಷ್ಟೌ ಸ್ವಸ್ವಾತಂತ್ರ್ಯಮನೇಕಧಾ ।
ವಿಭಜ್ಯಾದಾನ್ನ್ಯಪ ಇವ ಸರ್ವಕಾರ್ಯೇಷು ಲೀಲಯಾ ॥ ೫ ॥
ತತ್ತತ್ ಸ್ವಾತಂತ್ರ್ಯಯೋಗೇನ ಫಲಭಾಕ್ ಸ ಪ್ರಜಾಯತೇ ।

ಸೃಷ್ಟೌ-ಸೃಷ್ಟಿಯಲ್ಲಿ (ಸೃಷ್ಟಿಯಾಗುತ್ತಿರಲು), ಹರಿಃ-ಶ್ರೀಹರಿಯು, ಸ್ವತಂತ್ರಃ ಅಪಿ-(ಸರ್ವಜೀವರಿಂದ ಸರ್ವವನ್ನೂ ಮಾಡಿಸಲು ಶಕ್ತನಾದ) ಸ್ವತಂತ್ರನೇ

---

ತಾವೂ ಅಭಿಮಾನಿಗಳಾಗಿರುವರು(ಪ್ರೇರಕರೂ ನಿಯಾಮಕರೂ ಆಗಿರುವರು) (೩-೪). ಸ್ಥೂಲದೇಹಸಂಬಂಧದಿಂದ ಜೀವರನ್ನು ಸೃಷ್ಟಿಮಾಡಿ, ಅವರ ದೇಹಗಳಲ್ಲಿ ಜೀವನೊಂದಿಗೆ, ಬ್ರಹ್ಮಾದಿ ತಾತ್ತ್ವಿಕ ದೇವತೆಗಳನ್ನೂ ಕಲ್ಯಾದಿ ದೈತ್ಯರನ್ನೂ, ಮನ ಆದಿ

---

ಭಾವನೆಯಿಂದಲೇ ಮಾಡುತ್ತಾರಾಗಿ, ವಿಶೇಷ ಪುಣ್ಯ ಭಾಗಿಗಳೇ ಆಗುವರೆಂದೂ, ಅನುವ್ಯಾಖ್ಯಾನ ದಲ್ಲಿ ಶ್ರೀಮದಾಚಾರ್ಯರ ವಾಕ್ಯವಿದೆ—ಭಾಗವತ ತಾತ್ಪರ್ಯವಾಕ್ಯಗಳಿಂದಲೂ ಹೀಗೆಂದು ಸಿದ್ಧವಾಗುತ್ತದೆ. ಮೇಲಾಗಿ ತಾತ್ತ್ವಿಕ ದೇವತೆಗಳು ಶ್ರೀಹರಿಯ ವಿಶೇಷಾನುಗ್ರಹದಿಂದ, ಎಲ್ಲ ಜೀವರ ಪೂರ್ವಕರ್ಮಗಳನ್ನು ಬಲ್ಲ ಸರ್ವಜ್ಞರು; ಈ ವಿಧ ಸರ್ವಜ್ಞತ್ವ ದೈತ್ಯಾಭಿಮಾನಿಗಳಿಗಿಲ್ಲ, ಪುಣ್ಯಪಾಪ ಗಳ-ಉಭಯಕ್ಕೂ ದೇವತೆಗಳೇ ಪ್ರೇರಕವಾದರೆ ದೈತ್ಯಾಭಿಮಾನಿಗಳ ಪ್ರೇರಕವ್ಯಾಪಾರಕ್ಕೆ ಅವಕಾಶವಿಲ್ಲೆಂದು ಶಂಕಿಸಲಾಗದು. ತಾತ್ತ್ವಿಕ ದೇವತೆಗಳು ಜೀವರನ್ನು ಪಾಪಕರ್ಮಗಳಲ್ಲಿ ಪ್ರೇರಿಸು ವಾಗ, ಆ ತತ್ತ್ವದ (ಇಂದ್ರಿಯದ) ಅಭಿಮಾನಿ ದೈತ್ಯನ ದ್ವಾರಾ (ಸೂಚಿಸಿ) ತಮ್ಮ ಕಾರ್ಯವನ್ನು ನಿರ್ವಹಿಸುತ್ತಾರೆ. ಈ ಕಾರಣದಿಂದ ದೈತ್ಯಾಭಿಮಾನಿಗಳೂ ಪ್ರೇರಕರೇ—ಮತ್ತು ದುಷ್ಟ ಪ್ರೇರಣೆಯ ಫಲಕ್ಕೆ ಅವರೇ ಭಾಗಿಗಳು—ಬ್ರಹ್ಮಪರ್ಯಂತ ತಾತ್ತ್ವಿಕ ದೇವತೆಗಳಾದರೋ, ಸರ್ವಜೀವರ ಧರ್ಮಜ್ಞಾನಗಳ ಫಲವನ್ನು ತಾರತಮ್ಯಾನುಗುಣವಾಗಿ, ಅಧಿಕವಾಗಿ, ತಾವೇ ಹೊಂದುತ್ತಾರೆ.

'ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ ।
ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ ॥

ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ ।
ಪರ್ಯಾಜ್ಞಾಕರಣಾದೇವ ಪುಣ್ಯಮೇಭಿರವಾಪ್ಯತೇ ॥'

ಇತ್ಯಾದಿ (ಅನುವ್ಯಾಖ್ಯಾನವಾಕ್ಯಗಳು) ಈ ಮೇಲಿನ ಪ್ರಮೇಯಗಳನ್ನು ಸಾಧಿಸುತ್ತವೆ.

ಸಚಿವ: ಸ್ಮೃತಃ-(ಶ್ರೀವಿಷ್ಣುವಿಗೆ) ಸಚಿವ (ಕರ್ಮಸಹಾಯಕ)ನೆಂದು ಹೇಳಲ್ಪಡುತ್ತಾನೆ (ಬ್ರಹ್ಮಪ್ರಾಣರಂತೆ ಸರ್ವಕರ್ಮಗಳಲ್ಲಲ್ಲ); ಮನಸೋಧಿಪತಿಃ-ಮನೋಭಿಮಾನಿಯಾದ, ಶಕ್ರಃ-ಇಂದ್ರನೂ, ಇಂದ್ರಿಯ ದೇವತಾಃ-ಇಂದ್ರಿಯಾಭಿಮಾನಿ ದೇವತೆಗಳಾದ, ಅರ್ಕಾದ್ಯಾಃ-ಸೂರ್ಯಾದಿ ದೇವತೆಗಳೂ, (ಸಚಿವಾ ಏವ- ಹಿತವಾದ ಕೆಲವು ಕಾರ್ಯಗಳಲ್ಲಿ ಶ್ರೀವಿಷ್ಣುವಿನ ಸಹಾಯಕರೇ).

ಏವಮೇವ ಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ ।
ಬ್ರಹ್ಮವಚ್ಚ ಕಲಿಸ್ತೇಷಾಂ ಬಂಧಕೋಽಹಂಕೃತಿಃ ಸ್ಮೃತಃ ॥ ೩ ॥
ಮಧುಕೈಟಭಮುಖ್ಯಾಶ್ಚ ಶಂಬರಾದ್ಯಾ ಮನೋಧಿಗಾಃ ।
ಅನ್ಯೇಽಪಿ ದೇವದೈತ್ಯಾಸ್ತು ತತ್ತದಿಂದ್ರಿಯಮಾನಿನಃ ॥ ೪ ॥

ಏವಂ ಏವ - ಹೀಗೆಯೇ, ಸರ್ವದೇಹೇಷು - ಸಕಲ ಪ್ರಾಣಿ ದೇಹಗಳಲ್ಲಿ, ಕಲ್ಯಾದ್ಯಾಃ-ಕಲಿ ಮೊದಲಾದ ದೈತ್ಯರು, ಸಂಸ್ಥಿತಾಃ-ಸ್ಥಿತರಾಗಿರುವರು; ತೇಷಾಂ-ಅವರಿಗೆ (ದೈತ್ಯರಿಗೆ), ಕಲಿಃ-ಕಲಿಯು, ಬ್ರಹ್ಮವತ್-(ದೇವತೆಗಳಿಗೆ ಹೇಗೆ ಬ್ರಹ್ಮದೇವನು ಅಧಿಪತಿಯೋ, ಶ್ರೇಷ್ಠನೋ, ಹಾಗೆ) ಬ್ರಹ್ಮನಂತಿರುವನು; ಮತ್ತು ಬಂಧಕಃ-ಬಂಧಕನಾದ, ಅಹಂಕೃತಿಃ-ಅಹಂಕಾರನೆಂದು (ಅಹಂಕಾರ ತತ್ತ್ವಾಧಿ

---

ಇಂದ್ರಿಯಾಭಿಮಾನಿ ದೇವತೆಗಳೂ ಶ್ರೀವಿಷ್ಣುವಿಗೆ ಯಥಾಯೋಗ್ಯ ಸಚಿವರೇ ಮತ್ತು ಪ್ರಿಯರೇ (೨) ಇಂದ್ರಿಯಾಭಿಮಾನಿ ದೇವತೆಗಳಂತೆಯೇ, ಕಲಿ ಮೊದಲಾದ ದೈತ್ಯರೂ ಸರ್ವರ ದೇಹಗಳಲ್ಲಿರುವರು; ದೇವಶ್ರೇಷ್ಠನು ಬ್ರಹ್ಮದೇವನು ಹೇಗೋ, ಹಾಗೆ ದೈತ್ಯಾಧಿಪತಿಯು ಕಲಿಯು. ಕಲಿಯು ಅಹಂಕಾರ ತತ್ತ್ವಪರ್ಯಂತ ಪ್ರವೇಶವುಳ್ಳವನು. ಮಹತ್ತತ್ತ್ವದಲ್ಲಿ ಅಥವಾ ತನ್ನಿರ್ಮಿತ ಬ್ರಹ್ಮವಾಯು(ತತ್ತ್ವಯರ) ದೇಹದಲ್ಲಿಯಾಗಲಿ ಅವನ ಪ್ರವೇಶವಿಲ್ಲ. ಆ ತತ್ತ್ವದ ಮೇಲೆ ಅಥವಾ ಬ್ರಹ್ಮಾದಿಗಳ ಮೇಲೆ ಅವನ ಶಕ್ತಿಯು ಏನೂ ನಡೆಯದು. ಮಧು, ಕೈಟಭ ಮೊದಲಾದವರು ಮತ್ತು ಶಂಬರಾದಿ ದೈತ್ಯರು ಮನೋಭಿಮಾನಿಗಳು (ಮನಸ್ಸಿನ ದುಷ್ಪ್ರವೃತ್ತಿಗಳ ಪ್ರೇರಕರು).[1] ಇತರ ದೈತ್ಯರು, ಇತರ ಇಂದ್ರಿಯಗಳಿಗೆ, ದೇವತೆಗಳೊಂದಿಗೆ

1 [illegible]

ಸಚಿವಃ ಸ್ಮೃತಃ-(ಶ್ರೀವಿಷ್ಣುವಿಗೆ) ಸಚಿವ (ಕರ್ಮಸಹಾಯಕ)ನೆಂದು ಹೇಳಲ್ಪಡುತ್ತಾನೆ (ಬ್ರಹ್ಮಪ್ರಾಣರಂತೆ ಸರ್ವಕರ್ಮಗಳಲ್ಲಲ್ಲ); ಮನಸೋಧಿಪತಿಃ-ಮನೋಭಿಮಾನಿಯಾದ, ಶಕ್ರಃ-ಇಂದ್ರನೂ, ಇಂದ್ರಿಯ ದೇವತಾಃ-ಇಂದ್ರಿಯಾಭಿಮಾನಿ ದೇವತೆಗಳಾದ, ಅರ್ಕಾದ್ಯಾಃ-ಸೂರ್ಯಾದಿ ದೇವತೆಗಳೂ, (ಸಚಿವಾ ಏವ-ಮಿತವಾದ ತಂತಮ್ಮ ಕಾರ್ಯಗಳಲ್ಲಿ ಶ್ರೀವಿಷ್ಣುವಿನ ಸಹಾಯಕರೇ).

**ಏವಮೇವ ಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ ।**
**ಬ್ರಹ್ಮವಚ್ಚ ಕಲಿಸ್ತೇಷಾಂ ಬಂಧಕೋಹಂಕೃತಿಃ ಸ್ಮೃತಃ ॥ ೩ ॥**
**ಮಧುಕೈಟಭಮುಖ್ಯಾಶ್ಚ ಶಂಬರಾದ್ಯಾ ಮನೋಧಿಗಾಃ ।**
**ಅನ್ಯೇಪಿ ದೇವದೈತ್ಯಾಸ್ತು ತತ್ತದಿಂದ್ರಿಯಮಾನಿನಃ ॥ ೪ ॥**

ಏವಂ ಏವ - ಹೀಗೆಯೇ, ಸರ್ವದೇಹೇಷು - ಸಕಲ ಪ್ರಾಣಿ ದೇಹಗಳಲ್ಲಿ ಕಲ್ಯಾದ್ಯಾಃ-ಕಲಿ ಮೊದಲಾದ ದೈತ್ಯರು, ಸಂಸ್ಥಿತಾಃ-ಸ್ಥಿತರಾಗಿರುವರು; ತೇಷಾಂ-ಅವರಿಗೆ (ದೈತ್ಯರಿಗೆ). ಕಲಿಃ-ಕಲಿಯು, ಬ್ರಹ್ಮವತ್-(ದೇವತೆಗಳಿಗೆ ಹೇಗೆ ಬ್ರಹ್ಮದೇವನು ಅಧಿಪತಿಯೋ, ಶ್ರೇಷ್ಠನೋ, ಹಾಗೆ) ಬ್ರಹ್ಮನಂತಿರುವನು; ಮತ್ತು ಬಂಧಕಃ-ಬಂಧಕನಾದ, ಅಹಂಕೃತಿಃ-ಅಹಂಕಾರನೆಂದು (ಅಹಂಕಾರ ತತ್ವಾಭಿ

---

ಇಂದ್ರಿಯಾಭಿಮಾನಿ ದೇವತೆಗಳೂ ಶ್ರೀವಿಷ್ಣುವಿಗೆ ಯಥಾಯೋಗ್ಯ ಸಚಿವರೇ ಮತ್ತು ಪ್ರಿಯರೇ (೨). ಇಂದ್ರಿಯಾಭಿಮಾನಿ ದೇವತೆಗಳಂತೆಯೇ, ಕಲಿ ಮೊದಲಾದ ದೈತ್ಯರೂ ಸರ್ವರ ದೇಹಗಳಲ್ಲಿರುವರು; ದೇವಶ್ರೇಷ್ಠನು ಬ್ರಹ್ಮದೇವನು ಹೇಗೋ, ಹಾಗೆ, ದೈತ್ಯಾಧಿಪತಿಯು ಕಲಿಯು; ಕಲಿಯು ಅಹಂಕಾರ ತತ್ವಪರ್ಯಂತ ಪ್ರವೇಶವುಳ್ಳವನು; ಮಹತತ್ತ್ವದಲ್ಲಿ ಅಥವಾ ತನ್ನಿರ್ಮಿತ ಬ್ರಹ್ಮವಾಯು(ತತ್ತ್ವಿಯರ) ದೇಹದಲ್ಲಿಯಾಗಲಿ ಆತನ ಪ್ರವೇಶವಿಲ್ಲ-ಆ ತತ್ವದ ಮೇಲೆ ಅಥವಾ ಬ್ರಹ್ಮಾದಿಗಳ ಮೇಲೆ ಈತನ ಶಕ್ತಿಯು ಏನೂ ನಡೆಯದು; ಮಧು, ಕೈಟಭ ಮೊದಲಾದವರು ಮತ್ತು ಶಂಬರಾದಿ ದೈತ್ಯರು ಮನೋಭಿಮಾನಿಗಳು (ಮನಸ್ಸಿನ ದುಷ್ಟಪ್ರವೃತ್ತಿಗಳ ಪ್ರೇರಕರು);[1] ಇತರ ದೈತ್ಯರು, ಇತರ ಇಂದ್ರಿಯಗಳಿಗೆ, ದೇವತೆಗಳೊಂದಿಗೆ,

1. 'ತೇ ಹಿ ದುಷ್ಟಾಮದುರ್ಬುದ್ಧಿಶರೀರೇಂದ್ರಿಯಮಾನಿನಃ' (ಸ.ರ.ಮಾ) ಎಂಬ ಮೊದಲಾದ ಶ್ಲೋಕಭಾಗಗಳಿಂದ, ದೈತ್ಯಾಭಿಮಾನಿಗಳು, ತಮ್ಮಿಂದ ಅಭಿಮನ್ಯಮಾನವಾದ ಮನ ಆದಿ ಇಂದ್ರಿಯಗಳ ದುಷ್ಟಪ್ರವೃತ್ತಿಗಳಿಗೆ ಮಾತ್ರ ಅಭಿಮಾನಿಗಳೆಂದು ನಿಶ್ಚಯಿಸಲಾಗಿದೆ. ಯದ್ಯಪಿ, ತತ್ವಾಭಿಮಾನಿದೇವತೆಗಳು, ದೇಹಾಭಿಮಾನಿಯಾದ ಜೀವನನ್ನು ಶ್ರೀ ವಾಸುದೇವನ ಆಜ್ಞೆಯಿಂದ, ಆತನ ಪೂರ್ವಕರ್ಮಾನುಸಾರವಾಗಿ, ಪುಣ್ಯಾಪಾಪಗಳಲ್ಲಿ ಪ್ರೇರಿಸುವರೆಂದೂ, ರಾಗದ್ವೇಷ ರಹಿತರಾಗಿ ಪ್ರೇರಿಸುವ, ಇವರಿಗೆ ಯಾವ ದೋಷವೂ ತಗಲುವುದಿಲ್ಲವೆಂದೂ, ಪ್ರತ್ಯುತ, ಶ್ರೀಹರಿಯ ಆಜ್ಞೆಯನ್ನು ಪಾಲಿಸಿದ್ದರಿಂದ, ತಮ್ಮ ಪ್ರೇರಕ ವ್ಯಾಪಾರವನ್ನು ಶ್ರೀಹರಿಪೂಜೆಯೆಂಬ

ಮಾನಿಯಾದ ರುದ್ರನನ್ನೂ ಕಾಲವಿಶೇಷಗಳಲ್ಲಿ ಬಂಧಿಸುವ-ಪ್ರವೇಶಿಸಿ ಪೀಡಿಸುವ) ಅಹಂಕಾರ ತತ್ತ್ವದ ನಿಯಾಮಕನೆಂದೂ, ಸ್ಮೃತಃ-ಹೇಳಲ್ಪಡುತ್ತಾನೆ; ಮಧುಕೈಟಭ ಮುಖ್ಯಾಃ-ಮಧು, ಕೈಟಭ ಮೊದಲಾದವರು, ಚ-ಮತ್ತು ಶಂಬರಾದ್ಯಾಃ-ಶಂಬರ ಮೊದಲಾದವರೂ, ಮನೋಧಿಗಾಃ-ಮನೋನಿಯಾಮಕರು (ಎಂದು ಹೇಳಲಾಗಿರುವವರು); ಅನ್ಯೇ ಅಪಿ-ಇತರರಾದ, ದೇವದೈತ್ಯಾಃ-ದೇವತೆಗಳೊಡನೆ ಸ್ಥಿರರಾಗಿರುವ ದೈತ್ಯರೂ (ದೇವತೆಗಳೊಂದಿಗೆ), ತತ್ತದಿಂದ್ರಿಯಮಾನಿನಃ-ಆಯಾ (ಚಕ್ಷುರಾದಿ) ಇಂದ್ರಿಯಾಭಿಮಾನಿಗಳು; (ದುಷ್ಟವ್ಯಾಪಾರಗಳಲ್ಲಿ ಇಂದ್ರಿಯಾಭಿಮಾನಿ ದೇವತೆಗಳ ಅನುಮತಿಯಿಂದ ಪ್ರೇರಕರು).

ಸ್ವತಂತ್ರೋಽಪಿ ಹರಿಃ ಸೃಷ್ಟೌ ಸ್ವಸ್ವಾತಂತ್ರ್ಯಮನೇಕಧಾ ।
ವಿಭಜ್ಯಾದಾನ್ನೃಪ ಇವ ಸರ್ವಕಾರ್ಯೇಷು ಲೀಲಯಾ ॥ ೫ ॥
ತತ್ತತ್ ಸ್ವಾತಂತ್ರ್ಯಯೋಗೇನ ಫಲಭಾಕ್ ಸ ಪ್ರಜಾಯತೇ ।

ಸೃಷ್ಟೌ-ಸೃಷ್ಟಿಯಲ್ಲಿ (ಸೃಷ್ಟಿಯಾಗುತ್ತಿರಲು), ಹರಿಃ-ಶ್ರೀಹರಿಯು, ಸ್ವತಂತ್ರಃ ಅಪಿ-(ಸರ್ವಜೀವರಿಂದ ಸರ್ವವನ್ನೂ ಮಾಡಿಸಲು ಶಕ್ತನಾದ) ಸ್ವತಂತ್ರನೇ

---

ತಾವೂ ಅಭಿಮಾನಿಗಳಾಗಿರುವವರು(ಪ್ರೇರಕರೂ ನಿಯಾಮಕರೂ ಆಗಿರುವವರು) (೩-೪). ಸ್ಥೂಲದೇಹಸಂಬಂಧದಿಂದ ಜೀವರನ್ನು ಸೃಷ್ಟಿಮಾಡಿ, ಅವರ ದೇಹಗಳಲ್ಲಿ ಜೀವನೊಂದಿಗೆ, ಬ್ರಹ್ಮಾದಿ ತಾತ್ತ್ವಿಕ ದೇವತೆಗಳನ್ನೂ ಕಲ್ಯಾದಿ ದೈತ್ಯರನ್ನೂ, ಮನ ಆದಿ

---

ಭಾವನೆಯಿಂದಲೇ ಮಾಡುತ್ತಾರಾಗಿ, ವಿಶೇಷ ಪುಣ್ಯ ಭಾಗಿಗಳೇ ಆಗುವರೆಂದೂ, ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರ ವಾಕ್ಯವಿದೆ—ಭಾಗವತ ತಾತ್ಪರ್ಯವಾಕ್ಯಗಳಿಂದಲೂ ಹೀಗೆಂದು ಸಿದ್ಧವಾಗುತ್ತದೆ. ಮೇಲಾಗಿ ತಾತ್ತ್ವಿಕ ದೇವತೆಗಳು ಶ್ರೀಹರಿಯ ವಿಶೇಷಾನುಗ್ರಹದಿಂದ, ಎಲ್ಲ ಜೀವರ ಪೂರ್ವಕರ್ಮಗಳನ್ನು ಬಲ್ಲ ಸರ್ವಜ್ಞರು; ಈ ವಿಧ ಸರ್ವಜ್ಞತ್ವ ದೈತ್ಯಾಭಿಮಾನಿಗಳಿಗಿಲ್ಲ. ಪುಣ್ಯಪಾಪಗಳ- ಉಭಯಕ್ಕೂ ದೇವತೆಗಳೇ ಪ್ರೇರಕವಾದರೆ ದೈತ್ಯಾಭಿಮಾನಿಗಳ ಪ್ರೇರಕವ್ಯಾಪಾರಕ್ಕೆ ಅವಕಾಶವಿಲ್ಲೆಂದು ಶಂಕಿಸಲಾಗದು. ತಾತ್ತ್ವಿಕ ದೇವತೆಗಳು ಜೀವರನ್ನು ಪಾಪಕರ್ಮಗಳಲ್ಲಿ ಪ್ರೇರಿಸುವಾಗ, ಆ ತತ್ತ್ವದ (ಇಂದ್ರಿಯದ) ಅಭಿಮಾನಿ ದೈತ್ಯನ ದ್ವಾರಾ (ಸೂಚಿಸಿ) ತಮ್ಮ ಕಾರ್ಯವನ್ನು ನಿರ್ವಹಿಸುತ್ತಾರೆ. ಈ ಕಾರಣದಿಂದ ದೈತ್ಯಾಭಿಮಾನಿಗಳೂ ಪ್ರೇರಕರೇ—ಮತ್ತು ದುಷ್ಟ ಪ್ರೇರಣೆಯ ಫಲಕ್ಕೆ ಅವರೇ ಭಾಗಿಗಳು—ಬ್ರಹ್ಮಪರ್ಯಂತ ತಾತ್ತ್ವಿಕ ದೇವತೆಗಳಾದರೋ, ಸರ್ವಜೀವರ ಧರ್ಮಜ್ಞಾನಗಳ ಫಲವನ್ನು ತಾರತಮ್ಯಾನುಗುಣವಾಗಿ, ಅಧಿಕವಾಗಿ, ತಾವೇ ಹೊಂದುತ್ತಾರೆ.

'ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ ।
ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ ॥

ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ ।
ಪರ್ಯಾಪ್ತಾಕರಣಾದೇವ ಪುಣ್ಯಮೇಭಿರವಾಪ್ಯತೇ ॥'

ಇತ್ಯಾದಿ (ಅನುವ್ಯಾಖ್ಯಾನವಾಕ್ಯಗಳು) ಈ ಮೇಲಿನ ಪ್ರಮೇಯಗಳನ್ನು ಸಾಧಿಸುತ್ತವೆ.

ಆಗಿದ್ದರೂ, ಸ್ವಾತಂತ್ರ್ಯಂ-(ತನ್ನ) ಸ್ವಾತಂತ್ರ್ಯವನ್ನು ಅನೇಕಧಾ-ಬಹುಪ್ರಕಾರವಾಗಿ, ವಿಭಜ್ಯ- ವಿಭಾಗಿಸಿ, ನೃಪಃ ಇವ-ರಾಜನಂತೆ (ರಾಜನು ತನ್ನ ಅಧೀನರಾದ ಅಮಾತ್ಯಾದಿ ಅಧಿಕಾರಿಗಳಲ್ಲಿ ತನ್ನ ಸ್ವಾತಂತ್ರ್ಯವನ್ನು ಹಂಚಿಕೊಟ್ಟು ಅಧಿಕಾರ ಸ್ಥಾನಗಳಲ್ಲಿಡುವಂತೆ), ಸರ್ವಕಾರ್ಯೇಷು-ಸರ್ವಕಾರ್ಯಗಳಲ್ಲಿ (ಜೀವರಿಂದ ನಡೆಯಬೇಕಾದ ಎಲ್ಲ ಕರ್ಮಗಳಲ್ಲಿ, ಸ್ವಾತಂತ್ರ್ಯದ ಅಂಶಗಳನ್ನು), ಲೀಲಯಾ-ಲೀಲೆಯಿಂದ, ಅದಾತ್-(ಎಲ್ಲರಲ್ಲಿ—ಜೀವ ಮತ್ತು ಇಂದ್ರಿಯಾಭಿಮಾನಿಗಳಲ್ಲಿ) ಕೊಟ್ಟನು; ಸಃ-ಜೀವನು (ಮತ್ತು ಆಯಾ ಇಂದ್ರಿಯಾಭಿಮಾನಿಗಳು), ತತ್ತತ್-ಆಯಾ, ಸ್ವಾತಂತ್ರ್ಯಯೋಗೇನ-ಸ್ವಾತಂತ್ರ್ಯಾಂಶದ ಸಂಬಂಧದಿಂದ, ಫಲಭಾಕ್-(ಆಯಾ ಕರ್ಮದ) ಫಲಕ್ಕೆ (ಅಷ್ಟಷ್ಟು ಫಲಭಾಗಕ್ಕೆ), ಪ್ರಜಾಯತೇ—ಅರ್ಹನಾಗುತ್ತಾನೆ (ಫಲಭಾಗಿಯಾಗುತ್ತಾನೆ).

ಸ್ವಸ್ವಾತಂತ್ರ್ಯಚತುರ್ಥಾಂಶಂ ದಶಧಾ ವ್ಯಭಜದ್ಧರಿಃ ॥ ೬ ॥
ಪಾದೋನಪಂಚಕಂ ಪ್ರಾಣೇ ಸಪಾದಂ ಬ್ರಹ್ಮಣೇ ದದೌ ।

ಹರಿಃ-ಶ್ರೀಹರಿಯು, ಸ್ವಸ್ವಾತಂತ್ರ್ಯಚತುರ್ಥಾಂಶಂ-ತನ್ನ ಸ್ವಾತಂತ್ರ್ಯದ ಒಂದಂಶವನ್ನು (ಆ ಗುಣವನ್ನು) ನಾಲ್ಕುಭಾಗ ಮಾಡಿ, ಅದರಲ್ಲಿ ಒಂದು ಭಾಗವನ್ನು ದಶಧಾ-ಹತ್ತು ಭಾಗಗಳನ್ನಾಗಿ, ವ್ಯಭಜತ್-ಮಾಡಿದನು; ಪ್ರಾಣೇ- ಮುಖ್ಯಪ್ರಾಣನಲ್ಲಿ

---

ಇಂದ್ರಿಯಗಳಿಗೆ ಅಭಿಮಾನಿಗಳನ್ನಾಗಿ ಸ್ಥಾಪಿಸಿ ಸ್ವಯಂ ತಾನೇ ಜೀವರಿಂದ, ಅವರವರ ಪೂರ್ವಕರ್ಮ ಮತ್ತು ಯೋಗ್ಯತೆಗಳಿಗೆ ಅನುಸಾರವಾಗಿ ಸಂಘಟಿಸ ಬೇಕಾದ ಸಕಲವನ್ನೂ ಮಾಡಿಸುವ ಸಾಮರ್ಥ್ಯ ಮತ್ತು ಸ್ವಾತಂತ್ರ್ಯಗಳುಳ್ಳವ ನಾದರೂ, ತನ್ನ ಸ್ವಾತಂತ್ರ್ಯದ ಲೇಶಾಂಶವನ್ನು ಬಹುಪ್ರಕಾರವಾಗಿ ವಿಭಾಗರಿಂದ, ದೇಹಗತರಾದ ಜೀವ, ಮತ್ತು ಅಭಿಮಾನಿಗಳಲ್ಲಿ, ರಾಜನು, ತನ್ನ ಸ್ವಾತಂತ್ರ್ಯವನ್ನು (ಸ್ವೇಚ್ಛಾನುಸಾರ ವಿನಿಯೋಗಿಸಬಹುದಾದ ತನ್ನ ಅಧಿಕಾರವನ್ನು) ವಿಭಾಗದಿಂದ, ಅಮಾತ್ಯಾದಿಗಳಲ್ಲಿಟ್ಟು ಅವರಿಂದ ಕಾರ್ಯಗಳನ್ನು ಮಾಡಿಸಿ, ಅವರವರ ಗತಿಪ್ರದನಾಗುವಂತೆ, ಸ್ಥಾಪಿಸಿದನು (ಸ್ವಾತಂತ್ರ್ಯಾಂಶವನ್ನು ಅವರಿಗೆ ಕೊಟ್ಟನು-ಅವರಲ್ಲಿಟ್ಟನು); ಅವರು, ತಂತಮ್ಮ ಸ್ವಾತಂತ್ರ್ಯಾಂಶದಷ್ಟು ಪ್ರಮಾಣದ, ಪ್ರತಿಕರ್ಮದ ಫಲಕ್ಕೆ ಭಾಗಿಗಳಾಗುತ್ತಾರೆ[1] (೫). ಶ್ರೀಹರಿಯು ತನ್ನ ಸ್ವಾತಂತ್ರ್ಯಾಂಶವೊಂದನ್ನು (ಅದನ್ನು ಗಣನಾರ್ಥವಾಗಿ ಒಂದು ಗುಣವೆಂದು ಭಾವಿಸಿ), ನಾಲ್ಕುಭಾಗ ಮಾಡಿ, ಅದರಲ್ಲಿ ಒಂದನ್ನು (೧/೪ ಅಂಶವನ್ನು) ಹತ್ತುಭಾಗಗಳನ್ನಾಗಿ ಮಾಡಿದನು; ಈ

---

1. ಇಲ್ಲಿ ಹಿಂದಿನ ೨೧ನೇ ಅಧ್ಯಾಯದ ಶ್ಲೋಕ ೨೫ರಿಂದ ಮುಂದಿನ ಭಾಗವನ್ನೂ, ಅಲ್ಲಿನ ಸ್ವಾತಂತ್ರ್ಯದಾಸದ ವಿಷಯದಲ್ಲಿ ವಿವರಿಸಿರುವ ಅಡಿಟಿಪ್ಪಣಿಗಳನ್ನೂ ಪ್ರಮಾಣಗಳನ್ನೂ ಗಮನಿಸಬೇಕು.

ಪಾದೋನಪಂಚಕಂ-೪-೩/೪ ಭಾಗಗಳನ್ನು (ಇಟ್ಟು), ಸಪಾದಂ-ಉಳಿದ ೫-೧/೪ (ಸಪಾದಪಂಚಕಂ) ಭಾಗವನ್ನು ಬ್ರಹ್ಮಣೇ-ಬ್ರಹ್ಮದೇವನಿಗೆ, ದದೌ- ಕೊಟ್ಟನು.

ದ್ವಿತೀಯೇ ತು ಚತುರ್ಥಾಂಶೇ ದಶಧೈವ ವಿಭಾಜಿತೇ ॥ ೭ ॥
ದ್ವಾವೇವಾಂಶಾವಹಂಕಾರೇ ಸಾರ್ಧೈಕಂ ಚಿತ್ತದೈವತೇ ।
ಭಗವಾನ್ ಪ್ರದದಾವಿಂದ್ರೇ ಏಕಮೇವೇಂದ್ರಿಯಾಧಿಪೇ ॥ ೮ ॥
ಏವಮೇವ ದದೌ ಜೀವೇ ದೈತ್ಯೇಭ್ಯಃ ಸಾರ್ಧಚಾತುರಾನ್ ।
ಅಥ ದ್ವೌ ತು ತುರೀಯಾಂಶೌ ಸ್ವಾತಂತ್ರ್ಯಸ್ಯಾವಶೇಷಿತೌ ॥ ೯ ॥
ತೌ ವಿಧಾಯ ತ್ರಿಧಾ ತ್ರ್ಯಂಶಂ ಮಾಯಾಯೈ ಪ್ರದದೌ ಸ್ವಯಂ ।
ಶೇಷಂ ಭಾಗದ್ವಯಂ ಸ್ವಸ್ಮಿನ್ ಸ್ಥಾಪಯೇತ್ಸ್ವ ನಿಜೇಚ್ಛಯಾ ॥ ೧೦ ॥

ದ್ವಿತೀಯೇ-ಎರಡನೆಯ, ಚತುರ್ಥಾಂಶೇ-೧/೪ ಭಾಗವು, ದಶಧಾ ಏವ- ಹತ್ತು ಭಾಗಗಳಾಗಿಯೇ, ವಿಭಾಜಿತೇ-ವಿಭಾಗಿಸಲ್ಪಡುತ್ತಿರಲು, (ಆ ಹತ್ತರಲ್ಲಿ) ದ್ವೌ ಏವ ಅಂಶೌ-ಎರಡೇ ಭಾಗಗಳು, ಅಹಂಕಾರೇ-ರುದ್ರನಲ್ಲಿಯೂ, ಸಾರ್ಧೈಕಂ- ೧-೧/೨ ಭಾಗವು, ಚಿತ್ತದೈವತೇ ಇಂದ್ರೇ-ಮನೋಭಿಮಾನಿ ಇಂದ್ರನಲ್ಲಿಯೂ (ಇಂದ್ರಕಾಮರಲ್ಲಿ), ಇಂದ್ರಿಯಾಧಿಪೇ-ಇಂದ್ರಿಯಾಭಿಮಾನವರ್ಗದಲ್ಲಿ (ಆ

---

ಹತ್ತಂಶಗಳಲ್ಲಿ ೪.೩/೪ ಅಂಶಗಳನ್ನು ಮುಖ್ಯಪ್ರಾಣನಲ್ಲಿಟ್ಟು, ಉಳಿದ ೫.೧/೪ ಅಂಶಗಳನ್ನು ಬ್ರಹ್ಮದೇವನಿಗೆ ಕೊಟ್ಟನು[1] (೬). ಎರಡನೆಯ ೧/೪ ಭಾಗವನ್ನು (ಚತುರ್ಥಾಂಶವನ್ನು), ೧೦ ಭಾಗಗಳನ್ನಾಗಿ ವಿಭಾಗಿಸಿ, ಅದರಲ್ಲಿ ೨ ಭಾಗಗಳನ್ನು ರುದ್ರನಲ್ಲಿಯೂ, ೧-೧/೨ ಭಾಗವನ್ನು ಮನೋಭಿಮಾನಿ ಇಂದ್ರನಲ್ಲಿಯೂ, ಸೂರ್ಯಾದಿ ಇಂದ್ರಿಯಾಭಿಮಾನಿ ದೇವತಾವರ್ಗದಲ್ಲಿ ೧ ಭಾಗವನ್ನೂ ಅದರಂತೆಯೇ ಇಂದ್ರಿಯಾಭಿಮಾನಿಯಾದ ಜೀವನಲ್ಲಿ ೧ ಭಾಗವನ್ನೂ

1. ಜೀವರಲ್ಲಿರುವ ಶ್ರೀಹರಿಯ ಸ್ವಾತಂತ್ರ್ಯಾಂಶಗಳು ಮೂರು ವಿಧವಾಗಿವೆ; ದತ್ತಸ್ವಾತಂತ್ರ್ಯ, ಸ್ವಗತಸ್ವಾತಂತ್ರ್ಯ ಮತ್ತು ಸರ್ವಸ್ವಾತಂತ್ರ್ಯಗಳೆಂದು ಅವುಗಳ ನಾಮ; ಅವುಗಳಿಂದಾಗುವ ಕಾರ್ಯಗಳು ಪ್ರತ್ಯೇಕವಾಗಿದ್ದರೂ, ಪ್ರತಿಯೊಂದರಲ್ಲಿ ಮೂರೂ ಇರುತ್ತವೆ—ಪ್ರಚುರ ಅಪ್ರಚುರ ವಿಶೇಷದಿಂದ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತವೆ. ಜೀವಸ್ವರೂಪಗತವಾದ ಬಿಂಬಸ್ವರೂಪ ಸ್ವಾತಂತ್ರ್ಯಾಂಶವು ಅನಾದಿನಿತ್ಯವಾದುದು; ಅದು ಮುಕ್ತಿಯಲ್ಲಿ ವಿಹಾರಾದಿ ಕ್ರಿಯೆಗಳಿಗೆ ಕಾರಣವಾಗುತ್ತದೆ—ಸಂಸಾರಾವಸ್ಥೆಯಲ್ಲಿ ಅದರ ಕಾರ್ಯವಿಲ್ಲ. ಸೃಷ್ಟಿಕಾಲದಲ್ಲಿ ಮೂಲರೂಪದಿಂದ ಅವತಾರರೂಪಗಳಂತೆ, ಮೇಲೆ ಹೇಳಿದ ದತ್ತಸ್ವಾತಂತ್ರ್ಯಾದಿ ಮೂರು ಅಂಶಗಳು—ಅಪಾರವಾದ ಶ್ರೀಹರಿಯ ಸ್ವಾತಂತ್ರ್ಯ ಗುಣದಿಂದ, ವಿಶೇಷಬಲದಿಂದ ಭಿನ್ನನಾಮಗಳಿಂದ ವ್ಯವಹರಿಸಲ್ಪಡುವ ಈ ಅಂಶಗಳು—ಆವಿರ್ಭೂತವಾಗುತ್ತವೆ. ತ್ರಿವಿಧಜೀವರ ದೇಹಗಳಲ್ಲಿ ಈ ಅಂಶಗಳು (ಪರಸ್ಪರ ಭಿನ್ನಗಳೇ ಆದ ಮೂಲರೂಪದಂತೆ ಪೂರ್ಣಗಳೇ ಆದ ಈ ಭಗವಂತನ ರೂಪಗಳು) ಪ್ರವೇಶಿಸುತ್ತವೆ.

ದೇವತೆಗಳಲ್ಲಿ—ಸೂರ್ಯಾದಿಗಳಲ್ಲಿ), ಏಕಂ ಏವ-೧ ಭಾಗವನ್ನೂ, ಜೀವೇ-ಜೀವನಲ್ಲಿ (ದೇಹಾಭಿಮಾನಿಯಲ್ಲಿ), ಏವಂ ಏವ-ಒಂದನ್ನೇ (೧ ಭಾಗವನ್ನೇ), ಮತ್ತು ದೈತ್ಯೇಭ್ಯಃ-ದೈತ್ಯಾಭಿಮಾನಿಗಳಿಗೆ, ಸಾರ್ಧಚತುರಾನ್-೪-೧/೨ ಭಾಗ ಗಳನ್ನೂ ಭಗವಾನ್-ಶ್ರೀಹರಿಯು, ಪ್ರದದೌ-ಕೊಟ್ಟನು; ಅಥ-ನಂತರ (ಹೀಗೆ ಅಂಶಗಳನ್ನು ಜೀವ, ದೇವದೈತ್ಯರಲ್ಲಿ ಸ್ಥಾಪಿಸಿದ ನಂತರ), ಸ್ವಾತಂತ್ರ್ಯಸ್ಯ- ಸ್ವಾತಂತ್ರ್ಯದ, ದ್ವೌ ತು-ಎರಡೇ, ತುರೀಯಾಂಶೌ-ಚತುರ್ಥಾಂಶಗಳು (೧/೪ರ ೨ ಭಾಗಗಳು), ಅವಶೇಷಿತೌ-ಉಳಿದವು; ತೌ-ಆ ಎರಡನ್ನೂ, ತ್ರಿಧಾ-ಮೂರು ಭಾಗಗಳನ್ನಾಗಿ, ವಿಧಾಯ-ಮಾಡಿ, ತ್ರ್ಯಂಶಂ-೧/೩ ಭಾಗವನ್ನು ಮಾಯಾಯೈ- ಶ್ರೀರಮಾದೇವಿಗೆ, ಪ್ರದದೌ-ಕೊಟ್ಟನು; ಶೇಷಂ-ಉಳಿದ, ಭಾಗದ್ವಯಂ-೨ ಭಾಗಗಳನ್ನು (೨/೩ ಭಾಗವನ್ನು), ಸ್ವಯಂ-ತಾನೇ, ಸ್ವಸ್ಮಿನ್-ತನ್ನಲ್ಲಿಯೇ, ನಿಜೇಚ್ಛಯಾ-ಸ್ವೇಚ್ಛೆಯಿಂದಲೇ, ಸಃ-ಆ ಶ್ರೀಹರಿಯು, ಸ್ಥಾಪಯೇತ್-ಇಟ್ಟುಕೊಳ್ಳುತ್ತಾನೆ.

---

ದೈತ್ಯಾಭಿಮಾನಿಗಳಿಗೆ ೪-೧/೨ ಭಾಗಗಳನ್ನೂ ಕೊಟ್ಟನು; ಅವಶಿಷ್ಟವಾದ ಎರಡು(೧/೪) ಚತುರ್ಥಾಂಶಗಳನ್ನು ೩ ಭಾಗಮಾಡಿ, ೧ನ್ನು ಶ್ರೀ ರಮಾದೇವಿಗೆ ಕೊಟ್ಟು, ಉಳಿದ ೨

---

(೧) ದತ್ತಸ್ವಾತಂತ್ರ್ಯಾಂಶದ ಕಾರ್ಯಗಳು:—ತ್ರಿವಿಧ ಜೀವರ ಲಿಂಗದೇಹಗತ ಸೂಕ್ಷ್ಮ ಮನ ಆದಿಗಳ ದ್ವಾರಾ ಸ್ಥೂಲದೇಹಗತ ಮನ ಆದಿಗಳೊಂದಿಗೆ ಸೇರಿ, ಸಾಧನಾವಸ್ಥೆಯಲ್ಲಿ ಜೀವಯತ್ನಾದಿಗಳಿಗೆ ಹೇತುವಾಗಿ, ಅಹಂ ಮಮಕಾರಗಳಿಗೂ ಅವುಗಳಿಂದ ಕೂಡಿದ ನಾನಾ ಕಾರ್ಯನಿಷ್ಪತ್ತಿಗೂ ಕಾರಣವಾಗುತ್ತದೆ.

(೨) ಸ್ವಗತಸ್ವಾತಂತ್ರ್ಯದ ಕಾರ್ಯ:—ತ್ರಿವಿಧ ಜೀವರ ಪಕ್ವ-ಅಪಕ್ವಗಳೆಂಬ ಉಭಯಾವಸ್ಥೆಗಳಲ್ಲಿ ಪಾರತ್ರಿಕ ಫಲಸಾಧನವಿಷಯಕ ಪ್ರವೃತ್ತಿಗೆ ಹೇತುವಾಗುತ್ತದೆ.

(೩) ಸರ್ವಸ್ವಾತಂತ್ರ್ಯದ ಕಾರ್ಯ:—ತ್ರಿವಿಧ ಜೀವರ ಪಕ್ವದಶೆಯಲ್ಲಿ ಸ್ವಸ್ವರೂಪಾವಿರ್ಭಾವವೆಂಬ ಫಲಕ್ಕೆ ಕಾರಣವಾದ ಕಾರ್ಯನಿಷ್ಪತ್ತಿಗೆ ಕಾರಣವಾಗುತ್ತದೆ; ಸುಜೀವರಲ್ಲಿ, ಅಹಂ ಮಮಕಾರಗಳನ್ನು ತ್ಯಜಿಸಿ, ಸರ್ವವೂ ಶ್ರೀಹರಿಯ ಅಧೀನವೆಂಬ ಜ್ಞಾನಯುಕ್ತವಾದ, ಇಷ್ಟಸಂಪಾದಕ ಪ್ರವೃತ್ತಿಗೆ ಕಾರಣವಾಗುತ್ತದೆ.

ಹಿಂದೆ ೨೧ನೇ ಅಧ್ಯಾಯದಲ್ಲಿ ದತ್ತಸ್ವಾತಂತ್ರ್ಯದ ವಿವರಣಪೂರ್ವಕ ನಿರೂಪಣೆ ಇದೆ. ಈ ಅಧ್ಯಾಯವು, ಸ್ವಗತ ಮತ್ತು ಸರ್ವಸ್ವಾತಂತ್ರ್ಯಗಳ ವಿಭಾಗದ ವಿವರಗಳನ್ನು ನಿರೂಪಿಸುತ್ತದೆ. ಈ ಎರಡೂ ಸ್ವಾತಂತ್ರ್ಯಾಂಶಗಳ ವಿಭಾಗವು ಒಂದೇ ಪ್ರಕಾರವಾಗಿರುವುದು (ಚತುರ್ಥಾಂಶದ ದಶಭಾಗಗಳು ಮತ್ತು ಅವುಗಳ ದಾನ—ಸ್ಥಾಪನೆ). ಆದ್ದರಿಂದ ೨೧ನೇ ಅಧ್ಯಾಯದ ಪ್ರಮೇಯವೇ ಇಲ್ಲಿಯೂ ಉಕ್ತವಾಗಿದೆ, ಎಂಬ ಪುನರುಕ್ತಿದೋಷವನ್ನು ಚಿಂತಿಸಲಾಗದು. ಯದ್ಯಪಿ, ಸ್ವಾತಂತ್ರ್ಯಾಂಶಭಾಗಗಳು (ಬ್ರಹ್ಮಾದಿಗಳಲ್ಲಿ ಇಡಲ್ಪಟ್ಟವುಗಳು), ಏಕಪ್ರಕಾರವಾಗಿವೆ (ಒಂದೇ ಪ್ರಮಾಣದಲ್ಲಿರುತ್ತವೆ). ಈ ಪ್ರಮೇಯಗಳನ್ನು ವಿವರಿಸುವ ನಾನಾ ಪ್ರಮಾಣಗಳನ್ನು, ಇಲ್ಲಿ ಗ್ರಂಥವಿಸ್ತಾರಭಯದಿಂದ ಉದಾಹರಿಸಲಾಗಿಲ್ಲ.

**ಯದಿಂದ್ರಿಯೇನ ಯತ್ಕುರ್ವನ್ ಪುಣ್ಯಂ ಪಾಪಂ ಚ ದೃಶ್ಯತೇ ।**
**ತಸ್ಯ ತತ್ತತ್ಸ್ವತಂತ್ರತ್ವಾತ್ ಫಲಭಾಜೋಽಖಿಲಾ ಹಿ ತೇ ॥ ೧೧ ॥**

ಯದೀಂದ್ರಿಯೇನ-ಯಾವ ಇಂದ್ರಿಯದಿಂದ, ಯತ್ಕುರ್ವನ್-ಮಾಡುವ ಯಾವ, ಪುಣ್ಯಂ-ಪುಣ್ಯವು, ಪಾಪಂ ಚ-ಪಾಪವಾಗಲಿ, ದೃಶ್ಯತೇ-ಕಂಡುಬರುವುದೋ, ತಸ್ಯ-ಆ ಇಂದ್ರಿಯಾಭಿಮಾನಿಗೆ, ತತ್ತತ್-ಆಯಾ ಕರ್ಮವು, ಸ್ವತಂತ್ರತ್ವಾತ್-ತನ್ನಲ್ಲಿ ಸ್ಥಾಪಿತವಾದ ಶ್ರೀಹರಿಯ ಸ್ವಾತಂತ್ರ್ಯಾಂಶದಿಂದ ಸಂಭವಿಸಿ ದುದಾದ್ದರಿಂದ, ತೇ ಅಖಿಲಾಃ-ಆ ಇಂದ್ರಿಯಾಭಿಮಾನಿಗಳೆಲ್ಲರೂ, ಫಲಭಾಜಃ-(ಆ ಕರ್ಮದ) ಫಲಕ್ಕೆ ಭಾಗಿಗಳಾಗುತ್ತಾರೆ.

**ಗೃಹ್ಣಾತಿ ಹಿ ಹರಿಃ ಪುಣ್ಯಂ ಪಾಪಂ ಭಸ್ಮೀಕರೋತಿ ಚ ।**
**ಸ್ವಸ್ಯ ಚ ದ್ರೋಹಿಣಃ ಕಿಂಚಿತ್ ಪಾಪಾಂಶಂ ಪ್ರದದಾತಿ ಸಃ ॥ ೧೨ ॥**

ಹರಿಃ-ಶ್ರೀಹರಿಯು, ಪುಣ್ಯಂ-ಶುಭಕರ್ಮಫಲವನ್ನು, ಗೃಹ್ಣಾತಿ-ಸ್ವೀಕರಿಸುತ್ತಾನೆ; ಚ - ಮತ್ತು, ಪಾಪಂ - ಅಶುಭಕರ್ಮಫಲವನ್ನು, ಭಸ್ಮೀಕರೋತಿ - ಸುಟ್ಟು ಬೂದಿ ಮಾಡುತ್ತಾನೆ; ಸ್ವಸ್ಯ-ತನ್ನ, ದ್ರೋಹಿಣಃ-ದ್ವೇಷಿಗೆ, ಕಿಂಚಿತ್-ಸ್ವಲ್ಪ ಪಾಪಾಂಶಂ-ಪಾಪದ ಫಲಭಾಗವನ್ನು, ಸಃ-ಆತನು, ಪ್ರದದಾತಿ-ಕೊಡುತ್ತಾನೆ (ಮುಟ್ಟಿಸುತ್ತಾನೆ).

**ತಥೈವ ನಿಜಭಕ್ತಾನಾಂ ಬ್ರಹ್ಮಾದೀನಾಂ ಚ ಯೇ ದ್ರುಹಃ ।**
**ತೇಭ್ಯ ಏವ ಹಿ ತತ್ಪಾಪವಿಭಾಗಂ ಪ್ರದದಾತ್ಯಜಃ ॥ ೧೩ ॥**
**ಪಾಪಕರ್ಮಣಿ ಯೇಽಪಿ ಸ್ಯುಃ ಸಹಾಯಾಃ ಪಾಪರೂಪಿಣಃ ।**
**ಯಥಾಪರಾಧಂ ತೇಭ್ಯೋಽಪಿ ಪಾಪಾನಾಂ ವಿಭಜತ್ಯಸೌ ॥ ೧೪ ॥**

---

ಭಾಗಗಳನ್ನು ಸ್ವೇಚ್ಛೆಯಿಂದ ಶ್ರೀಹರಿಯು ತನ್ನಲ್ಲಿಯೇ ಇಟ್ಟು ಕೊಂಡನು[1] (೭-೧೦). ಯಾವ ಇಂದ್ರಿಯದಿಂದ ಯಾವ ಪುಣ್ಯ ಅಥವಾ ಪಾಪಕರ್ಮವು ಸಂಭವಿಸುತ್ತದೆಯೋ, ಆದು ಆ ಇಂದ್ರಿಯಾಭಿಮಾನಿ ದೇವ ಅಥವಾ ದೈತ್ಯನಿಗೆ, ಅವರಲ್ಲಿ ಸ್ಥಾಪಿತವಾದ ಶ್ರೀಹರಿಯ, ಪೂರ್ವೋಕ್ತ ಸ್ವಾತಂತ್ರ್ಯಾಂಶದಿಂದ ಸಂಭವಿಸಿದುದಾದ್ದರಿಂದ, ಸಲ್ಲುತ್ತದೆ; ಹೀಗೆ, ಸಮಸ್ತ ಇಂದ್ರಿಯಾಭಿಮಾನಿಗಳು, ಆ ದೇಹಿಯಿಂದ ಸಂಭವಿಸುವ

1. ಸೃಷ್ಟಿಕಾಲದಲ್ಲಿ ಅಸಂಖ್ಯ ಜೀವರಿಂದ, ತನ್ನ ಸ್ವಾತಂತ್ರ್ಯಾಂಶಗಳಿಂದಲೇ ಸಂಭವಿಸುವ ಸರ್ವಶುಭಕರ್ಮಗಳ ಫಲಭೋಕ್ತನಾಗಲು, ತಾನೂ ಸ್ವಾತಂತ್ರ್ಯಾಂಶದ ಹೊಣೆಭಾಗವನ್ನು ತನ್ನಲ್ಲಿಯೇ ಇಟ್ಟುಕೊಂಡಿರುವನು—ಅಶುಭಕರ್ಮಗಳೂ ಆತನ ಸ್ವಾತಂತ್ರ್ಯಾಂಶಗಳ ಪ್ರಭಾವದಿಂದಲೇ, ಜೀವರಿಂದ ಸಂಭವಿಸುತ್ತವೆ; ಅವುಗಳ ಫಲವಾದ ದುಃಖಾದಿಗಳು ಆನಂದನಿಧಿಯಾದ ಆತನ ಸಮೀಪಕ್ಕೆ ಸುಳಿಯಲು ಸಹ ಅಸಮರ್ಥವಾಗಿವೆ. ಶುಭ ಫಲ ಭೋಗವೂ, ಜೀವರ ಹಿತಾರ್ಥವಾಗಿಯೇ ಎಂಬುದು ನೆನಪಿರಲಿ.

ತಥೈವ-ಹಾಗೆಯೇ (ಮತ್ತೂ), ಯೇ-ಯಾರು, ನಿಜಭಕ್ತಾನಾಂ-ತನ್ನ ಭಕ್ತರಾದ, ಬ್ರಹ್ಮಾದೀನಾಂ-ಬ್ರಹ್ಮಾದಿಗಳ, ದ್ರುಹಃ-ದ್ರೋಹಿಗಳೋ (ದ್ವೇಷಿಗಳೋ—ವಿಷ್ಣು ಭಕ್ತದ್ವೇಷಿಗಳೋ), ತೇಭ್ಯಃ-ಅವರಿಗೂ, ತತ್ಪಾಪವಿಭಾಗಂ-ಆ ಪಾಪಫಲದ ಭಾಗವನ್ನು ಅಜಃ-ಸಕಲ ದೋಷದೂರನಾದ ಶ್ರೀಹರಿಯು, ಪ್ರದದಾತಿ-ಮುಟ್ಟಿಸುತ್ತಾನೆ; ಅಸೌ-ಈ ಶ್ರೀಹರಿಯು, ಯೇ-ಯಾವ, ಪಾಪ ರೂಪಿಣಃ-ಪಾಪಸ್ವರೂಪರಾದವರು (ತಮೋ ಯೋಗ್ಯಜೀವರು), ಪಾಪಕರ್ಮಣಿ-ಪಾಪಕರ್ಮಗಳ ಘಟನೆಯಲ್ಲಿ ಸಹಾಯಾಃ ಸ್ಯುಃ-ಸಹಾಯಕರಾಗಿರುವರೋ, ತೇಭ್ಯಃ ಅಪಿ- ಅವರಿಗೂ ಸಹ, ಪಾಪಾನಾಂ-ಪಾಪಗಳ (ಫಲವನ್ನು), ಯಥಾಪರಾಧಂ- ಅಪರಾಧದ (ಸಹಾಯದ) ಗುರುಲಾಘವವನ್ನು ಅನುಸರಿಸಿ, ವಿಭಜತಿ-ವಿಭಾಗಿಸುತ್ತಾನೆ (ಭಾಗವನ್ನು ಮುಟ್ಟಿಸುತ್ತಾನೆ).

**ದೈತ್ಯಭಾಗಗತಂ ಪುಣ್ಯಂ ತಥಾ ಭಾಗಂ ದದಾತಿ ಚ ।**
**ಪುಣ್ಯಕರ್ಮಸಹಾಯಾ ಯೇ ತೇಷಾಮಥ ಚ ಯೇ ನರಾಃ ॥ ೧೫ ॥**
**ದೈತ್ಯನಿಂದಾಂ ನ ಕುರ್ವಂತಿ ತೇಽಪಿ ತತ್ಪಾಪಭಾಗಿನಃ ।**

ತಥಾ-ಹಾಗೂ, ದೈತ್ಯಭಾಗಗತಂ-ದೈತ್ಯಭಾಗದಲ್ಲಿರುವ (ಕಲ್ಯಾದಿ ದೈತ್ಯಾಭಿ ಮಾನಿಗಳ ಸ್ವಾತಂತ್ರ್ಯಾಂಶ ಭಾಗದ-ಚತುರ್ಥಾಂಶದ ದಶಭಾಗಗಳಲ್ಲಿ ೪-೧/೨ ಭಾಗಗಳ), ಪುಣ್ಯಂ ಭಾಗಂ-ಪುಣ್ಯಭಾಗವನ್ನು ಯೇ-ಯಾರು, ಪುಣ್ಯಕರ್ಮ ಸಹಾಯಾಃ-ಆಯಾ ಪುಣ್ಯಕರ್ಮದ ಸಹಾಯಕರೋ, ತೇಷಾಂ-ಅವರಿಗೆ, ದದಾತಿ ಚ

---

ಕರ್ಮಫಲಗಳಿಗೆ ಭಾಗಿಗಳಾಗುತ್ತಾರೆ(೧೧). ಸ್ವಭಾಗವನ್ನೂ (ಚತುರ್ಥಾಂಶದ್ವಯಗಳಲ್ಲಿ ೨/೩ ಭಾಗವನ್ನೂ) ತಾನಿಟ್ಟು ಕೊಂಡಿರುವುದರಿಂದ, ಮತ್ತು ಯಾವ ಇಂದ್ರಿಯದಿಂದ ಕರ್ಮ ಸಂಭವಿಸಿದರೂ, ಅದರ ಮುಖ್ಯ ಪ್ರೇರಕನು ತಾನೇ ಆದ್ದರಿಂದ, ತನ್ನ ಭಾಗದ ಪುಣ್ಯಫಲವನ್ನು ಮಾತ್ರ ಸ್ವೀಕರಿಸಿ (ಜೀವನಿಗೆ ಅವನ ಭಾಗದ ಫಲಭೋಗವನ್ನು ಉಂಟುಮಾಡಲಿಕ್ಕಾಗಿ ಮಾತ್ರ, ಸ್ವೀಕರಿಸಿ), ಪಾಪಫಲವನ್ನು ಭಸ್ಮಮಾಡುತ್ತಾನೆ; ತನ್ನ ದ್ವೇಷಿಗಳಿಗೂ ಅದರಲ್ಲಿ (ಪಾಪಫಲದಲ್ಲಿ) ಅಲ್ಪವನ್ನು ಮುಟ್ಟಿಸುತ್ತಾನೆ (೧೨). ತನ್ನ ದ್ವೇಷಿಗಳಿಗೆ ಮಾತ್ರವಲ್ಲ; ತನ್ನ ಭಕ್ತರಾದ ಬ್ರಹ್ಮಾದಿಗಳ ದ್ವೇಷಿಗಳಿಗೂ ಮುಟ್ಟಿಸುತ್ತಾನೆ — ಸ್ವಯಂ ದೋಷಸ್ಪರ್ಶಕ್ಕೆ ಅವಕಾಶರಹಿತನಾದ ಶ್ರೀಹರಿಯು; ಮತ್ತು ಪಾಪವನ್ನಾಚರಿಸುವುದರಲ್ಲಿ ಆ ಜೀವನಿಗೆ, ಯಾವ ಪಾಪಿಗಳು, ಸಹಾಯಕರಾಗಿರುವರೋ, ಅವರ ಅಪರಾಧದ ಗುರುತ್ವವನ್ನು ಗಮನಿಸಿ, ತದನುಸಾರವಾಗಿ, ಅವರಿಗೂ (ಸಹಾಯಕರಿಗೂ), ಪಾಪಫಲವನ್ನು ವಿಭಾಗಿಸಿ ಕೊಡುತ್ತಾನೆ (೧೩-೧೪). ದೈತ್ಯಾಭಿಮಾನಿಗಳಲ್ಲಿ ಸ್ಥಾಪಿಸಿರುವ, ಚತುರ್ಥಾಂಶದ ದಶಭಾಗಗಳಲ್ಲಿ೪-೧/೨ ಭಾಗಗಳಿಗೆ ಸಲ್ಲಬೇಕಾದ, ಪುಣ್ಯದ ಭಾಗವನ್ನು ಪುಣ್ಯಕರ್ಮ ಸಹಾಯಕರಿಗೂ, ಪಾಪಕರ್ಮದ ಫಲದಲ್ಲಿ ಕೆಲವು ಭಾಗವನ್ನು ದೈತ್ಯನಿಂದೆಯನ್ನು

ಕೊಡುತ್ತಾನೆ; ಅಥ ಚ-ಮತ್ತೇನೆಂದರೆ, ಯೇ ನರಾಃ-ಯಾವ ಮನುಷ್ಯರು, ದೈತ್ಯನಿಂದಾಂ-ದೈತ್ಯನಿಂದೆಯನ್ನು (ಭಗವದ್ದ್ವೇಷಿಗಳ ನಿಂದೆಯನ್ನು) ಅವರ ತತ್ತ್ವಗಳ ಖಂಡನೆಯನ್ನು), ನ ಕುರ್ವಂತಿ-ಮಾಡುವುದಿಲ್ಲವೋ, ತೇಽಪಿ-ಅವರೂ ಸಹ, ತತ್ಪಾಪಭಾಗಿನಃ-ಆ ಪಾಪದ ಫಲಭಾಗಿಗಳು (ಆಗುತ್ತಾರೆ); (ದೈತ್ಯರ ಪಾಪ ಕರ್ಮಗಳನ್ನು—ಶ್ರೀವಿಷ್ಣು ಮತ್ತು ವಿಷ್ಣುಭಕ್ತರ ದ್ವೇಷಸಾಧಕ ಕರ್ಮಗಳನ್ನು ನಿಂದಿಸದ ಸುಜನರೂ ಆ ಪಾಪದ ಫಲಭಾಗಿಗಳಾಗುವರು).

ಏವಂ ಪುಣ್ಯಸ್ಯ ಪಾಪಸ್ಯ ಚತ್ವಾರಿಂಶತ್ತಮಂ ಲವಂ ॥ ೧೬ ॥
ಪ್ರಾಪ್ನೋತಿ ಜೀವಸ್ತೇನೈವ ಪೂರ್ಣೋಽಯಂ ಭವತಿ ಧ್ರುವಂ ।
ಅಲ್ಪಶಕ್ತಿತ್ವತೋಽಲ್ಪಂ ಚ ಪುಣ್ಯಂ ಪಾಪಂ ಪ್ರಜಾಯತೇ ॥ ೧೭ ॥
ಸ್ವಯೋಗ್ಯಂ ಜಲಮಾದತ್ತೇ ಸಮುದ್ರಾದುದ್ಧೃತೋ ಘಟಃ ।
ತಾವತೈವ ಭವೇತ್ಪೂರ್ಣ ಏವಮತ್ರ ನಿದರ್ಶನಂ ॥ ೧೮ ॥

ಏವಂ-ಹೀಗೆ, ಪುಣ್ಯಸ್ಯ-ಪುಣ್ಯದ, ಪಾಪಸ್ಯ-ಪಾಪದ, ಚತ್ವಾರಿಂಶತ್ತಮಂ-೧/೪೦ ಭಾಗದ, ಲವಂ-ಅತ್ಯಲ್ಪ ಫಲಾಂಶವನ್ನು, ಜೀವಃ-ಜೀವನು (ದೇಹಾಭಿಮಾನಿಯು), ಪ್ರಾಪ್ನೋತಿ-ಹೊಂದುತ್ತಾನೆ (ಚತುರ್ಥಾಂಶದ ದಶಭಾಗಗಳಲ್ಲಿ ೧ ಭಾಗದ ಸ್ವಾತಂತ್ರ್ಯಾಂಶವನ್ನು ಮಾತ್ರ ಹೊಂದಿರುವುದರಿಂದ, ಅಷ್ಟು ಫಲಕ್ಕೆ ಮಾತ್ರ ಅರ್ಹನಾಗುತ್ತಾನೆ); ತೇನೈವ-ಅಷ್ಟರಿಂದಲೇ, ಅಯಂ-ಈತನು (ಜೀವನು), ಪೂರ್ಣಃ-ಪೂರ್ಣನು (ತುಂಬಿದವನು), ಭವತಿ-ಆಗುತ್ತಾನೆ; ಧ್ರುವಂ-ನಿಶ್ಚಯವು; ಅಲ್ಪಶಕ್ತಿತ್ವತಃ-(ಜೀವನು) ಅಲ್ಪಶಕ್ತಿಯುಳ್ಳವನಾದ್ದರಿಂದ, ಅಲ್ಪಂ-ಅಲ್ಪವೇ ಆದ, ಪುಣ್ಯಂ-ಪುಣ್ಯವೂ, ಪಾಪಂ ಚ-ಪಾಪವೂ, ಪ್ರಜಾಯತೇ-ಉಂಟಾಗುತ್ತದೆ; ಘಟಃ-ಗಡಿಗೆಯು, ಸಮುದ್ರಾತ್-ಸಮುದ್ರದಿಂದ, ಉದ್ಧೃತಃ-ಎತ್ತಲ್ಪಟ್ಟರೆ, ಸ್ವಯೋಗ್ಯಂ-ತನ್ನ ಯೋಗ್ಯತೆಯಿರುವಷ್ಟೇ, ಜಲಂ-ನೀರನ್ನು, ಆದತ್ತೇ-ತೆಗೆದುಕೊಂಡು ಬರುತ್ತದೆ; ತಾವತಾ ಏವ-ಅಷ್ಟು ಜಲದಿಂದಲೇ, ಪೂರ್ಣಃ-ತುಂಬಿದುದು, ಭವೇತ್- ಆಗುತ್ತದೆ;

---

ಮಾಡದಿರುವ ಸುಜನರಿಗೆ ಸಹ ಮುಟ್ಟಿಸುತ್ತಾನೆ (೧೫). ಹೀಗೆ ಪುಣ್ಯಪಾಪಗಳ ಫಲದಲ್ಲಿ ದೇಹಾಭಿಮಾನಿಯು(ಜೀವನು), ೧/೪೦ ಭಾಗದ ಅಲ್ಪಫಲವನ್ನು ಮಾತ್ರ ಹೊಂದು ತ್ತಾನೆ—ಅದರಿಂದಲೇ ಜೀವನು ಪೂರ್ಣನಾಗುತ್ತಾನೆ; ಅಷ್ಟು ಅಲ್ಪಫಲದಿಂದ ಅವನ ಯೋಗ್ಯತೆಯು ತುಂಬಿಹೋಗುತ್ತದೆ—ಫಲಗಳಾದ ಸುಖದುಃಖಗಳನ್ನು ಭೋಗಿಸುವ ಜೀವನ ಶಕ್ತಿಯು ಪರಿಮಿತವಾದ್ದರಿಂದ, ಅಷ್ಟುಮಾತ್ರ ಸಾಕಾಗುತ್ತದೆ; ಅವನ ಭೋಗ ಶಕ್ತಿಯೇ ಅಲ್ಪವು—ಅಷ್ಟೇ ಅವನಿಗೆ ಲಭಿಸುತ್ತದೆ; ಸಮುದ್ರದಲ್ಲಿ ಮುಳುಗಿಸಿ ಮೇಲೆತ್ತಿದ ಘಟವು (ಪಾತ್ರೆಯು), ತನ್ನ ಯೋಗ್ಯತೆಗೆ ತಕ್ಕ ಜಲವನ್ನು ಮಾತ್ರ ಸ್ವೀಕರಿಸುತ್ತದೆ; ಅದು ಜಲಪೂರ್ಣವೇ ಆಗಿರುತ್ತದೆ; ಹೀಗೆಯೇ ತನ್ನ ಯೋಗ್ಯತೆಗೆ

ಅತ್ರ-ಈ ವಿಷಯದಲ್ಲಿ (ಜೀವನು ಸ್ವಯೋಗ್ಯ ಪುಣ್ಯಪಾಪಗಳ ಫಲದಿಂದಲೇ ಪೂರ್ಣನಾಗುತ್ತಾನೆಂಬಲ್ಲಿ), ಏವಂ ನಿದರ್ಶನಂ-ಇದೇ ದೃಷ್ಟಾಂತವು.

ಜೀವಕೃತಕರ್ಮಫಲದಲ್ಲಿ ಜೀವನ ಭಾಗವನ್ನು ನಿರ್ಣಯಿಸಿ ನಿರೂಪಿಸುವ
೩೦ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೧

ಶ್ರೀ ವೇದವ್ಯಾಸಾಯ ನಮಃ

**ಭೃಗುರುವಾಚ—**

**ಸಸರ್ಜ ಭಗವಾನಾದೌ ವೈರಾಜೋ ನಿಜದೇಹತಃ ।**
**ಮುಖತಃ ಬ್ರಾಹ್ಮಣಂ ಬಾಹ್ವೋಃ ಕ್ಷತ್ರಿಯಂ ವೈಶ್ಯಮೂರುತಃ ॥ ೧ ॥**
**ಪಾದಾಚ್ಛೂದ್ರಂ ಸ್ತ್ರಿಯಸ್ತೇಷಾಂ ವಾಮಭಾಗಾನ್ಮುಖಾದಿತಃ ।**

**ಅರ್ಥ:—**ಭಗವಾನ್-ಶ್ರೀಹರಿಯು, ಆದೌ-ಮೊದಲಿಗೆ, ವೈರಾಜಃ-ವೈರಾಜ ನಾಮಕನಾಗಿ, ನಿಜದೇಹತಃ-ತನ್ನ ಆ ದೇಹದಿಂದ, ಮುಖತಃ-ಮುಖದಿಂದ, ಬ್ರಾಹ್ಮಣಂ-ಬ್ರಾಹ್ಮಣನನ್ನೂ, ಬಾಹ್ವೋಃ-ಭುಜಗಳಿಂದ, ಕ್ಷತ್ರಿಯಂ-ಕ್ಷತ್ರಿಯನನ್ನೂ ಊರುತಃ-ತೊಡೆಗಳಿಂದ, ವೈಶ್ಯಂ-ವೈಶ್ಯನನ್ನೂ, ಪಾದಾತ್-ಪಾದಗಳಿಂದ, ಶೂದ್ರಂ- ಶೂದ್ರನನ್ನೂ, ಮುಖಾದಿತಃ-ಮುಖಾದಿಗಳ (ವೈರಾಜ ದೇಹದ ಮುಖಾದಿಗಳ), ವಾಮಭಾಗಾತ್-ಎಡಭಾಗದಿಂದ, ತೇಷಾಂ-(ಆಯಾ ವರ್ಣದ) ಬ್ರಾಹ್ಮಣಾದಿಗಳ, ಸ್ತ್ರಿಯಃ-ಸ್ತ್ರೀಯರನ್ನೂ, ಸಸರ್ಜ-ಸೃಷ್ಟಿಮಾಡಿದನು.

**ಶುಕ್ಲವರ್ಣೋಽಭವದ್ವಿಪ್ರಃ ಶೂದ್ರೋಽಭೂತ್ ಕೃಷ್ಣವರ್ಣಕಃ ॥ ೨ ॥**

---

ತಕ್ಕಷ್ಟು ಅಲ್ಪಪುಣ್ಯಪಾಪಫಲಗಳಿಂದಲೇ ಪೂರ್ಣನಾಗುತ್ತಾನೆ—ಈ ವಿಷಯದಲ್ಲಿ ಇದೇ ದೃಷ್ಟಾಂತವು (೧೬-೧೮).

೩೦ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೩೧

**ತಾತ್ಪರ್ಯ:—** ವೈರಾಜನಾಮಕ[1] ದೇಹಪ್ರವಿಷ್ಟನಾದ ಶ್ರೀಹರಿಯು, ಆ ದೇಹದ ಮುಖದಿಂದ ಬ್ರಾಹ್ಮಣನನ್ನೂ, ಬಾಹುಗಳಿಂದ ಕ್ಷತ್ರಿಯನನ್ನೂ, ತೊಡೆ ಗಳಿಂದ ವೈಶ್ಯನನ್ನೂ, ಪಾದಗಳಿಂದ ಶೂದ್ರನನ್ನೂ, ಮುಖಾದಿಗಳ ಎಡಭಾಗದಿಂದ ಆಯಾ

1. ಇಲ್ಲಿ ಹಿಂದಿನ ೨೮ನೇ ಅಧ್ಯಾಯದ ಶ್ಲೋಕ ೫೧ರಿಂದ ೫೩ರವರೆಗಿನ ಭಾಗವನ್ನು ನೋಡಿರಿ. ಪಾದ್ಮಕಲ್ಪದ ಆರಂಭದಲ್ಲಿ ಶ್ರೀಹರಿಯ (ಪದ್ಮನಾಭನ) ನಾಭಿಯಿಂದ ಹುಟ್ಟಿದ ಪದ್ಮವು

**ಕ್ಷತ್ರಿಯಃ ಪ್ರಾಯಶಃ ಶುಕ್ಲಃ ಕೃಷ್ಣಃ ಪ್ರಾಯೇಣ ವಿಟ್‌ಸ್ಮೃತಃ ।**

ವಿಪ್ರಃ-ಬ್ರಾಹ್ಮಣನು, ಶುಕ್ಲವರ್ಣಃ-ಶುಭ್ರವರ್ಣದವನು, ಅಭವತ್-ಆದನು; ಶೂದ್ರಃ-ಶೂದ್ರನು, ಕೃಷ್ಣವರ್ಣಕಃ-ಕೃಷ್ಣ (ಕಪ್ಪು) ವರ್ಣದವನಾದನು; ಕ್ಷತ್ರಿಯಃ-ಕ್ಷತ್ರಿಯನು, ಪ್ರಾಯಶಃ-ಬಹುವಾಗಿ, ಶುಕ್ಲಃ-ಶುಕ್ಲವರ್ಣದವನೇ; ವಿಟ್-ವೈಶ್ಯನು, ಪ್ರಾಯೇಣ-ಬಹಳವಾಗಿ, ಕೃಷ್ಣಃ-ಕೃಷ್ಣವರ್ಣನೆಂದು, ಸ್ಮೃತಃ-ಹೇಳಲ್ಪಟ್ಟಿರುವನು.

**ಬ್ರಾಹ್ಮಣಃ ಸರ್ವತಃ ಶ್ರೇಷ್ಠಸ್ತುರ್ಯಾಂಶಸ್ತಸ್ಯ ಬಾಹುಜಃ ॥ ೩ ॥**

**ವೈಶ್ಯಸ್ತತ್ಪಂಚಮಾಂಶಶ್ಚ ಶೂದ್ರಸ್ತತ್ ಷಷ್ಠಕಾಂಶಕಃ ।**

ಬ್ರಾಹ್ಮಣಃ-ಬ್ರಾಹ್ಮಣನು, ಸರ್ವತಃ-ಎಲ್ಲರಿಗಿಂತ, ಶ್ರೇಷ್ಠ-ಉತ್ತಮನು; ಬಾಹುಜಃ-ಕ್ಷತ್ರಿಯನು, ತಸ್ಯ-ಆತನ (ಬ್ರಾಹ್ಮಣನ), ತುರ್ಯಾಂಶಃ-೧/೪ ಭಾಗದವನು (ವರ್ಣಗಳ ಉಚ್ಚನೀಚತ್ವ ನಿರ್ಣಯಾರ್ಥವಾಗಿ ಗುಣವಿವಕ್ಷೆಯಿಂದ ಅಂಶಗಳನ್ನು ಹೇಳಲಾಗಿದೆ); ಚ-ಮತ್ತು ವೈಶ್ಯಃ-ವೈಶ್ಯನು, ತತ್ಪಂಚಮಾಂಶಃ- ಕ್ಷತ್ರಿಯನ ೧/೫ ಭಾಗದ ಗುಣವುಳ್ಳವನು; ಶೂದ್ರಃ-ಶೂದ್ರನು, ತತ್‌ಷಷ್ಠಕಾಂಶಕಃ- ವೈಶ್ಯನ ೧/೬ ಭಾಗ ಗುಣವುಳ್ಳವನು.

---

ವರ್ಣದ(ಬ್ರಾಹ್ಮಣಾದಿಗಳ) ಸ್ತ್ರೀಯರನ್ನೂ ಮೊದಲಿಗೆ ಸೃಷ್ಟಿಮಾಡಿದನು (೧). ಬ್ರಾಹ್ಮಣನು, ದೇಹದಿಂದ ಶುಕ್ಲವರ್ಣನು; ಕ್ಷತ್ರಿಯನು ಪ್ರಾಯಃ[1] ಶುಕ್ಲವರ್ಣನೇ; ಶೂದ್ರನು ಕೃಷ್ಣವರ್ಣನು; ವೈಶ್ಯನೂ ಬಹಳವಾಗಿ ಕೃಷ್ಣವರ್ಣನೇ (೨). ಬ್ರಾಹ್ಮಣನು ಸರ್ವಶ್ರೇಷ್ಠನು (ಗುಣಜ್ಯೇಷ್ಠನು); ಕ್ಷತ್ರಿಯನು ಆತನ ಚತುರ್ಥಾಂಶಗುಣಯು; ವೈಶ್ಯನು ಕ್ಷತ್ರಿಯನ ಪಂಚಮಾಂಶನು (೧/೫) ಮಾತ್ರ; ಶೂದ್ರನು ವೈಶ್ಯನ ಷಷ್ಠಾಂಶ (೧/೬)

---

ಬೆಳೆದು. ಅದರಲ್ಲಿ ೧೪ ಲೋಕಗಳ ನಿರ್ಮಾಣವಾಗಿ (ಲೋಕಗಳು ವ್ಯವಸ್ಥೆಗೊಳಿಸಲ್ಪಟ್ಟು), ಆ ಲೋಕಗಳ ಆಧಾರಕ್ಕಾಗಿ ಮಹದಾದಿ ಎಲ್ಲ ತತ್ತ್ವಗಳಿಂದ, ನಿರ್ಮಿತವಾದ ವೈರಾಜವೆಂಬ ಪುರುಷಾಕಾರದ ಬ್ರಹ್ಮದೇವನ ದೇಹವನ್ನು ನಿರ್ಮಿಸಿ, ಪುರುಷರೂಪದಿಂದ ಶ್ರೀಹರಿಯು ಪ್ರವೇಶಿಸಿ, ಸೃಷ್ಟಿಯನ್ನು ಮುಂದುವರಿಸಿದ ಪ್ರಮೇಯವು ವಿವರಿಸಲ್ಪಟ್ಟಿದೆ. ವೈರಾಜದೇಹಪ್ರವಿಷ್ಟನಾದ ಶ್ರೀಹರಿಯೇ ವಿರಾಟ್‌ಪುರುಷನು; ಆತನು ಮುಖಾದಿ ಅಂಗಗಳಿಂದ ಮಾಡಿದ ಸೃಷ್ಟಿಯನ್ನು ಇಲ್ಲಿ ವಿವರಿಸಲಾಗಿದೆ.

ಮುಖಾದಿಗಳಿಂದ ಬ್ರಾಹ್ಮಣಾದಿಗಳು ಹುಟ್ಟಿದರೆಂದರೆ, ಆಯಾ ವರ್ಣಾಭಿಮಾನಿ ದೇವತೆಗಳು ಸೃಷ್ಟರಾದರೆಂಬ ಅರ್ಥವನ್ನು ತಿಳಿಯಬೇಕು; ಅವರ ಸ್ತ್ರೀಯರೆಂದರೆ ಅವರ ನಿಯತಪತ್ನಿಯರನ್ನು ಗ್ರಹಿಸಬೇಕು; ಮತ್ತು ಬ್ರಾಹ್ಮಣಾದಿ ವರ್ಣಗಳಿಗೆ ಬೀಜಭೂತರಾದ ಮೂಲಪುರುಷರೂ ಸೃಷ್ಟರಾದರೆಂದೂ ತಿಳಿಯಬೇಕು.

1. ಪ್ರಾಯಃ ಶಬ್ದಕ್ಕೆ ಸಂಖ್ಯಾಬಾಹುಲ್ಯವನ್ನೂ ಶುಕ್ಲಾದಿ ವರ್ಣಪ್ರಾಚುರ್ಯವನ್ನೂ (ಅಲ್ಪವಾದ ಇತರ ವರ್ಣಮಿಶ್ರಣವನ್ನೂ) ತಿಳಿಯಬಹುದು.

**ಬ್ರಾಹ್ಮಣೋ ಮುಖಜಾತತ್ವಾತ್ ಮುಖಕರ್ಮಾಣಿ ತಸ್ಯ ತು ॥ ೪ ॥**
**ತತ್ರ ದೃಷ್ಟಫಲಾನ್ಯಸ್ಯ ಜೀವಿಕಾಸ್ಯಾನಿ ಯಾನಿ ತು ।**
**ಸ್ಯುಃ ಪುಣ್ಯಜನಕಾನ್ಯೇವ ಬಾಹುಕರ್ಮಾ ಚ ಬಾಹುಜಃ ॥ ೫ ॥**
**ಜಘನ್ಯಕರ್ಮಾ ವೈಶ್ಯಃ ಸ್ಯಾತ್ಸೇವಾಕರ್ಮಾ ಚ ಪಾದಜಃ ।**

ಬ್ರಾಹ್ಮಣಃ-ಬ್ರಾಹ್ಮಣನು, ಮುಖಜಾತತ್ವಾತ್-(ವೈರಾಜನ) ಮುಖದಿಂದ ಹುಟ್ಟಿದವನಾದ್ದರಿಂದ, ತಸ್ಯ ತು-ಅವನಿಗಾದರೋ, ಮುಖಕರ್ಮಾಣಿ-ಮುಖ ಸಾಧ್ಯವ್ಯಾಪಾರಗಳೇ ಯೋಗ್ಯ (ವಿಹಿತ) ಕರ್ಮಗಳು; ಅಸ್ಯ-ಈತನಿಗೆ, ತತ್ರ-ಅಲ್ಲಿ ದೃಷ್ಟಫಲಾನಿ-(ಮುಖಕರ್ಮಗಳಿಂದ) ಲಭಿಸುವ ಇಹಲೋಕದ ಫಲಗಳೇ, ಜೀವಿಕಾನಿ-ಉಪಜೀವನಮಾರ್ಗಗಳು; ಯಾನಿ ಯಾನಿ-(ಜೀವಿಕೆಗಳು) ಯಾವು ಯಾವುವೋ, (ಅವು) ಪುಣ್ಯಜನಕಾನಿ-ಪುಣ್ಯವನ್ನು ಹುಟ್ಟಿಸುವವೂ, ಸ್ಯುಃ ಏವ-ಆಗುತ್ತವೆ; ಸಂಶಯವಿಲ್ಲ. ಬಾಹುಜಃ-ಕ್ಷತ್ರಿಯನು, ಬಾಹುಕರ್ಮಾ ಚ-ಬಾಹು ಸಾಧ್ಯಕರ್ಮಗಳುಳ್ಳವನೇ ಸರಿ (ಅವೇ ಜೀವಿಕೆಗಳೂ ಮತ್ತು ಪುಣ್ಯಪ್ರದವೂ ಆಗುತ್ತವೆ); (ಇವರಂತೆ), ವೈಶ್ಯಃ-ವೈಶ್ಯನು, ಜಘನ್ಯಕರ್ಮಾ-ಕೆಳದೇಹದಿಂದ (ತೊಡೆಗಳಿಂದ) ಸಾಧ್ಯವಾಗುವ (ದೂರ ಸಂಚಾರಾದಿ ದೇಹಶ್ರಮಸಾಧ್ಯಗಳಾದ) (ಗೋರಕ್ಷ ಕೃಷಿ ವಾಣಿಜ್ಯ ಮೊದಲಾದ ಕರ್ಮಗಳುಳ್ಳವನು (ಅದೇ ಅವನಿಗೆ ಇಹಲೋಕದ ವೃತ್ತಿ ಮತ್ತು ಪರಗತಿಸಾಧಕ); ಪಾದಜಃ-ಶೂದ್ರನು, ಸೇವಾಕರ್ಮಾ ಚ-(ಮೇಲಿನ ಮೂರು ವರ್ಣದವರ) ಸೇವೆಯೇ ಕರ್ಮವಾಗುಳ್ಳವನು (ಅದೇ ಅವನಿಗೆ ವೃತ್ತಿ ಮತ್ತು ಪರಗತಿಸಾಧಕ).

---

ಮಾತ್ರ ಗುಣಿಯು[1] (೩). ಬ್ರಾಹ್ಮಣನು ಮುಖದಿಂದ ಸೃಷ್ಟನಾದ್ದರಿಂದ, ಅವನಿಗೆ ಮುಖಸಾಧ್ಯಕರ್ಮಗಳೇ ವಿಹಿತವಾಗಿವೆ; ಆ ಕರ್ಮಗಳಿಂದ ಲಭಿಸುವ ಇಹ (ದೃಷ್ಟ) ಫಲವೇ ಆತನ ಜೀವಿಕೆಯು (ವೃತ್ತಿಯು); ಈ ಯಾವ ಯಾವ ವೃತ್ತಿಗಳೋ ಅವು ಅವನಿಗೆ ಪುಣ್ಯಪ್ರಾಪಕವೂ ಆಗುತ್ತವೆ (ಪರಗತಿಸಾಧಕವೂ ಆಗುತ್ತವೆ); ಇದರಂತೆಯೇ, ಕ್ಷತ್ರಿಯನಿಗೆ ಬಾಹುಸಾಧ್ಯ (ಯುದ್ಧಾದಿ) ಕರ್ಮಗಳೂ, ವೈಶ್ಯನಿಗೆ ತೊಡೆಗಳ ಸಾಮರ್ಥ್ಯದಿಂದ ಸಾಧ್ಯವಾದ (ಕೃಷಿ ವಾಣಿಜ್ಯಾದಿ) ಕರ್ಮಗಳೂ, ಶೂದ್ರನಿಗೆ ಪಾದಸಾಧ್ಯವಾದ (ಮೇಲಿನ ವರ್ಣದವರ) ಸೇವಾದಿ ಕರ್ಮಗಳೂ, ಉಪಜೀವಿಕೆಗಳೂ

1. ಈ ಗುಣತಾರತಮ್ಯವು ಆಯಾ ವರ್ಣದ ದೇಹವಿವಕ್ಷೆಯಿಂದ ಮಾತ್ರ—ಜೀವಸ್ವರೂಪ ತಾರತಮ್ಯವಲ್ಲ; ಮುಂದೆ ನಿರೂಪಿಸಲಾಗುವ ಜಾತಿವಿವೇಕ, ಸಹವಾಸ, ಸಂಯೋಗ, ಸ್ಪರ್ಶ, ಶೌಚಾದಿ ನಿಯಮಗಳನ್ನು ಅನುಸರಿಸಲು ಅವಶ್ಯಕವಾಗುವ ಗುಣತಾರತಮ್ಯವನ್ನು ಮಾತ್ರ ಇಲ್ಲಿ ಹೇಳಲಾಗುತ್ತದೆ.

ಏತೇಷಾಮಾನುಲೋಮ್ಯೇನ ಪ್ರಾತಿಲೋಮ್ಯೇನ ಸೃಷ್ಟಿಷು ॥ ೬ ॥
ಬಹವೋ ಜಾತಯೋ ಜಾತಾಃ ನಾನಾಶಿಲ್ಪೇಷು ನೈಪುಣಾಃ ।

ಏತೇಷಾಂ-ಈ ನಾಲ್ಕು ವರ್ಣಗಳ, ಆನುಲೋಮ್ಯೇನ-ಅನುಲೋಮ ಕ್ರಮದಿಂದಲೂ, ಪ್ರಾತಿಲೋಮ್ಯೇನ-ಪ್ರತಿಲೋಮಕ್ರಮದಿಂದಲೂ, ಸೃಷ್ಟಿಷು-ಸೃಷ್ಟವಾದವುಗಳಲ್ಲಿ, ನಾನಾಶಿಲ್ಪೇಷು-ವಿವಿಧಶಿಲ್ಪ (ಕೈಕೆಲಸ)ಗಳಲ್ಲಿ, ನೈಪುಣಾಃ-ನಿಪುಣರಾದ (ಕುಶಲರಾದ), ಬಹವಃ-ಬಹಳವಾದ, ಜಾತಯಃ-ಜಾತಿಗಳು (ವರ್ಣಪ್ರಭೇದಗಳು), ಜಾತಾಃ-ಹುಟ್ಟಿದವು (ಹುಟ್ಟುತ್ತವೆ).

ನಾನಾವಿದ್ಯಾಧರಾಶ್ಚಾನ್ಯಾ ವಿಶ್ವವೃತ್ತಿಪ್ರವರ್ತಕಾಃ ॥ ೭ ॥
ಪ್ರತಿಲೋಮೇನ ತೇ ನ್ಯೂನಾಃ ತದಾಧಿಕ್ಯೇಽನುಲೋಮಕಃ ।

(ಆ ನಾನಾ ಜಾತಿಗಳು), ನಾನಾವಿದ್ಯಾಧರಾಃ-ವಿವಿಧ ವಿದ್ಯೆಗಳನ್ನು ಧರಿಸಿದವರೂ (ಹೊಂದಿದವರೂ), ಅನ್ಯಾಃ-ಮತ್ತಿತರರು, ವಿಶ್ವವೃತ್ತಿಪ್ರವರ್ತಕಾಃ- ಸಮಸ್ತ ವೃತ್ತಿಗಳ ಪ್ರವರ್ತಕರೂ (ಇರುವರು) (ಬಹುವೃತ್ತಿಗಳ ಉಪದೇಶಕರೂ ಆಗಿರುವರು); ತದಾಧಿಕ್ಯೇ-(ಪುರುಷ ಸ್ತ್ರೀಯರಲ್ಲಿ) ಪುರುಷನು ಅಧಿಕನಾದರೆ (ಸ್ತ್ರೀಗಿಂತ ಉತ್ತಮವರ್ಣದವನಾದರೆ), ಅನುಲೋಮಕಃ-(ಅವರಿಂದ ಜನಿಸಿದ ಸಂತಾನವು) ಅನುಲೋಮ ಜಾತಿಯೆನಿಸುತ್ತದೆ (ಅಥವಾ ಆ ಪುರುಷನು ಅನುಲೋಮ ಜಾತಿ ಪ್ರವರ್ತಕನೆನಿಸುವನು); ಪ್ರತಿಲೋಮೇನ-(ಸ್ತ್ರೀಯಳೇ ಉತ್ತಮ ವರ್ಣದವ ಳಾದರೆ) ಪ್ರತಿಲೋಮದಿಂದ, ತೇ-ಹುಟ್ಟಿದ ಆ ಪ್ರಜೆಗಳು, ನ್ಯೂನಾಃ- (ಅನುಲೋಮಿಗಳಕಿಂತ) ಕನಿಷ್ಠರು (ಹೀನರು) ಎನಿಸುತ್ತಾರೆ.

ಬ್ರಾಹ್ಮಣಸ್ಯ ತ್ರಯಃ ಪುತ್ರಾಸ್ತ್ರಿವರ್ಣೇಷ್ವನುಲೋಮಜಾಃ ॥ ೮ ॥
ಶೂದ್ರಸ್ಯ ಚ ತ್ರಯಃ ಪುತ್ರಾಸ್ತ್ರೈವರ್ಣ್ಯೇ ಪ್ರತಿಲೋಮಜಾಃ ।

ಬ್ರಾಹ್ಮಣಸ್ಯ-ಬ್ರಾಹ್ಮಣಪುರುಷನಿಗೆ, ತ್ರಿವರ್ಣೇಷು-ಕೆಳಗಿನ ಮೂರು ವರ್ಣದ

---

ಮತ್ತು ಪರಗತಿ ಸಾಧನಗಳೂ ಆಗುತ್ತವೆ (೪-೫). ಈ ನಾಲ್ಕು ವರ್ಣದವರಿಂದ, ಅನುಲೋಮ, ಪ್ರತಿಲೋಮಕ್ರಮದಿಂದ[1] ಸೃಷ್ಟರಾದ ಪ್ರಜಾವರ್ಗದಲ್ಲಿ ವಿವಿಧ ಶಿಲ್ಪಗಳಲ್ಲಿ (ಕಸಬುಗಳಲ್ಲಿ) ಕುಶಲರಾದ, ಬಹುಜಾತಿಗಳು ಹುಟ್ಟಿದವುಗಳಾಗುತ್ತವೆ (೬). ಈ ಜಾತಿಯವರು ವಿವಿಧ ವಿದ್ಯೆಗಳಿಗೆ ಆಶ್ರಯರಾಗಿರುತ್ತಾರೆ ಮತ್ತು ಇನ್ನೂ ಇತರರು (ಜಾತಿವೃತ್ತಿಗಳೆಂಬ ಯಾವ ನಿಯಮಗಳಿಗೂ ಒಳಗಾಗದವರು) ಸಕಲ ವೃತ್ತಿಗಳ ಉಪದೇಶಕರೂ ಆಗಿರುವರು; ಪುರುಷಾಧಿಕ್ಯದಿಂದ ಅನುಲೋಮಿಗಳೆಂದೂ, ಸ್ತ್ರೀ ಆಧಿಕ್ಯ

---

1. ಪುರುಷನು ಸ್ತ್ರೀಗಿಂತ ಉತ್ತಮವರ್ಣದವನಾದರೆ ಅನುಲೋಮವೆಂದೂ ಅಧಮವರ್ಣದವನಾದರೆ ಪ್ರತಿಲೋಮವೆಂದೂ, ಸಂತಾನೋತ್ಪತ್ತಿ ಕ್ರಮಗಳು ಭಿನ್ನವಾಗಿವೆ.

ಸ್ತ್ರೀಯರಲ್ಲಿ ತ್ರಯಃ ಪುತ್ರಾಃ-(ಹುಟ್ಟುವ) ಮೂರು ಮಕ್ಕಳು (ಪುತ್ರರು), ಅನುಲೋಮಜಾಃ - ಅನುಲೋಮಿಗಳು (ಅನುಲೋಮಜರು - ತಾಯಿಗಿಂತ ಉತ್ತಮವರ್ಣದ ಪುರುಷನಿಗೆಹುಟ್ಟಿದವರು); ಶೂದ್ರಸ್ಯ-ಶೂದ್ರಪುರುಷನಿಗೆ, ತ್ರೈವರ್ಣ್ಯೇ- (ಮೇಲಿನ) ಮೂರು ವರ್ಣದ ಸ್ತ್ರೀಯರಲ್ಲಿ, ತ್ರಯಃ ಪುತ್ರಾಃ- ಜನಿಸುವ ಮೂರು ಪುತ್ರರು, ಪ್ರತಿಲೋಮಜಾಃ-ಪ್ರತಿಲೋಮಜರೆನಿಸುವರು.

ತ್ರಯಸ್ತ್ರಯಃ ಕ್ಷತ್ರವಿಶೋಃ ಪ್ರತಿಲೋಮಾನುಲೋಮಜಾಃ ॥ ೯ ॥
ಏವಂ ದ್ವಾದಶವರ್ಣಾನಾಂ ಪುತ್ರಾ ಏಕೈಕಶಸ್ತು ತೇ ।
ಚಾತುರ್ವರ್ಣ್ಯೇ ಪ್ರಸೂಯಂತೇ ಚತುರಶ್ಚತುರಃ ಸುತಾನ್ ॥ ೧೦ ॥
ತೇ ಚತ್ವಾರಿಂಶದಷ್ಟೌ ಚ ಪೂರ್ವೈರ್ದ್ವಾದಶಭಿಃ ಸಹ ।
ಚಾತುರ್ವರ್ಣ್ಯೇನ ಸಂಯುಕ್ತಾಃ ಚತುಃಷಷ್ಟಿರ್ಹಿ ಜಾತಯಃ ॥ ೧೧ ॥
ತತ್ರಾದ್ಯಾಸ್ತು ಚತುರ್ವರ್ಣಾಃ ದ್ವಾದಶ ಸ್ಯುರ್ದ್ವಿತೀಯಕಾಃ ।
ಅನ್ಯೇ ತೃತೀಯಾಸ್ತೇಭ್ಯೋಽನ್ಯೇ ಚತುರ್ಥಾದ್ಯಾಸ್ತದುದ್ಭವಾಃ ॥ ೧೨ ॥

ಕ್ಷತ್ರ ವಿಶಃ-ಕ್ಷತ್ರಿಯ ವೈಶ್ಯರಿಗೆ, ಪ್ರತಿಲೋಮಾನುಲೋಮಜಾಃ- ಪ್ರತಿ ಲೋಮಜ ಮತ್ತು ಅನುಲೋಮಜರು, ತ್ರಯಃತ್ರಯಃ-ಮೂರು ಮೂರು (ಸಂತಾನಗಳು);[1] ಏವಂ-ಹೀಗೆ, ದ್ವಾದಶವರ್ಣಾನಾಂ-(ಬ್ರಾಹ್ಮಣಾದಿ ನಾಲ್ಕು ವರ್ಣದವರಿಂದ ಒಬ್ಬೊಬ್ಬರಿಂದ ಮೂರು ಮೂರು ಪ್ರತ್ಯೇಕವಾದ ಪ್ರತಿಲೋಮ ಅನುಲೋಮ ಜಾತಿಗಳು) ಒಟ್ಟು ಹನ್ನೆರಡು ಜಾತಿಗಳ, ಪುತ್ರಾಃ-ಪುತ್ರರು (ಸುತರು); ಏಕೈಕಶಃ-ಒಬ್ಬೊಬ್ಬರೂ, ತೇ-(ಆ ಹನ್ನೆರಡು ಜಾತಿಯವರೂ) ಅವರು,

---

ದಿಂದ ಹೀನಕುಲದವರೆಂದೂ (ಪ್ರತಿಲೋಮಿಗಳೆಂದೂ) ಕರೆಯಲ್ಪಡುವರು (೭). ಬ್ರಾಹ್ಮಣಪುರುಷನಿಂದ, ಕ್ಷತ್ರಿಯ, ವೈಶ್ಯ, ಶೂದ್ರಸ್ತ್ರೀಯರಲ್ಲಿ ಜನಿಸುವ ಮೂರು ಪುತ್ರರು ಅನುಲೋಮಜರು; ಶೂದ್ರಪುರುಷನಿಂದ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಸ್ತ್ರೀಯರಲ್ಲಿ ಜನಿಸುವ ಮೂರು ಪುತ್ರರು ಪ್ರತಿಲೋಮಜರು (೮). ಕ್ಷತ್ರಿಯರಿಂದ ಒಂದು ಪ್ರತಿಲೋಮ ಮತ್ತು ಎರಡು ಅನುಲೋಮ ಜಾತಿಗಳೂ, ವೈಶ್ಯರಿಂದ ಎರಡು ಪ್ರತಿಲೋಮ ಮತ್ತು ಒಂದು ಅನುಲೋಮ ಜಾತಿಗಳೂ, ಉದ್ಭವಿಸುತ್ತದೆ; ಹೀಗೆ ನಾಲ್ಕು ವರ್ಣಗಳಿಂದ ಒಟ್ಟು೧೨ ಅನುಲೋಮ ಪ್ರತಿಲೋಮ ಜಾತಿಗಳು ಹುಟ್ಟುತ್ತವೆ; ಈ ೧೨

---

೧. ಕ್ಷತ್ರಿಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಒಂದು ಪ್ರತಿಲೋಮಜ, ವೈಶ್ಯ ಶೂದ್ರ ಸ್ತ್ರೀಯರಲ್ಲಿ ಎರಡು ಅನುಲೋಮಜರು. ಹೀಗೆ ಮೂರು ಜಾತಿಗಳು; ವೈಶ್ಯನಿಂದ, ಕ್ಷತ್ರಿಯ ಬ್ರಾಹ್ಮಣ ಸ್ತ್ರೀಯರಲ್ಲಿ ಎರಡು ಪ್ರತಿಲೋಮಜ ಮತ್ತು ಶೂದ್ರಸ್ತ್ರೀಯಲ್ಲಿ ಒಂದು ಅನುಲೋಮಜ, ಹೀಗೆ ಮೂರು ಜಾತಿಗಳು.

ಚಾತುರ್ವರ್ಣ್ಯೇ- ಬ್ರಾಹ್ಮಣಾದಿ ನಾಲ್ಕು ವರ್ಣದ ಸ್ತ್ರೀಯರಲ್ಲಿ, ಚತುರಃ ಚತುರಃ- ನಾಲ್ಕು ನಾಲ್ಕು, ಸುತಾನ್- ಪುತ್ರರನ್ನು ಪ್ರಸೂಯಂತೇ- ಪಡೆಯುತ್ತಾರೆ; ತೇ- (ಅವರು) ಅ, ಚತ್ವಾರಿಂಶದಷ್ಟೌ- ನಲವತ್ತೆಂಟು (೪೮) ಜಾತಿಗಳು, ಪೂರ್ವೈಃ- ಮೊದಲಿನ, ದ್ವಾದಶಭಿಃ ಸಹ- ೧೨ ಜಾತಿಗಳಿಂದ ಕೂಡಿ, ಚಾತುರ್ವರ್ಣ್ಯೇನ- ನಾಲ್ಕು ವರ್ಣಗಳಿಂದ, ಸಂಯುಕ್ತಾಃ - ಸೇರಿಕೊಂಡು, ಜಾತಯಃ - ಜಾತಿಗಳು, ಚತುಃಷಷ್ಟಿಃ ಹಿ-೬೪ ಜಾತಿಗಳಾಗುತ್ತವೆಯಷ್ಟೆ ತತ್ರ- ಇವುಗಳಲ್ಲಿ ಚತುರ್ವರ್ಣಾಃತು- ಬ್ರಾಹ್ಮಣಾದಿ ನಾಲ್ಕು ವರ್ಣಗಳೇ, ಆದ್ಯಾಃ- ಮೊದಲಿನವು; ದ್ವಾದಶ- (ಪ್ರತಿಲೋಮ ಅನುಲೋಮಗಳು) ೧೨ (ಹನ್ನೆರಡು) ಜಾತಿಗಳು, ದ್ವಿತೀಯಕಾಃ- ಎರಡನೆಯವು; ಅನ್ಯೇ- ಬೇರೆ (ಈ ೧೬ ಜಾತಿಗಳಿಂದ ಹುಟ್ಟಿದ) ೪೮ ಜಾತಿಗಳು, ತೃತೀಯಾಃ- ಮೂರನೆಯವು; ತೇಭ್ಯಃ- ಈ ೬೪ ಜಾತಿಗಳಿಂದ, ಅನ್ಯೇ- ಬೇರೆಯಾದ, ತದುದ್ಭವಾಃ- ಅವುಗಳಿಂದ ಹುಟ್ಟುವ ಜಾತಿಗಳು, ಚತುರ್ಥಾದ್ಯಾಃ- ನಾಲ್ಕನೇ ಮೊದಲಾದ ವರ್ಗದ ಜಾತಿಗಳು.

**ಅಮೃತೇ ಜಾರಜಃ ಕುಂಡೋ ಮೃತೇ ಭರ್ತರಿ ಗೋಲಕಃ ।**
**ಷೋಡಶಾದ್ಯಾ ದ್ವಿತೀಯಾಶ್ಚ ಕುಂಡಗೋಲಕಸಂಯುತಾಃ ॥ ೧೩ ॥**
**ಜಾತಯೋಽಷ್ಟಾದಶ ಪ್ರಾಹುರನ್ಯಾಃ ಸಂಕರಜಾತಯಃ ।**
**ಜಾತೀನಾಂ ತು ಪುನಃ ಷಷ್ಠೇ ಮಿಥಃ ಕನ್ಯಾಸು ಸಂಗತಾಃ ॥ ೧೪ ॥**
**ಪ್ರತಿಕನ್ಯಾಪ್ರಜನನಾಜ್ಜಾತಯಸ್ಸ್ಯುಃ ಪುನಸ್ತತಃ ।**
**ತತ್ತಜ್ಜಾತಿಕಕನ್ಯಾಸು ತತ್ತಜ್ಜಾತೀಯಪೂರುಷೈಃ ॥ ೧೫ ॥**
**ಚತುರ್ಥಾಃ ಪಂಚಮಾಃ ಷಷ್ಠಾ ಇತ್ಯನಂತಾ ಹಿ ಜಾತಯಃ ।**

ಭರ್ತರಿ- ಗಂಡನು, ಅಮೃತೇ- ಬದುಕಿರಲು, ಜಾರಜಃ- ಸ್ತ್ರೀಯು ಜಾರನಿಂದ

---

ಜಾತಿಗಳಿಂದ ಒಂದೊಂದರಿಂದ, ಬ್ರಾಹ್ಮಣಾದಿ ನಾಲ್ಕು ವರ್ಣಗಳ ಸ್ತ್ರೀಯರಿಂದ ನಾಲ್ಕುನಾಲ್ಕರಂತೆ, ಒಟ್ಟು ೪೮ ಜಾತಿಗಳು ಉದ್ಭವಿಸುತ್ತವೆ; ಇವು ಮೊದಲಿನ ನಾಲ್ಕು, ನಂತರದ ೧೨ರಿಂದ ಕೂಡಿ, ಒಟ್ಟು ೬೪ ಜಾತಿಗಳಾಗುತ್ತವೆ; ಬ್ರಾಹ್ಮಣಾದಿ ೪ ಮೊದಲಿನದು, ಪ್ರತಿಲೋಮ ಅನುಲೋಮಾದಿ ಗಳು ೧೨ ಜಾತಿಗಳು ಎರಡನೆಯ ವರ್ಗದವುಗಳು; ನಂತರದ ೪೮ ಜಾತಿಗಳು ಮೂರನೆಯ ವರ್ಗದವುಗಳು; ಈ ೬೪ ಜಾತಿಗಳಿಂದ, ಹುಟ್ಟಿಕೊಳ್ಳುವ ಬೇರೆ ಜಾತಿಗಳು ನಾಲ್ಕನೆಯ ಮುಂತಾದ ವರ್ಗಗಳಿಗೆ ಸೇರುತ್ತವೆ (೯-೧೨). ಪತಿಯು ಬದುಕಿರಲು, ಸ್ತ್ರೀಯು (ಸ್ವಜಾತೀಯ) ಅನ್ಯಪುರುಷನಿಂದ ಸುತನನ್ನು ಪಡೆದರೆ, ಅವನು, 'ಕುಂಡ' ಎನಿಸುವನು; ವಿಧವೆಯು ಹಾಗೆ ಮಗನನ್ನು ಪಡೆದರೆ, ಅವನು 'ಗೋಲಕ' ಎನಿಸುವನು; ಮೇಲೆ ಹೇಳಿದ ಒಂದು, ಎರಡನೆಯ ವರ್ಗಗಳ ೧೬ ಜಾತಿಗಳೊಡನೆ, ಕುಂಡ, ಗೋಲಕಗಳೆಂಬ ಎರಡು ಜಾತಿಗಳು ಸೇರಿ, ೧೮ ಜಾತಿಗಳೆಂದೂ, ಇವುಗಳಿಂದ ಭಿನ್ನವಾದ (೩ನೇ ವರ್ಗದ ೪೮

ಪಡೆದ ಪುತ್ರನು, ಕುಂಡಃ-ಕುಂಡನೆನಿಸುವನು; (ಭರ್ತರಿ-ಪತಿಯು), ಮೃತೇ-ಮರಣಹೊಂದಿದ ನಂತರ, (ವಿಧವೆಯು), ಜಾರಜಃ-(ಜಾರ) ಅನ್ಯಪುರುಷನಿಂದ ಪಡೆದ ಸುತನು, ಗೋಲಕಃ-ಗೋಲಕನೆಂದು ಕರೆಯಲ್ಪಡುವನು; ಆದ್ಯಾಃ ದ್ವಿತೀಯಾಃ ಚ-ಮೊದಲನೆಯ ಮತ್ತು ಎರಡನೆ ವರ್ಗದವರಿಂದ ಆಗುವ, ಷೋಡಶ-೧೬ ಜಾತಿಗಳು, ಕುಂಡಗೋಲಕಸಂಯುತಾಃ-ಆ ಜಾತಿಗಳಲ್ಲಿ ಜನಿಸುವ ಕುಂಡ, ಗೋಲಕರೊಂದಿಗೆ, ಜಾತಯಃ-ಜಾತಿಗಳು, ಅಷ್ಟಾದಶ-೧೮ ಎಂದೂ, ಪ್ರಾಹುಃ-ಹೇಳುವರು; ಅನ್ಯಾಃ-(ಈ ೧೮ ಜಾತಿಗೆ ಸೇರದ) ಇತರರು, ಸಂಕರಜಾತಯಃ-ಸಂಕರ(ಮಿಶ್ರ) ಜಾತಿಯವರು (ಎನಿಸುವರು); ಪುನಃ-ಮತ್ತೆ ಜಾತೀನಾಂ-ಜಾತಿಗಳ, ಷಷ್ಠೇ-ಆರನೇ ವರ್ಗದಲ್ಲಿ (ಹಿಂದೆ ಹೇಳಿದ ೪೮ ಜಾತಿಗಳಿಂದ ಹೊರಗಿನವರು, ಅದಕ್ಕೂ ಸೇರದ ಕುಂಡ, ಗೋಲಕರು, ಚತುರ್ಥ ವರ್ಗಕ್ಕೆ ಸೇರುವರು; ಸಂಕರಜಾತಿಗಳು, ಪಂಚಮವರ್ಗದವರು), ಮಿಥಃ-ಪರಸ್ಪರ (ಬೇರೆ ಬೇರೆ ಜಾತಿಯ), ಕನ್ಯಾಸು-ಸ್ತ್ರೀಯರಲ್ಲಿ, ಸಂಗತಾಃ-ಹುಟ್ಟಿದವರು (೬ನೇ ವರ್ಗದಲ್ಲಿ ಸೇರುತ್ತಾರೆ); ಪ್ರತಿಕನ್ಯಾಪ್ರಜನನಾತ್-(ಈ ೬ನೇ ವರ್ಗದ ಸ್ತ್ರೀಯರಿಂದ, ಅನ್ಯಸಂಕರಪುರುಷಸಂಯೋಗದಿಂದ), ಪುನಃ-ಮತ್ತೆ ಜಾತಯಃ-(ಬೇರೆ) ಜಾತಿಗಳು, ಸ್ಯುಃ-ಉಂಟಾಗುತ್ತವೆ; ತತಃ-ಆದ್ದರಿಂದ, ತತ್ತಜ್ಜಾತಿಕನ್ಯಾಸು-ಆಯಾ ಜಾತಿಯ ಸ್ತ್ರೀಯರಲ್ಲಿ ತತ್ತಜ್ಜಾತೀಯಪೂರುಷೈಃ-ಆಯಾ ಜಾತಿಯ ಪುರುಷರಿಂದ, ಚತುರ್ಥಾಃ-ನಾಲ್ಕನೇ ವರ್ಗದವರೂ, ಪಂಚಮಾಃ- (ಸಂಕರ ಜಾತಿಯ) ಪಂಚಮರೂ, ಷಷ್ಠಾಃ-ಆರನೇ ವರ್ಗದವರೂ, ಇತಿ-ಹೀಗೆ, ಜಾತಯಃ-ಜಾತಿಗಳು, ಅನಂತಾಃ ಹಿ-ಅಸಂಖ್ಯವಾಗಿ ಉತ್ಪನ್ನವಾಗುತ್ತವೆಂಬುದು ನಿಶ್ಚಯ.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ವೈದಿಕೇಷ್ವಧಿಕಾರಿಣಃ ॥ ೧೬ ॥
ಶೂದ್ರಾಸ್ತತ್ರಾನಧಿಕೃತಾಸ್ತಥೈವ ಪ್ರತಿಲೋಮಿನಃ ।
ಅನುಲೋಮಿಷು ಯತ್ರ ಸ್ಯಾಚ್ಛೂದ್ರವರ್ಣಸ್ಯ ಸಂಕ್ರಮಃ ॥ ೧೭ ॥

---

ಜಾತಿಗಳು ಮತ್ತು ೪ನೇ ಕುಂಡ, ಗೋಲಕ ಜಾತಿಗಳನ್ನು ಬಿಟ್ಟು) ಇತರ ಜಾತಿಗಳು, ಸಂಕರಜಾತಿಗಳೆನಿಸುತ್ತವೆ—ಅವು ಪಂಚಮವರ್ಗಕ್ಕೆ ಸೇರುತ್ತವೆ; ಭಿನ್ನಜಾತಿಯ ಕನ್ಯಾವರರು, ಪರಸ್ಪರ ಸಂಗತರಾಗಿ, ಜನಿಸುವ ಸಂತಾನಗಳು ೬ನೇ ವರ್ಗದವರೆನಿಸುತ್ತಾರೆ; ಈ ೬ನೇ ವರ್ಗದ ಸ್ತ್ರೀಯರಿಂದ, ಅನ್ಯ ಸಂಕರಜಾತಿಗಳ (೫ನೇ ವರ್ಗದ) ಪುರುಷಸಂಪರ್ಕದಿಂದ, ಜನಿಸುವ ಸಂತಾನಗಳು ಅನ್ಯಜಾತಿಗಳಾಗುತ್ತವೆ (ವರ್ಗಕ್ಕೆ ಸೇರುತ್ತವೆ); ಹೀಗೆ, ಚತುರ್ಥ, ಪಂಚಮ, ಷಷ್ಠ ಇತ್ಯಾದಿಯಾಗಿ ಅಸಂಖ್ಯಜಾತಿ (ವರ್ಗ)ಗಳು ಏರ್ಪಡುತ್ತವೆ (ಪತಿಪತ್ನಿಗಳ ನಿಯತಭಾವಕ್ಕೊಳಗಾಗದ ಸ್ವೇಚ್ಛಾ ವಿಹಾರಿಗಳಾದ ವಿಷಯಲೋಲುಪರಾದ ಪ್ರಜೆಗಳಿಂದ ಹೀಗೆ ಅಸಂಖ್ಯ

**ಮಾತೃತಃ ಪಿತೃತೋ ವಾಪಿ ಸಾಕ್ಷಾದ್ವಾಂತರತೋಽಪಿ ವಾ ।**
**ತೇಷಾಮಪಿ ಭವೇನ್ನೈವ ವೈದಿಕೇಷ್ವಧಿಕಾರಿತಾ ॥ ೧೮ ॥**

ವೈದಿಕೇಷು-ವೇದೋಕ್ತ ಅಧ್ಯಯನಾದಿ ಕರ್ಮಾನುಷ್ಠಾನಗಳಲ್ಲಿ, ಬ್ರಾಹ್ಮಣಾಃ-ಬ್ರಾಹ್ಮಣರು, ಕ್ಷತ್ರಿಯಾಃ-ಕ್ಷತ್ರಿಯರು, ವೈಶ್ಯಾಃ-ವೈಶ್ಯರೂ, ಅಧಿಕಾರಿಣಃ-ಅಧಿಕಾರಿಗಳು (ವೇದೋಕ್ತವನ್ನಾಚರಿಸಿ ತದುಕ್ತಫಲಗಳನ್ನು ಹೊಂದಲರ್ಹರು); ಶೂದ್ರಾಃ-ಶೂದ್ರರೂ, ತಥಾ-ಮತ್ತು ಪ್ರತಿಲೋಮಿನಃ-ಪ್ರತಿಲೋಮಿಗಳೂ, ತತ್ರ-ವೈದಿಕ ಕರ್ಮಗಳಲ್ಲಿ ಅನಧಿಕೃತಾ ಏವ-ಅಧಿಕಾರವಿಲ್ಲದವರೇ ಸರಿ;[1] ಅನುಲೋಮಿಷು-ಅನುಲೋಮಿಗಳಲ್ಲಿ ಮಾತೃತಃ-ತಾಯಿಯಿಂದ, ವಾ-ಅಥವಾ, ಪಿತೃತಃ-ತಂದೆಯಿಂದಾಗಲಿ, ಸಾಕ್ಷಾತ್-ಸಾಕ್ಷಾತ್ತಾಗಿ (ತನಗೇ ಆಗಲಿ), ಅಪಿ ವಾ-ಅಥವಾ, ಅಂತರತಃ-ವ್ಯವಧಾನದಿಂದಾಗಲಿ (ಅನ್ಯರ ಮೂಲಕವಾಗಲಿ), ಯತ್ರ-ಯಾರ ವಿಷಯದಲ್ಲಿ (ಉತ್ಪತ್ತಿ ವಿಷಯದಲ್ಲಿ), ಶೂದ್ರವರ್ಣಸ್ಯ-ಶೂದ್ರವರ್ಣದ, ಸಂಕ್ರಮಃ ಸ್ಯಾತ್-ಸಂಬಂಧವಿರುವುದೋ, ತೇಷಾಂ ಅಪಿ-ಆ ಅನುಲೋಮಿಗಳಿಗೂ ಸಹ, ವೈದಿಕೇಷು-ವೈದಿಕ ಕರ್ಮಗಳಲ್ಲಿ ಅಧಿಕಾರಿತಾ-ಅಧಿಕಾರವು, ನೈವ ಭವೇತ್-ಉಂಟಾಗುವುದಿಲ್ಲ (ಇರುವುದಿಲ್ಲ).

**ಅನ್ಯೇಷಾಮನುಲೋಮಾನಾಂ ಪಿತೃವದ್ವೈದಿಕಾಃ ಕ್ರಿಯಾಃ ।**
**ವೇದಾಧಿಕಾರಿಪಿತೃತೋ ಯೇ ಜಾತಾಃ ಪ್ರತಿಲೋಮಿನಃ ॥ ೧೯ ॥**
**ಅವೈದಿಕೈಸ್ತು ಮಂತ್ರೈಸ್ತೇ ಸಂಸ್ಕಾರ್ಯಾಃ ಪಿತೃಜಾತಿವತ್ ।**
**ವ್ಯಾಹೃತಿಪ್ರಣವೈರ್ಹೀನೌ ಗಾಯತ್ರೀವೈಷ್ಣವೌ ದ್ವಿಜೈಃ ॥ ೨೦ ॥**
**ತೇಷಾಂ ಸಮುಪದೇಷ್ಟವ್ಯಾ ತದನ್ಯೇ ನಾಮಜಾಪಕಾಃ ।**

ಅನ್ಯೇಷಾಂ-ಇತರರಾದ (ಹಿಂದೆ ಹೇಳಿದಂತೆ ಶೂದ್ರಸಂಕ್ರಮರಹಿತರಾದ), ಅನುಲೋಮಾನಾಂ-ಅನುಲೋಮಿಗಳಿಗೆ, ಪಿತೃವತ್-ತಂದೆಯಂತೆ, ವೈದಿಕಾಃ

---

ಜಾತಿಗಳೇರ್ಪಡುವುದು ಸಹಜವೇ ಸರಿ) (೧೩-೧೪). ಹೀಗಿರುವ ವಿವಿಧ ಜಾತಿಗಳ ಮಧ್ಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು, ವೈದಿಕ (ವೇದೋಕ್ತ) ಕರ್ಮಾನುಷ್ಠಾನಗಳಲ್ಲಿ ಅಧಿಕಾರಿಗಳು; ಅಧಿಕಾರಿಗಳೆಂದರೆ, ಉಕ್ತಕರ್ಮಗಳನ್ನಾಚರಿಸಿ, ಅವುಗಳಿಗೆ ಹೇಳಲ್ಪಟ್ಟಿರುವ ಫಲಗಳನ್ನು ಹೊಂದಲು ಅರ್ಹರಾದವರು— ಅನಧಿಕಾರಿಗಳೆಂದರೆ, ಆ ಕರ್ಮಗಳ ಆಚರಣೆಗೂ ಫಲಕ್ಕೂ ಅನರ್ಹರೆಂದರ್ಥ—ಇಷ್ಟು ಮಾತ್ರವಲ್ಲ; ಅವುಗಳ ಆಚರಣೆಯಿಂದ ಮಹದನರ್ಥಗಳನ್ನೇ ಹೊಂದುವರು; ಶೂದ್ರರೂ,

---

1 ಇಲ್ಲಿ ಸರ್ವತ್ರ (ಅನುಲೋಮಿ, ಪ್ರತಿಲೋಮಿ ಶಬ್ದಾದಿಗಳಿಂದ) ಪುರುಷರೇ ವಿವಕ್ಷಿತರು; ಸ್ತ್ರೀಯರಲ್ಲ—ಸ್ತ್ರೀಸಾಮಾನ್ಯರಿಗೆ ವೇದಾಧಿಕಾರವಿಲ್ಲ.

ಕ್ರಿಯಾಃ-ವೈದಿಕ ಕರ್ಮಗಳು (ನಡೆಯತಕ್ಕದ್ದು); ಯೇ-ಯಾವ, ಪ್ರತಿಲೋಮಿನಃ-ಪ್ರತಿಲೋಮಿಗಳು, ವೇದಾಧಿಕಾರಿ ಪಿತೃತಃ-ವೇದಾಧಿಕಾರವುಳ್ಳ ತಂದೆಯಿಂದ, ಜಾತಾಃ-ಹುಟ್ಟಿದವರೋ, ತೇ-ಅವರು, ಪಿತೃಜಾತಿವತ್-ತಂದೆಯ ಜಾತಿಯಂತೆ, ಅವೈದಿಕೈಃ-ವೇದೋಕ್ತಗಳಲ್ಲದ, ಮಂತ್ರೈಃ ತು-ಮಂತ್ರಗಳಿಂದಲೇ (ತಂತ್ರೋಕ್ತ ಮಂತ್ರಗಳಿಂದ), ಸಂಸ್ಕಾರ್ಯಾಃ-ಸಂಸ್ಕಾರಗಳನ್ನು ಹೊಂದಿಸಲ್ಪಡಬೇಕು; ವ್ಯಾಹೃತಿ ಪ್ರಣವೈರ್ಹೀನೌ-ವ್ಯಾಹೃತಿಪ್ರಣವಗಳಿಲ್ಲದ, ಗಾಯತ್ರೀವೈಷ್ಣವೌ- ಗಾಯತ್ರೀ ಮತ್ತು ವಿಷ್ಣುಮಂತ್ರಗಳು, ದ್ವಿಜೈಃ-ಬ್ರಾಹ್ಮಣರಿಂದ, ತೇಷಾಂ-ಅವರಿಗೆ ಸಮುದೇಷ್ಟವ್ಯಾಃ-ಉಪದೇಶಿಸಲ್ಪಡಬೇಕು; ತದನ್ಯೇ-(ಈ ಉಕ್ತಜಾತಿಗಳಿಂದ) ಭಿನ್ನರಾದ ಸರ್ವರೂ, ನಾಮಜಾಪಕಾಃ-ಶ್ರೀಹರಿನಾಮಗಳನ್ನು ಜಪಿಸುವುದರಲ್ಲಿ ಮಾತ್ರ ಅಧಿಕಾರಿಗಳು.

ಯಾವದಂಶೈರ್ಭವೇನ್ನ್ಯೂನಾ ಜನನೀ ಪಿತೃಜಾತಿತಃ ॥ ೨೧ ॥
ಚತುರ್ಥಾಂಶಾಸ್ತು ತೇ ಭಕ್ತಾಸ್ತತ್ರಾಂಶೈಸ್ತ್ರಿಭಿರೂನಿತಃ ।

---

ಪ್ರತಿಲೋಮಿಗಳೂ ವೈದಿಕ ಕರ್ಮಗಳಲ್ಲಿ ಅನಧಿಕಾರಿಗಳು; ಎಲ್ಲ ಅನುಲೋಮಿಗಳೂ ಅಧಿಕಾರಿಗಳೆಂದು ತಿಳಿಯಬಾರದು; ಅನುಲೋಮಿಗಳಲ್ಲಿ ಸಹ, ಯಾರ ಜನನಕ್ಕೆ ಕಾರಣರಾದವರಲ್ಲಿ, ತಾಯಿಕಡೆಯಿಂದ ಅಥವಾ ತಂದೆಯ ಕಡೆಯಿಂದ, ಸಾಕ್ಷಾತ್ತಾಗಿ ಅಥವಾ ಅನ್ಯರ ಮೂಲಕ ಶೂದ್ರವರ್ಣದ ಸಂಬಂಧವಿರುತ್ತದೆಯೋ, ಅವರಿಗೂ ವೇದಾಧಿಕಾರವಿರುವುದಿಲ್ಲ (ಉದಾ:—ಬ್ರಾಹ್ಮಣಾದಿ ವರ್ಣತ್ರಯದ ಪುರುಷರಿಂದ ಶೂದ್ರಸ್ತ್ರೀಯಲ್ಲಿ ಜನಿಸಿದವನು, ಯದ್ಯಪಿ ಅನುಲೋಮಿಯೇ; ಆದರೂ ಅವನಿಗೆ ವೇದಾಧಿಕಾರವಿಲ್ಲ; ಬ್ರಾಹ್ಮಣಾದಿಗಳಿಂದ, ವೈಶ್ಯಸ್ತ್ರೀಯ ಪರ್ಯಂತರಾದ ಸ್ತ್ರೀಯರಲ್ಲಿ ಜನಿಸುವ ಅನುಲೋಮಿಗಳಿಗೆ ಉಂಟು), ಇತ್ಯಾದಿ (೧೬-೧೮). ಇತರರಾದ (ವೇದಾಧಿಕಾರವುಳ್ಳ) ಅನುಲೋಮಿ ಗಳಿಗೆ, ತಂದೆಯಂತೆ, ವೇದೋಕ್ತ ಕರ್ಮಗಳುಂಟು (ಯದ್ಯಪಿ ಮೊದಲಿನ ಮೂರು ವರ್ಣದವರು ವೇದಾಧಿಕಾರಿಗಳೇ ಆದರೂ, ಬ್ರಾಹ್ಮಣಪುರುಷನಿಂದ ಜನಿಸಿದ, ವೇದಾಧಿಕಾರವುಳ್ಳ ಅನುಲೋಮಿಗೆ, ವೇದೋಕ್ತವಾದ ಬ್ರಾಹ್ಮಣಕರ್ಮಗಳೆಲ್ಲಕ್ಕೂ ಅಧಿಕಾರವಿದೆ—ಇತರ ಅನುಲೋಮಿಗಳಿಗೆ ಹಾಗಿಲ್ಲ—ಅವರ ತಂದೆಯಷ್ಟು ಮಾತ್ರ ಅಧಿಕಾರವಿರುತ್ತದೆ); ವೇದಾಧಿಕಾರಿಗಳಾದ ತಂದೆಯಿಂದ ಜನಿಸಿದ ಪ್ರತಿಲೋಮಿಗೆ, ತಂದೆಯಂತೆ ಸಂಸ್ಕಾರಗಳು ನಡೆಯಬೇಕು— ಆದರೆ ಅವೈದಿಕ (ತಂತ್ರೋಕ್ತ) ಮಂತ್ರಗಳಿಂದ ಆ ಕರ್ಮಗಳನ್ನು ನಡೆಸಬೇಕು (ಉದಾ:—ವೇದಾಧಿಕಾರಿಯಾದ ಕ್ಷತ್ರಿಯ ಪುರುಷನಿಂದ, ಬ್ರಾಹ್ಮಣ ಸ್ತ್ರೀಯಲ್ಲಿ ಜನಿಸಿದ ಪ್ರತಿಲೋಮಿಯು, ಉಪನಯನ ಸಂಸ್ಕಾರಕ್ಕೆ ಅರ್ಹನಾದರೂ, ಅವೈದಿಕಮಂತ್ರಗಳಿಂದ ಆ ಸಂಸ್ಕಾರಕರ್ಮವು ನಡೆಯಬೇಕು); ವ್ಯಾಹೃತಿ ಪ್ರಣವಗಳಿಲ್ಲದ (ಭೂರ್ಭುವಃಸ್ವಃ- ವ್ಯಾಹೃತಿಗಳು, ಪ್ರಣವ-ಓಂಕಾರ) ಗಾಯತ್ರೀ

ಪಿತೃಜಾತೇರ್ಭವೇನ್ಮಾತುರೇಕಾಂಶೇನಾಧಿಕಃ ಸುತಃ ॥ ೨೨ ॥
ಯಾವದ್ಗುಣ್ಯೈರ್ಭವೇನ್ಮಾತೃಜಾತಿರ್ಜನಕತೋಽಧಿಕಾ ।
ತಾವದ್ಭಿರಂಶೈರ್ಜನಕಜಾತಿತೋ ನ್ಯೂನತಃ ಸುತಃ ॥ ೨೩ ॥

ಜನನೀ-(ಅನುಲೋಮಿಯೊಬ್ಬನ) ತಾಯಿಯು, ಪಿತೃಜಾತಿತಃ-ತಂದೆಯ ಜಾತಿಯ ದೆಶೆಯಿಂದ (ತಂದೆಗಿಂತ), ಯಾವದಂಶೈಃ-ಎಷ್ಟು ಅಂಶಗಳಿಂದ, ನ್ಯೂನಾ- ಅವರಳು (ಹೀನಳು), ಭವೇತ್-ಆಗಿರುವಳೋ, ತೇ-ಆ ಅಂಶಗಳು, ಚತುರ್ಥಾಂಶಾಃ ಭಕ್ತಾ-ನಾಲ್ಕು ಭಾಗಗಳಾಗಿ ವಿಭಾಗಿಸಲ್ಪಟ್ಟು, ತತ್ರ-ಅವುಗಳಲ್ಲಿ ಪಿತೃಜಾತೇಃ-ತಂದೆಯ ಜಾತಿಯಿಂದ, ತ್ರಿಭಿಃ ಅಂಶೈಃ-ಮೂರು ಭಾಗಗಳಿಂದ, ಊನಿತಃ-ಊನನು (ಕೊರತೆಯುಳ್ಳವನು), ಭವೇತ್-(ಅನುಲೋಮಿ ಪುತ್ರನು) ಆಗುವನು; ಸುತಃ-ಆ ಮಗನು, ಮಾತುಃ-ತಾಯಿಯಿಂದ (ತಾಯಿಯ ಜಾತಿಗಿಂತ), ಏಕಾಂಶೇನ-ಒಂದು ಭಾಗದಿಂದ, ಅಧಿಕಃ-ಉತ್ತಮನು (ಭವೇತ್-ಆಗುವನು); ಮಾತೃಜಾತಿಃ-ತಾಯಿಯ ಜಾತಿಯು, ಜನಕತಃ-ತಂದೆಯ ಜಾತಿಗಿಂತ, ಯಾವದ್ಗುಣ್ಯೈಃ-ಎಷ್ಟು ಗುಣಗಳಿಂದ (ಎಷ್ಟು ಅಂಶಗಳಿಂದ), ಅಧಿಕಾ-ಉತ್ತಮವಾದುದು, ಭವೇತ್-ಆಗಿರುವುದೋ, ಸುತಃ-ಆ ಮಗನು (ಪ್ರತಿಲೋಮಿಯು), ನ್ಯೂನತಃ-ಕೀಳಾದ (ಹೀನವಾದ), ಜನಕಜಾತಿತಃ-ತಂದೆಯ ಜಾತಿಗಿಂತ, ತಾವದ್ಭಿಃ-ಅಷ್ಟು ಅಂಶೈಃ-(ಭಾಗಗಳಲ್ಲಿ ಒಂದು ಭಾಗದಿಂದ) ಅಂಶಗಳಿಂದ (ಅಧಿಕಃ-ಅಧಿಕನಾಗುವನು).

ಕರ್ಣಂ ಸ್ಪೃಶೇದ್ದಶ ನ್ಯೂನೇ ವಿಂಶನ್ನ್ಯೂನೇ ಜಲಂ ಸ್ಪೃಶೇತ್ ।
ಸ್ಪೃಷ್ಟೇ ಷಷ್ಠಿಲವನ್ಯೂನೇ ದ್ವಿರಾಚಮ್ಯ ವಿಶುದ್ಧ್ಯತಿ ॥ ೨೪ ॥
ಶತಾಧಿಕೋನೇ ಸ್ನಾತ್ವೈವ ಸಹಸ್ರನ್ಯೂನಕೇ ಮೃದಾ ।

---

ಮತ್ತು ವಿಷ್ಣುಮಂತ್ರಗಳನ್ನು ಅವರಿಗೆ ಬ್ರಾಹ್ಮಣರಿಂದ (ಉಪದೇಶಾಧಿಕಾರವಿದ್ದ ಪ್ರಯುಕ್ತ ಅವರಿಂದ) ಉಪದೇಶಿಸ ಬೇಕು; ಇತರ ಸರ್ವರೂ, ಶ್ರೀಹರಿಯ ನಾನಾ ನಾಮಗಳನ್ನು ಜಪಿಸುವುದರಲ್ಲಿ ಮಾತ್ರವೇ ಅಧಿಕಾರಿಗಳು (ಆದರಿಂದಲೇ ಅವರಿಗೆ ಸ್ವಯೋಗ್ಯ ಉತ್ತಮ ಫಲ, ಸದ್ಗತಿಗಳು ಸಿದ್ಧಿಸುತ್ತವೆ) (೧೯-೨೦).

(ಅನುಲೋಮ ಪ್ರತಿಲೋಮ ಜಾತಿಗಳಲ್ಲಿ, ಮಾತಾಪಿತೃಗಳ ಜಾತಿಗಿಂತ, ಉಚ್ಚತ್ವ ನೀಚತ್ವಗಳನ್ನು ತಿಳಿಯುವ ಕ್ರಮವನ್ನು ವಿವರಿಸುತ್ತಾ, ಭೃಗುಋಷಿಗಳು, ತಮ್ಮ ಉಪದೇಶವನ್ನು ಮುಂದರಿಸುತ್ತಾರೆ). ಅನುಲೋಮಿಯ ತಾಯಿಯು, ತಂದೆಗಿಂತ ಎಷ್ಟು ಅಂಶಗಳಿಂದ (ಗುಣಗಳಿಂದ), ನೀಚಳೋ, ಅದನ್ನು ನಾಲ್ಕುಭಾಗ ಮಾಡಿ, ಅದರಲ್ಲಿ ಮೂರು ಅಂಶಗಳಿಂದ, ತಂದೆಗಿಂತ ಸುತನು ಊನನಾಗುತ್ತಾನೆ— ತಾಯಿಯ ಜಾತಿಗಿಂತ ಆ ಒಂದಂಶದಷ್ಟು ಉತ್ತಮನೆನಿಸುತ್ತಾನೆ; ಪ್ರತಿಲೋಮಿಯು, ತನ್ನ

**ಸ್ನಾನಂ ಕುರ್ಯಾತ್ತದಧಿಕೇ ಪಂಚಗವ್ಯಾಶನಂ ಸ್ಮೃತಂ ॥ ೨೫ ॥**

ದಶನ್ಯೂನೇ-೧೦ ಅಂಶಗಳಿಂದ ಹೀನನು, ಸ್ಪೃಷ್ಟೇ (ಸತಿ)-ಸ್ಪರ್ಶಿಸುತ್ತಿರಲು, ಕರ್ಣಂ ಸ್ಪೃಶೇತ್-(ಶುದ್ಧನಾಗಲು) (ಶ್ರೀಹರಿಸ್ಮರಣಪೂರ್ವಕ) ಕಿವಿಯನ್ನು ಮುಟ್ಟಿಕೊಳ್ಳಬೇಕು; ವಿಂಶತ್ನ್ಯೂನೇ- (ಸ್ಪರ್ಶಿಸಿದವನು) ೨೦ ಅಂಶಗಳಿಂದ (ತನಗಿಂತ) ಹೀನನಾಗಿದ್ದರೆ, ಜಲಂ ಸ್ಪೃಶೇತ್-ಜಲವನ್ನುಸ್ಪರ್ಶಮಾಡಬೇಕು (ಆಚಮನ ಮಾಡಬೇಕು); ಷಷ್ಟಿಲವನ್ಯೂನೇ-೬೦ ಅಂಶಗಳಿಂದ ಹೀನನಾದರೆ, ದ್ವಿರಾಚಮ್ಯ— ಎರಡಾವರ್ತಿ ಆಚಮನಮಾಡಿ, ವಿಶುದ್ಧ್ಯತಿ-ಶುದ್ಧನಾಗುತ್ತಾನೆ; ಶತಾಧಿಕೋನೇ-೧೦೦ ಅಂಶಗಳಿಂದ (ಸ್ಪರ್ಶಿಸಿದವನು) ಹೀನನಾಗಿದ್ದರೆ, ಸ್ನಾತ್ವಾ ಏವ-ಸ್ನಾನಮಾಡಿಯೇ (ಶುದ್ಧನಾಗುತ್ತಾನೆ); ಸಹಸ್ರ ನ್ಯೂನಕೇ-೧೦೦೦ ಅಂಶಗಳಿಂದ (೧೦೦ಕ್ಕಿಂತ ಅಧಿಕಾಂಶಗಳಿಂದ) ನ್ಯೂನನಾಗಿದ್ದರೆ, ಮೃದಾ-ಮೃತ್ತಿಕೆಯಿಂದ, ಸ್ನಾನಂ-ಸ್ನಾನವನ್ನು ಕುರ್ಯಾತ್-ಮಾಡಬೇಕು; ತದಧಿಕೇ-ಅದಕ್ಕಿಂತ ಅಧಿಕಾಂಶಗಳಿಂದ ಹೀನನಾದರೆ, ಪಂಚಗವ್ಯಾಶನಂ-ಪಂಚಗವ್ಯಪ್ರಾಶನವು, ಸ್ಮೃತಂ- (ಶುದ್ಧನಾಗಲು) ಉಕ್ತವಾಗಿದೆ.

---

ತಾಯಿಯು, ಎಷ್ಟು ಅಂಶಗಳಿಂದ ತಂದೆಗಿಂತ ಉತ್ತಮಳೋ, ಅಷ್ಟು ಅಂಶಗಳ[1] ಚತುರ್ಥಾಂಶದಿಂದ ತಂದೆಗಿಂತ ಉತ್ತಮನೆನಿಸುವನು (೨೦-೨೩). ೧೦ ಗುಣಗಳಿಂದ (ಅಂಶಗಳಿಂದ) ಹೀನವಾದ ಜಾತಿಯವನ ಸ್ಪರ್ಶವಾದರೆ, (ಉತ್ತಮನು) ಶ್ರೀಹರಿಯ ಸ್ಮರಣಪೂರ್ವಕ ಕಿವಿಯನ್ನು ಮುಟ್ಟಿಕೊಳ್ಳಬೇಕು; ೨೦ ಗುಣಗಳಿಂದ ಹೀನನಾಗಿದ್ದರೆ,

---

1. ಅನುಲೋಮ ಪ್ರತಿಲೋಮಗಳ ಸ್ಥಾನವನ್ನು (ದೇಹತಃ ನ್ಯೂನಾಧಿಕ್ಯಗಳನ್ನು) ಸೂಕ್ಷ್ಮಗಣನೆಯಿಂದ ಅರಿತು, ಅವರಿಂದ ಉತ್ತಮವಾದ ಜಾತಿಗೆ ಸೇರುವವರು, ಅವರೊಂದಿಗೆ ವ್ಯವಹರಿಸಬೇಕಾಗುವುದು; ಈ ಅಧ್ಯಾಯದ ಮುಂದಿನ ಭಾಗದಲ್ಲಿ ಈ ವಿಷಯಗಳು ಪ್ರಸಕ್ತವಾಗುತ್ತವೆ. ಉಕ್ತವಾದ ಗುಣದ ಗಣನೆಯು, ಉದಾಹರಣಾರ್ಥ ಹೀಗಿರುತ್ತದೆ:— ಅನುಲೋಮ—ಬ್ರಾಹ್ಮಣಪುರುಷ, ವೈಶ್ಯಸ್ತ್ರೀ, ಆಗಿದ್ದರೆ, ತಾಯಿಯು ತಂದೆಗಿಂತ ೨೦ ಅಂಶಗಳಿಂದ ಅಧಮಳು; ಈ ೨೦ರಲ್ಲಿ ನಾಲ್ಕು ಭಾಗಮಾಡಿದರೆ ೫ ಅಂಶಗಳ ಒಂದೊಂದು ಭಾಗವಾಗುತ್ತವೆ. ಸುತನು (ಅನುಲೋಮಿಯು), ತಾಯಿಗಿಂತ ೫ ಅಂಶಗಳಿಂದ ಉತ್ತಮನೂ, ತಂದೆಗಿಂತ ೧೫ ಅಂಶಗಳಿಂದ ನೀಚನೂ ಆಗುತ್ತಾನೆ. ಪ್ರತಿಲೋಮ—ಬ್ರಾಹ್ಮಣಸ್ತ್ರೀ, ಕ್ಷತ್ರಿಯಪುರುಷನಾದರೆ, ತಾಯಿಯು ೪ ಅಂಶಗಳಿಂದ ತಂದೆಗಿಂತ ಉತ್ತಮಳು; ಸುತನು (ಪ್ರತಿಲೋಮಿಯು) ತಂದೆಗಿಂತ ಚತುರ್ಥಾಂಶದಿಂದ, ಎಂದರೆ ೧ ಅಂಶದಿಂದ ಅಧಿಕನೇ ಆಗುತ್ತಾನೆ; ವೈಶ್ಯಪುರುಷನಾದರೆ, ಕ್ಷತ್ರಿಯಸ್ತ್ರೀಯಾಗಿದ್ದರೆ, ಸುತನು ತಂದೆಗಿಂತ ೫/೫ ಎಂದರೆ, ೧ ಗುಣದಿಂದ ಉತ್ತಮನೆನಿಸುತ್ತಾನೆ; ಎಂದರೆ, ಯಾವ ಕಾರಣದಿಂದಲೂ ತಾಯಿಯ ಜಾತಿಗಿಂತ, ಪ್ರತಿಲೋಮಿಯು ಅಧಿಕನಾಗುವುದಿಲ್ಲ (ಅನುಲೋಮಿಯಂತೆ). ಅಂಶಗಳ ಗಣನೆಯ ಸಂಬಂಧವಾಗಿ ಇದೇ ಅಧ್ಯಾಯದ (೩-೪) ಶ್ಲೋಕಗಳನ್ನು ನೋಡಿರಿ.

**ಯೇಷಾಂ ನ ಜ್ಞಾಯತೇ ಮಾತುಃ ಪಿತೃಜಾತಿವಿನಿರ್ಣಯಃ ।**
**ಸಂಕೀರ್ಣಾಸ್ತೇ ಹಿ ವಿಜ್ಞೇಯಾಸ್ತದಾಲಾಪಮಪಿ ತ್ಯಜೇತ್ ॥ ೨೬ ॥**
**ತದ್ದೃಷ್ಟೌ ಕರ್ಣಸಂಸ್ಪರ್ಶಃ ಆಲಾಪೇ ಜಲಮಾಚಮೇತ್ ।**
**ಸ್ಪರ್ಶೇ ಸವಾಸಸಸ್ನಾನಂ ಪಂಚಗವ್ಯಾಶನಾಚ್ಛುಚಿಃ ॥ ೨೭ ॥**

ಯೇಷಾಂ-ಯಾರ (ಯಾವ ಪ್ರಜೆಗಳ), ಮಾತುಃ-ತಾಯಿಯ, (ಮತ್ತು) ಪಿತೃಜಾತಿವಿನಿರ್ಣಯಃ-ತಂದೆಯ ಜಾತಿನಿಶ್ಚಯವು, ನ ಜ್ಞಾಯತೇ-ತಿಳಿದುಬರುವುದಿಲ್ಲವೋ, ತೇ-ಅವರು, 'ಸಂಕೀರ್ಣ'ರೆಂದು (ಮಿಶ್ರ-ಸಂಕರಜಾತಿಯವರೆಂದು),[1] ವಿಜ್ಞೇಯಾಃ-ತಿಳಿಯಲ್ಪಡಬೇಕು; ತದಾಲಾಪಂ-ಅವರೊಂದಿಗೆ (ಆಲಾಪ) ಮಾತನಾಡುವುದನ್ನು, ಅಪಿ-ಕೂಡ, ತ್ಯಜೇತ್-ಬಿಡಬೇಕು; ತದ್ದೃಷ್ಟೌ-ಈ ಜನರನ್ನು ನೋಡಿದರೆ (ಕಂಡರೆ), ಕರ್ಣಸಂಸ್ಪರ್ಶಃ-ಕಿವಿಯನ್ನು ಸ್ಪರ್ಶಿಸಿಕೊಳ್ಳಬೇಕು (ಅದರಿಂದ ಶುದ್ಧಿಯು); ಆಲಾಪೇ-(ಅವರೊಡನೆ) ಸಂಭಾಷಿಸಿದರೆ, ಜಲಂ-ಉದಕವನ್ನು, ಆಚಮೇತ್-ಆಚಮನ ಮಾಡಬೇಕು; ಸ್ಪರ್ಶೇ-ಮುಟ್ಟಿದರೆ, ಸವಾಸಸಸ್ನಾನಂ-ಉಡಿಗೆಯ (ಉಟ್ಟ ವಸ್ತ್ರದೊಂದಿಗೆ) ಸಮೇತ ಸ್ನಾನ ಮಾಡತಕ್ಕದ್ದು; ಪಂಚಗವ್ಯಾಶನಾತ್-(ಸ್ನಾನಮಾಡಿ) ಪಂಚಗವ್ಯಪ್ರಾಶನದಿಂದ, ಶುಚಿಃ-ಪರಿಶುದ್ಧಿಯು (ದೊರೆಯುತ್ತದೆ).

ರಾಜೋವಾಚ—

**ಪೂರ್ವೋಕ್ತವಿಧಿನಾ ಕೇಚಜ್ಜಾಯಂತೇ ವೈಶ್ಯತೋಽಧಿಕಾಃ ।**
**ಪ್ರತಿಲೋಮಾ ಅಪಿ ಕಥಂ ವೈದಿಕೇಽನಧಿಕಾರಿಣಃ ॥ ೨೮ ॥**

---

ಜಲಸ್ಪರ್ಶ (ಆಚಮನ) ಮಾಡಬೇಕು; ೬೦ ಗುಣಗಳಿಂದ ಹೀನನಾದರೆ, ಎರಡಾವರ್ತಿ ಆಚಮನ ಮಾಡಿ (ಶ್ರೀಹರಿಯ ಕೇಶವಾದಿ ನಾಮಗಳನ್ನು ಉಚ್ಚರಿಸುವುದರಿಂದ) ಶುದ್ಧನಾಗುತ್ತಾನೆ; ೧೦೦ ಗುಣಗಳಿಂದ ಹೀನನಾದರೆ, ಸ್ನಾನದಿಂದಲೂ, ೧೦೦೦ ಗುಣ (೧೦೦ಕ್ಕಿಂತ ಬಹ್ವಧಿಕಾಂಶಗಳಿಂದ)ಗಳಿಂದ ಹೀನನಾದರೆ, ಮೃತ್ತಿಕಾಸ್ನಾನದಿಂದಲೂ, ಅದಕ್ಕಿಂತ ನೀಚನಾಗಿದ್ದರೆ, ಪಂಚಗವ್ಯಪ್ರಾಶನದಿಂದಲೂ ಶುದ್ಧನಾಗುವನೆಂದೂ ತಿಳಿಯಲಾಗಿದೆ. (೨೪-೨೫). ಮಾತಾಪಿತೃಗಳ ಜಾತಿಯು, ಯಾರ ವಿಷಯದಲ್ಲಿ ನಿಶ್ಚಯವಾಗಿ ತಿಳಿದುಬರುವುದಿಲ್ಲವೋ, ಅವರನ್ನು ಸಂಕರಜಾತಿಯವರೆಂದು ತಿಳಿಯಬೇಕು; ಅವರೊಂದಿಗೆ ಸಂಭಾಷಣೆಯನ್ನು ಸಹ ತ್ಯಜಿಸಬೇಕು; ಅಂಥವರನ್ನು ನೋಡಿದರೆ, ಕರ್ಣಸ್ಪರ್ಶಮಾಡಿಕೊಳ್ಳಬೇಕು; ಅವರೊಡನೆ ಮಾತನಾಡಿದರೆ, ಜಲಾಚಮನ ಮಾಡಬೇಕು; ಸ್ಪರ್ಶಿಸಿದರೆ (ಮುಟ್ಟಿದರೆ) ಸಚೇಲ (ವಸ್ತ್ರಸಹಿತ) ಸ್ನಾನಮಾಡಬೇಕು;

---

1. ಇದೇ ಅಧ್ಯಾಯದ ೧೩-೧೫ನೇ ಶ್ಲೋಕಗಳ ತಾತ್ಪರ್ಯವನ್ನು ನೋಡಿಕೊಳ್ಳಿರಿ.

ಪೂರ್ವೋಕ್ತವಿಧಿನಾ-ಈ ಹಿಂದೆ ಹೇಳಲಾದ (ಅಂಶಗಣನ) ನಿಯಮದಂತೆ, ಕೇಚಿತ್-ಕೆಲವು, ಪ್ರತಿಲೋಮಾಃ ಅಪಿ-ಪ್ರತಿಲೋಮಿಗಳು ಸಹ, ವೈಶ್ಯತಃ-ವೈಶ್ಯ ಪುರುಷನಗಿಂತ, ಅಧಿಕಾಃ-ಅಧಿಕರು, ಜಾಯಂತೇ-ಆಗುತ್ತಾರೆ;[1] ಕಥಂ-ಇದು ಹೇಗೆ ಸಂಗತವಾಗುತ್ತದೆ? (ಏಕೆಂದರೆ), ವೈದಿಕೇ-ವೇದೋಕ್ತ ಕರ್ಮಾನುಷ್ಠಾನದಲ್ಲಿ ಅನಧಿಕಾರಿಣಃ-(ಪ್ರತಿಲೋಮಿಗಳು) ಅನಧಿಕಾರಿಗಳಲ್ಲವೇ?

**ಭೃಗುರುವಾಚ—**

**ದ್ವಿಜಸ್ತ್ರೀಣಾಮಿವೈತೇಷಾಂ ವೈಶ್ಯಾಧಿಕ್ಯೇಽಪಿ ಸರ್ವಥಾ ।**
**ವಚನಾದಧಿಕಾರೋ ನೋ ಜಾತೋ ದೋಷೋಽತ್ರ ಶಂಕ್ಯತೇ ॥ ೨೯ ॥**

ಏತೇಷಾಂ-(ವೈಶ್ಯನಗಿಂತ ಅಧಿಕನಾಗುವ) ಈ ಪ್ರತಿಲೋಮಿಗಳಿಗೆ, ವೈಶ್ಯಾಧಿಕ್ಯೇ ಅಪಿ-ವೈಶ್ಯರಕಿಂತ ಆಧಿಕ್ಯವು (ಅಂಶಗಣನೆಯಂತೆ) ಉಂಟಾಗುವುದಾದರೂ ಸಹ, ದ್ವಿಜಸ್ತ್ರೀಣಾಂ ಇವ-ಬ್ರಾಹ್ಮಣಾದಿ (ತ್ರಿವರ್ಣಗಳ) ಸ್ತ್ರೀಯರಂತೆ, ಸರ್ವಥಾ-ಯಾವ ಪ್ರಕಾರದಿಂದಲೂ, ವಚನಾತ್-ಶಬ್ದ(ಶ್ರುತಿ)ದಿಂದ, ಅಧಿಕಾರಃ-ವೇದಾಧಿಕಾರವು, ನೋ ಜಾತಃ-ಹುಟ್ಟುವುದಿಲ್ಲ; ಅತ್ರ-ಈ (ವೇದಾಧಿಕಾರವು ಪ್ರತಿಲೋಮಿಗೆ ಉಂಟಾಗಬಹುದೆಂಬ) ವಿಷಯದಲ್ಲಿ ದೋಷಃ-ದೋಷವು, (ತ್ವಯಾ-ನಿನ್ನಿಂದ), ಶಂಕ್ಯತೇ (ಕಿಲ)-ಶಂಕಿಸಲ್ಪಡುತ್ತದಷ್ಟೆ (ಆ ಶಂಕೆಗೆ ಅವಕಾಶವಿಲ್ಲ—ಶ್ರುತಿಯು ಸ್ಪಷ್ಟವಾಗಿದೆ).

**ವೈದಿಕೇಭ್ಯಸ್ತು ಯೇ ಜಾತಾಃ ಕುಂಡಾ ವಾ ಗೋಲಕಾ ಅಪಿ ।**

---

ಮತ್ತು ಪಂಚಗವ್ಯಪ್ರಾಶನಮಾಡಬೇಕು[2]—ಹೀಗೆ ಮಾಡುವುದರಿಂದ ಶುದ್ಧನಾಗುತ್ತಾನೆ (ಸ್ವವಿಹಿತಕರ್ಮಾನುಷ್ಠಾನಾದಿಗಳಿಗೆ ಯೋಗ್ಯನಾಗುತ್ತಾನೆ) (೨೬-೨೭).

ಈ ಹಿಂದೆ ಹೇಳಲಾದ ಗುಣಾಂಶಗಳ ಗಣನೆಯ ವಿಷಯದ ನಿಯಮಗಳಂತೆ ಕೆಲವು ಪ್ರತಿಲೋಮಿಗಳು, ಗುಣದಲ್ಲಿ ಸ್ವಯಂ ವೇದಾನಧಿಕಾರಿಗಳಾದರೂ, (ವೇದಾಧಿಕಾರಿಗಳಾದ) ವೈಶ್ಯರಿಗಿಂತ ಅಧಿಕರಾಗುತ್ತಾರೆ; ಇದು ಹೇಗೆ ಸಂಗತವಾಗುತ್ತದೆ? ಎಂದು ರಾಜನು ಕೇಳಲು, (೨೮) ಭೃಗುಋಷಿಗಳು ಹೇಳುತ್ತಾರೆ:— ವೈಶ್ಯನಗಿಂತ (ಅಂಶಗಣನೆಯಂತೆ) ಜಾತಿಯಿಂದ ಅಧಿಕಗುಣರಾಗುವರೆಂಬ ಪ್ರತಿಲೋಮಿಗಳಿಗೆ,

---

1. ಈ ಅಧ್ಯಾಯದ ಶ್ಲೋಕ (೨೦-೨೩)ಗಳ ತಾತ್ಪರ್ಯಭಾಗದ ಅಡಿಟಿಪ್ಪಣಿಯನ್ನು ನೋಡಿರಿ.

2. ಉಕ್ತವಾದ ಶೌಚವಿಧಿಗಳು, ಈ ಕಲಿಕಾಲದಲ್ಲಿಯ ಪರಿಸ್ಥಿತಿ ವಿಶೇಷಗಳಿಂದ, ಆಚರಿಸಲು ಅಸಾಧ್ಯವೆಂಬ ಭಾವನೆಯುಂಟಾಗುವುದು ಸಹಜವಾಗಿದೆ. ಆದರೆ, ವಿಹಿತ ಕರ್ಮಾನುಷ್ಠಾನದ, ಯಥಾಯೋಗ್ಯವಾದ (ಸ್ವಯೋಗ್ಯ) ಪೂರ್ಣಫಲವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವರಿಗೆ ಈ

**ಅನುಲೋಮ್ಯೇನ ತೇಽಪಿ ಸ್ಯುಃ ಪಿತೃಜಾತಿಕ್ರಿಯಾಕರಾಃ ॥ ೩೦ ॥**
**ಸಂಸ್ಕಾರ್ಯಾ ವೈದಿಕೈರ್ಮಂತ್ರೈರ್ವೇದಾಧ್ಯಯನವರ್ಜಿತಾಃ ।**
**ಅವೈದಿಕೇಷು ಶಾಸ್ತ್ರೇಷು ಜ್ಞೇಯಾ ತದಧಿಕಾರಿತಾ ॥ ೩೧ ॥**
**ಬ್ರಾಹ್ಮಣೇಭ್ಯೋಽಪಿ ಜಾತಾನಾಂ ಕುಂಡಾದೀನಾಂ ಪ್ರತಿಗ್ರಹೇ ।**
**ಅಧ್ಯಾಪನೇ ಯಾಜನೇ ಚ ನಾಧಿಕಾರಃ ಪ್ರಕೀರ್ತಿತಃ ॥ ೩೨ ॥**
**ಜ್ಯೋತಿಷೇ ವೈದಿಕೇ ಗಾನೇ ಶಿವಾದೀನಾಂ ಚ ಪೂಜನೇ ।**
**ಅಧಿಕಾರಸ್ತಯಾ ವೃತ್ತ್ಯಾ ತೇಷಾಂ ಜೀವನಮೀರಿತಂ ॥ ೩೩ ॥**

ವೈದಿಕೇಭ್ಯಃ-ವೇದಾಧಿಕಾರವುಳ್ಳ ಪುರುಷರಿಂದ, ಯೇ-ಯಾವ, ಕುಂಡಾಃ-ಕುಂಡರು, ವಾ-ಅಗಲಿ, ಅಪಿ-ಮತ್ತು ಗೋಲಕಾಃ-ಗೋಲಕರಾಗಲಿ, ಅನುಲೋಮ್ಯೇನ - ಕೆಳವರ್ಣದ ಸ್ತ್ರೀಯಿಂದ, ಜಾತಾಃ-ಜನಿಸಿದವರೋ, ತೇ-ಅವರೂ, ಪಿತೃಜಾತಿಕ್ರಿಯಾಕರಾಃ ಅಪಿ-ತಂದೆಯ ಜಾತಿಯ ಕರ್ಮಗಳುಳ್ಳವರಾದರೂ, ವೈದಿಕೈಃ ಮಂತ್ರೈಃ - ವೇದಮಂತ್ರಗಳಿಂದ, ಸಂಸ್ಕಾರ್ಯಾಃ (ಅಪಿ)-(ಉಪನಯನಾದಿ) ಸಂಸ್ಕಾರಗಳಿಗೆ ಅರ್ಹರಾದರೂ, ವೇದಾಧ್ಯಯನವರ್ಜಿತಾಃ-

ಆಧಿಕ್ಯವುಂಟಾದರೂ, ಜಾತಿಯಿಂದ ಉತ್ತಮರಾದ ಬ್ರಾಹ್ಮಣಾದಿ ಸ್ತ್ರೀಯರಂತೆ, ಇವರಿಗೆ ವೇದಾಧಿಕಾರವು ಹುಟ್ಟುವುದಿಲ್ಲ; ಪ್ರತಿಲೋಮಿಗಳಿಗೆ ವೇದೋಕ್ತ ಕರ್ಮಗಳಲ್ಲಿ ಅಧಿಕಾರವಿಲ್ಲವೆಂದು ಶ್ರುತಿವಚನಗಳಿರುವುದರಿಂದ, ನಿನ್ನ ಈ ಶಂಕೆಗೆ ಅವಕಾಶವಿಲ್ಲ(೨೯). ವೇದಾಧಿಕಾರವುಳ್ಳ ಪುರುಷರಿಂದ, ಜನಿಸಿದ ಮಾತ್ರಕ್ಕೆ, ಪ್ರತಿಲೋಮಿಗೆ ವೇದಾಧಿಕಾರವುಂಟೆಂದು ಶಂಕಿಸುವುದು ಯುಕ್ತವಲ್ಲ; ವೇದಾಧಿಕಾರವುಳ್ಳವರಿಂದ ಹುಟ್ಟಿದ, ಅನುಲೋಮಿಗಳಾದ (ಕೆಳವರ್ಣದ ಸ್ತ್ರೀಯರಲ್ಲಿ ಜನಿಸಿದ), ಕುಂಡಗೋಲಕರು ಸಹ ವೈದಿಕ ಕರ್ಮಗಳಲ್ಲಿ ಅನಧಿಕಾರಿಗಳಾಗಿರುವರು; ತಂದೆಯ ಜಾತಿಗೆ ಯೋಗ್ಯವಾದ

ನಿಯಮಗಳ ಪಾಲನೆಯು ಅವಶ್ಯಕ. ವಿಧಿಪೂರ್ವಕ ಸ್ನಾನಾದಿಗಳನ್ನಾಚರಿಸಿ, ವಿಧ್ಯುಕ್ತ ಕರ್ಮಗಳಲ್ಲಿ ತೊಡಗಿದವರು, ಸ್ವವರ್ಣದವರ, ಅಪೇಕ್ಷೆ, ಸ್ವಬಾಂಧವರೂ, ಪತ್ನೀಪುತ್ರಾದಿಗಳೂ ಆದವರ ಸ್ಪರ್ಶಾದಿಗಳನ್ನು ಸಹ ತ್ಯಜಿಸಬೇಕೆಂಬ ನಿಯಮವಿರುವಾಗ, ಅನ್ಯಜಾತಿಯವರ ವಿಷಯದಲ್ಲಿ ಈ ನಿಯಮಗಳನ್ನು ವಿಧಿಸಿರುವುದು, ವ್ಯಕ್ತಿಗಳನ್ನು ತುಚ್ಛರನ್ನಾಗಿ ಕಾಣಬೇಕೆಂಬ ತಾತ್ಪರ್ಯದಿಂದ ಅಲ್ಲವೇ ಅಲ್ಲ, ಕಿಂತು, ಸ್ವಕರ್ಮಶುದ್ಧಿಗಾಗಿ, ಎಂಬುದನ್ನು ಮನಗಾಣಬೇಕು. ಮುಖ್ಯವಾಗಿ, ಬಾಹ್ಯಾಂತರಂಗ ಶುದ್ಧಿಗಳಿಗೆ ಕಾರಣವಾದುದು, ಶ್ರೀಹರಿಸ್ಮರಣೆಯೆಂಬುದನ್ನು ಲಕ್ಷ್ಯದಲ್ಲಿಡಬೇಕಾದುದು ಅವಶ್ಯಕ. ಮತ್ತು ಉಕ್ತವಾದ ಜಾತಿಗಳ ಉಚ್ಚ ನೀಚತ್ವಗಳು, ಸತ್ವಾದಿ ಪ್ರಾಕೃತಗುಣನಿರ್ಮಿತಗಳಾದ, ಆಯಾ ವರ್ಣದ ಪುರುಷ ಸ್ತ್ರೀ ದೇಹನಿಮಿತ್ತವಾದವುಗಳು ಮಾತ್ರ—ಜ್ಞಾನಾದಿ ಗುಣಾಧಿಕ್ಯ ನ್ಯೂನತೆಗಳನ್ನು ಗಮನಿಸಿ, ಉತ್ತಮಜಾತಿಯವರು, ಹೀನಜಾತಿಗಳ ವ್ಯಕ್ತಿಗಳೊಂದಿಗೆ ಹೇಗೆ ನಡೆದುಕೊಳ್ಳತಕ್ಕದ್ದೆಂಬ ಪ್ರಮೇಯವು. ಅನ್ಯತ್ರ ಪ್ರಸಕ್ತವಾಗಿ, ಈ ಗ್ರಂಥದಲ್ಲಿ ನಿರ್ಣಯಿಸಲ್ಪಟ್ಟಿರುವುದನ್ನು ಲಕ್ಷ್ಯದಲ್ಲಿಡಬೇಕಾದುದು ಅವಶ್ಯಕ.

ವೇದಾಧ್ಯಯನವಿಲ್ಲದವರು (ಆಗಿರುವರು); ತದಧಿಕಾರಿತಾ-ಅವರ ಅಧಿಕಾರವು, ಅವೈದಿಕೇಷು-ವೈದಿಕವಲ್ಲದ, ಶಾಸ್ತ್ರೇಷು-ಶಾಸ್ತ್ರಗಳಲ್ಲಿ ಜ್ಞೇಯಾ-(ಮಾತ್ರವೆಂದು) ತಿಳಿಯಲ್ಪಡತಕ್ಕದ್ದು; ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಂದ, ಜಾತಾನಾಂ-ಜನಿಸಿದ, ಕುಂಡಾದೀನಾಂ ಅಪಿ-ಕುಂಡ ಮೊದಲಾದವರಿಗೂ, ಪ್ರತಿಗ್ರಹೇ-ದಾನಸ್ವೀಕಾರದಲ್ಲಿ ಅಧ್ಯಾಪನೇ-(ವೇದಗಳ) ಅಧ್ಯಯನ ಮಾಡಿಸುವುದರಲ್ಲಿ ಯಾಜನೇ- (ಯಜ್ಞಾದಿಗಳನ್ನು) ಮಾಡಿಸುವುದರಲ್ಲಿ ನ ಅಧಿಕಾರಃ-ಅಧಿಕಾರವಿಲ್ಲವು, ಪ್ರಕೀರ್ತಿತಃ-(ಎಂದು) ಹೇಳಲ್ಪಟ್ಟಿರುತ್ತದೆ (ಅಧ್ಯಾಪನಾದಿಗಳು ಅವರಿಗೆ ದೋಷಕರಗಳೆಂದು ಮಾತ್ರವಲ್ಲ— ಅವರಿಂದ ಮಾಡಿಸಿಕೊಳ್ಳುವವರಿಗೆ ಫಲಶೂನ್ಯಗಳಾಗುತ್ತವೆ); ಜ್ಯೋತಿಷೇ-ಜ್ಯೋತಿಷ್ಯದಲ್ಲಿ ವೈದಿಕೇ ಗಾನೇ-ವೇದೋಕ್ತ ಗಾನವಿದ್ಯೆಯಲ್ಲಿ ಶಿವಾದೀನಾಂ ಚ-ಶಿವಾದಿ ದೇವತೆಗಳ, ಪೂಜನೇ-ಪೂಜೆಯಲ್ಲಿ (ಶಿವದೇವಾಲಯಾದಿಗಳಲ್ಲಿ ಅರ್ಚನೆಮಾಡುವುದು), ಅಧಿಕಾರಃ-(ಇವರಿಗೆ) ಅಧಿಕಾರವಿರುತ್ತದೆ; ತಯಾ-ಆ, ವೃತ್ತ್ಯಾ-ವೃತ್ತಿಯಿಂದಲೇ, ತೇಷಾಂ-ಅವರಿಗೆ, ಜೀವನಂ-ಜೀವಿತವು (ಉಪಜೀವನವೆಂದು), ಈರಿತಂ- ಹೇಳಲ್ಪಟ್ಟಿದೆ.

**ಪ್ರತಿಲೋಮಿಷು ಸರ್ವೇಷು ವೈಶ್ಯಾನ್ನ್ಯೂನೇಷು ಕುಂಡತಾ ।**

**ನೈವ ಗೋಲಕತಾ ವಾಪಿ ತದಾಧಿಕ್ಯೇಽನುಲೋಮಿವತ್ ॥ ೩೪ ॥**

ವೈಶ್ಯಾತ್-ವೈಶ್ಯರಿಂದ, ನ್ಯೂನೇಷು-ಕೆಳಗಿನವರಲ್ಲಿ (ಶೂದ್ರಾದಿ ಜಾತಿಗಳಲ್ಲಿ), (ಜನಿಸುವ), ಸರ್ವೇಷು-ಎಲ್ಲ ಪ್ರತಿಲೋಮಿಗಳಲ್ಲಿ (ಹೀನಜಾತಿಯ ಪುರುಷರಿಂದ ಜನಿಸುವವರಲ್ಲಿ), ಕುಂಡತಾ-ಕುಂಡತ್ವ, ಅಪಿ ವಾ-ಮತ್ತು ಗೋಲಕತಾ- ಗೋಲಕತ್ವವು, ಅನುಲೋಮವತ್-ಅನುಲೋಮದಿಂದ (ಉತ್ತಮಜಾತಿಯ ಪುರುಷರಿಂದ ಜನಿಸುವ) ಹುಟ್ಟುವವರಂತೆ, ತದಾಧಿಕ್ಯೇ-(ತಾಯಿಯಿಂದ ಆಧಿಕ್ಯವೆಂಬುದು) ಆಧಿಕ್ಯವು, ನೈವ-ಇಲ್ಲವೇ ಇಲ್ಲ.

---

ಕರ್ಮಗಳುಳ್ಳವರಾದರೂ, ವೈದಿಕಮಂತ್ರಗಳಿಂದ, ಉಪನಯನಾದಿ ಸಂಸ್ಕಾರಗಳಿಗೆ ಅರ್ಹರಾಗಿ ದ್ದರೂ, ವೇದಾಧ್ಯಯನಕ್ಕೆ ಅನರ್ಹರಾಗಿರುವರು; ಈ ಅನುಲೋಮಿಗಳಿಗೆ, ಅವೈದಿಕಗಳಾದ (ವೈದಿಕಗಳಲ್ಲದ) ಶಾಸ್ತ್ರಗಳಲ್ಲಿ ಮಾತ್ರ ಅಧಿಕಾರವಿರುತ್ತದೆ; ಬ್ರಾಹ್ಮಣಪುರುಷನಿಂದ ಜನಿಸಿದ ಕುಂಡಾದಿಗಳಿಗೆ, ಅಧ್ಯಾಪನ, ಯಾಜನ, ಪ್ರತಿಗ್ರಹ (ಶಿಷ್ಯರಿಗೆ ವೇದಾಧ್ಯಯನ ಮಾಡಿಸುವುದು, ಯಜ್ಞಾದಿಗಳನ್ನು ಮಾಡಿಸುವುದು, ದಾನಾದಿಗಳನ್ನು ಸ್ವೀಕರಿಸುವುದು) ಗಳಲ್ಲಿ ಅಧಿಕಾರವಿಲ್ಲ; ಅವರಿಗೆ, ಜ್ಯೋತಿಷ್ಯ, ಗಾಂಧರ್ವವಿದ್ಯೆ (ವೈದಿಕಗಾನ), ಶಿವಾದಿ ಪೂಜಾದಿಗಳಲ್ಲಿ ಮಾತ್ರ ಅಧಿಕಾರವಿರುತ್ತದೆ; ಅವುಗಳೇ ಅವರ ವೃತ್ತಿಗಳು (೩೦-೩೩).

ಶೂದ್ರಾದಿ ಜಾತಿಗಳಲ್ಲಿ ಜನಿಸುವ, ಸಮಸ್ತ ಪ್ರತಿಲೋಮಿಗಳಲ್ಲಿ ಅನುಲೋಮಿಗಳಂತೆ, ಅನುಲೋಮದಿಂದ ಕೆಳಜಾತಿಯ ಸ್ತ್ರೀಯಲ್ಲಿ ಉತ್ತಮ

**ವೇದಾಧ್ಯಯನಹೀನಾನಾಂ ಜಾತೀನಾಮುಪನಾಯನೇ ।**
**ನ ಕಾಲನಿಯಮಾವಸ್ಥಾ ನೈವಾತಿನಿಯಮಾ ಅಪಿ ॥ ೩೫ ॥**

ವೇದಾಧ್ಯಯನಹೀನಾನಾಂ-(ವೇದೋಕ್ತ ಸಂಸ್ಕಾರಗಳಿಗೆ ಅರ್ಹರಾದರೂ) ವೇದಾಧ್ಯಯನಹೀನರಾದ (೩೧ನೇ ಶ್ಲೋಕವನ್ನು ನೋಡಿರಿ), ಜಾತೀನಾಂ-ಜಾತಿಯವರಿಗೆ (ಅನುಲೋಮಿ ಕುಂಡಾದಿಗಳಿಗೆ), ಉಪನಾಯನೇ-ಉಪನಯನ ಸಂಸ್ಕಾರ ಮಾಡುವುದರಲ್ಲಿ, ಕಾಲನಿಯಮಾವಸ್ಥಾ-ಕಾಲನಿಯಮದ ಅವಸ್ಥೆಯು (೮ ವರ್ಷದೊಳಗಿರಬೇಕೆಂಬ ಮುಂತಾದುದು), ನ-ಇಲ್ಲ ಅತಿ ನಿಯಾಮಾಃ ಅಪಿ- ಹೆಚ್ಚಿನ ನಿರ್ಬಂಧಗಳೂ, ನೈವ-ಇಲ್ಲ

**ಸ್ವಸ್ವವೃತ್ತಿಕರೀ ವಿದ್ಯಾಧ್ಯಯನಾಧ್ಯಾಪನಾನಿ ತು ।**
**ಕರ್ತವ್ಯಾನಿ ನ ದೋಷೋತ್ರ ತಥಾ ವೈದಿಕಕರ್ಮಸು ॥ ೩೬ ॥**
**ಬ್ರಹ್ಮಚರ್ಯಂ ಚ ಗಾರ್ಹಸ್ಥಂ ವಾನಪ್ರಸ್ಥಂ ಪರಿವ್ರಜಃ ।**
**ಚತ್ವಾರ ಆಶ್ರಮಾ ಹ್ಯೇತೇ ಪ್ರೋಕ್ತಾ ವೇದಾಧಿಕಾರಿಣಾಂ ॥ ೩೭ ॥**

ಅಧ್ಯಯನಾಧ್ಯಾಪನಾನಿ-(ವಿಪ್ರರು) ವೇದಗಳ ಅಧ್ಯಯನ, ಅಧ್ಯಾಪನಗಳನ್ನು (ಉಪಲಕ್ಷಣದಿಂದ ಯಜನ ಯಾಜನಾದಿಗಳನ್ನೂ), ಸ್ವಸ್ವವೃತ್ತಿಕರೀ-ತಂತಮ್ಮ ಉಪಜೀವನಕ್ಕೆ ಸಹ ಕಾರಣವಾದ, ವಿದ್ಯಾ-(ವಿಹಿತ) ವಿದ್ಯೆಯೆಂದು, ಕರ್ತವ್ಯಾನಿ-(ತಿಳಿದು) ಆಚರಿಸಬೇಕು (ಅವುಗಳೇ ಸ್ವವಿಹಿತವೃತ್ತಿಗಳೆಂದು ತಿಳಿದು ಆಚರಿಸಿ, ಶ್ರೀಹರೀಚ್ಛೆಯಿಂದ, ಅವುಗಳಿಂದ ದೊರೆತ ದ್ರವ್ಯಗಳಿಂದಲೇ ಜೀವಿತವನ್ನು

---

ವರ್ಣದ ಪುರುಷರಿಂದ ಜನಿಸುವ, ಕುಂಡಗೋಲಕರಂತೆ, ಕುಂಡತ್ವ, ಗೋಲಕತ್ವವು, ಅವರಿಗೆ (ಕುಂಡಗೋಲಕರಿಗೆ) ತಾಯಿಯಿಂದ ಯಾವ ಅಧಿಕ್ಯವನ್ನು ಹೊಂದಿಸುವುದಿಲ್ಲ (೩೪). ತಂದೆಯಂತೆ ವೇದಮಂತ್ರಗಳಿಂದ, ಉಪನಯನಾದಿ ವೇದೋಕ್ತಸಂಸ್ಕಾರಗಳಿಗೆ ಅರ್ಹರಾಗಿ, ವೇದಾಧ್ಯಯನಾದಿಗಳಿಗೆ ಅನರ್ಹರಾದವರಿಗೆ, ಉಪನಯನಕ್ಕೆ ಕಾಲನಿಯಮದ ವ್ಯವಸ್ಥೆಯಿರುವುದಿಲ್ಲ ಮತ್ತು ಅಧ್ಯಯನಾದಿಗಳಿಗೆ ಅರ್ಹರಾದವರಿಗೆ ಅನ್ವಯಿಸುವ, ಬೇರೆ, ಹೆಚ್ಚಿನ ನಿರ್ಬಂಧಗಳೂ ಸಹ ಅವರಿಗೆ ಅನ್ವಯಿಸುವುದಿಲ್ಲ (೩೫). ಬ್ರಾಹ್ಮಣರಿಗೆ ವೇದವಿಹಿತಗಳಾದ ಅಧ್ಯಯನ ಅಧ್ಯಾಪನಾದಿಗಳು (ಯಜನ ಯಾಜನಾದಿಗಳೂ) ಉಪಜೀವನಹೇತುಗಳೂ ಆಗುತ್ತವೆ; ಅಧ್ಯಾಪನಾದಿಗಳನ್ನು ಸ್ವವಿಹಿತ ಜೀವಿಕಾವೃತ್ತಿಗಳನ್ನಾಗಿ ಭಾವಿಸುವುದರಲ್ಲಿ ಯಾವ ದೋಷವೂ ಇಲ್ಲ; ವೇದೋಕ್ತಗಳಾದ ಇತರ ಕರ್ಮಾನುಷ್ಠಾನಗಳು ಬ್ರಹ್ಮಚರ್ಯಾದಿ ಆಶ್ರಮಗಳನ್ನನುಸರಿಸಿ ವಿಧಿಸಲ್ಪಟ್ಟಿರುತ್ತವೆ; ಇವುಗಳ ಆಚರಣೆಯ ವಿಷಯದಲ್ಲಿ, ಈ ಆಶ್ರಮಗಳನ್ನು ಅನುಸರಿಸಬೇಕು;

ನಡೆಸಬೇಕು—ಪರಧರ್ಮಗಳನ್ನು ಆಚರಿಸಕೂಡದು); ಅತ್ರ-ಹೀಗೆ ಮಾಡುವುದರಲ್ಲಿ ನ ದೋಷಃ-ದೋಷವಿಲ್ಲ ತಥಾ-ಮತ್ತು ವೈದಿಕಕರ್ಮಸು-ವೇದೋಕ್ತ ಕರ್ಮಗಳಲ್ಲಿ (ಕರ್ಮಾಚರಣ ವಿಷಯದಲ್ಲಿ), ಬ್ರಹ್ಮಚರ್ಯಂ-ಬ್ರಹ್ಮಚರ್ಯವು, ಗಾರ್ಹಸ್ಥ್ಯಂ-ಗೃಹಸ್ಥನಾಗುವಿಕೆ, ವಾನಪ್ರಸ್ಥಂ-ವಾನಪ್ರಸ್ಥವು, ಪರಿವ್ರಜಃ- ಯತಿಯಾಗುವಿಕೆ (ಸಂನ್ಯಾಸಸ್ವೀಕಾರ)ಗಳೆಂಬ, ಚತ್ವಾರಃ-ನಾಲ್ಕು, ಆಶ್ರಮಾಃ-ಆಶ್ರಮಗಳಿರುತ್ತವೆ (ಆಯಾ ಆಶ್ರಮದಲ್ಲಿರುವವರು ಅವುಗಳಿಗೆ ವೇದೋಕ್ತವಾದ ಕರ್ಮಗಳನ್ನು ಆಚರಿಸಬೇಕು); ಏತೇ-ಈ ನಾಲ್ಕು ಆಶ್ರಮಗಳು, ವೇದಾಧಿಕಾರಿಣಾಂ-ವೇದಾಧಿಕಾರಿಗಳಿಗೆ, ಪ್ರೋಕ್ತಾಃ ಹಿ-ಹೇಳಲ್ಪಡುತ್ತವೆಂಬುದು ಸ್ಪಷ್ಟವಿದೆ.

ಸಪಾದಾಧಿಕತಾ ಜ್ಞೇಯಾ ಗೃಹಸ್ಥಾದ್ಬ್ರಹ್ಮಚಾರಿಣಃ ।
ತಥಾ ತತೋಽಧಿಕೋ ವನ್ಯಸ್ತಥಾ ತಸ್ಮಾಚ್ಚ ನೈಷ್ಠಿಕಃ ॥ ೩೮ ॥
ಯತಿಃ ಸಾರ್ಧಾಧಿಕಸ್ತಸ್ಮಾನ್ನೈಷ್ಠಿಕಬ್ರಹ್ಮಚಾರಿಣಃ ।
ಯೇ ತೂಪನೀತ್ಯಧಿಕೃತಾ ನ ವೇದೇಷ್ವಧಿಕಾರಿಣಃ ॥ ೩೯ ॥
ಆಶ್ರಮದ್ವಿತಯಂ ತೇಷಾಮಾದ್ಯಮೇವ ಪ್ರಕೀರ್ತಿತಂ ।
ನೈಷ್ಠಿಕ್ಯಂ ಚಾಪಿ ವಾನಸ್ಥ್ಯಂ ತೇಷಾಂ ಪಾಕ್ಷಿಕಮಿಷ್ಯತೇ ॥ ೪೦ ॥
ಪಾರಿವ್ರಜ್ಯಂ ತು ನೈತೇಷಾಂ ಪ್ರಣವಾನಧಿಕಾರಿತಾ ।

ಬ್ರಹ್ಮಚಾರಿಣಃ-ಬ್ರಹ್ಮಚಾರಿಗೆ, ಗೃಹಸ್ಥಾತ್-ಗೃಹಸ್ಥನ ದೆಸೆಯಿಂದ, ಸಪಾದಾಧಿ

---

ಬ್ರಹ್ಮಚರ್ಯ, ಗಾರ್ಹಸ್ಥ್ಯ ವಾನಪ್ರಸ್ಥ ಮತ್ತು ಸಂನ್ಯಾಸ (ಪರಿವ್ರಾಜ)ಗಳೆಂದು ಆಶ್ರಮಗಳು ನಾಲ್ಕು; ಈ ನಾಲ್ಕು ಆಶ್ರಮಗಳು ವೇದಾಧಿಕಾರಿಗಳಾದ ಜಾತಿಯವರಿಗೆ ಮಾತ್ರ ಹೇಳಲ್ಪಟ್ಟಿವೆ (೩೬-೩೭). ಬ್ರಹ್ಮಚಾರಿಗಳಿಗಿಂತ ಗೃಹಸ್ಥನು ೧/೪ ಗುಣದಿಂದ ಅಧಿಕನು; ಗೃಹಸ್ಥನಗಿಂತ ವಾನಪ್ರಸ್ಥನೂ ಅಷ್ಟೇ ಗುಣಾಧಿಕನು; ಹಾಗೆಯೇ (೧/೪ ಗುಣದಿಂದಲೇ) ವಾನಪ್ರಸ್ಥನಗಿಂತ ನೈಷ್ಠಿಕ ಬ್ರಹ್ಮಚಾರಿಯು ಅಧಿಕನು (ಜನ್ಮವಿರುವವರೆಗೆ ಬ್ರಹ್ಮಚರ್ಯವನ್ನೇ ಧರಿಸಿರುವ ವ್ರತವುಳ್ಳವನು); ಈತನಗಿಂತ ಯತಿಯು ೧/೨ ಗುಣಾಧಿಕನು; ಉಪನಯನ ಸಂಸ್ಕಾರಕ್ಕೆ ಅಧಿಕಾರವಿದ್ದು ವೇದಾಧ್ಯಯನಾದಿ (ಪ್ರಣವೋಚ್ಚಾರಪೂರ್ವಕವಾದ) ವೇದೋಕ್ತ ಕರ್ಮಾನುಷ್ಠಾನಗಳಲ್ಲಿ ಅಧಿಕಾರವಿರುವುದಿಲ್ಲವೋ,[1] ಅವರಿಗೆ ಬ್ರಹ್ಮಚರ್ಯ, ಗಾರ್ಹಸ್ಥ್ಯಗಳೆಂಬ ಮೊದಲಿನ ಎರಡೇ ಆಶ್ರಮಗಳು ಉಕ್ತವಾಗಿವೆ; ಪಾಕ್ಷಿಕವಾಗಿ (ವೈರಾಗ್ಯಾದಿ ಗುಣ ಮತ್ತು ಜ್ಞಾನಲಾಲಸೆ ಇತ್ಯಾದಿ ನಿಮಿತ್ತವಾಗಿ) ನೈಷ್ಠಿಕಬ್ರಹ್ಮಚರ್ಯವೂ, ವಾನಪ್ರಸ್ಥವೂ ಉಂಟೆಂದು

---

1. ಇದೇ ಅಧ್ಯಾಯದ ೩೦-೩೧ ಶ್ಲೋಕಗಳನ್ನು ನೋಡಿರಿ.

ಕತಾ-೧/೪ ಗುಣದಿಂದ ಅಧಿಕ್ಯವು, ಜ್ಞೇಯಾ-ತಿಳಿಯತಕ್ಕದ್ದು[1] ತಥಾ-ಮತ್ತು ವನ್ಯಃ-ವಾನಪ್ರಸ್ಥನು, ತತಃ-ಗೃಹಸ್ಥನಿಂದ, (ತಥಾ-ಹಾಗೆಯೇ, ಅಷ್ಟು ಪ್ರಮಾಣ ದಿಂದಲೇ, ೧/೪ ಗುಣದಿಂದಲೇ), ಅಧಿಕಃ-ಅಧಿಕನು; ತಸ್ಮಾತ್-ವಾನಪ್ರಸ್ಥನಿಂದ, ತಥಾ-ಅದೇ ಪ್ರಮಾಣದಲ್ಲಿ ನೈಷ್ಠಿಕಃ-ನೈಷ್ಠಿಕ ಬ್ರಹ್ಮಚಾರಿಯು (ಅಧಿಕನು); ತಸ್ಮಾತ್ ನೈಷ್ಠಿಕ ಬ್ರಹ್ಮಚಾರಿಣಃ-ಆ ನೈಷ್ಠಿಕ ಬ್ರಹ್ಮಚಾರಿಯ ದೆಸೆಯಿಂದ, ಯತಿಃ-ಯತಿಯು (ಸನ್ಯಾಸಿಯು), ಅರ್ಧಾಧಿಕಃ-೧/೨ ಗುಣದಿಂದ ಅಧಿಕನು (ಅರ್ಧದಿಂದ ಸಹಿತವಾದ ಆಧಿಕ್ಯವುಳ್ಳವನು); ಯೇತು - ಯಾರು, ಉಪನೀತ್ಯಧಿಕತಾ - ಉಪನಯನ ಸಂಸ್ಕಾರಕ್ಕೆ ಅರ್ಹರೋ (ಅಧಿಕಾರವುಳ್ಳವರೋ), (ಆದರೆ) ವೇದೇಷು - ವೇದಾಧ್ಯಯನಾದಿ ಕರ್ಮಗಳಲ್ಲಿ ನ ಅಧಿಕಾರಿಣಃ-ಅಧಿಕಾರಿಗಳಲ್ಲವೋ, ತೇಷಾಂ- ಅವರಿಗೆ, ಆದ್ಯಂ-ಮೊದಲಿನ, ಆಶ್ರಮದ್ವಿತಯಂ ಏವ-ಎರಡು ಆಶ್ರಮಗಳು (ಬ್ರಹ್ಮಚರ್ಯ ಮತ್ತು ಗಾರ್ಹಸ್ಥ್ಯಗಳು) ಮಾತ್ರವೇ, ಪ್ರಕೀರ್ತಿತಂ-ಹೇಳಲಾಗಿದೆ; ನೈಷ್ಠಿಕಂ-ನೈಷ್ಠಿಕ ಬ್ರಹ್ಮಚರ್ಯವೂ, ಅಪಿ ಚ-ಮತ್ತು ವಾನಸ್ಥ್ಯಂ-ವಾನಪ್ರಸ್ಥವೂ, ತೇಷಾಂ-ಅವರಿಗೆ, ಪಾಕ್ಷಿಕಂ-ಒಂದು ಪಕ್ಷದಲ್ಲಿ ಆಗಬಹುದೆಂದು, ಇಷ್ಯತೇ- ಹೇಳಲ್ಪಡುತ್ತದೆ; ಏತೇಷಾಂ-ಅವರಿಗೆ, ಪಾರಿವ್ರಜ್ಯಂ-ಯತ್ಯಾಶ್ರಮವು, ನ-ಇಲ್ಲ (ಯತ್ಯಾಶ್ರಮಕ್ಕೆ ಅಧಿ ಕಾರವಿಲ್ಲ); (ಮತ್ತು) ಪ್ರಣವಾನಧಿಕಾರಿತಾ-ಪ್ರಣವೋಚ್ಚಾರದಲ್ಲಿ ಅಧಿಕಾರವೂ ಇಲ್ಲ.

**ಯೇ ನೋಪನೀತ್ಯಧಿಕೃತಾ ತಥಾ ಸಂಕರಜಾತಯಃ ॥ ೪೧ ॥**
**ಗಾರ್ಹಸ್ಥ್ಯಮೇವ ತೇಷಾಂ ಸ್ಯಾನ್ನಾಮಜಾಪ್ಯೇಧಿಕಾರಿತಾ ।**

ಯೇ-ಯಾರು, ಉಪನೀತ್ಯಧಿಕೃತಾ ನ-ಉಪನಯನ ಸಂಸ್ಕಾರಕ್ಕೆ ಅಧಿ ಕಾರವಿಲ್ಲದವರೋ, (ಅವರು) ತಥಾ-ಮತ್ತು ಸಂಕರಜಾತಯಃ-ಸಂಕರಜಾತಿ ಯವರೋ, ತೇಷಾಂ-ಅವರಿಗೆ, ಗಾರ್ಹಸ್ಥ್ಯಮೇವ-ಗೃಹಸ್ಥಾಶ್ರಮ ಮಾತ್ರವೇ,

---

ಹೇಳಲಾಗುತ್ತದೆ—ಆದರೆ ಯತ್ಯಾಶ್ರಮವು ಅವರಿಗೆ ಇಲ್ಲವೇ ಇಲ್ಲ; ಪ್ರಣವಾಧಿಕಾರ ವಂತೂ ದೂರವೇ ಉಳಿಯಿತು. (೩೮-೪೦). ಇನ್ನು ಉಪನಯನ ಸಂಸ್ಕಾರಕ್ಕೂ ಅರ್ಹರಲ್ಲದವರು ಮತ್ತು ಸಂಕರಜಾತಿಯವರಿಗೆ, ಕೇವಲ ಗೃಹಸ್ಥಾಶ್ರಮದಲ್ಲಿ ಮಾತ್ರ ಅಧಿಕಾರವುಂಟು, ಮತ್ತು ಶ್ರೀವಿಷ್ಣುವಿನ ಗುರೂಪದಿಷ್ಟನಾಮಗಳನ್ನು ಜಪಿಸುವುದ ರಲ್ಲಿಯೂ ಅಧಿಕಾರವುಂಟು (೪೧). ವೇದೋಕ್ತ ಉಪನಯನ ಸಂಸ್ಕಾರದಲ್ಲಿ ಅಧಿ ಕೃತರಾದವರು 'ದ್ವಿಜ'ರೆಂದು ವೇದಗಳಲ್ಲಿ ಪ್ರಸಿದ್ಧರಾಗಿರುವರು; ಅವರಿಗೆ

1. ಬ್ರಹ್ಮಚಾರಿಗೆ ಗೃಹಸ್ಥನಿಂದ ಆಧಿಕ್ಯವು ಯಾವ ವಿವಕ್ಷೆಯಿಂದ, ಎಂಬುದು ಇಲ್ಲಿ ಸ್ಪಷ್ಟ ವಾಗಿಲ್ಲ—ಮುಂದೆಯೂ ಇದರ ವಿವರಣೆಯಿರುವುದಿಲ್ಲ; 'ಗೃಹಸ್ಥಾತ್'-ಎಂಬುದಕ್ಕೆ ಷಷ್ಠೀ ವಿಭಕ್ತ್ಯರ್ಥವನ್ನು ತಿಳಿದು, 'ಬ್ರಹ್ಮಚಾರಿಣಃ' ಎಂಬುದಕ್ಕೆ ಪಂಚಮ್ಯರ್ಥವನ್ನಿಟ್ಟುಕೊಂಡು, ಬ್ರಹ್ಮಚಾರಿ ಗಿಂತ ಗೃಹಸ್ಥನಿಗೆ ಆಧಿಕ್ಯವನ್ನು ತಿಳಿಯಬೇಕೆಂಬ ಅರ್ಥವನ್ನು ಗ್ರಹಿಸುವುದು ಉಚಿತವಾಗಬಹುದು.

ಸ್ಯಾತ್-ಆಗುತ್ತದೆ (ಅನ್ಯಾಶ್ರಮಗಳಿಗೆ ಅಧಿಕಾರವಿರುವುದಿಲ್ಲ); ನಾಮಜಾಪ್ಯೇ-ನಾಮವನ್ನು (ಶ್ರೀವಿಷ್ಣುವಿನ ನಾಮಗಳನ್ನು ಉಪದೇಶಗೊಂಡು) ಜಪಿಸುವುದರಲ್ಲಿ ಅಧಿಕಾರಿತಾ-ಅಧಿಕಾರವು (ಸ್ಯಾತ್-ಇರುತ್ತದೆ).

**ವೈದಿಕಾ ಉಪನೀತಾ ಸ್ಯುಃ ದ್ವಿಜಾ ಇತಿ ಹಿ ಕೀರ್ತಿತಾಃ ॥ ೪೨ ॥**
**ಮಾತೃತಃ ಪ್ರಥಮಂ ಜನ್ಮ ಗಾಯತ್ರ್ಯಾಶ್ಚ ದ್ವಿತೀಯಕಂ ।**
**ಅತೋ ದ್ವಿಜತ್ವಮೇತೇಷಾಂ ತೇ ಹಿ ವೇದಾಧಿಕಾರಿಣಃ ॥ ೪೩ ॥**

ದ್ವಿಜರೆಂಬ ನಾಮವು ತ್ರಿವರ್ಣದವರಿಗೆ ಸಾರ್ಥಕವೆನ್ನುತ್ತಾರೆ—

ಉಪನೀತಾಃ-ಉಪನಯನ ಸಂಸ್ಕಾರವನ್ನು ಹೊಂದಿದ, ವೈದಿಕಾಃ-ವೇದಾಧಿಕಾರಿಗಳು, ಸ್ಯುಃ-ಆಗಿರುವರು; ದ್ವಿಜಾಃ ಇತಿ-ದ್ವಿಜರೆಂದು, ಕೀರ್ತಿತಾಃ ಹಿ-(ವೇದಗಳಲ್ಲಿ) ಹೇಳಲ್ಪಟ್ಟಿರುವರು (ಪ್ರಸಿದ್ಧರಾಗಿರುವರು); (ದ್ವಿಜತ್ವವು ಹೇಗೆಂದರೆ), ಪ್ರಥಮಂ ಜನ್ಮ-ಮೊದಲನೆಯ ಜನ್ಮವು (ಉತ್ಪತ್ತಿಯು), ಮಾತೃತಃ-ತಾಯಿಯಿಂದ (ಆದುದು); ದ್ವಿತೀಯಕಂ ಜನ್ಮ-ಎರಡನೆಯ ಜನ್ಮವು, ಗಾಯತ್ರ್ಯಾಃ ಚ-ಗಾಯತ್ರೀ ದೇವಿಯ ಅನುಗ್ರಹರೂಪವಾದುದೇ (ಗಾಯತ್ರೀ ಮಂತ್ರೋಪದೇಶವಾದೊಡನೆ, ಉಪನೀತನಿಗೆ ಎರಡನೆಯ ಜನ್ಮವು); ಅತಃ-ಈ ಕಾರಣದಿಂದ, ವೇದಾಧಿಕಾರಿಣಾಂ-ವೇದಾಧಿಕಾರಿಗಳಾದ, ಏತೇಷಾಂ-ಇವರಿಗೆ (ತ್ರಿವರ್ಣದವರಿಗೆ), ದ್ವಿಜತ್ವಂ-ದ್ವಿಜತ್ವವು (ಅನ್ವರ್ಥಕನಾಮವು)

**ಯೇ ತೂಪನೀತಿಹೀನಾಸ್ತೇ ವಿಜ್ಞೇಯಾ ಏಕಜಾತಯಃ ।**
**ಯೇ ತು ಪೌರಾಣಿಕೈರ್ಮಂತ್ರೈರುಪನೀತಾ ಕಥಂಚನ ॥ ೪೪ ॥**
**ತೇ ಮಿಶ್ರಾ ಇತಿ ವಿಜ್ಞೇಯಾಃ ಪುರಾಣಾಗಮವೇದಿನಃ ।**

ಉಪನಯನಾಧಿಕಾರವಿಲ್ಲದ ಮತ್ತು ವೇದಮಂತ್ರಗಳಿಂದಲ್ಲದೇ ಸ್ಮೃತಿ ಮಂತ್ರಗಳಿಂದ ಉಪನೀತರಾಗುವ ಜನರ ಸ್ಥಾನ ಮತ್ತು ಅಧಿಕಾರಗಳನ್ನು ನಿರೂಪಿಸುತ್ತಾರೆ—

ಯೇ ತು-ಯಾವ ಜನರು, ಉಪನೀತಿಹೀನಾಃ-ಉಪನಯನ ಸಂಸ್ಕಾರಕ್ಕೆ ಅರ್ಹರೇ ಅಲ್ಲವೋ, ತೇ-ಅವರೆಲ್ಲರೂ, ಏಕಜಾತಯಃ-ಒಂದು ಜಾತಿಯವರೆಂದು

---

ಎರಡಾವರ್ತಿ ಜನ್ಮವಿರುವುದರಿಂದ ಅವರು ದ್ವಿಜರೆಂದು ಅನ್ವರ್ಥನಾಮವುಳ್ಳವರು; ಮೊದಲ ಜನ್ಮವು ತಾಯಿಯ ಪ್ರಸವದಿಂದ; ಗಾಯತ್ರೀ ಉಪದೇಶದಿಂದ (ಗಾಯತ್ರೀ ಅನುಗ್ರಹದ ಆರಂಭದಿಂದ) ಎರಡನೆ ಜನ್ಮವು (೪೨-೪೩). ಉಪಯನ ಸಂಸ್ಕಾರಕ್ಕೆ ಅನರ್ಹರಾದವರೆಲ್ಲ, ಒಂದು ವಿವಕ್ಷೆಯಿಂದ (ವಿವಿಧ ಜಾತಿಗಳವರಾದರೂ) ಏಕಜಾತೀಯರೆಂದು, ಕರೆಯಲ್ಪಡುತ್ತಾರೆ; ಮತ್ತೆ ಕೆಲವರು ವೇದ ಮಂತ್ರಗಳಿಂದಲ್ಲದೇ,

(ಅವರಲ್ಲಿ ಜಾತಿವೈವಿಧ್ಯವಿದ್ದಾಗ್ಯೂ, ಒಂದು ವಿವಕ್ಷೆಯಿಂದ), ವಿಜ್ಞೇಯಾಃ-ತಿಳಿಯಲ್ಪಡತಕ್ಕವರು; ಯೇ ತು-ಯಾರಾದರೋ, ಕಥಂಚನ-ಹೇಗೂ (ಕಾರಣಾಂತರಗಳಿಂದ—ಪ್ರಕಾರಾಂತರದಿಂದ) ಪೌರಾಣಿಕೈಃ ಮಂತ್ರೈಃ-ಪುರಾಣೋಕ್ತ (ಸ್ಮೃತ್ಯುಕ್ತ) ಮಂತ್ರಗಳಿಂದ, ಉಪನೀತಾಃ-ಉಪನಯನವನ್ನು ಮಾಡಿಕೊಳ್ಳಲರ್ಹರೋ, ತೇ-ಅವರೆಲ್ಲರೂ, ಮಿಶ್ರಾ-'ಮಿಶ್ರ'ರೆನಿಸುವರು; ಪುರಾಣಗಮವೇದಿನಃ-ಪುರಾಣಗಳು ಮತ್ತು ಆಗಮಗಳನ್ನು ತಿಳಿಯುವ (ವೇದಗಳಲ್ಲಿ ಅನಧಿಕಾರಿಗಳಾದ) ಅಧಿಕಾರಿಗಳು, ಇತಿ-ಎಂದು, ವಿಜ್ಞೇಯಾಃ- ತಿಳಿಯಲ್ಪಡತಕ್ಕವರು.

ಏಕಾಜಾತಿಷು ಶೂದ್ರೋನಃ ಸಹಸ್ರಂ ಯಾವದಂಶಕಃ ॥ ೪೫ ॥
ಇತಿಹಾಸಪುರಾಣೇಷು ಸ್ಮೃತಿಷ್ವಾಗಮನೇಷು ಚ ।
ವಿಪ್ರಾಚ್ಛ್ರವಣಮಾತ್ರೇ ಸ್ಯಾದಧಿಕಾರೋ ನ ಚಾನ್ಯಥಾ ॥ ೪೬ ॥

ಏಕಜಾತಿ ಮತ್ತು ಮಿಶ್ರರೆಂಬ ಪೂರ್ವೋಕ್ತ ಜನರಿಂದ ಕೆಳಗಿನವರುರ ಸಾಧಕರ ಅಧಿಕಾರವನ್ನು ನಿರೂಪಿಸುತ್ತಾರೆ—

ಏಕಜಾತಿಷು-ಏಕಜಾತಿಯವರೆಂಬುವವರಲ್ಲಿ, ಸಹಸ್ರಂ ಯಾವದಂಶಕಃ- ೧೦೦೦ ಅಂಶಗಳಿಂದ ಹೀನನಾದ, ಶೂದ್ರೋನಃ-ಶೂದ್ರನಕಿಂತ ಹೀನನಾದವನು, ಇತಿಹಾಸ ಪುರಾಣೇಷು-ಇತಿಹಾಸ ಪುರಾಣಗಳಲ್ಲಿಯೂ (ಇತಿಹಾಸಶಬ್ದವು ಭಾರತ ರಾಮಾಯಣಗಳನ್ನು ಹೇಳುತ್ತದೆ; ರಾಮಾಯಣವನ್ನು ಪ್ರತ್ಯೇಕವಾಗಿ ಹೇಳಿರುವಲ್ಲಿ ಭಾರತಮಾತ್ರವನ್ನು ತಿಳಿಸುತ್ತದೆಂಬ ನಿಯಮವಿದೆ); ಸ್ಮೃತಿಷು-ಧರ್ಮಶಾಸ್ತ್ರಗಳಲ್ಲಿಯೂ, ಆಗಮನೇಷು ಚ-ಪಾಶುಪತಾದಿ ವಿವಿಧ (ಸ್ವಯೋಗ್ಯ) ಆಗಮಗಳಲ್ಲಿಯೂ, ವಿಪ್ರಾತ್-ಬ್ರಾಹ್ಮಣನಿಂದ, ಶ್ರವಣಮಾತ್ರೇ-ಶ್ರವಣ ಮಾಡುವುದರಲ್ಲಿ ಮಾತ್ರ (ಆದರಿಂದಲೇ ಜ್ಞಾನ ಭಕ್ತಿಗಳ ವೃದ್ಧಿಯನ್ನು ಸಾಧಿಸಿಕೊಳ್ಳುವುದಕ್ಕೆ ಮಾತ್ರ), ಅಧಿಕಾರಃ-ಅರ್ಹತೆಯು, ಸ್ಯಾತ್-ಇರುತ್ತದೆ; ಅನ್ಯಥಾ ನ ಚ-ಬೇರೆ ಪ್ರಕಾರದ ಅಧಿಕಾರವಿಲ್ಲವೇ ಇಲ್ಲ.

ಅಥ ಯೇ ಸ್ಯುಸ್ತತೋ ನ್ಯೂನಾಸ್ತೇಷಾಂ ಮಾನುಷನಿರ್ಮಿತೇ ।
ಕಥಾಗಾಥಾಪದ್ಯಕಾದೌ ಭಗವನ್ಮಹಿಮಾಂಕಿತೇ ॥ ೪೭ ॥

---

ಪೌರಾಣಿಕ ಮಂತ್ರಗಳಿಂದ ಉಪನಯನ ಮಾಡಿಕೊಳ್ಳಲು ಅರ್ಹರಾಗಿರುತ್ತಾರೆ;[1] ಅಂಥವರು 'ಮಿಶ್ರ'ರೆಂದು ಕರೆಯಲ್ಪಡುವರು; ಪುರಾಣಗಳು ಮತ್ತು ಆಗಮಗಳನ್ನು (ಅಧ್ಯಯನಮಾಡಿ) ಜ್ಞಾನಸಂಪಾದನೆ ಮಾಡಲು, ಈ ಉಭಯರಿಗೆ (ಏಕಜಾತಿ ಮತ್ತು ಮಿಶ್ರರೆಂಬುವರಿಗೆ) ಅಧಿಕಾರವಿರುತ್ತದೆ (೪೪). ಏಕಜಾತಿಯವರಲ್ಲಿ ಶೂದ್ರನೂ ಮತ್ತು

1. ಈ ಅಧ್ಯಾಯದ ೧೯-೨೦ನೇ ಶ್ಲೋಕಗಳನ್ನು ನೋಡಿರಿ.

**ಜ್ಞೇಯಾ ಅಧಿಕೃತಾಸ್ತೇಷಾಂ ಸುಕೃತಂ ತತ ಏವ ಹಿ ।**

ಅಥ-ನಂತರದಲ್ಲಿ, ಯೇ-ಯಾರು, ತತಃ-ಅದಕ್ಕಿಂತ, ನ್ಯೂನಾಃ ನ್ಯೂಃ-ಕೆಳಗಿನವರೋ (ಶೂದ್ರನಿಗಿಂತ ೧೦೦೦೦ ಅಂಶಗಳಿಗೂ ಅಧಿಕವಾಗಿ ಹೀನರೋ), ತೇಷಾಂ-ಅವರಿಗೆ, ಮಾನುಷನಿರ್ಮಿತೇ-ಮನುಷ್ಯರಿಂದ ರಚಿತವಾದ, ಭಗವನ್ಮಹಿಮಾಂಕಿತೇ-ಶ್ರೀವಿಷ್ಣುಮಹಿಮೆಗಳಿಂದ ಅಂಕಿತವಾದ (ಮಹಿಮೆಗಳೇ ಲಕ್ಷಣವಾಗಿ ಉಳ್ಳ), ಕಥಾ ಗಾಥಾ ಪದ್ಯಕಾದೌ-ಕಥಾ, ಗಥಾ, ಪದ್ಯ ಮೊದಲಾದವುಗಳಲ್ಲಿ (ಅಧಿಕಾರವು ಇರುತ್ತದೆ); ಅಧಿಕೃತಾಃ-ಅಧಿಕಾರವುಳ್ಳವರೆಂದು, ಜ್ಞೇಯಾಃ-ತಿಳಿಯಲ್ಪಡಬೇಕು; (ತೇಷಾಂ-ಅವರಿಗೆ), ತತಃ ಏವ-ಅದರಿಂದಲೇ (ಆ ಕಥಾ ಗಾಥಾ ಪದ್ಯಗಳಿಂದಲೇ), ಸುಕೃತಂ ಹಿ-ಪುಣ್ಯಪ್ರಾಪ್ತಿಯು (ಜ್ಞಾನೋದಯಕ್ಕೆ ಸಾಧನವಾದ ಪುಣ್ಯವು) ಎಂದು ಶಾಸ್ತ್ರಸಿದ್ಧವು.

**ವೇದಸ್ವಾಧ್ಯಯನಂ ಯಾಗೋ ದ್ವಿಜಾನಾಂ ಧರ್ಮ ಈರಿತಃ ॥ ೪೮ ॥**
**ದಾನಂ ಹಿ ಸರ್ವಜಾತೀನಾಂ ಹರೇರ್ನಾಮ್ನಾಂ ಚ ಕೀರ್ತನಂ ।**
**ಸ್ನಾನಂ ನಮಸ್ಕೃತಿರ್ಯಾತ್ರಾ ದಯಾಸ್ತೇಯಂ ಪ್ರದಕ್ಷಿಣಾಃ ॥ ೪೯ ॥**

---

ಶೂದ್ರನಿಂದ, ೧೦೦೦೦ ಅಂಶಗಳಿಂದ ನ್ಯೂನರಾಗುವವರೆಗಿನವರು.[1] ಇತಿಹಾಸ (ಭಾರತ ರಾಮಾಯಣ) ಪುರಾಣ, ಸ್ಮೃತಿ ಮತ್ತು ಆಗಮಗಳಲ್ಲಿ (ಅವುಗಳನ್ನು ತಿಳಿಯುವುದರಲ್ಲಿ) ಅಧಿಕಾರವಿದ್ದರೂ, ವಿಪ್ರರಿಂದ ಶ್ರವಣಮಾಡಲಿಕ್ಕೆ ಮಾತ್ರ (ಗ್ರಂಥವನ್ನಿಟ್ಟುಕೊಂಡು ಅಧ್ಯಯನಾದಿಗಳನ್ನು ಮಾಡುವುದನ್ನು ಬಿಟ್ಟು) ಅರ್ಹರಾಗುತ್ತಾರೆ; ಹೆಚ್ಚಿನ ಅಧಿಕಾರವಿಲ್ಲ (೪೫-೪೬). ಇವರಿಗಿಂತ ಹೀನರಾದ, ಕೆಳಗಿನ ವರ್ಗಗಳ ಜನರಿಗೆ, ಮನುಷ್ಯ ವಿರಚಿತವಾದ (ಪ್ರಾಯಃ ಪ್ರಾಕೃತಭಾಷೆಗಳಲ್ಲಿರುವ), ಶ್ರೀಹರಿಯ ಮತ್ತು ಹರಿಭಕ್ತರ

---

1. ವರ್ಣಗಳಲ್ಲಿ ಅಂಶಾಧಿಕ್ಯ ನ್ಯೂನತೆಗಳನ್ನು ಇದೇ ಅಧ್ಯಾಯದ ೩ನೇ ಶ್ಲೋಕದಿಂದ ಸೂಚಿತವಾದ ಪ್ರಕಾರದಿಂದ ಎಣಿಕೆಮಾಡಿ ತಿಳಿಯಬೇಕು; ೨೧-೨೩ನೇ ಶ್ಲೋಕ ತಾತ್ಪರ್ಯದ ಟಿಪ್ಪಣಿಯನ್ನೂ ನೋಡಬಹುದು; ಬ್ರಾಹ್ಮಣಾದಿ ಶೂದ್ರಪರ್ಯಂತವಾದ ಜ್ಞಾನಿಗಳ ಅಂಶತಃ ನ್ಯೂನತೆಗಳನ್ನೂ ಅನುಲೋಮ ಪ್ರತಿಲೋಮಗಳ ಮಾತಾಪಿತೃಗಳ ವಿವಕ್ಷೆಯಿಂದ, ಅಧಿಕ್ಯ ನ್ಯೂನತೆಗಳನ್ನೂ ಈ ಹಿಂದೆ ನಿರೂಪಿಸಲಾಗಿದ್ದರೂ ಅದಕ್ಕೂ ಕೆಳಗಿನ, ಸಂಕರಜಾತಿಗಳ (ಅಂಶಗಳ) ಹೀನತೆಯನ್ನು ಗಣನೆಯಿಂದ ತಿಳಿಯುವುದು ದುಸ್ಸಾಧ್ಯವೇ ಸರಿ. ಆದರೂ, ಆ ಕೀಳುಜಾತಿಗಳ ಅಧಿಕಾರಗಳನ್ನು ನಿರ್ಣಯಿಸಿ ತಿಳಿಹೇಳುವ ದೊಡ್ಡ ಜವಾಬ್ದಾರಿಯು ವಿಪ್ರರ ಮೇಲಿರುವುದರಿಂದ, ಯಥಾಶಕ್ತಿ ಅಂಶಗಳ ನ್ಯೂನಾಧಿಕ್ಯಗಳನ್ನು ತಿಳಿದು ಶ್ರೀಹರಿಯನ್ನೇ ಸ್ಮರಿಸಿ, ಆ ಜಾತಿಯವರನ್ನು ಸನ್ಮಾರ್ಗದಲ್ಲಿಡುವ ಯತ್ನವನ್ನು ಮಾಡಲೇಬೇಕು. (ತಾತ್ಕಾಲಿಕ ಪರಿಸ್ಥಿತಿಗಳಲ್ಲಿ ಈ ವಿಷಯವನ್ನು ಕುರಿತು, ಪ್ರಶ್ನಿಸುವವರೂ ಇಲ್ಲ—ನಿರ್ಣಯವನ್ನು ಹೇಳುವವರೂ ಇಲ್ಲ—ಧರ್ಮದೃಷ್ಟಿಯಿಂದ ಇದು ಅತ್ಯಂತ ಶೋಚನೀಯ).

ದ್ವಿಜಾನಾಂ-ದ್ವಿಜರಿಗೆ, ವೇದಸ್ಯ-ವೇದದ, ಅಧ್ಯಯನಂ-ಅಧ್ಯಯನವೂ, ಯಾಗಃ-ಯಾಗವೂ, ಧರ್ಮಃ-ಧರ್ಮವು (ಅವಶ್ಯ ಕರ್ತವ್ಯ ಕರ್ಮವು); ಈರಿತಃ-(ಎಂದು) ಹೇಳಲ್ಪಡುತ್ತದೆ; ದಾನಂ-(ಧರ್ಮಾರ್ಜಿತ ದ್ರವ್ಯವನ್ನು ಸತ್ಪಾತ್ರನಲ್ಲಿ) ಕೊಡುವುದು, ಹರೇಃ-ಶ್ರೀಹರಿಯ, ನಾಮ್ನಾಂ-ನಾಮಗಳ, ಕೀರ್ತನಂ- ಕೀರ್ತಿಸುವುದು, ಸ್ನಾನಂ-(ಹರಿಸ್ಮರಣಪೂರ್ವಕ) ಸ್ನಾನವು, ನಮಸ್ಕೃತಿಃ-(ಶ್ರೀಹರಿಯನ್ನು) ನಮಸ್ಕರಿಸುವುದು, ಯಾತ್ರಾ-(ಪುಣ್ಯತೀರ್ಥ ಕ್ಷೇತ್ರಗಳಿಗೆ) ಹೋಗುವುದು, ದಯಾ-(ಪ್ರಾಣಿ ಮಾತ್ರದಲ್ಲಿ) ದಯಾವಂತನಾಗಿರುವುದು, ಅಸ್ತೇಯಂ-ಸ್ತೇಯ (ಕಳವು) ಮಾಡದಿರುವುದು (ಶ್ರೀಹರಿಗುಣಗಳನ್ನು ಕದಿಯದಿರುವುದು); ಪ್ರದಕ್ಷಿಣಾಃ-(ಹರಿಮೂರ್ತಿಗಳ) ಪ್ರದಕ್ಷಿಣೆಗಳನ್ನು ಮಾಡುವುದು; ಸರ್ವ ಜಾತೀನಾಂ-ಸಮಸ್ತ (ಉಚ್ಚ ನೀಚಗಳೆಂಬ) ಸರ್ವ ಜಾತಿಗಳಿಗೂ, (ಧರ್ಮಃ ಈರಿತಃ-ಧರ್ಮವೆಂದು ಹೇಳಲಾಗುತ್ತದೆ).

**ಸ್ವಭರ್ತೃನಿಯತಿಃ ಸ್ತ್ರೀಣಾಂ ಸ್ವದಾರನಿಯತಿರ್ನೃಣಾಂ ।**
**ಏತೇ ಪ್ರಾಯೇಣ ಸಂಪ್ರೋಕ್ತಾ ಧರ್ಮಾಃ ಸಾಧಾರಣಾ ಇತಿ ॥ ೫೦ ॥**

ಸ್ತ್ರೀಣಾಂ-ಸ್ತ್ರೀಯರಿಗೆ, ಸ್ವಭರ್ತೃನಿಯತಿಃ-ತಮ್ಮ ಪತಿಗಳನ್ನನುಸರಿಸುವ ನಿಯಮವೂ-(ಪರಪುರುಷಸಂಗರಾಹಿತ್ಯವೂ), ನೃಣಾಂ-ಪುರುಷರಿಗೆ, ಸ್ವದಾರ ನಿಯತಿಃ-ಸ್ವಪತ್ನಿಯರ ಸಂಗ ಮಾತ್ರವೆಂಬ ನಿಯಮ (ಪರಸ್ತ್ರೀ ಸಂಗರಾಹಿತ್ಯವೂ).[1] (ಸಹ, ಹಿಂದೆ ಹೇಳಿದ ಧರ್ಮಗಳೊಂದಿಗೆ), ಏತೇ-ಇವುಗಳೂ ಸಹ, ಪ್ರಾಯೇಣ-ಬಹುವಾಗಿ, ಸಾಧಾರಣಾಃ ಧರ್ಮಾಃ-ಸರ್ವರಿಗೂ ಅನ್ವಯಿಸುವ (ಸರ್ವಸಾಮಾನ್ಯ) ಧರ್ಮಗಳು, ಇತಿ-ಎಂದು, ಸಂಪ್ರೋಕ್ತಾಃ-ಹೇಳಲ್ಪಟ್ಟಿರುತ್ತವೆ.

---

ಕಥೆಗಳು, ಗಾಥಾಗಳು (ಗಾನಯೋಗ್ಯ ಕವನಗಳು—ಹಾಡುಗಳು), ಪದ್ಯಗಳಲ್ಲಿ ಮಾತ್ರ ಅಧಿಕಾರವಿರುತ್ತದೆ; ಅವುಗಳಿಂದಲೇ (ಜ್ಞಾನ ಭಕ್ತಿಗಳ ವೃದ್ಧಿಗಳಿಗೆ ಹೇತುವಾಗುವ) ಪುಣ್ಯವನ್ನು ಹೊಂದುವರು (೪೭). ಬ್ರಾಹ್ಮಣ, ಕ್ಷತ್ರಿಯ, ವೈಶ್ಯವರ್ಣದವರಿಗೆ ಮಾತ್ರ, ವೇದಾಧ್ಯಯನ, ಯಜ್ಞಾಚರಣೆಗಳು ಧರ್ಮಗಳೆನಿಸುತ್ತವೆ; ಇತರ ಸಮಸ್ತ ಜಾತಿಗಳಿಗೂ, ಉಚ್ಚ ನೀಚಗಳೆಂಬ ಯಾವ ಭೇದವೂ ಇಲ್ಲದೆ, ಸತ್ಪಾತ್ರರಲ್ಲಿ ದಾನ, ಶ್ರೀಹರಿನಾಮಸಂಕೀರ್ತನ, ಸ್ನಾನ, ನಮಸ್ಕಾರ, ಪ್ರದಕ್ಷಿಣೆಗಳು, ತೀರ್ಥಯಾತ್ರೆ, ಪ್ರಾಣಿದಯಾ, ಅಸ್ತೇಯಾ (ಕದಿಯದಿರುವುದು) ಮೊದಲಾದವುಗಳು ಧರ್ಮಗಳು (ಜ್ಞಾನ ಭಕ್ತಿ ವೃದ್ಧಿಸಾಧಕ ಪುಣ್ಯವನ್ನು ದೊರಕಿಸುವ ಕರ್ಮಗಳು) (೪೮-೪೯).

1. ಸಂಗವೆಂದರೆ ದೇಹಸಂಬಂಧಮಾತ್ರವಲ್ಲ—ತ್ರಿಕರಣಗಳ ಸರ್ವವೃತ್ತಿಗಳಿಂದಲೂ, ಅಸಂಗವನ್ನು ಹೊಂದಿರುವುದು; ಸ್ತ್ರೀಪುರುಷರು ಅನ್ಯಪುರುಷ ಸ್ತ್ರೀಯರಲ್ಲಿ ಸರ್ವವಿಧದ ಆಸಕ್ತಿಯನ್ನು ವರ್ಜಿಸುವುದು.

**ಪ್ರತಿಗ್ರಹೋऽಧ್ಯಾಪನಂ ಚ ಯಾಜನಂ ದೂತ್ಯಮೇವ ಚ ।**
**ವಿಪ್ರಾಣಾಂ ಜೀವಿಕಾ ತತ್ರ ದೂತ್ಯಂ ಪಾಕ್ಷಿಕಮಿಷ್ಯತೇ ॥ ೫೦ ॥**

ಪ್ರತಿಗ್ರಹಃ- ದಾನಸ್ವೀಕಾರವು, ಅಧ್ಯಾಪನಂ- ಅನ್ಯರಿಗೆ ವೇದಾಧ್ಯಯನ ಮಾಡಿಸುವುದು, ಯಾಜನಂ- ಯಜ್ಞಗಳನ್ನು ಮಾಡಿಸುವುದು, ಚ- ಮತ್ತು, ದೂತ್ಯಂ ಏವ ಚ- ದೂತನಾಗಿ ದುಡಿಯುವುದು (ರಾಯಭಾರಿ ಮೊದಲಾದ ಕೆಲಸಗಳು), (ಇವು) ವಿಪ್ರಾಣಾಂ- ಬ್ರಾಹ್ಮಣರಿಗೆ, ಜೀವಿಕಾಃ- ಜೀವಿಕಾಮಾರ್ಗಗಳೆಂದು ಹೇಳಲಾಗಿವೆ; ತತ್ರ- ಇವುಗಳಲ್ಲಿ, ದೂತ್ಯಂ- ದೂತನಾಗುವಿಕೆಯು, ಪಾಕ್ಷಿಕಂ ಇಷ್ಯತೇ- ಅನಿರ್ವಾಹ ಪಕ್ಷದಲ್ಲಿ ಮಾತ್ರ ಕೈಗೊಳ್ಳಲು ಅರ್ಹವಾದುದೆಂದು ಹೇಳಲಾಗಿದೆ.

**ಪ್ರತಿಗ್ರಹಾದೌ ನಾನ್ಯೇಷಾಮಧಿಕಾರಸ್ತ್ರಿಕೇ ಕ್ವಚಿತ್ ।**
**ವಿಪ್ರಕ್ಷತ್ರಿಯಮಧ್ಯಸ್ಥಾಃ ಕಥಂಚಿದಧಿಕಾರಿಣಃ ॥ ೫೨ ॥**

ಪ್ರತಿಗ್ರಹಾದೌ ತ್ರಿಕೇ- ಅಧ್ಯಾಪನ, ಯಾಜನ, ಪ್ರತಿಗ್ರಹಗಳೆಂಬ ಮೂರರಲ್ಲಿ ಅನ್ಯೇಷಾಂ- ಇತರ ಜಾತಿಯವರಿಗೆ, ಕ್ವಚಿತ್- ಸ್ವಲ್ಪವೂ (ಎಲ್ಲಿಯೂ), ಅಧಿಕಾರಃ- ಅಧಿಕಾರವು, ನ- ಇರುವುದಿಲ್ಲ ಕಥಂಚಿತ್- ಒಂದೊಂದು ವಿಶೇಷ ಸಂದರ್ಭಗಳಲ್ಲಿ ವಿಪ್ರ ಕ್ಷತ್ರಿಯ ಮಧ್ಯಸ್ಥಾಃ- ಬ್ರಾಹ್ಮಣ ಕ್ಷತ್ರಿಯ ವರ್ಣದವರ ಮಧ್ಯದಲ್ಲಿರುವವರೂ (ಬ್ರಾಹ್ಮಣನಗಿಂತ ಹೀನನಾದರೂ ಕ್ಷತ್ರಿಯನಗಿಂತ ಅಧಿಕವಾದ ಜಾತಿಯವರೂ), ಅಧಿಕಾರಿಣಃ- (ಈ ಮೂರಕ್ಕೆ) ಅಧಿಕಾರಿಗಳೆಂದು (ತಿಳಿಯಲ್ಪಡುವರು).

---

ಇವುಗಳೊಂದಿಗೆ, ಸ್ತ್ರೀಯರಿಗೆ ಸ್ವಪತಿನಿಯಮವೂ, ಪುರುಷರಿಗೆ ಸ್ವಪತ್ನಿನಿಯಮವೂ, ಪ್ರಾಯಃ (ಸರ್ವಜಾತಿಗಳ ಸರ್ವರಿಗೂ ಅನ್ವಯಿಸುವ) ಸಾಮಾನ್ಯಧರ್ಮಗಳೆಂದು ಹೇಳಲ್ಪಟ್ಟಿರುತ್ತವೆ (೫೦). ಬ್ರಾಹ್ಮಣರಿಗೆ, ದಾನವನ್ನು ಸ್ವೀಕರಿಸುವುದು, ಅಧ್ಯಾಪನಂ (ಅನ್ಯರಿಗೆ- ವೇದಾಧಿಕಾರಿಗಳಿಗೆ) ಅಧ್ಯಯನ ಮಾಡಿಸುವುದು, ಯಜ್ಞಗಳನ್ನು ಮಾಡಿಸುವುದು ಮತ್ತು ದೂತ್ಯ (ದೂತನಾಗಿ, ಯಜಮಾನನ ವ್ಯವಹಾರಗಳಲ್ಲಿ ಅನ್ಯರಲ್ಲಿ ಹೋಗಿಬರುವ ಕೆಲಸಗಳನ್ನು ನಿರ್ವಹಿಸುವುದು), ಜೀವನ ವೃತ್ತಿಗಳು (ಜೀವಿಕಾಮಾರ್ಗಗಳು) ಎಂದು ಹೇಳಲಾಗಿವೆ; ಇವುಗಳಲ್ಲಿ ದೂತ್ಯವು (ದೌತ್ಯವು) ಅಷ್ಟು ಪ್ರಶಸ್ತವಲ್ಲದಿದ್ದರೂ, ಅನಿರ್ವಾಹಪಕ್ಷದಲ್ಲಿ (ಅಸಾಧಾರಣ ಸಂದರ್ಭಗಳಲ್ಲಿ) ಕೈಗೊಳ್ಳಬಹುದೆಂದು ಹೇಳಲಾಗುತ್ತದೆ (೫೧). ಈ ಪ್ರತಿಗ್ರಹ (ದಾನಸ್ವೀಕಾರ) ಮೊದಲಾದ ಮೂರರಲ್ಲಿ (ಪ್ರತಿಗ್ರಹ, ಅಧ್ಯಾಪನ ಮತ್ತು ಯಾಜನಗಳಲ್ಲಿ) ಬೇರೆಯವರಿಗೆ ಅಧಿಕಾರವಿರುವುದಿಲ್ಲ ಸಂದರ್ಭವಿಶೇಷಗಳಲ್ಲಿ ಮಾತ್ರ, ವಿಪ್ರ ಕ್ಷತ್ರಿಯರ ಮಧ್ಯದ ಜಾತಿಗಳವರು (ಸೂತಾದಿಗಳು—ಬ್ರಾಹ್ಮಣನಗಿಂತ ಕಿಂಚಿದೂನ ಮತ್ತು ಕ್ಷತ್ರಿಯನಗಿಂತ ಕಿಂಚಿದಧಿಕರಾಗುವ ಜಾತಿಯವರು)[1] ಸಹ, ಈ ಮೂರರಲ್ಲಿ ಅಧಿಕಾರಿಗಳಾಗುವವರೆಂದೂ ಹೇಳಲಾಗಿದೆ (೫೨).

1. ಈ ಜಾತಿ ವಿವೇಕಗಳು, ಮುಂದೆ ೩೬ನೇ ಅಧ್ಯಾಯದಲ್ಲಿ ಪ್ರಸಕ್ತವಾಗುತ್ತವೆ.

**ಯುದ್ಧಂ ಹಿ ಕ್ಷತ್ರಿಯೇ ಮುಖ್ಯಂ ರಥಮಾತಂಗವಾಜಿನಾಂ ।**
**ರಕ್ಷಣಾನಿ ಕ್ರಿಯಾ ನಾನಾಸಾರಥ್ಯಾದ್ಯಾಪದಿ ಸ್ಮೃತಂ ॥ ೫೩ ॥**

ಕ್ಷತ್ರಿಯೇ-ಕ್ಷತ್ರಿಯನಲ್ಲಿ (ಕ್ಷತ್ರಿಯನಿಗೆ), ಯುದ್ಧಂ-ಯುದ್ಧಕರ್ಮವು, ಮುಖ್ಯಂ ಹಿ-ಮುಖ್ಯಧರ್ಮ (ಅದೇ ವೃತ್ತಿ ಅಥವಾ ಜೀವಿಕೆಯೂ) ಎಂದು ಶಾಸ್ತ್ರಸಿದ್ಧವು; ಆಪದಿ-ಆಪತ್ಕಾಲದಲ್ಲಿ (ಯುದ್ಧಕರ್ಮವು ದೊರೆಯದಿದ್ದಾಗ), ರಥಮಾತಂಗ ವಾಜಿನಾಂ-ರಥಗಳು, ಆನೆಗಳು, ಕುದುರೆಗಳ, ರಕ್ಷಣಾನಿ-ರಕ್ಷಣೆಯ ಕೆಲಸಗಳು, ಸಾರಥ್ಯಾದಿ-ಸಾರಥ್ಯ (ರಥ ನಡೆಸುವುದು) ಮೊದಲಾದ, ನಾನಾ ಕ್ರಿಯಾಃ-ವಿವಿಧ ಕೆಲಸಗಳು, ಸ್ಮೃತಂ-(ಯೋಗ್ಯವೆಂದು) ಹೇಳಲ್ಪಡುತ್ತವೆ.

**ಕೃಷಿಗೋರಕ್ಷವಾಣಿಜ್ಯಂ ನಾನಾಕರ್ಮಸು ಕೌಶಲಂ ।**
**ವಿಟ್‌ಶೂದ್ರಜೀವಿಕಾ ಪ್ರೋಕ್ತಾ ಶೂದ್ರೇ ತು ದ್ವಿಜಸೇವನಂ ॥ ೫೪ ॥**

ಕೃಷಿಗೋರಕ್ಷವಾಣಿಜ್ಯಂ-ಕೃಷಿ (ಭೂವ್ಯವಸಾಯ), ಗೋವುಗಳನ್ನು ರಕ್ಷಿಸುವುದು, ಮತ್ತು ವ್ಯಾಪಾರವೂ, ನಾನಾಕರ್ಮಸು-ನಾನಾ ಶಿಲ್ಪಗಳಲ್ಲಿ (ಕುಶಲ ಕರ್ಮಗಳು-ಕೈಕಸುಬುಗಳು), ಕೌಶಲಂ-ನಿಪುಣತೆಯೂ, ವಿಟ್‌ಶೂದ್ರಜೀವಿಕಾಃ- ವೈಶ್ಯ, ಮತ್ತು ಶೂದ್ರರ ಜೀವಿಕೆಗಳೆಂದು (ಜೀವನೋಪಾಯಗಳೆಂದು- ವೃತ್ತಿಗಳೆಂದು), ಪ್ರೋಕ್ತಾ-ಹೇಳಲ್ಪಟ್ಟಿರುತ್ತವೆ; ಶೂದ್ರೇ-ಶೂದ್ರನ ವಿಷಯದಲ್ಲಿ (ಶೂದ್ರ ನಿಗೆ), ದ್ವಿಜಸೇವನಂ ತು-ದ್ವಿಜರ ಸೇವೆಯೇ ಮುಖ್ಯಧರ್ಮವು (ಕೃಷ್ಯಾದಿಗಳನ್ನು ಶೂದ್ರನು ಪಾಕ್ಷಿಕವಾಗಿ ಕೈಗೊಳ್ಳಬಹುದು).

**ಸ್ವವೃತ್ತ್ಯಾ ಸೇವನಂ ಕ್ಷತ್ರೇ ಕ್ಷತ್ರಸ್ಯ ನ ನಿಷಿಧ್ಯತೇ ।**
**ನೀಚಸೇವಾ ತು ಸರ್ವೇಷಾಂ ನಿಂದಿತಾ ಪರಿಕೀರ್ತಿತಾ ॥ ೫೫ ॥**

**ಆಪದ್ಯಪಿ ಚ ಕಷ್ಟಾಯಾಂ ಸನ್ನಿಕೃಷ್ಟಸ್ಯ ವೃತ್ತಿಭಿಃ ।**
**ಸರ್ವೇಽಪಿ ಜೀವನಂ ಕುರ್ಯುರ್ನಾಪಕೃಷ್ಟಸ್ಯ ಸೇವನಂ ॥ ೫೬ ॥**

---

ಕ್ಷತ್ರಿಯರಿಗೆ ಯುದ್ಧವೇ ಮುಖ್ಯಧರ್ಮವು—ಅದೇ ಅವರ ಜೀವನೋಪಾಯ ಸಹ; ಆಪತ್ಕಾಲದಲ್ಲಿ (ಯುದ್ಧಕರ್ಮವು ಜೀವಿಕೆಯಾಗಿ ದೊರೆಯದಾಗ) ರಥ, ಗಜ, ಅಶ್ವಗಳ ರಕ್ಷಣೆ, ಸಾರಥಿಯಾಗುವುದು, ಇತ್ಯಾದಿಗಳನ್ನೂ ಮಾಡಬಹುದು (೫೩). ಕೃಷಿ, ಗೋರಕ್ಷಣೆ ಮತ್ತು ವಾಣಿಜ್ಯಗಳೂ, ವಿವಿಧ ಕೈಗೆಲಸಗಳಲ್ಲಿ ಕುಶಲತೆಯೂ, ವೈಶ್ಯರಿಗೂ ಹಾಗೂ ಪಾಕ್ಷಿಕವಾಗಿ ಶೂದ್ರರಿಗೂ ಜೀವಿಕೆ ಗಳಾಗಿರುತ್ತವೆ; ಶೂದ್ರನಿಗೆ ದ್ವಿಜಸೇವೆಯು (ಮೇಲಿನ ಮೂರು ವರ್ಣದವರ ಸೇವೆಯು) ಪರಮ ಧರ್ಮವು (ಅದೇ ಅವನ ಜೀವಿಕೆಯೂ ಆಗುವುದು) (೫೪). ಕ್ಷತ್ರಿಯರ ವಿಷಯದಲ್ಲಿ, ಮತ್ತೊಬ್ಬ ಕ್ಷತ್ರಿಯನನ್ನು

**ಪ್ರತಿಗ್ರಹೋಽಧ್ಯಾಪನಂ ಚ ಯಾಜನಂ ದೂತ್ಯಮೇವ ಚ ।**
**ವಿಪ್ರಾಣಾಂ ಜೀವಿಕಾ ತತ್ರ ದೂತ್ಯಂ ಪಾಕ್ಷಿಕಮಿಷ್ಯತೇ ॥ ೫೦ ॥**

ಪ್ರತಿಗ್ರಹಃ- ದಾನಸ್ವೀಕಾರವು, ಅಧ್ಯಾಪನಂ- ಅನ್ಯರಿಗೆ ವೇದಾಧ್ಯಯನ ಮಾಡಿಸುವುದು, ಯಾಜನಂ- ಯಜ್ಞಗಳನ್ನು ಮಾಡಿಸುವುದು, ಚ- ಮತ್ತು ದೂತ್ಯಂ ಏವ ಚ- ದೂತನಾಗಿ ದುಡಿಯುವುದು (ರಾಯಭಾರಿ ಮೊದಲಾದ ಕೆಲಸಗಳು), (ಇವು) ವಿಪ್ರಾಣಾಂ- ಬ್ರಾಹ್ಮಣರಿಗೆ, ಜೀವಿಕಾಃ- ಜೀವಿಕಾಮಾರ್ಗಗಳೆಂದು ಹೇಳಲಾಗಿವೆ; ತತ್ರ- ಇವುಗಳಲ್ಲಿ ದೂತ್ಯಂ- ದೂತನಾಗುವಿಕೆಯು, ಪಾಕ್ಷಿಕಂ ಇಷ್ಯತೇ- ಅನಿರ್ವಾಹ ಪಕ್ಷದಲ್ಲಿ ಮಾತ್ರ ಕೈಗೊಳ್ಳಲು ಅರ್ಹವಾದುದೆಂದು ಹೇಳಲಾಗಿದೆ.

**ಪ್ರತಿಗ್ರಹಾದೌ ನಾನ್ಯೇಷಾಮಧಿಕಾರಸ್ತ್ರಿಕೇ ಕ್ವಚಿತ್ ।**
**ವಿಪ್ರಕ್ಷತ್ರಿಯಮಧ್ಯಸ್ಥಾಃ ಕಥಂಚಿದಧಿಕಾರಿಣಃ ॥ ೫೨ ॥**

ಪ್ರತಿಗ್ರಹಾದೌ ತ್ರಿಕೇ-ಅಧ್ಯಾಪನ, ಯಾಜನ, ಪ್ರತಿಗ್ರಹಗಳೆಂಬ ಮೂರರಲ್ಲಿ ಅನ್ಯೇಷಾಂ- ಇತರ ಜಾತಿಯವರಿಗೆ, ಕ್ವಚಿತ್- ಸ್ವಲ್ಪವೂ (ಎಲ್ಲಿಯೂ), ಅಧಿಕಾರಃ- ಅಧಿಕಾರವು, ನ- ಇರುವುದಿಲ್ಲ; ಕಥಂಚಿತ್- ಒಂದೊಂದು ವಿಶೇಷ ಸಂದರ್ಭಗಳಲ್ಲಿ ವಿಪ್ರ ಕ್ಷತ್ರಿಯ ಮಧ್ಯಸ್ಥಾಃ-ಬ್ರಾಹ್ಮಣ ಕ್ಷತ್ರಿಯ ವರ್ಣದವರ ಮಧ್ಯದಲ್ಲಿರುವವರೂ (ಬ್ರಾಹ್ಮಣನಗಿಂತ ಹೀನನಾದರೂ ಕ್ಷತ್ರಿಯನಗಿಂತ ಅಧಿಕವಾದ ಜಾತಿಯವರೂ), ಅಧಿಕಾರಿಣಃ-(ಈ ಮೂರಕ್ಕೆ) ಅಧಿಕಾರಿಗಳೆಂದು (ತಿಳಿಯಲ್ಪಡುವರು).

---

ಇವುಗಳೊಂದಿಗೆ, ಸ್ತ್ರೀಯರಿಗೆ ಸ್ವಪತಿನಿಯಮವೂ, ಪುರುಷರಿಗೆ ಸ್ವಪತ್ನಿನಿಯಮವೂ, ಪ್ರಾಯಃ (ಸರ್ವಜಾತಿಗಳ ಸರ್ವರಿಗೂ ಅನ್ವಯಿಸುವ) ಸಾಮಾನ್ಯಧರ್ಮಗಳೆಂದು ಹೇಳಲ್ಪಟ್ಟಿರುತ್ತವೆ (೫೦). ಬ್ರಾಹ್ಮಣರಿಗೆ, ದಾನವನ್ನು ಸ್ವೀಕರಿಸುವುದು, ಅಧ್ಯಾಪನಂ (ಅನ್ಯರಿಗೆ- ವೇದಾಧಿಕಾರಿಗಳಿಗೆ) ಅಧ್ಯಯನ ಮಾಡಿಸುವುದು, ಯಜ್ಞಗಳನ್ನು ಮಾಡಿಸುವುದು ಮತ್ತು ದೂತ್ಯ (ದೂತನಾಗಿ, ಯಜಮಾನನ ವ್ಯವಹಾರಗಳಲ್ಲಿ ಅನ್ಯರಲ್ಲಿ ಹೋಗಿಬರುವ ಕೆಲಸಗಳನ್ನು ನಿರ್ವಹಿಸುವುದು), ಜೀವನ ವೃತ್ತಿಗಳು (ಜೀವಿಕಾಮಾರ್ಗಗಳು) ಎಂದು ಹೇಳಲಾಗಿವೆ; ಇವುಗಳಲ್ಲಿ ದೂತ್ಯವು (ದೌತ್ಯವು) ಅಷ್ಟು ಪ್ರಶಸ್ತವಲ್ಲದಿದ್ದರೂ, ಅನಿರ್ವಾಹಪಕ್ಷದಲ್ಲಿ (ಅಸಾಧಾರಣ ಸಂದರ್ಭಗಳಲ್ಲಿ) ಕೈಗೊಳ್ಳಬಹುದೆಂದು ಹೇಳಲಾಗುತ್ತದೆ (೫೦). ಈ ಪ್ರತಿಗ್ರಹ (ದಾನಸ್ವೀಕಾರ) ಮೊದಲಾದ ಮೂರರಲ್ಲಿ (ಪ್ರತಿಗ್ರಹ, ಅಧ್ಯಾಪನ ಮತ್ತು ಯಾಜನಗಳಲ್ಲಿ) ಬೇರೆಯವರಿಗೆ ಅಧಿಕಾರವಿರುವುದಿಲ್ಲ; ಸಂದರ್ಭವಿಶೇಷಗಳಲ್ಲಿ ಮಾತ್ರ, ವಿಪ್ರ ಕ್ಷತ್ರಿಯರ ಮಧ್ಯದ ಜಾತಿಗಳವರು (ಸೂತಾದಿಗಳು—ಬ್ರಾಹ್ಮಣನಗಿಂತ ಕಿಂಚಿದೂನ ಮತ್ತು ಕ್ಷತ್ರಿಯನಗಿಂತ ಕಿಂಚಿದಧಿಕರಾಗುವ ಜಾತಿಯವರು)[1] ಸಹ, ಈ ಮೂರರಲ್ಲಿ ಅಧಿಕಾರಿಗಳಾಗುವರೆಂದೂ ಹೇಳಲಾಗಿದೆ (೫೨).

1. ಈ ಜಾತಿ ವಿವೇಕಗಳು, ಮುಂದೆ ೩೫ನೇ ಅಧ್ಯಾಯದಲ್ಲಿ ಪ್ರಸಕ್ತವಾಗುತ್ತವೆ.

**ಯುದ್ಧಂ ಹಿ ಕ್ಷತ್ರಿಯೇ ಮುಖ್ಯಂ ರಥಮಾತಂಗವಾಜಿನಾಂ ।**
**ರಕ್ಷಣಾನಿ ಕ್ರಿಯಾ ನಾನಾಸಾರಥ್ಯಾದ್ಯಾಪದಿ ಸ್ಮೃತಂ ॥ ೫೩ ॥**

ಕ್ಷತ್ರಿಯೇ-ಕ್ಷತ್ರಿಯನಲ್ಲಿ (ಕ್ಷತ್ರಿಯನಿಗೆ), ಯುದ್ಧಂ-ಯುದ್ಧಕರ್ಮವು, ಮುಖ್ಯಂ ಹಿ-ಮುಖ್ಯಧರ್ಮ (ಅದೇ ವೃತ್ತಿ ಅಥವಾ ಜೀವಿಕೆಯೂ) ಎಂದು ಶಾಸ್ತ್ರಸಿದ್ಧವು; ಆಪದಿ-ಆಪತ್ಕಾಲದಲ್ಲಿ (ಯುದ್ಧಕರ್ಮವು ದೊರೆಯದಿದ್ದಾಗ), ರಥಮಾತಂಗ ವಾಜಿನಾಂ-ರಥಗಳು, ಆನೆಗಳು, ಕುದುರೆಗಳ, ರಕ್ಷಣಾನಿ-ರಕ್ಷಣೆಯ ಕೆಲಸಗಳು, ಸಾರಥ್ಯಾದಿ-ಸಾರಥ್ಯ (ರಥ ನಡೆಸುವುದು) ಮೊದಲಾದ, ನಾನಾ ಕ್ರಿಯಾಃ-ವಿವಿಧ ಕೆಲಸಗಳು, ಸ್ಮೃತಂ-(ಯೋಗ್ಯವೆಂದು) ಹೇಳಲ್ಪಡುತ್ತವೆ.

**ಕೃಷಿಗೋರಕ್ಷವಾಣಿಜ್ಯಂ ನಾನಾಕರ್ಮಸು ಕೌಶಲಂ ।**
**ವಿಟ್‌ಶೂದ್ರಜೀವಿಕಾ ಪ್ರೋಕ್ತಾ ಶೂದ್ರೇ ತು ದ್ವಿಜಸೇವನಂ ॥ ೫೪ ॥**

ಕೃಷಿಗೋರಕ್ಷವಾಣಿಜ್ಯಂ-ಕೃಷಿ (ಭೂವ್ಯವಸಾಯ), ಗೋವುಗಳನ್ನು ರಕ್ಷಿಸು ವುದು, ಮತ್ತು ವ್ಯಾಪಾರವೂ, ನಾನಾಕರ್ಮಸು-ನಾನಾ ಶಿಲ್ಪಗಳಲ್ಲಿ (ಕುಶಲ ಕರ್ಮಗಳು-ಕೈಕಸುಬುಗಳು), ಕೌಶಲಂ-ನಿಪುಣತೆಯೂ, ವಿಟ್‌ಶೂದ್ರಜೀವಿಕಾಃ- ವೈಶ್ಯ, ಮತ್ತು ಶೂದ್ರರ ಜೀವಿಕೆಗಳೆಂದು (ಜೀವನೋಪಾಯಗಳೆಂದು- ವೃತ್ತಿಗಳೆಂದು), ಪ್ರೋಕ್ತಾಃ-ಹೇಳಲ್ಪಟ್ಟಿರುತ್ತವೆ; ಶೂದ್ರೇ-ಶೂದ್ರನ ವಿಷಯದಲ್ಲಿ (ಶೂದ್ರ ನಿಗೆ), ದ್ವಿಜಸೇವನಂ ತು-ದ್ವಿಜರ ಸೇವೆಯೇ ಮುಖ್ಯಧರ್ಮವು (ಕೃಷ್ಯಾದಿಗಳನ್ನು ಶೂದ್ರನು ಪಾಕ್ಷಿಕವಾಗಿ ಕೈಗೊಳ್ಳಬಹುದು).

**ಸ್ವವೃತ್ತ್ಯಾ ಸೇವನಂ ಕ್ಷತ್ರೇ ಕ್ಷತ್ರಸ್ಯ ನ ನಿಷಿಧ್ಯತೇ ।**
**ನೀಚಸೇವಾ ತು ಸರ್ವೇಷಾಂ ನಿಂದಿತಾ ಪರಿಕೀರ್ತಿತಾ ॥ ೫೫ ॥**

**ಆಪದ್ಯಪಿ ಚ ಕಷ್ಟಾಯಾಂ ಸನ್ನಿಕೃಷ್ಟಸ್ಯ ವೃತ್ತಿಭಿಃ ।**
**ಸರ್ವೇಽಪಿ ಜೀವನಂ ಕುರ್ಯುರ್ನಾಪಕೃಷ್ಟಸ್ಯ ಸೇವನಂ ॥ ೫೬ ॥**

---

ಕ್ಷತ್ರಿಯರಿಗೆ ಯುದ್ಧವೇ ಮುಖ್ಯಧರ್ಮವು—ಅದೇ ಅವರ ಜೀವನೋಪಾಯ ಸಹ; ಆಪತ್ಕಾಲದಲ್ಲಿ (ಯುದ್ಧಕರ್ಮವು ಜೀವಿಕೆಯಾಗಿ ದೊರೆಯದಾಗ) ರಥ, ಗಜ, ಅಶ್ವಗಳ ರಕ್ಷಣೆ, ಸಾರಥಿಯಾಗುವುದು, ಇತ್ಯಾದಿಗಳನ್ನೂ ಮಾಡಬಹುದು (೫೩). ಕೃಷಿ, ಗೋರಕ್ಷಣೆ ಮತ್ತು ವಾಣಿಜ್ಯಗಳೂ, ವಿವಿಧ ಕೈಗೆಲಸಗಳಲ್ಲಿ ಕುಶಲತೆಯೂ, ವೈಶ್ಯರಿಗೂ ಹಾಗೂ ಪಾಕ್ಷಿಕವಾಗಿ ಶೂದ್ರರಿಗೂ ಜೀವಿಕೆ ಗಳಾಗಿರುತ್ತವೆ; ಶೂದ್ರನಿಗೆ ದ್ವಿಜಸೇವೆಯು (ಮೇಲಿನ ಮೂರು ವರ್ಣದವರ ಸೇವೆಯು) ಪರಮ ಧರ್ಮವು (ಅದೇ ಅವನ ಜೀವಿಕೆಯೂ ಆಗುವುದು) (೫೪). ಕ್ಷತ್ರಿಯರ ವಿಷಯದಲ್ಲಿ ಮತ್ತೊಬ್ಬ ಕ್ಷತ್ರಿಯನನ್ನು

ಕ್ಷತ್ರಸ್ಯ-ಕ್ಷತ್ರಿಯನ, ಸ್ವವೃತ್ತ್ಯಾ-ಸ್ವವಿಹಿತ ವೃತ್ತಿಗಳಿಂದ, ಸೇವನಂ-ಸೇವಿಸುವುದು (ಕ್ಷತ್ರಿಯಯೋಗ್ಯ ಕೆಲಸಗಳನ್ನು ಮಾಡಿ ಕ್ಷತ್ರಿಯನ ಸೇವೆಯನ್ನು ಮಾಡುವುದು), ಕ್ಷತ್ರೇ-ಕ್ಷತ್ರಿಯನಲ್ಲಿ (ಕ್ಷತ್ರಿಯರ ವಿಷಯದಲ್ಲಿ), ನ ನಿಷಿಧ್ಯತೇ-ನಿಷೇಧಿಸಲ್ಪಡುವುದಿಲ್ಲ; ನೀಚಸೇವಾ ತು-ನೀಚರ ಸೇವೆಯಾದರೋ, ಸರ್ವೇಷಾಂ-ಎಲ್ಲ ಜಾತಿಯವರಿಗೂ, ನಿಂದಿತಾ-ನಿಂದ್ಯವೆಂದು (ದೋಷಕಾರಕವೆಂದು), ಪರಿಕೀರ್ತಿತಾ-ಹೇಳಲಾಗಿದೆ; ಕಷ್ಟಾಯಾಂ-ದುಃಖಪರವಾದ, ಆಪದಿ ಅಪಿ-ಆಪತ್ಕಾಲದಲ್ಲಿ ಸಹ, ಸರ್ವೇಃಪಿ-ಎಲ್ಲರೂ, ಸನ್ನಿಕೃಷ್ಟಸ್ಯ-ತಮಗೆ ಸಮೀಪರಾದವರ (ತಮ್ಮ ನಂತರದ ಜಾತಿಯ), ವೃತ್ತಿಭಿಃ-ವೃತ್ತಿಗಳಿಂದ, ಜೀವನಂ-ಜೀವಿತವನ್ನು, ಕುರ್ಯುಃ-ಸಾಧಿಸುವರು (ಸಾಧಿಸಬೇಕು); (ಆಗಲೂ ಸಹ), ಅಪಕೃಷ್ಟಸ್ಯ-ಕೆಳಜಾತಿಯವನ, ಸೇವನಂ-ಸೇವೆಯು, ನ-ಯುಕ್ತವಲ್ಲ (ಮಾಡಕೂಡದು).

**ಅನುಲೋಮವಿಲೋಮಾನಾಂ ಮಾತುರ್ವಾ ಜನಕಸ್ಯ ವಾ ।**
**ಜಾತೇರ್ವೃತ್ತಿರ್ಭವೇದ್ವೃತ್ತಿಃ ಯಥಾಸಂಭವಮೇವ ಹಿ ॥ ೫೭ ॥**

ಅನುಲೋಮವಿಲೋಮಾನಾಂ-ಅನುಲೋಮಿಗಳು ಮತ್ತು ಪ್ರತಿಲೋಮಿಗಳಿಗೆ, ಮಾತುಃ ವಾ-ತಾಯಿಯದಾಗಲಿ, ಜನಕಸ್ಯ ವಾ-ತಂದೆಯದಾಗಲಿ, ಜಾತೇಃ-ಜಾತಿಯ, ವೃತ್ತಿ-ವೃತ್ತಿಯು (ಜೀವನೋಪಾಯವು), ಯಥಾಸಂಭವಂ-ಅನುಕೂಲಿಸಿದಂತೆ, ವೃತ್ತಿಃ- ಜೀವಿಕೆಯು, ಭವೇತ್-ಆಗುತ್ತದೆ (ಆಗಬೇಕು).

**ಅತಃ ಸರ್ವಪ್ರಪಂಚಸ್ಯ ಜಾಯತೇ ಜೀವನಂ ಮಿಥಃ ।**
**ತತ್ತದ್ವೃತ್ತೇರನುಷ್ಠಾನಾದಂಧಪಂಗುಸಮಾಜವತ್ ॥ ೫೮ ॥**
**ತೇನ ನಾನಾವಿಧದ್ರವ್ಯಸಮುತ್ಪತ್ತೇರ್ನರಾದಿನಾಂ ।**
**ಜಾಯತೇ ಭೋಗಸಂಪತ್ತಿಃ ಜೀವಿಕಾಪ್ಯಖಿಲಸ್ಯ ಚ ॥ ೫೯ ॥**

---

ಕ್ಷತ್ರಿಯೋಚಿತ ಕರ್ಮಗಳಿಂದ, ಸೇವಿಸುವುದು, ನಿಷೇಧಿಸಲ್ಪಟ್ಟಿರುವುದಿಲ್ಲ; ನೀಚಸೇವೆಯು (ತಮ್ಮ ಕೆಳಗಿನ ಜಾತಿಯವರಲ್ಲಿ ಸೇವೆಯನ್ನು ಕೈಗೊಳ್ಳುವುದು) ಎಲ್ಲರಿಗೂ ನಿಂದಿತವೆಂದೇ (ಅಯೋಗ್ಯವೆಂದೇ) ಹೇಳಲಾಗಿದೆ; ಕಷ್ಟಕರವಾದ ಆಪತ್ತಿನಲ್ಲಿ (ಸ್ವವೃತ್ತಿಯಿಂದ ಜೀವನವು ನಡೆಯದಂತೆ ಆದಾಗ) ಸಹ, ತಮ್ಮ ನಂತರದ ಜಾತಿಯ (ಸಮೀಪದ ಜಾತಿಯ) ವೃತ್ತಿಗಳಿಂದ, ಜೀವನವನ್ನು ಸಾಧಿಸಿಕೊಳ್ಳಬೇಕು; ಅಲ್ಲದೇ, ಕೆಳಜಾತಿಯವರ ಸೇವಕವೃತ್ತಿಯನ್ನು ಮಾತ್ರ ಯಾರೂ ಸ್ವೀಕರಿಸಕೂಡದು (೫೫-೫೬).

ಅನುಲೋಮಿಗಳು ಮತ್ತು ಪ್ರತಿಲೋಮಿಗಳಿಗೆ, ಅವರವರ ತಾಯಿ ಅಥವಾ ತಂದೆಯ ಜಾತಿಗೆ ಉಚಿತವಾದ ವೃತ್ತಿಗಳನ್ನು ಅನುಕೂಲವಿದ್ದಂತೆ, ಅನುಷ್ಠಾನ ಯೋಗ್ಯಗಳೆಂದು ಹೇಳಲಾಗಿದೆ (೫೭). ಹೀಗೆ ಆಯಾ ಜಾತಿಯವರು ತಮತಮಗೆ

ಅತಃ-ಅದರಿಂದ (ಹೀಗೆ ಆಯಾ ಜಾತಿಯವರು ತಮತಮಗೆ ವಿಹಿತವಾದ ವೃತ್ತಿಗಳನ್ನು ಅನುಸರಿಸುವುದರಿಂದ), ಸರ್ವಪ್ರಪಂಚಸ್ಯ-ಸಕಲ ಜಗತ್ತಿಗೆ (ಜಗತ್ತಿನ ಪ್ರಜೆಗಳಿಗೆ), ಮಿಥಃ-ಪರಸ್ಪರವಾಗಿ (ಒಬ್ಬರಿಗೆ ಬೇಕಾದ ವಸ್ತುಗಳು ಅನ್ಯರಿಂದ ದೊರೆತು), ಜೀವನಂ-ಜೀವನವು, ಜಾಯತೇ-ಆಗುತ್ತದೆ (ನಡೆಯುತ್ತದೆ); ತತ್ತದ್ವೃತ್ತೇಃ-(ಆಯಾ ಜಾತಿಯವರು) ತಂತಮ್ಮ ವೃತ್ತಿಗಳ, ಅನುಷ್ಠಾನಾತ್-ಆಚರಣೆಯಿಂದ, ಅಂಧಪಂಗುಸಮಾಜವತ್-ಕುರುದನೂ ಹೆಳವನೂ (ಕಾಲಿಲ್ಲದವನೂ) ಸೇರಿ ದಾರಿ ನಡೆವಂತೆ (ಕುರುಡನು ಹೆಳವನನ್ನು ಹೊತ್ತು ಅವನು ನೋಡಿ ಹೇಳಿದ ದಾರಿಯಲ್ಲಿ ನಡೆದು ಉಭಯರೂ ಮಾರ್ಗಕ್ರಮಣ ಮಾಡುವಂತೆ), (ಸರ್ವರ ಜೀವನವೂ ಸಾಗುತ್ತದೆ); ತೇನ-ಅದರಿಂದ (ಹೀಗೆ ಪರಸ್ಪರ ಸಹಾಯಕ ವೃತ್ತಿಗಳ ಅನುಷ್ಠಾನದಿಂದ), ನಾನಾವಿಧದ್ರವ್ಯಸಮುತ್ಪತ್ತೇಃ-ವಿವಿಧ ವಸ್ತುಗಳ ನಿರ್ಮಾಣದಿಂದ, ನರಾದಿನಾಂ-ಮನುಷ್ಯಾದಿ ಸರ್ವರಿಗೆ, ಭೋಗಸಂಪತ್ತಿಃ-ಭೋಗ್ಯವಸ್ತುಗಳ ಸಂಪ್ರಾಪ್ತಿಯೂ, ಅಖಿಲಸ್ಯ-ಸರ್ವರ, ಜೀವಿಕಾಪಿ-ಜೀವಿಕೆಯೂ ಸಹ, ಜಾಯತೇ-ಉಂಟಾಗುತ್ತದೆ.

**ಸ್ವಸ್ವವೃತ್ತ್ಯಾನಾಪದಿ ಸ್ಯಾತ್ ಸನ್ನಿಕೃಷ್ಟಸ್ಯ ಚಾಪದಿ ।**
**ತದನಂತರವೃತ್ತ್ಯಾ ಚ ಮಹಾಪದಿ ಚ ಜೀವಿಕಾ ॥ ೬೦ ॥**

ಅನಾಪದಿ-ಆಪತ್ತಿಲ್ಲದಾಗ, ಸ್ವಸ್ವವೃತ್ತ್ಯಾ-ತಮತಮಗೆ ವಿಹಿತವಾದ ವೃತ್ತಿಯನ್ನು ಅನುಸರಿಸುವುದರಿಂದಲೂ, ಆಪದಿ-ಆಪತ್ಕಾಲದಲ್ಲಿ ಸನ್ನಿಕೃಷ್ಟಸ್ಯ-ಸಮೀಪದ ಜಾತಿಯ

---

ಉಚಿತವಾದ ವೃತ್ತಿಗಳನ್ನು ಆಚರಿಸುವುದರಿಂದ, ಅಂಧಪಂಗುಗಳು ಸೇರಿ ಉಭಯರೂ ಮಾರ್ಗಕ್ರಮಣ ಮಾಡಲು ಸಾಧ್ಯವಾಗುವಂತೆ, ಸಕಲರ ಜೀವನವೂ ಸಾಗುತ್ತದೆ; ಹೀಗೆ, ಪರಸ್ಪರ ಸಹಾಯಕವೃತ್ತಿಗಳ ಅನುಷ್ಠಾನದಿಂದ, ಬಹುವಿಧ ಭೋಗಸಾಧನವಸ್ತುಗಳು ಸಿದ್ಧವಾಗಿ, ಮನುಷ್ಯಾದಿ ಸರ್ವರ (ಪಶು ಭೃತ್ಯಾದಿಗಳ ಸಹಿತವಾಗಿ) ಜೀವಿಕೆಯೂ ಸುಖಮಯವಾಗಿ ಸಾಗುತ್ತದೆ (೫೮-೫೯).

ಆಪತ್ತಿಲ್ಲದಾಗ (ಸ್ವವಿಹಿತ ವೃತ್ತಿಯನ್ನು ಅವಲಂಬಿಸುವುದರಿಂದ ಜೀವನವು ನಡೆಯುವಾಗ), ಸ್ವವಿಹಿತ ವೃತ್ತಿಯನ್ನೇ ಮಾಡಿ ಜೀವಿಸಬೇಕು; ಆಪತ್ಕಾಲದಲ್ಲಿ[1] ತನ್ನ ಕೆಳಗಿನ ಜಾತಿಯ ವೃತ್ತಿಯನ್ನೂ ಮಹಾಪತ್ತಿನಲ್ಲಿ ಅದರ ಕೆಳಗಿನ ಜಾತಿಯ

1. ಬ್ರಾಹ್ಮಣನು ಆಪತ್ಕಾಲದಲ್ಲಿ ಕ್ಷತ್ರಿಯವೃತ್ತಿಯನ್ನೂ, ಮಹಾಪತ್ತಿನಲ್ಲಿ ವೈಶ್ಯವೃತ್ತಿಯನ್ನೂ ಅವಲಂಬಿಸಬಹುದು; ಆಪತ್ತು ಮಹಾಪತ್ತುಗಳ ಕಾಲನಿರ್ಣಯವನ್ನು ಪ್ರತಿ ವ್ಯಕ್ತಿಯೂ, ಪ್ರಾಮಾಣಿಕವಾಗಿಯೂ, ಆತ್ಮಸಾಕ್ಷಿಕವಾಗಿಯೂ ಕಂಡುಕೊಂಡು, ಯೋಗ್ಯವೃತ್ತಿಯನ್ನು ಹಿಡಿಯಬೇಕು. ಸಾಮಾಜಿಕವಾಗಿ, ವಿಹಿತಗಳಲ್ಲದ ಅನ್ಯವೃತ್ತಿಗಳನ್ನು ಹಿಡಿಯುವ ಪರಿಸ್ಥಿತಿಗಳು ಒದಗಿವೆಯೇ ಎಂಬುದನ್ನು ಅಧಿಕಾರಿಕ ಧರ್ಮಜ್ಞಾನಿಗಳು ನಿರ್ಣಯಿಸಿ ಮಾರ್ಗದರ್ಶಕರಾಗಬೇಕು.

(ತನ್ನ ಕೆಳಗಿನ ಜಾತಿಯ), ವೃತ್ತ್ಯಾ-ವೃತ್ತಿಯಿಂದಲೂ, ಮಹಾಪದಿ- ಮಹಾಪತ್ಕಾಲದಲ್ಲಿ ತದನಂತರವೃತ್ತ್ಯಾ ಚ-ಅದರ ಕೆಳಗಿನ ಜಾತಿಯ ವೃತ್ತಿಯಿಂದಲೂ, ಜೀವಿಕಾ-ಜೀವನೋಪಾಯವು (ಜೀವನವು), ಸ್ಯಾತ್-ಆಗುತ್ತದೆ.

**ಆದ್ಯದ್ವಿತೀಯಜಾತೀಯಾನ್ ಜೀವಾನೇವ ಸ್ವರೂಪತಃ ।**
**ಸೃಷ್ಟ್ವಾ ತಾನೇವ ಸೃಷ್ಟ್ಯಾದೌ ವಿಶ್ವಕರ್ಮಾಪಿ ಚ ಸ್ವಯಂ ॥ ೬೧ ॥**
**ನಾನಾಶಿಲ್ಪಾನಿ ಜೀವಾನಾಂ ಜೀವನಾರ್ಥಮಶಿಕ್ಷಯತ್ ।**
**ಜೀವಿಕಾಃ ಕಲ್ಪಯಾಮಾಸ ಪೂರ್ವೋಕ್ತವಿಧಿನಾ ತತಃ ॥ ೬೨ ॥**

ಸ್ವರೂಪತಃ ಏವ-ಸ್ವರೂಪದಿಂದಲೇ, ಆದ್ಯ ದ್ವಿತೀಯಜಾತೀಯಾನ್-ಒಂದು, ಎರಡನೆಯ ಜಾತಿಗೆ ಸೇರಿದ (ಬ್ರಾಹ್ಮಣಾದಿ ನಾಲ್ಕು ವರ್ಣಗಳು ಒಂದನೆಯ ಜಾತಿ-ಅನುಲೋಮ ಪ್ರತಿಲೋಮ ಜಾತಿಗಳು, ಎರಡನೆಯ ಜಾತಿ, ಹೀಗೆ ಒಟ್ಟು ೧೬ ಜಾತಿಗಳು ಸ್ವರೂಪದಲ್ಲಿ ಸಹ ಇವೆ)[1]; ಜೀವಾನ್-ಜೀವರನ್ನು ಸೃಷ್ಟ್ಯಾದೌ-ಸೃಷ್ಟಿಯ ಆರಂಭದಲ್ಲಿ ತಾನೇವ-ಅವರನ್ನೇ, ಸೃಷ್ಟ್ವಾ-ಸೃಷ್ಟಿಸಿ, ವಿಶ್ವಕರ್ಮಾ-ವಿಶ್ವಕರ್ಮನು (ತನ್ನಾಮಕ ಶ್ರೀವಿಷ್ಣುವು), ಸ್ವಯಂ-ತಾನೇ, ಜೀವಾನಾಂ-ಜೀವರ, ಜೀವನಾರ್ಥಂ-ಜೀವಿಕೆಗಾಗಿ, ನಾನಾ ಶಿಲ್ಪಾನಿ-ನಾನಾ ಕುಶಲಕರ್ಮಗಳನ್ನು (ವೃತ್ತಿಗಳನ್ನು), ಅಶಿಕ್ಷಯತ್-ಕಲಿಸಿದನು (ಉಪದೇಶಿಸಿದನು); ತತಃ-ನಂತರ (ಮುಂದೆ), ಪೂರ್ವೋಕ್ತವಿಧಿನಾ-ಈ ಹಿಂದೆ ಹೇಳಿದ ಪ್ರಕಾರ, ಜೀವಿಕಾಃ-ಜೀವನವೃತ್ತಿಗಳನ್ನು (ಈ ಜಾತಿಯ ಪ್ರಜೆಗಳಿಗೆ ಈ ವೃತ್ತಿಗಳೆಂದು), ಕಲ್ಪಯಾಮಾಸ-ನಿಯಮಿಸಿದನು (ವಿಧಿಸಿದನು).

---

ವೃತ್ತಿಯನ್ನೂ ಅವಲಂಬಿಸಬಹುದು (೬೦). ಒಂದೆರಡನೆ ವರ್ಗದ ಜೀವರನ್ನು (ಸ್ವರೂಪದಿಂದಲೇ ಆ ಜಾತಿಗಳಿಗೆ ಸೇರಿದವರನ್ನು), ಸೃಷ್ಟಿಯ ಆರಂಭದಲ್ಲಿ ಶ್ರೀವಿಷ್ಣುವು ಸೃಷ್ಟಿಮಾಡಿ, ವಿಶ್ವಕರ್ಮನಾಮಕನಾಗಿ ಪ್ರಕಟನಾದ ತಾನೇ, ಅವರನ್ನುದ್ದೇಶಿಸಿ, ಜೀವನಾರ್ಥವಾಗಿ ನಾನಾಶಿಲ್ಪಗಳನ್ನು (ಕಸಬು—ವೃತ್ತಿಗಳನ್ನು) ಉಪದೇಶಿಸಿದನು; ಹೀಗೆ ಉಪದೇಶಿಸಿದ ನಂತರ, ಈ ಜಾತಿಯವರಿಗೆ ಈ ವೃತ್ತಿಗಳೆಂಬ ನಿಯಮವನ್ನೂ, ತಾನೇ ಗೊತ್ತುಮಾಡಿದನು (ಅವು ಆ ಜೀವರ ಸ್ವರೂಪಕ್ಕೆ ಸಹಜವಾಗಿ ಹೊಂದಿಕೆಯಾಗುವ ವೃತ್ತಿಗಳು— ಮುಕ್ತರಾದಮೇಲೂ, ಅಲ್ಲಿಯೂ ಸ್ವೇಚ್ಛೆಯಿಂದಲೇ ಅವಶ್ಯಕವಲ್ಲದಿದ್ದರೂ—ಯಾವ ಫಲದ ಅವಶ್ಯಕತೆ ಇಲ್ಲದಿದ್ದರೂ ಅನುಷ್ಠಾನ ಮಾಡುವರು) (೬೧-೬೨). ಮೂರು, ನಾಲ್ಕು, ಐದನೇ

1. ಇಲ್ಲಿ ಇದೇ ಅಧ್ಯಾಯದ ಶ್ಲೋಕ (೯-೧೩)ರ ಅರ್ಥತಾತ್ಪರ್ಯಭಾಗಗಳನ್ನು ಓದಿಕೊಳ್ಳಿರಿ. ೧-೨ನೇ ವರ್ಗದ ಜಾತಿಗಳು ಸ್ವರೂಪದಲ್ಲಿ ಸಹ ಉಂಟು; ಅನ್ಯ ಸಂಕರ ಜಾತಿಗಳು ಸೃಷ್ಟಿಯ ನಂತರ (ಸ್ಥಿತಿಕಾಲದಲ್ಲಿ) ಮಾತ್ರ ಉದ್ಭವಿಸುತ್ತವೆ.

**ತೃತೀಯಾಶ್ಚ ಚತುರ್ಥಾಶ್ಚ ಪಂಚಮ್ಯಾದ್ಯಾಶ್ಚ ಜಾತಯಃ ।**
**ಸೃಷ್ಟಾವೇವಂ ವಿಮಿಶ್ರತ್ವಾದ್ವೃತ್ತಿಸಾಂಕರ್ಯಮಾಪಿರೇ ॥ ೬೩ ॥**

ತೃತೀಯಾಶ್ಚ-ಮೂರನೇ ಜಾತಿಯವರು, ಚ-ಮತ್ತು ಚತುರ್ಥಾಃ- ನಾಲ್ಕನೆಯ ಜಾತಿಯವರೂ, ಪಂಚಮ್ಯಾದ್ಯಾಃ-ಐದನೇ ಮೊದಲಾದ (ಮುಂದಿನ ವರ್ಗಗಳ), ಜಾತಯಃ-ಜಾತಿಯವರೂ (ಜಾತಿಗಳೂ),[1] ಏವಂ-ಹೀಗೆ, ಸೃಷ್ಟೌ ಏವ-ಸೃಷ್ಟಿಯಲ್ಲಿಯೇ, ವಿಮಿಶ್ರತ್ವಾತ್-ಮಿಶ್ರರಾದವರಾದ್ದರಿಂದ (ಸ್ವರೂಪದಲ್ಲಿ ಆ ವರ್ಗ(ಜಾತಿ) ಗಳಿಲ್ಲದ ಕಾರಣ), ವೃತ್ತಿಸಾಂಕರ್ಯಂ-ವೃತ್ತಿಸಾಂಕರ್ಯವನ್ನು ಒಬ್ಬರ ವೃತ್ತಿಯನ್ನು ಮತ್ತೊಬ್ಬರು ಮಾಡುವುದು ಇತ್ಯಾದಿ ಮಿಶ್ರಣವನ್ನು), ಆಪಿರೇ- ಹೊಂದಿದವು.

**ತಂತುವಾಯಕುಲಾಲಾದ್ಯಾಃ ಕರ್ಮಾರಾ ಹೇಮಕಾರಕಾಃ ।**
**ಪಶೋರ್ವಿಶಸಕಾ ಯೇ ಚ ವೈಣುವಾಸ್ನಾಯುಶೋಧಕಾಃ ॥ ೬೪ ॥**
**ವಿಣ್ಮೂತ್ರಹಾರಕಾ ವ್ಯಾಧಾಃ ಶ್ವಪಾಕಾಶ್ಚರ್ಮಶೋಧಕಾಃ ।**
**ಗ್ರಾಮ್ಯಾರಣ್ಯವಿಭೇದೇನ ಕಿರಾತಾಃ ಶಬರಾದಯಃ ॥ ೬೫ ॥**
**ಪುಲ್ಕಸಾಶ್ಚ ಪುಲಿಂದಾಶ್ಚ ಪುಷ್ಕಲಾ ಮ್ಲೇಂಛಜಾತಯಃ ।**
**ಕಿರಾತೇಷು ನಿಷಾದಾಶ್ಚ ಮತ್ಸ್ಯಾದಾ ಮಾಂಸಜೀವಿನಃ ॥ ೬೬ ॥**

ಮೊದಲಾದ ಜಾತಿಗಳು, ಸೃಷ್ಟಿ ಕಾಲದಲ್ಲಿ ಮಾತ್ರ (ಸೃಷ್ಟಿಯ ನಂತರದ ಸ್ಥಿತಿಕಾಲದಲ್ಲಿ) ವಿವಿಧ ಜಾತಿಗಳ ಮಿಶ್ರಣದಿಂದ ಉದ್ಭವಿಸಿದ ಕಾರಣ, ಅವುಗಳ ವೃತ್ತಿಗಳು ಸಾಂಕರ್ಯವನ್ನು (ಮಿಶ್ರಣವನ್ನು—ನಿಯಮವಿಲ್ಲದ ಪರಿಸ್ಥಿತಿಯನ್ನು) ಹೊಂದಿದವು (೬೩). ನೇಕಾರರು (ನೇಯಿಗೆ ಕೆಲಸ ಮಾಡುವವರು), ಕುಂಬಾರರು (ಮಡಕೆ ಮಾಡುವವರು), ಕಮ್ಮಾರರು (ಕುಲಿಮೆ ಕೆಲಸದವರು), ಅಕ್ಕಸಾಲಿಗರು (ಸ್ವರ್ಣಕಾರರು), ಕಟುಗರು (ಪಶುಸಂಹಾರಕರು), ಬಿತ್ತರ ಕೆಲಸದವರು (ಬಿದಿರು ಕೆಲಸದವರು ಅಥವಾ ಮೇದಾರರು); ಮಾಂಸಾದಿಗಳನ್ನು ತೆಗೆದು ಚರ್ಮವನ್ನು ಶುದ್ಧಗೊಳಿಸುವವರು, ಮಲಮೂತ್ರಾದಿಗಳನ್ನು ತೆಗೆಯುವವರು, ವ್ಯಾಧರು

1. ಇದೇ ಅಧ್ಯಾಯದ ಶ್ಲೋಕ (೧೨-೧೫)ರ ವರೆಗೆ, ಈ ಪ್ರಸಕ್ತಜಾತಿಗಳ ವಿವರಣೆಯಿರುತ್ತದೆ—ಅದನ್ನು ಇಲ್ಲಿ ನೋಡಿಕೊಳ್ಳಿರಿ. ಒಂದು ಎರಡನೆ ವರ್ಗದ ೧೬ ಜಾತಿಗಳಿಂದ ಬ್ರಾಹ್ಮಣಾದಿ ನಾಲ್ಕು ವರ್ಗದ ಸ್ತ್ರೀಯರಲ್ಲಿ ಜನಿಸುವ ೪೮ ವಿವಿಧ ಸಂತಾನಗಳು ೩ನೇ ವರ್ಗದ ಜಾತಿಗಳೆನಿಸುತ್ತವೆ; ಆಯಾ ಜಾತಿಗಳಲ್ಲಿಯೇ ಉತ್ಪನ್ನರಾಗುವ ಕುಂಡಗೋಲಕರು ೪ನೇ ವರ್ಗದವರು; ಮುಂದಿನ (ಈ ಮೇಲ್ಕಂಡ ೬೪ ಜಾತಿಗಳಿಂದ ಅನ್ಯಜಾತಿ ಸ್ತ್ರೀಯರಲ್ಲಿ ಹುಟ್ಟುವ ಜಾತಿಗಳು ೫ನೇ ವರ್ಗದವು; ಹೀಗೆ ಜಾತಿಗಳು ಅಸಂಖ್ಯ. (ವಿಷಯಲೋಲುಪರಾದ ಸ್ವೇಚ್ಛಾವೃತ್ತಿಯ ಸ್ತ್ರೀಪುರುಷರಿಂದ ಹೀಗೆ ಅಸಂಖ್ಯ ಜಾತಿಗಳು ಉದ್ಭವಿಸುತ್ತವೆ).

**ಕೇಚಿದ್ವನ್ಯಫಲಾಹಾರಾ ಗ್ರಾಮ್ಯಾ ಅಪಿ ತು ಕೇಚನ ।**
**ಸ್ತೇಯೈರ್ನಾನಾವಿಧೈರೇತೈಃ ಪ್ರಾಯೋ ಜೀವನಕಾರಿಣಃ ॥ ೬೭ ॥**

ತಂತುವಾಯ ಕುಲಾಲಾದ್ಯಾಃ-ನೇಯ್ಗೆಯವರು, ಕುಂಬಾರರು, ಮೊದಲಾದವರು, ಕರ್ಮಾರಾ ಹೇಮಕಾರಕಾಃ-ಕಮ್ಮಾರರು, ಅಕ್ಕಸಾಲಿಗರು, ಪಶೋಃ-ಪಶುವಿನ (ಪಶುಗಳನ್ನು), ವಿಶಸಕಾಃ-ಕತ್ತರಿಸುವವರು (ಕೊಯ್ದು ಹಿಂಸಿಸುವವರು, ಕಟುಗರು), ಯೇ ಚ-ಯಾವ, ವೈಣುವಾಃ-ಮೇದಾರರೋ ಅವರು (ಬಿದಿರು ಕೆಲಸದವರು), ಸ್ನಾಯುಶೋಧಕಾಃ-ಪಶುಗಳ ಮಾಂಸಮಜ್ಜಾದಿಗಳಿಂದ ಚರ್ಮವನ್ನು ಬೇರ್ಪಡಿಸುವವರು, ವಿಣ್ಮೂತ್ರಹಾರಕಾಃ - ಮಲಮೂತ್ರಗಳನ್ನು ತೆಗೆಯುವವರು, ವ್ಯಾಧಾಃ - ವ್ಯಾಧರು (ಬೇಡರು), ಶ್ವಪಾಕಾಃ-ನಾಯಿಯನ್ನು ಬೇಯಿಸು ವವರು, ಚರ್ಮಶೋಧಕಾಃ-ಚರ್ಮವನ್ನು(ಹದ) ಮಾಡುವವರು, ಗ್ರಾಮ್ಯಾರಣ್ಯ ವಿಭೇದೇನ-ಗ್ರಾಮ್ಯ, ಅರಣ್ಯವೆಂಬ ಭೇದದಿಂದ, ಕಿರಾತಾಃ-ಕಿರಾತರು, ಶಬರಾದಯಃ-ಶಬರರೇ ಮೊದಲಾದವರು, ಪುಲ್ಕಸಾಃ-ಪುಲ್ಕಸರೂ, ಪುಲಿಂದಾಶ್ಚ- ಪುಲಿಂದರೂ, (ಎಂಬುದಾಗಿ), ಮ್ಲೇಚ್ಛ ಜಾತಯಃ- ಮ್ಲೇಚ್ಛ (ವರ್ಣ ಬಾಹಿರ) ಜಾತಿಗಳು, ಪುಷ್ಕಲಾಃ-ಬಹಳವಾಗಿರುತ್ತವೆ; ಕಿರಾತೇಷು-ಕಿರಾತರೆಂಬುವರಲ್ಲಿ ನಿಷಾದಾಶ್ಚ-ನಿಷಾದರೆಂಬುವರೂ, ಮತ್ಸ್ಯಾದಾಃ-ಮೀನು ತಿನ್ನುವವರೂ, ಮಾಂಸ ಜೀವಿನಃ-ಮಾಂಸಭಕ್ಷಣದಿಂದ ಜೀವಿಸುವವರೂ, ಕೇಚಿತ್-ಕೆಲವರು, ವನ್ಯಫಲಾಹಾರಾಃ-ಅರಣ್ಯದ ಫಲಗಳೇ ಆಹಾರವಾಗುಳ್ಳವರು; ಕೇಚನ-ಮತ್ತೆ ಕೆಲವರು, ಗ್ರಾಮ್ಯಾಃ ಅಪಿ-ಗ್ರಾಮಗಳಲ್ಲಿ ದೊರೆಯುವ ಫಲಾದಿ (ಧಾನ್ಯಾದಿ)ಗಳಿಂದ ಜೀವಿಸುವವರೂ, (ಇರುವರು); ಸ್ತೇಯೈಃ-ಕಳ್ಳತನಗಳಿಂದಲೂ, ಏತೈಃ-ಈ ಮೊದ

---

(ಬೇಟೆಗಾರರು), ಶ್ವಪಾಕರು (ನಾಯಿ ಮಾಂಸವನ್ನು ಬೇಯಿಸುವವರು), ಚರ್ಮವನ್ನು ಹದಮಾಡುವವರು, ಗ್ರಾಮ್ಯ, ಅರಣ್ಯವೆಂಬ ಭೇದವುಳ್ಳ ಕಿರಾತ, ಶಬರಾದಿಗಳು, ಪುಲ್ಕಸ, ಪುಲಿಂದ, ಮೊದಲಾದ ಮ್ಲೇಂಛ ಜಾತಿಗಳು ಬಹಳವಾಗಿವೆ; ಮತ್ಸ್ಯ (ಮೀನು) ಮಾಂಸಾದಿಗಳಿಂದ ಜೀವಿಸುವ ಕಿರಾತರಲ್ಲಿ ಸೇರುವ ನಿಷಾದರೆಂಬುವರು, ಕೆಲವರು ಅರಣ್ಯದಲ್ಲಿ ದೊರೆಯುವ ಫಲಗಳಿಂದ ಜೀವಿಸುವವರು, ಕೆಲವರು ಗ್ರಾಮಗಳಲ್ಲಿ ಲಭ್ಯವಾಗುವ (ಧಾನ್ಯಾದಿ) ಪಕ್ವಫಲಗಳಿಂದ ಜೀವಿಸುವವರು, ಸ್ತೇಯ (ಕಳ್ಳತನ) ದಿಂದ ಜೀವಿಸುವವರು, ಇವೇ ಮೊದಲಾದ ಜೀವನೋಪಾಯಗಳುಳ್ಳವರು, ಬಹುವಿಧವಾಗಿರುವರು (ಅವರ ಜಾತಿಗಳಿಗೂ ಅವರ ವೃತ್ತಿಗಳಿಗೂ ಯಾವ ನಿಯಮಗಳೂ ಅನ್ವಯಿಸದೇ ಆಯಾ ವೃತ್ತಿಗಳ ಹೆಸರಿನಿಂದಲೇ ಕರೆಯಲಾಗುವ ನಾನಾ ಸಂಕರಜಾತಿಗಳೂ ಇರುತ್ತವೆ) (೬೪-೬೭). ಸ್ವೇಚ್ಛಾವೃತ್ತಿಗಳಿಂದ ಜೀವಿಸುವ, ಈ ನಾನಾ ಜಾತಿಯವರು, ರಾಜನು ಪ್ರಬಲನಾಗಿರುವಾಗ, ಶಾಂತರಾಗಿರುತ್ತಾರೆ

ಲಾದ, ನಾನಾವಿಧ್ಯೈಃ-ಬಹುವಿಧಗಳಿಂದ, ಪ್ರಾಯಃ-ಬಹುವಾಗಿ, ಜೀವನಕಾರಿಣಃ-ಜೀವಿತವನ್ನು ನಡೆಸುವವರೂ (ಇರುತ್ತಾರೆ).

ಶಾಂತಾಃ ಸ್ಯುಃ ಪ್ರಬಲೇ ರಾಜ್ಞಿ ಪ್ರಬಲಾಃ ನಿರ್ಬಲೇ ನೃಪೇ ।
ಇತಿ ತೇ ಕಥಿತೋ ರಾಜನ್ ಲೋಕೇ ಜೀವನಹೇತವಃ ॥ ೬೮ ॥
ತಥೋಪದ್ರಾವಕಾಶ್ಚಾಪಿ ನಾನಾಜಾತಿವಿಭೇದತಃ ।
ಶುದ್ಧತಾ ತಾರತಮ್ಯಂ ಚಾಪ್ಯಾಶ್ರಮಾಣಾಂ ಪ್ರಸಂಗತಃ ॥ ೬೯ ॥

ರಾಜ್ಞಿ-ರಾಜನು, ಪ್ರಬಲೇ-ಬಲಿಷ್ಠನಾಗಿರಲು, ಶಾಂತಾಃ-(ಈ ಪೂರ್ವೋಕ್ತ ಸಂಕರಜಾತಿಯ, ಸ್ವೇಚ್ಛಾಜೀವಿಗಳು) ಶಾಂತರಾಗಿ, ಸ್ಯುಃ-ಇರುತ್ತಾರೆ; ನೃಪೇ- ರಾಜನು, ನಿರ್ಬಲೇ-ದುರ್ಬಲನಾದರೆ (ಶಕ್ತಿಹೀನನಾದರೆ), ಪ್ರಬಲಾಃ-ಪ್ರಬಲರಾಗುತ್ತಾರೆ (ಪ್ರಜೆಗಳಿಗೆ ಉಪದ್ರವಕಾರಕರಾಗುತ್ತಾರೆ-ಪ್ರಜಾಪೀಡಕರಾಗುತ್ತಾರೆ); ಇತಿ- ಹೀಗೆ, ರಾಜನ್-ಹೇ ರಾಜನೇ!, ಲೋಕೇ-ಜಗತ್ತಿನಲ್ಲಿ ಜೀವನಹೇತವಃ- ಜೀವನೋಪಾಯ ಸಾಧನಗಳೂ, ತಥಾ-ಹಾಗೂ, ಉಪದ್ರಾವಕಾಶ್ಚ-(ಅನ್ಯರಿಂದ ಅವುಗಳಿಗೆ ಪ್ರಾಪ್ತವಾಗುವ ಪೀಡೆಯ ಕಾರಣಗಳೂ) ಉಪದ್ರವನಿಮಿತ್ತಗಳೂ, ನಾನಾಜಾತಿವಿಭೇದತಃ-ವಿವಿಧ ಜಾತಿಭೇದದಿಂದ, ಶುದ್ಧತಾತಾರತಮ್ಯಂ ಚ-ಶೌಚಭಂಗವನ್ನು ಪರಿಹರಿಸಿಕೊಳ್ಳುವ ವಿವಿಧ (ಕರ್ಣಸ್ಪರ್ಶ, ಆಚಮನ, ಸ್ನಾನಾದಿ ತರತಮಗಳುಳ್ಳ) ಪ್ರಕಾರದ ಶುದ್ಧತೆಯೂ,

---

(ಪ್ರಜಾಪೀಡಕರಾಗುವುದಿಲ್ಲ—ವಿಹಿತ ವೃತ್ತಿಗಳಿಂದ ನಿಯತಜೀವನವನ್ನು ನಡೆಸುವ ಪ್ರಜೆಗಳು ಸುಖದಿಂದಿರುತ್ತಾರೆ); ಹಾಗಲ್ಲದೇ ರಾಜನು ಇವರನ್ನು ನಿಗ್ರಹಿಸಲು ನಿರ್ವೀರ್ಯನಾದರೆ (ದುರ್ಬಲನಾದರೆ), ಈ ಸಂಕರಜಾತಿಯ ಸ್ವೇಚ್ಛಾಚಾರಿಗಳು, ಧರ್ಮಮಾರ್ಗದಲ್ಲಿರುವ ಪ್ರಜೆಗಳಿಗೆ, ನಾನಾ ವಿಧದಿಂದ ಉಪದ್ರವಗಳನ್ನು (ತೊಂದರೆಗಳನ್ನು— ಹಿಂಸೆಗಳನ್ನು) ಉಂಟುಮಾಡುತ್ತಾರೆ; ಹೇ ರಾಜನ್ !, ಜಗತ್ತಿನಲ್ಲಿ ಪ್ರಾಪ್ತವಾಗುವ ಸಂಕರಜಾತಿಗಳನ್ನೂ, ವಿವಿಧ ಜಾತಿಯವರ ಜೀವಿಕಾವೃತ್ತಿಗಳನ್ನೂ, ಹಾಗೂ ಆ ವೃತ್ತಿಗಳಿಗೆ ಅನುಷ್ಠಾನಗಳಿಗೆ ಪ್ರಾಪ್ತವಾಗುವ ಉಪದ್ರವಗಳನ್ನೂ ಮತ್ತು ವಿವಿಧ ಜಾತಿಭೇದಾನುಗುಣವಾಗಿ, ನಿಯತ ವರ್ಣಾಶ್ರಮಾಚಾರವುಳ್ಳ ಪ್ರಜೆಗಳಿಗೆ, ಸಂಕರಜಾತಿಗಳ ದರ್ಶನ ಸ್ಪರ್ಶನಾದಿಗಳಿಂದ ಉಂಟಾಗುವ ಶೌಚಭಂಗವನ್ನು ಪರಿಹರಿಸಿಕೊಂಡು ಶುದ್ಧರಾಗುವ ಮಾರ್ಗವನ್ನೂ, ಪ್ರಸಂಗಾನುಸಾರವಾಗಿ ಆಶ್ರಮಗಳ ತಾರತಮ್ಯಗಳನ್ನೂ ನಿನಗಾಗಿ ನಿರೂಪಿಸಿರುವೆನು (೬೮-೬೯).

ಇ೧ನೇ ಅಧ್ಯಾಯವು ಮುಗಿದುದು.

ಅಪಿ-ಮತ್ತು ಪ್ರಸಂಗತಃ- ಪ್ರಸಂಗಾನುಸಾರವಾಗಿ, ಆಶ್ರಮಾಣಾಂ-ಆಶ್ರಮಗಳ, (ತಾರತಮ್ಯಂ- ತಾರತಮ್ಯವೂ), ತೇ-ನಿನಗೆ, ಕಥಿತಃ-(ಈ ಎಲ್ಲವೂ) ಹೇಳಲ್ಪಟ್ಟಿತು.

ಇಂದ್ರದ್ಯುಮ್ನ ಭೃಗು ಸಂವಾದದಲ್ಲಿ ಜಾತಿವಿವೇಕವೆಂಬ
೩೧ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೨

ಶ್ರೀ ವೇದವ್ಯಾಸಾಯ ನಮಃ

**ರಾಜೋವಾಚ—**

**ನಾನಾಸಂಸಾರಹೇತೂನಾಂ ಲಿಂಗಾನಾಂ ಭೇದನೇ ನೃಣಾಂ ।**
**ಜಾಯತೇ ಮೋಕ್ಷಸಂಪತ್ತಿರಿತ್ಯಹಂ ಶ್ರುತವಾನ್ ಮುನೇ ॥ ೧ ॥**
**ಆದ್ಯದ್ವಿತೀಯಜಾತೀಯಜೀವಾ ಏವ ಸ್ವರೂಪತಃ ।**
**ಮುಕ್ತಾಃ ಕಿಂ ನು ಪ್ರಕುರ್ವಂತಿ ಪೂರ್ಣಕಾಮಾಃ ಸದಾ ಹಿ ತೇ ॥ ೨ ॥**

ಅರ್ಥ:—ಮುನೇ-ಹೇ ಭೃಗುಋಷಿಗಳೇ !, ನಾನಾಸಂಸಾರಹೇತೂನಾಂ-ವಿವಿಧ ಜನ್ಮಗಳನ್ನೆತ್ತಲು ಕಾರಣಗಳಾದ, ಲಿಂಗಾನಾಂ-ಲಿಂಗದೇಹಗಳ, ಭೇದನೇ (ಸತಿ)-ಭಂಗವಾಗುತ್ತಿರಲು, ನೃಣಾಂ-ಮನುಷ್ಯರಿಗೆ, ಮೋಕ್ಷಸಂಪತ್ತಿಃ-ಮೋಕ್ಷ ಸಂಪ್ರಾಪ್ತಿಯು, ಜಾಯತೇ-ಉಂಟಾಗುತ್ತದೆ, ಇತಿ-ಎಂದು, ಅಹಂ-ನಾನು, ಶ್ರುತವಾನ್-ಕೇಳಿದವನು (ಆಗಿದ್ದೇನೆ); ಸ್ವರೂಪತಃ-ಸ್ವರೂಪದಿಂದಲೇ, ಆದ್ಯ ದ್ವಿತೀಯಜಾತೀಯಜೀವಾಃ-ಒಂದು, ಎರಡನೆಯ ವರ್ಗಗಳ (೧೭ ಜಾತಿಯ) ಜೀವರು, ಮುಕ್ತಾಃ-ಮುಕ್ತರಾದನಂತರ, ಸದಾ-ನಿತ್ಯವೂ, ಪೂರ್ಣಕಾಮಾಃ-

---

ಅಧ್ಯಾಯ ೩೨

ತಾತ್ಪರ್ಯ:—ಜೀವರು, ಸಂಸಾರದಲ್ಲಿ ಸುತ್ತಲು (ದೇಹದಿಂದ ದೇಹಕ್ಕೆ ಹೋಗುತ್ತ ಸುತ್ತಲು) ಕಾರಣವಾದ ಲಿಂಗದೇಹದ ಭಂಗವಾದನಂತರ ಮೋಕ್ಷವು ದೊರೆಯುವುದೆಂದು, ನಾನು, ಹೇ ಋಷಿಗಳೇ! ಕೇಳಿರುವೆನು; ಒಂದೆರಡನೆ ಜಾತಿಯ ಜೀವರು, ಮುಕ್ತರಾಗಿ, ಪೂರ್ಣಕಾಮರಾಗಿರುವಾಗ, ಸ್ವರೂಪಸಹಜವಾದ ವೃತ್ತಿಗಳೆಂದು ತಾವು ನಿರೂಪಿಸಿದ, ಅವರ ವೃತ್ತಿಗಳೇನಾಗುವುವು? ಮುಕ್ತಿಯಲ್ಲಿ ಆ ಜೀವರು ಏನು ಮಾಡುವರು (ಈ ವೃತ್ತಿಗಳಿಂದಾಗಬೇಕಾದುದೇನು?) (೧-೨). ಭೃಗುಋಷಿಗಳು ಹೇಳುತ್ತಾರೆ:—(ಜಾತಿಗಣನೆಯಲ್ಲಿ) ಮೊದಲನೆಯ ವರ್ಗ ದವರೆಂಬ ಬ್ರಾಹ್ಮಣಾದಿ ನಾಲ್ಕುವರ್ಣದವರೂ, ಮೂರ್ಧಾವಸಿಕ್ತ ಮತ್ತು

ಪೂರ್ಣಾನಂದವುಳ್ಳವರಾದ, ತೇ-ಅವರು, ಕಿಂ ನು ಕುರ್ವಂತಿ-(ಮುಕ್ತಿಯಲ್ಲಿ) ಏನು ಮಾಡುತ್ತಾರೆ ?

ಭೃಗುರುವಾಚ—

ಬ್ರಾಹ್ಮಣಾದ್ಯಾಶ್ಚತುರ್ವರ್ಣಾ ಆದ್ಯಾ ಯೇ ಪರಿಕೀರ್ತಿತಾಃ ।
ಮೂರ್ಧಾವಸಿಕ್ತಸೂತಾದ್ಯಾ ಅನುಲೋಮವಿಲೋಮಿನಃ ॥ ೩ ॥
ದ್ವಿತೀಯಾ ದ್ವಾದಶೈವಂ ಸ್ಯುರ್ನೃಪಷೋಡಶಜಾತಯಃ ।
ಏತಜ್ಜಾತೀಯಯೋಷಾಭಿಃ ಸ್ವೀಯಾಭಿಃ ಸರ್ವದೈವ ತು ॥ ೪ ॥
ಸ್ವರೂಪಾನಂದಮಾಪನ್ನಾ ಮೋದಂತೇ ವಿಷ್ಣುಸದ್ಮಸು ।

ಭೃಗುಋಷಿಗಳು ಹೇಳುತ್ತಾರೆ—

ಬ್ರಾಹ್ಮಣಾದ್ಯಾಃ-ಬ್ರಾಹ್ಮಣರೇ ಮೊದಲಾದ, ಚತುರ್ವರ್ಣಾಃ-ನಾಲ್ಕು ಜಾತಿಯವರು, ಯೇ-ಯಾರು, ಆದ್ಯಾಃ-ಒಂದನೆಯ ವರ್ಗದವರೆಂದು, ಪರಿಕೀರ್ತಿತಾಃ-(ಈ ಹಿಂದೆ) ಹೇಳಲ್ಪಟ್ಟಿರುವರೋ (ಅವರು), ಮೂರ್ಧಾವಸಿಕ್ತ ಸೂತಾದ್ಯಾಃ-ಮೂರ್ಧಾವಸಿಕ್ತ ಮತ್ತು ಸೂತಜಾತಿಯವರೇ ಮೊದಲಾದ, ಅನುಲೋಮ ವಿಲೋಮಿನಃ-ಅನುಲೋಮಿ ಮತ್ತು ಪ್ರತಿಲೋಮಿಗಳು, ದ್ವಾದಶ- ೧೨ ಜಾತಿಗಳು, ದ್ವಿತೀಯಾಃ-ಎರಡನೆಯ ವರ್ಗದವರು, ಸ್ಯುಃ-ಆಗಿರುತ್ತಾರೆ; ನೃಪ-ಹೇ ರಾಜನ್!, ಏವಂ-ಹೀಗೆ, ಷೋಡಶಜಾತಯಃ-೧೬ ಜಾತಿಯವರು, ಸ್ವೀಯಾಭಿಃ-ತಮ್ಮ ನಿಯತಭಾರ್ಯರಾದ, ಏತಜ್ಜಾತೀಯ ಯೋಷಾಭಿಃ-ಈ ಜಾತಿಗಳಿಗೇ ಸೇರಿದ ಸ್ತ್ರೀಯರಿಂದ ಸಹಿತರಾಗಿ, ವಿಷ್ಣುಸದ್ಮಸು-ವೈಕುಂಠಾದಿ ವಿಷ್ಣು ಲೋಕಗಳಲ್ಲಿ, ಸ್ವರೂಪಾನಂದಂ-ಸ್ವಸ್ವರೂಪಾನಂದವನ್ನು ಆಪನ್ನಾಃ- ಹೊಂದಿದವರಾಗಿ, ಸರ್ವದಾ ಏವ-ಎಲ್ಲ ಕಾಲದಲ್ಲಿ ಮೋದಂತೇ- ಸುಖಿಸುತ್ತಿರುವರು.

ವೇದಾಧಿಕಾರಿಣಸ್ತತ್ರ ವೇದಾದ್ಯಾಗಮನಿಷ್ಠಿತಾಃ ॥ ೫ ॥

---

ಸೂತ ಮೊದಲಾದ[1] ಅನುಲೋಮಿ ಪ್ರತಿಲೋಮಿಗಳೆಂಬ ೧೨ ಜಾತಿಯವರು ದ್ವಿತೀಯ ವರ್ಗದವರು, ಹೀಗೆ ೧೬ ಜಾತಿಯ ಜೀವರು, ಸ್ವಸ್ವಜಾತೀಯ ನಿಯತ ಪತ್ನಿಯರೊಂದಿಗೆ, ಮುಕ್ತರಾಗಿ, ವಿಷ್ಣುಲೋಕಗಳಲ್ಲಿ ಸ್ವರೂಪಾನಂದವನ್ನು ಹೊಂದಿ, ನಿತ್ಯವೂ (ಎಲ್ಲ ಕಾಲದಲ್ಲಿಯೂ) ಸುಖಿಸುತ್ತಿರುವರು (೩-೪). ಇವರಲ್ಲಿ ವೇದಾಧಿ

1. ಮೂರ್ಧಾವಸಿಕ್ತ—ಬ್ರಾಹ್ಮಣಪುರುಷ ಕ್ಷತ್ರಿಯ ಸ್ತ್ರೀಯಿಂದ ಜನಿಸಿದವನು; ಸೂತ—ಕ್ಷತ್ರಿಯಪುರುಷ ಬ್ರಾಹ್ಮಣಸ್ತ್ರೀಯಿಂದ ಜನಿಸಿದವನು; ವಿವರಗಳು ೩೫ನೇ ಅಧ್ಯಾಯದಲ್ಲಿ ಪ್ರಸಕ್ತವಾಗಲಿವೆ

ಸ್ವಭಾವಾದೇವ ತೇ ವಿಷ್ಣುಂ ನಾನಾಯಾಗೈರ್ಯಜಂತಿ ತೇ ।
ಅನ್ಯಾಧಿಕಾರಿಣೋ ಯೇ ಚ ಸ್ವೋಚಿತೈಸ್ತಮುಪಾಸತೇ ॥ ೬ ॥

ತತ್ರ-ಇವರ (ಈ ಮುಕ್ತರ) ಮಧ್ಯದಲ್ಲಿ, ವೇದಾಧಿಕಾರಿಣಃ-ವೇದಾಧಿಕಾರವುಳ್ಳ ಜಾತಿಯವರು, ಸ್ವಭಾವಾದೇವ-ಸ್ವಭಾವದಿಂದಲೇ, ವೇದಾದ್ಯಾಗಮನಿಷ್ಠಿತಾಃ-ವೇದಾದಿ ಆಗಮಗಳಲ್ಲಿ ನಿಷ್ಠೆಯುಳ್ಳವರಾಗಿ (ಆಸಕ್ತಿ ಹೊಂದಿದ್ದು), ತೇ-ಅವರು, ವಿಷ್ಣುಂ-ಶ್ರೀವಿಷ್ಣುವನ್ನು ನಾನಾಯಾಗೈಃ-ವಿವಿಧ ಯಜ್ಞಗಳಿಂದ, ಯಜಂತಿ-ಪೂಜಿಸುತ್ತಾರೆ; ಯೇ ಚ-ಯಾವ ಮುಕ್ತರು, ಅನ್ಯಾಧಿಕಾರಿಣಃ-ಇತರ (ಪುರಾಣಶ್ರವಣಾದಿ, ನಾಮಜಪಕೀರ್ತನಾದಿ) ಅಧಿಕಾರವುಳ್ಳವರೋ, ತೇ-ಅವರು, ಸ್ವೋಚಿತೈಃ-ಸ್ವಯೋಗ್ಯವಾದ ಕರ್ಮಾಚರಣೆಗಳಿಂದ, ತಂ-ಆ ಶ್ರೀ ವಿಷ್ಣುವನ್ನು ಉಪಾಸ್ಯತೇ-ಸೇವಿಸುತ್ತಾರೆ.[1]

ನಿಪುಣಾ ಉತ್ತಮೋ ಶಿಲ್ಪೇ ಹೈಮಿಕಾದ್ಯಾಃ ಕುವಿಂದಕಾಃ ।
ನಾನಾವಾಣಿಜ್ಯಕಾರ್ಯೇ ಚ ರಥ್ಯಾಲಂಕಾರಹೇತವಃ ॥ ೭ ॥
ಹರಿಪ್ರೀತ್ಯರ್ಥಮೇವೈತೇ ವೈಕುಂಠಾದೌ ಸ್ವಭಾವತಃ ।
ವ್ಯವಹಾರಂ ಪ್ರಕುರ್ವಂತಿ ಸ್ವೋಚಿತೈಃ ಪಣ್ಯಕಾರಿಭಿಃ ॥ ೮ ॥

---

ಕಾರಿಗಳಾದವರು, ವೇದಾದಿ ಆಗಮಗಳಲ್ಲಿ ನಿಷ್ಠೆಯುಳ್ಳವರಾಗಿ, ಸ್ವಭಾವದಿಂದಲೇ ನಾನಾ ಯಾಗಗಳನ್ನಾಚರಿಸುತ್ತ ಶ್ರೀವಿಷ್ಣು ಸೇವಾತತ್ಪರರಾಗಿರುತ್ತಾರೆ; ಇತರ ಅಧಿಕಾರಿಗಳು, (ತಂತ್ರಾದಿಗಳಲ್ಲಿ ನಾಮಸಂಕೀರ್ತನಾದಿಗಳಲ್ಲಿ ಅಧಿಕಾರವುಳ್ಳ ಈ ೧೬ ಜಾತಿಗಳಲ್ಲಿರುವ ಜೀವರು), ತಮತಮಗೆ ಉಚಿತವಾದ ಕರ್ಮಗಳನ್ನಾಚರಿಸುತ್ತ ಶ್ರೀವಿಷ್ಣುವನ್ನು ಸೇವಿಸುತ್ತಾರೆ (೫-೬). ಭಂಗಾರದ ಆಭರಣಗಳನ್ನು ರಚಿಸುವ, ಸೂಕ್ಷ್ಮವಸ್ತ್ರಾದಿಗಳನ್ನು ತಯಾರಿಸುವ ಉತ್ತಮ ಶಿಲ್ಪಗಳಲ್ಲಿ(ಸಂಸಾರಾವಸ್ಥೆಯಲ್ಲಿ) ನಿಪುಣರಾಗಿದ್ದವರು, ಹಾಗೂ, ವಿವಿಧ ವಾಣಿಜ್ಯಾದಿ ವ್ಯವಹಾರಗಳಲ್ಲಿಯೂ, ರಾಜಮಾರ್ಗಗಳನ್ನು ಅಲಂಕರಿಸುವುದರಲ್ಲಿಯೂ, ಕುಶಲರಾಗಿದ್ದವರು, ಸ್ವಭಾವದಿಂದಲೇ, ವೈಕುಂಠಾದಿ ಮುಕ್ತಲೋಕಗಳಲ್ಲಿ ಶ್ರೀವಿಷ್ಣು ಪ್ರೀತ್ಯರ್ಥವಾಗಿ, ತಂತಮ್ಮ ಕುಶಲತೆಯನ್ನು ಪ್ರದರ್ಶಿಸುವ

---

1. ಮುಕ್ತರಲ್ಲಿ ಸಹ ಜಾತಿಗಳುಂಟೇ, ಎಂದು ಸಂಶಯಪಡುವ ಕಾರಣವಿಲ್ಲ; ಅಮುಕ್ತರಾದ ಆಯಾ ಜಾತಿಯ ಜೀವರಿಗೆ ವಿಹಿತವಾದ ಧರ್ಮಗಳು, ಯಾರ ಸ್ವರೂಪವೇ ಆಗಿರುವುವೋ, ಅವರು ಆ ಜಾತಿಯ ಜೀವರೆಂದು ಹೇಳಲ್ಪಡುತ್ತಾರಲ್ಲದೇ, ಮುಕ್ತಿಯಲ್ಲಿ ಇಲ್ಲಿಯಂತೆ, ಜಾತಿಭೇದಗಳ ನಿಮಿತ್ತ ಉಚ್ಚನೀಚತ್ವಭಾವನೆಗಳಿಗೆ ಅವಕಾಶವೇ ಇರುವುದಿಲ್ಲ. ಸ್ವರೂಪದಿಂದಿರುವ ಅವರಿಗೆ, ಪ್ರಾಕೃತರೀತಿಗಳೇ ಇಲ್ಲದಿರಲು, ತನ್ನಿಮಿತ್ತವಾದ ಮಡಿ ಮೈಲಿಗೆ, (ಶೌಚಭಂಗಾದಿ) ಸ್ಪೃಶ್ಯ-ಅಸ್ಪೃಶ್ಯತಾದಿ ಕಲ್ಪನೆಗಳಿಗೆಡೆಯಿಲ್ಲ. ಆದರೂ ಆ ಎಲ್ಲರು ಪರಸ್ಪರ ಯಥೋಚಿತವಾಗಿಯೇ ವರ್ತಿಸುತ್ತಾರೆಂಬಂಶವನ್ನು ಲಕ್ಷಿಸಬೇಕು.

ಉತ್ತಮೇ-ಶ್ರೇಷ್ಠವಾದ, ಶಿಲ್ಪೇ-ರಚನೆಗಳಲ್ಲಿ ನಿಪುಣಾಃ-ನಿಪುಣರಾದ, ಹೈಮಕಾದ್ಯಾಃ-ಸುವರ್ಣಕೆಲಸಗಳನ್ನು ಮಾಡುವವರು, ಕುವಿಂದಕಾಃ-ವಸ್ತ್ರಾದಿಗಳನ್ನು ತಯಾರಿಸುವವರು, ನಾನಾವಾಣಿಜ್ಯಕಾರ್ಯೇ-ವಿವಿಧವಾಣಿಜ್ಯಾದಿ ಕೆಲಸಗಳಲ್ಲಿ (ನಿಪುಣಾಃ-ಕುಶಲರು), ರಥ್ಯಾಲಂಕಾರಹೇತವಃ-ರಾಜಬೀದಿಗಳನ್ನು ಅಲಂಕರಿಸುವವರು, ಏತೇ-(ಈ ಮೊದಲಾದ) ಮುಕ್ತರು, ವೈಕುಂಠಾದೌ- ವೈಕುಂಠ ಮೊದಲಾದ ಮುಕ್ತಸ್ಥಾನಗಳಲ್ಲಿ ಸ್ವಭಾವತಃ-ಸ್ವಭಾವದಿಂದಲೇ, ಹರಿಪ್ರೀತ್ಯರ್ಥಂ ಏವ-ಶ್ರೀವಿಷ್ಣು ಪ್ರೀತಿಗಾಗಿ ಮಾತ್ರ, (ಯಾವ ಅನ್ಯಪ್ರಯೋಜನವಿಲ್ಲದೇ), ಸ್ವೋಚಿತೈಃ-ತಮತಮಗೆ ಯೋಗ್ಯವಾದ, ಪಣ್ಯಕಾರಿಭಿಃ-ವ್ಯವಹಾರಗಳಿಂದ, ವ್ಯವಹಾರಂ ಪ್ರಕುರ್ವಂತಿ-ವ್ಯವಹರಿಸುತ್ತಾರೆ (ಆಯಾ ಕ್ರಿಯೆಗಳಲ್ಲಿ ತೊಡಗಿ ಆನಂದಿಸುತ್ತಾರೆ).

ವೃಕ್ಷಾದಯಃ ಸ್ವರೂಪೇಣ ತೇಽಪಿ ಸ್ವೇಚ್ಛ್ಯಾದಿಚಾರಿಣಃ ।
ಸ್ಥಾನೇ ಸ್ಥಾನೇ ವಿಮುಂಚಂತಿ ಫಲಪುಷ್ಪಾದಿಸಂಚಯಂ ॥ ೯ ॥

ಸ್ವರೂಪೇಣ-ಸ್ವರೂಪದಿಂದ, ವೃಕ್ಷಾದಯಃ-ವೃಕ್ಷ ಮೊದಲಾದ ಜೀವರು, ತೇ ಅಪಿ-ಅವರೂ ಸಹ (ಮುಕ್ತ ವೃಕ್ಷಾದಿ ಜೀವರೂ), ಸ್ವೇಚ್ಛ್ಯಾದಿಚಾರಿಣಃ-ಸ್ವೇಚ್ಛಾನುಸಾರವಾದ ವಿಹಾರವುಳ್ಳವರೇ (ಸಂಚಾರವುಳ್ಳವರೇ-ಅಮುಕ್ತಾವಸ್ಥೆಯಲ್ಲಿನಂತೆ ಸ್ಥಾವರರಲ್ಲ); ಸ್ಥಾನೇ ಸ್ಥಾನೇ-(ತಾವು ಸಂಚರಿಸುವ) ಪ್ರತಿಸ್ಥಳಗಳಲ್ಲಿ ಫಲಪುಷ್ಪಾದಿ ಸಂಚಯಂ-ಫಲಪುಷ್ಪಾದಿಗಳ ರಾಶಿಯನ್ನೇ, ವಿಮುಂಚಂತಿ-ಬಿಡುತ್ತವೆ (ಸುರಿಸಿ ಹೋಗುತ್ತವೆ).

ಸಾತ್ತ್ವಿಕಾನ್ಯೇವ ತಾನ್ಯೇತೇ ಜೀವಾ ಭುಂಜಂತಿ ಲೀಲಯಾ ।
ನಾನೋದ್ಯಾನಗತಾಃ ಕೇಚಿದ್ರಥ್ಯಾಟ್ಟಾಲಕವರ್ತಿನಃ ॥ ೧೦ ॥
ರಥೈರಶ್ವೈರ್ಗಜಾದ್ಯೈಶ್ಚ ಯಾನೈಃ ಕ್ರೀಡಂತಿ ಜಾತುಚಿತ್ ।

---

ನಾನಾ ಕರ್ಮಗಳಲ್ಲಿಯೂ ತೊಡಗುತ್ತಾರೆ[1] (೭-೮). ಸ್ವರೂಪದಿಂದ ವೃಕ್ಷಾದಿಗಳಾದ (ಲತಾದಿ) ಜೀವರೂ, ಮುಕ್ತರಾಗಿ ಇಚ್ಛಾನುಸಾರವಾಗಿ ಸಂಚರಿಸುತ್ತಾರೆ (ಸಂಸಾರಾವಸ್ಥೆಯಲ್ಲಿದ್ದಂತೆ ಸ್ಥಾವರತ್ವದ ನಿಯಮವಿಲ್ಲ); ಈ ಮುಕ್ತರು ಸಂಚರಿಸಿದಲ್ಲೆಲ್ಲ ಫಲ ಪುಷ್ಪಗಳ ರಾಶಿಗಳನ್ನೇ ಸುರಿದು ಹೋಗುತ್ತಾರೆ (೯). ಈ ಫಲಪುಷ್ಪಾದಿಗಳು ಶುದ್ಧ

1. ಜ್ಞಾನ-ಇಚ್ಛೆ-ಮತ್ತು ಕ್ರಿಯೆಗಳು ಜೀವಸ್ವರೂಪಧರ್ಮಗಳು; ಸ್ವರೂಪರೀತಿಯಿಂದಲೇ ವಿಹರಿಸುವ ಮುಕ್ತಜೀವರು, ತಮ್ಮ ಸ್ವರೂಪಭೂತವೇ ಆದ ನಾನಾಕ್ರಿಯೆಗಳಿಂದ, ಶ್ರೀಹರಿಯನ್ನು ಸೇವಿಸುವುದು ಅನುಪಪನ್ನವೇನಲ್ಲ; ಮುಕ್ತರ ಕ್ರಿಯೆಗಳು ಅನ್ಯಪ್ರಯೋಜನಕ್ಕೆ ಸಾಧನಗಳಲ್ಲ; ಮೌಕ್ತಿಕಾನಂದದ ಅಭಿವ್ಯಕ್ತಿಯಿಂದ ಮಾತ್ರ ಸಂಭವಿಸುತ್ತವೆ; 'ಸಾಧ್ಯಾನಂದಸ್ವರೂಪಾಸ್ತು ಮುಕ್ತಿರ್ನೈವಾತ್ರ ಸಾಧನಂ'—ಸಾಧಿಸಲ್ಪಟ್ಟ (ಸಿದ್ಧವಾದ) ಆನಂದಸ್ವರೂಪರಾದ ಮುಕ್ತರಿಗೆ ಸಾಧನವೆಂಬುದಿಲ್ಲ, ಇತ್ಯಾದಿ ಹೇಳುವ ಪ್ರಮಾಣಗಳೊಡನೆ ಈ ಪ್ರಮೇಯವನ್ನು ಗ್ರಹಿಸಬೇಕು.

**ಅಶ್ವಾದ್ಯಾ ಅಪಿ ಮುಕ್ತಾಸ್ತೇ ಸರ್ವೇ ಮೋದಿನ ಏವ ಹಿ ॥ ೧೧ ॥**

ಸಾತ್ವಿಕಾನಿ-ಶುದ್ಧಸತ್ತ್ವಗುಣಾತ್ಮಕವಾದ, ತಾನಿ-ಅವುಗಳನ್ನು (ಆ ಫಲಪುಷ್ಪಗಳನ್ನು), ಏತೇ ಜೀವಾಃ-ಅಲ್ಲಿರುವ ಅನ್ಯ ಮುಕ್ತಜೀವರು, ಲೀಲಯಾ-ಲೀಲೆಯಿಂದ (ಕ್ರೀಡೆಗಾಗಿ), ಭುಂಜಂತಿ-ಭೋಗಿಸುತ್ತಾರೆ; ಕೇಚಿತ್-ಕೆಲವರು (ಕೆಲವು ವೃಕ್ಷಾದಿ ಜೀವರು), ನಾನೋದ್ಯಾನಗತಾಃ-ವಿವಿಧ ಉದ್ಯಾನಗಳಲ್ಲಿ (ವಿಹಾರಸ್ಥಾನಗಳಲ್ಲಿ) ಇರವುವಾಗುತ್ತವೆ; (ಕೇಚಿತ್-ಮತ್ತೆ ಕೆಲವರು), ರಥ್ಯಾಟ್ಟಾಲಕವರ್ತಿನಃ- ಬೀದಿಗಳಲ್ಲಿ (ಉಭಯಪಾರ್ಶ್ವಗಳಲ್ಲಿ), ಅಟ್ಟಾಲಕಗಳಲ್ಲಿ (ಕಟ್ಟೆಗಳ ಮಧ್ಯದಲ್ಲಿ) ಸ್ಥಿರವಾಗಿರುವವೂ ಆಗಿರುತ್ತವೆ; ಜಾತುಚಿತ್-ಒಂದೊಂದು ವೇಳೆ, ರಥೈಃ-ರಥ, ಅಶ್ವೈಃ-ಅಶ್ವ, ಗಜಾದ್ಯೈಃ-ಆನೆ ಮೊದಲಾದ, ಯಾನೈಃ-ಯಾನಗಳಿಂದ (ವಾಹನಗಳಿಂದ) ಸಹಿತರಾಗಿ, ಕ್ರೀಡಂತಿ-ಕ್ರೀಡಿಸುತ್ತಾರೆ; ತೇ ಅಶ್ವಾದ್ಯಾಃ ಅಪಿ-(ಯಾನಗಳಾದ) ಅಶ್ವಾದಿಗಳೂ ಸಹ, ಮುಕ್ತಾಃ-ಮುಕ್ತರೇ; ಸರ್ವೇ-ಎಲ್ಲರೂ (ವಾಹನ-ವಾಹ್ಯಾದಿ ಎಲ್ಲರೂ), ಮೋದಿನಃ ಏವ-ಆನಂದ ಸ್ವರೂಪರೇ ಆಗಿರುವರು; (ಹೊತ್ತವನಿಗೆ ಶ್ರಮಾದಿಗಳು, ಹೊರಲ್ಪಟ್ಟವನಿಗೆ ಸುಖಾದಿಗಳೆಂಬ ಭೇದವಿಲ್ಲ).

**ನಿಂದ್ಯಾಸ್ತು ವೃತ್ತಯಸ್ತತ್ರ ನ ಪ್ರವರ್ತಂತಿ ಕರ್ಹಿಚಿತ್ ।**
**ತತ್ರಾಧಿಕಾರಿಜಾತ್ಯಾಸ್ತು ಸ್ತೋಚಿತ್ವೈರ್ನಾಮಮಂತ್ರಕೈಃ ॥ ೧೨ ॥**
**ಉಪಾಸತೇ ಹರಿಂ ನಿತ್ಯಂ ದೂರಾತ್ಪರಿಚರಂತಿ ಚ ।**

ತತ್ರ-ಮುಕ್ತರಲ್ಲಿ (ಮುಕ್ತಲೋಕಗಳಲ್ಲಿ), ನಿಂದ್ಯಾಃ-ನಿಂದ್ಯವಾದ (ಹೇಯವಾದ-ನಿಷಿದ್ಧಗಳಾದ), ವೃತ್ತಯಃ-ವೃತ್ತಿಗಳು (ಇಲ್ಲಿ ಕಂಡುಬರುವ ವ್ಯವಹಾರಗಳು-ವಂಚಕತ್ವಾದಿಗಳು), ಕರ್ಹಿಚಿತ್-ಎಷ್ಟು ಮಾತ್ರವೂ (ಒಮ್ಮೆಯೂ), ನ ಪ್ರವರ್ತಂತಿ ತು-ಪ್ರವರ್ತಿಸುವುದೇ ಇಲ್ಲ (ಯಾವ ಮುಕ್ತನಿಂದಲೂ ಅವು ಸಂಭವಿಸುವುದಿಲ್ಲ); ತತ್ರ-ಮುಕ್ತಜೀವರ ಮಧ್ಯದಲ್ಲಿ ಅಧಿಕಾರಿಜಾತ್ಯಾಃ-ವಿಶಿಷ್ಟಾಧಿಕಾರಗಳುಳ್ಳ ಉತ್ತಮ

---

ಸತ್ವಾತ್ಮಕವಾದವುಗಳು[1]—ಇವುಗಳನ್ನು ಮುಕ್ತಜೀವರು ಭೋಗಿಸುತ್ತಾರೆ; ಕೆಲವು ಮುಕ್ತವೃಕ್ಷಜೀವರು, ಉದ್ಯಾನ, ರಥಬೀದಿ, ಕಟ್ಟೆಗಳ ಮಧ್ಯದಲ್ಲಿ ಸ್ಥಿರವಾಗಿರುವುದೂ ಉಂಟು; ಮತ್ತು ಕೆಲವರು, ಅಶ್ವಗಜಾದಿಗಳಿಂದ ಎಳೆಯಲ್ಪಡುವ ರಥಗಳಲ್ಲಿ ಕೂತು ಕ್ರೀಡಿಸುತ್ತಾರೆ; ಅಶ್ವಾದಿ ವಾಹನಗಳೂ, ಮುಕ್ತಜೀವರೇ; ಸರ್ವರೂ ಆನಂದ ಸ್ವರೂಪರೇ (ಶ್ರಮಾದಿಗಳು ಯಾರಿಗೂ ಇಲ್ಲ) (೧೦-೧೧). ಮುಕ್ತರಲ್ಲಿ ನಿಂದ್ಯವಾದ ವೃತ್ತಿಗಳಾವವೂ ಪ್ರವರ್ತಿಸುವುದಿಲ್ಲ; ಯಾವ ಮುಕ್ತನಿಂದಲೂ ದೋಷಯುಕ್ತ ವ್ಯವಹಾರಗಳು

---

1. ಶುದ್ಧಸತ್ವವೆಂಬುದು ಸೃಷ್ಟಿಯಲ್ಲಿ ಎಂದೂ ಉಪಯೋಗಿಸಲ್ಪಡದ, (ರಜತಮಗಳ ಸ್ಪರ್ಶವಿಲ್ಲದ) ಪ್ರಕೃತಿತತ್ವದ ಒಂದು ಭಾಗ. ಈ ಪ್ರಮೇಯವು, ಮುಕ್ತರ ನಾನಾ ಭೋಗಗಳನ್ನು ವಿವರಿಸುವ ಮುಂದಿನ ಅಧ್ಯಾಯಗಳಲ್ಲಿ ಪ್ರಸಕ್ತವಾಗಲಿದೆ.

ಜಾತಿಯವರು, ಸ್ವೋಚಿತೈಃ - ಸ್ವಯೋಗ್ಯ ಕೃತಿಗಳಿಂದಲೂ (ಧರ್ಮಾಚರಣೆಯಿಂದಲೂ), ನಾಮಮಂತ್ರಕೈಃ-(ಅಧಿಕಾರಿಗಳಲ್ಲದವರು) ನಾಮಮಂತ್ರಗಳಿಂದಲೂ (ಮಂತ್ರಜಪಾದಿಗಳಿಂದ), ಹರಿಂ-ಶ್ರೀಹರಿಯನ್ನು ಉಪಾಸತೇ-ಸೇವಿಸುತ್ತಾರೆ ಮತ್ತು ದೂರಾತ್- (ಶೂದ್ರಾದಿ ವರ್ಣದವರು) ದೂರದಿಂದಲೇ, ಪರಿಚರಂತಿ-ಸೇವಕರಂತೆ ಆಜ್ಞಾಧಾರಕರಾಗಿ ವರ್ತಿಸುತ್ತಾರೆ.

ಸ್ವಾನಂದಮಾತ್ರಪೂರ್ಣಾಸ್ತೇ ವಿಜ್ಞೇಯಾ ಮಾನುಷೋತ್ತಮಾಃ ॥ ೧೩ ॥
ಜಂಬೂದ್ವೀಪಪತೇ ರಾಜ್ಞೋ ದಕ್ಷಸ್ಯ ಸತತಂ ಸ್ವತಃ ।
ಸ್ವೇಷ್ಟಸ್ತ್ರೀಪುತ್ರಭೃತ್ಯಾದ್ಯೈಃ ಸಂಭೃತೋ ವೈರಿವರ್ಜಿತಃ ॥ ೧೪ ॥
ಯಸ್ಯಸ್ಯ ಯತ್ಸುಖಂ ಲೋಕೇ ಮುಕ್ತವಿಪ್ರಸ್ಯ ತಾದೃಶಂ ।
ತದನ್ಯಜಾತೌ ವಿಜ್ಞೇಯಂ ಪೂರ್ವೋಕ್ತೇನ ಕ್ರಮೇಣ ತು ॥ ೧೫ ॥

ಮಾನುಷೋತ್ತಮಾಃ-ಮಾನುಷೋತ್ತಮರಾದ, ತೇ-ಆ ಮುಕ್ತರು, ಸ್ವಾನಂದ ಮಾತ್ರಪೂರ್ಣಾಃ-ಸ್ವರೂಪಾನಂದಾನುಭವದಿಂದಲೇ ಪೂರ್ಣರೆಂದು (ಅನ್ಯ ನಿರಪೇಕ್ಷರೆಂದು), ವಿಜ್ಞೇಯಾಃ-ತಿಳಿಯಲ್ಪಡತಕ್ಕವರು; ಯಃ-ಯಾರು, ಸ್ವೇಷ್ಟಸ್ತ್ರೀ ಪುತ್ರಭೃತ್ಯಾದ್ಯೈಃ-ತನಗೆ ಪ್ರಿಯರಾದ ಪತ್ನೀಪುತ್ರಭೃತ್ಯರಿಂದ, ಸಂಭೃತಃ- ಪರ್ಯಾಪ್ತನು (ಪೂರ್ಣನು-ಕೊರತೆಯಿಲ್ಲದವನು) ಆಗಿರುವನೋ, ವೈರಿವರ್ಜಿತಃ-ಶತ್ರುಗಳಿಲ್ಲದವನೋ,

---

ಸಂಭವಿಸುವುದೇ ಇಲ್ಲ; ಆಧಿಕಾರಿಕ ಜಾತಿಯವರು ಸ್ವಯೋಗ್ಯ ಕರ್ಮಾನುಷ್ಠಾನಗಳಿಂದ ಶ್ರೀಹರಿಯನ್ನು ಉಪಾಸಿಸುತ್ತಾರೆ—ಮತ್ತೆ ಕೆಲವರು ಸ್ವೋಚಿತ (ಸಾಧನಾವಸ್ಥೆಯಲ್ಲಿ ಗುರೂಪದಿಷ್ಟ ಸ್ವಯೋಗ್ಯ) ಮಂತ್ರಗಳಿಂದ ಸೇವಿಸುತ್ತಾರೆ; ಇನ್ನೂ ಅಧಮರು (ಕೆಳಗಿನ ಮುಕ್ತರು) ಶ್ರೀಹರಿಯನ್ನು ದೂರದಿಂದಲೇ ಪರಿಚಾರಕರಾಗಿ ಒಲೈಸುತ್ತಾರೆ (೧೨). ಮುಕ್ತಮಾನುಷೋತ್ತಮ ಜೀವರು, ಸ್ವರೂಪಾನಂದಾನುಭವದಿಂದಲೇ ಪೂರ್ಣರಾಗಿರುತ್ತಾರೆ; ಸರ್ವದಾ ತನಗೆ ಅತಿಪ್ರಿಯರಾದ ಪತ್ನೀಪುತ್ರ ಭೃತ್ಯಾದಿಗಳುಳ್ಳವನಾಗಿದ್ದು ಶತ್ರು ರಹಿತನಾಗಿಯೂ, ಸ್ವಯಂ ಸಮರ್ಥನಾಗಿಯೂ ಇರುವ, ಜಂಬೂದ್ವೀಪಾಧಿಪತಿಯಾದ ರಾಜನಿಗೆ, ಈ ಲೋಕದಲ್ಲಿ ಯಾವ ಪ್ರಕಾರದ ಸುಖವಿರುತ್ತದೆಯೋ, ಅದಕ್ಕೆ ಸದೃಶವಾದ ಸುಖವು ಮುಕ್ತನಾದ ಬ್ರಾಹ್ಮಣನಿಗಿರುತ್ತದೆ—ಇತರ ಜಾತಿಯ ಮುಕ್ತರಿಗೆ,[1] ಹಿಂದೆ ನಿರೂಪಿಸಿದ ತಾರತಮ್ಯಕ್ರಮದಿಂದ (ಸ್ವಯೋಗ್ಯ) ಪೂರ್ಣಸುಖವಿರುವುದೆಂದು ತಿಳಿಯಬೇಕು (೧೩-೧೫). ಒಂದು

1. ವರ್ಣಗಳಲ್ಲಿ ಉಚ್ಚನೀಚತ್ವಗಳ ನಿರ್ಣಯಪ್ರಕಾರವು ಹಿಂದಿನ ಅಧ್ಯಾಯದಲ್ಲಿ ನಿರೂಪಿತವಾಗಿದೆ; ಇಲ್ಲಿಂದ ಮುಂದೆ, ಮುಕ್ತರ ಆನಂದತಾರತಮ್ಯವನ್ನು (ತೈತ್ತಿರೀಯಾದಿ ಉಪನಿಷತ್ ಪ್ರತಿಪಾದ್ಯವಿಶೇಷಗಳ ವಿವರಣೆಯನ್ನು) ನಿರೂಪಿಸುತ್ತಾರೆ; 'ದೇವರ್ಷಿಪಿತೃಪನರಾಃ'

ತಸ್ಯ-ಆತನ (ಅಂಥ), ಸತತಂ-ಸದಾ, ಸ್ವತಃ-ಸ್ವಯಂ (ಅನ್ಯಸಹಾಯರಹಿತನಾಗಿ), ದಕ್ಷಸ್ಯ-ಸಮರ್ಥನಾದ, ಜಂಬೂದ್ವೀಪಪತೇಃ-ಜಂಬೂದ್ವೀಪಾಧಿಪತಿಯಾದ, ರಾಜ್ಞಃ-ರಾಜನಿಗೆ, ಲೋಕೇ-ಈ ಲೋಕದಲ್ಲಿ, ಯತ್ಸುಖಂ- ಯಾವ ಸುಖವೋ (ಎಷ್ಟು ಸುಖವೆಂದು ಇಹದಲ್ಲಿ ಭಾವಿಸಬಹುದೋ), ತಾದೃಶಂ-ಆ ಪ್ರಕಾರದ ಸುಖವನ್ನು ಮುಕ್ತವಿಪ್ರಸ್ಯ- ಮುಕ್ತಬ್ರಾಹ್ಮಣಜೀವನಿಗೆ, ವಿಜ್ಞೇಯಂ-ತಿಳಿಯತಕ್ಕದ್ದು; ತದನ್ಯಜಾತೌ-ಆತನಿಂದ ಭಿನ್ನರಾದ ಇತರ ಜಾತಿಯ ಮುಕ್ತರಲ್ಲಿ, ಪೂರ್ವೋಕ್ತೇನ-ಹಿಂದೆ ಹೇಳಿದ, ಕ್ರಮೇಣ ತು-ಕ್ರಮದಿಂದಲೇ (ಜಾತಿಗಳ ತಾರತಮ್ಯ ಕ್ರಮದಿಂದಲೇ), (ವಿಜ್ಞೇಯಃ-ಸುಖವಿಶೇಷವನ್ನು ತಿಳಿಯಬೇಕು).

ದೀರ್ಘವಂಶಃ ಷಣ್ಣವತ್ಯಶೀತಿವಂಶಸುವಿಸ್ತೃತಂ ।
ಕ್ಷೇತ್ರಮಿತ್ಯುಚ್ಯತೇ ರಾಜನ್ ವಂಶಸ್ಸ್ಯಾದ್ದಶಹಸ್ತಕಃ ॥ ೧೬ ॥
ಯಸ್ಯ ಸ್ಯಾತ್ಸುಭುವಿಕ್ಷೇತ್ರಂ ಸ್ವಾಯತ್ತಂ ನಿರುಪದ್ರವಂ ।
ತೃಣಾನಾಂ ತಾದೃಶಾನಂದಸ್ತಸ್ಮಾತ್ತು ದ್ವಿಗುಣೋ ಮತಃ ॥ ೧೭ ॥
ಓಷಧೀನಾಂ ಚ ವಲ್ಲೀನಾಂ ಗುಲ್ಮಾನಾಂ ದ್ವಿಗುಣಸ್ತತಃ ।

---

ವಂಶವೆಂದರೆ ಹತ್ತುಮೊಳದ ಅಳತೆ; ೯೬ ವಂಶ ಉದ್ದವೂ, ೮೦ ವಂಶ ಅಗಲವೂ ಇರುವ ಭೂಪ್ರದೇಶವು 'ಕ್ಷೇತ್ರ'ವೆನಿಸುತ್ತದೆ; ಯಾರಿಗೆ, ಪರೋಪದ್ರವವಿಲ್ಲದ, ಒಂದು ಕ್ಷೇತ್ರಭೂಮಿಯ ಒಡೆತನವಿರುವುದೋ, ಆತನಿಗೆ ಇಹಲೋಕದಲ್ಲಿ ದೊರೆಯುವ ಸುಖಕ್ಕೆ ಸದೃಶವಾದ ಆನಂದವು, ತೃಣಜೀವನಿಗೆ ಮುಕ್ತಿಯಲ್ಲಿ ಲಭಿಸುತ್ತದೆ (ಅದೂ

---

(ತತ್ವಸಂಖ್ಯಾನ) ವಾಕ್ಯದಲ್ಲಿ ಮುಕ್ತಿಯೋಗ್ಯರು ಪಂಚವಿಧರೆಂದು ಹೇಳಲಾಗಿದೆ— ದೇವ, ಋಷಿ, ಪಿತೃ, (ಪ) ಚಕ್ರವರ್ತಿ, ನರ (ಮನುಷ್ಯೋತ್ತಮ)ರೆಂಬುದಾಗಿ. ನರಶಬ್ದದಿಂದ ಹೇಳಲ್ಪಡುವ ಮನುಷ್ಯೋತ್ತಮರೆಂಬ ಮುಕ್ತಿಯೋಗ್ಯರಲ್ಲಿ ತೃಣಜೀವಪರ್ಯಂತರಾದ ಇತರ ಮುಕ್ತಿಯೋಗ್ಯರೆಲ್ಲರ ಸಮಾವೇಶವನ್ನು ತಿಳಿಯಬೇಕು. ಮನುಷ್ಯೋತ್ತಮರು, ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳಿಂದ ಶ್ರೀಹರಿಯನ್ನು ಉಪಾಸಿಸಲು ಅಧಿಕಾರಿಗಳು; ('ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು....'-ಅಣುಭಾಷ್ಯ) ಏಕಗುಣೋಪಾಸಕರಾದ ತೃಣಾದಿ ಮುಕ್ತಿಯೋಗ್ಯಜೀವರೂ ಇರುವರೆಂದು ಅನ್ಯಬಹುಪ್ರಮಾಣಗಳಿಂದ ತಿಳಿದುಬರುತ್ತದೆ. ಪ್ರಸಕ್ತ ಶ್ಲೋಕಗಳಲ್ಲಿ ಮನುಷ್ಯೋತ್ತಮರೆಂಬ ಮುಕ್ತವರ್ಗಕ್ಕೆ ಸೇರಿದ ಬ್ರಾಹ್ಮಣಜಾತಿಯ ಜೀವರ ಆನಂದವನ್ನು ನಿರೂಪಿಸಲಾಗಿದೆ. ಮುಂದಿನ ಶ್ಲೋಕಗಳು ತೃಣಾದಿ ಜೀವರ ಮೌಕ್ತಿಕಾನಂದವನ್ನು ನಿರೂಪಿಸುತ್ತವೆ. ಇನ್ನೂ ಮುಂದಕ್ಕೆ ಮಾನುಷೋತ್ತಮರಿಂದ ಮೇಲಿನವರಾದ, ಚಕ್ರವರ್ತಿ ಮೊದಲಾದ ಜೀವರ ಆನಂದತಾರತಮ್ಯವೂ ಪ್ರತಿಪಾದಿಸಲ್ಪಡುತ್ತದೆ. ತತ್ವಸಂಖ್ಯಾನೋಕ್ತ ಮುಕ್ತಿಯೋಗ್ಯಜೀವರ ಪಂಚವಿಧತ್ವವು, ಬಹುವಿಧದ ಒಳಪ್ರಭೇದವುಳ್ಳದ್ದು; ಈ ಜೀವ ಸಮುದಾಯವನ್ನು ಐದು ದೊಡ್ಡ ವಿಭಾಗಗಳನ್ನಾಗಿ ಮಾಡಿ, ಸಂಗ್ರಹವಾಗಿ ನಿರೂಪಿಸಲಾಗಿದೆ. ಒಳಪ್ರಭೇದಗಳು ಇಲ್ಲಿಯೇ ಮುಂದೆ ಪ್ರಸಕ್ತವಾಗುತ್ತವೆಂಬುದನ್ನು ಗಮನಿಸಬೇಕು.

ವೃಕ್ಷಾಸ್ತದ್ದ್ವಿಗುಣಾನಂದಾಸ್ತಥೈವ ಕ್ಷುದ್ರಜಂತವಃ ॥ ೧೮ ॥
ತತೋ ದ್ವಿಗುಣಿತಾನಂದಾಃ ಪಕ್ಷಿಣೋ ಜಲಜಾ ಅಪಿ ।
ತತೋಽಪಿ ದ್ವಿಗುಣಾ ಗ್ರಾಮ್ಯಾಃ ಪಶವಶ್ಚ ಮೃಗಾ ಅಪಿ ॥ ೧೯ ॥
ತತೋ ದ್ವಿಗುಣಿತಾ ಅಶ್ವಾಸ್ತತೋ ದ್ವಿಗುಣಿತಾ ಗಜಾಃ ।
ಪ್ರತಿಲೋಮಿಷು ಹೀನೋ ಯಃ ಸ ತಚ್ಛತಗುಣಾಧಿಕಃ ॥ ೨೦ ॥
ತತೋ ಯಥಾಕ್ರಮಾನಂದಾ ವಿಜ್ಞೇಯಾ ಮಾನುಷೋತ್ತಮಾಃ ।
ಕಿಂಚಿತ್ಕಿಂಚಿತ್ ಮಿಥೋಽಪ್ಯೇಷಾಂ ನ್ಯೂನತಾಧಿಕತಾ ಸುಖೇ ॥ ೨೧ ॥

ದೀರ್ಘವಂಶಃ-ಉದ್ದದ ವಂಶವು, ಷಣ್ಣವತಿ-೯೬ ಉಳ್ಳ, ಅಶೀತಿವಂಶ ಸುವಿಸ್ತೃತಂ-೮೦ ವಂಶಗಳ ವಿಸ್ತಾರ (ಅಗಲ)ವುಳ್ಳ, ಕ್ಷೇತ್ರಂ-(ಭೂಪ್ರದೇಶವು), ಕ್ಷೇತ್ರಂ-ಕ್ಷೇತ್ರವು, ಇತಿ ಉಚ್ಯತೇ-ಎಂದು ಹೇಳಲ್ಪಡುತ್ತದೆ; ರಾಜನ್-ಹೇ ರಾಜನೇ! ದಶಹಸ್ತಕಃ-ಹತ್ತು ಮೊಳಗಳ ಉದ್ದವು, ವಂಶಃ ಸ್ಯಾತ್-'ವಂಶ'ವೆನಿಸುತ್ತದೆ; ಯಸ್ಯ-ಯಾರಿಗೆ, ಸುಭುವಿಕ್ಷೇತ್ರಂ-ಫಲವತ್ತಾದ ಭೂಮಿಯಲ್ಲಿ 'ಕ್ಷೇತ್ರ' ಪ್ರಮಾಣದ

ದುಃಖಸ್ಪರ್ಶವಿಲ್ಲದ ಸುಖವಾಗಿರುತ್ತದೆ); ಗಿಡಬಳ್ಳಿಗಳಿಗೆ (ಈ ಮುಕ್ತಜೀವರಿಗೆ)[1] ತೃಣಜೀವನ ದ್ವಿಗುಣಾನಂದವು ದೊರೆಯುತ್ತದೆ; ಗಿಡಬಳ್ಳಿ ಜೀವರಗಿಂತ ಗುಲ್ಮಗಳಿಗೆ ದ್ವಿಗುಣಾನಂದವೂ; ವೃಕ್ಷಗಳು ಮತ್ತು ಕ್ಷುದ್ರಪ್ರಾಣಿಗಳಿಗೆ, ಅದಕ್ಕಿಂತ ದ್ವಿಗುಣಾನಂದವೂ, ಪಕ್ಷಿ ಮತ್ತು ಜಲಚರ ಪ್ರಾಣಿಗಳಿಗೆ ಅದರ ದ್ವಿಗುಣಾನಂದವೂ; ಅದಕ್ಕಿಂತ ಗ್ರಾಮ್ಯಪಶುಗಳು ಮತ್ತು ಮೃಗಗಳಿಗೆ ದ್ವಿಗುಣಾನಂದವೂ; ಅಶ್ವಗಳಿಗೆ ಅದಕ್ಕಿಂತ

1. ಅನಂತರಾಶಿಗಳ ಜೀವರಿದ್ದಾರೆ; ಒಂದೊಂದು ರಾಶಿಯಲ್ಲಿಯೂ ಅಸಂಖ್ಯ ಜೀವರಿರುವರು; ಎಲ್ಲರೂ ಸ್ವಸ್ವರೂಪಗಳಿಂದ ನಿತ್ಯರು; ಜೀವಸ್ವರೂಪಗಳು ವಿವಿಧವಾದ ಅಸಂಖ್ಯ ಆಕಾರವುಳ್ಳವುಗಳು; ತೃಣಾದಿ ಜೀವರು, ಆಯಾ ಆಕಾರವುಳ್ಳ ಸ್ವರೂಪಗಳುಳ್ಳವರೇ; ಮುಕ್ತಿಯೋಗ್ಯಜೀವರು, ಈ ಎಲ್ಲ ವಿವಿಧವರ್ಗಗಳಲ್ಲಿಯೂ ಇದ್ದಾರೆ; ಪ್ರತಿಯೊಂದು ಆಕಾರದ ಜೀವವರ್ಗದಲ್ಲಿಯೂ, ತ್ರಿವಿಧಜೀವರೂ ಇರುವರು; ಎಲ್ಲ ಜೀವಸ್ವರೂಪಗಳು ಇಚ್ಛಾಜ್ಞಾನ, ಕ್ರಿಯಾಶಕ್ತಿಯುತವಾದುವುಗಳೇ; ಮುಕ್ತಿಯೋಗ್ಯಸ್ವರೂಪಗಳು ಆನಂದಾತ್ಮಕವಾದವುಗಳು, ಮಿಶ್ರಜೀವಸ್ವರೂಪಗಳು ಸುಖದುಃಖಮಿಶ್ರಸ್ವರೂಪಗಳೇ; ತಮೋಯೋಗ್ಯಸ್ವರೂಪಗಳು, ದುಃಖಾತ್ಮಕಗಳೇ ಆಗಿರುವುವು. ಹೀಗಿರುವ ಜೀವರಿಗೆ, ಸಾಧನಾವಸ್ಥೆಯಲ್ಲಿ (ಸಂಸಾರದಲ್ಲಿ ಸುತ್ತುವಾಗ) ಕರ್ಮಾನುಸಾರವಾದ, ಸ್ವರೂಪಭಿನ್ನಗಳಾದ (ಅಸ್ವಾಭಾವಿಕವಾದ) ಭೌತಿಕದೇಹಗಳೂ ಬರುತ್ತವೆ. ಆದ್ದರಿಂದ ಬಾಹ್ಯದೇಹವನ್ನು ಕಂಡು, ಅವರ ಸ್ವರೂಪವೂ ಅದೇ ಆಕಾರವುಳ್ಳದ್ದೆಂದು ಭ್ರಮಿಸಲಾಗದು; ಮುಕ್ತಿಯೋಗ್ಯರಾದ ಪಶುಪಕ್ಷಿವೃಕ್ಷಾದಿಜೀವರಿಗೆ, ಮನುಷ್ಯದೇಹವೂ, (ಸಾಧನಾರ್ಥವಾಗಿ) ದೊರೆಯುತ್ತದೆ. ಈ ಪ್ರಮೇಯಗಳು ಬಹುಪ್ರಮಾಣಸಿದ್ಧವಾದುವು; ವಿಸ್ತಾರಭಯದಿಂದ ಅವುಗಳನ್ನು ಉದಹರಿಸಲಾಗಿರುವುದಿಲ್ಲ. ಈ ಗ್ರಂಥದ ಪ್ರಸಕ್ತ ಈ ಅಧ್ಯಾಯದ ಎಲ್ಲ ಶ್ಲೋಕಗಳೂ ಈ ವಿಷಯದಲ್ಲಿ ಪ್ರಮಾಣಗಳಾಗಿವೆ.

(ಆಳತೆಯ) ಭೂಪ್ರದೇಶವು, ನಿರುಪದ್ರವಂ-ಅನ್ಯರ ಉಪದ್ರವವಿಲ್ಲದೇ, ಸ್ವಾಯತ್ತಂ-ತನ್ನ ಅಧೀನದಲ್ಲಿ, ಸ್ಯಾತ್-ಇರುವುದೋ, ತಾದೃಶಾನಂದಃ-ಅಷ್ಟು (ಭೂ ಒಡೆತನವಿದ್ದವನ) ಆನಂದವು, ತೃಣಾನಾಂ-ತೃಣಜೀವರಿಗೆ, ಸ್ಯಾತ್-ಆಗುತ್ತದೆ; ಓಷಧೀನಾಂ-ಓಷಧಿಗಳಿಗೆ (ಗಿಡಮೂಲಿಕೆ ಜೀವರಿಗೆ), ಚ-ಮತ್ತು ವಲ್ಲೀನಾಂ-ಬಳ್ಳಿಜೀವರಿಗೆ, ತಸ್ಮಾತ್-ಅದಕ್ಕಿಂತ (ಕ್ಷೇತ್ರಪ್ರಮಾಣದ ಭೂ ಒಡೆತನದ ಆನಂದಕ್ಕಿಂತ), ತತ್-ಆನಂದವು, ದ್ವಿಗುಣಃ-ಎರಡರಷ್ಟು ಅಧಿಕವು; ತತಃ-ಅದಕ್ಕಿಂತ (ಈ ಆನಂದಕ್ಕಿಂತ), ಗುಲ್ಮಾನಾಂ-ಗುಲ್ಮ (ಪೊದೆಗಳು) ಗಳಿಗೆ, ದ್ವಿಗುಣಃ-ದ್ವಿಗುಣಾನಂದವು; ವೃಕ್ಷಾ-ವೃಕ್ಷಗಳು (ದೊಡ್ಡ ಮರಗಳು), ತದ್ವಿ...ಗುಣಾನಂದಾಃ-ಅದಕ್ಕಿಂತ ದ್ವಿಗುಣಾನಂದವುಳ್ಳವು; ಕ್ಷುದ್ರಜಂತವಃ-ಅಲ್ಪಪ್ರಾಣಿಗಳೂ, ತಥೈವ-ಅಷ್ಟೇ ಆನಂದವುಳ್ಳವು; ಪಕ್ಷಿಣಃ-ಪಕ್ಷಿಗಳೂ, ಅಪಿ-ಮತ್ತು ಜಲಜಾಃ-ಜಲಚರಪ್ರಾಣಿಗಳೂ, ತತಃ-ಅದಕ್ಕಿಂತ, ದ್ವಿಗುಣಿತಾನಂದಾಃ- ದ್ವಿಗುಣಿತವಾದ ಆನಂದವುಳ್ಳವು; ತತೋಽಪಿ-ಅದಕ್ಕಿಂತಲೂ, ಗ್ರಾಮ್ಯಾಃ-ಗ್ರಾಮಗಳಲ್ಲಿರುವ (ಊರಲ್ಲಿರುವ), ಪಶವಃ-ಪಶುಗಳೂ, ಮೃಗಾಃ ಅಪಿ-ಮೃಗಗಳೂ ಸಹ (ಅರಣ್ಯದಲ್ಲಿರುವುವೂ), ದ್ವಿಗುಣಾಃ-ದ್ವಿಗುಣವಾದ ಆನಂದವುಳ್ಳವು; ತತಃ-ಆ ಆನಂದಕ್ಕಿಂತ, ಅಶ್ವಾಃ-ಅಶ್ವಗಳು, ದ್ವಿಗುಣಿತಾಃ-ಎರಡರಷ್ಟು ಆನಂದವುಳ್ಳವು; ತತಃ-ಅಶ್ವಗಳಗಿಂತ, ಗಜಾಃ-ಆನೆಗಳು, ದ್ವಿಗುಣಿತಾಃ-ದ್ವಿಗುಣಾನಂದವುಳ್ಳವು; ಯಃ-ಯಾವ ಮನುಷ್ಯಜೀವನು, ಪ್ರತಿಲೋಮಿಷು-ಪ್ರತಿಲೋಮ ಜಾತಿಗಳಲ್ಲಿ ಹೀನಃ-ಕನಿಷ್ಠನೋ, ಸಃ-ಅವನು, ತಚ್ಛತಗುಣಾಧಿಕಃ-ಗಜಕ್ಕಿಂತ ೧೦೦ ಗುಣ ಅಧಿಕಾನಂದವುಳ್ಳವನು; ತತಃ-ಆನೆಗಿಂತ, ಮಾನುಷೋತ್ತಮಾಃ-ಮನುಷ್ಯೋತ್ತಮರು, ಯಥಾಕ್ರಮಾನಂದಾಃ- ತಾರತಮ್ಯಾನುಗುಣವಾದ ಅಧಿಕಾನಂದವುಳ್ಳವರು; ವಿಜ್ಞೇಯಾಃ-(ಎಂದು) ತಿಳಿಯತಕ್ಕದ್ದು; ತೇಷಾಂ-ಈ ಮುಕ್ತರ, ಸುಖೇ-ಆನಂದರಲ್ಲಿ ಕಿಂಚಿತ್ಕಿಂಚಿತ್-ಸ್ವಲ್ಪ ಸ್ವಲ್ಪ ಮಿಥಃ-ಪರಸ್ಪರವಾಗಿ, ನ್ಯೂನತಾಧಿಕತಾ-ಕೊರತೆಯೂ ಆಧಿಕ್ಯವೂ (ಇರುವುದುಂಟು).

ಮಾನುಷಾನಂದಮಾರಭ್ಯ ನೃಪಗಂಧರ್ವದೇವತಾಃ ।
ಪಿತರೋ ದೇವತಾ ಭೃತ್ಯಾಃ ಕರ್ಮದೇವಾಶ್ಚ ತಾತ್ತ್ವಿಕಾಃ ॥ ೨೨ ॥

---

ದ್ವಿಗುಣವೂ; ಅಶ್ವಗಳಿಂದ ದ್ವಿಗುಣವಾದ ಆನಂದವು, ಗಜಗಳಿಗೂ, ದೊರೆಯುತ್ತದೆ; ಗಜಕ್ಕಿಂತ ಶತಗುಣಾಧಿಕಾನಂದವು ಪ್ರತಿಲೋಮಿಗಳಲ್ಲಿ ಕನಿಷ್ಠನಾದ ಮನುಷ್ಯನಿಗೂ (ಚಂಡಾಲನಿಗೂ), ಆತನಿಗಿಂತ ಉತ್ತಮರಿಗೆ (ಮನುಷ್ಯೋತ್ತಮ ಜೀವರಿಗೆ) ತಾರತಮ್ಯಾನುಗುಣವಾದ ಅಧಿಕ ಆನಂದವೂ ದೊರೆಯುತ್ತದೆ. ಈ ಮನುಷ್ಯೋತ್ತಮ ವರ್ಗದ ಜೀವರಲ್ಲಿ ಪರಸ್ಪರ ಆನಂದದಲ್ಲಿ ನ್ಯೂನಾಧಿಕ್ಯಗಳು ಅಲ್ಪಸ್ವಲ್ಪ ಇದ್ದೇ ಇರುತ್ತವೆಂಬುದನ್ನು ಮರೆಯಲಾಗದು (೧೬-೨೦).

ವಹ್ನ್ಯಾದಯಶ್ಚ ಸೂರ್ಯಾದ್ಯಾ ಇಂದ್ರೋಮಾಶಿವವೇಧಸಃ ।
ಕ್ರಮಾತ್ ಸ್ಯುರಧಿಕಾನಂದಾ ದಶಶಃ ಶತಶಸ್ತಥಾ ॥ ೨೩ ॥
ಸಹಸ್ರಶೋಽಪ್ಯಯುತಶೋ ಮುಕ್ತಿಗಾ ಬ್ರಹ್ಮಣಾ ಸಹ ।
ತತ್ಸ್ವಾಮಿಕಾಸ್ತದನುಗಾಃ ಸ್ವಾನಂದಪರಿಪೂರಿತಾಃ ॥ ೨೪ ॥
ವೈಕುಂಠಾದಿಷು ಮೋದಂತೇ ಸದಾ ಹರಿಪರಾಯಣಾಃ ।

ಮಾನುಷಾನಂದಂ-ಮನುಷ್ಯಜೀವನಿಗೆ ದೊರೆಯುವ ಆನಂದವನ್ನು ಆರಭ್ಯ-ಮೊದಲುಮಾಡಿ, ನೃಪಗಂಧರ್ವದೇವತಾಃ-ಚಕ್ರವರ್ತಿ, ಮನುಷ್ಯ ಗಂಧರ್ವರು, ಆಜಾನಜದೇವತೆಗಳು, ಪಿತರಃ-ಪಿತೃಗಳು (ಪಿತೃದೇವತೆಗಳು), ದೇವತಾಭೃತ್ಯಾಃ-ದೇವಗಂಧರ್ವರು, ಕರ್ಮದೇವಾಃ-ಕರ್ಮಜದೇವತೆಗಳು, ಚ-ಹಾಗೂ, ತಾತ್ವಿಕಾಃ-ತತ್ವಾಭಿಮಾನಿ ದೇವತೆಗಳು; (ಅವರಲ್ಲಿಯೂ), ವಹ್ನ್ಯಾದಯಃ-ಅಗ್ನಿ ಮೊದಲಾದವರು, ಸೂರ್ಯಾದ್ಯಾಃ-ಸೂರ್ಯನೇ ಮುಂತಾದವರು, ಇಂದ್ರೋಮಾಶಿವವೇಧಸಃ-ಇಂದ್ರ, ಉಮಾ, ರುದ್ರ, ಬ್ರಹ್ಮರು, ಕ್ರಮಾತ್- ಉತ್ಕ್ರಮದಲ್ಲಿ ದಶಶಃ-ಹತ್ತರಷ್ಟು (ಹತ್ತುಗುಣ), ತಥಾ-ಹಾಗೂ, ಶತಶಃ-೧೦೦ ಗುಣದಷ್ಟು ಸಹಸ್ರಶಃ-೧೦೦೦ದಷ್ಟು ಅಪಿ-ಮತ್ತು ಅಯುತಶಃ-ಹತ್ತುಸಾವಿರದಷ್ಟು ಅಧಿಕಾನಂದಾಃ-

---

ಮನುಷ್ಯ ಜೀವನಿಗೆ ದೊರೆಯುವ ಈ ಆನಂದಕ್ಕಿಂತ, ಚಕ್ರವರ್ತಿಗಳು, ಮನುಷ್ಯ ಗಂಧರ್ವರು, ಆಜಾನಜರು, ಪಿತೃಗಳು, ದೇವಗಂಧರ್ವರು, ಕರ್ಮಜ ದೇವತೆಗಳು, ಮತ್ತು ತತ್ವಾಭಿಮಾನಿದೇವತೆಗಳೂ, (ಅವರಲ್ಲಿ) ಅಗ್ನಿ ಮೊದಲಾದವರು, ಸೂರ್ಯಾದಿಗಳು ಇಂದ್ರ, ಉಮಾ, ರುದ್ರ, ಬ್ರಹ್ಮದೇವ, ಇವರುಗಳೆಲ್ಲರೂ ಉತ್ಕ್ರಮದಲ್ಲಿ (ತಾರತಮ್ಯಾನುಗುಣವಾಗಿ) ೧೦, ೧೦೦, ೧೦೦೦, ೧೦೦೦೦ ಗಳಷ್ಟು (ಗುಣಾಧಿಕ) ಅಧಿಕಾನಂದವುಳ್ಳವರಾಗಿರುತ್ತಾರೆ;[1] ಈ ಎಲ್ಲರೂ

1. ತೈತ್ತಿರೀಯೋಪನಿಷತ್ತಿನಲ್ಲಿ (ಆನಂದವಲ್ಲಿಯಲ್ಲಿ), ಆನಂದತಾರತಮ್ಯವು ನಿರೂಪಿತವಾಗಿದೆ. ಕೆಳಗಿನವರಗಿಂತ ಮೇಲಮೇಲಿನವರು ಶತಗುಣಾಧಿಕವಾದ ಆನಂದವುಳ್ಳವರೆಂದು ಹೇಳಲಾಗಿದೆ. ಭಾರತತಾತ್ಪರ್ಯನಿರ್ಣಯದಲ್ಲಿ ಶ್ರೀಮದಾಚಾರ್ಯರು 'ತಾಭ್ಯಶ್ಚ ತೇ ಶತಗುಣೈರ್ದಶತೋ ವರಿಷ್ಠಾ ಪಂಚೋತ್ತರೈರಪಿ...' ಎಂದರೆ, ಉಮಾದಿ ದೇವಿಯರಗಿಂತ ಮೇಲಿನವರಾದ ರುದ್ರ, ವಾಣೀ, ಬ್ರಹ್ಮಾದಿಗಳು, ೧೦೦ ಗುಣಗಳಿಂದ, ೧೦ ಗುಣಗಳಿಂದಲೂ, ಐದು ಮತ್ತು ಅಧಿಕ ಗುಣಗಳಿಂದಲೂ, ಅತಿಶಯವಾದ ಆನಂದವುಳ್ಳವರೆಂದೂ ಹೇಳಲಾಗಿದೆ. ಶ್ರೀ ವಾದಿರಾಜತೀರ್ಥರು ತಮ್ಮ ಭಾವಪ್ರಕಾಶಿಕಾ ವ್ಯಾಖ್ಯಾನದಲ್ಲಿ 'ಶತಂಗುಣಾನಾಮ' ಎಂದಾರಂಭಿಸಿ, 'ರುದ್ರಸ್ಯ ಯತ್ ಜ್ಞಾನಂ ತಾವತ್ ಪ್ರಾಕ್ ದ್ವಿಗುಣೀಕರ್ತವ್ಯಂ। ' ಅಯಮೇಕಗುಣೋ ನಾಮ। ಏವಂ ದ್ವಿಗುಣೀಕರಣೇ ಸಾಧಿಕಂ ಯತ್ ಜ್ಞಾನಂ। ತದೇವ ಜ್ಞಾನಂ ಪುನರ್ದ್ವಿಗುಣೀಕರ್ತವ್ಯಂ। ಇದಂ ಗುಣದ್ವಯಂ ನಾಮ' ಇತ್ಯಾದಿಯಾಗಿ, ಎಂಬ ವಿವರಣೆಯನ್ನು

ಅಧಿಕವಾದ ಆನಂದವುಳ್ಳವರು, ಸ್ಯುಃ-ಆಗಿರುವರು; (ಇವರೆಲ್ಲರೂ), ಬ್ರಹ್ಮಣಾ ಸಹ-ಚತುರ್ಮುಖಬ್ರಹ್ಮದೇವನೊಂದಿಗೆ, ಮುಕ್ತಾಃ - ಮುಕ್ತಿಯನ್ನು ಹೊಂದುವರು, ತತ್ಸ್ವಾಮಿಕಾಃ-(ಬ್ರಹ್ಮದೇವನೇ) ಆತನೇ ಸ್ವಾಮಿಯಾಗುಳ್ಳವರು (ಮುಕ್ತಿಯಲ್ಲಿ ಸಹ ಆತನ ಅಧೀನರಾಗಿರುವರು), ತದನುಗಾಃ - (ಸದಾ) ಆತನ ಅನುಯಾಯಿಗಳೇ ಆಗಿರುವವರು; ಸ್ವಾನಂದಪರಿಪೂರಿತಾಃ - ತಂತಮ್ಮ ಸ್ವರೂಪಾನಂದದಿಂದ ಪೂರ್ಣರಾಗಿ, ಸದಾ-ನಿತ್ಯವೂ, ಹರಿಪರಾಯಣಾಃ-ಶ್ರೀಹರಿಯ ಆಶ್ರಯದಲ್ಲಿರುವವರಾಗಿ (ಹರಿಭಕ್ತಿಯಲ್ಲಿಯೇ ಆಸಕ್ತರಾಗಿ), ವೈಕುಂಠಾದಿಷು-ವೈಕುಂಠವೇ ಮೊದಲಾದ ಮುಕ್ತಲೋಕಗಳಲ್ಲಿ ಮೋದಂತೇ- ಸುಖಿಸುತ್ತಾರೆ (ನಾನಾ ಭೋಗಗಳಿಂದ ಸಹ ಆನಂದಿಸುತ್ತಾರೆ).

**ಏವಂ ತಾಮಸಜೀವಾನಾಂ ಕ್ರಮೋ ದುಃಖೇ ಪ್ರಕೀರ್ತಿತಃ ॥ ೨೫ ॥**
**ಏಕರಾತ್ರನಿರಾಹಾರೋ ನಿರ್ಜಲಶ್ಚಾಪಿ ಯಲ್ಲಭೇತ್ ।**
**ದುಃಖಂ ತು ತಾದೃಶಂ ದುಷ್ಟೇ ತೃಣಜೀವೇ ಪ್ರಕೀರ್ತಿತಂ ॥ ೨೬ ॥**

ಇಲ್ಲಿಂದ ಮುಂದೆ ತಮೋಯೋಗ್ಯಜೀವರ ತಮಸ್ಸು ಮೊದಲಾದ ನಿತ್ಯನರಕ ದುಃಖತಾರತಮ್ಯವನ್ನು ನಿರೂಪಿಸುತ್ತಾರೆ :—

ಏವಂ-ಹೀಗೆಯೇ (ಮುಕ್ತರಾದ, ಪ್ರಾಕೃತಬಂಧನಿವೃತ್ತಿಯನ್ನು ಹೊಂದಿದ), ತಾಮಸಜೀವಾನಾಂ-ತಮೋಯೋಗ್ಯಜೀವರಿಗೆ, ದುಃಖೇ-ದುಃಖಾನುಭವವಿಷಯದಲ್ಲಿ ಕ್ರಮಃ-ಕ್ರಮವು (ತಾರತಮ್ಯವು), ಪ್ರಕೀರ್ತಿತಃ-ಹೇಳಲ್ಪಟ್ಟಿರುತ್ತದೆ; ಏಕರಾತ್ರನಿರಾಹಾರಃ-ಒಂದು ದಿನ ಆಹಾರವಿಲ್ಲದ, ನಿರ್ಜಲಃ-ಜಲಪಾನರಹಿತನಾದವನು

---

ಚತುರ್ಮುಖ ಬ್ರಹ್ಮನೇ ಅಧಿಪತಿಯಾಗಿವುಳ್ಳವರು—ಆತನ ಅನುಯಾಯಿಗಳು—ಆತನೊಂದಿಗೆ ಮುಕ್ತರಾಗುವರು; ಮತ್ತು ಸ್ವಸ್ವರೂಪಾನಂದಪೂರ್ಣರಾಗಿ, ನಿತ್ಯವೂ ಹರಿಪರಾಯಣರಾಗಿ, ವೈಕುಂಠಾದಿ ಮುಕ್ತಸ್ಥಾನಗಳಲ್ಲಿ ಸುಖಿಸುತ್ತಾರೆ (೨೨-೨೪). ಹೀಗೆಯೇ ತಾಮಸರಲ್ಲಿಯೂ (ತಮೋಯೋಗ್ಯರಲ್ಲಿಯೂ) ಅವರು ತಮಸ್ಸಿನಲ್ಲಿ ಹೊಂದುವ ದುಃಖದಲ್ಲಿ ಸಹ ತಾರತಮ್ಯವಿರುತ್ತದೆ; ಯಾರೊಬ್ಬನು, ಒಂದು ದಿನವೆಲ್ಲ ನೀರನ್ನು ಕುಡಿಯದೇ ಉಪೋಷಣಮಾಡಿದರೆ, ಯಾವ ಪ್ರಕಾರದ (ಎಷ್ಟು)

---

ಕೊಟ್ಟಿರುವರು. ಈ ರೀತಿ ಶತಗುಣವೆಂದರೆ ೧೦೦೦ ಕೋಟಿಗೂ ಅಧಿಕ ಗುಣವೆಂದು ಪ್ರಾಪ್ತವಾಗುತ್ತದೆ. ರುದ್ರದೇವನ ಜ್ಞಾನಕ್ಕಿಂತ ೧೦೦ರಷ್ಟು (೧೦೦೦ರಿಂದ ಗುಣಿಸಿದಷ್ಟು) ಮಾತ್ರ ವಾಯುದೇವರ ಜ್ಞಾನವಲ್ಲ—ಅಸಂಖ್ಯಗುಣಾಧಿಕವಾದ ಮಹಾಜ್ಞಾನವೆಂದು ತಿಳಿಯಲರುತ್ತದೆ. 'ಶಬ್ದಃ ಶತಂ ದಶಸಹಸ್ರ ಮಿತಿ ಸ್ಮ ಯಸ್ಮಾತ್...' ಇತ್ಯಾದಿ (ತಾತ್ಪರ್ಯನಿರ್ಣಯದಲ್ಲಿ), ದಶ, ಶತ, ಸಹಸ್ರ ಶಬ್ದಗಳ ಅರ್ಥವನ್ನು ಅಷ್ಟು ಸಂಖ್ಯಾಮಾತ್ರವೆಂದು ತಿಳಿಯದೇ, (ದಶಶಬ್ದವು ಶತಸಹಸ್ರ ಸಂಖ್ಯಾವಾಚಕವೂ ಆಗಿರುವಂತೆ) ಅಧಿಕಸಂಖ್ಯಾವಾಚಕಗಳೆಂದೂ ಅನ್ಯಪ್ರಮಾಣಗಳಂತೆ ತಿಳಿಯಬೇಕೆಂದು ಹೇಳಿರುವರು.

(ಒಂದು ದಿನ, ನೀರನ್ನು ಸಹ ಕುಡಿಯದೇ ಉಪವಾಸಮಾಡಿದವನು), ಯತ್-ಯಾವ ದುಃಖವನ್ನು ಲಭೇತ್-ಹೊಂದುವನೋ, ತಾದೃಶಂ-ಅದರಂತಿರುವ (ಅಷ್ಟು), ದುಃಖಂ - ದುಃಖವನ್ನು ದುಷ್ಟೇ - ದುಷ್ಟಭಾವದ (ತಮೋಯೋಗ್ಯನಾದ), ತೃಣಜೀವೇ-ತೃಣಜೀವನಲ್ಲಿ ಪ್ರಕೀರ್ತಿತಂ- (ತಮಸ್ಸಿನಲ್ಲಿ ನಿತ್ಯವೂ ಲಭಿಸುವುದೆಂದು) ಹೇಳಲ್ಪಟ್ಟಿರುತ್ತದೆ.

ತತಃ ಕ್ರಮೇಣ ವಿಜ್ಞೇಯಾಃ ಕಲ್ಯಂತಾ ದುಃಖರೂಪಿಣಃ ।
ಪರ್ವಸಂಧಿಷು ಯಸ್ಯ ಸ್ಯಾಲ್ಲೋಹಕಂಟಕವೇಧನಂ ॥ ೨೭ ॥
ಹೃದಯೇ ಶಲ್ಯವೇಧೋಽಪಿ ಪೀಡ್ಯಮಾನಃ ಕ್ಷುಧಾ ತೃಷಾ ।
ಮಹಾಂಧಕಾರೇ ನಿಕ್ಷಿಪ್ತಸ್ತಪ್ಯಮಾನೋ ಮಹೋಷ್ಮಣಾ ॥ ೨೮ ॥
ಸ್ವೇಷ್ಟಸ್ತ್ರೀಪುತ್ರನಾಶೋತ್ಥದುಃಖವಾಂಶ್ಚ ಶಿಲಾಹತಃ ।
ಮುಹುರ್ಮುಹುರ್ಭವೇದೀದೃಕ್ ಕಲಿರ್ದುಃಖಾಯುತಾಂಶಭುಕ್ ॥೨೯॥
ಭವೇನ್ನ ವೇತ್ತಿ ನೋ ಜಾನೇ ರಾಜನ್ ವಿಷ್ಣುದ್ರುಹಃ ಫಲಂ ।
ಯತ್ರ ಪಂಚೇಂದ್ರಿಯೈಃ ಕಷ್ಟಂ ಮನಸಾ ಸಹಿತೈರಪಿ ॥ ೩೦ ॥
ದುಃಖಂ ದುರ್ವಿಷಯೈರ್ಲಭ್ಯಂ ತಾದೃಶಂ ತತ್ತಮಃ ಸ್ಮೃತಂ ।
ವಿಷ್ಣುದ್ರೋಹೈಕಲಭ್ಯಂ ತದೂರ್ಧ್ವಂ ಮಧ್ಯಂ ತಥಾಧರಂ ॥ ೩೧ ॥

---

ದುಃಖವಾಗುವುದೋ, ಅಷ್ಟು ದುಃಖವು (ನಿತ್ಯದಲ್ಲಿ) ಮುಕ್ತನಾದ ತಾಮಸ ತೃಣಜೀವನಿಗೆ ಉಂಟಾಗುತ್ತದೆ (೨೫-೨೬). ತಾಮಸ ತೃಣಜೀವನಿಂದ ನೀಚನೀಚ ಕ್ರಮದಿಂದ ಕಲಿಪರ್ಯಂತರಾದ ತಮೋಯೋಗ್ಯರೆಲ್ಲರೂ, ದುಃಖ ಸ್ವರೂಪವುಳ್ಳವರೇ ಆಗಿರುವರು; ಯಾವನೊಬ್ಬನಿಗೆ, ಇಹಲೋಕದಲ್ಲಿ ದೇಹದ ಎಲ್ಲ ಸಂಧಿಗಳಲ್ಲಿ (ಮರ್ಮಸ್ಥಳಗಳಲ್ಲಿ) ಕಬ್ಬಿಣದ ಮೊಳೆಗಳನ್ನು (Iron nails) ಬಡಿದರೆ, ಎದೆಯಲ್ಲಿ ಬಾಣವು ಪ್ರವೇಶಿಸಿದರೆ, ಯಾವ ದುಃಖಾನುಭವವಾಗುವುದೋ, ಹಸಿವೆ ನೀರಡಿಕೆಗಳಿಂದ ಪೀಡಿತನಾದವನು, ಅಗ್ನಿಜ್ವಾಲೆಗಳುಳ್ಳ ಗಾಢಾಂಧಕಾರದಲ್ಲಿ ತಳ್ಳಲ್ಪಟ್ಟು ಅಗ್ನಿಯಿಂದ ದಹಿಸಲ್ಪಟ್ಟರೆ, ಮತ್ತು ತನಗೆ ಪ್ರಿಯರಾದ ಭಾರ್ಯಾಪುತ್ರಾದಿಗಳ ನಾಶದಿಂದ ದುಃಖಿತನಾದವನು, ಮೇಲಿಂದ ಮೇಲೆ (ಎಡೆಬಿಡದೆ) ಕಲ್ಲುಗಳಿಂದ ಹೊಡೆಯಲ್ಪಟ್ಟರೆ, ಯಾವ ದುಃಖವಾಗುವುದೋ, ಈ ವಿಧ ದುಃಖಗಳ ೧೦,೦೦೦ ಗುಣ (ಅಂಶ) ಗಳಿಂದ ಅಧಿಕವಾದ ದುಃಖವನ್ನು ಕಲಿಯು ನಿತ್ಯವೂ ಭೋಗಿಸುವನು; ಹೇ ಇಂದ್ರದ್ಯುಮ್ನ ! ವಿಷ್ಣುದ್ವೇಷದ ಫಲವು ಈ ಪರಿಯೆಂಬುದನ್ನು ತಾಮಸಜೀವರು ತಿಳಿಯರು; ನಾನಾದರೂ (ನಿತ್ಯನರಕದಲ್ಲಿ). ಆ ವಿಷ್ಣುದ್ವೇಷಿಗಳಿಗೆ ದೊರೆಯುವ ದುಃಖವು, ಎಷ್ಟೆಂಬುದನ್ನು (ದುಃಖವು ವರ್ಣನಾತೀತವಾದ್ದರಿಂದ) ತಿಳಿಯೆನು; ತಮಸ್ಸಿನಲ್ಲಿ

ತತಃ- ಅಲ್ಲಿಂದ ಕೆಳಗೆ (ತೃಣಜೀವನ ಕೆಳಗೆ), ಕ್ರಮೇಣ-(ನೀಚ ನೀಚ ಅಥವಾ ಅಧಮಾಧಮ) ಕ್ರಮದಿಂದ, ಕಲ್ಯಂತಾಃ-ಕಲಿಯೇ ಅಂತ್ಯವಾಗಿವುಳ್ಳ (ಅಧಮಾಧಮನಾದ ಕಲಿಯವರೆಗಿನ) ಜೀವರು, ದುಃಖರೂಪಿಣಃ-ದುಃಖ ಸ್ವರೂಪವುಳ್ಳವರೆಂದು, ವಿಜ್ಞೇಯಾಃ-ತಿಳಿಯಲ್ಪಡಬೇಕು; ಯಸ್ಯ-(ಈ ಲೋಕದಲ್ಲಿ) ಯಾವನೊಬ್ಬನಿಗೆ, ಸರ್ವಸಂಧಿಷು-(ದೇಹದ) ಎಲ್ಲ ಸಂಧಿಗಳಲ್ಲಿ (ಮರ್ಮಸ್ಥಾನಗಳಲ್ಲಿ), ಲೋಹಕಂಟಕವೇಧನಂ-ಕಬ್ಬಿಣದ ಮೊಳೆಗಳನ್ನು ಚುಚ್ಚುವುದು (ಬಡಿಯುವುದರಿಂದ ಯಾವ ನೋವು), ಸ್ಯಾತ್-ಉಂಟಾಗುವುದೋ, ಅಪಿ-ಮತ್ತು ಹೃದಯೇ-ಎದೆಯಲ್ಲಿ ಶಲ್ಯವೇಧಃ-ಬಾಣಹತಿಯೋ (ಬಾಣಚುಚ್ಚಿ ನಿಂತರೆ ಯಾವ ನೋವಾಗುವುದೋ), ಕ್ಷುಧಾ-ಹಸಿವೆಯಿಂದಲೂ, ತೃಷಾ-ನೀರಡಿಕೆಯಿಂದಲೂ, ಪೀಡ್ಯಮಾನಃ-ಪೀಡಿಸಲ್ಪಟ್ಟು ಮಹಾಂಧಕಾರೇ-ಗಾಢವಾದ ಕತ್ತಲೆಯಲ್ಲಿ (ಕಗ್ಗತ್ತಲೆಯಲ್ಲಿ), ನಿಕ್ಷಿಪ್ತಃ-ಹಾಕಲ್ಪಟ್ಟು ಮಹೋಷ್ಮಣಾ - ಮಹಾಗ್ನಿಯಿಂದ, ತಪ್ಯಮಾನಃ - ದಹಿಸಲ್ಪಡುವವನಾಗಿ, ಸ್ವೇಷ್ಟಸ್ತ್ರೀಪುತ್ರನಾಶೋತ್ಥದುಃಖವಾನ್-ತನಗೆ ಪ್ರಿಯರಾದ ಭಾರ್ಯಾಪುತ್ರರ ನಾಶದಿಂದಾಗುವ ದುಃಖವುಳ್ಳವನಾಗಿ, ಮುಹುಃ ಮುಹುಃ-ಮತ್ತೆ ಮತ್ತೆ

---

ಬೀಳುವ ಈ ಸಕಲ ದುರ್ಜೀವರಿಗೆ, ಮನಸ್ಸು ಮೊದಲಾದ ಸರ್ವೇಂದ್ರಿಯಗಳಿಂದ ದುರ್ಗಂಧಾದಿ ದುರ್ವಿಷಯಗಳೆಂಬ ಅನಿಷ್ಟಗಳನ್ನೇ ಭೋಗಿಸುವುದರಿಂದ ದೊರೆಯುವ ದುಃಖವೇ, ದೊರೆಯುವುದೆಂದು ಶಾಸ್ತ್ರಗಳ ನಿರ್ಣಯವಾಗಿದೆ; ತಮಸ್ಸು (ನಿತ್ಯ ನರಕವು) ಊರ್ಧ್ವ, ಮಧ್ಯ, ಅಧರಗಳೆಂಬ ಮೂರು ವಿಭಾಗಗಳುಳ್ಳದ್ದು[1]

---

1. ತಾರತಮ್ಯದಲ್ಲಿ ನೀಚನೀಚತರರಾದ ತಾಮಸಜೀವರು (ದೈತ್ಯರು) ಊರ್ಧ್ವ, ಮಧ್ಯಭಾಗಗಳಲ್ಲಿ ಬೀಳುವರು; ನೀಚತಮರಾದ ಮಹಾದೈತ್ಯರು ಅಧೋಭಾಗದ ತಮಸ್ಸಿನಲ್ಲಿ ಬೀಳುತ್ತಾರೆ. ಎಲ್ಲಕ್ಕೂ ಅಧೋಭಾಗದಲ್ಲಿ ಕಲಿಯು ಬೀಳುತ್ತಾನೆ. ತಮಸ್ಸಿನಲ್ಲಿರುತ್ತವೆಂಬ ಮೂರು ವಿಭಾಗಗಳಲ್ಲಿಯಾಗಲಿ, ಅಥವಾ ಅಧರಭಾಗದಲ್ಲಿರುತ್ತವೆಂಬ ಮೂರು ವಿಭಾಗಗಳಲ್ಲಿಯಾಗಲಿ, ಸುಖಲೇಶಕ್ಕೆ ಅವಕಾಶವೇ ಇಲ್ಲವೆಂಬುದನ್ನು ಲಕ್ಷ್ಯದಲ್ಲಿಡಬೇಕು. ನರಕಶಬ್ದವಾಚ್ಯಗತಿಗಳು ಮೂರು: ಪಶುಪಕ್ಷಿ ಮೊದಲಾದ ಜನ್ಮಗಳು, ಅನಿತ್ಯಯಾತನಾಸ್ಥಾನಗಳು (ನರಕಗಳು), ಮತ್ತು ನಿತ್ಯನರಕವೆಂಬ ಅಂಧತಮಸ್ಸು; ಇವುಗಳ ಮಧ್ಯೆ, ಮೊದಲಿನ ಎರಡರಲ್ಲಿ ಸುಖಲೇಶಕ್ಕೆ ಅವಕಾಶವಿದೆ (ಅನಿತ್ಯ ಯಮದೇವನ ನರಕಗಳಲ್ಲಿ ಸಹ ದೇಹಕ್ಕೆ ವಾಯುಸ್ಪರ್ಶಾದಿಗಳಿಂದ ಕಿಂಚಿತ್ ಸುಖವಾಗಬಹುದು); ಮೂರನೆಯ ಅಂಧತಮಸ್ಸಿನಲ್ಲಿ ಸುಖಲೇಶಕ್ಕೆ ಅವಕಾಶವೇ ಇಲ್ಲ. 'ನ ತೃತೀಯೇ ತಥೋಪಲಬ್ಧೇಃ' ಮತ್ತು 'ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ' ಎಂಬಲ್ಲಿ (ಬ್ರಹ್ಮಸೂತ್ರಗಳು) ಈ ಪ್ರಮೇಯಗಳ ನಿರ್ಣಯಗಳನ್ನು ಕಾಣಬಹುದು. ಈ ನಿರ್ಣಯಗಳ ಸಮರ್ಥನೆಗಾಗಿ ಶ್ರೀಮದಾಚಾರ್ಯರು 'ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ । ನಾಂಧೇ ತಮಸಿ ಮಗ್ನಾನಾಂ ಸುಖಲೇಶೋಽಪಿ ಕಶ್ಚನ ॥'' ಮತ್ತು 'ಮಹಾತಮಸ್ತ್ರಿಧಾ ಪ್ರೋಕ್ತಂ ಊರ್ಧ್ವಂ ಮಧ್ಯಂ ತಥಾಧರಂ ।' ಇತ್ಯಾದಿ ಸ್ಮೃತಿವಾಕ್ಯಗಳನ್ನೂ ಉದಹರಿಸಿರುವರು.

ಶಿಲಾಹತಃ-(ಎಲ್ಲ ಕಡೆಯಿಂದ) ಕಲ್ಲುಗಳಿಂದ ಹೊಡೆಯಲ್ಪಡುವವನು, ಭವೇತ್-(ಯಾವ ದುಃಖವುಳ್ಳವನು) ಆಗುವನೋ, ಈದೃಕ್-ಈ ಪರಿಯ (ದುಃಖವು ಒಂದಂಶವಾದರೆ), ದುಃಖಾಯುತಾಂಶ ಭುಕ್-೧೦,೦೦೦ ಅಂಶಗಳ (ಅಧಿಕ) ದುಃಖಭೋಗಿಯು, ಕಲಿಃ- ಕಲಿಯು, ಭವೇತ್-ಆಗುತ್ತಾನೆ; ರಾಜನ್-ಹೇ ಇಂದ್ರದ್ಯುಮ್ನ ರಾಜನೇ!, ವಿಷ್ಣುದ್ರುಹಃ- ವಿಷ್ಣುದ್ವೇಷರ, ಫಲಂ-ಫಲವನ್ನು ನ ವೇತ್ತಿ-(ತಾಮಸಿಯು-ದ್ವೇಷಿಸುವಾತನು) ತಿಳಿಯನು; ನೋಽಹಾನೇ-ನಾನೂ (ಪೂರ್ಣವಾಗಿ) ತಿಳಿಯೆನು; ಯತ್ರ-ಯಾವ ತಮಸ್ಸಿನಲ್ಲಿ ಮನಸಾ-ಮನಸ್ಸಿನಿಂದ, ಸಹಿತೈಃ-ಕೂಡಿದ, ಪಂಚೇಂದ್ರಿಯೈಃ-ಐದು ಜ್ಞಾನೇಂದ್ರಿಯಗಳಿಂದ, ಅಪಿ- ಕರ್ಮೇಂದ್ರಿಯಗಳಿಂದಲೂ, ಕಷ್ಟಂ-ಸಹಿಸಲಾರದ, ದುರ್ವಿಷಯೈಃ - (ದುರ್ಗಂಧಾದಿ) ದುರ್ವಿಷಯ ಭೋಗದಿಂದ, ಲಭ್ಯಂ-ದೊರೆಯುವ, ದುಃಖಂ - ದುಃಖವೋ (ದುಃಖವೇ ಲಭಿಸುವುದೋ), ತತ್‌ತಮಃ-ಆ ತಮಸ್ಸು (ನರಕವು), ತಾದೃಶಂ-ಅಂಥದೆಂದು, ಸ್ಮೃತಂ-ಹೇಳಲ್ಪಟ್ಟಿದೆ (ಶಾಸ್ತ್ರಗಳಲ್ಲಿ ನಿರ್ಣಯಿಸಲ್ಪಟ್ಟಿದೆ); ವಿಷ್ಣುದ್ರೋಹೈಕ ಲಭ್ಯಂ-ವಿಷ್ಣುದ್ವೇಷದಿಂದ ಮಾತ್ರ ಲಭ್ಯವಾದ, ತತ್-ಆ ತಮಸ್ಸು ಊರ್ಧ್ವಂ-ಮೇಲೆ, ಮಧ್ಯಂ-ಮಧ್ಯ, ತಥಾ-ಮತ್ತು ಅಧರಂ-ಕೆಳಗೆ (ಎಂದು ಮೂರು ಭಾಗಗಳುಳ್ಳದ್ದು).

ಸಂಕರ್ಷಣಮುಖಜ್ವಾಲಾದಗ್ಧಂ ಭೂಮಂಡಲಂ ಯದಾ ।
ವಾಯೋರ್ಗದಾಪ್ರಹಾರೇಣ ತದಾ ತಲ್ಲಿಂಗಭಂಜನಂ ॥ ೩೨ ॥
ವಾಯುದೂತೈಃ ಪುರೋನೀತಾ ಯಥಾಸ್ಥಾನಂ ನಿವೇಶಿತಾ ।
ಭುಂಜಾನಾಃ ಪರಮಂ ದುಃಖಂ ತೇಷ್ವೇಕೋಽಪಿ ಕದಾಚನ ॥ ೩೩ ॥

---

(೨೭-೩೧). ಶೇಷದೇವನ[1] ಮುಖದಿಂದ ಹೊರಟ ಅಗ್ನಿಜ್ವಾಲೆಯಿಂದ ಭೂಮಿಯೆಲ್ಲವೂ ಸುಟ್ಟುಹೋಗುತ್ತಿರಲು (ಪ್ರಲಯಕಾಲದಲ್ಲಿ), ವಾಯುದೇವನ ಗದಾಪ್ರಹಾರದಿಂದ, ಸಕಲ ತಾಮಸಜೀವರ ಲಿಂಗದೇಹಭಂಗವಾಗುತ್ತದೆ; ವಾಯು ಭೃತ್ಯರು ಇವರನ್ನು (ಸ್ವಸ್ವರೂಪದಿಂದ ಸ್ಥಿತರಾದ ಈ ತಮೋಯೋಗ್ಯ ಜೀವರನ್ನು) ಕರೆದೊಯ್ದು ಅವರವರಿಗೆ ಯೋಗ್ಯವಾದ ತಮಸ್ಸಿನ ಸ್ಥಾನಗಳಲ್ಲಿ ಪ್ರವೇಶಗೊಳಿಸುತ್ತಾರೆ (ದೂಡುತ್ತಾರೆ); ಸುಖಲೇಶವಿಲ್ಲದ ಅತ್ಯಂತ (ತೀವ್ರ) ದುಃಖವನ್ನೇ ಅನುಭವಿಸುತ್ತ ನಿತ್ಯವೂ (ಅನಂತ ಭವಿಷ್ಯಕಾಲದಲ್ಲಿ ಸಹ) ಅಲ್ಲಿಯೇ ಬಿದ್ದಿರುವವರು; ಎಂದೂ ಅವರಲ್ಲಿ ಯಾರೊಬ್ಬನೂ ಹೊರಗೆ ಬರುವುದೇ

---

1. ಸಂಕರ್ಷಣರೂಪೀ ಶ್ರೀಹರಿಯು ಶೇಷದೇವನ ಅಂತರ್ಯಾಮಿಯಾದ್ದರಿಂದ ಶೇಷನೂ ಸಂಕರ್ಷಣನೆಂಬ ನಾಮವುಳ್ಳವನಾಗಿದ್ದಾನೆ; ಶೇಷಾಂತರ್ಯಾಮಿಯಾದ ಶ್ರೀಸಂಕರ್ಷಣನ ಮುಖಾಗ್ನಿಯೇ ಪ್ರಲಯಕಾಲದಲ್ಲಿ ಎಲ್ಲವನ್ನೂ ದಹಿಸುತ್ತದೆ—ಶೇಷದೇವನು ಅಧಿಷ್ಠಾನ ಮಾತ್ರನು.

**ನೈವಾಯಾತಿ ಬಹಿಸ್ತಸ್ಮಾದೇವಂ ತಾಮಸದುರ್ಗತಿಃ ।**

ಯದಾ-ಯಾವ ಕಾಲದಲ್ಲಿ ಭೂಮಂಡಲಂ-ಭೂಮಂಡಲವು, ಸಂಕರ್ಷಣ ಮುಖಜ್ವಾಲಾತ್-ಶೇಷದೇವನ ಮುಖದಿಂದ ಹೊರಡುವ ಅಗ್ನಿಜ್ವಾಲೆಯಿಂದ, ದಗ್ಧಂ-ದಹಿಸಲ್ಪಡುವುದೋ, ತದಾ-ಆಗ, ವಾಯೋಃ-ವಾಯುದೇವನ, ಗದಾಪ್ರಹಾರೇಣ-ಗದಾಪ್ರಹಾರದಿಂದ (ಗದಾ ಪೆಟ್ಟಿನಿಂದ), ತಲ್ಲಿಂಗಭಂಜನಂ-ಆ ತಾಮಸಜೀವರ ಲಿಂಗದೇಹದ ಭಂಗವು (ನಾಶವು), (ಆಗುತ್ತದೆ); ವಾಯು ದೂತೈಃ-ವಾಯುದೇವನ ದೂತರಿಂದ, ಪುರೋನೀತಾಃ-ಕರೆದೊಯಲ್ಪಟ್ಟು (ಕೈಹಿಡಿದೆಳೆದು) ಯಥಾಸ್ಥಾನಂ-ಅವರ (ತಾರತಮ್ಯಾನುಗುಣವಾದ) ತಮಸ್ಸಿನಲ್ಲಿ ಸ್ಥಾನವನ್ನು ನಿವೇಶಿತಾಃ-ಪ್ರವೇಶಿಸಲ್ಪಡುತ್ತಾರೆ; ಪರಮಂ-ಅತ್ಯಂತ ತೀವ್ರವಾದ, ದುಃಖಂ- ದುಃಖವನ್ನು ಭುಂಜಾನಾಃ-ಭೋಗಿಸುವವರಾಗಿ, ಕದಾಚನ-ಎಂದಿಗೂ, ತೇಷು-ಅವರಲ್ಲಿ(ತಮಸ್ಸಿನಲ್ಲಿ ಪ್ರವೇಶಿಸಲ್ಪಟ್ಟ ಜೀವರಲ್ಲಿ), ಏಕೋಪಿ- ಯಾರೊಬ್ಬನೂ, ತಸ್ಮಾತ್-ಆ ತಮಸ್ಸಿನಿಂದ, ಬಹಿಃ-ಹೊರಗೆ, ನೈವ ಆಯಾತಿ- ಬರುವುದೇ ಇಲ್ಲ; ಏವಂ-ಹೀಗಿದೆ. ತಾಮಸದುರ್ಗತಿಃ-ತಮೋಯೋಗ್ಯರಿಗೆ ಲಭಿಸುವ ದುರ್ಗತಿಯು.

**ಅಥ ಸಾತ್ವಿಕಜೀವಾನಾಂ ಮುಕ್ತಿಂ ಶೃಣು ಮಹೀಪತೇ ॥ ೩೪ ॥**
**ಸತ್ಯೇ ಚ ಭಗವಾನ್ ಬ್ರಹ್ಮಾ ಸರ್ವಲೋಕಾಧಿಕೋ ಮತಃ ।**
**ವಿರಜಾ ಚ ನದೀ ತತ್ರ ಗಂಗೈವಾಪರನಾಮಿಕಾ ॥ ೩೫ ॥**
**ಊರ್ಧ್ವಂ ವೈಕುಂಠಲೋಕಸ್ತು ಯದ್ಗತ್ವಾ ನ ನಿವರ್ತತೇ ।**
**ಅಂತಿಮಾವರಣವ್ಯೋಮ್ನೋರಂತರೇ ವಿರಜಾನದೀ ॥ ೩೬ ॥**

ಅಥ-ಇನ್ನು ಮುಂದೆ, ಮಹೀಪತೇ-ಹೇ ರಾಜನ್!, ಸಾತ್ವಿಕ ಜೀವಾನಾಂ-ಸಾತ್ವಿಕ[1] (ಮುಕ್ತಿಯೋಗ್ಯ) ಜೀವರ, ಮುಕ್ತಿಂ-ಮೋಕ್ಷ (ಪ್ರಕಾರ)ವನ್ನು ಶೃಣು-ಕೇಳು; ಸತ್ಯೇ-ಸತ್ಯಲೋಕದಲ್ಲಿ ಭಗವಾನ್-ಲೋಕಪೂಜ್ಯನಾದ, ಬ್ರಹ್ಮಾ-(ಚತುರ್ಮುಖ) ಬ್ರಹ್ಮದೇವನು (ಇರುವನಷ್ಟೆ); (ಸತ್ಯಲೋಕವು) ಸರ್ವ ಲೋಕಾಧಿಕಃ-ಎಲ್ಲ ಲೋಕಗಳ

---

ಇಲ್ಲ—ಹೀಗಿದೆ ತಾಮಸರಿಗೆ ದೊರೆಯುವ ದುರ್ಗತಿಯು (೩೨-೩೩). ಹೇ ರಾಜನ್! ಮುಂದೆ, ಸಾತ್ವಿಕಜೀವರಿಗೆ ಲಭಿಸುವ ಮುಕ್ತಿಯನ್ನು ನಿರೂಪಿಸುವೆನು, ಕೇಳು; ಸತ್ಯಲೋಕವು ಎಲ್ಲ ಲೋಕಗಳಕಿಂತ ಮೇಲಿದೆ—ಸರ್ವಪ್ರಕಾರದಿಂದ ಶ್ರೇಷ್ಠವೂ ಆಗಿದೆ; ಸರ್ವಜೀವೋತ್ತಮನಾದ ಬ್ರಹ್ಮದೇವನೇ ಆ ಲೋಕಾಧಿಪತಿಯು; ಆ ಲೋಕದ ಮೇಲೆ ವೈಕುಂಠಲೋಕವಿದೆ; ಅಲ್ಲಿಗೆ ಹೋದವರು ತಿರುಗಿ ಇಲ್ಲಿಗೆ ಬರುವುದಿಲ್ಲ (ಸಂಸಾರಕ್ಕೆ

---

1. ಮುಕ್ತಿಯೋಗ್ಯ-ಮಿಶ್ರ-ತಮೋಯೋಗ್ಯರೆಂದು ಜೀವರು ತ್ರಿವಿಧರು; ಈ ವಿಭಾಗವು ಸ್ವರೂಪವಿವಕ್ಷೆಯಿಂದಾದುದು; ಇವರಿಗೆ ಸ್ವಸ್ವಗತಿಸಾಧನೆಗಾಗಿ ಲಭಿಸುವ ಪ್ರಾಕೃತದೇಹಗಳು ಕ್ರಮದಿಂದ, ಸತ್ವ-ರಜ-ತಮೋಗುಣಪ್ರಚುರವಾಗಿರುವುವು; ಈ ಕಾರಣದಿಂದಲೂ, ಇದರ

ಮೇಲಿರುವುದೆಂದು (ಶ್ರೇಷ್ಠವೆಂದೂ). ಮತಃ- (ಜ್ಞಾನಿಗಳಿಂದ) ತಿಳಿಯಲ್ಪಟ್ಟಿದೆ; ಯದ್ಗತ್ವಾ-ಎಲ್ಲಿಗೆ ಹೋಗಿ (ಯಾವುದನ್ನು ಹೊಂದಿ), ನ ನಿವರ್ತತೇ- (ಯಾವನೊಬ್ಬನೂ) ಹಿಂದಿರುಗುವುದಿಲ್ಲವೋ, ವೈಕುಂಠಲೋಕಃತು-ಆ ವೈಕುಂಠ ಲೋಕವಾದರೋ, ಊರ್ಧ್ವಗಂ- (ಸತ್ಯ ಲೋಕಕ್ಕೂ) ಮೇಲಿದೆ; ತತ್ರ-ಅಲ್ಲಿ (ವೈಕುಂಠದಲ್ಲಿ), ವಿರಜಾನದೀ-ಆ ವಿರಜಾ ನದಿಯು, ಗಂಗೈವ ಅಪರನಾಮಿಕಾ- ಗಂಗೆಯೇ ಎಂಬ ಮತ್ತೊಂದು ನಾಮವುಳ್ಳವಳು (ಆಗಿರುತ್ತಾಳೆ); ಅಂತಿಮಾವರಣ ವ್ಯೋಮ್ನೋಃ-ಅಂತಿಮಾವರಣ (ಬ್ರಹ್ಮಾಂಡದ ಬಹಿರಾವರಣಗಳಲ್ಲಿ ಕಡೆಯದಾದ ಸತ್ವಗುಣಾವರಣ) ಮತ್ತು (ಅದರಾಚೆಗೆ ಇರುವ ಅನಂತ ವಿಸ್ತಾರದ ನಿತ್ಯಾಕಾಶ) ಅವ್ಯಾಕೃತಾಕಾಶಗಳ, ಅಂತರಾ-ಮಧ್ಯದಲ್ಲಿ(ಬಂದಿರುತ್ತದೆ); (ವಿರಜಾನದೀ ಸಹಿತವಾದ ವೈಕುಂಠವು, ಬ್ರಹ್ಮಾಂಡದ ಬಹಿಃ ಸೂಕ್ಷ್ಮಸೃಷ್ಟಿಯಲ್ಲಿ ಸೃಷ್ಟರಾದ ತತ್ವಾಭಿಮಾನಿಗಳು, ಉತ್ತರೋತ್ತರ ಸ್ವಬಿಂಬ ದೇವತೆಗಳಲ್ಲಿ ಪ್ರವೇಶಿಸುತ್ತಿರುವಾಗ ಬಂದಿರುತ್ತದೆ).

ವಿಧೇರ್ದೇಹಾಪಗಮನೇ ಲಿಂಗಮಾತ್ರಶರೀರಿಣಃ ।
ಪೂರ್ಣಸಾಧನಸಂಪನ್ನಾ ಅಪರೋಕ್ಷದೃಶಶ್ಚ ಯೇ ॥ ೩೭ ॥

---

ಬರುವುದಿಲ್ಲ;[1] ವೈಕುಂಠದಲ್ಲಿ ವಿರಜಾನದಿಯೇ ಗಂಗೆಯೆಂಬ ಅಪರನಾಮವುಳ್ಳವಳಾಗಿ ಪ್ರವಹಿಸುತ್ತಿರುವಳು;[2] ಆ ವೈಕುಂಠಸಹಿತವಾದ ವಿರಜಾನದಿಯು, ಮಹಾಪ್ರಲಯ ಕಾಲದಲ್ಲಿ ಬ್ರಹ್ಮಾಂಡದ ಬಹಿರಾವರಣಗಳಲ್ಲಿ ಕಡೆಯದಾದ ಸತ್ವಗುಣ ಮತ್ತು ಅದರಾಚೆಗಿರುವ ಅಪಾರವಾದ ಅವ್ಯಾಕೃತಾಕಾಶಗಳ ಮಧ್ಯದಲ್ಲಿ ಬಂದಿರುತ್ತದೆ

---

ಸ್ವರೂಪಶ್ರದ್ಧೆಗಳು ಕ್ರಮವಾಗಿ, ಈ ಸತ್ವಾದಿಗುಣತ್ರಯಯುಕ್ತ ಲಕ್ಷಣಗಳುಳ್ಳವುಗಳಾಗಿರುವುದ ರಿಂದಲೂ, ಇವರು ಸಾತ್ವಿಕ-ರಾಜಸ-ತಾಮಸರೆಂದೂ ವ್ಯವಹರಿಸಲ್ಪಡುತ್ತಾರೆ. 'ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ। ಶ್ರದ್ಧಾಮಯೋಽಯಂ ಪುರುಷಃ ಯೋಃ ಯಚ್ಛ್ರದ್ಧಃ ಸ ಏವ ಸಃ॥' (ಗೀತಾ) ಎಂಬಲ್ಲಿ ಜೀವಸ್ವರೂಪಕ್ಕನುಗುಣವಾದ ಶ್ರದ್ಧೆಯೇ ಸರ್ವರಿಗೂ ಸಾಮಾನ್ಯವಾಗಿ ಉಂಟಾಗುವುದೆಂದೂ, ಯಾವನು ಸತ್ವಾದಿಗುಣ ನಿಮಿತ್ತಕವಾದ ಮೂರು ಶ್ರದ್ಧೆಗಳಲ್ಲಿ ಯಾವ ಶ್ರದ್ಧೆಯನ್ನುಳ್ಳವನೋ, ಅವನು ಅದೇ ಸ್ವರೂಪನೆಂದೇ ತಿಳಿಯಬೇಕೆಂದೂ ಹೇಳಲಾಗಿದೆ.

1. ವೈಕುಂಠಲೋಕದ ಅಮುಕ್ತಭಾಗಗಳಲ್ಲಿ (ಭೂದುರ್ಗಭಾಗಗಳಲ್ಲಿ) ವ್ಯಾಪ್ತ್ಯುಪಾಸಕ ರಾದ (ದೇವಾದಿ ಜೀವರು) ಸಾಧನಪರಿಪೂರ್ತಿಯನ್ನು ಹೊಂದಿದವರು, ಪ್ರಲಯದವರೆಗೆ ಅಲ್ಲಿಯೇ ಆನಂದದಿಂದ ವಾಸಿಸುತ್ತಿರುತ್ತಾರೆ; ವೈಕುಂಠದಲ್ಲಿರುವವರೆಲ್ಲರೂ ಮುಕ್ತರೇ (ಲಿಂಗಭಂಗ ಹೊಂದಿದ ಸ್ವರೂಪಸ್ಥಿತರೇ) ಅಲ್ಲ—ಆದರೂ ಆ ಯಾರೂ ಸಾಮಾನ್ಯವಾಗಿ ತಿರುಗಿ ಸಂಸಾರಕ್ಕೆ ಬರತಕ್ಕವರಲ್ಲ.

2. ವಿರಜಾನದೀ ಪ್ರವಾಹವು ಲಕ್ಷ್ಮ್ಯಾತ್ಮಕವಾದುದು; 'ಮಹಾಲಕ್ಷ್ಮೀಸ್ವರೂಪಿಣ್ಯಾಂ ವಿಗಾಹ್ಯ...' ಇತ್ಯಾದಿ (ತತ್ತ್ವರತ್ನಮಾಲಾ) ವಾಕ್ಯವು ವಿರಜಾಸ್ವರೂಪವನ್ನು ನಿರೂಪಿಸುತ್ತದೆ.

ನಿರ್ಗತ್ಯ ಚೋರ್ಧ್ವಂ ವೈಕುಂಠಾದತೀತ್ಯಾವರಣಾನಿ ಚ ।
ವಿರಜಾಯಾಂ ಕೃತಸ್ನಾನಾ ಬ್ರಹ್ಮಣಾ ಸಹ ಸರ್ವಶಃ ॥ ೩೮ ॥
ತ್ಯಕ್ತಲಿಂಗಾಸ್ತತಃ ಸರ್ವೇ ಸ್ವರೂಪೇಣ ವ್ಯವಸ್ಥಿತಾಃ ।
ತತೋ ದೃಷ್ಟ್ವಾ ಶಿಂಶುಮಾರಂ ಶ್ವೇತದ್ವೀಪಂ ನಿರೀಕ್ಷ್ಯ ಚ ॥ ೩೯ ॥
ವಿಶಂತಿ ವಾಸುದೇವಾಖ್ಯಂ ಹರೇರೂಪಂ ಚತುರ್ಥಕಂ ।
ಸೃಷ್ಟಿಕಾಲೇಪಿ ತೇ ಸರ್ವೇ ವೈಕುಂಠಾದಿಷು ಧಾಮಸು ॥ ೪೦ ॥
ಕುರ್ವಾಣಾ ಹರಿಸೇವಾಂ ತೇ ಸ್ವರೂಪಾನಂದಭೋಜನಾಃ ।
ಸಮಾಸತೇ ಸದಾ ತೇಷಾಂ ನ ಹಿ ಸಂಸಾರದರ್ಶನಂ ॥ ೪೧ ॥

ವಿಧೇಃ-ಬ್ರಹ್ಮದೇವನ ದೇಹಾಪಗಮನೇ-ದೇಹವು (ಪ್ರಾಕೃತದೇಹವು) ಬಿಟ್ಟುಹೋಗುತ್ತಿರಲಾಗಿ (ಬ್ರಹ್ಮನು ದೇಹವನ್ನು ತ್ಯಜಿಸುತ್ತಿರಲು), ಯೇ-ಯಾರು, ಪೂರ್ಣಸಾಧನಸಂಪನ್ನಾಃ-(ಸ್ವಯೋಗ್ಯವಾದ) ಸಾಧನಪೂರ್ತಿಯನ್ನು ಹೊಂದಿ, ಅಪರೋಕ್ಷದೃಶಃ-ಅಪರೋಕ್ಷಜ್ಞಾನಿಗಳಾಗಿ, ಲಿಂಗಮಾತ್ರಶರೀರಿಣಃ-ಲಿಂಗದೇಹ ಮಾತ್ರ ವುಳ್ಳವರಾಗಿರುವರೋ, (ತೇ-ಅವರು), ನಿರ್ಗತ್ಯ-ಹೊರಗೆ ಬಂದು (ಗರುಡ ಶೇಷಮಾರ್ಗಗಳಿಂದ ಬಂದು, ಬ್ರಹ್ಮದೇಹವನ್ನು ಪ್ರವೇಶಿಸಿದ್ದವರೆಲ್ಲರೂ ಹೊರಗೆ ಬಂದು), ಆವರಣಾನಿ-(ಬ್ರಹ್ಮಾಂಡದ) ಆವರಣಗಳನ್ನು ಅತೀತ್ಯ-ದಾಟಿ, ವೈಕುಂಠಾತ್- ವೈಕುಂಠದಿಂದ, ಊರ್ಧ್ವಂ-ಮೇಲ್ಭಾಗದಲ್ಲಿ ವಿರಜಾಯಾಂ-ವಿರಜಾನದಿಯಲ್ಲಿ ಸರ್ವಶಃ- ಎಲ್ಲರೂ, ಬ್ರಹ್ಮಣಾ ಸಹ-ಬ್ರಹ್ಮದೇವನೊಂದಿಗೆ, ಕೃತಸ್ನಾನಾಃ - ಸ್ನಾನಮಾಡಿದವರಾಗಿ, ತ್ಯಕ್ತಲಿಂಗಾಃ-ಲಿಂಗದೇಹಗಳನ್ನು ತ್ಯಜಿಸಿ, ತತಃ-ನಂತರ, ಸರ್ವೇ-ಸರ್ವರೂ, ಸ್ವರೂಪೇಣ-(ತಂತಮ್ಮ) ಸ್ವರೂಪದಿಂದ ಮಾತ್ರ, ವ್ಯವಸ್ಥಿತಾಃ-ಇರುವವರಾಗುತ್ತಾರೆ; ತತಃ-ಮುಂದೆ, ಶಿಂಶುಮಾರಂ- ಶಿಂಶುಮಾರ ರೂಪನಾದ (ತನ್ನಾಮಕ) ಶ್ರೀಹರಿಯನ್ನು, ದೃಷ್ಟ್ವಾ-(ಬ್ರಹ್ಮದೇವನೊಂದಿಗೆ ಹೋಗಿ) ದರ್ಶನ ಮಾಡಿಕೊಂಡು (ನೋಡಿ), ಶ್ವೇತದ್ವೀಪಂ ಚ-ಶ್ವೇತದ್ವೀಪವನ್ನೂ ಸಹ

---

(೩೪-೩೬). ಆಗಲೇ ಬ್ರಹ್ಮದೇವನ ದೇಹವು ಬಿದ್ದುಹೋಗುತ್ತದೆ; ಆ ಮೊದಲು (ಗರುಡಶೇಷಮಾರ್ಗಗಳಿಂದ) ಬಂದು ಬ್ರಹ್ಮನನ್ನು ಪ್ರವೇಶಿಸಿದವರು (ಮುಕ್ತಿಯೋಗ್ಯ ದೇವಾದಿ ಜೀವರು), ಮುಕ್ತಿಗೆ ಅವಶ್ಯಕವಾದ ಸಾಧನಪರಿಪೂರ್ತಿಯನ್ನೂ ಅಪರೋಕ್ಷಜ್ಞಾನವನ್ನೂ ಹೊಂದಿದವರಾಗಿ, ಲಿಂಗದೇಹ ಮಾತ್ರವುಳ್ಳವರಾಗಿರುತ್ತಾರೆ; ಅವರೆಲ್ಲರೂ ಆಗ ಹೊರಗೆ ಬಂದು, ವೈಕುಂಠದ ಮೇಲ್ಭಾಗದಲ್ಲಿರುವ ವಿರಜಾನದಿಯಲ್ಲಿ ಬ್ರಹ್ಮದೇವನೊಡನೆ ಸ್ನಾನಮಾಡಿ, ತಮ್ಮ ಲಿಂಗದೇಹಗಳನ್ನು ತ್ಯಜಿಸುತ್ತಾರೆ; ನಂತರ ಸ್ವರೂಪದೇಹಗಳಿಂದ ಮಾತ್ರ ಸ್ಥಿತರಾದ ಅವರೆಲ್ಲರೂ,

(ಅಲ್ಲಿರುವ ಶ್ರೀ ನಾರಾಯಣನನ್ನೂ), ನಿರೀಕ್ಷ್ಯ- ಕಂಡು, ಹರೇಃ-ಶ್ರೀಹರಿಯ, ಚತುರ್ಥಕಂ-ನಾಲ್ಕನೆಯದಾದ (ಅನಿರುದ್ಧಾದಿ ಚತುರ್ವ್ಯೂಹರಲ್ಲಿ ಕಡೆಯದಾದ), ವಾಸುದೇವಾಖ್ಯಂ ವಾಸುದೇವನೆಂಬ, ರೂಪಂ-ರೂಪವನ್ನು ಪ್ರವಿಶಂತಿ-(ಬ್ರಹ್ಮದೇವನೊಡನೆ) ಪ್ರವೇಶಿಸುತ್ತಾರೆ; ಸೃಷ್ಟಿ ಕಾಲೇ-(ಪ್ರಳಯಕಾಲ ಕಳೆದು ಪುನಃ ಸೃಷ್ಟಿಕಾಲ ಪ್ರಾಪ್ತವಾಗುತ್ತಿರಲು) ಸೃಷ್ಟಿಕಾಲದಲ್ಲಿ ತೇ ಸರ್ವೇ ಅಪಿ-(ವಾಸುದೇವನನ್ನು ಪ್ರವೇಶಿಸಿದ್ದ) ಆ ಮುಕ್ತರೆಲ್ಲರೂ, ವೈಕುಂಠಾದಿ ಧಾಮಸು-(ಬ್ರಹ್ಮಾಂಡದೊಳಗೆ ಹಿಂದಿನ ಕಲ್ಪದಂತೆ ಆಯಾ ಸ್ಥಾನಗಳಲ್ಲಿ ಪ್ರಕಟಗೊಳಿಸಲ್ಪಡುವ) ವೈಕುಂಠವೇ ಮೊದಲಾದ ಮುಕ್ತಲೋಕಗಳಲ್ಲಿ ಹರಿಸೇವಾಂ- ಶ್ರೀಹರಿಸೇವೆಯನ್ನು ಕುರ್ವಾಣಾಃ-(ಸ್ವಯೋಗ್ಯ ಧರ್ಮಾಚರಣೆಗಳಿಂದ) ಮಾಡುವವರಾಗಿ, ತೇ-ಆ ಮುಕ್ತರು, ಸ್ವರೂಪಾನಂದ ಭೋಜನಾಃ-ಸ್ವರೂಪಾನಂದವನ್ನು ಭೋಗಿಸುತ್ತ ಸದಾ-ಸರ್ವದಾ, ಸಮಾಸತೇ-ಇರುವವರಾಗುತ್ತಾರೆ; ತೇಷಾಂ-ಅವರಿಗೆ (ಮುಕ್ತರಿಗೆ), ಸಂಸಾರದರ್ಶನಂ-ಸಂಸಾರದ ಅನುಭವವು (ಪ್ರಾಕೃತದೇಹಯೋಗ ವಿಯೋಗಗಳು-ತನ್ನಿಮಿತ್ತ ಸುಖದುಃಖಾದಿಗಳು), ನ ಹಿ-ಇಲ್ಲವೆಂಬುದು ಶಾಸ್ತ್ರಸಿದ್ಧವು.

**ಅತೋ ರಾಜನ್ ಪ್ರಕುರ್ವೀತ ಹರಿಭಕ್ತಿಂ ಸದಾ ನರಃ ।**
**ದುರ್ಲಭಂ ಮಾನುಷಂ ಪ್ರಾಪ್ಯ ನೈವಾಯುರ್ವ್ಯರ್ಥತಾಂ ನಯೇತ್ ॥೨**

ಅತಃ-ಆದ್ದರಿಂದ (ಸುಜೀವರು ಹೀಗೆ ಸ್ವಗತಿಯನ್ನು ಸಾಧಿಸಬೇಕಾದುದರಿಂದ), ರಾಜನ್-ಹೇ ರಾಜನೇ!, ನರಃ-ಮನುಷ್ಯನು, ಹರಿಭಕ್ತಿಂ-ಹರಿಭಕ್ತಿಯನ್ನು

---

ಬ್ರಹ್ಮದೇವನೊಂದಿಗೆ ಹೊರಟು, ಶಿಂಶುಮಾರನಾಮಕ (ತದ್ರೂಪನಾದ) ಶ್ರೀಹರಿಯನ್ನು ಕಂಡು, ಶ್ವೇತದ್ವೀಪದಲ್ಲಿ (ಪ್ರಲಯದಲ್ಲಿ ನಷ್ಟವಾಗದ ಮುಕ್ತಲೋಕಗಳಲ್ಲೊಂದು), ಶ್ರೀನಾರಾಯಣನ ದರ್ಶನವನ್ನು ಪಡೆದು, ಅನಿರುದ್ಧಾದಿ ಚತುರ್ವ್ಯೂಹದಲ್ಲಿ ನಾಲ್ಕನೆಯದಾದ ವಾಸುದೇವರೂಪೀ ಶ್ರೀವಿಷ್ಣುವನ್ನು ಬ್ರಹ್ಮನೊಂದಿಗೆ, ಪ್ರವೇಶಿಸುತ್ತಾರೆ; (ಅಲ್ಲಿ ಧ್ಯಾನಮಗ್ನರಾಗಿ ಸ್ವಸ್ವರೂಪಾನಂದವನ್ನು ಅನುಭವಿಸುತ್ತಿದ್ದು) ಮತ್ತೆ ಸೃಷ್ಟಿಕಾಲ ಪ್ರಾಪ್ತವಾಗಿ, ಬ್ರಹ್ಮಾಂಡದಲ್ಲಿ ಆಯಾ ಸ್ಥಳಗಳಲ್ಲಿ ವೈಕುಂಠಾದಿ ಮುಕ್ತಲೋಕಗಳು ಪ್ರಕಟಗೊಳಿಸಲ್ಪಟ್ಟ ಒಡನೆ, ಅಲ್ಲಿ ಮುಕ್ತರೆಲ್ಲರೂ, ಸ್ವಯೋಗ್ಯ (ಸ್ವಭಾವಸಿದ್ಧ) ಧರ್ಮಾಚರಣೆಗಳಿಂದ ಶ್ರೀಹರಿಯನ್ನು ಸೇವಿಸುತ್ತ ಸ್ವಸ್ವರೂಪಾನಂದವನ್ನು ಭೋಗಿಸುತ್ತ ಸರ್ವದಾ ವಾಸಿಸುತ್ತಾರೆ;[1] ಅವರಿಗೆ ಎಂದಿಗೂ ಸಂಸಾರದರ್ಶನವಿಲ್ಲ (೩೭-೪೧), ಆದ್ದರಿಂದ, ಹೇ ರಾಜನ್! ಸಾತ್ವಿಕಜೀವರು ಸರ್ವದಾ ಹರಿಭಕ್ತಿಯನ್ನು ಅವಶ್ಯವಾಗಿ ಮಾಡಬೇಕು; ದುರ್ಲಭವಾದ ಮನುಷ್ಯದೇಹವನ್ನು ಹೊಂದಿ

---

1. ಪುನಃ ಶ್ವೇತದ್ವೀಪಪತಿಯ ದರ್ಶನ ಪಡೆದು ತಂತಮ್ಮ ಸ್ಥಾನಗಳನ್ನು ಸೇರುತ್ತಾರೆ.

ಸದಾ-ಸರ್ವದಾ, ಪ್ರಕುರ್ವೀತ-ಮಾಡಲೇಬೇಕು; ದುರ್ಲಭಂ-ಕಷ್ಟಲಭ್ಯವಾದ (ಅನೇಕ ನೀಚಯೋನಿಗಳಲ್ಲಿ ತಿರುಗಿದ ನಂತರ ದೊರೆಯುವ), ಮಾನುಷಂ-ಮನುಷ್ಯದೇಹವನ್ನು ಪ್ರಾಪ್ಯ-ಹೊಂದಿ, ಆಯುಃ-ಆಯುಷ್ಯವನ್ನು ವ್ಯರ್ಥತಾಂ-ವ್ಯರ್ಥತ್ವವನ್ನು (ವ್ಯರ್ಥವಾಗುವಿಕೆಯನ್ನು), ನ ನಯೇತ್ ಏವ-ಹೊಂದಿಸಲೇ ಕೂಡದು (ಪ್ರತಿಕ್ಷಣ ವನ್ನೂ ಸಾರ್ಥಕಗೊಳಿಸಿಕೊಳ್ಳಬೇಕು).

**ಕಾದಾಚಿತ್ಕೇನ ಯೋಗೇನ ಸ್ನೇಹಂ ಬಧ್ನಾತಿ ಮೂಢಧೀಃ ।**

**ಗೃಹಸ್ತ್ರೀಪುತ್ರದಾಸೇಷು ಸ್ವಸ್ಯೈವಾನಿಷ್ಟಕಾರಿಷು ॥ ೪೩ ॥**

ಕಾದಾಚಿತ್ಕೇನ-ಒಂದು ಕಾಲದಲ್ಲಿ ಮಾತ್ರ ಒದಗುವ (ಅಲ್ಪಕಾಲೀನವಾದ), ಯೋಗೇನ-ಸಂಬಂಧದಿಂದ (ಕೂಡುವಿಕೆಯಿಂದ) ಮೂಢಧೀಃ-ಅಜ್ಞಾನಿಯು, ಸ್ವಸ್ಯ-ತನಗೆ, ಅನಿಷ್ಟಕಾರಿಷು ಏವ-ಅನಿಷ್ಟವನ್ನೇ (ಅಹಿತವನ್ನೇ) ಮಾಡುವ, ಗೃಹಸ್ತ್ರೀಪುತ್ರ ದಾಸೇಷು-ಮನೆ, ಭಾರ್ಯಾ, ಪುತ್ರ, ಭೃತ್ಯರಲ್ಲಿ ಸ್ನೇಹಂ-ಸ್ನೇಹವನ್ನು (ಅಭಿಮಾನವನ್ನು-ತನಗೆ ಹಿತಕಾರಿಗಳೆಂಬ ಬುದ್ಧಿಯನ್ನು), ಬಧ್ನಾತಿ-ಕಟ್ಟುತ್ತಾನೆ (ಮಾಡುತ್ತಾನೆ).

**ಮನೋನುಕೂಲತಾ ಚೇತ್ಸ್ಯಾದ್ಗೃಹಸ್ತ್ರೀಪುತ್ರಬಂಧುಷು ।**

**ತದಾ ಭಾವಿವಿಯೋಗೇನ ಸ್ವಪಾತ್ಮಾ ಪರಿತಪ್ಯತೇ ॥ ೪೪ ॥**

**ಏಷ್ವೇವ ಪ್ರಾತಿಕೂಲ್ಯೇನ ನೃಣಾಂ ದುಃಖಮಿತಿ ಸ್ಫುಟಂ ।**

**ತ್ಯಕ್ತ್ವಾ ಸ್ಥಾನಂ ತು ತೇ ಯಾತಿ ಸ್ವಯಂ ತ್ಯಕ್ತ್ವಾಥವಾ ಮ್ರಿಯೇತ್ ॥ ೪೫ ॥**

**ತಸ್ಮಾತ್ಸರ್ವಾತ್ಮನಾ ನಾಸ್ತಿ ಸುಖಲೇಶೋಽಪಿ ಸಂಸೃತೌ ।**

**ಬುದ್ಧಿಮಾಂಸ್ತು ವಿಚಾರ್ಯೈವಂ ತಂ ಹರಿಂ ಶರಣಂ ವ್ರಜೇತ್ ॥ ೪೬ ॥**

ಗೃಹಸ್ತ್ರೀಪುತ್ರಬಂಧುಷು-(ಹಾಗೆ ಸ್ನೇಹದಿಂದ ಬಂಧಿತನಾಗುವ) ಮನೆ, ಹೆಂಡತಿ, ಪುತ್ರ, ಬಂಧುಗಳಲ್ಲಿ ಮನೋನುಕೂಲತಾ-(ತನ್ನ ಮನಸ್ಸಿಗೆ ಅನುಕೂಲ ವಾಗಿರುವಿಕೆಯು) ತನ್ನನ್ನು ಅನುವರ್ತಿಸುವಿಕೆಯು, ಸ್ಯಾತ್ ಚೇತ್-ಇರುವುದಾದರೆ, ತದಾ-ಆಗ, ಭಾವಿವಿಯೋಗೇನ-ಮುಂದಾಗಲಿರುವ (ಸಂಭವಿಸಲಿರುವ) ಅವರ

---

ಆಯುಷ್ಯವನ್ನು ವ್ಯರ್ಥಗೊಳಿಸಬಾರದು (೪೨). ಯಾವುದೊಂದು ಅಲ್ಪಕಾಲದಲ್ಲಿ ತನ್ನೊಡನೆ ಸೇರುವ, ಗೃಹ, ಪತ್ನೀಪುತ್ರಭೃತ್ಯರಲ್ಲಿ ಅಜ್ಞಾನಿಯು ಸ್ನೇಹಯುಕ್ತನಾಗುತ್ತಾನೆ (ಅಭಿಮಾನಯುಕ್ತನಾಗುತ್ತಾನೆ); ಈ ಎಲ್ಲರೂ ತನಗೇ ಅನಿಷ್ಟಕಾರಿಗಳೆಂಬುದನ್ನು ತಿಳಿಯನು (ಸಂಸಾರದಲ್ಲಿ ಬಂಧಿತನಾಗಲು, ಜನನಮರಣಗಳೆಂಬ ಸುಳಿಯಲ್ಲಿ ಸಿಕ್ಕು, ಸುತ್ತಲು ಕಾರಣರಾಗುತ್ತಾರೆಂಬುದನ್ನು ಅರಿಯನು) (೪೩). ಈ ಭಾರ್ಯಾದಿ ಬಂಧುಗಳು ತನಗೆ ಅನುಕೂಲರಾಗಿದ್ದರೆ, ಮುಂದೆ ಬರಲಿರುವ ಅವರ ವಿಯೋಗದ ಚಿಂತೆಯಿಂದ ಮನಸ್ಸು (ಜೀವನು) ದುಃಖಿಸುತ್ತಾನೆ; ಅವರು ತನಗೆ ಪ್ರತಿಕೂಲರಾಗಿದ್ದರೆ

ವಿಯೋಗದಿಂದ, ನೃಪ- ಹೇ ರಾಜನೇ!, ಆತ್ಮಾ-ಜೀವನು, ಪರಿತಪ್ಯತೇ- ದುಃಖಿಸುತ್ತಾನೆ; ಏಷು ಏವ-ಇವರಲ್ಲಿಯೇ (ಈ ಪತ್ನೀಪುತ್ರಾದಿಗಳಲ್ಲಿಯೇ), ಪ್ರಾತಿಕೂಲ್ಯೇನ-ತನ್ನನ್ನು ವಿರೋಧಿಸುವಿಕೆಯು (ತನ್ನ ವಿರೋಧವಿದ್ದರೆ) ಇರುವುದರಿಂದ, ನೃಣಾಂ- ಮನುಷ್ಯರಿಗೆ, ದುಃಖಂ- ದುಃಖವು, ಇತಿ- ಎಂಬುದು (ಅನುವರ್ತಿಗಳಾದರೂ ಅಥವಾ ವಿರೋಧಿಗಳಾದರೂ, ಉಭಯ ಪಕ್ಷದಲ್ಲಿಯೂ ದುಃಖ ವೆಂಬುದು), ಸ್ಫುಟಂ- ಸ್ಪಷ್ಟವೇ ಇದೆ; ಆತ್ಮಾನಂ-ತನ್ನನ್ನು ತೇ-ಅವರು (ಆ ಬಂಧುಗಳು), ತ್ಯಕ್ತ್ವಾ-ಬಿಟ್ಟು ಯಾಂತಿ- ಹೋಗುತ್ತಾರೆ (ಮರಣದಿಂದ ಅಗಲುತ್ತಾರೆ); ಅಥವಾ-ಅಥವಾ (ಹಾಗಲ್ಲದಿದ್ದರೆ), ಸ್ವಯಂ- ತಾನೇ, ತ್ಯಕ್ತ್ವಾ-(ಅವರನ್ನು) ಬಿಟ್ಟು ಮ್ರಿಯೇತ್-ಮೃತನಾಗುತ್ತಾನೆ; ತಸ್ಮಾತ್- ಆದ್ದರಿಂದ, ಸರ್ವಾತ್ಮನಾ- ಯಾವ ರೂಪದಿಂದಲೂ, ಸಂಸೃತೌ-ಸಂಸಾರದಲ್ಲಿ ಸುಖಲೇಶಃ ಅಪಿ-ಸುಖದ ಲೇಶವೂ (ಅತ್ಯಲ್ಪ ಸುಖವೂ, ನಾಸ್ತಿ ಇರುವುದಿಲ್ಲ ಬುದ್ಧಿಮಾನ್- ವಿವೇಕಿಯು, ಏವಂ- ಹೀಗೆ, ವಿಚಾರ್ಯ- ಆಲೋಚನೆಯಿಂದ ನಿಶ್ಚಯಿಸಿ, (ವಿಮರ್ಶಿಸಿ), ತಂ ಹರಿಂ-ಆ (ಮೋಕ್ಷಪ್ರದನಾದ) ಹರಿಯನ್ನು ಶರಣಂ ವ್ರಜೇತ್- ಶರಣುಹೊಂದಬೇಕು.

**ಅನಾದ್ಯನಂತಕಾಲಂ ಯೋ ಜೀವಸ್ಯ ಪರಮಃ ಸಖಾ ।**
**ತಸ್ಯ ಸಖ್ಯೇ ಸುಸಂಪನ್ನೇ ಮಾ ಭೇಮ ಶ್ರವಸಸ್ಪತೇ ॥ ೪೭ ॥**

ಯಃ- ಯಾವನು, ಅನಾದ್ಯನಂತಕಾಲಂ- ಎಲ್ಲ ಕಾಲದಲ್ಲಿ (ಅನಾದಿಯಿಂದ ಮತ್ತು ಅನಂತ ಭವಿಷ್ಯಕಾಲದಲ್ಲಿ ಸಹ), ಜೀವಸ್ಯ-ಜೀವನ, ಪರಮಃ-ಶ್ರೇಷ್ಠನಾದ, ಸಖಾ- ಸಖನೋ, ತಸ್ಯ- ಆತನ (ಶ್ರೀಹರಿಯ), ಸಖ್ಯೇ-ಸಖ್ಯವು (ಸ್ನೇಹವು), ಸುಸಂಪನ್ನೇ (ಸತಿ)- ಪೂರ್ಣವಾಗಿರಲು (ಸಖನೆಂಬ ಜ್ಞಾನವು ದೃಢವಾಗಿರುತ್ತಿರಲು), ಶ್ರವಸಸ್ಪತೇ- ಹೇ ಉತ್ತಮ ಕೀರ್ತೇ!, ಮಾ ಭೇಮ-(ಯಾವುದಕ್ಕೂ) ಹೆದರುವ (ಭಯಪಡುವ) ಕಾರಣವಿಲ್ಲ

**ತಮೇವ ನೋನುಮೋ ಭಕ್ತ್ಯಾ ಜೇತಾರಮಪರಾಜಿತಂ ।**
**ದುಷ್ಕೃತಾದ್ದ್ವೇಷಿಣೋ ಯಸ್ಯ ಪಾತ್ಯತೇ ಭೃಶಪೀಡಿತಾಃ ॥ ೪೮ ॥**
**ಪತ್ರೇ ತಮಸ್ಯನಾರಂಭೇ ತಮೀಶಂ ಶರಣಂ ವ್ರಜೇತ್ ।**
**ನಾನ್ಯಃ ಪಂಥಾ ನ ಚಾಸ್ತ್ಯನ್ಯಃ ಪಂಥಾ ಪಂಥಾ ನ ಹೀತರಃ ॥ ೪೯ ॥**

---

(ವಿರೋಧಿಗಳಾಗಿದ್ದರೆ) ದುಃಖವೆಂಬುದು ಸ್ಪಷ್ಟವೇ ಇದೆ; ಹೀಗೆ ಉಭಯಪಕ್ಷಗಳಲ್ಲಿ ಸಹ ಅವರಲ್ಲಿ ಸ್ನೇಹವನ್ನು ಬೆಳೆಸಿಕೊಳ್ಳುವುದು ದುಃಖಹೇತುವೆಂದು ಸಿದ್ಧವಾಗುತ್ತದೆ; ಆ ಬಂಧುಗಳು ಈತನನ್ನು (ಸ್ನೇಹಮಾಡುವ ತನ್ನನ್ನು) ಬಿಟ್ಟುಹೋಗುತ್ತಾರೆ, ಅಥವಾ ತಾನಾದರೂ ಅವರನ್ನು ಬಿಟ್ಟು ಮೃತನಾಗುತ್ತಾನೆ; ಆದ್ದರಿಂದ ಈ (ಸ್ನೇಹಬಂಧ ರೂಪದ)

ಸದಾ-ಸರ್ವದಾ, ಪ್ರಕುರ್ವೀತ-ಮಾಡಲೇಬೇಕು; ದುರ್ಲಭಂ-ಕಷ್ಟಲಭ್ಯವಾದ (ಅನೇಕ ನೀಚಯೋನಿಗಳಲ್ಲಿ ತಿರುಗಿದ ನಂತರ ದೊರೆಯುವ), ಮಾನುಷಂ-ಮನುಷ್ಯದೇಹವನ್ನು ಪ್ರಾಪ್ಯ-ಹೊಂದಿ, ಆಯುಃ-ಆಯುಷ್ಯವನ್ನು ವ್ಯರ್ಥತಾಂ-ವ್ಯರ್ಥತ್ವವನ್ನು (ವ್ಯರ್ಥವಾಗುವಿಕೆಯನ್ನು), ನ ನಯೇತ್ ಏವ-ಹೊಂದಿಸಲೇ ಕೂಡದು (ಪ್ರತಿಕ್ಷಣ ವನ್ನೂ ಸಾರ್ಥಕಗೊಳಿಸಿಕೊಳ್ಳಬೇಕು).

**ಕಾದಾಚಿತ್ಕೇನ ಯೋಗೇನ ಸ್ನೇಹಂ ಬಧ್ನಾತಿ ಮೂಢಧೀಃ ।**
**ಗೃಹಸ್ತ್ರೀಪುತ್ರದಾಸೇಷು ಸ್ವಸ್ಯೈವಾನಿಷ್ಟಕಾರಿಷು ॥ ೪೩ ॥**

ಕಾದಾಚಿತ್ಕೇನ-ಒಂದು ಕಾಲದಲ್ಲಿ ಮಾತ್ರ ಒದಗುವ (ಅಲ್ಪಕಾಲೀನವಾದ), ಯೋಗೇನ-ಸಂಬಂಧದಿಂದ (ಕೂಡುವಿಕೆಯಿಂದ) ಮೂಢಧೀಃ-ಅಜ್ಞಾನಿಯು, ಸ್ವಸ್ಯ-ತನಗೆ, ಅನಿಷ್ಟಕಾರಿಷು ಏವ-ಅನಿಷ್ಟವನ್ನೇ (ಅಹಿತವನ್ನೇ) ಮಾಡುವ, ಗೃಹಸ್ತ್ರೀಪುತ್ರ ದಾಸೇಷು-ಮನೆ, ಭಾರ್ಯಾ, ಪುತ್ರ, ಭೃತ್ಯರಲ್ಲಿ ಸ್ನೇಹಂ-ಸ್ನೇಹವನ್ನು (ಅಭಿಮಾನವನ್ನು-ತನಗೆ ಹಿತಕಾರಿಗಳೆಂಬ ಬುದ್ಧಿಯನ್ನು), ಬಧ್ನಾತಿ-ಕಟ್ಟುತ್ತಾನೆ (ಮಾಡುತ್ತಾನೆ).

**ಮನೋಽನುಕೂಲತಾ ಚೇತ್ಸ್ಯಾದ್ಗೃಹಸ್ತ್ರೀಪುತ್ರಬಂಧುಷು ।**
**ತದಾ ಭಾವಿವಿಯೋಗೇನ ನೃಪಾತ್ಮಾ ಪರಿತಪ್ಯತೇ ॥ ೪೪ ॥**
**ಏಷ್ವೇವ ಪ್ರಾತಿಕೂಲ್ಯೇನ ನೃಣಾಂ ದುಃಖಮಿತಿ ಸ್ಫುಟಂ ।**
**ತ್ಯಕ್ತ್ವಾತ್ಮಾನಂ ತು ತೇ ಯಾತಿ ಸ್ವಯಂ ತ್ಯಕ್ತ್ವಾಥವಾ ಮ್ರಿಯೇತ್ ॥ ೪೫ ॥**
**ತಸ್ಮಾತ್ಸರ್ವಾತ್ಮನಾ ನಾಸ್ತಿ ಸುಖಲೇಶೋಽಪಿ ಸಂಸೃತೌ ।**
**ಬುದ್ಧಿಮಾಂಸ್ತು ವಿಚಾರ್ಯೈವಂ ತಂ ಹರಿಂ ಶರಣಂ ವ್ರಜೇತ್ ॥ ೪೬ ॥**

ಗೃಹಸ್ತ್ರೀಪುತ್ರಬಂಧುಷು-(ಹಾಗೆ ಸ್ನೇಹದಿಂದ ಬಂಧಿತನಾಗುವ) ಮನೆ, ಹೆಂಡತಿ, ಪುತ್ರ, ಬಂಧುಗಳಲ್ಲಿ ಮನೋಽನುಕೂಲತಾ-(ತನ್ನ ಮನಸ್ಸಿಗೆ ಅನುಕೂಲ ವಾಗಿರುವಿಕೆಯು) ತನ್ನನ್ನು ಅನುವರ್ತಿಸುವಿಕೆಯು, ಸ್ಯಾತ್ ಚೇತ್-ಇರುವುದಾದರೆ, ತದಾ-ಆಗ, ಭಾವಿವಿಯೋಗೇನ-ಮುಂದಾಗಲಿರುವ (ಸಂಭವಿಸಲಿರುವ) ಅವರ

---

ಆಯುಷ್ಯವನ್ನು ವ್ಯರ್ಥಗೊಳಿಸಬಾರದು (೪೨). ಯಾವುದೊಂದು ಅಲ್ಪಕಾಲದಲ್ಲಿ ತನ್ನೊಡನೆ ಸೇರುವ, ಗೃಹ, ಪತ್ನೀಪುತ್ರಭೃತ್ಯರಲ್ಲಿ ಅಜ್ಞಾನಿಯು ಸ್ನೇಹಯುಕ್ತನಾಗುತ್ತಾನೆ (ಅಭಿಮಾನಯುಕ್ತನಾಗುತ್ತಾನೆ); ಈ ಎಲ್ಲರೂ ತನಗೇ ಅನಿಷ್ಟಕಾರಿಗಳೆಂಬುದನ್ನು ತಿಳಿಯನು (ಸಂಸಾರದಲ್ಲಿ ಬಂಧಿತನಾಗಲು, ಜನನಮರಣಗಳೆಂಬ ಸುಳಿಯಲ್ಲಿ ಸಿಕ್ಕು, ಸುತ್ತಲು ಕಾರಣರಾಗುತ್ತಾರೆಂಬುದನ್ನು ಅರಿಯನು) (೪೩). ಈ ಭಾರ್ಯಾದಿ ಬಂಧುಗಳು ತನಗೆ ಅನುಕೂಲರಾಗಿದ್ದರೆ, ಮುಂದೆ ಬರಲಿರುವ ಅವರ ವಿಯೋಗದ ಚಿಂತೆಯಿಂದ ಮನಸ್ಸು (ಜೀವನು) ದುಃಖಿಸುತ್ತಾನೆ; ಅವರು ತನಗೆ ಪ್ರತಿಕೂಲರಾಗಿದ್ದರೆ

ವಿಯೋಗದಿಂದ, ನೃಪ-ಹೇ ರಾಜನೇ!, ಆತ್ಮಾ-ಜೀವನು, ಪರಿತಪ್ಯತೇ-ದುಃಖಿಸುತ್ತಾನೆ; ಏಷು ಏವ-ಇವರಲ್ಲಿಯೇ (ಈ ಪತ್ನೀಪುತ್ರಾದಿಗಳಲ್ಲಿಯೇ), ಪ್ರಾತಿಕೂಲ್ಯೇನ-ತನ್ನನ್ನು ವಿರೋಧಿಸುವಿಕೆಯು (ತನ್ನ ವಿರೋಧವಿದ್ದರೆ) ಇರುವುದರಿಂದ, ನೃಣಾಂ-ಮನುಷ್ಯರಿಗೆ, ದುಃಖಂ-ದುಃಖವು, ಇತಿ-ಎಂಬುದು (ಅನುವರ್ತಿಗಳಾದರೂ ಅಥವಾ ವಿರೋಧಿಗಳಾದರೂ, ಉಭಯ ಪಕ್ಷದಲ್ಲಿಯೂ ದುಃಖ ವೆಂಬುದು), ಸ್ಫುಟಂ- ಸ್ಪಷ್ಟವೇ ಇದೆ; ಆತ್ಮಾನಂ-ತನ್ನನ್ನು, ತೇ-ಅವರು (ಆ ಬಂಧುಗಳು), ತ್ಯಕ್ತ್ವಾ-ಬಿಟ್ಟು ಯಾಂತಿ-ಹೋಗುತ್ತಾರೆ (ಮರಣದಿಂದ ಅಗಲುತ್ತಾರೆ); ಅಥವಾ-ಅಥವಾ (ಹಾಗಲ್ಲದಿದ್ದರೆ), ಸ್ವಯಂ-ತಾನೇ, ತ್ಯಕ್ತ್ವಾ-(ಅವರನ್ನು) ಬಿಟ್ಟು ಮ್ರಿಯೇತ್-ಮೃತನಾಗುತ್ತಾನೆ; ತಸ್ಮಾತ್-ಆದ್ದರಿಂದ, ಸರ್ವಾತ್ಮನಾ-ಯಾವ ರೂಪದಿಂದಲೂ, ಸಂಸೃತೌ-ಸಂಸಾರದಲ್ಲಿ ಸುಖಲೇಶಃ ಅಪಿ-ಸುಖದ ಲೇಶವೂ (ಅತ್ಯಲ್ಪ ಸುಖವೂ, ನಾಸ್ತಿ ಇರುವುದಿಲ್ಲ; ಬುದ್ಧಿಮಾನ್-ವಿವೇಕಿಯು, ಏವಂ-ಹೀಗೆ, ವಿಚಾರ್ಯ-ಆಲೋಚನೆಯಿಂದ ನಿಶ್ಚಯಿಸಿ, (ವಿಮರ್ಶಿಸಿ), ತಂ ಹರಿಂ-ಆ (ಮೋಕ್ಷಪ್ರದನಾದ) ಹರಿಯನ್ನು, ಶರಣಂ ವ್ರಜೇತ್-ಶರಣುಹೊಂದಬೇಕು.

ಅನಾದ್ಯನಂತಕಾಲಂ ಯೋ ಜೀವಸ್ಯ ಪರಮಃ ಸಖಾ ।
ತಸ್ಯ ಸಖ್ಯೇ ಸುಸಂಪನ್ನೇ ಮಾ ಭೇಮ ಶ್ರವಸಸ್ತತೇ ॥ ೪೭ ॥

ಯಃ-ಯಾವನು, ಅನಾದ್ಯನಂತಕಾಲಂ-ಎಲ್ಲ ಕಾಲದಲ್ಲಿ (ಅನಾದಿಯಿಂದ ಮತ್ತು ಅನಂತ ಭವಿಷ್ಯಕಾಲದಲ್ಲಿ ಸಹ), ಜೀವಸ್ಯ-ಜೀವನ, ಪರಮಃ-ಶ್ರೇಷ್ಠನಾದ, ಸಖಾ-ಸಖನೋ, ತಸ್ಯ-ಆತನ (ಶ್ರೀಹರಿಯ), ಸಖ್ಯೇ-ಸಖ್ಯವು (ಸ್ನೇಹವು), ಸುಸಂಪನ್ನೇ (ಸತಿ)-ಪೂರ್ಣವಾಗಿರಲು (ಸಖನೆಂಬ ಜ್ಞಾನವು ದೃಢವಾಗಿರುತ್ತಿರಲು), ಶ್ರವಸಸ್ತತೇ-ಹೇ ಉತ್ತಮ ಕೀರ್ತೇ !, ಮಾ ಭೇಮ-(ಯಾವುರಕ್ಕೂ) ಹೆದರುವ (ಭಯಪಡುವ) ಕಾರಣವಿಲ್ಲ.

ತಮೇವ ನೋನುಮೋ ಭಕ್ತ್ಯಾ ಜೇತಾರಮಪರಾಜಿತಂ ।
ದುಷ್ಕೃತಾದ್ವ್ಯೇಪಿಹೋ ಯಸ್ಯ ಪಾತ್ಯಂತೇ ಭೃತಪೀಡಿತಾಃ ॥ ೪೮ ॥
ವವ್ರೇ ತಮಸ್ಯನಾರಂಭೇ ತಮೀಶಂ ಶರಣಂ ವ್ರಜೇತ್ ।
ನಾನ್ಯಃ ಪಂಥಾ ನ ಚಾಸ್ತ್ಯನ್ಯಃ ಪಂಥಾ ಪಂಥಾ ನ ಹೀತರಃ ॥ ೪೯ ॥

---

(ವಿರೋಧಿಗಳಾಗಿದ್ದರೆ) ದುಃಖವೆಂಬುದು ಸ್ಪಷ್ಟವೇ ಇದೆ; ಹೀಗೆ ಉಭಯಪಕ್ಷಗಳಲ್ಲಿ ಸಹ ಅವರಲ್ಲಿ ಸ್ನೇಹವನ್ನು ಬೆಳೆಸಿಕೊಳ್ಳುವುದು ದುಃಖಹೇತುವೆಂದು ಸಿದ್ಧವಾಗುತ್ತದೆ; ಆ ಬಂಧುಗಳು ಈತನನ್ನು (ಸ್ನೇಹಮಾಡುವ ತನ್ನನ್ನು) ಬಿಟ್ಟುಹೋಗುತ್ತಾರೆ, ಅಥವಾ ತಾನಾದರೂ ಅವರನ್ನು ಬಿಟ್ಟು ಮೃತನಾಗುತ್ತಾನೆ; ಆದ್ದರಿಂದ ಈ (ಸ್ನೇಹಬಂಧ ರೂಪದ)

ರಾಜನ್ ಪುನಃ ಪುನಸ್ತಸ್ಮಾತ್ತಂ ಹರಿಂ ಶರಣಂ ವ್ರಜೇತ್ ।
ಮನಸಾ ಕರ್ಮಣಾ ವಾಚಾ ಯೋ ದ್ವಿಷ್ಯಾದ್ಧರಿಮೀಶ್ವರಂ ॥ ೫೦ ॥
ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ ।
ತ್ರಿಃಸಪ್ತಭಿಸ್ತು ಪೂಯೇತ ಪಿತೃಭಿಸ್ಸ್ವೈರ್ಹರಿಪ್ರಿಯಃ ।
ಯತ್ಸಂಗಾತ್ಕೀಕಟಸ್ಥಾನಂ ನೈಮಿಷಾರಣ್ಯಸನ್ನಿಭಂ ॥ ೫೧ ॥

ಅಪರಾಜಿತಂ-(ಅನ್ಯರಿಂದ) ಪರಾಜಯ ಹೊಂದದ, ಜೇತಾರಂ-ಸರ್ವವನ್ನೂ ಜಯಿಸುವ (ಜಯಿಸಿರುವ), ತಂ-ಏವ-ಆ ಶ್ರೀಹರಿಯನ್ನೇ, ಭಕ್ತ್ಯಾ-ಭಕ್ತಿಯಿಂದ, ನೋನುಮಃ-ಮತ್ತೆ ಮತ್ತೆ ನಮಸ್ಕರಿಸೋಣ; ದುಷ್ಕೃತಾತ್-ದುಷ್ಕರ್ಮಗಳಿಂದ, ದುಷ್ಟಸ್ವಭಾವದ ಜೀವರು), ಯಸ್ಯ-ಯಾವ ಶ್ರೀಹರಿಯ, ದ್ವೇಷಿಣಃ-ದ್ವೇಷಿಗಳು, ಭೃಶಪೀಡಿತಾಃ-ಅತಿಶಯವಾಗಿ ಪೀಡಿಸಲ್ಪಟ್ಟು (ವಾಯುಭೃತ್ಯರಿಂದ ಪೀಡಿತರಾಗಿ), ಅನಾರಂಭೇ-ಆದಿ ಇಲ್ಲದ, (ಅನಾದಿಯೂ ಅತ ಏವ ನಿತ್ಯವೂ ಆದ), ವವ್ರೇ- ವವ್ರವೆಂಬ, ತಮಸಿ-ನರಕದಲ್ಲಿ (ಅಂಧತಮಸ್ಸಿನಲ್ಲಿ), ಪಾತ್ಯಂತೇ - ತಳ್ಳಲ್ಪಡುತ್ತಾರೆ; ತಂ ಈಶಂ - ಆದ್ದರಿಂದ ಶ್ರೀಹರಿಯನ್ನು (ಸರ್ವ

---

ಸಂಸಾರದಲ್ಲಿ ಲೇಶವೂ ಸುಖವಿಲ್ಲ; ಹೀಗೆಂದು ವಿಚಾರದಿಂದ ನಿರ್ಧರಿಸಿ, ವಿವೇಕಿಯು ಮುಕ್ತಿಪ್ರದನಾದ ಶ್ರೀಹರಿಯನ್ನೇ ಶರಣುಹೊಂದಬೇಕು (೪೪-೪೯). ಆ ಶ್ರೀಹರಿಯು ಅನಾದ್ಯನಂತಕಾಲದಲ್ಲಿ ಸಹ ಜೀವನಿಗೆ ಶ್ರೇಷ್ಠ ಸಖನು;[1] ಹೀಗೆಂಬ ದೃಢಜ್ಞಾನವುಳ್ಳ

---

1. ನಿತ್ಯನಾದ ಜೀವನ ನಿತ್ಯತ್ವವನ್ನು ಶ್ರೀಹರಿಯು, ಬಿಂಬರೂಪನಾಗಿ ಸರ್ವಜೀವರ ಸ್ವರೂಪದಲ್ಲಿ ಅಂತರ್ಯಾಮಿಯಾಗಿದ್ದು ರಕ್ಷಿಸುತ್ತಾನೆ; ಜೀವಸ್ವರೂಪದ ಅಸ್ತಿತ್ವವೂ ಶ್ರೀಹರಿಯ ಅಧೀನವೇ; ಹೀಗೆ ಜೀವಪರಮಾತ್ಮರು ನಿತ್ಯಾವಿಯೋಗಿಗಳು—ಅನಾದ್ಯನಂತ ಕಾಲದಲ್ಲಿ ಕೂಡಿಯೇ ಇರುವವರು; 'ದ್ವಾ ಸುಪರ್ಣಾ ಸಯುಜಾ ಸಖಾಯಾ...' ಇತ್ಯಾದಿ ಶ್ರುತಿಯೂ ಇದನ್ನೇ ಹೇಳುತ್ತದೆ; 'ಸಯುಜಾ, ಸಖಾಯಾ' ಎಂಬ ಶಬ್ದಗಳು, ಜೀವೇಶರೆಂಬ ಎರಡು ಪಕ್ಷಿಗಳೂ ಸದಾ ಕೂಡಿಯೇ ಇರುವವರೆಂದೂ, ಅವರು ಸಖರೆಂದೂ ಹೇಳುತ್ತದೆ; 'ಸಮಾನಂ ವೃಕ್ಷಂ ಪರಿಷಸ್ವಜಾತೇ'—ಎಂದು, ದೇಹಾಖ್ಯವಾದ ಒಂದೇ ವೃಕ್ಷವನ್ನು ಆಶ್ರಯಿಸಿರುವರೆಂದು, ಹೇಳುವುದರಿಂದ, ಸಯುಜತ್ವ, ಸಖಿತ್ವಗಳು ಸಂಸಾರಾವಸ್ಥೆಯಲ್ಲಿ ಮಾತ್ರವೆಂದು ಶಂಕಿಸಲಾಗದು; ಕಿಂತು, ಶ್ರೀಹರಿಯು ಜೀವಸ್ವರೂಪದಿಂದ ಮಾತ್ರವಲ್ಲ, ಸಂಸಾರದಲ್ಲಿ (ದುರ್ಭಗದೇಹಾದಿಗಳು ಜೀವನಿಗೆ ಕರ್ಮಾನುಸಾರ ಬಂದಾಗ) ಸಹ ಜೀವನೊಂದಿಗೆ ಇರುವವನು, ಕೈಬಿಡುವುದಿಲ್ಲವೆಂದು ಹೇಳುತ್ತದೆ. 'ಸಯುಜಾ—ಸಖಾಯಾ' ಎಂಬ ಶಬ್ದಗಳನ್ನು ಪ್ರತ್ಯೇಕವಾಗಿಯೂ (ವೃಕ್ಷದಲ್ಲಿರುವಾಗ ಮಾತ್ರವಲ್ಲ—ತತ್ಪೂರ್ವದಲ್ಲಿ ಅನಾದಿಯಿಂದ, ಲಿಂಗದೇಹಸಹಿತನಾಗಿರುವಾಗ ಮತ್ತು ಮುಕ್ತನಾದ ಮೇಲೆ ಸಹ ಎಂದು) ಅನ್ವಯಿಸಿಕೊಂಡು ಮುಖ್ಯಾರ್ಥವನ್ನು ಗ್ರಹಿಸಬೇಕು. ಹೀಗೆ ನಿತ್ಯ ಕೂಡಿದ್ದು ರಕ್ಷಿಸುವ ಸಖನಾಗಿದ್ದರೂ, ಜೀವನು ಆತನ ಸಖಿತ್ವವನ್ನು ಅಜ್ಞಾನದಿಂದ ಮರೆತಿರುವನು; ಆ ಸಖಿತ್ವವನ್ನು ತಿಳಿದು ಅದರ ದೃಢಜ್ಞಾನವನ್ನು ಪಡೆದರೆ, ಆಗಲೇ ಮೋಕ್ಷಕ್ಕೆ ಅರ್ಹನಾಗುತ್ತಾನೆ.

ನಿಯಾಮಕನಾದ ಪರಮಾತ್ಮನನ್ನು). ಶರಣಂ-ಆಶ್ರಯವನ್ನು ವ್ರಜೇತ್-ಹೊಂದತಕ್ಕದ್ದು (ಸುಖರೂಪ ಮೋಕ್ಷವನ್ನು ಹೊಂದಲಿಚ್ಛಿಸುವ ಸರ್ವರೂ ಶ್ರೀಹರಿಯನ್ನೇ ಶರಣುಹೊಂದಬೇಕು): ಅನ್ಯಃ ಪಂಥಾಃ-ಬೇರೆ ಮಾರ್ಗವು (ಮುಕ್ತಿಗೆ ಅನ್ಯೋಪಾಯವು), ನ-ಇರುವುದಿಲ್ಲ ಅನ್ಯಃ ಪಂಥಾಃ-ಬೇರೆ ಮಾರ್ಗವು, ನ ಚಾಸ್ತಿ-ಇಲ್ಲವೇ ಇಲ್ಲ ಇತರಃ ಪಂಥಾಃ-ಬೇರೆ ಮಾರ್ಗವು, ನ ಹಿ-ಇಲ್ಲವೆಂದು ಸರ್ವವೇದಪ್ರಸಿದ್ಧವು; ರಾಜನ್-ಹೇ ರಾಜನೇ! ತಸ್ಮಾತ್-ಆದ್ದರಿಂದ, (ಮೋಕ್ಷಕ್ಕೆ ಅನ್ಯಮಾರ್ಗವಿಲ್ಲೆಂದು ತ್ರಿವಾರಸತ್ಯವಾದುದರಿಂದ), ಪುನಃಪುನಃ-(ಅನ್ಯ ಮಾರ್ಗವಿಲ್ಲೆಂದು) ಪುನಃಪುನಃ (ತ್ರಿವಾರ ಮಾತ್ರವಲ್ಲ) (೩೪); ತಂ ಹರಿಂ-ಆ ಶ್ರೀಹರಿಯನ್ನು ಮನಸಾ-ಮನಸ್ಸಿನಿಂದ, ಕರ್ಮಣಾ-ಕರ್ಮಗಳಿಂದಲೂ (ಕೃತಿಯಿಂದಲೂ), ವಾಚಾ-ಮಾತಿನಿಂದಲೂ, (ತ್ರಿಕರಣಗಳಿಂದ ಸಹ), ಶರಣಂ ವ್ರಜೇತ್-ಶರಣುಹೊಂದತಕ್ಕದ್ದು; ಯಃ-ಯಾರು, ಈಶ್ವರಂ-ಸರ್ವಸ್ವಾಮಿಯಾದ, ಹರಿಂ-ಶ್ರೀಹರಿಯನ್ನು ದ್ವಿಷ್ಯಾತ್-ದ್ವೇಷಿಸುವನೋ, ತಸ್ಯ-ಆತನ, ಪಿತರಃ-ಪಿತೃಗಳು, ಶಾಶ್ವತೀಃ ಸಮಾಃ[1]-ಬಹುಕಾಲ (ಬಹುವರ್ಷಗಳವರೆಗೆ), ನರಕೇ-ನರಕದಲ್ಲಿ ಮಜ್ಜಂತಿ-ಮುಳುಗುತ್ತಾರೆ; ಹರಿಪ್ರಿಯಃ-ಶ್ರೀಹರಿಗೆ ಪ್ರಿಯನಾದವನು (ಭಕ್ತನು), ಸ್ವೈಃ-ತನ್ನ ತ್ರಿಸಪ್ತಭಿಃ-೨೧ ತಲೆಮಾರಿನ, ಪಿತೃಭಿಃ- ಪಿತೃಗಳಿಂದ ಸಹಿತನಾಗಿ, ಪೂಯೇತ-ಪವಿತ್ರನಾಗುತ್ತಾನೆ (ಸರ್ವಪಾಪ ರಹಿತನಾಗುತ್ತಾನೆ); ಯತ್ಸಂಗಾತ್-(ಯಾರ) ಈತನ (ವಿಷ್ಣುಭಕ್ತನ) ಸಂಬಂಧದಿಂದ, ಕೀಕಟಸ್ಥಾನಂ-ಕೀಕಟ ಮೊದಲಾದ (ಅಪವಿತ್ರ) ಪ್ರದೇಶವೂ, ನೈಮಿಷಾರಣ್ಯ ಸನ್ನಿಭಂ-(ಪವಿತ್ರವಾದ) ನೈಮಿಷಾರಣ್ಯ ಸದೃಶವು (ಆಗುತ್ತದೆ).

ಮುಕ್ತಾನಂದ ನಿರೂಪಣವೆಂಬ ೩೨ನೇ ಅಧ್ಯಾಯವು ಮುಗಿದುದು.

---

ವನು; ಹೇ ಉತ್ತಮಕೀರ್ತೇ! ಭಯಪಡಲು ಕಾರಣವಿಲ್ಲ (ಸಂಸಾರದಿಂದ ಹೆದರುವ ಕಾರಣವಿಲ್ಲ) (೪೭). ಯಾರಿಂದಲೂ ಎಂದೂ ಪರಾಜಯವನ್ನು ಹೊಂದದ, ಸರ್ವವನ್ನೂ ಜಯಿಸಿರುವ (ಸರ್ವವಿಜಯಿಯಾದ) ಶ್ರೀಹರಿಯನ್ನು ಮತ್ತೆ ಮತ್ತೆ ನಮಸ್ಕರಿಸೋಣ; ದುಷ್ಟ ಸ್ವಭಾವದವರು ಪಾಪಕರ್ಮಗಳನ್ನಾಚರಿಸಿ (ಶ್ರೀಹರಿಯಾಜ್ಞೆಗಳನ್ನು ಉಲ್ಲಂಘಿಸಿ) ಶ್ರೀಹರಿಯನ್ನು ದ್ವೇಷಿಸುತ್ತಾರೆ; ಅವರು ವಾಯುಭೃತ್ಯರಿಂದ ಅತಿಯಾಗಿ ಪೀಡಿಸಲ್ಪಟ್ಟು ಅನಾದಿನಿತ್ಯವಾದ ವಪ್ರವೆಂಬ ಅಂಧತಮಸ್ಸಿನಲ್ಲಿ ತಳ್ಳಲ್ಪಡುತ್ತಾರೆ; ಆದ್ದರಿಂದ, ಮುಮುಕ್ಷುಗಳೆಲ್ಲರೂ ಶ್ರೀಹರಿಯನ್ನೇ ಆಶ್ರಯಿಸಬೇಕು; ಬೇರೆ ಯಾವ ಉಪಾಯವೂ ಮೋಕ್ಷಪ್ರಾಪ್ತಿಗೆ ಇರುವುದೇ ಇಲ್ಲ; ಇದು

---

1. ಶಾಶ್ವತೀಃ—ನಿತ್ಯವೆಂಬುದು ಬಹುವಾರ, ಸಮಾಃ-ವರ್ಷಗಳು.

# ಅಧ್ಯಾಯ ೩೩

## ಶ್ರೀ ವೇದವ್ಯಾಸಾಯ ನಮಃ

**ಭೃಗುರುವಾಚ—**

**ಅನಾದಿಕರ್ಮಣಾ ಬದ್ಧಾ ಜೀವಾ ಏವ ಹಿ ಸರ್ವಶಃ ।**
**ಪ್ರಾರಬ್ಧಂ ಕರ್ಮ ಭುಂಜಾನಾಃ ಪುನಃ ಕರ್ಮಾಣಿ ಕುರ್ವತೇ ॥ ೧ ॥**
**ತಾನ್ಯೇವ ಕ್ರಿಯಮಾಣಾನಿ ಜಾಯಂತೇ ಸಂಚಿತಾನ್ಯಪಿ ।**
**ತಾನ್ಯೇವ ಕಾಲತೋ ಯಾಂತಿ ಪ್ರಾರಬ್ಧತ್ವಂ ಫಲೋನ್ಮುಖಾತ್ ॥ ೨ ॥**

ಭೃಗುಋಷಿಗಳು ಮಾತನಾಡುತ್ತಾರೆ—

ಅರ್ಥ:—ಜೀವಾಃ-ಜೀವರು, ಸರ್ವಶಃ-ಎಲ್ಲರೂ, ಅನಾದಿಕರ್ಮಣಾ-ಅನಾದಿಕರ್ಮದಿಂದ, ಬದ್ಧಾಃ-ಬದ್ಧರಾಗಿರುವರು; ಪ್ರಾರಬ್ಧಂ-(ಫಲವನ್ನು ಕೊಡುವುದಕ್ಕೆ) ಆರಂಭವಾಗಿರುವ, ಕರ್ಮ-ಕರ್ಮವನ್ನು, ಭುಂಜಾನಾಃ-ಭೋಗಿಸುತ್ತಿರುವವರಾಗಿ, ಪುನಃ-ಮತ್ತೆ, ಕರ್ಮಾಣಿ-(ನೂತನ) ಕರ್ಮಗಳನ್ನು

---

ತ್ರಿವಾರಸತ್ಯವೆಂದು ತಿಳಿ; ಹೀಗೆಂದು ಪುನಃ ಪುನಃ ಪ್ರತಿಜ್ಞೆಮಾಡುತ್ತೇನೆ; ಆದ್ದರಿಂದ ಆಲೋಚನೆ, ಕೃತಿ ಮತ್ತು ನುಡಿಗಳಿಂದ (ತ್ರಿಕರಣಗಳಿಂದಲೂ) ಶ್ರೀಹರಿಯನ್ನೇ ಶರಣುಹೊಂದತಕ್ಕದ್ದು! ಶ್ರೀಹರಿಯನ್ನು ದ್ವೇಷಿಸುವವನ ಪಿತೃಗಳು ಸಹ ಬಹುಕಾಲ ನರಕದಲ್ಲಿ ಬೀಳುತ್ತಾರೆ; ಶ್ರೀಹರಿಪ್ರಿಯನಾದ ಭಕ್ತನಾದರೋ, ೨೧ ತಲೆಗಳವರೆಗಿನ ತನ್ನ ಪಿತೃಗಳಿಂದ ಸಹಿತನಾಗಿ ಪುನೀತನಾಗುತ್ತಾನೆ;[1] ಕೀಕಟಾದಿ ಅಪವಿತ್ರದೇಶವೂ ಸಹ, ವಿಷ್ಣುಭಕ್ತನ ಸಂಬಂಧದಿಂದ (ವಾಸದಿಂದ) ನೈಮಿಷಾರಣ್ಯಸದೃಶ ಪುಣ್ಯಭೂಮಿ ಎನಿಸುತ್ತದೆ (೪೮-೫೧).

ಇ೨ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೩

ತಾತ್ಪರ್ಯ:—ಎಲ್ಲ ಸಂಸಾರಿ ಜೀವರು, ಅನಾದಿ ಕರ್ಮದಿಂದ ಬದ್ಧರಾಗಿದ್ದಾರೆ;

---

1. 'ತ್ರಿಃ ಸಪ್ತಭಿಃ ಪಿತಾ ಪೂತಃ ಪಿತೃಭಿಃ ಸಹ ತೇಽನಘ ।' (ಭಾಗವತ), ಎಂಬಲ್ಲಿ ಭಕ್ತಪ್ರಹ್ಲಾದನು, ಶ್ರೀ ನರಹರಿಯಲ್ಲಿ ತನ್ನ ತಂದೆಯಾದ ಹಿರಣ್ಯಕಶಿಪುವಿನ ಸದ್ಗತಿಗಾಗಿ ಪ್ರಾರ್ಥಿಸಿದಾಗ, ಶ್ರೀ ನೃಸಿಂಹನು, ನಿನ್ನ ೨೧ ತಲೆಮಾರಿನ ಪಿತೃಗಳೊಂದಿಗೆ ನಿನ್ನ ತಂದೆಯು ಪುನೀತನಾಗಿರುವನೆಂದು, ಹೇಳಿರುವ ನುಡಿಯು, ಸರ್ವಹರಿಭಕ್ತರಿಗೆ ಅನ್ವಯಿಸುತ್ತದೆಂದು, ಇಲ್ಲಿ ಅತಿದೇಶ ಮಾಡಲಾಗಿದೆ. ತಮ್ಮ ಸಂತತಿಯಲ್ಲಿ ಹರಿಭಕ್ತನ ಜನನವಾಗಲು, ಪಿತೃಗಳು ಸಂತೋಷದಿಂದ ನರ್ತಿಸುವರೆಂದು ಹೇಳುವ ಅನ್ಯಪ್ರಮಾಣಗಳೂ, ಈ ಪ್ರಮೇಯವನ್ನೇ ಸಮರ್ಥಿಸುತ್ತವೆ.

ಕುರ್ವತೇ-ಮಾಡುತ್ತಾರೆ; ಕ್ರಿಯಮಾಣಾನಿ-ಮಾಡಲ್ಪಡುವ, ತಾನಿ ಏವ- ಅವುಗಳೇ (ಆ ಕರ್ಮಗಳೇ), ಸಂಚಿತಾನಿ ಅಪಿ-ಸಂಚಿತ ಕರ್ಮಗಳೂ ಸಹ, ಜಾಯಂತೇ- ಆಗುತ್ತವೆ; ತಾನಿಏವ- ಈ ಸಂಚಿತ ಕರ್ಮಗಳೇ, ಕಾಲತಃ-ಕಾಲಗತಿಯಿಂದ, ಫಲೋನ್ಮುಖಾತ್-ಫಲೋನ್ಮುಖವಾಗುವುದರಿಂದ, ಪ್ರಾರಬ್ಧತ್ವಂ-ಪ್ರಾರಬ್ಧ ಕರ್ಮವೆಂಬ ಸ್ವರೂಪವನ್ನು ಯಾಂತಿ-ಹೊಂದುತ್ತವೆ.

**ಕೋ ನಾಮ ಕರ್ಮಣಾಂ ಪಾಕಕಾಲಂ ಜಾನಾತಿ ಮಾನವಃ ।**
**ಫಲೇನೈವ ವಿನಿಶ್ಚೇಯಃ ಪಾಕಕಾಲೋಽಯಮಿತ್ಯಪಿ ॥ ೩ ॥**

ಕೋ ನಾಮ ಮಾನವಃ-ಯಾವ ಮನುಷ್ಯನೆಂಬುವನು, ಕರ್ಮಣಾಂ- ಕರ್ಮಗಳ, ಪಾಕಕಾಲಂ-ಫಲಕಾಲವನ್ನೇ (ಫಲೋನ್ಮುಖವಾಗುವ ಕಾಲವನ್ನು), ಜಾನಾತಿ-ತಿಳಿಯುತ್ತಾನೆ? (ತಿಳಿಯಲಾರನು); ಅಯಂ-ಇದು, ಪಾಕಕಾಲಃ- ಪಕ್ವಕಾಲವು (ಫಲಕೊಡುವ ಕಾಲವು), ಇತಿ-ಎಂದು, ಫಲೇನ ಏವ-ಫಲಭೋಗದಿಂದಲೇ, ವಿನಿಶ್ಚೇಯಂ-(ಇದು, ಕರ್ಮಫಲವೆಂದು) ನಿಶ್ಚಯಿಸಿಕೊಳ್ಳಬೇಕಾಗುವುದು.

**ಅಯಮೇವ ಹಿ ಜೀವಸ್ಯ ಕರ್ಮಬಂಧಃ ಪ್ರಕೀರ್ತಿತಃ ।**
**ಅನಾದಿನಾ ತು ಲಿಂಗೇನ ಸೂಕ್ಷ್ಮ ಮಾತ್ರೇಂದ್ರಿಯಾತ್ಮನಾ ॥ ೪ ॥**
**ಶುಭಾಶುಭಾದೃಷ್ಟಯುತೋ ನಾನಾಯೋನಿಷು ನೀಯತೇ ।**

ಅಯಂ ಏವ-ಇದೇ (ಹೀಗೆ ಕರ್ಮಾನುಸಾರವಾದ ಫಲವನ್ನು ಭೋಗಿಸುವುದೇ), ಜೀವಸ್ಯ-ಜೀವನಿಗೆ, ಕರ್ಮಬಂಧಃ-ಕರ್ಮಬಂಧವೆಂದು, ಪ್ರಕೀರ್ತಿತಃ-ಹೇಳಲ್ಪಡುತ್ತದೆ; (ಜೀವನು) ಅನಾದಿನಾ ತು-ಅನಾದಿಕಾಲದಿಂದಲೇ, ಸೂಕ್ಷ್ಮ ಮಾತ್ರೇಂದ್ರಿಯಾತ್ಮನಾ-ಸೂಕ್ಷ್ಮಗಳಾದ ತನ್ಮಾತ್ರೆಗಳು, ಇಂದ್ರಿಯಗಳು ಮತ್ತು ಮನಸ್ಸು

---

ಯಾವುದೊಂದು ಕರ್ಮದ ಫಲವನ್ನು (ಪ್ರಾರಬ್ಧ ಕರ್ಮ ಫಲವನ್ನು) ಭೋಗಿಸುತ್ತಿರುವಾಗಲೇ, ವಿವಿಧವಾದ ನಾನಾ ಕರ್ಮಗಳನ್ನು ಮಾಡುತ್ತಾರೆ; ಹೀಗೆ ಮಾಡುವ ಈ ಕರ್ಮಗಳು, ಸಂಚಿತಗಳಾಗುತ್ತವೆ (ಸಂಚಿತಕರ್ಮಗಳ ರಾಶಿಯಲ್ಲಿ ಸೇರುತ್ತವೆ); ಕಾಲಾಂತರದಲ್ಲಿ ಈ ಕರ್ಮಗಳು ಫಲ ಕೊಡುವ ಸ್ಥಿತಿಯನ್ನು ಹೊಂದುವುದರಿಂದ, ಇವೇ, ಪ್ರಾರಬ್ಧತ್ವವನ್ನು (ಪ್ರಾರಬ್ಧಭಾವವನ್ನು) ಹೊಂದುತ್ತವೆ (೧-೨). ಯಾವ ಮನುಷ್ಯನೂ, ಯಾವ ಕರ್ಮವು ಯಾವ ಕಾಲದಲ್ಲಿ ಪಕ್ವವಾಗಿ ಫಲಕೊಡುತ್ತದೆಂಬುದನ್ನು ತಿಳಿಯಲಾರನು; ಸುಖದುಃಖಾದಿ ಭೋಗದಿಂದಲೇ, ಕರ್ಮಫಲವೆಂಬುದನ್ನು ನಿಶ್ಚಯಿಸಿಕೊಳ್ಳಬೇಕು (೩). ಹೀಗೆ ಕರ್ಮಾನುಸಾರವಾದ ಫಲವನ್ನು ಭೋಗಿಸುವುದೇ, ಜೀವನಿಗೆ ಕರ್ಮಬಂಧವೆಂದು ಹೇಳಲಾಗುತ್ತದೆ; ಶಬ್ದ ಸ್ಪರ್ಶ, ರೂಪ, ರಸ, ಗಂಧಗಳೆಂಬ ತನ್ಮಾತ್ರೆಗಳು (ಜ್ಞಾನೇಂದ್ರಿಯ ವಿಷಯಗಳು), ಶ್ರೋತ್ರಾದಿ ೫ ಜ್ಞಾನೇಂದ್ರಿಯಗಳು, ಹಸ್ತಾದಿ ೫ ಕರ್ಮೇಂದ್ರಿಯಗಳು ಮತ್ತು ಮನಸ್ಸು

**ರೇತಃ ಸಿಂಚತಿ ತತ್ರೈಷ ಪ್ರದ್ಯುಮ್ನೋ ಹಿ ಪ್ರಜಾಪತಿಃ ॥ ೭ ॥**
**ತ್ವಷ್ಟಾ ಸಂಕರ್ಷಣಸ್ತತ್ರ ಧತ್ತೇ ರೂಪವಿಭಾಗಕಾನ್ ।**
**ಧೃತ್ವಾ ಪುಷ್ಣಾತಿ ತಂ ಗರ್ಭಂ ಸ್ವಯಂ ಧಾತಾನಿರುದ್ಧಕಃ ॥ ೮ ॥**
**ಗ್ರಹಾಸ್ತು ನ ಚ ಮೇಷಾದ್ಯಾಸ್ತತ್ರೋಪದ್ರವಕಾರಿಣಃ ।**
**ಅತೋ ರಾಜನ್ ಸ್ವೇಚ್ಛಯಾ ನೋ ಜಾಯತೇ ಗರ್ಭಸಂಭವಃ ॥ ೯ ॥**

ತತ್ರ-ಈ (ಜೀವನು ಮಾತೃಗರ್ಭಸ್ಥನಾಗುವ) ವ್ಯವಸ್ಥೆಯಲ್ಲಿ, ವಾಸುದೇವಾಭಿದಃ-ವಾಸುದೇವನಾಮಕನಾದ, ಹರಿಃ-ಶ್ರೀಹರಿಯು, ಯೋನಿಂ- ಯೋನಿಯನ್ನು (ಗರ್ಭಪ್ರವೇಶದ್ವಾರವನ್ನು), ಶೋಧಯತೇ-ಶುದ್ಧಿಮಾಡುತ್ತಾನೆ; ತತ್ರ-ಅಲ್ಲಿ (ಹಾಗೆ ಶೋಧಿಸಲ್ಪಟ್ಟ ದ್ವಾರದಲ್ಲಿ), ಏಷಃ-ಈ (ಪ್ರಸಿದ್ಧನಾದ), ಪ್ರಜಾಪತಿಃ-ಸೃಷ್ಟಿಕರ್ತನಾದ (ಪ್ರಜೆಗಳ ಉತ್ಪತ್ತಿಗೆ ಸ್ವತಂತ್ರ ಕಾರಣನಾದ), ಪ್ರದ್ಯುಮ್ನಃ-ಪ್ರದ್ಯುಮ್ನನಾಮಕ ಶ್ರೀಹರಿಯು, ರೇತಃ-ರೇತಸ್ಸನ್ನು, ಸಿಂಚತಿ-ಸೇಚನ ಮಾಡುತ್ತಾನೆ; ಹಿ-ಹೀಗೆಂಬುದು (ಈ ಎಲ್ಲವೂ ಶ್ರೀಹರಿಕೃತವೇ ಎಂಬುದು) ಶಾಸ್ತ್ರಸಿದ್ಧವು; ತತ್ರ-ಗರ್ಭದಲ್ಲಿ, ತ್ವಷ್ಟಾ-ಜಗನ್ನಿರ್ಮಾತನಾದ (ಶಿಲ್ಪಿ), ಸಂಕರ್ಷಣಃ- ಸಂಕರ್ಷಣನಾಮಕ ಶ್ರೀಹರಿಯು, ರೂಪವಿಭಾಗಕಾನ್-ಕರಚರಣಾದಿಗಳನ್ನು ರೂಪಿಸುವ ಕರ್ತವ್ಯಗಳನ್ನು, ಧತ್ತೇ-ವಹಿಸುತ್ತಾನೆ; ತಂ ಗರ್ಭಂ-ಈ (ಹೀಗೆ ರೂಪಿತವಾದ ದೇಹಸಹಿತ) ಗರ್ಭವನ್ನು, ಸ್ವಯಂ-ತಾನೇ, ಧಾತಾ-(ಸರ್ವ) ರಕ್ಷಕನಾದ, ಅನಿರುದ್ಧಕಃ- ಅನಿರುದ್ಧನಾಮಕ ಶ್ರೀಹರಿಯು, ಧೃತ್ವಾ-ಧರಿಸಿ, ಪುಷ್ಣಾತಿ-ಪೋಷಿಸುತ್ತಾನೆ; ಗ್ರಹಾಃ-(ಆದಿತ್ಯಾದಿ) ಗ್ರಹಗಳು, ಮೇಷಾದ್ಯಾಃ-ಮೇಷಾದಿಗಳು (ರಾಶ್ಯಧಿಪತಿಗಳು), ತತ್ರ-ಅಲ್ಲಿ (ಗರ್ಭದಲ್ಲಿರುವ ಶಿಶುವಿಗೆ), ಉಪದ್ರವಕಾರಿಣಃ-ಪೀಡಕರು, ನ ಚ ತು-ಅಲ್ಲವೇ ಅಲ್ಲ; ಅತಃ-ಆದ್ದರಿಂದ, ರಾಜನ್-ಹೇ ರಾಜನ್! ಸ್ವೇಚ್ಛಯಾ-ತನ್ನ (ಜೀವನ) ಇಚ್ಛಾನುಸಾರವಾಗಿ, ಗರ್ಭಸಂಭವಃ-ಗರ್ಭದ ಉತ್ಪತ್ತಿಯು, ನೋಜಾಯತೇ- ಉಂಟಾಗುವುದಿಲ್ಲ

---

ಮಾತೃಗರ್ಭವನ್ನೂ (ಪ್ರವೇಶ ದ್ವಾರವನ್ನೂ) ಶುದ್ಧಿಗೊಳಿಸುವವನು; ಪ್ರಜೋತ್ಪತ್ತಿಯ ನಿಯಾಮಕನಾದ ಪ್ರದ್ಯುಮ್ನನು ತಂದೆಯ ರೇತಸ್ಸನ್ನು ಅಲ್ಲಿ ಸೇಚನಮಾಡುತ್ತಾನೆ; ಸಂಕರ್ಷಣನೇ ಜಗನ್ನಿರ್ಮಾತನಾದ ಶಿಲ್ಪಿಯು; ಆತನೇ ಮಾತೃಗರ್ಭದಲ್ಲಿದ್ದು ಜೀವನಿಗೆ ಪ್ರಾಪ್ತವಾಗಲಿರುವ ದೇಹದ ಕರಚರಣಾದಿ ಅವಯವಗಳನ್ನು ರೂಪಗೊಳಿಸುತ್ತಾನೆ; ಸರ್ವರಕ್ಷಕನಾದ್ದರಿಂದ ಧಾತೃಶಬ್ದವಾಚ್ಯನಾದ ಅನಿರುದ್ಧ ನಾಮಕ ಶ್ರೀಹರಿಯು, ಸ್ವಯಂ ಆ ಗರ್ಭವನ್ನು ಧರಿಸಿ ಪೋಷಿಸುತ್ತಾನೆ; ಮೇಷಾದಿ ರಾಶ್ಯಾಧಿಪತ್ಯವುಳ್ಳ ಆದಿತ್ಯಾದಿ ಗ್ರಹಗಳು, ಗರ್ಭಗತ ಈ ಜೀವನನ್ನು ಯಾವ ವಿಧದಿಂದಲೂ ಪೀಡಿಸಲಸಮರ್ಥರು (೭-೯). ಹೀಗೆ ಸ್ವಯಂ ಅನಿರುದ್ಧನೇ ಪೋಷಕನಾಗಿದ್ದರೂ, ಆ ಜೀವನ (ಹಾಗೂ ಮಾತಾಪಿತ್ರಾದಿಗಳ) ಪೂರ್ವ ಕರ್ಮಾನುಸಾರ, ಗರ್ಭಪಾತವಾಗುವುದೂ

ಗಳೆಂಬ ಷೋಡಶ ಕಲಾತ್ಮಕವಾದ, (ಶಬ್ದಾದಿ ತನ್ಮಾತ್ರೆಗಳು ೫, ಇಂದ್ರಿಯಗಳು ೧೦, ಮನಸ್ಸು ೧, ಹೀಗೆ ೧೬ ತತ್ವಗಳ ಕಲೆಗಳಿಂದ ನಿರ್ಮಿತವಾದುದು ಲಿಂಗದೇಹ), ಲಿಂಗೇನ-ಲಿಂಗದೇಹದಿಂದ (ಜೀವಸ್ವರೂಪವನ್ನು ಆಚ್ಛಾದಿಸಿರುವ ದೇಹದಿಂದ), ಶುಭಾಶುಭದೃಷ್ಟಯುತಃ-ಶುಭ ಮತ್ತು ಅಶುಭ (ಪಾಪಪುಣ್ಯಗಳೆಂಬ) ಅದೃಷ್ಟ ವಿಶೇಷದಿಂದ ಕೂಡಿದ ಜೀವನು, ನಾನಾಯೋನಿಷು-(ಅದೃಷ್ಟಾನುಸಾರವಾದ) ವಿವಿಧ ಯೋನಿ (ದೇಹ)ಗಳಲ್ಲಿ, ನೀಯತೇ-ಕರೆದೊಯ್ಯಲ್ಪಡುತ್ತಾನೆ.

**ಯದೇಶ್ವರಃ ಪ್ರಾಣಯುತಃ ಪಿತರಿ ಸ್ಥಾಪಯತ್ಯಮುಂ ॥ ೫ ॥**
**ತದಾ ಪ್ರಭೃತಿ ತದ್ದೇಹೇ ಸ್ಥಿತೋ ಮಾಸದ್ವಯಾವಧಿ ।**
**ರೇತೋ ರೂಪೋ ಮಾತರಿ ಸ ಕಾಲೇ ಯೋನಿಂ ವಿಶತ್ಯಪಿ ॥ ೬ ॥**

ಯದಾ-ಯಾವಾಗ, ಈಶ್ವರಃ-ಶ್ರೀಹರಿಯು, ಪ್ರಾಣಯುತಃ-ಮುಖ್ಯಪ್ರಾಣ ಸಹಿತನಾಗಿ, ಅಮುಂ-ಈ (ಕರ್ಮಬಂಧಿತ) ಜೀವನನ್ನು, ಪಿತರಿ-ತಂದೆಯಲ್ಲಿ, ಸ್ಥಾಪಯತಿ-ಇಡುವನೋ, ತದಾಪ್ರಭೃತಿ-ಅಲ್ಲಿಂದ ಮೊದಲುಮಾಡಿ, ಮಾಸ ದ್ವಯಾವಧಿ-ಎರಡು ತಿಂಗಳಕಾಲ, ತದ್ದೇಹೇ-ಪಿತೃ ದೇಹದಲ್ಲಿ, ಸ್ಥಿತಃ-ಇರುವವನಾದ (ಜೀವನು), ರೇತೋರೂಪಃ-(ತಂದೆಯ) ರೇತಸ್ಸಿನ ರೂಪನಾಗಿ (ರೇತಸ್ಸನ್ನು ಆಶ್ರಯಿಸಿಕೊಂಡು), ಕಾಲೇ-ಯಥಾಕಾಲದಲ್ಲಿ (ಮಾತೃಗರ್ಭ ಪ್ರವೇಶಕ್ಕೆ ಶ್ರೀಹರಿ ನಿಯತವಾದ ಕಾಲದಲ್ಲಿ), ಸಃ-ಆ ಜೀವನು, ಮಾತರಿ-ತಾಯಿಯಲ್ಲಿ, ಯೋನಿಂ ಪ್ರವಿಶತಿ-ಯೋನಿದ್ವಾರಾ ಪ್ರವೇಶ ಮಾಡುತ್ತಾನೆ.

**ಯೋನಿಂ ಶೋಧಯತೇ ತತ್ರ ವಾಸುದೇವಾಭಿದೋ ಹರಿಃ ।**

---

ಎಂಬ ೧೬ ತತ್ವಗಳ ಸೂಕ್ಷ್ಮಾಂಶಗಳಿಂದ ನಿರ್ಮಿತವಾದ ಲಿಂಗದೇಹವು, ಜೀವನನ್ನು ಅನಾದಿಕಾಲದಿಂದ ಬಂಧಿಸಿದೆ; ಜೀವನು, ಶುಭಾಶುಭರೂಪದ (ಕರ್ಮಜನ್ಯ) ಅದೃಷ್ಟವೆಂಬ ಶಕ್ತಿವಿಶೇಷಗಳಿಂದ ಕೂಡಿದವನಾಗಿ, ಅವುಗಳ ಫಲರೂಪವಾಗಿ (ತನ್ನಿಮಿತ್ತವಾಗಿ) ವಿವಿಧ ಯೋನಿಗಳಲ್ಲಿ (ಪ್ರಾಣದೇಹಗಳಲ್ಲಿ) ಕರೆದೊಯ್ಯಲ್ಪಡುತ್ತಾನೆ (೪). ಶ್ರೀಹರಿಯು, ಮುಖ್ಯಪ್ರಾಣ ಸಹಿತನಾಗಿ, ಜೀವನನ್ನು (ಆಹಾರದ್ವಾರಾ) ಮೊದಲು ತಂದೆಯ ದೇಹವನ್ನು ಹೊಂದಿಸುತ್ತಾನೆ; ಎರಡು ತಿಂಗಳಕಾಲ ಅಲ್ಲಿದ್ದು, ನಿಯತಕಾಲದಲ್ಲಿ ತಂದೆಯ ರೇತಸ್ಸಿನ ದ್ವಾರಾ (ರೇತಸ್ಸಿನೊಡನೆ ಸೇರಿಕೊಂಡು, ತದ್ರೂಪನಾಗಿದ್ದು), ತಾಯಿಯ ಗರ್ಭವನ್ನು ಪ್ರವೇಶಿಸುತ್ತಾನೆ[1] (೫-೬). ಜೀವನು ಮಾತೃಗರ್ಭವನ್ನು ಪ್ರವೇಶಿಸಿ ವೃದ್ಧಿಹೊಂದುವುದು ಜೀವನ ಇಚ್ಛಾನುಸಾರವಲ್ಲವೆಂದೂ, ಶ್ರೀಹರಿಯ ವ್ಯಾಪಾರವೆಂದೂ ತಿಳಿ, ಹೇ ರಾಜನೇ! ವಾಸುದೇವನಾಮಕನಾದ ಶ್ರೀಹರಿಯು

1. 'ಪಿತೃಶರೀರಾನ್ಮಾತೃಯೋನಿಂ ಅನುಪ್ರವಿಶ್ಯ ತತ ಏವ ಶರೀರಂ ಪ್ರಾಪ್ನೋತಿ' (ಇತ್ಯಾದಿ ಶ್ರುತಿವಾಕ್ಯದಲ್ಲಿ) ಉಕ್ತವಾದ ಉತ್ಪತ್ತಿಕ್ರಮವನ್ನು ನಿರೂಪಿಸುತ್ತಾರೆ.

**ರೇತಃ ಸಿಂಚತಿ ತತ್ರೈಷ ಪ್ರದ್ಯುಮ್ನೋ ಹಿ ಪ್ರಜಾಪತಿಃ ॥ ೭ ॥**
**ತ್ವಷ್ಟಾ ಸಂಕರ್ಷಣಸ್ತತ್ರ ಧತ್ತೇ ರೂಪವಿಭಾಗಕಾನ್ ।**
**ಧೃತ್ವಾ ಪುಷ್ಣಾತಿ ತಂ ಗರ್ಭಂ ಸ್ವಯಂ ಧಾತಾನಿರುದ್ಧಕಃ ॥ ೮ ॥**
**ಗ್ರಹಾಸ್ತು ನ ಚ ಮೇಷಾದ್ಯಾಸ್ತತ್ರೋಪದ್ರವಕಾರಿಣಃ ।**
**ಅತೋ ರಾಜನ್ ಸ್ವೇಚ್ಛಯಾ ನೋ ಜಾಯತೇ ಗರ್ಭಸಂಭವಃ ॥ ೯ ॥**

ತತ್ರ-ಈ (ಜೀವನು ಮಾತೃಗರ್ಭಸ್ಥನಾಗುವ) ವ್ಯವಸ್ಥೆಯಲ್ಲಿ, ವಾಸುದೇವಾಭಿದಃ-ವಾಸುದೇವನಾಮಕನಾದ, ಹರಿಃ-ಶ್ರೀಹರಿಯು, ಯೋನಿಂ- ಯೋನಿಯನ್ನು (ಗರ್ಭಪ್ರವೇಶದ್ವಾರವನ್ನು), ಶೋಧಯತೇ-ಶುದ್ಧಿಮಾಡುತ್ತಾನೆ; ತತ್ರ-ಅಲ್ಲಿ (ಹಾಗೆ ಶೋಧಿಸಲ್ಪಟ್ಟ ದ್ವಾರದಲ್ಲಿ), ಏಷಃ-ಈ (ಪ್ರಸಿದ್ಧನಾದ), ಪ್ರಜಾಪತಿಃ-ಸೃಷ್ಟಿಕರ್ತನಾದ (ಪ್ರಜೆಗಳ ಉತ್ಪತ್ತಿಗೆ ಸ್ವತಂತ್ರ ಕಾರಣನಾದ), ಪ್ರದ್ಯುಮ್ನಃ-ಪ್ರದ್ಯುಮ್ನನಾಮಕ ಶ್ರೀಹರಿಯು, ರೇತಃ-ರೇತಸ್ಸನ್ನು ಸಿಂಚತಿ-ಸೇಚನ ಮಾಡುತ್ತಾನೆ; ಹಿ-ಹೀಗೆಂಬುದು (ಈ ಎಲ್ಲವೂ ಶ್ರೀಹರಿಕೃತವೇ ಎಂಬುದು) ಶಾಸ್ತ್ರಸಿದ್ಧವು; ತತ್ರ-ಗರ್ಭದಲ್ಲಿ ತ್ವಷ್ಟಾ-ಜಗನ್ನಿರ್ಮಾತನಾದ (ಶಿಲ್ಪಿ), ಸಂಕರ್ಷಣಃ- ಸಂಕರ್ಷಣನಾಮಕ ಶ್ರೀಹರಿಯು, ರೂಪವಿಭಾಗಕಾನ್-ಕರಚರಣಾದಿಗಳನ್ನು ರೂಪಿಸುವ ಕರ್ತವ್ಯಗಳನ್ನು ಧತ್ತೇ-ವಹಿಸುತ್ತಾನೆ; ತಂ ಗರ್ಭಂ-ಈ (ಹೀಗೆ ರೂಪಿತವಾದ ದೇಹಸಹಿತ) ಗರ್ಭವನ್ನು ಸ್ವಯಂ-ತಾನೇ, ಧಾತಾ-(ಸರ್ವ) ರಕ್ಷಕನಾದ, ಅನಿರುದ್ಧಕಃ- ಅನಿರುದ್ಧನಾಮಕ ಶ್ರೀಹರಿಯು, ಧೃತ್ವಾ-ಧರಿಸಿ, ಪುಷ್ಣಾತಿ-ಪೋಷಿಸುತ್ತಾನೆ; ಗ್ರಹಾಃ-(ಆದಿತ್ಯಾದಿ) ಗ್ರಹಗಳು, ಮೇಷಾದ್ಯಾಃ-ಮೇಷಾದಿಗಳು (ರಾಶ್ಯಧಿಪತಿಗಳು), ತತ್ರ-ಅಲ್ಲಿ (ಗರ್ಭದಲ್ಲಿರುವ ಶಿಶುವಿಗೆ), ಉಪದ್ರವಕಾರಿಣಃ-ಪೀಡಕರು, ನ ಚ ತು-ಅಲ್ಲವೇ ಅಲ್ಲ; ಅತಃ-ಆದ್ದರಿಂದ, ರಾಜನ್-ಹೇ ರಾಜನ್! ಸ್ವೇಚ್ಛಯಾ-ತನ್ನ (ಜೀವನ) ಇಚ್ಛಾನುಸಾರವಾಗಿ, ಗರ್ಭಸಂಭವಃ-ಗರ್ಭದ ಉತ್ಪತ್ತಿಯು, ನೋಜಾಯತೇ- ಉಂಟಾಗುವುದಿಲ್ಲ

---

ಮಾತೃಗರ್ಭವನ್ನೂ (ಪ್ರವೇಶ ದ್ವಾರವನ್ನೂ) ಶುದ್ಧಿಗೊಳಿಸುವವನು; ಪ್ರಜೋತ್ಪತ್ತಿಯ ನಿಯಾಮಕನಾದ ಪ್ರದ್ಯುಮ್ನನು ತಂದೆಯ ರೇತಸ್ಸನ್ನು ಅಲ್ಲಿ ಸೇಚನಮಾಡುತ್ತಾನೆ; ಸಂಕರ್ಷಣನೇ ಜಗನ್ನಿರ್ಮಾತನಾದ ಶಿಲ್ಪಿಯು; ಆತನೇ ಮಾತೃಗರ್ಭದಲ್ಲಿದ್ದು ಜೀವನಿಗೆ ಪ್ರಾಪ್ತವಾಗಲಿರುವ ದೇಹದ ಕರಚರಣಾದಿ ಅವಯವಗಳನ್ನು ರೂಪಗೊಳಿಸುತ್ತಾನೆ; ಸರ್ವರಕ್ಷಕನಾದ್ದರಿಂದ ಧಾತೃಶಬ್ದವಾಚ್ಯನಾದ ಅನಿರುದ್ಧನಾಮಕ ಶ್ರೀಹರಿಯು, ಸ್ವಯಂ ಆ ಗರ್ಭವನ್ನು ಧರಿಸಿ ಪೋಷಿಸುತ್ತಾನೆ; ಮೇಷಾದಿ ರಾಶ್ಯಾಧಿಪತ್ಯವುಳ್ಳ ಆದಿತ್ಯಾದಿ ಗ್ರಹಗಳು, ಗರ್ಭಗತ ಈ ಜೀವನನ್ನು ಯಾವ ವಿಧದಿಂದಲೂ ಪೀಡಿಸಲಸಮರ್ಥರು (೭-೯). ಹೀಗೆ ಸ್ವಯಂ ಅನಿರುದ್ಧನೇ ಪೋಷಕನಾಗಿದ್ದರೂ, ಆ ಜೀವನ (ಹಾಗೂ ಮಾತಾಪಿತ್ರಾದಿಗಳ) ಪೂರ್ವ ಕರ್ಮಾನುಸಾರ, ಗರ್ಭಪಾತವಾಗುವುದೂ

ತತ್ರಸ್ಥಸ್ಯಾಪಿ ಪೂರ್ವೇಣ ಕರ್ಮಣಾ ಪತನಂ ಭವೇತ್ ।
ಕಶ್ಚಿತ್ ಸ್ರವತಿ ತತ್ರೈವ ಕೇಚಿಜ್ಜೀವಂತಿ ಕರ್ಮತಃ ॥ ೧೦ ॥

ಕ್ವಾಥ್ಯಮಾನೋ ಜಾಠರೇಣ ಸರ್ವದಾಧೋಮುಖೋ ನೃಪ ।
ಮಾತುರನ್ನರಸೇನೈವ ನಾಭಿದ್ವಾರಾಭಿವರ್ಧತೇ ॥ ೧೧ ॥

ತತ್ರಸ್ಥಸ್ಯ ಅಪಿ-ಗರ್ಭಗತ ಜೀವನಿಗಾದರೂ (ಅನಿರುದ್ಧನ ಪೋಷಣೆಯಲ್ಲಿದ್ದರೂ), ಪೂರ್ವೇಣ-ಹಿಂದಿನ (ಜನ್ಮಾಂತರದ), ಕರ್ಮಣಾ-ಕರ್ಮದಿಂದ (ಕರ್ಮದ ಫಲವಾಗಿ), ಪತನಂ-ಗರ್ಭಪಾತವು (ಜನನವಾಗದಿರುವಿಕೆಯು), ಭವೇತ್- ಉಂಟಾಗುವುದುಂಟು; ಕಶ್ಚಿತ್-ಒಂದು ಗರ್ಭವು, ತತ್ರೈವ-ಮಾತೃಗರ್ಭಕೋಶದಲ್ಲಿಯೇ, ಸ್ರವತಿ-ಕರಗಿ ನಷ್ಟವಾಗುತ್ತದೆ; ಕೇಚಿತ್-ಮತ್ತೆ ಕೆಲವು, ಕರ್ಮತಃ-(ಪೂರ್ವ) ಕರ್ಮದಿಂದ, ಜೀವಂತಿ-ಬದುಕಿರುತ್ತವೆ; ನೃಪ-ಹೇ ಇಂದ್ರದ್ಯುಮ್ನ!, ಸರ್ವದಾ-ಸದಾಕಾಲವೂ, ಜಾಠರೇಣ-(ತಾಯಿಯ) ಹೊಟ್ಟೆಯಲ್ಲಿರುವ ಅಗ್ನಿಯಿಂದ, ಕ್ವಾಥ್ಯಮಾನಃ-ಕುದಿಸಲ್ಪಡುತ್ತ (ದಹಿಸಲ್ಪಡುತ್ತ), ಅಧೋಮುಖಃ-ಮುಖವನ್ನು ಕೆಳಗೆ ಮಾಡಿಕೊಂಡು ಬಿದ್ದಿದ್ದು, ನಾಭಿದ್ವಾರಾ-ಹೊಕ್ಕಳಿನ ಮೂಲಕ (ಬರುವ), ಮಾತುಃ-ತಾಯಿಯ, ಅನ್ನರಸೇನ-ಅನ್ನರಸದಿಂದಲೇ, ವರ್ಧತೇ-ಬೆಳೆಯುತ್ತದೆ.

ಗರ್ಭೇ ಪೂರ್ಣೇ ತು ಕಾಲೇನ ತತ್ತದ್ಯೋನಿಸ್ವಭಾವತಃ ।
ಪ್ರದ್ಯುಮ್ನಪ್ರೇರಿತಃ ಶ್ರೀಘ್ರಂ ನಿರ್ಯಾಪಯತಿ ಮಾರುತಃ ॥ ೧೨ ॥
ಮಾತುಃ ಸಮಾನಕೋ ನಾಮ್ನಾ ಬಹಿರ್ಯಾತಸ್ತ್ವಪಸ್ಮೃತಿಃ ।
ಪೀಡಿತೋ ಯೋನಿಯಂತ್ರೇಣ ಆಹಾರ್ಯೈಃ ಕರ್ಮನಿರ್ಮಿತೈಃ ॥ ೧೩ ॥
ವರ್ಧತೇ ಚ ದಿವಾರಾತ್ರೌ ಮ್ರಿಯತೇ ಕಾಲಭೋಗತಃ ।

---

ಉಂಟು; ಕೆಲವು ಗರ್ಭಗಳು ಮಾತೃಗರ್ಭದಲ್ಲಿಯೇ ಕರಗಿ ನಷ್ಟವಾಗುತ್ತವೆ (ಗರ್ಭಸ್ರಾವವಾಗುತ್ತದೆ); ಮತ್ತೆ ಕೆಲವು ಪೂರ್ವಕರ್ಮ (ಜನ್ಮಾಂತರಕರ್ಮ) ಪ್ರಭಾವದಿಂದ ಬದುಕಿ, ಬೆಳೆಯುತ್ತವೆ; ಹೇ ರಾಜ! ಮಾತೃಗರ್ಭಗತ ಶಿಶುದೇಹದಲ್ಲಿರುವ ಜೀವನು, ತನ್ನ ನಾಭಿಯ ದ್ವಾರಾ ತನ್ನ ಹೊಟ್ಟೆಗೆ ಬಂದು ಸೇರುವ, ತಾಯಿಯ ಅನ್ನರಸದಿಂದ ಬೆಳೆಯುತ್ತಿದ್ದರೂ, ಗರ್ಭದಲ್ಲಿ ಕೆಳಮುಖವಾಗಿ ಬಿದ್ದಿದ್ದು ಜಾಠರಾಗ್ನಿಯಿಂದ ದಹಿಸಲ್ಪಡುತ್ತಿರುವನು (೧೦-೧೧). ಗರ್ಭವು ಪೂರ್ಣವಾಗಿ ಬೆಳೆದ ನಂತರ (ನವಮಾಸಗಳ ನಂತರ), ಆಯಾ (ಮಾತೃಯೋನಿ) ಸ್ವಭಾವಾನುಗುಣವಾಗಿ, ಶ್ರೀ ಪ್ರದ್ಯುಮ್ನನಿಂದ ಪ್ರೇರಿತನಾದ ವಾಯುದೇವನು ಜೀವನನ್ನು (ಅವನ ದೇಹಸಹಿತ)

ತತ್ತದ್ಯೋನಿಸ್ವಭಾವತಃ-ಆಯಾ ಯೋನಿ (ಪಶ್ವಾದಿ) ಸ್ವಭಾವವನ್ನನುಸರಿಸಿ, ಕಾಲೇನ-ಕಾಲಗತಿಯಿಂದ (ಶ್ರೀ ಹರೀಚ್ಛೆಯಿಂದಲೇ), ಗರ್ಭಃ-ಗರ್ಭವು, ಪೂರ್ಣಃತು-ಪೂರ್ಣವಾಗುತ್ತಿರಲು (ವೃದ್ಧಿಹೊಂದುತ್ತಿರಲು), ಪ್ರದ್ಯುಮ್ನ ಪ್ರೇರಿತಃ-ಪ್ರದ್ಯುಮ್ನನಾಮಕ ಶ್ರೀಹರಿಪ್ರೇರಣೆಯಿಂದ, ಮಾರುತಃ-ವಾಯುದೇವನು (ಸೂತಿಕಾ ವಾಯುರೂಪದಿಂದ), ಶೀಘ್ರಂ-ಬೇಗನೇ, ನಿರ್ಯಾಪಯತಿ-(ಗರ್ಭವನ್ನು) ಹೊರಗೆ ತಳ್ಳುತ್ತಾನೆ (ಮಾತೃದೇಹದಿಂದ ಹೊರಗೆ ತರುತ್ತಾನೆ); ನಾಮ್ನಾ-ಹೆಸರಿನಿಂದ, ಮಾತುಃ-ತಾಯಿಯ, ಸನಾಮಕಃ-ಸಮಾನವಾದ ನಾಮವುಳ್ಳ (ಅವರೆಗೆ, ಪ್ರಸವಾಗುವ ಪೂರ್ವದಲ್ಲಿ ತಾಯಿನಾಮದಿಂದಲೇ ವ್ಯವಹರಿಸಲ್ಪಡುತ್ತಿದ್ದ) ಈ ಜೀವನು, ಅಪಸ್ಮೃತಿಃ-ಎಚ್ಚರವಿಲ್ಲದ ಸ್ಥಿತಿಯಲ್ಲಿರುವವನಾಗಿ (ಬಹಿಃ ಪ್ರಪಂಚದ ಅರಿವಿಲ್ಲದೇ), ಯೋನಿಯಂತ್ರೇಣ-(ಮಾತೃ) ಯೋನಿಯಂತ್ರದಿಂದ (ಯೋನಿಯ ಸಹಜ ವ್ಯಾಪಾರದಿಂದ), ಪೀಡಿತಃ-ಪೀಡಿತನಾಗಿ, ಬಹಿಃ-ಹೊರಗೆ, ಯಾತಃ- ಬಂದ ಜೀವನು, ಕರ್ಮನಿರ್ಮಿತ್ಯೆಃ - ತನ್ನ ಕರ್ಮಫಲ ಜನ್ಯವಾದ, ಆಹಾರೈಃ - (ಆಯಾಕಾಲದ) ಆಹಾರವಿಶೇಷಗಳಿಂದ, ದಿವಾರಾತ್ರೌ-ಹಗಲುರಾತ್ರಿಗಳಲ್ಲಿ, ವರ್ಧತೇ-ಬೆಳೆಯುತ್ತಾನೆ; ಕಾಲಭೋಗತಃ-(ತನ್ನ ಆಯುಷ್ಯದ ಕಾಲವನ್ನು ಭೋಗಿಸಿ, ಮ್ರಿಯತೇ-ಮೃತನಾಗುತ್ತಾನೆ.

ಸ್ಥಾವರೇಷ್ವೇವಮೇವಾಸ್ತಿ ಚತುರ್ಮೂರ್ತಿನಿಯಾಮನಂ ॥ ೧೪ ॥
ಯೋನಿರ್ಭೂಮಿರ್ಜಲಂ ರಕ್ತಂ ರೇತೋಬೀಜಂ ಬಹಿಃಸ್ಥಿತಿಃ ।
ಉತ್ಪತ್ತಿಃ ಸ್ಥಾಣುಜೀವಸ್ಯ ಗೋಮಯಾದೇಃ ಕ್ರಿಮೇರ್ಜನಿಃ ॥ ೧೫ ॥
ಕೇವಲಂ ತು ಚತುರ್ಮೂರ್ತೇರಿಚ್ಛಯೈವ ಪ್ರಜಾಯತೇ ।
ಘುಣಾಃ ಕಾಷ್ಠೇಷು ಜಾಯಂತೇ ಜಲಸಂಪರ್ಕತೋ ವಿನಾ ॥ ೧೬ ॥
ಸ್ವಾತಂತ್ರ್ಯಂ ಸ್ವಸ್ಯಸೃಷ್ಟ್ಯಾದೌ ತಥೈವ ನಿರಪೇಕ್ಷತಾಂ ।
ಪ್ರದರ್ಶಯಿತುಮೇವಾಯಂ ಹರಿರಿತ್ಥಂ ಸೃಜತ್ಯಪಿ ॥ ೧೭ ॥
ಉಪಾದಾನಾದ್ಯಭಾವೇಪಿ ಭೂತಪ್ರೇತಪಿಶಾಚಕಾನ್ ।

---

ಮಾತೃಗರ್ಭದಿಂದ ಹೊರಗೆ ಹಾಕುತ್ತಾನೆ; ಅವರೆಗೆ (ಗರ್ಭದಲ್ಲಿದ್ದು) ತಾಯಿಯ ಹೆಸರಿಂದಲೇ ವ್ಯವಹರಿಸಲ್ಪಡುತ್ತಿದ್ದ ಈ ಜೀವನು, ಸ್ಮೃತಿರಹಿತನಾಗಿ, ಮಾತೃಯೋನಿಯ ಸಹಜ ವ್ಯಾಪಾರದಿಂದ ಎಳೆಯಲ್ಪಟ್ಟು ಹೊರಗೆ ಬರುತ್ತಾನೆ; ತನ್ನ ಕರ್ಮಾನುಸಾರವಾಗಿ ಆಯಾ ಕಾಲದಲ್ಲಿ ದೊರೆಯುವ ಆಹಾರವಿಶೇಷಗಳಿಂದ, ಹಗಲುರಾತ್ರಿಗಳಲ್ಲಿ ಬೆಳೆಯುತ್ತಾನೆ; ಮುಂದೆ ತನ್ನ ನಿಯತವಾದ ಆಯುಷ್ಯದ ಕಾಲವನ್ನು ಭೋಗಿಸಿ ಮೃತನಾಗುತ್ತಾನೆ (೧೨-೧೩). ಸ್ಥಾವರಗಳಾದ (ವೃಕ್ಷಾದಿ) ಜೀವರ ಸೃಷ್ಟಿಯಲ್ಲಿ ಸಹ, ವಾಸುದೇವಾದಿ ಚತುರ್ಮೂರ್ತಿಗಳ ನಿಯಮನವು (ಹತೋಟಿಯು— ನಿಯಮಿಸುವ

**ವಾಯವೀಯಾನ್ ಸೃಜತ್ಯೇಷ ಕ್ವ ರೇತಃ ಕುತ್ರ ಲೋಹಿತಂ ॥ ೧೮ ॥**
**ಸ್ವೇಚ್ಛಯೈವ ಯಥಾನಾದಿಕಾಲಂ ಸಂಕಲ್ಪಿತಂ ಕಥಾ ।**
**ಸೃಷ್ಟ್ಯಾದಿವಿವಿಧಾತ್ಮೇಷ ಲೀಲಾ ನ ಜ್ಞಾಯತೇ ಕ್ವಚಿತ್ ॥ ೧೯ ॥**

ಸ್ಥಾವರೇಷು ಅಪಿ-ಸ್ಥಾವರ (ವೃಕ್ಷಾದಿ ಸ್ಥಾವರ ಜೀವರ) ಜನ್ಮವಿಷಯದಲ್ಲಿ ಸಹ, (ಸ್ಥಾವರ-ಸಂಚರಿಸದ, ಸ್ಥಿರವಾಗಿ ಏಕತ್ರವಿರುವ). ಏವಂ-ಹೀಗೆಯೇ (ಹಿಂದೆ ಹೇಳಿದ ಮಾತಾಪಿತೃಗಳಿಂದಾಗುವ ಸೃಷ್ಟಿಯಂತೆ),ಚತುರ್ಮೂರ್ತಿ ನಿಯಾಮಾನಂ-ವಾಸುದೇವಾದಿ ನಾಲ್ಕು ಭಗವದ್ರೂಪಗಳ ನಿಯಮನವು (ನಿಯಮಿಸಲ್ಪಡುವ ವ್ಯವಸ್ಥೆಯು), ಅಸ್ತಿ ಏವ-ಇದ್ದೇ ಇರುತ್ತದೆ; (ವಾಸುದೇವಾದಿ ಶ್ರೀಹರಿಯ ರೂಪಗಳ ವ್ಯಾಪಾರಕ್ಕೆ ಅಧಿಷ್ಠಾನಭೂತವಾದ ಯೋನಿ ಮೊದಲಾದವುಗಳು, ಇಲ್ಲಿ ಯಾವುವೆಂದರೆ), ಭೂಮಿಃ-ಭೂಮಿಯೇ, ಯೋನಿಃ-ಯೋನಿಯು; ಜಲಂ-ಜಲವೇ, ರಕ್ತಂ-ರಕ್ತವು (ಶೋಣಿತವು); ಬೀಜಂ-ಬೀಜವೇ, ರೇತಃ-ರೇತಸ್ಸು (ಶುಕ್ರವು); ಬಹಿಃಸೃತಿಃ- (ಅಂಕುರಾದಿ ರೂಪದಿಂದ) ಭೂಮಿಯಿಂದ ಹೊರಗೆ ಬರುವುದೇ, ಸ್ಥಾಣುಜೀವಸ್ಯ- ಸ್ಥಾವರ ಜೀವನ, ಉತ್ಪತ್ತಿಃ-ಜನ್ಮವು; (ಕ್ರಿಮಿ ಮೊದಲಾದ ಪ್ರಾಣಿಗಳ ಉತ್ಪತ್ತಿವಿಷಯದಲ್ಲಿ ಹೇಗೆಂದರೆ). ಗೋಮಯಾದೇಃ-ಗೋಮಯ (ಸಗಣಿ) ಮೊದಲಾದುವುಗಳಿಂದ, ಕ್ರಿಮೇಃ-ಕ್ರಿಮಿ ಜೀವನ, ಜನಿಃ-ಜನ್ಮವು, ಚತುರ್ಮೂರ್ತೇಃ-ವಾಸುದೇವಾದಿ ನಾಲ್ಕು ರೂಪಗಳ, ಕೇವಲಂ ಇಚ್ಛಯಾ ಏವ-ಇಚ್ಛಾಮಾತ್ರದಿಂದಲೇ (ಯೋನಿ ಶುದ್ಧೀಕರಣಾದಿ ಯಾವ ವ್ಯಾಪಾರಗಳೂ

---

ವ್ಯಾಪಾರವು). ಇದ್ದೇ ಇರುತ್ತದೆ; ಶ್ರೀಹರಿಯ ಪ್ರಾಣ್ಯುತ್ಪತ್ತಿ ಸಂಬಂಧವಾದ ವ್ಯಾಪಾರಕ್ಕೆ ಅಧಿಷ್ಠಾನಭೂತಗಳಾದ ಯೋನ್ಯಾದಿಗಳು ಅಲ್ಲಿಯೂ ಇವೆ; (ಭೂಮಿಯೇ ಯೋನಿಯು; ಬೀಜವೇ ರೇತಸ್ಸು ಜಲವೇ ಶೋಣಿತವು (ಸ್ತ್ರೀರಕ್ತಸ್ಥಾನದಲ್ಲಿರುವುದು); ಅಂಕುರಾದಿ ರೂಪದಿಂದ ಭೂಮಿಯಿಂದ ಹೊರಗೆ ಬರುವುದೇ ಸ್ಥಾವರಜೀವನ ಉತ್ಪತ್ತಿಯು; ಗೋಮಯಾದಿಗಳಿಂದ ಹುಟ್ಟುವ ಕ್ರಿಮಿಗಳ ಉತ್ಪತ್ತಿವಿಷಯದಲ್ಲಿ ವಾಸುದೇವಾದಿ ನಾಲ್ಕು ರೂಪಗಳ ಇಚ್ಛೆ ಮಾತ್ರ ಪ್ರವೃತ್ತವಾಗುತ್ತದೆಂದು ತಿಳಿಯಬೇಕು; ಜಲಸಂಪರ್ಕವಿಲ್ಲದೆಯೇ, ಕಾಷ್ಠಾದಿಗಳಲ್ಲಿ ಕ್ಷುದ್ರವಾದ ನಾನಾ ಪ್ರಾಣಿಗಳು ಹುಟ್ಟುತ್ತವೆ; ಸೃಷ್ಟ್ಯಾದಿಗಳಲ್ಲಿ ತನ್ನ ಪೂರ್ಣಸ್ವಾತಂತ್ರ್ಯವನ್ನೂ ಅನ್ಯಾಪೇಕ್ಷಾರಾಹಿತ್ಯವನ್ನೂ ಉಪಾದಾನಾದಿ ವಸ್ತುಗಳ ಅವಶ್ಯಕತೆಯು ಸಹ ಇಲ್ಲವೆಂಬುದನ್ನು ಪ್ರದರ್ಶನ ಮಾಡಲಿಕ್ಕಾಗಿ, ಶ್ರೀಹರಿಯು, ನಿದರ್ಶನಾರ್ಥವಾಗಿ ಈ ಬಗೆಯ ವಿವಿಧ ಪ್ರಾಣಿಗಳ ಸೃಷ್ಟಿಯನ್ನು ಮಾಡುತ್ತಾನೆ; ವಾಯುಪ್ರಚುರ ಭೌತಿಕದೇಹಗಳುಳ್ಳ ಭೂತಪ್ರೇತಪಿಶಾಚಾದಿಗಳನ್ನೂ ಶ್ರೀಹರಿಯು ಸೃಷ್ಟಿಸುತ್ತಾನೆ; ಈ ಸೃಷ್ಟಿಯಲ್ಲಿ ಪುರುಷ-ಸ್ತ್ರೀ ಸಂಯೋಗ ಅಥವಾ ಶುಕ್ಲಶೋಣಿತಗಳೂ ಎಲ್ಲಿವೆ? (ಇಲ್ಲವೇ ಇಲ್ಲ-ಅವಿಲ್ಲದೇ

ಇಲ್ಲದೇ), ಪ್ರಜಾಯತೇ-ಉಂಟಾಗುತ್ತದೆ; ಜಲ ಸಂಪರ್ಕತಃ ವಿನಾ-ಜಲದ ಸ್ಪರ್ಶವೇ ಇಲ್ಲದೇ, ಕಾಷ್ಠೇಷು-ಕಾಷ್ಠಾದಿ (ಕಟ್ಟಿಗೆ, ತೊಲೆ ಮೊದಲಾದ) ಮರದ ವಸ್ತುಗಳಲ್ಲಿ ಘುಣಾಃ-ಕ್ರಿಮಿ ವಿಶೇಷಗಳು, (ಘುಣ-ಹೇಸಿಗೆಯ, ಕ್ಷುದ್ರವಾದ ಪ್ರಾಣಿಗಳು), ಜಾಯಂತೇ-ಹುಟ್ಟುತ್ತವೆ; ಸ್ವಸ್ಯ-ತನ್ನಿಂದ ಸಂಭವಿಸುವ, ಸೃಷ್ಟ್ಯಾದೌ- ಸೃಷ್ಟಿ ಮೊದಲಾದ್ದರಲ್ಲಿ (ಸ್ವಸ್ಯ-ತನ್ನ) ಸ್ವಾತಂತ್ರ್ಯಂ-ಪೂರ್ಣವಾದ ಅನನ್ಯಾಧೀನತ್ವವನ್ನೂ, ತಥಾ-ಮತ್ತು ನಿರಪೇಕ್ಷತಾಂ-ಅನ್ಯಸಾಧನಾಪೇಕ್ಷೆಯರಹಿತ್ಯವನ್ನೂ (ಉಪಾದಾನ ಸಾಮಗ್ರಿಗಳೂ ಸಹ ಸೃಷ್ಟಿಕಾರ್ಯದಲ್ಲಿ ಅವಶ್ಯಕವಿಲ್ಲೆಂಬುದನ್ನೂ), ಪ್ರದರ್ಶಯಿತುಂ ಏವ-ನಿದರ್ಶನಮಾಡಲಿಕ್ಕಾಗಿಯೇ, ಅಯಂ-ಈ, ಹರಿಃ- ಶ್ರೀಹರಿಯು, ಇತ್ಥಂ-ಈ ಪ್ರಕಾರವಾಗಿ (ಈ ವಿಧ ಪ್ರಾಣಿಗಳ ಸೃಷ್ಟಿಯನ್ನು) ಉಪಾದಾನಾದ್ಯಭಾವೇಪಿ-ಉಪಾದಾನಾದಿಗಳಿಲ್ಲದಿದ್ದಾಗ್ಯೂ, ಸೃಜತಿ-ಸೃಷ್ಟಿಸುತ್ತಾನೆ; (ಉಪಾದಾನಾದ್ಯಭಾವೇಪಿ-ಉಪಾದಾನಾದಿ ಪುರುಷರೇತಸ್ಸು ಶೋಣಿತ ಮೊದಲಾದವುಗಳಿಲ್ಲದೇ), ವಾಯವೀಯನ್-ವಾಯು ಪ್ರಚುರದೇಹಗಳುಳ್ಳ, ಭೂತ ಪ್ರೇತ ಪಿಶಾಚಕಾನ್- ಭೂತ, ಪ್ರೇತ, ಪಿಶಾಚಿಗಳನ್ನು ಏಷಃ-ಈತನು (ಶ್ರೀಹರಿಯು), ಸೃಜತಿ- ಸೃಷ್ಟಿಸುತ್ತಾನೆ; ರೇತಃ-(ಈ ಮೊದಲಾದ ಪ್ರಾಣಿಗಳ ಸೃಷ್ಟಿಯಲ್ಲಿ) ರೇತಸ್ಸು ಕ್ವ-ಎಲ್ಲಿದೆ? ಲೋಹಿತಂ-ಶೋಣಿತವು, ಕ್ವ-ಎಲ್ಲಿದೆ? ಏಷಃ-ಈ ಶ್ರೀಹರಿಯು, ಅನಾದಿಕಾಲಂ-ಅನಾದಿಕಾಲದಿಂದ, ಯಥಾಸಂಕಲ್ಪಿತಂ- ತನ್ನ ಸಂಕಲ್ಪಾನುಸಾರವಾಗಿ, ಸ್ವೇಚ್ಛಯಾ ಏವ-ಕೇವಲ ತನ್ನ ಇಚ್ಛೆಯಿಂದಲೇ, ತಥಾ-ಹಾಗೆ, ಸೃಷ್ಟ್ಯಾದಿ-ಸೃಷ್ಟಿ ಮೊದಲಾದುದನ್ನು ವಿದಧಾತಿ-ಮಾಡುತ್ತಾನೆ; ಲೀಲಾ - (ಈತನ ಈ) ಲೀಲೆಯು, ಕ್ವಚಿತ್ - ಸ್ವಲ್ಪವೂ, ನ ಜ್ಞಾಯತೇ- (ಜ್ಞಾನಿಗಳಿಂದಲೂ) ತಿಳಿಯಲಾಗುವುದಿಲ್ಲ.

ದ್ರಷ್ಟವ್ಯಂ ಜಾಯತೇ ಯದ್ಯದ್ಭೋಕ್ತವ್ಯಂ ಯದ್ಯದಸ್ಯತೇ ।
ಗಂತವ್ಯಂ ನಯತೇ ಯತ್ತತ್ಸ್ಥಾತವ್ಯಂ ಸ್ಥಾಪಯೇದ್ಯತಃ ॥ ೨೦ ॥
ಸರ್ವದೈವಾನುಸಂಧೇಯಂ ಸ್ವಾತಂತ್ರ್ಯಂ ಪರಮಾತ್ಮನಃ ।

ಯತಃ-ಯಾವ ಕಾರಣದಿಂದ, ಯತ್-ಯಾವ, ದ್ರಷ್ಟವ್ಯಂ-ನೋಡಬೇಕಾದುದು, ಯತ್ (ಯತಃ) - ಯಾವನಿಂದ, (ಶ್ರೀಹರಿಯಿಂದ), ಜಾಯತೇ -

---

ಪಿಶಾಚಾದಿ ದೇಹಗಳ ಸೃಷ್ಟಿಯಾಗುತ್ತದೆ); ಶ್ರೀಹರಿಯು ಅನಾದಿಕಾಲದಿಂದ, ತನ್ನ ಸಂಕಲ್ಪಾನುಸಾರವಾಗಿ, ಇಚ್ಛಾಮಾತ್ರದಿಂದ ಸೃಷ್ಟ್ಯಾದಿಗಳನ್ನು ನಡೆಸುತ್ತಲಿರುವನು; ಈತನ ಲೀಲೆಯನ್ನು ಜ್ಞಾನಿಗಳು ಸಹ ತಿಳಿಯರು (೧೪-೧೯). ಯಾವ ಕಾಲದಲ್ಲಿ ಯಾವ ವಸ್ತುವನ್ನು ಜೀವನು ಕಾಣಬೇಕಾದುದೋ ಅದು ಶ್ರೀಹರಿಯಿಂದಲೇ ಹುಟ್ಟುತ್ತದೆ; ಭೋಕ್ತವ್ಯವಾದ ವಸ್ತುವು, ಜೀವನಿಗೆ ಆತನಿಂದಲೇ ಭೋಗಾರ್ಥವಾಗಿ ಸಿದ್ಧವಾಗುತ್ತದೆ; ಜೀವನು ಸಂಚರಿಸುವ ಎಲ್ಲ ಸ್ಥಾನಗಳಿಗೆ ಕರೆದೊಯ್ದು ಮುಟ್ಟಿಸುವವನೂ ಶ್ರೀಹರಿಯೇ;

ಉಂಟಾಗುವುದೋ (ಲಭಿಸುವುದೋ); ಯತ್-ಯಾವ, ಭೋಕ್ತವ್ಯಂ-ಭೋಗ್ಯ ವಸ್ತುವು (ಭೋಗಿಸಬೇಕಾದುದು), ಯತ್-ಯಾವಾತನಿಂದ, ಅದ್ಯತೇ-ಭೋಗಿಸಲ್ಪಡುವುದೋ (ಯಾರ ದೆಶೆಯಿಂದ ಭೋಗಕ್ಕಾಗಿ ಲಭಿಸುವುದೋ); ಯತ್- ಯಾವ, ಗಂತವ್ಯಂ-ಗಮ್ಯವಾದ ವಸ್ತುವು (ಅಥವಾ ಸ್ಥಾನವು) ಯತ್- ಯಾರಿಂದಲೇ), ನಯತೇ-ಒಯ್ಯು ಮುಟ್ಟಿಸಲ್ಪಡುವುದೋ, ಸ್ಥಾತವ್ಯಂ-ಸ್ಥಿರವಾಗಿ ನಿಲ್ಲಬೇಕಾದುದು, ಸ್ಥಾಪಯೇತ್-ಸ್ಥಾಪಿಸಲ್ಪಡುವುದೋ (ನಿಲ್ಲಬೇಕಾದುದನ್ನು ನೆಲೆ ನಿಲ್ಲಿಸುವನೋ), ತತ್ (ತತಃ)-ಆ ಕಾರಣದಿಂದ, ಸರ್ವದಾ-ಎಲ್ಲ ಕಾಲದಲ್ಲಿ, ಪರಮಾತ್ಮನಃ-ಶ್ರೀ ಹರಿಯ, ಸ್ವಾತಂತ್ರ್ಯಂ-ಸ್ವಾತಂತ್ರ್ಯವು, ಅನುಸಂಧೇಯಂ ಏವ- ಚಿಂತಿಸಲ್ಪಡಬೇಕಾದುದೇ ಸರಿ.

**ತದ್ಯಂತೃತ್ವಂ ಚ ಸರ್ವತ್ರ ಶಕ್ತ್ಯಾ ಚ ಶ್ರವಣಾದಿಕಂ ॥ ೨೧ ॥**
**ಕರ್ತವ್ಯಮಿದಮೇವಾಸ್ತಿ ಸಂಸಾರೇ ವಿದುಷಾಮಿಹ ।**

ಸರ್ವತ್ರ-ಎಲ್ಲೆಡೆಗಳಲ್ಲಿ, ತದ್ಯಂತೃತ್ವಂ-ಆತನ (ಶ್ರೀಹರಿಯ) ನಿಯಾಮಕತನವನ್ನು (ಸ್ವತಂತ್ರ ಕರ್ತೃತ್ವವನ್ನು), (ಅನುಸಂಧೇಯಂ-ಹಿಂದಿನ ಶ್ಲೋಕದಿಂದ ಆವರ್ತಿಸಿಕೊಂಡು, ಭಾವಿಸತಕ್ಕದ್ದೆಂದು ಅನ್ವಯಪೂರ್ತಿಯನ್ನು ತಿಳಿಯಬೇಕು); ಶಕ್ತ್ಯಾ-ತನ್ನ ಶಕ್ತಿಯಿದ್ದಷ್ಟು, ಶ್ರವಣಾದಿಕಂ-(ಶ್ರೀಹರಿಯ ಸ್ವಾತಂತ್ರ್ಯ, ಸರ್ವಕರ್ತೃತ್ವಾದಿ ಮಹಿಮೆಗಳ) ಶ್ರವಣಾದಿಗಳನ್ನು ಕರ್ತ್ಯವಂ ಚ-ಮಾಡಲೇಬೇಕು; ಇಹ ಸಂಸಾರೇ-ಈ ಸಂಸಾರದಲ್ಲಿ, ವಿದುಷಾಂ-ವಿವೇಕಿಗಳಿಗೆ, (ವಿಶೇಷವಾಗಿ ಜ್ಞಾನಿಗಳಿಗೆ), ಇದಂ ಏವ ಅಸ್ತಿ-ಇದು ಮಾತ್ರವೇ ಕರ್ತವ್ಯವಾಗಿರುತ್ತದೆ.

**ಏಕಸ್ಮಾತ್ತು ಕುಲಾಲಾದೇರ್ನಾನಾಭಾಂಡಜನಿರ್ಯಥಾ ॥ ೨೨ ॥**
**ತಥಾ ನಾನಾವಿಧಾನ್ ದೇಹಾನ್ ಹರಿಃ ಸೃಜತಿ ಲೀಲಯಾ ।**
**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಸ್ತಥೈವ ಪ್ರಲಯಾದಿಕಂ ॥ ೨೩ ॥**
**ಅಕರ್ತೇತಿ ತತೋ ವೇದೇ ಗೀಯತೇ ಪುರುಷೋತ್ತಮಃ ।**

ಯಥಾ-ಹೇಗೆ, ಏಕಸ್ಮಾತ್ ತು-ಒಬ್ಬನೇ ಆದ, ಕುಲಾಲಾದೇಃ-ಕುಂಬಾರ ಮೊದಲಾದ ಕರ್ತನಿಂದ, ನಾನಾಭಾಂಡಜನಿಃ-ವಿವಿಧ ಭಾಂಡಗಳ (ಪಾತ್ರೆಗಳ)

---

ಒಂದೆಡೆ ನಿಲ್ಲಬೇಕಾದರೆ, ನಿಲ್ಲಿಸುವವನೂ ಆತನೇ; ಈ ಮೊದಲಾದ ಸರ್ವಜೀವರ ಸರ್ವಾನುಭವಗಳಿಗೂ, ಅವಸ್ಥಾನಕ್ಕೂ ಕಾರಣನಾದ ಶ್ರೀಹರಿಯ ಸ್ವಾತಂತ್ರ್ಯವನ್ನು ಸರ್ವದಾ ಜೀವನು ಚಿಂತಿಸುತ್ತಿರಬೇಕು—ಶ್ರೀಹರಿಯನ್ನುಳಿದು ಯಾವುದೂ ನಡೆಯದೆಂಬ ಭಾವನೆಯು ಸರ್ವಾವಸ್ಥೆಗಳಲ್ಲಿರಬೇಕು (೨೦). ಆತನ ಕೈವಾಡವಿಲ್ಲದೇ ಎಲ್ಲಿಯೂ ಏನೂ ನಡೆಯದೆಂಬ ಭಾವನೆಯು ಸರ್ವದಾ ಇರಬೇಕು; ಈ ಪ್ರಕಾರದ ಶ್ರೀಹರಿಯ ಸ್ವಾತಂತ್ರ್ಯ ಮತ್ತು ಸರ್ವಕರ್ತೃತ್ವ (ಸರ್ವನಿಯಾಮಕತ್ವ) ಮಹಿಮೆಗಳ ಶ್ರವಣಮನನಾದಿಗಳನ್ನು ಮಾಡುವುದು ಅವಶ್ಯಕರ್ತವ್ಯವಾದುದು; ಈ ಸಂಸಾರದಲ್ಲಿ

ಉತ್ಪತ್ತಿಯೋ (ಸೃಷ್ಟಿಯೋ), ತಥಾ-ಹಾಗೆ, ಹರಿಃ-ಶ್ರೀಹರಿಯು, ನಾನಾ ವಿಧಾನ್-ಬಹು ಪ್ರಕಾರದ, ದೇಹಾನ್- (ಪ್ರಾಣಿ) ದೇಹಗಳನ್ನು ಲೀಲಯಾ - ಕ್ರೀಡೆಯಿಂದ (ಶ್ರಮಲೇಶವಿಲ್ಲದೇ), ಸೃಜತಿ-ಸೃಷ್ಟಿಸುತ್ತಾನೆ; ಪ್ರಭೋಃ-ಸರ್ವ ಸ್ವಾಮಿಯಾದ (ಸರ್ವಶಕ್ತನಾದ) ಶ್ರೀಹರಿಯ, ಸೃಷ್ಟಿಃ - ಜಗತ್ಸೃಷ್ಟಿಯು, ಇಚ್ಛಾಮಾತ್ರಂ - ಕೇವಲ ಇಚ್ಛೆಯಿಂದಲೇ (ಅಗುತ್ತದೆ-ಅನ್ಯಸಹಾಯದ ಅವಶ್ಯಕತೆ ಇಲ್ಲ); ಪ್ರಲಯಾದಿಕಂ-ಪ್ರಲಯಾದಿಗಳೂ ಸಹ (ಸ್ಥಿತಿ, ನಿಯಮನ, ಜ್ಞಾನಾಜ್ಞಾನ ಬಂಧ ಮೋಕ್ಷಗಳು ಸಹ) ತಥಾಏವ- ಹಾಗೆಯೇ ಸರಿ (ಇಚ್ಛಾಮಾತ್ರದಿಂದ ನಡೆಯುತ್ತವೆ); ತತಃ-ಈ ಕಾರಣದಿಂದ (ಯಾವ ವಿಧದ ಶ್ರಮಚಿಂತಾದಿಗಳೂ ಇಲ್ಲದೇ, ಲೀಲೆಯಿಂದ, ಕ್ರೀಡಾರ್ಥವಾಗಿ ಜಗತ್ತಿನ ಸೃಷ್ಟ್ಯಾದಿಗಳು ನಡೆಯುವುದರಿಂದಲೇ), ಪುರುಷೋತ್ತಮಃ[1] - ಶ್ರೀಹರಿಯು, ವೇದೇ- ವೇದಗಳಲ್ಲಿ ಅಕರ್ತಾ ಇತಿ - ಅಕರ್ತನೆಂದು, ಗೀಯತೇ - ಸ್ತುತಿಸಲ್ಪಡುವನು (ಅಕರ್ತನೆಂದು, ಕ್ರಿಯಾ ಶಕ್ತಿ ರಹಿತನು, ಅಥವಾ ಏನನ್ನೂ ಮಾಡದ ತಟಸ್ಥನೆಂಬರ್ಥದಲ್ಲಿ ಹೇಳಿರುವುದಿಲ್ಲ).

**ಜೀವಾಸ್ತು ತ್ರಿವಿಧಾ ರಾಜನ್ ನಾನಾಕಾರಾಃ ಸ್ವಭಾವತಃ ॥ ೨೪ ॥**
**ನರಾಃ ಷೋಡಶಜಾತ್ಯಾಸ್ತು ತದನ್ಯೇ ಲೋಕದೃಶ್ಯವತ್ ।**
**ಸಾತ್ವಿಕಾ ಮುಕ್ತಿಭಾಜಃ ಸ್ಯುಸ್ತಾಮಸಾಸ್ತು ತಮೋನುಗಾಃ ॥ ೨೫ ॥**
**ಮಧ್ಯಮಾ ಸಂಸೃತೌ ನಿತ್ಯಮೂರ್ಧ್ವಾಧಃ ಪರಿವರ್ತಿನಃ ।**

ರಾಜನ್-ಹೇ ರಾಜನೇ !, ಜೀವಾಃ-ಜೀವರು, ತ್ರಿವಿಧಾಃ ತು-ತ್ರಿವಿಧರೇ ಸರಿ; ಸ್ವಭಾವತಃ-ಸ್ವರೂಪದಿಂದಲೇ, ನಾನಾಕಾರಾಃ-ಬಹುಭಿನ್ನ ಆಕಾರಗಳುಳ್ಳವರು;

---

ಸಕಲಜ್ಞಾನಿಗಳೂ ಅದನ್ನು ತಪ್ಪದೇ ಮಾಡುತ್ತಾರೆ; ವಿವೇಕಿಗಳಾದ ಇತರರೂ ಸಹ ನಿರಂತರ ಶ್ರವಣಾದಿಗಳನ್ನು ಮಾಡತಕ್ಕದ್ದು—ಅದೇ ಸರ್ವ ಮುಮುಕ್ಷುಗಳ ಪ್ರಧಾನ ಕರ್ತವ್ಯವು (೨೧). ಒಬ್ಬ ಕುಂಬಾರನು ವಿವಿಧವಾದ ಅನೇಕ ಮಡಿಕೆ ಮೊದಲಾದ ಭಾಂಡೆಗಳನ್ನು ನಿರ್ಮಿಸುವಂತೆ, ಒಬ್ಬನೇ ಶ್ರೀಹರಿಯು (ಅನ್ಯ ಸಹಾಯಾಪೇಕ್ಷೆ ಇಲ್ಲದೇ) ನಾನಾ ಪ್ರಾಣದೇಹಗಳನ್ನು (ಜೀವರಿಗಾಗಿ ಅವರವರ ಕರ್ಮಾನುಸಾರ) ಲೀಲೆಯಿಂದ ಸೃಷ್ಟಿಸುತ್ತಾನೆ; ಸರ್ವಸಮರ್ಥನಾದ ಶ್ರೀಹರಿಯ ಜಗತ್ಸೃಷ್ಟಿಯು, ಕೇವಲ ಆತನ ಇಚ್ಛೆಯಿಂದ (ಇಚ್ಛಿಸುವ ಮಾತ್ರದಿಂದ, ಅದಕ್ಕಾಗಿ ಮಾಡಬೇಕಾದ ಯಾವ ಯತ್ನವೂ ಇಲ್ಲದೇ) ಸಂಭವಿಸುತ್ತದೆ; ('ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂಬುದು

---

1. ನಶ್ವರದೇಹಸಂಬಂಧವುಳ್ಳವರಾದ್ದರಿಂದ, ಎಲ್ಲ ಜೀವರು, ಕ್ಷರಪುರುಷರು; ನಿತ್ಯಸಚ್ಚಿದಾನಂದಸ್ವರೂಪಳಾದ ಶ್ರೀಲಕ್ಷ್ಮೀದೇವಿಯು, ಅಕ್ಷರಪುರುಷಳು; ಈ ಉಭಯ ವಿಧ ಪುರುಷರಿಂದ, ಭಿನ್ನನೂ, ಉತ್ತಮನೂ ಆದ ಶ್ರೀಹರಿಯು ಪುರುಷೋತ್ತಮನು. 'ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋऽಕ್ಷರ ಉಚ್ಯತೇ । ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥

ನರಾಃ ತು-ಮನುಷ್ಯರಾದರೋ, ಷೋಡಶಜಾತ್ಯಾಃ-(ಸ್ವರೂಪದಲ್ಲಿ ಸಹ) ೧೬ ಜಾತಿಗಳಿಗೆ ಸೇರಿದವರು; ತದನ್ಯೇ-(ಅನ್ಯಾಕಾರಗಳುಳ್ಳ) ಇತರರು, ಲೋಕ ದೃಶ್ಯವತ್ ಲೋಕದಲ್ಲಿ ಕಾಣುವಂತೆ (ಪಶುಪಕ್ಷಿ ಮೊದಲಾದ ಸ್ವರೂಪ ಗಳುಳ್ಳವರು); ಸಾತ್ವಿಕಾಃ-(ತ್ರಿವಿಧ ಜೀವರಲ್ಲಿ) ಸಾತ್ವಿಕರು, ಮುಕ್ತಿಭಾಜಃ- ಮೋಕ್ಷವನ್ನು ಹೊಂದುವವರು (ಮುಕ್ತಿಯೋಗ್ಯರು); ತಾಮಸಾಃ-ತಾಮಸರು, ತಮೋನುಗಾಃ ಸ್ಯುಃ-ತಮಸ್ಸನ್ನು (ನಿತ್ಯನರಕವನ್ನು) ಕುರಿತು ಧಾವಿಸುವವರಾಗಿರುವರು; ಮಧ್ಯಮಾಃ-ಮಧ್ಯಮರು (ರಾಜಸಜೀವರು) ಸಂಸೃತೌ-ಸಂಸಾರದಲ್ಲಿ ನಿತ್ಯಂ-ಸದಾ, ಊರ್ಧ್ವಾಧಃ-ಮೇಲೆ ಕೆಳಗೆ (ಸ್ವರ್ಗ-ಭೂನರಕಗಳಲ್ಲಿ), ಪರಿವರ್ತಿನಃ-ಸುತ್ತುವವರು.

ನಾನಾಕರ್ಮವಶಾ ಜೀವಾಃ ಸಂಸೃತೌ ಸ್ಯುರ್ವಿಜಾತಯಃ ॥ ೨೬ ॥
ನಾನಾಜಾತ್ಯಾಸ್ತಥೈವಾತ್ರ ಮುಕ್ತಾಃ ಸ್ಯುಃ ಪ್ರಕೃತಿಂ ಗತಾಃ ।
ಸ್ವಾನಂದಂ ವಾ ಸ್ವದುಃಖಂ ವಾ ಭುಂಜಾನಾಸ್ತು ಯಥಾ ತಥಾ ॥ ೨೭ ॥
ನಾವರ್ತಂತೇಽತ್ರ ಸಂಸಾರೇ ತತ್ರಸ್ಥಾ ಏವ ಸರ್ವದಾ ।

ಜೀವಾಃ-ಜೀವರು, ನಾನಾಕರ್ಮವಶಾಃ-ವಿವಿಧವಾದ ಕರ್ಮಗಳ ವಶರಾಗಿ (ಕರ್ಮಗಳ ಫಲವಾಗಿ), ಸಂಸೃತೌ-ಸಂಸಾರದಲ್ಲಿ ವಿಜಾತಯಃ-(ಸ್ವರೂಪಕ್ಕೆ

---

ಶ್ರುತಿಪ್ರತೀಕವೇ—ಶ್ರುತಿಯ ಶಬ್ದಗಳೇ ಆಗಿವೆ); ಅದರಂತೆ ಜಗತ್ತಿನ ಪ್ರಲಯಾದಿಗಳೂ ಸಹ ಕೇವಲ ಇಚ್ಛೆಯಿಂದ ಸಂಭವಿಸುತ್ತವೆ; ಸೃಷ್ಟ್ಯಾದಿ ಕಾರ್ಯಸಿದ್ಧಿಗಾಗಿ ಯಾವ ಪ್ರಕಾರದ ಯತ್ನವೂ ಅವಶ್ಯಕವಲ್ಲದ್ದರಿಂದ, ವೇದಗಳಲ್ಲಿ ಶ್ರೀಹರಿಯು ಅಕರ್ತನೆಂದು ಹೇಳಲ್ಪಡುತ್ತಾನೆ—ಕರ್ತನಲ್ಲವೆಂಬ ಕಾರಣದಿಂದಲ್ಲ (೨೨-೨೩). ಜೀವರು ತ್ರಿವಿಧರಾಗಿರುವರು; ಸ್ವರೂಪದಿಂದಲೇ ನಾನಾಕಾರವುಳ್ಳವರು; ಅವರಲ್ಲಿ ಮನುಷ್ಯಜೀವರಲ್ಲಿ ಸ್ವರೂಪದಲ್ಲಿ ಸಹ ೧೬ ಜಾತಿಗಳಿರುತ್ತವೆ (ಸ್ವರೂಪದಿಂದ ಬ್ರಾಹ್ಮಣಾದಿ ೪, ಅನುಲೋಮ ಪ್ರತಿಲೋಮಗಳು ೧೨, ಹೀಗೆ ೧೬ ಜಾತಿಗಳಿಗೆ ಸೇರುತ್ತಾರೆ); ಮನುಷ್ಯೇತರ ಜೀವರು, ಲೋಕದಲ್ಲಿ ಕಾಣುವ ಪಶುಪಕ್ಷಿ ಮೊದಲಾದ ಆಕಾರಗಳಂತೆ, (ನಿತ್ಯವಾದ) ಆಕಾರವುಳ್ಳ ಸ್ವರೂಪವುಳ್ಳವರಾಗಿರು ತ್ತಾರೆ; ಮೋಕ್ಷವನ್ನು ಹೊಂದಲರ್ಹರಾದವರು ಸಾತ್ವಿಕರು; ನಿತ್ಯನರಕವನ್ನು ಸೇರುವವರು, ತಾಮಸರು, ಮಧ್ಯಮರೆಂಬ ರಾಜಸರು ಸಂಸಾರದಲ್ಲಿ ನಿತ್ಯವೂ, ಸ್ವರ್ಗ, ಭೂ, ನರಕಗಳಲ್ಲಿ ಸುತ್ತುವವರು (೨೪-೨೫). ಹೀಗೆ ಜೀವರು ತ್ರಿವಿಧರಾದರೂ, ತಮ್ಮ

---

ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ । ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥' (ಗೀತಾ). ವಾಕ್ಯಗಳು, ಶ್ರೀಹರಿಯ ಪುರುಷೋತ್ತಮತ್ವವನ್ನು ನಿರೂಪಿಸುತ್ತವೆ.

ವಿರುದ್ಧವಾದ-ಅಸ್ವಾಭಾವಿಕವಾದ) ವಿವಿಧ ಜಾತಿಯವರು, ಸ್ಯುಃ-ಆಗಿರುತ್ತಾರೆ; ತಥಾ-ಮತ್ತು ಅತ್ರ-ಈ ಲೋಕದಲ್ಲಿ ನಾನಾಜಾತ್ಯಾಃ-ವಿವಿಧ ಜಾತಿಯವರಾದರೂ, ಮುಕ್ತಾಃ-ಮುಕ್ತರಾದವರು, ಪ್ರಕೃತಿಂ-(ತಂತಮ್ಮ) ಸ್ವಭಾವವನ್ನು, ಗತಾಃ-ಹೊಂದಿದ ವರು, ಸ್ಯುಃ-ಆಗುವರು; ಸ್ವಾನಂದಂ ವಾ-ಸ್ವಸ್ವರೂಪಾನಂದವನ್ನಾಗಲಿ, ಸ್ವದುಃಖಂ ವಾ-ಸ್ವರೂಪ ದುಃಖವನ್ನಾಗಲಿ, ಯಥಾತಥಾ-(ಅವರ ಸ್ವಭಾವಗಳು) ಹೇಗಿವೆಯೋ ಹಾಗೆ, ಸ್ಯುಃ-ಹೊಂದಿದವರಾಗುತ್ತಾರೆ; ಅತ್ರ ಸಂಸಾರೇ-ಇಲ್ಲಿಯ ಸಂಸಾರದಲ್ಲಿ ನ ಆವರ್ತಂತೇ-ಮತ್ತೆ ಬರುವುದಿಲ್ಲ (ಅಲ್ಲಿಂದ ಮರಳಿ ಬರುವುದಿಲ್ಲ); ಸರ್ವದಾ-ಎಲ್ಲ ಕಾಲದಲ್ಲಿ (ನಿತ್ಯವೂ), ತತ್ರಸ್ಥಾಃ ಏವ-ಅಲ್ಲಿಯೇ (ಮುಕ್ತಲೋಕದಲ್ಲಿಯೇ) ಇರುವವರಾಗುತ್ತಾರೆ.

**ಏವಂ ತೇ ಕಥಿತಂ ರಾಜನ್ ಯದ್ಯತ್ತ್ವಂ ಪೃಷ್ಟವಾನಸಿ ॥ ೨೮ ॥**
**ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸ್ವಾಶ್ರಮಂ ಯದಿ ಮನ್ಯಸೇ ॥ ೨೯ ॥**

ರಾಜನ್-ಹೇ ಇಂದ್ರದ್ಯುಮ್ನ!, ಏವಂ-ಹೀಗೆ, ಯದ್ಯದ್-ಯಾವು ಯಾವುದನ್ನು ಕುರಿತು, ತ್ವಂ-ನೀನು, ಪೃಷ್ಟವಾನ್‌ಅಸಿ-ಪ್ರಶ್ನೆಮಾಡಿದವನಾದೆಯೋ, ತೇ-(ಆ ಎಲ್ಲವೂ) ನಿನಗೋಸ್ಕರ, ಕಥಿತಂ-ಹೇಳಲ್ಪಟ್ಟಿತು; ತೇ-ನಿನಗೆ, ಸ್ವಸ್ತಿ ಅಸ್ತು-ಮಂಗಲವಾಗಲಿ, ಯದಿ ಮನ್ಯಸೇ-(ನಾನು ಇನ್ನು ಹೋಗಬಹುದೆಂದು) ತಿಳಿದರೆ, (ನೀನು ಒಪ್ಪುವುದಾದರೆ), ಸ್ವಾಶ್ರಮಂ-ನನ್ನ ಆಶ್ರಮಕ್ಕೆ, ಗಮಿಷ್ಯಾಮಿ- ಹೋಗುತ್ತೇನೆ.

ಶ್ರೀ ಭಗವಾನುವಾಚ—

**ಇಂದ್ರದ್ಯುಮ್ನ ಇತಿ ಶ್ರುತ್ವಾ ಭೃಗೋರುಕ್ತಂ ಯಥಾಶ್ರುತಂ ।**
**ಜಗ್ರಾಹ ಮನಸಾ ಭಕ್ತ್ಯಾ ಮಹಾಭಾಗವತೋ ನೃಪಃ ॥ ೩೦ ॥**

---

ತಮ್ಮ ವಶರಾಗಿ ಸಂಸಾರದಲ್ಲಿ ಅಸ್ವಾಭಾವಿಕವಾದ ವಿವಿಧದೇಹಗಳಿಂದಿರುತ್ತಾರೆ (ಮನುಷ್ಯ ಜೀವರು ೧೬ ಜಾತಿಗಳಿಗೆ ಮಾತ್ರ ಸ್ವರೂಪದಿಂದ ಸೇರಿದವರಾದರೂ, ಸಂಸಾರಾವಸ್ಥೆಯಲ್ಲಿ ಸ್ವರೂಪಕ್ಕೆ ವಿರುದ್ಧವಾದ ವಿವಿಧ ಜಾತಿಗಳಲ್ಲಿ ಹುಟ್ಟಿರುತ್ತಾರೆ); ಮುಕ್ತರಾಗಿ, ತಂತಮ್ಮ ಸ್ವರೂಪಗಳನ್ನೇ ಹೊಂದುತ್ತಾರೆ (ಅಸ್ವಾಭಾವಿಕವಾದ ಬಾಹ್ಯದೇಹ ರಹಿತರಾಗುತ್ತಾರೆ); ತಂತಮ್ಮ ಸ್ವಭಾವಸಿದ್ಧವಾದ ಸುಖವನ್ನೋ ದುಃಖವನ್ನೋ ನಿತ್ಯವೂ ಅನುಭವಿಸುತ್ತಾರೆ; ಸಂಸಾರಕ್ಕೆ ತಿರಿಗಿ ಬರುವುದಿಲ್ಲ—ಅನಂತಕಾಲದಲ್ಲಿ ಸಹ ಮುಕ್ತಲೋಕಸ್ಥಿತರಾಗುತ್ತಾರೆ (೨೬-೨೭). ಹೇ ಇಂದ್ರದ್ಯುಮ್ನ! ನೀನು ಮಾಡಿದ ಎಲ್ಲ ಪ್ರಶ್ನೆಗಳಿಗೆ ಉತ್ತರವು ಹೇಳಲ್ಪಟ್ಟಿತು; ನಾನು ಹೊರಡಲು ನೀನು ಒಪ್ಪುವಿಯಾದರೆ ನನ್ನಾಶ್ರಮವನ್ನು ಕುರಿತು ತೆರಳುತ್ತೇನೆ; ನಿನಗೆ ಮಂಗಳವಾಗಲಿ!'' (೨೮-೨೯). ಶ್ರೀವಿಷ್ಣುವು ಹೇಳುತ್ತಾನೆ— ಹೇ ಬ್ರಹ್ಮದೇವ! ಹೀಗೆ ಇಂದ್ರದ್ಯುಮ್ನನು

**ಸಾಷ್ಟಾಂಗಂ ಪ್ರಣಿಪತ್ಯಾಥ ವಿಸಸರ್ಜ ಭೃಗುಂ ಮುನಿಂ ।**
**ಯೇ ಚಾನುಯಾಯಿನಸ್ತಸ್ಯ ತೇಽಪಿ ತೇನ ಸಹಾಗಮನ್ ॥ ೩೧ ॥**

ಇಂದ್ರದ್ಯುಮ್ನಃ-ಇಂದ್ರದ್ಯುಮ್ನರಾಜನು, ಭೃಗೋಃ-ಭೃಗು ಋಷಿಗಳಿಂದ, ಯಥಾ ಶ್ರುತಂ-ವೇದಸಮ್ಮತವಾದ, ಉಕ್ತಂ-ಉಪದೇಶವನ್ನು (ಹೇಳಲಾದುದನ್ನು), ಶ್ರುತ್ವಾ-ಕೇಳಿ, ಮನಸಾ-ಮನಸ್ಸಿನಿಂದ, ಜಗ್ರಾಹ-ಸ್ವೀಕರಿಸಿದನು (ಮನಸ್ಸು ಉಪದೇಶದಿಂದ ಸಂಶಯರಹಿತವಾಗಿ, ಪ್ರಸನ್ನವಾಯಿತು); ಮಹಾಭಾಗವತಃ ನೃಪಃ-ಭಗವದ್ಭಕ್ತನಾದ ರಾಜನು, ಭಕ್ತ್ಯಾ-ಭಕ್ತಿಯಿಂದ, ಸಾಷ್ಟಾಂಗಂ-ಅಷ್ಟಾಂಗ ಪೂರ್ವಕ, ಪ್ರಣಿಪತ್ಯ-ನಮಸ್ಕರಿಸಿ, ಅಥ-ನಂತರ, ಮುನಿಂ-ಭೃಗುಋಷಿಗಳನ್ನು ವಿಸಸರ್ಜ- ಬೀಳ್ಕೊಟ್ಟನು (ಕಳುಹಿಸಿದನು); ತಸ್ಯ-ಆ ಋಷಿಯ, ಯೇ ಚ-ಯಾವ, ಅನುಯಾಯಿನಃ-ಅನುಯಾಯಿಗಳೋ (ಜೊತೆಯಲ್ಲಿ ಬಂದಿದ್ದವರೋ), ತೇ ಅಪಿ-ಅವರೆಲ್ಲರೂ ಸಹ, ತೇನ ಸಹ-ಭೃಗು ಋಷಿಗಳೊಂದಿಗೆ, ಅಗಮನ್- ಹೊರಟುಹೋದರು.

ಕರ್ಮನಿರೂಪಣವೆಂಬ ೩೩ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೪

ಶ್ರೀ ವೇದವ್ಯಾಸಾಯ ನಮಃ

ಶ್ರೀ ಭಗವಾನುವಾಚ—

**ತತಃ ಕದಾಚಿದಗಸ್ತ್ಯಸ್ತತ್ರಾಗಾಚ್ಛಿಷ್ಯಸಂವೃತಃ ।**
**ಜಪಧ್ಯಾನಪರೋ ರಾಜಾ ನ ಚಕಾರ ತದರ್ಹಣಾಂ ॥ ೧ ॥**

**ಅರ್ಥ:**—ತತಃ-ನಂತರ (ಭೃಗುಋಷಿಗಳು ಹೋದನಂತರ), ಕದಾಚಿತ್-ಒಂದುವೇಳೆ, ಶಿಷ್ಯಸಂವೃತಃ-ಶಿಷ್ಯರಿಂದ ಪರಿವೃತರಾದ, ಅಗಸ್ತ್ಯ-ಅಗಸ್ತ್ಯ ಋಷಿಗಳು, ತತ್ರ-(ಇಂದ್ರದ್ಯುಮ್ನ ರಾಜನ) ಮನೆಗೆ, ಆಗಾತ್-ಬಂದರು; ರಾಜಾ-ರಾಜನು,

---

ಭೃಗುಋಷಿಗಳಿಂದ ಉಕ್ತವಾದ, ವೇದಸಮ್ಮತವಾದ ಉಪದೇಶವನ್ನು ಶ್ರವಣಮಾಡಿ, ಬುದ್ಧಿಯಿಂದ ಗ್ರಹಿಸಿದನು; ತನ್ನ ಪ್ರಶ್ನೆಗಳಿಗೆ ಸದುತ್ತರಗಳು ದೊರೆತು ಮನಸ್ಸು ಶಾಂತವಾಯಿತು. ಮಹಾ ಭಗವದ್ಭಕ್ತನಾದ ರಾಜನು ಭಕ್ತಿಪೂರ್ವಕ ಸಾಷ್ಟಾಂಗನಮಸ್ಕಾರ ಮಾಡಿ, ಭೃಗುಋಷಿಗಳನ್ನು ಆದರಿಸಿ ಬೀಳ್ಕೊಟ್ಟನು; ಅವರೊಡನೆ ಬಂದಿದ್ದ ಮುನಿಗಳೆಲ್ಲರೂ ಅವರೊಂದಿಗೆ ಹೊರಟುಹೋದರು (೩೦-೩೧).

೩೩ನೇ ಅಧ್ಯಾಯವು ಮುಗಿದುದು.

ಜಪಧ್ಯಾನಪರಃ-ಜಪ, ಧ್ಯಾನಗಳಲ್ಲಿ ಆಸಕ್ತನಾಗಿ, ತದರ್ಹಣಂ-ಅವರ ಪೂಜೆಯನ್ನು (ಬಂದೊಡನೆ ಮಾಡಬೇಕಾದ ಸತ್ಕಾರವನ್ನು), ನ ಚಕಾರ-ಮಾಡಲಿಲ್ಲ.

**ಶಶಾಪ ಕುಪಿತೋ ವಿಪ್ರೋ ಗಜಸ್ತ್ವಂ ಭವಿತೇತಿ ಚ ।**
**ಪುನಃ ಸಂಪ್ರಾರ್ಥಿತೋ ರಾಜ್ಞಾ ಪ್ರೋವಾಚ ಮುನಿಸತ್ತಮಃ ॥ ೨ ॥**

ವಿಪ್ರಃ-ಬ್ರಹ್ಮಜ್ಞಾನಿಯಾದ ಅಗಸ್ತ್ಯರು, ಕುಪಿತಃ-ಸಿಟ್ಟಾಗಿ (ಕರ್ತವ್ಯಚ್ಯುತನಾದ ರಾಜನ ಮೇಲೆ ಕೋಪಗೊಂಡು), ತ್ವಂ-ನೀನು, ಗಜಃ-ಆನೆಯಾಗಿ, ಭವಿತಾ-ಹುಟ್ಟುವಿ, ಇತಿ-ಹೀಗೆಂದು, ಶಶಾಪ-ಶಪಿಸಿದನು; ರಾಜ್ಞಾ-ರಾಜನಿಂದ, ಪುನಃ-ಮತ್ತೆ ಸಂಪ್ರಾರ್ಥಿತಃ-ಪ್ರಾರ್ಥಿಸಲ್ಪಟ್ಟ ಮುನಿಸತ್ತಮಃ-ಋಷಿಶ್ರೇಷ್ಠರಾದ ಅಗಸ್ತ್ಯರು, ಪ್ರೋವಾಚ-ಮಾತನಾಡಿದರು.

**ಗಜಯೋನೌ ಹರೇರ್ದೃಷ್ಟ್ವಾ ಪ್ರಾಪ್ಸ್ಯೋಷಿ ಪರಮಂ ಪದಂ ।**
**ಇತ್ಯುಕ್ತ್ವಾ ತು ಗತೇ ವಿಪ್ರೇ ರಾಜಾ ರಾಜ್ಯಂ ಸುತೇ ನ್ಯಸತ್ ॥ ೩ ॥**
**ಯಯೌ ಸಭಾರ್ಯೋ ವಿಪಿನಂ ಕಂದಮೂಲಫಲಾಶನಃ ।**
**ಭೃಗೂಪದಿಷ್ಟಮಖಿಲಂ ಸ್ಮರನ್ ಹರಿವಿಚೇಷ್ಟಿತಂ ॥ ೪ ॥**
**ತಪಸ್ತೇಪೇ ನಿರಾಶೀಃ ಸೋऽನನ್ಯ ಸಾಧಾರಣಂ ಮಹತ್ ।**

ಗಜಯೋನೌ-ಗಜದೇಹದಲ್ಲಿರುವಾಗ, ಹರೇಃ-ಶ್ರೀಹರಿಯ, ದೃಷ್ಟ್ವಾ-ದರ್ಶನದಿಂದ, ಪರಮಂಪದಂ-ಉತ್ತಮ ಗತಿಯನ್ನು ಪ್ರಾಪ್ಸ್ಯೋಷಿ-ಹೊಂದುತ್ತೀ; ಇತಿ

---

ಅಧ್ಯಾಯ ೩೪

**ತಾತ್ಪರ್ಯ:**—ಭೃಗುಋಷಿಗಳು ಹೊರಟುಹೋದ ನಂತರ, ಒಂದು ದಿನ, ರಾಜಾ ಇಂದ್ರದ್ಯುಮ್ನನ ಮನೆಗೆ ಶಿಷ್ಯಪರಿವೃತರಾದ ಅಗಸ್ತ್ಯಋಷಿಗಳು ಬಂದರು; ಆಗ ರಾಜನು ಜಪಧ್ಯಾನಗಳಲ್ಲಿ ತೊಡಗಿದ್ದನು[1]; ಬಂದೊಡನೆ ಮಾಡಬೇಕಾದ ಯೋಗ್ಯ ಸತ್ಕಾರವನ್ನು ರಾಜನು ಅವರಿಗೆ ಮಾಡಲಿಲ್ಲ(೧). ಈ ಕಾರಣದಿಂದ ಕುಪಿತರಾದ ಅಗಸ್ತ್ಯರು, 'ನಿನಗೆ

1. ಅಸಂಪ್ರಜ್ಞಾತಸಮಾಧಿಯಲ್ಲಿದ್ದವರಿಗೆ ಮಾತ್ರ ಅತಿಥಿಪೂಜಾ ಮಾಡದಿರುವುದರಿಂದ, ದೋಷವಿಲ್ಲ; ಹಾಗಲ್ಲದೇ ಬೇರಾವ ಕೆಲಸಗಳಲ್ಲಿ ತೊಡಗಿದ್ದರೂ, ಅವುಗಳನ್ನು ಬಿಟ್ಟು ಬಂದು ವಿಪ್ರನನ್ನು ಸತ್ಕರಿಸಿ ನಮಸ್ಕರಿಸಬೇಕು; ಈ ಕರ್ತವ್ಯಲೋಪವು ಮಹಾನರ್ಥಕ್ಕೆ ಕಾರಣವಾಗ ಬಲ್ಲದು. ವಿಪ್ರೇತರ ಜ್ಞಾನಿಗಳನ್ನೂ ಯಥಾಯೋಗ್ಯವಾಗಿ ಸತ್ಕರಿಸಬೇಕು. ಅಪ್ರಯತ್ನವಾಗಿ, ಏಕಧಾರೆಯಂತೆ ಒಂದು ವಸ್ತುವಿನ ಧ್ಯಾನದಲ್ಲಿ ಮನಸ್ಸು ನಿಲ್ಲುವುದು ಸಮಾಧಿಯು; ಭೇರಿತಾಡನಾದಿಗಳಿಂದ ಸಹ ಮನಸ್ಸು ಬಹಿರ್ಮುಖವಾಗದೇ ನಿಶ್ಚಲವಾಗಿ ಸಮಾಧಿಯಲ್ಲಿರುವುದು, ಅಸಂಪ್ರಜ್ಞಾತ ಸಮಾಧಿ ಎನಿಸುತ್ತದೆ. ಹಾಗಲ್ಲದೆ ಜಪ, ಧ್ಯಾನ, ಪೂಜಾದಿ ಕರ್ಮಗಳನ್ನೂ ಮಧ್ಯೆ ನಿಲ್ಲಿಸಿ, ಬಂದ ಜ್ಞಾನಿಯನ್ನು ಸತ್ಕರಿಸಬೇಕು. ಈ ಪ್ರಮೇಯವು,

ಉಕ್ತ್ವಾ-ಹೀಗೆ ಹೇಳಿ, ವಿಪ್ರೇ-ಅಗಸ್ತ್ಯರು, ಗತೇ ತು-ಹೋಗುತ್ತಿರಲಾಗಿ, ರಾಜಾ-ಇಂದ್ರದ್ಯುಮ್ನನು, ಸುತೇ-ಮಗನಲ್ಲಿ ರಾಜ್ಯಂ-ರಾಜ್ಯಭಾರವನ್ನು ನ್ಯಸತ್-ಇಟ್ಟನು (ಸ್ಥಾಪಿಸಿ), ಸಭಾರ್ಯಃ-ಪತ್ನಿಸಮೇತನಾಗಿ, ವಿಪಿನಂ-ವನವನ್ನು ಕುರಿತು, ಯಯೌ-ಹೋದನು, (ಅಲ್ಲಿ) ಕಂದಮೂಲಫಲಾಶನಃ-ಗಡ್ಡೆಗೆಣಸುಗಳನ್ನು ತಿಂದುಕೊಂಡು, ಭೃಗೂಪದಿಷ್ಟಂ-ಭೃಗುಋಷಿಗಳಿಂದ ಉಪದೇಶಿಸಲ್ಪಟ್ಟಂತೆ, ಅಖಿಲಂ-ಸರ್ವವೂ, (ತನಗೆ ಅಗಸ್ತ್ಯರಿಂದ ಬಂದ ಶಾಪವೂ ಸಹ), ಹರಿ ವಿಚೇಷ್ಟಿತಂ-ಶ್ರೀಹರಿ ಕರ್ತೃಕವೇ ಎಂದು, ಸ್ಮರನ್-ಚಿಂತಿಸುವವನಾಗಿ, ಸಃ-ಆ ರಾಜನು, ನಿರಾಶೀಃ-ಆಶೆಗಳಿಲ್ಲವನ್ನೂ ತೊರೆದು, ಅನನ್ಯಸಾಧಾರಣಂ- ಅಸದೃಶ ವಾದ (ಅನ್ಯರಿಂದ ಸಾಧಿಸಲಾಗದ), ಮಹತ್‌ತಪಃ- ಮಹಾತಪಸ್ಸನ್ನು ತೇಪೇ- ತಪಿಸಿದನು (ಆಚರಿಸಿದನು).

**ಕಾಲಧರ್ಮಂ ನೃಪೋ ಯಾತಸ್ತತ್ಪತ್ನೀ ತತ್ಸಹಾಗಮತ್ ॥ ೫ ॥**

**ಕ್ಷೀರಾಬ್ಧಿದ್ವೀಪ ಉತ್ಪನ್ನಃ ಸ ರಾಜಾ ಗಜಯೋನಿಗಃ ।**

**ಅಚಿರಾದ್ಯೂಥಪಃ ಸೋಽಭೂತ್ ಕ್ರೀಡನ್ ಸ ಕರಿಶಾವಕೈಃ ॥ ೬ ॥**

**ಕರೇಣುಸಂವೃತಸ್ತಪ್ತೋ ಗ್ರೀಷ್ಮಾತಪಸುತಾಪಿತಃ ।**

---

ಗಜಜನ್ಮ ಬರಲಿ' ಎಂದು ರಾಜನನ್ನು ಶಪಿಸಿದರು; ರಾಜನಿಂದ ಪುನಃ ಪ್ರಾರ್ಥಿತರಾದ ಆ ಶ್ರೇಷ್ಠಮುನಿಗಳು (ಮುಂದೆ ಹೇಳುವಂತೆ ನುಡಿದರು (೨). 'ಗಜದೇಹದಲ್ಲಿರುವಾಗ ಶ್ರೀಹರಿದರ್ಶನದಿಂದ ನಿನಗೆ ಉತ್ತಮಗತಿಯು ಲಭಿಸುತ್ತದೆ', ಎಂದು ಹೇಳಿ ಅಗಸ್ತ್ಯರು ಹೊರಟುಹೋದರು; ಆಗ ರಾಜನು ತನ್ನ ಮಗನಲ್ಲಿ ರಾಜ್ಯಭಾರವನ್ನು ಸ್ಥಾಪಿಸಿ, ಪತ್ನೀ ಸಮೇತನಾಗಿ ವನವನ್ನು ಹೊಕ್ಕನು; ಅಲ್ಲಿ ಗಡ್ಡೆಗೆಣಸುಗಳನ್ನೇ ಆಹಾರವಾಗಿ ಉಳ್ಳವನಾಗಿ, ಭೃಗುಋಷಿಗಳ ಉಪದೇಶವನ್ನು ಸ್ಮರಿಸಿ, ತನಗೆ ಪ್ರಾಪ್ತವಾದ (ಅಗಸ್ತ್ಯಶಾಪ ಮೊದಲಾದ) ಸರ್ವವೂ ಶ್ರೀಹರಿಕೃತವೇ ಎಂಬ ನಿಶ್ಚಯವುಳ್ಳವನಾಗಿ, ಸಕಲ ಆಶೆಗಳನ್ನೂ ಪರಿತ್ಯಜಿಸಿ,

---

'ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥
ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥

ಎಂಬ (ಗೀತಾ) ವಾಕ್ಯಗಳಲ್ಲಿ ಪ್ರಸಕ್ತವಾಗಿದೆ. ಪರೀಕ್ಷಿದ್ರಾಜನು ಶಮೀಕಋಷಿಗಳ ಕೊರಳಿಗೆ ಮೃತಸರ್ಪವನ್ನು ಹಾಕಿದಾಗ, ಆ ಋಷಿಗಳು ಅಸಂಪ್ರಜ್ಞಾತಾವಸ್ಥೆಯಲ್ಲಿದ್ದರು; ಪ್ರಕೃತ ಇಂದ್ರದ್ಯುಮ್ನನು, ಅಗಸ್ತ್ಯರು ಬಂದಾಗ ಸಮಾಧಿಸ್ಥನಾಗಿರಲಿಲ್ಲ—ಜಪಧ್ಯಾನಗಳಲ್ಲಿ ಮಾತ್ರ ಇದ್ದನು; ಆದ್ದರಿಂದ ಕರ್ತವ್ಯಲೋಪವಾಯಿತು. ಶಾಪಕ್ಕೆ ಗುರಿಯಾಗಲು ನಿಮಿತ್ತವಾದ ಅಚಾತುರ್ಯವು ನಡೆಯಿತು.

**ವಿಚರನ್ ವಿಪಿನೇ ತಸ್ಮಿನ್ನಾನಾದ್ರುಮಲತಾಕುಲೇ ॥ ೭ ॥**
**ದದರ್ಶ ಸರಸೀಂ ಶೀತಾಂ ಪದ್ಮಕಿಂಜಲ್ಕಭೂಷಿತಾಂ ।**
**ತತ್ರ ಪ್ರವಿಷ್ಟಃ ಸಹಸಾ ಸ್ವಯೂಥೇನ ಸ ಯೂಥಪಃ ॥ ೮ ॥**

ನೃಪಃ-ರಾಜನು, ಕಾಲಧರ್ಮಂ-ಕಾಲದಲ್ಲಿ ಅವಶ್ಯ ಸಂಭವಿಸುವ ಧರ್ಮ ವನ್ನು (ಮರಣವನ್ನು), ಯಾತಃ-ಹೊಂದಿದನು; ತತ್ಪತ್ನೀ-ಆತನ ಭಾರ್ಯಳು, ತತ್ಸಹಾಗಮತ್-ಆತನೊಡನೆ ಹೊರಟಳು (ಚಿತೆಯನ್ನು ಪ್ರವೇಶಿಸಿ 'ಸಹಗಮನ' ಮಾಡಿದಳು); ಸಃ ರಾಜಾ-ಆ ರಾಜನು, ಗಜಯೋನಿಗಃ-ಗಜದೇಹವನ್ನು ಹೊಂದಿ, ಕ್ಷೀರಾಬ್ಧಿ ದ್ವೀಪೇ-ಕ್ಷೀರಸಮುದ್ರ ಮಧ್ಯದ ಒಂದು ದ್ವೀಪದಲ್ಲಿ ಉತ್ಪನ್ನಃ-ಹುಟ್ಟಿದನು, ಸಃ-ಆತನು, ಅಚಿರಾತ್-ಶೀಘ್ರವಾಗಿ, ಯೂಥಪಃ-(ಆನೆಗಳ) ಗುಂಪಿನ ಯಜಮಾನನು, ಅಭೂತ್-ಆದನು; ಸಃ-ಆ ಗಜರಾಜನು, ಕರಿಶಾವಕೈಃ-ಆನೆಮರಿ ಗಳೊಂದಿಗೆ, ಕ್ರೀಡನ್-ಕ್ರೀಡಿಸುತ್ತ ಕರೇಣು ಸಂವೃತಃ-ಹೆಣ್ಣಾನೆಗಳಿಂದ ಪರಿವೃತನಾಗಿ, ತಪ್ತಃ-ವ್ಯಥೆಗೊಂಡು, ಗ್ರೀಷ್ಮಾತಪಸುತಾಪಿತಃ-ಬೇಸಿಗೆಯ ಬಿಸಿಲಿನಿಂದ ದಹಿಸಲ್ಪಟ್ಟು ತಸ್ಮಿನ್-ಆ ನಾನಾ, ದ್ರುಮಲತಾಕುಲೇ-ನಾನಾ ಗಿಡಬಳ್ಳಿಗಳಿಂದ ತುಂಬಿದ, ವಿಪಿನೇ-ಕಾಡಿನಲ್ಲಿ ಪದ್ಮಕಿಂಜಲ್ಕಭೂಷಿತಾಂ-ಕಮಲಪುಷ್ಪಕೇಸರಗಳಿಂದ ಶೋಭಿಸುವ, ಶೀತಾಂ-ತಂಪಾದ ಜಲವುಳ್ಳ, ಸರಸೀಂ-ಸರೋವರವನ್ನು ದದರ್ಶ-ಕಂಡನು; ಸಃ ಯೂಥಪಃ-ಆ ಗಜರಾಜನು, ಸಹಸಾ-ತ್ವರೆಯಿಂದ, ಸ್ವಯೂಥೇನ-ತನ್ನ ಗುಂಪಿನಿಂದ ಕೂಡಿ, ತತ್ರ-ಆ ಸರೋವರದಲ್ಲಿ ಪ್ರವಿಷ್ಟಃ- ಪ್ರವೇಶ ಮಾಡಿದವನು (ಆದನು).

**ಜಗ್ರಾಹ ಗ್ರಾಹಃ ಪಾದೇ ತಂ ಚುಕ್ರೋಶೋಚ್ಚೈರ್ಮಹಾಗಜಃ ।**
**ವೋಢುಂ ನ ಶಕ್ತಾಃ ಸರ್ವೇ ತೇ ಕರಿಣಶ್ಚ ಕರೇಣವಃ ॥ ೯ ॥**

---

ಅಸದೃಶವಾದ ಮಹಾತಪಸ್ಸನ್ನು ಆಚರಿಸಿದನು (೩-೪). ಕಾಲಧರ್ಮದಂತೆ ರಾಜನು ಮರಣಹೊಂದಲು, ಆತನ ಪತ್ನಿಯು ಆತನೊಂದಿಗೆ 'ಸಹಗಮನ' ಮಾಡಿದಳು; ಇಂದ್ರದ್ಯುಮ್ನನಾದರೋ ಕ್ಷೀರಸಮುದ್ರದಲ್ಲಿನ ಒಂದು ದ್ವೀಪದಲ್ಲಿ ಗಜದೇಹದಿಂದ ಜನಿಸಿದನು; ಅಲ್ಪಕಾಲದಲ್ಲಿ ಗಜಗಳ ಸಮೂಹದ ನಾಯಕನಾದನು; ಒಂದುವೇಳೆ, ಈ ಗಜರಾಜನು ಹೆಣ್ಣಾನೆಗಳಿಂದ ಪರಿವೃತನಾಗಿ, ಆನೆಯ ಮರಿಗಳಿಂದ ಕೂಡಿ ಕ್ರೀಡಿಸುತ್ತ ಬೇಸಿಗೆಯ ಬಿಸಿಲಿನಿಂದ ತಪ್ತನಾಗಿ, ವಿವಿಧ ಗಿಡಬಳ್ಳಿಗಳಿಂದ ತುಂಬಿದ ಕಾಡಿನಲ್ಲಿ ಸಂಚರಿಸುತ್ತಲಿದ್ದು ವಿಕಸಿತವಾದ ಬಹುಪದ್ಮಗಳಿಂದ ಶೋಭಿಸುವ ಶೀತಲಜಲ ಪೂರ್ಣವಾದ ಸರೋವರವನ್ನು ಕಂಡನು; ಆನಂದದಿಂದ ತನ್ನ ಗುಂಪಿನವರೊಡನೆ ಆ ಗಜರಾಜನು ಆ ಸರೋವರವನ್ನು ಪ್ರವೇಶಿಸಿದನು (೫-೮). ಆ ಸರೋವರದಲ್ಲಿ ನಕ್ರವು (ಮೊಸಳೆಯು) ಗಜರಾಜನ ಕಾಲನ್ನು ಹಿಡಿಯಿತು; ಆ ಮಹಾಗಜವು ಗಟ್ಟಿಯಾಗಿ

**ದುದ್ರುವುಃ ಸ್ವಸ್ಯ ಭೀತ್ಯೈವ ತ್ಯಕ್ತ್ವಾ ಯೂಥಪತಿಂ ಜಲೇ ।**
**ಸ್ವಶಕ್ತ್ಯಾ ಯುದ್ಧ್ಯತಸ್ತಸ್ಯ ಶಕ್ಯೋಽಭೂನ್ನ ಜಲೇಚರಃ ॥ ೧೦ ॥**

ತಂ-ಆತನನ್ನು (ಗಜರಾಜನನ್ನು), ಗ್ರಾಹಃ-ಮೊಸಳೆಯು, ಪಾದೇ-ಕಾಲಿನಲ್ಲಿ ಜಗ್ರಾಹ-ಹಿಡಿಯಿತು (ಆನೆಯ ಕಾಲನ್ನು ತನ್ನ ಮುಖದಿಂದ ಕಚ್ಚಿ ಹಿಡಿಯಿತು); ಮಹಾಗಜಃ-ಮಹಾಗಜವು, ಉಚ್ಚೈಃ-ದೊಡ್ಡಧ್ವನಿಯಿಂದ (ಗಟ್ಟಿಯಾಗಿ), ಚುಕ್ರೋಶ-ಕೂಗಿತು; ತೇ-ಆ, ಸರ್ವೇ-ಎಲ್ಲ ಕರಿಣಃ-ಗಜಗಳೂ, ಚ-ಮತ್ತೆ ಕರೇಣವಃ-ಹೆಣ್ಣಾನೆಗಳೂ, ವೋಢುಂ-(ಗಜರಾಜನನ್ನು) ಧರಿಸಲು (ಹಿಡಿದೆಳೆಯಲು), ನ ಶಕ್ತಾಃ-ಶಕ್ತರಾಗಲಿಲ್ಲ; ಸ್ವಸ್ಯ-ತಮ್ಮ, ಭೀತ್ಯಾ ಏವ-(ಪ್ರಾಣ) ಭಯದಿಂದಲೇ, ಯೂಥಪತಿಂ-ತಮ್ಮ ಹಿಂದಿನ ನಾಯಕನನ್ನು ಜಲೇ-ನೀರಿನಲ್ಲಿ ತ್ಯಕ್ತ್ವಾ-ಬಿಟ್ಟು ದುದ್ರುವುಃ-ಓಡಿಹೋದವು; ಸ್ವಶಕ್ತ್ಯಾ- ತನ್ನ ಶಕ್ತಿಯಿದ್ದಷ್ಟು ಯುದ್ಧ್ಯತಃ - ಹೋರಾಡಿದ (ಮೊಸಳೆಯೊಂದಿಗೆ ಯುದ್ಧ ಮಾಡಿದ), ತಸ್ಯ-ಆ ಗಜರಾಜನಿಗೆ, ಜಲೇಚರಃ-ಆ ಜಲಚರನು (ನಕ್ರನು), ಶಕ್ಯಃ-(ಬಿಡಿಸಿಕೊಂಡು ಮೇಲೆಬರಲು-ಗೆಲ್ಲುವುದಕ್ಕೆ) ಸಾಧ್ಯನು, ನ ಅಭೂತ್-ಆಗಲಿಲ್ಲ

**ಪ್ರಾಣಸಂಶಯಮಾಪನ್ನೋ ಗಜೋ ದೀನೋಽಸ್ಮರದ್ಧರಿಂ ।**
**ತದೈವಾವಿರಭೂತ್ ಸಾಕ್ಷಾತ್ ಶಂಖಚಕ್ರಗಧಾಧರಃ ॥ ೧೧ ॥**
**ದಾರಯಿತ್ವಾರಿಣಾ ವಕ್ತ್ರಂ ಗ್ರಾಹಸ್ಯಾಮೋಚಯದ್ಗಜಂ ।**
**ಗ್ರಾಹಂ ಚ ಮೋಚಯತ್ತಸ್ಮಾದ್ಗ್ರಾಹದೇಹಾದ್ಧರಿಸ್ತದಾ ॥ ೧೨ ॥**

ಗಜಃ-ಗಜರಾಜನು, ಪ್ರಾಣಸಂಶಯಂ-ತನ್ನ ಜೀವಿತವಿಷಯದಲ್ಲಿ ಸಂಶಯ ವನ್ನು ಆಪನ್ನಃ-ಹೊಂದಿ, ದೀನಃ-ಭಯಗ್ರಸ್ತನಾಗಿ (ಮನೋವ್ಯಥೆಯುಳ್ಳವನಾಗಿ), ಹರಿಂ-ಶ್ರೀಹರಿಯನ್ನು ಅಸ್ಮರತ್-ಸ್ಮರಿಸಿದನು; ತದಾ ಏವ-ತತ್ಕಾಲದಲ್ಲಿಯೇ, ಸಾಕ್ಷಾತ್-ಸ್ವಯಂ, ಶಂಖಚಕ್ರಗದಾಧರಃ-ಶಂಖಚಕ್ರಗದಾಧಾರಿಯು (ಶ್ರೀಹರಿಯು), ಆವಿರಭೂತ್-ಪ್ರತ್ಯಕ್ಷನಾದನು (ಗಜರಾಜನೆದುರಿಗೆ ಪ್ರಕಟನಾದನು); ಗ್ರಾಹಸ್ಯ-

---

(ವನವೆಲ್ಲ ಪ್ರತಿಧ್ವನಿಸುವಂತೆ) ಕೂಗಿಕೊಂಡಿತು; ಇತರ ಗಜಗಳು ಮತ್ತು ಹೆಣ್ಣಾನೆಗಳು ಗಜರಾಜನನ್ನು ಬಿಡಿಸಿ ಮೇಲೆ ತರಲು ಶಕ್ತರಾಗದೇ, ತಮ್ಮ ಪ್ರಾಣರಕ್ಷಣೆಗಾಗಿ, ಭಯದಿಂದ ತಮ್ಮ ನಾಯಕನನ್ನು ನೀರಿನಲ್ಲಿಯೇ ಬಿಟ್ಟು ಓಡಿಹೋದವು; ಗಜರಾಜನಾದರೂ ತನ್ನ ಶಕ್ತಿಯಿದ್ದಷ್ಟು ನಕ್ರನೊಡನೆ ಹೋರಾಡಿದನು—ಆದರೂ ಆ ಜಲಚರನನ್ನು ಗೆಲ್ಲುವುದಕ್ಕೆ ಸಮರ್ಥನಾಗಲಿಲ್ಲ (೯-೧೦). ಗಜರಾಜನು ಪ್ರಾಣಭಯದಿಂದ ದೀನನಾಗಿ, (ಇಂದ್ರದ್ಯುಮ್ನನಾಗಿದ್ದ ಹಿಂದಿನ ಜನ್ಮದಲ್ಲಿ ಭೃಗುಋಷಿಗಳಿಂದ ಉಪಶಿಕ್ಷಿತನಾಗಿದ್ದುದರ ಪ್ರಭಾವದಿಂದ) ಶ್ರೀಹರಿಯನ್ನು ಸ್ಮರಿಸಿ, ಶರಣುಹೊಂದಿದನು; ಶಂಖಚಕ್ರಗದಾಧಾರಿಯಾಗಿ ಶ್ರೀಹರಿಯು ತತ್ಕಾಲದಲ್ಲಿ

ನಕ್ರದ, ವಕ್ತ್ರಂ-ಮುಖವನ್ನು, ಅರಿಣಾ-ಚಕ್ರದಿಂದ, ದಾರಯಿತ್ವಾ-ಸೀಳಿ, ಗಜಂ-ಆನೆಯನ್ನು, ಅಮೋಚಯತ್-(ನಕ್ರ ಮುಖದಿಂದ) ಬಿಡಿಸಿದನು; ತದಾ-ಆಗಲೇ, ಗ್ರಾಹಂಚ-ನಕ್ರವನ್ನೂ, ತಸ್ಮಾತ್-ಆ, ಗ್ರಾಹದೇಹಾತ್-ಮೊಸಳೆಯ ದೇಹದಿಂದ, ಹರಿಃ-ಶ್ರೀಹರಿಯು, ಅಮೋಚಯತ್- ಬಿಡುಗಡೆ ಮಾಡಿದನು (ನಕ್ರವು ಮರಣಹೊಂದಿತು-ದೇಹತ್ಯಾಗ ಮಾಡಿತು).

**ತತೋ ದಿವ್ಯೈಃ ಸಂಗಧರ್ವೈಃ ದೇವೈರ್ಬ್ರಹ್ಮಾದಿಭಿಃ ಸಹ ।**
**ತಥಾ ದೇವರ್ಷಿಭಿಃ ಸಾಧ್ಯೈರ್ಮುನಿಭಿಃ ಸಹ ಪನ್ನಗೈಃ ॥ ೧೩ ॥**
**ಸ್ತೂಯಮಾನಯಶೋಽಗಚ್ಛದ್ಗರುಡಾರೂಢ ಈಶ್ವರಃ ।**
**ಹಾಹಾಹೂಹೂಶ್ಚ ತೌ ಯಾತೌ ಶಕ್ರಸ್ಯ ನಗರೀಂ ಪ್ರತಿ ॥ ೧೪ ॥**
**ಪುನಃ ಸ್ವದೇಹಮಾಪನ್ನೌ ಗಾಯಂತೌ ತದ್ಧರೇರ್ಯಶಃ ।**

ತತಃ-ಆ ನಂತರ, ಸಗಂಧರ್ವೈಃ-ಗಂಧರ್ವರಿಂದ ಸಹಿತರಾದ, ದಿವ್ಯೈಃ-ದೇವಲೋಕವಾಸಿಗಳಾದ, ದೇವೈಃ-ದೇವತೆಗಳಿಂದಲೂ, ಬ್ರಹ್ಮಾದಿಭಿಃ ಸಹ-ಬ್ರಹ್ಮದೇವನೇ ಮುಂತಾದವರಿಂದಲೂ, ತಥಾ-ಹಾಗೂ, ದೇವರ್ಷಿಭಿಃ-ದೇವರ್ಷಿಗಳಿಂದ, ಸಾಧ್ಯೈಃ-ಸಾಧ್ಯರಿಂದಲೂ, ಮುನಿಭಿಃ-ಅನ್ಯಋಷಿಗಳಿಂದಲೂ, ಪನ್ನಗೈಃ ಸಹ-ಪನ್ನಗ(ನಾಗ)ರಿಂದ ಸಹ, ಸ್ತೂಯಮಾನಯಶಃ-ಸ್ತುತಿಸಲಾದ ಕೀರ್ತಿಯುಳ್ಳವನಾಗಿ, ಗರುಡಾರೂಢಃ - ಗರುಡಾರೂಢನಾಗಿ, ಈಶ್ವರಃ - ಶ್ರೀಹರಿಯು, ಅಗಚ್ಛತ್ - ಹೊರಟುಹೋದನು; ಹಾಹಾಹೂಹೂಃಚ - ಹಾಹಾ ಮತ್ತು ಹೂಹೂಗಳೆಂಬ, ತೌ-(ಕ್ರಮದಿಂದ ಗಜ ಮತ್ತು ನಕ್ರ ಜನ್ಮವನ್ನು ಹೊಂದಿದ್ದ) ಆ ಇಬ್ಬರು

ಪ್ರತ್ಯಕ್ಷನಾದನು[1]; ಚಕ್ರದಿಂದ ನಕ್ರಮುಖವನ್ನು ಸೀಳಿ ಗಜರಾಜನನ್ನು ಬಿಡಿಸಿ, ರಕ್ಷಿಸಿದನು; ನಕ್ರನನ್ನು ನಕ್ರದೇಹದಿಂದ ಬಿಡುಗಡೆ ಹೊಂದಿಸಿದನು (ನಕ್ರವು ದೇಹತ್ಯಾಗ ಮಾಡಿತು) (೧೧-೧೨). ನಂತರ ಶ್ರೀಹರಿಯು, ದೇವಲೋಕವಾಸಿಗಳಾದ ಗಂಧರ್ವಸಹಿತರಾದ ದೇವತೆಗಳಿಂದಲೂ, ಬ್ರಹ್ಮಾದಿಗಳಿಂದಲೂ, ದೇವರ್ಷಿಗಳಿಂದ ಮತ್ತು ಅನ್ಯಋಷಿಗಳಿಂದ

1. ಸರ್ವತ್ರ ಸರ್ವರೂಪಗಳಿಂದ ಶ್ರೀಹರಿಯು ವ್ಯಾಪ್ತನಾಗಿರುವನು (ತುಂಬಿರುವನು); ಸ್ವಾನುಗ್ರಹವಿಲ್ಲದೇ ಯಾರಿಗೂ ತೋರದ ಅವ್ಯಕ್ತಸ್ವಭಾವದ ಶ್ರೀಹರಿಯು ಇಚ್ಛಿತವಾದ ತನ್ನ ಯಾವ ರೂಪವನ್ನೇ ಆಗಲಿ, ತತ್ಕಾಲದಲ್ಲಿ ಅಭಿವ್ಯಕ್ತಗೊಳಿಸುತ್ತಾನೆ; ಚಕ್ರವನ್ನು ಧರಿಸಿ ಗರುಡಾರೂಢನಾಗಿ, ಗಜೇಂದ್ರನ ರಕ್ಷಣೆಗಾಗಿ (ನಾರಾಯಣಾಖಿಲಗುರೋ ಭಗವನ್ನಮಸ್ತೇ) ಎಂದು ಕೂಗಿದುದನ್ನು ಕೇಳಿ, ಧಾವಿಸಿ ಬಂದನೆಂದು ಶ್ರೀಭಾಗವತವು ಹೇಳುತ್ತದೆ; ಆತನ ಲೀಲೆಗಳನ್ನು ಕಂಡು ಆನಂದಿಸುವ ದೇವಾದಿಗಳಿಗೆ, ಭಕ್ತವಾತ್ಸಲ್ಯಪ್ರಕಟನೆಗಾಗಿ, ಹಾಗೆ ವಾಹನವೇರಿ ಒಂದೆಡೆಯಿಂದ ಮತ್ತೊಂದು ಸ್ಥಲಕ್ಕೂ ಬರುತ್ತಾನೆ; ಹೀಗಲ್ಲದಿದ್ದರೆ ಸರ್ವತ್ರ ವ್ಯಾಪ್ತನಾದ ವಸ್ತುವಿಗೆ ಸ್ಥಳಾಂತರ ಗಮನಾದಿಗಳು ಹೇಗೆ ಕೂಡುತ್ತವೆ? ಆಶ್ಚರ್ಯವು !

ದೇವಗಂಧರ್ವರು, (ಹಾಹಾ ಗಂಧರ್ವನು ಗಜದೇಹವನ್ನೂ ಕಾಲಗತಿಯಿಂದ ತ್ಯಜಿಸಲು), ಶಕ್ರಸ್ಯ-ಇಂದ್ರನ, ನಗರೀಂ ಪ್ರತಿ-ನಗರಿಯನ್ನು (ಅಮರಾವತಿಯನ್ನು) ಕುರಿತು, ಯಾತೌ - ಹೋದವರಾದರು; ಪುನಃ-ತಿರುಗಿ (ಮತ್ತೆ ಪೂರ್ವದಂತೆ), ಸ್ವದೇಹಂ-ತಮ್ಮ ಗಂಧರ್ವ ದೇಹವನ್ನು ಆಪನ್ನೌ- ಹೊಂದಿ, ತದ್ಧರೇಃ-(ಗಜೇಂದ್ರನನ್ನು ರಕ್ಷಿಸಿದ) ಆ ಶ್ರೀಹರಿಯ, ಯಶಃ-ಕೀರ್ತಿಯನ್ನು ಗಾಯಂತೌ-ಗಾನ ಮಾಡಿದವರಾದರು.

ಶೃಣುಯಾದೇತದಾಖ್ಯಾನಮಿಂದ್ರದ್ಯುಮ್ನಭೃಗೂಕ್ತಿಮತ್ ॥ ೧೫ ॥
ಸರ್ವೈಃ ಕಾಮ್ಯೈಃ ಪ್ರಪೂರ್ಣಃ ಸ್ಯಾದ್ಧರೌ ಭಕ್ತಿಂ ದೃಢಾಂ ಲಭೇತ್ ।
ಗಚ್ಛೇಚ್ಚ ಪರಮಂ ಸ್ಥಾನಂ ಯದ್ಗತ್ವಾ ನ ನಿವರ್ತತೇ ॥ ೧೬ ॥
ಪದಂ ತದ್ವೈಷ್ಣವಂ ಬ್ರಹ್ಮನ್ನಾನ್ಯಥಾ ಸಂಶಯೋತ್ರ ನ ॥ ೧೭ ॥

ಇಂದ್ರದ್ಯುಮ್ನ ಭೃಗೂಕ್ತಿಮತ್-ಇಂದ್ರದ್ಯುಮ್ನ ರಾಜನ ಮತ್ತು ಭೃಗು ಋಷಿಗಳ ಸಂವಾದವುಳ್ಳ (ಇಂದ್ರದ್ಯುಮ್ನನಿಗೆ ಭೃಗು ಋಷಿಗಳು ಮಾಡಿದ ಉಪದೇಶವನ್ನೊಳಗೊಂಡ), ಏತತ್-ಈ (ಈವರೆಗೆ ವಿಸ್ತರಿಸಲಾದ), ಆಖ್ಯಾನಂ-ಚರಿತ್ರೆಯನ್ನು ಶೃಣುಯಾತ್-(ಅವಶ್ಯ) ಶ್ರವಣಮಾಡತಕ್ಕದ್ದು (ಹಾಗೆ ಶ್ರವಣಮಾಡಿದ ಪ್ರತಿಯೊಬ್ಬ ಯೋಗ್ಯಜೀವನೂ), ಸರ್ವೈಃ-ಸಕಲ, ಕಾಮ್ಯೈಃ-ಅಭೀಷ್ಟಗಳಿಂದ, ಪ್ರಪೂರ್ಣಃ-ಪರಿಪೂರ್ಣನು, ಸ್ಯಾತ್-ಆಗುವನು; (ಮತ್ತು) ಹರೌ-ಶ್ರೀಹರಿಯಲ್ಲಿ ದೃಢಾಂ-ದೃಢವಾದ (ನಿಶ್ಚಲವಾದ), ಭಕ್ತಿಂ-ಭಕ್ತಿಯನ್ನೂ ಲಭೇತ್-ಹೊಂದುವನು; ಯದ್ಗತ್ವಾ-ಯಾವ ಸ್ಥಾನವನ್ನು ಹೊಂದಿ, ನ ನಿವರ್ತಂತೇ-ತಿರುಗಿ ಸಂಸಾರಕ್ಕೆ (ಇಲ್ಲಿಗೆ) ಬರುವುದಿಲ್ಲವೋ, ತತ್ - ಆ, ಪರಮಂ - ಶ್ರೇಷ್ಠವಾದ, ಸ್ಥಾನಂ - ಸ್ಥಾನವನ್ನು (ಅದು ಯಾವುದೆಂದರೆ), ವೈಷ್ಣವಂ ಪದಂ-ಶ್ರೀ ವಿಷ್ಣುವಿನ (ವೈಕುಂಠಾದಿ) ಲೋಕ

---

ಸಹಿತರಾದ ಸಾಧ್ಯರಿಂದ, ಹಾಗೂ ನಾಗರಿಂದ (ನಾಗಲೋಕದವರಿಂದಲೂ) ಸ್ತುತಿಸಲ್ಪಟ್ಟ ಕೀರ್ತಿಯುಳ್ಳವನಾಗಿ, ಗರುಡನನ್ನೇರಿ ಪ್ರಯಾಣ ಮಾಡಿದನು (ಅಲ್ಲಿಂದ ಹೊರಟು ಹೋದನು; ಕಾಲಗತಿಯಿಂದ ಗಜೇಂದ್ರನೂ ಗಜದೇಹವನ್ನು ಬಿಡಲು, ಹಾಹಾ ಹೂಹೂನಾಮಕ ಉಭಯಗಂಧರ್ವರೂ,[1] ಇಂದ್ರನ ನಗರಿಗೆ (ಸ್ವರ್ಗಲೋಕದ ಅಮರಾವತಿ ನಗರಕ್ಕೆ) ಹೋಗಿ, ತಮ್ಮ (ಪೂರ್ವದಂತೆ) ಗಾಂಧರ್ವದೇಹವನ್ನು ಹೊಂದಿ, ತಮ್ಮನ್ನು ಶಾಪದಿಂದ ಮೋಚನೆಮಾಡಿದ ಶ್ರೀಹರಿಯ ಕೀರ್ತಿಯನ್ನು ಗಾನ ಮಾಡಿದರು (೧೩-೧೪). ಇಂದ್ರದ್ಯುಮ್ನರಾಜನಿಗೆ ಭೃಗುಋಷಿಗಳು ಮಾಡಿದ ಉಪದೇಶವನ್ನೊಳಗೊಂಡ ಈ ಚರಿತ್ರೆಯನ್ನು ಅವಶ್ಯವಾಗಿ ಸರ್ವ ಮುಮುಕ್ಷುಗಳೂ ಶ್ರವಣ

1. ೨೮ನೇ ಅಧ್ಯಾಯದಲ್ಲಿ ಇವರ ಚರಿತ್ರೆಯನ್ನು ವಿವರಿಸಲಾಗಿದೆ.

ಗಳಲ್ಲಿನ ಸ್ಥಾನವನ್ನು ಗಚ್ಛೇತ್ ಚ(ಏವ)-ತಪ್ಪದೆ ಹೊಂದುತ್ತಾನೆ; ಬ್ರಹ್ಮನ್-ಹೇ ಬ್ರಹ್ಮದೇವ! ಅನ್ಯಥಾ-ಬೇರೆ ಮಾರ್ಗದಿಂದ, ನ-ಅಲ್ಲ (ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ); ಅತ್ರ-ಈ ವಿಷಯದಲ್ಲಿ ಸಂಶಯಃ ನ-ಸಂಶಯವಿಲ್ಲ

ಇಂದ್ರದ್ಯುಮ್ನಾಖ್ಯಾನವೆಂಬ ೩೪ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೫

ಶ್ರೀ ವೇದವ್ಯಾಸಾಯ ನಮಃ

**ಶೌನಕ ಉವಾಚ—**

**ಭೃಗ್ವಿಂದ್ರದ್ಯುಮ್ನಸಂವಾದಾದ್ಯದುಕ್ತಂ ಹರಿಚೇಷ್ಟಿತಂ ।**
**ತದೇವ ವಿಸ್ತರಾದ್ಬ್ರೂಹಿ ತತ್ರ ಕೌತೂಹಲಂ ಹಿ ನಃ ॥ ೧ ॥**
**ಸೃಷ್ಟ್ಯಾದೌ ಭಗವಾನ್ ಭೂತ್ವಾ ವೈರಾಜಃ ಪುರುಷೋ ಮಹಾನ್ ।**
**ಸಸರ್ಜ ವಿಶ್ವಮಖಿಲಂ ನಾನಾರೂಪಮಿದಂ ಸ್ವತಃ ॥ ೨ ॥**
**ವೈಜಾತ್ಯಂ ತತ್ಕಥಂ ಸೂತ ದೇವೇಷು ಸಮಭೂತ್ತಥಾ ।**
**ವಿದ್ಯಾಪ್ರವೃತ್ತಿಂ ಲೋಕೇಷು ಪ್ರವೃತ್ತಿಂ ಶಿಲ್ಪಿನಾಂ ತಥಾ ॥ ೩ ॥**
**ಕೇನ ರೂಪೇಣ ಭಗವಾನ್ ಕಥಂಚೇದಮಿಹಾತನೋತ್ ।**

ಅರ್ಥ:—ಶೌನಕರು ಕೇಳಿದರು :—ಭೃಗ್ವಿಂದ್ರದ್ಯುಮ್ನಸಂವಾದಾತ್-ಭೃಗು ಋಷಿಗಳು ಮತ್ತು ಇಂದ್ರದ್ಯುಮ್ನ ರಾಜನ ಸಂವಾದರೂಪದಿಂದ, ಯತ್-ಯಾವ,

---

ಮಾಡತಕ್ಕದ್ದು; ಈ ಆಖ್ಯಾನಶ್ರವಣದಿಂದ ಅಪೇಕ್ಷಿತ ಸರ್ವವೂ ಸಿದ್ಧಿಸುತ್ತದೆಯಲ್ಲದೇ, ಶ್ರೀಹರಿಯಲ್ಲಿ ನಿಶ್ಚಲವಾದ ಭಕ್ತಿಯೂ ಲಭಿಸುತ್ತದೆ; ಈ ಶ್ರೇಷ್ಠಭಕ್ತಿಯಿಂದಲೇ, ಎಲ್ಲಿಂದ ತಿರುಗಿ ಸಂಸಾರಕ್ಕೆ ಬರುವುದೆಂಬುದಿಲ್ಲವೋ, ಅಂಥ ಶ್ರೀವಿಷ್ಣುಪದವನ್ನು (ವೈಕುಂಠಾದಿ ಮುಕ್ತಲೋಕವನ್ನು) ಅಧಿಕಾರಿಗಳು ತಪ್ಪದೇ ಹೊಂದುತ್ತಾರೆ. ಮೋಕ್ಷಪ್ರಾಪ್ತಿಗೆ ಬೇರೆ ಮಾರ್ಗವೇ ಇಲ್ಲ—ಈ ವಿಷಯದಲ್ಲಿ ಯಾವ ಸಂಶಯವೂ ಇಲ್ಲ (೧೫-೧೭).

೩೪ನೇ ಅಧ್ಯಾಯವು ಮುಗಿದುದು.

**ತಾತ್ಪರ್ಯ:—**ಶೌನಕರು ಮಾತನಾಡುತ್ತಾರೆ:— ಭೃಗು ಇಂದ್ರದ್ಯುಮ್ನರ ಸಂವಾದರೂಪದಿಂದ ನೀವು ನಿರೂಪಿಸಿದ ಶ್ರೀಹರಿಯ ಜಗತ್ಸೃಷ್ಟ್ಯಾದಿ ಲೀಲೆಗಳನ್ನು ವಿಸ್ತಾರವಾಗಿ ಹೇಳಿರಿ; ಹೇ ಸೂತಾಚಾರ್ಯರೇ! ಅಲ್ಲಿ ಉಕ್ತವಾದ ಪ್ರಮೇಯಗಳ ವಿವರಗಳನ್ನು ತಿಳಿಯಲು ನಾವು ಕುತೂಹಲಪೂರ್ಣರಾಗಿದ್ದೇವೆ; ಭಗವಾನ್ ಶ್ರೀಹರಿಯು, ವೈರಾಜನಾಮಕ ಮಹಾಪುರುಷಾಕಾರದ 'ವಿರಾಟ್' ದೇಹದಲ್ಲಿ

ಹರಿಚೇಷ್ಟಿತಂ-ಶ್ರೀಹರಿಯ (ಸೃಷ್ಟ್ಯಾದಿ) ವ್ಯಾಪಾರವು, ಉಕ್ತಂ-ಹೇಳಲ್ಪಟ್ಟಿತೋ, ತದೇವ-ಅದನ್ನೇ, ವಿಸ್ತರಾತ್-ವಿಸ್ತಾರವಾಗಿ, ಬ್ರೂಹಿ-ಹೇಳಿರಿ; ತತ್ರ-ಆ ಪ್ರಮೇಯಗಳ ವಿಸ್ತಾರವನ್ನು ತಿಳಿಯುವುದರಲ್ಲಿ ನಃ-ನಮಗೆ, ಕೌತೂಹಲಂ ಹಿ-ವಿಶೇಷವಾದ ಆಶೆಯಿದೆ (ವಿವರಗಳನ್ನರಿಯುವ ಉತ್ಸಾಹವುಳ್ಳವರಾಗಿದ್ದೇವೆ); ಸೃಷ್ಟ್ಯಾದೌ-ಸೃಷ್ಟಿ ಪ್ರಾರಂಭದಲ್ಲಿ ಭಗವಾನ್-ಷಡ್ಗುಣೈಶ್ವರ್ಯ ಪೂರ್ಣನಾದ, ಮಹಾನ್ ಪುರುಷಃ-ಮಹಾಪುರುಷನಾದ ಶ್ರೀಹರಿಯು, ವೈರಾಜಃ-ವೈರಾಜನು (ಮಹಾಪುರುಷಾಕಾರದ ವೈರಾಜವೆಂಬ—ವಿರಾಟ್‌ನಾಮಕ, ಬ್ರಹ್ಮದೇವನ ದೇಹದಲ್ಲಿ), ಭೂತ್ವಾ-(ಪ್ರವೇಶಿಸಿ, ಅಲ್ಲಿ) ಸ್ಥಿತನಾಗಿ, ಸ್ವತಃ-ತಾನೇ, ನಾನಾರೂಪಂ-ವಿವಿಧ ರೂಪದ, ಇದಂ-ಈ, (ಪ್ರತ್ಯಕ್ಷಗೋಚರವಾದ), ಅಖಿಲಂ-ಸಮಸ್ತ ವಿಶ್ವಂ-ಜಗತ್ತನ್ನು ಸಸರ್ಜ-ಸೃಷ್ಟಿಸಿದ ನಷ್ಟೆ; ದೇವೇಷು-ದೇವತೆಗಳಲ್ಲಿ ಸೂತ-ಹೇ ಸೂತಾಚಾರ್ಯ!, ತತ್-ಆ (ನೀವು ಹೇಳಿರ), ವೈಜಾತ್ಯಂ-ವಿವಿಧ ಜಾತಿಗಳಿಗೆ ಸೇರಿರುವಿಕೆಯೆಂಬುದು, ಕಥಂ-ಹೇಗೆ, ಸಮಭೂತ್-ಉಂಟಾಯಿತು? (ಸರ್ವಸಮನಾದ ಶ್ರೀಹರಿಯು ತಾನೇ ಸಾಕ್ಷಾತ್ತಾಗಿ ಸೃಷ್ಟಿಸಿದವರಲ್ಲಿ ಈ ವ್ಯತ್ಯಾಸಗಳೇಕೆ?); ಲೋಕೇಷು-ಲೋಕಗಳಲ್ಲಿ ವಿದ್ಯಾಪ್ರವೃತ್ತಿಂ-ವಿವಿಧ ವಿದ್ಯೆಗಳ ಪ್ರಸಾರವನ್ನೂ ತಥಾ-ಮತ್ತು ಶಿಲ್ಪಿನಾಂ-ಶಿಲ್ಪಿಗಳ, (ಕೈಗೆಲಸಗಳ-ಕುಶಲ ಕಲೆಗಳನ್ನರಿತವರ), ಪ್ರವೃತ್ತಿಂ-ವ್ಯವಹಾರವನ್ನೂ, ಭಗವಾನ್-ಶ್ರೀ ಹರಿಯು, ಕೇನ ರೂಪೇಣ-ಯಾವ ರೂಪದಿಂದ, ಕಥಂ-ಯಾವ ಪ್ರಕಾರದಿಂದ (ಹೇಗೆ), ಇದಂ-ಈ ಎಲ್ಲವನ್ನೂ ಇಹ-ಜಗತ್ತಿನಲ್ಲಿ ಆತನೋತ್-ಮಾಡಿದನು (ವಿಸ್ತಾರ ಗೊಳಿಸಿದನು)?

**ಸೂತ ಉವಾಚ—**

ಜಾತಿಭೇದಸ್ತು ದೇವೇಷು ಈಶ್ವರೇಚ್ಛಾನಿಬಂಧನಃ ।
ಬ್ರಹ್ಮವರ್ಣಪತಿರ್ಬ್ರಹ್ಮಾ ನಾರದೋ ದೇವಲೋಽಸಿತಃ ॥ ೪ ॥
ಬೃಹಸ್ಪತಿರ್ಭೃಗುರ್ವಹ್ನಿರ್ಮರೀಚ್ಯಾದ್ಯಾಃ ಸನಾದಯಃ ।
ಋಷಯಃ ಪಿತರಃ ಸರ್ವೇ ಬ್ರಹ್ಮವರ್ಣಾಃ ಪ್ರಕೀರ್ತಿತಾಃ ॥ ೫ ॥

---

ಸ್ಥಿತನಾಗಿ, ಸ್ವಯಂ (ತಾನೇ), ನಾನಾರೂಪದ ಈ ಸಮಸ್ತ ಜಗತ್ತನ್ನು ಸೃಷ್ಟಿಮಾಡಿದನಷ್ಟೆ! ಹಾಗಾದರೆ, ದೇವತೆಗಳಲ್ಲಿ ವಿವಿಧ ಜಾತಿಯವರೆಂಬ ಈ ಭೇದಗಳು ಏಕೆ ಉಂಟಾದವು? ವಿವಿಧ ಲೋಕಗಳಲ್ಲಿ ನಾನಾ ವಿದ್ಯೆಗಳ ಪ್ರವೃತ್ತಿಯನ್ನೂ (ಪ್ರಸಾರವನ್ನೂ), ನಾನಾ ಶಿಲ್ಪಿಗಳ ವ್ಯವಹಾರಗಳ ಪ್ರವೃತ್ತಿಯನ್ನೂ, ಶ್ರೀಹರಿಯು, ಯಾವ ರೂಪದಿಂದ, ಹೇಗೆ ಈ ಜಗತ್ತಿನಲ್ಲಿ ಪ್ರಚಾರದಲ್ಲಿ ತಂದನು? (೧-೩). ಸೂತರು, ಶೌನಕರ ಪ್ರಶ್ನೆಗಳನ್ನು ಉತ್ತರಿಸುತ್ತಾರೆ:— ದೇವತೆಗಳಲ್ಲಿ ಜಾತಿಭೇದವು

ದೇವೇಷು - ದೇವತೆಗಳಲ್ಲಿ, ಜಾತಿಭೇದಃ ತು - ಜಾತಿಭೇದವಾದರೋ, ಈಶ್ವರೇಚ್ಛಾ ನಿಬಂಧನಃ-ಶ್ರೀಹರೀಚ್ಛಾಧೀನವಾದುದು; ಬ್ರಹ್ಮವರ್ಣಪತಿಃ-ಬ್ರಾಹ್ಮಣ ವರ್ಣಾಭಿಮಾನಿಯಾದ (ನಿಯಾಮಕನಾದ-ಅಧಿಪತಿಯಾದ), ಬ್ರಹ್ಮಾ-ಚತುರ್ಮುಖನು, ನಾರದಃ - ನಾರದನು, ದೇವಲಃ-ದೇವಲನು, ಅಸಿತಃ-ಅಸಿತನು, ಬೃಹಸ್ಪತಿಃ - ಬೃಹಸ್ಪತಿಯು, ಭೃಗುಃ-ಭೃಗುವೂ, ವಹ್ನಿಃ- ಅಗ್ನಿಯೂ, ಮರೀಚ್ಯಾದ್ಯಾಃ-ಮರೀಚಿ ಮೊದಲಾದವರು, ಸನಾದಯಃ - (ಬ್ರಹ್ಮಮಾನಸಪುತ್ರರಾದ) ಸನಾದ ಮೊದಲಾದವರು, ಸರ್ವೇ-ಎಲ್ಲ ಋಷಯಃ-ಋಷಿಗಳೂ, ಪಿತರಃ-ಪಿತೃದೇವತೆಗಳೂ, ಬ್ರಹ್ಮವರ್ಣಾಃ-ಬ್ರಾಹ್ಮಣಜಾತಿಯವರೆಂದು, ಪ್ರಕೀರ್ತಿತಾಃ-ಹೇಳಲ್ಪಟ್ಟರುವರು.

**ಕ್ಷತ್ರವರ್ಣಪತಿರ್ವಾಯುಃ ಪ್ರಾಣಃ ಸೂತ್ರಂ ಯ ಈರಿತಃ ।**
**ರುದ್ರಾದ್ಯಾ ಪ್ರಾಯಶೋ ದೇವಾಃ ಕ್ಷತ್ರವರ್ಣಾ ಉದೀರಿತಾಃ ॥ ೬ ॥**

ಯಃ-ಯಾವ, ಪ್ರಾಣಃ-ಮುಖ್ಯಪ್ರಾಣನು, ಸೂತ್ರಂ-ಸೂತ್ರನೆಂದು, ಈರಿತಃ-ಹೇಳಲ್ಪಟ್ಟನೋ, (ಸಃ-ಆ), ವಾಯುಃ-ವಾಯುದೇವನು, (ಕ್ಷತ್ರವರ್ಣಪತಿಃ-ಕ್ಷತ್ರಿಯವರ್ಣಾಧಿಪತಿಯು; ಪ್ರಾಯಶಃ-ಬಹುವಾಗಿ, ರುದ್ರಾದ್ಯಾಃ-ರುದ್ರನೇ ಮೊದಲಾದ, ದೇವಾಃ-ದೇವತೆಗಳು, ಕ್ಷತ್ರವರ್ಣಾಃ-ಕ್ಷತ್ರಿಯವರ್ಣದವರೆಂದು, ಉದೀರಿತಾಃ-ಹೇಳಲ್ಪಡುವರು.

---

ಶ್ರೀಹರೀಚ್ಛಾಧೀನವಾದುದು;[1] ಬ್ರಾಹ್ಮಣವರ್ಣಾಧಿಪತಿಯಾದ ಚತುರ್ಮುಖಬ್ರಹ್ಮ, ನಾರದ, ದೇವಲ, ಅಸಿತ, ಬೃಹಸ್ಪತಿ, ಭೃಗು, ಅಗ್ನಿ, ಮರೀಚಿ ಮೊದಲಾದ[2] ಸಪ್ತರ್ಷಿಗಳು, ಸನಾದ ಮೊದಲಾದ ಬ್ರಹ್ಮಪುತ್ರರು, ಸಕಲ ಋಷಿಗಳೂ, ಪಿತೃದೇವತೆಗಳೂ, ಈ ಎಲ್ಲರೂ ಬ್ರಾಹ್ಮಣ ವರ್ಣದವರೆಂದು ಹೇಳಲ್ಪಡುವರು

1. ಸ್ವರೂಪಭೂತವಾದ ಜೀವರ ಜಾತಿಗಳೂ (ಜೀವಸ್ವರೂಪವೇ ಶ್ರೀಹರಿಯ ಅಧೀನವಾದ್ದರಿಂದ) ಶ್ರೀಹರಿಯ ಇಚ್ಛಾಧೀನಗಳೇ ಸರಿ; ಆದರೂ ಶ್ರೀಹರಿಯು ಜೀವಸ್ವಭಾವಗಳನ್ನು ಎಂದಿಗೂ ಬದಲಾಯಿಸುವುದಿಲ್ಲ; ಉತ್ತಮ ದೇವತೆಗಳು (ಸರ್ವ ವರ್ಣಾಶ್ರಮಾಚಾರಗಳಲ್ಲಿ ಅರ್ಹತೆಯುಳ್ಳವರಾದ್ದರಿಂದ), ಅವರನ್ನು ಕಾಲವಿಶೇಷಗಳಲ್ಲಿ ಆಯಾ ವರ್ಣಾಧಿಪತಿಗಳನ್ನಾಗಿ ನಿಯೋಜಿಸುವುದು ಸ್ವತಂತ್ರನಾದ ಶ್ರೀಹರಿಯ ಇಚ್ಛಾಧೀನವೇ ಸರಿ; ಉದಾ:—ಬ್ರಹ್ಮದೇವನು ಸ್ವರೂಪದಿಂದ ಬ್ರಾಹ್ಮಣನು; ಮುಂದಿನ ಕಲ್ಪದಲ್ಲಿ ಬ್ರಹ್ಮಪದವಿಗೆ ಬರುವ ವಾಯುದೇವನೂ ಸ್ವರೂಪದಿಂದ ಬ್ರಾಹ್ಮಣನೇ ಆದರೂ ವಾಯುಪದದಲ್ಲಿರುವಾಗ, ಆತನು ಕ್ಷತ್ರಿಯನು—ಕ್ಷತ್ರವರ್ಣಾಧಿಪತಿಯು; ಈ ಅಧಿಕಾರನಿರ್ವಹಣೆಯೂ ಸ್ವರೂಪಸಿದ್ಧವಾದ ಧರ್ಮವೇ. ಅವರವರ ಚರಮದೇಹವು ಅವರವರ ಸ್ವರೂಪಜಾತಿಯನ್ನು ಸೂಚಿಸುತ್ತದೆಂಬುದು ಸಾಮಾನ್ಯ ನಿಯಮ.

2. 'ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ । (ಗೀತಾ) —ಪೂರ್ವ ಮನ್ವಂತರದಲ್ಲಿ, ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ ಪುಲಹ, ಕ್ರತು, ವಸಿಷ್ಠರು,

**ಅಶ್ವಿನೌ ಧನದೋ ವಿಶ್ವಕರ್ಮವಿದ್ಯಾಧರಾದಯಃ ।**

**ವೈಶ್ಯವರ್ಣಪತಿಂ ತೇಷಾಂ ಧನದಂ ವ್ಯದಧಾದ್ಧರಿಃ ॥ ೭ ॥**

ಅಶ್ವಿನೌ- ಅಶ್ವಿನೀದೇವತೆಗಳು, ಧನದಃ-ಕುಬೇರನು, ವಿಶ್ವಕರ್ಮ ವಿದ್ಯಾಧರಾದಯಃ-ವಿಶ್ವಕರ್ಮ, ವಿದ್ಯಾಧರರೇ ಮೊದಲಾದವರು, ಕ್ಷತ್ರವರ್ಣಾಃ-ಕ್ಷತ್ರಿಯ ವರ್ಣದವರು); ತೇಷಾಂ-ಇವರ ಮಧ್ಯದಲ್ಲಿ ಧನದಂ-ಕುಬೇರನನ್ನು ಹರಿಃ-ಶ್ರೀಹರಿಯು, ವೈಶ್ಯವರ್ಣಪತಿಂ-ವೈಶ್ಯವರ್ಣಾಭಿಮಾನಿಯನ್ನಾಗಿ, ವ್ಯದಧಾತ್-ಮಾಡಿದನು (ನೇಮಿಸಿದನು).

**ಏವಮೇವ ಯಮೋ ದೇವೋ ಧರ್ಮಃ ಕಾಲ ಇತಿ ದ್ವಿಧಾ ।**

**ಧರ್ಮೋ ವಿಪ್ರಃ ಕಾಲಃ ಶೂದ್ರವರ್ಣಾಧ್ಯಕ್ಷೋಥ ದೂತಕಾಃ ॥ ೮ ॥**

**ಯಕ್ಷಾಶ್ಚ ಗುಹ್ಯಕಾಶ್ಚಾಪಿ ಶೂದ್ರವರ್ಣಾಃ ಪ್ರಕೀರ್ತಿತಾಃ ।**

ಏವಂ ಏವ-ಹೀಗೆಯೇ, ಯಮೋ ದೇವಃ-ಯಮದೇವನು, ಧರ್ಮಃ-ಧರ್ಮನೆಂದೂ, ಕಾಲಃ-ಕಾಲನೆಂದೂ, ಇತಿ-ಹೀಗೆ, ದ್ವಿಧಾ-ಎರಡು ಪ್ರಕಾರನು (ದ್ವಿರೂಪವುಳ್ಳವನು); ಧರ್ಮಃ-ಧರ್ಮನು, ವಿಪ್ರಃ-ಬ್ರಾಹ್ಮಣನು, ಕಾಲಃ- ಕಾಲನು, ಶೂದ್ರವರ್ಣಾಧ್ಯಕ್ಷಃ-ಶೂದ್ರವರ್ಣಾಧಿಪತಿಯು; ಅಥ-ಮತ್ತು ದೂತಕಾಃ-ಯಮ ದೂತರು, ಚ-ಮತ್ತು ಯಕ್ಷಾಃ-ಯಕ್ಷರು, ಅಪಿ-ಮತ್ತು ಗುಹ್ಯಕಾಃ-ಗುಹ್ಯಕರೂ, ಶೂದ್ರವರ್ಣಾಃ ಚ (ಏವ)-ಶೂದ್ರವರ್ಣದವರೇ, ಪ್ರಕೀರ್ತಿತಾಃ-ಎಂದು ಹೇಳಲ್ಪಡುತ್ತಾರೆ.

---

(೪-೫). ಮುಖ್ಯಪ್ರಾಣನೂ, ಸೂತ್ರನೂ ಎಂದು ಹೇಳಲ್ಪಟ್ಟ ವಾಯುದೇವನು, ಕ್ಷತ್ರಿಯವರ್ಣಾಧಿಪತಿಯು; ಬಹುವಾಗಿ ರುದ್ರಾದಿ ದೇವತೆಗಳು ಕ್ಷತ್ರವರ್ಣದವರೆಂದು ಹೇಳಲ್ಪಡುತ್ತಾರೆ (೬). ಅಶ್ವಿನೀ ದೇವತೆಗಳು, ಕುಬೇರ, ವಿಶ್ವಕರ್ಮ, ವಿದ್ಯಾಧರರೇ ಮೊದಲಾದವರೂ, ಕ್ಷತ್ರಿಯ ವರ್ಣದವರು; ಇವರ ಮಧ್ಯೆ, ಕುಬೇರನನ್ನು ಶ್ರೀಹರಿಯು, ವೈಶ್ಯವರ್ಣಾಧಿಪತಿಯನ್ನಾಗಿ ನೇಮಕಮಾಡಿರುವನು (೭). ಹೀಗೆಯೇ ಯಮದೇವನು, ಧರ್ಮ ಮತ್ತು ಕಾಲ, ಎಂಬೆರಡು ರೂಪಗಳಿಂದಿರುವನು; ಧರ್ಮನು ಬ್ರಾಹ್ಮಣನು—ಕಾಲನು ಶೂದ್ರವರ್ಣಾಧಿಪತಿಯು; ಯಮದೂತರು, ಯಕ್ಷರು ಮತ್ತು ಗುಹ್ಯಕರೂ ಸಹ ಶೂದ್ರವರ್ಣದವರೆಂದು ಹೇಳಲ್ಪಟ್ಟಿರುವರು (೮).

---

ಸಪ್ತಋಷಿಗಳೆಂದು ಹೇಳಲಾಗಿದೆ; ಇವರು, ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮರೆಂಬ ಮನುಗಳೂ, ಅಥವಾ 'ಮನು' ಅವಬೋಧನೇ ಎಂಬ ಧಾತ್ವರ್ಥದಿಂದ, 'ಚತ್ವಾರಃ ಮನವಃ' ಎಂದರೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಜಾತಿಯುಳ್ಳ (ಜ್ಞಾನಿಗಳಾದ) ದೇವತೆಗಳೂ, 'ಮದ್ಭಾವಾಃ' ನನ್ನಿಂದಲೇ ಹುಟ್ಟಿದವರು—ಎಂದು ಹೇಳಿದೆ.

ವಿಶ್ವಾವಸುಶ್ಚಿತ್ರರಥಸ್ತಥಾ ಚಿತ್ರಾಂಗದಾದಯಃ ॥ ೯ ॥
ಅಷ್ಟೌ ಗಂಧರ್ವಪತಯಃ ಪ್ರೋಕ್ತಾ ಮೂರ್ಧಾವಸಿಕ್ತಕಾಃ ।
ತಥಾ ಕೇಚಿದ್ದೇವಗಣಾ ಯುದ್ಧಕರ್ಮವಿಶಾರದಾಃ ॥ ೧೦ ॥

ವಿಶ್ವಾವಸುಃ-ವಿಶ್ವಾವಸು, ಚಿತ್ರರಥಃ-ಚಿತ್ರರಥನು, ತಥಾ-ಹಾಗೂ, ಚಿತ್ರಾಂಗದಾದಯಃ-ಚಿತ್ರಾಂಗದನೇ ಮೊದಲಾದ, ಅಷ್ಟೌ-ಎಂಟುಮಂದಿ, ಗಂಧರ್ವಪತಯಃ-ಗಂಧರ್ವನಾಯಕರೂ, ತಥಾ-ಮತ್ತು ಯುದ್ಧಕರ್ಮ ವಿಶಾರದಾಃ-ಯುದ್ಧಕರ್ಮದಲ್ಲಿ ವಿಶಾರದರಾದ, ಕೇಚಿತ್-ಕೆಲವು, ದೇವಗಣಾಃ-ದೇವತೆಗಳ ಸಮೂಹಗಳೂ, ಮೂರ್ಧಾವಸಿಕ್ತಕಾಃ-ಮೂರ್ಧಾವಸಿಕ್ತರೆಂದೂ, ಪ್ರೋಕ್ತಾಃ-ಹೇಳಲ್ಪಡುತ್ತಾರೆ.

ಕ್ಷತ್ರಿಯಾದಿತ್ರಿವರ್ಣೇಷು ಬ್ರಾಹ್ಮಣಾದನುಲೋಮಿನಃ ।
ಮೂರ್ಧಾವಸಿಕ್ತಾಂಬಷ್ಠೌ ತಥಾ ಪಾರಾಶವಸ್ತ್ವಿತಿ ॥ ೧೧ ॥
ಬ್ರಹ್ಮವಿಟ್‌ಶೂದ್ರಯೋಷಿತ್ಸು ಸೂತೋ ಮಾಹಿಷ್ಯ ಉಗ್ರಕಃ ।
ತ್ರಯಃ ಕ್ಷತ್ರಿಯತೋ ಜಾತೌ ಪ್ರತಿಲೋಮಾನುಲೋಮಿನೌ ॥ ೧೨ ॥
ಬ್ರಹ್ಮಕ್ಷತ್ರಿಯಶೂದ್ರಸ್ತ್ರೀಗರ್ಭಜಾ ವೈಶ್ಯತಸ್ತ್ರಯಃ ।
ವೈದೇಹೋ ಮಾಗಧಶ್ಚೈವ ಕರಣಶ್ಚಾನುಲೋಮಜಃ ॥ ೧೩ ॥
ಶೂದ್ರಾಚ್ಚಾಂಡಾಲಕ್ಷತ್ತಾರಾ ವಾಯೋ ಗವ ಇತಿ ತ್ರಯಃ ।
ಬ್ರಾಹ್ಮಣಾದಿಷು ನಾರೀಷು ಪ್ರೋಚ್ಯಂತೇ ಪ್ರತಿಲೋಮಿನಃ ॥ ೧೪ ॥
ಕ್ಷತ್ತಾರಾವಿತಿ ವಿಜ್ಞೇಯಾ ಉಗ್ರಪಾರಾಶವಾವಪಿ ।
ಏವಂ ದ್ವಾದಶಪೂರ್ವೈಸ್ತು ಚತುರ್ಭಿಃ ಸಂಯುತಾಸ್ತ್ವಿಮೇ ॥ ೧೫ ॥
ದೇವಾಃ ಷೋಡಶಜಾತೀಯಾಃ ಸ್ವಭಾವಾದೇವ ಜಜ್ಞಿರೇ ।

ಕ್ಷತ್ರಿಯಾದಿ ತ್ರಿವರ್ಣೇಷು-ಕ್ಷತ್ರಿಯಾದಿ (ಕ್ಷತ್ರಿಯ, ವೈಶ್ಯ, ಶೂದ್ರರೆಂಬ) ಮೂರು ವರ್ಣದ ಸ್ತ್ರೀಯರಲ್ಲಿ, ಬ್ರಾಹ್ಮಣಾತ್-ಬ್ರಾಹ್ಮಣಪುರುಷನಿಂದ, ಮೂರ್ಧಾವಸಿಕ್ತಾಂಬಷ್ಠೌ-ಮೂರ್ಧಾವಸಿಕ್ತ ಮತ್ತು ಅಂಬಷ್ಠ ತಥಾ-ಮತ್ತು ಪಾರಾಶವಃ-ಪಾರಾಶವ, ಇತಿ ತು-ಹೀಗೆಂದೇ, ಅನುಲೋಮಿನಃ-(ಮೂರು) ಅನುಲೋಮ

---

ವಿಶ್ವಾವಸು, ಚಿತ್ರರಥ, ಚಿತ್ರಾಂಗದ ಮೊದಲಾದ ಎಂಟು ಗಂಧರ್ವನಾಯಕರೂ ಮತ್ತು ಯುದ್ಧಕರ್ಮನಿಪುಣರಾದ ಕೆಲವು ದೇವತೆಗಳ ಸಮೂಹಗಳೂ (ಗಣಗಳೂ) ಮೂರ್ಧಾವಸಿಕ್ತರೆಂದು ಹೇಳಲ್ಪಡುತ್ತಾರೆ (೯-೧೦). ಮೂರ್ಧಾವಸಿಕ್ತರೇ ಮೊದಲಾದ ಅನುಲೋಮ ಪ್ರತಿಲೋಮ ಜಾತಿಗಳನ್ನು ವಿವರಿಸುವೆನು, ಕೇಳಿರಿ; ಬ್ರಾಹ್ಮಣಪುರುಷನಿಂದ ಕ್ಷತ್ರಿಯ ವೈಶ್ಯ ಶೂದ್ರ ಸ್ತ್ರೀಯರಲ್ಲಿ ಕ್ರಮವಾಗಿ.

ಜಾತಿಗಳು (ಉತ್ಪನ್ನವಾಗುತ್ತವೆ); ಬ್ರಹ್ಮವಿಟ್ಶೂದ್ರಯೋಷಿತ್ಸು - ಬ್ರಾಹ್ಮಣ, ವೈಶ್ಯ, ಶೂದ್ರ ಸ್ತ್ರೀಯರಲ್ಲಿ ಕ್ಷತ್ರಿಯತಃ-ಕ್ಷತ್ರಿಯಪುರುಷನಿಂದ, ಸೂತಃ-ಸೂತನು, ಮಾಹಿಷ್ಯಃ-ಮಾಹಿಷ್ಯ ಮತ್ತು ಉಗ್ರಕಃ-ಉಗ್ರನು (ಎಂದು), ತ್ರಯಃ-ಮೂರು ಜಾತಿಗಳು; (ಇವುಗಳಲ್ಲಿ), ಪ್ರತಿಲೋಮಾನುಲೋಮಿನೌ- ಪ್ರತಿಲೋಮ ಮತ್ತು ಅನುಲೋಮ ಜಾತಿಗಳೆರಡೂ, ಜಾತೌ-ಹುಟ್ಟಿದವು;[1] ವೈಶ್ಯತಃ-ವೈಶ್ಯಪುರುಷನಿಂದ, ಬ್ರಹ್ಮಕ್ಷತ್ರಿಯಶೂದ್ರಸ್ತ್ರೀಗರ್ಭಜಾಃ-ಬ್ರಾಹ್ಮಣ, ಕ್ಷತ್ರಿಯ, ಶೂದ್ರ ಸ್ತ್ರೀಯರಲ್ಲಿ ಹುಟ್ಟಿದವು, ತ್ರಯಃ-ಮೂರು ಜಾತಿಗಳು; ವೈದೇಹಃ-ವೈದೇಹ, ಮಾಗಧಃ-ಮಾಗಧರೆಂಬವೂ (ಎರಡು ಪ್ರತಿಲೋಮ ಜಾತಿಗಳೂ), ಕರಣಃ ಚ-ಕರಣನೆಂಬುವನು, ಅನುಲೋಮಜಃ-ಅನುಲೋಮ ಜಾತಿಯಲ್ಲಿ ಜನಿಸಿದವನು; ಶೂದ್ರಾತ್-ಶೂದ್ರಪುರುಷನಿಂದ, ಬ್ರಾಹ್ಮಣಾದಿಷು-ಬ್ರಾಹ್ಮಣಾದಿ, ನಾರೀಷು-ಸ್ತ್ರೀಯರಲ್ಲಿ ಚಾಂಡಾಲಕ್ಷತ್ತಾರೌ-ಚಂಡಾಲ ಮತ್ತು ಕ್ಷತ್ತಾರರೆಂಬ ಎರಡು, ಆಯೋಗವಃ ಇತಿ-ಆಯೋಗನೆಂದು (ಒಂದು), (ಹೀಗೆ), ತ್ರಯಃ-ಮೂರು, ಪ್ರತಿಲೋಮಿನಃ-ಪ್ರತಿಲೋಮಜಾತಿಯವರು (ಹುಟ್ಟುತ್ತಾರೆ); ಉಗ್ರಪಾರಾಶವೌ-ಉಗ್ರ ಮತ್ತು ಪಾರಾಶವರೂ,[2] ಕ್ಷತ್ತಾರೌ-ಕ್ಷತ್ತಾರರೆಂದೇ, ವಿಜ್ಞೇಯಾಃ-ತಿಳಿಯಲ್ಪಡಲರ್ಹರು; ಏವಂ-ಹೀಗೆ, ದ್ವಾದಶಪೂರ್ವ್ಯಃ-ಹಿಂದೆ ಹೇಳಿದ (ಅನುಲೋಮ ಪ್ರತಿಲೋಮ

---

ಮೂರ್ಧಾವಸಿಕ್ತ ಅಂಬಷ್ಠ ಮತ್ತು ಪಾರಾಶವರೆಂಬ ಅನುಲೋಮಿಗಳು (ಆ ಹೆಸರಿನ ಅನುಲೋಮ ಜಾತಿಗಳು) ಹುಟ್ಟುತ್ತವೆ; ಕ್ಷತ್ರಿಯಪುರುಷನಿಂದ, ಬ್ರಾಹ್ಮಣ ವೈಶ್ಯ ಶೂದ್ರ ಸ್ತ್ರೀಯರಲ್ಲಿ ಕ್ರಮದಿಂದ, ಸೂತ, ಮಾಹಿಷ್ಯ, ಉಗ್ರಗಳೆಂಬ ಜಾತಿಗಳು ಹುಟ್ಟುತ್ತವೆ—ಸೂತನು ಪ್ರತಿಲೋಮಿಯು, ಉಳಿದಿಬ್ಬರು ಅನುಲೋಮಿಗಳು; ವೈಶ್ಯಪುರುಷನಿಂದ, ಇತರ ಬ್ರಾಹ್ಮಣಾದಿ ಮೂರು ವರ್ಣದ ಸ್ತ್ರೀಯರಲ್ಲಿ ಕ್ರಮದಿಂದ, ವೈದೇಹ ಮಾಗಧರೆಂಬ ಪ್ರತಿಲೋಮಿಗಳೂ, ಕರಣನೆಂಬ ಅನುಲೋಮಿಯೂ, ಹುಟ್ಟುವರು (ಆ ಮೂರು ಜಾತಿಗಳು ಹುಟ್ಟುತ್ತವೆ); ಶೂದ್ರಪುರುಷನಿಂದ, ಉತ್ತಮ ಮೂರು (ಬ್ರಾಹ್ಮಣಾದಿ) ವರ್ಣಗಳ ಸ್ತ್ರೀಯರಲ್ಲಿ ಚಾಂಡಾಲ, ಕ್ಷತ್ತಾರ, ಆಯೋಗವರೆಂಬ ಮೂರು ಪ್ರತಿಲೋಮಿಗಳು (ಆ ಜಾತಿಗಳು) ಹುಟ್ಟುತ್ತಾರೆ; ಉಗ್ರ ಪಾರಾಶವರೂ ಕ್ಷತ್ತಾರರೆಂದು ತಿಳಿಯಲ್ಪಡಲರ್ಹರು; ಹೀಗೆ ಅನುಲೋಮ ಪ್ರತಿಲೋಮ ಜಾತಿಗಳು ೧೨, ಬ್ರಾಹ್ಮಣಾದಿ ನಾಲ್ಕು (೪) ವರ್ಣಗಳಿಂದ ಕೂಡಿ, ಒಟ್ಟು

---

1. ಇವು ಮೂರರಲ್ಲಿ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದವನು, ಸೂತ—ಅವನು ಪ್ರತಿಲೋಮಿಯು; ಉಳಿದಿಬ್ಬರು, (ಮಾಹಿಷ್ಯ, ಉಗ್ರರು) ಅನುಲೋಮಿಗಳು.

2. ಕ್ಷತ್ರಿಯನಿಂದ ಶೂದ್ರಸ್ತ್ರೀಯಲ್ಲಿ ಜನಿಸಿದವನು, ಉಗ್ರನು; ಬ್ರಾಹ್ಮಣನಿಂದ ಶೂದ್ರ ಸ್ತ್ರೀಯಲ್ಲಿ ಜನಿಸಿದವನು ಪಾರಾಶವ; ಶೂದ್ರನಿಂದ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದವನು, ಕ್ಷತ್ತಾರನು.

ಗಳೆಂಬ) ೧೨ ಜಾತಿಗಳಿಂದ, ಚತುರ್ಭಿಃ- (ಬ್ರಾಹ್ಮಣಾದಿ) ನಾಲ್ಕು ಜಾತಿಗಳಿಂದ, ಸಂಯುತಾಃ-ಕೂಡಿದ, ಸ್ವಭಾವಾದೇವ-ಸ್ವರೂಪದಿಂದಲೇ, ಷೋಡಶ ಜಾತೀಯಾಃ-೧೬ ಜಾತಿಗಳಿಗೆ ಸೇರಿದವರಾದ, ದೇವಾಃ-ದೇವತೆಗಳು, ಜಜ್ಞಿರೇ- ಉತ್ಪನ್ನರಾದರು.

**ಮಾತಲ್ಯಾದ್ಯಾಃ ಸೂತಜಾತ್ಯಾ ಉಗ್ರಾ ಐರಾವತಾದಿಭಾಃ ॥ ೧೬ ॥**
**ಕರ್ಣಾಽಕ್ಷಿಚಿತ್ರಗುಪ್ತಾದ್ಯಾಃ ಮಾಗಧಶ್ಚಾರಣೇಷು ತು ।**
**ಕೇಚಿತ್ ಸೂತಾಶ್ಚ ತತ್ರಾಪಿ ಯಕ್ಷಾಃ ಪಾರಾಶವೋಗ್ರಕಾಃ ॥ ೧೭ ॥**

ಮಾತಲ್ಯಾದ್ಯಾಃ- ಮಾತಲಿ (ಇಂದ್ರನ ಸಾರಥಿ) ಮೊದಲಾದವರು, ಸೂತಜಾತ್ಯಾಃ-ಸೂತಜಾತಿಯವರು; ಐರಾವತಾದಿಭಾಃ-ಐರಾವತ (ಇಂದ್ರನ ಗಜ) ಮೊದಲಾದ ಗಜಗಳು, ಉಗ್ರಾಃ-ಉಗ್ರಜಾತಿಯವು; ಕರ್ಣಾಕ್ಷಿಚಿತ್ರಗುಪ್ತಾದ್ಯಾಃ-ಕರ್ಣ, ಅಕ್ಷಿ, ಚಿತ್ರಗುಪ್ತ ಮೊದಲಾದವರೂ, ಮಾಗಧಃ-ಮಾಗಧನೂ, ಚಾರಣೇಷು ತು-ಚಾರಣರಲ್ಲಿಯೇ, ಕೇಚಿತ್-ಕೆಲವರು, ಸೂತಾಃ-ಸೂತರು; ತತ್ರಾಪಿ-ಈ ವರ್ಗಗಳಲ್ಲಿಯೂ, ಯಕ್ಷಾಃ-ಯಕ್ಷರು, ಪಾರಾಶವೋಗ್ರಕಾಃ- ಪಾರಾಶವ ಮತ್ತು ಉಗ್ರಜಾತಿಯವರು.

**ಪುಷ್ಪದಂತಶ್ಚಾರಣೇಶೋ ಯಕ್ಷೇಶೋ ನಲಕೂಬರಃ ।**
**ಕ್ಷತ್ತಾರೋ ಗುಹ್ಯಕೇಷ್ವೇವ ಪ್ರೋಕ್ತಾಃ ಶೂದ್ರಾನುಯಾಯಿನಃ ॥ ೧೮ ॥**

ಪುಷ್ಪದಂತಃ-ಪುಷ್ಪದಂತನು, ಚಾರಣೇಶಃ-ಚಾರಣರ ನಾಯಕನು; ನಲಕೂಬರಃ-ನಲಕೂಬರನು, ಯಕ್ಷೇಶಃ-ಯಕ್ಷರ ಯಜಮಾನನು; ಗುಹ್ಯಕೇಷು-ಗುಹ್ಯಕರಲ್ಲಿ ಕ್ಷತ್ತಾರಃ-ಕ್ಷತ್ತಾರನೂ, ಶೂದ್ರಾನುಯಾಯಿನಃ-ಶೂದ್ರರ ಅನುಯಾಯಿಗಳೆಂದು, ಪ್ರೋಕ್ತಾಃ-ಹೇಳಲ್ಪಡುವರು.

---

೧೬ ಜಾತಿಗಳಿಗೆ, ಸ್ವಭಾವದಿಂದಲೇ ಸೇರಿರುವ ದೇವತೆಗಳು (ದೇವಾದಿ ಮುಕ್ತಿಯೋಗ್ಯ ಜೀವರು), ವೈರಾಜಪುರುಷನಿಂದ ಉತ್ಪನ್ನರಾದರು (೧೧-೧೫). ಮಾತಲಿ ಮೊದಲಾದವರು, ಸೂತಜಾತಿಯವರು; ಐರಾವತವೇ ಮೊದಲಾದ ಗಜಗಳು (ಆ ರೂಪದಿಂದಿರುವ ದೇವತೆಗಳು) ಉಗ್ರಜಾತಿಯವರು; ಕರ್ಣ, ಅಕ್ಷಿ (ತಕ್ಷಕನ ಮಗ), ಚಿತ್ರಗುಪ್ತ ಮೊದಲಾದವರು, ಮಾಗಧ (ಮಗಧದೇಶದ ಒಬ್ಬ ರಾಜಪುತ್ರ, ದುರ್ಯೋಧನನ ಪರ ಯುದ್ಧ ಮಾಡಿದವನು), ಚಾರಣರಲ್ಲಿ ಕೆಲವರು ಸಹ ಸೂತರೇ; ಯಕ್ಷರು, ಪಾರಾಶವ ಮತ್ತು ಉಗ್ರಜಾತಿಯವರಾಗಿರುವರು (೧೬-೧೭). ಪುಷ್ಪದಂತನು (ಅಷ್ಟದಿಗ್ಗಜಗಳಲ್ಲಿ ಒಂದಾಗಿ ಆ ರೂಪದಿಂದಿರುವವನು) ಚಾರಣೇಶನಾಗಿದ್ದಾನೆ; ನಲಕೂಬರನೆಂಬುವನು ಯಕ್ಷರ ನಾಯಕನು; ಗುಹ್ಯಕರ ಯಜಮಾನನು ಕ್ಷತ್ತಾರನು, ಈ ಎಲ್ಲರೂ ಶೂದ್ರಾನುಸಾರಿಗಳೆಂದು ಹೇಳಲ್ಪಟ್ಟಿರುವರು

**ಪಿಶಾಚಭೂತಕೂಷ್ಮಾಂಡಾಃ ಪ್ರೇತಾಶ್ಚಾಂಡಾಲಜಾತಯಃ ।**
**ಘಂಟಾಕರ್ಣಃ ಪಿಶಾಚೇಶೋ ಭೂತೇಶೋ ಭೈರವಃ ಸ್ಮೃತಃ ॥ ೧೯ ॥**
**ಕೂಷ್ಮಾಂಡೇಶೋ ಭೃಂಗಿರುಕ್ಕಿಪ್ರೇತಾಧೀಶಸ್ತಥೋಲ್ಲುಕಃ ।**

ಪಿಶಾಚಭೂತಕೂಷ್ಮಾಂಡಾಃ-ಪಿಶಾಚ, ಭೂತ, ಕೂಷ್ಮಾಂಡಗಳು, ಪ್ರೇತಾಃ-ಪ್ರೇತಗಳು, ಚಾಂಡಾಲಜಾತಯಃ-ಚಂಡಾಲಜಾತಿಗೆ ಸೇರಿದವುಗಳು; ಘಂಟಾಕರ್ಣಃ-ಘಂಟಾಕರ್ಣನೆಂಬುವನು, ಪಿಶಾಚೇಶಃ-ಪಿಶಾಚಗಳ ನಾಯಕನು; ಭೈರವಃ-ಭೈರವನು, ಭೂತೇಶಃ-ಭೂತಗಳ ನಾಯಕನು, ಸ್ಮೃತಃ-(ಎಂದು) ತಿಳಿಯಲ್ಪಟ್ಟಿರುವನು; ಭೃಂಗಿರುಕ್ಕಿ-ಭೃಂಗಿರುಕ್ಕಿಯು, ಕೂಷ್ಮಾಂಡೇಶಃ-ಕೂಷ್ಮಾಂಡಗಳ ಯಜಮಾನನು; ಉಲ್ಲುಕಃ-ಉಲ್ಲುಕನೆಂಬುವನು, ಪ್ರೇತಾಧೀಶಃ-ಪ್ರೇತಗಳ ಅಧಿಪತಿಯು.

**ತುಂಬುರ್ವಾದ್ಯಾಶ್ಚ ಗಂಧರ್ವಾ ಅಂಬಷ್ಠಾ ಅಖಿಲಾ ಅಪಿ ॥ ೨೦ ॥**
**ಆಯೋಗವಾಶ್ಚ ಮಾಹಿಷ್ಯಾ ನಾನಾಶಿಲ್ಪವಿಶಾರದಾಃ ।**

ತುಂಬುರ್ವಾದ್ಯಾಃ-ತುಂಬುರು ಮೊದಲಾದ, ಗಂಧರ್ವಾಃ-ಗಂಧರ್ವರು, ಅಖಿಲಾಃ ಅಪಿ-ಸಮಸ್ತರೂ, ಅಂಬಷ್ಠಾಃ-ಅಂಬಷ್ಠರು, ಚ-ಮತ್ತು ಆಯೋಗವಾಃ-ಆಯೋಗವರು, ಮಾಹಿಷ್ಯಾಃ-ಮಾಹಿಷ್ಯರೂ, (ಆಗಿದ್ದು), ನಾನಾಶಿಲ್ಪವಿಶಾರದಾಃ-ವಿವಿಧಶಿಲ್ಪಗಳಲ್ಲಿ (ಕುಶಲಕಲೆಗಳಲ್ಲಿ) ನಿಪುಣರಾಗಿರುವರು.

**ವಿದ್ಯಾಧರೇಷು ಕೇಚಿತ್ತು ಚಿತ್ರಕೇತ್ವಾದಯೋ ವಿಶಃ ॥ ೨೧ ॥**
**ಸರ್ವರಕ್ಷಃ ಪತಿಃ ಪ್ರೋಕ್ತಃ ಕ್ಷತ್ರವರ್ಣೋಽಥತದ್ಗಣಾಃ ।**

ವಿದ್ಯಾಧರೇಷು-ವಿದ್ಯಾಧರರಲ್ಲಿ, ಕೇಚಿತ್ ತು-ಕೆಲವರಾದರೋ, ಚಿತ್ರಕೇತ್ವಾದಯಃ-ಚಿತ್ರಕೇತು ಮೊದಲಾದವರು, ವಿಶಃ-ವೈಶ್ಯರು (ಆಗಿರುತ್ತಾರೆ); ಸರ್ವರಕ್ಷಃ ಪತಿಃ-ಎಲ್ಲ ರಾಕ್ಷಸರ ಅಧಿಪತಿಯು, ಕ್ಷತ್ರವರ್ಣಃ-ಕ್ಷತ್ರಿಯನೆಂದು, ಪ್ರೋಕ್ತಃ-ಹೇಳಲ್ಪಡುವನು; ಅಥ-ಮತ್ತೇನೆಂದರೆ, ತದ್ಗಣಾಃ-ಆ ರಾಕ್ಷಸರ ಗಣಗಳು, (ನಾನಾಜಾತ್ಯಾಃ ಪ್ರಕೀರ್ತಿತಾಃ-ವಿವಿಧಜಾತಿಯವರೆಂದು ಹೇಳಲ್ಪಡುತ್ತಾರೆ, ಎಂದು, ಮುಂದಿನ ಶ್ಲೋಕದಿಂದ ಅನ್ವಯವಾಗುತ್ತದೆ).

---

(೧೮). ಪಿಶಾಚ, ಭೂತ, ಕೂಷ್ಮಾಂಡ, ಪ್ರೇತಗಳೆಂಬ (ಭೂತಪ್ರಭೇದಗಳಿವು), ದುರ್ದೇಹಗಳು, ಚಂಡಾಲಜಾತಿಗೆ ಸೇರಿದವು; ಘಂಟಾಕರ್ಣನು ಪಿಶಾಚಗಳ ನಾಯಕನು; ಭೈರವನು ಭೂತಗಳ ಒಡೆಯನು; ಭೃಂಗಿರುಕ್ಕಿಯು ಕೂಷ್ಮಾಂಡಗಳ ಅಧಿಪನು; ಉಲ್ಲುಕನು ಪ್ರೇತಾಧಿಪತಿಯು (೧೯). ನಾನಾಶಿಲ್ಪವಿಶಾರದರಾದ, ತುಂಬುರು ಮೊದಲಾದ ಗಂಧರ್ವರು, ಅಂಬಷ್ಠರು ಮತ್ತು ಆಯೋಗವ, ಮಾಹಿಷ್ಯ ಜಾತಿಗಳಿಗೂ ಸೇರಿದವರು (೨೦). ವಿದ್ಯಾಧರರು ಸಾಮಾನ್ಯವಾಗಿ ಕ್ಷತ್ರಿಯರು (೭ನೇ ಶ್ಲೋಕವನ್ನು ನೋಡಿರಿ); ಅವರಲ್ಲಿ ಚಿತ್ರಕೇತು ಮೊದಲಾದ ಕೆಲವರು, ವೈಶ್ಯರೂ ಇರುವರು;

**ಬ್ರಹ್ಮರಾಕ್ಷಸವೇತಾಲಾಃ ನಾನಾಜಾತ್ಯಾಃ ಪ್ರಕೀರ್ತಿತಾಃ ॥ ೨೨ ॥**
**ಕ್ರವ್ಯಾದಾಃ ಶೋಣಿತಾಹಾರಾಃ ಯಾತುಧಾನಾಸ್ತಥಾಪರೇ ।**

ಬ್ರಹ್ಮರಾಕ್ಷಸವೇತಾಲಾಃ-ಬ್ರಹ್ಮರಾಕ್ಷಸ ಬೇತಾಳಗಳು, ಕ್ರವ್ಯಾದಾಃ-ಕ್ರವ್ಯಾದರು, ಶೋಣಿತಾಹಾರಾಃ-ಶೋಣಿತಾಹಾರರು, ತಥಾ-ಮತ್ತು ಅಪರೇ-ಅನ್ಯರಾದ (ರಾಕ್ಷಸ ಪ್ರಭೇದದವರಾದ), ಯಾತುಧಾನಾಃ-ಯಾತುಧಾನರು, (ಎಂದು) ನಾನಾಜಾತ್ಯಾಃ-ನಾನಾಜಾತಿಯವರು, ಪ್ರಕೀರ್ತಿತಾಃ-ಪ್ರಸಿದ್ಧರಾಗಿರುವರು; (ಅಥವಾ ಬ್ರಹ್ಮರಾಕ್ಷಸ, ಬೇತಾಳ, ಯಾತುಧಾನರೆಂಬ ರಾಕ್ಷಸಗಣಗಳು, ಮಾಂಸಭಕ್ಷಕರು, ರಕ್ತಪಾನ ಮಾಡುವವರು, ಎಂದೂ ತಿಳಿಯಬಹುದು).

**ಊರ್ವಶ್ಯಾದ್ಯಾ ಅಪ್ಸರಸೋ ನಾನಾಜಾತ್ಯಾಸ್ತಥೋದಿತಾಃ ॥ ೨೩ ॥**

ಊರ್ವಶ್ಯಾದ್ಯಾಃ-ಊರ್ವಶೀ ಮೊದಲಾದ, ಅಪ್ಸರಃ-ಅಪ್ಸರೆಯರು, ನಾನಾ ಜಾತ್ಯಾಃ-ವಿವಿಧಜಾತಿಯವರು; ತಥಾ-ಹಾಗೆ, ಉದಿತಾಃ-ಹೇಳಲ್ಪಟ್ಟಿರುತ್ತಾರೆ.

**ಮೃದಂಗಿನಸ್ತಾಲಧರಾಃ ಶೂದ್ರಾದ್ಯಾಸ್ತು ಯಥಾಯಥಂ ।**
**ನಟಾ ಗಂಧರ್ವಜಾತೀಯಾಶ್ಚಾರಣಾಃ ಪರಿಹಾಸಕಾಃ ॥ ೨೪ ॥**
**ವೀಣಾದಿಸಹಗಾತಾರೋ ಗಂಧರ್ವಾಃ ಪರಿಕೀರ್ತಿತಾಃ ।**
**ಕೇವಲಂ ಕಂಠಮಾಧುರ್ಯಾದ್ಗಾಯಂತೋ ವಿವಿಧೈಃ ಸ್ವರೈಃ ॥ ೨೫ ॥**
**ಕಿಂನರಾಸ್ತೇ ನರಾಸ್ಯಾ ಹಿ ಹಯಾಕಾರಕಬಂಧಕಾಃ ।**
**ಕೇಚಿತ್ ಕಿಂಪುರುಷಾಸ್ತ್ವನ್ಯೇ ಹಯಾಸ್ಯಾಃ ನೃಕಬಂಧಕಾಃ ॥ ೨೬ ॥**

ಮೃದಂಗಿನಃ-ಮೃದಂಗಬಾರಿಸುವವರು, ತಾಲಧರಾಃ-ತಾಳಧಾರಿಗಳು, ಯಥಾ ಯಥಂ-ತಂತಮ್ಮ ಜಾತಿಗಳಿದ್ದಂತೆ, ಶೂದ್ರಾದ್ಯಾಃ ತು-ಶೂದ್ರ ಮೊದಲಾದವರೇ ಸರಿ; ನಟಾಃ-ನಟರು (ಪಾತ್ರಧಾರಿಗಳಾಗಿ ರಂಗಸ್ಥಳದಲ್ಲಿ ನಟಿಸುವವರು), ಗಂಧರ್ವ ಜಾತೀಯಾಃ - ಗಂಧರ್ವ ಜಾತಿಯವರು (ಗಂಧರ್ವಗಣದವರು);

---

ರಾಕ್ಷಸಾಧಿಪತಿಯು ಕ್ಷತ್ರಿಯನು; ಆ ರಾಕ್ಷಸರು ನಾನಾ ಗಣಗಳಿಗೆ ಸೇರಿರುವರು (೨೧). ಬ್ರಹ್ಮರಾಕ್ಷಸ, ವೇತಾಲ, ಯಾತುಧಾನರೆಂದು, ರಾಕ್ಷಸರಲ್ಲಿ ವಿವಿಧ ಗಣಗಳಿವೆ; ಅವರೆಲ್ಲರೂ ಮಾಂಸಾಹಾರಿಗಳು—ರಕ್ತಪಾನದಿಂದ ತೃಪ್ತರಾಗುತ್ತಾರೆ (೨೨). ಊರ್ವಶಿಯೇ ಮೊದಲಾದ ಅಪ್ಸರೆಯರು, ನಾನಾ ಜಾತಿಗಳಿಗೆ ಸೇರಿರುವರೆಂದು ಹೇಳಲ್ಪಟ್ಟಿರುವರು (೨೩). ಮೃದಂಗ ಬಾರಿಸುವವರೂ ತಾಳಧಾರಿಗಳೂ, ಅವರವರ ಜಾತಿಗಳಾದ ಶೂದ್ರಾದಿಗಳೆಂದು ತಿಳಿಯತಕ್ಕದ್ದು (ಅವರ ಜಾತಿನಿರ್ಣಯಕ್ಕೆ ವೃತ್ತಿಯನ್ನು ಗಮನಿಸಬೇಕಾಗಿಲ್ಲ); ನಟರು ಬಹುವಾಗಿ, ಗಂಧರ್ವಜಾತಿಯವರು; ಪರಿಹಾಸಕರು (ಹಾಸ್ಯಕಾರರು—ವಿದೂಷಕರು ಚಾರಣರು; ವೀಣಾದಿ ವಾದ್ಯ ಗಳೊಡನೆ ಹಾಡುವವರು, ಗಂಧರ್ವರೆಂದು ಪ್ರಸಿದ್ಧರು; ವಿವಿಧ ರಾಗಗಳಿಂದ,

ಪರಿಹಾಸಕಾಃ-ವಿದೂಷಕರು (ಹಾಸ್ಯಕಾರರು), ಚಾರಣಾಃ-ಚಾರಣರು; ವೀಣಾದಿ ಸಹಗಾತಾರಃ-ವೀಣಾದಿ ವಾದ್ಯಸಹಿತ ಗಾನಮಾಡುವವರು, ಗಂಧರ್ವಾಃ-ಗಂಧರ್ವ ರೆಂದು, ಪರಿಕೀರ್ತಿತಾಃ-ಹೇಳಲ್ಪಡುವರು; ವಿವಿಧೈಃ- ನಾನಾ, ಸ್ವರೈಃ-ರಾಗಗಳಿಂದ, ಕೇವಲಂ-ಕೇವಲ (ಅನ್ಯಸಹಾಯವಿಲ್ಲದೇ), ಕಂಠಮಾಧುರ್ಯಾತ್-ಕಂಠದ ಮಾಧುರ್ಯ ದಿಂದಲೇ, ಗಾಯಂತಃ-ಗಾನಮಾಡಿ ಆನಂದಪಡಿಸುವವರು, ಕಿಂನರಾಃ- ಕಿನ್ನರರು; ತೇ-ಅವರು, ನರಾಸ್ಯಾಃ-ಮನುಷ್ಯರಂತೆ ಮುಖವುಳ್ಳವರು, ಹಯಾಕಾರಕ ಬಂಧಕಾಃ- ಅಶ್ವದಂತೆ ದೇಹವುಳ್ಳವರು; (ಇನ್ನು ಕೆಲವರು, ಅಶ್ವದಂತೆ ಮುಖವುಳ್ಳವರಾಗಿ, ಮನುಷ್ಯರಂತೆ ದೇಹವುಳ್ಳವರು, ಕಿಂಪುರುಷರೆಂದು ಕರೆಯಲ್ಪಡುತ್ತಾರೆ); ಅನ್ಯೇ ಕೇಚಿತ್-ಇತರ ಕೆಲವರು, ಹಯಾಸ್ಯಾಃ-ಕುದುರೆಮುಖದವರು; ನೃಕಬಂಧಕಾಃ- ಮನುಷ್ಯದೇಹವುಳ್ಳವರು, ಕಿಂಪುರುಷಾಃ- ಕಿಂಪುರುಷರೆನಿಸುವರು.

**ಗಂಧರ್ವಪತಯಸ್ತೇಽಪಿ ಸೇವಂತೇ ದೇವತಾಗಣಾನ್ ।**
**ಮಾತರಃ ಪೂತನಾದ್ಯಾಶ್ಚ ಶಾಕಿನ್ಯೋ ಡಾಕಿನೀಗಣಾಃ ॥ ೨೭ ॥**
**ಮಲರಕ್ತ ಸುರಾಪಾಶ್ಚ ನಾನಾಜಾತ್ಯಾಃ ಪ್ರಕೀರ್ತಿತಾಃ ।**

ತೇ-ಆ (ಈ ಮೊದಲು ಹೇಳಿದ), ಗಂಧರ್ವಪತಯಃ ಅಪಿ-ಗಂಧರ್ವ ನಾಯಕರೂ, ದೇವತಾಗಣಾನ್-ದೇವಸಮೂಹಗಳನ್ನು, ಸೇವಂತೇ-ಸೇವಿಸುತ್ತಾರೆ; ಮಾತರಃ-ಮಾತೃಗಳು,[1] ಪೂತನಾದ್ಯಾಃ ಚ-ಪೂತನಾ ಮೊದಲಾದವರೂ, ಶಾಕಿನ್ಯಃ-

---

ಕೇವಲ ಕಂಠಮಾಧುರ್ಯದಿಂದ (ಮಧುರವಾದ ಕಂಠದಿಂದಲೇ—ವಾದ್ಯಸಹಿತ ವಲ್ಲದೇ) ಗಾನಮಾಡುವವರು, ಕಿನ್ನರರು; ಈ ಕಿನ್ನರರೆಂಬುವರು, ಮನುಷ್ಯರಂತೆ ಮುಖವುಳ್ಳವರಾಗಿ, ಕುದುರೆಯಂತೆ ಕಬಂಧ (ಇತರ ದೇಹಭಾಗ)ವುಳ್ಳವ ರಾಗಿರುತ್ತಾರೆ; ಇನ್ನು ಕೆಲವರು, ಕಿಂಪುರುಷರೆಂಬುವರು, ಕುದುರೆಮುಖವುಳ್ಳವರಾಗಿ, ನರಾಕಾರದ ದೇಹವುಳ್ಳವರಾಗಿರುತ್ತಾರೆ (೨೪-೨೬). ಗಂಧರ್ವನಾಯಕರೆಂಬುವರು ಸಹ, ದೇವತಾಗಣಗಳನ್ನು (ವಿವಿಧ ದೇವಸಮೂಹದವರನ್ನು) ಸೇವಿಸುತ್ತಾರೆ; ಸಪ್ತಮಾತೃಗಳು (ಬ್ರಾಹ್ಮೀ ಮೊದಲಾದ ದೇವತಾನಾಮಗಳುಳ್ಳವರಾದರೂ), ಪೂತನಾ ಮೊದಲಾದ ರಾಕ್ಷಸಿಯರು, ಶಾಕಿನೀ ಡಾಕಿನೀ ಗಣಗಳೂ, ಮಲಾದಿ

---

1. 'ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ।
ವಾರಾಹೀ ಚೈವ ಚೇಂದ್ರಾಣೀ ಚಾಮುಂಡಾ ಸಪ್ತಮಾತರಃ '—(ಅಮರಕೋಶ)
ಮಾತೃನಾಮಕರು ಬ್ರಾಹ್ಮೀ ಮೊದಲಾದ ಏಳು ನಾಮವುಳ್ಳವರು; ಇವು ಪ್ರಸಿದ್ಧ ಪಾರ್ವತೀ ನಾಮಗಳಾದರೂ, ತನ್ನಾಮಕರಾದ ದುಷ್ಟಜೀವರು (ದುರ್ದೇವತೆಗಳು—ದುರ್ಜನರಿಂದ ದುರಿಚ್ಛೆಗಳ ಸಾಧನೆಗಾಗಿ ಸೇವಿಸಲ್ಪಡುವವರು) ಇಲ್ಲಿ ಪ್ರಸಕ್ತರೆಂದು ತಿಳಿಯಬೇಕು; ಹಲವು ದೇವತಾನಾಮಗಳುಳ್ಳ ದೈತ್ಯರೂ ಇರುವರು.

ಶಾಕಿನಿಯರು, ಡಾಕಿನೀಗಣಾಃ-ಡಾಕಿನೀಗಣಗಳೂ, ಮಲರಕ್ತಸುರಾಪಾಃ ಚ-ಮಲ, ರಕ್ತ, ಸುರಾಪಾನಗಳೇ ಅನ್ನಪಾನಾದಿಗಳಾಗಿ ಉಳ್ಳವರು; ನಾನಾಜಾತ್ಯಾಃ-(ಇವರು) ವಿವಿಧಜಾತಿಯವರೆಂದು, ಪ್ರಕೀರ್ತಿತಾಃ-ಹೇಳಲ್ಪಡುವರು.

ಸರ್ವವರ್ಣಾಶ್ರಮಾಚಾರಾ ದೇವಾ ಯದ್ಯಪಿ ಸರ್ವಶಃ ॥ ೨೮ ॥
ತಥಾಪಿ ಪ್ರಾಯಃ ಸ್ವಾಭಾವ್ಯಾದೇತಜ್ಜಾತಯ ಈರಿತಾಃ ।
ಸರ್ವಸ್ರಷ್ಟಾ ಯತೋ ವಿಷ್ಣುಃ ನಾಸ್ಯ ಜಾತಿರ್ನಿಯಮ್ಯತೇ ॥ ೨೯ ॥
ಸ್ವಸ್ವಯೋಗ್ಯತಯಾ ಸರ್ವೈರ್ಬ್ರಹ್ಮಾದ್ಯೈಃ ಸ ಉಪಾಸ್ಯತೇ ॥ ೩೦ ॥

ಯದ್ಯಪಿ-(ದೇವತೆಗಳು ಸ್ವರೂಪದಿಂದಲೇ ಬ್ರಾಹ್ಮಣಾದಿ) ಜಾತಿಗಳಿಗೆ ಸೇರಿದವರೆಂದು ಹೇಳಿದರೂ, ಸರ್ವಶಃ-ಸಮಸ್ತ ದೇವಾಃ-ದೇವತೆಗಳೂ, ಸರ್ವವರ್ಣಾಶ್ರಮಾಚಾರಾಃ-ಎಲ್ಲ ವರ್ಣಗಳ, ಎಲ್ಲ ಆಶ್ರಮಗಳ ಆಚಾರವುಳ್ಳವರು; ತಥಾಪಿ-ಹೀಗಿದ್ದರೂ, ಪ್ರಾಯಃ ಸ್ವಾಭಾವ್ಯಾತ್-ಪ್ರಚುರಸ್ವಭಾವದಿಂದ (ಯಾವ ವರ್ಣದ ಮತ್ತು ಆಶ್ರಮದ ಆಚಾರಗಳನ್ನು ಅನುಷ್ಠಾನಮಾಡುವ ಸ್ವಭಾವವು ಅಧಿಕವಾಗಿರುವುದೋ, ಅದನ್ನು ನಿಮಿತ್ತಮಾಡಿ), ಏತಜ್ಜಾತಯಃ-ಈ ಜಾತಿಯವರೆಂದು, ಈರಿತಾಃ-ಹೇಳಲ್ಪಡುತ್ತಾರೆ; ಯತಃ-ಯಾವ ಕಾರಣದಿಂದ, ವಿಷ್ಣುಃ-ಶ್ರೀವಿಷ್ಣುವು, ಸರ್ವಸ್ರಷ್ಟಾ-ಸರ್ವನಿರ್ಮಾತನೋ, (ಸರ್ವರ ಸರ್ವ ಕ್ರಿಯೆಗಳನ್ನು ಸ್ವತಂತ್ರನಾಗಿ ತಾನೂ ಮಾಡಿ, ಜೀವರಿಂದ ಮಾಡಿಸುವನೋ), (ಆ ಕಾರಣದಿಂದ), ಅಸ್ಯ-ಈತನಿಗೆ (ಶ್ರೀವಿಷ್ಣುವಿಗೆ), ಜಾತಿಃ-ಜಾತಿಯು, ನ ನಿಯಮ್ಯತೇ- ನಿಯಮಿಸಲ್ಪಡುವುದಿಲ್ಲ (ಜಾತಿ ನಿಯಮವು ಆತನಿಗೆ ಅನ್ವಯಿಸುವುದಿಲ್ಲ); ಬ್ರಹ್ಮಾದ್ಯೈಃ-ಬ್ರಹ್ಮದೇವನೇ

---

ಅಮೇಧ್ಯವಸ್ತುಗಳನ್ನು ಆಹಾರವಾಗಿಯೂ, ರಕ್ತಸುರಾದಿಗಳನ್ನು ಪಾನೀಯವಾಗಿಯೂ ಉಳ್ಳವರಾಗಿರುವರು; ಇವರೆಲ್ಲರೂ ವಿವಿಧಜಾತಿಗಳಿಗೆ (ಕೀಳು ಜಾತಿಗಳಿಗೆ) ಸೇರಿದವರೆಂದು ಹೇಳಲ್ಪಡುತ್ತಾರೆ (೨೭). ಎಲ್ಲ ದೇವತೆಗಳೂ, ಯದ್ಯಪಿ, ಸರ್ವವರ್ಣಾಶ್ರಮಾಚಾರಗಳುಳ್ಳವರೇ; ಹೀಗಿದ್ದರೂ ಅವರ ಪ್ರಚುರಸ್ವಭಾವವು (ಯಾವ ವರ್ಣ ಮತ್ತು ಆಶ್ರಮಧರ್ಮಗಳನ್ನು, ಅವರ ಸ್ವಭಾವಧರ್ಮಗಳು, ಹೆಚ್ಚಾಗಿ ಹೊಂದಿರುವುವೋ ಅವು) ಅವರ ಜಾತಿಯನ್ನು ನಿರೂಪಿಸಲಾಗಿದೆ.[1] ಶ್ರೀವಿಷ್ಣುವು ಸರ್ವರ ಸೃಷ್ಟಿಕರ್ತನಾದ್ದರಿಂದ (ಸರ್ವಜೀವರ ಸ್ವರೂಪಧರ್ಮಗಳನ್ನು ನಿತ್ಯವಾಗಿಟ್ಟು

---

1. ಇದೇ ಅಧ್ಯಾಯದ ೪-೫ನೇ ಶ್ಲೋಕಗಳ ಅಡಿಟಿಪ್ಪಣಿಯನ್ನು ಇಲ್ಲಿ ನೋಡಿಕೊಳ್ಳುವುದು ಉಪಯುಕ್ತವಾಗುತ್ತದೆ. ದೇವತೆಗಳು ಸರ್ವವರ್ಣಾಶ್ರಮಾಚಾರವುಳ್ಳವರೆಂಬುದು ತಾತ್ತ್ವಿಕದೇವತೆಗಳಲ್ಲಿ ಹೆಚ್ಚು ಸ್ಪಷ್ಟವಾಗಿ ಕಂಡುಬರುತ್ತದೆ; ತಾತ್ತ್ವಿಕದೇವತೆಗಳು, ಎಲ್ಲ ವರ್ಣಾಶ್ರಮಾಚಾರಗಳುಳ್ಳ ಜೀವರಲ್ಲಿದ್ದು, ಆಯಾ ಕರ್ಮಗಳನ್ನು ಅವರವರಿಂದ ಮಾಡಿಸುತ್ತಾರೆ. ಆದರೂ ಸ್ವಸ್ವರೂಪದ ವೈಶಿಷ್ಟ್ಯವುಳ್ಳವರೇ ಆಗಿರುತ್ತಾರೆಂಬುದನ್ನು ಮರೆಯಲಾಗದು.

ಮೊದಲಾದ, ಸರ್ವೈಃ-ಸರ್ವರಿಂದ (ವಿವಿಧ ವರ್ಣಾಶ್ರಮಾಚಾರಗಳುಳ್ಳವರಿಂದ), ಸ್ವಸ್ವಯೋಗ್ಯತಯಾ-ಅವರವರ ಯೋಗ್ಯತೆಯಂತೆ, ಸಃ-ಶ್ರೀವಿಷ್ಣುವು, ಉಪಾಸತೇ-ಸೇವಿಸಲ್ಪಡುತ್ತಾನೆ.

**ಏವಂ ಷೋಡಶಜಾತೀಯಾ ನರಜೀವಾಃ ಪ್ರಕೀರ್ತಿತಾಃ ।**
**ಚರಾಚರಸ್ಯ ಸರ್ವಸ್ಯ ವ್ಯವಹಾರಪ್ರಸಿದ್ಧಯೇ ॥ ೩೧ ॥**
**ಜೀವನಾರ್ಥಂ ಚ ಸರ್ವೇಷಾಂ ವಿಶ್ವಕರ್ಮಾऽಭವತ್ಸ್ವಯಂ ।**
**ದೇವಾನುಪಾದಿಶಚ್ಛಿಲ್ಪಾನ್ ಯಥಾಯೋಗ್ಯತಯಾऽಖಿಲಾನ್ ॥ ೩೨ ॥**

ಏವಂ-ಹೀಗೆಯೇ (ದೇವಾದಿಗಳಲ್ಲಿರುವಂತೆಯೇ), ನರಜೀವಾಃ-ಮನುಷ್ಯ ಜೀವರೂ, ಷೋಡಶಜಾತೀಯಾಃ-೧೬ ಜಾತಿಗಳಿಗೆ ಸೇರಿದವರೆಂದು, ಪ್ರಕೀರ್ತಿತಾಃ-ಹೇಳಲ್ಪಟ್ಟಿರುವರು; ಸರ್ವಸ್ಯ-ಎಲ್ಲ ಚರಾಚರಸ್ಯ-ಜಂಗಮಸ್ಥಾವರ ಜಗತ್ತಿನ, ವ್ಯವಹಾರ ಪ್ರಸಿದ್ಧಯೇ - ಪರಸ್ಪರ ವ್ಯವಹಾರಗಳು ಸಿದ್ಧಿಸಲಿಕ್ಕೂ, ಸರ್ವೇಷಾಂ - ಸರ್ವರಿಗೆ, ಜೀವನಾರ್ಥಂ ಚ-ಜೀವನ ನಡೆಯಲಿಕ್ಕೆ ಸಹ (ಜೀವನೋಪಾಯಗಳನ್ನು ಪ್ರವರ್ತಿಸಲು ಸಹ), ಸ್ವಯಂ - ತಾನೇ (ಶ್ರೀವಿಷ್ಣುವು), ವಿಶ್ವಕರ್ಮಾ - ವಿಶ್ವಕರ್ಮನಾಮಕನಾಗಿ, ಅಭವತ್-ಅವತರಿಸಿದನು; ಯಥಾಯೋಗ್ಯತಯಾ - ಅವರವರ ಯೋಗ್ಯತೆಯಂತೆ (ಸ್ವರೂಪಯೋಗ್ಯತಾನುಗುಣವಾಗಿ), ಅಖಿಲಾನ್ ದೇವಾನ್-ಎಲ್ಲ ದೇವತೆಗಳಿಗೆ (ದೇವತೆಗಳನ್ನುದ್ದೇಶಿಸಿ), ಅಖಿಲಾನ್ ಶಿಲ್ಪಾನ್- ಸಮಸ್ತಶಿಲ್ಪಗಳನ್ನು (ವೃತ್ತಿಗಳನ್ನು), ಉಪಾದಿಶತ್-ಕಲಿಸಿದನು (ಉಪದೇಶಿಸಿದನು).

---

ಅವುಗಳ ಅಭಿವ್ಯಕ್ತಿಗೆ ಯೋಗ್ಯವಾದ ಬಾಹ್ಯದೇಹಗಳನ್ನು ಕೊಡುವವನಾದ್ದರಿಂದ, ಸರ್ವಧರ್ಮಗಳ ಸ್ವತಂತ್ರನಿಯಾಮಕನೂ ಆದ್ದರಿಂದ), ಆತನನ್ನು ಯಾವುದೊಂದು ಜಾತಿಧರ್ಮವೂ ನಿಯಮಿಸುವುದಿಲ್ಲ—ಆದ್ದರಿಂದ ಆತನಿಗೆ ಯಾವ ಜಾತಿ ನಿಯಮವೂ ಇಲ್ಲ; ಬ್ರಹ್ಮಾದಿ ದೇವತೆಗಳೆಲ್ಲರೂ, ಸ್ವಯೋಗ್ಯತೆಯಂತೆ (ಸ್ವಸ್ವರೂಪಧರ್ಮಗಳಂತೆ-ಬ್ರಾಹ್ಮಣಾದಿಗಳಿಗೆ ಉಚಿತವಾದ ಸ್ವಧರ್ಮಗಳಿಂದ) ಶ್ರೀವಿಷ್ಣುವನ್ನು ಉಪಾಸಿಸುತ್ತಾರೆ (೨೮-೩೦). ದೇವಾದಿಗಳಲ್ಲಿರುವಂತೆ, ಮನುಷ್ಯ ಜೀವರಲ್ಲಿ ಸಹ ಪೂರ್ವೋಕ್ತ ೧೬ ಜಾತಿಗಳು ಇರುತ್ತವೆ; ಸ್ಥಾವರ ಜಂಗಮಾತ್ಮಕ ಜಗತ್ತಿನ ವ್ಯವಹಾರಸಿದ್ಧಿಗಾಗಿಯೂ, ಸಕಲ ಜೀವರ ಜೀವನೋಪಾಯಮಾರ್ಗಗಳನ್ನು (ವೃತ್ತಿ-ಕಸಬುಗಳನ್ನು) ಪ್ರವರ್ತಿಸಲಿಕ್ಕಾಗಿಯೂ, ಶ್ರೀವಿಷ್ಣುವು ಸ್ವಯಂ ವಿಶ್ವಕರ್ಮನಾಗಿ ಅವತರಿಸಿದನು; ಸಮಸ್ತ ದೇವತೆಗಳಿಗೆ ಅವರವರ ಯೋಗ್ಯತಾನುಗುಣವಾದ ಶಿಲ್ಪಗಳನ್ನು ಕಲಿಸಿದನು (ವಿವಿಧ ವಿದ್ಯೆಗಳನ್ನು ಉಪದೇಶಿಸಿದನು) (೩೧-೩೨). ಅಧ್ಯಯನ, ಉಪದೇಶಾದಿ, ಮುಖಸಾಧ್ಯವಾದ ವಿದ್ಯೆಗಳನ್ನು ಬ್ರಹ್ಮದೇವನಿಗೂ, ನಾರದಾದಿಗಳಿಗೂ ವಿಶ್ವಕರ್ಮನೇ ಉಪದೇಶಿಸಿದನು; ದೇವತೆಗಳಲ್ಲಿ ಭುವನ

ಬ್ರಹ್ಮಾಣಂ ನಾರದಾದೀಂಶ್ಚ ಮುಖವಿದ್ಯಾ ಉಪಾದಿಶತ್ ।
ಭುವನೋ ನಾಮ ಯೋ ದೇವೋ ವಿಶ್ವಕರ್ಮಾಥ ತತ್ಸುತಃ ॥ ೩೩ ॥
ಪ್ರಸಿದ್ಧೋ ಯಶ್ಚ ಶಾಸ್ತ್ರೇಷು ಭೌವನಃ ಸುರವಾರ್ಧಕಿಃ ।
ವಿಶ್ವಕರ್ಮಾ ಸ್ವಯಂ ತತ್ರ ಸ್ಥಿತ್ವಾ ಲೋಕಾನ್ ವಿನಿರ್ಮಮೇ ॥ ೩೪ ॥

ಬ್ರಹ್ಮಾಣಂ-ಬ್ರಹ್ಮದೇವನಿಗೂ, ನಾರದಾದೀನ್ ಚ-ನಾರದರೇ ಮೊದಲಾದ ವರಿಗೂ (ಅವರನ್ನು ಕುರಿತು), ಮುಖವಿದ್ಯಾಃ-ಮುಖದಿಂದ ಸಾಧ್ಯವಾದ ವಿದ್ಯೆಗಳನ್ನು (ಅಧ್ಯಯನ-ಉಪದೇಶಾದಿ) ಉಪಾದಿಶತ್-ಉಪದೇಶಿಸಿದನು; ಯಃ ದೇವಃ-ಯಾವ ದೇವತೆಯು, ಭುವನಃ ನಾಮ-'ಭುವನ' ಎಂಬ ಹೆಸರುಳ್ಳವನೋ, ತತ್ಸುತಃ-ಆತನ ಮಗನು, ವಿಶ್ವಕರ್ಮಾ-ವಿಶ್ವಕರ್ಮನೆಂಬುವನು; ಅಥ-ಮತ್ತು ಯಶ್ಚ-ಯಾವ ಈ ವಿಶ್ವಕರ್ಮನು, ಶಾಸ್ತ್ರೇಷು-ವೇದಾದಿ ಶಾಸ್ತ್ರಗಳಲ್ಲಿ ಭೌವನಃ- (ಭುವನನ ಮಗ ನಾದ್ದರಿಂದ) ಭೌವನನೆಂದೂ, ಸುರವಾರ್ಧಕಿಃ-ದೇವಬಡಗಿಯೆಂದೂ (ದೇವ ಶಿಲ್ಪಿಯೆಂದೂ), ಪ್ರಸಿದ್ಧಃ-ಪ್ರಸಿದ್ಧನಾಗಿರುವನೋ, ತತ್ರ-ಆ ಭೌವನನಲ್ಲಿ ವಿಶ್ವ ಕರ್ಮಾ-ವಿಶ್ವಕರ್ಮರೂಪನಾದ ಶ್ರೀವಿಷ್ಣುವು, ಸ್ವಯಂ-ತಾನೇ, ಸ್ಥಿತ್ವಾ-ನಿಂತು (ಭೌವನನಿಗೆ ಶಕ್ತಿಪ್ರದನಾಗಿ), ಲೋಕಾನ್- ಲೋಕಗಳನ್ನು (ಅಧಿಕಾರಿ ದೇವತೆಗಳ ನಗರಾದಿಗಳನ್ನು) ವಿನಿರ್ಮಮೇ- ನಿರ್ಮಿಸಿದನು.

ಪ್ರಾಸಾದಾಂಶ್ಚ ವಿಮಾನಾನಿ ವಾಪ್ಯುದ್ಯಾನಾನ್ಯಲಂಕೃತೀಃ ।
ವಸ್ತ್ರಾದ್ಯಾದಿವಸ್ತೂನಿ ವಿಚಿತ್ರಾಣಿ ಪೃಥಕ್ ಪೃಥಕ್ ॥ ೩೫ ॥
ತತಃ ಸೃಷ್ಟಾನ್ ಮರ್ತ್ಯಲೋಕೇ ನಾನಾಜೀವಾನುಪಾದಿಶತ್ ।
ನಾನಾ ಋಷಿಗತೋ ವಿಷ್ಣುರ್ವೇದಾನ್ ಸಾಂಗಾನ್ ದ್ವಿಜಾತಿಷು ॥ ೩೬ ॥
ಸರ್ವೇಷಾಂ ಗುರವೋ ವಿಪ್ರಾ ವಿಪ್ರಾಣಾಂ ತು ಮಿಥೋಧಿಕಾಃ ।
ಆಯುರ್ವೇದಂ ಧನುರ್ವೇದಂ ಗಾಂಧರ್ವಂ ಚಾರ್ಥಶಾಸ್ತ್ರಕಂ ॥ ೩೭ ॥

---

ನೆಂಬುವನಿಗೆ ವಿಶ್ವಕರ್ಮನೆಂಬ ಮಗನಾದನು; ಈತನು (ಈ ವಿಶ್ವಕರ್ಮನು) ದೇವಶಿಲ್ಪಿಯೆಂದೂ, ಭೌವನನೆಂದೂ, ಶಾಸ್ತ್ರಗಳಲ್ಲಿ ಪ್ರಸಿದ್ಧನಾಗಿರುವನು; ಈತನಲ್ಲಿ ಸ್ವಯಂ (ಸಾಕ್ಷಾತ್) ವಿಶ್ವಕರ್ಮನಾಮಕ ಶ್ರೀವಿಷ್ಣುವೇ ನಿಂತು, ದೇವತೆಗಳ ಲೋಕಗಳನ್ನು (ಪ್ರಾಸಾದ ನಗರಾದಿಗಳನ್ನು) ನಿರ್ಮಿಸಿದನು (೩೩-೩೪). ಪ್ರಾಸಾದಗಳನ್ನೂ ವಿಮಾನಗಳನ್ನೂ ವಾಪಿ, ಉದ್ಯಾನಗಳನ್ನೂ ವಸ್ತ್ರ ವಾದ್ಯಾದಿ ವಿಚಿತ್ರಗಳಾದ ಅಲಂಕಾರವಸ್ತುಗಳನ್ನೂ ಪ್ರತಿ ವಸ್ತುವೂ ತನ್ನದೇ ಆದ ವೈಶಿಷ್ಟ್ಯಯುಕ್ತವಾಗಿರುವಂತೆ, ನಿರ್ಮಿಸಿದನು; ನಂತರ ಭೂಲೋಕದಲ್ಲಿ ಸೃಷ್ಟರಾದ ವಿವಿಧ ಜೀವರಿಗೆ (ಮನುಷ್ಯರಿಗೆ). ಬಹು ಋಷಿಗಳಲ್ಲಿ ತಾನೇ ನಿಂತು, ಬ್ರಾಹ್ಮಣಾದಿ

ಮೊದಲಾದ, ಸರ್ವೈಃ-ಸರ್ವರಿಂದ (ವಿವಿಧ ವರ್ಣಾಶ್ರಮಾಚಾರಗಳುಳ್ಳವರಿಂದ), ಸ್ವಸ್ವಯೋಗ್ಯತಯಾ-ಅವರವರ ಯೋಗ್ಯತೆಯಂತೆ, ಸಃ-ಶ್ರೀವಿಷ್ಣುವು, ಉಪಾಸತೇ-ಸೇವಿಸಲ್ಪಡುತ್ತಾನೆ.

**ಏವಂ ಷೋಡಶಜಾತೀಯಾ ನರಜೀವಾಃ ಪ್ರಕೀರ್ತಿತಾಃ ।**
**ಚರಾಚರಸ್ಯ ಸರ್ವಸ್ಯ ವ್ಯವಹಾರಪ್ರಸಿದ್ಧಯೇ ॥ ೩೧ ॥**
**ಜೀವನಾರ್ಥಂ ಚ ಸರ್ವೇಷಾಂ ವಿಶ್ವಕರ್ಮಾಽಭವತ್ಸ್ವಯಂ ।**
**ದೇವಾನುಪಾದಿಶಚ್ಛಿಲ್ಪಾನ್ ಯಥಾಯೋಗ್ಯತಯಾಽಖಿಲಾನ್ ॥ ೩೨ ॥**

ಏವಂ-ಹೀಗೆಯೇ (ದೇವಾದಿಗಳಲ್ಲಿರುವಂತೆಯೇ), ನರಜೀವಾಃ-ಮನುಷ್ಯ ಜೀವರೂ, ಷೋಡಶಜಾತೀಯಾಃ-೧೬ ಜಾತಿಗಳಿಗೆ ಸೇರಿದವರೆಂದು, ಪ್ರಕೀರ್ತಿತಾಃ-ಹೇಳಲ್ಪಟ್ಟಿರುವರು; ಸರ್ವಸ್ಯ-ಎಲ್ಲ ಚರಾಚರಸ್ಯ-ಜಂಗಮಸ್ಥಾವರ ಜಗತ್ತಿನ, ವ್ಯವಹಾರ ಪ್ರಸಿದ್ಧಯೇ - ಪರಸ್ಪರ ವ್ಯವಹಾರಗಳು ಸಿದ್ಧಿಸಲಿಕ್ಕೂ, ಸರ್ವೇಷಾಂ - ಸರ್ವರಿಗೆ, ಜೀವನಾರ್ಥಂ ಚ-ಜೀವನ ನಡೆಯಲಿಕ್ಕೆ ಸಹ (ಜೀವನೋಪಾಯಗಳನ್ನು ಪ್ರವರ್ತಿಸಲು ಸಹ), ಸ್ವಯಂ - ತಾನೇ (ಶ್ರೀವಿಷ್ಣುವು), ವಿಶ್ವಕರ್ಮಾ - ವಿಶ್ವಕರ್ಮನಾಮಕನಾಗಿ, ಅಭವತ್-ಅವತರಿಸಿದನು; ಯಥಾಯೋಗ್ಯತಯಾ - ಅವರವರ ಯೋಗ್ಯತೆಯಂತೆ (ಸ್ವರೂಪಯೋಗ್ಯತಾನುಗುಣವಾಗಿ), ಅಖಿಲಾನ್ ದೇವಾನ್-ಎಲ್ಲ ದೇವತೆಗಳಿಗೆ (ದೇವತೆಗಳನ್ನುದ್ದೇಶಿಸಿ), ಅಖಿಲಾನ್ ಶಿಲ್ಪಾನ್- ಸಮಸ್ತಶಿಲ್ಪಗಳನ್ನು (ವೃತ್ತಿಗಳನ್ನು), ಉಪಾದಿಶತ್-ಕಲಿಸಿದನು (ಉಪದೇಶಿಸಿದನು).

---

ಅವುಗಳ ಅಭಿವ್ಯಕ್ತಿಗೆ ಯೋಗ್ಯವಾದ ಬಾಹ್ಯದೇಹಗಳನ್ನು ಕೊಡುವವನಾದ್ದರಿಂದ, ಸರ್ವಧರ್ಮಗಳ ಸ್ವತಂತ್ರನಿಯಾಮಕನೂ ಆದ್ದರಿಂದ), ಆತನನ್ನು ಯಾವುದೊಂದು ಜಾತಿಧರ್ಮವೂ ನಿಯಮಿಸುವುದಿಲ್ಲ—ಆದ್ದರಿಂದ ಆತನಿಗೆ ಯಾವ ಜಾತಿ ನಿಯಮವೂ ಇಲ್ಲ; ಬ್ರಹ್ಮಾದಿ ದೇವತೆಗಳೆಲ್ಲರೂ, ಸ್ವಯೋಗ್ಯತೆಯಂತೆ (ಸ್ವಸ್ವರೂಪಧರ್ಮಗಳಂತೆ-ಬ್ರಾಹ್ಮಣಾದಿಗಳಿಗೆ ಉಚಿತವಾದ ಸ್ವಧರ್ಮಗಳಿಂದ) ಶ್ರೀವಿಷ್ಣುವನ್ನು ಉಪಾಸಿಸುತ್ತಾರೆ (೨೮-೩೦). ದೇವಾದಿಗಳಲ್ಲಿರುವಂತೆ, ಮನುಷ್ಯ ಜೀವರಲ್ಲಿ ಸಹ ಪೂರ್ವೋಕ್ತ ೧೬ ಜಾತಿಗಳು ಇರುತ್ತವೆ; ಸ್ಥಾವರ ಜಂಗಮಾತ್ಮಕ ಜಗತ್ತಿನ ವ್ಯವಹಾರಸಿದ್ಧಿಗಾಗಿಯೂ, ಸಕಲ ಜೀವರ ಜೀವನೋಪಾಯಮಾರ್ಗಗಳನ್ನು (ವೃತ್ತಿ-ಕಸಬುಗಳನ್ನು) ಪ್ರವರ್ತಿಸಲಿಕ್ಕಾಗಿಯೂ, ಶ್ರೀವಿಷ್ಣುವು ಸ್ವಯಂ ವಿಶ್ವಕರ್ಮನಾಗಿ ಅವತರಿಸಿದನು; ಸಮಸ್ತ ದೇವತೆಗಳಿಗೆ ಅವರವರ ಯೋಗ್ಯತಾನುಗುಣವಾದ ಶಿಲ್ಪಗಳನ್ನು ಕಲಿಸಿದನು (ವಿವಿಧ ವಿದ್ಯೆಗಳನ್ನು ಉಪದೇಶಿಸಿದನು) (೩೧-೩೨). ಅಧ್ಯಯನ, ಉಪದೇಶಾದಿ, ಮುಖನಾಧ್ಯವಾದ ವಿದ್ಯೆಗಳನ್ನು ಬ್ರಹ್ಮದೇವನಿಗೂ, ನಾರದಾದಿಗಳಿಗೂ ವಿಶ್ವಕರ್ಮನೇ ಉಪದೇಶಿಸಿದನು; ದೇವತೆಗಳಲ್ಲಿ ಭುವನ

ಬ್ರಹ್ಮಾಣಂ ನಾರದಾದೀಂಶ್ಚ ಮುಖವಿದ್ಯಾ ಉಪಾದಿಶತ್ ।
ಭುವನೋ ನಾಮ ಯೋ ದೇವೋ ವಿಶ್ವಕರ್ಮಾಥ ತತ್ಸುತಃ ॥ ೩೩ ॥
ಪ್ರಸಿದ್ಧೋ ಯಶ್ಚ ಶಾಸ್ತ್ರೇಷು ಭೌವನಃ ಸುರವಾರ್ಧಕಿಃ ।
ವಿಶ್ವಕರ್ಮಾ ಸ್ವಯಂ ತತ್ರ ಸ್ಥಿತ್ವಾ ಲೋಕಾನ್ ವಿನಿರ್ಮಮೇ ॥ ೩೪ ॥

ಬ್ರಹ್ಮಾಣಂ-ಬ್ರಹ್ಮದೇವನಿಗೂ, ನಾರದಾದೀನ್ ಚ-ನಾರದರೇ ಮೊದಲಾದ ವರಿಗೂ (ಅವರನ್ನು ಕುರಿತು), ಮುಖವಿದ್ಯಾಃ-ಮುಖದಿಂದ ಸಾಧ್ಯವಾದ ವಿದ್ಯೆಗಳನ್ನು (ಅಧ್ಯಯನ-ಉಪದೇಶಾದಿ) ಉಪಾದಿಶತ್-ಉಪದೇಶಿಸಿದನು; ಯಃ ದೇವಃ-ಯಾವ ದೇವತೆಯು, ಭುವನಃ ನಾಮ-'ಭುವನ' ಎಂಬ ಹೆಸರುಳ್ಳವನೋ, ತತ್ಸುತಃ-ಆತನ ಮಗನು, ವಿಶ್ವಕರ್ಮಾ-ವಿಶ್ವಕರ್ಮನೆಂಬುವನು; ಅಥ-ಮತ್ತು ಯಶ್ಚ-ಯಾವ ಈ ವಿಶ್ವಕರ್ಮನು, ಶಾಸ್ತ್ರೇಷು-ವೇದಾದಿ ಶಾಸ್ತ್ರಗಳಲ್ಲಿ ಭೌವನಃ- (ಭುವನನ ಮಗ ನಾದ್ದರಿಂದ) ಭೌವನನೆಂದೂ, ಸುರವಾರ್ಧಕಿಃ-ದೇವಬಡಗಿಯೆಂದೂ (ದೇವ ಶಿಲ್ಪಿಯೆಂದೂ), ಪ್ರಸಿದ್ಧಃ-ಪ್ರಸಿದ್ಧನಾಗಿರುವನೋ, ತತ್ರ-ಆ ಭೌವನನಲ್ಲಿ ವಿಶ್ವ ಕರ್ಮಾ-ವಿಶ್ವಕರ್ಮರೂಪನಾದ ಶ್ರೀವಿಷ್ಣುವು, ಸ್ವಯಂ-ತಾನೇ, ಸ್ಥಿತ್ವಾ-ನಿಂತು (ಭೌವನನಿಗೆ ಶಕ್ತಿಪ್ರದನಾಗಿ), ಲೋಕಾನ್- ಲೋಕಗಳನ್ನು (ಅಧಿಕಾರಿ ದೇವತೆಗಳ ನಗರಾದಿಗಳನ್ನು) ವಿನಿರ್ಮಮೇ- ನಿರ್ಮಿಸಿದನು.

ಪ್ರಾಸಾದಾಂಶ್ಚ ವಿಮಾನಾನಿ ವಾಪ್ಯುದ್ಯಾನಾನ್ಯಲಂಕೃತೀಃ ।
ವಸ್ತ್ರಾದ್ಯಾದಿವಸ್ತೂನಿ ವಿಚಿತ್ರಾಣಿ ಪೃಥಕ್ ಪೃಥಕ್ ॥ ೩೫ ॥
ತತಃ ಸೃಷ್ಟಾನ್ ಮರ್ತ್ಯಲೋಕೇ ನಾನಾಜೀವಾನುಪಾದಿಶತ್ ।
ನಾನಾ ಋಷಿಗತೋ ವಿಷ್ಣುರ್ವೇದಾನ್ ಸಾಂಗಾನ್ ದ್ವಿಜಾತಿಷು ॥ ೩೬ ॥
ಸರ್ವೇಷಾಂ ಗುರವೋ ವಿಪ್ರಾ ವಿಪ್ರಾಣಾಂ ತು ಮಿಥೋಽಧಿಕಾಃ ।
ಆಯುರ್ವೇದಂ ಧನುರ್ವೇದಂ ಗಾಂಧರ್ವಂ ಚಾರ್ಥಶಾಸ್ತ್ರಕಂ ॥ ೩೭ ॥

---

ನೆಂಬುವನಿಗೆ ವಿಶ್ವಕರ್ಮನೆಂಬ ಮಗನಾದನು; ಈತನು (ಈ ವಿಶ್ವಕರ್ಮನು) ದೇವಶಿಲ್ಪಿಯೆಂದೂ, ಭೌವನನೆಂದೂ, ಶಾಸ್ತ್ರಗಳಲ್ಲಿ ಪ್ರಸಿದ್ಧನಾಗಿರುವನು; ಈತನಲ್ಲಿ ಸ್ವಯಂ (ಸಾಕ್ಷಾತ್) ವಿಶ್ವಕರ್ಮನಾಮಕ ಶ್ರೀವಿಷ್ಣುವೇ ನಿಂತು, ದೇವತೆಗಳ ಲೋಕಗಳನ್ನು (ಪ್ರಾಸಾದ ನಗರಾದಿಗಳನ್ನು) ನಿರ್ಮಿಸಿದನು (೩೩-೩೪). ಪ್ರಾಸಾದಗಳನ್ನೂ ವಿಮಾನಗಳನ್ನೂ ವಾಪಿ, ಉದ್ಯಾನಗಳನ್ನೂ ವಸ್ತ್ರ ವಾದ್ಯಾದಿ ವಿಚಿತ್ರಗಳಾದ ಅಲಂಕಾರವಸ್ತುಗಳನ್ನೂ ಪ್ರತಿ ವಸ್ತುವೂ ತನ್ನದೇ ಆದ ವೈಶಿಷ್ಟ್ಯಯುಕ್ತವಾಗಿರುವಂತೆ, ನಿರ್ಮಿಸಿದನು; ನಂತರ ಭೂಲೋಕದಲ್ಲಿ ಸೃಷ್ಟರಾದ ವಿವಿಧ ಜೀವರಿಗೆ (ಮನುಷ್ಯರಿಗೆ), ಬಹು ಋಷಿಗಳಲ್ಲಿ ತಾನೇ ನಿಂತು, ಬ್ರಾಹ್ಮಣಾದಿ

ಪ್ರಾಸಾದಾನ್-ಪ್ರಾಸಾದಗಳನ್ನು (ಉಪ್ಪರಿಗೆ ಗೃಹಗಳನ್ನು), ವಿಮಾನಾನಿ-ವಿಮಾನಗಳನ್ನೂ (ಆಕಾಶಯಾನಗಳನ್ನೂ), ವಾಪ್ಯುದ್ಯಾನಾನಿ-ವಾಪಿಗಳು (ಹೊಕ್ಕು ತುಂಬುವ ಭಾವಿಗಳು), ಉದ್ಯಾನಗಳನ್ನೂ, ಅಲಂಕೃತೀಃ-ಅಲಂಕಾರ ವಸ್ತುಗಳಾದ, ವಸ್ತ್ರವಾದ್ಯಾದಿ ವಸ್ತೂನಿ-ವಸ್ತ್ರ ವಾದ್ಯ (ವೀಣಾದಿ) ಮೊದಲಾದ ವಸ್ತುಗಳನ್ನೂ, ಪೃಥಕ್ ಪೃಥಕ್-ಬೇರೆ ಬೇರೆಯಾಗಿ (ವಿವಿಧ ವೈಶಿಷ್ಟ್ಯಯುಕ್ತ ವಸ್ತುಗಳನ್ನು), ವಿಚಿತ್ರಾಣಿ-ಆಶ್ಚರ್ಯಕರವಾದವುಗಳನ್ನಾಗಿ (ವಿನಿರ್ಮಮೇ-ನಿರ್ಮಿಸಿದನು); ತತಃ-ನಂತರ, ಮರ್ತ್ಯಲೋಕೇ-ಮನುಷ್ಯಲೋಕದಲ್ಲಿ ಸೃಷ್ಟಾನ್-ಸೃಷ್ಟರಾದ, ನಾನಾಜೀವಾನ್-ವಿವಿಧ ಜೀವರನ್ನು (ಜೀವರಿಗೆ), ಉಪಾದಿಶತ್-ಉಪದೇಶ ಮಾಡಿದನು; (ಯಾರ್ಯಾರಿಗೆ ಏನೇನನ್ನು ಯಾರಲ್ಲಿ ನಿಂತು, ಈ ವಿಶ್ವಕರ್ಮನು ಉಪದೇಶಿಸಿದನೆಂಬು ದನ್ನು ವಿವರಿಸುತ್ತಾರೆ); ವಿಷ್ಣುಃ-ಈ ವಿಷ್ಣುವೇ, ನಾನಾಋಷಿಗತಃ-ನಾನಾ ಋಷಿ ಗಳಲ್ಲಿದ್ದವನಾಗಿ, (ಅವರ ದ್ವಾರಾ) ದ್ವಿಜಾತಿಷು-ದ್ವಿಜರಲ್ಲಿ (ಬ್ರಾಹ್ಮಣಾದಿ ತ್ರಿವರ್ಣ ರಲ್ಲಿ), ಸಾಂಗಾನ್-ಅಂಗಸಹಿತವಾದ, ವೇದಾನ್-ವೇದಗಳನ್ನು (ಉಪಾದಿಶತ್-ಉಪದೇಶಿಸಿದನು); ಸರ್ವೇಷಾಂ-ಎಲ್ಲರಿಗೆ, ವಿಪ್ರಾಃ-ಬ್ರಾಹ್ಮಣರು, ಗುರವಃ-ಉಪದೇಶಕರು (ಗುರುಗಳು), ವಿಪ್ರಾಣಾಂ ತು-ಬ್ರಾಹ್ಮಣರಿಗಾದರೋ, ಅಧಿಕಾಃ-ಉತ್ತಮರು, ಮಿಥಃ-ಪರಸ್ಪರವಾಗಿ (ಗುರುಗಳಾಗಿರುವರು); ಆಯುರ್ವೇದಂ-ಆಯುರ್ವೇದವನ್ನೂ, ಧನುರ್ವೇದಂ-ಧನುರ್ವೇದವನ್ನೂ, ಗಾಂಧರ್ವಂ-ಗಾಂಧರ್ವ ವೇದವನ್ನೂ, ಚ-ಮತ್ತು ಅರ್ಥಶಾಸ್ತ್ರಕಂ-ಅರ್ಥಶಾಸ್ತ್ರವನ್ನೂ, (ಉಪಾದಿಶತ್-ಆಯಾ ವಿದ್ಯೆಗೆ ಅರ್ಹರಾದವರಿಗೆ ಉಪದೇಶಿಸಿದನು)

**ಸತ್ಯಾಯುಷಿ ಶರೀರಸ್ಯ ನಾನಾರೋಗನಿವೃತ್ತಯೇ ।**
**ಆಯುರ್ವೇದಂ ವಿತೇನೇ ಸ ಹ್ಯಗ್ನಿವೇಶ್ಯಾದಿಭಿರ್ಭುವಿ ॥ ೩೮ ॥**

ಆಯುಷಿ-ಆಯುಷ್ಯವು, ಸತಿ-ಇರುತ್ತಿರಲು, ಶರೀರಸ್ಯ-ದೇಹದ, ನಾನಾ ರೋಗನಿವೃತ್ತಯೇ - ವಿವಿಧರೋಗಗಳ ಪರಿಹಾರಕ್ಕಾಗಿ, ಸಃ - ಶ್ರೀವಿಷ್ಣುವೇ,

---

ತ್ರಿವರ್ಣದವರಿಗೆ, ಅಂಗಸಹಿತವಾದ ವೇದಗಳನ್ನು ಉಪದೇಶಿಸಿದನು; ಬ್ರಾಹ್ಮಣರೇ ಸರ್ವರ ಗುರುಗಳು; ಬ್ರಾಹ್ಮಣರಿಗೆ, ಬ್ರಾಹ್ಮಣರೇ ಪರಸ್ಪರ, ಜ್ಞಾನಾಧಿಕರು ಗುರು ಗಳಾಗಿರುತ್ತಾರೆ; ಇದೇ ಕ್ರಮದಿಂದ, ಆಯುರ್ವೇದವನ್ನೂ ಧನುರ್ವೇದವನ್ನೂ, ಗಾಂಧರ್ವವಿದ್ಯೆ (ಸಂಗೀತಶಾಸ್ತ್ರ), ಅರ್ಥಶಾಸ್ತ್ರಾದಿಗಳನ್ನೂ ಉಪದೇಶಿಸಿದನು (೩೫-೩೭). ಆಯುಷ್ಯವಿರುತ್ತಿರಲು (ಬದುಕುವ ಯೋಗವಿರುತ್ತಿರಲು), ದೇಹಕ್ಕೆ ಬರುವ ರೋಗಗಳನ್ನು ಪರಿಹರಿಸಿಕೊಳ್ಳಲು, ಆಯುರ್ವೇದವನ್ನು ಅಗ್ನಿವೇಶ್ಯಾದಿ ಋಷಿಗಳ ದ್ವಾರಾ (ಅವರಲ್ಲಿದ್ದು) ಪ್ರಸಾರ ಮಾಡಿದನು (೩೮). ಯುದ್ಧವಿದ್ಯೆಯನ್ನು ಶಿಕ್ಷಿಸುವ ಮತ್ತು ಯುದ್ಧದ ಜಯಾಪಜಯಗಳ ನಿರ್ಣಯಗಳನ್ನು ತಿಳಿಯಲವಶ್ಯಕವಾದ

ಅಗ್ನಿವೇಶ್ಯಾದಿಭಿಃ - ಅಗ್ನಿವೇಶ್ಯಾದಿಋಷಿಗಳಿಂದ (ಋಷಿಗಳಲ್ಲಿ ತಾನೇ ನಿಂತು), ಭುವಿ-ಭೂಲೋಕದಲ್ಲಿ ಆಯುರ್ವೇದಂ-ಆಯುರ್ವೇದವನ್ನು ವಿತೇನೇ-ವಿಸ್ತರಿಸಿದನು (ಪ್ರಚಾರಮಾಡಿದನು); (ಆಯುಷ್ಯದ ಅವಧಿ ಮುಗಿದು ಮರಣೋನ್ಮುಖರಾದವರ ರೋಗಗಳನ್ನು ಆಯುರ್ವೇದದಿಂದ—ತದುಕ್ತ ಚಿಕಿತ್ಸಾಜ್ಞಾನ ಮತ್ತು ಅನುಷ್ಠಾನದಿಂದ —ಪರಿಹರಿಸಿಕೊಂಡು, ಬದುಕಲಾಗುವುದಿಲ್ಲ).

ನಾನಾಶ(ಶಾ)ಸ್ತ್ರೈರ್ಯುದ್ಧಸಿದ್ಧ್ಯೈ ಧನುರ್ವೇದಮುವಾತನೋತ್ ।
ರಾಜ್ಞಾಂ ಚ ಧನಿಕಾನಾಂ ಚ ಮನೋರಂಜನಸಿದ್ಧಯೇ ॥ ೩೯ ॥
ಗಾಂಧರ್ವಂ ವ್ಯತನೋದ್ಯತ್ರ ಗೀತಂ ವಾದ್ಯಂ ಚ ನರ್ತನಂ ।

ನಾನಾಶಸ್ತ್ರೈಃ-ವಿವಿಧವಾದ ಆಯುಧಗಳಿಂದ (ಅಥವಾ ನಾನಾಶಾಸ್ತ್ರೈಃ- ವಿವಿಧ ಗದಾದಿ ಯುದ್ಧಗಳಿಗೆ ಸಂಬಂಧಿಸಿದ ನಿಯಮಗಳನ್ನು ವಿಧಿಸುವ ಶಾಸ್ತ್ರಗಳಿಂದ), ಯುದ್ಧಸಿದ್ಧ್ಯೈ-ಯುದ್ಧದ ಸಿದ್ಧಿಯನ್ನು ದೊರಕಿಸಲು, ಧನುರ್ವೇದಂ- ಧನುರ್ವೇದವನ್ನು ಅವಾತನೋತ್-ಉಪದೇಶಿಸಿ ವಿಸ್ತರಿಸಿದನು; ರಾಜ್ಞಾಂ- ರಾಜರಿಗೂ, ಧನಿಕಾನಾಂ ಚ-ಶ್ರೀಮಂತರಿಗೂ, ಮನೋರಂಜನಸಿದ್ಧಯೇ- ಮನೋ ರಂಜನೆಯನ್ನು ದೊರಕಿಸಲಿಕ್ಕಾಗಿ, ಯತ್ರ-ಯಾವ ವಿದ್ಯೆಯಲ್ಲಿ ಗೀತಂ-ಗಾನವೂ, ವಾದ್ಯಂ-ವಾದ್ಯವೂ, ನರ್ತನಂ ಚ-ನೃತ್ಯವೂ ಸಹ (ಇರುವುವೋ), (ಆ) ಗಾಂಧರ್ವಂ- ಗಂಧರ್ವವಿದ್ಯೆಯನ್ನು ವ್ಯತನೋತ್-ವಿಸ್ತರಿಸಿದನು. (ಎಲ್ಲ ವಿದ್ಯೆಗಳೂ ಅನಾದಿ ಯಾದವುಗಳೆಂಬುದನ್ನು ಲಕ್ಷ್ಯದಲ್ಲಿಡಬೇಕು).

ಪಾಕಕ್ರಿಯಾಗಜಾಶ್ವಾದಿ ನಾನಾಕರ್ಮಪ್ರಸಿದ್ಧಯೇ ॥ ೪೦ ॥
ಲೋಕಾನಾಂ ವ್ಯವಹಾರಾಯ ನಾನಾಶಿಲ್ಪಪ್ರಸಿದ್ಧಯೇ ।
ರಾಜನೀತ್ಯೈ ದಂಡನೀತ್ಯೈ ಅರ್ಥಶಾಸ್ತ್ರಮಿಹಾತನೋತ್ ॥ ೪೧ ॥

ಪಾಕಕ್ರಿಯಾಗಜಾಶ್ವಾದಿ-ಪಾಕ (ಅಡಿಗೆ ಮಾಡುವುದು), ಗಜ, ಅಶ್ವ ಮೊದಲಾದವುಗಳ, ನಾನಾಕರ್ಮಪ್ರಸಿದ್ಧಯೇ - ಬಹುಭಿನ್ನಕರ್ಮಕುಶಲತೆಯ

---

ಧನುರ್ವೇದವನ್ನೂ ಉಪದೇಶಿಸಿ ವಿಸ್ತರಿಸಿದನು; ರಾಜರು ಮತ್ತು ಶ್ರೀಮಂತರ ಮನೋರಂಜನೆಗಾಗಿ, ವಾದ್ಯ, ಗಾನ, ನೃತ್ಯಗಳಿಂದ ಸಹಿತವಾದ ಗಾಂಧರ್ವ ವಿದ್ಯೆಯನ್ನೂ ಪ್ರಚುರಗೊಳಿಸಿದನು (೩೯). ಪಾಕಕರ್ಮ, ಗಜ, ಅಶ್ವಾದಿಗಳ ನಾನಾ ಕರ್ಮಸಿದ್ಧಿಗೂ ಲೋಕದ ಪ್ರಜೆಗಳಲ್ಲಿ ನಾನಾ ವ್ಯವಹಾರಗಳು ಸಿದ್ಧಿಸಲಿಕ್ಕೂ, ವಿವಿಧ (ಕೈಗೆಲಸಗಳ) ಕುಶಲಶಿಲ್ಪಗಳ ಪ್ರಸಾರಕ್ಕೂ, ರಾಜನೀತಿ, ದಂಡನೀತಿಗಳ ಜ್ಞಾನಾರ್ಥವಾಗಿಯೂ, ಶ್ರೀವಿಷ್ಣುವೇ ಅರ್ಥಶಾಸ್ತ್ರವನ್ನು ರಚಿಸಿ, ಪ್ರಸಾರಗೊಳಿಸಿದನು (ಋಷ್ಯಾದಿ ಜ್ಞಾನಿಗಳ ದ್ವಾರಾ ಈ ಎಲ್ಲವೂ ಸಂಭವಿಸುವುವೆಂದು

ಪ್ರಚಾರಕ್ಕಾಗಿಯೂ, ಲೋಕಾನಾಂ - ಪ್ರಜೆಗಳ, ವ್ಯವಹಾರಾಯ - ಲೌಕಿಕ(ಇಹ) ವ್ಯಾಪಾರಗಳು ಸುಗಮವಾಗಿ ನಡೆಯಲಿಕ್ಕೂ, ನಾನಾಶಿಲ್ಪಪ್ರಸಿದ್ಧ್ಯೇ-ವಿವಿಧ ಕೈಗೆಲಸಗಳು ವೃದ್ಧಿಹೊಂದಲಿಕ್ಕಾಗಿಯೂ, ರಾಜನೀತ್ಯೈ-ರಾಜರುಗಳ ನೀತಿಯನ್ನು ಶಿಕ್ಷಿಸಲಿಕ್ಕೂ, ದಂಡನೀತ್ಯೈ-(ಪ್ರಜಾರಕ್ಷಣೆಗಾಗಿ ರಾಜರು ವಿಧಿಸಬೇಕಾದ) ವಿವಿಧ ಶಿಕ್ಷೆಗಳನ್ನು ವಿಧಿಸಲಿಕ್ಕಾಗಿಯೂ, ಇಹ-ಈ ಲೋಕದಲ್ಲಿ ಅರ್ಥಶಾಸ್ತ್ರಂ- ಅರ್ಥಶಾಸ್ತ್ರವನ್ನು ಆತನೋತ್-ವಿಸ್ತರಿಸಿದನು (ರಚಿಸಿ ಉಪದೇಶದಿಂದ ವಿಸ್ತರಿಸಿದನು).

**ಬ್ರಾಹ್ಮಣಾದ್ಯಾ ಮುಖಾದಿಭ್ಯಃ ಸೃಷ್ಟಾಃ ಸತ್ಕರ್ಮಕಾರಿಣಃ ।**
**ಮಧ್ಯಂ ಸನ್ನಿಧಿಕರ್ಮೈಷಾಮಧಮಂ ವ್ಯಾವಧಾನಿಕಂ ॥ ೪೨ ॥**
**ಅನಾಪದಿ ಸ್ವಕರ್ಮೈವ ಮಧ್ಯಂ ಕರ್ಮ ತಥಾಪದಿ ।**
**ಮಹಾಪದ್ಯಧಮಂ ಪ್ರೋಕ್ತಂ ಜಾತಿಜೀವನಹೇತವೇ ॥ ೪೩ ॥**

ಸತ್ಕರ್ಮಕಾರಿಣಃ - ಸತ್ಕರ್ಮ (ಲೋಕಹಿತ ಕರ್ಮ)ಗಳಲ್ಲಿ ತೊಡಗುವ, ಬ್ರಾಹ್ಮಣಾದ್ಯಾಃ-ಬ್ರಾಹ್ಮಣಾದಿ ವರ್ಣದ ಪ್ರಜೆಗಳು, ಮುಖಾದಿಭ್ಯಃ-(ವಿರಾಟ್ ದೇಹದ) ಮುಖಾದಿ ಅಂಗಗಳಿಂದ, ಸೃಷ್ಟಾಃ-ಸೃಷ್ಟರಾದರು; ಏಷಾಂ-ಇವರಿಗೆ, ಸನ್ನಿಧಿ ಕರ್ಮ-ತಮ್ಮ ಕೆಳಗಿನ ವರ್ಣದ (ಸಮೀಪದ ಜಾತಿಯ) ಕರ್ಮವು, ಮಧ್ಯಂ-ಮಧ್ಯಮವೆನಿಸುತ್ತದೆ (ಆಚರಣಯೋಗ್ಯವಾಗುವುದು); ವ್ಯಾವಧಾನಿಕಂ-(ಎರಡನೆಯ ಜಾತಿಯ) ಒಂದನ್ನು ಬಿಟ್ಟು ಮತ್ತೊಂದರ ಕರ್ಮವು, ಅಧಮಂ-ಅಧಮವೆನಿಸುತ್ತದೆ; ಅನಾಪದಿ-(ಈ ಬ್ರಾಹ್ಮಣಾದಿಗಳಿಗೆ) ಆಪತ್ತಿಲ್ಲದಾಗ, (ಪರಿಹರಿಸಲಾಗದ ವಿರೋಧಪರಿಸ್ಥಿತಿಗಳೊದಗದಾಗ), ಸ್ವಕರ್ಮ ಏವ-(ತಮ್ಮ ವರ್ಣಕ್ಕೆ ವಿಹಿತವಾದ ಸ್ವಕರ್ಮವೂ, ತಥಾ-ಮತ್ತು ಆಪದಿ-ಆಪತ್ಕಾಲದಲ್ಲಿ ಮಧ್ಯಂ ಕರ್ಮ-ಮಧ್ಯಮ ಕರ್ಮವೂ, ಮಹಾಪದಿ-ಮಹಾಪತ್ತಿನಲ್ಲಿ (ಮಹಾಯತ್ನಗಳಿಂದ ಸಹ

---

ತಿಳಿಯಬೇಕು) (೪೦-೪೧). ವಿಧ್ಯುಕ್ತ ಸತ್ಕರ್ಮಾಚರಣೆಯುಳ್ಳವರಾದ ಬ್ರಾಹ್ಮಣಾದಿ ವರ್ಣದ ಪ್ರಜೆಗಳನ್ನು ಮುಖಾದಿ ಅಂಗಗಳಿಂದ ವೈರಾಜಪುರುಷ ಶ್ರೀವಿಷ್ಣುವು ಸೃಷ್ಟಿಮಾಡಿದನಷ್ಟೆ; ಈ ವರ್ಣದವರಿಗೆ ಸ್ವಸ್ವವರ್ಣದ ಕರ್ಮಗಳು ಉತ್ತಮವು; ಕೆಳಗಿನ ವರ್ಣದ ಕರ್ಮವು ಮಧ್ಯಮ; ಅದರ ಕೆಳಗಿನ ವರ್ಣದ ಕರ್ಮವು ಅಧಮವೆಂದೂ ತಿಳಿಯಬೇಕು; ಈ ಬ್ರಾಹ್ಮಣಾದಿ ವರ್ಣದ ಪ್ರಜರಿಗೆ, ಆಪತ್ತಿಲ್ಲದಾಗ, ಸ್ವಕರ್ಮವೂ, ಆಪತ್ತಿನಲ್ಲಿ ಮಧ್ಯಮ ಕರ್ಮವೂ, ಮಹಾಪತ್ತಿನಲ್ಲಿ ಅಧಮಕರ್ಮವೂ ಆಚರಣಯೋಗ್ಯವೆನಿಸುತ್ತದೆ; ಈ ಪರಿಸ್ಥಿತಿಗಳಲ್ಲಿ ಆಚರಿಸುವ ಮಧ್ಯಮಾಧಮ ಕರ್ಮಗಳಿಂದ, ಅವರ ಜಾತಿಯು ಉಳಿಯುತ್ತದೆ (ಅವರು ಜಾತಿಭ್ರಷ್ಟರಾಗುವುದಿಲ್ಲ) (೪೨-೪೩). ಬ್ರಾಹ್ಮಣನು ವರ್ಣದಿಂದ ಪ್ರಧಾನನು (ಶ್ರೇಷ್ಠನು); ಆತನಿಗಿಂತ ಕ್ಷತ್ರಿಯನು (ನೃಪಯೋಗ್ಯವರ್ಣದವನು) ಗುಣದಲ್ಲಿ ೧/೪ ಅಂಶನು ಮಾತ್ರ;

ಪರಿಹರಿಸಲಾಗದ ವಿರೋಧಗಳಿದ್ದಾಗ), ಅಧಮಂ-ಅಧಮ ಕರ್ಮವೂ, ಜಾತಿ ಜೀವನಹೇತವೇ-ತಮ್ಮ ಜಾತಿಯನ್ನು ಉಳಿಸಿಕೊಳ್ಳುವುದಕ್ಕೆ (ಸ್ವಜಾತಿಯನ್ನು ಬದುಕಿಸಿಕೊಳ್ಳಲು), ಪ್ರೋಕ್ತಂ-(ಆಚರಣಯೋಗ್ಯವೆಂದು) ಹೇಳಲ್ಪಡುತ್ತದೆ.

**ಮುಖ್ಯವರ್ಣೋ ಭವೇದ್ವಿಪ್ರಶ್ಚತುರ್ಥಾಂಶೋ ನೃಪಸ್ತತಃ ।**
**ವೈಶ್ಯಃ ಪಂಚಾಂಶಕೋ ಭೂಪಾದ್ವೈಶ್ಯಾಚ್ಛೂದ್ರಃ ಷಡಂಶಕಃ ॥ ೪೪ ॥**
**ಪುಮಾಧಿಕ್ಯಾದಾನುಲೋಮ್ಯಂ ಪುನ್ನೀಚತ್ವಾದ್ವಿಲೋಮತಾ ।**

ವಿಪ್ರಃ-ಬ್ರಾಹ್ಮಣನು, ಮುಖ್ಯವರ್ಣಃ-ಪ್ರಧಾನ (ಉತ್ತಮ) ವರ್ಣನು, ಭವೇತ್-ಆಗಿರುತ್ತಾನೆ; ತತಃ-ಆತನಿಂದ, ನೃಪಃ-ರಾಜನು (ಕ್ಷತ್ರಿಯನು), ಚತುರ್ಥಾಂಶಃ-೧/೪ ಅಂಶನು (ಗುಣದಲ್ಲಿ ಹೀನನು); ಭೂಪಾತ್-ರಾಜನಿಂದ, ವೈಶ್ಯಃ-ವೈಶ್ಯನು, ಪಂಚಾಂಶಕಃ-೧/೫ ಅಂಶನು; ಶೂದ್ರಃ-ಶೂದ್ರನು, ವೈಶ್ಯಾತ್-ವೈಶ್ಯನಿಂದ, ಷಡಂಶಕಃ- ೧/೬ ಅಂಶನು; ಪುಮಾಧಿಕ್ಯಾತ್-ಪುರುಷನ ಅಧಿಕ್ಯದಿಂದ (ಪುರುಷನು ಉಕ್ತನಿಯಾಮಾನುಸಾರ ಸ್ತ್ರೀಗಿಂತ ಉತ್ತಮನಾಗಿದ್ದರೆ), ಅನುಲೋಮ್ಯಂ - ಅನುಲೋಮತ್ವವೂ (ಅನುಲೋಮಜಾತಿಗೆ ಸೇರುವಿಕೆಯೂ), ಪುನ್ನೀಚತ್ವಾತ್- (ಸ್ತ್ರೀಗಿಂತ) ಪುರುಷನು ನೀಚನಾಗಿದ್ದರೆ (ಹೀನಜಾತಿಯವನಾಗುವುದರಿಂದ), ವಿಲೋಮತಾ-ಪ್ರತಿಲೋಮತ್ವವೂ (ಎಂದು ತಿಳಿಯಬೇಕು).

**ಅನುಲೋಮೀ ತ್ರಿಪಾದೋನೋ ವಿಪ್ರಾನ್ಮೂರ್ಧಾವಸಿಕ್ತಕಃ ॥ ೪೫ ॥**
**ತಸ್ಮಾನ್ಮಾತಾರ್ಧಪಾದೋನಾ ಪಿತಾ ಪಾದದ್ವಯಾಧಿಕಃ ।**
**ಮಾತೃಜಾತ್ಯನುಸಾರೇಣ ನೀಚೋಚ್ಚತ್ವಂ ತತಃಪರಂ ॥ ೪೬ ॥**
**ಏತನ್ನ್ಯಾಯೇನ ಸರ್ವತ್ರ ದ್ರಷ್ಟವ್ಯಮನುಲೋಮಿಷು । .**

ಅನುಲೋಮೀ-ಅನುಲೋಮಜಾತಿಯವನಾದ, ಮೂರ್ಧಾವಸಿಕ್ತಕಃ-ಮೂರ್ಧಾವಸಿಕ್ತನು (ಇದೇ ಅಧ್ಯಾಯದ ಶ್ಲೋಕ ೧೧ ನೋಡಿರಿ), ವಿಪ್ರಾತ್-ಬ್ರಾಹ್ಮಣನಿಂದ, ತ್ರಿಪಾದೋನಃ-೩/೪ ಅಂಶಗಳಿಂದ ಹೀನನು (ಊನನು);

---

ವೈಶ್ಯನು, ಕ್ಷತ್ರಿಯನಗಿಂತ ೧/೫ ಅಂಶನು ಮಾತ್ರ (ಅಷ್ಟು ಅಂಶಗಳಿಂದ ಹೀನನೆಂದರ್ಥ); ಶೂದ್ರನು ವೈಶ್ಯನಗಿಂತ ೧/೬ ಅಂಶ ಮಾತ್ರನು (ಶೂದ್ರನಗಿಂತ ವೈಶ್ಯನು ೬ ಗುಣಗಳಿಂದ-ಆರರಷ್ಟು ಉತ್ತಮನು, ಇತ್ಯಾದಿಯಾಗಿ ತಿಳಿಯಬೇಕು); ಈ ಗುಣ ತಾರತಮ್ಯದಂತೆ, ಪುರುಷನು ಸ್ತ್ರೀಗಿಂತ ಅಧಿಕನಾಗಿದ್ದರೆ, ಅವರಿಂದ ಜನಿಸುವ ಸಂತಾನವು ಅನುಲೋಮಜಾತಿಯದೆಂದೂ, ಪುರುಷನು ಸ್ತ್ರೀಗಿಂತ ನೀಚನಾಗಿದ್ದರೆ, ಪ್ರತಿಲೋಮಜಾತಿಯದೆಂದೂ, ತಿಳಿಯಬೇಕು (೪೪). ಅನುಲೋಮ ಪ್ರತಿಲೋಮ ಜಾತಿಗಳಲ್ಲಿ ನೀಚೋಚ್ಚತ್ವಗಳು ತಿಳಿಯುವ ಬಗೆಯನ್ನು ಸ್ಥೂಲವಾಗಿ ವಿವರಿಸುತ್ತಾರೆ:— ಮೂರ್ಧಾವಸಿಕ್ತನು (ಬ್ರಾಹ್ಮಣನಿಂದ ಹುಟ್ಟಿದ ಮೊದಲಿನ

ತಸ್ಮಾತ್-ಆ ಮೂರ್ಧಾವಸಿಕ್ತನಿಂದ, ಮಾತಾ-(ಅವನನ್ನು ಹೆತ್ತ) ತಾಯಿಯು, ಅರ್ಧಪಾದೋನಾ-೧/೨ ಅಂಶದಿಂದ ಊನಳು (ಕನಿಷ್ಠಳು); ಪಿತಾ-(ಆತನ) ತಂದೆಯು, ಪಾದದ್ವಯಾಧಿಕಃ-೨ ಅಂಶಗಳಿಂದ ಅಧಿಕನು; ತತಃಪರಂ-ಅಲ್ಲಿಂದ ಮುಂದೆ (ಮೂರ್ಧಾವಸಿಕ್ತನಿಂದ ಮುಂದಿನ ಅನುಲೋಮಿಗಳ ವಿಷಯದಲ್ಲಿ), ಮಾತೃಜಾತ್ಯನುಸಾರೇಣ-ತಾಯಿಯ ಜಾತಿಯನ್ನನುಸರಿಸಿ, ನೀಚೋಚ್ಚತ್ವಂ- ಊನಾಧಿಕ್ಯವನ್ನು ಅನುಲೋಮಿಷು-ಅನುಲೋಮಿಗಳ ವಿಷಯದಲ್ಲಿ ಏತನ್ನ್ಯಾಯೇನ-ಇದೇ ರೀತಿಯಾಗಿ (ಈ ಗಣನಾಕ್ರಮದಿಂದಲೇ), ಸರ್ವತ್ರ-ಎಲ್ಲೆಡೆಗಳಲ್ಲಿ ದ್ರಷ್ಟವ್ಯಂ-(ಗುಣತಾರತಮ್ಯವನ್ನು) ತಿಳಿಯತಕ್ಕದ್ದು.

**ಪ್ರಾತಿಲೋಮ್ಯೇ ಪಿತುರ್ಯಾವದ್ಗುಣಾ ಮಾತಾಧಿಕಾ ಭವೇತ್ ॥ ೪೬ ॥**
**ತಾವದಂಶೋ ಭವೇತ್ಪುತ್ರಃ ಪಿತುರ್ಜಾತೇರ್ನ ಸಂಶಯಃ ।**

---

ಅನುಲೋಮಜಾತಿ) ಅನುಲೋಮಿಯು; ಈತನು ಬ್ರಾಹ್ಮಣನಗಿಂತ ೩ ಅಂಶಗಳಿಂದ ಹೀನನು (ಇಲ್ಲಿ ೩೧ನೇ ಅಧ್ಯಾಯದ ೨೧-೨೩ ಶ್ಲೋಕಗಳನ್ನು ನೋಡಿರಿ); ಈತನ ತಾಯಿಯು ಅವನಿಗಿಂತ ೧/೨ ಅಂಶ ಊನಳು; ತಂದೆಯು ೨ ಅಂಶಗಳಿಂದ ಅಧಿಕನು; ಇಲ್ಲಿಂದ (ಮೂರ್ಧಾವಸಿಕ್ತನಿಂದ) ಮುಂದೆ, ಎಲ್ಲ ಅನುಲೋಮ ಜಾತಿಗಳಲ್ಲಿ ಮಾತೃಜಾತಿಯನ್ನನುಸರಿಸಿ, ಮಾತಾಪಿತೃಗಳ ನೀಚೋಚ್ಚತ್ವಗಳನ್ನು[1] ಇಲ್ಲಿ ಹೇಳಿದ ನ್ಯಾಯದಂತೆ, ನಿರ್ಧರಿಸಿ ತಿಳಿಯಬೇಕು (೪೫-೪೬). ಪ್ರತಿಲೋಮ

---

1. ೩೧ನೇ ಅಧ್ಯಾಯದಲ್ಲಿ ಅನುಲೋಮ ಪ್ರತಿಲೋಮ ಜಾತಿಗಳಲ್ಲಿ ಜನಿಸಿದ ಪುತ್ರರ ಗುಣಾಂಶಗಳನ್ನು ನಿಶ್ಚಯಿಸುವ ವಿಧಾನವನ್ನು ವರ್ಣಿಸಿದರೆ ಇಲ್ಲಿ ಅವರ ಮಾತಾಪಿತೃಗಳ ಗುಣಾಂಶಗಳ ನಿರ್ಣಯ ಪ್ರಕಾರವನ್ನು ನಿರೂಪಿಸುತ್ತಾರೆ; ಅನುಲೋಮಿಯ ತಾಯಿಯು ಉತ್ತಮಜಾತಿಯ ಪುರುಷನನ್ನು ಸೇರಿದ್ದರಿಂದ, ತನ್ನ ಮಗನಗಿಂತ ಸ್ವಲ್ಪ ಮಾತ್ರ (೧/೨ ಅಂಶದಿಂದ) ಕನಿಷ್ಠಳಾಗಿರುವಳು; ತಂದೆಯು (ಉತ್ತಮಜಾತಿಯ ಪುರುಷನು) ಮಗನಗಿಂತ ೨ ಅಂಶಗಳಿಂದ ಮಾತ್ರ ಅಧಿಕನಾಗುತ್ತಾನೆ. ಮೂರ್ಧಾವಸಿಕ್ತ ಮಗನನ್ನು ಪಡೆದ ಬ್ರಾಹ್ಮಣನು, ೨ ಅಂಶಗಳಿಂದ, ಎಂದರೆ, ಮೊದಲು ಕ್ಷತ್ರಿಯನಗಿಂತ ೪ ಅಂಶಗಳಿಂದ ಅಧಿಕನಾಗಿದ್ದು ಈಗ ಬ್ರಾಹ್ಮಣನಗಿಂತ ೩ ಅಂಶ ನ್ಯೂನನಾದ ಮಗನನ್ನು ಪಡೆದು, ಅವನಗಿಂತ ೨ ಅಂಶ ಉತ್ತಮನೆಂದರೆ, ಶುದ್ಧ ಬ್ರಾಹ್ಮಣನಗಿಂತ ೧ ಅಂಶ ಹೀನನಾಗುತ್ತಾನೆ. ಏವಂಚ, ಬ್ರಾಹ್ಮಣನು ಜಾತಿಭ್ರಷ್ಟನಾದಂತೆಯೇ ಸರಿ. ರಾಜಪುತ್ರಿ ಸುಕನ್ಯೆಯನ್ನು ಲಗ್ನವಾದ ಚ್ಯವನಋಷಿಗಳೂ, ಮಾಂಧಾತನ ಹೆಣ್ಣುಮಕ್ಕಳನ್ನು ಲಗ್ನವಾದ ಸೌಭರಿಋಷಿಗಳೂ, ಮನುಪುತ್ರಿ ದೇವಹೂತಿಯನ್ನು ಲಗ್ನವಾದ ಕರ್ದಮರೂ, ಇತ್ಯಾದಿಗಳು, ಈ ಸಾಮಾನ್ಯ ನಿಯಮಕ್ಕೆ ಅಪವಾದಗಳೆಂದು ತಿಳಿಯಬೇಕು; ಮಹಾತಪಸ್ವಿಗಳಿಗೆ ರಾಜಪುತ್ರಿಯರನ್ನು ಲಗ್ನವಾಗಿ, ಭಗವತ್ಕಾರ್ಯ ಸಾಧಕರಾಗುವುದು ಅವರ ಜಾತಿಶುದ್ಧತೆಗೆ ಹಾನಿಯನ್ನುಂಟುಮಾಡುವುದಿಲ್ಲ. ಸ್ವವರ್ಣದ ಸ್ತ್ರೀವಿವಾಹವೇ ಸರ್ವರಿಗೆ ಸರ್ವಶ್ರೇಷ್ಠವಾದುದೆಂಬುದು ಸಾಮಾನ್ಯ ನಿಯಮ.

ಪ್ರಾತಿಲೋಮ್ಯೇ-ಪ್ರತಿಲೋಮಜಾತಿಗಳ ವಿಷಯದಲ್ಲಿ ಪಿತುಃ-ತಂದೆಗಿಂತ, ಮಾತಾ-ತಾಯಿಯು, ಯಾವದ್ಗುಣಾ-ಎಷ್ಟು ಗುಣಗಳಿಂದ, ಅಧಿಕಾ-ಉತ್ತಮಳು, ಭವೇತ್-ಆಗಿರುವಳೋ, ಪುತ್ರಃ-(ಹುಟ್ಟಿದ) ಮಗನು, ಪಿತುಃ-ತಂದೆಯ, ಜಾತೇಃ-ಜಾತಿಯಿಂದ, ತಾವದಂಶಃ-ಅಷ್ಟು ಅಂಶಗಳಿಂದ (ಎಂದರೆ, ತಾಯಿಯು ೪ ಅಂಶಗಳಿಂದ ಪುರುಷನಗಿಂತ ಅಧಿಕಳಾದರೆ, ಜನಿಸಿದ ಸುತನು, ತಂದೆಗಿಂತ ೧ ಅಂಶದಿಂದ) ಅಧಿಕನು, ನ ಸಂಶಯಃ-(ಆಗುತ್ತಾನೆ) ಸಂಶಯವಿಲ್ಲ.

**ಪಿತರೌ ಜಾತಿತೋ ಭ್ರಷ್ಟೌ ದ್ವಿಪಂಚಾಂಶಾಧಿಕೌ ಸುತಾತ್ ॥ ೪೮ ॥**
**ಜಾತ್ಯಂತರಾತ್ಪುತ್ರಪಿತ್ರೋರ್ಭಾಗಕಲ್ಪನಮತ್ರ ತು ।**

ಪಿತರೌ-ತಂದೆತಾಯಿಗಳಿಬ್ಬರೂ (ಉಭಯರೂ), ಜಾತಿತಃ-(ತಂತಮ್ಮ) ಜಾತಿಯಿಂದ, ಭ್ರಷ್ಟೌ-ಭ್ರಷ್ಟರಾಗಿದ್ದವರಾದರೆ (ಪತಿತರಾಗಿದ್ದರೆ), ಸುತಾತ್-(ಜನಿಸುವ) ಮಗನಿಂದ, ದ್ವಿಪಂಚಾಂಶಾಧಿಕೌ-೧೦ ಅಂಶಗಳಿಂದ, ಉತ್ತಮರೆನಿಸುವರು; ಪುತ್ರಪಿತ್ರೋಃ-ಮಗ ತಂದೆಗಳ, ಜಾತ್ಯಂತರಾತ್-ಜಾತಿಭೇದದಿಂದ, ಅತ್ರ ತು-ಈ ವಿಷಯದಲ್ಲಿ ಆದರೂ (ಉಚ್ಚನೀಚತ್ವ ನಿರ್ಣಯದಲ್ಲಿ), ಭಾಗಕಲ್ಪನಂ-ಅಂಶಗಳನ್ನು ಗಣನೆಮಾಡಬೇಕು. (ವಿವಿಧಜಾತಿಗಳ ನೀಚೋಚ್ಚತ್ವಗಳನ್ನು ಜಾತಿಗಳ ಅಂಶತಾರತಮ್ಯಕ್ಕನುಗುಣವಾಗಿ ತಿಳಿಯಬೇಕು).

**ಏಕಸ್ಯ ನಾನಾಭಾರ್ಯತ್ವೇ ಸಮೋನಾ ಭೃತಮಾಖಿಲಾಃ ॥ ೪೯ ॥**
**ಯಥಾಯೋಗಮಥೋ ನಾತ್ರ ಪ್ರಾತಿಲೋಮ್ಯಸ್ಯ ಸಂಭವಃ ।**
**ಏಕಮಾತ್ರೇನುಲೋಮಸ್ಯ ನಾನಾಮಾತ್ರಾನುಲೋಮತಃ ॥ ೫೦ ॥**
**ನೀಚೋಚ್ಚತ್ವಂ ಯಥಾಯೋಗಂ ಏವಮೇವ ವಿಲೋಮಕೇ ।**

ಏಕಸ್ಯ - ಒಬ್ಬ ಪುರುಷನಿಗೆ, ನಾನಾಭಾರ್ಯತ್ವೇ - ಬಹುಸ್ತ್ರೀಯರಿರುವಲ್ಲಿ

---

ಜಾತಿಗಳ ವಿಷಯದಲ್ಲಿ ತಾಯಿಯು, ಪುರುಷನಗಿಂತ ಎಷ್ಟು ಗುಣ (ಅಂಶ)ದಿಂದ ಅಧಿಕಳಾಗಿರುವಳೋ, ಅಷ್ಟು ಅಂಶಗಳಲ್ಲಿ ಒಂದಂಶದಿಂದ, ಜನಿಸುವ ಪ್ರತಿಲೋಮಿಯು, ತಂದೆಗಿಂತ ಅಧಿಕನಾಗಿರುತ್ತಾನೆ (೩೧ನೇ ಅ.-ಶ್ಲೋ. ೨೧-೨೩ರ ಅಡಿಟಿಪ್ಪಣಿ ನೋಡಿ) (೪೭). ಪತಿತರಾದ ಮಾತಾಪಿತೃಗಳಿಂದ ಜನಿಸುವ ಮಗನು, ೧೦ ಅಂಶ (ಗುಣ)ಗಳಿಂದ ಹೀನನೆನಿಸುವನು; ಇಲ್ಲಿಯೂ ಸುತ-ಪಿತರಲ್ಲಿ ಮೊದಲೇ ಜಾತಿಭೇದವಿದ್ದರೆ, ಪರಸ್ಪರವಾಗಿ ಅವರ ಉಚ್ಚನೀಚತ್ವಗಳನ್ನು ಜಾತಿಗಳ ಅಂಶತಾರತಮ್ಯಗಳನ್ನನುಸರಿಸಿ, ಗಣನೆಮಾಡಿ ತಿಳಿಯಬೇಕು (೪೮). ಒಬ್ಬ ಪುರುಷನಿಗೆ ಬಹುಭಾರ್ಯರಿದ್ದಲ್ಲಿ ಪುರುಷನಿಗೆ ಜಾತ್ಯಾಸಮರೂ ಅಥವಾ ಹೀನರೂ ಆಗಿದ್ದಲ್ಲಿ ಅವರೆಲ್ಲರೂ ಏಕಪ್ರಕಾರವಾಗಿ ಆತನಿಂದ ರಕ್ಷಿತರಾಗಿರುವಾಗ, ಆ ಸ್ತ್ರೀಯರಿಂದ ಜನಿಸುವ, ಪುತ್ರರ ಉಚ್ಚನೀಚತ್ವಗಳನ್ನು ಪೂರ್ವೋಕ್ತ ಅಂಶಗಣನೆಯ

ಸಮೋನಾಃ-(ಪುರುಷನಿಂದ) ಸಮರೂ ಹೀನರೂ ಆದ ಅವರು, ಭೃತಮಾಖಿಲಾಃ-ರಕ್ಷಿಸಲ್ಪಟ್ಟ ಸ್ತ್ರೀಯರೇ (ಎಂದು ಭಾವಿಸಿ). ಯಥಾಯೋಗಂ-(ಅವರಿಂದ ಜನಿಸಿದ ಪುತ್ರರ ನೀಚೋಚ್ಚತ್ವವನ್ನು) ಯೋಗ್ಯವಾಗುವಂತೆ (ಹೇಗೆ ಯುಕ್ತವಾಗುವುದೋ ಹಾಗೆ) ತಿಳಿಯಬೇಕು; ಅಥ-ಮತ್ತೇನೆಂದರೆ, ಅತ್ರ-ಈ ಪರಿಸ್ಥಿತಿಯಲ್ಲಿ ಪ್ರಾತಿಲೋಮ್ಯಸ್ಯ-ಪ್ರತಿಲೋಮ ಜಾತಿಯ, ಸಂಭವಃ-ಉತ್ಪತ್ತಿಕಾರಣವು, ನ-(ಎಲ್ಲ ಸ್ತ್ರೀಯರು ಪುರುಷನಿಂದ ಸಮ ಅಥವಾ ಊನಜಾತಿಯವರಾದ್ದರಿಂದ) ಇಲ್ಲ; ಅನುಲೋಮಸ್ಯ-ಅನುಲೋಮಿಗೆ, ಏಕಮಾತ್ರೇ-ಒಬ್ಬ ತಾಯಿ ಇದ್ದಲ್ಲಿ, ನಾನಾಮಾತ್ರಾನುಲೋಮತಃ-ಬಹುತಾಯಂದಿರುಳ್ಳ ಅನುಲೋಮಿಯ ದೆಶೆಯಿಂದ, ನೀಚೋಚ್ಚತ್ವಂ-ಊನಾಧಿಕ್ಯವು, ಯಥಾಯೋಗಂ-ಹೇಗೆ ಯುಕ್ತವಾಗುವುದೋ, ಹಾಗೆ (ನಿಶ್ಚಯಿಸಿಕೊಳ್ಳಬೇಕು); ವಿಲೋಮಕೇ-ವಿಲೋಮಿಯ ವಿಷಯದಲ್ಲಿಯೂ (ಬಹುತಾಯಂದಿರುಳ್ಳ ವಿಲೋಮಿಯ ವಿಷಯಕ್ಕೂ), ಏವಮೇವ - ಹೀಗೆಯೇ (ಯಥಾಯೋಗಂ-ಯೋಗ್ಯವಾಗುವಂತೆ ತಿಳಿಯತಕ್ಕದ್ದು).

ತ್ರಿವಾರಂ ಮೈಥುನಂ ಸಾಂತಂ ಗರ್ಭೋತ್ಪತ್ತಿಮದುಚ್ಯತೇ ॥ ೫೧ ॥
ಪಾದೋನಂ ಸ್ಯಾತ್ ಸಕೃತ್ಸಂಗೇ ದ್ವಿವಾರೇ ಸಾರ್ಧತಾಂ ವ್ರಜೇತ್ ।
ಗರ್ಭೋತ್ಪತ್ತೌ ಭವೇದ್ಯಾವತ್ಯಾನುಲೋಮ್ಯೇ ತು ನೀಚತಾ ॥ ೫೨ ॥
ತಾವತ್ಯೇವಾತ್ರ ವಿಜ್ಞೇಯಾ ಮಾತ್ರಾಧಿಕ್ಯೇ ತಥೈವ ಹಿ ।

ಅನ್ಯಪುರುಷಸಂಗದಿಂದ ಜನಿಸುವ ಪುತ್ರರ ವಿಷಯದಲ್ಲಿ ಗುಣತಾರತಮ್ಯ ವಿಧಿಯನ್ನು ನಿರೂಪಿಸುತ್ತಾರೆ:— ತ್ರಿವಾರಂ-ಮೂರಾವರ್ತಿ, ಸಾಂತಂ-ಅಂತ್ಯದವರೆಗಿನ (ರೇತೋತ್ಸರ್ಜನಪರ್ಯಂತರ), ಮೈಥುನಂ-ಸಂಭೋಗವು, ಗರ್ಭೋತ್ಪತ್ತಿ-

---

ನಿಯಮಗಳಿಗೆ ಹೊಂದಿಕೆಯಾಗುವಂತೆ, ನಿಶ್ಚಯಿಸಿಕೊಳ್ಳಬೇಕು; ಈ ಪರಿಸ್ಥಿತಿಯಲ್ಲಿ (ಪುರುಷನಗಿಂತ ಉತ್ತಮಜಾತಿಯ ಸ್ತ್ರೀ ಇಲ್ಲದ್ದರಿಂದ), ಪ್ರತಿಲೋಮದಿಂದ ಜನಿಸುವ ಪುತ್ರರ ಪ್ರಶ್ನೆಯೇ ಇರುವುದಿಲ್ಲ—ಎಲ್ಲರೂ ಅನುಲೋಮಿಗಳೇ ಆಗಿರುವರು; ಒಬ್ಬ ಜನನಿಯುಳ್ಳ ಅನುಲೋಮಿಗೂ, ಬಹು ತಾಯಂದಿರುಳ್ಳ ಒಬ್ಬ ಅನುಲೋಮಿಗೂ, ಇರುವ ಊನಾಧಿಕ್ಯವನ್ನು ಯೋಗ್ಯ ರೀತಿಯಲ್ಲಿ ನಿರ್ಣಯಿಸಿಕೊಳ್ಳಬೇಕು—ಹೀಗೆಯೇ ಈ ವಿಧದ ವಿಲೋಮಿಗಳ ತಾರತಮ್ಯವನ್ನೂ ಯಥಾಯೋಗ್ಯವಾಗಿ ಗುರ್ತಿಸಿ ತಿಳಿಯಬೇಕು (೪೯-೫೦). ರೇತೋತ್ಸರ್ಜನದವರೆಗೆ ನಡೆಸುವ ತ್ರಿವಾರ ಸ್ತ್ರೀಸಂಭೋಗವು, ಗರ್ಭೋತ್ಪತ್ತಿಗೆ ಸಾಕಷ್ಟು ಅವಕಾಶ ಕೊಡುತ್ತದೆ; ಒಂದಾವರ್ತಿ ಮಾಡುವ ಸಂಗದಿಂದ, ಸ್ತ್ರೀಯು ಗರ್ಭಧಾರಣ ಮಾಡಿದರೆ, ಹುಟ್ಟುವ ಪುತ್ರನು, ತಂದೆಗಿಂತ ೧/೪ನೇ ಅಂಶದಿಂದ ಹೀನನಾಗುತ್ತಾನೆ; ಆರೇ ಎರಡಾವರ್ತಿ ಸಂಭೋಗದಿಂದ ಧರಿಸಲ್ಪಟ್ಟ ಗರ್ಭದಿಂದ ಹುಟ್ಟುವ ಪುತ್ರನು ೩/೪ನೇ ಅಂಶದಿಂದ

ಮತ್-ಗರ್ಭೋತ್ಪತ್ತಿಯುಳ್ಳದ್ದೆಂದು. (ಗರ್ಭೋತ್ಪತ್ತಿಯ ಕಾರಣವೆಂದು), ಉಚ್ಯತೇ-(ಶಾಸ್ತ್ರಜ್ಞರಿಂದ ಹೇಳಲ್ಪಡುತ್ತದೆ; ಸಕೃತ್ಸಂಗೇ-ಒಂದಾವರ್ತಿ ಸಂಭೋಗದಿಂದಾದರೆ (ಗರ್ಭೋತ್ಪತ್ತಿಯಾದರೆ), ಪಾದೋನಂ-೧/೪ನೇ ಭಾಗ (ಅಂಶ)ದಿಂದ, (ಹುಟ್ಟಿದ ಪುತ್ರನು), ಊನನು (ತಂದೆಗಿಂತ ಹೀನನು), ಸ್ಯಾತ್-ಆಗುತ್ತಾನೆ; ದ್ವಿವಾರೇ-ಎರಡಾವರ್ತಿ ಸಂಗದಿಂದ ಹುಟ್ಟಿದ್ದರೆ, ಸಾರ್ಧತಾಂ- ೧/೨ದಿಂದ ಸಹಿತವಾದ ಪಾದ (೩/೪ನೇ ಅಂಶದಿಂದ) ಊನತ್ವವನ್ನು ವ್ರಜೇತ್-ಹೊಂದುವನು; ಅನುಲೋಮ್ಯೇ-ಅನುಲೋಮ ಕ್ರಮದಲ್ಲಿ (ಪುರುಷನು ಉತ್ತಮನಾಗಿದ್ದಾಗ), ಗರ್ಭೋತ್ಪತ್ತೌ-ಗರ್ಭದ ಉತ್ಪತ್ತಿಯಲ್ಲಿ ಯಾವತೀ-ಯಾವ ಪ್ರಮಾಣದ, ನೀಚತಾ-ನೀಚತ್ವವು (ಸುತನಲ್ಲಿ ತಂದೆಗಿಂತ ನೀಚತ್ವವು), ಭವೇತ್-ಉಂಟಾಗುವುದೋ (ಎಷ್ಟು ಅಂಶಗಳಿಂದ ಕನಿಷ್ಠನಾಗುವನೋ), ಮಾತ್ರಾಧಿಕ್ಯೇ-ಸ್ತ್ರೀಯು ಉಚ್ಚಳಾಗಿರುವಾಗ, ಅತ್ರ-ವಿಲೋಮಕ್ರಮದಲ್ಲಿ ತಥೈವ- ಹಾಗೆಯೇ, ತಾವತೀ ಏವ-ಅಷ್ಟೇ ಅಂಶಗಳ (ತಾಯಿಗಿಂತ) ನೀಚತ್ವವು, ವಿಜ್ಞೇಯಾ-ತಿಳಿಯಲ್ಪಡತಕ್ಕದ್ದು.

ಸಕೃತ್ಸಂಗೇನ ಯತ್ರಸ್ಯಾದ್ಗರ್ಭೋ ಗರ್ಭಃ ಸ ಏವತು ॥ ೫೩ ॥
ಪ್ರಾಯಶ್ಚಿತ್ತಾದ್ಯಥಾ ಶಾಸ್ತ್ರಂ ದಂಪತ್ಯೋಃ ಶುದ್ಧಿರಿಷ್ಯತೇ ।
ತದ್ರಾಹಿತ್ಯೇ ಜಾತಿಹೈನ್ಯಂ ಜಾಯತೇ ನಾತ್ರ ಸಂಶಯಃ ॥ ೫೪ ॥

ಯತ್ರ-ಎಲ್ಲಿ (ಯಾವ ಸ್ತ್ರೀಯಲ್ಲಿ), ಸಕೃತ್ಸಂಗೇನ-(ಅಜ್ಞಾನ ಬಲಾತ್ಕಾರಾದಿ ಅವಸ್ಥೆಗಳಲ್ಲಿ) ಒಂದಾವರ್ತಿ ಭೋಗಿಸುವುದರಿಂದ, ಗರ್ಭಃ-ಗರ್ಭಧಾರಣೆಯು, ಸ್ಯಾತ್-(ಪರಪುರುಷನಿಂದ) ಸಂಭವಿಸುವುದೋ, ಸ ಏವ ಗರ್ಭಃ-ಅದೇ ಗರ್ಭವು, ದಂಪತ್ಯೋಃ-ದಂಪತಿಗಳಿಗೆ (ಪತಿಪತ್ನಿಯರಿಗೆ), ಯಥಾಶಾಸ್ತ್ರಂ- ವಿಧ್ಯುಕ್ತರೀತಿಯಿಂದ, ಪ್ರಾಯಶ್ಚಿತ್ತಾತ್-ಪ್ರಾಯಶ್ಚಿತ್ತ ಮಾಡಿಕೊಳ್ಳುವುದರಿಂದ, ಶುದ್ಧಿಃ-ಶುದ್ಧವೆಂದು, ಇಷ್ಯತೇ - ಹೇಳಲ್ಪಡುತ್ತದೆ;[1] ತದ್ರಾಹಿತ್ಯೇ - (ಪ್ರಾಯಶ್ಚಿತ್ತ) ಮಾಡಿಕೊಳ್ಳದಿದ್ದಲ್ಲಿ

ಕೀಳೆನಿಸುತ್ತಾನೆ; ಅನುಲೋಮಕ್ರಮದಲ್ಲಿ ಎಂದರೆ ಸ್ತ್ರೀಗಿಂತ ಪುರುಷನು ಉತ್ತಮಜಾತಿಯವನಾಗಿದ್ದರೆ, ಗರ್ಭೋತ್ಪತ್ತಿಯಾಗಿ ಜನಿಸುವ ಪುತ್ರನು, ತಂದೆಗಿಂತ, ಎಷ್ಟು (ಅಂಶ) ಗುಣಗಳಿಂದ ನೀಚನೆನಿಸುವನೋ, ಅಷ್ಟೇ ಅಂಶಗಳಿಂದ ತಾಯಿಗಿಂತ ನೀಚತ್ವವು ಸುತನಿಗೆ ವಿಲೋಮಕ್ರಮದಲ್ಲಿ (ಪುರುಷನು ಸ್ತ್ರೀಗಿಂತ ಉಚ್ಚಜಾತಿಯವನಾಗಿದ್ದರೆ), ಎಂದು, ತಿಳಿಯಬೇಕು (೫೧-೫೨). ನಿದ್ರಾದಿ ಅಜ್ಞಾನಾವಸ್ಥೆಯಲ್ಲಿ ಅಥವಾ ಬಲಾತ್ಕಾರಾದಿಗಳಿಂದ, ಯಾವ ಸ್ತ್ರೀಯಲ್ಲಿ ಪರಪುರುಷನಿಂದ, ಗರ್ಭಧಾರಣೆಯಾಗುವುದೋ, ಆಕೆ ಮತ್ತು ಆಕೆಯ ಗಂಡ, ಉಭಯರೂ (ದಂಪತಿಗಳು),

1. ಸ್ತ್ರೀಯು, ಪತಿಯಿಂದ ತ್ಯಾಜ್ಯಳಾಗುವುದಿಲ್ಲ—ಜನಿಸುವ ಪುತ್ರ ಜಾತಿಹೀನನಾಗುವುದಿಲ್ಲ (How generous are the caste rules !)

ಜಾತಿಹೈನ್ಯಂ-ಜಾತಿಹೀನತ್ವವು, ಜಾಯತೇ-ಉಂಟಾಗುತ್ತದೆ, ಅತ್ರ-ಈ ವಿಷಯದಲ್ಲಿ ಸಂಶಯಃ ನ-ಸಂಶಯವಿಲ್ಲ.

ಮಾತೃತಃ ಪಿತೃತೋ ವಾಪಿ ಹ್ಯೇಕಜಾತೇಸ್ತು ಸಂಕ್ರಮಃ ।
ಯತ್ರ ಜಾತೋ ಭವೇತ್ತತ್ರ ನೋಪನಾಯಾಧಿಕಾರಿತಾ ॥ ೫೫ ॥
ಅನ್ಯೇನುಲೋಮಿನಃ ಸರ್ವೇ ವೈದಿಕಾಧಿಕೃತಾ ಮತಾಃ ।
ತ ಏವ ಹಿ ದ್ವಿಜಾಸ್ತ್ವನ್ಯೇ ಏಕಜಾತಯ ಈರಿತಾಃ ॥ ೫೬ ॥
ಪ್ರತಿಲೋಮೇಷು ಸರ್ವೇಷು ವೈದಿಕಾನಧಿಕಾರಿತಾ ।

ಯತ್ರ-ಎಲ್ಲಿ (ಯಾವ ಸ್ತ್ರೀಪುರುಷರ ಸಂಗದಲ್ಲಿ), ಮಾತೃತಃ-(ಸ್ತ್ರೀ) ತಾಯಿಯಿಂದಾಗಲೀ, ಅಪಿ ವಾ-ಅಥವಾ (ಮತ್ತು), ಪಿತೃತಃ-(ಪುರುಷ) ತಂದೆಯಿಂದಾಗಲಿ, ಏಕಜಾತೇಃ-ಏಕಜಾತಿಯ (ದ್ವಿಜಾನ್ಯರ), ಸಂಕ್ರಮಃಜಾತಃ-ಯೋಗವೂ (ಮಿಶ್ರಣವು ಉಂಟಾಗಿರುವುದೋ), ತತ್ರ-ಅಲ್ಲಿ (ಜನಿಸಿದ ಪುತ್ರನಲ್ಲಿ), ಉಪನಾಯಾಧಿಕಾರಿತಾ-ಉಪನಯನ ಸಂಸ್ಕಾರಕ್ಕೆ ಅಧಿಕಾರವು, ನ-ಇರುವುದಿಲ್ಲ; ಅನ್ಯೇ-ಇತರ, ಸರ್ವೇ-ಎಲ್ಲ ಅನುಲೋಮಿನಃ-ಅನುಲೋಮಿಗಳು, ವೈದಿಕಾಧಿಕೃತಾಃ-ವೇದೋಕ್ತ ಸಂಸಾರಗಳಿಗೆ ಅಧಿಕಾರವುಳ್ಳವರೆಂದು, ಮತಾಃ-ಸಂಮತರಾಗಿದ್ದಾರೆ; ತ ಏವ-ಅವರೇ (ಬ್ರಾಹ್ಮಣಾದಿಗಳೇ), ದ್ವಿಜಾಃ-ದ್ವಿಜರು; ಅನ್ಯೇ-ಇತರರು (ದ್ವಿಜಾನ್ಯರು), ಏಕಜಾತಯಃ-ಏಕಜಾತಿಯವರೆಂದು, ಈರಿತಾಃ-ಹೇಳಲ್ಪಡುವರು; ಸರ್ವೇಷು-ಎಲ್ಲ ಪ್ರತಿಲೋಮಿಷು-ಪ್ರತಿಲೋಮಿಗಳಲ್ಲಿ ವೈದಿಕಾನಧಿಕಾರಿತಾ-ವೇದೋಕ್ತ ಕರ್ಮಗಳಿಗೆ ಅನಧಿಕಾರವೇ ಸರಿ (ಪ್ರತಿಲೋಮಿಗಳೆಲ್ಲರೂ ಅನಧಿಕಾರಿಗಳೇ).

---

ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ, ಅದೇ ಗರ್ಭವು ಶುದ್ಧವೆಂದು ಹೇಳಲ್ಪಡುತ್ತದೆ; ಹುಟ್ಟುವ ಶಿಶುವಿಗಾಗಲಿ, ದಂಪತಿಗಳಿಗಾಗಲಿ ಜಾತಿಹೀನತ್ವವು ಉಂಟಾಗುವುದಿಲ್ಲ; ಪ್ರಾಯಶ್ಚಿತ್ತವನ್ನು ಆಚರಿಸದಿದ್ದರೆ, ಜಾತಿಹೀನತ್ವವು ತಪ್ಪಿದ್ದಲ್ಲ—ಈ ವಿಷಯದಲ್ಲಿ ಸಂಶಯವಿಲ್ಲ (೫೩-೫೪). ಯಾವ ಸಂತಾನದ (ಪುತ್ರನ) ಉತ್ಪತ್ತಿಯಲ್ಲಿ ತಾಯಿಯಿಂದಾಗಲಿ ತಂದೆಯಿಂದಾಗಲಿ, ಏಕಜಾತಿಯ (ದ್ವಿಜಾನ್ಯರ) ಸಂಪರ್ಕವಿರುವುದೋ (ತಂದೆತಾಯಿಯರಲ್ಲಿ ಯಾರೊಬ್ಬರು ದ್ವಿಜರಲ್ಲದಿದ್ದರೆ), ಆ ಪುತ್ರನಿಗೆ ಉಪನಯನಾಧಿಕಾರವಿರುವುದಿಲ್ಲ (ಇದರಿಂದ ವೇದೋಕ್ತ ಕರ್ಮಗಳಲ್ಲಿ ಅಧಿಕಾರವಿಲ್ಲೆಂದೂ ಹೇಳಿದಂತಾಯಿತು); ಇತರ ಅನುಲೋಮಿಗಳೆಲ್ಲರೂ, ವೈದಿಕ ಕರ್ಮಗಳಲ್ಲಿ ಅಧಿಕಾರವುಳ್ಳವರೆಂದು ತಿಳಿಯಲ್ಪಟ್ಟಿರುವರು; ದ್ವಿಜರೆಲ್ಲರೂ ವೇದಾಧಿಕಾರಿಗಳೇ; ದ್ವಿಜರಲ್ಲದ ಅನ್ಯರು 'ಏಕಜಾತೀಯ'ರೆಂದು ಕರೆಯಲ್ಪಡುವರು; ಸಕಲ ಪ್ರತಿಲೋಮಿಗಳು ವೈದಿಕ

**ವೈಶ್ಯಾಧಿಕಾಸ್ತು ತುಲ್ಯಾ ವಾ ಸಂಸ್ಕಾರ್ಯಾಃ ಪಿತೃತಂತ್ರತಃ ॥ ೫೭ ॥**
**ಮಂತ್ರೈರವೈದಿಕೈಃ ಸಮ್ಯಗುಪನೀತ್ಯ ವಿವಾಹಿತಃ ।**
**ಉಪಾದಿಶೇದ್ಗುರುಸ್ತೇಷಾಂ ಗಾಯತ್ರೀಂ ವೈಷ್ಣವೀಂ ತ್ರಿಶಃ ॥ ೫೮ ॥**

ವೈಶ್ಯಾಧಿಕಾಃ-(ಪ್ರತಿಲೋಮಿಗಳು) ವೈಶ್ಯಾಧಿಕರಾಗಲಿ, ತುಲ್ಯಾಃ ವಾ- (ವೈಶ್ಯರ) ಸಮರಾಗಲಿ, (ಆದವರು), ಪಿತೃತಂತ್ರತಃ-ತಂದೆಗೆ ಅನ್ವಯಿಸುವ ತಂತ್ರದಿಂದ (ಸ್ಮೃತ್ಯುಕ್ತಪ್ರಕಾರದಿಂದ), ಅವೈದಿಕೈಃ-ವೇದೋಕ್ತಗಳಲ್ಲದ, ಮಂತ್ರೈಃ-ಮಂತ್ರಗಳಿಂದ, ಸಮ್ಯಕ್-ಚೆನ್ನಾಗಿ (ವಿಧಿಯಂತೆ), ಉಪನೀತ್ಯ-ಉಪನಯನ ಮಾಡಿಸಿಕೊಂಡು (ಉಪನೀತನಾದ), ವಿವಾಹಿತಃ-ವಿವಾಹಿತನು (ಆಗಬೇಕು); ತೇಷಾಂ-ಅವರಿಗೆ (ಈ ವಿಧದ ಪ್ರತಿಲೋಮಿಗಳಿಗೆ), ಗುರುಃ-(ಮಂತ್ರೋಪದೇಶಕ) ಗುರುವು, ತ್ರಿಶಃ-ಮೂರಾವರ್ತಿ, ವೈಷ್ಣವೀಂ ಗಾಯತ್ರೀಂ-ವಿಷ್ಣುಗಾಯತ್ರಿಯನ್ನು (ಪ್ರಣವರಹಿತವಾಗಿ), ಉಪಾದಿಶೇತ್-ಉಪದೇಶ ಮಾಡಬೇಕು.

**ಆರ್ಷಂ ಗೋತ್ರಂ ತು ವಿಪ್ರಾಣಾಂ ತದನ್ಯೇಷಾಂ ಗುರೋರಿವ ।**
**ಶಾಖಾಭೇದಾದ್ಗುರೋರ್ಭೇದಾದ್ಭೂಪಾದೀನಾಂ ತು ಸರ್ವಶಃ ॥ ೫೯ ॥**

ವಿಪ್ರಾಣಾಂ-ಬ್ರಾಹ್ಮಣರಿಗೆ, ಗೋತ್ರಂ-ಗೋತ್ರವು, ಆರ್ಷಂ-ಋಷಿಮೂಲಕವಾದುದು (ಮೂಲಋಷಿಗಳಿಂದ ಪರಂಪರೆಯನ್ನು ಸ್ಮರಿಸುವುದು); ತದನ್ಯೇಷಾಂ-ಇತರರಿಗೆ (ಬ್ರಾಹ್ಮಣರಲ್ಲದವರಿಗೆ), ಗುರೋಃ ಇವ-(ಅವರ) ಗುರುಗಳ ಗೋತ್ರದಂತೆ; ಭೂಪಾದೀನಾಂ-ಕ್ಷತ್ರಿಯಾದಿಗಳಿಗೆ, ಸರ್ವಶಃ-ಸಮಸ್ತರಿಗೂ, ಶಾಖಾಭೇದಾತ್-(ವೇದ) ಶಾಖೆಯ ಭೇದದಿಂದಲೂ, ಗುರೋಃ- (ಅವರ) ಗುರುವಿನ, ಭೇದಾತ್-ಭೇದದಿಂದಲೂ (ಗೋತ್ರವನ್ನು ತಿಳಿಯಬೇಕು).

---

ಕರ್ಮಗಳಿಗೆ ಅನಧಿಕಾರಿಗಳೇ ಸರಿ (೫೫-೫೬). ಕೆಲವು ಪ್ರತಿಲೋಮಿಗಳು ಗುಣಾಂಶಗಣನೆಯಲ್ಲಿ ವೈಶ್ಯರಕಿಂತ ಅಧಿಕರಾಗುವರು;[1] ಹಾಗೆ ಸಮರಾಗುವ ಅಥವಾ ಅಧಿಕರಾಗುವ ಪ್ರತಿಲೋಮಿಗಳು, ತಮ್ಮ ತಂದೆಗೆ ಅನ್ವಯಿಸುವ ಸಂಸ್ಕಾರಗಳನ್ನು, ತಂತ್ರೋಕ್ತ ಮಂತ್ರಗಳಿಂದ, ಹೊಂದಬೇಕು (ಮಾಡಿಸಿಕೊಳ್ಳಬೇಕು); ಹಾಗೆ ಅವೈದಿಕಮಂತ್ರಗಳಿಂದ ಉಪನೀತನಾಗಿ ವಿವಾಹವನ್ನೂ ಮಾಡಿಕೊಂಡ ಪ್ರತಿಲೋಮಿಗಳಿಗೆ ಮಂತ್ರೋಪದೇಶಕ ಗುರುವು, (ಪ್ರಣವರಹಿತ) ವಿಷ್ಣುಗಾಯತ್ರೀ ಮಂತ್ರವನ್ನು ಮೂರಾವರ್ತಿ ಉಪದೇಶಿಸಬೇಕು (೫೭-೫೮). ಬ್ರಾಹ್ಮಣರಿಗೆ, ಗೋತ್ರಪ್ರವರ್ತಕರೆಂದು ಪ್ರಸಿದ್ಧರಾದ, ಮೂಲಪುರುಷ ಋಷಿಯಿಂದ, ಗೋತ್ರವನ್ನು ತಿಳಿಯಬೇಕು; ಇತರರಿಗೆ ಅವರವರ ಗುರುವಿನ ಗೋತ್ರವೇ ಅವರ ಗೋತ್ರವೆಂದು

1. ೩೧ನೇ ಅಧ್ಯಾಯದ ೨೮ನೇ ಶ್ಲೋಕದ ವಿವರಣೆಯನ್ನು ನೋಡಿರಿ.

**ಸಾಪಿಂಡ್ಯಂ ಸಪ್ತಪುರುಷಂ ಸೋದಕಾ ಆಚತುರ್ದಶ ।**
**ಸಗೋತ್ರಾ ಏಕವಿಂಶಃ ಸ್ಯುಸ್ತತ ಊರ್ಧ್ವಂ ತು ಗೋತ್ರಜಾಃ ॥ ೬೦ ॥**

ಸಪ್ತಪುರುಷಂ-(ಪಿತೃ, ಪಿತಾಮಹ ಇತ್ಯಾದಿ) ಏಳು ತಲೆಯವರೆಗೆ, ಸಾಪಿಂಡ್ಯಂ-'ಸಪಿಂಡ್ಯ'ರೆಂಬ (ಬಂಧುತ್ವಭಾವವನ್ನು ತಿಳಿಯಬೇಕು); ಆಚತುರ್ದಶ-೧೪ ತಲೆಗಳವರೆಗೆ, ಸೋದಕಾಃ-'ಸಮಾನೋದಕ'ರೆಂದೂ (ಬಂಧುತ್ವವೂ), ಏಕವಿಂಶಃ-೨೧ ತಲೆಗಳವರೆಗಿನವರು, ಸಗೋತ್ರಾಃ-ಸಗೋತ್ರರೆಂದೂ, ತತಃ- ಅಲ್ಲಿಂದ, ಊರ್ಧ್ವಂ-ಮೇಲೆ (೨೨ನೇ ತಲೆಯಿಂದ ಮೇಲಿನವರು), ಗೋತ್ರಜಾಃ ತು-'ಗೋತ್ರಜ'ರು ಮಾತ್ರರೆಂದೂ, ಸ್ಯುಃ- ಆಗಿರುವರು (ತಿಳಿಯಲ್ಪಡುವರು).

**ದ್ವಾತ್ರಿಂಶೇ ಕ್ಷತ್ರಿಯಾಣಾಂ ತು ಗುರುಭೇದಃ ಪ್ರಶಸ್ಯತೇ ।**
**ವಿಶಾಂ ಪಂಚದಶೇ ಪ್ರೋಕ್ತಃ ಶೂದ್ರವರ್ಣಸ್ಯ ಚಾಷ್ಟಮೇ ॥ ೬೧ ॥**

ಕ್ಷತ್ರಿಯಾಣಾಂ ತು-ಕ್ಷತ್ರಿಯರಿಗಾದರೋ, ದ್ವಾತ್ರಿಂಶೇ-೩೨ನೇ ತಲೆಮಾರಿನಲ್ಲಿ (೩೨ ತಲೆಗಳವರೆಗಿನ ಪಿತೃಗಳ ನಂತರ), ಗುರುಭೇದಃ-ಗುರುಭೇದವು (ಬೇರೆ ಗುರುಗಳನ್ನು ಸ್ವೀಕರಿಸುವುದು), ಪ್ರಶಸ್ಯತೇ-ಪ್ರಶಸ್ತವೆನಿಸುತ್ತದೆ (ಆ ಒಳಗೆ ಬೇರೆ ಗುರುಗಳನ್ನು ಅಂಗೀಕರಿಸಕೂಡದು); ವಿಶಾಂ-ವೈಶ್ಯರಿಗೆ, ಪಂಚದಶೇ-೧೫ ತಲೆಗಳ ನಂತರವೂ, ಶೂದ್ರವರ್ಣಸ್ಯ-ಶೂದ್ರಜಾತಿಯವನಿಗೆ, ಅಷ್ಟಮೇ-೮ನೇ ತಲೆಯ ನಂತರವೂ, ಪ್ರೋಕ್ತಃ-(ಗುರುಭೇದವು) ವಿಹಿತವೆಂದು ಹೇಳಲಾಗುತ್ತದೆ.

---

ತಿಳಿಯಬೇಕು; ಕ್ಷತ್ರಿಯಾದಿ ಸಮಸ್ತರಿಗೂ, ಅವರ ವೇದಶಾಖಾಭೇದದಿಂದಲೂ, ಗುರುಗಳ ಭೇದದಿಂದಲೂ ಸಹ ಗೋತ್ರವನ್ನು ತಿಳಿಯಬೇಕು (೫೯). ಪಿತೃ, ಪಿತಾಮಹ (ತಂದೆ, ತಾತ) ಇತ್ಯಾದಿ ಗಂಡುಸಂತತಿಯಲ್ಲಿ ೭ ತಲೆಯವರೆಗೆ 'ಸಪಿಂಡ'ರೆನಿಸುವರು; ೧೪ ತಲೆಗಳವರೆಗೆ 'ಸಮಾನೋದಕ'ರೆಂದೂ, ೨೧ ತಲೆಗಳವರೆಗೆ 'ಸಗೋತ್ರ'ರೆಂದೂ, ಅಲ್ಲಿಂದ ಮೇಲಿನವರಾದ ವಂಶದ ಮೂಲಪುರುಷರು, 'ಗೋತ್ರಜ'ರೆಂದೂ ತಿಳಿಯತಕ್ಕದ್ದು (೬೦). ಕ್ಷತ್ರಿಯರು ೩೨ ತಲೆಗಳವರೆಗಿನ ಪಿತೃಗಳ ನಂತರ ಅಲ್ಲಿಂದ ತಮ್ಮ ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದ ಗುರುಗಳನ್ನು (ಗುರುಸಂತತಿಯಲ್ಲಿ ಬಂದ ತಮ್ಮ ಕುಲಗುರುವನ್ನು) ಬಿಟ್ಟು ಬೇರೆ ಗುರುವನ್ನು ಸ್ವೀಕರಿಸಬಹುದು; ಅದು ಪ್ರಶಸ್ತವೆನಿಸುತ್ತದೆ—ಆ ಮಧ್ಯಕಾಲದಲ್ಲಿ ಅನ್ಯಗುರುವನ್ನು ಅಂಗೀಕರಿಸಕೂಡದು; ಹೀಗೆಯೇ, ವೈಶ್ಯನಿಗೆ, ೧೫ನೇ ತಲೆಯ ನಂತರವೂ, ಶೂದ್ರನಿಗೆ ೮ನೇ ತಲೆಯ ನಂತರವೂ, ಕುಲಗುರುವನ್ನು ತ್ಯಜಿಸಿ, ಅನ್ಯಗುರುವನ್ನು ಸ್ವೀಕರಿಸುವುದು ಯೋಗ್ಯವಾಗುತ್ತದೆಂದು ಹೇಳಲಾಗುತ್ತದೆ (೬೧). ಬ್ರಾಹ್ಮಣನಿಗೆ ಅನ್ಯಗುರು

**ವಿಪ್ರಸ್ಯ ಗುರುಭೇದೇಪಿ ಶಾಖಾಗೋತ್ರಾಭಿದಾ ನ ಹಿ ।**
**ಅನುಲೋಮವಿಲೋಮೇಷು ಪಿತುರ್ಗುರುರ್ಗುರುರ್ಭವೇತ್ ॥ ೬೨ ॥**

ವಿಪ್ರಸ್ಯ-ಬ್ರಾಹ್ಮಣನಿಗೆ, ಗುರುಭೇದೇ ಅಪಿ-ಗುರುಭೇದವಿದ್ದಾಗ್ಯೂ (ಅನ್ಯ ಗುರು ಸ್ವೀಕಾರದಲ್ಲಿ ಕ್ಷತ್ರಿಯಾದಿಗಳಿಗೆ ಅನ್ವಯಿಸುವ ನಿಯಮಗಳು ಅನ್ವಯಿಸದಿದ್ದರೂ), ಶಾಖಾಗೋತ್ರಾಭಿದಾ-(ಅನ್ಯಗುರುವನ್ನು ಸ್ವೀಕರಿಸಿದರೂ) (ವೇದ) ಶಾಖಾ ಮತ್ತು ಗೋತ್ರಗಳ ಭೇದವು, ನ ಹಿ-(ಯಾವ ಕಾರಣದಿಂದಲೂ) ಇಲ್ಲವೇ ಇಲ್ಲ (ಪಿತೃಗಳ-ತಲೆಮಾರುಗಳ, ಸಂಖ್ಯಾಗಣನೆಯಿಲ್ಲದೇ ಎಲ್ಲ ಕಾಲಕ್ಕೂ ಏಕ ಪ್ರಕಾರವಾಗಿ ಉಳಿಯುತ್ತವೆ); ಅನುಲೋಮ ವಿಲೋಮೇಷು-ಅನುಲೋಮ ಪ್ರತಿಲೋಮ ಜಾತಿಗಳಲ್ಲಿ, ಪಿತುಃ-ತಂದೆಯ, ಗುರುಃ-ಗುರುವು, ಗುರುಃ-(ತನಗೆ) ಗುರುವು, ಭವೇತ್-ಆಗುತ್ತಾನೆ.

**ವಧ್ವಾರ್ವರಸ್ಯ ವಾ ತಾತಃ ಕೂಟಸ್ಥಾದ್ಯದಿ ಸಪ್ತಮಃ ।**
**ಪಂಚಮೀ ಚೇತಯೋರ್ಮಾತಾ ತತ್ಸಾಪಿಂಡ್ಯಂ ನಿವರ್ತತೇ ॥ ೬೩ ॥**

ವಧ್ವಾಃ-ವಧುವಿನ, ವಾ-ಅಥವಾ, ವರಸ್ಯ-ವರನ, ತಾತಃ-ತಂದೆಯು, ಕೂಟಸ್ಥಾತ್-ಮೂಲಪುರುಷನಿಂದ, ಯದಿಸಪ್ತಮಃ-ಏಳನೆಯವನಾಗಿದ್ದರೆ (೭ನೇ ತಲೆಯವನಾಗಿದ್ದರೆ), ಚ-ಮತ್ತು ಏತಯೋಃ-ಇವರುಗಳ (ಕನ್ಯಾವರರ),

---

ಸ್ವೀಕಾರದಲ್ಲಿ ಅವಕಾಶವಿದ್ದರೂ,[1] ಆತನ ಶಾಖಾಗೋತ್ರಗಳು ಮಾತ್ರ ಎಂದೂ ಭಿನ್ನವಾಗುವುದಿಲ್ಲ; ಅನುಲೋಮ ಪ್ರತಿಲೋಮ ಜಾತಿಗಳಲ್ಲಿ, ತಂತಮ್ಮ ತಂದೆಯ ಗುರುವೇ ತಮ್ಮ ಗುರುವಾಗುತ್ತಾನೆ (೬೨). ಕನ್ಯೆಯ ಅಥವಾ ವರನ (ವಿವಾಹವಾಗತಕ್ಕ ಸ್ತ್ರೀ ಅಥವಾ ಪುರುಷನ) ತಂದೆಯು, ಮೂಲಪುರುಷನಿಂದ ಏಳನೆ (ತಲೆ)ಯವ

1. ಒಬ್ಬನೇ ಗುರುವು ನಿರ್ದಿಷ್ಟ ತಲೆಮಾರುಗಳವರೆಗೆ ಕುಲದವರಿಗೆಲ್ಲ ಗುರುವಾಗಿರಬೇಕೆಂಬ (ಎಂದರೆ ಆ ಮಧ್ಯೆ ಅನ್ಯಗುರುವನ್ನು ಆ ವಂಶದವರು ಅಂಗೀಕರಿಸಕೂಡದೆಂಬ) ನಿಯಮವು ಬ್ರಾಹ್ಮಣನಿಗಿಲ್ಲ. ಬ್ರಹ್ಮಸೂತ್ರಗಳ ೩ನೇ ಅಧ್ಯಾಯದ ೩ನೇ ಉಪಾಸನಾ ಪಾದದಲ್ಲಿ ೨೮ನೇ ವಿಕಲ್ಪಾಧಿಕರಣದಲ್ಲಿ "ಪೂರ್ಣಾನುಗ್ರಹ ಮಾಡಲು ಸಿದ್ಧನಾದ ಅನ್ಯ ಗುರುವು ಲಭಿಸಿದಾಗ, ಶಿಷ್ಯನು, ಆ ಹೊಸ ಗುರುವು, ಪೂರ್ವದ ಗುರುವಿನ ಸಮನಾಗಿದ್ದರೆ, ತನ್ನ ಇಚ್ಛಾನುಸಾರ ಸ್ವೀಕರಿಸಬಹುದು ಅಥವಾ ಬಿಡಬಹುದು; ಉತ್ತಮ ಗುರುವು ಪ್ರಾಪ್ತನಾದಾಗ, ಹಿಂದಿನ ಗುರುವನ್ನು ಬಿಟ್ಟು ಹೊಸ ಗುರುವನ್ನು ಸ್ವೀಕರಿಸಬಹುದು; ಉತ್ತಮ ಗುರುವನ್ನು ಸ್ವೀಕರಿಸುವಲ್ಲಿ ಹಿಂದಿನ ಗುರುವಿನ ಅನುಮತಿಯು (ವೇದವಿಹಿತವಾಗಿ) ಸಿದ್ಧವೇ ಇರುತ್ತದೆ." ಇತ್ಯಾದಿ ನಿರೂಪಿಸಲಾಗಿರುವ ನಿರ್ಣಯಗಳು, ವೇದಾಧಿಕಾರಿಗಳಲ್ಲಿ ಉತ್ತಮರಾದ ವಿಪ್ರರಿಗೆ ವಿಶೇಷವಾಗಿ ಅನ್ವಯಿಸುತ್ತವೆ. ಆದ್ದರಿಂದ ಅವರಿಗೆ ಗುರುಭೇದದಲ್ಲಿ ಈ ತಲೆಮಾರುಗಳ ನಿರ್ಬಂಧವಿಲ್ಲ. ಆದರೆ, ಶಿಷ್ಯನ ಶಾಖಾ (ವೇದಶಾಖೆ) ಮತ್ತು ಗೋತ್ರಗಳು ವ್ಯತ್ಯಾಸವಾಗುವುದಿಲ್ಲ.

ಮಾತಾ-ತಾಯಿಯು, (ಯದಿ) ಪಂಚಮೀ-ಐದನೇ ತಲೆಯಾದರೆ, (ಈ ತಲೆಮಾರು ಗಳಲ್ಲಿ ಅವರ ಮೂಲಪುರುಷನಿಲ್ಲದಿದ್ದರೆ), ತತ್ಸಾಪಿಂಡ್ಯಂ-ಅವರ ಸಪಿಂಡರೆಂಬ ಬಂಧುತ್ವವು[1] ನಿವರ್ತತೇ-ತಪ್ಪಿಹೋಗುತ್ತದೆ (ವಿವಾಹಯೋಗ್ಯರಾಗುವರೆಂದರ್ಥ).

**ಭಿನ್ನಗೋತ್ರೇಽಪಿ ಸಾಪಿಂಡ್ಯಂ ವಿಪ್ರಾಣಾಮೇವಮೀರಿತಂ ।**
**ಜಾತೀನಾಂ ಇತರಾನಾಂ ತು ಸಾಪಿಂಡ್ಯಂ ಸ್ಯಾತ್ತ್ರಿಪೌರುಷಂ ॥ ೬೪ ॥**

ಭಿನ್ನಗೋತ್ರೇಽಪಿ-ಭಿನ್ನಗೋತ್ರದವರಾದರೂ (ಭಿನ್ನಗೋತ್ರವಿದ್ದರೂ ಸಹ), ಸಾಪಿಂಡ್ಯಂ-ಸಪಿಂಡಭಾವವು, ವಿಪ್ರಾಣಾಂ-ಬ್ರಾಹ್ಮಣರಿಗೆ, ಏವಂ-ಹೀಗೆ, ಈರಿತಂ-ಹೇಳಲ್ಪಡುತ್ತದೆ (ಅನ್ಯಜಾತಿಯವರಿಗೆ, ಹೀಗಿಲ್ಲ); ಇತರಾನಾಂ-ಇತರ, ಜಾತೀನಾಂ ತು-ಜಾತಿಗಳಿಗಾದರೋ, ಸಾಪಿಂಡ್ಯಂ-ಸಪಿಂಡತ್ವ ಭಾವವು, ತ್ರಿಪೌರುಷಂ-(ಗಂಡುಸಂತತಿಯಲ್ಲಿ) ಮೂರುತಲೆಗಳವರೆಗೆ ಮಾತ್ರ, ಸ್ಯಾತ್-ಆಗುತ್ತದೆ (೭ ತಲೆಯವರೆಗೆ ಅಲ್ಲ).

**ಅಸಗೋತ್ರಾಮಸಪಿಂಡಾಮುದ್ವಹೇದಿಚ್ಛಯಾ ಸ್ತ್ರಿಯಂ ।**
**ಬ್ರಾಹ್ಮೋ ದೈವಸ್ತಥೈವಾರ್ಷಂ ಪ್ರಾಜಾಪತ್ಯಸ್ತಥೋಽಸುರಃ ॥ ೬೫ ॥**
**ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ।**

ಅಸಗೋತ್ರಾಂ-ಸಮಾನಗೋತ್ರಳಲ್ಲದ, ಅಸಪಿಂಡಾಂ-ಸಪಿಂಡಳಲ್ಲದ, ಸ್ತ್ರಿಯಂ-ಸ್ತ್ರೀಯನ್ನು ಇಚ್ಛಯಾ-ಇಚ್ಛಾನುಸಾರ, ಉದ್ವಹೇತ್-ವಿವಾಹಮಾಡಿಕೊಳ್ಳ ಬಹುದು; ಬ್ರಾಹ್ಮಃ-ಬ್ರಾಹ್ಮವು, ದೈವಃ-ದೈವವು, ತಥಾ ಏವ-ಹಾಗೂ, ಆರ್ಷಂ-ಆರ್ಷವೂ (ಋಷಿ ವಿಧವೂ), ಪ್ರಾಜಾಪತ್ಯಃ-ಪ್ರಾಜಾಪತ್ಯವು, ತಥಾ-ಮತ್ತು ಅಸುರಃ-ಅಸುರವು, ಗಾಂಧರ್ವಃ-ಗಾಂಧರ್ವವು, ರಾಕ್ಷಸಃ- ರಾಕ್ಷಸವು (ಎಂದು

---

ನಾಗಿದ್ದರೆ, ಅಥವಾ (ಮತ್ತು), ಇವರ (ಕನ್ಯಾವರರ) ತಾಯಿಯು, ಐದನೆಯವ ಳಾಗಿದ್ದರೆ (ಮೂಲಪುರುಷನು ಐದನೇ ತಲೆಯವನಾಗಿದ್ದರೆ) ಅಥವಾ ಮೂಲಪುರುಷ ನಿಂದ ಐದನೆಯ ತಲೆಯವಳಾಗಿದ್ದರೆ, ಸಾಪಿಂಡ್ಯರೂಪದ ಬಂಧುತ್ವವು ತಪ್ಪುತ್ತದೆಂದು ತಿಳಿಯಬೇಕು (೬೩). ಭಿನ್ನಗೋತ್ರದವರಾದರೂ, ಸಪಿಂಡರಾಗಿರಬಹುದೆಂಬ ನಿಯಮವು, ಬ್ರಾಹ್ಮಣರಿಗೆ ಮಾತ್ರ ಅನ್ವಯಿಸುತ್ತದೆ; ಅನ್ಯಜಾತಿಯವರಿಗೆ, ಸಾಪಿಂಡ್ಯವು (ಗಂಡುಸಂತತಿಯ) ಮೂರು ತಲೆಯವರೆಗೆ ಮಾತ್ರ, ಆಗಿರುತ್ತದೆ (೬೪). ಸಮಾನಗೋತ್ರಳಲ್ಲದ (ಸ್ವಗೋತ್ರಕ್ಕೆ ಸೇರದ), ಸಪಿಂಡಳಲ್ಲದ ಸ್ತ್ರೀಯನ್ನು ಪುರುಷನು, ತನ್ನ ಇಚ್ಛಾನುಸಾರ ವಿವಾಹ ಮಾಡಿಕೊಳ್ಳಬಹುದು; ವಿವಾಹವು ಎಂಟು

---

1. ಇದೇ ಅಧ್ಯಾಯದ ೬೦ನೇ ಶ್ಲೋಕದಲ್ಲಿ ಸಪಿಂಡ ಮೊದಲಾದ ಬಂಧುತ್ವಗಳ ವಿವರಣೆ ಇದೆ.

ವಿವಾಹಗಳು ಬಹುವಿಧವಾಗಿವೆ): ಪೈಶಾಚಶ್ಚ-ಪೈಶಾಚವೆಂದೂ, ಅಧಮಃ-ಕನಿಷ್ಠವಾದ, ಅಷ್ಟಮಃ-ಎಂಟನೆಯ ವಿಧವಾದುದೂ (ಇರುತ್ತದೆ).

ಬ್ರಾಹ್ಮೋ ವಿವಾಹ ಆಹೂಯ ದೀಯತೇ ಶಕ್ತ್ಯಲಂಕೃತಾ ॥ ೬೬ ॥
ದೈವೋ ವಿವಾಹಃ ಕನ್ಯಾಯಾ ಋತ್ವಿಜೇ ದಾನಮುಚ್ಯತೇ ।
ಆರ್ಷೋ ಗೋಮಿಥುನೇ ದತ್ತೇ ಕನ್ಯಾದಾನಂ ಯದಾ ತದಾ ॥ ೬೭ ॥
ಪ್ರಾಜಾಪತ್ಯಃ ಸಹ ಧರ್ಮಂ ಚರೇತಾಮಿತಿ ದಾನತಃ ।
ಆಸುರೋ ದ್ರವಿಣಾದಾನಾದ್ಗಾಂಧರ್ವಃ ಸಮಯಾನ್ಮಿಥಃ ॥ ೬೮ ॥
ರಾಕ್ಷಸೋ ಯುದ್ಧಹರಣಾತ್ಪೈಶಾಚಃ ಕನ್ಯಕಾ ಛಲಾತ್ ।

ಆಹೂಯ - (ವರನನ್ನು) ಆಹ್ವಾನಿಸಿ, ಶಕ್ತ್ಯಲಂಕೃತಾ - ಶಕ್ತ್ಯಾನುಸಾರ (ವಸ್ತ್ರಾಭರಣಗಳಿಂದ) ಅಲಂಕೃತಳಾದ ಕನ್ಯೆಯು, ದೀಯತೇ-ದಾನಮಾಡಲ್ಪಡುವುದು, ಬ್ರಾಹ್ಮಃ ವಿವಾಹಃ-ಬ್ರಾಹ್ಮವಿಧಾನದ ವಿವಾಹವೆನಿಸುತ್ತದೆ; ಋತ್ವಿಜೇ- ಋತ್ವಿಜನಿಗೆ, ಕನ್ಯಾಯಾಃ-ಕನ್ಯೆಯ, ದಾನಂ-ದಾನವು, ದೈವಃ ವಿವಾಹಃ- ದೈವವಿವಾಹವೆಂದು, ಉಚ್ಯತೇ-ಹೇಳಲ್ಪಡುತ್ತದೆ; ಯದಾ-ಯಾವಾಗ, ಗೋಮಿಥುನೇ-ಎರಡು ಗೋವುಗಳು (ಒಂದು ಹಸು, ಒಂದು ವೃಷಭ), ದತ್ತೇ (ಸತಿ)-(ವರನಿಂದ) ಕೊಡಲ್ಪಡುತ್ತಿರಲಾಗಿ, ಕನ್ಯಾದಾನಂ-ಕನ್ಯೆಯು ಕೊಡಲ್ಪಡುವಳೋ (ಕನ್ಯಾದಾನವೋ), ತದಾ-ಆಗ, ಆರ್ಷಃ-(ಆ ವಿವಾಹವು) ಆರ್ಷವು; ದಾನತಃ- (ಕನ್ಯೆಯನ್ನು) ದಾನಮಾಡುವುದರಿಂದ, ಸಹಧರ್ಮಂ-(ದಂಪತಿಗಳು ಕೂಡಿ) ಧರ್ಮಗಳನ್ನು, ಚರೇತಾಂ-ಆಚರಿಸಲಿ, ಇತಿ-ಎಂದು (ಸಂಕಲ್ಪಿಸುವುದು), ಪ್ರಾಜಾಪತ್ಯಃ-ಪ್ರಾಜಾಪತ್ಯ (ವಿವಾಹವು); ದ್ರವಿಣಾದಾನಾತ್-ದ್ರವ್ಯವನ್ನು ತೆಗೆದುಕೊಂಡು (ಕನ್ಯೆಯನ್ನು ಕೊಡುವುದು), ಆಸುರಃ-ಆಸುರವಿವಾಹವು; ಮಿಥಃ-(ಕನ್ಯಾವರರು)

---

ವಿಧವಾಗಿರುತ್ತದೆ; ಅವು ಯಾವುವೆಂದರೆ:—ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಅಧಮವಾದ, ಪೈಶಾಚವೆಂಬ ಎಂಟನೆಯದು (೬೫). ವರನನ್ನು ಆಹ್ವಾನಿಸಿ, ಶಕ್ತಿಗನುಗುಣವಾಗಿ ವಸ್ತ್ರಾಭರಣಗಳಿಂದ ಅಲಂಕರಿಸಿ, ಸಾಲಂಕೃತ ಕನ್ಯಾದಾನಮಾಡುವುದು, ಬ್ರಾಹ್ಮವಿವಾಹವು; ಋತ್ವಿಜನಿಗೆ (ಯಜ್ಞಕರ್ಮಗಳಲ್ಲಿ ತೊಡಗುವ ವಿಪ್ರನಿಗೆ) ಕನ್ಯಾದಾನಮಾಡುವುದು, ದೈವ ವಿವಾಹವು; ಗೋಮಿಥುನವನ್ನು ಪಡೆದು (ಗೋಧನರಾದ ಋಷಿಗಳಲ್ಲೊಬ್ಬನಿಗೆ) ಕನ್ಯೆಯನ್ನು ದಾನಮಾಡುವುದು, ಆರ್ಷವಿವಾಹವು; ಸಹಧರ್ಮಿಣಿಯಾಗಿ ಪತಿಯೊಂದಿಗೆ ವಾಸಿಸಲೆಂದು ಕನ್ಯೆಯನ್ನು ದಾನಮಾಡುವುದು, ಪ್ರಾಜಾಪತ್ಯವು; ದ್ರವ್ಯವನ್ನು ಪಡೆದು ಕನ್ಯೆಯನ್ನು ಕೊಡುವುದು, ಆಸುರವು; ಪರಸ್ಪರವಾಗಿ ದಂಪತಿಗಳಾಗಿ ಬಾಳುವ ಪ್ರತಿಜ್ಞೆ ಮಾಡಿ, ಕನ್ಯಾವರರೇ ಒಪ್ಪಿ ಲಗ್ನವಾಗುವುದು ಗಾಂಧರ್ವವಿವಾಹವು; ಯುದ್ಧಮಾಡಿ,

ಪರಸ್ಪರವಾಗಿ, ಸಮಯಾತ್-ಪ್ರತಿಜ್ಞೆಮಾಡಿ ದಂಪತಿಗಳಾದರೆ, ಗಾಂಧರ್ವಃ-ಗಾಂಧರ್ವವಿವಾಹವೆನಿಸುವುದು; ಯುದ್ಧಹರಣಾತ್-ಯುದ್ಧದಲ್ಲಿ ಕನ್ಯೆಯನ್ನು ಅಪಹರಿಸಿಕೊಂಡುಬರುವುದು, ರಾಕ್ಷಸವಿವಾಹವು; ಕನ್ಯಾಛಲಾತ್-ಕನ್ಯೆಯ ಮೇಲಿನ ಛಲದಿಂದ (ಆ ಸ್ತ್ರೀಯನ್ನೇ ಸಾಧಿಸುವ ಹಠದಿಂದ) ವಿವಾಹವಾದರೆ, ಪೈಶಾಚಃ-ಪೈಶಾಚವಿವಾಹವೆನಿಸುತ್ತದೆ.

ಧರ್ಮಾಶ್ಚತ್ವಾರ ಆದ್ಯಾಸ್ಸ್ಯುರ್ಬ್ರಾಹ್ಮಣಸ್ಯ ತ ಏವ ಹಿ ॥ ೧೯ ॥
ರಾಕ್ಷಸೋಽಪಿ ಕ್ಷತ್ರಿಯಸ್ಯ ತ್ರಯೋಽನ್ಯೇಽನ್ಯಾಸು ಜಾತಿಷು ।
ಸ್ವಯಂವರಸ್ತು ಗಾಂಧರ್ವಂ ಹಠಾದ್ರಾಕ್ಷಸ ಉಚ್ಯತೇ ॥ ೨೦ ॥

ಆದ್ಯಾಃ-ಮೊದಲಿನ, ಚತ್ವಾರಃ-ನಾಲ್ಕು ವಿಧದ ವಿವಾಹಗಳು, ಬ್ರಾಹ್ಮಣಸ್ಯ-ಬ್ರಾಹ್ಮಣನಿಗೆ, ಧರ್ಮಾಃ-ಧರ್ಮವು, ಸ್ಯುಃ-ಆಗುತ್ತವೆ; ತ ಏವ ಹಿ-ಅವು ನಾಲ್ಕು ವಿಧಾನಗಳು ಮಾತ್ರ ಧರ್ಮಗಳು (ಯೋಗ್ಯವು-ಅನ್ಯವಿಧ ವಿವಾಹಗಳು ಬ್ರಾಹ್ಮಣನಿಗೆ ಯೋಗ್ಯವಲ್ಲ); ಕ್ಷತ್ರಿಯಸ್ಯ-ಕ್ಷತ್ರಿಯನಿಗೆ, ರಾಕ್ಷಸಃ (ಅಪಿ)-ರಾಕ್ಷಸ ವಿವಾಹವೂ (ಗಾಂಧರ್ವ ಪೈಶಾಚಗಳೊಂದಿಗೆ) (ಧರ್ಮವು-ಯೋಗ್ಯವು); ಅನ್ಯೇ-ಇತರ (ಉಳಿದ), ತ್ರಯಃ-ಮೂರು ವಿವಾಹಗಳು (ಅಸುರ, ಗಾಂಧರ್ವ, ಪೈಶಾಚಗಳು); ಅನ್ಯಾಸು ಜಾತಿಷು-ಇತರ ಜಾತಿಗಳಲ್ಲಿ (ಯುಕ್ತವಾಗುತ್ತವೆ); ಸ್ವಯಂವರಃತು-ಸ್ವಯಂವರವಾದರೋ, ಗಾಂಧರ್ವಂ-ಗಾಂಧರ್ವವಿವಾಹವೇ ಸರಿ; ಹಠಾತ್-ಛಲದಿಂದಾಗುವ ವಿವಾಹವು (ಆ ಕನ್ಯೆಯು ತನಗೇ ದೊರೆಯಬೇಕು—ಅನ್ಯನಿಗೆ ಸೇರಕೂಡದೆಂಬ ಹಠವು ವಿವಾಹ ಕಾರಣವಾದರೆ), ರಾಕ್ಷಸಃ ಉಚ್ಯತೇ-ಅದೂ ರಾಕ್ಷಸವಿವಾಹವೆಂದೇ, ಉಚ್ಯತೇ-ಹೇಳಲ್ಪಡುತ್ತದೆ.

---

ಬಲಪ್ರದರ್ಶನದಿಂದ, ಬಲಾತ್ಕಾರವಾಗಿ ಕನ್ಯೆಯನ್ನು ಅಪಹರಿಸಿ ತರುವುದು ರಾಕ್ಷಸವಿವಾಹವು; ಈ ಕನ್ಯೆಯನ್ನೇ ಸಾಧಿಸುವೆನೆಂಬ ಹಠದಿಂದ, ವಿವಾಹವಾಗುವುದು ಪೈಶಾಚವಿವಾಹವು (೬೬-೬೮). ಬ್ರಾಹ್ಮ, ದೈವ, ಆರ್ಷ ಮತ್ತು ಪ್ರಾಜಾಪತ್ಯ ವಿವಾಹಗಳು ಬ್ರಾಹ್ಮಣನಿಗೆ ವಿಹಿತವಾಗುತ್ತವೆ—ಅನ್ಯವಿಧ ವಿವಾಹಗಳು ಯೋಗ್ಯವಾಗುವುದಿಲ್ಲ ಕ್ಷತ್ರಿಯನಿಗೆ, ನಾಲ್ಕರೊಂದಿಗೆ ರಾಕ್ಷಸವೂ ಯೋಗ್ಯವಾಗುತ್ತದೆ; ಗಾಂಧರ್ವದಲ್ಲಿ ವರನ ಪರಾಕ್ರಮಾದಿಗಳನ್ನು ಅರಿತೇ ಕನ್ಯೆಯು ಸ್ವಯಂ ಒಪ್ಪಿ ಕೈಹಿಡಿಯುತ್ತಾಳೆ; ಪೈಶಾಚದಲ್ಲಿ ರಾಕ್ಷಸವಿವಾಹದ ಲಕ್ಷಣವು ಅತಿದೇಶವಾಗುತ್ತದೆ—ಛಲಸಾಧನೆಯಲ್ಲಿ ಅವಶ್ಯವೆನಿಸುವ ಬಲಪ್ರಯೋಗ ರೂಪದ (ಯುದ್ಧವೂ ಅಂತರ್ಭವಿಸುತ್ತದೆ) ಇವೂ ಕ್ಷತ್ರಿಯಯೋಗ್ಯವೇ; ಅನ್ಯವಿಧ ವಿವಾಹಗಳು (ಆಸುರ, ಗಾಂಧರ್ವ ಪೈಶಾಚಗಳು) ಅನ್ಯಜಾತಿಗಳಿಗೆ ಯೋಗ್ಯವೆನಿಸುತ್ತವೆ (೬೯-೭೦).

ಕ್ರೀತಾ ಕನ್ಯಾ ಸಮಾ ದಾಸ್ಯಾ ವಿಪ್ರಾಣಾಮತಿನಿಂದಿತಾ ।
ಅವೈದಿಕೀ ವೈದಿಕೀ ಚ ಗಾಯತ್ರೀ ದ್ವಿವಿಧಾ ಮತಾ ॥ ೭೧ ॥
ವೈದಿಕೀ ತತ್ರ ಸಾವಿತ್ರೀ ವೈಷ್ಣವ್ಯಾದ್ಯಾದ್ವಿಧೈವ ಹಿ ।
ಸೋಂಕಾರಾ ವೈದಿಕೀ ಪ್ರೋಕ್ತಾ ಸಶ್ರೀಕಾ ಸ್ಯಾದವೈದಿಕೀ ॥ ೭೨ ॥
ವೈಶ್ಯತುಲ್ಯವಿಲೋಮಾನಾಂ ಸೈವೋಕ್ತಾ ಪೂರ್ವಮೇವ ತು ।
ಅನ್ಯೈಕಜಾತಯೋ ನಾಮಮಂತ್ರೈರೇವ ಹಿ ಸಂಸ್ಕೃತಾಃ ॥ ೭೩ ॥
ಭಜೇಯುರ್ವಿಷ್ಣುಮವ್ಯಗ್ರಾ ದಯಾದಾನಾದಿಕರ್ಮಭಿಃ ।
ಗ್ರಹಣಂ ತಪ್ತಮುದ್ರಾಣಾಂ ತಥಾ ಮಂತ್ರವಿವೇಚನಂ ॥ ೭೪ ॥
ಹಯಗ್ರೀವಬ್ರಹ್ಮವಿದ್ಯಾಪ್ರಸಂಗೇ ಪೂರ್ವಮೀರಿತಂ ।

ಕ್ರೀತಾ-ಕ್ರಯಕ್ಕೆ ಪಡೆದ (ದ್ರವ್ಯ ಕೊಟ್ಟು ತಂದ), ಕನ್ಯಾ-ಕನ್ಯೆಯು, ದಾಸ್ಯಾಃ-ದಾಸಿಯ, ಸಮಾ-ಸಮಾನಳು; ವಿಪ್ರಾಣಾಂ-ಬ್ರಾಹ್ಮಣರಿಗೆ, ಅತಿನಿಂದಿತಾ-(ಆ ಕನ್ಯೆಯು) ಅತಿ ನಿಂದಿತಳು (ವಿವಾಹಯೋಗ್ಯಳಲ್ಲ-ದೋಷಯುಕ್ತಳು); ಅವೈದಿಕೀ-ಅವೈದಿಕವೆಂದೂ, ವೈದಿಕೀ ಚ-ವೈದಿಕವೆಂದೂ, ಗಾಯತ್ರೀ-ಗಾಯತ್ರಿಯು, ದ್ವಿವಿಧಾ-ಎರಡು ವಿಧವೆಂದು, ಮತಾ-ತಿಳಿಯಲ್ಪಟ್ಟಿದೆ; ತತ್ರ-ಅವುಗಳಲ್ಲಿ, ವೈದಿಕೀ-ವೈದಿಕ ಗಾಯತ್ರಿಯು, ಸಾವಿತ್ರೀ - ಸಾವಿತ್ರೀ ನಾಮಕವಾದುದು; ವೈಷ್ಣವ್ಯಾದ್ಯಾಃ - (ಅವೈದಿಕವೆಂಬ) ವೈಷ್ಣವ ಗಾಯತ್ರೀ ಮೊದಲಾದವೂ, ದ್ವಿಧೈವ-ಎರಡು ಪ್ರಕಾರವೇ (ಎಲ್ಲವೂ ಗಾಯತ್ರೀ ನಾಮಕನಾದ-ತನ್ನನ್ನು ಗಾನಮಾಡುವವರನ್ನು ಸಂಸಾರದಿಂದ ರಕ್ಷಿಸುವವನಾದ್ದರಿಂದ ಗಾಯತ್ರೀ ಎಂಬ ಹೆಸರುಳ್ಳ ಶ್ರೀವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆಯಾದ್ದರಿಂದ, ಗಾಯತ್ರೀಮಂತ್ರಗಳೆನಿಸುವುವು); ಸೋಂಕಾರಾ-ಓಂಕಾರಸಹಿತವಾದ ಗಾಯತ್ರಿಯು, ವೈದಿಕೀ-ವೈದಿಕ ಗಾಯತ್ರಿಯೆಂದು, ಪ್ರೋಕ್ತಾ-ಹೇಳಲ್ಪಡುತ್ತದೆ; ಸಶ್ರೀಕಾ - ಶ್ರೀಕಾರಸಹಿತವಾದುದು; ಅವೈದಿಕೀ - ಅವೈದಿಕವು,

---

ದ್ರವ್ಯವನ್ನಿತ್ತು ತಂದ (ಕ್ರಯಕ್ಕೆ ಪಡೆದ) ಕನ್ಯೆಯು ದಾಸಿಯ ಸಮಳು; ಬ್ರಾಹ್ಮಣನಿಗೆ ಆಕೆಯು ಬಹು ನಿಂದ್ಯಳು—ದೋಷಯುಕ್ತಳು—ವಿವಾಹಯೋಗ್ಯಳಲ್ಲ; ಗಾಯತ್ರಿಯು (ಗಾಯತ್ರೀ ಮಂತ್ರವು) ಅವೈದಿಕವೆಂದೂ, ವೈದಿಕವೆಂದೂ ಎರಡು ವಿಧ; ಅವುಗಳಲ್ಲಿ ವೈದಿಕಗಾಯತ್ರಿಯು, ಸಾವಿತ್ರೀ ಎನಿಸುತ್ತದೆ; ವೈಷ್ಣವೀ ಮೊದಲಾದುವೂ ಎರಡು ವಿಧವಾಗಿವೆ; ಓಂಕಾರಸಹಿತವಾದುದು ವೈದಿಕಗಾಯತ್ರೀ ಯೆನಿಸುತ್ತದೆ; ಶ್ರೀಕಾರಯುಕ್ತವಾದುದು ಅವೈದಿಕವು; ವೈಶ್ಯಸಮರಾದ, ಪ್ರತಿಲೋಮ ಜಾತಿಯವರಿಗೆ ಈ ಅವೈದಿಕಗಾಯತ್ರೀ ಉಪದೇಶವನ್ನೇ ಈ ಹಿಂದೆ ಹೇಳಿದುದು (ಇದೇ ಅಧ್ಯಾಯದ ೫೮ನೇ ಶ್ಲೋಕವನ್ನು ನೋಡಿರಿ); ಇತರರಾದ 'ಏಕಜಾತೀಯ'ರೆಂಬುವರು (ಶ್ಲೋಕ ೫೬ ನೋಡಿರಿ), ನಾಮಮಂತ್ರಗಳಿಂದ ಮಾತ್ರ,

ಸ್ಯಾತ್-ಆಗಿರುತ್ತದೆ; ಪೂರ್ವಂ-ಈ ಮೊದಲು, ಸಾ ಏವ-ಆ ಗಾಯತ್ರಿಯೇ (ಅವೈದಿಕ ಶ್ರೀಹಾರಯುಕ್ತ ಮಂತ್ರವೇ). ವೈಶ್ಯತುಲ್ಯ - ವಿಲೋಮಾನಾಂ-ವೈಶ್ಯರಿಗೆ (ಗುಣಾಂಶ ಗಣನೆಯಲ್ಲಿ) ಸಮರಾಗುವ ಪ್ರತಿಲೋಮಿಗಳಿಗೆ, ಪ್ರೋಕ್ತಾ-(ಉಪದೇಶಾರ್ಹವೆಂದು ಹೇಳಲ್ಪಟ್ಟಿತು; ಅನ್ಯೇ-ಇತರರಾದ, ಏಕಜಾತಯಃ-ಏಕಜಾತಿಯರೆಂಬುವರು, ನಾಮಮಂತ್ರೈಃ ಏವ-ಕೇವಲ (ಶ್ರೀವಿಷ್ಣುವಿನ) ನಾಮಮಂತ್ರಗಳಿಂದ, ಸಂಸ್ಕೃತಾಃ-ಸ್ವಯೋಗ್ಯ ಸಂಸ್ಕಾರಗಳನ್ನು ಹೊಂದಿ, ಅವ್ಯಗ್ರಾಃ-ಏಕಾಗ್ರ ಮನಸ್ಸಿನಿಂದ (ಅನ್ಯದೇವತೆಗಳ ಕಡೆಗೆ ಮನಸ್ಸನ್ನು ಹರಿಗೊಡದೇ—ಶ್ರೀವಿಷ್ಣುವೇ ಸರ್ವೋತ್ತಮನೆಂಬುದನ್ನು ಸದಾ ಚಿಂತಿಸಿ), ದಯಾದಾನಾದಿಕರ್ಮಭಿಃ-(ಪ್ರಾಣಿ ಮಾತ್ರದಲ್ಲಿ) ದಯೆ, (ಸತ್ಪಾತ್ರರಲ್ಲಿ) ದಾನ ಇತ್ಯಾದಿ ಕರ್ಮಗಳಿಂದ, ವಿಷ್ಣುಂ-ಶ್ರೀವಿಷ್ಣುವನ್ನು ಭಜೇಯುಃ-ಸೇವಿಸುವರು (ಸೇವಿಸಲು ಮಾತ್ರ ಅರ್ಹರು—ಸೇವಿಸತಕ್ಕದ್ದು); ತಪ್ತಮುದ್ರಾಣಾಂ-ತಪ್ತಮುದ್ರೆಗಳ (ಚಕ್ರಶಂಖಗಳ), ಗ್ರಹಣಂ-(ದೇಹದಲ್ಲಿ) ಸ್ವೀಕಾರವೂ, ತಥಾ-ಮತ್ತು ಮಂತ್ರವಿವೇಚನಂ-ಮಂತ್ರೋಪದೇಶಗಳ (ಅಧಿಕಾರಾದಿ) ವಿವೇಚನೆಯೂ, ಪೂರ್ವಂ-ಈ ಮೊದಲು, ಹಯಗ್ರೀವ ಬ್ರಹ್ಮವಿದ್ಯಾ ಪ್ರಸಂಗೇ-ಶ್ರೀಹಯಗ್ರೀವ ದೇವನು, ಬ್ರಹ್ಮದೇವನಿಗೆ ಉಪದೇಶಿಸಿದ ವಿದ್ಯಾನಿರೂಪಣ ಪ್ರಸಂಗದಲ್ಲಿ, ಈರಿತಂ-ಹೇಳಲಾಗಿದೆ.

ಉಪನೀತ್ಯಧಿಕಾರೀ ಯೋ ನೋಪನೀತೋ ಯದಾ ಭವೇತ್ ॥ ೭೫ ॥
ಸಾವಿತ್ರೀ ಪತಿತೋ ವ್ರಾತ್ಯಸ್ಸಜ್ಜನ್ಮಾಭೃಜ್ಜಕಂಟಕಃ ।
ವ್ರತೀ ಸ್ತ್ರೀಸಂಗತೋ ವ್ರಾತ್ಯಃ ಆರೂಢಪತಿತೋ ಯತಿಃ ॥ ೭೬ ॥
ಯತಿಸ್ತಸ್ಮಾನ್ಮಹಾಪಾಪಃ ಪಾಖಂಡೋ ವೇದನಿಂದಕಃ ।
ಜಾತಾಶ್ಚತುರ್ಭ್ಯ ಏತೇಭ್ಯಸ್ತೇಪ್ಯುಕ್ತಾ ಭೃಜ್ಜಕಂಟಕಾಃ ॥ ೭೭ ॥

---

ಸ್ವಯೋಗ್ಯ ಸಂಸ್ಕಾರಗಳಿಗೆ ಅರ್ಹರಾಗಿರುತ್ತಾರೆ; ಮತ್ತು ನಾಮಮಂತ್ರಗಳಿಂದಲೇ ಶ್ರೀವಿಷ್ಣುವನ್ನು ಏಕಾಗ್ರಚಿತ್ತರಾಗಿ, ದಯೆ, ದಾನಾದಿ ಕರ್ಮಗಳಿಂದ, ಸೇವಿಸುತ್ತಾರೆ; (ಸೇವಿಸತಕ್ಕದ್ದು—ಸೇವಿಸಲು ಮಾತ್ರ ಅರ್ಹರು); ಅವರೆಲ್ಲರೂ ತಪ್ತಮುದ್ರೆಗಳನ್ನು ಗ್ರಹಣಮಾಡುವುದು ಮತ್ತು ಮಂತ್ರೋಪದೇಶವನ್ನು ಪಡೆಯುವುದು, ಮುಂತಾದ ವಿಷಯಗಳ ವಿವೇಚನೆಯನ್ನು ಈ ಹಿಂದೆ, ಹಯಗ್ರೀವ ವಿದ್ಯಾನಿರೂಪಣ ಪ್ರಸಂಗದಲ್ಲಿ ಮಾಡಲಾಗಿದೆ[1] (೭೧-೭೪). ಉಪನಯನ ಸಂಸ್ಕಾರಕ್ಕೆ, ತನ್ನ ಜಾತಿನಿಯಾಮಾನುಸಾರ ಅರ್ಹನಾಗಿದ್ದು ಉಪನೀತನಾಗದಿದ್ದರೆ, ಗಾಯತ್ರೀ ಭ್ರಷ್ಟನಾಗಿ (ಗಾಯತ್ರೀ ಅನುಗ್ರಹವನ್ನು ಕಳೆದುಕೊಂಡು, ಪತಿತನಾದವನು)

---

1. ೭-೮ನೇ ಅಧ್ಯಾಯಗಳನ್ನು ನೋಡಿರಿ.

ಯಃ - ಯಾರು, ಉಪನೀತ್ಯಧಿಕಾರೀ - ಉಪನಯನ ಸಂಸ್ಕಾರಕ್ಕೆ (ಜಾತಿ ನಿಯಮಾನುಸಾರ) ಅರ್ಹನೋ, ಯದಾ-ಯಾವಾಗ, ಉಪನೀತಃ-ಉಪನಯನ ವನ್ನು ಹೊಂದಿದವನು, ನ ಭವೇತ್-ಆಗುವುದಿಲ್ಲವೋ, (ಸಃ-ಆತನು, ಆ ಅನುಪನೀತನು), ಸಾವಿತ್ರೀ ಪತಿತಃ-ಗಾಯತ್ರೀಭ್ರಷ್ಟನಾಗಿ, ವ್ರಾತ್ಯಃ-'ವ್ರಾತ್ಯ' ಎನಿಸು ವನು; ತಜ್ಜನ್ಮಾ-ಅವನಿಂದ (ವ್ರಾತ್ಯನಿಂದ) ಹುಟ್ಟಿದವನು, ಭೃಜ್ಜಕಂಟಕಃ-'ಭೃಜ್ಜಕಂಟಕ' ಎನಿಸುತ್ತಾನೆ; ವ್ರತೀ-ಬ್ರಹ್ಮಚಾರಿಯು, ಸ್ತ್ರೀಸಂಗತಃ-ಸ್ತ್ರೀಸಂಗದಿಂದ, ವ್ರಾತ್ಯಃ-ವ್ರಾತ್ಯ ನೆನಿಸುತ್ತಾನೆ; ಅಯತಿಃ-ಇಂದ್ರಿಯನಿಗ್ರಹವಿಲ್ಲದ, ಆರೂಢಪತಿತಃ - ಉತ್ತಮಾಶ್ರಮದಿಂದ ಭ್ರಷ್ಟನಾದ, ಯತಿಃ-ಸನ್ಯಾಸಿಯೂ (ವ್ರಾತ್ಯನು); ತಸ್ಮಾತ್-ಆತನಗಿಂತ, ಮಹಾಪಾಪಃ- ಮಹಾಪಾಪಿಯಾದ, ವೇದನಿಂದಕಃ- ವೇದಗಳನ್ನು ಅಪ್ರಮಾಣವೆಂದು ವಾದಿಸುವ, ಪಾಖಂಡಃ-ನಾಸ್ತಿಕನು (ಅಧಿಕನಾದ ವ್ರಾತ್ಯನು); ಏತೇಭ್ಯಃ-ಈ, ಚತುರ್ಭ್ಯಃ-ನಾಲ್ಕು ವ್ರಾತ್ಯರಿಂದ, ಜಾತಾಃ-ಹುಟ್ಟಿದವರು (ಯಾರೋ), ತೇ ಅಪಿ-ಅವರೂ ಕೂಡ, ಭೃಜ್ಜಕಂಟಕಾಃ-ಭೃಜ್ಜಕಂಟಕರೆಂದು, ಉಕ್ತಾಃ-ಹೇಳಲ್ಪಡುವರು.

**ಜೀವತ್ಪತಿಸ್ತು ಯಾ ಭಾರ್ಯಾ ಜನಯೇದನ್ಯತಃ ಸುತಂ ।**
**ಅನುರಾಗಾದ್ಧಠಾದ್ವಾಪಿ ಪ್ರಚ್ಛನ್ನಂ ಸ್ಪಷ್ಟಮೇವ ವಾ ॥ ೭೮ ॥**
**ಸ ಪ್ರೋಕ್ತೋ ಜಾರಜಃ ಕುಂಡಃ ಕ್ಷೇತ್ರಜೋ ಭರ್ತುರಾಜ್ಞಯಾ ।**

ಜೀವತ್ಪತಿಃ-ಪತಿಯು ಜೀವಂತನಾಗಿರುವ, ಯಾ ಭಾರ್ಯಾ-ಯಾವ ಸ್ತ್ರೀಯು (ಹೆಂಡತಿಯು), ಅನ್ಯತಃ-ಪರಪುರುಷನಿಂದ, ಅನುರಾಗಾತ್-ಪ್ರೇಮದಿಂದಾಗಲಿ, ಹಠಾತ್ ವಾ-ಆಗ್ರಹದಿಂದಾಗಲಿ (ಆತನ ಸಂಗದಲ್ಲಿ ದುರಾಗ್ರಹಯುಕ್ತಳಾಗಿ), ಪ್ರಚ್ಛನ್ನಂ-ಗೂಢವಾಗಿ, ವಾ-ಅಥವಾ, ಸ್ಪಷ್ಟಂ ಏವ-ಪ್ರತ್ಯಕ್ಷವಾಗಿ (ಸರ್ವರಿಗೆ ತಿಳಿಯುವಂತೆ), ಸುತಂ-ಮಗನನ್ನು ಜನಯೇತ್-ಹಡೆದರೆ (ಪ್ರಸವಿಸಿದರೆ), ಸಃ-ಆ, ಜಾರಜಃ-ಜಾರಪುರುಷನಿಂದ ಹುಟ್ಟಿದವನು, ಕುಂಡಃ-ಕುಂಡನೆಂದು, ಪ್ರೋಕ್ತಃ-

---

ವ್ರಾತ್ಯನೆನಿಸುತ್ತಾನೆ; ವ್ರಾತ್ಯನಿಂದ ಜನಿಸಿದ ಪುತ್ರನು, ಭೃಜ್ಜಕಂಟಕನು; ಬ್ರಹ್ಮಚಾರಿಯಾಗಿ ಸ್ತ್ರೀಸಂಗಮಾಡಿದವನೂ, ವ್ರಾತ್ಯನೇ; ಹಾಗೆಯೇ, ಉತ್ತಮಾಶ್ರಮವನ್ನು ಹೊಂದಿ, ಇಂದ್ರಿಯನಿಗ್ರಹವಿಲ್ಲದೇ ಭ್ರಷ್ಟನಾದ ಸಂನ್ಯಾಸಿಯೂ ವ್ರಾತ್ಯನೇ; ಆತನಿಗಿಂತ ಮಹಾಪಾಪಿಯಾದ ವೇದಪ್ರಾಮಾಣ್ಯವನ್ನು ತಿರಸ್ಕರಿಸುವ ಪಾಖಂಡಿಯೂ ಮಹಾವ್ರಾತ್ಯನು; ಈ ಪ್ರಕಾರ ನಾಲ್ಕುವಿಧ ವ್ರಾತ್ಯರಿಂದ ಜನಿಸಿದವರೆಲ್ಲರೂ ಭೃಜ್ಜಕಂಟಕರೆಂದು ಹೇಳಲ್ಪಡುವರು (೭೫-೭೭).

ಜೀವತ್ಪತಿಯಾದ ಯಾವ ಸ್ತ್ರೀಯು, ಪರಪುರುಷನಿಂದ, ಅನುರಾಗದಿಂದಾಗಲಿ, ಹಠದಿಂದಾಗಲಿ, ರಹಸ್ಯವಾಗಿ ಅಥವಾ ಎಲ್ಲರಿಗೆ ತಿಳಿಯುವಂತೆ, ಕೂಡಿ, ಆತನಿಂದ

ಹೇಳಲ್ಪಡುತ್ತಾನೆ; ಭರ್ತುಃ-ಪತಿಯ, ಆಜ್ಞಯಾ-ಆಜ್ಞೆಯಿಂದ ಆದರೆ (ಪುತ್ರ ಪ್ರಾಪ್ತಿಗಾಗಿ ಪತಿಯೇ ಆ ಪುರುಷನ ಸಂಗಕ್ಕೆ ಅನುಮತಿಯನ್ನಿತ್ತಿದ್ದರೆ, ಆಗ), ಕ್ಷೇತ್ರಜಃ-'ಕ್ಷೇತ್ರಜ' ಪುತ್ರನೆನಿಸುವನು.

**ಮೃತೇ ಭರ್ತರಿ ಯಾ ನಾರೀ ವರಯೇತ್ ಸ್ವೇಚ್ಛಯಾ ಪತಿಂ ॥ ೭೯ ॥**
**ತಜ್ಜನ್ಮಾ ಗೋಲಕಃ ಪ್ರೋಕ್ತೋ ಹಠಾದ್ವಾಪಿ ಸ ಏವ ಹಿ ॥ ೮೦ ॥**
**ಭರ್ತೃಸಂಬಂಧಿನಾಮಾಜ್ಞಾ ಯದಿ ತತ್ರ ಭವೇತ್ಸುತೇ ।**
**ಸೋಽಪಿ ಕ್ಷೇತ್ರಜ ಏವ ಸ್ಯಾದ್ದ್ವಿಪಾದೋನೌ ತು ತೌ ಪಿತುಃ ॥ ೮೧ ॥**

ಯಾ ನಾರೀ-ಯಾವ ಸ್ತ್ರೀಯು, ಭರ್ತರಿ-ಪತಿಯು, ಮೃತೇ (ಸತಿ)-ಮರಣಹೊಂದಿರಲು, (ವಿಧವೆಯು), ಸ್ವೇಚ್ಛಯಾ-ತನ್ನ ಇಚ್ಛೆಯಿಂದಲೇ, ಪತಿಂ-(ಪರಪುರುಷನನ್ನು) ಪತಿಯನ್ನಾಗಿ, ವರಯೇತ್-ಸ್ವೀಕರಿಸುವಳೋ, ತಜ್ಜನ್ಮಾ-ಆ ಪುರುಷನಿಂದ ಹುಟ್ಟಿದ ಸುತನು, ಗೋಲಕಃ-'ಗೋಲಕ'ನೆಂದು, ಪ್ರೋಕ್ತಃ-ಹೇಳಲ್ಪಡುತ್ತಾನೆ; ಹಠಾತ್ ವಾ ಅಪಿ-(ಆಕೆಗೆ ಆ ಪುರುಷನ ಸಂಬಂಧವು) ಬಲಾತ್ಕಾರಾದಿಗಳಿಂದ ಸಂಭವಿಸಿದ್ದರೆ ಸಹ, ಸಃ ಏವ-ಗೋಲಕನೇ ಸರಿ; ಯದಿ — ಒಂದುವೇಳೆ, ಭರ್ತೃ ಸಂಬಂಧಿನಾಂ - ಪತಿಯ ಜ್ಞಾತಿಗಳ, ಆಜ್ಞಾ-ಅನುಮತಿಯು, ತತ್ರ-ಆ, ಸುತೇ- ಪುತ್ರನ ವಿಷಯದಲ್ಲಿ, ಭವೇತ್-ಇರುವುದಾದರೆ, ಸಃ ಅಪಿ-ಆ ಪುತ್ರನೂ ಸಹ, ಕ್ಷೇತ್ರಜಃ ಏವ-'ಕ್ಷೇತ್ರಜ'ಪುತ್ರನೇ, ಸ್ಯಾತ್-ಆಗುತ್ತಾನೆ;

---

ಸುತನನ್ನು ಪಡೆಯುವಳೋ, ಜಾರಪುರುಷನಿಂದ ಹುಟ್ಟಿದ ಮಗನು, 'ಕುಂಡ'ನೆನಿಸುವನು; ಪುತ್ರಪ್ರಾಪ್ತಿಗಾಗಿ ಪತಿಯೇ ಆ ಪುರುಷಸಂಗಕ್ಕೆ ಅನುಮತಿಯನ್ನಿತ್ತಿದ್ದರೆ, ಆಗ ಹಾಗೆ ಜನಿಸಿದ ಸುತನು 'ಕ್ಷೇತ್ರಜ' ಎನಿಸುತ್ತಾನೆ (೭೮). ಪತಿಯು ಮೃತನಾದ ಸ್ತ್ರೀಯು (ವಿಧವೆಯು), ಸ್ವೇಚ್ಛೆಯಿಂದ ಅನ್ಯಪುರುಷನನ್ನು ಪತಿಭಾವದಿಂದ ಸೇರಿ, ಆತನಿಂದ ಪುತ್ರನನ್ನು ಪಡೆದರೆ ಆ ಪುತ್ರನು, 'ಗೋಲಕ'ನೆಂದು ಕರೆಸುವನು; ಆ ಪುರುಷನ ಸಂಗವು ಹಠದಿಂದ (ಬಲಪ್ರಯೋಗಾದಿಗಳಿಂದ) ಸಂಭವಿಸಿದರೂ, ಹುಟ್ಟುವ ಪುತ್ರನು 'ಗೋಲಕನೇ'; ವಿಧವೆಯು, ಸಂತತಿಗಾಗಿ, ಪತಿಯ ಜ್ಞಾತಿಗಳ ಅನುಮತಿಯನ್ನು ಪಡೆದು, ಸುತನನ್ನು ಪಡೆದರೆ, ಆತನೂ 'ಕ್ಷೇತ್ರಜ' ಪುತ್ರನೆನಿಸುತ್ತಾನೆ; ಈ ಉಭಯ ವಿಧ ಕ್ಷೇತ್ರಜಪುತ್ರರೂ ತಂದೆಗಿಂತ ೨ ಅಂಶದಿಂದ, ಜಾತ್ಯಾ, ಹೀನರೆನಿಸುವರು[1] (೭೯-೮೧). ಭೃಙ್ಗಕಂಟಕನು (ವ್ರಾತ್ಯನಿಂದ

---

1. ಪಾಂಡುಪುತ್ರರಾದ ಯುಧಿಷ್ಠಿರಾದಿಗಳು, ಯದ್ಯಪಿ, ಇಲ್ಲಿ ಉಕ್ತವಾದ ಮೊದಲಿನ ವರ್ಗದ 'ಕ್ಷೇತ್ರಜ'ಪುತ್ರರಾಗುವರು; ಆದರೆ, ಕ್ಷೇತ್ರಜನಂತೆ ತಂದೆಗಿಂತ ಜಾತ್ಯಾಹೀನರಾಗುವುದಿಲ್ಲ; ಯಮಧರ್ಮ, ವಾಯು ಮೊದಲಾದ ದೇವತೆಗಳಿಂದ ಪುತ್ರರನ್ನು ಪಡೆಯಲು ಪಾಂಡು ರಾಜನು ಅನುಮತಿಯನ್ನಿತ್ತಿರುವನು; ಉಕ್ತವಾದ ನಿಯಮವು ಮಾನವರಿಗೆ ಮಾತ್ರ ಅನ್ವಯಿಸುತ್ತದೆ.

ತು-ಆದರೆ, ತೌ-ಆ ಉಭಯರೂ (ಪತಿಯು ಬದುಕಿರುವಾಗ ಮತ್ತು ಮೃತನಾದ ನಂತರ, ಸ್ತ್ರೀಯು, ಪತಿಯ ಜ್ಞಾತಿಗಳ ಅನುಜ್ಞೆಯಿಂದ ಪಡೆಯುವ, ಉಭಯವಿಧ ಕ್ಷೇತ್ರಜಪುತ್ರರೂ), ಪಿತುಃ-ತಂದೆಯಿಂದ, ದ್ವಿಪಾದೋನೌ-ಎರಡು ಅಂಶಗಳಿಂದ ಹೀನರಾಗುತ್ತಾರೆ.

**ಭೃಜ್ಜಕಂಟಕಶ್ಚತುರ್ಥಾಂಶಃ ಸೋಽಪಿ ಚೇತ್ ಪಿತೃಜಾತಿತಃ ।**
**ಸಂಸ್ಕೃತಸ್ತ್ರ್ಯಂಶಹೀನಸ್ಯಾತ್ತತ್ಸುತೋ ದ್ವ್ಯಂಶ ಉಚ್ಯತೇ ॥ ೮೨ ॥**
**ತನ್ನಪ್ತಾ ಲಭತೇ ಜಾತಿಂ ಮೂಲಪುಂಸಃ ಕ್ರಮಾದಿತಿ ।**
**ವಿಧಿರೇಷ ಸವರ್ಣಾಸು ಭಾರ್ಯಾಸ್ವೇವ ಯದಾ ಜನಿಃ ॥ ೮೩ ॥**

ಭೃಜ್ಜಕಂಟಕಃ-ಭೃಜ್ಜಕಂಟಕನು, ಚತುರ್ಥಾಂಶಃ-(ತಂದೆಗಿಂತ) ೪ ಅಂಶಗಳಿಂದ (ಜಾತ್ಯಾ) ಹೀನನೆನಿಸುವನು; ಸಃ ಅಪಿ-ಅವನಾದರೋ, ಪಿತೃಜಾತಿತಃ- ತಂದೆ ಜಾತಿಯ ನಿಯಮದಂತೆ, ಸಂಸ್ಕೃತಃ-ಸಂಸ್ಕಾರವನ್ನು ಹೊಂದಿದರೆ, ತ್ರ್ಯಂಶಹೀನಃ-ಮೂರು ಅಂಶಗಳಿಂದ ಹೀನನಾಗುವನು; ತತ್ಸುತಃ-ಆತನ (ಆ ಭೃಜ್ಜಕಂಟಕನ) ಮಗನು, ದ್ವ್ಯಂಶಃ-ಎರಡಂಶಗಳಿಂದ ಹೀನನೆಂದು, ಉಚ್ಯತೇ- ಹೇಳಲ್ಪಡುವನು; ತನ್ನಪ್ತಾ-ಪೌತ್ರನು (ಮೊಮ್ಮಗನು), ಕ್ರಮಾತ್-ಕ್ರಮವಾಗಿ, ಮೂಲಪುಂಸಃ-ಮೂಲಪುರುಷನ, ಜಾತಿಂ-ಜಾತಿಯನ್ನು ಲಭತೇ-ಹೊಂದುತ್ತಾನೆ; ಏಷಃ ವಿಧಿಃ-ಈ ನಿಯಮವು, ಸವರ್ಣಾಸು-(ಭೃಜ್ಜಕಂಟಕನ) ಜಾತಿಗೆ ಸೇರಿದ, ಭಾರ್ಯಾಸು-ಸ್ತ್ರೀಯರಲ್ಲಿ (ಅಥವಾ ಪತ್ನಿಯರಲ್ಲಿ), ಯದಾ ಜನಿಃ - ಯಾವಾಗ ಉತ್ಪತ್ತಿಯೋ (ಭೃಜ್ಜಕಂಟಕನ ಸುತನು ಜನಿಸುವನೋ), ಏವ-ಆಗ ಮಾತ್ರ (ಅನ್ವಯಿಸುತ್ತದೆ—ಅನ್ಯತ್ರವಲ್ಲ).

---

ಜನಿಸಿದವನು) ತಂದೆಗಿಂತ ೪ ಅಂಶಗಳಿಂದ ಹೀನನು (ಎಂದರೆ ಜಾತ್ಯಾ ೧/೪ ಭಾಗದ ಗುಣಮಾತ್ರನು); ಆ ಭೃಜ್ಜಕಂಟಕನೇ ತಂದೆಯ ಜಾತಿನಿಯಮದಂತೆ, ಸಂಸ್ಕಾರವನ್ನು ವಿಧಿವತ್ತಾಗಿ, ಹೊಂದಿದರೆ, ೧/೩ ಭಾಗ ಮಾತ್ರನಾಗುತ್ತಾನೆ—ದೋಷವು ಕಡಿಮೆಯಾಗುತ್ತದೆ; ಈತನು ಸುತನು ೨ ಅಂಶಗಳಿಂದ (೧/೨ ಗುಣಮಾತ್ರ) ಹೀನನೆನಿಸುತ್ತಾನೆ; ಈತನ ಮೊಮ್ಮಗನು, ಕ್ರಮವಾಗಿ ಮೂಲಪುರುಷನ ಜಾತಿಯನ್ನು ಹೊಂದುತ್ತಾನೆ; ಭೃಜ್ಜಕಂಟಕನ ಜಾತಿಯ ಸ್ತ್ರೀಯರಲ್ಲಿ ಅಥವಾ ಭಾರ್ಯರಲ್ಲಿ[1] ಪುತ್ರೋತ್ಪತ್ತಿಯಾದಾಗ ಮಾತ್ರ ಈ ನಿಯಮವು ಅನ್ವಯಿಸುತ್ತದೆ (೮೨-೮೩). ಹೀಗೆಯೇ ಇದೇ ಪುತ್ರಪೌತ್ರಾದಿ ಕ್ರಮದಿಂದ, ತಂದೆಯಿಂದ,

---

1. ವ್ರಾತ್ಯರಿಂದ ಹುಟ್ಟಿದ ಪುತ್ರನು ಭೃಜ್ಜಕಂಟಕನು; ವ್ರಾತ್ಯರು ೪ ವಿಧರೆಂದು, ೭೬-೭೭ನೇ ಶ್ಲೋಕಗಳಲ್ಲಿ ಹೇಳಿದೆ. ವಿವಾಹಿತ ಪತ್ನಿಯನ್ನು ಪಡೆದವನೂ ವ್ರಾತ್ಯನಾಗಲು ಅವಕಾಶವಿದೆ.

**ಏವಂ ಹಿ ಕ್ಷೇತ್ರಜೋ ಜಾತಿಂ ಲಭತೇ ಕ್ರಮಶಃ ಪಿತುಃ ।**
**ಪ್ರಾಯಶ್ಚಿತ್ತಾದ್ವಿಶುದ್ಧಿಃ ಸ್ಯಾತ್ ಕ್ಷೇತ್ರಜೇ ವ್ಯಾವಹಾರಕೇ ॥ ೮೪ ॥**
**ತದಭಾವೇ ವಿಗೀತಃ ಸ್ಯಾತ್ ಕಿಂಚಿಜ್ಜಾತೇಸ್ತಥೋನತಾ ।**

ಏವಂ-ಹೀಗೆಯೇ, ಕ್ಷೇತ್ರಜಃ-ಕ್ಷೇತ್ರಜಸುತನೂ, ಕ್ರಮಶಃ-ಕ್ರಮವಾಗಿ (ಅವನ ಪುತ್ರ ಪೌತ್ರ ಕ್ರಮದಿಂದ), ಪಿತುಃ-ತಂದೆಯ ಜಾತಿಂ-ಜಾತಿಯನ್ನು ಲಭತೇ-ಹೊಂದುತ್ತಾನೆ; ವ್ಯಾವಹಾರಕೇ - ಲೋಕನುಡಿಯಿಂದ, ಕ್ಷೇತ್ರಜೇ - ಕ್ಷೇತ್ರಜನಾದವನಲ್ಲಿ ಪ್ರಾಯಶ್ಚಿತ್ತಾತ್-(ವಿಧಿಪ್ರಕಾರ) ಪ್ರಾಯಶ್ಚಿತ್ತಕರ್ಮವನ್ನು ಆಚರಿಸಿದರೆ, ವಿಶುದ್ಧಿಃ-ಶುದ್ಧಿಯು (ಜಾತಿಶುದ್ಧಿಯು), ಸ್ಯಾತ್-ಉಂಟಾಗುತ್ತದೆ; ತದಭಾವೇ- ಅದಿಲ್ಲದಿದ್ದರೆ (ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ), ವಿಗೀತಃ ಸ್ಯಾತ್-ವಿರುದ್ಧ ವ್ಯವಹಾರಕ್ಕೊಳಗಾಗುವನು; ತಥಾ-ಮತ್ತು ಜಾತೇಃ-ಜಾತಿಗೆ, ಕಿಂಚಿತ್-ಅಲ್ಪ ಊನತಾ - ಹೀನತ್ವವೂ (ಸ್ಯಾತ್-ಆಗುತ್ತದೆ).

**ಭ್ರೂಣಕಂಟಸ್ಯ ಪಿತರೌ ಸುತಾತ್ ಪಾದದ್ವಯಾಧಿಕೌ ॥ ೮೫ ॥**
**ಕುಂಡಗೋಲೌ ಪಿತುರ್ಜಾತೇಃ ಪಂಚಮಾಂಶಾಧಮೌ ಮತೌ ।**

ಭ್ರೂಣಕಂಟಸ್ಯ-ಭ್ರೂಣಕಂಟಕನ, ಪಿತರೌ-ಮಾತಾಪಿತೃಗಳು (ಅಥವಾ ಪಿತೃ ಪಿತಾಮಹರು), ಸುತಾತ್-ಭ್ರೂಣಕಂಟಕನಾದ ತಮ್ಮ ಮಗನಗಿಂತ, ಪಾದದ್ವಯಾಧಿಕೌ-೨ ಅಂಶಗಳಿಂದ (ಪ್ರಾಯಶ್ಚಿತ್ತಮಾಡಿಕೊಂಡರೆ) ಅಧಿಕರು; ಕುಂಡಗೋಲೌ-ಕುಂಡಗೋಲಕರೆಂಬುವರು, ಪಿತುಃ-ತಂದೆಯ, ಜಾತೇಃ-ಜಾತಿಯಿಂದ, ಪಂಚಮಾಂಶಾಧಮೌ-೫ ಅಂಶಗಳಿಂದ ಹೀನರೆಂದು, ಮತೌ-ತಿಳಿಯಲ್ಪಡುವರು.

**ಪಿತರೌ ಭ್ರೂಣಕಂಟೇನ ತುಲ್ಯರೂಪೌ ಪ್ರಕೀರ್ತಿತೌ ॥ ೮೬ ॥**
**ಪ್ರಾಯಶ್ಚಿತ್ತಾಜ್ಜಾತಿಲಾಭಃ ಪಿತ್ರೋರೇವ ನ ಪುತ್ರಯೋಃ ।**

---

ಗುಣಹೀನನಾದ ಕ್ಷೇತ್ರಜನೂ ತಂದೆಯ ಜಾತಿಯನ್ನು ಹೊಂದುತ್ತಾನೆ; ಕ್ಷೇತ್ರಜನೆಂದು ವ್ಯವಹರಿಸಲ್ಪಡುವವನೂ, ವಿಧ್ಯುಕ್ತಪ್ರಾಯಶ್ಚಿತ್ತವನ್ನು ಆಚರಿಸಿ ಶುದ್ಧನಾಗಬಹುದು; ತಂದೆಯ ಜಾತಿಯನ್ನು ಹೊಂದಬಹುದು; ಅದಿಲ್ಲದಿದ್ದರೆ, ಎಂದಿನಂತೆ ವಿರುದ್ಧವ್ಯವಹಾರಕ್ಕೆ ಒಳಗಾಗುವುದೂ ಅಲ್ಲದೇ, ಜಾತಿಯಿಂದ ಅಲ್ಪನ್ಯೂನತೆಯೂ ಉಳಿಯುತ್ತದೆಂದು ತಿಳಿಯಬೇಕು (೮೪). ಹಾಗೆ ವಿಧ್ಯುಕ್ತಪ್ರಾಯಶ್ಚಿತ್ತ ಮಾಡಿಕೊಂಡರೆ, ಭ್ರೂಣಕಂಟಕನನ್ನು ಪಡೆದ ಪಿತೃಗಳು, ತಮ್ಮ ಮಗನಿಂದ ೨ ಅಂಶಗಳಿಂದ ಅಧಿಕರಾಗುವರು; ಕುಂಡ, ಗೋಲಕರು, ತಂದೆಯ ಜಾತಿಗಿಂತ ೫ ಅಂಶಗಳಿಂದ ಅಧಮರೆಂದು ತಿಳಿಯಲ್ಪಟ್ಟಿರುವರು (೮೫). ಪ್ರಾಯಶ್ಚಿತ್ತಮಾಡಿಕೊಳ್ಳದ ಭ್ರೂಣಕಂಟನ ಪಿತೃಗಳು (ತಾಯಿತಂದೆಗಳು ಅಥವಾ ಪಿತೃಪಿತಾಮಹರು) ಜಾತಿಯಿಂದ,

ಪಿತರೌ-(ಪ್ರಾಯಶ್ಚಿತ್ತ ಮಾಡಿಕೊಳ್ಳದ) ಮಾತಾಪಿತೃಗಳು, ಭೃಜ್ಜಕಂಟೇನ-ಭೃಜ್ಜ ಕಂಟಕನಿಂದ, ತುಲ್ಯರೂಪೌ-ಸಮಾನರೆಂದು (ತಮ್ಮ ಜಾತಿಯಿಂದ, ಭೃಜ್ಜಕಂಟಕನಂತೆ ಚತುರ್ಥಾಂಶಹೀನರೆಂದು), ಪ್ರಕೀರ್ತಿತೌ - ಹೇಳಲ್ಪಡುತ್ತಾರೆ; ಪ್ರಾಯಶ್ಚಿತ್ತಾತ್ - ಪ್ರಾಯಶ್ಚಿತ್ತದಿಂದ, ಪಿತ್ರೋಃ ಏವ-ಮಾತಾಪಿತೃಗಳಿಗೆ ಮಾತ್ರ, ಜಾತಿಲಾಭಃ-ಜಾತಿ ಶುದ್ಧತೆಯ ಪ್ರಾಪ್ತಿಯು, ನ ಪುತ್ರಯೋಃ-ಮಕ್ಕಳಿಗಲ್ಲ (ಪುತ್ರರಿಗಲ್ಲ).

ಅನುಲೋಮಾದಾನುಲೋಮ್ಯಮೇವಮೇವ ಪ್ರಕೀರ್ತಿತಂ ॥ ೮೭ ॥
ವೈಲೋಮ್ಯೇ ಜಾತಿಭೇದಸ್ತು ನೈತೇಷಾಂ ವಿದ್ಯತೇ ಕ್ವಚಿತ್ ।
ಕಿಂಚಿದ್ವಿಗೀತತ್ವೈವ ಸ್ಯಾನ್ಮಾತಾಪಿತ್ರೋಃ ಸುತಸ್ಯ ಚ ॥ ೮೮ ॥
ಶೂದ್ರಾಧಿಕಾಸ್ತು ತುಲ್ಯಾ ವಾ ವಿಲೋಮಾ ಅನುಲೋಮಿನಃ ।
ಯಾವಂತ ಏಕಜಾತ್ಯಾಃ ಸ್ಯುಸ್ತೇ ಶೂದ್ರಾ ಇತಿ ಕೀರ್ತಿತಾಃ ॥ ೮೯ ॥

ಅನುಲೋಮಾತ್-ಅನುಲೋಮ ಜಾತಿಯಿಂದ, ಅನುಲೋಮ್ಯಂ ಏವ-ಅನುಲೋಮತ್ವವೇ (ಅನುಲೋಮ ಜಾತಿಗೆ ಸೇರಿರುವಿಕೆಯೇ), ಏವಂ-ಹೀಗೆ, ಪ್ರಕೀರ್ತಿತಂ-ಹೇಳಲ್ಪಡುತ್ತದೆ; (ಅನುಲೋಮ ಜಾತಿಗೆ ಸೇರಿದ ಸ್ತ್ರೀಪುರುಷರಿಂದ, ಹುಟ್ಟುವ ಸಂತಾನವೂ ಅನುಲೋಮ ಜಾತಿ ಪ್ರಭೇದವೆಂದೇ ತಿಳಿಯಬೇಕು); ಜಾತಿಭೇದಃ ತು - ಜಾತಿಭೇದವಾದರೋ, ವೈಲೋಮ್ಯೇ - ಪ್ರತಿಲೋಮ ಜಾತಿಯಲ್ಲಿಯೇ; ಏತೇಷಾಂ-ಈ ಜಾತಿಗಳ ಪ್ರಭೇದಗಳಿಗೆ (ಪ್ರತಿಲೋಮಜಾತಿಗಳಲ್ಲಿ ಸ್ತ್ರೀಯು ಉತ್ತಮಳಾಗಿರುವುದರಿಂದ, ಅಧಮಪುರುಷರಿಂದ ಜನಿಸುವ ಸಂತಾನಗಳಿಗೆ ಅಧಿಕವಾದ ಅಧಮತ್ವವೇ ಲಭಿಸುತ್ತದೆ), ಕ್ವಚಿತ್-ಎಲ್ಲಿಯೂ (ಸ್ವಲ್ಪವಾದರೂ), ನ ವಿದ್ಯತೇ-(ವಿರಾಮವು) ಇರುವುದಿಲ್ಲ (ಜಾತಿಪ್ರಭೇದಗಳು ಬೆಳೆಯುತ್ತಲೇ ಸಾಗುತ್ತವೆ); ಮಾತಾಪಿತ್ರೋಃ-ತಾಯಿತಂದೆಗಳಿಗೆ, ಚ-ಮತ್ತು, ಸುತಸ್ಯ-(ಜನಿಸಿದ)

---

ಭೃಜ್ಜಕಂಟನಂತೆ ಚತುರ್ಥಾಂಶದಿಂದ ಹೀನರು; ಪ್ರಾಯಶ್ಚಿತ್ತದಿಂದ ಪಿತೃಗಳಿಗೆ ಜಾತಿಲಾಭವಲ್ಲದೇ, ಪುತ್ರರಿಗಲ್ಲ (ಭೃಜ್ಜಕಂಟ ಮತ್ತು ಅವನ ಮಗನಿಗಲ್ಲ) (೮೬). ಅನುಲೋಮ ಜಾತಿಗಳಿಂದ ಪರಸ್ಪರವಾಗಿ (ಸ್ತ್ರೀಪುರುಷ ಸಂಯೋಗದಿಂದ) ಅನುಲೋಮ ಜಾತಿಗಳೇ ಉದ್ಭವಿಸುತ್ತವೆ; ಪ್ರತಿಲೋಮ ಜಾತಿಗಳಲ್ಲಿ ಬಹುಭಿನ್ನ ಜಾತಿಗಳು ಏರ್ಪಡುತ್ತವೆ; ಈ ಜಾತಿ ಪ್ರಭೇದಗಳ ನಿರ್ಮಿತಿಗೆ ಮಿತಿಯಿಲ್ಲ; ಹೀಗೆ ವಿವಿಧ ಪ್ರತಿಲೋಮ ಜಾತಿಗಳು ಉದ್ಭವಿಸುವುದರಲ್ಲಿ ತಾಯಿತಂದೆಗಳಿಗೂ ಮತ್ತು ಹುಟ್ಟುವ ಮಗನಿಗೂ, (ಸಮಾಜದಲ್ಲಿ) ನಿಂದೆಯೇ ಲಭಿಸುತ್ತದೆ; ಆ ಜಾತಿಗಳು ಹೀನಜಾತಿಗಳೆಂದು, ಜನರು ದೂಷಿಸುತ್ತಾರೆ; ದ್ವಿಜರಿಗೆ ಶೂದ್ರಜಾತಿಯು ಯಾವ ಸ್ಥಾನದಲ್ಲಿರುವುದೋ, ಆ ಸ್ಥಾನದಲ್ಲಿ ಅನುಲೋಮಿಗಳಿಗೆ ಪ್ರತಿಲೋಮ ಜಾತಿಗಳಿರುತ್ತವೆ

ಪುತ್ರನಿಗೆ, ಕಿಂಚಿತ್-ಸ್ವಲ್ಪ ವಿಗೀತತಾ-(ಪ್ರತಿಲೋಮಜಾತಿ ಪ್ರಭೇದಗಳ ಉತ್ಪತ್ತಿಯು) ನಿಂದಾಸ್ಪದವೇ (ನಿಂದ್ಯವೇ), ಸ್ಯಾತ್-ಆಗಿರುತ್ತದೆ; ಅನುಲೋಮಿನಃ-ಅನುಲೋಮಿಗೆ (ಅನುಲೋಮ ಜಾತಿಯ ದೆಸೆಯಿಂದ). ವಿಲೋಮಾಃ-ಪ್ರತಿಲೋಮಿಗಳು, ಶೂದ್ರಾಧಿಕಾಃ-ಶೂದ್ರರಗಿಂತ (ಬ್ರಾಹ್ಮಣಾದಿ ದ್ವಿಜರಿಗೆ ಶೂದ್ರ ಜಾತಿಯು ಹೇಗೋ, ಅದಕ್ಕಿಂತ) ಉತ್ತಮರು (ಎನಿಸುತ್ತಾರೆ), ವಾ-ಅಥವಾ, (ಕೆಲವು ಪ್ರತಿಲೋಮಿಗಳು), ತುಲ್ಯಾಃ-ವಾ-ಶೂದ್ರಸಮರೇ (ಆಗುವರು); ಯಾವಂತಃ-ಎಲ್ಲಿಯವರಿಗೆ, ಏಕಜಾತ್ಯಾಃ-ಏಕಜಾತೀಯರು,[1] ಸ್ಯುಃ-ಆಗಿರುವರೋ, ತೇ-ಅವರೆಲ್ಲರೂ, ಶೂದ್ರಾಃ-ಶೂದ್ರರು, ಇತಿ-ಎಂದೇ, ಕೀರ್ತಿತಾಃ- ಹೇಳಲ್ಪಡುತ್ತಾರೆ.

**ಶೂದ್ರವೈದೇಹಮಧ್ಯಸ್ಥಾ ಮಧ್ಯಜಾತಯ ಈರಿತಾಃ ।**
**ಅಂತ್ಯಜಾಸ್ತತ್ತರಾಃ ಪ್ರೋಕ್ತಾ ಯಾವಜ್ಜಾತಿರ್ವಿವಿಚ್ಯತೇ ॥ ೯೦ ॥**
**ಯತ್ರ ಜಾತಿವಿವೇಕೋ ನ ಯಥೇಷ್ಟಮಿಥುನಾಶನಾಃ ।**
**ಯವನಾಸ್ತೇ ವಿಮಿಶ್ರತ್ವಾತ್ ಮ್ಲೇಚ್ಛಾ ಇತಿ ಚ ಕೀರ್ತಿತಾಃ ॥ ೯೧ ॥**

ಶೂದ್ರವೈದೇಹಮಧ್ಯಸ್ಥಾಃ-ಶೂದ್ರ ಮತ್ತು ವೈದೇಹರ ಮಧ್ಯದಲ್ಲಿರುವವರು, ಮಧ್ಯಜಾತಯಃ-ಮಧ್ಯಜಾತಿಯವರು, (ಎಂದು), ಈರಿತಾಃ-ಹೇಳಲ್ಪಡುತ್ತಾರೆ; ಯಾವತ್-ಎಲ್ಲಿಯವರೆಗೆ, ಜಾತಿಃ-ಜಾತಿಯು, ವಿವಿಚ್ಯತೇ-ವಿವೇಕಿಸಲು ಶಕ್ಯವೋ, ತತ್ತರಾಃ - ಅಲ್ಲಿರುವವರೆಲ್ಲರೂ, ಅಂತ್ಯಜಾಃ -'ಅಂತ್ಯಜ'ರೆಂದು, ಪ್ರೋಕ್ತಾಃ - ಹೇಳಲ್ಪಡುವರು; ಯತ್ರ-ಯಾರ ವಿಷಯದಲ್ಲಿ ಜಾತಿವಿವೇಕಃ-ಜಾತಿವಿವೇಕವು, ನ-ಇಲ್ಲವೋ (ಸಾಧ್ಯವಿಲ್ಲವೋ), ಯಥೇಷ್ಟಮಿಥುನಾಶನಾಃ-ಸ್ವೇಚ್ಛಾನುಸಾರವಾದ

---

ಅಥವಾ ಕೆಲವು ಶೂದ್ರಜಾತಿಗಿಂತ ಕಿಂಚಿದಧಿಕವಾದರೂ ಆಗಬಹುದು; ಏಕಜಾತೀಯರೆಂಬ ವರ್ಗಕ್ಕೆ ಸೇರುವ ಈ ಎಲ್ಲರೂ ಶೂದ್ರರೆಂದೇ ಕರೆಯಲ್ಪಡುತ್ತಾರೆ (೮೭-೮೯). ಶೂದ್ರ ವೈದೇಹ ಜಾತಿಗಳ ಮಧ್ಯದಲ್ಲಿರುವ ಪ್ರತಿಲೋಮ ಜಾತಿಗಳು (ಸೂತಮಾಗಧಾದಿಗಳು) ಮಧ್ಯಮ ಜಾತಿಗಳೆನಿಸುತ್ತವೆ; ಜಾತಿಗಳನ್ನು ವಿವೇಕಿಸಿ ಗುರ್ತಿಸಲು, ಎಲ್ಲಿಯಪರ್ಯಂತ ಸಾಧ್ಯವೋ, ಅವರೆಗಿನ ಜಾತಿಯವರೆಲ್ಲರೂ 'ಅಂತ್ಯಜ'ರೆನಿಸುತ್ತಾರೆ; ಅಲ್ಲಿಂದ ಮುಂದೆ, ಎಂದರೆ ಜಾತಿಗಳನ್ನು ವಿವೇಕಿಸಲು ಸಾಧ್ಯವಿಲ್ಲದ, ಸ್ವೇಚ್ಛಾನುಸಾರವಾದ ಸ್ತ್ರೀಸಂಗ ಮತ್ತು ಆಹಾರ ವಿಹಾರಗಳುಳ್ಳವರೆಲ್ಲರೂ, 'ಯವನ'ರೆಂದೂ, ಅನಿಯತ ಜಾತಿಮಿಶ್ರಣ ದಿಂದ, 'ಮ್ಲೇಂಛ'ರೆಂದೂ ಕರೆಯಲ್ಪಡುತ್ತಾರೆ (೯೦-೯೧). ಅನುಲೋಮಿಗಳು

---

1. ದ್ವಿಜಾನ್ಯರು 'ಏಕಜಾತೀಯ'ರೆಂಬಲ್ಲಿ ಈ ಅಧ್ಯಾಯದ ೫೭ನೇ ಶ್ಲೋಕವನ್ನು ನೋಡಿರಿ.

ಸ್ತ್ರೀಭೋಗ ಮತ್ತು ಆಹಾರಾದಿಗಳುಳ್ಳವರೋ (ಯಾವ ನಿಯಮಗಳಿಗೂ ಒಳಪಡದ ಸ್ತ್ರೀವಿಹಾರವುಳ್ಳವರೋ), ತೇ-ಅವರೆಲ್ಲರೂ, ಯವನಾಃ-'ಯವನ'ರೆನಿಸುತ್ತಾರೆ; ಚ-ಮತ್ತು ವಿಮಿಶ್ರತ್ವಾತ್-(ಅನಿಯತಜಾತಿ) ಮಿಶ್ರಣವಿರುವುದರಿಂದ, ಮ್ಲೇಚ್ಛಃ ಇತಿ-'ಮ್ಲೇಂಛ'ರೆಂದೂ, ಕೀರ್ತಿತಾಃ-ಹೇಳಲ್ಪಡುವರು.

**ಅನುಲೋಮೇ ಮಾತೃವೃತ್ತಿಃ ಪಿತೃವೃತ್ತಿರ್ವಿಲೋಮಕೇ ।**

**ಸಾನ್ನಿಧ್ಯವಶತಸ್ತ್ವೇವಂ ತದ್ಧರ್ಮಾನ್ ಶೃಣುತಾಧುನಾ ॥ ೯೨ ॥**

ಅನುಲೋಮೇ-ಅನುಲೋಮ ಜಾತಿಯಲ್ಲಿ (ಆ ಜಾತಿಯವರಿಗೆ), ಮಾತೃವೃತ್ತಿ-ತಾಯಿಯ ವೃತ್ತಿಯು (ಉಪಜೀವಿಕೆಯು; ಯೋಗ್ಯವು); ವಿಲೋಮಕೇ-ಪ್ರತಿ ಲೋಮಿಗಳಲ್ಲಿ, ಪಿತೃವೃತ್ತಿ-ತಂದೆಯ ವೃತ್ತಿಯು (ಯೋಗ್ಯವು); ಸಾನ್ನಿಧ್ಯವಶತಃ-ಸಾಮೀಪ್ಯಪ್ರಭಾವದಿಂದ (ಅನುಲೋಮಜನು, ತಾಯಿ ಬಳಿ ಇದ್ದು ಬೆಳೆಯುತ್ತಾನೆ; ಪ್ರತಿಲೋಮಜನು, ತಂದೆ ಬಳಿ ಬೆಳೆಯುತ್ತಾನೆ); ಏವಂ-ಹೀಗೆ (ವೃತ್ತಿಭೇದವೆಂದು) ತಿಳಿಯಬೇಕು; ತದ್ಧರ್ಮಾನ್-ನಾನಾಜಾತಿಯ ಧರ್ಮಗಳನ್ನು, ಅಧುನಾ-ಈಗ, ಶೃಣುತ-ಶ್ರವಣಮಾಡು.

**ದಯಾದಾನಮಹಿಂಸಾದಿವಿಷ್ಣುನಾಮಾನುಕೀರ್ತನಂ ।**

**ಸರ್ವಾಸಾಮೇವ ಜಾತೀನಾಮೇಷ ಸಾಧಾರಣೋ ವಿಧಿಃ ॥ ೯೩ ॥**

ದಯಾದಾನಮಹಿಂಸಾದಿ-ದಯಾ, ದಾನ, ಅಹಿಂಸಾ, ಮೊದಲಾದುದೂ, ವಿಷ್ಣುನಾಮಾನುಕೀರ್ತನಂ - ವಿಷ್ಣುನಾಮಸಂಕೀರ್ತನವೂ, (ಎಂಬ) ಏಷಃ - ಈ, ವಿಧಿಃ - ವಿಧಿಯು, ಸರ್ವಾಸಾಂ - ಎಲ್ಲ ಜಾತೀನಾಂ ಏವ - ಜಾತಿಗಳಿಗೂ, ಸಾಧಾರಣಃ-ಸಮಾನವಾದುದು.

**ವೇದಾಧೀತಿಶ್ಚ ಯಜನಂ ದ್ವಿಜಾನಾಮಧಿಕಂ ಸ್ಮೃತಂ ।**

**ಅಧ್ಯಾಪನಂ ಯಾಜನಂ ಚ ಪ್ರತಿಗ್ರಹ ಇತಿ ತ್ರಯಂ ॥ ೯೪ ॥**

---

ಮಾತೃವೃತ್ತಿಯನ್ನೂ, ಪ್ರತಿಲೋಮಿಗಳು ಪಿತೃವೃತ್ತಿಯನ್ನೂ ಅನುಸರಿಸುವುದೇ ವಿಹಿತವು; ಏಕೆಂದರೆ ಪ್ರಾಯಶಃ ಅನುಲೋಮಿಗಳು ತಾಯಿಯ ಸಮೀಪದಲ್ಲಿಯೂ, ಪ್ರತಿಲೋಮಿಗಳು ತಂದೆ ಬಳಿಯಲ್ಲಿಯೂ ಇರುತ್ತ ಬಾಲ್ಯ, ಯೌವನಾವಸ್ಥೆಗಳನ್ನು ಕಳೆಯುತ್ತಾರೆ; ನಾನಾ ಜಾತಿಗಳಿಗೆ ವಿಹಿತವಾಗಿರುವ ಧರ್ಮಗಳನ್ನು ಹೇಳುತ್ತೇನೆ, ಕೇಳು (೯೨). ಪ್ರಾಣಿದಯೆ, ದಾನ, ಅಹಿಂಸೆ, ಮೊದಲಾದವು, ಎಲ್ಲ ಜಾತಿಯವರಿಗೂ ಸಮಾನವಾದ ಧರ್ಮಗಳು; ಹಾಗೆಯೇ ಶ್ರೀವಿಷ್ಣುವಿನ ನಾಮಸಂಕೀರ್ತನೆಯು, ಸರ್ವಜಾತೀಯರ ಮುಖ್ಯಧರ್ಮವಾಗಿದೆ (೯೩). ವೇದಾಧ್ಯಯನ, ಯಜ್ಞಮಾಡುವುದು, ಎಂಬೀ ಎರಡು ದ್ವಿಜರಿಗೆ, ಇತರರಿಗಿಂತ ಅಧಿಕವಾದ ಧರ್ಮಗಳು; ಅನ್ಯರಿಗೆ ವೇದಗಳ ಅಧ್ಯಯನ ಮಾಡಿಸುವುದು, ಅವರಿಂದ

**ವಿಪ್ರಾಣಾಮಧಿಕೋ ಧರ್ಮೋ ಜೀವಿಕಾ ಪರಿಕೀರ್ತಿತಾ ।**
**ಕ್ಷತ್ರಿಯೋ ಯುದ್ಧಜೀವೀ ಸ್ಯಾಚ್ಛಸ್ತ್ರವೃತ್ತ್ಯಾ ಚ ಸೇವಕಃ ॥ ೯೫ ॥**
**ಕೃಷಿಗೋರಕ್ಷವಾಣಿಜ್ಯವೃತ್ತಿರ್ವೈಶ್ಯ ಉದಾಹೃತಃ ।**
**ಸೇವಾಕರ್ಮಸ್ತು ಶೂದ್ರಸ್ಯ ವೃತ್ತಿರಿತ್ಯಭಿಧೀಯತೇ ॥ ೯೬ ॥**

ವೇದಾಧೀತಿಃ-ವೇದಾಧ್ಯಯನವೂ, ಚ-ಮತ್ತು ಯಜನಂ-ಯಜ್ಞ ಮಾಡುವುದು, ದ್ವಿಜಾನಾಂ-ದ್ವಿಜರಿಗೆ, ಅಧಿಕಂ-ಅಧಿಕವೆಂದು, (ಅನ್ಯಜಾತಿಗಳಗಿಂತ ಹೆಚ್ಚಾದುವುಗಳೆಂದು), ಸ್ಮೃತಂ-ತಿಳಿಯಲ್ಪಟ್ಟಿದೆ; ಅಧ್ಯಾಪನಂ-ಅಧ್ಯಯನ ಮಾಡಿಸುವುದು, ಯಾಜನಂ-ಯಜ್ಞಮಾಡಿಸುವುದು (ಅನ್ಯದ್ವಿಜರಿಂದ ವೇದಾಧ್ಯಯನ ಯಜ್ಞಯಾಗಾದಿಗಳನ್ನು ಮಾಡಿಸುವುದು), ಚ-ಮತ್ತು ಪ್ರತಿಗ್ರಹಃ-ದಾನವನ್ನು ಹಿಡಿಯುವುದು (ದಾನಸ್ವೀಕಾರ), ಇತಿ ತ್ರಯಂ-ಹೀಗೆಂಬ ಮೂರು, ವಿಪ್ರಾಣಾಂ-ಬ್ರಾಹ್ಮಣರಿಗೆ, ಅಧಿಕಃ ಧರ್ಮಃ-(ಅನ್ಯರಗಿಂತ) ಅಧಿಕವಾದ ಧರ್ಮವು, ಜೀವಿಕಾ-ಜೀವಿಕೆ (ಜೀವನೋಪಾಯವೆಂದು), ಪರಿಕೀರ್ತಿತಾ- ಹೇಳಲ್ಪಟ್ಟಿರುತ್ತವೆ; ಕ್ಷತ್ರಿಯಃ-ಕ್ಷತ್ರಿಯನು, ಯುದ್ಧಜೀವೀ-ಯುದ್ಧದಿಂದ ಜೀವಿಸುವವನು (ಸೈನ್ಯದಲ್ಲಿ ಕೆಲಸ ಮಾಡಿ ಜೀವಿಸುವವನು), ಸ್ಯಾತ್ - ಆಗತಕ್ಕದ್ದು; ಚ - ಮತ್ತು ಶಸ್ತ್ರವೃತ್ತ್ಯಾ- (ಖಡ್ಗಾದಿ) ಆಯುಧಗಳಿಗೆ ಸಂಬಂಧಪಟ್ಟ ಕೆಲಸದಿಂದ, ಸೇವಕಃ-ಸೇವಕನೂ ಆಗಬಹುದು; ವೈಶ್ಯಃ-ವೈಶ್ಯನು, ಕೃಷಿಗೋರಕ್ಷವಾಣಿಜ್ಯವೃತ್ತಿಃ- ಕೃಷಿ, ಗೋರಕ್ಷಣೆ, ವ್ಯಾಪಾರಗಳೇ ಜೀವಿಕೆಯಾಗಿ ಉಳ್ಳವನು, ಉದಾಹೃತಃ- (ಎಂದು) ಹೇಳಲ್ಪಡುವವನು; ಶೂದ್ರಸ್ಯ-ಶೂದ್ರನಿಗೆ, ಸೇವಾಕರ್ಮಃ ತು- (ಅನ್ಯರ-ದ್ವಿಜರ) ಸೇವಾಕರ್ಮವೇ, ವೃತ್ತಿಃ-ಜೀವಿಕೆಯೆಂದು, ಅಭಿಧೀಯತೇ- ಹೇಳಲ್ಪಡುತ್ತದೆ.

**ಸಜಾತೀಯಾಸ್ತು ಭೋಜ್ಯಾನ್ನಶ್ಚತುರ್ನ್ಯೂನಾಸ್ತು ಮಧ್ಯಮಾಃ ।**
**ಅಧಮಾ ದ್ವಾದಶನ್ಯೂನಾ ವಿಂಶನ್ಯೂನಾಧಮಾಧಮಾಃ ॥ ೯೭ ॥**

---

ಯಜ್ಞಯಾಗಾದಿಗಳನ್ನು ಮಾಡಿಸುವುದು, ದಾನಸ್ವೀಕಾರ ಮಾಡುವುದು, ಇವು ಮೂರು ಬ್ರಾಹ್ಮಣರಿಗೆ ಮಾತ್ರ, ಹೆಚ್ಚಿನ ಧರ್ಮಗಳು; ಇವು ಮೂರು ಅವರಿಗೆ ಜೀವಿಕೆಗಳೂ ಆಗಿವೆ; ಕ್ಷತ್ರಿಯನು ಯುದ್ಧಜೀವಿಯಾಗಬೇಕು; ಶತ್ರುಗಳಿಂದ ರಾಜ್ಯವನ್ನು ರಕ್ಷಿಸುವ ಕೆಲಸದಲ್ಲಿರುವುದು ಅವನ ಧರ್ಮವೂ ಜೀವಿಕೆಯೂ ಆಗಿರುತ್ತದೆ; ಆತನು ಆಯುಧಗಳಿಗೆ ಸಂಬಂಧಿಸಿದ ಕೆಲಸಗಳಲ್ಲಿ ತೊಡಗಿ, ಅನ್ಯರಲ್ಲಿ ಆ ಕೆಲಸಗಳ ಸೇವಕನೂ ಆಗಿರಬಹುದು; ವೈಶ್ಯನು, ಕೃಷಿ, ಗೋರಕ್ಷಣೆ, ವಾಣಿಜ್ಯವೃತ್ತಿಯುಳ್ಳವನಾಗಿರಬೇಕು; ಶೂದ್ರನಿಗೆ (ಮೇಲೆ ಹೇಳಿದ ಸರ್ವ ಸಾಮಾನ್ಯವಾದ ವಿಷ್ಣುನಾಮಸಂಕೀರ್ತನಾದಿಗಳೊಂದಿಗೆ) ದ್ವಿಜರ ಸೇವೆಯೂ, ಶ್ರೀಹರಿ ಪ್ರೀತಿಕರವಾದ ಧರ್ಮವೂ, ಜೀವಿಕೆಯೂ ಆಗಿರುತ್ತದೆ (೯೪-೯೬).

**ತನ್ನ್ಯೂನಾ ನೈವ ಭೋಜ್ಯಾನ್ನಾ ಇತಿ ಶಾಸ್ತ್ರವಿನಿರ್ಣಯಃ ।**

ಸಜಾತೀಯಾಃ ತು-ಸಜಾತೀಯರೇ (ಸ್ವಜಾತಿಯವರು ಮಾತ್ರ), ಭೋಜ್ಯಾನ್ನಾಃ-ಭೋಗಯೋಗ್ಯವಾದ ಅನ್ನವುಳ್ಳವರು (ಅವರ ಹಸ್ತದಿಂದ ಅವರು ಪಕ್ವಮಾಡಿದ ಅನ್ನಾದಿಗಳನ್ನು ಸ್ವೀಕರಿಸಬಹುದು); ಚತುರ್ನ್ಯೂನಾಃ - ನಾಲ್ಕು ಅಂಶಗಳಿಂದ ಹೀನರಾದವರು, ಮಧ್ಯಮಾಃ-ಮಧ್ಯಮರು (ಭೋಜ್ಯಾನ್ನರಲ್ಲಿ ಮಧ್ಯಮರು); ದ್ವಾದಶನ್ಯೂನಾಃ-೧೨ ಅಂಶಗಳಿಂದ ನೀಚರು, ಅಧಮಾಃ- ಅಧಮರು; ವಿಂಶನ್ಯೂನಾಃ-೨೦ ಅಂಶಗಳಿಂದ ಹೀನರು, ಅಧಮಾಧಮಾಃ- ಅಧಮಾಧಮರು; ತನ್ನ್ಯೂನಾಃ-೨೦ ಅಂಶಗಳಿಗೂ ಹೆಚ್ಚು ಅಂಶಗಳಿಂದ (ಜಾತ್ಯಾ) ನ್ಯೂನರಾದವರು, ಭೋಜ್ಯಾನ್ನಾಃ-ಭೋಜ್ಯಾನ್ನರು; ನೈವ-ಅಲ್ಲವೇ ಅಲ್ಲ (ಅವರಿಂದ ಅನ್ನಾದಿಗಳಿಂದ ಸ್ವೀಕರಿಸತಕ್ಕದ್ದಲ್ಲ); ಇತಿ-ಹೀಗೆಂದು, ಶಾಸ್ತ್ರವಿನಿರ್ಣಯಃ- ಶಾಸ್ತ್ರನಿರ್ಣಯವು.

**ವಿನೋದಕೇನ ಯತ್ಪಕ್ವಂ ಯತ್ಪಕ್ವಂ ತೈಲಸರ್ಪಿಷಾ ॥ ೯೮ ॥**
**ತದನ್ನಂ ಫಲವದ್ಗ್ರಾಹ್ಯಂ ನಾತ್ರ ಕಾರ್ಯಾ ವಿಚಾರಣಾ ।**

ಯತ್-ಯಾವುದು (ಆಹಾರವಸ್ತುವು), ಉದಕೇನ ವಿನಾ-ನೀರಿಲ್ಲದೇ, ಪಕ್ವಂ-ಬೆಂದುದೋ (ಪಕ್ವವಾದುದೋ), (ಮತ್ತು) ಯತ್-ಯಾವುದು, ತೈಲ ಸರ್ಪಿಷಾ-ಎಣ್ಣೆ ತುಪ್ಪದಿಂದ, ಪಕ್ವಂ-ಪಕ್ವವಾದುದೋ, ತತ್ ಅನ್ನಂ-ಆ ಆಹಾರ ಪದಾರ್ಥವು, ಫಲವತ್-ಫಲದಂತೆ (ಹಣ್ಣಿನಂತೆ), ಗ್ರಾಹ್ಯಂ-ಸ್ವೀಕಾರಕ್ಕೆ ಅರ್ಹ ವಾದುದು; (ನೀರಿನಲ್ಲಿ ಬೇಯಿಸದ, ಎಣ್ಣೆ ತುಪ್ಪಗಳಲ್ಲಿ ಕರಿದ (ಪಕ್ವಗೊಳಿಸಿದ) ಆಹಾರವು, ಅನ್ಯರಿಂದಲೂ—ಭೋಜ್ಯಾನ್ನರಲ್ಲದವರಿಂದಲೂ, ಗ್ರಾಹ್ಯವು); ಅತ್ರ-ಈ ವಿಷಯದಲ್ಲಿ, ವಿಚಾರಣಾ-ಯಾವ ವಿಚಾರವೂ, ನ ಕಾರ್ಯಾ-ಮಾಡತಕ್ಕದ್ದಲ್ಲ.

---

ಸ್ವಜಾತಿಯರಿಂದ, ಅನ್ನಾದಿ ಆಹಾರ ವಸ್ತುಗಳನ್ನು ಸ್ವೀಕರಿಸಬಹುದು; ಅನ್ನಸ್ವೀಕಾರ ವಿಷಯದಲ್ಲಿ ಜಾತ್ಯಾ ೪ ಅಂಶಗಳಿಂದ ಹೀನರಾದವರು, ಮಧ್ಯಮರು; ೧೨ ಅಂಶಗಳಿಂದ ಹೀನರು, ಅಧಮರು; ೨೦ ಅಂಶಗಳಿಂದ ಹೀನರು ಅಧಮಾಧಮರು;[1] ಅದಕ್ಕಿಂತ ಅಧಿಕಾಂಶಗಳಿಂದ ನ್ಯೂನರು ಭೋಜ್ಯಾನ್ನರು ಅಲ್ಲವೇ ಅಲ್ಲ (ಅವರು ಸ್ಪರ್ಶಿಸಿದ, ಪಕ್ವಗೊಳಿಸಿದ ಅನ್ನಾದಿಗಳು ಸ್ವೀಕರಿಸಲು ಯೋಗ್ಯವಾಗುವುದಿಲ್ಲ); ಇದು ಶಾಸ್ತ್ರವಿನಿರ್ಣಯವು (೯೭). ನೀರಿನಲ್ಲಿ ಬೇಯಿಸದ, (ಹುರಿದ) ಎಣ್ಣೆ ತುಪ್ಪಗಳಲ್ಲಿ ಕರಿದ, (ಪಕ್ವಗೊಳಿಸಿದ) ಆಹಾರ ಪದಾರ್ಥಗಳು, ಫಲದಂತೆ, ಗ್ರಾಹ್ಯವೆಂದು ತಿಳಿಯಬೇಕು—ವಿಚಾರ ಮಾಡುವ ಕಾರಣವಿಲ್ಲ (೯೮). ಅನ್ನಸ್ವೀಕಾರ ವಿಷಯದಲ್ಲಿ

---

1. ಜಾತಿಗಳಲ್ಲಿರುವ ನ್ಯೂನಾಂಶಗಳ ಬಗ್ಗೆ ೩೧ನೇ ಅಧ್ಯಾಯದ ೩-೪ನೇ ಶ್ಲೋಕಗಳನ್ನು ನೋಡಿರಿ.

ಅಧಮಾನ್ಮಧ್ಯಮಂ ಚೇದಂ ಮಧ್ಯಾದುತ್ತಮಮುಚ್ಯತೇ ॥ ೯೯ ॥
ಭೋಜ್ಯಾನ್ನೇ ಯೋಧಮಃ ಪ್ರೋಕ್ತೋ ಜಲಪಾನೇ ಸ ಉತ್ತಮಃ ।
ವಿಂಶನ್ಯೂನಾ ತು ಮಧ್ಯಂ ಸ್ಯಾತ್ ಷಷ್ಟ್ಯೂನೇಽಧಮ ಈರಿತಂ ॥
ವಿಂಶೋತ್ತರಶತಾಂಶಾತ್ಸ್ಯಾದಧಮಾದಧಮಂ ತ್ವಿತಿ ।
ಯತಸ್ತಸ್ಮಾಚ್ಚ ಪರತೋ ಜಲಪಾನಂ ನ ಯುಜ್ಯತೇ ।
ವಿಪ್ರಧರ್ಮಃ ಭವೇತ್ಸೋಪಿ ಮೂರ್ಧಾವಸಿಕ್ತತೋಧಿಕಃ ॥ ೧೦೧ ॥

ಇದಂ-ಇದು (ಅನ್ನರಿಂದ ಅನ್ನಸ್ವೀಕಾರವು), ಅಧಮಾತ್-ಅಧಮನಿಗಿಂತ, ಮಧ್ಯಮಂ-ಮಧ್ಯಮನೂ (ಅಧಮನಿಂದ ಸ್ವೀಕರಿಸುವುದಕ್ಕಿಂತ ಮಧ್ಯಮನಿಂದ ಸ್ವೀಕರಿಸುವುದೂ), ಉತ್ತಮಂ-ಉತ್ತಮವಾಗುತ್ತದೆ; ಮಧ್ಯಮಾತ್-ಮಧ್ಯಮನಿಗಿಂತ, ಉತ್ತಮಂ-ಉತ್ತಮನು, ಉಚ್ಯತೇ-(ಎಂದು) ಹೇಳಲಾಗುತ್ತದೆ; ಭೋಜ್ಯಾನ್ನೇ-ಭೋಜ್ಯಾನ್ನ ವಿಷಯದಲ್ಲಿ ಯಃ-ಯಾರು, ಅಧಮಃ-ಅಧಮನೋ, ಸಃ-ಅವನು, ಜಲಪಾನೇ-ಜಲಪಾನ ವಿಷಯದಲ್ಲಿ (ಅವನಿಂದ ಕುಡಿಯಲು ಜಲವನ್ನು ಸ್ವೀಕರಿಸುವ ವಿಷಯದಲ್ಲಿ), ಉತ್ತಮಃ ಪ್ರೋಕ್ತಃ-ಉತ್ತಮನೆಂದು ಹೇಳಲ್ಪಡುವನು; ವಿಂಶನ್ಯೂನಾ ತು-೨೦ ಅಂಶಗಳಿಂದ ಹೀನನಾದರೋ, ಮಧ್ಯಂ ಸ್ಯಾತ್-ಮಧ್ಯಮನಾಗುತ್ತಾನೆ; ಷಷ್ಟ್ಯೂನೇ-೬೦ ಅಂಶಗಳಿಂದ ಹೀನನಾಗಿದ್ದಲ್ಲಿ ಅಧಮಃ-ಅಧಮನೆಂದು, ಈರಿತಂ-ಹೇಳಲಾಗಿದೆ; ವಿಂಶೋತ್ತರ ಶತಾಂಶಾತ್-೧೨೦ ಅಂಶಗಳಿಂದ ಹೀನತ್ವದಿಂದ, ಅಧಮಾಧಮಂ ತು- ಅಧಮಾಧಮವೆಂದೇ, (ಈರಿತಂ- ಹೇಳಲಾಗಿದೆ); ಯತಃ-ಯಾವ ಕಾರಣದಿಂದ, ತಸ್ಮಾತ್ ಚ-ಆ ೧೨೦ ಅಂಶಗಳಿಂದಲೂ, ಪರತಃ-ಆಚೆಯವನಿಂದ (ಅಧಿಕಾಂಶ ಹೀನನಿಂದ), ಜಲಪಾನಂ- ಜಲಪಾನವು, ನ ಯುಜ್ಯತೇ-ಯೋಗ್ಯವಾಗುವುದಿಲ್ಲವೋ, (ಆ ಕಾರಣದಿಂದ), ವಿಪ್ರಧರ್ಮಃ-(ಇದು) ಬ್ರಾಹ್ಮಣಧರ್ಮವು; ಸಃ ಅಪಿ-ಬ್ರಾಹ್ಮಣನಾದರೋ, ಮೂರ್ಧಾವಸಿಕ್ತತಃ-ಮೂರ್ಧಾವಸಿಕ್ತನಿಗಿಂತ, ಅಧಿಕಃ-(ಜಾತಿಯಲ್ಲಿ) ಉತ್ತಮನು.

---

ಅಧಮನಗಿಂತ ಮಧ್ಯಮನೂ, ಮಧ್ಯಮನಗಿಂತ ಉತ್ತಮನೂ, ಉತ್ತಮರೆಂದೆನಿಸುತ್ತಾರೆ; ಭೋಜ್ಯಾನ್ನರಲ್ಲಿ ಅಧಮನಾದವನು, ಪಾನಯೋಗ್ಯಜಲವುಳ್ಳವರಲ್ಲಿ (ಪಾನಾರ್ಥವಾಗಿ ಜಲಸ್ವೀಕಾರ ವಿಷಯದಲ್ಲಿ) ಉತ್ತಮನೆನಿಸುತ್ತಾನೆ (ಆತನಿಂದ ಜಲಸ್ವೀಕಾರವು ಯೋಗ್ಯವಾಗುತ್ತದೆ—ಉತ್ತಮಪಕ್ಷವೇ ಆಗುತ್ತದೆ); ೨೦ ಅಂಶಗಳಿಂದ (ಜಾತ್ಯಾ)ಹೀನನು, ಜಲಪಾನ ವಿಷಯಕ್ಕೆ ಮಧ್ಯಮನೂ, ೬೦ ಅಂಶಗಳಿಂದ ಹೀನನು, ಅಧಮನೂ, ೧೨೦ ಅಂಶಗಳಿಂದ ಹೀನನು, ಅಧಮಾಧಮನೆಂದೂ ಹೇಳಲ್ಪಡುತ್ತದೆ; ಹೀಗಿರುವುದರಿಂದ, ಇದು, (ಅನ್ನಜಲ ಸ್ವೀಕಾರ ವಿಷಯಕ ತಾರತಮ್ಯ ನಿಯಮವು) ಬ್ರಾಹ್ಮಣವಿಷಯವು (ಕ್ಷತ್ರಿಯಾದಿ

**ಪ್ರತಿಗ್ರಹಾದೌ ತಸ್ಮಾತ್ ಸ್ಯಾದಧಿಕಾರೀ ಸ ಇತ್ಯಪಿ ।**
**ಬ್ರಹ್ಮಕ್ಷತ್ರವಿಶಾಂ ಪುತ್ರಾಃ ಅನುಲೋಮಾಃ ಷಡೇವ ತು ॥ ೧೦೨ ॥**
**ಶೂದ್ರ ವಿಟ್ ಕ್ಷತ್ರಜಾ ಪುತ್ರಾಃ ಪ್ರತಿಲೋಮಾಷಡೇವ ತು ।**

ತಸ್ಮಾತ್-ಆದ್ದರಿಂದ, ಸಃ-ಬ್ರಾಹ್ಮಣನು, ಪ್ರತಿಗ್ರಹಾದೌ-ದಾನಸ್ವೀಕಾರ ಮೊದಲಾದ್ದರಲ್ಲಿ ಅಧಿಕಾರೀ-ಅಧಿಕಾರಿಯು (ಅರ್ಹನು), ಸ್ಯಾತ್-ಆಗುವವನು, ಇತ್ಯಪಿ-ಎಂದೂ ಹೇಳಲ್ಪಟ್ಟಿರುವನು; ಬ್ರಹ್ಮಕ್ಷತ್ರವಿಶಾಂ-ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ, ಪುತ್ರಾಃ-ಪುತ್ರರು, ಷಟ್-ಆರು, ಏವ-ಮಾತ್ರ, ಅನುಲೋಮಾಃ-ಅನುಲೋಮಿಗಳು; ಶೂದ್ರಾವಿಟ್‌ಕ್ಷತ್ರಜಾಃ-ಶೂದ್ರ, ವೈಶ್ಯ, ಕ್ಷತ್ರಿಯರಿಂದ ಹುಟ್ಟಿದವರು, ಪ್ರತಿಲೋಮಾಃ-ಪ್ರತಿಲೋಮಿಗಳಾದ, ಪುತ್ರಾಃ-ಪುತ್ರರೂ, ಷಟ್ ಏವ ತು-ಆರು ಮಾತ್ರ.

**ಮಂತ್ರೀ ಸಭಾಸತ್ಸಚಿವಃ ಸೇನಾನೀಃ ಕೋಶರಕ್ಷಕಃ ॥ ೧೦೩ ॥**
**ಯೋದ್ಧಾ ವಿಪ್ರಾದಿಭೋಜ್ಯಾನ್ನೋಽಖಿಲವಿದ್ಯಾವಿಶಾರದಃ ।**
**ಉಪದೇಷ್ಟೋಪವೇದಾನಾಂ ಪ್ರೋಕ್ತೋ ಮೂರ್ಧಾವಸಿಕ್ತಕಃ ॥ ೧೦೪ ॥**

ಮೂರ್ಧಾವಸಿಕ್ತನಿಗೆ ಯೋಗ್ಯವಾಗುವ ಕರ್ಮಗಳನ್ನು ಹೇಳುತ್ತಾರೆ:—

ಮಂತ್ರೀ-ಮಂತ್ರಿಯೂ, ಸಭಾಸತ್ಸಚಿವಃ-ರಾಜಸಭೆಯಲ್ಲಿ ಸಲಹೆಗಾರನೂ, ಸೇನಾನೀಃ - ಸೇನಾನಾಯಕನೂ, ಕೋಶರಕ್ಷಕಃ - ಕೋಶರಕ್ಷಕನೂ, ಯೋದ್ಧಾ-ಯೋದ್ಧನೂ (ಸೈನಿಕನೂ), ವಿಪ್ರಾದಿಭೋಜ್ಯಾನ್ನಃ-ಬ್ರಾಹ್ಮಣಾದಿಗಳಿಗೆ ಪಾಕಕರ್ತನೂ,

---

ಇತರರಿಗೆ ಯಥಾಯೋಗ್ಯವಾಗಿ ಉತ್ತಮಾಧಮ ಮಧ್ಯಮ ವಿಭಾಗಗಳನ್ನು ತಿಳಿಯಬೇಕು); ಬ್ರಾಹ್ಮಣನು ಮೂರ್ಧಾವಸಿಕ್ತನಿಗಿಂತ ಉತ್ತಮನು (೯೯-೧೦೧). ಆದ್ದರಿಂದ ಬ್ರಾಹ್ಮಣನೇ ದಾನಸ್ವೀಕಾರಾದಿಗಳಲ್ಲಿ ಅಧಿಕಾರಿಯೆಂದು ಹೇಳಲ್ಪಟ್ಟಿರುವನು; ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಂದ ಜನಿಸುವ ಅನುಲೋಮ ಜಾತಿಯ ಪುತ್ರರು ಆರು (ಅನುಲೋಮಜಾತಿಗಳು ಆರು ಮಾತ್ರ); ಇದರಂತೆ, ಶೂದ್ರ ವೈಶ್ಯ ಕ್ಷತ್ರಿಯರಿಂದ ಹುಟ್ಟುವ ಪ್ರತಿಲೋಮ ಜಾತಿಗಳೂ[1] ಆರು ಮಾತ್ರ (೧೦೨). ಅವುಗಳಲ್ಲಿ ಮೊದಲಿನ ಅನುಲೋಮ ಜಾತಿಯವನಾದ ಮೂರ್ಧಾವಸಿಕ್ತನು, ಮಂತ್ರೀ, ರಾಜಸಭಾಸಚಿವ, ಸೇನಾನೀ, ಕೋಶರಕ್ಷಕ, ಸೈನಿಕ, ವಿಪ್ರರ ಪಾಕಕರ್ತ,

---

1. ಬ್ರಾಹ್ಮಣನಿಂದ, ಕ್ಷತ್ರಿಯ ವೈಶ್ಯ ಶೂದ್ರ ಸ್ತ್ರೀಯರಲ್ಲಿ ಮೂರು, ಕ್ಷತ್ರಿಯನಿಂದ, ವೈಶ್ಯ ಶೂದ್ರ ಸ್ತ್ರೀಯರಲ್ಲಿ ಎರಡು, ವೈಶ್ಯನಿಂದ ಶೂದ್ರಸ್ತ್ರೀಯಲ್ಲಿ ಒಂದು. ಹೀಗೆ ಒಟ್ಟು ಆರು ಅನುಲೋಮ ಜಾತಿಗಳು; ಶೂದ್ರನಿಂದ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಸ್ತ್ರೀಯರಲ್ಲಿ ಮೂರು, ವೈಶ್ಯನಿಂದ, ಕ್ಷತ್ರಿಯ ಬ್ರಾಹ್ಮಣ ಸ್ತ್ರೀಯರಲ್ಲಿ ಎರಡು, ಕ್ಷತ್ರಿಯನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಒಂದು, ಹೀಗೆ ಒಟ್ಟು ಆರು ಪ್ರತಿಲೋಮ ಜಾತಿಗಳು; ಈ ಅನುಲೋಮಾದಿಗಳಿಗೆ ಯೋಗ್ಯವಾಗುವ ಕರ್ಮಗಳನ್ನು ಮುಂದಿನ ಶ್ಲೋಕಗಳಿಂದ ಸಂಗ್ರಹಿಸುತ್ತಾರೆ.

ಅಖಿಲವಿದ್ಯಾವಿಶಾರದಃ - ಸಮಸ್ತ ವಿದ್ಯೆಗಳಲ್ಲಿ ಸಮರ್ಥನೂ, ಉಪವೇದಾನಾಂ- ಉಪವೇದಗಳ (ಆಯುರ್ವೇದ, ಧನುರ್ವೇದ, ಗಾಂಧರ್ವ, ಅರ್ಥ ಶಾಸ್ತ್ರಗಳ— ಅಧ್ಯಾಯ ೩-ಶ್ಲೋಕ ೧೦), ಉಪದೇಷ್ಟಾ- ಉಪದೇಶಕನೂ, ಮೂರ್ಧಾವಸಿಕ್ತಃ- ಮೂರ್ಧಾವಸಿಕ್ತನು, ಪ್ರೋಕ್ತಃ-(ಆಗಿರಬಹುದೆಂದು) ಹೇಳಲ್ಪಟ್ಟಿರುವನು.

**ಚಿಕಿತ್ಸಕಃ ಪತ್ರಲೇಖೋ ರತ್ನಸೌವರ್ಣವಾಸಸಾಂ ।**
**ವಿಕ್ರೇತಾ ನಾಣಕಾದೀನಾಂ ಧಾನ್ಯಾದೀನಾಂ ಸುವಸ್ತುನಾಂ ॥ ೧೦೫ ॥**
**ಉಪವೇದೋಪದೇಷ್ಟಾ ಚ ತುಲ್ಯನೀಚಾಧಿಕಾರಿಣಾಂ ।**
**ಪುರಾಣಾಖ್ಯಾನನಿಪುಣಃ ಪುಸ್ತಕಾದಿವಿಲೇಖಕಃ ॥ ೧೦೬ ॥**
**ನೃಪಾಣಾಂ ಸಚಿವಃ ಪ್ರೋಕ್ತೋಽಂಬಷ್ಠ ಇತ್ಯಾದಿಕರ್ಮಕಃ ।**

ಅಂಬಷ್ಠಾಗೆ ಯೋಗ್ಯವೆನಿಸುವ ಕರ್ಮಗಳಾವುವೆಂದರೆ—ಅಂಬಷ್ಠ- ಅಂಬಷ್ಠನು, ಚಿಕಿತ್ಸಕಃ-ವೈದ್ಯನು, ಪತ್ರಲೇಖಃ-(ರಾಜಕೀಯ) ಪತ್ರಗಳನ್ನು ಬರೆಯುವವನೂ, ರತ್ನಸೌವರ್ಣವಾಸಸಾಂ-ರತ್ನ ಭಂಗಾರಖಚಿತ ವಸ್ತ್ರ ನಾಣಕಾದೀನಾಂ- ಮುದ್ರಿತ ನಾಣ್ಯಾದಿ, ಧಾನ್ಯಾದೀನಾಂ-ಧಾನ್ಯಾದಿ, ಸುವಸ್ತುನಾಂ-ಪವಿತ್ರವಸ್ತುಗಳ, ವ್ಯಾಪಾರ ಮಾಡುವವನೂ, ಚ - ಮತ್ತು ತುಲ್ಯನೀಚಾಧಿಕಾರಿಣಾಂ - ಸ್ವಸಮಾನರೂ ನೀಚರೂ (ಜಾತಿಯಿಂದ) ಆದ ಅಧಿಕಾರಿಗಳಿಗೆ, ಉಪವೇದೋಪದೇಷ್ಟಾ- (ಧನುರ್ವೇದಾದಿ) ಉಪವೇದಗಳ ಉಪದೇಶಕನೂ, ಪುರಾಣಾಖ್ಯಾನನಿಪುಣಃ- ಪುರಾಣಪ್ರವಚನಕುಶಲನೂ, ಪುಸ್ತಕಾದಿವಿಲೇಖಕಃ - ಪುಸ್ತಕ ಮೊದಲಾದವುಗಳನ್ನು ಬರೆಯುವವನೂ (ಗ್ರಂಥರಚನಕರ್ತನೂ), ನೃಪಾಣಾಂ- ರಾಜರುಗಳ,

---

ಸಕಲ ವಿದ್ಯಾವಿಶಾರದ, ಉಪವೇದಗಳ ಉಪದೇಶಕ, ಈ ಕರ್ಮಗಳಲ್ಲಿ ತೊಡಗುವುದು ಯೋಗ್ಯವಾಗುತ್ತದೆ (೧೦೩-೧೦೪). ಎರಡನೇ ಅನುಲೋಮಜನಾದ ಅಂಬಷ್ಠನು,[1] ವೈದ್ಯ, ಪತ್ರಲೇಖಕ (Correspondent). ರತ್ನಸುವರ್ಣ ವಸ್ತ್ರಾದಿಗಳ ವ್ಯಾಪಾರ, ಮುದ್ರಿತ ನಾಣ್ಯಾದಿ ವಸ್ತುಗಳ (ನಾಣಕಗಳ) ಹಾಗೂ ಧಾನ್ಯಾದಿ ಪವಿತ್ರ ಪದಾರ್ಥಗಳ ವ್ಯಾಪಾರಿಯೂ, ಉಪವೇದಗಳ ಉಪದೇಶಕನೂ, (ಜಾತಿಯಿಂದ ತನ್ನ ಸಮರೂ ಮತ್ತು ಕನಿಷ್ಠರೂ ಆದವರಿಗೆ ಮಾತ್ರ). ಪುರಾಣಪ್ರವಚನ ನಿಪುಣನೂ, ಗ್ರಂಥಗಳನ್ನು ಬರೆಯುವನೂ, ರಾಜರಿಗೆ ಸಚಿವನೂ, ಆಗಿದ್ದು ಈ ಮೊದಲಾದ ಕರ್ಮಗಳನ್ನು ಮಾಡಲರ್ಹನೆನಿಸುತ್ತಾನೆ (೧೦೫-೧೦೬). ಪಾರಾಶವನು[2] ಉತ್ತಮ ಜಾತಿಯವರಲ್ಲಿ ಪರಿಚಾರಕನಾಗಿರುತ್ತ

1. ಇದೇ ಅಧ್ಯಾಯದ ಶ್ಲೋಕ ೧೧ ರಿಂದ ೧೫ ಮತ್ತು ೩೧, ನೋಡಿರಿ.

2. ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಜನಿಸಿದವನು ಪಾರಾಶವ. ವೈಶ್ಯಸ್ತ್ರೀಯಲ್ಲಿ ಜನಿಸಿದವನು ಅಂಬಷ್ಠ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದವನು. ಮೂರ್ಧಾವಸಿಕ್ತ.

ಸಚಿವಃ-ಸಚಿವನೂ (ಸಲಹೆಗಾರನೂ), ಇತ್ಯಾದಿ-ಈ ಮೊದಲಾದ, ಕರ್ಮಕಃ-ಕರ್ಮಗಳುಳ್ಳವನೆಂದು, ಪ್ರೋಕ್ತಃ-ಹೇಳಲ್ಪಟ್ಟಿರುವನು.

**ಸುವರ್ಣಾದ್ಯಷ್ಟಲೋಹಾನಾಮುಪಲೋಹಸ್ಯ ಚಾಪಿ ತು ॥ ೧೦೭ ॥**
**ಅಲಂಕಾರಾದ್ಯಖಿಲಕೃತ್ ಕವಚಾದಿವಿಧಾಯಕಃ ।**
**ರತ್ನಮಾಣಿಕ್ಯಮುಕ್ತಾನಾಂ ವೇಧಭೇದಾದಿಕರ್ಮಕೃತ್ ॥ ೧೦೮ ॥**
**ಪರಿಚರ್ಯಾಕರೋಽಪ್ಯುಚ್ಚ ಜಾತೇಃ ಪಾರಾಶವಾಭಿದಃ ।**

ಪಾರಾಶವಯೋಗ್ಯಕರ್ಮಗಳು ಹೇಳಲ್ಪಡುತ್ತವೆ.

ಪಾರಾಶವಾಭಿದಃ-ಪಾರಾಶವನೆಂಬ ನಾಮದ ಅನುಲೋಮಿಯು, ಉಚ್ಚಜಾತೇಃ-ಉತ್ತಮವರ್ಣದವನ, ಪರಿಚರ್ಯಾಕರಃ-ಪರಿಚಾರಿಕೆಯನ್ನು ಮಾಡುವವನಾಗಿದ್ದುಕೊಂಡು, ಸುವರ್ಣಾದ್ಯಷ್ಟಲೋಹಾನಾಂ-ಸುವರ್ಣಾದಿ ಎಂಟು ಲೋಹಗಳ, ಅಪಿ ತು-ಮತ್ತು ಉಪಲೋಹಸ್ಯ-ಯಾವುದೇ ಅನ್ಯ ಲೋಹದ, ಅಲಂಕಾರಾದ್ಯಖಿಲಕೃತ್-ಸಮಸ್ತ ಅಲಂಕಾರಾದಿಗಳನ್ನು ಮಾಡುವವನೂ, ಕವಚಾದಿ ವಿಧಾಯಕಃ-ಕವಚಾದಿಗಳ ರಚನೆ ಮಾಡುವವನೂ, ರತ್ನಮಾಣಿಕ್ಯ ಮುಕ್ತಾನಾಂ-ರತ್ನ ಮಾಣಿಕ್ಯ ಮುತ್ತುಗಳ, ವೇಧಭೇದಾದಿ ಕರ್ಮಕೃತ್- ಸಾಣೆ ಹಿಡಿಯುವುದು, ತುಂಡುಮಾಡುವುದು ಇತ್ಯಾದಿ ಕರ್ಮಕರ್ತನೂ (ಆಗಿರಬಹುದು).

**ಕ್ರಮಾದುತ್ತಮಜಾತೀಯಾಃ ಕ್ಷತ್ರವರ್ಣಾದಿಮೇ ತ್ರಯಃ ॥ ೧೦೯ ॥**
**ವೈಶ್ಯತಃ ಕ್ಷತ್ರಿಯಾದ್ವಾಪಿ ಯೇಽಧಿಕಾ ಏಕಜಾತಯಃ ।**
**ತೇಷಾಮವೈದಿಕತ್ವಂ ತು ವಚನಾದೇವ ನಾನ್ಯಥಾ ॥ ೧೧೦ ॥**
**ನ ತಾವತಾಧಮತ್ವಂ ಸ್ಯಾದ್ದ್ವಿಜಸ್ತ್ರೀಣಾಮಿವಾತ್ರ ಹಿ ।**
**ವಿಪ್ರಕ್ಷತ್ರಿಯಮಧ್ಯಸ್ಥಾ ಬ್ರಹ್ಮಸೂದಾಃ ಪ್ರಕೀರ್ತಿತಾಃ ॥ ೧೧೧ ॥**

---

ಸುವರ್ಣಾದಿ[1] ಅಷ್ಟಲೋಹಗಳ ಮತ್ತಿತರ ಉಪಲೋಹ (alloy)ಗಳ ವಿವಿಧ ಅಲಂಕಾರ ವಸ್ತುಗಳನ್ನು ಮಾಡುವುದು, ಕವಚಾದಿಗಳನ್ನು ರಚಿಸುವುದು, ರತ್ನಮಾಣಿಕ್ಯ ಮುತ್ತುಗಳನ್ನು ಸೀಳುವುದು ತುಂಡುಮಾಡುವುದು (ವಜ್ರಾದಿ ನವರತ್ನಗಳ ಸಂಬಂಧವಾದ) ಈ ಮೊದಲಾದ ಕೆಲಸಗಳನ್ನು ಮಾಡುವುದೂ, ಇತ್ಯಾದಿ ಕರ್ಮಗಳನ್ನು ಮಾಡಬಹುದು (೧೦೭-೧೦೮). ಈ ಮೂರು ಅನುಲೋಮ ಜಾತಿಗಳವರು, ಕ್ರಮದಿಂದ (ಮೂರ್ಧಾವಸಿಕ್ತನಿಂದ ಆರಂಭಿಸಿ)

---

1. ಸುವರ್ಣ, ರಜತ, ತಾಮ್ರ, ಸೀಸಕ, ಕಾಂತಿಕ, ವಂಗ, ಲೋಹ, ತೀಕ್ಷ್ಣ, ಎಂಬುವು ಅಷ್ಟಲೋಹಗಳು: 'ಸುವರ್ಣಂ ರಜತಂ ತಾಮ್ರಂ ಸೀಸಕಂ ಕಾಂತಿಕಂ ತಥಾ ।
ವಂಗ ಲೋಹಂ ತೀಕ್ಷ್ಣಲೋಹಂ ಲೋಹಾನ್ಯಷ್ಟಾವಿಮಾನಿ ತು ॥'

**ವೈಶ್ಯಕ್ಷತ್ರಿಯಮಧ್ಯಸ್ಥಾಃ ಕ್ಷತ್ರಸೂದಾ ಇತೀರಿತಾಃ ।**
**ವೈಶ್ಯಶೂದ್ರಾಂತರಾ ಯೇ ತು ವೈಶ್ಯಸೂದಾಃ ಪ್ರಕೀರ್ತಿತಾಃ ॥ ೧೧೨ ॥**
**ಶೂದ್ರಸೂದಾಸ್ತು ವೈದೇಹಪರ್ಯಂತಾಃ ಕ್ರಮಶೋ ವರಾಃ ।**
**ಸೂದಾಶ್ಚ ಪರಿವಾಹಾಶ್ಚ ಯಥಾಜಾತ್ಯಖಿಲಾ ಅಪಿ ॥ ೧೧೩ ॥**
**ಭೋಜ್ಯಾನ್ನಾಃ ಪೇಯಪಾನೀಯಾಃ ನಜಾತಿನಿಯಮೋತ್ರತು ।**

ಇಮೇ-ಈ, ತ್ರಯಃ-ಮೂರುಜಾತಿಗಳು (ಮೂರ್ಧಾವಸಿಕ್ತ ಅಂಬಷ್ಠ ಪಾರಾಶವಗಳು), ಕ್ಷತ್ರವರ್ಣಾತ್-ಕ್ಷತ್ರಿಯಜಾತಿಗಿಂತ, ಕ್ರಮಾತ್-ಕ್ರಮವಾಗಿ (ಅಂಬಷ್ಠನು ವೈಶ್ಯನಿಗಿಂತ, ಪಾರಾಶವನು ಶೂದ್ರನಗಿಂತ), ಉತ್ತಮಜಾತೀಯಾ-ಉತ್ತಮಜಾತಿಯವರೆಂದು, (ತಿಳಿಯಬೇಕು); ಯೇ-ಯಾವ, ಏಕಜಾತಯಃ-(ದ್ವಿಜಾನ್ಯರಾದ) ಏಕಜಾತೀಯರೆಂಬ ಪ್ರತಿಲೋಮಿಗಳು, ವೈಶ್ಯತಃ-ವೈಶ್ಯನಗಿಂತ, ಕ್ಷತ್ರಿಯಾತ್ ವಾಪಿ-ಕ್ಷತ್ರಿಯನಿಗಿಂತ ಸಹ, ಅಧಿಕಾಃ-(ಜಾತ್ಯಂಶಗಣನೆಯಲ್ಲಿ) ಅಧಿಕ ರಾಗುವರೋ, ತೇಷಾಂ-ಅವರ, ಅವೈದಿಕತ್ವಂ ತು-ವೇದಾನಧಿಕಾರಿತ್ವವಾದರೋ (ವೇದಾಧಿಕಾರವಿಲ್ಲದವರೆಂಬುದು), ವಚನಾತ್ ಏವ-ಶಾಸ್ತ್ರವಿಧಿ ಹಾಗಿರುವುದರಿಂದ ಮಾತ್ರ; ಅನ್ಯಥಾ ನ-ಬೇರೆ ಕಾರಣವಿಲ್ಲ; ತಾವತಾ-ಅಷ್ಟುಮಾತ್ರದಿಂದ, (ಅಧಿಕಾರ ವಿಲ್ಲದ ಮಾತ್ರದಿಂದ), ಅಧಮತ್ವಂ-ಅಧಮತ್ವವು, ನ ಸ್ಯಾತ್-ಇಲ್ಲವು (ಉಂಟಾಗುವು ದಿಲ್ಲ), ದ್ವಿಜಸ್ತ್ರೀಣಾಂ ಇವ-ಬ್ರಾಹ್ಮಣಾದಿ ದ್ವಿಜಸ್ತ್ರೀಯರಂತೆ, (ಬ್ರಾಹ್ಮಣಸ್ತ್ರೀಗೆ

---

ಕ್ಷತ್ರಿಯಾದಿ ವರ್ಣಕ್ಕಿಂತ ಅಧಿಕರಾಗಿರುತ್ತಾರೆ; ಯಾವ (ದ್ವಿಜಾನ್ಯ) ಪ್ರತಿಲೋಮಿಗಳು (ಏಕಜಾತೀಯರು) ಜಾತ್ಯಂಶಗಳ ಗಣನೆಯಲ್ಲಿ ವೈಶ್ಯ ಕ್ಷತ್ರಿಯರಗಿಂತ ಅಧಿಕ ರಾಗುವರೋ, ಅವರು, ಶಾಸ್ತ್ರವಚನ 'ಮಾತ್ರದಿಂದ ವೇದಗಳಲ್ಲಿ ಅಧಿಕಾರ ವಿಲ್ಲದವರಾಗಿರುವರು; ಆದರೆ ಜಾತ್ಯಾ ಅಧಿಕರೇ ಸರಿ—ಅಧಮತ್ವವಿಲ್ಲ; ದ್ವಿಜ ಸ್ತ್ರೀಯರು ಹೇಗೆ ವೇದಾಧಿಕಾರವಿಲ್ಲದವರಾದರೂ, ವೇದಾಧಿಕಾರವುಳ್ಳ ಕೆಳಗಿನ ವರ್ಣದ ದ್ವಿಜರಗಿಂತ ಜಾತ್ಯಾ ಉತ್ತಮರೋ, ಅನಧಿಕಾರ ನಿಮಿತ್ತವಾದ ಅಧಮತ್ವವಿಲ್ಲವೋ, ಅದರಂತೆ ಈ ಪ್ರತಿಲೋಮಿಗಳೂ ವೇದಾಧಿಕಾರರಹಿತ ರಾದರೂ ಜಾತಿಯಿಂದ (ಗುಣಾಂಶದಿಂದ), ವೇದಾಧಿಕಾರವುಳ್ಳ ಕೆಳಗಿನ ವರ್ಣದ ದ್ವಿಜರಗಿಂತ, ಅಧಿಕರೇ ಸರಿ; ಬ್ರಾಹ್ಮಣ ಕ್ಷತ್ರಿಯ ಮಧ್ಯದ ಜಾತಿಯವರು ಬ್ರಾಹ್ಮಣರಲ್ಲಿ ಅಡಿಗೆಯವರಾಗಲು (ಬ್ರಹ್ಮಸೂದರಾಗಲು) ಅರ್ಹರು; ವೈಶ್ಯ ಕ್ಷತ್ರಿಯ ಮಧ್ಯ ಜಾತಿಯವರು, ಕ್ಷತ್ರಿಯಸೂದರಾಗಬಹುದು; ವೈಶ್ಯ ಶೂದ್ರ ಮಧ್ಯದವರು, ವೈಶ್ಯ ಸೂದರಾಗಲರ್ಹರು; ಗುಣಾಂಶತಾರತಮ್ಯಾನುಸಾರ ಉತ್ತಮರಾದ ವೈದೇಹರವರೆಗಿನ ಪ್ರತಿಲೋಮಿಗಳು, ಶೂದ್ರಸೂದರಾಗಬಹುದು; ಎಲ್ಲ ಪಾಚಕ (ಅಡಿಗೆಯವರು) ಪರಿಚಾರಕರೂ (ಸೇವಕರು), ಈ ಮೊದಲು ಹೇಳಿದ ಜಾತಿಗಳಂತೆ

ವೇದಾಧಿಕಾರವಿಲ್ಲದ ಮಾತ್ರದಿಂದ, ಜಾತಿಯಿಂದ ಅಧಮತ್ವವಿಲ್ಲದಿರುವಂತೆ, ಪ್ರತಿಲೋಮಿಯು ದ್ವಿಜನಗಿಂತ, ವೇದಾಧಿಕಾರವಿಲ್ಲದಿದ್ದರೂ ಜಾತ್ಯಾ ಉತ್ತಮನೇ ಸರಿ);[1] ವಿಪ್ರಕ್ಷತ್ರಿಯ ಮಧ್ಯಸ್ಥಾಃ-ಬ್ರಾಹ್ಮಣ ಮತ್ತು ಕ್ಷತ್ರಿಯರ ಮಧ್ಯಜಾತಿಯವರು; ಬ್ರಹ್ಮಸೂದಾಃ-ಬ್ರಾಹ್ಮಣರ ಅಡಿಗೆಯವರೆಂದು (ಪಾಚಕರೆಂದು), ಪ್ರಕೀರ್ತಿತಾಃ-ಹೇಳಲ್ಪಡುವರು; ವೈಶ್ಯಕ್ಷತ್ರಿಯಮಧ್ಯಸ್ಥಾಃ-ವೈಶ್ಯರು ಮತ್ತು ಕ್ಷತ್ರಿಯರ ಮಧ್ಯ ಜಾತಿಯವರು, ಕ್ಷತ್ರಸೂದಾಃ ಇತಿ-ಕ್ಷತ್ರಿಯರ ಅಡಿಗೆಯವರೆಂದೂ, ಈರಿತಾ-ಹೇಳಲ್ಪಡುವರು; ಯೇ ತು-ಯಾರಾದರೆ, ವೈಶ್ಯಶೂದ್ರಾಂತರಾಃ-ವೈಶ್ಯರು ಮತ್ತು ಶೂದ್ರರ ಮಧ್ಯ ಜಾತಿಯವರೋ, (ಅವರು), ವೈಶ್ಯಸೂದಾಃ-ವೈಶ್ಯರ ಅಡಿಗೆ ಯವರೆಂದು, ಪ್ರಕೀರ್ತಿತಾಃ-ಹೇಳಲ್ಪಟ್ಟಿರುತ್ತಾರೆ; ವೈದೇಹಪರ್ಯಂತಾಃ - ವೈದೇಹ ಜಾತಿಯವರೆಗಿನ (ವೈಶ್ಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು ವೈದೇಹನು), ಕ್ರಮಶಃ-ತಾರತಮ್ಯಾನುಗುಣವಾಗಿ, ವರಾಃ-ಉತ್ತಮರಾದವರು, ಶೂದ್ರಸೂದಾಃ-ಶೂದ್ರರ ಅಡಿಗೆಯವರು; ಸೂದಾಶ್ಚ- ಪಾಚಕರೂ, ಪರಿವಾಹಾಶ್ಚ-ಪರಿಚಾರಕರೂ, ಅಖಿಲಾಃ ಅಪಿ-ಎಲ್ಲರೂ ಸಹ, ಯಥಾಜಾತಿ-(ಉಕ್ತ) ಜಾತ್ಯಾನುಸಾರವಾಗಿ, ಭೋಜ್ಯಾನ್ನಾಃ-ಭೋಜ್ಯಾನ್ನರೇ; ಪೇಯಪಾನೀಯಾಃ-ಜಲಾದಿ ಪೇಯಗಳನ್ನು ತರಲು ಯೋಗ್ಯರು; ಅತ್ರ-ಈ ವಿಷಯದಲ್ಲಿ ಜಾತಿನಿಯಮಃ ನತು-(ಬೇರೆ ವಿಧದ) ಜಾತಿನಿಯಮಗಳಿಲ್ಲ.

> ಪರಚಿತ್ತಾನುವೃತ್ತಿರ್ಯಾ ಸಾ ಸೇವೇತ್ಯಭಿಧೀಯತೇ ॥ ೧೧೪ ॥
> ಪರಿಚರ್ಯಾ ಚ ಸಾಚಿವ್ಯಂ ದೂತ್ಯಮಿತ್ಯೇವ ಸಾ ತ್ರಿಧಾ ।
> ಪುರೋವಸ್ಥಿತಿರೂಪಾದಿತ್ರಯಹೀನತ್ವಮೀಕ್ಷ್ಯತೇ ॥ ೧೧೫ ॥

ಯಾ-ಯಾವ, ಪರಚಿತ್ತಾನುವೃತ್ತಿಃ-ಪರಚಿತ್ತಾನುಸರಣವೋ (ಅನ್ಯರ ಮನೋನುಗುಣವಾಗಿ ನಡೆದುಕೊಳ್ಳುವುದಿದೆಯೋ), ಸಾ-ಅದು, ಸೇವಾ-'ಸೇವೆ'ಯು, ಇತಿ-ಎಂದು, ಅಭಿಧೀಯತೇ-ಹೇಳಲ್ಪಡುತ್ತದೆ; ಸಾ-ಆ ಸೇವೆ

(ತಾರತಮ್ಯವನ್ನನುಸರಿಸಿ) ಭೋಜ್ಯಾನ್ನರು ಮತ್ತು ಜಲಾದ್ಯಾಹರಣಾರ್ಹರು; ಈ ವಿಷಯದಲ್ಲಿ ಬೇರಾವ ಜಾತಿನಿರ್ಬಂಧಗಳೂ ಇರುವುದಿಲ್ಲ (೧೦೯-೧೧೩). ಪರಸೇವೆ ಎಂಬುದು, ಪರಚಿತ್ತಾನುಸಾರ ನಡೆದುಕೊಳ್ಳುವುದೇ ಆಗಿರುತ್ತದೆ (ಅದೇ ಸೇವೆಯು); ಅದು, ಪರಿಚರ್ಯೆ, ಸಾಚಿವ್ಯ ಮತ್ತು ದೂತ್ಯವೆಂದು, ಮೂರು ವಿಧವು; ಯಜಮಾನನ ಮುಂದೆ (ಕೈಜೋಡಿಸಿ) ನಿಲ್ಲುವುದೇ ಮೊದಲಾದ ಹೀನತ್ವವಿಲ್ಲದ ಸೇವೆಯು, ಉಕ್ತವಾದ ತ್ರಿವಿಧ ಸೇವೆಗಳಲ್ಲಿ ಒಂದಾದ, ಪರಿಚರ್ಯದ ಲಕ್ಷಣವು (೧೧೪-೧೧೫). ಆದರೆ ತನಗಿಂತ ಹೀನರಾದ (ನೀಚರಾದವರ) ಪರಿಚರ್ಯವೂ

1. ೩೧ನೇ ಅಧ್ಯಾಯದ ೨೮-೨೯ನೇ ಶ್ಲೋಕಭಾಗವನ್ನು ನೋಡಿರಿ.

ವೈಶ್ಯಕ್ಷತ್ರಿಯಮಧ್ಯಸ್ಥಾಃ ಕ್ಷತ್ರಸೂದಾ ಇತೀರಿತಾಃ ।
ವೈಶ್ಯಶೂದ್ರಾಂತರಾ ಯೇ ತು ವೈಶ್ಯಸೂದಾಃ ಪ್ರಕೀರ್ತಿತಾಃ ॥ ೧೧೨ ॥
ಶೂದ್ರಸೂದಾಸ್ತು ವೈದೇಹಪರ್ಯಂತಾಃ ಕ್ರಮಶೋ ವರಾಃ ।
ಸೂದಾಶ್ಚ ಪರಿವಾಹಾಶ್ಚ ಯಥಾಜಾತ್ಯಖಿಲಾ ಅಪಿ ॥ ೧೧೩ ॥
ಭೋಜ್ಯಾನ್ನಾಃ ಪೇಯಪಾನೀಯಾಃ ನಜಾತಿನಿಯಮೋತ್ರತು ।

ಇಮೇ-ಈ, ತ್ರಯಃ-ಮೂರುಜಾತಿಗಳು (ಮೂರ್ಧಾವಸಿಕ್ತ ಅಂಬಷ್ಠ ಪಾರಾಶವಗಳು), ಕ್ಷತ್ರವರ್ಣಾತ್-ಕ್ಷತ್ರಿಯಜಾತಿಗಿಂತ, ಕ್ರಮಾತ್-ಕ್ರಮವಾಗಿ (ಅಂಬಷ್ಠನು ವೈಶ್ಯನಿಗಿಂತ, ಪಾರಾಶವನು ಶೂದ್ರನಗಿಂತ), ಉತ್ತಮಜಾತೀಯಾ-ಉತ್ತಮಜಾತಿಯವರೆಂದು, (ತಿಳಿಯಬೇಕು); ಯೇ-ಯಾವ, ಏಕಜಾತಯಃ-(ದ್ವಿಜಾನ್ಯರಾದ) ಏಕಜಾತೀಯರೆಂಬ ಪ್ರತಿಲೋಮಿಗಳು, ವೈಶ್ಯತಃ-ವೈಶ್ಯನಗಿಂತ, ಕ್ಷತ್ರಿಯಾತ್ ವಾಪಿ-ಕ್ಷತ್ರಿಯನಿಗಿಂತ ಸಹ, ಅಧಿಕಾಃ-(ಜಾತ್ಯಂಶಗಣನೆಯಲ್ಲಿ) ಅಧಿಕ ರಾಗುವರೋ, ತೇಷಾಂ-ಅವರ, ಅವೈದಿಕತ್ವಂ ತು-ವೇದಾನಧಿಕಾರಿತ್ವವಾದರೋ (ವೇದಾಧಿಕಾರವಿಲ್ಲದವರೆಂಬುದು), ವಚನಾತ್ ಏವ-ಶಾಸ್ತ್ರವಿಧಿ ಹಾಗಿರುವುದರಿಂದ ಮಾತ್ರ; ಅನ್ಯಥಾ ನ-ಬೇರೆ ಕಾರಣವಿಲ್ಲ; ತಾವತಾ-ಅಷ್ಟುಮಾತ್ರದಿಂದ, (ಅಧಿಕಾರ ವಿಲ್ಲದ ಮಾತ್ರದಿಂದ), ಅಧಮತ್ವಂ-ಅಧಮತ್ವವು, ನ ಸ್ಯಾತ್-ಇಲ್ಲವು (ಉಂಟಾಗುವು ದಿಲ್ಲ), ದ್ವಿಜಸ್ತ್ರೀಣಾಂ ಇವ-ಬ್ರಾಹ್ಮಣಾದಿ ದ್ವಿಜಸ್ತ್ರೀಯರಂತೆ, (ಬ್ರಾಹ್ಮಣಸ್ತ್ರೀಗೆ

---

ಕ್ಷತ್ರಿಯಾದಿ ವರ್ಣಕ್ಕಿಂತ ಅಧಿಕರಾಗಿರುತ್ತಾರೆ; ಯಾವ (ದ್ವಿಜಾನ್ಯ) ಪ್ರತಿಲೋಮಿಗಳು (ಏಕಜಾತೀಯರು) ಜಾತ್ಯಂಶಗಳ ಗಣನೆಯಲ್ಲಿ ವೈಶ್ಯ ಕ್ಷತ್ರಿಯರಗಿಂತ ಅಧಿಕ ರಾಗುವರೋ, ಅವರು, ಶಾಸ್ತ್ರವಚನ 'ಮಾತ್ರದಿಂದ ವೇದಗಳಲ್ಲಿ ಅಧಿಕಾರ ವಿಲ್ಲದವರಾಗಿರುವರು; ಆದರೆ ಜಾತ್ಯಾ ಅಧಿಕರೇ ಸರಿ—ಅಧಮತ್ವವಿಲ್ಲ; ದ್ವಿಜ ಸ್ತ್ರೀಯರು ಹೇಗೆ ವೇದಾಧಿಕಾರವಿಲ್ಲದವರಾದರೂ, ವೇದಾಧಿಕಾರವುಳ್ಳ ಕೆಳಗಿನ ವರ್ಣದ ದ್ವಿಜರಗಿಂತ ಜಾತ್ಯಾ ಉತ್ತಮರೋ, ಅನಧಿಕಾರ ನಿಮಿತ್ತವಾದ ಅಧಮತ್ವವಿಲ್ಲವೋ, ಅದರಂತೆ ಈ ಪ್ರತಿಲೋಮಿಗಳೂ ವೇದಾಧಿಕಾರರಹಿತ ರಾದರೂ ಜಾತಿಯಿಂದ (ಗುಣಾಂಶದಿಂದ), ವೇದಾಧಿಕಾರವುಳ್ಳ ಕೆಳಗಿನ ವರ್ಣದ ದ್ವಿಜರಗಿಂತ, ಅಧಿಕರೇ ಸರಿ; ಬ್ರಾಹ್ಮಣ ಕ್ಷತ್ರಿಯ ಮಧ್ಯದ ಜಾತಿಯವರು ಬ್ರಾಹ್ಮಣರಲ್ಲಿ ಅಡಿಗೆಯವರಾಗಲು (ಬ್ರಹ್ಮಸೂದರಾಗಲು) ಅರ್ಹರು; ವೈಶ್ಯ ಕ್ಷತ್ರಿಯ ಮಧ್ಯ ಜಾತಿಯವರು, ಕ್ಷತ್ರಿಯಸೂದರಾಗಬಹುದು; ವೈಶ್ಯ ಶೂದ್ರ ಮಧ್ಯದವರು, ವೈಶ್ಯ ಸೂದರಾಗಲರ್ಹರು; ಗುಣಾಂಶತಾರತಮ್ಯಾನುಸಾರ ಉತ್ತಮರಾದ ವೈದೇಹರವರೆಗಿನ ಪ್ರತಿಲೋಮಿಗಳು, ಶೂದ್ರಸೂದರಾಗಬಹುದು; ಎಲ್ಲ ಪಾಚಕ (ಅಡಿಗೆಯವರು) ಪರಿಚಾರಕರೂ (ಸೇವಕರು), ಈ ಮೊದಲು ಹೇಳಿದ ಜಾತಿಗಳಂತೆ

ವೇದಾಧಿಕಾರವಿಲ್ಲದ ಮಾತ್ರದಿಂದ, ಜಾತಿಯಿಂದ ಅಧಮತ್ವವಿಲ್ಲದಿರುವಂತೆ, ಆ ಪ್ರತಿಲೋಮಿಯು ದ್ವಿಜನಗಿಂತ, ವೇದಾಧಿಕಾರವಿಲ್ಲದಿದ್ದರೂ ಜಾತ್ಯಾ ಉತ್ತಮನೇ ಸರಿ);[1] ವಿಪ್ರಕ್ಷತ್ರಿಯ ಮಧ್ಯಸ್ಥಾ:-ಬ್ರಾಹ್ಮಣ ಮತ್ತು ಕ್ಷತ್ರಿಯರ ಮಧ್ಯಜಾತಿಯವರು; ಬ್ರಹ್ಮಸೂದಾ:-ಬ್ರಾಹ್ಮಣರ ಅಡಿಗೆಯವರೆಂದು (ಪಾಚಕರೆಂದು), ಪ್ರಕೀರ್ತಿತಾ:-ಹೇಳಲ್ಪಡುವರು; ವೈಶ್ಯಕ್ಷತ್ರಿಯಮಧ್ಯಸ್ಥಾ:-ವೈಶ್ಯರು ಮತ್ತು ಕ್ಷತ್ರಿಯರ ಮಧ್ಯ ಜಾತಿಯವರು, ಕ್ಷತ್ರಸೂದಾ: ಇತಿ-ಕ್ಷತ್ರಿಯರ ಅಡಿಗೆಯವರೆಂದೂ, ಈರಿತಾ-ಹೇಳಲ್ಪಡುವರು; ಯೇ ತು-ಯಾರಾದರೆ, ವೈಶ್ಯಶೂದ್ರಾಂತರಾ:-ವೈಶ್ಯರು ಮತ್ತು ಶೂದ್ರರ ಮಧ್ಯ ಜಾತಿಯವರೋ, (ಅವರು), ವೈಶ್ಯಸೂದಾ:-ವೈಶ್ಯರ ಅಡಿಗೆಯವರೆಂದು, ಪ್ರಕೀರ್ತಿತಾ:-ಹೇಳಲ್ಪಟ್ಟಿರುತ್ತಾರೆ; ವೈದೇಹಪರ್ಯಂತಾ: - ವೈದೇಹ ಜಾತಿಯವರೆಗಿನ (ವೈಶ್ಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು ವೈದೇಹನು), ಕ್ರಮಶ:-ತಾರತಮ್ಯಾನುಗುಣವಾಗಿ, ವರಾ:-ಉತ್ತಮರಾದವರು, ಶೂದ್ರಸೂದಾ:-ಶೂದ್ರರ ಅಡಿಗೆಯವರು; ಸೂದಾಶ್ಚ- ಪಾಚಕರೂ, ಪರಿವಾಹಾಶ್ಚ-ಪರಿಚಾರಕರೂ, ಅಖಿಲಾ: ಅಪಿ-ಎಲ್ಲರೂ ಸಹ, ಯಥಾಜಾತಿ-(ಉಕ್ತ) ಜಾತ್ಯನುಸಾರವಾಗಿ, ಭೋಜ್ಯಾನ್ನಾ:-ಭೋಜ್ಯಾನ್ನರೇ; ಪೇಯಪಾನೀಯಾ:-ಜಲಾದಿ ಪೇಯಗಳನ್ನು ತರಲು ಯೋಗ್ಯರು; ಅತ್ರ-ಈ ವಿಷಯದಲ್ಲಿ ಜಾತಿನಿಯಮ: ನತು-(ಬೇರೆ ವಿಧದ) ಜಾತಿನಿಯಮಗಳಿಲ್ಲ.

**ಪರಚಿತ್ತಾನುವೃತ್ತಿರ್ಯಾ ಸಾ ಸೇವೇತ್ಯಭಿಧೀಯತೇ ॥ ೧೧೪ ॥**
**ಪರಿಚರ್ಯಾ ಚ ಸಾಚಿವ್ಯಂ ದೂತ್ಯಮಿತ್ಯೇವ ಸಾ ತ್ರಿಧಾ ।**
**ಪುರೋವಸ್ಥಿತಿರೂಪಾದಿತ್ರಯಹೀನತ್ವಮೀಕ್ಷ್ಯತೇ ॥ ೧೧೫ ॥**

ಯಾ-ಯಾವ, ಪರಚಿತ್ತಾನುವೃತ್ತಿ-ಪರಚಿತ್ತಾನುಸರಣವೋ (ಅನ್ಯರ ಮನೋನುಗುಣವಾಗಿ ನಡೆದುಕೊಳ್ಳುವುದಿರೆಯೋ), ಸಾ-ಅದು, ಸೇವಾ-'ಸೇವೆ'ಯು, ಇತಿ-ಎಂದು, ಅಭಿಧೀಯತೇ-ಹೇಳಲ್ಪಡುತ್ತದೆ; ಸಾ-ಆ ಸೇವೆ

(ತಾರತಮ್ಯವನ್ನನುಸರಿಸಿ) ಭೋಜ್ಯಾನ್ನರು ಮತ್ತು ಜಲಾದ್ಯಾಹರಣಾರ್ಹರು; ಈ ವಿಷಯದಲ್ಲಿ ಬೇರಾವ ಜಾತಿನಿರ್ಬಂಧಗಳೂ ಇರುವುದಿಲ್ಲ (೧೦೯-೧೧೩). ಪರಸೇವೆ ಎಂಬುದು, ಪರಚಿತ್ತಾನುಸಾರ ನಡೆದುಕೊಳ್ಳುವುದೇ ಆಗಿರುತ್ತದೆ (ಅದೇ ಸೇವೆಯು); ಅದು, ಪರಿಚರ್ಯೆ, ಸಾಚಿವ್ಯ ಮತ್ತು ದೂತ್ಯವೆಂದು, ಮೂರು ವಿಧವು; ಯಜಮಾನನ ಮುಂದೆ (ಕೈಜೋಡಿಸಿ) ನಿಲ್ಲುವುದೇ ಮೊದಲಾದ ಹೀನತ್ವವಿಲ್ಲದ ಸೇವೆಯು, ಉಕ್ತವಾದ ತ್ರಿವಿಧ ಸೇವೆಗಳಲ್ಲಿ ಒಂದಾದ, ಪರಿಚರ್ಯೆಯ ಲಕ್ಷಣವು (೧೧೪-೧೧೫). ಆದರೆ ತನಗಿಂತ ಹೀನರಾದ (ನೀಚರಾದವರ) ಪರಿಚರ್ಯೆಯೂ

1. ೩೧ನೇ ಅಧ್ಯಾಯದ ೨೮-೨೯ನೇ ಶ್ಲೋಕಭಾಗವನ್ನು ನೋಡಿರಿ.

ಯೆಂಬುದು, ಪರಿಚರ್ಯಾ-ಪರಿಚರ್ಯೆ, ಸಾಚಿವ್ಯಂ-ಸಹಕಾರಿತ್ವ, ಚ-ಮತ್ತು ದೂತ್ಯಂ-ದೌತ್ಯವು, ಇತ್ಯೇವ-ಈ ಪ್ರಕಾರವಾಗಿ, ತ್ರಿಧಾ-ಮೂರು ವಿಧವು, ಪುರೋವಸ್ಥಿತಿರೂಪಾದಿ-ಎದುರಿಗೆ ನಿಲ್ಲುವುದು ಮೊದಲಾದುದು, ತ್ರಯಹೀನತ್ವಂ-ಈ ಮೂರು ಪ್ರಕಾರದ ಸೇವೆಯಲ್ಲಿ ಇಲ್ಲದಿರುವುದು, ಈಕ್ಷ್ಯತೇ-ಎನಿಸುತ್ತದೆ; (ಅದು ಪರಿಚರ್ಯವು, ಎಂದು ಮುಂದಿನ ಶ್ಲೋಕದಿಂದ ಅನ್ವಯವು).

ಪರಿಚರ್ಯಾ ತು ಸಂಪ್ರೋಕ್ತಾ ನೀಚಾನಾಂ ಸಾ ನ ಶಸ್ಯತೇ ।
ಸಭಾಸತ್ತ್ವಂ ಚ ಮಂತ್ರಿತ್ವಂ ಮಾನ್ಯಕರ್ಮನಿಯೋಜ್ಯತಾ ॥ ೧೧೬ ॥
ಸಾಚಿವ್ಯಮಿತಿ ದೂತ್ಯಂ ತು ಪ್ರೇಷ್ಯತ್ವಂ ಮಾನಪೂರ್ವಕಂ ।
ಪರಿಚರ್ಯಾ ನೀಚಜಾತೇಃ ಶ್ವವೃತ್ತಿರಿತಿ ಭಣ್ಯತೇ ॥ ೧೧೭ ॥
ಸ್ವಾಮಿನಃ ಸೇವಕಸ್ಯಾಪಿ ಶ್ವವೃತ್ತಿಃ ಪಾಪಕೃದ್ಯತಃ ।
ನಿವಾರಯೇತ್ತತೋ ರಾಜಾ ಜ್ಞಾತ್ವಾ ಜಾತಿವಿವೇಚನಂ ॥ ೧೧೮ ॥
ಸರ್ವೇಷಾಂ ವೃತ್ತಿಕೃದ್ರಾಜಾ ಸ ತಥಾಜ್ಞಾನ್ನಿಯೋಜಯೇತ್ ।
ನಾನಾಕರ್ಮಸು ವಿಪ್ರಾದೀಂಸ್ತತೋತ್ರಾಮುತ್ರ ಶಂ ಲಭೇತ್ ॥ ೧೧೯ ॥

ನೀಚಾನಾಂ-ಅಧಮರ, ಪರಿಚರ್ಯಾ ತು-ಸೇವೆಯಾದರೋ, ಸಾ-ಅದು, ನ ಶಸ್ಯತೇ-ಪ್ರಶಸ್ತವಲ್ಲ (ಯೋಗ್ಯವಲ್ಲ), ಸಂಪ್ರೋಕ್ತಾ-(ಎಂದು) ಹೇಳಲ್ಪಡುತ್ತದೆ; ಸಭಾಸತ್ತ್ವಂ-ಸಭಾಸದನಾಗಿರುವಿಕೆ, ಮಂತ್ರಿತ್ವಂ-ರಾಜನೊಡನೆ ಆಲೋಚನೆಗಳಲ್ಲಿ ಸೇರಿ ಸಲಹೆಗಳನ್ನೀಯುವುದು, ಮಾನ್ಯಕರ್ಮನಿಯೋಜ್ಯತಾ-ಗೌರವಯುಕ್ತವಾದ ಕರ್ಮದಲ್ಲಿ ನಿಯೋಜಿಸಲ್ಪಡುವುದು, ಸಾಚಿವ್ಯಂ ಇತಿ-(ಇವು) ಸಾಚಿವ್ಯವೆಂದು (ಸಂಪ್ರೋಕ್ತಾ - ಹೇಳಲ್ಪಡುತ್ತದೆ); ಮಾನಪೂರ್ವಕಂ - ಗೌರವಪೂರ್ವಕವಾಗಿ,

---

ಯಾರಿಗೂ, ಎಂದೂ ಪ್ರಶಸ್ತವಲ್ಲ; ಸಭಾಸದಸ್ಯನಾಗಿದ್ದು ರಾಜಕಾರ್ಯಗಳಲ್ಲಿ ಯೋಗ್ಯಸಲಹೆಗಳನ್ನಿತ್ತು ರಾಜನೊಂದಿಗೆ ಆಲೋಚನೆಗಳಲ್ಲಿ ಭಾಗವಹಿಸುವುದೆಂಬ 'ಮಂತ್ರಿತ್ವ'ವೂ, ಗೌರವಯುತವಾದ ಕರ್ಮಗಳಲ್ಲಿ ನಿಯೋಜಿಸಲ್ಪಡುವುದೂ, 'ಸಾಚಿವ್ಯ'ವೆನಿಸುತ್ತದೆ; ಮಾನಪೂರ್ವಕ ಅನ್ಯರಲ್ಲಿಗೆ ಯಜಮಾನನ ಕಾರ್ಯಾರ್ಥವಾಗಿ ಕಳುಹಿಸಲ್ಪಡುವುದು 'ದೂತ್ಯ'ವೆನಿಸುತ್ತದೆ; ನೀಚಜಾತಿಯ ಸೇವೆಯು ಶ್ವಾನವೃತ್ತಿಯು—ಅದು ಸ್ವಾಮಿಗೂ ಸೇವಕನಿಗೂ ಪಾಪವನ್ನುಂಟುಮಾಡುತ್ತದೆ; ಆದ್ದರಿಂದ (ಪ್ರಜಾಶಾಸಕನಾದ) ರಾಜನು, ಜಾತಿವಿವೇಕವನ್ನು ತಿಳಿದು, ನೀಚಸೇವೆಯನ್ನು ನಿವಾರಿಸಬೇಕು; ಅದು ರಾಜನ ಕರ್ತವ್ಯವು—ರಾಜನೇ ಸಕಲ ಪ್ರಜೆಗಳಿಗೆ ಯೋಗ್ಯವೃತ್ತಿಗಳನ್ನು ದೊರಕಿಸುವ ಜವಾಬ್ದಾರಿಯುಳ್ಳವನಾಗಿದ್ದಾನೆ; ಅಜ್ಞಾನಿಗಳು ನೀಚಸೇವೆಯಲ್ಲಿ ತೊಡಗುವುದನ್ನು ತಪ್ಪಿಸಿ, ಯೋಗ್ಯವೃತ್ತಿಕಲ್ಪಕನಾಗಿ,

ಪ್ರೇಷ್ಯತ್ವಂ ತು- ಅನ್ಯರ ಬಳಿಗೆ ಕಾರ್ಯಾರ್ಥವಾಗಿ ಕಳುಹಿಸಲ್ಪಡುವುದೇ (ರಾಯಭಾರಿ ಇತ್ಯಾದಿ), ದೂತ್ಯಂ - ದೂತ್ಯವೆಂದು (ಸಂಪ್ರೋಕ್ತಾ) ; ನೀಚಜಾತೇಃ - (ತನಗಿಂತ) ಕನಿಷ್ಠಜಾತಿಯವರ, ಪರಿಚರ್ಯಾ-ಪರಿಚರ್ಯವು (ಸೇವೆಯು), ಶ್ವವೃತ್ತಿಃ- ಶ್ವಾನವೃತ್ತಿಯು (ನಾಯಿಯ ನಡವಳಿಕೆ), ಇತಿ ಭಣ್ಯತೇ-ಎಂದು ಹೇಳಲ್ಪಡುತ್ತದೆ; ಯತಃ-ಯಾವ ಕಾರಣದಿಂದ, ಸ್ವಾಮಿನಃ-ಯಜಮಾನನಿಗೂ, ಸೇವಕಸ್ಯ ಅಪಿ- ಸೇವಕನಿಗೂ ಸಹ, ಶ್ವವೃತ್ತಿಃ - ಶ್ವಾನವೃತ್ತಿಯು, ಪಾಪಕೃತ್ - ಪಾಪಕರವಾದುದೋ, ತತಃ-ಆ ಕಾರಣದಿಂದ, ರಾಜಾ-ರಾಜನು, ಜಾತಿವಿವೇಚನಂ ಜ್ಞಾತ್ವಾ-ಜಾತಿಯ ವಿವೇಚನೆಯುಳ್ಳವನಾಗಿ, ನಿವಾರಯೇತ್-(ಶ್ವವೃತ್ತಿಯನ್ನು) ನಿವಾರಿಸಬೇಕು; ರಾಜಾ - ರಾಜನು, ಸರ್ವೇಷಾಂ - ಎಲ್ಲ ಪ್ರಜೆಗಳಿಗೆ, ವೃತ್ತಿಕೃತ್ - (ಯೋಗ್ಯ) ವೃತ್ತಿಕಲ್ಪಕನು (ಆಗಿರುವನು): ಸಃ-ಆತನು, ಅಜ್ಞಾನ್-(ನೀಚಸೇವೆಯ ದುಷ್ಫಲವನ್ನು) ತಿಳಿಯದ, ನಾನಾಕರ್ಮಸು-(ಅವರವರಿಗೆ ಯೋಗ್ಯವಾದ) ನಾನಾ ಕರ್ಮಗಳಲ್ಲಿ, ವಿಪ್ರಾದೀನ್- ವಿಪ್ರರೇ ಮೊದಲಾದವರನ್ನು, ತಥಾ-ಯಥಾಯೋಗ್ಯವಾಗಿ (ನೀಚ ಸೇವೆಯಿಂದ ತನಗೆ ಸಹ ಪ್ರಾಪ್ತವಾಗುವ ಪಾಪವನ್ನು ನಿವಾರಿಸಿಕೊಳ್ಳಲು), ನಿಯೋಜ ಯೇತ್- ಯೋಜನೆ ಮಾಡಬೇಕು (ಪ್ರವೃತ್ತರಾಗುವಂತೆ ನೋಡಿಕೊಳ್ಳಬೇಕು), ತತಃ-ಹೀಗೆ ಮಾಡುವುದರಿಂದ, ಅತ್ರಾಮುತ್ರ-ಇಹ ಪರಲೋಕಗಳಲ್ಲಿ, ಶಂ-ಸುಖವನ್ನು ಲಭೇತ್- ಹೊಂದುವನು.

**ಜೀವಾಃ ಷೋಡಶಜಾತೀಯಾಃ ಸಂತಿ ಯೇ ಮಾನುಷೋತ್ತಮಾಃ ।**
**ತೇಷಾಂ ಜಾತಿಕ್ರಮೇಣೈವ ಮುಕ್ತಾವಾನಂದ ಇಷ್ಯತೇ ॥ ೧೨೦ ॥**
**ಜಾತಿರ್ನಿಯಮ್ಯತೇ ತಸ್ಮಾದುಚ್ಚನೀಚಸಮತ್ವತಃ ।**

ಷೋಡಶಜಾತೀಯಾಃ-(ಬ್ರಾಹ್ಮಣಾದಿ ೪, ಅನುಲೋಮ ಪ್ರತಿಲೋಮಾದಿ ೧೨; ಹೀಗೆ) ೧೬ ಜಾತಿಯವರಾದ, ಯೇ-ಯಾವ, ಮಾನುಷೋತ್ತಮಾಃ- (ಮುಕ್ತಿಯೋಗ್ಯರಾದ) ಮನುಷ್ಯೋತ್ತಮರಾದ, ಜೀವಾಃ-ಜೀವರು (ಮನುಷ್ಯ ಲೋಕದಲ್ಲಿರುವ ಮುಕ್ತಿಯೋಗ್ಯರು), ಸಂತಿ-ಇರುವರೋ, ತೇಷಾಂ-ಅವರಿಗೆ,

---

ಪ್ರಜೆಗಳನ್ನು ರಕ್ಷಿಸಬೇಕು; ವಿಶೇಷವಾಗಿ ಬ್ರಾಹ್ಮಣನು (ನೀಚಸೇವೆಯನ್ನು ಕೈಗೊಳ್ಳಲು ಅವಕಾಶವಿಲ್ಲದಂತೆ ಮಾಡಿ) ಅವರಿಗೆ ಯೋಗ್ಯವಾದ ವೃತ್ತಿಗಳನ್ನು ಕಲ್ಪಿಸುವುದರಿಂದ, ರಾಜರು (ಪ್ರಜೆಗಳೂ ಸಹ) ಇಹಪರಗಳಲ್ಲಿ ಸುಖವನ್ನು ಹೊಂದುತ್ತಾರೆ (೧೧೬-೧೧೯). ಮಾನುಷೋತ್ತಮ ವರ್ಗದ (ಮುಕ್ತಿಗೆ ಅರ್ಹರಾದ ಕಡೆಯ ದರ್ಜೆಯ) ಜೀವರು, ಯಾರಿರುವರೋ, ಅವರೆಲ್ಲರಿಗೆ, ಅವರ, ಬ್ರಾಹ್ಮಣಾದಿ ಅನುಲೋಮ ಪ್ರತಿಲೋಮಾದಿ ಜಾತಿಕ್ರಮದಿಂದಲೇ, ಮುಕ್ತಿಯಲ್ಲಿ ಸಹ ತಾರತಮ್ಯಯುಕ್ತವಾದ ಆನಂದವೇ ಲಭಿಸುತ್ತದೆಂದು, ಹೇಳಲಾಗುತ್ತದೆ; ಆದ್ದರಿಂದ

ಜಾತಿಕ್ರಮೇಣ ಏವ-(ಅವರವರ ಸ್ವರೂಪಭೂತವಾದ) ಜಾತಿಕ್ರಮದಿಂದಲೇ (ಜಾತಿತಾರತಮ್ಯವನ್ನನುಸರಿಸಿಯೇ), ಮುಕ್ತೌ-ಮೋಕ್ಷದಲ್ಲಿ ಆನಂದಃ-ಆನಂದವು (ಆನಂದದಲ್ಲಿ ಸಹ ತಾರತಮ್ಯವು), ಇಷ್ಯತೇ-ಹೇಳಲ್ಪಡುತ್ತದೆ; ತಸ್ಮಾತ್-ಹೀಗಿರುವುದರಿಂದ, ಉಚ್ಚನೀಚಸಮತ್ವತಃ-ಉಚ್ಚನೀಚಸಮತ್ವಗಳಿಂದ (ಉತ್ತಮಾಧಮಮಧ್ಯಮಭಾವಗಳಿಂದ), ಜಾತಿಃ-ಜಾತಿಯು, ನಿಯಮ್ಯತೇ-ನಿಯಮಿಸಲ್ಪಡುತ್ತದೆ (ಜೀವಸ್ವರೂಪಯೋಗ್ಯತೆಯ ಅಧೀನವಾದುದು ಸ್ವರೂಪ ಜಾತಿಯು).

**ಕರ್ಣಂ ಸ್ಪೃಶೇದ್ದಶನ್ಯೂನೇ ವಿಂಶನ್ಯೂನೇ ಜಲಂ ಸ್ಪೃಶೇತ್ ॥ ೧೨೧ ॥**
**ವಿಂಶೋತ್ತರಶತನ್ಯೂನೇ ತಾವದಂಗವಿಶೋಧನಂ ।**
**ಸ್ಪೃಷ್ಟೇ ತು ಮಧ್ಯಜಾತೀನಾಂ ಸಚೈಲಂ ಸ್ನಾನಮಾಚರೇತ್ ॥ ೧೨೨ ॥**
**ಸ್ಪರ್ಶನಾದಂತ್ಯಜಾತೀನಾಂ ಪಂಚಗವ್ಯಂ ವಿಶೋಧನಂ ।**
**ನೀಚನೀಚತರೇಷ್ವತ್ರ ಕ್ರಮಾದುಪವಸೇದಪಿ ॥ ೧೨೩ ॥**
**ಸ್ಪೃಷ್ಟಸ್ಪೃಷ್ಟೇತದರ್ವಾಕ್ತು ಕ್ರಮಾದೇವ ವಿಶೋಧನಂ ।**
**ಭವೇದಾಚಾರವಾನೇವಂ ಜ್ಞಾತ್ವಾ ಜಾತಿವಿವೇಚಕಃ ॥ ೧೨೪ ॥**

ದಶನ್ಯೂನೇ-೧೦ ಅಂಶಗಳಿಂದ ಹೀನನು, ಸ್ಪೃಷ್ಟೇ-ಸ್ಪರ್ಶಮಾಡುತ್ತಿರಲು (ಆತನ ಸ್ಪರ್ಶವಾದಾಗ), ಕರ್ಣಂ-ಕಿವಿಯನ್ನು ಸ್ಪೃಶೇತ್-ಮುಟ್ಟಿಕೊಳ್ಳಬೇಕು; ವಿಂಶನ್ಯೂನೇ-೨೦ ಅಂಶಗಳಿಂದ ಹೀನನ ಸ್ಪರ್ಶವಾದರೆ, ಜಲಂ ಸ್ಪೃಶೇತ್-ಆಚಮನ ಮಾಡಬೇಕು; ವಿಂಶೋತ್ತರಶತನ್ಯೂನೇ-೧೨೦ ಅಂಶಗಳವರೆಗಿನ ಹೀನರ ಸ್ಪರ್ಶವಾದರೆ, ತಾವತ್-ಆಗ (ಯಥಾಯೋಗ್ಯವಾಗಿ), ಅಂಗವಿಶೋಧನಂ-ದೇಹಶುದ್ಧಿಯನ್ನು ಮಾಡಿಕೊಳ್ಳಬೇಕು;[1] ಮಧ್ಯಜಾತೀನಾಂ- ಮಧ್ಯಜಾತಿಗಳ (ಸ್ಪರ್ಶವಾದರೆ-ಷೋಡಶಜಾತಿಗಳ ಕೆಳಗಿನ ಜಾತಿಯವರ ಸ್ಪರ್ಶವಾದಾಗ), ಸಚೈಲಂ-ವಸ್ತ್ರಸಹಿತವಾಗಿ, ಸ್ನಾನಂ-ಸ್ನಾನವನ್ನು, ಆಚರೇತ್ - ಮಾಡಬೇಕು;

---

ಈ ವರ್ಗದ ಜೀವರ ಉತ್ತಮಾಧಮ ಮಧ್ಯಮಗಳೆಂಬ ಸ್ವರೂಪ ತಾರತಮ್ಯದ ಅಧೀನವಾದುದು ಅವರ ಸ್ವರೂಪಜಾತಿಗಳೆಂದು ತಿಳಿಯಬೇಕು (೧೨೦). ೧೦ ಅಂಶಗಳಿಂದ ಜಾತ್ಯಾಹೀನನ ಸ್ಪರ್ಶವಾದರೆ, ಕಿವಿಗಳನ್ನು ಮುಟ್ಟಿಕೊಂಡು ಶ್ರೀಹರಿಸ್ಮರಣೆ ಮಾಡಬೇಕು; ೨೦ ಅಂಶಗಳಿಂದ ನ್ಯೂನಜಾತಿಯವನ ಸ್ಪರ್ಶವಾದರೆ, (ಉದಾ:—ವೈಶ್ಯನು ಬ್ರಾಹ್ಮಣನಿಂದ ೨೦ ಅಂಶಗಳಿಂದ ಹೀನನು), ಆಚಮನದಿಂದ ಶುದ್ಧನಾಗುತ್ತಾನೆ; ೧೨೦ ಅಂಶಗಳಿಂದ ಹೀನನು (ಶೂದ್ರನು) ಸ್ಪರ್ಶಿಸಿದರೆ, ದೇಹವನ್ನು ಜಲದಿಂದ ಶುದ್ಧಿಮಾಡಿಕೊಳ್ಳಬೇಕು; ಶೂದ್ರನಗಿಂತ ಕೀಳಾದ

---

1. ೩೧ನೇ ಅಧ್ಯಾಯದಲ್ಲಿ ವಿಸ್ತರಿಸಲಾದ ಶುದ್ಧಿಕ್ರಮವು ಇಲ್ಲಿ ಪ್ರಸಂಗತ್ವೇನ ಸಂಗ್ರಹವಾಗಿ ನಿರೂಪಿಸಲ್ಪಟ್ಟಿದೆ; (ಶ್ಲೋಕ ೨೪-೨೭ ನೋಡಿರಿ).

ಅಂತ್ಯಜಾತೀನಾಂ-ಅಂತ್ಯಜರ (ಅವರಗಿಂತ ಕೆಳಗಿನ ಸಂಕರಜಾತಿಗಳವರ), ಸ್ಪರ್ಶನಾತ್ - ಸ್ಪರ್ಶದಿಂದ, ಪಂಚಗವ್ಯಂ-ಪಂಚಗವ್ಯವೇ (ಪ್ರಾಶನವೇ), ವಿಶೋಧನಂ-ಶುದ್ಧಿಯು (ಎಂದು ಹೇಳಲಾಗುತ್ತದೆ); ನೀಚನೀಚತರೇಷು- ನೀಚಜಾತೀಯವರ ಮತ್ತು ನೀಚತರ ಜಾತೀಯರರ (ಸ್ಪರ್ಶ) ವಿಷಯದಲ್ಲಿ ಅತ್ರ-ಶುದ್ಧನಾಗಲು, ಕ್ರಮಾತ್-ಕ್ರಮದಿಂದ (ಯಥಾಯೋಗ್ಯವಾಗಿ), ಉಪವಸೇತ್ ಅಪಿ-ಉಪವಾಸವನ್ನೂ ಆಚರಿಸ ಬೇಕಾಗುತ್ತದೆ; ಸ್ಪೃಷ್ಟಸ್ಪೃಷ್ಟೇ-ಸ್ಪರ್ಶಮಾಡಿದವನ ಸ್ಪರ್ಶವಾದರೆ (ಸಾಕ್ಷಾತ್ ಸ್ಪರ್ಶವಿಲ್ಲದೇ ಪರಂಪರೆಯಿಂದ ಸ್ಪರ್ಶದೋಷವುಂಟಾದಾಗ), ತದರ್ವಾಕ್ ಕ್ರಮಾದೇವ - ಹಿಂದಿನ ಕ್ರಮದಂತೆಯೇ (ಒಂದೊಂದು ಮಟ್ಟದ ಕಡಿಮೆ ಶುದ್ಧತೆಯು), ವಿಶೋಧನಂ-ಶುದ್ಧಿಯು (ಶುದ್ಧಿಯನ್ನುಂಟುಮಾಡುವುದೆಂದು ತಿಳಿಯಬೇಕು); ಜಾತಿವಿವೇಚಕಃ-ಜಾತಿವಿವೇಕವನ್ನರಿತವನು, ಏವಂ ಜ್ಞಾತ್ವಾ-ಈ ಶುದ್ಧಿಪ್ರಕಾರ ಗಳನ್ನು ತಿಳಿದು ಆಚರಿಸಿ, ಆಚಾರವಾನ್ ಭವತಿ - ಆಚಾರವಂತನೆನಿಸುತ್ತಾನೆ.

**ಮಾಹಿಷ್ಯೋ ಗಣಕೋ ಜ್ಯೋತಿಃಶಾಸ್ತ್ರಾಣಾಮುಪದೇಶಕಃ ।**
**ಭಾಂಡಾರರಕ್ಷಃ ಸೈರಂಧ್ರೋ ರತ್ನವಿಕ್ರೀಯಲೇಖಕಃ ॥ ೧೨೫ ॥**
**ಸೇನಾನೀರ್ವರ್ಮಸ್ತ್ರಹೇಮಾದಿವಣಿಗ್ವ್ಯವಹೃತೌ ಪಟುಃ ।**
**ನೃಪಪ್ರಿಯೋಧಿಕಾರೀ ಚ ನ್ಯಾಯಾನ್ಯಾಯವಿವೇಚಕಃ ॥ ೧೨೬ ॥**

---

ಮಧ್ಯಮಜಾತಿಯವನ ಸ್ಪರ್ಶವಾದರೆ, ವಸ್ತ್ರಸಹಿತ (ಉಟ್ಟಬಟ್ಟೆಗಳ ಸಮೇತ) ಸ್ನಾನಮಾಡಬೇಕು; ಅಂತ್ಯಜರ ಸ್ಪರ್ಶವಾದರೆ ಪಂಚಗವ್ಯಪ್ರಾಶನ ಮಾಡಬೇಕು; ಅಲ್ಲಿಂದ ಕೆಳಗಿನವರು, ನೀಚ ನೀಚತರ ಜಾತೀಯರ ಸ್ಪರ್ಶಿಸಿದರೆ, ಕ್ರಮವಾಗಿ ಉಪವಾಸದವರೆಗಿನ ಶುದ್ಧಿಪ್ರಕಾರಗಳನ್ನು ಆಚರಿಸಬೇಕು; ಪರಂಪರೆಯಿಂದ ಉಂಟಾಗುವ ಸ್ಪರ್ಶದೋಷದ ಪರಿಹಾರವಾದರೂ, ಹಿಂದಿನ ಕ್ರಮದಿಂದಲೇ, ಎಂದರೆ ಸ್ಪರ್ಶಿಸಿದವನ ಜಾತಿಗೆ ಈ ಹಿಂದೆ ವಿಹಿತವಾದಷ್ಟು ಶುದ್ಧಿಯನ್ನು ಮಾಡಿ ಕೊಳ್ಳುವುದರಿಂದ ಸಿದ್ಧಿಸುತ್ತದೆ; ಸ್ಪರ್ಶಿಸಿದವನಿಗೆ ಅನ್ಯನೀಚ ಸ್ಪರ್ಶದಿಂದುಂಟಾ ದುದೆಂಬ ದೋಷವನ್ನು ಪರಿಗಣಿಸಬೇಕಾದುದಿಲ್ಲ—ಸಾಕ್ಷಾತ್ ಸ್ಪರ್ಶವು ದೋಷಕರವಾದರೆ ಮಾತ್ರ ಉಕ್ತವಾದ ಪರಿಶೋಧನವಿಧಿಗಳು; ಪರಂಪರೆಯಿಂದ ಪ್ರಾಪ್ತವಾಗಬಹುದಾದ ದೋಷಗಳಿಗಲ್ಲ; ಈ ಪ್ರಕಾರದ ಜಾತಿವಿವೇಕವನ್ನು ತಿಳಿದು ಆಚರಿಸುವವನೇ ಆಚಾರವಂತನೆನಿಸುತ್ತಾನೆ (೧೨೧-೧೨೪). ಜ್ಯೋತಿಷ್ಯನೂ, ಜ್ಯೋತಿಷದ (ಶಾಸ್ತ್ರದ) ಉಪದೇಶಕನೂ, ಕೋಶರಕ್ಷಕನೂ, ಸೇನಾಧಿಕಾರಿಗೆ ಕವಚಾದಿಗಳನ್ನು ತೊಡಿಸುವ ಸೇವಕನೂ, ರತ್ನಾದಿ ವ್ಯಾಪಾರಿಗಳಲ್ಲಿ ನೌಕರನೂ, ಸೈನ್ಯದಳದ ನಾಯಕನೂ, ಸುವರ್ಣ ವಸ್ತ್ರಾದಿಗಳ ವ್ಯಾಪಾರ ವ್ಯವಹಾರಗಳಲ್ಲಿ

ಮಾಹಿಷ್ಯಃ-ಮಾಹಿಷ್ಯನು,[1] ಗಣಕಃ-ಗಣಿತಜ್ಞನೂ (ಜ್ಯೋತಿಷ್ಯನೂ); ಜ್ಯೋತಿಃ ಶಾಸ್ತ್ರಾಣಾಂ ಉಪದೇಶಕಃ-ಜ್ಯೋತಿಷ್ಯವಿದ್ಯೆಯ ಉಪದೇಶಕನೂ, ಭಾಂಡಾರರಕ್ಷಃ-ಕೋಶರಕ್ಷಕನೂ, ಸೈರಂಧ್ರಃ-(ಸೈನ್ಯಾಧಿಕಾರಿಯ) ಕವಚಾದಿ ಅಲಂಕಾರ ಕರ್ತನೂ, ರತ್ನವಿಕ್ರೀಯಲೇಖಕಃ-ರತ್ನಾದಿ ವ್ಯಾಪಾರಗಳಲ್ಲಿ ಸೌಕರನೂ, ಸೇನಾನೀಃ-ಸೈನ್ಯದಳದ ನಾಯಕನೂ, ವಸ್ತ್ರಹೇಮಾದಿವಣಿಗ್ವ್ಯಪಹೃತೌ-ವಸ್ತ್ರ ಭಂಗಾರಾದಿ ವ್ಯಾಪಾರ ವ್ಯವಹಾರದಲ್ಲಿ, ಪಟುಃ-ದಕ್ಷನೂ, ನೃಪಪ್ರಿಯಃ-ರಾಜನಿಗೆ ಪ್ರಿಯನೂ, ಅಧಿಕಾರೀ ಚ-ಅಧಿಕಾರಿಯೂ, ನ್ಯಾಯಾನ್ಯಾಯವಿವೇಚಕಃ-ನ್ಯಾಯಾ ನ್ಯಾಯಗಳ ವಿಮರ್ಶಕನೂ, (ಆಗಿದ್ದು ಜೀವಿಕೆಯನ್ನು ನಡೆಸಿಕೊಳ್ಳಬಹುದು).

**ಉಗ್ರೋಽಶ್ವಸಾದಿಪಾದಾತಃ ಶೂರಃ ಶಾಸ್ತಾ ದುರಾತ್ಮನಾಂ ।**
**ಧರ್ಮಪಾಲಃ ಪ್ರಜಾಪಾಲಃ ಶಸ್ತ್ರೇಣೈವ ಸ ಜೀವತಿ ॥ ೧೨೭ ॥**

ಉಗ್ರಃ-ಉಗ್ರನು (ಕ್ಷತ್ರಿಯನಿಂದ ಶೂದ್ರಸ್ತ್ರೀಯಲ್ಲಿ ಜನಿಸಿದವನು), ಶೂರಃ-ಶೂರನಾದ, ಅಶ್ವಸಾದಿಪಾದಾತಃ-ಅಶ್ವಾರೋಹಿ ಸೈನಿಕನೂ, ಕಾಲಾಳೂ (ಪದಾತಿಯೂ), ದುರಾತ್ಮನಾಂ-ದುಷ್ಟರ (ಶಿಕ್ಷೆಗೆ ಗುರಿಯಾದ ಅಪರಾಧಿಗಳ), ಶಾಸ್ತಾ-ಶಿಕ್ಷಕನೂ (ಶಾಸನಕರ್ತನೂ), ಧರ್ಮಪಾಲಃ-(ಪ್ರಜೆಗಳ) ಧರ್ಮಾನುಷ್ಠಾನಗಳನ್ನು ವೀಕ್ಷಿಸುವ ಅಧಿಕಾರಿಯೂ, ಪ್ರಜಾಪಾಲಃ-(ನಿರ್ದಿಷ್ಟ ಗ್ರಾಮಾದಿ ಪ್ರದೇಶಗಳ) ಪ್ರಜೆಗಳ ರಕ್ಷಕನೂ (ಆಗಿದ್ದು), ಸಃ-ಆತನು, ಶಸ್ತ್ರೇಣ ಏವ-ಶಸ್ತ್ರವನ್ನಾಶ್ರಯಿಸಿಯೇ (ಆಯುಧಪಾಣಿಯಾಗಿದ್ದು ಮಾಡುವ ಕರ್ಮಗಳಿಂದಲೇ), ಜೀವತಿ-ಜೀವಿಸುತ್ತಾನೆ (ಇವು ಅವನು ಅನುಷ್ಠಿಸ ಬಹುದಾದ ವೃತ್ತಿಗಳಾಗಿರುತ್ತವೆ).

**ಹಸ್ತ್ಯಶ್ವರಥಪಾದಾಂತಂ ಸೇನಾಂಗಂ ಸ್ಯಾಚ್ಚತುಷ್ಟಯಂ ।**
**ಚತುರಂಗಸ್ಯ ಸೈನ್ಯಸ್ಯ ಕಾರ್ಯಾಕಾರ್ಯವಿವೇಚಕಃ ॥ ೧೨೮ ॥**
**ಸಾರಥ್ಯಕೃತ್ಸಖಾ ರಾಜ್ಞಃ ಸೂತೋ ಹಸ್ತ್ಯಶ್ವವಾಹನಃ ।**

ಹಸ್ತ್ಯಶ್ವರಥಪಾದಾಂತಂ-ಗಜ, ಅಶ್ವ, ರಥ, ಪದಾತಿಯೇ ಕಡೆಯಾಗಿ ಉಳ್ಳ,

---

ಕುಶಲನೂ, ನ್ಯಾಯಾನ್ಯಾಯ ವಿವೇಚಕನಾದ ರಾಜಪ್ರಿಯನಾದ ಅಧಿಕಾರಿಯೂ, ಆಗಿದ್ದು ಮಾಹಿಷ್ಯನು, ಜೀವಿತವನ್ನು ನಡೆಸಬಹುದು (೧೨೫-೧೨೬). ಉಗ್ರಜಾತಿಯವನು, ಶೂರನಾದ ಅಶ್ವಾರೋಹಿಯೂ, ಪದಾತಿಯೂ, ದುರ್ಜನರಿಗೆ (ಅಪರಾಧಿಗಳಿಗೆ) ಶಿಕ್ಷೆಯನ್ನು ವಿತರಣೆ ಮಾಡುವವನೂ, (ರಾಜಾಜ್ಞಾನುಸಾರವಾಗಿ) ಪ್ರಜಾಪಾಲನೂ, ಧರ್ಮಪಾಲನೂ ಆಗಿದ್ದು ಪ್ರಾಯಃ ಶಸ್ತ್ರಧಾರಿಯಾಗಿ ಮಾಡಬೇಕಾದ ಕರ್ಮಗಳಲ್ಲಿ ತೊಡಗಿ, ತನ್ನ ಜೀವಿತವನ್ನು ನಡೆಸುತ್ತಾನೆ (೧೨೭). ಸೂತನು ರಾಜನ ಸಾರಥಿಯಾಗಿಯೂ, ಸಖನಾಗಿಯೂ ಇರುತ್ತಾನೆ (ಇರಬಹುದು);

1. ಇದೇ ಅಧ್ಯಾಯದ ೧೨ನೇ ಶ್ಲೋಕವನ್ನು ನೋಡಿರಿ.

ಚತುಷ್ಟಯಂ-ಈ ನಾಲ್ಕು. ಸೇನಾಂಗಂ-ಸೇನಾಂಗವು. ಸ್ಯಾತ್-ಆಗಿರುತ್ತದೆ; ಸೂತಃ-ಸೂತನು (ಕ್ಷತ್ರಿಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು), ಚತುರಂಗಸ್ಯ-ಗಜಾದಿ ನಾಲ್ಕಂಗಗಳುಳ್ಳ, ಸೈನ್ಯಸ್ಯ-ಸೈನ್ಯದ, ಕಾರ್ಯಾಕಾರ್ಯ ವಿವೇಚಕಃ-ಕಾರ್ಯ, ಅಕಾರ್ಯಗಳ ಮೇಲ್ವಿಚಾರಕನೂ, ರಾಜ್ಞಃ-ರಾಜನ, ಸಾರಥ್ಯಕೃತ್-ಸಾರಥಿಯೂ (ಸಾರಥಿತನವನ್ನು ಮಾಡುವವನೂ), ಹಸ್ತ್ಯಶ್ವವಾಹನಃ- (ಸ್ವಯಂ) ಗಜಾದಿ ವಾಹನಗಳನ್ನೇರಿರವನಾಗಿ, ಸಖಾ-(ರಾಜ) ಸಖನೂ (ಆಗಿ ಕೆಲಸಮಾಡುತ್ತಾನೆ).

**ಕರಣೋ ಲಿಪಿಲೇಖಃ ಸ್ಯಾಚ್ಚಿತ್ರಲೇಖೋ ವಣಿಗ್ವರಃ ॥ ೧೨೯ ॥**
**ಕೃಷಿಕೃದ್ ಗ್ರಾಮಣೀರಾವೀಭಾಗವ್ಯವಹೃತೌ ಪಟುಃ ।**
**ನಾನಾಶಿಲ್ಪಕರಃ ಸ್ವೋಚ್ಚಪರಿಚರ್ಯಾಕರೋಽಪಿ ಸಃ ॥ ೧೩೦ ॥**

ಕರಣಃ-ಕರಣನು (ವೈಶ್ಯನಿಂದ ಶೂದ್ರಸ್ತ್ರೀಯಲ್ಲಿ ಜನಿಸಿದವನು). ಲಿಪಿಲೇಖಃ-ಪತ್ರಗಳನ್ನು ಬರೆಯುವವನು, ಚಿತ್ರಲೇಖಃ-ಚಿತ್ರಗಳನ್ನು ಬರೆಯುವವನು, ವಣಿಗ್ವರಃ-ಶ್ರೇಷ್ಠ ವ್ಯಾಪಾರಿಯು, ಕೃಷಿಕೃತ್-ಭೂವ್ಯವಸಾಯಮಾಡುವವನು, ಗ್ರಾಮಣೀಃ-ಗ್ರಾಮಾಧಿಕಾರಿಯು, ಆವೀಭಾಗವ್ಯವಹೃತೌ-ಕುರಿಮೇಕೆಗಳ ವ್ಯವಹಾರದಲ್ಲಿ ಪಟುಃ-ದಕ್ಷನೂ, ನಾನಾಶಿಲ್ಪಕರಃ-ವಿವಿಧ ಕೈಕೆಲಸಗಳನ್ನು ಮಾಡುವವನು; ಸ್ವೋಚ್ಚಪರಿಚರ್ಯಾಕರಃ ಅಪಿ-ತನಗಿಂತ ಉತ್ತಮರ ಸೇವೆಯನ್ನು ಮಾಡುವವನೂ, ಸಃ-ಆತನು (ಕರಣನು), ಸ್ಯಾತ್-ಆಗಬೇಕು (ಆಗಬಹುದು).

**ಮಾಗಧೋ ನೃಪತಿಸ್ತೋತಾ ಹಯಾದಿಪಶುವಿಕ್ರಯೀ ।**
**ನಾನಾವಾದ್ಯಪಟುರ್ಗಾತಾ ಕರ್ಷಕಶ್ಚಿತ್ರಲೇಖಕಃ ॥ ೧೩೧ ॥**
**ಶಿಲ್ಪವೇತ್ತಾ ಚ ಸಂಗೀತನಟನಾಟ್ಯಕವಿತ್ ಪಟುಃ ।**
**ರಾಜ್ಞಾಂ ವಿನೋದಕಃ ಶೂರೋ ಯಂತಾ ಗಜಹಯಾದಿನಾಂ ॥ ೧೩೨ ॥**

ಸ್ವಯಂ ಗಜಾದಿ ವಾಹನಗಳನ್ನು ಆರೋಹಣ ಮಾಡಿಕೊಂಡು, ಚತುರಂಗ ಸೈನ್ಯದ ಕಾರ್ಯಾಕಾರ್ಯಗಳನ್ನು ಪರಿಶೀಲಿಸುವ ಅಧಿಕಾರಿಯಾಗಿರಬಹುದು; ಗಜ, ಅಶ್ವ, ರಥ, ಪದಾತಿಗಳೆಂಬ ನಾಲ್ಕು ವಿಭಾಗಗಳುಳ್ಳದ್ದು ಸೇನೆಯು; (ರಾಜ್ಯರಕ್ಷಣೆಯಲ್ಲಿ ಸಮರ್ಥವಾಗುತ್ತದೆ) (೧೨೮). ಕರಣನೆಂಬ ಅನುಲೋಮಿಯು, ಚಿತ್ರ ಲೇಖಕನೂ, ಪತ್ರಲೇಖಕನೂ, ಉತ್ತಮ ವ್ಯಾಪಾರಿಯೂ, ವ್ಯವಸಾಯಗಾರನೂ, ಗ್ರಾಮಾಧಿಕಾರಿಯೂ, ಕುರಿ ಮೇಕೆಗಳ ವ್ಯವಹಾರ ದಕ್ಷನೂ, ವಿವಿಧ ಕೈ ಕೆಲಸಗಳ ನಿರ್ವಾಹಕನೂ, ಸ್ವೋತ್ತಮರ ಸೇವಕನೂ, ಆಗಿರಬಹುದು; ಇವು ಅವನ ಜೀವಿಕೆಗಳೂ ಸ್ವಧರ್ಮಗಳೂ ಆಗಿ ಅವನ ಸದ್ಗತಿಕಾರಣವಾಗುತ್ತವೆ (೧೨೯-೧೩೦). ಮಾಗಧನೆಂಬ ಪ್ರತಿಲೋಮಿಯು, (ರಾಜ) ಸ್ತುತಿಪಾಠಕನೂ, ಅಶ್ವಾದಿ ಪಶುಗಳ ವ್ಯಾಪಾರಿಯೂ, ವಿವಿಧ ವಾದ್ಯಗಳನ್ನು ಬಾರಿಸುವುದರಲ್ಲಿ ದಕ್ಷನೂ, ಗಾನಕರ್ತನೂ,

ಮಾಗಧಃ-ಮಾಗಧನು (ವೈಶ್ಯನಿಂದ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದವನು), ನೃಪತಿಸ್ತೋತಾ-ರಾಜನನ್ನು ಸ್ತುತಿಸುವವನು (ಸ್ತುತಿಪಾಠಕನು), ಹಯಾದಿ ಪಶುವಿಕ್ರಯೀ-ಅಶ್ವಾದಿ ಪಶುಗಳ ವ್ಯಾಪಾರಿಯೂ, ನಾನಾವಾದ್ಯಪಟುಃ-ವಿವಿಧ ವಾದ್ಯಗಳನ್ನು ನುಡಿಸುವುದರಲ್ಲಿ ದಕ್ಷನೂ, ಗಾತಾ-ಗಾನಮಾಡುವವನೂ, ಕರ್ಷಕಃ-ಭೂವ್ಯವಸಾಯಗಾರನೂ, ಚಿತ್ರಲೇಖಕಃ-ಚಿತ್ರಲೇಖಕನೂ, ಶಿಲ್ಪವೇತ್ತಾ ಚ-ಶಿಲ್ಪವನ್ನು (ಕುಶಲಕಲೆಗಳನ್ನು) ತಿಳಿದವನೂ, ಸಂಗೀತನಟನಾಟ್ಯಕವಿತ್‌ಪಟುಃ-ಸಂಗೀತ, ನರ್ತನ, ನಟನಗಳನ್ನು ತಿಳಿದ ಪ್ರವೀಣನೂ, ರಾಜ್ಞಾಂ-ರಾಜರ, ವಿನೋದಕಃ-ವಿನೋದಕಾರಿಯೂ (ವಿದೂಷಕನೂ) (ವಿವಿಧ ಹಾಸ್ಯಾದಿಗಳಿಂದ ಮನೋರಂಜನೆ ಮಾಡುವವನು), ಶೂರಃ-ಪರಾಕ್ರಮಿಯೂ, ಗಜಹಯಾದಿನಾಂ-ಆನೆ ಕುದುರೆಗಳ, ಯಂತಾ-ನಿಯಾಮಕನೂ (ಆ ವಾಹನಗಳ ನಿಯಂತನೂ), (ಸ್ಯಾತ್-ಆಗಿರಬಹುದು).

**ವೈದೇಹಃ ಕಾಷ್ಠಪಾಷಾಣಕ್ರಯವಿಕ್ರಯಶಿಲ್ಪಕೃತ್ ।**
**ತಾಮ್ರಕಾಂಸ್ಯಾಯಸಾದೀನಾಂ ನಾನಾಕರ್ಮವಿಧಾಯಕಃ ॥ ೧೩೩ ॥**
**ಕೌಶೇಯಕಸ್ತಂತುವಾಯಃ ಕುಲಾಲಶ್ಚರ್ಮಕರ್ಮಕೃತ್ ।**
**ಹಯೋಷ್ಟ್ರಾಶ್ವತರಾದೀನಾಂ ಪಲ್ಯಾಣಕರಣೇ ಪಟುಃ ॥ ೧೩೪ ॥**
**ಕರ್ಷಕೋ ವಣಿಗಿತ್ಯಾದಿಕರ್ಮಾ ಚ ಪರಿಚಾರಕಃ ।**

ವೈದೇಹಃ-ವೈದೇಹನು (ವೈಶ್ಯನಿಂದ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದ ಪ್ರತಿಲೋಮಿಯು), ಕಾಷ್ಠಪಾಷಾಣಕ್ರಯವಿಕ್ರಯಶಿಲ್ಪಕೃತ್ - ಕಟ್ಟಿಗೆ, ಕಲ್ಲು ಮೊದಲಾದವುಗಳ ಕ್ರಯವಿಕ್ರಯ ಕಸಬನ್ನು ಮಾಡುವವನು, ತಾಮ್ರಕಾಂಸ್ಯಾಯಸಾದೀನಾಂ-ತಾಮ್ರ, ಕಂಚು, ಉಕ್ಕು ಮೊದಲಾದ ಲೋಹಗಳ, ನಾನಾಕರ್ಮವಿಧಾಯಕಃ-ವಿವಿಧ ವಸ್ತು ನಿರ್ಮಾಪಕನೂ, ಕೌಶೇಯಕಃ-ರೇಶ್ಮೆ ತಯಾರಕನೂ, ತಂತುವಾಯಃ-ನೇಯ್ಗೆ ಮಾಡುವವನೂ (ನೇಗಾರನೂ), ಕುಲಾಲಃ- ಕುಂಬಾರನೂ,

---

ಭೂಕೃಷಿಗಾರನೂ, ಚಿತ್ರಲೇಖಕನೂ, ಶಿಲ್ಪಜ್ಞನೂ; ಸಂಗೀತ, ನೃತ್ಯ, ನಟನೆಗಳಲ್ಲಿ ಕುಶಲನೂ, ರಾಜರ ಮನೋರಂಜಕನೂ (ವಿದೂಷಕನೂ), ಶೂರನೂ, ಆನೆ ಕುದುರೆಗಳನ್ನು ನಡೆಸುವವನೂ, ಆಗಿರಬಹುದು (೧೩೧-೧೩೨). ವೈದೇಹನೆಂಬ ಪ್ರತಿಲೋಮಿಯು, ಮರಮುಟ್ಟುಗಳು ಮತ್ತು ವಿವಿಧ ಶಿಲೆಗಳ ಕ್ರಯವಿಕ್ರಯ, ತಾಮ್ರ, ಕಂಚು, ಕಬ್ಬಿಣ ಮೊದಲಾದ ಲೋಹಗಳಿಂದ ನಾನಾವಸ್ತುಗಳನ್ನು ತಯಾರ್ಮಾಡುವ ಕೆಲಸ, ರೇಶ್ಮೆ ತಯಾರಕನೂ, ನೇಗಾರನೂ, ಕುಂಬಾರನೂ, ಚರ್ಮಹರಕಾರನೂ, ಕುದುರೆ, ಒಂಟೆ, ಹೇಸರಗತ್ತೆ ಮೊದಲಾದ ವಾಹನಗಳಿಗೆ ಬೇಕಾಗುವ ಲಗಾಮು, ಜೀನು (ತಡಿ) ಮೊದಲಾದ ವಸ್ತುಗಳನ್ನು ತಯಾರಿಸುವವನೂ, ವ್ಯವಸಾಯಗಾರನೂ,

ಚರ್ಮಕರ್ಮಕೃತ್-ಚರ್ಮಹದಕಾರನೂ, ಹಯೋಷ್ಟ್ರಾಶ್ವ- ತರಾದೀನಾಂ-ಅಶ್ವ, ಒಂಟೆ, ಅಶ್ವತರ (ಹೇಸರಗತ್ತೆ), ಮೊದಲಾದವುಗಳಿಗೆ, ಪರ್ಯಾಣಕರಣೇ-ಜೀನು ಲಗಾಮು ಇತ್ಯಾದಿ ವಾಹನಸಾಮಗ್ರಿಗಳನ್ನು ತಯಾರುಮಾಡುವುದರಲ್ಲಿ ಪಟುಃ-ಕುಶಲನೂ, ಕರ್ಷಕಃ-ವ್ಯವಸಾಯಗಾರನೂ, ವಣಿಗಿತ್ಯಾದಿಕರ್ಮಾ-ವ್ಯಾಪಾರ ಮೊದಲಾದ ಕರ್ಮವುಳ್ಳವನೂ, ಚ-ಮತ್ತು ಪರಿಚಾರಕಃ-(ಉತ್ತಮರ) ಸೇವಕನೂ (ಸ್ಯಾತ್-ಆಗಿರಬಹುದು).

ಅಯೋಗವಸ್ತು ರಜಕೋ ಧಾವಕಶ್ಚರ್ಮಕರ್ಮಕೃತ್ ॥ ೧೩೫ ॥
ನಾಪಿತಸ್ತಂತುವಾಯಶ್ಚ ಕರ್ಮಾರಃ ಖನಕೋಽಪಿ ಚ ।
ಕುಡ್ಯಕೋ ವಾದ್ಯಕೋ ವ್ಯಾಧಸ್ತಲಿಕಶ್ಚೂರ್ಣಕೃತ್ತಥಾ ॥ ೧೩೬ ॥
ವೃಕ್ಷಭೇದಕರೋ ದಂಡ್ಯದಂಡಕೃದ್ಬಾಣಕುಂತಕೃತ್ ।
ಮಲ್ಲಕಃ ಶಿಲ್ಪಿನಿಚರೋ ಮೃಗಪಕ್ಷ್ಯಕ್ಷಕರ್ಮಕೃತ್ ॥ ೧೩೭ ॥
ಧಾನ್ಯವಾಹೋ ಬಲೀವರ್ದವಾಹನಾದೌ ಮಹಾಪಟುಃ ।

ಅಯೋಗವಃ ತು-ಅಯೋಗವನಾದರೋ (ಶೂದ್ರನಿಂದ ವೈಶ್ಯಸ್ತ್ರೀಯಲ್ಲಿ ಜನಿಸಿರವನು), ರಜಕಃ-ಅಗಸನೂ, ಧಾವಕಶ್ಚ-ಬಟ್ಟೆ ಒಗೆಯುವವನೂ (ಅಥವಾ ವೇಗವಾಗಿ ಓಡಿ ಕಾರ್ಯ ನಿರ್ವಹಿಸುವವನು), ಚರ್ಮಕರ್ಮಕೃತ್-ಚರ್ಮ ಹದಮಾಡುವವನೂ, ನಾಪಿತಃ-ಕ್ಷೌರಕನೂ, ತಂತುವಾಯಶ್ಚ-ನೇಗಾರನೂ, ಕರ್ಮಾರಃ-ಕಮ್ಮಾರನು (ಕುಲಿಮೆ ಇಟ್ಟು ಕೆಲಸಮಾಡುವವ), ಖನಕಃ-ಭೂಮಿ ಅಗಿಯುವವನೂ, ಅಪಿ ಚ-ಮತ್ತು ಕುಡ್ಯಕಃ-ಗೋಡೆ ಕಟ್ಟುವವನೂ, ವಾದ್ಯಕಃ-ವಾದ್ಯಗಾರನೂ, ವ್ಯಾಧಃ-ಬೇಟೆಗಾರನೂ, ತಲಿಕಃ-ಮೇದಾರನೂ (ಬಿದಿರುಚಾಪೆ

---

ವ್ಯಾಪಾರಿಯೂ, ಉತ್ತಮರ ಸೇವಕನೂ, ಆಗಿರಬಹುದು (೧೩೩-೧೩೪). ಅಯೋಗವವೆಂಬ ಪ್ರತಿಲೋಮಿಯು ಈ ಮುಂದಿನ ವೃತ್ತಿಗಳಲ್ಲಿ ತೊಡಗಬಹುದು—ಅವು ಜಾತಿಧರ್ಮಕ್ಕೆ ವಿರುದ್ಧವಾಗುವುದಿಲ್ಲ: ವಸ್ತ್ರಶೋಧಕ, ಅಗಸರವನು, ಚರ್ಮ ಹದಮಾಡುವವ, ಕ್ಷೌರಕ, ನೇಗಾರ, ಕಮ್ಮಾರ, ಭೂಖನಕ, ಗೋಡೆಕಟ್ಟುವವ, ವಾದ್ಯಗಾರ, ಬೇಡರವ, ಮೇದಾರ, ಚೂರ್ಣಕಾರಕ, ವೃಕ್ಷಭೇದಕ, ಅಪರಾಧಿಗಳಿಗೆ ದಂಡ ವಿತರಣೆ ಮಾಡುವವ, ಶರ, ಈಟಿ ಮೊದಲಾದ ಆಯುಧಗಳ ನಿರ್ಮಾಪಕ, ಜಟ್ಟಿ (ಮಲ್ಲಯುದ್ಧಕರ), ಶಿಲ್ಪಗಳನ್ನು ಬಲ್ಲವ, ಮೃಗಪಕ್ಷಿ ಮೊದಲಾದ ಪ್ರಾಣದೇಹಗಳನ್ನು ಕೊಯ್ದು ಅವುಗಳಿಂದ ಉಪಯುಕ್ತವಸ್ತುಗಳನ್ನು ತಯಾರಿಸುವ, ಮೂಟೆ (ಧಾನ್ಯಚೀಲಗಳನ್ನು) ಹೊರುವವ, ಗೂಳಿ ಮೊದಲಾದವುಗಳನ್ನೇರಿ ನಿಯಂತ್ರಿಸುವುದರಲ್ಲಿ ಸಮರ್ಥನಾದವ; ಈ ಮೊದಲಾದ ಕರ್ಮಗಳಲ್ಲಿ ತೊಡಗಬಹುದು (೧೩೫-೧೩೭). ಕ್ಷತ್ತಾರನೆಂಬ ಪ್ರತಿಲೋಮಿಯು, ರಾಜದ್ವಾರಪಾಲಕ, ಸುರೆ ಮದ್ಯ

ಮೊದಲಾದುದನ್ನು ಮಾಡುವವನೂ), ಚೂರ್ಣಕೃತ್-ಚೂರ್ಣ ಮಾಡುವವನೂ (ಸುಣ್ಣಪುಡಿ, ರಂಗೋಲಿ ಇತ್ಯಾದಿ), ತಥಾ-ಹಾಗೂ, ವೃಕ್ಷಭೇದಕರಃ-ಅರಣ್ಯದಲ್ಲಿ ವೃಕ್ಷಗಳನ್ನು ಕತ್ತರಿಸುವವನೂ) ಕಟ್ಟಿಗೆ ಕಡಿಯುವವನೂ, ದಂಡ್ಯದಂಡಕೃತ್-ಅಪರಾಧಿಗಳಿಗೆ (ನ್ಯಾಯಾಧೀಶನ ಆಜ್ಞೆಯಂತೆ) ದಂಡವನ್ನು (ಶಿಕ್ಷೆಯನ್ನು) ವಿಧಿಸುವವನೂ, ಬಾಣಕುಂತಕೃತ್-ಬಾಣ, ಈಟಿ (ಇತ್ಯಾದಿ ಆಯುಧಗಳನ್ನು) ತಯಾರಿಸುವವನೂ, ಮಲ್ಲಕಃ-ಜಟ್ಟಿಯೂ (ಕುಸ್ತಿಗಾರ), ಶಿಲ್ಪಿನಿಚರಃ-ಶಿಲ್ಪವಿದ್ಯೆಗಳನ್ನು ಬಲ್ಲವನೂ, ಮೃಗಪಕ್ಷಿಷ್ಠಕರ್ಮಕೃತ್-ಮೃಗ, ಪಕ್ಷಿಗಳನ್ನು ಕೊಯ್ದು ಆ ಸಂಬಂಧದ ನಾನಾ ಕರ್ಮಗಳನ್ನು ಮಾಡುವವನೂ, ಧಾನ್ಯವಾಹಃ-ಧಾನ್ಯದ ಮೂಟೆಗಳನ್ನು ಹೊರುವವನೂ, ಬಲೀವರ್ದವಾಹನಾದೌ-ವೃಷಭ (ಗೂಳಿ) ಮೊದಲಾದ ವಾಹನಗಳನ್ನೇರುವುದರಲ್ಲಿ (ಅವುಗಳನ್ನು ನಿಯಂತ್ರಿಸುವುದರಲ್ಲಿ), ಮಹಾಪಟುಃ-ಮಹಾಸಮರ್ಥನೂ (ಆಗಿರಬಹುದು).

ಕ್ಷತ್ತಾ ರಾಜ್ಞಾಂ ಪ್ರತೀಹಾರಃ ಸುರಾಮದ್ಯಾದಿಕರ್ಮಕೃತ್ ॥ ೧೩೮ ॥
ಚೋರಾದಿದಂಡ್ಯಪಾಪಾನಾಂ ಶಿರಃಪಾಣ್ಯಾದಿವರ್ಧಕಃ ।
ಮಲ್ಲಶ್ಚೂರ್ಣಕರೋ ವಾಜಿಗಜಗೋಮೃಗಪಕ್ಷಿಣಾಂ ॥ ೧೩೯ ॥
ಪರಿಚರ್ಯಾಕರೋ ರಾಜ್ಞಾಂ ಶುದ್ಧಾಂತಸ್ಯ ಚ ರಕ್ಷಕಃ ।
ಪ್ರೇಷ್ಯಃ ಪುರಃಸರಃ ಶೂರೋ ಮಲ್ಲಶಾಸ್ತ್ರೇಷು ನೈಪುಣಃ ॥ ೧೪೦ ॥
ತಂತುಕೃತ್ತಂತುವಾಯಶ್ಚ ಜಾಲಕೃನ್ಮತ್ಸ್ಯಜೀವನಃ ।
ಕರ್ಮಾರಶ್ಚರ್ಮರಜಕಃ ಕ್ರೂರಕರ್ಮಾ ಚ ಯಾಮಿಕಃ ॥ ೧೪೧ ॥
ಗ್ರಾಮರಕ್ಷೀ ದುರ್ಗರಕ್ಷೀ ನಾವಿಕೋ ಮಾಂಸವಿಕ್ರಯೀ ।
ಶೈಲೂಷೋ ಗಾರುಡೋ ಗಾತಾ ನಟೋ ರಜ್ಜ್ವಾದಿಕರ್ಮಕೃತ್ ॥೧೪೨॥
ವೇಣುಕೋ ಗೂಢಚಾರಶ್ಚೇತ್ಯಾದಿಕರ್ಮಾ ಚ ಭಾಂಡಕಃ ।

---

ಮೊದಲಾದ ಮಾದಕವಸ್ತು ಸಂಬಂಧವಾದ ಕರ್ಮ, ಚೌರ್ಯಾದಿ ಅಪರಾಧಗಳಿಗಾಗಿ ಶಿಕ್ಷೆಗೆ ಗುರಿಮಾಡಲ್ಪಟ್ಟ ಪಾಪಿಗಳ ತಲೆ ಕೈ ಮೊದಲಾದ ಅಂಗಗಳನ್ನು ಕತ್ತರಿಸುವುದು; ಕುಸ್ತಿಮಾಡುವುದು; ಚೂರ್ಣಗಳನ್ನು ತಯಾರಿಸುವುದು; ರಾಜರ ಅಶ್ವ ಗಜ ಗೋವು ಹರಿಣಪಕ್ಷಿ ಮೊದಲಾದ ಪ್ರಾಣಿಗಳ ಉಪಚಾರಕರ್ತನಾಗಿರುವುದು; ರಾಜಾಂತಃಪುರದ ಕಾವಲುಗಾರ, ರಾಜಾದಿಗಳ ಮುಂಭಾಗದಲ್ಲಿ ಹೋಗುವ ದೂತ; ಮಲ್ಲಶಾಸ್ತ್ರನಿಪುಣ; ನೂಲುಗಾರ, ನೇಗಾರ, ಜಾಲಗಾರ (ಬಲೆಗಳನ್ನು ಸಿದ್ಧಗೊಳಿಸುವವ), ಬೆಸ್ತರವ (ಮತ್ಸ್ಯಗಳನ್ನು ಹಿಡಿದು ಜೀವಿಸುವವ); ಕಮ್ಮಾರ; ಚರ್ಮ ಹದಮಾಡುವವ, ಉಗ್ರಕರ್ಮನಿರ್ವಾಹಕ, ರಾತ್ರಿಕಾವಲುಗಾರ,

ಕ್ಷತ್ತಾ-ಕ್ಷತ್ತಾರನು (ಶೂದ್ರನಿಂದ ಕ್ಷತ್ರಿಯಸ್ತ್ರೀಯಲ್ಲಿ ಜನಿಸಿದ ಪ್ರತಿಲೋಮಿಯು), ರಾಜ್ಞಾಂ-ರಾಜರ, ಪ್ರತೀಹಾರಃ-ದ್ವಾರಪಾಲಕನೂ, ಸುರಾಮದ್ಯಾದಿಕರ್ಮಕೃತ್-ಸುರೆ, ಮದ್ಯ ಮೊದಲಾದ ಮಾದಕವಸ್ತುಗಳನ್ನು ಸಿದ್ಧಗೊಳಿಸುವವನೂ, ಚೋರಾದಿದಂಡ್ಯಪಾಪಾನಾಂ-ಕಳ್ಳತನ ಮೊದಲಾದ ಶಿಕ್ಷಾರ್ಹವಾದ ಪಾಪಗಳನ್ನು ಮಾಡಿದವರ, ಶಿರಃಪಾಣ್ಯಾದಿವರ್ಧಕಃ-(ರಾಜಾಜ್ಞೆಯಂತೆ) ತಲೆ ಕೈ ಮೊದಲಾದವುಗಳನ್ನು ಕತ್ತರಿಸುವವನೂ, ಮಲ್ಲಃ-ಕುಸ್ತಿಗಾರನೂ, ಚೂರ್ಣಕರಃ-ಚೂರ್ಣಗಳನ್ನು ತಯಾರಿಸುವವನೂ, ರಾಜ್ಞಾಂ-ರಾಜರ, ವಾಜಿಗಜಗೋಮೃಗಪಕ್ಷಿಣಾಂ-ಅಶ್ವ, ಗಜ, ಗೋವು, ಹರಿಣ, ಪಕ್ಷಿಗಳ, ಪರಿಚರ್ಯಾಕರಃ-ಉಪಚಾರಕನೂ (ಅವುಗಳಿಗೆ ಅನ್ನಾಹಾರಾದಿಗಳನ್ನಿತ್ತು ನೋಡಿಕೊಳ್ಳುವವನೂ), ಶುದ್ಧಾಂತಸ್ಯ-ಪವಿತ್ರವಾದ (ರಾಜನ) ಅಂತಃಪುರದ (ಸ್ತ್ರೀಯರ ವಾಸಸ್ಥಳದ), ರಕ್ಷಕಃ-ಕಾವಲುಗಾರನೂ, ಪುರಃಸರಃ-ಮುಂದೆ (ರಾಜ ಅಥವಾ ಅಧಿಕಾರಿಗಳ ಮುಂಭಾಗದಲ್ಲಿ), ಪ್ರೇಷ್ಯಃ-ಕಳುಹಿಸಲ್ಪಡುವವನೂ (ದೂತನೂ), ಶೂರಃ-ಶೂರನೂ, ಮಲ್ಲಶಾಸ್ತ್ರೇಷು-ಮಲ್ಲಯುದ್ಧದ ವಿಧಿಗಳಲ್ಲಿ ನೈಪುಣಃ-ಕುಶಲನೂ, ತಂತುಕೃತ್-ನೂಲು ತಯಾರಿಸುವವನೂ, ಚ-ಮತ್ತು ತಂತುವಾಯಃ-ನೇಗಾರನೂ, ಜಾಲಕೃತ್-ಬಲೆಗಳನ್ನು ಹೆಣೆಯುವವನೂ, ಮತ್ಸ್ಯಜೀವನಃ-ಮೀನುಗಳಿಂದ (ಜಲಚರಗಳನ್ನು ಜಾಲದಲ್ಲಿ ಹಿಡಿದು) ಜೀವಿಸುವವನೂ, ಕರ್ಮಾರಃ - ಕಮ್ಮಾರನೂ, ಚರ್ಮರಜಕಃ - ಚರ್ಮಗಳನ್ನು ಶುದ್ಧಗೊಳಿಸುವವನೂ (ಚರ್ಮಹದಗಾರನೂ), ಕ್ರೂರಕರ್ಮಾ-ಉಗ್ರಕರ್ಮಗಳನ್ನು ನಿರ್ವಹಿಸುವ ದಕ್ಷನೂ, ಯಾಮಿಕಃ-ರಾತ್ರಿಕಾವಲುಗಾರನೂ, ಗ್ರಾಮರಕ್ಷಃ- ಗ್ರಾಮರಕ್ಷಕನೂ, ದುರ್ಗರಕ್ಷಃ-ಕೋಟೆಯನ್ನು ರಕ್ಷಿಸುವವನೂ, ನಾವಿಕಃ- ನಾವಿಕನೂ (ದೋಣಿ ಮುಂತಾದ ಜಲಯಾನಗಳನ್ನು ನಡೆಸುವವನೂ), ಮಾಂಸವಿಕ್ರಯೀ - ಮಾಂಸವ್ಯಾಪಾರಿಯೂ, ಶೈಲೂಷಃ - ನಟನೂ, ಗಾರುಡಃ -

---

ಗ್ರಾಮರಕ್ಷಕ, ಕೋಟೆರಕ್ಷಕ, ನಾವಿಕ, ಮಾಂಸವ್ಯಾಪಾರಿ, ನಟ, ನರ್ತಕ, ಹಾವಾಡಿಗ, ನಟನ ಹಿಂದೆ ಗಾನ ಮಾಡುವವ, ಹಗ್ಗ ಹೆಣೆಯುವುದು, ಮೇದಾರ (ಬಿದಿರುಕೆಲಸ), ಪಾತ್ರವ್ಯಾಪಾರಿ, ಗೂಢಚಾರ, ಇತ್ಯಾದಿ, ಕರ್ಮವುಳ್ಳವನಾಗಬಹುದು (೧೩೮-೧೪೨).

ಚಂಡಾಲಜಾತಿಯವನಿಗೆ ಉಚಿತವಾದ ಕರ್ಮಗಳಾವುವೆಂದರೆ:—ಮೃತವಾದ ಪ್ರಾಣದೇಹಗಳೇ ಆಹಾರವಾಗಿ ಉಳ್ಳವನಾಗುವುದು; ಚರ್ಮಗಳಿಗೆ ಬಣ್ಣಹಾಕುವುದು; ಪ್ರಾಣದೇಹಗಳಿಂದ ನರಮಾಂಸಖಂಡಗಳನ್ನು ಕಿತ್ತಿಗೆಯುವುದು; ರಾಜರ ಮುಂದೆ ಕಳುಹಿಸಲ್ಪಡುವ ಧೈರ್ಯಶಾಲಿಯಾದ ಸೇವಕನಾಗಿರುವುದು; ಶವವಸ್ತ್ರಗಳನ್ನು ಧರಿಸುವುದು; ಗ್ರಾಮದ ಹೊರಗೆ ಸಂಚರಿಸುತ್ತ ಗ್ರಾಮವನ್ನು ರಕ್ಷಿಸುವುದು;

ಹಾವಾಡಿಗನೂ, ಗಾತಾ-ಗಾನಕರ್ತನೂ, ನಟಃ-ನರ್ತಕನೂ, ರಜ್ಜ್ವಾದಿ ಕರ್ಮ ಕೃತ್-ಹಗ್ಗವನ್ನು ತಯಾರಿಸುವವನೂ, ವೇಣುಕಃ-ಮೇದಾರನೂ (ಬಿದಿರು ಕೆಲಸದವನೂ), ಗೂಢಚಾರಃ-ಗೂಢಚಾರನೂ (ವೇಷಾಂತರದಿಂದ ಸಂಚರಿಸುತ್ತ ವಾರ್ತೆಯನ್ನು ಸಂಗ್ರಹಿಸುವವನೂ), ಚ-ಮತ್ತು ಭಾಂಡಕಃ-ಪಾತ್ರ ವ್ಯಾಪಾರಿಯೂ, ಇತ್ಯಾದಿ-ಈ ಮುಂತಾದ, ಕರ್ಮಾ-ಕರ್ಮವುಳ್ಳವನು (ಆಗಿರಬಹುದು).

**ಚಾಂಡಾಲೋ ಮೃತಜೀವೀ ಸ್ಯಾಚ್ಚರ್ಮಣಾಂ ರಂಜಕೋಽಪಿ ಚ ॥೧೪೩॥**
**ಸ್ನಾಯುನಿಷ್ಕಾಸನಃ ಶೂರಃ ಪ್ರೇಷ್ಯೋ ರಾಜ್ಞಾಂ ಪುರಃಸರಃ ।**
**ಮೃತವಸ್ತ್ರಪರೀಧಾನೋ ಗ್ರಾಮರಕ್ಷೋ ಬಹಿಶ್ಚರಃ ॥ ೧೪೪ ॥**
**ಪರಿಚರ್ಯಾಕರಶ್ಚಾನ್ಯೋ ವ್ಯಾಧಶ್ಚ ಮೃಗಪಾಚಕಃ ।**
**ಗ್ರಾಮ್ಯಕುಕ್ಕುಟವಾರಾಹಕ್ರಯವಿಕ್ರಯಜೀವನಃ ॥ ೧೪೫ ॥**
**ರಜ್ಜುಕೃತ್ತಂತುವಾಯಶ್ಚ ತಂತುಕೃತ್ಕಾಷ್ಠಜೀವನಃ ।**
**ತೃಣಪುಷ್ಪಫಲಾಹರ್ತಾ ತಥೈವೋದ್ಯಾನಸೇವಕಃ ॥ ೧೪೬ ॥**
**ಇತ್ಯಾದಿ ಕರ್ಮ ಸಂಪ್ರೋಕ್ತಾ ಇತ್ಥಂ ಪ್ರಾಗ್ಧರ್ಮಿಣೋಽಖಿಲಾಃ ।**

ಚಾಂಡಾಲಃ-(ಶೂದ್ರನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದ) ಚಂಡಾಲ ಜಾತಿಯ ಪ್ರತಿಲೋಮಿಯು, ಮೃತಜೀವೀ-ಸತ್ತ ಪ್ರಾಣಿಗಳನ್ನು ತಿಂದು ಜೀವಿಸುವವನು; ಚರ್ಮಣಾಂ-(ಪ್ರಾಣಿ) ಚರ್ಮಗಳ, ರಂಜಕಃ ಅಪಿ-(ಚರ್ಮಗಳಿಗೆ) ಬಣ್ಣ ಹಾಕುವವನೂ, ಸ್ಯಾತ್-ಆಗಬಹುದು (ಚಂಡಾಲನು ಈ ಮುಂದಿನ ಇತರ ಕರ್ಮಗಳಲ್ಲಿಯೂ ತೊಡಗಬಹುದು); ಸ್ನಾಯುನಿಷ್ಕಾಸನಃ-(ಪ್ರಾಣಿದೇಹಗಳಿಂದ) ನರ, ಮಾಂಸಾದಿಗಳನ್ನು ಹೊರಗೆ ತೆಗೆಯುವವನು; ಶೂರಃ-ಧೈರ್ಯಶಾಲಿಯಾದ, ರಾಜ್ಞಾಂ-ರಾಜರ, ಪುರಃಸರಃ-ಮುಂದೆ ಹೋಗುವ, ಪ್ರೇಷ್ಯಃ-ಆಳು(ಸೇವಕ); ಮೃತವಸ್ತ್ರಪರೀಧಾನಃ-ಶವದ ಮೇಲಿನ ವಸ್ತ್ರಗಳನ್ನು ಧರಿಸುವವನು; ಬಹಿಶ್ಚರಃ-ಹೊರಗೆ ತಿರುಗುವ, ಗ್ರಾಮರಕ್ಷಃ-ಗ್ರಾಮರಕ್ಷಕನು; ಚರಃ-ಸಂಚರಿಸುತ್ತ ಸೇವಿಸುವ, ಪರಿಚಾರ್ಯಕರಃ-ಪರಿಚಾರಕನು; ಮೃಗಪಾಚಕಃ-ಪಶುಮಾಂಸ ಪಾಚಕನಾದ.

---

ಹೊರಗೆ ಸಂಚರಿಸುತ್ತ ಸೇವಿಸುವ ಸೇವಕನಾಗಿರುವುದು; ಪಶುಮಾಂಸಪಾಚಕನಾದ ವ್ಯಾಧನಾಗುವುದು. ಕೋಳಿ ಹಂದಿ ಮೊದಲಾದವುಗಳ ವ್ಯಾಪಾರ; ಹಗ್ಗ ಹೆಣೆಯುವುದು; ನೇಯ್ಗೆ; ನೂಲುವುದು; ಕಟ್ಟಿಗೆ ಮಾರುವುದು; ಹುಲ್ಲು ಹೂವು, ಹಣ್ಣು ಮುಂತಾದ್ದನ್ನು ತರುವುದು; ಉದ್ಯಾನ ಸೇವಕತನ, ಇತ್ಯಾದಿ ಕರ್ಮಗಳಲ್ಲಿ ತೊಡಗಬಹುದು. ಹೀಗೆ ಪ್ರಾಗ್ಧರ್ಮ (ಸನಾತನ ಧರ್ಮ) ಸಮ್ಮತವಾದ ವೃತ್ತಿಗಳುಳ್ಳ ವಿವಿಧ ಜಾತಿಯವರು ಹೇಳಲ್ಪಟ್ಟಿರುವರು (೧೪೩-೧೪೬). ಒಬ್ಬ ಪತಿಯನ್ನು ಸೇವಿಸಿ ಪತಿವ್ರತೆಯರ [illegible] ವಿಧವೆಯರಾದ ನಾನಾ ಜಾತಿಯ ಸ್ತ್ರೀಯರು, ಸರ್ವಸಂಗತ್ಯಾಗ

ವ್ಯಾಧಃ - ವ್ಯಾಧನು; ಗ್ರಾಮ್ಯಕುಕ್ಕುಟವಾರಾಹಕ್ರಯವಿಕ್ರಯಜೀವನಃ - ಊರಕೋಳಿ, ಹಂದಿ ಮೊದಲಾದವುಗಳ ಕ್ರಯವಿಕ್ರಯದಿಂದ (ವ್ಯಾಪಾರದಿಂದ) ಜೀವಿಸುವವನು; ರಜ್ಜುಕೃತ್-ಹಗ್ಗವನ್ನು ಹೆಣೆಯುವವನು, ತಂತುವಾಯಃ- ನೇಗಾರನೂ, ತಂತುಕೃತ್-ನೂಲುವವನೂ, ಚ-ಮತ್ತು ಕಾಷ್ಠಜೀವನಃ-ಕಟ್ಟಿಗೆ ಮಾರಿ ಜೀವಿಸುವವನು; ತೃಣಪುಷ್ಪಫಲಾಹರ್ತಾ-ದರ್ಭೆ, ಪುಷ್ಪ ಫಲಗಳನ್ನು ತರುವವನೂ, ತಥಾ ಏವ-ಹಾಗೆಯೇ, ಉದ್ಯಾನಸೇವಕಃ-ಉದ್ಯಾನಗಳಲ್ಲಿ ಸೇವಕನಾಗಿರುವುದು; ಇತ್ಯಾದಿ ಕರ್ಮ—ಈ ಮುಂತಾದ ಕರ್ಮವುಳ್ಳವನು (ಆಗಬಹುದು); ಅಖಿಲಾಃ-ಸಮಸ್ತರಾದ, ಪ್ರಾಗ್ಧರ್ಮಿಣಃ-ಸನಾತನ ಧರ್ಮಸಂಮತವಾದ ವೃತ್ತಿಗಳುಳ್ಳವರು (ವಿವಿಧ ಜಾತೀಯರು). ಇತ್ಥಂ-ಹೀಗೆ (ಈವರೆಗೆ ನಿರೂಪಿಸಿರಂತೆ), ಸಂಪ್ರೋಕ್ತಾ-ಹೇಳಲ್ಪಟ್ಟರು.

ವಿಧವಾ ಏಕಪತ್ನ್ಯಶ್ಚ ಭಿಕ್ಷುಕ್ಯಃ ಸೂತ್ರಕಾರಿಕಾಃ ॥ ೧೪೭ ॥
ಸೂತ್ರಚಿತ್ರಕರಾವಾಸಾಃ ಕೌಶೇಯಾದಿಷ್ವನೇಕಧಾ ।
ಸೂಪಕಾರ್ಯಶ್ಚ ಸೈರಂಧ್ರ್ಯೋ ಗೃಹಕ್ಷೇತ್ರಾದಿ ರಕ್ಷಿಕಾಃ ॥ ೧೪೮ ॥
ನಾನಾಸ್ವಯೋಗ್ಯವಾಣಿಜ್ಯವೃತ್ತಯೋ ಜೀವಿತಾವಧಿ ।
ಸುಶೀಲ್ಯಸ್ವೈರಿಣೀದೂತ್ಯೋ ನರ್ತಕ್ಯೋ ಭಗಜೀವನಾಃ ॥ ೧೪೯ ॥
ಇತ್ಯಾದ್ಯನೇಕಕರ್ಮಿಣ್ಯ ಏವಂ ಸ್ತ್ರಿಯಃ ಪರಿಹೇಶಿತುಃ ।

ಏಕಪತ್ನ್ಯಃ-ಪತಿವ್ರತೆಯರಾದ (ಒಬ್ಬನಿಗೆ ಮಾತ್ರ ಪತ್ನಿಯಾಗಿ ಆತನನ್ನೇ ಸೇವಿಸುತ್ತಿರು). ವಿಧವಾಃ-ವಿಧವೆಯರು, ಭಿಕ್ಷುಕ್ಯಃ-ಭಿಕ್ಷುಕಿಯರೂ (ಸಂಗರಹಿತರಾಗಿ ಸಂಚರಿಸುವವರೂ), ಸೂತ್ರಕಾರಿಕಾಃ-ನೂಲು ತೆಗೆಯುವವರೂ, ಕೌಶೇಯಾದಿಷು-

---

ಮಾಡಿ ಸಂಚರಿಸುವ ಭಿಕ್ಷುಕಿಯರಾಗಿಯೂ; ನೂಲು ತೆಗೆಯುವುದು; ರೇಶ್ಮೆ ಮೊದಲಾದ ವಸ್ತ್ರಗಳಲ್ಲಿ ಅನೇಕ ವಿಧ ಚಿತ್ರಗಳನ್ನು ಸೂತ್ರದಿಂದ ರಚಿಸುವುದು; ಅಡಿಗೆ ಮಾಡುವುದು, ಸ್ತ್ರೀಯರ ಕೇಶಾಲಂಕಾರಾದಿಗಳನ್ನು ಮಾಡುವ ಸೇವಕಿಯರಾಗುವುದು, ಮನೆ ಹೊಲಗಳ ಕಾವಲುಗಾರರಾಗಿ ದುಡಿಯುವುದು, ಇತ್ಯಾದಿ, ತಂತಮ್ಮ ಜಾತಿಯೋಗ್ಯವಾದ ವ್ಯಾಪಾರಾದಿ ವೃತ್ತಿಗಳನ್ನು ಮರಣಪರ್ಯಂತ ಮಾಡಿ ಜೀವಿಸಬಹುದು; ಅಥವಾ ತಮ್ಮ ಶೀಲವನ್ನು ಕಾಪಾಡಿಕೊಂಡು, ಸ್ವೇಚ್ಛಾ ವೃತ್ತಿಯವರಾಗದೇ ದೂತಿಯರಾಗಿಯೂ, ನರ್ತಕಿಯರಾಗಿಯೂ, ಅಥವಾ ಜಾತಿಪದ್ಧತಿಯಂತೆ ಸೂಳೆಯರಾಗಿಯೂ[1] ಇರಬಹುದು;, ಸರ್ವೇಶನಾದ ಶ್ರೀಹರಿಯ

---

1 ಆಯಾ ಕಾಲಕ್ಕೆ ಶ್ರೀಹರಿ ಸಂಕಲ್ಪದಂತೆ ದೊರೆಯುವ ಪುರುಷನನ್ನು ಪತಿಭಾವನೆಯಿಂದ ಸೇವಿಸಿ, ಭಾಗವತದಲ್ಲಿ ಪ್ರಸಿದ್ಧಳಾದ ಪಿಂಗಳನಾಮಕ ವೇಶ್ಯೆಯಂತೆ, ನಿತ್ಯರಮಣನಾದ ತನ್ನ ಅಂತರ್ಯಾಮಿ ಶ್ರೀಹರಿಯನ್ನು ಸ್ಮರಿಸುತ್ತಿರುವುದು, ವೇಶ್ಯಾಧರ್ಮವು.

ರೇಶ್ಮೆ ವಸ್ತ್ರಾದಿಗಳಲ್ಲಿ ಅನೇಕಧಾ-ವಿವಿಧವಾದ, ಸೂತ್ರಚಿತ್ರ ಕರಾವಾಸಃ-ನೂಲಿನಿಂದ ಚಿತ್ರಗಳನ್ನು ರಚಿಸಿ ಜೀವಿಸುವವರೂ, ಸೂಪಕಾರ್ಯಃ- ಅಡಿಗೆ ಕೆಲಸದವರೂ, ಸೈರಂಧ್ರ್ಯಃ - ಸ್ತ್ರೀಯರಿಗೆ ಕೇಶಾಲಂಕಾರಾದಿ ಸೇವೆಯನ್ನು ಸಲ್ಲಿಸುವವರೂ, ಗೃಹಕ್ಷೇತ್ರಾದಿರಕ್ಷಿಕಾಃ - ಮನೆ ಹೊಲಗಳನ್ನು ಕಾಯುವವರೂ, ಜೀವಿತಾವಧಿ-ಬದುಕಿರುವವರೆಗೂ (ಮರಣಪರ್ಯಂತ), ನಾನಾಸ್ವಯೋಗ್ಯ ವಾಣಿಜ್ಯವೃತ್ತಯಃ-ವಿವಿಧವಾದ ಸ್ವಯೋಗ್ಯ (ತಮ್ಮ ಜಾತಿಗೆ ಉಚಿತವಾದ) ವ್ಯಾಪಾರ (ಕ್ರಯ ವಿಕ್ರಯ)ದಲ್ಲಿದ್ದು ಜೀವಿಸುವವರೂ (ಆಗಿದ್ದು ಜೀವಿಸಲು, ಧರ್ಮದಿಂದ ಅವಕಾಶವಿದೆ); ಸುಶೀಲ್ಯಸ್ವೈರಿಣೀದೂತ್ಯಃ-ತಮ್ಮ ಶೀಲವನ್ನು ಕಾಪಾಡಿಕೊಂಡು, ವ್ಯಭಿಚಾರಿಗಳಾಗದೇ ದೂತಿಯರೂ (ಯಜಮಾನಿಯರಾದ ಸ್ತ್ರೀಯರ ಕಾರ್ಯಗಳಿಗಾಗಿ ದೂತಿಯರಾಗಿಯೂ), ನರ್ತಕ್ಯಃ-ನರ್ತಕಿಯರಾಗಿಯೂ, ಭಗಜೀವನಾಃ-ಸೂಳೆಯರಾಗಿ (ಜಾತಿಪದ್ಧತಿಗನುಸಾರವಾಗಿ) ಜೀವಿಸುವವರೂ, ಇತ್ಯಾದಿ-ಇವೇ ಮೊದಲಾದ, ಅನೇಕಕರ್ಮಿಣ್ಯಃ-ಅನೇಕ ಕರ್ಮಗಳುಳ್ಳವರು (ಆಗಿರಬಹುದು); ಈಶಿತುಃ-ಸರ್ವಸ್ವಾಮಿಯಾದ ಶ್ರೀಹರಿಯ, ಸೃಷ್ಟಿಃ-ಸೃಷ್ಟಿಯು, ಇಹ-ಈ (ಮನುಷ್ಯ) ಲೋಕದಲ್ಲಿ, ಏವಂ-ಈ ಪ್ರಕಾರವಾಗಿರುತ್ತದೆ.

**ಆದ್ಯೇಭ್ಯೋಽಥ ದ್ವಿತೀಯಾಸ್ತು ಚತ್ವಾರಿಂಶತ್ತಥಾಷ್ಟ ಚ ॥ ೧೫೦ ॥**
**ತಾವಂತ ಏವ ಚಾದ್ಯಾಸು ದ್ವಿತೀಯೇಭ್ಯಶ್ಚ ಜಜ್ಞಿರೇ ।**
**ದ್ವಿತೀಯೇಭ್ಯೋ ದ್ವಿತೀಯಾಸು ದ್ವಾತ್ರಿಂಶದಧಿಕಂ ಸ್ಮೃತಂ ॥ ೧೫೧ ॥**
**ಏವಂ ತೃತೀಯಾ ಆದ್ಯಾಸು ತೃತೀಯೈರಪಿ ಸಂಯುತಾಃ ।**
**ಮಿಲಿತಾಸ್ತು ಚತುಶ್ಚತ್ವಾರಿಂಶದಗ್ರ್ಯಂ ತತದ್ವಯಂ ॥ ೧೫೨ ॥**

ಆದ್ಯೇಭ್ಯಃ-ಮೊದಲಿನವರಿಂದ (ಬ್ರಾಹ್ಮಣಾದಿ ನಾಲ್ಕು ಜಾತಿಗಳಿಂದ), ದ್ವಿತೀಯಾಃ-ಎರಡನೆಯ ವರ್ಗದವರೂ (ಅನುಲೋಮ ಪ್ರತಿಲೋಮಗಳೆಂಬ ೧೨ ಜಾತಿಗಳೂ), ಆದ್ಯಾಸು-ಮೊದಲಿನ ನಾಲ್ಕು ಜಾತಿಗಳಲ್ಲಿ ದ್ವಿತೀಯೇಭ್ಯಃ-

---

ಸೃಷ್ಟಿಯು, ಈ ಮನುಷ್ಯಲೋಕದಲ್ಲಿ ಈ ವ್ಯವಸ್ಥೆಗಳಿಂದ ಯುಕ್ತವಾಗಿರುತ್ತದೆ (೧೪೭-೧೪೯). ಬ್ರಾಹ್ಮಣಾದಿ ಮೊದಲಿನ ವರ್ಗದ ೪ ಜಾತಿಗಳಿಂದ, ಅನುಲೋಮ ಪ್ರತಿಲೋಮ ಕ್ರಮದಿಂದ ೧೨ ಜಾತಿಗಳೂ, ಈ ೧೨ ಜಾತಿಗಳಿಂದ ಮೊದಲನೆಯ ವರ್ಗದ ೪ ಜಾತಿಗಳಲ್ಲಿ ೪೮ ಜಾತಿಗಳೂ, ಹುಟ್ಟಿದವು; ಒಂದು, ಎರಡನೇ ವರ್ಗದ ೧೬ ಜಾತಿಗಳಿಕಿಂತ ೩ನೇ ವರ್ಗದ ೪೮ ಜಾತಿಗಳು, ೩೨ ಸಂಖ್ಯೆಯಿಂದ ಅಧಿಕವಾಗಿರುತ್ತವೆಯೆಂದು, ತಿಳಿಯಲ್ಪಟ್ಟಿದೆ; ಹೀಗೆಯೇ ೩ನೇ ವರ್ಗದ ೪೮ ಜಾತಿಗಳಿಂದ ಒಂದನೆಯ ವರ್ಗದ ನಾಲ್ಕು ಜಾತಿಗಳಲ್ಲಿ (೪ನೇ ವರ್ಗದ) ೧೯೨ ಜಾತಿಗಳು ಹುಟ್ಟುತ್ತವೆ; ಒಂದು ಮತ್ತು ಮೂರನೆಯ ವರ್ಗಗಳ ಜಾತಿಗಳು ೫೨

ಎರಡನೆಯ ವರ್ಗದ ೧೨ ಜಾತಿಗಳಿಂದ, ಅಥ-ನಂತರದಲ್ಲಿ, ಚತ್ವಾರಿಂಶತ್-ನಲವತ್ತು ತಥಾ-ಹಾಗೂ, ಅಷ್ಟ ಚ-ಎಂಟೂ, ತಾವಂತ ಏವ-ಆ ಸಂಖ್ಯೆಯಷ್ಟೇ (೪೮) ಜಾತಿಗಳು, ಜಜ್ಞಿರೇ-ಹುಟ್ಟಿದವು; ದ್ವಿತೀಯೇಭ್ಯಃ-ಎರಡನೆಯ ವರ್ಗದ ಜಾತಿಗಳಿಂದ, ದ್ವಿತೀಯಾಸು-ದ್ವಿತೀಯರಲ್ಲಿ ಹುಟ್ಟಿದ ಜಾತಿಗಳು, ದ್ವಾತ್ರಿಂಶದಧಿಕಂ-೩೨ ಜಾತಿಗಳು ಅಧಿಕವೆಂದು (ಒಂದು ಎರಡನೆಯ ವರ್ಗದ ಜಾತಿಗಳು ೧೬; ೩ನೇ ವರ್ಗದ ಜಾತಿಗಳು ೪೮; ಎರಡನೆಯ ವರ್ಗದ ೧೨ ಜಾತಿಗಳಿಂದ ಹುಟ್ಟಿಕೊಂಡ ೪೮ ಜಾತಿಗಳು ೧-೨ನೇ ವರ್ಗದ ಜಾತಿಗಳಿಂದ ೩೨ ಅಧಿಕವೆಂದು), ಸ್ಮೃತಂ-ತಿಳಿಯಲ್ಪಟ್ಟಿದೆ; ಏವಂ - ಹೀಗೆ, ತೃತೀಯಾಃ - ಮೂರನೆಯ ವರ್ಗದ ೪೮ ಜಾತಿಯವರು, ಆದ್ಯಾಸು-ಮೊದಲಿನ ವರ್ಗದವರಲ್ಲಿ (೧೯೨ ಜಾತಿಗಳನ್ನು ಉತ್ಪಾದಿಸುತ್ತಾರೆ); ಆದ್ಯಾಃ ತು-೧ನೇ ವರ್ಗದ ಜಾತಿಯವರು, ತೃತೀಯೈಃ ಅಪಿ-ಮೂರನೆಯವರಿಂದ ಸಹ, ಸಂಯುತಾಃ-ಕೂಡಿಕೊಂಡು (೫೨ ಜಾತಿಗಳಾಗುತ್ತವೆ); ಮಿಲಿತಾಃ ತು-ಈ ಎಲ್ಲ ಜಾತಿಗಳೂ ಸೇರಿದರೆ (೧೯೨+೫೨=೨೪೪), ಚತುಶ್ಚತ್ವಾರಿಂಶದಗ್ರ್ಯಂ-೪೪ರಿಂದ ಹೆಚ್ಚಾದ, ಶತದ್ವಯಂ-೨೦೦ (ಅಂದರೆ ೨೪೪ ಜಾತಿಗಳಾಗುತ್ತವೆ).

**ಕೇಚಿನ್ಮಾತೃಕುಲಾಚಾರಾಃ ಕೇಚಿಜ್ಜನಕವೃತ್ತಯಃ ।**
**ಸಂಕೀರ್ಣವೃತ್ತಯಶ್ಚಾನ್ಯೇ ತಥಾ ಸನ್ನಿಧಿವೃತ್ತಯಃ ॥ ೧೫೩ ॥**

ಕೇಚಿತ್-ಕೆಲವರು, ಮಾತೃಕುಲಾಚಾರಾಃ-ತಾಯಿ ವಂಶದ ಆಚಾರವುಳ್ಳವರು; ಕೇಚಿತ್-ಮತ್ತೆ ಕೆಲವರು, ಜನಕವೃತ್ತಯಃ-ತಂದೆಯ ವೃತ್ತಿಯುಳ್ಳವರು; ಅನ್ಯೇ-ಇನ್ನು ಕೆಲವರು (ಇತರರು), ಸಂಕೀರ್ಣವೃತ್ತಯಃ-ಮಿಶ್ರವಾದ ವಿವಿಧ ವೃತ್ತಿಗಳುಳ್ಳವರು; ತಥಾ-ಹಾಗೂ, ಸನ್ನಿಧಿವೃತ್ತಯ-(ಈ ಯಾವ ನಿಯಮವೂ ಇಲ್ಲದೇ) ಸಮೀಪದಲ್ಲಿ ದೊರೆಯುವ (ತಮ್ಮ ಸಹವಾಸಿಗಳ) ವೃತ್ತಿಗಳನ್ನನುಸರಿಸುವವರು (ಹೀಗೆ ಜಗತ್ತಿನಲ್ಲಿ ವಿವಿಧ ವೃತ್ತಿಗಳು ಪ್ರಚಾರದಲ್ಲಿರುತ್ತವೆ).

**ತೃತೀಯೇಭ್ಯಶ್ಚತುರ್ಥಾಶ್ಚ ತೇಭ್ಯಃ ಪಂಚಮಷಷ್ಠಕಾಃ ।**
**ಏವಂ ನಾನಾವಿಧಾ ಲೋಕೇ ಮಿಥೋ ಜೀವನವೃತ್ತಯಃ ॥ ೧೫೪ ॥**

---

ಜಾತಿಗಳಾಗುತ್ತವೆ; ೪ನೇ ವರ್ಗದ ೧೯೨ ಜಾತಿಗಳೂ ಸೇರಿ, ೨೪೪ ಜಾತಿಗಳಾಗುತ್ತವೆ (೧೫೦-೧೫೨). ಕೆಲವರು ತಮ್ಮ ಮಾತೃಕುಲದ ವೃತ್ತಿಯನ್ನು ಅನುಸರಿಸುತ್ತಾರೆ; ಮತ್ತೆ ಕೆಲವರು ಪಿತೃವೃತ್ತಿಯನ್ನು ಅವಲಂಬಿಸುತ್ತಾರೆ; ಇತರರು ಮಿಶ್ರವಾದ ಬಹುವೃತ್ತಿಗಳುಳ್ಳವರಾಗುತ್ತಾರೆ; ಅಥವಾ ತಮ್ಮ ಸಮೀಪದಲ್ಲಿ ಲಭಿಸುವ (ಕಾಣುವ) ಯಾವುದೊಂದು ವೃತ್ತಿಯನ್ನು ಕೈಗೊಳ್ಳುತ್ತಾರೆ (೧೫೩). ಜಾತಿಗಳು ಬೆಳೆದಂತೆ, ವೃತ್ತಿಗಳೂ ಪರಸ್ಪರ ಬೆಳೆಯುತ್ತವೆ; ಮೂರನೇ ವರ್ಗದ ೪೮ ಜಾತಿಗಳಿಂದ, ನಾಲ್ಕನೇ

**ತೇಷಾಂ ನಾಮಾನಿ ಸರ್ವಾಣಿ ನ ಕಶ್ಚಿದ್ವೇದಿತುಂ ಕ್ಷಮಃ ।**

ತೃತೀಯೇಭ್ಯಃ-ಮೂರನೇ ವರ್ಗದ (೪೮ ಜಾತಿಗಳಿಂದ), ಚತುರ್ಥಾಃ-ನಾಲ್ಕನೇ ವರ್ಗದ ಜಾತಿಗಳೂ (೧೯೨ ಜಾತಿಗಳೂ), ಚ-ಮತ್ತು ತೇಭ್ಯಃ- ಅವರಿಂದ, ಪಂಚಮಷಷ್ಠಕಾಃ - ಐದು ಆರನೇ ವರ್ಗದ ಜಾತಿಗಳೂ (ಉತ್ಪನ್ನವಾಗುತ್ತವೆ); ಏವಂ-ಹೀಗೆ (ವಿವಿಧ ಜಾತಿಗಳಂತೆ), ಲೋಕೇ-ಜಗತ್ತಿನಲ್ಲಿ ನಾನಾವಿಧಾಃ-ಬಹು ವಿಧವಾದ, ಜೀವನವೃತ್ತಯಃ-ಜೀವಿಕೆಗಳು, ಮಿಥಃ-ಪರಸ್ಪರವಾಗಿ (ಸಂಭವಂತಿ-ಉಂಟಾಗುತ್ತವೆ); ತೇಷಾಂ-ಆ ಎಲ್ಲ ವೃತ್ತಿಗಳ, ಸರ್ವಾಣಿ-ಎಲ್ಲ ನಾಮಾನಿ-ಹೆಸರುಗಳನ್ನು ವೇದಿತುಂ-ತಿಳಿಯುವುದಕ್ಕೆ, ಕಶ್ಚಿತ್-ಯಾರೊಬ್ಬನೂ, ನ ಕ್ಷಮಃ-ಶಕ್ತನಲ್ಲ

**ಯತ್ರ ಗ್ರಾಮೇ ಯತ್ರ ದೇಶೇ ಜಾತಯೋ ಯಾಃ ಕಥಂಚನ ।**
**ವೇತ್ತುಂ ಶಕ್ಯಾಸ್ತಥಾ ತಾಭಿರ್ವ್ಯವಹಾರ್ಯಂ ಕ್ರಮಾದಿತಿ ॥ ೧೫೫ ॥**
**ಇತಿ ಜಾತಿವಿವೇಕೋ ಯೋ ಯಥಾವನ್ಮೇ ನಿರೂಪಿತಃ ।**
**ವ್ಯವಾಹರದ್ಯಥಾ ವಿಷ್ಣುಃ ಸೃಷ್ಟೌ ವಿವಿಧಕರ್ಮಭಿಃ ॥ ೧೫೬ ॥**

ಯತ್ರ ಗ್ರಾಮೇ-ಯಾವ ಗ್ರಾಮದಲ್ಲಿ ಯತ್ರ ದೇಶೇ-ಯಾವ ದೇಶದಲ್ಲಿ ಕಥಂಚನ-ಹೇಗಾದರೂ (ಕಷ್ಟದಿಂದಾದರೂ), ಯಾಃ-ಯಾವ, ಜಾತಯಃ-ಜಾತಿಗಳು, ವೇತ್ತುಂ-ತಿಳಿಯಲು (ಗುರ್ತಿಸಲು), ಶಕ್ಯಾಃ-ಸಾಧ್ಯವಾಗುವುವೋ, ತಥಾ-ಹಾಗೆ, ಇತಿ ಕ್ರಮಾತ್-ಹೀಗೆ ತಾರತಮ್ಯಾನುಗುಣವಾಗಿ, ತಾಭಿಃ-ಅವುಗಳಿಂದ (ಆಯಾ ಜಾತಿಯವರೊಡನೆ, ಸರ್ವರಿಂದ), ವ್ಯವಹಾರ್ಯಂ- ವ್ಯವಹರಿಸತಕ್ಕದ್ದು (ನಡೆದುಕೊಳ್ಳಬೇಕು); ಯಥಾ-ಹೇಗೆ, ವಿಷ್ಣುಃ-ಶ್ರೀವಿಷ್ಣುವು, ಸೃಷ್ಟೌ-ಜಗತ್ತಿನ ಸೃಷ್ಟಿಯಲ್ಲಿ ವಿವಿಧ ಕರ್ಮಭಿಃ-ನಾನಾ ಕರ್ಮಗಳಿಂದ (ವೃತ್ತಿಭೇದಗಳಿಂದ), ವ್ಯವಾಹರತ್-ವ್ಯವಹರಿಸಿದನೋ (ಪ್ರವರ್ತಿಸಿದನೋ), ಯಥಾವತ್-ಅದರಂತೆ

---

ವರ್ಗದ ೧೯೨ ಜಾತಿಗಳೂ, ಅವುಗಳಿಂದ, (ಈ ಹಿಂದೆ ಹೇಳಿದ ೨-೩ನೇ ವರ್ಗದ ಜಾತಿಗಳು ಹುಟ್ಟುವ ಕ್ರಮದಿಂದ) ಐದು, ಆರನೇ ವರ್ಗದ ಜಾತಿಗಳೂ ಉತ್ಪನ್ನವಾಗುತ್ತವೆ; ಎಲ್ಲ ಜಾತಿಗಳನ್ನೂ, ಎಲ್ಲ ವೃತ್ತಿಗಳನ್ನೂ ಅವುಗಳ ಹೆಸರುಗಳನ್ನೂ ತಿಳಿಯಲು ಯಾರೊಬ್ಬನೂ ಶಕ್ತನಲ್ಲ (೧೫೪). ಯಾವ ದೇಶದಲ್ಲಿ ಯಾವ ಗ್ರಾಮದಲ್ಲಿ ಯಾವ ಜಾತಿಗಳನ್ನು ಕಷ್ಟದಿಂದಾದರೂ ಗುರ್ತಿಸಬಹುದೋ, ಆಯಾ ಜಾತಿಯವರೊಂದಿಗೆ ಸರ್ವರೂ, ಈವರೆಗೆ ನಿರೂಪಿಸಿದ ತಾರತಮ್ಯಗಳಿಗೆ ಅನುಸಾರವಾಗಿ ವ್ಯವಹರಿಸಬೇಕು; ಶ್ರೀ ಮಹಾವಿಷ್ಣುವು ಜಗತ್ತಿನ ಸೃಷ್ಟಿಯಲ್ಲಿ ನಾನಾ ವೃತ್ತಿಗಳಿಂದ ಸಹಿತರಾದ ಪ್ರಜೆಗಳನ್ನು, ಹೇಗೆ ಸೃಷ್ಟಿಮಾಡಿ ವ್ಯವಹರಿಸಿದನೋ, ಆ ಪ್ರಕಾರವಾಗಿ, ಯಥಾವತ್ತಾಗಿ (ಇದ್ದಂತೆ) ನಾನು (ಸೂತರು) ನಿರೂಪಿಸಿದ್ದೇನೆ;

(ಅವುಗಳನ್ನು ಇದ್ದಂತೆ), ಮೇ-ನನ್ನಿಂದ (ಸೂತರಿಂದ), ಯಃ-ಯಾವ, ಜಾತಿವಿವೇಕಃ-ಜಾತಿಗಳ ವಿಮರ್ಶಾತ್ಮಕ ಜ್ಞಾನವು, ಇತಿ-ಹೀಗೆ (ಈವರೆಗೆ), ನಿರೂಪಿತಃ-ಹೇಳಲಾಯಿತು.

ಜಾತಿವಿವೇಕವೆಂಬ ೩೫ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೬

ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

**ಸ್ವಭಾವಾದೇವ ಯೇ ಜೀವಾ ಜಾತ್ಯಾ ಷೋಡಶಜಾ ಹಿ ತಾನ್ ।**
**ಸೃಷ್ಟ್ಯಾದೌ ಸ ವಿನಿರ್ಮಾಯ ತತ್ತಜ್ಜಾತ್ಯೈವ ಮಾನುಷಾನ್ ॥ ೧ ॥**
**ಸ್ವಶಕ್ತ್ಯಾವಿಶ್ಯ ತೇಷ್ವೇವ ಸರ್ವವಿದ್ಯಾ ಇಹಾತನೋತ್ ।**
**ಪ್ರವೃತ್ತಿಃ ಸರ್ವವಿದ್ಯಾನಾಂ ಶಿಲ್ಪಾನಾಮಪಿ ಸರ್ವಶಃ ॥ ೨ ॥**
**ತದಾರಭ್ಯೈವ ಲೋಕೇಸ್ಮಿನ್ ವ್ಯವಹಾರಾದಿ ಚಾಭವತ್ ।**

ಅರ್ಥ:—ಯೇ-ಯಾವ, ಜೀವಾಃ-ಜೀವರು, ಸ್ವಭಾವಾತ್ ಏವ-ಸ್ವರೂಪದಿಂದಲೇ, ಜಾತ್ಯಾ-ಜಾತಿಯಿಂದ, ಷೋಡಶಜಾಃ-(ಒಂದು ಎರಡನೆಯ ವರ್ಗಗಳ) ೧೬ ಜಾತಿಗಳಿಗೆ ಸೇರಿದವರೋ (ಆಯಾ ಜಾತಿಗಳಲ್ಲಿ ಹುಟ್ಟಬೇಕಾದವರೋ), ತಾನ್-ಅವರನ್ನು (ಆ ಜೀವರನ್ನು), ಸೃಷ್ಟ್ಯಾದೌ-ಸೃಷ್ಟಿಯ ಪ್ರಾರಂಭದಲ್ಲಿ, ಸಃ-ಆ ವಿಷ್ಣುವು, ತತ್ತಜ್ಜಾತ್ಯೈವ-ಆಯಾ ಜಾತಿಯಿಂದಲೇ (ಆಯಾ ಜಾತಿಯ), ಮಾನುಷಾನ್-

---

ಜಾತಿಗಳ ವಿಮರ್ಶಾತ್ಮಕಜ್ಞಾನವನ್ನು ವಿಷ್ಣುಭಕ್ತರೆಲ್ಲರೂ ಅವಶ್ಯವಾಗಿ ಸಂಪಾದಿಸಿ ಅದನ್ನು ಅನುಷ್ಠಾನದಲ್ಲಿಟ್ಟುಕೊಂಡು ಶ್ರೀವಿಷ್ಣುಪ್ರೀತಿಗೆ ಪಾತ್ರರಾಗಲಿ (೧೫೫-೧೫೭).

೩೫ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೩೬

ತಾತ್ಪರ್ಯ:—ಒಂದು, ಎರಡನೆ ವರ್ಗದ ೧೬ ಜಾತಿಗಳು, ಜೀವರಿಗೆ ಸ್ವಭಾವ (ಸ್ವರೂಪ) ಸಿದ್ಧವೇ ಆಗಿವೆ; ಸೃಷ್ಟಿಯ ಆರಂಭದಲ್ಲಿ ಆ ಶ್ರೀ ಮಹಾವಿಷ್ಣುವು, ಆಯಾ ಜಾತಿಯ ಜೀವರನ್ನು ಆಯಾ ಜಾತಿಯ ಮನುಷ್ಯರನ್ನಾಗಿ ನಿರ್ಮಾಣ ಮಾಡಿ, ಸ್ವಸಾಮರ್ಥ್ಯದಿಂದ, ಅವರಲ್ಲಿ ಪ್ರವಿಷ್ಟನಾಗಿ ನಿಂತು, ಈ ಲೋಕದಲ್ಲಿ ಎಲ್ಲ ವಿದ್ಯೆಗಳನ್ನೂ ಕುಶಲ ಕಲೆ (ಶಿಲ್ಪ)ಗಳನ್ನೂ ಪ್ರವರ್ತಿಸಿ, ವ್ಯವಹಾರಾದಿಗಳನ್ನುಂಟು

ಮನುಷ್ಯರನ್ನು ವಿನಿರ್ಮಾಯ-ನಿರ್ಮಾಣ ಮಾಡಿ, ತೇಷು-ಅವರಲ್ಲಿ ಸ್ವಶಕ್ತ್ಯಾ-ತನ್ನ ಸಾಮರ್ಥ್ಯದಿಂದ, ಆವಿಶ್ಯ ಏವ-ಪ್ರವಿಷ್ಟನಾಗಿಯೇ, ಇಹ-ಈ ಲೋಕದಲ್ಲಿ ಸರ್ವವಿದ್ಯಾಃ-ಎಲ್ಲ ವಿದ್ಯೆಗಳನ್ನು ಅತನೋತ್-ವಿಸ್ತಾರಗೊಳಿಸಿದನು; ತದಾರಭ್ಯ ಏವ-ಆಗಿನಿಂದ ಪ್ರಾರಂಭವಾಗಿಯೇ, ಸರ್ವವಿದ್ಯಾನಾಂ- ಎಲ್ಲ ವಿದ್ಯೆಗಳ, ಪ್ರವೃತ್ತಿಃ-ಪ್ರವೃತ್ತಿಯೂ, ಅಪಿ-ಮತ್ತು ಸರ್ವಶಃ-ಎಲ್ಲ ಶಿಲ್ಪಾನಾಂ-ಶಿಲ್ಪಗಳ (ಜೀವಿಕೆಗಳ-ಕುಶಲವಿದ್ಯೆಗಳ), ವ್ಯವಹಾರಾದಿ ಚ-ವ್ಯವಹಾರ ಮೊದಲಾದುದೂ, ಅಸ್ಮಿನ್-ಈ, ಲೋಕೇ-ಲೋಕದಲ್ಲಿ (ಮನುಷ್ಯಲೋಕದಲ್ಲಿ), ಅಭವತ್-ಉಂಟಾಯಿತು.

**ಸೃಷ್ಟಿಪಾಲನಸಂಹಾರಾ ನಿಯತ್ಯಾದ್ಯಾ ದಿನೇ ದಿನೇ ॥ ೩ ॥**
**ಭವಂತಿ ಸ್ಮ ಹರೇರೇವ ಸಾಕ್ಷಾದಂತರತೋಽಪಿ ಹಿ ।**

ಸೃಷ್ಟಿಪಾಲನಸಂಹಾರಃ-ಸೃಷ್ಟಿ ಸ್ಥಿತಿ (ರಕ್ಷಣೆ), ಸಂಹಾರಗಳು, ನಿಯತ್ಯಾದ್ಯಾಃ-ನಿಯಮನಾದಿಗಳು (ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳು ಸಹ), ದಿನೇದಿನೇ-ಪ್ರತಿನಿತ್ಯವೂ (ಪ್ರಸಿದ್ಧವಾದ ಸೃಷ್ಟಿ ಪ್ರಲಯಕಾಲಗಳಲ್ಲಿ ಮಾತ್ರವಲ್ಲ, ಕಿಂತು, ಪ್ರತಿದಿನವೂ), ಹರೇಃ ಏವ-ಶ್ರೀಹರಿಯಿಂದಲೇ, ಸಾಕ್ಷಾತ್-ಸ್ವಯಂ, ಅಪಿ-ಮತ್ತು ಅಂತರತಃ-ವ್ಯವಧಾನದಿಂದ (ಅನ್ಯರ ಮೂಲಕ ಸಹ). ಭವಂತಿ ಸ್ಮ-ಸಂಭವಿಸುತ್ತವೆ; ಹಿ-ಹೀಗೆಂಬುದು ವೇದಸಿದ್ಧವು.

**ರಾಜಾ ಹಿ ಪರಮೋ ಲೋಕೇ ಧರ್ಮಾಧರ್ಮನಿಯಾಮಕಃ ॥ ೪ ॥**
**ತಸ್ಮಿನ್ ಸ್ವತೇಜ ಆವಿಶ್ಯ ಶಾಸ್ತಿ ಲೋಕಾನ್ ಸ್ವಯಂ ಹರಿಃ ।**
**ತೇನೇಯಂ ಹಿ ಯಥಾ ಲೋಕೇ ನಾವಿಷ್ಣುಃ ಪೃಥಿವೀಪತಿಃ ॥ ೫ ॥**

ಲೋಕೇ-ಈ ಲೋಕದಲ್ಲಿ ಧರ್ಮಾಧರ್ಮನಿಯಾಮಕಃ-ಧರ್ಮ, ಅಧರ್ಮಗಳ

---

ಮಾಡಿರನು; ಅಲ್ಲಿಂದ ಆರಂಭವಾಗಿ ಈ ಸಮಸ್ತವಿದ್ಯೆಗಳೂ ಶಿಲ್ಪಗಳೂ ನಡೆದುಬಂದಿವೆ (೧-೨). ಈ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳೂ, ನಿಯಮನಾದಿಗಳೂ, ದಿನೇ ದಿನೇ,[1] ಸಾಕ್ಷಾತ್ತಾಗಿ ಅಥವಾ ಅನ್ಯರ ದ್ವಾರಾ, ಶ್ರೀಹರಿಯಿಂದಲೇ ಸಂಭವಿಸುತ್ತವೆ (೩). ಲೋಕದಲ್ಲಿ ಧರ್ಮಾಧರ್ಮ ನಿಯಾಮಕರಲ್ಲಿ ಶ್ರೇಷ್ಠನು ರಾಜನೇ ಸರಿ; ಆತನಲ್ಲಿ ಶ್ರೀಹರಿಯು, ಸ್ವಯಂ, ತನ್ನ ತೇಜಸ್ಸಿನಿಂದ

1. 'ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮಮಹದ್ಯೋನಿರಹಂ ಬೀಜಪ್ರದಃ ಪಿತಾ ॥' (ಗೀತಾ)

ಆದಿಸರ್ಗದಲ್ಲಿ ಮಾತ್ರ, ಪ್ರಕೃತಿ ಪರಮಾತ್ಮರು (ಲಕ್ಷ್ಮೀನಾರಾಯಣರು) ಪ್ರಾಣಿಗಳ ಉತ್ಪತ್ತಿಗೆ ಕಾರಣರೆಂದಲ್ಲ; ದೇವ, ಮನುಷ್ಯ, ಪಶು, ಪಕ್ಷಿ ಮೊದಲಾದ ಎಲ್ಲ ಯೋನಿಗಳಲ್ಲಿ ಯಾವ ಪ್ರಾಣಿಗಳು ಹುಟ್ಟುತ್ತವೆಯೋ, ಅವೆಲ್ಲಕ್ಕೂ, ಮಹದ್ಬ್ರಹ್ಮ (ಲಕ್ಷ್ಮೀದೇವಿಯೇ) ಕ್ಷೇತ್ರಗತಳಾಗಿ ಕಾರಣಳು; ನಾನು ಗರ್ಭಾಧಾನ ಮಾಡುವ ತಂದೆಯು.

ನಿಯಾಮಕನು, ಪರಮಃ-ಪ್ರಜಾಶ್ರೇಷ್ಠನಾದ, ರಾಜಾ ಹಿ-ರಾಜನೇ ಅಷ್ಟೆ!; ಸ್ವಯಂ ಹರಿಃ-ಶ್ರೀ ಹರಿಯು ತಾನೇ (ಸಾಕ್ಷಾತ್ತಾಗಿ, ಒಂದಂಶದಿಂದ), ತಸ್ಮಿನ್-ಆತನಲ್ಲಿ (ರಾಜನಲ್ಲಿ), ಸ್ವತೇಜಃ-ತನ್ನ ಸಾಮರ್ಥ್ಯದಿಂದ, ಆವಿಶ್ಯ- ಪ್ರವೇಶಿಸಿ, ಲೋಕಾನ್-ಲೋಕಗಳನ್ನು ಶಾಸ್ತಿ-ಶಾಸನ ಮಾಡುತ್ತಾನೆ (ಆಳುತ್ತಾನೆ-ಅಧರ್ಮ ಪ್ರವರ್ತಕರನ್ನು ಶಿಕ್ಷಿಸುತ್ತಾನೆ); ಯಥಾಲೋಕೇ-ಲೋಕದಲ್ಲಿ (ಜ್ಞಾನಿಗಳು) ಹೇಳುವಂತೆ, 'ನಾವಿಷ್ಣುಃ ಪೃಥಿವೀಪತಿಃ'-'ಶ್ರೀವಿಷ್ಣುವನ್ನುಳಿದು ರಾಜನಿಲ್ಲ ಎಂಬ, ಇಯಂ-ಈ ನುಡಿಯು, ತೇನ-ಈ ಕಾರಣದಿಂದಲೇ (ರಾಜನಲ್ಲಿ ಶ್ರೀವಿಷ್ಣುವು ಪ್ರವಿಷ್ಟನಾಗಿರುವುದರಿಂದಲೇ) ಆಗಿರುತ್ತದೆ.

ಯಾವತ್ತೇಜೋ ಭವೇದ್ಯತ್ರ ಹರೇಸ್ತಾವತ್ ಪ್ರಭುರ್ಭವೇತ್ ।
ತದ್ಧೀನೋ ಭಸ್ಮವಲ್ಲೋಕೇ ಸ್ವೈರೇವ ಹ್ಯವಮನ್ಯತೇ ॥ ೬ ॥

ಯತ್ರ-ಎಲ್ಲಿ(ಯಾರಲ್ಲಿ), ಯಾವತ್-ಎಲ್ಲಿಯವರೆಗೆ, ಹರೇಃ-ಶ್ರೀಹರಿಯ, ತೇಜಃ-ತೇಜಸ್ಸು (ಅಂಶವು), ಭವೇತ್-ಇರುವುದೋ, ತಾವತ್-ಅವರೆಗೆ, ಪ್ರಭುಃ-ರಾಜನು (ಯಜಮಾನನು-ಆಳಲು ಸಮರ್ಥನು), ಭವೇತ್-ಆಗುವನು; ತದ್ಧೀನಃ-ಅದರಿಂದ ರಹಿತನು (ಶ್ರೀಹರಿಯ ತೇಜಸ್ಸಿನಿಂದ ಹೀನನು), ಲೋಕೇ-ಲೋಕದಲ್ಲಿ ಭಸ್ಮವತ್-(ಬೆಂಕಿ ಇಲ್ಲದ-ಆರಿದ) ಬೂದಿಯಂತೆ, ಸ್ವೈಃ ಏವ-ತನ್ನವರಿಂದಲೇ (ಮೊದಲು ತನ್ನನ್ನು ರಾಜನೆಂದು, ಪ್ರಭುವೆಂದು ಸನ್ಮಾನಿಸುತ್ತಿದ್ದ ಜನರಿಂದಲೇ), ಅವಮನ್ಯತೇ-ಅಪಮಾನಿತನಾಗುತ್ತಾನೆ.

ದೀಪಾನುಸಾರಿಣೀ ದೀಪ್ತಿರ್ಯಥಾ ತದ್ವನ್ನರೇಷ್ವಪಿ ।
ತತ್ತದ್ಯೋಗ್ಯತಯಾ ವಿಷ್ಣುಃ ಸಾಮರ್ಥ್ಯಂ ಸಂಪ್ರಯಚ್ಛತಿ ॥ ೭ ॥
ಅತ ಏವ ಹಿ ಲೋಕೇಽಸ್ಮಿನ್ನಾನಾಯಂತೃತ್ವಮೀಕ್ಷ್ಯತೇ ।
ಕಶ್ಚಿದೇಕಸ್ಯ ಯಂತಾಸ್ತಿ ದ್ವಿಯಂತಾ ಚ ತ್ರಿಯಂತೃಕಃ ॥ ೮ ॥

---

ಪ್ರವಿಷ್ಟನಾಗಿದ್ದು ಪ್ರಜರನ್ನು ಶಾಸನಮಾಡುತ್ತಾನೆ; ಈ ಕಾರಣದಿಂದಲೇ 'ವಿಷ್ಣುವನ್ನುಳಿದು ರಾಜನಿಲ್ಲ' ಎಂಬ ನಾಣ್ನುಡಿಯು ಕೇಳಬರುತ್ತದೆ (೪-೫). ಶ್ರೀಹರಿಯ ತೇಜಸ್ಸು ಯಾವನಲ್ಲಿ ಎಲ್ಲಿಯವರೆಗೆ ಇರುವುದೋ, ಅವರೆಗೆ ಆತನು ಪ್ರಭುವಾಗಿರುವನು (ಆಳಲು ಸಮರ್ಥನಾಗಿರುವನು); ಶ್ರೀಹರಿಯ ತೇಜೋಂಶವು ಆತನನ್ನು ತ್ಯಜಿಸಿದ ಒಡನೆಯೇ, ಆತನು, ದಹಿಸಲಸಮರ್ಥವಾದ ಭಸ್ಮದಂತಾಗುತ್ತಾನೆ; ಮೊದಲು ಪ್ರಭುವೆಂದು ಗೌರವಿಸುತ್ತಿದ್ದ ತನ್ನ ಜನರೇ (ಸ್ವಜನರು ಸಹ), ಅಗೌರವದಿಂದ ಕಾಣುತ್ತಾರೆ (ಅಪಮಾನಗೊಳಿಸುತ್ತಾರೆ) (೬). ದೀಪದ ಪ್ರಕಾಶವು ದೀಪದ ಸ್ವರೂಪಸಾಮರ್ಥ್ಯವನ್ನನುಸರಿಸುವಂತೆ, ಮನುಷ್ಯರಲ್ಲಿ ಸಹ, ಶ್ರೀವಿಷ್ಣುವು, ಅವರವರ ಯೋಗ್ಯತಾನುಗುಣವಾದ ಸಾಮರ್ಥ್ಯವನ್ನು (ಪ್ರಕಟಗೊಳಿಸುತ್ತಾನೆ)

**ದಶಾನಾಂ ಚ ಶತಾನಾಂ ಚ ಸಹಸ್ರಾಯುತಯಂತ್ರಕಃ ।**
**ಸಾಮಂತಶ್ಚ ನೃಪೋ ರಾಜಾ ಮಹಾರಾಜೋಽಖಿಲಾಧಿಪಃ ॥೯॥**
**ಚಕ್ರವರ್ತೀ ಸಾರ್ವಭೌಮ ಇತ್ಯೇವಂ ವ್ಯಪದಿಶ್ಯತೇ ।**

ಯಥಾ-ಹೇಗೆ, ದೀಪ್ತಿ-ಪ್ರಕಾಶವು, ದೀಪಾನುಸಾರಿಣೀ-ದೀಪವನ್ನು (ದೀಪದ ಸಹಜಶಕ್ತಿಯನ್ನು) ಅನುಸರಿಸುವುದಾಗಿರುವುದೋ, ತದ್ವತ್-ಅದರಂತೆ, ನರೇಷು ಅಪಿ-ಮನುಷ್ಯರಲ್ಲಿಯೂ, ವಿಷ್ಣುಃ-ಶ್ರೀವಿಷ್ಣುವು, ತತ್ತದ್ಯೋಗ್ಯತಯಾ- ಅವರವರ ಸ್ವರೂಪಯೋಗ್ಯತೆಯಂತೆ, ಸಾಮರ್ಥ್ಯಂ-ಪ್ರಭುತ್ವಶಕ್ತಿಯನ್ನು ಸಂಪ್ರಯಚ್ಛತಿ-ಕೊಟ್ಟು ನಡೆಸುತ್ತಾನೆ; ಅತ ಏವ ಹಿ-ಈ ಕಾರಣದಿಂದಲೇ, ಅಸ್ಮಿನ್-ಈ, ಲೋಕೇ-ಲೋಕದಲ್ಲಿ, ನಾನಾಯಂತೃತ್ವಂ-ವಿವಿಧ ನಿಯಾಮಕ ಸಾಮರ್ಥ್ಯಗಳ ಇರುವಿಕೆಯು, ಈಕ್ಷ್ಯತೇ-ಕಾಣಲ್ಪಡುತ್ತದೆ; ಕಶ್ಚಿತ್-ಯಾರೊಬ್ಬನು, ಏಕಸ್ಯ-ಮತ್ತೊಬ್ಬನ, ಯಂತಾ-ನಿಯಾಮಕನು, ಅಸ್ತಿ-ಆಗಿರುವನು; ದ್ವಿಯಂತಾ ಚ-ಇಬ್ಬರ ನಿಯಾಮಕನೂ, ತ್ರಿಯಂತೃಕಃ-ಮೂವರ ನಿಯಾಮಕನೂ (ಇರುವರು); ದಶಾನಾಂ-೧೦ ಜನರ, ಶತಾನಾಂ-೧೦೦ ಜನರ, ಚ-ಮತ್ತು ಸಹಸ್ರಾಯುತಯಂತ್ರಕಃ-೧೦೦೦, ೧೦,೦೦೦, ಜನರ ನಿಯಾಮಕನೂ, ಚ-ಮತ್ತು ಸಾಮಂತಃ ನೃಪಃ-ದೇಶಾಧಿಪ, ಮಾಂಡಲಿಕನೂ, ರಾಜಾ-ರಾಜನೂ, ಮಹಾರಾಜಃ-ಮಹಾರಾಜನೂ, ಅಖಿಲಾಧಿಪಃ-ಸಮಸ್ತರ ಅಧಿಪತಿಯಾದ, ಚಕ್ರವರ್ತೀ ಸಾರ್ವಭೌಮಃ-ಚಕ್ರವರ್ತಿಯೂ, ಸಾರ್ವಭೌಮನೂ, ಇತ್ಯೇವಂ-ಈ ಮುಂತಾದ ನಾಮಗಳಿಂದ, ವ್ಯಪದಿಶ್ಯತೇ-(ನಿಯಾಮಕನು) ವ್ಯವಹರಿಸಲ್ಪಡುತ್ತಾನೆ (ಕರೆಯಲ್ಪಡುತ್ತಾನೆ).

**ರಾಜ್ಞೈವ ಪ್ರಥಮಂ ಧರ್ಮೇ ನಿಜೇ ಸ್ಥಾತವ್ಯನಿಷ್ಠಿತಃ ॥೧೦॥**

---

ಕೊಡುತ್ತಾನೆ; ಆದ್ದರಿಂದಲೇ ಲೋಕದಲ್ಲಿ ವಿವಿಧ ಪುರುಷರಲ್ಲಿ ವಿವಿಧ ಆಳುವ ಶಕ್ತಿಯು (ಅನ್ಯನಿಯಾಮಕ ಸಾಮರ್ಥ್ಯವು) ಕಂಡುಬರುತ್ತದೆ; ಒಬ್ಬನು, ಮತ್ತೊಬ್ಬನನ್ನು ಮಾತ್ರ ನಿಯಂತ್ರಿಸುತ್ತಾನೆ; ಇಬ್ಬರ-ಮೂವರ ನಿಯಂತೃಗಳೂ ಇರುವರು; ಹೀಗೆ, ೧೦, ೧೦೦, ೧೦೦೦, ೧೦,೦೦೦ ಜನರನ್ನಾಳುವವರೂ ಕಂಡುಬರುತ್ತಾರೆ; ಹಾಗೂ, ತಮ್ಮ ಪ್ರಜೆಗಳ ಮೇಲೆ ಪರಿಪರಿಯ ಅಧಿಕಾರಗಳನ್ನು ನಡೆಸುವ (ಹೊಂದಿರುವ), ಮಾಂಡಲಿಕರೂ, ಸಾಮಂತರೂ, ರಾಜರೂ, ಮಹಾರಾಜರೂ, ಸಮಸ್ತರಿಗೆ ಅಧಿಪತಿಯಾದ ಚಕ್ರವರ್ತಿ ಸಾರ್ವಭೌಮನೂ, ಇರುವರು; ಈ ಎಲ್ಲರೂ, ಅವರವರ ನಿಯಂತೃತ್ವ ಸಾಮರ್ಥ್ಯವನ್ನನುಸರಿಸಿ ವಿಭಿನ್ನನಾಮಗಳಿಂದ ಕರೆಯಲ್ಪಡುತ್ತಾರೆ (೭-೯). ಮೊದಲಿಗೆ, ರಾಜನು ಸ್ವಧರ್ಮದಲ್ಲಿ ನಿಷ್ಠೆಯುಳ್ಳವನಾಗಬೇಕು; ಆಗ ಪ್ರಜೆಗಳೆಲ್ಲರೂ ಅನಾಯಾಸವಾಗಿ, ಹಾಗೆಯೇ ಸ್ವಸ್ವಧರ್ಮಗಳಲ್ಲಿ ಇರುವವರಾಗುತ್ತಾರೆ, ಇಲ್ಲದಿದ್ದರೆ ಇಲ್ಲ; ರಾಜನು ಧರ್ಮಮಾರ್ಗದಲ್ಲಿದ್ದರೆ, ಪ್ರಜೆಗಳೂ

**ಲೋಕಾಸ್ತಥೈವ ಕುರ್ವೀರನ್ನನಾಯಸೇನ ನಾನ್ಯಥಾ ।**
**ರಾಜ್ಞೋ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಾಃ ಸಮೋ ಸಮಾಃ ॥೧೧॥**
**ಲೋಕಾಸ್ತಥಾನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ।**

ಪ್ರಥಮಂ-ಮೊದಲು, ರಾಜಾ ಏವ-ರಾಜನೇ, ನಿಜೇ ಧರ್ಮೇ-ತನ್ನ ಧರ್ಮದಲ್ಲಿ ಪರಿನಿಷ್ಠಿತಃ-ವಿಶೇಷ ಶ್ರದ್ಧೆಯಿಂದ ಆಚರಿಸುವವನು, ಸ್ಯಾತ್-ಆಗಿರಬೇಕು; ಲೋಕಾಃ-ಪ್ರಜೆಗಳೂ, ಅನಾಯಾಸೇನ-ಯಾವಶ್ರಮವೂ ಇಲ್ಲದೇ, ತಥಾ ಏವ-(ತಾವು ಸ್ವಧರ್ಮನಿಷ್ಠರು) ಹಾಗೆಯೇ, ಕುರ್ವೀರನ್-ಮಾಡುತ್ತಾರೆ; ಅನ್ಯಥಾ-ಹಾಗಲ್ಲದಿದ್ದರೆ (ರಾಜನು ತನ್ನ ಧರ್ಮದಲ್ಲಿ ನಿಷ್ಠೆ ಇಲ್ಲದವನಾದರೆ), ನ-(ಪ್ರಜೆಗಳು) ಹಾಗೆ ಮಾಡುವುದಿಲ್ಲ; ರಾಜ್ಞ-ರಾಜನು, ಧರ್ಮಿಣಿ-ಧರ್ಮಸ್ಥನಾದರೆ, ಧರ್ಮಿಷ್ಠಾಃ-(ಪ್ರಜೆಗಳು) ಧರ್ಮಮಾರ್ಗಸ್ಥರಾಗಿರುವರು; ಪಾಪೇ-ರಾಜನು ಪಾಪಿಷ್ಠನಾದರೆ, ಪಾಪಾಃ-(ಪ್ರಜೆಗಳೂ) ಪಾಪಿಷ್ಠರಾಗುವರು; ಸಮೇ-(ರಾಜನು) ಧರ್ಮಾಧರ್ಮಗಳ ಮಿಶ್ರನಾದರೆ (ಎರಡೂ ಸಮವಾಗಿ ಉಳ್ಳವನಾದರೆ), ಸಮಾಃ-(ಪ್ರಜೆಗಳೂ) ಮಿಶ್ರಧರ್ಮಿಗಳಾಗುವರು; ಲೋಕಾಃ-ಪ್ರಜೆಗಳು, ತಥಾ-ಹಾಗೆ, ಅನುವರ್ತಂತೇ-ರಾಜನನ್ನು ಅನುಕರಿಸುತ್ತಾರೆ; ಯಥಾ ರಾಜಾ-ರಾಜನು ಹೇಗೋ, ತಥಾ ಪ್ರಜಾಃ-ಪ್ರಜೆಗಳೂ ಹಾಗೆಯೇ (ಇರುವರೆಂಬುದು ಸಾಮಾನ್ಯ ನಿಯಮವು).

**ಧರ್ಮಾಧರ್ಮೌ ಸದಾಚಾರೈ ನೃಪೋನ್ವಿಕ್ಷೇತ್ ಸ್ವಮಂಡಲೇ ॥ ೧೨ ॥**
**ಧರ್ಮಂ ವಿವರ್ಧಯೇನ್ನಿತ್ಯಮಧರ್ಮಂ ಹಾಪಯೇದಪಿ ।**
**ನೃಪಃ ಷಷ್ಠಾಂಶಭಾಗ್ಯಸ್ಮಾಲ್ಲೋಕಾನಾಂ ಪುಣ್ಯಪಾಪಯೋಃ ॥ ೧೩ ॥**

---

ಧರ್ಮಿಷ್ಠರಾಗಿರುತ್ತಾರೆ; ರಾಜನೇ ಪಾಪವನ್ನಾಚರಿಸುತ್ತಿದ್ದರೆ, ಪ್ರಜೆಗಳೂ ಪಾಪಿಗಳಾಗುವರು; ರಾಜನು ಧರ್ಮಾಧರ್ಮಗಳೆರಡನ್ನೂ ಸ್ವೇಚ್ಛೆಯಿಂದ ಅನುಷ್ಠಾನ ಮಾಡಹತ್ತಿದರೆ, ಪ್ರಜೆಗಳೂ ಹಾಗೆಯೇ (ಧರ್ಮ-ಅಧರ್ಮ) ಉಭಯ ಸಮರಾಗುವರು; ಪ್ರಜೆಗಳು ರಾಜನನ್ನೇ ಅನುಕರಿಸುತ್ತಾರೆ—'ಯಥಾ ರಾಜಾ ತಥಾ ಪ್ರಜಾಃ'—ಎಂಬ ಜ್ಞಾನಿಗಳ ನುಡಿಯು ಸತ್ಯವಾದುದು—ರಾಜನಂತೆ ಪ್ರಜೆಗಳೂ ಇರುವರೆಂಬುದು ಸತ್ಯ (೧೦-೧೧). ರಾಜನು, ಚಾರರಿಂದ, ತನ್ನ ದೇಶದಲ್ಲಿ ಧರ್ಮ-ಅಧರ್ಮಗಳ ಪರಿಸ್ಥಿತಿಗಳನ್ನು ಹುಡುಕಿ ತಿಳಿಯಬೇಕು; ಧರ್ಮವನ್ನು (ಧರ್ಮಾನುಷ್ಠಾನವಂತರನ್ನು ಪ್ರೋತ್ಸಾಹಿಸಿ) ಅಭಿವೃದ್ಧಿಗೊಳಿಸಬೇಕು; ಅಧರ್ಮವನ್ನು (ಯೋಗ್ಯ ದಂಡಾದಿಗಳನ್ನು ವಿಧಿಸಿ) ನಿಗ್ರಹಿಸಬೇಕು (ಅಧರ್ಮಾಚರಣೆಯನ್ನು ತಡೆಯಬೇಕು); ರಾಜನು, ಪ್ರಜೆಗಳಿಂದ ಆಚರಿಸಲ್ಪಡುವ ಪುಣ್ಯಪಾಪಗಳಲ್ಲಿ ೧/೬ನೇ ಭಾಗಕ್ಕೆ ಪಾತ್ರನಾಗಿರುವುದರಿಂದ, ಇದು ಆತನ ಮುಖ್ಯಕರ್ತವ್ಯವು

ನೃಪಃ-ರಾಜನು, ಸದಾ-ನಿತ್ಯವೂ, ಸ್ವಮಂಡಲೇ-ತನ್ನ ದೇಶದಲ್ಲಿ ಚಾರೈಃ-ಚಾರರಿಂದ, ಧರ್ಮಾಧರ್ಮೌ-ಧರ್ಮ, ಅಧರ್ಮಗಳನ್ನು ಅನ್ವಿಷ್ಯೇತ್- ಹುಡುಕಿ ತಿಳಿಯಬೇಕು (ಧರ್ಮವನ್ನು ರಕ್ಷಿಸುವುದೂ ಅಧರ್ಮವನ್ನು ನಿಗ್ರಹಿಸುವುದೂ ಆತನ ಧರ್ಮವು); ನಿತ್ಯಂ-ಸದಾ, ಧರ್ಮಂ-ಧರ್ಮವನ್ನು ವಿವರ್ಧಯೇತ್-(ಎಲ್ಲ ವಿಧದಿಂದ ಪ್ರೋತ್ಸಾಹಿಸಿ) ಬೆಳೆಸಬೇಕು; ಅಪಿ-ಮತ್ತೇನೆಂದರೆ, ಅಧರ್ಮಂ-ಅಧರ್ಮವನ್ನು ಹಾಪಯೇತ್-ನಾಶಗೊಳಿಸಬೇಕು (ನಿಗ್ರಹಿಸಬೇಕು- ಅಧರ್ಮಾಚರಣೆಯನ್ನು ತಡೆಯಬೇಕು); ಯಸ್ಮಾತ್-ಯಾವ ಕಾರಣದಿಂದ, ನೃಪಃ-ರಾಜನು, ಲೋಕಾನಾಂ-ಪ್ರಜೆಗಳ, ಪುಣ್ಯಪಾಪಯೋಃ- ಪುಣ್ಯಪಾಪಗಳಲ್ಲಿ ಷಷ್ಠಾಂಶಭಾಕ್-೧/೬ ಅಂಶಕ್ಕೆ ಭಾಗಿಯಾಗಿರುವನೋ (ಆ ಕಾರಣದಿಂದ, ಇದು ಆತನ ಅವಶ್ಯ ಕರ್ತವ್ಯವು).

**ಸದಾ ಪಂಡಿತಸೇವೀಸ್ಯಾದುಷ್ಟಭೋಗವಿವರ್ಜಿತಃ ।**
**ಶಾಸ್ತ್ರತತ್ತ್ವಪರಿಜ್ಞಾನಂ ಸ್ವಯಂ ತೈಃ ಸಾಧಯೇದಪಿ ॥ ೧೪ ॥**
**ಯಥಾಪರಾಧಂ ದಂಡ್ಯೇತ ನ್ಯಾಯೇನ ಧನಮಾರ್ಜಯೇತ್ ।**
**ಮಂತ್ರಿಣಾಂ ಸಚಿವಾನಾಂ ಚ ವೃತ್ತಂ ಚಾರೈಃ ಸದೇಕ್ಷಯೇತ್ ॥ ೧೫ ॥**
**ಜಾಯಂತೇ ದುಃಖಿನೋ ಲೋಕಾಃ ರಾಜವಲ್ಲಭಪೀಡಯಾ ।**
**ತಸ್ಮಾತ್ತಾನಪಿ ಸನ್ಮಾರ್ಗೇ ಸ್ಥಾಪಯೇದನ್ಯಥಾ ಜಯೇತ್ ॥ ೧೬ ॥**

(ರಾಜನು), ಸದಾ-ಎಲ್ಲ ಕಾಲದಲ್ಲಿ ದುಷ್ಟಭೋಗವಿವರ್ಜಿತಃ-ನಿಷಿದ್ಧ ಭೋಗಗಳನ್ನು ಪರಿತ್ಯಜಿಸಿ, ಪಂಡಿತಸೇವೀ-ಜ್ಞಾನಿಗಳನ್ನು ಸೇವಿಸುವನು (ಯಥಾಯೋಗ್ಯವಾಗಿ ಉಪಚರಿಸುವನು), ಸ್ಯಾತ್-ಆಗಿರಬೇಕು; ಅಪಿ-ಮತ್ತು ಸ್ವಯಂ-ತಾನು, ತೈಃ-ಅವರಿಂದ (ಪಂಡಿತರಿಂದ), ಶಾಸ್ತ್ರತತ್ತ್ವಪರಿಜ್ಞಾನಂ-ಶಾಸ್ತ್ರಗಳ ಯಥಾರ್ಥಜ್ಞಾನವನ್ನು ಸಾಧಯೇತ್-ದೊರಕಿಸಿಕೊಳ್ಳಬೇಕು; ಯಥಾಪರಾಧಂ-

---

(೧೪-೧೬). ರಾಜನು, ನಿತ್ಯವೂ ಜ್ಞಾನಿಗಳನ್ನು ಸೇವಿಸಬೇಕು—ನಿಷಿದ್ಧ (ಸ್ತ್ರ್ಯಾದಿ) ಭೋಗಗಳನ್ನು ತ್ಯಜಿಸಬೇಕು; ಜ್ಞಾನಿಗಳಿಂದ ತಾನು ಶಾಸ್ತ್ರತತ್ತ್ವಪರಿಜ್ಞಾನವನ್ನು ಸಂಪಾದಿಸಬೇಕು; ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು; ನ್ಯಾಯಮಾರ್ಗದಿಂದ ಧನವನ್ನು ಸಂಪಾದಿಸಬೇಕು (ಪ್ರಜೆಗಳ ರಕ್ಷಣಾರ್ಥವಾಗಿ ಕೋಶವನ್ನು ವೃದ್ಧಿಗೊಳಿಸಬೇಕು); ಮಂತ್ರಿಗಳ ಹಾಗೂ ಸಚಿವರ (ಮಂತ್ರೀ-ರಾಜಕಾರ್ಯಗಳಲ್ಲಿ ರಾಜನಿಗೆ ಸಲಹೆಗಳನ್ನೀಯುವವ; ಸಚಿವ-ರಾಜಾಜ್ಞೆಗಳನ್ನು ಜಾರಿಯಲ್ಲಿ ತರುವ ಅಧಿಕಾರಿ) ನಡವಳಿಕೆಯನ್ನು ಚಾರರಿಂದ ತಿಳಿದು ಗಮನಿಸುತ್ತಿರಬೇಕು; ಈ ಜನರನ್ನು ಸನ್ಮಾರ್ಗದಲ್ಲಿಡಬೇಕು—ಅವರನ್ನು ಬೇರೆ ವಿಧದಿಂದಲೂ ತನ್ನ ಅಧೀನದಲ್ಲಿಟ್ಟುಕೊಳ್ಳಬೇಕು; ಇಲ್ಲವಾದರೆ, ರಾಜನಿಗೆ ಪ್ರೀತಿ ವಿಷಯರೆಂಬ ಈ ಜನರಿಂದ ಪ್ರಜೆಗಳಿಗೆ

ಅಪರಾಧಕ್ಕೆ ತಕ್ಕಂತೆ, ದಂಡ್ಯೇಷ-ಶಿಕ್ಷೆಯನ್ನು ವಿಧಿಸಬೇಕು; ಧನಂ-ಧನವನ್ನು ನ್ಯಾಯೇನ-ಧರ್ಮಮಾರ್ಗದಿಂದ, ಅರ್ಜಯೇತ್-ಸಂಪಾದಿಸಬೇಕು; ಸದಾ-ನಿತ್ಯವೂ, ಚಾರೈಃ-ಚಾರರಿಂದ (ಗೂಢಾಚಾರರಿಂದ), ಮಂತ್ರಿಣಾಂ-ಮಂತ್ರಿಗಳ, ಚ - ಹಾಗೂ, ಸಚಿವಾನಾಂ - ಸಚಿವರ (ವಿವಿಧ ಕಾರ್ಯಗಳಲ್ಲಿ ತನಗೆ ಸಹಾಯಕರಾದವರ), ವೃತ್ತಂ-ನಡವಳಿಕೆಯನ್ನು, ಏಕ್ಷಯೇತ್-ಗಮನಿಸುತ್ತಿರಬೇಕು; (ಏಕೆಂದರೆ), ರಾಜವಲ್ಲಭಪೀಡಯಾ-ರಾಜನ ಪ್ರೀತಿ ವಿಷಯರಾದ ಜನರ ಪೀಡೆಯಿಂದ (ವಿವಿಧ ಹಿಂಸೆಗಳಿಂದ), ಲೋಕಾಃ-ಪ್ರಜೆಗಳು, ದುಃಖಿನಃ-ದುಃಖಿಗಳು, ಜಾಯಂತೇ-ಆಗುತ್ತಾರೆ; ತಸ್ಮಾತ್-ಆದ್ದರಿಂದ, ತಾನ್ ಅಪಿ-ಅವರನ್ನು (ಮಂತ್ರಿ ಸಚಿವರನ್ನು) ಸಹ, ಸನ್ಮಾರ್ಗೇ-ಸನ್ಮಾರ್ಗದಲ್ಲಿ ಸ್ಥಾಪಯೇತ್-ಇಡಬೇಕು; ಅನ್ಯಥಾ-ಬೇರೆ ವಿಧದಿಂದಲೂ, ಜಯೇತ್-(ಅವರನ್ನು) ಜಯಿಸಬೇಕು (ತನ್ನ ಅಧೀನದಲ್ಲಿಟ್ಟುಕೊಂಡು ಪ್ರಜಾಪೀಡಕರಾಗದಂತೆ ಎಚ್ಚರನಾಗಿರಬೇಕು).

**ವೃತ್ತ್ಯಾ ಯುಂಜೀತ ಧರ್ಮಿಷ್ಠಾನಧರ್ಮಿಷ್ಠಾಂಶ್ಚ ಶಿಕ್ಷಯೇತ್ ।**
**ದಂಡಯಿತ್ವಾ ಚ ಸಮ್ಯಕ್ ತಾನ್ ಕುರ್ಯಾತ್ ಸನ್ಮಾರ್ಗಗಾನ್ನೃಪಃ ॥೧೭**

ಧರ್ಮಿಷ್ಠಾನ್-ಧರ್ಮಮಾರ್ಗದಲ್ಲಿರುವ (ಸಚಿವಾದಿಗಳನ್ನು ಅಥವಾ ಪ್ರಜೆಗಳನ್ನು), ವೃತ್ತ್ಯಾ-ವೃತ್ತಿಯಿಂದ (ಯೋಗ್ಯಪ್ರತಿಫಲದ ಕೆಲಸವನ್ನಿತ್ತು), ಯುಂಜೀತ-ಯೋಜನೆ ಮಾಡಬೇಕು (ಅನ್ಯಪೀಡಕರಾಗದಂತೆ ಮಾಡಬೇಕು); ಅಧರ್ಮಿಷ್ಠಾನ್-ಅಧರ್ಮದಲ್ಲಿರುವವರನ್ನು ಶಿಕ್ಷಯೇತ್-ಶಿಕ್ಷಿಸಬೇಕು; ತಾನ್-ಅವರನ್ನು (ಆ ಸಚಿವಾದಿ ಪ್ರಜೆಗಳನ್ನು), ಸಮ್ಯಕ್-ಚೆನ್ನಾಗಿ (ಯೋಗ್ಯ ರೀತಿಯಿಂದ), ದಂಡಯಿತ್ವಾ-ಶಿಕ್ಷಿಸಿ, ನೃಪಃ-ರಾಜನು, ಸನ್ಮಾರ್ಗಗಾನ್-ಸನ್ಮಾರ್ಗವರ್ತಿಗಳನ್ನಾಗಿ, ಕುರ್ಯಾತ್-ಮಾಡತಕ್ಕದ್ದು.

**ಶರೀರದಂಡೋ ವಿಪ್ರಾಣಾಂ ನಾರ್ಹಸ್ತಸ್ಮಾತ್ತತೋಽನ್ಯಥಾ ।**
**ದಂಡಯೇದ್ವಿಪ್ರಜಾತಿಂ ತು ಮಾನಹಾನ್ಯಾದಿನಾ ನೃಪಃ ॥ ೧೮ ॥**

---

ನಾನಾ ದುಃಖಗಳು ಸಂಭವಿಸುತ್ತವೆ (೧೪-೧೬). ರಾಜನು, ಧರ್ಮಮಾರ್ಗದಲ್ಲಿರುವ ಪ್ರಜೆಗಳನ್ನು ಅವರ ಜೀವನ ನಡೆಯಲು ಅನುಕೂಲಿಸುವ ವೃತ್ತಿಗಳನ್ನು ಕಲ್ಪಿಸಿಕೊಟ್ಟು ಜಯಿಸಬೇಕು (ತನ್ನ ಅಧೀನರನ್ನಾಗಿ ಮಾಡಿಕೊಳ್ಳಬೇಕು); ಅಧರ್ಮಿಷ್ಠರನ್ನು ಶಿಕ್ಷಿಸಿ, ಸನ್ಮಾರ್ಗಕ್ಕೆ ಹಚ್ಚಬೇಕು; ಏವಂ ಚ, ಯಾರೂ ಪ್ರಜಾಪೀಡಕರಾಗದಂತೆ, ರಾಜನು, ಎಚ್ಚರ ವಹಿಸಬೇಕು (೧೭). ಶಾರೀರಕ ಶಿಕ್ಷೆಗೆ ಬ್ರಾಹ್ಮಣನು ಅರ್ಹನಲ್ಲ; ಈ ಕಾರಣದಿಂದ ಬ್ರಾಹ್ಮಣಜಾತಿಯ ಅಪರಾಧಿಗಳನ್ನು (ಅಧರ್ಮಿಷ್ಠರನ್ನು, ಪಾಪಿಗಳನ್ನು) ರಾಜನು ಬೇರೆ ವಿಧದಿಂದ ಶಿಕ್ಷಿಸಬೇಕು—ಮಾನಹಾನಿ ಮುಂತಾದ ಪ್ರಕಾರವನ್ನನು ಸರಿಸಬೇಕು; ವಪನ (ಮುಂಡನ-ತಲೆ ಬೋಳಿಸುವುದು) ದ್ರವ್ಯವನ್ನಾಗಲಿ (ಅಥವಾ

ವಪನಂ ದ್ರವಿಣಾದಾನಂ ಸ್ಥಾನಾನ್ನಿರ್ಯಾಪಣಂ ತಥಾ ।
ಏಷ ಹಿ ಬ್ರಹ್ಮಬಂಧೂನಾಂ ವಧೋ ನಾನ್ಯೋಽಸ್ತಿ ದೈಹಿಕಃ ॥ ೧೯ ॥

ವಿಪ್ರಾಣಾಂ-ಬ್ರಾಹ್ಮಣರಿಗೆ, ಶರೀರದಂಡಃ-ಶಾರೀರಕ ಶಿಕ್ಷೆಯು, ನ ಅರ್ಹಃ-ಯೋಗ್ಯವಲ್ಲ; ತಸ್ಮಾತ್-ಆದ್ದರಿಂದ, ವಿಪ್ರಜಾತಿಂ-ಬ್ರಾಹ್ಮಣಜಾತಿಯನ್ನು (ಆ ಜಾತಿಯ ಪಾಪಿಗಳನ್ನು-ಅಧರ್ಮಿಷ್ಠರನ್ನು-ಅಪರಾಧಿಗಳನ್ನು), ತತಃ-ಅದರಿಂದ (ಶಾರೀರಕ ಶಿಕ್ಷೆಯಿಂದ), ಅನ್ಯಥಾ-ಬೇರೆ ಪ್ರಕಾರದಿಂದ, ನೃಪಃ-ರಾಜನು, ಮಾನಹಾನ್ಯಾದಿನಾ-ಮಾನಹಾನಿ ಮೊದಲಾದ ವಿಧದಿಂದ, ದಂಡಯೇತ್- ಶಿಕ್ಷಿಸತಕ್ಕದ್ದು; ವಪನಂ-ತಲೆಬೋಳಿಸುವುದು, ದ್ರವಿಣಾದಾನಂ-ದ್ರವ್ಯವನ್ನು (ಆಸ್ತಿಯನ್ನು) ಕಿತ್ತುಕೊಳ್ಳುವುದು; ತಥಾ-ಮತ್ತು ಸ್ಥಾನಾತ್-ಸ್ಥಲದಿಂದ (ವಾಸಸ್ಥಾನ ದಿಂದ), ನಿರ್ಯಾಪಣಂ-ಹೊರಗೆ ಹಾಕುವುದು; ಬ್ರಹ್ಮಬಂಧೂನಾಂ-ಬ್ರಾಹ್ಮಣಜಾತಿಯ ಅಪರಾಧಿಗಳಿಗೆ, ಏಷಃ-ಇದು (ಇವುಗಳಲ್ಲೊಂದು), ವಧಃ ಹಿ-ವಧೆಯೇ ಸರಿ (ಮರಣದಂಡವೇ ಸರಿ); ಅನ್ಯಃ-ಬೇರೆಯಾದ, ದೈಹಿಕಃ-ದೈಹಿಕ ಶಿಕ್ಷೆಯು, ನ ಅಸ್ತಿ-ಇರುವುದಿಲ್ಲ (ಯೋಗ್ಯವಾಗುವುದಿಲ್ಲ).

ಕಾರಾಗೃಹೇಷು ನಿಕ್ಷೇಪೋ ಜ್ಞಾತೀನಾಮಾತತಾಯಿನಾಂ ।
ನ ಶಸ್ತಸ್ತದ್ವಧೋ ಲೋಕೇ ಕಾಲೇನ ಪರಿತಾಪಕಃ ॥ ೨೦ ॥
ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।
ಕ್ಷೇತ್ರದಾರಹರಶ್ಚೈವ ಷಡೇತೇ ಹ್ಯಾತತಾಯಿನಃ ॥ ೨೧ ॥
ಆತತಾಯಿನಮಾಯಾಂತಮಪಿ ವೇದಾಂತಪಾರಗಂ ।
ಜಿಘಾಂಸಂತಂ ಜಿಘಾಂಸೇತ ನ ತೇನ ಬ್ರಹ್ಮಹಾ ಭವೇತ್ ॥ ೨೨ ॥
ಆತತಾಯ್ಯಪಿ ಯೋ ವಿಪ್ರಃ ಸ ದಂಡ್ಯೋ ವಪನಾದಿನಾ ।
ವಧಾನರ್ಹೋ ನ ತತ್ಕುರ್ಯಾತ್ ಕುರ್ವಾಣೋ ಬ್ರಹ್ಮಹಾ ಭವೇತ್ ೨೩

---

ಆತನ ಸ್ವಂತ ಆಸ್ತಿಯನ್ನಾಗಲಿ) ಕಿತ್ತುಕೊಳ್ಳುವುದು, ವಾಸಸ್ಥಾನದಿಂದ ಹೊರಗೆ ಹಾಕುವುದು, ಇತ್ಯಾದಿಗಳು ಬ್ರಾಹ್ಮಣನಿಗೆ ವಧೆಯೇ ಸರಿ—ಈ ಶಿಕ್ಷೆಗೆ ಗುರಿಮಾಡಿದರೆ ಮರಣದಂಡನೆಯನ್ನು ವಿಧಿಸಿದಂತೆಯೇ; ಬ್ರಾಹ್ಮಣನಿಗೆ ಬೇರಾವ (ಕೈಕತ್ತರಿಸುವುದು ಇತ್ಯಾದಿ) ಶಿಕ್ಷೆಗಳೂ ಯೋಗ್ಯವಾಗುವುದಿಲ್ಲ (೧೮-೧೯). ಬೆಂಕಿ ಇಡುವವ, ವಿಷಪ್ರಯೋಗ ಮಾಡುವವ, ಶಸ್ತ್ರಪಾಣಿಯಾಗಿ ಮೇಲೆಬೀಳುವವ, ಧನವನ್ನು ಅಪಹರಿಸುವವ, ಭೂಮಿಯನ್ನು ಅಪಹರಿಸುವವ, ಮತ್ತು ಸ್ವಸ್ತ್ರೀಧರ್ಷಣ ಮಾಡುವವ, ಹೀಗೆ ಈ ಆರು ಜನರು 'ಆತತಾಯಿ'ಗಳೆನಿಸುವರು; ಆತತಾಯಿಗಳಾದ ಜ್ಞಾತಿಗಳಿಗೆ ಕಾರಾಗೃಹವಾಸರೂಪದ ಶಿಕ್ಷೆಯೇ ಯೋಗ್ಯವಾಗುತ್ತವೆ—ಅವರನ್ನು

ಆತತಾಯಿನಾಂ-ಆತತಾಯಿಗಳಾದ, ಜ್ಞಾತೀನಾಂ-ಜ್ಞಾತಿಗಳಿಗೆ, ಕಾರಾಗೃಹೇಷು-ಕಾರಾಗೃಹದಲ್ಲಿ (ಬಂದೀಖಾನೆಯಲ್ಲಿ), ನಿಕ್ಷೇಪಃ-ಇಡುವುದು (ಯೋಗ್ಯವಾಗುತ್ತದೆ); ತದ್ವಧಃ-ಅವನ ವಧೆಯು (ದೇಹಾಂತ ಶಿಕ್ಷೆಯು- ಮರಣ ದಂಡನೆಯು), ನ ಶಸ್ತಃ-ಪ್ರಶಸ್ತವಲ್ಲವು; (ಏಕೆಂದರೆ), ಲೋಕೇ-ಲೋಕದಲ್ಲಿ ಕಾಲೇನ-ಕಾಲಗತಿಯಿಂದ (ಕಾಲಾಂತರದಲ್ಲಿ ಜ್ಞಾತಿವಧೆಯು), ಪರಿತಾಪಕಃ-ಪರಿತಾಪಕ್ಕೆ (ವಿಶೇಷ ದುಃಖಕ್ಕೆ—ಪಶ್ಚಾತ್ತಾಪಕ್ಕೆ) ಕಾರಣವಾಗುತ್ತದೆ. ಅಗ್ನಿದಃ-ಬೆಂಕಿ ಹಚ್ಚುವವನು, ಗರದಃ ವಿಷ-ವಿಷಯವನ್ನು ಕೊಡುವವನೂ, ಶಸ್ತ್ರಪಾಣಿಃ-ಆಯುಧ ಪಾಣಿಯೂ, ಧನಾಪಹಃ-ಧನವನ್ನು ಅಪಹರಿಸುವವನೂ, ಕ್ಷೇತ್ರದಾರಹರಃ-ಭೂಮಿಯ ಮತ್ತು ಭಾರ್ಯೆಗಳ ಅಪಹಾರಕನೂ, ಏತೇ-ಈ, ಷಟ್ ಏವ-ಆರು ಜನರೇ, ಆತತಾಯಿನಃ ಹಿ-'ಆತತಾಯಿ'ಗಳೆಂದು ಶಾಸ್ತ್ರಸಿದ್ಧರು (ಆತತಾಯಿಯಾದ ಬ್ರಾಹ್ಮಣನು ಯಾವಾಗ ವಧಾರ್ಹನೆಂದರೆ), ಜಿಘಾಂಸಂತಂ- ಕೊಲ್ಲುವ ಇಚ್ಛೆಯಿಂದ, ಆಯಾಂತಂ-ಮೇಲೇರಿಬರುವ (ಆಯುಧಪಾಣಿಯಾಗಿ ಮೇಲೆಬೀಳಲುದ್ಯುಕ್ತನಾದ), ಆತತಾಯಿನಂ - ಆತತಾಯಿಯನ್ನು ವೇದಾಂತಪಾರಗಂ ಅಪಿ - ವೇದಾಂತ ಪಾರಂಗತನಾದರೂ, ಜಿಘಾಂಸೇತ-ವಧಿಸಬೇಕು (ಕೊಲ್ಲಬಹುದು); ತೇನ-ಅದರಿಂದ (ಹಾಗೆ ಕೊಲ್ಲುವುದರಿಂದ), ಬ್ರಹ್ಮಹಾ-ಬ್ರಹ್ಮಹತ್ಯೆಯನ್ನು ಮಾಡಿದವನು, ನ ಭವೇತ್-ಆಗುವುದಿಲ್ಲ. ಯಃ-ಯಾರೊಬ್ಬ, ವಿಪ್ರಃ-ಬ್ರಾಹ್ಮಣನು, ಆತತಾಯ್ಯಪಿ-ಆತತಾಯಿಯಾಗಿದ್ದರೂ (ಬೇರೆ ವಿಧದಿಂದ ಆತತಾಯಿಯಾದರೂ), ಸಃ-ಆತನು, ವಪನಾದಿನಾ-ಮುಂಡನಾದಿಗಳಿಂದ (ಈ ಹಿಂದೆ ಹೇಳಿದ ವಧೆಯಂತಿರುವ ಶಿಕ್ಷೆಗಳಿಂದ), ದಂಡ್ಯಃ-ಶಿಕ್ಷಿಸಲ್ಪಡಬೇಕು; ವಧಾನರ್ಹೇ-ದೈಹಿಕವಧೆಗೆ ಅನರ್ಹನಾದವನ ವಿಷಯದಲ್ಲಿ ತತ್-ವಧೆಯನ್ನು ನ ಕುರ್ಯಾತ್-ಮಾಡತಕ್ಕದ್ದಲ್ಲ; ಕುರ್ವಾಣಃ-(ಹಾಗೆ) ಮಾಡುವವನು, ಬ್ರಹ್ಮಹಾ-ಬ್ರಹ್ಮಹತ್ಯವನ್ನಾಚರಿಸಿದ ದೋಷಿಯು, ಭವೇತ್-ಆಗುತ್ತಾನೆ.

---

ವಧಿಸುವುದು (ಮರಣದಂಡನೆಯನ್ನು ವಿಧಿಸುವುದು) ಪ್ರಶಸ್ತವಲ್ಲ; ಕಾಲಾಂತರದಲ್ಲಿ ಜ್ಞಾತಿಗಳಿಗೆ ಪಶ್ಚಾತ್ತಾಪವುಂಟಾಗುವ ಸಂಭವಿರುತ್ತದೆ—ಅದರಿಂದ ಅವರಿಗೆ (ಆತತಾಯಿಯ ಜ್ಞಾತಿಗಳಿಗೆ) ದುಃಖವೂ ಆಗುತ್ತದೆ; ಕೊಲ್ಲುವುದಕ್ಕಾಗಿ ಆಯುಧ ಪಾಣಿಯಾಗಿ ಮೇಲೇರಿಬರುವ ಬ್ರಾಹ್ಮಣನನ್ನು (ಆತತಾಯಿಯನ್ನು), ಆತನು ವೇದವೇದಾಂತಪಾರಂಗತನಾದರೂ, ಸಂಹರಿಸಬಹುದು; ಅದರಿಂದ ಬ್ರಹ್ಮಹತ್ಯೆಯ ದೋಷ ಬರುವುದಿಲ್ಲ. ಆದರೆ ಬೇರೆ ವಿಧದಿಂದ ಆತತಾಯಿಯಾದ ಬ್ರಾಹ್ಮಣನನ್ನು ವಧೆಗೆ ಸಮವಾದ ಮುಂಡನಾದಿಗಳಿಂದ, ದಂಡಿಸಬೇಕಲ್ಲದೇ ಸಂಹರಿಸಕೂಡದು; ದೈಹಿಕ ವಧೆಗೆ ಅನರ್ಹನಾದವನನ್ನು ವಧಿಸಿದರೆ, ವಧಿಸಿದವನು ಬ್ರಹ್ಮಹತ್ಯವನ್ನಾಚರಿಸಿದ ದೋಷಿಯಾಗುತ್ತಾನೆ (೨೦-೨೩). ಅಪರಾಧದ ಯೋಗ್ಯತೆಯನ್ನು

**ಯಥಾಪರಾಧಂ ದಂಡೇನ ನ ಪಾಪೀ ಪುಣ್ಯವಾನ್ ನೃಪಃ ।**
**ಧನಂ ಚ ಲಭತೇ ದಂಡಾದ್ದಂಡ್ಯಃ ಪಾಪಾದ್ವಿಮುಚ್ಯತೇ ॥ ೨೪ ॥**

ನೃಪಃ-ರಾಜನು, ಯಥಾಪರಾಧಂ-ಅಪರಾಧಕ್ಕೆ ತಕ್ಕಂತೆ, ದಂಡೇನ- ಶಿಕ್ಷೆಯನ್ನು ವಿಧಿಸುವುದರಿಂದ, ನ ಪಾಪೀ-ಯಾವ ಪಾಪಕ್ಕೂ ಗುರಿಯಾಗುವುದಿಲ್ಲ; ಕಿಂತು-(ಪ್ರತ್ಯುತ), ಪುಣ್ಯವಾನ್-ಪುಣ್ಯವನ್ನೇ ಹೊಂದುತ್ತಾನೆ; ಚ-ಮತ್ತು ದಂಡಾತ್-ದ್ರವ್ಯರೂಪದ ದಂಡದಿಂದ (ಜುಲ್ಮಾನೆ—fine), ಧನಂ-ಧನವನ್ನೂ, ಲಭತೇ-ಹೊಂದುತ್ತಾನೆ; ದಂಡ್ಯಃ-ಶಿಕ್ಷಿಸಲ್ಪಟ್ಟವನು, ಪಾಪಾತ್-(ಅಪರಾಧ ನಿಮಿತ್ತವಾದ) ಪಾಪದಿಂದ, ವಿಮುಚ್ಯತೇ-ಮುಕ್ತನಾಗುತ್ತಾನೆ.

**ಪ್ರಜಾನಾಂ ರಕ್ಷಣಂ ದಂಡಾದನ್ಯಥೋಚ್ಛೃಂಖಲೋ ಜನಃ ।**
**ಧನದಾರಾದಿಹರಣಂ ಮೃತ್ಯುಂ ಚ ಪ್ರಾಪ್ನುಯಾನ್ಮಿಥಃ ॥ ೨೫ ॥**

ದಂಡಾತ್-(ರಾಜನು) ಶಿಕ್ಷೆಯನ್ನು (ಅಪರಾಧಿಗಳಿಗೆ) ವಿಧಿಸುವುದರಿಂದ, ಪ್ರಜಾನಾಂ-ಪ್ರಜೆಗಳ, ರಕ್ಷಣಂ-ರಕ್ಷಣೆಯೂ (ಆಗುತ್ತದೆ); ಅನ್ಯಥಾ-ಹಾಗಲ್ಲದಿದ್ದರೆ (ಅಪರಾಧಿಗಳಿಗೆ ರಾಜದಂಡದ ಭಯವಿಲ್ಲದಿದ್ದರೆ), ಜನಃ-ಜನರು (ಪ್ರಜೆಗಳು), ಉಚ್ಛೃಂಖಲಃ-ಸ್ವೇಚ್ಛಾಚಾರಿಗಳಾಗಿ (ಅನಿರ್ಬಂಧರಾಗಿ ವರ್ತಿಸಿ), ಮಿಥಃ-ಪರಸ್ಪರ ವಾಗಿ, ಧನದಾರಾದಿಹರಣಂ-ದ್ರವ್ಯ, ಸ್ತ್ರೀ ಮೊದಲಾದವುಗಳ ಅಪಹಾರವನ್ನೂ ಚ-ಮತ್ತು ಮೃತ್ಯುಂ-ಮರಣವನ್ನೂ, ಪ್ರಾಪ್ನುಯಾತ್-ಹೊಂದುತ್ತಾರೆ.

**ರಾಜ್ಞೋಽಪಿ ಜೀವನಂ ನ ಸ್ಯಾತ್ ಸುಖಲಾಭಸ್ತು ದೂರಕಃ ।**
**ಅಥೋ ಹಿ ಪ್ರಥಮಂ ವಿಷ್ಣುಃ ಸೃಷ್ಟ್ಯಾದೌ ದಂಡಮಾತನೋತ್ ॥ ೨೬॥**

ರಾಜ್ಞಃ-(ಅಪರಾಧಿಗಳಿಗೆ ಯೋಗ್ಯದ್ರವ್ಯರೂಪದ ದಂಡವನ್ನು ವಿಧಿಸದಿದ್ದರೆ) ರಾಜನಿಗೆ, ಜೀವನಂ ಅಪಿ-ಜೀವನವೂ ಸಹ, ನ ಸ್ಯಾತ್-ಇಲ್ಲದಾಗುತ್ತದೆ; ಸುಖಲಾಭಃ

---

ಸರಿಸಿ (ಗುರುಲಾಘವಾದಿಗಳನ್ನು ಗಮನಿಸಿ) ಶಿಕ್ಷೆಯನ್ನು ವಿಧಿಸುವುದರಿಂದ, ರಾಜನು ಪಾಪಕ್ಕೆ ಗುರಿಯಾಗುವುದಿಲ್ಲ; ಪ್ರತ್ಯುತ, ಪುಣ್ಯವನ್ನೇ ಹೊಂದುತ್ತಾನೆ; ಯೋಗ್ಯವಾದ ದ್ರವ್ಯದಂಡವನ್ನು ವಿಧಿಸುವುದರಿಂದ, ರಾಜನಿಗೆ ಧನವೂ ಲಭಿಸುತ್ತದೆ; ಅಪರಾಧಿಯು ಪಾಪದಿಂದಲೂ ಮುಕ್ತನಾಗುತ್ತಾನೆ (೨೪). ರಾಜನು, ಅಪರಾಧಿಗಳನ್ನು ಶಿಕ್ಷಿಸುವುದರಿಂದ, ಪ್ರಜೆಗಳ ರಕ್ಷಣೆಯಾಗುತ್ತದೆ; ರಾಜದಂಡದ ಭೀತಿಯಿಲ್ಲದಿದ್ದರೆ, ಪ್ರಜೆಗಳು ಸ್ವೇಚ್ಛಾಚಾರಿಗಳಾಗಿ ವರ್ತಿಸಿ, ಪರಸ್ಪರವಾಗಿ, ಧನ ಸ್ತ್ರೀ ಮೊದಲಾದವುಗಳ ಅಪಹಾರದಲ್ಲಿ ತೊಡಗುತ್ತಾರೆ— ಅದರಿಂದ ಮರಣವನ್ನೂ ಹೊಂದುತ್ತಾರೆ (೨೫). ದಂಡವನ್ನು ವಿಧಿಸದಿದ್ದರೆ, ರಾಜನ ಜೀವಿತವೂ ನಡೆಯುವುದಿಲ್ಲ—ವಿವಿಧ ಸುಖಭೋಗಗಳಂತೂ ದೂರದಲ್ಲಿಯೇ ಉಳಿಯುತ್ತವೆ; ಈ ಕಾರಣದಿಂದಲೇ,

ತು-ಸುಖಪ್ರಾಪ್ತಿಯಂತೂ (ಭೋಗಸಾಮಗ್ರಿಗಳಿಂದ ದೊರೆಯುವ ಐಹಿಕಸುಖ ವಂತೂ), ದೂರಕಃ-ದೂರವೇ ಉಳಿಯುತ್ತದೆ; ಅಥೋ-ಆದ್ದರಿಂದಲೇ, ಪ್ರಥಮಂ-ಮೊದಲಿಗೆ, ಸೃಷ್ಟ್ಯಾದೌ-ಸೃಷ್ಟಿ ಪ್ರಾರಂಭದಲ್ಲಿ ವಿಷ್ಣುಃ-ಶ್ರೀವಿಷ್ಣುವು, ದಂಡಂ-ಶಿಕ್ಷಾವಿಧಾನವನ್ನು ಆತನೋತ್-ವಿಸ್ತರಿಸಿದನು.

**ಪ್ರಥಮೇ ದಂಡನೀತಿಂ ಚ ಯೇನ ಸೃಷ್ಟ್ಯಾದಿಕಂ ಭವೇತ್ ।**
**ಚಂಡಕೃದ್ದಂಡನೀತ್ಯಾ ಚ ರಾಜನೀತ್ಯಾ ಪ್ರವರ್ತಕಃ ॥ ೨೭ ॥**

**ಇಹಾಮುತ್ರ ಸುಖಂ ರಾಜಾ ಲಭತೇಽಸುಖಮನ್ಯಥಾ ।**

ಪ್ರಥಮೇ-(ಜಗತ್ತಿನ ಸ್ಥಿತಿಗಾಗಿ-ಪಾಲನೆಗಾಗಿ) ಎಲ್ಲಕ್ಕೆ ಮೊದಲು, ದಂಡನೀತಿಂ-ದಂಡನೀತಿಶಾಸ್ತ್ರವನ್ನು (ಆತನೋತ್-ನಿರ್ಮಿಸಿದನು); ಯೇನ-(ಯಾವುದರಿಂದ) ಇದನ್ನು (ರಾಜನು) ಅವಲಂಬಿಸುವುದರಿಂದ, ಸೃಷ್ಟ್ಯಾದಿಕಂ-(ಜಗತ್ತಿನಲ್ಲಿ ಪ್ರಜಾಭಿವೃದ್ಧಿ) ಸೃಷ್ಟಿ ರಕ್ಷಣೆ ಮೊದಲಾದವುಗಳು, ಭವೇತ್-ನಡೆಯುತ್ತವೆ (ನಿರ್ವಿಘ್ನವಾಗಿ ಸಾಗುತ್ತವೆ); ದಂಡನೀತ್ಯಾ-ದಂಡನೀತಿಶಾಸ್ತ್ರದ ಅನುಸರಣೆಯಿಂದಲೂ, ಚ-ಹಾಗೂ (ಅದರೊಂದಿಗೆ), ರಾಜನೀತ್ಯಾ-ರಾಜನೀತಿಯನ್ನೂ ಅನುಸರಿಸುವುದರಿಂದ, ಪ್ರವರ್ತಕಃ-(ಇವುಗಳ) ಪ್ರವರ್ತಕನಾದ, ಚಂಡಕೃತ್-ಉಗ್ರಶಾಸನವುಳ್ಳ, ರಾಜಾ-ರಾಜನು, ಇಹಾಮುತ್ರ-ಇಹಪರಗಳಲ್ಲಿ ಸುಖಂ-ಸುಖವನ್ನು ಲಭತೇ-ಹೊಂದುತ್ತಾನೆ; ಅನ್ಯಥಾ-ಹಾಗಲ್ಲದಿದ್ದರೆ, ಅಸುಖಂ-ದುಃಖವನ್ನು (ಹೊಂದುತ್ತಾನೆ).

**ರುಧಿರೇಣ ಸಮಾಸಿಕ್ತಾ ಶಿರೋಭಿಶ್ಚ ಪರಿಸ್ತೃತಾ ॥ ೨೮ ॥**
**ರಿಪೂಣಾಂ ಕದನಂ ಕೃತ್ವಾ ರಾಜ್ಞಾ ಸಂಪ್ರಾಪ್ಯತೇ ಮಹೀ ।**
**ಮಹಾನ್ಮತ್ಯೈವ ಜಾಯೇತ ಮತ್ಯೈವ ಧನವಾನ್ ಭವೇತ್ ॥ ೨೯ ॥**

---

ಜಗತ್ತಿನ ಸೃಷ್ಟಿಪ್ರಾರಂಭದಲ್ಲಿ ಶ್ರೀವಿಷ್ಣುವು ಮೊದಲಿಗೆ ದಂಡವಿಧಾನವನ್ನು ವಿಸ್ತರಿಸಿದನು (೨೬). ದಂಡನೀತಿಯನ್ನೇ ಎಲ್ಲಕ್ಕೂ ಮೊದಲು ನಿರ್ಮಿಸಿ ಉಪದೇಶಿಸಿದನು (ಬ್ರಹ್ಮದೇವನಿಗೆ); ಸೃಷ್ಟಿ ಸ್ಥಿತ್ಯಾದಿಗಳು ವಿಶೇಷವಾಗಿ ದಂಡ ನೀತಿಶಾಸ್ತ್ರವನ್ನು ಅವಲಂಬಿಸುತ್ತವೆ; ರಾಜನೀತಿಯನ್ನೂ ದಂಡನೀತಿಯನ್ನೂ ಪ್ರವರ್ತಿಸುವವನಾಗಿ (ಅನುಸರಿಸುವ ಕೃತಿಗಳುಳ್ಳವನಾಗಿ), ಉಗ್ರನಾದ (ಬಾಹ್ಯದಲ್ಲಿ—ಅಂತಃಪ್ರಜಾಪ್ರೇಮವುಳ್ಳವನಾದ) ರಾಜನು, ಇಹಪರಗಳಲ್ಲಿ ಸುಖವನ್ನು ಹೊಂದುತ್ತಾನೆ; ಹಾಗಿಲ್ಲದಿದ್ದರೆ ದುಃಖವನ್ನೇ (ಉಭಯತ್ರ) ಹೊಂದುತ್ತಾನೆ; ಶತ್ರುಗಳನ್ನು ಸಂಹರಿಸಿ, ರಕ್ತಸಿಕ್ತವಾದ ಭೂಮಿಯನ್ನು ರಾಜನು ಸಂಪಾದಿಸುತ್ತಾನೆ; ರಾಜನು ಭೂಮಿಯಿಂದಲೇ ಮಹಾತ್ಮನೆನಿಸುವನು; ರಾಜನು ಭೂಮಿಯಿಂದಲೇ ಶ್ರೀಮಂತನು; ಆತನಿಗೆ

**ಮಹೀಪಿತಾ ಮಹೀಮಾತಾ ಮಹೀಸ್ತ್ರೀ ಚ ಮಹೀಸುತಃ ।**
**ಮಹೀಸ್ಸೈನ್ಯಂ ಮಹೀಭೋಗಾ ವಿನಾ ಮಹ್ಯಾ ನ ಕಿಂಚನ ॥ ೩೦ ॥**

ರಾಜ್ಞಾ-ರಾಜನಿಂದ, ಕದನಂ-ಯುದ್ಧವನ್ನು ಕೃತ್ವಾ-ಮಾಡಿ, ರುಧಿರೇಣ-ರಕ್ತದಿಂದ, ಸಮಾಸಿಕ್ತಾ-ಲೇಪಿತವಾದ, ರಿಪೂಣಾಂ-ಶತೃಗಳ, ಶಿರೋಭಿಃ-ತಲೆಗಳಿಂದ, ಪರಿಸ್ರುತಾ-ತುಂಬಿದ (ಹರವಲ್ಪಟ್ಟ), ಮಹೀ-ಭೂಮಿಯು, ಸಂಪ್ರಾಪ್ಯತೇ-ಸಂಪಾದಿಸಲ್ಪಡುತ್ತದೆ; (ರಾಜನು), ಮಹ್ಯೈವ-ಭೂಮಿಯಿಂದಲೇ, ಮಹಾನ್-ದೊಡ್ಡವನೂ (ಮಹಾತ್ಮನೂ), ಜಾಯೇತ-ಆಗುವನು; ಮಹ್ಯೈವ-ಭೂಮಿಯಿಂದಲೇ, ಧನವಾನ್-ಧನವಂತನೂ, ಭವೇತ್-ಆಗುತ್ತಾನೆ; ಮಹೀಪಿತಾ-ಭೂಮಿಯೇ ತಂದೆಯಾಗಿ ಉಳ್ಳವನು; ಮಹೀಮಾತಾ-ಭೂಮಿಯೇ (ಆತನಿಗೆ) ತಾಯಿಯು; ಚ-ಮತ್ತು ಮಹೀ ಸ್ತ್ರೀ-ಭೂಮಿಯೇ (ಆತನ) ಭಾರ್ಯೆಳು; ಮಹೀಸುತಃ-ಭೂಮಿಯೇ ಮಗನು; ಮಹೀಸ್ಸೈನ್ಯಂ-ಭೂಮಿಯೇ ಸೈನ್ಯವು (ಆತನನ್ನು ಪರರಿಂದ ರಕ್ಷಿಸುವುದು—ರಾಜತ್ವವನ್ನು ಕಾಪಾಡುವುದು); ಮಹೀಭೋಗಾಃ-ಭೂಮಿಯೇ (ಆತನ) ನಾನಾಭೋಗಗಳು (ಬಹುಭೋಗ ಸಾಧನವು); ಮಹ್ಯಾ ವಿನಾ-ಭೂಮಿಯಿಂದ ರಹಿತನಾದರೆ (ಭೂಮಿ ಇಲ್ಲದೇ, ಆತನಿಗೆ), ನ ಕಿಂಚನ-ಏನೊಂದೂ ಇಲ್ಲ (ಯಾವ ಇಹಪರ ಪುರುಷಾರ್ಥವೂ ಇಲ್ಲ).

**ಅತಏವ ಶಿರೋಭಿಃ ಸ್ವೈರ್ಮಹೀಮಾರ್ಜತಿ ಸರ್ವಶಃ ।**
**ದಾನಾದ್ಯಸ್ಯಾ ಮಹಾ ಪುಣ್ಯಂ ಹರಣಾತ್ ಪಾತಕಂ ಮಹತ್ ॥ ೩೧ ॥**
**ಮಹೀಪಾಲೋ ಲಭೇತ್ಪುಣ್ಯಂ ಸುಖಮತ್ರ ಪರತ್ರ ಚ ।**
**ಮಹೀಪೀಡೀ ಲಭೇತ್ಪಾಪಂ ದುಃಖಮತ್ರ ಪರತ್ರ ಚ ॥ ೩೨ ॥**
**ಮಹೀ ಯಸ್ಯ ಸುಸಂಪನ್ನಾ ಕೋಶಃ ಸೈನ್ಯಂ ಚ ತಸ್ಯ ಹಿ ।**
**ಅನ್ಯಥಾ ನೈವ ಕೋಶಃ ಸ್ಯಾತ್ ಸೈನ್ಯಂ ತಸ್ಯ ಕುತೋ ಭವೇತ್ ॥ ೩೩ ॥**

---

ಭೂಮಿಯೇ ತಂದೆಯು, ತಾಯಿಯು, ಭಾರ್ಯೆಳು, ಮಗನು; ಭೂಮಿಯೇ ಸೈನ್ಯವು; ಭೂಮಿಯೇ ಆತನ ಸರ್ವಭೋಗಸಾಧನವು; ಭೂಮಿಯಿಲ್ಲದೇ ಏನೊಂದೂ ಇಲ್ಲ (ಇಹಪರಗಳ ಯಾವ ಪುರುಷಾರ್ಥವೂ ದೊರೆಯದು) (೨೭-೩೦). ರಾಜನಿಗೆ ಭೂಮಿಯು ಹೀಗೆ ಸರ್ವಸ್ವವೂ ಆಗಿರುವುದರಿಂದ, ಸರ್ವಯತ್ನದಿಂದ, ತನ್ನ ಹಾಗೂ ತನ್ನವರ ಶಿರಸ್ಸುಗಳನ್ನು ಅರ್ಪಿಸಲಿಕ್ಕೆ ಸಹ ಸಿದ್ಧನಾಗಿ, ಭೂಮಿಯನ್ನು ಸಂಪಾದಿಸುತ್ತಾನೆ; ಭೂದಾನದಿಂದ ಮಹಾಪುಣ್ಯವೂ ಭೂಮಿಯ ಅಪಹಾರದಿಂದ ಮಹಾಪಾಪವೂ ಲಭಿಸುತ್ತದೆ—ಈ ವಿಧವಾದ ಮಹತ್ತ್ವವುಳ್ಳದ್ದು ಭೂಮಿಯು; ಭೂಮಿಯನ್ನು (ಅಲ್ಲಿರುವ ಪ್ರಾಣಿವರ್ಗವನ್ನು) ಯಥಾಯೋಗ್ಯವಾಗಿ ಪಾಲನೆಮಾಡುವ ರಾಜನು,

**ಈದೃಶಾಂ ಯೋ ಮಹೀಂ ಪ್ರಾಪ್ಯ ನಿಷ್ಫಲಾಂ ಕುರುತೇ ನೃಪಃ ।**
**ನ ತತ್ತಮೋಽಸ್ತಿ ಮೂರ್ಖೋಽತ್ರ ಮೂರ್ಖೋಽಪಿ ಸ್ವಾರ್ಥಮೀಕ್ಷತೇ ॥ ೩೪**
**ಪಾದಮಾತ್ರಾಮಪಿ ಮಹೀಂ ತಸ್ಮಾನ್ನ ವ್ಯರ್ಥತಾಂ ನಯೇತ್ ।**

ಅತ ಏವ-ಈ ಕಾರಣದಿಂದಲೇ (ಭೂಮಿಯು ಪುರುಷಾರ್ಥಸಾಧನವಾದುದರಿಂದಲೇ), ಸರ್ವಶಃ-ಸರ್ವಪ್ರಕಾರದಿಂದ, ಸ್ವೈಃ-ತನ್ನ (ಮತ್ತು ತನ್ನವರ), ಶಿರೋಭಿಃ-ತಲೆಗಳಿಂದಲಾದರೂ (ತಲೆಗಳನ್ನು ಅರ್ಪಿಸಿಯಾದರೂ), ಮಹೀಂ-ಭೂಮಿಯನ್ನು ಆರ್ಜತಿ-ಸಂಪಾದಿಸುತ್ತಾನೆ; ಯಸ್ಯಾಃ-ಯಾವುದರ (ಭೂಮಿಯ), ದಾನಾತ್-ದಾನದಿಂದ, ಮಹಾಪುಣ್ಯಂ-ಅಧಿಕ ಪುಣ್ಯವೂ, ಹರಣಾತ್-(ಅನ್ಯರ ಭೂಮಿಯನ್ನು) ಅಪಹರಿಸುವುದರಿಂದ, ಮಹತ್ ಪಾತಕಂ-ಮಹಾಪಾಪವೂ (ಉಂಟಾಗುತ್ತದೆಯೋ ಅಂಥ ಮಹತ್ವವಿಶಿಷ್ಟವಾದ ಭೂಮಿಯನ್ನು ಆರ್ಜತಿ-ಸಂಪಾದಿಸುತ್ತಾನೆ); ಮಹೀಪಾಲಃ-ಭೂಮಿಯನ್ನು ರಕ್ಷಣೆ ಮಾಡುವ ರಾಜನು (ಪ್ರಜರನ್ನು ರಕ್ಷಿಸುವ ರಾಜನು), ಪುಣ್ಯಂ-ಪುಣ್ಯವನ್ನು ಲಭೇತ್-ಪಡೆಯುತ್ತಾನೆ; ಚ-ಮತ್ತು (ಆ ಪುಣ್ಯಭಾವದಿಂದ), ಅತ್ರ-ಇಲ್ಲಿ (ಇಹಲೋಕದಲ್ಲಿ), ಪರತ್ರ ಚ-ಪರದಲ್ಲಿ (ಪರಲೋಕಗಳಲ್ಲಿಯೂ) ಸಹ, ಸುಖಂ-ಸುಖವನ್ನು (ಲಭೇತ್-ಹೊಂದುತ್ತಾನೆ); ಮಹೀಪೀಡೀ-ಪ್ರಜಾಪೀಡಕನಾದ ರಾಜನು, ಪಾಪಂ- ಪಾಪವನ್ನು ಲಭೇತ್-ಹೊಂದುತ್ತಾನೆ; ಅತ್ರ ಪರತ್ರ ಚ-ಇಹಪರಗಳಲ್ಲಿ ಸಹ, ದುಃಖಂ ಚ-ದುಃಖವನ್ನೇ (ಲಭೇತ್); ಯಸ್ಯ-ಯಾವ ರಾಜನಿಗೆ, ಮಹೀ- ಭೂಮಿಯು, ಸುಸಂಪನ್ನಾ - ಚೆನ್ನಾಗಿ ಹೊಂದಲ್ಪಟ್ಟಿರೆಯೋ (ಸಸ್ಯಾದಿಭರಿತವಾಗಿ ತನ್ನ ವಶದಲ್ಲಿರುವುದೋ), ತಸ್ಯ ಹಿ-ಆತನಿಗಷ್ಟೆ ಕೋಶಃ-ಕೋಶವೂ (ಧನರಾಶಿಯೂ), ಚ-ಮತ್ತು ಸೈನ್ಯಂ-ಸೈನ್ಯವೂ (ಸಿದ್ಧವಾಗುತ್ತವೆ); ಅನ್ಯಥಾ- (ರಾಜನಿಗೆ ಭೂಮಿಯು ಸುಸಂಪನ್ನವಾಗದಿದ್ದರೆ) ಹಾಗಲ್ಲದಿದ್ದರೆ, ಕೋಶಃ - ಕೋಶವು, ನೈವ ಸ್ಯಾತ್ -

---

ಪುಣ್ಯವನ್ನೂ ತತ್ಫಲವಾಗಿ ಇಹಪರಗಳಲ್ಲಿ ಸುಖವನ್ನೂ ಹೊಂದುತ್ತಾನೆ; ಪ್ರಜಾಪೀಡಕನಾದ ರಾಜನು ಪಾಪವನ್ನೂ, ತತ್ಫಲವಾಗಿ ಇಹಪರಗಳಲ್ಲಿ ದುಃಖವನ್ನೂ ಹೊಂದುತ್ತಾನೆ; ಭೂಮಿಯು, ಸುಸಂಪನ್ನವಾಗಿ ರಾಜನ ವಶದಲ್ಲಿರುತ್ತಿದ್ದರೆ, ರಾಜನಿಗೆ ಕೋಶವೂ ಸೈನ್ಯವೂ ಸಿದ್ಧವಾಗುತ್ತವೆ—ಇಲ್ಲದಿದ್ದರೆ, ಕೋಶವು ಹೇಗೆ ತುಂಬುತ್ತದೆ? ಕೋಶವಿಲ್ಲದ ರಾಜನಿಗೆ ಸೈನ್ಯವೆಲ್ಲಿಂದ ಬಂದೀತು? (ಭೂಮಿಯು ಸುಸಂಪನ್ನವಾದರೆ ಕೋಶ—ಅದಿದ್ದರೆ ಸೈನ್ಯ—ಸೈನ್ಯವನ್ನಿಟ್ಟುಕೊಳ್ಳಲು ಅಪಾರ ದ್ರವ್ಯವು ಅವಶ್ಯಕ); ಈ ಪ್ರಕಾರದ ಪ್ರಾಧಾನ್ಯತೆಯುಳ್ಳ ಭೂಮಿಯನ್ನು ಹೊಂದಿಯೂ, ಯಾವ ರಾಜನು, ಅದನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳದೇ ನಿಷ್ಫಲಗೊಳಿಸುವನೋ, ಅವನು ಮೂರ್ಖನೇ ಸರಿ; ಮೂರ್ಖನಾದರೂ ಸ್ವಪ್ರಯೋಜನವನ್ನು ಗಮನಿಸುತ್ತಾನೆ; ಈ

(ಸಿದ್ಧವಾಗಿ) ಇರುವುದಿಲ್ಲ; ತಸ್ಯ-ಕೋಶವಿಲ್ಲದ ರಾಜನಿಗೆ, ಸೈನ್ಯಂ-ಸೈನ್ಯವು, ಕುತಃ-ಎಲ್ಲಿಂದ, ಭವೇತ್-ಸಿದ್ಧವಾಗುವುದು? ಯಃ ನೃಪಃ-ಯಾವ ರಾಜನು, ಈದೃಶಾಂ-ಈ ಪ್ರಕಾರದ (ಪ್ರಾಧಾನ್ಯತೆಯುಳ್ಳ), ಮಹೀಂ-ಭೂಮಿಯನ್ನು, ಪ್ರಾಪ್ಯ-ಹೊಂದಿಯೂ, ನಿಷ್ಫಲಾಂ ಕುರುತೇ-ವ್ಯರ್ಥಗೊಳಿಸುವನೋ (ಅದರ ಯೋಗ್ಯವಾದ ಫಲವನ್ನು ದೊರಕಿಸಿಕೊಳ್ಳುವುದಿಲ್ಲವೋ), ತತ್ಸಮಃ-ಆತನಿಗೆ ಸಮನಾದ, ಮೂರ್ಖಃ-ಮೂರ್ಖನು, ಅತ್ರ-ಈ ಲೋಕದಲ್ಲಿಯೇ, ನ ಅಸ್ತಿ-ಇರುವುದಿಲ್ಲ; ಮೂರ್ಖಃ ಅಪಿ-ಮೂರ್ಖನೂ ಕೂಡ, ಸ್ವಾರ್ಥಂ-ಸ್ವಪ್ರಯೋಜನವನ್ನು ಈಕ್ಷತೇ-ಗಮನಿಸುತ್ತಾನೆ (ಈ ಮೂರ್ಖ ರಾಜನು ಮೂರ್ಖನಗಿಂತ ಕನಿಷ್ಠನು); ತಸ್ಮಾತ್- ಆದ್ದರಿಂದ, ಪಾದಮಾತ್ರಾಂ ಅಪಿ-ಒಂದು ಪಾದದಷ್ಟು (ಹೆಜ್ಜೆಯ ಪ್ರಮಾಣದಷ್ಟು), ಮಹೀಂ-ಭೂಮಿಯನ್ನೂ, ವ್ಯರ್ಥತಾಂ-ನಿಷ್ಫಲತ್ವವನ್ನು ನ ನಯೇತ್-ಹೊಂದಿಸಬಾರದು.

**ಯದ್ಯತ್ರ ರೋಹತೇ ಬೀಜಂ ತತಸ್ತದ್ವಾಪಯೇಜ್ಜನೈಃ ॥ ೩೫ ॥**
**ಶಿಲಾಭೂಮೌ ಪ್ರಕುರ್ವೀತ ಖೇಟಖರ್ಪಟವಾದಿಕಾಃ ।**
**ನದೀಮಾನಕೃತಾಂ ದೇಶಂ ನಯೇತ ಯದಿ ಶಕ್ಯತೇ ॥ ೩೬ ॥**

ಯದ್ಯತ್ರ-ಎಲ್ಲೆಲ್ಲಿ, ಬೀಜಂ-ಬೀಜವು, ರೋಹತೇ-ಹುಟ್ಟುವುದೋ (ಅಂಕುರಿಸುವುದೋ), ತತಸ್ತತ್-ಅಲ್ಲಲ್ಲಿ ಜನೈ-ಪ್ರಜೆಗಳಿಂದ, ವಾಪಯೇತ್-ಬಿತ್ತಿಸಬೇಕು; ಶಿಲಾಭೂಮೌ-ಕಲ್ಲುಭೂಮಿಯಲ್ಲಿ (ಬಂಜರುಪ್ರದೇಶದಲ್ಲಿ), ಖೇಟಖರ್ಪಟವಾದಿಕಾಃ-ವ್ರಜ, (ಗೊಲ್ಲರೇ ಮೊದಲಾದವರ ಹಟ್ಟಿಗಳು) ಹಳ್ಳಿ, ಗ್ರಾಮ ಇತ್ಯಾದಿ ವಾಸಸ್ಥಾನಗಳನ್ನು ಪ್ರಕುರ್ವೀತ-ನಿರ್ಮಿಸಬೇಕು (ಅದಕ್ಕಾಗಿ ಆ ಪ್ರದೇಶವನ್ನು ಉಪಯೋಗಿಸಬೇಕು); ನದೀಮಾನಕೃತಾಂ-ನದಿಯೇ ಗಡಿಯಾಗಿ ಉಳ್ಳ, ದೇಶಂ-ದೇಶವನ್ನು ಯದಿ ಶಕ್ಯತೇ-ಸಾಧ್ಯವಿದ್ದಲ್ಲಿ ನಯೇತ- ಹೊಂದಿಸಬೇಕು (ನದೀಜಲವನ್ನು ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೆ ಮುಟ್ಟಿಸಬೇಕು).

**ಏವಂ ರಾಜ್ಯಂ ಪ್ರಕುರ್ವಾಣಃ ಸದಾ ವಿಷ್ಣುಪರೋ ಭವೇತ್ ।**
**ಅಂತಃ ಸ್ವಸ್ಯಾಪಿ ವೈ ರಾಜಾ ಚಿಂತಯೇದ್ವಿಷ್ಣುಯಂತೃತಾಂ ॥ ೩೭ ॥**

---

ರಾಜನು ಆತನಿಗಿಂತ ಅಧಿಕ ಮೂರ್ಖನು; ಆದ್ದರಿಂದ ರಾಜನು ಒಂದು ಹೆಜ್ಜೆಯಷ್ಟು ಭೂಮಿಯನ್ನು ಸಹ ವ್ಯರ್ಥಗೊಳಿಸಬಾರದು (೩೦-೩೪). ಎಲ್ಲೆಲ್ಲಿ ಬೀಜವು ಅಂಕುರಿಸುವುದೋ ಆ ಭೂಪ್ರದೇಶವನ್ನೆಲ್ಲಾ ಪ್ರಜೆಗಳಿಂದ ಬಿತ್ತಿಸಬೇಕು; ಕಲ್ಲು (ಜರಗು) ಭೂಮಿಯನ್ನು ಹಳ್ಳಿ, ಗ್ರಾಮ, ಮೊದಲಾದ ವಾಸಸ್ಥಳಗಳ ನಿರ್ಮಾಣಕ್ಕಾಗಿ ಉಪಯೋಗಿಸಬೇಕು; ನದೀ ಸಮೀಪದಲ್ಲಿರುವ ಪ್ರದೇಶದಲ್ಲಿ, ಶಕ್ಯವಾಗುವವರೆಗೆ, ನದೀ ಜಲವನ್ನು (ವ್ಯವಸಾಯಕ್ಕಾಗಿ ಸಹ) ಒಯ್ದು ಮುಟ್ಟಿಸಬೇಕು (೩೫-೩೬). ಹೀಗೆ ರಾಜನು ರಾಜ್ಯವನ್ನು ಪರಿಪಾಲಿಸುತ್ತ ಸರ್ವದಾ ಶ್ರೀವಿಷ್ಣುಪರವಾದ ಚಿತ್ತವುಳ್ಳವನಾಗಿರ

ರಾಜಾ-ರಾಜನು, ಏವಂ-ಹೀಗೆ, ರಾಜ್ಯಂ-ರಾಜ್ಯಭಾರನಿರ್ವಹಣೆಯನ್ನು ಪ್ರಕುರ್ವಾಣಃ-ಮಾಡುವವನಾಗಿ, ಸದಾ-ಸರ್ವದಾ, ವಿಷ್ಣುಪರಃ-ಶ್ರೀವಿಷ್ಣುಪರನು (ವಿಷ್ಣುಚಿಂತೆಯುಳ್ಳವನು-ಆಸಕ್ತನು), ಭವೇತ್-ಆಗಬೇಕು; ಸ್ವಸ್ಯ-ತನ್ನ ಅಂತಃ ಅಪಿ-ಒಳಗೆ ಸಹ, ವಿಷ್ಣುಯಂತೃತಾಂ-ಶ್ರೀವಿಷ್ಣುನಿಯಾಮಕತ್ವವನ್ನು (ಅಂತರ್ಯಾಮಿತ್ವವನ್ನು), ಚಿಂತಯೇತ್-ಭಾವಿಸಬೇಕು (ತಿಳಿಯಬೇಕು), ವೈ-ಹೀಗೆ ತಿಳಿಯಬೇಕೆಂಬುದು ಶಾಸ್ತ್ರಸಿದ್ಧವು.

**ಕುರ್ವೇಽಹಂ ತದಧಿಷ್ಠಾನಾತ್ತದ್ಭಿನ್ನೋಽಹಂ ತು ಭಸ್ಮವತ್ ।**
**ಪೂರ್ವೇ ಪೂರ್ವತರಾ ಮತ್ತಃ ಕತಿ ಆಸನ್ನೃಪಾ ಭುವಿ ॥ ೩೮ ॥**
**ಮೇ ಮೇ ಯದಂತೇ ಸರ್ವೇಽಪಿ ಕಾಲೇನೇಶೇಚ್ಛಯಾ ಹತಾಃ ।**
**ತತ್ಯಜುಃ ಸ್ವಯಮಿಮಾಂ ಭೂಮಿಂ ಪ್ರಿಯವ್ರತಮುಖಾ ನೃಪಾಃ ॥ ೩೯ ॥**
**ತದನ್ಯೇ ತ್ವನಯಾ ತ್ಯಕ್ತಾಃ ಕಥಂ ಮೇ ಭವಿತಾ ಮಹೀ ।**

(ರಾಜನು ಹೀಗೆ ವಿಮರ್ಶಿಸಿ, ನಿರ್ಣಯವನ್ನರಿತವನಾಗಬೇಕು); ವಿಚಾರ ಪ್ರಕಾರವು ಹೇಗೆಂದರೆ:—ತದಧಿಷ್ಠಾನಾತ್-ಶ್ರೀಹರಿಯು (ತಚ್ಛಬ್ದವಾಚ್ಯನು) ನನ್ನಲ್ಲಿರುವುದರಿಂದ (ಆತನಿಗೆ ನಾನು ಅಧಿಷ್ಠಾನ-ಆಶ್ರಯಸ್ಥಾನನು ಆದ್ದರಿಂದ), ಅಹಂ-ನಾನು, ಕುರ್ವೇ-(ಈ ಎಲ್ಲವನ್ನೂ) ಮಾಡುತ್ತೇನೆ; ತದ್ಭಿನ್ನಃ-ಅವನಿಂದ ಪ್ರತ್ಯೇಕಿಸಲ್ಪಟ್ಟರೆ (ಆತನು ನನ್ನ ದೇಹವೆಂಬ ಅಧಿಷ್ಠಾನವನ್ನು ತ್ಯಜಿಸಿದರೆ), ಭಸ್ಮವತ್ ತು-ಭಸ್ಮದಂತೆ (ದಹನಶಕ್ತಿರಹಿತವಾದ ಬೂದಿಯಂತೆ) ಆಗುವೆನಷ್ಟೆ; ಮತ್ತಃ-ನನ್ನಿಂದ, ಪೂರ್ವತರಾಃ-ಹಿಂದಿನವರಾದ, ಪೂರ್ವೇ-ಪೂರ್ವಿಕರಾದ, ಭುವಿ-ಭೂಮಿಯಲ್ಲಿ ನೃಪಾಃ-ರಾಜರೆಂಬುವರು, ಕತಿ-ಎಷ್ಟು ಮಂದಿ, ಆಸನ್- ಆಗಿಹೋದರು!, ಮೇ ಮೇ-ನನ್ನದು, (ಭೂಮಿಯು) ನನ್ನದು, ಯದಂತೇ-ಎಂಬ ಭಾವನೆಯ ಕೊನೆಯಲ್ಲಿ

---

ಬೇಕು; ತನ್ನೊಳಗೆ ನಿಂತು ಸರ್ವವನ್ನೂ ತನ್ನಿಂದ ಮಾಡಿಸುವ ಶ್ರೀವಿಷ್ಣುವಿನ ನಿಯಾಮಕತ್ವವನ್ನು ಅರಿತು ತನ್ನ ಕರ್ತವ್ಯಗಳಲ್ಲಿ ತೊಡಗಬೇಕು (೩೭). ರಾಜನು, ಈ ಮುಂದೆ ನಿರೂಪಿಸುವಂತೆ, ಮನಸ್ಸಿನಿಂದ ವಿವೇಕಿಸಿ ತಿಳಿದು, ಶ್ರೀಹರಿಸ್ಮರಣಪೂರ್ವಕ ರಾಜ್ಯವನ್ನು ಪರಿಪಾಲಿಸುತ್ತ ಮೋಕ್ಷಕ್ಕೆ ಆವಶ್ಯಕವಾದ ಸಾಧನೆಯನ್ನೂ ಮಾಡಿಕೊಳ್ಳಬೇಕು:—ಈ ನನ್ನ ದೇಹದಲ್ಲಿ, ನನ್ನ ಅಧಿಷ್ಠಾನದಲ್ಲಿ (ನನ್ನ ಅಂತರ್ಯಾಮಿಯಾಗಿ) ಶ್ರೀಹರಿಯು ಇರುವುದರಿಂದಲೇ, ಈ ಎಲ್ಲವನ್ನೂ ನಾನು ಮಾಡುತ್ತೇನೆ; ಆತನು ಈ ಅಧಿಷ್ಠಾನವನ್ನು ತ್ಯಜಿಸಿದರೆ, ನಾನು ಭಸ್ಮದಂತೆ ನಿರ್ವೀರ್ಯನಾಗುವೆನು (ಯಾವ ಅಲ್ಪಕಾರ್ಯಕ್ಕಾಗಲಿ ಅಸಮರ್ಥನಾಗುತ್ತೇನೆ); ನನ್ನಿಂದ ಹಿಂದಿನವರಾದ, ಪೂರ್ವಿಕರು (ಎಷ್ಟೋ ಮಂದಿ ರಾಜರು), ಈ ಭೂಮಿಯನ್ನು ತಮ್ಮದೆಂದೇ (ನನ್ನದು-ನನ್ನದು, ಎಂದೇ) ತಿಳಿದು, ಶ್ರೀಹರೀಚ್ಛೆಯಿಂದ ಮೃತರಾದರು;

ಸರ್ವೇಽಪಿ-ಆ ಎಲ್ಲರೂ, ಈಶೇಚ್ಛಯಾ-ಶ್ರೀಹರೀಚ್ಛಾನುಸಾರಿಯಾದ, ಕಾಲೇನ-ಕಾಲ ಗತಿಯಿಂದ (ಶ್ರೀಹರೀಚ್ಛೆಯಿಂದ ಪ್ರಾಪ್ತವಾದ ಮೃತ್ಯುವಿನಿಂದ), ಹತಾಃ-ಸಂಹೃತ ರಾದರು (ಮೃತರಾದರು); ಪ್ರಿಯವ್ರತಮುಖಾಃ-ಪ್ರಿಯವ್ರತನೇ ಮೊದಲಾದ, ನೃಪಾಃ-(ಸಪ್ತದ್ವೀಪಸಹಿತ ಇಡೀ ಪೃಥ್ವಿಯನ್ನಾಳಿದ) ಚಕ್ರವರ್ತಿ ಸಾರ್ವಭೌಮರು, ಇಮಾಂ-ಈ, ಭೂಮಿಂ-ಭೂಮಿಯನ್ನು, ಸ್ವಯಂ-ತಾವೇ (ವಿರಕ್ತರಾಗಿ), ತತ್ಯಜುಃ-ಪರಿತ್ಯಾಗಮಾಡಿದರು (ನನ್ನದೆಂಬ ಮಮತ್ವಬುದ್ಧಿಯನ್ನು ತ್ಯಜಿಸಿದರು); ತದನ್ಯೇ ತು-ಇತರ ಅನೇಕ ರಾಜರಾದರೋ, ಅನಯಾ-ಈಕೆಯಿಂದ (ಭೂಮಿ ಯಿಂದ), ತ್ಯಕ್ತಾಃ-ಬಿಡಲ್ಪಟ್ಟರು (ಪರಾಜಯ ಮರಣಾದಿ ನಿಮಿತ್ತದಿಂದ ಭೂಮಿಯೇ ಅವರನ್ನು ಬಿಟ್ಟಳು); (ಹೀಗಿರುವಾಗ) ಮಹೀ-ಭೂಮಿಯು, ಕಥಂ-ಹೇಗೆ, ಮೇ-ನನ್ನವಳು, ಭವಿತಾ-ಆಗುತ್ತಾಳೆ? (ಸರ್ವಥಾ ನನ್ನವಳಲ್ಲ).

ಆ ವಿಚಾರಸರಣಿಯು ಮತ್ತೂ ಹೇಗಿರಬೇಕೆಂದರೆ:—

**ಪುತ್ರಸ್ತ್ರೀಭೃತ್ಯಪಶ್ವಾದಿಸರ್ವಮೀಶ್ವರಯಂತ್ರಿತಂ ॥ ೪೦ ॥**
**ಮದಿಚ್ಛಯಾ ನ ಚೋತ್ಪನ್ನಾ ನ ಜೀವಂತಿ ಮದಿಚ್ಛಯಾ ।**
**ಮದಿಚ್ಛಯಾ ನ ಮ್ರಿಯಂತೇ ವರ್ಧಂತೇ ನ ಮದಿಚ್ಛಯಾ ॥ ೪೧ ॥**
**ಮದಿಚ್ಛಯಾ ನ ವರ್ತಂತೇ ಮನೋವಾಕ್ಕಾಯಕರ್ಮಭಿಃ ।**
**ಮದಧೀನಾ ಅತೋ ನೈತೇ ಮಮತಾ ತೇಷು ಮೇ ವೃಥಾ ॥ ೪೨ ॥**

ಪುತ್ರಸ್ತ್ರೀಭೃತ್ಯಪಶ್ವಾದಿ-ಸುತ, ಸತೀ, ಭೃತ್ಯ, ಪಶು ಮೊದಲಾದ, ಸರ್ವಂ-ಎಲ್ಲವೂ, ಈಶ್ವರಯಂತ್ರಿತಂ-ಶ್ರೀಹರಿಯ ಅಧೀನವಾದುವು; ಮದಿಚ್ಛಯಾ-ನನ್ನ

---

ಪ್ರಿಯವ್ರತನೇ ಮೊದಲಾದ ಅಖಂಡ ಪೃಥ್ವೀಪತಿಗಳು, ವಿರಕ್ತರಾಗಿ ತಾವೇ ಭೂಮಿಯನ್ನು ತೊರೆದು ಹೋದರು; ಅನ್ಯರನ್ನು ಭೂಮಿಯೇ ತೊರೆದಳು (ಮರಣ ಪರಾಜಯಗಳಿಂದ ಭೂಮಿಯನ್ನು ಕಳೆದುಕೊಂಡರು); ಹೀಗಿರಲು ಈ ಭೂಮಿಯು ನನ್ನವಳು ಹೇಗಾದಾಳು? (ಸರ್ವಥಾ ನನ್ನವಳಲ್ಲ) (೩೮-೩೯). ಇನ್ನು ನನ್ನ ನಿಕಟವರ್ತಿಗಳಾಗಿ ನನ್ನ ಅಧೀನರೆಂದು ನಾನು ತಿಳಿದಿರುವ ನನ್ನ ಮಕ್ಕಳು, ಹೆಂಡಿರು, ಭೃತ್ಯರು, ಪಶ್ವಾದಿ (ಗೋ-ಅಶ್ವ-ಗಜಾದಿ)ಗಳು, ಎಲ್ಲವೂ ಶ್ರೀಹರಿಯ ಅಧೀನ ವಾದವುಗಳೇ ಸರಿ; (ಏಕೆಂದರೆ) ಅವು ಯಾವುವೂ ನನ್ನ ಇಚ್ಛೆಯಿಂದ (ನನ್ನ ಇಚ್ಛೆಯಂತೆ) ಹುಟ್ಟಿದವುಗಳಲ್ಲ—ನನ್ನ ಇಚ್ಛೆಯಂತೆ ಜೀವಿಸಿರುವುದಿಲ್ಲ; ನನ್ನ ಇಚ್ಛೆಯಿಂದ ಬೆಳೆಯುವುದಿಲ್ಲ—ನನ್ನ ಇಚ್ಛೆಯಂತೆ ಸಾಯುವುದೂ ಇಲ್ಲ; ಅವು ಯಾವುವೂ ತಮ್ಮ ಮನೋವಾಕ್ಕಾಯಗಳಿಂದ, ನನ್ನ ಇಚ್ಛೆಯಂತೆ ವರ್ತಿಸುವುದಿಲ್ಲ; ಆದ್ದರಿಂದ ಅವು ನನ್ನ ಅಧೀನಗಳಲ್ಲ; ಅವುಗಳಲ್ಲಿ ನನ್ನ ಮಮತ್ವಭಾವನೆಯು ವ್ಯರ್ಥವೇ ಸರಿ—ಅರ್ಥವಿಲ್ಲದುದು—ಸತ್ಯವಲ್ಲದುದು (೪೦-೪೨). ಈ ನನ್ನ

ಇಚ್ಛೆಯಿಂದ, ನ ಉತ್ಪನ್ನಾಃ-ಹುಟ್ಟಿದವರಲ್ಲ ಚ-ಮತ್ತು ಮದಿಚ್ಛಯಾ-ನನ್ನ ಇಚ್ಛೆಯಿಂದ, ನ ಜೀವಂತಿ-ಬದುಕಿರುವುದೂ ಇಲ್ಲ ಮದಿಚ್ಛಯಾ-ನನ್ನ ಇಚ್ಛೆಯಿಂದ, ನ ಮ್ರಿಯಂತೇ-ಸಾಯುವುದಿಲ್ಲ ಮದಿಚ್ಛಯಾ-ನನ್ನ ಇಚ್ಛೆಯಿಂದ ನ ವರ್ಧಂತೇ-ಬೆಳೆಯುವುದಿಲ್ಲ ಮದಿಚ್ಛಯಾ-ನನ್ನ ಇಚ್ಛೆಯಿಂದ, ನ ವರ್ತಂತೇ-ಪ್ರವರ್ತಿಸುವುದಿಲ್ಲ (ನಡೆಯುವವರಾಗುವುದಿಲ್ಲ); ಮನೋವಾಕ್ಕಾಯ ಕರ್ಮಭಿಃ-ಮನಸ್ಸು ನುಡಿ, ಕೃತಿಗಳಿಂದ (ನನ್ನ ಇಚ್ಛಾನುಸಾರ ವರ್ತಿಸುವುದಿಲ್ಲ); ಅತಃ-ಆದ್ದರಿಂದ (ಈ ಯಾವುವೂ ನನ್ನ ಇಚ್ಛೆಯಂತೆ ನಡೆಯದಿರುವುದರಿಂದ), ಏತೇ-ಇವರು (ಸತಿಸುತಾದಿಗಳು), ಮದಧೀನಾಃ-ನನ್ನ ಅಧೀನರು, ನ-ಅಲ್ಲ ತೇಷು-ಅವರಲ್ಲಿ ಮೇ-ನನ್ನ ಮಮತಾ-ಮಮತ್ವಬುದ್ಧಿಯು (ನನ್ನವರು-ನನ್ನ ಅಧೀನರೆಂಬ ಭಾವನೆಯು), ವೃಥಾ-ವ್ಯರ್ಥವೇ (ಅಯಥಾರ್ಥವು-ಸುಳ್ಳು- ಭ್ರಮಾತ್ಮಕವು).

**ಕಿಂಚ ದೇಹೋಽಪ್ಯಯಂ ನೋ ಮೇ ಮದಿಚ್ಛಾ ವ್ಯಭಿಚಾರತಃ ।**
**ಮಮ ಯೋ ನೋ ಭವೇದ್ದೇಹಸ್ತತ್ರಾಹಂತಾ ಕಥಂ ಮಮ ॥ ೪೩ ॥**

ಕಿಂಚ-ಮತ್ತೇನೆಂದರೆ; ಅಯಂ-ಈ, ದೇಹಃ-ದೇಹವು, ಮದಿಚ್ಛಾ ವ್ಯಭಿಚಾರತಃ-ನನ್ನ ಇಚ್ಛಾನುಸಾರವಾಗಿಯೇ ನಡೆಯುವುದೆಂಬ ನಿಯಮವಿಲ್ಲದುದರಿಂದ (ನನ್ನ ಇಚ್ಛೆಗೆ ವಿರುದ್ಧವಾಗಿಯೂ ವರ್ತಿಸುವುದಾದ್ದರಿಂದ), ಮೇ-ನನ್ನದು, ನೋ-ಅಲ್ಲ ಯಃ-ಯಾವ, ದೇಹಃ-ದೇಹವು, ಮಮ-ನನ್ನದು, ನೋ ಭವೇತ್-ಅಲ್ಲವೋ, ತತ್ರ-ಅಲ್ಲಿ (ಆ ದೇಹದಲ್ಲಿ), ಮಮ-ನನಗೆ, ಅಹಂತಾ- ನಾನೆಂಬ ಭಾವನೆಯು (ದೇಹವೇ ನಾನೆಂದು ತಿಳಿಯುವುದು), ಕಥಂ-ಹೇಗೆ (ಯುಕ್ತವಾಗುತ್ತದೆ?-ಆದ್ದರಿಂದ ದೇಹವೇ ನಾನಲ್ಲ).

**ದೇಹೇ ಸಾವಯವೇ ತಿಷ್ಠತ್ಯಪಿ ಯಸ್ಮಿನ್ ಗತೇ ಮೃತಃ ।**
**ಇತಿ ವ್ಯವಹೃತಿರ್ಲೋಕೇ ಸ ಜೀವೋ ದೇಹತಃ ಪರಃ ॥ ೪೪ ॥**

**ಸೋಽಪಿ ನ ಸ್ವೇಚ್ಛಯಾ ದೇಹೇ ಸ್ಥಾತುಂ ಶಕ್ನೋತ ಏವ ಹಿ ।**
**ಪರತಂತ್ರಃ ಪರೋ ಯಸ್ತು ಸ ಏವೇಶ್ವರ ಉಚ್ಯತೇ ॥ ೪೫ ॥**

---

ದೇಹವೂ ನನ್ನ ಇಚ್ಛಾನುಸಾರ ನಡೆಯುತ್ತದೆಂಬ ನಿಯಮವುಳ್ಳದ್ದಲ್ಲ; ನನ್ನ ಇಚ್ಛೆಗೆ ವಿರೋಧವಾಗಿಯೂ (ಬಹುವಾಗಿ) ವರ್ತಿಸುತ್ತದೆ; ಅದರಿಂದ, ಅದೂ ನನ್ನದಲ್ಲ— ನನ್ನ ಅಧೀನವಾದುದಲ್ಲ; ನನ್ನ ಅಧೀನವಲ್ಲದ ಈ ದೇಹವು ನಾನೇ ಹೇಗಾದೇನು? ದೇಹವೇ ನಾನೆಂಬ ಭಾವನೆಯು ಹೇಗೆ ಯುಕ್ತವಾಗುತ್ತದೆ? ಆದ್ದರಿಂದ ದೇಹವೇ ನಾನಲ್ಲ (೪೩). ಸರ್ವಾವಯವಗಳಿಂದ ಸಹಿತವಾದ ಈ ದೇಹವು ಇರುತ್ತಿದ್ದರೂ, ಯಾರು ದೇಹದಿಂದ ಹೊರಗೆ ಹೋಗುತ್ತಿರಲು, ಆ ದೇಹವನ್ನು ಜನರು, ಮೃತ

ಸಾವಯವೇ-ಅವಯವಗಳಿಂದ ಸಹಿತವಾದ (ಹಸ್ತಪಾದಾದಿ ಸರ್ವಾಂಗ ಯುಕ್ತವಾದ), ದೇಹೇ-ದೇಹವು, ತಿಷ್ಠತಿ ಅಪಿ-ಇರುತ್ತಿದ್ದರೂ ಕೂಡ, ಯಸ್ಮಿನ್-ಯಾವ ವಸ್ತುವು, ಗತೇ(ಸತಿ)-(ದೇಹವನ್ನು ಬಿಟ್ಟು) ಹೋಗುತ್ತಿರಲು, ಲೋಕೇ-ಲೋಕದಲ್ಲಿ (ಜನರು), ಮೃತಃ-ಮೃತನು, ಇತಿ-ಎಂಬುದಾಗಿ, ವ್ಯವಹೃತಿಃ-ವ್ಯವಹಾರವೋ (ಆ ದೇಹವು ಶವವೆಂದು ಕರೆಯಲ್ಪಡುವುದೋ), ದೇಹತಃ-ದೇಹದಿಂದ, ಪರಃ-ಭಿನ್ನನಾದ, ಸಃ-ಅವನೇ, ಜೀವಃ-ಜೀವನು; ಸಃ ಅಪಿ-ಅವನೂ ಸಹ, ಸ್ವೇಚ್ಛಯಾ-ತನ್ನ ಇಚ್ಛೆಯಂತೆ, ದೇಹೇ-ದೇಹದಲ್ಲಿ, ಸ್ಥಾತುಂ-ಇರುವುದಕ್ಕೆ (ನಿಲ್ಲುವುದಕ್ಕೆ), ನ ಶಕ್ತಃ-ಸಮರ್ಥನಲ್ಲ (ಯಾರೂ ಸ್ವೇಚ್ಛೆಯಿಂದ ದೇಹವನ್ನು ಬಿಡುವುದಿಲ್ಲ—ಬಿಡಕೂಡದೆಂದು ಇಚ್ಛಿಸುವ ಯಾರೂ ಅಲ್ಲಿ ನಿಲ್ಲಲಾರರು); ಅತ ಏವ ಹಿ-ಆದ್ದರಿಂದಲೇ, ಪರತಂತ್ರಃ-(ಜೀವನು) ಪರಾಧೀನನು; ಯಃ-ಯಾರು, ಪರಃ-(ಜೀವಭಿನ್ನನೂ ಜೀವನಿಯಾಮಕನೂ ಆದ) ಪರಶಬ್ದವಾಚ್ಯನಾದ (ಸ್ವತಂತ್ರ ಪ್ರಭುವಾದ) ಸರ್ವಶ್ರೇಷ್ಠ ಶ್ರೀಹರಿಯೇ, ಸ ಏವ-ಆತನೇ, ಈಶ್ವರಃ- ಸ್ವಾಮಿಯೆಂದು, ಉಚ್ಯತೇ-(ಶಾಸ್ತ್ರಗಳಲ್ಲಿ) ಹೇಳಲ್ಪಡುತ್ತಾನೆ.

**ಸುಖಂ ನಾನಾವಿಧಂ ಜೀವೇ ದುಃಖಂ ಚಾಪಿ ತಥಾ ವಿಧಂ ।**
**ಜೀವಾ ಅಪಿ ಪೃಥಕ್ ತೇ ತೇ ತಸ್ಮಾತ್ತತ್ಕಾರಣಂ ಪೃಥಕ್ ॥ ೪೬ ॥**
**ತದೇವ ಕರ್ಮ ವಿಜ್ಞೇಯಂ ಯಥಾಕರ್ಮ ಫಲಪ್ರದಃ ।**
**ಜಗದೀಶಸ್ತತೋ ನಾತ್ರ ವೈಷಮ್ಯಾದಿ ಕಥಂಚನ ॥ ೪೭ ॥**
**ಸಂಸಾರೇ ಭ್ರಮತಸ್ತ್ವೇವಂ ನಾನಾ ಯೋನೀರನೇಕಶಃ ।**
**ಕರ್ಮಭಾರಪರಿಶ್ರಾಂತೋ ಶರಣಂ ಯಾಮಿ ತಂ ಹರಿಂ ॥ ೪೮ ॥**

---

ಶರೀರವೆಂದು ವ್ಯವಹರಿಸುವರೋ, ಆತನೇ ಜೀವನು—ದೇಹದಿಂದ ಭಿನ್ನನು; ಜೀವನೂ ತನ್ನ ಇಚ್ಛೆಯಂತೆ, ಆ ದೇಹದಲ್ಲಿ ನಿಲ್ಲಲು ಸಮರ್ಥನಲ್ಲ—ಅತ ಏವ ಜೀವನೂ ಪರತಂತ್ರನೇ ಸರಿ; ಜೀವಭಿನ್ನನೂ, ಸ್ವತಂತ್ರನಿಯಾಮಕನೂ ಆದವನು ಯಾವನೋ ಆತನೇ ಈಶ್ವರನು— ಸರ್ವೋತ್ತಮ ಪ್ರಭು, ಶ್ರೀಹರಿಯು (೪೪-೪೫). ಜೀವನಿಗೆ ಸಂಸಾರದಲ್ಲಿ ವಿವಿಧ (ಕ್ಷುಲ್ಲಕ) ಸುಖವಿಶೇಷಗಳು ಲಭಿಸುವಂತೆ, ಬಹುಪರಿಯ ದುಃಖಗಳೂ ಪ್ರಾಪ್ತವಾಗುತ್ತವೆ; ಈ ಸುಖದುಃಖಗಳು ಪ್ರತಿ ಪ್ರತಿ ದೇಹದಲ್ಲಿರುವ ಜೀವನಿಗೂ ಪ್ರತ್ಯೇಕವಾಗಿಯೇ ಇರುತ್ತದೆ; ಈ ಅನುಭವಗಳು ಏಕಪ್ರಕಾರಕವಾಗಲಿ, ಏಕಕಾಲಿಕವಾಗಲಿ ಆಗಿರುವುದಿಲ್ಲ—ಆದ್ದರಿಂದ ಜೀವರೆಲ್ಲರೂ ಪರಸ್ಪರ ಭಿನ್ನರು; ಬಹುಭ[illegible] ಇವರ ಅನುಭವಗಳಿಗೆ ಕಾರಣಗಳೂ ಪ್ರತ್ಯೇಕವಾಗಿಯೇ ಇರಬೇ[illegible] ಕಾರಣವನ್ನೇ 'ಕರ್ಮ'ವೆಂದು ತಿಳಿಯತಕ್ಕದ್ದು; ಜಗತ್ಪ್ರಭುವಾದ ಶ್ರೀ[illegible] ತಯಾ ಜೀವರ ಕರ್ಮಾನುಸಾರವಾಗಿ ಅವರಿಗೆ

**ಸಂಸಾರಾಬ್ಧೌ ನಿಮಗ್ನಸ್ಯ ನೌರೇಕಾ ಶ್ರೀಹರಿರ್ಮಮ ।**

ಜೀವೇ-ಜೀವನಲ್ಲಿ (ಜೀವನಿಗೆ), ಸುಖಂ-(ಸಂಸಾರದಲ್ಲಿ) ಸುಖವು, ನಾನಾವಿಧಂ-ಬಹುವಿಧವಾದುದು (ಭಿನ್ನವಾದ ಇಂದ್ರಿಯಗಳಿಂದ ಉಂಟಾಗುವ, ಕ್ಷಣಿಕವಾದರೂ, ಬಹುಪ್ರಕಾರವಾದ ಸುಖವಿಶೇಷಗಳು); ತಥಾವಿಧಂ-ಹೀಗೆಯೇ ಬಹುಪ್ರಕಾರವಾದ, ದುಃಖಂ ಚ-ದುಃಖವೂ (ಇರುತ್ತದೆ); ತೇ ತೇ-ಆ ಸುಖ ದುಃಖಗಳು, ಪೃಥಕ್-ಬೇರೆಬೇರೆ (ಎಲ್ಲರಿಗೂ ಏಕಪ್ರಕಾರವೂ ಅಲ್ಲ—ಏಕಕಾಲಿಕವೂ ಅಲ್ಲ); ಜೀವಾಃ ಅಪಿ(ಪೃಥಕ್)-ಜೀವರೂ ಸಹ ಬೇರೆಬೇರೆಯೇ (ಪರಸ್ಪರ ಭಿನ್ನರೇ ಸರಿ); ತಸ್ಮಾತ್-ಆದ್ದರಿಂದ (ಜೀವರು ಭಿನ್ನರಾಗಿ—ಅವರ ಸುಖದುಃಖಾದಿ ಅನುಭವಗಳೂ ಭಿನ್ನವಾದ್ದರಿಂದ), ತತ್ಕಾರಣಂ-(ಸುಖದುಃಖ ಕಾರಣಗಳೂ) ಸುಖಾದಿಗಳ ಕಾರಣವೂ, ಪೃಥಕ್-ಪ್ರತ್ಯೇಕವಾದುದೇ; ತದೇವ-ಅದೇ (ಆ ಕಾರಣವೇ), ಕರ್ಮ-ಕರ್ಮವೆಂದು, ವಿಜ್ಞೇಯಂ- ತಿಳಿಯಲ್ಪಡ ಬೇಕು (ಅದನ್ನೇ ಕರ್ಮವೆಂದು ತಿಳಿಯತಕ್ಕದ್ದು); ಜಗದೀಶಃ- ಜಗತ್ಪ್ರಭುವಾದ ಶ್ರೀಹರಿಯು, ಯಥಾಕರ್ಮ-ಕರ್ಮಾನುಸಾರವಾಗಿ, ಫಲಪ್ರದಃ- (ಆಯಾ ಜೀವರಿಗೆ ಸುಖದುಃಖಾದಿ) ಫಲಗಳನ್ನು ಕೊಡತಕ್ಕವನು; ತತಃ-ಆದ್ದರಿಂದ, ಅತ್ರ-ಆತನಲ್ಲಿ ವೈಷಮ್ಯಾದಿ-(ಪಕ್ಷಪಾತ-ಭೇದಬುದ್ಧಿ- ನಿರ್ದಯತ್ವಾದಿ) ವೈಷಮ್ಯ ಮೊದಲಾದವು, ಕಥಂಚನ-ಯಾವ ವಿಧದಿಂದಲೂ (ಸ್ವಲ್ಪ ಸಹ), ನ-ಇಲ್ಲವು; ಏವಂ-ಹೀಗೆ (ಕರ್ಮಾನುಸಾರವಾಗಿ), ಸಂಸಾರೇ-ಸಂಸಾರದಲ್ಲಿ ಅನೇಕಶಃ-ಬಹು ಪ್ರಕಾರವಾದ, ನಾನಾಯೋನೀಃ-ಅನೇಕ ದೇಹಗಳನ್ನು ಭ್ರಮತಃ-ಸುತ್ತುತ್ತಿರುವ (ನಾನಾ ದೇಹಗಳನ್ನು ಹೊಂದುತ್ತಿರುವ), ಕರ್ಮಭಾರಪರಿಶ್ರಾಂತಃ-ಕರ್ಮದ ಹೊರೆಯಿಂದ ಬಳಲಿದ ನಾನು, ತಂ ಹರಿಂ-ಆ (ಸ್ವತಂತ್ರಪ್ರಭುವಾದ) ಶ್ರೀಹರಿಯನ್ನು ಶರಣಂ ಯಾಮಿ-ಶರಣುಹೊಂದುತ್ತೇನೆ (ಆಶ್ರಯಿಸುತ್ತೇನೆ); ಸಂಸಾರಾಬ್ಧೌ-ಸಂಸಾರವೆಂಬ ಸಮುದ್ರದಲ್ಲಿ ನಿಮಗ್ನಸ್ಯ-ಮುಳುಗಿರುವ (ಮುಣುಗುತ್ತಿರುವ), ಮಮ-ನನಗೆ, ಶ್ರೀಹರಿಃ-ಶ್ರೀಹರಿಯೇ, ಏಕಾ ನೌಃ-ಒಂದು ನಾವೆಯು (ಮುಳುಗದಂತೆ ರಕ್ಷಿಸುವ ನೌಕೆಯು-ದೋಣಿಯು) (ಆತನು ಏಕಮಾತ್ರ ತಾರಕನು).

---

ಸುಖದುಃಖಾದಿ ಫಲಗಳನ್ನು ವಿತರಣೆ ಮಾಡುತ್ತಾನೆ; ಆದ್ದರಿಂದ ಶ್ರೀಹರಿಯಲ್ಲಿ ವೈಷಮ್ಯಾದಿ ದೋಷಲೇಶಕ್ಕೂ ಎಡೆಯಿಲ್ಲ; ಹೀಗೆ ಕರ್ಮಾನುಸಾರವಾದ ನಾನಾ ಯೋನಿಗಳಲ್ಲಿ (ಪ್ರಾಣದೇಹಗಳಲ್ಲಿ) ಸುತ್ತುತ್ತ ಕರ್ಮಭಾರದಿಂದ ಶ್ರಾಂತನಾದ ನಾನು, ಸ್ವತಂತ್ರಪ್ರಭುವಾದ ಶ್ರೀಹರಿಯನ್ನೇ ಶರಣುಹೊಂದುತ್ತೇನೆ; ಸಂಸಾರ ಸಾಗರದಲ್ಲಿ ಮುಳುಗುತ್ತಿರುವ ನನಗೆ, ಶ್ರೀಹರಿಯೇ ಏಕಮಾತ್ರ ನಾವೆಯು; ಮುಳುಗದಂತೆ ಎತ್ತಿಹಿಡಿದು ಸಮುದ್ರವನ್ನು ದಾಟಿಸುವ ನೌಕೆಯಂತೆ, ಮುಖ್ಯ

**ಇತ್ಯಾದ್ಯನೇಕಧಾ ರಾಜಾ ವಿವಿಚ್ಯ ಹೃದಯೇ ಸದಾ ॥ ೪೯ ॥**
**ಕುರ್ವಾಣೋಽಪಿ ಬಹೀ ರಾಜ್ಯಂ ಸ್ಮರೇತ್ಸಹೃದಯೇ ಹರಿಂ ।**
**ತತ್ಕಥಾಶ್ರವಣಂ ಕುರ್ಯಾತ್ ಕಾಲೇ ಕಾಲೇ ದಿನೇ ದಿನೇ ॥ ೫೦ ॥**

ಇತ್ಯಾದಿ-ಈ ರೀತಿಯಾಗಿ, ಅನೇಕಧಾ-ನಾನಾ ಪ್ರಕಾರದಿಂದ, ರಾಜಾ-ರಾಜನು, ಸದಾ-ನಿರಂತರವಾಗಿ, ಹೃದಯೇ-ಮನಸ್ಸಿನಲ್ಲಿ, ವಿವಿಚ್ಯ-ವಿಮರ್ಶಿಸಿ (ವಿವೇಚನೆ ಮಾಡಿ), ಬಹಿಃ-ಹೊರಗೆ (ಬಾಹ್ಯದಲ್ಲಿ), ರಾಜ್ಯಂ-ರಾಜ್ಯವನ್ನು (ರಾಜಕಾರ್ಯಗಳನ್ನು), ಕುರ್ವಾಣಃ ಅಪಿ-ಮಾಡುವವನಾದರೂ, ಸಹೃದಯೇ-ಭಕ್ತಿಯುತ ಮನಸ್ಸಿನಲ್ಲಿ ಹರಿಂ ಸ್ಮರೇತ್-ಶ್ರೀಹರಿಯನ್ನು ಸ್ಮರಿಸತಕ್ಕದ್ದು; ದಿನೇ ದಿನೇ-ಪ್ರತಿ ದಿನವೂ, ಕಾಲೇ ಕಾಲೇ-ನಿಯತವಾದ ಕಾಲದಲ್ಲಿ ತತ್ಕಥಾ ಶ್ರವಣಂ-ಶ್ರೀಹರಿಮಹಿಮೆಗಳ (ಚರಿತ್ರೆಗಳ) ಶ್ರವಣವನ್ನು, ಕುರ್ಯಾತ್- ಮಾಡತಕ್ಕದ್ದು.

**ಮಮಾರಾಧನಸಂಪನ್ನೋ ರಾಜ್ಯಂ ನ್ಯಸ್ಯ ಸುತಾದಿಷು ।**
**ಮುಕ್ತಸಂಗೋ ಭವೇದ್ರಾಜ್ಯಾತ್ ಕ್ರಮಾದ್ದೇಹಾದಿಕೇಷ್ವಪಿ ॥ ೫೧ ॥**
**ವನಂ ಗಚ್ಛೇತ್ತಪಃಸಿದ್ಧ್ಯೈ ಗೃಹೇ ವಾ ನಿರ್ಮಮೋ ವಸೇತ್ ।**
**ಸತ್ಸಂಗೀ ಧರ್ಮನಿಷ್ಠಃ ಸ್ಯಾದ್ವಿಶೇಷೇಣ ತತಃಪರಂ ॥ ೫೨ ॥**
**ಆಯುಃಶೇಷಂ ನಯನ್ನಂತೇ ತದ್ವಿಷ್ಣೋರ್ಲಭತೇ ಪದಂ ।**

ಮಮ-ನನ್ನ ಆರಾಧನಸಂಪನ್ನಃ-ಆರಾಧನೆಯಲ್ಲಿಯೇ (ಉಪಾಸನೆಯಲ್ಲಿಯೇ) ಬದ್ಧವಾದ ಮನಸ್ಸುಳ್ಳವನಾಗಿ, ರಾಜ್ಯಂ-ರಾಜ್ಯವನ್ನು (ರಾಜ್ಯಾಧಿಕಾರವನ್ನು), ಸುತಾದಿಷು-ಮಕ್ಕಳೇ ಮೊದಲಾದವರಲ್ಲಿ (ಉತ್ತರಾಧಿಕಾರಿಗಳಲ್ಲಿ), ನ್ಯಸ್ಯ-ಸ್ಥಾಪಿಸಿ, ಮುಕ್ತಸಂಗಃ-ಸಂಗವನ್ನು ಬಿಟ್ಟವನು (ದೇಹ, ಸುತ, ದಾರಾದಿಗಳಲ್ಲಿ ಅಭಿಮಾನರಹಿತನು), ಭವೇತ್-ಆಗಬೇಕು; ರಾಜ್ಯಾತ್ - ರಾಜ್ಯದಿಂದಲೂ,

---

ಸಾಧನನು ಶ್ರೀಹರಿಯೇ (೪೬-೪೮). ಇದೇ ಮೊದಲಾದ ಪ್ರಕಾರವಾಗಿ, ಸದಾ ಮನಸ್ಸಿನಲ್ಲಿ ವಿವೇಚಿಸಿ, ರಾಜನು ಬಾಹ್ಯದಲ್ಲಿ ರಾಜ್ಯಾಡಳಿತವನ್ನು ನಡೆಸುತ್ತಿದ್ದರೂ ಭಕ್ತಿಯುತ ಮನಸ್ಸಿನಲ್ಲಿ ಶ್ರೀಹರಿಯನ್ನು ಸ್ಮರಿಸುತ್ತಿರಬೇಕು; ಪ್ರತಿನಿತ್ಯವೂ ನಿಯತವಾದ ಕಾಲದಲ್ಲಿ ತಪ್ಪದೇ ಶ್ರೀಹರಿಮಹಿಮೆಗಳನ್ನು ಪ್ರತಿಪಾದಿಸುವ ಚರಿತ್ರೆಗಳನ್ನು ಶ್ರವಣಮಾಡಬೇಕು (೪೯-೫೦). ಶ್ರೀವಿಷ್ಣುವು ಬ್ರಹ್ಮದೇವನನ್ನು ಕುರಿತು ರಾಜನ ಮುಂದಿನ ಕರ್ತವ್ಯವನ್ನು ಹೀಗೆ ನಿರೂಪಿಸಿದನೆಂದು ಸೂತರು ಹೇಳುತ್ತಾರೆ:— 'ನನ್ನ ಆರಾಧನೆಯಲ್ಲಿಯೇ ಬದ್ಧವಾದ ಮನಸ್ಸುಳ್ಳವನಾಗಿ, ರಾಜ್ಯವನ್ನು ಮಕ್ಕಳಲ್ಲಿ (ಅಥವಾ ಅನ್ಯ ಉತ್ತರಾಧಿಕಾರಿಗಳಲ್ಲಿ), ಸ್ಥಾಪಿಸಿ (ಅಧಿಕಾರವನ್ನು ವಹಿಸಿಕೊಟ್ಟು), ರಾಜ್ಯದಲ್ಲಿಯೂ, ಕ್ರಮವಾಗಿ ದೇಹ, ಸತಿ, ಸುತಾದಿಗಳಲ್ಲಿಯೂ, ಅಭಿಮಾನರೂಪದ

ಕ್ರಮಾತ್-ಕ್ರಮವಾಗಿ, ದೇಹಾದಿಕೇಷು ಅಪಿ-ದೇಹಾದಿಗಳಲ್ಲಿ ಸಹ (ಮುಕ್ತಸಂಗನಾಗಿ), ತಪಃಸಿದ್ಧ್ಯೈ-ತಪಸ್ಸಿದ್ಧಿಗಾಗಿ, ವನಂ-ಅರಣ್ಯವನ್ನು ಕುರಿತು, ಗಚ್ಛೇತ್-ಹೋಗತಕ್ಕದ್ದು; ವಾ-ಅಥವಾ, ಗೃಹೇ-ಗೃಹದಲ್ಲಿಯೇ, ನಿರ್ಮಮಃ-(ದೇಹಾದಿಗಳಲ್ಲಿ) ಮಮತ್ವಬುದ್ಧಿಯನ್ನು ತ್ಯಜಿಸಿ, ವಸೇತ್-ವಾಸಿಸತಕ್ಕದ್ದು; ತತಃಪರಂ-ಆ ಮುಂದೆ, ಸತ್ಸಂಗೀ-ಸಜ್ಜನಸಂಗವುಳ್ಳವನೂ, ವಿಶೇಷೇಣ-ಅಧಿಕವಾಗಿ, ಧರ್ಮನಿಷ್ಠಃ-ವಿಷ್ಣುಧರ್ಮಗಳಲ್ಲಿ (ಶ್ರೀವಿಷ್ಣುಪ್ರೀತಿಕರಗಳಾದ ಧರ್ಮಗಳನ್ನು ಆಚರಿಸುವುದರಲ್ಲಿ) ಸ್ಥಿರಬುದ್ಧಿಯುಳ್ಳವನಾಗಿ, ಆಯುಃಶೇಷಂ-ಉಳಿದಿರುವ ಆಯುಷ್ಯವನ್ನು, ನಯನ್-ನಡೆಸುವವನಾಗಿ (ಕಳೆದು), ಅಂತೇ-ಕಡೆಗೆ (ಮೃತನಾದಾಗ), ತದ್ವಿಷ್ಣೋಃ-ಶ್ರೀವಿಷ್ಣುವಿನ, ಪದಂ-ಸ್ಥಾನವನ್ನು, ಲಭತೇ- ಹೊಂದುತ್ತಾನೆ.

**ನಿಜಕರ್ಮಾನುಸಾರೇಣ ಯತ್ರ ಜಾತೋ ಭವೇನ್ನರಃ ॥ ೫೩ ॥**
**ಯದವಸ್ಥೋ ಯದಾಚಾರಸ್ತಾದೃಶೋಽಪಿ ಸದಾ ಹರಿಂ ।**
**ಪೂರ್ವೋಕ್ತವಿಧಿನಾ ಸಮ್ಯಕ್ ವಿವಿಚ್ಯ ಭಜತೇ ಸ ಹಿ ।**
**ಕರ್ಮಬಂಧವಿನಿರ್ಮುಕ್ತೋ ಲಬ್ಧರೂಪಸ್ತಮಾಪ್ನುಯಾತ್ ॥ ೫೪ ॥**

ನರಃ-ಮನುಷ್ಯನು (ರಾಜನ ವಿಷಯವನ್ನು ಈವರೆಗೆ ಹೇಳಿ ಮನುಷ್ಯಸಾಮಾನ್ಯನ ವಿಷಯವನ್ನು ಹೇಳುತ್ತಾರೆ), ನಿಜಕರ್ಮಾನುಸಾರೇಣ - ತನ್ನ ಕರ್ಮಾನುಸಾರವಾಗಿ, ಯತ್ರ-ಎಲ್ಲಿ, ಜಾತಃ-ಹುಟ್ಟಿದವನು, ಭವೇತ್-ಆಗುವನೋ, ಯದವಸ್ಥಃ-ಯಾವ ಅವಸ್ಥೆಯಲ್ಲಿರುವವನಾಗಲಿ, ಯದಾಚಾರಃ-ಯಾವ ಆಚಾರವುಳ್ಳವನೇ ಆಗಲಿ, ತಾದೃಶಃ ಅಪಿ-ಹೇಗೇ ಇದ್ದರೂ ಆತನು, ಸದಾ-ಯಾವಾಗಲೂ, ಹರಿಂ-ಶ್ರೀಹರಿಯನ್ನು, ಪೂರ್ವೋಕ್ತವಿಧಿನಾ-ಈ ಹಿಂದೆ (ರಾಜನ ವಿಷಯಕ್ಕೆ) ಹೇಳಿದ ಪ್ರಕಾರದಿಂದ, ಸಮ್ಯಕ್-ಚೆನ್ನಾಗಿ, ವಿವಿಚ್ಯ-ವಿಮರ್ಶೆಮಾಡಿ, ಭಜತೇ-ಭಜಿಸುವವನಾದರೆ, ಸಃ-ಅವನು, ಕರ್ಮಬಂಧವಿನಿರ್ಮುಕ್ತಃ-ಕರ್ಮಬಂಧದಿಂದ ಮುಕ್ತನಾಗಿ,

---

ಸಂಗವನ್ನು ತ್ಯಜಿಸಿ, ತಪಸ್ಸಿನಿಂದ ಸಿದ್ಧಿಯನ್ನು (ಶ್ರೀಹರಿಪ್ರಸನ್ನತೆಯನ್ನು) ಪಡೆಯಲಿಕ್ಕಾಗಿ ವನವನ್ನು ಪ್ರವೇಶಿಸಬೇಕು ಅಥವಾ ಮನೆಯಲ್ಲಿಯೇ ನಿರ್ಮಮನಾಗಿ ವಾಸಿಸಬೇಕು; ಅಲ್ಲಿಂದ ಮುಂದೆ, ಸಜ್ಜನಸಂಗವುಳ್ಳವನಾಗಿ ಧರ್ಮನಿಷ್ಠೆಯನ್ನು ಹೊಂದಿ, ಅವಶಿಷ್ಟನಾದ ಆಯುಷ್ಯವನ್ನು ಕಳೆದರೆ, ಅಂತ್ಯದಲ್ಲಿ ಶ್ರೀವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ (ಮುಕ್ತನಾಗುತ್ತಾನೆ) (೫೧-೫೩). ಯಾವ ಮನುಷ್ಯನು ಎಲ್ಲಿ ಜನ್ಮವೆತ್ತಿ, ಯಾವ ಅವಸ್ಥೆಯಲ್ಲಿರಲಿ, ಯಾವ ಆಚಾರವುಳ್ಳವನಾಗಲಿ, ಪೂರ್ವೋಕ್ತಪ್ರಕಾರವಾದ ವಿಮರ್ಶೆಯಿಂದ, ಶ್ರೀಹರಿಯ ಸರ್ವೋತ್ತಮತ್ವವನ್ನು ತಿಳಿದು (ತನ್ನ ಪರತಂತ್ರತ್ವವನ್ನೂ ತಿಳಿದು) ಸದಾ ಹರಿಸ್ಮರಣೆಯುಳ್ಳವನಾಗಿ,

ಸಾವಯವೇ-ಅವಯವಗಳಿಂದ ಸಹಿತವಾದ (ಹಸ್ತಪಾದಾದಿ ಸರ್ವಾಂಗ ಯುಕ್ತವಾದ), ದೇಹೇ-ದೇಹವು, ತಿಷ್ಠತಿ ಅಪಿ-ಇರುತ್ತಿದ್ದರೂ ಕೂಡ, ಯಸ್ಮಿನ್-ಯಾವ ವಸ್ತುವು, ಗತೇ(ಸತಿ)-(ದೇಹವನ್ನು ಬಿಟ್ಟು) ಹೋಗುತ್ತಿರಲು, ಲೋಕೇ-ಲೋಕದಲ್ಲಿ (ಜನರು), ಮೃತಃ-ಮೃತನು, ಇತಿ-ಎಂಬುದಾಗಿ, ವ್ಯವಹೃತಿಃ-ವ್ಯವಹಾರವೋ (ಆ ದೇಹವು ಶವವೆಂದು ಕರೆಯಲ್ಪಡುವುದೋ), ದೇಹತಃ-ದೇಹದಿಂದ, ಪರಃ-ಭಿನ್ನನಾದ, ಸಃ-ಅವನೇ, ಜೀವಃ-ಜೀವನು; ಸಃ ಅಪಿ-ಅವನೂ ಸಹ, ಸ್ವೇಚ್ಛಯಾ-ತನ್ನ ಇಚ್ಛೆಯಂತೆ, ದೇಹೇ-ದೇಹದಲ್ಲಿ, ಸ್ಥಾತುಂ-ಇರುವುದಕ್ಕೆ (ನಿಲ್ಲುವುದಕ್ಕೆ), ನ ಶಕ್ತಃ-ಸಮರ್ಥನಲ್ಲ (ಯಾರೂ ಸ್ವೇಚ್ಛೆಯಿಂದ ದೇಹವನ್ನು ಬಿಡುವುದಿಲ್ಲ—ಬಿಡಕೂಡದೆಂದು ಇಚ್ಛಿಸುವ ಯಾರೂ ಅಲ್ಲಿ ನಿಲ್ಲಲಾರರು); ಅತ ಏವ ಹಿ-ಆದ್ದರಿಂದಲೇ, ಪರತಂತ್ರಃ-(ಜೀವನು) ಪರಾಧೀನನು; ಯಃ-ಯಾರು, ಪರಃ-(ಜೀವಭಿನ್ನನೂ ಜೀವನಿಯಾಮಕನೂ ಆದ) ಪರಶಬ್ದವಾಚ್ಯನಾದ (ಸ್ವತಂತ್ರ ಪ್ರಭುವಾದ) ಸರ್ವಶ್ರೇಷ್ಠ ಶ್ರೀಹರಿಯೇ, ಸ ಏವ-ಆತನೇ, ಈಶ್ವರಃ- ಸ್ವಾಮಿಯೆಂದು, ಉಚ್ಯತೇ-(ಶಾಸ್ತ್ರಗಳಲ್ಲಿ) ಹೇಳಲ್ಪಡುತ್ತಾನೆ.

**ಸುಖಂ ನಾನಾವಿಧಂ ಜೀವೇ ದುಃಖಂ ಚಾಪಿ ತಥಾ ವಿಧಂ ।**
**ಜೀವಾ ಅಪಿ ಪೃಥಕ್ ತೇ ತೇ ತಸ್ಮಾತ್ತತ್ಕಾರಣಂ ಪೃಥಕ್ ॥ ೪೬ ॥**
**ತದೇವ ಕರ್ಮ ವಿಜ್ಞೇಯಂ ಯಥಾಕರ್ಮ ಫಲಪ್ರದಃ ।**
**ಜಗದೀಶಸ್ತತೋ ನಾತ್ರ ವೈಷಮ್ಯಾದಿ ಕಥಂಚನ ॥ ೪೭ ॥**
**ಸಂಸಾರೇ ಭ್ರಮತಸ್ತ್ವೇವಂ ನಾನಾ ಯೋನೀರನೇಕಶಃ ।**
**ಕರ್ಮಭಾರಪರಿಶ್ರಾಂತೋ ಶರಣಂ ಯಾಮಿ ತಂ ಹರಿಂ ॥ ೪೮ ॥**

---

ಶರೀರವೆಂದು ವ್ಯವಹರಿಸುವರೋ, ಆತನೇ ಜೀವನು—ದೇಹದಿಂದ ಭಿನ್ನನು; ಜೀವನೂ ತನ್ನ ಇಚ್ಛೆಯಂತೆ, ಆ ದೇಹದಲ್ಲಿ ನಿಲ್ಲಲು ಸಮರ್ಥನಲ್ಲ—ಅತ ಏವ ಜೀವನೂ ಪರತಂತ್ರನೇ ಸರಿ; ಜೀವಭಿನ್ನನೂ, ಸ್ವತಂತ್ರನಿಯಾಮಕನೂ ಆದವನು ಯಾವನೋ ಆತನೇ ಈಶ್ವರನು— ಸರ್ವೋತ್ತಮ ಪ್ರಭು, ಶ್ರೀಹರಿಯು (೪೪-೪೫). ಜೀವನಿಗೆ ಸಂಸಾರದಲ್ಲಿ ವಿವಿಧ (ಕ್ಷುಲ್ಲಕ) ಸುಖವಿಶೇಷಗಳು ಲಭಿಸುವಂತೆ, ಬಹುಪರಿಯ ದುಃಖಗಳೂ ಪ್ರಾಪ್ತವಾಗುತ್ತವೆ; ಈ ಸುಖದುಃಖಗಳು ಪ್ರತಿ ಪ್ರತಿ ದೇಹದಲ್ಲಿರುವ ಜೀವನಿಗೂ ಪ್ರತ್ಯೇಕವಾಗಿಯೇ ಇರುತ್ತದೆ; ಈ ಅನುಭವಗಳು ಏಕಪ್ರಕಾರಕವಾಗಲಿ, ಏಕಕಾಲಿಕವಾಗಲಿ ಆಗಿರುವುದಿಲ್ಲ—ಆದ್ದರಿಂದ ಜೀವರೆಲ್ಲರೂ ಪರಸ್ಪರ ಭಿನ್ನರು; ಬಹುಭ[illegible] ಇವರ ಅನುಭವಗಳಿಗೆ ಕಾರಣಗಳೂ ಪ್ರತ್ಯೇಕವಾಗಿಯೇ ಇರಬೇ[illegible], [illegible] ಕಾರಣವನ್ನೇ 'ಕರ್ಮ'ವೆಂದು ತಿಳಿಯತಕ್ಕದ್ದು ಜಗತ್ಪ್ರಭುವಾದ ಶ್ರೀ[illegible], ತಯಾ ಜೀವರ ಕರ್ಮಾನುಸಾರವಾಗಿ ಅವರಿಗೆ

**ಸಂಸಾರಾಬ್ಧೌ ನಿಮಗ್ನಸ್ಯ ನೌರೇಕಾ ಶ್ರೀಹರಿರ್ಮಮ ।**

ಜೀವೇ-ಜೀವನಲ್ಲಿ (ಜೀವನಿಗೆ), ಸುಖಂ-(ಸಂಸಾರದಲ್ಲಿ) ಸುಖವು, ನಾನಾವಿಧಂ-ಬಹುವಿಧವಾದುದು (ಭಿನ್ನವಾದ ಇಂದ್ರಿಯಗಳಿಂದ ಉಂಟಾಗುವ, ಕ್ಷಣಿಕವಾದರೂ, ಬಹುಪ್ರಕಾರವಾದ ಸುಖವಿಶೇಷಗಳು); ತಥಾವಿಧಂ-ಹೀಗೆಯೇ ಬಹುಪ್ರಕಾರವಾದ, ದುಃಖಂ ಚ-ದುಃಖವೂ (ಇರುತ್ತದೆ); ತೇ ತೇ-ಆ ಸುಖ ದುಃಖಗಳು, ಪೃಥಕ್-ಬೇರೆಬೇರೆ (ಎಲ್ಲರಿಗೂ ಏಕಪ್ರಕಾರವೂ ಅಲ್ಲ— ಏಕಕಾಲಿಕವೂ ಅಲ್ಲ); ಜೀವಾಃ ಅಪಿ(ಪೃಥಕ್)-ಜೀವರೂ ಸಹ ಬೇರೆಬೇರೆಯೇ (ಪರಸ್ಪರ ಭಿನ್ನರೇ ಸರಿ); ತಸ್ಮಾತ್-ಆದ್ದರಿಂದ (ಜೀವರು ಭಿನ್ನರಾಗಿ—ಅವರ ಸುಖದುಃಖಾದಿ ಅನುಭವಗಳೂ ಭಿನ್ನವಾದ್ದರಿಂದ), ತತ್ಕಾರಣಂ-(ಸುಖದುಃಖ ಕಾರಣಗಳೂ) ಸುಖಾದಿಗಳ ಕಾರಣವೂ, ಪೃಥಕ್-ಪ್ರತ್ಯೇಕವಾದುದೇ; ತದೇವ-ಅದೇ (ಆ ಕಾರಣವೇ), ಕರ್ಮ-ಕರ್ಮವೆಂದು, ವಿಜ್ಞೇಯಂ- ತಿಳಿಯಲ್ಪಡ ಬೇಕು (ಅದನ್ನೇ ಕರ್ಮವೆಂದು ತಿಳಿಯತಕ್ಕದ್ದು); ಜಗದೀಶಃ- ಜಗತ್ಪ್ರಭುವಾದ ಶ್ರೀಹರಿಯು, ಯಥಾಕರ್ಮ-ಕರ್ಮಾನುಸಾರವಾಗಿ, ಫಲಪ್ರದಃ- (ಆಯಾ ಜೀವರಿಗೆ ಸುಖದುಃಖಾದಿ) ಫಲಗಳನ್ನು ಕೊಡತಕ್ಕವನು; ತತಃ-ಆದ್ದರಿಂದ, ಅತ್ರ-ಆತನಲ್ಲಿ, ವೈಷಮ್ಯಾದಿ-(ಪಕ್ಷಪಾತ-ಭೇದಬುದ್ಧಿ- ನಿರ್ದಯತ್ವಾದಿ) ವೈಷಮ್ಯ ಮೊದಲಾದವು, ಕಥಂಚನ-ಯಾವ ವಿಧದಿಂದಲೂ (ಸ್ವಲ್ಪ ಸಹ), ನ-ಇಲ್ಲವು; ಏವಂ-ಹೀಗೆ (ಕರ್ಮಾನುಸಾರವಾಗಿ), ಸಂಸಾರೇ-ಸಂಸಾರದಲ್ಲಿ, ಅನೇಕಶಃ-ಬಹು ಪ್ರಕಾರವಾದ, ನಾನಾಯೋನೀಃ-ಅನೇಕ ದೇಹಗಳನ್ನು, ಭ್ರಮತಃ-ಸುತ್ತುತ್ತಿರುವ (ನಾನಾ ದೇಹಗಳನ್ನು ಹೊಂದುತ್ತಿರುವ), ಕರ್ಮಭಾರಪರಿಶ್ರಾಂತಃ-ಕರ್ಮದ ಹೊರೆಯಿಂದ ಬಳಲಿದ ನಾನು, ತಂ ಹರಿಂ-ಆ (ಸ್ವತಂತ್ರಪ್ರಭುವಾದ) ಶ್ರೀಹರಿಯನ್ನು, ಶರಣಂ ಯಾಮಿ-ಶರಣುಹೊಂದುತ್ತೇನೆ (ಆಶ್ರಯಿಸುತ್ತೇನೆ); ಸಂಸಾರಾಬ್ಧೌ-ಸಂಸಾರವೆಂಬ ಸಮುದ್ರದಲ್ಲಿ, ನಿಮಗ್ನಸ್ಯ-ಮುಳುಗಿರುವ (ಮುಣುಗುತ್ತಿರುವ), ಮಮ-ನನಗೆ, ಶ್ರೀಹರಿಃ-ಶ್ರೀಹರಿಯೇ, ಏಕಾ ನೌಃ-ಒಂದು ನಾವೆಯು (ಮುಳುಗದಂತೆ ರಕ್ಷಿಸುವ ನೌಕೆಯು-ದೋಣಿಯು) (ಆತನು ಏಕಮಾತ್ರ ತಾರಕನು).

---

ಸುಖದುಃಖಾದಿ ಫಲಗಳನ್ನು ವಿತರಣೆ ಮಾಡುತ್ತಾನೆ; ಆದ್ದರಿಂದ ಶ್ರೀಹರಿಯಲ್ಲಿ ವೈಷಮ್ಯಾದಿ ದೋಷಲೇಶಕ್ಕೂ ಎಡೆಯಿಲ್ಲ; ಹೀಗೆ ಕರ್ಮಾನುಸಾರವಾದ ನಾನಾ ಯೋನಿಗಳಲ್ಲಿ (ಪ್ರಾಣಿದೇಹಗಳಲ್ಲಿ) ಸುತ್ತುತ್ತ ಕರ್ಮಭಾರದಿಂದ ಶ್ರಾಂತನಾದ ನಾನು, ಸ್ವತಂತ್ರಪ್ರಭುವಾದ ಶ್ರೀಹರಿಯನ್ನೇ ಶರಣುಹೊಂದುತ್ತೇನೆ; ಸಂಸಾರ ಸಾಗರದಲ್ಲಿ ಮುಳುಗುತ್ತಿರುವ ನನಗೆ, ಶ್ರೀಹರಿಯೇ ಏಕಮಾತ್ರ ನಾವೆಯು; ಮುಳುಗದಂತೆ ಎತ್ತಿಹಿಡಿದು ಸಮುದ್ರವನ್ನು ದಾಟಿಸುವ ನೌಕೆಯಂತೆ, ಮುಖ್ಯ

ಲಬ್ಧರೂಪಃ-ಸ್ವಸ್ವರೂಪವನ್ನು ಹೊಂದಿದವನಾಗಿ, ತಂ-ಆ ಶ್ರೀಹರಿಯನ್ನು ಆಪ್ನುಯಾತ್-ಹೊಂದುತ್ತಾನೆ; ಹಿ-(ಇದು ಶಾಸ್ತ್ರಸಿದ್ಧವು).

ರಾಜನೀತಿ ಮೋಕ್ಷೋಪದೇಶವೆಂಬ ೩೬ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೭

ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

**ಅನಾದಿಕರ್ಮಣಾ ಬದ್ಧಾ ಜೀವಾ ಈಶ್ವರಯಂತ್ರಿತಾಃ ।**

**ಭ್ರಮಂತಿ ಸಂಸೃತೌ ಸರ್ವೇ ಯಾವನ್ಮುಕ್ತಿರವಾಪ್ಯತೇ ॥ ೧ ॥**

**ಅರ್ಥ:—** ಅನಾದಿಕರ್ಮಣಾ-ಅನಾದಿಕರ್ಮದಿಂದ, ಬದ್ಧಾಃ-ಬದ್ಧರಾದ, ಜೀವಾಃ-ಜೀವರು, ಈಶ್ವರಯಂತ್ರಿತಾಃ-ಶ್ರೀಹರಿಯ ಅಧೀನರಾಗಿ, ಸರ್ವೇ - ಎಲ್ಲರೂ, ಮುಕ್ತಿ-ಮೋಕ್ಷವು, ಯಾವತ್ ಅವಾಪ್ಯತೇ-ಹೊಂದಲ್ಪಡುವವರೆಗೆ (ಮುಕ್ತರಾಗುವವರೆಗೆ), ಸಂಸೃತೌ-ಸಂಸಾರದಲ್ಲಿ, ಭ್ರಮಂತಿ-ಸುತ್ತುತ್ತಾರೆ.

---

ಶ್ರೀಹರಿಯನ್ನು ಭಜಿಸಿದರೆ, ಕರ್ಮಬಂಧದಿಂದ ಮುಕ್ತನಾಗಿ, ಸ್ವಸ್ವರೂಪದಿಂದ ಮಾತ್ರ ಸ್ಥಿತನಾಗಿ ಶ್ರೀಹರಿಯನ್ನೇ ಸೇರುತ್ತಾನೆ—ಇದು ಶಾಸ್ತ್ರಸಿದ್ಧ—ನಿಶ್ಚಯವು' (೫೩-೫೪).

೩೬ನೇ ಅಧ್ಯಾಯವು ಮುಗಿದುದು.

**ಅಧ್ಯಾಯ ೩೭**

**ತಾತ್ಪರ್ಯ:—** ಎಲ್ಲ ಜೀವರೂ ಅನಾದಿ ಕರ್ಮದಿಂದ ಬದ್ಧರು; ಎಲ್ಲರೂ ಸರ್ವವಿಧದಿಂದ ಶ್ರೀಹರಿಯ ಅಧೀನರು; ಈ ಎಲ್ಲರೂ ಮುಕ್ತರಾಗುವವರೆಗೆ ಸಂಸಾರದಲ್ಲಿ ಸುತ್ತುತ್ತಿರುತ್ತಾರೆ[1] (೧).

---

1. ಮೋಕ್ಷವೆಂಬುದು ಬಹುವಿಧ; ಪ್ರಧಾನವಾಗಿ ಅದು ದ್ವಿವಿಧ; ನಿತ್ಯಸುಖರೂಪದ (ಸ್ವಸ್ವರೂಪದ ಆನಂದಾನುಭವ) ಸ್ಥಿತಿಯನ್ನು ಹೊಂದುವುದು ಮತ್ತು ನಿತ್ಯದುಃಖರೂಪದ (ಸ್ವರೂಪಾವಿರ್ಭಾವ) ಸ್ಥಿತಿಯನ್ನು ಹೊಂದುವುದು, ಎಂಬುವೇ ಆ ಎರಡು; ಮೊದಲಿನದು ಸನ್ಮೋಕ್ಷವೆಂದೂ, ಎರಡನೆಯದು, ತಮಸ್ಸೆಂದೂ ಸಹ ಕರೆಯಲ್ಪಡುತ್ತವೆ; ಕರ್ಮಬಂಧವು ಕಳಚಿ, ಅದರೊಂದಿಗೆ, ಅನಾದಿಯಿಂದ ಜೀವಸ್ವರೂಪವನ್ನು ಆಚ್ಛಾದಿಸಿರುವ ಲಿಂಗದೇಹವನ್ನು ತ್ಯಜಿಸುವುದೆಂಬ ಮುಕ್ತಿಯು ಸರ್ವಜೀವಸಾಧಾರಣವು. ಮುಕ್ತಿಯೋಗ್ಯ ಜೀವರಿಗೆ (ಸಾತ್ವಿಕ ಜೀವರಿಗೆ) ಸನ್ಮೋಕ್ಷವೂ, ತಮೋಯೋಗ್ಯರಿಗೆ (ತಾಮಸರಿಗೆ) ತಮಸ್ಸೂ (ನಿತ್ಯದುಃಖರೂಪ

**ಕರ್ಮ ತದ್ದ್ವಿವಿಧಂ ಪ್ರೋಕ್ತಂ ಧರ್ಮಾಧರ್ಮವಿಭೇದತಃ ।**
**ಸುಖೈಕಕಾರಣಂ ಧರ್ಮೋಽಧರ್ಮೋ ದುಃಖೈಕಕಾರಣಂ ॥ ೨ ॥**

ತತ್‌ಕರ್ಮ-(ಹೀಗೆ ಜೀವರನ್ನು ಬಂಧಿಸಿರುವ) ಆ ಕರ್ಮವು, ದ್ವಿವಿಧಂ-ಎರಡು ವಿಧವೆಂದು, ಪ್ರೋಕ್ತಂ-ಹೇಳಲ್ಪಡುತ್ತದೆ; ಧರ್ಮಾಧರ್ಮವಿಭೇದತಃ-ಧರ್ಮ ಮತ್ತು ಅಧರ್ಮವೆಂಬ ಭೇದದಿಂದ (ಈ ದ್ವಿವಿಧತ್ವವು ಸಿದ್ಧವಾಗುತ್ತದೆ); ಸುಖೈಕಕಾರಣಂ-ಸುಖಕ್ಕೆ ಮಾತ್ರ ಕಾರಣವಾದುದು, ಧರ್ಮಃ-ಧರ್ಮವು; ದುಃಖೈಕಕಾರಣಂ-ದುಃಖಕ್ಕೆ ಮಾತ್ರ ಕಾರಣವಾದುದು, ಅಧರ್ಮಃ-ಅಧರ್ಮವು.

**ನಿತ್ಯೋ ನೈಮಿತ್ತಿಕಃ ಕಾಮ್ಯ ಇತಿ ಧರ್ಮಸ್ತ್ರಿಧಾ ಮತಃ ।**
**ದಿನಮಾಸರ್ತುಪಕ್ಷಾದೌ ನಿಯಮಾದುಪದಿಶ್ಯತೇ ॥ ೩ ॥**
**ಅಕೃತೌ ಪ್ರತ್ಯವಾಯಶ್ಚ ತನ್ನಿತ್ಯಮಿತಿ ಕೀರ್ತಿತಂ ।**
**ನಿಯಮಾಭಾವತಃ ಕಾಲವಿಶೇಷೇ ವಿಹಿತಂ ಯತ್ ॥ ೪ ॥**
**ಪ್ರತ್ಯವಾಯೋಽಕೃತೌ ಯಸ್ಯ ತನ್ನೈಮಿತ್ತಿಕಮುಚ್ಯತೇ ।**
**ನಿಯತೇಽನಿಯತೇ ವಾಪಿ ಕಾಲೇ ಧರ್ಮ ವಿಧೀಯತೇ ॥ ೫ ॥**
**ಕೃತೇ ಪುಣ್ಯಂ ನ ಪಾಪಂ ಸ್ಯಾದಕೃತೌ ಕಾಮ್ಯಮೇವ ತತ್ ।**

---

ಜೀವರನ್ನು ಬಂಧಿಸಿರುವ ಆ ಕರ್ಮವು ದ್ವಿವಿಧವೆಂದು ಹೇಳಲ್ಪಟ್ಟಿದೆ; ಧರ್ಮವೆಂದೂ, ಅಧರ್ಮವೆಂದೂ ಕರ್ಮವು ಎರಡು ವಿಧ; ಸುಖಮಾತ್ರಕ್ಕೆ ಕಾರಣವಾಗುವುದು ಧರ್ಮವೆನಿಸುತ್ತದೆ; ದುಃಖಮಾತ್ರಕ್ಕೆ ಕಾರಣವಾಗುವುದು, ಅಧರ್ಮವು (೨). ಧರ್ಮವೆಂಬುದು, ನಿತ್ಯ, ನೈಮಿತ್ತಿಕ ಮತ್ತು ಕಾಮ್ಯವೆಂದು ತ್ರಿವಿಧವಾದುದು; ದಿನ, ಮಾಸ, ಋತು, ಪಕ್ಷ ಮೊದಲಾದ ಕಾಲಗಳಲ್ಲಿ ತಪ್ಪದೇ ಆಚರಿಸಲ್ಪಡತಕ್ಕದ್ದೆಂದೂ, ಆಚರಿಸದಿದ್ದರೆ, ದೋಷವುಂಟೆಂದೂ (ಅಧರ್ಮವಾಗುವುದೆಂದೂ) ಉಪದೇಶಿಸಲ್ಪಡುವ (ಸಚ್ಛಾಸ್ತ್ರಗಳಲ್ಲಿ ಹೇಳಲ್ಪಡುವ) ಧರ್ಮಗಳು, 'ನಿತ್ಯ'ವೆಂದು ಹೇಳಲಾಗುತ್ತದೆ; ಕಾಲನಿಯಮವಿಲ್ಲದಿದ್ದರೂ, ಕಾಲವಿಶೇಷದಲ್ಲಿ (ಗ್ರಹಣಾದಿ ಕಾಲಗಳಂತೆ) ಯಾವ ಧರ್ಮವು ವಿಹಿತವಾಗಿರುವುದೋ (ಶಾಸ್ತ್ರದಿಂದ ವಿಧಿಸಲ್ಪಟ್ಟಿರುವುದೋ) ಮತ್ತು ಯಾವುದನ್ನು ಮಾಡದಿದ್ದರೆ (ಆಚರಿಸದಿದ್ದರೆ)

---

ಸ್ಥಿತಿಯೂ— ನಿತ್ಯನರಕವೂ), ಲಭಿಸುವ ಆತ್ಯಂತಿಕ ಗತಿಗಳು. ಸುಖದುಃಖ ಮಿಶ್ರಸ್ವರೂಪರವರೆಂಬ ನಿತ್ಯಸಂಸಾರಿಗಳೆಂಬ ಅಥವಾ ಮಿಶ್ರಸ್ವಭಾವರ ಜೀವರಿಗೂ (ರಾಜಸರಿಗೂ) ಲಿಂಗಭಂಗವುಂಟೆಂದೂ, ಅವರಿಗೆ ದೊರೆಯುವ ನಿತ್ಯಗತಿಯೂ, ಸುಖದುಃಖ ಮಿಶ್ರವಾದ ನಿತ್ಯಾನುಭವಮುಕ್ತವೆಂದು, ಶ್ರೀ ವಾದಿರಾಜಸ್ವಾಮಿಗಳವರ ಅಭಿಪ್ರಾಯವಾಗಿದೆ. 'ತಮಸಾ ಮಿಶ್ರಮತಯಃ ವಿಮಿಶ್ರಗತಯೋಽಪಿ ಚ' —ಇತ್ಯಾದಿ ಪ್ರಮಾಣ ವಚನಗಳೂ ಅದನ್ನು ಸಮರ್ಥಿಸುತ್ತವೆ.

ಧರ್ಮಃ-ಧರ್ಮವು, ನಿತ್ಯಃ-ನಿತ್ಯವೂ, ನೈಮಿತ್ತಿಕಃ-ನೈಮಿತ್ತಿಕವೂ, ಕಾಮ್ಯಃ-ಕಾಮ್ಯವೂ, ಇತಿ-ಎಂದು, ತ್ರಿಧಾ ಮತಃ-ಮೂರು ವಿಧವೆಂದು (ಜ್ಞಾನಿಗಳಿಂದ) ತಿಳಿಯಲ್ಪಟ್ಟಿದೆ; ದಿನಮಾಸರ್ತುಪಕ್ಷಾದೌ-ದಿನ, ಮಾಸ, ಋತು, ಪಕ್ಷ ಮೊದಲಾದ ಕಾಲಗಳಲ್ಲಿ ನಿಯಮಾತ್ - ತಪ್ಪದೇ, ಉಪದಿಶ್ಯತೇ - (ಆಚರಿಸತಕ್ಕದ್ದೆಂದು) ಉಪದೇಶಿಸಲ್ಪಡುವುದೂ, ಅಕೃತೌ-ಆಚರಿಸದಿದ್ದರೆ, ಪ್ರತ್ಯವಾಯಃ ಚ-ದೋಷವೂ (ಪಾಪವೂ) ಯಾವುದರಿಂದಲೋ, ತತ್-ಅದು, ನಿತ್ಯಂ ಇತಿ-ನಿತ್ಯಧರ್ಮವೆಂದು, ಕೀರ್ತಿತಂ - ಹೇಳಲ್ಪಡುತ್ತದೆ; ನಿಯಮಾಭಾವತಃ - ಕಾಲ ನಿಯಮವಿಲ್ಲದ್ದರಿಂದ (ಗ್ರಹಣಾದಿಗಳಂತೆ), ಕಾಲವಿಶೇಷೇ-ಕಾಲವಿಶೇಷದಲ್ಲಿ ಯತ್-ಯಾವ ಧರ್ಮವು, ವಿಹಿತಂ-(ಶಾಸ್ತ್ರಗಳಲ್ಲಿ) ವಿಧಿಸಲ್ಪಟ್ಟಿರುವುದೋ, (ಮತ್ತು) ಯಸ್ಯ- ಯಾವ ಧರ್ಮದ, ಅಕೃತೌ-ಆಚರಿಸದಿರುವುದರಿಂದ, ಪ್ರತ್ಯವಾಯಃ-ಪ್ರತ್ಯವಾಯವಿರುವುದೋ, ತತ್-ಅದು, ನೈಮಿತ್ತಿಕಂ-ನೈಮಿತ್ತಿಕವೆಂದು, ಉಚ್ಯತೇ-ಹೇಳಲ್ಪಡುತ್ತದೆ; ನಿಯತೇ-ನಿಯತವಾದ (ನಿರ್ದಿಷ್ಟವಾದ-ಗೊತ್ತಾದ), ಅನಿಯತೇ-ಅನಿಯತವಾದ (ಇಚ್ಛಾನುಸಾರವಾದ), ಕಾಲೇ-ಕಾಲದಲ್ಲಿ ಧರ್ಮಃ-(ಯಾವ) ಧರ್ಮವು, ವಿಧೀಯತೇ-(ಆಚರಿಸತಕ್ಕದ್ದೆಂದು) ವಿಧಿಸಲ್ಪಡುತ್ತದೆಯೋ, ಕೃತೇ-ಆಚರಿಸಿದರೆ, ಪುಣ್ಯಂ-ಪುಣ್ಯವೂ, ಅಕೃತೌ-ಮಾಡದಿದ್ದರೆ (ಆಚರಿಸದೇ ಬಿಟ್ಟರೆ), ನ ಪಾಪಂ-ಪ್ರತ್ಯವಾಯವಿಲ್ಲವೋ, ತತ್-ಅದು (ಆ ಧರ್ಮವು), ಕಾಮ್ಯಂ ಏವ-ಕಾಮ್ಯವೇ ಸರಿ.

**ಪುಣ್ಯಂ ಪ್ರಜಾಯತೇ ನೃಣಾಂ ತ್ರಿವಿಧಾದಪಿ ಕರ್ಮಣಃ ॥ ೬ ॥**

ನೃಣಾಂ-ಮನುಷ್ಯರಿಗೆ, ತ್ರಿವಿಧಾತ್-ಈ ಮೂರು ವಿಧದ (ನಿತ್ಯ, ನೈಮಿತ್ತಿಕ, ಕಾಮ್ಯಗಳೆಂಬ), ಕರ್ಮಣಃ ಅಪಿ-ಕರ್ಮದಿಂದಲೂ, ಪುಣ್ಯಂ-ಪುಣ್ಯವು (ಸುಖಕ್ಕೆ ಕಾರಣವಾದ ಅದೃಷ್ಟವಿಶೇಷವು), ಪ್ರಜಾಯತೇ-ಹುಟ್ಟುತ್ತದೆ (ಉಂಟಾಗುತ್ತದೆ-ಉದ್ಭವಿಸುತ್ತದೆ).

**ಪ್ರಾಯಶ್ಚಿತ್ತಂ ತು ಕಾಮ್ಯಂ ಸ್ಯಾತ್ ಪಾಪನಾಶೋ ಹಿ ತತ್ಫಲಂ ।**
**ಪಾಪಾಂತರಂ ಭವೇನ್ನೈವ ಪ್ರಾಯಶ್ಚಿತ್ತಾಽಕೃತೌ ಯತಃ ॥ ೭ ॥**

ಪ್ರಾಯಶ್ಚಿತ್ತಃ-ಪ್ರಾಯಶ್ಚಿತ್ತವೆಂಬ ಕರ್ಮವು, ಕಾಮ್ಯಂ ತು-ಕಾಮ್ಯ ಕರ್ಮವೇ,

---

ಪ್ರತ್ಯವಾಯವುಂಟೋ, ಅದು ನೈಮಿತ್ತಿಕವು; ಗೊತ್ತಾದ ಕಾಲದಲ್ಲಿ ಆಗಲಿ ಅಥವಾ ಕಾಲನಿಯಮವಿಲ್ಲದೇ ಇಚ್ಛಾನುಸಾರವಾಗಿ ಆಗಲಿ, ಆಚರಿಸುವ ಧರ್ಮವು ಕಾಮ್ಯವು; ಅದನ್ನು ಆಚರಿಸಿದರೆ ಪುಣ್ಯ ಲಭಿಸುತ್ತದೆ—ಬಿಟ್ಟರೆ ಪ್ರತ್ಯವಾಯವಿಲ್ಲ (ಪಾಪವಿಲ್ಲ) (೩-೫). ಈ ಮೂರು ವಿಧ ಕರ್ಮಗಳನ್ನು ಆಚರಿಸುವುದರಿಂದಲೂ, ಮನುಷ್ಯರಿಗೆ ಪುಣ್ಯವು (ಸುಖಹೇತುವಾದ ಅದೃಷ್ಟವಿಶೇಷವು) ಉದ್ಭವಿಸುತ್ತದೆ (೬) ಪಾಪಗಳ ಪರಿಹಾರಕ್ಕಾಗಿ ಆಚರಿಸುವ ವಿಧಃ ಪ್ರಾಯಶ್ಚಿತ್ತಕರ್ಮವೂ ಕಾಮ್ಯ

ಭ್ಯಾತ್-ಆಗಿರುತ್ತದೆ; ತತ್ಫಲಂ-ಅದರ (ಪ್ರಾಯಶ್ಚಿತ್ತಕರ್ಮದ) ಫಲವು, ಪಾಪನಾಶಃ-ಪಾಪದ ನಾಶವು, ಹಿ-(ಎಂಬುದು) ಸಿದ್ಧವಷ್ಟೆ (ಫಲವುಳ್ಳ ಕರ್ಮವಾದ್ದರಿಂದ ಅದು ಕಾಮ್ಯವು); ಯತಃ-ಯಾವ ಕಾರಣದಿಂದ, ಪ್ರಾಯಶ್ಚಿತ್ತಾಽಕೃತೌ-ಪ್ರಾಯಶ್ಚಿತ್ತವನ್ನು ಆಚರಿಸದಿದ್ದರೆ, ಪಾಪಾಂತರಂ-ಬೇರೆ ಪಾಪವು (ಮತ್ತೊಂದು ಪಾಪವು), ನೈವ ಭವೇತ್-ಉಂಟಾಗುವುದೇ ಇಲ್ಲವೋ (ಅದ್ದರಿಂದಲೂ ಪ್ರಾಯಶ್ಚಿತ್ತರೂಪದ ಕರ್ಮವು ಕಾಮ್ಯವೇ).

ತದೇತತ್ತ್ರಿವಿಧಂ ಕರ್ಮ ಪ್ರತ್ಯೇಕಂ ದ್ವಿವಿಧಂ ಮತಂ ।
ಸಬೀಜಂ ಚಾಪಿ ನಿರ್ಬೀಜಂ ಸಬೀಜಂ ದ್ವಿವಿಧಂ ಸ್ಮೃತಂ ॥ ೮ ॥
ಪುಣ್ಯಬೀಜಂ ಪಾಪಬೀಜಂ ಪುಣ್ಯಬೀಜಮಿದಂ ಶೃಣು ।
ಸಮ್ಯಗಾಸ್ತಿಕ್ಯಭಾವೇನ ಜ್ಞಾನಪೂರ್ವಂ ತು ಯತ್ಕೃತಂ ॥ ೯ ॥
ಕಾಮ್ಯಹೀನಂ ತು ಯತ್ಕರ್ಮ ಪುಣ್ಯಬೀಜಂ ತದುಚ್ಯತೇ ।

ಏತತ್-ಈ, ತತ್ ತ್ರಿವಿಧಂ-ಉಕ್ತತ್ರಿವಿಧವಾದ, ಕರ್ಮ-ಕರ್ಮವು, ಪ್ರತ್ಯೇಕಂ-(ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳು) ಒಂದೊಂದೂ, ದ್ವಿವಿಧಂ- ದ್ವಿವಿಧವೆಂದು, ಮತಂ-ತಿಳಿಯಲ್ಪಟ್ಟಿದೆ; ಸಬೀಜಂ-ಸಬೀಜವೆಂದೂ, ಅಪಿ ಚ-ಮತ್ತು ನಿರ್ಬೀಜಂ-ನಿರ್ಬೀಜವೆಂದೂ (ದ್ವಿವಿಧವು); ಸಬೀಜಂ-ಸಬೀಜ ಕರ್ಮವೂ, ದ್ವಿವಿಧಂ-ದ್ವಿವಿಧವೆಂದು, ಸ್ಮೃತಂ-ಹೇಳಲ್ಪಟ್ಟಿದೆ; ಪುಣ್ಯಬೀಜಂ-ಪುಣ್ಯಬೀಜವೆಂದೂ, ಪಾಪಬೀಜಂ-ಪಾಪಬೀಜವೆಂದೂ (ಸಬೀಜ ಕರ್ಮವು ಎರಡು ವಿಧ); ಇದಂ-ಈ, ಪುಣ್ಯಬೀಜಂ-ಪುಣ್ಯಬೀಜಕರ್ಮವನ್ನು ಶೃಣು-(ಅದರ ಲಕ್ಷಣವನ್ನು) ಕೇಳು; ಸಮ್ಯಕ್ - ದೃಢವಾದ, ಆಸ್ತಿಕ್ಯಭಾವೇನ - ಆಸ್ತಿಕ್ಯಬುದ್ಧಿಯಿಂದ, ಜ್ಞಾನಪೂರ್ವಂ ತು-ಜ್ಞಾನಪೂರ್ವಕವಾಗಿಯೂ (ಶ್ರೀಹರಿಯ ಸ್ವತಂತ್ರ ಕರ್ತೃತ್ವವನ್ನು ತಿಳಿದು, ಫಲಾಪೇಕ್ಷೆಯಿಲ್ಲದೇ), ಯತ್-ಯಾವ ಕರ್ಮವು, ಕೃತಂ-ಮಾಡಲ್ಪಟ್ಟಿದೆಯೋ, ಮತ್ತು

---

ಕರ್ಮವೇ; ಏಕೆಂದರೆ, ಪಾಪವನ್ನು ನಾಶಮಾಡುವುದೆಂಬ ಫಲವನ್ನು ಉದ್ದೇಶಿಸಿಯೇ ಮಾಡುವ ಕರ್ಮವದು; ಮತ್ತು ಪ್ರಾಯಶ್ಚಿತ್ತಕರ್ಮವನ್ನು ಆಚರಿಸದಿದ್ದರೆ ಪ್ರತ್ಯವಾಯವಿಲ್ಲ—ಎಂದರೆ, ಆ ಕರ್ಮವನ್ನು ಬಿಡುವುದು, ಪ್ರತ್ಯೇಕವಾದ ಮತ್ತೊಂದು ಪಾಪವಲ್ಲ (ಹಿಂದಿನ ಪಾಪನಾಶವಾಗದಿರಬಹುದಲ್ಲದೇ, ಆ ಕರ್ಮ ತ್ಯಾಗವು ಮತ್ತೊಂದು ಪಾಪವಲ್ಲ) (೭). ಹೀಗೆ ತ್ರಿವಿಧವಾಗಿರುವ ಕರ್ಮಗಳೂ, ಒಂದೊಂದೂ ದ್ವಿವಿಧವೆಂದು ಹೇಳಲಾಗುತ್ತದೆ; ಸಬೀಜವೆಂದೂ ನಿರ್ಬೀಜವೆಂದೂ ಕರ್ಮವು ಎರಡು ವಿಧ; ಸಬೀಜ ಕರ್ಮವೂ ಪುನಃ, ಪುಣ್ಯಬೀಜವೆಂದೂ, ಪಾಪಬೀಜವೆಂದೂ ಎರಡು ವಿಧವಾಗಿರುವುದು; ಪುಣ್ಯಬೀಜಕರ್ಮದ ಸ್ವಭಾವವನ್ನು ವಿವರಿಸುತ್ತೇನೆ. ಕೇಳು: ದೃಢವಾದ ಆಸ್ತಿಕ್ಯಬುದ್ಧಿಯುಳ್ಳವನಾಗಿ, ಜ್ಞಾನಪೂರ್ವಕವಾಗಿ,

ಧರ್ಮಃ-ಧರ್ಮವು, ನಿತ್ಯಃ-ನಿತ್ಯವೂ, ನೈಮಿತ್ತಿಕಃ-ನೈಮಿತ್ತಕವೂ, ಕಾಮ್ಯಃ-ಕಾಮ್ಯವೂ, ಇತಿ-ಎಂದು, ತ್ರಿಧಾ ಮತಃ-ಮೂರು ವಿಧವೆಂದು (ಜ್ಞಾನಿಗಳಿಂದ) ತಿಳಿಯಲ್ಪಟ್ಟಿದೆ; ದಿನಮಾಸರ್ತುಪಕ್ಷಾದೌ-ದಿನ, ಮಾಸ, ಋತು, ಪಕ್ಷ ಮೊದಲಾದ ಕಾಲಗಳಲ್ಲಿ ನಿಯಮಾತ್ - ತಪ್ಪದೇ, ಉಪದಿಶ್ಯತೇ - (ಆಚರಿಸತಕ್ಕದ್ದೆಂದು) ಉಪದೇಶಿಸಲ್ಪಡುವುದೂ, ಅಕೃತೌ-ಆಚರಿಸದಿದ್ದರೆ, ಪ್ರತ್ಯವಾಯಃ ಚ-ದೋಷವೂ (ಪಾಪವೂ) ಯಾವುದರಿಂದಲೋ, ತತ್-ಅದು, ನಿತ್ಯಂ ಇತಿ-ನಿತ್ಯಧರ್ಮವೆಂದು, ಕೀರ್ತಿತಂ - ಹೇಳಲ್ಪಡುತ್ತದೆ; ನಿಯಮಾಭಾವತಃ - ಕಾಲ ನಿಯಮವಿಲ್ಲದ್ದರಿಂದ (ಗ್ರಹಣಾದಿಗಳಂತೆ), ಕಾಲವಿಶೇಷೇ-ಕಾಲವಿಶೇಷದಲ್ಲಿ ಯತ್-ಯಾವ ಧರ್ಮವು, ವಿಹಿತಂ-(ಶಾಸ್ತ್ರಗಳಲ್ಲಿ) ವಿಧಿಸಲ್ಪಟ್ಟಿರುವುದೋ, (ಮತ್ತು) ಯಸ್ಯ- ಯಾವ ಧರ್ಮದ, ಅಕೃತೌ-ಆಚರಿಸದಿರುವುದರಿಂದ, ಪ್ರತ್ಯವಾಯಃ-ಪ್ರತ್ಯವಾಯವಿರುವುದೋ, ತತ್-ಅದು, ನೈಮಿತ್ತಿಕಂ-ನೈಮಿತ್ತಿಕವೆಂದು, ಉಚ್ಯತೇ-ಹೇಳಲ್ಪಡುತ್ತದೆ; ನಿಯತೇ-ನಿಯತವಾದ (ನಿರ್ದಿಷ್ಟವಾದ-ಗೊತ್ತಾದ), ಅನಿಯತೇ-ಅನಿಯತವಾದ (ಇಚ್ಛಾನುಸಾರವಾದ), ಕಾಲೇ-ಕಾಲದಲ್ಲಿ ಧರ್ಮಃ-(ಯಾವ) ಧರ್ಮವು, ವಿಧೀಯತೇ-(ಆಚರಿಸತಕ್ಕದ್ದೆಂದು) ವಿಧಿಸಲ್ಪಡುತ್ತದೆಯೋ, ಕೃತೇ-ಆಚರಿಸಿದರೆ, ಪುಣ್ಯಂ-ಪುಣ್ಯವೂ, ಅಕೃತೌ-ಮಾಡದಿದ್ದರೆ (ಆಚರಿಸದೇ ಬಿಟ್ಟರೆ), ನ ಪಾಪಂ-ಪ್ರತ್ಯವಾಯವಿಲ್ಲವೋ, ತತ್-ಅದು (ಆ ಧರ್ಮವು), ಕಾಮ್ಯಂ ಏವ-ಕಾಮ್ಯವೇ ಸರಿ.

**ಪುಣ್ಯಂ ಪ್ರಜಾಯತೇ ನೃಣಾಂ ತ್ರಿವಿಧಾದಪಿ ಕರ್ಮಣಃ ॥ ೬ ॥**

ನೃಣಾಂ-ಮನುಷ್ಯರಿಗೆ, ತ್ರಿವಿಧಾತ್-ಈ ಮೂರು ವಿಧದ (ನಿತ್ಯ, ನೈಮಿತ್ತಿಕ, ಕಾಮ್ಯಗಳೆಂಬ), ಕರ್ಮಣಃ ಅಪಿ-ಕರ್ಮದಿಂದಲೂ, ಪುಣ್ಯಂ-ಪುಣ್ಯವು (ಸುಖಕ್ಕೆ ಕಾರಣವಾದ ಅದೃಷ್ಟವಿಶೇಷವು), ಪ್ರಜಾಯತೇ-ಹುಟ್ಟುತ್ತದೆ (ಉಂಟಾಗುತ್ತದೆ-ಉದ್ಭವಿಸುತ್ತದೆ).

**ಪ್ರಾಯಶ್ಚಿತ್ತಂ ತು ಕಾಮ್ಯಂ ಸ್ಯಾತ್ ಪಾಪನಾಶೋ ಹಿ ತತ್ಫಲಂ ।**
**ಪಾಪಾಂತರಂ ಭವೇನ್ನೈವ ಪ್ರಾಯಶ್ಚಿತ್ತಾಽಕೃತೌ ಯತಃ ॥ ೭ ॥**

ಪ್ರಾಯಶ್ಚಿತ್ತಂ-ಪ್ರಾಯಶ್ಚಿತ್ತವೆಂಬ ಕರ್ಮವು, ಕಾಮ್ಯಂ ತು-ಕಾಮ್ಯ ಕರ್ಮವೇ,

---

ಪ್ರತ್ಯವಾಯವುಂಟೋ, ಅದು ನೈಮಿತ್ತಿಕವು; ಗೊತ್ತಾದ ಕಾಲದಲ್ಲಿ ಆಗಲಿ ಅಥವಾ ಕಾಲನಿಯಮವಿಲ್ಲದೇ ಇಚ್ಛಾನುಸಾರವಾಗಿ ಆಗಲಿ, ಆಚರಿಸುವ ಧರ್ಮವು, ಕಾಮ್ಯವು; ಅದನ್ನು ಆಚರಿಸಿದರೆ ಪುಣ್ಯ ಲಭಿಸುತ್ತದೆ—ಬಿಟ್ಟರೆ ಪ್ರತ್ಯವಾಯವಿಲ್ಲ (ಪಾಪವಿಲ್ಲ) (೩-೫). ಈ ಮೂರು ವಿಧ ಕರ್ಮಗಳನ್ನು ಆಚರಿಸುವುದರಿಂದಲೂ, ಮನುಷ್ಯರಿಗೆ ಪುಣ್ಯವು (ಸುಖಹೇತುವಾದ ಅದೃಷ್ಟ ವಿಶೇಷವು) ಉದ್ಭವಿಸುತ್ತದೆ (೬). ಪಾಪಗಳ ಪರಿಹಾರಕ್ಕಾಗಿ ಆಚರಿಸುವ ವಿಧ್ಯುಕ್ತಪ್ರಾಯಶ್ಚಿತ್ತಕರ್ಮವೂ ಕಾಮ್ಯ

ಸ್ಯಾತ್-ಆಗಿರುತ್ತದೆ; ತತ್ಫಲಂ-ಅದರ (ಪ್ರಾಯಶ್ಚಿತ್ತಕರ್ಮದ) ಫಲವು, ಪಾಪನಾಶಃ-ಪಾಪದ ನಾಶವು, ಹಿ-(ಎಂಬುದು) ಸಿದ್ಧವಷ್ಟೆ (ಫಲವುಳ್ಳ ಕರ್ಮವಾದ್ದರಿಂದ ಅದು ಕಾಮ್ಯವು); ಯತಃ-ಯಾವ ಕಾರಣದಿಂದ, ಪ್ರಾಯಶ್ಚಿತ್ತಾಕೃತೌ-ಪ್ರಾಯಶ್ಚಿತ್ತವನ್ನು ಆಚರಿಸದಿದ್ದರೆ, ಪಾಪಾಂತರಂ-ಬೇರೆ ಪಾಪವು (ಮತ್ತೊಂದು ಪಾಪವು), ನೈವ ಭವೇತ್-ಉಂಟಾಗುವುದೇ ಇಲ್ಲವೋ (ಆದ್ದರಿಂದಲೂ ಪ್ರಾಯಶ್ಚಿತ್ತರೂಪದ ಕರ್ಮವು, ಕಾಮ್ಯವೇ).

ತದೇತತ್ತ್ರಿವಿಧಂ ಕರ್ಮ ಪ್ರತ್ಯೇಕಂ ದ್ವಿವಿಧಂ ಮತಂ ।
ಸಬೀಜಂ ಚಾಪಿ ನಿರ್ಬೀಜಂ ಸಬೀಜಂ ದ್ವಿವಿಧಂ ಸ್ಮೃತಂ ॥ ೮ ॥
ಪುಣ್ಯಬೀಜಂ ಪಾಪಬೀಜಂ ಪುಣ್ಯಬೀಜಮಿದಂ ಶೃಣು ।
ಸಮ್ಯಗಾಸ್ತಿಕ್ಯಭಾವೇನ ಜ್ಞಾನಪೂರ್ವಂ ತು ಯತ್ಕೃತಂ ॥ ೯ ॥
ಶಾಠ್ಯಹೀನಂ ತು ಯತ್ಕರ್ಮ ಪುಣ್ಯಬೀಜಂ ತದುಚ್ಯತೇ ।

ಏತತ್-ಈ, ತತ್ ತ್ರಿವಿಧಂ-ಉಕ್ತ ತ್ರಿವಿಧವಾದ, ಕರ್ಮ-ಕರ್ಮವು, ಪ್ರತ್ಯೇಕಂ-(ನಿತ್ಯ, ನೈಮಿತ್ತಿಕ, ಕಾಮ್ಯಕರ್ಮಗಳು) ಒಂದೊಂದೂ, ದ್ವಿವಿಧಂ- ದ್ವಿವಿಧವೆಂದು, ಮತಂ-ತಿಳಿಯಲ್ಪಟ್ಟಿದೆ; ಸಬೀಜಂ-ಸಬೀಜವೆಂದೂ, ಅಪಿ ಚ-ಮತ್ತು ನಿರ್ಬೀಜಂ-ನಿರ್ಬೀಜವೆಂದೂ (ದ್ವಿವಿಧವು); ಸಬೀಜಂ-ಸಬೀಜ ಕರ್ಮವೂ, ದ್ವಿವಿಧಂ-ದ್ವಿವಿಧವೆಂದು, ಸ್ಮೃತಂ-ಹೇಳಲ್ಪಟ್ಟಿದೆ; ಪುಣ್ಯಬೀಜಂ-ಪುಣ್ಯಬೀಜವೆಂದೂ, ಪಾಪಬೀಜಂ-ಪಾಪಬೀಜವೆಂದೂ (ಸಬೀಜ ಕರ್ಮವು ಎರಡು ವಿಧ); ಇದಂ-ಈ, ಪುಣ್ಯಬೀಜಂ-ಪುಣ್ಯಬೀಜಕರ್ಮವನ್ನು ಶೃಣು-(ಅದರ ಲಕ್ಷಣವನ್ನು) ಕೇಳು; ಸಮ್ಯಕ್ - ದೃಢವಾದ, ಆಸ್ತಿಕ್ಯಭಾವೇನ - ಆಸ್ತಿಕ್ಯಬುದ್ಧಿಯಿಂದ, ಜ್ಞಾನಪೂರ್ವಂ ತು-ಜ್ಞಾನಪೂರ್ವಕವಾಗಿಯೂ (ಶ್ರೀಹರಿಯ ಸ್ವತಂತ್ರ ಕರ್ತೃತ್ವವನ್ನು ತಿಳಿದು, ಫಲಾಪೇಕ್ಷೆಯಿಲ್ಲದೇ), ಯತ್-ಯಾವ ಕರ್ಮವು, ಕೃತಂ-ಮಾಡಲ್ಪಟ್ಟಿದ್ದೋ, ಮತ್ತು

---

ಕರ್ಮವೇ; ಏಕೆಂದರೆ, ಪಾಪವನ್ನು ನಾಶಮಾಡುವುದೆಂಬ ಫಲವನ್ನು ಉದ್ದೇಶಿಸಿಯೇ ಮಾಡುವ ಕರ್ಮವದು; ಮತ್ತು ಪ್ರಾಯಶ್ಚಿತ್ತಕರ್ಮವನ್ನು ಆಚರಿಸದಿದ್ದರೆ ಪ್ರತ್ಯವಾಯವಿಲ್ಲ—ಎಂದರೆ, ಆ ಕರ್ಮವನ್ನು ಬಿಡುವುದು, ಪ್ರತ್ಯೇಕವಾದ ಮತ್ತೊಂದು ಪಾಪವಲ್ಲ (ಹಿಂದಿನ ಪಾಪನಾಶವಾಗದಿರಬಹುದಲ್ಲದೇ, ಆ ಕರ್ಮ ತ್ಯಾಗವು ಮತ್ತೊಂದು ಪಾಪವಲ್ಲ) (೭). ಹೀಗೆ ತ್ರಿವಿಧವಾಗಿರುವ ಕರ್ಮಗಳೂ, ಒಂದೊಂದೂ ದ್ವಿವಿಧವೆಂದು ಹೇಳಲಾಗುತ್ತದೆ; ಸಬೀಜವೆಂದೂ ನಿರ್ಬೀಜವೆಂದೂ ಕರ್ಮವು ಎರಡು ವಿಧ; ಸಬೀಜ ಕರ್ಮವೂ ಪುನಃ, ಪುಣ್ಯಬೀಜವೆಂದೂ, ಪಾಪಬೀಜವೆಂದೂ ಎರಡು ವಿಧವಾಗಿರುವುದು; ಪುಣ್ಯಬೀಜಕರ್ಮದ ಸ್ವಭಾವವನ್ನು ವಿವರಿಸುತ್ತೇನೆ, ಕೇಳು; ದೃಢವಾದ ಆಸ್ತಿಕ್ಯಬುದ್ಧಿಯುಳ್ಳವನಾಗಿ, ಜ್ಞಾನಪೂರ್ವಕವಾಗಿ,

ಯತ್ ಕರ್ಮ-ಯಾವ ಕರ್ಮವು, ಶಾಠ್ಯಹೀನಂ ತು-ಶಾಠ್ಯವಿಲ್ಲದೇ (ಕೃತಂ-ಮಾಡಲ್ಪಟ್ಟದ್ದೋ), ತತ್-ಆ ಕರ್ಮವು, ಪುಣ್ಯಬೀಜಂ-ಪುಣ್ಯಬೀಜಕರ್ಮವೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಶಾರೀರದಾಕ್ಷ್ಯಸಾಧ್ಯಾನಿ ಧನಸಾಧ್ಯಾನಿ ಕಾನಿಚಿತ್ ॥ ೧೦ ॥**
**ದೇಶಕಾಲಸ್ವಾಸ್ಥ್ಯಸಾಧ್ಯಾನ್ಯೇವಂ ಕರ್ಮಾಣಿ ಸರ್ವಶಃ ।**
**ಯಥಾಸಂಪತ್ತಿ ಯತ್ಕರ್ಮ ಶಾಠ್ಯಹೀನಂ ತು ತತ್ಸ್ಮೃತಂ ॥ ೧೧ ॥**

ಸರ್ವಶಃ ಕರ್ಮಾಣಿ-ಎಲ್ಲ ಕರ್ಮಗಳು, ಶಾರೀರದಾಕ್ಷ್ಯಸಾಧ್ಯಾನಿ-ಶರೀರದ ದಕ್ಷತೆ (ಶಕ್ತಿ)ಯಿಂದ ಸಾಧ್ಯವಾಗುವುವು, ಕಾನಿಚಿತ್-ಕೆಲವು; ಧನಸಾಧ್ಯಾನಿ-ಧನಸಂಪತ್ತಿನಿಂದ ಸಾಧ್ಯವಾಗುವುವು (ಕಾನಿಚಿತ್-ಕೆಲವು ಕರ್ಮಗಳು); ದೇಶಕಾಲಸ್ವಾಸ್ಥ್ಯಸಾಧ್ಯಾನಿ-ದೇಶ ಕಾಲಗಳು ಸ್ವಸ್ಥವಾಗಿರುವಾಗ (ಶಾಂತವಾಗಿರುವಾಗ) ಸಾಧ್ಯವಾಗುವುವು; ಏವಂ-(ಕರ್ಮಗಳ ಸಂಭವವು) ಹೀಗಿರುವಲ್ಲಿ ಯಥಾಸಂಪತ್ತಿ-ಧನಸಂಪತ್ತಿಗೆ ತಕ್ಕಂತೆ (ಯೋಗ್ಯವಾದ ದ್ರವ್ಯವಿನಿಯೋಗದಿಂದ), ಯತ್ ಕರ್ಮ-(ಮಾಡಲಾಗುವ) ಯಾವ ಕರ್ಮವೋ, ತತ್-ಅದು, ಶಾಠ್ಯಹೀನಂ-ಶಾಠ್ಯರಹಿತವಾದ ಕರ್ಮವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ.

**ಶಕ್ತಿವಂಚನತೋ ಯತ್ಸ್ಯಾಚ್ಛಾಠ್ಯಂ ತಚ್ಚ ಪ್ರಕೀರ್ತಿತಂ ।**
**ಅಸೂಯಯಾ ವಾ ಶಾಠ್ಯೇನ ದಂಭಲೋಭಾದಿನಾ ಕೃತಂ ॥ ೧೨ ॥**
**ಪಶ್ಚಾತ್ತಪ್ತಂ ಚ ಯತ್ಪುಣ್ಯಂ ಪಾಪಬೀಜಂ ತದುಚ್ಯತೇ ।**

ಶಕ್ತಿವಂಚನತಃ-ಶಕ್ತಿವಂಚನೆಯಿಂದ (ಇದ್ದರೂ ಇಲ್ಲವೆಂತ ಭಾವಿಸಿ-ಮನಸ್ಸನ್ನು ವಂಚಿಸಿ, ಅಥವಾ ಬಾಹ್ಯದಲ್ಲಿ ತೋರಿ), ಯತ್-ಯಾವ ಕರ್ಮವು, ಸ್ಯಾತ್-ಆಗುತ್ತದೆಯೋ (ಆಚರಿಸಲ್ಪಡುತ್ತದೆಯೋ), ತತ್ ಚ-ಅದೂ ಸಹ (ಇಲ್ಲದ ಅಧಿಕಶಕ್ತಿ ವ್ಯಯದಿಂದ ಆಚರಿಸುವ ಕರ್ಮದಂತೆ), ಶಾಠ್ಯಂ-ಶಾಠ್ಯಕರ್ಮವೆಂದೇ

---

ಶಾಠ್ಯವಿಲ್ಲದಂತೆ ಆಚರಿಸುವ (ತ್ರಿವಿಧ) ಕರ್ಮಗಳೂ ಪುಣ್ಯಬೀಜವೆಂದು ಹೇಳಲ್ಪಡುತ್ತವೆ (೮-೯).

ಶರೀರಸಾಮರ್ಥ್ಯದಿಂದ ಸಾಧ್ಯವಾಗುವ ಕರ್ಮಗಳು, ಕೆಲವು; ಮತ್ತೆ ಕೆಲವು ಧನದಿಂದ ಸಾಧ್ಯವಾಗುವುವು; ದೇಶ, ಕಾಲಗಳು ಸ್ವಸ್ಥವಾಗಿರುವಾಗ (ದುರ್ಭಿಕ್ಷಾದಿ ಅಶಾಂತಿಕಾರಣಗಳಿಲ್ಲದಾಗ) ಸಾಧ್ಯವಾಗುವುವು ಕೆಲವು; ಹೀಗೆ ಸಮಸ್ತ ಕರ್ಮಗಳೂ ಪರಿಸ್ಥಿತಿಗಳಿಗನುಗುಣವಾಗಿ ಸಂಭವಿಸುತ್ತವೆ; ಧನಸಾಧ್ಯ ಕರ್ಮಗಳಲ್ಲಿ ತನ್ನ ಧನಸಂಪತ್ತಿಗೆ ಯೋಗ್ಯವೆನಿಸುವ ಕರ್ಮವನ್ನಾಚರಿಸುವುದು, ಶಾಠ್ಯಹೀನ ಕರ್ಮವೆನಿಸುತ್ತದೆ (೧೦-೧೧). ಧನಶಕ್ತಿಯ ವಂಚನೆಯಿಂದ (ಇದ್ದರೂ ಇಲ್ಲದಂತೆ ತೋರ್ಪಡಿಸಿ), ಕರ್ಮಮಾಡುವುದೂ, ಶಾಠ್ಯವೆನಿಸುತ್ತದೆ (ಇರುವುದಕ್ಕಿಂತ ಅಧಿಕ

(ಅದೂ ಶಾಠ್ಯವೆಂದು) ಪ್ರಕೀರ್ತಿತಂ-ಹೇಳಲ್ಪಡುತ್ತದೆ; ಅಸೂಯಯಾ-ಅಸೂಯೆಯಿಂದ (ಅನ್ಯರ ಮೇಲಿನ ಸ್ಪರ್ಧೆಯಿಂದ ಅಥವಾ ಮಾತ್ಸರ್ಯದಿಂದ), ವಾ-ಅಥವಾ, ಶಾಠ್ಯೇನ-ಶಾಠ್ಯದಿಂದ, ದಂಭಲೋಭಾದಿನಾ-ದಂಭ (ಅವಿದ್ಯಮಾನ ಗುಣಪ್ರದರ್ಶನ), ಲೋಭಾದಿಗಳಿಂದ, ಕೃತಂ-ಮಾಡಲಾದ ಕರ್ಮವೂ, ಚ-ಮತ್ತು ಪಶ್ಚಾತ್ತಪ್ತಂ-(ಧನವ್ಯಯಾದಿ ಚಿಂತೆಯಿಂದ ಪುಣ್ಯವನ್ನಾಚರಿಸಿದ ಮೇಲೆ ವ್ಯಥೆಪಡುವುದೂ) ಪಶ್ಚಾತ್ತಾಪ ಪಡುವ, ಯತ್ಪುಣ್ಯಂ-ಯಾವ ಪುಣ್ಯ ಕರ್ಮವೋ, ತತ್-ಅದು (ಈ ವಿವಿಧ ಪುಣ್ಯಕರ್ಮಗಳೂ), ಪಾಪಬೀಜಂ-ಪಾಪಬೀಜಕರ್ಮವೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಶಾರೀರದಾರ್ಢ್ಯವಾನ್ ಲೋಕೇ ಧನಸಾಮರ್ಥ್ಯವಾನಪಿ ॥ ೧೩ ॥**
**ಜಾಯತೇ ಪುಣ್ಯಯೋಗೇನ ಪುಣ್ಯಬೀಜಂ ಚ ತದ್ಯದಿ ।**
**ತಪೋದಾನಾದಿಕಂ ಕುರ್ವನ್ ಪುಣ್ಯಮೇವಾಭಿವರ್ಧಯೇತ್ ॥ ೧೪ ॥**
**ಪಾಪಬೀಜಂ ತು ತಸ್ಯ ಸ್ಯಾತ್ತದಾ ದುರ್ಭೋಗಭೋಗತಃ ।**
**ಪರಪೀಡಾದಿಕುರ್ವಾಣಃ ಪಾಪಮೇವಾಭಿವರ್ಧಯೇತ್ ॥ ೧೫ ॥**

ಪುಣ್ಯಬೀಜ ಮತ್ತು ಪಾಪಬೀಜಭೇದದಿಂದ ದ್ವಿವಿಧವಾದ ಪುಣ್ಯಕರ್ಮದ ಲಕ್ಷಣ (ಸ್ವಭಾವ)ವನ್ನು ನಿರೂಪಿಸುತ್ತಾರೆ:—

ಲೋಕೇ-ಜಗತ್ತಿನಲ್ಲಿ ಪುಣ್ಯಯೋಗೇನ-ಪುಣ್ಯಪ್ರಭಾವದಿಂದ (ಫಲರೂಪವಾಗಿ), ಶಾರೀರದಾರ್ಢ್ಯವಾನ್-ದೃಢಕಾಯನಾಗಿಯೂ (ಶರೀರಸಾಮರ್ಥ್ಯವುಳ್ಳವನೂ), ಧನಸಾಮರ್ಥ್ಯವಾನ್ ಅಪಿ-ಧನದಿಂದ ಪುಷ್ಟನಾಗಿಯೂ (ಧನವಂತನಾಗಿಯೂ), ಜಾಯತೇ-ಹುಟ್ಟುತ್ತಾನೆ (ಆಗುತ್ತಾನೆ); ತತ್-ಆ ಪುಣ್ಯವು (ಯಾವ ಪುಣ್ಯದಿಂದ ದೃಢಕಾಯನೂ ಧನವಂತನೂ ಆಗುತ್ತಾನೆಯೋ, ಅದು), ಯದಿ ಪುಣ್ಯಬೀಜಂ-ಪುಣ್ಯಬೀಜಪುಣ್ಯವಾಗಿದ್ದರೆ, ತಪೋದಾನಾದಿಕಂ-ತಪಸ್ಸು ದಾನ

---

ವಾಗಿ, ಶಕ್ತಿಮೀರಿ ಮಾಡುವ ಶಾಠ್ಯಕರ್ಮದಂತೆ); ಅಸೂಯೆಯಿಂದಲಾಗಲಿ ಶಾಠ್ಯ, ಡಂಭ, ಲೋಭಾದಿಗಳಿಂದ ಮಾಡುವ ಪುಣ್ಯ ಕರ್ಮವೂ, ಮಾಡಿದಮೇಲೆ ಪಶ್ಚಾತ್ತಾಪಪಡುವುದೂ (ಧನವ್ಯಯಾದಿಗಳನ್ನು ಚಿಂತಿಸಿ ಪಶ್ಚಾತ್ತಾಪಪಡುವುದೂ) ಆದ ಯಾವುದೇ ಪುಣ್ಯಕರ್ಮವಾಗಲಿ, ಪಾಪಬೀಜಕರ್ಮವೆನಿಸುತ್ತದೆ (೧೨). ಪುಣ್ಯಯೋಗದಿಂದ (ಪುಣ್ಯಫಲದಿಂದ), ಲೋಕದಲ್ಲಿ ಮಾನವನು ದೃಢಕಾಯನೂ ಧನವಂತನೂ ಆಗುತ್ತಾನೆ; ಆ ಪುಣ್ಯವು, ಪುಣ್ಯಬೀಜಪುಣ್ಯವಾಗಿದ್ದರೆ, ತಪಸ್ಸು ದಾನ ಮೊದಲಾದ ಪುಣ್ಯಕರ್ಮಗಳನ್ನೇ ಮಾಡಿ, ಪುಣ್ಯವನ್ನೇ ವೃದ್ಧಿಗೊಳಿಸಿಕೊಳ್ಳುತ್ತಾನೆ; ಹಾಗಲ್ಲದೇ ಆ ಪುಣ್ಯವು ಪಾಪಬೀಜಪುಣ್ಯವಾಗಿದ್ದರೆ, ದೇಹದಾರ್ಢ್ಯಧನಾದಿಗಳುಳ್ಳವನಾಗಿ, ನಾನಾ ದುರ್ಭೋಗಗಳನ್ನು (ನಿಷಿದ್ಧ ಭೋಗಗಳನ್ನು) ಅನುಭವಿಸುತ್ತ

ಮುಂತಾದುದರನ್ನು, ಕುರ್ವನ್-ಮಾಡುವವನಾಗಿ, ಪುಣ್ಯಂ ಏವ-ಪುಣ್ಯವನ್ನೇ, ಅಭಿವರ್ಧಯೇತ್-ವೃದ್ಧಿಗೊಳಿಸಿಕೊಳ್ಳುತ್ತಾನೆ; ತಸ್ಯ-(ಪುಣ್ಯಯೋಗವುಳ್ಳ) ಆತನ, (ತತ್-ಆ ಪುಣ್ಯವು), ಪಾಪಬೀಜಂ ತು-ಪಾಪಬೀಜಪುಣ್ಯವೇ, ಸ್ಯಾತ್-ಆಗಿದ್ದರೆ, ತದಾ - ಆಗ, ದುರ್ಭೋಗಭೋಗತಃ-ದುಷ್ಟವಾದ (ನಿಷಿದ್ಧಗಳಾದ ವೈಷಯಿಕ) ಭೋಗಗಳ ಅನುಭವದಿಂದ, ಪರಪೀಡಾದಿ-ಪರಹಿಂಸೆ ಮೊದಲಾದ ಪಾಪಗಳನ್ನು ಕುರ್ವಾಣಃ-ಮಾಡುವವನಾಗಿ, ಪಾಪಂ ಏವ-ಪಾಪವನ್ನೇ, ಅಭಿವರ್ಧಯೇತ್-ವೃದ್ಧಿಗೊಳಿಸಿಕೊಳ್ಳುತ್ತಾನೆ (ಅಧಿಕ ಪಾಪವನ್ನೇ ಸಂಪಾದಿಸುತ್ತಾನೆ).

ಜ್ಞಾತಾಜ್ಞಾತಫಲತ್ವೇನ ನಿರ್ಬೀಜಂ ದ್ವಿವಿಧಂ ಮತಂ ।
ನಾಸ್ತಿಕ್ಯೇನ ಪ್ರಸಂಗಾದ್ವಾ ಪರಂ ದೃಷ್ಟ್ವಾ ಭಿಯಾ ಕೃತಂ ॥ ೧೬ ॥
ಔದಾಸೀನ್ಯೇನ ಯದ್ ಜ್ಞಾನಂ ತದ್‌ಜ್ಞಾತಫಲಕಂ ಸ್ಮೃತಂ ।
ಅನಿಷಿದ್ಧಂ ತು ಸದ್ಭೋಗಂ ದತ್ವಾ ನಶ್ಯತಿ ಕರ್ಮ ತತ್ ॥ ೧೭ ॥

ನಿರ್ಬೀಜಪುಣ್ಯಕರ್ಮ ವಿಭಾಗವನ್ನು ನಿರೂಪಿಸುತ್ತಾರೆ:—ನಿರ್ಬೀಜಂ-ನಿರ್ಬೀಜಕರ್ಮವು, ಜ್ಞಾತಾಜ್ಞಾತಫಲತ್ವೇನ-ಜ್ಞಾತ (ಫಲಜ್ಞಾನಪೂರ್ವಕ ಆಚರಿಸಿದುದು) ಮತ್ತು ಅಜ್ಞಾತವಾದುದು, ಎಂದು (ಎಂಬ ಭೇದದಿಂದ), ದ್ವಿವಿಧಂ-ದ್ವಿವಿಧವೆಂದು, ಮತಂ-ಜ್ಞಾನಿಸಮ್ಮತವಾಗಿದೆ; ನಾಸ್ತಿಕ್ಯೇನ-ಆಸ್ತಿಕ್ಯಬುದ್ಧಿರಹಿತನಾಗಿ (ಕರ್ಮಫಲದಲ್ಲಿ ವಿಶ್ವಾಸವಿಲ್ಲದೇ), ವಾ-ಅಥವಾ, ಪ್ರಸಂಗಾತ್-ಪ್ರಸಂಗವಶನಾಗಿ (ಸ್ವೇಚ್ಛಾಪೂರ್ವಕವಲ್ಲದೇ ಸಂದರ್ಭಬಲದಿಂದ), ಪರಂ-ಅನ್ಯನನ್ನು, ದೃಷ್ಟ್ವಾ-ಕಂಡು (ಹಿರಿಯರೋ ಅಥವಾ ಅಧಿಕಾರಿಗಳೋ ಆ ಕರ್ಮಮಾಡುವುದನ್ನು ಕಂಡು), ಭಿಯಾ-ಭಯದಿಂದ (ತಾನೂ ಮಾಡದಿದ್ದರೆ ಲೌಕಿಕವಾದ ತೊಂದರೆಗೆ ಗುರಿಯಾಗುವ ಭಯದಿಂದ), ಕೃತಂ-ಮಾಡಲ್ಪಟ್ಟದ್ದು (ಅಥವಾ) ಔದಾಸೀನ್ಯೇನ-ಉದಾಸೀನಬುದ್ಧಿಯಿಂದ, ಯತ್-ಯಾವ ಕರ್ಮಫಲದ, ಜ್ಞಾನಂ-ಜ್ಞಾನವೋ, ತತ್-(ಈ ವಿಧ ಫಲಜ್ಞಾನಪೂರ್ವಕ ಆಚರಿಸಿದ) ಕರ್ಮವು, ಜ್ಞಾತಫಲಕಂ-ಜ್ಞಾತಫಲವುಳ್ಳ ಕರ್ಮವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ; ತತ್‌ಕರ್ಮ-ಆ ಕರ್ಮವು,

---

ಪರಹಿಂಸಾದಿ ಪಾಪಗಳನ್ನು ಮಾಡುವವನಾಗಿ, ಪಾಪವನ್ನೇ ಬೆಳೆಸಿಕೊಳ್ಳುತ್ತಾನೆ (೧೩-೧೫). ಜ್ಞಾತಫಲ, ಅಜ್ಞಾತಫಲವೆಂಬ ಭೇದದಿಂದ ನಿರ್ಬೀಜ (ಪುಣ್ಯ) ಕರ್ಮವು ದ್ವಿವಿಧವೆಂದು ತಿಳಿಯಲ್ಪಡುತ್ತದೆ; ಕರ್ಮಫಲದಲ್ಲಿ ಶ್ರದ್ಧೆಯಿಲ್ಲದೇ, ಅಥವಾ ಕೇವಲ ಪ್ರಸಂಗಬಲದಿಂದ, ಅಥವಾ ತನ್ನ ಹಿರಿಯರೋ ಮೇಲಿನ ಅಧಿಕಾರಿಗಳೋ ಆ ಕರ್ಮವನ್ನಾಚರಿಸುವುದನ್ನು ಕಂಡು ಭಯದಿಂದಲೋ, ಅಥವಾ ಉದಾಸೀನ ಬುದ್ಧಿಯಿಂದ ಕರ್ಮಫಲವನ್ನು ತಿಳಿದೋ, ಮಾಡಿದ ಕರ್ಮವು, ಜ್ಞಾತಫಲಕರ್ಮವೆನಿಸುತ್ತದೆ; ಆ ಕರ್ಮವು ಶಾಸ್ತ್ರದಿಂದ ನಿಷೇಧಿಸಲ್ಪಡದ ಸುಖಭೋಗವನ್ನಿತ್ತು

ಅನಿಷಿದ್ಧಂ-(ಶಾಸ್ತ್ರದಿಂದ) ನಿಷೇಧಿಸಲ್ಪಡದ, ಸದ್ಭೋಗಂ-ಒಳ್ಳೆಯ (ಯೋಗ್ಯವಾದ) ಭೋಗವಸ್ತು, ದತ್ತ್ವಾ-(ತನ್ನ ಫಲವಾಗಿ) ಕೊಟ್ಟು, ನಶ್ಯತಿ-ನಷ್ಟವಾಗುತ್ತದೆ.

**ಅಜ್ಞಾನಾವಸ್ಥಯಾ ಸ್ವೇನ ಭಾರ್ಯಾಪುತ್ರಾದಿನಾ ಕೃತಂ ।**
**ಪಶ್ಚಾದಪಿ ಯದಜ್ಞಾತಂ ತದಜ್ಞಾತಫಲಂ ಸ್ಮೃತಂ ॥ ೧೮ ॥**
**ಸುವರ್ಣವಸ್ತ್ರರತ್ನಾದಿ ತತ್ಫಲಂ ಜಾಯತೇ ಹಿ ಯತ್ ।**
**ಬಾಲ್ಯೇ ಪಶುತ್ವೇ ನಿದ್ರಾದೌ ಜಾಯಮಾನಂ ನ ಬುಧ್ಯತೇ ॥ ೧೯ ॥**
**ಪಶ್ಚಾತ್ ಜ್ಞಾತಂ ತು ತಚ್ಚೇತ್ಸ್ಯಾತ್ಪೂರ್ವಂ ವಾಪ್ಯನುಮೋದಿತಂ ।**
**ತತ್ತದ್ಭಾವವಶಾತ್ತಸ್ಯ ಪೂರ್ವರೀತ್ಯಾ ಫಲಂ ಭವೇತ್ ॥ ೨೦ ॥**

ಅಜ್ಞಾನಾವಸ್ಥಯಾ-(ತನ್ನ) ಅಜ್ಞಾನಾವಸ್ಥೆಯಿಂದ (ತನಗೆ ತಿಳಿಯದಂತೆ), ಸ್ವೇನ-ತನ್ನ ಭಾರ್ಯಾಪುತ್ರಾದಿನಾ-ಸತಿಸುತಾದಿಗಳಿಂದ (ಹೆಂಡತಿ ಮಕ್ಕಳಿಂದ), ಕೃತಂ - (ಆ ಪುಣ್ಯಕರ್ಮವು) ಮಾಡಲ್ಪಟ್ಟದ್ದಾಗಿ, ಪಶ್ಚಾತ್ ಅಪಿ - ಆ ನಂತರವೂ (ಅವರು ಆ ಕರ್ಮವನ್ನು ಮಾಡಿದಮೇಲೆ ಸಹ), ಯತ್-ಯಾವುದು, ಅಜ್ಞಾತಂ-ಅಜ್ಞಾತವೇ ಆಗಿ (ತನಗೆ ತಿಳಿಯದೇ) ಇರುವುದೋ, ತತ್-ಆ ಕರ್ಮವು, ಅಜ್ಞಾತ ಫಲಂ-ಅಜ್ಞಾತಫಲವುಳ್ಳ ಕರ್ಮವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ; ತತ್ಫಲಂ-ಆ ಪುಣ್ಯದ ಫಲರೂಪವಾದ, ಯತ್-ಯಾವ, ಸುವರ್ಣರತ್ನವಸ್ತ್ರಾದಿ- ಭಂಗಾರ, ವಸ್ತ್ರ ರತ್ನ ಮೊದಲಾದುದು, ಜಾಯತೇ-ಉಂಟಾಗುವುದೋ, ಜಾಯಮಾನಂ-ಹಾಗೆ ಹುಟ್ಟುವ ಆ ಫಲವನ್ನು, ಬಾಲ್ಯೇ-ಬಾಲ್ಯದಲ್ಲಿ ಪಶುತ್ವೇ-ಪಶುದೇಹದಲ್ಲಿ ನಿದ್ರಾದೌ-ನಿದ್ರೆ ಮೊದಲಾದ್ದರಲ್ಲಿ (ಅಜ್ಞಾನಾವಸ್ಥೆಗಳಲ್ಲಿ), ನ ಬುಧ್ಯತೇ-(ಭೋಗಿಸುವ

---

ನಷ್ಟವಾಗುತ್ತದೆ (೧೬-೧೭). ಅಜ್ಞಾನಾವಸ್ಥೆಯಲ್ಲಿದ್ದ ತನ್ನಿಂದಾಗಲಿ, ಅಥವಾ ತನ್ನ ಭಾರ್ಯಾಪುತ್ರರಿಂದಾಗಲಿ ಮಾಡಲ್ಪಡುವ[1] ಪುಣ್ಯಕರ್ಮವು, ಆ ಕರ್ಮವು ಘಟಿಸಿದ ನಂತರವೂ, ತನಗೆ ತಿಳಿಯದಿದ್ದರೆ, ಅದು 'ಅಜ್ಞಾತಫಲಕ' ಕರ್ಮವೆನಿಸುತ್ತದೆ (ಪುಣ್ಯಕರ್ಮವು, ತಿಳಿಯಲ್ಪಡದಿದ್ದರೂ ಅದರ ಫಲವನ್ನು ಅನುಭವಿಸುವುದು, ಈ ಕರ್ಮದ ಲಕ್ಷಣ); ಈ ಅಜ್ಞಾತಕರ್ಮ ಫಲವಾದ, ಸುವರ್ಣವಸ್ತ್ರ ರತ್ನಾದಿಗಳ ಭೋಗವೂ, ಬಾಲ್ಯ, ಪಶುದೇಹ, ನಿದ್ರಾದಿ ಅಜ್ಞಾನಾವಸ್ಥೆಗಳಲ್ಲಿಯೇ ಲಭಿಸುತ್ತದೆ; ಅಜ್ಞಾತಫಲಕರ್ಮವು, ಒಂದುವೇಳೆ, ಕರ್ಮವು ಸಂಭವಿಸಿದ ನಂತರ ಜ್ಞಾತವಾಗಿದ್ದರೆ (ತಿಳಿದುಬಂದಿದ್ದರೆ), ಅಥವಾ, ಕರ್ಮವು ಸಂಘಟಿಸುವ ಮೊದಲೇ ಅದಕ್ಕೆ ಈತನು

---

1. ಪತ್ನೀಪುತ್ರಾದಿಗಳಿಂದ ಆಚರಿಸಲ್ಪಡುವ ಕರ್ಮಗಳಲ್ಲಿ (ಪುಣ್ಯವೇ ಆಗಲಿ, ಪಾಪವೇ ಆಗಲಿ), ಯಜಮಾನನಿಗೆ, ಫಲದಲ್ಲಿ ಭಾಗವಿರುತ್ತದೆ; ಆ ಕರ್ಮಗಳ ಸಂಭವಕ್ಕೆ ಪ್ರಧಾನ ಸಹಕಾರಿ ಕಾರಣನಾದ್ದರಿಂದ, ತನಗೆ ಆ ಕರ್ಮಗಳು ತಿಳಿಯದಿದ್ದರೂ, ಯಜಮಾನನು ಫಲಭಾಗಿಯಾಗುತ್ತಾನೆ.

ಜೀವನು) ತಿಳಿಯುವುದಿಲ್ಲ; ಪಶ್ಚಾತ್-ನಂತರ (ಆ ಕರ್ಮವು ಸಂಭವಿಸಿದ ನಂತರ), ತತ್-ಅದು, ಜ್ಞಾತಂ ಚೇತ್-ತಿಳಿಯಲ್ಪಟ್ಟರೆ, ವಾ-ಅಥವಾ, ಪೂರ್ವಂ-ಕರ್ಮ ಮಾಡುವ ಮೊದಲು, ಅನುಮೋದಿತಂ-(ತನ್ನಿಂದ) ಅನುಮೋದಿಸಲ್ಪಟ್ಟದ್ದು (ಸತಿಸುತಾದಿಗಳು ಆ ಪುಣ್ಯಕರ್ಮವನ್ನು ಆಚರಿಸಲು ತಾನು ಮೊದಲೇ ಒಪ್ಪಿಗೆಯನ್ನಿತ್ತಿದ್ದರೆ), ಸ್ಯಾತ್-ಆಗಿದ್ದರೆ, ತತ್ತದ್ಭಾವಪದಾತ್-ಆಯಾ ವಸ್ತುಗಳ (ಫಲರೂಪವಾದ ಸುವರ್ಣವಸ್ತ್ರಾದಿಗಳ) ಪ್ರಭಾವಸಹಿತವಾದ, ಫಲಂ-ಫಲವು, ಪೂರ್ವರೀತ್ಯಾ-ಹಿಂದೆ ಹೇಳಿದಂತೆ (ಅಜ್ಞಾನಾವಸ್ಥೆಗಳಲ್ಲಿ ದೊರೆತು, ನಂತರ ತಿಳಿಯಲ್ಪಟ್ಟರು), ಭವೇತ್-ಆಗುತ್ತದೆ.

ಸತ್ಕರ್ಮ ವಿಷ್ಣುಮುದ್ದಿಶ್ಯ ಕೃತಂ ತಸ್ಮಿನ್ ಸಮರ್ಪಿತಂ ।
ಫಲಾಧಿಕ್ಯಂ ಭವೇತ್ತಸ್ಯ ಮೋಕ್ಷಬೀಜಂ ಚ ಜಾಯತೇ ॥ ೨೧ ॥
ಅನ್ಯಸ್ಮಿನ್ನರ್ಪಿತಂ ಯತ್ತು ತತ್ತದ್ದೈವವಶಂ ತು ತತ್ ।
ಫಲೇ ನ್ಯೂನಂ ಭವೇತ್ತಚ್ಚ ಮೋಕ್ಷಬೀಜಂ ನ ಜಾಯತೇ ॥ ೨೨ ॥
ಸರ್ವೇಷ್ವಪಿ ಸ್ಥಿತೋ ವಿಷ್ಣುಃ ಸರ್ವಕರ್ತಾಖಿಲಾಶಯಃ ।
ಸಾಕ್ಷಾತ್ಪರಂಪರಾಯೋಗಾತ್ ಫಲವೈಚಿತ್ರ್ಯಕೃದ್ಭವೇತ್ ॥ ೨೩ ॥

ಪುಣ್ಯಕರ್ಮಗಳ ಪ್ರಭೇದಗಳನ್ನು ಹೇಳಿ, ಸಬೀಜಕರ್ಮಗಳಲ್ಲಿ ಪುಣ್ಯಬೀಜ, ನಿರ್ಬೀಜಗಳೆಂಬ ದ್ವೈವಿಧ್ಯವನ್ನು ನಿರೂಪಿಸಿ, ಪುಣ್ಯಕರ್ಮಗಳಲ್ಲಿ 'ಮೋಕ್ಷಬೀಜ'ವೆಂಬ ಮತ್ತೊಂದು ವಿಧವೂ ಉಂಟೆಂದು ಮುಂದಿನ ಶ್ಲೋಕಗಳಿಂದ ನಿರೂಪಿಸುತ್ತಾರೆ:—

---

ಅನುಮೋದಿಸಿದ್ದರೆ (ಒಪ್ಪಿಗೆಯನ್ನಿತ್ತಿದ್ದರೆ), ಆ ಕರ್ಮಫಲಗಳಾದ ಸುವರ್ಣಾದಿಗಳ ಭೋಗವೂ, ಅಜ್ಞಾನಾವಸ್ಥೆಯ ನಂತರ ಅಥವಾ ಆ ಮೊದಲು, ತಿಳಿಯಲ್ಪಟ್ಟದ್ದಾಗಿರುತ್ತದೆ (ನಿದ್ರೆಯಲ್ಲಿದ್ದವನನ್ನು ಎತ್ತಿತಂದು, ಸುಪ್ಪತ್ತಿಗೆಯಮೇಲೆ ಮಲಗಿಸಿರಲು, ಎಚ್ಚತ್ತಮೇಲೆ ಆ ಭೋಗದ ಜ್ಞಾನವಾಗುವಂತೆ ಇತ್ಯಾದಿ ಊಹನೀಯವಾದುದು—ಈ ಪ್ರಮೇಯವು) (೧೮-೨೦). ಶ್ರೀವಿಷ್ಣುವನ್ನು ಉದ್ದೇಶಿಸಿ ಮಾಡಲ್ಪಟ್ಟ ಸತ್ಕರ್ಮವು (ಪುಣ್ಯಕರ್ಮವು) ಶ್ರೀವಿಷ್ಣುವಿನಲ್ಲಿಯೇ ಭಕ್ತಿಪೂರ್ವಕ ಸಮರ್ಪಿಸಲ್ಪಟ್ಟದ್ದಾದರೆ, ಆ ಕರ್ಮಕ್ಕೆ ಅಧಿಕ ಫಲವೂ ದೊರೆಯುವುದಲ್ಲದೇ, ಅದು ಮೋಕ್ಷಹೇತುವೂ (ಬೀಜವೂ) ಆಗುತ್ತದೆ; ಅನ್ಯದೇವತೆಗಳಲ್ಲಿ ಅರ್ಪಿತವಾದ ಸತ್ಕರ್ಮವು, ಆಯಾ ದೇವತೆಯ ವಶಕ್ಕೆ ಸೇರಿ (ಫಲದಾತರು ಅವರಾಗುವುದರಿಂದ), ಶ್ರೀವಿಷ್ಣುಪ್ರೇರಣೆಯಂತೆ ಅವರು ಫಲವನ್ನಿತ್ತರೂ, ಆ ಕರ್ಮವು ಅಲ್ಪಫಲಪ್ರದವಾಗುತ್ತದೆ—ಅಲ್ಲದೇ ಅದು, ಮೋಕ್ಷಬೀಜವಾಗುವುದಿಲ್ಲ; ಸರ್ವರ ಮನೋನಿಯಾಮಕನಾಗಿ, ಸರ್ವಜೀವರಲ್ಲಿ ಸ್ಥಿತನಾಗಿರುವ ಶ್ರೀಹರಿಯೇ ಸ್ವತಂತ್ರ ಸರ್ವಕರ್ತನು (ಜೀವರು ಆತನು

ವಿಷ್ಣುಂ - ಶ್ರೀವಿಷ್ಣುವನ್ನು, ಉದ್ದಿಶ್ಯ - ಉದ್ದೇಶಿಸಿ (ಆತನ ಪ್ರೀತಿಯನ್ನೇ ಗುರಿಯಾಗಿಟ್ಟುಕೊಂಡು), ಕೃತಂ-ಮಾಡಲ್ಪಟ್ಟ, ಸತ್ಕರ್ಮ-ಪುಣ್ಯಕರ್ಮವು, ತಸ್ಮಿನ್-ಆತನಲ್ಲಿ (ಶ್ರೀವಿಷ್ಣುವಿನಲ್ಲಿ), ಸಮರ್ಪಿತಂ-ಸಮರ್ಪಿಸಲ್ಪಟ್ಟಿದ್ದು (ಆದರೆ), ತಸ್ಯ-ಅದಕ್ಕೆ, ಫಲಾಧಿಕ್ಯಂ-ಅಧಿಕ ಫಲವು ದೊರೆಯುವುದಲ್ಲದೇ, ಮೋಕ್ಷಬೀಜಂ-(ಆ ಸತ್ಕರ್ಮವು) ಮೋಕ್ಷಹೇತುವೂ, ಚ-ಕೂಡ, ಜಾಯತೇ-ಆಗುತ್ತದೆ; ಯತ್ತು-ಯಾವ ಸತ್ಕರ್ಮವಾದರೋ, ಅನ್ಯಸ್ಮಿನ್-ಅನ್ಯನಲ್ಲಿ (ವಿಷ್ಣ್ವಿತರ ದೇವತೆಯಲ್ಲಿ), ಅರ್ಪಿತಂ-ಸಮರ್ಪಿಸಲ್ಪಟ್ಟಿದ್ದು (ಆದರೆ), ತತ್-ಅದು, ತತ್ತದ್ವಶವಶಂ-ಆಯಾ ದೇವತೆಯ ವಶದಲ್ಲಿ ಸೇರಿ (ಫಲದಾನ ವಿಷಯದಲ್ಲಿ ಆಯಾ ದೇವತೆಯ ವಶದಲ್ಲಿರುತ್ತಾ), ಫಲೇ-ಫಲದಲ್ಲಿ, ನ್ಯೂನಂ-ಅಲ್ಪತೆಯನ್ನುಳ್ಳದ್ದು, ಭವೇತ್-ಆಗುತ್ತದೆ; ತಚ್ಚ-ಆ ಕರ್ಮವು (ಅನ್ಯದೇವತೆಯಲ್ಲಿ ಅರ್ಪಿತವಾದುದು), ಮೋಕ್ಷಬೀಜಂ-ಮೋಕ್ಷಕ್ಕೆ ಕಾರಣವಾದುದು, ನ ಜಾಯತೇ-ಆಗುವುದಿಲ್ಲ. ಸರ್ವೇಷು ಅಪಿ-ಎಲ್ಲರಲ್ಲಿಯೂ, ಸ್ಥಿತಃ-ಇರುವ (ಪ್ರಚೋದಕನಾಗಿ ನಿಂತಿರುವ, ಸ್ವತಂತ್ರನಾದ), ವಿಷ್ಣುಃ-ಶ್ರೀವಿಷ್ಣುವು, ಅಖಿಲಾಶಯಃ-ಸರ್ವರ ಮನಸ್ಸಿನಲ್ಲಿರುವ (ಮನೋನಿಯಾಮಕನಾದ), ಸರ್ವ ಕರ್ತಾ-ಸರ್ವಕರ್ತನಾಗಿರುವನು; ಸಾಕ್ಷಾತ್-ತಾನೇ (ಸ್ವಯಂ), ಪರಂಪರಾ ಯೋಗಾತ್-ಪರಂಪರಾ (ಅನ್ಯರ-ತತ್ತ್ವಾಭಿಮಾನಿಗಳ ದ್ವಾರಾ) ಯೋಗದಿಂದ, ಫಲ ವೈಚಿತ್ರ್ಯಕೃತ್-ವಿವಿಧವಾದ ಫಲವನ್ನುಂಟುಮಾಡುವವನು, ಭವೇತ್-ಆಗುತ್ತಾನೆ.

**ಆಭಿಚಾರಿಕಕರ್ಮಾಣಿ ದುರ್ಜನಾನಾಂ ನಿಬರ್ಹಣೇ ।**
**ಚೇತ್ಸತಾಮುಪಕಾರಾಣಿ ಪುಣ್ಯಬೀಜಾನಿ ತಾನಿ ಹಿ ॥ ೨೪ ॥**
**ಸ್ವಾರ್ಥಮೇವ ಸತಾಂ ಪೀಡಾಮುದ್ದಿಶ್ಯಾಭಿಚರೇದ್ಯದಿ ।**
**ಪಾಪಬೀಜಂ ತು ತತ್ಕರ್ಮ ತತ್ಸಹಾಯೋಽಪಿ ಪಾಪಕೃತ್ ॥ ೨೫ ॥**

ಪರಪೀಡಾರ್ಥವಾಗಿ ಆಚರಿಸುವ ಆಭಿಚಾರಿಕಕರ್ಮಗಳಲ್ಲಿಯೂ ಪುಣ್ಯಬೀಜ, ಪಾಪಬೀಜಗಳೆಂಬ ವಿಭಾಗವುಂಟೆಂದು ಹೇಳುತ್ತಾರೆ:—

ಆಭಿಚಾರಿಕಕರ್ಮಾಣಿ-(ಮಂತ್ರ, ಮಾಟ ಮೊದಲಾದ ಪರಪೀಡಾರ್ಥ ಆಚರಿಸುವ) ಮಾಟ ಮೊದಲಾದ ಕರ್ಮಗಳು, ದುರ್ಜನಾನಾಂ-ದುಷ್ಟಜನರ,

---

ಮಾಡಿದುದನ್ನೇ ಮಾಡುವ ಪರಾಧೀನಕರ್ತರು); ಸಾಕ್ಷಾತ್ತಾಗಿ ತಾನೇ ಅಥವಾ ಅನ್ಯರ ದ್ವಾರಾ (ಅನ್ಯದೇವತೆಗಳಲ್ಲಿದ್ದು ಪರಂಪರೆಯಿಂದ) ವಿವಿಧ ಫಲಗಳನ್ನು ಉತ್ಪಾದಿಸುವನು, ಶ್ರೀವಿಷ್ಣುವೇ (೨೦-೨೩). ಪರಪೀಡೆಗಾಗಿ ಆಚರಿಸುವ ಮಂತ್ರಮಾಟಾದಿ (ಅಭಿಚಾರಿಕ) ಕರ್ಮಗಳೂ ಪುಣ್ಯಬೀಜ ಪಾಪಬೀಜ ಪ್ರಭೇದವುಳ್ಳವು; ದುಷ್ಟಜನರ ವಿನಾಶಕ್ಕಾಗಿ ಆ ಕರ್ಮಗಳು ಆಚರಿಸಲ್ಪಟ್ಟು, ಸಜ್ಜನರಿಗೆ ಅದರಿಂದ ಉಪಕಾರವಾದರೆ, ಅವು ಪುಣ್ಯಬೀಜಕರ್ಮಗಳೇ ಆಗುತ್ತವೆ; ಸ್ವಾರ್ಥಕ್ಕಾಗಿ ಅಥವಾ ಸಜ್ಜನರ ಪೀಡೆಗಾಗಿ

ನಿಬರ್ಹಣೇ-ನಾಶಕ್ಕಾಗಿದ್ದು, ಸತಾಂ-ಸಜ್ಜನರಿಗೆ, ಉಪಕಾರಾಣಿ ಚೇತ್-ಉಪಕಾರಕಗಳಾದರೆ, ತಾನಿ-ಅವೂ, ಪುಣ್ಯಬೀಜಾನಿ ಹಿ-ಪುಣ್ಯಬೀಜಕರ್ಮಗಳೇ ಸರಿ; ಯದಿ-ಒಂದು ಪಕ್ಷ(ಅವು), ಸ್ವಾರ್ಥಂ ಏವ-ಸ್ವಪ್ರಯೋಜನಕ್ಕಾಗಿಯೇ, ಅಥವಾ, ಸತಾಂ-ಸಜ್ಜನರ, ಪೀಡಾಂ-ಹಿಂಸೆಯನ್ನು, ಉದ್ದಿಶ್ಯ-ಗುರಿಯಾಗಿಟ್ಟುಕೊಂಡು, ಅಭಿಚರೇತ್- ಆಚರಿಸಲ್ಪಟ್ಟರೆ, ತತ್ಕರ್ಮ-ಆ ಕರ್ಮವು, ಪಾಪಬೀಜಂ ತು-ಪಾಪಬೀಜ ಕರ್ಮವೇ ಸರಿ; ತತ್ಸಹಾಯಃ-ಅದರ ಸಹಾಯಕನೂ, ಪಾಪಕೃತ್-ಪಾಪಿಯೇ (ಪಾಪಮಾಡಿದವನೇ)

**ಭಾರ್ಯಾಪುತ್ರಧನಾದೀನಿ ಶರೀರೇಂದ್ರಿಯದಕ್ಷತಾ ।**
**ಅವಶ್ಯಂ ಸುಖಭೋಗಾಯ ಸರ್ವೇಷಾಂ ಭಾವ್ಯಮಿತ್ಯತಃ ॥ ೨೬ ॥**
**ಫಲಭೂತಾನಿ ಕೇಷಾಂಚಿತ್ ಕರ್ಮಣಾಂ ಪ್ರಾಯಶಸ್ತ್ವಿತಿ ।**
**ಉತ್ಸರ್ಗತೋ ಹಿ ಲೋಕಾನಾಂ ಜಾಯತೇ ತಾನಿ ಕರ್ಮಭಿಃ ॥ ೨೭ ॥**

ಭಾರ್ಯಾಪುತ್ರಧನಾದೀನಿ-ಸತೀ ಸುತ ಧನಾದಿಗಳು (ಹೆಂಡತಿ ಮಕ್ಕಳು ಐಶ್ವರ್ಯಾದಿಗಳು), ಶರೀರೇಂದ್ರಿಯದಕ್ಷತಾ-ದೇಹ ಮತ್ತು ಇಂದ್ರಿಯಗಳ ದಕ್ಷತೆಯೂ (ಭೋಗಶಕ್ತಿಯುಳ್ಳವಾಗಿರುವಿಕೆಯೂ), ಸರ್ವೇಷಾಂ-ಸರ್ವರಿಗೂ, ಸುಖಭೋಗಾಯ-ಸುಖಾನುಭವಕ್ಕಾಗಿ, ಅವಶ್ಯಂ ಭಾವ್ಯಂ-ಅವಶ್ಯಕವೆಂದು ತಿಳಿಯತಕ್ಕದ್ದು (ಅವಶ್ಯವಾಗಿ ಇರಬೇಕಾದವುಗಳು), ಇತ್ಯತಃ-ಹೀಗಿರುವುದರಿಂದ, ಕೇಷಾಂಚಿತ್-ಕೆಲವು, ಕರ್ಮಣಾಂ-ಕರ್ಮಗಳ, ಫಲಭೂತಾನಿ-(ಭಾರ್ಯಾ ಪುತ್ರಾದಿಗಳು) ಫಲರೂಪವಾದವುಗಳು, ಪ್ರಾಯಶಃ-ಬಹಳವಾಗಿ, ಇತಿ ತು-ಎಂದೇ (ತಿಳಿಯಬರುವುದರಿಂದ), ತಾನಿ-ಆ ಭೋಗಸಾಮಗ್ರಿಗಳು (ಪತ್ನಿ ಪುತ್ರ ಧನಾದಿಗಳು), ಉತ್ಸರ್ಗತಃ-ಸ್ವಾಭಾವಿಕವಾಗಿ, ಲೋಕಾನಾಂ-ಪ್ರಜೆಗಳಿಗೆ (ಜೀವರಿಗೆ), ಕರ್ಮಭಿಃ- (ಅವರವರ) ಕರ್ಮಗಳಿಂದ, ಜಾಯತೇ-ಉಂಟಾಗುತ್ತವೆ.

**ಪಾಪಾತಿಶಯಯೋಗೇನ ಭಾರ್ಯಾದಿಕಮಪೋಹ್ಯತೇ ।**
**ಕರ್ಮವೈಗುಣ್ಯವಶತಃ ಫಲೇ ವೈಗುಣ್ಯಮೀಕ್ಷ್ಯತೇ ॥ ೨೮ ॥**

---

ಆಚರಿಸಲ್ಪಟ್ಟರೆ, ಅವೇ ಕರ್ಮಗಳು ಪಾಪಬೀಜಕರ್ಮಗಳಾಗುತ್ತವೆ; ಆ ಕರ್ಮಗಳಿಗೆ ಸಹಾಯಮಾಡಿದವನೂ ಪಾಪಿಯಾಗುತ್ತಾನೆ (೨೪-೨೫). ಪತ್ನೀ ಪುತ್ರ ಧನಾದಿಗಳು ಮತ್ತು ದೇಹೇಂದ್ರಿಯಗಳ ಭೋಗಶಕ್ತಿಯೂ, ಸುಖಾನುಭವಕ್ಕೆ ಸರ್ವರಿಗೂ ಅವಶ್ಯವಾಗಿ ಇರಬೇಕು; ಇವುಗಳು ಪ್ರಾಯಃ ಕೆಲವು ಕರ್ಮಗಳ ಫಲರೂಪವಾಗಿಯೇ ದೊರೆಯುತ್ತವೆ; ಆದ್ದರಿಂದ ಜೀವರಿಗೆ, ಈ ಭೋಗಸಾಮಗ್ರಿಗಳು ಸ್ವಾಭಾವಿಕವಾಗಿ ಕರ್ಮಗಳಿಂದಲೇ ಸಿದ್ಧಿಸುತ್ತವೆಂದು ತಿಳಿಯಬೇಕು (೨೬-೨೭). ಮಹಾಪಾಪದ ಫಲದಿಂದ, ಭಾರ್ಯಾದಿ ಭೋಗಸಾಧನಗಳು ದುರ್ಲಭವಾಗುತ್ತವೆ (ನಷ್ಟವೂ

ಪಾಪಾತಿಶಯಯೋಗೇನ - ಅಧಿಕ ಪಾಪದ ಫಲವಾಗಿ (ಮಹಾಪಾಪಗಳ ಫಲರೂಪವಾಗಿ), ಭಾರ್ಯಾದಿಕಂ-ಪತ್ನೀ ಮೊದಲಾದ ಭೋಗಸಾಧನಗಳು, ಅಪೋಹ್ಯತೇ-ನಷ್ಟವಾಗುತ್ತವೆ (ದೊರೆಯುವುದಿಲ್ಲ); ಕರ್ಮವೈಗುಣ್ಯವಶತಃ-(ಶಾಸ್ತ್ರ) ವಿರುದ್ಧ ಕರ್ಮಗಳ ಫಲವಾಗಿ, ಫಲವೈಗುಣ್ಯಂ-ವಿರುದ್ಧ (ಸುಖವಿರುದ್ಧ-ದುಃಖ) ಫಲಗಳೂ, ಈಕ್ಷ್ಯತೇ-ಕಂಡುಬರುತ್ತವೆ.

**ಸುರೂಪಯೌವನಸ್ಥಾ ಚ ಪೂರ್ಣಾಯುಃ ಪುತ್ರಿಣೀ ಸುವಾಕ್ ।**
**ಪತ್ಯೌ ಭಕ್ತಿಮತೀ ನಿತ್ಯಂ ಕುಟುಂಬೀ ಸ್ವಮನೋಹರಾ ॥ ೨೯ ॥**
**ಏವಂ ಗುಣವತೀ ಭಾರ್ಯಾ ಸಾಂಗಕರ್ಮಫಲಂ ಸ್ಮೃತಂ ।**

ಸುರೂಪಯೌವನಸ್ಥಾ - ಸುಂದರಳೂ ತಾರುಣ್ಯವುಳ್ಳವಳೂ, ಚ - ಮತ್ತು ಪೂರ್ಣಾಯುಃ-ದೀರ್ಘಾಯುಷ್ಯವುಳ್ಳವಳೂ, ಪುತ್ರಿಣೀ-ಸತ್ಪುತ್ರರನ್ನು ಪಡೆದವಳೂ, ಸುವಾಕ್-ಮಧುರಭಾಷಿಣಿಯೂ, ಪತ್ಯೌ-ಪತಿಯಲ್ಲಿ ನಿತ್ಯಂ-ಸದಾ, ಭಕ್ತಿಮತೀ-ಭಕ್ತಿಯುಳ್ಳವಳೂ, ಕುಟುಂಬೀ-ಗೃಹಿಣೀಯೂ (ಗೃಹಕಾರ್ಯಗಳನ್ನು ಸಮರ್ಪಕ ವಾಗಿ ನಿರ್ವಹಿಸುವವಳೂ), ಸ್ವಮನೋಹರಾ-ತನ್ನ ಮನಸ್ಸನ್ನು ವಶಮಾಡಿಕೊಂಡ ವಳೂ (ತನಗೆ ಸದಾ ಆನಂದಪ್ರದಳೂ), ಏವಂ-(ಆಗಿರುವ) ಹೀಗಿರುವ, ಗುಣವತೀ-ಸದ್ಗುಣಶಾಲಿಯಾದ, ಭಾರ್ಯಾ-ಭಾರ್ಯಳು, ಸಾಂಗಕರ್ಮಫಲಂ-ನಿರ್ದುಷ್ಟವಾದ (ಲೋಪದೋಷಗಳಿಲ್ಲದ-ಅಂಗವೈಕಲ್ಯರಹಿತವಾದ) ಸತ್ಕರ್ಮಫಲ ರೂಪಳೆಂದು (ಸತ್ಕರ್ಮಫಲದಿಂದ ಪ್ರಾಪ್ಯಳೆಂದು), ಸ್ಮೃತಂ-ತಿಳಿಯಲ್ಪಟ್ಟಿದೆ.

**ಆಯುಷ್ಮಾನ್ ಶೀಲಸಂಪನ್ನೋ ವಿದ್ಯಾವಾನ್ ದಕ್ಷಗಾತ್ರಕಃ ॥ ೩೦ ॥**
**ವಂಶಕರ್ತಾ ಚ ಭೋಗ್ಯಶ್ಚ ಧನೀ ಪುತ್ರೋ ಹಿ ಸತ್ಫಲಂ ।**
**ನಾತಿಕಷ್ಟಾರ್ಜಿತಂ ಯತ್ಸ್ಯಾಚ್ಚೋರಾದಿಭಯವರ್ಜಿತಂ ॥ ೩೧ ॥**

---

ಆಗುತ್ತವೆ); ಶಾಸ್ತ್ರವಿರುದ್ಧವಾದ ಕರ್ಮಾಚರಣೆಯ ಫಲವಾಗಿ, ಸುಖವಿರುದ್ಧ (ದುಃಖ) ಫಲಗಳೂ ಕಂಡುಬರುತ್ತವೆ; ಕರ್ಮ ಮತ್ತು ಫಲಗಳ ಈ ಪ್ರಕಾರದ ಸಂಭವವು ಅನುಭವದಿಂದ ಸಹ ತಿಳಿಯಬಹುದಾಗಿದೆ (೨೮). ಸುಂದರಳೂ, ತರುಣಳೂ, ದೀರ್ಘಾಯುವೂ, ಸುಪುತ್ರವತಿಯೂ, ಮಧುರಭಾಷಿಣಿಯೂ, ಪತಿ ಭಕ್ತಿಯುತಳೂ, ನಿತ್ಯಮನೋಹರಳೂ, ದಕ್ಷಗೃಹಿಣಿಯೂ ಆದ, ಗುಣಶಾಲಿ ಯಾದ ಭಾರ್ಯಳು, ಸಾಂಗವಾಗಿ (ದೋಷಗಳಿಲ್ಲದಂತೆ) ಆಚರಿಸಿದ ಸತ್ಕರ್ಮಗಳ ಫಲವೆಂದು ತಿಳಿಯಲ್ಪಡುತ್ತದೆ (೨೯). ಆಯುಷ್ಮಂತನೂ, ನೀತಿಸಂಪನ್ನನೂ, ವಿದ್ಯಾವಂತನೂ, ದೃಢಕಾಯನೂ, ವಂಶೋದ್ಧಾರಕನೂ, ಆನಂದಪ್ರದನೂ, ಐಶ್ವರ್ಯವಂತನೂ ಆದ ಪುತ್ರನೂ, ಹೀಗೆಯೇ ಸತ್ಕರ್ಮಫಲರೂಪನೇ (ಫಲಪ್ರಾಪ್ಯನೇ) ಸರಿ; ವಿಶೇಷಶ್ರಮವಿಲ್ಲದೇ ಸಂಪಾದಿತವಾದುದೂ (ಅಲ್ಪಯತ್ನ

**ಯಾವಜ್ಜೀವಂ ದಾನಭೋಗನಿಯೋಜ್ಯಂ ತದ್ಧನಂ ಹಿ ಸತ್ ।**
**ಗೃಹಾರಾಮಾದಿಕಂ ಚೈವ ಮನೋ ಯತ್ರ ಪ್ರಸೀದತಿ ॥ ೩೨ ॥**
**ಇಂದ್ರಿಯಾಣಿ ಶರೀರಂ ಚ ಸ್ವಸ್ವಕಾರ್ಯಕ್ಷಮಾಣಿ ತು ।**
**ಸಾಂಗಕರ್ಮ ಫಲಾನ್ಯಾಹುರ್ವೈಗುಣ್ಯವಶತೋಽನ್ಯಥಾ ॥ ೩೩ ॥**

ಆಯುಷ್ಮಾನ್ - ದೀರ್ಘಾಯುವೂ, ಶೀಲಸಂಪನ್ನಃ - ಒಳ್ಳೆಯ ನಡತೆಯುಳ್ಳವನೂ, ವಿದ್ಯಾವಾನ್-ವಿದ್ಯಾವಂತನೂ, ದೃಢಗಾತ್ರಕಃ-ದೃಢವಾದ (ರೋಗಾದಿ ರಹಿತವೂ ಪುಷ್ಟವೂ ಆದ) ದೇಹವುಳ್ಳವನೂ, ವಂಶಕರ್ತಾ ಚ-ಸಂತತಿಯನ್ನು ವೃದ್ಧಿಗೊಳಿಸುವವನೂ, ಭೋಗ್ಯಃ-ಕಣ್ಮನಗಳಿಗೆ ಆನಂದಪ್ರದನೂ, ಧನೀ-ಧನವಂತನೂ (ಆದ), ಪುತ್ರಃ-ಸುತನು, ಸತ್ಫಲಂ ಹಿ-ಸತ್ಕರ್ಮಫಲವೆಂದು ಸಿದ್ಧವು (ನಿಶ್ಚಯವು); ನಾತಿಕಷ್ಟಾರ್ಜಿತಃ-ಅತ್ಯಾಯಾಸವಿಲ್ಲದೇ ಸಂಪಾದಿತವೂ (ಅಲ್ಪ ಯತ್ನದಿಂದ ಲಭಿಸಿದುದೂ), ಚೋರಾದಿಭಯವರ್ಜಿತಂ-ಚೋರಾದಿಗಳ ಭಯಕ್ಕೆ ಅವಕಾಶ ಕೊಡದುದೂ ಯಾವಜ್ಜೀವಂ-ಜೀವಂತನಾಗಿರುವವರೆಗೆ ದಾನ ಭೋಗನಿಯೋಜ್ಯಂ-ದಾನಕ್ಕೂ, ಭೋಗಕ್ಕೂ ವಿನಿಯೋಗಿಸಲ್ಪಡುವುದೂ, ಯತ್-ಯಾವುದೋ, ತದ್ಧನಂ-ಆ ಧನವೂ, ಸತ್-ಸತ್ಕರ್ಮಫಲವೇ; ಮನಃ-ಮನಸ್ಸು ಯತ್ರ-ಎಲ್ಲಿ (ಯಾವುದರಿಂದ), ಪ್ರಸೀದತಿ-ಪ್ರಸನ್ನವಾಗುವುದೋ, (ಹರ್ಷಶಾಂತಿಗಳಿಗೆ ಕಾರಣವಾಗುವ), ಗೃಹಾರಾಮಾದಿಕಂ-ಗೃಹ, ಉದ್ಯಾನಾದಿಗಳು, ಚ-ಮತ್ತು ಸ್ವಸ್ವಕಾರ್ಯಕ್ಷಮಾಣಿ-ತಂತಮ್ಮ ಕಾರ್ಯಗಳಲ್ಲಿ ಸಮರ್ಥವಾದ, ಇಂದ್ರಿಯಾಣಿ-ಇಂದ್ರಿಯಗಳೂ, ಚ-ಹಾಗೂ, ಶರೀರಂ-ದೇಹವೂ, ಸಾಂಗಕರ್ಮಫಲಾನಿ-ಸಾಂಗವಾಗಿ (ಲೋಪದೋಷಗಳಿಲ್ಲದಂತೆ) ಆಚರಿಸಲ್ಪಟ್ಟ ಸತ್ಕರ್ಮ ಫಲಗಳೆಂದು, ಆಹುಃ-ಜ್ಞಾನಿಗಳು (ಹೇಳುವರು); ವೈಗುಣ್ಯವಶತಃ-ಕರ್ಮವು ಗುಣಹೀನವಾಗುವುದರಿಂದ, ಅನ್ಯಥಾ-ಈ ಸರ್ವವೂ ಬೇರೆ ವಿಧವೇ (ವಿರುದ್ಧವಾದವುಗಳೇ-ದುಃಖಪ್ರದಗಳೇ) ಆಗುತ್ತವೆ.

**ಸರ್ವೇಷಾಂ ಭೋಗದಾನಾಯ ಸಂಪದಶ್ಚಂಚಲಾಃ ಕೃತಾಃ ।**
**ಸಂಸಾರೇ ಭಗವಾಂಸ್ತಸ್ಮಾತ್ಸಂಪತ್ಸು ಮದಮೋಹಕೃತ್ ॥ ೩೪ ॥**

---

ದಿಂದ ದೊರೆತದ್ದೂ), ಚೋರಾದಿಗಳ ಭಯಕ್ಕೆ ಅವಕಾಶ ಕೊಡದುದೂ, ಮರಣಪರ್ಯಂತ, ಭೋಗಕ್ಕೂ ದಾನಾದಿಗಳಿಗೆ ವಿನಿಯೋಗಿಸಲೂ, ಉಪಯುಕ್ತವಾಗುವ ಧನವೂ ಸತ್ಕರ್ಮಫಲದಿಂದಲೇ ಲಭ್ಯವಾಗುತ್ತದೆ; ಮನಃಪ್ರಸನ್ನತೆಗೆ (ಹರ್ಷಶಾಂತಿಗಳಿಗೆ) ಕಾರಣವಾಗುವ ಗೃಹ ಉದ್ಯಾನಾದಿಗಳೂ, ಸ್ವಕಾರ್ಯಸಮರ್ಥಗಳಾದ ದೇಹೇಂದ್ರಿಯಗಳೂ, ಸಾಂಗವಾಗಿ ಆಚರಿಸಿದ ಸತ್ಕರ್ಮಫಲಗಳೇ ಆಗಿವೆ; ಈ ಎಲ್ಲವೂ ಕರ್ಮವೈಗುಣ್ಯದಿಂದ (ವಿರುದ್ಧ ಕರ್ಮಾಚರಣೆಯಿಂದ) ಇದಕ್ಕೆ ವಿರುದ್ಧವಾದ ಗುಣವುಳ್ಳವುಗಳೇ ಆಗಿರುತ್ತವೆ (೩೦-೩೩). ಎಲ್ಲರಿಗೆ ಸುಖಪ್ರದವಾಗಲೆಂದೇ

**ಬಹುಕಾಲೀನ ಭೋಗ್ಯಾನಾಂ ಸಂಪದಾಂ ಕ್ಷಯಹೇತವೇ ।**
**ಸಂಪದ್ವತಿ ಮದಂ ಧತ್ತೇ ಪಶ್ಯನ್ನಪ್ಯೇವ ನ ಪಶ್ಯತಿ ॥ ೩೫ ॥**

ಸರ್ವೇಷಾಂ-ಸಮಸ್ತರಿಗೂ (ಎಲ್ಲರಿಗೂ), ಭೋಗದಾನಾಯ-ಸುಖಪ್ರದಾನಕ್ಕಾಗಿ, ಸಂಪದಃ-ಸಂಪತ್ತುಗಳು (ಪೂರ್ವೋಕ್ತಧನಾದಿಗಳು), ಚಂಚಲಾಃ-ಅಸ್ಥಿರವಾದವುಗಳಾಗಿ (ಏಕತ್ರ ನಿಲ್ಲದಂತೆ), ಕೃತಾಃ-(ಶ್ರೀಹರಿಯಿಂದ) ಮಾಡಲ್ಪಟ್ಟವೆ; ತಸ್ಮಾತ್-ಈ ಉದ್ದೇಶದಿಂದಲೇ, ಸಂಸಾರೇ-ಸಂಸಾರದಲ್ಲಿ ಭಗವಾನ್- ಶ್ರೀಹರಿಯು, ಸಂಪತ್ಸು-ಸಂಪತ್ತುಗಳಲ್ಲಿ ಮದಮೋಹಕೃತ್-ಮದಮೋಹಗಳನ್ನುಂಟುಮಾಡಿರುವನು; ಬಹುಕಾಲೀನ-ದೀರ್ಘಕಾಲ, ಭೋಗ್ಯಾನಾಂ-ಭೋಗಿಸಲ್ಪಡುವ, ಸಂಪದಾಂ-ಸಂಪತ್ತುಗಳ, ಕ್ಷಯಹೇತವೇ-ನಾಶಕ್ಕಾಗಿಯೇ, ಸಂಪದ್ವತಿ-ಸಂಪತ್ತುಳ್ಳವನಲ್ಲಿ ಮದಂ-ಮದವನ್ನು (ಗರ್ವವನ್ನು), ಧತ್ತೇ-ಉಂಟುಮಾಡುತ್ತಾನೆ; ಪಶ್ಯನ್ ಅಪಿ- (ಆಗ ಮದಾಂಧನಾಗಿ, ವಿಪ್ರಾದಿಗಳನ್ನು) ಕಂಡರೂ, ನ ಪಶ್ಯತಿ-ಕಾಣದಂತಿರುತ್ತಾನೆ.

**ಅವಜ್ಞಾನೇ ಚ ವಿಪ್ರಾಣಾಂ ಗುರೂಣಾಂ ಚ ಸತಾಮಪಿ ।**
**ಶೀಘ್ರಂ ಪುಣ್ಯಕ್ಷಯೇ ಜಾತೇ ಸಂಪದನ್ಯೇನ ಭುಜ್ಯತೇ ॥ ೩೬ ॥**

ವಿಪ್ರಾಣಾಂ-ಬ್ರಾಹ್ಮಣರ, ಚ-ಮತ್ತು, ಗುರೂಣಾಂ-ಗುರುಗಳ, ಚ-ಹಾಗೂ, ಸತಾಂ ಅಪಿ-ಸಜ್ಜನರ, ಅವಜ್ಞಾನೇನ-ತಿರಸ್ಕಾರದಿಂದ (ಅಪಮಾನಾದಿಗಳಿಂದ), ಶೀಘ್ರಂ-ಬೇಗನೇ, ಪುಣ್ಯಕ್ಷಯೇ-ಪುಣ್ಯನಾಶವು, ಜಾತೇ(ಸತಿ)-ಉಂಟಾಗುತ್ತಿರಲು, ಸಂಪತ್-ಸಂಪತ್ತು, ಅನ್ಯೇನ-ಬೇರೊಬ್ಬನಿಂದ, ಭುಜ್ಯತೇ-ಭೋಗಿಸಲ್ಪಡುತ್ತದೆ (ಸಂಪತ್ತನ್ನು ಪುಣ್ಯನಾಶದಿಂದ ಕಳೆದುಕೊಳ್ಳುತ್ತಾನೆ—ಅನ್ಯರ ವಶವಾಗುತ್ತದೆ).

---

ಸಂಪತ್ತುಗಳು (ಪಶುಧನಾದಿ ವಸ್ತುಗಳು) ಚಂಚಲಗಳಾಗಿ ಶ್ರೀಹರಿಯಿಂದ (ಏಕತ್ರ ನಿಲ್ಲದಂತೆ) ಮಾಡಲ್ಪಟ್ಟಿರುತ್ತವೆ; ಆದ್ದರಿಂದ, ಶ್ರೀಹರಿಯು, ಸಂಸಾರದಲ್ಲಿ ಸಂಪತ್ತುಗಳುಳ್ಳವರಲ್ಲಿ, ತದ್ವಿಷಯಕವಾದ ಮದಮೋಹಗಳನ್ನುಂಟುಮಾಡುವನು; ಬಹುಕಾಲ ಭೋಗಿಸಲ್ಪಡುವ ಸಂಪತ್ತುಗಳ ನಾಶಕ್ಕಾಗಿ, ಸಂಪತ್ತುಳ್ಳವನಿಗೆ ಮದವನ್ನು ಕೊಡುತ್ತಾನೆ; ಆಗ ಕಣ್ಣಿದ್ದೂ ಕಾಣದ ಕುರುಡನಂತೆ (ಮದಾಂಧನು) ಆಗುತ್ತಾನೆ (೩೪-೩೫). ಬ್ರಾಹ್ಮಣರ, ಗುರುಗಳ, ಹಾಗೂ ಸಜ್ಜನರ ತಿರಸ್ಕಾರದಿಂದ (ಅಪಮಾನದಿಂದ) ಪುಣ್ಯವು ನಾಶವಾಗುತ್ತದೆ—ಸಂಪತ್ತಿನ ನಾಶವಾಗುತ್ತದೆ; ಅವನ ಕೈತಪ್ಪಿ ಅನ್ಯವಶವಾಗಿ ಅನ್ಯರಿಂದ ಭೋಗಿಸಲ್ಪಡುತ್ತದೆ (೩೬). ಶ್ರೀಹರಿಯು ಯಾರಲ್ಲಿ ಅನುಗ್ರಹ ಮಾಡುವನೋ, ಅವರ ಮದಾದಿಗಳನ್ನು ಪರಿಹಾರಮಾಡುತ್ತಾನೆ; ಅವರು, ಗುರುವಿಪ್ರರ ಪೂಜಕರಾಗಿ ಪುಣ್ಯವೃದ್ಧಿಯನ್ನು ಸಾಧಿಸಿಕೊಳ್ಳುತ್ತಾರೆ; ಮೋಕ್ಷಕ್ಕೆ ಅನಧಿಕಾರಿಗಳಾದವರ ಅಜ್ಞಾನಾದಿಗಳನ್ನು ಶ್ರೀಹರಿಯು ವೃದ್ಧಿಗೊಳಿಸುತ್ತಾನೆ; ಮುಂದಿನ

ಅನುಗ್ರಹೋ ಹರಿರ್ಯಸ್ಮಿನ್ ಹರೇನ್ಮೋಹಂ ಮದಂ ತತಃ ।
ಪೂಜಕೋ ಗುರುವಿಪ್ರಾಣಾಂ ಪುಣ್ಯವೃದ್ಧಿಂ ಲಭೇತ ಸಃ ॥ ೩೭ ॥
ಮೋಕ್ಷೇಽನಧಿಕೃತಾ ಯೇ ತು ತೇಷಾಂ ಮೋಹಾದಿ ವರ್ಧಯೇತ್ ।
ಕಲ್ಪಾಂತರೇ ಮೋಕ್ಷ್ಯಮಾಣಾನಪಿ ಮೋಹೇನ ಯೋಜಯೇತ್ ॥ ೩೮
ವಿಘಟ್ಟನಾಯ ಮೋಕ್ಷಸ್ಯ ಸಾಮಗ್ರ್ಯಾ ಯೋಜಯನ್ಮದಂ ।
ಮೋಹಾದಿಕಂ ಚ ಕುರ್ವೀತ ವಿಲಂಬಸ್ತೇನ ಜಾಯತೇ ॥ ೩೯ ॥
ಮೋಕ್ತುಕಾಮಸ್ತು ಯಾನ್ ಜೀವಾನ್ ಸ ಸಾಮಗ್ರೀಃ ಸುಸಾಧಯೇತ್ ।
ಸರ್ವಸಾಕ್ಷೀ ಸರ್ವನಾಥಃ ಸರ್ವಕರ್ತಾ ಹರಿಸ್ತ್ವಿತಿ ॥ ೪೦ ॥
ಸುಖದುಃಖಪ್ರದೋ ಜೀವೈರ್ಜಡೈಶ್ಚಾಪಿ ಸ ದೀಪ್ಯತಿ ।

ಹರಿಃ-ಶ್ರೀಹರಿಯು, ಯಸ್ಮಿನ್-ಯಾರಲ್ಲಿ ಅನುಗ್ರಹಃ-ಅನುಗ್ರಹವುಳ್ಳವನೋ, ತತಃ-ಆತನಿಂದ, ಮೋಹಂ-ಮೋಹವನ್ನು (ಅಜ್ಞಾನವನ್ನು), ಹರೇತ್- ಕಳೆಯುತ್ತಾನೆ (ಅಪಹರಿಸುತ್ತಾನೆ); ಸಃ-ಆತನು (ಈ ರೀತಿ ಅನುಗ್ರಹಕ್ಕೆ ಪಾತ್ರನಾದವನು), ಗುರುವಿಪ್ರಾಣಾಂ-ಗುರುಗಳ ಮತ್ತು ಬ್ರಾಹ್ಮಣರ, ಪೂಜಕಃ-ಪೂಜಕನಾಗಿ, ಪುಣ್ಯ ವೃದ್ಧಿಂ-ಪುಣ್ಯದ ಅಭಿವೃದ್ಧಿಯನ್ನು ಲಭೇತ-ಹೊಂದುತ್ತಾನೆ; ಯೇ ತು-ಯಾರಾದರೆ, ಮೋಕ್ಷೇ-ಮುಕ್ತಿಯನ್ನು ಹೊಂದುವಲ್ಲಿ ಅನಧಿಕೃತಾಃ-ಅಧಿಕಾರವಿಲ್ಲದವರೋ, ತೇಷಾಂ-ಅವರಿಗೆ, ಮೋಹಾದಿ-ಅಜ್ಞಾನಾದಿಗಳನ್ನು ವರ್ಧಯೇತ್-ವೃದ್ಧಿಗೊಳಿಸು ತ್ತಾನೆ; ಅಪಿ-ಮತ್ತು ಕಲ್ಪಾಂತರೇ-ಬೇರೊಂದು ಬ್ರಹ್ಮಕಲ್ಪದಲ್ಲಿ ಮೋಕ್ಷ್ಯಮಾಣಾನ್- ಮುಕ್ತರಾಗಲಿರುವ ಜೀವರನ್ನು ಮೋಹೇನ-ಮೋಹದಿಂದ, ಯೋಜಯೇತ್- ಸಂಬಂಧಿಸುತ್ತಾನೆ (ಯುಕ್ತರಾಗುವಂತೆ ಮಾಡುತ್ತಾನೆ—ಸಂಸಾರಕ್ಕೆ ಕಾರಣವಾದ ಮೋಹಾದಿಗಳಿಂದ ಮುಕ್ತರನ್ನಾಗಿ ಮಾಡುವುದಿಲ್ಲ); ಮೋಕ್ಷಸ್ಯ-ಮೋಕ್ಷದ

---

ಬ್ರಹ್ಮಕಲ್ಪಗಳಲ್ಲಿ ಅಂದರೆ, ಬಹುಕಾಲದ ನಂತರ, ಮುಕ್ತರಾಗಲಿರುವ ಜೀವರಿಗೆ ಸಹ ಮೋಹಾದಿಗಳನ್ನುಂಟುಮಾಡಿ ಅವರನ್ನು ಸಂಸಾರ ಬಂಧನದಲ್ಲಿಡುತ್ತಾನೆ; ಶೀಘ್ರವಾಗಿ ಮೋಹವನ್ನು ಹೊಂದದಂತೆ ತಡೆಗಟ್ಟುವುದಕ್ಕೆ ಅವಶ್ಯಸಾಧನಗಳಾದ ಮದಾದಿ ಗಳನ್ನೂ ಅಜ್ಞಾನವನ್ನೂ ಪರಿಹರಿಸದೇ ಅವುಗಳ ಸಂಬಂಧವು ಬಹುಕಾಲ ಇರುವಂತೆ ಮಾಡುತ್ತಾನೆ. ಯಾರನ್ನು ಮುಕ್ತರನ್ನಾಗಿ ಮಾಡಲು, ಶ್ರೀಹರಿಯು ಇಚ್ಛಿಸುವನೋ ಅವರಿಗೆ ಜ್ಞಾನ ಭಕ್ತ್ಯಾದಿ ಸಾಧನಸಾಮಗ್ರಿಗಳನ್ನು ವಿಶೇಷವಾಗಿ ಒದಗಿಸಿಕೊಡುತ್ತಾನೆ; ಹೀಗೆ ಸರ್ವರ ಸ್ವಾಮಿಯೂ, ಸರ್ವಸಾಕ್ಷಿಯೂ, ಸರ್ವಕರ್ತನೂ ಆದ ಶ್ರೀಹರಿಯು, ಸರ್ವರಿಗೆ ಯಥಾಯೋಗ್ಯ ಸುಖದುಃಖಪ್ರದನಾಗಿರುವನು; ವಿಶ್ವಗತವಾದ ಸಕಲ ಚೇತನಾಚೇತನ ವಸ್ತುಗಳಲ್ಲಿದ್ದು ಆಯಾ ಅಧಿಷ್ಠಾನದ ಯೋಗ್ಯತಾನುಗುಣವಾಗಿ, ಅಲ್ಲಲ್ಲಿ ಪ್ರಕಾಶಿಸುತ್ತಾನೆ (೩೭-೪೦). ಪಾಪಪ್ರಭೇದಗಳನ್ನು ಈ ಮುಂದೆ

(ಮುಕ್ತಿಯನ್ನು), ವಿಘಟ್ಟನಾಯ - ತಪ್ಪಿಸಲಿಕ್ಕಾಗಿ, ಸಾಮಗ್ರ್ಯಾ - (ಅವಶ್ಯಕವಾದ) ಸಾಧನದಿಂದ, ಯೋಜಯನ್-ಯುಕ್ತರನ್ನಾಗಿ ಮಾಡುವವನಾಗಿ, ಮದಂ-ಮದವನ್ನು (ವಿಷಯಾಸಕ್ತಿಯಿಂದ ಹುಟ್ಟುವ ದರ್ಪಾದಿಗಳನ್ನೂ), ಮೋಹಾದಿಕಂ ಚ-ಮೋಹಾದಿ (ಮಾತ್ಸರ್ಯಾದಿ)ಗಳನ್ನೂ ಕುರ್ವೀತ-ಉಂಟುಮಾಡುತ್ತಾನೆ; ತೇನ-ಅದರಿಂದ, ವಿಲಂಬಃ-(ಮೋಕ್ಷಪ್ರಾಪ್ತಿಯು) ವಿಲಂಬವು (ತಡವಾಗಿ), ಜಾಯತೇ-ಉಂಟಾಗುತ್ತದೆ; ಸಃ-ಶ್ರೀಹರಿಯು, ಯಾನ್ ಜೀವಾನ್-ಯಾವ ಜೀವರನ್ನು ಮೋಕ್ತುಕಾಮಃ-(ಸಂಸಾರದಿಂದ ಬಿಡಿಸಲು) ಮುಕ್ತರನ್ನಾಗಿ ಮಾಡಲು ಇಚ್ಛಿಸುವನೋ, ಸಾಮಗ್ರೀಃ-ಮೋಕ್ಷಸಾಮಗ್ರಿಗಳನ್ನು ಸುಸಾಧಯೇತ್-(ಜ್ಞಾನಾದಿಗಳನ್ನು) ಅಧಿಕವಾಗಿ ಸಾಧಿಸಿ ಕೊಡುತ್ತಾನೆ; ಇತಿ-ಹೀಗೆ, ಸರ್ವನಾಥಃ-ಸರ್ವರ ಸ್ವಾಮಿಯೂ, ಸರ್ವಸಾಕ್ಷೀ-ಸರ್ವಸಾಕ್ಷಿಯೂ (ಎಲ್ಲ ಜೀವರ ಮೋಕ್ಷಕಾಲ, ಸಾಧನಾದಿಗಳನ್ನು ಬಲ್ಲವನೂ), ಸರ್ವಕರ್ತಾ-ಸರ್ವಕರ್ತನೂ (ಎಲ್ಲರಿಂದ ಎಲ್ಲವನ್ನೂ ಮಾಡಿ ಮಾಡಿಸುವವನೂ), ಹರಿಃ-(ಆದ) ಶ್ರೀಹರಿಯು, ಸುಖದುಃಖಪ್ರದಃ-(ಅವರವರ ಯೋಗ್ಯತೆಯಂತೆ) ಸುಖದುಃಖಗಳನ್ನು ಕೊಡುವವನಾಗಿ, ಜೀವೈಃ-ಜೀವರಿಂದಲೂ, ಜಡೈಃ ಚ-ಜಡ ಪದಾರ್ಥಗಳಿಂದಲೂ, ಅಪಿ-ಸಹ, ಸಃ-(ಚೇತನಾಚೇತನಗಳೆಂಬ ಸರ್ವಾಧಿಷ್ಠಾನಗತನಾದ) ತಾನು, ದೀಪ್ಯತಿ-(ಅಧಿಷ್ಠಾನಾನುಸಾರವಾಗಿ), ಪ್ರಕಾಶಿಸುತ್ತಾನೆ.

ವಿಹಿತಾಕರಣಾತ್ಪಾಪಂ ನಿಷಿದ್ಧಸ್ಯ ಕೃತೇರಪಿ ॥ ೪೧ ॥
ಪ್ರತ್ಯೇಕಂ ದ್ವಿವಿಧಂ ತಚ್ಚ ನಿರ್ಬೀಜಂ ಚ ಸಬೀಜಕಂ ।

ವಿಹಿತಾಕರಣಾತ್-ವಿಧ್ಯುಕ್ತಕರ್ಮಗಳನ್ನು ಆಚರಿಸದಿರುವುದರಿಂದ (ಶಾಸ್ತ್ರವಿಹಿತಕರ್ಮತ್ಯಾಗದಿಂದ), ಅಪಿ-ಮತ್ತು ನಿಷಿದ್ಧಸ್ಯ ಕೃತೇಃ ಅಪಿ-ನಿಷೇಧಿಸಲಾದ ಕರ್ಮವನ್ನು ಮಾಡುವುದರಿಂದಲೂ, ಪಾಪಂ-ಪಾಪವು (ಉದ್ಭವಿಸುತ್ತದೆ); ತತ್ ಚ-ಆ ಪಾಪವಾದರೂ, ಪ್ರತ್ಯೇಕಂ-ಒಂದೊಂದೂ (ವಿಧಿತ್ಯಾಗ ಮತ್ತು ನಿಷಿದ್ಧವನ್ನಾಚರಿಸುವುದು), ನಿರ್ಬೀಜಂ-ನಿರ್ಬೀಜವೆಂದೂ, ಚ-ಮತ್ತು ಸಬೀಜಕಂ-ಸಬೀಜವೆಂದೂ, ದ್ವಿವಿಧಂ-ಎರಡು ವಿಧವಾಗಿರುವುದು.

---

ವಿವೇಚಿಸಲಾಗುತ್ತದೆ:— ಶ್ರೀಹರಿಯ ಆಜ್ಞಾರೂಪಗಳಾದ ಶ್ರುತಿಸ್ಮೃತಿಗಳು ವಿಧಿ ನಿಷೇಧರೂಪದಿಂದ ಇವೆ (ಮಾಡು-ಬಿಡು ಎಂಬ ಆಜ್ಞಾರೂಪದಿಂದಿವೆ—ಶಾಸ್ತ್ರಗಳು); ವಿಧಿಯನ್ನು ಪಾಲಿಸದಿರುವುದರಿಂದಲೂ, ನಿಷಿದ್ಧವನ್ನು ಆಚರಿಸುವುದರಿಂದಲೂ, ಪಾಪ ಉಂಟಾಗುತ್ತದೆ; ಈ ಎರಡು ವಿಧವಾದ ಪಾಪವೂ, ಪ್ರತ್ಯೇಕವಾಗಿ, ನಿರ್ಬೀಜವೆಂದೂ ಸಬೀಜವೆಂದೂ ದ್ವಿವಿಧವಾಗಿರುತ್ತದೆ (೪೧). ನಿರ್ಬೀಜ ಪಾಪವು, ಜ್ಞಾತಫಲವುಳ್ಳದೆಂದೂ, ಅಜ್ಞಾತಫಲವುಳ್ಳದ್ದೆಂದೂ, ದ್ವಿವಿಧವಾಗಿರುವುದು; ಪ್ರಸಂಗಬಲದಿಂದ (ಉದ್ದೇಶಪೂರ್ವಕವಲ್ಲದೇ), ಅಥವಾ ಪ್ರಮಾದದಿಂದ, ಅಥವಾ

**ಜ್ಞಾತಾಜ್ಞಾತಫಲತ್ವೇನ ನಿರ್ಬೀಜಂ ದ್ವಿವಿಧಂ ಮತಂ ॥ ೪೨ ॥**
**ಪ್ರಸಂಗೇನ ಪ್ರಮಾದಾದ್ವಾ ಯದೌದಾಸೀನ್ಯತಃ ಕೃತಂ ।**
**ಪರಾನುರೋಧಾತ್ ಜ್ಞಾತಂ ಚೇತ್ತಜ್ಞಾತಫಲಕಂ ಸ್ಮೃತಂ ॥ ೪೩ ॥**

ನಿರ್ಬೀಜಂ-ನಿರ್ಬೀಜಪಾಪವು, ಜ್ಞಾತಾಜ್ಞಾತಫಲತ್ವೇನ-ಜ್ಞಾತ ಮತ್ತು ಅಜ್ಞಾತ ಫಲವುಳ್ಳದ್ದೆಂಬ ಭೇದದಿಂದ, ದ್ವಿವಿಧಂ-ಎರಡು ವಿಧವೆಂದು, ಮತಂ-ತಿಳಿಯಲಾಗಿದೆ; ಪ್ರಸಂಗೇನ-ಸಂದರ್ಭಬಲದಿಂದ (ಉದ್ದೇಶಪೂರ್ವಕವಲ್ಲದೇ), ವಾ-ಅಥವಾ, ಪ್ರಮಾದಾತ್-ಆಕಸ್ಮಿಕವಾದ ತಪ್ಪಿನಿಂದ (ಅಥವಾ ಮರವಿನಿಂದ-ವಿಸ್ಮರಣೆಯಿಂದ) ಯತ್-ಯಾವ ಪಾಪವು, ಔದಾಸೀನ್ಯತಃ- ಉದಾಸೀನಭಾವದಿಂದ, ಕೃತಂ-ಮಾಡಲ್ಪಡುವುದೋ, ಪರಾನುರೋಧಾತ್-ಅನ್ಯಾಭಿಪ್ರಾಯಾನುಸಾರ, ಜ್ಞಾತಂ ಚೇತ್- (ಪಾಪವೆಂದು) ತಿಳಿಯಲ್ಪಟ್ಟರೆ, ತತ್ - ಅದು, ಜ್ಞಾತಫಲಕಂ -'ಜ್ಞಾತಫಲಕ' ಪಾಪವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ.

**ತಾದೃಶಂ ಕರ್ಮ ದುರ್ಭೋಗಂ ದತ್ವಾ ನಶ್ಯತಿ ನಾನ್ಯಥಾ ।**
**ತತೋ ಭಾರ್ಯಾದಿನಾ ವಾಪಿ ಸಂಪನ್ನಂ ಪಾತಕಂ ಹಿ ತತ್ ॥ ೪೪ ॥**
**ಸರ್ವಥಾ ಸ್ವಯಮಜ್ಞಾತಂ ತದಜ್ಞಾತಫಲಂ ಸ್ಮೃತಂ ।**
**ವಿಣ್ಮೂತ್ರಮಾಂಸರಕ್ತಾದಿ ದುರ್ವಸ್ತ್ರಾದಿ ಚ ತತ್ಫಲಂ ॥ ೪೫ ॥**
**ಬಾಲ್ಯೇ ಪಶುತ್ವೇ ನಿದ್ರಾದೌ ಜಾಯಮಾನಂ ನ ಬುಧ್ಯತೇ ।**

ತಾದೃಶಂ ಕರ್ಮ-ಜ್ಞಾತಫಲನಿರ್ಬೀಜಪಾಪವು, ದುರ್ಭೋಗಂ - ಅನಿಷ್ಟ (ದುಷ್ಟ) ವಿಷಯಗಳ ಭೋಗವನ್ನು ದತ್ವಾ-ಕೊಟ್ಟು, ನಶ್ಯತಿ-ನಷ್ಟವಾಗುತ್ತದೆ; ಅನ್ಯಥಾ ನ-ಬೇರೆ ಪ್ರಕಾರದಿಂದ ಅದರ ನಾಶವಿಲ್ಲ; ತತಃ-ಆ ನಂತರ, ಭಾರ್ಯಾದಿನಾ

---

ಉದಾಸೀನಭಾವದಿಂದ ಮಾಡಲ್ಪಟ್ಟು, ಅನ್ಯಾಭಿಪ್ರಾಯಾನುಸಾರ ಪಾಪವೆಂದು ಕರ್ತನಿಗೆ ತಿಳಿದುಬಂದರೆ, ಅದು ಜ್ಞಾತಫಲ ನಿರ್ಬೀಜ ಪಾಪವೆನಿಸುತ್ತದೆ[1] (೪೨-೪೩). ಈ ಪಾಪದ ಫಲವು, ದುರ್ಭೋಗವನ್ನಿತ್ತು ನಷ್ಟವಾಗುತ್ತದೆ; ಭಾರ್ಯಾದಿಗಳಿಂದ, ತನಗೆ ತಿಳಿಯದಂತೆ, ಸಂಪಾದಿತವಾದ ಪಾಪವೂ, ಅಜ್ಞಾತಫಲಕ ನಿರ್ಬೀಜಪಾಪವೆಂದೇ ತಿಳಿಯಲ್ಪಡುತ್ತದೆ—ಆ ಕರ್ಮವು, ಮಲ, ಮೂತ್ರ, ಮಾಂಸ, ರಕ್ತ ದುರ್ವಸ್ತ್ರಾದಿಗಳ ರೂಪದಿಂದ ಕರ್ತನಿಗೆ, ಬಾಲ್ಯ, ಪಶುದೇಹ, ನಿದ್ರಾದಿ ಅಜ್ಞಾನಾವಸ್ಥೆಯಲ್ಲಿ ಭೋಗವಿತ್ತು ನಷ್ಟವಾಗುತ್ತದೆ (೪೪-೪೫).

---

1. ಇದೇ ಅಧ್ಯಾಯದ ೧೭-೧೮-೧೯ನೇ ಶ್ಲೋಕಗಳನ್ನು ನೋಡಿರಿ; ಅಲ್ಲಿ ಜ್ಞಾತಾಜ್ಞಾತ ನಿರ್ಬೀಜ ಪುಣ್ಯಕರ್ಮದ ವಿವರಣೆಯಿದೆ—ಇಲ್ಲಿ ಆ ವಿಧದ ವಿಭಾಗವು ಪಾಪಕರ್ಮದಲ್ಲಿಯೂ ಉಂಟೆಂದು ಹೇಳಲಾಗಿದೆ.

ವಾಪಿ-ಪತ್ನೀ (ಪುತ್ರ) ಮೊದಲಾದ ತನ್ನ ಜನರಿಂದ, ಸಂಪನ್ನಂ-ಸಂಪಾದಿತವಾದ, ಪಾತಕಂ-ಪಾಪವು, ತತ್-ಅದು, ಸರ್ವಥಾ-ಯಾವ ರೀತಿಯಿಂದಲೂ, ಸ್ವಯಂ-ತನ್ನಿಂದ, ಅಜ್ಞಾತಂ-ತಿಳಿಯಲ್ಪಡದಿರುವುದು (ತಿಳಿಯಲ್ಪಡದಿದ್ದರೆ), ತತ್-ಅದು, ಅಜ್ಞಾತಫಲಂ-ಅಜ್ಞಾತಫಲವುಳ್ಳ ನಿರ್ಬೀಜಪಾಪವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ; ತತ್ಫಲಂ-ಈ ಪಾಪದ ಫಲವಾದ, ವಿಣ್ಮೂತ್ರ ಮಾಂಸರಕ್ತಾದಿ-ಮಲ, ಮೂತ್ರ, ಮಾಂಸ, ರಕ್ತಾದಿಗಳನ್ನು, ದುರ್ವಸ್ತ್ರಾದಿ-ಚೀರವಸ್ತ್ರಾದಿಗಳನ್ನೂ (ಹರಿದ ಬಟ್ಟೆ ಮೊದಲಾದುವನ್ನು), ಬಾಲ್ಯೇ-ಬಾಲ್ಯದಲ್ಲಿಯೂ, ಪಶುತ್ವೇ-ಪಶುದೇಹದಲ್ಲಿದ್ದಾಗಲೂ, ನಿದ್ರಾದೌ-ನಿದ್ರೆ ಮೊದಲಾದ ಅಜ್ಞಾನಾವಸ್ಥೆಯಲ್ಲಿ ಜಾಯಮಾನಂ-ಒಂದೊದಗುವವುಗಳನ್ನು ನ ಬುದ್ಧ್ಯತೇ- ತಿಳಿಯುವುದಿಲ್ಲ.

**ಪಶ್ಚಾತ್ ಜ್ಞಾತಂ ತು ತಚ್ಚೇತ್ಸ್ಯಾತ್ ಪೂರ್ವಂ ವಾಪ್ಯನುಮೋದಿತಂ ॥ ೪೬ ॥**
**ತತ್ತದ್ಭಾವವಶಾತ್ತಸ್ಯ ಫಲಂ ಭವತಿ ನಾನ್ಯಥಾ ।**

ಪಶ್ಚಾತ್-(ಆ ಪಾಪಕರ್ಮವು ಸಂಭವಿಸಿದ) ನಂತರ, ತತ್-ಅದು, ಜ್ಞಾತಂ ಚೇತ್-ತಿಳಿಯಲ್ಪಟ್ಟರೆ, ವಾ-ಅಥವಾ, ಪೂರ್ವಂ-(ಸಂಭವಿಸುವ) ಮೊದಲು, ಅನುಮೋದಿತಂ ಸ್ಯಾತ್-(ತನ್ನಿಂದ) ಅನುಮೋದಿಸಲ್ಪಟ್ಟಿದ್ದಾದರೆ, ತತ್ತದ್ಭಾವವಶಾತ್-ಆಯಾ ದುರ್ಭೋಗಗಳ ಪ್ರಭಾವದಿಂದ, ತಸ್ಯ-ಅದರ, ಫಲಂ-ಫಲವು, ಪೂರ್ವರೀತ್ಯಾ-ಹಿಂದೆ ಹೇಳಿದಂತೆ (ಅಜ್ಞಾನಾವಸ್ಥೆಯಲ್ಲಿ ದೊರೆತು ನಂತರ ತಿಳಿಯಲ್ಪಡುವುದು), ಭವತಿ-ಆಗುತ್ತದೆ; ಅನ್ಯಥಾ ನ-ಬೇರೆ ವಿಧದಿಂದಲ್ಲ.

**ಇಷ್ಟಾನಿಷ್ಟ ಪದಾರ್ಥೇಭ್ಯಃ ದುಃಖೇऽದುಃಖಂ ಚ ವೇದನಂ ॥ ೪೭ ॥**
**ತಯೋರನ್ಯತರಂ ಜ್ಞಾನಂ ಭೋಗ ಇತ್ಯಭಿಧೀಯತೇ ।**
**ಸುಖಭೋಗಸ್ತು ಸದ್ಭೋಗೋ ದುರ್ಭೋಗೋ ದುಃಖವೇದನಂ ॥ ೪೮**

ಇಷ್ಟಾನಿಷ್ಟಪದಾರ್ಥೇಭ್ಯಃ-(ತನಗೆ) ಇಷ್ಟವಾದ ಮತ್ತು ಅನಿಷ್ಟವಾದ ಪದಾರ್ಥಗಳಿಂದ (ಇಷ್ಟವಸ್ತುವಿನ ವಿಯೋಗದಿಂದಲೂ, ಅನಿಷ್ಟವಸ್ತುವಿನ

---

ಆ ಪಾಪಕರ್ಮದ ಸಂಭವವು, ನಂತರ ಜ್ಞಾತವಾಗಿದ್ದರೆ, ಅಥವಾ, ತನ್ನ ಪೂರ್ವದ ಒಪ್ಪಿಗೆಯಿಂದ (ಪತಿಸುತಾದಿಗಳಿಂದ) ನಡೆದಿದ್ದರೆ,[1] ಅದರ ಫಲವಾದರೂ, ಅಜ್ಞಾನಾವಸ್ಥೆಯಲ್ಲಿ ದೊರೆತು, ನಂತರ ಆ ದುರ್ಭೋಗದ ಜ್ಞಾನವಾಗುತ್ತದೆ; ಅಥವಾ ದುರ್ಭೋಗವನ್ನು ಹೊಂದುವ ಪೂರ್ವದಲ್ಲಿ ಮಾತ್ರ ತಿಳಿದು, ಭೋಗಕಾಲದಲ್ಲಿ ಅದರ ಜ್ಞಾನವಿರುವುದಿಲ್ಲ (೪೬). ತನಗೆ ಇಷ್ಟವಾದ ವಸ್ತುವಿನ ವಿಯೋಗವೂ,

---

1. ಇದೇ ಅಧ್ಯಾಯದ ೨೦ನೇ ಶ್ಲೋಕದಲ್ಲಿ 'ಅಜ್ಞಾತಫಲಕ' ನಿರ್ಬೀಜಪುಣ್ಯದ ಫಲಾನುಭವ ಪ್ರಕಾರವು ವರ್ಣಿತವಾಗಿದೆ—ಅದನ್ನು ಇಲ್ಲಿ ಗಮನಿಸಬಹುದು.

ಪ್ರಾಪ್ತಿಯಿಂದಲೂ), ದುಃಖೇ-(ಉಂಟಾಗುವ) ದ್ವಿವಿಧ ದುಃಖವು, ಚ-ಮತ್ತು ಅದುಃಖಂ-ಸುಖವೂ,[1] ವೇದನಂ-ಅನುಭವಗೋಚರವು; ತಯೋಃ-ಈ ಎರಡರಲ್ಲಿ ಅನ್ಯತರಂ ಜ್ಞಾನಂ-ಯಾವುದೊಂದರ ಜ್ಞಾನವೂ, ಭೋಗಃ-ಭೋಗವು, ಇತಿ ಅಭಿಧೀಯತೇ-ಎಂದು ಕರೆಯಲ್ಪಡುತ್ತದೆ; ಸುಖಭೋಗಃ ತು-ಸುಖಭೋಗವೇ, ಸದ್ಭೋಗಃ-ಸದ್ಭೋಗವು (ಸುಖಾನುಭವವು); ದುಃಖವೇದನಂ-ದುಃಖಾನುಭವವು, ದುರ್ಭೋಗಃ-ದುರ್ಭೋಗವೆನಿಸುತ್ತದೆ.

**ಯದ್ಯಥಾ ಕರ್ಮ ಸಂಪನ್ನಂ ತತ್ತಥಾಪ್ಯನುಮೋದಿತಂ ।**
**ತತ್ತದ್ಭಾವವಶಾತ್ತಸ್ಯ ಫಲಂ ಭವತಿ ನಾನ್ಯಥಾ ॥ ೪೯ ॥**
**ಇಷ್ಟಾನಿಷ್ಟಪದಾರ್ಥೇಭ್ಯಃ ತತ್ತಥಾ ಫಲದಂ ಭವೇತ್ ।**

ಯತ್‌ಕರ್ಮ-ಯಾವ ಕರ್ಮವು, ಯಥಾ-ಹೇಗೆ, ಸಂಪನ್ನಂ-ಸಂಭವಿಸುತ್ತದೆಯೋ (ಘಟಿಸುವುದೋ), ತತ್-ಯಾವ ಕರ್ಮವು, ತಥಾಪಿ-ಹಾಗೆಯೇ, ಅನುಮೋದಿತಂ-(ಘಟನೆಗೆ ಮೊದಲು) ಒಪ್ಪಲ್ಪಟ್ಟಿತ್ತೋ, ತತ್ತದ್ಭಾವವಶಾತ್-ಕರ್ಮಘಟನೆಯ ಆಯಾ ಭಾವವನ್ನು (ಪರಿಸ್ಥಿತಿಯನ್ನು) ಅನುಸರಿಸಿ, ತಸ್ಯ-ಅದರ, ಫಲಂ-ಫಲವು, ಭವತಿ-ಉಂಟಾಗುತ್ತದೆ; ಅನ್ಯಥಾ ನ-ಬೇರೆ ರೀತಿಯಿಂದಲ್ಲ. ತತ್-ಆ ಕರ್ಮವು, ಇಷ್ಟಾನಿಷ್ಟಪದಾರ್ಥೇಭ್ಯಃ-ಇಷ್ಟಾನಿಷ್ಟ ವಸ್ತುಗಳ ದೆಸೆಯಿಂದ, ತಥಾ ಫಲದಂ-ಹಾಗೆ ಫಲಪ್ರದವು, ಭವೇತ್-ಆಗುತ್ತದೆ.

**ಪುಣ್ಯಬೀಜಂ ಪಾಪಬೀಜಂ ಸಬೀಜಂ ದ್ವಿವಿಧಂ ಸ್ಮೃತಂ ॥ ೫೦ ॥**

ಜ್ಞಾತಾಜ್ಞಾತಭೇದದಿಂದ ದ್ವಿವಿಧವಾದ ನಿರ್ಬೀಜಪಾಪದ ಫಲಪ್ರಕಾರವನ್ನು ನಿರೂಪಿಸಿ, ಈ ಮುಂದೆ, ಸಬೀಜಪಾಪದ ವಿಭಾಗಗಳನ್ನು ಹೇಳುತ್ತಾರೆ:—

---

ಅನಿಷ್ಟವಸ್ತುವಿನ ಪ್ರಾಪ್ತಿಯೂ ದುಃಖಹೇತುಗಳು; ಹಾಗೆಯೇ ಇಷ್ಟಪ್ರಾಪ್ತಿಯೂ, ಅನಿಷ್ಟದ ವಿಯೋಗವೂ ಸುಖಹೇತುಗಳು; ಈ ದ್ವಿವಿಧವಾದ ಅನುಭವಗಳಲ್ಲಿ ಯಾವುದೊಂದನ್ನು ಹೊಂದಿದರೂ, ಅದು ಭೋಗವೆನಿಸುತ್ತದೆ; ಸುಖಾನುಭವವೇ 'ಸದ್ಭೋಗವು'— ದುಃಖಾನುಭವವೇ 'ದುರ್ಭೋಗವು' (೪೭-೪೮). ಯಾವ ಪಾಪಕರ್ಮವು ಹೇಗೆ ಸಂಭವಿಸುವುದೋ ಮತ್ತು ಅನುಮೋದಿಸಲ್ಪಟ್ಟಿರುವುದೋ, ಕರ್ಮಘಟನೆಯ ಆಯಾ ಪರಿಸ್ಥಿತಿಯನ್ನನುಸರಿಸಿ, ಅದರ ಫಲವು ಭೋಗಕ್ಕೆ ಬರುತ್ತದೆ; ಬೇರೆ ಅಲ್ಲ; ಆ ಕರ್ಮವು, ಕರ್ತೃವಿನ ಇಷ್ಟಾನಿಷ್ಟ ಪದಾರ್ಥಗಳ ಸಂಬಂಧ ವಿಯೋಗಗಳ ದೆಸೆಯಿಂದಲೇ, ಫಲಪ್ರದವಾಗಿ ದುಃಖಾನುಭವವನ್ನು ಉಂಟುಮಾಡುತ್ತದೆ (೪೯). ಪುಣ್ಯಬೀಜವೆಂದೂ, ಪಾಪಬೀಜವೆಂದೂ, ಸಬೀಜಪಾಪವು

---

1. ಇಷ್ಟಾನಿಷ್ಟ ವಸ್ತುಗಳ, ಪ್ರಾಪ್ತಿ ಮತ್ತು ವಿಯೋಗಗಳಿಂದ ಉಂಟಾಗುವುದೇ ಸುಖವು.

ಸಬೀಜಂ-ಸಬೀಜಪಾಪವು, ಪುಣ್ಯಬೀಜಂ-ಪುಣ್ಯಬೀಜವೆಂದೂ, ಪಾಪ ಬೀಜಂ-ಪಾಪಬೀಜವೆಂದೂ, ದ್ವಿವಿಧಂ-ಎರಡು ವಿಧವೆಂದು, ಸ್ಮೃತಂ- ತಿಳಿಯಲ್ಪಡುತ್ತದೆ.

**ಯತ್ಸತಾಮುಪಕಾರಾರ್ಥಂ ಪಶ್ಚಾತ್ತಪ್ತಂ ತು ಯದ್ಭವೇತ್ ।**
**ಸಂಕಟೇಽಪಿ ಕೃತಂ ಯತ್ತು ಪುಣ್ಯಬೀಜಂ ತು ಪಾತಕಂ ॥ ೫೦ ॥**

ಯತ್-ಯಾವ ಪಾಪವು, ಸತಾಂ-ಸಜ್ಜನರ, ಉಪಕಾರಾರ್ಥಂ- ಉಪಕಾರಕ್ಕಾಗಿ ಆಚರಿಸಲ್ಪಟ್ಟಿದ್ದೋ, ಯತ್-ಯಾವುದು, ಪಶ್ಚಾತ್ತಪ್ತಂ-ಪಶ್ಚಾತ್ತಾಪ ಯುಕ್ತವಾದುದು, ಭವೇತ್-ಆಗಿರುವುದೋ, ಅಪಿ-ಮತ್ತು ಯತ್ತು-ಯಾವ ಪಾಪವಾದರೆ, ಸಂಕಟೇ-ಸಂಕಟದಲ್ಲಿ (ಕಷ್ಟದಲ್ಲಿ ಸಿಕ್ಕಿದಾಗ), ಕೃತಂ- ಮಾಡಲ್ಪಟ್ಟಿದ್ದೋ, ಪಾತಕಂ-ಆ ಪಾಪವು, ಪುಣ್ಯಬೀಜಂ ತು-ಪುಣ್ಯಬೀಜವಾದುದೇ ಸರಿ.

**ಸ್ನಾನೋಪವಾಸಯಾತ್ರಾದೌ ಹಿಮಕ್ಷುತ್‌ತೃಟ್‌ಶ್ರಮಾದಿನಾ ।**
**ದುಃಖಂ ಪುಣ್ಯಫಲಂ ದತ್ವಾ ಪುಣ್ಯಮೇವಾಭಿವರ್ಧಯೇತ್ ॥ ೫೧ ॥**

ಸ್ನಾನೋಪವಾಸಯಾತ್ರಾದೌ-(ತೀರ್ಥ)ಸ್ನಾನ, (ಏಕಾದಶೀ ಮೊದಲಾದ) ಉಪವಾಸ, (ಕಾಶೀ ಮೊದಲಾದ ಕ್ಷೇತ್ರಗಳ) ಯಾತ್ರೆಗಳಲ್ಲಿ ಪುಣ್ಯಫಲಂ-ಪುಣ್ಯ ಸಾಧಕ ಕರ್ಮಕ್ಕೆ (ಪುಣ್ಯಫಲಕ್ಕೆ) ಕಾರಣವಾದ, ದುಃಖಂ-ದುಃಖವನ್ನು ದತ್ವಾ-ಕೊಟ್ಟು ಪುಣ್ಯಂ ಏವ-(ಆ ಪುಣ್ಯಬೀಜಪಾಪವು) ಪುಣ್ಯವನ್ನೇ, ಅಭಿವರ್ಧಯೇತ್-ವೃದ್ಧಿಗೊಳಿಸುತ್ತದೆ.

**ನಾಸ್ತಿಕ್ಯಾದಥವಾ ದ್ವೇಷಾದ್ಬುದ್ಧಿಪೂರ್ವಂ ತು ಯತ್ಕೃತಂ ।**
**ತತ್ಪಾಪಂ ಪಾಪಬೀಜಂ ಸ್ಯಾದುತ್ತರೋತ್ತರವೃದ್ಧಯೇ ॥ ೫೨ ॥**

ನಾಸ್ತಿಕ್ಯಾತ್-ನಾಸ್ತಿಕಬುದ್ಧಿಯಿಂದ, ಅಥವಾ-ಅಥವಾ, ದ್ವೇಷಾತ್-ಅನ್ಯರ

---

ಎರಡು ವಿಧವಾಗಿರುವುದು (೫೦). ಸಜ್ಜನರ ಉಪಕಾರಕ್ಕಾಗಿ ಮಾಡಿದ ಪಾಪಕರ್ಮವೂ, ಪಶ್ಚಾತ್ತಾಪದಿಂದ ಕೂಡಿರುದೂ, ಮತ್ತು ಕಷ್ಟಪರಿಸ್ಥಿತಿಯಲ್ಲಿ ಸಿಕ್ಕಿದಾಗ ಆಚರಿಸಿದ ಪಾಪಕರ್ಮವೂ, ಪುಣ್ಯಬೀಜ ಪಾಪವೆಂದೂ ಕರೆಯಲ್ಪಡುತ್ತದೆ (ಅದರ ಫಲವಾದ ದುಃಖವನ್ನು ಅನುಭವಿಸುವುದು ಪುಣ್ಯಸಾಧನೆಯಾಗುತ್ತದೆಂದು ತಿಳಿಯಲ್ಪಟ್ಟಿರುತ್ತದೆ) (೫೦). ಪುಣ್ಯಬೀಜ ಪಾಪವು, ತೀರ್ಥಸ್ನಾನಕಾಲದಲ್ಲಿ ಏಕಾದಶ್ಯಾದಿ ಉಪವಾಸವನ್ನು ಮಾಡುವಾಗ, ಕಾಶೀ ಮೊದಲಾದ ಯಾತ್ರೆ ಮಾಡುವಾಗ (ಸಂಚರಿಸುವಾಗ), ಸಂಭವಿಸುವ ದುಃಖಗಳಿಗೆ ಕಾರಣವಾಗುತ್ತದೆ; ಪುಣ್ಯಸಾಧನೆಗೆ ಕಾರಣವಾಗುವ, ದುಃಖವನ್ನಿತ್ತು ಪುಣ್ಯವನ್ನೇ ವೃದ್ಧಿಗೊಳಿಸುತ್ತದೆ (೫೧). ಪಾಪಪುಣ್ಯಗಳನ್ನು ತಿರಸ್ಕರಿಸುವ ನಾಸ್ತಿಕಬುದ್ಧಿಯಿಂದ, ಅಥವಾ, ಅನ್ಯರಮೇಲಿನ ದ್ವೇಷಸಾಧನೆಗಾಗಿ, ಬುದ್ಧಿಪೂರ್ವಕವಾಗಿ, ಆಚರಿಸಲ್ಪಡುವ ಪಾಪವು,

ಮೇಲಿನ ದ್ವೇಷದಿಂದ, ಬುದ್ಧಿಪೂರ್ವಂ-ಬುದ್ಧಿಪೂರ್ವಕವಾಗಿ (ಪಾಪಕರ್ಮವೆಂದು ಚೆನ್ನಾಗಿ ತಿಳಿದೂ), ಯತ್-ಯಾವುದು, ಕೃತಂ-ಮಾಡಲ್ಪಟ್ಟಿದ್ದೋ, ತತ್-ಆ, ಪಾಪಂ-ಪಾಪವು, ಪಾಪಬೀಜಂ-ಪಾಪಬೀಜ ಪಾಪವು, ಉತ್ತರೋತ್ತರ ವೃದ್ಧಯೇ-ಮುಂದೆ ಮುಂದೆ (ಅದರ ಫಲರೂಪವಾಗಿ) ಪಾಪದ ವೃದ್ಧಿಗಾಗಿಯೇ, ಸ್ಯಾತ್-ಆಗುತ್ತದೆ.

**ದಾರಿದ್ರ್ಯಂ ನಿರಪತ್ಯತ್ವಂ ಭಾರ್ಯಾಗೇಹಾದಿವರ್ಜನಂ ।**
**ಫಲಬುದ್ಧ್ಯಾ ಸ್ತೇಯಹಿಂಸಾಮೃಗಯಾದಿಕಮಾಚರೇತ್ ॥ ೫೪ ॥**
**ತತ್ರ ನಾನಾವಿಧಾಯಾಸೈಃ ಶ್ರಾಂತ್ವಾ ದುಃಖಮವಾಪ್ನುಯಾತ್ ।**
**ಅಸ್ತು ಮಾಸ್ತು ಫಲಂ ತಸ್ಯ ಪಾಪವೃದ್ಧಿಸ್ತು ಜಾಯತೇ ॥ ೫೫ ॥**

ದಾರಿದ್ರ್ಯಂ-(ಆ ಪಾಪಬೀಜ ಪಾಪದ ಫಲವಾಗಿ) ಬಡತನವೂ, ನಿರಪತ್ಯತ್ವಂ-ಸಂತಾನವಿಲ್ಲದಿರುವಿಕೆಯೂ, ಭಾರ್ಯಾಗೇಹಾದಿವರ್ಜನಂ - ಪತ್ನೀಗೃಹಾದಿಗಳಿಲ್ಲದಿರುವಿಕೆಯೂ (ಉಂಟಾಗುತ್ತವೆ); ಫಲಬುದ್ಧ್ಯಾ-ಪ್ರಯೋಜನವನ್ನು ಆಶಿಸಿ, ಸ್ತೇಯಹಿಂಸಾಮೃಗಯಾದಿಕಂ-ಕಳ್ಳತನ, ಪರಹಿಂಸೆ, (ಮೃಗಗಳನ್ನು) ಬೇಟೆಯಾಡುವುದೇ ಮೊದಲಾದ ದುಷ್ಕರ್ಮಗಳನ್ನು ಆಚರೇತ್-ಆಚರಿಸುತ್ತಾನೆ; ತತ್ರ-ಈ ಕೃತಿಗಳಲ್ಲಿ (ಆಚರಿಸುವ ಕಾಲದಲ್ಲಿ), ನಾನಾವಿಧಾಯಾಸೈಃ-ಬಹುವಿಧವಾದ ಆಯಾಸಗಳಿಂದ, ಶ್ರಾಂತ್ವಾ - ಶ್ರಾಂತನಾಗಿ (ದೇಹಶ್ರಮಗಳಿಂದ), ದುಃಖಂ-ದುಃಖವನ್ನು ಅವಾಪ್ನುಯಾತ್-ಹೊಂದುವನು; ತಸ್ಯ - ಈ ದುಃಖಕ್ಕೆ, ಫಲಂ- (ಪ್ರತ್ಯೇಕವಾದ) ಫಲವು, ಅಸ್ತು-ಇರಲಿ, ಮಾಸ್ತು-ಇಲ್ಲದಿರಲಿ, ಪಾಪವೃದ್ಧಿಃ ತು - (ದುಃಖವಿಶಿಷ್ಟ ಆ ಕರ್ಮಗಳಿಂದ) ಪಾಪವೃದ್ಧಿಯಾದರೋ, ಜಾಯತೇ-(ತಪ್ಪದೇ) ಉಂಟಾಗುತ್ತದೆ.

**ಔಷಧೇ ವಾ ವಿಷೇ ವಾಪಿ ದ್ರವ್ಯಾಂತರವಿಭಾವನಾತ್ ।**
**ಗುಣಾಧಿಕ್ಯಂ ತಥಾ ತದ್ವದ್ವಿಷ್ಣುಭಕ್ತಿಃ ಸುಕರ್ಮಣಿ ॥ ೫೬ ॥**
**ಫಲಾಧಿಕ್ಯಪ್ರದಾ ಪ್ರೋಕ್ತಾ ತದ್ದ್ವೇಷಾತ್ಪಾಪಕರ್ಮಣಿ ।**

ಔಷಧೇ-ಔಷಧಿಯಲ್ಲಿ (ರೋಗಪರಿಹಾರದ್ರವ್ಯಗಳಾದ ಗಿಡಮೂಲಿಕೆ ಬಳ್ಳಿ

---

ಪಾಪಬೀಜ ಪಾಪವು—ಅದು ತನ್ನ ಫಲರೂಪವಾಗಿ, ಮುಂದೆ, ಪಾಪಾಭಿವೃದ್ಧಿಗೇ ಕಾರಣವಾಗುತ್ತದೆ (೫೩). ಪಾಪಬೀಜ ಪಾಪಕರ್ಮದ ಫಲವಾಗಿ, ದಾರಿದ್ರ್ಯವೂ, ಸಂತಾನರಾಹಿತ್ಯವೂ, ಭಾರ್ಯಾಗೃಹಾದಿ ರಾಹಿತ್ಯವೂ ಉಂಟಾಗುತ್ತವೆ; ಇದರಿಂದ, ಚೌರ್ಯ, ಪರಪೀಡೆ, ಬೇಟೆಯಾಡುವುದು, ಮೊದಲಾದ, ಅನ್ಯಪಾಪಕೃತ್ಯಗಳಲ್ಲಿ ಫಲಬುದ್ಧಿಯಿಂದ ಪ್ರವೃತ್ತನಾಗುತ್ತಾನೆ; ಈ ಪಾಪಕರ್ಮಗಳ ಆಚರಣೆಯ ಕಾಲದಲ್ಲಿ ವಿವಿಧವಾದ ಆಯಾಸಗಳಿಂದಲೂ, ದೇಹಶ್ರಮಗಳಿಂದಲೂ ದುಃಖವನ್ನು ಹೊಂದುತ್ತಾನೆ; ಈ ದುಃಖವೇ ಅನ್ಯಫಲವುಳ್ಳದ್ದಾಗಲಿ ಬಿಡಲಿ, ಪಾಪವೃದ್ಧಿಗೆ ಮಾತ್ರ ತಪ್ಪದೇ ಕಾರಣವಾಗುತ್ತದೆ (೫೪-೫೫). ಔಷಧವಸ್ತುವಿನಲ್ಲಿ, ಅಥವಾ

ಮೊದಲಾದವುಗಳಲ್ಲಿ), ವಾ-ಅಥವಾ, ವಿಷೇ ವಾಪಿ-ವಿಷದಲ್ಲಿಯೇ ಆಗಲಿ (ಪ್ರಾಣನಾಶಕ ದ್ರವ್ಯದಲ್ಲಿ), ದ್ರವ್ಯಾಂತರವಿಭಾವನಾತ್-ಬೇರೆ ದ್ರವ್ಯವನ್ನು (ಪದಾರ್ಥವನ್ನು) ಕೂಡಿಸುವುದರಿಂದ, ಗುಣಾಧಿಕ್ಯಂ-ಅಧಿಕ ಶಕ್ತಿಯು (ಗುಣವು- ಸ್ವಕಾರ್ಯಸಾಧಕ ಶಕ್ತಿಯು), (ಯಥಾ-ಹೇಗೆ ಉಂಟಾಗುವುದೋ), ತಥಾ-ಹಾಗೆ, ಸುಕರ್ಮಣಿ-ಸತ್ಕರ್ಮಾಚರಣೆಯಲ್ಲಿ ವಿಷ್ಣುಭಕ್ತಿಃ-ವಿಷ್ಣುಭಕ್ತಿಯು, ತದ್ವತ್-ಗುಣಾಧಿಕ್ಯವನ್ನು (ಫಲಾಧಿಕ್ಯವನ್ನು) ಉಂಟುಮಾಡುತ್ತದೆ; ತದ್ವತ್-ಅದರಂತೆ, ಪಾಪಕರ್ಮಣಿ - ಪಾಪಕರ್ಮಾಚರಣೆಯಲ್ಲಿ ತದ್ದ್ವೇಷಾತ್ - ವಿಷ್ಣುದ್ವೇಷದಿಂದ, ಫಲಾಧಿಕ್ಯಪ್ರದಾ-(ಪಾಪಕರ್ಮವೂ) ಅಧಿಕ ಫಲಪ್ರದವಾಗುತ್ತದೆ.

**ಸರ್ವೇಷಾಂ ಕರ್ಮಣಾಮಾಹುರವಸ್ಥಾತ್ರಿತಯಂ ಬುಧಾಃ ॥ ೫೭ ॥**
**ಕ್ರಿಯಮಾಣಾದಿ ಭೇದೇನ ತತಸ್ತಚ್ಛೃಣು ಚಾದರಾತ್ ।**
**ಮನಸಾ ಕರ್ಮಣಾ ವಾಚಾ ಸದಾ ಕರ್ಮ ಕರೋತ್ಯಯಂ ॥ ೫೮ ॥**
**ಸದಥಾಸದುದಾಸೀನಮಿತ್ಯೇವಂ ತ್ರಿವಿಧಂ ಹಿ ತತ್ ।**

ಬುಧಾಃ -ಜ್ಞಾನಿಗಳು, ಸರ್ವೇಷಾಂ - ಎಲ್ಲ ಕರ್ಮಣಾಂ -ಕರ್ಮಗಳಿಗೆ, ಕ್ರಿಯಮಾಣಾದಿಭೇದೇನ-ಕ್ರಿಯಮಾಣ ಮೊದಲಾದ ಭೇದದಿಂದ (ಕ್ರಿಯಮಾಣ-ಮುಂದೆ ಮಾಡಲ್ಪಡುವ, ಹಿಂದೆ ಮಾಡಿದ, ಈಗ ಮಾಡುವ, ಎಂಬ ಭೇದದಿಂದ), ಅವಸ್ಥಾತ್ರಿತಯಂ-ಮೂರು ವಿಧದ ಅವಸ್ಥೆಯನ್ನು (ಸ್ಥಿತಿಯನ್ನು-ಇರುವಿಕೆಯನ್ನು), ಆಹುಃ-ಹೇಳುವರು; ತತಃ-ಆದ್ದರಿಂದ, ಆದರಾತ್-ಶ್ರದ್ಧೆಯಿಂದ, ತತ್-ಅದನ್ನು (ತ್ರಿವಿಧ ಕರ್ಮಗಳ ವಿವರಣೆಯನ್ನು), ಶೃಣು-ಶ್ರವಣಮಾಡು; ಅಯಂ-ಈ ದೇಹಿಯು (ಶರೀರಗತ ಜೀವನು), ಮನಸಾ-ಮನಸ್ಸಿನಿಂದ, ಕರ್ಮಣಾ-ಕರ್ಮದಿಂದ (ಶರೀರದಿಂದ), ವಾಚಾ-ಮಾತಿನಿಂದ, ಸದಾ-ಎಲ್ಲ ಕಾಲದಲ್ಲಿ

---

ವಿಷಪದಾರ್ಥದಲ್ಲಿ ಬೇರೆ ವಸ್ತುಗಳನ್ನು ಸೇರಿಸುವುದರಿಂದ, ಅವುಗಳ ಕಾರ್ಯ ಸಾಮರ್ಥ್ಯವು (ರೋಗವನ್ನು ಪರಿಹರಿಸುವ, ಮತ್ತು ಪ್ರಾಣವನ್ನು ಅಪಹರಿಸುವ ಶಕ್ತಿಯು) ಅಧಿಕವಾಗುವುದೆಂಬುದು ಲೋಕಾನುಭವಸಿದ್ಧವಾಗಿದೆ; ಹೀಗೆಯೇ ಸತ್ಕರ್ಮಗಳನ್ನು ಆಚರಿಸುವುದರಲ್ಲಿ ವಿಷ್ಣುಭಕ್ತಿಯೂ, ಪಾಪಾಚರಣೆಗಳಲ್ಲಿ ವಿಷ್ಣುದ್ವೇಷವೂ ಕೂಡಿದರೆ, ಆ ಕರ್ಮಗಳ ಫಲದಾನಸಾಮರ್ಥ್ಯವು ಅಧಿಕವಾಗುತ್ತದೆ (೫೬). ಕರ್ಮಗಳು, ಮುಂದೆ ಮಾಡುವ, ಹಿಂದೆ ಮಾಡಿದ ಮತ್ತು ಈಗ ಮಾಡುವ, ಎಂಬ ಭೇದದಿಂದ, ತ್ರಿವಿಧವೆಂದು, ಜ್ಞಾನಿಗಳು ಹೇಳುವರು; ಆದ್ದರಿಂದ, ಈ ತ್ರಿವಿಧ ಕರ್ಮಗಳ ವಿವರಣೆಯನ್ನು ಶ್ರದ್ಧೆಯಿಂದ ಕೇಳುವವನಾಗು; ಈ ದೇಹಸ್ಥಿತನಾದ ಜೀವನು, ಸದಾ ಮನಸ್ಸಿನಿಂದ, ದೇಹದಿಂದ ಅಥವಾ ಮಾತಿನಿಂದ, ಕರ್ಮ ಮಾಡುತ್ತಲೇ ಇರುವನು; ಹೀಗೆ (ತ್ರಿಕರಣಗಳಿಂದ) ಸಂಭವಿಸುವ ಕರ್ಮಗಳೂ,

ಕರ್ಮ-ಕರ್ಮವನ್ನು, ಕರೋತಿ-ಮಾಡುತ್ತಾನೆ; ಸತ್-ಸತ್ಕರ್ಮ, ಅಥ-ಮತ್ತು ಅಸತ್-ದುಷ್ಕರ್ಮ, ಉದಾಸೀನಂ-ಉದಾಸೀನ ಕರ್ಮ; ಇತ್ಯೇವಂ-ಹೀಗೆ, ತತ್-ಕರ್ಮವು, ತ್ರಿವಿಧಂ-�ೂರು ವಿಧವಾಗಿರುತ್ತದೆ.

**ಸಫಲಂ ಸತ್ತಥಾಸತ್ಸ್ಯಾದುದಾಸೀನಂ ತು ನಿಷ್ಫಲಂ ॥ ೫೯ ॥**
**ಪುಣ್ಯಂ ಸದಿತಿ ಸಂಪ್ರೋಕ್ತಮಸತ್ಪಾತಕಮುಚ್ಯತೇ ।**
**ಯದ್ವೇದಾದ್ಯಾಗಮೈಃ ಸಿದ್ಧಂ ತತ್ಪುಣ್ಯಮಿತಿ ಕೀರ್ತಿತಂ ॥ ೬೦ ॥**
**ತೈರ್ನಿಷಿದ್ಧಂ ತು ಪಾಪಂ ಸ್ಯಾದುದಾಸೀನಮುದಾಹಿತಂ ।**

ಸತ್-ಸತ್ಕರ್ಮವೂ, ತಥಾ-ಮತ್ತು, ಅಸತ್-ದುಷ್ಕರ್ಮವೂ, ಸಫಲಂ-ಫಲವುಳ್ಳದ್ದು ಸ್ಯಾತ್-ಆಗುತ್ತದೆ; ಉದಾಸೀನಂ ತು-ಉದಾಸೀನ ಕರ್ಮವಾದರೋ, ನಿಷ್ಫಲಂ-ವ್ಯರ್ಥವಾದುದು (ಫಲವಿಲ್ಲದ್ದು); ಪುಣ್ಯಂ-ಪುಣ್ಯಕರ್ಮವು, ಸತ್‌ಇತಿ-ಸತ್ ಎಂದು (ಸತ್ಕರ್ಮವೆಂದು), ಸಂಪ್ರೋಕ್ತಂ-ಹೇಳಲ್ಪಡುತ್ತದೆ; ಪಾತಕಂ-ಪಾಪ ಕರ್ಮವು, ಅಸತ್-ಅಸತ್ ಎಂದು, ಉಚ್ಯತೇ-ಹೇಳಲ್ಪಡುತ್ತದೆ; ಯತ್-ಯಾವ ಕರ್ಮವು, ವೇದಾದ್ಯಾಗಮೈಃ-ವೇದಾದಿ ಶಾಸ್ತ್ರಗಳಿಂದ, ಸಿದ್ಧಂ-(ಕರ್ತವ್ಯವೆಂದು) ಸಿದ್ಧವಾಗುವುದೋ, ತತ್-ಅದು, ಪುಣ್ಯಂ-ಪುಣ್ಯವು, ಇತಿ-ಎಂದು, ಕೀರ್ತಿತಂ-ಹೇಳಲಾಗುತ್ತದೆ; ತೈಃ-ಆ ಶಾಸ್ತ್ರಗಳಿಂದ, ನಿಷಿದ್ಧಂ-(ಮಾಡಬಾರದೆಂದು) ನಿಷೇಧಿಸಲ್ಪಟ್ಟದ್ದು, ಪಾಪಂ-ಪಾಪವು, ಸ್ಯಾತ್ ತು-ಆಗುವುದು ನಿಶ್ಚಯ; ಉದಾಹಿತಂ-ಉದಾಸೀನ ಮಾಡಲ್ಪಟ್ಟ ಕರ್ಮಗಳು (ಮಾಡು ಅಥವಾ ಬಿಡು ಎಂದು ಹೇಳಲ್ಪಡದ ಇತರ ನಾನಾ ಕರ್ಮಗಳು), ಉದಾಸೀನಂ-ಉದಾಸೀನ ಕರ್ಮವು.

**ಕ್ರಿಯತೇಽಹರಹರ್ಯತ್ತತ್ ಕ್ರಿಯಮಾಣಂ ಚ ಸಚ್ಚ ಯತ್ ॥ ೬೧ ॥**
**ಅತಿಕ್ರಾಂತಂ ಸಂಚಿತಂ ತತ್ಪ್ರಾರಬ್ಧಂ ತು ಫಲೋನ್ಮುಖಂ ।**
**ಭೋಗಾದೇವ ಕ್ಷಯಂ ಯಾಯಾತ್ ಪ್ರಾರಬ್ಧಂ ನಾನ್ಯಥಾ ಕ್ವಚಿತ್ ॥ ೬೨**

---

ಸತ್ಕರ್ಮ, ದುಷ್ಕರ್ಮ ಮತ್ತು ಉದಾಸೀನಗಳೆಂಬ ಭೇದದಿಂದ ತ್ರಿವಿಧವಾಗಿರುತ್ತವೆ (೫೭-೫೮). ಸತ್ಕರ್ಮ ದುಷ್ಕರ್ಮಗಳೆರಡೂ ಫಲವುಳ್ಳವುಗಳು; ಉದಾಸೀನ ಕರ್ಮವು ನಿಷ್ಫಲವಾದುದು; ಪುಣ್ಯವೇ ಸತ್ಕರ್ಮವು; ಪಾಪವೇ ಅಸತ್ಕರ್ಮವು; ವೇದಾದಿ ಶಾಸ್ತ್ರಗಳಿಂದ ಕರ್ತವ್ಯವೆಂದು ಸಿದ್ಧವಾದುದೇ ಪುಣ್ಯವೆನಿಸುತ್ತದೆ; ಅವುಗಳಿಂದ ನಿಷೇಧಿಸಲ್ಪಟ್ಟ ಕರ್ಮವೇ ಪಾಪವು; ಮಾಡು ಅಥವಾ ಬಿಡು ಎಂದು ಹೇಳಲ್ಪಡದ ಇತರ ವಿವಿಧ ಕರ್ಮಗಳು ಉದಾಸೀನ ಕರ್ಮಗಳೆನಿಸುತ್ತವೆ (೫೯-೬೦). ಪ್ರತಿ ದಿನವೂ ಮಾಡುವ ಕರ್ಮ ಮತ್ತು ಮುಂದೆ ಮಾಡುವ ಕರ್ಮವೂ, ಕಾಲವು ಗತಿಸಿದರೆ, ಸಂಚಿತವೆಂದೆನಿಸಿ, ರಾಶಿಯಾಗಿ ಕೂಡಿಬೀಳುತ್ತವೆ; ತನ್ನ ಫಲವನ್ನು ಜೀವನ ಭೋಗಕ್ಕೆ ತಂದುಕೊಡಲು ಸಿದ್ಧವಾಗಿರುವ (ಆರಂಭವಾಗಿರುವ) ಕರ್ಮವು

ಅಹರಹಃ-ದಿನದಿನದಲ್ಲಿ ಯತ್-ಯಾವ ಕರ್ಮವು, ಕ್ರಿಯತೇ- ಮಾಡಲ್ಪಡುವುದೋ, ಚ-ಮತ್ತು ಯತ್-ಯಾವ ಕರ್ಮವು, ಕ್ರಿಯಮಾಣಂ ಸತ್-(ಮುಂದೆ) ಮಾಡಲ್ಪಡುವುದಾಗಿದ್ದು ಅತಿಕ್ರಾಂತಂ-ಅತಿಕ್ರಾಂತವಾದರೆ (ಕಾಲ ಗತಿಸಿದಾಗ), ತತ್-ಆ ಕರ್ಮವು, ಸಂಚಿತಂ-'ಸಂಚಿತ'ವೆನಿಸುತ್ತದೆ (ಹಿಂದೆ ಕೂಡಿ ಬಿದ್ದಿರುವುದು, ಎನಿಸುತ್ತದೆ); ಫಲೋನ್ಮುಖಂ ತು-(ತನ್ನ) ಫಲವನ್ನು ಭೋಗಕ್ಕೆ ತಂದುಕೊಡಲು ಆರಂಭವಾಗಿರುವ ಕರ್ಮವೇ, ಪ್ರಾರಬ್ಧಂ-ಪ್ರಾರಬ್ಧ ಕರ್ಮವೆನಿಸುವುದು; ಪ್ರಾರಬ್ಧಂ-ಪ್ರಾರಬ್ಧಕರ್ಮವು, ಭೋಗಾದೇವ-(ಅದರ ಫಲವನ್ನು) ಅನುಭವಿಸುವುದರಿಂದಲೇ, ಕ್ಷಯಂ-ನಾಶವನ್ನು ಯಾಯಾತ್-ಹೊಂದುತ್ತದೆ; ಕ್ವಚಿತ್-ಎಲ್ಲಿಯೂ, ಅನ್ಯಥಾ ನ-ಬೇರೆ ಅಲ್ಲ (ಬೇರೆ ಪ್ರಕಾರದಿಂದ ನಷ್ಟ ಹೊಂದುವುದಿಲ್ಲ).

**ಸಂಚಿತಾನಿ ತು ನಶ್ಯಂತಿ ಕರ್ಮಾಣಿ ದ್ವಿವಿಧಾನ್ಯಪಿ ।**
**ಆಗಮಾಧ್ಯಯನಂ ಜಾಪ್ಯಂ ವೇದಶಾಸ್ತ್ರಾರ್ಥಚಿಂತನಂ ॥ ೬೩ ॥**
**ವಿಷ್ಣೋಃ ಸಂಕೀರ್ತನಂ ಭಕ್ತ್ಯಾ ತಪೋ ಬ್ರಾಹ್ಮಣತೋಷಣಂ ।**
**ತೀರ್ಥಸೇವಾ ತೀರ್ಥಯಾತ್ರಾಽಹಿಂಸಾ ದಾನಂ ಪ್ರಪಾದಿಕಂ ॥ ೬೪ ॥**
**ಮಾತಾಪಿತೃಗುರೂಣಾಂ ಚ ಪ್ರೀಣನಂ ಪಾಪಹೃದ್ಭವೇತ್ ।**

ದ್ವಿವಿಧಾನಿ-ಪಾಪಪುಣ್ಯಗಳೆಂಬ ಎರಡು ವಿಧದ, ಸಂಚಿತಾನಿ-ಸಂಚಿತ ರಾಶಿಯ, ಕರ್ಮಾಣಿ ಅಪಿ-ಕರ್ಮಗಳೂ ಸಹ, ನಶ್ಯಂತಿ-ನಷ್ಟಹೊಂದುತ್ತವೆ (ಅನ್ಯ ಪುಣ್ಯಕರ್ಮಗಳಿಂದ ಸಂಚಿತ ಪಾಪಗಳೂ ನಷ್ಟವಾಗುತ್ತವೆ; ಹಾಗೆಯೇ ಪಾಪಕರ್ಮಗಳಿಂದ, ಸಂಚಿತ ಪುಣ್ಯವೂ ನಾಶವಾಗುತ್ತದೆ); ಆಗಮಾಧ್ಯಯನಂ-ವೇದಾದಿ ಶಾಸ್ತ್ರಾಧ್ಯಯನವೂ, ಜಾಪ್ಯಂ-(ಗುರೂಪದಿಷ್ಟಮಂತ್ರ) ಜಪವೂ, ವೇದ ಶಾಸ್ತ್ರಾರ್ಥಚಿಂತನಂ-ಶಾಸ್ತ್ರಾರ್ಥಗಳ ಮನನವೂ, ವಿಷ್ಣೋಃ-ಶ್ರೀವಿಷ್ಣುವಿನ,

---

ಪ್ರಾರಬ್ಧಕರ್ಮವೆನಿಸುವುದು; ಪ್ರಾರಬ್ಧಕರ್ಮವು, ಅದರ ಫಲವನ್ನು ಭೋಗಿಸುವುದರಿಂದಲೇ ನಷ್ಟಹೊಂದುತ್ತದೆ—ಅನ್ಯಥಾ ಅದಕ್ಕೆ ನಾಶವಿಲ್ಲ (೬೧-೬೨). ಸಂಚಿತರಾಶಿಯಲ್ಲಿರುವ ಪಾಪಪುಣ್ಯರೂಪದ ದ್ವಿವಿಧ ಕರ್ಮಗಳೂ ಪ್ರಾರಬ್ಧರೂಪದಿಂದ ಫಲಭೋಗವನ್ನಿತ್ತೇ ನಷ್ಟಹೊಂದುವುವೆಂಬ ನಿಯಮವಿಲ್ಲ; ಸಂಚಿತ ಪಾಪವು ಸತ್ಕರ್ಮಗಳ ನಿರಂತರ ಆಚರಣೆಯಿಂದ (ಉತ್ಕಟವಾದ, ತೀವ್ರವಾದ ಅಧಿಕ ಪುಣ್ಯಗಳಿಂದ) ನಷ್ಟವಾಗುತ್ತವೆ; ಅಂಥ ಉತ್ಕಟ ಪುಣ್ಯಕರ್ಮಗಳಾವುವೆಂದರೆ:—ವೇದಾಧ್ಯಯನ, ಜಪ, ಸಚ್ಛಾಸ್ತ್ರಗಳ ಮನನ, ಶ್ರೀವಿಷ್ಣುವನ್ನು ಭಕ್ತಿಯಿಂದ ಕೀರ್ತನಮಾಡುವುದು, ತಪಸ್ಸು, ಬ್ರಾಹ್ಮಣರನ್ನು ಸಂತೋಷಗೊಳಿಸುವುದು, ತೀರ್ಥಸೇವೆ, ತೀರ್ಥಯಾತ್ರೆ, ಅಹಿಂಸೆ, ಸತ್ಪಾತ್ರದಾನ, ಯಾತ್ರಿಕರಿಗೆ ಜಲಪಾನವ್ಯವಸ್ಥೆ (ಅರವಂಟಿಗೆ ಇಡುವುದು), ಮಾತಾಪಿತೃ ಗುರುಗಳನ್ನು ಸಂಪ್ರೀತಿಗೊಳಿಸುವುದು;

ಭಕ್ತ್ಯಾ-ಭಕ್ತಿಯಿಂದ, ಸಂಕೀರ್ತನಂ-(ಪಠಿಸುವ) ಸ್ತೋತ್ರವೂ, ತಪಃ-ತಪಸ್ಸೂ (ಉಪವಾಸಾದಿ ವ್ರತಾನುಷ್ಠಾನಗಳೂ, ಬ್ರಾಹ್ಮಣತೋಷಣಂ - ಬ್ರಾಹ್ಮಣರನ್ನು ಸಂತೋಷ ಗೊಳಿಸುವುದೂ, ತೀರ್ಥಸೇವಾ - (ಗಂಗಾದಿ) ತೀರ್ಥಗಳನ್ನು (ಸ್ನಾನಾದಿಗಳಿಂದ) ಸೇವಿಸುವುದೂ, ತೀರ್ಥಯಾತ್ರಾ - ತೀರ್ಥಗಳಿಗಾಗಿ ಕ್ಷೇತ್ರಗಳ ಪ್ರವಾಸ ಮಾಡುವುದೂ, ಅಹಿಂಸಾ-ಪರಹಿಂಸೆಯನ್ನು (ಸರ್ವಥಾ) ತ್ಯಜಿಸುವುದೂ, ದಾನಂ-(ಸತ್ಪಾತ್ರರಲ್ಲಿ) ದಾನಮಾಡುವುದೂ, ಪ್ರಪಾದಿಕಂ-ಅರವಂಟಿಗೆ (ಯಾತ್ರಿಕರಿಗೆ ಜಲಪಾನದ ವ್ಯವಸ್ಥೆ ಯನ್ನಿಡುವುದೂ, ಮಾತಾಪಿತೃಗುರೂಣಾಂ ಚ-ತಾಯಿ, ತಂದೆ, ಗುರುಗಳ, ಪ್ರೀಣನಂ-ಪ್ರೀತಿಯನ್ನು ಸಂಪಾದಿಸುವುದೂ, ಪಾಪಹೃತ್-(ಸಂಚಿತ) ಪಾಪಪರಿಹಾರಕವು, ಭವೇತ್-ಆಗುತ್ತದೆ.

**ಅಧಿಕಾರಾದಿ ಸಂಪತ್ತಾವಾಗಮಾನಾಮುಪೇಕ್ಷಣಂ ॥ ೬೫ ॥**
**ಚಿಂತಾ ದುರ್ವಿಷಯಾಣಾಂ ಚ ವಿಷ್ಣುವೈಷ್ಣವನಿಂದನಂ ।**
**ವಿಪ್ರಾವಜ್ಞಾ ಸತಾಂ ದ್ವೇಷೋ ದಯಾದಾನಾದಿ ವರ್ಜನಂ ॥ ೬೬ ॥**
**ಮಾತಾಪಿತೃಗುರೂಣಾಂ ಚ ಪ್ರೀತಿಹೃತ್ಪುಣ್ಯಹೃದ್ಭವೇತ್ ।**

ಅಧಿಕಾರಾದಿಸಂಪತ್ತೌ-(ಶಾಸ್ತ್ರಾದಿಗಳ ಅಭ್ಯಾಸಕ್ಕೆ ಅವಶ್ಯಕವಾದ ಯೋಗ್ಯತೆ) ದ್ವಿಜಜನ್ಮ, ಉಪನಯನ ಸಂಸ್ಕಾರಾದಿ ಅಧಿಕಾರವಿದ್ದರೂ, ಆಗಮಾನಾಂ-ವೇದಾದಿ ಶಾಸ್ತ್ರಗಳನ್ನು, ಉಪೇಕ್ಷಣಂ-ಉಪೇಕ್ಷಿಸುವುದು (ಅಧ್ಯಯನಮಾಡದಿರುವುದು), ಚ-ಮತ್ತು ದುರ್ವಿಷಯಾಣಾಂ-ದುರ್ವಿಷಯಗಳ (ನಿಷಿದ್ಧ ವಿಷಯಭೋಗದ), ಚಿಂತಾ-ಚಿಂತೆಯೂ, ವಿಷ್ಣುವೈಷ್ಣವನಿಂದನಂ-ಶ್ರೀವಿಷ್ಣುವನ್ನೂ, ವಿಷ್ಣುಭಕ್ತರನ್ನೂ ನಿಂದಿಸುವುದು (ತಿರಸ್ಕಾರಾದಿಗಳಿಂದ ಅವರಿಗೆ ಅಲ್ಪತ್ವವನ್ನು ತಿಳಿಯುವುದು), ವಿಪ್ರಾವಜ್ಞಾ-ಬ್ರಾಹ್ಮಣರ ಅವಜ್ಞೆ (ಅಪಮಾನ-ಕೀಳಾಗಿ ಕಾಣುವುದು), ಸತಾಂ-ಸಜ್ಜನರ, ದ್ವೇಷಃ-ದ್ವೇಷವೂ, ದಯಾದಾನಾದಿ ವರ್ಜನಂ-ಪ್ರಾಣಿದಯೆ, ಸತ್ಪಾತ್ರ ದಾನಾದಿಗಳನ್ನು ತ್ಯಜಿಸುವುದೂ, ಮಾತಾಪಿತೃಗುರೂಣಾಂ ಚ-ತಾಯಿ ತಂದೆ ಗುರುಗಳ, ಪ್ರೀತಿಹೃತ್-ಮನಃಪ್ರಸನ್ನತೆಯನ್ನು ಅಪಹರಿಸುವುದೂ (ಅವರಿಗೆ

---

ಇವು ಪಾಪವನ್ನು ಪರಿಹರಿಸುತ್ತವೆ (೬೩-೬೪). ದ್ವಿಜಜನ್ಮ, ಉಪನಯನ ಸಂಸ್ಕಾರಾದಿ ಅಧಿಕಾರಯುಕ್ತನಾಗಿದ್ದರೂ, ವೇದಾಭ್ಯಾಸಾದಿಗಳನ್ನು ಉಪೇಕ್ಷಿಸುವುದು (ಉದಾಸೀನದಿಂದ ಪರಿತ್ಯಜಿಸುವುದು), ನಿಷಿದ್ಧ ವಿಷಯಗಳ ಚಿಂತೆ, ವಿಷ್ಣುವೈಷ್ಣವನಿಂದೆ, ವಿಪ್ರರ ಅವಹೇಳನ, ಸಜ್ಜನ ದ್ವೇಷ, ದಯಾದಾನಾದಿಗಳನ್ನು ತ್ಯಜಿಸುವುದು, ಮಾತಾ ಪಿತೃ ಗುರುಗಳಿಗೆ ಅಪ್ರೀತಿಯನ್ನುಂಟುಮಾಡುವುದು, ಈ ಮುಂತಾದ ನಡವಳಿಕೆಗಳು, (ಸಂಚಿತ) ಪೂರ್ವಪುಣ್ಯವನ್ನೂ ನಾಶಮಾಡುತ್ತವೆ (೬೫-೬೬). ತನ್ನ ತಂದೆತಾಯಿಗಳಿಂದಲೂ, ಜನರಿಂದಲೂ ಸತ್ಕಾರದಾನಾದಿಗಳಿಂದ

ಅಪ್ರೀತಿಯನ್ನುಂಟುಮಾಡುವುದು), ಪುಣ್ಯಹೃತ್-(ಸಂಚಿತ) ಪುಣ್ಯವನ್ನು ನಾಶಗೊಳಿಸುವುದು, ಭವೇತ್-ಆಗುತ್ತದೆ.

**ಮಾತಾಪಿತ್ರೋಶ್ಚ ಯೇ ಮಾನ್ಯಾ ಮಾನದಾನಾದಿಭಿರ್ಜನೈಃ ॥ ೬೭ ॥**
**ಸ್ವಯಂ ತೇ ಗುರುವನ್ಮಾನ್ಯಾಸ್ತದವಜ್ಞಾ ಹಿ ದೋಷಕೃತ್ ।**
**ಪಿತೃವ್ಯೋ ಮಾತುಲೋ ಭ್ರಾತಾ ಜ್ಯೇಷ್ಠಾ ಶ್ವಶ್ರುಸ್ತಥಾಗ್ರಜಾಃ ॥ ೬೮ ॥**
**ಪಿತ್ರೋಃ ಸ್ವಸಾರೌ ಶ್ವಶುರೋ ಯಶ್ಚ ವಿದ್ಯೋಪದೇಶಕಃ ।**
**ಉಪಾಧ್ಯಾಯಃ ಪುರೋಧಾಶ್ಚ ಶ್ರೋತ್ರಿಯೋ ಗುರುವತ್ಸ್ಮೃತಾಃ ॥ ೬೯ ॥**
**ಸದಾ ಮಾನ್ಯಾ ನಾವಮಾನ್ಯಾ ಇಮೇ ಸರ್ವೇಽಪಿ ಸರ್ವದಾ ।**

ಯೇ - ಯಾರು, ಮಾತಾಪಿತ್ರೋಃ ಚ - ತಾಯಿತಂದೆಗಳಿಗೂ, ಮಾನ್ಯಾಃ-ಮಾನ್ಯರೋ (ಪೂಜ್ಯರೋ), ಜನೈಃ-ಜನರಿಂದ, ಮಾನದಾನಾದಿಭಿಃ-ಪೂಜೆ (ಸತ್ಕಾರ) ದಾನಾದಿಗಳಿಂದ (ಮಾನ್ಯಾಃ-ಮಾನ್ಯರೋ), ತೇ-ಅವರೆಲ್ಲರೂ, ಸ್ವಯಂ-ಸಾಕ್ಷಾತ್ತಾಗಿ, ಗುರುವತ್-ಗುರುವಿನಂತೆ, ಮಾನ್ಯಾಃ-ಪೂಜ್ಯರೇ; ತದವಜ್ಞಾ- ಅವರ ಅವಮಾನವು (ಅವರನ್ನು ಅವಮಾನಿಸುವುದು), ದೋಷಕೃತ್ ಹಿ- ದೋಷವನ್ನು (ಪಾಪವನ್ನು)

---

ಮಾನ್ಯರಾದವರೆಲ್ಲರೂ ಗುರುವಿನಂತೆ ಪೂಜ್ಯರು—ಅವರ ಅವಮಾನವು ಪಾಪಕರವೇ ಸರಿ—ಸಂಶಯವಿಲ್ಲ; ತಂದೆಯ ಸಹೋದರರು, ತಾಯಿಯ ಸಹೋದರರು, ಅಣ್ಣ, ಅತ್ತೆ, ಅಕ್ಕ, ತಂದೆತಾಯಿಗಳ ಅಕ್ಕತಂಗಿಯರು, ಹೆಣ್ಣು ಕೊಟ್ಟ ಮಾವ, ಶಾಸ್ತ್ರೋಪದೇಶಕ, ಅನ್ಯೋಪದೇಶಕ ಉಪಾಧ್ಯಾಯ, ಕುಲಪುರೋಹಿತ, ಶ್ರೋತ್ರಿಯ ಬ್ರಾಹ್ಮಣ, ಈ ಎಲ್ಲರೂ ಗುರುವಿನಂತೆ ಮಾನ್ಯರು; ಈ ಎಲ್ಲರನ್ನೂ ಎಲ್ಲ ಕಾಲದಲ್ಲಿ ಸರ್ವತ್ರ ಮಾನ್ಯಮಾಡಬೇಕು—ಸರ್ವಥಾ ಅಗೌರವದಿಂದ ಕಾಣಲ್ಪಡತಕ್ಕವರಲ್ಲ (೬೭-೬೯). ಬ್ರಾಹ್ಮಣರನ್ನು ನಮಸ್ಕರಿಸುವುದು, ವಿಷ್ಣುನಮಸ್ಕಾರ, ಅಗ್ನಿ ವಂದನೆಗಳಿಗಿಂತ ಅಧಿಕವೆಂದು ತಿಳಿಯಲ್ಪಟ್ಟದೆ;[1] ಬ್ರಾಹ್ಮಣಾವಮಾನವು, ಹೇಗೆ (ಎಷ್ಟು

---

1. ಅಗ್ನಿನಮಸ್ಕಾರಕ್ಕಿಂತ ಬ್ರಾಹ್ಮಣನಮಸ್ಕಾರವು ಶ್ರೀವಿಷ್ಣುವಿಗೆ ಹೆಚ್ಚು ಪ್ರೀತಿಕರವೆಂಬರ್ಥವನ್ನೂ ತಿಳಿಯಬಹುದು; ಶ್ರೀವಿಷ್ಣುವು ಬ್ರಾಹ್ಮಣರಲ್ಲಿ ಅನುಗ್ರಹೋನ್ಮುಖ ಸನ್ನಿಧಾನವನ್ನಿಟ್ಟಿರುವುದರಿಂದ, ವಿಷ್ಣುವಿನ ಇತರ ಪ್ರತೀಕಗಳನ್ನು ನಮಸ್ಕರಿಸುವುದಕ್ಕಿಂತ ಬ್ರಾಹ್ಮಣವಂದನೆಯು ಶ್ರೇಷ್ಠವು. ಸಾಕ್ಷಾತ್ಕಾರಿಸಲಾದ ಶ್ರೀವಿಷ್ಣುರೂಪವನ್ನು ವಂದಿಸುವುದಕ್ಕಿಂತ ಅಧಿಕವೆಂದು ತಿಳಿಯಲಾಗದು; ಅನಪರೋಕ್ಷಿಗಳಾದ ಮನುಷ್ಯರೇತರರಲ್ಲಿರುವ ಎಲ್ಲ ಜೀವರಿಗೆ, ಅಗ್ನಿಯು ಪ್ರಧಾನವಾದ, ವಿಷ್ಣೂಪಾಸನೆಯ, ಪ್ರತೀಕವು. ಅಗ್ನಿಗಿಂತ, ವಿಪ್ರನು, ಉತ್ತಮ ಪ್ರತೀಕನು. 'ಅಗ್ನೌ ಕ್ರಿಯಾವತಾಂ ವಿಷ್ಣುಃ' (ಇತ್ಯಾದಿ) ಐತರೇಯಭಾಷ್ಯ ವಾಕ್ಯಗಳು. ಕರ್ಮಯೋಗಿಗಳಾದ ಮನುಷ್ಯಜೀವರಿಗೆ, ಅಗ್ನಿಯಲ್ಲಿ ಶ್ರೀವಿಷ್ಣುಪೂಜೆಯು ಶ್ರೇಷ್ಠವೆಂದು ಹೇಳುತ್ತವೆ. ಅದಕ್ಕಿಂತ ಬ್ರಾಹ್ಮಣನಲ್ಲಿ ಶ್ರೀವಿಷ್ಣುವಿನ (ನಮಸ್ಕಾರಾದಿ) ಪೂಜೆಯು ಅಧಿಕವೆಂದು ತಿಳಿಯಬೇಕು.

ಉಂಟುಮಾಡುವುದು ನಿಶ್ಚಯ; (ಗುರುವಿನಂತೆ ಮಾನ್ಯರು ಯಾರುಯಾರೆಂದರೆ), ಪಿತೃವ್ಯಃ - ತಂದೆಯ ಸಹೋದರನು, ಮಾತುಲಃ - ಸೋದರಮಾವನು (ತಾಯಿಯ ಸಹೋದರನು), ಭ್ರಾತಾಜ್ಯೇಷ್ಠಾಶ್ವಶ್ರುಸ್ಸಸಾಗ್ರಜಾಃ- ಅಣ್ಣ (ಜ್ಯೇಷ್ಠಭ್ರಾತೃ), ಅತ್ತೆ (ಹೆಂಡತಿಯ ತಾಯಿ), ಹಿರಿಯ ಸಹೋದರರಿಯರು, ಪಿತ್ರೋಃ-ತಾಯಿತಂದೆಗಳ, ಸ್ವಸಾರೌ- ಅಕ್ಕತಂಗಿಯರು, ಶ್ವಶುರಃ-ಮಾವನು, ವಿದ್ಯೋಪದೇಶಕಃ ಯಶ್ಚ- ಅಧ್ಯಾತ್ಮವಿದ್ಯೆಯ ಉಪದೇಶಕನಾದವನೂ, ಉಪಾಧ್ಯಾಯಃ-ಇತರ ವಿದ್ಯೆಗಳ ಉಪದೇಶಕನೂ, ಪುರೋಧಾಃ ಚ-ಕುಲಪುರೋಹಿತನೂ, ಶ್ರೋತ್ರಿಯಃ- ಶ್ರೋತ್ರಿಯನೂ (ಸಚ್ಛಾಸ್ತ್ರಾಭ್ಯಾಸ ನಿರತನಾದ ಬ್ರಾಹ್ಮಣ), ಗುರುವತ್ ಸ್ಮೃತಾಃ-(ಈ ಎಲ್ಲರೂ) ಗುರುವಿನಂತೆ (ಪೂಜ್ಯರು) ಎಂದು ಹೇಳಲ್ಪಟ್ಟಿರುವರು; ಇಮೇ - ಈ, ಸರ್ವೇಪಿ - ಎಲ್ಲರೂ, ಸರ್ವದಾ - ಎಲ್ಲ ಕಾಲದಲ್ಲಿ ಸದಾ - ನಿತ್ಯವೂ, ಮಾನ್ಯಾಃ - ಪೂಜ್ಯರು (ಗೌರವಿಸಲ್ಪಡಲರ್ಹರು), ಅವಮಾನ್ಯಾಃ ನ-ಅವಮಾನಿಸಲ್ಪಡತಕ್ಕವರಲ್ಲ.

**ವಿಪ್ರಾಣಾಂ ವಂದನಂ ವಿಷ್ಣೋರಗ್ನೇರಪ್ಯಧಿಕಂ ಸ್ಮೃತಂ ॥ ೭೦ ॥**
**ನ ತಾವದ್ದಹತೇ ವಹ್ನಿರ್ವಿಪ್ರಾವಜ್ಞಾ ಯಥಾ ದಹೇತ್ ।**
**ಸ್ವೋದರೇ ಶಸ್ತ್ರಘಾತೋ ವಾ ವಿಷಾಶನಮಹಿಸ್ಪೃಶಿಃ ॥ ೭೧ ॥**
**ದೇಹಮಾತ್ರವಿನಾಶಾಯ ಬ್ರಹ್ಮಾವಜ್ಞಾಖಿಲಂ ದಹೇತ್ ।**
**ಅದಹ್ಯಂ ವಹ್ನಿನಾ ಯತ್ಸ್ಯಾದಹಾರ್ಯಂ ನೃಪದಸ್ಯುಭಿಃ ॥ ೭೨ ॥**
**ತದ್ದರೇತ್ತದ್ದಹೇತ್ ಕ್ಷಿಪ್ರಂ ವಿಪ್ರಾವಜ್ಞಾ ನ ಸಂಶಯಃ ।**

ವಿಪ್ರಾಣಾಂ-ಬ್ರಾಹ್ಮಣರ, ವಂದನಂ-ವಂದನೆಯು, ವಿಷ್ಣೋಃ-ಶ್ರೀವಿಷ್ಣುವಿನ, ಅಪಿ-ಮತ್ತು ಅಗ್ನೇಃ-ಅಗ್ನಿಯ (ವಂದನೆಗಿಂತ), ಅಧಿಕಂ-ಶ್ರೇಷ್ಠವೆಂದು, ಸ್ಮೃತಂ-ತಿಳಿಯಲಾಗಿದೆ; ವಿಪ್ರಾವಜ್ಞಾ-ಬ್ರಾಹ್ಮಣಾವಮಾನವು, ಯಥಾ-ಹೇಗೆ, ದಹೇತ್-(ಅವಮಾನಕನನ್ನು) ದಹಿಸುವುದೋ (ನಷ್ಟನನ್ನಾಗಿ-ಭ್ರಷ್ಟನನ್ನಾಗಿ ಮಾಡುವುದೋ), ತಾವತ್-ಹಾಗೆ (ಅಷ್ಟು ಉಗ್ರವಾಗಿ), ವಹ್ನಿಃ-ಅಗ್ನಿಯು (ಜಡಾಗ್ನಿಯು), ನ ದಹತೇ-ದಹಿಸುವುದಿಲ್ಲ; ಸ್ವೋದರೇ-ತನ್ನ ಹೊಟ್ಟೆಯಲ್ಲಿ ಶಸ್ತ್ರಘಾತಃ-ಶಸ್ತ್ರದ

---

ನಿಶ್ಶೇಷವಾಗಿ) ದಹಿಸುವುದೋ, ಅದರಂತೆ ಅಗ್ನಿಯು ದಹಿಸುವುದಿಲ್ಲ; ಹೊಟ್ಟೆಯಲ್ಲಿ ಶಸ್ತ್ರದಿಂದ ಇರಿಯುವುದು, ವಿಷವನ್ನು ನುಂಗುವುದು, ಮತ್ತು ಸರ್ಪ ಕಚ್ಚುವುದು, ದೇಹನಾಶಕ್ಕೆ ಮಾತ್ರ ಕಾರಣವಾಗುತ್ತದೆ; ಆದರೆ ಬ್ರಾಹ್ಮಣಾವಜ್ಞೆಯು, ಸರ್ವವನ್ನೂ (ಶ್ರೇಯಃಸಾಧಕವಾದ ಪುಣ್ಯಾದಿ ಸಂಪತ್ತನ್ನೂ) ದಹಿಸುತ್ತದೆ; ಯಾವ ವಸ್ತುವು ಅಗ್ನಿಯಿಂದ ದಹಿಸಲ್ಪಡುವುದಿಲ್ಲವೋ ಅಥವಾ ರಾಜರಿಂದಾಗಲಿ, ಚೋರರಿಂದಾಗಲಿ ಅಪಹರಿಸಲ್ಪಡುವುದಿಲ್ಲವೋ, ಅದನ್ನೂ ಸಹ ವಿಪ್ರಾವಜ್ಞೆಯು ಶೀಘ್ರವಾಗಿ ಸುಡುತ್ತದೆ ಮತ್ತು ಅಪಹರಿಸುತ್ತದೆ—ಸಂಶಯವಿಲ್ಲ (೭೦-೭೨). ಬ್ರಾಹ್ಮಣಾವಜ್ಞಾನದಿಂದ

ಘಾತವೂ, ವಾ-ಅಥವಾ, ವಿಷಾಶನಂ-ವಿಷವನ್ನು ನುಂಗುವುದೂ, ಅಹಿಸ್ಪೃಶಿ- ಸರ್ಪವು ಕಚ್ಚುವುದೂ, ದೇಹಮಾತ್ರವಿನಾಶಾಯ-ದೇಹದ ನಾಶಕ್ಕೆ ಮಾತ್ರ ಕಾರಣವಾಗುತ್ತದೆ; ಬ್ರಹ್ಮಾವಜ್ಞಾ-ಬ್ರಾಹ್ಮಣಾವಮಾನವು, ಅಖಿಲಂ-ಸರ್ವವನ್ನೂ (ಪೂರ್ವಪುಣ್ಯಾದಿ ಶ್ರೇಯಃ ಸಾಧನಗಳೆಲ್ಲವನ್ನೂ), ದಹೇತ್-ದಹಿಸುತ್ತದೆ; ಯತ್- ಯಾವ ವಸ್ತುವು, ವಹ್ನಿನಾ-ಅಗ್ನಿಯಿಂದ, ಅದಹ್ಯಂ-ದಹಿಸಲ್ಪಡದುದು; ಸ್ಯಾತ್- ಆಗಿರುವುದೋ, ನೃಪದಸ್ಯುಭಿಃ-ರಾಜರಿಂದಲೂ ಚೋರರಿಂದಲೂ, ಅಹಾರ್ಯಂ- ಅಪಹರಿಸಲಾಗದುದೋ, ತತ್-ಅದನ್ನು (ಆ ವಸ್ತುವನ್ನು), ವಿಪ್ರಾವಜ್ಞಾ-ಬ್ರಾಹ್ಮಣಾವ ಮಾನವು, ದಹೇತ್-ಸುಟ್ಟು ಬೂದಿಮಾಡುತ್ತದೆ; ಕ್ಷಿಪ್ರಂ-ಶೀಘ್ರವಾಗಿ, ತತ್-ಅದನ್ನು ಹರೇತ್-ಅಪಹರಿಸುತ್ತದೆ; ನ ಸಂಶಯಃ- ಸಂಶಯವಿಲ್ಲ (ನಿಶ್ಚಯವು).

**ಯದವಜ್ಞಾನತಃ ಶಕ್ರೋ ದೌರ್ಭಾಗ್ಯಂ ಪರಮಂ ಗತಃ ॥ ೭೩ ॥**
**ಇಂದ್ರದ್ಯುಮ್ನೋ ಗಜೋ ಜಾತೋ ಮೃತೋ ಹಂಸಶ್ಚ ಡಿಭಕಃ ।**
**ಸಮುದ್ರಃ ಶೋಷಮಾಪನ್ನಃ ಚಂದ್ರಮಾ ರಾಜಯಕ್ಷ್ಮವಾನ್ ॥ ೭೪ ॥**
**ನಹುಷಶ್ಚ ಚ್ಯುತೋ ರಾಜ್ಯಾದ್ಯಾದವಾಶ್ಚ ಕ್ಷಯಂ ಗತಾಃ ।**
**ಆಸುರೀಂ ಯೋನಿಮಾಪನ್ನೌ ಜಯಶ್ಚ ವಿಜಯಸ್ತಥಾ ॥ ೭೫ ॥**
**ನಲಕೂಬರಮಣಿಗ್ರೀವೌ ವೃಕ್ಷತಾಂ ಗಮಿತೌ ಯತಃ ।**
**ಅನಪತ್ಯೋ ಭವತ್ಪಾಂಡುಸ್ತಥಾ ಕಲ್ಮಾಷಪಾನ್ನೃಪಃ ॥ ೭೬ ॥**
**ಪರೀಕ್ಷಿನ್ಮರಣಂ ಪ್ರಾಪ್ತೋ ಬಲೀ ರಾಜ್ಯಚ್ಯುತೋಽಭವತ್ ।**
**ಏವಂ ನಾನಾ ನೃಪಾಃ ಪ್ರಾಯೋ ವಿಪ್ರಾವಜ್ಞಾನಪಾತಿತಾಃ ॥ ೭೭ ॥**

ಬ್ರಾಹ್ಮಣಾವಮಾನದಿಂದ ಕಷ್ಟಸ್ಥಿತಿಗಳನ್ನು ಹೊಂದಿದ ರಾಜಾದಿಗಳನ್ನು ನಿದರ್ಶನಾರ್ಥವಾಗಿ ಉದಹರಿಸುತ್ತಾರೆ:—

ಯದವಜ್ಞಾನತಃ-ಯಾವ ಬ್ರಾಹ್ಮಣರ ಅವಜ್ಞಾನದಿಂದ, ಶಕ್ರಃ-ಇಂದ್ರನು, ಇಂದ್ರನು ಸ್ವರ್ಗೈಶ್ವರ್ಯವನ್ನು ಕಳೆದುಕೊಂಡನು;[1] ಇಂದ್ರದ್ಯುಮ್ನ ರಾಜನು ವಿಪ್ರಶಾಪದಿಂದ ಗಜನಾಗಿ ಹುಟ್ಟಿದನು;[2] ಹಂಸಡಿಭಕರು ಮೃತರಾದರು;[3] ಸಮುದ್ರನು

1. ದೂರ್ವಾಸರು ಕೊಟ್ಟ ಹೂಮಾಲೆಯನ್ನು ತನ್ನ ಗಜದ ಕಾಲಿಗೆ ಸಿಗುವಂತೆ ಮಾಡಿದ ತಿರಸ್ಕಾರದಿಂದ, ಅವರಿಂದ ಶಪ್ತನಾಗಿ, ಸ್ವರ್ಗರಾಜ್ಯದಿಂದ ಚ್ಯುತನಾದನು.

2. ಇಂದ್ರದ್ಯುಮ್ನರಾಜನು, ಬಂದ ಅಗಸ್ತ್ಯಋಷಿಗಳನ್ನು ಸತ್ಕರಿಸದೆ ಅವರ ಮನನೋಯಿಸಿದ ಪ್ರಯುಕ್ತ ಶಪ್ತನಾಗಿ ಗಜನಾಗಿ ಜನಿಸಿದನು.

3. ಹಂಸಡಿಭಕರು, ದೂರ್ವಾಸಋಷಿಗಳನ್ನು ಅಪಮಾನಗೊಳಿಸಿ, ಶ್ರೀಕೃಷ್ಣ ಬಲರಾಮರಿಂದ ಹತರಾದರು.

ಪರಮಂ - ಅತಿಶಯವಾದ, ದೌರ್ಭಾಗ್ಯಂ - ಹೀನಸ್ಥಿತಿಯನ್ನು (ಸ್ವರ್ಗದ ರಾಜ್ಯೈಶ್ವರ್ಯಗಳ ನಷ್ಟವನ್ನು), ಗತಃ-ಹೊಂದಿದನು; ಇಂದ್ರದ್ಯುಮ್ನಃ- ಇಂದ್ರದ್ಯುಮ್ನ ರಾಜನು, ಗಜಃ-ಗಜರಾಜನು, ಜಾತಃ-ಆದನು (ಶಾಪದಿಂದ ಗಜದೇಹವನ್ನು ಹೊಂದಿದನು); ಹಂಸಃ-ಹಂಸನೂ, ಚ-ಮತ್ತು ಡಿಭಕಃ-ಡಿಭಕನೂ, ಮೃತಃ- ಮರಣ ಹೊಂದಿದರು; ಸಮುದ್ರಃ-ಸಮುದ್ರವು, ಶೋಷಂ-ಜಲಶೂನ್ಯತೆಯನ್ನು ಆಪನ್ನಃ-ಹೊಂದಿತು; ಚಂದ್ರಮಾಃ-ಚಂದ್ರದೇವನು, ರಾಜಯಕ್ಷ್ಮವಾನ್-ಕ್ಷಯರೋಗಿಯಾದನು; ನಹುಷಃ-ನಹುಷನು, ರಾಜ್ಯಾತ್-ರಾಜ್ಯದಿಂದ, ಚ್ಯುತಃ-ಭ್ರಷ್ಟನಾದನು (ರಾಜಪದವಿಯಿಂದ ಕೆಳಗೆ ಅಜಗರನಾಗಿ ಬಿದ್ದನು); ಯಾದವಾಃ- ಯಾದವರು, ಕ್ಷಯಂ- (ಕುಲ) ನಾಶವನ್ನೇ, ಗತಾಃ-ಹೊಂದಿದರು; ಜಯಃ- (ವಿಷ್ಣುಪಾರ್ಷದರಾದ) ಜಯನೂ, ತಥಾ ವಿಜಯಃ-ಮತ್ತು ವಿಜಯನೂ, ಆಸುರೀಂ- ಅಸುರಸಂಬಂಧವಾದ, ಯೋನಿಂ-ದೇಹವನ್ನು, ಆಪನ್ನೌ-ಹೊಂದಿದರು; ಯತಃ-ಯಾವ ವಿಪ್ರಾವಜ್ಞೆಯಿಂದಲೇ, ನಲಕೂಬರ ಮಣಿಗ್ರೀವೌ-ನಲಕೂಬರ ಮಣಿಗ್ರೀವರು,

---

ಬತ್ತಿಹೋದನು;[1] ಚಂದ್ರನು ಕ್ಷಯರೋಗಗ್ರಸ್ತನಾದನು;[2] ನಹುಷನು ರಾಜ್ಯಚ್ಯುತನಾದನು;[3] ಯಾದವರು ಕುಲನಾಶವನ್ನೇ ಹೊಂದಿದರು;[4] ವಿಷ್ಣುಪಾರ್ಷದರಾದ

---

1. ಅಗಸ್ತ್ಯರು ಕುಪಿತರಾಗಿ, ಸಮುದ್ರವನ್ನೇ ಆಪೋಶನ ಮಾಡಿದರು—ಬತ್ತಿ ಹೋಯಿತು; ಹೀಗೆ ಉಚಥ್ಯನೂ ಒಮ್ಮೆ ಸಮುದ್ರವನ್ನು ಪಾನಮಾಡಿದನು.

2. ದಕ್ಷಪುತ್ರಿಯರಾದ ಅಶ್ವಿನೀ ಮೊದಲಾದ ೨೭ ಹೆಣ್ಣುಮಕ್ಕಳನ್ನು ಚಂದ್ರನು ಲಗ್ನಮಾಡಿಕೊಂಡಿದ್ದ—ಎಲ್ಲರಿಗಿಂತ ರೋಹಿಣಿಯಲ್ಲಿ ವಿಶೇಷ ಪ್ರೇಮ ಮಾಡುತ್ತಿದ್ದ ಕಾರಣ, ಇತರರು ತಮ್ಮ ತಂದೆಯಲ್ಲಿ ದೂರಿಕೊಂಡರು; ದಕ್ಷಪ್ರಜಾಪತಿಯು, ಚಂದ್ರನಿಗೆ ಕ್ಷಯರೋಗಗ್ರಸ್ತನಾಗೆಂದು ಶಪಿಸಿದನು.

3. ನಹುಷನು ಸ್ವರ್ಗರಾಜ್ಯವನ್ನಾಳುತ್ತಿದ್ದನು; ಸಪ್ತಋಷಿಗಳಿಂದ ತನ್ನ ಪಲ್ಲಕ್ಕಿಯನ್ನು ಹೊರಿಸಿ, ಶಚೀದೇವಿಯ ಬಳಿಗೆ ಹೊರಟಿರಲು, ಪಲ್ಲಕ್ಕಿ ಹೊತ್ತವರಲ್ಲಿ ಒಬ್ಬರಾದ ಅಗಸ್ತ್ಯರ ತಲೆಯಮೇಲೆ ಕಾಲಿನಿಂದ ತಿವಿದು (ಸರ್ಪ ಸರ್ಪ—ಬೇಗ ನಡೆ) ಎಂದು ಹೇಳಿದನು; ಆಗ ಅವರು 'ಸರ್ಪೋ ಭವ' ಎಂದು ಶಪಿಸಿದರು; ತಕ್ಷಣವೇ ಅಜಗರನಾಗಿ ಭೂಮಿಯಲ್ಲಿ ಬಿದ್ದನು.

4. ಸಾಂಬನಿಗೆ ಸ್ತ್ರೀವೇಷವನ್ನು ಹಾಕಿ, ಈ ಗರ್ಭಿಣಿಸ್ತ್ರೀಯು ಯಾವ ಶಿಶುವನ್ನು ಪ್ರಸವವಾಗುವಳೆಂದು, ತ್ರಿಕಾಲಜ್ಞರಾದ ಋಷಿಗಳನ್ನು ಪ್ರಶ್ನಿಸಿ ವಂಚನೆ ಮಾಡಲು ಯತ್ನಿಸಿದರು; ಅವರು 'ನಿಮ್ಮ ಕುಲನಾಶಕವಾದ ಮುಸಲವನ್ನೇ (ಒನಕೆ) ಪ್ರಸವಿಸುವಳೆಂದರು; ಆಗ ವೇಷವನ್ನು ತೆಗೆದು ನೋಡಲಾಗಿ ಗರ್ಭಸ್ಥಳದಲ್ಲಿ ಮುಸಲವಿತ್ತು; ಉಗ್ರಸೇನರಾಜನು ಅದನ್ನು ಅರೆದು (ಪುಡಿಮಾಡಿ) ಸಮುದ್ರಜಲದಲ್ಲಿ ಹಾಕಿಸಿದನು; ಆ ಪುಡಿಯು ದಡವನ್ನು ಸೇರಿ ಅಲ್ಲಿ ಹುಟ್ಟಿಕೊಂಡ ಆಪುಗಳಿಂದ, ಯಾದವರು ಪರಸ್ಪರ ಹೊಡೆದಾಡಿ ಮೃತರಾದರು—ಶ್ರೀಕೃಷ್ಣನೂ, ಆ ಮುಸಲದ ತುಂಡಿನಿಂದಾದ ಬಾಣದಿಂದ ಜರಾನಾಮಕವ್ಯಾಧನಿಂದ, ಕಾಲಿನಲ್ಲಿ ತಾಡಿತನಾಗಿ, ಮೃತನಾದಂತೆ ತೋರಿ, ಬ್ರಹ್ಮಾದಿಗಳ ಪ್ರಾರ್ಥನೆಯಂತೆ, ಪರಂಧಾಮವನ್ನು ಹೊಂದಿದನು; ಹೀಗೆ ವಿಪ್ರಶಾಪದಿಂದ ಯಾದವಕುಲ ನಾಶವಾಯಿತು.

ವೃಕ್ಷತಾಂ-ವೃಕ್ಷತ್ವವನ್ನು, ಗಮಿತೌ-ಹೊಂದಿಸಲ್ಪಟ್ಟರು; ಪಾಂಡುಃ- ಪಾಂಡುರಾಜನು, ಅನಪತ್ಯಃ-ಪುತ್ರಹೀನನು (ಔರಸಪುತ್ರರಹಿತನು), ಅಭವತ್-ಆದನು; ತಥಾ-ಮತ್ತು, ಕಲ್ಮಾಷಪಾದ್ಮುಖಾಃ-ಕಲ್ಮಾಷಪಾದನೇ ಮೊದಲಾದವರು (ಅಪುತ್ರವಂತರಾದರು); ಪರೀಕ್ಷಿತ್-ಪರೀಕ್ಷಿದ್ರಾಜನು, ಮರಣಂ-ಮರಣವನ್ನು, ಪ್ರಾಪ್ತಃ-ಹೊಂದಿದನು; ಬಲಿಃ-ಬಲಿಚಕ್ರವರ್ತಿಯು, ರಾಜ್ಯಚ್ಯುತಃ-ರಾಜ್ಯದಿಂದ ಭ್ರಷ್ಟನು, ಅಭವತ್-ಆದನು; ಏವಂ-ಹೀಗೆ, ನಾನಾನೃಪಾಃ-ಬಹು ರಾಜರುಗಳು, ಪ್ರಾಯಃ-ಪ್ರಾಯಶಃ (ಬಹುವಾಗಿ), ವಿಪ್ರಾವಜ್ಞಾನಪಾತಿತಾಃ-ಬ್ರಾಹ್ಮಣಾವಜ್ಞಾನದಿಂದ, ಸ್ಥಾನಚ್ಯುತರಾಗಿರುವರು.

**ಅನ್ಯೇಪಿ ಬಹವೋ ಲೋಕೇ ವಿಪ್ರಾಂ ನಾಮಾಪಿ ದುಃಸಹಾ ।**
**ತಾನ್ಮೂಢಾ ನೈವ ಜಾನಂತಿ ಮಂದಭಾಗ್ಯಾ ಮದಂ ಗತಾಃ ॥ ೭೮ ॥**

---

ಜಯವಿಜಯರು ಅಸುರದೇಹವನ್ನು ಹೊಂದಿದರು;[1] ನಲಕೂಬರ ಮಣಿಗ್ರೀವರು ವೃಕ್ಷಗಳಾದರು;[2] ಪಾಂಡುರಾಜನೂ, ಕಲ್ಮಾಷಪಾದನೂ, ಸಂತಾನರಹಿತರಾದರು;[3] ಪರೀಕ್ಷಿದ್ರಾಜನು ಮರಣವನ್ನೇ ಹೊಂದಿದನು;[4] ಬಲಿಚಕ್ರವರ್ತಿಯು ರಾಜ್ಯಚ್ಯುತನಾದನು;[5] ಹೀಗೆಯೇ ನಾನಾ ನೃಪರು ವಿಪ್ರಾವಜ್ಞಾನದಿಂದ ದುರ್ಗತಿಗಳನ್ನು (ಹೀನಸ್ಥಿತಿಗಳನ್ನು) ಹೊಂದಿದ್ದಾರೆ (೭೩-೭೭). ಇನ್ನು ಬಹುಜನರು ವಿಪ್ರಾವಜ್ಞೆ

---

1. ಜಯವಿಜಯರು ಸನಕಾದಿಗಳ ಶಾಪದಿಂದ, ಹಿರಣ್ಯಕಶಿಪು, ಹಿರಣ್ಯಾಕ್ಷರಾಗಿ ಅಸುರ ಯೋನಿಯಲ್ಲಿ ಹುಟ್ಟಿದರು.

2. ನಲಕೂಬರ ಮಣಿಗ್ರೀವರು ಕುಬೇರನ ಮಕ್ಕಳು; ನಾರದರು ಬಂದರೂ ದಿಗಂಬರರಾಗಿ ಸ್ತ್ರೀಯರೊಡನೆ ಕ್ರೀಡಿಸುತ್ತಿದ್ದು ಅವರ ಶಾಪದಿಂದ ಅರ್ಜುನವೃಕ್ಷಗಳಾದರು; ಶ್ರೀಕೃಷ್ಣನಿಂದ ಉದ್ಧೃತರಾದರು.

3. ಪಾಂಡುರಾಜನು, ಮೃಗರೂಪದಿಂದ, ತನ್ನ ಭಾರ್ಯೆಯೊಂದಿಗೆ ಕ್ರೀಡಿಸುತ್ತಿದ್ದ ಕಿಂದಮ ಋಷಿಗೆ ಬಾಣಪ್ರಯೋಗಮಾಡಿ, 'ಪತ್ನೀಸಂಗಮಾಡಿದೆಯಾದರೆ ಸಾಯುವಿ', ಎಂಬ ಶಾಪವನ್ನು ಪಡೆದನು—ಅಪುತ್ರವಂತನಾಗಿ, ದೇವತೆಗಳ ವರದಿಂದ ಪುತ್ರರನ್ನು ತನ್ನ ಭಾರ್ಯೆರ ದ್ವಾರಾ ಪಡೆದನು. ಋಷಿಶಾಪದಂತೆ ಮಾದ್ರೀಸಂಗದಿಂದ ಮೃತನಾದನು.

4. ಕಲ್ಮಾಷಪಾದರಾಜನು, ವಸಿಷ್ಠರ ಶಾಪದಿಂದ ರಾಕ್ಷಸದೇಹದಲ್ಲಿ ಬಂದು, ಅಲ್ಲಿಯೂ, ಅರಣ್ಯದಲ್ಲಿ ಬ್ರಾಹ್ಮಣದಂಪತಿಗಳು ಕ್ರೀಡಿಸುತ್ತಿರುವಾಗ, ಪತಿಯನ್ನು ತಿಂದು, ಆತನ ಭಾರ್ಯೆಯಿಂದ, '೧೨ ವರ್ಷಗಳ ಪರ್ಯಂತ ನಿನಗೆ ಸ್ತ್ರೀಸಂಗ ಬೇಡ—ಮಾಡಿದೆಯಾದರೆ ಮರಣ ಹೊಂದು', ಎಂಬ ಶಾಪವನ್ನು ಹೊಂದಿ, ಸಂತಾನವಿಲ್ಲದೆ ದುಃಖಿಸಿದನು;

5. ಬಲಿಚಕ್ರವರ್ತಿಯು, ವಟು ವಾಮನನಿಗೆ ಮೂರುಪಾದ ಭೂಮಿಯನ್ನು ದಾನಮಾಡುವಾಗ, ಕುಲಗುರುಗಳಾದ ಶುಕ್ರಾಚಾರ್ಯರು ಮಾಡಿದ ಸಲಹೆಯನ್ನು ತಿರಸ್ಕರಿಸಿ, ದಾನಸಂಕಲ್ಪವನ್ನು ಮಾಡಿದ್ದರಿಂದ, ರಾಜ್ಯವನ್ನೇ ಕಳೆದುಕೊಂಡನು.

**ಅವಜ್ಞಾಯಾಃ ಫಲಂ ದೃಷ್ಟ್ವಾ ಸ್ವಯಂ ಭುಕ್ತ್ವಾಪಿ ಮೋಹಿತಾಃ ।**
**ಶ್ವಪುಚ್ಛವತ್ಸದಾ ಮತ್ತಾ ವಿಪ್ರಾವಜ್ಞಾಂ ಪ್ರಕುರ್ವತೇ ॥ ೭೯ ॥**
**ಜಾನಾತಿ ವಿಪ್ರಮಾಹಾತ್ಮ್ಯಂ ಸ್ವಯಮೇವ ಹರಿಃ ಪ್ರಭುಃ ।**
**ಕೃತಂ ಪಾದಮಪಿ ಸ್ವಸ್ಯ ಹೃದಿ ಯೇಷಾಂ ಬಭಾರ ಯಃ ॥ ೮೦ ॥**

ಲೋಕೇ-ಜಗತ್ತಿನಲ್ಲಿ ಅನ್ಯೇಪಿ-ಇತರರಾದ, ಬಹವಃ-ಬಹುಜನರು, (ಪಾತಿತಾಃ-ವಿಪ್ರಾವಜ್ಞೆಯಿಂದ ಭ್ರಷ್ಟರಾಗಿರುವರು;) ಏಷಾಂ-ಈ ಜನರ, ನಾಮಾಪಿ-ಹೆಸರೂ ಸಹ, ದುಃಸಹಾ-(ಕೇಳಿ) ಸಹಿಸಲಾಗದು; ತಾನ್-ಹೀಗೆ ಕೆಟ್ಟವರನ್ನು ಮಂದಭಾಗ್ಯಾಃ-ಪುಣ್ಯರಹಿತರಾದವರು (ಅಲ್ಪಪುಣ್ಯವುಳ್ಳವರು), ಮದಂ-ಮದವನ್ನು (ಧನಾದಿ ನಿಮಿತ್ತ ಗರ್ವವನ್ನು), ಗತಾಃ-ಹೊಂದಿದವರಾಗಿ, ನೈವ ಜಾನಂತಿ-(ಬ್ರಾಹ್ಮಣಾವಮಾನದ ಫಲವನ್ನು) ತಿಳಿಯುವುದೇ ಇಲ್ಲ; (ಮತ್ತೆ ಕೆಲವು ಮಂದಭಾಗ್ಯರು), ಅವಜ್ಞಾಯಾಃ-ವಿಪ್ರಾವಮಾನದ, ಫಲಂ-ಫಲವನ್ನು ದೃಷ್ಟ್ವಾ-ಕಂಡು (ನೋಡಿಯೂ), ಸ್ವಯಂ-ತಾವೇ, ಭುಕ್ತ್ವಾಪಿ-(ಆ ಫಲವನ್ನು) ಅನುಭವಿಸಿಯೂ, ಮೋಹಿತಾಃ-ಅಜ್ಞಾನಿಗಳಾಗಿರುವರು (ತಮ್ಮ ಪಾತಕ್ಕೂ, ಬ್ರಾಹ್ಮಣಾವಮಾನಕ್ಕೂ ಇರುವ ಕಾರ್ಯಕಾರಣ ಸಂಬಂಧವನ್ನು ತಿಳಿಯದೇ ಮೋಹಿತರಾಗಿರುತ್ತಾರೆ); ಶ್ವಪುಚ್ಛವತ್- ನಾಯಿಬಾಲದಂತೆ (ಅದು ಸದಾ ಡೊಂಕಾಗಿಯೇ ಇರುವಂತೆ—ರುಜುವಾಗಿಡಲು ಶಕ್ಯವಿಲ್ಲದಂತೆ), ಸದಾ-ಸರ್ವದಾ, ಮತ್ತಾಃ-ಗರ್ವಿಷ್ಠರಾಗಿ (ಮದಿಸಿ), ವಿಪ್ರಾವಜ್ಞಾಂ- ಬ್ರಾಹ್ಮಣಾವಮಾನವನ್ನು ಪ್ರಕುರ್ವತೇ- ಮಾಡುತ್ತಾರೆ; ಹರಿಃ-ಶ್ರೀಹರಿಯು, ಸ್ವಯಂಏವ-ತಾನೇ (ಸಾಕ್ಷಾತ್ತಾಗಿ), ವಿಪ್ರಮಾಹಾತ್ಮ್ಯಂ-ಬ್ರಾಹ್ಮಣರ ಮಹಿಮೆಯನ್ನು, ಜಾನಾತಿ-ತಿಳಿಯುತ್ತಾನೆ; ಯಃ- ಯಾವ ಆ ಶ್ರೀಹರಿಯು, ಸ್ವಸ್ಯ-ತನ್ನ, ಹೃದಿ-ಎದೆಯಲ್ಲಿ (ಎದೆಯ ಮೇಲೆ), ಕೃತಂ-

---

ಯಿಂದ ಕಷ್ಟವನ್ನನುಭವಿಸಿದ್ದಾರೆ; ಹಾಗೆ ಅನುಭವಿಸಿದವರ ಹೆಸರನ್ನು ಸಹ ಕೇಳಿ ಸಹಿಸುವುದೂ ಕಷ್ಟವೇ; ಮಂದಭಾಗ್ಯರೂ, ಧನಾದಿಗಳಿಂದ ಉನ್ನತ್ತರಾದವರೂ, ಬ್ರಾಹ್ಮಣಾವಮಾನದ ಫಲವನ್ನು ತಿಳಿಯುವುದೇ ಇಲ್ಲ; ಮತ್ತೆ ಕೆಲವರು, ಅದರ ಫಲವನ್ನು ನೋಡಿಯೂ, ತಾವೇ ಅನುಭವಿಸಿಯೂ, ಮೋಹಿತರಾಗುತ್ತಾರೆ; ಆ ಫಲಕ್ಕೂ ಅವಜ್ಞೆಗೂ ಇರುವ ಕಾರ್ಯಕಾರಣ ಸಂಬಂಧವನ್ನು ಅಜ್ಞಾನದಿಂದ ತಿಳಿಯುವುದಿಲ್ಲ; ಸದಾ ನಾಯಿಬಾಲದಂತೆ ಡೊಂಕು (ತಿದ್ದಿ ಸರಿಮಾಡಲು ಶಕ್ಯವಲ್ಲದ) ಬುದ್ಧಿಯುಳ್ಳವರಾಗಿ, ಸರ್ವದಾ ಗರ್ವದಿಂದ ಬ್ರಾಹ್ಮಣಾವಜ್ಞೆಯನ್ನು ಮಾಡುತ್ತಲೇ ಇರುವರು; ತನ್ನನ್ನು ವಕ್ಷಸ್ಥಲದಲ್ಲಿ ಕಾಲಿನಿಂದ ಒದೆದುದನ್ನೂ (ಪಾದತಾಡನವನ್ನೂ) ಸಹಿಸಿದ ಶ್ರೀಹರಿಯೇ ಬ್ರಾಹ್ಮಣರ ಮಹಿಮೆಯನ್ನು ಪೂರ್ಣವಾಗಿ ಬಲ್ಲನು (೭೮-೮೦). (ದ್ವಾದಶೀ) ವ್ಯಾಜದಿಂದ, ಶೀಘ್ರಕೋಪಿಗಳಾದ ದೂರ್ವಾಸರ

ಮಾಡಲ್ಪಟ್ಟ (ಸ್ಥಾಪಿಸಲಾದ-ಕಾಲಿನಿಂದ ಎದೆಯನ್ನು ಒದ್ದರೂ), ಯೇಷಾಂ-ಯಾವ ಬ್ರಾಹ್ಮಣರ, ಪಾದಂ ಅಪಿ-ಪಾದವನ್ನು ಸಹ, ಬಭಾರ-ಧರಿಸಿದನು (ಸಹಿಸಿದನು) (ಆತನೇ ವಿಪ್ರಮಾಹಾತ್ಮೆಯನ್ನು ಬಲ್ಲನು).

**ಜ್ಞಾತವಾನಂಬರೀಷಶ್ಚ ಛಲತೋಽಪಿ ಚ ಕೋಪನಂ ।**
**ದದೌ ಪಂಚಾಶತಂ ಕನ್ಯಾ ರಾಜಾ ಸೌಭರಯೇ ಭಯಾತ್ ॥ ೮೧ ॥**
**ಸ ಮಾಂಧಾತಾ ಸ್ಮ ಜಾನಾತಿ ವಿಪ್ರಮಾಹಾತ್ಮ್ಯಮದ್ಭುತಂ ।**
**ರುಗ್ಮಿಣೀಸಹಿತಃ ಕೃಷ್ಣೋ ರಥಂ ಸ್ವಯಮುವಾಹ ಯಃ ॥ ೮೨ ॥**
**ಸ ಕೃಷ್ಣೋ ವೇದ ಮಾಹಾತ್ಮ್ಯಂ ಕಿಂ ವಿದುರ್ಮೂಢಚೇತಸಃ ।**
**ಔರ್ವಸ್ಯಾನುಗ್ರಹಾದ್ರಾಜಾ ಸಗರೋ ರಾಜ್ಯಮಾಪ್ತವಾನ್ ॥ ೮೩ ॥**
**ದ್ರುಪದೋ ದ್ರೋಣಹಂತಾರಂ ವಹ್ನೇಃ ಪುತ್ರಮವಾಪ್ತವಾನ್ ।**
**ಮಂತ್ರೇ ಬೃಹಸ್ಪತೇಸ್ತಿಷ್ಠನ್ನಿಂದ್ರೋ ಮುಕ್ತಸ್ತು ಸಂಕಟಾತ್ ॥ ೮೪ ॥**
**ಮಂತ್ರೋಪದೇಶತಃ ಕುಂತೀ ಗಾಂಧಾರೀ ಚ ಸುತಾನ್ವಿತಾ ।**
**ಪುತ್ರಾ ರಾಮಾದಯೋ ಜಾತಾ ರಾಜ್ಞೋ ದಶರಥಸ್ಯ ಹಿ ॥ ೮೫ ॥**
**ಮಾರ್ಕಂಡೇಯೋಽತಿದೀರ್ಘಾಯುಃ ಶ್ರೀಮಂತಶ್ಚ ಗದಾದಯಃ ।**
**ಹರಿಶ್ಚಂದ್ರಾದಯೋಽನ್ಯೇಽಪಿ ರಾಜಾನೋ ಧನಿಕಾ ಅಪಿ ॥ ೮೬ ॥**
**ಜಾತಾಃ ಸರ್ವೇಽಪಿ ಸಂಪನ್ನಾ ಮೂಢಾ ಜಾನಂತಿ ಕಿಂ ನು ತಾನ್ ।**
**ಕಿಯತ್ ಬ್ರೂಯಾಂ ಕತಿ ಬ್ರೂಯಾಂ ಕಥಂ ಬ್ರೂಯಾಮಹಂ ಹಿ ವಃ ॥**
**ಮಹಿಮಾನಂ ತು ವಿಪ್ರಾಣಾಂ ಹರಿಣಾ ಮಾನಿತಾ ಹಿ ಯೇ ।**

ಅಂಬರೀಷಃ-ಅಂಬರೀಷರಾಜನು, ಛಲತಃ ಅಪಿ-ವ್ಯಾಜದಿಂದಲಾದರೂ (ದ್ವಾದಶೀಪಾರಣೆಯ ನಿಮಿತ್ತದಿಂದ), ಕೋಪನಂ-ಶೀಘ್ರಕೋಪಿಯಾದ ದೂರ್ವಾಸರನ್ನು (ಅವರ ಮಹಿಮೆಯನ್ನು), ಜ್ಞಾತವಾನ್-ತಿಳಿದನು; ರಾಜಾ-ರಾಜನು, ಭಯಾತ್- (ಬ್ರಾಹ್ಮಣ) ಭಯದಿಂದ, ಸೌಭರಯೇ-ಸೌಭರಿಋಷಿಗಳಿಗೆ, ಪಂಚಾಶತಂ ಕನ್ಯಾಃ- ಐವತ್ತು ಕನ್ಯೆಯರನ್ನು (ತನ್ನ ಮಕ್ಕಳನ್ನು), ದದೌ-ಕೊಟ್ಟನು (ವಿವಾಹಮಾಡಿಕೊಟ್ಟನು); ಸಃ-ಆತನು (ಹೀಗೆ ಕನ್ಯೆಯರನ್ನಿತ್ತ), ಮಾಂಧಾತಾ-

---

ಮಹಿಮೆಯನ್ನು ಅಂಬರೀಷನು ತಿಳಿದನು; ಮಾಂಧಾತ ರಾಜನು, ಸೌಭರಿಋಷಿಗಳ ಭಯದಿಂದ ತನ್ನ ಐವತ್ತು ಮಂದಿ ಹೆಣ್ಣುಮಕ್ಕಳನ್ನೂ ವಿವಾಹಮಾಡಿಕೊಟ್ಟನು— ಆತನೇ ಅದ್ಭುತವಾದ ವಿಪ್ರಮಾಹಾತ್ಮ್ಯೆಯನ್ನು ಬಲ್ಲನು; ಬ್ರಾಹ್ಮಣವಾಕ್ಯದಿಂದ ಕುಂಡಿನೀಪುರಕ್ಕೆ ಧಾವಿಸಿ, ರುಗ್ಮಿಣಿಯೊಡನೆ ರಥವನ್ನೇರಿದ ಶ್ರೀಕೃಷ್ಣನು ಬ್ರಾಹ್ಮಣ ಮಹಾತ್ಮ್ಯವನ್ನು ಬಲ್ಲನು—ಅಜ್ಞಾನಿಗಳೇನು ಬಲ್ಲರು? ಔರ್ವರ ಅನುಗ್ರಹದಿಂದ

ಮಾಂಧಾತರಾಜನು, ಅದ್ಭುತಂ-ಅದ್ಭುತವಾದ, ವಿಪ್ರಮಾಹಾತ್ಮ್ಯಂ-ಬ್ರಾಹ್ಮಣರ ಮಹಿಮೆಯನ್ನು ಜಾನಾತಿ ಸ್ಮ-ತಿಳಿದವನಾದನು; ಯಃ-ಯಾವ, ಕೃಷ್ಣಃ-ಶ್ರೀಕೃಷ್ಣನು, ಸ್ವಯಂ-ತಾನೇ, ರುಗ್ಮಿಣೀಸಹಿತಃ-ರುಗ್ಮಿಣಿಯೊಡನೆ, ರಥಂ-ರಥವನ್ನು ಉವಾಹ-ಏರಿದನೋ, ಸಃ ಕೃಷ್ಣಃ-ಆ ಕೃಷ್ಣನೇ, ಮಾಹಾತ್ಮ್ಯಂ-(ಬ್ರಾಹ್ಮಣರ) ಮಹಿಮೆಯನ್ನು ವೇದ-ಬಲ್ಲನು (ರುಗ್ಮಿಣಿಯಿಂದ ಪತ್ರವನ್ನು ತಂದ ಬ್ರಾಹ್ಮಣನ ಮಾತಿನಂತೆ ಕುಂಡಿನೀಪುರಕ್ಕೆ ಧಾವಿಸಿ ರುಗ್ಮಿಣಿಯನ್ನು ಪಡೆದ ಶ್ರೀಕೃಷ್ಣನು ಬ್ರಾಹ್ಮಣ ಮಹಾತ್ಮ್ಯವನ್ನು ಬಲ್ಲನು); ಮೂಢಚೇತಸಃ-ಅಜ್ಞಾನಿಗಳು, ಕಿಂ ವಿದುಃ-ಏನು ಬಲ್ಲರು? (ತಿಳಿಯರು); ಔರ್ವಸ್ಯ-ಔರ್ವರ (ಚ್ಯವನಋಷಿಗಳ ಪುತ್ರರ), ಅನುಗ್ರಹಾತ್-ಅನುಗ್ರಹದಿಂದ, ರಾಜಾ ಸಗರಃ-ಸಗರಚಕ್ರವರ್ತಿಯು, ರಾಜ್ಯಂ-ರಾಜ್ಯವನ್ನು ಆಪ್ತವಾನ್- ಹೊಂದಿದನು; ದ್ರುಪದಃ-ದ್ರುಪದರಾಜನು, ದ್ರೋಣ ಹಂತಾರಂ-ದ್ರೋಣನನ್ನು ಸಂಹರಿಸುವ, ಪುತ್ರಂ-ಮಗನನ್ನು (ಧೃಷ್ಟದ್ಯುಮ್ನನನ್ನು), ವಹ್ನೇಃ-ಅಗ್ನಿಯಿಂದ (ಋತ್ವಿಜರ ಮಹಿಮೆಯಿಂದ), ಅವಾಪ್ತವಾನ್ - ಹೊಂದಿದನು;

---

ಸಗರಚಕ್ರವರ್ತಿಯು ರಾಜ್ಯವನ್ನು ಪಡೆದನು;[1] ದ್ರುಪದರಾಜನು ದ್ರೋಣರನ್ನು ಸಂಹರಿಸುವ ಪುತ್ರನನ್ನು (ಧೃಷ್ಟದ್ಯುಮ್ನನನ್ನು) ಬ್ರಾಹ್ಮಣರ (ಋತ್ವಿಜರ) ಮಹಿಮೆಯಿಂದ (ಯಜ್ಞಕುಂಡದಲ್ಲಿ) ಪಡೆದನು;[2] ಇಂದ್ರನು ಬೃಹಸ್ಪತಿಗಳ ಸಲಹೆಯಂತೆ ನಡೆದು,[3] ದುಃಖಪರಿಹಾರವನ್ನು ಹೊಂದಿದನು; ಕುಂತೀದೇವಿಯು,

---

1. ಇಕ್ಷ್ವಾಕುವಂಶದ ಬಾಹುಕರಾಜನ ಮಗನೇ ಸಗರನು; ಈತನ (ಬಾಹುಕನ) ರಾಜ್ಯವನ್ನು ಕಾರ್ತವೀರ್ಯಾರ್ಜುನ ವಂಶೀಯರು, ಅಪಹರಿಸಿದರು; ಪತ್ನೀಸಮೇತನಾಗಿ ಬಾಹುಕನು ಅರಣ್ಯವನ್ನು ಸೇರಿ ಮೃತನಾದನು; ಆತನ ಹೆಂಡತಿ 'ಯಾದವಿ'ಯು ಗರ್ಭಿಣಿಯಾಗಿದ್ದಳು; ಆಕೆಯ ಸವತಿಯು ಯಾದವಿಗೆ ವಿಷಕೊಟ್ಟಳು; ಯಾದವಿಯು ಸಹಗಮನ ಮಾಡಲು ಚಿತೆಯನ್ನೇರುವ ಸಮಯದಲ್ಲಿ ಔರ್ವರು ತಡೆದು, ತಮ್ಮ ಆಶ್ರಮಕ್ಕೆ ಕರೆದೊಯ್ದರು; ಅಲ್ಲಿ ಆಕೆಯು ಪ್ರಸವವಾದಳು; ಗರ (ವಿಷ) ಸಹಿತವಾಗಿ ಔರ್ವರಿಂದ ರಕ್ಷಿತನಾಗಿ, ಜನಿಸಿದ್ದರಿಂದ, ಅವರೇ 'ಸಗರ'ನೆಂದು ನಾಮಕರಣಮಾಡಿ, ಮುಂದೆ, ವೇದಶಾಸ್ತ್ರಗಳ ಪಾಠ ಹೇಳಿದರು; ರಾಜ್ಯವನ್ನೂ ಪಡೆದು ಸಗರ ಚಕ್ರವರ್ತಿಯಾದನು.

2. ಸಂತಾನಾರ್ಥವಾಗಿ, ದ್ರುಪದರಾಜನಿಂದ, ಯಜ್ಞಮಾಡಿಸಿದ, ಯಾಜ, ಉಪಯಾಜರೆಂಬ ಬ್ರಾಹ್ಮಣರ ವಿಶೇಷ ತಪಃಪ್ರಭಾವದಿಂದ, ಯಜ್ಞಕುಂಡದಿಂದ, ಧೃಷ್ಟದ್ಯುಮ್ನನೂ, ದ್ರೌಪದಿಯೂ ಜನಿಸಿದರು.

3. ಬೃಹಸ್ಪತಿಗಳು ದೇವಗುರುಗಳು; ದೇವರಾಜನಾದ ಇಂದ್ರನು ಅವರ ಸಲಹೆಗಳಂತೆ, ನಡೆದು, ನಾನಾ ಯುದ್ಧಗಳಲ್ಲಿ ದೈತ್ಯರನ್ನು ಸೋಲಿಸಿ, ಜಯಶಾಲಿಯಾಗಿದ್ದಾನೆ; ಇಂದ್ರಾದಿಗಳ ಜಯಾರ್ಥವಾಗಿ, ಮೃತಸಂಜೀವನಿ ವಿದ್ಯೆಯನ್ನು ದೈತ್ಯಗುರುಗಳಾದ ಶುಕ್ರಾಚಾರ್ಯರಿಂದ ಕಲಿತು ಬರಲು, ಬೃಹಸ್ಪತಿಗಳು ತಮ್ಮ ಮಗ ಕಚನನ್ನೇ ಕಳುಹಿಸಿಕೊಟ್ಟರು ಇತ್ಯಾದಿ ಅವರ ಮಹಿಮೆಯು ಭಾರತಾದಿ ಬಹು ಪುರಾಣಗಳಲ್ಲಿ ಸಹ ನಿರೂಪಿಸಲ್ಪಟ್ಟಿದೆ.

ಇಂದ್ರಃ-ಇಂದ್ರನು, ಬೃಹಸ್ಪತೇಃ-ಬೃಹಸ್ಪತ್ಯಾಚಾರ್ಯರ, ಮಂತ್ರೇ-ಸಲಹೆಯಂತೆ, ತಿಷ್ಠನ್-ನಡೆದು, ಸಂಕಟಾತ್-ದುಃಖದಿಂದ, ಮುಕ್ತಃ-ಮುಕ್ತನಾದನು; ಕುಂತೀ-ಕುಂತೀದೇವಿಯೂ, ಗಾಂಧಾರೀ ಚ-ಗಾಂಧಾರಿಯೂ, ಮಂತ್ರೋಪದೇಶತಃ-(ಕ್ರಮವಾಗಿ ದೂರ್ವಾಸರ ಮತ್ತು ವೇದವ್ಯಾಸರ) ಮಂತ್ರೋಪದೇಶದಿಂದ, ಸುತಾನ್ವಿತಾ - ಮಕ್ಕಳುಳ್ಳವರು (ಆದರು); ರಾಜ್ಞಃ - ರಾಜನಾದ, ದಶರಥಸ್ಯ-ದಶರಥನಿಗೆ, ರಾಮಾದಯಃ-ಶ್ರೀರಾಮನೇ ಮೊದಲಾದ, ಪುತ್ರಾಃ-ಮಕ್ಕಳು, ಜಾತಾಃ-ಹುಟ್ಟಿದರು; ಮಾರ್ಕಂಡೇಯಃ-ಮಾರ್ಕಂಡೇಯನು, ದೀರ್ಘಾಯುಃ-ಚಿರಾಯು (ಕಲ್ಪಾಯು) ಆದನು; ಗದಾದಯಃ-ಗದಾದಿ ರಾಜರು, ಶ್ರೀಮಂತಃ-ಶ್ರೀಮಂತರಾದರು; ಅನ್ಯೇಪಿ - ಇತರರಾದ, ಹರಿಶ್ಚಂದ್ರಾದಯಃ - ಹರಿಶ್ಚಂದ್ರನೇ ಮೊದಲಾದ, ರಾಜಾನಃ - ರಾಜರೂ, ಧನಿಕಾಃ ಅಪಿ-ಶ್ರೀಮಂತರೂ ಸಹ, ಸರ್ವೇ ಅಪಿ-ಎಲ್ಲರೂ, ಸಂಪನ್ನಾಃ - ಸುಖಿಗಳು, ಜಾತಾಃ-ಆದರು; ಮೂಢಾಃ-ಅಜ್ಞಾನಿಗಳು, ತಾನ್-ಅವರನ್ನು (ಬ್ರಾಹ್ಮಣರನ್ನು-ಅವರ ಮಹಿಮೆಗಳನ್ನು), ಕಿಂ ನು ಜಾನಂತಿ-ಏನು ತಿಳಿಯುತ್ತಾರೆ? (ತಿಳಿಯುವುದಿಲ್ಲ); ಕಿಯತ್-ಎಷ್ಟು ಬ್ರೂಯಾಂ-ಹೇಳಲಿ; ಕತಿ-ಎಷ್ಟಾವರ್ತಿ, ಬ್ರೂಯಾಂ-ಹೇಳಲಿ; ಯೇ-ಯಾರು, ಹರಿಣಾ-ಶ್ರೀಹರಿಯಿಂದಲೇ, ಮಾನಿತಾಃ-ಮಾನಿತರೋ, (ಆ), ವಿಪ್ರಾಣಾಂ-ಬ್ರಾಹ್ಮಣರ, ಮಹಿಮಾನಂ-ಮಹಿಮೆ

(ದೂರ್ವಾಸರ) ಮಂತ್ರೋಪದೇಶದಿಂದ, (ದೇವಾಂಶರಾದ) ಪುತ್ರರನ್ನು ಪಡೆದಳು; ಹಾಗೆಯೇ ಗಾಂಧಾರಿಯೂ, (ಶ್ರೀ ವೇದವ್ಯಾಸರ) ಅನುಗ್ರಹದಿಂದ (ಭಗ್ನವಾದ) ಗರ್ಭದಿಂದ, ಮಕ್ಕಳನ್ನು ಪಡೆದಳು;[1] ದಶರಥನು, (ಪುತ್ರಕಾಮೇಷ್ಟಿ ಯಾಗದಲ್ಲಿ) ಋತ್ವಿಜರ ಪ್ರಾರ್ಥನಾ ಬಲದಿಂದ, ಶ್ರೀರಾಮನೇ ಮೊದಲಾದ ಪುತ್ರರನ್ನು ಪಡೆದನು; ಮಾರ್ಕಂಡೇಯನು ಚಿರಂಜೀವಿಯಾದನು;[2] ಗದಾದಿ ರಾಜರು[3] ಶ್ರೀಮಂತರಾದರು;

1. ಗಾಂಧಾರಿಯು ಧೃತರಾಷ್ಟ್ರನ ಪತ್ನಿಯು; ಆಕೆಯು ಗರ್ಭಿಣಿಯಾಗಿದ್ದಾಗ, ಕುಂತಿಯು ಅರಣ್ಯದಲ್ಲಿ ಧರ್ಮಪುತ್ರನನ್ನು ಪಡೆದಳೆಂಬ ವಾರ್ತೆಯನ್ನು ಕೇಳಿ, ತಾನು ಇನ್ನೂ ಪ್ರಸವವಾಗದಿರುವುದಕ್ಕೆ ದುಃಖಿಸಿ, ಬಲಾತ್ಕಾರದಿಂದ (ಹೊಟ್ಟೆಯನ್ನು ಕುಟ್ಟಿ) ಗರ್ಭವನ್ನು ಹೊರತೆಗೆದಳು; ಆಗ ಮೃತಪ್ರಾಯವಾದ ೧೦೦ ತುಂಡುಗಳಾಗಿ, ಆ ಗರ್ಭವು ಬಿದ್ದಿರಲು, ಕೃಷ್ಣದ್ವೈಪಾಯನರು ಅಲ್ಲಿಗೆ ಬಂದು, ಗಾಂಧಾರಿಯನ್ನು ಸಂತೈಸಿ, ೧೦೦ ತುಪ್ಪದ ಕುಂಭಗಳಲ್ಲಿ ಆ ಪಿಂಡಗಳನ್ನಿರಿಸಿ ಅನುಗ್ರಹಿಸಲು, ಕೆಲವು ಕಾಲಾನಂತರ ೧೦೦ ಮಂದಿ ಪುತ್ರರು, ಆ ಕುಂಭಗಳಿಂದ ಹೊರಬಂದರು.

2. ಭೃಗುಋಷಿಗಳ ಅನುಗ್ರಹದಿಂದ, ಶಿವನಿಂದ ಕಲ್ಪಜೀವಿಯಾಗೆಂಬ ವರವನ್ನು ಪಡೆದನು—ಮೃಕಂಡುಪುತ್ರ ಮಾರ್ಕಂಡೇಯನು.

3. ಗದ—ಶ್ರೀಕೃಷ್ಣನ ತಮ್ಮ—ವಸುದೇವನಿಂದ ರೋಹಿಣಿಯಲ್ಲಿ ಜನಿಸಿದವನು. ಬ್ರಾಹ್ಮಣಪ್ರಿಯನಾಗಿ, ಎರಡೂ ಕೈಗಳಿಂದ ಅಸ್ತ್ರಗಳನ್ನು ಪ್ರಯೋಗಿಸಬಲ್ಲ ಮಹಾ ಪರಾಕ್ರಮಿಯಾದನು; ಮತ್ತು ಮಹಾ ತೇಜಸ್ವಿಯೆಂಬ ಪ್ರಸಿದ್ಧಿಯನ್ನೂ ಪಡೆದನು.

ಯನ್ನು, ಅಹಂ-ನಾನು, ವಃ-ನಿಮಗೆ, ಕಥಂ-ಯಾವ ಪ್ರಕಾರದಿಂದ (ಹೇಗೆ-ಪೂರ್ಣವಾಗಿ), ಬ್ರೂಯಾಂ-ಹೇಳಲಿ? (ಶಕ್ಯವಿಲ್ಲ).

**ಉಪಕಾರಾಯ ಕೇಷಾಂಚಿತ್ ಅಪಕಾರಾಯ ಕಸ್ಯಚಿತ್ ॥ ೮೮ ॥**
**ಮುಖಂ ಹಿ ಬ್ರಾಹ್ಮಣಾ ವಿಷ್ಣೋರ್ನೃಪಸ್ಯೇವಾತ್ರ ದೂತಕಾಃ ।**
**ನಾನಾಸಂಪತ್ಕರಾಸ್ತುಷ್ಟಾ ರುಷ್ಟಾ ನಾನಾವಿಪತ್ಕರಾಃ ॥ ೮೯ ॥**
**ಅತಃ ಸಂಮಾನಯೇದ್ ಜ್ಞಾತ್ವಾ ಬುಭೂಷುಸ್ತಾನ್ಸದೈವ ಹಿ ।**
**ಶ್ರೇಷ್ಠಸ್ಯ ಯಸ್ಯಕಸ್ಯಾಪಿ ದೂತಂ ಸಂಮಾನಯೇದ್ಭಿಯಾ ॥ ೯೦ ॥**

ಕೇಷಾಂಚಿತ್-ಕೆಲವರಿಗೆ, ಉಪಕಾರಾಯ-ಉಪಕಾರಕ್ಕಾಗಿಯೂ, ಕಸ್ಯಚಿತ್-ಮತ್ತೊಬ್ಬನ, ಅಪಕಾರಾಯ-ಅಪಕಾರಕ್ಕಾಗಿಯೂ, ಬ್ರಾಹ್ಮಣಾಃ-ಬ್ರಾಹ್ಮಣರು, ವಿಷ್ಣೋಃ-ಶ್ರೀವಿಷ್ಣುವಿನ, ಮುಖಂ ಹಿ-ಮುಖದಂತಿರುವರು; ಅತ್ರ-ಈ ವಿಷಯದಲ್ಲಿ (ಉಪಕಾರ ಅಪಕಾರಗಳ ವಿಷಯದಲ್ಲಿ), ನೃಪಸ್ಯ-ರಾಜನ, ದೂತಕಾಃ ಇವ-ದೂತರಂತೆ (ಬ್ರಾಹ್ಮಣರಿರುವರು), ತುಷ್ಟಾಃ-(ಬ್ರಾಹ್ಮಣರು) ಸಂತುಷ್ಟರಾದರೆ (ಪ್ರೀತರಾದರೆ), ನಾನಾಸಂಪತ್ಕರಾಃ-ವಿವಿಧ ಸಂಪತ್ತುಗಳಿಗೆ ಕಾರಣರಾಗುತ್ತಾರೆ; ರುಷ್ಟಾಃ-ಕುಪಿತರಾದರೆ, ನಾನಾವಿಪತ್ಕರಾಃ-ಬಹು ಕಷ್ಟಗಳಿಗೆ ಕಾರಣರಾಗುತ್ತಾರೆ; ಯಸ್ಯ ಕಸ್ಯಾಪಿ -ಯಾರೊಬ್ಬ, ಶ್ರೇಷ್ಠಸ್ಯ - ಶ್ರೇಷ್ಠ ಪುರುಷನ, ದೂತಂ-ದೂತನನ್ನು ಭಿಯಾ-(ದೂತನನ್ನು ಸತ್ಕರಿಸದಿದ್ದರೆ, ಆತನ ಯಜಮಾನನಿಂದ ವಿಪತ್ತುಂಟಾಗು

---

ಈ ಎಲ್ಲರೂ ಬಹು ಶ್ರೇಯಸ್ಸುಗಳನ್ನು ಬ್ರಾಹ್ಮಣರ ಅನುಗ್ರಹದಿಂದ ಪಡೆದಿರುವರು; ಅಜ್ಞಾನಿಗಳು ಅವರ ಬಹು ಮಹಿಮೆಗಳನ್ನು ಏನು ತಿಳಿಯಬಲ್ಲರು? ವಿಪ್ರರ ಮಹಿಮೆಯನ್ನು ಎಷ್ಟೆಂದು ಹೇಳಲಿ, ಎಷ್ಟು ವಿಧವೆಂದು ಹೇಳಲಿ? ಶ್ರೀಹರಿಯಿಂದ ಸಹ ಮಾನಿತರಾದ ಇವರ ಮಹಿಮೆಯನ್ನು ಹೇಗೆ ಹೇಳಿ ಮುಗಿಸಲಿ? (ಶಕ್ಯವಿಲ್ಲ—ಬ್ರಾಹ್ಮಣಮಹಿಮೆಯು ಅಗಾಧವಾದುದು, ಅವರ್ಣನೀಯವು) (೮೧-೮೭). ಬ್ರಾಹ್ಮಣರು ಶ್ರೀವಿಷ್ಣುವಿನ ಮುಖದಂತಿರುವರು; ರಾಜನ ಕಡೆಯವರಾದ ದೂತರಂತೆ, ಅವರನ್ನು ಕಂಡು ಸತ್ಕರಿಸಿ ಗೌರವಿಸಬೇಕು; ಅವರು ತುಷ್ಟರಾದರೆ, ವಿವಿಧ ಸುಖಸಂಪತ್ತುಗಳಿಗೆ ಕಾರಣರಾಗುವರು; ಕುಪಿತರಾದರೆ, ನಾನಾ ವಿಪತ್ತುಗಳಿಗೆ ಕಾರಣರಾಗುತ್ತಾರೆ; ಬ್ರಾಹ್ಮಣರು ಕೆಲವರಿಗೆ ಉಪಕಾರಕರೂ, ಕೆಲವರಿಗೆ ಅಪಕಾರಕರೂ ಆಗುತ್ತಾರೆ; ಇದು ಅವರ ಪ್ರೀತಿ-ಅಪ್ರೀತಿಗಳನ್ನು ಅವಲಂಬಿಸುತ್ತದೆ; ಯಾವನೊಬ್ಬ ಶ್ರೇಷ್ಠಪುರುಷನ ಕಡೆಯಿಂದ ಬರುವ ದೂತನನ್ನು ಭಯದಿಂದ ಸನ್ಮಾನಿಸುವಂತೆ, ಶ್ರೇಯೋಭಿಲಾಷಿಯು, ಬ್ರಾಹ್ಮಣರನ್ನು ಶ್ರೀವಿಷ್ಣುವಿನ ದೂತರೆಂದು ತಿಳಿದು, ಅವರ ಸಂತೋಷ-ಅಸಂತೋಷಗಳನ್ನು ತನ್ನ ಸಂಪದ್ವಿಪತ್ಕಾರಕಗಳೆಂಬ ಜ್ಞಾನವುಳ್ಳವನಾಗಿ, ಯಥಾಯೋಗ್ಯವಾಗಿ ಸನ್ಮಾನಿಸಬೇಕು (೮೮-೯೦).

ವುದೆಂಬ) ಭಯದಿಂದ, ಸಂಮಾನಯೇತ್ - (ಯೋಗ್ಯವಾಗಿ) ಸನ್ಮಾನಿಸುವನಷ್ಟೆ ಅತಃ-ಆದ್ದರಿಂದ, ಬುಭೂಷುಃ - ಸುಖವುಳ್ಳವನಾಗಲಿಚ್ಛಿಸುವ ಪುರುಷನು, ತಾನ್-ಬ್ರಾಹ್ಮಣರನ್ನು, ಜ್ಞಾತ್ವಾ-(ತುಷ್ಟರುಷ್ಟರಾಗುವುದರಿಂದ ತನಗೆ ದೊರೆಯುವ ಫಲವನ್ನು) ತಿಳಿದು, ಸದೈವ-ಎಲ್ಲ ಕಾಲ, ಎಲ್ಲ ಅವಸ್ಥೆಗಳಲ್ಲಿಯೂ, ಸಂಮಾನಯೇತ್-ಗೌರವದಿಂದ ಕಾಣತಕ್ಕದ್ದು; ಹಿ-ಅತ್ಯವಶ್ಯಕವೇ ಸರಿ.

**ಸರ್ವಶ್ರೇಷ್ಠಸ್ಯ ವಿಷ್ಣೋರ್ಯೇ ಮುಖಂ ತಾನವಜಾನತೇ ।**
**ಕಥಂ ಭೀರ್ಜಾಯತೇ ನ್ವೈಷಾಂ ದುಷ್ಟಾನಾಂ ನಿರ್ಹ್ರಿಯಾಮಪಿ ॥ ೬೧ ॥**
**ವಿಷ್ಣೋರ್ಮುಖಮಿತಿ ಜ್ಞಾತ್ವಾಪ್ಯವಮಾನಂ ಪ್ರಕುರ್ವತೇ ।**
**ಅಹೋ ಮಾಯಾಬಲಂ ವಿಷ್ಣೋಃ ಪಶ್ಯನ್ನಪಿ ನ ಪಶ್ಯತಿ ॥ ೬೨ ॥**

ಸರ್ವಶ್ರೇಷ್ಠಸ್ಯ-ಸರ್ವಶ್ರೇಷ್ಠನಾದ, ವಿಷ್ಣೋಃ-ಶ್ರೀವಿಷ್ಣುವಿನ, ಮುಖಂ ತಾನ್-ಮುಖವನ್ನು (ಮುಖದಂತಿರುವ ಬ್ರಾಹ್ಮಣರನ್ನು), ಮುಖಸ್ಥಾನೀಯರಾದ ಬ್ರಾಹ್ಮಣರನ್ನು, ಅವಜಾನತೇ-(ಗೌರವಿಸದೇ) ಅಪಮಾನಿಸುವರೋ, ದುಷ್ಟಾನಾಂ-ದುರ್ಜನರೂ, ನಿರ್ಹ್ರಿಯಾಂ-ನಿರ್ಲಜ್ಜರೂ, (ಆದ), ಏಷಾಂ-ಈ ಜನರಿಗೆ, ಕಥಂ-ಹೇಗೆ, ಭೀಃ-ಭಯವು, ನ ಜಾಯತೇ-ಉಂಟಾಗುವುದಿಲ್ಲ; ವಿಷ್ಣೋಃ-ಶ್ರೀವಿಷ್ಣುವಿನ, ಮುಖಂ-ಮುಖದಂತಿರುವ ಬ್ರಾಹ್ಮಣರನ್ನು (ಮುಖವೆಂದು), ಜ್ಞಾತ್ವಾ ಅಪಿ-ತಿಳಿದೂ ಸಹ, ಅವಮಾನಂ-ಅಗೌರವವನ್ನು ಪ್ರಕುರ್ವತೇ-ಮಾಡುತ್ತಾರೆ; ಅಹೋ-ಆಶ್ಚರ್ಯವು ! ವಿಷ್ಣೋಃ-ಶ್ರೀವಿಷ್ಣುವಿನ, ಮಾಯಾಬಲಂ-ಮಾಯಾ ಸಾಮರ್ಥ್ಯವು (ಇಚ್ಛಾಶಕ್ತಿಯು) ಅದ್ಭುತವು; ಪಶ್ಯನ್ ಅಪಿ-ಕಂಡೂ ಸಹ, ನ ಪಶ್ಯತಿ-ಕಾಣುವುದಿಲ್ಲ (ಬ್ರಾಹ್ಮಣರನ್ನು ಅಗೌರವಿಸುವುದರ ಅನರ್ಥವನ್ನು ತಿಳಿಯದ ಅಜ್ಞಾನಿಗಳು, ಕಣ್ಣಿದ್ದ ಕುರುಡರಂತೆ).

**ಸರ್ವಧೀಪ್ರೇರಕೋ ದೇವಸ್ತಂ ಧ್ಯಾಯೇಮ ಸದೈವ ಹಿ ।**
**ಇತ್ಯರ್ಥಂ ಪ್ರಾಹ ಗಾಯತ್ರೀ ಸ ದೇವೋ ವಿಷ್ಣುರೇವ ಹಿ ॥ ೬೩ ॥**

ಸರ್ವಧೀಪ್ರೇರಕಃ-ಸರ್ವರ ಬುದ್ಧಿಪ್ರೇರಕನು, ದೇವಃ-(ಕ್ರೀಡಾದಿ ಗುಣ

---

ಸರ್ವಶ್ರೇಷ್ಠನಾದ (ಸರ್ವೋತ್ತಮನಾದ) ಶ್ರೀವಿಷ್ಣುವಿನ ಮುಖದಂತಿರುವ, ಬ್ರಾಹ್ಮಣರನ್ನು ಸತ್ಕರಿಸದೇ ಅಗೌರವಗೊಳಿಸುವ, ನಿರ್ಲಜ್ಜರಾದ ದುರ್ಜನರಿಗೆ, ಭಯವಾದರೂ ಹೇಗೆ ಉಂಟಾಗುವುದಿಲ್ಲ? ಶ್ರೀವಿಷ್ಣುವಿನ ಮುಖಸ್ಥಾನೀಯರೆಂದು ತಿಳಿದೂ ಬ್ರಾಹ್ಮಣಾವಮಾನವನ್ನು ಮಾಡುವ ಜನರನ್ನು ಕಂಡು, ಶ್ರೀವಿಷ್ಣುವಿನ ಮಾಯಾಬಲವು, ಎಷ್ಟು ಪ್ರಬಲವೆಂಬುದನ್ನು ಊಹಿಸಬಹುದಾಗಿದೆ; ಸರ್ವಪ್ರೇರಕನಾದ ಶ್ರೀವಿಷ್ಣುವು, ಈ ದುರ್ಜನರನ್ನು, ಕಣ್ಣಿದ್ದ ಕುರುಡರಂತೆ, ವರ್ತಿಸುವಂತೆ ಮಾಡುತ್ತಾನೆ, ಆಶ್ಚರ್ಯವು! ಅದ್ಭುತವು! (೬೧-೬೨). ಸರ್ವರ

ವಿಶಿಷ್ಟನಾದ) ಆ ದೇವನೇ (ಆಗಿರುವನು); ಹಿ-ಆದ್ದರಿಂದ, ಸದಾ ಏವ-ಸರ್ವ ಕಾಲದಲ್ಲಿ ತಂ-ಆತನನ್ನೇ, ಧ್ಯಾಯೇಮ-ಧ್ಯಾನಿಸೋಣ (ಧ್ಯಾನಿಸತಕ್ಕದ್ದು), ಇತ್ಯರ್ಥಂ-ಈ ಅರ್ಥವನ್ನು ಗಾಯತ್ರೀ-ಗಾಯತ್ರೀಮಂತ್ರವು, ಪ್ರಾಹ-ಹೇಳಿತು (ಹೇಳುತ್ತದೆ); ಸಃ-ಆ, ದೇವಃ-ದೇವನು, ವಿಷ್ಣುಃ ಏವ-ಶ್ರೀವಿಷ್ಣುವೇ; ಹಿ-ಶಾಸ್ತ್ರಸಿದ್ಧವು.

**ಅಧನಾನ್ ಸಧನಾನ್ ಕರ್ತುಂ ಸಧನಾನಪಿ ನಿರ್ಧನಾನ್ ।**
**ಬ್ರಾಹ್ಮಣಾನ್ನಿರ್ಧನಾಂಶ್ಚಕ್ರೇ ಸಂತೋಷರಹಿತಾನಪಿ ॥ ೯೪ ॥**
**ಸಂತುಷ್ಟಾ ಯದಿ ವಿಪ್ರಾಃ ಸ್ಯುಃ ಕೇ ತರ್ಹಿ ಗೃಹಿಣಾಂ ಗೃಹಂ ।**
**ಗತ್ವಾ ಧನಂ ಪ್ರಗೃಹ್ಣೀಯುರ್ಯೇನ ದಾತಾ ಧನೀ ಭವೇತ್ ॥ ೯೫ ॥**
**ಅಥವಾ ಕಸ್ಯ ತೇಽವಜ್ಞಾಂ ಧನಿನಃ ಕುರ್ಯುರುದ್ಧತಾಃ ।**
**ಕಥಂ ಸ್ಯುರ್ನಿರ್ಧನಾಸ್ತೇ ತು ಕಥಂ ಸ್ಯುಃ ಸಧನಾಃ ಪರೇ ॥ ೯೬ ॥**
**ಯಥಾ ರಥ್ಯಾನಿ ಚಕ್ರಾಣಿ ಪರಿವೃತ್ತಿಂ ಪ್ರಯಾಂತಿ ಹಿ ।**
**ತಥೈವ ಸಂಪದಃ ಸರ್ವಾಃ ಪರಿವರ್ತಂತಿ ಸರ್ವದಾ ॥ ೯೭ ॥**

(ಸ ದೇವಃ ವಿಷ್ಣುರೇವ-ಹಿಂದಿನ ಶ್ಲೋಕದಿಂದ ಆವರ್ತನೆಮಾಡಿಕೊಂಡು, ಆ ದೇವೋತ್ತಮನಾದ ಶ್ರೀವಿಷ್ಣುವೇ), ಅಧನಾನ್-ದರಿದ್ರರನ್ನು ಸಧನಾನ್- ಧನವಂತರನ್ನಾಗಿ, ಕರ್ತುಂ - ಮಾಡುವುದಕ್ಕಾಗಿ, ಅಪಿ - ಮತ್ತು ಸಧನಾನ್ - ಧನಿಕರನ್ನು ನಿರ್ಧನಾನ್-ದರಿದ್ರರನ್ನಾಗಿ (ಕರ್ತುಂ-ಮಾಡಲಿಕ್ಕೂ), ಬ್ರಾಹ್ಮಣಾನ್-ಬ್ರಾಹ್ಮಣರನ್ನು ನಿರ್ಧನಾನ್-ಬಡವರನ್ನಾಗಿಯೂ, ಅಪಿ-ಮತ್ತು ಸಂತೋಷ ರಹಿತಾನ್-ಅತೃಪ್ತರನ್ನಾಗಿಯೂ, ಚಕ್ರೇ-ಮಾಡಿದನು; ವಿಪ್ರಾಃ-ಬ್ರಾಹ್ಮಣರು, ಯದಿ ಸಂತುಷ್ಟಾಃ ಸ್ಯುಃ-ಸಂತೃಪ್ತರಾಗಿರುವರಾದರೆ, ತರ್ಹಿ-ಆಗ, ಕೇ-ಯಾರು (ಯಾವ ಬ್ರಾಹ್ಮಣರು), ಗೃಹಿಣಾಂ-ಗೃಹಸ್ಥರ, (ಕುಟುಂಬಿಗಳ), ಗೃಹಂ-ಮನೆಗೆ, ಗತ್ವಾ- ಹೋಗಿ, ಯೇನ-ಯಾವುದರಿಂದ (ಯಾರಿಗೆ ದ್ರವ್ಯವನ್ನು ಕೊಡುವುದರಿಂದ), ದಾತಾ-ಕೊಟ್ಟವನು

---

ಬುದ್ಧಿಪ್ರೇರಕನಾದವನು, ಆ ಕ್ರೀಡಾದಿ ಗುಣವಿಶಿಷ್ಟ ಶ್ರೀಹರಿಯೇ ಸರಿ; ಸರ್ವದಾ ಆತನನ್ನೇ ಧ್ಯಾನಿಸತಕ್ಕದ್ದು; ಹೀಗೆಂಬ ಅರ್ಥವನ್ನು (ವೇದಮಾತಾ) ಗಾಯತ್ರೀ ಮಂತ್ರವು ಹೇಳುತ್ತದೆ; ಆ ದೇವನಾದರೋ ಶ್ರೀವಿಷ್ಣುವೇ ಎಂಬುದು, ಸರ್ವಶಾಸ್ತ್ರ ನಿರ್ಣಯವು (೯೩). ದರಿದ್ರರನ್ನು ಧನಿಕರನ್ನಾಗಿ ಮಾಡುವುದಕ್ಕೂ, ಧನಿಕರನ್ನು ದರಿದ್ರರನ್ನಾಗಿ ಮಾಡುವುದಕ್ಕೂ ಶ್ರೀವಿಷ್ಣುವು, ಬ್ರಾಹ್ಮಣರನ್ನು ನಿರ್ಧನರನ್ನಾಗಿಯೂ, ಅಸಂತುಷ್ಟರನ್ನಾಗಿಯೂ ನಿರ್ಮಿಸಿರುವನು; ಬ್ರಾಹ್ಮಣರು ಸಂತೃಪ್ತರಾಗಿರುವರಾದರೆ, ಯಾರಿಗೆ ಧನವನ್ನು ದಾನಮಾಡುವುದರಿಂದ, ದಾನಿಯು ಧನಿಕನಾಗುವನೋ, ಅಂಥ ಧನವನ್ನು, ಗೃಹಸ್ಥರ ಮನೆಗಳಿಗೆ ಹೋಗಿ (ಯಾಚಿಸಿಯೂ) ಸ್ವೀಕರಿಸುವರು?

(ದಾನಿಯು), ಧನೀ-ಧನಿಕನು, ಭವೇತ್-ಆಗುವನೋ, ಧನಂ-(ಅಂತಹ) ಧನವನ್ನು ಪ್ರಗೃಹ್ಣೀಯುಃ- ಸ್ವೀಕರಿಸುತ್ತಾರೆ? (ಸಂತೃಪ್ತರಾದವರು, ಅನ್ಯರನ್ನು ಯಾಚಿಸಲು ಹೋಗುವುದೇ ಇಲ್ಲ); ಅಥವಾ, ತೇ-ಅ, ಧನಿನಃ - ಧನವಂತರು, ಉದ್ಧತಾಃ- ಉನ್ನತ್ತರಾಗಿ, ಕಸ್ಯ-ಯಾರ (ಯಾವ ಬ್ರಾಹ್ಮಣನ), ಅವಜ್ಞಾಂ- ಅವಮಾನವನ್ನು ಕುರ್ಯುಃ-ಮಾಡುವರು? (ಸಧನರು ನಿರ್ಧನರಾಗಬೇಕಾದ ಸಂದರ್ಭದಲ್ಲಿ ಅಲ್ಲದಿದ್ದರೆ, ಬ್ರಾಹ್ಮಣಾವಮಾನವನ್ನು ಮಾಡುವುದೇ ಇಲ್ಲ); ಕಥಂ-ಹೇಗೆ (ಬ್ರಾಹ್ಮಣಾವಮಾನದಿಂದಲ್ಲದೇ ಬೇರಾವ ಸಾಧನದಿಂದ), ತೇ-ಆ ಧನವಂತರು, ನಿರ್ಧನಾಃ ಸ್ಯುಃ-ದರಿದ್ರರಾಗುವರು? ಮತ್ತು ಪರೇ-ನಿರ್ಧನರಾದ ಅನ್ಯರು, ಸಧನಾಃ-ಧನವಂತರು, ಕಥಂ-ಹೇಗೆ (ಸಂತುಷ್ಟರಾದ ಬ್ರಾಹ್ಮಣಾಶೀರ್ವಾದ ದಿಂದಲ್ಲದೇ-ತಲ್ಲಭ್ಯ ಶ್ರೀಹರಿಪ್ರಸನ್ನತೆಯಿಂದಲ್ಲದೇ), ಸ್ಯುಃ-ಆದಾರು? (ಧನ ವಾದರೂ ಒಬ್ಬರಿಂದ ಮತ್ತೊಬ್ಬರಿಗೆ ಸೇರುತ್ತ ಸುತ್ತುತ್ತಲೇ ಇರುವುದೆನ್ನುತ್ತಾರೆ); ಯಥಾ-ಹೇಗೆ, ರಥ್ಯಾನಿ ಚಕ್ರಾಣಿ-ರಥದಲ್ಲಿರುವ ಚಕ್ರಗಳು, ಪರಿವೃತ್ತಿಂ-ಸುತ್ತುವಿಕೆ ಯನ್ನು, ಯಾಂತಿ-ಹೊಂದಿರುವುವೋ, ತಥಾ-ಹಾಗೆ, ಸರ್ವಾಃ-ಎಲ್ಲ ಸಂಪದಃ- ಸಂಪತ್ತುಗಳು, ಸರ್ವದಾ-ಎಲ್ಲ ಕಾಲದಲ್ಲಿ ಪರಿವರ್ತಂತಿ-ಸುತ್ತುತ್ತಲೇ ಇರುತ್ತವೆ (ಐಶ್ವರ್ಯವು ಯಾರೊಬ್ಬರಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲ— ಚಂಚಲವಾದುದು).

**ಧನವ್ಯಯಂ ಪ್ರತಿದಿನಂ ವಿಚಾರಯತಿ ಮೂಢಧೀಃ ।**
**ಯಮಮಾರ್ಗಸ್ಯ ಪಾಥೇಯಂ ಮನಸ್ಯಪಿ ನ ಚಿಂತತಿ ॥ ೯೮ ॥**
**ವ್ಯಯಾಗ್ನಿರ್ಗೃಹಿಣಾಂ ಗೇಹೇ ದಹತ್ಯಹರಹರ್ಧನಂ ।**
**ವಿಪ್ರೈರಾಕೃಷ್ಯತೇ ಯತ್ತು ತದೇವಾಸ್ಯಾವಶಿಷ್ಯತೇ ॥ ೯೯ ॥**

ಮೂಢಧೀಃ-ಮೂರ್ಖನು, ಪ್ರತಿದಿನಂ-ನಿತ್ಯದಲ್ಲಾಗುವ, ಧನವ್ಯಯಂ- ದ್ರವ್ಯದ ಖರ್ಚನ್ನು, ವಿಚಾರಯತಿ-ಆಲೋಚಿಸುತ್ತಾನೆ; ಅಪಿ-ಆದರೆ, ಯಮ ಮಾರ್ಗಸ್ಯ - ಯಮಮಾರ್ಗದ, ಪಾಥೇಯಂ - (ಯಮಲೋಕದ ಮಾರ್ಗದಲ್ಲಿ

---

(ಯಾವ ಬ್ರಾಹ್ಮಣನೂ ಇನ್ನೊಬ್ಬನ ಮನೆಗೆ ಹೋಗಲಿಕ್ಕಿಲ್ಲ); ಧನಿಕರು ಗರ್ವಿಷ್ಠರಾಗಿ, ಬ್ರಾಹ್ಮಣಾವಮಾನವನ್ನು ಮಾಡದಿದ್ದರೆ, ಅವರು ದರಿದ್ರರು ಹೇಗಾದಾರು? ದರಿದ್ರರಾದವರು, ಅತ್ಯಲ್ಪವನ್ನಾದರೂ ಬ್ರಾಹ್ಮಣರಿಗೆ ದಾನಮಾಡಿ, ತತ್ಫಲವಾಗಿ ಶ್ರೀಮಂತರಾಗುತ್ತಾರೆ; ರಥದ ಚಕ್ರಗಳು ಸುತ್ತುವಂತೆ, ಎಲ್ಲ ಸಂಪತ್ತುಗಳು, ಸರ್ವದಾ ಸುತ್ತುತ್ತಲೇ ಇರುತ್ತವೆ— ಯಾರೊಬ್ಬನಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲ (೯೪-೯೭). ಪ್ರತಿದಿನವೂ ವ್ಯಯವಾಗುತ್ತಿರುವ (ಕ್ಷೀಣವಾಗುತ್ತಿರುವ) ದ್ರವ್ಯದ ವಿಷಯದಲ್ಲಿ ಸದಾ ವಿಚಾರಮಾಡುವವನು, ಮೂರ್ಖನೇ ಸರಿ; ಆತನು, ಎಂದೂ ತನ್ನ ಮನಸ್ಸಿನಲ್ಲಿ ಯಮಲೋಕದ ಮಾರ್ಗದಲ್ಲಿ ತನಗೆ ಆಶ್ರಯಕೊಡುವ (ರಕ್ಷಣೆಯನ್ನೀಯುವ)

ಅನ್ನಾದಿಗಳಂತೆ ತನ್ನನ್ನು ರಕ್ಷಿಸುವ) ಅವಶ್ಯಸಾಮಗ್ರಿಯನ್ನು, ಮನಸಿ-ಮನಸ್ಸಿನಲ್ಲಿ ನ ಚಿಂತತಿ-ತರುವುದೇ ಇಲ್ಲ (ಅದರ ಯೋಚನೆಯನ್ನೇ ಮಾಡುವುದಿಲ್ಲ); ವ್ಯಯಾಗ್ನಿಃ-ವ್ಯಯ (ಖರ್ಚು ಎಂಬ ಅಗ್ನಿಯು, ದ್ರವ್ಯಹಾನಿ ಎಂಬ ಅಗ್ನಿಯು), ಗೃಹಿಣಾಂ ಗೇಹೇ-ಕುಟುಂಬಿಗಳ ಮನೆಯಲ್ಲಿ, ಅಹರಹಃ-ಪ್ರತಿದಿನವೂ, ಧನಂ-(ಅವರ) ಧನವನ್ನು ದಹತಿ-ದಹಿಸುತ್ತದೆ; ಯತ್ ತು-ಯಾವ ಧನದ ಭಾಗವಾದರೋ, ವಿಪ್ರೈಃ-ಬ್ರಾಹ್ಮಣರಿಂದ, ಆಕೃಷ್ಯತೇ-ಸೆಳೆಯಲ್ಪಡುತ್ತದೆಯೋ (ಬ್ರಾಹ್ಮಣರಿಗೆ ದಾನಾರ್ಥವಾಗಿ ಉಪಯೋಗಿಸಲ್ಪಡುವುದೋ), ತದೇವ-ಆ ಧನವೇ, ಅಸ್ಯ-ಆ ಗೃಹಸ್ಥನಿಗೆ, ಅವಶಿಷ್ಯತೇ-(ನಿಜವಾಗಿಯೂ) ಉಳಿಯುತ್ತದೆ.

ಪುತ್ರಸ್ತ್ರೀಪಶುಭೃತ್ಯೇಭ್ಯಃ ಕಿಯದ್ವಿತ್ತಂ ಪ್ರಯಚ್ಛತಿ ।
ತತ್ಪಾದಾಂಶಮಪಿ ಸ್ವಸ್ಯ ಕುರ್ಯಾತ್ ಪಾಥೇಯಮನ್ವಹಂ ॥ ೧೦೦ ॥
ಪಶ್ಚಾತ್ತಾಪೋ ನ ಜಾಯೇತ ಮರಣಾನಂತರಂ ತಥಾ ।
ವಿದ್ವಾಂಸ್ತಥಾ ಯತೇತಾದೌ ಯಾವದ್ಧಸ್ತೇ ಧನಂ ಭವೇತ್ ॥ ೧೦೧ ॥

ಪುತ್ರಸ್ತ್ರೀಪಶುಭೃತ್ಯೇಭ್ಯಃ-ಸುತ, ಪತ್ನೀ, ಪಶು, ಭೃತ್ಯರಿಗಾಗಿ, ಕಿಯದ್ವಿತ್ತಂ-ಎಷ್ಟಾದರೂ ದ್ರವ್ಯವನ್ನು ಪ್ರಯಚ್ಛತಿ-ಕೊಡುತ್ತಾನಷ್ಟೆ ತತ್ಪಾದಾಂಶಮಪಿ-ಅದರಲ್ಲಿ ಪಾದಾಂಶವನ್ನಾದರೂ (೧/೪ನೇ ಭಾಗವನ್ನಾದರೂ), ಅನ್ವಹಂ-ಪ್ರತಿದಿನವೂ, ಸ್ವಸ್ಯ-ತನ್ನ ಪಾಥೇಯಂ-ಪರಲೋಕಮಾರ್ಗಕ್ಕೆ ಉಪಯುಕ್ತವನ್ನಾಗಿ, ಕುರ್ಯಾತ್-ಮಾಡಬೇಕು; ತಥಾ-ಹಾಗೆ ಮಾಡಿದರೆ, ಮರಣಾನಂತರಂ-ಮೃತನಾದ ನಂತರ, ಪಶ್ಚಾತ್ತಾಪಃ-ಪಶ್ಚಾತ್ತಾಪವು (ಪಾಥೇಯವನ್ನು ಮಾಡಿಕೊಳ್ಳಲಿಲ್ಲವೆಂಬ ಮನೋವ್ಯಥೆಯು), ನ ಜಾಯೇತ-ಉಂಟಾಗುವುದಿಲ್ಲ; ವಿದ್ವಾನ್-ವಿವೇಕಿಯಾದವನು (ಈ ಜ್ಞಾನವುಳ್ಳವನು), ಯಾವತ್-ಎಲ್ಲಿಯವರೆಗೆ, ಹಸ್ತೇ-(ತನ್ನ) ಕೈಯಲ್ಲಿ ಧನಂ-

---

ವಸ್ತುವನ್ನು (ಪಾಥೇಯವನ್ನು) ಚಿಂತಿಸುವುದೇ ಇಲ್ಲ; ವ್ಯಯ (ಖರ್ಚು) ಎಂಬ ಅಗ್ನಿಯು, ಕುಟುಂಬಿಗಳ ಮನೆಗಳಲ್ಲಿ ಪ್ರತಿದಿನವೂ ಧನವನ್ನು ದಹಿಸುತ್ತಲೇ ಇರುತ್ತದೆ; ಧನದ ಯಾವ ಭಾಗವು (ಅಂಶವು) ಬ್ರಾಹ್ಮಣರಿಂದ ಆಕರ್ಷಿಸಲ್ಪಡುವುದೋ (ಅವರಿಗೆ ಕೊಡಲು ವಿನಿಯೋಗಿಸಲ್ಪಡುವುದೋ), ಆ ಭಾಗವೇ ಕುಟುಂಬಿಯ ಸತ್ಯವಾದ ಉಳಿತಾಯವು—ಅದೇ ಅವನಿಗೆ ಉಳಿಯುವುದು (೯೮-೯೯). ತನ್ನ ಮಕ್ಕಳು, ಹೆಂಡಿರು, ಗೋ ಅಶ್ವಾದಿ ಪಶುಗಳು, ಭೃತ್ಯರು (ಸೇವಕರು), ಇವರಿಗಾಗಿ ಖರ್ಚುಮಾಡುವ ದ್ರವ್ಯಭಾಗದಲ್ಲಿ ೧/೪ ಅಂಶವನ್ನಾದರೂ (ಅಥವಾ ವಿಧ್ಯುಕ್ತ ಅಂಶವನ್ನಾದರೂ), ನಿತ್ಯವೂ, ಪರಗತಿಯ ಪಾಥೇಯವನ್ನಾಗಿ ಮಾಡಿಕೊಳ್ಳಬೇಕು; ಮರಣಾನಂತರ ಪಶ್ಚಾತ್ತಾಪವುಂಟಾಗದಂತೆ (ಪರಲೋಕಪಾಥೇಯವನ್ನು ಮಾಡಿಕೊಳ್ಳಲಿಲ್ಲವಲ್ಲ ಎಂಬ ಮನೋವ್ಯಥೆಗೆ ಕಾರಣವಾಗದಂತೆ) ಎಚ್ಚರವಹಿಸಿ

ಧನವು, ಭವೇತ್-ಇರುವುದೋ, ಆದೌ-(ಆ ಪರ್ಯಂತ) ಮೊದಲು, ತಥಾ-ಹಾಗೆ (ಪಶ್ಚಾತ್ತಾಪಕ್ಕೆ ಅವಕಾಶವಾಗದಂತೆ), ಯತೇತ-ಯತ್ನಿಸಬೇಕು.

**ವಿಪ್ರಾಣಾಮವಮಾನೇನ ಯಥಾ ಪುಣ್ಯಂ ನ ಹೀಯತೇ ।**

**ತಥಾ ಸಂಪ್ರೀಣಯೇದ್ವಿಪ್ರಾಂಸ್ತೇಭ್ಯಃ ಪುಣ್ಯಂ ದುಹೇದಪಿ ॥ ೧೦೨ ॥**

ವಿಪ್ರಾಣಾಂ-ಬ್ರಾಹ್ಮಣರ, ಅವಮಾನೇನ-ಅವಜ್ಞೆಯಿಂದ, ಪುಣ್ಯಂ-ತನ್ನ ಪುಣ್ಯವು, ಯಥಾ-ಹೇಗೆ, ನ ಹೀಯತೇ-ನಷ್ಟವಾಗುವುದಿಲ್ಲವೋ, ತಥಾ-ಹಾಗೆ, ವಿಪ್ರಾನ್-ಬ್ರಾಹ್ಮಣರನ್ನು ಸಂಪ್ರೀಣಯೇತ್-ಪೂರ್ಣವಾಗಿ ಸಂತೋಷಗೊಳಿಸಬೇಕು; ಅಪಿ-ಮತ್ತು ತೇಭ್ಯಃ-ಅವರಿಂದ, ಪುಣ್ಯಂ-ಪುಣ್ಯವನ್ನು ದುಹೇತ್-ದೊರಕಿಸಿಕೊಳ್ಳಬೇಕು (ಸಂಪಾದಿಸಬೇಕು).

**ಪ್ರತಿಗ್ರಹೇಣ ವಿಪ್ರಾಣಾಂ ಪುಣ್ಯಹಾನಿಃ ಪ್ರಜಾಯತೇ ।**

**ಜಪಾಧ್ಯಯನಹೋಮಾದ್ಯೈಃ ಪುನಃ ಪೂರಣಮಾಚರೇತ್ ॥ ೧೦೩ ॥**

ಪ್ರತಿಗ್ರಹೇಣ-(ಅನ್ಯರಿಂದ) ದಾನವನ್ನು ಸ್ವೀಕರಿಸುವುದರಿಂದ, ವಿಪ್ರಾಣಾಂ-ಬ್ರಾಹ್ಮಣರ, ಪುಣ್ಯಹಾನಿಃ-ಪುಣ್ಯನಾಶವು, ಪ್ರಜಾಯತೇ-ಉಂಟಾಗುತ್ತದೆ (ಬ್ರಾಹ್ಮಣನ ಪುಣ್ಯವು ದಾತನನ್ನು ಸೇರುತ್ತದೆ—ಆದ್ದರಿಂದಲೇ 'ಪುಣ್ಯಂ ದುಹೇತ್' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುತ್ತದೆ); ಜಪಾಧ್ಯಯನ ಹೋಮಾದ್ಯೈಃ-ಜಪ, ಅಧ್ಯಯನ, ಹೋಮಾದಿಗಳಿಂದ, ಪುನಃ-ಮತ್ತೆ ಪೂರಣಂ-ಪುಣ್ಯದ ಪೂರ್ತಿಯನ್ನು ಆಚರೇತ್-ಆಚರಿಸಬೇಕು (ನಷ್ಟವಾದ ಪುಣ್ಯವನ್ನು ತುಂಬಿಕೊಳ್ಳಬೇಕು).

**ಕೀರ್ತನಾದಪಿ ನಶ್ಯಂತಿ ನೃಣಾಂ ಪುಣ್ಯಾನಿ ಕಾನಿಚಿತ್ ।**

**ತಸ್ಮಾನ್ನ ಕೀರ್ತಯೇತ್ಪುಣ್ಯಂ ಮಯೇದಂ ಕೃತಮಿತ್ಯಪಿ ॥ ೧೦೪ ॥**

---

ನಡೆದುಕೊಳ್ಳಬೇಕು; ಹೀಗೆ ತಿಳಿದವನು, ತನ್ನ ಕೈಯಲ್ಲಿ ಧನವಿರುವ ಪರ್ಯಂತ, ಪಶ್ಚಾತ್ತಾಪಕ್ಕೆ ಅವಕಾಶವಾಗದಂತೆ, ತಪ್ಪದೇ ಯತ್ನಿಸಬೇಕು (೧೦೦-೧೦೧). ತನ್ನ ಪುಣ್ಯವು ಹೇಗೆ ನಷ್ಟವಾಗುವುದಿಲ್ಲವೋ, ಹಾಗೆ ಜಾಗರೂಕನಾಗಿದ್ದು ಬ್ರಾಹ್ಮಣಾವಮಾನದಿಂದ ದೂರನಾಗಿದ್ದು ಅವರನ್ನು ಸುಪ್ರೀತರನ್ನಾಗಿಸಿ, ಅವರಿಂದ ಪುಣ್ಯವನ್ನೇ ಸಂಪಾದಿಸಬೇಕು (೧೦೨). ಬ್ರಾಹ್ಮಣರಿಗೆ ಯಥಾಯೋಗ್ಯವಾಗಿ ದಾನ ಕೊಟ್ಟು ಅವರನ್ನು ತೃಪ್ತಿಗೊಳಿಸಬೇಕು; ದಾನಸ್ವೀಕಾರದಿಂದ, ಅವರ ಪುಣ್ಯವು ದಾತನನ್ನು ಸೇರುವುದರಿಂದ, ಅವರಿಗೆ ಪುಣ್ಯಕ್ಷಯವಾಗುತ್ತದೆ; ಬ್ರಾಹ್ಮಣರು, ಜಪ, ಅಧ್ಯಯನ, ಹೋಮಾದಿಗಳಿಂದ, ನಷ್ಟವಾದ ಪುಣ್ಯವನ್ನು ತುಂಬಿಕೊಂಡು ಪೂರ್ಣರೇ (ಮೊದಲಿನಂತೆ) ಆಗುತ್ತಾರೆ (ಆಗಬೇಕು) (೧೦೩). ಮಾಡಿದ ಪುಣ್ಯಗಳನ್ನು ಹೇಳಿಕೊಳ್ಳುವುದರಿಂದಲೇ, ಬಹು ಪುಣ್ಯಗಳು ನಷ್ಟವಾಗುತ್ತವೆ; ಆದ್ದರಿಂದ 'ಈ

ಮನಸ್ಯಪಿ ನ ಕುರ್ವೀತ ಪಶ್ಯನ್ ಪುಣ್ಯಾಧಿಕಾನ್ ಸ್ವತಃ ।
ಪುಣ್ಯೇ ಪುಣ್ಯಾಧಿಕಾನ್ ಪಶ್ಯೇದ್ದುಃಖೇ ದುಃಖಾಧಿಕಾನಪಿ ॥ ೧೦೫ ॥

ಧನೀ ಧನಾಧಿಕಾನ್ ಪಶ್ಯೇತ್ ಪಾಪೇ ಪಾಪಾಧಿಕಾನ್ನ ತು ।
ವಿನೀತಃ ಸರ್ವದಾ ತಿಷ್ಠೇದನಿತ್ಯಂ ವೀಕ್ಷ್ಯ ಸರ್ವತಃ ॥ ೧೦೬ ॥

ನೃಣಾಂ-ಮನುಷ್ಯರ, ಕಾನಿಚಿತ್-ಕೆಲವು, ಪುಣ್ಯಾನಿ-ಪುಣ್ಯಗಳು, ಕೀರ್ತನಾದಪಿ-ಹೇಳಿಕೊಳ್ಳುವುದರಿಂದಲೂ, ನಶ್ಯಂತಿ-ನಷ್ಟವಾಗುತ್ತವೆ; ತಸ್ಮಾತ್-ಆದ್ದರಿಂದ, ಮಯಾ-ನನ್ನಿಂದ, ಇದಂ-ಇದು, ಕೃತಂ-ಮಾಡಲ್ಪಟ್ಟಿತು, ಇತ್ಯಪಿ- ಎಂಬುದಾಗಿ ಸಹ, ಪುಣ್ಯಂ-ಪುಣ್ಯಕರ್ಮವನ್ನು ನ ಕೀರ್ತಯೇತ್-ಹೇಳಬಾರದು; ಮನಸಿ ಅಪಿ-(ತನ್ನ) ಮನಸ್ಸಿನಲ್ಲಿ ಸಹ, ಸ್ವತಃ-ತನಗಿಂತ ಪುಣ್ಯಾಧಿಕಾನ್-ಹೆಚ್ಚಾಗಿ ಪುಣ್ಯಕರ್ಮಗಳನ್ನಾಚರಿಸುವವರನ್ನು ಪಶ್ಯನ್-ನೋಡಿ, ನ ಕುರ್ವೀತ- (ಪುಣ್ಯಮಾಡಿದನೆಂಬ ಭಾವನೆಯನ್ನೂ) ಮಾಡಿಕೊಳ್ಳಬಾರದು; ಪುಣ್ಯೇ-ಪುಣ್ಯದ ವಿಷಯದಲ್ಲಿ, ಪುಣ್ಯಾಧಿಕಾನ್-ಅಧಿಕ ಪುಣ್ಯವಂತರನ್ನು ಪಶ್ಯೇತ್-ನೋಡಬೇಕು; ದುಃಖೇ-ದುಃಖ ವಿಷಯದಲ್ಲಿ ಅಪಿ-ಸಹ (ಹೀಗೆಯೇ), ದುಃಖಾಧಿಕಾನ್-ಅಧಿಕ ದುಃಖವುಳ್ಳವರನ್ನು ಪಶ್ಯೇತ್-ನೋಡಬೇಕು; (ಹೀಗೆಯೇ) ಧನೀ-ಧನಿಕನು, ಧನಾಧಿಕಾನ್-ಅಧಿಕ ಧನವಂತರನ್ನು ಪಶ್ಯೇತ್-ನೋಡಬೇಕು; ತು-ಆದರೆ, ಪಾಪೇ-ಪಾಪವಿಷಯದಲ್ಲಿ ಪಾಪಾಧಿಕಾನ್-ಅಧಿಕ ಪಾಪಿಗಳನ್ನು ನ-ನೋಡಕೂಡದು (ತಾನು ಅಲ್ಪಪಾಪವನ್ನು ಮಾಡಿದವನೆಂಬ ಸಮಾಧಾನವನ್ನು ಹೊಂದಬಾರದು); ಸರ್ವತಃ-ಸರ್ವ ಪ್ರಕಾರದಿಂದ (ಸರ್ವವಸ್ತುಗಳ), ಅನಿತ್ಯಂ- ಅನಿತ್ಯತ್ವವನ್ನು (ನಶ್ವರವೆಂಬುದನ್ನು), ವೀಕ್ಷ್ಯ-ಗಮನಿಸಿ, ಸರ್ವದಾ-ಸದಾ, ವಿನೀತಃ-ನಮ್ರನಾಗಿ, ತಿಷ್ಠೇತ್-ಇರತಕ್ಕದ್ದು.

---

ಪುಣ್ಯವನ್ನು ನಾನು ಮಾಡಿದೆನು' ಇತ್ಯಾದಿಯಾಗಿ ಪುಣ್ಯವನ್ನು ಹೇಳಿಕೊಳ್ಳಬಾರದು— ಮನಸ್ಸಿನಲ್ಲಿ ಸಹ ಪುಣ್ಯಮಾಡಿದೆನೆಂಬ ಭಾವನೆಯನ್ನು ತರಕೂಡದು; ಇದನ್ನು ಸಾಧಿಸಲು ತನಗಿಂತ ಅಧಿಕ ಪುಣ್ಯಗಳನ್ನಾಚರಿಸಿದವರನ್ನು ನೋಡಬೇಕು; ಪುಣ್ಯದ ವಿಷಯದಲ್ಲಿ ಅಧಿಕ ಪುಣ್ಯಮಾಡಿದವರನ್ನೂ, ದುಃಖದ ವಿಷಯದಲ್ಲಿ ತನಗಿಂತ ಅಧಿಕ ದುಃಖಿಗಳನ್ನೂ ನೋಡಬೇಕು; ಧನಿಕನು ತನಗಿಂತ ಅಧಿಕ ಧನವಂತರನ್ನು ನೋಡಬೇಕು; ಆದರೆ ಪಾಪವಿಷಯದಲ್ಲಿ ಮಾತ್ರ ತನಗಿಂತ ಅಧಿಕ ಪಾಪಿಗಳನ್ನು ಕಂಡು ಸಮಾಧಾನಪಟ್ಟುಕೊಳ್ಳಕೂಡದು; ಎಲ್ಲದರ ಅನಿತ್ಯವೆಂಬುದನ್ನು ಮನಗಂಡು (ಧನಾದಿಗಳ ನಶ್ವರತ್ವವನ್ನು ನಿಶ್ಚಯಿಸಿಕೊಂಡು) ವಿನೀತನಾಗಿ (ನಮ್ರನಾಗಿ) ವರ್ತಿಸತಕ್ಕದ್ದು (೧೦೪-೧೦೬). ಧನಾದಿಗಳಲ್ಲಿ ಅಥವಾ ಅದರಿಂದ ಸಾಧಿಸುವ ಪುಣ್ಯದಲ್ಲಿ ಸಹ ನನದೆಂಬ ಅಭಿಮಾನವನ್ನು ಬಿಡಬೇಕು; ಹೀಗೆ ನಿರಭಿಮಾನಿ

**ನಾಭಿಮಾನಂ ಪ್ರಕುರ್ವೀತ ತಸ್ಯ ತುಷ್ಯೇಜ್ಜನಾರ್ದನಃ ।**
**ಪಾಪಾನಾಮಪಿ ಪುಣ್ಯಾನಾಂ ಸಂಚಿತಾನಾಂ ಚ ಕರ್ಮಣಾಂ ॥ ೧೦೭ ॥**
**ನಾಶೋ ಭವತಿ ವೃದ್ಧಿಶ್ಚ ಪ್ರತ್ಯಹಂ ಜಾಯತೇ ಪುನಃ ।**
**ಪುನಃ ಪ್ರಾರಬ್ಧತಾಂ ಯಾಂತಿ ಭೋಗ್ಯಾನಿ ಚ ಪುನಃ ಪುನಃ ॥ ೧೦೮ ॥**
**ಏಕೇಷು ಭುಜ್ಯಮಾನೇಷು ಜಾಯಂತೇ ಕರ್ಮಕೋಟಯಃ ।**
**ಮೋಕ್ಷ್ಯ ಭವಿತುಂ ನಾರ್ಹೋ ಮಗ್ನಃ ಕರ್ಮವಾರಿಧೌ ॥ ೧೦೯ ॥**

ಅಭಿಮಾನಂ-(ಪುಣ್ಯದಲ್ಲಿ ನನ್ನದೆಂಬ) ಅಭಿಮಾನವನ್ನೂ, ನ ಪ್ರಕುರ್ವೀತ-ತಕ್ಕದಲ್ಲ; ತಸ್ಯ-ಅತನಿಗೆ (ಹೀಗೆ ನಿರಭಿಮಾನಿಯಾದವನಿಗೆ). ಜನಾರ್ದನಃ-ರಿಯು. ತುಷ್ಯೇತ್-ಪ್ರೀತನಾಗುತ್ತಾನೆ; ಸಂಚಿತಾನಾಂ-ಸಂಚಿತಗಳಾದ, ಣಾಂ-ಕರ್ಮಗಳಿಗೆ, ಪಾಪಾನಾಂ-ಪಾಪಗಳಿಗೂ, ಅಪಿ-ಮತ್ತು ಪುಣ್ಯಾನಾಂ-ಳಿಗೂ, ಪ್ರತ್ಯಹಂ-ಪ್ರತಿದಿನವೂ, ನಾಶಃ-ನಾಶವು, ಭವತಿ - ಉಂಟಾಗುತ್ತದೆ, -ವೃದ್ಧಿಯೂ, ಜಾಯತೇ-ಉಂಟಾಗುತ್ತದೆ; ಪುನಃಪುನಃ- ಮೇಲಿಂದ ಮೇಲೆ, ಗ್ಯಾನಿ-ಭೋಗಿಸಲ್ಪಡಬೇಕಾದ ಕರ್ಮಗಳು, ಪುನಃಪುನಃ-ಮತ್ತೆಮತ್ತೆ (ಅದೇ ಂದ). ಪ್ರಾರಬ್ಧತಾಂ-ಪ್ರಾರಬ್ಧಕರ್ಮಭಾವವನ್ನು ಯಾಂತಿ-ಹೊಂದುತ್ತವೆ; -ಒಂದೊಂದು ಪ್ರಾರಬ್ಧಕರ್ಮವು, ಭುಜ್ಯಮಾನೇಷು-ಭೋಗಿಸಲ್ಪಡುತ್ತಿರಲು, ಲದಲ್ಲಿ). ಕರ್ಮಕೋಟಯಃ- ಕರ್ಮಕೋಟಿಗಳು (ಕೋಟಿಶಃ ಹೊಸ ಗಳು). ಜಾಯಂತೇ-ಉಂಟಾಗುತ್ತವೆ (ಸಂಭವಿಸುತ್ತವೆ). ಕರ್ಮವಾರಿಧೌ-ಈ ಸಾಗರದಲ್ಲಿ, ಮಗ್ನಃ-ಮುಳುಗಿದವನಿಗೆ, ಮೋಕ್ಷ-ಮೋಕ್ಷದ, ಭವಿತುಂ-ಗುವಿಕೆಯು, ನಾರ್ಹಃ-ಅರ್ಹತೆಯು ಇರುವುದಿಲ್ಲ (ಹೀಗೆ ಕರ್ಮರಾಶಿಯಲ್ಲಿ ಗಿದವನು, ಮೋಕ್ಷಕ್ಕೆ ಎಂದೂ ಅಧಿಕಾರಿಯಾಗುವುದಿಲ್ಲ—ಮೋಕ್ಷವನ್ನು ದಲು ಶಕ್ಯನಾಗುವುದಿಲ್ಲ).

---

ವನ ಮೇಲೆ ಶ್ರೀಹರಿಯು ಪ್ರೀತನಾಗುತ್ತಾನೆ. ಸಂಚಿತರಾಶಿಯಲ್ಲಿರುವ ನ ಕರ್ಮಗಳಿಗೆ (ಪುಣ್ಯಪಾಪರೂಪದ ಉಭಯ ಕರ್ಮಗಳಿಗೂ) ನದಲ್ಲಿ ವೃದ್ಧಿಹ್ರಾಸಗಳು ಸಂಭವಿಸುತ್ತವೆ. ಆ ಸಂಚಿತ ಕರ್ಮಗಳು ಫಲಪ್ರದಾನಕ್ಕೆ ವಾಗಿ ಪ್ರಾರಬ್ಧಕರ್ಮ ಭಾವವನ್ನು ಹೊಂದುತ್ತವೆ. ಈ (ಪ್ರಾರಬ್ಧಕರ್ಮಗಳ) ಕಾಲದಲ್ಲಿ ಕೋಟಿಶಃ ನೂತನ ಕರ್ಮಗಳು ಸಂಭವಿಸುತ್ತವೆ; ಹೀಗೆ ಪಾರ ಈ ಕರ್ಮಸಾಗರದಲ್ಲಿ ಮುಳುಗಿರುವ ಪುರುಷನು, ಅಲ್ಲಿಂದ ಮೇಲೆದ್ದು ರ್ಗದಿಂದ ದಡಗಳ ಹೊಂದಿ) ಮೋಕ್ಷವನ್ನು ಪಡೆಯಲು ಎಂದಿಗೂ [illegible] ಆದ್ದರಿಂದ ಕರ್ಮಗಳಿಂದ ಮುಕ್ತನಾಗಿ

ಮನಸ್ಯಪಿ ನ ಕುರ್ವೀತ ಪಶ್ಯನ್ ಪುಣ್ಯಾಧಿಕಾನ್ ಸ್ವತಃ ।
ಪುಣ್ಯೇ ಪುಣ್ಯಾಧಿಕಾನ್ ಪಶ್ಯೇದ್ದುಃಖೇ ದುಃಖಾಧಿಕಾನಪಿ ॥ ೧೦೫ ॥
ಧನೀ ಧನಾಧಿಕಾನ್ ಪಶ್ಯೇತ್ ಪಾಪೇ ಪಾಪಾಧಿಕಾನ್ನ ತು ।
ವಿನೀತಃ ಸರ್ವದಾ ತಿಷ್ಠೇದನಿತ್ಯಂ ವೀಕ್ಷ್ಯ ಸರ್ವಶಃ ॥ ೧೦೬ ॥

ನೃಣಾಂ-ಮನುಷ್ಯರ, ಕಾನಿಚಿತ್-ಕೆಲವು, ಪುಣ್ಯಾನಿ-ಪುಣ್ಯಗಳು, ಕೀರ್ತನಾದಪಿ-ಹೇಳಿಕೊಳ್ಳುವುದರಿಂದಲೂ, ನಶ್ಯಂತಿ-ನಷ್ಟವಾಗುತ್ತವೆ; ತಸ್ಮಾತ್-ಆದ್ದರಿಂದ, ಮಯಾ-ನನ್ನಿಂದ, ಇದಂ-ಇದು, ಕೃತಂ-ಮಾಡಲ್ಪಟ್ಟಿತು, ಇತ್ಯಪಿ- ಎಂಬುದಾಗಿ ಸಹ, ಪುಣ್ಯಂ-ಪುಣ್ಯಕರ್ಮವನ್ನು, ನ ಕೀರ್ತಯೇತ್-ಹೇಳಬಾರದು; ಮನಸಿ ಅಪಿ-(ತನ್ನ) ಮನಸ್ಸಿನಲ್ಲಿ ಸಹ, ಸ್ವತಃ-ತನಗಿಂತ, ಪುಣ್ಯಾಧಿಕಾನ್-ಹೆಚ್ಚಾಗಿ ಪುಣ್ಯಕರ್ಮಗಳನ್ನಾಚರಿಸುವವರನ್ನು ಪಶ್ಯನ್-ನೋಡಿ, ನ ಕುರ್ವೀತ- (ಪುಣ್ಯಮಾಡಿದನೆಂಬ ಭಾವನೆಯನ್ನೂ) ಮಾಡಿಕೊಳ್ಳಬಾರದು; ಪುಣ್ಯೇ-ಪುಣ್ಯದ ವಿಷಯದಲ್ಲಿ ಪುಣ್ಯಾಧಿಕಾನ್-ಅಧಿಕ ಪುಣ್ಯವಂತರನ್ನು ಪಶ್ಯೇತ್-ನೋಡಬೇಕು; ದುಃಖೇ-ದುಃಖ ವಿಷಯದಲ್ಲಿ ಅಪಿ-ಸಹ (ಹೀಗೆಯೇ), ದುಃಖಾಧಿಕಾನ್-ಅಧಿಕ ದುಃಖವುಳ್ಳವರನ್ನು ಪಶ್ಯೇತ್-ನೋಡಬೇಕು; (ಹೀಗೆಯೇ) ಧನೀ-ಧನಿಕನು, ಧನಾಧಿಕಾನ್-ಅಧಿಕ ಧನವಂತರನ್ನು ಪಶ್ಯೇತ್-ನೋಡಬೇಕು; ತು-ಆದರೆ, ಪಾಪೇ-ಪಾಪವಿಷಯದಲ್ಲಿ ಪಾಪಾಧಿಕಾನ್-ಅಧಿಕ ಪಾಪಿಗಳನ್ನು ನ-ನೋಡಕೂಡದು (ತಾನು ಅಲ್ಪಪಾಪವನ್ನು ಮಾಡಿದವನೆಂಬ ಸಮಾಧಾನವನ್ನು ಹೊಂದಬಾರದು); ಸರ್ವಶಃ-ಸರ್ವ ಪ್ರಕಾರದಿಂದ (ಸರ್ವವಸ್ತುಗಳ), ಅನಿತ್ಯಂ- ಅನಿತ್ಯತ್ವವನ್ನು (ನಶ್ವರವೆಂಬುದನ್ನು), ವೀಕ್ಷ್ಯ-ಗಮನಿಸಿ, ಸರ್ವದಾ-ಸದಾ, ವಿನೀತಃ-ನಮ್ರನಾಗಿ, ತಿಷ್ಠೇತ್-ಇರತಕ್ಕದ್ದು.

---

ಪುಣ್ಯವನ್ನು ನಾನು ಮಾಡಿದೆನು' ಇತ್ಯಾದಿಯಾಗಿ ಪುಣ್ಯವನ್ನು ಹೇಳಿಕೊಳ್ಳಬಾರದು— ಮನಸ್ಸಿನಲ್ಲಿ ಸಹ ಪುಣ್ಯಮಾಡಿದನೆಂಬ ಭಾವನೆಯನ್ನು ತರಕೂಡದು; ಇದನ್ನು ಸಾಧಿಸಲು ತನಗಿಂತ ಅಧಿಕ ಪುಣ್ಯಗಳನ್ನಾಚರಿಸಿದವರನ್ನು ನೋಡಬೇಕು; ಪುಣ್ಯದ ವಿಷಯದಲ್ಲಿ ಅಧಿಕ ಪುಣ್ಯಮಾಡಿದವರನ್ನೂ, ದುಃಖದ ವಿಷಯದಲ್ಲಿ ತನಗಿಂತ ಅಧಿಕ ದುಃಖಿಗಳನ್ನೂ, ನೋಡಬೇಕು; ಧನಿಕನು ತನಗಿಂತ ಅಧಿಕ ಧನವಂತರನ್ನು ನೋಡಬೇಕು; ಆದರೆ ಪಾಪವಿಷಯದಲ್ಲಿ ಮಾತ್ರ ತನಗಿಂತ ಅಧಿಕ ಪಾಪಿಗಳನ್ನು ಕಂಡು ಸಮಾಧಾನಪಟ್ಟುಕೊಳ್ಳಕೂಡದು; ಎಲ್ಲವೂ ಅನಿತ್ಯವೆಂಬುದನ್ನು ಮನಗಂಡು (ಧನಾದಿಗಳ ನಶ್ವರತ್ವವನ್ನು ನಿಶ್ಚಯಿಸಿಕೊಂಡು) ವಿನೀತನಾಗಿ (ನಮ್ರನಾಗಿ) ವರ್ತಿಸತಕ್ಕದ್ದು (೧೦೪-೧೦೬). ಧನಾದಿಗಳಲ್ಲಿ ಅಥವಾ ಅದರಿಂದ ಸಾಧಿಸುವ ಪುಣ್ಯದಲ್ಲಿ ಸಹ ನನ್ನದೆಂಬ ಅಭಿಮಾನವನ್ನು ಬಿಡಬೇಕು; ಹೀಗೆ ನಿರಭಿಮಾನಿ

**ನಾಭಿಮಾನಂ ಪ್ರಕುರ್ವೀತ ತಸ್ಮೈ ತುಷ್ಯೇಜ್ಜನಾರ್ದನಃ ।**
**ಪಾಪಾನಾಮಪಿ ಪುಣ್ಯಾನಾಂ ಸಂಚಿತಾನಾಂ ಹಿ ಕರ್ಮಣಾಂ ॥ ೧೦೭ ॥**
**ನಾಶೋ ಭವತಿ ವೃದ್ಧಿಶ್ಚ ಪ್ರತ್ಯಹಂ ಜಾಯತೇ ಪುನಃ ।**
**ಪುನಃ ಪ್ರಾರಬ್ಧತಾಂ ಯಾಂತಿ ಭೋಗ್ಯಾನಿ ಚ ಪುನಃ ಪುನಃ ॥ ೧೦೮ ॥**
**ಏಕೇಷು ಭುಜ್ಯಮಾನೇಷು ಜಾಯಂತೇ ಕರ್ಮಕೋಟಯಃ ।**
**ಮೋಕ್ಷಸ್ಯ ಭವಿತುಂ ನಾರ್ಹೋ ಮಜ್ಜತಃ ಕರ್ಮವಾರಿಧೌ ॥ ೧೦೯ ॥**

ಅಭಿಮಾನಂ-(ಪುಣ್ಯಾದಲ್ಲಿ ಸನ್ನರೆಂಬ) ಅಭಿಮಾನವನ್ನೂ, ನ ಪ್ರಕುರ್ವೀತ-ಮಾಡತಕ್ಕದ್ದಲ್ಲ; ತಸ್ಮೈ-ಆತನಿಗೆ (ಹೀಗೆ ನಿರಭಿಮಾನಿಯಾದವನಿಗೆ), ಜನಾರ್ದನಃ-ಶ್ರೀಹರಿಯು, ತುಷ್ಯೇತ್-ಪ್ರೀತನಾಗುತ್ತಾನೆ; ಸಂಚಿತಾನಾಂ-ಸಂಚಿತಗಳಾದ, ಕರ್ಮಣಾಂ-ಕರ್ಮಗಳಿಗೆ, ಪಾಪಾನಾಂ-ಪಾಪಗಳಿಗೂ, ಅಪಿ-ಮತ್ತು, ಪುಣ್ಯಾನಾಂ-ಪುಣ್ಯಗಳಿಗೂ, ಪ್ರತ್ಯಹಂ-ಪ್ರತಿದಿನವೂ, ನಾಶಃ-ನಾಶವು, ಭವತಿ - ಉಂಟಾಗುತ್ತದೆ, ವೃದ್ಧಿಶ್ಚ-ವೃದ್ಧಿಯೂ, ಜಾಯತೇ-ಉಂಟಾಗುತ್ತದೆ; ಪುನಃಪುನಃ- ಮೇಲಿಂದ ಮೇಲೆ, ಭೋಗ್ಯಾನಿ-ಭೋಗಿಸಲ್ಪಡಬೇಕಾದ ಕರ್ಮಗಳು, ಪುನಃಪುನಃ-ಮತ್ತೆಮತ್ತೆ (ಅದೇ ಕ್ರಮದಿಂದ), ಪ್ರಾರಬ್ಧತಾಂ-ಪ್ರಾರಬ್ಧಕರ್ಮಭಾವವನ್ನು ಯಾಂತಿ-ಹೊಂದುತ್ತವೆ; ಏಕೇಷು-ಒಂದೊಂದು ಪ್ರಾರಬ್ಧಕರ್ಮವು, ಭುಜ್ಯಮಾನೇಷು-ಭೋಗಿಸಲ್ಪಡುತ್ತಿರಲು, (ಆ ಕಾಲದಲ್ಲಿ), ಕರ್ಮಕೋಟಯಃ- ಕರ್ಮಕೋಟಿಗಳು (ಕೋಟಿಶಃ ಹೊಸ ಕರ್ಮಗಳು), ಜಾಯಂತೇ-ಉಂಟಾಗುತ್ತವೆ (ಸಂಭವಿಸುತ್ತವೆ); ಕರ್ಮವಾರಿಧೌ-ಈ ಕರ್ಮಸಾಗರದಲ್ಲಿ, ಮಜ್ಜತಃ-ಮುಳುಗಿದವನಿಗೆ, ಮೋಕ್ಷಸ್ಯ-ಮೋಕ್ಷದ, ಭವಿತುಂ-ಉಂಟಾಗುವಿಕೆಯು, ನಾರ್ಹಃ-ಅರ್ಹತೆಯು ಇರುವುದಿಲ್ಲ (ಹೀಗೆ ಕರ್ಮರಾಶಿಯಲ್ಲಿ ಮುಳುಗಿದವನು, ಮೋಕ್ಷಕ್ಕೆ ಎಂದೂ ಅಧಿಕಾರಿಯಾಗುವುದಿಲ್ಲ—ಮೋಕ್ಷವನ್ನು ಹೊಂದಲು ಶಕ್ತನಾಗುವುದಿಲ್ಲ).

---

ಯಾರವನ ಮೇಲೆ ಶ್ರೀಹರಿಯು ಪ್ರೀತನಾಗುತ್ತಾನೆ. ಸಂಚಿತರಾಶಿಯಲ್ಲಿರುವ ಮನುಷ್ಯನ ಕರ್ಮಗಳಿಗೆ (ಪುಣ್ಯಪಾಪರೂಪದ ಉಭಯ ಕರ್ಮಗಳಿಗೂ) ಪ್ರತಿದಿನದಲ್ಲಿ ವೃದ್ಧಿಹ್ರಾಸಗಳು ಸಂಭವಿಸುತ್ತವೆ; ಆ ಸಂಚಿತ ಕರ್ಮಗಳು ಫಲಪ್ರದಾನಕ್ಕೆ ಆರಂಭವಾಗಿ ಪ್ರಾರಬ್ಧಕರ್ಮ ಭಾವವನ್ನು ಹೊಂದುತ್ತವೆ; ಈ (ಪ್ರಾರಬ್ಧಕರ್ಮಗಳ) ಭೋಗಕಾಲದಲ್ಲಿ ಕೋಟಿಶಃ ನೂತನ ಕರ್ಮಗಳು ಸಂಭವಿಸುತ್ತವೆ; ಹೀಗೆ ಅಪಾರವಾದ ಈ ಕರ್ಮಸಾಗರದಲ್ಲಿ ಮುಳುಗಿರುವ ಪುರುಷನು, ಅಲ್ಲಿಂದ ಮೇಲೆದ್ದು (ಕರ್ಮಗಳಿಂದ ಬಿಡುಗಡೆ ಹೊಂದಿ) ಮೋಕ್ಷವನ್ನು ಪಡೆಯಲು ಎಂದಿಗೂ ಸಮರ್ಥನಾಗುವುದಿಲ್ಲ (೧೦೭-೧೦೯). ಆದ್ದರಿಂದ ಕರ್ಮಗಳಿಂದ ಮುಕ್ತನಾಗಿ,

**ಅತೋ ಹಿ ಮೋಕ್ಷುಕಾಮೇನ ಕಾರ್ಯಂ ಶ್ರವಣಮೀಶಿತುಃ ।**

**ಮನನಧ್ಯಾನಯೋಗೇನ ತುಷ್ಟಃ ಸಾಕ್ಷಾದ್ಭವೇದ್ಧರಿಃ ॥ ೧೧೦ ॥**

**ತತಃ ಸಂಚಿತನಾಶಃ ಸ್ಯಾತ್ಕ್ರಿಯಮಾಣಂ ನ ಲಿಪ್ಯತೇ ।**

**ಪ್ರಾರಬ್ಧನಾಶೋ ಭೋಗೇನ ಕರ್ಮಮುಕ್ತೋ ಭವೇನ್ನರಃ ॥ ೧೧೧ ॥**

ಅತಃ-ಆದ್ದರಿಂದ (ಕರ್ಮದಿಂದ), ಮೋಕ್ಷುಕಾಮೇನ-ಬಿಡುಗಡೆಯನ್ನು ಹೊಂದಲಿಚ್ಛಿಸುವವನಿಂದ, ಈಶಿತುಃ-ಶ್ರೀಹರಿಯ, ಶ್ರವಣಂ-ಕಥಾಶ್ರವಣವು (ಮಹಿಮೆಗಳ ಶ್ರವಣವು), ಕಾರ್ಯಂ-ಮಾಡಲ್ಪಡತಕ್ಕದ್ದು; ಮನನಧ್ಯಾನ ಯೋಗೇನ-ಮನನ ಮತ್ತು ಧ್ಯಾನಗಳ ಪ್ರಭಾವದಿಂದ, ಹರಿಃ-ಶ್ರೀಹರಿಯು, ತುಷ್ಟಃ-ಪ್ರೀತನಾಗಿ, ಸಾಕ್ಷಾತ್‌ಭವೇತ್-ಪ್ರತ್ಯಕ್ಷನಾಗುತ್ತಾನೆ (ಬ್ರಹ್ಮದರ್ಶನವು ಲಭಿಸುತ್ತದೆ); ತತಃ-ದರ್ಶನದಿಂದ (ಸಾಕ್ಷಾತ್ಕಾರದ ಫಲವಾಗಿ), ಸಂಚಿತನಾಶಃ-ಸಂಚಿತ ಕರ್ಮದ ನಾಶವು, ಸ್ಯಾತ್-ಆಗುತ್ತದೆ; ಕ್ರಿಯಮಾಣಂ-ಆ ಮುಂದೆ ಮಾಡಲ್ಪಡುವ ಕರ್ಮವು, ನ ಲಿಪ್ಯತೇ-ಲೇಪಿಸುವುದಿಲ್ಲ (ಸುಖದುಃಖಭೋಗಪ್ರದಗಳಾಗು ವುದಿಲ್ಲ); ಭೋಗೇನ-(ಸಾಕ್ಷಾತ್ಕಾರಕಾಲದಲ್ಲಿ ಆರಂಭವಾಗಿರುವ ಪ್ರಾರಬ್ಧ ಕರ್ಮವು) ಭೋಗದಿಂದ, ಪ್ರಾರಬ್ಧನಾಶಃ-ಪ್ರಾರಬ್ಧಕರ್ಮದ ನಾಶವಾಗುತ್ತದೆ; ನರಃ-ಮನುಷ್ಯನು, ಕರ್ಮಮುಕ್ತಃ-ಕರ್ಮಗಳಿಂದ ಮುಕ್ತನು, ಭವೇತ್- ಆಗುತ್ತಾನೆ.

**ಲಿಂಗಮುಕ್ತಃ ಶುದ್ಧರೂಪಃ ಸ್ವರೂಪನಿಜಮಶ್ನುತೇ ।**

**ಬ್ರಹ್ಮಣಾ ಸಹ ಭುಂಜಾನಸ್ತತೋ ನಾವರ್ತತೇ ಪುನಃ ॥ ೧೧೨ ॥**

ಲಿಂಗಮುಕ್ತಃ-ಲಿಂಗದೇಹದಿಂದ ಮುಕ್ತನಾಗಿ (ಲಿಂಗದೇಹವನ್ನು ತ್ಯಜಿಸಿ), ಶುದ್ಧರೂಪಃ-ಶುದ್ಧವಾದ (ಸಚ್ಚಿದಾನಂದಾತ್ಮಕ) ಸ್ವರೂಪದೇಹವನ್ನು ಹೊಂದಿ, ಸ್ವರೂಪನಿಜಂ-ತನ್ನ ಸ್ವರೂಪವನ್ನು (ಸ್ವಸ್ವರೂಪಾನಂದವನ್ನು), ಅಶ್ನುತೇ-

---

ಸ್ವಸ್ವರೂಪ ಸ್ಥಿತಿರೂಪದ ಮೋಕ್ಷವನ್ನು ಹೊಂದಲಿಚ್ಛಿಸುವ ಪುರುಷನು, ಶ್ರೀಹರಿ ಮಹಿಮೆಗಳನ್ನು ಸಂತತವಾಗಿ ಶ್ರವಣ ಮಾಡಬೇಕು—ಮನನ ಮಾಡಬೇಕು; ಶ್ರೀಹರಿಯ ಸರ್ವೋತ್ತಮತ್ವ ಜ್ಞಾನ ನಿಶ್ಚಯದಿಂದ ಧ್ಯಾನಮಾಡಬೇಕು; ಮನನ ಧ್ಯಾನಗಳಿಂದ ತುಷ್ಟನಾಗಿ, ಶ್ರೀಹರಿಯು ಪ್ರತ್ಯಕ್ಷನಾಗುತ್ತಾನೆ; ಶ್ರೀಹರಿಯ ಪ್ರತ್ಯಕ್ಷ ದರ್ಶನದಿಂದ (ಅಪರೋಕ್ಷ ಜ್ಞಾನದಿಂದ) ಸಂಚಿತ ಕರ್ಮರಾಶಿಯು ದಹಿಸಿ ಹೋಗುತ್ತದೆ; ಆ ಮುಂದೆ ಮಾಡುವ ಕರ್ಮಗಳು ಲೇಪಿಸುವುದಿಲ್ಲ; ಆ ಕಾಲದಲ್ಲಿ ಫಲಕೊಡಲು ಆರಬ್ಧವಾದ (ಪ್ರಾರಬ್ಧ) ಕರ್ಮವು ಭೋಗದಿಂದ ನಾಶವಾಗುತ್ತದೆ; ಈ ಕ್ರಮದಿಂದ ಮಾತ್ರ ಮಾನವನು ಕರ್ಮಮುಕ್ತನಾಗಬಹುದಲ್ಲದೇ ಅನ್ಯೋಪಾಯವಿರುವುದಿಲ್ಲ (೧೧೦-೧೧೧). ಪ್ರಾರಬ್ಧನಾಶಾನಂತರ, ಜೀವನು, ಅನಾದಿಕಾಲದಿಂದ ತನ್ನ ಸ್ವರೂಪವನ್ನಾಚ್ಛಾದಿಸಿ ಸಂಸಾರದಲ್ಲಿ ಸುತ್ತಲು ಕಾರಣವಾಗಿದ್ದ

ಅನುಭವಿಸುತ್ತಾನೆ; ಬ್ರಹ್ಮಣಾ ಸಹ-ಬ್ರಹ್ಮದೇವನೊಡನೆ (ಮುಕ್ತನಾಗಿ), ಭುಂಜಾನಃ-(ನಿತ್ಯಾನಂದವನ್ನು) ಭೋಗಿಸುತ್ತ ತತಃ-ಅಲ್ಲಿಂದ (ಮುಕ್ತಸ್ಥಾನದಿಂದ), ಪುನಃ-ಮತ್ತೆ ನ ಆವರ್ತತೇ-ತಿರುಗಿ ಬರುವುದಿಲ್ಲ (ಸಂಸಾರಕ್ಕೆ ಬರುವುದಿಲ್ಲ).

**ಅನಂತಾಸನವೈಕುಂಠನಾರಾಯಣಪುರೇಷು ಸಃ ।**
**ರಮಮಾಣಃ ಸ್ವೈರಚೇಷ್ಟ ಇಚ್ಛಯಾನ್ಯತ್ರ ಮೋದತೇ ॥ ೧೧೩ ॥**

ಸಃ- ಆ ಮುಕ್ತಜೀವನು, ಅನಂತಾಸನವೈಕುಂಠನಾರಾಯಣಪುರೇಷು - ಅನಂತಾಸನ, ವೈಕುಂಠ, ನಾರಾಯಣಪುರ (ಶ್ವೇತದ್ವೀಪ)ಗಳಲ್ಲಿ ರಮಮಾಣಃ- ಕ್ರೀಡಿಸುವವನಾಗಿ, ಸ್ವೈರಚೇಷ್ಟಃ-ಸ್ವೇಚ್ಛಾನುಸಾರವಾದ ವಿಹಾರವುಳ್ಳವನಾಗಿ, ಇಚ್ಛಯಾ-ಇಚ್ಛೆಯಿಂದ, ಅನ್ಯತ್ರ-ಬೇರೆ ಲೋಕಗಳಲ್ಲಿಯೂ, ಮೋದತೇ-ಸುಖಿಸುತ್ತಾನೆ.

**ಕಾಮಭಕ್ಷಃ ಕಾಮಪಾನಃ ಕಾಮಸ್ತ್ರೀಭೋಗವಾನ್ ಹಿ ಸಃ ।**
**ಇಚ್ಛಾ ವಿಹನ್ಯತೇ ನಾಸ್ಯ ನೇಚ್ಛಾನರ್ಹೋ ಪ್ರಜಾಯತೇ ॥ ೧೧೪ ॥**

ಮುಕ್ತನು (ಸ್ವೇಚ್ಛಾನುಸಾರವಾದ ಕ್ರೀಡೆಯುಳ್ಳವನೆಂಬುದನ್ನು ವಿವರಿಸ

---

ಲಿಂಗದೇಹವನ್ನು ತ್ಯಜಿಸಿ, ಅಪ್ರಾಕೃತದೇಹಿಯಾಗಿ, ಸ್ವಸ್ವರೂಪವನ್ನು ಅನುಭವಿಸುತ್ತಾನೆ; ಬ್ರಹ್ಮದೇವನೊಡನೆ ಮುಕ್ತನಾಗಿ, ತನ್ನ ಸ್ವರೂಪದ ಆನಂದವನ್ನು ನಿತ್ಯವೂ ಭೋಗಿಸುತ್ತ ಮುಕ್ತಸ್ಥಾನದಿಂದ ಮತ್ತೆ ಈ ಸಂಸಾರಕ್ಕೆ ಬರುವುದಿಲ್ಲ (೧೧೨). ಅನಂತಾಸನ, ವೈಕುಂಠ ಮತ್ತು ಶ್ವೇತದ್ವೀಪಗಳ ಮುಕ್ತಭಾಗಗಳಲ್ಲಿ ಆ ಮುಕ್ತಜೀವನು, ಇಚ್ಛಾನುಸಾರವಾದ ಚೇಷ್ಟೆ (ವ್ಯಾಪಾರ)ಯುಳ್ಳವನಾಗಿ, ಕ್ರೀಡಿಸುತ್ತಾನೆ—ಇಚ್ಛಿಸಿದರೆ ಅನ್ಯತ್ರ ಸಹ ವಿಹರಿಸಿ ಸುಖಿಸುತ್ತಾನೆ[1] (೧೧೩). ಮುಕ್ತನು, ಇಚ್ಛಿತವಾದ ಅನ್ನಪಾನಗಳನ್ನು (ಇಚ್ಛಾಮಾತ್ರದಿಂದ ಯತ್ನಾದಿ ಶ್ರಮವಿಲ್ಲದೆ) ಹೊಂದಿ

---

1. 'ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ ॥' ಎಂಬ (ಮುಂಡಕ) ಶ್ರುತಿಯು, ಬ್ರಹ್ಮಜ್ಞಾನಿಯು, ಯಾವ ಯಾವ ಲೋಕವನ್ನು ಯಾವ ಯಾವ ಭೋಗಗಳನ್ನು ಮನಸ್ಸಿನಿಂದ ಇಚ್ಛಿಸುವನೋ, ಅವೆಲ್ಲವನ್ನೂ ಹೊಂದುವನೆಂದು, ಹೇಳುತ್ತದೆ. ಬ್ರಹ್ಮಜ್ಞಾನಿಯ ಸ್ಥಿತಿಯೇ ಹೀಗಿರಲು, ಮುಕ್ತನು, ಇಚ್ಛಿತ ಲೋಕಗಳನ್ನೂ, ಭೋಗಗಳನ್ನೂ, ಹೊಂದುವನೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ; ಮುಕ್ತಭೋಗವನ್ನು ನಿರ್ಣಯಿಸಿ ನಿರೂಪಿಸುವ ಬ್ರಹ್ಮಸೂತ್ರದ ೪ನೇ ಅಧ್ಯಾಯದ ಭೋಗಪಾದದಲ್ಲಿ 'ಯಥಾಕಾಮಂ ಚರತಿ, ಯಥಾಕಾಮಂ ಪಿಬತಿ, ಯಥಾಕಾಮಂ ರಮತೇ...' ಇತ್ಯಾದಿ (ತೈತ್ತಿರೀಯ) ಶ್ರುತ್ಯರ್ಥವನ್ನು ಸಮರ್ಥಿಸಿ, ಮುಕ್ತನು ಸ್ವೇಚ್ಛಾಸಂಚಾರವುಳ್ಳವನೆಂದೂ, ಭೋಗಗಳುಳ್ಳವನೆಂದೂ, ನಿಶ್ಚಯಿಸಲಾಗಿದೆ.

'ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ' ಎಂಬ ಬ್ರಹ್ಮಸೂತ್ರವು, ಮುಕ್ತನಿಗೆ ಪುನರಾವೃತ್ತಿಯು (ಮತ್ತೆ ಸಂಸಾರಕ್ಕೆ ಬರುವುದು) ಇಲ್ಲವೇ ಇಲ್ಲವೆಂದು, ನಿರ್ಣಯಿಸಿರುತ್ತದೆ.

ಲಾಗುತ್ತದೆ). ಸಃ - ಆ ಮುಕ್ತನು, ಕಾಮಭಕ್ಷಃ - ಅಪೇಕ್ಷಿತ ಆಹಾರವುಳ್ಳವನು; ಕಾಮಪಾನಃ-ಇಚ್ಛಿತಪಾನಗಳುಳ್ಳವನು; ಕಾಮಸ್ತ್ರೀಭೋಗವಾನ್-ಯಥೇಚ್ಛವಾದ ಸ್ತ್ರೀಭೋಗವುಳ್ಳವನು; ಅಸ್ಯ-ಈತನ (ಮುಕ್ತನ), ಇಚ್ಛಾ-ಇಚ್ಛೆಯು, ನ ವಿಹನ್ಯತೇ-ವ್ಯರ್ಥವಾಗುವುದಿಲ್ಲ (ಪೂರ್ಣವಾಗದೇ ವಿಘಾತವನ್ನು ಹೊಂದುವುದಿಲ್ಲ); ಅನರ್ಹಾ-ಅಯೋಗ್ಯವಾದ, ಇಚ್ಛಾ-ಇಚ್ಛೆಯು, ನ ಪ್ರಜಾಯತೇ-(ಮುಕ್ತನಿಗೆ) ಉಂಟಾಗುವುದೇ ಇಲ್ಲ.

**ಸ್ವರೂಪಾನಂದಪೂರ್ಣೋಽಸೌ ಸಾರೂಪ್ಯಂ ವಾ ಸಲೋಕತಾಂ ।**
**ಸಾಮೀಪ್ಯಂ ವಾಪಿ ಸಾಯುಜ್ಯಂ ಪ್ರಾಪ್ತೋಽನಂತೇ ಸ ಮೋದತೇ ॥ ೧೧೫ ॥**
**ಇತಿ ವಃ ಕಥಿತಂ ವಿಪ್ರಾ ಯಥಾಜ್ಞಾನಂ ಮಯಾ ಪುರಃ ।**
**ಆಖ್ಯಾಸ್ಯಾಮಿ ತಥಾನ್ಯಚ್ಚ ಮತ್ತೋಽನ್ಯತ್ ಶ್ರೋತುಮಿಚ್ಛಥ ॥ ೧೧೬ ॥**

ಅಸೌ-ಈ ಮುಕ್ತನು, ಸ್ವರೂಪಾನಂದಪೂರ್ಣಃ-ಸ್ವರೂಪಾನಂದದಿಂದ ಪೂರ್ಣನಾಗಿ, ಸಾರೂಪ್ಯಂ-ಸಾರೂಪ್ಯವನ್ನೂ, ವಾ-ಅಥವಾ, ಸಲೋಕತಾಂ-ಸಾಲೋಕ್ಯವನ್ನೂ, ಸಾಮೀಪ್ಯಂ-ಸಾಮೀಪ್ಯವನ್ನೂ, ಅಪಿ ವಾ-ಅಥವಾ (ಸ್ವಯೋಗ್ಯತೆಯಂತೆ), ಸಾಯುಜ್ಯಂ-ಸಾಯುಜ್ಯವನ್ನೂ, ಪ್ರಾಪ್ತಃ-ಹೊಂದಿದವನಾಗಿ, ಸಃ-ಆತನು, ಅನಂತೇ-ಶ್ರೀಹರಿಯಲ್ಲಿ (ಅಥವಾ ಅನಂತಕಾಲದಲ್ಲಿಯೂ—ಸರ್ವದಾ), 

---

ಭೋಗಿಸುತ್ತಾನೆ; ಯಥೇಚ್ಛವಾದ ಸ್ತ್ರೀಭೋಗವುಳ್ಳವನೂ ಆಗುತ್ತಾನೆ; ಮುಕ್ತನ ಇಚ್ಛೆಯು ಎಂದೂ ವ್ಯರ್ಥವಾಗುವುದಿಲ್ಲ[1] (ಸಿದ್ಧಿಸದಿರುವುದಿಲ್ಲ)—ಆತನಿಗೆ ಅಯೋಗ್ಯವಾದ ಇಚ್ಛೆಯು ಹುಟ್ಟುವುದೇ ಇಲ್ಲ (೧೧೪). ಎಲ್ಲ ಮುಕ್ತರೂ ಸ್ವಸ್ವರೂಪಾನಂದಪೂರ್ಣರಾಗಿ, ಸಾರೂಪ್ಯ (ಚತುರ್ಭುಜಾದಿ ಶ್ರೀಹರಿಯ ರೂಪದ ಸಾದೃಶ್ಯ), ಸಾಲೋಕ್ಯ, ಸಾಮೀಪ್ಯ, ಸಾಯುಜ್ಯಗಳೆಂಬ ನಾಲ್ಕು ಪ್ರಕಾರದ ಮುಕ್ತಿಗಳಲ್ಲಿ ಸ್ವಯೋಗ್ಯವಾದ ಮುಕ್ತಿಯನ್ನು ಹೊಂದಿ, ಶ್ರೀಹರಿಯೊಂದಿಗೆ (ಸಾಯುಜ್ಯರು ಅಥವಾ ಸದಾ ಶ್ರೀಹರಿದರ್ಶನದಿಂದ ಅಥವಾ 'ಅನಂತೇ' ಅನಂತಕಾಲದಲ್ಲಿ) ಆನಂದಿಸುತ್ತಾರೆ. ಹೇ ಶೌನಕಾದಿಗಳೇ! ಹೀಗೆ, ನಿಮ್ಮ ಪ್ರಶ್ನೆಗಳಿಗೆ, ಯಥಾಮತಿ ಪರಿಹಾರಗಳನ್ನು ಈವರೆಗೆ ಹೇಳಿರುವೆನು; ಮುಂದಾದರೂ ಯಥಾಮತಿ, ನೀವು ಕೇಳಬಹುದಾದ

---

1. 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ', 'ಸ್ತ್ರೀಭಿರ್ವಾ ಯಾನೈರ್ವಾ' ಇತ್ಯಾದಿ ಶ್ರುತಿಗಳು ಮುಕ್ತನ ಸ್ವೇಚ್ಛಾವಿಹಾರಗಳನ್ನು ವರ್ಣಿಸುತ್ತವೆ.

'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್...'

'ಹರಿಹಸ್ತದಿಂದ ಸ್ವೀಕರಿಸುತ್ತಾನೆ, ಹರಿಯ ದೃಷ್ಟಿಯಿಂದ ನೋಡುತ್ತಾನೆ, ಹರಿಪಾದಗಳಿಂದ ಸಂಚರಿಸುತ್ತಾನೆ', ಎಂದು, ನಿರೂಪಿಸುವ ಸ್ಮೃತಿಗಳು ಸಾಯುಜ್ಯಮುಕ್ತರ ಸ್ಥಿತಿಯನ್ನು ಹೇಳುತ್ತವೆ.

ಮೋದತೇ-ಆನಂದಿಸುತ್ತಾನೆ; ವಿಪ್ರಾಃ-ಹೇ ಬ್ರಾಹ್ಮಣರೇ! (ಶೌನಕಾದಿಗಳೇ!), ಇತಿ-ಹೀಗೆ, ವಃ-ನಿಮಗೋಸ್ಕರ, ಮಯಾ- ನನ್ನಿಂದ, ಯಥಾಜ್ಞಾನಂ-ಯಥಾಮತಿ (ನನಗೆ ತಿಳಿದಷ್ಟು), ಕಥಿತಂ-ಹೇಳಲ್ಪಟ್ಟಿತು; ತಥಾ-ಹಾಗೆಯೇ (ಯಥಾಮತಿ), ಪುರಃ-ಮುಂದಾದರೂ, ಅನ್ಯಚ್ಚ-ಬೇರೆ ವಿಷಯವನ್ನಾದರೂ, ಆಖ್ಯಾಸ್ಯಾಮಿ-ಹೇಳುತ್ತೇನೆ; ಮತ್ತಃ-ನನ್ನಿಂದ, ಅನ್ಯತ್-ಬೇರೆ (ಏನನ್ನು), ಶ್ರೋತುಂ-ಶ್ರವಣ ಮಾಡಲಿಕ್ಕೆ, ಇಚ್ಛಥ-ಇಚ್ಛಿಸುತ್ತೀರಿ?

ಕರ್ಮವಿವೇಕವರ್ಣನವೆಂಬ ೩೭ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೮

ಶ್ರೀ ವೇದವ್ಯಾಸಾಯ ನಮಃ

ಸತ್ಯವ್ರತ ಉವಾಚ—

ಅವಜ್ಞಾನೇನ ವಿಪ್ರಾಣಾಂ ತಥಾ ಸಂಪ್ರೀಣನೇನ ಚ ।
ಕ್ಷಯಃ ಪುಣ್ಯಸ್ಯ ಪಾಪಸ್ಯ ವೃದ್ಧಿಶ್ಚಾಪಿ ವಿಪರ್ಯಯಾತ್ ॥ ೧ ॥
ಕುತ ಏವಂ ಕಥಂ ತೇಷಾಮವಜ್ಞಾನಂ ಚ ತರ್ಪಣಂ ।
ತನ್ನ ಆಖ್ಯಾಹಿ ಸೂತ ತ್ವಂ ಶ್ರೋತುಮಿಚ್ಛಾಮಹೇ ವಯಂ ॥ ೨ ॥

ಸತ್ಯವ್ರತಋಷಿಯು, ಪ್ರಶ್ನಿಸುತ್ತಾನೆ:—

ಅರ್ಥ:—ವಿಪ್ರಾಣಾಂ-ಬ್ರಾಹ್ಮಣರ, ಅವಜ್ಞಾನೇನ-ಅವಮಾನದಿಂದ, ತಥಾ-ಮತ್ತು, ಸಂಪ್ರೀಣನೇನ-ಸಂತೃಪ್ತಿಗೊಳಿಸುವುದರಿಂದ, (ಕ್ರಮವಾಗಿ), ಪುಣ್ಯಸ್ಯ-ಪುಣ್ಯದ, ಕ್ಷಯಃ-ನಾಶವೂ, ಪಾಪಸ್ಯ-ಪಾಪದ, ವೃದ್ಧಿಃ-ವೃದ್ಧಿಯೂ, ಚ - ಮತ್ತು

---

ಪ್ರಶ್ನೆಗಳಿಗೆ ಉತ್ತರಗಳನ್ನು ನಿರೂಪಿಸುವೆನು; ನನ್ನಿಂದ ಬೇರೇನನ್ನು ತಿಳಿಯ ಲಿಚ್ಛಿಸುವಿರಿ? ಕೇಳಿರಿ (೧೧೫-೧೧೬).

ಅ೭ನೇ ಅಧ್ಯಾಯವು ಮುಗಿದುದು.

ಅಧ್ಯಾಯ ೩೮

ತಾತ್ಪರ್ಯ:—ಋಷಿಗಳ ಪರವಾಗಿ ಸತ್ಯವ್ರತರು ಪ್ರಶ್ನಿಸುತ್ತಾರೆ:— ಹೇ ಸೂತ! ಬ್ರಾಹ್ಮಣರ ಅವಜ್ಞಾನದಿಂದ ಪುಣ್ಯನಾಶವೂ ಪಾಪವೃದ್ಧಿಯೂ, ಅವರನ್ನು ತೃಪ್ತಿಗೊಳಿಸುವುದರಿಂದ, ಪಾಪನಾಶವೂ ಪುಣ್ಯದ ವೃದ್ಧಿಯೂ, ಉಂಟಾಗುತ್ತದೆಂಬುದು, ಏಕೆ? ಮತ್ತು ಬ್ರಾಹ್ಮಣರ ಅವಜ್ಞೆ ಮತ್ತು ಸಂತೃಪ್ತಿಗಳು ಹೇಗೆ ಸಂಭವಿಸುತ್ತವೆ? ಈ ಪ್ರಮೇಯದ ವಿಸ್ತಾರವನ್ನು ಶ್ರವಣಮಾಡಲು ನಾವು ಇಚ್ಛಿಸುತ್ತೇವೆ

ವಿಪರ್ಯಯಾತ್-ವಿರುದ್ಧಕ್ರಮದಿಂದ, ಪಾಪಸ್ಯ-ಪಾಪದ, ಕ್ಷಯಃ-ನಾಶವೂ, ಪುಣ್ಯಸ್ಯ - ಪುಣ್ಯದ, ವೃದ್ಧಿಃ-ವೃದ್ಧಿಯೂ, ಏವಂ-ಹೀಗೆಂಬುದು, ಕುತಃ-ಏಕೆ (ಯಾವ ಕಾರಣದಿಂದ), ಮತ್ತು ತೇಷಾಂ-ಅವರ (ಬ್ರಾಹ್ಮಣರ), ಅವಜ್ಞಾನಂ- ಅವಮಾನವು, ಚ-ಮತ್ತು ತರ್ಪಣಂ-ತೃಪ್ತಿಯೂ, ಕಥಂ-ಹೇಗೆ? (ಯಾವುದರಿಂದ ಉಂಟಾಗುತ್ತದೆ?), ತತ್-ಅದನ್ನು ನಃ-ನಮಗೆ, ಸೂತ-ಹೇ ಸೂತರೇ!, ಆಖ್ಯಾಹಿ-ಹೇಳಿರಿ; ವಯಂ-ನಾವು, ಶ್ರೋತುಂ-(ಪ್ರಮೇಯವನ್ನು ತಿಳಿಯಲು) ಕೇಳಲು, ಇಚ್ಛಾಮಹೇ-ಅಪೇಕ್ಷಿಸುತ್ತೇವೆ.

**ಸೂತ ಉವಾಚ—**

ಅನಾದಿಕರ್ಮಣಾ ಬದ್ಧಾ ಜೀವಾಃ ಸರ್ವೇ ಸುಖೇಪ್ಸವಃ ।
ಸುಖದಾನೇ ತತಸ್ತೇಷಾಂ ಕಿಂಚಿದ್ಭಾವ್ಯಂ ನಿಯಾಮಕಂ ॥ ೩ ॥
ಕಿಯತ್ ಕಸ್ಮೈ ಕಥಂ ದೇಯಂ ಸುಖಂ ದುಃಖಂ ಚ ವಾ ಮಮ ।
ನೈರ್ಘೃಣ್ಯಂ ವಿಷಮತ್ವಂ ಚ ಮಮ ನ ಸ್ಯಾತ್ಕಥಂತ್ವಿತಿ ॥ ೪ ॥
ವಿಚಿಂತ್ಯ ಕಾರಣಂ ಚಕ್ರೇ ತಪೋದಾನಾತ್ಮಕಂ ಸುಖೇ ।
ಕಾರಣಸ್ಯ ವಿಚಿತ್ರತ್ವಾತ್ ಕಾರ್ಯೇ ವೈಚಿತ್ರ್ಯಮೀಕ್ಷ್ಯತೇ ॥ ೫ ॥
ವಿಪರ್ಯಯಂ ಹಿ ದುಃಖಸ್ಯ ಕಾರಣಂ ನಿರ್ಮಮೇ ಹರಿಃ ।

**ಸೂತರು ಹೇಳುತ್ತಾರೆ—**

ಅನಾದಿಕರ್ಮಣಾ-ಅನಾದಿಕರ್ಮದಿಂದ, ಬದ್ಧಾಃ-ಬದ್ಧರಾದ, ಜೀವಾಃ-ಜೀವರು, ಸರ್ವೇ-ಎಲ್ಲರೂ, ಸುಖೇಪ್ಸವಃ-ಸುಖಾಪೇಕ್ಷಿಗಳು (ಆಗಿರುತ್ತಾರೆ); ತತಃ-ಆದ್ದರಿಂದ (ಎಲ್ಲರೂ ಸುಖವನ್ನೇ ಇಚ್ಛಿಸುವುದರಿಂದ), ತೇಷಾಂ-ಅವರಿಗೆ ಸುಖದಾನೇ - ಸುಖಪ್ರದಾನಮಾಡುವುದರಲ್ಲಿ ಕಿಂಚಿತ್ -ಏನಾದರೊಂದು, ನಿಯಾಮಕಂ- ನಿಯಾಮಕಕಾರಣವು, ಭಾವ್ಯಂ-ಇರತಕ್ಕದ್ದು; ಕಸ್ಮೈ-ಯಾವ

---

(೧-೨). ಸೂತನು ಹೇಳುತ್ತಾನೆ:—ಸರ್ವಜೀವರೂ ಅನಾದಿ ಕರ್ಮದಿಂದ ಬದ್ಧರಾಗಿರುವರು; ಎಲ್ಲರೂ ಸುಖಾಪೇಕ್ಷಿಗಳೇ ಆಗಿರುತ್ತಾರೆ; ಅವರಿಗೆ ಸುಖವನ್ನು ಪ್ರದಾನಮಾಡುವ ವಿಷಯದಲ್ಲಿ ಯಾವುದಾದರೂ ನಿಯಮವಿರಬೇಕು; ಸುಖವನ್ನಾಗಲಿ, ದುಃಖವನ್ನಾಗಲಿ ಯಾರಿಗೆ, ಎಷ್ಟು ಪ್ರಮಾಣದಲ್ಲಿ ಮತ್ತು ಹೇಗೆ ಕೊಡುವುದೆಂಬ ನಿಯಮವಿಲ್ಲದಿದ್ದರೆ (ಸ್ವೇಚ್ಛೆಯಿಂದ ಪ್ರದಾನ ಮಾಡಿದರೆ) ನನಗೆ ವೈಷಮ್ಯ ಮತ್ತು ನೈರ್ಘೃಣ್ಯಗಳು ಪ್ರಾಪ್ತವಾಗಬಹುದು (ಸಮಾನ ಜೀವರಿಗೆ ನ್ಯೂನಾಧಿಕ ಸುಖದುಃಖಗಳನ್ನು ಕಾರಣವಿಲ್ಲದೇ ಕೊಡುವುದರಿಂದ) ನನ್ನಲ್ಲಿ ವೈಷಮ್ಯವೂ (ಪಕ್ಷಪಾತ ದೋಷವೂ) ನಿರ್ದಯನೆಂಬ ದೋಷವೂ

ಜೀವನಿಗೆ, ಸುಖಂ-ಸುಖವನ್ನೂ, ವಾ-ಅಥವಾ (ಮತ್ತು), ದುಃಖಂ ಚ-ದುಃಖ ವನ್ನೂ ಸಹ, ಕಿಯತ್-ಎಷ್ಟು (ಯಾವ ಪ್ರಮಾಣದಲ್ಲಿ), ಕಥಂ-ಹೇಗೆ (ಯಾವ ಪ್ರಕಾರದಿಂದ), ದೇಯಂ-ಕೊಡತಕ್ಕದ್ದು ಚ-ಮತ್ತು ಮಮ-ನನಗೆ (ಸುಖದುಃಖ ಪ್ರದನಾದ ನನಗೆ), ನೈರ್ಘೃಣ್ಯಂ-ನಿರ್ದಯತ್ವವೂ, ಚ-ಹಾಗೂ, ವಿಷಮತ್ವಂ-ವೈಷಮ್ಯವೂ, ಕಥಂ-ಹೇಗೆ, ನ ಸ್ಯಾತ್-ಉಂಟಾಗದಿರುತ್ತದೆ (ಈ ದೋಷಗಳ ಆರೋಪಣೆಗೆ ಅವಕಾಶವಿಲ್ಲದಿರಲು ಯಾವ ನಿಯಮವನ್ನನುಸರಿಸಲಿ?), ಇತಿ ತು - ಹೀಗೆಂದು, ವಿಚಿಂತ್ಯ - ವಿಚಾರಮಾಡಿ, ಸುಖೇ - ಸುಖದಾನ ವಿಷಯದಲ್ಲಿ (ಸುಖಪ್ರಾಪ್ತಿ ವಿಷಯದಲ್ಲಿ), ಕಾರಣಂ-ಕಾರಣವನ್ನು ತಪೋದಾನಾತ್ಮಕಂ-ತಪಸ್ಸು ಮತ್ತು ದಾನಗಳ ಅಧೀನವನ್ನಾಗಿ, ಚಕ್ರೇ-ಮಾಡಿದನು; ಕಾರಣಸ್ಯ-ಕಾರಣದ (ತಪಸ್ಸು ದಾನಗಳ), ವಿಚಿತ್ರತ್ವಾತ್-ಭೇದದಿಂದ (ವೈವಿಧ್ಯದಿಂದ), ಕಾರ್ಯೇ-ಕಾರ್ಯವಾದ ಸುಖದಲ್ಲಿ ವೈಚಿತ್ರ್ಯಂ-ವಿವಿಧತ್ವವು (ಜೀವರಲ್ಲಿ ಸುಖವೈವಿಧ್ಯವು), ಈಕ್ಷ್ಯತೇ-ಯೋಗ್ಯವೆಂದು ತಿಳಿಯಲಾಗುತ್ತದೆ; ವಿಪರ್ಯಯಂ-(ತಪಸ್ಸು ದಾನಗಳ) ಅಭಾವ ವನ್ನು (ಅವುಗಳಿಗೆ ವಿರುದ್ಧವಾದ ಪ್ರವೃತ್ತಿಯನ್ನು), ದುಃಖಸ್ಯ-ದುಃಖಪ್ರಾಪ್ತಿಯ, ಕಾರಣಂ-ಕಾರಣವನ್ನಾಗಿ, ಹರಿಃ-ಶ್ರೀಹರಿಯು, ನಿರ್ಮಮೇ-ಮಾಡಿದನು (ಹೀಗೆ ವ್ಯವಸ್ಥೆಗೊಳಿಸಿದನು).

**ಮನಸಾ ಕರ್ಮಣಾ ವಾಚಾ ಪುಣ್ಯಂ ಕರ್ಮ ತಪಃ ಸ್ಮೃತಂ ॥ ೬ ॥**
**ಸ್ವಧನೇ ಪರಸತ್ತಾಯಾಃ ಕೃತಿರ್ದಾನಂ ಪ್ರಕೀರ್ತಿತಂ ।**

---

ಆರೋಪಿಸಲ್ಪಡಲು, ಅವಕಾಶವಾಗುತ್ತದೆ; ಹೀಗಾಗದಿರಲೆಂಬ ಕಾರಣದಿಂದ, ಸುಖದುಃಖಾದಿ ಸರ್ವಾನುಭವಪ್ರದನಾದ ಶ್ರೀವಿಷ್ಣುವು, ವಿಚಾರಮಾಡಿ, ಆಯಾ ಜೀವರ ತಪಸ್ಸು ದಾನಗಳನ್ನು ಸುಖಪ್ರದಾನದ ನಿಮಿತ್ತ ಕಾರಣವನ್ನಾಗಿಯೂ, ಇವುಗಳಿಗೆ ವಿರುದ್ಧವಾದ ಪ್ರವೃತ್ತಿಯನ್ನು ದುಃಖದಾನದ ಕಾರಣವನ್ನಾಗಿಯೂ, ಮಾಡಿದನು; ಸುಖದುಃಖಗಳಿಗೆ ಕಾರಣಗಳಾದ ತಪಸ್ಸು ದಾನಗಳ ವೈಚಿತ್ರ್ಯ (ವಿವಿಧತ್ವ)ದಿಂದ, ಅವುಗಳ ಕಾರ್ಯ(ಫಲ)ವಾದ ಸುಖದುಃಖಗಳಲ್ಲಿ ವೈಚಿತ್ರ್ಯವು ಯುಕ್ತಿಯುಕ್ತವಾಗಿ (ಯೋಗ್ಯವೆನಿಸಿ) ತನ್ನಲ್ಲಿ ದೋಷಾರೋಪಣೆಗೆ ಅವಕಾಶವಿರುವುದಿಲ್ಲವೆಂಬ ಕಾರಣದಿಂದ ಈ ವ್ಯವಸ್ಥೆಯನ್ನು ಮಾಡಿದನು (೩-೫). ಮನದಿಂದಲೂ, ನುಡಿಯಿಂದಲೂ, ದೇಹದಿಂದಲೂ, ಆಚರಿಸುವ ಪುಣ್ಯಕರ್ಮವು (ಶಾಸ್ತ್ರೋಕ್ತ ಸ್ವಧರ್ಮಾಚರಣೆಯು), ತಪಸ್ಸೆಂದು ಕರೆಯಲ್ಪಡುತ್ತದೆ;[1]

---

1. ತ್ರಿಕರಣಗಳಿಂದ ಆಚರಿಸಲ್ಪಡಬೇಕಾದ ಸತ್ಕರ್ಮಗಳು, ತ್ರಿವಿಧ ತಪಸ್ಸುಗಳೆಂದು ಹೇಳಲಾಗಿವೆ; ಈ ತ್ರಿವಿಧ ತಪಸ್ಸುಗಳ ವಿವರವನ್ನು ಶ್ರೀಮದ್ಭಗವದ್ಗೀತೆಯಲ್ಲಿ ಕಾಣುತ್ತೇವೆ; ಇವು ಸ್ವಯೋಗ್ಯವಾದ ವಿಹಿತಕರ್ಮಾನುಷ್ಠಾನಗಳನ್ನು ಒಳಗೊಂಡಿವೆ.

ತಪಸ್ಸು ಮತ್ತು ದಾನಗಳ ಲಕ್ಷಣವನ್ನು ವಿವರಿಸುತ್ತಾರೆ:—

ಮನಸಾ-ಮನಸ್ಸಿನಿಂದ, ಕರ್ಮಣಾ-ದೇಹದಿಂದ, ವಾಚಾ-ನುಡಿಯಿಂದ, (ತ್ರಿಕರಣಗಳಿಂದ ಸಂಭವಿಸುವ), ಪುಣ್ಯಂ ಕರ್ಮ-ಸತ್ಕರ್ಮವು (ಸ್ವವಿಹಿತ ಕರ್ಮವು), ತಪಃ-ತಪಸ್ಸೆಂದು, ಸ್ಮೃತಂ-ತಿಳಿಯಲ್ಪಟ್ಟಿದೆ ; ಸ್ವಧನೇ - (ನ್ಯಾಯಾರ್ಜಿತವಾದ) ತನ್ನ ಧನದಲ್ಲಿ ಪರಸತ್ತಾಯಾಃ-ಪರಸ್ವದ (ಅನ್ಯ ಸ್ವಾಮಿತ್ವದ-ಪರಾಧೀನಗೊಳಿಸುವ), ಕೃತಿಃ-ಕೃತಿಯು, (ಕರ್ಮವು), ದಾನಂ-ದಾನವೆಂದು, ಪ್ರಕೀರ್ತಿತಂ- ಪ್ರಸಿದ್ಧವಾಗಿದೆ (ಹೇಳಲ್ಪಟ್ಟಿದೆ).

ಉಪದೇಷ್ಟಾ ಯದಾ ನ ಸ್ಯಾತ್ತದಾ ಸ್ಯಾತ್ತು ಕಥಂ ತಪಃ ॥ ೭ ॥
ಪ್ರತಿಗ್ರಾಹೀ ಯದಾ ನ ಸ್ಯಾತ್ತದಾ ದಾನಂ ಕಥಂ ಭವೇತ್ ।
ಇತಿ ದ್ವಯಸ್ಯ ಸಿದ್ಧ್ಯರ್ಥಂ ಹರಿರ್ವಿಪ್ರಾನ್ ವಿನಿರ್ಮಮೇ ॥ ೮ ॥

---

ನ್ಯಾಯಾರ್ಜಿತವಾದ ಸ್ವಧನದಲ್ಲಿ ಅನ್ಯನಿಗೆ ಸ್ವಾಮಿತ್ವವನ್ನು ಕೊಡುವುದು, (ಸ್ವಧನವನ್ನು ಪರಾಧೀನಗೊಳಿಸುವುದು) ದಾನವೆನಿಸುತ್ತದೆ (೬). ಉಪದೇಶಕರಿಲ್ಲದೇ ತಪಸ್ಸಾಗಲೀ, ಸ್ವೀಕರಿಸುವವರಿಲ್ಲದೇ ದಾನವಾಗಲಿ ಸಿದ್ಧಿಸುವುದಿಲ್ಲ ಈ ಎರಡರ ಸಿದ್ಧಿಗಾಗಿ, ಶ್ರೀಹರಿಯು, ಬ್ರಾಹ್ಮಣರನ್ನು ನಿರ್ಮಿಸಿದನು—ಎಂದರೆ

---

'ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥' (ಗೀತಾ)

'ದೇವತೆಗಳು, ಬ್ರಾಹ್ಮಣರು, ಗುರುಗಳು ಮತ್ತು ಜ್ಞಾನಿಗಳು, ಇವರುಗಳನ್ನು ವಿಧ್ಯುಕ್ತ ಪ್ರಕಾರವಾಗಿ ಪೂಜಿಸುವುದು, ಬಹಿರಂಗ ಅಂತರಂಗ ಶುದ್ಧಿ, ಗುಹ್ಯೇಂದ್ರಿಯ ನಿಯಮನ, ಮನ ನುಡಿಗಳಿಗೆ ಅನುಸಾರವಾದ ಆಚರಣೆ, ಪ್ರಾಣಿಗಳನ್ನು ಹಿಂಸಿಸದಿರುವುದು, ಇವು ಶಾರೀರಕ ತಪಸ್ಸೆಂದು ಕರೆಸಲ್ಪಡುತ್ತವೆ.'

'ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥' (ಗೀತಾ)

'ಅನ್ಯರನ್ನು ಉದ್ವೇಗಗೊಳಿಸದ ನುಡಿ, ಯಥಾರ್ಥ ಭಾಷಣ, ಪ್ರಿಯವೂ ಹಿತಕರವೂ ಆದ ಮಾತು, ಗುರೂಪದೇಶಾನುಸಾರ ವೇದಗಳನ್ನು ಪುನರಾವೃತ್ತಿ (ಮತ್ತೆ ಮತ್ತೆ ಉಚ್ಚಾರ) ಮಾಡುವುದು, ಇದೆಲ್ಲವೂ ವಾಙ್ಮಯತಪಸ್ಸೆನಿಸುತ್ತದೆ.'

ಮನಃಪ್ರಸಾದಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ (ಗೀತಾ)

'ಪ್ರಯಾಸವಿಲ್ಲದೇ ಮನಸ್ಸು ವಿಷಯಗಳಲ್ಲಿ ಪ್ರವರ್ತಿಸದಿರುವುದು (ಪ್ರಸಾದ), ಉಗ್ರತ್ವ (ಕ್ರೂರತನ)ವನ್ನು ಬಿಡುವುದು (ಸೌಮ್ಯತ್ವ), ವಿಚಾರಪರವಾಗಿರುವುದು (ಮೌನ), ಪರಮಾತ್ಮನಲ್ಲಿ ಮನಸ್ಸನ್ನು ವಿಶೇಷವಾಗಿ ನಿಲ್ಲಿಸುವುದು (ಆತ್ಮನಿಗ್ರಹ), ವಿವಿಧ ಕಾಮಗಳ ತ್ಯಾಗ (ಭಾವಸಂಶುದ್ಧಿ), ಇದೆಲ್ಲ ಮಾನಸತಪಸ್ಸೆಂದು ಹೇಳಲ್ಪಡುತ್ತದೆ.'

ಉಪದೇಷ್ಟಾ-ಉಪದೇಶಕನು, ಯದಾ-ಯಾವಾಗ, ನ ಸ್ಯಾತ್-ಇರುವುದಿಲ್ಲವೋ, ತದಾ-ಆಗ, ಕಥಂ-ಹೇಗೆ, ತಪಃ-ತಪಸ್ಸು ಸ್ಯಾತ್-ಸಂಭವಿಸುತ್ತದೆ; ತು-ಮತ್ತು ಪ್ರತಿಗ್ರಾಹೀ-ಪ್ರತಿಗ್ರಾಹಿಯು (ದಾನವನ್ನು ಸ್ವೀಕರಿಸುವವನು), ಯದಾ ನ ಸ್ಯಾತ್-ಯಾವಾಗ ಇರುವುದಿಲ್ಲವೋ, ತದಾ-ಆಗ, ದಾನಂ-ದಾನವು, ಕಥಂ-ಹೇಗೆ, ಭವೇತ್ - ಸಂಭವಿಸುತ್ತದೆ; ಇತಿ-ಹೀಗಿರುವುದರಿಂದ, ದ್ವಯಸ್ಯ-(ಈ) ಎರಡರ (ತಪಸ್ಸು ದಾನಗಳ), ಸಿದ್ಧ್ಯರ್ಥಂ-ಸಿದ್ಧಿಗಾಗಿ, ಹರಿಃ-ಶ್ರೀಹರಿಯು, ವಿಪ್ರಾನ್-ಬ್ರಾಹ್ಮಣರನ್ನು ವಿನಿರ್ಮಮೇ-ನಿರ್ಮಾಣಮಾಡಿದನು (ಬ್ರಾಹ್ಮಣರನ್ನು ಉಪದೇಶ ಮತ್ತು ಪ್ರತಿಗ್ರಹದಲ್ಲಿ ತೊಡಗಿಸಿದನು—ಅಧಿಕಾರಿಗಳನ್ನಾಗಿ ಮಾಡಿದನು).

**ಉಪಾದಿಶೇತ್ ಕಥಂ ಸಾಕ್ಷಾತ್ ಪ್ರತಿಗೃಹ್ಣೀತ ವಾ ಸ್ವಯಂ ।**
**ಅತೋ ಲೋಕೋಪಕಾರಾರ್ಥಂ ಚಕಾರ ಪ್ರತಿಮಾಶ್ಚಲಾಃ ॥ ೯ ॥**

ಸಾಕ್ಷಾತ್-(ಶ್ರೀಹರಿಯು) ಪ್ರತ್ಯಕ್ಷವಾಗಿ, ಕಥಂ-ಹೇಗೆ, ಉಪಾದಿಶೇತ್-(ಸರ್ವರಿಗೂ ಗುರುವಾಗಿ ಬಂದು) ಉಪದೇಶ ಮಾಡುವನು?[1] ವಾ-ಅಥವಾ ಸ್ವಯಂ-ತಾನೇ, ಪ್ರತಿಗೃಹ್ಣೀತ-(ದಾನವನ್ನು) ಸ್ವೀಕರಿಸುವನು? ಅತಃ-ಆದ್ದರಿಂದ, ಲೋಕೋಪಕಾರಾರ್ಥಂ-(ಸಾಧಕ ಪ್ರಜೆಗಳ) ಉಪಕಾರಕ್ಕಾಗಿ, ಚಲಾಃ-ಸಂಚರಿಸುವ, ಪ್ರತಿಮಾಃ-(ತನ್ನ) ಪ್ರತಿಮೆಗಳನ್ನು ಚಕಾರ-ಮಾಡಿದನು.

---

ಉಪದೇಶ ಮತ್ತು ಪ್ರತಿಗ್ರಹಗಳಿಗೆ ಅಧಿಕಾರಿಗಳನ್ನಾಗಿ ನೇಮಿಸಿದನು (೭-೮). ಶ್ರೀಹರಿಯು, ಸ್ವಯಂ, (ಸಾಕ್ಷಾತ್ತಾಗಿ) ಹೇಗೆ ಉಪದೇಶಕನೂ, ಸರ್ವರಿಂದ ದಾನ ಸ್ವೀಕಾರಮಾಡುವವನೂ ಆದಾನು? ಆದ್ದರಿಂದ, ಲೋಕೋಪಕಾರಾರ್ಥವಾಗಿ ತನ್ನ ಸ್ಥಾನದಲ್ಲಿದ್ದು ಉಭಯ ಕಾರ್ಯಗಳನ್ನು ನೆರವೇರಿಸಲು, ಬ್ರಾಹ್ಮಣರನ್ನು ತನ್ನ ಚಲಪ್ರತಿಮೆಗಳನ್ನಾಗಿ ಮಾಡಿದನು (ಬ್ರಾಹ್ಮಣರು ಶ್ರೀಹರಿಯ ಚಲಪ್ರತಿಮೆಗಳು—ಅವರಲ್ಲಿ ಶ್ರೀಹರಿಯು, ಪ್ರತಿಮೆಗಳಲ್ಲಿರುವಂತೆ ಸ್ಥಿತನಾಗಿರುತ್ತಾನೆ; ಬ್ರಾಹ್ಮಣರು ಸಂಚಾರಮಾಡುವ ಪ್ರತಿಮೆಗಳು) (೯). ಆ ಪ್ರತಿಮೆಗಳಾದರೋ (ಬ್ರಾಹ್ಮಣ

---

1. ಶ್ರೀಹರಿಯು, ಸ್ವಾನುಗ್ರಹವಿಲ್ಲದೇ ಪ್ರತ್ಯಕ್ಷನಾಗುವ ಸ್ವಭಾವದವನಲ್ಲ; ಅಸಂಖ್ಯ ಜೀವರಿಗೆ, ಅನಂತರೂಪಿಯಾದ ತಾನು, ಬಹುರೂಪಗಳಿಂದ ಉಪದೇಶಮಾಡಲಿಕ್ಕಾಗಲಿ, ಸರ್ವರಿಂದ ದಾನಸ್ವೀಕಾರಮಾಡಲಿಕ್ಕಾಗಿ, ಅಸಮರ್ಥನಲ್ಲ; ಈ ವಿಧವಾದ ಪ್ರತ್ಯಕ್ಷವಾದ ಅನುಗ್ರಹವನ್ನು ಹೊಂದಲು, ಸರ್ವಜೀವರೂ, ಅಧಿಕಾರಿಗಳಲ್ಲಿ (ಯೋಗ್ಯತೆಯುಳ್ಳವರಲ್ಲಿ); ಮೇಲಾಗಿ ಬ್ರಾಹ್ಮಣರಿಗೆ ಈ ಉಭಯಕಾರ್ಯಗಳನ್ನು ನಿರ್ವಹಿಸುವುದರಿಂದ, ಅವರ ಸ್ವಯೋಗ್ಯ ಗತಿಸಾಧಕವೂ ಆಗುವಂತೆ, ಚಲಪ್ರತಿಮೆಗಳನ್ನಾಗಿ ಮಾಡಿದನೆಂದು ತಿಳಿಯಬೇಕು; (ಬ್ರಾಹ್ಮಣರಲ್ಲಿ ತಾನು ವಿಶೇಷ ಸನ್ನಿಹಿತನಾಗಿ ನಿಂತು ಆ ಕಾರ್ಯಗಳನ್ನು ನಿರ್ವಹಿಸುವುದರಿಂದ, ಬ್ರಾಹ್ಮಣರು ಶ್ರೀಹರಿಯ ಪ್ರತಿಮೆಗಳು).

**ಅಸಂತುಷ್ಟಾಶ್ಚ ತಾಃ ಪ್ರಾಯಸ್ತಥಾ ಪ್ರಾಯೇಣ ನಿರ್ಧನಾಃ ।**
**ನ ತೃಪ್ತಃ ಪ್ರತಿಗೃಹ್ಣೀತ ನಿರಾಶೋ ನ ವದೇದಪಿ ॥ ೧೦ ॥**
**ಅತ ಆವಶ್ಯಕತ್ವೇನ ಕರ್ತವ್ಯಂ ಹರಿಣಾ ಕೃತಂ ।**
**ತಪಸ್ತು ಪೂರ್ವಮೇವೋಕ್ತಂ ದಾನಪಾತ್ರತ್ವಮುಚ್ಯತೇ ॥ ೧೧ ॥**

ತಾಃ-ಆ ಪ್ರತಿಮೆಗಳು (ಬ್ರಾಹ್ಮಣರು), ಪ್ರಾಯಃ-ಬಹುಮಾಗಿ, ಅಸಂತುಷ್ಟಾಃ ಚ-ಅತೃಪ್ತರೇ (ಆಗಿರುವರು); ತಥಾ-ಮತ್ತು ಪ್ರಾಯೇಣ-ಬಹುಶಃ, ನಿರ್ಧನಾಃ-ದರಿದ್ರರೇ (ಆಗಿರುವರು); ತೃಪ್ತ-ತೃಪ್ತನಾದವನು (ಅಧಿಕ ಧನಾದಿಗಳ ಇಚ್ಛೆ ಇಲ್ಲದವನು), ನ ಪ್ರತಿಗೃಹ್ಣೀತ-ದಾನವನ್ನು ಸ್ವೀಕರಿಸುವುದಿಲ್ಲ; ಅಪಿ-ಹಾಗೂ, ನಿರಾಶಃ-ಆಶಾರಹಿತನು, ನ ವದೇತ್-ಉಪದೇಶ ಮಾಡುವುದಿಲ್ಲ (ಮಾತನಾಡುವುದಿಲ್ಲ-ಮೌನವಾಗಿರುತ್ತಾನೆ); ಅತಃ-ಆದ್ದರಿಂದ, ಆವಶ್ಯಕತ್ವೇನ-ಅವಶ್ಯಕವಾದ್ದರಿಂದ, ಕರ್ತವ್ಯಂ-(ತಪಸ್ಸು ದಾನಗಳ ಪ್ರಚಾರದ) ಕರ್ತವ್ಯವು, ಹರಿಣಾ- ಶ್ರೀಹರಿಯಿಂದ, ಕೃತಂ-ಮಾಡಲ್ಪಟ್ಟಿತು; ತಪಃ ತು-ತಪಸ್ಸಾದರೋ, ಪೂರ್ವಮೇವ-ಈ ಮೊದಲೇ, ಉಕ್ತಂ-ಹೇಳಲ್ಪಟ್ಟಿತು; ದಾನ ಪಾತ್ರತ್ವಂ-ದಾನಸ್ವೀಕಾರದ ಅರ್ಹತೆಯು, ಉಚ್ಯತೇ-ಹೇಳಲ್ಪಡುತ್ತದೆ.

**ತಪಃಸ್ವಾಧ್ಯಾಯವಿದ್ಯಾಭಿರ್ವಿಪ್ರಃ ಪಾತ್ರತ್ವಮಶ್ನುತೇ ।**
**ದುರ್ಲಭಂ ತ್ರಯಮೇಕತ್ರ ಕುತ್ರಚಿತ್ ಸುಲಭಂ ದ್ವಯಂ ॥ ೧೨ ॥**
**ಏಕೈಕಸ್ಮಾದಪಿ ಪ್ರೋಕ್ತಂ ಪಾತ್ರತ್ವಂ ನಾನ್ಯಥಾ ಹಿ ತತ್ ।**

ವಿಪ್ರಃ - ಬ್ರಾಹ್ಮಣನು, ತಪಃಸ್ವಾಧ್ಯಾಯವಿದ್ಯಾಭಿಃ - ತಪಸ್ಸು, ಸ್ವಾಧ್ಯಾಯ (ವೇದಾಧ್ಯಯನ), ಅಧ್ಯಾತ್ಮವಿದ್ಯೆಗಳಿಂದ, ಪಾತ್ರತ್ವಂ-ದಾನಸ್ವೀಕಾರಾರ್ಹತೆಯನ್ನು

---

ರಾದರೋ) ಪ್ರಾಯಃ ಅತೃಪ್ತರು ಮತ್ತು ನಿರ್ಧನರು; ತೃಪ್ತನು ದಾನವನ್ನು ಸ್ವೀಕರಿಸುವುದಿಲ್ಲ—ಆಶೆಗಳನ್ನು ಪರಿತ್ಯಜಿಸಿದವನು ಉಪದೇಶವನ್ನೂ ಮಾಡುವುದಿಲ್ಲ[1] (ಇದು ಸಹಜವಾದ ಮಾನವ ನಡವಳಿಕೆಯು); ಆದ್ದರಿಂದ, ಶ್ರೀಹರಿಯು, ಅವಶ್ಯಕವಾಗಿ ಮಾಡಬೇಕಾದ ಕರ್ತವ್ಯವನ್ನು ಮಾಡಿರುವನು (ಬ್ರಾಹ್ಮಣರನ್ನು ಅತೃಪ್ತರನ್ನಾಗಿಯೂ ದರಿದ್ರರನ್ನಾಗಿಯೂ ಇಡುವನು) : ತಪಸ್ಸಿನ ವಿಷಯವು (೬ನೇ ಶ್ಲೋಕದಲ್ಲಿ) ಈ ಮೊದಲು ಹೇಳಲಾಗಿದೆ; ದಾನಪಾತ್ರರು ಯಾರೆಂಬುದನ್ನು (ದಾನಸ್ವೀಕಾರದ ಅರ್ಹತೆಯನ್ನು) ಈಗ ಹೇಳುತ್ತೇನೆ (೧೦-೧೧). ತಪಸ್ಸು, ವೇದಾಧ್ಯಯನ,

1. ಕೀರ್ತಿ ಧನಾದಿಗಳ ಆಶೆಯನ್ನು ಪರಿತ್ಯಜಿಸಿದ ಬ್ರಾಹ್ಮಣನು, ಪ್ರಾಯಃ, (ವಿಶೇಷ ಪ್ರಾರ್ಥನಾದಿ ನಿಮಿತ್ತದಿಂದಾಗುವ ಶ್ರೀಹರಿಪ್ರೇರಣೆಯಿಲ್ಲದರೇ) ಉಪದೇಶಿಸುವ ಕಾರ್ಯದಲ್ಲಿ ತೊಡಗುವುದಿಲ್ಲ.

ಅಶ್ನುತೇ-ಹೊಂದುತ್ತಾನೆ; ತ್ರಯಂ-ಈ ಮೂರು (ತಪಃ ಸ್ವಾಧ್ಯಾಯ ವಿದ್ಯೆಗಳು), ಏಕತ್ರ-ಒಬ್ಬನಲ್ಲಿ ದುರ್ಲಭಂ-ದೊರೆಯುವುದು ಕಷ್ಟವಾದುದು; ಕುತ್ರಚಿತ್-ಕೆಲವರಲ್ಲಿ ಮಾತ್ರ, ದ್ವಯಂ-(ಈ ಮೂರರಲ್ಲಿ) ಎರಡು, ಸುಲಭಂ-ದೊರೆಯುತ್ತವೆ; ಏಕೈಕಸ್ಮಾತ್ ಅಪಿ-ಈ ಮೂರರಲ್ಲಿ ಒಂದೊಂದರಿಂದ ಸಹ (ಯಾವುದೊಂದು ಇದ್ದರೂ), ಪಾತ್ರತ್ವಂ-ದಾನಪಾತ್ರತ್ವವು, ಪ್ರೋಕ್ತಂ- (ಉಂಟೆಂದು) ಹೇಳಲ್ಪಡುತ್ತದೆ; ತತ್-ಅದು (ಪಾತ್ರತ್ವವೆಂಬುದು), ಅನ್ಯಥಾ ನ-ಬೇರೆ ವಿಧವಾದುದಲ್ಲ.

**ಅನ್ನಸ್ಯ ಕ್ಷುಧಿತಂ ಪಾತ್ರಂ ಪಾನೀಯಸ್ಯ ಪಿಪಾಸಿತಂ ॥ ೧೩ ॥**
**ನ ಹಿ ಜಾತಿವಿವೇಕೋತ್ರ ವಿಶೇಷಾತ್‌ಬ್ರಾಹ್ಮಣಃ ಸ್ಮೃತಃ ।**

ಅನ್ನಸ್ಯ-ಅನ್ನಕ್ಕೆ (ಅನ್ನದಾನಕ್ಕೆ), ಕ್ಷುಧಿತಂ-ಹಸಿದಿರುವುದು, ಪಾತ್ರಂ-ಪಾತ್ರನನ್ನಾಗಿಸುತ್ತದೆ; ಪಾನೀಯಸ್ಯ-ಜಲಾದಿ ಪಾನೀಯದಾನಕ್ಕೆ ಪಿಪಾಸಿತಂ (ಪಾತ್ರಂ)-ದಾಹವು (ನೀರಡಿಕೆಯು), ಪಾತ್ರತ್ವವನ್ನುಂಟುಮಾಡುತ್ತದೆ; ಅತ್ರ-ಈ ವಿಷಯದಲ್ಲಿ (ಅನ್ನಪಾನಗಳ ದಾನವಿಷಯದಲ್ಲಿ), ಜಾತಿವಿವೇಕಃ-ಜಾತಿಭೇದಗಳನ್ನು ಗಮನಿಸುವುದು (ಗಮನಿಸಬೇಕೆಂಬ), ನ ಹಿ-ಇಲ್ಲ (ನಿಯಮವಿಲ್ಲ); (ಹೀಗಿದ್ದರೂ) ವಿಶೇಷಾತ್-ವಿಶೇಷವಾಗಿ, (ಅಧಿಕ್ಯದಿಂದ), ಬ್ರಾಹ್ಮಣಃ-ಬ್ರಾಹ್ಮಣನು ಅಧಿಕಪಾತ್ರನೆಂದು, ಸ್ಮೃತಃ-(ಜ್ಞಾನಿಗಳಿಂದ) ತಿಳಿಯಲ್ಪಟ್ಟಿರುವನು.

**ಪಶುವಸ್ತ್ರಧನಾದೀನಾಂ ಪಾತ್ರಂ ಸ್ಯಾತ್ತಪ ಆದಿಮತ್ ॥ ೧೪ ॥**
**ವಿಶೇಷಸ್ತತ್ರ ವಿಜ್ಞೇಯಃ ಕ್ರಮೇಣ ತಪ ಆದಿಷು ।**

ಪಶುವಸ್ತ್ರಧನಾದೀನಾಂ-ಪಶು, ವಸ್ತ್ರ ಧನಾದಿಗಳಿಗೆ (ಅವುಗಳ ದಾನಕ್ಕೆ), ತಪ ಆದಿಮತ್ - (ಹಸಿವೆ ತೃಷೆಗಳಂತಲ್ಲದೆ) ತಪಸ್ಸು ಮೊದಲಾದವುಗಳುಳ್ಳವನೇ, ಪಾತ್ರಂ ಸ್ಯಾತ್-ಪಾತ್ರನಾಗುತ್ತಾನೆ (ದಾನ ಸ್ವೀಕರಿಸುವ ಅರ್ಹತೆಯುಳ್ಳವನಾಗುತ್ತಾನೆ);

---

ತತ್ತ್ವವಿದ್ಯೆಗಳಿಂದ ಬ್ರಾಹ್ಮಣನು ದಾನಪಾತ್ರನಾಗುತ್ತಾನೆ; ಈ ಮೂರೂ ಒಬ್ಬನಲ್ಲಿ ದೊರೆಯುವುದು ದುರ್ಲಭ; ಕೆಲವರಲ್ಲಿ ಇವುಗಳಲ್ಲಿ ಎರಡನ್ನು ಕಾಣಬಹುದು; ಈ ಮೂರರಲ್ಲಿ ಯಾವುದೊಂದಿದ್ದರೂ ಪಾತ್ರತ್ವವುಂಟೆಂದು ಹೇಳಲಾಗುತ್ತದೆ —ಅನ್ಯಥಾ ಪಾತ್ರತ್ವವಿಲ್ಲ (೧೨). ಅನ್ನವನ್ನು ಸ್ವೀಕರಿಸಲು, ಹಸಿದವನು ಪಾತ್ರನು; ಜಲಾದಿ ಪಾನವನ್ನು ಸ್ವೀಕರಿಸಲು ನೀರಡಿಸಿದವನು ಪಾತ್ರನು; ಅನ್ನಪಾನಗಳ ದಾನವಿಷಯದಲ್ಲಿ ಜಾತಿ ವಿವೇಕಕ್ಕೆ ಎಡೆಯಿಲ್ಲ (ಸ್ಥಾನವಿಲ್ಲ); ಹೀಗಿದ್ದರೂ ಈ ದಾನಗಳಿಗೆ ಬ್ರಾಹ್ಮಣನು ವಿಶೇಷ ಪಾತ್ರನೆಂದು ತಿಳಿಯಲ್ಪಟ್ಟಿರುವನು (೧೩). ಪಶು (ಗೋ ಮೊದಲಾದವು) ವಸ್ತ್ರ ಧನಾದಿಗಳ ದಾನ ವಿಷಯದಲ್ಲಿ ತಪಸ್ಸು ಮೊದಲಾದ ಗುಣಗಳೇ ಪಾತ್ರತ್ವ ಕಾರಣಗಳಾಗುತ್ತವೆ; ತಪಸ್ಸು, ಅಧ್ಯಯನ, ವಿದ್ಯೆಗಳಲ್ಲಿ ಇದೇ ಕ್ರಮದಿಂದ ಒಂದಕ್ಕಿಂತ ಮತ್ತೊಂದು ಶ್ರೇಷ್ಠವೆಂದು ತಿಳಿಯತಕ್ಕದ್ದು (೧೪).

ತಪ ಆದಿಷು-ತಪಸ್ಸು ಮೊದಲಾದವುಗಳಲ್ಲಿ, ತತ್ರ-ಪಾತ್ರತ್ವವಿಷಯದಲ್ಲಿ, ಕ್ರಮೇಣ-(ತಪಸ್ಸು, ಅಧ್ಯಯನ, ವಿದ್ಯೆಗಳಸ್ಸು) ಈ ಕ್ರಮದಿಂದ, ವಿಶೇಷಃ-ವಿಶೇಷವೆಂದು (ಒಂದಕ್ಕಿಂತ ಒಂದು ಶ್ರೇಷ್ಠವೆಂದು), ವಿಜ್ಞೇಯಃ-ತಿಳಿಯತಕ್ಕದ್ದು.

**ಮೋಕ್ಷೋಪಯೋಗಿ ಯಜ್ಞಾನಂ ಸಾ ಹಿ ವಿದ್ಯೇತಿ ಭಣ್ಯತೇ ॥ ೧೫ ॥**
**ವಿದ್ಯಾವಾನಧಿಕಸ್ತಸ್ಮಾಚ್ಛ್ರೌತಂ ಪಾತ್ರಂ ತತೋ ಹಿ ಸಃ ।**
**ವಿಪ್ರಾಣಾಮಪಿ ಪಾತ್ರಾಣಿ ವಿಪ್ರಾ ಏವ ಮಿಥಃ ಸ್ಮೃತಾಃ ॥ ೧೬ ॥**
**ತಾರತಮ್ಯಂ ತು ತತ್ರಾಪಿ ತಪ ಆದೇರ್ವಿಶೇಷತಃ ।**
**ವಿಚಾರೋತ್ರ ಬಹು ಪ್ರೋಕ್ತೋ ಧರಿಣ್ಯೈ ಹರಿಣಾ ಸ್ವಯಂ ॥ ೧೭ ॥**
**ಬ್ರಹ್ಮಣಾ ನಾರದಾದಿಭ್ಯಃ ಸ್ವಾಮಿನೇ ಶಂಭುನಾ ತಥಾ ।**
**ತಸ್ಮಾತ್ಸರ್ವಪ್ರಯತ್ನೇನ ಪಾತ್ರೇ ದಾನಂ ಸಮಾಚರೇತ್ ॥ ೧೮ ॥**

ಯತ್ ಜ್ಞಾನಂ-ಯಾವ ಜ್ಞಾನವು, ಮೋಕ್ಷೋಪಯೋಗಿ-ಮೋಕ್ಷ ಸಂಪಾದನೆಗೆ ಉಪಯುಕ್ತವಾಗುವುದೋ, ಸಾ ವಿದ್ಯಾ ಇತಿ-ಅದೇ ವಿದ್ಯೆಯೆಂದು, ಭಣ್ಯತೇ ಹಿ-(ಶಾಸ್ತ್ರಗಳಲ್ಲಿ) ಹೇಳಲ್ಪಡುತ್ತದೆ (ತತ್ರ-ಸತ್ಪಾತ್ರರ ಮಧ್ಯದಲ್ಲಿ); ತಸ್ಮಾತ್-ಈ ಕಾರಣದಿಂದ (ವಿದ್ಯೆಯುಳ್ಳವನಾದ್ದರಿಂದ), ವಿದ್ಯಾವಾನ್-ವಿದ್ಯಾವಂತನು, ಅಧಿಕಃ-ಉತ್ತಮನು (ಶ್ರೇಷ್ಠನು); ತತಃ-ಅವನ ನಂತರ, ಶ್ರೌತಂ - ವೇದಸಂಬಂಧವಾದ (ವೇದಾಧ್ಯಯನವುಳ್ಳ), ಪಾತ್ರಂ-ಪಾತ್ರತ್ವವು (ಶ್ರೇಷ್ಠವು); (ತತಃ-ವಿದ್ಯಾವಂತನ ನಂತರ), ಸಃ-ಅಧ್ಯಯನವುಳ್ಳವನೇ, ಹಿ-ಉತ್ತಮನೆಂಬುದು ನಿಶ್ಚಯ; ವಿಪ್ರಾಣಾಂ ಅಪಿ-ಬ್ರಾಹ್ಮಣರಿಗಾದರೂ, ವಿಪ್ರಾಃ ಏವ-ಬ್ರಾಹ್ಮಣರೇ, ಮಿಥಃ-ಪರಸ್ಪರವಾಗಿ (ಒಬ್ಬರಿಗೊಬ್ಬರು), ಪಾತ್ರಾಣಿ-(ದಾನ) ಪಾತ್ರರೆಂದು, ಸ್ಮೃತಾಃ-ಹೇಳಲ್ಪಟ್ಟಿರುವರು;

---

ಮೋಕ್ಷೋಪಯೋಗಿಯಾದ ಜ್ಞಾನವೇ, (ಅಧ್ಯಾತ್ಮವಿದ್ಯೆಯೇ) ವಿದ್ಯೆಯೆಂದು ಹೇಳಲ್ಪಡುತ್ತದೆ (ಅನ್ಯ, ಲೌಕಿಕ ವಿಷಯಕಜ್ಞಾನವಲ್ಲ); ಪಾತ್ರತ್ವ ಗುಣಗಳಲ್ಲಿ ವಿದ್ಯೆಯೇ ಶ್ರೇಷ್ಠವು; ಆದ್ದರಿಂದ ವಿದ್ಯಾವಂತನೇ ಉತ್ತಮ ಪಾತ್ರನು; ಅವನ ನಂತರ ವೇದಾಧ್ಯಯನವುಳ್ಳನು ಪಾತ್ರನೆಂದು ತಿಳಿಯತಕ್ಕದ್ದು; ಬ್ರಾಹ್ಮಣರಿಂದ ದಾನಸ್ವೀಕಾರ ಮಾಡಲು, ಬ್ರಾಹ್ಮಣರೇ ಪಾತ್ರರು (ಅರ್ಹರು); ಪರಸ್ಪರವಾಗಿ ಬ್ರಾಹ್ಮಣರು ಒಬ್ಬರಿಗೆ ಮತ್ತೊಬ್ಬರು ಪಾತ್ರರಾಗಿರುತ್ತಾರೆ; ಅಲ್ಲಿಯೂ ತಪಸ್ಸು ಮೊದಲಾದ ಗುಣಗಳೇ ಪಾತ್ರರ ತಾರತಮ್ಯವನ್ನು ನಿಶ್ಚಯಿಸುತ್ತದೆ; ದಾನಪಾತ್ರತ್ವ ವಿಷಯದಲ್ಲಿ ಶ್ರೀಹರಿಯು ಧರಿಣೀದೇವಿಗೆ ಬಹು ಸೂಕ್ಷ್ಮ ವಿಷಯಗಳನ್ನು ಉಪದೇಶಿಸಿರುವನು; ಬ್ರಹ್ಮದೇವನು ನಾರದಾದಿಗಳಿಗೂ, ಶಿವನು (ತನ್ನ ಮಗನಾದ) ಕುಮಾರಸ್ವಾಮಿಗೂ ಈ ಪ್ರಮೇಯವನ್ನು ವಿಸ್ತಾರವಾಗಿ ಉಪದೇಶಿಸಿರುವರು; ಆದ್ದರಿಂದ, ಸರ್ವಪ್ರಯತ್ನದಿಂದ ಸತ್ಪಾತ್ರರಲ್ಲಿ ದಾನವನ್ನು ಮಾಡಬೇಕು (೧೫-೧೮). ಬಂದ ಬ್ರಾಹ್ಮಣನನ್ನು ಕಣ್ಣೆತ್ತಿ

ತತ್ರಾಪಿ-ಅಲ್ಲಿಯೂ, ತಪ ಆದೇ-ತಪಸ್ಸೇ ಮೊದಲಾದ ಗುಣಗಳ, ವಿಶೇಷತಃ-ವಿಶೇಷದಿಂದ, ತಾರತಮ್ಯಂ ತು- ಪಾತ್ರತಾರತಮ್ಯವು (ಇದ್ದೇ ಇರುತ್ತದೆ); ಅತ್ರ-ಈ ವಿಷಯದಲ್ಲಿ ಸ್ವಯಂ- ಸಾಕ್ಷಾತ್ತಾಗಿ, ಹರಿಣಾ-ಶ್ರೀಹರಿಯಿಂದಲೇ, ಧರಿಣ್ಯೈ-ಧರಿಣೀದೇವಿಗೋಸ್ಕರ, ವಿಚಾರಃ-ವಿವರವು, ಬಹು ಪ್ರೋಕ್ತ-ಬಹಳವಾಗಿ ಹೇಳಲ್ಪಟ್ಟಿದೆ; ತಥಾ-ಹಾಗೂ, ಬ್ರಹ್ಮಣಾ-ಬ್ರಹ್ಮದೇವನಿಂದ, ನಾರದಾದಿಭ್ಯಃ-ನಾರದಾದಿಗಳಿಗೂ, ಶಂಭುನಾ-ಶಿವನಿಂದ, ಸ್ವಾಮಿನೇ-(ತನ್ನ ಪುತ್ರನಾದ) ಕುಮಾರಸ್ವಾಮಿಗೂ (ಬಹು ಪ್ರೋಕ್ತ-ಬಹುವಾಗಿ, ವಿಸ್ತಾರವಾಗಿ ಹೇಳಲ್ಪಟ್ಟಿದೆ); ತಸ್ಮಾತ್-ಆದ್ದರಿಂದ (ಸತ್ಪಾತ್ರದಾನಮಹಿಮೆಯು ಅಗಾಧವಾದುದರಿಂದ), ಸರ್ವ ಪ್ರಯತ್ನೇನ - ಸರ್ವಪ್ರಯತ್ನದಿಂದ, ಪಾತ್ರೇ-ಸತ್ಪಾತ್ರನಲ್ಲಿ, ದಾನಂ-ದಾನವನ್ನು ಸಮಾಚರೇತ್- ಆಚರಿಸತಕ್ಕದ್ದು (ಮಾಡಬೇಕು).

ದೃಷ್ಟಿಂ ದದ್ಯಾನ್ಮನೋ ದದ್ಯಾದ್ವಾಚಂ ದದ್ಯಾಚ್ಚ ಸೂನೃತಾಂ ।
ಉತ್ಥಾಯ ಚಾಸನಂ ದೇಯಾದಿತ್ಯಾದೌ ವಿಪ್ರತೋಷಣಂ ॥ ೧೯ ॥
ಶಕ್ತ್ಯಾ ದಾನಂ ಪ್ರಕುರ್ವೀತ ಯಥಾಪಾತ್ರಂ ಯಥಾಧನಂ ।
ಯಥಾಶ್ರಿತತ್ವಸಂಬಂಧಂ ಯಥಾಪ್ರೀತಿ ಯಥಾಶ್ರಮಂ ॥ ೨೦ ॥
ಇತ್ಥಂ ದಾನಾನ್ನ ತೋಷಃ ಸ್ಯಾದ್ಯದಿ ವಿಪ್ರಸ್ಯ ಕರ್ಹಿಚಿತ್ ।
ತದಾ ಸಾಕ್ಷೀ ಹರಿಸ್ತಸ್ಮಾತ್ತುಷ್ಟೋ ದಾತರಿ ಜಾಯತೇ ॥ ೨೧ ॥

ದೃಷ್ಟಿಂ-ದೃಷ್ಟಿಯನ್ನು ದದ್ಯಾತ್-ಕೊಡಬೇಕು (ಕಣ್ಣಿನಿಂದ ನೋಡಬೇಕು), ಮನಃ ದದ್ಯಾತ್-ಮನಸ್ಸನ್ನು ಕೊಡಬೇಕು (ಪ್ರಸನ್ನಚಿತ್ತನಾಗಬೇಕು); ಚ-ಮತ್ತು ಸೂನೃತಾಂ-ಮೃದುವಾದ (ನಮ್ರತೆಯಿಂದ ಕೂಡಿದ), ವಾಚಂ-ನುಡಿಯನ್ನು ದದ್ಯಾತ್-ಕೊಡಬೇಕು (ಮೃದುವಾಗಿ ಮಾತನಾಡಬೇಕು); ಚ-ಹಾಗೂ, ಉತ್ಥಾಯ-ಮೇಲೆದ್ದು ಆಸನಂ-ಆಸನವನ್ನು ದೇಯಾತ್-ಕೊಡಬೇಕು; ಇತ್ಯಾದೌ-

---

ನೋಡಬೇಕು, ಮೃದುನುಡಿಯಬೇಕು, ಪ್ರಸನ್ನಮನಸ್ಕನಾಗಬೇಕು; ಮೇಲೆದ್ದು ಆಸನವನ್ನಿತ್ತು ಗೌರವಿಸಬೇಕು; ಈ ವಿಧವಾದ ನಡವಳಿಕೆಯಲ್ಲಿ ವಿಪ್ರ ತೋಷಣವಿದೆ—ಇವು ಬ್ರಾಹ್ಮಣನನ್ನು ಸಂತೋಷಗೊಳಿಸುವ (ಸುಲಭ ಮತ್ತು ಅವಶ್ಯಕವಾದ) ಸಾಧನಗಳು; ಸಹಾಯಾರ್ಥವಾಗಿ ಯಾಚಿಸಲು ಬಂದ ಬ್ರಾಹ್ಮಣನಿಗೆ ತನ್ನ ಶಕ್ತ್ಯನುಸಾರವಾದ ಧನಾದಿಗಳನ್ನು ದಾನಮಾಡಬೇಕು; ದಾನಮಾಡುವುದರಲ್ಲಿ ಪಾತ್ರನ (ಆ ಬ್ರಾಹ್ಮಣನ) ಯೋಗ್ಯತೆಯನ್ನು (ತಪಸ್ಸು ಮೊದಲಾದ ಪೂರ್ವೋಕ್ತಗುಣಗಳನ್ನು) ಗಮನಿಸಬೇಕು—ದಾನವು ಯೋಗ್ಯತಾನುಸಾರವಾಗಿರ ಬೇಕು; ದಾತನು ತನ್ನ ಧನಸಂಪತ್ತಿಯನ್ನೂ ಗಮನಿಸಬೇಕು; ದಾನವನ್ನು ಸ್ವೀಕರಿಸುವ ಬ್ರಾಹ್ಮಣನು ದಾತನ ಆಶ್ರಿತನಾಗಿದ್ದರೆ ಅಥವಾ ಅನ್ಯವಿಧದಿಂದ ಸಂಬಂಧವುಳ್ಳವ

ಈ ಮೊದಲಾದ್ದರಲ್ಲಿ (ನಡವಳಿಕೆಯಲ್ಲಿ), ವಿಪ್ರತೋಷಣಂ-ಬ್ರಾಹ್ಮಣನ ಪ್ರೀತಿಯು (ತುಷ್ಟಿಯು) (ಸಂಭವಿಸುತ್ತದೆ); ದಾನಂ-ದಾನವನ್ನು, ಶಕ್ತ್ಯಾ-ಸ್ವಶಕ್ತಿ ಯನ್ನನುಸರಿಸಿ, ಪ್ರಕುರ್ವೀತ-ಮಾಡಬೇಕು; (ಆ ದಾನವು) ಯಥಾಪಾತ್ರಂ-ಪಾತ್ರಾನುಗುಣವಾಗಿಯೂ (ಸ್ವೀಕರಿಸುವವನ ಅರ್ಹತೆಯನ್ನನುಸರಿಸಿಯೂ), ಯಥಾಧನಂ- ಕೊಡುವವನ ಸಂಪತ್ತಿಗನುಗುಣವಾಗಿಯೂ, ಯಥಾಶ್ರಿತತ್ವ ಸಂಬಂಧಂ-ದಾತನೊಡನೆ ಪಾತ್ರನಿಗಿರುವ ಆಶ್ರಿತತ್ವಸಂಬಂಧವನ್ನನುಲಕ್ಷಿಸಿಯೂ, ಯಥಾಪ್ರೀತಿ- (ದಾತನಿಗೆ ಪಾತ್ರನಲ್ಲಿರುವ) ಪ್ರೀತ್ಯನುಗುಣವಾಗಿಯೂ ಯಥಾಶ್ರಮಂ-(ಪಾತ್ರನ) ಆಶ್ರಮಾನುಗುಣವೂ, (ಆಗಿರಬೇಕು); ಇತ್ಥಂ-ಹೀಗೆ (ವಿವೇಕದಿಂದ), ದಾನಾತ್- (ಮಾಡುವ) ದಾನದಿಂದ, ಕರ್ಹಿಚಿತ್-ಹೇಗಾದರೂ (ಯಾವ ಸಂದರ್ಭದಲ್ಲಿ ಯಾಗಲಿ), ವಿಪ್ರಸ್ಯ-ಬ್ರಾಹ್ಮಣನಿಗೆ, ತೋಷಃ-ತೃಪ್ತಿಯು, ಯದಿ ನ ಸ್ಯಾತ್-ಒಂದು ಪಕ್ಷ ಆಗದಿದ್ದರೆ, ತದಾ-ಆಗ, ಸಾಕ್ಷೀ-ಸರ್ವಸಾಕ್ಷಿಯಾದ, ಹರಿಃ-ಶ್ರೀಹರಿಯು, ತಸ್ಮಾತ್-ಆ ದಾನದಿಂದ, ದಾತರಿ-ದಾತನಲ್ಲಿ(ದಾನ ಕೊಟ್ಟವನಲ್ಲಿ), ತುಷ್ಟಃ-ಪ್ರೀತನು, ಜಾಯತೇ- ಆಗುತ್ತಾನೆ.

**ಯತ್ರ ಕಾಲೇ ಯತ್ರ ದೇಶೇ ಲಭ್ಯಂತೇ ಬ್ರಾಹ್ಮಣಾ ಯಥಾ ।**
**ತಥೈವ ವಂದನೀಯಾಸ್ತೇ ಯತಸ್ತಾ ಹರಿಮೂರ್ತಯಃ ॥ ೨೨ ॥**
**ಹರಿಭಾವನಯಾ ತಸ್ಮಾತ್ ಪೂಜ್ಯಾಸ್ತೇ ಭಕ್ತಿಪೂರ್ವಕಂ ।**

ಯತ್ರ ಕಾಲೇ-ಯಾವ ಕಾಲದಲ್ಲಿ ಯತ್ರ ದೇಶೇ-ಯಾವ ದೇಶದಲ್ಲಿ ಯಥಾ-(ಹೇಗೆ) ಯಾವ ವಿಧದ, ಬ್ರಾಹ್ಮಣಾಃ-ಬ್ರಾಹ್ಮಣರು, ಲಭ್ಯಂತೇ- ದೊರೆಯುವರೋ, ತಥಾ-ಆ ವಿಧ ಬ್ರಾಹ್ಮಣರೇ (ಹಾಗೆ), ತೇ ಏವ-ಅವರೇ, ವಂದನೀಯಾಃ-ಪೂಜ್ಯರು (ನಮಸ್ಕಾರಾದಿಗಳಿಂದ ಸೇವಿಸಲರ್ಹರು); ಯತಃ- ಏಕೆಂದರೆ, ತಾಃ-ಅವರೇ, ಹರಿಮೂರ್ತಯಃ-ಶ್ರೀಹರಿಯ ಪ್ರತಿಮೆಗಳು (ಅವರಲ್ಲಿ

---

ನಾಗಿದ್ದರೆ, ಅದನ್ನೂ ಗಣನೆಗೆ ತಂದು ಯಥಾಯೋಗ್ಯವಾಗಿ ಕೊಡಬೇಕು; ಪಾತ್ರನಲ್ಲಿ ತನಗಿರುವ ಪ್ರೀತಿ ವಿಶ್ವಾಸಗಳನ್ನೂ ಗಮನಿಸಬೇಕು; ಪಾತ್ರನು (ಬ್ರಹ್ಮಚರ್ಯಾದಿ ಆಶ್ರಮಗಳಲ್ಲಿ) ಯಾವ ಆಶ್ರಮಕ್ಕೆ ಸೇರಿದವನೆಂಬುದನ್ನೂ ಪ್ರಧಾನವಾಗಿ ಲಕ್ಷಿಸಿ, ಆಶ್ರಮತಾರತಮ್ಯಾನುಗುಣವಾಗಿ ಕೊಡಬೇಕು; ಹೀಗೆ ವಿವೇಕದಿಂದ ಮಾಡುವ ದಾನದಿಂದ ಬ್ರಾಹ್ಮಣನಿಗೆ ತೃಪ್ತಿಯಾಗದಿದ್ದರೆ, ದಾತನಿಗೆ ಯಾವ ಕೊರತೆಯೂ ಇಲ್ಲ; ಆತನ ವಿಷಯದಲ್ಲಿ ಸರ್ವಸಾಕ್ಷಿಯಾದ ಶ್ರೀಹರಿಯು ಸುಪ್ರೀತನಾಗುತ್ತಾನೆ (೧೯-೨೧). ಯಾವ ಕಾಲ ದೇಶಗಳಲ್ಲಿ ಯಾವ ವಿಧದ ಬ್ರಾಹ್ಮಣನು ಲಭಿಸುವರೋ, ಅವರನ್ನೇ ಹರಿಭಾವನೆಯಿಂದ ಪೂಜಿಸಬೇಕು; ಬ್ರಾಹ್ಮಣರು ಶ್ರೀಹರಿಯ ಪ್ರತಿಮೆಗಳು—ಅವರಲ್ಲಿ ಶ್ರೀಹರಿಯು ಸದಾ ಸನ್ನಿಹಿತನಾಗಿರುತ್ತಾನೆ; ಆದ್ದರಿಂದ ಆ

ಶ್ರೀಹರಿಯು ಸನ್ನಿಹಿತನಾಗಿರುತ್ತಾನೆ); ತಸ್ಮಾತ್-ಆದ್ದರಿಂದ, ಭಕ್ತಿಪೂರ್ವಕಂ-ಭಕ್ತಿಯಿಂದ, ತೇ-ಅವರು (ಆಯಾ ಕಾಲ ದೇಶದಲ್ಲಿ ಲಭಿಸುವ ಬ್ರಾಹ್ಮಣರು), ಹರಿಭಾವನಯಾ-ಶ್ರೀಹರಿಯೇ ಬಂದಿರುವನೆಂಬ ಭಾವನೆಯಿಂದ (ಅಂತರ್ಯಾಮಿಯಾದ ಶ್ರೀಹರಿಯನ್ನೇ ಪೂಜಿಸುತ್ತಿರುವನೆಂದು ಭಾವಿಸಿ), ಪೂಜ್ಯಾಃ-ಪೂಜಿಸಲ್ಪಡಲು ಅರ್ಹರಾಗಿರುತ್ತಾರೆ.

**ಯಃ ಕೋಪಿ ದೇವಂ ತುಷ್ಯೇತ ವಿಪ್ರಾಣಾಮೇವ ತೋಷಣಾತ್ ॥ ೨೩**
**ಪಿತರೋಽಪಿ ಹಿ ತುಷ್ಯಂತಿ ಭೂತಾಃ ಪ್ರೇತಾಶ್ಚ ಸರ್ವಶಃ ।**

ಯಃ ಕಃ ಅಪಿ-ಯಾವನೊಬ್ಬ ಪುರುಷನಾಗಲಿ, ವಿಪ್ರಾಣಾಂ-ಬ್ರಾಹ್ಮಣರ, ತೋಷಣಾತ್-ತುಷ್ಟಿಯಿಂದ (ಬ್ರಾಹ್ಮಣರನ್ನು ತೃಪ್ತಿಗೊಳಿಸಿ), ದೇವಂ-ಶ್ರೀಹರಿಯನ್ನು ತುಷ್ಯೇತ - ಸಂತೋಷಗೊಳಿಸುತ್ತಾನೆಯೋ (ಅದರಿಂದ-ಶ್ರೀಹರಿತೋಷಣದಿಂದ), ಪಿತರಃ ಅಪಿ-(ಆತನ) ಪಿತೃಗಳೂ, ತುಷ್ಯಂತಿ ಹಿ-ತೃಪ್ತರಾಗುವರೆಂಬುದು ನಿಶ್ಚಯ; ಚ-ಮತ್ತು (ಅದೇ ಹರಿತೋಷಣದಿಂದ), ಸರ್ವಶಃ-ಸಮಸ್ತ ಭೂತಾಃ-ಪ್ರಾಣಿಗಳೂ, ಪ್ರೇತಾಃ-ಮೃತರಾದವರೂ (ಕರ್ಮಾನುಸಾರವಾದ ಮುಂದಿನ ದೇಹವನ್ನು ಹೊಂದುವ ಮೊದಲು, ಪ್ರೇತದೇಹದಲ್ಲಿದ್ದರೆ, ಅವರೂ), ಪ್ರೀತರಾಗುತ್ತಾರೆ.[1]

---

ಬ್ರಾಹ್ಮಣರನ್ನೇ ಭಕ್ತಿಪೂರ್ವಕ ಪೂಜಿಸಬೇಕು—ಶ್ರೇಷ್ಠ ಬ್ರಾಹ್ಮಣರು ದೊರೆಯಲಿಲ್ಲವೆಂದು ಬ್ರಾಹ್ಮಣಪೂಜೆಯನ್ನೇ ನಿಲ್ಲಿಸಕೂಡದು (೨೨). ಯಾವನೊಬ್ಬ ಪುರುಷನೇ ಆಗಲಿ, ಬ್ರಾಹ್ಮಣರನ್ನು ಸಂತೋಷಗೊಳಿಸುವುದರಿಂದ, ಶ್ರೀಹರಿಪ್ರೀತಿಯನ್ನು ಗಳಿಸಿದರೆ, ಆತನ ಪಿತೃಗಳೂ ಅದರಿಂದ ತೃಪ್ತರಾಗುತ್ತಾರೆ; ಸಕಲಪ್ರಾಣಿಗಳೂ ತೃಪ್ತರಾಗುತ್ತಾರೆ—ಆತನ ಪಿತೃಗಳು ಕರ್ಮಾನುಸಾರವಾದ ಅನ್ಯದೇಹಗಳಲ್ಲಿರಲಿ ಅಥವಾ ಇನ್ನೂ ಪ್ರೇತದೇಹದಲ್ಲಿರಲಿ, ಅಲ್ಲಲ್ಲಿ ಅವರೆಲ್ಲರೂ (ಬ್ರಾಹ್ಮಣತೃಪ್ತಿಯಿಂದ) ತೃಪ್ತರಾಗುತ್ತಾರೆ (೨೩). ನೆರೆದಿರುವ ಎಲ್ಲ ಬ್ರಾಹ್ಮಣರೂ (ಯಜಮಾನನಿಂದ

---

1. 'ಬೇರು ನೀರುಂಡಾಗ ಶಾಖೋಪಶಾಖೆಗಳು ದಣಿಯುವೇ'—ಜಗದ್ವೃಕ್ಷದ ಮೂಲನಾದ ಶ್ರೀಹರಿಯು ತೃಪ್ತನಾದರೆ, ವೃಕ್ಷದ ಇತರ ಭಾಗಗಳೆಲ್ಲವೂ (ಜಗತ್ತೆಲ್ಲವೂ) ತೃಪ್ತಿಗೊಳ್ಳುತ್ತವೆ— ಬ್ರಾಹ್ಮಣರನ್ನು ಸಂತೃಪ್ತಿಗೊಳಿಸಿದರೆ, ಶ್ರೀಹರಿಯು ತೃಪ್ತನಾಗುತ್ತಾನೆ;

'ಯತಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಃ ಸ್ವಯಂ ।
ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ತ್ರಯಂ ॥'

'ಯತಿಯು ಯಾರ ಮನೆಯಲ್ಲಿ ಸಂತೋಷದಿಂದ ಭೋಜನಮಾಡುವನೋ ಅಲ್ಲಿ ಶ್ರೀಹರಿಯೇ ಭೋಜನಮಾಡುತ್ತಾನೆ; ಶ್ರೀಹರಿಯು ಭೋಜನಮಾಡಿದಲ್ಲಿ ಜಗತ್ತ್ರಯವೇ (ಮೂರು ಲೋಕದಲ್ಲಿರುವ ಜೀವರೂ) ಭೋಜನತೃಪ್ತಿಯನ್ನು ಹೊಂದುತ್ತಾರೆ', ಎಂಬ ಪ್ರಮಾಣೋಕ್ತವಾದ ಪ್ರಮೇಯವೇ ಈ ಶ್ಲೋಕದಿಂದಾರಂಭಿಸಿ, ವಿವರಿಸಲ್ಪಟ್ಟಿರುತ್ತದೆ.

**ಹೋಮಂ ವಿನಾಗ್ನೌ ತುಷ್ಯಂತಿ ಬ್ರಾಹ್ಮಣೈರಖಿಲೈಃ ಸುರಾಃ ॥ ೨೪ ॥**
**ನ ತಥಾ ಹೋಮಮಾತ್ರೇಣ ತಸ್ಮಾದಗ್ನೇರ್ವರಾ ದ್ವಿಜಾಃ ।**
**ಅತಸ್ತಾನ್ನಾವಮನ್ಯೇತ ತೋಷಯೇದಪಿ ಶಕ್ತಿತಃ ॥ ೨೫ ॥**
**ತೇನ ತುಷ್ಯಂತಿ ಸರ್ವೇಽಪಿ ದೇವಾ ವಿಷ್ಣುಪುರಸ್ಸರಾಃ ।**

ಅಖಿಲೈಃ-ಸಮಸ್ತರಾದ, ಬ್ರಾಹ್ಮಣೈಃ-ಬ್ರಾಹ್ಮಣರಿಂದ (ದಾತನು—ಯಜಮಾನನು ತನ್ನ ಶಕ್ತ್ಯನುಸಾರ ಪೂಜಿಸುತ್ತಿರುವ ಎಲ್ಲ ಬ್ರಾಹ್ಮಣರಿಂದ), ಸುರಾಃ-ದೇವತೆಗಳು, ಅಗ್ನೌ-ಅಗ್ನಿಯಲ್ಲಿ ಹೋಮಂ ವಿನಾ-ಹೋಮಿಸದೇ ಇದ್ದರೂ, ತುಷ್ಯಂತಿ-ತುಷ್ಟರಾಗುತ್ತಾರೆ; ಹೋಮಮಾತ್ರೇಣ-ಕೇವಲ ಹೋಮ ಮಾಡುವುದರಿಂದ, ನ ತಥಾ-ಹಾಗೆ (ಬ್ರಾಹ್ಮಣರಿಂದ ತೃಪ್ತರಾದಂತೆ) ತೃಪ್ತರಾಗುವುದಿಲ್ಲ; ತಸ್ಮಾತ್-ಆದ್ದರಿಂದ, ದ್ವಿಜಾಃ-ವಿಪ್ರರು, ಅಗ್ನೇಃ-ಅಗ್ನಿಯಕಿಂತ, ವರಾಃ-ಶ್ರೇಷ್ಠರು; ಅತಃ-ಆದ್ದರಿಂದ, ತಾನ್-ವಿಪ್ರರನ್ನು ನ ಅವಮನ್ಯೇತ-ಅವಮಾನಿಸ ಕೂಡದು; ಅಪಿ-ಮತ್ತೇನೆಂದರೆ, ಶಕ್ತಿತಃ-ಶಕ್ತಿ ಇದ್ದಷ್ಟು, ತೋಷಯೇತ್-ಸಂತೋಷಪಡಿಸಬೇಕು; ತೇನ-ಅದರಿಂದ, ವಿಷ್ಣು ಪುರಸ್ಸರಾಃ-ಶ್ರೀವಿಷ್ಣು ಮೊದಲಾದ, ಸರ್ವೇ-ಸಮಸ್ತ ದೇವಾಃ ಅಪಿ-ದೇವತೆಗಳೂ ಸಹ, ತುಷ್ಯಂತಿ-ಪ್ರೀತರಾಗುತ್ತಾರೆ.

**ಏಕಂ ದಶಧನೋ ದದ್ಯಾತ್ ಸಹಸ್ರಧನವಾನ್ ಶತಂ ॥ ೨೬ ॥**

---

ಪೂಜಿಸಲ್ಪಡುತ್ತಿರುವ ಎಲ್ಲ ಅತಿಥಿ ಅಭ್ಯಾಗತ ಬ್ರಾಹ್ಮಣರೂ), ತೃಪ್ತರಾದರೆ, ಸಮಸ್ತ ದೇವತೆಗಳೆಲ್ಲರೂ ತೃಪ್ತರಾಗುತ್ತಾರೆ; ದೇವತೆಗಳು ಅಗ್ನಿಯ ದ್ವಾರಾ ತಮಗೆ ಹವಿಸ್ಸುಗಳನ್ನು ಅರ್ಪಿಸುವ ಮಾತ್ರದಿಂದ, ಅಷ್ಟು ತೃಪ್ತರಾಗುವುದಿಲ್ಲ; ('ಹೋಮಂ ವಿನಾ' ಎಂಬುದರಿಂದ, ವೈಶ್ವದೇವಾದಿ ಸಂಸ್ಕಾರರಹಿತವಾದ ಅನ್ನಾದಿಗಳನ್ನು ಬ್ರಾಹ್ಮಣರಿಗೆ ದಾನಮಾಡಬಹುದೆಂಬ ಅರ್ಥವನ್ನು ತಿಳಿಯಕೂಡದು; 'ನ ತಥಾ ಹೋಮಮಾತ್ರೇಣ' ಎಂಬುದರಿಂದ, ಅಗ್ನಿಯಲ್ಲಿ ಹೋಮಿಸಿ, ಬ್ರಾಹ್ಮಣಭೋಜನ ಮಾಡಿಸದಿದ್ದರೆ, ದೇವತೆಗಳು ಅಷ್ಟು ತೃಪ್ತರಾಗುವುದಿಲ್ಲ—ಹೋಮವಿಲ್ಲದೆಯೇ ಬ್ರಾಹ್ಮಣರ ತೃಪ್ತಿಯಿಂದ ದೇವತೆಗಳು ತೃಪ್ತರಾಗುತ್ತಾರೆಂದಮೇಲೆ, ಹೋಮಸಹಿತ ಬ್ರಾಹ್ಮಣಪೂಜೆಯಿಂದ ತೃಪ್ತರಾಗುವರೆಂದು ಹೇಳಬೇಕಾಗಿಲ್ಲವೆಂಬ ಕೈಮುತ್ಯ ನ್ಯಾಯವನ್ನು ಸೂಚಿಸಲು ಮಾತ್ರ ಹೀಗೆ ಹೇಳಲಾಗಿದೆ, ಎಂದು ತಿಳಿಯಬೇಕು.) ಆದ್ದರಿಂದ, ಸರ್ವರೂ, ಶಕ್ತ್ಯನುಸಾರವಾಗಿ ಬ್ರಾಹ್ಮಣರನ್ನು ಸಂತೋಷ ಪಡಿಸಬೇಕು; ಅದರಿಂದ ಶ್ರೀವಿಷ್ಣುಸಹಿತರಾದ ಸಮಸ್ತದೇವತೆಗಳೂ ಸುಪ್ರೀತರಾಗುತ್ತಾರೆ (೨೪-೨೫). ತನ್ನ ಧನಸಂಪತ್ತಿನಲ್ಲಿ ೧/೧೦ನೇ ಭಾಗವನ್ನು ದಾನಕ್ಕಾಗಿ ವಿನಿಯೋಗಿಸಬೇಕು; ೧೦, ೧೦೦೦, ೧೦೦ ರೂಪಾಯಿಗಳುಳ್ಳವರು,

**ದಶ ದದ್ಯಾಚ್ಛತಧನಃ ಸರ್ವೇ ತುಲ್ಯಫಲಾಃ ಸ್ಮೃತಾಃ ।**
**ಪಂಚ ದದ್ಯಾಚ್ಛತಧನಃ ಸಹಸ್ರಧನವಾನ್ ದಶ ॥ ೨೭ ॥**
**ಪುಣ್ಯಾಧಿಕ್ಯಂ ಶತಧನೇ ಭವೇತ್ತತ್ರ ನ ಚಾನ್ಯಥಾ ।**
**ಶರೀರದಾರ್ಢ್ಯತಸ್ತ್ವೇವಂ ಪುಣ್ಯಂ ತಪಸಿ ನಿರ್ದಿಶೇತ್ ॥ ೨೮ ॥**

ದಶಧನಃ-ಹತ್ತು ಧನವುಳ್ಳವನು, ಏಕಂ-ಒಂದನ್ನು ದದ್ಯಾತ್-ದಾನ ಮಾಡಬೇಕು (ತನ್ನ ಧನದಲ್ಲಿ ೧/೧೦ ಭಾಗವನ್ನು ದಾನಕ್ಕಾಗಿ ವಿನಿಯೋಗಿಸಬೇಕು); ಸಹಸ್ರಧನವಾನ್-೧೦೦೦ ಧನವುಳ್ಳವನು, ಶತಂ—(೧/೧೦ ಭಾಗವೆಂದರೆ) ೧೦೦ನ್ನು (ಕೊಡಬೇಕು); ಶತಧನಃ-೧೦೦ ಧನವುಳ್ಳವನು, ದಶ-೧೦ನ್ನು ದದ್ಯಾತ್-ಕೊಡಬೇಕು; ಸರ್ವೇ-ಈ ಎಲ್ಲರೂ (ಒಂದು, ನೂರು, ಹತ್ತು ಧನಗಳನ್ನು ಕೊಟ್ಟವರೆಲ್ಲರೂ); ತುಲ್ಯಫಲಾಃ-ಸಮಾನವಾದ ಫಲವುಳ್ಳವರೆಂದು, ಸ್ಮೃತಾಃ-ಹೇಳಲ್ಪಟ್ಟಿರುವರು; (ಆದರೆ) ಶತಧನಃ-೧೦೦ ಧನವುಳ್ಳವನು, ಪಂಚ-ಐದು ಧನವನ್ನು ದದ್ಯಾತ್-ಕೊಟ್ಟರೆ, (ಮತ್ತು), ಸಹಸ್ರಧನವಾನ್-೧೦೦೦ ಧನವುಳ್ಳವನು, ದಶ-೧೦ನ್ನು (ಕೊಟ್ಟರೆ), ಶತಧನೇ-೧೦೦ ಧನವಿದ್ದು ಐದು ಕೊಟ್ಟವನಲ್ಲಿ (ಕೊಟ್ಟವನಿಗೆ), ಪುಣ್ಯಾಧಿಕ್ಯಂ-ಅಧಿಕ ಪುಣ್ಯವು (೧೦೦೦ ಇದ್ದು ೧೦ ಕೊಟ್ಟವನಿಗಿಂತ ಅಧಿಕ ಪುಣ್ಯವು), ಭವೇತ್-ಉಂಟಾಗುತ್ತದೆ; ಅನ್ಯಥಾ-ಬೇರೆ, ನ ಚ-ಅಲ್ಲವೇ ಅಲ್ಲ (೧೦ನ್ನು ಕೊಟ್ಟ ಮಾತ್ರದಿಂದ, ೫ ಕೊಟ್ಟವನಿಗಿಂತ, ಅಧಿಕ ಪುಣ್ಯವು ಬರುವುದಿಲ್ಲ); ಏವಂ-ಹೀಗೆಯೇ (ಈ ನೀತಿಯನ್ನನುಸರಿಸಿ—ಇದ್ದುದರಲ್ಲಿ ಅಧಿಕ ಭಾಗ—ಅಧಿಕಾಂಶವನ್ನು ಕೊಡುತ್ತಾನೆಂಬುದರಿಂದ ಅಧಿಕ ಪುಣ್ಯವೆಂಬ ನಿಯಮವನ್ನನುಸರಿಸಿ), ಶರೀರದಾರ್ಢ್ಯತಃ-ದೇಹಸಾಮರ್ಥ್ಯದಿಂದ, ತಪಸಿ-ತಪಸ್ಸಿನಲ್ಲಿಯೂ, ಪುಣ್ಯಂ-ಪುಣ್ಯಭಾಗವನ್ನು (ನ್ಯೂನಾಧಿಕ್ಯವನ್ನು), ನಿರ್ದಿಶೇತ್-ನಿಶ್ಚಯಿಸಬೇಕು (ನಿರ್ಣಯಿಸಿ ಹೇಳಬೇಕು).[1]

---

ಕ್ರಮವಾಗಿ ೧, ೧೦೦, ೧೦ ರೂಪಾಯಿಗಳನ್ನು ಕೊಡಬೇಕು; ೧೦೦ ರೂಪಾಯಿಗಳಿದ್ದವನು, ೫ ರೂಪಾಯಿ ಕೊಟ್ಟಾಗ, ೧೦೦೦ ಇದ್ದವನು ೧೦ ರೂಪಾಯಿ ಕೊಟ್ಟರೆ, ೫ ಕೊಟ್ಟವನಿಗೇ ಅಧಿಕ ಪುಣ್ಯವು ಲಭಿಸುತ್ತದೆಂದು ತಿಳಿಯಬೇಕು; ಹೀಗೆಯೇ ಶಾರೀರಕ ತಪಸ್ಸಿನ ವಿಷಯದಲ್ಲಿ ದೇಹಸಾಮರ್ಥ್ಯದ

---

1. ಶಾರೀರಕ ತಪಸ್ಸಿನ ವಿವರಣೆಯನ್ನು ಇದೇ ಅಧ್ಯಾಯದ ೬ನೇ ಶ್ಲೋಕದ ತಾತ್ಪರ್ಯ ಮತ್ತು ಅಡಿಟಿಪ್ಪಣಿಯಿಂದ ತಿಳಿಯಬಹುದು. ದೇಹಸಾಧ್ಯವಾದ ತಪಸ್ಸಿಗಾಗಿ, ವ್ಯಯಮಾಡುವ ದೇಹಸಾಮರ್ಥ್ಯದ ಅಂಶವನ್ನು ಪರಿಗಣಿಸಿ ಪುಣ್ಯಾಧಿಕ್ಯವನ್ನು ತಿಳಿಯತಕ್ಕದ್ದು—ಅಲ್ಪಶಕ್ತಿವಂತನು, ದೃಢಕಾಯನಗಿಂತ ಹೆಚ್ಚು ಶ್ರಮವಹಿಸಿ, ಸತ್ಕರ್ಮಗಳನ್ನಾಚರಿಸಿದರೆ, ಆತನಿಗೆ, ಅಷ್ಟೇ ಸತ್ಕರ್ಮಗಳನ್ನು ಮಾಡುವ ದೃಢಕಾಯನಗಿಂತ, ಅಧಿಕ ಪುಣ್ಯವು ಲಭಿಸುತ್ತದೆಂದು ತಿಳಿಯತಕ್ಕದ್ದು.

**ಭಕ್ತ್ಯಾಧಿಕ್ಯಾತ್ಫಲಾಧಿಕ್ಯಂ ತದೂನತ್ವಾತ್ಫಲೋನತಾ ।**
**ದಗ್ಧಾನಿ ಯೈಃ ಶರೀರಾಣಿ ತಪೋಭಿರ್ನಿಯಮಾನ್ವಿತೈಃ ॥ ೨೯ ॥**
**ಬ್ರಾಹ್ಮಣಾಸ್ತೋಷಿತಾ ಯೈಶ್ಚ ತ ಏವ ಸ್ಯುರ್ಮಹಾಧನಾಃ ।**
**ಯಥಾ ಯಥಾ ತಪಶ್ಚೀರ್ಣಂ ಯಥಾ ದಾನಂ ಚ ಯೈಃ ಕೃತಂ ॥ ೩೦ ॥**
**ಪೂರ್ವಜನ್ಮಸು ಧರ್ಮಿಷ್ಠೈರ್ಲಭಂತೇ ತೇ ತಥಾತಥಾ ।**
**ಕೃತಂ ತಪಶ್ಚ ಯೈರ್ದಾನಂ ಸಾಂತರಂ ವಾ ನಿರಂತರಂ ॥ ೩೧ ॥**
**ತೈಸ್ತಥಾ ಲಭ್ಯತೇ ಸೌಖ್ಯಂ ಸಾಂತರಂ ಚ ನಿರಂತರಂ ।**

ಪುಣ್ಯದ ನ್ಯೂನಾಧಿಕ್ಯವು ಪ್ರಧಾನವಾಗಿ ಭಕ್ತಿಯನ್ನು ಅವಲಂಬಿಸುತ್ತದೆಂದು ಹೇಳುತ್ತಾರೆ:—**ಭಕ್ತ್ಯಾಧಿಕ್ಯಾತ್**-(ಕರ್ತನು ಮಾಡುವ ಬ್ರಾಹ್ಮಣ ಪೂಜೆ, ತಪ ಮೊದಲಾದ್ದರಲ್ಲಿ) ಭಕ್ತಿಯ ಅತಿಶಯದಿಂದ, **ಫಲಾಧಿಕ್ಯಂ**-ಫಲದಲ್ಲಿ (ಪುಣ್ಯದಲ್ಲಿ) ಆಧಿಕ್ಯವೂ, **ತದೂನತ್ವಾತ್**-ಭಕ್ತಿಯ ಕೊರತೆಯಿಂದ, **ಫಲೋನತಾ**-ಫಲ (ಪುಣ್ಯದಲ್ಲಿ) ನ್ಯೂನತೆಯೂ (ಉಂಟಾಗುತ್ತದೆ); **ಯೈಃ**-ಯಾರಿಂದ (ಯಾವ ಪುರುಷರಿಂದ), **ನಿಯಮಾನ್ವಿತೈಃ**-(ಆಹಾರಾದಿ) ನಿಯಮಗಳಿಂದ ಯುಕ್ತವಾದ, **ತಪೋಭಿಃ**- (ಶಾರೀರಕ) ತಪಸ್ಸುಗಳಿಂದ, **ಶರೀರಾಣಿ**-(ಅವರ) ದೇಹಗಳು, **ದಗ್ಧಾನಿ**-ದಹಿಸಲ್ಪಟ್ಟಿರುತ್ತವೆಯೋ (ಕೃಶಗೊಳಿಸಲಾಗಿರುವುವೋ), **ಯೈಃ**-ಯಾರಿಂದ, **ಬ್ರಾಹ್ಮಣಾಃ**-ಬ್ರಾಹ್ಮಣರು, **ತೋಷಿತಾಃ**-ಸಂತೋಷಿಸಲ್ಪಟ್ಟಿರುವರೋ, **ತೇ ಏವ**-ಅವರೇ, **ಮಹಾಧನಾಃ**-ಮಹಾಧನಿಕರು, **ಸ್ಯುಃ**-ಆಗಿರುವರು; **ಯೈಃ**-ಯಾವ, **ಧರ್ಮಿಷ್ಠೈಃ**-ಧರ್ಮದಲ್ಲಿ ಸ್ಥಿತರಾದವರಿಂದ, **ಪೂರ್ವಜನ್ಮಸು**- ಹಿಂದಿನ ಜನ್ಮಗಳಲ್ಲಿ, **ಯಥಾ ಯಥಾ**-ಹೇಗೆ

---

ವಿನಿಯೋಗದಿಂದ (ಶ್ರಮಪಟ್ಟು) ಸತ್ಕರ್ಮಗಳನ್ನು ಆಚರಿಸುವುದರಿಂದ, ಸತ್ಕರ್ಮಕ್ಕಾಗಿ ವಿನಿಯೋಗಿಸಲಾದ ದೇಹಸಾಮರ್ಥ್ಯದ ನ್ಯೂನಾಧಿಕ್ಯದಿಂದ ಪುಣ್ಯದ ನ್ಯೂನಾಧಿಕ್ಯವನ್ನು ನಿರ್ಣಯಿಸಿಕೊಳ್ಳಬೇಕು (೨೬-೨೮). ಪುಣ್ಯದ ನ್ಯೂನಾಧಿಕ್ಯವು ಬಹುವಾಗಿ ಭಕ್ತಿಯನ್ನೇ ಅವಲಂಬಿಸಿರುತ್ತದೆ; ಭಕ್ತಿಯ ಅತಿಶಯದಿಂದ ಯಾವುದೊಂದು ಸತ್ಕರ್ಮದ ಪುಣ್ಯಫಲವು ಅಧಿಕವಾಗುತ್ತದೆ—ಭಕ್ತಿಯ ಕೊರತೆಯಿಂದ, ಅದೇ ಕರ್ಮದ ಪುಣ್ಯಫಲವೂ ಅಲ್ಪವಾಗುತ್ತದೆ; ಬಹುವಿಧವಾದ ನಿಯಮಗಳನ್ನು ಪಾಲಿಸಲಿಕ್ಕಾಗಿ, ಯಾರ ದೇಹಗಳು ಕೃಶಗೊಳಿಸಲ್ಪಡುತ್ತವೆಯೋ ಮತ್ತು ಯಾರು ಬ್ರಾಹ್ಮಣರನ್ನು ಸಂತುಷ್ಟಗೊಳಿಸುವರೋ, ಅವರೇ ನಿಜಕ್ಕೂ ಮಹಾಧನಿಕರು (ಜಡಧನವುಳ್ಳವರು ಧನಿಕರಲ್ಲ); ಯಾರು ಹಿಂದಿನ ಜನ್ಮಗಳಲ್ಲಿ ಧರ್ಮಿಷ್ಠರಾಗಿ, ತಪಸ್ಸು ದಾನಗಳನ್ನು ಮಾಡಿರುವರೋ ಅವರು ಈ ಜನ್ಮದಲ್ಲಿ ಸುಖಿಗಳಾಗುತ್ತಾರೆ; ಅವರಿಗೆ ಲಭಿಸುವ ಸೌಖ್ಯವು (ಮತ್ತು ಸುಖಸಾಧನ ವಸ್ತುಗಳು) ಅವರ ಹಿಂದಿನ ತಪಸ್ಸು ದಾನಗಳನ್ನೇ ಅನುಸರಿಸುತ್ತದೆ; ಆ ತಪಸ್ಸು ದಾನಗಳನ್ನು

ಹೇಗೆ, ತಪಃ-ತಪಸ್ಸು[1] ಚೀರ್ಣಂ- ಮಾಡಲಾಗಿರುವುದೋ, ಯಥಾ-ಹೇಗೆ ಹೇಗೆ, ದಾನಂ ಚ-ದಾನವೂ, ಕೃತಂ-ಮಾಡಲ್ಪಟ್ಟಿರುತ್ತದೆಯೋ, ತೇ-ಅವರು, ತಥಾ ತಥಾ-ಹಾಗೆ ಹಾಗೆ, ಸೌಖ್ಯಂ-ಸುಖವನ್ನು ಲಭಂತೇ-ಹೊಂದುತ್ತಾರೆ; ಯೈಃ-ಯಾರಿಂದ, ತಪಃ-ತಪಸ್ಸು ದಾನಂ ಚ-ದಾನವೂ, ನಿರಂತರಂ-ನಿರಂತರವಾಗಿ (ಸದಾ-ನಿತ್ಯವೂ), ವಾ-ಅಥವಾ, ಸಾಂತರಂ-ಆಗಾಗ (ಕಾಲವ್ಯವಧಾನದಿಂದ), ಕೃತಂ-ಮಾಡಲ್ಪಟ್ಟಿರುವುದೋ, ತೈಃ-ಅವರಿಂದ, ತಥಾ- ಹಾಗೆಯೇ (ನಿರಂತರವೂ ಅಥವಾ ಆಗಾಗ), ಸಾಂತರಂ-ಸಾಂತರವೂ (ಬಿಟ್ಟು ಬಿಟ್ಟು ಬೇರೆ ಬೇರೆ ಕಾಲಗಳಲ್ಲಿ), ಚ-ಅಥವಾ, ನಿರಂತರಂ-ಸರ್ವದಾ, ಸೌಖ್ಯಂ-ಸುಖವು, ಲಭ್ಯತೇ-ಹೊಂದಲ್ಪಡುತ್ತದೆ. (ಜನ್ಮಾಂತರದಲ್ಲಿ ಆಚರಿಸಿದ ತಪಸ್ಸು ಮತ್ತು ದಾನಗಳಂತೆ, ಅವುಗಳ ಫಲವಾದ ಸುಖವನ್ನು ಹೊಂದುತ್ತಾರೆ)

**ನ ಯೈಃ ಕೃತಂ ತಪೋ ದಾನಂ ಪಾಪಂ ಚಾಪ್ಯಧಿಕಂ ಕೃತಂ ॥ ೩೨ ॥**
**ನಿರ್ಧನಾ ಅನಪತ್ಯಾಶ್ಚ ನಾನಾದುಃಖಾನ್ವಿತಾ ಹಿ ತೇ ।**
**ಹಸತಃ ಕುರ್ವತೇ ಪಾಪಂ ರುದಂತೋ ಭುಂಜತೇ ಫಲಂ ॥ ೩೩ ॥**
**ಕ್ಲಿಶ್ಯಂತಃ ಪುಣ್ಯಮಾರ್ಜಂತಿ ಹಸಂತೋ ಭುಂಜತೇ ಫಲಂ ।**

ಯೈಃ-ಯಾರಿಂದ, ತಪಃ-ತಪಸ್ಸು ದಾನಂ-ದಾನವೂ, ನ ಕೃತಂ-ಮಾಡಲ್ಪಟ್ಟಿಲ್ಲವೋ, ಅಪಿ-ಮತ್ತೇನೆಂದರೆ, ಅಧಿಕಂ-ಹೆಚ್ಚಾಗಿ, ಪಾಪಂ ಚ-ಪಾಪವೇ, ಕೃತಂ-ಮಾಡಲ್ಪಟ್ಟಿರುವುದೋ, ತೇ-ಅವರು, ನಿರ್ಧನಾಃ-ದರಿದ್ರರೂ, ಅನಪತ್ಯಾಃ-ಮಕ್ಕಳಿಲ್ಲದವರೂ, ನಾನಾದುಃಖಾನ್ವಿತಾಃ-ವಿವಿಧ ದುಃಖಗಳುಳ್ಳವರೂ (ಆಗಿರುತ್ತಾರೆ), ಹಿ-ನಿಶ್ಚಯವು; ಹಸತಃ-ನಗುವವರಾಗಿ (ನಗುತ್ತಾ), ಪಾಪಂ-ಪಾಪವನ್ನು

ನಿರಂತರವಾಗಿ ಆಚರಿಸಿದ್ದರೆ, ಸುಖವನ್ನು ನಿರಂತರವಾಗಿ ಹೊಂದುತ್ತಾರೆ; ಆಗಾಗ (ಕಾಲವ್ಯವಧಾನದಿಂದ, ಅನುಕೂಲಿಸಿದಾಗ, ಇಚ್ಛೆ ಬಂದಾಗ) ಆಚರಿಸಿದ್ದರೆ, ಈಗ ಸುಖವೂ ಹಾಗೆಯೇ ಬಿಟ್ಟು ಬಿಟ್ಟು ಲಭಿಸುತ್ತದೆ (೨೯-೩೧). ಯಾರು, ಹಿಂದಿನ ಜನ್ಮಗಳಲ್ಲಿ ತಪಸ್ಸು ದಾನಗಳನ್ನು ಮಾಡದೇ, ಅಧಿಕವಾಗಿ ಪಾಪವನ್ನೇ ಮಾಡಿರುವರೋ ಅವರು ಈಗ ದರಿದ್ರರೂ, ಮಕ್ಕಳಿಲ್ಲದವರೂ (ಸಂತಾನವಿಹೀನರೂ) ಆಗಿ, ವಿವಿಧ ದುಃಖಗಳನ್ನು ಹೊಂದುತ್ತಾರೆ; ಜೀವರು ಮನುಷ್ಯದೇಹವನ್ನು ಹೊಂದಿ ನಗುನಗುತ್ತ ಪಾಪವನ್ನು ಮಾಡುತ್ತಾರೆ—ಅಳುತ್ತಳುತ್ತ ಅದರ ಫಲವನ್ನು (ದುಃಖವನ್ನು) ಅನುಭವಿಸುತ್ತಾರೆ; ಕಷ್ಟದಿಂದ ಪುಣ್ಯವನ್ನು ಸಂಪಾದಿಸಿದವರು ನಗುತ್ತ ಅದರ ಫಲವನ್ನು (ಸುಖವನ್ನು) ಭೋಗಿಸುತ್ತಾರೆ (೩೨-೩೩). ತಪಸ್ಸು ದಾನಗಳೇನನ್ನೂ

1. ತ್ರಿವಿಧವಾದ ತಪಸ್ಸುಗಳ ವಿವರಣೆಯನ್ನು ಹಿಂದೆ ೬ನೇ ಶ್ಲೋಕದ ಅಡಿಟಿಪ್ಪಣಿಯಲ್ಲಿ ನೋಡಿರಿ.

ಕುರ್ವತೇ-ಮಾಡುತ್ತಾರೆ; ರುದಂತಃ-ರೋದನಮಾಡುತ್ತ (ಅಳುತ್ತ), ಫಲಂ-ಫಲವನ್ನು ಭುಂಜತೇ-ಭೋಗಿಸುತ್ತಾರೆ; ಕ್ಲಿಶ್ಯಂತಃ-ಕಷ್ಟಪಟ್ಟು ಪುಣ್ಯಂ-ಪುಣ್ಯವನ್ನು ಅರ್ಜಂತಿ-ಸಂಪಾದಿಸುತ್ತಾರೆ; ಹಸಂತಃ-ನಗುನಗುತ್ತ ಫಲಂ-ಫಲವನ್ನು ಭುಂಜತೇ-ಭೋಗಿಸುತ್ತಾರೆ.

ತಪೋದಾನವಿಹೀನಾನಾಂ ಭುಂಜಾನಾನಾಂ ನಿಜಂ ಫಲಂ ॥ ೩೪ ॥
ತಸ್ಯೋಪರಿ ಭವೇದ್ದೋಷೋ ವೃಥಾ ತಾಪಕರೋ ಹಿ ಸಃ ।
ಸುಕ್ಷೇತ್ರೇ ಕೋದ್ರವಾನುಪ್ತ್ವಾ ವ್ರೀಹೀನ್ ವಾಂಛತಿ ಮೂಢಧೀಃ ॥೩೫ ॥
ನ ಜಾನಾತ್ಯವಿವೇಕೇನ ವೃಥಾ ಸಂತಾಪಮಶ್ನುತೇ ।
ಇಚ್ಛತ್ಯನ್ಯತ್ಕರೋತ್ಯನ್ಯದುಪ್ತಲಾಭೇ ಚ ಖಿದ್ಯತಿ ॥ ೩೬ ॥
ಅಹೋ ಮೋಹಸ್ಯ ಮಾಹಾತ್ಮ್ಯಂ ಪಾಮರಾದಪಿ ಪಾಮರಃ ।
ಅನಾಯಾಸೇನ ಕೇಷಾಂಚಿತ್ ಜಾಯಂತೇ ಭೂರಿಸಂಪದಃ ॥ ೩೭ ॥
ನ ಲಭಂತೇ ಕ್ಲಿಶ್ಯಮಾನಾಃ ಕೇಚಿತ್ ಸ್ವಲ್ಪಮಪೀಹಿತಂ ।
ಪಶ್ಯೇತ್ತತ್ರ ವಿವೇಕೇನ ಪುಣ್ಯಂ ಪಾಪಂ ಚ ಕಾರಣಂ ॥ ೩೮ ॥

ತಪೋದಾನವಿಹೀನಾನಾಂ-(ಪೂರ್ವಕೃತವಾದ) ತಪಸ್ಸು ದಾನಗಳಿಲ್ಲದ, ನಿಜಫಲಂ-ತಂತಮ್ಮ ಕರ್ಮಫಲಗಳನ್ನು ಭುಂಜಾನಾನಾಂ-ಭೋಗಿಸುವವರ (ಮಧ್ಯೆ), ತಸ್ಯ-(ಭೋಗಿಸುವ) ಪುರುಷನ, ಉಪರಿ-ಮೇಲೆ, ದೋಷಃ- ದೋಷವು, ಭವೇತ್- ಉಂಟಾಗುತ್ತದೆ (ಸುಖದುಃಖಗಳಿಗೆ ತತ್ಕಾಲದ ಆತನ ನಡವಳಿಕೆಗಳೇ ಕಾರಣವೆಂಬ ದೋಷವು ಆರೋಪಿಸಲ್ಪಡುತ್ತದೆ) (ಅಥವಾ, ತಸ್ಯೋಪರಿ-ತಚ್ಛಬ್ದವಾಚ್ಯನಾದ ಶ್ರೀಹರಿಯ ಮೇಲೆ, ತಪ್ಪು ಆರೋಪಿಸಲ್ಪಡುತ್ತದೆ); ಸಃ-ಅದು

---

ಮಾಡದೇ, ತಮ್ಮ ಕರ್ಮಫಲವನ್ನು ಭೋಗಿಸುವವರು, ಸರ್ವರಿಗೆ ಸುಖ ದುಃಖಪ್ರದನಾದ ಶ್ರೀಹರಿಯಲ್ಲಿ ವ್ಯರ್ಥವಾಗಿ ದೋಷವನ್ನು ಎಣಿಸುತ್ತಾರೆ; ಮತ್ತೆ ಕೆಲವು ಅಜ್ಞಾನಿಗಳು ತಮ್ಮ ಯತ್ನಗಳೇ ದೋಷಯುಕ್ತವಾದ್ದರಿಂದ ಇಚ್ಛಿತ ಫಲವು ದೊರೆಯಲಿಲ್ಲವೆಂದು ಭ್ರಮಿಸಿ, ವಿಶೇಷ ಯತ್ನಗಳಲ್ಲಿ ತೊಡಗಿ, ದುಃಖಪಡುತ್ತಾರೆ; ಈ ಉಭಯರ ತಿಳುವಳಿಕೆಯೂ ಸತ್ಯದಿಂದ ದೂರವಾದುದು; ಫಲವತ್ತಾದ ಭೂಮಿಯಲ್ಲಿ ಕೀಳುಧಾನ್ಯದ ಬೀಜವನ್ನು ಬಿತ್ತಿ, ಭತ್ತದ ಪೈರನ್ನು ನಿರೀಕ್ಷಿಸುವವನಂತೆ, ಮೂಢನಾದ ಮನುಷ್ಯನು, ಮನುಷ್ಯದೇಹ ಬಂದಾಗಲೂ, ಕ್ಷುದ್ರಕರ್ಮಗಳನ್ನು ಮಾಡುತ್ತ ಸುಖಾಧಿಕ್ಯವನ್ನು ನಿರೀಕ್ಷಿಸುತ್ತಾನೆ; ತನಗೆ ಪ್ರಾಪ್ತವಾಗುವ ದುಃಖಗಳ ನಿಜಕಾರಣವನ್ನು ಈ ಅಜ್ಞನು ತಿಳಿಯುವುದಿಲ್ಲ; ವೃಥಾ ದುಃಖಕಾರಣಗಳನ್ನು ಅನ್ಯಥಾ ತಿಳಿದು, ಅಧಿಕವಾದ ದುಃಖವನ್ನೇ ಹೊಂದುತ್ತಾನೆ; ಈತನು ಅತಿ ಪಾಮರನೇ ಸರಿ; ಕೆಲವರಿಗೆ

(ಹೀಗೆ ತಿಳಿಯುವುದು). ವೃಥಾ-ವ್ಯರ್ಥವಾಗಿ, ತಾಪಕರಃ-ದುಃಖಕ್ಕೇ ಕಾರಣ ವಾಗುತ್ತದೆ (ಹೀಗೆ ಭಾವಿಸುವುದು ವ್ಯರ್ಥವೂ-ಅಸತ್ಯ ಮತ್ತು ನಿಷ್ಪ್ರಯೋಜಕವು; ಕಿಂತು ದುಃಖಹೇತುವೇ ಆಗುತ್ತದೆ); ಸುಕ್ಷೇತ್ರೇ-ಒಳ್ಳೆಯ (ಫಲವತ್ತಾದ) ಭೂಮಿಯಲ್ಲಿ (ಮನುಷ್ಯದೇಹದಲ್ಲಿದ್ದು), ಕೋದ್ರವಾನ್ - ಹುಲ್ಲುಬೀಜಗಳನ್ನು (ಬಡವರು ತಿನ್ನುವ ಕಾಳಿನ ಬೀಜವನ್ನು) (ಕ್ಷುದ್ರಕರ್ಮಗಳನ್ನು), ಉಪ್ತ್ವಾ-ಬಿತ್ತಿ (ಮಾಡಿ), ಮೂಢಧೀಃ-ಮೂರ್ಖನಾದವನು, ವ್ರೀಹೀನ್-ಭತ್ತದ ಪೈರನ್ನು (ಅಕ್ಕಿ ಬೆಳೆಯನ್ನು) (ಪುಣ್ಯದ ಫಲವನ್ನು), ವಾಂಛತಿ-ಆಶಿಸುತ್ತಾನೆ; ಅವಿವೇಕೇನ-ಅಜ್ಞಾನದಿಂದ, ನ ಜಾನಾತಿ-(ತನ್ನ ದುಃಖಾದಿಗಳಿಗೆ ನಿಜಕಾರಣವನ್ನು ತಿಳಿಯುವುದಿಲ್ಲ; ವೃಥಾ-ವ್ಯರ್ಥವಾಗಿ, ಸಂತಾಪಂ-ದುಃಖವನ್ನು (ದುಃಖಾನುಭವದ ಕಾರಣವನ್ನು ತಪ್ಪಾಗಿ ತಿಳಿದು ಪುನಃ ದುಃಖಾತಿಶಯವನ್ನೇ), ಅಶ್ನುತೇ-ಹೊಂದುತ್ತಾನೆ; ಅನ್ಯತ್-ಒಂದನ್ನು (ಸುಖವನ್ನು), ಇಚ್ಛತಿ-ಅಪೇಕ್ಷಿಸುತ್ತಾನೆ; ಅನ್ಯತ್-ಬೇರೊಂದನ್ನು (ಅದಕ್ಕೆ ಸಾಧಕವಲ್ಲದ ಕರ್ಮವನ್ನು), ಕರೋತಿ-ಮಾಡುತ್ತಾನೆ; ಉಪ್ತಲಾಭೇ-ಬಿತ್ತಿದ್ದರ ಫಲವನ್ನು ಹೊಂದುತ್ತಿರಲು, ಖಿದ್ಯತಿ-ದುಃಖಿಸುತ್ತಾನೆ; ಮೋಹಸ್ಯ-ಅಜ್ಞಾನದ, ಮಾಹಾತ್ಮ್ಯಂ-ಪ್ರಭಾವವು, ಅಹೋ-ಆಶ್ಚರ್ಯಕರವು!; ಆತನು, ಪಾಮರಾತ್ ಅಪಿ-ಮೂರ್ಖನಗಿಂತಲೂ, ಪಾಮರಃ-ಮೂರ್ಖನು; ಕೇಷಾಂಚಿತ್-ಕೆಲವರಿಗೆ, ಅನಾಯಾಸೇನ-ಯಾವ ಪ್ರಯತ್ನವೂ ಇಲ್ಲದೇ, ಭೂರಿಸಂಪದಃ-ಮಹಾ ಸಂಪತ್ತುಗಳು, ಜಾಯಂತೇ-ಲಭಿಸುತ್ತವೆ; ಕ್ಲಿಶ್ಯಮಾನಾಃ-ಬಹು ಶ್ರಮಪಟ್ಟು ಯತ್ನಿಸುವ, ಕೇಚಿತ್-ಕೆಲವರು, ಈಹಿತಂ-ಅಪೇಕ್ಷಿತವಾದ, ಸ್ವಲ್ಪಂ ಅಪಿ-ಸ್ವಲ್ಪವನ್ನು (ಅಲ್ಪ ಧನಾದಿಗಳನ್ನೂ), ನ ಲಭಂತೇ-ಹೊಂದುವುದಿಲ್ಲ; ತತ್ರ-ಸುಖಪ್ರಾಪ್ತಿ ವಿಷಯದಲ್ಲಿ (ತತ್ಸಾಧನಗಳಾದ ಸಂಪದಾದಿಗಳ ಪ್ರಾಪ್ತಿ ವಿಷಯದಲ್ಲಿ), ವಿವೇಕೇನ-ವಿವೇಚನೆಯಿಂದ, ಪುಣ್ಯಂ- ಪುಣ್ಯವನ್ನೂ, ಪಾಪಂ ಚ-ಪಾಪವನ್ನೂ, ಕಾರಣಂ-ಕಾರಣವನ್ನಾಗಿ, ಪಶ್ಯೇತ್- ತಿಳಿಯತಕ್ಕದ್ದು.

**ಅತಃ ಪುಣ್ಯಂ ಪ್ರಕುರ್ವೀತ ಯಾವಚ್ಛಕ್ನೋತಿ ಬುದ್ಧಿಮಾನ್ ।**
**ದರಿದ್ರಃ ಪುಣ್ಯಕೃಚ್ಚೇತ್ಸ್ಯಾತ್ಪರೇ ಜನ್ಮನಿ ಭಾಗ್ಯಭಾಕ್ ॥ ೩೯ ॥**

---

ಅನಾಯಾಸವಾಗಿ ಮಹಾಸಂಪತ್ತು ಲಭಿಸುತ್ತದೆ—ಮತ್ತಿತರರಿಗೆ, ಬಹು ಶ್ರಮಪಟ್ಟು ಯತ್ನಿಸಿದರೂ ಅಲ್ಪಧನಾದಿಗಳೂ ಲಭಿಸುವುದಿಲ್ಲ; ಸುಖಪ್ರಾಪ್ತಿ ವಿಷಯದಲ್ಲಿ ವಿಮರ್ಶೆಯಿಂದ, ಪುಣ್ಯಪಾಪಗಳೇ ಕಾರಣವೆಂಬ ನಿಶ್ಚಯಜ್ಞಾನವನ್ನು ಹೊಂದಬೇಕು (೩೪-೩೮). ಆದ್ದರಿಂದ ವಿವೇಕಿಯು ಶಕ್ತ್ಯನುಸಾರವಾಗಿ ಪುಣ್ಯಕರ್ಮಗಳಲ್ಲಿ ತೊಡಗಬೇಕು; ದರಿದ್ರನು ಪುಣ್ಯಕರ್ಮಗಳನ್ನು ಮಾಡಿದರೆ ಮುಂದಿನ ಜನ್ಮದಲ್ಲಿ ಭಾಗ್ಯವಂತನಾಗುತ್ತಾನೆ; ಭಾಗ್ಯವಂತನು ಉನ್ಮತ್ತನಾಗಿ ಪಾಪಕರ್ಮಗಳಲ್ಲಿ

**ಭಾಗ್ಯಭಾಕ್ ಚ ದರಿದ್ರಃ ಸ್ಯಾದುನ್ಮಾದಾತ್ಪಾಪಕರ್ಮಕೃತ್ ।**

**ಏವಂ ಹಿ ಜೀವರಾಶೀನಾಂ ಭೋಗಃ ಸ್ಯಾತ್ ಸುಖದುಃಖಯೋಃ ॥ ೪೦**

ಅತಃ-ಆದ್ದರಿಂದ, ಬುದ್ಧಿಮಾನ್-ವಿವೇಕವುಳ್ಳವನು, ಯಾವತ್ ಶಕ್ನೋತಿ-ತನ್ನ ಶಕ್ತ್ಯನುಸಾರವಾಗಿ, ಪುಣ್ಯಂ-ಪುಣ್ಯವನ್ನು ಪ್ರಕುರ್ವೀತ-ಮಾಡತಕ್ಕದ್ದು; ದರಿದ್ರಃ-ಬಡವನು (ಧನವಿಲ್ಲದವನು), ಪುಣ್ಯಕೃತ್ ಚೇತ್-ಪುಣ್ಯವನ್ನು ಮಾಡುವನಾದರೆ, ಪರೇ ಜನ್ಮನಿ-ಮುಂದಿನ ಜನ್ಮದಲ್ಲಿ ಭಾಗ್ಯಭಾಕ್-ಭಾಗ್ಯವಂತನು (ಆಗುತ್ತಾನೆ); ಭಾಗ್ಯಭಾಕ್-ಭಾಗ್ಯವಂತನು, ಉನ್ಮಾದಾತ್-ಮದದಿಂದ (ಗರ್ವದಿಂದ), ಪಾಪಕರ್ಮಕೃತ್(ಚೇತ್)-ಪಾಪಕರ್ಮವನ್ನು ಮಾಡುವನಾದರೆ, ದರಿದ್ರಃ ಸ್ಯಾತ್-(ಮುಂದಿನ ಜನ್ಮದಲ್ಲಿ) ದರಿದ್ರನಾಗುತ್ತಾನೆ; ಏವಂ-ಹೀಗೆ (ಪುಣ್ಯಪಾಪಗಳ ನಿಮಿತ್ತದಿಂದ), ಜೀವರಾಶೀನಾಂ-ಜೀವಸಮೂಹಗಳಿಗೆ (ಸಮೂಹಗತ ವ್ಯಕ್ತಿಗಳಿಗೆ, ಅವರವರ ಕರ್ಮಾನುಸಾರ), ಸುಖದುಃಖಯೋಃ-ಸುಖದುಃಖಗಳ, ಭೋಗಃ-ಭೋಗವು, ಸ್ಯಾತ್-ಉಂಟಾಗುತ್ತದೆ.

**ಸಂಪದೋ ವಿಪದಶ್ಚೈವ ಭ್ರಮಂತಿ ರಥಚಕ್ರವತ್ ।**

**ಅತೋ ಯಾವದ್ಯಸ್ಯ ಶಕ್ತಿರ್ದಾನೇ ತಪಸಿ ಭೂಮಿಪ ॥ ೪೧ ॥**

**ತಾವತ್ಯೇವ ಪ್ರಕುರ್ವೀತ ಪುಣ್ಯಮಿತ್ಯಾಹ ಹಿ ಶ್ರುತಿಃ ।**

ಸಂಪದಃ-(ವಿವಿಧ) ಸಂಪತ್ತುಗಳು, ಚ-ಮತ್ತು, ವಿಪದಃ-(ನಾನಾ) ವಿಪತ್ತುಗಳೂ, ರಥಚಕ್ರವತ್-ರಥದ ಚಕ್ರಗಳಂತೆ, ಭ್ರಮಂತಿ ಏವ-ಸುತ್ತುತ್ತಲೇ ಇರುತ್ತವೆ; ಅತಃ-ಆದ್ದರಿಂದ, ಯಸ್ಯ-ಯಾವ ಪುರುಷನಿಗೆ, ದಾನೇ-ದಾನ ಮಾಡುವುದರಲ್ಲಿಯೂ, ತಪಸಿ-ತಪಸ್ಸನ್ನಾಚರಿಸುವುದರಲ್ಲಿಯೂ, ಯಾವತ್ ಶಕ್ತಿಃ-ಎಷ್ಟು ಶಕ್ತಿ ಇರುತ್ತದೆಯೋ, ತಾವತ್-ಅಷ್ಟು, ಪುಣ್ಯಂ ಏವ-ಪುಣ್ಯಕರ್ಮವನ್ನೇ, ಭೂಮಿಪ-ಹೇ ಸತ್ಯವ್ರತ[1] ರಾಜರ್ಷೇ!, ಪ್ರಕುರ್ವೀತ-ಮಾಡತಕ್ಕದ್ದು ಇತಿ-ಎಂದು, ಶ್ರುತಿಃ-ವೇದವೇ, ಆಹ ಹಿ-ಸ್ಪಷ್ಟವಾಗಿ ಹೇಳಿರುತ್ತದೆ.

---

ತೊಡಗಿದರೆ, ಮುಂದಿನ ಜನ್ಮದಲ್ಲಿ ದರಿದ್ರನಾಗುತ್ತಾನೆ; ಸರ್ವಜೀವರಿಗೆ, ಸುಖದುಃಖ ಭೋಗಗಳು, ಹೀಗೆಯೇ (ಪುಣ್ಯಪಾಪ ನಿಮಿತ್ತವಾಗಿಯೇ) ಉಂಟಾಗುತ್ತವೆಂಬಲ್ಲಿ ಯಾವ ಸಂಶಯವಿಲ್ಲ (ಹೀಗೆಂಬುದು ಶಾಸ್ತ್ರಸಿದ್ಧ ಪ್ರಮೇಯವು) (೩೯-೪೦). ಇಹಜೀವನದಲ್ಲಿ, ಸಂಪತ್ತು ವಿಪತ್ತುಗಳು ರಥಚಕ್ರದಂತೆ ಸುತ್ತುತ್ತಲಿರುತ್ತವೆ—ವೃದ್ಧಿಯನ್ನೂ ಅಧೋಗತಿಯನ್ನೂ (ಮೇಲೆ-ಕೆಳಗೆ) ಹೊಂದುತ್ತವೆ; ಆದ್ದರಿಂದ

---

1. ಸತ್ಯವ್ರತನು ರಾಜರ್ಷಿಯು; ಈತನು ಶೌನಕಾದಿ ಋಷಿಗಳೆಲ್ಲರ ಪರವಾಗಿ, ಈ ಅಧ್ಯಾಯದ ಆರಂಭದಲ್ಲಿ ನಿರೂಪಿಸಿರುವಂತೆ ಪ್ರಶ್ನೆ ಮಾಡಿದ್ದಾನೆ. ಇವನು ಇಕ್ಷ್ವಾಕುವಂಶದ (ಸೂರ್ಯವಂಶದ) ರಾಜನು—ತ್ರಿಶಂಕು ಎಂದೂ ಕರೆಯಲ್ಪಡುತ್ತಾನೆ.

**ಧೂಮ್ರಪಾನಾದಯಃ ಕ್ಲೇಶಾಃ ಶೀತವಾತಾತಪಾದಿಜಾಃ ॥ ೪೨ ॥**
**ನ ಯತ್ರ ತದ್ವರಂ ಪುಣ್ಯಂ ನರಾಣಾಂ ವಿಪ್ರತೋಷಣಂ ।**
**ಸುಖಾದಿ ಪುಷ್ಟಿದಂ ಪುಣ್ಯಂ ಯಶಃ ಕೀರ್ತಿಕರಂ ಪರಂ ॥ ೪೩ ॥**

ಯತ್ರ-ಯಾವ ಸತ್ಕರ್ಮದಲ್ಲಿ (ಬ್ರಾಹ್ಮಣರನ್ನು ತುಷ್ಟಿಗೊಳಿಸುವುದರಲ್ಲಿ), ಧೂಮ್ರಪಾನಾದಯಃ-ಹೊಗೆ ಕುಡಿಯುವುರೇ ಮೊದಲಾದ, ಕ್ಲೇಶಾಃ-(ಯಜ್ಞಾದಿ ಗಳಂತೆ) ಕ್ಲೇಶಗಳು, ಶೀತವಾತಾತಪಾದಿಜಾಃ-ಚಳಿ, ಗಾಳಿ, ಬಿಸಿಲುಗಳಿಂದ ಉಂಟಾಗುವ, (ಕ್ಲೇಶಾಃ-ತೀರ್ಥಯಾತ್ರಾದಿಗಳಲ್ಲಾಗುವ ಕಷ್ಟಗಳು), ನ-ಇಲ್ಲವೋ, ತತ್‌ಪುಣ್ಯಂ-ಆ ಪುಣ್ಯಕರ್ಮವು, ನರಾಣಾಂ-ಮಾನವರಿಗೆ, ವಿಪ್ರತೋಷಣಂ- ಬ್ರಾಹ್ಮಣರನ್ನು ಸಂತೋಷ ಗೊಳಿಸುವುದೇ (ಆಗಿದೆ); (ತತ್-ಅದು), ಪರಂ-ಶ್ರೇಷ್ಠವಾದ, ಪುಣ್ಯಂ-ಪುಣ್ಯಕರ್ಮವು; ಸುಖಾದಿಪುಷ್ಟಿದಂ-ಸುಖಾದಿ (ಸಂಪದಾದಿ)ಗಳನ್ನು ವೃದ್ಧಿಗೊಳಿಸು ವುದೂ, ಯಶಃಕೀರ್ತಿಕರಂ-ಯಶಸ್ಸು ಮತ್ತು ಕೀರ್ತಿಗಳನ್ನು ದೊರಕಿಸುವುದೂ (ಆದುದು); ವರಂ-(ಈ ವಿಪ್ರತೋಷಣವೇ) ಉತ್ತಮಸಾಧನವು.

**ರೋಗಪಾಪಹರಂ ಲೋಕೇ ವಿಪ್ರಶೇಷಾನ್ನಭೋಜನಂ ।**
**ತದನ್ನಂ ತದ್ಧನಂ ನೃಣಾಂ ಯದ್ವಿಪ್ರೇಷು ವ್ಯಯೀಕೃತಂ ॥ ೪೪ ॥**
**ನ ತದ್ಧನಂ ವ್ಯಯೋ ನಾಸೌ ಯೋ ವಿಪ್ರಾಣಾಂ ನ ತೋಷಕೃತ್ ।**
**ಸಾನುಕೂಲೇ ಹರೌ ದೇಯಂ ಯತಃ ಪೂರಯಿತಾ ಹರಿಃ ॥ ೪೫ ॥**
**ಪ್ರತಿಕೂಲೇ ಹರೌ ದೇಯಂ ಯತಃ ಸರ್ವಂ ಹರಿಷ್ಯತಿ ।**

ಲೋಕೇ-ಲೋಕದಲ್ಲಿ ವಿಪ್ರಶೇಷಾನ್ನಭೋಜನಂ-ಬ್ರಾಹ್ಮಣರಿಗೆ ಭೋಜನ ಮಾಡಿಸಿ ಮಿಕ್ಕ ಅನ್ನವನ್ನುಣ್ಣುವುದು, ರೋಗಪಾಪಹರಂ-(ವಿವಿಧ) ರೋಗಗಳನ್ನೂ (ರೋಗಗಳಿಗೆ ಕಾರಣವಾದ) ಪಾಪಗಳನ್ನೂ ಪರಿಹರಿಸಲು, ಸಮರ್ಥವಾದುದು;

---

ಯಾವ ಕಾಲದಲ್ಲಿ ಎಷ್ಟು ಸಾಮರ್ಥ್ಯವಿರುವುದೋ ಅಷ್ಟು ಪುಣ್ಯಕರ್ಮಗಳನ್ನೇ—ದಾನ-ತಪಸ್ಸುಗಳನ್ನೇ ಆಚರಿಸಬೇಕು—ಇದೇ ಕರ್ತವ್ಯವೆಂದು ಶ್ರುತಿಯೂ ಸ್ಪಷ್ಟವಾಗಿ ಉಪದೇಶಿಸುತ್ತದೆ (೪೧). ಯಜ್ಞಾದಿಗಳಂತೆ, ಧೂಮ್ರಪಾನಾದಿ ದುಃಖಗಳಿಲ್ಲದ, ತೀರ್ಥಯಾತ್ರೆ ಮೊದಲಾದವುಗಳಂತೆ, ಚಳಿಗಾಳಿ ಬಿಸಿಲುಗಳ ಕ್ಲೇಶಗಳಿಲ್ಲದ, ವಿಪ್ರತೋಷಣವೆಂಬ ಪುಣ್ಯಕರ್ಮವೇ ಮಾನವರಿಗೆ ಶ್ರೇಷ್ಠವಾದುದು; ಅದು ಸುಖಸಂಪತ್ತುಗಳನ್ನು ವೃದ್ಧಿಗೊಳಿಸುತ್ತದೆ—ಉತ್ತಮವಾದ ಯಶಸ್ಸನ್ನೂ ಕೀರ್ತಿಯನ್ನೂ ದೊರಕಿಸುತ್ತದೆ (ಇಹಪರಗಳಲ್ಲಿ ಗೌರವಪಾತ್ರನನ್ನಾಗಿ ಮಾಡುತ್ತದೆ) (೪೨-೪೩). ಬ್ರಾಹ್ಮಣರಿಗೆ ಭೋಜನ ಮಾಡಿಸಿದ ನಂತರ ಮಿಕ್ಕ ಅನ್ನವನ್ನುಣ್ಣುವುದು, ರೋಗ ಗಳನ್ನೂ, ತತ್ಕಾರಣವಾದ ಪಾಪಗಳನ್ನೂ ಪರಿಹರಿಸುತ್ತದೆ; ಬ್ರಾಹ್ಮಣಸಂತುಷ್ಟಿಗಾಗಿ ವಿನಿಯೋಗಿಸಿದ ಧನವೇ ಧನವು—ಅನ್ನವೇ ಅನ್ನವು (ಪವಿತ್ರವಾದ ಅನ್ನ ಧನಗಳು)

ಯತ್-ಯಾವುದು, ವಿಪ್ರೇಷು-ಬ್ರಾಹ್ಮಣರಲ್ಲಿ (ಬ್ರಾಹ್ಮಣರ ತುಷ್ಟಿಗಾಗಿ), ವ್ಯಯೀಕೃತಂ-ವ್ಯಯಮಾಡಲ್ಪಡುವುದೋ (ವಿನಿಯೋಗಿಸಲಾಗುವುದೋ), ನೃಣಾಂ-ಮಾನವರಿಗೆ, ತತ್-ಅದೇ, ಅನ್ನಂ-(ಯೋಗ್ಯವಾದ) ಅನ್ನವು; ತತ್-ಅದೇ, ಧನಂ-(ಶುದ್ಧವಾದ) ಧನವು; ಯೋಽಸೌ-ಯಾವ ಈ, ವ್ಯಯಃ-(ಧನದ) ವ್ಯಯವು, ವಿಪ್ರಾಣಾಂ-ಬ್ರಾಹ್ಮಣರ, ತೋಷಕೃತ್-ಸಂತುಷ್ಟಿಗೊಳಿಸುವುದು, ನ-ಅಲ್ಲವೋ, ಅಸೌ ವ್ಯಯಃ ನ-ಅದು ನಿಜವಾದ ವ್ಯಯವೇ ಅಲ್ಲ (ವ್ಯರ್ಥವಾದ ವ್ಯಯವೇ); ತತ್-(ವಿಪ್ರತೋಷಣಕ್ಕಾಗಿ ಉಪಯೋಗಿಸಲ್ಪಡದ) ಆ ಧನವು, ಧನಂ ನ-ಧನವೇ ಅಲ್ಲ. ಹರೌ-ಶ್ರೀಹರಿಯು, ಸಾನುಕೂಲೇ (ಸತಿ)-(ತನಗೆ) ಅನುಕೂಲನಾಗಿರುತ್ತಿರಲು, ದೇಯಂ-(ಧನವನ್ನು) ಕೊಡಬೇಕು; ಯತಃ- ಏಕೆಂದರೆ, ಹರಿಃ- ಶ್ರೀಹರಿಯು, ಪೂರಯಿತಾ-ಪೂರ್ಣಮಾಡುವನು (ವ್ಯಯವಾದುದನ್ನು ಕೊಟ್ಟು ಪೂರ್ವದಂತೆ ಧನವನ್ನು ಪೂರ್ಣಗೊಳಿಸುತ್ತಾನೆ); ಹರೌ-ಶ್ರೀಹರಿಯು, ಪ್ರತಿಕೂಲೇ-ಪ್ರತಿಕೂಲನಾಗಿರುತ್ತಿರಲು (ಸಹಾಯಕನಲ್ಲವೇ ವಿರೋಧವನ್ನೇ ಇಚ್ಛಿಸುವಾಗಲೂ), ದೇಯಂ-(ಬ್ರಾಹ್ಮಣರಿಗೆ ದಾನವನ್ನು) ಕೊಡತಕ್ಕದ್ದು; ಯತಃ- ಏಕೆಂದರೆ, ಸರ್ವಂ-ಎಲ್ಲವನ್ನೂ (ಸರ್ವಧನವನ್ನೂ), ಹರಿಷ್ಯತಿ-ಅಪಹರಿಸುವವನೂ ಆಗಿರುತ್ತಾನೆ (ಧನಾದಿ ಸಂಪತ್ತನ್ನು ಕೊಡುವವನೂ ಅಪಹರಿಸುವವನೂ ಶ್ರೀಹರಿಯೇ ಆಗಿದ್ದಾನೆ).

**ದಾರಿದ್ರ್ಯಂ ಯದ್ಯವಶ್ಯಂ ಸ್ಯಾತ್ತದಾ ಚೋರನೃಪಾದಿಭಿಃ ॥ ೪೬ ॥**
**ಧನಹಾನಿರ್ಭವೇದೇವ ದಾನಾತ್ತುಚ್ಛಾಧಿಕೋ ಭವೇತ್ ।**
**ಸಂಪದೋ ಯದಿ ಜಾಯೇರನ್ ತದಾ ದಾನಾತ್ ಕಿಯಾನ್ ಕ್ಷಯಃ ॥**
**ದಾತಾ ಹಸ್ತಸಹಸ್ರೈಃ ಸ್ಯಾದ್ಧರಿಃ ಪ್ರೀತೋ ನೃಣಾಂ ಯದಿ ।**
**ವ್ಯಯೋ ಹಸ್ತದ್ವಯೇನಾಸ್ಯ ಧನಸ್ಯ ಭವಿತಾ ಕಿಯಾನ್ ॥ ೪೮ ॥**

---

(ವಿನಿಯೋಗಿಸಿದ ನಂತರ ಉಳಿದ ಅನ್ನ ಧನಗಳೇ ಪವಿತ್ರವಾದುವು); ವಿಪ್ರತೋಷಣಕ್ಕಾಗಿ ಉಪಯೋಗಿಸಲ್ಪಡದ ಧನವ್ಯಯವು ವ್ಯರ್ಥವೇ ಸರಿ; ಶ್ರೀಹರಿಯು ತನ್ನ ವಿಷಯಕ್ಕೆ ಪ್ರಸನ್ನನಾಗಿರಲು, ವ್ಯಯವಾದ ಆ ಧನವನ್ನು ಅನಾಯಾಸದಿಂದ ತುಂಬಿಕೊಡುತ್ತಾನೆ; ಶ್ರೀಹರಿಯು ವಿರೋಧಿಯಾಗಿದ್ದರೆ, ಆಗಲೂ ಬ್ರಾಹ್ಮಣರಿಗಾಗಿ ಇದ್ದ ಧನವನ್ನು ವ್ಯಯಗೊಳಿಸಬೇಕು—ಧನವನ್ನು ಅಪಹರಿಸುವವನೂ ಶ್ರೀಹರಿಯೇ (ಧನಾದಿ ಸಂಪತ್ತನ್ನು ಕೊಡುವಾತನೂ ಕಸಿದುಕೊಳ್ಳುವವನೂ ಶ್ರೀಹರಿಯೇ ಆಗಿರುವನೆಂಬ ನಿಶ್ಚಯಜ್ಞಾನವುಳ್ಳವನಾಗಬೇಕು) (೪೪-೪೫).

ಶ್ರೀಹರೀಚ್ಛೆಯಿಂದ ದಾರಿದ್ರ್ಯವು ಅವಶ್ಯವಾಗಿ ಪ್ರಾಪ್ತವಾಗಲಿದ್ದರೆ, ಆಗ ಕಳ್ಳರು ರಾಜರು ಮೊದಲಾದವರಿಂದ ಧನಾಪಹಾರವು ಸಂಭವಿಸಿಯೇ ತೀರುತ್ತದೆ; ಆದೇ

**ಹರ್ತಾ ಹಸ್ತಸಹಸ್ರೈಶ್ಚೇತ್ ಧನಸ್ಯ ಭವಿತಾ ಹರಿಃ ।**
**ತದಾ ಹಸ್ತದ್ವಯೇನಾಸೌ ಕಿಯದ್ರಕ್ಷಣಮಾಚರೇತ್ ॥ ೪೯ ॥**
**ತಸ್ಮಾದ್ದಾನಂ ಪ್ರಕುರ್ವೀತ ಸರ್ವವಾಂಛಾಪ್ರಪೂರ್ವಕಂ ।**
**ವಿನಾ ಶರೀರಸಂಕ್ಲೇಶೈರ್ಮಹಾಪುಣ್ಯಂ ಯತೋ ಭವೇತ್ ॥ ೫೦ ॥**

ಯತ್-ಯಾವ ಕಾಲದಲ್ಲಿ ದಾರಿದ್ರ್ಯಂ-ದಾರಿದ್ರ್ಯವು, ಅವಶ್ಯಂ ಸ್ಯಾತ್-(ಶ್ರೀಹರೀಚ್ಛಾನುಸಾರ) ಅವಶ್ಯಕವಾಗಿ ಆಗಲೇಬೇಕೋ, ತದಾ-ಆಗ, ಚೋರನೃಪಾದಿಭಿಃ - ಕಳ್ಳರು, ರಾಜರು ಮೊದಲಾದವರಿಂದ, ಧನಹಾನಿಃ - ಧನ ನಾಶವು, ಭವೇತ್ ಏವ-ಆಗಿಯೇ ಆಗುತ್ತದೆ; ದಾನಾತ್-ದಾನದಿಂದ (ಬ್ರಾಹ್ಮಣರಿಗೆ ದಾನಮಾಡುವುದರಿಂದ), ಪುಣ್ಯಾಧಿಕಃ-ಅಧಿಕ ಪುಣ್ಯವು, ಭವೇತ್-ಉಂಟಾಗುತ್ತದೆ; (ಧನನಷ್ಟವಾದರೂ ಪುಣ್ಯವಾದರೂ ಲಭಿಸುತ್ತದೆ); ಸಂಪದಃ-ಸಂಪತ್ತುಗಳು ಯದಿ ಜಾಯೇರನ್-ಯಾವ ಕಾಲದಲ್ಲಿ ದೊರೆಯುತ್ತಿರುವುವೋ, ತದಾ-ಆಗ, ದಾನಾತ್-ದಾನಮಾಡುವುದರಿಂದ, ಕಿಯಾನ್‌ಕ್ಷಯಃ-ಎಷ್ಟು ಹಾನಿಯಾದೀತು? (ದಶಮಾಂಶ ಮಾತ್ರ ದಾನಕ್ಕೆ ವಿನಿಯೋಗವಾಗುವುದಷ್ಟೆ); ಹರಿಃ-ಶ್ರೀಹರಿಯು, ಹಸ್ತ ಸಹಸ್ರೈಃ-ತನ್ನ ಅನಂತಹಸ್ತಗಳಿಂದ, ನೃಣಾಂ-ಮನುಷ್ಯರಿಗೆ, ಪ್ರೀತಃ-ಪ್ರೀತನಾಗಿ, ಯದಿ ದಾತಾ ಸ್ಯಾತ್-ಕೊಡುವವನಾದರೆ, ಅಸ್ಯ-ಮಾನವನ, ಹಸ್ತದ್ವಯೇನ-ಎರಡು ಕೈಗಳಿಂದ, ಧನಸ್ಯ-ಧನದ, ವ್ಯಯಃ - ವ್ಯಯವು, ಕಿಯಾನ್-ಎಷ್ಟು ಭವಿತಾ-ಆದೀತು? (ಅಲ್ಪಮಾತ್ರವೇ); ಹರಿಃ-ಶ್ರೀಹರಿಯು, ಹಸ್ತಸಹಸ್ರೈಃ-ಅನಂತಹಸ್ತಗಳಿಂದ, ಧನಸ್ಯ-ಧನದ, ಹರ್ತಾ- ಅಪಹಾರಮಾಡುವವನು (ಕಿತ್ತುಕೊಳ್ಳುವವನು), ಭವಿತಾ ಚೇತ್-ಆಗುವವನಾದರೆ, ಅಸೌ-ಈ ಮನುಷ್ಯನು, ತದಾ-ಆಗ, ಹಸ್ತದ್ವಯೇನ-ಎರಡು ಕೈಗಳಿಂದ, ಕಿಯತ್-ಎಷ್ಟು ಧನವನ್ನು ರಕ್ಷಣಂ ಆಚರೇತ್-ರಕ್ಷಿಸಿಕೊಳ್ಳ ಬಲ್ಲನು? (ಅಲ್ಪವನ್ನೇ ಉಳಿಸಿಕೊಳ್ಳಲು ಸಾಧ್ಯ); ತಸ್ಮಾತ್-ಆದ್ದರಿಂದ, ಯತಃ-ಯಾವ ಕರ್ಮದಿಂದ, ಶರೀರಸಂಕ್ಲೇಶೈಃ ವಿನಾ-ಶಾರೀರಕಕ್ಲೇಶಗಳಿಲ್ಲದೇ, ಮಹಾಪುಣ್ಯಂ-

---

ಧನವನ್ನು ಬ್ರಾಹ್ಮಣರಿಗೆ ದಾನಮಾಡಿದರೆ ಅಧಿಕಪುಣ್ಯವಾದರೂ ಉಂಟಾಗುತ್ತದೆ; ಯಾವ ಕಾಲದಲ್ಲಿ ಸಂಪತ್ತು (ಧನಾದಿಗಳು) ಮೇಲೆಮೇಲೆ ಲಭಿಸುತ್ತಿರುವುದೋ ಆಗ, ದಾನದಿಂದ ಎಷ್ಟು ನಷ್ಟವಾದೀತು? (ಅಲ್ಪಾಂಶ ಮಾತ್ರ ವ್ಯಯವಾಗುತ್ತದೆ); ಶ್ರೀಹರಿಯು ಮಾನವರಿಗೆ ಪ್ರೀತನಾಗಿ ತನ್ನ ಅನಂತಹಸ್ತಗಳಿಂದ ಧನವನ್ನು ಕೊಡುವವನಾದರೆ, ಮಾನವನು ತನ್ನ ಎರಡು ಕೈಗಳಿಂದ ಎಷ್ಟು ಧನವನ್ನು ವ್ಯಯಮಾಡಿಯಾನು? (ಅಲ್ಪಮಾತ್ರವೇ); ಅದೇ ಶ್ರೀಹರಿಯು, ತನ್ನ ಸಹಸ್ರಬಾಹುಗಳಿಂದ, ಧನವನ್ನು ಕಿತ್ತುಕೊಳ್ಳಲಿಚ್ಛಿಸಿದರೆ, ಮನುಷ್ಯನು ಎರಡು ಕೈಗಳಿಂದ ಎಷ್ಟು ಧನವನ್ನು ರಕ್ಷಿಸಿಕೊಳ್ಳಬಲ್ಲನು? (ಅಲ್ಪವನ್ನು ಮಾತ್ರ); ಆದ್ದರಿಂದ,

ಮಹಾಪುಣ್ಯವು, ಭವೇತ್ - ಉಂಟಾಗುವುದೋ, (ಅಂತಹ), ಸರ್ವಾಂಥಾ ಪ್ರಪೂರ್ವಕಂ-ಸರ್ವಾಭೀಷ್ಟಪ್ರದವಾದ, ದಾನಂ-ದಾನವನ್ನು, ಪ್ರಕುರ್ವೀತ-ಮಾಡತಕ್ಕದ್ದು.

**ಸರ್ವೇಽಪಿ ಯದಿ ದಾತಾರಃ ಸ್ಯುಸ್ತದಾಗ್ನಿನೃಪಾದಯಃ ।**

**ಕಿಂ ದಹೇಯುರ್ಹರೇಯುಃ ಕಿಂ ತಸ್ಮಾತ್ತೇ ವಿರಲಾ ಭುವಿ ॥ ೫೧ ॥**

ಸರ್ವೇ ಅಪಿ-ಎಲ್ಲರೂ, ಯದಿ-ಒಂದುವೇಳೆ, ದಾತಾರಃ-ದಾನಮಾಡುವವರು, ಸ್ಯುಃ-ಆದರೆ, ತದಾ-ಆಗ, ಅಗ್ನಿನೃಪಾದಯಃ-ಅಗ್ನಿರಾಜಾದಿಗಳು, ಕಿಂ-ಏನನ್ನು ದಹೇಯುಃ-ಸುಡುವರು (ದಹಿಸುವರು), ಕಿಂ-ಏನನ್ನು ಹರೇಯುಃ-ಅಪಹರಿಸುವರು? (ಸಂಪದಾದಿಗಳ ವಿನಾಶಕ್ಕೆ ಅವಕಾಶವಿಲ್ಲದಂತಾಗುತ್ತದೆ); ತಸ್ಮಾತ್-ಆದ್ದರಿಂದ, ಭುವಿ-ಲೋಕದಲ್ಲಿ, ತೇ-ಅವರು (ದಾತರು), ವಿರಲಾಃ-ವಿರಳರು.

**ನ ವಿಪ್ರಂ ಕೋಪಯೇದ್ವಿದ್ವಾನ್ ರುಷ್ಟಂ ಚ ಪರಿಸಾಂತ್ವಯೇತ್ ।**

**ಪ್ರತಿಕೋಪಂ ನ ಕುರ್ವೀತ ಯದಿಚ್ಛೇಚ್ಛ್ರೇಯ ಆತ್ಮನಃ ॥ ೫೨ ॥**

**ಸಾಂತ್ವ್ಯಮಾನೋಽಪಿ ಸಾಂತ್ವೇನ ಶಕ್ಯಾ ಚೇದ್ಗೃಹಮೇಧಿನಾ ।**

**ನ ಶಾಂತಿಂ ಲಭತೇ ತರ್ಹಿ ನ ಗೃಹೀ ದೋಷಭಾಗ್ಭವೇತ್ ॥ ೫೩ ॥**

ವಿದ್ವಾನ್-ವಿವೇಕಿಯು (ತಿಳಿದವನು), ವಿಪ್ರಂ-ಬ್ರಾಹ್ಮಣನನ್ನು ನ ಕೋಪಯೇತ್-ಸಿಟ್ಟಾಗುವಂತೆ ಮಾಡಬಾರದು; ರುಷ್ಟಂ ಚ-ಕುಪಿತನಾದ ವಿಪ್ರನನ್ನೂ, ಪರಿಸಾಂತ್ವಯೇತ್-ಎಲ್ಲ ಯತ್ನದಿಂದ ಶಾಂತನನ್ನಾಗಿ ಮಾಡಬೇಕು (ಸಮಾಧಾನ

---

ಯಾವ ಕರ್ಮದಿಂದ ದೇಹಕ್ಲೇಶಾದಿಗಳಿಲ್ಲದೇ, ಮಹಾಪುಣ್ಯವು ದೊರೆಯುವುದೋ, ಅಂತಹ ಸಕಲಾಭೀಷ್ಟಗಳನ್ನು ಪೂರೈಸುವ ದಾನವೆಂಬ ಪವಿತ್ರಕರ್ಮವನ್ನು ಶ್ರೀಹರಿಯು ಸಂಪತ್ತನ್ನು ಅನುಗ್ರಹಿಸಿದಾಗ, ಅವಶ್ಯವಾಗಿ ಮಾಡತಕ್ಕದ್ದು (೪೬-೫೦). ದಾನಿಗಳು (ದಾನ ಕೊಡುವವರು) ಜಗತ್ತಿನಲ್ಲಿ ಬಹು ವಿರಳರು; ಏಕೆಂದರೆ, ಎಲ್ಲರೂ ಉದಾರಿಗಳಾಗಿ ದಾನಮಾಡುವುದಾದರೆ, ಅಗ್ನಿ ರಾಜ ಚೋರಾದಿಗಳಿಗೆ ಏನೂ ಕೆಲಸವಿರುವುದಿಲ್ಲ; ಅಗ್ನಿಯು ಏನು ದಹಿಸಬೇಕು—ರಾಜಾದಿಗಳು ಯಾವ ಸಂಪತ್ತನ್ನು ಅಪಹರಿಸಬೇಕು? ದಹಿಸಲು ಮತ್ತು ಅಪಹರಿಸಲು ಕಾರಣವೇ ಉಳಿಯುವುದಿಲ್ಲವೆಂದರ್ಥ—ಜಗತ್ತಿನಲ್ಲಿ ದಾನಿಗಳು ಬಹು ವಿರಳರು (೫೧). ವಿವೇಕಿಯು ಬ್ರಾಹ್ಮಣನನ್ನು ಎಂದೂ ಕೋಪಗೊಳಿಸಬಾರದು; ಕುಪಿತನಾದವನನ್ನು ಸಮಾಧಾನಗೊಳಿಸಬೇಕು—ಆತನ ಕೋಪಕ್ಕೆ ಪ್ರತಿಯಾಗಿ ಕೋಪವನ್ನು ಮಾಡಬಾರದು—ಆತನ ವಿಷಯಕ್ಕೆ ತಾನೂ ಕೋಪಗೊಳ್ಳಬಾರದು; ಈ ನಿಯಮವನ್ನು ತನ್ನ ಶ್ರೇಯಸ್ಸನ್ನು (ಇಹಪರಗಳ ಕ್ಷೇಮವನ್ನು) ಅಪೇಕ್ಷಿಸುವ ಪುರುಷನು, ಸರ್ವದಾ ಪಾಲಿಸಬೇಕು;

ಗೊಳಿಸಬೇಕು); ಆತ್ಮನಃ-ತನ್ನ ಶ್ರೇಯಃ-ಶ್ರೇಯಸ್ಸನ್ನು (ಕ್ಷೇಮವನ್ನು), ಯದಿಚ್ಛೇತ್-ಅಪೇಕ್ಷಿಸುವವನಾದರೆ, ಪ್ರತಿಕೋಪಂ-(ಬ್ರಾಹ್ಮಣನನ್ನು ವಿರೋಧಿಸಿ) ತಾನೂ ಕೋಪವನ್ನು, ನ ಕುರ್ವೀತ-ಮಾಡಕೂಡದು (ವಿಪ್ರನು ಕುಪಿತನಾದರೆ, ಪ್ರತಿಯಾಗಿ ತಾನೂ ಅವನಮೇಲೆ ಕೋಪಮಾಡಬಾರದು); ಸಾಂತ್ವೇನ- ಸಮಾಧಾನನುಡಿಗಳುಳ್ಳ, ಗೃಹಮೇಧಿನಾ-ಗೃಹಸ್ಥರಿಂದ, ಶಕ್ತ್ಯಾ-ತನ್ನ ಶಕ್ತಿ ಇದ್ದಷ್ಟು ಸಾಂತ್ವ್ಯಮಾನಃ ಅಪಿ-ಸಮಾಧಾನಮಾಡಿದರೂ, ಶಾಂತಿಂ-ಸಮಾಧಾನವನ್ನು ನ ಲಭತೇ ಚೇತ್-(ಆ ವಿಪ್ರನು) ಹೊಂದದಿದ್ದರೆ, ತರ್ಹಿ-ಆಗ, ಗೃಹೀ-ಗೃಹಸ್ಥನು, ದೋಷಭಾಕ್-ದೋಷ ಭಾಗಿಯು (ತಪ್ಪಿತಸ್ಥನು), ನ ಭವೇತ್-ಆಗುವುದಿಲ್ಲ.

**ಶೌಚಂ ಸ್ನಾನಂ ಜಪೋ ಹೋಮಃ ಸ್ವಾಧ್ಯಾಯಪಿತೃತರ್ಪಣಂ ।**
**ಕಾಲೇ ಕಾಲೇ ಪ್ರಕುರ್ವೀತ ತತ್ತಪಃ ಪರಿಕೀರ್ತಿತಂ ॥ ೫೪ ॥**
**ಶ್ರವಣಂ ಮನನಂ ವಿಷ್ಣೋಸ್ತಪಸಾಮುತ್ತಮಂ ತಪಃ ।**
**ಅವಶ್ಯಂ ತತ್ತಪಂ ಕುರ್ಯಾತ್ ಧ್ಯಾನಂ ಚಾಪಿ ವಿಶೇಷತಃ ॥ ೫೫ ॥**
**ಮಹಾಪುಣ್ಯಂ ಮೋಕ್ಷಬೀಜಂ ಸಂಸಾರೇಪಿ ಸುಖಪ್ರದಂ ।**
**ಧನವಾನ್ನಿರ್ಧನೋ ವಾಪಿ ತದವಶ್ಯಂ ಸದಾ ಚರೇತ್ ॥ ೫೬ ॥**

ತ್ರಿವಿಧ ತಪಸ್ಸುಗಳನ್ನು ಸಂಗ್ರಹಿಸಿ ನಿರೂಪಿಸುತ್ತಾರೆ:—

ಶೌಚಂ-ವ್ಯಕ್ತಿಕಾಶೌಚ (ಮಲಮೂತ್ರವಿಸರ್ಜನೆಯ ನಂತರ ಮಣ್ಣು ನೀರುಗಳಿಂದ ಮಾಡಿಕೊಳ್ಳಬೇಕಾದ ಶುದ್ಧತೆ), ಸ್ನಾನಂ-(ವಿಧ್ಯುಕ್ತಕ್ರಮದಿಂದ ತೀರ್ಥಗಳಲ್ಲಿ ಅಥವಾ ತೀರ್ಥಾಭಿಮಾನಿಗಳನ್ನು ಆಹ್ವಾನಿಸಿ ಅಭಿಮಂತ್ರಿಸಿದ ಜಲದಲ್ಲಿ) ಸ್ನಾನವೂ, ಜಪಃ-(ಗುರೂಪದಿಷ್ಟ ಮಂತ್ರಗಳ ಆವೃತ್ತಿರೂಪದ) ಜಪವೂ, ಹೋಮಃ- (ವೈಶ್ವದೇವಾದಿ) ಹೋಮವೂ, ಸ್ವಾಧ್ಯಾಯಪಿತೃತರ್ಪಣಂ-ವೇದಾಧ್ಯಯನ ಮತ್ತು ಪಿತೃತರ್ಪಣಾದಿಯೂ, (ಇವುಗಳನ್ನು), ಕಾಲೇ ಕಾಲೇ-ಆಯಾ ಕಾಲದಲ್ಲಿ (ನಿರ್ದಿಷ್ಟ ಕಾಲಗಳಲ್ಲಿ ತಪ್ಪದೇ), ಪ್ರಕುರ್ವೀತ-ಮಾಡತಕ್ಕದ್ದು;

---

ಯಾವನೊಬ್ಬ ಗೃಹಸ್ಥನು ತನ್ನ ಶಕ್ತಿಯಿದ್ದಷ್ಟು ಮೃದುನುಡಿಗಳಿಂದ ಸಮಾಧಾನಗೊಳಿಸಿದರೂ ಕುಪಿತನಾದ ಬ್ರಾಹ್ಮಣನು ಶಾಂತನಾಗದಿದ್ದರೆ, ಆ ಗೃಹಸ್ಥನಿಗೆ ಯಾವ ದೋಷವೂ ಸ್ಪರ್ಶಿಸುವುದಿಲ್ಲ (ದೋಷಭಾಗಿಯಾಗುವುದಿಲ್ಲ) (೫೨-೫೩). ಶೌಚ, ಸ್ನಾನ, ಜಪ, ಹೋಮ, ಸ್ವಾಧ್ಯಾಯ, ಪಿತೃತರ್ಪಣಾದಿಗಳನ್ನು ನಿಯತವಾದ ಕಾಲಗಳಲ್ಲಿ ನಿತ್ಯವೂ ಆಚರಿಸಬೇಕು—ಅದೇ ತಪಸ್ಸು; ಶ್ರೀವಿಷ್ಣುವಿನ ಗುಣಗಳ (ಮಹಿಮೆಗಳ) ಶ್ರವಣಮನನಗಳು, ತಪಸ್ಸುಗಳಲ್ಲಿ ಶ್ರೇಷ್ಠವಾದ ತಪಸ್ಸು; ಶಕ್ತಿಯನ್ನು ಮೀರಿ (ಅತಿಕ್ರಮಿಸಿಯೂ-ವಿಶೇಷವಾಗಿ) ಧ್ಯಾನವನ್ನು ಮಾಡಬೇಕು; ಈ ಶ್ರವಣಮನನಧ್ಯಾನರೂಪದ ವಿಷ್ಣೂಪಾಸನೆಯು ಅಪರೋಕ್ಷಜ್ಞಾನಕ್ಕೆ ಪ್ರಧಾನ

**ತತ್**-ಅದು (ಈ ವಿಧ ನಡವಳಿಕೆಯು), **ತಪಃ**-ತಪಸ್ಸೆಂದು, **ಪರಿಕೀರ್ತಿತಃ**-ಹೇಳಲ್ಪಡುತ್ತದೆ; **ವಿಷ್ಣೋಃ**-ಶ್ರೀವಿಷ್ಣುವಿನ (ಶ್ರೀವಿಷ್ಣುಮಹಿಮೆಗಳ-ಗುಣಗಳ), **ಶ್ರವಣಂ**-(ಸದ್ಗುರುಮುಖದಿಂದ) ಶ್ರವಣವೂ, **ಮನನಂ**-(ಶ್ರವಣಮಾಡಿರುದರ) ಮನನವೂ (ಚಿಂತನೆಯೂ), **ತಪಸಾಂ**-(ವಿವಿಧ) ತಪಸ್ಸುಗಳ ಮಧ್ಯದಲ್ಲಿ **ಉತ್ತಮಂ**-ಶ್ರೇಷ್ಠವಾದ, **ತಪಃ**-ತಪಸ್ಸಾಗಿರುತ್ತದೆ; **ತತ್ತಪಃ**-ಆ ತಪಸ್ಸನ್ನು **ಅವಶ್ಯಂ**-ಅವಶ್ಯವಾಗಿ, **ಕುರ್ಯಾತ್**-ಮಾಡತಕ್ಕದ್ದು **ಅಪಿ ಚ**-ಮತ್ತೇನೆಂದರೆ, **ವಿಶೇಷತಃ**-ವಿಶೇಷವಾಗಿ (ಶಕ್ತ್ಯನುಸಾರ ಅಧಿಕವಾಗಿಯೂ), **ಧ್ಯಾನಂ**-ಧ್ಯಾನವನ್ನೂ (ಆಚರಿಸಬೇಕು); **ತತ್**-ಅದು (ಶ್ರವಣಮನನಧ್ಯಾನರೂಪದ ವಿಷ್ಣು ಜಿಜ್ಞಾಸೆಯು), **ಮಹಾಪುಣ್ಯಂ** - ಮಹಾಪುಣ್ಯಪ್ರದವಾದುದು (ಅಪರೋಕ್ಷಜ್ಞಾನ ಸಾಧಕವಾದ ಅಹಾಮ್ಯಪುಣ್ಯವನ್ನು ಉತ್ಪಾದಿಸುತ್ತದೆ; **ಮೋಕ್ಷಬೀಜಂ**-ಅದು (ಆ ಮಹಾಪುಣ್ಯವು ಮತ್ತು ತಲ್ಲಭ್ಯ ಸಾಕ್ಷಾತ್ಕಾರವು) ಮೋಕ್ಷಕ್ಕೆ ಮುಖ್ಯ ಕಾರಣವು; **ಅಪಿ**-ಮತ್ತು **ಸಂಸಾರೇ**-ಸಂಸಾರದಲ್ಲಿಯೂ, **ಸುಖಪ್ರದಂ**-ಸುಖವನ್ನು (ಮನಃಶಾಂತಿಯನ್ನು) ಕೊಡತಕ್ಕದ್ದು; (ಆದ್ದರಿಂದ ಅದನ್ನು), **ಅವಶ್ಯಂ**-ಅವಶ್ಯಕವಾಗಿ, **ಧನವಾನ್**-ಧನವಂತನೂ, **ವಾ**-ಅಥವಾ (ಮತ್ತು), **ನಿರ್ಧನಃ ಅಪಿ**-ದರಿದ್ರನೂ, **ಸದಾ**-ನಿತ್ಯವೂ, **ಆಚರೇತ್**-ಆಚರಿಸಬೇಕು.

**ಸಂಗೇನ ವಿಷ್ಣುಭಕ್ತಾನಾಂ ವಿಷ್ಣೌ ಭಕ್ತಿರ್ವಿವರ್ಧತೇ ।**
**ಸಂಗಾದ್ದುರ್ವಿದುಷಾಂ ಚೈವ ಪ್ರಾಯೇಣ ಕ್ಷಯಮಶ್ನುತೇ ॥ ೫೭ ॥**
**ಅತಃ ಸಂಗಂ ಪ್ರಕುರ್ವೀತ ಸದ್ಭಿರೇವ ಸದಾ ನರಃ ।**
**ಶ್ರೋತವ್ಯಂ ಶೃಣುಯಾತ್ತೇಭ್ಯಃ ಕಥಾ ಕುರ್ಯಾಚ್ಚ ತೈಃ ಸಹ ॥ ೫೮ ॥**

**ವಿಷ್ಣುಭಕ್ತಾನಾಂ**-ವಿಷ್ಣುಭಕ್ತರ, **ಸಂಗೇನ**-ಸಹವಾಸದಿಂದ, **ವಿಷ್ಣೌ**-ಶ್ರೀವಿಷ್ಣುವಿನಲ್ಲಿ **ಭಕ್ತಿಃ**-ಭಕ್ತಿಯು, **ವಿವರ್ಧತೇ**-ಅಭಿವೃದ್ಧಿಗೊಳ್ಳುತ್ತದೆ; **ದುರ್ವಿದುಷಾಂ**-(ವಿಷಯಾಸಕ್ತರಾದ) ಮಿಥ್ಯಾಜ್ಞಾನಿಗಳ, **ಸಂಗಾತ್ ಏವ**-ಸಹವಾಸದಿಂದಲೇ, **ಪ್ರಾಯೇಣ**-ಬಹುಶಃ, **ಕ್ಷಯಂ**-ಹ್ರಾಸವನ್ನು (ಭಕ್ತಿಭಾವವು), **ಅಶ್ನುತೇ ಚ**-

---

ಸಾಧನವಾದ ಮಹಾತಪಸ್ಸು; ಅತ ಏವ ಮೋಕ್ಷಬೀಜ(ಕಾರಣ)ವೂ ಆಗಿರುತ್ತದೆ; ಮುಕ್ತಿಗೆ ಮಾತ್ರ ಸಾಧನವಲ್ಲ—ಸಂಸಾರದಲ್ಲಿ ಸಹ ಸುಖಪ್ರದವಾದುದು; ಆದ್ದರಿಂದ ಧನವಂತನಾಗಲಿ ದರಿದ್ರನಾಗಲಿ, ತಪಸ್ಸನ್ನು ಅವಶ್ಯವಾಗಿ ಸದಾ (ನಿತ್ಯವೂ) ಆಚರಿಸಬೇಕು (೫೪-೫೬). ವಿಷ್ಣುಭಕ್ತರ ಸಹವಾಸದಿಂದ ಶ್ರೀವಿಷ್ಣುವಿನಲ್ಲಿ ಭಕ್ತಿಯು ಅಭಿವೃದ್ಧವಾಗುತ್ತದೆ; ದುಷ್ಟಜ್ಞಾನಿಗಳ ಸಂಗದಿಂದ ಪ್ರಾಯಃ, ಉದಯವಾಗಿದ್ದ ಅಲ್ಪಭಕ್ತಿಯೂ, ನಷ್ಟವಾಗುತ್ತದೆ; ಆದ್ದರಿಂದ ಸಜ್ಜನರ (ಭಕ್ತರ) ಸಂಗವನ್ನೇ ಮನುಷ್ಯನು, ಸದಾ ಯತ್ನದಿಂದ ದೊರಕಿಸಿಕೊಳ್ಳಬೇಕು; ಅವರ ಮುಖದಿಂದ ಅವಶ್ಯ

ಹೊಂದುತ್ತದೆಂಬುದು ನಿಶ್ಚಯ; ಅತಃ-ಆದ್ದರಿಂದ, ಸದಾ-ಎಲ್ಲ ಕಾಲದಲ್ಲಿ, ನರಃ-ಮನುಷ್ಯನು, ಸದ್ಭಿಃ ಏವ-ಸಜ್ಜನರದೇ ಆದ, ಸಂಗಂ-ಸಹವಾಸವನ್ನು, ಪ್ರಕುರ್ವೀತ-ಮಾಡಬೇಕು; ತೇಭ್ಯಃ-ಅವರಿಂದ, ಶ್ರೋತವ್ಯಂ-ಅವಶ್ಯ ಶ್ರವಣೀಯವಾದುದನ್ನು ಶೃಣುಯಾತ್-ಶ್ರವಣಮಾಡಬೇಕು; ಚ-ಮತ್ತು, ತೈಃ-ಸಹ-ಅವರಿಂದ ಕೂಡಿ, ಕಥಾಃ-ಭಗವನ್ಮಹಿಮೆಗಳ ವಿಷಯವನ್ನು ಕುರ್ಯಾತ್- ಪ್ರಸ್ತಾಪಿಸುತ್ತಿರಬೇಕು.

**ಸದಾ ಸಂತೋಽಭಿಗಂತವ್ಯಾ ಯದ್ಯಪ್ಯುಪದಿಶಂತಿ ನಃ ।**

**ಯಾಶ್ಚ ಸ್ವೈರಕಥಾಸ್ತೇಷಾಮುಪದೇಶಾ ಭವಂತಿ ಹಿ ॥ ೫೯ ॥**

ಸದಾ-ಸರ್ವದಾ, ಸಂತಃ-ಸಜ್ಜನರು (ಭಕ್ತರು-ಜ್ಞಾನಿಗಳು), ಅಭಿಗಂತವ್ಯಾಃ-ಹೊಂದಲ್ಪಡುವವರಾಗಬೇಕು (ಹುಡುಕಿಕೊಂಡು ಹೋಗಿ ಅವರನ್ನು ಸೇರಬೇಕು); ಯದ್ಯಪಿ-ಹೇಗಿದ್ದರೂ, ನಃ-ನಮಗೆ, ಉಪದಿಶಂತಿ-(ಅವರು) ಭಗವದ್ಗುಣಗಳನ್ನು ಉಪದೇಶಮಾಡುತ್ತಾರೆ; ಹಿ-ಹೀಗಿದ್ದರೂ ವಿಶೇಷವೇನೆಂದರೆ, ತೇಷಾಂ-ಅವರ ಸಜ್ಜನರ, ಯಾಃ-ಯಾವ, ಸ್ವೈರಕಥಾಃ-ಸ್ವಚ್ಛಂದವಾದ (ಸಹಜವಾದ) ಆಲಾಪಗಳೂ (ನುಡಿಗಳೂ), ಉಪದೇಶಾಃ-ಉಪದೇಶಗಳೇ, ಭವಂತಿ-ಆಗುತ್ತವೆ. (ಸಜ್ಜನರು ವ್ಯರ್ಥಾಲಾಪವನ್ನು ಮಾಡುವುದೇ ಇಲ್ಲ-ಅವರ ನುಡಿಗಳೆಲ್ಲವೂ ಒಂದೊಂದು ವಿಧದಿಂದ ಮಾರ್ಗಪ್ರದರ್ಶಕವೇ ಆಗಿರುತ್ತವೆ.

**ಶಕ್ತಿವಂಚನತೋ ದಾನಂ ಶಾಠ್ಯದಾನಂ ಪ್ರಕೀರ್ತಿತಂ ।**

**ಹರಿಸ್ತೇನ ನ ತುಷ್ಯೇತ ಫಲಮಲ್ಪಂ ಭವೇತ್ತತಃ ॥ ೬೦ ॥**

ಶಕ್ತಿವಂಚನತಃ-(ತನ್ನ) ಶಕ್ತಿಯನ್ನು ವಂಚಿಸಿ (ನಿಜಸಾಮರ್ಥ್ಯವನ್ನು ಮುಚ್ಚಿಟ್ಟು ಕೊಂಡು ಮಾಡುವ), ದಾನಂ-ದಾನವು, ಶಾಠ್ಯದಾನಂ-ಶಾಠ್ಯದಾನವೆಂದು, ಪ್ರಕೀರ್ತಿತಂ-ಹೇಳಲ್ಪಡುತ್ತದೆ; ತೇನ-ಅದರಿಂದ, ಹರಿಃ-ಶ್ರೀಹರಿಯು, ನ ತುಷ್ಯೇತ-

---

ಶ್ರವಣೀಯವಾದ ಭಗವನ್ಮಹಿಮೆಗಳನ್ನು ಶ್ರವಣಮಾಡಬೇಕು ಮತ್ತು ಅವರಿಂದ ಕೂಡಿ, ಪರಸ್ಪರವಾಗಿ ಭಗವತ್ಕಥೆಗಳ ಪ್ರಸ್ತಾಪಮಾಡುತ್ತಿರಬೇಕು (೫೭-೫೮). ಸರ್ವದಾ, ಸಜ್ಜನರನ್ನೇ ಹುಡುಕಿಕೊಂಡು ಹೋಗಿ ಹೊಂದಬೇಕು; ಸಜ್ಜನರು, ಯದ್ಯಪಿ, ನಮಗೆ ಭಗವದ್ಗುಣಗಳನ್ನೇ ಉಪದೇಶಿಸುತ್ತಾರೆ; ಸರ್ವದಾ ಈ ವಿಧವಾದ ಉಪದೇಶವನ್ನೇ ನಿರೀಕ್ಷಿಸುವ ಕಾರಣವಿಲ್ಲ; ಏಕೆಂದರೆ, ಅವರು ಸ್ವೇಚ್ಛೆಯಿಂದ (ಸಹಜವಾಗಿ—ಯಾವ ಉದ್ದೇಶವನ್ನೂ ಹೊಂದದರೇ) ಆಡುವ ನುಡಿಗಳೂ (ಸಾಮಾನ್ಯ ಆಲಾಪಗಳೂ), ಉಪದೇಶರೂಪವಾಗಿಯೇ ಇರುತ್ತವೆ (೫೯) ಶಕ್ತಿಯನ್ನು (ಸ್ವಯೋಗ್ಯತೆಯನ್ನು) ವಂಚಿಸಿ (ಮುಚ್ಚಿಟ್ಟು) ಮಾಡುವ ದಾನವು ಶಾಠ್ಯದಾನವೆನಿಸುತ್ತದೆ; ಶ್ರೀಹರಿಯು ಅದರಿಂದ ಸಂತುಷ್ಟನಾಗುವುದಿಲ್ಲ; ದಾನದ ಪೂರ್ಣಫಲವೂ ಬರುವುದಿಲ್ಲ—ಫಲವು ಅಲ್ಪವಾಗುತ್ತದೆ (೬೦) ವಿಪ್ರಾವಜ್ಞೆಯಿಂದಲೂ

ತೃಪ್ತನಾಗುವುದಿಲ್ಲ (ಸಂತೋಷಿಸುವುದಿಲ್ಲ—ದಾತನ ವಿಷಯಕ್ಕೆ ಪ್ರಸನ್ನನಾಗುವುದಿಲ್ಲ); ತತಃ-ಆದರಿಂದ (ಶಾಠ್ಯದಾನದಿಂದ), ಅಲ್ಪಂ ಫಲಂ - ಅಲ್ಪವಾದ ಫಲವು, ಭವೇತ್-ಉಂಟಾಗುತ್ತದೆ.[1]

ಅವಮಾನೇನ ಶಾಠ್ಯೇನ ಪಾಪಮಪ್ಯಧಿಕಂ ಭವೇತ್ ।
ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ ॥ ೬೧ ॥
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ।
ಗೃಹಿಣಃ ಶಕ್ತ್ಯಭಾವೇ ತು ಪಾತ್ರಾವಜ್ಞಾ ನ ದೋಷಕೃತ್ ॥ ೬೨ ॥

ಅವಮಾನೇನ-(ವಿಪ್ರರ) ಅವಜ್ಞಾದಿಂದ, ಶಾಠ್ಯೇನ-(ದಾನದಲ್ಲಿ) ಶಕ್ತಿವಂಚನೆಯಿಂದ, ಪಾಪಂ ಅಪಿ-ಪಾಪವಾದರೂ, ಅಧಿಕಂ-ಅತಿಶಯವಾಗಿ, ಭವೇತ್-ಉಂಟಾಗುತ್ತದೆ; (ವಿಪ್ರಾವಜ್ಞಾನವು ಸಂಭವಿಸಿದಂತೆ ಇರಲು ಗಮನಿಸಬೇಕಾದ ಮುಖ್ಯಾಂಶಗಳನ್ನು ಈ ಮುಂದೆ ನಿರೂಪಿಸುತ್ತಾರೆ); ತೃಣಾನಿ - ತೃಣವಿಶೇಷಗಳು (ಹುಲ್ಲು ಚಾಪೆ ಮೊದಲಾದ ಆಸನಾದಿಗಳು), ಭೂಮಿಃ-ಭೂಮಿಯು (ಕೂಡಲು ವಿಶ್ರಮಿಸಲು ಅವಶ್ಯಕವಾದ ಭೂಪ್ರದೇಶ—ಸ್ಥಲ), ಉದಕಂ-ಜಲವು, (ಪಾದ ಪ್ರಕ್ಷಾಲನ, ಆಚಮನಾದಿಗಳಿಗೆ ಬೇಕಾದ ಜಲ), ಚ-ಮತ್ತು, ಚತುರ್ಥೀ-ನಾಲ್ಕನೆಯದಾದ, ಸೂನೃತಾವಾಕ್-ಮೃದುನುಡಿ, ಏತಾನಿ-ಇವುಗಳು, ಸತಾಂ-ಸಜ್ಜನರ, ಗೇಹೇ-ಮನೆಯಲ್ಲಿ, ಕದಾಚನ-ಎಂದೂ, ನ ಉಚ್ಛಿದ್ಯಂತೇ-ಇಲ್ಲದಂತಾಗುವುದಿಲ್ಲ; ಗೃಹಿಣಃ-ಗೃಹಸ್ಥನಿಗೆ (ಮನೆಯ ಯಜಮಾನನಿಗೆ), ಶಕ್ತ್ಯಭಾವೇ ತು-(ಈ ನಾಲ್ಕನ್ನೂ ಅಥವಾ ಅವುಗಳಲ್ಲಿ ಯಾವುದೊಂದನ್ನೂ ಒದಗಿಸಲು ಶಕ್ತಿ ಇಲ್ಲದಿದ್ದರೆ, ಪಾತ್ರಾವಜ್ಞಾ-ಸತ್ಪಾತ್ರನಾದ ಬ್ರಾಹ್ಮಣನನ್ನು ಸತ್ಕರಿಸದಿರುವುದು, ನ ದೋಷಕೃತ್-ದೋಷವನ್ನುಂಟುಮಾಡುವುದಿಲ್ಲ.

---

(ಯೋಗ್ಯನಾದ ಬ್ರಾಹ್ಮಣನನ್ನು ಸತ್ಕರಿಸದಿರುವುದರಿಂದಲೂ), ದಾನಮಾಡುವುದರಲ್ಲಿ ಶಕ್ತಿವಂಚನೆಯಿಂದಲೂ, ಅಧಿಕವಾಗಿ ಪಾಪವೇ ಉಂಟಾಗುತ್ತದೆ; ಕೂಡಲಿಕ್ಕೆ ಆಸನ, ಜಲ, ಕೂಡಲು (ವಿಶ್ರಮಿಸಿಕೊಳ್ಳಲು) ಸ್ಥಲ ಮತ್ತು ಮೃದುನುಡಿ, ಈ ನಾಲ್ಕು, ಪ್ರಾಪ್ತನಾದ ಯಾವ ಬ್ರಾಹ್ಮಣನಿಗೂ, ಯಾವ ಸಜ್ಜನರ ಮನೆಗಳಲ್ಲಿಯೂ ಎಂದೂ ತಪ್ಪುವುದಿಲ್ಲ (ಇಲ್ಲದಂತೆ ಆಗುವುದಿಲ್ಲ—ದೊರೆಯದಿರುವುದಿಲ್ಲ); ಬಂದ ವಿಪ್ರನನ್ನು ಯಥಾಯೋಗ್ಯವಾಗಿ ಸತ್ಕರಿಸಲು ಗೃಹಸ್ಥನು ಅಶಕ್ತನಾಗಿದ್ದರೆ, ಸತ್ಕಾರ ನ್ಯೂನತೆಯು ದೋಷಾಪಾದಕವಾಗುವುದಿಲ್ಲ (೬೧-೬೨). ಸತ್ಪಾತ್ರನಾದ ಬ್ರಾಹ್ಮಣನನ್ನು

1. ಶಕ್ತಿಯನ್ನು ಅತಿಕ್ರಮಿಸಿ, ಆಡಂಬರಕ್ಕಾಗಿ ದಾನಮಾಡಿದರೂ, ಶಕ್ತಿಯನ್ನು ವಂಚಿಸಿ ಕಡಿಮೆ ಕೊಟ್ಟರೂ ಫಲದಲ್ಲಿ ಕೊರತೆಯುಂಟಾಗುತ್ತದೆ—ಶಕ್ತ್ಯನುಸಾರ ಕೊಡುವುದರಿಂದ ಬರುವಷ್ಟು ಪುಣ್ಯ ಬರುವುದಿಲ್ಲ.

ಅಂಧೋ ಯದಿ ನ ಪಶ್ಯೇತ ಭ್ರಾಂತೋ ದದ್ಯಾನ್ಮನೋ ನ ಚೇತ್ ।
ರೋಗೀ ವಾ ಪಂಗುಲೋ ವಾಪಿ ನೋತ್ತಿಷ್ಠೇತ್ತನ್ನ ದೋಷಕೃತ್ ॥ ೬೩ ॥
ಮೂಕಶ್ಚೇನ್ನ ವದೇದ್ವಿಪ್ರಾಂಸ್ತೃಣಭೂಮಿರ್ನ ವಾಪ್ಯತೇ ।
ದೋಷಾಭಾವಸ್ತದೈವಸ್ಯಾದನ್ಯಥಾ ದೋಷಭಾಗ್ಭವೇತ್ ॥ ೬೪ ॥
ಏವಂ ಮಹಾದರಿದ್ರಶ್ಚೇನ್ನದದ್ಯಾದ್ದೋಷಭಾಂಗ್ನ ಹಿ ।

ಅಂಧಃ-ಕುರುಡನು (ಕಣ್ಣಿಲ್ಲದವನು), ಯದಿ ನ ಪಶ್ಯೇತ-(ಬಂದ ಬ್ರಾಹ್ಮಣನನ್ನು) ಕಣ್ಣೆತ್ತಿ ನೋಡದಿದ್ದರೆ, ಭ್ರಾಂತಃ-ಭ್ರಾಂತಚಿತ್ತನು (ಭ್ರಮಿಸಿ ರವನು—ಯಥಾರ್ಥವನ್ನು ನಡೆದುದನ್ನು ತಿಳಿಯದವನು), ಮನಃ-ಮನಸ್ಸನ್ನು ದದ್ಯಾತ್ ನ ಚೇತ್-ಕೊಡದಿದ್ದರೆ (ಬಂದ ವಿಪ್ರನನ್ನು ಮನಸ್ಸಿಗೆ ತಾರದೆ ಅಲಕ್ಷ್ಯಮಾಡಿದರೆ) ರೋಗೀ-ರೋಗಿಯು, ವಾ-ಅಥವಾ, ಪಂಗುಲಃ-ಹೆಳವನು (ಓಡಾಡುವ ಶಕ್ತಿ ಇಲ್ಲದವನು), ನ ಉತ್ತಿಷ್ಠೇತ್-ಮೇಲೆದ್ದು ಗೌರವಿಸದಿದ್ದರೆ, ತತ್-ಅದು (ಈ ವಿಧ ನಡವಳಿಕೆಯು), ನ ದೋಷಕೃತ್-ದೋಷವನ್ನುಂಟು ಮಾಡುವುದಿಲ್ಲ; ಮೂಕಃ-(ಗೃಹಸ್ಥನು) ಮೂಕನು, ವಿಪ್ರಾನ್-ಬ್ರಾಹ್ಮಣರನ್ನು ನ ವದೇತ್ ಚೇತ್-ಮಾತನಾಡಿಸದಿದ್ದರೆ, ವಾ-ಅಥವಾ, ತೃಣಭೂಮಿಃ-ಆಸನಸ್ಥಲಗಳು, ನ ಆಪ್ಯತೇ-(ಬ್ರಾಹ್ಮಣನು) ಹೊಂದದಿದ್ದರೆ (ಆ ಮೂಕನು ನಿವೇದಿಸದಿದ್ದರೆ), ತದಾ-ಆಗ, ದೋಷಾಭಾವ ಏವ-ದೋಷಾಭಾವವೇ, ಸ್ಯಾತ್-ಆಗಿರುತ್ತದೆ; ಅನ್ಯಥಾ-ಹಾಗಲ್ಲದಿದ್ದರೆ (ಉಕ್ತ ವಿಧವಾದ ಅಶಕ್ತತೆಗಳಿಲ್ಲದಿದ್ದರೆ), ದೋಷಭಾಕ್-(ಬ್ರಾಹ್ಮಣನನ್ನು ಸತ್ಕರಿಸದ ಗೃಹಸ್ಥನು) ದೋಷಕ್ಕೆ ಭಾಗಿಯು, ಭವೇತ್-ಆಗುತ್ತಾನೆ; ಏವಂ-ಹೀಗೆಯೇ, ಮಹಾದರಿದ್ರಃ ಚೇತ್-(ಗೃಹಸ್ಥನು) ಮಹಾದರಿದ್ರನು (ಅತಿ

---

ಅವಮಾನಿಸುವುದು (ಯಥಾಯೋಗ್ಯವಾಗಿ ಸತ್ಕರಿಸದಿರುವುದು) ಮಹಾದೋಷವೇ (ದೊಡ್ಡ ಅಪರಾಧವೇ); ಆದರೂ ಮನೆಯ ಯಜಮಾನನು, ಕಣ್ಣಿಲ್ಲದ ಕುರುಡನಾದರೆ, ಭ್ರಾಂತಚಿತ್ತನಾದರೆ, ರೋಗಿಯಾಗಿದ್ದರೆ, ಪಂಗುವಾಗಿದ್ದರೆ, ಬಂದ ಬ್ರಾಹ್ಮಣನನ್ನು ಕಣ್ಣೆತ್ತಿ ನೋಡದ, ಮನಸ್ಸಿಗೆ ತಂದುಕೊಳ್ಳದ, ಎದ್ದುಬಂದು ಗೌರವಿಸದ ದೋಷಕ್ಕೆ ಗುರಿಯಾಗುವುದಿಲ್ಲ; ಮೂಕನಾದ್ದರಿಂದ ಮೃದುನುಡಿಗಳಿಂದ ಆಸನಭೂಮಿಗಳನ್ನು ನಿವೇದಿಸದಿದ್ದರೆ, ಆಗಲೂ ದೋಷಪಾತ್ರನಾಗುವುದಿಲ್ಲ (ಅಥವಾ ತನಗೇ ತೃಣಭೂಮಿಗಳಿಲ್ಲದಿದ್ದರೆ, ಬ್ರಾಹ್ಮಣನಿಗೆ ಅವುಗಳನ್ನು ಕೊಟ್ಟು ಸತ್ಕರಿಸಲಿಲ್ಲವೆಂಬ ದೋಷಕ್ಕೆ ಗುರಿಯಾಗುವುದಿಲ್ಲ); ಈ ವಿಧವಾದ ಅಶಕ್ತತೆಗಳಿಲ್ಲದಿದ್ದರೆ, ಬ್ರಾಹ್ಮಣನನ್ನು ಅಗೌರವಿಸಿದ ಅಪರಾಧಕ್ಕೆ (ಅವಜ್ಞೆಯ ದೋಷಕ್ಕೆ) ಗುರಿಯಾಗುತ್ತಾನೆ; ಹೀಗೆಯೇ ತಾನೇ ಮಹಾದರಿದ್ರನಾಗಿರುವಾಗ, ಬ್ರಾಹ್ಮಣನಿಗೆ ಏನನ್ನೂ ಕೊಡದಿದ್ದರೆ, ದೋಷಭಾಗಿಯಾಗುವುದಿಲ್ಲ (೬೩-೬೪).

ಬಡವನು) ಆದರೆ, ನ ದದ್ಯಾತ್-(ಬ್ರಾಹ್ಮಣನಿಗೆ, ಸತ್ಪಾತ್ರನಿಗೆ) ಏನನ್ನೂ ಕೊಡದಿದ್ದರೆ, ದೋಷಭಾಕ್-ದೋಷಭಾಗಿಯು, ನ ಹಿ-ಆಗುವುದಿಲ್ಲ.

**ಅವಜ್ಞಾಂ ಘಟಯತ್ಯೇವ ಸಂಪದೋ ನಾಶಹೇತವೇ ॥ ೬೫ ॥**
**ವೃದ್ಧಯೇ ಘಟಯತ್ಯೇವ ವಿಪ್ರಾಣಾಂ ತೋಷಣಂ ಹರಿಃ ।**

ಸಂಪದಃ-ಸಂಪತ್ತಿನ (ಧನಾದಿಗಳ), ನಾಶಹೇತವೇ-ನಾಶಕ್ಕಾಗಿ, ಹರಿಃ-ಶ್ರೀಹರಿಯು (ಕರ್ಮಾನುಸಾರ ಸಂಪದ್ವಿಪತ್ತುಗಳನ್ನು ಪ್ರದಾನಮಾಡುವವನಾಗಿ), ಅವಜ್ಞಾಂ ಏವ-(ಬ್ರಾಹ್ಮಣರ) ಅವಜ್ಞೆಯನ್ನೇ, ಘಟಯತಿ-ಸಂಭವಿಸುವಂತೆ ಮಾಡುತ್ತಾನೆ; ವೃದ್ಧಯೇ-(ಸಂಪತ್ತಿನ) ವೃದ್ಧಿಗಾಗಿ, ವಿಪ್ರಾಣಾಂ-ಬ್ರಾಹ್ಮಣರ, ತೋಷಣಂ-ತೋಷಣವನ್ನು (ಸಂಪ್ರೀತಿಗೊಳಿಸುವುದನ್ನು), ಘಟಯತ್ಯೇವ-ಘಟನೆ ಮಾಡುತ್ತಾನೆ (ತಂದೊದಗಿಸುತ್ತಾನೆ) ಎಂಬುದು ಶಾಸ್ತ್ರಸಿದ್ಧವು.

**ಅಪಾಹರತ ಯಲ್ಲಂಕಾಂ ರಾವಣಾದ್ರಾಮರೂಪಧೃಕ್ ॥ ೬೬ ॥**
**ವಿಭೀಷಣಾಯ ತದ್ದಾತುಮರ್ಜಿತಾಂ ಪೂರ್ವಕರ್ಮಭಿಃ ।**
**ಬಲೇರ್ಯತ್ಕೃತಿಜಗ್ರಾಹ ತ್ರೈಲೋಕ್ಯಂ ವಾಮನೋ ಹರಿಃ ॥ ೬೭ ॥**
**ದಾತುಮಿಂದ್ರಾಯ ತದ್ರಾಜ್ಯಂ ಸರ್ವತ್ರೈವಂ ನಿರೀಕ್ಷಯೇತ್ ।**

ಪೂರ್ವಕರ್ಮಭಿಃ-ಪೂರ್ವಕರ್ಮಗಳಿಂದ, (ಕರ್ಮಾನುಸಾರವಾಗಿ), ವಿಭೀಷಣಾಯ-ವಿಭೀಷಣನಿಗೆ, ಉರ್ಜಿತಾಂ-ಸಂಪದಭಿವೃದ್ಧವಾದ, ಲಂಕಾಂ-ಲಂಕಾಧಿಪತ್ಯವನ್ನು, ದಾತುಂ-ಕೊಡಲಿಕ್ಕಾಗಿ, ರಾಮರೂಪಧೃಕ್-ಶ್ರೀರಾಮರೂಪಧಾರಿಯಾದ ಶ್ರೀಹರಿಯು, ರಾವಣಾತ್-ರಾವಣನಿಂದ, ಯತ್ ಅಪಾಹರತ-ಏನು (ಯಾವುದನ್ನು) ಅಪಹರಿಸಿದನೋ, ತತ್-ಅದು (ಅದಕ್ಕಾಗಿಯೇ-ವಿಭೀಷಣನಿಗೆ ಕೊಡಲಿಕ್ಕಾಗಿಯೇ ಸರಿ); ವಾಮನಃ-ವಾಮನರೂಪಿಯಾದ, ಹರಿಃ-ಶ್ರೀಹರಿಯು,

---

ಕರ್ಮಾನುಸಾರ ಜೀವರಿಗೆ ಸಂಪದ್ವಿಪತ್ತುಗಳನ್ನು ಆಯಾ ಕಾಲದಲ್ಲಿ ಪ್ರದಾನಮಾಡುವ ಶ್ರೀಹರಿಯು, ಸಂಪತ್ತಿನ ನಾಶಕ್ಕೆ ಕಾರಣವಾಗಲೆಂದು ಬ್ರಾಹ್ಮಣರ ಅವಜ್ಞೆಯನ್ನು ಘಟನೆ ಮಾಡುತ್ತಾನೆ; ಹಾಗೆಯೇ, ಸಂಪತ್ತಿನ ಅಭಿವೃದ್ಧಿಗಾಗಿಯೇ ಬ್ರಾಹ್ಮಣ ಸಂತೋಷಪಡಿಸುವಿಕೆಯನ್ನೂ ಸಂಘಟಿಸುತ್ತಾನೆ (ಸಂಭವಿಸುವಂತೆ ಮಾಡುತ್ತಾನೆ); ಈ ನಿಮಿತ್ತಗಳನ್ನು ಒದಗಿಸಿ, ಫಲಪ್ರದನಾದವನು, ಸರ್ವಕರ್ತನೂ, ಸ್ವತಂತ್ರನೂ ಆದ ಶ್ರೀಹರಿಯೇ (೬೫). ರಾಮರೂಪಧರನಾದ ಶ್ರೀಹರಿಯು, ರಾವಣನಿಂದ ಸಂಪದಭಿವೃದ್ಧವಾದ ಲಂಕಾರಾಜ್ಯವನ್ನು ಅಪಹರಿಸಿದನು (ರಾವಣನನ್ನು ಯುದ್ಧದಲ್ಲಿ ಕೊಂದು ಸಂಪಾದಿಸಿದನು); ಅದು ಪೂರ್ಣನೂ, ಸರ್ವಸ್ವಾಮಿಯೂ ಆದ ತನಗಾಗಿ ಅಲ್ಲ—ಪೂರ್ವಕರ್ಮಾನುಸಾರವಾಗಿ ರಾಜ್ಯಸಂಪತ್ತನ್ನು ಹೊಂದಬೇಕಾಗಿದ್ದ

ಬಲೇಃ-ಬಲಿಚಕ್ರವರ್ತಿಯಿಂದ, ಯತ್ ಪ್ರತಿಜಗ್ರಾಹ-ಯಾವುದನ್ನು ಪ್ರತಿಗ್ರಹಿಸಿದನೋ (ದಾನರೂಪದಿಂದ ಸ್ವೀಕರಿಸಿದನೋ), ತತ್-ಆ, ತ್ರೈಲೋಕ್ಯಂ ರಾಜ್ಯಂ-ಮೂರು ಲೋಕಗಳ ರಾಜ್ಯಾಧಿಪತ್ಯವನ್ನು, ಇಂದ್ರಾಯ-ಇಂದ್ರನಿಗೆ, ದಾತುಂ-ಕೊಡಲಿಕ್ಕಾಗಿ; ಸರ್ವತ್ರ-ಎಲ್ಲ ಜೀವರ ವಿಷಯದಲ್ಲಿಯೂ, ಏವಂ-ಹೀಗೆಯೇ, (ಸಂಪತ್ತು ಮತ್ತು ನಾಶಗಳ ನಿಯಮವನ್ನು), ನಿರೀಕ್ಷಯೇತ್-ತಿಳಿಯತಕ್ಕದ್ದು.

**ಅಥಾಪಿ ದಯಯಾ ಕ್ಲಿನ್ನಚೇತಾಃ ಸರ್ವೇಶ್ವರೋ ಹರಿಃ ॥ ೬೮ ॥**
**ಯಥಾಪರಾಧಂ ಲೋಕಾನಾಂ ನೈವ ದಂಡಂ ಕರೋತಿ ಸಃ ।**

ಅಥಾಪಿ-ಹೀಗಿದ್ದರೂ (ಬ್ರಾಹ್ಮಣಾವಜ್ಞೆ-ತೋಷಣೆಗಳಿಗೆ ಪೂರ್ವಕರ್ಮಾನುಸಾರವಾಗಿ ಶ್ರೀಹರಿಯು ಫಲವನ್ನು ಕೊಡುವನಾದರೂ), ಸರ್ವೇಶ್ವರಃ-ಸರ್ವಸ್ವಾಮಿಯಾದ (ಸರ್ವನಿಯಾಮಕನಾದ), ಹರಿಃ-ಶ್ರೀಹರಿಯು, ದಯಯಾ-ಕೃಪೆಯಿಂದ, ಕ್ಲಿನ್ನಚೇತಾಃ-ತೊಯ್ದ (ದ್ರವಿಸಿದ) ಮನಸ್ಸುಳ್ಳವನಾಗಿ (ಕೃಪಾಯುಕ್ತನಾದ್ದರಿಂದ), ಸಃ-ಆತನು, ಲೋಕಾನಾಂ-ಪ್ರಜೆಗಳಿಗೆ (ಜೀವರಿಗೆ), ಯಥಾಪರಾಧಂ-(ಅವರ) ಬ್ರಾಹ್ಮಣಾವಜ್ಞಾದಿ ಅಪರಾಧಾನುಸಾರವಾಗಿ (ಅಪರಾಧಕ್ಕೆ ತಕ್ಕಷ್ಟು), ದಂಡಂ-ಶಿಕ್ಷೆಯನ್ನು, ನೈವ ಕರೋತಿ-ಮಾಡುವುದೇ ಇಲ್ಲ. (ಕಡಿಮೆ ಶಿಕ್ಷೆಯನ್ನೇ ಕೊಡುತ್ತಾನೆ—ಸರ್ವನಾಶವನ್ನೇ ಮಾಡುವ ಶಿಕ್ಷೆಯನ್ನು ವಿಧಿಸಬೇಕಾಗಿದ್ದರೂ, ಸ್ವಲ್ಪಭಾಗದ ಸಂಪತ್ತನ್ನೇ ನಾಶಮಾಡುತ್ತಾನೆ).

**ಸಂಪದಶ್ಚಂಚಲಾ ಲೋಕೇ ಗತ್ಯರ್ಯೋಃ ವಶ್ಯಮೇವ ಹಿ ॥ ೬೯ ॥**

---

ವಿಭೀಷಣನಿಗೆ ಕೊಡಲಿಕ್ಕಾಗಿ; ವಾಮನರೂಪಿಯಾಗಿ ಶ್ರೀಹರಿಯು, ಬಲಿಚಕ್ರವರ್ತಿಯಿಂದ ದಾನರೂಪವಾಗಿ ತ್ರೈಲೋಕ್ಯರಾಜ್ಯವನ್ನು ಸ್ವೀಕರಿಸಿದುದು, ಆಗ ಸಂಪತ್ಪ್ರಾಪ್ತಿಗೆ ಅರ್ಹನಾಗಿದ್ದ ಇಂದ್ರನಿಗೆ ಕೊಡಲಿಕ್ಕಾಗಿ; ಹೀಗೆಯೇ ಎಲ್ಲ ಜೀವರ ವಿಷಯದಲ್ಲಿಯೂ ಸಂಪತ್ತಿನ ಪ್ರಾಪ್ತಿ ಮತ್ತು ನಾಶಗಳ ನಿಯಮವನ್ನು ತಿಳಿಯತಕ್ಕದ್ದು (೬೬-೬೭). ಶ್ರೀಹರಿಯು, ಸಂಪತ್ತಿನ ವೃದ್ಧಿನಾಶಗಳನ್ನು ನಿಮಿತ್ತಗಳಾದ ಅವಜ್ಞೆ—ತೋಷಣೆಗಳಂತೆ ಮಾಡಿದರೂ, ಸರ್ವನಿಯಾಮಕನಾದ ಶ್ರೀಹರಿಯು, ದಯಾಪೂರ್ಣನಾದ್ದರಿಂದ, ಅಪರಾಧಕ್ಕೆ ತಕ್ಕ (ಯೋಗ್ಯವಾದ) ಶಿಕ್ಷೆಯನ್ನು ವಿಧಿಸುವುದಿಲ್ಲ; ಕಡಿಮೆಯಾದ ದಂಡವನ್ನೇ ವಿಧಿಸುತ್ತಾನೆ (೬೮). ಲೋಕದಲ್ಲಿ ವಿವಿಧವಾದ ಸಂಪತ್ತುಗಳು ಚಂಚಲವಾಗಿಯೇ ಇರುತ್ತವೆ—ಯಾರೊಬ್ಬನಲ್ಲಿ ಶಾಶ್ವತವಾಗಿ (ಸ್ಥಿರವಾಗಿ) ನಿಲ್ಲುವುದಿಲ್ಲ; ಯದ್ಯಪಿ, ಹೀಗೆ ಸಂಪತ್ತು ಸಂಚರಿಸುತ್ತಲೇ ಇರಬೇಕಾದುದು ಅವಶ್ಯಕವೇ ಸರಿ (ಜೀವರು ಸ್ವಯೋಗ್ಯಗತಿಗಳನ್ನು ಸಾಧಿಸಿಕೊಳ್ಳಲು ಇದು

ಸಂಪದಃ-ಸಂಪತ್ತುಗಳು (ಭೂಗೃಹಧನಾದಿಗಳು), ಚಂಚಲಾಃ-ಚಂಚಲ ವಾದವುಗಳು (ಯಾರೊಬ್ಬನ ಅಧೀನದಲ್ಲಿ ಸ್ಥಿರವಾಗಿ ಚಿರಕಾಲ ನಿಲ್ಲುವುದಿಲ್ಲ); ಲೋಕೇ-ಲೋಕದಲ್ಲಿ, ಅವಶ್ಯಂ-ಅವಶ್ಯಕವಾಗಿ, ಗತ್ವರ್ಯಃ ಏವ ಹಿ-(ಸಂಪತ್ತುಗಳು) ಸಂಚರಿಸುತ್ತಲೇ ಇರಬೇಕಷ್ಟೆ

**ಯಾವಚ್ಛಕ್ತ್ಯಾ ಪ್ರಕುರ್ವೀತ ಬ್ರಾಹ್ಮಣಸ್ಯ ಹಿ ತೋಷಣಂ ।**
**ಯಥಾ ದಾಕ್ಷ್ಯಂ ಪ್ರಕುರ್ವೀತ ತಪೋಽಪಿ ಸ್ವಹಿತೇಪ್ಸಯಾ ॥ ೭೦ ॥**

ಬ್ರಾಹ್ಮಣಸ್ಯ-ವಿಪ್ರನ, ತೋಷಣಂ-ಸಂತೋಷವನ್ನು ಯಾವತ್‌ಶಕ್ತ್ಯಾ-(ತನ್ನ) ಶಕ್ತ್ಯನುಸಾರವಾಗಿ, ಪ್ರಕುರ್ವೀತ-ಮಾಡಲೇಬೇಕು; ಹಿ-ಹೀಗೆಂಬುದು ಶಾಸ್ತ್ರ ನಿರ್ಣಯವು; ಅಪಿ-ಮತ್ತು, ಸ್ವಹಿತೇಪ್ಸಯಾ-ತನ್ನ ಹಿತಕ್ಕಾಗಿಯೇ, ಯಥಾದಾಕ್ಷ್ಯಂ-ಸಾಮರ್ಥ್ಯವಿದ್ದಷ್ಟು, ತಪಃ-ತಪಸ್ಸನ್ನೂ, ಪ್ರಕುರ್ವೀತ-ಮಾಡಬೇಕು. (ಏವಂಚ ಶ್ರೇಯೋಕಾಂಕ್ಷಿಗಳಾದ ಸರ್ವರೂ ದಾನತಪಸ್ಸುಗಳನ್ನು ಯಥಾಶಕ್ತಿ ಮಾಡಲೇ ಬೇಕು).

**ಇತಿ ವಃ ಕಥಿತಂ ವಿಪ್ರಾಃ ಯತ್ ಪೃಷ್ಟಮಖಿಲಂ ಚ ತತ್ ।**
**ಯದನ್ಯತ್ ಪ್ರಷ್ಟುಮಿಚ್ಛಾಸ್ಯಾತ್ತದಪ್ಯಾಖ್ಯಾಮಿ ಶಕ್ತಿತಃ ॥ ೭೧ ॥**

ವಿಪ್ರಾಃ-ಹೇ ಶೌನಕಾದಿಗಳೇ!, ಇತಿ-ಹೀಗೆ, ವಃ-ನಿಮಗೋಸ್ಕರ, ಯತ್-ಯಾವುದು, ಪೃಷ್ಟಂ-ಪ್ರಶ್ನಿಸಲ್ಪಟ್ಟಿತೋ, ತತ್-ಅ, ಅಖಿಲಂ ಚ-ಸಮಸ್ತವೂ (ಎಲ್ಲವೂ), ಕಥಿತಂ-(ನನ್ನಿಂದ) ಹೇಳಲ್ಪಟ್ಟಿತು; ಯತ್ ಅನ್ಯತ್-ಬೇರೆ ಯಾವುದಾದರೂ, ಪ್ರಷ್ಟುಂ-ಪ್ರಶ್ನೆಮಾಡಲು, ಇಚ್ಛಾ-ಇಚ್ಛೆಯು, ಸ್ಯಾತ್-ಉಂಟಾದರೆ, (ಕೇಳಿರಿ), ತದಪಿ-ಅದನ್ನೂ ಸಹ, ಶಕ್ತಿತಃ-(ನನ್ನ) ಶಕ್ತ್ಯನುಸಾರವಾಗಿ, ಆಖ್ಯಾಮಿ-ಹೇಳುತ್ತೇನೆ.

ಬ್ರಾಹ್ಮಣಪ್ರಶಂಸನವೆಂಬ ೩೮ನೇ ಅಧ್ಯಾಯವು ಮುಗಿದುದು.

---

ಅತ್ಯವಶ್ಯಕ (೬೯). ಆದ್ದರಿಂದ ಪ್ರತಿಯೊಬ್ಬ ಸ್ವಹಿತವನ್ನು ಕೋರುವ ವ್ಯಕ್ತಿಯೂ, ಅದಕ್ಕಾಗಿ, ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣರನ್ನು ಗೌರವಿಸಿ, ಸೇವಿಸಿ, ದಾನಾದಿಗಳನ್ನಿತ್ತು ಸಂತೋಷಗೊಳಿಸಬೇಕು ಮತ್ತು ಹೀಗೆಯೇ ಸ್ವಸಾಮರ್ಥ್ಯ ವನ್ನನುಸರಿಸಿ ತಪಸ್ಸನ್ನೂ ಆಚರಿಸಬೇಕು (೭೦). ಹೇ ಶೌನಕಾದಿಗಳೇ! ನೀವು ಕೇಳಿದ ಪ್ರಶ್ನೆಗಳೆಲ್ಲವನ್ನೂ, ನನಗೆ ತಿಳಿದಂತೆ ಉತ್ತರಿಸಿರುವೆನು; ಮತ್ತೇನಾದರೂ ಕೇಳುವುದಿದ್ದಲ್ಲಿ ಪ್ರಶ್ನೆ ಮಾಡಿರಿ—ನನ್ನ ಜ್ಞಾನವಿದ್ದಷ್ಟು ಹೇಳುತ್ತೇನೆ (೭೧).

೩೮ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೩೯

ಶ್ರೀ ವೇದವ್ಯಾಸಾಯ ನಮಃ

ಗಾಲವ ಉವಾಚ—

ಅನಂತಾಸನವೈಕುಂಠನಾರಾಯಣಪುರಾಣಿ ತು ।
ತ್ರೀಣಿ ಧಾಮಾನಿ ವೈ ವಿಷ್ಣೋಃ ಕುತ್ರ ಸಂತೀತಿ ತದ್ವದ ॥ ೧ ॥
ಕಥಂ ಭೋಗಾಃ ಪ್ರಜಾಯಂತೇ ಸರ್ವದೋಷವಿವರ್ಜಿತೇ ।
ಸ್ಥಾನತ್ರಯೇ ತು ಮುಕ್ತಾನಾಂ ನಿರ್ದೋಷಾಣಾಂ ಸ್ವಭಾವತಃ ॥ ೨ ॥
ಕ್ಷುಧಾಂ ವಿನಾ ಕಥಂ ಭಕ್ಷ್ಯಂ ಕಥಂ ಪಾನಂ ತೃಷಾಂ ವಿನಾ ।
ಕಾಮೋದ್ರೇಕಂ ವಿನಾ ಭೋಗಃ ಕಥಂ ಸ್ತ್ರೀಣಾಂ ಪ್ರಜಾಯತೇ ॥ ೩ ॥
ಕ್ಷುಧಾದಯೋ ಯತೋ ದೋಷಾಃ ನಿರ್ದೋಷಾಃ ಸ್ಯುಃ ಕಥಂ ಮುನೇ ।
ಅವಿನಾಶಿನಿ ತತ್ಸ್ಥಾನೇ ಫಲಪುಷ್ಪಾದಯಃ ಕಥಂ ॥ ೪ ॥
ಭುಜ್ಯಂತೇ ವಾಥವೇಚ್ಛೈಕ್ಯಂ ಕಥಂ ಸ್ಯಾದ್ಭೋಕ್ತೃಭೋಗ್ಯಯೋಃ ।
ಸ್ತ್ರೀಪುಂಸಯೋರ್ವಾಹನಾನಾಂ ಗಜಾದೀನಾಂ ಚ ಸರ್ವಶಃ ॥ ೫ ॥
ಇಚ್ಛಾಭೇದೇ ಕಥಂ ಸೌಖ್ಯಮಿಚ್ಛೈಕ್ಯಂ ಸರ್ವದಾ ಕಥಂ ।
ಏತನ್ನೋ ವಿಸ್ತರಾದ್ಬ್ರೂಹಿ ವ್ಯಾಸಶಿಷ್ಯೋಽಸಿ ಸರ್ವವಿತ್ ॥ ೬ ॥

ಗಾಲವರು ಶ್ರೋತೃವಂದದ ಪರವಾಗಿ ಮುಕ್ತಲೋಕಗಳ ಹಾಗೂ ಮುಕ್ತರ ಭೋಗವಿಷಯಕವಾದ ಸಂಶಯಗಳ ಪರಿಹಾರವನ್ನು ಪ್ರಶ್ನಿಸುತ್ತಾರೆ:—

ಅರ್ಥ:—ಅನಂತಾಸನವೈಕುಂಠನಾರಾಯಣಪುರಾಣಿ-ಅನಂತಾಸನ, ವೈಕುಂಠ, ನಾರಾಯಣಪುರ (ಶ್ವೇತದ್ವೀಪ)ಗಳೆಂಬ (ಶ್ರೀಹರಿಯು ನಿತ್ಯವ್ಯಕ್ತನಾಗಿ ವಿರಾಜಿಸುವ ನೆಂಬ), ವಿಷ್ಣೋಃ-ಶ್ರೀವಿಷ್ಣುವಿನ, ತ್ರೀಣಿ ಧಾಮಾನಿ ತು-ತ್ರಿಧಾಮಗಳಾದರೂ (ಮೂರು ಶ್ರೀವಿಷ್ಣುವಾಸಸ್ಥಾನಗಳು), ಕುತ್ರ-ಎಲ್ಲಿ ಸಂತಿ-ಇರುತ್ತವೆ, ತತ್ ವದ-

---

ತಾತ್ಪರ್ಯ:—ಗಾಲವಋಷಿಗಳು ಕೇಳುತ್ತಾರೆ: ಹೇ ಸೂತಾಚಾರ್ಯ! ನೀನು ಶ್ರೀ ವೇದವ್ಯಾಸರ ಶಿಷ್ಯನಾಗಿದ್ದು, ಸರ್ವಶಾಸ್ತ್ರಾರ್ಥಗಳನ್ನು ಬಲ್ಲವನಾಗಿರುವಿ (ಸರ್ವವವನ್ನೂ ತಿಳಿದಿರುವಿ); ಆದ್ದರಿಂದ ಈ ಮುಂದಿನ ನಮ್ಮ ಸಂಶಯಗಳನ್ನು ಪರಿಹರಿಸುವವನಾಗು (ನಮ್ಮ ಪ್ರಶ್ನೆಗಳನ್ನು ಉತ್ತರಿಸು); ಅನಂತಾಸನ, ವೈಕುಂಠ, ನಾರಾಯಣಪುರ (ಶ್ವೇತದ್ವೀಪ)ಗಳೆಂಬ, ಶ್ರೀವಿಷ್ಣುವಿನ (ಶ್ರೀ ವಿಷ್ಣುವು ನಿತ್ಯ ವ್ಯಕ್ತನಾಗಿ ವಾಸಿಸುವ) ತ್ರಿಧಾಮಗಳು, ಎಲ್ಲಿವೆ? ಸ್ವಭಾವದಿಂದಲೇ (ಪ್ರಾಕೃತವಲ್ಲದ್ದರಿಂದ) ಸರ್ವದೋಷಹರಿತವಾದ ಈ ಮೂರು ಸ್ಥಾನಗಳಲ್ಲಿ ದೋಷರಹಿತರಾದ

ಅದನ್ನು ಹೇಳು, ಹೇ ಸೂತಾಚಾರ್ಯ!; ನಿರ್ದೋಷಾಣಾಂ-ದೋಷರಹಿತರಾದ, ಮುಕ್ತಾನಾಂ-ಮುಕ್ತರ (ಮುಕ್ತರು ವಾಸಿಸುವ), ಸ್ವಭಾವತಃ-ಸ್ವಭಾವದಿಂದಲೇ (ಸರ್ವದಾ), ಸರ್ವದೋಷವಿವರ್ಜಿತೇ-ಸಕಲ ದೋಷಗಳಿಂದ ದೂರವಾದ, ಸ್ಥಾನತ್ರಯೇ-(ಈ) ತ್ರಿಧಾಮಗಳಲ್ಲಿ (ಮುಕ್ತಾನಾಂ-ಮುಕ್ತರಿಗೆ) ಭೋಗಾಃ-(ವಿವಿಧವಾದ) ಭೋಗಗಳು, ಕಥಂ-ಹೇಗೆ, ಪ್ರಜಾಯಂತೇ-ಉಂಟಾಗುತ್ತವೆ? ಕ್ಷುಧಾಂ ವಿನಾ-ಹಸಿವೆ ಇಲ್ಲದೇ, ಭಕ್ಷ್ಯಂ-ಭೋಜನವು, ಕಥಂ-ಹೇಗೆ? (ಹೇಗೆ ಯುಕ್ತವಾಗುತ್ತದೆ-ಕೂಡುತ್ತದೆ?); ತೃಷಾಂ ವಿನಾ-ನೀರಡಿಕೆ ಇಲ್ಲದೇ (ದಾಹ ವಿಲ್ಲದೇ), ಪಾನಂ-ಪಾನವು (ಜಲಾದಿಗಳನ್ನು ಕುಡಿಯುವುದು, ಕಥಂ-ಹೇಗೆ? ಕಾಮೋದ್ರೇಕಂ ವಿನಾ-ಸ್ತ್ರೀಸಂಗದ ಉತ್ಕಟೇಚ್ಛೆಯಿಲ್ಲದೇ, ಸ್ತ್ರೀಣಾಂ-ಸ್ತ್ರೀಯರ, (ಸ್ತ್ರೀಯರೊಂದಿಗೆ), ಭೋಗಃ-ಭೋಗವು (ಅಂಗಸಂಗವು), ಕಥಂ-ಹೇಗೆ? ಪ್ರಜಾಯತೇ-(ಮುಕ್ತರಿಗೆ) ಸಂಭವಿಸುತ್ತದೆ? ಯತಃ-ಯಾವ ಕಾರಣದಿಂದ, ಕ್ಷುದಾದಯಃ-ಹಸಿವು, ನೀರಡಿಕೆ ಮೊದಲಾದವು, ದೋಷಾಃ-ದೋಷಗಳೋ, ಮುನೇ-ಹೇ ಸೂತ!, ಕಥಂ-ಹೇಗೆ, ನಿರ್ದೋಷಾಃ-(ಮುಕ್ತರು) ನಿರ್ದೋಷಿಗಳು, ಸ್ಯುಃ-ಆಗುವರು? ಅವಿನಾಶಿನಿ-ನಿತ್ಯವಾದ (ನಾಶರಹಿತವಾದ), ತತ್ ಸ್ಥಾನೇ-ಆ ವೈಕುಂಠಾದಿ ಸ್ಥಾನದಲ್ಲಿ ಕಥಂ-ಹೇಗೆ, ಫಲಪುಷ್ಪಾದಯಃ-(ವಿನಾಶಿಗಳಾದ) ಫಲಪುಷ್ಪಗಳು, (ಇರುತ್ತವೆ?), ವಾ-ಮತ್ತು ಭುಜ್ಯಂತೇ-(ಮುಕ್ತರಿಂದ) ಭೋಗಿಸ ಲ್ಪಡುತ್ತವೆ? ಅಥ-ಮತ್ತು ವಾಹನಾನಾಂ-(ವಾಹನಗಳಾದ, ಗಜಾದೀನಾಂ-ಗಜಾದಿಗಳಿಗೂ, ಸ್ತ್ರೀಪುಂಸಯೋಃ-(ವಾಹ್ಯರಾದ) ಸ್ತ್ರೀಪುರುಷರಿಗೂ, ವಾ-ಅಥವಾ, ಭೋಕ್ತೃಭೋಗ್ಯಯೋಃ-ಭೋಗಿಸುವವ ಮತ್ತು ಭೋಗಿಸಲ್ಪಡುವ ವಸ್ತು, ಇವುಗಳಲ್ಲಿ ಇಚ್ಛೈಕ್ಯಂ-(ಪರಸ್ಪರ) ಇಚ್ಛೆಗಳ ಏಕಭಾವವು (ಇಚ್ಛೆಯಲ್ಲಿ ವಿರೋಧವಿಲ್ಲ ದಿರುವಿಕೆಯು), ಕಥಂ ಸ್ಯಾತ್-ಹೇಗೆ ಆದೀತು? (ಇರುತ್ತದೆ?); ಇಚ್ಛಾಭೇದೇ-(ಭೋಕ್ತೃಭೋಗ್ಯಗಳಲ್ಲಿ-ಪುರುಷ ಸ್ತ್ರೀಯರಲ್ಲಿ) ಇಚ್ಛಾಭೇದವಿದ್ದರೆ, ಕಥಂ-ಹೇಗೆ, ಸೌಖ್ಯಂ-(ಪರಸ್ಪರ) ಸುಖವು (ದೊರೆಯುವುದು?); (ಇಚ್ಛೈಕ್ಯವಿರುವುದಾದರೆ),

---

(ಚಿದಾನಂದ ದೇಹಿಗಳಾದ) ಮುಕ್ತರಿಗೆ ಭೋಗಗಳು ಹೇಗೆ ಸಂಭಾವ್ಯವಾಗುತ್ತವೆ) (ಕೂಡುತ್ತವೆ?): ಏಕೆಂದರೆ ಹಸಿವೆಯಿಲ್ಲದೇ ಊಟವಿಲ್ಲ; ನೀರಡಿಕೆಯಿಲ್ಲದೇ ಜಲಾದಿಪಾನವಿಲ್ಲ; ಕಾಮೋದ್ರೇಕವಿಲ್ಲದೇ ಸ್ತ್ರೀ ಭೋಗವಿಲ್ಲ; ಹಸಿವೆ ತೃಷೆ ಮೊದಲಾದವುಗಳು ದೋಷಗಳು; ನಿರ್ದೋಷಿಗಳಾದ ಮುಕ್ತರಿಗೆ ಇವು ಹೇಗೆ ಕೂಡುತ್ತವೆ? ಒಂದು ವೇಳೆ ಅವರಿಗೆ ಭೋಗೇಚ್ಛೆಯು ಇರುವುದಾದರೆ, ನಿತ್ಯಸ್ಥಾನಗಳಾದ ಈ ವೈಕುಂಠಾದಿಗಳಲ್ಲಿ ನಶ್ವರವಾದ ಫಲಪುಷ್ಪಾದಿಭೋಗ್ಯವಸ್ತುಗಳು ಹೇಗಿರುತ್ತವೆ? ಗಜಾದಿವಾಹನಗಳಿಗೂ, ವಾಹ್ಯರಾದ ಮುಕ್ತರಿಗೂ—ಸ್ತ್ರೀಪುರುಷರಿಗೂ ಏಕಪ್ರಕಾರದ ಇಚ್ಛೆಯು ಹೇಗೆ ಸಂಭವಿಸುತ್ತದೆ? ಭೋಕ್ತೃ ಭೋಗ್ಯ ವಸ್ತುಗಳಲ್ಲಿ

ಇಚ್ಛೈಕ್ಯಂ-ಆ ಏಕ ರೀತಿಯ ಇಚ್ಛೆಯು, ಕಥಂ ಸರ್ವದಾ-ಎಲ್ಲ ಕಾಲದಲ್ಲಿರಲು ಸಾಧ್ಯವೇ? ಏತತ್-ಈ ಎಲ್ಲವನ್ನೂ (ಈ ಎಲ್ಲ ಸಂಶಯಗಳ ಪರಿಹಾರವನ್ನು), ನಃ-ನಮಗೆ, ವಿಸ್ತರಾತ್-ವಿಸ್ತಾರವಾಗಿ, ಬ್ರೂಹಿ-ಹೇಳು; ವ್ಯಾಸಶಿಷ್ಯಃ-ಶ್ರೀ ವೇದವ್ಯಾಸರ ಶಿಷ್ಯನೂ, ಸರ್ವವಿತ್-ಸರ್ವಜ್ಞನೂ (ಅವರ ಅನುಗ್ರಹ ಬಲದಿಂದ ಸರ್ವಶಾಸ್ತ್ರಾರ್ಥಗಳನ್ನು ತಿಳಿದವನೂ), ಅಸಿ-ಆಗಿರುವಿ.

**ಸೂತ ಉವಾಚ—**

**ಬ್ರಹ್ಮಾಂಡಸ್ಯಾಪಿ ವಿಸ್ತಾರಃ ಪಂಚಾಶತ್ ಕೋಟಿಯೋಜನಃ ।**
**ಮಧ್ಯಭಾಗೇ ತಸ್ಯ ಮೇರುರ್ಲಕ್ಷಯೋಜನಮುಚ್ಛ್ರಿತಃ ॥ ೭ ॥**
**ಅಧಃ ಷೋಡಶಸಾಹಸ್ರಯೋಜನಾತ್ತಸ್ಯ ವಿಸ್ತೃತಿಃ ।**
**ದ್ವಾತ್ರಿಂಶದ್ಯೋಜನಾಯಾಮಾ ಶಿರೋ ವಿಸ್ತೃತಿರುಚ್ಯತೇ ॥ ೮ ॥**
**ತನ್ಮಧ್ಯಭಾಗಮಾರಭ್ಯ ಯಾವದ್ಬ್ರಹ್ಮಾಂಡಖರ್ಪರಂ ।**
**ವಿಸ್ತಾರೋ ದಶಕಾಷ್ಠಾಸು ಪಂಚವಿಂಶತಿಕೋಟಯಃ ॥ ೯ ॥**

ಸೂತನು ಹೇಳುತ್ತಾನೆ:—

ಬ್ರಹ್ಮಾಂಡಸ್ಯ-ಬ್ರಹ್ಮಾಂಡದ, ವಿಸ್ತರಃ ಅಪಿ-ವಿಸ್ತಾರವಾದರೂ, ಪಂಚಾಶತ್ ಕೋಟಿಯೋಜನಃ-೫೦ ಕೋಟಿ ಯೋಜನವು (ಆಗಿರುತ್ತದೆ); ತಸ್ಯ-ಅದರ (ಬ್ರಹ್ಮಾಂಡದ), ಮಧ್ಯಭಾಗೇ-ಮಧ್ಯಪ್ರದೇಶದಲ್ಲಿ, ಮೇರುಃ-ಮೇರು (ಪರ್ವತ) ಇದೆ. (ಅದು) ಉಚ್ಛ್ರಿತಃ-ಎತ್ತರದಲ್ಲಿ, ಲಕ್ಷಯೋಜನಂ-ಲಕ್ಷಯೋಜನವುಳ್ಳದ್ದು; ಷೋಡಶಸಾಹಸ್ರಯೋಜನಾತ್-ಹದಿನಾರುಸಾವಿರ ಯೋಜನದಿಂದ, ತಸ್ಯ-ಆ ಮೇರುವಿನ, ಅಧಃ ವಿಸ್ತೃತಿಃ-(ಭೂಮಿಯ) ಕೆಳಭಾಗದ ವಿಸ್ತಾರವು; ದ್ವಾತ್ರಿಂಶದ್ಯೋಜನಾಯಾಮಾ-೩೨ ಸಹಸ್ರಯೋಜನ ಅಗಲವುಳ್ಳ, ಶಿರೋ ವಿಸ್ತೃತಿಃ-ಶಿರಸ್ಸಿನ (ಮೇಲ್ಭಾಗದ) ವಿಸ್ತಾರವುಳ್ಳದ್ದು ಉಚ್ಯತೇ-(ಎಂದು) ಹೇಳಲಾಗುತ್ತದೆ; ತನ್ಮಧ್ಯಭಾಗಂ ಆರಭ್ಯ-ಆ ಮೇರುವಿನ ಮಧ್ಯಭಾಗದಿಂದ ಆರಂಭಿಸಿ, ಬ್ರಹ್ಮಾಂಡ

---

ಭಿನ್ನವಾದ ಇಚ್ಛೆಯಿರುವುದಾದರೆ, ಪರಸ್ಪರ ಸುಖವಾಗಲು ಅವಕಾಶವಿರುವುದಿಲ್ಲ ವಷ್ಟೆ? ಒಂದು ಪಕ್ಷ ಇವರಲ್ಲಿ ಇಚ್ಛೈಕ್ಯವಿರುವುದಾದರೂ ಅದು ಸರ್ವದಾ ಇರುವುದು ಹೇಗೆ ಸಾಧ್ಯ? ಈ ಎಲ್ಲ ನಮ್ಮ ಸಂಶಯಗಳನ್ನು ಪರಿಹರಿಸು (೧-೬). ಸೂತನು ಹೇಳುತ್ತಾನೆ: ಬ್ರಹ್ಮಾಂಡದ ವಿಸ್ತಾರವು ೫೦ ಕೋಟಿ ಯೋಜನಗಳಾಗಿರುತ್ತದೆ; ಇದರ ಮಧ್ಯದಲ್ಲಿ ಮೇರುಪರ್ವತವಿದೆ; ಇದು ೧ ಲಕ್ಷ ಯೋಜನ ಎತ್ತರವಾದುದು; ಭೂಮಿಯ ಕೆಳಗೆ ೧೬,೦೦೦ ಯೋಜನವುಳ್ಳ ಅದರ ಭಾಗವಿದೆ (ಉಳಿದ) ೮೪,೦೦೦ ಯೋಜನದ ಭಾಗವು (ಎತ್ತರವು) ಭೂಮಿಯ ಮೇಲ್ಭಾಗದಲ್ಲಿದೆ; ಅದರ ಶಿರೋಭಾಗವು ೩೨,೦೦೦ ಯೋಜನ ವಿಸ್ತಾರವುಳ್ಳದ್ದು (ಅಗಲವಾಗಿ

ಖರ್ಪರಂ ಯಾವತ್-ಬ್ರಹ್ಮಾಂಡದ (೫೦ ಕೋಟಿ ಯೋಜನದ ಬ್ರಹ್ಮಾಂಡದ ಮೇಲ್ಭಾಗದಲ್ಲಿರುವ) ಖರ್ಪರದ (ಚಿಪ್ಪು ಅಥವಾ ಮುಚ್ಚಳಿಕೆಯ)ವರೆಗೆ, ದಶಕಾಷ್ಠಾಸು-ಹತ್ತೂ ದಿಕ್ಕುಗಳಲ್ಲಿ ವಿಸ್ತಾರಃ-(ಅದರ) ವಿಸ್ತಾರವು (ಅಳತೆಯು), ಪಂಚವಿಂಶತಿಕೋಟಯಃ-೨೫ ಕೋಟಿ ಯೋಜನಗಳು (ಇರುತ್ತದೆ).

**ಜಂಬೂದ್ವೀಪೋಽಭಿತೋ ಮೇರೋಃ ಪಂಚಾಯುತಮಿತಃ ಸ್ಮೃತಃ ।**

**ಲಕ್ಷಯೋಜನವಿಸ್ತಾರಂ ಏವಂ ದ್ವೀಪೋಽಯಮುಚ್ಯತೇ ॥ ೧೦ ॥**

ಮೇರೋಃ-ಮೇರುವಿನ, ಅಭಿತಃ-ಸುತ್ತಲೂ, ಜಂಬೂದ್ವೀಪಃ-ಜಂಬೂದ್ವೀಪ ಇದೆ; (ಅದು) ಪಂಚಾಯುತಮಿತಃ-(ಎಲ್ಲ ದಿಕ್ಕುಗಳಲ್ಲಿ) ೫೦,೦೦೦ ಯೋಜನ ಪರಿಮಿತವೆಂದು, ಸ್ಮೃತಃ-ಹೇಳಲಾಗುತ್ತದೆ; ಏವಂ-ಹೀಗೆ, ಅಯಂ-ಈ, ದ್ವೀಪಃ-ಜಂಬೂದ್ವೀಪವು, ಲಕ್ಷಯೋಜನವಿಸ್ತಾರಂ-೧,೦೦,೦೦೦ ಯೋಜನ ವಿಸ್ತಾರ ವಾಗಿರುತ್ತದೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಪ್ಲಕ್ಷಾದಿ ದ್ವೀಪಷಟ್ಕಂ ತು ಕ್ರಮಾದ್ವಿಗುಣಿತಂ ಮತಂ ।**

**ಪರಿತೋ ವಲಯಾಕಾರಾಃ ಸಪ್ತಾನಾಂ ಸಪ್ತಸಿಂಧವಃ ॥ ೧೧ ॥**

**ಲವಣೇಕ್ಷುಸುರಾಸರ್ಪಿರ್ದಧಿಕ್ಷೀರಾಂಬುಪೂರಿತಾಃ ।**

**ತತ್ರ ಕ್ಷೀರಾಬ್ಧಿಮಧ್ಯೇ ತು ದ್ವಾತ್ರಿಂಶಲ್ಲಕ್ಷಯೋಜನೇ ॥ ೧೨ ॥**

**ಶ್ವೇತದ್ವೀಪೋ ಹರೇರ್ಲೋಕೋ ದ್ವಿಶತಾಯುತಯೋಜನಃ ।**

**ಶಾಕದ್ವೀಪಂ ಸಮಾರಭ್ಯ ಪರಿತೋ ವಲಯಾಕೃತಿಃ ॥ ೧೩ ॥**

ಪ್ಲಕ್ಷಾದಿ ದ್ವೀಪಷಟ್ಕಂ ತು-ಪ್ಲಕ್ಷ ಮೊದಲಾದ ಆರು ದ್ವೀಪಗಳಾದರೋ, ಕ್ರಮಾತ್-ಕ್ರಮದಿಂದ (ಒಂದಕ್ಕಿಂತ ಅದರ ಮುಂದಿನರು), ದ್ವಿಗುಣಿತಂ-ಎರಡರಷ್ಟು

ಭತ್ತಿರಯಂತಿದೆ);[1] ಈ ಮೇರುಪರ್ವತದ ಮಧ್ಯಭಾಗದಿಂದ, ಬ್ರಹ್ಮಾಂಡದ ಖರ್ಪರದವರೆಗೆ, ಹತ್ತೂ ದಿಕ್ಕುಗಳಲ್ಲಿ (ದಿಕ್ಕುವಿದಿಕ್ಕುಗಳು ೮, ಮೇಲೆ ಕೆಳಗೆ ೨, ಹೀಗೆ ದಿಕ್ಕುಗಳು ೧೦), ೨೫,೦೦,೦೦೦೦೦ ಯೋಜನಗಳಾಗುತ್ತದೆ (೭-೯). ಮೇರುಪರ್ವತದ ಸುತ್ತಲೂ, (ನಾಲ್ಕು ದಿಕ್ಕುಗಳಲ್ಲಿಯೂ ಲವಣ ಸಮುದ್ರದವರೆಗೆ) ೫೦,೦೦೦ ಯೋಜನ ಪರಿಮಿತಿಯುಳ್ಳ ಜಂಬೂದ್ವೀಪವಿರುತ್ತದೆ; ಹೀಗೆ ಈ ದ್ವೀಪವು ೧,೦೦,೦೦೦ ಯೋಜನ ವಿಸ್ತಾರವುಳ್ಳದ್ದೆಂದು ಹೇಳಲಾಗುತ್ತದೆ (೧೦).

1. 'ಮೂರ್ಧನಿ ದ್ವಾತ್ರಿಂಶತ್ಸಹಸ್ರಯೋಜನವಿತತೋ ಮೂಲೇ ಷೋಡಶಸಹಸ್ರಂ ತಾವತಾಂತರ್ಭೂಮ್ಯಾಂ ಪ್ರವಿಷ್ಟಃ'— ಎಂದು (ಭಾಗವತವು) ಶಿರೋಭಾಗವು ೩೨,೦೦೦ ಯೋಜನಪರಿಮಿತವಾಗಿ ಅಗಲವಾಗಿ ಹರಡಿಕೊಂಡಿರುತ್ತದೆಂದು ಹೇಳಲಾಗಿದೆ; ಆದ್ದರಿಂದ (೮ನೇ ಶ್ಲೋಕದಲ್ಲಿ) 'ದ್ವಾತ್ರಿಂಶದ್ಯೋಜನಾಯಾತಾ' ಎಂಬುದಕ್ಕೆ ಸಹಸ್ರಶಬ್ದವನ್ನು ಹಿಂದಿನಿಂದ ಆವೃತ್ತಿಮಾಡಿಕೊಂಡು, ೩೨ ಸಾವಿರ ಯೋಜನವೆಂಬರ್ಥವನ್ನು ತಿಳಿಯಬೇಕು.

ವಿಸ್ತಾರವುಳ್ಳದ್ದೆಂದು (ಜಂಬೂದ್ವೀಪವು ಒಂದುಲಕ್ಷ ಯೋಜನ ವಿಸ್ತಾರವಾದ್ದರಿಂದ ಪ್ಲಕ್ಷ ದ್ವೀಪವು ಎರಡುಲಕ್ಷ ಯೋಜನ, ಈ ಪ್ರಕಾರವಾಗಿ), ಮತಂ-ತಿಳಿಯಲ್ಪಟ್ಟಿದೆ; ಸಪ್ತಾನಾಂ-(ಈ) ದ್ವೀಪಗಳ, (ಜಂಬೂದ್ವೀಪ ಮತ್ತು ಪ್ಲಕ್ಷಾದಿ ಆರು, ಹೀಗೆ ಏಳು ದ್ವೀಪಗಳ), ಪರಿತಃ-ಸುತ್ತಲೂ, ವಲಯಾಕಾರಾಃ-ಬಳೆಯಂತೆ (ಕಡಗ ಅಥವಾ ಪಟ್ಟಿಯಂತೆ) ಆಕಾರವುಳ್ಳ, ಸಪ್ತಸಿಂಧವಃ-ಏಳು ಸಮುದ್ರಗಳು (ಇವೆ); ಲವಣೇಕ್ಷುಸುರಾಸರ್ಪಿರ್ದಧಿಕ್ಷೀರಾಂಬುಪೂರಿತಾಃ-(ಇವು ಕ್ರಮವಾಗಿ), ಲವಣ, ಇಕ್ಷು (ಕಬ್ಬಿನ ರಸ), ಸುರೆ, ತುಪ್ಪ ಮೊಸರು, ಹಾಲು ಮತ್ತು ಜಲಗಳಿಂದ ತುಂಬಿವೆ; ತತ್ರ-ಇವುಗಳಲ್ಲಿ, ದ್ವಾತ್ರಿಂಶಲ್ಲಕ್ಷ ಯೋಜನೇ-೩೨ ಲಕ್ಷ ವಿಸ್ತೀರ್ಣದ ಕ್ಷೀರಾಬ್ಧಿ ಮಧ್ಯೇತು-ಕ್ಷೀರಸಮುದ್ರದ ಮಧ್ಯದಲ್ಲಿಯೇ, ದ್ವಿಶತಾಯುತಯೋಜನಃ-೨೦ ಲಕ್ಷ ಯೋಜನ ವಿಸ್ತಾರದ, ಹರೇಃ-ಶ್ರೀಹರಿಯ, ಲೋಕಃ-ಲೋಕವಾದ, ಶ್ವೇತದ್ವೀಪಃ-ಶ್ವೇತದ್ವೀಪವು, (ಇರುತ್ತದೆ); ಶಾಕದ್ವೀಪಂ-ಶಾಕದ್ವೀಪವನ್ನು ಸಮಾರಭ್ಯ-ಆರಂಭಿಸಿ, ಪರಿತಃ-ಸುತ್ತಲೂ, ವಲಯಾಕೃತಿಃ-(ಕ್ಷೀರಸಮುದ್ರವು) ವಲಯಾಕಾರದಿಂದಿರೆ (ಬಳೆಯಂತೆ ಶಾಕದ್ವೀಪವನ್ನು ಸುತ್ತುಗಟ್ಟಿದೆ).

**ಷಡ್‌ಲಕ್ಷಯೋಜನೋತ್ಸೇಧಸ್ತದ್ಭೂಭಾಗಃ ಪ್ರಕೀರ್ತಿತಃ ।**
**ಶ್ರೀಭಾಗಃ ಪರತಸ್ತಸ್ಯ ದುರ್ಗಾಭಾಗೋಽಪಿ ತತ್ಪರಃ ॥ ೧೪ ॥**

ಷಡ್‌ಲಕ್ಷಯೋಜನೋತ್ಸೇಧಃ-ಆರುಲಕ್ಷ ಯೋಜನ ವಿಸ್ತಾರದ ಎತ್ತರವಾದ ಪ್ರದೇಶವು, ತತ್ ಭೂಭಾಗಃ-ಆ ಶ್ವೇತದ್ವೀಪದ ಭೂಭಾಗವೆಂದು, ಪ್ರಕೀರ್ತಿತಃ-ಹೇಳಲ್ಪಡುತ್ತದೆ; ತಸ್ಯ ಪರತಃ-ಅದರ ಮುಂದಿನದು (ಒಳಗಿನದು-ಶ್ವೇತದ್ವೀಪದ

---

ಜಂಬೂದ್ವೀಪದಿಂದ ಮುಂದಿರುವ ಪ್ಲಕ್ಷ ಮೊದಲಾದ ಆರು ದ್ವೀಪಗಳು,[1] ಕ್ರಮವಾಗಿ ಒಂದಕ್ಕಿಂತ ಮತ್ತೊಂದು ಎರಡರಷ್ಟು ವಿಸ್ತಾರವುಳ್ಳವುಗಳಾಗಿವೆ; ಈ ಏಳೂ ದ್ವೀಪಗಳು, ಲವಣ, ಇಕ್ಷು ಸುರೆ, ಸರ್ಪಿ (ತುಪ್ಪ), ದಧಿ (ಮೊಸರು), ಕ್ಷೀರ(ಹಾಲು) ಮತ್ತು ಶುದ್ಧೋದಕಗಳಿಂದ ತುಂಬಿದ ಏಳು ಸಮುದ್ರಗಳಿಂದ, ಸುತ್ತುವರಿಯಲ್ಪಟ್ಟಿವೆ; ಇವುಗಳಲ್ಲಿ ಕ್ಷೀರಸಮುದ್ರವು, ೩೨ ಲಕ್ಷ ಯೋಜನ ವಿಸ್ತಾರವಾದುದು—ಇದು, ೩೨ ಲಕ್ಷ ಯೋಜನ ವಿಸ್ತಾರದ ಶಾಕ ದ್ವೀಪವನ್ನು ಸುತ್ತುಗಟ್ಟಿದೆ; ಈ ಕ್ಷೀರಸಮುದ್ರದ ಮಧ್ಯದಲ್ಲಿ ೨೦ ಲಕ್ಷ ಯೋಜನವಿಸ್ತಾರದ ಶ್ವೇತದೀಪವಿದೆ; ಇದೇ ಹಿಂದೆ ಹೇಳಿದ ತ್ರಿಧಾಮಗಳಲ್ಲಿ (ವಿಷ್ಣುಲೋಕಗಳಲ್ಲಿ) ಒಂದಾದ ಶ್ವೇತದೀಪವು (೧೧-೧೩). ಶ್ವೇತದ್ವೀಪದಲ್ಲಿ ಎತ್ತರವಾದ ಮೂರು ಭಾಗಗಳಿವೆ; ಮೊದಲಿನ ಆರುಲಕ್ಷಯೋಜನ ವಿಸ್ತಾರದ ಭಾಗವು ಭೂಭಾಗವೆನಿಸುತ್ತದೆ; ಅದರ ನಂತರದ ಭಾಗವು ಶ್ರೀಭಾಗವು;

1. ಜಂಬೂ, ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ, ಪುಷ್ಕರಗಳೆಂಬುವು ಸಪ್ತದ್ವೀಪಗಳು; ಕ್ರಮವಾಗಿ, ೧ ೨, ೪, ೮, ೧೬, ೩೨, ೬೪ ಲಕ್ಷ ಯೋಜನ ವಿಸ್ತೀರ್ಣವುಳ್ಳವುಗಳು.

ಮಧ್ಯಭಾಗವು) ಶ್ರೀಭಾಗಃ-ಶ್ರೀಭಾಗವು; ಅಪಿ-ಮತ್ತು ತತ್ಪರಃ-ಅದಕ್ಕಿಂತ ಮುಂದಿನದು, ದುರ್ಗಭಾಗಃ-ದುರ್ಗಭಾಗವು.

**ಸಪ್ತಮಾಚ್ಛಲಧೇಃ ಪಾರೇ ತದರ್ಧ್ಯರ್ಧಾ ಸುವರ್ಣಭೂಃ ।**
**ತಾವಲ್ಲೋಕ ಇತಿ ಪ್ರೋಕ್ತೋ ಭಾನುರಶ್ಮಿವಿಲೋಕನಾತ್ ॥ ೧೪ ॥**

ಅದರ ಮುಂದಿರುವುದು ದುರ್ಗಭಾಗವು[1] (೧೪) ಏಳನೆಯ ಶುದ್ಧಜಲದ ಸಮುದ್ರದಿಂದಾಚೆ, ೯೬ ಲಕ್ಷ ಯೋಜನ ವಿಸ್ತಾರವಾದ ಸುವರ್ಣ ಭೂಮಿಯಿರುವುದು; ಅವರೆಗೆ ಸೂರ್ಯನು ಪ್ರಕಾಶಿಸುತ್ತಾನೆ—ಆದ್ದರಿಂದ, ಈ ಸ್ವರ್ಣಭೂಮಿಯ ತುದಿಯವರೆಗಿನ ಭೂಮಿಯು 'ಲೋಕ'ವೆಂದೂ, ಅದರಾಚೆ ಸೂರ್ಯದರ್ಶನವಾಗಲಿ ಸೂರ್ಯಪ್ರಕಾಶನವಾಗಲಿ ಇಲ್ಲದ್ದರಿಂದ, 'ಅಲೋಕ'

೧. ತ್ರಿಧಾಮಗಳೂ ತಮ್ಮ ಸುತ್ತಲಿನ ಪ್ರದೇಶಕ್ಕಿಂತ ಅತ್ಯಂತ ಎತ್ತರದಲ್ಲಿವೆ; 'ಪೃಥಿವೀಸ್ಥಿತೇಷು ಸರ್ವೇಭ್ಯೋ ಲೋಕೋಽನಂತಾಸನಾತ್ಮಕಃ । ಅಂತರಿಕ್ಷಾತ್ಮಕೇಭ್ಯಶ್ಚ ಶ್ವೇತದ್ವೀಪಸ್ಥಿತೋ ಹರಿಃ । ದ್ಯಾತ್ಮಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ' (ಛಾಂದೋಗ್ಯಭಾಷ್ಯ); ಇದರ ಭಾವಾರ್ಥ:—ಪೃಥ್ವಿಯ ಎಲ್ಲ ಪ್ರದೇಶಗಳಿಗಿಂತ ಎತ್ತರವಾದುದು; ಈ ಎರಡಕ್ಕಿಂತ ಎತ್ತರದಲ್ಲಿ (ಸತ್ಯಲೋಕಕ್ಕಿಂತ ಮೇಲೆ) ಇರುವುದು ವೈಕುಂಠವು. ಭಾಗತವ ತಾತ್ಪರ್ಯದಲ್ಲಿ 'ಸಾಂದ್ರಂ ಕ್ಷೀರಂ ತಥಾ ದಧಿ' ಎಂಬಲ್ಲಿ ಕ್ಷೀರಸಮುದ್ರದ ಕ್ಷೀರವೂ, ದಧಿಸಮುದ್ರದ ದಧಿಯೂ ಘನೀಭೂತವಾದುವೆಂದು ಹೇಳಲಾಗಿದೆ. ಘನೀಭೂತವಾದ ಕ್ಷೀರದಮೇಲೆ ಅಂತರಿಕ್ಷದಲ್ಲಿದ್ದರೂ ಭೂಸ್ಪರ್ಶವುಳ್ಳದ್ದಾದ್ದರಿಂದ (ಕ್ಷೀರದ್ವಾರಾ) ಬೃಹದಾರಣ್ಯಭಾಷ್ಯದಲ್ಲಿ 'ಪೃಥಿವ್ಯಾಂ ಶ್ವೇತಾಖ್ಯೇ ದ್ವೀಪೇ ಮುಕ್ತೈರುಪಾಸಿತಃ'—ಪೃಥ್ವಿಯಲ್ಲಿರುವ ಶ್ವೇತದ್ವೀಪದಲ್ಲಿ ಮುಕ್ತರಿಂದ ಉಪಾಸ್ಯನಾಗಿರುವನೆಂದು ಹೇಳಿರುವುದು ವಿರೋಧವಲ್ಲ.

ಶ್ರೀ ವಿಜಯದಾಸಾರ್ಯರು ಶ್ವೇತದ್ವೀಪಸುಳಾದಿಯಲ್ಲಿ ಹೀಗೆ ಈ ಪ್ರಮೇಯವನ್ನು ನಿರೂಪಿಸಿದ್ದಾರೆ:—'ಸುಧಾಂಬುಧಿ ಮಧ್ಯೇ ಇಪ್ಪತ್ತೈದುದಶಲಕ್ಷ (೧೦+೧೦) ಯೋಜನ (ಗಾವುದ) ಮಿತಿ ವಿಸ್ತಾರ ಶ್ವೇತದ್ವೀಪ । ಅದರೊಳು ತ್ರಿಭಾಗ ಈರಾರು ಪೊಂದಿರಲು । ಭೂ ದುರ್ಗ ಶ್ರೀಭಾಗವೆಂಟು ಲಕ್ಷ । ಉದಧಿ ಎರಡು ಉಂಟು ಅರಣ್ಯವಂ । ಬದರಗಳಾ ಲಕ್ಷವೊಂದೊಂದು ಗಾವುದ । ವಿದಿತದಿಂದಲಿ ಶ್ರೀಭಾಗದೊಳಗೆ ಲಕ್ಷ । ತದನಂತರದಲ್ಲಿಹೊ ಕದಲಕ್ಷದ್ವಯದೊಳು । ಪದುಮನಿಭೇಕ್ಷಣ ವಿಜಯವಿಠ್ಠಲನು । ಮದವಣಗನಾಗಿ ಶ್ರೀಭಾಗದೊಳಪ್ಪ ॥'—ಕ್ಷೀರಾಂಬುಧಿಯ ಮಧ್ಯದಲ್ಲಿ ೨೦ ಲಕ್ಷ ಯೋಜನ ವಿಸ್ತಾರದ ಶ್ವೇತದ್ವೀಪವಿದ್ದು ಅದರಲ್ಲಿ ಮೂರು ಭಾಗಗಳಿವೆ; ಅವುಗಳಲ್ಲಿ ಎರಡು, ಭೂಭಾಗ ಮತ್ತು ದುರ್ಗ ಭಾಗಗಳು; ಒಂದೊಂದು ಆರುಲಕ್ಷ ಯೋಜನದವುಗಳು; ಮೂರನೆಯ ಶ್ರೀಭಾಗವು ಎಂಟುಲಕ್ಷ ಯೋಜನ ವಿಸ್ತಾರವಾದುದು. ಈ ಮೂರು ಭಾಗಗಳನ್ನು ವಿಂಗಡಿಸುವ 'ಅರ' ಮತ್ತು 'ಣ್ಯ' ಎಂಬ ಎರಡು ಅಮೃತ ಸಮುದ್ರಗಳಿವೆ—ಇವು ಒಂದೊಂದೂ ಲಕ್ಷ ಗಾವುದ ಅಗಲವಾದುದು; ಶ್ರೀಭಾಗದಲ್ಲಿ ಒಂದು ಲಕ್ಷ ಗಾವುದದ ನಂತರ ಒಳಗಿರುವ ಎರಡು ಲಕ್ಷ ಗಾವುದ ಪ್ರದೇಶದಲ್ಲಿ ಶ್ರೀವಿಜಯವಿಠ್ಠಲನು, ಮದುವಣಗನಂತೆ (ಪರಮಸುಂದರನಾಗಿ) ವಿರಾಜಿಸುತ್ತಿರುವನು. ಈ ಮುಂತಾದ ಪ್ರಮಾಣಗಳು, ಈ ಶ್ಲೋಕದ ಉಕ್ತಾರ್ಥವನ್ನು ಪುಷ್ಟೀಕರಿಸುತ್ತವೆ.

**ಆಲೋಕಃ ಪರತಃ ಸೂರ್ಯಲೋಕಾಭಾವೇನ ಮೂರ್ತಿತಃ ।**

**ಅಲೋಕಲೋಕಯೋರ್ಮಧ್ಯೇ ಲೋಕಾಲೋಕೋ ಮಹಾಚಲಃ ॥ ೧೬ ॥**

ಸಪ್ತಮಾತ್-ಏಳನೆಯದಾದ, ಜಲಧೇಃ-(ಶುದ್ಧೋದಕ) ಸಮುದ್ರದ, ಪಾರೇ-ಆಚೆ, (ಜಲಧಿಯನ್ನು ದಾಟಿದ ನಂತರ), ತದರ್ಧ್ಯಧಾ-ಅದರ (ಜಲ ಸಮುದ್ರದ) ೧೨ ರಷ್ಟು ಅಂದರೆ (೬೪+೨.೨) ೬೬ ಲಕ್ಷ ಯೋಜನ ವಿಸ್ತಾರದ, ಸುವರ್ಣಭೂಃ-ಸುವರ್ಣಭೂಮಿಯು (ಇರುತ್ತದೆ); ತಾವತ್-ಅಲ್ಲಿಯವರೆಗೆ (ಈ ಸ್ವರ್ಣಭೂಮಿಯ ತುದಿಯವರೆಗೆ), ಭಾನುರಶ್ಮಿಪಿಲೋಕನಾತ್-ಸೂರ್ಯಕಿರಣಗಳು ಪ್ರಕಾಶಿಸುವುದರಿಂದ, ಲೋಕಃ-ಲೋಕವು, ಇತಿ-ಎಂದು, ಪ್ರೋಕ್ತಃ-ಹೇಳಲ್ಪಡುತ್ತದೆ; ಪರತಃ-ಅದರ ಆಚೆ, ಮೂರ್ತಿತಃ-ಬಿಂಬನಾಗಿ, ಸೂರ್ಯಲೋಕಾಭಾವೇನ-ಸೂರ್ಯನು (ಪ್ರಕಾಶವು) ಕಾಣದಿರುವುದರಿಂದ, ಅಲೋಕಃ-ಅಲೋಕವೆಂಬುದಿದೆ; ಅಲೋಕಲೋಕಯೋಃ-ಅಲೋಕಲೋಕಗಳ, ಮಧ್ಯೇ-ಮಧ್ಯದಲ್ಲಿ ಲೋಕಾ ಲೋಕಃ-ಲೋಕಾಲೋಕವೆಂಬ (ಸ್ವರ್ಣಭೂಮಿಯ ಈ ಕಡೆಯ ಪಾರ್ಶ್ವವು ಪ್ರಕಾಶಿತವಾಗಿದ್ದು ಆ ಕಡೆಯ ಪಾರ್ಶ್ವವು-ಮಗ್ಗುಲು, ಅಂಧಕಾರದಿಂದ ಮುಸುಗಿರುವುದರಿಂದ), ಮಹಾಚಲಃ-ಮಹಾಪರ್ವತವು (ಇದೆ).

**ಪಂಚಾಶಲ್ಲಕ್ಷವಿಸ್ತಾರೋ ಲಕ್ಷದ್ವಯಸಮುಚ್ಛ್ರಯಃ ।**

**ಪಂಚಾಯುತಮಿತಾಸ್ತಸ್ಯೋಭಯತೋಧಿತ್ಯಕಾ ಮತಾಃ ॥ ೧೭ ॥**

(ಲೋಕಾಲೋಕಪರ್ವತವು), ಪಂಚಾಶಲ್ಲಕ್ಷ ವಿಸ್ತಾರಃ-೫೦ (ಐವತ್ತು) ಲಕ್ಷ ಯೋಜನ ವಿಸ್ತಾರವುಳ್ಳದ್ದು ಲಕ್ಷದ್ವಯ ಸಮುಚ್ಛ್ರಯಃ - ೨ ಲಕ್ಷ ಯೋಜನ ಎತ್ತರವಾದುದು; ತಸ್ಯ-ಆ ಪರ್ವತದ, ಉಭಯತಃ-ಎರಡೂ ಪಾರ್ಶ್ವಗಳಲ್ಲಿ, ಪಂಚಾಯುತಮಿತಾಃ-(೫೦) ಸಾವಿರ ಯೋಜನ ಅಗಲವುಳ್ಳ; ಅಧಿತ್ಯಕಾಃ-ಕಟ್ಟೆಗಳಂತಿರುವ ಉಪಪರ್ವತಗಳು (ಲೋಕಾಲೋಕ ಪರ್ವತದ ಆಸರಕಟ್ಟೆಗಳಂತೆ), ಮತಾಃ-ಇರುವುವೆಂದು ತಿಳಿಯಲ್ಪಟ್ಟಿವೆ.

**ಲೋಕಾಲೋಕಾತ್ತು ಪರತೋ ಲೋಕಾದ್ದ್ವಿಗುಣಿತಂ ತಮಃ ।**

**ಪರತೋ ದ್ವಿಗುಣಂ ತಸ್ಮಾದ್ಧನೋದಕಮಿತಿ ಸ್ಮೃತಂ ॥ ೧೮ ॥**

---

ವೆಂದೂ ಕರೆಯಲ್ಪಡುತ್ತವೆ; ಈ ಲೋಕಾಲೋಕಗಳ ಮಧ್ಯದಲ್ಲಿ 'ಲೋಕಾಲೋಕ'ವೆಂಬ (ಒಂದು ಪಾರ್ಶ್ವವು ಬೆಳಕಿನಲ್ಲಿಯೂ ಮತ್ತೊಂದು ಪಾರ್ಶ್ವವು ಕತ್ತಲಿನಲ್ಲಿಯೂ ಇರುವ) ಮಹಾ ಪರ್ವತವಿದೆ (೧೫-೧೬). ಈ ಲೋಕಾಲೋಕ ಪರ್ವತವು ೫೦ ಲಕ್ಷ ಯೋಜನ ವಿಸ್ತಾರವಾದುದು—೨ ಲಕ್ಷ ಯೋಜನ ಎತ್ತರವಾಗಿದೆ; ಈ ಪರ್ವತದ ಎರಡೂ ಮಗ್ಗುಲಲ್ಲಿ ೫೦ ಸಾವಿರ ಯೋಜನ ಅಗಲದ ಉಪ ಪರ್ವತಗಳು (ಕಂಭಕ್ಕೆ ಕಟ್ಟೆಯಂತೆ ಆಶ್ರಯವಾಗಿ) ಇರುತ್ತವೆ (೧೭). ಲೋಕಾಲೋಕ

ಲೋಕಾಲೋಕಾತ್-ಲೋಕಾಲೋಕ ಪರ್ವತದ, ಪರತಃ ತು-ಆಚೆಗಾದರೂ ಲೋಕಾತ್ ಭೂಭಾಗಕ್ಕಿಂತ (ಮೇರುವಿನಿಂದ ಲೋಕಾಲೋಕ ಪರ್ವತದವರೆಗೆ ಆಗುವ ವಿಸ್ತಾರಕ್ಕಿಂತ), ದ್ವಿಗುಣಂ-ಎರಡರಷ್ಟು ವಿಸ್ತಾರವುಳ್ಳ, ತಮಃ-ತಮಸ್ಸು (ಇರುತ್ತದೆ); ತಸ್ಮಾತ್-ಆ ತಮಸ್ಸಿನ, ಪರತಃ-ಆಚೆ, ದ್ವಿಗುಣಂ-ತಮಸ್ಸಿನ ಎರಡರಷ್ಟು ವಿಸ್ತಾರದ, ಘನೋದಕಂ-ಘನೀಭೂತವಾದ ಜಲಭಾಗವು, ಸ್ಥಿತಂ-ಇರುತ್ತದೆಂದು ಸ್ಮೃತಂ-ತಿಳಿಯಲ್ಪಟ್ಟಿದೆ.

**ದಧ್ಯಾಕಾರಂ ಜಲಂ ತತ್ತು ನಾನಾದ್ವೀಪಸಮಾಕುಲಂ ।**
**ಯೇಷಾಂ ಮಣಿಪ್ರಕಾಶೇನ ತಮಸೋ ನಾಸ್ತಿ ಸಂಭವಃ ॥೧೯॥**

ತತ್-ಆ, ದಧ್ಯಾಕಾರಂ-ದಧಿಯಂತಿರುವ (ಘನೀಭೂತವಾದ), ಜಲಂ ತು-ಘನೋದಕವಾದರೋ, ನಾನಾದ್ವೀಪ ಸಮಾಕುಲಂ-ಚತುರ್ದ್ವೀಪಗಳಿಂದ ಕೂಡಿದೆ; ಯೇಷಾಂ-ಯಾವ ದ್ವೀಪಗಳ (ದ್ವೀಪಗಳಲ್ಲಿರುವ) ಮಣಿಪ್ರಕಾಶೇನ-ಮಣಿಗಳ ಪ್ರಕಾಶದಿಂದ, ತಮಸಃ-ಕತ್ತಲೆಯ, ಸಂಭವಃ-ಸಂಭವವು (ಆವರಿಸುವ ಅವಕಾಶವು), ನಾಸ್ತಿ-ಇರುವುದಿಲ್ಲ.

**ತತ್ಪರೋ ಖರ್ಪರಂ ಯಾವದನಂತಾಸನಮುಚ್ಯತೇ ।**
**ಲಕ್ಷತ್ರಯಂ ಯೋಜನಾನಾಂ ವಿಸ್ತೃತಂ ವಲಯಾಕೃತಿಃ ॥೨೦॥**

ತತ್ಪರಃ-ಆ ಘನೋದಕದ ಆಚೆಗೆ, ಯೋಜನಾನಾಂ-ಯೋಜನಗಳ, ಲಕ್ಷತ್ರಯಂ-ಮೂರು (೩) ಲಕ್ಷ ವಿಸ್ತೃತಂ-ವಿಸ್ತಾರವುಳ್ಳ, ವಲಯಾಕೃತಿಃ-ಬಳೆಯಂತೆ ಸುತ್ತುಗಟ್ಟಿರುವ, ಯಾವತ್-ಖರ್ಪರಂ-ಬ್ರಹ್ಮಾಂಡದ ಖರ್ಪರದವರೆಗಿನ ಭಾಗವು ಅನಂತಾಸನಂ-ಅನಂತಾಸನವೆಂದು, ಉಚ್ಯತೇ-ಹೇಳಲ್ಪಡುತ್ತದೆ. (ಘನೋದಕದಲ್ಲಿರುವ, ಘನೋದಕದಿಂದ ಸುತ್ತುಗಟ್ಟಲ್ಪಟ್ಟಿರುವ ಅನಂತಾಸನವೆಂಬ ೩ ಲಕ್ಷ ಯೋಜನ ವಿಸ್ತಾರದ ದ್ವೀಪವಿರುತ್ತದೆ).

---

ಪರ್ವತದಿಂದಾಚೆ, ಮೇರುಪರ್ವತದಿಂದ ಅಲ್ಲಿಯವರೆಗಿನ ಭೂಭಾಗದ ಎರಡರಷ್ಟು ವಿಸ್ತಾರವಾದ ತಮಸ್ಸು ಇರುತ್ತದೆ; ಅದರ ಆಚೆಗೆ ತಮಸ್ಸಿನ ಎರಡರಷ್ಟು ವಿಸ್ತಾರದ, ಘನೋದಕವಿರುತ್ತದೆ (೧೮). ದಧಿ (ಮೊಸರಿನಂತೆ)ಯಂತೆ ಹೆಪ್ಪುಗಟ್ಟಿರುವ ಇದರ ಜಲವು, ಚತುರ್ದ್ವೀಪಗಳನ್ನೊಳಗೊಂಡದ್ದಾಗಿದೆ; ಅಲ್ಲಿರುವ ಮಣಿಗಳ ಪ್ರಕಾಶದಿಂದ ಅಲ್ಲಿ ಕತ್ತಲೆ ಮುಸುಕಲು ಅವಕಾಶವೇ ಇಲ್ಲ (೧೯). ಅಲ್ಲಿಂದಾಚೆ ಬ್ರಹ್ಮಾಂಡದ ಖರ್ಪರದವರೆಗೆ, ಅನಂತಾಸನವಿದೆ; ಘನೋದಕದಲ್ಲಿ ಖರ್ಪರದವರೆಗೆ, ೩ (ಮೂರು) ಲಕ್ಷ ಯೋಜನ ವಿಸ್ತಾರವುಳ್ಳ ಅನಂತಾಸನವಿದೆ— ಘನೋದಕದಲ್ಲಿರುವ ಈ ಲೋಕವು (ಅನಂತಾಸನವು) ವಲಯಾಕಾರ (ಬಳೆಯ ಸುತ್ತಿನಂತೆ) ವ್ಯಾಪಿಸಿದೆ (೨೦). ಇಲ್ಲಿಯೂ ಶ್ರೀ, ಭೂ, ದುರ್ಗಾ ಭಾಗಗಳು

**ಶ್ರೀಭೂದುರ್ಗಾತ್ಮಕಾ ಭಾಗಾಸ್ತತ್ರಾಪಿ ಪರತಃ ಸ್ಥಿತಾಃ ।**
**ಏವಂ ಸ್ಥಾನದ್ವಯಂ ವಿಷ್ಣೋರ್ಭೂಮಿಷ್ಠಮಿವ ದೃಶ್ಯತೇ ॥ ೨೧ ॥**
**ಅಧಸ್ತಾದ್ಭೂಮಿನಾಶೇಽಪಿ ತದನಶ್ಯದ್ಧಿ ತಿಷ್ಠತಿ ।**
**ಭೂದುರ್ಗಾಭಾಗಯೋಸ್ತತ್ರ ಭೂಮಿನಾಶೇ ಪ್ರಣಶ್ಯತಿ ॥ ೨೨ ॥**
**ಶ್ರೀಭಾಗೋ ನಿತ್ಯ ಏವಾಸ್ತಿ ಮುಕ್ತೈರೇವ ನಿಷೇವಿತಃ ।**

ತತ್ರಾಪಿ-ಆ ಅನಂತಾಸನದಲ್ಲಿಯೂ, ಶ್ರೀಭೂದುರ್ಗಾತ್ಮಕಾಃ-ಶ್ರೀ, ಭೂ, ದುರ್ಗಾರೂಪದ, ಭಾಗಾಃ-ವಿಭಾಗಗಳು, ಪರತಃ-ಒಂದಾರ ಮೇಲೆ ಒಂದರಂತೆ, ಸ್ಥಿತಾಃ-ಇರುತ್ತವೆ; ಏವಂ-ಹೀಗೆ, ವಿಷ್ಣೋಃ-ಶ್ರೀವಿಷ್ಣುವಿನ, ಸ್ಥಾನದ್ವಯಂ-(ತ್ರಿಧಾಮಗಳಲ್ಲಿ) ಎರಡು ಧಾಮಗಳು, ಭೂಮಿಷ್ಠಂ ಇವ-ಭೂಮಿಯಲ್ಲಿರುವಂತೆ (ಬಹು ಎತ್ತರದಲ್ಲಿದ್ದರೂ ಭೂಸ್ಪರ್ಶವುಳ್ಳವಾದ್ದರಿಂದ, ಭೂಮಿಯಲ್ಲಿದ್ದಂತೆ), ದೃಶ್ಯತೇ-ಕಾಣುತ್ತವೆ; ಅಧಸ್ತಾತ್-ಕೆಳಗಿನ (ಬುಡದಲ್ಲಿರುವ), ಭೂಮಿನಾಶೇಽಪಿ-ಭೂಮಿಯು, (ಪ್ರಳಯದಲ್ಲಿ) ನಷ್ಟವಾದರೂ, ತತ್-ಆ ಸ್ಥಾನದ್ವಯವು (ಶ್ವೇತದ್ವೀಪ ಮತ್ತು ಅನಂತಾಸನವು), ಅನಶ್ಯತ್-ನಾಶವಾಗದೇ, ತಿಷ್ಠತಿ ಹಿ-ಇರುವುದೆಂದು ವೇದಸಿದ್ಧವು; ತತ್ರ-ಇವುಗಳಲ್ಲಿ ಭೂದುರ್ಗಾಭಾಗಯೋಃ-ಭೂಭಾಗದುರ್ಗಾಭಾಗಗಳಿಗೆ, ಭೂಮಿನಾಶೇ-ಭೂಮಿಯು ನಷ್ಟವಾಗುತ್ತಿರಲು, ಪ್ರಣಶ್ಯತಿ-ನಾಶವು ಸಂಭವಿಸುತ್ತದೆ; ಶ್ರೀಭಾಗಃ-ಶ್ರೀಭಾಗವು, ಮುಕ್ತೈಃ ಏವ-ಮುಕ್ತರಿಂದ ಮಾತ್ರ, ನಿಷೇವಿತಃ-ಸೇವಿಸಲ್ಪಟ್ಟು (ವಾಸಿಸಲ್ಪಟ್ಟು), ನಿತ್ಯಃ ಏವ-ನಿತ್ಯವಾಗಿಯೇ (ನಾಶವಿಲ್ಲದೇ) ಅಸ್ತಿ-ಇರುತ್ತದೆ.

**ಪೃಥಿವೀಲೋಕತೋಽಧಸ್ತಾತ್ ಯಾವದ್ಬ್ರಹ್ಮಾಂಡಖರ್ಪರಂ ॥ ೨೩ ॥**
**ಪಂಚವಿಂಶತಿಕೋಟ್ಯಸ್ತು ಯೋಜನಾನಾಂ ಪ್ರಕೀರ್ತಿತಂ ।**

ಪೃಥಿವೀಲೋಕತಃ-ಭೂಲೋಕದಿಂದ, ಅಧಸ್ತಾತ್-ಕೆಳಗೆ, ಬ್ರಹ್ಮಾಂಡ ಖರ್ಪರಂ ಯಾವತ್-ಬ್ರಹ್ಮಾಂಡಖರ್ಪರದವರೆಗೆ, ಯೋಜನಾನಾಂ-ಯೋಜನಗಳ, ಪಂಚವಿಂಶತಿ ಕೋಟ್ಯಃ-೨೫ ಕೋಟಿಗಳು; ಪ್ರಕೀರ್ತಿತಂ ತು-ಹೀಗೆಂದು ಹೇಳಲಾಗಿದೆ.

---

ಮೂರು ವಿಭಾಗಗಳು (ಶ್ವೇತದೀಪದಲ್ಲಿರುವಂತೆ) ಇರುತ್ತವೆ; ಹೀಗೆ, ತ್ರಿಧಾಮಗಳೆಂಬ ಶ್ರೀ ವಿಷ್ಣುವಿನ ನಿತ್ಯಸ್ಥಾನಗಳಲ್ಲಿ, ಎರಡು ಸ್ಥಾನಗಳು ಭೂಮಿಗೆ ಸಂಬಂಧಿಸಿಕೊಂಡು ಆದರೂ ಬಹು ಎತ್ತರದಲ್ಲಿರುತ್ತಾ[1] ಭೂಮಿಯಲ್ಲಿದ್ದಂತೆ ಇರುತ್ತವೆ; ಇವುಗಳ ಕೆಳಗಿರುವ ಭೂಮಿಯು, ಪ್ರಲಯದಲ್ಲಿ ನಷ್ಟಗೊಂಡರೂ, ಈ ಸ್ಥಾನದ್ವಯಗಳಿಗೆ ನಾಶವಿಲ್ಲ; ಇವುಗಳಲ್ಲಿರುವ ಭೂದುರ್ಗಾಭಾಗಗಳಿಗೆ ನಾಶವುಂಟು—ಮುಕ್ತರಿಂದ ಸೇವ್ಯವಾದ, ಶ್ರೀಭಾಗ ಮಾತ್ರ ನಿತ್ಯವಾಗಿಯೇ ನಿಲ್ಲುತ್ತದೆ (೨೧-೨೨). ಭೂಲೋಕ

1. ಇಲ್ಲಿ ಹಿಂದಿನ ೧೪ನೇ ಶ್ಲೋಕದ ಅಡಿಟಿಪ್ಪಣಿಯನ್ನು ನೋಡಿ.

ಲೋಕಾಲೋಕಾತ್-ಲೋಕಾಲೋಕ ಪರ್ವತದ, ಪರತಃ ತು-ಆಚೆಗಾದರೋ ಲೋಕಾತ್ ಭೂಭಾಗಕ್ಕಿಂತ (ಮೇರುವಿನಿಂದ ಲೋಕಾಲೋಕ ಪರ್ವತದವರೆಗೆ ಆಗುವ ವಿಸ್ತಾರಕ್ಕಿಂತ), ದ್ವಿಗುಣಿತಂ-ಎರಡರಷ್ಟು ವಿಸ್ತಾರವುಳ್ಳ, ತಮಃ-ತಮಸ್ಸು (ಇರುತ್ತದೆ); ತಸ್ಮಾತ್-ಆ ತಮಸ್ಸಿನ, ಪರತಃ-ಆಚೆ, ದ್ವಿಗುಣಂ-ತಮಸ್ಸಿನ ಎರಡರಷ್ಟು ವಿಸ್ತಾರದ, ಘನೋದಕಂ-ಘನೀಭೂತವಾದ ಜಲಭಾಗವು, ಇತಿ-ಇರುತ್ತದೆಂದು ಸ್ಮೃತಂ-ತಿಳಿಯಲ್ಪಟ್ಟಿದೆ.

**ದಧ್ಯಾಕಾರಂ ಜಲಂ ತತ್ತು ನಾನಾದ್ವೀಪಸಮಾಕುಲಂ ।**
**ಯೇಷಾಂ ಮಣಿಪ್ರಕಾಶೇನ ತಮಸೋ ನಾಸ್ತಿ ಸಂಭವಃ ॥ ೧೯ ॥**

ತತ್-ಆ, ದಧ್ಯಾಕಾರಂ-ದಧಿಯಂತಿರುವ (ಘನೀಭೂತವಾದ), ಜಲಂ ತು-ಘನೋದಕವಾದರೋ, ನಾನಾದ್ವೀಪ ಸಮಾಕುಲಂ-ಬಹುದ್ವೀಪಗಳಿಂದ ತುಂಬಿದೆ; ಯೇಷಾಂ-ಯಾವ ದ್ವೀಪಗಳ (ದ್ವೀಪಗಳಲ್ಲಿರುವ) ಮಣಿಪ್ರಕಾಶೇನ-ಮಣಿಗಳ ಪ್ರಕಾಶದಿಂದ, ತಮಸಃ-ಕತ್ತಲೆಯ, ಸಂಭವಃ-ಸಂಭವವು (ಆವರಿಸುವ ಅವಕಾಶವು), ನಾಸ್ತಿ-ಇರುವುದಿಲ್ಲ.

**ತತ್ಪರೋ ಖರ್ಪರಂ ಯಾವದನಂತಾಸನಮುಚ್ಯತೇ ।**
**ಲಕ್ಷತ್ರಯಂ ಯೋಜನಾನಾಂ ವಿಸ್ತೃತಂ ವಲಯಾಕೃತಿಃ ॥ ೨೦ ॥**

ತತ್ಪರಃ-ಆ ಘನೋದಕದ ಆಚೆಗೆ, ಯೋಜನಾನಾಂ-ಯೋಜನಗಳ, ಲಕ್ಷತ್ರಯಂ-ಮೂರು (೩) ಲಕ್ಷ ವಿಸ್ತೃತಂ-ವಿಸ್ತಾರವುಳ್ಳ, ವಲಯಾಕೃತಿಃ-ಬಳೆಯಂತೆ ಸುತ್ತುಗಟ್ಟಿರುವ, ಯಾವತ್-ಖರ್ಪರಂ-ಬ್ರಹ್ಮಾಂಡದ ಖರ್ಪರದವರೆಗಿನ ಭಾಗವು, ಅನಂತಾಸನಂ-ಅನಂತಾಸನವೆಂದು, ಉಚ್ಯತೇ-ಹೇಳಲ್ಪಡುತ್ತದೆ. (ಘನೋದಕದಲ್ಲಿರುವ, ಘನೋದಕದಿಂದ ಸುತ್ತುಗಟ್ಟಲ್ಪಟ್ಟಿರುವ ಅನಂತಾಸನವೆಂಬ ೩ ಲಕ್ಷ ಯೋಜನ ವಿಸ್ತಾರದ ದ್ವೀಪವಿರುತ್ತದೆ).

---

ಪರ್ವತದಿಂದಾಚೆ, ಮೇರುಪರ್ವತದಿಂದ ಅಲ್ಲಿಯವರೆಗಿನ ಭೂಭಾಗದಕಿಂತ ಎರಡರಷ್ಟು ವಿಸ್ತಾರವಾದ ತಮಸ್ಸು ಇರುತ್ತದೆ; ಅದರ ಆಚೆಗೆ ತಮಸ್ಸಿನ ಎರಡರಷ್ಟು ವಿಸ್ತಾರದ, ಘನೋದಕವಿರುತ್ತದೆ (೧೮). ದಧಿ (ಮೊಸರಿನಂತೆ) ಯಂತೆ ಹೆಪ್ಪುಗಟ್ಟಿರುವ ಇದರ ಜಲವು, ಬಹುದ್ವೀಪಗಳನ್ನುಳ್ಳದ್ದಾಗಿದೆ; ಅಲ್ಲಿರುವ ಮಣಿಗಳ ಪ್ರಕಾಶದಿಂದ ಅಲ್ಲಿ ಕತ್ತಲೆ ಮುಸುಕಲು ಅವಕಾಶವೇ ಇಲ್ಲ (೧೯). ಅಲ್ಲಿಂದಾಚೆ, ಬ್ರಹ್ಮಾಂಡದ ಖರ್ಪರದವರೆಗೆ, ಅನಂತಾಸನವಿದೆ; ಘನೋದಕದಲ್ಲಿ ಖರ್ಪರದ ವರೆಗೆ, ೩ (ಮೂರು) ಲಕ್ಷ ಯೋಜನ ವಿಸ್ತಾರವುಳ್ಳ ಅನಂತಾಸನವಿದೆ— ಘನೋದಕದಲ್ಲಿರುವ ಈ ಲೋಕವು (ಅನಂತಾಸನವು) ವಲಯಾಕಾರ (ಬಳೆಯ ಸುತ್ತಿನಂತೆ) ವ್ಯಾಪಿಸಿದೆ (೨೦). ಇಲ್ಲಿಯೂ ಶ್ರೀ, ಭೂ, ದುರ್ಗಾ ಭಾಗಗಳೆಂದು

ಶ್ರೀಭೂದುರ್ಗಾತ್ಮಕಾ ಭಾಗಾಸ್ತತ್ರಾಪಿ ಪರತಃ ಸ್ಥಿತಾಃ ।
ಏವಂ ಸ್ಥಾನದ್ವಯಂ ವಿಷ್ಣೋರ್ಭೂಮಿಷ್ಠಮಿವ ದೃಶ್ಯತೇ ॥ ೨೧ ॥
ಅಧಸ್ತಾದ್ಭೂಮಿನಾಶೇಽಪಿ ತದನಶ್ಯದ್ಧಿ ತಿಷ್ಠತಿ ।
ಭೂದುರ್ಗಾಭಾಗಯೋಸ್ತತ್ರ ಭೂಮಿನಾಶೇ ಪ್ರಣಶ್ಯತಿ ॥ ೨೨ ॥
ಶ್ರೀಭಾಗೋ ನಿತ್ಯ ಏವಾಸ್ತಿ ಮುಕ್ತೈರೇವ ನಿಷೇವಿತಃ ।

ತತ್ರಾಪಿ-ಆ ಅನಂತಾಸನದಲ್ಲಿಯೂ, ಶ್ರೀಭೂದುರ್ಗಾತ್ಮಕಾಃ-ಶ್ರೀ, ಭೂ, ದುರ್ಗಾರೂಪದ, ಭಾಗಾಃ-ವಿಭಾಗಗಳು, ಪರತಃ-ಒಂದಾದ ಮೇಲೆ ಒಂದರಂತೆ, ಸ್ಥಿತಾಃ-ಇರುತ್ತವೆ; ಏವಂ-ಹೀಗೆ, ವಿಷ್ಣೋಃ-ಶ್ರೀವಿಷ್ಣುವಿನ, ಸ್ಥಾನದ್ವಯಂ-(ತ್ರಿಧಾಮಗಳಲ್ಲಿ) ಎರಡು ಧಾಮಗಳು, ಭೂಮಿಷ್ಠಂ ಇವ-ಭೂಮಿಯಲ್ಲಿರುವಂತೆ (ಬಹು ಎತ್ತರದಲ್ಲಿದ್ದರೂ ಭೂಸ್ಪರ್ಶವುಳ್ಳವಾದ್ದರಿಂದ, ಭೂಮಿಯಲ್ಲಿದ್ದಂತೆ), ದೃಶ್ಯತೇ-ಕಾಣುತ್ತವೆ; ಅಧಸ್ತಾತ್-ಕೆಳಗಿನ (ಬುಡದಲ್ಲಿರುವ), ಭೂಮಿನಾಶೇಽಪಿ-ಭೂಮಿಯು, (ಪ್ರಳಯದಲ್ಲಿ) ನಷ್ಟವಾದರೂ, ತತ್-ಆ ಸ್ಥಾನದ್ವಯವು (ಶ್ವೇತದ್ವೀಪ ಮತ್ತು ಅನಂತಾಸನವು), ಅನಶ್ಯತ್-ನಾಶವಾಗದೇ, ತಿಷ್ಠತಿ ಹಿ-ಇರುವುದೆಂದು ವೇದಸಿದ್ಧವು; ತತ್ರ-ಇವುಗಳಲ್ಲಿ ಭೂದುರ್ಗಾಭಾಗಯೋಃ-ಭೂಭಾಗದುರ್ಗಾಭಾಗಗಳಿಗೆ, ಭೂಮಿನಾಶೇ-ಭೂಮಿಯು ನಷ್ಟವಾಗುತ್ತಿರಲು, ಪ್ರಣಶ್ಯತಿ-ನಾಶವು ಸಂಭವಿಸುತ್ತದೆ; ಶ್ರೀಭಾಗಃ-ಶ್ರೀಭಾಗವು, ಮುಕ್ತೈಃ ಏವ-ಮುಕ್ತರಿಂದ ಮಾತ್ರ, ನಿಷೇವಿತಃ-ಸೇವಿಸಲ್ಪಟ್ಟು (ವಾಸಿಸಲ್ಪಟ್ಟು), ನಿತ್ಯಃ ಏವ-ನಿತ್ಯವಾಗಿಯೇ (ನಾಶವಿಲ್ಲದೇ) ಅಸ್ತಿ-ಇರುತ್ತದೆ.

ಪೃಥಿವೀಲೋಕತೋಽಧಸ್ತಾತ್ ಯಾವದ್ಬ್ರಹ್ಮಾಂಡಖರ್ಪರಂ ॥ ೨೩ ॥
ಪಂಚವಿಂಶತಿಕೋಟ್ಯಸ್ತು ಯೋಜನಾನಾಂ ಪ್ರಕೀರ್ತಿತಂ ।

ಪೃಥಿವೀಲೋಕತಃ-ಭೂಲೋಕದಿಂದ, ಅಧಸ್ತಾತ್-ಕೆಳಗೆ, ಬ್ರಹ್ಮಾಂಡ ಖರ್ಪರಂ ಯಾವತ್-ಬ್ರಹ್ಮಾಂಡಖರ್ಪರದವರೆಗೆ, ಯೋಜನಾನಾಂ-ಯೋಜನಗಳ, ಪಂಚವಿಂಶತಿ ಕೋಟ್ಯಃ-೨೫ ಕೋಟಿಗಳು; ಪ್ರಕೀರ್ತಿತಂ ತು-ಹೀಗೆಂದು ಹೇಳಲಾಗಿದೆ.

---

ಮೂರು ವಿಭಾಗಗಳು (ಶ್ವೇತದೀಪದಲ್ಲಿರುವಂತೆ) ಇರುತ್ತವೆ; ಹೀಗೆ, ತ್ರಿಧಾಮಗಳೆಂಬ ಶ್ರೀ ವಿಷ್ಣುವಿನ ನಿತ್ಯಸ್ಥಾನಗಳಲ್ಲಿ, ಎರಡು ಸ್ಥಾನಗಳು ಭೂಮಿಗೆ ಸಂಬಂಧಿಸಿಕೊಂಡು ಆದರೂ ಬಹು ಎತ್ತರದಲ್ಲಿರುತ್ತಾ[1] ಭೂಮಿಯಲ್ಲಿದ್ದಂತೆ ಇರುತ್ತವೆ; ಇವುಗಳ ಕೆಳಗಿರುವ ಭೂಮಿಯು, ಪ್ರಲಯದಲ್ಲಿ ನಷ್ಟಗೊಂಡರೂ, ಈ ಸ್ಥಾನದ್ವಯಗಳಿಗೆ ನಾಶವಿಲ್ಲ; ಇವುಗಳಲ್ಲಿರುವ ಭೂದುರ್ಗಾಭಾಗಗಳಿಗೆ ನಾಶವುಂಟು—ಮುಕ್ತರಿಂದ ಸೇವ್ಯವಾದ, ಶ್ರೀಭಾಗ ಮಾತ್ರ ನಿತ್ಯವಾಗಿಯೇ ನಿಲ್ಲುತ್ತದೆ (೨೧-೨೨). ಭೂಲೋಕ

1. ಇಲ್ಲಿ ಹಿಂದಿನ ೧೪ನೇ ಶ್ಲೋಕದ ಅಡಿಟಿಪ್ಪಣಿಯನ್ನು ನೋಡಿ.

**ತತ್ಪಂಚಾಶತ್ತ್ರಯಂ ತೋಯಂ ಪಂಚಾಶದ್ದ್ವಿತಯಂ ದಲಂ ॥ ೨೪ ॥**
**ತತ್ರ ಮಗ್ನಂ ಮೇರುಮೂಲಂ ಸಹಸ್ರಾಣಿ ತು ಷೋಡಶ ।**

ತತ್ಪಂಚಾಶತ್ತ್ರಯಂ-ಭೂಮಿಯ ಕೆಳಗೆ (ಒಳಗೆ) ೧೫೦ ಯೋಜನದ, ತೋಯಂ-ಜಲವೂ, ಪಂಚಾಶತ್‌ದ್ವಿತಯಂ-೧೦೦ ಯೋಜನದ, ದಲಂ-ದಲವೂ (ಜಲದನಂತರ ಬರುವ ಭೂಮಿಯ ತುಂಡು) (ಇರುತ್ತಿದ್ದು), ತತ್ರ-ಅದರಲ್ಲಿ ಮೇರುಮೂಲಂ-ಮೇರು ಪರ್ವತದ ಮೂಲವು (ಬುಡವು), ಮಗ್ನಂ-ಹುದುಗಿದೆ; ತು-ಆದರೆ, (ಆ ಮಗ್ನವಾದ ಭಾಗವು), ಷೋಡಶಸಹಸ್ರಾಣಿ-೧೬,೦೦೦ ಯೋಜನ ವಿಸ್ತಾರವಾಗಿದೆ.

**ಸಮುದ್ರಾಸ್ತತ್ರ ಸಪ್ತಾಪಿ ಗಂಭೀರಾ ವಿಸ್ತೃತೇಃ ಸಮಂ ॥ ೨೫ ॥**

ತತ್ರ-ಅಲ್ಲಿ (ಭೂಮಿಯ ಒಳಭಾಗದಲ್ಲಿ), ಸಪ್ತಸಮುದ್ರಾಃ ಅಪಿ-ಏಳು (ಪೂರ್ವೋಕ್ತ) ಸಮುದ್ರಗಳೂ, ಗಂಭೀರಾವಿಸ್ತೃತೇಃ-ಆಳ ಮತ್ತು ವಿಸ್ತಾರದಿಂದ, ಸಮಂ-ಸಮವ್ಯಾಪ್ತಿ ಉಳ್ಳವುಗಳೆಂದು (ಹೇಳಲ್ಪಡುತ್ತವೆ).

---

ದಿಂದ ಕೆಳಗೆ[1] ಬ್ರಹ್ಮಾಂಡದ ಖರ್ಪರದವರೆಗೆ ೨೫ ಕೋಟಿ ಯೋಜನಗಳಾಗುತ್ತದೆ; (೨೩). ೧೫೦ ಯೋಜನದ ಜಲವೂ, ೧೦೦ ಯೋಜನದ ಭೂಖಂಡ (ದಲ-crust)ವೂವುಳ್ಳ ಭೂಮಿಯ ಅಧೋಭಾಗದಲ್ಲಿ ಮೇರುಪರ್ವತದ ಮೂಲವು ಮಗ್ನವಾಗಿದೆ;[2] ಈ ಮೇರು ಮೂಲವು ೧೬,೦೦೦ ಯೋಜನದ್ದಾಗಿರುತ್ತೆ (ಆ ಪರ್ಯಂತ ಭೂಮಿಯೊಳಗೆ ಸೇರಿದೆ) (೨೪). ಭೂಮಿಯ ಕೆಳಭಾಗದಲ್ಲಿ

1. ಮೇರುಪರ್ವತದಿಂದ ಪೂರ್ವಭಾಗಕ್ಕೆ ಜಂಬೂ ಮೊದಲಾದ ಸಪ್ತದ್ವೀಪಗಳು. ಅವುಗಳನ್ನು ವಲಯಾಕಾರವಾಗಿ ಸುತ್ತಿರುವ ಲವಣಾದಿ ಸಪ್ತಸಮುದ್ರಗಳು. ಅದರಾಚೆ ಇರುವ ಸ್ವರ್ಣಭೂಮಿ, ಲೋಕಾಲೋಕಪರ್ವತ, ಮುಂದಿನ ತಮಸ್ಸು, ಘನೋದಕ, ಅದರಲ್ಲಿರುವ ಅನಂತಾಸನಗಳನ್ನೊಳಗೊಂಡು ಖರ್ಪರದವರೆಗೆ ಒಟ್ಟು ೨೫ ಕೋಟಿ ಯೋಜನವಾಗುತ್ತದೆ; ಅದರಂತೆ ಮೇರುವಿನಿಂದ ದಕ್ಷಿಣಭಾಗಕ್ಕೆ ಭೂಮಿಯ ಕೆಳಗೆ ಬ್ರಹ್ಮಾಂಡದ ಖರ್ಪರಪರ್ಯಂತ ೨೫ ಕೋಟಿಗಳಾಗುತ್ತವೆ.

2. ಭೂಮಿಯ ಕೆಳಭಾಗದ ೨೫ ಕೋಟಿಯಲ್ಲಿ ೧ ಲಕ್ಷ ಯೋಜನ ಪರಿಮಿತವಾದ ಪಾತಾಳಾದಿ ೭ ಲೋಕಗಳು, ಅವುಗಳ ಸಂಧಿಯಲ್ಲಿ ಬರುವ ಭೂದಲ ಸೇರಿ; ಉಳಿದುದೆಲ್ಲ ಜಲಮಯ (ಘನೋದಕ)ವೆಂದೂ ಶ್ರೀ ವಿಜಯದಾಸರ ಸುಳಾದಿಗಳಿಂದ ತಿಳಿಯಬರುತ್ತದೆ.

ಆಧುನಿಕ (Modern) ಭೂಗೋಳಶಾಸ್ತ್ರಜ್ಞರ ಮತ್ತು ವಿಜ್ಞಾನಿಗಳ (Scientific experts) ಅಭಿಪ್ರಾಯಗಳೊಂದಿಗೆ, ಈ ವಿವರಗಳನ್ನು ಸಮನ್ವಯಗೊಳಿಸಿ, ಏಕವಾಕ್ಯತೆಯನ್ನು ಸಾಧಿಸುವುದು ಬಹು ಕಷ್ಟಸಾಧ್ಯ; ಮೇಲಾಗಿ ಆಧುನಿಕರ ಅಭಿಪ್ರಾಯಗಳನ್ನು ಪ್ರತ್ಯಕ್ಷಸಿದ್ಧ ನಿರ್ಣಯಗಳೆಂದು ತಿಳಿಯಲು ಬರುವುದಿಲ್ಲ. ಈ ಸಮನ್ವಯದ ದಿಗ್ದರ್ಶನವನ್ನು, ನಮ್ಮ ಸಂಘದಿಂದ ಪ್ರಕಾಶಿತವಾದ 'ಸಂದೇಶರತ್ನಮಾಲೆ'ಯ ರತ್ನ (೨) 'ಆಗಮ ಪ್ರಾಮಾಣ್ಯ'ವೆಂಬ ಪುಸ್ತಕದಲ್ಲಿ ಪುಟ ೧೦೧ ರಿಂದ ೧೨೬ರ ವರೆಗೆ, ಕಾಣಬಹುದು.

ಕೋಟಿಯೋಜನಗಂಭೀರಂ ತತ್ರೈವ ಚ ಘನೋದಕಂ ।
ಘನೋದಕಾದಧಸ್ತಾತ್ತು ಭೂದಲಂ ಕೋಟಿಯೋಜನಂ ॥ ೨೬ ॥
ಕೋಟೌಕೋಟೌ ತತೋಽಧಸ್ತಾತ್ ಜ್ಞೇಯಂ ಪಾತಾಲಸಪ್ತಕಂ ।
ತತೋಽಪ್ಯಧಸ್ತಾತ್ಸಪ್ತಾಪಿ ನರಕಾ ರೌರವಾದಿಕಾಃ ॥ ೨೭ ॥
ಲಕ್ಷದ್ವಾದಶಕಂ ತತ್ರ ಪ್ರತ್ಯೇಕಂ ನರಕಾಂತರಂ ।
ಅಧಸ್ತಾತ್ಸರ್ವತೋ ಭೂಮೇರ್ದಲಂ ಷೋಡಶಲಕ್ಷಕಂ ॥ ೨೮ ॥
ತತೋಽಧೋಽಪ್ಯತಿಗಂಭೀರೇ ಜಲೇ ಸಾಕ್ಷಾದ್ಧರಿಃ ಸ್ವಯಂ ।
ಆಧಾರಶಕ್ತಿಸಂಯುಕ್ತೋ ನಾನಾರೂಪೈಃ ಪ್ರದೀಪ್ಯತಿ ॥ ೨೯ ॥

ತತ್ರೈವ-ಅಲ್ಲಿಯೇ (ಭೂಮಿಯ ಕೆಳಗೆ), ಕೋಟಿ ಯೋಜನ ಗಂಭೀರಂ-ಕೋಟಿಯೋಜನ ಆಳವಾದ ಘನೋದಕಂ-ಘನೋದಕವಿದೆ (ಘನೀಭೂತವಾದ-ಸಾಂದ್ರವಾದ ಜಲ); ಘನೋದಕಾತ್-ಈ ಘನೋದಕದ, ಅಧಸ್ತಾತ್ ತು-ಕೆಳಗೇನೆ, ಕೋಟಿಯೋಜನಂ-ಕೋಟಿಯೋಜನ ದಪ್ಪವಾದ (ಆಳವಾದ), ಭೂದಲಂ-ಭೂದಲವು (ಇರುತ್ತದೆ); ಕೋಟೌಕೋಟೌ-(ಈ ಭೂದಲವು) ಪ್ರತಿಕೋಟಿ

---

ಪೂರ್ವೋಕ್ತ ಸಪ್ತ ಸಮುದ್ರಗಳೂ, ಆಳ ಮತ್ತು ವಿಸ್ತಾರದಿಂದ, ಹಿಂದೆ ನಿರೂಪಿಸಿದ ಪರಿಮಿತಿಗಳುಳ್ಳವೇ ಆಗಿರುತ್ತವೆ (೨೫). ಅಲ್ಲಿಯೇ, ಕೆಳಗೆ, ಕೋಟಿ ಯೋಜನ ಆಳವಾದ ಘನೋದಕವಿರುತ್ತದೆ; ಅದರ ಕೆಳಭಾಗದಲ್ಲಿ ಕೋಟಿ ಯೋಜನ ದಪ್ಪವಾದ ಭೂದಲವಿರುತ್ತದೆ; ಪ್ರತಿ ಕೋಟಿ ಯೋಜನಾನಂತರ ಖರ್ಪರದ ಪರ್ಯಂತ ಹೀಗೆ ಜಲಭೂದಲಗಳಿರುವುವೆಂದು ತಿಳಿಯಬೇಕು; ಭೂಮಿಯ ಕೆಳಗೆ, ಪಾತಾಲಾದಿ ಸಪ್ತಲೋಕಗಳಿವೆ;[1] ಇವುಗಳ ಕೆಳಗೆ ರೌರವಾದಿ ಸಪ್ತನರಕಗಳೂ ಇವೆ;[2] ಈ ನರಕಗಳು

---

1. ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲಗಳೆಂಬುವು ಸಪ್ತಪಾತಾಲಾದಿ ಲೋಕಗಳು. ಭೂಮಗ್ನವಾಗಿರುವ ಮೇರುವರ್ವತದ ೧೬,೦೦೦ ಯೋಜನಗಳಿಂದ ಕೆಳಗೆ ಈ ಲೋಕಗಳು, ಉತ್ಕ್ರಮದಲ್ಲಿ ಒಂದೊಂದು ಲೋಕವೂ ೧೦,೦೦೦ ಯೋಜನಗಂಭೀರವಾದ ಪ್ರದೇಶವನ್ನು ಆಕ್ರಮಿಸಿ, ಪರಸ್ಪರ ಒಂದೊಂದರ ಮಧ್ಯ ೫,೦೦೦ ಯೋಜನದ ಭೂದಲವುಳ್ಳದ್ದಾಗಿದೆ (ಶ್ರೀ ವಿಜಯದಾಸರ ಸುಳಾದಿಯಂತೆ).

2. ಸಪ್ತನರಕಗಳು:— 'ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ । ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯ ನರಕಾಣಿ ಚ । ತಾಮಿಸ್ರಶ್ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತೌ ॥ ಇತಿ ಸಪ್ತಪ್ರಧಾನಾನಿ ಬಲೀಯಸ್ಸೂತ್ತರೋತ್ತರಂ ॥' ಎಂದರೆ, ರೌರವ, ಮಹಾರೌರವ, ವಹ್ನಿ, ವೈತರಣೀ, ಕುಂಭೀಪಾಕಗಳೆಂಬ ಐದು ಅನಿತ್ಯನರಕಗಳು, ತಾಮಿಸ್ರ ಮತ್ತು ಅಂಧತಾಮಿಸ್ರಗಳೆಂಬ ಎರಡು ನಿತ್ಯನರಕಗಳು, ಹೀಗೆ ಏಳು ಪ್ರಧಾನ ನರಕಗಳು—ಬೇರೆ ಅನೇಕ ನರಕಗಳೂ ಇವೆ.

ಯೋಜನದಲ್ಲಿಯೂ (ಖರ್ಪರದವರೆಗೂ) ಇರುತ್ತದೆ (ಘನೋದಕದ ನಂತರ ಭೂದಲ-ಭೂದಲದನಂತರ ಘನೋದಕ ಹೀಗೆ ಇರುತ್ತದೆ); ತತಃ-ಭೂಮಿಯ, ಅಧಸ್ತಾತ್-ಕೆಳಗೆ, ಪಾತಾಲಸಪ್ತಕಂ-ಪಾತಾಲಾದಿ ಸಪ್ತ ಲೋಕಗಳು, ಜ್ಞೇಯಂ-ತಿಳಿಯಲ್ಪಡತಕ್ಕದ್ದು; ತತಃ-ಸಪ್ತ ಪಾತಾಲಾದಿಗಳ, ಅಧಸ್ತಾತ್-ಕೆಳಗೆ, ರೌರವಾದಿಕಾಃ-ರೌರವವೇ ಮೊದಲಾದ, ನರಕಾಃ-ನರಕಗಳು, ಸಪ್ತ ಅಪಿ-ಏಳೂ (ಇರುತ್ತವೆ); ತತ್ರ-ಅವುಗಳಲ್ಲಿ, ಪ್ರತ್ಯೇಕಂ-ಪ್ರತ್ಯೇಕವಾಗಿ (ಒಂದೊಂದೂ), ನರಕಾಂತರಂ-ಬೇರೆ ನರಕವೂ, ಲಕ್ಷದ್ವಾದಶಕಂ-೧೨ ಲಕ್ಷ ಯೋಜನ ವಿಸ್ತಾರವುಳ್ಳದ್ದು; ಸರ್ವತಃ-ಈ ಎಲ್ಲ ನರಕಗಳ, ಅಧಸ್ತಾತ್-ಕೆಳಗೆ, ಭೂಮೇಃ-ಭೂಮಿಯ, ಷೋಡಶಲಕ್ಷಕಂ-೧೬ ಲಕ್ಷ ಯೋಜನ ವಿಸ್ತಾರದ (ದಪ್ಪವಾದ), ದಲಂ-ದಲವು, (ಇರುವುದು); ತತಃ-ಆದರಿಂದ, ಅಧಃ-ಕೆಳಗೆ, ಅತಿಗಂಭೀರೇ-ಅತ್ಯಂತ ಆಳವಾದ, ಜಲೇ-ಜಲದಲ್ಲಿ ಸಾಕ್ಷಾತ್ ಹರಿಃ-ಶ್ರೀಹರಿಯೇ, ಸ್ವಯಂ-ತಾನು, ಆಧಾರಶಕ್ತಿ ಸಂಯುಕ್ತಃ-(ಬ್ರಹ್ಮಾಂಡವನ್ನು) ಧಾರಣಮಾಡುವ ಶಕ್ತಿ ಸಹಿತನಾಗಿ, ನಾನಾರೂಪೈಃ-(ಕೂರ್ಮ, ಮಂಡೂಕ, ವರಾಹಗಳೆಂಬ ರೂಪಗಳಿಂದ) ಬಹುರೂಪಿಯಾದ ತಾನು, ಪ್ರದೀಪ್ಯತಿ-ಪ್ರಕಾಶಮಾನನಾಗಿರುತ್ತಾನೆ.[1]

> ಭೂದಲೇ ಲಕ್ಷತೋಽಧಸ್ತಾತ್ತಿಷ್ಠಂತಿ ಜಲದೇವತಾಃ ।
> ತತ್ರಾಸ್ತಿ ವಾರುಣೋ ಲೋಕೋ ನಾನಾಭೋಗಸಮನ್ವಿತಃ ॥ ೩೦ ॥

---

ಒಂದೊಂದೂ ಪ್ರತ್ಯೇಕವಾಗಿ ೧೨ ಲಕ್ಷ ಯೋಜನ ವಿಸ್ತಾರವಾದುದು; ಈ ನರಕಗಳ ಕೆಳಗೆ, ೧೬ ಲಕ್ಷ ಯೋಜನ ದಪ್ಪದ ಭೂದಲವಿರುತ್ತದೆ—ಅದರ ಕೆಳಗೆ ಅತ್ಯಂತ ಗಂಭೀರವಾದ ಜಲ ಮಧ್ಯದಲ್ಲಿ ಸ್ವಯಂ ಶ್ರೀಹರಿಯು ಬ್ರಹ್ಮಾಂಡಧಾರಣ ಶಕ್ತಿ ಸಹಿತನಾಗಿ ನಾನಾ ರೂಪಗಳಿಂದ ಪ್ರಕಾಶಿಸುತ್ತಿರುವನು[2] (೨೬-೨೯). ಭೂಮಿಯ ಕೆಳಗೆ, ಭೂದಲದ ಲಕ್ಷ ಯೋಜನದ ಕೆಳಭಾಗದಲ್ಲಿ ಜಲಾಭಿಮಾನಿ

1. ಬಹು ಗಂಭೀರವಾದ ಖರ್ಪರದವರೆಗಿನ ಘನೋದಕದಲ್ಲಿ ಮೊದಲು ಶೇಷದೇವನು (ತನ್ನ ಒಂದು ಫಣದಲ್ಲಿ ಭೂಮಿಯನ್ನು ಹೊತ್ತು) ಇರುತ್ತಾನೆ; ಆತನ ಕೆಳಗೆ ವಾಯುದೇವನು ಕೂರ್ಮನಾಗಿದ್ದು, ಆತನನ್ನು ಹೊತ್ತಿರುವನು; ಈ ವಾಯುಕೂರ್ಮನು, ವಿಷ್ಣುಕೂರ್ಮನ (ಕೂರ್ಮರೂಪನಾದ ಶ್ರೀವಿಷ್ಣುವಿನ) ಶಕ್ತಿಯಿಂದ ಸರ್ವವನ್ನೂ ಧರಿಸಿರುವನು; ಈ ವಿಷ್ಣುಕೂರ್ಮನು, ಮಂಡೂಕರೂಪದಿಂದಲೂ, ಆತನನ್ನು ವರಾಹರೂಪದಿಂದಲೂ ತನ್ನನ್ನು ತಾನೇ ಹೊತ್ತು ಸ್ಥಿತನಾಗಿರುವನೆಂದು ಹೇಳಲಾಗುತ್ತದೆ.

2. ಬ್ರಹ್ಮಾಂಡವನ್ನು ತನ್ನ ಒಂದು ಹೆಡೆಯಮೇಲೆ ಸಾಸಿವೆಕಾಳಿನಂತೆ ಲೀಲೆಯಿಂದ ಧರಿಸಿರುವ ಶೇಷದೇವರನ್ನು, ವಾಯುಕೂರ್ಮನು ಹೊತ್ತಿರುವನು; ವಾಯುಕೂರ್ಮನಿಗೆ ವಿಷ್ಣುಕೂರ್ಮನು ಆಧಾರನು; ಆತನು (ಶ್ರೀವಿಷ್ಣುವು), ಮಂಡೂಕ, ವರಾಹಾದಿ ರೂಪಗಳಿಂದ ತನಗೆ ತಾನೇ ಆಧಾರನೆನಿಸುವ ಬಹುರೂಪಗಳುಳ್ಳವನಾಗಿ ವಿಶ್ವಧಾರಕನಾಗಿದ್ದಾನೆ.

ಸುವರ್ಣನಲಿನೀಪ್ರಾಯಃ ಪೂರ್ಣಪ್ರಾಯೋಂಬುನಿರ್ಝರೈಃ ।

ಭೂದಲೇ-ಭೂದಲದಲ್ಲಿ(ಭೂಮಿಯ ಕೆಳಗೆ), ಲಕ್ಷತಃ-ಒಂದು ಲಕ್ಷ ಯೋಜನದ, ಅಧಸ್ತಾತ್-ಕೆಳಗೆ, ಜಲದೇವತಾಃ-ಜಲಾಭಿಮಾನಿದೇವತೆಗಳು, ತಿಷ್ಠಂತಿ-ಇರುತ್ತಾರೆ; ತತ್ರ-ಅಲ್ಲಿ, ನಾನಾಭೋಗಸಮನ್ವಿತಃ-ಬಹುವಿಚಿತ್ರ ಭೋಗಗಳಿಂದ ಕೂಡಿದ, ವಾರುಣಃ-ವರುಣಸಂಬಂಧವಾದ (ವರುಣದೇವನ), ಲೋಕಃ - ಲೋಕವು, ಅಸ್ತಿ-ಇರುತ್ತದೆ; (ಆ ವರುಣಲೋಕವು), ಅಂಬುನಿರ್ಝರೈಃ-ಜಲ ಪ್ರವಾಹಗಳಿಂದ, ಪೂರ್ಣಪ್ರಾಯಃ-ಪೂರ್ಣವಾದಂತಿರುವ, ಸುವರ್ಣನಲಿನೀಪ್ರಾಯಃ-ಭಂಗಾರದ ಕಮಲದಂತೆ (ತದಾಕಾರವಾಗಿ ವಿರಾಜಿಸುತ್ತದೆ).

ಭೂಲೋಕಾದೂರ್ಧ್ವತೋ ಮೇರುಃ ಛತ್ರಾಕಾರಃ ಸುರಾಲಯಃ ॥ ೩೧ ॥
ಚತುರಾಶೀತಿ ಸಾಹಸ್ರೋ ನಾನೋದ್ಯಾನವಿರಾಜಿತಃ ।
ಗಂಧರ್ವೈರ್ದೇವತಾಭಿಶ್ಚ ಸ್ಥಾನೇ ಸ್ಥಾನೇ ಸದಾನ್ವಿತಃ ॥ ೩೨ ॥
ಪರಿತಸ್ತು ಚತುಷ್ಕೋಣಮಿಲಾವೃತಮುದೀರಿತಂ ।
ಪ್ರತ್ಯೇಕಂ ತಚ್ಚ ತುರ್ದಿಕ್ಷು ನವಸಾಹಸ್ರವಿಸ್ತೃತಂ ॥ ೩೩ ॥
ಮಾಲ್ಯವಾನ್ ಪಶ್ಚಿಮೇ ತತ್ರ ಪೂರ್ವತೋ ಗಂಧಮಾದನಃ ।
ಕೇತುಮಾಲಂ ಚ ಭದ್ರಾಶ್ವಂ ಕ್ರಮಾತ್ ಖಂಡೇ ತಯೋಃ ಪರೇ ॥ ೩೪ ॥
ಏಕತ್ರಿಂಶತ್ಸಹಸ್ರಾಣಿ ಪ್ರತ್ಯೇಕಂ ದೀರ್ಘತಾ ತಯೋಃ ।
ಚತುಸ್ತ್ರಿಂಶತ್ಸಹಸ್ರಾಣಿ ವಿಸ್ತಾರೋಽಪಿ ತಯೋಃ ಸ್ಮೃತಃ ॥ ೩೫ ॥

ಭೂಲೋಕಾತ್-ಭೂಲೋಕದಿಂದ (ಭೂಮಿಯಿಂದ), ಊರ್ಧ್ವತಃ-ಮೇಲೆ, ಛತ್ರಾಕಾರಃ-ಛತ್ರಿಯಂತೆ ಆಕಾರವುಳ್ಳದ್ದೂ, ಸುರಾಲಯಃ-(ಮೇಲ್ಭಾಗದಲ್ಲಿ) ದೇವತೆಗಳ (ದಿಕ್ಪಾಲಾದಿ ದೇವತೆಗಳ) ಆಲಯಗಳುಳ್ಳದ್ದೂ ಆದ, ನಾನೋದ್ಯಾನ

ದೇವತೆಗಳಿರುವರು;[1] ಅದೇ ವಿವಿಧ ವಿಚಿತ್ರ ಭೋಗಯುಕ್ತವಾದ ವರುಣ ಲೋಕವು—ಅದು, ಜಲಪ್ರವಾಹಗಳಿಂದ ಪೂರ್ಣವಾಗಿ ಸುವರ್ಣಪದ್ಮದಂತೆ ಆಕಾರವುಳ್ಳದ್ದಾಗಿ ವಿರಾಜಿಸುತ್ತದೆ (೩೦). ಭೂಲೋಕದಿಂದ (ಭೂಮಿಯಿಂದ) ಮೇಲೆ, ೮೪,೦೦೦ ಯೋಜನ ಎತ್ತರವಿರುವ ಮೇರುಪರ್ವತವು, ಛತ್ರಿಯಂತೆ ಆಕಾರವುಳ್ಳದ್ದಾಗಿದೆ; ಅದರ ಮೇಲೆ ನಾನಾ ಉದ್ಯಾನಗಳಿಂದ ವಿರಾಜಿಸುವ

1. ಸಾಮಾನ್ಯವಾಗಿ ಎಲ್ಲ ತತ್ತ್ವಾಭಿಮಾನಿ ದೇವತೆಗಳೂ ಅಪ್(ಜಲ)ತತ್ತ್ವದ ಅಭಿಮಾನಿಗಳೇ ಆಗಿರುತ್ತಾರೆ; ಹೀಗೆ ಸರ್ವದೇವತಾಸನ್ನಿಧಾನವುಳ್ಳದ್ದಾದುದರಿಂದಲೇ 'ಅಪ್' ಶಬ್ದವು 'ಆಪಃ' ಎಂದು ನಿತ್ಯಬಹುವಚನಶಬ್ದವಾಗಿದೆ. ವರುಣಲೋಕದಲ್ಲಿ ಅಭಿಮಾನಿ ದೇವತೆಗಳೆಲ್ಲರೂ ಸ್ವಾಂಶಗಳಿಂದ ಅಲ್ಲಿರುತ್ತಾರೆ.

ವಿರಾಜಿತಃ-ಅನೇಕ ದೇವೋದ್ಯಾನಗಳಿಂದ ವಿರಾಜಿತವಾದ, ಮೇರುಃ-ಮೇರು ಪರ್ವತವು, ಚತುರಾಶೀತಿ ಸಾಹಸ್ರಃ-೮೪,೦೦೦ ಯೋಜನ ಎತ್ತರವಾದುದು (ಇರುತ್ತದೆ); ಸದಾ-ಸರ್ವದಾ, ಸ್ಥಾನೇ ಸ್ಥಾನೇ-ಪ್ರತಿ ಪ್ರದೇಶದಲ್ಲಿಯೂ, (ಸುರಾಲಯಗಳು ಮತ್ತು ಉದ್ಯಾನಗಳೂ ಇರುವ ಛತ್ರಾಕಾರದ ಮೇಲ್ಭಾಗದಲ್ಲಿ); ಗಂಧರ್ವೈಃ-ಗಂಧರ್ವರಿಂದಲೂ, ಚ-ಮತ್ತು ದೇವತಾಭಿಃ-ದೇವತೆಗಳಿಂದಲೂ, ಅನ್ವಿತಃ-ಕೂಡಿಯೇ (ಅವರಿಂದ ಸೇವ್ಯಗಳಾಗಿ) ಇರುತ್ತವೆ; ಪರಿತಃ ತು-(ಈ ಮೇರುಪರ್ವತದ) ಸುತ್ತಲೂ, ಚತುಷ್ಕೋಣಂ-ಚೌಕವಾಗಿರುವ ಭೂಭಾಗವು (ಖಂಡವು), ಇಲಾವೃತಂ-ಇಲಾವೃತವೆಂದು, ಈರಿತಂ-ಕರೆಯಲ್ಪಡುತ್ತದೆ; ತತ್-ಅದು (ಇಲಾವೃತವು), ಚತುರ್ದಿಕ್ಷು-ನಾಲ್ಕೂ ದಿಕ್ಕುಗಳಲ್ಲಿ, ಪ್ರತ್ಯೇಕಂ-ಒಂದೊಂದರಲ್ಲಿಯೂ, ನವಸಾಹಸ್ರವಿಸ್ತೃತಂ-೯೦೦೦ ಯೋಜನ ವಿಸ್ತಾರವುಳ್ಳದ್ದಾಗಿದೆ; ತತ್ರ-ಅಲ್ಲಿ (ಆ ಖಂಡದಲ್ಲಿ), ಪಶ್ಚಿಮೇ-ಪಶ್ಚಿಮದಲ್ಲಿ (ಗಡಿಯಾದ-ಮರ್ಯಾದಾ ಪರ್ವತವು), ಮಾಲ್ಯವಾನ್-ಮಾಲ್ಯವಂತವೂ, ಪೂರ್ವತಃ-ಪೂರ್ವದಲ್ಲಿ (ಅದರಂತೆ), ಗಂಧಮಾದನಃ-ಗಂಧಮಾದನ ಪರ್ವತವೂ (ಇವೆ); ತಯೋಃ-ಈ ಪರ್ವತಗಳ, ಪರೇ-ಆಚೆಗೆ, ಕ್ರಮಾತ್-ಕ್ರಮವಾಗಿ, ಕೇತುಮಾಲಂ-(ಪಶ್ಚಿಮದಲ್ಲಿ) ಕೇತುಮಾಲಖಂಡವೂ, ಚ-ಮತ್ತು (ಪೂರ್ವದಲ್ಲಿ), ಭದ್ರಾಶ್ವಂ-ಭದ್ರಾಶ್ವಖಂಡವೂ, (ಇರುತ್ತವೆ); ತಯೋಃ- ಈ ಎರಡು ಖಂಡಗಳ, ದೀರ್ಘತಾ-ಉದ್ದವು (ಪೂರ್ವಪಶ್ಚಿಮವಾಗಿ), ಪ್ರತ್ಯೇಕಂ-ಒಂದೊಂದೂ, ಏಕತ್ರಿಂಶತ್ಸಹಸ್ರಾಣಿ-೩೧,೦೦೦ ಯೋಜನವಿದೆ, ತಯೋಃ-ಅವುಗಳ, ವಿಸ್ತಾರಃ ಅಪಿ-ಅಗಲವೂ (ಉತ್ತರ ದಕ್ಷಿಣವಾಗಿಯೂ), ಚತುಸ್ತ್ರಿಂಶತ್ ಸಹಸ್ರಾಣಿ-೩೪,೦೦೦ ಯೋಜನವೂ (ಇರುತ್ತದೆ); ಸ್ಮೃತಃ-ಹೀಗೆಂದು (ಯೋಗಿಗಳಿಂದ) ತಿಳಿಯಲ್ಪಟ್ಟಿದೆ.

---

ದೇವತಾಗೃಹಗಳಿವೆ; ಅಲ್ಲಿರುವ ವಾಸಸ್ಥಾನಗಳು, ಗಂಧರ್ವರಿಂದಲೂ, ದೇವತೆಗಳಿಂದಲೂ ಸರ್ವದಾ ಸೇವ್ಯಗಳಾಗಿರುತ್ತವೆ; ಈ ಮೇರುಪರ್ವತದ ಬುಡದ ಸುತ್ತಲೂ, ಚತುಷ್ಕೋಣಾಕಾರದ (ಚೌಕವಾದ), ಭೂಖಂಡವಿದೆ—ಅದಕ್ಕೆ ಇಲಾವೃತಖಂಡವೆಂದು ಹೆಸರು; ಆ ಖಂಡವು ಪೂರ್ವಾದಿ ನಾಲ್ಕೂ ದಿಕ್ಕುಗಳಲ್ಲಿ ೯,೦೦೦ ಯೋಜನ ವಿಸ್ತಾರವುಳ್ಳದ್ದು; ಈ ಖಂಡದ ಪಶ್ಚಿಮದ ಗಡಿಯಲ್ಲಿ (ಗಡಿಯ ರೂಪದಿಂದ) ಮಾಲ್ಯವಂತವೆಂಬ ಪರ್ವತವೂ, ಪೂರ್ವದ ಗಡಿಯಾಗಿ, ಗಂಧಮಾದನ ಪರ್ವತವೂ ಇರುತ್ತವೆ; ಇವುಗಳ (ಈ ಗಡಿ ಪರ್ವತಗಳ) ಆಚೆಗೆ, ಪಶ್ಚಿಮದಲ್ಲಿ ಕೇತುಮಾಲಾ, ಮತ್ತು ಪೂರ್ವದಲ್ಲಿ ಭದ್ರಾಶ್ವಗಳೆಂಬ ಖಂಡಗಳಿರುತ್ತವೆ; ಈ ಒಂದೊಂದು ಖಂಡವೂ ೩೧,೦೦೦ ಯೋಜನ ಉದ್ದವಾಗಿವೆ (ಇದು ಪೂರ್ವಪಶ್ಚಿಮದ ಅಳತೆ); ಅಗಲ (ದಕ್ಷಿಣೋತ್ತರವಾಗಿ) ೩೪,೦೦೦ ಯೋಜನಗಳುಳ್ಳವು (೩೧-೩೩). ಇಲಾವೃತ ಖಂಡದ ದಕ್ಷಿಣದಲ್ಲಿ ನಿಷಧ, ಹೇಮಕೂಟ,

ನಿಷಧೋ ಹೇಮಕೂಟಶ್ಚ ಹಿಮಾಲಯ ಇತಿ ತ್ರಯಃ ।
ಹರಿವರ್ಷಂ ಕಿಂಪುರುಷಂ ಭಾರತಂ ಚೇತಿ ದಕ್ಷಿಣೇ ॥ ೩೬ ॥
ಕ್ರಮಾತ್ ಖಂಡತ್ರಯಂ ಪ್ರೋಕ್ತಂ ಯಾವಲ್ಲವಣವಾರಿಧಿಃ ।
ನೀಲಃ ಶ್ವೇತಶ್ಚ ಶೃಂಗೀ ಚ ಉತ್ತರೇವಧಿ ಪರ್ವತಾಃ ॥ ೩೭ ॥
ರಮ್ಯಂ ಹಿರಣ್ಮಯಂ ಚೈವ ಕುರುವರ್ಷಮಿತಿ ತ್ರಯಂ ।
ಖಂಡನಾಂ ಯಾವದಂಭೋಧಿ ವಿಸ್ತೃತಾನಿ ಮಹರ್ಷಯಃ ॥ ೩೮ ॥

ದಕ್ಷಿಣೇ-(ಇಲಾವೃತಖಂಡದ) ದಕ್ಷಿಣದಲ್ಲಿ, ಹರಿವರ್ಷಂ-ಹರಿವರ್ಷ, ಕಿಂಪುರುಷಂ-ಕಿಂಪುರುಷ, ಚ-ಮತ್ತು, ಭಾರತಂ-ಭಾರತ, ಇತಿ-ಎಂದು, ಖಂಡತ್ರಯಂ-ಮೂರು ಖಂಡಗಳೂ, ನಿಷಧಃ-ನಿಷಧ, ಹೇಮಕೂಟಃ- ಹೇಮಕೂಟ, ಚ-ಮತ್ತು ಹಿಮಾಲಯಃ-ಹಿಮಾಲಯ, ಇತಿ-ಎಂಬ, ತ್ರಯಃ-ಮೂರು (ಮರ್ಯಾದಾ-ಗಡಿ) ಪರ್ವತಗಳೂ, ಕ್ರಮಾತ್-ಕ್ರಮವಾಗಿ (ಉಕ್ತಕ್ರಮದಲ್ಲಿ), ಲವಣವಾರಿಧಿಃ ಯಾವತ್-ಲವಣ ಸಮುದ್ರದವರೆಗೆ, ಪ್ರೋಕ್ತಂ-(ಇರುವುವೆಂದು) ಹೇಳಲಾಗುತ್ತದೆ; ಉತ್ತರೇ-(ಇಲಾವೃತಖಂಡದ ಉತ್ತರದಲ್ಲಿ ನೀಲಃ-ನೀಲ, ಶ್ವೇತಃ-ಶ್ವೇತ, ಚ-ಮತ್ತು ಶೃಂಗೀ-ಶೃಂಗವಾನ್, (ಎಂಬ ಮೂರು ಪರ್ವತಗಳು), ಅವಧಿಪರ್ವತಾಃ- ಮರ್ಯಾದಾ ಪರ್ವತಗಳು; ಮಹರ್ಷಯಃ-ಹೇ ಋಷಿಗಳೇ!, (ಈ ಪರ್ವತಗಳಿಂದ ವಿಭಾಗಿಸಲ್ಪಡುವ), ರಮ್ಯಂ-ರಮ್ಯಕ, ಹಿರಣ್ಮಯಂ-ಹಿರಣ್ಮಯ, ಚ-ಮತ್ತು ಕುರುವರ್ಷಂ ಏವ-ಕುರುವರ್ಷವೆಂದೂ, ಇತಿ-ಹೀಗೆ (ಕರೆಯಲ್ಪಡುವ) ಖಂಡಾನಾಂ-ಖಂಡಗಳ, ತ್ರಯಂ-ಮೂರು, ಅಂಭೋಧಿಯಾವತ್-(ಉತ್ತರಲವಣ) ಸಮುದ್ರದವರೆಗೆ ವಿಸ್ತೃತಾನಿ-ವಿಸ್ತರಿಸಿವೆ.

---

ಹಿಮಾಲಯಗಳೆಂಬ ಮೂರು ಪರ್ವತಗಳಿವೆ; ಇವು ಮೂರೂ ತಮ್ಮಿಂದ, ಮರ್ಯಾದಿತವಾದ, ದಕ್ಷಿಣದಲ್ಲಿರುವ ಹರಿವರ್ಷ, ಕಿಂಪುರುಷ, ಭಾರತಗಳೆಂಬ ಮೂರು ಖಂಡಗಳ ಗಡಿಪರ್ವತಗಳಂತಿವೆ; ಭರತಖಂಡವು ದಕ್ಷಿಣದಲ್ಲಿ ಲವಣಸಮುದ್ರಪರ್ಯಂತವಿರುತ್ತದೆ; ಇಲಾವೃತ ಖಂಡದ ಉತ್ತರದಲ್ಲಿ ಸಹ ಹೀಗೆಯೇ ಮೂರು ಪರ್ವತಗಳೂ ಅವುಗಳಿಂದ ಮರ್ಯಾದಿತವಾದ ಮೂರು ಖಂಡಗಳೂ, ಉತ್ತರದಲ್ಲಿ ಲವಣಸಮುದ್ರಪರ್ಯಂತ ಇರುತ್ತವೆ (ಜಂಬೂದ್ವೀಪವು ಲವಣಸಮುದ್ರದಿಂದ ಸುತ್ತುವರಿಯಲ್ಪಟ್ಟು ಈ ದ್ವೀಪದ ಎಲ್ಲ ದಿಕ್ಕುಗಳಲ್ಲಿ ಲವಣಸಮುದ್ರವಿರುತ್ತದೆ); ನೀಲ, ಶ್ವೇತ, ಶೃಂಗವಾನ್ ಎಂಬುವೇ ಆ ಮೂರು ಪರ್ವತಗಳು ಮತ್ತು ಕ್ರಮವಾಗಿ ಈ ಪರ್ವತಗಳ ಉತ್ತರಕ್ಕೆ ಇರುವ, ರಮ್ಯಕ, ಹಿರಣ್ಮಯ ಮತ್ತು ಕುರು, ಎಂಬುವೇ ಆ ಮೂರು ಖಂಡಗಳು; ಈ ಕುರು ಖಂಡವು ಉತ್ತರದ ಲವಣಸಮುದ್ರದವರೆಗೆ ವಿಸ್ತರಿಸಿದೆ (೩೬-೩೮). ಹೀಗೆ ಇಲಾವೃತಖಂಡದ

**ಪ್ರತ್ಯೇಕಂ ಖಂಡಷಟ್ಕಂ ತು ನವಸಾಹಸ್ರಯೋಜನಂ ।**
**ಮರ್ಯಾದಾಪರ್ವತಾನಾಂ ತು ಅಷ್ಟಾನಾಮಪಿ ವಿಸ್ತೃತಿಃ ॥ ೩೯ ॥**
**ದ್ವಿಸಹಸ್ರಂ ಯೋಜನಾನಾಂ ಪ್ರತ್ಯೇಕಂ ಪರಿಕೀರ್ತಿತಾ ।**

ಖಂಡಷಟ್ಕಂ ತು-(ದಕ್ಷಿಣೋತ್ತರಗಳಲ್ಲಿ ಇರುವುವೆಂದು) ಈ ಮೊದಲು ಹೇಳಲಾದ ಆರು ಖಂಡಗಳಾದರೋ, ಪ್ರತ್ಯೇಕಂ-ಒಂದೊಂದೂ, ನವಸಾಹಸ್ರ ಯೋಜನಂ-೯೦೦೦ ಯೋಜನ ವಿಸ್ತಾರವಾದುದು; ಅಷ್ಟಾನಾಂ-ಎಂಟು, ಮರ್ಯಾದಾಪರ್ವತಾನಾಂ-ಗಡಿಪರ್ವತಗಳ (ಹಿಮಾಲಯಾದಿ ೬ ಪರ್ವತಗಳು ಮತ್ತು ಇಲಾವೃತಖಂಡದ ಪೂರ್ವಪಶ್ಚಿಮದ ಗಡಿಪರ್ವತಗಳಾದ, ಗಂಧಮಾದನ ಮತ್ತು ಮಾಲ್ಯವಂತ ಪರ್ವತಗಳು, ಹೀಗೆ ಈ ಎಂಟು ಪರ್ವತಗಳು), ವಿಸ್ತೃತಿಃ-ವಿಸ್ತಾರವು (ಅಗಲವು), ಪ್ರತ್ಯೇಕಂ-ಒಂದೊಂದೂ, ಯೋಜನಾನಾಂ-ಯೋಜನಗಳ, ದ್ವಿಸಹಸ್ರಂ-೨೦೦೦ ವೆಂದು, ಪರಿಕೀರ್ತಿತಾ-ಹೇಳಲ್ಪಟ್ಟಿದೆ.

**ದ್ವೀಪೇಷ್ವನ್ಯೇಷು ಖಂಡಾನಿ ಪ್ರತ್ಯೇಕಂ ಸಪ್ತ ಸಪ್ತ ತು ॥ ೪೦ ॥**
**ಖಂಡದ್ವಯಂ ಪುಷ್ಕರಸ್ಯ ನವಖಂಡಮಿದಂ ಸ್ಮೃತಂ ।**

ಅನ್ಯೇಷು-ಬೇರೆ (ಇತರ), ದ್ವೀಪೇಷು-(ಪ್ಲಕ್ಷಾದಿ) ದ್ವೀಪಗಳಲ್ಲಿ ಪ್ರತ್ಯೇಕಂತು-ಒಂದೊಂದರಲ್ಲಿಯೂ, ಸಪ್ತ ಸಪ್ತ-ಏಳುಏಳು, ಖಂಡಾನಿ-ಖಂಡಗಳು (ವಿಭಾಗಗಳು ಇರುತ್ತವೆ); (ಆದರೆ) ಪುಷ್ಕರಸ್ಯ-ಪುಷ್ಕರ ದ್ವೀಪಕ್ಕೆ, ಖಂಡದ್ವಯಂ-ಎರಡು ಖಂಡಗಳು, ಇದಂ-ಇದು (ಈ ಜಂಬೂದ್ವೀಪವು), ನವಖಂಡಂ-ಒಂಭತ್ತು ಖಂಡಗಳು, ಸ್ಮೃತಂ-(ಉಳ್ಳದ್ದೆಂದು) ತಿಳಿಯಲಾಗಿದೆ.

**ಭುವರ್ಲೋಕಸ್ತು ಭೂಲೋಕಾದೂರ್ಧ್ವತೋ ಲಕ್ಷಯೋಜನಃ ॥ ೪೧ ॥**

---

ದಕ್ಷಿಣೋತ್ತರಗಳಲ್ಲಿರುವ ಆರು ಖಂಡಗಳು, ಒಂದೊಂದೂ, ೯,೦೦೦ ಯೋಜನ ವಿಸ್ತಾರವುಳ್ಳವುಗಳಾಗಿವೆ; ಉಕ್ತವಾದ ಆರು ಗಡಿಪರ್ವತಗಳೂ ಮತ್ತು ಇಲಾವೃತ ಖಂಡದ ಪೂರ್ವಪಶ್ಚಿಮದ ಗಡಿಪರ್ವತಗಳಾದ ಗಂಧಮಾದನ ಮತ್ತು ಮಾಲ್ಯವಂತ ಪರ್ವತಗಳು, ಹೀಗೆ ಈ ಎಂಟೂ ಪರ್ವತಗಳ ಅಗಲವು (ಒಂದೊಂದರ ಅಗಲವೂ) ಎರಡು ಸಾವಿರ (೨,೦೦೦) ಯೋಜನಗಳೆಂದು ಹೇಳಲ್ಪಟ್ಟಿದೆ (೩೯). ಸಪ್ತದ್ವೀಪಗಳ ಪೈಕಿ, ಪುಷ್ಕರದ್ವೀಪದಲ್ಲಿ ಎರಡು (೨) ಖಂಡಗಳೂ, ಈ ಜಂಬೂದ್ವೀಪದಲ್ಲಿ ಒಂಭತ್ತು (೯) ಖಂಡಗಳೂ ಇರುತ್ತವೆ—ಉಳಿದ ಐದು ದ್ವೀಪಗಳಲ್ಲಿ ಒಂದೊಂದರಲ್ಲಿ ಏಳೇಳು ಖಂಡಗಳಿವೆ; ಏಳನೇ ಪುಷ್ಕರದ್ವೀಪದಲ್ಲಿ ಮಾತ್ರ ಎರಡು ಖಂಡಗಳು ಮಾತ್ರ ಇವೆ[1] (೪೦). ಭೂಲೋಕದಿಂದ ಮೇಲೆ ಒಂದು ಲಕ್ಷ ಯೋಜನವು ಭುವರ್ಲೋಕವು;

---

1. ಪ್ಲಕ್ಷಾದಿ ದ್ವೀಪಗಳಲ್ಲಿರುವ ಖಂಡಗಳು, ಗಡಿಪರ್ವತಗಳು, ವಿಸ್ತಾರ, ಮಹಾನದಿಗಳು, ರಾಜಾದಿಗಳು—ಇತ್ಯಾದಿ ವಿವರಗಳನ್ನು ಶ್ರೀಭಾಗವತ ಪಂಚಮಸ್ಕಂಧದಲ್ಲಿ ಕಾಣುತ್ತೀರಿ.

**ಮಹೇಂದ್ರನಗರೀ ತಸ್ಮಾತ್ಪಂಚಾಶಲ್ಲಕ್ಷಯೋಜನಾ ।**
**ತದರ್ಧ್ಯರ್ಧೋ ಸ್ವರ್ಗಲೋಕಸ್ತತೋಽಧ್ಯರ್ಧಾಃ ಪರೇ ಸ್ಮೃತಾಃ ॥ ೪೨ ॥**
**ಮಹರ್ಜನಸ್ತಪಶ್ಚೇತಿ ಸಪ್ತಲೋಕಾಸ್ತದೂರ್ಧ್ವತಃ ।**
**ಭೂಲೋಕಾತ್ತು ತಪೋ ಯಾವದ್ವೈಕುಂಠಂ ಸಪ್ತತಃ ಪರಂ ॥ ೪೩ ॥**
**ಯಾವದಂಡಕಟಾಹಂ ತದೂರ್ಧ್ವಮೂರ್ಧ್ವಮವಸ್ಥಿತಂ ।**

ಭೂಲೋಕಾತ್-ಭೂಲೋಕದಿಂದ, ಊರ್ಧ್ವತಃ-ಮೇಲೆ, ಲಕ್ಷ ಯೋಜನಃ-೧,೦೦,೦೦೦ ಯೋಜನ ಪ್ರದೇಶವು, ಭುವರ್ಲೋಕಃ-ಭುವರ್ಲೋಕವೆಂದು (ಭುವಃ ಎಂಬ ಹೆಸರುಳ್ಳದ್ದೆಂದು), ತು-ಪ್ರಸಿದ್ಧವಾಗಿದೆ; ತಸ್ಮಾತ್-ಭೂಮಿಯಿಂದ ಮೇಲೆ, ಮಹೇಂದ್ರನಗರೀ-ಇಂದ್ರನ (ಅಮರಾವತಿ ನಾಮಕ) ಪಟ್ಟಣವು, ಪಂಚಾಶಲ್ಲಕ್ಷಯೋಜನಾ-(೫೦) ಐವತ್ತು ಲಕ್ಷ ಯೋಜನದ ಮೇಲಿರುವುದು; ತದರ್ಧ್ಯರ್ಧಃ-ಅದರ (೧½) ಒಂದೂವರೆಯಷ್ಟು ಎಂದರೆ ಎಪ್ಪತ್ತೈದು ಲಕ್ಷ ಯೋಜನದವರೆಗೆ, ಸ್ವರ್ಗಲೋಕಃ-ಸ್ವರ್ಗಲೋಕವು; ಪರೇ-ಉಳಿದವು (ಅದರ ಮೇಲೆ ಮೇಲಿರುವ ಮಹರಾದಿ ಲೋಕಗಳು), ತತಃ-ಅದಕ್ಕಿಂತ, ಅಧ್ಯರ್ಧಾಃ- ೧½) ಒಂದೂವರೆಯಷ್ಟು ಮೇಲೆ (೭೫ ಲಕ್ಷ ಯೋಜನದ ಮೇಲೆ ಮಹರ್ಲೋಕವೂ ಅದರ ಒಂದೂವರೆಯಷ್ಟು ಅಂದರೆ ೧,೧೨,೫೦,೦೦೦ ಯೋಜನದ ಮೇಲೆ ಜನೋಲೋಕವೂ ಇತ್ಯಾದಿ) ಇರುವುವೆಂದು, ಸ್ಮೃತಾಃ-ತಿಳಿಯಲ್ಪಟ್ಟಿವೆ; ಮಹಃ-

---

ಭೂಮಿಯಿಂದ ಮೇಲೆ ೫೦ ಲಕ್ಷ ಯೋಜನದಲ್ಲಿ ಮಹೇಂದ್ರ ನಗರಿ (ಅಮರಾವತಿ) ಇದೆ; ೭೫ ಲಕ್ಷ ಯೋಜನದ ಮೇಲೆ ಮಹರ್ಲೋಕವಿದೆ; ಅಲ್ಲಿಂದ ಮೇಲೆ ತಪೋಲೋಕದವರೆಗೆ ಎಂದರೆ, (ಮಹರ್ಲೋಕ, ಜನೋಲೋಕ ಮತ್ತು ತಪೋಲೋಕಗಳು) ಒಂದೊಂದೂ, ಒಂದಕ್ಕಿಂತ ಮೇಲಿನ ಇನ್ನೊಂದು, ೧½ಯಷ್ಟು ದೂರದಲ್ಲಿರುತ್ತದೆ[1]; ಆಮೇಲೆ ಮೂರರಷ್ಟು ದೂರವಿರುವ ಸತ್ಯಲೋಕವೂ, ಅದರ

---

೧. ಭೂಲೋಕದ ಮೇಲೆ ವೈಕುಂಠದವರೆಗಿನ ಲೋಕಗಳ ಸ್ಥಿತಿಯನ್ನೂ ಅವುಗಳ ವಿಸ್ತಾರವನ್ನೂ ವಿಸ್ತಾರವಾಗಿ ವಿವರಿಸುವ ಅಭಿನವ ಜನಾರ್ದನವಿಠ್ಠಲಕೃತ ಸುಳಾದಿಯು ಹೀಗಿದೆ:—

| | |
|---|---|
| ಸುರಲೋಕ ಭುವಿಗೆ ದಶಪಂಚಲಕ್ಷವ । | ೫೦,೦೦,೦೦೦ |
| ದರ ಕಂದ ಅಗಲವು ಐವತ್ತು ಸಾವಿರ । | |
| ಸುರಲೋಕದತ್ತ ಎಪ್ಪತ್ತೈದು ಲಕ್ಷವು । | ೭೫,೦೦,೦೦೦ |
| ಮಹರಲೋಕ ಕಂದ ಕೋಟಿರಡತ್ತೈದು ಲಕ್ಷ । | |
| ದರ ಮೇಲೆ ಜನಲೋಕ ಕೋಟಿ ದ್ವಾದಶಲಕ್ಷ । | |
| ಎರಡಧಿಕ ಮೂವತ್ತು ಸಾವಿರ ಯೋಜನ । | ೧,೧೨,೩೨,೦೦೦ |

ಮಹರ್ಲೋಕ, ಜನಃ-ಜನೋಲೋಕ, ತಪಃ-ತಪೋಲೋಕ, ತದೂರ್ಧ್ವತಃ-ಆ ತಪೋಲೋಕದ ಮೇಲಿರುವ, ಚ-ಸತ್ಯಲೋಕವೂ, ಇತಿ-ಹೀಗೆ, ಸಪ್ತಲೋಕಾಃ-ಏಳು ಲೋಕಗಳಿವೆ; ಭೂಲೋಕಾತ್-ಭೂಲೋಕದಿಂದ, ತಪಃ ಯಾವತ್-ತಪೋ ಲೋಕದವರೆಗೆ, (ಅರ್ಧ್ಯರ್ಧಃ-ಒಂದೊಂದೂ ೧ತ್ತೆ ರಷ್ಟು ವಿಸ್ತಾರವುಳ್ಳದ್ದು); ಸಪ್ತತಃ-ಏಳನೆಯದಾದ ಸತ್ಯಲೋಕದ, ಪರಂ-ನಂತರ (ಮೇಲೆ), ಅಂಡಕಟಾಹಂ ಯಾವತ್-ಬ್ರಹ್ಮಾಂಡಖರ್ಪರದವರೆಗೆ, ಊರ್ಧ್ವಾಷ್ಯಮ್ಬಿತಂ-ಮೇಲಿರುವ, ಊರ್ಧ್ವಂ-ಶ್ರೇಷ್ಠವಾದ, ವೈಕುಂಠಂ-ವೈಕುಂಠಲೋಕವು, (ಸ್ಥಿತಂ-ಸ್ಥಿತವಾಗಿದೆ).

**ಮಧ್ಯಭಾಗಃ ಶ್ರೀಯಸ್ತತ್ರ ಸ ತು ಲೋಕಃ ಸನಾತನಃ ॥ ೪೪ ॥**
**ಮುಕ್ತಾ ಏವ ರಮಂತೇತ್ರ ಪುನರಾವೃತ್ತಿವರ್ಜಿತಾಃ ।**
**ಭೂದುರ್ಗಾಭಾಗಕೌ ತತ್ರ ದಕ್ಷಿಣೋತ್ತರತಃ ಸ್ಥಿತೌ ॥ ೪೫ ॥**

ತತ್ರ-ಆ ವೈಕುಂಠಲೋಕದಲ್ಲಿ, ಮಧ್ಯಭಾಗಃ-ಮಧ್ಯಭಾಗವು, ಶ್ರಿಯಃ

---

ಮೇಲೆ, ಬ್ರಹ್ಮಾಂಡಕಟಾಹದವರೆಗೆ ಸರ್ವಲೋಕ ಶ್ರೇಷ್ಠವಾದ ವೈಕುಂಠಲೋಕವಿದೆ (೪೧-೪೩) ವೈಕುಂಠಲೋಕದಲ್ಲಿ ಮೂರು ಭಾಗಗಳಿವೆ—ಶ್ರೀ, ಭೂ, ದುರ್ಗಾ ಭಾಗಗಳೆಂದು ಅವು ಕರೆಯಲ್ಪಡುತ್ತದೆ; ಶ್ರೀ ಭಾಗವು ಮಧ್ಯದಲ್ಲಿದೆ, ಅದರ ದಕ್ಷಿಣದಲ್ಲಿ ಭೂಭಾಗವೂ, ಉತ್ತರದಲ್ಲಿ ದುರ್ಗಾಭಾಗವೂ ಇವೆ; ಶ್ರೀಭಾಗವು

---

ಇರುತಿಪ್ಪದು ಸ್ಥೂಲ ಕೋಟ್ಯೆವತ್ತು ಲಕ್ಷ ।
ಕರುವಾಯ ತಪೋಕೋಟಿ ಆರುವತ್ತೆಂಟು ಲಕ್ಷ । ೧,೬೮,೫೨,೦೦೦
ಎರಡಧಿಕ ಐವತ್ತು ಸಾವಿರ ಯೋಜನ ।
ಇರುವುದು ಕೆಳಗಿನದೊಂದು ಮ್ಯಾಲಿಪ್ಪದ್ದಿ ।
ಪುರದೊನ್ನತವೆಲ್ಲವೊಂದೆ ಸಮಾವೆನ್ನು ।
ಅರಿವದು ಇಲ್ಲಿಗೆ ಸತ್ಯಲೋಕವು ।
ಎರಡೆರಡು ಕೋಟ್ಯಾರುಲಕ್ಷ ಇಪ್ಪತ್ತೈದು ಸಾ । ೪,೦೬,೨೫,೦೦೦
ಸಿರದ ಯೋಜನದ ಮ್ಯಾಲಿಪ್ಪುದು ।
ಸಿರಿಪತಿ ಮಹಿಮೆಯ ಅರಿದವರಾರಿನ್ನು ।
ಸ್ಥಿರಮಣ ಅಭಿನವಜನಾರ್ದನವಿಠಲ ।
ನಿರುತ ಈ ಪರಿಯಲ್ಲಿ ಸ್ಮರಿಸಿದವರ ಕಾವ ॥
ಸರಸಿಜೋದ್ಭವನ ಸುಪುರ ಎಂಟು ಕೋಟಿ ।
ಎರಡಾರು ಲಕ್ಷ ಐವತ್ತು ಸಾವಿರದ ಮ್ಯಾ ।
ಲಿರುತಿಪ್ಪ ವೈಕುಂಠಪುರದ.... ಇತ್ಯಾದಿ.

ಕಂದ—ಒಂದೊಂದು ಲೋಕಕ್ಕೂ ಮಧ್ಯ ಇರುವ ಪ್ರದೇಶ—ಸಂಧಿಸುವ ಭಾಗ. ತಪೋಲೋಕದ ಕಂದ ಮತ್ತು ಅದರ ಒಂದೂವರೆಯಷ್ಟು ಸತ್ಯಲೋಕವೂ ಅದರ ಕಂದವೂ ಸೇರಿ ಸತ್ಯಲೋಕವು ಮೂರರಷ್ಟೆಂದು ತಿಳಿಯಬೇಕು.

(ಭಾಗಃ)-ಶ್ರೀಭಾಗವು; ಸಃ ಲೋಕಃ ತು-ಆ ಶ್ರೀಭಾಗದ ವೈಕುಂಠಲೋಕವಾದರೋ, ಸನಾತನಃ-ಅನಾದಿನಿತ್ಯವಾದುದು; ಅತ್ರ-ಇಲ್ಲಿ ಪುನರಾವೃತ್ತಿವರ್ಜಿತಾಃ-ಸಂಸಾರಕ್ಕೆ ಎಂದೂ ತಿರುಗಿಬರದ, ಮುಕ್ತಾಃ ಏವ-ಮುಕ್ತಜೀವರು ಮಾತ್ರವೇ, ರಮಂತೇ-ಆನಂದದಿಂದ ವಾಸಿಸುತ್ತಾರೆ; ತತ್ರ-ಆ ವೈಕುಂಠದಲ್ಲಿ, ದಕ್ಷಿಣೋತ್ತರತಃ-(ಶ್ರೀಭಾಗದ) ದಕ್ಷಿಣ (ಭೂಭಾಗ), ಉತ್ತರ (ದುರ್ಗಾಭಾಗ) ದಿಕ್ಕುಗಳಲ್ಲಿ ಭೂದುರ್ಗಾಭಾಗಕೌ-ಭೂದುರ್ಗಾಭಾಗಗಳು, ಸ್ಥಿತೌ-ಇರುತ್ತವೆ.

ಆರಾಧಿತೋಽಸ್ತಿ ಯೈರ್ವಿಷ್ಣುರ್ನಾನಾಪುಣ್ಯೋಚ್ಚಯೈರ್ನರೈಃ ।
ನಿವಸಂತಿ ತ ಏವಾತ್ರ ಕ್ಷೀಣೇ ಪುಣ್ಯೇ ಪತಂತ್ಯಧಃ ॥ ೪೬ ॥

ಅತ್ರ-ಈ ಭೂದುರ್ಗಾಭಾಗಗಳಲ್ಲಿ ಯೈಃ ನರೈಃ-ಯಾವ ಜೀವರಿಂದ, ನಾನಾಪುಣ್ಯೋಚ್ಚಯೈಃ-ವಿವಿಧ ಉತ್ಕಟವಾದ ಪುಣ್ಯಕರ್ಮಗಳಿಂದ (ಕೇವಲ ಶ್ರೀವಿಷ್ಣುಪ್ರೀತ್ಯರ್ಥವಾಗಿ ಆಚರಿಸಲ್ಪಡುವ ಶ್ರೇಷ್ಠ ಸತ್ಕರ್ಮಗಳಿಂದ), ವಿಷ್ಣುಃ-ಶ್ರೀವಿಷ್ಣುವು, ಆರಾಧಿತಃ-ಉಪಾಸಿಸಲ್ಪಟ್ಟವನು, ಅಸ್ತಿ-ಆಗಿರುವನೋ, ತೇ ಏವ-ಅವರೇ, ವಸಂತಿ-ವಾಸಮಾಡುತ್ತಾರೆ; ಪುಣ್ಯೇ-ಸತ್ಕರ್ಮ ರೂಪದ ಉಪಾಸನೆಯು, ಕ್ಷೀಣೇ-ಕಡಿಮೆಯಾಗುತ್ತಿರಲು, ಅಧಃ-ಕೆಳಗೆ (ಕೆಳಗಿನ ಸತ್ಯಾದಿಲೋಕಗಳಿಗೆ), ಪತಂತಿ-ಬೀಳುತ್ತಾರೆ (ಹೋಗುತ್ತಾರೆ).

---

ಅನಾದಿನಿತ್ಯವಾದುದು;[1] ಅಲ್ಲಿ ಸಂಸಾರಕ್ಕೆ ಎಂದೂ ಹಿಂದಿರುಗದ (ಲಿಂಗದೇಹವನ್ನೂ ತ್ಯಜಿಸಿ, ನಿತ್ಯಸ್ವರೂಪದಿಂದಿರುವ) ಮುಕ್ತರು ಮಾತ್ರ ವಾಸಿಸುತ್ತಾರೆ (೪೪-೪೫). ಯಾವ ಜೀವರು ನಾನಾ ಸತ್ಕರ್ಮಾಚರಣರೂಪದ ಉತ್ಕಟ ಪುಣ್ಯವುಳ್ಳವರೋ, ಅವರು ಮಾತ್ರ ಈ ಭೂದುರ್ಗಾಭಾಗಗಳಲ್ಲಿ (ವೈಕುಂಠ ಲೋಕದಲ್ಲಿ) ವಾಸಿಸುತ್ತಾರೆ; ಅಲ್ಲಿರುವಾಗ, ಅದೇ ಪ್ರಕಾರದ (ಉತ್ಕಟಪುಣ್ಯಕರ್ಮಾಚರಣ ರೂಪದ) ಭಗವದುಪಾಸನೆಯಲ್ಲಿ ಕೊರತೆಯುಂಟಾದರೆ, ಆಗ, ಅವರು ಕೆಳಗಿನ ಲೋಕಗಳಿಗೆ ಬೀಳುತ್ತಾರೆ[2] (೪೬).

---

1. ಭೂ ದುರ್ಗಾ ಭಾಗಗಳು ಪ್ರಲಯಕಾಲದಲ್ಲಿ ನಷ್ಟವಾಗುತ್ತವೆ.

2. ವೈಕುಂಠಲೋಕದ ಭೂ ದುರ್ಗಾ ಭಾಗಗಳನ್ನು ಪ್ರಾಯಃ ಅಪರೋಕ್ಷ ಜ್ಞಾನೋತ್ತರಕಾಲದಲ್ಲಿ (ಪ್ರಾರಬ್ಧಕರ್ಮಭೋಗಕಾಲದಲ್ಲಿ), ಅಧಿಕಾರಿಜೀವರು ಆಚರಿಸುವ, ಅತ್ಯುತ್ಕಟವಾದ (ಪುಣ್ಯ) ಕರ್ಮಾಚರಣೆಗಳ ಫಲವಾಗಿ, ಮಹಾಪ್ರಲಯಪರ್ಯಂತ, ವಾಸಕ್ಕಾಗಿ ಹೊಂದಿಸಲ್ಪಡುವರು; ಸಾಮಾನ್ಯವಾಗಿ ವಿಷ್ಣ್ವುಪಾಸಕರಾದ ದೇವತೆಗಳು ಮಾತ್ರ ಈ ಲೋಕಕ್ಕೆ ಬರುತ್ತಾರೆ—ತಥಾಪಿ, ದುರ್ಗಾಭಾಗಕ್ಕೆ, ಭೂಭಾಗಕ್ಕೆ ಬರುವವರಿಗಿಂತ, ಕಿಂಚಿತ್ ಅಲ್ಪ ಯೋಗ್ಯತೆಯುಳ್ಳವರೇ ತರಲಾಗುವರೆಂದೂ ತಿಳಿಯಬರುತ್ತದೆ; ಏನಂದರೆ ಇಲ್ಲಿರುವವರೆಲ್ಲರೂ ಬ್ರಹ್ಮಸಾಕ್ಷಾತ್ಕಾರ ಪಡೆದ ಜ್ಞಾನಿಗಳೆಂಬಲ್ಲಿ ಯಾವ ಸಂಶಯವೂ ಇಲ್ಲ. 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತ್ಯರ್ಥ ವಿವರಣೆಯಲ್ಲಿ (ಬ್ರಹ್ಮಸೂತ್ರ ೪ನೇ ಅಧ್ಯಾಯ

**ಸಂಸಾರೇ ಪೂರ್ವಸಂಸ್ಕಾರಾತ್ ಶ್ರೀವಿಷ್ಣುಂ ಶ್ರವಣಾದಿನಾ ।**
**ಆರಾಧ್ಯ ದೃಷ್ಟಬಿಂಬಾಸ್ತೇ ಮುಕ್ತಾ ಮೋದಂತಿ ಸರ್ವದಾ ॥ ೪೭ ॥**

ಪೂರ್ವಸಂಸ್ಕಾರಾತ್-ಅನಾದಿ ಸಂಸ್ಕಾರ ಪ್ರಭಾವದಿಂದ (ಸ್ವರೂಪ ಯೋಗ್ಯತೆ, ಕರ್ಮಾದಿಗಳ ಪ್ರಭಾವದಿಂದ), ಸಂಸಾರೇ-ಸಂಸಾರದಲ್ಲಿರುವಾಗ, ಶ್ರವಣಾದಿನಾ-ಶ್ರವಣ, ಮನನ, ಧ್ಯಾನಾದಿರೂಪ ಜಿಜ್ಞಾಸೆಯಿಂದ, ಶ್ರೀವಿಷ್ಣುಂ-(ಬ್ರಹ್ಮಶಬ್ದಮುಖ್ಯ ವಾಚ್ಯನಾದ) ಶ್ರೀವಿಷ್ಣುವನ್ನು, ಆರಾಧ್ಯ-ಉಪಾಸಿಸಿ, ದೃಷ್ಟಬಿಂಬಾಃ-ಸ್ವಬಿಂಬವನ್ನು ಕಂಡ, (ಬಿಂಬಾಪರೋಕ್ಷವನ್ನು ಹೊಂದಿದ), ಮುಕ್ತಾಃ-(ಸಂಸಾರದಿಂದ) ಮುಕ್ತರಾದ (ಲಿಂಗಭಂಗಕ್ಕಾಗಿ, ಮಹಾ ಪ್ರಲಯಕಾಲದ ನಿರೀಕ್ಷಣೆಯಲ್ಲಿ, ತೇಜೋರೂಪದ ಸೂಕ್ಷ್ಮತಮ ದೇಹಗಳಲ್ಲಿರುವ) ಜೀವರು, ಸರ್ವದಾ-ಸದಾ(ನಿಯಮೇನ), (ಅತ್ರ-ಈ ಭೂದುರ್ಗಾಭಾಗಗಳಲ್ಲಿ), ಮೋದಂತಿ-ಆನಂದಿಸುತ್ತಿರುವರು.

**ಅರಣ್ಯಾಖ್ಯೌ ಸುಧಾಸಿಂಧೂ ವಿಷ್ಣೋರ್ಲೋಕತ್ರಯೇಽಪಿ ಹಿ ।**
**ಸೀಮಾ ವಿಭಾಜಕೌ ತೌ ತು ಭೂದುರ್ಗಾಭಾಗಯೋಃ ಕ್ರಮಾತ್ ॥೪೮॥**

---

ಈ ಭೂ ದುರ್ಗಾ ವೈಕುಂಠ ಭಾಗಗಳಲ್ಲಿ, ಪೂರ್ವಸಂಸ್ಕಾರ ಪ್ರಭಾವದಿಂದ ಶ್ರೀವಿಷ್ಣುವನ್ನು ಶ್ರವಣಾದಿಗಳಿಂದ ವಿಶಿಷ್ಟ ರೀತಿಯಿಂದ ಉಪಾಸಿಸಿ, ಬಿಂಬಾ ಪರೋಕ್ಷವನ್ನು ಪಡೆದು ಸಂಸಾರದಿಂದ ಮುಕ್ತರಾದ ಜ್ಞಾನಿಜೀವರು ಮಾತ್ರ ವಾಸಿಸುತ್ತ (ಮಹಾಪ್ರಲಯ ಪರ್ಯಂತ) ಆನಂದಿಸುತ್ತಿರುವರು (೪೭). ಶ್ರೀವಿಷ್ಣುವಿನ ಮೂರು

---

ಮಾರ್ಗಪಾದರ ಕಾರ್ಯಾಧಿಕರಣವನ್ನು ನೋಡಬಹುದು). ಈ ಪ್ರಮೇಯದ ವಿವರಣೆಯನ್ನು ಕಾಣಬಹುದು. 'ಋತೇ ದೇವಾನ್ ಪರಬ್ರಹ್ಮ ಹಿ। ಪುಮಾನ್ ಪ್ರಾಪ್ನುಯಾತ್ ಕ್ವಚಿತ್ । ಯದ್ಯಪಿ ಬ್ರಹ್ಮದೃಷ್ಟಿಃ ಸ್ಯಾತ್ ಬ್ರಹ್ಮಲೋಕಮವಾಪ್ನುಯಾತ್ ॥' ಇತ್ಯಾದಿ ಭಾಷ್ಯದಲ್ಲಿ ಉದಾಹೃತವಾದ ಪ್ರಮಾಣಗಳು, ಮುಖ್ಯಪ್ರಾಣನು, ಜ್ಞಾನಿಜೀವರನ್ನು ಅವರವರ ಯೋಗ್ಯತಾನುಗುಣವಾದ ಲೋಕಗಳನ್ನು (ಕಾರ್ಯಬ್ರಹ್ಮ—ಸತ್ಯಾದಿಲೋಕಗಳು; ಪರಬ್ರಹ್ಮ—ವೈಕುಂಠಲೋಕದ ಭೂ ದುರ್ಗಾ ಭಾಗಗಳನ್ನು) ಹೊಂದಿಸುತ್ತಾನೆಂದು ಹೇಳುತ್ತವೆ. ಪುಣ್ಯಹಾನಿಯಿಂದ 'ಅಧಃ ಪತತಿ' ಎಂಬುದಕ್ಕೆ ಪುನಃ ಸಂಸಾರದಲ್ಲಿ ಬೀಳುತ್ತಾನೆಂಬರ್ಥವನ್ನು ತಿಳಿಯಕೂಡದು; ಬ್ರಹ್ಮದರ್ಶನಕ್ಕೆ ಪೂರ್ವದಲ್ಲಿ ಪುಣ್ಯಫಲವಾಗಿ ಸ್ವರ್ಗಾದಿ ಸ್ಥಾನಗಳನ್ನು ಹೊಂದಿದವರು ಮಾತ್ರ, ಪುಣ್ಯವು ಭೋಗದಿಂದ ಕ್ಷೀಣವಾಗಲು, ಸಂಸಾರದಲ್ಲಿ ಬರುತ್ತಾರೆ—ಜ್ಞಾನಿಗಳಲ್ಲ; ವೈಕುಂಠಲೋಕ ದಲ್ಲಿರುವ ಜೀವರಿಗೆ ಉತ್ತಮಲೋಕದ ಭಗವದುಪಾಸನೆಯ ಅರ್ಹತೆ ಇರಬೇಕು; ಅದಕ್ಕೆ ಕೊರತೆಯಾದರೆ ಕೆಳಗಿನ ಲೋಕಗಳಿಗೆ (ಅಷ್ಟು ಸಾಧನ ಪೂರ್ತಿಹೊಂದಿದ ಜ್ಞಾನಿಗಳಿರುವ ಲೋಕಗಳಿಗೇ) ಬರುತ್ತಾರೆ. ಜನೋಲೋಕದಿಂದ ಮುಂದಿನ ಮೇಲಿನ ಲೋಕಗಳಲ್ಲಿರುವ ಜೀವರಿಗೆ ಭೂಲೋಕದಲ್ಲಿ ಪುನರ್ಜನ್ಮವಿಲ್ಲವೆಂಬುದು ಸಾಮಾನ್ಯನಿಯಮ; ಭಗವದಾಜ್ಞೆ, ಸ್ವೋತ್ತಮರ ಶಾಪಾದಿ ವಿಶೇಷನಿಮಿತ್ತವಾಗಿ, ಅಂಶದಿಂದ ಭೂಲೋಕದಲ್ಲಿ ಹುಟ್ಟುವುದುಂಟು—ವೈಕುಂಠದ್ವಾರದಲ್ಲಿದ್ದ ಜಯವಿಜಯರು (ವಿಷ್ಣುಪಾರ್ಷದರು)ಸನಕಾದಿಗಳ ಶಾಪನಿಮಿತ್ತವಾಗಿ ಅಸುರ ದೇಹದಲ್ಲಿ ಬಂದಂತೆ (ಜನ್ಮತಾಳಿದಂತೆ); ಇತ್ಯಾದಿ ಸೂಕ್ಷ್ಮ ವಿಶೇಷಗಳನ್ನು ಗುರುಮುಖೇನ ತಿಳಿಯತಕ್ಕದ್ದು.

ವಿಷ್ಣೋಃ - ಶ್ರೀವಿಷ್ಣುವಿನ, ಲೋಕತ್ರಯೇ ಅಪಿ - ತ್ರಿಧಾಮಗಳಲ್ಲಿಯೂ (ವೈಕುಂಠ, ಶ್ವೇತದ್ವೀಪ, ಅನಂತಾಸನಗಳಲ್ಲಿ), ಅರಣ್ಯಾಖ್ಯೌ-ಅರ ಮತ್ತು ಣ್ಯ ಎಂಬ ಹೆಸರಿನ, ಸುಧಾಸಿಂಧೂ-ಅಮೃತ ಸಮುದ್ರಗಳು (ಇರುತ್ತವೆ); ತೌ-ಅವುಗಳು, ಕ್ರಮಾತ್-ಕ್ರಮವಾಗಿ, ಭೂದುರ್ಗಾಭಾಗಯೋಃ-ಭೂದುರ್ಗಾ ಭಾಗಗಳ, ಸೀಮಾ ವಿಭಾಜಕೌ-ಗಡಿಗಳನ್ನು ಪ್ರತ್ಯೇಕಿಸುತ್ತವೆ; ಹಿ-ಹೀಗೆಂಬುದು ಶ್ರುತಿ ಸಿದ್ಧವು.

ಶ್ರೀಭಾಗಃ ಶುದ್ಧಸತ್ತ್ವಾತ್ಮಾ ಮುಕ್ತೈರೇವ ನಿಷೇವಿತಃ ।
ಯಥಾಯಥೈವ ಮುಕ್ತೇಚ್ಛಾ ಫಲಂ ಪುಷ್ಪಾದಿಕಂ ತಥಾ ॥ ೪೯ ॥
ಸತ್ತ್ವತೋ ಜಾಯತೇ ಶೀಘ್ರಮಿಚ್ಛಾಂತೇ ತತ್ರ ಲೀಯತೇ ।
ತರಂಗಾ ಇವ ತೋಯೇಷು ತದಾತ್ಮಾನೋಽಪಿ ತಲ್ಲಯಾಃ ॥ ೫೦ ॥
ತಥೈವ ಸತ್ತ್ವತಃ ಸರ್ವಂ ದೃಶ್ಯತೇ ಲೀಯತೇಽಪಿ ಚ ।

ಶ್ರೀಭಾಗಃ-ಶ್ರೀಭಾಗವು, ಶುದ್ಧಸತ್ತ್ವಾತ್ಮಾ-ಶುದ್ಧಸತ್ತ್ವದಿಂದಾದುದು; ಮುಕ್ತೈಃ ಏವ-(ಲಿಂಗಭಂಗವನ್ನು ಹೊಂದಿದ) ಮುಕ್ತರಿಂದ ಮಾತ್ರ, ನಿಷೇವಿತಃ-ಸೇವಿಸಲ್ಪಡುವುದು (ಆಶ್ರಯಿಸಲ್ಪಡುವುದು-ವಾಸಮಾಡುವರು); ಯಥಾಯಥಾ-ಹೇಗೆಹೇಗೆ, ಮುಕ್ತೇಚ್ಛಾ-(ಅಲ್ಲಿ ವಾಸಿಸುವ) ಮುಕ್ತರ ಇಚ್ಛೆಯೋ (ಅಪೇಕ್ಷಿಸುವರೋ), ತಥೈವ-ಹಾಗೆಯೇ, ಫಲಂ-ಫಲವೂ, ಪುಷ್ಪಾದಿಕಂ-ಪುಷ್ಪ ಮೊದಲಾದ ಭೋಗ್ಯ ವಸ್ತುಗಳೂ, ಸತ್ತ್ವತಃ-ಸತ್ತ್ವ ಗುಣದಿಂದ, ಶೀಘ್ರಂ-ಶೀಘ್ರವಾಗಿ (ಇಚ್ಛಿತಕಾಲದಲ್ಲಿ- ತಕ್ಷಣದಲ್ಲಿ) ಜಾಯತೇ-ಹುಟ್ಟುತ್ತದೆ (ಸಿದ್ಧವಾಗಿ ಒದಗುತ್ತವೆ); ಇಚ್ಛಾಂತೇ- (ಮುಕ್ತರ) ಇಚ್ಛೆಯು ಪೂರೈಸಿದೊಡನೆ, ತತ್ರ-ಅಲ್ಲಿಯೇ (ಆ

---

ಲೋಕಗಳಲ್ಲಿಯೂ, (ವೈಕುಂಠಾದಿ ತ್ರಿಧಾಮಗಳಲ್ಲಿ), ಅರ ಮತ್ತು ಣ್ಯ ಎಂಬ ನಾಮವುಳ್ಳ ಎರಡು ಅಮೃತ ಸಮುದ್ರಗಳು (ಸರೋವರಗಳು), ಅಲ್ಲಿ (ತ್ರಿಧಾಮಗಳಲ್ಲಿಯೂ) ಇರುವ ಭೂದುರ್ಗಾಭಾಗಗಳನ್ನು ವಿಭಾಗಿಸುತ್ತವೆ—ಭೂ ಶ್ರೀಭಾಗಗಳನ್ನು 'ಅರ'ವೂ, ದುರ್ಗಾ ಶ್ರೀ ಭಾಗಗಳನ್ನು 'ಣ್ಯ'ವೂ ಪ್ರತ್ಯೇಕಿಸುತ್ತವೆ (೪೮). ಶ್ರೀಭಾಗವು ಶುದ್ಧ ಸತ್ತ್ವಾತ್ಮಕವಾದುದು—(ಲಿಂಗಭಂಗ ಹೊಂದಿದ—ಸ್ವಸ್ವರೂಪದಿಂದಿರುವ) ಮುಕ್ತರಿಂದ ಮಾತ್ರ ಸೇವಿತವಾದುದು (ಅಲ್ಲಿ ಮುಕ್ತರು ಮಾತ್ರ ವಾಸಿಸುವರು); ಸತ್ತ್ವಗುಣದಿಂದ, ಮುಕ್ತರ ಇಚ್ಛೆಯಂತೆ, ಇಚ್ಛಿತವಾದೊಡನೆಯೇ, ಫಲಪುಷ್ಪಾದಿ ಸಕಲ ಭೋಗ್ಯವಸ್ತುಗಳು ರೂಪಗೊಂಡು, ಸಿದ್ಧವಾಗುತ್ತವೆ; ಭೋಗದಿಂದ ಅವರ ಇಚ್ಛೆಯು ಪೂರ್ಣವಾಗಲು, ಅವು ಸತ್ತ್ವಗುಣದಲ್ಲಿಯೇ

---

1. ಮೂಲಪ್ರಕೃತಿಯು ತ್ರಿಗುಣಾತ್ಮಕವಾದುದು; ವಿಶ್ವಸೃಷ್ಟಿಗಾಗಿ (ಉಪಾದಾನವಾಗಿ) ಅನಂತವಾದ ಪ್ರಕೃತಿಯಲ್ಲಿ ಅಲ್ಪಭಾಗ ಮಾತ್ರ ಉಪಯೋಗಿಸಲ್ಪಡುತ್ತದೆ; ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಮೂಲಪ್ರಕೃತಿಗತವಾದ ಸತ್ತ್ವಗುಣವು, ಶುದ್ಧಸತ್ತ್ವವೆನಿಸುತ್ತದೆ.

ಸತ್ವಗುಣದಲ್ಲಿಯೇ), ಲೀಯತೇ-ನಷ್ಟಹೊಂದುತ್ತವೆ (ಫಲಾದಿರೂಪವನ್ನು ತೊರೆದು ಅಡಗುತ್ತದೆ); ತರಂಗಾಃ-ನೀರಿನ ಅಲೆಗಳು, ತದಾತ್ಮಾನಃ ಅಪಿ-ಜಲಾತ್ಮಕವೇ ಆದರೂ (ಜಲದ ರೂಪಾಂತರವೇ ಆಗಿದ್ದು), ತೋಯೇಷು-ಜಲದಲ್ಲಿ, ತಲ್ಲಯಾಃ-(ಅಲೆಗಳ ರೂಪವನ್ನು ತೊರೆದು ಜಲವೇ ಆಗುವಂತೆ) ಜಲವಾಗಿಯೇ ಲೀನವಾಗುವಂತೆ, ತಥಾ ಏವ-ಅದರಂತೆಯೇ, ಸರ್ವಂ-ಫಲಪುಷ್ಪಾದಿ ಸರ್ವವೂ, ಸತ್ವತಃ-ಸತ್ವಗುಣದಿಂದ, ದೃಶ್ಯತೇ-ಪ್ರತ್ಯಕ್ಷವಾಗುತ್ತವೆ; ಅಪಿ ಚ-(ಮುಕ್ತರ ಭೋಗಾನಂತರ) ಮತ್ತೂ ಲೀಯತೇ-(ಸತ್ವದಲ್ಲಿಯೇ) ಲೀನವಾಗುತ್ತವೆ.

**ಕಾಮೋದ್ರೇಕಃ ಕ್ಷುಧಾ ತೃಷ್ಣಾ ಗುಣಃ ಸ್ಯಾದ್ವಿಷಯೇ ಸತಿ ॥ ೫೧ ॥**
**ತದಭಾವೇ ತು ದೋಷಃ ಸ್ಯಾನ್ನ ದೋಷಸ್ತತ್ರ ವಿದ್ಯತೇ ।**
**ಸಿದ್ಧಂ ಸ್ಯಾದಿಚ್ಛಯೈವೇಷ್ಟಂ ತತ್ರ ದೋಷಃ ಕಥಂ ಭವೇತ್ ॥ ೫೨ ॥**

ಕಾಮೋದ್ರೇಕಃ-ತೀವ್ರವಾದ ವಿಷಯಭೋಗೇಚ್ಛೆಯೂ, ಕ್ಷುಧಾ-ಹಸಿವು, ತೃಷ್ಣಾ-ನೀರಡಿಕೆ (ಪಾನೇಚ್ಛೆಯ ಆತುರ), (ಇವು), ವಿಷಯೇ ಸತಿ-ಭೋಗ್ಯ ವಸ್ತುವಿರುವಾಗ, ಗುಣಃ ಸ್ಯಾತ್-ಗುಣವೇ ಆಗುತ್ತವೆ (ದೋಷವಲ್ಲ); ತದಭಾವೇ-ಭೋಗ್ಯವಸ್ತುಗಳಿಲ್ಲದಾಗ, ದೋಷಃ-ದೋಷವು, ಸ್ಯಾತ್ ತು-ತಪ್ಪದೇ ಆಗುತ್ತವೆ; ತತ್ರ-ಅಲ್ಲಿ (ಮುಕ್ತಸ್ಥಾನದಲ್ಲಿ), ದೋಷಃ-(ಯಾವ ವಿಧದ) ದೋಷವೂ, ನ ವಿದ್ಯತೇ-ಇರುವುದೇ ಇಲ್ಲ (ಏಕೆಂದರೆ), ಇಚ್ಛಯಾ ಏವ-ಇಚ್ಛಿಸುವ ಮಾತ್ರದಿಂದ, ಇಷ್ಟಂ-ಅಪೇಕ್ಷಿತವಾದ ಭೋಗ್ಯವಸ್ತುವು, ಸಿದ್ಧಂ-ಸಿದ್ಧವಾದುದು, ಸ್ಯಾತ್-ಆಗುತ್ತವೆ; ತತ್ರ-ಹೀಗಿರುವ, (ಅಪ್ರಯತ್ನವಾಗಿ ಸರ್ವವೂ ಸಿದ್ಧವಾಗುವ) ಆ ಮುಕ್ತಸ್ಥಾನದಲ್ಲಿ

---

ಲೀನವಾಗುತ್ತವೆ; ಜಲಾತ್ಮಕವೇ ಆದ ಜಲತರಂಗಗಳು, ತರಂಗರೂಪವನ್ನು ತ್ಯಜಿಸಿ, ಜಲವೇ ಆಗುವಂತೆ, (ತರಂಗಗಳು ಜಲದಲ್ಲಿಯೇ ಲೀನವಾಗುವಂತೆ), ಫಲಪುಷ್ಪಾದಿ ಸರ್ವವೂ (ರಥಾದಿವಾಹನಗಳೂ ಹೀಗೆಯೇ ಎಂದು ತಿಳಿಯಬೇಕು) ಸತ್ವಗುಣದಿಂದ ಉದ್ಭವಿಸಿ, ಮುಕ್ತರ ಭೋಗಾನಂತರ, ಸತ್ವದಲ್ಲಿಯೇ ಲೀನಗೊಳ್ಳುತ್ತವೆ (೪೯-೫೦). ಹಸಿವುತೃಷೆಗಳು ಮತ್ತು ಸ್ತ್ರೀ ಮೊದಲಾದ ವಿವಿಧ ವಿಷಯಗಳ ಭೋಗೇಚ್ಛೆಯು, ಭೋಗ್ಯವಸ್ತುಗಳಿರುವಲ್ಲಿ ಗುಣರೂಪವೇ ಆಗುತ್ತವೆ—ದೋಷಗಳಲ್ಲ. ಭೋಗ್ಯವಸ್ತುಗಳ ಅಭಾವವಿದ್ದಾಗ ಅದು ದೋಷವಾಗುತ್ತವೆ; ಮುಕ್ತಸ್ಥಾನದಲ್ಲಿ (ಶ್ರೀ ಭಾಗದ ವೈಕುಂಠಾದಿಗಳಲ್ಲಿ) ದೋಷವೆಂಬುದೇ ಇಲ್ಲ. ಮುಕ್ತರು, ಇಚ್ಛಿಸುವ ಮಾತ್ರದಿಂದ, ಇಚ್ಛಿತ ವಸ್ತುಗಳು ಸಿದ್ಧವಾಗುವ ಅಲ್ಲಿ, ಕಾಮೋದ್ರೇಕಾದಿಗಳು ದೋಷಗಳು ಹೇಗಾದಾವು? (೫೧-೫೨). ಭೋಗ್ಯವಸ್ತುಗಳನ್ನು ಯಥೇಷ್ಟವಾಗಿ ಹೊಂದಿರುವ ಶ್ರೀಮಂತರು, ಈ ಲೋಕದಲ್ಲಿ ಹಸಿವು ತೃಷೆಗಳನ್ನು ಪರಿಗಣಿಸಿಕೊಳ್ಳಲು. ವಿಷದ

ದೋಷಃ-(ಕಾಮೋದ್ರೇಕಾದಿಗಳು) ದೋಷರೂಪವಾದುದು, ಕಥಂ ಭವೇತ್-ಹೇಗೆ ಆಗುತ್ತದೆ.

**ಯತಂತೇ ಕ್ಷುತ್ ತೃಷಾದೀನಾಂ ವೃದ್ಧ್ಯೈ ಸಂಪನ್ನಭೋಗಕಾಃ ।**

**ಅತ ಏವ ನ ತೇ ದೋಷಾಸ್ತತ್ರ ಸಂತೋಽಪಿ ಸರ್ವಥಾ ॥ ೫೩ ॥**

ಸಂಪನ್ನಭೋಗಕಾಃ-ಭೋಗ್ಯವಸ್ತುಗಳು ಪೂರ್ಣವಾಗಿ (ಯಥೇಚ್ಛವಾಗಿ) ಇರುವವರು, ಕ್ಷುತ್‌ತೃಷಾದೀನಾಂ-ಹಸಿವು ತೃಷೆಗಳ, ವೃದ್ಧ್ಯೈ-ಅಭಿವೃದ್ಧಿಗಾಗಿ, ಯತಂತೇ-(ಔಷಧಾದಿ ಸೇವನೆಯಿಂದ) ಯತ್ನಿಸುತ್ತಾರೆ; ಅತ ಏವ-ಆದ್ದರಿಂದ, ತತ್ರ-ಅಲ್ಲಿ (ಮುಕ್ತಸ್ಥಾನದಲ್ಲಿ), ಸಂತಃ ಅಪಿ-(ಕ್ಷುಧಾದಿಗಳು) ಇದ್ದರೂ, ಸರ್ವಥಾ-ಯಾವ ಪ್ರಕಾರದಿಂದಲೂ, ತೇ-ಅವು (ಕ್ಷುಧಾದಿಗಳು), ನ ದೋಷಾಃ-ದೋಷಗಳೇ ಅಲ್ಲ.

**ಸ್ತ್ರೀಪುಂಸಭರ್ತೃಕಾದೀನಾಮೈಕ್ಯಮೈಕ್ಯಂ ತತ್ರ ಸರ್ವದಾ ।**

**ಸ್ವಭಾವಾದೇವ ಮುಕ್ತಾನಾಂ ನೇಚ್ಛಾಭೇದಃ ಕಥಂಚನ ॥ ೫೪ ॥**

ಸ್ತ್ರೀಪುಂಸಭರ್ತೃಕಾದೀನಾಂ-ಸ್ತ್ರೀಪುರುಷರು, ಸ್ವಾಮಿಭೃತ್ಯರೇ ಮೊದಲಾದವರಿಗೆ, ತತ್ರ-ಮುಕ್ತಿಯಲ್ಲಿ ಸರ್ವದಾ-ಎಲ್ಲ ಕಾಲದಲ್ಲಿ ಇಚ್ಛೈಕ್ಯಂ-ಇಚ್ಛೆಯಲ್ಲಿ ಯಾವ ವಿರೋಧವೂ ಇರುವುದಿಲ್ಲ. ಮುಕ್ತಾನಾಂ-ಮುಕ್ತರಿಗೆ, ಕಥಂಚನ-ಯಾವ ಪ್ರಕಾರದಿಂದಲೂ, ಇಚ್ಛಾಭೇದಃ-(ಪರಸ್ಪರವಾಗಿ) ಭಿನ್ನವಾದ ಇಚ್ಛೆಯು, ಸ್ವಭಾವಾತ್ ಏವ-ಸ್ವಾಭಾವಿಕವಾಗಿಯೇ, ನ-ಇರುವುದಿಲ್ಲ.

**ನಾಸೂಯಾ ನಾಪ್ಯವಜ್ಞಾನಂ ನೀಚಾನಾಮಧಿಕೇಷು ಹಿ ।**

**ನಿರ್ದೋಷತ್ವಾದತಃ ಶ್ರೇಷ್ಠೋ ವಿಷ್ಣುಲೋಕಃ ಸನಾತನಃ ॥ ೫೫ ॥**

ಹಿ-ಯಾವ ಕಾರಣದಿಂದ, ನೀಚಾನಾಂ-ಕನಿಷ್ಠರಿಗೆ, ಅಧಿಕೇಷು-ತಮಗಿಂತ ಉತ್ತಮರಲ್ಲಿ ಅಸೂಯಾ-ಮಾತ್ಸರ್ಯವು, ನ-ಇಲ್ಲವೋ, ಅವಜ್ಞಾನಂ ಅಪಿ-ತಿರಸ್ಕಾರ ಬುದ್ಧಿಯೂ, ನ ಇಲ್ಲವೋ, ಅತಃ-ಆ ಕಾರಣದಿಂದ, ನಿರ್ದೋಷತ್ವಾತ್- ದೋಷ

---

(ರಸಾಯನಾದಿ) ಸೇವನೆಯಿಂದ ಯತ್ನಿಸುತ್ತಾರೆ; ಮುಕ್ತಿಯಲ್ಲಿ ಇಚ್ಛಿತ ಭೋಗ ಸಾಮಗ್ರಿಗಳು, ಸರ್ವದಾ ಅಪ್ರಯತ್ನವಾಗಿ ದೊರೆಯುತ್ತಿರಲು ಹಸಿವ ತೃಷೆಗಳು ಹೇಗೆ ದೋಷಗಳಾಗುತ್ತವೆ? ಅವು ದೋಷಗಳೇ ಅಲ್ಲ (೫೩). ಸ್ತ್ರೀಪುರುಷರಲ್ಲಿ ಸ್ವಾಮಿಭೃತ್ಯರಲ್ಲಿ ಪರಸ್ಪರವಾಗಿ, ಮುಕ್ತಿಯಲ್ಲಿ ಯಾವ ವಿಧದಿಂದಲೂ ಇಚ್ಛಾಭೇದವು ಇರುವುದಿಲ್ಲ—ಹೀಗೆ ಒಂದೇ ಪ್ರಕಾರದ ಇಚ್ಛೆಯಿರುವುದು ಮುಕ್ತರ ಸ್ವಭಾವವೇ ಆಗಿದೆ (೫೪). ನೀಚರಿಗೆ (ತಾರತಮ್ಯದಲ್ಲಿ ಅವರರಾದವರಿಗೆ— ಕನಿಷ್ಠರಿಗೆ) ಉತ್ತಮರಲ್ಲಿ (ತಮಗಿಂತ ಶ್ರೇಷ್ಠರಲ್ಲಿ) ಅಸೂಯೆ, ತಿರಸ್ಕಾರಗಳು ಇರುವುದಿಲ್ಲ; ಸಕಲಮುಕ್ತರೂ ನಿರ್ದೋಷಿಗಳಾದ್ದರಿಂದ ಈ ಮೊದಲಾದ ದೋಷಗಳಿಲ್ಲದಿರುವುದು

ರಹಿತವಾದ್ದರಿಂದ, ಸನಾತನಃ-ನಿತ್ಯವಾದ, ವಿಷ್ಣುಲೋಕಃ-(ವೈಕುಂಠಾದಿ) ಮುಕ್ತ ಲೋಕವು, ಶ್ರೇಷ್ಠಃ-ಶ್ರೇಷ್ಠವಾದುದು.

ವಿಮುಕ್ತಾ ದ್ವಿವಿಧಾಃ ಪ್ರೋಕ್ತಾಃ ಪುನರಾವರ್ತಿವರ್ಜಿತಾಃ ।
ಸಾತ್ತ್ವಿಕಾ ವಿಷ್ಣುಲೋಕಸ್ಥಾಸ್ತಾಮಸಾಸ್ತಮಸಿ ಸ್ಥಿತಾಃ ॥ ೫೬ ॥
ಲೋಕಾಲೋಕಾತ್ಪರೇ ಭಾಗೇ ಲೋಕೋ ಯಾವದ್ಘನೋದಕಂ ।
ತಾವತ್ತಮೋ ಭವೇನ್ನಿತ್ಯಂ ನ ತತ್ಸ್ಥಾನಾನ್ನಿವರ್ತನಂ ॥ ೫೭ ॥
ವಿಷ್ಣೋರ್ಭಕ್ತ್ಯಾ ವಿಷ್ಣುಲೋಕಸ್ತದ್ದ್ವೇಷಾತ್ತಮಸಿ ಸ್ಥಿತಿಃ ।
ನಿತ್ಯಾನಂದೋ ವಿಷ್ಣುಲೋಕೋ ನಿತ್ಯದುಃಖಂ ತಮಸ್ಸ್ಮೃತಂ ॥ ೫೮ ॥

ಪುನರಾವರ್ತಿವರ್ಜಿತಾಃ-ಸಂಸಾರಕ್ಕೆ ತಿರಿಗಿಬಂದ, ವಿಮುಕ್ತಾಃ-ಮುಕ್ತಜೀವರು (ಲಿಂಗದೇಹವನ್ನು ತ್ಯಜಿಸಿ ಸ್ವರೂಪದಿಂದಿರುವವರು), ದ್ವಿವಿಧಾಃ-ಎರಡು ವಿಧರೆಂದು, ಪ್ರೋಕ್ತಾಃ-ಹೇಳಲ್ಪಡುವರು; ವಿಷ್ಣುಲೋಕಸ್ಥಾಃ-ವೈಕುಂಠಾದಿ ವಿಷ್ಣು ಲೋಕದಲ್ಲಿರುವವರು (ಅಲ್ಲಿ ನಿತ್ಯವಾಸವುಳ್ಳವರು), ಸಾತ್ತ್ವಿಕಾಃ-ಸಾತ್ತ್ವಿಕ ಜೀವರು; ತಮಸಿ-ತಮಸ್ಸಿನಲ್ಲಿ ಸ್ಥಿತಾಃ-ಇರುವವರು, ತಾಮಸಾಃ-ತಾಮಸ ಜೀವರು; ಲೋಕಾಲೋಕಾತ್-ಲೋಕಲೋಕಪರ್ವತದಿಂದ, ಪರೇಭಾಗೇ-ಆಚೆಗಿರುವ ಭಾಗದ, ಲೋಕೇ-ಭೂಪ್ರದೇಶದಲ್ಲಿ, ಘನೋದಕಂ-ಘನೋದಕವು, ಯಾವತ್-ಎಲ್ಲಿರುವುದೋ, ತಾವತ್-ಅಲ್ಲಿಯವರೆಗೆ, ನಿತ್ಯಂ-ನಿತ್ಯವಾದ, ತಮಃ-ತಮಸ್ಸು (ದುಃಖಸ್ಥಾನವು-ಅಂಧಕಾರದಿಂದ ಮುಸಿಗಿದದು), ಭವೇತ್-ಆಗಿರುತ್ತದೆ; ತತ್ಸ್ಥಾನಾತ್-ಆ ಸ್ಥಾನದಿಂದ, ನಿವರ್ತನಂ-ಹಿಂದಿರುಗುವುದೆಂಬುದು, ನ-ಇಲ್ಲ;

---

ಸಹಜವೇ ಸರಿ; ಆದ್ದರಿಂದ ನಿತ್ಯವಾದ ವಿಷ್ಣುಲೋಕವೇ ಶ್ರೇಷ್ಠವಾದುದು (೫೫). ಪುನರಾವೃತ್ತಿರಹಿತವಾದ (ಸಂಸಾರಕ್ಕೆ ತಿರಿಗಿಬಾರದ) ಸ್ವಸ್ವರೂಪಸ್ಥಿತಿರೂಪದ ವಿಮುಕ್ತಿಯು (ಮೋಕ್ಷವೆಂಬುದು) ಎರಡು ವಿಧವಾದುದೆಂದು ಹೇಳಲಾಗುತ್ತದೆ—ಮುಕ್ತರೂ ದ್ವಿವಿಧರು; ವಿಷ್ಣುಲೋಕದಲ್ಲಿರುವವರು ಸಾತ್ತ್ವಿಕಜೀವರು; ತಮಸ್ಸಿನಲ್ಲಿರುವವರು; ತಾಮಸಜೀವರು; ಲೋಕಾಲೋಕ ಪರ್ವತದ ಆಚೆಗೆ ಘನೋದಕದವರೆಗಿನ ಭೂಪ್ರದೇಶವೇ ತಮಸ್ಸೆಂಬುದು; ಆ ಸ್ಥಾನವನ್ನು ಸೇರಿದವರು, ಎಂದೂ ತಿರಿಗಿಸಂಸಾರಕ್ಕೆ ಬರುವುದಿಲ್ಲ (ಭೂಲೋಕಾದಿಗಳಲ್ಲಿ ಜನ್ಮವೆತ್ತುವುದಿಲ್ಲ);[1] ವಿಷ್ಣುಭಕ್ತಿಯಿಂದ ವಿಷ್ಣು ಲೋಕವೂ, ವಿಷ್ಣುದ್ವೇಷದಿಂದ ತಮಸ್ಸು ದೊರೆಯುತ್ತದೆ; ವಿಷ್ಣುಲೋಕವು ನಿತ್ಯಾನಂದ ಪ್ರದವೂ, ತಮಸ್ಸು ನಿತ್ಯ ದುಃಖಪ್ರದವೂ ಆದುದು—ಉಭಯವೂ ಪುನರಾವೃತ್ತಿ ರಹಿತವಾದ ನಿತ್ಯವಾಸಸ್ಥಾನಗಳು (೫೬-೫೮). ಆತ್ಯಂತಿಕಗತಿಗಳು ಹೀಗಿರುವುದರಿಂದ, ನಿತ್ಯಸುಖ

---

1. ಇದೇ ಅಧ್ಯಾಯದ ಶ್ಲೋಕ (೨೬-೨೯)ನ್ನು ನೋಡಿರಿ. ರೌರವಾದಿ ಮಹಾ ನರಕಗಳು ಈ ತಮೋಭಾಗದ ಕೆಳಭಾಗದಲ್ಲಿ ಬಹು ಆಳದಲ್ಲಿವೆ.

ವಿಷ್ಣೋಃ-ಶ್ರೀವಿಷ್ಣುವಿನ, ಭಕ್ತ್ಯಾ-ಭಕ್ತಿಯಿಂದ, ವಿಷ್ಣುಲೋಕಃ-ವಿಷ್ಣುಲೋಕವೂ, ತದ್ದ್ವೇಷಾತ್-ವಿಷ್ಣುದ್ವೇಷದಿಂದ, ತಮಸಿ-ತಮಸ್ಸಿನಲ್ಲಿ ಸ್ಥಿತಿಃ-ವಾಸವೂ, (ಲಭಿಸುತ್ತದೆ); ವಿಷ್ಣುಲೋಕಃ-ವಿಷ್ಣುಲೋಕವು (ಅಲ್ಲಿಯ ವಾಸವು), ನಿತ್ಯಾನಂದಃ-ನಿತ್ಯಾನಂದರೂಪವಾದುದು; ತಮಃ-ತಮಸ್ಸು ನಿತ್ಯದುಃಖಂ-ನಿತ್ಯದುಃಖರೂಪವಾದುದು, ಸ್ಮೃತಂ-(ಎಂದು) ಹೇಳಲ್ಪಟ್ಟಿರುತ್ತದೆ. (ಜ್ಞಾನಿಗಳಿಂದ ತಿಳಿಯಲ್ಪಟ್ಟಿದೆ).

ಅತೋ ನಿತ್ಯಸುಖಪ್ರಾಪ್ತ್ಯೈ ನಿತ್ಯದುಃಖನಿವೃತ್ತಯೇ ।
ಉಪಾಸ್ಯಃ ಸರ್ವದಾ ವಿಷ್ಣುರ್ನ ದ್ವೇಷ್ಯಃ ಕರ್ಹಿಚಿದ್ಭವೇತ್ ॥ ೫೯ ॥
ತೇನೇಹಾಮುತ್ರ ಕಲ್ಯಾಣಂ ವಿಂದತೇ ನಾನ್ಯಥಾ ನರಃ ।
ಗತಿದ್ವಯವಿಹೀನಾ ಸ್ಯೂ ರಾಜಸಾ ಸಂಸೃತಿಸ್ಥಿತಾಃ ॥ ೬೦ ॥
ಪರಿವರ್ತಯತೇ ನಿತ್ಯಮೇವಂ ಜೀವಾನ್ ಸ ಕೇಶವಃ ।

ಅತಃ-ಆದ್ದರಿಂದ (ವಿಷ್ಣುಲೋಕ ಮತ್ತು ತಮಸ್ಸುಗಳಲ್ಲಿ ನಿತ್ಯಾನಂದ, ನಿತ್ಯದುಃಖಗಳು ಪ್ರಾಪ್ತವಾಗುವುದರಿಂದ, ನಿತ್ಯಸುಖಪ್ರಾಪ್ತ್ಯೈ-ನಿತ್ಯಸುಖದ ಲಾಭಕ್ಕಾಗಿ, ನಿತ್ಯದುಃಖನಿವೃತ್ತಯೇ-ನಿತ್ಯದುಃಖವನ್ನು ತಪ್ಪಿಸಿಕೊಳ್ಳಲಿಕ್ಕಾಗಿ, ಸರ್ವದಾ-ಯಾವಾಗಲೂ, ವಿಷ್ಣುಃ-ಶ್ರೀವಿಷ್ಣುವು, ಉಪಾಸ್ಯಃ-ಉಪಾಸಿಸಲ್ಪಡಬೇಕು (ಧ್ಯಾನಿಸಲ್ಪಡಬೇಕು- ಸೇವಿಸಲ್ಪಡಬೇಕು); ಕರ್ಹಿಚಿತ್-ಯಾವ ಕಾಲಕ್ಕೂ, (ಯಾವ ವಿಧದಿಂದಲೂ, ದ್ವೇಷ್ಯಃ-ದ್ವೇಷಿಸಲ್ಪಡುವವನು, ನ ಭವೇತ್-ಆಗಬಾರದು; ತೇನ-ಅದರಿಂದ (ಭಕ್ತಿಯಿಂದ ಸೇವಿಸುವುದರಿಂದ), ನರಃ-ಪುರುಷನು (ಜೀವನು), ಇಹ-ಈ ಲೋಕದಲ್ಲಿಯೂ, ಅಮುತ್ರ-ಪರಲೋಕದಲ್ಲಿಯೂ, ಕಲ್ಯಾಣಂ-ಮಂಗಲವನ್ನು (ಶ್ರೇಯಸ್ಸನ್ನು), ವಿಂದತೇ-ಹೊಂದುತ್ತಾನೆ; ಅನ್ಯಥಾ-ಬೇರೆ ಪ್ರಕಾರದಿಂದ (ಅನ್ಯಸಾಧನದಿಂದ), ನ-ಅಲ್ಲ; ಸಂಸೃತಿಸ್ಥಿತಾಃ-ಸಂಸಾರದಲ್ಲಿಯೇ ಆಸಕ್ತರಾದ,

---

ಪ್ರಾಪ್ತಿಗಾಗಿಯೂ ನಿತ್ಯದುಃಖವನ್ನು ಪರಿಹರಿಸಿಕೊಳ್ಳಲಿಕ್ಕಾಗಿಯೂ ಸರ್ವದಾ ಶ್ರೀವಿಷ್ಣುವನ್ನು ಭಕ್ತಿಯಿಂದ ಉಪಾಸಿಸಬೇಕು; ಯಾವ ವಿಧದಿಂದ (ಎಂದೂ, ಎಲ್ಲಿಯೂ) ದ್ವೇಷಿಸತಕ್ಕದ್ದಲ್ಲ[1] ಶ್ರೀ ವಿಷ್ಣುವನ್ನು ಭಕ್ತಿಯಿಂದ ಸೇವಿಸುವುದರಿಂದ ಇಹಪರಗಳಲ್ಲಿ ಕಲ್ಯಾಣವೇ ಉಂಟಾಗುತ್ತದೆ—ಬೇರಾವ ಸಾಧನದಿಂದಲೂ ಅಲ್ಲ; ನಿತ್ಯಾನಂದ ಮತ್ತು ನಿತ್ಯದುಃಖರೂಪದ ಎರಡು ಗತಿಗಳಲ್ಲಿ ಯಾವುದೊಂದನ್ನೂ ಹೊಂದದವರು, ರಾಜಸಜೀವರು—ಅವರು ಸುಖ ದುಃಖ ಮಿಶ್ರಸ್ವರೂಪದವರು—ನಿತ್ಯಮಿಶ್ರಗತಿಯನ್ನೇ ಹೊಂದುವರು; ಹೀಗೆ ಶ್ರೀಹರಿಯು, ಜೀವರನ್ನು ಸದಾ

1. ಈ ಹಿಂದೆ ವಿವರಿಸಲಾಗಿರುವ ನವವಿಧ ದ್ವೇಷಗಳಲ್ಲಿ ಯಾವ ವಿಧದ ಶ್ರೀವಿಷ್ಣುದ್ವೇಷವನ್ನೇ ಹೊಂದಿದವನು ತಮಸ್ಸನ್ನು ಹೊಂದುತ್ತಾನೆ; ನವವಿಧ ಭಕ್ತಿಗಳನ್ನೂ ಅಲ್ಲಿಯೇ ವಿವರಿಸಲಾಗಿದೆ.

ರಾಜಸಾಃ-ರಾಜಸಜೀವರು, ಗತಿದ್ವಯವಿಹೀನಾಃ-(ವಿಷ್ಣುಲೋಕ ತಮಸ್ಸುಗಳೆಂಬ) ಎರಡು ಗತಿಗಳೂ ಇಲ್ಲದವರು (ಯಾವುದೊಂದನ್ನು ಹೊಂದದವರು; ಸಃ ಕೇಶವಃ-ಆ ಸರ್ವಪ್ರೇರಕನಾದ ಶ್ರೀಹರಿಯು, ಏವಂ-ಹೀಗೆ, ಜೀವಾನ್-ಜೀವರನ್ನು ನಿತ್ಯಂ-ಎಲ್ಲ ಕಾಲದಲ್ಲಿ ಪರಿವರ್ತಯತೇ-ಸುತ್ತಿಸುತ್ತಾನೆ (ಸುತ್ತಿಸಿ ಅವರವರ ಗತಿಗಳನ್ನು ಹೊಂದಿಸುತ್ತಾನೆ).

ಆದ್ಯೋ ಮಾಯಾಸಮಾಯುಕ್ತಃ ಕ್ಷೇತ್ರಜ್ಞಃ ಪುರುಷೋತ್ತಮಃ ॥ ೬೧ ॥
ಸೇವ್ಯೋ ನಿತ್ಯಂ ವಂದನೀಯಶ್ಚ ನಿತ್ಯಂ
ಶ್ರಾವ್ಯೋ ನಿತ್ಯಂ ಮಾನನೀಯಃ ಸ ಏವ ।
ಧ್ಯೇಯಃ ಸಾಕ್ಷಾತ್ಕಾರ್ಯ ಏವೈವ ವಿಷ್ಣುಃ
ನಿತ್ಯಾನಂದಂ ಪ್ರೇಪ್ಸುಭಿರ್ವಿಶ್ವಮೂರ್ತಿಃ ॥ ೬೨ ॥

ಕ್ಷೇತ್ರಜ್ಞಃ-ಸರ್ವಪ್ರಾಣಿದೇಹಸ್ಥಿತನೂ, (ಸರ್ವಜ್ಞನೂ), ಪುರುಷೋತ್ತಮಃ-ಪುರುಷೋತ್ತಮನೂ (ಬ್ರಹ್ಮಾದಿಜೀವರಿಂದಲೂ ಲಕ್ಷ್ಮೀದೇವಿಯಿಂದಲೂ ಉತ್ತಮನಾದ), ಮಾಯಾಸಮಾಯುಕ್ತಃ-ಮಾಯಾಪತಿಯೂ ಆದ (ಪ್ರಕೃತಿ ಯನ್ನಾಳುವ ಪ್ರಭುವಾದ), ಆದ್ಯಃ-ಮೊದಲಿನವನಾದ ಶ್ರೀವಾಸುದೇವನು (ಮೂಲ ರೂಪದಿಂದ ಅವತರಿಸಿದ ಅನಿರುದ್ಧಾದಿ ನಾಲ್ಕು ರೂಪಗಳಲ್ಲಿ ಮೊದಲಿನದು ವಾಸುದೇವರೂಪ), ನಿತ್ಯಂ-ಸರ್ವದಾ, ಸೇವ್ಯಃ-ಸೇವಿಸಲ್ಪಡಲರ್ಹನಾಗಿರುವನು; ನಿತ್ಯಂ-ಸದಾ, ವಂದನೀಯಶ್ಚ-ವಂದನಾರ್ಹನೂ ಆಗಿರುವನು; ನಿತ್ಯಂ-ನಿತ್ಯದಲ್ಲಿ ಶ್ರಾವ್ಯಃ- ಶ್ರವಣ ಮಾಡಲ್ಪಡಬೇಕು; ಸಃ ಏವ-ಆತನೇ (ಮುಕ್ತಿಪ್ರದನಾದ ವಾಸುದೇವಾ ಭಿನ್ನನಾದ ಶ್ರೀನಾರಾಯಣನೇ, ಮಾನನೀಯಃ-ಮನನ ಮಾಡಲ್ಪಡಬೇಕು; ಧ್ಯೇಯಃ-

---

ಸುತ್ತಿಸುತ್ತಿರುವನು—ಅವರವರ ಗತಿಗಳನ್ನು ಹೊಂದಿಸುತ್ತಿರುವನು (೫೯-೬೦). ಸರ್ವಶರೀರಸ್ಥಿತನೂ ಸರ್ವಜ್ಞನೂ, ಕ್ಷರಾಕ್ಷರ ಪುರುಷಶಬ್ದವಾಚ್ಯವಾದ ಬ್ರಹ್ಮಾದಿ ಜೀವರು ಮತ್ತು ಶ್ರೀ ಲಕ್ಷ್ಮೀದೇವಿಯರಿಂದ ಉತ್ತಮನೂ (ಪುರುಷೋತ್ತಮನೂ), ಮಾಯಾನಾಮಕ ಲಕ್ಷ್ಮೀರೂಪದಿಂದ ಕೂಡಿದವನೂ (ಮಾಯಾಪತಿಯೂ) ಆದ, ಆದ್ಯನನ್ನು (ಮುಕ್ತಿದಾತನಾದ ಶ್ರೀ ವಾಸುದೇವಾಭಿನ್ನ ಶ್ರೀ ನಾರಾಯಣನನ್ನು ನಿತ್ಯವೂ ಸೇವಿಸಬೇಕು—ವಂದಿಸಬೇಕು; ಆತನೇ ಶ್ರವಣಯೋಗ್ಯವಾದ ಮಹಿಮೆಗಳುಳ್ಳವನು (ಶ್ರಾವ್ಯನು); ಆ ಮಹಿಮೆಗಳುಳ್ಳ ಸರ್ವೋತ್ತಮನೆಂಬ ಜ್ಞಾನನಿಶ್ಚಯಾರ್ಥವಾಗಿ ಮನನ ಮಾಡಲ್ಪಡಬೇಕು; ನಿತ್ಯಾನಂದನನ್ನು ಹೊಂದಲಪೇಕ್ಷಿಸುವ ಸರ್ವರೂ, ವಿಶ್ವಮೂರ್ತಿಯಾದ ಆತನನ್ನೇ ನಿರಂತರವಾಗಿ ಧ್ಯಾನಿಸಿ, ಆತನನ್ನೇ ಸಾಕ್ಷಾತ್ಕರಿಸಿಕೊಳ್ಳಬೇಕು; ಬ್ರಹ್ಮಸಾಕ್ಷಾತ್ಕಾರವಿಲ್ಲದೇ ಮೋಕ್ಷವಿಲ್ಲ (ವೈಕುಂಠಾದಿ ಮುಕ್ತಸ್ಥಾನವು ಲಭಿಸುವುದಿಲ್ಲ)—ಶ್ರೀ ವಿಷ್ಣುವೇ ಆ ಬ್ರಹ್ಮನು—ಬ್ರಹ್ಮಶಬ್ದವಾಚ್ಯನು (೬೧-೬೨). ಹೇ ಶೌನಕಾದಿ ವಿಪ್ರರೇ! ನೀವು ನನ್ನನ್ನು

ಧ್ಯಾನಿಸಲ್ಪಡಬೇಕು; ವಿಷ್ಣುಃ ಏವ - ಶ್ರೀವಿಷ್ಣುವೇ ಆದ, ವಿಶ್ವಮೂರ್ತಿಃ - ಅನಂತ ರೂಪಿಯಾದ ಶ್ರೀನಾರಾಯಣನು, ನಿತ್ಯಾನಂದಂ-ನಿತ್ಯಸುಖವನ್ನು ಪ್ರೇಪ್ಸುಭಿಃ- ಉತ್ಕಟವಾಗಿ ಇಚ್ಛಿಸುವವರಿಂದ (ಮುಮುಕ್ಷುಗಳಿಂದ), ಸಾಕ್ಷಾತ್ಕಾರ್ಯಃ ಏವ- ಪ್ರತ್ಯಕ್ಷವಾಗಿ ಸಂದರ್ಶಿಸಲ್ಪಡಲೇಬೇಕು; (ಬ್ರಹ್ಮಸಾಕ್ಷಾತ್ಕಾರವಿಲ್ಲದೇ - ಅಪರೋಕ್ಷ ದರ್ಶನವಿಲ್ಲದೇ ಮೋಕ್ಷವಿಲ್ಲ).

**ಏವಂ ವಃ ಕಥಿತಂ ವಿಪ್ರಾಃ ಯದ್ಯತ್ ಪೃಷ್ಟಂ ಚ ಮಾಂ ಪ್ರತಿ ।**
**ಯಚ್ಛ್ರುತ್ವಾ ಪುರುಷಾರ್ಥೇಷು ಶ್ರೋತವ್ಯಂ ನಾವಶಿಷ್ಯತೇ ॥ ೬೩ ॥**

ವಿಪ್ರಾಃ-ಹೇ ಋಷಿಗಳೇ! ಮಾಂ ಪ್ರತಿ-ನನ್ನನ್ನು ಕುರಿತು, ಯದ್ಯತ್- ಯಾವು ಯಾವುದು, ಪೃಷ್ಟಂ-ಪ್ರಶ್ನಿಸಲ್ಪಟ್ಟಿತ್ತೋ (ನೀವು ಕೇಳಿದರೋ), ಏವಂ-ಹೀಗೆ (ಅದೆಲ್ಲವೂ), ವಃ-ನಿಮಗೋಸ್ಕರ, ಕಥಿತಂ-(ನನ್ನಿಂದ) ಹೇಳಲ್ಪಟ್ಟಿತು; ಯತ್- ಯಾವುದನ್ನು, ಶ್ರುತ್ವಾ-ಕೇಳಿ, ಪುರುಷಾರ್ಥೇಷು-(ಮೋಕ್ಷಾದಿ) ಪುರುಷಾರ್ಥಗಳಲ್ಲಿ (ಪುರುಷಾರ್ಥಗಳ ವಿಷಯದಲ್ಲಿ), ಶ್ರೋತವ್ಯಂ-ಶ್ರವಣ ಮಾಡಬೇಕಾದುದು (ಕೇಳಬೇಕಾದುದು), ನ ಅವಶಿಷ್ಯತೇ-ಉಳಿಯುವುದಿಲ್ಲವೋ, (ಕಥಿತಂ-ಅದೆಲ್ಲವೂ ಹೇಳಲ್ಪಟ್ಟಿತು).

ಭೂಗೋಲವರ್ಣನ ಮತ್ತು ವಿಷ್ಣುಧಾಮತ್ರಯವರ್ಣನವೆಂಬ
೩೯ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೦

ಶ್ರೀ ವೇದವ್ಯಾಸಾಯ ನಮಃ

**ಶಾಂಡಿಲ್ಯ ಉವಾಚ—**

**ಸಂಭೋಗಾದ್ಯಕ್ಷಣಾತ್ತಾನಾನ್ಮಲೋತ್ಪತ್ತಿರ್ನ ದೃಶ್ಯತೇ ।**
**ಸಚ್ಚಿದಾನಂದದೇಹಾನಾಂ ವಿಷ್ಣುಲೋಕೇಽತಿ ನಿರ್ಮಲೇ ॥ ೧ ॥**
**ಮಲೋತ್ಪತ್ತಿರ್ವಿರುಧ್ಯೇತ ತತ್ಕಥಂ ಭೋಗಸಂಭವಃ ।**
**ಪುಣ್ಯಾನುಷ್ಠಾನತಃ ಕೇಚಿತ್ಸಫಲಾ ಇಹ ಜನ್ಮನಿ ॥ ೨ ॥**
**ಕೇಷಾಂಚಿತ್ ಸಫಲಂ ನೈವ ಧನಪುತ್ರಾದಿಕಂ ತತಃ ।**

---

ಕುರಿತು ಮಾಡಿದ ಪ್ರಶ್ನೆಗಳೆಲ್ಲವನ್ನೂ ಹೀಗೆ ಉತ್ತರಿಸಿರುವೆನು; ಈವರೆಗಿನ ನಿರೂಪಣೆ ಯನ್ನು ಕೇಳಿದವರಿಗೆ, ಮೋಕ್ಷಾದಿ ಪುರುಷಾರ್ಥಗಳ ವಿಷಯದಲ್ಲಿ ಕೇಳಬೇಕಾಗಿ ಉಳಿದಿರುವುದು ಏನೂ ಇರುವುದಿಲ್ಲ—ಎಲ್ಲವನ್ನೂ ನಿಮಗಾಗಿ ಹೇಳಿದ್ದೇನೆ (೬೩).

೩೯ನೇ ಅಧ್ಯಾಯವು ಮುಗಿದುದು.

**ಏವಂ ಪಾಪಾ ಅಪಿ ನರಾಃ ದೃಶ್ಯಂತೇ ಸುಖಿನೋ ಭುವಿ ॥ ೩ ॥**

**ಕೇಚಿಚ್ಚ ದುಃಖಿನಃ ಸೂತ ತತ್ಕಥಂ ಕರ್ಮಣಾಂ ಗತಿಃ ।**

**ಏತನ್ನೋ ವಿಸ್ತರಾದ್ಬ್ರೂಹಿ ಜ್ಞಾತತತ್ತ್ವೋಽಸಿ ಬುದ್ಧಿಮಾನ್ ॥ ೪ ॥**

**ಶಾಂಡಿಲ್ಯ ಋಷಿಯು ಕೇಳುತ್ತಾನೆ:—**

**ಅರ್ಥ:**—ಸಂಭೋಗಾತ್-(ಸ್ತ್ರ್ಯಾದಿ) ವಿಷಯಭೋಗದಿಂದ, ಭಕ್ಷಣಾತ್-ಆಹಾರವನ್ನು ಸೇವಿಸುವುದರಿಂದ, ಪಾನಾತ್-(ಜಲಾದಿ) ಪಾನದಿಂದಲೂ, ಮಲೋತ್ಪತ್ತಿಃ-ಮಲದ ಉತ್ಪತ್ತಿಯು, ದೃಶ್ಯತೇ ಹಿ-(ಲೋಕದಲ್ಲಿ) ಕಂಡುಬರುವುದಷ್ಟೇ; ಅತಿನಿರ್ಮಲೇ-ಅತ್ಯಂತ ಪರಿಶುದ್ಧವಾದ, ವಿಷ್ಣುಲೋಕೇ-ವಿಷ್ಣುಲೋಕದಲ್ಲಿ ಸಚ್ಚಿದಾನಂದದೇಹಾನಾಂ-ದೋಷರಹಿತಜ್ಞಾನಾನಂದಗಳೇ ದೇಹವಾಗಿವುಳ್ಳ ಮುಕ್ತರಿಗೆ, ಮಲೋತ್ಪತ್ತಿಃ-ಮಲದ ಉತ್ಪತ್ತಿಯು, ವಿರುಧ್ಯೇತ-(ಅವರ ಸ್ವಭಾವವನ್ನು) ವಿರೋಧಿಸುತ್ತದೆ (ಶುದ್ಧವಾದ ದೇಹದಲ್ಲಿ ಮಲದ ಸ್ಥಿತಿಯು ವಿರೋಧವೆನಿಸುತ್ತದೆ); ತತ್-ಆದ್ದರಿಂದ, ಕಥಂ-ಹೇಗೆ, ಭೋಗಸಂಭವಃ-(ಮುಕ್ತರ ಭೋಗಗಳು) ಕೂಡುತ್ತವೆ? ಇಹ ಜನ್ಮನಿ-ಈ ಜನ್ಮದಲ್ಲಿ (ಮಾನುಷ್ಯ ದೇಹದಲ್ಲಿ), ಪುಣ್ಯಾನುಷ್ಠಾನತಃ-ಪುಣ್ಯಕರ್ಮಗಳನ್ನು ಆಚರಿಸುವುದರಿಂದ, ಕೇಚಿತ್-ಕೆಲವರು, ಸಫಲಾಃ-ಫಲಗಳನ್ನು ಹೊಂದುವವರು (ಆಗುತ್ತಾರೆ); ಕೇಷಾಂಚಿತ್-ಮತ್ತೆ ಕೆಲವರಿಗೆ, ನೈವ ಸಫಲಂ-(ಪುಣ್ಯ ಕರ್ಮಾನುಷ್ಠಾನವು) ಫಲವುಳ್ಳದ್ದಾಗುವುದೇ ಇಲ್ಲ; ತತಃ-(ಪುಣ್ಯದಿಂದ) ಆದರಿಂದ, ಧನಪುತ್ರಾದಿಕಂ-ಐಶ್ವರ್ಯ ಸಂತಾನಾದಿಗಳು (ಸಂಭವಿಸುತ್ತವೆ-ಇವು ಪುಣ್ಯಕರ್ಮಿಗಳಿಗೆ ಕೆಲವರಿಗೆ ದೊರೆಯುತ್ತವೆ, ಮತ್ತೆ

---

ಅಧ್ಯಾಯ ೪೦

**ತಾತ್ಪರ್ಯ:**—ಶಾಂಡಿಲ್ಯನು ಪ್ರಶ್ನಿಸುತ್ತಾನೆ:—ಸ್ತ್ರೀ ಮೊದಲಾದ ವಿಷಯ ಭೋಗದಿಂದಲೂ, ಆಹಾರಭಕ್ಷಣದಿಂದಲೂ, ಜಲಾದಿಪಾನದಿಂದಲೂ, ಈ ದೇಹದಲ್ಲಿ ಮಲೋತ್ಪತ್ತಿಯು (ಮಲಮೂತ್ರಾದಿ ಅಶುಚಿ ವಸ್ತುಗಳು) ಕಂಡುಬರುತ್ತದೆ; ಅತ್ಯಂತ ನಿರ್ಮಲವಾದ ವಿಷ್ಣುಲೋಕದಲ್ಲಿ ಜ್ಞಾನಾನಂದ ದೇಹಿಗಳಾದ ಮುಕ್ತರಿಗೆ, ಮಲೋತ್ಪತ್ತಿಯು ಕೂಡುವುದಿಲ್ಲ—ಯುಕ್ತಿವಿರೋಧವಾಗಿರುತ್ತದೆ; ಆದ್ದರಿಂದ ಮುಕ್ತರ ವಿವಿಧ ಭೋಗಗಳು ಹೇಗೆ ಸಂಭಾವಿತಗಳಾಗುತ್ತವೆ? ಈ ಮನುಷ್ಯಜನ್ಮದಲ್ಲಿ, ಪುಣ್ಯಕರ್ಮಗಳನ್ನಾಚರಿಸುವ ಕೆಲವರಿಗೆ ಧನ ಸಂತಾನಾದಿ ಫಲಗಳು ಲಭಿಸುತ್ತವೆ—ಮತ್ತೆ ಕೆಲವರಿಗೆ ದೊರೆಯುವುದಿಲ್ಲ; ಹೀಗೆಯೇ ಪಾಪಗಳನ್ನು ಮಾಡುವವರಲ್ಲಿ, ಕೆಲವರಿಗೆ ದುಃಖವು ಲಭಿಸಿದರೂ, ಮತ್ತೆ ಕೆಲವು ಪಾಪಿಗಳು ಸುಖವಾಗಿರುವುದನ್ನೂ ಕಾಣುತ್ತೇವೆ; ಹೀಗಿರುವುದರಿಂದ ಕರ್ಮಾನುಸಾರವಾದ ಫಲಗಳು ದೊರೆಯುತ್ತವೆಂಬುದು ಹೇಗೆ ಯುಕ್ತವಾಗುತ್ತದೆ;

ಕೆಲವರಿಗೆ ಇಲ್ಲ); ಏವಂ-ಹೀಗೆಯೇ, ಪಾಪಾಃ-ಪಾಪಕರ್ಮಗಳನ್ನು ಮಾಡುವ, ನರಾಃಅಪಿ-ಮನುಷ್ಯರೂ ಸಹ, ಭುವಿ-ಭೂಲೋಕದಲ್ಲಿ ಸುಖಿನಃ-(ಕೆಲವರು) ಸುಖವುಳ್ಳವರಾಗಿ, ದೃಶ್ಯಂತೇ-ಕಂಡುಬರುತ್ತಾರೆ; ಕೇಚಿತ್-ಮತ್ತೆ ಕೆಲವರು, ದುಃಖಿನಃ-ದುಃಖವುಳ್ಳವರೂ (ಇರುತ್ತಾರೆ); ಸೂತ-ಹೇ ಸೂತ!, ತತ್-ಆದ್ದರಿಂದ, ಕರ್ಮಣಾಂ-ಕರ್ಮಗಳ, ಗತಿಃ-ಗತಿಯು (ಫಲದಾನ ಶಕ್ತಿಯು), ಕಥಂ-ಹೇಗೆ ಯುಕ್ತವಾಗುತ್ತದೆ? ಜ್ಞಾತತತ್ತ್ವಃ-ತತ್ತ್ವಜ್ಞಾನಿಯೂ, ಬುದ್ಧಿಮಾನ್-(ಅದನ್ನು ಅನ್ಯರಿಗೆ ತಿಳಿಸಿಕೊಡುವ) ಬುದ್ಧಿಯುಳ್ಳವನೂ, ಅಸಿ-ಆಗಿರುವಿ; ಏತತ್-(ಈ ಸಂಶಯದ ಪರಿಹಾರವನ್ನು) ಇದನ್ನು ನಃ-ನಮ್ಮಗಳಿಗೆ, ವಿಸ್ತರಾತ್-ವಿವರವಾಗಿ, ಬ್ರೂಹಿ-ಹೇಳುವವನಾಗು.

**ಸೂತ ಉವಾಚ—**

**ವಿಷ್ಣುಲೀಲಾರಹಸ್ಯಾನಿ ಕೋ ವೇತ್ತುಮಿಹ ಶಕ್ನುತೇ ।**
**ಅಥಾಪಿ ಯುಷ್ಮತ್ಪೃಷ್ಟೋಽಹಂ ರಹಸ್ಯಾನಿ ಯಥಾಮತಿ ॥ ೫ ॥**
**ವದಾಮಿ ತಚ್ಛೃಣುಧ್ವಂ ಮೇ ಯಥಾ ದ್ವೈಪಾಯನಾಚ್ಛ್ರುತಂ ।**

ಸೂತಾಚಾರ್ಯನು ಹೇಳುತ್ತಾನೆ:—

ವಿಷ್ಣುಲೀಲಾರಹಸ್ಯಾನಿ-ಶ್ರೀವಿಷ್ಣುವಿನ ಕ್ರೀಡಾ ವಿಶೇಷಗಳ ಗೂಢಾರ್ಥಗಳನ್ನು ವೇತ್ತುಂ-ತಿಳಿಯಲು, ಇಹ-ಈ ಲೋಕದಲ್ಲಿ ಕಃ-ಯಾವನು, ಶಕ್ನುತೇ-ಸಮರ್ಥನಾಗುವನು? ಅಥಾಪಿ-ಹಾಗಿದ್ದರೂ, ಯುಷ್ಮತ್ ಪೃಷ್ಟಃ-ನಿಮ್ಮಿಂದ ಪ್ರಶ್ನಿಸಲ್ಪಟ್ಟ ಅಹಂ-ನಾನು, ರಹಸ್ಯಾನಿ-ಆ ಗೂಢವಾದ ಪ್ರಮೇಯಗಳನ್ನು, ಯಥಾಮತಿ-ನನಗೆ ತಿಳಿದಷ್ಟು ವದಾಮಿ-ಹೇಳುತ್ತೇನೆ; ಯಥಾ-ಹೇಗೆ, ದ್ವೈಪಾಯನಾತ್-ಶ್ರೀವ್ಯಾಸರಿಂದ, ಶ್ರುತಂ-(ನನ್ನಿಂದ) ಕೇಳಲ್ಪಟ್ಟಿರುವುದೋ, (ತಥಾ-ಹಾಗೆ), ತತ್-ಆ ಪ್ರಮೇಯಗಳನ್ನು, ಮೇ-ನನ್ನಿಂದ, ಶೃಣುಧ್ವಂ-ಕೇಳುವವರಾಗಿರಿ.

**ಏಕ ದ್ವಿತ್ರಿ ಚತುರ್ಭಾರ್ಯಾ ಬಹುಭಾರ್ಯಾಸ್ತಥಾಪರೇ ॥ ೬ ॥**
**ಸಾಮಾನ್ಯನಾರೀಭೋಗಾಶ್ಚ ಸಂತಿ ಜೀವಾಶ್ಚ ಸರ್ವಶಃ ।**

ಹೇ ಸೂತಾಚಾರ್ಯ!, ನೀನು ತತ್ತ್ವಜ್ಞಾನಿಯೂ, ಬುದ್ಧಿಶಾಲಿಯೂ ಆಗಿರುವಿ; ಈ ಸಂಶಯಗಳ ಪರಿಹಾರವನ್ನು ವಿಸ್ತಾರವಾಗಿ ನಿರೂಪಿಸು (೧-೪). ಸೂತನು ಹೇಳುತ್ತಾನೆ:—ಸರ್ವಕರ್ತನಾದ ಶ್ರೀವಿಷ್ಣುವಿನ ಲೀಲಾರಹಸ್ಯಗಳನ್ನು, ಈ ಜಗತ್ತಿನಲ್ಲಿ ಯಾವನು ತಿಳಿಯಲು ಸಮರ್ಥನಾಗುವನು? (ಯಾರೂ ಇಲ್ಲ). ಆದರೂ ನಿಮ್ಮಿಂದ ಪ್ರಶ್ನಿತನಾದ, ನಾನು ಆ ರಹಸ್ಯಗಳನ್ನು ಶ್ರೀಕೃಷ್ಣದ್ವೈಪಾಯನರಿಂದ (ವೇದವ್ಯಾಸರಿಂದ) ಶ್ರವಣಮಾಡಿದಂತೆ, ನಿಮಗಾಗಿ, ಯಥಾಮತಿ, ವಿವರಿಸುತ್ತೇನೆ; ಆದರದಿಂದ ಶ್ರವಣಮಾಡುವರಾಗಿರಿ (೫). ಒಬ್ಬಳು, ಇಬ್ಬರು, ಮೂವರು, ನಾಲ್ವರು,

ಏಕಪತ್ನ್ಯಶ್ಚ ಸಾಮಾನ್ಯಾ ನಾರ್ಯೋಽಪಿ ದ್ವಿವಿಧಾಃ ಸ್ಮೃತಾಃ ॥ ೭ ॥
ನಿಯತಾ ಏಕಪತ್ನ್ಯಸ್ಸ್ಯುಃ ಸಾಮಾನ್ಯಾಃ ಸ್ವೈರಭರ್ತೃಕಾಃ ।
ಸಾಮಾನ್ಯಾ ಅಪ್ಸರೋ ನಾನ್ಯಾಃ ಕಾಚಿದಾಸ್ವಧಿಕಾ ಅಪಿ ॥ ೮ ॥
ವಿಷ್ಣುಭೋಗಾಧಿಕಾರಿಣ್ಯಃ ಭೋಗ್ಯಾ ದೇವೋತ್ತಮೈರಪಿ ।
ವಿಷ್ಣೋರೇವಾಜ್ಞಯಾನ್ಯೇಷಾಂ ಭೋಗಾದ್ದೋಷೋ ನ ಹಿ ಕ್ವಚಿತ್ ॥೯॥
ದೇವಗಂಧರ್ವವಿದ್ಯಾದ್ಯೈರ್ಭೋಗ್ಯಾಶ್ಚಾಪಿ ನೃಪಾದಿಭಿಃ ।
ಪೃಥಗಪ್ಸರಸಃ ಕಾಶ್ಚಿದ್ವಿಷ್ಣುಭೋಗವಿವರ್ಜಿತಾಃ ॥ ೧೦ ॥
ಕಾಶ್ಚಿನ್ಮಾನುಷಭೋಗ್ಯಾಸ್ತು ಸ್ವಾಯೋಗ್ಯೇಚ್ಛಾತ್ರ ನೋ ಭವೇತ್ ।
ಯೋಗ್ಯೇಚ್ಛಾ ನ ವಿಹನ್ಯೇತ ನಿತ್ಯಾನಂದಸ್ತತೋತ್ರ ಹಿ ॥ ೧೧ ॥

ಏಕ ದ್ವಿ ತ್ರಿ ಚತುರ್ಭಾರ್ಯಾಃ-ಒಂದು, ಎರಡು, ಮೂರು, ನಾಲ್ಕು ಭಾರ್ಯರುಳ್ಳವರೂ, ತಥಾ-ಹಾಗೆಯೇ, ಬಹುಭಾರ್ಯಾಃ-ಬಹು ಪತ್ನಿಯರುಳ್ಳವರು, ಅಪರೇ-ಕೆಲವರು, ಚ - ಮತ್ತು ಸಾಮಾನ್ಯನಾರೀಭೋಗಾಃ - ಸಾಮಾನ್ಯ ಸ್ತ್ರೀ (ಸರ್ವಪುರುಷ ಭೋಗ್ಯಸ್ತ್ರೀ) ಭೋಗವುಳ್ಳವರೂ (ಎಂದು), ಸರ್ವಶಃ-ಈ ಎಲ್ಲ ಪ್ರಕಾರದ, ಜೀವಾಃ-ಜೀವರು, ಸಂತಿ-ಇರುವರು; ನಾರ್ಯಃ ಅಪಿ-ಸ್ತ್ರೀಯರಾದರೂ, ಏಕಪತ್ನ್ಯಃ-ಏಕ ಪತ್ನಿಯರೆಂದೂ, ಚ-ಮತ್ತು ಸಾಮಾನ್ಯಾಃ-ಸಾಮಾನ್ಯರೆಂದೂ, ದ್ವಿವಿಧಾಃ-ಎರಡು ವಿಧರೆಂದು, ಸ್ಮೃತಾಃ-ತಿಳಿಯಲ್ಪಟ್ಟಿರುವರು; ಏಕಪತ್ನ್ಯಃ-ಏಕ ಪತ್ನಿಯರೆಂಬುವರು, ನಿಯತಾಃ ಸ್ಯುಃ-ನಿಯತರಾದ ಪುರುಷರನ್ನೇ ಪತಿಗಳಾಗುಳ್ಳವರು (ಮುಕ್ತಿಯಲ್ಲಿ ನಿಯತಿ ಪತಿಯೊಂದಿಗೆ ವಿಹರಿಸುವವರು); ಸಾಮಾನ್ಯಾಃ-ಸಾಮಾನ್ಯರೆಂಬುವರು, ಸ್ವೈರಭರ್ತೃಕಾಃ-ಇಚ್ಛಾನುಸಾರ ಪತಿಗಳುಳ್ಳವರು; ಸಾಮಾನ್ಯಾಃ-

---

ಬಹುಮಂದಿ ಭಾರ್ಯರುಳ್ಳವರಾದ ಕೆಲವು ಪುರುಷರು ಸ್ತ್ರೀಭೋಗವುಳ್ಳವರಾಗಿರುತ್ತಾರೆ—ಕೆಲವರು ಸಾಮಾನ್ಯ ನಾರೀಭೋಗಿಗಳೂ ಇರುವರು; ಹೀಗೆ ಜೀವರು ಬಹುಪ್ರಕಾರವಾಗಿದ್ದಾರೆ; ಸ್ತ್ರೀಯರು ದ್ವಿವಿಧರು—ಏಕಪತ್ನಿಯರೆಂದೂ, ಸಾಮಾನ್ಯರೆಂದೂ; ನಿಯತಪತಿಗಳನ್ನುಳ್ಳವರು ಏಕಪತ್ನಿಯರೆನಿಸುವರು;[1] ಇಚ್ಛಾನುಸಾರವಾಗಿ ಕಾಲ ಕಾಲಕ್ಕೆ ಬೇರೆ ಪತಿಗಳನ್ನು ಸೇರುವವರು, ಸಾಮಾನ್ಯರು; ಅಪ್ಸರಾಸ್ತ್ರೀಯರೇ ಸಾಮಾನ್ಯರು—ಅನ್ಯರಲ್ಲ; ಇವರಲ್ಲಿ (ಅಪ್ಸರೆಯರಲ್ಲಿ)

1. ಗೃಹಸ್ಥ ಜೀವರೆಲ್ಲರೂ ನಿಯತ ಪತ್ನಿಯುಳ್ಳವರು; ನಿಯತ ಪತಿಪತ್ನಿಯರು (ನಿಯತ ದಂಪತಿಗಳು) ಮುಕ್ತಿಯಲ್ಲಿ ತಪ್ಪದೇ ಸೇರುತ್ತಾರೆ—ಒಂದಿಗೆ ಮುಕ್ತರಾಗುತ್ತಾರೆ; ಸಂಸಾರಾವಸ್ಥೆಯಲ್ಲಿ ಕರ್ಮಾನುಸಾರ, ಅನಿಯತರಾದ ಪುರುಷ ಸ್ತ್ರೀಯರನ್ನು ಪತಿಪತ್ನಿಯರನ್ನಾಗಿ ಹೊಂದುವುದೂ ಉಂಟು.

(ಹೀಗೆ) ಸಾಮಾನ್ಯ ಸ್ತ್ರೀಯರೆಂಬುವರು, ಅಪ್ಸರಃ-ಅಪ್ಸರೆಯರು, ನಾನ್ಯಾಃ-ಇತರರಲ್ಲ; ಆಸು-ಇವರಲ್ಲಿ (ಅಪ್ಸರೆಯರಲ್ಲಿ), ಕಾಚಿತ್-ಕೆಲವರು, ಅಧಿಕಾಃ ಅಪಿ-ಉತ್ತಮರೂ (ಇರುವರು); (ಇವರು); ವಿಷ್ಣುಭೋಗಾಧಿಕಾರಿಣ್ಯಃ-ಶ್ರೀವಿಷ್ಣುವಿನಿಂದ ಭೋಗಿಸಲ್ಪಡುವ ಅರ್ಹತೆಯುಳ್ಳವರು, ದೇವೋತ್ತಮೈಃ ಅಪಿ-(ಇತರ) ದೇವಶ್ರೇಷ್ಠರಿಂದಲೂ, ಭೋಗ್ಯಾಃ-ಭೋಗಿಸಲ್ಪಡುವವರು (ಆಗಿರುತ್ತಾರೆ); ವಿಷ್ಣೋಃ-ಶ್ರೀವಿಷ್ಣುವಿನ, ಆಜ್ಞಯಾ ಏವ-(ಇತರ ದೇವತೆಗಳು ಅಪ್ಸರೆಯರನ್ನು ಭೋಗಿಸುವುದು) ಆಜ್ಞೆಯಿಂದಲೇ, (ಆದ್ದರಿಂದ) ಅನ್ಯೇಷಾಂ-ಇತರರಿಗೆ, ಭೋಗಾತ್-(ಈ ಅಪ್ಸರೆಯರ) ಭೋಗದಿಂದ, ಕ್ವಚಿತ್-ಸ್ವಲ್ಪ, ದೋಷಃ-ದೋಷವೂ, ನಹಿ-ಇಲ್ಲ; ಕಾಶ್ಚಿತ್ ಅಪ್ಸರಸಃ-ಕೆಲವು ಅಪ್ಸರಸ್ತ್ರೀಯರು, ದೇವಗಂಧರ್ವವಿದ್ಯಾಧ್ಯೈಃ- ದೇವಗಂಧರ್ವರು ಮತ್ತು ವಿದ್ಯಾಧರರಿಂದ, ನೃಪಾದಿಭಿಃ-ರಾಜರಿಂದ, ಅಪಿ ಚ-ಸಹ, ಭೋಗ್ಯಾಃ-

ಶ್ರೀವಿಷ್ಣುವಿನಿಂದ ಭೋಗಿಸಲ್ಪಡಲು ಅರ್ಹರಾದ ಕೆಲವು ಉತ್ತಮ ಸ್ತ್ರೀಯರೂ ಇರುವರು;[1] ಅನ್ಯ ದೇವೋತ್ತಮರಿಂದಲೂ ಭೋಗ್ಯರಾಗಿರುವ ಇವರು, ಕಾಲವಿಶೇಷಗಳಲ್ಲಿ ಅನ್ಯದೇವತೆಗಳಿಗೂ ಅಂಗಸಂಗವನ್ನೀಯುತ್ತಾರೆ; ಹೀಗೆ ಇವರನ್ನು ಭೋಗಿಸುವ ದೇವತೆಗಳು, ಶ್ರೀವಿಷ್ಣುವಿನ ಆಜ್ಞೆಯಿಂದಲೇ ಅವರನ್ನು

1. ಈ ಉತ್ತಮ ಅಪ್ಸರೆಯರಿಗೆ ಭಗವಂತನ ಅಂಗಸಂಗವಾಗುವಾಗ ಅವರಲ್ಲಿ ರಮಾವೇಶವಿರುತ್ತದೆ; ರಮಾಸನ್ನಿಧಾನವಿಲ್ಲದ ಸ್ತ್ರೀಯಲ್ಲಿ ಶ್ರೀಹರಿಯು ಎಂದೂ ಅನುಗ್ರಹಿಸುವುದಿಲ್ಲ—ಅಂಗಸಂಗವನ್ನು ಕರುಣಿಸುವುದಿಲ್ಲ.

ಭಗವದ್ಭಾರ್ಯತಾ ಯೋಗ್ಯಾಃ ಕಾಶ್ಚಿದಪ್ಸರಸಃ ಸ್ತ್ರಿಯಃ ।
ರಮಾವೇಶಾತ್ ಕದಾಚಿತ್ಸ್ಯು। ತಾಸ್ವೇಕಾ ಪಿಂಗಲಾऽಭವತ್ ।

ಎಂಬ (ಭಾಗವತ ತಾತ್ಪರ್ಯ) ವಾಕ್ಯವು ಈ ಪ್ರಮೇಯವನ್ನೇ ನಿರೂಪಿಸುತ್ತದೆ. ಪಿಂಗಲಾ ನಾಮಕ ವೇಶ್ಯೆಯು ಈ ವಿಧದ ಉತ್ತಮ ಅಪ್ಸರೆಯರಲ್ಲಿ ಒಬ್ಬಳು; ಪಿಂಗಲಾಜನ್ಮದಲ್ಲಿ ರಮಾವೇಶವಿಲ್ಲದ್ದರಿಂದ ಅನ್ಯಪುರುಷರಿಂದ ಭೋಗ್ಯಳೂ ಆಗಿದ್ದಳು; ಮುಂದೆ ಕುಬ್ಜೆಯಾಗಿ ಜನಿಸಿ, ರಮಾವೇಶದಿಂದ, ಶ್ರೀಕೃಷ್ಣನ ಅಂಗಸಂಗವನ್ನು ಪಡೆದು, ವಿಶೋಕನೆಂಬ ಪುತ್ರನನ್ನು ಪಡೆದಳು; ಈ ವಿಶೋಕನು ನಾರದರ ಶಿಷ್ಯನಾಗಿ, ಭೀಮಸೇನನ ಸಾರಥಿಯಾದನು.

ಅನ್ಯದೇವತೆಗಳು ಇಂತಹ ಅಪ್ಸರೆಯರನ್ನು ಭೋಗಿಸುವುದರಿಂದ ಅವರಿಗೆ ಯಾವ ದೋಷವೂ ಇಲ್ಲ—ಅವರಲ್ಲಿ ರಮಾವೇಶವಿಲ್ಲದ ಕಾಲವಾದ್ದರಿಂದಲೂ, ಭಗವದಾಜ್ಞೆಯೇ ಹಾಗೆ ಅವಕಾಶಪ್ರದವಾಗಿರುವುದರಿಂದಲೂ ದೋಷವಿಲ್ಲ.

ದೇವಗಂಧರ್ವಾದಿ ದೇವಲೋಕದ ಪ್ರಜರಿಂದ ಭೋಗ್ಯರಾದ ಅಪ್ಸರೆಯರೂ ಹೇರಳವಾಗಿದ್ದಾರೆ—ಮನುಷ್ಯಲೋಕಕ್ಕೆ ಬಂದು ಮನುಷ್ಯರಿಂದ ಅಪ್ಸರೆಯರು ಭೋಗಿಸಲ್ಪಟ್ಟ ವೃತ್ತಾಂತಗಳನ್ನು ಪುರಾಣಗಳಲ್ಲಿ ಕಾಣಬಹುದು. ಇವರು, ಆಯಾಕಾಲದಲ್ಲಿ ಪ್ರಾಪ್ತರಾಗುವ ಪುರುಷರನ್ನು ಪತಿಭಾವದಿಂದ ಸೇವಿಸಿ ಅನಂತರಪಡಿಸುತ್ತಾರೆ—ಆದ್ದರಿಂದ 'ಬಹುಭರ್ತೃಕ'ರೆಂದು ನಿರ್ದೇಶಿಸಲ್ಪಟ್ಟಿದ್ದಾರೆ. ಮಾನುಷ ವೇಶ್ಯೆಯರನ್ನು ಸಾಮಾನ್ಯ ನಾರಿಯರೆಂದು ಭ್ರಮಿಸಕೂಡದು.

ಭೋಗಿಸಲ್ಪಡತಕ್ಕವರು; ವಿಷ್ಣುಭೋಗವಿವರ್ಜಿತಾಃ-(ಇವರು) ವಿಷ್ಣುಭೋಗ ವಿಲ್ಲದವರು (ಶ್ರೀವಿಷ್ಣುವಿನ ಅಂಗಸಂಗಕ್ಕೆ ಅನರ್ಹರು); ತು-ಮತ್ತು ಕಾಶ್ಚಿತ್-ಕೆಲವು ಅಪ್ಸರೆಯರು, ಮಾನುಷಭೋಗ್ಯಾಃ-ಮನುಷ್ಯರಿಂದ ಸಹ ಭೋಗಾರ್ಹರು; ಅತ್ರ-ವೈಕುಂಠಾದಿ ಮುಕ್ತಸ್ಥಾನಗಳಲ್ಲಿ, ಸ್ವಾಯೋಗ್ಯೇಚ್ಛಾ-ತಮಗೆ ಅಯೋಗ್ಯವಾದ ಇಚ್ಛೆಯು, ನೋ ಭವೇತ್-(ಮುಕ್ತರಿಗೆ) ಉಂಟಾಗುವುದೇ ಇಲ್ಲ. ಯೋಗ್ಯೇಚ್ಛಾ-ಯೋಗ್ಯವಾದ (ಮುಕ್ತರ) ಇಚ್ಛೆಯು, ನ ವಿಹನ್ಯೇತ-ಎಂದೂ ಪೂರ್ಣವಾಗದಿರುವುದಿಲ್ಲ (ವ್ಯರ್ಥವಾಗುವುದಿಲ್ಲ); ತತಃ-ಆದ್ದರಿಂದ; ನಿತ್ಯಾನಂದಃ-(ಮುಕ್ತರಿಗೆ) ನಿತ್ಯಾನಂದವು, ಹಿ-ಸಿದ್ಧವೇ ಆಗಿರುತ್ತದೆ.

**ಕದಾಚಿತ್ತತ್ತ್ವದೇಹಾಸ್ತೇ ಜ್ಞಾನಮಾತ್ರಶರೀರಿಣಃ ।**
**ಮೋದಂತೇ ಕರ್ಹಿಚಿತ್ ಕೇಚಿತ್ ಸ್ತ್ರೀಭಿರ್ಯಾನೇ ಗೃಹೇ ವನೇ ॥ ೧೨ ॥**
**ಯಥಾಸ್ವರೂಪವ್ಯಕ್ತಿಃ ಸ್ಯಾದ್ಭೋಜ್ಯೈಕ್ಯೇಽಪಿ ಸುಖಾದಿನಾ ।**
**ರತ್ಯಂತ ಉಭಯೇಚ್ಛೈಕ್ಯಾದ್ರೇತೋದ್ರಾವಸುಖಂ ತಥಾ ॥ ೧೩ ॥**
**ಉತ್ಸರ್ಗಾ ನೈವ ಜಾಯಂತೇ ಶುಕ್ಲಮೂತ್ರವಿಡಾದಿನಾಂ ।**
**ಭೋಗ ಅಲೌಕಿಕಾಸ್ತೇಷಾಂ ಸಂತಿ ಲೋಕವಿಲಕ್ಷಣಾಃ ॥ ೧೪ ॥**

---

ಭೋಗಿಸುವುದರಿಂದ ದೋಷಿಗಳಾಗುವುದಿಲ್ಲ; ಕೆಲವು ಅಪ್ಸರೆಯರು, ವಿಷ್ಣು ಭೋಗಕ್ಕೆ ಅನರ್ಹರಾಗಿ, ದೇವಗಂಧರ್ವ, ವಿದ್ಯಾಧರ, ರಾಜಾದಿಗಳಿಂದ ಸಹ ಭೋಗ್ಯರಾಗಿರುತ್ತಾರೆ—ಮನುಷ್ಯ ಭೋಗ್ಯರಾದ ಅಪ್ಸರೆಯರೂ ಕೆಲವರಿದ್ದಾರೆ; ಮುಕ್ತಲೋಕದಲ್ಲಿ ಮುಕ್ತರಿಗೆ ಅಯೋಗ್ಯವಾದ ಇಚ್ಛೆಯೇ ಉಂಟಾಗುವುದಿಲ್ಲ; ಅವರ ಯೋಗ್ಯವಾದ ಇಚ್ಛೆಯು ಎಂದೂ ವ್ಯರ್ಥವಾಗುವುದಿಲ್ಲ—ಪೂರ್ಣಗೊಳ್ಳುತ್ತದೆ; ಆದ್ದರಿಂದ ಎಲ್ಲ ಮುಕ್ತರೂ ನಿತ್ಯಾನಂದವುಳ್ಳವರೆಂಬುದು ಯುಕ್ತವಾಗುತ್ತದೆ—ಶಾಸ್ತ್ರಸಿದ್ಧವೂ ಆಗಿದೆ (೬-೧೧). ಮುಕ್ತರು ಚಿನ್ಮಾತ್ರದೇಹವುಳ್ಳವರು; ಆದರೂ ಕೆಲವು ವೇಳೆ, ಸ್ವೇಚ್ಛೆಯಿಂದ ಶುದ್ಧಸತ್ತ್ವಾತ್ಮಕದೇಹಗಳನ್ನು ಸ್ವೀಕರಿಸುತ್ತಾರೆ;[1] ಯಾನ, ಗೃಹ,

---

1. 'ಸ್ವಪ್ನಸ್ಥಾನಾಂ ಯಥಾಭೋಗೋ ವಿನಾ ದೇಹೇನ ಯುಜ್ಯತೇ । ಏವಂ ಮುಕ್ತಾವಪಿ ಭವೇದ್ವಿನಾ ದೇಹೇನ ಭೋಜನಂ । ಸ್ವೇಚ್ಛಯಾ ವಾ ಶರೀರಾಣಿ ತೇಜೋ ರೂಪಾಣಿ ಕಾನಿಚಿತ್ । ಸ್ವೀಕೃತ್ಯ... ಇತ್ಯಾದಿ ಸೂತ್ರಭಾಷ್ಯೋಕ್ತಪ್ರಮಾಣಗಳೂ, 'ಸ್ವರೂಪಂ ವರ್ಧತೇ ತೇಷಾಂ ಸರ್ವೇಷಾಂ ಪರಿಮಾಣತಃ ।' (ಸ.ರ.ಮಾ) ವಾಕ್ಯವೂ, ಮುಕ್ತರು ನಾನಾ ಭೋಗಗಳನ್ನು, ಸ್ವರೂಪ ದೇಹದಿಂದಲೂ (ಅಣುಮಾತ್ರ ಸ್ವರೂಪರಾದರೂ ಪರಮಾತ್ಮನ ವಿಶೇಷಾನುಗ್ರಹದಿಂದ ಅದು ವೃದ್ಧಿಗೊಳ್ಳುವುದರಿಂದಲೂ) ಸ್ವೇಚ್ಛೆಯಿಂದ ತೇಜೋರೂಪದ (ಶುದ್ಧ ಸತ್ತ್ವಾತ್ಮಕ) ದೇಹಗಳನ್ನು ಸ್ವೀಕರಿಸಿ, ಭೋಗಾನಂತರ ತ್ಯಜಿಸುವುದರಿಂದಲೂ, ಹೊಂದುವರೆಂಬುದನ್ನು ಸಮರ್ಥಿಸುತ್ತವೆ.

ಜ್ಞಾನಮಾತ್ರಶರೀರಿಣಃ-ಚಿನ್ಮಾತ್ರದೇಹವುಳ್ಳ, (ಚೇತನಸ್ವರೂಪವೇ ದೇಹವಾಗಿವುಳ್ಳ), ತೇ-ಆ ಮುಕ್ತರು, ಕದಾಚಿತ್-ಒಮ್ಮೊಮ್ಮೆ ಸತ್ವದೇಹಾಃ-ಶುದ್ಧ ಸತ್ವಾತ್ಮಕವಾದ ದೇಹಗಳನ್ನು ಹೊಂದಿ (ಸ್ವೀಕರಿಸಿ, ಕರ್ಹಿಚಿತ್-ಯಾವುದಾದರೊಂದು ವಿಧದಿಂದ, ಕೇಚಿತ್-ಕೆಲವರು, ಸ್ತ್ರೀಭಿಃ-ಸ್ತ್ರೀಯರಿಂದ ಕೂಡಿ, ಯಾನೇ-ವಾಹನದಲ್ಲಿ (ವಿಮಾನ ಮೊದಲಾದವುಗಳಲ್ಲಿ), ಗೃಹೇ-ಮನೆಗಳಲ್ಲಿ ವನೇ-ಉದ್ಯಾನಗಳಲ್ಲಿ ಮೋದಂತೇ-ಸುಖಿಸುತ್ತಾರೆ (ವಿಹರಿಸುತ್ತಾರೆ); ಯಥಾ-ಹೇಗೆ, ಭೋಕ್ತೈಕ್ಯೇ ಅಪಿ-ಭೋಗಿಸುವ ವಸ್ತುವು ಒಂದೇ ಆದರೂ, (ಸ್ವರೂಪದಿಂದ ಅಭಿನ್ನವಾದ ಆನಂದವನ್ನೇ ಭೋಗಿಸಿದರೂ), ಸುಖಾದಿನಾ-ಸುಖಾದಿ ಅನುಭವದಿಂದ, ಸ್ವರೂಪವ್ಯಕ್ತಿ-ಸ್ವಸ್ವರೂಪದ ಅಭಿವ್ಯಕ್ತಿಯು (ಆನಂದದ ಅಭಿವ್ಯಕ್ತಿಯ-ಪ್ರಾಕಟ್ಯವು), ಸ್ಯಾತ್-ಆಗುವುದೋ, ತಥಾ-ಹಾಗೆಯೇ, ಉಭಯೇಚ್ಛೈಕ್ಯಾತ್-(ಪುರುಷ ಸ್ತ್ರೀಯರ) ಇಚ್ಛೆಯು ಏಕಪ್ರಕಾರವಾದುದರಿಂದ, ರತ್ಯಂತೇ-ರತಿ ಕ್ರೀಡೆಯ ಅಂತ್ಯದಲ್ಲಿ ರೇತೋದ್ರಾವಸುಖಂ-ರೇತಸ್ಸು ಸ್ರವಿಸುವುದರ ಸುಖವು (ಅಭಿವ್ಯಕ್ತವಾಗುತ್ತದೆ); ಶುಕ್ರಮೂತ್ರವಿಡಾದಿನಾಂ-(ಮುಕ್ತರ) ರೇತಸ್ಸು ಮೂತ್ರ ಮಲಾದಿಗಳ, ಉತ್ಸರ್ಗಾಃ-(ದೇಹದಿಂದ) ಹೊರಗೆ ಬರುವಿಕೆಗಳು, ನೈವ ಜಾಯಂತೇ-ಉಂಟಾಗುವುದೇ ಇಲ್ಲ; ತೇಷಾಂ-ಮುಕ್ತರ, ಭೋಗಃ-ಭೋಗವು (ವಿಲಕ್ಷಣವಾದುದು); (ಆ ಭೋಗಗಳು) ಲೋಕವಿಲಕ್ಷಣಾಃ-ಈ ಲೋಕದಲ್ಲಿರದ, ಅಲೌಕಿಕಾಃ-ಅತಿ ವಿಚಿತ್ರಗಳೂ, ಸಂತಿ-ಇರುತ್ತವೆ.

**ಲೋಕೇಪಿ ಬರ್ಹಿಣಾದೀನಾಂ ಭೋಗಾ ಲೋಕವಿಲಕ್ಷಣಾಃ ।**
**ವಿದ್ದಿ ಪಕ್ಷೋಷ್ಮಣಾ ಕ್ವಾಪಿ ಕ್ವಚಿದ್ದೃಷ್ಟ್ಯಾ ಸ್ಮೃತೇರಪಿ ॥ ೧೫ ॥**
**ದೃಶ್ಯಂತೇ ಹ್ಯಂಡಜಾದೀನಾಂ ಸ್ತನಪಾನಂ ವಿನಾಪಿ ಹಿ ।**
**ಅಪಕ್ಷಾ ಉತ್ಪ್ಲವಂತೇಪಿ ಪಾದಹೀನಾ ವ್ರಜಂತಿ ಚ ॥ ೧೬ ॥**

---

ಉಪವನಾದಿ ಸ್ಥಳವಿಶೇಷಗಳಲ್ಲಿ ಸ್ತ್ರೀಯರಿಂದ ಕೂಡಿ, ಕೆಲವುಕಾಲ, ವಿಹರಿಸುತ್ತಾರೆ; ಮುಕ್ತರ ರತಿಕ್ರೀಡೆಯು, ಅತ್ಯಂತ ವಿಲಕ್ಷಣವಾದುದು; ಸ್ವರೂಪಸ್ಥಿತವಾದ ಆನಂದವನ್ನೇ ಭೋಗಿಸುವುದರಿಂದ, ಸ್ವರೂಪದ ಅಭಿವ್ಯಕ್ತಿಯು ಹೇಗೆ ಉಂಟಾಗುವುದೋ (ನಿತ್ಯಾಭಿವ್ಯಕ್ತವಾದ ಸ್ವರೂಪವೇ ಆದರೂ, ಆನಂದಭೋಗದಿಂದ ಅಭಿವ್ಯಕ್ತಿ ವಿಶೇಷವು ಸಂಭವಿಸುವಂತೆ), ಹಾಗೆಯೇ ಮುಕ್ತಪುರುಷ ಸ್ತ್ರೀಯರ ಇಚ್ಛೈಕ್ಯದಿಂದ, ರತಿಕ್ರೀಡೆಯ ಅಂತ್ಯದಲ್ಲಿ ರೇತಸ್ಸು ದ್ರವಿಸುವುದರಿಂದಾಗುವ ಸುಖವಿಶೇಷವು, ಉಭಯರ ಸ್ವರೂಪದಲ್ಲಿ ಅಭಿವ್ಯಕ್ತವಾಗುತ್ತದೆ; ಅವರ ದೇಹದಿಂದ ರೇತಸ್ಸು ಮಲ, ಮೂತ್ರಾದಿಗಳಾವುವೂ ಹೊರಗೆ ಬರುವುದೇ ಇಲ್ಲ. ಈ ವಿಧವಾದ ಲೋಕವಿಚಿತ್ರವಾದ, ಬಹುಭೋಗವುಳ್ಳವರು—ಮುಕ್ತರು (೧೨-೧೪). ಈ

ಸ್ತ್ರೀಪುಂಸಯೋರ್ವಿನಾಯೋಗಮುತ್ಪದ್ಯಂತೇಪಿ ದೇಹಿನಃ ।
ಪಶ್ಯಂತಿ ಜಲ ಏವಾನ್ಯೇ ಜಲೇಂಧಾಃ ಕೇಚಿದೇವ ಚ ॥ ೧೭ ॥
ತಮೋಂಧಾಃ ಪ್ರಾಣಿನಃ ಕೇಚಿದ್ದಿವಾಂಧಾಃ ಸರ್ವದಾಂಧಕಾಃ ।
ಇತ್ಯಾದಿ ಚಿತ್ರತಾ ಲೋಕೇ ಸೃಷ್ಟೌ ವೃದ್ಧ್ಯಾದಿಕೇಷ್ವಪಿ ॥ ೧೮ ॥
ದೃಶ್ಯಂತೇ ಕಿಮು ವಕ್ತವ್ಯಂ ಸರ್ವಲೋಕವಿಲಕ್ಷಣೇ ।
ವೈಲಕ್ಷಣ್ಯಂ ಹಿ ಭೋಗಾನಾಂ ರಹಸ್ಯಮಿದಮೀರಿತಂ ॥ ೧೯ ॥

ಲೋಕೇ ಅಪಿ-ಈ ಲೋಕದಲ್ಲಿ ಸಹ, ಬರ್ಹಿಣಾದೀನಾಂ-ನವಿಲು ಮೊದಲಾದ ಪ್ರಾಣಿಗಳ, ಭೋಗಾಃ-ರತಿಸುಖವೇ ಮೊದಲಾದ ಭೋಗಗಳು, ಲೋಕ ವಿಲಕ್ಷಣಾಃ-ವಿಚಿತ್ರವಾದುವೆಂದು (ಅಸಾಧಾರಣ- ಅಪೂರ್ವವಾದವುಗಳೆಂದು), ವಿದ್ಧಿ-ತಿಳಿಯಿರಿ; (ಅಸಾಧಾರಣ ಭೋಗವನ್ನು ಸೂಚಿಸುತ್ತಾರೆ); ಕ್ವಾಪಿ-ಕೆಲವು ಸಂದರ್ಭಗಳಲ್ಲಿ, ಪಕ್ಷೋಷ್ಮಣಾ-ರೆಕ್ಕೆಗಳ ಶಾಖದಿಂದಲೂ, ಕ್ವಚಿತ್-ಮತ್ತೆ ಕೆಲವು ಪ್ರಾಣಿಗಳಲ್ಲಿ ದೃಷ್ಟ್ಯಾ-ದರ್ಶನ ಮಾತ್ರದಿಂದಲೂ, ಅಪಿ-ಮತ್ತು ಸ್ಮೃತೇಃ-(ರತಿಭೋಗದ) ಸ್ಮರಣಮಾತ್ರದಿಂದಲೂ, (ಭೋಗಪೂರ್ಣವಾಗುವುದೆಂದು, ವಿದ್ಧಿ-ತಿಳಿ); ಅಂಡಜಾದೀನಾಂ-ಪಕ್ಷಿಗಳೇ ಮೊದಲಾದ ಕೆಲವು ಪ್ರಾಣಿಗಳಿಗೆ ಸ್ತನಪಾನಂ ವಿನಾ ಅಪಿ-ಮಾತೃಸ್ತನ್ಯಪಾನವಿಲ್ಲದೇ, ದೃಶ್ಯಂತೇ-ಭೋಗವು (ತೃಪ್ತಿಯು) ಕಂಡುಬರುತ್ತದೆ; (ಈ ಲೋಕದಲ್ಲಿಯೇ ಕಂಡುಬರುವ ಇತರ ವಿಚಿತ್ರವಿಹಾರಗಳನ್ನು ಉದಹರಿಸುತ್ತಾರೆ); ಅಪಕ್ಷಾಃ-ರೆಕ್ಕೆಯಿಲ್ಲದ ಪ್ರಾಣಿಗಳು, ಉತ್ಪ್ಲವಂತೇ-ಹಾರುತ್ತವೆ; ಪಾದಹೀನಾಃ ಅಪಿ-ಕಾಲಿಲ್ಲದವುಗಳೂ ಕೂಡ, ವ್ರಜಂತಿ-ಸಂಚರಿಸುತ್ತವೆ;

---

ವಿಧವಾದ ಅಪೂರ್ವವಾದ ವಿಚಿತ್ರ ಭೋಗಗಳುಳ್ಳವರು, ಮುಕ್ತರು, ಎಂಬುದೇನೂ ಆಶ್ಚರ್ಯವಲ್ಲ; ಈ ಲೋಕದಲ್ಲಿ ಸಹ, ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸುವ ರೀತಿಯಲ್ಲಿ ಅಸಾಧಾರಣತೆಯು ಕಂಡುಬರುತ್ತಿರುವಾಗ, ಸರ್ವಲೋಕ ವಿಲಕ್ಷಣವಾದ ಮುಕ್ತಲೋಕದಲ್ಲಿ ಅತಿವಿಲಕ್ಷಣ ಭೋಗಗಳುಂಟೆಂದು ಹೇಳಲೇನು? ಉಂಟೆಂದು ಗ್ರಹಿಸುವುದು ಕಷ್ಟವಲ್ಲ. ನವಿಲುಗಳ ರತಿಕ್ರೀಡೆಯು ಅತ್ಯ ಸಾಧಾರಣವಾದುದು; ರೆಕ್ಕೆಗಳ ಪರಸ್ಪರ ಶಾಖೆಯಿಂದ ಗಂಡುಹೆಣ್ಣು ಪಕ್ಷಿಗಳಲ್ಲಿ ರತಿಸುಖಾನುಭವವು ದೊರೆಯುತ್ತದೆ; ಕೆಲವು ಪ್ರಾಣಿಗಳಂತೂ, (ಪರಸ್ಪರ ದರ್ಶನಮಾತ್ರದಿಂದ, ಮತ್ತೂ ಕೆಲವು ಪ್ರಾಣಿಗಳು, ಪರಸ್ಪರ ಸ್ಮರಣೆಮಾತ್ರದಿಂದಲೂ ರತ್ಯಾನಂದವನ್ನು ಪಡೆಯುತ್ತವೆ;[1] ಇತರ ಇಂದ್ರಿಯಗಳಿಂದ ಹೊಂದುವ ಭೋಗವೂ

1. ಅನ್ಯವಿಧ ಭೋಗವೂ ಕಂಡಿದೆ; ಕೂರ್ಮವು ಜಲಾಶಯದಲ್ಲಿ ಅನ್ಯತ್ರ ಸಂಚರಿಸುತ್ತ ಆಹಾರವನ್ನು ಭಕ್ಷಿಸಿ, ತನ್ನ ಮರಿಗಳನ್ನು ಸ್ಮರಿಸಿದರೆ, ಅವುಗಳಿಗೆ ಉಂಡತೃಪ್ತಿಯೂ, ದೇಹಪುಷ್ಟಿಯೂ ಲಭಿಸುತ್ತದಂತೆ.

ಸ್ತ್ರೀಪುಂಸಯೋಃ-ಸ್ತ್ರೀಪುರುಷರ, ಯೋಗಂ ವಿನಾ-ಸಂಬಂಧವಿಲ್ಲದೇ, ದೇಹಿನಃ-ಪ್ರಾಣಿಗಳು, ಉತ್ಪದ್ಯಂತೇ-(ದೇಹವುಳ್ಳವುಗಳಾಗಿ) ಹುಟ್ಟುತ್ತವೆ; ಅನ್ಯೇ-ಇತರ ಕೆಲವು ಪ್ರಾಣಿಗಳು, ಜಲೇ ಏವ-ನೀರಿನಲ್ಲಿಯೇ ಕಾಣುತ್ತವೆ (ನೋಡುವ ಶಕ್ತಿಯುಳ್ಳವು); ಕೇಚಿತ್-ಮತ್ತೆ ಕೆಲವು, ಜಲೇ-ನೀರಲ್ಲಿ, ಅಂಧಾಃ ಚ-ಕಾಣುವುದೇ ಇಲ್ಲ (ಚಕ್ಷುರಿಂದ್ರಿಯದ ಭೋಗವು-ವಿಷಯ ಗ್ರಹಣವು ಇರುವುದಿಲ್ಲ); ಪ್ರಾಣಿನಃ-ಮತ್ತಿತರ ಪ್ರಾಣಿಗಳು, ತಮೋಂಧಾಃ-ಕತ್ತಲಲ್ಲಿ ಕಾಣಲಾರವು; ಕೇಚಿತ್-ಕೆಲವು, ದಿವಾಂಧಾಃ-ಹಗಲಲ್ಲೇ ನೋಡಲಾರವು; (ಮತ್ತೆ ಕೆಲವು), ಸರ್ವದಾಂಧಕಾಃ-ಸರ್ವದಾ ಕಣ್ಣಿನ ವ್ಯಾಪಾರವೇ ಇಲ್ಲದವು; ಇತ್ಯಾದಿ-ಇದೇ ಮೊದಲಾದ, ಚಿತ್ರತಾ-ಆಶ್ಚರ್ಯವು (ಅಸಾಧಾರಣ ಭೋಗಗಳು-ಇಂದ್ರಿಯಗಳಿಂದ ವಿಷಯ ಗ್ರಹಣ ವ್ಯಾಪಾರಗಳು); ಸೃಷ್ಟೌ-ಸೃಷ್ಟಿಯಲ್ಲಿ, ವೃದ್ಧ್ಯಾದಿಕೇಷು ಅಪಿ-(ಬಹುಪರಿಯ) ವೃದ್ಧಿಯುಳ್ಳ ಪ್ರಾಣಿಗಳಲ್ಲಿ ದೃಶ್ಯಂತೇ-ಕಾಣಲ್ಪಡುತ್ತವೆ; ಸರ್ವಲೋಕವಿಲಕ್ಷಣೇ-(ಲೋಕದಲ್ಲಿಯೇ ಹೀಗಿರಲು) ಸಕಲ ಲೋಕಗಳಿಂದ ವಿಲಕ್ಷಣವಾದ ಮುಕ್ತ ಲೋಕದಲ್ಲಿ, ಕಿಮು ವಕ್ತವ್ಯಂ-(ವಿಲಕ್ಷಣ ಭೋಗಗಳುಂಟೆಂದು) ಹೇಳಲೇನಿದೆ? ಭೋಗಾನಾಂ-ಮುಕ್ತಭೋಗಗಳ, ವೈಲಕ್ಷಣ್ಯಂ-ವೈಲಕ್ಷಣ್ಯವನ್ನು (ಅಪೂರ್ವತೆಯನ್ನು) ಹೇಳಲೇನು? ಭೋಗಾನಾಂ-ಮುಕ್ತಭೋಗಗಳ, ಇದಂ-ಈ, ರಹಸ್ಯಂ-ರಹಸ್ಯವು, ಈರಿತಂ-(ಹೀಗೆ) ವಿವರಿಸಲ್ಪಟ್ಟಿತು.

**ಏವಮೇವ ಹಿ ದುಷ್ಟಾನಾಂ ಸ್ತ್ರೀಣಾಂ ಪುಂಸಾಂ ತಮಸ್ಯಪಿ ।**
**ಜಾಯತೇಽನಿಚ್ಛಯಾ ಯೋಗೋ ರತ್ಯಾದೇರ್ದುಃಖಹೇತುತಾ ॥ ೨೦ ॥**

ಏವಂ ಏವ-ಹೀಗೆಯೇ, ದುಷ್ಟಾನಾಂ-ತಾಮಸ ಜೀವರ, ಸ್ತ್ರೀಣಾಂ-ಸ್ತ್ರೀಯ

---

ಹೀಗೆಯೇ ಅಸಾಧಾರಣವಾಗಿರುವುದೂ ಕಂಡುಬರುತ್ತದೆ; ಕೆಲವು ಪಕ್ಷಿಜಾತಿಗಳಿಗೆ (ತತ್ತಿಯೊಡೆದು ಜನಿಸುವ ಈ ಪ್ರಾಣಿಗಳಿಗೆ) ತಾಯಿಯ ಸ್ತನಪಾನವಿಲ್ಲದೆ ತೃಪ್ತಿಯು ಲಭಿಸುತ್ತದೆ; ರೆಕ್ಕೆಗಳಿಲ್ಲದೇ ಹಾರುವ ಪ್ರಾಣಿಗಳಿವೆ; ಕಾಲಿಲ್ಲದೇ ಸಂಚರಿಸುವ (ಸರ್ಪಾದಿ) ಪ್ರಾಣಿಗಳು ಇವೆ; ಸ್ತ್ರೀಪುರುಷರ ಸಂಯೋಗವಿಲ್ಲದೇ ಕೆಲವು ಪ್ರಾಣಿಗಳು ಹುಟ್ಟುತ್ತವೆ; ಕೆಲವು ಪ್ರಾಣಿಗಳು ನೀರಿನಲ್ಲಿ ನೋಡಬಲ್ಲವು—ಕೆಲವು ನೋಡಲಾರವು; ಕೆಲವು ರಾತ್ರಿಯಲ್ಲಿ ಕುರುಡಾದರೆ, ಕೆಲವಕ್ಕೆ ಹಗಲಲ್ಲಿಯೇ ಕಣ್ಣು ಕಾಣುವುದಿಲ್ಲ (ಗೂಬೆ ಮೊದಲಾದುವು); ಮತ್ತೆ ಕೆಲವಕ್ಕೆ ಕಣ್ಣೇ ಇಲ್ಲ—ಸದಾ ಕುರುಡೇ; ಸೃಷ್ಟಿಯಲ್ಲಿ ಪ್ರಾಣಿಗಳು ಬಹುಪರಿಯ ದೇಹೇಂದ್ರಿಯಾದಿಗಳ ವೃದ್ಧಿಯನ್ನು ಪಡೆದರೂ, ಈ ಮೊದಲಾದ ವಿಚಿತ್ರಗಳು ಕಂಡುಬರುತ್ತವೆ; ಹೀಗಿರಲು ಮುಕ್ತರ ಭೋಗಗಳು ಅಲೌಕಿಕವೆಂದು ಗ್ರಹಿಸುವುದು ಸುಲಭ; ಮುಕ್ತಭೋಗಗಳ ಸಂಬಂಧವಾದ ರಹಸ್ಯವು, ಹೀಗೆ ನಿರೂಪಿಸಲ್ಪಟ್ಟಿತು (೧೫-೧೯). ನಿತ್ಯಾನಂದ ರೂಪದ ಮೋಕ್ಷವನ್ನು

ರಿಗೂ, ಪುಂಸಾಂ-ಪುರುಷರಿಗೂ, ತಮಸಿ ಅಪಿ-ತಮಸ್ಸಿನಲ್ಲಿ (ನಿತ್ಯನರಕದಲ್ಲಿಯೂ), ಯೋಗಃ-ಸಂಬಂಧವು, ಅನಿಚ್ಛಯಾ-ಪರಸ್ಪರ ಇಚ್ಛೈಕ್ಯವಿಲ್ಲದೇ, ಜಾಯತೇ-ಉಂಟಾಗುತ್ತದೆ; (ಆ ಸಂಯೋಗವು ಸ್ತ್ರೀಪುರುಷರ ಒಮ್ಮನಸ್ಸಿನಿಂದ ಆಗದಿದ್ದರೆ), ರತ್ಯಾದೇಃ-ರತಿಕ್ರೀಡಾದಿಗಳಿಗೆ, ದುಃಖಹೇತುತಾ-ದುಃಖಕಾರಣತ್ವವು (ಸಹಜವಾಗಿ ಸಿದ್ಧಿಸುತ್ತದೆ).

ಪ್ರಾಣ ಏವ ಹಿ ಸರ್ವೇಷಾಂ ಮುಕ್ತಾನಾಮುಭಯತ್ರ ತು ।
ಸುಖದುಃಖನಿಯಂತಾಸ್ತಿ ವೃತೋ ದೂತೈರನೇಕಶಃ ॥ ೨೧ ॥
ಯೇನ ಪ್ರಾಣೇನ ಯೇ ಮುಕ್ತಾಃ ಸಹ ಜೀವಾಃ ಸಹಸ್ರಶಃ ।
ಸರ್ವೇ ತಮನುವರ್ತಂತೇ ಶಾಸ್ತಾ ತೇಷಾಂ ಸ ಏವ ಹಿ ॥ ೨೨ ॥

ಉಭಯತ್ರ ತು-ಎರಡೂವಿಧ ಮುಕ್ತ ಸ್ಥಾನಗಳಲ್ಲಿಯೂ (ವೈಕುಂಠಾದಿಗಳು ಮತ್ತು ನಿತ್ಯನರಕಗಳಲ್ಲಿ), ಸರ್ವೇಷಾಂ-ಎಲ್ಲ ಮುಕ್ತಾನಾಂ-ಮುಕ್ತರಿಗೆ (ಸಾತ್ವಿಕ ತಾಮಸರಾದ, ಲಿಂಗಭಂಗದಿಂದ ಸ್ವಸ್ವರೂಪಸ್ಥಿತಿಯನ್ನು ಹೊಂದಿದ, ಸ್ವಯೋಗ್ಯ ಮುಕ್ತಸ್ಥಾನಗಳಲ್ಲಿರುವವರಿಗೆ), ಪ್ರಾಣಃ ಏವ-ಬ್ರಹ್ಮದೇವನೇ, ಸುಖದುಃಖ ನಿಯಂತಾ-ಸುಖದುಃಖಗಳನ್ನು ನಿಯಮಿಸುವವನು, ಅಸ್ತಿ-ಆಗಿರುತ್ತಾನೆ; ಅನೇಕಶಃ-ಬಹುಸಂಖ್ಯೆಯ, ದೂತೈಃ-(ತನ್ನ) ದೂತರಿಂದ, ವೃತಃ-ಕೂಡಿಕೊಂಡು (ಅಸ್ತಿ-ಸುಖದುಃಖ ನಿಯಾಮಕನಾಗಿರುತ್ತಾನೆ); ಯೇನ-ಯಾವ, ಪ್ರಾಣೇನ ಸಹ-ಬ್ರಹ್ಮನೊಂದಿಗೆ[1], ಸಹಸ್ರಶಃ-ಬಹುಸಂಖ್ಯೆಯ ಯೇ-ಯಾವ, ಜೀವಾಃ-ಜೀವರು, ಮುಕ್ತಾಃ-ಮುಕ್ತರಾಗುವರೋ, ಸರ್ವೇ-ಆ ಎಲ್ಲರೂ, ತಂ-ಆತನನ್ನು

ಹೊಂದಿದ ಮುಕ್ತರ ಭೋಗಗಳು ಹೀಗೆ ವಿಚಿತ್ರವಾಗಿದ್ದರೆ, ಇದರಂತೆ ನಿತ್ಯದುಃಖರೂಪದ ಮೋಕ್ಷವನ್ನು ಹೊಂದಿದ ಮುಕ್ತರ (ತಾಮಸಜೀವರ) ದುಃಖಭೋಗವೂ ವಿಚಿತ್ರವಾದುದೇ ಎಂದು ತಿಳಿಯಬೇಕು; ತಾಮಸಮುಕ್ತರ ಸ್ತ್ರೀಪುರುಷರಿಗೆ ತಮಸ್ಸಿನಲ್ಲಿ ಸಂಭವಿಸುವ ರತಿಕೇಳಿಯೂ ದುಃಖಪ್ರದವಾದುದೇ; ಪರಸ್ಪರ ಇಚ್ಛೆಯು ವಿರೋಧವಿರುವಾಗ ರತ್ಯಾದಿಗಳು ಸಂಭವಿಸುವುದರಿಂದ, ಅವೂ ದುಃಖಹೇತುವಾಗುತ್ತವೆ (೨೦). ಈ ಉಭಯವಿಧ ಮುಕ್ತರಿಗೂ, ಮುಖ್ಯಪ್ರಾಣನೇ (ಬ್ರಹ್ಮನೇ-ಮುಕ್ತ ಮುಖ್ಯಪ್ರಾಣನೆಂದರೆ ಬ್ರಹ್ಮನೇ), ತನ್ನ ಅಸಂಖ್ಯದೂತರಿಂದ ಕೂಡಿಕೊಂಡು, ಸುಖದುಃಖ ನಿಯಾಮಕನಾಗಿರುತ್ತಾನೆ; ಯಾವ ಬ್ರಹ್ಮನಿಂದ ಸಹಿತರಾಗಿ (ಯಾರೊಡನೆ) ಯಾವ ಸಹಸ್ರಾರು ಜೀವರು ಮುಕ್ತರಾಗುವರೋ, ಆ ಎಲ್ಲರೂ, ಆತನನ್ನೇ ಅನುವರ್ತಿಸುತ್ತಾರೆ; (ಸಾತ್ವಿಕರು ಅನುಕೂಲರಾಗಿ

1. ತಾಮಸಜೀವರು, ಬ್ರಹ್ಮದೇವನೊಂದಿಗೆ, ಎಂದರೆ, ಸಾತ್ವಿಕಜೀವರೊಡನೆ ತಾನು ಮುಕ್ತನಾಗುವ ಕಾಲದಲ್ಲಿಯೇ, ತಾವೂ ತಮಸ್ಸನ್ನು ಪ್ರವೇಶಿಸುತ್ತಾರೆ.

ಅನುವರ್ತಂತೇ-ಅನುವರ್ತಿಸುತ್ತಾರೆ (ಆತನಿಂದ ನಿಯಮ್ಯರಾಗಿರುತ್ತಾರೆ); ತೇಷಾಂ-ಆ ಸಮಸ್ತರ, ಶಾಸ್ತಾ-ನಿಯಾಮಕನು, ಸಃ ಏವ-ಆತನೇ (ಹಿಂದೆ ಮುಕ್ತರಾದ ಬ್ರಹ್ಮರಲ್ಲ) ಹಿ-ಎಂಬುದು ಶ್ರುತಿಸಿದ್ಧವು.

**ಅನಾದಿಕಾಲತಸ್ತ್ವೇವಂ ಮುಕ್ತಾ ಮೋಕ್ಷ್ಯಂತಿ ಚಾಪರೇ ।**
**ತೈರ್ಭವೇನ್ನಾತ್ರ ಸಂಬಂಧಸ್ತಥಾ ವಿರಲತಾಪಿ ನ ॥ ೨೩ ॥**
**ಅತೋ ವಿಲಕ್ಷಣಂ ಪ್ರೋಕ್ತಂ ಮುಕ್ತಧಾಮ ಚತುಷ್ಟಯಂ ।**

ಅಪರೇ-ಅನ್ಯಜೀವರೂ, ಏವಂ-ಹೀಗೆಯೇ (ತಂತಮ್ಮ ಭೂತಭವಿಷ್ಯತ್ಕಾಲಗಳ ಬ್ರಹ್ಮರೊಂದಿಗೆ), ಅನಾದಿಕಾಲತಃ-ಅನಾದಿಕಾಲದಿಂದಲೂ, ಮೋಕ್ಷ್ಯಂತಿ-(ಸಂಸಾರದಿಂದ) ಬಿಡುಗಡೆಯನ್ನು ಹೊಂದುತ್ತಾರೆ; ಮುಕ್ತಾಃ ಚ-ಮುಕ್ತರಾಗಿ ಸ್ವಸ್ಥಾನಗಳನ್ನು ಹೊಂದುತ್ತಾರೆ; ತೈಃ-ಆ ಮುಕ್ತಜೀವರಿಂದ, ಅತ್ರ-ಈ ಮುಕ್ತಲೋಕಗಳಲ್ಲಿ ಸಂಬಂಧಃ-ಸಂಬಂಧವು (ಸೇರುವಿಕೆಯಿಂದ ನಿಬಿಡತ್ವವೂ-ಪ್ರಜಾಸಾಂದ್ರತೆಯೂ),

---

ವರ್ತಿಸುತ್ತಾರೆ—ತಾಮಸರು ನಿಯಮ್ಯರಾಗಿ ದುಃಖಾನುಭವಗಳನ್ನು ಹೊಂದುತ್ತಾರೆಂದರ್ಥ); ಆ ಬ್ರಹ್ಮನೇ ಆ ಎಲ್ಲರ ನಿಯಾಮಕನು (ಪೂರ್ವಕಲ್ಪಗಳಲ್ಲಿ ಮುಕ್ತರಾದ ಬ್ರಹ್ಮರಲ್ಲ) (೨೧-೨೨). ಹೀಗೆಯೇ, ಅನಾದಿಕಾಲದಿಂದ, ಅಸಂಖ್ಯ ಜೀವರು ತಂತಮ್ಮ ಹಿಂದೆ ಮುಂದಿನ, ಭೂತಭವಿಷ್ಯತ್ಕಾಲದ ಬ್ರಹ್ಮರೊಡನೆ ಸಂಸಾರದಿಂದ ಮುಕ್ತರಾಗಿ, ಮುಕ್ತಲೋಕಗಳನ್ನು ಪ್ರವೇಶಿಸುತ್ತಾರೆ; ಹೀಗೆ ಪ್ರವೇಶಿಸಿ ವಾಸ ಮಾಡುವುದರಿಂದ ಈ ಲೋಕಗಳಲ್ಲಿ ಪ್ರಜಾನಿಬಿಡತೆಯಾಗಲಿ, ವಿರಳತೆಯಾಗಲಿ ಉಂಟಾಗುವುದಿಲ್ಲ[1] (ಎಲ್ಲರೂ ಗೃಹೋದ್ಯಾನಾದಿ ವಿಶಾಲ ವಿಹಾರಸ್ಥಾನಗಳುಳ್ಳವರೇ

---

1. 'ಈತೋ ದೇಶಶ್ಚ ಕಾಲಶ್ಚ ಸ್ವಗತಾ ಏತ ಸರ್ವದಾ । ಈಶಾಧೀನೌ ಚ ತೌ ನಿತ್ಯಂ ತದಾಧಾರೌ ಚ ತದ್ಗತೌ॥' (ಸ.ರ.ಮಾ); ಇದರ ಭಾವಾರ್ಥ:—ಈಶ, ದೇಶ, ಕಾಲಗಳು ಸ್ವಗತವಾದುವುಗಳು (ಭಗವದಿತರಾಶ್ರಯವಿಲ್ಲದುವು); ದೇಶಕಾಲಗಳು ನಿತ್ಯ ಮತ್ತು ಸ್ವಗತಗಳಾದರೂ, ಈಶಾಧೀನಗಳು—ಸ್ವತಂತ್ರಗಳಲ್ಲ; ಶ್ರೀಹರಿಯ ಅಧೀನಗಳು; ದೇಶಕಾಲಗಳ ಸ್ವಭಾವ ಧರ್ಮಗಳೂ ಶ್ರೀಹರೀಚ್ಛಾಧೀನಗಳೇ ಆಗಿವೆ. ಕಾಲವ್ಯವಸ್ಥೆಗೆ ನಿಮಿತ್ತ ಕಾರಣಗಳಾದ, ಸೂರ್ಯಾದಿಗಳ ಗತಿ, ಜಗತ್ತಿನ ಸೃಷ್ಟ್ಯಾದಿ ಕ್ರಿಯೆಗಳೂ ಶ್ರೀಹರಿಯ ಇಚ್ಛಾಧೀನಗಳೇ. ಶ್ರೀಕೃಷ್ಣನು, ದೇಶಕಾಲಗಳು ತನ್ನ ಅಧೀನಗಳೆಂಬುದನ್ನು, ಅಲ್ಪಪ್ರದೇಶದಲ್ಲಿ ನೂರಾರು ಯೋಜನದ ಮಣಿಪರ್ವತಗಳನ್ನು ಸ್ಥಾಪಿಸಿಯೂ, ೧೨ ವರ್ಷಗಳಲ್ಲಿ ಆಚರಿಸಬೇಕಾದ ವ್ರತವನ್ನು ಒಂದು ದಿನದಲ್ಲಿ ಪೂರ್ತಿಗೊಳಿಸಿಯೂ, ನಿದರ್ಶನ ಮಾಡಿದ್ದಾನೆ. ಅಣುಪ್ರದೇಶದಲ್ಲಿ ಬ್ರಹ್ಮಾಂಡವನ್ನೇ ಇಡಬಲ್ಲನು; ಗ್ರಹಗಳನ್ನು ಸ್ವೇಚ್ಛಾನುಸಾರ ಸುತ್ತಿಸಲು ಸಮರ್ಥನು. ಶ್ರೀಕೃಷ್ಣಭಕ್ತನಾದ ವಿಶ್ವಕರ್ಮನು ನಿರ್ಮಿಸಿದ ಸಭೆಯಲ್ಲಿ ರಾಜಸೂಯಯಾಗಕ್ಕಾಗಿ ಪಾಂಡವರು ಸಂಪಾದಿಸಿದ ಅಖಂಡ ದ್ರವ್ಯರಾಶಿಯು, ಸಭೆಯ ಅಲ್ಪಸ್ಥಲದಲ್ಲಿ ಅಂತರ್ಗತವಾಯಿತು; ಶ್ರೀಕೃಷ್ಣನ ಈ ಸಂಬಂಧರ ಮಹಿಮೆಯನ್ನು ಹೇಳಲು ಯಾರಿಂದ ಸಾಧ್ಯವಾದೀತು?

ನ ಭವೇತ್-ಉಂಟಾಗುವುದಿಲ್ಲ; ತಥಾ-ಹಾಗೂ, ವಿರಲತಾ ಅಪಿ-ವಿರಳತ್ವವು (ನಿರ್ಜನತ್ವವೂ-ಅಲ್ಪಸಂಖ್ಯೆಯ ಪ್ರಜೆಗಳು ಬಹುವಿಸ್ತಾರವಾದ ಪ್ರದೇಶಗಳಲ್ಲಿರುವಿಕೆಯೂ) ನ-ಉಂಟಾಗುವುದಿಲ್ಲ; ಅತಃ-ಈ ಕಾರಣದಿಂದಲೂ, ಮುಕ್ತಧಾಮ ಚತುಷ್ಟಯಂ-(ವೈಕುಂಠಾದಿ ತ್ರಿಧಾಮಗಳು ಮತ್ತು ತಮಸ್ಸುಗಳೆಂಬ) ಮುಕ್ತರು ವಾಸಿಸುವ ನಾಲ್ಕು ಸ್ಥಾನಗಳು, ವಿಲಕ್ಷಣಂ-ಲೋಕ ವಿಲಕ್ಷಣಗಳೆಂದು, ಪ್ರೋಕ್ತಂ-ಹೇಳಲ್ಪಡುತ್ತವೆ.

**ಪ್ರತಿಕೂಲಂ ಸ್ಮೃತಂ ದುಃಖಂ ಅನುಕೂಲಂ ಸುಖಂ ಮತಂ ॥ ೨೪ ॥**

**ಉಭಯೋಃ ಕಾರಣಂ ಕರ್ಮ ಪಾಪಂ ಪುಣ್ಯಂ ತ್ರಿಧಾ ಕ್ರಮಾತ್ ।**

**ದಾಹ್ಯದಾಹಕಭಾವೋಽಸ್ತಿ ಪ್ರಾಬಲ್ಯೇನ ತಯೋರ್ಮಿಥಃ ॥ ೨೫ ॥**

ಪ್ರತಿಕೂಲಂ-ಪ್ರತಿಕೂಲವಾದುದು (ಇಷ್ಟಕ್ಕೆ ವಿರೋಧವಾದುದು), ದುಃಖಂ ಸ್ಮೃತಂ-ದುಃಖವೆಂದು ತಿಳಿಯಲಾಗುತ್ತದೆ; ಅನುಕೂಲಂ-ಅನುಕೂಲವಾದುದು (ಇಷ್ಟಸಾಧಕವಾದ ಅನುಭವವು), ಸುಖಂ ಮತಂ-ಸುಖವೆಂದು ತಿಳಿಯಲ್ಪಡುತ್ತದೆ; ಉಭಯೋಃ-ದುಃಖಸುಖಗಳೆರಡಕ್ಕೂ, ಕರ್ಮ-ಕರ್ಮವು, ಕಾರಣಂ-ಕಾರಣವು; ಪಾಪಂ-ಪಾಪವೂ, ಪುಣ್ಯಂ-ಪುಣ್ಯವೂ, ತ್ರಿಧಾ-(ಈ ಮುಂದೆ ಹೇಳುವಂತೆ, ಪ್ರಾರಬ್ಧಾದಿ ಭೇದದಿಂದ) ಮೂರು ಪ್ರಕಾರವಾಗಿರುತ್ತದೆ; ಕ್ರಮಾತ್-ಕ್ರಮದಿಂದ, (ಪಾಪ ಪುಣ್ಯ ಕ್ರಮದಿಂದ), ತಯೋಃ-ಅವುಗಳ, ಪ್ರಾಬಲ್ಯೇನ-ಪ್ರಾಬಲ್ಯದಿಂದ (ಪ್ರಬಲವಾದುದರಿಂದ ದುರ್ಬಲವಾದುದಕ್ಕೆ), ಮಿಥಃ-ಪರಸ್ಪರವಾಗಿ, ದಾಹ್ಯ ದಾಹಕಭಾವಃ-ದಾಹ್ಯ (ದಹಿಸಲ್ಪಡುವುದು) ದಾಹಕ (ದಹಿಸುವುದು) ಭಾವವು; ಅಸ್ತಿ-ಇರುತ್ತದೆ (ಪಾಪವು ದಾಹ್ಯ, ಪುಣ್ಯವು ದಾಹಕವೆಂಬ

---

ಆಗಿರುವರು—ತ್ರಿಧಾಮಗಳಲ್ಲಿ ತಮಸ್ಸಿನಲ್ಲಿ ಸಹ ವಿಶಾಲವಾದ ನಾನಾ ಯಾತನಾಸ್ಥಾನಗಳು ವಿರಲವಾಗಿಯೇ ಇರುತ್ತವೆಂದು ತಿಳಿಯಬೇಕು); ಈ ಕಾರಣದಿಂದ ಸಹ (ವಿಲಕ್ಷಣ ಭೋಗಮಾತ್ರದಿಂದ ಅಲ್ಲ), ಮುಕ್ತರ ಈ ನಾಲ್ಕು ಧಾಮಗಳು (ತ್ರಿಧಾಮಗಳು ಮತ್ತು ತಮಸ್ಸು) ಲೋಕವಿಲಕ್ಷಣಗಳೆಂದು ಹೇಳಲ್ಪಡುತ್ತವೆ (೨೩). ಇನ್ನು ಸುಖದುಃಖಗಳ ಸ್ವರೂಪವನ್ನೂ, ಅವುಗಳಿಗೆ ಕಾರಣವನ್ನೂ ನಿರೂಪಿಸಲಾಗುತ್ತದೆ; ಇಷ್ಟಕ್ಕೆ ವಿರೋಧವಾದ ಅನುಭವವು ದುಃಖವೆನಿಸುತ್ತದೆ—ಅನುಕೂಲವಾದುದು (ಇಷ್ಟಾನುಸಾರಿಯಾದ ಅನುಭವವು) ಸುಖವೆನಿಸುತ್ತದೆ; ಸುಖದುಃಖಗಳೆರಡಕ್ಕೂ ಅವರವರ ಕರ್ಮವೇ ಕಾರಣವು; ಕರ್ಮವು ಪ್ರಾರಬ್ಧಾದಿ ಭೇದದಿಂದ ತ್ರಿವಿಧವಾದುದು—ಇದನ್ನು ಕ್ರಮವಾಗಿ ಮುಂದೆ ವಿವರಿಸಲಾಗುತ್ತದೆ; ಪಾಪಪುಣ್ಯಗಳಿಗೆ ಪರಸ್ಪರವಾಗಿ ದಾಹ್ಯದಾಹಕಭಾವವಿದೆ; ಅದು ಅವುಗಳ ಪ್ರಾಬಲ್ಯವನ್ನನುಸರಿಸುತ್ತದೆ — ಪ್ರಬಲವಾದುದು (ಪಾಪವೇ ಆಗಲಿ, ಪುಣ್ಯವೇ

ಸಂಬಂಧವಿರುತ್ತದೆ—ಎಂದರೆ, ಪುಣ್ಯವು ಪ್ರಬಲವಾಗಿದ್ದರೆ, ಪಾಪವನ್ನು ನಾಶ ಗೊಳಿಸುತ್ತದೆ).

**ಪುಣ್ಯೇ ಪುಣ್ಯಂ ಸಹಾಯಂ ಸ್ಯಾತ್ಪಾಪೇ ಪಾಪಂ ತಥೈವ ಚ ।**

**ಮಿಥಸ್ತುಲ್ಯಬಲಂ ಯತ್ಸ್ಯಾದ್ವಿರೋಧಿಪ್ರತಿಬಂಧಕಂ ॥ ೨೬ ॥**

ಪುಣ್ಯೇ-ಪುಣ್ಯ ಕರ್ಮಮಾಡುವುದರಲ್ಲಿ ಪುಣ್ಯಂ-(ಪೂರ್ವ) ಪುಣ್ಯವು, ಸಹಾಯಂ ಸ್ಯಾತ್-ಸಹಾಯಮಾಡುತ್ತರೆ (ಸಹಾಯಕವಾಗುತ್ತದೆ); ತಥಾ-ಹಾಗೆಯೇ, ಪಾಪೇ-ಪಾಪಕರ್ಮಾಚರಣೆಯಲ್ಲಿ ಪಾಪಂ ಏವ ಚ-(ಪೂರ್ವ) ಪಾಪವೂ (ಸಹಾಯಕವಾಗುತ್ತದೆ); ಮಿಥಃ-ಪರಸ್ಪರವಾಗಿ, ಯತ್-ಯಾವುದು (ಯಾವಾಗ ಪಾಪಪುಣ್ಯಗಳು), ತುಲ್ಯಬಲಂ ಸ್ಯಾತ್-ಸಮಾನಬಲವುಳ್ಳವಾದರೆ, ವಿರೋಧಿ ಪ್ರತಿ ಬಂಧಕಂ-ತನಗೆ ವಿರೋಧವಾದ ಕರ್ಮವನ್ನು ಪ್ರತಿಬಂಧಿಸುತ್ತದೆ (ಆಚರಿಸದಂತೆ ತಡೆಯುತ್ತದೆ); (ಕ್ರಿಯಮಾಣವಾದ-ಈಗ ಮಾಡಲಿರುವ, ಪುಣ್ಯವೂ, ಪ್ರಾರಬ್ಧವಾಗಿ ರುವ ಪೂರ್ವಪಾಪವೂ ಸಮಬಲರವುಗಳಾಗಿದ್ದರೆ, ನೂತನ ಪಾಪಾಚರಣೆಯನ್ನು ತಡೆಗಟ್ಟುತ್ತದೆ—ಹೀಗೆಯೇ ಕ್ರಿಯಮಾಣಪಾಪವೂ, ಪ್ರಾರಬ್ಧ ಪೂರ್ವ ಪುಣ್ಯವೂ ಸಮಬಲದವುಗಳಾಗಿದ್ದರೆ, ನೂತನ ಪುಣ್ಯಾಚರಣೆಯನ್ನು ನಿರೋಧಿಸುತ್ತದೆ).

**ದೇವತಾರಾಧನಂ ತೀರ್ಥಯಾತ್ರಾಸ್ವಸ್ತ್ಯಯನಾದಿಕಂ ।**

**ವಿಪ್ರಾಶಿಷೋಽಪಿ ಪ್ರಾರಬ್ಧಪುಣ್ಯಾನುಗ್ರಾಹಕಾ ಮತಾಃ ॥ ೨೭ ॥**

ದೇವತಾರಾಧನಂ-ದೇವಪೂಜೆಯೂ, ತೀರ್ಥಯಾತ್ರಾಸ್ವಸ್ತ್ಯಯನಾದಿಕಂ-ತೀರ್ಥಯಾತ್ರೆಯೂ, ಮಂಗಲವಾಚನವೂ (ಶುಭಾಶ್ರಯವೂ), ಈ ಮೊದಲಾದುದೂ, ಅಪಿ-ಮತ್ತು ವಿಪ್ರಾಶಿಷಃ-ಬ್ರಾಹ್ಮಣಾಶೀರ್ವಾದಗಳೂ (ಶುಭ ನುಡಿಗಳೂ), ಪ್ರಾರಬ್ಧಪುಣ್ಯಾನುಗ್ರಾಹಕಾಃ-ಪ್ರಾರಬ್ಧ ಪುಣ್ಯವನ್ನು (ಅನುಗ್ರಹಿಸುವವು) ಫಲಪ್ರದವಾಗುವಂತೆ ಮಾಡುವ ನಿಮಿತ್ತಕಾರಣಗಳೆಂದು, ಮತಾಃ-ತಿಳಿಯಲ್ಪಟ್ಟಿವೆ.

---

ಆಗಲಿ) ದುರ್ಬಲವಾದ ಮತ್ತೊಂದನ್ನು ದಹಿಸುತ್ತದೆ (ಅಸಮರ್ಥವನ್ನಾಗಿಸುತ್ತದೆ) (೨೪-೨೫). ಪುಣ್ಯವನ್ನಾಚರಿಸುವುದರಲ್ಲಿ ಆರಬ್ಧವಾಗಲಿರುವ ಪೂರ್ವಪುಣ್ಯವು ಸಹಾಯಕವಾಗುತ್ತದೆ; ಆದರೆ ಯಾವಾಗ ಕ್ರಿಯಾಮಾಣ ಪುಣ್ಯಪಾಪಗಳೂ ಸಹಾಯಕ ಪಾಪಪುಣ್ಯಗಳೂ, ಸಮಬಲವುಳ್ಳವುಗಳಾಗಿರುವುವೋ, ಆಗ ನೂತನವಾದ ಪಾಪಪುಣ್ಯಗಳು (ಸ್ವವಿರುದ್ಧ ಕರ್ಮಗಳು) ಸಂಭವಿಸುವುದಿಲ್ಲ (ಪಾಪಪುಣ್ಯಗಳ ದಾಹ್ಯದಾಹಕ ಭಾವವನ್ನು ಈ ವಿಶೇಷದೊಂದಿಗೆ ಗ್ರಹಿಸಬೇಕು) (೨೬). ದೇವರಾರಾಧನೆ, ತೀರ್ಥಯಾತ್ರೆ, ಸ್ವಸ್ತಿವಾಚನ, ಬ್ರಾಹ್ಮಣಾಶೀರ್ವಾದಗಳು, ಆಗ ಆರಬ್ಧವಾಗಲಿರುವ ಪುಣ್ಯಕರ್ಮವು ಶೀಘ್ರವಾಗಿ ಫಲಪ್ರದವಾಗುವಂತೆ ಮಾಡುವ ನಿಮಿತ್ತಗಳಾಗುತ್ತವೆಂದು ಜ್ಞಾನಿಗಳು ತಿಳಿಯುತ್ತಾರೆ (೨೭). ಮಾಡಲ್ಪಡಬೇಕಾದ

(ಕ್ರಿಯಮಾಣವಾದ ಕರ್ಮಾರಂಭಕ್ಕೆ ಮೊದಲು, ತೀರ್ಥಯಾತ್ರೆ, ದೇವತಾರಾಧನೆ, ಸ್ವಸ್ತಿವಾಚನ ಮತ್ತು ಬ್ರಾಹ್ಮಣಾಶೀರ್ವಚನಗಳನ್ನು ಪಡೆಯಬೇಕಾದುದರ ಅವಶ್ಯಕತೆಯೂ ಸೂಚಿತವಾಯಿತೆಂದು ತಿಳಿಯಬೇಕು.)

**ಪ್ರಾರಬ್ಧಪಾಪಪ್ರಾಬಲ್ಯೇ ಜನ್ಮಾಂತರಫಲಪ್ರದಾಃ ।**
**ದೇವಬ್ರಾಹ್ಮಣವಿದ್ವೇಷಃ ಪಾಪಾಚಾರಾ ಹ್ಯನೇಕಶಃ ॥ ೨೮ ॥**
**ಏವಂ ನ್ಯಾಯೇನ ವಿಜ್ಞೇಯಃ ಫಲದಾ ನಾನ್ಯಥಾ ಕ್ವಚಿತ್ ।**
**ಕ್ರಿಯಮಾಣಾನ್ಮಹಾಪುಣ್ಯಾತ್ ಪ್ರಾರಬ್ಧಂ ಪ್ರಬಲಂ ಭವೇತ್ ॥ ೨೯ ॥**
**ತಥಾ ಪಾಪಂ ಕ್ರಿಯಮಾಣಾತ್ ಪ್ರಾರಬ್ಧಂ ಪ್ರಬಲಂ ಮತಂ ।**
**ಸಂಚಿತಂ ಕ್ರಿಯಮಾಣಂ ಚ ಪ್ರಾರಬ್ಧೇನಾಭಿಭೂಯತೇ ॥ ೩೦ ॥**

ಪ್ರಾರಬ್ಧಪಾಪಪ್ರಾಬಲ್ಯೇ-(ಕ್ರಿಯಮಾಣ ಪುಣ್ಯಕ್ಕಿಂತ) ಪ್ರಾರಬ್ಧಪಾಪವು ಪ್ರಬಲವಾಗಿದ್ದರೆ, ಜನ್ಮಾಂತರ ಫಲಪ್ರದಾಃ-(ವಿಪ್ರಾಶಿಷಾದಿಗಳು) ಬೇರೆ ಜನ್ಮದಲ್ಲಿ ತಮ್ಮ ಫಲಗಳನ್ನು ಕೊಡುತ್ತವೆ; ದೇವ ಬ್ರಾಹ್ಮಣವಿದ್ವೇಷಃ-ದೇವ ಬ್ರಾಹ್ಮಣ ವಿದ್ವೇಷವೂ, ಅನೇಕಶಃ-ಸರ್ವವಿಧದ, ಪಾಪಾಚಾರಾಃ-(ತತ್ಸಮಾನ) ಪಾಪಾಚರಣೆಗಳೇ (ಇವು-ಪ್ರಬಲ ಪ್ರಾರಬ್ಧಗಳೆಂಬುವು); ಏವಂ ನ್ಯಾಯೇನ-ಈ ನಿಯಮಾನುಸಾರವಾಗಿಯೇ, ಫಲದಾಃ-ಫಲಪ್ರದಗಳೆಂದು, ವಿಜ್ಞೇಯಃ-ತಿಳಿಯತಕ್ಕದ್ದು; ಕ್ವಚಿತ್-ಸ್ವಲ್ಪವೂ, ಅನ್ಯಥಾ ನ-ಬೇರೆ ವಿಧದಿಂದಲ್ಲ; ಕ್ರಿಯಮಾಣಾತ್-ಈಗ ಮಾಡಲಿರುವ, ಮಹಾಪುಣ್ಯಾತ್-ಮಹಾಪುಣ್ಯಕ್ಕಿಂತಲೂ, ಪ್ರಾರಬ್ಧಂ-ಪ್ರಾರಬ್ಧ ಕರ್ಮವು, ಪ್ರಬಲಂ-ಬಲಿಷ್ಠವಾದುದು, ಭವೇತ್-ಆಗುತ್ತದೆ; ತಥಾ-ಹಾಗೆಯೇ, ಕ್ರಿಯಮಾಣಾತ್-ಈಗ ಮಾಡಲಿರುವ ಕರ್ಮಕ್ಕಿಂತ, ಪ್ರಾರಬ್ಧಂ ಪಾಪಂ-ಪ್ರಾರಬ್ಧವಾದ ಪಾಪವು, ಪ್ರಬಲಂ - ಪ್ರಬಲವಾದುದೆಂದು, ಮತಂ - ತಿಳಿಯಲ್ಪಡುತ್ತದೆ; ಸಂಚಿತಂ -

---

ಪುಣ್ಯಕರ್ಮಕ್ಕಿಂತ, ಪ್ರಾರಬ್ಧ ಪಾಪವು ಪ್ರಬಲವಾಗಿದ್ದರೆ, ಆ ಕ್ರಿಯಮಾಣ ಕರ್ಮವು ಸಂಘಟಿಸದಿರಬಹುದು; ಆಗ ಸ್ವಸ್ತಿವಾಚನವಿಪ್ರಾಶೀರ್ವಾದಾದಿಗಳು ವ್ಯರ್ಥವಾಗುವುದಿಲ್ಲ ಪರಂತು, ಜನ್ಮಾಂತರದಲ್ಲಿ ಫಲಪ್ರದಗಳಾಗುತ್ತವೆ; ಈ ರೀತಿಯಲ್ಲಿ ಪುಣ್ಯಕರ್ಮದ ಹಾನಿಯನ್ನುಂಟುಮಾಡುವ ಪ್ರಬಲ ಪ್ರಾರಬ್ಧ ಪಾಪಗಳೆಂದರೆ, ದೇವ ಬ್ರಾಹ್ಮಣ ಪ್ರದ್ವೇಷ ಮತ್ತು ತತ್ಸದೃಶಪೂರ್ವ ಪಾಪಾಚಾರಗಳೆಂದು ತಿಳಿಯಬೇಕು; ಪ್ರಾರಬ್ಧಕರ್ಮಗಳು, ಈ ಪ್ರಕಾರದ ನಿಯಮಾನುಸಾರ ಫಲ ಕೊಡುತ್ತವೆಂದೂ, ಬೇರೆ ರೀತಿಯಿಂದಲ್ಲವೆಂದೂ ತಿಳಿಯತಕ್ಕದ್ದು; ಈಗ ಮಾಡಲಿಚ್ಛಿಸುವ ಕರ್ಮವು ಮಹಾಪುಣ್ಯರೂಪವಾದುದಾದರೂ, ಪ್ರಾರಬ್ಧ ಕರ್ಮವು ಪ್ರಬಲವಾದ್ದರಿಂದ, ಪ್ರಾರಬ್ಧ ಪಾಪವು ಪ್ರಬಲವಾಗಿದ್ದರೆ, ಅದನ್ನು ಆಗಗೊಡುವುದಿಲ್ಲ (ವಿಘಾತಗೊಳಿಸುತ್ತದೆ); ಪ್ರಾರಬ್ಧ ಕರ್ಮವು, ಸಂಚಿತ ಮತ್ತು ಕ್ರಿಯಮಾಣ ಕರ್ಮಗಳನ್ನು ಅತಿಕ್ರಮಿಸುತ್ತದೆ.

ಸಂಚಿತವೂ, ಕ್ರಿಯಮಾಣಂ ಚ-ಈಗ ಮಾಡುವ ಕರ್ಮಗಳೂ, ಪ್ರಾರಬ್ಧೇನ-ಪ್ರಾರಬ್ಧಕರ್ಮದಿಂದ, ಅಭಿಭೂಯತೇ-ಅತಿಕ್ರಮಿಸಲ್ಪಡುತ್ತವೆ (ಪ್ರಾರಬ್ಧವು, ಅವುಗಳನ್ನು ಮೀರಿದ ಪ್ರಭಾವವುಳ್ಳದ್ದಾಗುತ್ತದೆ).

**ಬಲವತ್ಕ್ರಿಯಮಾಣೇನ ಸಂಚಿತಾನ್ಯಪಿ ಕಾನಿಚಿತ್ ।**
**ನಶ್ಯಂತಿ ಕಾನಿಚಿದ್ಧೀನಬಲಾನಿ ಸ್ಯುಶ್ಚ ಕಾನಿಚಿತ್ ॥ ೩೧ ॥**

ಬಲವತ್ಕ್ರಿಯಮಾಣೇನ-ಪ್ರಬಲವಾದ ಕ್ರಿಯಮಾಣಕರ್ಮದಿಂದ, ಕಾನಿಚಿತ್-ಕೆಲವು, ಸಂಚಿತಾನಿ ಅಪಿ-ಸಂಚಿತಕರ್ಮಗಳೂ ಸಹ, ನಶ್ಯಂತಿ-ನಷ್ಟವಾಗುತ್ತವೆ; ಕಾನಿಚಿತ್-ಮತ್ತೆ ಕೆಲವು, ಕಾನಿಚಿತ್-ಕೆಲವು ಪ್ರಬಲ ಸಂಚಿತಗಳೂ, ಹೀನಬಲಾನಿ-ಬಲಹೀನವಾದವು, ಸ್ಯುಃ-ಆಗುತ್ತವೆ (ತಮ್ಮ ಫಲಪ್ರದಶಕ್ತಿಯಲ್ಲಿ ಹ್ರಾಸ ಹೊಂದುತ್ತವೆ).

**ಉಪದ್ರವೇಣ ಶೂನ್ಯಾನಿ ಯಥಾ ದಾವಾಗ್ನಿನಾ ವನೇ ।**
**ನಶ್ಯೇತ ಪಾಪತಃ ಪುಣ್ಯಂ ಪುಣ್ಯೇನಾಪಿ ಚ ಪಾತಕಂ ॥ ೩೨ ॥**

ಉಪದ್ರವೇಣ-(ಅನ್ಯ ತೊಂದರೆಗಳಿಂದ) ಉಪದ್ರವದಿಂದ, ಶೂನ್ಯಾನಿ-ರಹಿತವಾದ ಕರ್ಮಗಳು, ಪಾಪತಃ-ಪಾಪದಿಂದ, ಪುಣ್ಯಂ-ಪುಣ್ಯವೂ, ಅಪಿ ಚ-ಮತ್ತೂ ಪುಣ್ಯೇನ-ಪುಣ್ಯದಿಂದ, ಪಾತಕಂ-ಪಾಪವೂ, ವನೇ-ಅರಣ್ಯದಲ್ಲಿ ದಾವಾಗ್ನಿನಾ-ಕಾಡ್ಗಿಚ್ಚಿನಿಂದ, ಯಥಾ-ಹೇಗೋ ಹಾಗೆ, ನಶ್ಯೇತ-(ದಹಿಸಲ್ಪಡುತ್ತವೆ) ನಷ್ಟವಾಗುತ್ತವೆ.

**ದುರ್ಬಲಂ ಪ್ರಬಲೇನೈವ ಪ್ರಬಲಂ ನ ವಿನಶ್ಯತಿ ।**
**ಅತಃ ಪುಣ್ಯಂ ಸದಾ ಕಾರ್ಯಂ ಸರ್ವಥೈವೋಪಕಾರಕಂ ॥ ೩೩ ॥**

---

ಅವುಗಳನ್ನು ತಿರಸ್ಕರಿಸುವ (ಒತ್ತಿ ಹಿಡಿಯುವ, ಮೀರುವ) ಪ್ರಭಾವವುಳ್ಳದ್ದಾಗಿರುತ್ತದೆ (೨೯-೩೦). ಪ್ರಾರಬ್ಧಕರ್ಮವು ಹಿಂದೆ ಹೇಳಿದ ರೀತಿಯಲ್ಲಿ ಕ್ರಿಯಮಾಣ ಕರ್ಮಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿರಲು, ಪ್ರಬಲ ಕ್ರಿಯಮಾಣ ಕರ್ಮಗಳಿಂದ ಸಂಚಿತ ಕರ್ಮಗಳ (ರಾಶಿಯಾಗಿ ಕೂಡಿಬಿದ್ದಿರುವ ಕರ್ಮಗಳ) ಮೇಲಾಗುವ ಪರಿಣಾಮವನ್ನು ವಿವರಿಸುತ್ತಾರೆ; ಕ್ರಿಯಮಾಣ ಪುಣ್ಯಕರ್ಮವು ಬಲಿಷ್ಠವಾಗಿದ್ದಾಗ, (ಯಜ್ಞದಾನ ತಪಸ್ಸು ವ್ರತೋಪವಾಸಾದಿ ಪ್ರಬಲ ಪುಣ್ಯದಿಂದ), ಕೆಲವು ಸಂಚಿತ ರಾಶಿಯೊಳಗಿನ ದುರ್ಬಲ ಪಾಪಕರ್ಮಗಳು ನಾಶವಾಗುತ್ತವೆ; ಮತ್ತೆ ಕೆಲವು ಪ್ರಬಲ ಸಂಚಿತಗಳು ಬಲಹೀನವಾಗುತ್ತವೆ (೩೧). ಕಾಡ್ಗಿಚ್ಚು ದಹಿಸುವ ತನ್ನ ಕಾರ್ಯವನ್ನು ಸಾಧಿಸಲು ಪ್ರಬಲಪ್ರತಿಬಂಧಕ ಕಾರಣಗಳಿಲ್ಲದಿದ್ದರೆ, ವನವನ್ನೇ ದಹಿಸುವಂತೆ, ಅನ್ಯಉಪದ್ರವಕಾರಕ ಸಂದರ್ಭಗಳಿಲ್ಲದಿದ್ದರೆ ಪಾಪದಿಂದ ಪುಣ್ಯವೂ, ಪುಣ್ಯದಿಂದ ಪಾಪವೂ, ನಷ್ಟವಾಗುತ್ತದೆಂದು (ದಹಿಸಲ್ಪಡುವುದೆಂದು) ತಿಳಿಯಬೇಕು (೩೨).

(ಕ್ರಿಯಮಾಣವಾದ ಕರ್ಮಾರಂಭಕ್ಕೆ ಮೊದಲು, ತೀರ್ಥಯಾತ್ರೆ, ದೇವತಾರಾಧನೆ, ಸ್ವಸ್ತಿವಾಚನ ಮತ್ತು ಬ್ರಾಹ್ಮಣಾಶೀರ್ವಚನಗಳನ್ನು ಪಡೆಯಬೇಕಾದುದರ ಅವಶ್ಯಕತೆಯೂ ಸೂಚಿತವಾಯಿತೆಂದು ತಿಳಿಯಬೇಕು.)

**ಪ್ರಾರಬ್ಧಪಾಪಪ್ರಾಬಲ್ಯೇ ಜನ್ಮಾಂತರಫಲಪ್ರದಾಃ ।**
**ದೇವಬ್ರಾಹ್ಮಣವಿದ್ವೇಷಃ ಪಾಪಾಚಾರಾ ಹ್ಯನೇಕಶಃ ॥ ೨೮ ॥**
**ಏವಂ ನ್ಯಾಯೇನ ವಿಜ್ಞೇಯಃ ಫಲದಾ ನಾನ್ಯಥಾ ಕ್ವಚಿತ್ ।**
**ಕ್ರಿಯಮಾಣಾನ್ಮಹಾಪುಣ್ಯಾತ್ ಪ್ರಾರಬ್ಧಂ ಪ್ರಬಲಂ ಭವೇತ್ ॥ ೨೯ ॥**
**ತಥಾ ಪಾಪಂ ಕ್ರಿಯಮಾಣಾತ್ ಪ್ರಾರಬ್ಧಂ ಪ್ರಬಲಂ ಮತಂ ।**
**ಸಂಚಿತಂ ಕ್ರಿಯಮಾಣಂ ಚ ಪ್ರಾರಬ್ಧೇನಾಭಿಭೂಯತೇ ॥ ೩೦ ॥**

ಪ್ರಾರಬ್ಧಪಾಪಪ್ರಾಬಲ್ಯೇ-(ಕ್ರಿಯಮಾಣ ಪುಣ್ಯಕ್ಕಿಂತ) ಪ್ರಾರಬ್ಧಪಾಪವು ಪ್ರಬಲವಾಗಿದ್ದರೆ, ಜನ್ಮಾಂತರ ಫಲಪ್ರದಾಃ-(ವಿಪ್ರಾಶಿಷಾದಿಗಳು) ಬೇರೆ ಜನ್ಮದಲ್ಲಿ ತಮ್ಮ ಫಲಗಳನ್ನು ಕೊಡುತ್ತವೆ; ದೇವ ಬ್ರಾಹ್ಮಣವಿದ್ವೇಷಃ-ದೇವ ಬ್ರಾಹ್ಮಣ ವಿದ್ವೇಷವೂ, ಅನೇಕಶಃ-ಸರ್ವವಿಧದ, ಪಾಪಾಚಾರಾಃ-(ತತ್ಸಮಾನ) ಪಾಪಾಚರಣೆಗಳೇ (ಇವು-ಪ್ರಬಲ ಪ್ರಾರಬ್ಧಗಳೆಂಬುವು); ಏವಂ ನ್ಯಾಯೇನ-ಈ ನಿಯಮಾನುಸಾರವಾಗಿಯೇ, ಫಲದಾಃ-ಫಲಪ್ರದಗಳೆಂದು, ವಿಜ್ಞೇಯಃ-ತಿಳಿಯತಕ್ಕದ್ದು; ಕ್ವಚಿತ್-ಸ್ವಲ್ಪವೂ, ಅನ್ಯಥಾ ನ-ಬೇರೆ ವಿಧದಿಂದಲ್ಲ; ಕ್ರಿಯಮಾಣಾತ್-ಈಗ ಮಾಡಲಿರುವ, ಮಹಾಪುಣ್ಯಾತ್-ಮಹಾಪುಣ್ಯಕ್ಕಿಂತಲೂ, ಪ್ರಾರಬ್ಧಂ-ಪ್ರಾರಬ್ಧ ಕರ್ಮವು, ಪ್ರಬಲಂ-ಬಲಿಷ್ಠವಾದುದು, ಭವೇತ್-ಆಗುತ್ತದೆ; ತಥಾ-ಹಾಗೆಯೇ, ಕ್ರಿಯಮಾಣಾತ್-ಈಗ ಮಾಡಲಿರುವ ಕರ್ಮಕ್ಕಿಂತ, ಪ್ರಾರಬ್ಧಂ ಪಾಪಂ-ಪ್ರಾರಬ್ಧವಾದ ಪಾಪವು, ಪ್ರಬಲಂ - ಪ್ರಬಲವಾದುದೆಂದು, ಮತಂ - ತಿಳಿಯಲ್ಪಡುತ್ತದೆ; ಸಂಚಿತಂ -

---

ಪುಣ್ಯಕರ್ಮಕ್ಕಿಂತ, ಪ್ರಾರಬ್ಧ ಪಾಪವು ಪ್ರಬಲವಾಗಿದ್ದರೆ, ಆ ಕ್ರಿಯಮಾಣ ಕರ್ಮವು ಸಂಘಟಿಸದಿರಬಹುದು; ಆಗ ಸ್ವಸ್ತಿವಾಚನವಿಪ್ರಾಶೀರ್ವಾದಾದಿಗಳು ವ್ಯರ್ಥವಾಗುವುದಿಲ್ಲ; ಪರಂತು, ಜನ್ಮಾಂತರದಲ್ಲಿ ಫಲಪ್ರದಗಳಾಗುತ್ತವೆ; ಈ ರೀತಿಯಲ್ಲಿ ಪುಣ್ಯಕರ್ಮದ ಹಾನಿಯನ್ನುಂಟುಮಾಡುವ ಪ್ರಬಲ ಪ್ರಾರಬ್ಧ ಪಾಪಗಳೆಂದರೆ, ದೇವ ಬ್ರಾಹ್ಮಣ ಪ್ರದ್ವೇಷ ಮತ್ತು ತತ್ಸದೃಶಪೂರ್ವ ಪಾಪಾಚಾರಗಳೆಂದು ತಿಳಿಯಬೇಕು; ಪ್ರಾರಬ್ಧಕರ್ಮಗಳು, ಈ ಪ್ರಕಾರದ ನಿಯಮಾನುಸಾರ ಫಲ ಕೊಡುತ್ತವೆಂದೂ, ಬೇರೆ ರೀತಿಯಿಂದಲ್ಲವೆಂದೂ ತಿಳಿಯತಕ್ಕದ್ದು; ಈಗ ಮಾಡಲೆಣಿಸಿರುವ ಕರ್ಮವು ಮಹಾಪುಣ್ಯರೂಪವಾದುದಾದರೂ, ಪ್ರಾರಬ್ಧ ಕರ್ಮವು ಪ್ರಬಲವಾದ್ದರಿಂದ, ಪ್ರಾರಬ್ಧ ಪಾಪವು ಪ್ರಬಲವಾಗಿದ್ದರೆ, ಅದನ್ನು ಆಗಗೊಡುವುದಿಲ್ಲ (ವಿಘಾತಗೊಳಿಸುತ್ತದೆ); ಪ್ರಾರಬ್ಧ ಕರ್ಮವು, ಸಂಚಿತ ಮತ್ತು ಕ್ರಿಯಮಾಣ ಕರ್ಮಗಳನ್ನು ಅತಿಕ್ರಮಿಸುತ್ತದೆ,

ಸಂಚಿತವೂ, ಕ್ರಿಯಮಾಣಂ ಚ-ಈಗ ಮಾಡುವ ಕರ್ಮಗಳೂ, ಪ್ರಾರಬ್ಧೇನ-ಪ್ರಾರಬ್ಧಕರ್ಮದಿಂದ, ಅಭಿಭೂಯತೇ-ಅತಿಕ್ರಮಿಸಲ್ಪಡುತ್ತವೆ (ಪ್ರಾರಬ್ಧವು, ಅವುಗಳನ್ನು ಮೀರಿದ ಪ್ರಭಾವವುಳ್ಳದ್ದಾಗುತ್ತದೆ).

**ಬಲವತ್ಕ್ರಿಯಮಾಣೇನ ಸಂಚಿತಾನ್ಯಪಿ ಕಾನಿಚಿತ್ ।**

**ನಶ್ಯಂತಿ ಕಾನಿಚಿದ್ಧೀನಬಲಾನಿ ಸ್ಯುಶ್ಚ ಕಾನಿಚಿತ್ ॥ ೩೧ ॥**

ಬಲವತ್ಕ್ರಿಯಮಾಣೇನ-ಪ್ರಬಲವಾದ ಕ್ರಿಯಮಾಣಕರ್ಮದಿಂದ, ಕಾನಿಚಿತ್-ಕೆಲವು, ಸಂಚಿತಾನಿ ಅಪಿ-ಸಂಚಿತಕರ್ಮಗಳೂ ಸಹ, ನಶ್ಯಂತಿ-ನಷ್ಟವಾಗುತ್ತವೆ; ಕಾನಿಚಿತ್-ಮತ್ತೆ ಕೆಲವು, ಕಾನಿಚಿತ್-ಕೆಲವು ಪ್ರಬಲ ಸಂಚಿತಗಳೂ, ಹೀನಬಲಾನಿ-ಬಲಹೀನವಾದವು, ಸ್ಯುಃ-ಆಗುತ್ತವೆ (ತಮ್ಮ ಫಲಪ್ರದಶಕ್ತಿಯಲ್ಲಿ ಹ್ರಾಸ ಹೊಂದುತ್ತವೆ).

**ಉಪದ್ರವೇಣ ಶೂನ್ಯಾನಿ ಯಥಾ ದಾವಾಗ್ನಿನಾ ವನೇ ।**

**ನಶ್ಯೇತ ಪಾಪತಃ ಪುಣ್ಯಂ ಪುಣ್ಯೇನಾಪಿ ಚ ಪಾತಕಂ ॥ ೩೨ ॥**

ಉಪದ್ರವೇಣ-(ಅನ್ಯ ತೊಂದರೆಗಳಿಂದ) ಉಪದ್ರವದಿಂದ, ಶೂನ್ಯಾನಿ-ರಹಿತವಾದ ಕರ್ಮಗಳು, ಪಾಪತಃ-ಪಾಪದಿಂದ, ಪುಣ್ಯಂ-ಪುಣ್ಯವೂ, ಅಪಿ ಚ-ಮತ್ತೂ ಪುಣ್ಯೇನ-ಪುಣ್ಯದಿಂದ, ಪಾತಕಂ-ಪಾಪವೂ, ವನೇ-ಅರಣ್ಯದಲ್ಲಿ ದಾವಾಗ್ನಿನಾ-ಕಾಡ್ಗಿಚ್ಚಿನಿಂದ, ಯಥಾ-ಹೇಗೋ ಹಾಗೆ, ನಶ್ಯೇತ-(ದಹಿಸಲ್ಪಡುತ್ತವೆ) ನಷ್ಟವಾಗುತ್ತವೆ.

**ದುರ್ಬಲಂ ಪ್ರಬಲೇನೈವ ಪ್ರಬಲಂ ನ ವಿನಶ್ಯತಿ ।**

**ಅತಃ ಪುಣ್ಯಂ ಸದಾ ಕಾರ್ಯಂ ಸರ್ವಥೈವೋಪಕಾರಕಂ ॥ ೩೩ ॥**

---

ಅವುಗಳನ್ನು ತಿರಸ್ಕರಿಸುವ (ಒತ್ತಿ ಹಿಡಿಯುವ, ಮೀರುವ) ಪ್ರಭಾವವುಳ್ಳದ್ದಾಗಿರುತ್ತದೆ (೨೮-೩೦). ಪ್ರಾರಬ್ಧ ಕರ್ಮವು ಹಿಂದೆ ಹೇಳಿದ ರೀತಿಯಲ್ಲಿ ಕ್ರಿಯಮಾಣ ಕರ್ಮಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿರಲು, ಪ್ರಬಲ ಕ್ರಿಯಮಾಣ ಕರ್ಮಗಳಿಂದ ಸಂಚಿತ ಕರ್ಮಗಳ (ರಾಶಿಯಾಗಿ ಕೂಡಿಬಿದ್ದಿರುವ ಕರ್ಮಗಳ) ಮೇಲಾಗುವ ಪರಿಣಾಮವನ್ನು ವಿವರಿಸುತ್ತಾರೆ; ಕ್ರಿಯಮಾಣ ಪುಣ್ಯಕರ್ಮವು ಬಲಿಷ್ಠವಾಗಿದ್ದಾಗ, (ಯಜ್ಞದಾನ ತಪಸ್ಸು ವಿಪ್ರತೋಷಣಾದಿ ಪ್ರಬಲ ಪುಣ್ಯದಿಂದ), ಕೆಲವು ಸಂಚಿತ ರಾಶಿಯೊಳಗಿನ ದುರ್ಬಲ ಪಾಪಕರ್ಮಗಳು ನಾಶವಾಗುತ್ತವೆ; ಮತ್ತೆ ಕೆಲವು ಪ್ರಬಲ ಸಂಚಿತಗಳು ಬಲಹೀನವಾಗುತ್ತವೆ (೩೧). ಕಾಡ್ಗಿಚ್ಚು ದಹಿಸುವ ತನ್ನ ಕಾರ್ಯವನ್ನು ಸಾಧಿಸಲು ಪ್ರಬಲಪ್ರತಿಬಂಧಕ ಕಾರಣಗಳಿಲ್ಲದಿದ್ದರೆ, ವನವನ್ನೇ ದಹಿಸುವಂತೆ, ಅನ್ಯಉಪದ್ರವಕಾರಕ ಸಂದರ್ಭಗಳಿಲ್ಲದಿದ್ದರೆ ಪಾಪದಿಂದ ಪುಣ್ಯವೂ, ಪುಣ್ಯದಿಂದ ಪಾಪವೂ, ನಷ್ಟವಾಗುತ್ತದೆಂದು (ದಹಿಸಲ್ಪಡುವುದೆಂದು) ತಿಳಿಯಬೇಕು (೩೨).

**ಪಾಪಂ ಚ ಪರಿಹಾರ್ಯಂ ಸ್ಯಾತ್ಸರ್ವಥೈವಾಪಕಾರಕಂ ।**

**ಕರ್ಮತುಲ್ಯಬಲಂ ಯತ್ಸ್ಯಾದ್ವಿರೋಧಿ ಪ್ರತಿಬಂಧಯೇತ್ ॥ ೩೪ ॥**

**ಹೀನಂ ಹೀನಬಲಂ ಕುರ್ಯಾತ್ ಪ್ರಬಲಂ ನಾಶಯತ್ಯಪಿ ।**

**ಅಥೋ ನ ವ್ಯರ್ಥತಾಂ ಯಾತಿ ಪುಣ್ಯಂ ವಾ ಪಾಪಕರ್ಮ ವಾ ॥ ೩೫ ॥**

ದುರ್ಬಲಂ-ದುರ್ಬಲವಾದುದು (ಪಾಪವು), ಪ್ರಬಲೇನ ಏವ-ಪ್ರಬಲವಾರುದರಿಂದಲೇ (ಪುಣ್ಯದಿಂದಲೇ), (ನಶ್ಯೇತ-ನಾಶವಾಗುವುದು); ಪ್ರಬಲಂ-ಪ್ರಬಲವಾದುದು (ಪಾಪವು), ನ ವಿನಶ್ಯತಿ-ನಷ್ಟಹೊಂದುವುದಿಲ್ಲ ಅತಃ-ಆದ್ದರಿಂದ (ಪುಣ್ಯದಿಂದ ಪಾಪಗಳ ಪರಿಹಾರವು ಹೀಗೆ ಸಂಭವಿಸುವುದರಿಂದ), ಸರ್ವಥಾ-ಸರ್ವವಿಧದಿಂದ, ಉಪಕಾರಕಂ-ಉಪಕಾರವನ್ನೇ ಮಾಡುವ, ಪುಣ್ಯಂ-ಪುಣ್ಯವನ್ನು, ಸದಾ-ಸರ್ವದಾ, ಕಾರ್ಯಂ-ಆಚರಿಸತಕ್ಕದ್ದು; ಸರ್ವಥಾ-ಸರ್ವವಿಧದಿಂದ, ಅಪಕಾರಕಂ ಏವ-ಅಪಕಾರವನ್ನೇ ಮಾಡುವ, ಪಾಪಂ ಚ-ಪಾಪವನ್ನಾದರೋ, ಪರಿಹಾರ್ಯಂ-ಪರಿಹರಿಸಿಕೊಳ್ಳಬೇಕು (ಪಾಪಕರ್ಮತ್ಯಾಗದಿಂದಲೂ, ಪುಣ್ಯಕರ್ಮದ ಆಚರಣೆಯಿಂದಲೂ ಪರಿಹರಿಸಿಕೊಳ್ಳಬೇಕು);

---

ಪುಣ್ಯಪಾಪಗಳು ಸಮಬಲಗಳೆಂದರೆ, ಪುಣ್ಯಫಲವೂ, ಪಾಪಫಲವೂ (ಸುಖದುಃಖಗಳೆರಡೂ) ತೀವ್ರತೆಯಲ್ಲಿ ಔತ್ಕಟ್ಯದಲ್ಲಿ ಸಮವೆಂದರ್ಥ;[1] ಪ್ರಬಲವಾದ ಪುಣ್ಯವು ದುರ್ಬಲವಾದ ಪಾಪವನ್ನು ನಾಶಮಾಡುತ್ತದೆ; ಪ್ರಬಲವಾದ ಪಾಪವು ನಾಶಹೊಂದುವುದಿಲ್ಲ; ಪಾಪಪುಣ್ಯಗಳ ಪರಸ್ಪರ ಪ್ರಭಾವವು ಹೀಗಿರುವುದರಿಂದ, ಸರ್ವವಿಧದಿಂದ ಉಪಕಾರಕವಾದ (ಸುಖಸಾಧಕವಾದ—ಹಿತಸಾಧಕವಾದ) ಪುಣ್ಯಕರ್ಮವನ್ನೇ ಸರ್ವದಾ ಆಚರಿಸಬೇಕು—ಸರ್ವಥಾ ಅಪಕಾರಕವಾದ (ದುಃಖಸಾಧಕವಾದ—ಅಹಿತವನ್ನುಂಟುಮಾಡುವ) ಪಾಪವನ್ನು ಪರಿಹರಿಸಿಕೊಳ್ಳಬೇಕು; ಪಾಪಕರ್ಮತ್ಯಾಗದಿಂದಲೂ, ಪುಣ್ಯಕರ್ಮಾಚರಣೆಯಿಂದಲೂ, ಪಾಪಪರಿಹಾರವನ್ನು ಮಾಡಿಕೊಳ್ಳಬೇಕು; ಪುಣ್ಯಪಾಪಗಳು (ಕ್ರಿಯಮಾಣ ಮತ್ತು ಪ್ರಾರಬ್ಧ ಪುಣ್ಯಪಾಪಗಳು) ಸಮಬಲವಾದವುಗಳಾಗಿದ್ದರೆ, ತಮಗೆ ವಿರುದ್ಧವಾದ ಪುಣ್ಯಪಾಪಗಳನ್ನು ಸಂಭವಿಸದಂತೆ ತಡೆಹಿಡಿಯುತ್ತವೆ; ದುರ್ಬಲ ಪುಣ್ಯವು ಪಾಪಪ್ರಾರಬ್ಧವನ್ನು

---

1. ಪಾಪ ಪುಣ್ಯಗಳು ಎಂದೂ ಸ್ವರೂಪತಃ ಸಮಗಳಾಗುವುದಿಲ್ಲ ಅವು ಸ್ವರೂಪದಿಂದಲೇ ವಿರುದ್ಧವಾದವುಗಳು. ಪುಣ್ಯ ಪಾಪಗಳು ತಂತಮ್ಮಲ್ಲಿ ತಾರತಮ್ಯವುಳ್ಳವಾಗಿರುತ್ತವೆ; ಉದಾ:—ಉಪಪಾತಕ, ಪಾತಕ, ಮಹಾಪಾತಕ, ಸುಮಹತ್‌ಪಾತಕ ಇತ್ಯಾದಿ; ಪುಣ್ಯದಲ್ಲಿ ಸಹ ಹೀಗೆಯೇ ತಾರತಮ್ಯವಿದೆ. (ಸಾಮಾನ್ಯಪುಣ್ಯ, ಮಹಾಪುಣ್ಯ, ಸುಮಹತ್ಪುಣ್ಯ ಇತ್ಯಾದಿ). ಬ್ರಹ್ಮಹತ್ಯಾದಿ (ಸುರಾಪಾನ ಮೊದಲಾದವು) ಮಹಾಪಾತಕಗಳು—ಇವುಗಳ ಪರಿಹಾರಕ್ಕಾಗಿ ಉಕ್ತವಾಗಿರುವ ಪ್ರಾಯಶ್ಚಿತ್ತ ಕರ್ಮಗಳು ಸುಮಹತ್ಪುಣ್ಯ ಕರ್ಮಗಳು—ಇತ್ಯಾದಿಯಾಗಿ ವಿವೇಕಿಸಿ ತಿಳಿಯಬೇಕು.

ಯತ್-ಯಾವ, ಕರ್ಮ-ಕರ್ಮವು, (ಪಾಪವಾಗಲಿ ಪುಣ್ಯವಾಗಲಿ), ತುಲ್ಯಬಲಂ-(ಪ್ರಾರಬ್ಧ ಪುಣ್ಯಪಾಪದ) ಸಮಬಲವುಳ್ಳದ್ದು ಸ್ಯಾತ್-ಆದರೆ, ವಿರೋಧಿ-ತನಗೆ ವಿರೋಧವಾದುದನ್ನು (ಪುಣ್ಯವನ್ನಾಗಲಿ ಪಾಪವನ್ನಾಗಲಿ), ಪ್ರತಿಬಂಧಯೇತ್-ಪ್ರತಿಬಂಧಿಸುತ್ತದೆ (ಸಂಭವಿಸದಂತೆ ಅಡ್ಡಿಪಡಿಸುತ್ತದೆ); ಹೀನಂ-(ಸಮಬಲವಾಗಿರದೆ, ಪ್ರಾರಬ್ಧಕ್ಕಿಂತ) ಹೀನಬಲವುಳ್ಳದ್ದಾದರೆ (ದುರ್ಬಲವಾದರೆ), ಹೀನಬಲಂ-ದುರ್ಬಲಪುಣ್ಯವು (ಕ್ರಿಯಮಾಣ ಪುಣ್ಯವು) ಪ್ರಾರಬ್ಧಪಾಪವನ್ನು ದುರ್ಬಲವಾದುದನ್ನಾಗಿ, ಕುರ್ಯಾತ್-ಮಾಡುತ್ತದೆ; ಪ್ರಬಲಂ-ಪ್ರಬಲಪ್ರಾರಬ್ಧಪಾಪವನ್ನು, ನಾಶಯತ್ಯಪಿ-(ಕ್ರಿಯಮಾಣ ಮಹಾಪುಣ್ಯವು) ನಾಶಮಾಡುತ್ತದೆ, ಅಥೋ-ಆದ್ದರಿಂದ, ಪುಣ್ಯಂ ವಾ-ಪುಣ್ಯವಾಗಲಿ, ಪಾಪಕರ್ಮ ವಾ-ಪಾಪಕರ್ಮವಾಗಲಿ, ವ್ಯರ್ಥತಾಂ-ಪ್ರಯೋಜನಶೂನ್ಯವಾದುದು, ನ ಯಾತಿ-ಆಗುವುದಿಲ್ಲ (ಪ್ರಯೋಜನರಾಹಿತ್ಯವನ್ನು ಹೊಂದುವುದಿಲ್ಲ).

ಅಧಿಕಾರವಶಾತ್ತತ್ರ ಫಲವೈಚಿತ್ರ್ಯಮಶ್ನುತೇ ।
ಸ್ವಾಭಾವಿಕೋ ದೈಹಿಕಶ್ಚ ದೈಶಿಕಃ ಕಾಲಿಕಃ ಸ್ಮೃತಃ ॥ ೩೬ ॥
ಅಧಿಕಾರಶ್ಚತುರ್ಥೋಕ್ತಃ ಫಲಭೇದಪ್ರವರ್ತಕಃ ।

ತತ್ರ-ಈ ಪಾಪಪುಣ್ಯಗಳಲ್ಲಿ ಅಧಿಕಾರವಶಾತ್-ಅಧಿಕಾರವಶದಿಂದ (ಅರ್ಹತೆಗಳ ಪ್ರಭಾವದಿಂದ), ಫಲವೈಚಿತ್ರ್ಯಂ-ಫಲದಲ್ಲಿ ವೈವಿಧ್ಯವು (ತಾರತಮ್ಯವು-ಆಧಿಕ್ಯನ್ಯೂನತೆಗಳು), ಅಶ್ನುತೇ-ಉಂಟಾಗುತ್ತದೆ (ಲಭಿಸುತ್ತದೆ); ಸ್ವಾಭಾವಿಕಃ-ಸ್ವಾಭಾವಿಕವೂ, ಚ-ಮತ್ತು ದೈಹಿಕಃ-ದೈಹಿಕವೂ, ದೈಶಿಕಃ-ದೈಶಿಕವೂ, ಫಲಭೇದಪ್ರವರ್ತಕಃ-ಫಲಭೇದಕ್ಕೆ ಕಾರಣವಾದ, ಅಧಿಕಾರಃ ಸ್ಮೃತಃ-ಅರ್ಹತೆಯೆನಿಸುತ್ತದೆ; ಕಾಲಿಕಃ-ಕಾಲಿಕವು, ಚತುರ್ಥಃ-ನಾಲ್ಕನೆಯದು ಎಂದು, ಪ್ರೋಕ್ತಃ-ಹೇಳಲಾಗುತ್ತದೆ.

ಸಾತ್ತ್ವಿಕಾದಿ ಸ್ವರೂಪತ್ವಂ ಸ ತು ಸ್ವಾಭಾವಿಕಃ ಸ್ಮೃತಃ ॥ ೩೭ ॥
ಸತ್ತ್ವಾಧಿಕ್ಯೇ ಫಲಾಧಿಕ್ಯಂ ಪುಣ್ಯೇ ಸ್ಯಾತ್ಪಾಪಕೇಽನ್ಯಥಾ ।
ತಮೋಧಿಕ್ಯೇ ಫಲಾಧಿಕ್ಯಂ ಪಾಪೇ ಸ್ಯಾತ್ ಸುಕೃತೇಽನ್ಯಥಾ ॥ ೩೮ ॥

---

ದುರ್ಬಲಗೊಳಿಸುತ್ತದೆ; ಮಹಾಪುಣ್ಯವು ಪ್ರಬಲ ಪ್ರಾರಬ್ಧ ಪಾಪವನ್ನು ನಾಶಗೊಳಿಸುತ್ತದೆ; ಆದ್ದರಿಂದ ಪುಣ್ಯಕರ್ಮವಾಗಲಿ, ಪಾಪಕರ್ಮವಾಗಲಿ ವ್ಯರ್ಥವಾಗುವುದಿಲ್ಲ—ಎಲ್ಲ ಕರ್ಮಗಳೂ ಯಥಾಯೋಗ್ಯ ಪ್ರಯೋಜನವುಳ್ಳವುಗಳೇ ಆಗುತ್ತವೆ (೩೩-೩೫). ಕರ್ಮಫಲಗಳಲ್ಲಿ ಅಧಿಕಾರ ವಶದಿಂದ ವೈಚಿತ್ರ್ಯವು (ಬಹುಪ್ರಕಾರದ ಭೇದವು) ಕಂಡುಬರುತ್ತದೆ; ಫಲಭೇದಕ್ಕೆ ಕಾರಣವಾಗುವ ಅಧಿಕಾರವೆಂಬುದು ನಾಲ್ಕು ವಿಧವಾದುದು; ಸ್ವಾಭಾವಿಕ, ದೈಹಿಕ,

**ರಾಜಸೇ ತು ಸಮಂ ಪುಣ್ಯಂ ಪಾಪಂ ಚ ಪರಿಕೀರ್ತಿತಂ ।**

ಸಾತ್ವಿಕಾದಿಸ್ವರೂಪತ್ವಂ-(ಪುಣ್ಯಪಾಪಗಳ) ಸಾತ್ವಿಕಾದಿ ಸ್ವರೂಪತ್ವವು (ಫಲಭೇದಪ್ರವರ್ತಕಃ-ಫಲವ್ಯತ್ಯಾಸಕ್ಕೆ ಕಾರಣವಾಗುತ್ತದೆ); ಸಃ ತು-ಅದೇ, ಸ್ವಾಭಾವಿಕಃ-ಸ್ವಾಭಾವಿಕವಾದ ಅಧಿಕಾರ (ಅರ್ಹತೆ) ಎನಿಸುತ್ತದೆ; ಸತ್ವಾಧಿಕ್ಯೇ-ಅತಿಶಯ ಸಾತ್ವಿಕವಾದ ಕರ್ಮದಲ್ಲಿ ಪುಣ್ಯೇ-(ಅದರಿಂದ ಲಭಿಸುವ) ಪುಣ್ಯದಲ್ಲಿ ಫಲಾಧಿಕ್ಯಂ-ಅಧಿಕವಾದ ಫಲವು, ಸ್ಯಾತ್-ಉಂಟಾಗುತ್ತದೆ; ಪಾಪಕೇ-ಪಾಪ ಕರ್ಮದಲ್ಲಿ ಅನ್ಯಥಾ-ಬೇರೆಯಾಗುತ್ತದೆ (ಅಧಿಕ ಫಲವಿಲ್ಲ); ತಮೋಧಿಕ್ಯೇ-ಅಧಿಕ ತಾಮಸವಾಗಿದ್ದಲ್ಲಿ ಪಾಪೇ-ಪಾಪಕರ್ಮದಲ್ಲಿ ಫಲಾಧಿಕ್ಯಂ-ಅಧಿಕ ಫಲವು, ಸ್ಯಾತ್-ಉಂಟಾಗುತ್ತದೆ; ಸುಕೃತೇ-ಪುಣ್ಯಕರ್ಮದಲ್ಲಿ ಅನ್ಯಥಾ-ಹಾಗಲ್ಲ (ಪುಣ್ಯ ಕರ್ಮವು ತಾಮಸವಾಗಿದ್ದರೆ-ತಾಮಸಪುಣ್ಯಕ್ಕೆ ಅಧಿಕಪುಣ್ಯಫಲ ದೊರೆಯದೇ, ತದ್ವಿರುದ್ಧವಾಗಿ ಫಲಹ್ರಾಸವೇ ಆಗುತ್ತದೆ); ರಾಜಸೇ ತು-ರಾಜಸವಾದ ಕರ್ಮದಲ್ಲಿ

---

ದೈಶಿಕ ಮತ್ತು ಕಾಲಿಕಗಳೆಂಬುವೇ ಇವು (೩೬). ಕರ್ಮದ ಸಾತ್ವಿಕಾದಿ ಸ್ವರೂಪವೇ,[1] ಸ್ವಾಭಾವಿಕ ಅಧಿಕಾರವು (ಫಲಾರ್ಹತೆ); ಸತ್ವಾಧಿಕವಾದ ಪುಣ್ಯಕರ್ಮವು ಫಲಾಧಿಕ್ಯವನ್ನು ದೊರಕಿಸುತ್ತದೆ; ಪಾಪಕರ್ಮದಲ್ಲಿ ಹಾಗಲ್ಲ—ಸಾತ್ವಿಕ ಪಾಪಕ್ಕೆ ಅಧಿಕ ಪಾಪವಿಲ್ಲ; ತಮೋಧಿಕ ಪಾಪಕರ್ಮಕ್ಕೆ ಫಲಾಧಿಕ್ಯವುಂಟು—ಪುಣ್ಯದಲ್ಲಿ ಹಾಗಲ್ಲ (ತಾಮಸ ಪುಣ್ಯಕ್ಕೆ ಅಧಿಕ ಪುಣ್ಯವಿಲ್ಲ); ರಾಜಸಕರ್ಮದಲ್ಲಿ ಪುಣ್ಯಪಾಪಗಳೆರಡಕ್ಕೂ ಸಮವಾದ ಫಲಗಳೇ ಲಭಿಸುತ್ತವೆ; (೩೭-೩೮). ಮೋಕ್ಷವನ್ನು ಸಮೀಪಿಸಿರುವ

---

1. ಸಾತ್ವಿಕಾದಿಭೇದದಿಂದ ಕರ್ಮವು ತ್ರಿವಿಧವಾದುದು. ಶ್ರೀಕೃಷ್ಣನು ಗೀತೆಯಲ್ಲಿ ತ್ರಿವಿಧಕರ್ಮಗಳ ಸ್ವರೂಪವನ್ನು ಹೀಗೆ ನಿರೂಪಿಸಿರುವನು:—'ನಿಯತಂ ಸಂಗರಹಿತಂ ಅರಾಗದ್ವೇಷತಃ ಕೃತಂ ॥ ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ । ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ॥ ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಂ । ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥'—ಇವುಗಳ ಭಾವಾರ್ಥ:—ಸ್ವತಂತ್ರ ಕರ್ತೃತ್ವಾಭಿಮಾನ ರಹಿತವಾದುದೂ, ರಾಗದ್ವೇಷಗಳಿಲ್ಲದುದೂ, ಫಲಾಶೆಯನ್ನು ಬಿಟ್ಟು ಆಚರಿಸಲ್ಪಡುವುದೂ ಆದ ಮೋಕ್ಷಸಾಧಕವಾದ ವರ್ಣಾಶ್ರಮೋಚಿತ (ನಿಯತ) ಕರ್ಮವು, ಸಾತ್ತ್ವಿಕವೆನಿಸುತ್ತದೆ; ಕರ್ತೃತ್ವಾಭಿಮಾನದಿಂದಲೂ, ಫಲೇಚ್ಛೆಯಿಂದಲೂ ಬಹು ಆಯಾಸಪಟ್ಟು ಸಾಧಿಸುವ ಕರ್ಮವು ರಾಜಸವು; ಕರ್ಮಾಂತರಕ್ಕೆ ಕಾರಣವಾಗಿ ತನ್ಮೂಲಕ ಬಂಧಕವಾದುದೂ, ನಾಶ, ಪರಪೀಡೆಗಳನ್ನುಂಟುಮಾಡುವುದೂ, ಸ್ವಸಾಮರ್ಥ್ಯದ ಜ್ಞಾನವಿಲ್ಲದೇ ಮೋಹದಿಂದ (ಮಿಥ್ಯಾಜ್ಞಾನದಿಂದ) ಆರಂಭಿಸಲ್ಪಡುವ ಕರ್ಮವು ತಾಮಸವು. ಈ ಕರ್ಮ ತ್ರೈವಿಧ್ಯವು ಪುನಃ ಪುಣ್ಯ, ಪಾಪ ಭೇದದಿಂದ, ತ್ರಿವಿಧವೆಂದೂ, (ಸಾತ್ತ್ವಿಕಪುಣ್ಯ, ರಾಜಸ ಪುಣ್ಯ, ತಾಮಸಪುಣ್ಯ ಇತ್ಯಾದಿಯಾಗಿ) ಸೂಕ್ಷ್ಮ ಪ್ರಕಾರಭೇದಗಳುಳ್ಳದ್ದಾಗುತ್ತದೆ—ಈ ಗ್ರಂಥದಲ್ಲಿ ಕರ್ಮವಿವೇಕವು, ವಿಸ್ತಾರದಿಂದ ಪ್ರಸಕ್ತವಾಗಿದೆ.

ಪುಣ್ಯಂ-ಪುಣ್ಯಫಲವೂ, ಪಾಪಂ ಚ-ಪಾಪಫಲವೂ, ಸಮಂ-(ಕರ್ಮಕ್ಕೆ) ಸಮವಾದ ಫಲವೆಂದು, ಪರಿಕೀರ್ತಿತಂ-ಹೇಳಲಾಗುತ್ತದೆ.

**ಆಸನ್ನಮೋಕ್ಷಾ ವೃದ್ಧಾ ಸ್ಯುಃ ತರುಣಾ ದೂರಮೋಕ್ಷಿಣಃ ॥ ೩೯ ॥**

**ತತೋ ದೂರಾ ಬಾಲಕಾ ಸ್ಯುಸ್ತದ್ದೂರಾಃ ಶಿಶವಃ ಸ್ಮೃತಾಃ ।**

ಆಸನ್ನಮೋಕ್ಷಾಃ-ಮೋಕ್ಷಕ್ಕೆ ಸಮೀಪವಾಗಿರುವ ಜೀವರು (ಮುಕ್ತರಾಗುವ ಕಾಲವು ಸಮೀಪಿಸಿದ್ದರೆ), ವೃದ್ಧಾಃ-ವೃದ್ಧರು, ಸ್ಯುಃ-(ಎನಿಸುವರು) ಆಗಿರುವರು; ದೂರಮೋಕ್ಷಿಣಃ-ಮೋಕ್ಷವು ಇನ್ನೂ ದೂರದಲ್ಲಿರುವವರು (ಮೋಕ್ಷದಿಂದ ದೂರವಿರುವವರು), ತರುಣಾಃ-ತರುಣರು; ತತಃ-ಅದಕ್ಕಿಂತಲೂ (ತರುಣವರ್ಗಕ್ಕಿಂತಲೂ), ದೂರಾಃ-ದೂರವಿರುವವರು, ಬಾಲಕಾಃ ಸ್ಯುಃ-ಬಾಲಕರೆನಿಸುವರು; ತದ್ದೂರಾಃ-ಅದಕ್ಕೂ ದೂರದಲ್ಲಿರುವವರು, ಶಿಶವಃ-ಶಿಶುಗಳೆಂದು, ಸ್ಮೃತಾಃ-ಹೇಳಲ್ಪಡುವರು.

**ಪುಣ್ಯವೃದ್ಧಿಸ್ತು ವೃದ್ಧಾನಾಂ ಸಾತ್ವಿಕಾನಾಂ ಪ್ರಜಾಯತೇ ॥ ೪೦ ॥**

**ಪಾಪವೃದ್ಧಿಸ್ತು ವೃದ್ಧಾನಾಂ ತಾಮಸಾನಾಂ ಪ್ರಜಾಯತೇ ।**

**ತದನ್ಯೇಷಾಂ ಫಲೇ ಹ್ರಾಸೋ ವಿಘ್ನಶ್ಚಾಪಿ ಕ್ರಮಾದ್ಭವೇತ್ ॥ ೪೧ ॥**

ಸಾತ್ವಿಕಾನಾಂ-ಸಾತ್ವಿಕರಾದ (ಮುಕ್ತಿಯೋಗ್ಯರಾದ), ವೃದ್ಧಾನಾಂ-ವೃದ್ಧರಿಗೆ, ಪುಣ್ಯವೃದ್ಧಿಃ-ಪುಣ್ಯದ ವೃದ್ಧಿಯು, ಪ್ರಜಾಯತೇ ತು-ತಪ್ಪದೇ ಉಂಟಾಗುತ್ತದೆ; ತಾಮಸಾನಾಂ-ತಾಮಸರಾದ (ತಮೋಯೋಗ್ಯರಾದ), ವೃದ್ಧಾನಾಂ-ವೃದ್ಧರಿಗೆ, ಪಾಪವೃದ್ಧಿಃ-ಪಾಪದ ವೃದ್ಧಿಯು, ಪ್ರಜಾಯತೇ ತು (ಏವ)-ತಪ್ಪದೇ ಉಂಟಾಗುತ್ತದೆ; ತದನ್ಯೇಷಾಂ-ಇವರಿಂದ ಭಿನ್ನರಾದವರಿಗೆ (ತರುಣರೇ ಮೊದಲಾದವರಿಗೆ), ಫಲೇ-ಪುಣ್ಯಫಲದಲ್ಲಿ, ಹ್ರಾಸಃ-ಕೊರತೆಯೂ (ಅಲ್ಪತ್ವವೂ), ವಿಘ್ನಶ್ಚ-

---

ಜೀವರು, ವೃದ್ಧರು; ದೂರದಲ್ಲಿರುವವರು ತರುಣರು; ಇನ್ನೂ ಹೆಚ್ಚು ದೂರದಲ್ಲಿರುವವರು ಬಾಲಕರು; ಅತಿ ದೂರದಲ್ಲಿರುವವರು ಶಿಶುಗಳು (೩೯). ಸಾತ್ವಿಕ (ಮುಕ್ತಿಯೋಗ್ಯ) ವೃದ್ಧರಿಗೆ, ನಿಷ್ಕಾಮ ಪುಣ್ಯಕರ್ಮಕ್ಕೆ ಅಧಿಕ ಫಲವು ದೊರೆಯುತ್ತದೆ; ಹಾಗೆಯೇ ತಾಮಸ (ತಮೋಯೋಗ್ಯ) ವೃದ್ಧರಿಗೆ (ತಮಸ್ಸನ್ನು ಪ್ರವೇಶಿಸುವ ಕಾಲ—ಅವರ ಮೋಕ್ಷಕಾಲ ಸಮೀಪವಾಗಿರುವವರಿಗೆ) ಪಾಪಕರ್ಮದಿಂದ (ತಮಸ್ಸಾಧಕ ಪಾಪದಿಂದ) ಅಧಿಕ ಫಲ ದೊರೆಯುತ್ತದೆ (ಫಲದಲ್ಲಿ ವೃದ್ಧಿಯಾಗುತ್ತದೆ); ಇವರಿಂದ ಭಿನ್ನರಾದ ತರುಣ, ಬಾಲಕಾದಿಗಳಿಗೆ, ಕ್ರಮದಿಂದ (ವಯೋನುಗುಣವಾಗಿ) ಪುಣ್ಯಪಾಪಕರ್ಮಗಳ ಫಲಗಳಲ್ಲಿ ಹ್ರಾಸವೂ, ಮೋಕ್ಷೋಪಯೋಗಿಯಾದ, ಅವರವರ ಕರ್ಮಾಚರಣೆಯಲ್ಲಿ ವಿಘ್ನವೂ ಉಂಟಾಗುತ್ತವೆ (೪೦-೪೧). ಶ್ರೀಹರಿಯು, ತಾಮಸರ ಮುಕ್ತಿಯೋಗ್ಯ ಕರ್ಮಗಳನ್ನು

(ಕರ್ಮಾಚರಣೆಯಲ್ಲಿ) ವಿಷ್ಣುವು, ಕ್ರಮಾತ್-ಕ್ರಮದಿಂದ (ವಯೋನುಗುಣವಾಗಿ, ಬಾಲ್ಯಾದಿ ಅವಸ್ಥೆಗಳಿಗನುಸಾರವಾಗಿ), ಭವೇತ್-ಉಂಟಾಗುತ್ತದೆ.

ಮೋಕ್ಷಯೋಗ್ಯಾನಿ ಪುಣ್ಯಾನಿ ತಾಮಸಾನಾಂ ನಿಹಂತಿ ಸಃ ।
ಅತ ಏವ ಹಿ ಬುದ್ಧ್ಯಾ ಚ ಚ್ಯಾವಂತೇ ಧರ್ಮತೋ ಸುರಾಃ ॥ ೪೨ ॥
ಸಂತೋ ದುರ್ಮಾರ್ಗಗಾಸ್ತದ್ವತ್ಕಾಲೇ ಕಾಲೇ ಚ ವಿಷ್ಣುನಾ ।
ಪುಣ್ಯಂ ಘಾತಯತೇ ಕ್ವಾಪಿ ಕೇಶವೋ ದೂರಮೋಕ್ಷಿಣಾಂ ॥ ೪೩ ॥
ವರ್ಧಯತ್ಯಸತಾಂ ಕ್ವಾಪಿ ಪುಣ್ಯಕರ್ಮಾಪಿ ಲೀಲಯಾ ।
ಏವಂ ಸ್ವಭಾವವಶತಃ ಫಲೇ ವೈಚಿತ್ರ್ಯಮೀರಿತಂ ॥ ೪೪ ॥

ಸಃ-ಶ್ರೀಹರಿಯು, ತಾಮಸಾನಾಂ-ತಾಮಸಜೀವರ, ಮೋಕ್ಷಯೋಗ್ಯಾನಿ-ಮೋಕ್ಷಕ್ಕೆ ಅರ್ಹತೆಯನ್ನುಂಟುಮಾಡುವ (ಮುಕ್ತಿಯೋಗ್ಯವೆನಿಸುವ), ಪುಣ್ಯಾನಿ-ಪುಣ್ಯಗಳನ್ನು ನಿಹಂತಿ-ನಾಶಗೊಳಿಸುತ್ತಾನೆ; ಅತಃ ಏವ-ಈ ಕಾರಣದಿಂದಲೇ, ಅಸುರಾಃ-ದೈತ್ಯರು, ಧರ್ಮತಃ-ಪುಣ್ಯದಿಂದಲೂ, ಬುದ್ಧ್ಯಾ ಚ -(ಸತ್ಕರ್ಮಗಳನ್ನು ಆಚರಿಸಬೇಕೆಂಬ) ಸದ್ಬುದ್ಧಿಯಿಂದಲೂ, ಚ್ಯಾವಂತೇ-ಚ್ಯುತರಾಗುತ್ತಾರೆ (ವಂಚಿತರಾಗುತ್ತಾರೆ); ತದ್ವತ್-ಅದರಂತೆ, ದುರ್ಮಾರ್ಗಗಾಃ-ದುರ್ಮಾರ್ಗದಲ್ಲಿರುವ, ಸಂತಃ-ಸಾತ್ವಿಕರು (ದೇವಸ್ವಭಾವದ ಜೀವರು), ಕಾಲೇ ಕಾಲೇ ಚ-ಕಾಲಕಾಲಕ್ಕೆ (ಆಯಾ ಕಾಲದಲ್ಲಿ), ವಿಷ್ಣುನಾ-ಶ್ರೀವಿಷ್ಣುವಿನಿಂದ, (ತದ್ವತ್-ದುರ್ಬುದ್ಧಿಯಿಂದಲೂ, ಅಧರ್ಮದಿಂದಲೂ (ರಕ್ಷಿತರಾಗುತ್ತಾರೆ) ಚ್ಯುತರಾಗುತ್ತಾರೆ); ಕ್ವಾಪಿ-ಕೆಲವು ವೇಳೆ, ದೂರಮೋಕ್ಷಿಣಾಂ-ಮೋಕ್ಷಕ್ಕೆ ದೂರವಿರುವ (ತರುಣಬಾಲಕಾದಿ) ಜೀವರ, ಪುಣ್ಯಂ-(ಮೋಕ್ಷಸಾಧಕ) ಪುಣ್ಯವನ್ನು, ಕೇಶವಃ-ಶ್ರೀಹರಿಯು, ಘಾತಯತೇ-ನಷ್ಟಗೊಳಿಸುತ್ತಾನೆ; ಲೀಲಯಾ- ಕ್ರೀಡೆಗಾಗಿ, ಕ್ವಾಪಿ-ಕೆಲವು ಸಂದರ್ಭದಲ್ಲಿ, ಅಸತಾಂ-ದುರ್ಜನರ, ಪುಣ್ಯಕರ್ಮಅಪಿ-ಪುಣ್ಯ ಕರ್ಮವನ್ನೂ

---

ನಾಶಮಾಡುತ್ತಾನೆ (ಸಂಭವಿಸಲು ಅವಕಾಶವಿಲ್ಲದಂತೆ ಮಾಡುತ್ತಾನೆ); ಆದ್ದರಿಂದಲೇ ಅಸುರರು ಪುಣ್ಯಹೀನರೂ ಸತ್ಕರ್ಮಗಳನ್ನಾಚರಿಸುವ ಸದ್ಬುದ್ಧಿ ರಹಿತರೂ ಆಗಿರುತ್ತಾರೆ; ಹೀಗೆಯೇ ದುರ್ಮಾರ್ಗದಲ್ಲಿರುವ ಸಾತ್ವಿಕ ಜೀವರು, ಶ್ರೀಹರಿಯಿಂದ, ಪಾಪದಿಂದಲೂ, ದುರ್ಬುದ್ಧಿಯಿಂದಲೂ ರಕ್ಷಿತರಾಗುತ್ತಾರೆ. ಶ್ರೀಹರಿಯು, ಕೆಲವು ವೇಳೆ (ಕೆಲವು ಜೀವರ ವಿಷಯದಲ್ಲಿ—ತರುಣ ಬಾಲಕಾದಿಗಳ) ಪುಣ್ಯವನ್ನೂ ನಷ್ಟಗೊಳಿಸುತ್ತಾನೆ ಮತ್ತು ಲೀಲೆಗಾಗಿ ಅಂತಹ (ತರುಣಬಾಲಕಾದಿ) ದುರ್ಜನರ (ತಾಮಸಜೀವರ) ಪುಣ್ಯಕರ್ಮವನ್ನು ವೃದ್ಧಿಗೊಳಿಸುತ್ತಾನೆ; ಸ್ವಾಭಾವಿಕವೆಂಬ ಕರ್ಮಸ್ವರೂಪದ ಅಧಿಕಾರದಿಂದಾಗುವ ಫಲವೈಚಿತ್ರ್ಯವು ಹೀಗೆ ನಿರೂಪಿಸಲ್ಪಟ್ಟಿರುತ್ತದೆ (೪೨-೪೪). ಜಾತಿಭೇದದಿಂದ ಧರ್ಮಾಧರ್ಮಗಳು (ಪುಣ್ಯಪಾಪಗಳು)

ವರ್ಧಯತಿ-ವೃದ್ಧಿಗೊಳಿಸುತ್ತಾನೆ; ಏವಂ-ಹೀಗೆ, ಫಲೇ-ಕರ್ಮಫಲದಲ್ಲಿ, ಸ್ವಭಾವ ವಶತಃ-ಸ್ವಾಭಾವವಶದಿಂದ (ಕರ್ಮದ ಸ್ವಭಾವದಿಂದಾಗುವ), ವೈಚಿತ್ರ್ಯಂ-ಬಹುವಿಧ ಭೇದವು, ಈರಿತಂ-ಹೇಳಲ್ಪಟ್ಟಿತು.

**ತತ್ತಜ್ಜಾತಿವಿಭೇದೇನ ಧರ್ಮಾಧರ್ಮವಿನಿರ್ಣಯಾತ್ ।**

**ಅಧಿಕಾರೋ ದೈಹಿಕಃ ಸ್ಯಾತ್ ಫಲಭೇದಪ್ರವರ್ತಕಃ ॥ ೪೫ ॥**

ತತ್ತಜ್ಜಾತಿವಿಭೇದೇನ-(ಕರ್ಮಕರ್ತೃಗಳ) ಜಾತಿಭೇದವನ್ನು ಗಮನಿಸಿ, ಧರ್ಮಾಧರ್ಮವಿನಿರ್ಣಯಾತ್-ಧರ್ಮ ಅಧರ್ಮಗಳನ್ನು (ಪುಣ್ಯಪಾಪಗಳನ್ನು) ನಿರ್ಣಯಿಸಬೇಕಾಗುವುದರಿಂದ, ಫಲಭೇದಪ್ರವರ್ತಕಃ-ಭಿನ್ನಫಲಗಳಿಗೆ ಕಾರಣ ವಾದುದು (ಕರ್ತನ ಜಾತಿಯು), ದೈಹಿಕಃ-ದೈಹಿಕವಾದ, ಅಧಿಕಾರಃ-ಅರ್ಹತೆಯು, ಸ್ಯಾತ್-ಎಂದು ಹೇಳಲ್ಪಡುತ್ತದೆ.

**ಅತ ಏವ ಹಿ ಶೂದ್ರಾದೇರ್ವೈದಿಕಂ ಕರ್ಮ ಪಾತಕಂ ।**

**ಸುರಾಪಾನಾದಿಕಂ ತದ್ವದ್ವಿಪ್ರಾದೇರ್ನೇತರತ್ರ ತತ್ ॥ ೪೬ ॥**

**ಶೈಶವಾದ್ಯನುಸಾರೇಣ ನಿಯಮಾಚ್ಚ ಯಥಾಶ್ರಮಂ ।**

**ಫಲಭೇದೋಪದೇಶೇನ ಸೋಽಧಿಕಾರೋಽಪಿ ದೈಹಿಕಃ ॥ ೪೭ ॥**

**ಯಜ್ಞದಾನಾದಿಕಂ ತಸ್ಮಾದ್ಯತಿನೋ ಧರ್ಮಕೃನ್ನ ಹಿ ।**

ಅತಃ ಏವ-(ದೈಹಿಕ ಅಧಿಕಾರವೆಂಬುದು) ಹೀಗಿರುವುದರಿಂದಲೇ, ಶೂದ್ರಾದೇಃ-ಶೂದ್ರರೇ ಮೊದಲಾದ ಹೀನಜಾತಿಯವರಿಗೆ, ವೈದಿಕಂ ಕರ್ಮ-ವೇದಾಧ್ಯಯನಾದಿಯು (ವೇದೋಕ್ತ ಸಂಧ್ಯಾದಿ ಕರ್ಮಾನುಷ್ಠಾನಾದಿಗಳು), ಪಾತಕಂ-ಪಾಪವೆನಿಸುತ್ತದೆ; ತದ್ವತ್-ಅದರಂತೆ, ವಿಪ್ರಾದೇಃ-ಬ್ರಾಹ್ಮಣನೇ ಮೊದ ಲಾದ ಉತ್ತಮವರ್ಣದವರಿಗೆ, ಸುರಾಪಾನಾದಿಕಂ-ಸುರಾಪಾನವೇ ಮೊದಲಾದುದು,

---

ನಿರ್ಣಯಿಸಲ್ಪಡುತ್ತವೆಯಾದ್ದರಿಂದ (ಒಂದು ಜಾತಿಯವರಿಗೆ ಪುಣ್ಯಕರ್ಮವಾದುದು, ಮತ್ತೊಂದು ಜಾತಿಯವರಿಗೆ ಪಾಪಕರ್ಮವಾಗುತ್ತದೆಯಾದ್ದರಿಂದ), ಫಲಭೇದಕ್ಕೆ ಕಾರಣವಾಗುವ ಕರ್ತೃವಿನ ಜಾತಿಯು, ದೈಹಿಕ ಅಧಿಕಾರವೆನಿಸುತ್ತದೆ (೪೫). ಈ ಕಾರಣದಿಂದ ಶೂದ್ರಾದಿಗಳಿಗೆ, ವೇದಾಧ್ಯಯನ, ಮತ್ತು ಸಂಧ್ಯಾದಿಕರ್ಮಾನುಷ್ಠಾನ ಗಳು, ಪಾಪಕರ್ಮಗಳೇ ಆಗುತ್ತವೆ; ಶೂದ್ರಾದಿಗಳಿಗೆ ಪಾತಕವಲ್ಲದ ಸುರಾಪಾನಾದಿ ಗಳು, ಬ್ರಾಹ್ಮಣಾದಿ ಉತ್ತಮ ವರ್ಣದವರಿಗೆ ಪಾತಕವಾಗುತ್ತದೆ; ಇದು ಮಾತ್ರವಲ್ಲ— ಕರ್ಮಗಳಿಗೆ ಶೈಶವಾದಿ ವಯೋನಿಮಿತ್ತ ಅವಸ್ಥಾಭೇದಗಳಿಗನುಸಾರವಾದ ಫಲವು ಹೇಳಲ್ಪಟ್ಟಿರುವುದರಿಂದಲೂ, ಯತ್ಯಾದಿ ಆಶ್ರಮಗಳಿಗೆ ಧರ್ಮಗಳು ನಿಯತ ವಾಗಿರುವುದರಿಂದಲೂ, ಶೈಶವಾದ್ಯವಸ್ಥೆಗಳು ಮತ್ತು ಯತ್ಯಾದ್ಯಾಶ್ರಮಗಳೂ, ಫಲವೈಚಿತ್ರ್ಯಕ್ಕೆ ಕಾರಣವಾಗುವ, (ಕರ್ಮಗಳ) ದೈಹಿಕ ಅಧಿಕಾರವೆಂದೇ ತಿಳಿಯಬೇಕು

(ಪಾತಕಂ-ಪಾಪಕರ್ಮವೆನಿಸುತ್ತದೆ); ತತ್-ಆ ಸುರಾಪಾನಾದಿಯು, ಇತರತ್ರ-ಇತರರಿಗೆ (ಹೀನಜಾತಿಯವರಿಗೆ), ನ-(ಅದು) ಪಾತಕವಲ್ಲ; ಶೈಶವಾದ್ಯನುಸಾರೇಣ-ಶಿಶುತ್ವ (ಬಾಲ್ಯಾದಿ ವಯೋಸುಗುಣವಾಗಿ) ಮೊದಲಾದ ಅವಸ್ಥೆಗಳನ್ನನುಸರಿಸಿ, ಫಲೋಪದೇಶೇನ-(ಕರ್ಮಗಳಿಗೆ) ಫಲವನ್ನು ಹೇಳಿರುವುದರಿಂದ, ಚ-ಮತ್ತು, ಯಥಾಶ್ರಮಂ-(ಯತ್ಯಾದಿ) ಆಶ್ರಮಾನುಸಾರವಾದ ಕರ್ಮಾಚರಣೆಯು, ನಿಯಮಾತ್-ನಿಯಮಗಳಿರುವುದರಿಂದಲೂ, ಸಃ ಅಪಿ-ಅದೂ ಸಹ (ಆ ಅಧಿಕಾರವೂ), (ಫಲವೈಚಿತ್ರಕ್ಕೆ ಕಾರಣವಾದ), ದೈಹಿಕಃ-ದೈಹಿಕ ಅಧಿಕಾರವೆಂದೇ (ತಿಳಿಯಬೇಕು); ತಸ್ಮಾತ್-ಧರ್ಮಗಳು (ವಯಸ್ಸನ್ನೂ ಆಶ್ರಮವನ್ನೂ ಲಕ್ಷಿಸಿ ಫಲಪ್ರದಗಳಾಗುವುದರಿಂದ), ಯತಿನಃ-ಯತಿಗೆ (ಸನ್ಯಾಸಿಗೆ), ಯಜ್ಞದಾನಾದಿಕಂ-ಯಜ್ಞ ಮತ್ತು ಯಜ್ಞಾಂಗ ದಾನಾದಿಗಳು, ಧರ್ಮಕೃತ್ ನ ಹಿ-ಪುಣ್ಯವನ್ನು ಉಂಟುಮಾಡುವುದೇ ಇಲ್ಲ (ಪುಣ್ಯಪ್ರದಗಳಲ್ಲ).

**ಸೂತಕೇ ಮೃತಕೇ ರೋಗೇ ದುಸ್ಪರ್ಶೇ ರಜಸೀತರಃ** ॥ ೪೮ ॥
**ಅಧಿಕಾರೋ ವೈದಿಕಃ ಸ್ಯಾತ್ಪುಣ್ಯಪಾಪನಿಯಾಮಕಃ ।**
**ತತ್ತತ್ಕಾಲವಿಶೇಷೇಷು ಯಜ್ಞದಾನಜಪಾದಿಕಂ** ॥ ೪೯ ॥
**ವಿಧೀಯತೇ ಸ ತು ಪ್ರೋಕ್ತೋಧಿಕಾರಃ ಕಾಲಿಕೋ ಬುಧೈಃ ।**
**ಪರ್ವಕಾಲೇಷ್ವತಃ ಪುಣ್ಯಂ ಭವೇತ್ಕರ್ಮಫಲಾಧಿಕಂ** ॥ ೫೦ ॥
**ಯುಗಕಲ್ಪವಿಭೇದೇನ ಧರ್ಮಾಧರ್ಮವಿನಿರ್ಣಯಾತ್ ।**
**ಸೋಪಿ ಕಾಲಿಕ ಇತ್ಯುಕ್ತಃ ಕಲಿವರ್ಜ್ಯಾದಿ ರಕ್ಷಿತಃ** ॥ ೫೧ ॥

ಇತರಃ-ಅನ್ಯ ಯಜ್ಞಾದಿ ಕರ್ಮವೂ (ಯತ್ಯಾಶ್ರಮಗಳಲ್ಲದ, ಇತರ ವೈದಿಕ ಯಜ್ಞಾದಿ ಕರ್ಮಗಳಲ್ಲಿ ಅಧಿಕಾರವುಳ್ಳವರಿಂದ ಆಚರಿಸಲ್ಪಡುವ ಯಜ್ಞಾದಿ ಕರ್ಮವೂ), ಸೂತಕೇ-ಸೂತಕದಲ್ಲಿಯೂ, ಮೃತಕೇ-ಮರಣಾಶೌಚದಲ್ಲಿಯೂ, ರೋಗೇ-ರೋಗದಲ್ಲಿಯೂ, ರಜಸಿದುಸ್ಪರ್ಶೇ-ರಜಸ್ವಲಾಸ್ತ್ರೀಯ ಸ್ಪರ್ಶದಲ್ಲಿಯೂ

---

(ಜಾತಿಭೇದ ಮಾತ್ರ ದೈಹಿಕಾಧಿಕಾರವೆಂದಲ್ಲ); ಈ ಕಾರಣದಿಂದ, ಅಗ್ನಿಯಲ್ಲಿ ಹೋಮದ್ವಾರಾ ಶ್ರೀವಿಷ್ಣುವನ್ನು ಪೂಜಿಸುವ ಯಜ್ಞಾದಿಗಳು, ಯತಿಗೆ ಪುಣ್ಯಕರಗಳಲ್ಲ (ಅಗ್ನಿಕಾರ್ಯವು ಯತ್ಯಾಶ್ರಮಿಗೆ ನಿಷೇಧಿಸಲ್ಪಟ್ಟಿರುತ್ತದೆ) (೪೬-೪೭). ಹೀಗೆ ವೈದಿಕಾಧಿಕಾರವು ಪುಣ್ಯಪಾಪಗಳ ನಿಯಾಮಕವು; ಅಧಿಕಾರವುಳ್ಳವರು ಆಚರಿಸುವ ವೇದೋಕ್ತ ಕರ್ಮಗಳು ಪುಣ್ಯಕರಗಳಾಗುತ್ತವೆ (ಅವುಗಳನ್ನೇ ಅನಧಿಕಾರಿಗಳು ಆಚರಿಸಿದರೆ ಪಾಪಕರಗಳಾಗುತ್ತವೆ); ಅಧಿಕಾರವುಳ್ಳವರೇ ಆ ಕರ್ಮಗಳನ್ನು ಮೃತಶೌಚಾದಿ ಕಾಲದಲ್ಲಿ, ರೋಗಗ್ರಸ್ತರಾದವರ, ರಜಸ್ವಲಾ ಸ್ತ್ರೀಯರೇ ಮೊದಲಾದವರ ಸ್ಪರ್ಶಾದಿಗಳಿಂದ ಅಶುದ್ಧರಾದ ಕಾಲದಲ್ಲಿ ಆಚರಿಸುವುದರಿಂದ

(ಧರ್ಮಕೃತ್ ನ ಹಿ-ಪುಣ್ಯಕರವಾಗುವುದಿಲ್ಲ); ವೈದಿಕಃ ಅಧಿಕಾರಃ-(ದೈಹಿಕಾಧಿಕಾರದ ಒಳಪ್ರಭೇದವಾದ) ವೈದಿಕಾಧಿಕಾರವು (ವೇದೋಕ್ತ ಕರ್ಮಾನುಷ್ಠಾನದ ಅರ್ಹತೆಯು), ಪುಣ್ಯಾಪಾಪನಿಯಮಾಕಃ-(ಕರ್ಮಪ್ರಾಪ್ಯವಾದ) ಪುಣ್ಯಾಪಾಪ ಫಲಗಳನ್ನು ನಿಯಮಿಸುವುದು, ಸ್ಯಾತ್-ಆಗುತ್ತದೆ. ತತ್ತತ್ಕಾಲವಿಶೇಷೇಷು-ಆಯಾ ಕಾಲವಿಶೇಷಗಳಲ್ಲಿ ಯಜ್ಞದಾನಜಪಾದಿಕಂ ಯಜ್ಞ ದಾನ, ಜಪಾದಿಗಳು, ವಿಧೀಯತೇ-ವಿಧಿಸಲ್ಪಡುತ್ತವೆಯಷ್ಟೆ ಸಃ ತು-(ಯಜ್ಞದಾನಾದಿಗಳಿಗೆ ಹೇಳಲ್ಪಡುವ ಕಾಲನಿಯಮವು) ಅದೇ, ಬುಧೈಃ-ಜ್ಞಾನಿಗಳಿಂದ, ಕಾಲಿಕಃ-ಕಾಲಿಕವಾದ, ಅಧಿಕಾರಃ-ಅಧಿಕಾರವೆಂದು, ಪ್ರೋಕ್ತ-ಹೇಳಲ್ಪಡುತ್ತದೆ; ಅತಃ-(ಕಾಲನಿಯಮಗಳಿರುವ) ಕಾರಣದಿಂದ, ಪರ್ವಕಾಲೇಷು-ಪರ್ವಕಾಲಗಳಲ್ಲಿ (ಆಚರಿಸಲ್ಪಡುವ), ಪುಣ್ಯಂ ಕರ್ಮ-ಪುಣ್ಯಕರ್ಮವು (ಜಪ ದಾನಾದಿಗಳು), ಫಲಾಧಿಕಂ-ವಿಶೇಷಫಲವುಳ್ಳದ್ದು ಭವೇತ್-ಆಗುತ್ತದೆ; ಯುಗಕಲ್ಪವಿಭೇದೇನ-ಯುಗಕಲ್ಪ ಭೇದದಿಂದ, ಧರ್ಮಾಧರ್ಮವಿನಿರ್ಣಯಾತ್-ಧರ್ಮ ಅಧರ್ಮಗಳನ್ನು ನಿರ್ಣಯಿಸಲಾಗುವುದರಿಂದ, ಸಃ ಅಪಿ-ಅದು ಸಹ, ಕಲಿವರ್ಜ್ಯಾದಿರಕ್ಷಿತಃ-ಕಲಿವರ್ಜ್ಯಾದಿ (ಕಲಿಯುಗದಲ್ಲಿ ತ್ಯಾಜ್ಯಗಳೆಂಬ ನಿಯಮಗಳು ಮತ್ತು ಆಪದ್ಧರ್ಮ ನಿರೂಪಣೆಗಳು ಮೊದಲಾದವು)ಗಳಿಂದ ರಕ್ಷಿತವಾಗಿ (ಆ ನಿಯಮಗಳಿಗೊಳಪಟ್ಟು), ಕಾಲಿಕಃ-ಕಾಲಿಕ ಅಧಿಕಾರವು, ಇತಿ ಉಕ್ತಃ-ಎಂದು ಹೇಳಲಾಗಿದೆ.

**ತೀರ್ಥಕ್ಷೇತ್ರವಿಶೇಷೇಷು ಕರ್ತವ್ಯಮಧಿಗೀಯತೇ ।**
**ತತೋಽಧಿಕಾರೋ ವಿಜ್ಞೇಯಃ ದೈಶಿಕೋ ಮುನಿಭಿರ್ಮುನೇ ॥ ೫೨ ॥**

---

ಪುಣ್ಯಪ್ರದಗಳಾಗುವುದಿಲ್ಲ; ವೇದಾಧಿಕಾರವೆಂಬುದು ದೈಹಿಕಾಧಿಕಾರದ ಒಳಪ್ರಭೇದವು; ಯಜ್ಞ, ದಾನ, ಜಪಾದಿ ವಿಧ್ಯುಕ್ತಕರ್ಮಗಳು ನಿಯತವಾದ ಕಾಲವಿಶೇಷಗಳಲ್ಲಿ ಮಾತ್ರ ಆಚರಿಸಲ್ಪಡಬೇಕು; ಪರ್ವಕಾಲಗಳಲ್ಲಿ ಆಚರಿಸಲ್ಪಡುವ ಈ ಕರ್ಮಗಳು ಅಧಿಕ ಫಲಪ್ರದಗಳಾಗುತ್ತವೆ; ಯುಗಕಲ್ಪಭೇದಗಳಿಂದ ಧರ್ಮಾಧರ್ಮಗಳು ನಿರ್ಣಯಿಸಲಾಗುತ್ತವೆ; ಕಲಿಯುಗದಲ್ಲಿ ಧರ್ಮವಾದುದು, ಕೃತಯುಗದಲ್ಲಿ ಧರ್ಮವಾಗುವುದಿಲ್ಲ—ಭಿನ್ನಮನುಕಲ್ಪಗಳಲ್ಲಿ ಭಿನ್ನಭಿನ್ನ ಧರ್ಮಗಳು ಆಚರಣಯೋಗ್ಯಗಳಾಗುತ್ತವೆ; ಕಲಿಯುಗದಲ್ಲಿ ಪಶುಹತ್ಯಸಹಿತವಾದ ಯಜ್ಞವು ತ್ಯಾಜ್ಯವಾಗುತ್ತದೆ; ಆಪದ್ಧರ್ಮಗಳೆಂದು ನಿರೂಪಿಸಲ್ಪಡುವವುಗಳು, ಆಪತ್ಕಾಲದಲ್ಲಿ ಮಾತ್ರ ಧರ್ಮಗಳಾಗುತ್ತವೆ—ಸರ್ವದಾ ಅಲ್ಲ—ಆಪತ್ತಿಲ್ಲವಾದ ಅವು ಧರ್ಮಗಳೇ ಅಲ್ಲ; ಹೀಗೆ ಕಾಲನಿಯಮಗಳಿಗೊಳಪಟ್ಟು ಫಲಭೇದಕ್ಕೆ ಕರ್ಮಗಳು ಕಾರಣವಾಗುವುದರಿಂದ, ಈ ಫಲವೈಚಿತ್ರ್ಯಕಾರಣವು, ಕಾಲಿಕಾಧಿಕಾರವೆಂದು ಕರೆಯಲ್ಪಡುತ್ತದೆ (೪೮-೫೧). ಹೇ ಶಾಂಡಿಲ್ಯರೇ! ಜ್ಞಾನಿಗಳು, ಪುಣ್ಯತೀರ್ಥಕ್ಷೇತ್ರಗಳಲ್ಲಿ ವಿಹಿತಕರ್ಮಗಳನ್ನಾಚರಿಸುವುದರಿಂದ ಫಲಾಧಿಕ್ಯವುಂಟೆಂದು ಪ್ರಶಂಸಿಸುತ್ತಾರೆ;

ಅತ ಏವ ಹಿ ತೀರ್ಥಾದೌ ಮುಂಡನಂ ಚೋಪವಾಸನಂ ।
ರಥ್ಯಾದೌ ನಿಗಮಾಧೀತೇಃ ಪಾಪಮೇವ ಪ್ರಜಾಯತೇ ॥ ೫೩ ॥
ದಿಙ್ಮಾತ್ರದರ್ಶನಾದಸ್ಮಾತ್ ಸರ್ವಮೂಹ್ಯಂ ವಿಪಶ್ಚಿತಾ ।

ಮುನೇ-ಹೇ ಶಾಂಡಿಲ್ಯರೇ! ಮುನಿಭಿಃ-ಜ್ಞಾನಿಗಳಿಂದ (ಋಷಿಗಳಿಂದ), ತೀರ್ಥಕ್ಷೇತ್ರವಿಶೇಷೇಷು-ಉತ್ತಮತೀರ್ಥಕ್ಷೇತ್ರಗಳಲ್ಲಿ, ಕರ್ತವ್ಯಂ-ಅವಶ್ಯ ಮಾಡಬೇಕಾದ ಕರ್ಮಗಳು, ಅಧಿಗೀಯತೇ-ಉತ್ಕೃಷ್ಟಫಲಪ್ರದವೆಂದು ಸ್ತುತಿಸಲ್ಪಡುತ್ತದೆ; ತತಃ-ಆದ್ದರಿಂದ, ದೈಶಿಕಃ ಅಧಿಕಾರಃ-(ಫಲವೈಚಿತ್ರ್ಯಕ್ಕೆ ಕರ್ಮಗಳನ್ನು ಆಚರಿಸುವ ದೇಶದ ಗುಣವೂ ಕಾರಣವೆಂದು) ದೈಶಿಕಾಧಿಕಾರವೆಂದು, ವಿಜ್ಞೇಯಃ-ತಿಳಿಯತಕ್ಕದ್ದು; ದೈಶಿಕಾಧಿಕಾರವು ಫಲವ್ಯತ್ಯಾಸಕ್ಕೆ ಕಾರಣವಾಗುತ್ತದೆಂಬಲ್ಲಿ ಕೆಲವು ನಿದರ್ಶನಗಳನ್ನು ತೋರಿಸುತ್ತಾರೆ), ಅತಃ ಏವ-ಈ ಕಾರಣದಿಂದಲೇ, ತೀರ್ಥಾದೌ-ತೀರ್ಥಕ್ಷೇತ್ರಗಳಲ್ಲಿ, ಮುಂಡನಂ-ಕ್ಷೌರಕರ್ಮವೂ (ತಲೆ ಬೋಳಿಸಿಕೊಳ್ಳುವುದು), ಚ-ಮತ್ತು ಉಪವಾಸನಂ-ಉಪವಾಸಮಾಡುವುದೂ (ವಿಧಿಸಲ್ಪಟ್ಟವೆ); ರಥ್ಯಾದೌ-ಬೀದಿ ಮೊದಲಾದ ಸ್ಥಳಗಳಲ್ಲಿ (ದುಷ್ಟರ ಸಮಾಜದಲ್ಲಿ), ನಿಗಮಾಧೀತೇಃ - ವೇದಾಧ್ಯಯನಾದಿಗಳನ್ನು ಮಾಡುವುದರಿಂದ, ಪಾಪಂ ಏವ-ಪಾಪವೇ, ಪ್ರಜಾಯತೇ- ಉಂಟಾಗುತ್ತದೆ; ಅಸ್ಮಾತ್-ಈ, ದಿಙ್ಮಾತ್ರಪ್ರದರ್ಶನಾತ್-(ಕರ್ಮಫಲಗಳ ನಿಜತತ್ತ್ವವನ್ನರಿಯುವ) ದಿಕ್ಕನ್ನು ಮಾತ್ರ ಪ್ರದರ್ಶನಮಾಡಿರುವುದರಿಂದ (ಮಾರ್ಗ ಸೂಚನೆಯಿಂದ), ವಿಪಶ್ಚಿತಾ-ವಿವೇಕವುಳ್ಳವನಿಂದ, ಸರ್ವಂ-ಎಲ್ಲವೂ, ಊಹ್ಯಂ-ಊಹಿಸಿ ತಿಳಿಯಲ್ಪಡತಕ್ಕದ್ದು.

ಉದಾಹೃತ್ಯಾರ್ಥಮೇವೈತನ್ಮಯೋಕ್ತಂ ಭವತಾಂ ಪುರಃ ॥ ೫೪ ॥
ತೃಣವೀರುಲ್ಲತಾವೃಕ್ಷಗುಲ್ಮೌಷಧ್ಯಾದಿಕಂ ಯಥಾ ।
ತಥೈವ ಫಲದಾನಾದೌ ಕರ್ಮಣಾಂ ನ್ಯಾಯ ಇಷ್ಯತೇ ॥ ೫೫ ॥

---

ಇದನ್ನೇ (ದೇಶದ ಗುಣಾನುಸಾರವಾಗಿ ಕರ್ಮಗಳಿಗೆ ಫಲವು ದೊರೆಯುವುದೆಂಬುದನ್ನೇ) ಫಲವೈಚಿತ್ರ್ಯಕ್ಕೆ ಕಾರಣವಾದ ದೈಶಿಕಾಧಿಕಾರವೆಂದು ತಿಳಿಯತಕ್ಕದ್ದು; ತೀರ್ಥಕ್ಷೇತ್ರಗಳ (ಈ ಅಧಿಕಾರವನ್ನು ಗಮನಿಸಿಯೇ) ಸಂಬಂಧವಾದ ಈ ನಿಯಮದಿಂದಲೇ ಅಲ್ಲಿ ಮುಂಡನ, ಉಪವಾಸಾದಿಗಳು ವಿಧಿಸಲ್ಪಡುತ್ತವೆ; ಬೀದಿಯಲ್ಲಿ (ಅಥವಾ ಇತರ ದುಷ್ಟ ಸಮಾಜಗಳಲ್ಲಿ) ವೇದಾಧ್ಯಯನಾದಿಗಳನ್ನು ನಡೆಸಿದರೆ, ಪಾಪವೇ ಉಂಟಾಗುತ್ತದೆಂದು ನಿಷೇಧಿಸಲಾಗುತ್ತದೆ; ಹೀಗೆ ಕರ್ಮಫಲಗಳ ವೈಚಿತ್ರ್ಯನಿಯಾಮಕಗಳಾದ ಸ್ವಾಭಾವಿಕಾದಿ ಅಧಿಕಾರಗಳನ್ನು, ಕೇವಲ ಮಾರ್ಗಪ್ರದರ್ಶನ ರೂಪದಿಂದ ಸೂಚಿಸಲಾಗಿದೆ; ವಿವೇಕಿಯು ಸರ್ವವನ್ನೂ ಯಥಾಶಕ್ತಿ ಊಹಿಸಿ ತಿಳಿಯತಕ್ಕದ್ದು (೫೨-೫೩). ಈ ಅಭಿಪ್ರಾಯವನ್ನು, ನಿಮ್ಮೆಲ್ಲರ ಮುಂದೆ,

ಭವತಾಂ-ನಿಮ್ಮಗಳ, ಪುರಃ-ಎದುರಿನಲ್ಲಿ, ಏತತ್-ಈ, ಅರ್ಥಂ ಏವ-ಅರ್ಥವೇ, ಉದಾಹೃತ್ಯ-ಉದಾಹರಣೆಗಳಿಂದ ವಿವರಿಸಲ್ಪಟ್ಟು ಮಯಾ-ನನ್ನಿಂದ, ಉಕ್ತಂ-ಹೇಳಲ್ಪಟ್ಟದ; ತೃಣವೀರುಲ್ಲತಾವೃಕ್ಷಗುಲ್ಮೌಷಧ್ಯಾದಿಕಂ-ತೃಣ, ವೀರುಧ (ಕತ್ತರಿಸಿದರೂ ನೆಲದಲ್ಲಿ ಹಬ್ಬಿಕೊಳ್ಳುವ ಬಳ್ಳಿ), ಲತಾ (ಪುಷ್ಪಾದಿ ಬಳ್ಳಿಗಳು) ವೃಕ್ಷ ಗುಲ್ಮ (ಪೊದೆಯಾಗಿ ಬೆಳೆಯುವ ಸಸ್ಯವಿಶೇಷ), ಔಷಧಿ (ಗಿಡಮೂಲಿಕೆ) ಇತ್ಯಾದಿಯು, ಯಥಾ-ಹೇಗೋ, ತಥಾ ಏವ-ಹಾಗೆಯೇ, (ಗಿಡಮೂಲಿಕೆ ಮೊದಲಾದವುಗಳು ತಿಥಿ, ವಾರ, ನಕ್ಷತ್ರಾದಿ ವಿಶೇಷಕಾಲಗಳಲ್ಲಿಯೂ, ಪರ್ವತಾದಿ ದೇಶವಿದೇಶಗಳಲ್ಲಿಯೂ, ರೋಗಾದಿ ಚಿಕಿತ್ಸೆಯಲ್ಲಿ ಫಲಕಾರಿಗಳಾಗುವಂತೆ), ಕರ್ಮಣಾಂ-ಕರ್ಮಗಳಿಗೆ, ಫಲದಾನಾದೌ-ಫಲದಾನಾದಿಗಳಲ್ಲಿ (ಫಲವನ್ನುಂಟು ಮಾಡುವುದರಲ್ಲಿ); ನ್ಯಾಯಃ-(ದೈಶಿಕಕಾಲಿಕಾದಿ ಅಧಿಕಾರ) ನಿಯಮವು, ಇಷ್ಯತೇ-(ಎಂದು) ಹೇಳಲ್ಪಡುತ್ತದೆ.

**ಪಾಪಂ ವಹ್ನಿಸಮಂ ಪುಣ್ಯೇ ಪಾತಕೇ ಸುಕೃತಂ ತಥಾ ।**

**ಅನ್ಯೋನ್ಯಸ್ಯ ವಿರುಧ್ಯೇತ ನೈವ ವ್ಯರ್ಥಂ ಭವೇತ್ ಕ್ವಚಿತ್ ॥ ೫೬ ॥**

ಪುಣ್ಯೇ-ಪುಣ್ಯದ ವಿಷಯದಲ್ಲಿ ಪಾಪಂ-ಪಾಪವು, ವಹ್ನಿಸಮಂ-ಅಗ್ನಿ ಸದೃಶವಾದುದು (ಪುಣ್ಯವನ್ನು ವಿರೋಧಿಸುತ್ತದೆ-ಪ್ರತಿಬಂಧಿಸುತ್ತದೆ-ಪುಣ್ಯವು ಫಲ ಕೊಡದಂತೆ ತಡೆಯುತ್ತದೆ); ತಥಾ-ಹಾಗೆಯೇ, ಪಾತಕೇ-ಪಾಪವಿಷಯದಲ್ಲಿ ಸುಕೃತಂ-ಪುಣ್ಯವೂ (ಅಗ್ನಿಸಮವೇ); ಅನ್ಯಃ-ಒಂದು, ಅನ್ಯಸ್ಯ-ಮತ್ತೊಂದರ, ವಿರುಧ್ಯೇತ-ವಿರುದ್ಧವಾಗಿರುತ್ತದೆ (ಪಾಪಪುಣ್ಯಗಳು ಒಂದು ಮತ್ತೊಂದನ್ನು—ಅನ್ಯೋನ್ಯವಾಗಿ—ಪರಸ್ಪರ—ವಿರೋಧಿಸುತ್ತದೆ); ಕ್ವಚಿತ್-ಎಲ್ಲಿಯೂ (ಸ್ವಲ್ಪವೂ), ವ್ಯರ್ಥಂ-ವ್ಯರ್ಥವಾದುದು, ನೈವ ಭವೇತ್-ಆಗುವುದೇ ಇಲ್ಲ.

---

ಉದಾಹರಣಪೂರ್ವಕವಾಗಿ ನಿರೂಪಿಸಿದ್ದೇನೆ; ತೃಣ, ವೀರುಧ, ಲತಾ, ವೃಕ್ಷ ಗುಲ್ಮ, ಓಷಧಿ ಮೊದಲಾದವುಗಳು, ರೋಗ ಚಿಕಿತ್ಸೆಯಲ್ಲಿ ದೇಶಕಾಲಾದಿ ನಿಯಮಾನುಸಾರ, ಪ್ರಯೋಗಿಸಲ್ಪಟ್ಟರೆ ಮಾತ್ರ ಫಲಪ್ರದಗಳಾಗುವಂತೆ, ಕರ್ಮಗಳಿಗೆ ಫಲಪ್ರದತ್ವ ವಿಷಯದಲ್ಲಿ ಪೂರ್ವೋಕ್ತ ಸ್ವಾಭಾವಿಕಾದಿ ನಾಲ್ಕು ಅಧಿಕಾರಗಳ ನಿಯಮವು ಅನ್ವಯಿಸುವುದೆಂದು ತಿಳಿಯಬೇಕು (೫೪-೫೫). ಪುಣ್ಯದ ವಿಷಯಕ್ಕೆ ಪಾಪವು ಅಗ್ನಿಯಂತಿರುತ್ತದೆ; ಅದರಂತೆ ಪಾಪವಿಷಯಕ್ಕೆ ಪುಣ್ಯವೂ ಅಗ್ನಿಸದೃಶವೇ ಆಗಿರುವುದು; ಪುಣ್ಯಪಾಪಗಳು ಒಂದಕ್ಕೊಂದು ಫಲಪ್ರತಿಬಂಧಕವಾಗುತ್ತವೆ; ಪಾಪವು ಪುಣ್ಯಫಲವನ್ನು ನಿರೋಧಿಸುತ್ತದೆ, ಪುಣ್ಯವು ಪಾಪಫಲವನ್ನು ತಡೆಹಿಡಿಯುತ್ತದೆ—ಅದರ ಫಲವನ್ನು ನಾಶಮಾಡುತ್ತದೆ—ಅತ ಏವ ವಸ್ತುವನ್ನು ನಾಶಗೊಳಿಸುವ ಅಗ್ನಿಯಂತೆ ಎಂದು ಹೇಳಲಾಗುತ್ತದೆ (೫೬). ಒಂದೆ (ಒಂದು ಕಾಲದಲ್ಲಿ) ಸುಕ್ರೀಕ

**ಸುಶ್ರೀಕಶ್ಚ ಸುಕಾಂತಶ್ಚ ಭ್ರಾತರಾವಾಸತುಃ ಪುರಾ ।**

**ಸದಾಚಾರೋ ಭವೇಜ್ಜ್ಯೇಷ್ಠಃ ಪಾಪಾಚಾರೋಽನುಜಸ್ತಥಾ ॥ ೫೭ ॥**

ಪುರಾ-ಪೂರ್ವದಲ್ಲಿ (ಹಿಂದೆ), ಸುಶ್ರೀಕಶ್ಚ-ಸುಶ್ರೀಕನೆಂದೂ, ಸುಕಾಂತಶ್ಚ-ಸುಕಾಂತನೆಂದೂ, ಭ್ರಾತರೌ-ಇಬ್ಬರು ಸಹೋದರರು, ಆಸತುಃ-ಇದ್ದರು; ಜ್ಯೇಷ್ಠಃ-ಹಿರಿಯನು (ಅಣ್ಣನು), ಸದಾಚಾರಃ-ಸದಾಚಾರನು, ಭವೇತ್-ಆಗಿದ್ದನು; ತಥಾ-ಮತ್ತು ಅನುಜಃ-ತಮ್ಮನು, ಪಾಪಾಚಾರಃ-ಪಾಪಾಚಾರನು (ಆಗಿದ್ದನು).

**ಕರ್ಹಿಚಿತ್ ಪಥಿ ಗಚ್ಛಂತೌ ದೇವಾಲಯಮಪಶ್ಯತಾಂ ।**

**ಚಕ್ರೇ ಪ್ರದಕ್ಷಿಣಂ ಜ್ಯೇಷ್ಠಸ್ತತ್ಪಾದೇ ಕಂಟಕೋಽವಿಶತ್ ॥ ೫೮ ॥**

**ನಾಸ್ತಿಕೇನ ಸುಕಾಂತಸ್ತು ಕೃತ್ವಾ ವಾಮತ ಆವ್ರಜತ್ ।**

**ಸ ಲೇಭೇ ಮುದ್ರಿಕಾಂ ಹೈಮೀಂ ತತೋಽಪಾಹಸತಾಗ್ರಜಂ ॥ ೫೯ ॥**

ಕರ್ಹಿಚಿತ್-ಒಂದು ದಿನ, ಪಥಿ-ಮಾರ್ಗದಲ್ಲಿ ಗಚ್ಛಂತೌ-ಹೋಗುತ್ತಿದ್ದ ಇಬ್ಬರೂ (ಆ ಸಹೋದರರು), ದೇವಾಲಯಂ-ಒಂದು ದೇವಾಲಯವನ್ನು ಅಪಶ್ಯತಾಂ-ಕಂಡರು; ಜ್ಯೇಷ್ಠಃ-ಅಣ್ಣನಾದ ಸುಶ್ರೀಕನು, ಪ್ರದಕ್ಷಿಣಂಚಕ್ರೇ-ಪ್ರದಕ್ಷಿಣೆ ಮಾಡಿದನು (ದೇವಸ್ಥಾನವನ್ನು ಬಲದಲ್ಲಿಟ್ಟುಕೊಂಡು ಅದನ್ನು ಸುತ್ತುವುದು); ತತ್ಪಾದೇ-ಆತನ ಕಾಲಿನಲ್ಲಿ ಕಂಟಕಃ-ಮುಳ್ಳು, ಅವಿಶತ್-ಪ್ರವೇಶಿಸಿತು (ಚುಚ್ಚಿತು); ಸುಕಾಂತಃ ತು-ತಮ್ಮನಾದ ಸುಕಾಂತನಾದರೋ, ನಾಸ್ತಿಕೇನ-ನಾಸ್ತಿಕ ಭಾವದಿಂದ, ವಾಮತಃಕೃತ್ವಾ-(ದೇವಾಲಯವನ್ನು) ಎಡಕ್ಕೆ ಮಾಡಿಕೊಂಡು (ಪ್ರದಕ್ಷಿಣೆ ಮಾಡದೇ), ಆವ್ರಜತ್-ಮುಂದೆ ಹೋದನು; ಸಃ-ಅವನು, ಹೈಮೀಂ ಮುದ್ರಿಕಾಂ-ಭಂಗಾರದ ಉಂಗುರವನ್ನು, ಲೇಭೇ-ಹೊಂದಿದನು (ಮಾರ್ಗದಲ್ಲಿ ಸಿಕ್ಕಿತು); ತತಃ-ನಂತರ (ಮುಂದೆ ಇಬ್ಬರೂ ಸೇರಿದಾಗ), ಅಗ್ರಜಂ-ಅಣ್ಣನನ್ನು, ಅಪಾಹಸತ್-ಅಪಹಾಸ ಮಾಡಿದನು.

---

ಮತ್ತು ಸುಕಾಂತನೆಂಬ ಇಬ್ಬರು ಸಹೋದರರಿದ್ದರು; ಅವರಲ್ಲಿ ಹಿರಿಯನಾದ ಸುಶ್ರೀಕನು ಸದಾಚಾರಿಯಾಗಿದ್ದನು—ಅವನ ತಮ್ಮನು ಸುಕಾಂತನು ಪಾಪಾಚಾರನಾಗಿದ್ದನು (೫೭). ಒಂದು ದಿನ ಅವರಿಬ್ಬರೂ ದಾರಿಯಲ್ಲಿ ಹೋಗುತ್ತ ಒಂದು ದೇವಾಲಯವನ್ನು ಕಂಡರು; ಸದಾಚಾರನಾದ ಸುಶ್ರೀಕನು, ಪ್ರದಕ್ಷಿಣೆ ಮಾಡಿದನು—ಅವನ ಕಾಲಲ್ಲಿ ಮುಳ್ಳು ಮುರಿದುಕೊಂಡಿತು; ಸುಕಾಂತನು ನಾಸ್ತಿಕಭಾವದಿಂದ, ಪ್ರದಕ್ಷಿಣೆ ಮಾಡದೇ, ದೇವಾಲಯವನ್ನು ಎಡಕ್ಕಿಟ್ಟು ಮುಂದೆ ನಡೆದನು—ಅವನಿಗೆ ದಾರಿಯಲ್ಲಿ ಒಂದು ಭಂಗಾರದ ಉಂಗುರವು ಸಿಕ್ಕಿತು; ಮುಂದೆ ಇಬ್ಬರೂ ಸೇರಲು, ಸುಕಾಂತನು ಅಣ್ಣನನ್ನು ಅಪಹಾಸ ಮಾಡಿದನು (ದೇವರನ್ನು ನಂಬಿ ಪ್ರದಕ್ಷಿಣೆ ಮಾಡಿದ ನಿನಗೇನಾಯಿತು ನೋಡು, ನನಗೆ ಸುವರ್ಣಮುದ್ರಿಕೆಯು ದೊರೆಯಿತೆಂದು ನಕ್ಕನು)

**ಅಗ್ರಜೋ ವ್ರೀಡಿತಸ್ತಾವದ್ ವೃದ್ಧಬ್ರಾಹ್ಮಣ ಆಯಯೌ ।**
**ಸ ಉವಾಚ ತದಾ ತೌತು ಪುರತೋಽವಸ್ಥಿತಃ ಕ್ಷಣಂ ॥ ೬೦ ॥**
**ಸುಕಾಂತ ಮೂಢ ಪುಣ್ಯಂ ತ್ವಂ ನಾಸ್ತಿಕ್ಯಾದವಮನ್ಯಸೇ ।**
**ಕರ್ಮತತ್ತ್ವಂ ನ ಜಾನಾಸಿ ವಿಚಿತ್ರಾ ಕರ್ಮಣಾಂ ಗತಿಃ ॥ ೬೧ ॥**

ಅಗ್ರಜಃ-ಸುಶ್ರೀಕನು, ವ್ರೀಡಿತಃ-ನಾಚಿ ತಲೆತಗ್ಗಿಸಿದನು; ತಾವತ್-ಅಷ್ಟರೊಳಗೆ, ವೃದ್ಧಬ್ರಾಹ್ಮಣಃ-(ಒಬ್ಬ) ವೃದ್ಧಬ್ರಾಹ್ಮಣನು, ಆಯಯೌ-(ಅಲ್ಲಿಗೆ) ಬಂದನು; ಸಃ-ಆತನು, ಪುರತಃ-ಎದುರಿಗೆ, ಕ್ಷಣಂ-ಕ್ಷಣಕಾಲ, ಸ್ಥಿತಃ-(ಸನ್)ನಿಂತವನಾಗಿ, ತದಾ-ಆಗ, ತೌ-ಆ ಇಬ್ಬರನ್ನು ಕುರಿತು, ಉವಾಚ-ಮಾತನಾಡಿದನು, ಮೂಢ-ಅಜ್ಞಾನಿಯಾದ, ಸುಕಾಂತ-ಹೇ ಸುಕಾಂತ!, ನಾಸ್ತಿಕ್ಯಾತ್-ನಾಸ್ತಿಕ್ಯಬುದ್ಧಿಯಿಂದ, ತ್ವಂ-ನೀನು, ಪುಣ್ಯಂ-ಪುಣ್ಯವನ್ನು (ಪುಣ್ಯಕರ್ಮವನ್ನು—ಧರ್ಮಾಚರಣೆಯನ್ನು), ಅವಮನ್ಯಸೇ—ಅವಮಾನಿಸುತ್ತೀ (ಕೀಳಾಗಿ ತಿಳಿಯುತ್ತೀ): ಕರ್ಮತತ್ತ್ವಂ-ಕರ್ಮತತ್ತ್ವವನ್ನು (ನಿಜಸ್ಥಿತಿಯನ್ನು), ನ ಜಾನಾಸಿ-ತಿಳಿದಿರುವುದಿಲ್ಲ; ಕರ್ಮಣಾಂ-ಕರ್ಮಗಳ, ಗತಿಃ-ಗತಿಯು (ಫಲವು), ವಿಚಿತ್ರಾ-ಆಶ್ಚರ್ಯಕರವಾದುದು (ಗಹನವಾದುದು-ಗೂಢವಾದುದು).

**ಇತ್ಯುಕ್ತ್ವಾ ದೃಷ್ಟಿಮಾತ್ರೇಣ ದಿವ್ಯದೃಷ್ಟೀ ಚಕಾರ ತೌ ।**
**ದೇವಸ್ಯ ದಕ್ಷಿಣೇ ವಾಮೇ ದೃಶ್ಯತಾಮಿತಿ ಚಾವದತ್ ॥ ೬೨ ॥**
**ನಿಧೇರ್ಮುಖಂ ಚ ಸರ್ಪಂ ಚ ತೌ ತದಾನೀಮಪಶ್ಯತಾಂ ।**
**ದೃಷ್ಟಮಿತ್ಯೇವ ಸ ಪ್ರಾಹ ತಾವೋಮಿತಿ ತಮೂಚತುಃ ॥ ೬೩ ॥**

ಇತ್ಯುಕ್ತ್ವಾ-(ಆ ವೃದ್ಧಬ್ರಾಹ್ಮಣನು ಅವರನ್ನುದ್ದೇಶಿಸಿ) ಹೀಗೆ ಹೇಳಿ, ದೃಷ್ಟಿಮಾತ್ರೇಣ-ತನ್ನ ಕೃಪಾದೃಷ್ಟಿಮಾತ್ರದಿಂದ, ತೌ-ಆ ಇಬ್ಬರನ್ನೂ, ದಿವ್ಯದೃಷ್ಟೀ-

---

(೫೮-೫೯). ಸುಶ್ರೀಕನು, ಈ ಫಲವೈಲಕ್ಷಣ್ಯವನ್ನು ದೇವಾಲಯವನ್ನು ಪ್ರದಕ್ಷಿಣೆ ಮಾಡಿದ ತನ್ನ ನಡವಳಿಕೆಗಾಗಿ ಲಜ್ಜೆಗೊಂಡನು; ಅಷ್ಟರಲ್ಲಿ ಅಲ್ಲಿಗೆ ಒಬ್ಬ ವೃದ್ಧ ಬ್ರಾಹ್ಮಣನು ಬಂದು, ಅವರೆದುರಿಗೆ ಕ್ಷಣಹೊತ್ತು ನಿಂತು ಮಾತನಾಡಿದನು; 'ಹೇ ಮೂಢ! ಸುಕಾಂತ! ನೀನು ನಾಸ್ತಿಕ್ಯಬುದ್ಧಿಯಿಂದ ಪುಣ್ಯವನ್ನು ಹೀನವಾಗಿ ತಿಳಿಯುತ್ತೀ—ಕರ್ಮತತ್ತ್ವವನ್ನು ನೀನು ತಿಳಿಯೆ; ಕರ್ಮಗಳ ಗತಿಯು (ಫಲಪ್ರದಾನ ಸಾಮರ್ಥ್ಯವು) ಅತಿ ಗಹನವಾದುದು (ಆಶ್ಚರ್ಯಕರವು) (೬೦-೬೧). ಹೀಗೆ ಹೇಳಿ, ಆ ವೃದ್ಧನು, ಅವರನ್ನು ನೋಡುವ ಮಾತ್ರದಿಂದ (ಕೃಪಾದೃಷ್ಟಿಯನ್ನು ಅವರ ಮೇಲೆ ಬೀರಿ), ದಿವ್ಯದೃಷ್ಟಿಯುಳ್ಳವರನ್ನಾಗಿ ಮಾಡಿ, ದೇವಾಲಯದ, ಬಲ, ಎಡ ಪಾರ್ಶ್ವಗಳಲ್ಲಿ ನೋಡಿರೆಂದನು; ಅವರು ನೋಡಿದ್ದರಲ್ಲಿ, ಧನದ ನಿಧಿಯಿರುವ

ದಿವ್ಯದೃಷ್ಟಿಯುಳ್ಳವರನ್ನಾಗಿ, ಚಕಾರ-ಮಾಡಿದನು; ಚ-ಮತ್ತು ದೇವಸ್ಯ-(ದೇವಾಲಯದ) ದೇವರ, ದಕ್ಷಿಣೇ-ಬಲ ಭಾಗದಲ್ಲಿಯೂ, ವಾಮೇ-ಎಡ ಪಾರ್ಶ್ವದಲ್ಲಿಯೂ, ದೃಶ್ಯತಾಂ-ನೋಡುವವರಾಗಿರಿ, ಇತಿ ಅವದತ್-ಎಂದು ಹೇಳಿದನು; ತದಾ ನೀಂ-ಆಗ, ತೌ-ಆ ಇಬ್ಬರೂ, ನಿಧೇಃ ಮುಖಂ ಚ-(ದೇವಾಲಯದ ಬಲಭಾಗದಲ್ಲಿ) ದ್ರವ್ಯನಿಧಿಯ ಮುಖವನ್ನೂ, ಸರ್ಪಂ ಚ-(ಎಡಭಾಗದಲ್ಲಿ) ಸರ್ಪವನ್ನೂ, ಅಪಶ್ಯತಾಂ-ಕಂಡರು; ಸಃ-ಆ ಬ್ರಾಹ್ಮಣನು, ದೃಷ್ಟಂ-ಕಾಣಲ್ಪಟ್ಟಿತೇ (ಕಂಡಿರಷ್ಟೆ), ಇತ್ಯೇವ ಪ್ರಾಹ-ಎಂದು ನುಡಿದನು; ತೌ-ಅವರಿಬ್ಬರೂ, ಓಂ ಇತಿ-ಸರಿ (ಕಂಡೆವು) ಎಂದು, ತಂ-ಅತನನ್ನು ಕುರಿತು, ಊಚತುಃ-ಹೇಳಿದರು.

ವಿಪ್ರಃ ಪ್ರಾಹ ತತೋ ಭೂಯಃ ಸಮ್ಮುಖೀಕೃತ್ಯ ಚಾದರಾತ್ ।
ಯದೀದಾನೀಂ ಹಿ ಸುಶ್ರೀಕೋ ನಿರ್ಗಚ್ಛೇದ್ದೇವವಾಮತಃ ॥ ೬೪ ॥
ತರ್ಹಿ ಸರ್ಪೇಣ ದಷ್ಟವ್ಯಸ್ತಸ್ಯ ಕರ್ಮೈವ ತಾದೃಶಂ ।
ತಥಾ ಯದಿ ತ್ವಂ ದೇವಸ್ಯ ನಿರ್ಗಚ್ಛೇಚ್ಚ ಪ್ರದಕ್ಷಿಣಂ ॥ ೬೫ ॥
ಪ್ರಾಪ್ತವ್ಯೋಽಯಂ ನಿಧಿಸ್ತರ್ಹಿ ತ್ವಯಾ ತತ್ಕರ್ಮ ತಾದೃಶಂ ।
ಪ್ರದಕ್ಷಿಣಾದವಜ್ಞಾನಾದೀದೃಶಂ ಭವತೋ ಫಲಂ ॥ ೬೬ ॥
ಬಹು ಯತ್ತದಭೂದಲ್ಪಮನುಗ್ರಾಹಕವರ್ಜನಾತ್ ।
ಇದಾನೀಂ ತನ್ನ ತೇ ಲಭ್ಯಂ ಮಹಾಸರ್ಪೇಣ ರಕ್ಷಿತಂ ॥ ೬೭ ॥
ಇತ್ಯುಕ್ತ್ವಾಂತರ್ದಧೇ ವಿಪ್ರಃ ಸುಕಾಂತಃ ಪ್ರದದೃಶೇ ತತಃ ।
ವಂದಿತ್ವಾ ತಂ ತಥಾ ಭ್ರಾತುಃ ಸುಕೃತೇರ್ಭಕ್ತಿಮಾನಭೂತ್ ॥ ೬೮ ॥
ಏವಂ ಬಹು ವಿಧಂ ಲೋಕೇ ಜಾಯಮಾನಂ ನ ಬುಧ್ಯತೇ ।

ತತಃ-ಮುಂದೆ, ವಿಪ್ರಃ-ಆ ಬ್ರಾಹ್ಮಣನು, ಆದರಾತ್-ಪ್ರೀತಿಯಿಂದ,

---

ಭೂಬಿಲವನ್ನು ಸರ್ಪವನ್ನೂ ಕ್ರಮವಾಗಿ ಬಲ, ಎಡಭಾಗಗಳಲ್ಲಿ ಕಂಡರು; ವೃದ್ಧನು ನೋಡಿದಿರಾ? ಎಂದು ಕೇಳಿದನು; ಸಹೋದರರಿಬ್ಬರೂ ಕಂಡೆವೆಂದರು (೬೨-೬೩). ಆ ಸಹೋದರರನ್ನು ಆದರಿಂದ ಸಮ್ಮುಖದಲ್ಲಿಟ್ಟುಕೊಂಡು (ತನ್ನ ನುಡಿಯಲ್ಲಿ ವಿಶ್ವಾಸಪಡುವಂತೆ ಮಾಡಿಕೊಂಡು), ಆ ಬ್ರಾಹ್ಮಣನು, ವಿವರವಾಗಿ ಹೇಳತೊಡಗಿದನು; ಸುಶ್ರೀಕನು, ಮಾರ್ಗದಲ್ಲಿ ಹೋಗುವಾಗ, ದೇವಾಲಯದ ಎಡಭಾಗದಿಂದ (ಅಪ್ರದಕ್ಷಿಣವಾಗಿ) ಹೋಗಿದ್ದರೆ, ಅಲ್ಲಿ ನೀವು ಕಂಡ ಸರ್ಪದಿಂದ ಕಚ್ಚಲ್ಪಡುತ್ತಿದ್ದನು—ಅವನ ಪೂರ್ವಕರ್ಮವು (ಪಾಪವು) ಹಾಗಿತ್ತು; ಮತ್ತು ಹೇ ಸುಕಾಂತ! ನೀನೇನಾದರೂ ಬಲಭಾಗದಿಂದ (ಪ್ರದಕ್ಷಿಣಾಕಾರವಾಗಿ) ಹೋಗಿದ್ದರೆ, ನಿನಗೆ, ಅಲ್ಲಿ ಕಂಡ ಮಹಾನಿಧಿಯು ಲಭಿಸುತ್ತಿತ್ತು—ನಿನ್ನ ಪೂರ್ವಪುಣ್ಯವೇ ಹಾಗಿತ್ತು;

ಸಮ್ಮುಖೀಕೃತ್ಯ-(ಆ ಸಹೋದರರನ್ನು) ತನ್ನಲ್ಲಿ ವಿಶ್ವಾಸ ಹುಟ್ಟುವಂತೆ ಮಾಡಿಕೊಂಡು, ಭೂಯಃ-ವಿವರವಾಗಿ, ಪ್ರಾಹ-ಹೇಳಿದನು; ಸುಶ್ರೀಕಃ-ಸುಶ್ರೀಕನು, ದೇವವಾಮತಃ-ದೇವನ (ದೇವಾಲಯದ) ಎಡಪಾರ್ಶ್ವದಿಂದ, ಇದಾನೀಂ-ಈಗ (ದಾರಿ ನಡೆಯುವಾಗ), ಯದಿ ನಿರ್ಗಚ್ಛೇತ್-ಒಂದು ಪಕ್ಷ ಹೋಗಿದ್ದರೆ, ತರ್ಹಿ-ಆಗ, ಸರ್ಪೇಣ-ಸರ್ಪದಿಂದ, ದಷ್ಟವ್ಯಃ-ಕಚ್ಚಲ್ಪಡುತ್ತಿದ್ದನು; ತಸ್ಯ-ಆತನ, ಕರ್ಮ ಏವ-(ಪೂರ್ವ) ಕರ್ಮವೇ, ತಾದೃಶಂ-ಹಾಗಿತ್ತು (ಕರ್ಮದ ಫಲವಾಗಿ ಸರ್ಪದಷ್ಟನಾಗ ಬೇಕಾಗಿತ್ತು); ತಥಾ-ಹಾಗೂ, ತ್ವಂ-ನೀನು (ಹೇ ಸುಕಾಂತ!), ದೇವಸ್ಯ-ದೇವರ (ದೇವಾಲಯದ), ಪ್ರದಕ್ಷಿಣಂ-ಬಲಭಾಗದಿಂದ, ಯದಿ ನಿರ್ಗಚ್ಛೇತ್-ಒಂದು ಪಕ್ಷ ಹೋಗಿದ್ದರೆ, ತರ್ಹಿ-ಆಗ, ತ್ವಯಾ-ನಿನ್ನಿಂದ, ಅಯಂ-ಈ (ನೀನು ಬಲಭಾಗದಲ್ಲಿ ಕಂಡ), ನಿಧಿಃ-ದ್ರವ್ಯನಿಧಿಯು, ಪ್ರಾಪ್ತವ್ಯಃ-ಹೊಂದಲ್ಪಡಬೇಕಾಗಿತ್ತು; ತತ್ಕರ್ಮ-ನಿಧಿ ಪ್ರಾಪ್ತಿಗೆ ಕಾರಣವಾದ ಪೂರ್ವಕರ್ಮವು, ತಾದೃಶಂ-ಹಾಗೆ (ಅದಕ್ಕೆ ಅನುಕೂಲವಾಗಿ) ಇತ್ತು; ಪ್ರದಕ್ಷಿಣಾತ್-ಪ್ರದಕ್ಷಿಣಮಾಡಿಕೊಂಡು ಹೋಗಬೇಕೆಂಬುದರ, ಅವಜ್ಞಾನಾತ್-ಅವಜ್ಞೆಯಿಂದ, (ತಿರಸ್ಕಾರದಿಂದ), ಭವತಃ-ನಿನಗೆ, ಈದೃಶಂ ಫಲಂ-ಈ ಪ್ರಕಾರದ (ಉಂಗುರ ಮಾತ್ರದ) ಅಲ್ಪ ಫಲವು (ದೊರೆಯಿತು); ಅನುಗ್ರಾಹಕ ವರ್ಜನಾತ್-(ಪೂರ್ವಕರ್ಮಾನುಸಾರವಾದ ಮಹಾಫಲಪ್ರಾಪ್ತಿಗೆ ಅವಶ್ಯಕವಾದ) ಅನುಗ್ರಾಹಕ ಸತ್ಕರ್ಮ (ಪ್ರದಕ್ಷಿಣೆ ಮಾಡುವುದೆಂಬ ಸತ್ಕರ್ಮದ) ಅಭಾವದಿಂದ, ಯತ್ ಬಹು-ಯಾವ ಮಹಾಫಲವೋ, ತತ್-ಅದು, ಅಲ್ಪಂ-ಅಲ್ಪವು.

---

ಆದರೆ, ದೇವಾಲಯವನ್ನು ಬಲಕ್ಕಿಟ್ಟುಕೊಂಡು ಹೋಗಬೇಕೆಂಬ ಸತ್ಕರ್ಮ (ಸದಾಚಾರ)ವನ್ನು ತಿರಸ್ಕರಿಸಿದ್ದರಿಂದ (ತಪ್ಪಾಗಿ ತಿಳಿದ ಕಾರಣ), ನಿನ್ನ ಪೂರ್ವಪುಣ್ಯಾನುಸಾರ ಈಗ ನಿನಗೆ ದೊರೆಯಲಿದ್ದ ಆ ಮಹಾನಿಧಿಯ ಬದಲಾಗಿ, ಒಂದು ಉಂಗುರ ಮಾತ್ರದ, ಅಲ್ಪ ಫಲವು ಲಭಿಸಿತು; ಪೂರ್ವಕರ್ಮಗಳು ಅನುಗ್ರಾಹಕ ಕರ್ಮಾನುಸಾರ ಫಲಪ್ರದಗಳಾಗುತ್ತವೆ; ನಿನ್ನ ಪೂರ್ವಪುಣ್ಯದ ಫಲವನ್ನು ನಿರೋಧಿಸುವ (ಪ್ರತಿಬಂಧಿಸುವ) ಅಸತ್ಕರ್ಮವು ನಿನ್ನಿಂದ ಸಂಭವಿಸಿದ ಕಾರಣ, ಹೀಗಾಯಿತು; ಆ ಪುಣ್ಯಪ್ರಭಾವದಿಂದಲೇ ನೀನು ಎಡಭಾಗದಿಂದ ಬಂದರೂ ಅಲ್ಲಿದ್ದ ಸರ್ಪವು ನಿನ್ನನ್ನು ಕಚ್ಚಲಿಲ್ಲ; ಸುಶ್ರೀಕನಾದರೋ ಸರ್ಪದಷ್ಟನಾಗಬೇಕಾದ ಪೂರ್ವಪಾಪವುಳ್ಳವನಾಗಿದ್ದನು, ಫಲೋದಯ ಕಾಲದಲ್ಲಿ ಆತನು ಆಚರಿಸಿದ ಸತ್ಕರ್ಮದಿಂದ, ಮಹಾದುಃಖವು ತಪ್ಪಿ ಕೇವಲ ಒಂದು ಮುಳ್ಳು ಮಾತ್ರ ಚುಚ್ಚಿತು; ಹೀಗೆ ಹೇಳಿ, ಬ್ರಾಹ್ಮಣನು ಅದೃಶ್ಯನಾದನು; ಸುಕಾಂತನು, ಬ್ರಾಹ್ಮಣನನ್ನು ನಮಸ್ಕರಿಸಿ, ಅಲ್ಲಿಂದ ಮುಂದೆ, ಸದಾಚಾರದ ವಿಷಯದಲ್ಲಿ ವಿಶ್ವಾಸವುಳ್ಳವನಾದನು ಮತ್ತು ಧರ್ಮ ಶ್ರದ್ಧೆಯುಳ್ಳ ತನ್ನ ಅಗ್ರಜನಲ್ಲಿ ವಿಶೇಷ ಭಕ್ತಿಯುಳ್ಳವನಾದನು; ಹೀಗೆ ಲೋಕದಲ್ಲಿ

ಅಭೂತ್-ಆಯಿತು; ಇದಾನೀಂ-ಈಗ, ತೇ-ನಿನಗೆ, ತತ್-ಅದು (ಆ ನಿಧಿಯು), ನ ಲಭ್ಯಂ-ಲಭಿಸುವುದಿಲ್ಲ; ಮಹಾಸರ್ಪೇಣ-ಮಹಾಸರ್ಪದಿಂದ, ರಕ್ಷಿತಂ-ರಕ್ಷಿಸುವುದು ಆಯಿತು (ಆ ನಿನ್ನ ಪೂರ್ವಪುಣ್ಯವು ಮಹಾಸರ್ಪದಿಂದ ನಿನ್ನನ್ನು ರಕ್ಷಿಸಿತು); ಸುತ್ರೀಣನಾದರೋ, ಸರ್ಪದಷ್ಟನಾಗಬೇಕಾದ ಪೂರ್ವ ಪಾಪಕರ್ಮದಿಂದ, ಪ್ರದಕ್ಷಿಣಾಕಾರವಾಗಿ ಹೋದ ಸತ್ಕರ್ಮನಿಮಿತ್ತದಿಂದ, ರಕ್ಷಿತನಾಗಿ, ಅಲ್ಲಿ ಮುಳ್ಳು ಮಾತ್ರ ಚುಚ್ಚಿತು); ಇತ್ಯುಕ್ತ್ವಾ-ಹೀಗೆ ಹೇಳಿ, ವಿಪ್ರಃ-ಬ್ರಾಹ್ಮಣನು, ಅಂತರ್ದಧೇ-ಅದೃಶ್ಯನಾದನು. ತತಃ-ಅಲ್ಲಿಂದ ಮುಂದೆ, ಸುಹಾಂತಃ-ಸುಹಾಂತನು, ಶ್ರದ್ಧಧೇ- (ಸದಾಚಾರವುಳ್ಳವರಾಗಬೇಕೆಂಬಲ್ಲಿ ಪುಣ್ಯಪಾಪಗಳ ಫಲಗಳು ಪೂರ್ಣವಾಗಿ ದೊರೆಯಲು, ಅನುಗ್ರಾಹಕ ಪುಣ್ಯಪಾಪಗಳು ಅವಶ್ಯಕವೆಂಬಲ್ಲಿ) ವಿಶ್ವಾಸವನ್ನು ಹೊಂದಿದನು; ತಂ-ಆ ಬ್ರಾಹ್ಮಣನನ್ನು, ವಂದಿತ್ವಾ-ವಂದಿಸಿ, ಸುಕೃತೀ-ಪುಣ್ಯವಂತನಾದ (ಧರ್ಮಶ್ರದ್ಧೆಯುಳ್ಳ), ಭ್ರಾತಃ-ಅಗ್ರಜನ, ಭಕ್ತಿಮಾನ್- ಭಕ್ತಿಯುಳ್ಳವನು, ಅಭೂತ್-ಆದನು ಏವಂ-ಹೀಗೆ ಲೋಕೇ-ಜಗತ್ತಿನಲ್ಲಿ ಜಾಯಮಾನಂ- ಉಂಟಾಗುವ, ಬಹುವಿಧಂ-ಬಹು ವಿಧವನ್ನು (ಫಲವೈಚಿತ್ರ್ಯ ಕಾರಣವನ್ನು). ನ ಬುದ್ಧ್ಯೇ-(ಅಜ್ಞಾನಿಯು) ತಿಳಿಯುವುದಿಲ್ಲ.

ಪ್ರತಿಗೃಹೀತಾ ಪಾತ್ರಂ ಸ್ಯಾದ್ದಾತುಃ ಪಾಪಸ್ಯ ಕರ್ಮಣಃ ॥ ೬೯ ॥
ತತ್ಪಾಪಸ್ಯಾಪಿ ಪಾತ್ರಂ ಸ್ಯುರ್ಯೇ ವಿಪ್ರಾನವಜಾನತೇ ।

ಪ್ರತಿಗೃಹೀತಾ-ದಾನ ಸ್ವೀಕಾರಮಾಡುವಾತನು, ದಾತುಃ-ದಾತನು (ದಾನ ಕೊಡುವವನ), ಪಾಪಸ್ಯ ಕರ್ಮಣಃ-ಪಾಪಕರ್ಮದ, ಪಾತ್ರಂ-ಪಾತ್ರನು (ಪಾಪವನ್ನು ಹೊಂದುವವನು), ಸ್ಯಾತ್-ಆಗುತ್ತಾನೆ; ಯೇ-ಯಾರು, ವಿಪ್ರಾನ್-ಬ್ರಾಹ್ಮಣರನ್ನು, ಅವಜಾನತೇ-ಅವಜ್ಞೆಯಿಂದ ಕಾಣುವರೋ (ಕೀಳಾಗಿ ಭಾವಿಸುವರೋ- ಅವಮಾನಗೊಳಿಸುವರೋ), (ತೇ-ಅವರು), ತತ್ಪಾಪಸ್ಯ ಅಪಿ-ಆ ಪಾಪಕ್ಕಾದರೂ, ಪಾತ್ರಂ ಸ್ಯುಃ-ಪಾತ್ರರು (ಹೊಂದುವವರು) ಆಗುವರು.

ಸಂತಪ್ತವ್ರತಚಾರೀಣಾಂ ಪ್ರಜಾನಾಂ ನಾಮ ವೈ ಹರೇಃ ।
ಪಾಪಾನಿ ನಿಂದಕಾನಾಂ ಸ್ಯುರ್ನಿಂದೇತ್ಸದ್ಭಾವಂಸ್ತತಃ ॥ ೭೦ ॥

---

ಕಂಡುಬರುವ ಕರ್ಮಫಲವೈಚಿತ್ರ್ಯಕಾರಣವು ಪುಣ್ಯಪಾಪವೆಂದು ಅಜ್ಞಾನಿಗಳು ತಿಳಿಯುವುದಿಲ್ಲ (೬೪-೬೮). ದಾನ ಕೊಡುವವನ (ದಾತನ) ಪಾಪಕ್ಕೆ ದಾನ ಸ್ವೀಕಾರಮಾಡುವವನು ಪಾತ್ರನಾಗುತ್ತಾನೆ; ಆ ಪಾಪವು, ಯಾರು ಬ್ರಾಹ್ಮಣರನ್ನು ಕೀಳಾಗಿ ತಿಳಿದು ಅ ವ ಮಾ ನಿ ಸು ವ ರೋ, ಅವರನ್ನು ಸೇರುತ್ತದೆ (೬೯). ಭಗವನ್ನಾಮಕೀರ್ತನಾದಿಗಳಲ್ಲಿಯೇ ಪೂರ್ಣಾಸಕ್ತರಾದವರ ಮತ್ತು ಶ್ರೀಹರಿನಾಮವನ್ನು ಜಪಿಸುವವರ, ಪಾಪಗಳು, ಅವರ ನಿಂದಕರನ್ನು ಹೊಂದುವವು; ಆದರಿಂದ

ಸಂಪನ್ನತ್ರವಣಾದೀನಾಂ-(ಭಗವತ್ಕಥಾ) ಶ್ರವಣಾದಿಗಳಲ್ಲಿ ಆಸಕ್ತರಾದವರ, ಹರೇಃ-ಶ್ರೀಹರಿಯ, ನಾಮ-ನಾಮವನ್ನು ಜಪತಾಂ-ಜಪಿಸತಕ್ಕವರ, ಪಾಪಾನಿ-ಪಾಪಗಳು, ನಿಂದಕಾನಾಂ ವೈ-(ಅವರನ್ನು) ನಿಂದಿಸತಕ್ಕವರಿಗೇ, ಸ್ಯುಃ-ಸಲ್ಲುತ್ತವೆ (ಮುಟ್ಟುತ್ತವೆ); ತತಃ-ಆದ್ದರಿಂದ, ಸಜ್ಜನಾನ್-ಸಜ್ಜನರನ್ನು (ಸದಾಚಾರವುಳ್ಳವರನ್ನು), ನ ನಿಂದೇತ್-ನಿಂದಿಸಕೂಡದು.

**ಸಂಗಾತ್ ಸಂಕ್ರಮತೇ ಪುಣ್ಯಂ ಪಾಪಂ ವಾಪ್ಯಥವಾಂತತಃ ।**
**ಸತ್ಸಂಗಮೇವ ಕುರ್ವೀತ ದುಸ್ಸಂಗಂ ದೂರತಸ್ತ್ಯಜೇತ್ ॥ ೭೧ ॥**

ಸಂಗಾತ್-ಸಂಗದಿಂದ (ಅನ್ಯರ ಸಹವಾಸಾದಿಗಳಿಂದ), ಪುಣ್ಯಂ-ಪುಣ್ಯವು, ಸಂಕ್ರಮತೇ-(ನಮಗೆ) ಬಂದು ಸೇರುತ್ತದೆ, ಅಥವಾ-ಅಥವಾ (ಅದಿಲ್ಲದಿದ್ದರೆ), ಪಾಪಂ ವಾ-ಪಾಪವಾದರೂ, ಅಂತತಃ-ನಮಗೆ ತಿಳಿಯದಂತೆ, (ಸಂಕ್ರಮತೇ-ಬಂದು ಸೇರುತ್ತದೆ); (ಆದ್ದರಿಂದ) ಸತ್ಸಂಗಮೇವ-ಸಜ್ಜನಸಂಗವನ್ನೇ, ಕುರ್ವೀತ-ಮಾಡಬೇಕು; ದೂರತಃ-ದೂರದಿಂದ, ದುಸ್ಸಂಗಂ-ದುರ್ಜನಸಂಗವನ್ನು, ತ್ಯಜೇತ್-ಬಿಡತಕ್ಕದ್ದು.

**ಸಾಕ್ಷಾತ್ಕಾರೇಽಪಿ ಯೋ ವಿಷ್ಣೋಃ ಕರ್ಮಣ್ಯಪಿ ಉದಾಹೃತಃ ।**
**ತತ್ರಾಪಿ ಪಾಪಭಾಗಃ ಸ್ಯಾನ್ನಿಂದಕಾನಾಂ ನ ಸಂಶಯಃ ॥ ೭೨ ॥**
**ತನ್ಮಿತ್ರಾಣಾಂ ಪುಣ್ಯಭಾಗ ಇತ್ಯೇವ ಹಿ ವಿನಿರ್ಣಯಃ ।**
**ಅಪರೋಕ್ಷದೃಶಃ ಕರ್ಮ ಕ್ರಿಯಮಾಣಂ ನ ಲಿಪ್ಯತೇ ॥ ೭೩ ॥**
**ಇತಿ ಯತ್ ಪ್ರೋಚ್ಯತೇ ವಿಪ್ರ ಜ್ಞೇಯಂ ತದಪಿ ನೋ ವೃಥಾ ।**
**ತದ್ಬಂಧಕಂ ಭವೇನ್ನೈವ ನ ಲೇಪಸ್ತು ಉಚ್ಯತೇ ॥ ೭೪ ॥**
**ಮುಖ್ಯತಸ್ತು ಫಲಂ ತಸ್ಯ ಮುಕ್ತಾವೇವ ಭವಿಷ್ಯತಿ ।**
**ಸ್ವರ್ಗಾದಾ ಸುಖೋತ್ಪ್ರಾಯಃ ಪಾಪೇನ ಚ ಸುಖೋನತಾ ॥ ೭೫ ॥**

---

ಸಜ್ಜನರನ್ನು ನಿಂದಿಸತಕ್ಕದ್ದಲ್ಲ (೭೦). ಸಂಗದಿಂದ (ಸಹವಾಸಾದಿಗಳಿಂದ) ಪುಣ್ಯವಾಗಲಿ, ಪಾಪವಾಗಲಿ, ತಿಳಿಯದಂತೆ, ನಮ್ಮನ್ನು ಬಂದು ಸೇರುತ್ತವೆ; ಆ ಕಾರಣದಿಂದ (ಪುಣ್ಯವನ್ನೇ ದೊರಕಿಸುವ) ಸತ್ಸಂಗವನ್ನೇ ಮಾಡತಕ್ಕದ್ದು—ದುಸ್ಸಂಗವನ್ನು ದೂರವಿದ್ದು ತ್ಯಜಿಸಬೇಕು (೭೧). ಶ್ರೀವಿಷ್ಣುವಿನ ಸಾಕ್ಷಾತ್ಕಾರವಾದಾಗ (ಅಪರೋಕ್ಷ

ಅಭೂತ್-ಆಯಿತು; ಇದಾನೀಂ-ಈಗ, ತೇ-ನಿನಗೆ, ತತ್-ಅದು (ಆ ನಿಧಿಯು), ನ ಲಭ್ಯಂ-ಲಭಿಸುವುದಿಲ್ಲ; ಮಹಾಸರ್ಪೇಣ-ಮಹಾಸರ್ಪದಿಂದ, ರಕ್ಷಿತಂ-ರಕ್ಷಿಸುವು ದಾಯಿತು (ಆ ನಿನ್ನ ಪೂರ್ವಪುಣ್ಯವು ಮಹಾಸರ್ಪದಿಂದ ನಿನ್ನನ್ನು ರಕ್ಷಿಸಿತು); ಸುಶ್ರೀಕನಾದರೋ, ಸರ್ಪದಷ್ಟನಾಗಬೇಕಾದ ಪೂರ್ವ ಪಾಪಕರ್ಮ ದಿಂದ, ಪ್ರದಕ್ಷಿಣಾಕಾರವಾಗಿ ಹೋದ ಸತ್ಕರ್ಮನಿಮಿತ್ತದಿಂದ, ರಕ್ಷಿತನಾಗಿ, ಕಾಲಲ್ಲಿ ಮುಳ್ಳು ಮಾತ್ರ ಚುಚ್ಚಿತು); ಇತ್ಯುಕ್ತ್ವಾ-ಹೀಗೆ ಹೇಳಿ, ವಿಪ್ರಃ-ಬ್ರಾಹ್ಮಣನು, ಅಂತರ್ದಧೇ-ಅದೃಶ್ಯನಾದನು; ತತಃ-ಅಲ್ಲಿಂದ ಮುಂದೆ, ಸುಕಾಂತಃ-ಸುಕಾಂತನು, ಶ್ರದ್ದಧೇ- (ಸದಾಚಾರವುಳ್ಳವರಾಗಬೇಕೆಂಬಲ್ಲಿ ಪುಣ್ಯಪಾಪಗಳ ಫಲಗಳು ಪೂರ್ಣವಾಗಿ ದೊರೆಯಲು, ಅನುಗ್ರಾಹಕ ಪುಣ್ಯಪಾಪಗಳು ಅವಶ್ಯಕವೆಂಬಲ್ಲಿ) ವಿಶ್ವಾಸವನ್ನು ಹೊಂದಿದನು; ತಂ-ಆ ಬ್ರಾಹ್ಮಣನನ್ನು, ವಂದಿತ್ವಾ-ವಂದಿಸಿ, ಸುಕೃತೇಃ-ಪುಣ್ಯವಂತನಾದ (ಧರ್ಮಶ್ರದ್ಧೆಯುಳ್ಳ), ಭ್ರಾತುಃ-ಅಗ್ರಜನ, ಭಕ್ತಿಮಾನ್- ಭಕ್ತಿಯುಳ್ಳವನು, ಅಭೂತ್-ಆದನು. ಏವಂ-ಹೀಗೆ, ಲೋಕೇ-ಜಗತ್ತಿನಲ್ಲಿ ಜಾಯಮಾನಂ- ಉಂಟಾಗುವ, ಬಹುವಿಧಂ-ಬಹು ವಿಧವನ್ನು (ಫಲವೈಚಿತ್ರ್ಯ ಕಾರಣವನ್ನು), ನ ಬುದ್ಧ್ಯತೇ-(ಅಜ್ಞಾನಿಯು) ತಿಳಿಯುವುದಿಲ್ಲ.

**ಪ್ರತಿಗೃಹೀತಾ ಪಾತ್ರಂ ಸ್ಯಾದ್ದಾತುಃ ಪಾಪಸ್ಯ ಕರ್ಮಣಃ ॥ ೭೯ ॥**
**ತತ್ಪಾಪಸ್ಯಾಪಿ ಪಾತ್ರಂ ಸ್ಯುರ್ಯೇ ವಿಪ್ರಾನವಜಾನತೇ ।**

ಪ್ರತಿಗೃಹೀತಾ-ದಾನ ಸ್ವೀಕಾರಮಾಡುವಾತನು, ದಾತುಃ-ದಾತನು (ದಾನ ಕೊಡುವವನ), ಪಾಪಸ್ಯ ಕರ್ಮಣಃ-ಪಾಪಕರ್ಮದ, ಪಾತ್ರಂ-ಪಾತ್ರನು (ಪಾಪವನ್ನು ಹೊಂದುವವನು), ಸ್ಯಾತ್-ಆಗುತ್ತಾನೆ; ಯೇ-ಯಾರು, ವಿಪ್ರಾನ್-ಬ್ರಾಹ್ಮಣರನ್ನು ಅವಜಾನತೇ-ಅವಜ್ಞೆಯಿಂದ ಕಾಣುವರೋ (ಕೀಳಾಗಿ ಭಾವಿಸುವರೋ- ಅವಮಾನ ಗೊಳಿಸುವರೋ), (ತೇ-ಅವರು), ತತ್ಪಾಪಸ್ಯ ಅಪಿ-ಆ ಪಾಪಕ್ಕಾದರೂ, ಪಾತ್ರಂ ಸ್ಯುಃ-ಪಾತ್ರರು (ಹೊಂದುವರು) ಆಗುವರು.

**ಸಂಪನ್ನಶ್ರವಣಾದೀನಾಂ ಜಪತಾಂ ನಾಮ ವೈ ಹರೇಃ ।**
**ಪಾಪಾನಿ ನಿಂದಕಾನಾಂ ಸ್ಯುರ್ನನಿಂದೇತ್ತಜ್ಜನಾಂಸ್ತತಃ ॥ ೭೦ ॥**

---

ಕಂಡುಬರುವ ಕರ್ಮಫಲವೈಚಿತ್ರ್ಯಕಾರಣವು ಬಹುಪ್ರಕಾರವೆಂದು ಅಜ್ಞಾನಿಗಳು ತಿಳಿಯುವುದಿಲ್ಲ (೬೪-೬೮). ದಾನ ಕೊಡುವವನ (ದಾತನ) ಪಾಪಕ್ಕೆ ದಾನ ಸ್ವೀಕಾರಮಾಡುವವನು ಪಾತ್ರನಾಗುತ್ತಾನೆ; ಈ ಪಾಪವು, ಯಾರು ಬ್ರಾಹ್ಮಣರನ್ನು ಕೀಳಾಗಿ ತಿಳಿದು ಅ ವ ಮಾ ನಿ ಸು ವ ರೋ, ಅವರನ್ನು ಸೇರುತ್ತದೆ (೬೯). ಭಗವತ್ಕಥಾಶ್ರವಣಾದಿಗಳಲ್ಲಿಯೇ ಪೂರ್ಣಾಸಕ್ತರಾದವರ ಮತ್ತು ಶ್ರೀಹರಿನಾಮವನ್ನು ಜಪಿಸುವವರ, ಪಾಪಗಳು, ಅವರ ನಿಂದಕರನ್ನು ಹೊಂದುತ್ತವೆ; ಆದ್ದರಿಂದ

ಸಂಪನ್ನಶ್ರವಣಾದೀನಾಂ-(ಭಗವತ್ಕಥಾ) ಶ್ರವಣಾದಿಗಳಲ್ಲಿ ಆಸಕ್ತರಾದವರ, ಹರೇಃ-ಶ್ರೀಹರಿಯ, ನಾಮ-ನಾಮವನ್ನು ಜಪತಾಂ-ಜಪಿಸತಕ್ಕವರ, ಪಾಪಾನಿ-ಪಾಪಗಳು, ನಿಂದಕಾನಾಂ ವೈ-(ಅವರನ್ನು) ನಿಂದಿಸತಕ್ಕವರಿಗೇ, ಸ್ಯುಃ-ಸಲ್ಲುತ್ತವೆ (ಮುಟ್ಟುತ್ತವೆ); ತತಃ-ಆದ್ದರಿಂದ, ಸಜ್ಜನಾನ್-ಸಜ್ಜನರನ್ನು (ಸದಾಚಾರವುಳ್ಳವರನ್ನು), ನ ನಿಂದೇತ್-ನಿಂದಿಸಕೂಡದು.

**ಸಂಗಾತ್ ಸಂಕ್ರಮತೇ ಪುಣ್ಯಂ ಪಾಪಂ ವಾಪ್ಯಥವಾಂತತಃ ।**
**ಸತ್ಸಂಗಮೇವ ಕುರ್ವೀತ ದುಃಸಂಗಂ ದೂರತಸ್ತ್ಯಜೇತ್ ॥ ೭೧ ॥**

ಸಂಗಾತ್-ಸಂಗದಿಂದ (ಅನ್ಯರ ಸಹವಾಸಾದಿಗಳಿಂದ), ಪುಣ್ಯಂ-ಪುಣ್ಯವು, ಸಂಕ್ರಮತೇ-(ನಮಗೆ) ಬಂದು ಸೇರುತ್ತದೆ, ಅಥವಾ-ಅಥವಾ (ಅದಿಲ್ಲದಿದ್ದರೆ), ಪಾಪಂ ವಾ-ಪಾಪವಾದರೂ, ಅಂತತಃ-ನಮಗೆ ತಿಳಿಯದಂತೆ, (ಸಂಕ್ರಮತೇ-ಬಂದು ಸೇರುತ್ತದೆ); (ಆದ್ದರಿಂದ) ಸತ್ಸಂಗಮೇವ-ಸಜ್ಜನಸಂಗವನ್ನೇ, ಕುರ್ವೀತ-ಮಾಡಬೇಕು; ದೂರತಃ-ದೂರದಿಂದ, ದುಸ್ಸಂಗಂ-ದುರ್ಜನಸಂಗವನ್ನು ತ್ಯಜೇತ್-ಬಿಡತಕ್ಕದ್ದು.

**ಸಾಕ್ಷಾತ್ಕಾರೇಪಿ ಯೋ ವಿಷ್ಣೋಃ ಕರ್ಮಕ್ಷಯ ಉದಾಹೃತಃ ।**
**ತತ್ರಾಪಿ ಪಾಪಭಾಗಃ ಸ್ಯಾನ್ನಿಂದಕಾನಾಂ ನ ಸಂಶಯಃ ॥ ೭೨ ॥**
**ತನ್ಮಿತ್ರಾಣಾಂ ಪುಣ್ಯಭಾಗ ಇತ್ಯೇವ ಹಿ ವಿನಿರ್ಣಯಃ ।**
**ಅಪರೋಕ್ಷದೃಶಃ ಕರ್ಮ ಕ್ರಿಯಮಾಣಂ ನ ಲಿಪ್ಯತೇ ॥ ೭೩ ॥**
**ಇತಿ ಯತ್ ಪ್ರೋಚ್ಯತೇ ವಿಪ್ರ ಜ್ಞೇಯಂ ತದಪಿ ನೋ ವೃಥಾ ।**
**ತದ್ಬಂಧಕಂ ಭವೇನ್ನೈವ ನ ಲೇಪಸ್ತತ್ರ ಉಚ್ಯತೇ ॥ ೭೪ ॥**
**ಮುಖ್ಯತಸ್ತು ಫಲಂ ತಸ್ಯ ಮುಕ್ತಾವೇವ ಭವಿಷ್ಯತಿ ।**
**ಸತ್ಕರ್ಮಣಾ ಸುಖೋಚ್ಛ್ರಾಯಃ ಪಾಪೇನ ಚ ಸುಖೋನತಾ ॥ ೭೫ ॥**

---

ಸಜ್ಜನರನ್ನು ನಿಂದಿಸತಕ್ಕದ್ದಲ್ಲ (೭೦). ಸಂಗದಿಂದ (ಸಹವಾಸಾದಿಗಳಿಂದ) ಪುಣ್ಯವಾಗಲಿ, ಪಾಪವಾಗಲಿ, ತಿಳಿಯದಂತೆ, ನಮ್ಮನ್ನು ಬಂದು ಸೇರುತ್ತವೆ; ಈ ಕಾರಣದಿಂದ (ಪುಣ್ಯವನ್ನೇ ದೊರಕಿಸುವ) ಸತ್ಸಂಗವನ್ನೇ ಮಾಡತಕ್ಕದ್ದು—ದುಸ್ಸಂಗವನ್ನು ದೂರವಿಟ್ಟು ತ್ಯಜಿಸಬೇಕು (೭೧). ಶ್ರೀವಿಷ್ಣುವಿನ ಸಾಕ್ಷಾತ್ಕಾರವಾದಾಗ (ಅಪರೋಕ್ಷದರ್ಶನ ಲಭಿಸಿದಾಗ) ಜ್ಞಾನಿಯ ಪೂರ್ವಕರ್ಮವು ನಾಶಹೊಂದುವುದೆಂದು ಹೇಳಲಾಗುತ್ತದೆ; ಹಾಗೆ ನಷ್ಟವಾಗುವ ಕರ್ಮಗಳ ಪಾಪಭಾಗವು ಆ ಜ್ಞಾನಿಯ ನಿಂದಕರಿಗೆ ಸೇರುತ್ತದೆ; ಪುಣ್ಯಭಾಗವು ಆತನ ಸುಹೃದರಿಗೆ ಮುಟ್ಟುತ್ತದೆ— ಎಂಬುದು ನಿರ್ದಿಷ್ಟವಾದ ಶಾಸ್ತ್ರನಿರ್ಣಯವು; ಅಪರೋಕ್ಷಜ್ಞಾನಿಯು ಮಾಡುವ ಕರ್ಮಗಳು

**ತಾಮಸಾನಾಂ ತು ಜೀವಾನಾಂ ಸರ್ವಮೇತದ್ವಿಪರ್ಯಯಾತ್ ।**
**ಯೋಜನೀಯಮನೇನೈವ ನ್ಯಾಯೇನ ಸುಧಿಯಾಖಿಲಂ ॥ ೭೬ ॥**

ವಿಷ್ಣೋಃ-ಶ್ರೀಹರಿಯ, ಸಾಕ್ಷಾತ್ಕಾರೇ ಅಪಿ-ಸಾಕ್ಷಾತ್ಕಾರದಲ್ಲಿಯಾದರೂ (ಅಪರೋಕ್ಷದರ್ಶನವಾದಾಗ), ಯಃ-ಯಾವ, ಕರ್ಮಕ್ಷಯಃ-ಕರ್ಮಕ್ಷಯವು (ಕರ್ಮಗಳ ನಾಶವು), ಉದಾಹೃತಃ-ಹೇಳಲಾಗುವುದೋ, ತತ್ರಾಪಿ-ಅಲ್ಲಿಯೂ (ಆ ಕರ್ಮಗಳಲ್ಲಿ ಸಹ), ತನ್ನಿಂದಕಾನಾಂ-ಆ ಅಪರೋಕ್ಷಜ್ಞಾನಿಯ) ನಿಂದಕರಿಗೆ, ಪಾಪಭಾಗಃ-ಪಾಪಭಾಗವು, ಸ್ಯಾತ್-ಆಗುತ್ತದೆ (ಸೇರುತ್ತದೆ), ನ ಸಂಶಯಃ-ಸಂಶಯ ವಿಲ್ಲ; ತನ್ಮಿತ್ರಾಣಾಂ-ಆತನ ಮಿತ್ರರಿಗೆ (ಪ್ರೇಮಿಗಳಿಗೆ), ಪುಣ್ಯಭಾಗಃ-ಪುಣ್ಯಭಾಗವು, (ಸ್ಯಾತ್-ಸೇರುತ್ತದೆ), ಇತ್ಯೇವ-ಹೀಗೆಂದೇ, ವಿನಿರ್ಣಯಃ-ವಿಶೇಷ ನಿರ್ಣಯವು, ಹಿ-ಶಾಸ್ತ್ರಸಿದ್ಧವು; ಕ್ರಿಯಮಾಣಂ-ಮಾಡಲ್ಪಡುವ (ಅಪರೋಕ್ಷವಾದನಂತರ ಮಾಡುವ), ಕರ್ಮ-ಯಾವ ಕರ್ಮವೂ, ಅಪರೋಕ್ಷದೃಶಃ-ಅಪರೋಕ್ಷಜ್ಞಾನಿಗೆ, ನ ಲಿಪ್ಯತೇ-ಲೇಪಿಸುವುದಿಲ್ಲ (ಸಾಂಸಾರಿಕ ಸುಖ ದುಃಖಜನಕವಾಗುವುದಿಲ್ಲ); ವಿಪ್ರ-ಹೇ

---

(ಜ್ಞಾನಾನಂತರದ ಕರ್ಮಗಳು) ಆತನಿಗೆ ಲೇಪಿಸುವುದಿಲ್ಲ—ಹೀಗೆಂದಮಾತ್ರಕ್ಕೆ ಅವೆಲ್ಲವೂ ವ್ಯರ್ಥವೆಂದು ತಿಳಿಯಲಾಗದು; ಆ ಕರ್ಮಗಳು ಜ್ಞಾನಿಯನ್ನು ಪುನಃ ಸಂಸಾರದಲ್ಲಿ ಬಂಧಿಸುವುದಿಲ್ಲ—ಈ ಅರ್ಥದಲ್ಲಿ ಲೇಪಿಸುವುದಿಲ್ಲವೆಂದು ಹೇಳಿರುದು; ಮುಖ್ಯವಾಗಿ ಅವುಗಳ ಫಲಸಂಬಂಧವು, ಜ್ಞಾನಿಗೂ ಮುಕ್ತಿಯಲ್ಲಿ ಕಂಡುಬರುತ್ತದೆ; ಜ್ಞಾನಿಯು ಆಚರಿಸುವ ಪುಣ್ಯಕರ್ಮದಿಂದ ಮೋಕ್ಷದಲ್ಲಿ ಆನಂದಾಭಿವೃದ್ಧಿಯೂ, ಪಾಪಕರ್ಮದಿಂದ ಆನಂದಹ್ರಾಸವೂ ಉಂಟಾಗುತ್ತದೆ;[1] ತಮೋಯೋಗ್ಯ (ತಾಮಸ) ಜೀವರಿಗೆ ಈ ಎಲ್ಲವನ್ನು ವಿರುದ್ಧ ಕ್ರಮದಿಂದ

1. ಅಪರೋಕ್ಷಜ್ಞಾನಿಕೃತ ಸತ್ಕರ್ಮಾನುಷ್ಠಾನವು ಮಹತ್ಫಲವುಳ್ಳದ್ದು. ಜ್ಞಾನಿಗೆ ದೊರೆಯುವ ಆ ಮಹಾಫಲವು ತ್ರಿವಿಧವಾಗಿರುತ್ತದೆ; (೧) ಅದು (ಜ್ಞಾನಿಯ ಸತ್ಕರ್ಮಾನುಷ್ಠಾನವು) ಲೋಕಶಿಕ್ಷಾರೂಪದ ಶ್ರೀಹರಿಸೇವೆಯಾಗುತ್ತದೆ; (೨) ಮುಕ್ತಿಯಲ್ಲಿ ತನಗೆ ದೊರೆಯುವ ಆನಂದದ ಉನ್ನತಕ್ಕೆ (ವೃದ್ಧಿಗೆ) ಕಾರಣವಾಗುತ್ತದೆ; (೩) ಫಲಕೊಡಲು ಉಪಕ್ರಮಿಸಿರುವ ಪ್ರಾರಬ್ಧಕರ್ಮದ ಭಾಗಕ್ಕೆ, ಉಪಮರ್ದ ಕಾರಣವಾಗುತ್ತದೆ. ಇನ್ನು ಜ್ಞಾನಿಕೃತವಿಕರ್ಮ (ದುಷ್ಕರ್ಮ) ಫಲವು ಅಧಿಕಾರಿಭೇದದಿಂದ ವಿಭಿನ್ನವಾಗಿರುತ್ತದೆ; ಚತುರ್ಮುಖಾದಿ ದೇವಶ್ರೇಷ್ಠರಿಗೆ ವಿಕರ್ಮಗಳು ಸಂಭವಿಸುವುದೇ ಇಲ್ಲ—ಬ್ರಹ್ಮೇತರರಲ್ಲಿ ಕೆಲವರಿಂದ ಸಂಭವಿಸುವುದು, ಪ್ರಬಲ ಪ್ರಾರಬ್ಧನಿಮಿತ್ತದಿಂದ ಮಾತ್ರ; ಇವರ ವಿಕರ್ಮವು ಸ್ವೋತ್ತಮದ್ರೋಹಾದಿ ರೂಪದ್ದಾದರೆ, ಅವರು ಹಿಂದೆ ಸಾಧಿಸಿದ ಆನಂದಾತಿಶಯಕ್ಕೆ ಮಾತ್ರ ಹ್ರಾಸವುಂಟಾಗುತ್ತದೆ; ಕ್ಲಿಪ್ತವಾದ ಆನಂದ ಮತ್ತು ಆನಂದಾತಿಶಯಗಳಿಗೆ ಯಾವ ಕಾರಣದಿಂದಲೂ ಹಾನಿಯಿಲ್ಲ; ಮನುಷ್ಯಾದಿ ಅಲ್ಪಾಧಿಕಾರಿಗಳಿಗೆ, ಕ್ಲಿಪ್ತವಾದ ಮೋಕ್ಷಾನಂದಕ್ಕೂ ವಿಕರ್ಮದಿಂದ ಹ್ರಾಸವುಂಟು —ಆನಂದದ ಅಭಿವ್ಯಕ್ತಿಯು ಪೂರ್ಣವಾಗಿ ಆಗದಿರುವುದೇ ಹ್ರಾಸವು.

ಶಾಂಡಿಲ್ಯರೇ! ಇತಿ ಯತ್-ಹೀಗೆಂದು (ಲೇಪಿಸುವುದಿಲ್ಲವೆಂದು) ಯಾವ ಕರ್ಮವು, ಪ್ರೋಚ್ಯತೇ-ಹೇಳಲ್ಪಡುತ್ತದೆಯೋ, ತದಪಿ-ಅದೂ ಸಹ, ನೋ ವೃಥಾ-ವ್ಯರ್ಥವಲ್ಲ; ತತ್-ಅದು (ಕ್ರಿಯಮಾಣ ಕರ್ಮವು), ಬಂಧಕಂ-(ಜ್ಞಾನಿಯನ್ನು) ಬಂಧಿಸುವುದು, ನೈವ ಭವೇತ್-ಆಗುವುದಿಲ್ಲ; ತತಃ-ಆ ಕಾರಣದಿಂದ, ನ ಲೇಪಃ-ಲೇಪವಿಲ್ಲೆಂದು, ಉಚ್ಯತೇ-ಹೇಳಲಾಗುತ್ತದೆ; ಮುಖ್ಯತಃ-ಮುಖ್ಯವಾಗಿ, ತಸ್ಯ-ಆ ಕರ್ಮದ, ಫಲಂ ತು-ಫಲವಾದರೋ, ಮುಕ್ತೌ ಏವ-ಮೋಕ್ಷದಲ್ಲಿಯೇ, ಭವಿಷ್ಯತಿ-ಉಂಟಾಗುತ್ತದೆ; ಸತ್ಕರ್ಮಣಾ-(ಜ್ಞಾನೋತ್ತರಕಾಲದ) ಸತ್ಕರ್ಮದಿಂದ, ಸುಖೋಚ್ಛ್ರಾಯಃ-(ಮೋಕ್ಷದಲ್ಲಿ) ಆನಂದವೃದ್ಧಿಯು, ಚ-ಮತ್ತು ಪಾಪೇನ-ಅಸತ್ಕರ್ಮದಿಂದ, ಸುಖೋನತಾ-ಆನಂದಹ್ರಾಸವೂ (ಭವಿಷ್ಯತಿ-ಉಂಟಾಗುತ್ತದೆ); ತಾಮಸಾನಾಂ-ತಾಮಸರಾದ, ಜೀವಾನಾಂ ತು-ಜೀವರಿಗಾದರೋ, ಏತತ್-ಈ, ಸರ್ವಂ-ಎಲ್ಲವೂ, ವಿಪರ್ಯಯಾತ್-ವಿರುದ್ಧಕ್ರಮದಿಂದ (ಭವಿಷ್ಯತಿ-ಸಂಭವಿಸುತ್ತದೆ); ಸುಧಿಯಾ-ವಿವೇಕಿಯಿಂದ, ಅಖಿಲಂ-ಎಲ್ಲವೂ, ಅನೇನ ಏವ ನ್ಯಾಯೇನ-ಈ ನ್ಯಾಯಾನುಸಾರವಾಗಿಯೇ, ಯೋಜನೀಯಃ-ಯೋಜನೆ ಮಾಡಲ್ಪಡತಕ್ಕದ್ದು (ಸಂಬಂಧವನ್ನು ಊಹಿಸಿ ವ್ಯವಸ್ಥೆಗೊಳಿಸಿಕೊಳ್ಳಬೇಕು).

**ಸಂಪದೋ ವಿಪದಶ್ಚೈವ ಪರ್ಯಾಯೇಣ ಭವಂತಿ ಹಿ ।**
**ಯಥಾತಥೈವ ಕರ್ಮಾಪಿ ದ್ವಿವಿಧಂ ಪರಿವರ್ತತೇ ॥ ೭೭ ॥**
**ಸತಾಂ ದ್ರೋಹಾದವಜ್ಞಾನಾತ್ತಾಪಂ ದ್ರೋಹಿಷು ವ್ರಜೇತ್ ।**
**ತೇಷಾಂ ಸಂಗೇನ ಭಕ್ತ್ಯಾ ಚ ತತ್ಪುಣ್ಯಂ ಸಂಗಿಷು ವ್ರಜೇತ್ ॥ ೭೮ ॥**

ಸಂಪದಃ-ಸಂಪತ್ತುಗಳು, ಚ-ಮತ್ತು ವಿಪದಃ ಏವ-ವಿಪತ್ತುಗಳೂ ಸಹ, ಪರ್ಯಾಯೇಣ-('ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ' ಎಂಬಂತೆ) ಒಂದಾದ ಮೇಲೊಂದು, ಭವಂತಿ ಹಿ-(ಬರುತ್ತವೆ) ಉಂಟಾಗುತ್ತ

---

ಯೋಜಿಸಿಕೊಳ್ಳಬೇಕು;[1] ವಿವೇಕಿಯು, ಇದೇ ನ್ಯಾಯದಿಂದ, ಸಮಸ್ತವನ್ನೂ (ಕರ್ಮಲೇಪ—ಲೇಪಾಭಾವಗಳ ಅರ್ಥವಿಶೇಷಗಳನ್ನು) ಊಹೆಯಿಂದ ಗ್ರಹಿಸತಕ್ಕದ್ದು (೭೨-೭೬). ಸಂಪತ್ತು ವಿಪತ್ತುಗಳು, (ಪರ್ಯಾಯದಿಂದ) ಒಂದಾದ

1. ತಮೋಯೋಗ್ಯರಿಗೆ ಅಪರೋಕ್ಷವಿಲ್ಲ—ಜ್ಞಾನಿಗಳ ಉಪದೇಶವಿದ್ದಾಗಲೂ ಅದನ್ನು ತಿರಸ್ಕರಿಸಿ, ಕೇವಲ ಅಧರ್ಮದಲ್ಲಿ ವಿಷಯಾಸಕ್ತರಾಗಿ, ಪ್ರವೃತ್ತಿಸುವುದೇ ಅವರ ಸಾಧನ ಪರಿಪೂರ್ತಿಯ ಕಾಲವೆಂದು ತಿಳಿಯಬೇಕು; ನಂತರ ಅವರಿಂದ ಸತ್ಕರ್ಮಗಳು ಸಂಭವಿಸುವುದೇ ಇಲ್ಲ. ಕೆಲವರಿಂದ ಪ್ರಾರಬ್ಧನಿಮಿತ್ತವಾಗಿ ಸಂಭವಿಸಿದರೆ, ಹಿಂದೆ ಸಾಧಿಸಿದ ಮೋಕ್ಷದಲ್ಲಿನ ದುಃಖಾತಿಶಯದಲ್ಲಿ ಹ್ರಾಸಕ್ಕೆ ಕಾರಣವಾಗುತ್ತದೆ; ಅಸತ್ಕರ್ಮಗಳಿಂದ ಎಲ್ಲ ತಮೋಯೋಗ್ಯರಿಗೆ, ಯಥಾಯೋಗ್ಯವಾಗಿ, ತಮಸ್ಸಿನಲ್ಲಿ ದುಃಖಾತಿಶಯವೇ ಲಭಿಸುತ್ತದೆ.

ವೇಬುರು, ಅನುಭವಸಿದ್ಧವಷ್ಟೆ; ಯಥಾತಥೈವ-ಇದು ಹೇಗೋ ಹಾಗೆಯೇ, ಕರ್ಮ ಅಪಿ-ಕರ್ಮವೂ ಸಹ, (ದ್ವಿವಿಧಂ) - (ಪುಣ್ಯಪಾಪರೂಪದಿಂದ) ಎರಡು ವಿಧ ವಾಗಿದ್ದು ಪರಿವರ್ತತೇ-ಸುತ್ತುತ್ತದೆ; (ಒಂದಾದ ಮೇಲೆ ಮತ್ತೊಂದು ಕೊಡಲಿಕ್ಕೆ ಆರಂಭಿಸುತ್ತವೆ); ಸತಾಂ-ಸಜ್ಜನರ, ದ್ರೋಹಾತ್-ದ್ರೋಹ (ದ್ವೇಷ-ವಂಚನೆ) ದಿಂದ, ಅವಜ್ಞಾನಾತ್-ಅವಮಾನದಿಂದಲೂ, ತತ್ಪಾಪಂ-(ಉಂಟಾಗುವ) ಆ ಪಾಪವು, ದ್ರೋಹಿಷು-ದ್ರೋಹ ಮಾಡಿದವರಲ್ಲಿ, ವ್ರಜೇತ್-ಸೇರುತ್ತದೆ (ಹೋಗುತ್ತದೆ); ತೇಷಾಂ-ಸಜ್ಜನರ, ಸಂಗೇನ-ಸಹವಾಸದಿಂದಲೂ, ಭಕ್ತ್ಯಾ ಚ-ಭಕ್ತಿಯಿಂದಲೂ (ಅವರಲ್ಲಿ ಮೂಡುವ ಪ್ರೇಮ, ಆದರಗಳಿಂದ) ಸಹ, ತತ್ಪುಣ್ಯಂ-ಉಂಟಾಗುವ ಪುಣ್ಯವು, ಸಂಗಿಷು-ಸಹವಾಸ ಮಾಡಿದವರಲ್ಲಿ, ವ್ರಜೇತ್- (ಹೋಗಿ) ಸೇರುತ್ತದೆ.

**ಏವಮೇವ ಹಿ ದುಷ್ಟಾನಾಂ ದ್ವೇಷಾತ್ತತ್ಪುಣ್ಯಭಾಗ್ಭವೇತ್ ।**

**ಭಕ್ತ್ಯಾ ಸಂಗೇನ ತತ್ಪಾಪಭಾಗೀ ಸ್ಯಾನ್ನಾತ್ರ ಸಂಶಯಃ ॥ ೭೯ ॥**

ಏವಮೇವ-ಹೀಗೆಯೇ, ದುಷ್ಟಾನಾಂ-ದುರ್ಜನರ, ದ್ವೇಷಾತ್-ದ್ವೇಷದಿಂದ, ತತ್ಪುಣ್ಯಭಾಕ್-ಉಂಟಾಗುವ ಪುಣ್ಯದ ಭಾಗಿಯು (ಪಾತ್ರನು), ಭವೇತ್-(ದ್ವೇಷಿಸುವವನು) ಆಗುತ್ತಾನೆ; ಭಕ್ತ್ಯಾ-(ದುರ್ಜನರಲ್ಲಿ) ಪ್ರೇಮಾದರಗಳಿಂದಲೂ, ಸಂಗೇನ-(ಅವರ) ಸಹವಾಸದಿಂದಲೂ, ತತ್ಪಾಪಭಾಗೀ-ಉಂಟಾಗುವ ಪಾಪಕ್ಕೆ ಪಾತ್ರನು, ಸ್ಯಾತ್-(ದುರ್ಜನ ಸಂಗದಿಂದ ಅವರನ್ನು ಪ್ರೀತಿಸುವವನು) ಆಗುವನು; ಅತ್ರ-ಈ ವಿಷಯದಲ್ಲಿ ನ ಸಂಶಯಃ-ಸಂಶಯವಿಲ್ಲ.

**ಜ್ಞಾನಸ್ಯ ಫಲಮೇತಾವದ್ಯೋ ವಿವೇಕಃ ಸತೋ ಸತಃ ।**

**ಪರಿಗ್ರಹಃ ಸತಾಂ ಶ್ರೇಯಾನಸತಾಂ ಚ ವಿವರ್ಜನಂ ॥ ೮೦ ॥**

ಸತಃ-ಸಜ್ಜನರ, ಅಸತಃ-ದುರ್ಜನರ, ಯಃ-ಯಾವ, ವಿವೇಕಃ-ವಿವೇಕವೋ (ಉಭಯರೊಡನೆ ವರ್ತಿಸುವ ವಿವೇಕವೋ), ಜ್ಞಾನಸ್ಯ-(ಆ) ಜ್ಞಾನದ, ಫಲಂ-ಫಲವು,

---

ಮೇಲೊಂದು ಉಂಟಾಗುತ್ತವೆ; ಅದರಂತೆ, ಅವುಗಳಿಗೆ ಕಾರಣವಾದ ಪುಣ್ಯಪಾಪಕರ್ಮಗಳೂ ಸಹ ಸುತ್ತುತ್ತವೆ (ಫಲಪ್ರಾಪ್ತಕಗಳಾಗುತ್ತವೆ); ಸಜ್ಜನರ ಅವಜ್ಞೆಯಿಂದಲೂ, ದ್ರೋಹದಿಂದಲೂ (ದ್ವೇಷದಿಂದಲೂ), ಉಂಟಾಗುವ ಪಾಪವು ದ್ವೇಷಿಗಳನ್ನು ಸೇರುತ್ತದೆ; ಸಜ್ಜನರ ಸಂಗದಿಂದಲೂ ಅವರಲ್ಲಿ ಪ್ರೇಮಾದರಗಳನ್ನು ಮಾಡುವುದರಿಂದ ಉಂಟಾಗುವ ಪುಣ್ಯವು, ಸಜ್ಜನಸಂಗ ಮಾಡಿದವರಲ್ಲಿ ಹೋಗಿ ಸೇರುತ್ತದೆ (೭೭-೭೮). ಹೀಗೆಯೇ ದುರ್ಜನರನ್ನು ದ್ವೇಷಿಸುವವನು, ಅದರಿಂದ ಉದಯಿಸುವ ಪುಣ್ಯವನ್ನು ಹೊಂದುತ್ತಾನೆ; ದುರ್ಜನರ ಸಂಗದಿಂದಲೂ ಅವರಲ್ಲಿ ಪ್ರೇಮಾದರಗಳನ್ನು ಮಾಡುವುದರಿಂದಲೂ ಉಂಟಾಗುವ ಪಾಪಕ್ಕೆ, ಅವರನ್ನು ಪ್ರೀತಿಸುವವನು ಪಾತ್ರನಾಗುತ್ತಾನೆ (೭೯). ಸಜ್ಜನರು ಮತ್ತು ದುರ್ಜನರನ್ನು ಗುರ್ತಿಸಿ

ಏತಾವತ್-ಇಷ್ಟೇ ಸರಿ (ಹಿಂದಿನ ಶ್ಲೋಕದಲ್ಲಿ ನಿರೂಪಿಸಿದಂತೆಯೇ ಸರಿ); (ಆದ್ದರಿಂದ) ಸತಾಂ ಪರಿಗ್ರಹಃ-ಸಜ್ಜನರನ್ನು ಹೊಂದುವುದು (ಅವರ ಸಹವಾಸವು), ಶ್ರೇಯಾನ್-ಶ್ರೇಯಸ್ಕರವು; ಅಸತಾಂ-ದುರ್ಜನರ, ವಿವರ್ಜನಂ ಚ-ಪರಿತ್ಯಾಗವೂ (ಶ್ರೇಯಾನ್).

**ದುರ್ನಿವಾಸೇಽಸತಾಂ ಸಂಗೋ ಯದಿ ಸ್ಯಾತ್ತರ್ಹಿ ಚೇತಸಾ ।**

**ಉದ್ವಿಜೇತ್ತತ್ಸಂಗತಸ್ತೇಷಾಂ ಮನಸಾ ಸಂಸ್ಮರೇತ್ಸತಃ ॥ ೮೧ ॥**

ಅಸತಾಂ-ದುರ್ಜನರ, ಸಂಗಃ-ಸಂಗವು (ಸಹವಾಸವು), ದುರ್ನಿವಾಸೇ-ಯದಿ ಸ್ಯಾತ್-ಅಪರಿಹಾರ್ಯವಾದ ಸಂದರ್ಭದಲ್ಲಿ ಆಗುವುದಾದರೆ, ತರ್ಹಿ-ಆಗ, ಚೇತಸಾ-ಮನಸ್ಸಿನಿಂದ, ತೇಷಾಂ-ಅವರ (ಆ ದುರ್ಜನರ), ಸಂಗತಃ-ಸಂಗದಿಂದ, ಉದ್ವಿಜೇತ್-ದ್ವೇಷಿಸುವವನಾಗಬೇಕು (ಭಯಗ್ರಸ್ತನಾಗಬೇಕು); ಮನಸಾ-ಮನಸ್ಸಿನಿಂದ, ಸತಃ-ಸಜ್ಜನರನ್ನು, ಸಂಸ್ಮರೇತ್-ಸ್ಮರಿಸಬೇಕು.

**ಮುಖ್ಯಂ ಹಿ ಪರಮಂ ಸತ್ತ್ವಂ ಭಕ್ತಿರ್ವಿಷ್ಣೋಸ್ತತಃ ಪರಂ ।**

**ತದ್ಭಕ್ತಭಕ್ತಿಸ್ತಸ್ಯಾಶ್ಚ ಸದಾಗಮರತಿಃ ಪರಾ ॥ ೮೨ ॥**

**ಅಸತ್ತ್ವಂ ಚ ಪರಂ ತದ್ವದ್ವಿಷ್ಣುದ್ವೇಷಪರಾ ತತಃ ।**

**ತದ್ದ್ವೇಷಿಭಕ್ತಿಸ್ತಸ್ಯಾಶ್ಚ ದುರಾಗಮರತಿಃ ಪರಾ ॥ ೮೩ ॥**

ವಿಷ್ಣೋಃ-ಶ್ರೀವಿಷ್ಣುವಿನ, ಭಕ್ತಿಃ-ಭಕ್ತಿಯು, ಮುಖ್ಯಂ-ಪ್ರಧಾನವಾದ, ಪರಮಂ ಸತ್ತ್ವಂ-ಶ್ರೇಷ್ಠವಾದ ಸದ್ಗುಣವು; ಹಿ-ಹೀಗೆಂಬುದು ಶಾಸ್ತ್ರ ನಿರ್ಣಯವು; ತತಃ ಪರಂ-ಅನಂತರ, ತದ್ಭಕ್ತಭಕ್ತಿಃ-ವಿಷ್ಣುಭಕ್ತರಲ್ಲಿ ಭಕ್ತಿಯು (ಸಪ್ರೇಮ ಪೂಜ್ಯತಾ ಬುದ್ಧಿಯು), ಚ-ಮತ್ತು ತಸ್ಯಾಃ-ಅದಕ್ಕಿಂತ (ಭಕ್ತಿದಾರ್ಢ್ಯಕ್ಕೆ ಅವಶ್ಯಕವಾದ), ಪರಾ-ಉತ್ತಮವಾದ (ತೀವ್ರವಾದ), ಸದಾಗಮರತಿಃ-ಸಚ್ಛಾಸ್ತ್ರಗಳಲ್ಲಿ ಆಸಕ್ತಿಯೂ,

---

ಅವರೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬ ವಿವೇಕದ ಜ್ಞಾನಕ್ಕೆ (ಹಿಂದಿನ ಶ್ಲೋಕದಲ್ಲಿ ಹೇಳಿರಂತೆ ಬರುವ) ಪುಣ್ಯಪಾಪಗಳೇ ಫಲಗಳು; ಆದ್ದರಿಂದ ಸಜ್ಜನರ ಸಂಗ ಮತ್ತು ಅವರಲ್ಲಿ ಪ್ರೇಮಾದರಗಳನ್ನು ಹೊಂದುವುದೇ ಶ್ರೇಯಃ ಸಾಧಕವು—ಹಾಗೂ, ದುರ್ಜನರ ಪರಿತ್ಯಾಗವೂ ಶ್ರೇಯಸ್ಕರವೇ, ಎಂದು ನಿಶ್ಚಯವಾಗಿ ತಿಳಿಯತಕ್ಕದ್ದು (೮೦). ವಾಸಾಯೋಗ್ಯವಾದ ಸ್ಥಳದಲ್ಲಿ ದುರ್ಜನರ ಸಂಗವುಂಟಾಗಿ, ತ್ಯಜಿಸುವುದು ಅಪರಿಹಾರ್ಯವಾದರೆ, ಆಗ ಮನಸ್ಸಿನಿಂದ ಅವರ ಸಂಗವನ್ನು ದ್ವೇಷಿಸಿ, ಅದರಿಂದ ಭಯಗ್ರಸ್ತನಾಗಿ, ಮನಸಾ ಸಜ್ಜನರನ್ನು ಸ್ಮರಿಸಬೇಕು (೮೧). ವಿಷ್ಣುಭಕ್ತಿಯು ಶ್ರೇಷ್ಠವಾದ ಸದ್ಗುಣವು; ನಂತರ ವಿಷ್ಣುಭಕ್ತರಲ್ಲಿ ಆದರವೂ, ಆ ನಂತರ ಸಚ್ಛಾಸ್ತ್ರಗಳಲ್ಲಿ ಪ್ರೀತಿಯೂ ಒಂದಕ್ಕಿಂತ ಮತ್ತೊಂದು ಅಧಿಕವಾಗಿ ಶ್ರೀವಿಷ್ಣು

(ಸತ್ತ್ವಂ-ಸದ್ಗುಣವೇ); ತದ್ವತ್-ಅದರಂತೆ, ವಿಷ್ಣುದ್ವೇಷಪರಾ-ಶ್ರೀವಿಷ್ಣುವಿನ ದ್ವೇಷ ಪರವಾದ (ನವವಿಧ ದ್ವೇಷಗಳನ್ನು ಪ್ರತಿಪಾದಿಸುವ), ದುರಾಗಮರತಿಃ- ದುಃಶಾಸ್ತ್ರಗಳ ಆಸಕ್ತಿಯು, ಪರಂ-ಅತಿ ಹೀನವಾದ (ಅತ್ಯಂತ ಕನಿಷ್ಠವಾದ), ಅಸತ್ತ್ವಂ-ದುರ್ಗುಣವು; ತತಃ-ಅದರನಂತರ, ತದ್ದ್ವೇಷಿ ಭಕ್ತಿ-ವಿಷ್ಣುದ್ವೇಷಿಗಳಲ್ಲಿ ಆದರವು, ತಸ್ಯಾಃ ಚ-(ವಿಷ್ಣುದ್ವೇಷಕ್ಕಿಂತ) ಅದಕ್ಕಿಂತ, ಪರಾ-ಹೆಚ್ಚಿನದು (ಕನಿಷ್ಠವು-ಅನರ್ಥಪ್ರದವು)[1].

**ಸರ್ವಥೈವ ತತೋ ವಿಪ್ರಾಃ ಸತಾಂ ಸಂಗೋಽಖಿಲಾದ್ವರಃ ।**
**ಸಾಧನೀಯಃ ಪ್ರಯತ್ನೇನ ತದ್ಧೀನಾ ನೈವ ಮೋಕ್ಷಿಣಃ ॥ ೮೪ ॥**

ವಿಪ್ರಾಃ-ಹೇ ಋಷಿಗಳೇ!, ತತಃ-ಆ ಕಾರಣದಿಂದ, ಸರ್ವಥಾ-ಸರ್ವ ವಿಧದಿಂದ, ಸತಾಂ-ಸಜ್ಜನರ, ಸಂಗಃ ಏವ-ಸಂಗವೇ (ಸಹವಾಸಾದಿಗಳೇ), ಅಖಿಲಾತ್-ಸಮಸ್ತಕ್ಕಿಂತಲೂ (ಸರ್ವಸಾಧನೆಗಳಕಿಂತ), ವರಃ-ಶ್ರೇಷ್ಠವಾದುದು; ಪ್ರಯತ್ನೇನ-(ಸರ್ವ) ಪ್ರಯತ್ನದಿಂದ, ಸಾಧನೀಯಃ-ದೊರಕಿಸಿಕೊಳ್ಳಲು ಯೋಗ್ಯ ವಾದುದು; ತದ್ಧೀನಾಃ-ಅದಿಲ್ಲದವರು (ಸಜ್ಜನಸಂಗವಿಲ್ಲದವರು); ಮೋಕ್ಷಿಣಃ-ಮೋಕ್ಷವನ್ನು ಹೊಂದುವವರು, ನೈವ-ಆಗುವುದೇ ಇಲ್ಲ.

**ಸಲ್ಲಾಪಃ ಸ್ಪರ್ಶನಂ ಮೌನಂ ಭೋಜನಂ ಚ ಸಹಾಸನಂ ।**
**ಪ್ರೀತ್ಯಾ ಸಂಚಿಂತನಂ ಚೈವ ಷೋಢಾ ಸಂಗತಿರುಚ್ಯತೇ ॥ ೮೫ ॥**

---

ಪ್ರೀತಿಗೆ ಕಾರಣವಾಗುತ್ತವೆ; ಅದರಂತೆ, ವಿಷ್ಣುದ್ವೇಷವೂ, ಅದಕ್ಕಿಂತ ವಿಷ್ಣುಭಕ್ತರ ದ್ವೇಷವೂ, ಅದಕ್ಕಿಂತ ದುಃಶಾಸ್ತ್ರಗಳಲ್ಲಿ ಪ್ರೀತಿಯೂ, ಅಧಿಕವಾಗಿ ತಮೋಯೋಗ್ಯರಿಗೆ ತಮಸ್ಸಾಧಕವಾಗುತ್ತವೆ; ಅನ್ಯರಿಗೆ ಮಹಾ ಅನರ್ಥಗಳಿಗೆ ಕಾರಣವಾಗುತ್ತವೆ' (೮೨-೮೩). ಆದ್ದರಿಂದ, ಹೇ ಋಷಿಗಳೇ! ಸರ್ವವಿಧದಿಂದ ಸಜ್ಜನ ಸಂಗವೇ ಸಕಲ ಮೋಕ್ಷಸಾಧನೆಗಳಲ್ಲಿ ಶ್ರೇಷ್ಠವಾದುದು; ಅದನ್ನೇ ಸರ್ವಪ್ರಯತ್ನದಿಂದ ದೊರಕಿಸಿಕೊಳ್ಳಬೇಕು; ಸಜ್ಜನಸಂಗವಿಲ್ಲದೇ ಮೋಕ್ಷವು ದೊರೆಯುವುದಿಲ್ಲ[2] (೮೪). ಸಲ್ಲಾಪ, ಅಂಗಸ್ಪರ್ಶ, ಸದಾ ಭಗವದ್ವಿಷಯಾಲಾಪಗಳಲ್ಲಿ ತೊಡಗುವುದು (ಮೌನ),

---

1. ಹರಿದ್ವೇಷಕ್ಕಿಂತಲೂ, ಹರಿಭಕ್ತರ ದ್ವೇಷವು ಹೆಚ್ಚು ಅನರ್ಥಕರವು—ಶ್ರೀಹರಿಯ ಭಕ್ತವಾತ್ಸಲ್ಯವು, ಭಕ್ತರ ದ್ವೇಷಿಯನ್ನು ಹೆಚ್ಚಾಗಿ ಶಿಕ್ಷಿಸುವಂತೆ ಮಾಡುತ್ತದೆ.

2. 'ಭವಾಪವರ್ಗೋ ಭ್ರಮತೋ ಯದಾ ಭವೇಜ್ಜನಸ್ಯ ತರ್ಹ್ಯಚ್ಯುತ ಸತ್ಸಮಾಗಮಃ । ಸತ್ಸಂಗಮೋ ಯರ್ಹಿ ತದೈವ ಸದ್ಗತೌ ಪರಾವರೇಶೇ ತ್ವಯಿ ಜಾಯತೇ ರತಿಃ ॥' —(ಭಾಗವತ)-ಸಂಸಾರದಲ್ಲಿ ಸುತ್ತುವ ಜೀವರಿಗೆ ಬಿಡುಗಡೆಕಾಲ ಸಮೀಪಿಸಿದಾಗ, ದೈವೇಚ್ಛೆಯಿಂದ ಸಜ್ಜನ ಸಹವಾಸವು ಲಭಿಸುತ್ತದೆ; ಸತ್ಸಂಗದಿಂದಲೇ, ಸದ್ಗತಿದಾತನೂ, ಪುರುಷೋತ್ತಮನೂ ಆದ ನಿನ್ನಲ್ಲಿ ಭಕ್ತಿಯುಂಟಾಗುತ್ತದೆ.

ಸಲ್ಲಾಪಃ-(ಸೌಹಾರ್ದಯುಕ್ತವಾದ) ಪರಸ್ಪರ ಸಂಭಾಷಣ, ಸ್ಪರ್ಶನಂ-(ಆಲಿಂಗನಾದಿ) ಅಂಗಸ್ಪರ್ಶ, ಮೌನಂ-ಸಹಚಿಂತನ (ಭಗವದನ್ಯವಿಷಯಾಲಾಪವಿಲ್ಲದಿರುವುದು), ಭೋಜನಂ-(ಏಕತ್ರ) ಭೋಜನ, ಸಹಾಸನಂ-ಒಂದೇ ಆಸನದಲ್ಲಿ ಕೂಡುವುದು, ಪ್ರೀತ್ಯಾ-ಆದರಪೂರ್ವಕವಾಗಿ, ಸಂಚಿಂತನಂ-ಸದ್ವಿಷಯಗಳ ಆಲೋಚನೆಯಲ್ಲಿ ತೊಡಗುವುದು. ಷೋಢಾ ಚೈವ-ಈ ಆರು ವಿಧದ ಪರಸ್ಪರ ವ್ಯವಹಾರಗಳೇ, ಸಂಗತಿಃ-ಸಂಗವೆಂದು, ಉಚ್ಯತೇ-ಹೇಳಲ್ಪಡುತ್ತದೆ.

**ಕರ್ಮ ಚಾಪಿ ವೃಥಾ ನೈವ ತತಃ ಪುಣ್ಯಂ ಸಮಾಚರೇತ್ ।**
**ಪಾಪಂ ಪರಿಹರೇಚ್ಛಕ್ತ್ಯಾ ಜ್ಞಾತಪಾಪಾಪನುತ್ತಯೇ ॥ ೮೬ ॥**
**ಜಪದಾನಾದಿಭಿರ್ಯತ್ನಂ ಸದಾ ವಿದ್ವಾನ್ ಸಮಾಚರೇತ್ ।**

ಕರ್ಮ ಚ ಅಪಿ-ಕರ್ಮವಾದರೋ, ವೃಥಾ ನೈವ-ವ್ಯರ್ಥವಾಗುವುದೇ ಇಲ್ಲ (ಪ್ರತಿ ಕರ್ಮಕ್ಕೂ ಫಲವಿದ್ದೇ ಇರುತ್ತದೆ); ತತಃ-ಆದ್ದರಿಂದ, ಪುಣ್ಯಂ-ಪುಣ್ಯ ಕರ್ಮವನ್ನು ಸಮಾಚರೇತ್-ಬುದ್ಧಿಪೂರ್ವಕ ಆಚರಿಸಬೇಕು, ಶಕ್ತ್ಯಾ-ತನ್ನ ಶಕ್ತಿಯಿದ್ದಷ್ಟೂ ಪಾಪಂ-ಪಾಪಕರ್ಮವನ್ನು ಪರಿಹರೇತ್-(ಸಂಘಟಿಸದಂತೆ) ಪರಿಹರಿಸಿಕೊಳ್ಳಬೇಕು; ಜ್ಞಾತಪಾಪಾಪನುತ್ತಯೇ-ಜ್ಞಾತವಾದ ಪಾಪಗಳನ್ನು ಕಳೆದುಕೊಳ್ಳಲಿಕ್ಕಾಗಿ, ಸದಾ-ಸರ್ವದಾ, ವಿದ್ವಾನ್-ವಿವೇಕಿಯು, ಜಪದಾನಾದಿಭಿಃ-ಜಪ ದಾನಾದಿಗಳಿಂದ, ಯತ್ನಂ-ಯತ್ನವನ್ನು, ಸಮಾಚರೇತ್-ಮಾಡಬೇಕು.

**ಧನಮಿಷ್ಟಂ ಹಿ ಸರ್ವೇಷಾಂ ಮೂಲಂ ಸರ್ವಸುಖಸ್ಯ ಚ ॥ ೮೭ ॥**
**ಪ್ರಾಯೇಣ ಧನಸಂಪ್ರಾಪ್ತಿಃ ವಿನಾ ಪಾಪಂ ನ ಜಾಯತೇ ।**
**ದುರ್ನಿವಾರಮತಃ ಪಾಪಂ ತಸ್ಮಾತ್ತದಪನುತ್ತಯೇ ॥ ೮೮ ॥**

---

ಭೋಜನ, ಸಹಾಸನ, ಪ್ರೀತಿಯಿಂದ ಮಿಳಿತರಾಗಿ ಸಹಚಿಂತನೆ ಮಾಡುವುದು, ಇವು ಆರು ವಿಧದ ವ್ಯವಹಾರಗಳೇ ಸಂಗ (ಸಂಗತಿ) ಎನಿಸುತ್ತವೆ (೮೫). ಮನುಷ್ಯನು ಮಾಡುವ ಯಾವುದೊಂದು ಕರ್ಮವೂ ವ್ಯರ್ಥವಾಗುವುದಿಲ್ಲ—ಪ್ರತಿಕರ್ಮಕ್ಕೂ ಫಲವಿರುತ್ತದೆ. ಆದ್ದರಿಂದ ಪುಣ್ಯಕರ್ಮವನ್ನೇ ಆಚರಿಸತಕ್ಕದ್ದು—ಪಾಪಕರ್ಮವನ್ನು ತ್ಯಜಿಸಬೇಕು; ಜ್ಞಾನಪೂರ್ವಕ ಮಾಡಿದ ಕರ್ಮಗಳನ್ನು (ತಿಳಿದ ಪಾಪಗಳನ್ನು) ಪರಿಹರಿಸಿಕೊಳ್ಳಲು ಜಪದಾನಾದಿಗಳಿಂದ, ಸದಾ, ಯತ್ನಿಸುತ್ತಿರಬೇಕು (೮೬). ಪಾಪಗಳಾದರೂ, ತಪ್ಪದೇ ಸರ್ವರಿಗೂ ಪ್ರಾಪ್ತವಾಗುತ್ತದೆ; ಏಕೆಂದರೆ, ಸರ್ವರ ಸರ್ವಸುಖಕ್ಕೆ ಮೂಲಕಾರಣವಾದುದು ಧನವು; ಸುಖಕ್ಕಾಗಿ ಸರ್ವರೂ ಯತ್ನಿಸುತ್ತಾರೆ); ಆ ಧನವು ಪಾಪವಿಲ್ಲದೇ ದೊರೆಯುವುದಿಲ್ಲ (ಪಾಪವನ್ನಾಚರಿಸದೇ

**ಯತೇತ ಬುದ್ಧಿಮಾನ್ನಿತ್ಯಂ ಶಕ್ತ್ಯಾ ದಾನಜಪಾದಿಭಿಃ ।**

ಸರ್ವೇಷಾಂ-ಸರ್ವರಿಗೆ, ಧನಂ-ಧನವು, ಇಷ್ಟಂ-ಇಷ್ಟವಾದುದು; ಹಿ-ಏಕೆಂದರೆ, ಸರ್ವಸುಖಸ್ಯ-(ಅದು) ಎಲ್ಲರ ಎಲ್ಲ ಸುಖದ, ಮೂಲಂ-ಮೂಲವು (ಕಾರಣವು); ಧನಸಂಪ್ರಾಪ್ತಿಃ-(ಸುಖಮೂಲವಾದ) ಈ ಧನದ ಲಾಭವು, ಪಾಪಂ ವಿನಾ-ಪಾಪವಿಲ್ಲದೇ, ಪ್ರಾಯಃ-ಬಹುವಾಗಿ, ನ ಜಾಯತೇ-ಉಂಟಾಗುವುದಿಲ್ಲ; ಅತಃ-ಆದ್ದರಿಂದ, ಪಾಪಂ-ಪಾಪವು, ದುರ್ನಿವಾರಂ-(ಎಲ್ಲರಿಗೂ) ಅನಿವಾರ್ಯವು (ತಪ್ಪಿಸಿಕೊಳ್ಳಲು ಆಗದುದು); ತಸ್ಮಾತ್-ಆ ಕಾರಣದಿಂದ, ತದಪನುತ್ತಯೇ-ಆ ಪಾಪದ ಪರಿಹಾರಕ್ಕಾಗಿ, ಬುದ್ಧಿಮಾನ್-ವಿವೇಕಿಯು, ನಿತ್ಯಂ-ಯಾವಾಗಲೂ, ದಾನಜಪಾದಿಭಿಃ-ದಾನ, ಜಪ, ಮೊದಲಾದವುಗಳಿಂದ, ಶಕ್ತ್ಯಾ-(ತನ್ನ) ಶಕ್ತಿಯಿದ್ದಷ್ಟು ಯತೇತ-ಯತ್ನಮಾಡಬೇಕು.

**ಧನವ್ಯಯಾದ್ದೇಹತಾಪಾನ್ಮನಸೋಽಯಂ ತೃಣಾದೃತೇ ॥ ೮೯ ॥**

**ಪುಣ್ಯಂ ನ ಜಾಯತೇ ಯಸ್ಮಾತ್ತಸ್ಮಾತ್ತದ್ದುಷ್ಕರಂ ನರೈಃ ।**

**ಅತೋ ಯತ್ನೇನ ತತ್ಸಾಧ್ಯಂ ಸುಖಬೀಜಂ ಯತೋ ಹಿ ತತ್ ॥ ೯೦ ॥**

ಯಸ್ಮಾತ್-ಯಾವ ಕಾರಣದಿಂದ, ಧನವ್ಯಯಾತ್-ಧನವ್ಯಯ, ದೇಹತಾಪಾತ್-ದೇಹಶ್ರಮ, ಮನಸಃ (ತಾಪಾತ್)-ಮನಸ್ಸಿನ ತಾಪ, ತೃಣಾತ್ ಋತೇ-(ಇವುಗಳ) ಅಲ್ಪವಾದರೂ ಇಲ್ಲದೇ, ಅಯಂ-ದಾನಜಪಾದಿಯು, ಪುಣ್ಯಂ-(ಪಾಪದ ಪರಿಹಾರಕ್ಕೆ ಅವಶ್ಯಕವಾದ) ಪುಣ್ಯವೂ, ನ ಜಾಯತೇ- ಉದ್ಭವಿಸುವುದಿಲ್ಲವೋ, ತಸ್ಮಾತ್-ಆ ಕಾರಣದಿಂದ, ನರೈಃ-ಮನುಷ್ಯರಿಂದ, ತತ್-ದಾನಜಪಾದಿಯು, ದುಷ್ಕರಂ- ಕಷ್ಟಸಾಧ್ಯವಾದುದು; ಯತಃ-ಯಾವ ಕಾರಣದಿಂದ, ತತ್-ಆ (ದಾನಜಪಾದಿಜನ್ಯ) ಪುಣ್ಯವೇ, ಸುಖಬೀಜಂ-ಸುಖದ ಮೂಲ ಕಾರಣವಾದುದೋ, ಅತಃ-ಆ ಕಾರಣದಿಂದ, ಯತ್ನೇನ-ಬಹು ಪ್ರಯತ್ನದಿಂದ, ತತ್ಸಾಧ್ಯಂ-ಆ ಪುಣ್ಯವು ಸಾಧಿಸಲ್ಪಡತಕ್ಕದ್ದು.

---

ಧನಲಾಭವಾಗುವುದಿಲ್ಲ); ಆದ್ದರಿಂದ ಪಾಪವು ಅನಿವಾರ್ಯವು; ಹೀಗಿರುವುದರಿಂದ, ವಿವೇಕಿಯು ಪಾಪದ ಪರಿಹಾರಕ್ಕಾಗಿ (ನಾಶಕ್ಕಾಗಿ) ತನ್ನ ಶಕ್ತ್ಯನುಸಾರ, ನಿತ್ಯವೂ ದಾನಜಪಾದಿಗಳನ್ನಾಚರಿಸಬೇಕು (೮೭-೮೮). ದಾನಜಪಾದಿಗಳು ಸ್ವಲ್ಪವಾದರೂ ಧನವ್ಯಯ, ದೇಹಾಯಾಸ, ಮನಸ್ಸಿನ ತಾಪಗಳಿಲ್ಲದೇ ಸಂಭವಿಸುವುದಿಲ್ಲ—ಅವಿಲ್ಲದೇ ಪುಣ್ಯವೂ ಹುಟ್ಟುವುದಿಲ್ಲ; ಆದ್ದರಿಂದ ಮನುಷ್ಯರು ಪುಣ್ಯವನ್ನು ಸುಲಭವಾಗಿ ದೊರಕಿಸಲಾರರು; ಪುಣ್ಯವೇ ಸುಖದ ಮೂಲಕಾರಣವಾದ್ದರಿಂದ, ಬಹು ಯತ್ನದಿಂದಾದರೂ ಅದನ್ನು ಸಾಧಿಸಲು, ಸದಾ, ಸರ್ವರೂ ಪ್ರಯತ್ನಿಸಬೇಕು (೮೯-೯೦). ಈ ಲೋಕದಲ್ಲಿ ತಮ್ಮ ಹಿತವನ್ನು ತಿಳಿಯದ ಮೂಢರೇ ಬಹಳ; ಎಲ್ಲರೂ ಪುಣ್ಯದ ಫಲವಾದ ಸುಖವನ್ನು ಇಚ್ಛಿಸುತ್ತಾರೆ—ಆದರೆ, ಯತ್ನದಿಂದ ಪಾಪಗಳನ್ನೇ

**ಪ್ರಾಯೇಣ ಮೂಢಾ ಲೋಕೇಽಸ್ಮಿನ್ನ ವಿದ್ಯಾದ್ಧಿತಂ ಚೇತಸಃ ।**
**ಪುಣ್ಯಸ್ಯ ಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥ ೯೧ ॥**
**ಉಪ್ತಮನ್ಯಂ ಫಲಂ ಚಾನ್ಯಂ ಮೂಢಾದನ್ಯಃ ಕ ಇಚ್ಛತಿ ।**
**ಮೂಢಪ್ರಾಯಮಿದಂ ವಿಶ್ವಂ ಪಶ್ಯಂಶ್ಚಾಪಿ ನ ಪಶ್ಯತಿ ॥ ೯೨ ॥**
**ವಿಷ್ಣುಮಾಯಾಬಲಂ ಚೈತದನ್ಯಥಾ ಸಂಸೃತಿರ್ನ ಹಿ ।**

ಅಸ್ಮಿನ್-ಈ, ಲೋಕೇ-ಲೋಕದಲ್ಲಿ, ಮೂಢಾಃ-ಅಜ್ಞಾನಿಗಳು, ಚೇತಸಃ-ಜೀವನಿಗೆ, ಹಿತಂ-ಹಿತವಾದುದನ್ನು, ಪ್ರಾಯೇಣ-ಪ್ರಾಯಶಃ (ಬಹುಜನರು), ನ ವಿದ್ಯಾತ್-ತಿಳಿಯುವುದಿಲ್ಲವು; ಪುಣ್ಯಸ್ಯ-ಪುಣ್ಯದ, ಫಲಂ-ಫಲವನ್ನು (ಸುಖವನ್ನು), ಇಚ್ಛಂತಿ-ಅಪೇಕ್ಷಿಸುತ್ತಾರೆ; (ಆದರೆ) ಯತ್ನತಃ-ಯತ್ನದಿಂದ (ಕೃತಿಯಿಂದ), ಪಾಪಂ-ಪಾಪವನ್ನು ಕುರ್ವಂತಿ-ಮಾಡುತ್ತಾರೆ; ಉಪ್ತಂ-ಬಿತ್ತಿದುದು, ಅನ್ಯಂ-ಒಂದು (ಬೇರೆ), ಅನ್ಯಂ-ಬೇರೆಯಾದ, ಫಲಂ-ಫಲವನ್ನು ಮೂಢಾತ್ ಅನ್ಯಂ-ಮೂರ್ಖನಿಂದ ಬೇರೆಯಾದ, ಕಃ-ಯಾರು (ವಿವೇಕಿಯು), ಇಚ್ಛತಿ-ಇಚ್ಛಿಸುತ್ತಾನೆ? ಇದಂ ವಿಶ್ವಂ-ಈ ಜಗತ್ತು (ಲೋಕದಲ್ಲಿನ ಪ್ರಜಾವರ್ಗವು), ಮೂಢಪ್ರಾಯಂ-ಅಜ್ಞಾನಿಗಳಿದ್ದಂತೆ (ಬಹುಭಾಗದವರು ಅಜ್ಞಾನಿಗಳೇ); ಪಶ್ಯನ್ ಅಪಿ ಚ-ಕಂಡರೂ ಸಹ, ನ ಪಶ್ಯತಿ-ಕಾಣುವುದಿಲ್ಲ (ಕಂಡದ್ದನ್ನು ಗಮನಿಸುವುದಿಲ್ಲ-ಕಣ್ಣಿದ್ದೂ ಕುರುಡರಂತೆ); ಏತತ್-ಹೀಗಿರುವುದು, ವಿಷ್ಣುಮಾಯಾ ಬಲಂ ಚ-ಶ್ರೀವಿಷ್ಣುವಿನ ಇಚ್ಛಾಶಕ್ತಿಯ ಪ್ರಭಾವವೇ ಸರಿ; ಅನ್ಯಥಾ-ಹಾಗಲ್ಲದೆ, ಸಂಸೃತಿಃ-ಸಂಸಾರವು, ನ ಹಿ ಜೀವರಿಗೆ ಇಲ್ಲವೇ ಇಲ್ಲ.

**ಅನಾದಿಕರ್ಮಭಿರ್ಬದ್ಧಾನೇವಂ ಜೀವಾನನಂತಶಃ ॥ ೯೩ ॥**

---

ಆಚರಿಸುತ್ತಾರೆ; ಬಿತ್ತಿದುದರಿಂದ ಭಿನ್ನವಾದ ಫಲವನ್ನು ಮೂರ್ಖನಲ್ಲದ ಯಾವನು ನಿರೀಕ್ಷಿಸುವನು? (ವಿವೇಕಿಯು ನಿರೀಕ್ಷಿಸುವುದಿಲ್ಲ); ಜಗತ್ತಿನ ಬಹುಭಾಗದ ಜನರು ಅಜ್ಞಾನಿಗಳು—ಕಣ್ಣಿದ್ದ ಕುರುಡರಂತೆ, ನೋಡಿದರೂ ತಿಳಿಯುವುದಿಲ್ಲ; ಇದು, ಶ್ರೀವಿಷ್ಣುವಿನ ಇಚ್ಛಾಶಕ್ತಿಯ ಪ್ರಭಾವವೇ ಸರಿ—ಅನ್ಯಥಾ[1] ಸಂಸಾರವೇ ಜೀವರಿಗೆ ಇರುವುದಿಲ್ಲ (೯೧-೯೨). ಅನಾದಿಕರ್ಮಗಳಿಂದ ಬದ್ಧರಾದ, ಅಸಂಖ್ಯ ಜೀವರನ್ನು

1. 'ಬಂಧಕೋ ಭವಪಾಶೇನ ಮೋಚಕಶ್ಚ ಸ ಏವ ಹಿ' ಎಂಬ ಪ್ರಮಾಣವು ಸಂಸಾರದಲ್ಲಿ ಸುತ್ತುವುದಕ್ಕೆ ಕಾರಣವಾದ ಅಹಂಮಮಕಾರರೂಪದ ಅಭಿಮಾನವೂ ಶ್ರೀಹರಿಯಿಂದಲೇ—ಅದರಿಂದ ಬಿಡುಗಡೆಯೂ ಆತನಿಂದಲೇ, ಎಂದು ಸಾರುತ್ತದೆ; ಅನಾದಿಯಿಂದ ಜೀವರನ್ನು ಬಂಧಿಸಿರುವ ಲಿಂಗದೇಹದ ಭಂಗವನ್ನು ಸಾಧಿಸಲಿಕ್ಕಾಗಿಯೇ, ಶ್ರೀಹರಿಯು, ಜೀವರನ್ನು ನಾನಾ ಯೋನಿಗಳಲ್ಲಿ ಸುತ್ತಿಸುತ್ತಾನೆ—ಅದರಿಂದ ಸಂಸಾರವೂ, ಅದರಿಂದ ವಿಮೋಚನೆಯೂ, ಜೀವರಿಗೆ ಶ್ರೀಹರಿಯಿಂದಲೇ ಸಂಭವಿಸುತ್ತವೆ.

**ನಿವರ್ತಯತಿ ಸಂಸಾರೇ ಸರ್ವದೈವ ಪ್ರಭುರ್ಹರಿಃ ।**

**ತಮೇವ ಶರಣಂ ಗಚ್ಛೇತ್ಸರ್ವೇಭ್ಯೋ ಮುಕ್ತಮಾನಸಃ ॥ ೯೪ ॥**

**ಸ ಏವ ಕೃಪಯಾ ಬಂಧಾನ್ಮೋಚಯೇದನ್ಯಥಾ ನ ಹಿ ।**

**ನಾಸ್ತ್ಯನ್ಯೋ ಮೋಚಕಸ್ತಸ್ಮಾತ್ತತಃ ಸೇವ್ಯಃ ಸ ಏವ ಹಿ ॥ ೯೫ ॥**

ಅನಾದಿಕರ್ಮಭಿಃ-ಅನಾದಿ ಕರ್ಮಗಳಿಂದ, ಬದ್ಧಾನ್-ಬದ್ಧರಾದ, ಅನಂತಶಃ-ಅಸಂಖ್ಯರಾದ, ಜೀವಾನ್-ಜೀವರನ್ನು ಏವಂ-ಹೀಗೆ, ಪ್ರಭುಃ-ಸಮರ್ಥನಾದ (ಸರ್ವಸ್ವಾಮಿಯಾದ), ಹರಿಃ-ಶ್ರೀಹರಿಯು, ಸರ್ವದಾ ಏವ-ಎಲ್ಲ ಕಾಲದಲ್ಲಿ (ಮೋಕ್ಷಪರ್ಯಂತ), ಸಂಸಾರೇ-(ಜನನ ಮರಣರೂಪದ) ಸಂಸಾರದಲ್ಲಿ ನಿವರ್ತಯತಿ-ಸುತ್ತಿಸುತ್ತಾನೆ; ಸರ್ವೇಭ್ಯಃ-(ಭಗವದಿತರವಾದ) ಸರ್ವವಸ್ತುಗಳಿಂದ, ಮುಕ್ತಮಾನಸಃ-ತ್ಯಕ್ತವಾದ ಮನಸ್ಸುಳ್ಳವನಾಗಿ, (ಶ್ರೀಹರಿಯಲ್ಲಿ ಏಕಮನಸ್ಕನಾಗಿ), ತಂ ಏವ-ಆ ಶ್ರೀಹರಿಯನ್ನೇ, ಶರಣಂ ಗಚ್ಛೇತ್-ಶರಣುಹೊಂದಬೇಕು; ಸಃ ಏವ-ಪ್ರಭುವಾದ ಆತನೇ, ಕೃಪಯಾ-ಕೃಪೆಮಾಡಿ (ದಯತೋರಿ), ಬಂಧಾತ್-(ಸಂಸಾರ) ಬಂಧದಿಂದ, ಮೋಚಯೇತ್-ಬಿಡುಗಡೆ ಮಾಡುತ್ತಾನೆ (ಮುಕ್ತನನ್ನಾಗಿ ಮಾಡುತ್ತಾನೆ); ಅನ್ಯಥಾ ನ ಹಿ-(ಮೋಕ್ಷವು) ಬೇರೆ ಮಾರ್ಗದಿಂದ ದೊರೆಯುವುದೇ ಇಲ್ಲ; ತಸ್ಮಾತ್-ಹಾಗಿರುವುದರಿಂದ (ಆತನೇ ಮೋಚಕನಾದ್ದರಿಂದ), ಅನ್ಯೋ-ಮತ್ತೊಬ್ಬ, ಮೋಚಕಃ-ಮೋಚಕನು, ನಾಸ್ತಿ-ಇರುವುದಿಲ್ಲ; ಅತಃ- ಆದ್ದರಿಂದ, ಸಃ ಏವ-ಶ್ರೀಹರಿಯೇ, ಸೇವ್ಯಃ-ಸೇವ್ಯನು (ಮೋಕ್ಷಕ್ಕಾಗಿ ಸೇವಿಸಲ್ಪಡಲರ್ಹನು-ಅನ್ಯನಲ್ಲ); ಹಿ-ಇದು ಶಾಸ್ತ್ರಸಿದ್ಧವು.

**ಮನಸಾ ಕರ್ಮಣಾ ವಾಚಾ ತುಚ್ಛಮನ್ಯತ್ತತೋಽಖಿಲಂ ।**

**ಅಸತ್ಸಂಸರ್ಗಸಂಯುಕ್ತೋ ದುಷ್ಟದೇಶಗತೋಽಪಿ ಸನ್ ॥ ೯೬ ॥**

**ಭಕ್ತ್ಯಾ ಸಂಕೀರ್ತಯನ್ ವಿಷ್ಣುಂ ನ ದೋಷಃ ಪರಿಭೂಯತೇ ।**

---

ಸರ್ವಶಕ್ತನಾದ (ಸರ್ವರ ಪ್ರಭುವಾದ) ಶ್ರೀ ಹರಿಯು, ಸರ್ವದಾ (ಮುಕ್ತಿಪರ್ಯಂತ) ಸಂಸಾರದಲ್ಲಿ ಸುತ್ತಿಸುತ್ತಿರುವನು; ಭಗವದನ್ಯ ಸರ್ವ ವಸ್ತುಸಂಗವನ್ನು ಪರಿತ್ಯಜಿಸಿ, ಆತನನ್ನೇ (ಶ್ರೀ ಹರಿಯನ್ನೇ) ಶರಣು ಹೊಂದತಕ್ಕದ್ದು; ಆತನೇ ಕೃಪೆಯಿಂದ, ಸಂಸಾರದಿಂದ ಮುಕ್ತರನ್ನಾಗಿ ಮಾಡುತ್ತಾನೆ—ಮೋಕ್ಷಕ್ಕೆ ಅನ್ಯಮಾರ್ಗವಿಲ್ಲ—ಸಂಸಾರದಿಂದ ಮುಕ್ತರನ್ನಾಗಿಸುವವನು, ಆತನೇ ಆದ್ದರಿಂದ, ಶ್ರೀಹರಿಯೇ ಸರ್ವಥಾ ಸೇವ್ಯನು—ಅನ್ಯನಲ್ಲ; ಇದು ಶಾಸ್ತ್ರಸಿದ್ಧವಾದ ಪ್ರಮೇಯವು (೯೩-೯೫). ಮನಸಾ, ಕರ್ಮಣಾ, (ಕಾಯೇನ) ವಾಚಾ (ತ್ರಿಕರಣಗಳಿಂದಲೂ) ದುರ್ಜನಸಂಗವುಳ್ಳವನಾದರೂ, ಅಪವಿತ್ರ ಕ್ಷೇತ್ರಗಳಲ್ಲಿ ವಾಸಿಸುತ್ತಿದ್ದರೂ, ಭಗವದನ್ಯ ಸಕಲ ವಸ್ತುಗಳೂ

ದೇವತಾಋಷಿನಾಮಾನಿ ನಾಶುಚಿಃ ಪರಿಕೀರ್ತಯೇತ್ ॥ ೯೭ ॥
ವಿಷ್ಣೋರ್ದಿವ್ಯಾನಿ ನಾಮಾನಿ ಸರ್ವದಾ ಪರಿಕೀರ್ತಯೇತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ ೯೮
ಪ್ರಲಪನ್ ವಿಸೃಜನ್ ಗೃಹ್ಣನ್ ಉನ್ಮಿಮಿಷನ್ನಿಮಿಷನ್ನಪಿ ।
ಸಂಸ್ಮರೇದ್ವಿಷ್ಣುಮವ್ಯಗ್ರಸ್ತಲ್ಲೀಲಾಶ್ಚಾಪಿ ಚಿಂತಯೇತ್ ॥ ೯೯ ॥

ಮನಸಾ-ಮನಸ್ಸಿನಿಂದ, ಕರ್ಮಣಾ-ದೇಹದಿಂದ, ವಾಚಾ-ನುಡಿಯಿಂದ, ಅಸತ್ಸಂಸರ್ಗಸಂಯುಕ್ತಃ-ದುರ್ಜನಸಂಗವುಳ್ಳ ಪುರುಷನು, ದುಷ್ಟದೇಶಗತಃ ಅಪಿ ಸನ್-ಅಪವಿತ್ರ ದೇಶದಲ್ಲಿದ್ದರೂ ಸಹ, ತತಃ-ಶ್ರೀಹರಿಯಿಂದ, ಅನ್ಯತ್-ಭಿನ್ನವಾದ, ಅಖಿಲಂ-ಸಮಸ್ತವೂ, ತುಚ್ಛಂ-ತುಚ್ಛವೆಂದು (ಸಂಗಕ್ಕೆ ಅಯೋಗ್ಯವಾದುದೆಂದು) (ಮತ್ವಾ-ಭಾವಿಸಿ); ಭಕ್ತ್ಯಾ-ಭಕ್ತಿಯಿಂದ, ವಿಷ್ಣುಂ-ಶ್ರೀವಿಷ್ಣುವನ್ನು ಸಂಕೀರ್ತಯನ್-ಸ್ತುತಿಸುವವನಾದರೆ, ದೋಷಃ-ದೋಷವು, (ಆತನನ್ನು) ನ ಪರಿಭೂಯತೇ-ಆವರಿಸುವುದಿಲ್ಲ (ಮುಸುಕುವುದಿಲ್ಲ—ದೋಷಪಾತ್ರನಾಗುವುದಿಲ್ಲ—ದೋಷದಿಂದ ಕೆಡುವುದಿಲ್ಲ); ಅಶುಚಿಃ-ಅಶುಚಿಯಾದವನು (ಮೈಲಿಗೆಯಲ್ಲಿರುವವನು), ದೇವತಾಋಷಿನಾಮಾನಿ-ದೇವತೆಗಳು ಮತ್ತು ಋಷಿಗಳ ನಾಮಗಳನ್ನು, ನ ಪರಿಕೀರ್ತಯೇತ್-ಉಚ್ಚರಿಸಬಾರದು; ವಿಷ್ಣೋಃ-ಶ್ರೀವಿಷ್ಣುವಿನ, ದಿವ್ಯಾನಿ-ಪರಮ ಪವಿತ್ರವಾದ, ನಾಮಾನಿ-ನಾಮಗಳನ್ನು, ಸರ್ವದಾ-ಎಲ್ಲ ಕಾಲದಲ್ಲಿ ಪರಿಕೀರ್ತಯೇತ್-ಪಠಿಸುತ್ತಿರಬೇಕು; ಸ್ಪೃಶನ್-ಸ್ಪರ್ಶಿಸುವವನಾದರೂ, ಪಶ್ಯನ್-(ರೂಪಾದಿಗಳನ್ನು) ನೋಡುವವನಾದರೂ, ಶೃಣ್ವನ್-(ಶಬ್ದವನ್ನು) ಕೇಳುವವ

---

ತುಚ್ಛವೆಂದು (ಸಹವಾಸಕ್ಕೆ ಯೋಗ್ಯವಲ್ಲವೆಂಬ ಜ್ಞಾನವುಳ್ಳವನಾಗಿ) ತಿಳಿದು, ಭಕ್ತಿಯಿಂದ ಶ್ರೀ ವಿಷ್ಣುನಾಮಗಳನ್ನೇ ಉಚ್ಚರಿಸುತ್ತಿರಬೇಕು; ಇದರಿಂದ ಯಾವ ದೋಷಕ್ಕೂ ಪಾತ್ರನಾಗುವುದಿಲ್ಲ. ಅಶುಚಿಯಾದ ಮನುಷ್ಯನು, ದೇವತಾ ಋಷಿ ನಾಮಗಳನ್ನು ಉಚ್ಚರಿಸಬಾರದು; ಆದರೆ ಶ್ರೀ ವಿಷ್ಣುವಿನ ಪವಿತ್ರ ನಾಮಗಳನ್ನು ಸರ್ವದಾ ಉಚ್ಚರಿಸಬಹುದು (ಪಠನಮಾಡುತ್ತಿರಬೇಕು): ನೋಡುವುದು, ಕೇಳುವುದು, ಸ್ಪರ್ಶಿಸುವುದು, ಮೂಸಿನೋಡುವುದು, ಭಕ್ಷಿಸುವುದು, ಸಂಚರಿಸುವುದು, ಮಲಗುವುದು, ಉಸಿರಾಡುವುದು, ಮಾತನಾಡುವುದು, ವಿಸರ್ಜಿಸುವುದು, ಸ್ವೀಕರಿಸುವುದು, ಕಣ್ಣು ತೆರೆಯುವುದು, ಕಣ್ಣು ಮುಚ್ಚುವುದು, ಇವೇ ಮೊದಲಾದ, ಜ್ಞಾನಕರ್ಮೇಂದ್ರಿಯ ವ್ಯಾಪಾರಗಳನ್ನು ಮಾಡುತ್ತಿದ್ದರೂ, ಚಿತ್ತ ವಿಕಾರವನ್ನು ಹೊಂದದ (ಕರ್ತೃತ್ವಾಭಿಮಾನವಿಲ್ಲದವನಾಗಿ) ಎಲ್ಲವೂ ಶ್ರೀ ವಿಷ್ಣುವಿನ ಲೀಲೆಗಳೆಂಬ (ಮಾಡಿ ಜೀವರಿಂದ ಮಾಡಿಸುವ ಕೃತಿಗಳೆಂಬ) ಅನುಸಂಧಾನವುಳ್ಳವನಾಗಿರಬೇಕು

ಗುಣಪೂರ್ಣನಾದ), ಹರಿಂ-ಶ್ರೀಹರಿಯನ್ನು, ಕಥಂ-ಹೇಗೆ, ತ್ಯಜೇತ್-(ಹರಿಗುಣ ಧ್ಯಾನದಲ್ಲಿ ಆಸಕ್ತವಾದ ಮನಸ್ಸು ಅನ್ಯತ್ರ ಹೋಗಲಿಕ್ಕೆ ಕಾರಣವೇ ಇಲ್ಲ-ಮನಸ್ಸಿಗೆ ಅಗೋಚರವಾದ ಅನಂತಗುಣಗಳಿರುವುದರಿಂದ, ನಿತ್ಯನೂತನ ವಸ್ತುವಾದ್ದರಿಂದ, ಅನ್ಯವಸ್ತುವನ್ನು ಅರಸಿ ಅನ್ಯತ್ರ ಧಾವಿಸಲು ಕಾರಣವೇ ಇಲ್ಲ); ಮಂದಭಾಗ್ಯಃ ತು-ಅಲ್ಪಪುಣ್ಯವುಳ್ಳವರು ಮಾತ್ರ, ತಂ-ಆ ಶ್ರೀಹರಿಯನ್ನು, ತ್ಯಕ್ತ್ವಾ-ಬಿಟ್ಟು ವಿಷಯಾನ್-ಅನ್ಯವಸ್ತುಗಳನ್ನು, ಚಿಂತಯಂತಿ ಹಿ-ಚಿಂತಿಸುತ್ತಾರೆ (ಇದು ನಿಶ್ಚಯ).

**ಕಾಲೇ ಕಾಲೇ ಜಾಯಮಾನಂ ಸುಖಂ ವಿಷ್ಣೋಃ ಸಮರ್ಪಯೇತ್ ೧೦೨**

**ದುಃಖೇ ತು ಯಃ ಸ್ಮರೇದ್ವಿಷ್ಣುಂ ಸ ದುಃಖೈರ್ನಾಭಿಭೂಯತೇ ।**

ಕಾಲೇಕಾಲೇ-ಕಾಲಕಾಲಕ್ಕೆ (ಆಯಾ ಕಾಲದಲ್ಲಿ), ಜಾಯಮಾನಂ-ಉದ್ಭವಿಸುವ (ಉಂಟಾಗುವ), ಸುಖಂ-ಸುಖವನ್ನು, ವಿಷ್ಣೋಃ-ಶ್ರೀವಿಷ್ಣುವಿಗೆ (ಶ್ರೀವಿಷ್ಣುವಿನಿಂದಾದುದೆಂದು ತಿಳಿದು), ಸಮರ್ಪಯೇತ್-ಅರ್ಪಿಸಬೇಕು; ದುಃಖೇ ತು-ದುಃಖದಲ್ಲಿರುವಾಗಲಾದರೂ, ಯಃ-ಯಾರು, ವಿಷ್ಣು-ಶ್ರೀವಿಷ್ಣುವನ್ನು, ಸ್ಮರೇತ್-ಸ್ಮರಿಸುವನೋ, ಸಃ-ಆತನು, ದುಃಖೈಃ-ದುಃಖಗಳಿಂದ, ನ ಅಭಿಭೂಯತೇ-ನಿರ್ವಿಣ್ಣನಾಗುವುದಿಲ್ಲ (ಮುಸುಕಲ್ಪಡುವುದಿಲ್ಲ-ಕುಂದುವುದಿಲ್ಲ).

**ಯಾವತ್ಪಾಪಂ ಕರೋತ್ಯೇಷಸ್ತಾವದ್ದುಃಖಂ ದದಾತಿ ನ ॥ ೧೦೩ ॥**

**ದಯಾಲುಸ್ತಾವದ್ಧರಿಸ್ತಂ ತು ಮೂಢತ್ವಾದ್ಬಹು ಮನ್ಯತೇ ।**

ಏಷಃ-ಈ ಜೀವನು, ಯಾವತ್-ಎಷ್ಟು, ಪಾಪಂ-ಪಾಪವನ್ನು, ಕರೋತಿ-ಮಾಡುತ್ತಾನೆಯೋ, ತಾವತ್-ಅಷ್ಟು (ಅದಕ್ಕೆ ಯೋಗ್ಯವಾದಷ್ಟು), ದುಃಖಂ-ದುಃಖವನ್ನು, ಸಃ-ಶ್ರೀಹರಿಯು, ನ ದದಾತಿ-ಕೊಡುವುದಿಲ್ಲ (ಜೀವನು ಭೋಗಿಸುವಂತೆ ಮಾಡುವುದಿಲ್ಲ; (ಏಕೆಂದರೆ), ಹರಿಃ-ಶ್ರೀಹರಿಯು, ದಯಾಲುತ್ವಾತ್-ದಯಾಸಮುದ್ರನಾದ್ದರಿಂದ (ಅಲ್ಪದುಃಖವನ್ನೇ ಕೊಡುತ್ತಾನೆ); ತಂ ತು-ಆ (ಅಲ್ಪ)

---

ನಿತ್ಯನೂತನ ವಸ್ತುವಾಗಿರುತ್ತಾನಾದ್ದರಿಂದ, ಅನ್ಯವಸ್ತುಗಳನ್ನರಸಿಕೊಂಡು ಹೋಗುವ ಅವಶ್ಯಕವೇ ಇಲ್ಲ; ಮಂದಭಾಗ್ಯರು ಮಾತ್ರ ಶ್ರೀಹರಿಧ್ಯಾನವನ್ನು ಬಿಟ್ಟು ಅನ್ಯವಸ್ತುಗಳನ್ನು ಚಿಂತಿಸುತ್ತಾರೆ (೧೦೧). ಕಾಲಕಾಲಕ್ಕೆ ಲಭಿಸುವ ಸುಖಾನುಭವವನ್ನು ಶ್ರೀವಿಷ್ಣುವಿಗೇ ಅರ್ಪಿಸಬೇಕು—ಎಂದರೆ, ಶ್ರೀವಿಷ್ಣುವಿನಿಂದಲೇ ದತ್ತವೆಂದು ತಿಳಿದು, ಆತನ ಭೃತ್ಯನೆಂಬ ಭಾವದಿಂದಲೇ ಅನುಭವಿಸಬೇಕು; ದುಃಖಾನುಭವದಲ್ಲಿ ಶ್ರೀವಿಷ್ಣುವನ್ನೇ ಸ್ಮರಿಸಬೇಕು—ಅದರಿಂದ ದುಃಖದ ತೀವ್ರತೆಯು ಬಹುಮಟ್ಟಿಗೆ ಕಡಿಮೆಯಾಗುತ್ತದೆ—ವಿಷಣ್ಣಚಿತ್ತನಾಗುವುದಿಲ್ಲ—ತನ್ನ ಸ್ವಾಮಿಯಿಂದ ದತ್ತವೆಂದು ತಿಳಿದರೆ, ದುಃಖವು ಎದೆಗುಂದಿಸುವುದಿಲ್ಲ (೧೦೨). ಶ್ರೀಹರಿಯು ಪರಮದಯಾಲುವಾದ್ದರಿಂದ, ಈ ಜೀವನು, ಎಷ್ಟು ಪಾಪವನ್ನು ಮಾಡಿರುವನೋ, ಅದಕ್ಕೆ ಸರಿಯಾದ

ದುಃಖವನ್ನೇ, ಮೂಢತ್ವಾತ್-ಅಜ್ಞಾನದಿಂದ (ಶ್ರೀಹರಿಯ ದಯಾಲುತ್ವವನ್ನು ತಿಳಿಯದ ಅಜ್ಞನು), ಬಹು ಮನ್ಯತೇ-ದೊಡ್ಡದೆಂದು ತಿಳಿಯುತ್ತಾನೆ.

**ಕುರ್ವಾಣಃ ಪಾಪಕರ್ಮಾಣಿ ಲಂಘಯಂಸ್ತಸ್ಯ ಭಾಷಿತಂ ॥ ೧೦೪ ॥**

**ಅಲಂ ನ ಮನ್ಯತೇ ಮೂಢೋ ದುಃಖೇ ಸ್ವಲ್ಪೇಪ್ಯಲಂ ವದಃ ।**

ತಸ್ಯ-ಶ್ರೀಹರಿಯ, ಭಾಷಿತಂ-ಮಾತನ್ನು (ಆಜ್ಞೆಯನ್ನು-ಆಜ್ಞೆಗಳೇ ಆದ ಶ್ರುತಿ ಸ್ಮೃತಿಗಳನ್ನು), ಲಂಘಯನ್-ಉಲ್ಲಂಘಿಸುವವನಾಗಿ (ಮೀರಿ-ಅತಿಕ್ರಮಿಸಿ), ಪಾಪ ಕರ್ಮಾಣಿ-ಪಾಪಕರ್ಮಗಳನ್ನು ಕುರ್ವಾಣಃ-ಮಾಡುವವನಾದರೂ (ವಿಧಿಗಳನ್ನು ಅತಿಕ್ರಮಿಸಿ, ನಿಷೇಧಗಳನ್ನು ಆಚರಿಸುವ), ಮೂಢಃ-ಅಜ್ಞಾನಿಯು, ಅಲಂ-ಸಾಕಷ್ಟು (ಪಾಪವನ್ನು ಆಚರಿಸಿರುವೆನು) ಎಂದು, ನ ಮನ್ಯತೇ-ತಿಳಿಯುವುದಿಲ್ಲ (ಆದರೆ), ದುಃಖೇ-ದುಃಖವು, ಸ್ವಲ್ಪೇಪಿ-ಅಲ್ಪವೇ ಆದರೂ (ಅಲ್ಪವಾಗಿಯೇ ಕೊಟ್ಟಿದ್ದರೂ), ಅಲಂ ವದಃ-(ಪೂರ್ಣ-ಬಹು) ಎಂದು ನುಡಿಯುತ್ತಾನೆ.

**ಏವಂ ಪುಣ್ಯಂ ಸ್ವಲ್ಪಮಪಿ ಮನ್ಯತೇ ಬಹು ಮೂಢಧೀಃ ॥ ೧೦೫ ॥**

**ನಾಲಂಬುದ್ಧಿಃ ಸುಖಪ್ರಾಪ್ತೌ ವಿಸ್ಮರತ್ಯಪಿ ಕೇಶವಂ ।**

**ಅತೋ ವಿದ್ವಾನ್ ಸಾವಧಾನಃ ಸಂಪದಶ್ಚಂಚಲಾ ಇತಿ ॥ ೧೦೬ ॥**

**ಮನ್ವಾನಃ ಸತತಂ ವಿಷ್ಣೋರರ್ಚೇನ್ಮೂರ್ತೀಶ್ಚಲಾಚಲಾಃ ।**

ಏವಂ-ಹೀಗೆಯೇ, ಮೂಢಧೀಃ-ಅಜ್ಞಾನಿಯು, ಸ್ವಲ್ಪಂ ಅಪಿ-ಸ್ವಲ್ಪವೇ ಆದರೂ ಪುಣ್ಯಂ-ಪುಣ್ಯವನ್ನು ಬಹು-ದೊಡ್ಡದೆಂದು (ಅಧಿಕವಾದುದೆಂದು), ಮನ್ಯತೇ-ತಿಳಿಯುತ್ತಾನೆ (ತಾನು ಮಾಡಿದ ಮಹಾಪಾಪಗಳನ್ನು ಅಲ್ಪಗಳೆಂದು ತಿಳಿಯುವಂತೆ, ಅಲ್ಪ ಪುಣ್ಯಗಳನ್ನು ಮಹಾ ಪುಣ್ಯಗಳೆಂದು ತಿಳಿಯುತ್ತಾನೆ); (ಈ ಕಾರಣದಿಂದ), ಸುಖಪ್ರಾಪ್ತೌ-ಸುಖಪ್ರಾಪ್ತಿ ವಿಷಯದಲ್ಲಿ ಅಲಂ ಬುದ್ಧಿಃ ನ-ಸಾಕೆಂಬ (ತನ್ನ ಪುಣ್ಯಕ್ಕೆ ಸರಿಯಾದದ್ದೆಂಬ) ಬುದ್ಧಿಯನ್ನು ಹೊಂದುವುದಿಲ್ಲ (ಅಲ್ಪ ಪುಣ್ಯವನ್ನು ಮಾಡಿ

---

(ಯೋಗ್ಯವಾದ) ದುಃಖವನ್ನು ಕೊಡುವುದಿಲ್ಲ; ಇದನ್ನು ತಿಳಿಯದೇ ಅಲ್ಪ ದುಃಖವನ್ನೇ ಮಹತ್ತೆಂದು ತಿಳಿಯುತ್ತಾನೆ (೧೦೩). ಶ್ರೀಹರಿಯ ಆಜ್ಞೆಗಳಾದ ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ವಿಧಿಗಳನ್ನು ಮೀರಿ ನಡೆಯುವ, ಮತ್ತು ಅವುಗಳಲ್ಲಿ ನಿಷೇಧಿಸಲ್ಪಟ್ಟ ಪಾಪಕರ್ಮಗಳನ್ನೂ ಮಾಡುವ, ಅಜ್ಞಾನಿಯಾದ ಮನುಷ್ಯನು, ತಾನು ಯಾವ ದೊಡ್ಡ ಪಾಪವನ್ನು ಮಾಡಿಲ್ಲವೆಂದೇ ತಿಳಿಯುತ್ತಾನೆ ಮತ್ತು ತನ್ನ ಪಾಪಕ್ಕೆ ಯೋಗ್ಯವಾದುದಕ್ಕಿಂತ ಕಡಿಮೆ ದುಃಖವನ್ನೇ ಕೊಟ್ಟಿದ್ದರೂ ಅದನ್ನೇ ಅತಿ ದುಃಖವೆಂದು ತಿಳಿಯುತ್ತಾನೆ (೧೦೪). ತಾನು ಮಾಡಿದ ಮಹತ್ತರವಾದ ಪಾಪಗಳನ್ನು ಅಲ್ಪವೆಂದೂ ಅವುಗಳ ಫಲವಾದ ಅಲ್ಪ ದುಃಖವನ್ನು ಬಹಳವೆಂದೂ ತಿಳಿಯುವಂತೆ, ತಾನು ಮಾಡಿದ ಅಲ್ಪ ಪುಣ್ಯವನ್ನು (ತದ್ವಿರುದ್ಧವಾಗಿ) ಮಹಾಪುಣ್ಯವೆಂದು, ಮೂಢನು ತಿಳಿದು,

ಮಹಾಫಲವನ್ನು ನಿರೀಕ್ಷಿಸುತ್ತಾನೆ); ಅಪಿ-ಮತ್ತು, ಕೇಶವಂ-ಶ್ರೀಹರಿಯನ್ನು ಮರೆಯುತ್ತಾನೆ (ಸುಖಬಂದಾಗ ಮರೆಯುತ್ತಾನೆ-ಅಜ್ಞಾನಿಗಳು ದುಃಖಬಂದಾಗ ಮಾತ್ರ ಶ್ರೀಹರಿಯನ್ನು ಸ್ಮರಿಸುತ್ತಾರೆ); ಅತಃ-ಆದ್ದರಿಂದ, ವಿದ್ವಾನ್-ವಿವೇಕಿಯು, ಸಾವಧಾನಃ-ಶಾಂತಚಿತ್ತನಾಗಿ, ಸಂಪದಃ-(ಸುಖಹೇತುಗಳಾದ) ಸಂಪತ್ತುಗಳು, ಚಂಚಲಾಃ ಇತಿ-ಚಂಚಲಗಳೆಂದು (ಅ ಶಾ ಶ್ವ ತ ವೆಂ ದು), ಮನ್ವಾನಃ-ತಿಳಿದು, ಸತತಂ-ಸದಾ, ವಿಷ್ಣೋಃ-ಶ್ರೀವಿಷ್ಣುವಿನ, ಚಲಾಚಲಾಃ-ಚಲ, ಅಚಲಗಳೆಂಬ, ಮೂರ್ತೀಃ-(ದ್ವಿವಿಧ) ಪ್ರತಿಮೆಗಳನ್ನು, ಅರ್ಚೇತ್-ಪೂಜಿಸತಕ್ಕದ್ದು.

**ಬಾಹ್ಯಾಂತರವಿಭೇದೇನ ಸಂಪದೋ ದ್ವಿವಿಧಾ ಮತಾಃ ॥ ೧೦೭ ॥**
**ಧನಭೂಗಜವಾಜ್ಯಾದಿ ಭಾರ್ಯಾ ಸಂಪದಿತೀರ್ಯತೇ ।**
**ಜ್ಞಾನಂ ಭಕ್ತಿಶ್ಚ ವೈರಾಗ್ಯಂ ಯಮಾಶ್ಚ ನಿಯಮಾ ಅಪಿ ॥ ೧೦೮ ॥**
**ಆಂತರೀ ಸಂಪದಿತ್ಯುಕ್ತಾ ದ್ವಾಭ್ಯಾಮಭ್ಯರ್ಚಯೇದ್ಧರಿಂ ।**

ಸಂಪದಃ-ಸಂಪತ್ತುಗಳು, ಬಾಹ್ಯಾಭ್ಯಂತರ ವಿಭೇದೇನ-ಬಾಹ್ಯ ಮತ್ತು ಆಂತರವೆಂಬ ಭೇದದಿಂದ, ದ್ವಿವಿಧಾಃ ಮತಾಃ-ಎರಡು ವಿಧಗಳೆಂದು ತಿಳಿಯಲ್ಪಟ್ಟಿರುತ್ತವೆ; ಧನಭೂಗಜವಾಜ್ಯಾದಿ-ಧನ, ಭೂಮಿ, ಗಜ, ಅಶ್ವ ಮೊ ದ ಲಾ ದು ದೂ, ಭಾರ್ಯಾ-ಪ ತ್ನಿ ಯೂ, ಸಂಪತ್-(ಬಾಹ್ಯ) ಸಂಪತ್ತು ಇತಿ-ಎಂದು, ಈರ್ಯತೇ-ಹೇಳಲ್ಪಡುತ್ತದೆ; ಜ್ಞಾನಂ-(ಭಗವದ್ವಿಷಯಕ) ಜ್ಞಾನವೂ,

---

ದೊರೆಯುವ ಸುಖದಿಂದ ತೃಪ್ತನಾಗದೇ, ಶ್ರೀಹರಿಯನ್ನು ಮರೆಯುತ್ತಾನೆ—ಮಹಾಸುಖವನ್ನೇ ನಿರೀಕ್ಷಿಸುತ್ತಾನೆ; ಆದ್ದರಿಂದ, ವಿವೇಕಿಯು, ಸುಖಸಾಧನಗಳಾದ ಸಂಪತ್ತುಗಳು ಅಸ್ಥಿರವೆಂದು ತಿಳಿದು, ಶಾಂತಚಿತ್ತನಾಗಿ, ನಿತ್ಯವೂ ಶ್ರೀವಿಷ್ಣುವಿನ ಚಲಾಚಲಮೂರ್ತಿಗಳನ್ನು ಪೂಜಿಸುತ್ತಿರಬೇಕು[1] (೧೦೫-೧೦೬). ಬಾಹ್ಯವೆಂದೂ ಆಂತರವೆಂದೂ ಸಂಪತ್ತು ದ್ವಿವಿಧವಾದುದು; ಧನ, ಭೂಮಿ, ಗಜ, ಅಶ್ವ ಮೊದಲಾದವೂ, ಪತ್ನಿಯೂ, ಬಾಹ್ಯಸಂಪತ್ತುಗಳು; ಜ್ಞಾನ, ಭಕ್ತಿ, ವೈರಾಗ್ಯಗಳೂ, ಯಮ ನಿಯಮಾದಿಗಳೂ,[2] ಆಂತರೀ ಸಂಪತ್ತೆಂದು ಹೇಳಲ್ಪಡುತ್ತವೆ; ಉಭಯ ವಿಧ

---

1. ಚಲಪ್ರತಿಮೆಗಳು—ಬ್ರಾಹ್ಮಣಾದಿ ಜ್ಞಾನಿಜನರು; ಅಚಲಪ್ರತಿಮೆಗಳು—ಪ್ರತಿಷ್ಠಿತವಾದ ಶಿಲಾದಿ ವಿಗ್ರಹಗಳು. ಈ ವಿಷಯವು ಅನ್ಯತ್ರ ವಿಸ್ತೃತವಾಗಿದೆ.

2. ಯಮನಿಯಮಗಳು ಅಷ್ಟಾಂಗ ಯೋಗದ ಪ್ರಧಾನ ಭಾಗಗಳು; ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳು; ಯೋಗದ ಅಂಗಗಳು; (ಯೋಗವೆಂಬುದು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವ ಉಪಾಯವು). ಯಮವು, ಬ್ರಹ್ಮಚರ್ಯ, ದಯಾ, ಕ್ಷಮಾ, ಇತ್ಯಾದಿ ೧೦ ಪ್ರಕಾರವೆಂದು ಹೇಳಲ್ಪಡುತ್ತದೆ; ಈ ೧೦ನ್ನು ಭಿನ್ನ ಧರ್ಮ ಯುಕ್ತ ಪ್ರಕಾರದಿಂದಲೂ (ವಿವಿಧವಾಗಿ) ಹೇಳುವುದುಂಟು; ನಿಯಮವೂ ೧೦ ವಿಧವಾಗಿರುವುದು; ಶೌಚ, ಇಜ್ಯಾ, ತಪ, ದಾನ ಇತ್ಯಾದಿಗಳೇ ಅವು.

ಭಕ್ತಿ-ಭಕ್ತಿಯೂ (ಮಾಹಾತ್ಮ್ಯ ಜ್ಞಾನಪೂರ್ವಕವಾದ ಶ್ರೀಹರಿ ಪ್ರೇಮವೂ), ಚ-ಮತ್ತು ವೈರಾಗ್ಯಂ-ವೈರಾಗ್ಯವೂ (ವಿಷಯಾಸಕ್ತಿ ಇಲ್ಲದಿರುವುದೂ) ಯಮಾಃ-ಯಮಗಳೂ, ಚ-ಮತ್ತು ನಿಯಮಾಃ ಅಪಿ-ನಿಯಮಗಳೂ ಸಹ, ಅಂತರೀ-ಅಂತರಂಗದ, ಸಂಪತ್-ಸಂಪತ್ತು ಇತಿ ಉಕ್ತಾ-ಎಂದು ಹೇಳಲ್ಪಡುತ್ತದೆ; ದ್ವಾಭ್ಯಾಂ-ಈ ಎರಡೂ ವಿಧ ಸಂಪತ್ತುಗಳಿಂದ, ಹರಿಂ-ಶ್ರೀಹರಿಯನ್ನು ಅರ್ಚಯೇತ್- ಪೂಜಿಸತಕ್ಕದ್ದು

ಶಕ್ತಿಶಾಠ್ಯಂ ಪ್ರಕುರ್ವಾಣೋ ಮಂದಃ ಸ್ಯಾನ್ಮಂದಭಾಗ್ಯಭಾಕ್ ॥ ೧೦೯ ॥
ಯಥಾಶಕ್ತಿ ಪ್ರಕುರ್ವಾಣಃ ಪೂರ್ಣಂ ಫಲಮಾಪ್ನುಯಾತ್ ।
ಶಕ್ತಿತೋಽಪ್ಯಧಿಕಂ ಕರ್ತಾ ಪೂರ್ಣಾತ್ ಪೂರ್ಣತರಂ ಲಭೇತ್॥ ೧೧೦ ॥
ರಹಸ್ಯಮೇತದಾಖ್ಯಾತಂ ವಿಷ್ಣೋರದ್ಭುತಕರ್ಮಣಃ ।
ಶ್ರವಣಾನ್ಮನನಾದಸ್ಯ ಪ್ರಸಾದಂ ಪ್ರಾಪ್ನುಯಾದ್ಧರೇಃ ॥ ೧೧೧ ॥

ಮಂದಃ-(ಈ ರಹಸ್ಯವನ್ನು ತಿಳಿಯದ) ಅಜ್ಞಾನಿಯು, ಶಕ್ತಿಶಾಠ್ಯಂ-ಶಕ್ತಿ ವಂಚನೆಯನ್ನು ಪ್ರಕುರ್ವಾಣಃ-ಮಾಡುವವನಾಗಿ (ಸಂಪತ್ತಿದ್ದೂ ಶ್ರೀಹರಿಯನ್ನು ಪೂಜಿಸಿದವನು), ಮಂದಭಾಗ್ಯಭಾಕ್-ಅಲ್ಪಪುಣ್ಯಕ್ಕೆ ಭಾಗಿಯು (ಅಲ್ಪಸಂಪತ್ತನ್ನು ಹೊಂದುವವನು), ಸ್ಯಾತ್-ಆಗುತ್ತಾನೆ; ಯಥಾಶಕ್ತಿ-ಸ್ವಶಕ್ತ್ಯನುಸಾರವಾಗಿ ಪ್ರಕುರ್ವಾಣಃ-(ದ್ವಿವಿಧ ಸಂಪತ್ತಿನಿಂದ ಶ್ರೀಹರಿಯ ಚಲಾಚಲ ಪ್ರತಿಮೆಗಳನ್ನು) ಪೂಜಿಸುವವನು, ಪೂರ್ಣಂ-ಪೂರ್ಣವಾದ (ಆ ಪೂಜಾ ಕರ್ಮದ ಪೂರ್ಣ), ಫಲಂ-ಫಲವನ್ನು ಆಪ್ನುಯಾತ್-ಹೊಂದುತ್ತಾನೆ; ಶಕ್ತಿತಃ ಅಪಿ-ಸ್ವಶಕ್ತಿಗಿಂತಲೂ, ಅಧಿಕಂ-ಅಧಿಕವಾದ ಪೂಜೆಯನ್ನು ಕರ್ತಾ-ಮಾಡುವವನು, ಪೂರ್ಣಾತ್-ಪೂರ್ಣಕ್ಕಿಂತಲೂ, ಪೂರ್ಣತರಂ-

---

ಸಂಪತ್ತುಗಳಿಂದ ಶ್ರೀಹರಿಯನ್ನು ಪೂಜಿಸಬೇಕು (೧೦೭-೧೦೮). ಶ್ರೀಹರಿ ಪೂಜೆಯನ್ನು ಸ್ವಶಕ್ತ್ಯನುಸಾರ ಮಾಡಬೇಕು; ಸಂಪತ್ತಿನ ಸಾಮರ್ಥ್ಯವನ್ನು ವಂಚಿಸಿ, ಅಲ್ಪ ಪೂಜೆಯನ್ನು ಸಲ್ಲಿಸುವವನು, ಮಂದಮತಿಯೆನಿಸುವನು; ಅಲ್ಪ(ಮಂದ) ಭಾಗ್ಯವನ್ನೇ (ಸಂಪತ್ತನ್ನೇ) ಹೊಂದುತ್ತಾನೆ; ಶಕ್ತ್ಯನುಸಾರವಾಗಿ ಪೂಜಿಸುವವನು, ಪೂಜೆಯ ಪೂರ್ಣಫಲವನ್ನು ಹೊಂದುತ್ತಾನೆ; ತನ್ನ ಶಕ್ತಿಯನ್ನು ಅತಿಕ್ರಮಿಸಿ, ಅಧಿಕವಾಗಿ ಪೂಜಿಸುವವನು (ಶ್ರೀಹರಿದತ್ತವಾದ ಎಲ್ಲ ದ್ವಿವಿಧ ಸಂಪತ್ತನ್ನು ಹರಿಪೂಜೆಗಾಗಿಯೇ ವಿನಿಯೋಗಿಸುವವನು), ಪೂರ್ಣತರವಾದ (ಪೂರ್ಣಫಲಕ್ಕಿಂತ ಅಧಿಕವಾದ ಮಹಾಫಲವನ್ನು) ಹೊಂದುತ್ತಾನೆ;[1] ಅದ್ಭುತ ಕರ್ಮಗಳುಳ್ಳ ಶ್ರೀಹರಿಯ ಈ ರಹಸ್ಯವು (ಕರ್ಮಫಲ ವಿತರಣೆಯ ರಹಸ್ಯವು), ಹೇಳಲ್ಪಟ್ಟಿತು; ಶ್ರೀಹರಿಯ ಈ

1. ಶ್ರೀಹರಿದತ್ತವಾದ ಸಂಪತ್ತುಗಳ ವಿನಿಯೋಗವು ಅನ್ಯತ್ರ ವಿಸ್ತಾರದಿಂದ ಪ್ರಸಕ್ತವಾಗಿದೆ

ಅಧಿಕ(ಪೂರ್ಣ)ವಾದ ಫಲವನ್ನು ಲಭೇತ್-ಹೊಂದುವನು; ಅದ್ಭುತ ಕರ್ಮಣಃ-ಆಶ್ಚರ್ಯ ಕರ್ಮಗಳುಳ್ಳ, ವಿಷ್ಣೋಃ-ಶ್ರೀವಿಷ್ಣುವಿನ, ಏತತ್-ಈ (ಪುಣ್ಯಫಲ ಪ್ರಧಾನದ), ರಹಸ್ಯಂ-ರಹಸ್ಯವು (ಗೋಪ್ಯವಾದ ಪ್ರಮೇಯವು), ಆಖ್ಯಾತಂ- ಹೇಳಲ್ಪಟ್ಟಿತು; ಅಸ್ಯ-ಈ ರಹಸ್ಯದ, ಶ್ರವಣಾತ್- ಶ್ರವಣದಿಂದಲೂ, ಮನನಾತ್-ಮನನದಿಂದಲೂ (ಈ ಪ್ರಮೇಯದ ನಿಶ್ಚಯ ಜ್ಞಾನವನ್ನು ಸಂಪಾದಿಸಿದ ಅಧಿಕಾರಿಯು), ಹರೇಃ-ಶ್ರೀಹರಿಯ, ಪ್ರಸಾದಂ- (ಮುಕ್ತಿಸಾಧನವಾದ) ಪ್ರಸನ್ನತೆಯನ್ನು ಪ್ರಾಪ್ನುಯಾತ್-ಹೊಂದುತ್ತಾನೆ.

ಶಾಂಡಿಲ್ಯ ಪ್ರಶ್ನೋತ್ತರವೆಂಬ ೪೦ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೧

ಶ್ರೀ ವೇದವ್ಯಾಸಾಯ ನಮಃ

**ಕೌಂಡಿಣ್ಯ ಉವಾಚ—**

**ಸತ್ವವರ್ಣಃ ಶುಕ್ಲ ಏವ ತಮಸಃ ಕೃಷ್ಣ ಏವ ಚ ।**
**ತಥಾ ಸತಿ ಕಥಂ ಮುಕ್ತೌ ನಾನಾವರ್ಣಾನಿ ಭುಂಜತೇ ॥ ೧ ॥**
**ಮಾಣಿಕ್ಯನೀಲವೈಡೂರ್ಯಗಾರುಡಾದ್ಯೈರಲಂಕೃತೀಃ ।**
**ಖಚಿತಾ ಸ್ಯುಃ ಕಥಂ ಸೂತ ನಾನಾಕುಟ್ಟಿಮಭೂಮಯಃ ॥ ೨ ॥**
**ರತ್ನಸೋಪಾನಕಾ ವಾಪ್ಯಶ್ಚಿತ್ರವರ್ಣಾಶ್ಚ ಶಾಖಿನಃ ।**
**ನಾನಾಪುಷ್ಪಫಲಾಶ್ಚೈವ ನಾನಾವರ್ಣವಿಲೇಪನಂ ॥ ೩ ॥**
**ನಾನಾವಿಧಾನಿ ವಾಸಾಂಸಿ ಕಥಂ ಸ್ಯುಸ್ತತ್ರ ತದ್ವದ ।**
**ನೈಕವರ್ಣಾನಿ ವಸ್ತೂನಿ ಶೋಭಾಯೈ ಪ್ರಭವಂತಿ ವೈ ॥ ೪ ॥**
**ಸರ್ವೇಷಾಮಪಿ ತೋಷಾಯ ನೈಕವರ್ಣಂ ಪ್ರಶಸ್ಯತೇ ।**

---

ರಹಸ್ಯಮಹಿಮೆಯ ಶ್ರವಣಮನನಗಳಿಂದ, ಅಧಿಕಾರಿಯು ಶ್ರೀಹರಿಯ ಪ್ರಸಾದವನ್ನು (ಮುಕ್ತಿಸಾಧನವಾದ ಪ್ರಸನ್ನತೆಯನ್ನು ಹೊಂದುತ್ತಾನೆ (೧೦೯-೧೧೧).

೪೦ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೪೧

**ತಾತ್ಪರ್ಯ:—**ಸತ್ತ್ವಗುಣದ ವರ್ಣವು ಬಿಳುವು; ತಮೋಗುಣದ ವರ್ಣವು ಕಪ್ಪು; (ಇವುಗಳ ಮಿಶ್ರಣದಿಂದ ಸೃಷ್ಟವಾದುದು ರಜೋಗುಣವು— ಸೃಷ್ಟವಾದ್ದರಿಂದ, ಅನಿತ್ಯವು; ಪ್ರಲಯದಲ್ಲಿ ಸತ್ತ್ವತಮೋಗುಣದ ಆದರ ಭಾಗಗಳು, ಸತ್ತ್ವತಮೋಗುಣಗಳಲ್ಲಿ

ಇತಿ ನೋ ವದ ವಿದ್ವಂಸ್ತ್ವಂ ಯಥಾದ್ವೈಪಾಯನಾಚ್ಛ್ರುತಂ ॥ ೫ ॥

ಅರ್ಥ:—ಕೌಂಡಿನ್ಯಋಷಿಯು ಪ್ರಶ್ನಿಸುತ್ತಾನೆ— ಸತ್ವವರ್ಣಃ-ಸತ್ವಗುಣದ ವರ್ಣವು (ಬಣ್ಣವು), ಶುಕ್ಲಃ ಏವ-ಬಿಳುಪೇ ಸರಿ (ಬೆಳ್ಳಗಿರುತ್ತದೆ); ತಮಸಃ-ತಮೋಗುಣದ, (ವರ್ಣಃ-ಬಣ್ಣವು), ಕೃಷ್ಣಃ ಏವ ಚ-ಕಪ್ಪು ಬಣ್ಣವೇ ಆಗಿರುತ್ತದೆ; ತಥಾಸತಿ-ಹೀಗಿರುತ್ತಿರಲು, ಮುಕ್ತೌ-ಮೋಕ್ಷದಲ್ಲಿ (ಮುಕ್ತಲೋಕದಲ್ಲಿ), ನಾನಾವರ್ಣಾನಿ-ವಿವಿಧ ವರ್ಣಗಳನ್ನು (ವಿವಿಧ ವರ್ಣದ ವಸ್ತುಗಳನ್ನು), ಕಥಂ-ಹೇಗೆ, ಭುಂಜತೇ-(ಮುಕ್ತರು) ಭೋಗಿಸುತ್ತಾರೆ? ಮಾಣಿಕ್ಯ ನೀಲವೈಡೂರ್ಯ ಗಾರುಡಾದ್ಯೈಃ-ಮಾಣಿಕ್ಯ, ನೀಲ, ವೈಡೂರ್ಯ, ಪಚ್ಚೆ ಮೊದಲಾದ ರತ್ನಗಳಿಂದ (ವಿವಿಧ ಬಣ್ಣಗಳುಳ್ಳ ನವರತ್ನಗಳಿಂದ), ಅಲಂಕೃತೀಃ-ಅಲಂಕಾರವಸ್ತುಗಳು (ಕಿರೀಟ ಕವಚಾದಿ ಮುಕ್ತರು ಉಪಯೋಗಿಸುವವು), ಕಥಂ-ಹೇಗೆ, ಖಚಿತಾಃ ಸ್ಯುಃ-ಖಚಿತವಾದವುಗಳು (ಹೊಂದಿಸಲ್ಪಟ್ಟವು-ಜೋಡಿಸಲ್ಪಟ್ಟವು) ಆಗುತ್ತವೆ? ಸೂತ-ಹೇ ಸೂತಾಚಾರ್ಯ!, ನಾನಾಕುಟ್ಟಿಮಭೂಮಯಃ-ವಿವಿಧ (ಸ್ಫಟಿಕ ಪದ್ಮರಾಗಾದಿ) ರತ್ನಗಳಿಂದ ಖಚಿತವಾದ ನೆಲಕಟ್ಟುಳ್ಳ ಪ್ರದೇಶಗಳೂ, ರತ್ನಸೋಪಾನಕಾಃ-ರತ್ನನಿರ್ಮಿತ ಸೋಪಾನವುಳ್ಳ (ಮೆಟ್ಟಿಲುಗಳುಳ್ಳ) ವಾಪ್ಯಃ-ವಾಪಿಗಳೂ (ಇಳಿಯುವ ಭಾವಿಗಳೂ-ಚಿಕ್ಕ ಸರೋವರಗಳೂ), ಚಿತ್ರಾವರ್ಣಾಃ-ವಿವಿಧ ವರ್ಣಗಳುಳ್ಳ, ಶಾಖಿನಃ-ವೃಕ್ಷಗಳೂ, ಚ-ಮತ್ತು ನಾನಾ ಪುಷ್ಪಫಲಾಃ-ವಿವಿಧ ಪುಷ್ಪಫಲಗಳೂ, ನಾನಾವರ್ಣ ವಿಲೇಪನಂ-ವಿವಿಧ ಬಣ್ಣವುಳ್ಳ ಲೇಪನ ದ್ರವ್ಯಗಳೂ (ಗೃಹಾದ್ಯಲಂಕಾರ ಸಾಮಗ್ರಿಗಳು); ನಾನಾ ವಿಧಾನಿ-ಬಹುವಿಧದ, ವಾಸಾಂಸಿ-ವಸ್ತ್ರಗಳೂ, ತತ್ರ-ಅಲ್ಲಿ (ಮುಕ್ತಲೋಕದಲ್ಲಿ), ಕಥಂ ಸ್ಯುಃ-

---

ಲೀನವಾಗುತ್ತವೆ); ಹೀಗೆ ಎರಡೇ ವರ್ಣಗಳಿರುವಾಗ (ವಿಕೃತ ವಸ್ತುಗಳಿಲ್ಲದ ನಿರ್ವಿಕಾರವೂ ನಿತ್ಯವೂ ಆದ ವೈಕುಂಠಾದಿ ಮುಕ್ತ ಲೋಕಗಳಲ್ಲಿ) ಮುಕ್ತಿಯಲ್ಲಿ ಮುಕ್ತಜೀವರು ನಾನಾ ವರ್ಣರಂಜಿತವಾದ ವಸ್ತುಗಳನ್ನು ಹೇಗೆ ಭೋಗಿಸುವರು? ಮಾಣಿಕ್ಯ ನೀಲ, ವೈಡೂರ್ಯ, ಪಚ್ಚೆ ಮೊದಲಾದ ರತ್ನಖಚಿತವಾದ ಆಭರಣಾದಿ ಅಲಂಕಾರಗಳನ್ನು (ಕಿರೀಟಕುಂಡಲಾದಿಗಳನ್ನು) ಮುಕ್ತರು ಹೇಗೆ ಉಪಯೋಗಿಸುವರು? ಅಲ್ಲಿ ಸ್ಫಟಿಕ ಹವಳಾದಿಗಳಿಂದ ಖಚಿತವಾದ ನೆಲಗಟ್ಟುಳ್ಳ ಭೂಭಾಗಗಳು ಹೇಗಿರುತ್ತವೆ? ರತ್ನಾದಿ ಖಚಿತ ಸೋಪಾನಗಳುಳ್ಳ ವಾಪಿಗಳೂ, ಚಿತ್ರವರ್ಣಗಳುಳ್ಳ ವೃಕ್ಷಗಳೂ, ಫಲಪುಷ್ಪಾದಿಗಳೂ, ವಿವಿಧ ವರ್ಣದ ಲೇಪನವಸ್ತುಗಳೂ, ವಸ್ತ್ರಗಳೂ, ಅಲ್ಲಿ ಇರಲು ಹೇಗೆ ಸಾಧ್ಯ? ವಿವಿಧ ವರ್ಣಗಳೇ ಶೋಭಿಸುತ್ತವೆ; ಒಂದೇ ವರ್ಣವು ಸರ್ವರಿಗೂ ಸಂತೋಷವನ್ನುಂಟು ಮಾಡಲಾರವು; ಹೇ ವಿದ್ವನ್! ಸೂತಾಚಾರ್ಯ!, ನೀನು ಈ ಪ್ರಮೇಯ ವಿಷಯದಲ್ಲಿ

ಹೇಗಿರುತ್ತವೆ? (ಇರಲು ಹೇಗೆ ಸಾಧ್ಯ?); ತತ್‌ವದ-ಅದನ್ನು ಹೇಳುವನಾಗು; ನೈಕವರ್ಣಾನಿ- ವಿವಿಧ ವರ್ಣದ, ವಸೂನಿ-ವಸ್ತುಗಳು, ಶೋಭಾಯೈ-ಶೋಭೆಗೋಸ್ಕರ (ಕಾಂತಿಯನ್ನು ಹೆಚ್ಚಿಸಲು), ಪ್ರಭವಂತಿ ವೈ-ಶಕ್ತವಾಗುತ್ತವೆಂಬುದು ಲೋಕಾನುಭವ ಸಿದ್ಧವಲ್ಲವೇ?, ಸರ್ವೇಷಾಂ ಅಪಿ-ಎಲ್ಲರಿಗೂ, ತೋಷಾಯ- ಸಂತೋಷ ವನ್ನುಂಟುಮಾಡಲು, ಏಕವರ್ಣಂ-ಒಂದೇ ವರ್ಣವು ನ ಪ್ರಶಸ್ಯತೇ- ಪ್ರಶಸ್ತವೆನಿಸು ವುದಿಲ್ಲ (ಒಂದೇ ವರ್ಣವು ಎಲ್ಲರಿಗೂ ಸಂತೋಷಕರವಾಗುವುದಿಲ್ಲ); ಇತಿ- ಹೀಗಿರುವುದರಿಂದ, ವಿದ್ವನ್-ಜ್ಞಾನಿಯಾದ ಹೇ ಸೂತ! ತ್ವಂ-ನೀನು, ದ್ವೈಪಾಯನಾತ್- ಶ್ರೀ ವೇದವ್ಯಾಸರಿಂದ, ಯಥಾ-ಹೇಗೆ, ಶ್ರುತಂ-ಶ್ರವಣ ಮಾಡಲ್ಪಟ್ಟಿರುವುದೋ (ಹಾಗೆ), ನಃ-ನಮಗೆ, ವದ-(ನಿರ್ಣಯವನ್ನು) ಹೇಳುವವನಾಗು.

ಸೂತ ಉವಾಚ—

ಸ್ವರೂಪೇಣೈವ ಯೇ ಜೀವಾಃ ಶಾಖಿನಃ ಪಶವೋ ಮೃಗಾಃ ।
ನಾನಾರೂಪಾಃ ಶುಕ್ಲವರ್ಣಾಃ ಸತ್ವರೂಪಾಯತೋಽಖಿಲಾಃ ॥ ೬ ॥

ಯೇ ಜೀವಾಃ-ಯಾವ ಜೀವರು, ಸ್ವರೂಪೇಣ ಏವ-ಸ್ವರೂಪದಿಂದಲೇ, ಶಾಖಿನಃ-ವೃಕ್ಷಗಳು, ಪಶವಃ-ಪಶುಗಳು, ಮೃಗಾಃ-ಮೃಗಗಳೂ (ಆಗಿರುವರೋ-ಆ ಎಲ್ಲರೂ), ನಾನಾರೂಪಾಃ-ವಿವಿಧ ರೂಪಗಳುಳ್ಳವರು; ಯತಃಯಾವ ಕಾರಣದಿಂದ, ಅಖಿಲಾಃ-ಆ ಸಮಸ್ತರೂ, ಸತ್ವರೂಪಾಃ-ಶುದ್ಧವಾದ ಸ್ವಸ್ವರೂಪವುಳ್ಳವರೋ, (ತತಃ-ಆ ಕಾರಣದಿಂದ), ಶುಕ್ಲವರ್ಣಾಃ-(ಅವರೆಲ್ಲರೂ) ಶುಕ್ಲ ವರ್ಣದವರೇ (ಅಮಿಶ್ರಿತ ಶುಭ್ರವರ್ಣದ ಸ್ವರೂಪದೇಹಗಳುಳ್ಳವರೇ ಆಗಿರುವರು).

ಯಥಾಯಥೈವ ವಾಂಛಂತಿ ಮುಕ್ತಾ ವಸೂನಿ ಯಾನಿ ತು ।
ತಥಾತಥೈವ ಜಾಯಂತೇ ನಾನಾರೂಪಾಣ್ಯನೇಕಶಃ ॥ ೭ ॥
ಇಚ್ಛಾಂತೇ ಪ್ರಕೃತಿಂ ಯಾಂತಿ ಹರೇರಿಚ್ಛಾ ತಥೈವ ಹಿ ।

ಮುಕ್ತಾ-(ಈ ಶುಕ್ಲವರ್ಣ ಸ್ವರೂಪರಾದ) ಮುಕ್ತರು, ಯಥಾ ಯಥಾ

---

ಶ್ರೀ ವೇದವ್ಯಾಸರಿಂದ ಶ್ರವಣ ಮಾಡಿದುದನ್ನು ಯಥಾವತ್ತಾಗಿ (ಕೇಳಿದಂತೆ), ನಮಗೆ ನಿರೂಪಿಸುವವನಾಗು (೧-೫). ಸೂತನು ಹೇಳುತ್ತಾನೆ: ಜೀವರು ಸ್ವರೂಪದಿಂದಲೇ, ವೃಕ್ಷಗಳೂ, ಪಶುಗಳೂ, ಮೃಗಗಳೂ ಆಗಿದ್ದು ನಾನಾ ರೂಪಗಳುಳ್ಳವರಾದರೂ, ಮುಕ್ತರು ಶುದ್ಧವಾದ (ಅಪ್ರಾಕೃತವಾದ ಚೇತನಾತ್ಮಕ) ರೂಪದಿಂದ ಸ್ಥಿತರಾಗಿರುವುದರಿಂದ, ಅವರೆಲ್ಲರೂ ಶುಕ್ಲವರ್ಣದವರೇ ಸರಿ (೬). ಈ ಮುಕ್ತರು, ತಮ್ಮ ಭೋಗಕ್ಕಾಗಿ, ಹೇಗೆ ಹೇಗಿರುವ ವಿವಿಧ ವಸ್ತುಗಳನ್ನು ಅಪೇಕ್ಷಿಸುವವರೋ,

ಏವಂ-ಯಾವಯಾವ ಪ್ರಕಾರದ, ಯಾನಿ-ಯಾವ, ವಸೂನಿ-ವಸ್ತುಗಳನ್ನು ವಾಂಛಂತಿ-ಅಪೇಕ್ಷಿಸುವರೋ, ತಥಾ ತಥೈವ-ಹಾಗೆಹಾಗೆ (ಅಯಾ ಪ್ರಕಾರದ) ಇರುವ ವಸ್ತುಗಳು, ಅನೇಕಶಃ-ಬಹು ವಿಧವಾದವುಗಳು (ನಾನಾವರ್ಣ ವಿಶಿಷ್ಟವಾದವುಗಳು), ನಾನಾರೂಪಾಣಿ-ಬಹುರೂಪವುಳ್ಳವುಗಳು, ಜಾಯಂತೇ- ಉದ್ಭವಿಸುತ್ತವೆ; ಇಚ್ಛಾಂತೇ-(ಮುಕ್ತರ) ಇಚ್ಛೆಯು ಪೂರ್ಣವಾದೊಡನೆ, ಪ್ರಕೃತಿಂ-ಪ್ರಕೃತಿಯನ್ನು (ತಮ್ಮ ಮೂಲ ರೂಪವನ್ನು) ಯಾಂತಿ-ಹೊಂದುತ್ತವೆ; (ಶುದ್ಧ ಸತ್ತ್ವಾತ್ಮಕವಾದ ಈ ವಸ್ತುಗಳಿಗಾದರೂ ವಿವಿಧ ವರ್ಣಗಳು ಹೇಗೆ ಕೂಡುತ್ತದೆಂಬ ಸಂಶಯವೂ ಯೋಗ್ಯವಲ್ಲ) ಹಿ-(ಏಕೆಂದರೆ) ಯಾವ ಕಾರಣದಿಂದ, ಹರೇಃ-ಶ್ರೀಹರಿಯ, ಇಚ್ಛಾ-ಇಚ್ಛೆಯು, ತಥಾ ಏವ ಹಾಗೆಯೇ (ನಾನಾ ವರ್ಣಯುಕ್ತವಾಗಿರಬೇಕೆಂದೇ) ಇರುತ್ತದೆ.

**ಕೇಚಿದ್ಧ್ಯಾನಪರಾಃ ಪ್ರಾಯಃ ಕೇಚಿದ್ಯಜ್ಞಾನ್ವಿತನ್ವತೇ ॥ ೮ ॥**
**ಸತ್ಕಥಾಕಥಕಾಶ್ಚಾನ್ಯೇ ಪರಿಚರ್ಯಾ ಪರಾಃ ಪರೇ ।**
**ವಿಪಣ್ಯಾಪಣರಥ್ಯಾಸು ವ್ಯವಹಾರರತಾಃ ಪರೇ ॥ ೯ ॥**
**ಉದ್ಯಾನವನವಾಪ್ಯಾದೌ ಕ್ರೀಡಾಸಕ್ತಾಃ ಪರೇ ಜನಾಃ ।**
**ಸ್ವೈರಾಚಾರಾಃ ಸ್ವೈರಭೋಗಾಃ ನಿತ್ಯಾನಂದಾ ಹರೀಚ್ಛಯಾ ॥ ೧೦ ॥**
**ಮೋದಂತೇ ಸರ್ವದಾ ಜೀವಾಃ ದೋಷಲೇಶವಿವರ್ಜಿತಾಃ ।**

ಕೇಚಿತ್-(ಆ ಮುಕ್ತರಲ್ಲಿ) ಕೆಲವರು, ಪ್ರಾಯಃ-ಬಹುವಾಗಿ, ಧ್ಯಾನಪರಾಃ-(ಶ್ರೀಹರಿ) ಧ್ಯಾನದಲ್ಲಿಯೇ ಆಸಕ್ತರು; ಕೇಚಿತ್-ಮತ್ತೆ ಕೆಲವು ಮುಕ್ತರು, ಯಜ್ಞಾನ್-(ವಿವಿಧ) ಯಜ್ಞಗಳನ್ನು, ವಿತನ್ವತೇ-ವಿಸ್ತಾರವಾಗಿ ಆಚರಿಸುವರು; ಅನ್ಯೇ-ಮತ್ತಿತರರು, ಸತ್ಕಥಾಕಥಕಾಃ-ಸತ್ಕಥೆಗಳನ್ನು ಹೇಳುವರು (ಶ್ರೀಹರಿ ಮಹಿಮೆಗಳನ್ನು

---

ಹಾಗೆ ಹಾಗಿರುವ ಬಹು ವಸ್ತುಗಳು, ಇಚ್ಛಾಮಾತ್ರದಿಂದ ಸಿದ್ಧವಾಗುತ್ತವೆ; ಮುಕ್ತರ ಇಚ್ಛೆಯು ಪೂರ್ಣವಾದೊಡನೆ, ಅವೆಲ್ಲವೂ ತಮ್ಮ ಮೂಲರೂಪವನ್ನು (ಶುದ್ಧ ಸತ್ತ್ವವನ್ನು) ಸೇರುತ್ತವೆ—ಅಲ್ಲಿಯೇ ಲೀನವಾಗುತ್ತವೆ;[1] ಶುದ್ಧ ಸತ್ತ್ವಗುಣನಿರ್ಮಿತ ಈ ವಸ್ತುಗಳಿಗೆ ವಿವಿಧ ವರ್ಣಗಳು ಹೇಗೆ ಸಂಭಾವ್ಯವಾಗುತ್ತದೆಂದು ಶಂಕಿಸಲು ಅವಕಾಶವಿಲ್ಲ; ಏಕೆಂದರೆ, ಶ್ರೀ ಹರಿಯ ಇಚ್ಛೆಯೇ ಹಾಗಿರಬೇಕೆಂದು (ವಿವಿಧವರ್ಣ ಶೋಭಿತಗಳಾಗಿರಲೆಂದು) ಇರುತ್ತದೆ (೭). ಮುಕ್ತಲೋಕದ ಈ ಪ್ರಜೆಗಳಲ್ಲಿ (ಮುಕ್ತರಲ್ಲಿ) ಕೆಲವರು ಹರಿಧ್ಯಾನಾಸಕ್ತರಾಗಿರುತ್ತಾರೆ; ಕೆಲವರು ಯಜ್ಞಗಳನ್ನಾಚರಿ ಸುತ್ತಿರುವರು; ಕೆಲವರು ಶ್ರೀ ಹರಿಮಹಿಮೆಗಳ ಪ್ರವಚನದಲ್ಲಿ ತೊಡಗಿರುತ್ತಾರೆ; ಮತ್ತೆ ಕೆಲವರು ಸ್ವೋತ್ತಮ ಮುಕ್ತರನ್ನು ಸೇವಿಸುತ್ತಿರುವರು; ಇನ್ನೂ ಕೆಲವರು

1. ೩೯ನೇ ಅಧ್ಯಾಯದ ೪೯-೫೦ನೇ ಶ್ಲೋಕಗಳನ್ನು ಇಲ್ಲಿ ನೋಡಬಹುದು.

ಪ್ರವಚನವಮಾಡುವರು); ಪರೇ-ಇನ್ನೂ ಇತರರು, ಪರಿಚರ್ಯಾಪರಾಃ-(ಸ್ತೋತ್ತಮುಮುಕ್ತರ) ಪರಿಚರ್ಯದಲ್ಲಿ(ಸೇವೆಯಲ್ಲಿತೊಡಗುವರು; ಪರೇ-ಅನ್ಯರು, ವಿಪಣ್ಯಾಪಣರಥ್ಯಾಸು-ಕ್ರಯ ವಿಕ್ರಯಗಳು ನಡೆಯುವ ಅಂಗಡಿ ಬೀದಿಗಳಲ್ಲಿ ವ್ಯವಹಾರರತಾಃ-ವ್ಯಾಪಾರಾದಿಗಳಲ್ಲಿ ತೊಡಗಿರುವರು; ಪರೇ ಜನಾಃ-ಇನ್ನಿತರ ಮುಕ್ತರು, ಉದ್ಯಾನವನ ವಾಪ್ಯಾದೌ-ಉದ್ಯಾನವನ ಮತ್ತು ಸರೋವರಾದಿಗಳಲ್ಲಿ ಕ್ರೀಡಾಸಕ್ತಾಃ-ಕ್ರೀಡಿಸುತ್ತಿರುವರು; ದೋಷಲೇಶ ವಿವರ್ಜಿತಾಃ-ದೋಷಲೇಶವಿಲ್ಲದ (ದೋಷಸ್ಪರ್ಶವೇ ಇಲ್ಲದ), ಜೀವಾಃ-(ಈ ಎಲ್ಲ) ಮುಕ್ತಜೀವರೂ, ಸ್ವೈರಾಚಾರಾಃ-ಸ್ವೇಚ್ಛಾಚಾರವುಳ್ಳವರು, (ಇಚ್ಛಾನುಸಾರ ವರ್ತಿಸುವರು); ಸ್ವೈರಭೋಗಾಃ-ಇಚ್ಛಿತಭೋಗವುಳ್ಳವರು, ಹರೀಚ್ಛಯಾ-ಶ್ರೀಹರಿಯ ಇಚ್ಛೆ ಯಿಂದಲೇ (ಶ್ರೀಹರಿಯ ಅಧೀನರಾಗಿಯೇ), ನಿತ್ಯಾನಂದಾಃ-ನಿತ್ಯವೂ ಆನಂದಿಸುತ್ತ (ಸ್ವರೂಪಾನಂದಾನು ಭವವುಳ್ಳವರಾಗಿ), ಸರ್ವದಾ-ಸರ್ವಕಾಲದಲ್ಲಿ ಮೋದಂತೇ-ಸುಖಿಸುತ್ತಾರೆ.

**ಸ್ವೇಚ್ಛಯಾ ಪರಿಮಾಣಾನಿ ಯಥಾಕಾರಮನೇಕಧಾ ॥ ೧೧ ॥**
**ತೇಷಾಂ ದೇಹೇಷು ಜಾಯಂತೇ ನೇಚ್ಛಾಭಂಗಃ ಕದಾಚನ ।**

ಸ್ವೇಚ್ಛಯಾ-(ಮುಕ್ತರ) ಇಚ್ಛೆಯಿಂದ, ಯಥಾಕಾರಂ-ಅಪೇಕ್ಷಿತ ಆಕಾರವುಳ್ಳ, ಅನೇಕಧಾ-ಬಹುವಿಧದ, ಪರಿಮಾಣಾನಿ-(ಚಿಕ್ಕದೊಡ್ಡ) ಪರಿಮಾಣಗಳು, ತೇಷಾಂ-ಆ ಮುಕ್ತರ, ದೇಹೇಷು-(ಚಿದಾತ್ಮಕ) ದೇಹಗಳಲ್ಲಿ ಜಾಯಂತೇ- ಉಂಟಾಗುತ್ತವೆ; ಕದಾಚನ-ಎಂದೂ, ಇಚ್ಛಾಭಂಗಃ-ಮುಕ್ತರ ಇಚ್ಛೆಯ ವಿಘಾತವು, ನ-ಆಗುವುದೇ ಇಲ್ಲ (ಶ್ರೀಹರಿಯ ವಿಶೇಷಾನುಗ್ರಹಬಲವಿದು).

---

ಅಂಗಡಿ ಬೀದಿಗಳಲ್ಲಿ ಕ್ರಯವಿಕ್ರಯರ ವ್ಯವಹಾರಗಳಲ್ಲಿ ಆಸಕ್ತರಾಗಿರುವರು;[1] ಅನ್ಯಮುಕ್ತರು ಉಪವನಗಳಲ್ಲಿಯೂ ಸರೋವರಗಳಲ್ಲಿಯೂ ಕ್ರೀಡಿಸುತ್ತಿರುವರು; ಹೀಗೆ ವಿವಿಧ ಕ್ರೀಡೆಗಳಲ್ಲಿ ಆಸಕ್ತರಂತಿರುವ ಈ ಎಲ್ಲ ಮುಕ್ತಜೀವರು, ದೋಷಲೇಶಸ್ಪರ್ಶವಿಲ್ಲದ ಶುದ್ಧ ಸ್ವರೂಪರಾಗಿರುತ್ತಾರೆ; ಸರ್ವರೂ ಸ್ವೇಚ್ಛಾನುಸಾರ ವಾದ ಆಚಾರವುಳ್ಳವರು, ಭೋಗಗಳುಳ್ಳವರು; ಶ್ರೀಹರಿಯ ಅಧೀನರಾಗಿ, ಆತನ ಇಚ್ಛಾನುಸಾರವಾದ ಪ್ರವೃತ್ತಿಯುಳ್ಳವರಾಗಿ, ನಿತ್ಯವೂ, ಎಲ್ಲ ಕಾಲಕ್ಕೂ, ಸ್ವಸ್ವರೂಪಾ ನಂದವನ್ನು ಭೋಗಿಸುತ್ತ ಸುಖವಾಗಿ ಮುಕ್ತಲೋಕಗಳಲ್ಲಿ ವಾಸಿಸುತ್ತಾರೆ (ಎಂದೂ ಸಂಸಾರಕ್ಕೆ ಹಿಂದಿರುಗುವುದಿಲ್ಲ) (೮-೧೦). ಮುಕ್ತರು ತಮ್ಮ ಸ್ವರೂಪದೇಹ ದಿಂದಲೂ, ಇಚ್ಛಾನುಸಾರ ಸ್ವೀಕರಿಸುವ ಶುದ್ಧ ಸತ್ವಾತ್ಮಕ ದೇಹಗಳಿಂದಲೂ, ವಿವಿಧಭೋಗಗಳನ್ನು ಭೋಗಿಸುತ್ತಾರೆ; ಅವರ ಸ್ವರೂಪವೂ, ವಿವಿಧ ಪರಿಣಾಮವನ್ನು

1. ಯಾವ ಪ್ರಯೋಜನವೂ ಇಲ್ಲದ ಕೇವಲ ಲೀಲಾವಿಹಾರವಿದು.

**ಸೃಷ್ಟ್ಯಾದಿಲೀಲಾಃ ಪಶ್ಯಂತೋ ವಿಷ್ಣೋರದ್ಭುತಕರ್ಮಣಃ ॥ ೧೨ ॥**
**ಕಾಲೇ ಕಾಲೇ ಜಾಯಮಾನಾ ಮೋದಂತೇ ವಿಸ್ಮಿತಾ ಮುಹುಃ ।**

ಅದ್ಭುತಕರ್ಮಣಃ-ವಿಚಿತ್ರ ಕರ್ಮಗಳುಳ್ಳ, ವಿಷ್ಣೋಃ-ಶ್ರೀವಿಷ್ಣುವಿನ, ಕಾಲ ಕಾಲೇ-ಆಯಾಕಾಲದಲ್ಲಿ ಜಾಯಮಾನಾಃ-ಸಂಭವಿಸುವ, ಸೃಷ್ಟ್ಯಾನಿ ಲೀಲಾಃ-ಜಗತ್ತಿನ ಸೃಷ್ಟಿ ಮೊದಲಾದ ಲೀಲೆಗಳನ್ನು ಪಶ್ಯಂತಃ-(ಮುಕ್ತರು) ನೋಡುವವರಾಗಿ, ಮುಹುಃ-ಮತ್ತೆಮತ್ತೆ, ವಿಸ್ಮಿತಾಃ-ಆಶ್ಚರ್ಯಚಕಿತರಾಗಿ, ಮೋದಂತೇ-ಆನಂದಿಸುತ್ತಾರೆ.

**ವಿಚಾರ್ಯಮಾಣೇ ಕಿಂ ಕಿಂ ನ ವಿಚಿತ್ರಂ ಹರಿನಿರ್ಮಿತಂ ॥ ೧೩ ॥**
**ಮೂಢಸ್ತತ್ತ್ವಂ ನ ಜಾನಾತಿ ಸ್ವಭಾವ ಇತಿ ಮನ್ಯತೇ ।**

ವಿಚಾರ್ಯಮಾಣೇ-ವಿಚಾರಮಾಡುತ್ತಿರಲು (ಆಲೋಚಿಸಿದರೆ), ಹರಿ ನಿರ್ಮಿತಂ-

---

(ಬಹು ಪ್ರಕಾರದ ಪರಿಮಿತಿಯುಳ್ಳ ಇಚ್ಛಿತಾಕಾರಗಳನ್ನು) ಹೊಂದುತ್ತಾರೆ;[1] ಸ್ವೀಕರಿಸುವ ಸತ್ವಾತ್ಮಕ ದೇಹಗಳ, ಆಕೃತಿ, ಪರಿಮಿತಿ ಮೊದಲಾದವುಗಳು ಮುಕ್ತರ ಇಚ್ಛಾಧೀನವೇ ಆಗಿರುತ್ತವೆ; ಅವರ ಇಚ್ಛೆಯು ಎಂದೂ ವ್ಯರ್ಥವಾಗುವುದಿಲ್ಲ —ನಡೆಯದಿರುವುದಿಲ್ಲ (೧೧). ಕಾಲಕಾಲದಲ್ಲಿ ಸಂಭವಿಸುವ ಶ್ರೀವಿಷ್ಣುವಿನ, ಜಗತ್ಸೃಷ್ಟ್ಯಾದಿ ಅದ್ಭುತ ವ್ಯಾಪಾರಗಳನ್ನು, ಕಾಣುತ್ತ, ವಿಷ್ಣುಲೀಲೆಗಳಿಂದ ಆಶ್ಚರ್ಯಚಕಿತರಾಗಿ, ಪುನಃ ಪುನಃ ಆನಂದದಿಂದ ಉದ್ರಿಕ್ತರಾಗುತ್ತಾರೆ (೧೨). ಶ್ರೀಹರಿನಿರ್ಮಿತವಾದುದು, ಯಾವುದು ವಿಚಿತ್ರವಲ್ಲ? ಆಲೋಚಿಸಿದರೆ ಸರ್ವವೂ ವಿಚಿತ್ರವೆಂದೇ ತಿಳಿಯಬರುತ್ತದೆ; ಅಜ್ಞಾನಿಯು ಮಾತ್ರ, ಸೃಷ್ಟವಾದುದೆಲ್ಲವೂ ಅಷ್ಟು

---

1. ಮುಕ್ತರಿಗೆ ಬಾಹ್ಯದೇಹವಿಲ್ಲದಿದ್ದರೂ, ಚಿದ್ದೇಹದಿಂದಲೇ ಭೋಗವು ದೊರೆಯುತ್ತದೆ.
'ಸ್ವಪ್ನಸ್ಥಾನಾಂ ಯಥಾ ಭೋಗೋ ವಿನಾ ದೇಹೇನ ಯುಜ್ಯತೇ ।
ಏವಂ ಮುಕ್ತಾವಪಿ ಭವೇದ್ವಿನಾ ದೇಹೇನ ಭೋಜನಂ ।
ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ ।
ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ ॥'
(ಬ್ರಹ್ಮವೈವರ್ತ), 'ಸ್ವರೂಪಂ ವರ್ಧತೇ ತೇಷಾಂ ಸರ್ವೇಷಾಂ ಪರಿಮಾಣತಃ' (ಸ.ರ.ಮಾ) ಮತ್ತು 'ಜ್ಯೋತಿಷ್ಯೇವ ರೂಪೇಣ ಚಿತಾ ವಾ ಅಚಿತಾ ವಾ ನಿತ್ಯೇನ ವಾ ಅನಿತ್ಯೇನ ವಾ ಅಥಾನಂದೀ ಹ್ಯೇವೈಷ ಭವತಿ । ನಾನಾನಂದಂ ಕಿಂಚಿದುಪಸ್ಪೃಶತಿ' (ಉದ್ದಾಲಕ ಶ್ರುತಿ), ಎಂಬ ಪ್ರಮಾಣಗಳು, ಮುಕ್ತರು ಪ್ರಕಾಶರೂಪವಾದ ತಮ್ಮ ಚಿದ್ದೇಹ (ಸ್ವರೂಪ)ದಿಂದಾಗಲಿ, ಶುದ್ಧ ಸತ್ವಾತ್ಮಕ ಪ್ರಾಕೃತ ದೇಹದಿಂದಾಗಲಿ, ನಿತ್ಯವಾದ (ಸ್ವರೂಪದ) ಅಥವಾ ಅನಿತ್ಯವಾದ (ಸತ್ವಾತ್ಮಕ) ದೇಹದಿಂದ ಆನಂದವನ್ನೇ ಹೊಂದುತ್ತಾರೆ—ದುಃಖವನ್ನು ಅಲ್ಪವೂ ಮುಟ್ಟುವುದಿಲ್ಲ, ಎಂದೂ ಇಚ್ಛಾನುಸಾರವಾಗಿ, ಸ್ವರೂಪದೇಹವೂ ವೃದ್ಧಿಗೊಳ್ಳುವುದೆಂದೂ ಹೇಳುತ್ತವೆ. ಈ ಸಂಬಂಧದ ಹೆಚ್ಚಿನ ವಿಶೇಷಗಳನ್ನು ಸತತ್ತ್ವರತ್ನಮಾಲಾ ಭೋಗಪಾದದಲ್ಲಿ ಕಾಣಬಹುದು.

ಶ್ರೀಹರಿಯಿಂದ ಸೃಷ್ಟವಾದ, ಕಿಂಕಿಂ-ಯಾವ ಯಾವ ವಸ್ತುವು, ನ ವಿಚಿತ್ರಂ-ವಿಚಿತ್ರವಲ್ಲ (ಆಶ್ಚರ್ಯಕರವಲ್ಲ?); ಮೂಢಃ-ಅಜ್ಞಾನಿಯು (ಜಗತ್ಸೃಷ್ಟ್ಯಾದಿಗಳು ಶ್ರೀಹರಿಯಿಂದ ಸಂಭವಿಸುವುವೆಂದು ತಿಳಿಯದವನು), ತತ್ತ್ವಂ-ಸತ್ಯವನ್ನು (ನಿಜಕಾರಣವನ್ನು), ನ ಜಾನಾತಿ-ತಿಳಿಯುವುದಿಲ್ಲ; ಸ್ವಭಾವಃ-ಸ್ವಭಾವವು, ಇತಿ-(ವಸ್ತುಸ್ವಭಾವವೇ ವೈಚಿತ್ರ್ಯ ಕಾರಣವು) ಎಂದು, ಮನ್ಯತೇ-ಭಾವಿಸುತ್ತಾನೆ.

**ಏಕಂ ಪತ್ರಂ ಫಲಂ ಪುಷ್ಪಂ ಯತ್ಕಿಂಚಿದ್ವಸ್ತು ಯಾದೃಶಂ ॥ ೧೪ ॥**

**ಭಗವನ್ನಿರ್ಮಿತಂ ತಾದೃಕ್ ಕಃ ಪುಮಾನ್ ಕರ್ತುಮರ್ಹತಿ ।**

ಭಗವನ್ನಿರ್ಮಿತಂ-ಶ್ರೀಹರಿ ನಿರ್ಮಿತವಾದ, ಏಕಂ-ಒಂದು, ಪತ್ರಂ-ಎಲೆ, ಫಲಂ-ಹಣ್ಣು, ಪುಷ್ಪಂ-ಹೂವು, ಯತ್ಕಿಂಚಿತ್-ಯಾವುದೊಂದು ಅಲ್ಪವಾದ, ವಸ್ತು ಪದಾರ್ಥವೊ, ಯಾದೃಶಂ-ಯಾವ ಪ್ರಕಾರವಾಗಿರುವುದೋ, ತಾದೃಕ್-ಅದರಂತಿರುವ ಒಂದು ಅಲ್ಪ ಪದಾರ್ಥವನ್ನು, ಕಃ ಪುಮಾನ್-ಯಾವ ಮನುಷ್ಯನು, ಕರ್ತುಂ-ಮಾಡಲು (ನಿರ್ಮಿಸಲು), ಅರ್ಹತಿ-ಶಕ್ತನಾಗುತ್ತಾನೆ? (ಯಾವ ಮನುಷ್ಯನೂ, ಶ್ರೀಹರಿ ಸೃಷ್ಟವಾದಂತೆ ಅತ್ಯಲ್ಪವಾದ ಯಾವ ವಸ್ತುವನ್ನೂ ನಿರ್ಮಿಸಲಾರನು).

**ಕಥಂ ಸೃಜತಿ ವಸ್ತೂನಿ ಕಥಂ ವಾ ವರ್ಧಯತ್ಯಪಿ ॥ ೧೫ ॥**

**ಕಥಂ ಸಂಹರತೇ ಚಾಯಂ ನಿಯಚ್ಛತಿ ಕಥಂ ಸ್ಥಿತಿ ।**

**ಕಥಂ ಜ್ಞಾಪಯತೇ ಲೋಕಾನ್ ಕಥಂ ವಾ ಮೋಹಯತ್ಯಪಿ ॥ ೧೬ ॥**

---

ವಿಚಿತ್ರವಾಗಿರಲು (ಆಶ್ಚರ್ಯಕರವಾಗಿರಲು) ವಸ್ತುಸ್ವಭಾವವೇ ಕಾರಣವೆಂದು ತಿಳಿಯುತ್ತಾನೆ (೧೩). ಶ್ರೀಹರಿಯಿಂದ ಸೃಷ್ಟವಾದ ಒಂದು ಪತ್ರ, ಪುಷ್ಪ ಫಲ ಮೊದಲಾದ ಅತ್ಯಲ್ಪವಾದ (ಕ್ಷುದ್ರವಾದ) ಪದಾರ್ಥವನ್ನೂ, ಯಾವ ಮನುಷ್ಯನೂ, ಅದರಂತೆ ನಿರ್ಮಿಸಲಾರನು; ಅಷ್ಟು ಅದ್ಭುತವಾದುದು ಆತನ ಸೃಷ್ಟಿ (೧೪). ಶ್ರೀಹರಿಯ ಸೃಷ್ಟಿ ಮಾತ್ರವಲ್ಲ—ಜಗತ್ಸಂಬಂಧವಾದ ಆತನ ಯಾವ ವ್ಯಾಪಾರವನ್ನೂ ಯಾರೂ ಪೂರ್ಣವಾಗಿ ತಿಳಿಯಲಾರರು; ಚೇತನಾಚೇತನಾತ್ಮಕ ಜಗದ್ವಸ್ತುಗಳನ್ನು ಹೇಗೆ ಸೃಷ್ಟಿಸುತ್ತಾನೆ, ಹೇಗೆ ರಕ್ಷಿಸಿ ವೃದ್ಧಿಗೊಳಿಸುತ್ತಾನೆ, ಹೇಗೆ ನಾಶಗೊಳಿಸುತ್ತಾನೆ, ಅವುಗಳನ್ನು ಹೇಗೆ ನಿಯಮಿಸುತ್ತಾನೆ, (ಚೇತನರಿಗೆ)[1] ಹೇಗೆ ಜ್ಞಾನವನ್ನುಂಟು

1. ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳೆಂಬ ಈ ಎಂಟೂ ಗತಿಗಳು, ಜಡಚೇತನಾತ್ಮಕವಾದ ಈ ಜಗತ್ತಿಗೆ, ಶ್ರೀಹರಿಯಿಂದಲೇ ಸಂಭವಿಸುತ್ತವೆ. ಈ ಅಷ್ಟವಿಧ ಕರ್ತೃತ್ವಗಳಲ್ಲಿ, ಮೊದಲಿನ ನಾಲ್ಕು ಜಡಚೇತನಗಳು ಛಯಕ್ಕೂ ಕೂಡುತ್ತವೆ; ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು, ಚೇತನರಿಗೆ ಮಾತ್ರ ಕೂಡುವ (ಅನ್ವಯಿಸುವ) ಕರ್ತೃತ್ವಗಳು. ಸರ್ವಜಗತ್ತಿನ ಈ ಎಂಟನ್ನೂ, ಸರ್ವದಾ ಸ್ವತಂತ್ರನಾಗಿ ನಡೆಸುವವನು, ಸರ್ವಜ್ಞನೂ, ಸರ್ವಶಕ್ತನೂ ಆದ ಶ್ರೀಹರಿಯು.

**ಕಥಂ ಬಧ್ನಾತಿ ಸಂಸಾರೇ ಕಥಂ ಮೋಚಯತೇಽಪಿ ಚ ।**
**ಸದಾ ಸರ್ವತ್ರ ಚೇಷ್ಟಾಸು ಸ್ವಯಂ ಕರ್ತಾಪಿ ನೇಕ್ಷ್ಯತೇ ॥ ೧೭ ॥**
**ಇತ್ಯಾದೀನಿ ಚರಿತ್ರಾಣಿ ವಿಚಿತ್ರಾಣಿ ಸದಾ ಹರೇಃ ।**
**ವಿಚಿನ್ವಂತೋ ನ ಜಾನಂತಿ ಸಾಕಲ್ಯೇನ ರಮಾದಯಃ ॥ ೧೮ ॥**

ವಸೂನಿ-ಚೇತನಾಚೇತನಾತ್ಮಕಗಳಾದ (ಅನಂತ) ಜಗದ್ವಸ್ತುಗಳನ್ನು, ಕಥಂ-ಹೇಗೆ, ಸೃಜತಿ-(ಶ್ರೀಹರಿಯು) ಸೃಷ್ಟಿಸುತ್ತಾನೆ; ವಾ-ಮತ್ತು, ಕಥಂ-ಹೇಗೆ, ವರ್ಧಯತಿ ಅಪಿ-(ರಕ್ಷಿಸಿ) ವೃದ್ಧಿಗೊಳಿಸುತ್ತಾನೆ; ಚ-ಮತ್ತು, ಅಯಂ-ಈ ಶ್ರೀಹರಿಯು, ಕಥಂ-ಹೇಗೆ, ಸಂಹರತಿ-(ತಾನೇ ಸೃಷ್ಟಿಸಿದವುಗಳನ್ನು) ಸಂಹಾರ ಮಾಡುತ್ತಾನೆ (ನಾಶ ಮಾಡುತ್ತಾನೆ); ಕಥಂ-ಹೇಗೆ, ನಿಯಚ್ಛತಿ ತು-(ಸ್ವಯಂ) ನಿಯಮನ ಮಾಡುತ್ತಾನೆ; ಇತಿ-ಎಂಬುದನ್ನೂ; ಲೋಕಾನ್-ಪ್ರಜೆಗಳನ್ನು (ಚೇತನರನ್ನು), ಕಥಂ-ಹೇಗೆ, ಜ್ಞಾಪಯತೇ-ಜ್ಞಾನವುಳ್ಳವರನ್ನಾಗಿ ಮಾಡುತ್ತಾನೆ (ಜ್ಞಾನದಾನ ಮಾಡುತ್ತಾನೆ); ವಾ-ಮತ್ತು, ಮೋಹಯತಿ ಅಪಿ-ಮೋಹವನ್ನೂ (ಅಜ್ಞಾನವನ್ನೂ) ಹೊಂದಿಸುತ್ತಾನೆ; ಕಥಂ-ಹೇಗೆ, ಸಂಸಾರೇ-ಸಂಸಾರದಲ್ಲಿ, ಬಧ್ನಾತಿ-(ಜೀವರನ್ನು) ಬಂಧಿಸುತ್ತಾನೆ; ಅಪಿಚ-ಮತ್ತೂ, ಕಥಂ-ಯಾವ ಪ್ರಕಾರದಿಂದ, ಮೋಚಯತೇ-(ಸಂಸಾರಬಂಧವನ್ನು) ಬಿಡಿಸಿ ಮುಕ್ತರನ್ನಾಗಿ ಮಾಡುತ್ತಾನೆ; ಇತಿ-ಎಂಬುದನ್ನೂ, ಸದಾ-ಎಲ್ಲ ಕಾಲದಲ್ಲಿ, ಸರ್ವತ್ರ-ಎಲ್ಲ ದೇಶದಲ್ಲಿ, ಚೇಷ್ಟಾಸು-(ಸಂಭವಿಸುವ) ಸರ್ವಕ್ರಿಯೆಗಳಲ್ಲಿ (ಚೇಷ್ಟೆಗಳಲ್ಲಿ-ಚಲನಾದಿ ನಾನಾ ವ್ಯಾಪಾರಗಳಲ್ಲಿ), ಸ್ವಯಂ-ತಾನೇ (ಸ್ವತಂತ್ರನಾಗಿ-ಅನ್ಯಾಪೇಕ್ಷೆಯಿಲ್ಲದೆ), ಕರ್ತಾ ಅಪಿ-ಕರ್ತನಾಗಿದ್ದರೂ, ನ ಈಕ್ಷ್ಯತೇ-(ಹಾಗೆಂದು) ಯಾರೂ ತಿಳಿಯುವುದಿಲ್ಲ. ಇತ್ಯಾದೀನಿ-ಈ ಮೊದಲಾದ, ಹರೇಃ-ಶ್ರೀಹರಿಯ, ಸದಾ-ಎಲ್ಲ ಕಾಲದಲ್ಲಿ ಸಂಭವಿಸುವ (ನಿತ್ಯಗಳಾದ) ವಿಚಿತ್ರಾಣಿ-ಆಶ್ಚರ್ಯಕರಗಳಾದ, ಚರಿತ್ರಾಣಿ-ಲೀಲೆಗಳನ್ನು, ವಿಚಿನ್ವಂತಃ-ಅರಸುವವರಾಗಿ (ಆಲೋಚಿಸಿ ಗ್ರಹಿಸಲು ಸದಾ ಯತ್ನಿಸುವವರಾದರೂ), ರಮಾದಯಃ-ಲಕ್ಷ್ಮೀಬ್ರಹ್ಮಾದಿಗಳೂ ಅಚಿಂತ್ಯ

---

ಮಾಡುತ್ತಾನೆ, ಮತ್ತು ಹೇಗೆ ಮೋಹ (ಅಜ್ಞಾನ)ವನ್ನೂ ಹೊಂದಿಸುತ್ತಾನೆ. ಅವರನ್ನು ಸಂಸಾರದಲ್ಲಿ ಹೇಗೆ ಬಂಧಿಸುತ್ತಾನೆ ಮತ್ತು ಅವರನ್ನು ಅದರಿಂದ ಮುಕ್ತಗೊಳಿಸಿ, ನಿತ್ಯಸ್ಥಿತಿರೂಪದ ಮೋಕ್ಷವನ್ನು ಕೊಡುತ್ತಾನೆ, ಎಂಬೀ ಯಾವ ಶ್ರೀಹರಿಯ ವ್ಯಾಪಾರಗಳನ್ನೂ (ಕೃತಿಗಳನ್ನೂ) ಯಾರೂ ತಿಳಿಯಲಾರರು; ಶ್ರೀಹರಿಯು ಸರ್ವದಾ, ಸರ್ವತ್ರ, ಸ್ವತಂತ್ರ ಸರ್ವಕರ್ತನಾದರೂ, ಹೀಗಿರುವನೆಂಬ ಆತನ ವಿಚಿತ್ರ ಲೀಲೆಗಳನ್ನು, ಅಪಾರ ಜ್ಞಾನಮಹಿಮರಾದ ರಮಾಬ್ರಹ್ಮಾದಿಗಳು, ಸರ್ವಕಾಲದಲ್ಲಿ ಬುದ್ಧ್ಯಾಗ್ರಹಿಸಲು, ಸರ್ವಪ್ರಯತ್ನದಿಂದ ಪರಿಪರಿ ಚಿಂತಿಸಿದರೂ ಪೂರ್ಣವಾಗಿ ತಿಳಿಯುವುದಿಲ್ಲ (೧೫-೧೮). ಹೀಗೆ ಶ್ರೀಹರಿಯು ರಮಾಬ್ರಹ್ಮಾದಿಗಳಿಂದ ಸಹ

ಜ್ಞಾನಶಕ್ತಿಯುಳ್ಳವರೂ) ಸಹ (ಒಬ್ಬೊಬ್ಬರೂ, ಸರ್ವರೂ ಮಿಳಿತರಾಗಿ ಸಹ), ಸಾಕಲ್ಯೇನ-ಪೂರ್ಣವಾಗಿ, ನ ಜಾನಂತಿ-ತಿಳಿಯುವುದಿಲ್ಲ.

**ಯಥಾಮತಿ ಯಥಾಶಕ್ತಿ ಸದಾ ಸರ್ವೈಶ್ಚ ಸೋ ಹರಿಃ ।**
**ಉಪಾಸ್ಯೋ ವೇದನೀಯಶ್ಚ ತತೋ ಯಾತಿ ಕೃತಾರ್ಥತಾಂ ॥ ೧೯ ॥**

**ಯಥಾ ಖಗಾಃ ಸ್ವಶಕ್ತ್ಯೈವ ನಭೋ ಲಂಘನತೋಽಖಿಲಾಃ ।**
**ಲಭಂತೇ ಸ್ವಗತಿಂ ತದ್ವದ್ವಿದ್ವಾಂಸೋ ವಿಷ್ಣುಮಾರ್ಗಣಾತ್ ॥ ೨೦ ॥**

**ನ ಹ್ಯಸ್ತಿ ತಾದೃಶಃ ಕಶ್ಚಿತ್ ಪಾರವೇತ್ತಾಽಖಿಲೇಶಿತುಃ ।**
**ಕಥಂ ಸ್ಯಾತ್ತಾದೃಶಸ್ತಸ್ಯ ದೂರಾಪಾಸ್ತಸ್ತತೋಽಧಿಕಃ ॥ ೨೧ ॥**

ಸಃ ಹರಿಃ-(ಹೀಗಿರುವ) ಆ ಶ್ರೀಹರಿಯು, ಯಥಾಮತಿ-ತಮತಮಗೆ ತಿಳಿದಷ್ಟು ಯಥಾಶಕ್ತಿ-ತಂತಮ್ಮ (ಊಹಾದಿ) ಸಾಮರ್ಥ್ಯವಿದ್ದಷ್ಟು ಸರ್ವೈಃ-ಎಲ್ಲರಿಂದ, ಸದಾ ಚ-ಎಲ್ಲ ಕಾಲದಲ್ಲಿಯೂ, ಉಪಾಸ್ಯಃ-ಉಪಾಸಿಸಲು (ಧ್ಯಾನಿಸಲ್ಪಡಲು) ಅರ್ಹನೇ; ಚ-ಮತ್ತು ವೇದನೀಯಃ-ತಿಳಿಯಲ್ಪಡತಕ್ಕವನೇ (ಆಗಿರುತ್ತಾನೆ); ತತಃ-ಅದರಿಂದ (ಜ್ಞಾನವಿದ್ದಷ್ಟು, ಶಕ್ತಿಯಿದ್ದಷ್ಟು ಶ್ರೀಹರಿಯನ್ನು ಉಪಾಸಿಸಿ ತಿಳಿಯುವುದರಿಂದ-ಕಾಣುವುದರಿಂದ ಸಾಕ್ಷಾದ್ದರ್ಶನದಿಂದ), ಕೃತಾರ್ಥತಾಂ-ಕೃತಾರ್ಥನು (ಪುರುಷ ಪ್ರಯತ್ನದ ಪೂರ್ಣ ಫಲವನ್ನು ಹೊಂದಿದವನು) ಆದ ಸ್ಥಿತಿಯನ್ನು ಯಾತಿ-ಹೊಂದುತ್ತಾನೆ; ಖಗಾಃ-ಪಕ್ಷಿಗಳು, ಸ್ವಶಕ್ತ್ಯಾ ಏವ-ತಮ್ಮ ಶಕ್ತಿಯಿರುವಷ್ಟೇ, ನಭಃ-ಆಕಾಶವನ್ನು ಲಂಘನತಃ-ಹಾರುವುದರಿಂದ, ಅಖಿಲಾಃ-ಎಲ್ಲವೂ (ಎಲ್ಲ ಪಕ್ಷಿಗಳೂ), ಯಥಾ-ಹೇಗೆ, ಸ್ವಗತಿಂ-ತಮತಮಗೆ ಯೋಗ್ಯವಾದ ಸ್ಥಾನವನ್ನು,

---

ಸಾಕಲ್ಯೇನ ಅಜ್ಞೇಯನಾದರೂ, ಸರ್ವಕಾಲದಲ್ಲಿರುವ ಸರ್ವರೂ (ಸರ್ವಜೀವರೂ), ಆತನನ್ನು ಯಥಾಮತಿ, ಯಥಾಶಕ್ತಿ ತಿಳಿಯುತ್ತಾರೆ; ಶಕ್ತ್ಯನುಸಾರ ಉಪಾಸಿಸಿ, ಸುಜೀವರು ಯಥಾಯೋಗ್ಯವಾದ ಪ್ರತ್ಯಕ್ಷದರ್ಶನವನ್ನೂ ಪಡೆಯುತ್ತಾರೆ; ಅದರಿಂದ ಕೃತಾರ್ಥರೂ (ಹೊಂದಲ್ಪಟ್ಟ ಪರಮಪುರುಷಾರ್ಥವುಳ್ಳವರೂ) ಆಗುತ್ತಾರೆ; ಪಕ್ಷಿಗಳು ಹೇಗೆ, ಸ್ವಶಕ್ತ್ಯನುಸಾರವಾಗಿ (ರೆಕ್ಕೆಗಳಲ್ಲಿ ಬಲವಿರುವಷ್ಟು) ಆಕಾಶದಲ್ಲಿ ಹಾರಿ, ಸ್ವಯೋಗ್ಯಸ್ಥಾನಗಳನ್ನು ಸೇರುತ್ತವೆಯೋ, ಹಾಗೆ, ವಿಷ್ಣುಜ್ಞಾನಕ್ಕಾಗಿ ಯತ್ನಿಸುವ ಶಾಸ್ತ್ರಾಭ್ಯಾಸಿಗಳು (ವಿದ್ವಾಂಸರು) ಸ್ವಯೋಗ್ಯ ಜ್ಞಾನವನ್ನು ಹೊಂದಿ, ಅದರಿಂದ ಸ್ವಸ್ವಗತಿಗಳನ್ನು ಪಡೆಯುತ್ತಾರೆ; ನಿಖಿಲಸ್ವಾಮಿಯಾದ ಶ್ರೀಹರಿಯ ಮಹಿಮೆಗಳನ್ನೇ ಸಾಕಲ್ಯೇನ ತಿಳಿಯಲು ಯಾರೂ ಶಕ್ತರಲ್ಲವಾಗಿರಲು, ಶ್ರೀಹರಿಗೆ ಸದೃಶ ಮಹಿಮೆಗಳುಳ್ಳ ಮತ್ತೊಬ್ಬನು ಎಲ್ಲಿ ಬಂದಾನು? ಶ್ರೀಹರಿಗೆ ಸಮನಾದವನು

ಲಭಂತೇ-ಹೊಂದುವುವೋ, ತದ್ವತ್-ಅದರಂತೆ, ವಿಷ್ಣುಮಾರ್ಗಣಾತ್-ಶ್ರೀವಿಷ್ಣುವಿನ ಮಾರ್ಗದಿಂದ (ಜ್ಞಾನಕ್ಕಾಗಿ ನಡೆಸುವ ಯತ್ನದಿಂದ), ವಿದ್ವಾಂಸಃ-ವಿದ್ವಾಂಸರೂ (ಸಚ್ಛಾಸ್ತ್ರಾಭ್ಯಾಸದಲ್ಲಿ ತೊಡಗಿದ ವಿವೇಕಿಗಳೂ-ಸುಜೀವರೂ), (ಸ್ವಗತಿಂ ಯಾಂತಿ-ತಂತಮಗೆ ಯೋಗ್ಯವಾದ ಗತಿಗಳನ್ನು ಹೊಂದುತ್ತಾರೆ); ತಾದೃಶಃ-ಹಾಗಿರುವವನಾದ ಅಖಿಲೇಶಿತುಃ-ಸರ್ವಸ್ವಾಮಿಯಾದ ಶ್ರೀಹರಿಯ, ಪಾರವೇತ್ತಾ-ಪೂರ್ಣಜ್ಞಾನಿಯೂ, ಕಶ್ಚಿತ್-ಯಾರೊಬ್ಬನೂ (ಬ್ರಹ್ಮನೂ), ನ ಅಸ್ತಿ ಹಿ-ಇಲ್ಲವೆಂಬುದು ಪ್ರಮಾಣ ಪ್ರಸಿದ್ಧವು; ತರ್ಹಿ-ಹೀಗಿರುವಾಗ, ತಾದೃಶಃ-ಶ್ರೀಹರಿಯಂತಿರುವವನು, ಕಥಂ ಸ್ಯಾತ್-ಹೇಗೆ ಇರಲು ಸಾಧ್ಯ? (ಶ್ರೀಹರಿಯನ್ನು ಪೂರಾ ತಿಳಿಯಲು ಸಹ ಆಗದಿರುವಾಗ ಆತನ ಸಮನು ಹೇಗೆ ಇದ್ದಾನು? ಇಲ್ಲವೇ ಇಲ್ಲ); ತತಃ-ಶ್ರೀಹರಿಗಿಂತ, ಅಧಿಕಃ-ಉತ್ತಮನಾದವನು, ದೂರಾಪಾಸ್ತಃ-ದೂರದಿಂದಲೇ ತಿರಸ್ಕೃತನಾದವನು (ಆಲೋಚನೆಗೆ ಸಹ ಅರ್ಹವಲ್ಲೆಂದು ತಳ್ಳಿಹಾಕಲ್ಪಟ್ಟನು) (ಸಮಾಧಿಕರು ಇಲ್ಲದ್ದರಿಂದ ಶ್ರೀಹರಿಯೇ ಸರ್ವೋತ್ತಮನೆಂದು ಸಿದ್ಧವಾಯಿತು).

ಭಗವನ್ಮಹಿಮಾವರ್ಣನವೆಂಬ ೪೧ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೨

ಶ್ರೀ ವೇದವ್ಯಾಸಾಯ ನಮಃ

**ಆರ್ಷ್ಟಿಷೇಣ ಉವಾಚ—**

**ಸೃಷ್ಟಿಸ್ಥಿತ್ಯಂತಕರ್ಮಾಣಿ ಬ್ರಹ್ಮಾವಿಷ್ಣುಮಹೇಶ್ವರಾಃ ।**
**ಕುರ್ವಂತಿ ಸಕಲಸ್ಯೇತಿ ಶ್ರೂಯತೇ ಮುಖತಃ ಸತಾಂ ॥ ೧ ॥**

---

ಯಾರೂ ಇಲ್ಲ; ಹೀಗಿರಲು, ಆತನಗಿಂತ ಅಧಿಕನು ಆಲೋಚನೆಯಿಂದ ಸಹ ದೂರೀಕರಿಸಲ್ಪಟ್ಟವನೇ ಸರಿ; ಅತಏವ ಸಮಾಧಿಕ ರಹಿತನಾದ ಶ್ರೀಹರಿಯೇ ಸರ್ವೋತ್ತಮನು. (೧೯-೨೧).

೪೧ನೇ ಅಧ್ಯಾಯವು ಮುಗಿದುದು.

**ಅಧ್ಯಾಯ ೪೨**

**ತಾತ್ಪರ್ಯ:—**ಆರ್ಷ್ಟಿಷೇಣನು ಸೂತನನ್ನು ಕುರಿತು ಪ್ರಶ್ನಿಸುತ್ತಾನೆ:—ಬ್ರಹ್ಮ, ವಿಷ್ಣು ಮಹೇಶ್ವರರು, ಕ್ರಮವಾಗಿ, ಸಕಲಜಗತ್ತಿನ ಸೃಷ್ಟಿ ಸ್ಥಿತಿ (ಪಾಲನ), ಲಯ (ನಾಶ)ಗಳನ್ನು ಮಾಡುತ್ತಾರೆಂದು ಜ್ಞಾನಿಗಳ ಮುಖದಿಂದ ಕೇಳಿಬರುತ್ತದೆ; ಮತ್ತೆ

ಅಪರೇ ವಾಸುದೇವಾದಿ ಮೂರ್ತಿಭ್ಯ ಇತಿ ಮನ್ವತೇ ।
ಕಥಂ ತರ್ಹಿ ಹರೇರೇವಂ ಸೃಷ್ಟ್ಯಾದಿಕಮಿತೀರ್ಯತೇ ॥ ೨ ॥
ಸರ್ವೇಷ್ವಪಿ ಪ್ರಮಾಣೇಷು ಋಗಾದ್ಯಾ ಶ್ರುತಯೋ ವರಾಃ ।
ಪ್ರಾಯೇಣ ಶ್ರೂಯತೇ ತತ್ರ ಮಹೇಂದ್ರೋಽಗ್ನಿಶ್ಚ ಮಾರುತಃ ॥ ೩ ॥
ಸವಿತಾ ವರುಣೋ ಮನ್ಯುರ್ವಿಷ್ಣೂ ರುದ್ರೋ ಬೃಹಸ್ಪತಿಃ ।
ಬ್ರಹ್ಮಾಯಮಕುಬೇರಾದ್ಯಾ ನಾನಾದೇವಾಶ್ಚ ಕುತ್ರಚಿತ್ ॥ ೪ ॥
ಓಂಕಾರಃ ಸದಸದ್ಬ್ರಹ್ಮಾ ಪ್ರಾಣೋಽನ್ನಂ ಜ್ಯೋತಿರಪ್ಪಪಃ ।
ಪ್ರಕೃತಿಃ ಪುರುಷಶ್ಚೇತಿ ಬಹುಧಾ ಯತ್ರಕುತ್ರಚಿತ್ ॥ ೫ ॥
ಸಾಂಖ್ಯಾಃ ಪಾಶುಪತಾಶ್ಚಾನ್ಯೇ ಯೋಗಾಚಾರ್ಯಾಸ್ತಥಾ ಪರೇ ।
ಕೇಚಿತ್ ಕಿಂಚಿದಿತಿ ಶ್ರುತ್ವಾ ಮುಗ್ಧತಾಂ ಭಜತೇ ಮತಿಃ ॥ ೬ ॥
ಯದ್ಯೇಕಂ ತತ್ರ ಸತ್ತತ್ತ್ವಂ ಯತ್ಸ್ಯಾದ್ಭಗವತೋ ಮತಂ ।
ನಿಶ್ಚಿತ್ಯ ತತ್ತ್ವಂ ಯಚ್ಛ್ರುತ್ವಾ ನರಾಸ್ಯುರ್ಮೋಕ್ಷಭಾಗಿನಃ ॥ ೭ ॥

ಅರ್ಥ:—ಅರ್ಷ್ಟಿಷೇಣನು ಪ್ರಶ್ನಿಸುತ್ತಾನೆ:—

ಬ್ರಹ್ಮಾವಿಷ್ಣುಮಹೇಶ್ವರಾಃ-ಬ್ರಹ್ಮ, ವಿಷ್ಣು, ಮಹೇಶ್ವರರು, ಸಕಲಸ್ಯ- ಸರ್ವ ಜಗತ್ತಿನ, ಸೃಷ್ಟಿ ಸ್ಥಿತ್ಯಂತ ಕರ್ಮಾಣಿ-ಸೃಷ್ಟಿ ಸ್ಥಿತಿ, ಲಯಗಳೆಂಬ ಕರ್ಮಗಳನ್ನು ಕುರ್ವಂತಿ-(ಕ್ರಮವಾಗಿ) ಮಾಡುವರು, ಇತಿ-ಎಂದು, ಸತಾಂ-ಸತ್ಪುರುಷರ, ಮುಖತಃ-ಮುಖದಿಂದ, ಶ್ರೂಯತೇ-ಕೇಳಿಬರುತ್ತದೆ; ಅಪರೇ-ಬೇರೆ ಕೆಲವರು (ಜ್ಞಾನಿಗಳು), ವಾಸುದೇವಾದಿ ಮೂರ್ತಿಭ್ಯಃ ಇತಿ-ವಾಸುದೇವಾದಿ (ಶ್ರೀಹರಿಯ)

---

ಕೆಲವರು, ಈ ಸೃಷ್ಟ್ಯಾದಿ ಕರ್ಮಗಳು ವಾಸುದೇವಾದಿ ರೂಪಗಳಿಂದ ಸಂಭವಿಸುತ್ತವೆಂದು ತಿಳಿಯುತ್ತಾರೆ;[1] ಹೀಗಿರುವಾಗ ಶ್ರೀಹರಿಯಿಂದಲೇ ಈ ಎಲ್ಲವೂ ನಡೆಯುತ್ತವೆಂದು ಹೇಳುವುದು ಹೇಗೆ ಯುಕ್ತವಾಗುತ್ತದೆ? ಸಕಲ ಪ್ರಮಾಣಗಳಲ್ಲಿ ಋಗಾದಿ ಶ್ರುತಿಗಳು ಶ್ರೇಷ್ಠವಾದುವು; ಈ ಶ್ರುತಿಗಳಲ್ಲಿ ಪ್ರಾಯಃ (ಬಹುವಾಗಿ-ಅಲ್ಲಲ್ಲಿ), ಮಹೇಂದ್ರ, ಅಗ್ನಿ, ವಾಯು, ಸೂರ್ಯ, ವರುಣ, ಮನ್ಯು, ವಿಷ್ಣು, ರುದ್ರ,

---

1. ಪ್ರದ್ಯುಮ್ನನಿಂದ ಸೃಷ್ಟಿಯೂ, ಅನಿರುದ್ಧನಿಂದ ಸ್ಥಿತಿಯೂ, ಸಂಕರ್ಷಣನಿಂದ ಲಯವೂ, ವಾಸುದೇವನಿಂದ ಮೋಕ್ಷವೂ ಸಂಭವಿಸುತ್ತವೆಂಬುದೇ ನಿರ್ಣಯವು; ಬ್ರಹ್ಮ—ವಿಷ್ಣು—ಮಹೇಶ್ವರರಗಳೆಂಬ ಮೂರು ರೂಪಗಳಿಂದ, ವಾಸುದೇವನೇ ತನ್ನ ಪತ್ನಿಯಾದ ಶ್ರೀ ಭೂ ದುರ್ಗಾರೂಪಳಾದ ಮಾಯಾದೇವಿಯಲ್ಲಿ ಅವತರಿಸಿದನೆಂದೂ, ಬ್ರಹ್ಮರೂಪವು ಚತುರ್ಮುಖ ಬ್ರಹ್ಮನನ್ನೂ, ಮಹೇಶ್ವರರೂಪವು ರುದ್ರದೇವನನ್ನೂ ಪ್ರವೇಶಿಸಿ, ಅವರ ಅಂತರ್ಯಾಮಿ ರೂಪಗಳಿಂದಿರುವುದೆಂದೂ, ಹೇಳಲಾಗಿದೆ. (ಹಿಂದೆ ೨೪ನೇ ಅಧ್ಯಾಯವನ್ನು ಇಲ್ಲಿ ನೋಡಬಹುದು).

ರೂಪಗಳಿಂದ, ಎಂದು (ಸೃಷ್ಟ್ಯಾದಿಗಳು ಸಂಭವಿಸುವುವೆಂದು), ಮನ್ಯತೇ-ತಿಳಿಯುತ್ತಾರೆ; ತರ್ಹಿ-(ಹೀಗೆ ಭಿನ್ನಾಭಿಪ್ರಾಯಗಳಿರುವಾಗ) ಹಾಗಾದರೆ, ಹರೇಃ ಏವಂ-ಶ್ರೀಹರಿಗೆ ಮಾತ್ರವೇ, ಸೃಷ್ಟ್ಯಾದಿಕಂ-ಸೃಷ್ಟಿ ಮೊದಲಾದುದೆಲ್ಲವೂ, ಇತಿ-ಎಂದು, ಕಥಂ-ಹೇಗೆ, ಈರ್ಯತೇ-ಹೇಳಲ್ಪಡುತ್ತದೆ? ಮತ್ತು ಸರ್ವೇಷು-ಎಲ್ಲ ಪ್ರಮಾಣೇಷು ಅಪಿ-ಪ್ರಮಾಣಗಳಲ್ಲಿ ಋಗಾದ್ಯಾಃ-ಋಗ್ವೇದವೇ ಮೊದಲಾದ, ಶ್ರುತಯಃ-ಶ್ರುತಿಗಳು, ವರಾಃ-ಶ್ರೇಷ್ಠವಾದವುಗಳು; ತತ್ರ-ಇವುಗಳಲ್ಲಿ (ವೇದಗಳಲ್ಲಿ), ಪ್ರಾಯೇಣ-ಬಹುವಾಗಿ, ಮಹೇಂದ್ರಃ-ದೇವೇಂದ್ರನೂ, ಅಗ್ನಿಃ-ಅಗ್ನಿದೇವನೂ, ಚ-ಮತ್ತು ಮಾರುತಃ-ವಾಯುದೇವನೂ, ಸವಿತಾ-ಸೂರ್ಯದೇವನೂ, ವರುಣಃ-ವರುಣನೂ, ಮನ್ಯು-ಮನ್ಯುವೂ (ಕ್ರೋಧಾಭಿಮಾನಿದೇವನೂ), ವಿಷ್ಣುಃ- ವಿಷ್ಣುವೂ, ರುದ್ರಃ-ರುದ್ರನೂ, ಬೃಹಸ್ಪತಿಃ-ಬೃಹಸ್ಪತಿಯೂ, ಬ್ರಹ್ಮಾಯಮ ಕುಬೇರಾದ್ಯಾಃ-ಬ್ರಹ್ಮ ಯಮ, ಕುಬೇರನೇ ಮೊದಲಾದ, ನಾನಾದೇವಾಃ-ಅನೇಕ ದೇವತೆಗಳೂ, ಕುತ್ರಚಿತ್-ಕೆಲವೆಡೆಗಳಲ್ಲಿ (ವೇದಗಳ ಕೆಲವು ಭಾಗಗಳಲ್ಲಿ), ಓಂಕಾರಃ-ಓಂಕಾರವೂ, ಸದಸದ್ಬ್ರಹ್ಮಾ-ಸತ್ ಅಸತ್‌ನಾಮಕ ಬ್ರಹ್ಮನೂ, ಪ್ರಾಣಃ-ಪ್ರಾಣನೂ, ಅನ್ನಂ-ಅನ್ನವೂ, ಜ್ಯೋತಿಃ-ಜ್ಯೋತಿಯೂ, ಅಪ್ತಪಃ-ಜಲ, ತಪಗಳೂ (ಜಲಾಭಿಮಾನಿಯ ತಪಸ್ಸೂ),

---

ಬೃಹಸ್ಪತಿ, ಚತುರ್ಮುಖ, ಯಮ, ಕುಬೇರಾದಿ ನಾನಾದೇವತೆಗಳೂ ಮತ್ತು ಕೆಲವು ಶ್ರುತಿಗಳಲ್ಲಿ ಓಂಕಾರ, ಸದಸನ್ನಾಮಕ ಬ್ರಹ್ಮ, ಪ್ರಾಣ, ಅನ್ನ, ಜ್ಯೋತಿ, ಜಪ, ತಪಗಳೂ, ಇನ್ನೂ ಕೆಲವು ವೇದಭಾಗಗಳಲ್ಲಿ ಪ್ರಕೃತಿ ಪುರುಷರೂ, ಜಗತ್ತಿನ ಸಂಬಂಧವಾದ ಸೃಷ್ಟಿ ಮೊದಲಾದ ವಿವಿಧ ವ್ಯಾಪಾರಗಳಿಗೆ ಕಾರಣರೆಂದು ಹೇಳಲಾಗುತ್ತದೆ; ಹೀಗಿರುವ ಈ ಬಹುಪರಿಯ ನಿರೂಪಣಗಳನ್ನಾಶ್ರಯಿಸಿ, ಸಾಂಖ್ಯರೂ, ಯೋಗಾಚಾರ್ಯರೂ, ಪಾಶುಪತರೂ, ಮತ್ತಿತರ ಅಭಿಪ್ರಾಯಗಳುಳ್ಳವರೂ,[1] ಇರುವರೆಂದು ಕೇಳಿ, ನಮ್ಮ ಬುದ್ಧಿಯು ಮೋಹಗೊಳ್ಳುತ್ತದೆ; ಈ ವಿಷಯದಲ್ಲಿ ಶ್ರೀವೇದವ್ಯಾಸರಿಗೆ ಸಮ್ಮತವಾದ,

---

1. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸ, ಉತ್ತರ ಮೀಮಾಂಸ ಗಳೆಂದು ಪ್ರಸಿದ್ಧವಾದ ಷಡ್ದರ್ಶನಗಳು ಭಿನ್ನಭಿನ್ನ ರೀತಿಯಿಂದ ತತ್ತ್ವಗಳನ್ನು ನಿರೂಪಿಸುತ್ತವೆ. ಈ ಷಡ್ದರ್ಶನಗಳ ಪ್ರವರ್ತಕರು, ಕ್ರಮದಿಂದ, ಗೌತಮ, ಕಣಾದ, ಕಪಿಲ, ಪತಂಜಲಿ, ಜೈಮಿನಿ ಮತ್ತು ಬಾದರಾಯಣರು. ಪಶುಪತಿಯೇ ಜಗತ್ಸೃಷ್ಟ್ಯಾದಿಕರ್ತನೆಂದೂ, ಆದಿಶಕ್ತಿಯೇ ಜಗತ್ಕಾರಣವೆಂದೂ ಸಿದ್ಧಾಂತಿಸುವ, ಪಾಶುಪತ, ಶಾಕ್ತೇಯಾದಿ ಅನ್ಯಮತಗಳೂ ಇವೆ. ಇವೆಲ್ಲ ವನ್ನೂ ವಿಮರ್ಶಿಸಿ, ನಿರ್ಣಯವನ್ನು ಪ್ರತಿಪಾದಿಸುವ ಶ್ರೀ ಬಾದರಾಯಣರ ಮತವು ಉತ್ತರಮೀಮಾಂಸಾರೂಪದಿಂದಿದೆ. ಅನ್ಯಮತಗಳ ನಿರಾಕರಣ ಯುಕ್ತಿಗಳನ್ನು ಬ್ರಹ್ಮಸೂತ್ರಗಳ ದ್ವಿತೀಯಾಧ್ಯಾಯದ ದ್ವಿತೀಯಪಾದ (ಸಮಯಪಾದ)ದಲ್ಲಿ ಕಾಣಬಹುದು. ಶ್ರೀ ಬಾದರಾಯಣರ ನಿರ್ಣಯವನ್ನೇ, ಇಲ್ಲಿ ಸೂತಾಚಾರ್ಯನು, ಋಷಿಗಳಿಗೆ, ಮುಂದಿನ ಶ್ಲೋಕಗಳಿಂದ ಸಂಗ್ರಹವಾಗಿ ನಿರೂಪಿಸುತ್ತಾನೆ.

ಪ್ರಕೃತಿಃ-ಪ್ರಕೃತಿಯೂ, ಚ-ಮತ್ತು ಪುರುಷಃ-ಪುರುಷನು, ಇತಿ-ಎಂದು, ಯತ್ರ ಕುತ್ರಚಿತ್-ಮತ್ತೆ ಕೆಲವು ಬೇರೆ ಭಾಗಗಳಲ್ಲಿ ಬಹುಧಾ-ನಾನಾರೀತಿಯಿಂದ, (ಈ ಮೊದಲಾದ ದೇವತೆಗಳಿಂದ ಬಹುಪರಿಯ ಜಗದ್ವ್ಯಾಪಾರಗಳು ನಡೆಯುತ್ತವೆಂದು), (ಶ್ರೂಯತೇ-ಕೇಳಿ ಬರುತ್ತದೆ); ಸಾಂಖ್ಯಾಃ-ಸಾಂಖ್ಯರೂ, ಪಾಶುಪತಾಃ-ಪಾಶುಪತರೂ, ಅನ್ಯೇ-ಇತರ, ಯೋಗಾಚಾರ್ಯಾಃ-ಯೋಗಾಚಾರ್ಯರೂ, ತಥಾ-ಹಾಗೂ, ಅಪರೇ-ಇನ್ನೂ ಇತರರಾದ (ಜಗತ್ಸೃಷ್ಟ್ಯಾದಿಗಳನ್ನು ವಿವಿಧವಾಗಿ ನಿರೂಪಿಸುವವರಾದ) ಕೇಚಿತ್- ಕೆಲವರೂ, (ಇರುವರೆಂದು), ಕಿಂಚಿತ್-ಸ್ವಲ್ಪಮಟ್ಟಿಗೆ, ಶ್ರುತ್ವಾ-(ಇರುವರೆಂದು) ಕೇಳಿ, ಮತಿಃ-ಬುದ್ಧಿಯು, ಮುಗ್ಧತಾಂ-ಮೋಹವನ್ನು, ಭಜತೇ-ಹೊಂದುತ್ತದೆ (ಭ್ರಮಿಸುತ್ತದೆ- ಚಂಚಲವಾಗುತ್ತದೆ-ಸತ್ಯದ ನಿಶ್ಚಯ ಜ್ಞಾನವಾಗುವುದಿಲ್ಲ); ತತ್ರ-ಈ ವಿಷಯದಲ್ಲಿ ನಃ- ನಮಗೆ, ಯತ್- ಯಾವುದು, ಭಗವತಃ-ಶ್ರೀ ವೇದವ್ಯಾಸರಿಗೆ, ಮತಂ- ಸಮ್ಮತವಾದುದೋ (ವೇದವ್ಯಾಸರ ಅಭಿಪ್ರಾಯವೋ), ಏಕಂ ಸತ್ಯಂ-(ಮುಖ್ಯವಾದ ಆ)ಒಂದು ಸತ್ಯವನ್ನು, ವದ-ಹೇಳುವವನಾಗು; ಯತ್-ಯಾವ, ತತ್ತ್ವಂ-ಸತ್ಯವನ್ನು, ನಿಶ್ಚಿತ್ಯ-ನಿಶ್ಚಯಿಸಿ, (ನಿರ್ಣಯಿಸಿಕೊಂಡು), ಶ್ರುತ್ವಾ-ಶ್ರವಣ ಮಾಡುವುದರಿಂದ, ನರಾಃ-ಮಾನವರು, ಮೋಕ್ಷಭಾಗಿನಃ-ಸನ್ಮುಕ್ತಿಗೆ ಪಾತ್ರರಾಗುವರೋ, (ತತ್, ಏಕಂ ಸತ್ಯಂ ವದ- ಆ ಒಂದು ಸತ್ಯವನ್ನು ನಿರೂಪಿಸುವವನಾಗು).

**ಸೂತ ಉವಾಚ—**

> ಏವಮೇವ ಪುರಾ ಬ್ರಹ್ಮಾ ಸಂಪೃಷ್ಟೋ ನಾರದಾದಿಭಿಃ ।
> ವಕ್ತುಂ ತದುತ್ತರಂ ವಿಷ್ಣುಂ ಸೋಽಸ್ಮರತ್ತತ್ರದೈವ ಹಿ ॥ ೮ ॥
> ಪ್ರಾದುರ್ಭೂತ್ವಾ ವದತ್ತೇಭ್ಯಃ ಪಂಚರಾತ್ರಂ ಸದಾಗಮಂ ।
> ಯಥಾ ಮುಗ್ಧಮನಾಃ ಪಾರ್ಥೋ ಬೋಧಿತಃ ಕೃಷ್ಣರೂಪಿಣಾ ॥ ೯ ॥
> ಸ್ಥಾನೇ ಸ್ಥಾನೇ ತಥಾ ತತ್ತ್ವಂ ಯದವೋಚದ್ಧರಿಃ ಸ್ವಯಂ ।
> ಸರ್ವಂ ತದನುಸಂಧಾಯ ವ್ಯಾಸಃ ಸೂತ್ರಾಣಿ ನಿರ್ಮಮೇ ॥ ೧೦ ॥
> ವೇದಾಂತಮಖಿಲಂ ಯತ್ಸ್ಯಾಜ್ಜನೈರ್ಜ್ಞಾತಂ ಬುದ್ಧೈಃ ಸ್ಫುಟಂ ।
> ತದರ್ಥನಿರ್ಣಯಾತ್ ಪ್ರಾಹ ಯನ್ಮಾಂ ವಿಶ್ವಸ್ತಚೇತಸಾಂ ॥ ೧೧ ॥
> ವದಾಮಿ ತಮಹಂ ಸರ್ವಂ ಯುಷ್ಮಾಕಂ ಪೃಚ್ಛತಾಂ ಪುರಃ ।

---

ಒಂದು ಮತವನ್ನು ನಿಶ್ಚಯಿಸಿ, ಯಾವುದರ ಶ್ರವಣಾದಿಗಳಿಂದ ಸುಜೀವರು ಮೋಕ್ಷವನ್ನು ಹೊಂದುವರೋ, ಆ ಒಂದು ಸತ್ಯವಾದ ತತ್ತ್ವವನ್ನು (ಸಿದ್ಧಾಂತವನ್ನು), ನಮಗೋಸ್ಕರ ನಿರೂಪಿಸುವವನಾಗು. (೧-೭) ಸೂತಾಚಾರ್ಯನು ಹೇಳುತ್ತಾನೆ:—

ಸೂತನು ಹೇಳುತ್ತಾನೆ:—ಏವಮೇವ-ಹೀಗೆಯೇ (ನೀವು ಕೇಳಿರುವಂತೆಯೇ), ಪುರಾ-ಪೂರ್ವದಲ್ಲಿ, ಬ್ರಹ್ಮಾ-ಬ್ರಹ್ಮದೇವನು, ನಾರದಾದಿಭಿಃ-ನಾರದನೇ ಮೊದಲಾದವರಿಂದ, ಸಂಪೃಷ್ಟಃ-ಪ್ರಶ್ನಿಸಲ್ಪಟ್ಟವನಾಗಿ, ತದುತ್ತರಂ-ಆ ಪ್ರಶ್ನೆಗಳಿಗೆ ಯೋಗ್ಯವಾದ ಉತ್ತರವನ್ನು, ವಕ್ತುಂ-ಹೇಳಲಿಕ್ಕಾಗಿ, ಸಃ-ಬ್ರಹ್ಮದೇವನು, ತದಾ ಏವ-ಆಗಲೇ (ಪ್ರಶ್ನೆ ಮಾಡಿದಾಗಲೇ), ವಿಷ್ಣುಂ-ಶ್ರೀವಿಷ್ಣುವನ್ನು ಅಸ್ಮರತ್-ಸ್ಮರಿಸಿದನು[1] ಸಃ ಪ್ರಾದುರ್ಭೂತ್ವಾ-ಶ್ರೀವಿಷ್ಣುವು (ಅವತರಿಸಿ) ಪ್ರತ್ಯಕ್ಷನಾಗಿ, ತೇಭ್ಯಃ-ಆ ನಾರದಾದಿ ಸರ್ವರಿಗೆ, ಸದಾಗಮಂ-ಸಚ್ಛಾಸ್ತ್ರವಾದ (ನಿರ್ದುಷ್ಟ ಪ್ರಮಾಣವಾದ-ವೇದಗಳ ಯಥಾರ್ಥಸಾರವಾದ), ಪಂಚರಾತ್ರಂ-ಪಂಚರಾತ್ರಾಗಮವನ್ನು, ಯಥಾ-ಹೇಗೆ, ಮುಗ್ಧಮನಾಃ-ಬುದ್ಧಿ ಮೋಹವನ್ನು ಹೊಂದಿದ, ಪಾರ್ಥಃ-ಅರ್ಜುನನು, ಕೃಷ್ಣರೂಪಿಣಾ-ಕೃಷ್ಣರೂಪಿಯಾದ ಶ್ರೀಹರಿಯಿಂದ, ಬೋಧಿತಃ-ಉಪದೇಶಿಸಲ್ಪಟ್ಟನೋ, (ತಥಾ-ಹಾಗೆ), ಅವದತ್-(ಅವರ ಪ್ರಶ್ನೆಗಳನ್ನು) ಉತ್ತರಿಸಿದನು; ತಥಾ-ಹಾಗೂ, ಸ್ಥಾನೇ ಸ್ಥಾನೇ-ವಿವಿಧ ಸಂದರ್ಭಗಳಲ್ಲಿ (ಸನ್ನಿವೇಶದಲ್ಲಿ), ಯತ್ ತತ್ತ್ವಂ-ಯಾವ ತತ್ತ್ವವನ್ನು; ಹರಿಃ-ಶ್ರೀಹರಿಯು, ಸ್ವಯಂ-ತಾನೇ (ಸಾಕ್ಷಾತ್ತಾಗಿ), ಅವೋಚತ್-ಹೇಳಿರುವನೋ, ತತ್ ಸರ್ವಂ-ಆ ಎಲ್ಲವನ್ನೂ, ಅನುಸಂಧಾಯ- ಮನಸ್ಸಿನಲ್ಲಿಟ್ಟು ವ್ಯಾಸಃ-ಶ್ರೀವೇದವ್ಯಾಸರು, ಸೂತ್ರಾಣಿ-ಬ್ರಹ್ಮಸೂತ್ರಗಳನ್ನು, ನಿರ್ಮಮೇ-ರಚಿಸಿದರು; ಬುಧೈಃ ಜನೈಃ-ಜ್ಞಾನಿಜನರಿಂದ, ಯತ್-ಯಾವುದು, ಸ್ಫುಟಂ-ಸ್ಪಷ್ಟವಾಗಿ (ನಿಸ್ಸಂಶಯವಾಗಿ), ಜ್ಞಾತಂ ಸ್ಯಾತ್-(ಯತ್ನಪೂರ್ವಕ) ತಿಳಿಯಲ್ಪಡುತ್ತದೆಯೋ, (ಆ) ಅಖಿಲಂ ವೇದಾಂತಂ-ಸಮಸ್ತ ವೇದಗಳ ನಿರ್ಣಯವನ್ನು

---

ನೀವು ನನ್ನನ್ನು ಪ್ರಶ್ನಿಸಿರುವಂತೆಯೇ, ಪೂರ್ವದಲ್ಲಿ ನಾರದಾದಿಗಳು ಬ್ರಹ್ಮದೇವನನ್ನು ಪ್ರಶ್ನಿಸಿದರು; ಆ ಪ್ರಶ್ನೆಗಳನ್ನು ಯೋಗ್ಯವಾಗಿ ಉತ್ತರಿಸಲು, ಬ್ರಹ್ಮದೇವನು ಶ್ರೀವಿಷ್ಣುವನ್ನು ಸ್ಮರಿಸಿದನು; ತತ್ಕಾಲದಲ್ಲಿ ಶ್ರೀವಿಷ್ಣುವು ಪ್ರತ್ಯಕ್ಷನಾಗಿ, ನಾರದಾದಿಗಳಿಗೆ ಸಮೀಚೀನವಾದ ಪಂಚರಾತ್ರಾಗಮವನ್ನು ಉಪದೇಶಿಸಿದನು; ಹಿಂದೆ, ಬುದ್ಧಿ ಮೋಹದಿಂದ ವ್ಯಥಿತನಾದ ಅರ್ಜುನನಿಗೆ ಶ್ರೀಕೃಷ್ಣರೂಪದಿಂದ ಶ್ರೀಹರಿಯು ಹೇಗೆ ತತ್ತ್ವೋಪದೇಶಮಾಡಿ ಆತನ ಸಕಲ ಸಂಶಯಗಳನ್ನು ಪರಿಹರಿಸಿದನೋ, ಹಾಗೆ, ನಿಸ್ಸಂಶಯವಾದ ತತ್ತ್ವಜ್ಞಾನದ ಉದಯವಾಗುವಂತೆ ಉಪದೇಶಿಸಿದನು; ಶ್ರೀವಿಷ್ಣುವು, ವಿವಿಧ ಸನ್ನಿವೇಶಗಳಲ್ಲಿ ಸ್ವಭಕ್ತರಿಗೆ ಮಾಡಿದ ಉಪದೇಶಗಳನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು, ಶ್ರೀ ಹ ರಿ ಯೇ ಶ್ರೀ ವೇದವ್ಯಾಸರೂಪದಿಂದ, ಸಕಲ

---

1. ಸ್ವಯಂ ಶ್ರೀಹರಿಯೇ ಉಪದೇಶಿಸಲು ಸಂಕಲ್ಪಿಸಿರುವನೆಂಬುದನ್ನು ಅರಿತ ಬ್ರಹ್ಮದೇವನು, ಶ್ರೀವಿಷ್ಣುವನ್ನು ಸ್ಮರಿಸಿದನು—ತಾನು ಉತ್ತರಿಸಲು ಅಸಮರ್ಥನೆಂಬ ಕಾರಣದಿಂದಲ್ಲ—ತಾನೂ ಶ್ರೀ ವಿಷ್ಣುಮುಖದಿಂದ ವಾಕ್ಯಾರ್ಥವಾಗಿ ಶ್ರವಣಮಾಡುವ ಇಚ್ಛೆಯೂ ಇತ್ತು.

ತದರ್ಥನಿರ್ಣಯಾತ್-ವೇದವಾಕ್ಯಗಳ ಅರ್ಥವನ್ನು (ಯುಕ್ತಿಯುಕ್ತವಾದ) ನಿರ್ಣಯದಿಂದ, ಪ್ರಾಹ-ಹೇಳಿದರು (ವೇದವ್ಯಾಸರೂಪೀ ಶ್ರೀಹರಿಯು ನಿರೂಪಿಸಿರುವನು); ತಂ ಸರ್ವಂ-ಆ ಎಲ್ಲವನ್ನೂ (ಎಲ್ಲ ನಿರ್ಣಯಗಳ ಸಾರವನ್ನು), ಯತ್-ಯಾವುದನ್ನು ಮಾಂ-ನನ್ನನ್ನುದ್ದೇಶಿಸಿ, (ಶ್ರೀವೇದವ್ಯಾಸರು, ಪ್ರಾಹ- ಹೇಳಿದರೋ, ಆ ಎಲ್ಲವನ್ನೂ), ವಿಶ್ವಸ್ತ ಚೇತಸಾಂ-ಆದರ ಮನಸ್ಕರಾದ, ಪೃಚ್ಛತಾಂ-ಪ್ರಶ್ನಿಸುತ್ತಿರುವ, ಯುಷ್ಮಾಕಂ ಪುರಃ-ನಿಮ್ಮೆದುರಿಗೆ, ಅಹಂ-ನಾನು, ವದಾಮಿ-ಹೇಳುತ್ತೇನೆ (ಶ್ರೀ ವೇದವ್ಯಾಸರಿಂದ ನಾನು ಕೇಳಿ ತಿಳಿದುದನ್ನೇ ನಿಮಗೆ ಹೇಳುತ್ತೇನೆ).

ಜಗತ್ಸರ್ವಂ ಚ ಯತ್ಕಿಂಚಿತ್ ದೃಶ್ಯತೇ ಶ್ರೂಯತೇಽಥವಾ ॥ ೧೨ ॥
ಬಹಿರಂತಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ।
ಸೃಷ್ಟಿಸ್ಥಿತ್ಯಂತನಿಯತಿಜ್ಞಾನಬಂಧಾಸ್ತಥಾವೃತಿಃ ॥ ೧೩ ॥
ಮೋಕ್ಷಶ್ಚೇತ್ಯಖಿಲಸ್ಯಾಸ್ಯ ತಸ್ಮಾದೇವ ಹಿ ಮುಖ್ಯತಃ ।
ಸ ಏವ ಸೃಷ್ಟ್ವಾ ಬ್ರಹ್ಮಾದೀನ್ ದೇವಗಂಧರ್ವಮಾನುಷಾನ್ ॥ ೧೪ ॥
ಚೇತನಾಚೇತನಾನ್ ಸರ್ವಾನ್ ತತ್ರ ವಿಷ್ಟೋಽವಬುದ್ಧ್ಯತೇ ।
ಜಡೇಷು ಚೇತನಾವಿಷ್ಟಾ ಜಡಾಭೇದಂ ಚ ಮನ್ವತೇ ॥ ೧೫ ॥
ಸರ್ವದೈವ ಪರಾಧೀನಾಃ ಸ್ವಾತಂತ್ರ್ಯಂ ಚಾಪಿ ಮನ್ವತೇ ।
ಪಶ್ಯಂತೋಽಪಿ ನ ಪಶ್ಯಂತಿ ನ ಬುಧ್ಯಂತೇಽಪಿ ಬೋಧಿತಾಃ ॥ ೧೬ ॥

---

ವೇದಾರ್ಥಗಳನ್ನು ಯುಕ್ತಿಯುಕ್ತವಾಗಿ ನಿರ್ಣಯಿಸಿ, ಬ್ರಹ್ಮಸೂತ್ರಗಳನ್ನು ರಚಿಸಿದನು; ಸಮಸ್ತ ಜ್ಞಾನಿಜನರೂ, ಈ ಸೂತ್ರಗಳನ್ನು ಚೆನ್ನಾಗಿ ಅರಿತುಕೊಂಡು (ಸೂತ್ರಗಳಿಂದ ಪ್ರತಿಪಾದಿಸಲ್ಪಟ್ಟಿರುವ ನಿರ್ಣಯಗಳಿಂದ ತತ್ತ್ವಜ್ಞಾನ ನಿಶ್ಚಯವನ್ನು ಹೊಂದಿ) ಉದ್ಧೃತರಾಗುವರು; ಈ ಸೂತ್ರ ನಿರ್ಣಯಗಳಿಂದ ಸಿದ್ಧವಾಗುವ ತತ್ತ್ವಗಳನ್ನೇ (ಪ್ರಮೇಯಗಳನ್ನೇ) ಪಂಚರಾತ್ರಾಗಮವು ನಿರೂಪಿಸುತ್ತದೆ; ಸೂತ್ರಕರ್ತನೇ ಪಂಚರಾತ್ರದ ಉಪದೇಶಕನು; ಆ ವೇದವ್ಯಾಸರ ಮುಖದಿಂದಲೇ ನಾನು, ಈ ಸರ್ವವನ್ನು ಶ್ರವಣಮಾಡಿರುವೆನು; ವಿಶ್ವಾಸಪೂರ್ವಕ (ನನ್ನ ಮಾತುಗಳಲ್ಲಿ ನಂಬಿಕೆಯನ್ನಿಟ್ಟು ಆದರಪೂರ್ವಕ) ನೀವು ನನ್ನನ್ನು ಕೇಳುತ್ತಿರುವಿರಿ; ನಿಮ್ಮೆದುರಿಗೆ ಆ ಎಲ್ಲವನ್ನೂ ನಾನು ಯಥಾಮತಿ ನಿರೂಪಿಸುವೆನು (೮-೧೧). ಕಂಡು ಕೇಳುವ ಸಮಸ್ತವನ್ನೂ ಒಳಗೊಂಡ ಈ ಜಗತ್ತನ್ನು ಶ್ರೀನಾರಾಯಣನು ಒಳಹೊರಗೆ ವ್ಯಾಪಿಸಿ ಸ್ಥಿತನಾಗಿದ್ದಾನೆ; ಈ ನಿಖಿಲ ಜಗತ್ತಿನ, ಸೃಷ್ಟಿ ಸ್ಥಿತಿ, ಲಯ, ನಿಯಮನ, ಜ್ಞಾನ, ಬಂಧ, ಅಜ್ಞಾನ, ಮೋಕ್ಷಗಳೆಲ್ಲವೂ, ಮುಖ್ಯವಾಗಿ ಸ್ವತಂತ್ರನಾದ ಶ್ರೀಹರಿಯಿಂದಲೇ ಸಂಭವಿಸುತ್ತವೆ (ಸೃಷ್ಟಿಕರ್ತನೆಂಬ ಪ್ರಸಿದ್ಧಿಯುಳ್ಳ ಬ್ರಹ್ಮನೂ, ಶ್ರೀಹರಿಯ ಅಧೀನನಾಗಿ,

**ಅನ್ಯೇ ಸ್ವಬುದ್ಧಯಶ್ಚಾಪಿ ನಶ್ವರೇ ನಿತ್ಯಬುದ್ಧಯಃ ।**

**ಅಸಾರಂ ಮನ್ವತೇ ಸಾರಂ ಸಾರಂ ಚಾಪಿ ವಿಪರ್ಯಯಾತ್ ॥ ೧೭ ॥**

**ತಾದೃಕ್ ಸ್ವಮಾಯಯಾ ಬದ್ಧಾನ್ ಸಂಸಾರಯತಿ ಸರ್ವಶಃ ।**

**ಅಹೋ ಮಾಯಾಬಲಂ ವಿಷ್ಣೋರ್ದುರ್ಬೋಧಂ ಯೋಗಿನಾಮಪಿ ೧೮ ॥**

ಯತ್ಕಿಂಚಿತ್-ಯಾವುದೊಂದು, ದೃಶ್ಯತೇ-ಕಾಣಲ್ಪಡುತ್ತದೆಯೋ, ಅಥವಾ ಶ್ರೂಯತೇ-(ವೇದಾದಿಗಳಿಂದ) ಕೇಳಬರುವುದೋ, ಸರ್ವಂ ಜಗತ್ ಚ-(ಆ) ಎಲ್ಲವೂ ಜಗತ್ತೇ ಸರಿ (ಜಗತ್ತೆಂದು ಕರೆಯಲ್ಪಡುತ್ತದೆ); ತತ್ ಸರ್ವಂ-ಆ ಎಲ್ಲವನ್ನೂ ಬಹಿಃ-ಹೊರಗೂ, ಅಂತಃ ಚ-ಒಳಗೂ ಸಹ, ವ್ಯಾಪ್ಯ-ವ್ಯಾಪಿಸಿ, ನಾರಾಯಣಃ-ಶ್ರೀಹರಿಯು, ಸ್ಥಿತಃ-ಇರುವವನಾಗಿದ್ದಾನೆ; ಸೃಷ್ಟಿಸ್ಥಿತ್ಯಂತ ನಿಯತಿ ಜ್ಞಾನಬಂಧಾಃ-ಸೃಷ್ಟಿ ಸ್ಥಿತಿ, ಲಯ, ನಿಯಮನ, ಜ್ಞಾನ, ಬಂಧಗಳು, ತಥಾ-ಮತ್ತು ಅವೃತಿಃ-ಅಜ್ಞಾನವೂ, ಚ-ಮತ್ತು ಮೋಕ್ಷಃ-ಮೋಕ್ಷವೂ, ಇತಿ-ಎಂಬ ಈ ಎಲ್ಲವೂ, ಅಖಿಲಸ್ಯ-ಸಮಸ್ತವಾದ, ಅಸ್ಯ-ಈ ಜಗತ್ತಿಗೆ, ಮುಖ್ಯತಃ-ಮುಖ್ಯವಾಗಿ (ಪರಾಧೀನರಾದ ಅಮುಖ್ಯರನ್ನು ಬಿಟ್ಟು), ತಸ್ಮಾತ್ ಏವ-ಆ ಶ್ರೀಹರಿಯಿಂದಲೇ, ಹಿ-(ಸಂಭವಿಸುತ್ತವೆಂದು ಸರ್ವ ಪ್ರಮಾಣ ಸಿದ್ಧವು); ಸಃ ಏವ-(ಹೀಗೆ ಸ್ವತಂತ್ರ ಸರ್ವಕರ್ತನಾದ) ಆ ಶ್ರೀಹರಿಯೇ, ಬ್ರಹ್ಮಾದೀನ್-ಬ್ರಹ್ಮಾದಿಗಳನ್ನೂ, ದೇವಗಂಧರ್ವಮಾನುಷಾನ್-ದೇವತೆಗಳು, ಗಂಧರ್ವರು, ಮನುಷ್ಯರೇ ಮೊದಲಾದವರನ್ನೂ, ಚೇತನಾಚೇತನಾನ್ ಸರ್ವಾನ್-ಚೇತನ ಮತ್ತು ಅಚೇತನಗಳೆಲ್ಲವನ್ನೂ, ಸೃಷ್ಟ್ವಾ-ಸೃಷ್ಟಿಮಾಡಿ, ತತ್ಪ್ರವಿಷ್ಟಃ-(ಚೇತನಾ ಚೇತನಾತ್ಮಕವಾದ) ಸರ್ವಜಗತ್ತನ್ನು ಪ್ರವೇಶಿಸಿ, (ಅಲ್ಲಿದ್ದು), ಅವಬುಧ್ಯತೇ-(ಜ್ಞಾನಿಗಳಿಂದ) ತಿಳಿಯಲ್ಪಡುತ್ತಾನೆ; ಜಡೇಷು-ಜಡವಸ್ತುಗಳಲ್ಲಿಯೇ ಚೇತನಾವಿಷ್ಟಾಃ-ಮನಸ್ಸನ್ನು ಇಟ್ಟವರಾಗಿ, ಜಡಾಭೇದಂ ಚ-(ಚೇತನವನ್ನು) ಜಡದಿಂದ ಅಭಿನ್ನವೆಂದೇ

---

ಆತನು ಮಾಡಿಸಿದಂತೆ ಮಾಡುತ್ತಾನೆ—ಸ್ವತಂತ್ರ ಅಥವಾ ಮುಖ್ಯಕರ್ತನಲ್ಲ); ಶ್ರೀಹರಿಯು ಬ್ರಹ್ಮಾದಿ ದೇವತೆಗಳನ್ನೂ, ಇತರ ದೇವ, ಗಂಧರ್ವ, ಮನುಷ್ಯಾದಿ ಜೀವರನ್ನೂ, ಸಮಸ್ತ ಚೇತನಾಚೇತನ ಪದಾರ್ಥಗಳನ್ನೂ ಸೃಷ್ಟಿಸಿ, ಅವುಗಳನ್ನು ಪ್ರವೇಶಿಸಿ, ಅಲ್ಲಿದ್ದು ಅವುಗಳ ಸಕಲ ಚೇಷ್ಟೆಗಳನ್ನು ನಿಯಮನಮಾಡುತ್ತಾನೆ; ಹೀಗೆ ಸರ್ವಾಂತರ್ಯಾಮಿಯಾಗಿರುವ ಶ್ರೀಹರಿಯನ್ನು ಜ್ಞಾನಿಗಳು ತಿಳಿಯುತ್ತಾರೆ; ಅಜ್ಞಾನಿಗಳು ಪ್ರತ್ಯಕ್ಷಕ್ಕೆ ಗೋಚರಿಸುವ ದೇಹಾದಿ ಜಡವಸ್ತುಗಳನ್ನು ಮಾತ್ರ ಅಂಗೀಕರಿಸಿ, ಜಡಭಿನ್ನವಾದ ಚೇತನವನ್ನೇ ಒಪ್ಪುವುದಿಲ್ಲ (ದೇಹವೇ ತಾವೆಂದು ತಿಳಿಯುತ್ತಾರೆ); ಸರ್ವದಾ ಪರಾಧೀನರಾದ ತಮ್ಮನ್ನು ಸ್ವತಂತ್ರರೆಂದು ತಿಳಿಯುತ್ತಾರೆ; ಜ್ಞಾನಿಗಳ ಉಪದೇಶದ ಹಿತನುಡಿಗಳನ್ನು ಮನಸ್ಸಿಗೆ ತರುವುದಿಲ್ಲ; ತಮ್ಮದಲ್ಲದ ವಸ್ತುಗಳಲ್ಲಿ ತಮ್ಮದೆಂಬ ಬುದ್ಧಿಯುಳ್ಳವರಾಗುತ್ತಾರೆ; ನಶ್ವರವಾದ (ದೇಹಾದಿ)

(ಜಡಭಿನ್ನ ವಸ್ತುವೇ ಇಲ್ಲವೆಂದು-ದೇಹಭಿನ್ನ ಜೀವನಿಲ್ಲವೆಂದೇ), ಮನ್ಯತೇ-ತಿಳಿಯುತ್ತಾರೆ; (ಈ ಅಜ್ಞಾನಿಗಳು), ಸರ್ವದಾ-ಎಲ್ಲ ಕಾಲದಲ್ಲಿ ಪರಾಧೀನಾಃ-ಏವ-ಅಸ್ವತಂತ್ರರೇ ಆಗಿದ್ದರೂ, ಸ್ವಾತಂತ್ರ್ಯಂ ಚ ಅಪಿ-(ತಮಗೆ) ಸ್ವಾತಂತ್ರ್ಯವೂ ಇರುವುದೆಂದೇ, ಮನ್ಯತೇ-ತಿಳಿಯುತ್ತಾರೆ; ಪಶ್ಯಂತಃ ಅಪಿ-ನೋಡುತ್ತಿದ್ದರೂ, ನ ಪಶ್ಯಂತಿ-ಕಾಣುವುದಿಲ್ಲ (ಕಣ್ಣಿದ್ದೂ ಕುರುಡರಂತಿರುವರು); ಬೋಧಿತಾಃ ಅಪಿ-(ಜ್ಞಾನಿಗಳಿಂದ) ಬೋಧಿಸಲ್ಪಟ್ಟರೂ, ನ ಬುಧ್ಯಂತೇ-ಗ್ರಹಿಸುವುದಿಲ್ಲ (ಅನರ್ಥವನ್ನು ತಿಳಿಸಿದರೂ ಎಚ್ಚರಗೊಳ್ಳುವುದಿಲ್ಲ); ಅಸ್ವೇ-ತಮ್ಮದಲ್ಲದ ವಸ್ತುವಿನಲ್ಲಿ ಸ್ವಬುದ್ಧಯಃ-ತಮ್ಮದೆಂಬ ಬುದ್ಧಿಯುಳ್ಳವರಾಗಿರುವರು; ಅಪಿ ಚ-ಮತ್ತು, ನಶ್ವರೇ-ನಶ್ವರದಲ್ಲಿ (ಅಸ್ಥಿರವಾದ ಪದಾರ್ಥದಲ್ಲಿ), ನಿತ್ಯಬುದ್ಧಯಃ-ನಿತ್ಯವಾದುದೆಂಬ (ನಾಶರಹಿತವೆಂಬ) ಬುದ್ಧಿಯುಳ್ಳವರಾಗಿರುತ್ತಾರೆ; ಅಸಾರಂ-ಅಸಾರವಾದುದನ್ನು, ಸಾರಂ-ಸಾರವಾದುದೆಂದು, ಮನ್ಯತೇ-ತಿಳಿಯುತ್ತಾರೆ; ಅಪಿ ಚ-ಮತ್ತೇನೆಂದರೆ, ಸಾರಂ-ಸಾರವನ್ನು, ವಿಪರ್ಯಯಾತ್-ವಿರುದ್ಧವಾಗಿ (ಅಸಾರವೆಂದು) ತಿಳಿಯುತ್ತಾರೆ; ತಾದೃಕ್-ಹೀಗಿರುವ, ಸ್ವಮಾಯಯಾ-ತನ್ನ ಮಾಯೆಯಿಂದ (ಇಚ್ಛೆಯಿಂದ ಅಥವಾ ತನ್ನ ಇಚ್ಛಾಧೀನವಾದ (ಪ್ರಕೃತಿಯಿಂದ), ಬದ್ಧಾನ್-ಬದ್ಧರಾದ (ಅಹಂ ಮಮಕಾರಗಳೆಂಬ ಮೋಹಕ್ಕೊಳಗಾದ), ಸರ್ವಶಃ-ಸಮಸ್ತ ಜೀವರನ್ನು, ಸಂಸಾರಯತಿ-ಸುತ್ತಿಸುತ್ತಾನೆ (ದೇಹದಿಂದ ಅನ್ಯದೇಹವನ್ನು ಹೊಂದಿಸುತ್ತ ಸಂಸಾರದಲ್ಲಿ ಸುತ್ತಿಸುತ್ತಾನೆ); ವಿಷ್ಣೋಃ-ಶ್ರೀವಿಷ್ಣುವಿನ, ಮಾಯಾಬಲಂ-ಮೋಹಕ ಶಕ್ತಿಯು, (ಬಂಧಕಶಕ್ತಿಯು), ಅಹೋ-ಆಶ್ಚರ್ಯಕರವು, ಅದ್ಭುತವು! ಯೋಗಿನಾಂ ಅಪಿ-ಜ್ಞಾನಿಗಳಿಗೂ (ದೇವತೆಗಳಿಗೂ), ದುರ್ಬೋಧಂ-ತಿಳಿಯಲು ಸಾಧ್ಯವಲ್ಲ.

**ತಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ।**
**ಸ ಬ್ರಹ್ಮಾ ಪೂರ್ವಜತ್ವೇನ ಸ ಬ್ರಹ್ಮಾಗುಣಪೂರ್ತಿತಃ ॥ ೧೯ ॥**

---

ವಸ್ತುಗಳನ್ನು ನಿತ್ಯವೆಂದು ನಂಬಿಕೊಳ್ಳುತ್ತಾರೆ; ಅಸಾರವಾದುದನ್ನು ಸಾರವೆಂದೂ, ಸಾರವಾದುದನ್ನು ಅಸಾರವೆಂದೂ ಬಗೆಯುತ್ತಾರೆ; ಹೀಗಿರುವ ಅಜ್ಞಾನಿ ಜೀವರನ್ನು ಶ್ರೀಹರಿಯು, ತನ್ನ ಮಾಯಾಶಕ್ತಿಯಿಂದ ಬಂಧಿಸಿ, ಸಂಸಾರದಲ್ಲಿ ಸುತ್ತಿಸುತ್ತಾನೆ; ಶ್ರೀಹರಿಯ ಬಂಧಕ ಶಕ್ತಿಯು, ಅದ್ಭುತವಾದುದು; ಜ್ಞಾನಿಗಳಿಗೆ (ದೇವತೆಗಳಿಗೂ) ಸಹ ತಿಳಿಯಲಶಕ್ಯವಾದುದು (೧೨-೧೮). ಯಾರು (ಯಾವ ಜೀವರು) ಆತನನ್ನೇ ಶರಣುಹೊಂದುವರೋ ಅವರು ಮಾತ್ರ ಈತನ ಈ ಮಾಯೆಯನ್ನು ದಾಟುತ್ತಾರೆ (ಸಂಸಾರದಿಂದ ಮುಕ್ತರಾಗುತ್ತಾರೆ); ಎಲ್ಲಕ್ಕೂ ಮೊದಲು ಹುಟ್ಟಿದವನಾದ್ದರಿಂದ (ವಾಸುದೇವರೂಪದಿಂದ ಪ್ರಾದುರ್ಭವಿಸಿದ ಕಾರಣ), ಅನಂತ ಗುಣಪೂರ್ಣನಾದ್ದರಿಂದಲೂ, ಆತನೇ ಬ್ರಹ್ಮನೆಂಬ ಅನ್ವರ್ಥನಾಮವುಳ್ಳವನು. (೧೯).

ರೂಪವುಳ್ಳವನಾದ್ದರಿಂದ, ವಿಷ್ಣುಃ-(ಆತನೇ) ವಿಷ್ಣುವೆನಿಸುವನು; (ಆತನೇ), ಸರ್ವೇಶತ್ವಾತ್-ಸರ್ವಸ್ವಾಮಿಯಾದ್ದರಿಂದ (ನಿಯಾಮಕನಾದ್ದರಿಂದ), ಮಹೇಶ್ವರಃ-ಮಹೇಶ್ವರನೆಂಬ ನಾಮವುಳ್ಳವನು.

**ವಾಸನಾದ್ವಸತೇಶ್ಚಾಪಿ ವಾಸುದೇವಃ ಸ ಏವ ಹಿ ।**
**ಸರ್ವೇಷಾಂ ಕರ್ಷಣಾತ್ಸೋಽಪಿ ಸಂಕರ್ಷಣ ಉದಾಹೃತಃ ॥ ೨೦ ॥**
**ಪ್ರಕೃಷ್ಟದ್ಯೋತನತ್ವೇನ ಪ್ರದ್ಯುಮ್ನ ಇತಿ ಕೀರ್ತಿತಃ ।**
**ಅನಿರುದ್ಧಃ ಸರ್ವಗತ್ವಾದಿಂದ್ರಃ ಪೂರ್ಣೈಶ್ವರತ್ವತಃ ॥ ೨೧ ॥**
**ಮಹೇಂದ್ರಃ ಸರ್ವತಃ ಶ್ರೈಷ್ಠ್ಯಾದಗ್ನಿಃ ಸರ್ವಸ್ಯ ಚೇಷ್ಟನಾತ್ ।**
**ಸುತತ್ವಾನ್ಮಾರುತೋ ಲಕ್ಷ್ಮ್ಯಾಃ ಸವಿತಾ ಸರ್ವಸೂತಿತಃ ॥ ೨೨ ॥**

ವಾಸನಾತ್-(ತಾನು ಸರ್ವತ್ರ) ವಾಸಮಾಡುವುದರಿಂದಲೂ, ಅಪಿ ಚ-ಮತ್ತೂ, ವಸತೇಃ-(ತಾನು ಸರ್ವರಿಗೆ) ವಸತಿ (ಆಶ್ರಯನು), ಆಗಿರುವುದರಿಂದ, ಸಃ ಏವ-ಆ ಶ್ರೀಹರಿಯೇ, ವಾಸುದೇವಃ-ವಾಸುದೇವನು; ಸಃ-ಆತನು, ಸರ್ವೇಷಾಂ-ಸರ್ವರ, ಕರ್ಷಣಾತ್-ಆಕರ್ಷಣ ಮಾಡುವವನಾದ್ದರಿಂದ (ಸರ್ವರ ದೇಹೇಂದ್ರಿಯಾದಿ ಸರ್ವಕರಣಗಳನ್ನು ಆಕರ್ಷಿಸಿ, ತನ್ನ ಇಚ್ಛಾನುಸಾರ ನಿಯಮನ ಮಾಡುವುದರಿಂದ), ಸಂಕರ್ಷಣಃ-ಸಂಕರ್ಷಣನು, ಅಪಿ-ಎಂದೂ, ಉದಾಹೃತಃ-ಹೇಳಲ್ಪಡುವನು. ಪ್ರಕೃಷ್ಟದ್ಯೋತನತ್ವೇನ-ಪ್ರಕೃಷ್ಟವಾದ (ಉತ್ತಮವಾದ) ಪ್ರಕಾಶವುಳ್ಳವನಾದ್ದರಿಂದ (ವಸ್ತುಸ್ವಭಾವಗಳನ್ನು ಚೆನ್ನಾಗಿ ಪ್ರಕಾಶಗೊಳಿಸುವವನಾದ್ದರಿಂದ), ಪ್ರದ್ಯುಮ್ನಃ-ಪ್ರದ್ಯುಮ್ನನು, ಇತಿ-ಎಂದು, ಕೀರ್ತಿತಃ-ಪ್ರಸಿದ್ಧನಾಗಿರುವನು (ಹೇಳಲ್ಪಡುವನು); ಸರ್ವಗತ್ವಾತ್-ಸರ್ವತ್ರ ಗಮನವುಳ್ಳವನಾದ್ದರಿಂದ (ಆತನ ಗಮನವನ್ನು ಅಥವಾ ಸ್ವತಂತ್ರ ಸ್ಥಿತಿಯನ್ನು ಯಾರೂ ನಿರೋಧಗೊಳಿಸಲಾರರಾದ್ದರಿಂದ), ಅನಿರುದ್ಧಃ (ಶ್ರೀಹರಿಯೇ)

---

ರಿಂದಲೂ, ತಾನು ಸರ್ವರ ವಾಸಸ್ಥಲನಾಗಿದ್ದು (ಎಲ್ಲವನ್ನೂ ತನ್ನಲ್ಲಿಟ್ಟುಕೊಂಡಿರುವುದರಿಂದಲೂ) ಆಶ್ರಯನಾಗಿರುವುದರಿಂದಲೂ, ಶ್ರೀಹರಿಯು ವಾಸುದೇವನೆನಿಸುವನು; ಎಲ್ಲರನ್ನೂ (ವಿಶೇಷವಾಗಿ ಸಜ್ಜೀವರನ್ನು) ತನ್ನ ಕಡೆಗೆ ಸೆಳೆದುಕೊಳ್ಳುವವನಾದ್ದರಿಂದ (ಸರ್ವರ ಸರ್ವ ದೇಹೇಂದ್ರಿಯಾದಿಗಳ ನಿಯಾಮಕನಾದ್ದರಿಂದ) ಆತನು ಸಂಕರ್ಷಣನೆಂದೂ ಕರೆಯಲ್ಪಡುತ್ತಾನೆ; ಉತ್ತಮ ಪ್ರಕಾಶರೂಪನಾಗಿದ್ದು ವಸ್ತುಸ್ವಭಾವಗಳನ್ನು ಚನ್ನಾಗಿ ಪ್ರಕಾಶಗೊಳಿಸುವವನಾದ್ದರಿಂದ, ಆತನೇ ಪ್ರದ್ಯುಮ್ನ ನಾಮಕನು; ಸರ್ವತ್ರ ಗಮನವುಳ್ಳವನಾದ್ದರಿಂದ (ಸರ್ವವನ್ನೂ ತಿಳಿದವನಾದ್ದರಿಂದ) ಮತ್ತು ಆತನ ಜ್ಞಾನವನ್ನು ಅಥವಾ ಗಮನವನ್ನು ಯಾರೂ ನಿರೋಧಿಸಲಾರರಾದ್ದರಿಂದ, ಆತನೇ ಅನಿರುದ್ಧನು; ಪೂರ್ಣೈಶ್ವರ್ಯವುಳ್ಳವನಾದ್ದರಿಂದ ಇಂದ್ರನು; ಸರ್ವಶ್ರೇಷ್ಠ (ಇಂದ್ರ)ನಾದ್ದರಿಂದ ಮಹೇಂದ್ರನು; ಸರ್ವಚೇಷ್ಟಕ

ಯೇ-ಯಾರು, ತಂ ಏವ-ಆ ಶ್ರೀಹರಿಯನ್ನೇ, ಪ್ರಪದ್ಯಂತೇ-(ಅನನ್ಯ ಭಾವದಿಂದ) ಶರಣುಹೊಂದುವರೋ, ತೇ-ಅವರು, ಏತಾಂ-ಈ, ಮಾಯಾಂ-(ಸಂಸಾರದಲ್ಲಿ ಬಂಧಿಸಿರುವ) ಶ್ರೀವಿಷ್ಣುವಿನ ಮಾಯಾಬಲವನ್ನು, ತರಂತಿ-ದಾಟುತ್ತಾರೆ (ಬಂಧನದಿಂದ ಮುಕ್ತರಾಗುತ್ತಾರೆ); ಸಃ-ಆತನೇ ಪೂರ್ವಜತ್ವೇನ-ಮೊದಲು ಪ್ರಾದುರ್ಭವಿಸಿದ್ದರಿಂದ (ವಾಸುದೇವ ರೂಪದಿಂದ ಪ್ರಕಟನಾದ್ದರಿಂದ - ಶ್ರೀನಾರಾಯಣನ ಮೊದಲಿನ ಜನ್ಮವದು; 'ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ' ಮತ್ತು 'ಜನ್ಮಕರ್ಮ ಚ ಮೇ ದಿವ್ಯಂ' ಇತ್ಯಾದಿ ಗೀತಾ ವಾಕ್ಯಗಳಿಂದ ಈ ಅರ್ಥವು ಸಿದ್ಧವಾಗುತ್ತದೆ), ಬ್ರಹ್ಮಾ-ಬ್ರಹ್ಮನಾಮಕನು; ಗುಣಪೂರ್ತಿತಃ - ಗುಣಪೂರ್ಣ ನಾದ್ದರಿಂದ, ಸಃ-ಆತನು, ಬ್ರಹ್ಮಾ-ಬ್ರಹ್ಮನೆನಿಸುವನು.

**ಪ್ರಲಯೋದಕಶಾಯಿತ್ವಾತ್ಸ ತು ನಾರಾಯಣಃ ಸ್ಮೃತಃ ।**

**ವಿಷ್ಣುರ್ವ್ಯಾಪಕಮೂರ್ತಿತ್ವಾತ್ಸರ್ವೇಶತ್ವಾನ್ಮಹೇಶ್ವರಃ ॥ ೨೦ ॥**

ಸಃ ತು-ಆತನೇ (ಆ ಶ್ರೀಹರಿಯೇ), ಪ್ರಲಯೋದಕಶಾಯಿತ್ವಾತ್-ಪ್ರಲಯ ಜಲದಲ್ಲಿ ಶಯನಮಾಡುವುದರಿಂದ, ನಾರಾಯಣಃ-ನಾರಾಯಣನೆಂದು, ಸ್ಮೃತಃ-ತಿಳಿಯಲ್ಪಟ್ಟಿರುವನು; ವ್ಯಾಪಕಮೂರ್ತಿತ್ವಾತ್-ಸರ್ವವನ್ನು ವ್ಯಾಪಿಸಿದ

---

ಪ್ರಲಯೋದಕದಲ್ಲಿ ಶಯನಮಾಡುವುದರಿಂದ, ಆ ಶ್ರೀಹರಿಯೇ ನಾರಾಯಣ ನೆಂದು[1] ಹೇಳಲ್ಪಡುವನು; ಸರ್ವವನ್ನೂ ವ್ಯಾಪಿಸಿರುವ ರೂಪವುಳ್ಳವನಾದ್ದರಿಂದ ಆತನೇ ವಿಷ್ಣುವು;[2] ಸರ್ವನಿಯಾಮಕನಾದ್ದರಿಂದ ಆತನು ಮಹೇಶ್ವರನೆಂಬ ನಾಮ ವುಳ್ಳವನೂ ಆಗಿರುವನು. (೨೦). ಶ್ರೀಹರಿಯು ಸರ್ವತ್ರ ವಾಸಮಾಡುವುದ

---

1. 'ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಸ್ಮೃತಃ ।'—ಚತುರ್ವಿಧ ನಾಶರಹಿತನಾದ್ದರಿಂದ ಶ್ರೀವಿಷ್ಣುವು 'ನರ'ನು; ಅವನಿಂದ ಸೃಷ್ಟವಾದುದೆಂಬ ಸಂಬಂಧದಿಂದ ಜಲವು (ಅಪಃ-ಜಲ, ನಿತ್ಯ ಬಹುವಚನ) ನಾರಾ—ಎನಿಸುತ್ತದೆ; ಸೃಷ್ಟಿಪೂರ್ವದಲ್ಲಿದ್ದ ಪ್ರಲಯಜಲವೇ ಶ್ರೀವಿಷ್ಣುವಿಗೆ ಆಶ್ರಯವಾದ್ದರಿಂದ (ಅಲ್ಲಿ ಶಯನಮಾಡಿದ್ದರಿಂದ) ಆತನು 'ನಾರಾಯಣ'ನೆನಿಸುತ್ತಾನೆ— ನಾರಾಯಣ ಶಬ್ದಬೋಧ್ಯಗಳಾದ ಗುಣಪೂರ್ಣತ್ವ, ನಿರ್ದೋಷತ್ವಾದಿ ಬಹುಮಹಿಮೆಗಳುಳ್ಳ ವನೂ ಆಗಿದ್ದಾನೆ.

2. ಸರ್ವದೇಶ (ದೇಶತಃ) ಸರ್ವಕಾಲ (ಕಾಲತಃ)ಗಳಲ್ಲಿ ಜ್ಞಾನಾನಂದಾದಿ ಅನಂತ ಗುಣಗಳಿಂದ (ಗುಣತಃ) ವ್ಯಾಪ್ತನಾದ್ದರಿಂದ ಶ್ರೀಹರಿಯು 'ವಿಷ್ಣು'ವೆನಿಸುತ್ತಾನೆ. ವಿಷ್ಣು ಶಬ್ದಬೋಧ್ಯ ಮಹಿಮೆಗಳು ಐತರೇಯ ಭಾಷ್ಯದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿವೆ. 'ಷ'ಕಾರವು ರಮಾಬ್ರಹ್ಮಾದಿ ಸರ್ವಚೇಷ್ಟಕತ್ವವನ್ನೂ 'ಣ'ಕಾರವು ಬಲರೂಪತ್ವವನ್ನೂ (ಷ್ಣ), 'ವಿ'ಕಾರವು ಸರ್ವವಿಶಿಷ್ಟತ್ವವನ್ನೂ (ಉತ್ತಮತ್ವವನ್ನು), ಅಂತ್ಯದಲ್ಲಿರುವ 'ಉ'ಕಾರವು, ಈ ಮಹಿಮೆಗಳು ಸ್ವಾಭಾವಿಕವಾದ ಸ್ವರೂಪಗುಣಗಳೆಂಬುದನ್ನು ಹೇಳುತ್ತವೆ, ಇತ್ಯಾದಿ.

ರೂಪವುಳ್ಳವನಾದ್ದರಿಂದ, ವಿಷ್ಣುಃ-(ಆತನೇ) ವಿಷ್ಣುವೆನಿಸುವನು; (ಆತನೇ), ಸರ್ವೇಶತ್ವಾತ್-ಸರ್ವಸ್ವಾಮಿಯಾದ್ದರಿಂದ (ನಿಯಾಮಕನಾದ್ದರಿಂದ), ಮಹೇಶ್ವರಃ-ಮಹೇಶ್ವರನೆಂಬ ನಾಮವುಳ್ಳವನು.

ವಾಸನಾದ್ವಸತೇಶ್ಚಾಪಿ ವಾಸುದೇವಃ ಸ ಏವ ಹಿ ।
ಸರ್ವೇಷಾಂ ಕರ್ಷಣಾತ್ಸೋಽಪಿ ಸಂಕರ್ಷಣ ಉದಾಹೃತಃ ॥ ೨೧ ॥
ಪ್ರಕೃಷ್ಟದ್ಯೋತನತ್ವೇನ ಪ್ರದ್ಯುಮ್ನ ಇತಿ ಕೀರ್ತಿತಃ ।
ಅನಿರುದ್ಧಃ ಸರ್ವಗತ್ವಾದಿಂದ್ರಃ ಪೂರ್ಣೈಶ್ವರತ್ವತಃ ॥ ೨೨ ॥
ಮಹೇಂದ್ರಃ ಸರ್ವತಃ ಶ್ರೈಷ್ಠ್ಯಾದಗ್ನಿಃ ಸರ್ವಸ್ಯ ಚೇಷ್ಟನಾತ್ ।
ಸುತತ್ವಾನ್ಮಾರುತೋ ಲಕ್ಷ್ಮ್ಯಾ ಸವಿತಾ ಸರ್ವಸೂತಿತಃ ॥ ೨೩ ॥

ವಾಸನಾತ್-(ತಾನು ಸರ್ವತ್ರ) ವಾಸಮಾಡುವುದರಿಂದಲೂ, ಅಪಿ ಚ-ಮತ್ತೂ ವಸತೇಃ-(ತಾನು ಸರ್ವರಿಗೆ) ವಸತಿ (ಆಶ್ರಯನು), ಆಗಿರುವುದರಿಂದ, ಸಃ ಏವ-ಆ ಶ್ರೀಹರಿಯೇ, ವಾಸುದೇವಃ-ವಾಸುದೇವನು; ಸಃ-ಆತನು, ಸರ್ವೇಷಾಂ-ಸರ್ವರ, ಕರ್ಷಣಾತ್-ಆಕರ್ಷಣ ಮಾಡುವವನಾದ್ದರಿಂದ (ಸರ್ವರ ದೇಹೇಂದ್ರಿಯಾದಿ ಸರ್ವಕರಣಗಳನ್ನು ಆಕರ್ಷಿಸಿ, ತನ್ನ ಇಚ್ಛಾನುಸಾರ ನಿಯಮನ ಮಾಡುವುದರಿಂದ), ಸಂಕರ್ಷಣಃ-ಸಂಕರ್ಷಣನು, ಅಪಿ-ಎಂದೂ, ಉದಾಹೃತಃ-ಹೇಳಲ್ಪಡುವನು. ಪ್ರಕೃಷ್ಟ ದ್ಯೋತನತ್ವೇನ-ಪ್ರಕೃಷ್ಟವಾದ (ಉತ್ತಮವಾದ) ಪ್ರಕಾಶವುಳ್ಳವನಾದ್ದರಿಂದ (ವಸ್ತು ಸ್ವಭಾವಗಳನ್ನು ಚೆನ್ನಾಗಿ ಪ್ರಕಾಶಗೊಳಿಸುವವನಾದ್ದರಿಂದ), ಪ್ರದ್ಯುಮ್ನಃ-ಪ್ರದ್ಯುಮ್ನನು, ಇತಿ-ಎಂದು, ಕೀರ್ತಿತಃ-ಪ್ರಸಿದ್ಧನಾಗಿರುವನು (ಹೇಳಲ್ಪಡುವನು); ಸರ್ವಗತ್ವಾತ್-ಸರ್ವತ್ರ ಗಮನವುಳ್ಳವನಾದ್ದರಿಂದ (ಆತನ ಗಮನವನ್ನು ಅಥವಾ ಸ್ವತಂತ್ರ ಸ್ಥಿತಿಯನ್ನು ಯಾರೂ ನಿರೋಧಗೊಳಿಸಲಾರರಾದ್ದರಿಂದ), ಅನಿರುದ್ಧಃ (ಶ್ರೀಹರಿಯೇ)

---

ರಿಂದಲೂ, [illegible]ನು ಸರ್ವರ ವಾಸಸ್ಥಲನಾಗಿದ್ದು (ಎಲ್ಲವನ್ನೂ ತನ್ನಲ್ಲಿಟ್ಟುಕೊಂಡಿರುವುದರಿಂದಲೂ) ಆಶ್ರಯನಾಗಿರುವುದರಿಂದಲೂ, ಶ್ರೀಹರಿಯು ವಾಸುದೇವನೆನಿಸುವನು; ಎಲ್ಲರನ್ನೂ (ವಿಶೇಷವಾಗಿ ಸಜ್ಜೀವರನ್ನು) ತನ್ನ ಕಡೆಗೆ ಸೆಳೆದುಕೊಳ್ಳುವವನಾದ್ದರಿಂದ (ಸರ್ವರ ಸರ್ವ ದೇಹೇಂದ್ರಿಯಾದಿಗಳ ನಿಯಾಮಕನಾದ್ದರಿಂದ) ಆತನು ಸಂಕರ್ಷಣನೆಂದೂ ಕರೆಯಲ್ಪಡುತ್ತಾನೆ; ಉತ್ತಮ ಪ್ರಕಾಶರೂಪನಾಗಿದ್ದು ವಸ್ತುಸ್ವಭಾವಗಳನ್ನು ಚೆನ್ನಾಗಿ ಪ್ರಕಾಶಗೊಳಿಸುವನಾದ್ದರಿಂದ, ಆತನೇ ಪ್ರದ್ಯುಮ್ನ ನಾಮಕನು; ಸರ್ವತ್ರ ಗಮನವುಳ್ಳವನಾದ್ದರಿಂದ (ಸರ್ವವನ್ನೂ ತಿಳಿದವನಾದ್ದರಿಂದ) ಮತ್ತು ಆತನ ಜ್ಞಾನವನ್ನು ಅಥವಾ ಗಮನವನ್ನು ಯಾರೂ ನಿರೋಧಿಸಲಾರರಾದ್ದರಿಂದ, ಆತನೇ ಅನಿರುದ್ಧನು; ಪೂರ್ಣೈಶ್ವರ್ಯವುಳ್ಳವನಾದ್ದರಿಂದ ಇಂದ್ರನು; ಸರ್ವಶ್ರೇಷ್ಠ (ಇಂದ್ರ)ನಾದ್ದರಿಂದ ಮಹೇಂದ್ರನು; ಸರ್ವಚೇಷ್ಟಕ

ಅನಿರುದ್ಧನು; ಪೂರ್ಣೈಶ್ವರತ್ವತಃ-ಪೂರ್ಣವಾದ ಐಶ್ವರ್ಯಯುಕ್ತನಾದ್ದರಿಂದ, ಇಂದ್ರಃ-ಇಂದ್ರನು; ಸರ್ವತಃ-ಎಲ್ಲರಗಿಂತ ಶ್ರೈಷ್ಠ್ಯಾತ್-ಶ್ರೇಷ್ಠತ್ವವುಳ್ಳವನಾದ್ದರಿಂದ, ಮಹೇಂದ್ರಃ-ಮಹೇಂದ್ರನೆನಿಸುವನು; ಸರ್ವಸ್ಯ-ಸಕಲರ (ಸರ್ವವಸ್ತುಗಳ), ಚೇಷ್ಟನಾತ್-ಚೇಷ್ಟಿಸುವವನಾದ್ದರಿಂದ, (ಎಲ್ಲರ ಕ್ರಿಯೆಗಳಿಗೆ ಕಾರಣನಾಗಿ), ಅಗ್ನಿಃ-ಅಗ್ನಿಯೆನಿಸುವನು; ಲಕ್ಷ್ಮ್ಯಾ-ಶ್ರೀ ಲಕ್ಷ್ಮೀದೇವಿಯಿಂದ, ಸ್ತುತತ್ವಾತ್-(ಸರ್ವಾಧಿಕನಾಗಿ) ಸ್ತೋತ್ರ ಮಾಡಲ್ಪಡುವನಾದ್ದರಿಂದ, ಮಾರುತಃ-(ಶ್ರೀಹರಿಯು) ಮಾರುತನು; ಸರ್ವಸೂತಿತಃ-ಸರ್ವವನ್ನು (ಜಗತ್ತನ್ನು) ಪ್ರಸವವಾಗುವುದರಿಂದ, (ಜನಕನಾದ್ದರಿಂದ-ಪ್ರಲಯಕಾಲದಲ್ಲಿ ತನ್ನ ಗರ್ಭದಲ್ಲಿಟ್ಟುಕೊಂಡ ಜಗತ್ತನ್ನು ಸೃಷ್ಟಿಕಾಲ ಪ್ರಾಪ್ತವಾದಾಗ ಹೊರಗೆಹಾಕುವುದರಿಂದ), ಸವಿತಾ-ಸವಿತೃನಾಮಕನು.

**ಸರ್ವತ್ರ ಗಮನಾತ್ ಜ್ಞಾನಾತ್ ವಾಯುಃ ಸರ್ವಸ್ಯ ಶೋಷಣಾತ್ ।**
**ಸೂರಿಭಿರ್ಜ್ಞೇಯಮೂರ್ತಿತ್ವಾನ್ಮನ್ಯುರ್ಜ್ಞಾನಾದಿ ಪೂರ್ತಿತಃ ॥ ೨೪ ॥**

ಸರ್ವತ್ರ-ಎಲ್ಲದೇಶದಲ್ಲಿ ಗಮನಾತ್-ಸಂಚರಿಸುವುದರಿಂದ, ಜ್ಞಾನಾತ್-ಜ್ಞಾನಿಯಾದ್ದರಿಂದಲೂ, ಸರ್ವಸ್ಯ ಶೋಷಣಾತ್-ಎಲ್ಲವನ್ನೂ ಒಣಗಿಸುವ (ಶೋಷಿಸುವ-ಬತ್ತಿಸುವ-ವಸ್ತು ಸ್ವಭಾವಗಳನ್ನು ನಿಯಂತ್ರಿಸುವ) ಶಕ್ತಿಯುಳ್ಳವನಾದ್ದರಿಂದಲೂ, ವಾಯುಃ-(ಶ್ರೀಹರಿಯು) ವಾಯುನಾಮಕನು; ಜ್ಞಾನಾದಿ ಪೂರ್ತಿತಃ-ಜ್ಞಾನಾದಿ ಗುಣಪೂರ್ಣನಾದ್ದರಿಂದಲೂ, ಸೂರಿಭಿಃ-ಜ್ಞಾನಿಗಳಿಂದ, ಜ್ಞೇಯಮೂರ್ತಿತ್ವಾತ್-ತಿಳಿಯಲ್ಪಡುವ ಸ್ವರೂಪವುಳ್ಳವನಾದ್ದರಿಂದಲೂ, ಮನ್ಯುಃ-ಮನ್ಯುನಾಮಕನು.

**ವಿಶಿಷ್ಟಪ್ರಾಣಸೌಖ್ಯತ್ವಾದಪಿ ವಿಷ್ಣುಃ ಸ ಏವ ಹಿ ।**
**ರುಜಾಂ ದ್ರಾವಣತೋ ರುದ್ರೋ ದುಷ್ಟಶೋಕಪ್ರದೋ ಹಿ ಸಃ ॥ ೨೫ ॥**

ವಿಶಿಷ್ಟ ಪ್ರಾಣಸೌಖ್ಯತ್ವಾತ್-ಉತ್ತಮ ಸುಖಸ್ವರೂಪನಾದ್ದರಿಂದ, ವಿಷ್ಣುಃ-

---

ನಾದ್ದರಿಂದ ಅಗ್ನಿಯು; ಶ್ರೀಲಕ್ಷ್ಮೀದೇವಿಯಿಂದಲೂ ಸ್ತುತ್ಯನಾದ್ದರಿಂದ ಆತನು ಮಾರುತನೆಂದೂ ಕರೆಯಲ್ಪಡುವನು; (ಮಾ-ಲಕ್ಷ್ಮೀ, ರುತ-ಸ್ತುತ); ಸರ್ವಜಗತ್ತನ್ನು ಪ್ರಸವಾಗುವುದರಿಂದ (ತನ್ನ ಹೊಟ್ಟೆಯಿಂದ ಹೊರಗೆ ಹಾಕುವುದರಿಂದ) ಸವಿತೃನಾಮಕನು. (೨೧-೨೩). ಸರ್ವಶೋಷಕನೂ, ಸರ್ವತ್ರ ಗಮನವುಳ್ಳವನೂ, ಸರ್ವಜ್ಞನೂ ಆದ್ದರಿಂದ ಶ್ರೀಹರಿಯೇ ವಾಯುನಾಮಕನು; ಜ್ಞಾನಾದಿ ಗುಣಪೂರ್ಣನಾದ್ದರಿಂದಲೂ, ಜ್ಞಾನಿಗಳಿಂದ ತಿಳಿಯಲ್ಪಡುವ (ಕಾಣಲಾಗುವ) ಸ್ವರೂಪವುಳ್ಳವನಾದ್ದರಿಂದಲೂ, ಆತನೇ ಮನ್ಯುನಾಮಕನು. (೨೪). ನಿತ್ಯಾನಂದ ಸ್ವರೂಪನಾದ್ದರಿಂದ (ಸರ್ವಮುಕ್ತರ ಪ್ರಭುವಾದ್ದರಿಂದ) ಶ್ರೀವಿಷ್ಣುವೇ ಪ್ರಾಣಶಬ್ದವಾಚ್ಯನು; (ಸುಜನರ) ನಾನಾರೋಗಗಳನ್ನು, ಸಂಸಾರರೂಪದ ಮಹಾರೋಗವನ್ನೂ ದೂರೀಕರಿಸುವವನಾದ್ದರಿಂದ, ಶ್ರೀಹರಿಯು ರುದ್ರನಾಮಕನು; ದುರ್ಜನರಿಗೆ

ಶ್ರೀವಿಷ್ಣುವು. ಸಃ ಏವ-ಪ್ರಾಣನಾಮಕನೇ[1] ರುಜಾಂ-(ಸಜ್ಜನರ) ಸರ್ವರೋಗಗಳ (ಸಂಸಾರವೆಂಬ ಮಹಾರೋಗದ), ದ್ರಾವಣತಃ-ಪರಿಹರಿಸುವುದರಿಂದ (ರೋಗಗಳನ್ನು ಹೊಡೆದೋಡಿಸುವುದರಿಂದ), ರುದ್ರಃ-ರುದ್ರನು; ಸಃ-ಆತನು, ದುಷ್ಟಶೋಕಪ್ರದಃ ಹಿ-ದುಷ್ಟರಿಗೆ ದುಃಖಪ್ರದನು ಆಗಿರುವನು; ಇದೂ ಶಾಸ್ತ್ರಸಿದ್ಧವೇ.

**ಬೃಹಸ್ಪತಿಃ ಸ ಏವೋಕ್ತಃ ಬೃಹತಾಮಪಿ ಯಃ ಪತಿಃ ।**

**ಯಮಃ ಸಂಯಮನಾತ್ ಜ್ಞಾನೀ ಮೇಯತ್ವಾದ್ಧ್ಯನುಮಾನತಃ ॥ ೨೬ ॥**

ಬೃಹತಾಂ ಅಪಿ-ಪೂರ್ಣಜ್ಞಾನಿಗಳೆಂಬುವರಿಗೂ, ಯಃ-ಯಾವಾತನು, ಪತಿಃ-ಒಡೆಯನೋ, ಸಃ ಏವ-ಆ ಶ್ರೀಹರಿಯೇ, ಬೃಹಸ್ಪತಿಃ-ಬೃಹಸ್ಪತಿ ಶಬ್ದ ಮುಖ್ಯವಾಚ್ಯನು; ಸಂಯಮನಾತ್-ಸರ್ವರನ್ನೂ (ಯಥಾಯೋಗ್ಯವಾಗಿ ಶಿಕ್ಷಿಸಿ) ನಿಯಮನ ಮಾಡುವುದರಿಂದ, ಯಮಃ-ಯಮನಾಮಕನು; ಅನುಮಾನತಃ-(ಸಮೀಚೀನ) ತರ್ಕಗಳಿಂದ ಸಹ, ಮೇಯತ್ವಾತ್-ಗ್ರಹಿಸಲ್ಪಡತಕ್ಕವನಾದ್ದರಿಂದ, ಜ್ಞಾನೀ-ಆತನು ಜ್ಞಾನಿ, ಎನಿಸುವನು.

**ಕುಮತೇರೀರಣಾತ್ಸರ್ವಸಂವೃತೇಃ ಸ ಕುಬೇರಕಃ ।**

**ದುರ್ಜ್ಞೇಯತ್ವಾನ್ನಿಋತಿಃ ಸ ವಹ್ನಿಃ ಸರ್ವವಹತ್ವತಃ ॥ ೨೭ ॥**

ಕುಮತೇಃ-ದುರ್ಮತಿಗಳ, ಸರ್ವಸಂವೃತೇಃ-ಎಲ್ಲ ಪ್ರಕಾರದ ಅಜ್ಞಾನದ, ಈರಣಾತ್-ಪ್ರೇರಕನಾದ್ದರಿಂದ, ಸಃ-ಶ್ರೀಹರಿಯು, ಕುಬೇರಕಃ-ಕುಬೇರನೆನಿಸುವನು; ದುರ್ಜ್ಞೇಯತ್ವಾತ್-ದುರ್ಬುದ್ಧಿಗಳಿಂದ ಸರ್ವಥಾ ದುರ್ಜ್ಞೇಯನೂ (ಅನ್ಯರಿಂದ ಸಾಕಲ್ಯೇನ ಅಜ್ಞೇಯನೂ) ಆದ್ದರಿಂದ ಶ್ರೀಹರಿಯು, ನಿರ್ಋತಿಯು; ಸರ್ವವಹತ್ವತಃ-ವಿಶ್ವವಾಹಕನಾದ್ದರಿಂದ ಸಃ ವಹ್ನಿಃ-ಅವನು ವಹ್ನಿನಾಮಕನೂ ಆಗಿರುವನು.

---

ನಿತ್ಯದುಃಖಪ್ರದನೂ ಆತನೇ, ಎಂಬುದು ಸಹ ಶಾಸ್ತ್ರಸಿದ್ಧವು. (೨೫). ಮಹಾಜ್ಞಾನಿಗಳೆಂಬುವರಿಗೂ ಪತಿಯಾದ (ಸ್ವಾಮಿಯಾದ) ಶ್ರೀಹರಿಯೇ ಬೃಹಸ್ಪತಿಯು; ಸರ್ವರನ್ನೂ ನಿಯಮನಮಾಡುವುದರಿಂದ ಆತನೇ ಯಮನು; ಸತ್ತರ್ಕಗಳಿಂದಲೂ ಜ್ಞೇಯನಾದ್ದರಿಂದ, ಶ್ರೀಹರಿಯು ಜ್ಞಾನೀ ಎಂದೂ ಕರೆಯಲ್ಪಡುತ್ತಾನೆ. (೨೬). ದುರ್ಮತಿಗಳ ಸರ್ವಪ್ರಕಾರದ ಅಜ್ಞಾನ ಪ್ರೇರಕನಾದ್ದರಿಂದ, ಆತನು ಕುಬೇರನೆಂದೂ ಹೇಳಲ್ಪಡುವನು; ತಾನು ದುರ್ಮತಿಗಳಿಗೆ ಸರ್ವಥಾ ದುರ್ಜ್ಞೇಯನೂ, ಅನ್ಯರಿಗೆ ಸಾಕಲ್ಯೇನ ಅಜ್ಞೇಯನೂ ಆದ್ದರಿಂದ ನಿರ್ಋತಿ ಎನಿಸುವನು; ಸರ್ವಭಾರವನ್ನು ತಾನೇ

---

1. 'ಗಂ ಸುಖಂ, ಯೇಷಾಂ ತೇ ಅಗಾಃ ಮುಕ್ತಾಃ ತೇಭ್ಯಃ ಪ್ರಕೃಷ್ಟಃ ಇತಿ ಪ್ರಾಗಃ' ಎಂಬ ವ್ಯುತ್ಪತ್ತಿಯಿಂದ. 'ಗ' ಎಂದರೆ ಸುಖವು. ಸ್ವರೂಪವೇ ಸುಖಮಯವಾದವರು ಅಗರು—ಅವರೇ ಮುಕ್ತರು—ಸರ್ವಮುಕ್ತರಲ್ಲಿ ಶ್ರೇಷ್ಠನಾದ, ನಿತ್ಯಾನಂದ ಸ್ವರೂಪನಾದ ಶ್ರೀಹರಿಯು 'ಪ್ರಾಗ' ಶಬ್ದ ಮುಖ್ಯವಾಚ್ಯನು.

ಅಕಾರಃ ಸರ್ವವಾಗಾತ್ಮಾ ಸೋಂಕಾರಃ ಸರ್ವವಾಗ್ಯತಃ ।
ಸರ್ವೋತ್ಕೃಷ್ಟೇರುಕಾರಃ ಸ ಮಕಾರಃ ಸರ್ವಮಾನನಾತ್ ॥ ೨೮ ॥
ಓಂಕಾರಃ ಸ ತ್ರಿರೂಪತ್ವಾತ್ ಅವನಾದೋಂಚ ಪೂರ್ತಿತಃ ।
ಸದಾ ಸರ್ವತ್ರ ಸತ್ವೇನ ಸದ್ರೂಪಃ ಸರ್ವದೀಪನಾತ್ ॥ ೨೯ ॥
ಸರ್ವೇಷಾಂ ಗ್ರಹಣಾತ್ ಜ್ಞಾನಾತ್ಸರ್ವವೇದಸ್ತುತೇರಪಿ ।
ಅದ್ಭುತಾನಂದನಾತ್ ಕ್ಷೇಪಾದಸದಿತ್ಯುಚ್ಯತೇ ಹರಿಃ ॥ ೩೦ ॥

ಯತಃ-ಯಾವ ಕಾರಣದಿಂದ, ಸರ್ವವಾಕ್-ಸರ್ವವೇದ (ಪ್ರತಿಪಾದ್ಯ) ಸ್ವರೂಪನೋ, (ತತಃ-ಆ ಕಾರಣದಿಂದ, ಸಃ-ಶ್ರೀಹರಿಯು, ಓಂಕಾರಃ-ಓಂಕಾರ ವಾಚ್ಯನು; ತ್ರಿರೂಪತ್ವಾತ್-(ಪ್ರಸಿದ್ಧವಾದ ಅ, ಉ, ಮ ಗಳೆಂಬ) ಮೂರಕ್ಷರಗಳುಳ್ಳದ್ದಾದ್ದರಿಂದ, ಓಂಕಾರಃ-ಓಂಕಾರವು, ಸಃ-ಆತನೇ (ಆತನನ್ನೇ ಹೇಳುತ್ತದೆ); ಅಕಾರಃ-(ಓಂಕಾರದಲ್ಲಿರುವ) ಅಕಾರವು, ಸರ್ವವಾಗಾತ್ಮಾ-ಸರ್ವ ಶಬ್ದಗಳ ಮೂಲಭೂತವಾದುದು (ಅದು ಸರ್ವಶಬ್ದಗಳ ಅರ್ಥರೂಪವೂ ಆಗಿದೆ); ಸಃ-ಶ್ರೀಹರಿಯು, ಸರ್ವೋತ್ಕೃಷ್ಟೇಃ-ಸರ್ವೋತ್ತಮನಾದ್ದರಿಂದ (ಸರ್ವರಿಂದ ಉತ್ತಮತ್ವವನ್ನು ಸೆಳೆದು ತನ್ನಲ್ಲಿ ಮಾತ್ರ ಇಟ್ಟುಕೊಂಡಿರುವುದರಿಂದ). ಉಕಾರಃ- ಉಕಾರವಾಚ್ಯನು; ಸರ್ವಮಾನನಾತ್-ಸರ್ವಪೂಜ್ಯನಾದ್ದರಿಂದ (ರಮಾಬ್ರಹ್ಮಾದಿ ಪೂಜ್ಯನಾದ್ದರಿಂದ-ಅಥವಾ ಸರ್ವವನ್ನೂ ಮಾನಿಸುವುದರಿಂದ ಅವುಗಳ ಸ್ವಭಾವ ರಕ್ಷಕನಾದ್ದರಿಂದ), ಮಕಾರಃ-ಮಕಾರವಾಚ್ಯನು; ಅವನಾತ್-ಜಗದ್ರಕ್ಷಕನಾದ್ದರಿಂದಲೂ, ಪೂರ್ತಿತಃ-ಗುಣಪೂರ್ಣನಾದ್ದರಿಂದಲೂ, ಓಂ ಚ-ಓಂಕಾರ ಮುಖ್ಯವಾಚ್ಯನು, ಶ್ರೀಹರಿಯೇ-ಅನ್ಯರಲ್ಲ (ಮತ್ತು), ಸದಾ-ಸರ್ವಕಾಲದಲ್ಲಿ ಸರ್ವತ್ರ-ಸರ್ವದೇಶದಲ್ಲಿ ಸದ್ರೂಪಃ-ಪರಮಮಂಗಳಸ್ವರೂಪನಾದ ತಾನು, (ಅಪ್ರಾಕೃತಗಳಾದ ಅನಂತರೂಪಗಳಿಂದ ಸಹ

ಹೊತ್ತಿರುವುದರಿಂದ ಶ್ರೀಹರಿಯು ವಹ್ನಿ ಎನಿಸುವನು. (೨೭). ಶ್ರೀಹರಿಯು, ಸರ್ವವೇದ ಪ್ರತಿಪಾದ್ಯ ಸ್ವರೂಪವುಳ್ಳವನಾದ್ದರಿಂದ, ಸರ್ವವೇದಾರ್ಥವನ್ನೊಳಗೊಂಡ ಓಂಕಾರವಾಚ್ಯನಾಗಿರುವನು; ಓಂಕಾರವು, ಅಕಾರ, ಉಕಾರ, ಮಕಾರಗಳೆಂಬ ಮೂರು ರೂಪಗಳನ್ನೊಳಗೊಂಡಿರುತ್ತದೆ.[1] ಇವುಗಳಲ್ಲಿ ಅಕಾರವು

1. ಓಂಕಾರದಲ್ಲಿ ಈ ಮೂರು ಅಕ್ಷರಗಳಲ್ಲದೇ, ನಾದ, ಬಿಂದು, ಘೋಷ, ಶಾಂತ, ಅತಿಶಾಂತಗಳೆಂಬ ಬೇರೆ ಐದು, ಹೀಗೆ ಒಟ್ಟು ೮ ಅಕ್ಷರಗಳುಳ್ಳದ್ದು. ಭೂಃ, ಭುವಃ, ಸ್ವಃ ಎಂಬುವು ಓಂಕಾರದ ವ್ಯಾಖ್ಯಾನವಾಗಿದ್ದು ವ್ಯಾಹೃತಿಗಳೆಂದು ಕರೆಯಲ್ಪಡುತ್ತವೆ. ಈ ವ್ಯಾಹೃತಿಗಳ ವ್ಯಾಖ್ಯಾನವೇ 'ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್' ಎಂಬ ಗಾಯತ್ರೀ ಮಂತ್ರದ ಮೂರು ಪಾದಗಳು; ಗಾಯತ್ರ್ಯರ್ಥದ ವಿವರಣೆಯೇ ಪುರುಷಸೂಕ್ತವು. ಪುರುಷಸೂಕ್ತದ ವಿವರಣೆಯೇ ಸಕಲ ವೇದಗಳು. ಓಂಕಾರವು

ಇರುವವನಾಗಿ), ಸತ್ತ್ವೇನ-ಇರುವುದರಿಂದ, (ಮತ್ತು), ಸರ್ವದೀಪನಾತ್-ಸರ್ವಪ್ರಕಾಶನಾದ್ದರಿಂದಲೂ, (ಸೂರ್ಯಾದಿ ಸರ್ವಪ್ರಕಾಶಕರಿಗೂ ಪ್ರಕಾಶ ಪ್ರದನಾದ, ಹಾಗೂ, ಸರ್ವಚೇತನರ ಸ್ವರೂಪಗಳನ್ನು ಪ್ರಕಟಗೊಳಿಸುವವನಾದ್ದ ರಿಂದಲೂ), ಸರ್ವೇಷಾಂ-ಎಲ್ಲರನ್ನು ಗ್ರಹಣಾತ್-ಬಲ್ಲವನಾದ್ದರಿಂದ (ತನ್ನ ಅಧೀನ ವಿಟ್ಟುಕೊಂಡಿರುವುದರಿಂದ), ಅಪಿ-ಮತ್ತು, ಸರ್ವ ವೇದಸುತ್ತೇಃ-ಸಕಲವೇದ ಸ್ತುತಿಗಳ, ಜ್ಞಾನಾತ್-ವಿಷಯನಾದ್ದರಿಂದ (ಅಥವಾ ವೇದಾಭಿಮಾನಿಗಳು ಸ್ತುತಿಸುವ ಸರ್ವಗುಣಪೂರ್ಣತ್ವವನ್ನು ತಾನೇ ಬಲ್ಲವನಾದ್ದರಿಂದ)[1], ಅದ್ಭುತಾನಂದನಾತ್-ಅತ್ಯಾಶ್ಚರ್ಯಕರವಾದ ಆನಂದಾನುಭವವುಳ್ಳವನಾದ್ದರಿಂದ, ಕ್ಷೇಪಾತ್-(ದುರ್ಜನರ

ಸರ್ವಶಬ್ದಗಳ ಮೂಲರೂಪವಾದುದು—ಅದು ಪರಬ್ರಹ್ಮನನ್ನೇ ಹೇಳುತ್ತದೆ; ಉಕಾರವು, ಶ್ರೀಹರಿಗೆ ಸರ್ವೋತ್ಕೃಷ್ಟತ್ವವನ್ನು ಹೇಳುತ್ತದೆ; ಮಕಾರವು, ಆತನು ರಮಾಬ್ರಹ್ಮಾದಿ ಸರ್ವ ಜಗತ್ತಿನಿಂದ ಪೂಜ್ಯನೆಂದು ಹೇಳುತ್ತದೆ; ಹೀಗೆ, ಸರ್ವಶಬ್ದವಾಚ್ಯನಾಗಿದ್ದು, ಅದರಿಂದ ಸಿದ್ಧವಾಗುವ ಸರ್ವಗುಣಪೂರ್ತಿ ಯುಳ್ಳವನಾದ್ದರಿಂದಲೂ, ಸರ್ವ ಜಗದ್ರಕ್ಷಕನಾದ್ದರಿಂದಲೂ, ಓಂಕಾರವಾಚ್ಯನು ಶ್ರೀಹರಿಯೇ ಸರಿ; ಸಚ್ಚಿದಾನಂದ ಸ್ವರೂಪನಾದ (ಪರಮಮಂಗಳ ಸ್ವರೂಪನಾದ) ಶ್ರೀಹರಿಯು ಸರ್ವತ್ರ ಇರುವವನಾಗಿ, ಸರ್ವಪ್ರಕಾಶಕನಾದ್ದರಿಂದ, ಮತ್ತು ಸರ್ವವನ್ನೂ ಅಶೇಷವಿಶೇಷಗಳೊಡನೆ ಬಲ್ಲ ಸರ್ವಜ್ಞನಾದ್ದರಿಂದ, ಹಾಗೂ ಸರ್ವ ವೇದ ಸ್ತುತಿಗಳ ವಸ್ತುವಾಗಿರುವುದರಿಂದ ಹೀಗಿದ್ದರೂ ಅದ್ಭುತಾನಂದಭೋಗಿಯಾದ

ಹೀಗೆ ಸಕಲ ವೇದಾರ್ಥಗಳನ್ನೊಳಗೊಂಡು ಸಕಲ ವೇದಪ್ರತಿಪಾದ್ಯನಾದ ಶ್ರೀಹರಿಯ ಗುಣಪೂರ್ಣತ್ವವನ್ನು ಪ್ರತಿಪಾದಿಸುತ್ತದೆ. ಓಂಕಾರದ ಮೇಲ್ಕಂಡ ಎಂಟು ಅಕ್ಷರಗಳಿಂದ ಪ್ರತಿಪಾದ್ಯಗಳಾದ, ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮಗಳೆಂಬ ಎಂಟು ರೂಪಗಳಿಂದ, ಶ್ರೀಹರಿಯ ೫೦ ರೂಪಗಳು ಪ್ರಕಟವಾಗುತ್ತವೆ; ಇವುಗಳನ್ನು ಅಕಾರಾದಿ ೫೦ ಅಕ್ಷರಗಳು ಪ್ರತಿಪಾದಿಸುತ್ತವೆ; ಓಂಕಾರವು (ಪ್ರಣವವು) ಅಷ್ಟಮಹಾಮಂತ್ರಗಳಲ್ಲಿ ಒಂದು; ವಿಷ್ಣುಮಂತ್ರದ ಮಹಿಮೆಯು, ಐತರೇಯ ಭಾಷ್ಯದಲ್ಲಿ ನಿರೂಪಿತವಾಗಿದೆ—ಇದೂ ಅಷ್ಟ ಮಹಾಮಂತ್ರಗಳಲ್ಲಿ ಸೇರಿದೆ; ವಿರಿಂಚನು ವಿಷ್ಣುವನ್ನು ಧ್ಯಾನಿಸಿ, ಸರ್ವವೇದಾರ್ಥಗಳನ್ನು ಆತನಲ್ಲಿ ಉಪಸಂಹಾರ ಮಾಡಿದನೆಂದೂ ಅಲ್ಲಿ ಹೇಳಲಾಗಿದೆ. 'ಓಂ ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿನ ಬ್ರಹ್ಮಶಬ್ದವಾಚ್ಯನು ವಿಷ್ಣುವೇ ಎಂದು ನಿರ್ಣಯಿಸಲಾಗಿದೆ. ಪ್ರಸಕ್ತ ಶ್ಲೋಕಗಳಲ್ಲಿ ಪ್ರಸಿದ್ಧವಾದ ಕೆಲಮಾತ್ರೆಗಳು ಮಾತ್ರ ವಿವರಿಸಲ್ಪಟ್ಟು, ಅನ್ಯಮಾತ್ರೆಗಳ (ನಾದಾದಿಗಳ) ಅರ್ಥವೂ ಸೂಚಿತವೆಂದು ತಿಳಿಯಬೇಕು.

1. 'ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ' (ಗೀತಾ) ಹೇ ಪುರುಷೋತ್ತಮ! ನಿನ್ನನ್ನು ನೀನೇ ಬಲ್ಲೆ ಎಂದು ಹೇಳಲಾಗಿದೆ. (ಶ್ರೀಹರಿಯು ತನ್ನ ಅನಂತತ್ವವನ್ನು ತಾನೇ ಬಲ್ಲನು—ರಮಾದಿಗಳು ಅನಂತನೆಂದು ಮಾತ್ರ ತಿಳಿಯುವರು—ಈ ವಿಷಯವನ್ನು ಗಮನಿಸಬೇಕು.

ಆಕ್ಷೇಪಕ್ಕೆ ಗುರಿಯಾಗಿ), ನಿರ್ಗುಣ, ನಿರಾಕಾರಾದಿ ಆರೋಪಗಳಿಗೆ ಒಳಗಾಗುವು ದರಿಂದಲೂ, ಹರಿಃ-ಶ್ರೀಹರಿಯು, ಅಸತ್-ಅಸತ್, ಇತಿ-ಎಂದು, ಉಚ್ಯತೇ-ಹೇಳಲ್ಪಡುತ್ತಾನೆ.

**ಸತಾಂ ಹಿತಕರತ್ವೇನ ನಿರ್ದೋಷಜ್ಞಾನಸೌಖ್ಯತಃ ।**
**ಅದ್ಯತೇತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ ॥ ೩೧ ॥**

ಸತಾಂ-ಸಜ್ಜನರಿಗೆ, ಹಿತಕರತ್ವೇನ-ಹಿತವನ್ನುಂಟುಮಾಡುವುದರಿಂದ (ಮೋಕ್ಷ ಪ್ರದನಾದುದರಿಂದ), ನಿರ್ದೋಷಜ್ಞಾನಸೌಖ್ಯತಃ-ಶುದ್ಧವಾದ ಜ್ಞಾನಾನಂದ ಗಳನ್ನುಳ್ಳವನಾದ್ದರಿಂದ (ದೋಷಲೇಶವಿಲ್ಲದ ಜ್ಞಾನಾನಂದಗಳೇ ದೇಹವಾಗಿವುಳ್ಳವ ನಾದ್ದರಿಂದ), ಚ-ಮತ್ತು ಭೂತಾನಿ-ಸಕಲ ಪ್ರಾಣಿಗಳನ್ನು (ಪಂಚಭೂತಗಳನ್ನೂ ಸಹ), ಅದ್ಯತೇ ಇತಿ ತಸ್ಮಾತ್-(ಪ್ರಲಯಕಾಲದಲ್ಲಿ) ಭಕ್ಷಣಮಾಡುವವನೆಂಬ ಕಾರಣ ದಿಂದಲೂ, ತತ್-ಆ ಬ್ರಹ್ಮವಸ್ತುವು, ಅನ್ನಂ-ಅನ್ನವೆಂದು ಉಚ್ಯತೇ- ಹೇಳಲ್ಪಡುತ್ತದೆ.

**ಸತ್ಯಂ ಪ್ರಾಣಃ ಸರ್ವಚೇಷ್ಟಾಸ್ತೇನಾನಂತೋ ಯತಃ ಸ ಹಿ ।**
**ಸರ್ವೇಷಾಂ ದೀಪನಾಜ್ಜ್ಯೋತಿರಾಪಃ ಸರ್ವವಿಲಕ್ಷಣಃ ॥ ೩೨ ॥**

ಸತ್ಯಂ-(ಶ್ರೀಹರಿಯು) ಸತ್ಯಶಬ್ದವಾಚ್ಯನು; ಪ್ರಾಣಃ-ಪ್ರಾಣನೂ ಆತನೇ; ಯತಃ-ಯಾವ ಕಾರಣದಿಂದ, ತೇನ-ಆತನಿಂದ, ಸರ್ವಚೇಷ್ಟಾಃ-(ಚೇತನಾ ಚೇತನಾತ್ಮಕ) ಸರ್ವಜಗತ್ತಿನ ಸರ್ವಚೇಷ್ಟೆಗಳೂ ಸಂಭವಿಸುವುವೋ, (ಆ ಕಾರಣ ದಿಂದ), ಸಃ-ಶ್ರೀಹರಿಯು, ಅನಂತಃಹಿ-ಅನಂತನೆಂದೂ ಪ್ರಸಿದ್ಧನು; ಸರ್ವೇಷಾಂ-ಎಲ್ಲರಿಗೆ, ದೀಪನಾತ್-ಪ್ರಕಾಶಪ್ರದನಾದ್ದರಿಂದ (ಸಮಸ್ತ ವಸ್ತುಗಳ ಸ್ವಭಾವ ಪ್ರಕಾಶಕನಾದ್ದರಿಂದ), ಜ್ಯೋತಿಃ-ಜ್ಯೋತಿಯು; ಸರ್ವವಿಲಕ್ಷಣಃ-ಸಕಲ ಜಗದ್ವಿಲಕ್ಷಣನು; (ಜಗದ್ಭಿನ್ನನೂ, ಅದ್ಭುತಮಹಿಮನು); (ಆದ್ದರಿಂದ), ಆಪಃ-ಅಪ್ ಶಬ್ದವಾಚ್ಯನು.

---

ತಾನು, ದುರ್ಜನರ ಗುಣಶೂನ್ಯನೆಂಬ ಮೊದಲಾದ ದುಷ್ಟ ಆರೋಪಣೆಗಳಿಗೆ ವಿಷಯನಾಗುವುದರಿಂದ, ಅಸತ್ ಎಂದೂ ಕರೆಯಲ್ಪಡುತ್ತಾನೆ (೨೮-೩೦). ಸಜ್ಜನರಿಗೆ ಮೋಕ್ಷಪ್ರದನೂ, ನಿರ್ದುಷ್ಟ (ಶುದ್ಧ) ಜ್ಞಾನಾನಂದಸ್ವರೂಪನೂ; ಮತ್ತು ಸರ್ವವನ್ನೂ ಭಕ್ಷಣ ಮಾಡುವವನೂ ಆದ್ದರಿಂದ, ಶ್ರೀಹರಿಯು ಅನ್ನನೆನಿಸುವನು. (೩೧). ಯಾರಿಂದ ಸರ್ವ ಜಗತ್ತಿನ ಸಮಸ್ತ ಚೇಷ್ಟೆಗಳು (ಕ್ರಿಯೆಗಳು) ಸಂಭವಿಸುವುವೋ, ಆ ಶ್ರೀಹರಿಯೇ ಅನಂತನಾಮಕನು; ಆತನೇ ಸತ್ಯನು ಮತ್ತು ಪ್ರಾಣನು; ಸರ್ವಪ್ರಕಾಶಕನಾದ್ದರಿಂದ ಆತನು ಜ್ಯೋತಿಯು; ಸಕಲ ಜಗದ್ವಿಲಕ್ಷಣನಾದ್ದ ರಿಂದ ಶ್ರೀಹರಿಯು 'ಅಪಃ' ಎಂದು, ಅಪ್ ಶಬ್ದವಾಚ್ಯನೆಂದೂ ಹೇಳಲ್ಪಡುತ್ತಾನೆ.

**ಸರ್ವದೃಶ್ಯತ್ವತಃ ಸರ್ವಃ ದ್ರಷ್ಟೃತ್ವಾತ್ತಪನಾತ್ತಪಃ ।**

**ಪ್ರಕೃಷ್ಟಕರ್ತಾ ಪ್ರಕೃತಿಃ ಪುರುಷಃ ಪೂರ್ಣಷಡ್ಗುಣಃ ॥ ೩೩ ॥**

ಸರ್ವದೃಶ್ಯತ್ವತಃ-ಸಕಲ ಸಜ್ಜನರಿಂದ ಕಾಣಲ್ಪಡುವನಾದ್ದರಿಂದ (ಮುಕ್ತಿ ಯೋಗ್ಯಜೀವರಿಗೆ ಸ್ವೇಚ್ಛಾನುಸಾರ ಪ್ರತ್ಯಕ್ಷತೋರುತ್ತಾನಾದ್ದರಿಂದ), ದ್ರಷ್ಟೃತ್ವಾತ್-ಸ್ವಯಂ-(ಸರ್ವವನ್ನೂ) ನೋಡುತ್ತಾನಾದ್ದರಿಂದ, ಸರ್ವಃ-(ಶ್ರೀ ಹರಿಯು) 'ಸರ್ವ'ಶಬ್ದವಾಚ್ಯನು; ತಪನಾತ್-ಜ್ಞಾನಮಯನಾದ್ದರಿಂದ ಸೂರ್ಯಾದಿಗಳಲ್ಲಿದ್ದು ತಾಪವನ್ನುಂಟುಮಾಡುವುದರಿಂದ), ತಪಃ-ತಪನೆಂದೂ ಕರೆಯಿಸುವನು; ಪ್ರಕೃಷ್ಟ ಕರ್ತಾ-ಉತ್ತಮಕರ್ತನು (ಆತನ ಎಲ್ಲ ಕ್ರಿಯೆಗಳೂ, ಗುಣಾದಿಗಳಂತೆ ಪೂರ್ಣಗಳೇ-ಅಪೂರ್ಣಕ್ರಿಯೆಗಳಿಲ್ಲದವನು); ಪ್ರಕೃತಿಃ-(ಆದ್ದರಿಂದ) ಪ್ರಕೃತಿ ಶಬ್ದವಾಚ್ಯನು; ಪೂರ್ಣಷಡ್ಗುಣಃ-ಐಶ್ವರ್ಯಾದಿ ಷಡ್ಗುಣಪೂರ್ಣನು;[1] ಪುರುಷಃ-(ಆದ್ದರಿಂದ) ಪುರುಷನಾಮಕನು.

**ಪ್ರಧಾನಂ ಮುಖ್ಯಕರ್ತೃತ್ವಾತ್ ಪಾತಾ ಪಶುಪತಿಃ ಸತಾಂ ।**

**ಹಿರಣ್ಯಗರ್ಭೋ ಬ್ರಹ್ಮಾಂಡಗರ್ಭತ್ವಾದಪಿ ಸ ಸ್ಮೃತಃ ॥ ೩೪ ॥**

ಮುಖ್ಯಕರ್ತೃತ್ವಾತ್ (ಶ್ರೀಹರಿಯು) ಮುಖ್ಯಕರ್ತನಾದ್ದರಿಂದ, ಪ್ರಧಾನಂ-

---

(೩೨). ಎಲ್ಲವನ್ನೂ ನೋಡುತ್ತಾನೆ ಮತ್ತು ಎಲ್ಲರಿಂದ (ಸಜ್ಜನರಿಂದ ಯೋಗ್ಯಕಾಲದಲ್ಲಿ) ಕಾಣಲ್ಪಡುತ್ತಾನೆ. ಆದ್ದರಿಂದ ಶ್ರೀಹರಿಯು 'ಸರ್ವ'ನು; ಸೂರ್ಯಾದಿಗಳಲ್ಲಿ ತಪಿಸುವುದರಿಂದ (ಅವರ ತಾಪನಶಕ್ತಿಗೆ ಕಾರಣನಾದ್ದರಿಂದ) ತಪನೆಂದೂ ಕರೆಯಲ್ಪಡುವನು; ಅವನ ಎಲ್ಲ ಕೃತಿಗಳೂ ಪೂರ್ಣಗಳಾದ್ದರಿಂದ ಆತನು ಪ್ರಕೃತಿಯು; ಷಡ್ಗುಣಪೂರ್ಣನಾದ್ದರಿಂದ ಆತನೇ ಪುರುಷನು. (೩೩). ಮುಖ್ಯ ಸರ್ವಕರ್ತನಾದ್ದರಿಂದ ಶ್ರೀಹರಿಯು 'ಪ್ರಧಾನ'ನು; ಸಜ್ಜನರಕ್ಷಕನಾದ್ದರಿಂದ, 'ಪಶುಪತಿ'ಯು; ಉದರದಲ್ಲಿ ಬ್ರಹ್ಮಾಂಡವುಳ್ಳವನಾದ್ದರಿಂದ, ಆತನೇ ಹಿರಣ್ಯಗರ್ಭನಾಮಕನೂ ಆಗಿರುವನು[2] (೩೪). ಪ್ರಕಾಶರೂಪನಾದ್ದರಿಂದ, ಶ್ರೀಹರಿಯು 'ಆಕಾಶ'ನು; ಸರ್ವತ್ರ

---

1. ಪೂರ್ಣೈಶ್ವರ್ಯ, ವೀರ್ಯ, ಯಶಸ್ಸು, ಕಾಂತಿ, ಜ್ಞಾನ, ವಿಜ್ಞಾನಗಳೆಂಬ ಪ್ರಧಾನಗುಣಗಳು 'ಭಗ' ಶಬ್ದದಿಂದ ಹೇಳಲ್ಪಡುತ್ತವೆ. ಇವುಗಳಿಂದ ಸದಾ ಸರ್ವತ್ರಪೂರ್ಣನಾದವನು, ಭಗವಂತನು; ಇದೇ ಅರ್ಥವನ್ನು ಪುರುಷ ಶಬ್ದವೂ ತಿಳಿಸುತ್ತದೆ. ಷಡ್ಗುಣಗಳ ವಿವರವು, 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ॥' ಎಂಬ ಪ್ರಮಾಣದಿಂದ ತಿಳಿದುಬರುತ್ತದೆ.

2. 'ಹಿರಣ್ಯಗರ್ಭಃ ಸಮವರ್ತತಾಗ್ರೇ' ಇತ್ಯಾದಿ ಶ್ರುತಿಗಳು, ಸೃಷ್ಟಿಪೂರ್ವದಲ್ಲಿ ಜಗದುದರನಾದ ಶ್ರೀಹರಿಯೊಬ್ಬನೇ ಇದ್ದನೆಂದು ಹೇಳುತ್ತವೆ. 'ಹಿರಣ್ಯಂ ಸುವರ್ಣಾತ್ಮಕಂ ಬ್ರಹ್ಮಾಂಡಂ ಗರ್ಭೇ ಯಸ್ಯ ಸಃ ಹಿರಣ್ಯಗರ್ಭಃ'—ಎಂಬ, ವಿಷ್ಣುಸಹಸ್ರನಾಮ ಭಾಷ್ಯವಾಕ್ಯದಂತೆ, ಈ ನಾಮವು ಶ್ರೀಹರಿಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ.

ಪ್ರಧಾನನು; ಸತಾಂ-ಸಜ್ಜನರ, ಪಾತಾ-ರಕ್ಷಕನು (ಆದ್ದರಿಂದ), ಪಶುಪತಿಃ-ಪಶುಪತಿಯು; ಸಃ-ಆತನು, ಬ್ರಹ್ಮಾಂಡಗರ್ಭತ್ವಾತ್ ಅಪಿ-(ಚತುರ್ಮುಖಜನಕನೂ) ಬ್ರಹ್ಮಾಂಡವನ್ನು ತನ್ನ ಉದರದಲ್ಲಿ ಧರಿಸಿರುವವನೂ ಆದುದರಿಂದ, ಹಿರಣ್ಯಗರ್ಭಃ-ಹಿರಣ್ಯಗರ್ಭನು, ಸ್ಮೃತಃ-(ಎಂದು) ತಿಳಿಯಲ್ಪಟ್ಟಿರುವನು.

**ಆಕಾಶೋ ದೀಪ್ಯಮಾನತ್ವಾದಾಪಃ ಸರ್ವತ್ರ ಪೂರಿತಃ ।**

**ಸರ್ವೋತ್ಪಾದಕರೂಪತ್ವಾದ್ಭೂರ್ಭೂಮಿಶ್ಚೇಷ್ಟನಾದ್ಘಟಃ ॥ ೩೫ ॥**

ದೀಪ್ಯಮಾನತ್ವಾತ್-ಪ್ರಕಾಶಿಸುವುದರಿಂದ, ಆಕಾಶಃ-ಆಕಾಶನು; ಸರ್ವತ್ರ-ಎಲ್ಲ ದೇಶದಲ್ಲಿ ಪೂರಿತಃ-ಪೂರ್ಣನಾದ್ದರಿಂದ, ಆಪಃ-ಅಪ್ ಶಬ್ದವಾಚ್ಯನು (ಆಪಃ ಎಂದು ಕರೆಯಲ್ಪಡುವನು); ಸರ್ವೋತ್ಪಾದಕರೂಪತ್ವಾತ್-ಸರ್ವವನ್ನೂ ಉತ್ಪಾದನೆ ಮಾಡುವ ರೂಪವುಳ್ಳವನಾದ್ದರಿಂದ, ಭೂಃ-(ಶ್ರೀಹರಿಯು) ಭೂಃ ಎಂದೂ; ಭೂಮಿಃ-ಭೂಮಿ ಎಂದೂ, ಚೇಷ್ಟನಾತ್-ಸರ್ವಚೇಷ್ಟಕನಾದ್ದರಿಂದ, ಘಟಃ-ಘಟನೆಂದೂ (ಕರೆಯಲ್ಪಡುವನು).

**ಆಚ್ಛಾದನಾದ್ವಸ್ತ್ರನಾಮಾ ವೃಶ್ಚನಾದ್ವೃಕ್ಷ ಇತ್ಯಪಿ ।**

**ಪತ್ರಂ ಸರ್ವಗತತ್ವೇನ ಪರ್ಣಃ ಪಾಲನರೂಪಣಾತ್ ॥ ೩೬ ॥**

ಆಚ್ಛಾದನಾತ್-ಸರ್ವವನ್ನು ಮುಚ್ಚಿರುವುದರಿಂದ (ಆಚ್ಛಾದಿಸಿರುವುದರಿಂದ-ವ್ಯಾಪಿಸಿರುವುದರಿಂದ), ವಸ್ತ್ರನಾಮಾ-ವಸ್ತ್ರನೆಂಬ ನಾಮವುಳ್ಳವನು; ವೃಶ್ಚನಾತ್-ಕತ್ತರಿಸುವುದರಿಂದ (ಛೇದಿಸುವುದರಿಂದ), ವೃಕ್ಷಃ ಇತ್ಯಪಿ-ವೃಕ್ಷನೆಂದೂ, ಸರ್ವಗತತ್ವೇನ-ಸರ್ವತ್ರ ಇರುವುದರಿಂದ, ಪತ್ರಂ-ಪತ್ರನಾಮಕನೂ, ಪಾಲನರೂಪಣಾತ್-(ಜಗತ್ತಿನ) ಪಾಲನೆಯನ್ನು ರೂಪಿಸುವುದರಿಂದ (ನಿರ್ವಹಿಸುವುದರಿಂದ), ಪರ್ಣಃ-ಪರ್ಣನೆಂದೂ (ಕರೆಯಲ್ಪಡುತ್ತಾನೆ).

**ವಿಕಾಸಾತ್ ಪೋಷಣಾತ್ ಪುಷ್ಪಂ ಶೋಭನೇಂದ್ರಿಯತಃ ಸುಖಂ ।**

**ಸರ್ವಸ್ವಾಮಿತ್ವತೋ ದುಃಖೀ, ದುಃಖಂ ದುಷ್ಟವಿನಾಶನಾತ್ ॥ ೩೭ ॥**

ವಿಕಾಸಾತ್-ವಿಕಾಸದಿಂದ (ಸರ್ವವನ್ನೂ ವಿಕಾಸಗೊಳಿಸುವುದರಿಂದ-ಚೇತನರ

---

ಪೂರ್ಣನಾದ್ದರಿಂದ 'ಆಪಃ' ಎನಿಸುವನು; ಸರ್ವಜಗತ್ತಿನ ಉತ್ಪಾದಕನಾದ್ದರಿಂದ, ಭೂ ಮತ್ತು ಭೂಮಿ ಶಬ್ದಗಳಿಂದಲೂ ಕರೆಯಲ್ಪಡುವನು; ಸರ್ವಚೇಷ್ಟಕನಾದ್ದರಿಂದ (ಸರ್ವಕ್ರಿಯೆಗಳ ಸಂಭವಕ್ಕೆ ಸ್ವತಂತ್ರಮೂಲಕಾರಣನಾದ್ದರಿಂದ) 'ಘಟ' ಎಂಬ ನಾಮವುಳ್ಳವನು (೩೫). ಸರ್ವವನ್ನೂ ವ್ಯಾಪಿಸಿ ಆಚ್ಛಾದಿಸುವುದರಿಂದ ಶ್ರೀಹರಿಯು 'ವಸ್ತ್ರ'ನು; ಬಂಧಛೇದಕನಾದ್ದರಿಂದ, 'ವೃಕ್ಷ'ನೆನಿಸುವನು; ಸರ್ವಗತನಾದ್ದರಿಂದ 'ಪತ್ರ'ನು; ಪಾಲನ ವ್ಯಾಪಾರವನ್ನು ನಿರ್ವಹಿಸುವುದರಿಂದ, 'ಪರ್ಣ'ನಾಮಕನೂ ಆತನೇ (೩೬). ಸುಜೀವರ ಸ್ವರೂಪವನ್ನು ವಿಕಾಸಗೊಳಿಸಿ (ಪ್ರಕಟಮಾಡಿ) ನಿತ್ಯ

ಸ್ವರೂಪವನ್ನು ಆವಿರ್ಭಾವಗೊಳಿಸುವುದರಿಂದ). ಪೋಷಣಾತ್-(ಮತ್ತು) ಪೋಷಿಸುವುದರಿಂದ, ಪುಷ್ಟಂ-(ಶ್ರೀಹರಿಯು) ಪುಷ್ಟನು; ಶೋಭನೇಂದ್ರಿಯತಃ-ಸರ್ವದಾ ಅಪ್ರಾಕೃತಗಳಾದ (ಸಚ್ಚಿದಾನಂದಾತ್ಮಕವಾದ ಸರ್ವ ಶಕ್ತ್ಯುಪೇತಗಳಾದ) ಇಂದ್ರಿಯಗಳುಳ್ಳವನಾದ್ದರಿಂದ, ಸುಖಂ-'ಸುಖಿ'ಎನಿಸುವನು; ಸರ್ವಸ್ವಾಮಿತ್ವತಃ-ಸರ್ವಸ್ವಾಮಿಯಾದ್ದರಿಂದ, ದುಃಖೀ-(ಜೀವರು ಅನುಭವಿಸುವ ದುಃಖವೂ ಆತನ ಅಧೀನವಾದ್ದರಿಂದ-ದುಃಖಸ್ವಾಮಿಯೂ ಆಗಿರುವುದರಿಂದ) ದುಃಖೀ ಎಂದು ಸಹ (ಕರೆಯಲ್ಪಡುವನು);[1] ದುಷ್ಟವಿನಾಶನಾತ್-ದುಷ್ಟರನ್ನು ನಾಶಗೊಳಿಸುವುದರಿಂದ (ದುಷ್ಟನಿಗ್ರಹಕರ್ತನಾದ್ದರಿಂದ), ದುಃಖಂ-ದುಃಖನೆಂದೂ (ಹೇಳಲ್ಪಡುವವನು).

**ಬಂಧಕತ್ವಾತ್ಸ ಬಂಧೋಽಪಿ ಜೀವಃ ಪ್ರಾಣನತಃ ಸ್ಮೃತಃ ।**

**ಪ್ರಾಣಾದೀನಾಂ ಸ್ವರೂಪಾಣಾಂ ಹಿತಕೃಚ್ಛೂನ್ಯನಾಮಕಃ ॥ ೩೮ ॥**

ಬಂಧಕತ್ವಾತ್-(ಜೀವರನ್ನು ಸಂಸಾರದಲ್ಲಿ ಬಂಧಿಸುವವನಾದ್ದರಿಂದ, ಸಃ-ಆ ಶ್ರೀಹರಿಯು, ಬಂಧಃ-ಬಂಧನಾಮಕನು; ಪ್ರಾಣನತಃ-ಚೇಷ್ಟಕನಾದ್ದರಿಂದ, ಜೀವಃಸ್ಮೃತಃ-ಜೀವನೆಂದು ತಿಳಿಯಲ್ಪಟ್ಟಿರುವನು (ಜೀವ್-ಚೇಷ್ಟಾಯಾಂ); ಪ್ರಾಣಾದೀನಾಂ-ಮುಖ್ಯಪ್ರಾಣ ಮೊದಲಾದ, ಸ್ವರೂಪಾಣಾಂ-ಸುಚೇತನರಿಗೆ, ಹಿತಕೃತ್-ಸುಖವನ್ನು (ನಿತ್ಯಸುಖವನ್ನು) ದೊರಕಿಸುವುದರಿಂದ, ಶೂನ್ಯನಾಮಕನು-ಶೂನ್ಯ (ಶಂ-ಸುಖ) ನಾಮಕನು.

---

ಸುಖದಲ್ಲಿಟ್ಟು ರಕ್ಷಿಸುವುದರಿಂದ, ಶ್ರೀಹರಿಯು ಪುಷ್ಟನೆನಿಸುತ್ತಾನೆ; ಮಂಗಳರೂಪದ (ಅಪ್ರಾಕೃತ) ಇಂದ್ರಿಯಗಳುಳ್ಳವನಾದ್ದರಿಂದ ಆತನೇ 'ಸುಖಿ'ನು; ಸರ್ವಸ್ವಾಮಿಯಾದ್ದರಿಂದ (ಜೀವರು ಅನುಭವಿಸುವ ದುಃಖಕ್ಕೂ ಸ್ವಾಮಿಯಾದ್ದರಿಂದ) ದುಃಖೀ ಎಂದೂ ಕರೆಯಲ್ಪಡುತ್ತಾನೆ; ದುಷ್ಟವಿನಾಶಕನಾದ್ದರಿಂದ ಆತನೇ 'ದುಃಖ'ನು; (೩೭) ಬಂಧಕನಾದ್ದರಿಂದ (ಸಂಸಾರದಲ್ಲಿ ಜೀವರನ್ನು ಬಂಧಿಸುವವನಾದ್ದರಿಂದ, ಶ್ರೀಹರಿಯು ಬಂಧನಾಮಕನು; ಚೇಷ್ಟಕನಾದ್ದರಿಂದ ಜೀವನಾಮಕನು;[1] ಮುಖ್ಯಪ್ರಾಣಾದಿ ಸರ್ವ ಸುಚೇತನರಿಗೆ ನಿತ್ಯಸುಖವನ್ನು ದೊರಕಿಸುವುದರಿಂದ, ಆತನು 'ಶೂನ್ಯ' ನಾಮಕನೂ ಆಗಿದ್ದಾನೆ (೩೮). ಜ್ಞಾನಸ್ವರೂಪನಾದ್ದರಿಂದ ಶ್ರೀಹರಿಯು

---

1. 'ಓಂ ತದಧೀನತ್ವಾದರ್ಥವತ್ ಓಂ' ಎಂಬ, ಸೂತ್ರದಲ್ಲಿ ದುಃಖಿತ್ವ ಬದ್ಧತ್ವಾದಿ ಶಬ್ದ ಸಮೂಹಗಳು ಪರಮಾತ್ಮನಲ್ಲಿಯೇ ಅರ್ಥವುಳ್ಳವುಗಳೆಂದು ನಿರ್ಣಯಿಸಲಾಗಿದೆ. 'ಯದಧೀನೋ ಗುಣೋ ಯಸ್ಯ ತದ್ಗುಣಃ ಸೋಽಭಿಧೀಯತೇ । ಯಥಾ ಜೀವಃ ಪರಾತ್ಮೇತಿ ಯಥಾ ರಾಜಾ ಜಯೀತ್ಯಪಿ॥''—ಯಾವ ಗುಣವು ಯಾರ ಅಧೀನವೋ, ಆತನು ಆ ಗುಣದ ಹೆಸರಿನಿಂದಲೇ ಕರೆಯಲ್ಪಡುತ್ತಾನೆ; ಪರಮಾತ್ಮನು ಜೀವಸ್ವಾಮಿಯಾದ್ದರಿಂದ ಜೀವನೆಂದೂ, ರಾಜಾಧೀನನಾದ ಭಟರು ಯುದ್ಧದಲ್ಲಿ ಗೆದ್ದರೂ, ರಾಜನೇ 'ಜಯೀ' ಎಂದೂ ಕರೆಯಲ್ಪಡುವಂತೆ; ಎಂಬರ್ಥದ ಪ್ರಮಾಣವು ಇದನ್ನೇ ಸಾಧಿಸುತ್ತದೆ.

ಮುಖ್ಯಸ್ವಾರ್ಥಾಹರೇರೇವ ನಾಮಾನೀತ್ಯವದಚ್ಛ್ರುತಿಃ ।
ಬುದ್ಧೋ ಬೋಧಸ್ವರೂಪತ್ವಾಜ್ಜಯಾತ್ಸಂಹರಣಾಜ್ಜನಃ ।
ಪಾಚಕಃಪಾಟಕೋಯದ್ವತ್ಕ್ರಿಯಾಭೇದಾತ್ಪುಮಾನ್ ಭವೇತ್ ॥ ೬೯ ॥
ತಥಾ ಸೃಷ್ಟ್ಯಾದಿಯೋಗಾತ್ಸ ಏಕೋ ಬ್ರಹ್ಮಾದಿನಾಮಕಃ ।
ಏವಂ ಯಾವಂತಿ ನಾಮಾನಿ ಕ್ರಿಯಾಶಬ್ದಾಶ್ಚ ಸರ್ವಶಃ ॥ ೭೦ ॥

ಬೋಧಸ್ವರೂಪತ್ವಾತ್-ಜ್ಞಾನಸ್ವರೂಪನಾದ್ದರಿಂದ, ಬುದ್ಧ-ಬುದ್ಧನಾಮಕನು; ಜಯಾತ್-(ಸರ್ವದಾ) ಜಯಶಾಲಿಯಾದ್ದರಿಂದಲೂ, ಸಂಹರಣಾತ್-(ಸರ್ವ) ಸಂಹಾರಕನಾದ್ದರಿಂದಲೂ, ಜನಃ-ಜನನೆನಿಸುವನು; ಯದ್ವತ್-ಹೇಗೆ, ಕ್ರಿಯಾ ಭೇದಾತ್-ಕರ್ಮಭೇದದಿಂದ, ಪುಮಾನ್-ಪುರುಷನು, ಪಾಚಕಃ ಪಾಟಕಃ- ಪಾಚಕ ಪಾಟಕ (ಬೇಯಿಸುವವನು, ಒಡೆಯುವವನು) ಎಂದು, ಭವೇತ್-ಕರೆಯಲ್ಪಡುವನೋ, ತಥಾ-ಹಾಗೆಯೇ, ಸಃ-ಶ್ರೀಹರಿಯು, ಏಕಃ-ಒಬ್ಬನೇ, ಸೃಷ್ಟ್ಯಾದಿ ಯೋಗಾತ್-ಸೃಷ್ಟಿ ಮೊದಲಾದ ತನ್ನ ವಿವಿಧ ಕರ್ಮಗಳಿಂದ, ಬ್ರಹ್ಮಾದಿನಾಮಕಃ-ಬ್ರಹ್ಮ ಮೊದಲಾದ ನಾಮಗಳುಳ್ಳವನಾಗುತ್ತಾನೆ; ಏವಂ-ಹೀಗೆಯೇ, ಯಾವಂತಿ ನಾಮಾನಿ-ಎಷ್ಟು ನಾಮಗಳಿವೆಯೋ ಎಲ್ಲವೂ, ಚ-ಮತ್ತು ಸರ್ವಶಃ-ಸಮಸ್ತ ಕ್ರಿಯಾಶಬ್ದಾಃ-ಕ್ರಿಯಾವಾಚಕ ಶಬ್ದಗಳೂ ಹರೇಃ ಏವ-ಶ್ರೀಹರಿಗೇ (ಅನ್ವಯಿಸುವ), ಮುಖ್ಯಸ್ವಾರ್ಥಾಃ-ಮುಖ್ಯವಾದ ತಮ್ಮ ಅರ್ಥಗಳುಳ್ಳ, ನಾಮಾನಿ-ನಾಮಗಳು, ಇತಿ-ಎಂದು, ಶ್ರುತಿಃ-ವೇದವು, ಅವದತ್-('ಸರ್ವಾಣಿ ನಾಮಾನಿ ಯಮಾವಿಶಂತಿ'-ಇತ್ಯಾದಿಶ್ರುತಿಗಳು) ಹೇಳಿತು.

ತತ್ಸೃಷ್ಟ್ವಾ ತತ್ಪ್ರವೇಶೇನ ತನ್ನಾಮಾ ಸರ್ವಲಿಂಗವಾನ್ ॥ ೭೧ ॥
ಯ ಏವೈಕೋಽಖಿಲಶ್ರೇಷ್ಠಃ ಸ ವಿಷ್ಣುಃ ಸರ್ವನಾಮಕಃ ।

---

ಬುದ್ಧನೆನಿಸುವನು; ಸದಾ ಜಯಶೀಲನೂ, ಸರ್ವಸಂಹಾರಕರ್ತನೂ ಆಗಿದ್ದು 'ಜನ' ನಾಮಕನಾಗಿರುವನು; ಕ್ರಿಯಾನಿಮಿತ್ತವಾಗಿ (ಕರ್ಮಭೇದದಿಂದಾಗಿ) ಪುರುಷನು, ಪಾಚಕ, ಪಾಟಕ ಇತ್ಯಾದಿ ನಾಮಗಳುಳ್ಳವನಾಗುವಂತೆ, ಜಗತ್ಸೃಷ್ಟ್ಯಾದಿ ಭಿನ್ನ ಕರ್ಮಗಳಿಂದ ಬ್ರಹ್ಮಾದಿ ಭಿನ್ನ ನಾಮಗಳನ್ನು ಹೊಂದುತ್ತಾನೆ; (ತನ್ನಾಮಕನಾದ ತಾನು, ತಾನೇ ಬ್ರಹ್ಮಾದಿಗಳಿಗೆ ಆ ನಾಮಗಳನ್ನು ಕೊಡುತ್ತಾನೆ); ಬ್ರಹ್ಮಾದಿ ನಾಮಕನಾದ ಶ್ರೀಹರಿಯು, ಸಮಸ್ತ ಕ್ರಿಯಾವಾಚಕ ಶಬ್ದಗಳಿಂದಲೂ ಇತರ ಸಕಲನಾಮಗಳಿಂದಲೂ, ಒಬ್ಬನೇ ಹೇಳಲ್ಪಡುವನೆಂದು, ಶ್ರುತಿಯೂ ಹೇಳಿತು; ಎಲ್ಲ ನಾಮಗಳಿಂದ ಬೋಧ್ಯನಾದವನು ಶ್ರೀಹರಿಯು ಒಬ್ಬನೇ ಎಂಬುದು ಅನಾದಿನಿತ್ಯ ವೇದಗಳಿಂದಲೂ ಸಿದ್ಧವೇ ಇದೆ (೬೯-೭೦). ಸಕಲ ವಸ್ತುಗಳನ್ನು ಸೃಷ್ಟಿಮಾಡಿ, ತಾನೇ

ತತ್ಸೃಷ್ಟ್ವಾ-(ಜಗತ್ತಿನ) ಪ್ರತಿಯೊಂದು ವಸ್ತುವನ್ನೂ ಸೃಷ್ಟಿಸಿ, ತತ್ಪ್ರವೇಶೇನ-ಅದನ್ನು ಪ್ರವೇಶಮಾಡಿದ್ದರಿಂದ, ತನ್ನಾಮಾ-ಆಯಾ ವಸ್ತುವಿನ ನಾಮವುಳ್ಳವನೂ, ಸರ್ವಲಿಂಗವಾನ್-(ಎಲ್ಲ ವಸ್ತುಗಳ) ಸರ್ವಧರ್ಮಗಳುಳ್ಳವನೂ (ಸರ್ವಧರ್ಮ ನಿಯಾಮಕನೂ—ಸರ್ವಶುಭಧರ್ಮಗಳನ್ನೂ ಅಪರಿಮಿತವಾಗಿ ಹೊಂದಿರುವವನೂ), (ಆದ), ಯಃ-ಯಾರು, ಬಲಶ್ರೇಷ್ಠಃ-ಸರ್ವಶಕ್ತಿಯುತನೂ, ಏಕಃ-ಸರ್ವೋತ್ತಮನೂ ಆದವನೋ, ಸಃ-ಆ, ವಿಷ್ಣುಃ-ಶ್ರೀವಿಷ್ಣುವೇ, ಸರ್ವನಾಮಕಃ-ಸರ್ವನಾಮಗಳುಳ್ಳವನು.

**ಅನಾದಿಕರ್ಮಣಾ ಬದ್ಧಾನ್ ಜೀವಾನ್ ಸರ್ವಾಂಶ್ಚ ಸರ್ವದಾ ॥ ೪೨ ॥**
**ನಿಯಚ್ಛತೀತಿ ಸರ್ವೇಷಾಮಾಗಮಾನಾಂ ವಿನಿರ್ಣಯಃ ।**

ಅನಾದಿಕರ್ಮಣಾ-ಅನಾದಿ ಕರ್ಮದಿಂದ, ಬದ್ಧಾನ್-ಬದ್ಧರಾದ, ಸರ್ವಾನ್-ಎಲ್ಲ, ಜೀವಾನ್-ಜೀವರನ್ನು, ಸರ್ವದಾ-ಸರ್ವಕಾಲದಲ್ಲಿ, ನಿಯಚ್ಛತಿ-ನಿಯಮನ ಮಾಡುತ್ತಾನೆ (ತನ್ನ ಇಚ್ಛಾನುಸಾರವಾಗಿ ಪ್ರವರ್ತಿಸುವಂತೆ ಮಾಡುತ್ತಾನೆ), ಇತಿ-ಎಂದು, ಸರ್ವೇಷಾಂ-ಎಲ್ಲ, ಆಗಮಾನಾಂ-ಆಗಮಗಳ (ಶಾಸ್ತ್ರಗಳ), ವಿನಿರ್ಣಯಃ-ವಿಶೇಷವಾದ (ಮಹತಾತ್ಪರ್ಯವಾದ) ನಿರ್ಣಯವಾಗಿದೆ.

**ಅತೋ ನ ಬುದ್ಧಿಭೇದೋಽಸ್ತಿ ಸರ್ವೇಷಾಮಪಿ ವಾದಿನಾಂ ॥ ೪೩ ॥**
**ವ್ಯಾಮೋಹಾತ್ಕಲಹಾಯಂತೇ ವಿಮೂಢಾಸ್ತತ್ವವರ್ತ್ಮನಿ ।**

ಅತಃ-ಈ ಕಾರಣದಿಂದ, ಸರ್ವೇಷಾಂ-ಸಮಸ್ತರಾದ, ವಾದಿನಾಂ ಅಪಿ-ಜ್ಞಾನಿಗಳಿಗೆ (ತತ್ತ್ವವಾದಿಗಳಲ್ಲಿ-ಯಥಾರ್ಥವಾದಿಗಳಲ್ಲಿ), ಬುದ್ಧಿಭೇದಃ-ಬುದ್ಧಿ ಭೇದವು (ಅಭಿಪ್ರಾಯದಲ್ಲಿ ವ್ಯತ್ಯಾಸವು), ನ ಅಸ್ತಿ-ಇರುವುದಿಲ್ಲ; ವಿಮೂಢಾಃ-ಅಜ್ಞಾನಿಗಳು, ವ್ಯಾಮೋಹಾತ್-ವ್ಯಾಮೋಹದಿಂದ (ಮೋಹಿತರಾಗಿ), ತತ್ತ್ವವರ್ತ್ಮನಿ-ತತ್ತ್ವಮಾರ್ಗ

---

ಅವುಗಳನ್ನು ಪ್ರವೇಶಿಸಿ, ಆ ಸರ್ವವಸ್ತುಗಳ ಸರ್ವಸ್ವಭಾವ ಧರ್ಮಗಳ ನಿಯಾಮಕನಾಗಿರುವುದರಿಂದ, ಸರ್ವಶಕ್ತನಾದ ಆ ಶ್ರೀ ವಿಷ್ಣುವು ಸರ್ವನಾಮಕನಾಗಿದ್ದಾನೆ; ಆಯಾ ನಾಮಬೋಧ್ಯವಾದ ಸಕಲ ಶುಭ ಧರ್ಮಗಳನ್ನು ಪೂರ್ಣವಾಗಿ ಉಳ್ಳವನಾದ್ದರಿಂದ ಆತನೇ ಸರ್ವೋತ್ತಮನು (೪೧). ಅನಾದಿಕರ್ಮದಿಂದ ಬದ್ಧರಾದ ಸರ್ವಜೀವರನ್ನು ಸರ್ವದಾ ನಿಯಮನ ಮಾಡುವವನೆಂಬುದು ಸರ್ವಶಾಸ್ತ್ರಗಳ ಮಹಾನಿರ್ಣಯವಾಗಿದೆ (೪೨). ಈ ಕಾರಣದಿಂದ ಜ್ಞಾನಿಗಳಲ್ಲಿ ಈ ವಿಷಯದಲ್ಲಿ ಪರಸ್ಪರ ಭಿನ್ನಾಭಿಪ್ರಾಯಲೇಶವೂ ಇರುವುದಿಲ್ಲ; ಅಜ್ಞಾನಿಗಳು, ತತ್ತ್ವಮಾರ್ಗದಲ್ಲಿ (ಸತ್ಯಾನ್ವೇಷಣ ಮಾರ್ಗದಲ್ಲಿರುವಾಗ) ಬುದ್ಧಿ ಮೋಹದಿಂದ ಕಲಹಮಾಡುತ್ತಾರೆ (ವ್ಯರ್ಥವಾದ ವಿವಾದಗಳಲ್ಲಿ ತೊಡಗುತ್ತಾರೆ) (೪೩). ಸಮಸ್ತ ಲೌಕಿಕ ವೈದಿಕ ಶಬ್ದಗಳೂ ಪ್ರತ್ಯೇಕವಾಗಿ (ಪ್ರತಿಯೊಂದೂ) ಅನೇಕಾರ್ಥಗಳನ್ನು

ಮುಖ್ಯಸ್ವಾರ್ಥಾಹರೇರೇವ ನಾಮಾನೀತ್ಯವದಚ್ಛ್ರುತಿಃ ।
ಬುದ್ಧೋ ಬೋಧಸ್ವರೂಪತ್ವಾಜ್ಜಯಾತ್ಸಂಹರಣಾಜ್ಜನಃ ।
ಪಾಚಕಃಪಾಟಕೋಽಯದ್ವತ್ಕ್ರಿಯಾಭೇದಾತ್ಪುಮಾನ್ ಭವೇತ್ ॥ ೩೯ ॥
ತಥಾ ಸೃಷ್ಟ್ಯಾದಿಯೋಗಾತ್ಸ ಏಕೋ ಬ್ರಹ್ಮಾದಿನಾಮಕಃ ।
ಏವಂ ಯಾವಂತಿ ನಾಮಾನಿ ಕ್ರಿಯಾಶಬ್ದಾಶ್ಚ ಸರ್ವಶಃ ॥ ೪೦ ॥

ಬೋಧಸ್ವರೂಪತ್ವಾತ್-ಜ್ಞಾನಸ್ವರೂಪನಾದ್ದರಿಂದ, ಬುದ್ಧ-ಬುದ್ಧನಾಮಕನು; ಜಯಾತ್-(ಸರ್ವದಾ) ಜಯಶಾಲಿಯಾದ್ದರಿಂದಲೂ, ಸಂಹರಣಾತ್-(ಸರ್ವ) ಸಂಹಾರಕನಾದ್ದರಿಂದಲೂ, ಜನಃ-ಜನನೆನಿಸುವನು; ಯದ್ವತ್-ಹೇಗೆ, ಕ್ರಿಯಾ ಭೇದಾತ್-ಕರ್ಮಭೇದದಿಂದ, ಪುಮಾನ್-ಪುರುಷನು, ಪಾಚಕಃ ಪಾಟಕಃ- ಪಾಚಕ ಪಾಟಕ (ಬೇಯಿಸುವವನು, ಒಡೆಯುವವನು) ಎಂದು, ಭವೇತ್-ಕರೆಯಲ್ಪಡು ವನೋ, ತಥಾ-ಹಾಗೆಯೇ, ಸಃ-ಶ್ರೀಹರಿಯು, ಏಕಃ-ಒಬ್ಬನೇ, ಸೃಷ್ಟ್ಯಾದಿ ಯೋಗಾತ್-ಸೃಷ್ಟಿ ಮೊದಲಾದ ತನ್ನ ವಿವಿಧ ಕರ್ಮಗಳಿಂದ, ಬ್ರಹ್ಮಾದಿನಾಮಕಃ-ಬ್ರಹ್ಮ ಮೊದಲಾದ ನಾಮಗಳುಳ್ಳವನಾಗುತ್ತಾನೆ; ಏವಂ-ಹೀಗೆಯೇ, ಯಾವಂತಿ ನಾಮಾನಿ-ಎಷ್ಟು ನಾಮಗಳಿವೆಯೋ ಎಲ್ಲವೂ, ಚ-ಮತ್ತು ಸರ್ವಶಃ-ಸಮಸ್ತ ಕ್ರಿಯಾಶಬ್ದಾಃ-ಕ್ರಿಯಾವಾಚಕ ಶಬ್ದಗಳೂ ಹರೇಃ ಏವ-ಶ್ರೀಹರಿಗೇ (ಅನ್ವಯಿಸುವ), ಮುಖ್ಯಸ್ವಾರ್ಥಾಃ-ಮುಖ್ಯವಾದ ತಮ್ಮ ಅರ್ಥಗಳುಳ್ಳ, ನಾಮಾನಿ-ನಾಮಗಳು, ಇತಿ-ಎಂದು, ಶ್ರುತಿಃ-ವೇದವು, ಅವದತ್-('ಸರ್ವಾಣಿ ನಾಮಾನಿ ಯಮಾವಿಶಂತಿ'-ಇತ್ಯಾದಿಶ್ರುತಿಗಳು) ಹೇಳಿತು.

ತತ್ಸೃಷ್ಟ್ಯಾ ತತ್ಪ್ರವೇಶೇನ ತನ್ನಾಮಾ ಸರ್ವಲಿಂಗವಾನ್ ॥ ೪೧ ॥
ಯ ಏವೈಕೋಽಖಿಲಶ್ರೇಷ್ಠಃ ಸ ವಿಷ್ಣುಃ ಸರ್ವನಾಮಕಃ ।

---

ಬುದ್ಧನೆನಿಸುವನು; ಸದಾ ಜಯಶೀಲನೂ, ಸರ್ವಸಂಹಾರಕರ್ತನೂ ಆಗಿದ್ದು 'ಜನ' ನಾಮಕನಾಗಿರುವನು; ಕ್ರಿಯಾನಿಮಿತ್ತವಾಗಿ (ಕರ್ಮಭೇದದಿಂದಾಗಿ) ಪುರುಷನು, ಪಾಚಕ, ಪಾಟಕ ಇತ್ಯಾದಿ ನಾಮಗಳುಳ್ಳವನಾಗುವಂತೆ, ಜಗತ್ಸೃಷ್ಟ್ಯಾದಿ ಭಿನ್ನ ಕರ್ಮಗಳಿಂದ ಬ್ರಹ್ಮಾದಿ ಭಿನ್ನ ನಾಮಗಳನ್ನು ಹೊಂದುತ್ತಾನೆ; (ತನ್ನಾಮಕನಾದ ತಾನು, ತಾನೇ ಬ್ರಹ್ಮಾದಿಗಳಿಗೆ ಆ ನಾಮಗಳನ್ನು ಕೊಡುತ್ತಾನೆ); ಬ್ರಹ್ಮಾದಿ ನಾಮಕನಾದ ಶ್ರೀಹರಿಯು, ಸಮಸ್ತ ಕ್ರಿಯಾವಾಚಕ ಶಬ್ದಗಳಿಂದಲೂ ಇತರ ಸಕಲನಾಮ ಗಳಿಂದಲೂ, ಒಬ್ಬನೇ ಹೇಳಲ್ಪಡುವನೆಂದು, ಶ್ರುತಿಯೂ ಹೇಳಿತು; ಎಲ್ಲ ನಾಮಗಳಿಂದ ಬೋಧ್ಯನಾದವನು ಶ್ರೀಹರಿಯು ಒಬ್ಬನೇ ಎಂಬುದು ಅನಾದಿನಿತ್ಯ ವೇದಗಳಿಂದಲೂ ಸಿದ್ಧವೇ ಇದೆ (೩೯-೪೦). ಸಕಲ ವಸ್ತುಗಳನ್ನು ಸೃಷ್ಟಿಮಾಡಿ, ತಾನೇ

ತತ್ಸೃಷ್ಟ್ವಾ-(ಜಗತ್ತಿನ) ಪ್ರತಿಯೊಂದು ವಸ್ತುವನ್ನೂ ಸೃಷ್ಟಿಸಿ, ತತ್ಪ್ರವೇಶೇನ-ಅದನ್ನು ಪ್ರವೇಶಮಾಡಿದ್ದರಿಂದ, ತನ್ನಾಮಾ-ಆಯಾ ವಸ್ತುವಿನ ನಾಮವುಳ್ಳವನೂ, ಸರ್ವಲಿಂಗವಾನ್-(ಎಲ್ಲ ವಸ್ತುಗಳ) ಸರ್ವಧರ್ಮಗಳುಳ್ಳವನೂ (ಸರ್ವಧರ್ಮ ನಿಯಾಮಕನೂ—ಸರ್ವಶುಭಧರ್ಮಗಳನ್ನೂ ಅಪರಿಮಿತವಾಗಿ ಹೊಂದಿರುವವನೂ), (ಆದ), ಯಃ-ಯಾರು, ಬಲಶ್ರೇಷ್ಠಃ-ಸರ್ವಶಕ್ತಿಯುತನೂ, ಏಕಃ-ಸರ್ವೋತ್ತಮನೂ ಆದವನೋ, ಸಃ-ಆ, ವಿಷ್ಣುಃ-ಶ್ರೀವಿಷ್ಣುವೇ, ಸರ್ವನಾಮಕಃ-ಸರ್ವನಾಮಗಳುಳ್ಳವನು.

**ಅನಾದಿಕರ್ಮಣಾ ಬದ್ಧಾನ್ ಜೀವಾನ್ ಸರ್ವಾಂಶ್ಚ ಸರ್ವದಾ ॥ ೪೨ ॥**
**ನಿಯಚ್ಛತೀತಿ ಸರ್ವೇಷಾಮಾಗಮಾನಾಂ ವಿನಿರ್ಣಯಃ ।**

ಅನಾದಿಕರ್ಮಣಾ-ಅನಾದಿ ಕರ್ಮದಿಂದ, ಬದ್ಧಾನ್-ಬದ್ಧರಾದ, ಸರ್ವಾನ್-ಎಲ್ಲ ಜೀವಾನ್-ಜೀವರನ್ನು, ಸರ್ವದಾ-ಸರ್ವಕಾಲದಲ್ಲಿ, ನಿಯಚ್ಛತಿ-ನಿಯಮನ ಮಾಡುತ್ತಾನೆ (ತನ್ನ ಇಚ್ಛಾನುಸಾರವಾಗಿ ಪ್ರವರ್ತಿಸುವಂತೆ ಮಾಡುತ್ತಾನೆ), ಇತಿ-ಎಂದು, ಸರ್ವೇಷಾಂ-ಎಲ್ಲ ಆಗಮಾನಾಂ-ಆಗಮಗಳ (ಶಾಸ್ತ್ರಗಳ), ವಿನಿರ್ಣಯಃ-ವಿಶೇಷವಾದ (ಮಹತಾತ್ಪರ್ಯವಾದ) ನಿರ್ಣಯವಾಗಿದೆ.

**ಅತೋ ನ ಬುದ್ಧಿಭೇದೋಽಸ್ತಿ ಸರ್ವೇಷಾಮಪಿ ವಾದಿನಾಂ ॥ ೪೩ ॥**
**ವ್ಯಾಮೋಹಾತ್‌ಕಲಹಾಯಂತೇ ವಿಮೂಢಾಸ್ತತ್ವವರ್ತ್ಮನಿ ।**

ಅತಃ-ಈ ಕಾರಣದಿಂದ, ಸರ್ವೇಷಾಂ-ಸಮಸ್ತರಾದ, ವಾದಿನಾಂ ಅಪಿ-ಜ್ಞಾನಿಗಳಿಗೆ (ತತ್ತ್ವವಾದಿಗಳಲ್ಲಿ-ಯಥಾರ್ಥವಾದಿಗಳಲ್ಲಿ), ಬುದ್ಧಿಭೇದಃ-ಬುದ್ಧಿ ಭೇದವು (ಅಭಿಪ್ರಾಯದಲ್ಲಿ ವ್ಯತ್ಯಾಸವು), ನ ಅಸ್ತಿ-ಇರುವುದಿಲ್ಲ. ವಿಮೂಢಾಃ-ಅಜ್ಞಾನಿಗಳು, ವ್ಯಾಮೋಹಾತ್-ವ್ಯಾಮೋಹದಿಂದ (ಮೋಹಿತರಾಗಿ), ತತ್ವವರ್ತ್ಮನಿ-ತತ್ತ್ವಮಾರ್ಗ

---

ವಸ್ತುಗಳನ್ನು ಪ್ರವೇಶಿಸಿ, ಆ ಸರ್ವವಸ್ತುಗಳ ಸರ್ವಸ್ವಭಾವ ಧರ್ಮಗಳ ನಿಯಾಮಕನಾಗಿರುವುದರಿಂದ, ಸರ್ವಶಕ್ತನಾದ ಆ ಶ್ರೀ ವಿಷ್ಣುವು ಸರ್ವನಾಮಕನಾಗಿದ್ದಾನೆ; ಆಯಾ ನಾಮಬೋಧ್ಯವಾದ ಸಕಲ ಶುಭ ಧರ್ಮಗಳನ್ನು ಪೂರ್ಣವಾಗಿ ಉಳ್ಳವನಾದ್ದರಿಂದ ಆತನೇ ಸರ್ವೋತ್ತಮನು (೪೧). ಅನಾದಿಕರ್ಮದಿಂದ ಬದ್ಧರಾದ ಸರ್ವಜೀವರನ್ನು ಸರ್ವದಾ ನಿಯಮನ ಮಾಡುವವನೆಂಬುದು ಸರ್ವಶಾಸ್ತ್ರಗಳ ಮಹಾನಿರ್ಣಯವಾಗಿದೆ (೪೨). ಈ ಕಾರಣದಿಂದ ಜ್ಞಾನಿಗಳಲ್ಲಿ ಈ ವಿಷಯದಲ್ಲಿ ಪರಸ್ಪರ ಭಿನ್ನಾಭಿಪ್ರಾಯಲೇಶವೂ ಇರುವುದಿಲ್ಲ. ಅಜ್ಞಾನಿಗಳು, ತತ್ತ್ವಮಾರ್ಗದಲ್ಲಿ (ಸತ್ಯಾನ್ವೇಷಣ ಮಾರ್ಗದಲ್ಲಿರುವಾಗ) ಬುದ್ಧಿ ಮೋಹದಿಂದ ಕಲಹಮಾಡುತ್ತಾರೆ (ವ್ಯರ್ಥವಾದ ವಿವಾದಗಳಲ್ಲಿ ತೊಡಗುತ್ತಾರೆ) (೪೩). ಸಮಸ್ತ ಲೌಕಿಕ ವೈದಿಕ ಶಬ್ದಗಳೂ ಪ್ರತ್ಯೇಕವಾಗಿ (ಪ್ರತಿಯೊಂದೂ) ಅನೇಕಾರ್ಥಗಳನ್ನು

ದಲ್ಲಿ (ಸತ್ಯಜ್ಞಾನಕ್ಕಾಗಿ ಯತ್ನಿಸುವಲ್ಲಿ), ಕಲಹಾಯಂತೇ-ಕಲಹಮಾಡುತ್ತಾರೆ. (ವಿರುದ್ಧಗಳಾದ ಭಿನ್ನಾಭಿಪ್ರಾಯಗಳುಳ್ಳವರಾಗುತ್ತಾರೆ).

**ಲೌಕಿಕಾ ವೈದಿಕಾಃ ಶಬ್ದಾಃ ಪ್ರತ್ಯೇಕಮಪಿ ಸರ್ವಶಃ ॥ ೪೪ ॥**

**ಬಹುಧಾರ್ಥಾಭಿಧಾತಾರೋ ಮುಖ್ಯತಃ ಪರಮೇಶ್ವರೇ ।**

**ಕೇಚಿದರ್ಥಾಸ್ತು ಕೇಷಾಂಚಿತ್ ಪ್ರವೃತ್ತ್ಯರ್ಥಂ ಪ್ರದರ್ಶಿತಾಃ ॥ ೪೫ ॥**

ಲೌಕಿಕಾಃ-ಲೌಕಿಕವಾದ (ಲೋಕವ್ಯವಹಾರಕ್ಕಾಗಿ ಉಪಯೋಗಿಸಲ್ಪಡುವ), ವೈದಿಕಾಃ-ವೈದಿಕವಾದ (ಆಗಮಗಳಲ್ಲಿ ಶಾಸ್ತ್ರವಿಷಯಪ್ರತಿಪಾದನೆಗಾಗಿ ಉಪಯೋಗಿಸಲ್ಪಡುವ), ಶಬ್ದಾಃ-ಶಬ್ದಗಳು, ಸರ್ವಶಃ ಅಪಿ-ಎಲ್ಲವೂ ಸಹ, ಬಹುಧಾ-ಬಹುಪ್ರಕಾರದ, ಅರ್ಥಾಭಿಧಾತಾರಃ-ಅರ್ಥಗಳನ್ನು ಹೇಳುತ್ತವೆ; ಮುಖ್ಯತಃ-ಮುಖ್ಯವಾಗಿ, ಪರಮೇಶ್ವರೇ-ಸರ್ವನಿಯಾಮಕನಾದ ಶ್ರೀವಿಷ್ಣುವಿನಲ್ಲಿಯೇ (ತಾತ್ಪರ್ಯವುಳ್ಳವುಗಳಾಗಿರುತ್ತವೆ); ಕೇಷಾಂಚಿತ್-ಕೆಲವು ಶಬ್ದಗಳ, ಕೇಚಿದರ್ಥಾಃ- ಕೆಲವು ಅರ್ಥಗಳು (ಮಾತ್ರ), ಪ್ರವೃತ್ತ್ಯರ್ಥಂ-(ಎಲ್ಲ ಶಬ್ದಗಳೂ ಶ್ರೀವಿಷ್ಣುವನ್ನು ಪ್ರತಿಪಾದಿಸುವ) ಮುಖ್ಯ ಪ್ರವೃತ್ತಿಯುಳ್ಳವುಗಳೆಂಬರ್ಥವನ್ನು ತಿಳಿಸಲು, ಪ್ರದರ್ಶಿತಾಃ-(ನಿದರ್ಶನಾರ್ಥವಾಗಿ) ತೋರಿಸಲ್ಪಟ್ಟವು (ಹೇಳಲ್ಪಟ್ಟವು).

**ಮುಮುಕ್ಷುರ್ಭಾವಯೇದ್ವಿಷ್ಣುಂ ಸದಾ ಸರ್ವತ್ರ ವಸ್ತುಷು ।**

**ತತ್ತಚ್ಛಬ್ದಾರ್ಥಗುಣೈರ್ನಂ ಸ್ವತಂತ್ರಂ ಚ ನಿಯಾಮಕಂ ॥ ೪೬ ॥**

**ಪರಾಭೂಯೇತ ನ ಕ್ವಾಪಿ ಸುದುಃಖೈರ್ಬಹುಲೈರಪಿ ।**

**ಏವಂ ಸ ಧ್ಯಾನಯೋಗೇನ ಬಹಿರಂತಶ್ಚ ಸರ್ವದಾ ॥ ೪೭ ॥**

**ಮುಕ್ತೇಃ ಕರಗತತ್ವೇನ ಮುಕ್ತ ಏವ ಹಿ ಸ ಸ್ಮೃತಃ ।**

ಮುಮುಕ್ಷುಃ-ಮೋಕ್ಷಾಪೇಕ್ಷಿಯು, ಸದಾ-ಎಲ್ಲ ಕಾಲದಲ್ಲಿ, ಸರ್ವತ್ರ-ಎಲ್ಲ ದೇಶದಲ್ಲಿ, ವಸ್ತುಷು-(ಇರುವ) ಸರ್ವವಸ್ತುಗಳಲ್ಲಿ, ತತ್ತತ್-ಆಯಾ, ಶಬ್ದಾರ್ಥ

---

ಹೇಳುತ್ತಿದ್ದರೂ, ಅವೆಲ್ಲವೂ ಮುಖ್ಯವಾಗಿ ಸರ್ವನಿಯಾಮಕನಾದ ಶ್ರೀಹರಿಯಲ್ಲಿಯೇ ತಾತ್ಪರ್ಯವುಳ್ಳವುಗಳಾಗಿರುತ್ತವೆ; ಮುಖ್ಯವೃತ್ತಿಯಿಂದ ಆತನನ್ನೇ ಹೇಳುತ್ತವೆ; ಹೀಗೆ ಸರ್ವಶಬ್ದಗಳ ಮುಖ್ಯವೃತ್ತಿಯನ್ನು ಪ್ರದರ್ಶನಮಾಡುವುದಕ್ಕಾಗಿ, ಈವರೆಗೆ ಕೆಲವು ಶಬ್ದಗಳ ಕೆಲವು ಅರ್ಥಗಳನ್ನು ಮಾತ್ರ ನಿರೂಪಿಸಲಾಯಿತು (೪೪-೪೫). ಮೋಕ್ಷಾಪೇಕ್ಷಿಯು (ಮುಕ್ತಿಯನ್ನಿಚ್ಛಿಸುವವನು) ಸದಾ ಸರ್ವತ್ರ ಸರ್ವವಸ್ತುಗಳಲ್ಲಿ ಆಯಾ ವಸ್ತುವಾಚಕ ಶಬ್ದಗಳಿಂದ ಬೋಧ್ಯವಾದ ಗುಣಗಳಿಂದ ಪೂರ್ಣನೂ ವಸ್ತುಗತ ಗುಣಗಳ ನಿಯಾಮಕನೂ, ಅನ್ಯನಿಯಾಮಕನಿಲ್ಲದ ಸ್ವತಂತ್ರನೂ ಆದ ಶ್ರೀವಿಷ್ಣುವನ್ನೇ ಚಿಂತಿಸುತ್ತ ಭಕ್ತಿಯ ವೃದ್ಧಿಯನ್ನು ಸಾಧಿಸಬೇಕು; ಈ ಯತ್ನದಲ್ಲಿ ತೊಡಗಿದ ಜೀವನು

ಗುಣಿನಂ-ಶಬ್ದಬೋಧ್ಯ ಗುಣವುಳ್ಳ, ಸ್ವತಂತ್ರಂ-ಸ್ವತಂತ್ರನಾದ (ಅನ್ಯ ನಿಯಾಮಕ ನಿಲ್ಲದ), ನಿಯಾಮಕಂ-ಸರ್ವನಿಯಾಮಕನಾದ, ವಿಷ್ಣುಂ-ಶ್ರೀವಿಷ್ಣುವನ್ನು, ಭಾವಯೇತ್-ಚಿಂತಿಸಬೇಕು (ಈ ಮಹಿಮೆಯ ಧ್ಯಾನದಿಂದ ಭಕ್ತಿಯುಳ್ಳವನಾಗ ಬೇಕು); ಬಹುಲೈಃ-ಬಹಳವಾದ, ಸುದುಃಖೈಃ ಅಪಿ-ಅತಿದುಃಖಗಳಿಂದಲೂ, ಕ್ವಾಪಿ-ಎಲ್ಲಿಯೂ (ಯಾವ ಸಂದರ್ಭದಲ್ಲಿಯೂ), ನ ಪರಾಭೂಯೇತ-(ಈ ಪ್ರಕಾರದ ಚಿಂತನೆಯಿಂದ) ತಿರಸ್ಕೃತನಾಗಬಾರದು (ತ್ಯಜಿಸಿ, ಸೋಲಬಾರದು-ಆ ಯತ್ನದಲ್ಲಿ ಅಪಜಯವನ್ನು ಹೊಂದಬಾರದು); ಏವಂ-ಹೀಗೆ, ಸಃ-ಆ ಮುಮುಕ್ಷುವು, ಬಹಿಃ-ಹೊರಗೂ, ಅಂತಶ್ಚ-ಒಳಗೂ, ಸರ್ವದಾ-ಎಲ್ಲ ಕಾಲದಲ್ಲಿ, ಧ್ಯಾನಯೋಗೇನ-ಧ್ಯಾನಪ್ರಭಾವದಿಂದ (ಚಿಂತಿಸುವುದೆಂಬ ಸಾಧನದಿಂದ), ಮುಕ್ತೇಃ-ಮೋಕ್ಷದ, ಕರಗತತ್ವೇನ-ಕೈಸೇರಿದಂತೆ ಆಗುವುದರಿಂದ, ಮುಕ್ತಿಯು ಕೈಯಲ್ಲಿದ್ದವನಂತಿರುವು ದರಿಂದ), ಮುಕ್ತಃ ಏವ-ಮುಕ್ತನೇ ಎಂದು (ಜೀವನ್ಮುಕ್ತನೆಂದೇ), ಸಃ ಸ್ಮೃತಃ-ಆತನು (ಜ್ಞಾನಿಗಳಿಂದ) ತಿಳಿಯಲ್ಪಡುವನು.

**ಮಹಿಮಾನಂ ಭಗವತೋ ಯ ಏವಂ ಪ್ರಯತೋ ನರಃ ॥ ೪೮ ॥**
**ಶೃಣುತೇ ಪಠತೇ ನಿತ್ಯಂ ಕರ್ಮಬಂಧಾತ್ಸ ಮುಚ್ಯತೇ ।**

ಯಃ ನರಃ-ಯಾವ ಜೀವನು (ಅಧಿಕಾರಿಯು), ಪ್ರಯತಃ-ಯತ್ನಪೂರ್ವಕ ವಾಗಿ, ಭಗವತಃ-ಶ್ರೀಹರಿಯ, ಏವಂ-ಈ ಪ್ರಕಾರದ, ಮಹಿಮಾನಂ-ಮಹಿಮೆ ಯನ್ನು ಶೃಣುತೇ-ಶ್ರವಣಮಾಡುವನೋ, ನಿತ್ಯಂ-ನಿತ್ಯವೂ, ಪಠತೇ-ಪಠನ ಮಾಡುವನೋ, ಸಃ-ಆತನು, ಕರ್ಮಬಂಧಾತ್-ಕರ್ಮಬಂಧದಿಂದ, ಮುಚ್ಯತೇ-ಮುಕ್ತನಾಗುತ್ತಾನೆ.

**ಮುಮುಕ್ಷೋರೇತದೇವಾಲಂ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ॥ ೪೯ ॥**
**ನಾಲಮೇತದ್ಬವೇದ್ಯಸ್ಯ ತಸ್ಯ ಸರ್ವಾಗಮೈಶ್ಚ ಕಿಂ ॥ ೫೦ ॥**

ಮುಮುಕ್ಷೋಃ-ಮೋಕ್ಷಾಪೇಕ್ಷೆಯುಳ್ಳವನಿಗೆ, ಏತದೇವ-ಇಷ್ಟುಮಾತ್ರವೇ

---

ತನ್ನ ಪ್ರಾಪ್ತವಾಗುವ, ನಾನಾದುಃಖಗಳಿಂದ ಎಂದೂ, ಪರಾಭವಗೊಳ್ಳಬಾರದು; ಹೀಗೆ, ಒಳಹೊರಗೆ ವ್ಯಾಪ್ತನಾದ ಶ್ರೀಹರಿಯನ್ನು ಸರ್ವದಾ ಚಿಂತಿಸುವವನಿಗೆ ಮುಕ್ತಿಯು ಕರಗತವಾದಂತೆಯೇ ಸರಿ; ಇಂಥವನನ್ನು ಜ್ಞಾನಿಗಳು ಮುಕ್ತನೆಂದೇ ತಿಳಿಯುವರು (ಆತನೇ ಜೀವನ್ಮುಕ್ತನು—ಭೌತಿಕ ದೇಹದಲ್ಲಿದ್ದರೂ ಮುಕ್ತನೇ ಸರಿ) (೪೬-೪೭). ಯಾವ ಮನುಷ್ಯನು ಯತ್ನಪೂರ್ವಕವಾಗಿ, ಶ್ರೀವಿಷ್ಣುವಿನ ಈ ಮಹಿಮೆಯನ್ನು ಶ್ರವಣಮಾಡುವನೋ, ನಿತ್ಯವೂ ಪಠನಮಾಡುವನೋ, ಆತನು ಕರ್ಮಬಂಧದಿಂದ ಮುಕ್ತನಾಗುತ್ತಾನೆ (೪೮). ಸರ್ವದಾ, ಸರ್ವತ್ರ ಶ್ರೀಹರಿಯನ್ನು ಭಕ್ತಿಯಿಂದ ಭಾವಿಸುವುದೆಂಬ ಈ ಪ್ರಮೇಯ ಜ್ಞಾನವು, ಮುಮುಕ್ಷುವಿಗೆ,

(ಸರ್ವದಾ ಸರ್ವತ್ರ ಶ್ರೀಹರಿಚಿಂತನವೆಂಬ ಇಷ್ಟುಮಾತ್ರ). ಅಲಂ-(ಮೋಕ್ಷಪ್ರಾಪ್ತಿಗೆ) ಸಾಕಾಗುವುದು (ಸಾಕಷ್ಟು ಸಾಧನೆಯನ್ನೊದಗಿಸುತ್ತದೆ); ಅನ್ಯೈಃ-ಬೇರೆಯಾದ, ಶಾಸ್ತ್ರಸಂಗ್ರಹೈಃ-ಶಾಸ್ತ್ರಸಂಗ್ರಹಗಳಿಂದ (ಶಾಸ್ತ್ರವಿಷಯಗಳನ್ನು ಏಕತ್ರಸೇರಿಸಿ ಮಾಡುವ ನಿರೂಪಣೆಗಳಿಂದ), ಕಿಂ-ಏನು ಅಧಿಕ ಪ್ರಯೋಜನ? (ಅವಶ್ಯಕವಿಲ್ಲೆಂದರ್ಥ): ಯಸ್ಯ-ಯಾರಿಗೆ, ಏತತ್-ಇದು (ಈ ಪ್ರಮೇಯದ ಜ್ಞಾನವು), ಅಲಂ-ಸಾಕಷ್ಟು (ಅಪೇಕ್ಷಿತ ಫಲ ಪ್ರಾಪ್ತಿಗೆ ಪರ್ಯಾಪ್ತವಾದುದು), ನ ಭವೇತ್-ಆಗುವುದಿಲ್ಲವೋ, ತಸ್ಯ-ಆತನಿಗೆ, ಸರ್ವಾಗಮೈಃ ಚ-ಸಕಲಶಾಸ್ತ್ರಗಳಿಂದ ಸಹ, ಕಿಂ-ಏನಾಗುತಕ್ಕದ್ದಿದೆ? (ಅಪೇಕ್ಷಿತ ಫಲವು, ದೊರೆಯಲಾರದು).

ಭಗವನ್ನಾಮ ನಿರ್ವಚನವೆಂಬ ೪೨ನೇ ಅಧ್ಯಾಯವು ಮುಗಿರುದು.

## ಅಧ್ಯಾಯ ೪೩

ಶ್ರೀ ವೇದವ್ಯಾಸಾಯ ನಮಃ

**ಸಂವರ್ತ ಉವಾಚ—**

**ಅಲ್ಪೇನೈವ ನಿಮಿತ್ತೇನ ಮಹತ್ಫಲವಿಪರ್ಯಯಃ ।**
**ಸುಶ್ರೀಕಸ್ಯ ಸುಕಾಂತಸ್ಯ ಶ್ರದ್ಧೇಯಂ ತತ್ಕಥಂ ಹಿ ನಃ ॥ ೧ ॥**
**ಯೇ ನಿರ್ಧನಾಃ ಸ್ವಯಂ ವಿಪ್ರಾಸ್ತೇಷಾಂ ತೋಷಾತ್ಕಥಂ ನೃಣಾಂ ।**
**ಸಂಪದೋ ವಿಪದೋ ರೋಷಾತ್ಸಂಭವೇತ್ತತ್ಕಥಂ ವದ ॥ ೨ ॥**

---

ಪುರುಷಾರ್ಥ (ಮೋಕ್ಷ) ಪ್ರಾಪ್ತಿಗೆ ಸಾಕಾಗುತ್ತದೆ (ಮುಕ್ತಿಯನ್ನು ದೊರಕಿಸಲು ಸಮರ್ಥವಾಗುತ್ತದೆ); ಅನ್ಯಶಾಸ್ತ್ರ ಸಂಗ್ರಹಗಳಿಂದಾಗಬೇಕಾದ ಅಧಿಕ ಪ್ರಯೋಜನ ವಾವುದೂ ಇರುವುದಿಲ್ಲ; ಈ ಜ್ಞಾನ ನಿಶ್ಚಯವು ಯಾವ ಮುಮುಕ್ಷುವಿಗೆ ಸಾಲದೋ (ಫಲಪ್ರಾಪ್ತಿಗೆ ಅವಶ್ಯಕವಾದ ಸಿದ್ಧತೆಯನ್ನೊದಗಿಸುವುದಿಲ್ಲವೋ), ಆತನಿಗೆ, ಸಕಲಶಾಸ್ತ್ರಗಳಿಂದ ಸಾಧಿಸಬೇಕಾದ ಅಧಿಕ ಪ್ರಯೋಜನವಿರುವುದಿಲ್ಲ (೪೯-೫೦).

ಳ೨ನೇ ಅಧ್ಯಾಯವು ಮುಗಿದುದು.

### ಅಧ್ಯಾಯ ೪೩

**ತಾತ್ಪರ್ಯ**—ಸಂವರ್ತನು ಪ್ರಶ್ನಿಸುತ್ತಾನೆ:—ಸುಶ್ರೀಕ ಮತ್ತು ಸುಕಾಂತನಿಗೆ ತಮ್ಮ ಪೂರ್ವಕರ್ಮಾನುಸಾರವಾಗಿ ಆ ಕಾಲದಲ್ಲಿ ಲಭಿಸಬೇಕಾಗಿದ್ದ ಮಹಾಫಲಗಳಲ್ಲಿ

ಅರ್ಥ:—ಸಂವರ್ತನು ಪ್ರಶ್ನಿಸುತ್ತಾನೆ:—ಸುತ್ರೀಣಸ್ಯ-ಸುತ್ರೀಣನಿಗೂ, ಸುಕಾಂತಸ್ಯ-ಸುಕಾಂತನಿಗೂ, ಅಲ್ಪೇನ-ಅಲ್ಪವಾದ (ಕ್ಷುದ್ರವಾದ), ನಿಮಿತ್ತೇನ ಏವ-ನಿಮಿತ್ತದಿಂದಲೇ (ಕಾರಣದಿಂದಲೇ), ಮಹತ್ಫಲ ವಿಪರ್ಯಯಃ-(ಅವರಿಗೆ ಪೂರ್ವಕರ್ಮಾನುಸಾರ ಆಗ ದೊರೆಯಲಿದ್ದ) ಮಹತ್ಫಲದಲ್ಲಿ ವ್ಯತ್ಯಾಸವಾಗಿ ಅಲ್ಪ ಫಲಗಳು ದೊರೆತವೆಂಬುದು, ನಃ-ನಮಗೆ, ಶ್ರದ್ಧೇಯಂ-ನಂಬಲರ್ಹವಾದುದು, ಕಥಂ-ಹೇಗೆ ಆಗುತ್ತದೆ? ಹಿ-ಆಶ್ಚರ್ಯವು! ಯೇ-ಯಾವ, ವಿಪ್ರಾಃ-ಬ್ರಾಹ್ಮಣರು, ಸ್ವಯಂ-ತಾವೇ, ನಿರ್ಧನಾಃ-ದರಿದ್ರರೋ, ತೇಷಾಂ-ಅವರ, ತೋಷಾತ್-ಸಂತೋಷದಿಂದ (ಅವರನ್ನು ತೃಪ್ತಿಗೊಳಿಸುವುದರಿಂದ), ನೃಣಾಂ-ಮನುಷ್ಯರಿಗೆ, ಕಥಂ-ಹೇಗೆ, ಸಂಪದಃ-ವಿವಿಧ ಸಂಪತ್ತುಗಳೂ (ಧನಪ್ರಾಪ್ತಿ ಮೊದಲಾದ ಶ್ರೇಯಸ್ಸುಗಳೂ), (ತೇಷಾಂ-ಆ ಬ್ರಾಹ್ಮಣರ), ರೋಷಾತ್-ಕೋಪದಿಂದ, ವಿಪದಃ-ವಿಪತ್ತುಗಳೂ (ಅನರ್ಥಗಳೂ), ಭವೇತ್-ಉಂಟಾಗುವುದು? ತತ್-ಅದನ್ನು ವದ-ಹೇಳುವವನಾಗು.

ಸೂತ ಉವಾಚ—

**ಪಕ್ವಂ ಫಲಂ ಯಥಾ ವೃಕ್ಷಾದ್ವಾತಾದಿ ಸಹಕಾರಿಣಾ ।**
**ಕುತ್ರಚಿದ್ವಿಧಾಪೇಕ್ಷಾ ದೃಷ್ಟಸ್ಯೈವ ಹಿ ಕುತ್ರಚಿತ್ ॥ ೩ ॥**
**ಅದೃಷ್ಟಸ್ಯೈವ ಕುತ್ರಾಪಿ ಗುರುವಾಲ್ಪಮಪೇಕ್ಷಣಾಂ ।**
**ದ್ವಿವಿಧಂ ಸಹಕಾರಿತ್ವಂ ಪುತ್ರೇಷ್ಟ್ಯಾದಾವಪೇಕ್ಷ್ಯತೇ ॥ ೪ ॥**
**ಭೋಜನಾದೌ ತು ದೃಷ್ಟಸ್ಯ ಕಾರೀರ್ಯಾದಾವದೃಷ್ಟತಃ ।**
**ಕಾ ಹಾನಿಃ ಪರಮಾ ಲೋಕೇ ನರಾಣಾಂ ಮರಣಾದೃತೇ ॥ ೫ ॥**

---

ಮಾರ್ಗದಲ್ಲಿ ಕಂಡ ದೇವಾಲಯವನ್ನು ಪ್ರದಕ್ಷಿಣ ಅಪ್ರದಕ್ಷಿಣವಾಗಿ ಸುತ್ತಿದರೆಂಬ ಅಲ್ಪನಿಮಿತ್ತದಿಂದ, ಮಹತ್ತರವಾದ ವ್ಯತ್ಯಾಸವು ಉಂಟಾಯಿತೆಂಬುದು ಹೇಗೆ ನಂಬಲರ್ಹವಾಗುತ್ತದೆ? ಸ್ವಯಂ ದರಿದ್ರರಾದ ವಿಪ್ರರನ್ನು ಸಂತೋಷಗೊಳಿಸುವುದರಿಂದ, ಮನುಷ್ಯರಿಗೆ ಸಂಪತ್ತುಗಳು ಲಭಿಸುತ್ತವೆಂಬುದನ್ನು, ಅವರ ಕೋಪದಿಂದ ವಿಪತ್ತುಗಳು ಸಂಭವಿಸುತ್ತವೆಂಬುದನ್ನೂ ನಂಬುವುದು ಹೇಗೆ? ಈ ಪ್ರಶ್ನೆಗಳ ಪರಿಹಾರವನ್ನು ದಯಮಾಡಿ ನಿರೂಪಿಸುವವನಾಗು, ಹೇ ಸೂತ! ಎಂದು ಪ್ರಶ್ನಿಸಿದನು.[1]

(೧-೨). ಅಲ್ಪನಿಮಿತ್ತದಿಂದ ಫಲಪ್ರಾಪ್ತಿಗೆ ಸಹಾಯವಾಗುತ್ತದೆಂಬುದೇನೂ ಆಶ್ಚರ್ಯವಲ್ಲ ಅಥವಾ ಯುಕ್ತಿವಿರುದ್ಧವೂ ಅಲ್ಲ. ಗಾಳಿ ಬೀಸುವುದೆಂಬ ಅಲ್ಪಸಹಕಾರಿ ಕಾರಣದಿಂದ ವೃಕ್ಷದಿಂದ ಪಕ್ವಫಲವು ಕೆಳಗೆ ಬಿದ್ದು ದೊರೆಯುತ್ತದೆ; ಸಹಕಾರಿ

1. ಈ ಋಷಿಯು ಅಂಗಿರಸನ ಮಗ ಮತ್ತು ಬೃಹಸ್ಪತಿಯ ಸಹೋದರ.

**ಜಾಯತೇ ಮರಣಂ ತಾದೃಕ್ ಸ್ವಲ್ಪಾಯಾಸಾದ್ವಿಷಾಶನಾತ್ ।**

ವಾತಾದಿಸಹಕಾರಿಣಾ-ವಾಯು ಮೊದಲಾದ (ಗಾಳಿ ಬೀಸುವುದೇ ಮೊದಲಾದ ಅಲ್ಪ) ಸಹಕಾರಿ ಕಾರಣದಿಂದ, ಪಕ್ವಂ-ಪಕ್ವವಾದ ಫಲಂ-ಫಲವು (ಹಣ್ಣು) ವೃಕ್ಷಾತ್-ಮರದಿಂದ, ಯಥಾ-ಹೇಗೋ (ಬೀಳುವುದೋ) ಹಾಗೆ, (ಫಲ ವಿಪರ್ಯವು ಸಹಕಾರಿ ಕಾರಣದಿಂದ) ಫಲವ್ಯತ್ಯಾಸವು ಅಲ್ಪಕಾರಣದಿಂದ ಆಗುವು ದೆಂದು ತಿಳಿಯಿರಿ); ಕುತ್ರಚಿತ್-ಕೆಲವೆಡೆಗಳಲ್ಲಿ(ಸಂದರ್ಭಗಳಲ್ಲಿ), ದ್ವಿವಿಧಾ-ಎರಡು ವಿಧವಾದ (ದೃಷ್ಟ ಮತ್ತು ಅದೃಷ್ಟಗಳೆಂಬ ದ್ವಿವಿಧ ಸಹಕಾರಿ ಕಾರಣಗಳು) ಅಪೇಕ್ಷಾ-ಅವಶ್ಯಕವಿರುತ್ತದೆ; ಕುತ್ರಚಿತ್-ಮತ್ತೆ ಕೆಲವು ಸಂದರ್ಭಗಳಲ್ಲಿ ದೃಷ್ಟಸ್ಯೈವ-ದೃಷ್ಟಕಾರಣದ (ಅಪೇಕ್ಷಾ) ಮಾತ್ರವೂ, ಕುತ್ರಾಪಿ-ಮತ್ತೆ ಕೆಲವೆಡೆಗಳಲ್ಲಿ ಅದೃಷ್ಟಸ್ಯೈವ-ಅದೃಷ್ಟ ಸಹಕಾರಿಯ ಅವಶ್ಯಕತೆ ಮಾತ್ರವೂ, ಗುರು ವಾ ಅಲ್ಪಂ-ಮಹತ್ತಾದ (ದೊಡ್ಡದಾದ-ಭಾರಭೂತವಾದ) ಅಥವಾ ಅಲ್ಪವಾದುದರ (ಸಹಕಾರಿಯ), ಅಪೇಕ್ಷಣಂ-ಅಪೇಕ್ಷೆಯು, (ಇರುತ್ತದೆ); ಪುತ್ರೇಷ್ಟ್ಯಾದೌ-ಪುತ್ರಕಾಮೇಷ್ಟಿಯಾಗ ಮೊದಲಾದವುಗಳಲ್ಲಿ ದ್ವಿವಿಧಂ ಸಹಕಾರಿತ್ವಂ-(ದೃಷ್ಟ ಮತ್ತು ಅದೃಷ್ಟಗಳೆಂಬ) ಎರಡು ಪ್ರಕಾರದ ಸಹಕಾರಿಗಳನ್ನು ಅಪೇಕ್ಷ್ಯತೇ-(ಯಾಗದ ಫಲಪ್ರಾಪ್ತಿಗಾಗಿ) ಅವಶ್ಯಕವಾಗುತ್ತದೆ; ಭೋಜನಾದೌ-ತು-ಭೋಜನ ಮೊದ ಲಾದವುಗಳ ವಿಷಯದಲ್ಲಿ ಆದರೋ, ದೃಷ್ಟಸ್ಯ-ದೃಷ್ಟ ಸಹಕಾರಿಯ (ಅಪೇಕ್ಷೆ ಯಿರುತ್ತದೆ); ಕಾರೀರ್ಯಾದೌ-ಕಾರೀರಯಾಗಾದಿಗಳಲ್ಲಿ (ವೃಷ್ಟ್ಯರ್ಥವಾಗಿ ಆಚರಿಸುವ ಯಾಗ), ಅದೃಷ್ಟತಃ-ಅದೃಷ್ಟ ಸಹಕಾರಿ ಮಾತ್ರದ ಅವಶ್ಯಕತೆಯು (ಇರುತ್ತದೆ); ಲೋಕೇ-ಜಗತ್ತಿನಲ್ಲಿ, ನರಾಣಾಂ-ಮನುಷ್ಯರಿಗೆ, ಮರಣಾತ್

---

ಕಾರಣಗಳು ಎರಡು ವಿಧ-ದೃಷ್ಟ ಮತ್ತು ಅದೃಷ್ಟವೆಂದು; ಕೆಲವೆಡೆ ಕೇವಲ ದೃಷ್ಟಸಹಕಾರಿಯೂ, ಮತ್ತು ಕೆಲವು ಸಂದರ್ಭಗಳಲ್ಲಿ ಅದೃಷ್ಟ ಸಹಕಾರಿಯೂ, ಫಲಹೇತುಗಳಾಗುತ್ತವೆ; ಇನ್ನೂ ಕೆಲವು ಸಂದರ್ಭಗಳಲ್ಲಿ ಉಭಯ ಸಹಕಾರಿಗಳ ಅವಶ್ಯಕತೆಯೂ ಇರುತ್ತದೆ; ಸಹಕಾರಿ ಕಾರಣವು ಗುರು (ದೊಡ್ಡದು) ಅಥವಾ ಅಲ್ಪವೂ ಆಗಿರಬಹುದು; ಪುತ್ರಕಾಮೇಷ್ಟಿಯಾಗವು ಫಲಪ್ರದವಾಗುವುದಕ್ಕೆ ದ್ವಿವಿಧ ಸಹಕಾರಿಗಳ ಅವಶ್ಯಕವೂ ಇದೆ; ಭೋಜನಾದಿ ಕ್ರಿಯೆಗಳು ಸಫಲವಾಗಲು ದೃಷ್ಟಸಹಕಾರಿ ಮಾತ್ರವೂ, ಕಾರೀರ ಯಾಗಾದಿಗಳ ಫಲಕ್ಕೆ ಕೇವಲ ಅದೃಷ್ಟ ಸಹಕಾರಿಯೂ, ಅವಶ್ಯಕವಾಗುವುವೆಂಬ ನಿದರ್ಶನಗಳಿಂದ ಸಹಕಾರಿಯ ಕೃತ್ಯವನ್ನು ಊಹಿಸಿ ತಿಳಿಯತಕ್ಕದ್ದು; ಲೋಕದಲ್ಲಿ ಮನುಷ್ಯರಿಗೆ ಮರಣಕ್ಕಿಂತ ಹೆಚ್ಚಾದ ನಷ್ಟವಿಲ್ಲ; ಅದು ವಿಷಪ್ರಾಶನರೂಪದ ಅಲ್ಪಾಯಾಸದಿಂದಲೇ ಉಂಟಾಗುತ್ತದೆ (೨-೫). ಅತ್ಯಲ್ಪವಾದ ಸಹಕಾರಿ ಕ್ರಿಯೆಯು, ಮಹಾಫಲ ವ್ಯತ್ಯಾಸಕ್ಕೆ ಕಾರಣವಾಗಬಲ್ಲದೆಂಬಲ್ಲಿ

ಯತೇ-ಮರಣದ ವಿನಹ, ಪರಮಾಹಾನಿಃ-ಅಧಿಕವಾದ ಹಾನಿಯು, ಕಾ-ಯಾವುದಿದೆ? (ಇಲ್ಲ ತಾದೃಕ್-ಅಂಥ, ಮರಣಂ-ಮರಣವು, ವಿಷಾಶನಾತ್-ವಿಷವನ್ನು ನುಂಗುವ, ಅಲ್ಪಾಯಾಸಾತ್-ಅಲ್ಪಶ್ರಮದಿಂದ, ಜಾಯತೇ-ಉಂಟಾಗುತ್ತದೆ.

**ಸುದೇವೋ ದೇವಕಶ್ಚೇತಿ ಪಾಂಥೌ ಮಾರ್ಗೇ ಸ್ಮ ಗಚ್ಛತಃ** ॥ ೬ ॥
**ಪುರತೋ ವ್ರಜತಃ ಪೇಶೀ ಗಲಿತಾ ಕಸ್ಯಚಿತ್ ಪಥಿ ।**
**ರತ್ನಪೂರ್ಣಾ ತು ಸಾ ಪೇಶೀ ದೂರ ಏವಾಸ್ತಿ ತಾವತಾ** ॥ ೭ ॥
**ಸುದೇವಸ್ಯಾಭವದ್ಬುದ್ಧಿರಂಧಾನುಕರಣೇ ಗತೌ ।**

ಸುದೇವಃ-ಸುದೇವನೂ, ಚ-ಮತ್ತು ದೇವಕಃ ಇತಿ-ದೇವಕನೂ ಎಂಬ, ಪಾಂಥೌ-ಇಬ್ಬರು ಮಾರ್ಗಸ್ಥರು, ಮಾರ್ಗೇ-ದಾರಿಯಲ್ಲಿ ಗಚ್ಛತಃ ಸ್ಮ-ಹೋಗುತ್ತಿದ್ದರು; ವ್ರಜತಃ-ಹೋಗುತ್ತಿರುವವರ, ಪುರತಃ-ಮುಂದೆ, ಪಥಿ-ಮಾರ್ಗದಲ್ಲಿ ಕಸ್ಯಚಿತ್-ಯಾರೋ ಒಬ್ಬರ (ಗೊತ್ತಿಲ್ಲದ ಮನುಷ್ಯನ), ಪೇಶೀ-ಖಡ್ಗದ ಒರೆಯು (ಅಥವಾ ಕೋಶ-ಕರಂಡ), ಗಲಿತಾ-ಬಿದ್ದಿತ್ತು ಸಾ ಪೇಶೀ ತು-ಆ ಕೋಶವಾದರೂ, ರತ್ನಪೂರ್ಣಾ ರತ್ನಗಳಿಂದ ತುಂಬಿತ್ತು ದೂರೇ ಏವ-(ಇನ್ನೂ ಮುಂದೆ) ದೂರದಲ್ಲಿಯೇ, ಅಸ್ತಿ-(ಆ ಕೋಶವು), ಅಸ್ತಿ ಇದೆ (ಇತ್ತು); ತಾವತಾ-ಅಷ್ಟರೊಳಗೆ, ಸುದೇವಸ್ಯ-ಸುದೇವನಿಗೆ, ಗತೌ-ನಡೆಯುವುದರಲ್ಲಿ, ಅಂಧಾನುಕರಣೇ-ಕುರುಡನಂತಾಗಲು (ಕಣ್ಣುಮುಚ್ಚಿ ನಡೆಯಬೇಕೆಂಬುವ), ಬುದ್ಧಿಃ-ಬುದ್ಧಿಯು, ಅಭವತ್- ಉಂಟಾಯಿತು.

**ತತೋ ನೇತ್ರೇ ನಿಮೀಲ್ಯೈವ ಸುದೇವಃ ಸ್ವಯಮೇವ ಹಿ** ॥ ೮ ॥
**ಅಂಧವತ್ ಪಥಿ ವವ್ರಾಜ ನಾಪಶ್ಯದ್ರತ್ನಪೇಶಿಕಾಂ ।**
**ಪೇಶೀಮುಲ್ಲಂಘ್ಯ ಗತ್ವೈವ ನೇತ್ರೋನ್ಮೇಷಣಮಾಚರತ್** ॥ ೯ ॥

---

ಸುದೇವ ದೇವಕರ ಕಥೆಯನ್ನು ಕೇಳಿರಿ:—ಸುದೇವ ಮತ್ತು ದೇವಕರೆಂಬಿಬ್ಬರು ದಾರಿಯಲ್ಲಿ ನಡೆಯುತ್ತಿದ್ದರು; ಅವರ ಮುಂದೆ ಸ್ವಲ್ಪ ದೂರದಲ್ಲಿ ಮಾರ್ಗದ ಮೇಲೆ ಯಾರೋ ಒಬ್ಬರ ಒರೆಯು (ಖಡ್ಗಕೋಶವು) ಬಿದ್ದಿತ್ತು—ಅದು ರತ್ನಗಳಿಂದ ತುಂಬಿತ್ತು; ಆಗ ಇದ್ದಕ್ಕಿದ್ದಂತೆ, ಸುದೇವನಿಗೆ, ಕುರುಡನನ್ನು ಅನುಕರಣ ಮಾಡಬೇಕೆಂಬ (ಕಣ್ಣುಮುಚ್ಚಿ ನಡೆಯಬೇಕೆಂಬ) ಇಚ್ಛೆಯುಂಟಾಯಿತು (೬-೭). ಹೀಗೆ ಇಚ್ಛೆಯುಂಟಾದನಂತರ ಅವನು ಕಣ್ಣುಮುಚ್ಚಿ ನಡೆದು, ಕುರುಡನಂತೆ ಮುಂದುವರಿದು, ಆ ರತ್ನಕೋಶವನ್ನು ಕಾಣಲಿಲ್ಲ—ಅದನ್ನು ದಾಟಿದ ಮೇಲೆ ಕಣ್ತೆರೆದನು; ನಂತರ ಅಲ್ಲಿಗೆ ಕಣ್ಣು ಬಿಟ್ಟುಕೊಂಡು ನಡೆದು ಬಂದ ದೇವಕನು, ಆ

**ಅಗಚ್ಛನ್ ದೇವಕಃ ಪಶ್ಚಾತ್ ರತ್ನಪೇಶೀಮವೈಕ್ಷತ ।**
**ಗೃಹೀತ್ವಾ ಮೋದಮಾಪನ್ನಸ್ತದದ್ಭುತಮಿವಾಭವತ್ ॥ ೧೦ ॥**
**ನೇತ್ರಯೋರ್ಮೀಲನಾದಲ್ಪಾತ್ಸುದೇವೋ ವಂಚಿತೋ ಧನಾತ್ ।**
**ಗಚ್ಛನ್ಮಾರ್ಗೇ ದೃಷ್ಟಿಮಾತ್ರಾದ್ದೇವಕೋ ಧನಭಾಗಭೂತ್ ॥ ೧೧ ॥**

ತತಃ-ಹೀಗೆ ಇಚ್ಛೆಯುಂಟಾದೊಡನೆ, ನೇತ್ರೇ-ತನ್ನ ಎರಡು ಕಣ್ಣುಗಳನ್ನೂ ನಿಮೀಲ್ಯ ಏವ-ಮುಚ್ಚಿಕೊಂಡೇ, ಸುದೇವಃ-ಸುದೇವನು, ಸ್ವಯಂ ಏವ-ತಾನೇ, ಅಂಧವತ್-ಕುರುಡನಂತೆ, ಪಥಿ-ಮಾರ್ಗದಲ್ಲಿ, ವವ್ರಾಜ-ನಡೆದುಹೋದನು; ರತ್ನಪೇಶಿಕಾಂ-ರತ್ನದ ಕೋಶವನ್ನು, ನ ಅಪಶ್ಯತ್-ನೋಡಲಿಲ್ಲ; ಪೇಶೀಂ-ಕೋಶವನ್ನು, ಉಲ್ಲಂಘ್ಯ-ದಾಟಿ (ಮೀರಿನಡೆದು), ಗತ್ವಾ ಏವ-ಹೋದನಂತರವೇ, ನೇತ್ರೋನ್ಮೇಷಣಂ-ಕಣ್ಣು ತೆರೆಯುವುದನ್ನು ಅಚರತ್-ಆಚರಿಸಿದನು (ಕಣ್ಣು ತೆರೆದನು); ದೇವಕಃ-ದೇವಕನು, ಪಶ್ಚಾತ್-ನಂತರ, ಅಗಚ್ಛನ್-(ಅಲ್ಲಿಗೆ) ಬಂದವನಾಗಿ, ರತ್ನಪೇಶೀಂ-ರತ್ನಕೋಶವನ್ನು ಅವೈಕ್ಷತ-ಕಂಡನು; ಗೃಹೀತ್ವಾ-(ಅದನ್ನು) ತೆಗೆದುಕೊಂಡು, ಮೋದಂ-ಸಂತೋಷವನ್ನು ಆಪನ್ನಃ-ಹೊಂದಿದವನಾದನು; ತತ್-ಆ ಘಟನೆಯು, ಅದ್ಭುತಂ ಇವ ಅಭವತ್-ಆಶ್ಚರ್ಯಕರವೆನಿಸಿತು; ಸುದೇವಃ-ಸುದೇವನು, ನೇತ್ರಯೋಃ-ಕಣ್ಣುಗಳ, ಮೀಲನಾತ್-ಮುಚ್ಚಿಕೊಳ್ಳುವುದೆಂಬ, ಅಲ್ಪಾತ್ - ಅಲ್ಪನಿಮಿತ್ತದಿಂದ, ಧನಾತ್-ಐಶ್ವರ್ಯದಿಂದ, ವಂಚಿತಃ-ವಂಚಿತನಾದನು (ಧನಪ್ರಾಪ್ತಿಯು ತಪ್ಪಿತು); ದೇವಕಃ-ದೇವಕನಾದರೋ, ಮಾರ್ಗೇ-ದಾರಿಯಲ್ಲಿ, ಗಚ್ಛನ್-ಹೋಗುವವನಾಗಿ, ದೃಷ್ಟಿ ಮಾತ್ರಾತ್-(ಕಣ್ತೆರೆದು) ನೋಡುವ ಮಾತ್ರದಿಂದ, ಧನಭಾಕ್ ಅಭೂತ್-ಮಹಾಧನಕ್ಕೆ ಭಾಗಿಯಾದನು.

**ಅತೋಽಲ್ಪಂ ಗುರು ವಾ ಕಿಂಚಿದದೃಷ್ಟಂ ದೃಷ್ಟಮೇವ ವಾ ।**
**ಪ್ರಾರಬ್ಧಫಲಭೋಗಾರ್ಥಂ ಸಹಕಾರಿತ್ವಪೇಕ್ಷ್ಯತೇ ॥ ೧೨ ॥**

---

ರತ್ನಕೋಶವನ್ನು ಕಂಡು ಕೈಗೆತ್ತಿಕೊಂಡು ಧನಲಾಭದಿಂದ ಸಂತೋಷಪಟ್ಟನು; ಈ ಘಟನೆಯು ಆಶ್ಚರ್ಯದಂತೆ ತೋರುವುದಿಲ್ಲವೇ? ಕಣ್ಣುಗಳನ್ನು ಮುಚ್ಚಿಕೊಂಡ ಅಲ್ಪನಿಮಿತ್ತದಿಂದ ಸುದೇವನು ಮಹಾಧನದಿಂದ ವಂಚಿತನಾದನು (ಅನಾಯಾಸವಾಗಿ ದೊರೆಯುತ್ತಿದ್ದುದನ್ನು ಕಳೆದುಕೊಂಡನು); ದೇವಕನಾದರೋ, ಕಣ್ಣು ಬಿಟ್ಟುಕೊಂಡು ನಡೆದ ಮಾತ್ರದಿಂದ ಮಹಾ ಧನಭಾಗಿಯಾದನು; ಅವರವರ (ಅದೃಷ್ಟ) ಪ್ರಾರಬ್ಧ ಫಲಪ್ರಾಪ್ತಿಗೆ ಕಣ್ಣುಮುಚ್ಚುವುದು—ತೆರೆಯುವುದೆಂಬ ಅಲ್ಪ (ದೃಷ್ಟವಾದ) ಸಹಕಾರಿಯೇ ನಿಮಿತ್ತವಾಯಿತು (೮-೧೧). ಆದ್ದರಿಂದ, ಅಲ್ಪವಾದುದಾಗಲಿ, ದೊಡ್ಡದಾಗಲಿ, ಅದೃಷ್ಟವಾದುದಾಗಲಿ, ದೃಷ್ಟವಾದುದಾಗಲಿ, ಪ್ರಾರಬ್ಧ ಫಲಭೋಗಕ್ಕೆ ಸಹಕಾರಿ

**ಸುಶ್ರೀಕಸ್ಯ ಸುಕಾಂತಸ್ಯ ನಾತಃ ಫಲವಿಪರ್ಯಯಃ ।**
**ಆಶ್ಚರ್ಯಮಿತಿ ವಿಜ್ಞೇಯೋ ಯತ್ಕರ್ಮಗತಿರೀದೃಶೀ ॥ ೧೩ ॥**

ಅತಃ-ಆದ್ದರಿಂದ (ಸುದೇವ ದೇವಕರ ನಿದರ್ಶನದಿಂದ ತಿಳಿಯುವುದರಿಂದ), ಅಲ್ಪಂ-ಅಲ್ಪವಾಗಲಿ, ವಾ-ಅಥವಾ, ಗುರು-ಮಹತ್ತಾಗಲಿ, ಕಿಂಚಿತ್-ಯಾವುದಾದರೊಂದು, ಅದೃಷ್ಟಂ-ಅದೃಷ್ಟವಾದುದು (ಪೂರ್ವಕರ್ಮಾಚರಣೆಯಿಂದ ಹುಟ್ಟಿದ ಪುಣ್ಯ ಪಾಪರೂಪದ ಅದೃಷ್ಟಶಕ್ತಿಯು), ವಾ-ಅಥವಾ, ದೃಷ್ಟಂ ಏವ-ದೃಷ್ಟವಾದ (ಈಗ ತೋರುವ) ಸಹಕಾರಿ-ಸಹಕಾರಿ ಕಾರಣವನ್ನು, ಪ್ರಾರಬ್ಧ ಫಲಭೋಗಾರ್ಥಂ-ಪ್ರಾರಬ್ಧಕರ್ಮದ ಫಲವನ್ನು ಹೊಂದಲಿಕ್ಕೆ, ಅಪೇಕ್ಷ್ಯತೇ-ಅಪೇಕ್ಷಿಸುತ್ತದೆ; ಅತಃ-ಆದ್ದರಿಂದ, ಸುಶ್ರೀಕಸ್ಯ-ಸುಶ್ರೀಕನಿಗೂ, ಸುಕಾಂತಸ್ಯ-ಸುಕಾಂತನಿಗೂ, ಫಲವಿಪರ್ಯಯಃ-(ಪ್ರಾರಬ್ಧಕರ್ಮ ಫಲಭೋಗದಲ್ಲಿ ಕಂಡ) ಫಲವ್ಯತ್ಯಾಸವು (ವಿರೋಧವು), ನ ಆಶ್ಚರ್ಯಂ-ಆಶ್ಚರ್ಯವಲ್ಲವು, ಇತಿ-ಎಂದು, ವಿಜ್ಞೇಯಃ-ತಿಳಿಯತಕ್ಕದ್ದು; ಯತ್ ಏಕೆಂದರೆ, (ಯಸ್ಮಾತ್-ಯಾವ ಕಾರಣದಿಂದ ಎಂದರೆ), ಕರ್ಮಗತಿಃ-ಕರ್ಮಗಳ ಫಲವೇ, ಈದೃಶೀ-ಈ ಪ್ರಕಾರವಾದುದು (ಆಗಿರುತ್ತದೆ).

**ಬ್ರಾಹ್ಮಣಸ್ಯ ಹಿ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।**
**ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ ॥ ೧೪ ॥**
**ಅತ ಏವರ್ಷಯಃ ಪ್ರಾಯೋ ನಾಪೇಕ್ಷಂತೇಽತ್ರ ಸಂಪದಃ ।**
**ಶಕ್ತಾ ಅನುಗ್ರಹೇ ಶಾಪೇ ತಪಸಾಽಗ್ನ್ಯರ್ಕಸನ್ನಿಭಾಃ ॥ ೧೫ ॥**

ಬ್ರಾಹ್ಮಣಸ್ಯ-ಬ್ರಾಹ್ಮಣನ, ಅಯಂ ದೇಹಃ-ಈ ದೇಹವು, ಕ್ಷುದ್ರ ಕಾಮಾಯ-

---

ಕರ್ಮವು ಬೇಕಾಗುತ್ತದೆ;[1] ಹೀಗಿರುವುದರಿಂದ, ಸುಶ್ರೀಕ ಸುಕಾಂತರಲ್ಲಿ ಫಲಪ್ರಾಪ್ತಿಯಲ್ಲಿ ಕಂಡ ವಿಪರ್ಯವು, ಆಶ್ಚರ್ಯವೇನಲ್ಲ; ಕರ್ಮಗಳ ಗತಿಯೇ ಈ ಪ್ರಕಾರವಾದುದು (೧೨-೧೩). ಬ್ರಾಹ್ಮಣ ದೇಹವು ನಶ್ವರವಾದ ಅಲ್ಪವಿಷಯ ಭೋಗಗಳನ್ನನುಭವಿಸಲು ಬಂದಿರುವುದಿಲ್ಲ; ಕಿಂತು, ಇಲ್ಲಿ ಕಠಿಣತರವಾದ ವಿವಿಧ ತಪಸ್ಸುಗಳನ್ನಾಚರಿಸಿ, ಮರಣಾನಂತರ ನಿತ್ಯಸುಖವನ್ನು ದೊರಕಿಸಿಕೊಳ್ಳಲಿಕ್ಕಾಗಿ ಬಂದಿರುತ್ತದೆ; ಆದ್ದರಿಂದ, ಋಷಿಗಳು, ತಮ್ಮ ತಪೋಬಲದಿಂದ ಶಾಪಾನುಗ್ರಹಶಕ್ತರಾಗಿ, ಅಗ್ನಿಸೂರ್ಯರಂತಿದ್ದರೂ, ಪ್ರಾಯಃ ಇಹದಲ್ಲಿ ಸಂಪದಾದಿಗಳನ್ನು ಆಶಿಸುವುದಿಲ್ಲ (೧೪-೧೫). ಕಾಲಗತಿಯಿಂದ (ಕಲಿಕಾಲದಲ್ಲಿ) ಅಲ್ಪತಪಸ್ಸುಳ್ಳವರೂ

---

1. ಸುದೇವದೇವಕರ ಮತ್ತು ಸುಶ್ರೀಕ ಸುಕಾಂತರ ಚರಿತ್ರೆಗಳಲ್ಲಿ ದೃಷ್ಟ ಸಹಕಾರಿ ಕರ್ಮವು, ಪ್ರಾರಬ್ಧ ಫಲಭೋಗದ ವ್ಯತ್ಯಾಸಕ್ಕೆ ಕಾರಣವಾಗಿರುವುದು ಕಂಡುಬರುತ್ತದೆ; ಹೀಗೆಯೇ ಅದೃಷ್ಟವಾದ ಸಹಕಾರಿ ಕರ್ಮವೂ ಪ್ರಾರಬ್ಧಕರ್ಮದ ಪ್ರಧಾನ ಫಲಭೋಗ ವ್ಯತ್ಯಾಸಕ್ಕೆ ಕಾರಣವಾಗುತ್ತದೆಂದು ತಿಳಿಯಬೇಕು.

ಅಲ್ಪವಾದ (ಕೀಳಾದ) ವಿಷಯಭೋಗಕ್ಕಾಗಿ, ನ ಇಷ್ಯತೇ- (ಉಪಯೋಗಿಸಲ್ಪಡ ತಕ್ಕದ್ದು) ಅಲ್ಲವೆಂದು ಹೇಳಲಾಗುತ್ತದೆ; ಇಹ-ಈ ದೇಹದಲ್ಲಿ (ಈ ಲೋಕದಲ್ಲಿ), ಕೃಚ್ಛ್ರಾಯ-ಕಷ್ಟಕರವಾದ, ತಪಸೇ-ತಪಸ್ಸಿಗಾಗಿಯೂ, ಚ-ಮತ್ತು, ಪ್ರೇತ್ಯ-ಮೃತನಾದ ನಂತರ (ಮರಣಹೊಂದಿ), ಅನಂತಸುಖಾಯ-ಶಾಶ್ವತವಾದ ಪೂರ್ಣಸುಖಕ್ಕೂ (ಬಂದಿರುವುದೆಂದು ಹೇಳಲಾಗುತ್ತದೆ); ಹಿ-ಹೀಗೆಂಬುದು ವೇದಸಿದ್ಧವು; ಅತಃಏವ-ಈ ಕಾರಣದಿಂದಲೇ, ಋಷಯಃ-ಋಷಿಗಳು, ಅತ್ರ-ಇಹದಲ್ಲಿ, ತಪಸಾ-(ತಮ್ಮ) ತಪಸ್ಸಿನಿಂದ, ಅನುಗ್ರಹೇ-ಅನುಗ್ರಹ ಮಾಡುವುದರಲ್ಲಿಯೂ, ಶಾಪೇ-ಶಾಪ ಕೊಡುವುದ ರಲ್ಲಿಯೂ, ಶಕ್ತಾಃ-ಸಮರ್ಥರಾಗಿದ್ದು, ಅಗ್ನ್ಯರ್ಕಸನ್ನಿಭಾಃ-ಅಗ್ನಿ ಸೂರ್ಯರಿಗೆ ಸದೃಶ ರಾದರೂ, ಪ್ರಾಯಃ-ಬಹುವಾಗಿ, (ಅತ್ರ-ಇಹದಲ್ಲಿ), ಸಂಪದಃ-(ವಿವಿಧ) ಐಶ್ವರ್ಯ ಗಳನ್ನು, ನ ಅಪೇಕ್ಷಂತೇ-ಇಚ್ಛಿಸುವುದಿಲ್ಲ (ಆಶಿಸುವುದಿಲ್ಲ).

**ಕಾಲೇನ ಮಂದತಪಸೋ ಯೇ ವಿಪ್ರಾ ಲೋಲುಪಾ ಭುವಿ ।**
**ತೇಽಪಿ ಮಾನ್ಯಾ ಭವಂತ್ಯೇವ ಸಫಲಾಶ್ಚ ತದಾಶಿಷಃ ॥ ೧೬ ॥**
**ಕಿಂತು ಮಂದಫಲತ್ವೇನ ವಿಲಂಬೇನ ಫಲಪ್ರದಾಃ ।**
**ಏವಮೇವ ಹಿ ಕಾಲೇನ ತದ್ದ್ವೇಷಾತ್ ಫಲಮಾಪ್ಯತೇ ॥ ೧೭ ॥**

ಕಾಲೇನ-ಕಾಲಬಲದಿಂದ, ಮಂದತಪಸಃ-ಅಲ್ಪವಾದ ತಪಸ್ಸುಳ್ಳ, ಲೋಲುಪಾಃ-ವಿಷಯಾಸಕ್ತರಾದ, ಯೇ-ಯಾವ, ಭುವಿ-ಲೋಕದಲ್ಲಿರುವ, ವಿಪ್ರಾಃ-ಬ್ರಾಹ್ಮಣರೋ, ತೇ ಅಪಿ-ಅವರೂ ಸಹ, ಮಾನ್ಯಾಃ-ಪೂಜ್ಯರು, ಭವಂತಿ ಏವ-ಆಗಿಯೇ ಇರುತ್ತಾರೆ; ತದಾಶಿಷಃ-ಅವರ ಆಶೀರ್ವಾದಗಳು, ಸಫಲಾಃ ಚ (ಏವ)-ಫಲವುಳ್ಳವುಗಳೇ (ಆಗುತ್ತವೆ); ಕಿಂತು-ಆದರೆ, ಮಂದಫಲತ್ವೇನ-ಅಲ್ಪ ಫಲರೂಪ ದಿಂದಲೂ, ವಿಲಂಬೇನ-ಕಾಲವಿಲಂಬದಿಂದಲೂ, ಫಲಪ್ರದಾಃ-ಫಲವನ್ನು ತಪ್ಪದೇ ಕೊಡುತ್ತವೆ; ಏವಂ ಏವ-ಹೀಗೆಯೇ (ಆ ವಿಪ್ರರನ್ನು ಭಕ್ತಿಯಿಂದ ಪೂಜಿಸುವುದರಿಂದ ದೊರೆಯುವ ಫಲದಂತೆಯೇ), ತದ್ದ್ವೇಷಾತ್-ಅವರನ್ನು ದ್ವೇಷಿಸುವುದರಿಂದ,

---

ವಿಷಯಲೋಲುಪರೂ ಆದ ವಿಪ್ರರೂ ಲೋಕದಲ್ಲಿ ಕಂಡುಬರುತ್ತಾರೆ; ಅವರೂ ಸಹ ಪೂಜ್ಯರೇ ಆಗಿರುತ್ತಾರೆ—ಅವರ ಆಶೀರ್ವಚನಗಳೂ ಸಫಲವಾಗುತ್ತವೆ— ಆದರೆ ಅವು ಅಲ್ಪವಾದ ಸತ್ಫಲಗಳನ್ನು ಕಾಲವಿಲಂಬದಿಂದಾದರೂ ತಪ್ಪದೇ ದೊರಕಿಸುತ್ತವೆ; ಆದ್ದರಿಂದ ಅವರನ್ನು ಭಕ್ತಿಯಿಂದ ಅರ್ಚಿಸಬೇಕು; ಇದರಂತೆಯೇ, ಅವರಲ್ಲಿ ಮೂಡುವ ದ್ವೇಷವೂ ಕಾಲವಿಲಂಬದಿಂದಾದರೂ ದುಷ್ಫಲಗಳನ್ನು (ಅನರ್ಥಗಳನ್ನು) ಕೊಡಲು ತಪ್ಪುವುದಿಲ್ಲವೆಂಬುದನ್ನೂ ಮರೆಯಲಾಗದು (೧೬-೧೭). ಸಂಸಾರದಲ್ಲಿ ಸುತ್ತುವ ಜೀವನು ಮಹಾಪಾಪಗಳ ಫಲವಾಗಿ ನರಕಾದಿ ದುಃಖಗಳನ್ನನುಭವಿಸಿದ

ಕಾಲೇನ-ಕಾಲಕ್ರಮದಲ್ಲಿ (ವಿಲಂಬದಿಂದಾದರೂ), ಫಲಂ-(ಆ ದ್ವೇಷದ ಅನರ್ಥಕರ) ಫಲವು ಆಪ್ಯತೇ-ಹೊಂದಲ್ಪಡುತ್ತದೆ.

ಸಂಸಾರೇ ಭ್ರಮತೋ ಜಂತೋರ್ಮಹಾಪಾತಕಯೋಗತಃ ।
ಸ್ಥಾವರೇ ವೃಕ್ಷಗುಲ್ಮಾದೌ ಕರ್ಮಶೇಷಾದ್ಭವೇಜ್ಜನಿಃ ॥ ೧೮ ॥
ಶೀತವಾತಾತಪಕ್ಲೇಶಾನ್ ಛೇದಭೇದಾದಿಕಾನಪಿ ।
ತತ್ರ ಪಾಪಫಲಂ ಭುಕ್ತ್ವಾ ಪಶ್ವಾದಿಷು ಚ ಸಂಭವೇತ್ ॥ ೧೯ ॥
ತತ್ರಾಪಿ ವಿವಿಧಾನ್ ಕ್ಲೇಶಾನ್ ಭುಕ್ತ್ವಾ ಮಾನುಷಯೋನಿಷು ।
ದಾರಿದ್ರ್ಯಾದ್ವ್ಯಾಧಿಪೀಡಾಭಿರ್ಯುಕ್ತೋ ಭುವಿ ಸ ಜಾಯತೇ ॥ ೨೦ ॥

ಸಂಸಾರೇ-ಸಂಸಾರದಲ್ಲಿ ಭ್ರಮತಃ-ಸುತ್ತುತ್ತಿರುವ, ಜಂತೋಃ-ಪ್ರಾಣಿಗೆ (ಜೀವನಿಗೆ), ಮಹಾಪಾತಕಯೋಗತಃ-ಮಹಾಪಾಪದ ಫಲವಾಗಿ, ಕರ್ಮಶೇಷಾತ್-(ನರಕಾದಿಗಳನ್ನು ಅನುಭವಿಸಿದನಂತರ) ಪಾಪಶೇಷದಿಂದ, ಸ್ಥಾವರೇ-ಸ್ಥಾವರಗಳಾದ (ಸಂಚಾರ ಸಾಮರ್ಥ್ಯವಿಲ್ಲದ), ವೃಕ್ಷಗುಲ್ಮಾದೌ-ವೃಕ್ಷ, ಗುಲ್ಮ (ಪೊದೆ) ಮೊದಲಾದ ಯೋನಿಗಳಲ್ಲಿ, ಜನಿಃ-ಜನ್ಮವು (ಉತ್ಪತ್ತಿಯು), ಭವೇತ್-ಉಂಟಾಗುತ್ತದೆ; ತತ್ರ-ಅಲ್ಲಿ (ಆ ಯೋನಿಯಲ್ಲಿ-ದೇಹದಲ್ಲಿ), ಶೀತವಾತಾತಪಕ್ಲೇಶಾನ್-ಚಳಿಗಾಳಿ, ಬಿಸಲುಗಳ ದುಃಖಗಳನ್ನೂ, ಅಪಿ-ಮತ್ತು, ಛೇದಭೇದಾದಿಕಾನ್-ಕತ್ತರಿಸುವುದು, ಕೊಯ್ಯುವುದು ಮೊದಲಾದ ದುಃಖಗಳನ್ನೂ, ಪಾಪಫಲಂ-ಪಾಪಶೇಷದ ಫಲರೂಪವಾಗಿ, ಭುಕ್ತ್ವಾ-ಭೋಗಿಸಿ, ಪಶ್ವಾದಿಷು ಚ-(ಮುಂದೆ) ಪಶು ಮೊದಲಾದ ಯೋನಿಗಳಲ್ಲಿಯೂ, ಸಂಭವೇತ್-ಜನ್ಮವುಂಟಾಗುತ್ತದೆ; ತತ್ರಾಪಿ-ಅಲ್ಲಿಯೂ ಸಹ, ವಿವಿಧಾನ್-ಬಹುವಿಧದ, ಕ್ಲೇಶಾನ್-ದುಃಖಗಳನ್ನು ಭುಕ್ತ್ವಾ-ಭೋಗಿಸಿ, ಸಃ-ಆ ಜೀವನು, ಮಾನುಷಯೋನಿಷು-ಮನುಷ್ಯದೇಹಗಳಲ್ಲಿ ಭುವಿ-ಭೂಮಿಯಲ್ಲಿ, ಜಾಯತೇ-ಹುಟ್ಟುತ್ತಾನೆ; (ಅಲ್ಲಿಯೂ) ದಾರಿದ್ರ್ಯಾತ್-ಬಡತನದಿಂದಾಗುವ, ವ್ಯಾಧಿಪೀಡಾಭಿಃ-ರೋಗ ಪೀಡಾದಿಗಳಿಂದ, ಯುಕ್ತಃ (ಜಾಯತೇ)-ಯುಕ್ತನಾಗಿಯೇ ಜನಿಸುತ್ತಾನೆ.

---

ನಂತರ ಪಾಪಶೇಷದಿಂದ, ವೃಕ್ಷಗುಲ್ಮಾದಿ ಸ್ಥಾವರ ದೇಹಗಳನ್ನು ಹೊಂದುತ್ತಾನೆ; ಅಲ್ಲಿ ಚಳಿ ಗಾಳಿ ಬಿಸಿಲುಗಳ ಕ್ಲೇಶಗಳನ್ನೂ, ಛೇದಭೇದಾದಿ ದುಃಖಗಳನ್ನೂ ಅನುಭವಿಸಿ, ಪಾಪದ ಫಲವಾಗಿಯೇ ಮುಂದೆ ಪಶ್ವಾದಿ (ಪಕ್ಷಿಜಲಚರ ಮೊದಲಾದ) ದೇಹಗಳನ್ನು ಹೊಂದಿ, ಅಲ್ಲಿಯೂ ನಾನಾ ದುಃಖಗಳನ್ನನುಭವಿಸಿ, ಪುನಃ ಮನುಷ್ಯ ದೇಹಗಳಲ್ಲಿ ಬರುತ್ತಾನೆ; ಅಲ್ಲಿ ಬಡತನದಿಂದಲೂ, ರೋಗಾದಿ ಪೀಡೆಗಳಿಂದಲೂ ಯುಕ್ತನಾಗಿ ದುಃಖವುಳ್ಳವನಾಗುತ್ತಾನೆ; ಮಹಾಪಾತಕಗಳಿಂದಾಗುವ ಅನಂತ ಪರಂಪರೆಯು ಹೀಗಿರುತ್ತದೆ (೧೮-೨೦). ಅಶ್ವತ್ಥ ತುಲಸೀ ಮತ್ತು ಬ್ರಾಹ್ಮಣರು, ಮೂರುವಿಧದ

**ಅಶ್ವತ್ಥತುಲಸೀವಿಪ್ರಾಸ್ತ್ರಿವಿಧಾ ಹರಿಮೂರ್ತಯಃ ।**
**ತತ್ರಾಶ್ವತ್ಥತುಲಸ್ಯೌ ಚ ಸ್ಥಾವರತ್ವೇನ ದುಃಖಿತೇ ॥ ೨೧ ॥**
**ತಥಾಪಿ ಭಜತಾಂ ನೃಣಾಂ ಸಿದ್ಧಿದಸ್ತತ್ರ ಕೇಶವಃ ।**
**ಏವಮೇವ ಹಿ ವಿಪ್ರಾಶ್ಚ ನಿಬದ್ಧಾಃ ಸ್ವೇನ ಕರ್ಮಣಾ ॥ ೨೨ ॥**
**ದುಃಖಿನಃ ಸುಖಿನೋ ವಾಪಿ ಪೂಜ್ಯಾ ವಿಷ್ಣುಧಿಯಾಖಿಲೈಃ ।**

ಅಶ್ವತ್ಥತುಲಸೀವಿಪ್ರಾಃ- ಅಶ್ವತ್ಥವೃಕ್ಷ ತುಲಸೀಗಿಡ ಮತ್ತು ಬ್ರಾಹ್ಮಣರು, ತ್ರಿವಿಧಾಃ- ಮೂರು ವಿಧದ, ಹರಿಮೂರ್ತಯಃ-ಶ್ರೀಹರಿಯ ಪ್ರತಿಮೆಗಳು (ಆಗಿರುವರು); ತತ್ರ-ಇವುಗಳಲ್ಲಿ, ಅಶ್ವತ್ಥತುಲಸ್ಯೌ-ಅಶ್ವತ್ಥ ತುಲಸಿಗಳು, ಸ್ಥಾವರತ್ವೇನ-ಸ್ಥಾವರರಾದ ಕಾರಣ, ದುಃಖಿತೇ-ದುಃಖವುಳ್ಳವರೇ; ತಥಾಪಿ- ಹಾಗಿದ್ದರೂ, ಭಜತಾಂ-(ತಮ್ಮನ್ನು) ಸೇವಿಸುವ, ನೃಣಾಂ-ಮನುಷ್ಯರಿಗೆ, (ಸತ್ಫಲಗಳನ್ನು ಕೊಡುತ್ತವೆ); ತತ್ರ-ಅಲ್ಲಿ (ಅಲ್ಲಿರುವ), ಕೇಶವಃ-ಶ್ರೀಹರಿಯು, ಸಿದ್ಧಿದಃ-ಫಲದಾತನು; ಏವಂ ಏವ-ಹೀಗೆಯೇ, ಸ್ವೇನ-ತಂತಮ್ಮ ಕರ್ಮಣಾ-ಕರ್ಮದಿಂದ ನಿಬದ್ಧಾಃ-ಬದ್ಧರಾದ, ವಿಪ್ರಾಶ್ಚ- ಬ್ರಾಹ್ಮಣರೂ ಕೂಡ, ದುಃಖಿನಃ-ದುಃಖಿಗಳೂ, ವಾ-ಅಥವಾ, ಸುಖಿನಃ ಅಪಿ- ಸುಖಿಗಳೂ (ಆಗಿರುವರು); (ಹೀಗಿದ್ದರೂ) ಅಖಿಲೈಃ-ಸರ್ವರಿಂದ, ವಿಷ್ಣುಧಿಯಾ- ವಿಷ್ಣು ಬುದ್ಧಿಯಿಂದ, (ಶ್ರೀವಿಷ್ಣುವಿನ ಪ್ರತಿಮೆಗಳೆಂಬ ಭಾವನೆಯಿಂದ), ಪೂಜ್ಯಾಃ- ಪೂಜಿಸಲ್ಪಡಲು ಯೋಗ್ಯರು; ಹಿ-ಹೀಗೆಂಬುದು ವೇದಸಿದ್ಧವು.

**ಕುಷ್ಠಿನಂ ಪತಿಮಾರಾಧ್ಯ ಸ್ವಗತಿಂ ಗಾತ್ಪತಿವ್ರತಾ ॥ ೨೩ ॥**
**ಸಂಪೂಜ್ಯ ಪಿತರೌ ವೃದ್ಧೌ ವ್ಯಾಧೋ ಲೇಭೇ ಪರಾಂ ಗತಿಂ ।**
**ಅತಃ ಪೂಜ್ಯಸ್ಥಿತೋ ವಿಷ್ಣುಸ್ತತ್ತತ್ಪೂಜಾನುಸಾರತಃ ॥ ೨೪ ॥**

---

ಶ್ರೀಹರಿಯ ಪ್ರತಿಮೆಗಳು—ಅವರಲ್ಲಿ ಶ್ರೀಹರಿಯು ಸದಾ ಸನ್ನಿಹಿತನಾಗಿರುವನು; ಇವರಲ್ಲಿ ಅಶ್ವತ್ಥ ತುಲಸಿಗಳು, ಸ್ಥಾವರಚೇತನರು; ಈ ಕಾರಣದಿಂದ ಆ ಜೀವರೂ ಪೂರ್ವೋಕ್ತ ಕ್ಲೇಶಗಳುಳ್ಳವರೇ; ಹಾಗಿದ್ದರೂ, ತಮ್ಮನ್ನು ಭಜಿಸುವ ಮನುಷ್ಯರಿಗೆ ಸತ್ಫಲ ಗಳನ್ನೀಯುತ್ತಾರೆ—ಅಲ್ಲಿದ್ದು ಫಲ ಕೊಡುವವನು ಶ್ರೀ ಕೇಶವನೇ ಆಗಿದ್ದಾನೆ; ಹೀಗೆಯೇ ಬ್ರಾಹ್ಮಣರೂ ತಂತಮ್ಮ ಕರ್ಮದಿಂದ ಬಂಧಿತರಾಗಿ, ತಮ್ಮ ಕರ್ಮಾನುಸಾರ ವಾದ ಸುಖದುಃಖಗಳನ್ನು ಅನುಭವಿಸುತ್ತಿದ್ದರೂ, ಸೇವಿಸಲ್ಪಡಲರ್ಹರೇ ಆಗಿರುತ್ತಾರೆ; ಸರ್ವರಿಂದ, ಬ್ರಾಹ್ಮಣರು ಶ್ರೀವಿಷ್ಣುಪ್ರತಿಮೆಗಳೆಂಬ ಭಾವನೆಯಿಂದ ಅವಶ್ಯವಾಗಿ ಪೂಜಿಸಲ್ಪಡಬೇಕು (೨೧-೨೨). ಪತಿವ್ರತೆಯಾದ ಸ್ತ್ರೀಯು ಕುಷ್ಠರೋಗಿಯಾದ ಪತಿಯನ್ನು ಸೇವಿಸಿ ಉತ್ತಮ ಗತಿಯನ್ನು ಹೊಂದಿರುವಳು; ವ್ಯಾಧನು ವೃದ್ಧರಾದ

**ಪೂಜಕೇಭ್ಯಃ ಫಲಂ ಧತ್ತೇ ಯಥಾ ವಿಪ್ರಾದಿಷು ಸ್ಥಿತಃ ।**

ಪತಿವ್ರತಾ-ಪತಿವ್ರತೆಯಾದ ಸ್ತ್ರೀಯು, ಕುಷ್ಠಿನಂ ಪತಿಂ-ಕುಷ್ಠರೋಗಿಯಾದ ಪತಿಯನ್ನು ಆರಾಧ್ಯ-ಸೇವಿಸಿ, ಸ್ವಗತಿಂ-ತನ್ನ ಗತಿಯನ್ನು (ಮೋಕ್ಷವನ್ನು), ಗಾತ್-ಹೊಂದಿದಳು; ವ್ಯಾಧಃ-ಧರ್ಮವ್ಯಾಧನು, ವೃದ್ಧೌ-ವೃದ್ಧರಾದ, ಪಿತರೌ-ಮಾತಾಪಿತೃಗಳನ್ನು ಸಂಪೂಜ್ಯ-ಭಕ್ತಿಯಿಂದ ಸೇವಿಸಿ, ಪರಾಂ ಗತಿಂ-ಪರಮಗತಿಯನ್ನು (ಮೋಕ್ಷವನ್ನು), ಲೇಭೇ-ಹೊಂದಿದನು; ಅತಃ-ಹೀಗಿರುವುದರಿಂದ (ಈ ನಿದರ್ಶಗಳಿಂದ ತಿಳಿಯಬರುವುದರಿಂದ). ಪೂಜ್ಯಸ್ಥಿತಃ-ಪೂಜ್ಯರಲ್ಲಿರುವ, ವಿಷ್ಣುಃ-ಶ್ರೀವಿಷ್ಣುವು, ತತ್ತತ್ಪೂಜಾನುಸಾರತಃ-ಅವರವರ (ಪೂಜಕರ) ಪೂಜಾನುಗುಣವಾಗಿ, ಯಥಾ-ಹೇಗೆ, ವಿಪ್ರಾದಿಷು-ಬ್ರಾಹ್ಮಣಾದಿಗಳಲ್ಲಿ (ಆದಿಪದದಿಂದ ಗೋವು, ಅಶ್ವತ್ಥಾದಿಗಳನ್ನು ಗ್ರಹಿಸಬೇಕು), ಸ್ಥಿತಃ-ಇದ್ದವನಾಗಿ, ಪೂಜಕೇಭ್ಯಃ-(ತನ್ನನ್ನು) ಪೂಜಿಸುವವರಿಗೆ, ಫಲಂ-ಫಲವನ್ನು ಧತ್ತೇ-ಕೊಡುವನೋ, (ಹಾಗೆಯೇ) ಅನ್ಯಪೂಜ್ಯರಲ್ಲಿ (ಪತಿ, ಪಿತೃ, ವೃದ್ಧರೇ ಮೊದಲಾದವರಲ್ಲಿ) ಸ್ಥಿತನಾಗಿ, (ಫಲಂ ಧತ್ತೇ-ಫಲವನ್ನು ಕೊಡುತ್ತಾನೆ).

**ಅತ ಏವೈಕಲವ್ಯೋಽಪಿ ಸಂಪೂಜ್ಯ ಪರಮಾದರಾತ್ ॥ ೨೫ ॥**

---

ತಾಯಿತಂದೆಗಳನ್ನು ಭಕ್ತಿಯಿಂದ ಸೇವಿಸಿ ಸ್ವಗತಿಯನ್ನು ಸಾಧಿಸಿರುವನು;[1] ಆದ್ದರಿಂದ, ಹೇಗೆ ಬ್ರಾಹ್ಮಣರಲ್ಲಿ ಸ್ಥಿತನಾದ ಶ್ರೀ ವಿಷ್ಣುವು ಅಲ್ಲಿರುವ ತನ್ನನ್ನು ಪೂಜಿಸಿದವರಿಗೆ, ಅವರವರ ಭಕ್ತ್ಯನುಗುಣವಾಗಿ ಫಲಗಳನ್ನು ಕೊಡುವನೋ, ಹಾಗೆಯೇ ಇತರ ಸರ್ವಪೂಜ್ಯ ವಸ್ತುಗಳಲ್ಲಿ ಸ್ಥಿತನಾಗಿ ಪೂಜಕರಿಗೆ ಪೂಜಾನುಗುಣವಾದ ಫಲಗಳನ್ನು ಕೊಡುತ್ತಾನೆಂದು ತಿಳಿಯತಕ್ಕದ್ದು (೨೩-೨೪). ಈ ಕಾರಣದಿಂದಲೇ, ಪೂಜ್ಯರಾದ ದ್ರೋಣರಲ್ಲಿದ್ದ ಶ್ರೀಹರಿಯು, ಪೂಜ್ಯವಿದ್ಯಾಗುರುಗಳೆಂಬ ಭಾವನೆಯಿಂದ,

---

1. ಪತಿವ್ರತಾಸ್ತ್ರೀಗೆ ಪತಿಯೇ ಶ್ರೀವಿಷ್ಣುವಿನ ಮುಖ್ಯ ಪ್ರತಿಮೆಯು; ಪತ್ಯಂತರ್ಗತನಾದ ಶ್ರೀವಿಷ್ಣುವನ್ನು, ಪತಿರೂಪದ ಪ್ರತಿಮೆಯಲ್ಲಿ ಪೂಜಿಸಿಯೇ ಸದ್ಗತಿಯನ್ನು ಸ್ತ್ರೀಯರು ಹೊಂದುತ್ತಾರೆ (ಹೊಂದತಕ್ಕದ್ದು-ಅನ್ಯಮಾರ್ಗವಿಲ್ಲ); ಮಹಾಭಾರತದ ವನಪರ್ವದಲ್ಲಿ ಪಾತಿವ್ರತ್ಯದ ಮಾಹಾತ್ಮ್ಯೆಯು ಬಹುಪರಿಯಿಂದ, ನಿದರ್ಶನಗಳೊಂದಿಗೆ ನಿರೂಪಿಸಲಾಗಿದೆ. ಕುಷ್ಠಾದಿರೋಗ ಪೀಡಿತನಾಗಿರಲಿ, ಸುರಾಪಾನ, ವೇಶ್ಯಾಸಕ್ತಿ ಮೊದಲಾದ ದುರ್ವ್ಯಸನಗಳುಳ್ಳವನಾಗಿರಲಿ, ಪತಿಯೇ ಪರದೈವವೆಂದು ತಿಳಿದು, ಸೇವಿಸಿ ಸದ್ಗತಿಯನ್ನು ಹೊಂದಿದ, ಸಾಧ್ವೀಮಣಿಗಳ ಕಥೆಗಳು ಅಲ್ಲಿ ನಿರೂಪಿಸಲಾಗಿದೆ. ಅದೇ ವನಪರ್ವದಲ್ಲಿ ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿದ್ದು ಋಷಿಶಾಪದಿಂದ, ಕಟುಕನಾಗಿ ಜನ್ಮಪಡೆದ, ಧರ್ಮವ್ಯಾಧನು, ಕೌಶಿಕನಾಮಕ ದುರಭಿಮಾನಿಯಾದ ಬ್ರಾಹ್ಮಣನಿಗೆ ಧರ್ಮೋಪದೇಶ ಮಾಡಿದ ಕಥೆಯೂ ನಿರೂಪಿತವಾಗಿದೆ; ಧರ್ಮವ್ಯಾಧನಿಗೆ ಕೇವಲ ಮಾತಾಪಿತೃಗಳ ಸೇವಾರೂಪದ (ಅವರ ಅಂತರ್ಯಾಮಿಯಾದ) ಶ್ರೀಹರಿ ಸೇವೆಯ ಪ್ರಭಾವದಿಂದ, ಬ್ರಾಹ್ಮಣನಿಗೂ ಉಪದೇಶಿಸುವ ಮಹಾಜ್ಞಾನವೂ ಅಧಿಕಾರವೂ ದೊರೆತಿತ್ತು.

**ಮೃತ್ತಿಕಾನಿರ್ಮಿತಂ ದ್ರೋಣಂ ಪರಾಂ ಸಿದ್ಧಿಮವಾಪ್ತವಾನ್ ।**

ಅತಃ ಏವ-ಆದ್ದರಿಂದಲೇ (ಪೂಜಕರಿಗೆ ಪೂಜ್ಯಸ್ಥಿತನಾದ ಶ್ರೀವಿಷ್ಣುವೇ, ಪೂಜಕರು ತನ್ನನ್ನು ತಿಳಿದು ಪೂಜಿಸಲಿ ಅಥವಾ ಬಿಟ್ಟಿರಲಿ ಫಲಕೊಡುವವನಾದ್ದರಿಂದ), ಏಕಲವ್ಯಃ ಅಪಿ-ಏಕಲವ್ಯನೂ ಸಹ (ತಮೋಯೋಗ್ಯನಾದರೂ), ಪರಮಾದರಾತ್-ಉತ್ತಮ ಭಕ್ತಿಯಿಂದ, ಮೃತ್ತಿಕಾನಿರ್ಮಿತಂ-ಮಣ್ಣಿನಿಂದ ಮಾಡಲ್ಪಟ್ಟ ದ್ರೋಣಂ-ದ್ರೋಣನನ್ನು (ದ್ರೋಣನ ಪ್ರತಿಮೆಯನ್ನು), ಸಂಪೂಜ್ಯ-ಚೆನ್ನಾಗಿ ಅರ್ಚಿಸಿ, ಪರಾಂ-ಉತ್ಕೃಷ್ಟವಾದ, ಸಿದ್ಧಿಂ-(ಶಸ್ತ್ರವಿದ್ಯಾ) ಸಿದ್ಧಿಯನ್ನು ಅವಾಪ್ತವಾನ್-ಹೊಂದಿದನು.

**ವೇತ್ತಿ ಶಕ್ತಿಮಶಕ್ತಿಂ ವಾ ಭಕ್ತಿಶಾಠ್ಯಮಥಾಪಿ ವಾ ॥ ೨೬ ॥**
**ಸಾಕ್ಷೀ ಸರ್ವಗತೋ ವಿಷ್ಣುಃ ಸದೋಕ್ತಫಲದಾಯಕಃ ।**

ಸರ್ವಗತಃ-ಸರ್ವತ್ರಸ್ಥಿತನಾದ, ಸಾಕ್ಷೀ-ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುತ್ತಿರುವ (ಸರ್ವಜ್ಞನಾದ), ವಿಷ್ಣುಃ-ಶ್ರೀವಿಷ್ಣುವು, ಸದಾ-ಎಲ್ಲ ಕಾಲದಲ್ಲಿ, ಉಕ್ತಫಲದಾಯಕಃ-(ಶಾಸ್ತ್ರಗಳಲ್ಲಿ) ಉಕ್ತವಾದ ಫಲಗಳನ್ನು ಕೊಡುವವನಾದ ತಾನು, ಶಕ್ತಿಂ-(ಪೂಜಕನ) ಶಕ್ತಿಯನ್ನೂ, ವಾ-ಅಥವಾ (ಮತ್ತು); ಅಶಕ್ತಿಂ-ಅಶಕ್ತಿಯನ್ನೂ, ಅಥಾಪಿ ವಾ-ಮತ್ತೂ ಭಕ್ತಿಶಾಠ್ಯಂ-(ಭಕ್ತನ) ಭಕ್ತಿಯ ನಿಜತ್ವವನ್ನು ಅಥವಾ ವಂಚಕತ್ವವನ್ನು, ವೇತ್ತಿ-ತಿಳಿಯುತ್ತಾನೆ (ತಿಳಿದು ಭಕ್ತ್ಯನುಸಾರವಾದ ಫಲವನ್ನು ಕೊಡುತ್ತಾನೆ).

**ಸತ್ಯಾಮಪಿ ಚ ಯಃ ಶಕ್ತೌ ಸ್ವದೈನ್ಯಂ ಯಃ ಪ್ರಕಾಶತೇ ॥ ೨೭ ॥**
**ಹರೇಃ ಕೃತಘ್ನಃ ಪಾಪಿಷ್ಠೋ ದರಿದ್ರಃ ಸಪ್ತ ಜನ್ಮಸು ।**
**ಅಶಕ್ತಃ ಶಕ್ತವತ್ಕುರ್ವನ್ ಶಕ್ತಃ ಸ್ಯಾತ್ಸಪ್ತ ಜನ್ಮಸು ॥ ೨೮ ॥**

---

ಭಕ್ತಿಯಿಂದ ಸೇವಿಸಿದ ಏಕಲವ್ಯನಿಗೆ ಸಹ,[1] ಮೃತ್ತಿಕಾನಿರ್ಮಿತ ದ್ರೋಣ ಪ್ರತಿಮೆಯನ್ನು ಪೂಜಿಸಿ, ಸೇವಿಸಿದರೂ, ಶಸ್ತ್ರವಿದ್ಯೆಯಲ್ಲಿ ಉತ್ತಮ ಸಿದ್ಧಿಯನ್ನಿತ್ತನು (೨೫). ಪೂಜಕನ ಶಕ್ತಿ ಅಶಕ್ತಿಗಳನ್ನೂ, ಭಕ್ತಿಯ ನಿಜತ್ವವಂಚಕತ್ವಗಳನ್ನೂ (ಡಾಂಭಿಕತನವನ್ನೂ) ಸದಾ ಸರ್ವತ್ರ ಸರ್ವರಿಗೆ ಶಾಸ್ತ್ರೋಕ್ತ ಫಲದಾಯಕನಾದ ಶ್ರೀ ವಿಷ್ಣುವು ತಿಳಿಯುತ್ತಾನೆ; ಆತನು ಸರ್ವತ್ರ ಇದ್ದು ಸರ್ವಸಾಕ್ಷಿಯಾದ ಸರ್ವಜ್ಞನಾಗಿದ್ದಾನೆ (೨೬). ಯಾರು ದೇಹಧನಾದಿ ಸಂಪತ್ತುಗಳ ಶಕ್ತಿ ಇದ್ದರೂ (ಶ್ರೀಹರಿದತ್ತವಾದ ಸಂಪದಗಳಿಂದ ಆಢ್ಯನಾಗಿದ್ದರೂ), ಅವುಗಳಿಲ್ಲದವನಂತೆ ದೈನ್ಯವನ್ನು (ದಾರಿದ್ರ್ಯಾದಿಗಳನ್ನು) ಪ್ರಕಾಶಪಡಿಸುವನೋ

---

1. ಪೂಜ್ಯಭಾವನೆಯಿಂದ ಮೃತ್ತಿಕಾನಿರ್ಮಿತ ದ್ರೋಣರನ್ನು ಪೂಜಿಸಿದ ಕಾರಣ, ಶ್ರೀಹರಿಯು, ಆತನು ಸ್ವರೂಪದಿಂದ ತಮೋಯೋಗ್ಯನಾದರೂ, ಶಸ್ತ್ರವಿದ್ಯೆಯಲ್ಲಿ ಉತ್ತಮ ಸಿದ್ಧಿಯನ್ನು ಕೊಟ್ಟು, ಸೇವಾನುರೂಪವಾದ ಫಲಗಳನ್ನೀವ, ಪ್ರತಿಮಾಂತಃಸ್ಥಿತನಾದ ತಾನು, ಸರ್ವಸಮನೆಂಬುದನ್ನು ನಿದರ್ಶನ ಮಾಡಿರುವನು.

ಧೈರ್ಯೇಣ ತಸ್ಯ ತುಷ್ಯಂತಿ ದೇವಾ ವಿಷ್ಣುಪುರಃಸರಾಃ ।
ತಥಾಸ್ತ್ವಿತಿ ಹಿ ಭಾಷಂತೇ ಸಮಸ್ತಾಸ್ತತ್ತ್ವದೇವತಾಃ ॥ ೨೯ ॥

ಪ್ರತಿಕೂಲಂ ಚ ದೈನ್ಯ ಚ ನಾತೋ ಬ್ರೂಯಾತ್ ಸ್ವಯಂ ಸುಧೀಃ ।
ಶುಭಂ ವದೇಚ್ಛುಭಂ ಧ್ಯಾಯೇದ್ವಿಪತ್ತಾವಪಿ ಧೀರಧೀಃ ॥ ೩೦ ॥

ಅಧೀರಸ್ಯ ಶುಭಂ ನ ಸ್ಯಾದಿಹ ಲೋಕೇ ಪರತ್ರ ಚ ।

ಯಃ-ಯಾರು (ಯಾವ ಪೂಜಕನು), ಶಕ್ತೌ-ಶಕ್ತಿಯು, (ದೇಹದಾರ್ಢ್ಯ ಧನಾದಿ ಸಂಪದಗಳು), ಸತ್ಯಾಂ ಅಪಿ-ಇದ್ದರೂ ಸಹ, ಯಃ-ಯಾರು, ಸ್ವದೈನ್ಯಂ-ತನ್ನ ಅಶಕ್ತಿಯನ್ನು (ದಾರಿದ್ರ್ಯಾದಿಗಳನ್ನು) ಪ್ರಕಾಶತೇ-ತೋರಿಸುತ್ತಾನೆಯೋ (ಇಲ್ಲದ ಅಶಕ್ತಿಯನ್ನು ತೋರಿಕೊಳ್ಳುತ್ತಾನೆಯೋ) (ಸಃ-ಆತನು), ಹರೇಃ-ಶ್ರೀಹರಿಯು, ಕೃತಘ್ನಃ-ಕೃತಘ್ನನು (ಸಂಪದಾದಿಗಳನ್ನಿತ್ತ ಶ್ರೀಹರಿಯ ಉಪಕಾರವನ್ನು ಸ್ಮರಿಸದ ಕೃತಘ್ನನು); ಪಾಪಿಷ್ಠಃ-ಪಾಪಿಯು; ಸಪ್ತಜನ್ಮಸು-ಏಳು (ಮುಂದಿನ) ಜನ್ಮಗಳಲ್ಲಿ ದರಿದ್ರಃ-ದರಿದ್ರನು (ಆಗುವನು); (ಅದೇ) ಅಶಕ್ತಃ-(ಸಂಪದಾದಿಗಳಿಂದ) ಅಶಕ್ತನಾದವನು, ಶಕ್ತವತ್-ಶಕ್ತನಂತೆ, ಕುರ್ವನ್-(ಶ್ರೀಹರಿ ಪೂಜಾದಿಗಳನ್ನು ನಾನಾ ಅಧಿಷ್ಠಾನಗಳಲ್ಲಿ) ಮಾಡುವವನಾಗಿ, ಸಪ್ತಜನ್ಮಸು-(ಮುಂದಿನ) ಏಳು ಜನ್ಮಗಳಲ್ಲಿ ಶಕ್ತಃ ಸ್ಯಾತ್-(ಸಂಪದಾದಿಗಳಿಂದ) ಆಢ್ಯನಾಗುವನು; ತಸ್ಯ-ಆತನ, ಧೈರ್ಯೇಣ-ಧೈರ್ಯದಿಂದ, ವಿಷ್ಣುಪುರಃಸರಾಃ-ಶ್ರೀವಿಷ್ಣುವೇ ಮೊದಲಾದ, ದೇವಾಃ-ದೇವತೆಗಳು, ತುಷ್ಯಂತಿ-ಸಂತುಷ್ಟರಾದವರಾಗಿ, ತಥಾಸ್ತು ಇತಿ-ಹಾಗೆಯೇ ಆಗಲಿ (ಸಂಪತ್ಪೂರ್ಣನೇ-ಶಕ್ತನೇ ಆಗಲಿ) ಎಂದು, ಭಾಷಂತೇ-ನುಡಿಯುತ್ತಾರೆ; ಸಮಸ್ತಾಃ-ಎಲ್ಲ ತತ್ತ್ವದೇವತಾಃ-ತತ್ತ್ವಾಭಿಮಾನಿದೇವತೆಗಳೂ (ಭಾಷಂತೇ-ಹಾಗೇ ಆಗಲೆಂದು ನುಡಿಯುತ್ತಾರೆ); ಸುಧೀಃ-ವಿವೇಕಿಯಾದವನು, ಸ್ವಯಂ-ತಾನು, ಪ್ರತಿಕೂಲಂ-ತನ್ನ ಸದ್ಗತಿಯನ್ನು ವಿರೋಧಿಸುವ ದೈನ್ಯಂ-ದೈನ್ಯವನ್ನು (ದಾರಿದ್ರ್ಯಾದಿಭಾವವನ್ನು), ಅತಃ-ಈ ಕಾರಣದಿಂದ, ನ ಬ್ರೂಯಾತ್-ಆಡಬಾರದು (ನುಡಿಯಬಾರದು);

---

(ತೋರಿಕೊಳ್ಳುವನೋ), ಅವನು ಕೃತಘ್ನನು—ಪಾಪಿಷ್ಠನು; ಮುಂದಿನ ಏಳು ಜನ್ಮಗಳಲ್ಲಿ ದರಿದ್ರನೇ ಆಗುತ್ತಾನೆ; ಯಾರು ಅಶಕ್ತನಾಗಿದ್ದರೂ, ಶಕ್ತನಂತೆ (ಶಕ್ತಿಮೀರಿ) ಶ್ರೀಹರಿ ಪೂಜಾದಿಗಳನ್ನು ಮಾಡುವನೋ, ಅವನು ಮುಂದಿನ ಏಳು ಜನ್ಮಗಳಲ್ಲಿ ಸಂಪತ್ತಿನಿಂದ ಶಕ್ತನೇ ಆಗುತ್ತಾನೆ (ಆಢ್ಯನಾಗುತ್ತಾನೆ); ಶಕ್ತಿಮೀರಿ ಸೇವೆ ಮಾಡುವ ಆತನ ಧೈರ್ಯದಿಂದ ವಿಷ್ಣು ಮೊದಲಾದ ಎಲ್ಲ ದೇವತೆಗಳು ಸಂತೋಷಿಸುತ್ತಾರೆ—ಎಲ್ಲ ತತ್ತ್ವಾಭಿಮಾನಿ ದೇವತೆಗಳೂ 'ತಥಾಸ್ತು' (ಹಾಗೆಯೇ ಆಗಲಿ) ಎಂದು ನುಡಿಯುತ್ತಾರೆ. ಆದ್ದರಿಂದ ವಿವೇಕಿಯು, ತನ್ನ ಮುಂದಿನ ಗತಿಗೆ ಪ್ರತಿಕೂಲವಾದ

ಧೀರಧೀಃ-ಧೈರ್ಯವಾದ ಮನಸ್ಸುಳ್ಳವನಾಗಿ (ಶಕ್ತ್ಯನುಸಾರ ಪೂಜಾದಿಗಳನ್ನು ಮಾಡುವವನಾಗಿ), ಶುಭಂ-ಶುಭವನ್ನು (ಒಳ್ಳೆಯದನ್ನು-ಮಂಗಳನುಡಿಯನ್ನು), ವದೇತ್-ನುಡಿಯತಕ್ಕದ್ದು; ಶುಭಂ-ಶುಭವನ್ನೇ-ವಿಪತ್ಸ್ವಪಿ-ವಿಪತ್ತಿನಲ್ಲಿ ಸಹ ಧ್ಯಾಯೇತ್-ಚಿಂತಿಸಬೇಕು; ಹಿ-ಏಕೆಂದರೆ, ಅಧೀರಸ್ಯ-ಧೈರ್ಯವಿಲ್ಲದವನಿಗೆ (ಅಧೈರ್ಯದಿಂದ-ಸಂಪದಾದಿಗಳು ನಷ್ಟವಾಗುವುವೆಂಬ ಭಯದಿಂದ, ಇಲ್ಲದ ಅಶಕ್ತತೆಯನ್ನು ತನ್ನಲ್ಲಿ ಆರೋಪಿಸಿಕೊಳ್ಳುವವನಿಗೆ), ಇಹ ಲೋಕೇ-ಈ ಲೋಕದಲ್ಲಿಯೂ, ಪರತ್ರ ಚ-ಪರಲೋಕದಲ್ಲಿಯೂ (ಲೋಕ-ದೇಹ, ಈ ದೇಹದಲ್ಲಿ ಮತ್ತು ಮುಂದಿನ ಜನ್ಮಗಳಲ್ಲಿ ಸಹ) ಶುಭಂ-ಶುಭವು (ಮಂಗಲವು), ನ ಸ್ಯಾತ್-ಉಂಟಾಗುವುದಿಲ್ಲ

**ನಿಷ್ಕಾಮೋ ವಾ ಸಕಾಮೋ ವಾ ಪುಣ್ಯಂ ಯಃ ಕೃತವಾನ್ ಪುರಾ ॥ ೩೧॥**
**ಇದಾನೀಂ ಸ ಸುಖಂ ಭುಂಕ್ತೇ ಪಾಪಮಪ್ಯಾಚರನ್ ನರಃ ।**

ಯಃ-ಯಾರು, ಪುರಾ-ಹಿಂದೆ (ಪೂರ್ವಜನ್ಮಗಳಲ್ಲಿ), ನಿಷ್ಕಾಮಃ ವಾ- ಫಲಾಪೇಕ್ಷೆಯನ್ನು ತೊರೆದಾಗಲಿ, ಸಕಾಮಃ ವಾ-ಫಲಾಪೇಕ್ಷೆಯಿಂದಲೇ ಆಗಲೀ, ಪುಣ್ಯಂ-ಪುಣ್ಯವನ್ನು (ಪುಣ್ಯಪ್ರಾಪಕ ಕರ್ಮಗಳನ್ನು) ಕೃತವಾನ್-ಮಾಡಿರುವನೋ, ಸಃ-ಆತನು, ಇದಾನೀಂ-ಈಗ (ಈ ಜನ್ಮದಲ್ಲಿ), ಸುಖಂ-ಸುಖವನ್ನು ಭುಂಕ್ತೇ-ಭೋಗಿಸುತ್ತಾನೆ; ನರಃ-ಮನುಷ್ಯನು, ಪಾಪಂ ಅಪಿ-ಪಾಪವನ್ನೂ ಆಚರನ್-ಆಚರಿಸುವವನಾಗಿ, (ಸುಖಂ ಭುಂಕ್ತೇ-ಸುಖವನ್ನು ಅನುಭವಿಸುವುದೂ ಕಂಡಿರುತ್ತದೆ).

**ಪಾಪಿಷ್ಠಾ ಅಪಿ ಯೇ ಲೋಕೇ ದೃಶ್ಯಂತೇ ಸುಖಭಾಗಿನಃ ॥ ೩೨ ॥**

**ಸ್ತ್ರೀಪುತ್ರಧನವಂತಶ್ಚ ತೈಃ ಪುಣ್ಯಂ ಹಿ ಪುರಾ ಕೃತಂ ।**
**ಏವಮೇವ ಹಿ ಲೋಕೇಽಸ್ಮಿನ್ ಪುಣ್ಯಾಚಾರಾ ಅಪಿ ಸ್ಫುಟಂ ॥ ೩೩ ॥**

---

ಇಲ್ಲದ ದೈನ್ಯಾದಿಗಳನ್ನು ಹೇಳಿಕೊಳ್ಳಬಾರದು; ಯಾವಾಗಲೂ ಬುದ್ಧಿಶಾಲಿಯಾದವನು, ಶುಭವನ್ನೇ ನುಡಿಯಬೇಕು—ಶುಭವನ್ನೇ ಚಿಂತಿಸಬೇಕು; ವಿಪತ್ತಿನಲ್ಲಿದ್ದಾಗಲೂ ಹೀಗೆ ವರ್ತಿಸಬೇಕು; ಧೈರ್ಯದಿಂದ ಶಕ್ತ್ಯನುಸಾರ ಶ್ರೀಹರಿ ಸೇವಾದಿಗಳನ್ನು ಸಲ್ಲಿಸುವುದು ಹೀಗೆ ಮುಂದಿನ ಜನ್ಮಗಳಲ್ಲಿ ಶುಭಪ್ರದವಾದುದರಿಂದ, ಹಾಗೆ ಧೀರನಾಗಿ ವರ್ತಿಸಬೇಕು—ಅಧೀರನಿಗೆ, ಇಹಪರಗಳಲ್ಲಿ ಶುಭಪ್ರಾಪ್ತಿಯಾಗುವುದಿಲ್ಲ (೨೭-೩೦). ಪೂರ್ವದಲ್ಲಿ (ಜನ್ಮಾಂತರದಲ್ಲಿ), ಯಾರು ಫಲಾಪೇಕ್ಷೆಯಿಂದಾಗಲಿ, ನಿಷ್ಕಾಮರಾಗಿ ಆಗಲಿ, ಪುಣ್ಯವನ್ನು ಆಚರಿಸಿರುವರೋ, ಅವರು ಈಗ (ಇಹಜನ್ಮದಲ್ಲಿ) ಸುಖವನ್ನು ಭೋಗಿಸುತ್ತಾರೆ—ಪಾಪಾಚಾರದಲ್ಲಿ ನಿರತರಾಗಿರುವವರೂ, ಸುಖಾನುಭವ ಮಾಡುವುದು ಲೋಕದಲ್ಲಿ ಕಂಡುಬರುತ್ತದೆ (೩೧) ಪಾಪಾಚಾರ ದಲ್ಲಿರುವವರೂ, ಸುಖಭೋಗ ಸಾಮಗ್ರಿಗಳಾದ, ಸ್ತ್ರೀಪುತ್ರ ಧನಾದಿಗಳಿಂದ ಆಢ್ಯರಾಗಿ ಸುಖವನ್ನು

ಪೂರ್ವಪಾಪಫಲಾತ್ಕೇಚಿದ್ದೃಶ್ಯಂತೇ ದುಃಖಭಾಗಿನಃ ।

ಯೇ-ಯಾರು, ಪಾಪಿಷ್ಠಾಃ ಅಪಿ-ಪಾಪಾಚಾರದಲ್ಲಿದ್ದರೂ, ಸುಖಭಾಗಿನಃ-ಸುಖಭಾಗಿಗಳಾಗಿರುವರು, ಲೋಕೇ-(ಎಂದು) ಲೋಕದಲ್ಲಿ ದೃಶ್ಯಂತೇ- ಕಂಡುಬರುವರು; ಸ್ತ್ರೀಪುತ್ರಧನವಂತಃ ಚ-ಪತ್ನಿ ಪುತ್ರ, ಧನಾದಿಗಳುಳ್ಳವರೂ (ಆಗಿರುವುದು ಕಂಡುಬರುತ್ತದೆ); ತೈಃ-ಅಂಥವರಿಂದ, ಪುರಾ-ಪೂರ್ವದಲ್ಲಿ ಪುಣ್ಯಂ-ಪುಣ್ಯವು, ಕೃತಂ ಹಿ-ಮಾಡಲ್ಪಟ್ಟಿರುತ್ತದೆಂಬುದು ನಿಶ್ಚಯ; ಏವಂ ಏವ-ಹೀಗೆಯೇ, ಅಸ್ಮಿನ್ ಲೋಕೇ-ಈ (ಮನುಷ್ಯ) ಲೋಕದಲ್ಲಿ ಸ್ಫುಟಂ-ಸ್ಪಷ್ಟವಾಗಿ, (ಎಲ್ಲರಿಗೂ ಕಾಣುವಂತೆ), ಪುಣ್ಯಾಚಾರಾಃ ಅಪಿ-ಪುಣ್ಯಾಚಾರವುಳ್ಳವರೂ, ಕೇಚಿತ್-ಕೆಲವರು, ದುಃಖಭಾಗಿನಃ-ದುಃಖಭಾಗಿಗಳಾಗಿ, ದೃಶ್ಯಂತೇ-ಕಂಡುಬರು ವರು; ಪೂರ್ವಪಾಪಫಲಾತ್-(ಹೀಗೆ ದುಃಖಭಾಗಿಗಳಾಗಿರುವುದು) ಪೂರ್ವ ಪಾಪದ ಫಲವಾಗಿ (ಈಗಿನ ಪುಣ್ಯಾಚಾರ ದಿಂದಲ್ಲ).

ವೃಕ್ಷಾದಿತುಲ್ಯಧರ್ಮಾಣಿ ವಿಂದ್ಯಾತ್ಕರ್ಮಾಣಿ ಸರ್ವಶಃ ॥ ೩೪ ॥
ಅತಃ ಸದ್ಯಃಫಲಂ ನೈಷಾಂ ಕಿಂತು ಕಾಲೇನ ಲಭ್ಯತೇ ।
ತೃಣಶಾಕೌಷಧೀಗುಲ್ಮವೃಕ್ಷಾದಿಭ್ಯಃ ಫಲಾಪ್ತಯಃ ॥ ೩೫ ॥
ಚಿರಾಚ್ಚಿರತರಾತ್ಕಾಲಾಚ್ಚಿರಂ ಚಿರತಮಾದ್ಯಥಾ ।
ತಥಾ ಕರ್ಮವಿಶೇಷಾಣಾಂ ಪಾಕಕಾಲೇ ವಿಲಂಬತಾ ॥ ೩೬ ॥
ಗೃಹದಾಹೇ ಸಮುತ್ಪನ್ನೇ ಕೂಪಸ್ಯ ಖನನಂ ಯಥಾ ।
ಸದ್ಯೋ ನೈವೋಪಕುರ್ವೀತ ತಥಾ ಕರ್ಮಫಲಂ ಸ್ಮೃತಂ ॥ ೩೭ ॥
ಪೂರ್ವಮುಪ್ತಂ ಯಥೇದಾನೀಂ ಭುಜ್ಯತೇ ಮಾನವೈರಿಹ ।
ತಥೇದಾನೀಂ ಯದುಪ್ತಂ ಸ್ಯಾತ್ ತದಗ್ರೇ ಫಲದಂ ಭವೇತ್ ॥ ೩೮ ॥

---

ಅನುಭವಿಸುತ್ತಿರುವುದು ಅವರು, ಪೂರ್ವದಲ್ಲಿ ಮಾಡಿರುವ ಪುಣ್ಯಫಲದಿಂದ; ಹೀಗೆಯೇ ಈಗ ನಾನಾ ಪುಣ್ಯಾಚರಣೆಗಳುಳ್ಳವರೂ, ದುಃಖಾನುಭವವುಳ್ಳವರಾಗಿರುವುದು ಕಂಡುಬರುತ್ತದೆ—ಇದಕ್ಕೆ ಇವರ ಪೂರ್ವಕೃತವಾದ ಪಾಪವೇ ಕಾರಣವೆಂದು ತಿಳಿಯಬೇಕು (೩೨-೩೩). ಎಲ್ಲ ಕರ್ಮಗಳೂ ಫಲ ಕೊಡುವುದರಲ್ಲಿ ವೃಕ್ಷಾದಿಗಳಿದ್ದಂತೆ, ಎಂದು ತಿಳಿಯಬೇಕು; ಆದ್ದರಿಂದ ಕರ್ಮಗಳಿಂದ ತತ್ಕಾಲದಲ್ಲಿ ಅವುಗಳ ಫಲವು ದೊರೆಯುವುದಿಲ್ಲ—ಕಿಂತು ಕಾಲಾಂತರದಲ್ಲಿ ಲಭಿಸುತ್ತದೆ; ತೃಣ, ಶಾಕ, ಓಷಧಿ (ಲತೆ), ಗುಲ್ಮ (ಪೊದೆ), ವೃಕ್ಷ (ಮರ) ಮೊದಲಾದವುಗಳಿಂದ, ಒಂದಕ್ಕಿಂತ ಒಂದು ಅಧಿಕವಾದ ಕಾಲಾಂತರದಲ್ಲಿ (ಆಮೇಲಿನ—ಮುಂದಿನ ಕಾಲದಲ್ಲಿ) ಫಲಪ್ರಾಪ್ತಿಯಾಗುವಂತೆ, ಕರ್ಮಗಳ ಫಲವನ್ನೂ ತಿಳಿಯಬೇಕು;

ಸರ್ವಶಃ-ಎಲ್ಲ ಪ್ರಕಾರದ, ಕರ್ಮಾಣಿ-ಕರ್ಮಗಳು, ವೃಕ್ಷತುಲ್ಯ ಧರ್ಮಾಣಿ-ವೃಕ್ಷಗಳಂತಿರುವ (ಧರ್ಮವುಳ್ಳವೆಂದು) ಸ್ವಭಾವವುಳ್ಳವೆಂದು, ಪಿಂದ್ಯಾತ್-ತಿಳಿಯ ತಕ್ಕದ್ದು; ಅತಃ-ಆದ್ದರಿಂದ, ಏಷಾಂ-ಇವುಗಳಿಗೆ (ಕರ್ಮಗಳಿಗೆ), ಸದ್ಯಃಫಲಂ-ತತ್ಕಾಲದಲ್ಲಿ (ಕರ್ಮವನ್ನು ಆಚರಿಸಿದ ಕಾಲದಲ್ಲಿ) ಫಲವು, ನ-ಇಲ್ಲ (ದೊರೆಯುವುದಿಲ್ಲ); ಕಿಂತು-ಮತ್ತೇನೆಂದರೆ, ಕಾಲೇನ-ಕಾಲಾಂತರದಲ್ಲಿ (ಮುಂದೆ), ಲಭ್ಯತೇ-ಲಭಿಸುತ್ತದೆ; ತೃಣಶಾಕೌಷಧೀ ಗುಲ್ಮವೃಕ್ಷಾದಿಭ್ಯಃ-ತೃಣ, ಶಾಕ, ಓಷಧಿ, ಗುಲ್ಮ, ವೃಕ್ಷಾದಿ ಸಸ್ಯಗಳಿಂದ, ಫಲಾಪ್ತಯಃ-ಫಲಪ್ರಾಪ್ತಿಗಳು, ಯಥಾ-ಹೇಗೆ, ಚಿರಾತ್-ಚಿರತರಾತ್ ಕಾಲಾತ್-ಅಧಿಕಾಧಿಕ ಕಾಲ ವ್ಯತ್ಯಾಸದಿಂದ, ಚಿರಂಚಿರತಮಾತ್-(ಬೇಗ ಮತ್ತು ತಡವಾಗಿ) ಬಹುಕಾಲ ವ್ಯತ್ಯಾಸದಿಂದ ಆಗುವುವೋ, ತಥಾ-ಹಾಗೆ, ಕರ್ಮವಿಶೇಷಾಣಾಂ-ವಿವಿಧ ಕರ್ಮಗಳ, ಪಾಕಕಾಲೇ-ಫಲಕೊಡುವ ಕಾಲದಲ್ಲಿ, ವಿಲಂಬತಾ-ವಿಲಂಬವು (ಕಾಲ ವ್ಯವಧಾನವು) ಸಂಭವಿಸುತ್ತದೆ; ಗೃಹದಾಹೇ ಸುಮುತ್ಪನ್ನೇ-ಮನೆಯು ದಹಿಸುತ್ತಿರಲು, ಕೂಪಸ್ಯ-ಭಾವಿಯ, ಖನನಂ- ತೋಡುವುದು (ಅಗಿಯುವುದು), ಯಥಾ-ಹೇಗೆ, ಸದ್ಯಃ-ಆ ಕಾಲದಲ್ಲಿ, ನೈವ ಉಪಕುರ್ವೀತ-ಉಪಕಾರಕವಾಗುವುದಿಲ್ಲವೋ (ಫಲವುಳ್ಳದ್ದು ಆಗುವುದಿಲ್ಲವೋ), ತಥಾ-ಹಾಗೆ, ಕರ್ಮಫಲಂ-ಕರ್ಮಫಲವೂ, ಸ್ಮೃತಂ-(ಎಂದು) ತಿಳಿಯಲ್ಪಡುತ್ತದೆ; ಇಹ-ಇಲ್ಲಿ (ಪ್ರತ್ಯಕ್ಷದಿಂದ ಕಂಡುಬರುವಂತೆ), ಪೂರ್ವಂ-ಮೊದಲು (ಹಿಂದೆ), ಉಪ್ತಂ ಸ್ಯಾತ್-ಬಿತ್ತಿದುದಾಗಿದ್ದು ಯಥಾ-ಹೇಗೆ, ಮಾನವೈಃ-ಮನುಷ್ಯರಿಂದ, ಇದಾನೀಂ-ಈಗ, ಭುಜ್ಯತೇ-ಭೋಗಿಸಲ್ಪಡುವುದೋ, ತಥಾ-ಹಾಗೆ, ಯತ್-ಯಾವುದು (ಬೀಜದಂತಿರುವ ಕರ್ಮವು), ಇದಾನೀಂ-ಈಗ, ಉಪ್ತಂ ಸ್ಯಾತ್- ಬಿತ್ತಲ್ಪಡುವುದೋ (ಮಾಡಲ್ಪಡುವುದೋ), ತತ್-ಅದು, ಅಗ್ರೇ-ಮುಂದೆ (ಭವಿಷ್ಯತ್ಕಾಲದಲ್ಲಿ), ಫಲದಂ-ಫಲವನ್ನು ಕೊಡುವುದು, ಭವೇತ್-ಆಗುತ್ತದೆ.

**ಅತೋ ನೈವೋದ್ವಿಜೇತ್ತುಸ್ಮಾತ್ ದೃಷ್ಟ್ವಾ ಪಾಪಾನ್ ಸುಖಾನ್ವಿತಾನ್ ।**
**ದುಃಖಿತಾಂಶ್ಚ ಸದಾಚಾರಾನ್ ರಹಸ್ಯಂ ಕರ್ಮಣಾಂ ಸ್ಮರನ್ ॥ ೩೯ ॥**

---

ಭಿನ್ನಕರ್ಮಗಳ ಫಲಕೊಡುವ (ಪಕ್ವ) ಕಾಲವು, ಭಿನ್ನ ಭಿನ್ನವಾಗಿದ್ದು ಕಾಲ ವಿಳಂಬದಿಂದ ಫಲಪ್ರಾಪ್ತಿಯಾಗುತ್ತದೆ; ಮನೆಗೆ ಬೆಂಕಿ ಹಚ್ಚಿದಾಗ, ಬಾವಿಯನ್ನು ಅಗಿಯಲಾರಂಭಿಸುವುದು ಹೇಗೆ ಮೂರ್ಖತನವೋ ಆ ಕರ್ಮವು ತತ್ಕಾಲದಲ್ಲಿ ಹೇಗೆ ಉಪಯುಕ್ತವಾಗುವುದಿಲ್ಲವೋ, ಹಾಗೆ, ಆಗ ಮಾಡಿದ ಕರ್ಮವು, ಸದ್ಯಃ ಕಾಲದಲ್ಲಿ (ಆಗಲೇ) ಉಪಕಾರವಾಗುವುದಿಲ್ಲವೆಂದು, ಕರ್ಮಫಲ ನಿಯಮವು ಜ್ಞಾನಿಗಳಿಂದ ತಿಳಿಯಲ್ಪಟ್ಟಿದೆ. ಹಿಂದೆ ಬಿತ್ತಿದ್ದರ ಫಲವನ್ನು ಈಗ ಭೋಗಿಸುವಂತೆ, ಮನುಷ್ಯರಿಂದ ಈಗ ಆಚರಿಸಲ್ಪಡುವ ಕರ್ಮವು, ಮುಂದೆ ಫಲವನ್ನು ಕೊಡುತ್ತದೆಂದು ತಿಳಿಯಬೇಕು

ಅತಃ-ಆದ್ದರಿಂದ (ಕರ್ಮಗತಿಯು ಹೀಗಿರುವುದರಿಂದ), ಸುಖಾನ್ವಿತಾನ್-ಸುಖದಿಂದಿರುವ, ಪಾಪಾನ್-ಪಾಪಾಚಾರರನ್ನು ದೃಷ್ಟ್ವಾ-ಕಂಡು, ಚ-ಮತ್ತು ದುಃಖಿತಾನ್-ದುಃಖಪಡುತ್ತಿರುವ, ಸದಾಚಾರಾನ್-ಪುಣ್ಯಾಚಾರರನ್ನು ದೃಷ್ಟ್ವಾ-ಕಂಡು, ಕರ್ಮಣಾಂ-ಕರ್ಮಗಳ, ರಹಸ್ಯಂ-ರಹಸ್ಯವನ್ನು (ಫಲಪ್ರದಾನ ಸಂಬಂಧದ ಸೂಕ್ಷ್ಮ ಪ್ರಮೇಯವನ್ನು), ಸ್ಮರನ್-ಚಿಂತಿಸುವನಾಗಿ, ಪುಣ್ಯಾತ್-ಪುಣ್ಯವನ್ನು ಆಚರಿಸುವುದರಿಂದ, ನೈವ ಉದ್ವಿಜೇತ್-ಎದೆಗುಂದಕೂಡದು, (ಅಪ್ರಯೋಜಕ ವೆಂದು ವಿಮುಖನಾಗಬಾರದು-ಪುಣ್ಯಗಳನ್ನು ಆಚರಿಸುವುದನ್ನು ಬಿಡಕೂಡದು).

**ತಥೇಶಃ ಕುರುತೇ ಮೂರ್ಖಾನ್ ಪಾಪಿನೋಽಪಿ ಮಹಾಧನಾನ್ ।**

**ಯಥಾ ಸಹಸ್ರಶಃ ಪ್ರಾಜ್ಞಾ ದೃಷ್ಟ್ವಾ ತಾನ್ ಸ್ಯುಃ ಸುವಿಸ್ಮಯಾಃ ॥ ೪೦ ॥**

ಸಹಸ್ರಶಃ-ಸಾವಿರಾರು, ಪ್ರಾಜ್ಞಾಃ-ವಿವೇಕಿಗಳು, ತಾನ್-ಅವರನ್ನು, ದೃಷ್ಟ್ವಾ-ಕಂಡು, ಯಥಾ-ಹೇಗೆ, ಸುವಿಸ್ಮಯಾಃ-ಆಶ್ಚರ್ಯಚಕಿತರು, ಸ್ಯುಃ-ಆಗುವರೋ, ತಥಾ-ಹಾಗೆ, ಮೂರ್ಖಾನ್-ಮೂರ್ಖರನ್ನೂ (ಅವಿವೇಕಿಗಳನ್ನೂ), ಅಪಿ-ಮತ್ತು ಪಾಪಿನಃ-ಪಾಪಾಚಾರರನ್ನೂ ಈಶಃ-ಶ್ರೀಹರಿಯು, ಮಹಾಧನಾನ್-ಮಹಾಧನವಂತ ರನ್ನಾಗಿ, ಕುರುತೇ-ಮಾಡುತ್ತಾನೆ.

**ನ ಹಿ ಪಾಪಾಃ ಸರ್ವಥೈವ ಸರ್ವೇಽಪಿ ಸುಖಭಾಗಿನಃ ।**

**ಪುಣ್ಯಾತ್ಮಾನಶ್ಚ ಸರ್ವೇಽಪಿ ದುಃಖಭಾಜೋ ನ ಸರ್ವಥಾ ॥ ೪೧ ॥**

**ನ ಹಿ ಕಶ್ಚಿತ್ಸುಖಂ ಲೋಕೇ ಸರ್ವೈರರ್ಥೈಶ್ಚ ಸರ್ವದಾ ।**

**ತಥಾ ನ ದುಃಖಿನೋ ಲೋಕೇ ಸರ್ವೈರರ್ಥೈಶ್ಚ ಸರ್ವದಾ ॥ ೪೨ ॥**

ಸರ್ವೇ-ಸಮಸ್ತ ಪಾಪಾಃ-ಪಾಪಿಗಳು (ಪಾಪಕರ್ಮಗಳಲ್ಲಿ ತೊಡಗಿದವರು), ಸರ್ವಥಾ ಏವ-ಎಲ್ಲ ಪ್ರಕಾರದಿಂದಲೂ, ಸುಖಭಾಗಿನಃ-ಸುಖವುಳ್ಳವರು, ನಹಿ-ಆಗಿರುವುದಿಲ್ಲವಷ್ಟೆ, ಅಪಿ-ಮತ್ತು ಸರ್ವೇಽಪಿ ಪುಣ್ಯಾತ್ಮಾನಃ-ಎಲ್ಲ ಪುಣ್ಯಾಚಾರ

---

(೩೪-೩೮). ಕರ್ಮಗತಿಯು ಹೀಗಿರುವುದರಿಂದ, ಸುಖದಿಂದಿರುವ ಪಾಪಿಷ್ಠರನ್ನೂ ದುಃಖಿಸುತ್ತಿರುವ ಪುಣ್ಯಾಚಾರವುಳ್ಳವರನ್ನೂ ಕಂಡು, ಪುಣ್ಯಗಳನ್ನು ಆಚರಿಸುವುದ ರಿಂದ ವಿಮುಖನಾಗಬಾರದು; ಪೂರ್ವೋಕ್ತ ಕರ್ಮರಹಸ್ಯವನ್ನು ಸ್ಮರಿಸಿ, ಧೈರ್ಯದಿಂದ ಸತ್ಕರ್ಮಾನುಷ್ಠಾನಪರನಾಗಬೇಕು (೩೯). ಶ್ರೀಹರಿಯು, ಪಾಪಿಗಳಾದ ಮೂರ್ಖರನ್ನು ಮಹಾ ಧನಿಕರನ್ನಾಗಿ ಮಾಡುತ್ತಾನೆ; ಅವರ ಪೂರ್ವಕರ್ಮವನ್ನು ನಿಮಿತ್ತ ಮಾಡಿ ಸ್ವೇಚ್ಛೆಯಿಂದ ಶ್ರೀಮಂತರನ್ನಾಗಿ ಮಾಡಿದಾಗ, ಅದನ್ನು ಕಂಡ ಸಾವಿರಾರು ಮಂದಿ ವಿವೇಕಿಗಳು ಸಹ ಆಶ್ಚರ್ಯಚಕಿತರಾಗುತ್ತಾರೆ (೪೦). ಲೋಕದಲ್ಲಿ ಎಲ್ಲ ಪಾಪಿಗಳೂ ಸರ್ವಪ್ರಕಾರದಿಂದ ಸುಖಭಾಗಿಗಳಾಗಿರುವುದಿಲ್ಲ ಹಾಗೆಯೇ ಎಲ್ಲ ಪುಣ್ಯಾತ್ಮರೂ, ಸರ್ವವಿಧದಿಂದ ದುಃಖಭಾಗಿಗಳೂ ಆಗಿರುವುದಿಲ್ಲ

ವುಳ್ಳವರೂ, ಸರ್ವಥಾ-ಎಲ್ಲ ವಿಧದಿಂದ, ದುಃಖಭಾಜಃ-ದುಃಖಭಾಗಿಗಳು, ನ-ಆಗಿರುವುದಿಲ್ಲ; ಲೋಕೇ-ಜಗತ್ತಿನಲ್ಲಿ ಸರ್ವೈಃ-ಎಲ್ಲಾ ಅರ್ಥೈಃ-(ಸುಖ) ಸಾಮಗ್ರಿಗಳಿಂದ, ಸರ್ವದಾ-ಎಲ್ಲ ಕಾಲದಲ್ಲಿ ಸುಖಿಂ-ಸುಖವೆಂಬುದು, ಕಶ್ಚಿತ್-ಯಾವುದೊಂದೂ, ನಹಿ-ಇಲ್ಲ(ಇದೂ ಲೋಕಸಿದ್ಧವೇ); ತಥಾ-ಅದರಂತೆ, ಸರ್ವೈಃ-ಎಲ್ಲ ಅರ್ಥೈಃ-ವಸ್ತುಗಳಿಂದ, ಸರ್ವದಾ-ಸದಾ, ದುಃಖಿನಃ-ದುಃಖವುಳ್ಳವರು, ಲೋಕೇ-ಲೋಕದಲ್ಲಿ ನ-ಇರುವುದಿಲ್ಲ.

**ಕಶ್ಚಿದ್ಧನೀ ಪುತ್ರಹೀನಃ ಸ್ತ್ರೀಹೀನೋ ರೋಗಿಕೋಽಪಿ ವಾ ।**
**ಷಂಢಃ ಕುಷ್ಠೀ ನೇತ್ರಹೀನೋ ನಾನೋಪದ್ರವಸಂಯುತಃ ॥ ೪೩ ॥**

**ಅಧನಾ ಮಂದಭಾಗ್ಯಾಶ್ಚ ಕೇಚಿತ್ ಕಿಂಚಿತ್ಸುಖಾನ್ವಿತಾಃ ।**
**ಅತೋ ಮಿಶ್ರಂ ಫಲಂ ಲೋಕೇ ಯಾವನ್ಮುಕ್ತಿರವಾಪ್ಯತೇ ॥ ೪೪ ॥**

ಕಶ್ಚಿತ್-ಯಾವನೊಬ್ಬನು, ಧನೀ-ಧನವಂತನಾಗಿದ್ದು ಪುತ್ರಹೀನಃ-ಮಕ್ಕಳಿಲ್ಲದವನೂ, ಸ್ತ್ರೀಹೀನಃ-ಹೆಂಡತಿ ಇಲ್ಲದವನೂ, ವಾ-ಅಥವಾ, ರೋಗಿಕಃ- ರೋಗಿಯೂ, ಷಂಢಃ-ಪುಂಸ್ತ್ವವಿಲ್ಲದವನೂ (ಪುರುಷತ್ವಹೀನನೂ), ಕುಷ್ಠೀ- ಕುಷ್ಠರೋಗಿಯೂ, ನೇತ್ರಹೀನಃ-ಕಣ್ಣಿಲ್ಲದವನೂ, ನಾನೋಪದ್ರವಸಂಯುತಃ-ವಿವಿಧ ಪೀಡೆಗಳುಳ್ಳವನೂ (ಆಗಿರುವುದು ಕಂಡುಬರುತ್ತದೆ); ಕೇಚಿತ್-ಕೆಲವರು, ಅಧನಾಃ- ದರಿದ್ರರು, ಮಂದಭಾಗ್ಯಾಃ-ಅಲ್ಪಭಾಗ್ಯ (ಪುಣ್ಯ)ವುಳ್ಳವರಾದರೂ, ಕಿಂಚಿತ್-ಸ್ವಲ್ಪ ವಾದ, ಸುಖಾನ್ವಿತಾಃ-ಸುಖವುಳ್ಳವರಾಗಿರುತ್ತಾರೆ; ಅತಃ-ಇದರಿಂದ, ಮುಕ್ತಿ -ಮೋಕ್ಷವು, ಯಾವತ್ ಅವಾಪ್ಯತೇ-ಹೊಂದಲಡುವವರೆಗೆ, ಲೋಕೇ- ಲೋಕದಲ್ಲಿ(ಈ ಮನುಷ್ಯ ದೇಹದಲ್ಲಿ), ಫಲಂ-(ಕರ್ಮಫಲವು) ಸುಖದುಃಖ ರೂಪವಾದುದು, ಮಿಶ್ರಂ- ಮಿಶ್ರವಾಗಿಯೇ (ಸುಖದುಃಖಗಳು ಕೂಡಿಯೇ) ಇರುತ್ತದೆ.

---

ಎಲ್ಲ ವಸ್ತುಗಳಿಂದ, ಎಲ್ಲ ಕಾಲದಲ್ಲಿ ಸುಖವುಳ್ಳವನು, ಲೋಕದಲ್ಲಿ ಯಾವನೊಬ್ಬನೂ ಕಂಡುಬರುವುದಿಲ್ಲ; ಅದರಂತೆ ಎಲ್ಲ ಸಾಮಗ್ರಿಗಳಿಂದ ಸರ್ವದಾ ದುಃಖಿಗಳಾಗಿರುವರೂ, ಲೋಕದಲ್ಲಿಲ್ಲ (೪೧-೪೨). ಒಬ್ಬನು, ಶ್ರೀಮಂತ (ಧನಿಕ)ನಾಗಿರುತ್ತಾನೆ—ಮಕ್ಕಳಿರುವುದಿಲ್ಲ, ಹೆಂಡತಿ ಇರುವುದಿಲ್ಲ—ಅಥವಾ ರೋಗಿಯಾಗಿರುತ್ತಾನೆ; ಇಲ್ಲವೇ ಪುರುಷತ್ವವೇ ಇರುವುದಿಲ್ಲ; ಕುಷ್ಠರೋಗಿಯೋ ಕುರುಡನೋ ಆಗಿರುತ್ತಾನೆ; ಹೀಗೆ ವಿವಿಧ ಪೀಡೆಗಳಿಂದ ದುಃಖಿಸುತ್ತಾನೆ. ಕೆಲವರು ದರಿದ್ರರು, ಮಂದಭಾಗ್ಯರಾದರೂ, ಕಿಂಚಿತ್ಸುಖವುಳ್ಳವರಾಗಿಯೇ ಇರುತ್ತಾರೆ. ಆದ್ದರಿಂದ ಈ ಲೋಕದಲ್ಲಿ ಮೋಕ್ಷವು ದೊರೆಯುವವರೆಗೆ, ಕರ್ಮಫಲವಾದ ಸುಖದುಃಖಗಳು, ಸರ್ವದಾ ಮಿಶ್ರವಾಗಿಯೇ ಇರುತ್ತವೆ (೪೩-೪೪). ಪೂರ್ವ ಪುಣ್ಯಾಪಾಪಗಳ

**ಶರೀರಂ ಪುಣ್ಯಪಾಪಾಭ್ಯಾಂ ಮೃಜ್ಜಲಾಭ್ಯಾಂ ಯಥಾ ಘಟಃ ।**
**ಪುಣ್ಯವಾನ್ ಪಾಪವಾನ್ ವಾಪಿ ಭೂಯಸ್ತ್ವಾದ್ವ್ಯಪದಿಶ್ಯತೇ ॥ ೪೫ ॥**

ಪುಣ್ಯಪಾಪಾಭ್ಯಾಂ-(ಪೂರ್ವ) ಪುಣ್ಯಪಾಪಗಳಿಂದ, ಶರೀರಂ-ಈ ಶರೀರವು (ಅದುದು ಅವುಗಳ ಭೋಗಕ್ಕಾಗಿ ಜೀವನಿಗೆ ದೊರಕಿಸಲ್ಪಟ್ಟಿರುವುದು). ಯಥಾ-ಹೇಗೆ, ಮೃಜ್ಜಲಾಭ್ಯಾಂ-ಮಣ್ಣುನೀರುಗಳಿಂದಾದ, ಘಟಃ-ಘಟವು (ಗಡಿಗೆಯು) (ಮೃತ್ತಿಕೆಯೇ ಅಧಿಕವಾಗಿರುವುದರಿಂದ, ಮಣ್ಣಿನ ಗಡಿಗೆ ಎಂದು ಹೇಳಲ್ಪಡುತ್ತದೆಯೋ); (ತಥಾ-ಹಾಗೆ), ಪುಣ್ಯವಾನ್-(ಶರೀರದಲ್ಲಿರುವ ಜೀವನು) ಪುಣ್ಯವಂತನು, ಅಪಿ ವಾ-ಅಥವಾ, ಪಾಪವಾನ್-ಪಾಪವಂತನು, (ಇತ್ಯಾದಿಯಾಗಿ), ಭೂಯಸ್ತ್ವಾತ್-(ಪೂರ್ವ ಪುಣ್ಯಪಾಪಗಳ) ಆಧಿಕ್ಯದಿಂದ (ಪ್ರಾಚುರ್ಯದಿಂದ), ವ್ಯಪದಿಶ್ಯತೇ-ಕರೆಯಲ್ಪಡುವನು (ಅಧಿಕ ಸುಖಿಯಾದರೆ ಪುಣ್ಯವಂತನೆಂದೂ, ದುಃಖಾಧಿಕ್ಯವುಳ್ಳವನಾದರೆ ಪಾಪಿಯೆಂದೂ ವ್ಯವಹರಿಸಲ್ಪಡುತ್ತಾನೆ).

**ಅತಃ ಸರ್ವಾಣಿ ಕರ್ಮಾಣಿ ಪಾಪಾನಿ ಸುಕೃತಾನ್ಯಪಿ ।**
**ನ ವೃಥೇತಿ ವಿದಿತ್ವೈವ ಹಿತಂ ಸ್ವಸ್ಯ ಸದಾಚರೇತ್ ॥ ೪೬ ॥**
**ಯತ್ನೇನ ಸಾಧಯೇತ್ಪುಣ್ಯಂ ಪಾಪಂ ಯತ್ನೇನ ವರ್ಜಯೇತ್ ।**
**ತಥಾಪಿ ಚೇದ್ಭವೇತ್ಪಾಪಂ ನಿವೃತ್ತಿಂ ತಸ್ಯ ಚಿಂತಯೇತ್ ॥ ೪೭ ॥**
**ತತ್ರೋದಾಸೀನತಾಯಾಂ ತು ನಿಯಮಾತ್ತತ್ಫಲಂ ಭವೇತ್ ।**

ಅತಃ-ಈ ಕಾರಣದಿಂದ, ಸರ್ವಾಣಿ-ಸಮಸ್ತ ಕರ್ಮಾಣಿ-ಕರ್ಮಗಳೂ, ಪಾಪಾನಿ-ಪಾಪಗಳಾಗಲಿ, ಅಪಿ ಮತ್ತು ಸುಕೃತಾದಿ-ಪುಣ್ಯಗಳಾಗಲಿ, ನ ವೃಥಾ-ವ್ಯರ್ಥವಲ್ಲ (ತಂತಮ್ಮ ಫಲಗಳನ್ನು ಕೊಡುವುವೇ ಆಗುತ್ತವೆ). ಇತಿ-ಎಂದು, ವಿದಿತ್ವಾ-ತಿಳಿದು, ಸದಾ-ನಿರಂತರವಾಗಿ, ಸ್ವಸ್ಯ-ತನ್ನ ಹಿತಂ ಏವ-ಹಿತವನ್ನೇ

---

ಭೋಗಕ್ಕಾಗಿಯೂ (ನೂತನ ಕರ್ಮಗಳಿಂದ ಸ್ವಗತಿಯನ್ನು ಸಾಧಿಸಲಿಕ್ಕೂ) ಈ ಶರೀರವು ಜೀವನಿಗೆ ದೊರಕಿಸಲ್ಪಟ್ಟಿದೆ; ಸುಖಾಧಿಕ್ಯದಿಂದ ಪುಣ್ಯವಂತನೆಂದೂ, ದುಃಖಾಧಿಕ್ಯದಿಂದ ಪಾಪಿಯೆಂದೂ ಪುಣ್ಯಪಾಪಗಳ (ತಲ್ಲಭ್ಯ ಸುಖದುಃಖಗಳ) ಪ್ರಾಚುರ್ಯದಿಂದ, ಜೀವರು ವ್ಯವಹರಿಸಲ್ಪಡುತ್ತಾರೆ (೪೫). ವಿವೇಕಿಯಾದ ಮನುಷ್ಯನು, ಕರ್ಮಫಲಗಳು ಹೀಗೆ ಅನಿವಾರ್ಯವಾದ್ದರಿಂದ, ಪಾಪಗಳಾಗಲಿ, ಪುಣ್ಯಗಳಾಗಲಿ, ಸಮಸ್ತ ಕರ್ಮಗಳೂ ವ್ಯರ್ಥವಲ್ಲವೆಂದು ತಿಳಿದು, ನಿರಂತರವೂ ತನ್ನ ಹಿತವನ್ನೇ ಆಚರಿಸತಕ್ಕದ್ದು; ಯತ್ನಪೂರ್ವಕವಾಗಿ ಪುಣ್ಯವನ್ನು ಸಾಧಿಸಬೇಕು—ಪಾಪವನ್ನು ತ್ಯಜಿಸಬೇಕು; ಹೀಗೆ ಯತ್ನಿಸಿದರೂ, ಒಂದು ವೇಳೆ ಪಾಪವು ಸಂಭವಿಸಿದರೆ, ಅದರ ಪರಿಹಾರ ಮಾರ್ಗವನ್ನು ಚಿಂತಿಸಬೇಕು; ಹಾಗೆ ಮಾಡದೇ

(ಶ್ರೇಯಸ್ಸನ್ನೇ), ಆಚರೇತ್-ಆಚರಿಸತಕ್ಕದ್ದು; ಪುಣ್ಯಂ-ಪುಣ್ಯವನ್ನು ಯತ್ನೇನ-ಯತ್ನದಿಂದ, ಸಾಧಯೇತ್-ಸಾಧಿಸಬೇಕು; ಪಾಪಂ-ಪಾಪವನ್ನು ಯತ್ನೇನ-ಯತ್ನಪೂರ್ವಕ, ವರ್ಜಯೇತ್-ಬಿಡಬೇಕು; ತಥಾಪಿ-ಹೀಗೆ ಯತ್ನಿಸಿದರೂ, ಪಾಪಂ-ಪಾಪವು, ಭವೇತ್ ಚೇತ್-ಸಂಭವಿಸುವುದಾದರೆ, ತಸ್ಯ-ಅದರ, ನಿವೃತ್ತಿಂ-ಪರಿಹಾರವನ್ನು (ಕಳೆದುಕೊಳ್ಳುವ ಉಪಾಯವನ್ನು), ಚಿಂತಯೇತ್-ಚಿಂತಿಸಬೇಕು; ತತ್ರ-ಆ ವಿಷಯದಲ್ಲಿ ಉದಾಸೀನತಾಯಾಂ ತು-ಉದಾಸೀನನಾದಲ್ಲಿ ನಿಯಮಾತ್-ತಪ್ಪದೇ, ತತ್ಫಲಂ-ಅದರ (ಆ ಪಾಪದ) ಫಲವು (ದುಃಖಾದಿ ಅನರ್ಥವು), ಭವೇತ್-ಉಂಟಾಗುತ್ತದೆ (ಅನುಭವಿಸಲೇಬೇಕಾಗುತ್ತದೆ).

**ಸ್ವಧರ್ಮನಿಯತಿರ್ನೄಣಾಂ ವಿಪ್ರದೇವಾಗ್ನಿತೋಷಣಂ ॥ ೪೮ ॥**
**ಪಾಪಘ್ನಂ ಪುಣ್ಯದಂ ವಾಪಿ ತಸ್ಮಾತ್ತತ್ಸರ್ವದಾಚರೇತ್ ।**

ನೄಣಾಂ-ಮನುಷ್ಯರಿಗೆ, ವಿಪ್ರದೇವಾಗ್ನಿತೋಷಣಂ-ಬ್ರಾಹ್ಮಣ, ದೇವತೆಗಳು ಮತ್ತು ಅಗ್ನಿಯನ್ನು ಸಂತೃಪ್ತಿಗೊಳಿಸುವುದು, ಸ್ವಧರ್ಮನಿಯತಿಃ-ಸ್ವಧರ್ಮನಿಯಮವು (ಸ್ವಧರ್ಮವೆಂದು ವಿಧಾಯಕವಾಗಿದೆ); ತತ್-ಅದು, ಪಾಪಘ್ನಂ-ಪಾಪವನ್ನು ನಾಶಮಾಡುವುದೂ, ಅಪಿ ವಾ-ಮತ್ತೂ, ಪುಣ್ಯದಂ-ಪುಣ್ಯವನ್ನು ಕೊಡುವುದೂ (ಆಗಿರುತ್ತದೆ); ತಸ್ಮಾತ್-ಆದ್ದರಿಂದ, (ತತ್-ಅದನ್ನು), ಸರ್ವದಾ-ನಿತ್ಯವೂ, ಆಚರೇತ್-ಆಚರಿಸಬೇಕು.

**ಸೂರ್ಯೋಽಗ್ನಿರ್ಬ್ರಾಹ್ಮಣಾ ಗಾವೋ ವೈಷ್ಣವಾ ಖಂ ಮರುಜ್ಜಲಂ ॥ ೪೯ ॥**
**ಭೂರಾತ್ಮಾ ಸರ್ವಭೂತಾನಿ ಪೂಜ್ಯಸ್ಥಾನಾನಿ ವೈ ಹರೇಃ ।**

ಸೂರ್ಯಃ-ಸೂರ್ಯನು, ಅಗ್ನಿಃ-ಅಗ್ನಿಯು, ಬ್ರಾಹ್ಮಣಾಃ-ಬ್ರಾಹ್ಮಣರು, ಗಾವಃ-ಗೋವುಗಳು, ವೈಷ್ಣವಾಃ-ವಿಷ್ಣುಭಕ್ತರು, ಖಂ-ಆಕಾಶವು, ಮರುತ್-ವಾಯುವೂ, ಜಲಂ-ಉದಕವೂ, ಭೂಃ-ಭೂಮಿಯೂ, ಆತ್ಮಾ-(ಜೀವಾಂತರ್ಯಾಮಿ) ಪರಮಾತ್ಮನೂ, ಸರ್ವಭೂತಾನಿ-ಸಮಸ್ತ ಪ್ರಾಣಿಗಳೂ, ಹರೇಃ-ಶ್ರೀಹರಿಯ,

---

ಇದ್ದಲ್ಲಿ ಉದಾಸೀನಭಾವವನ್ನು ತಾಳಿದರೆ, ಆ ಪಾಪದ ಫಲವನ್ನು ತಪ್ಪದೇ ಭೋಗಿಸಲೇಬೇಕಾಗುತ್ತದೆ (೪೬-೪೭). ದೇವ, ಬ್ರಾಹ್ಮಣ, ಅಗ್ನಿಗಳನ್ನು ತೃಪ್ತಿಗೊಳಿಸುವುದು (ಯಥಾ ಯೋಗ್ಯವಾಗಿ) ಮನುಷ್ಯರಿಗೆ ವಿಧಿಸಲ್ಪಟ್ಟಿರುವ ಸ್ವಧರ್ಮವು; ಅದು ಪಾಪವನ್ನು ಪರಿಹರಿಸಿ ಪುಣ್ಯವನ್ನು ತಂದುಕೊಡುತ್ತದೆ; ಆದ್ದರಿಂದ ಅದನ್ನು ತಪ್ಪದೇ ಸದಾ ಆಚರಿಸುತ್ತಿರಬೇಕು (೪೮). ಸೂರ್ಯ, ಅಗ್ನಿ, ಬ್ರಾಹ್ಮಣರು, ಗೋವುಗಳು, ವೈಷ್ಣವರು, ಆಕಾಶ, ವಾಯು, ಜಲ, ಭೂಮಿ, ಆತ್ಮಾ (ಜೀವಾಂತರ್ಯಾಮಿ ಪರಮಾತ್ಮನೂ), ಸಮಸ್ತ ವಸ್ತುಗಳೂ ಶ್ರೀಹರಿಯ ಪೂಜಾಸ್ಥಾನಗಳು; ಶ್ರೀಹರಿಯನ್ನು ಪೂಜಿಸಲರ್ಹಗಳಾದ ಅಧಿಷ್ಠಾನಗಳು—ಆ ಸ್ಥಾನಗಳಲ್ಲಿರುವ ಶ್ರೀಹರಿಯನ್ನು ಪೂಜಿಸ

ಪೂಜ್ಯಸ್ಥಾನಾನಿ-ಪೂಜಾರ್ಹವಾದ ಸ್ಥಾನಗಳು (ಅಧಿಷ್ಠಾನಗಳು); ವೈ-ಇದು ಶಾಸ್ತ್ರಸಿದ್ಧವು.

ಮಂತ್ರೈರಾರಾಧಯೇತ್ಸೂರ್ಯೇ ಹವಿಷಾಗ್ನೌ ಚ ತರ್ಪಯೇತ್ ॥ ೫೦ ॥
ಭಕ್ತ್ಯಾದರೇಣ ದಾನೇನ ತೋಷಯೇದ್ಬ್ರಾಹ್ಮಣೇಷು ತಂ ।
ಗೋಷು ಚೇದ್ಯೋಗ್ಯಭಕ್ಷ್ಯಾದ್ಯೈಃ ಸತ್ಕಾರೈರ್ವೈಷ್ಣವಂ ನರಂ ॥ ೫೧ ॥
ಧ್ಯಾನೇನ ಹೃದಯಾಕಾಶೇ ಮುಖ್ಯಪ್ರಾಣಧಿಯಾನಿಲೇ ।
ಜಲಮೂರ್ತಿರ್ಜಲೇ ಪೂಜ್ಯೋ ಜಲಾದ್ಯೈರುಪಚಾರಕೈಃ ॥ ೫೨ ॥
ಸ್ಥಂಡಿಲೇ ಪ್ರತಿಮಾಯಾಂ ಚ ನಾಮದ್ರವ್ಯೈಸ್ಸಮರ್ಚಯೇತ್ ।
ಆತ್ಮಾನಮರ್ಚಯೇದ್ಯೋಗ್ಯೈಃ ಸರ್ವದೈವ ಹೃದಿ ಸ್ಥಿತಂ ॥ ೫೩ ॥
ಸರ್ವಾಕಾರಂ ಸರ್ವರೂಪಂ ಸರ್ವನಾಮಾನಮೀಶ್ವರಂ ।
ಅರ್ಚೇತ್ಸರ್ವನಿಯಂತೃತ್ವಭಾವನಾತ್ಸರ್ವವಸ್ತುಷು ॥ ೫೪ ॥

ಸೂರ್ಯೇ-ಸೂರ್ಯನಲ್ಲಿ ಮಂತ್ರೈಃ-ಮಂತ್ರಗಳಿಂದ, ಆರಾಧಯೇತ್-(ಶ್ರೀಹರಿಯನ್ನು) ಆರಾಧಿಸಬೇಕು (ಪೂಜಿಸಬೇಕು); ಅಗ್ನೌಚ-ಅಗ್ನಿಯಲ್ಲಿ ಆದರೋ, ಹವಿಷಾ-ಹವಿಸ್ಸುಗಳಿಂದ, ತರ್ಪಯೇತ್-(ಶ್ರೀಹರಿಯನ್ನು) ತೃಪ್ತಿಗೊಳಿಸಬೇಕು

---

ತಕ್ಕದ್ದು (೪೯). ಈ ಅಧಿಷ್ಠಾನಗಳಲ್ಲಿ ಶ್ರೀಹರಿಯನ್ನು ಪೂಜಿಸುವ ವಿಧಾನಗಳಾವುವೆಂದರೆ:—ಸೂರ್ಯನಲ್ಲಿ ಮಂತ್ರಗಳಿಂದಲೂ, ಅಗ್ನಿಯಲ್ಲಿ ಹವಿಸ್ಸುಗಳನ್ನು ಅರ್ಪಿಸುವುದರಿಂದಲೂ, ಭಕ್ತಿಯಿಂದ ಆದರಪೂರ್ವಕ ದಾನ ಕೊಡುವುದರಿಂದ ಬ್ರಾಹ್ಮಣರಲ್ಲಿಯೂ ಶ್ರೀಹರಿಯನ್ನು ತೃಪ್ತಿಗೊಳಿಸಬೇಕು—ಅದೇ ಆತನ ಪೂಜೆಯು; ಗೋವುಗಳಲ್ಲಿರುವ ಶ್ರೀಹರಿಯನ್ನು ಗೋವುಗಳಿಗೆ ಯೋಗ್ಯವಾದ ತೃಣಪಿಣ್ಯಾಕಾದಿ ಭಕ್ಷ್ಯಗಳನ್ನು (ಆಹಾರವನ್ನು) ಕೊಡುವುದರಿಂದಲೂ, ವಿಷ್ಣುಭಕ್ತನಲ್ಲಿ ಉಚಿತವಾದ ಸತ್ಕಾರ (ಉಪಚಾರ) ಗಳಿಂದಲೂ, ಹೃದಯದಲ್ಲಿರುವ ಆಕಾಶದಲ್ಲಿ ಧ್ಯಾನದಿಂದಲೂ, ಅಲ್ಲಿರುವ ಶ್ರೀಹರಿಯನ್ನು ಅರ್ಚಿಸಬೇಕು; ವಾಯುವಿನಲ್ಲಿ ಮುಖ್ಯಪ್ರಾಣವನ್ನು ಚಿಂತಿಸುವುದೇ ಅಲ್ಲಿರುವ ಶ್ರೀಹರಿ ಪೂಜೆಯು; ಜಲದಲ್ಲಿ ಜಲಾಕಾರದ ಜಲಮೂರ್ತಿಯಾದ[1] ಶ್ರೀಹರಿಯನ್ನು ಜಲಾದಿ (ಉದಕ ಮೊದಲಾದ) ಉಪಚಾರ

---

1. 'ಯೋಽಸೌ ಸರ್ವಗತೋ ವಿಷ್ಣುಃ ಚಿತ್ಸ್ವರೂಪೀ ನಿರಂಜನಃ । ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ ॥'. ಚಿದಾನಂದ ಸ್ವರೂಪನಾದ ಸರ್ವತ್ರಸ್ಥಿತ ಶ್ರೀಹರಿಯೇ ಜಲದಲ್ಲಿ ದ್ರವರೂಪನಾಗಿರುವನೆಂದು ಹೇಳುವ, ಈ ವಾಕ್ಯದಿಂದಲೂ, ಶ್ರೀಹರಿಯು, ತತ್ತದ್ವಸ್ತುಗಳಲ್ಲಿ ತತ್ತದಾಕಾರದಿಂದ, ತನ್ನಾಮಕನಾಗಿ ಸ್ಥಿತನೆಂಬ ಇಲ್ಲಿ ಹೇಳಿರುವ ಪ್ರಮೇಯವೇ ಸಿದ್ಧವಾಗುತ್ತದೆ.

(ಇದೇ ಅಗ್ನಿಯಲ್ಲಿ ಪೂಜಿಸುವ ವಿಧಾನ); ಭಕ್ಷ್ಯಾ-ಭಕ್ತಿಯಿಂದಲೂ, ಆದರೇಣ-ಆದರದಿಂದಲೂ, ದಾನೇನ-ದಾನದಿಂದಲೂ, ಬ್ರಾಹ್ಮಣೇಷು-ಬ್ರಾಹ್ಮಣರಲ್ಲಿ ತಂ-ಶ್ರೀಹರಿಯನ್ನು ತೋಷಯೇತ್-ಸಂತೋಷಪಡಿಸಬೇಕು; ಗೋಷು ಚೇತ್-ಗೋವುಗಳಲ್ಲಿ ಆದರೆ, (ಪೂಜಿಸಬೇಕಾದರೆ), ಯೋಗ್ಯ ಭಕ್ಷ್ಯಾದ್ಯೈಃ-(ಗೋ ಯೋಗ್ಯವಾದ) ತೃಣಾದಿ ಯೋಗ್ಯಭಕ್ಷ್ಯಗಳಿಂದಲೂ, ವೈಷ್ಣವಂ-ವಿಷ್ಣುಭಕ್ತನಾದ, ನರಂ-ಮನುಷ್ಯನನ್ನು ಸತ್ಕಾರೈಃ-ಸತ್ಕಾರಗಳಿಂದಲೂ (ಉಪಚಾರಗಳಿಂದಲೂ), ಹೃದಯಾಕಾಶೇ-(ಆಕಾಶದಲ್ಲಿ) ಹೃದಯದಲ್ಲಿ ಧ್ಯಾನೇನ-ಧ್ಯಾನಿಸುವುದರಿಂದಲೂ, ಅನಿಲೇ-ವಾಯುವಿನಲ್ಲಿ ಮುಖ್ಯ ಪ್ರಾಣಧಿಯಾ-ಮುಖ್ಯಪ್ರಾಣನನ್ನು ಚಿಂತಿಸಿಯೂ, ಜಲೇ-ಜಲದಲ್ಲಿ ಜಲಮೂರ್ತಿಃ-ಜಲಾಕಾರದಿಂದಿರುವ ಶ್ರೀಹರಿಯು, ಜಲಾದ್ಯೈಃ-ಉದಕವೇ ಮೊದಲಾದ, ಉಪಚಾರಕೈಃ-ಉಪಚಾರ ದ್ರವ್ಯಗಳಿಂದಲೂ, ಪೂಜ್ಯಃ-(ಶ್ರೀಹರಿಯು) ಪೂಜಿಸಲ್ಪಡಬೇಕು; ಸ್ಥಂಡಿಲೇ-ಭೂಮಿಯಲ್ಲಿ ಪ್ರತಿಮಾಯಾಂ ಚ-(ತನ್ನಿರ್ಮಿತ) ಪ್ರತಿಮೆಯಲ್ಲಿಯೂ, ನಾಮದ್ರವ್ಯೈಃ-ನಾಮ ಸಂಕೀರ್ತನಾದಿ ವಸ್ತುಗಳಿಂದ, ತಂ-ಆ ಶ್ರೀವಿಷ್ಣುವನ್ನು ಅರ್ಚಯೇತ್- ಪೂಜಿಸತಕ್ಕದ್ದು; ಸರ್ವದಾ ಏವ-ಎಲ್ಲ ಕಾಲದಲ್ಲಿಯೂ, ಹೃದಿ ಸ್ಥಿತಂ-ಹೃದಯಸ್ಥಿತನಾದ, ಆತ್ಮಾನಂ-ಪರಮಾತ್ಮನನ್ನು ಭೋಗ್ಯೈಃ-(ವಿವಿಧ) ಭೋಗಗಳಿಂದ, ಅರ್ಚಯೇತ್- ತೃಪ್ತಿಗೊಳಿಸ ಬೇಕು; ಸರ್ವವಸ್ತುಷು-ಸಮಸ್ತ ವಸ್ತುಗಳಲ್ಲಿ ಸರ್ವಾಕಾರಂ-ಎಲ್ಲ ಆಕಾರಗಳುಳ್ಳ, ಸರ್ವರೂಪಂ-ಸರ್ವರೂಪಗಳುಳ್ಳ, ಸರ್ವನಾಮಾನಂ-ಸರ್ವನಾಮಗಳುಳ್ಳ (ಆಯಾ ವಸ್ತುಗಳಲ್ಲಿ ಆಯಾ ಆಕಾರ, ಆಯಾ ರೂಪ ಮತ್ತು ಆಯಾ ನಾಮಗಳುಳ್ಳ), ಈಶ್ವರಂ-ಶ್ರೀಹರಿಯನ್ನು ಸರ್ವನಿಯಂತೃತ್ವಭಾವನಾತ್- ಸರ್ವವಸ್ತು ನಿಯಂತ್ರಿಸುವ (ತನ್ನ ಅಧೀನಪಡಿಸಿಕೊಂಡು ತನ್ನ ಇಚ್ಛೆಯಂತೆ ನಡೆಸುವ) ನೆಂಬ ಭಾವನೆಯಿಂದ, ಅರ್ಚೇತ್-ಪೂಜಿಸತಕ್ಕದ್ದು (ಈ ಭಾವನೆಯನ್ನು ಹೊಂದುವುದೇ ಸರ್ವವಸ್ತುಗಳಲ್ಲಿ ಶ್ರೀಹರಿಯನ್ನು ಪೂಜಿಸುವ ವಿಧಾನವು).

---

ದ್ರವ್ಯಗಳಿಂದಲೂ, ಭೂಮಿಯಲ್ಲಿ ಮತ್ತು ಅನ್ಯಪೃಥ್ವ್ಯಾತ್ಮಕ ಪ್ರತಿಮೆಗಳಲ್ಲಿ ಶ್ರೀಹರಿ ನಾಮ ಸಂಕೀರ್ತನಾದಿಗಳಿಂದಲೂ, ಸ್ವಹೃದಯದಲ್ಲಿ ನಿತ್ಯಸಂಸ್ಥಿತನಾದ ಆತ್ಮನನ್ನು ವಿವಿಧ ಭೋಗಗಳಿಂದಲೂ (ಸದ್ವಿಷಯ ಭೋಗದಿಂದಲೂ) ಪೂಜಿಸತಕ್ಕದ್ದು (ದೇಹೇಂದ್ರಿಯಗಳಿಂದ ತಾನು ಭೋಗಿಸುವ ವಸ್ತುಗಳೆಲ್ಲವೂ ತಜ್ಜನ್ಯ ಸುಖವಿಶೇಷಗಳೂ ಶ್ರೀಹರಿಗೆಂದು ಅರ್ಪಿಸುವುದು ಆತ್ಮನ ಪೂಜೆಯು); ಸರ್ವವಸ್ತುಗಳಲ್ಲಿ ತತ್ತದಾಕಾರನಾಗಿ ತದ್ರೂಪನಾಗಿ (ಅನಂತ ರೂಪಗಳಿಂದ), ತತ್ತನ್ನಾಮಕನಾಗಿರುವನೆಂದು ಶ್ರೀಹರಿಯನ್ನು ಚಿಂತಿಸುವುದೇ, ಸರ್ವತ್ರಗತನಾದ ಆತನ ಪೂಜೆಯು (೫೦-೫೪). ಸರ್ವವಸ್ತುಗಳಲ್ಲಿ ಶ್ರೀಹರಿಯನ್ನು ಪೂಜಿಸಲು

ಸರ್ವೇಷ್ವಶಕ್ತಃ ಕುರ್ವೀತ ಶಕ್ತ್ಯಾ ಬ್ರಾಹ್ಮಣತೋಷಣಂ ।
ವೃಕ್ಷಾದೀನಿ ತೃಣಾಂತಾನಿ ಸ್ಥಾವರಾಣಿ ತಥೈವ ಹಿ ॥ ೫೫ ॥
ವಿಚಿತ್ರಫಲಭೋಗ್ಯಾನಿ ತದ್ವತ್ಕರ್ಮವಿಚಿತ್ರತಾ ।
ಯೈರ್ಯಥಾ ಚರಿತಂ ಕರ್ಮ ತೇ ತಥಾ ಫಲಭಾಗಿನಃ ॥ ೫೬ ॥

ಸರ್ವೇಷು-ಈ ಎಲ್ಲ ಅಧಿಷ್ಠಾನಗಳಲ್ಲಿ, ಅಶಕ್ತಃ-(ಪೂಜಿಸಲು) ಅಶಕ್ತನಾದವನು, ಶಕ್ತ್ಯಾ-ತನ್ನ ಶಕ್ತ್ಯನುಸಾರವಾಗಿ, ಬ್ರಾಹ್ಮಣತೋಷಣಂ-ಬ್ರಾಹ್ಮಣ ತೃಪ್ತಿಯನ್ನು ಕುರ್ವೀತ-ಮಾಡತಕ್ಕದ್ದು ವೃಕ್ಷಾದೀನಿ-ವೃಕ್ಷಗಳೇ ಮೊದಲಾಗಿ ತೃಣಾಂತಾನಿ-ತೃಣವೇ ಕಡೆಯಾಗಿರುವ, ಸ್ಥಾವರಾಣಿ-ಸ್ಥಾವರವಸ್ತುಗಳು, ತಥಾ ಏವ-ಹಾಗೆಯೇ (ಪೂಜಾನುಸಾರವಾಗಿಯೇ), ವಿಚಿತ್ರ ಫಲಭೋಗ್ಯಾನಿ-ವಿವಿಧ ಫಲಭೋಗಗಳುಳ್ಳವು (ಭೋಗಗಳನ್ನು ಕೊಡುತ್ತವೆ); ತದ್ವತ್-ಅದರಂತೆ (ಫಲವಿಚಿತ್ರತೆಯಂತೆ), ಕರ್ಮ ವಿಚಿತ್ರತಾ-(ಆ ಫಲಭಾಗಿಗಳಾದ ಜೀವರ) ಕರ್ಮಗಳೂ ವಿವಿಧವಾದವು (ಆಗಿರುತ್ತವೆ); ಯೈಃ-ಯಾರಿಂದ, ಯಥಾ-ಹೇಗೆ, ಕರ್ಮ-ಕರ್ಮವು-ಆಚರಿತಂ-ಆಚರಿಸಲ್ಪಟ್ಟಿರುವುದೋ, ತೇ-ಅವರು (ಕರ್ಮಕರ್ತೃಗಳು), ತಥಾ-ಹಾಗೆ (ಕರ್ಮಾನುಸಾರವಾಗಿ), ಫಲಭಾಗಿನಃ-ಫಲಭಾಗಿಗಳಾಗುವರು.

ಅತ ಏವ ಹಿ ಲೋಕೇಸ್ಮಿನ್ ಜನ್ಮಾರಭ್ಯೈವ ದುಃಖಿನಃ ।
ತಥೈವ ಸುಖಿನಃ ಕೇಚಿತ್ ಪುತ್ರಿಣೋ ಧನಿನಸ್ತಥಾ ॥ ೫೭ ॥
ಯತ್ನಂ ವಿನೈವ ಜಾಯಂತೇ ಪೂರ್ವಕರ್ಮವಶಾದಿಹ ।
ನ ಹಿ ಸ್ವೇನೈವ ಯತ್ನೇನ ರಾಜಪುತ್ರೋ ಭವತ್ಯಯಂ ॥ ೫೮ ॥
ಯತಃ ಸಂಜಾತಮಾತ್ರೇಣ ರಾಜ್ಯಭಾಗೇವ ಜಾಯತೇ ।
ಏವಂ ನಿದರ್ಶನಾನ್ಯತ್ರ ನಾನಾ ದೃಷ್ಟ್ವಾ ಸುಧೀಃ ಸ್ವಯಂ ॥ ೫೯ ॥
ನ ವಂಧ್ಯಂ ದಿವಸಂ ಕುರ್ಯಾಚ್ಛಕ್ತ್ಯಾ ಪುಣ್ಯವಿವರ್ಜನಾತ್ ।

ಅತ ಏವ-ಆದ್ದರಿಂದಲೇ (ಪೂರ್ವಕರ್ಮಾನುಸಾರವಾಗಿ ಫಲಗಳು ದೊರೆಯು

---

ಅಶಕ್ತರಾದವರು, ಶಕ್ತ್ಯನುಸಾರವಾಗಿ ಬ್ರಾಹ್ಮಣರನ್ನಾದರೂ ಸಂತೋಷಪಡಿಸಬೇಕು; ಲೋಕದಲ್ಲಿ ವೃಕ್ಷಾದಿ ತೃಣಾಂತವಾದ ಸ್ಥಾವರ ವಸ್ತುಗಳು ವಿಚಿತ್ರ ಭೋಗ್ಯ ಫಲವುಳ್ಳವುಗಳಾಗಿ ಕಂಡುಬರುತ್ತವೆ; ಆ ಫಲಗಳಿಗೆ ಭಾಗಿಗಳಾದ ಜೀವರೂ ಸಹ ವಿಚಿತ್ರ ಕರ್ಮಗಳುಳ್ಳವರಾಗಿರುತ್ತಾರೆ; ಪ್ರಾಯಃ ಸರ್ವರೂ ಸ್ವಸ್ವಕರ್ಮಾನುಸಾರವಾದ ಫಲಗಳಿಗೆ ಭಾಗಿಗಳಾಗುತ್ತಾರೆ (೫೫-೫೬). ಈ ಕಾರಣದಿಂದಲೇ, ಲೋಕದಲ್ಲಿ ಕೆಲವರು ಜನ್ಮಾರಭ್ಯ ದುಃಖಿಗಳಾಗಿರುತ್ತಾರೆ; ಮತ್ತೆ ಕೆಲವರು, ಸುಖಿಗಳಾಗಿರುತ್ತಾರೆ; ಪೂರ್ವಕರ್ಮಾನುಗುಣವಾಗಿ, ಕೆಲವರು, ಯತ್ನವಿಲ್ಲದೇ ಧನವಂತರಾಗುತ್ತಾರೆ—

ವುದರಿಂದ), ಅಸ್ಮಿನ್-ಈ, ಲೋಕೇ-ಲೋಕದಲ್ಲಿ ಕೇಚಿತ್-ಕೆಲವರು, ಜನ್ಮಾರಭ್ಯ ಏವ-ಹುಟ್ಟಿದ ದಿನದಿಂದಲೇ, ದುಃಖಿನಃ-ದುಃಖಿಗಳಾಗಿಯೂ, ತಥೈವ-ಹಾಗೆಯೇ, ಕೇಚಿತ್-ಕೆಲವರು, ಸುಖಿನಃ-ಸುಖಿಗಳಾಗಿಯೂ, ಪೂರ್ವ ಕರ್ಮವಶಾತ್-ಹಿಂದಿನ (ಜನ್ಮಾಂತರ) ಕರ್ಮವಶದಿಂದ (ಪ್ರಭಾವದಿಂದ), ಯತ್ನಂ ವಿನಾ ಏವ-ಯಾವ ಯತ್ನವೂ ಇಲ್ಲದೇ, ಜಾಯಂತೇ-ಹುಟ್ಟುತ್ತಾರೆ; ತಥಾ-ಹಾಗೆಯೇ (ಯತ್ನವಿಲ್ಲದೇ) (ಕೇಚಿತ್-ಕೆಲವರು), ಪುತ್ರಿಣಃ-ಪುತ್ರವಂತ(ವುಳ್ಳ)ವರೂ, ಧನಿನಃ- ಧನವಂತರೂ (ಆಗುತ್ತಾರೆ); ಅಯಂ-ಈತನು (ರಾಜಪುತ್ರನಾಗಿ ಜನಿಸುವ ಜೀವನು), ಸ್ವೇನೈವ ಯತ್ನೇನ-ತನ್ನ ಯತ್ನದಿಂದಲೇ, ರಾಜಪುತ್ರಃ-ರಾಜಪುತ್ರನು, ನ ಭವತಿ ಹಿ-ಆಗುವುದಿಲ್ಲವಷ್ಟೆ; ಯತಃ-ಏಕೆಂದರೆ, ಸಂಜಾತಮಾತ್ರೇಣ-ಜನ್ಮಮಾತ್ರದಿಂದ, ರಾಜ್ಯಭಾಕ್-ರಾಜ್ಯಕ್ಕೆ ಅಧಿಕಾರಿಯೇ, ಜಾಯತೇ ಏವ-ಆಗುತ್ತಾನೆ; ಅತ್ರ-ಈ ವಿಷಯದಲ್ಲಿ (ಕರ್ಮಾನುಸಾರವಾಗಿ ಯತ್ನವಿಲ್ಲದೆ ಫಲಗಳು ದೊರೆಯುತ್ತವೆಂಬಲ್ಲಿ), ಏವಂ-ಈ ಪ್ರಕಾರದ (ರಾಜಪುತ್ರನಂತೆ-ಶ್ರೀಮಂತ ಪುತ್ರನಂತೆ), ನಿದರ್ಶನಾನಿ-ನಿದರ್ಶನಗಳನ್ನು, ನಾನಾ ದೃಷ್ಟ್ವಾ-ಬಹುವಾಗಿ ಲಕ್ಷಿಸಿ, ಸುಧೀಃ-ವಿವೇಕವುಳ್ಳವನು, ಸ್ವಯಂ-ತಾನು, ಶಕ್ತಃ-(ಪುಣ್ಯವನ್ನು ಆಚರಿಸಲು) ಶಕ್ತನಾಗಿದ್ದು ಪುಣ್ಯವಿವರ್ಜನಾತ್-ಪುಣ್ಯಾಚರಣೆಯನ್ನು ತ್ಯಜಿಸಿ, ದಿವಸಂ-ಒಂದು ದಿನವನ್ನೂ, ವಂಧ್ಯಂ-ವ್ಯರ್ಥವನ್ನಾಗಿ (ಪುಣ್ಯವನ್ನು ಉತ್ಪಾದಿಸದಂತೆ), ನ ಕುರ್ಯಾತ್-ಮಾಡಕೂಡದು.

**ನ ಕುರ್ಯಾದ್ಬಹುಲಾಂ ಚಿಂತಾಂ ಚಿತ್ತನಾಶಕರೀಂ ನರಃ ॥ ೬೦ ॥**

**ಪ್ರಾಯಃ ಪುಣ್ಯಾರ್ಜನೇ ಚಿಂತಾಂ ಕುರ್ವಾಣಃ ಸಂಸ್ಮರೇದ್ಧರಿಂ ।**

ನರಃ-ಮನುಷ್ಯನು, ಚಿತ್ತನಾಶಕರೀಂ-ಮನಃಶಕ್ತಿಯನ್ನು ವ್ಯರ್ಥಗೊಳಿಸುವ, ಬಹುಲಾಂ-ವಿಸ್ತಾರವಾದ (ಅನೇಕ ವಿಷಯಕವಾದ, ದೀರ್ಘ), ಚಿಂತಾಂ-(ಲೌಕಿಕ) ಚಿಂತೆಯನ್ನು, ನ ಕುರ್ಯಾತ್-ಮಾಡತಕ್ಕದ್ದಲ್ಲ; ಪುಣ್ಯಾರ್ಜನೇ-ಪುಣ್ಯವನ್ನು ಸಂಪಾದಿಸುವುದರಲ್ಲಿ, ಚಿಂತಾಂ-ಚಿಂತೆಯನ್ನು; ಕುರ್ವಾಣಃ-(ನನ್ನ ಶಕ್ತಿಗೊಳಪಟ್ಟ

---

ಪುತ್ರವಂತರೂ ಆಗುತ್ತಾರೆ; ತನ್ನ ಯತ್ನದಿಂದ, ಅರಸನ ಮಗನು ರಾಜಪುತ್ರನಾಗಿ ಹುಟ್ಟಲಿಲ್ಲವಷ್ಟೆ! ರಾಜಪುತ್ರನು ಹುಟ್ಟುತ್ತಲೇ (ಜನ್ಮಮಾತ್ರದಿಂದ) ರಾಜ್ಯಕ್ಕೆ ಭಾಗಿಯಾಗುತ್ತಾನೆ—ಇದು ಪೂರ್ವದ (ಜನ್ಮಾಂತರ) ಕರ್ಮದ ಫಲವೇ ಸರಿ; ಆದ್ದರಿಂದ ವಿವೇಕಿಯು, ಪೂರ್ವಕರ್ಮಾನುಸಾರವಾದ ಫಲಗಳು ಯತ್ನವಿಲ್ಲದೇ ದೊರೆಯುವುದೆಂಬ ವಿಷಯದಲ್ಲಿ, ಲೋಕದಲ್ಲಿ ಕಂಡುಬರುವ ನಾನಾ ನಿದರ್ಶನಗಳನ್ನು ಲಕ್ಷಿಸಿ, ಯಾವ ದಿನವನ್ನೂ ವ್ಯರ್ಥವಾಗಿ ಕಳೆಯಬಾರದು—ಶಕ್ತಿಯಿದ್ದರೂ ಪುಣ್ಯಾಚರಣೆಯನ್ನು ತ್ಯಜಿಸಿದರೆ ದಿನವನ್ನು ವ್ಯರ್ಥಗೊಳಿಸಿದಂತೆಯೇ ಸರಿ (೫೭-೫೯). ಮನುಷ್ಯನು, ಮನಃಶಕ್ತಿಯನ್ನು ನಷ್ಟಗೊಳಿಸುವ (ವ್ಯರ್ಥಗೊಳಿಸುವ)

ಯಾವ ಪುಣ್ಯಕರ್ಮವನ್ನಾಚರಿಸಲಿ, ಅದಕ್ಕಾಗಿ ಯಾವ ಸಿದ್ಧತೆಗಳನ್ನು ಹೇಗೆ ಮಾಡಿಕೊಳ್ಳಲಿ, ಇತ್ಯಾದಿ ಚಿಂತೆಯನ್ನು) ಮಾಡುವವನಾಗಿ, ಪ್ರಾಯಃ-ಹೆಚ್ಚಾಗಿ (ವಿಶೇಷವಾಗಿ), ಹರಿಂ-ಶ್ರೀಹರಿಯನ್ನು ಸಂಸ್ಮರೇತ್-ಸ್ಮರಿಸತಕ್ಕದ್ದು.

ಪುಣ್ಯಾತ್ಪುಣ್ಯತಮಂ ಲೋಕೇ ಸ್ಮರಣಂ ಪರಮಾತ್ಮನಃ ॥ ೬೦ ॥
ಪಾಪಾತ್ಪಾಪತಮಾ ಪ್ರೋಕ್ತಾ ಹೃಷೀಕೇಶಸ್ಯ ವಿಸ್ಮೃತಿಃ ।
ಗಾಯಂತಿ ಮುನಯಃ ಸರ್ವೇ ಗಾಥಾ ಲೋಕೋಪದೇಶಿಕಾಃ ।
ಯಃ ಸ್ಮರನ್ ಸರ್ವದಾ ಜಂತುರ್ನ ದುಃಖೈಃ ಪರಿಭೂಯತೇ ॥ ೬೨ ॥

ಪರಮಾತ್ಮನಃ-ಶ್ರೀಹರಿಯ, ಸ್ಮರಣಂ-ಸ್ಮರಣೆಯು (ನೆನೆಸುವುದು), ಲೋಕೇ-ಈ ಜಗತ್ತಿನಲ್ಲಿ ಪುಣ್ಯಾತ್-(ಸರ್ವ) ಪುಣ್ಯಕ್ಕಿಂತ, ಪುಣ್ಯತಮಂ-ಶ್ರೇಷ್ಠ ಪುಣ್ಯವು; ಹೃಷೀಕೇಶಸ್ಯ-ಶ್ರೀಹರಿಯ (ಸರ್ವೇಂದ್ರಿಯ ನಿಯಾಮಕನ), ವಿಸ್ಮೃತಿಃ- ವಿಸ್ಮರಣೆಯು (ಮರೆವುದು), ಪಾಪಾತ್-(ಸರ್ವ) ಪಾಪಕ್ಕಿಂತ, ಪಾಪತಮಾ-(ನೀಚತಮವಾದ) ಅತ್ಯಂತ ಹೀನಪಾಪವೆಂದು, ಪ್ರೋಕ್ತಾ-ಹೇಳಲಾಗಿದೆ; ಲೋಕೋಪದೇಶಿಕಾಃ-ಅಜ್ಞ ಜನರಿಗೆ ಉಪದೇಶಕರಾದ, ಸರ್ವೇ-ಸಮಸ್ತ ಮುನಯಃ-ಋಷಿಗಳೂ (ಜ್ಞಾನಿಗಳೂ), ಗಾಥಾಃ-ಹೀಗೆ ಸ್ಮರಣೆ ವಿಸ್ಮರಣೆಗಳ ಮಹಿಮೆಗಳನ್ನು ಗಾಯಂತಿ- ಸ್ತುತಿಸುತ್ತಾರೆ; ಯಃ ಜಂತುಃ-ಅಲ್ಪನಾದ ಯಾವ ಈ ಜೀವನು, ಸರ್ವದಾ-ಸದಾ (ನಿರಂತರವಾಗಿ), ಸ್ಮರನ್-(ಶ್ರೀಹರಿಯನ್ನು) ಸ್ಮರಿಸುವವನಾಗಿ, ದುಃಖೈಃ-(ಸಾಂಸಾರಿಕ) ನಾನಾ ದುಃಖಗಳಿಂದ, ನ ಪರಿಭೂಯತೇ- ಎದೆಗುಂದುವುದಿಲ್ಲ.

---

ಬಹುಲೋಕವಿಚಿಂತನೆಯನ್ನು ಮಾಡಕೂಡದು;[1] ಪುಣ್ಯಾರ್ಜನೆಯ (ಪುಣ್ಯವನ್ನು ಸಂಪಾದಿಸುವ) ಚಿಂತೆಯಲ್ಲಿಯೇ ಇರುತ್ತ ವಿಶೇಷವಾಗಿ ಶ್ರೀಹರಿಯನ್ನೇ ಸ್ಮರಿಸುತ್ತಿರಬೇಕು (೬೦). ಲೋಕದಲ್ಲಿ ಪರಮಾತ್ಮನ ಸ್ಮರಣೆಯು, ಎಲ್ಲ ಪುಣ್ಯಗಳಲ್ಲಿ ಶ್ರೇಷ್ಠ ಪುಣ್ಯವು; ಶ್ರೀ ಹೃಷೀಕೇಶನ ವಿಸ್ಮೃತಿಯು (ಶ್ರೀಹರಿಯೇ ಸರ್ವೇಂದ್ರಿಯ ಪ್ರೇರಕನೆಂಬುದರ ವಿಸ್ಮರಣೆಯು) ಸರ್ವಪಾಪಗಳಲ್ಲಿ ಅತ್ಯಂತ ಹೀನವಾದ ಪಾಪವು—ಇದು ನಿಶ್ಚಯ, ಜ್ಞಾನಿಗಳ ನಿರ್ಣಯ; ಲೋಕಗುರುಗಳೆನಿಸುವ ಸರ್ವರೂ (ಹಿತೋಪದೇಶಕರಾದ ಸರ್ವಜ್ಞಾನಿಗಳೂ), ಶ್ರೀಹರಿಯ ಸ್ಮರಣೆ ವಿಸ್ಮರಣೆಗಳ ಮಹಿಮೆಯನ್ನು ಹೀಗೆಂದು ಕೊಂಡಾಡುತ್ತಾರೆ; ಶ್ರೀ ಹರಿಯನ್ನು ಸರ್ವದಾ ಸ್ಮರಿಸುವ ಅಲ್ಪನಾದ ಈ ಜೀವನು, ಸ್ಮರಣೆಯ ತತ್ಕಾಲದ ಫಲವಾಗಿ, ವಿವಿಧ ದುಃಖಗಳಿಗೆ ಸೋಲುವುದಿಲ್ಲ—ಧೈರ್ಯದಿಂದ ಎದುರಿಸಿ ನಿಲ್ಲುತ್ತಾನೆ—ದುಃಖಗಳ ಉಲ್ಬಣತೆಯೂ ತಗ್ಗುತ್ತದೆ—ಸಹನೀಯವಾಗುತ್ತವೆ (೬೦-೬೨). ಪೂರ್ವಕರ್ಮಾನುಸಾರ

---

1. 'ತರಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ' (ದ್ವಾದಶ ಸ್ತೋತ್ರ) ಎಂದರು, ಶ್ರೀಮದಾಚಾರ್ಯರು.

ಪ್ರಾಪ್ತವ್ಯಮರ್ಥಂ ಲಭತೇ ಮನುಷ್ಯೋ
ದೇವೋಽಪಿ ತಂ ಲಂಘಯಿತುಂ ನ ಶಕ್ತಃ ।
ತಸ್ಮಾನ್ನಶೋಚಾಮಿ ನ ವಿಸ್ಮಯೋ ಮೇ
ಯದಸ್ಮದೀಯಂ ನ ಹಿ ತತ್ಪರೇಷಾಂ ॥ ೬೩ ॥
ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥ ೬೪ ॥
ಜನ್ಮಾಂತರಹಿತಂ ತಾತ ಸರ್ವದೈವ ವಿಚಿಂತಯೇತ್ ।
ಇಹ ಜನ್ಮನಿ ಯದ್ಭಾವಂ ತದ್ಭವೇತ್ಪೂರ್ವಕರ್ಮಣಾ ॥ ೬೫ ॥

ಮನುಷ್ಯಃ-ಮನುಷ್ಯನು, ಪ್ರಾಪ್ತವ್ಯಂ-(ಪೂರ್ವಕರ್ಮಾನುಸಾರ) ದೊರೆಯಲಿರುವ, ಅರ್ಥಂ-ಫಲವನ್ನು, ಲಭತೇ-ಹೊಂದುತ್ತಾನೆ; ದೇವಃ ಅಪಿ-ದೇವತೆಯೇ ಆದರೂ, ತಂ-ಅದನ್ನು (ಆ ಫಲವನ್ನು), ಲಂಘಯಿತುಂ-ಮೀರಲು (ದಾಟಲು-ತಪ್ಪಿಸಿಕೊಳ್ಳಲು), ನ ಶಕ್ತಃ-ಶಕ್ತನಲ್ಲ; ತಸ್ಮಾತ್-ಆದ್ದರಿಂದ, ನ ಶೋಚಾಮಿ-ನಾನು ದುಃಖಿಸುವುದಿಲ್ಲ; ಮೇ-ನನಗೆ, ನ ವಿಸ್ಮಯಃ-ಆಶ್ಚರ್ಯವೂ ಇಲ್ಲ (ಯಾವ ಘಟನೆಯಿಂದಲೂ, ಶೋಕವಾಗಲಿ ಆಶ್ಚರ್ಯವಾಗಲಿ ಉಂಟಾಗುವುದಿಲ್ಲ); ಯತ್-ಯಾವುದು (ಯಾವ ಫಲವು), ಅಸ್ಮದೀಯಂ-ನಮ್ಮದೋ, ತತ್-ಅದು, ಪರೇಷಾಂ ನಹಿ-ಅನ್ಯರಿಗೆ ಇಲ್ಲವೆಂಬುದು ಸಿದ್ಧ; ಅಭುಕ್ತಂ-ಭೋಗಿಸಲ್ಪಡದ, ಕರ್ಮ-ಕರ್ಮವು, ಕಲ್ಪ ಕೋಟಿ ಶತೈಃ ಅಪಿ-ನೂರಾರು ಕಲ್ಪ ಸಮೂಹಗಳ ಕಾಲದಿಂದಲೂ, ನ ಕ್ಷೀಯತೇ-ನಷ್ಟವಾಗುವುದಿಲ್ಲ (ಮಾಡಲಾದ ಪ್ರತಿಕರ್ಮವೂ, ತನ್ನ ಫಲವನ್ನು ಕರ್ತನಿಗೆ ಕೊಡದೇ, ಕೇವಲ ದೀರ್ಘಕಾಲ ಗತಿಸುವ ಮಾತ್ರದಿಂದ

---

ಪ್ರಾಪ್ತವ್ಯವಾದ (ದೊರೆಯಲಿರುವ) ಫಲವನ್ನು ಮನುಷ್ಯನು ತಪ್ಪದೇ ಹೊಂದುತ್ತಾನೆ—ದೇವತೆಯಾದರೂ (ದೇವಜೀವನಾದರೂ) ಅದನ್ನು ಮೀರಲು (ಅತಿಕ್ರಮಿಸಲು) ಶಕ್ತನಲ್ಲ; ಆದ್ದರಿಂದ, 'ನನಗೆ ದುಃಖವೂ ಇಲ್ಲ, ಆಶ್ಚರ್ಯವೂ ಇಲ್ಲ—ಯಾವ ಫಲವು ನಮ್ಮದೋ ಅದು ನಮಗೇ ದೊರೆಯುತ್ತದೆ, ಅನ್ಯರಿಗಿಲ್ಲ; ಮಾಡಲ್ಪಟ್ಟ ಪುಣ್ಯಪಾಪಗಳನ್ನು (ಅವುಗಳ ಫಲಗಳಾದ ಸುಖದುಃಖಗಳನ್ನು) ಅವಶ್ಯವಾಗಿ ಅನುಭವಿಸಲೇಬೇಕು; ನೂರಾರು ಕಲ್ಪಸಮೂಹಗಳಷ್ಟು ಕಾಲ ಕಳೆದರೂ, ಭೋಗಿಸಲ್ಪಡದ ಕರ್ಮವು ನಷ್ಟವಾಗುವುದಿಲ್ಲ' ಎಂದು ಚಿಂತಿಸುತ್ತಿರಬೇಕು; ಸರ್ವದಾ, ಜನ್ಮಾಂತರದಲ್ಲಿ ತನಗೆ ಹಿತವಾಗುವುದನ್ನೇ ಚಿಂತಿಸಬೇಕು—ಈ ಜನ್ಮದಲ್ಲಿ ಯಾವುದು (ಸುಖದುಃಖವು) ಸಂಭವಿಸುತ್ತದೆಯೋ (ಭೋಗಿಸಲಾಗುವುದೋ) ಅದು ಪೂರ್ವಜನ್ಮಗಳಲ್ಲಿ ಮಾಡಿದ ಕರ್ಮಫಲವೇ ಸರಿ (೬೩-೬೫). ವಿವೇಕಿಯು

ನಷ್ಟವಾಗುವುದಿಲ್ಲ-ಫಲಪ್ರದನಾದ ಶ್ರೀಹರೀಚ್ಛೆ ಬಂದ ಕಾಲಕ್ಕೆ ಅದರ ಫಲವನ್ನು ಜೀವನು ಭೋಗಿಸಲೇಬೇಕು—ಫಲಗಳ ತೀವ್ರತೆ ಉಪಮರ್ದಗಳು ಶ್ರೀಹರಿಯ ಅಧೀನಗಳು;[1] ಕೃತಂ-(ಜೀವನಿಂದ) ಮಾಡಲ್ಪಟ್ಟ, ಶುಭಾಶುಭಂ-ಪುಣ್ಯಪಾಪಗಳು, ಅವಶ್ಯಂ-ತಪ್ಪದೇ (ಅವಶ್ಯವಾಗಿ-ತನ್ನ ಇಚ್ಛೆಯಿಲ್ಲದಿದ್ದರೂ), ಭೋಕ್ತವ್ಯಂ ಏವ-ಭೋಗಿಸಲ್ಪಡತಕ್ಕವುಗಳೇ (ಆಗಿರುತ್ತವೆ); (ಆದ್ದರಿಂದ) ತಾತ-ಹೇ ಪ್ರಿಯ ಸಂವರ್ತ!, ಸರ್ವದಾ-ಸದಾ, ಜನ್ಮಾಂತರಹಿತಂ ಏವ-ಮುಂದಿನ ಬೇರೆ ಜನ್ಮಗಳಲ್ಲಿ ಹಿತವಾಗುವುದನ್ನೇ, ವಿಚಿಂತಯೇತ್-ವಿಶೇಷವಾಗಿ ಯೋಚಿಸಬೇಕು; ಇಹ ಜನ್ಮನಿ-ಈ ಜನ್ಮದಲ್ಲಿ (ದೇಹದಲ್ಲಿ), ಯತ್ ಭಾವಂ-(ಯಾವುದು ಸಂಭವಿಸ ಲಿದೆಯೋ) ಯಾವ ಸುಖವೋ (ಹಿತವೋ), ತತ್-ಅದು, ಪೂರ್ವಕರ್ಮಣಾ-ಪೂರ್ವ (ಜನ್ಮದ) ಕರ್ಮದಿಂದ, ಭವೇತ್-ಆಗುತ್ತದೆ (ದೊರೆಯುತ್ತದೆ).

ಮಾಲಾಕಾರಸಧರ್ಮಾ ಸ್ಯಾನ್ನಸ್ಯಾದಂಗಾರಕೃತ್ತಮಃ ।
ಪಶ್ಚಾತ್ತಪೇದ್ಯಥಾ ನಾತ್ಮಾ ತಥಾ ಸ್ವಹಿತಮಾಚರೇತ್ ॥ ೬೬ ॥
ಮಾಲಾಕಾರೋ ಯಥಾ ಪೂರ್ವಮುಪ್ತಾನಾಂ ಪ್ರಾಪ್ನುಯಾತ್ಫಲಂ ।
ವಪತ್ಯನ್ಯಾನಿ ಬೀಜಾನಿ ಭವಿಷ್ಯದ್ಭೋಗಹೇತವೇ ॥ ೬೭ ॥
ತಥಾ ಕರ್ಮಾಣಿ ಭುಂಜಾನೋಽನ್ಯಾನಿ ಪುಣ್ಯಾನಿ ವರ್ಧಯೇತ್ ।
ನಾವಸೀದತಿ ಸ ಪ್ರಾಜ್ಞಃ ಪ್ರಾಪ್ನುವನ್ ಸರ್ವದಾ ಸುಖಂ ॥ ೬೮ ॥
ಅಂಗಾರಕಾರಕೋ ವೃಕ್ಷಾನ್ ಛಿತ್ವಾ ದಹತಿ ಯದ್ವನಂ ।
ತದ್ವನಸ್ಥಃ ಪುನಃ ಕಿಂನು ಜೀವನಾರ್ಥಮವಾಪ್ನುಯಾತ್ ॥ ೬೯ ॥
ಅನ್ಯದೀಯಾನಿ ಕರ್ಮಾಣಿ ನ ಹ್ಯಯಂ ಪ್ರಾಪ್ತುಮರ್ಹತಿ ।
ಅಂಗಾರಕಾರವದ್ಯೇನ ಭವೇಜ್ಜೀವನವೃತ್ತಿಕೃತ್ ॥ ೭೦ ॥

ಮಾಲಾಕಾರನಂತಿರಬೇಕಲ್ಲದೇ, ಅಂಗಾರಕಾರ (ಇದ್ದಿಲು ತಯಾರಿಸಿ ಜೀವಿಸುವ) ನಂತೆ ಇರಕೂಡದು; ಕಾಲಾಂತರದಲ್ಲಿ ಮನಸ್ಸು ಪಶ್ಚಾತ್ತಾಪಗೊಳ್ಳದಂತೆ, ಈಗ ತನ್ನ ಹಿತವನ್ನು ಸಾಧಿಸಬೇಕು; ಮಾಲಾಕಾರನು ತನ್ನ ಪುಷ್ಪವಾಟಿಕೆಯಲ್ಲಿ(ಹೂದೋಟದಲ್ಲಿ) ಮೊದಲು (ಹಿಂದೆ) ಬಿತ್ತಿದ ಬೀಜಗಳ ಪುಷ್ಪಗಳನ್ನು ಹೊಂದುತ್ತ ಮುಂದೆ ಪುಷ್ಪಗಳು ದೊರೆಯಲಿಕ್ಕಾಗಿ, ಬೇರೆ ಬೀಜಗಳನ್ನು ಬಿತ್ತುತ್ತಲೇ ಇರುವನು; ಅವನಂತೆ, ಪೂರ್ವ (ಪುಣ್ಯ) ಕರ್ಮಫಲಗಳನ್ನು ಭೋಗಿಸುತ್ತ ಬೇರೆ ಪುಣ್ಯಗಳನ್ನು ಆಚರಿಸುತ್ತಲಿದ್ದು ಪುಣ್ಯರಾಶಿಯನ್ನು ಬೆಳಸಬೇಕು; ಹೀಗೆ ಮಾಡುವುದರಿಂದ ಸದಾ ಸುಖಿಯಾಗಿರು

1. ಬಿಂಬಾಪರೋಕ್ಷದಿಂದ ಸರ್ವಕರ್ಮ ಕ್ಷಯವಾಗುವತನಕ ಈ ನಿಯಮವು ಅನ್ವಯಿಸುತ್ತದೆಂದು ತಿಳಿಯಬೇಕು.

ಮಾಲಾಕಾರಸಧರ್ಮಾ-(ವಿವೇಕಿಯು) ಮಾಲಾಕಾರನ ಸಮಾನ ಧರ್ಮವುಳ್ಳವನು (ಸದೃಶ ಪ್ರವೃತ್ತಿಯುಳ್ಳವನು), ಸ್ಯಾತ್-ಆಗಬೇಕು, ಅಂಗಾರಕೃತ್ಸಮಃ-ಇದ್ದಿಲು ತಯಾರಿಸುವ ಸದೃಶನು, ನ ಸ್ಯಾತ್-ಆಗಬಾರದು; ಯಥಾ-ಹೇಗೆ, ಆತ್ಮಾ-ಮನಸ್ಸು(ಜೀವನು), ನ ಪಶ್ಚಾತ್ ತಪೇತ್-ನಂತರ ತಾಪವನ್ನು ಹೊಂದುವುದಿಲ್ಲವೋ, ತಥಾ-ಹಾಗೆ, ಸ್ವಹಿತಂ-ತನ್ನ ಹಿತವನ್ನು ಆಚರೇತ್- ಆಚರಿಸಬೇಕು; ಯಥಾ-ಹೇಗೆ, ಮಾಲಾಕಾರಃ-ಮಾಲಾಕಾರನು, ಪೂರ್ವಂ-(ತನ್ನ ಪುಷ್ಪವಾಟದಲ್ಲಿ-ತೋಟದಲ್ಲಿ) ಮೊದಲು, ಉಪ್ತಾನಾಂ-ಬಿತ್ತಿದ ಬೀಜಗಳ, ಫಲಂ-ಫಲವನ್ನು (ಹೂವುಗಳನ್ನು), ಪ್ರಾಪ್ನುಯಾತ್-ಹೊಂದುತ್ತಾನೆಯೋ, (ಮತ್ತು) ಭವಿಷ್ಯದ್ಯೋಗಹೇತವೇ-ಮುಂದೆ ಫಲವನ್ನು ಹೊಂದಲಿಕ್ಕಾಗಿ, ಅನ್ಯಾನಿ-ಬೇರೆ, ಬೀಜಾನಿ-ಬೀಜಗಳನ್ನು ವಪತಿ-ಬಿತ್ತುವನೋ, ತಥಾ-ಹಾಗೆ, ಕರ್ಮಾಣಿ-ಪೂರ್ವಕರ್ಮಗಳ ಫಲವನ್ನು ಭುಂಜಾನಃ-ಭೋಗಿಸುವವನಾಗಿ, ಅನ್ಯಾನಿ ಪುಣ್ಯಾನಿ-ಬೇರೆ ಪುಣ್ಯಗಳನ್ನು ವರ್ಧಯೇತ್-(ಆಚರಿಸಿ) ಬೆಳೆಸಿಕೊಳ್ಳಬೇಕು; ಸಃ ಪ್ರಾಜ್ಞಃ-ಆ ವಿವೇಕಿಯು, ಸರ್ವದಾ-ಸದಾ, ಸುಖಂ-ಸುಖವನ್ನೇ, ಪ್ರಾಪ್ನುಯಾತ್-ಹೊಂದುತ್ತಾನೆ; ನ ಅವಸೀದತಿ-ದುಃಖಿಯಾಗುವುದಿಲ್ಲ (ನಷ್ಟನಾಗುವುದಿಲ್ಲ—ಹತಾಶನಾಗುವುದಿಲ್ಲ); ಅಂಗಾರಕಾರಕಃ-ಇದ್ದಿಲು ತಯಾರ್ಮಾಡುವವನು, ವೃಕ್ಷಾನ್-ಮರಗಳನ್ನು ಛಿತ್ವಾ-ಕತ್ತರಿಸಿ, ಯದ್ವನಂ-ಯಾವ ವನವನ್ನು (ಅರಣ್ಯ ಪ್ರದೇಶವನ್ನು), ದಹತಿ-ದಹಿಸುತ್ತಾನೆಯೋ, ತದ್ವನಸ್ಥಃ-ಆ ವನದಲ್ಲಿದ್ದು ಜೀವನಾರ್ಥಂ-(ತನ್ನ) ಜೀವನಕ್ಕಾಗಿ, ಪುನಃ-ಮತ್ತೆ (ವೃಕ್ಷಗಳೆಲ್ಲ ನಷ್ಟವಾದಮೇಲೆ), ಕಿಂ ನು ಆಪ್ನುಯಾತ್-ಏನನ್ನು ಹೊಂದುವನು? (ಜೀವಿತವನ್ನೇ ಹಾಳುಮಾಡಿಕೊಳ್ಳುತ್ತಾನೆ); ಅಂಗಾರಕಾರವತ್-ಅಂಗಾರಕಾರನಂತೆ, ಅಯಂ-(ಹೊಸ ಪುಣ್ಯಗಳನ್ನಾಚರಿಸುತ್ತ ವೃದ್ಧಿಗೊಳಿಸಿಕೊಳ್ಳದವನು) ಈ ಜೀವನು, ಯೇನ-ಯಾವುದರಿಂದ, ಜೀವನವೃತ್ತಿಕೃತ್-ಜೀವನೋಪಾಯವನ್ನೊದಗಿಸಿಕೊಳ್ಳುವವನು, ಭವೇತ್-ಆಗುವನೋ, (ಅಂತಹ), ಅನ್ಯದೀಯಾನಿ-ಮತ್ತೊಬ್ಬರ, ಕರ್ಮಾಣಿ- (ಪುಣ್ಯ) ಕರ್ಮಫಲಗಳನ್ನು, ಪ್ರಾಪ್ತುಂ-ಹೊಂದಲಿಕ್ಕೆ, ನ ಅರ್ಹತಿ-ಯೋಗ್ಯನಾಗುವುದಿಲ್ಲ.

---

ತಾನೆ—ದುಃಖಿಯಾಗುವುದಿಲ್ಲ; ಅಂಗಾರಕಾರನು ಹೀಗಲ್ಲ; ತನ್ನ ವನದಲ್ಲಿರುವ ವೃಕ್ಷಗಳನ್ನು ಕತ್ತರಿಸಿ, ಸುಟ್ಟು ಇದ್ದಿಲು ಮಾಡಿ, ಜೀವಿಸುತ್ತಾನೆ; ಮುಂದೆ ಆ ವನದಲ್ಲಿ ವೃಕ್ಷಗಳೇ ಇಲ್ಲದಂತಾಗಿ, ತನ್ನ ಜೀವನೋಪಾಯವೇ ನಷ್ಟವಾಗುತ್ತದೆ; ಅನ್ಯರನ್ನಾಶ್ರಯಿಸುವುದರಿಂದ ಸ್ವತಂತ್ರ ಜೀವನವು ನಡೆಯುವುದಿಲ್ಲ—ಅದರಂತೆ (ಅಂಗಾರಕಾರನಂತೆ), ಪುಣ್ಯವನ್ನಾಚರಿಸದೇ ತನ್ನ ಅಹಿತವನ್ನು ಸಾಧಿಸಿಕೊಳ್ಳಬಾರದು; ಮತ್ತೊಬ್ಬರ ಕರ್ಮಫಲಗಳು ತನಗೆ ದೊರೆಯುವುದಿಲ್ಲವೆಂಬುದನ್ನು ನೆನಪಿಡಬೇಕು (೬೬-೭೦). ಜೀವನು ತಾನೊಬ್ಬನೇ ಹುಟ್ಟುತ್ತಾನೆ—ಒಬ್ಬನೇ ಮೃತನಾಗುತ್ತಾನೆ; ಆಗ ಜೊತೆಯಲ್ಲಿ

**ಏಕಸ್ತು ಮ್ರಿಯತೇ ಜಂತುರೇಕ ಏವ ಪ್ರಜಾಯತೇ ।**

**ಏಕ ಏವ ಸುಖಂ ಭುಂಕ್ತೇ ದುಃಖಮಪ್ಯೇಕ ಏವ ಹಿ ॥ ೭೧ ॥**

ಜಂತುಃ-(ಪ್ರಾಣಿಯು) ಆಗಿರುವ ಈ ಜೀವನು, ಏಕಃ ಏವ-ತಾನೊಬ್ಬನೇ, ಪ್ರಜಾಯತೇ-ಹುಟ್ಟುತ್ತಾನೆ; ಏಕಃ ತು-ಒಬ್ಬನೇ, ಮ್ರಿಯತೇ-ಮೃತನಾಗುತ್ತಾನೆ (ಹುಟ್ಟುವಾಗ ಅಥವಾ ಸಾಯುವಾಗ ಅನ್ಯರಾರೂ ಜೊತೆಯಲ್ಲಿ ಬರುವುದಿಲ್ಲ); ಏಕಃ ಏವ-ತಾನೊಬ್ಬನೇ, ಸುಖಂ-ಸುಖವನ್ನು, ಭುಂಕ್ತೇ-ಭೋಗಿಸುತ್ತಾನೆ; ದುಃಖಂ ಅಪಿ-ದುಃಖವನ್ನು ಸಹ, ಏಕಃ ಏವ ಹಿ-ಒಬ್ಬನೇ (ಭೋಗಿಸುತ್ತಾನೆ-ಇದು ಅನುಭವಸಿದ್ಧವಷ್ಟೆ).

**ಋಣಾನುಬಂಧಿನಃ ಸರ್ವೇ ಪಶುಪತ್ನೀಸುತಾದಯಃ ।**

**ಋಣಾಪಾಯೇ ವ್ರಜಂತ್ಯೇವ ನೇಚ್ಛಯಾ ಕೋಽಪಿ ತಿಷ್ಠತಿ ॥ ೭೨ ॥**

ಪಶು ಪತ್ನೀ ಸುತಾದಯಃ-(ಗೋ, ಅಶ್ವಾದಿ) ಪಶು, ಪತ್ನೀ, ಪುತ್ರ ಮೊದಲಾದವರು, ಸರ್ವೇ-ಎಲ್ಲರೂ, ಋಣಾನುಬಂಧಿನಃ-ಋಣಾನುಬಂಧಿಗಳು (ಜನ್ಮಾಂತರದ ಪರಸ್ಪರ ಋಣದಿಂದ ಏಕತ್ರ ಸೇರಿರುವರು); ಋಣಾಪಾಯೇ-(ಆ) ಋಣವು ಮುಗಿದೊಡನೆ, ವ್ರಜಂತಿ ಏವ-ತಪ್ಪದೇ ಹೊರಡುತ್ತಾರೆ (ಅವರ ವಿಯೋಗವಾಗುತ್ತದೆ); ಕಃ ಅಪಿ-ಯಾರೊಬ್ಬನೂ, ಸ್ವೇಚ್ಛಯಾ-ತನ್ನ ಇಚ್ಛೆಯಿಂದ (ತಾನು ಇಚ್ಛಿಸುವವರೆಗೂ), ನ ತಿಷ್ಠತಿ-(ಎಲ್ಲರೊಡನೆ ಇರುವುದಿಲ್ಲ).

**ಆದಾತಾರಃ ಪ್ರದಾತಾರೋ ಧರ್ಮಣಾ ಉತ್ತಮರ್ಣಕಾಃ ।**

**ನ ನಿಸ್ತೀರ್ಣಮೃಣಂ ಯೇಷಾಂ ಕೇಚನೋಭಯಥಾ ಪರೇ ॥ ೭೩ ॥**

**ಕೇಚಿದ್ಧನಾರ್ಥಾಃ ಕ್ಲೇಶಾರ್ಥಾ ವೈರಾರ್ಥಾಶ್ಚ ತಥಾಪರೇ ।**

**ಸುಖಾರ್ಥಾಃ ಕರ್ಮವೈಚಿತ್ರ್ಯಾನ್ಮಿಲಂತಿ ಚ ವಿಯುಜ್ಯತೇ ॥ ೭೪ ॥**

---

ಯಾರೂ ಇರುವುದಿಲ್ಲ; ಮಧ್ಯಕಾಲದಲ್ಲಿ ಸುಖವನ್ನಾಗಲಿ ದುಃಖವನ್ನಾಗಲಿ ಒಬ್ಬನೇ ಭೋಗಿಸುತ್ತಾನೆ (೭೧). ಆ ಕಾಲದಲ್ಲಿ ತನ್ನೊಂದಿಗಿರುವ, ಪಶು ಪತ್ನಿ ಪುತ್ರ ಭೃತ್ಯಾದಿಗಳು, ಪೂರ್ವಜನ್ಮದ ಋಣಸಂಬಂಧದಿಂದ ಒಂದು ಕಡೆಗೆ ಬಂದು ಸೇರಿರುತ್ತಾರೆ—ಋಣವು ಮುಗಿದೊಡನೆ ತೊರೆದು ಹೋಗುತ್ತಾರೆ; ಅವರು ಯಾರೂ ತಮ್ಮ ಇಚ್ಛಾನುಸಾರ ಈ ಜೀವನೊಡನೆ ಇರುವುದಿಲ್ಲ—ಇರುವ ಸ್ವಾತಂತ್ರ್ಯವೂ ಅವರಿಗಿಲ್ಲ (೭೨). ಋಣಾನುಬಂಧಿಗಳು ಬಹುವಿಧವಾಗಿರುತ್ತಾರೆ; ಚಿತ್ತಿದುದನ್ನು (ಹಿಂದೆ ಮಾಡಿದ ಕರ್ಮದ ಫಲವನ್ನು) ಕೊಡುವವರು, ಮತ್ತು ಕೊಡದವರು (ಎಂದರೆ ಈತನಿಂದಲೇ ಪಡೆಯುವವರು) ಎಂದು ಋಣಾನುಬಂಧಿಗಳು ಸಾಮಾನ್ಯವಾಗಿ ದ್ವಿವಿಧರು; ಪಶುಪತ್ನೀಪುತ್ರಾದಿಗಳಾದ ಈ ಬಂಧುಗಳಲ್ಲಿ ಹಿಂದಿನ ಋಣ

ನ ಕುರ್ಯಾತ್ಕುತ್ರಚಿತ್ಸಕ್ತಿಂ ಮಮತಾಂ ನೈವ ಕಾರಯೇತ್ ।
ಬಹಿಸ್ತುಷ್ಟೋ ವ್ಯವಹರೇದನಿತ್ಯಮಖಿಲಂ ಸ್ಮರನ್ ॥ ೭೫ ॥

ಧರ್ಮಣಾ-ನ್ಯಾಯಮಾರ್ಗದಿಂದ, ಉಪ್ತಂ-ಬಿತ್ತಿದುದನ್ನು (ಅದರ ಫಲವನ್ನು), ಅದಾತಾರಃ-ಕೊಡದವರು, (ಮತ್ತು) ಪ್ರದಾತಾರಃ-ಕೊಡುವವರು, (ಎಂದು), ಅರ್ಣಕಾಃ-(ಜನ್ಮಾಂತರದ) ಋಣವುಳ್ಳವರು (ಇರುತ್ತಾರೆ); ಯೇಷಾಂ-ಯಾರ, ಋಣಂ-ಋಣವು, ನ ನಿಸ್ತೀರ್ಣಂ-ತೀರಿಸಲಟ್ಟಿಲ್ಲವೋ (ಮುಗಿದಿರುವುದಿಲ್ಲವೋ), ಕೇಚನ ಪರೇ-ಬೇರೆ ಕೆಲವರು, ಉಭಯಥಾ-(ಸುಖದುಃಖಗಳೆಂಬೆರಡನ್ನೂ ಮುಟ್ಟಿಸುವವರು-ಉಂಟುಮಾಡುವ ಋಣವುಳ್ಳವರು) (ಈ ಪ್ರಕಾರದ ಪ್ರಭೇದವುಳ್ಳವರೂ, ಆ ಪಶುಪಕ್ಷಿ ಪುತ್ರಾದಿಗಳಲ್ಲಿ ಇರುತ್ತಾರೆ); ಕೇಚಿತ್-ಕೆಲವರು, ಧನರ್ಣಾಃ-ಧನರೂಪದ ಋಣವುಳ್ಳವರು (ಧನವನ್ನು ಮುಟ್ಟಿಸುವವರು ಮತ್ತು ಕೊಡದವರು, ಎಂದರೆ ತಾವೇ ಪಡೆಯುವವರು, ಉಭಯರೂ); ಕ್ಲೇಶಾರ್ಣಾಃ-(ಕಷ್ಟಗಳನ್ನುಂಟುಮಾಡುವವರು, ಕಷ್ಟಗಳನ್ನು ಸಹಿಸುವವರು ಎಂಬ) ಕ್ಲೇಶದ ಋಣವುಳ್ಳವರು; ತಥಾ-ಹಾಗೂ, ಅಪರೇ-ಮತ್ತೆ ಕೆಲವರು, ವೈರಾರ್ಣಾಃ-ದ್ವೇಷರೂಪದ ಋಣವುಳ್ಳವರು (ಇಲ್ಲಿಯೂ ಹಿಂದಿನಂತೆ ಉಭಯ ವಿಧವನ್ನು ತಿಳಿಯಬೇಕು); ಸುಖಾರ್ಣಾಃ-ಸುಖರೂಪದ ಋಣವುಳ್ಳವರು; (ಹೀಗೆ ವಿವಿಧ ಋಣಸಂಬಂಧವುಳ್ಳವರು), ಕರ್ಮವೈಚಿತ್ರ್ಯಾತ್-(ಪೂರ್ವಜನ್ಮದ) ಕರ್ಮಭೇದದಿಂದ; (ಉಕ್ತ ಋಣಸಂಬಂಧದಿಂದ), ಮಿಲಂತಿ-(ಸಂಸಾರದಲ್ಲಿ ಒಂದೆಡೆ) ಸೇರುತ್ತಾರೆ, ಚ-ಮತ್ತು, ವಿಯುಂಜ್ಯತೇ-ವಿಯೋಗವನ್ನು ಹೊಂದುತ್ತಾರೆ (ತೊರೆದು ಹೋಗುತ್ತಾರೆ); (ಆದ್ದರಿಂದ) ಕುತ್ರಚಿತ್-ಯಾರಲ್ಲಿಯೂ, ಸಕ್ತಿಂ- ಆಸಕ್ತಿಯನ್ನು,

---

ತೀರದವರೂ, ತಮ್ಮ ಋಣ ತೀರಿದ್ದರೂ, ತಾವೇ ಋಣವನ್ನು ಹೊರಬೇಕಾದವರೂ, ಎಂದು ಪುನಃ ಎರಡು ವಿಧವಾಗಿರುತ್ತಾರೆ; ಸಂಸಾರಿ ಜೀವನಿಗೂ, ಆತನ ಅನುಬಂಧಿಗಳಿಗೂ ಇರುವ ಪರಸ್ಪರ ಋಣವು ವಿವಿಧವಾಗಿರುತ್ತದೆ; ಧನದಿಂದ ಋಣಿಗಳು ಕೆಲವರು; ಕೆಲವರು ಕ್ಲೇಶ (ದುಃಖ) ರೂಪದ ಋಣವುಳ್ಳವರು (ದುಃಖವನ್ನು ಕೊಡುವವರು ಮತ್ತು ಪಡೆಯತಕ್ಕವರು ಸಹ); ಹಾಗೂ ಮತ್ತಿತರರು ದ್ವೇಷರೂಪದ ಋಣವುಳ್ಳವರು; ಸುಖದಿಂದ ಋಣಿಗಳು ಕೆಲವರು; ಹೀಗೆ ಅವರವರ ಕರ್ಮವೈಚಿತ್ರ್ಯದಿಂದ ಸಂಸಾರದಲ್ಲಿ ಈ ಅನುಬಂಧಿಗಳು ಬಂದು ಸೇರುತ್ತಾರೆ—ಋಣಸಂಬಂಧ ತೀರಿದೊಡನೆ ಅಗಲುತ್ತಾರೆ; ಆದ್ದರಿಂದ ಈ ಅನುಬಂಧಿಗಳಲ್ಲಿ ಆಸಕ್ತನಾಗಬಾರದು; ಮಮತ್ವ (ನನ್ನವರೆಂಬ) ಅಭಿಮಾನವನ್ನು ಮಾಡಕೂಡದು; ಗಾಢವಾಗಿ ಮನಸ್ಸಿಗೆ ಅವರನ್ನು ಹಚ್ಚಿಕೊಳ್ಳಬಾರದು; ಸರ್ವವೂ ಅನಿತ್ಯವೆಂಬ ನಿತ್ಯಸ್ಮರಣೆಯುಳ್ಳವನಾಗಿ, ಅವರೊಡನೆ ಅವಶ್ಯವಿದ್ದಷ್ಟು ಮಾತ್ರ ವ್ಯವಹರಿಸಬೇಕು

ನ ಕುರ್ಯಾತ್-ಮಾಡ (ಹೊಂದ)ಬಾರದು; ಮಮತಾಂ- ನಮ್ಮವರೆಂಬ ಬುದ್ಧಿಯನ್ನು ನೈವ ಕಾರಯೇತ್-ಮಾಡಲೇಬಾರದು; ಅಖಿಲಂ-ಸರ್ವವನ್ನೂ (ಪತ್ನೀ ಪುತ್ರಾದಿ ಸಮಸ್ತವನ್ನೂ), ಅನಿತ್ಯಂ-ಅನಿತ್ಯವೆಂದು, ಸ್ಮರನ್-ನೆನಪಿಟ್ಟು (ಮರೆಯದೆ), ಬಹಿಶ್ಚಿತ್ತಃ-ಬಾಹ್ಯಚಿತ್ತನಾಗಿ (ಗಾಢವಾಗಿ ಆಸಕ್ತನಾಗದೇ), ವ್ಯವಹರೇತ್-(ಅವರೊಂದಿಗೆ) ವ್ಯವಹರಿಸಬೇಕು.

**ಏವಂ ದುಃಖಂ ನಿಯುಂಜೀತ ಯುಂಜೀತಾಪಿ ಸುಖೇನ ಸಃ ।**
**ಅನ್ಯಥಾ ಪಾಪಭಾಗೇವ ದುಃಖೈಶ್ಚ ಪರಿಭೂಯತೇ ॥ ೭೬ ॥**

ಏವಂ-ಹೀಗೆ (ನಿರಂತರ ಹರಿಸ್ಮರಣೆಯಿಂದ), ಸಃ-ಆ ಜೀವನು, ದುಃಖಂ-ದುಃಖವನ್ನು ನಿಯುಂಜೀತ-ನಿಗ್ರಹಮಾಡಿ(ಕಳೆದು)ಕೊಳ್ಳುತ್ತಾನೆ; ಅಪಿ-ಮತ್ತು ಸುಖೇನ-ಸುಖದಿಂದ, ಯುಂಜೀತ-ಕೂಡಿದವನನ್ನಾಗಿ ಮಾಡಿಕೊಳ್ಳುತ್ತಾನೆ; ಅನ್ಯಥಾ-ಹಾಗಲ್ಲದಿದ್ದರೆ (ನಿರಂತರ ಸ್ಮರಣೆಯಿಲ್ಲದಿದ್ದರೆ), ಪಾಪಭಾಕ್ ಏವ-(ಹರಿ ವಿಸ್ಮರಣೆಯೇ ಪಾಪತಮವಾದ್ದರಿಂದ) ಪಾಪಭಾಗಿಯೇ (ಆಗುತ್ತಾನೆ); ಚ ಮತ್ತು ದುಃಖೈಃ-ನಾನಾ ದುಃಖಗಳಿಂದ, ಪರಿಭೂಯತೇ-ಮುಚ್ಚಲ್ಪಡುತ್ತಾನೆ (ಪರಾಹತನಾಗುತ್ತಾನೆ).

**ಈಶ್ವರಸ್ಯೇದಮಖಿಲಂ ಮನ್ವಾನಃ ಸ್ವೀಯಮೇವ ಯಃ ।**
**ಕಥಂ ದುಃಖೀ ನ ಜಾಯೇತ ಯದ್ದುಃಖಂ ಸ್ವಲ್ಪಮೇವ ತತ್ ॥ ೭೭ ॥**

ಯಃ-ಯಾರು, ಈಶ್ವರಸ್ಯ-ಶ್ರೀಹರಿಯ, ಇದಂ-ಈ, ಅಖಿಲಂ-ಸಮಸ್ತವನ್ನೂ (ಶ್ರೀಹರಿಯ ಸ್ವಾಮ್ಯಕ್ಕೆ ಸೇರಿದ ಎಲ್ಲವನ್ನೂ), ಸ್ವೀಯಂ ಏವ-ತನ್ನದೇ ಎಂದು (ತನ್ನ ಪರವೆಂದು), ಮನ್ವಾನಃ-ತಿಳಿದವನಾಗಿ, ಕಥಂ-ಹೇಗೆ, ದುಃಖೀ-ದುಃಖಿಯು, ನ ಜಾಯೇತ-ಆಗುವುದಿಲ್ಲ? ಯದ್ದುಃಖಂ-(ಜೀವನು ಅನುಭವಿಸುವ) ಯಾವ ದುಃಖವೋ, ತತ್-ಅದು, ಅಲ್ಪಂ ಏವ-(ವಿಸ್ಮರಣರೂಪದ ಮಹಾಪಾಪಕ್ಕೆ) ಅಲ್ಪವೇ ಸರಿ.

---

(೭೩-೭೫). ಹೀಗೆ ಸರ್ವವೂ ಅನಿತ್ಯವೆಂದು ತಿಳಿದು, ಶ್ರೀಹರಿಯ ಅಧೀನವೆಂಬ ನಿತ್ಯಸ್ಮರಣೆಯುಳ್ಳವನು ದುಃಖಗಳನ್ನು ಸಹಿಸಿಕೊಂಡು (ಕುಗ್ಗದೇ, ನಿರುತ್ಸಾಹಿಯಾಗದೇ), ಸುಖಿಯೂ ಆಗುತ್ತಾನೆ (ಶ್ರೀಹರಿಸ್ಮರಣೆಯೇ ಶ್ರೇಷ್ಠ ಪುಣ್ಯವಾದುದರಿಂದ ಭವಿಷ್ಯದಲ್ಲಿಯೂ ಸುಖಿಯಾಗುತ್ತಾನೆ); ನಿರಂತರ ಈ ಪ್ರಕಾರದ ಹರಿಸ್ಮರಣೆ ಇಲ್ಲದವನು, ಪಾಪಭಾಗಿಯೂ ಆಗುತ್ತಾನೆ (ವಿಸ್ಮರಣೆಯೇ ಅಧಿಕ ಪಾಪವಾದ್ದರಿಂದ), ದುಃಖಗಳಿಂದ ಪರಾಹತನೂ ಆಗುತ್ತಾನೆ (೭೬). ಎಲ್ಲ ವಸ್ತುಗಳೂ ಶ್ರೀಹರಿಯ ಅಧೀನಗಳೇ—ಆತನು ಅವುಗಳ ಸ್ವಾಮಿಯು; ಹೀಗಿರಲು, ಜೀವನು, ಅವುಗಳನ್ನು ತನ್ನದೇ ಎಂದು ತಿಳಿದರೆ ಹೇಗೆ ದುಃಖಿಯಾಗದಿರಲು ಸಾಧ್ಯ? ಅವನು,

**ಸ್ವಾಮಿನಃ ಸ್ವಂ ಪರಸ್ವಂ ಚ ಮನ್ಯಮಾನೋ ನಿಜಂ ತ್ವಿತಿ ।**
**ಸ ಧೃಷ್ಟೋ ದಂಡನೀಯಃ ಸ್ಯಾದಿತಿಲೋಕನಿದರ್ಶನಂ ॥ ೭೮ ॥**

ಪರಸ್ವಂ- ಪರರ (ಅನ್ಯರಿಗೆ ಸೇರಿದ) ಆಸ್ತಿಯನ್ನು ಚ- ಹಾಗೂ, ಸ್ವಾಮಿನಃ- ತನ್ನ ಸ್ವಾಮಿಯ (ಯಜಮಾನನ), ಸ್ವಂ- ಆಸ್ತಿಯನ್ನೂ, ನಿಜಂ ತು- ತನ್ನದೇ, ಇತಿ ಮನ್ಯಮಾನಃ- ಎಂದು ಭಾವಿಸುವವನು, ಧೃಷ್ಟಃ- ಉದ್ಧತನು, ಸಃ- ಅವನು, ದಂಡನೀಯಃ- ಶಿಕ್ಷಾರ್ಹನು, ಇತಿ- ಹೀಗೆಂದು, ಲೋಕನಿದರ್ಶನಂ- ಲೋಕ ದೃಷ್ಟಾಂತವೂ, ಸ್ಯಾತ್- ಇರುವುದಷ್ಟೆ

**ಅಗ್ನಿರಾಪಃ ಫಲಂ ಮೂಲಂ ತೃಣೌಷಧ್ಯಾದಿಕಂ ಹರಿಃ ।**
**ಸುಲಭಂ ವ್ಯದಧಾಲ್ಲೋಕೇ ತೇನ ಜೀವಂತಿ ಜಂತವಃ ॥ ೭೯ ॥**
**ತಥೈವ ವಿಪ್ರಾ ಲೋಕೇಽಸ್ಮಿನ್ ಹರಿಣಾ ಸುಲಭಾಃ ಕೃತಾಃ ।**
**ಯತೋ ದಾನೇನ ತಪಸಾ ಲೋಕಾಃ ಪುಣ್ಯಮವಾಪ್ನುಯುಃ ॥ ೮೦ ॥**

ಅಗ್ನಿಃ- ಅಗ್ನಿ, ಆಪಃ- ಜಲ, ಫಲಂ- (ವನ್ಯ) ಫಲಗಳು, ಮೂಲಂ- ಗಡ್ಡೆ ಗೆಣಸುಗಳು, ತೃಣ- ಹುಲ್ಲು, ಔಷಧ್ಯಾದಿಕಂ- ಔಷಧಿ (ಲತಾದಿ ಗಿಡಮೂಲಿಕೆಗಳು). (ಈ ಎಲ್ಲವನ್ನೂ), ಹರಿಃ- ಶ್ರೀಹರಿಯು, ಲೋಕೇ- ಜಗತ್ತಿನಲ್ಲಿ, ಸುಲಭಂ- ಸುಲಭ ವನ್ನಾಗಿ (ಎಲ್ಲರಿಗೂ ಆಯಾಸವಿಲ್ಲದೇ ದೊರೆಯುವಂತೆ), ವ್ಯಧಾತ್- ಮಾಡಿದನು; ತೇನ- ಅದರಿಂದ, (ಈ ವಸ್ತುಗಳು ಎಲ್ಲರಿಗೆ ಸುಲಭವಾದ್ದರಿಂದ), ಜಂತವಃ- ಪ್ರಾಣಗಳು, ಜೀವಂತಿ- ಬದುಕುತ್ತವೆ (ದೇಹವನ್ನು ರಕ್ಷಿಸಿಕೊಳ್ಳುತ್ತವೆ); ತಥಾ ಏವ- ಇವುಗಳಂತೆಯೇ, ಅಸ್ಮಿನ್- ಈ, ಲೋಕೇ- ಜಗತ್ತಿನಲ್ಲಿ (ವಿಶೇಷವಾಗಿ ಭರತವರ್ಷದಲ್ಲಿ), ವಿಪ್ರಾಃ- ಬ್ರಾಹ್ಮಣರು, ಹರಿಣಾ- ಶ್ರೀಹರಿಯಿಂದ, ಸುಲಭಾಃ

---

ಅನುಭವಿಸುತ್ತಿರುವ ಬಹುದುಃಖಗಳೂ, ಶ್ರೀಹರಿ ವಿಸ್ಮರಣ ರೂಪದ ಮಹಾಪಾಪಕ್ಕೆ ಅತ್ಯಲ್ಪವೇ ಸರಿ (೭೭). ಪರರ ಸ್ವತ್ತನ್ನು (ಪದಾರ್ಥವನ್ನು) ತನ್ನದೆಂದು ತಿಳಿಯುವ, ಅಷ್ಟೇ ಅಲ್ಲದೇ, ತನ್ನ ಸ್ವಾಮಿಯ ಸ್ವತ್ತನ್ನೇ ತನ್ನದೆಂದು ತಿಳಿಯುವ ಧಾರ್ಷ್ಟ್ಯ (ಹುಚ್ಚು ಧೈರ್ಯ—ಸಾಹಸ—ಉದ್ಧಟತನ)ವುಳ್ಳವನು ಶಿಕ್ಷಾರ್ಹನೆಂದು ಲೋಕನಿದರ್ಶನದಿಂದ ಸಹ ತಿಳಿದುಬರುತ್ತದೆ; ಹೀಗಿರಲು ಸರ್ವಸ್ವಾಮಿಯಾದ ಶ್ರೀಹರಿಯ ಆಸ್ತಿಗಳನ್ನು ತನ್ನದೆಂಬ ಸಾಹಸಿಗೆ ದುಃಖವಲ್ಲದೇ ಮತ್ತೇನು ದೊರೆಯಬಹುದು? (೭೮). ಬೆಂಕಿ, ನೀರು, ಹಣ್ಣು ಗಡ್ಡೆ ಹುಲ್ಲು ಗಿಡ ಇತ್ಯಾದಿಗಳು ಸರ್ವರಿಗೂ ಸುಲಭವಾಗಿ ದೊರೆಯುವಂತೆ ಮಾಡಿದನು; ಇದರಿಂದ (ಈ ಸೌಲಭ್ಯದಿಂದ) ಪ್ರಾಣಿಗಳು, ಲೋಕದಲ್ಲಿ ಜೀವಿಸುತ್ತವೆ; ಇವುಗಳಂತೆಯೇ, ಶ್ರೀಹರಿಯು ಬ್ರಾಹ್ಮಣರನ್ನೂ ಎಲ್ಲರಿಗೆ ಸುಲಭರನ್ನಾಗಿ ಮಾಡಿದನು; ಇದರಿಂದ ಲೋಕದಲ್ಲಿ ಸರ್ವರೂ, ಅವರಿಗೆ ದಾನ ಕೊಡುವುದರಿಂದಲೂ, ಅವರ ತಪಸ್ಸಿನಿಂದಲೂ, ಪುಣ್ಯವನ್ನು ಸುಲಭವಾಗಿ

ಕೃತಾಃ-ಸುಲಭರಾಗಿ ಮಾಡಲ್ಪಟ್ಟಿರುವವರು. ಯತಃ-ಏಕೆಂದರೆ, ಲೋಕಾಃ-ಪ್ರಜೆಗಳು, ದಾನೇನ-ದಾನದಿಂದಲೂ (ಬ್ರಾಹ್ಮಣರಿಗೆ ದಾನ ಕೊಡುವುದರಿಂದಲೂ), ತಪಸಾ-(ಬ್ರಾಹ್ಮಣರ ತಪೋಬಲದಿಂದಲೂ) ಅವರ ಸೇವಾರೂಪದ ತಮ್ಮ ದೈಹಿಕ ತಪಸ್ಸಿನಿಂದಲೂ, ಪುಣ್ಯಂ-ಪುಣ್ಯವನ್ನು ಆಪ್ನುಯುಃ-ಹೊಂದುವರು.

ವಿಪ್ರಾ ದಾನತಪೋಮೂಲಂ ತಾನ್ವಿನಾ ತನ್ನ ಜಾಯತೇ ।
ಸುಲಭಾನಪ್ಯತೋ ಧರ್ಮಾನ್ನಾವಮನ್ಯೇತ ತಾನಿ ಹ ॥ ೮೧ ॥
ಕೇಷಾಂಚಿದುಪಚರ್ಯಾರ್ಥಂ ಗಂಗಾಮಪಿ ವಿನಿರ್ಮಮೇ ।
ಸ್ವಪಾದಾದ್ದಯಯಾ ವಿಷ್ಣುರ್ಯಾ ಪುನಾತಿ ಜಗತ್ತ್ರಯಂ ॥ ೮೨ ॥
ಭಕ್ತ್ಯಾ ದಧಾರ ಯಾಂ ಮೂರ್ಧ್ನಾ ಹರೇಃ ಪಾದಜಲಂ ತ್ವಿತಿ ।
ಮಹಾದೇವೋಽಪಿ ಸಾ ಪ್ರೋಕ್ತಾ ಸಾರಭೂತಾ ಜಗದ್ಧಿತೇ ॥ ೮೩ ॥

ವಿಪ್ರಾಃ-ಬ್ರಾಹ್ಮಣರು, ದಾನತಪೋಮೂಲಂ-ದಾನ ಮತ್ತು ತಪಸ್ಸುಗಳ ಆಶ್ರಯರು (ಅವರಿಲ್ಲದೆ ದಾನ ತಪಸ್ಸುಗಳು ಸಿದ್ಧಿಸುವುದಿಲ್ಲ[1] ತಾನ್ ವಿನಾ-ಅವರನ್ನುಳಿದು, ತತ್-ಅದು (ದಾನ ಮತ್ತು ತಪಸ್ಸು), ನ ಜಾಯತೇ-ಹುಟ್ಟುವುದಿಲ್ಲ (ಸಂಭವಿಸುವುದಿಲ್ಲ); ಅತಃ-ಈ ಕಾರಣದಿಂದ, ಸುಲಭಾನ್ ಅಪಿ-(ದಾನ ತಪಸ್ಸುಗಳು ಹೀಗೆ) ಸುಲಭವಾಗಿ ಸಂಪಾದಿಸಲ್ಪಡುವ ಪುಣ್ಯಕರಗಳಾದ, ತಾನ್-ಆ, ಧರ್ಮಾನ್-ಧರ್ಮಗಳನ್ನು ಇಹ-ಇಲ್ಲಿ (ಈ ಲೋಕದಲ್ಲಿ—ಭರತವರ್ಷದಲ್ಲಿ), ನ ಅವಮನ್ಯೇತ-ತುಚ್ಛಗಳೆಂದು ತಿಳಿಯಬಾರದು; (ಅಥವಾ ಈ ಪುಣ್ಯಗಳನ್ನು

---

ದೊರಕಿಸಿಕೊಳ್ಳುತ್ತಾರೆ (೭೯-೮೦). ಬ್ರಾಹ್ಮಣರು ದಾನ ತಪಸ್ಸುಗಳ ಮೂಲಸಾಧನರಾಗಿದ್ದಾರೆ; (ಅವರನ್ನು ಬಿಟ್ಟು ದಾನ ತಪಸ್ಸುಗಳೆಂಬ ಸುಲಭ ಪುಣ್ಯಗಳನ್ನು ಸಂಪಾದಿಸಲಾಗುವುದಿಲ್ಲ); ಈ ಪುಣ್ಯಗಳನ್ನು ಸುಲಭವಾಗಿ ಸಾಧಿಸಬಹುದಾದರೂ, ಅವು ಅಲ್ಪಫಲವುಳ್ಳವೆಂದು ತಿಳಿಯಲಾಗದು—ಅವುಗಳ ಮೂಲರಾದ ಬ್ರಾಹ್ಮಣರನ್ನು ತುಚ್ಛವಾಗಿ ಕಾಣಲೂಬಾರದು (ಅದರಿಂದ ಮಹದನರ್ಥವಿದೆ); ಶ್ರೀವಿಷ್ಣುವು, ಮತ್ತೆ ಕೆಲವರ ಉಪಕಾರಾರ್ಥವಾಗಿ, ಜಗತ್ತ್ರಯವನ್ನೇ ಪವಿತ್ರಗೊಳಿಸುವ ಗಂಗೆಯನ್ನು ಕೃಪೆಮಾಡಿ, ತನ್ನ ಪಾದದಿಂದ ನಿರ್ಮಿಸಿದನು; ದೇವಶ್ರೇಷ್ಠನೆನಿಸಿದ ಮಹದೇವನು (ರುದ್ರನೂ) ಸಹ, ಶ್ರೀಹರಿಯ ಪಾದೋದಕವೆಂದು ತಿಳಿದು ಭಕ್ತಿಯಿಂದ ತನ್ನ ಶಿರಸ್ಸಿನಲ್ಲಿ ಧರಿಸಿದನು; ಪ್ರತಿಗಳ ಪಾಪಗಳನ್ನು ತೊಳೆದು, ಅವರನ್ನು ಶುದ್ಧರನ್ನಾಗಿ ಮಾಡುವ ಉತ್ತಮ ಸಾಧನವೆನಿಸಿರುವವಳು, ಭಾಗೀರಥಿಯು—ಹೀಗೆಂದು ಜ್ಞಾನಿಗಳ

1. ಬ್ರಾಹ್ಮಣರ ಸೇವೆಯೇ ಶಾರೀರಕ ತಪಸ್ಸು: 'ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥' (ಗೀತಾ).

ಬ್ರಾಹ್ಮಣರಿಂದ ಸುಲಭವಾಗಿ ಸಂಪಾದಿಸಲು ಅವಕಾಶಕೊಡುವ, ತಾನ್-ಆ ಬ್ರಾಹ್ಮಣರನ್ನು, ನ ಅವಮನ್ಯೇತ-ಅವಮಾನಗೊಳಿಸಕೂಡದು—ಆದರಿಂದ, ಮಹಾ ಅನರ್ಥವೂ ಇದೆ). ವಿಷ್ಣುಃ-ಶ್ರೀವಿಷ್ಣುವು, ಕೇಷಾಂಚಿತ್-ಮತ್ತೆ ಕೆಲವರಿಗೆ, ಉಪಚರ್ಯಾರ್ಥಂ-ಉಪಕಾರಮಾಡಲು, ದಯಯಾ-ಕೃಪೆಯಿಂದ, ಸ್ವಪಾದಾತ್-ತನ್ನ ಪಾದದಿಂದ, ಯಾ-ಯಾವಾಕೆಯು, ಜಗತ್ತ್ರಯಂ-ಮೂರು ಲೋಕದ ಪ್ರಜೆಗಳನ್ನು, ಪುನಾತಿ-ಶುದ್ಧಗೊಳಿಸುವಳೊ (ಪಾಪಗಳನ್ನು ಕಳೆದು ಪವಿತ್ರರನ್ನಾಗಿ ಮಾಡುವಳೋ), (ತಾಂ-ಆ) ಗಂಗಾಂ ಅಪಿ-ಭಾಗೀರಥಿಯನ್ನೂ, ವಿನಿರ್ಮಮೇ-ಸೃಷ್ಟಿಮಾಡಿದನು; ಹರೇಃ-ಶ್ರೀಹರಿಯ, ಪಾದಜಲಂ-ಪಾದೋದಕವು, ಇತಿ ತು-ಎಂಬುದರಿಂದಲೇ, ಯಾಂ-ಯಾವಾಕೆಯನ್ನು, ಮೂರ್ಧ್ನಾ-ಶಿರಸ್ಸಿನಿಂದ, ಮಹದೇವಃ ಅಪಿ-(ದೇವಶ್ರೇಷ್ಠನಾದ) ಮಹದೇವನೂ, ದಧಾರ-ಧರಿಸಿದನೋ, ಸಾ-ಆ ಗಂಗೆಯು, ಜಗದ್ಧಿತೇ-ಪ್ರಜೆಗಳ ಹಿತದಲ್ಲಿ, ಸಾರಭೂತಾ-ಸಾರಭೂತಳೆಂದು (ಶ್ರೇಷ್ಠಳೆಂದು) ಪ್ರೋಕ್ತಾ-ಹೇಳಲ್ಪಟ್ಟಿರುವಳು.

**ಅತ ಏವ ಪುರಾ ವ್ಯಾಸಃ ಪ್ರಾಹ ಪೃಷ್ಟೋ ಮಹರ್ಷಿಭಿಃ ।**
**ಸಾರಭೂತಂ ಜಗತ್ಯಸ್ಮಿಂಸ್ತನ್ಮತಂ ಶೃಣುತಾದರಾತ್ ॥ ೮೪ ॥**

ಅತಃ ಏವ-ಆದ್ದರಿಂದಲೇ, ಪುರಾ-ಪೂರ್ವದಲ್ಲಿ, ವ್ಯಾಸಃ-ಶ್ರೀ ವೇದವ್ಯಾಸರು, ಮಹರ್ಷಿಭಿಃ-ಮಹರ್ಷಿಗಳಿಂದ, ಪೃಷ್ಟಃ-ಪ್ರಶ್ನಿಸಲ್ಪಟ್ಟು, ಅಸ್ಮಿನ್-ಈ, ಜಗತಿ- ಜಗತ್ತಿನಲ್ಲಿ, ಸಾರಭೂತಂ-ಶ್ರೇಷ್ಠವಾದುದನ್ನು, ಪ್ರಾಹ-ಹೇಳಿದರು; ತನ್ಮತಂ-ಅವರ ನಿರ್ಣಯವನ್ನು (ಅಭಿಪ್ರಾಯವನ್ನು), ಆದರಾತ್-ಆದರದಿಂದ, ಶೃಣುತ-ಕೇಳಿರಿ.

**ಹರಿರ್ಭಾಗೀರಥೀ ವಿಪ್ರಾ ವಿಪ್ರಾ ಭಾಗೀರಥೀ ಹರಿಃ ।**
**ಭಾಗೀರಥೀಹರಿರ್ವಿಪ್ರಾಃ ಸಾರಮೇತಜ್ಜಗತ್ರಯೇ ॥ ೮೫ ॥**
**ಮನಸಾಪಿ ತ್ರಯಂ ಚೈತನ್ನಾವಮನ್ಯೇತ ಬುದ್ಧಿಮಾನ್ ।**
**ನ ಹಿ ಸಾರದ್ರುಹೋ ಲೋಕೇ ದೃಶ್ಯಂತೇ ಬುದ್ಧಿಸಂಯುತಾಃ ॥ ೮೬ ॥**

---

ಮತವಾಗಿದೆ (೮೧-೮೩). ಹಿಂದೆ, ಮಹರ್ಷಿಗಳಿಂದ ಪ್ರಶ್ನಿತರಾಗಿ ಶ್ರೀ ವೇದವ್ಯಾಸರು ಜಗತ್ತಿನಲ್ಲಿ ಸಾರಭೂತವಾದ ವಸ್ತುಗಳು (ಹಿತಸಾಧಕವಾದ ಶ್ರೇಷ್ಠ ಪದಾರ್ಥಗಳು ಯಾವುವೆಂಬುದನ್ನು ಹೇಳಿದರು—ಅವರ ಅಭಿಪ್ರಾಯವನ್ನು ಹೇಳಿದ ನಿರ್ಣಯ ವಾಕ್ಯವನ್ನು ಹೇಳುತ್ತೇನೆ; ಆದರದಿಂದ ಕೇಳಿರಿ (೮೪). ಶ್ರೀ ವೇದವ್ಯಾಸರು ಹೀಗೆ ಹೇಳಿದರು:—ಶ್ರೀಹರಿ ಭಾಗೀರಥೀ ಮತ್ತು ವಿಪ್ರರು ಎಂಬ, ಈ ಮೂರು ವಸ್ತುಗಳು ಬ್ರಹ್ಮಾಂಡದಲ್ಲಿ ದೊರೆಯುವ ಸಾರಭೂತವಾದ (ಹಿತಸಾಧಕವಾದ ಶ್ರೇಷ್ಠ) ವಸ್ತುಗಳು; ಯಾವ ಕ್ರಮದಿಂದ ಹೇಳಿದರೂ ಇವರು ಮೂರೇ ಸಾರವಸ್ತುಗಳೆಂದು ಸಾರಿಸಾರಿ ಹೇಳುತ್ತೇನೆ; ವಿವೇಕಿಯು ಈ ಮೂರನ್ನು ಮನಸ್ಸಿನಲ್ಲಿ ಸಹ ಅಲ್ಪಗಳೆಂದು (ಕಡಿಮೆ

ಭಾಗ್ಯೇನ ಸುಲಭಂ ಚೈತದಭಾಗ್ಯಾದ್ದುರ್ಲಭಂ ತ್ರಯಂ ।
ಸುಲಭಂ ಯೋವಜಾನಾತಿ ದುರ್ಲಭಂ ತಸ್ಯ ತದ್ಭವೇತ್ ॥ ೮೭ ॥
ಯದ್ಯೇತದ್ದುರ್ಲಭಂ ತರ್ಹಿ ಕಥಂ ಸ್ಯಾತ್ಸುಲಭಂ ಸುಖಂ ।
ಅತಃ ಸುಖಾರ್ಥಿನಾ ನಿತ್ಯಂ ಭಜನೀಯಮಿದಂ ತ್ರಯಂ ॥ ೮೮ ॥
ವಸ್ತುತೋ ದುರ್ಲಭಾ ವಿಪ್ರಾ ದೃಶ್ಯಂತೇ ಸುಲಭಾ ಇವ ।
ಭಾಗ್ಯಲಭ್ಯಾ ಹಿ ತೇ ಪ್ರಾಯೋ ಭಾಗ್ಯಂ ದುರ್ಲಭಮೇವ ಹಿ ॥ ೮೯ ॥

ವೇದವ್ಯಾಸರು ಮಹರ್ಷಿಗಳಿಗೆ ಹೇಳಿದುದು:—(ವಿಪ್ರಾಃ-ಹೇ ಋಷಿಗಳೇ! ಬ್ರಾಹ್ಮಣ ಶ್ರೇಷ್ಠರೇ!), ಹರಿಃ-ಶ್ರೀಹರಿಯು, ಭಾಗೀರಥೀ-ಗಂಗೆಯು, ವಿಪ್ರಾಃ-ಬ್ರಾಹ್ಮಣರು; ವಿಪ್ರಾ ಭಾಗೀರಥೀ ಹರಿಃ-ವಿಪ್ರರು, ಭಾಗೀರಥೀ ಮತ್ತು ಶ್ರೀಹರಿಯು; ಭಾಗೀರಥೀ ಹರಿರ್ವಿಪ್ರಾಃ-ಭಾಗೀರಥೀ, ಶ್ರೀಹರಿಯು ಮತ್ತು ವಿಪ್ರರು; ಏತತ್-ಈ ಮೂರು, ಜಗತ್ರಯೇ-ಮೂರು ಲೋಕಗಳಲ್ಲಿ (ಬ್ರಹ್ಮಾಂಡದಲ್ಲಿ ಭೂಲೋಕ, ಅಧೋಲೋಕಗಳು ಮತ್ತು ಊರ್ಧ್ವಲೋಕಗಳೆಂಬ ವಿಭಾಗ ರೀತ್ಯಾ ಮೂರು ಲೋಕಗಳು), ಸಾರಂ-ಸಾರಭೂತವಾದುದು (ಶ್ರೇಷ್ಠ ವಸ್ತುತ್ರಯವು) (ಭಿನ್ನಕ್ರಮದಿಂದ ಮೂರಾವರ್ತಿ ಹೇಳಿರುವುದು, ಇದು ಪ್ರತಿಜ್ಞಾಪೂರ್ವಕವಾದ ಸತ್ಯನುಡಿ ಎಂಬುದನ್ನು ತಿಳಿಸಲಿಕ್ಕಾಗಿ); ಬುದ್ಧಿಮಾನ್-ಬುದ್ಧಿಯುಳ್ಳವನು (ವಿವೇಕಿಯು), ಏತತ್-ಈ ತ್ರಯಂ-ಮೂರನ್ನು ಮನಸಾ ಅಪಿ-ಮನಸ್ಸಿನಿಂದ ಸಹ, ನ ಅವಮನ್ಯೇತ-ಹೀನವಾಗಿ (ಅಲ್ಪಗಳೆಂದು) ತಿಳಿದು ಅವಮಾನಿಸಬಾರದು; ಲೋಕೇ-ಜಗತ್ತಿನಲ್ಲಿ ಸಾರದ್ರುಹಃ-ಉತ್ತಮ ವಸ್ತುಗಳ ದ್ರೋಹಚಿಂತಕರು (ಉತ್ತಮವಾದುದನ್ನು ಕೀಳೆಂದು ತಿಳಿಯುವವರು), ಬುದ್ಧಿಸಂಯುತಾಃ-ಬುದ್ಧಿಯುಳ್ಳವರಾಗಿ, ನಹಿ ದೃಶ್ಯಂತೇ-ಕಂಡುಬರುವುದಿಲ್ಲ; ಏತತ್-ಈ ಮೂರು, ಭಾಗ್ಯೇನ-(ಪೂರ್ವ) ಪುಣ್ಯದಿಂದ, ಸುಲಭಂ-ಸುಲಭವು (ಶ್ರಮವಿಲ್ಲದೆ ದೊರೆಯುತ್ತವೆ); ಅಭಾಗ್ಯಾತ್-ಪುಣ್ಯವಿಲ್ಲದ್ದರಿಂದ, ತ್ರಯಂ-ಮೂರೂ, ದುರ್ಲಭಂ-ದುರ್ಲಭವೇ ಸರಿ; ಸುಲಭಂ-ಸುಲಭವಾಗಿ (ಪುಣ್ಯದಿಂದ) ದೊರೆಯುವುದನ್ನು ಯಃ-ಯಾರು, ಅವಜಾನಾತಿ-ಹೀನವಾಗಿ ತಿಳಿಯುವನೋ (ಕೀಳು-ಕಳಪೆ ಎಂದು ತಿಳಿಯುವನೋ), ತಸ್ಯ-ಅವನಿಗೆ,

---

ಯಾಗಿ) ತಿಳಿಯಬಾರದು; ಸಾರವಸ್ತುವನ್ನು ಅಸಾರವೆಂದು ತಿಳಿದು ಆ ವಸ್ತುವಿಗೆ ದ್ರೋಹವನ್ನು (ವಿರೋಧವನ್ನು) ಎಸಗುವ ವ್ಯಕ್ತಿಯನ್ನು ಬುದ್ಧಿವಂತನೆಂದು ಲೋಕದಲ್ಲಿ ಯಾರೂ ಹೇಳುವುದಿಲ್ಲ; ಈ ಮೂರು ವಸ್ತುಗಳು ಪೂರ್ವಪುಣ್ಯದಿಂದ ಸುಲಭವಾಗಿ ದೊರೆಯುತ್ತವೆ; ಅದಿಲ್ಲದಿದ್ದರೆ ದುರ್ಲಭಗಳೇ ಆಗುತ್ತವೆ (ಕಷ್ಟದಿಂದ ಯತ್ನಿಸಿದರೂ ದೊರೆಯುವುದಿಲ್ಲ); ಇವು ಸುಲಭವೆಂಬ ಕಾರಣದಿಂದ ಯಾರು ಇವುಗಳನ್ನು ಕೀಳಾಗಿ ಕಾಣುವರೋ, ಅವರಿಗೆ ಅವು ದುರ್ಲಭಗಳೇ ಆಗುತ್ತವೆ; ಇವು

ತತ್-ಅದು, ದುರ್ಲಭಂ-ದುರ್ಲಭವೇ, ಭವೇತ್-ಆಗುತ್ತದೆ; ಯದಿ-ಒಂದುವೇಳೆ, ಏತತ್-ಇದು, ದುರ್ಲಭಂ-ದುರ್ಲಭವಾದರೆ (ಕಷ್ಟದಿಂದ ದೊರೆಯುವುದಾದರೆ), ತರ್ಹಿ-ಆಗ, ಸುಖಂ-ಸುಖವು, ಸುಲಭಂ-ಸುಲಭವಾದುದು, ಕಥಂಸ್ಯಾತ್-ಹೇಗೆ ಆದೀತು? (ಸುಲಭವಾಗುವುದಿಲ್ಲ); ಅತಃ-ಆದ್ದರಿಂದ, ಸುಖಾರ್ಥಿನಾ-ಸುಖಾಪೇಕ್ಷಿತನಿಂದ, ನಿತ್ಯಂ-ನಿತ್ಯದಲ್ಲಿ ಇದಂ ತ್ರಯಂ-ಈ ಮೂರೂ, ಭಜನೀಯಂ-ಸೇವಿಸಲ್ಪಡತಕ್ಕದ್ದೇ ಸರಿ. ವಸ್ತುತಃ-ನಿಜವೆಂದರೆ (ಸತ್ಯವೆಂದರೆ), ವಿಪ್ರಾಃ-ಬ್ರಾಹ್ಮಣರು, ದುರ್ಲಭಾಃ-ದುರ್ಲಭರೇ; ಸುಲಭಾಃ ಇವ-ಸುಲಭರಿದ್ದಂತೆ (ನಮ್ಮ ಇಚ್ಛಾನುಸಾರ ನಡೆದುಕೊಳ್ಳುವಂತೆ), ದೃಶ್ಯಂತೇ ಕಾಣುತ್ತಾರೆ; ಹಿ-ಏಕೆಂದರೆ (ಯಾವ ಕಾರಣದಿಂದ), ತೇ-ಅವರು (ವಿಪ್ರರು), ಪ್ರಾಯಃ-ಬಹುವಾಗಿ, ಭಾಗ್ಯಲಭ್ಯಾಃ-ಪುಣ್ಯದಿಂದ ಮಾತ್ರ (ಪೂರ್ವ ಪುಣ್ಯವಿದ್ದವರಿಂದ) ಲಭ್ಯರು; ಭಾಗ್ಯಂ-ಪುಣ್ಯವು, ದುರ್ಲಭಂ ಏವ-ದುರ್ಲಭವೇ ಸರಿ. (ಇಲ್ಲಿ ಭಾಗ್ಯವೆಂಬುದಕ್ಕೆ ಧನವೆಂಬ ಅರ್ಥವನ್ನೂ ಗ್ರಹಿಸಿ, ದಾನಾದಿಗಳಲ್ಲಿ ಅಶಕ್ತರಾದ ನಿರ್ಧನರಿಗೆ, ಸುಲಭರಲ್ಲವೆಂದರ್ಥವನ್ನು ತಿಳಿಯಬಹುದು).

ಪೃಥಿವ್ಯಾಂ ಭಾರತಂ ವರ್ಷಂ ಅತ್ಯಲ್ಪಪರಿಮಾಣಕಂ ।
ತತ್ರಾಪಿ ಪ್ರಾಯಶೋ ವೃಕ್ಷಾ ನದೀಪರ್ವತಕಂದರಾಃ ॥ ೯೦ ॥
ಕ್ಷೇತ್ರಾದೀನ್ಯವಶಿಷ್ಟೇಪಿ ಪ್ರಾಯೇಣೈವಾಧಮಾ ಜನಾಃ ।
ಉತ್ತಮೇಷ್ವಪಿ ಹಿ ಪ್ರಾಯೋ ನಿರ್ಧನಾ ನಾಸ್ತಿಕಾಃ ಪರೇ ॥ ೯೧ ॥
ಆಸ್ತಿಕೇಷ್ವಪಿ ಹಿ ಪ್ರಾಯೋ ಮಂದಭಾಗ್ಯಾ ಹ್ಯುಪದ್ರುತಾಃ ।
ಲಕ್ಷಾಯುತಸಹಸ್ರೇಷು ಕಶ್ಚಿದ್ವಿಷ್ಣುಪದೇ ರತಃ ॥ ೯೨ ॥
ತತ್ರಾಪಿ ಭಾಗ್ಯತೋ ಲಾಭೋ ವಿಷ್ಣುಭಕ್ತಸ್ಯ ಸಂಗತೇಃ ।
ಮಹಿಮಾ ಶ್ರವಣಂ ವಿಷ್ಣೋರ್ದುರ್ಲಭಾದ್ದುರ್ಲಭಂ ಸ್ಮೃತಂ ॥ ೯೩ ॥

ಪೃಥಿವ್ಯಾಂ-ಪೃಥ್ವಿಯಲ್ಲಿ ಭಾರತಂವರ್ಷಂ-(ಜಂಬೂದ್ವೀಪದ ಏಕದೇಶವಾದ)

---

ಮೂರು ದುರ್ಲಭವಾದರೆ ಸುಖವು ಹೇಗೆ ಸುಲಭವಾದೀತು? (ಎಂದೂ ಆಗುವುದಿಲ್ಲ); ಆದ್ದರಿಂದ ಸುಖಾಪೇಕ್ಷಿಯು ಈ ಮೂರನ್ನು ನಿತ್ಯವೂ ಸೇವಿಸತಕ್ಕದ್ದು; ವಸ್ತುತಃ ವಿಪ್ರರು ದುರ್ಲಭರೇ ಆದರೂ, ಸುಲಭರಂತೆ ತೋರುತ್ತಾರೆ; ಪ್ರಾಯಃ ವಿಪ್ರರು ಪುಣ್ಯಲಭ್ಯರು—ಪುಣ್ಯವು ದುರ್ಲಭವಲ್ಲವೆ? (ದಾನಾದಿಗಳಲ್ಲಿ ಅಸಮರ್ಥರಾದ ನಿರ್ಧನರಿಗೆ ವಿಪ್ರರು ದುರ್ಲಭರೇ ಸರಿ (೮೫-೮೯). ವಿಸ್ತಾರವಾದ ಪೃಥ್ವಿಯಲ್ಲಿ ಜಂಬೂದ್ವೀಪವು ಏಕದೇಶವಾಗಿದೆ (ಸಪ್ತ ದ್ವೀಪಗಳಲ್ಲಿ ಒಂದು); ಇದು ನವವರ್ಷಗಳುಳ್ಳದ್ದು (೯ ವಿಭಾಗಗಳುಳ್ಳದ್ದು); ಅದರಲ್ಲಿ ಭಾರತವರ್ಷವು ಒಂದು—ಇದು

ಭಾರತವರ್ಷವು, ಅತ್ಯಲ್ಪ ಪರಿಮಾಣಕಂ-ಅತ್ಯಲ್ಪ ವಿಸ್ತಾರವುಳ್ಳದ್ದು; ತತ್ರಾಪಿ-ಅದರಲ್ಲಿಯೂ, ಪ್ರಾಯಶಃ-ಬಹುವಾಗಿ, ನದೀಪರ್ವತಕಂದರಾಃ-ನದೀ ಪರ್ವತಗಳು ಮತ್ತು ತಪ್ಪಲು ಪ್ರದೇಶಗಳೂ (ಕಣಿವೆಗಳು-Valleys) ಕ್ಷೇತ್ರಾದೀನಿ-ಬಹುಪ್ರದೇಶಗಳನ್ನು (ಆಕ್ರಮಿಸಿಕೊಂಡಿವೆ); ಅವಶಿಷ್ಟೇ ಅಪಿ-ಉಳಿದ (ಭಾರತ ವರ್ಷದ) ಭೂಭಾಗದಲ್ಲಿ ಪ್ರಾಯೇಣ-ಹೆಚ್ಚಾಗಿ, ಅಧಮಾಃ ಜನಾಃ-ಕೀಳು ಜನಾಂಗದವರು (ಪಾರ್ವತೀಯರೇ ಆದಿಯಾಗಿ), ಏವ-(ಇರುವವರೇ) ಆಗಿರುವರು; ಉತ್ತಮೇಷು ಅಪಿ-ಉತ್ತಮರೆಂಬ (ನಾಗರಿಕ) ಜನರು ವಾಸಿಸುವ ಪ್ರದೇಶಗಳಲ್ಲಿ ಸಹ, ಪರೇ-ಇತರರಾದ, ನಿರ್ಧನಾಃ-ದರಿದ್ರರೂ, ನಾಸ್ತಿಕಾಃ-ನಾಸ್ತಿಕರೂ, ಪ್ರಾಯಃ-ಹೆಚ್ಚಾಗಿರುವರು; ಆಸ್ತಿಕೇಷು ಅಪಿ-ಅವರಲ್ಲಿರುವ ಕೆಲವು ಆಸ್ತಿಕರಲ್ಲಿಯೂ, ಮಂದಭಾಗ್ಯಾಃ-ಅಲ್ಪ ಪುಣ್ಯವುಳ್ಳವರೂ (ಅಲ್ಪ ಧನಾದಿಗಳುಳ್ಳವರೂ) ಉಪದ್ರುತಾಃ-(ವಿವಿಧ) ಸಾಂಸಾರಿಕ ಪೀಡೆಗಳುಳ್ಳವರು (ಆಗಿರುತ್ತಾರೆ); ಲಕ್ಷಾಯುತಸಹಸ್ರೇಷು-ಲಕ್ಷ, ಹತ್ತು ಸಹಸ್ರ, ಅಥವಾ ಸಾವಿರದಲ್ಲಿ ಕಶ್ಚಿತ್-ಯಾವನೋ ಒಬ್ಬನು, ವಿಷ್ಣುಪದೇ-ಶ್ರೀವಿಷ್ಣುಪಾದದಲ್ಲಿ ರತಃ-ಭಕ್ತಿಯುಳ್ಳವನು (ಆಗಿರುತ್ತಾನೆ); ತತ್ರಾಪಿ-ಹೀಗೆ ವಿಷ್ಣುಭಕ್ತರ ದುರ್ಲಭರಾಗಿರುತ್ತಿರುವಲ್ಲಿ ವಿಷ್ಣುಭಕ್ತಸ್ಯ-ವಿಷ್ಣುಭಕ್ತನ, ಸಂಗತೇಃ-ಸಂಗದಿಂದ (ಸಹವಾಸದಿಂದ) ವಿಷ್ಣೋಃ- ಶ್ರೀವಿಷ್ಣುವಿನ, ಮಹಿಮಾಶ್ರವಣಂ-ಮಹಿಮೆಗಳ ಶ್ರವಣವು, ಭಾಗ್ಯತಃ-(ಪೂರ್ವ) ಪುಣ್ಯದಿಂದ, ಲಾಭಃ-ಲಭಿಸುವುದೆಂಬುದು, ದುರ್ಲಭಾತ್-ದುರ್ಲಭವಾದುದಕ್ಕಿಂತ, ದುರ್ಲಭಂ-ಅತಿದುರ್ಲಭವೆಂದು, ಸ್ಮೃತಂ -(ಜ್ಞಾನಿಗಳಿಂದ) ತಿಳಿಯಲಾಗಿದೆ.

**ನ ಲಭ್ಯಂತೇ ಯತಂತೋಽಪಿ ಮಂದಭಾಗ್ಯಾ ಹಿ ಯೇ ನರಾಃ ।**
**ಶ್ರವಣಾನಂತರಂ ವಿಷ್ಣೋರ್ಮನನಂ ದುರ್ಲಭಂ ಮತಂ ॥ ೯೪ ॥**

---

ಇಡೀ ಪೃಥ್ವಿಯಲ್ಲಿ ಅತ್ಯಲ್ಪ ವಿಸ್ತಾರದ ಒಂದು ಭಾಗ ಮಾತ್ರ; ಹೀಗಿರುವ ಭಾರತ ವರ್ಷದ ಬಹುಪ್ರದೇಶವು ನದೀ ಪರ್ವತ ಕಂದರಗಳಿಂದ ಆಕ್ರಮಿಸಲ್ಪಟ್ಟಿದೆ; ಉಳಿದ ಪ್ರದೇಶದಲ್ಲಿ ಗುಡ್ಡಗಾಡು ಜನರೇ ಮೊದಲಾದ ಕೀಳು ಜನಾಂಗದವರು ವಾಸಿಸುತ್ತಾರೆ; ಉತ್ತಮರಾದ ಜನರು ವಾಸಿಸುವ ಅಲ್ಪ ಪ್ರದೇಶಗಳಲ್ಲಿರುವ ಜನರಲ್ಲಿ ಬಹುಭಾಗದವರು ದರಿದ್ರರೂ ನಾಸ್ತಿಕರೂ ಆಗಿರುತ್ತಾರೆ; ಇರುವ ಅಲ್ಪಸಂಖ್ಯೆಯ ಆಸ್ತಿಕರಲ್ಲಿ ಮಂದಭಾಗ್ಯರೂ ಉಪದ್ರುತರೂ ಜಾಸ್ತಿ; ಇವರಲ್ಲಿಯೂ ಸಾವಿರ, ಹತ್ತುಸಾವಿರ, ಅಥವಾ ಲಕ್ಷಕ್ಕೊಬ್ಬನು ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳವನಾಗಿರುತ್ತಾನೆ; ಇಂತಹ ವಿಷ್ಣುಭಕ್ತನ ಸಹವಾಸವು ದೊರೆತು, ಶ್ರೀವಿಷ್ಣುಮಹಿಮೆಗಳ ಶ್ರವಣ ಲಾಭವಾಗುವುದು, ದುರ್ಲಭಗಳಲ್ಲಿ ಅತ್ಯಂತ ದುರ್ಲಭವಾದುದೆಂದು ಜ್ಞಾನಿಗಳು ತಿಳಿಯುತ್ತಾರೆ (೯೦-೯೩). ಹೀಗೆ ದುರ್ಲಭವಾದ ವಿಷ್ಣುಮಹಿಮಾ ಶ್ರವಣವನ್ನು ಮಂದಭಾಗ್ಯ

ಧ್ಯಾನಂ ಚ ದುರ್ಲಭಂ ತಸ್ಮಾತ್ಸಾಕ್ಷಾತ್ಕಾರೋ ಭವೇದ್ಯತಃ ।
ಬಹೂನಾಂ ಜನ್ಮನಾಮಂತೇ ನಿದಿಧ್ಯಾಸನತತ್ಪರಾಃ ॥ ೯೫ ॥
ಲಭಂತೇ ಬ್ರಹ್ಮನಿರ್ವಾಣಂ ಮೋಕ್ಷೋತೋ ದುರ್ಲಭೋ ಮತಃ ।
ಜಾನತಾಜಾನತಾ ವಾಪಿ ವಿಷ್ಣುಭಕ್ತಿಮತಾ ಸತಾ ॥ ೯೬ ॥
ಸಂಕೀರ್ತ್ಯೋ ವಚಸಾ ವಿಷ್ಣುಃ ಸ್ಮರಣೀಯಶ್ಚ ಚೇತಸಾ ।
ಕರ್ಮಾಣಿ ಸಂಸ್ಮರೇತ್ತಸ್ಯ ಲಭೇತ್ಸಿದ್ಧಿಂ ತತಃ ಶನೈಃ ॥ ೯೭ ॥

ಯೇ ನರಾಃ-ಯಾವ ಮನುಷ್ಯರು, ಮಂದಭಾಗ್ಯಾಃ-ಅಲ್ಪಪುಣ್ಯವುಳ್ಳವರೋ, (ತೇ-ಅವರು), ಯತಂತಃ ಅಪಿ-ಯತ್ನಮಾಡುವವರಾದರೂ, ನ ಲಭಂತೇ-(ಶ್ರೀ ವಿಷ್ಣುಮಹಿಮೆಗಳ ಶ್ರವಣವನ್ನು) ಹೊಂದುವುದಿಲ್ಲ (ಶ್ರವಣ ಸೌಲಭ್ಯವು ಮಹಾ ಪುಣ್ಯದಿಂದ ಮಾತ್ರ ಲಭಿಸುತ್ತದೆ; ವಿಷ್ಣೋಃ-ಶ್ರೀವಿಷ್ಣುವಿನ, ಶ್ರವಣಾನಂತರಂ-(ಮಹಿಮೆಗಳ) ಶ್ರವಣದನಂತರ, ಮನನಂ-ಮನನವು (ಸಂಶಯ ವಿಪರ್ಯಗಳನ್ನು ಪರಿಹರಿಸುವ ವಿಮರ್ಶಾತ್ಮಕ ಚಿಂತನವು); (ಅವಶ್ಯಕ); ದುರ್ಲಭಂ-(ಮನನವು ಶ್ರವಣಕ್ಕಿಂತ) ದುರ್ಲಭವು; (ಎಂದು) ಮತಂ-ತಿಳಿಯಲ್ಪಡುತ್ತದೆ; ತಸ್ಮಾತ್-ಅದಕ್ಕಿಂತ (ಮನನಕ್ಕಿಂತ), ಯತಃ-ಯಾವುದರಿಂದ, ಸಾಕ್ಷಾತ್ಕಾರಃ-(ಶ್ರೀವಿಷ್ಣುವಿನ) ಪ್ರತ್ಯಕ್ಷ ದರ್ಶನವು, ಭವೇತ್-ದೊರೆಯುವುದೋ, ಧ್ಯಾನಂ ಚ-(ಆ) ಧ್ಯಾನವೂ, ದುರ್ಲಭಂ-ದುರ್ಲಭವಾದುದೇ; ನಿದಿಧ್ಯಾಸನ ತತ್ಪರಾಃ-ಧ್ಯಾನದಲ್ಲಿ ಆಸಕ್ತರಾದ ಸಾಧಕರು; ಬಹೂನಾಂ-ಅನೇಕ, ಜನ್ಮನಾಂ-ಜನ್ಮಗಳೂ, ಅಂತೇ-ಕಳೆದನಂತರ, (ಜನ್ಮಗಳ ಕಡೆಯಲ್ಲಿ), ಬ್ರಹ್ಮನಿರ್ವಾಣಂ-ಅಪ್ರಾಕೃತ ಸ್ವರೂಪನಾದ ಶ್ರೀಹರಿಯನ್ನು

---

ರಾದ ನರರು, ಯತ್ನಿಸಿದರೂ, ಪಡೆಯುವುದಿಲ್ಲ; ವಿಷ್ಣುವಿಷಯಕವಾದ ಮನನವು, ಶ್ರವಣಕ್ಕಿಂತ ದುರ್ಲಭವಾದುದು; ಅದಕ್ಕಿಂತ ಆತನ ಸಾಕ್ಷಾದರ್ಶನಕ್ಕೆ ಕಾರಣವಾದ ಧ್ಯಾನವು ಹೆಚ್ಚು ದುರ್ಲಭವಾದುದು. ಧ್ಯಾನಾಸಕ್ತರಾದ ಮುಕ್ತಿಯೋಗ್ಯ ಜೀವರು, ಬಹುಜನ್ಮಗಳು ಕಳೆದನಂತರ, ಸಮಾಧಿಯ ಸಿದ್ಧಿಯನ್ನು ಹೊಂದಿ, ಅಪ್ರಾಕೃತ ಸ್ವರೂಪನಾದ ಶ್ರೀಹರಿಯ ಸಾಕ್ಷಾತ್ಕಾರವನ್ನು ಹೊಂದುತ್ತಾರೆ; ಸಾಕ್ಷಾದ್ದರ್ಶನಕ್ಕಿಂತ ಮೋಕ್ಷವು (ಲಿಂಗಭಂಗದಿಂದ ಮುಕ್ತಾವಸ್ಥೆಯನ್ನು ಸೇರುವುದು) ಮತ್ತೂ ದುರ್ಲಭವೆಂದು ಹೇಳಲಾಗುತ್ತದೆ; ಆದ್ದರಿಂದ ವಿಷ್ಣುಭಕ್ತಿಯುಳ್ಳ ಸುಜೀವನು, ಅಜ್ಞಾನ ದಿಂದಾಗಲಿ, ಜ್ಞಾನಪೂರ್ವಕವಾಗಲಿ, ಸದಾ ಮುಖದಿಂದ ಶ್ರೀವಿಷ್ಣುಸಂಕೀರ್ತನ ಮಾಡುತ್ತಿರಬೇಕು; ಮನಸ್ಸಿನಿಂದ, ವಿಷ್ಣು ಮಹಿಮೆಗಳನ್ನು ಸ್ಮರಿಸುತ್ತಿರಬೇಕು; ಆತನ ಸೃಷ್ಟ್ಯಾದಿ ಅದ್ಭುತಕರ್ಮಗಳನ್ನೂ ಅವತಾರ ಲೀಲೆಗಳನ್ನೂ ನಿರಂತರವಾಗಿ ಸ್ಮರಿಸುತ್ತಿರಬೇಕು; ಹೀಗೆ ಮಾಡುವುದರಿಂದ, ಕ್ರಮವಾಗಿ (ಮೆಲ್ಲಮೆಲ್ಲಗೆ) ಸಿದ್ಧಿಯನ್ನು ಪಡೆಯುತ್ತಾನೆ—ಅಂತ್ಯಕ್ಕೆ ಪರಮಪುರುಷಾರ್ಥವಾದ ಮೋಕ್ಷವನ್ನೇ ಹೊಂದುತ್ತಾನೆ

(ಸಮಾಧಿಯ ಸಿದ್ಧಿಯನ್ನು ಹೊಂದಿ ಶ್ರೀಹರಿ ದರ್ಶನವನ್ನು), ಲಭಂತೇ-ಹೊಂದುತ್ತಾರೆ; ಅತಃ-ಅದರಿಂದ (ಸಾಕ್ಷಾತ್ಕಾರದಿಂದ), ದುರ್ಲಭಃ-ದುರ್ಲಭವಾದ, ಮೋಕ್ಷಃ-ಮೋಕ್ಷವೆಂದು, ಮತಃ-ತಿಳಿಯಲ್ಪಟ್ಟರೆ; (ಅಥವಾ ದರ್ಶನಕ್ಕಿಂತ ಮೋಕ್ಷವು ದುರ್ಲಭವೆಂಬರ್ಥವನ್ನೂ ತಿಳಿಯಬಹುದು; ಅಪರೋಕ್ಷಾನಂತರ ಬ್ರಹ್ಮ ಪ್ರಲಯ ಪರ್ಯಂತ ಕಾದಿದ್ದು ಬ್ರಹ್ಮೋಪದೇಶದಿಂದ ಸ್ಫುಟತರವಾದ ಬಿಂಬಾಪರೋಕ್ಷವನ್ನು ಹೊಂದಿ, ಶ್ರೀಹರಿಯ 'ಏನಂ ಮೋಚಯಾಮಿ' ಎಂಬ ಸಂಕಲ್ಪರೂಪದ ಆತ್ಯಂತಿಕ ಪ್ರಸಾದದಿಂದ ಲಿಂಗಭಂಗವನ್ನು ಹೊಂದಿ, ಪ್ರಲಯಕಾಲದಲ್ಲಿ ಪರಮಾತ್ಮನ ಉದರದಲ್ಲಿ ಧ್ಯಾನದಲ್ಲಿದ್ದು ಸೃಷ್ಟಿಕಾಲ ಪ್ರಾಪ್ತವಾಗಲು, ಶ್ರೀವಾಸುದೇವನ ಅನುಗ್ರಹದಿಂದ ಶ್ವೇತದ್ವೀಪದಲ್ಲಿ ಶ್ರೀ ನಾರಾಯಣನ ದರ್ಶನವನ್ನು ಪಡೆದನಂತರ, ಆನಂದಾತಿಶಯ ಭೋಗವುಳ್ಳ ಮುಕ್ತ್ಯವಸ್ಥೆಯು ಲಭಿಸುತ್ತದೆ.); ವಿಷ್ಣುಭಕ್ತಿಮತಾ-ವಿಷ್ಣು ಭಕ್ತಿಯುಳ್ಳ, ಸತಾ-ಸುಜೀವನಿಂದ, ಜಾನತಾ-ಜ್ಞಾನಪೂರ್ವಕ, ಅಪಿ ವಾ-ಅಥವಾ, ಅಜಾನತಾ-ತಿಳಿಯದೆ ಆಗಲಿ (ಅಜ್ಞಾನಾವಸ್ಥೆಯಲ್ಲಿ ಆಗಲಿ), ವಿಷ್ಣುಃ-ಶ್ರೀವಿಷ್ಣುವು, ವಚಸಾ-ನುಡಿಯಿಂದ, ಸಂಕೀರ್ತ್ಯಃ-ಕೀರ್ತಿಸಲ್ಪಡಬೇಕು (ವಿಷ್ಣುನಾಮಗಳನ್ನು ಉಚ್ಚರಿಸಬೇಕು); ಚೇತಸಾ-ಮನಸ್ಸಿನಿಂದ, ಸ್ಮರಣೀಯಃ ಚ-ಸ್ಮರಿಸಲ್ಪಡುವವನೂ (ಆಗಬೇಕು), ತಸ್ಯ-ಆತನ, (ಶ್ರೀವಿಷ್ಣುವಿನ), ಕರ್ಮಾಣಿ-(ಅದ್ಭುತ ಸೃಷ್ಟ್ಯಾದಿ ಕರ್ಮಗಳನ್ನು ಅಥವಾ) ಅವತಾರ ಲೀಲೆಗಳನ್ನು ಸಂಸ್ಮರೇತ್-(ಸದಾ) ಸ್ಮರಿಸುತ್ತಿರಬೇಕು; ತತಃ-ಅದರಿಂದ, ಶನೈಃ-ಕ್ರಮವಾಗಿ, ಸಿದ್ಧಿಂ-ಸಿದ್ಧಿಯನ್ನು (ಪುರುಷಾರ್ಥವನ್ನು), ಲಭತೇ- (ತಪ್ಪದೇ) ಹೊಂದುತ್ತಾನೆ.

ಸಕಾಮಾನಿ ತು ಕರ್ಮಾಣಿ ವಿಷ್ಣುಭಕ್ತೈಃ ಕೃತಾನಿ ಚೇತ್ ।
ಸಾಂತಾನ್ಯೇವ ಫಲಾನಿ ಸ್ಯುರವಿಲಂಬೇನ ನಾನ್ಯಥಾ ॥ ೯೮ ॥
ನಿಷ್ಕಾಮೋ ಹರಿತುಷ್ಟ್ಯರ್ಥಂ ಕುರ್ಯಾತ್ಕರ್ಮಾಣಿ ಯಾನಿ ಚ ।
ವಿಲಂಬಾತ್ತತ್ಫಲಂ ಭುಂಕ್ತೇ ಮೋಕ್ಷಬೀಜಂ ಚ ತದ್ಭವೇತ್
ತದನ್ಯಂ ದೇವಮುದ್ದಿಶ್ಯ ಕರ್ಮ ಯತ್ಸುಕೃತಂ ನರೈಃ ॥ ೧೦೦ ॥

---

(೯೪-೯೭). ವಿಷ್ಣುಭಕ್ತರು, ಸಕಾಮಕರ್ಮಗಳನ್ನು ಆಚರಿಸಿದರೆ, ಶ್ರೀವಿಷ್ಣುವು, ಕಾಲವಿಳಂಬವಿಲ್ಲದೇ ಶೀಘ್ರವಾಗಿ, ನಶ್ವರವಾದ ಫಲಗಳನ್ನು ಕೊಡುತ್ತಾನೆ—ಆ ಫಲಭೋಗವೂ ಮೋಕ್ಷಸಾಧಕವಾಗುವುದಿಲ್ಲ; ಅದೇ, ನಿಷ್ಕಾಮರಾಗಿ ಕೇವಲ ಶ್ರೀಹರಿ ಪ್ರೀತಿಗಾಗಿ, ಮಾಡುವ ಕರ್ಮಗಳಿಗೆ ವಿಲಂಬದಿಂದ ಫಲ ಕೊಡುತ್ತಾನೆ; ಆ ಕರ್ಮಗಳೂ ಅವುಗಳ ಫಲವೂ, ಮೋಕ್ಷಕ್ಕೇ ಸಾಧನಗಳಾಗುತ್ತವೆ; ವಿಷ್ಣುಭಕ್ತರು, ಅನ್ಯದೇವತೆಗಳನ್ನುದ್ದೇಶಿಸಿ, ಸತ್ಕರ್ಮಗಳನ್ನಾಚರಿಸಿದರೆ, ಆ ದೇವತೆಗಳಲ್ಲಿ ಅಂತರ್ಯಾಮಿಯಾಗಿ ಸ್ಥಿತನಾದ ಶ್ರೀಹರಿಯೇ, ಕ್ಷುದ್ರಗಳಾದ ನಶ್ವರ ಫಲಗಳನ್ನು

**ತತ್ರಸ್ಥಸ್ತತ್ಫಲಂ ವಿಷ್ಣುಃ ಪ್ರದದ್ಯಾತ್ಕಿಂಚಿದಲ್ಪಕಂ ।**
**ತನ್ಮೋಕ್ಷಪ್ರತಿಬಂಧಾಯ ಭವೇತ್ತಸ್ಮಾನ್ನತದ್ವರಂ ॥ ೧೦೧ ॥**

ವಿಷ್ಣುಭಕ್ತೈಃ-ವಿಷ್ಣುಭಕ್ತರಿಂದ, ಸಕಾಮಾನಿ-ಫಲಾಪೇಕ್ಷೆಯುಳ್ಳ, ಕರ್ಮಾಣಿ-ಕರ್ಮಗಳು, ಕೃತಾನಿ ಚೇತ್-ಮಾಡಲ್ಪಟ್ಟರೆ, ಅವಿಲಂಬೇನ-ತಡವಿಲ್ಲದೇ (ಶೀಘ್ರವಾಗಿ), ಸಾಂತಾನಿ ಏವ-ನಶ್ವರಗಳೇ ಆದ (ನಾಶವುಳ್ಳ), ಫಲಾನಿ-ಫಲಗಳು, ಸ್ಯುಃ-ದೊರೆಯುತ್ತವೆ; ಅನ್ಯಥಾ ನ-ಬೇರೆಯಲ್ಲ (ಶಾಶ್ವತ-ಅನಂತ ಫಲವಲ್ಲ); ನಿಷ್ಕಾಮಃ-ಫಲಕಾಮನೆಯನ್ನು ಬಿಟ್ಟು ಹರಿತುಷ್ಟ್ಯರ್ಥಂ ಚ-ಶ್ರೀಹರಿ ಪ್ರೀತ್ಯರ್ಥವಾಗಿಯೇ, ಯಾನಿ-ಯಾವ, ಕರ್ಮಾಣಿ-ಕರ್ಮಗಳನ್ನು ಕುರ್ಯಾತ್-(ಭಕ್ತನು) ಮಾಡುವನೋ (ಕುರ್ಯಾತ್ ಚೇತ್-ಮಾಡುವವನಾದರೆ), ತತ್ಫಲಂ-ಅವುಗಳ ಫಲವನ್ನು ವಿಲಂಬಾತ್-ಬಹುಕಾಲದ ಮೇಲೆ, ಭುಂಕ್ತೇ-ಪಡೆಯುತ್ತಾನೆ; ತತ್-ಅದು (ಆ ಫಲಭೋಗವೂ), ಮೋಕ್ಷಬೀಜಂ-ಮುಕ್ತಿಗೆ ಸಾಧನವಾದುದು, ಭವೇತ್-ಆಗುತ್ತದೆ; ತದನ್ಯಂ ದೇವಂ-ಶ್ರೀಹರಿಯಿಂದ ಭಿನ್ನನಾದ ಅನ್ಯದೇವತೆಯನ್ನು ಉದ್ದಿಶ್ಯ-ಕುರಿತು (ಉದ್ದೇಶಿಸಿ), ಯತ್-ಯಾವುದೊಂದು, ಕರ್ಮ-ಪುಣ್ಯಕರ್ಮವು, ನರೈಃ-ಮನುಷ್ಯರಿಂದ, ಸುಕೃತಂ-(ಭಕ್ತಿಯಿಂದ) ಮಾಡಲ್ಪಡುವುದೋ, ತತ್ಫಲಂ-ಅದರ ಫಲವನ್ನು ಅಲ್ಪಕಂ-ಅಲ್ಪವಾದ, ಕಿಂಚಿತ್-ನಶ್ವರವಾದುದನ್ನೇ, ತತ್ರಸ್ಥಃ-ಆ ದೇವತೆಯಲ್ಲಿರುವ, ವಿಷ್ಣುಃ-ಶ್ರೀವಿಷ್ಣುವೇ, ಪ್ರದದಾತಿ-ಕೊಡುತ್ತಾನೆ (ಫಲದಾನದಲ್ಲಿ ಅನ್ಯದೇವತೆಗಳು ಸ್ವತಂತ್ರರಲ್ಲ); ತತ್-ಅದು (ಆ ಕರ್ಮ ಅಥವಾ ಫಲಭೋಗವು), ಮೋಕ್ಷ ಪ್ರತಿಬಂಧಾಯ-ಮೋಕ್ಷವನ್ನು ಪ್ರತಿಬಂಧಿಸುವುದಕ್ಕಾಗಿ (ಮೋಕ್ಷ ವಿರೋಧಿಯು) ಭವೇತ್-ಆಗುತ್ತದೆ; ತಸ್ಮಾತ್-ಆದ್ದರಿಂದ, ತತ್-ಅದು, ನ ವರಂ-ಶ್ರೇಷ್ಠವಲ್ಲ.

**ಜೀವಾಃ ಕರ್ಮಾಣಿ ಕುರ್ವಾಣಾಃ ಪ್ರಾಯೋ ನೈವ ವಿಜಾನತೇ ।**
**ನ ಸ್ಮರಂತಿ ವಿಜಾನಂತೋ ಯದ್ಯಪ್ಯೇವಂ ತಥಾಪಿ ಹಿ ॥ ೧೦೨ ॥**

**ತತ್ತದ್ದೇವಾಃ ಪ್ರಪಶ್ಯಂತಿ ಪ್ರಾಣಾದ್ಯಾಃ ಸಕಲಾ ಅಪಿ ।**
**ಹರೇರಾಜ್ಞಾನುಸಾರೇಣ ಫಲದಾಃ ಸೂಕ್ಷ್ಮದರ್ಶಿನಃ ॥ ೧೦೩ ॥**

---

ಕೊಡುತ್ತಾನೆ—ಆ ಕರ್ಮಗಳೂ ಅವುಗಳ ಫಲಭೋಗವೂ ಮೋಕ್ಷಪ್ರತಿಬಂಧಕಗಳೇ ಆಗುತ್ತವೆ; ಆದ್ದರಿಂದ, ಮುಮುಕ್ಷುವಾದ ವಿಷ್ಣುಭಕ್ತನು, ಅನ್ಯದೇವತೆಗಳನ್ನು ಉದ್ದೇಶಿಸಿ, ಕರ್ಮಗಳನ್ನಾಚರಿಸುವುದು ಒಳ್ಳೆಯದಲ್ಲ (೯೮-೧೦೧). ಸದಾ ಕರ್ಮಗಳನ್ನು ಮಾಡುತ್ತಲೇ ಇರುವ ಜೀವರು, ಬಹುಕರ್ಮಗಳನ್ನು ಮಾಡಿದ್ದನ್ನು ತಾವೇ ತಿಳಿದಿರುವುದಿಲ್ಲ—ಕರ್ಮ ಮಾಡುವಾಗ ತಿಳಿದಿದ್ದರೂ, ನೆನಪಿರುವುದಿಲ್ಲ; ಹೀಗಿದ್ದರೂ, ಮುಖ್ಯಪ್ರಾಣಾದಿ ಸರ್ವತತ್ತ್ವಾಭಿಮಾನಿ ದೇವತೆಗಳೂ, ಶ್ರೀಹರಿಯ

ಆದಿತ್ಯಚಂದ್ರಾವನಿಲೋ ನಲಶ್ಚ ।
ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ॥
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ।
ಧರ್ಮೋ ವಿಜಾನಾತಿ ನರಸ್ಯ ವೃತ್ತಿಂ ॥ ೧೦೪ ॥
ಅನ್ಯೇಪಿ ಯೇ ಪ್ರಾಣಮನೋ ಹೃಷೀಕ
ಭೂತಾಧಿದೇವಾ ಮನುರೀಶಮುಖ್ಯಾಃ ।
ಕರ್ಮಾಧಿದೇವಾ ಅಮುನಾ ಸದೈವ
ಬಹಿಸ್ಥಥಾಂತರ್ವಿಚರಂತಿ ಶಶ್ವತ್ ॥ ೧೦೫ ॥

ಕರ್ಮಾಣಿ-(ವಿವಿಧ) ಕರ್ಮಗಳನ್ನು ಕುರ್ವಾಣಾಃ-ಮಾಡುವ, ಜೀವಾಃ-ಜೀವರು, ಪ್ರಾಯಃ-ಬಹುಶಃ, ನೈವ ವಿಜಾನತೇ-ಆ ಕರ್ಮಗಳೆಲ್ಲವನ್ನೂ) ತಿಳಿದಿರುವುದಿಲ್ಲ (ಜ್ಞಾನಪೂರ್ವಕವಾಗಿ ಮಾಡಿರುವುದಿಲ್ಲ); ವಿಜಾನಂತಃ-ಜ್ಞಾನ ಪೂರ್ವಕ ಮಾಡಿದ್ದರೂ, ನ ಸ್ಮರಂತಿ-(ಅವರಿಗೆ) ಸ್ಮರಣೆ ಇರುವುದಿಲ್ಲ; ಯದ್ಯಪಿ ಏವಂ-ಹೀಗಿದ್ದರೂ ಸಹ, ತಥಾಪಿ-ಅವರಿಗೆ ಅವುಗಳ ನೆನಪಿಲ್ಲದಿದ್ದರೂ, ಹರೇಃ-ಶ್ರೀಹರಿಯ, ಆಜ್ಞಾನುಸಾರೇಣ-ಆಜ್ಞೆಯಂತೆ, ಫಲದಾಃ-(ಕರ್ಮಗಳಿಗೆ) ಫಲಗಳನ್ನು ಕೊಡುವ, ಸೂಕ್ಷ್ಮದರ್ಶಿನಃ-ಸೂಕ್ಷ್ಮಗಳನ್ನು (ರಹಸ್ಯಗಳನ್ನೂ) ತಿಳಿಯುವ, ಪ್ರಾಣಾದ್ಯಾಃ-ಮುಖ್ಯಪ್ರಾಣನೇ ಮೊದಲಾದ, ಸಕಲಾಃ ಅಪಿ-ಸಮಸ್ತರಾದ, ತತ್ತ್ವದೇವಾಃ-ತತ್ತ್ವಾಭಿಮಾನಿ ದೇವತೆಗಳು, ಪ್ರಪಶ್ಯಂತಿ-ಚೆನ್ನಾಗಿ (ಸ್ಪಷ್ಟವಾಗಿ) ಕಂಡು ಬಲ್ಲವರಾಗಿರುತ್ತಾರೆ; ಆದಿತ್ಯಚಂದ್ರೌ-ಸೂರ್ಯಚಂದ್ರರು, ಅನಿಲಃ-ವಾಯುದೇವ, ಅನಲಃ ಚ-ಅಗ್ನಿದೇವನೂ, ದ್ಯೌಃ-ಆಕಾಶಾಭಿಮಾನಿಯು, ಭೂಮಿಃ-ಭೂದೇವಿಯು, ಆಪಃ-ಜಲಾಭಿಮಾನಿಯು, ಹೃದಯಂ-ಮನೋಭಿಮಾನಿಯೂ, ಯಮಶ್ಚ-ಯಮದೇವನೂ, ಅಹಃ-ಹಗಲಿನ ಅಭಿಮಾನಿಯೂ, ಚ-ಮತ್ತು ರಾತ್ರಿಃ-ರಾತ್ರಿಯ

---

ಆಜ್ಞೆಯಂತೆ ಜೀವಕರ್ಮಗಳಿಗೆ ಫಲಕೊಡುವ ಸೂಕ್ಷ್ಮದರ್ಶಿಗಳಾದ ದೇವತೆಗಳೂ, ಕರ್ಮಸಾಕ್ಷಿಗಳೆನಿಸಿದ, ಸೂರ್ಯಚಂದ್ರರು, ವಾಯು, ಅಗ್ನಿ, ಆಕಾಶ, ಭೂಮಿ, ಜಲ, ಮನಸ್ಸುಗಳ ಅಭಿಮಾನಿ ದೇವತೆಗಳು, ಯಮರಾಜನೂ, ಹಗಲು, ರಾತ್ರಿ, ಬೆಳಗಿನ ಮತ್ತು ಸಾಯಂಕಾಲದ ಸಂಧಿಕಾಲಗಳು (ಅವುಗಳ ಅಭಿಮಾನಿಗಳು), ಧರ್ಮಾಧ್ಯಕ್ಷ ದೇವತೆಯೂ ತಿಳಿಯುತ್ತಾರೆ; ಪಂಚಪ್ರಾಣಗಳು, ಮನಸ್ಸು ದಶೇಂದ್ರಿಯಗಳು, ಪಂಚಭೂತಗಳು, ಇವುಗಳ ಅಭಿಮಾನಿಗಳೂ, ಮನು, ಈಶ, ಮುಂತಾದ ಕರ್ಮಾಧಿ ದೇವತೆಗಳೂ, ಕರ್ಮಗಳನ್ನು ಆಚರಿಸುವ ಜೀವರ ಒಳಹೊರಗೆ (ದೇಹಗಳ ಒಳಹೊರಗೆ-ಸ್ವರೂಪದ ಒಳಗಲ್ಲ). ಸರ್ವದಾ ಜೀವರೊಂದಿಗೆ ಸಂಚರಿಸುತ್ತಿರು

ಅಭಿಮಾನಿಯೂ, ಉಭೇಚ ಸಂಧ್ಯೇ-ಎರಡೂ (ಪ್ರಾತಃಕಾಲ, ಸಾಯಂಕಾಲಗಳ) ಸಂಧಿಕಾಲಗಳ ಅಭಿಮಾನಿಗಳೂ, ಧರ್ಮಃ-ಧರ್ಮಾಭಿಮಾನಿಯೂ, ನರಸ್ಯ-ಮಾನವನ, ವೃತ್ತಿಂ-ಪ್ರವೃತ್ತಿಯನ್ನು (ಪ್ರತಿಯೊಂದು ಕರ್ಮವನ್ನೂ), ವಿಜಾನಾತಿ-(ಈ ಪ್ರತಿಯೊಬ್ಬ ದೇವತೆಯೂ) ತಿಳಿಯುತ್ತಾನೆ; ಯೇ-ಯಾರು, ಪ್ರಾಣ ಮನೋಹೃಷೀಕ ಭೂತಾಧಿ ದೇವಾಃ-ಪ್ರಾಣಗಳು, ಮನಸ್ಸು ಇಂದ್ರಿಯಗಳು, ಪಂಚಭೂತಗಳು, ಇವುಗಳ ಅಭಿಮಾನಿಗಳಾದ, ಮನುರೀಶಮುಖ್ಯಾಃ-ಮನು, ರುದ್ರಾದಿ, ಅನ್ಯೇಪಿ-ಇತರರೂ ಸಹ, (ಮತ್ತು) ಕರ್ಮಾಧಿದೇವಾಃ-ಕರ್ಮಾಭಿಮಾನಿ ದೇವತೆಗಳೂ, ಅಮುನಾ-ಈ (ಕರ್ಮ ಮಾಡುತ್ತಿರುವ) ಜೀವನಿಂದ ಕೂಡಿ, ಸದಾ ಏವ-ಸರ್ವ ಕಾಲದಲ್ಲಿ ಬಹಿಃ-ಹೊರಗೆ, ತಥಾ-ಹಾಗೂ, ಅಂತಃ-ಒಳಗೂ (ದೇಹದ ಹೊರಗೆ ಮತ್ತು ಒಳಗೆ), ಶಶ್ವತ್-ಏಕಪ್ರಕಾರವಾಗಿ, ವಿಚರಂತಿ-ಸಂಚರಿಸುತ್ತಲೇ ಇರುತ್ತಾರೆ.

ಏಕೋಹಮತ್ರಾಸ್ಮಿ ನ ಕೋಪಿ ಜಾನಾ-
ತ್ಯೇವಂ ವಿಮೂಢೋ ಬತ ಮನ್ಯಮಾನಃ ।
ಕರೋತಿ ಕರ್ಮಾಣಿ ನ ಶಂಕಮಾನೋ
ಭೋಗೇ ಫಲಾನಾಂ ಕೃಪಣೋ ಹಿ ಖಿದ್ಯತೇ ॥ ೧೦೬ ॥
ಅತೋ ವಿಶಂಕೇತ ಸದೈವ ದೇವಾನ್
ಸದೈವ ಪಶ್ಯನ್ ವಿಬುಧೋ ಹಿತೇಪ್ಸುಃ ।
ಪಾಪೇಷು ಕರ್ಮಸ್ವಥ ಪುಣ್ಯ ಏಕಃ
ಸದಾ ಯತೇತೈವ ತತೋ ಲಭೇತ ಶಂ ॥ ೧೦೭ ॥

ಅತ್ರ-ಇಲ್ಲಿ, ಅಹಂ-ನಾನು, ಏಕಃ-ಒಬ್ಬನು, ಅಸ್ಮಿ-ಇರುವೆನು; ಕಃ ಅಪಿ-ಯಾರೊಬ್ಬನೂ, ನ ಜಾನಾತಿ-ತಿಳಿಯುವುದಿಲ್ಲ; ಏವಂ-ಹೀಗೆಂದು, ವಿಮೂಢಃ-ಅಜ್ಞನು, ಮನ್ಯಮಾನಃ-ತಿಳಿದವನಾಗಿ, ನ ಶಂಕಮಾನಃ-ಭಯವಿಲ್ಲದೇ, ಕರ್ಮಾಣಿ (ಪಾಪ)ಕರ್ಮಗಳನ್ನೂ, ಕರೋತಿ-ಮಾಡುತ್ತಾನೆ; ಫಲಾನಾಂ-(ಅವುಗಳ) ಫಲಗಳ, ಭೋಗೇ-ಭೋಗ (ಕಾಲ)ದಲ್ಲಿ, ಕೃಪಣಃ-ದೀನನಾಗಿ, ಖಿದ್ಯತೇ-ದುಃಖಿಸುತ್ತಾನೆ; ಅತಃ-ಆದ್ದರಿಂದ, ಹಿತೇಪ್ಸುಃ-ಸ್ವಹಿತವನ್ನು ಇಚ್ಛಿಸುವ, ವಿಬುಧಃ-ವಿವೇಕಿಯು, ಸದಾ

---

ತ್ತಾರೆ. (೧೦೨-೧೦೫). ಹೀಗಿರುವಾಗ (ಈ ಎಲ್ಲ ದೇವತೆಗಳು ಜೀವನಿಂದ ಮಾಡಲ್ಪಡುವ ಸೂಕ್ಷ್ಮ ಕರ್ಮಗಳನ್ನು—ಜೀವನಿಗೆ ಸಹ ಅರಿವಿಲ್ಲದಂತೆ ಸಂಘಟಿಸಿದವುಗಳನ್ನು ಸಹ ನೋಡುತ್ತಿದ್ದರೂ—ತಿಳಿಯುತ್ತಿದ್ದರೂ) ಮೂಢ ಮಾನವನು, ತಾನೊಬ್ಬನೇ ಇರುವವನು—ಅನ್ಯರಾರೂ ಇಲ್ಲವೆಂದು ತಿಳಿದು ಕರ್ಮಗಳನ್ನು ಮಾಡುವುದು ಆಶ್ಚರ್ಯ! ಯಾರೂ ನೋಡುತ್ತಿಲ್ಲವೆಂದು ನಿರ್ಭಯದಿಂದ ಬಹು

ಏವ-ಯಾವಾಗಲೂ, ದೇವಾನ್-ದೇವತೆಗಳನ್ನು ಸಹೈವ-ತನ್ನೊಂದಿಗೆ, ಪಶ್ಯನ್-(ಇರುವರೆಂದು) ತಿಳಿದು, ಪಾಪೇಷು ಕರ್ಮಸು-ಪಾಪ ಕರ್ಮಗಳನ್ನಾಚರಿಸುವುದರಲ್ಲಿ ವಿಶಂಕೇತ-ಭಯವುಳ್ಳವನಾಗಿರಬೇಕು; ಅಥ-ಮತ್ತು (ಆದರೆ), ಪುಣ್ಯೇ-ಪುಣ್ಯಕರ್ಮದಲ್ಲಿ ಸದಾ ಏವ-ಎಲ್ಲ ಕಾಲದಲ್ಲಿಯೂ, ಏಕಃ-ಒಬ್ಬನೇ (ಇರುವನೆಂಬ ಅನುಸಂಧಾನದಿಂದ), ಯತೇತ-ಯತ್ನಿಸಬೇಕು; ತತಃ-ಆದರಿಂದ (ಈ ಅನುಸಂಧಾನದಿಂದ), ಶಂ-ಸುಖವನ್ನು ಲಭೇತ-ಹೊಂದುತ್ತಾನೆ (ಹೊಂದಲಿಕ್ಕೆ ಸಾಧ್ಯವಾಗುತ್ತದೆ—ತಾನು ಆಚರಿಸುವ ಪುಣ್ಯವನ್ನು ಪೂರ್ವೋಕ್ತ ದೇವತೆಗಳೆಲ್ಲ ನೋಡುತ್ತಿದ್ದರೂ, ಅನ್ಯರು ನೋಡಿ ಮೆಚ್ಚಿಕೊಳ್ಳಬೇಕೆಂಬಾಶೆ ಇರಕೂಡದೆಂದು ಎಚ್ಚರಿಸಲಾಗಿದೆ).

**ಈರ್ಷ್ಯಾಮಸೂಯಾಂ ಚ ಸದೈವ ವರ್ಜಯೇತ್**
**ಪೀಡಾ ಯತಃ ಸ್ಯಾದಪರಸ್ಯ ತಚ್ಚ।**
**ನೈವಾಚರೇನ್ನೈವ ಗೃಹೀತ ವಾಚಾ**
**ನ ಚಿಂತಯೇದ್ವಾ ಮನಸಾಪಿ ಕರ್ಹಿಚಿತ್ ॥ ೧೦೮ ॥**

ಈರ್ಷ್ಯಾಂ-ಈರ್ಷ್ಯೆಯನ್ನೂ (ಪರರಿಗೆ ಅನಿಷ್ಟವಾದುದನ್ನು ಕಂಡು ಹರ್ಷಿಸುವುದು), ಅಸೂಯಾಂ-(ಪರರಿಗೆ ಇಷ್ಟ ಲಾಭವಾದುದನ್ನು ಕಂಡು ದುಃಖಿಸುವುದು) ಅಸೂಯೆಯನ್ನೂ, ಸದೈವ-ಎಲ್ಲ ಕಾಲದಲ್ಲಿ ವರ್ಜಯೇತ್-ತ್ಯಜಿಸಬೇಕು; ಯತಃ-ಯಾವುದರಿಂದ, ಅಪರಸ್ಯ-ಅನ್ಯನಿಗೆ, ಪೀಡಾ-ಪೀಡೆಯು (ತೊಂದರೆಯು-ಹಿಂಸೆಯು), ಸ್ಯಾತ್-ಉಂಟಾಗುವುದೋ, ತತ್ ಚ-ಅದನ್ನೂ ನೈವ ಆಚರೇತ್-

---

ನಿಷಿದ್ಧಕರ್ಮಗಳನ್ನಾಚರಿಸಿ, ಅವುಗಳ ಫಲವನ್ನು ಭೋಗಿಸುವಾಗ, ದೀನನಾಗಿ ದುಃಖಿಸುತ್ತಾನೆ. ಆದ್ದರಿಂದ ಸ್ವಹಿತವನ್ನಿಚ್ಛಿಸುವ ವಿವೇಕಿಯು, ಸದಾ ತನ್ನೊಡನಿದ್ದು ತನ್ನ ಪಾಪಗಳನ್ನು ಕಾಣುವ ದೇವತೆಗಳಿರುವರೆಂಬ ಭಯವುಳ್ಳವನಾಗಿ ನಡೆದುಕೊಳ್ಳಬೇಕು; ಪುಣ್ಯಕರ್ಮಗಳನ್ನು ಯತ್ನಪೂರ್ವಕವಾಗಿ ಆಚರಿಸುವಾಗ, ಅನ್ಯರು ನೋಡಲೆಂಬ ಆಶೆಯನ್ನು ತೊರೆದು, ತಾನೊಬ್ಬ ಮಾತ್ರ ಇರುವೆನೆಂಬ ಅನುಸಂಧಾನವುಳ್ಳವನಾಗಿರಬೇಕು (ಯದ್ಯಪಿ, ಕರ್ಮ ಸಾಕ್ಷಿಗಳು ಪುಣ್ಯವನ್ನೂ ನೋಡುತ್ತಾರೆ; ಆದರೆ ಜೀವನಿಗೆ ಮಾತ್ರ ಬಹುಮಂದಿಯ ಎದುರಿಗೆ ಮಾಡುವೆನೆಂಬ ಅನುಸಂಧಾನವಿರಕೂಡದು); ಹೀಗೆ ಪುಣ್ಯವನ್ನಾಚರಿಸಿ, ಸುಖಭಾಗಿಯಾಗುತ್ತಾನೆ (೧೦೬-೧೦೭). ಈರ್ಷ್ಯೆ, ಅಸೂಯೆಗಳನ್ನೂ, ಪರಪೀಡೆಯನ್ನೂ ತ್ಯಜಿಸಬೇಕು; ಪರಪೀಡೆಗೆ ಕಾರಣವಾಗುವ, ಕೃತಿಗಳನ್ನೂ ಅವುಗಳನ್ನು ಸೂಚಿಸುವ ನುಡಿಗಳನ್ನೂ ಬಿಡಬೇಕು; ಮನಸ್ಸಿನಲ್ಲಿ ಈರ್ಷ್ಯಾದಿಭಾವನೆಗಳನ್ನು ಸ್ವಲ್ಪವೂ ತರಕೂಡದು (ತ್ರಿಕರಣಗಳಿಂದ ಅವುಗಳನ್ನು ಪರಿತ್ಯಜಿಸಬೇಕೆಂದು ಅರ್ಥ) (೧೦೮). ಅನ್ಯರಿಗೆ

ಆಚರಿಸಲೇಕೂಡದು; ವಾಚಾ-ನುಡಿಯಿಂದ, ನೈವ ಗೃಹೀತ-ಗ್ರಹಣ ಮಾಡಬಾರದು (ಮಾತಿನಲ್ಲಿ ಎತ್ತಾಡಕೂಡದು); ವಾ-ಅಥವಾ (ಮತ್ತು), ಮನಸಾ ಅಪಿ-ಮನಸ್ಸಿನಲ್ಲಿ ಸಹ, ಕರ್ಹಿಚಿತ್-ಎಂದೂ, ನ ಚಿಂತಯೇತ್-ಚಿಂತಿಸಕೂಡದು (ತ್ರಿಕರಣಗಳಿಂದ ಪರಪೀಡೆಯನ್ನಾಚರಿಸತಕ್ಕದ್ದಲ್ಲ).

**ಪರಸ್ಯಾನಿಷ್ಟಸಂಪ್ರಾಪ್ತೌ ಯತ್ಸಮ್ಯಂಗ್ಮನುತೇ ನರಃ ।**

**ಸ ಈರ್ಷಕಃ ಸ್ವಯಂ ಚಾಪಿ ತಾದೃಶಂ ದುಃಖಮಾಪ್ನುಯಾತ್ ॥ ೧೦೯ ॥**

ಪರಸ್ಯ-ಅನ್ಯನಿಗೆ, ಅನಿಷ್ಟಸಂಪ್ರಾಪ್ತೌ-ಅನಿಷ್ಟ ಬರುತ್ತಿರಲು, ನರಃ-ಮನುಷ್ಯನು, ಯತ್-ಯಾವುದನ್ನು ಸಮ್ಯಕ್-ಒಳ್ಳೆಯದಾಯಿತೆಂದು, ಮನುತೇ-ತಿಳಿಯುವನೋ, ಸಃ-(ಆ ಭಾವವು), ಅವನು, ಈರ್ಷಕಃ-(ಈರ್ಷೆಯು) ಈರ್ಷೆಯುಳ್ಳವನೆನಿಸುವನು; ಸ್ವಯಂ ಚ ಅಪಿಃ-(ಈರ್ಷಕನು) ತಾನೂ ಕೂಡ, ತಾದೃಶಂ-ಆ ವಿಧದ, (ಅನ್ಯನಿಗೆ ಬಂದಂಥ), ದುಃಖಂ-ದುಃಖವನ್ನು (ಅನಿಷ್ಟವನ್ನು), ಪ್ರಾಪ್ನುಯಾತ್-(ಈರ್ಷೆಯ ಫಲವಾಗಿ) ಹೊಂದುತ್ತಾನೆ.

**ಅಸೂಯತಿ ಪರಸ್ಯೇಷ್ಟಂ ದೃಷ್ಟ್ವಾ ಖಿದ್ಯತಿ ಮಾನಸೇ ।**

**ಇಷ್ಟಹಾನಿಂ ಚ ಯೋ ವಾಂಛೇತ್ತಾದೃಗಿಷ್ಟಂ ಲಭೇನ್ನ ಸಃ ॥ ೧೧೦ ॥**

ಪರಸ್ಯ-ಬೇರೊಬ್ಬನ, ಇಷ್ಟಂ-ಸುಖವನ್ನು (ಇಷ್ಟಪ್ರಾಪ್ತಿಯನ್ನು), ದೃಷ್ಟ್ವಾ-ಕಂಡು, ಯಃ-ಯಾರು, ಮಾನಸೇ-ತನ್ನ ಮನಸ್ಸಿನಲ್ಲಿ (ಮನೋಭಾವನೆಯಲ್ಲಿ), ಖಿದ್ಯತಿ-ವಿಷಾದಿಸುವನೋ, ಇಷ್ಟಹಾನಿಂ-(ಅನ್ಯನಿಗೆ), ಇಷ್ಟಹಾನಿಂ ಚ-ಇಷ್ಟದ ನಾಶವನ್ನು ವಾಂಛೇತ್-ಇಚ್ಛಿಸುವನೋ, ಸಃ-ಅವನು, ಅಸೂಯತಿ-(ಅಸೂಯೆಯುಳ್ಳವನು) ಅಸೂಯೆಪಡುತ್ತಾನೆ; (ಅವನು), ತಾದೃಕ್-ಆ ಪ್ರಕಾರದ, ಇಷ್ಟಂ-ಸುಖವನ್ನು ನ ಲಭೇತ್-ಹೊಂದುವುದಿಲ್ಲ.

**ಪರಪೀಡಾಂ ತು ಯಃ ಕುರ್ಯಾತ್ತಾದೃಕ್ ಪೀಡಾಂ ಲಭೇತ್ಸ್ವಯಂ ।**

**ಯೋ ಯಸ್ಯ ಮಾಂಸಮಾಶ್ನಾತಿ ಸ ತದ್ವಿಷ್ಠಾಕ್ರಿಮಿರ್ಭವೇತ್ ॥ ೧೧೧ ॥**

---

ದುಃಖವಾಗುವುದನ್ನು (ಅನಿಷ್ಟ ಬರುವುದನ್ನು) ಕಂಡು (ಒಳ್ಳೆಯದೆಂದು ಹರ್ಷಿಸುವುದು ಈರ್ಷೆಯು; ಈರ್ಷೆಯುಳ್ಳವನು ಆ ಪ್ರಕಾರದ ದುಃಖವನ್ನು ತಾನೂ ಹೊಂದುತ್ತಾನೆ (ಇದು ಈರ್ಷೆಯ ಫಲವು) (೧೦೯). ಅನ್ಯರಿಗೆ ಇಷ್ಟಪ್ರಾಪ್ತಿಯಾದುದನ್ನು (ಸುಖವಾದುದನ್ನು) ಕಂಡು ಸಹಿಸದೆ ವಿಷಾದಗೊಳ್ಳುವುದು ಮತ್ತು ಆ ಸುಖದ ಹಾನಿಯಾಗಲೆಂದು ಆಶಿಸುವುದು ಅಸೂಯೆಯು; ಅನ್ಯರನ್ನು ಕಂಡು ಅಸೂಯೆಪಡುವವನು, ಆ ವಿಧದ ಸುಖವನ್ನು ಎಂದೂ ಹೊಂದುವುದಿಲ್ಲ (ಇದು ಅಸೂಯೆಯ ಫಲವು) (೧೧೦). ಪರರಿಗೆ ಪೀಡೆಯನ್ನುಂಟುಮಾಡುವವನು, ತಾನು, ಅಂತಹ ಹಿಂಸೆಯನ್ನು ಅನ್ಯರಿಂದ ಪಡೆಯುತ್ತಾನೆ; ಯಾರು, ಅನ್ಯಪ್ರಾಣಿಯನ್ನು

ಯಃ-ಯಾವಾತನು, ಪರಪೀಡಾಂ-ಪರಹಿಂಸೆಯನ್ನು, ಕುರ್ಯಾತ್-ಮಾಡುವನೋ, ತಾದೃಕ್-ಆ ವಿಧದ, ಪೀಡಾಂ-ಹಿಂಸೆಯನ್ನು ಸ್ವಯಂ-ತಾನು, ಲಭೇತ್ ತು-ಹೊಂದುವುದು ಸತ್ಯ; ಯಃ-ಯಾರು, ಯಸ್ಯ-ಯಾರ (ಯಾವ ಪ್ರಾಣಿಯ), ಮಾಂಸಂ-(ಕೊಂದು, ಅದರ) ಮಾಂಸವನ್ನು ಅಶ್ನಾತಿ-ತಿನ್ನುವನೋ, ಸಃ-ಆತನು, ತದ್ವಿಷ್ಠಾಕ್ರಿಮಿಃ-ಆ ಪ್ರಾಣಿಯ ಮಲದಲ್ಲಿನ ಕ್ರಿಮಿಯಾಗಿ, ಭವೇತ್-ಹುಟ್ಟುತ್ತಾನೆ.

**ವೃಥಾ ದ್ರೋಹೇ ತು ಯೋ ಯಸ್ಯ ಪುತ್ರಸ್ತ್ರೀಸುಹೃದಾದಿನಾ ।**

**ಕುರ್ಯಾತ್ತೇನ ವಿಮುಕ್ತಃ ಸ್ಯಾತ್ತದ್ವಾಂಸ್ತತ್ಪ್ರೀತಿಮಾನ್ ಭವೇತ್ ॥೧೧೨॥**

ಯಃ-ಯಾರು, ಯಸ್ಯ-ಯಾರ(ತನ್ನ), ಪುತ್ರ ಸ್ತ್ರೀ ಸುಹೃದಾದಿನಾ-ಪುತ್ರ, ಭಾರ್ಯಾ, ಬಂಧು ಮೊದಲಾದವರಿಂದ, ವೃಥಾ ದ್ರೋಹೇ ತು-ಕಾರಣವಿಲ್ಲದ (ನಿರರ್ಥಕವಾದ) ದ್ರೋಹವನ್ನು (ವಂಚನೆ, ದ್ವೇಷಾದಿ), ಕುರ್ಯಾತ್-ಮಾಡುವನೋ, ತೇನ-ಅವನಿಂದ (ಆ ಪುತ್ರಾದಿ ಬಂಧುಜನರಿಂದ), ವಿಮುಕ್ತಃ ಸ್ಯಾತ್-ರಹಿತನು (ಇಲ್ಲದವನು-ಬಿಡಲ್ಪಟ್ಟವನು) ಆಗುವನು; ತದ್ವಾನ್-ಅವರನ್ನುಳ್ಳವನು (ದ್ರೋಹಮಾಡದವನು), ಪ್ರೀತಿಮಾನ್-(ಮುಂದೆ) ಪ್ರೀತಿಯುಳ್ಳವನು (ಪುತ್ರಾದಿಗಳ ಪ್ರೀತಿಯುಳ್ಳವನು), ಭವೇತ್-ಆಗುತ್ತಾನೆ (ಆಗಿ ಜನಿಸುತ್ತಾನೆ).

**ಅದಾತಾ ತು ದರಿದ್ರಃ ಸ್ಯಾದ್ದಾತಾ ಯಃ ಸಧನೋ ಭವೇತ್ ।**

**ಪತಿಧ್ರುಕ್ ಪುಂಶ್ಚಲೀ ಚೈವ ಸಪತ್ನೀದ್ರೋಹಿಣೀ ಚ ಯಾ ॥ ೧೧೩ ॥**

ಅದಾತಾ-ದಾನಕೊಡದವನು, ದರಿದ್ರಃ-ದರಿದ್ರನು, ಸ್ಯಾತ್ ತು-ಆಗುತ್ತಾನೆಯೇ ಸರಿ; ಯಃ-ಯಾವನು, ದಾತಾ-ಕೊಡುವವನೋ, (ಸಃ-ಅವನು) ಸಧನಃ-ಧನವಂತನು, ಭವೇತ್-ಆಗುವನು; ಪತಿಧ್ರುಕ್-ಪತಿಗೆ ದ್ರೋಹಮಾಡುವವಳು (ವಂಚಿಸುವವಳು ಅಥವಾ ದ್ವೇಷಿಸುವವಳು), ಚ-ಮತ್ತು ಸಪತ್ನೀ ದ್ರೋಹಿಣೀ-ಸವತಿಯನ್ನು ದ್ವೇಷಿಸುವವಳೂ, ಪುಂಶ್ಚಲೀ ಏವ ಚ-ವ್ಯಭಿಚಾರಿಣಿಯಾಗುವುದೇ ಸತ್ಯ.

---

ಆಹಾರಕ್ಕಾಗಿ ಕೊಂದು, ಅದರ ಮಾಂಸವನ್ನು ತಿನ್ನುವನೋ (ಸ್ವಾರ್ಥಕ್ಕಾಗಿ ಪರರನ್ನು ಹಿಂಸಿಸುವನೋ) ಅವನು, ಆ ಪ್ರಾಣಿಯ ಮಲದಲ್ಲಿರುವ ಕ್ರಿಮಿಯಾಗಿ ಜನಿಸುವನು (೧೧೧). ಯಾರು, ತನ್ನ ಪುತ್ರ, ಪತ್ನೀ, ಬಂಧುಗಳೊಡನೆ ವ್ಯರ್ಥವಾಗಿ (ಕಾರಣವಿಲ್ಲದೇ) ವಂಚನೆಯಿಂದ ಅಥವಾ ದ್ವೇಷದಿಂದ ವರ್ತಿಸುವನೋ, ಅವನು, ಜನ್ಮಾಂತರದಲ್ಲಿ ಪುತ್ರಾದಿಗಳನ್ನು ಹೊಂದಿರುವುದಿಲ್ಲ; ಅದೇ ಆ ಬಂಧುಗಳನ್ನು ಸರಿಯಾಗಿ (ಪ್ರೀತಿಯಿಂದ) ಇಟ್ಟುಕೊಂಡರೆ, ಪ್ರೀತಿಯುತರಾದ ಪುತ್ರಾದಿಗಳನ್ನು ಪಡೆಯುವನು (೧೧೨). ದಾನ ಕೊಡದವನು ದರಿದ್ರನಾಗಿ ಹುಟ್ಟುತ್ತಾನೆ; ಕೊಡುವವನು ಧನವಂತನಾಗುತ್ತಾನೆ; ಪತಿವಂಚಕಳು ಮತ್ತು ಸವತಿಯರನ್ನು (ತನ್ನ ಪತಿಯ ಅನ್ಯಭಾರ್ಯರನ್ನು) ದ್ವೇಷಿಸುವವಳು, ವ್ಯಭಿಚಾರಿಣಿಯಾಗಿ ಜನಿಸುವಳು

**ದೇವಬ್ರಾಹ್ಮಣಪೂಜಾದ್ವಿಟ್ ದಾನಧ್ರುಕ್ ವಿಧವಾ ಭವೇತ್ ।**
**ವಿಪರ್ಯಯಾತ್ ಪ್ರಜಾಯೇತ ಸುಭಗಾಧನಪುತ್ರಿಣೀ ॥ ೧೧೪ ॥**

ದೇವಬ್ರಾಹ್ಮಣಪೂಜಾದ್ವಿಟ್-ದೇವ, ಬ್ರಾಹ್ಮಣರ ಪೂಜೆಯನ್ನು ದ್ವೇಷಿಸುವವಳು, ದಾನಧ್ರುಕ್-ದಾನವನ್ನು ದ್ವೇಷಿಸುವವಳು (ವಿರೋಧಿಸುವವಳು-ಶಕ್ತಿವಂಚಕಳು). ವಿಧವಾ ಭವೇತ್-ವಿಧವೆಯು (ಪತಿಹೀನಳು) ಆಗುತ್ತಾಳೆ; ವಿಪರ್ಯಯಾತ್-(ಇದರ) ವಿರೋಧಕ್ರಮದಿಂದ (ದೇವಬ್ರಾಹ್ಮಣ ಪೂಜೆಯಲ್ಲಿ ಆಸಕ್ತಳೂ-ಮನಃಪೂರ್ವಕ ಯಥಾಶಕ್ತಿ ದಾನದಿಂದ ಸಂತೋಷಿಸುವವಳೂ), ಸುಭಗಾಧನ ಪುತ್ರಿಣೀ-ಸೌಭಾಗ್ಯ, (ಮುತ್ತೈದೆತನ) ಧನ, ಸಂತಾನವುಳ್ಳವಳಾಗಿ, ಪ್ರಜಾಯೇತ-ಹುಟ್ಟುತ್ತಾಳೆ.

**ದೇಶಕಾಲಾನುಸಾರೇಣ ಜಾತಿಕರ್ತೃ ವಿಶೇಷತಃ ।**
**ವಿಚಿತ್ರಫಲದಂ ಕರ್ಮ ವಿಸ್ತರಾದ್ದುರ್ವಚಂ ಚ ತತ್ ॥ ೧೧೫ ॥**
**ಪ್ರಾಯೋ ಜನ್ಮಾಂತರೇಷ್ವೇವ ಕರ್ಮಣಾಂ ಫಲಮಶ್ನುತೇ ।**
**ಕಾಲಾಂತರೇಪಿ ಕೇಷಾಂಚಿತ್ಸಹಾಯಾಂತರಲಾಭತಃ ॥ ೧೧೬ ॥**
**ತ್ರಿಭಿರ್ವರ್ಷೈಃ ತ್ರಿಭಿರ್ಮಾಸೈಃ ತ್ರಿಭಿಃ ಪಕ್ಷೈಃ ತ್ರಿಭಿರ್ದಿನೈಃ ।**
**ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ ॥ ೧೧೭ ॥**
**ಇತ್ಯೇವ ಪ್ರಾಯಶಃ ಶಾಸ್ತ್ರರಹಸ್ಯಂ ಭವತಾಂ ಪುರಃ ।**
**ಪ್ರಶ್ನಾನುಸಾರಿಕಥಿತಂ ಪ್ರಸಂಗಾದಪಿ ಕಿಂಚನ ॥ ೧೧೮ ॥**

ದೇಶಕಾಲಾನುಸಾರೇಣ-ದೇಶ ಕಾಲಾನುಸಾರವಾಗಿಯೂ, ಜಾತಿಕರ್ತೃ ವಿಶೇಷತಃ-(ಕರ್ಮಕರ್ತನ) ಜಾತಿ ಮತ್ತು ಜ್ಞಾನಾದಿ ವಿಶೇಷದಿಂದಲೂ, ಕರ್ಮ-ಕರ್ಮವು, ವಿಚಿತ್ರಫಲದಂ-ವಿವಿಧವಾದ (ಆಶ್ಚರ್ಯಕರ) ಫಲವನ್ನು ಕೊಡುವುದು (ಆಗುತ್ತದೆ): ತತ್ ಚ-ಅದಾದರೂ, ವಿಸ್ತರಾತ್-ವಿಸ್ತಾರದಿಂದ, ದುರ್ವಚಂ-

---

(೧೧೩). ದೇವಬ್ರಾಹ್ಮಣ ಪೂಜಾದ್ವೇಷಿಯೂ, ದಾನದ್ರೋಹಿಯೂ ಆದ ಸ್ತ್ರೀಯು, ವಿಧವೆಯಾಗುತ್ತಾಳೆ; ಇವುಗಳಲ್ಲಿ ಪ್ರೀತಿಯುತಳಾದವಳು, ಸೌಭಾಗ್ಯ (ಪತಿಭಾಗ್ಯ) ಧನ, ಸಂತಾನಾದಿಗಳುಳ್ಳವಳಾಗಿ ಹುಟ್ಟುತ್ತಾಳೆ (೧೧೪). ದೇಶಕಾಲಾನುಸಾರವಾಗಿಯೂ, ಕರ್ಮಕರ್ತನ ಜಾತಿ ಮತ್ತು ಜ್ಞಾನಾದಿ ಗುಣವಿಶೇಷದಿಂದಲೂ, ಕರ್ಮಗಳು ವಿಚಿತ್ರವಾದ (ವಿವಿಧವಾದ) ಫಲಗಳನ್ನು ಕೊಡುತ್ತವೆ—ಅದನ್ನು ವಿಸ್ತಾರದಿಂದ ಹೇಳುವುದು ಶಕ್ಯವಲ್ಲ; ಕರ್ಮಗಳ ಫಲವು, ಪ್ರಾಯಃ, ಜನ್ಮಾಂತರಗಳಲ್ಲಿಯೇ ದೊರೆಯುತ್ತದೆ; ಕೆಲವು ಕರ್ಮಗಳು, ಅನ್ಯ ಸಹಕಾರಿ ಸಂದರ್ಭಗಳಿಂದ ಅದೇ ಜನ್ಮದಲ್ಲಿ, ಕಾಲಾಂತರದಲ್ಲಿ ಫಲಕೊಡುವುದೂ ಉಂಟು;

ಹೇಳಲಿಕ್ಕೆ ಶಕ್ಯವಲ್ಲ ಪ್ರಾಯಃ-ಬಹುವಾಗಿ, ಜನ್ಮಾಂತರೇಷು ಏವ-ಬೇರೆ ಜನ್ಮಗಳಲ್ಲಿಯೇ, ಕರ್ಮಣಾಂ-(ಈಗ ಮಾಡುವ) ಕರ್ಮಗಳ (ಪುಣ್ಯ ಪಾಪಗಳ), ಫಲಂ-ಫಲವನ್ನು ಅಶ್ನುತೇ-ಹೊಂದುತ್ತಾನೆ (ಕರ್ತನು ಭೋಗಿಸುತ್ತಾನೆ); ಕೇಷಾಂಚಿತ್-ಕೆಲವು ಕರ್ಮಗಳ (ಫಲವನ್ನು), ಸಹಾಯಾಂತರಲಾಭತಃ-(ಅವುಗಳಿಗೆ ಬೇರೆ ಸಹಾಯ ಸಾಮಗ್ರಿಗೀದ್ದರೆ) ಅನ್ಯಸಹಾಯವನ್ನು ಹೊಂದುವುದರಿಂದ, ಕಾಲಾಂತರೇ ಅಪಿ-(ಅದೇ ಜನ್ಮದ) ಭವಿಷ್ಯಕಾಲದಲ್ಲಿಯೂ (ಅಶ್ನುತೇ-ಭೋಗಿಸುತ್ತಾನೆ); ಅತ್ಯುತ್ಕಟೈಃ-ಪ್ರಬಲಗಳಾದ (ತೀವ್ರವಾದ) ಪುಣ್ಯಪಾಪೈಃ-ಪುಣ್ಯಪಾಪಗಳಿಂದ, ಇಹ ಏವ-ಈ ಜನ್ಮದಲ್ಲಿಯೇ, (ಈ ಲೋಕದಲ್ಲಿಯೇ-ಈ ದೇಹದಲ್ಲಿಯೇ), ತ್ರಿಭಿಃ ವರ್ಷೈಃ-ಮೂರು ವರ್ಷಗಳ ಅವಧಿಯಿಂದ (ಮೂರು ವರ್ಷಗಳಲ್ಲಿ), ತ್ರಿಭಿಃ ಮಾಸೈಃ-ಮೂರು ಮಾಸಗಳಲ್ಲಿ ತ್ರಿಭಿಃ ಪಕ್ಷೈಃ-ಮೂರು ಪಕ್ಷಗಳಲ್ಲಿ ತ್ರಿಭಿಃ ದಿನೈಃ-ಮೂರು ದಿವಸಗಳಲ್ಲಿಯೂ, ಫಲಂ-(ಅವುಗಳ) ಫಲವನ್ನು ಅಶ್ನುತೇ-(ಕರ್ತನು) ಹೊಂದುತ್ತಾನೆ; ಇತ್ಯೇವ-ಈ ಪ್ರಕಾರವಾಗಿ, ಭವತಾಂ-ನಿಮ್ಮ ಪುರಃ-ಎದುರಿನಲ್ಲಿ ಪ್ರಾಯಶಃ-ಬಹುವಾಗಿ (ಸಾಧಾರಣವಾದ ಎಲ್ಲ), ಶಾಸ್ತ್ರರಹಸ್ಯಂ- ಶಾಸ್ತ್ರರಹಸ್ಯವೂ, ಪ್ರಶ್ನಾನುಸಾರಿ-(ನಿಮ್ಮ) ಪ್ರಶ್ನಾನುಸಾರವಾಗಿ; ಕಥಿತಂ-ಹೇಳಲ್ಪಟ್ಟಿತು; ಪ್ರಸಂಗಾತ್ ಅಪಿ-ಪ್ರಸಂಗದಿಂದ ಸಹ, ಕಿಂಚನ-ಕೆಲವು, (ಸಂಬಂಧಿಸಿದ ಪ್ರಮೇಯಗಳೂ) (ಕಥಿತಂ-ಹೇಳಲ್ಪಟ್ಟವು).

ಭವಂತೋ ವಿದುಷಾಂ ಶ್ರೇಷ್ಠಾಃ ಶಾಸ್ತ್ರತತ್ವವಿವೇಕಿನಃ ।
ನಿರ್ಣಯಂ ತ್ವವಶಿಷ್ಟಂ ಯಚ್ಛಾಸ್ತ್ರಾಂತರವಿಲೋಕನಾತ್ ॥ ೧೦೯ ॥
ಸ್ವಯಂ ತತ್ವವಿದೋ ಯೂಯಂ ಶಾಸ್ತ್ರತತ್ವಪ್ರದರ್ಶಕಾಃ ।
ಅಥಾಪಿ ಪ್ರಶ್ನವಾಕ್ಯಾನಿ ಲೋಕಾನಾಂ ತತ್ವವಿತ್ತಯೇ ॥ ೧೧೦ ॥
ಸ್ವಭಾವೋಽಯಂ ಸತಾಂ ವಿಶ್ವಂ ವಿದಿತ್ವಾಪಿ ಪುನಃಪುನಃ ।
ಅಬುಧಾ ಇವ ಪೃಚ್ಛಂತಿ ಶೃಣ್ವಂತಿ ಪರತಸ್ತಥಾ ॥ ೧೧೧ ॥

---

ಅತ್ಯಂತ ಪ್ರಬಲಗಳಾದ (ಉತ್ಕಟವಾದ—ಬಲಿಷ್ಠ—ತೀವ್ರಗಳಾದ) ಪುಣ್ಯಾಪಾಪಗಳು, ಈ ಜನ್ಮದಲ್ಲಿಯೇ—ಕೆಲವು ಕರ್ಮಗಳು ಮೂರು ವರ್ಷಗಳಲ್ಲಿ ಕೆಲವು ಮೂರು ತಿಂಗಳಲ್ಲಿ ಮೂರು ಪಕ್ಷಗಳಲ್ಲಿ ಮತ್ತೆ ಕೆಲವು ಮೂರು ದಿನಗಳಲ್ಲಿಯೇ, ತಮ್ಮ ಫಲವನ್ನು ಮುಟ್ಟಿಸುತ್ತವೆ—ಕರ್ತನು ಅವುಗಳ ಫಲವನ್ನು ಭೋಗಿಸುತ್ತಾನೆ; ಹೇ ಸಂವರ್ತಾದಿ ಋಷಿಗಳೇ! ಹೀಗೆ ನಿಮ್ಮ ಪ್ರಶ್ನಾನುಸಾರವಾಗಿಯೂ, ಮತ್ತು ಪ್ರಸಂಗದಿಂದಲೂ, ಶಾಸ್ತ್ರರಹಸ್ಯವೆಲ್ಲವೂ ಪ್ರಾಯಶಃ ಹೇಳಲ್ಪಟ್ಟಿತು (೧೦೫-೧೦೮). ನೀವೆಲ್ಲರೂ ಜ್ಞಾನಿಶ್ರೇಷ್ಠರು—ಶಾಸ್ತ್ರರಹಸ್ಯಗಳನ್ನು ತಿಳಿದವರು; ನಾನು ಹೇಳಿರುದರಲ್ಲಿ ಏನಾದರೂ ಉಳಿದಿದ್ದರೆ, ಶಾಸ್ತ್ರಾಂತರಗಳನ್ನು ನೋಡುವುದರಿಂದ ತಿಳಿಯಬಹು

**ಜ್ಞಾತಂ ಮುಹುರ್ವಿಚಾರ್ಯಂ ಸ್ಯಾಚ್ಛ್ರೋತವ್ಯಂ ಬಹುಧಾ ಬಹು ।**
**ಬಹುಭ್ಯೋ ಬಹು ವಾರಂ ಚೇತ್ಯೇವಂ ದರ್ಶಯಿತುಂ ಜನಾನ್ ॥ ೧೨೨**

ಅವಶಿಷ್ಟಂ-ಉಳಿದಿರಬಹುದಾದ, ಯತ್ ನಿರ್ಣಯಂ ತು-ಯಾವ ನಿರ್ಣಯಗಳಾದರೋ (ನಿಶ್ಚಿತ ಪ್ರಮೇಯಗಳಾದರೋ), ಶಾಸ್ತ್ರಾಂತರ ವಿಲೋಕನಾತ್-ಅನ್ಯಶಾಸ್ತ್ರಗಳನ್ನು ನೋಡುವುದರಿಂದ (ತಿಳಿಯಬಹುದು-ಶಾಸ್ತ್ರ ಮುಖ್ಯ ರಹಸ್ಯಗಳನ್ನು ಇಲ್ಲಿ ಹೇಳಲಾಗಿದೆ); ಭವಂತಃ-ನೀವುಗಳು, ವಿದುಷಾಂ-ವಿದ್ವಾಂಸರಲ್ಲಿ ಶ್ರೇಷ್ಠಾಃ-ಉತ್ತಮರು; ಶಾಸ್ತ್ರತತ್ತ್ವವಿವೇಕಿನಃ-ಶಾಸ್ತ್ರರಹಸ್ಯಗಳನ್ನು ತಿಳಿದವರು (ಆಗಿದ್ದೀರಿ); ಯೂಯಂ-ನೀವುಗಳು, ಸ್ವಯಂ-ನೀವೇ (ಸಾಕ್ಷಾತ್ತಾಗಿ), ತತ್ತ್ವವಿದಃ-ತತ್ತ್ವವೇತ್ತರು; ಶಾಸ್ತ್ರತತ್ತ್ವಪ್ರದರ್ಶಕಾಃ-ಶಾಸ್ತ್ರಪ್ರಮೇಯಗಳನ್ನು ಉಪದೇಶಿಸುವ ಸಾಮರ್ಥ್ಯವುಳ್ಳವರು; ಅಥಾಪಿ-ಹೀಗಿದ್ದರೂ (ಹೊಸದಾಗಿ ತಿಳಿಯಬೇಕಾದುದಿಲ್ಲವಾದರೂ), ಲೋಕಾನಾಂ-ಅಜ್ಞಾನಿಗಳ ತತ್ತ್ವವಿತ್ತಯೇ-ತತ್ತ್ವಜ್ಞಾನಾರ್ಥವಾಗಿ, ಪ್ರಶ್ನವಾಕ್ಯಾನಿ-ಪ್ರಶ್ನೆಗಳನ್ನು (ಕೇಳಿರುವಿರಿ); ಅಯಂ-ಇದು (ಹೀಗೆ ಅನ್ಯರ ಜ್ಞಾನಾರ್ಥವಾಗಿ ಪ್ರಶ್ನಿಸುವುದು), ಸತಾಂ-ಸತ್ಪುರುಷರ, ಸ್ವಭಾವಃ-ಸ್ವಭಾವವೇ (ಆಗಿದೆ); ವಿಶ್ವಂ-ಸರ್ವವನ್ನೂ ವಿದಿತ್ವಾ ಅಪಿ-ತಿಳಿದೂ ಸಹ, ಅಬುಧಾಃ ಇವ-ತಿಳಿಯದವರಂತೆ, ಪುನಃಪುನಃ-ಮತ್ತೆಮತ್ತೆ (ಸತ್ಪುರುಷರು-ತಿಳಿದ ಸಜ್ಜನರು), ಪೃಚ್ಛಂತಿ-ಪ್ರಶ್ನಿಸುತ್ತಾರೆ; ತಥಾ-ಮತ್ತು ಪರತಃ-ಅನ್ಯರಿಂದ, ಶೃಣ್ವಂತಿ-ಶ್ರವಣ ಮಾಡುತ್ತಾರೆ; (ಹೀಗೆ ಮಾಡುವುದರ ಉದ್ದೇಶವೇನೆಂದರೆ); ಜ್ಞಾತಂ-ತಿಳಿಯಲ್ಪಟ್ಟದ್ದು (ತಿಳಿಯಲ್ಪಟ್ಟ ಶಾಸ್ತ್ರ ಪ್ರಮೇಯವು) ಮುಹುಃ-ಮೇಲಿಂದಮೇಲೆ, ವಿಚಾರ್ಯಂ-ವಿಚಾರಮಾಡಲ್ಪಡುವುದು, ಸ್ಯಾತ್-ಆಗಬೇಕು; ಬಹು-ಬಹುವಾರ, ಬಹುಧಾ-ಬಹುಪ್ರಕಾರದಿಂದ, ಶ್ರೋತವ್ಯಂ-ಶ್ರವಣ ಮಾಡಲ್ಪಡಬೇಕು; ಬಹುಭ್ಯಃ-ಬಹುಜನರಿಂದ (ಬಹುಜ್ಞಾನಿಗಳಿಂದ), ಬಹುವಾರಂ-ಅನೇಕಾವರ್ತಿ (ಚ-ಕೇಳತಕ್ಕದ್ದೇ) ಇತ್ಯೇವಂ-ಹೀಗೆಂದು,

---

ದಾಗಿದೆ; ಸ್ವಯಂ ತತ್ತ್ವವೇತ್ತರಾದ ನೀವು, ಶಾಸ್ತ್ರನಿರ್ಣಯಗಳನ್ನು ಉಪದೇಶಿಸಲು ಸಹ ಸಮರ್ಥರಾಗಿರುವಿರಿ; ಹೀಗಿದ್ದರೂ ಅಜ್ಞಾನಿಗಳ ತತ್ತ್ವಜ್ಞಾನಾರ್ಥವಾಗಿ ಪ್ರಶ್ನೆಗಳನ್ನು ಕೇಳುತ್ತಿರುವಿರಿ; ತಿಳಿದಿದ್ದರೂ ಪ್ರಶ್ನಿಸುವುದು ಸತ್ಪುರುಷರ ಸ್ವಭಾವವೇ ಆಗಿದೆ; ತಿಳಿದ ವಿಷಯವನ್ನೇ ಕುರಿತು ಮತ್ತೆ ಮತ್ತೆ ಪ್ರಶ್ನಿಸುವುದು (ತಿಳಿಯದವರಂತೆ ಅನ್ಯರನ್ನು ಕೇಳುವುದು) ಮತ್ತು ಅನ್ಯರಿಂದ ಶ್ರವಣಮಾಡುವುದು, ಜ್ಞಾತ ತತ್ತ್ವವನ್ನೇ (ರಹಸ್ಯಗಳನ್ನೇ) ಮೇಲಿಂದಮೇಲೆ ವಿಮರ್ಶೆಮಾಡಿ ದಾರ್ಢ್ಯವನ್ನು ಹೊಂದತಕ್ಕದ್ದು; ಇದಕ್ಕಾಗಿ ವಿಸ್ತಾರವಾಗಿ (ಸೂಕ್ಷ್ಮ ವಿಚಾರಗಳೊಡನೆ) ಬಹುವಾರ, ಬಹೂಜ್ಞರಿಂದ ಶ್ರವಣ ಮಾಡಬೇಕಾದುದರ ಅವಶ್ಯಕತೆಯನ್ನು ಸಾಧಕ ಜೀವರಿಗೆ (ಅಜ್ಞಾನಿಗಳಿಗೆ) ತಿಳಿಸಿಕೊಡಲು, ನೀವುಗಳು ನನ್ನನ್ನು ಕುರಿತು ಪ್ರಶ್ನೆಮಾಡುತ್ತಿರುವಿರಿ, ಎಂಬುದನ್ನು

ಜನಾನ್-ಜನರಿಗೆ (ಸಾಧಕರಿಗೆ), ದರ್ಶಯಿತುಂ- ತಿಳಿಸಿಕೊಡಲಿಕ್ಕಾಗಿ (ಜ್ಞಾನಿಗಳು ಅಬುಧರಂತೆ ಪ್ರಶ್ನಿಸುತ್ತಾರೆ).

**ಅನಂತೋ ಮಹಿಮಾ ವಿಷ್ಣೋಶ್ಚಿಂತನೀಯಃ ಸದೈವ ಸಃ ।**
**ವದೇಚ್ಛ್ರೋತರಿ ಸಂಪನ್ನೇ ಶೃಣುಯಾತ್ಸತಿ ವಕ್ತರಿ ॥ ೧೨೩ ॥**
**ಅನ್ಯದಾ ಸಂಸ್ಮರೇತಾಪಿ ಮಹಿಮಾನಂ ಪರಾತ್ಮನಃ ।**

ವಿಷ್ಣೋಃ-ಶ್ರೀವಿಷ್ಣುವಿನ, ಮಹಿಮಾ-ಮಹಿಮೆಯು, ಅನಂತಃ-ಅನಂತವಾದುದು; ಸದಾ ಏವ-ನಿರಂತರವಾಗಿ, ಚಿಂತನೀಯಃ-ಸ್ಮರಿಸಲ್ಪಡಬೇಕಾದುದು; ಸಃ-ಅಧಿಕಾರಿಯು (ಮುಮುಕ್ಷುವು), ಶ್ರೋತರಿ-ಶ್ರೋತೃವು (ಶ್ರವಣಾಧಿಕಾರಿಯು), ಸಂಪನ್ನೇ (ಸತಿ)-ದೊರೆಯುತ್ತಿರಲಾಗಿ, ವದೇತ್-ಹೇಳಬೇಕು; ವಕ್ತರಿ ಸತಿ-ವಕ್ತೃವು (ವಕ್ತಾರನು- ಹೇಳುವ ಅಧಿಕಾರಿಯು) ಇರುತ್ತಿರಲು, ಶೃಣುಯಾತ್-ಶ್ರವಣ ಮಾಡಬೇಕು; ಅಪಿ-ಮತ್ತು, ಅನ್ಯದಾ-ಇತರ ಕಾಲದಲ್ಲಿ (ಶ್ರೋತೃವಕ್ತೃಗಳು ಸೇರದಿರುವಾಗ), ಪರಮಾತ್ಮನಃ-ಶ್ರೀವಿಷ್ಣುವಿನ, ಮಹಿಮಾನಂ-ಮಹಿಮೆಯನ್ನು, ಸಂಸ್ಮರೇತ-ಸ್ಮರಿಸುತ್ತಿರಬೇಕು.

**ನ ವೃಥಾ ಕರ್ಮ ಕುರ್ವೀತ ಯೇನಾಯುರ್ವ್ಯರ್ಥತಾಂ ವ್ರಜೇತ್ ॥**
**ದುರ್ಲಭಾದ್ದುರ್ಲಭಂ ಲೋಕೇ ತ್ವಲ್ಪಮಾಯುರ್ನೃಣಾಂ ಯತಃ ।**

ವೃಥಾಕರ್ಮ-ವ್ಯರ್ಥವಾದ ಕರ್ಮವನ್ನು, ನ ಕುರ್ವೀತ-ಮಾಡತಕ್ಕದ್ದಲ್ಲ; ಯೇನ-(ಯಾವುದರಿಂದ) ಅದರಿಂದ, ಆಯುಃ-ಆಯುಷ್ಯವು, ವ್ಯರ್ಥತಾಂ-ವ್ಯರ್ಥತೆಯನ್ನು, ವ್ರಜೇತ್-ಹೊಂದುತ್ತದೆ; (ಯಾವ ಕರ್ಮದಿಂದ ಆಯುಷ್ಯವು ವ್ಯರ್ಥವಾಗುವುದೋ ಅದನ್ನು ಮಾಡಬಾರದು); ಲೋಕೇ-ಲೋಕದಲ್ಲಿ, ಯತಃ-ಯಾವ ಕಾರಣದಿಂದ, ನೃಣಾಂ-ಮನುಷ್ಯರ, ಆಯುಃ-ಆಯುಷ್ಯವು, ಅಲ್ಪಂ-ಅಲ್ಪವಾದುದು (ಅಲ್ಪವಾದ ಕಾಲಮಿತಿಯುಳ್ಳದ್ದು); ಮತ್ತು ದುರ್ಲಭಾತ್ ದುರ್ಲಭಂ-ಅತ್ಯಂತ ದುರ್ಲಭವಾದುದೋ, (ಅದರಿಂದ ಆಯುಷ್ಯವನ್ನು ವ್ಯರ್ಥಗೊಳಿಸಕೂಡದು).

---

ಬಲ್ಲೆನು (೧೧೯-೧೨೨). ಶ್ರೀವಿಷ್ಣುವಿನ ಮಹಿಮೆಗಳು ಅನಂತ ಮತ್ತು ಪ್ರತಿ ಮಹಿಮೆಯು ಅನಂತವಾದುದು— ಸದಾ ಚಿಂತಿಸಲ್ಪಡತಕ್ಕವುಗಳು; ಮುಮುಕ್ಷುವು, ಶ್ರವಣಾಧಿಕಾರಿಯು ದೊರೆತಾಗ ವಿಷ್ಣು ಮಹಿಮೆಗಳನ್ನು ಹೇಳಬೇಕು; ವಕ್ತಾರನು (ತನಗಿಂತ ಉತ್ತಮಾಧಿಕಾರಿಯು) ದೊರೆತಾಗ ಶ್ರವಣಮಾಡಬೇಕು; ಬೇರೆ ಕಾಲದಲ್ಲಿ ಶ್ರೀ ಹರಿಮಹಿಮೆಗಳನ್ನು ಸ್ಮರಿಸುತ್ತಿರಬೇಕು (೧೨೩). ಆಯುಷ್ಯವನ್ನು ವ್ಯರ್ಥಗೊಳಿಸುವಂತಾಗುವುದರಿಂದ, ವ್ಯರ್ಥಕರ್ಮವನ್ನು ಎಂದೂ ಆಚರಿಸಕೂಡದು; ಮನುಷ್ಯ

**ಬಾಲ್ಯೇನ ಹ್ರಿಯತೇ ಕಿಂಚಿತ್ ತಥಾ ಪ್ರಾಯೇಣ ನಿದ್ರಯಾ ॥ ೧೨೫ ॥**
**ರೋಗವಾರ್ಧಕಚಿಂತಾಭಿರ್ದುಃಸಂಗಾತ್ಪ್ರಾಯಶಸ್ತಥಾ ।**
**ಅವಶಿಷ್ಟಂ ಕದಾಚಿತ್ತು ಸತ್ಸಂಗೋ ಲಭ್ಯತೇ ನರೈಃ ॥ ೧೨೬ ॥**
**ತದಾ ಕಿಂಚಿದ್ಧಿತಂ ಸ್ವಸ್ಯ ಭವೇದ್ಭಾಗ್ಯಾನ್ನ ವಾ ಭವೇತ್ ।**

ಕಿಂಚಿತ್-(ಮನುಷ್ಯನ ಆಯುಷ್ಯದಲ್ಲಿ) ಕೆಲವು ಭಾಗವು, ಬಾಲ್ಯೇನ-ಬಾಲ್ಯದಿಂದ (ಆಟಪಾಟಗಳಲ್ಲಿ ಆಸಕ್ತನಾಗುವುದರಿಂದ), ಹ್ರಿಯತೇ-(ವ್ಯರ್ಥವಾಗಿ) ಹರಣವಾಗುತ್ತದೆ; ತಥಾ-ಹಾಗೂ, ಪ್ರಾಯೇಣ-ಬಹುವಾಗಿ (ಬಹುಭಾಗವು), ನಿದ್ರಯಾ-ನಿದ್ರೆಯಿಂದ (ಹ್ರಿಯತೇ-ಕಳೆಯುತ್ತದೆ); ತಥಾ-ಮತ್ತು ಪ್ರಾಯಶಃ-ಬಹಳವಾಗಿ, ರೋಗ ವಾರ್ಧಕ ಚಿಂತಾಭಿಃ-ರೋಗ, ವಾರ್ಧಕ್ಯ (ಮುಪ್ಪು), ಸಾಂಸಾರಿಕ ಚಿಂತೆಗಳಿಂದಲೂ, ದುಃಸಂಗಾತ್-ದುಷ್ಟಸಹವಾಸದಿಂದಲೂ, (ಹ್ರಿಯತೇ-ಕಳೆಯುತ್ತದೆ); ಅವಶಿಷ್ಟಂ-ಉಳಿಯುವುದು. (ಅಲ್ಪಭಾಗದ ಆಯುಷ್ಯವೇ); ಕದಾಚಿತ್-(ಉಳಿದ ಕಾಲದಲ್ಲಿ) ಆಗಾಗ, ತು-ಮಾತ್ರ, ಸತ್ಸಂಗಃ- ಸಜ್ಜನ ಸಹವಾಸವು, ನರೈಃ-ಮನುಷ್ಯರಿಂದ ಲಭ್ಯತೇ-ಹೊಂದಲ್ಪಡುತ್ತದೆ; ತದಾ-ಆಗ, ಭಾಗ್ಯಾತ್-ಪೂರ್ವ ಪುಣ್ಯಪ್ರಭಾವದಿಂದ, ಸ್ವಸ್ಯ-ತನಗೆ, ಕಿಂಚಿತ್ ಹಿತಂ-ಅಲ್ಪ ಹಿತವು, ಭವೇತ್-ಆಗುತ್ತದೆ, ನ ವಾ ಭವೇತ್-ಅಥವಾ (ಸ್ವಹಿತವು) ಆಗದಿದ್ದರೂ ಇರಬಹುದು.

**ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಸ್ಮಾರಿತೋ ಯದ್ಭವಾದೃಶೈಃ ।**
**ಮಹಿಮಾನಂ ಮಹಾವಿಷ್ಣೋರ್ವಿಷ್ಣುಭಕ್ತಿಪರಾಯಣೈಃ ॥ ೧೨೭ ॥**

---

ಜನ್ಮವು ಅತ್ಯಂತ ದುರ್ಲಭವಾದುದು; ಅದರ ಆಯುಷ್ಯವೂ ಅತ್ಯಲ್ಪವಾದುದು[1] ಆದ್ದರಿಂದ ಪ್ರತಿಕ್ಷಣವನ್ನೂ ಸಾರ್ಥಕಪಡಿಸಿಕೊಳ್ಳಲು ನಿರಂತರ ಶ್ರೀಹರಿಯ ಮಹಿಮೆಗಳನ್ನು ಸ್ಮರಿಸುತ್ತಿರಬೇಕು (೧೨೪). ಆಯುಷ್ಯದ ಬಹುಭಾಗವು (ದೊಡ್ಡ ಭಾಗವು) ನಿದ್ರೆಯಲ್ಲಿ ಕಳೆದುಹೋಗುತ್ತದೆ; ಬಾಲ್ಯಾವಸ್ಥೆಯಲ್ಲಿ ಕೆಲವು ಭಾಗದ ಆಯುಷ್ಯವು ವ್ಯರ್ಥವಾಗುತ್ತದೆ; ರೋಗ, ಮುಪ್ಪು, ಸಾಂಸಾರಿಕ ಚಿಂತೆಗಳಲ್ಲಿಯೂ, ದುಸ್ಸಂಗದಲ್ಲಿಯೂ ಬಹುಕಾಲ ಕಳೆದುಹೋಗುತ್ತದೆ; ಉಳಿಯುವ ಕಾಲದಲ್ಲಿ

---

1. 'ಅದ್ಯ ವಾ ಅಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಂ' ಎಂದು (ಭಾಗವತದಲ್ಲಿ) ಹೇಳಿದಂತೆ, 'ಶತಮಾನಃ ಭವತಿ' ಇತ್ಯಾದಿ (ಶ್ರುತಿಗಳಲ್ಲಿಯೂ) ಹೇಳುವಂತೆ ಕೇವಲ ೧೦೦ ವರ್ಷಗಳ ಪರಿಮಿತಿಯುಳ್ಳದ್ದು—ಮನುಷ್ಯನ ಆಯುಷ್ಯ; ವಿಶೇಷ ಸಂದರ್ಭಗಳಲ್ಲಿ ೧೨೦ ವರ್ಷಗಳವರೆಗೂ ಇರುವುದೆಂದು ಹೇಳುವ ಕೆಲವು ಉಕ್ತಿಗಳನ್ನು ಬಿಟ್ಟು, ೧೦೦ ವರ್ಷವೆಂಬುದು ಸಾಮಾನ್ಯ ನಿಯಮವು; ಶತಶಬ್ದವು ಬಹು ಎಂಬರ್ಥವುಳ್ಳದ್ದು; ಕಲಿಯುಗದಲ್ಲಿ ಈ ೧೦೦ ವರ್ಷದ ಅವಧಿಯನ್ನು ಮುಟ್ಟುವವರೂ ಅತಿ ವಿರಳ.

**ವಾಸುದೇವಕಥಾಪ್ರಶ್ನಃ ಪುರುಷಾಂಸ್ತ್ರೀನ್ ಪುನಾತಿ ಹಿ ।**
**ವಕ್ತಾರಂ ಪೃಚ್ಛಕಂ ಶ್ರೋತೄಂಸ್ತತ್ಪಾದಸಲಿಲಂ ಯಥಾ ॥ ೧೨೮ ॥**

ಸೂತಾಚಾರ್ಯನು ಹೇಳುತ್ತಾನೆ:—ಧನ್ಯಃ ಅಸ್ಮಿ-(ನಾನು) ಧನ್ಯನಾದೆನು; ಕೃತಕೃತ್ಯಃ ಅಸ್ಮಿ-ಕೃತಕೃತ್ಯನಾದೆನು; ಯತ್-ಏಕೆಂದರೆ, ಭವಾದೃಶೈಃ-ನಿಮ್ಮಂಥ, ವಿಷ್ಣುಭಕ್ತಿಪರಾಯಣೈಃ-ವಿಷ್ಣುಭಕ್ತಿಪರಾಯಣರಿಂದ, ಮಹಾವಿಷ್ಣೋಃ-ಶ್ರೀವಿಷ್ಣುವಿನ, ಮಹಿಮಾನಂ-ಮಹಿಮೆಯನ್ನು ಕುರಿತು; ಸ್ಮಾರಿತಃ-ಜ್ಞಾಪಿಸಲ್ಪಟ್ಟೆನು; (ವಿಷ್ಣುಸ್ಮರಣೆ ಯುಳ್ಳವರು ಕೃತಕೃತ್ಯರೇ ಸರಿ—ಅವರಿಂದ ಮಾಡಲ್ಪಡಬೇಕಾದ ಯಾವ ಕೃತ್ಯವೂ ಉಳಿಯುವುದಿಲ್ಲ—ಅದಕ್ಕಿಂತ ಅಧಿಕವಾದ ಪುಣ್ಯಕರ್ಮವಿಲ್ಲವೆಂದು ಈ ಹಿಂದೆ ನಿರೂಪಿಸಲಾಗಿದೆ); ವಾಸುದೇವ ಕಥಾಪ್ರಶ್ನಃ-ಶ್ರೀ ಹರಿಮಹಿಮೆಗಳನ್ನು ಕುರಿತು ಮಾಡಲ್ಪಡುವ ಪ್ರಶ್ನೆಯು, ತ್ರೀನ್-ಮೂರು, ಪುರುಷಾನ್-ಪುರುಷರನ್ನು, ಪುನಾತಿ-ಪವಿತ್ರಗೊಳಿಸುತ್ತದೆ; (ಆ ಮೂವರು ಯಾರೆಂದರೆ), ವಕ್ತಾರಂ-(ವಿಷ್ಣು ಮಹಿಮೆ ಗಳನ್ನು) ಹೇಳುವವನನ್ನೂ (ವಕ್ತೃವನ್ನೂ), ಪೃಚ್ಛಕಂ-ಪ್ರಶ್ನೆಮಾಡುವವನನ್ನೂ, ಶ್ರೋತೄನ್-ಕೇಳುವವರನ್ನೂ, ಯಥಾ-ಹೇಗೆ, ತ ತ್ಪಾ ದ ಸ ಲಿ ಲಂ-ಶ್ರೀವಿಷ್ಣು ಪಾದೋದಕವು, (ಪುನಾತಿ ತಥಾ-ಪವಿತ್ರಗೊಳಿಸುವುದೋ ಹಾಗೆ, ಈ ಮೂರೂ ಪುರುಷರ ಪಾಪಗಳನ್ನು ಪರಿಹರಿಸಿ ಶುದ್ಧಗೊಳಿಸುತ್ತದೆ).

ಭಗವನ್ಮಹಿಮಾ ವರ್ಣನವೆಂಬ ೪೩ನೆಯ ಅಧ್ಯಾಯವು ಮುಗಿದುದು.

---

ಯಾವಾಗಲಾದರೂ ಒಮ್ಮೊಮ್ಮೆ ಸತ್ಸಂಗವು ದೊರೆತರೂ, ಪೂರ್ವಪುಣ್ಯ ಪ್ರಭಾವದಿಂದ, ಅದರಿಂದ ತನ್ನ ಪಾರಮಾರ್ಥಿಕ ಹಿತವು ಸಾಧಿಸಬಹುದು ಅಥವಾ ಅದೂ ಆಗದಿರಬಹುದು (೧೨೫-೧೨೬). ನಿಮ್ಮಂಥ ವಿಷ್ಣುಭಕ್ತರಿಂದ ಶ್ರೀ ಮಹಾವಿಷ್ಣುವಿನ ಮಹಿಮೆಯ ಸ್ಮರಣೆಯನ್ನು ಪಡೆದ ನಾನು ಧನ್ಯನು—ಕೃತಕೃತ್ಯನಾಗಿದ್ದೇನೆ; (ವಿಷ್ಣು ಮಹಿಮಾ ಸ್ಮರಣೆಗಿಂತ ಅಧಿಕ ಪುಣ್ಯವಾವುದಿದೆ ?); ಶ್ರೀವಿಷ್ಣು ಮಹಿಮೆಯನ್ನು (ಮೋಕ್ಷಪ್ರದನಾದ ಶ್ರೀ ವಾಸುದೇವನ ಮಹಿಮೆಯನ್ನು) ಕುರಿತು ಮಾಡಲ್ಪಡುವ ಪ್ರಶ್ನೆಯು, ವಕ್ತೃವನ್ನೂ (ಹೇಳುವವನನ್ನೂ), ಪ್ರಶ್ನೆಮಾಡಿ ದವನನ್ನೂ, ಶ್ರೋತೃಗಳನ್ನೂ (ಕೇಳುವವರನ್ನೂ) ಈ ಮೂರು ಪುರುಷರನ್ನೂ ಶ್ರೀವಿಷ್ಣು ಪಾದೋದಕದಂತೆ (ಮೂರು ಲೋಕಗಳನ್ನು ಪವಿತ್ರಗೊಳಿಸುವ ಗಂಗೆಯಂತೆ), ಪವಿತ್ರರನ್ನಾಗಿ (ಪಾಪಗಳನ್ನು ಕಳೆದು ಮಹಾಪುಣ್ಯವನ್ನಿತ್ತು) ಮಾಡುತ್ತದೆ (೧೨೭-೧೨೮).

೪೩ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೪

**ಶ್ರೀ ವೇದವ್ಯಾಸಾಯ ನಮಃ**

**ಶೌನಕ ಉವಾಚ—**

**ಅಪಿ ಸೂತ ತ್ವಯಾ ಗೀತಮೇತತ್ಸರ್ವಂ ಶ್ರುತಂ ಹಿ ನಃ ।**
**ಅಥ ಪ್ರಸ್ತುತಮಾಖ್ಯಾಹಿ ಯದಮೋಚದ್ಗಜಂ ಹರಿಃ ॥ ೧ ॥**

ಶೌನಕರು ಮಾತನಾಡುತ್ತಾರೆ:—

ಅರ್ಥ: ಸೂತ-ಹೇ ಸೂತಾಚಾರ್ಯ !, ತ್ವಯಾ-ನಿನ್ನಿಂದ, ಗೀತಂ-ಹೇಳಲಾದ, ಏತತ್-ಈ, ಸರ್ವಂ ಅಪಿ-ಎಲ್ಲವೂ, ಶ್ರುತಂ ಹಿ-ಕೇಳಲ್ಪಟ್ಟಿತು; ಹರಿಃ-ಶ್ರೀಹರಿಯು, ಗಜಂ-ಗಜರಾಜನನ್ನು ಯತ್ ಅಮೋಚತ್-ಏನು ಬಿಡಿಸಿದನೋ,[1] ಅಥ ಪ್ರಸ್ತುತಂ-ಅದರ ಮುಂದೆ ಪ್ರಸಕ್ತವಾದುದನ್ನು (ಮನ್ವಂತರ ಚರಿತ್ರೆಗಳನ್ನು ನಃ-ನಮಗೆ, ಆಖ್ಯಾಹಿ-ಹೇಳು.

**ಸೂತ ಉವಾಚ—**

**ಹರಿಣಾ ಮೋಚಿತೋ ನಕ್ರಾದ್ಗಜೇಂದ್ರಃ ಸ್ಮೃತಿಮಾತ್ರತಃ ।**
**ತಾಪಸಸ್ಯಾಂತರೇ ವಿಪ್ರಾಸ್ತದಾಖ್ಯಾನಂ ಮಹಾದ್ಭುತಂ ॥ ೨ ॥**
**ವಿಷ್ಣುಃ ಪಂಚಮಮಾರಭ್ಯ ಮನ್ವಂತರಮವೋಚತ ।**
**ತದಾಖ್ಯಾಸ್ಯಾಮಿ ಭವತಾಂ ಪುರುಸಾತ್ ಶ್ರುಣುತಾದರಾತ್ ॥ ೩ ॥**

---

ತಾತ್ಪರ್ಯ:— ಶೌನಕರು ಕೇಳುತ್ತಾರೆ:—ಹೇ ಸೂತಾಚಾರ್ಯ! ನೀನು ಈವರೆಗೆ ಹೇಳಿದುದೆಲ್ಲವನ್ನೂ ಶ್ರವಣಮಾಡಿದೆವು; ಹಿಂದೆ, ಗಜೇಂದ್ರನನ್ನು ಶ್ರೀಹರಿಯು ಮೋಚನೆಮಾಡಿದನೆಂಬ ೪ನೇ ತಾಪಸ ಮನ್ವಂತರದ ಮುಂದೆ ಪ್ರಸ್ತುತವಾಗುವ ಚರಿತ್ರೆಯನ್ನು ನಿರೂಪಿಸುವನಾಗು (೧). ಸೂತನು ಹೇಳುತ್ತಾನೆ:— ತಾಪಸ ಮನ್ವಂತರದಲ್ಲಿ ಶ್ರೀಹರಿಯು, ಸ್ಮರಣಮಾತ್ರದಿಂದ ಪ್ರಾಪ್ತನಾಗಿ, ಗಜೇಂದ್ರನನ್ನು ನಕ್ರಮುಖದಿಂದ ಮೋಚನೆಮಾಡಿದ ಚರಿತ್ರೆಯು, ಹೇ ಋಷಿಗಳೇ! ಪರಮಾಶ್ಚರ್ಯ

---

1. ೪ನೇ ತಾಪಸಮನ್ವಂತರದಲ್ಲಿ ನಡೆದ ಗಜೇಂದ್ರಮೋಕ್ಷ ಕಥೆಯು, ೩೪ನೇ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟು, ಭೃಗುಋಷಿಗಳು ಇಂದ್ರದ್ಯುಮ್ನರಾಜನಿಗೆ ಮಾಡಿದ ಉಪದೇಶದ ವಿಸ್ತಾರಕ್ಕಾಗಿ ಶೌನಕರಿಂದ ಪ್ರಾರ್ಥಿಸಲ್ಪಟ್ಟು, ಮಂತ್ರೋಪದೇಶ, ಗುರುಶಿಷ್ಯ ಸಂಬಂಧ, ರಾಜನೀತಿ, ಬ್ರಾಹ್ಮಣಾದಿ ವರ್ಣಧರ್ಮಗಳು, ಸರ್ವರಿಗೆ ಗುರುಸ್ಥಾನೀಯರಾದ ವಿಪ್ರರ ಮಹಿಮೆ, ಮುಕ್ತಿ, ಭೋಗ ಇತ್ಯಾದಿ ಬಹುವಿಷಯಗಳು ಮುಂದಿನ ಅಧ್ಯಾಯಗಳಲ್ಲಿ ನಿರೂಪಿಸಲ್ಪಟ್ಟನಂತರ, ಅಲ್ಲಿ ಪ್ರಸಕ್ತವಾದ ೫ನೇ ಮನ್ವಂತರದಿಂದ ಮುಂದಿನ ಚರಿತ್ರೆಯನ್ನು ನಿರೂಪಿಸಿರೆಂದು, ಶೌನಕರು ಈಗ ಕೇಳುತ್ತಿದ್ದಾರೆ.

ಗಜೇಂದ್ರಃ-ಗಜೇಂದ್ರನು, ಸ್ಮೃತಿಮಾತ್ರತಃ-ಸ್ಮರಣ ಮಾತ್ರದಿಂದ (ಪ್ರಾಪ್ತನಾದ), ಹರಿಣಾ-ಶ್ರೀಹರಿಯಿಂದ, ತಾಪಸಸ್ಯ ಅಂತರೇ-(೪ನೇ) ತಾಪಸ ಮನ್ವಂತರದಲ್ಲಿ ನಕ್ರಾತ್-ಮೊಸಳೆಯಿಂದ (ನಕ್ರಮುಖದಿಂದ), ಮೋಚಿತಃ-ಬಿಡಿಸಲ್ಪಟ್ಟನಷ್ಟೆ ವಿಪ್ರಾಃ-ಹೇ ಬ್ರಾಹ್ಮಣರೇ ! ತತ್ ಆಖ್ಯಾನಂ-ಆ ಚರಿತ್ರೆಯು, ಮಹಾದ್ಭುತಂ- ಅತ್ಯಾಶ್ಚರ್ಯ ಕರವಾದುದು; ವಿಷ್ಣುಃ-ಶ್ರೀವಿಷ್ಣುವು, (ಬ್ರಹ್ಮನಿಗಾಗಿ), ಪಂಚಮಂ - ಐದನೆಯ, ಮನ್ವಂತರಂ-ಮನ್ವಂತರವನ್ನು ಆರಭ್ಯ-ಪ್ರಾರಂಭಿಸಿ, ಅವೋಚತ- (ಏನು) ಹೇಳಿದನೋ; ತತ್-ಅದನ್ನು ಪುರಸ್ತಾತ್-ಮುಂದೆ, ಭವತಾಂ- ನಿಮ್ಮಗಳಿಗೆ (ಅಥವಾ ನಿಮ್ಮೆದುರಿನಲ್ಲಿ), ಆಖ್ಯಾಸ್ಯಾಮಿ-ಹೇಳುತ್ತೇನೆ; ಆದರಾತ್-ಆದರದಿಂದ, ಶೃಣುತ-ಕೇಳಿರಿ.

ಶ್ರೀಭಗವಾನುವಾಚ—

ತಾಪಸಸ್ಯಾನುಜೋ ಬ್ರಹ್ಮನ್ ಪಂಚಮೋ ರೈವತೋ ಮನುಃ ।
ತದಾ ಭೂತರಯಾ ದೇವಾ ಆಸನ್ನಿಂದ್ರೋ ವಿಭುಃ ಸ್ಮೃತಃ ॥ ೪ ॥

ಶ್ರೀವಿಷ್ಣುವು ಹೇಳುತ್ತಾನೆ:—

ಬ್ರಹ್ಮನ್-ಹೇ ಬ್ರಹ್ಮದೇವ!, ತಾಪಸಸ್ಯ-ತಾಪಸ ಮನುವಿನ, ಅನುಜಃ-ತಮ್ಮನೇ, ಪಂಚಮಃ-ಐದನೆಯ, ರೈವತಃ ಮನುಃ-ರೈವತನೆಂಬ ಮನುವು; ತದಾ-ಆಗ (ಆ ಮನ್ವಂತರದಲ್ಲಿ), ಭೂತರಯಾಃ-ಭೂತರಯರೆಂಬುವರು, ದೇವಾಃ-ದೇವತೆಗಳು, ಆಸನ್-ಆಗಿದ್ದರು; ವಿಭುಃ-ವಿಭುನಾಮಕನು, ಇಂದ್ರಃ ಸ್ಮೃತಃ-ಇಂದ್ರನೆಂದು ಪ್ರಸಿದ್ಧನು (ಹೇಳಲ್ಪಡುವನು).

---

ಕರವಾದುದು! ಶ್ರೀವಿಷ್ಣುವು ಬ್ರಹ್ಮದೇವನಿಗೋಸ್ಕರ, ಪಂಚಮ (೫ನೇ) ಮನ್ವಂತರದಿಂದ ಆರಂಭಿಸಿ, ಮುಂದೆ ಹೇಳಿದ ಆಖ್ಯಾನವನ್ನು, ಇಲ್ಲಿಂದ ಮುಂದೆ, ನಿಮಗಾಗಿ ನಿರೂಪಿಸುತ್ತೇನೆ—ಆದರದಿಂದ ಶ್ರವಣಮಾಡಿರಿ (೨-೩). ಶ್ರೀವಿಷ್ಣುವು ಬ್ರಹ್ಮದೇವನಿಗೆ ಹೀಗೆ ಹೇಳಿದನು:—ಹೇ ಬ್ರಹ್ಮ! ತಾಪಸ ಮನುವಿನ ತಮ್ಮನಾದ ರೈವತನೆಂಬುವನೇ ಐದನೇ ಮನ್ವಂತರಾಧಿಪತಿಯಾದ, ಮನುವು; ಆಗ ಭೂತರಯರೆಂಬುವರು[1] ದೇವತೆಗಳಾಗಿದ್ದರು; ವಿಭುನಾಮಕನು ದೇವೇಂದ್ರನಾಗಿದ್ದನು (೪).

೧. ಪ್ರತಿ ಮನ್ವಂತರದಲ್ಲಿ, ಮನ್ವಂತರಾಧಿಪತಿಯಾದ, ಆ ಮನ್ವಂತರದ ಪ್ರಜೆಗಳ ಧರ್ಮನಿಯಾಮಕನಾದ ಮನು, ತ್ರಿಲೋಕರಕ್ಷಕನಾದ ಇಂದ್ರ, ದೇವಾದಿ ಪ್ರಜೆಗಳ ಮೇಲ್ವಿಚಾರದ ಅಧಿಕಾರದಲ್ಲಿರುವ ದೇವತೆಗಳು, ಸಪ್ತರ್ಷಿಗಳು, ಪ್ರಜಾಭಿವೃದ್ಧಿಯಲ್ಲಿ ದಕ್ಷರಾದ ಮನುಪುತ್ರರು, ಮತ್ತು ಆ ಮನ್ವಂತರದಲ್ಲಿ ಸಂಭವಿಸುವ ಶ್ರೀಹರಿಯ ಪ್ರಧಾನವಾದ ಅವತಾರ, ಇತ್ಯಾದಿ ವಿವರಗಳು ಪ್ರತಿ ಮನ್ವಂತರ ವಿಷಯದಲ್ಲಿ ಸಾಮಾನ್ಯವಾಗಿ ಹೇಳಲ್ಪಡುತ್ತವೆಂಬುದನ್ನು ಗಮನಿಸಬೇಕು. ಪ್ರಕೃತ, ರೈವತ ಮನ್ವಂತರದಲ್ಲಿ (ಮನುವಿನ ನಾಮದಿಂದಲೇ ಆ ಮನ್ವಂತರವು ಕರೆಯಲ್ಪಡುತ್ತದೆ), ಭೂತರಯರೆಂಬುವರು ಅಧಿಕಾರಿಕ ದೇವತೆಗಳಾಗಿದ್ದರೆಂದು ಹೇಳಲಾಗಿದೆ.

ಧರ್ಮಪತ್ನ್ಯಾಂ ವಿಕುಂಠಾಯಾಂ ಶುಭ್ರಾಖ್ಯಸ್ಯ ಮಹಾಮುನೇಃ ।
ಅಜಾಯತ ಸ್ವಯಂ ವಿಷ್ಣುರ್ವೈಕುಂಠೋ ಲೋಕವಿಶ್ರುತಃ ॥ ೫ ॥
ತಸ್ಯ ಪತ್ನ್ಯಭವದ್ದೇವೀ ಸ್ವಯಂ ಪದ್ಮೈವ ಸುಂದರೀ ।
ತತ್ಪ್ರೀತ್ಯರ್ಥಂ ಭುವೋ ಭಾಗೇ ವೈಕುಂಠಂ ಕೃತವಾನ್ ಪುರಂ ॥ ೬ ॥
ಯತ್ರ ದೇವೈಃ ಸ ವೈಕುಂಠೇ ದೇವ್ಯಾ ಚ ಸಹ ಮೋದತೇ ।
ತಸ್ಯ ಕರ್ಮಾಣ್ಯಪಾರಾಣಿ ನ ಶಕ್ಯಾನೀಹ ವರ್ಣಿತುಂ ॥ ೭ ॥

ಶುಭ್ರಾಖ್ಯಸ್ಯ-ಶುಭ್ರನಾಮಕನಾದ, ಮಹಾಮುನೇಃ-ಮಹರ್ಷಿಯ, ಧರ್ಮಪತ್ನ್ಯಾಂ-ಧರ್ಮಪತ್ನಿಯಾದ, ವಿಕುಂಠಾಯಾಂ-ವಿಕುಂಠಾನಾಮಕ ಸ್ತ್ರೀಯಲ್ಲಿ (ಆಕೆಯನ್ನು ನಿಮಿತ್ತೀಕರಿಸಿ), ಸ್ವಯಂ-ಸಾಕ್ಷಾತ್, ವಿಷ್ಣುಃ-ಶ್ರೀವಿಷ್ಣುವು, ವೈಕುಂಠಃ-ವೈಕುಂಠನೆಂಬ ನಾಮದಿಂದ, ಲೋಕವಿಶ್ರುತಃ-ಜಗತ್ಪ್ರಸಿದ್ಧನಾಗಿ, ಅಜಾಯತ-ಹುಟ್ಟಿದನು (ಅವತರಿಸಿದನು); ತಸ್ಯ-ಆ ವೈಕುಂಠನ, ಪತ್ನೀ-ಭಾರ್ಯಳು, ಸ್ವಯಂ-ಸಾಕ್ಷಾತ್, ಸುಂದರೀ-ಲೋಕಸುಂದರಿಯಾದ (ಮೂರ್ತಿವೆತ್ತ ಸೌಂದರ್ಯವೇ ಆದ್ದರಿಂದ ಸುಂದರೀ ನಾಮಕಳಾದ) ಪದ್ಮಾ ಏವ-ಶ್ರೀಮಹಾಲಕ್ಷ್ಮೀದೇವಿಯೇ (ಆದಳು); ತತ್ಪ್ರೀತ್ಯರ್ಥಂ-ಆಕೆಯ ಸಂತೋಷಕ್ಕಾಗಿ, ಭುವಃ ಭಾಗೇ-(ವೈಕುಂಠಲೋಕದ) ಭೂಭಾಗದಲ್ಲಿ, ವೈಕುಂಠಪುರಂ-ವೈಕುಂಠವೆಂಬ ಹೆಸರಿನ ನಗರವನ್ನು, ಕೃತವಾನ್-(ವೈಕುಂಠವನ್ನು) ನಿರ್ಮಿಸಿದನು; ಯತ್ರ ವೈಕುಂಠೇ-ಯಾವ ವೈಕುಂಠನಗರದಲ್ಲಿ ಸಃ-ಆ ವೈಕುಂಠನು, ದೇವೈಃ-ದೇವತೆಗಳಿಂದಲೂ, ದೇವ್ಯಾ ಚ ಸಹ-ಶ್ರೀಲಕ್ಷ್ಮೀದೇವಿಯಿಂದಲೂ ಸಹ ಕೂಡಿ, ಮೋದತೇ-ಆನಂದದಿಂದ ವಿಹರಿಸುತ್ತಾನೆ; ತಸ್ಯ-ಆ ವೈಕುಂಠನ, ಕರ್ಮಾಣಿ-ಕೃತಿಗಳು, ಅಪಾರಾಣಿ-ಅನಂತವಾದುವು; ಇಹ-ಇಲ್ಲಿ ವರ್ಣಿತುಂ-ವರ್ಣಿಸಲಿಕ್ಕೆ, ಅಶಕ್ಯಾನಿ-ಅಶಕ್ಯವಾರವುಗಳು (ಒಂದೊಂದೂ ಅನಂತ ಮಹಿಮೋಪೇತವಾದುದು).

---

ಶುಭ್ರನಾಮಕ ಮಹರ್ಷಿಯ ಧರ್ಮಪತ್ನಿಯಾದ ವಿಕುಂಠಾ ಎಂಬ ಸ್ತ್ರೀಯಲ್ಲಿ ಸ್ವಯಂ ವಿಷ್ಣುವೇ, ಅವತರಿಸಿ, 'ವೈಕುಂಠ'ನೆಂದು ಸರ್ವಲೋಕಗಳಲ್ಲಿ ಪ್ರಸಿದ್ಧನಾದನು; ವೈಕುಂಠನ ಪತ್ನಿಯಾದ ದೇವಿಯು, ಲೋಕಸುಂದರಿಯಾದ ಸಾಕ್ಷಾತ್ ಮಹಾಲಕ್ಷ್ಮಿಯೇ ಆಗಿದ್ದಳು; ಆಕೆಯನ್ನು ಸಂತೋಷಪಡಿಸಲಿಕ್ಕಾಗಿ, ವೈಕುಂಠಲೋಕದ (ಮೂರು ಭಾಗಗಳಲ್ಲೊಂದಾದ) ಭೂಭಾಗದಲ್ಲಿ ವೈಕುಂಠನಾಮಕಪುರವನ್ನು ನಿರ್ಮಿಸಿ, ದೇವತೆಗಳಿಂದ ಸಹಿತನಾಗಿ ಆ ನಗರದಲ್ಲಿ ವೈಕುಂಠನು ಲಕ್ಷ್ಮೀದೇವಿಯೊಡನೆ ವಿಹರಿಸುವವನಾದನು; ಈ ವೈಕುಂಠ ಅನಂತಗುಣರ ಕ್ರಿಯೆಗಳನ್ನು ಇಲ್ಲಿ ವರ್ಣಿಸಲು ಶಕ್ಯವಿಲ್ಲ (ಈ ರಮಾಬ್ರಹ್ಮಾದಿ ಚೇತನಸಮೂಹದಲ್ಲಿ ವರ್ಣಿಸಲು ಯಾರೂ ಶಕ್ತರಲ್ಲ—ಒಂದೊಂದು ಕರ್ಮವು ಅಪಾರ ಮಹಿಮೋಪೇತವಾದುದು); (೫-೭).

**ಷಷ್ಠಸ್ತು ಚಕ್ಷುಷಃ ಪುತ್ರಶ್ಚಾಕ್ಷುಷಮನುರೀರಿತಃ ।**
**ಮಂದ್ರದ್ಯುಮ್ನಃ ಸ್ವಯಂ ಶಕ್ರಃ ಐಂದ್ರಂ ಪದಮಶಾಸತ ॥ ೮ ॥**

ಷಷ್ಠಃ ತು-ಆರನೆಯವನಾದರೋ, ಚಕ್ಷುಷಃ-ಚಕ್ಷುಷನ, ಪುತ್ರಃ-ಮಗನಾದ, ಚಾಕ್ಷುಷಮನುಃ-ಚಾಕ್ಷುಷ ಮನುವೆಂದು, ಈರಿತಃ-ಹೇಳಲ್ಪಟ್ಟಿರುವನು; ಸ್ವಯಂ-ಸಾಕ್ಷಾತ್, ಶಕ್ರಃ-ಶಕ್ರನೇ (ಶಕ್ರನು ತಾನೇ), ಮಂದ್ರದ್ಯುಮ್ನಃ-ಮಂದ್ರದ್ಯುಮ್ನನಾಮಕನಾಗಿ, ಐಂದ್ರಂ ಪದಂ-ಇಂದ್ರಪದವಿಯನ್ನು, ಅಶಾಸತ-ಆಳಿದನು.

**ವೈರಾಜಾದಭವದ್ವಿಷ್ಣುರ್ಯೋಽಜಿತೋಽಹಮಿತಿ ಶ್ರುತಃ ।**
**ಚತುರ್ದಶಾಪಿ ರತ್ನಾನಿ ಲಕ್ಷ್ಮ್ಯಾದೀನಿ ಪಯೋಂಬುಧೇಃ ॥ ೯ ॥**
**ಉದ್ಧೃತ್ಯ ಪ್ರದದೌ ತಾನಿ ದೇವಾದಿಭ್ಯೋ ಯಥಾತಥಂ ।**
**ಜಗ್ರಾಹ ಸ ಸ್ವಯಂ ಲಕ್ಷ್ಮೀಂ ರುದ್ರೋ ಹಾಲಾಹಲಂ ಪಪೌ ॥ ೧೦ ॥**
**ಸುಧಾಂ ಧನ್ವಂತರಿರ್ಭೂತ್ವಾ ಬಹಿರಾನೀಯ ದೇವತಾಃ ।**
**ಸ್ತ್ರೀರೂಪೀ ಪಾಯಯಾಮಾಸ ವಂಚಿತ್ವಾ ದೈತ್ಯದಾನವಾನ್ ॥ ೧೧ ॥**
**ತದೈವ ಕೂರ್ಮರೂಪೇಣ ಪೃಷ್ಠೇ ದಧ್ರೇ ಸ ಮಂದರಂ ।**
**ಅನ್ಯಾನ್ಯಪಿ ಚರಿತ್ರಾಣಿ ವಿಚಿತ್ರಾಣಿ ಚಕಾರ ಸಃ ॥ ೧೨ ॥**

ಯಃ-ಯಾರು, ಅಹಂ ಇತಿ-'ಅಹಂ' ಎಂದು, ಶ್ರುತಃ-ಶ್ರುತಿಯಲ್ಲಿ ಪ್ರಸಿದ್ಧನೋ, ವಿಷ್ಣುಃ-(ಆ) ಶ್ರೀವಿಷ್ಣುವು, ವೈರಾಜಾತ್-ವೈರಾಜನಿಂದ, ಅಜಿತಃ-ಅಜಿತನೆಂಬ

---

ಆರನೆಯ ಮನ್ವಂತರಾಧಿಪತಿಯು ಚಾಕ್ಷುಷಮನುವೆಂದು ಹೇಳಲ್ಪಟ್ಟಿರುವನು—ಈತನು ಚಕ್ಷುಷನೆಂಬುವನ ಪುತ್ರನು; ಆ ಮನ್ವಂತರದಲ್ಲಿ ಸ್ವಯಂ ಇಂದ್ರನು, ಮಂದ್ರದ್ಯುಮ್ನನಾಮಕನಾಗಿ ಇಂದ್ರಪದವಿಯನ್ನಾಳಿದನು[1] (೮). ಈ ಚಾಕ್ಷುಷ ಮನ್ವಂತರದಲ್ಲಿ ಅಮೃತಕ್ಕಾಗಿ ದೇವದೈತ್ಯಾದಿಗಳು ಮಿಳಿತರಾಗಿ, ಕ್ಷೀರಸಮುದ್ರವನ್ನು ಮಥನ ಮಾಡಿದರು; 'ಅಹಂ' ಶಬ್ದವಾಚ್ಯನಾದ ('ಅಹೇಯತ್ವಾದಹಂ ನಾಮಾ' ಇತ್ಯಾದಿ ಪ್ರಮಾಣವಾಕ್ಯಗಳು ಸಾರುವಂತೆ—ಶ್ರೀಹರಿಯನ್ನು ಬಿಟ್ಟು ಯಾವುದೊಂದು

---

1. ದೇವಶ್ರೇಷ್ಠನಾದ ಇಂದ್ರನು, ಶ್ರೀಹರಿಯ ಆಜ್ಞೆಯಂತೆ, ಕೆಲವು ಮನ್ವಂತರಗಳಲ್ಲಿ ಸ್ವಯಂ ಸ್ವರ್ಗಾಧಿಪತಿಯಾಗಿ ಅಧಿಕಾರವನ್ನು ವಹಿಸುತ್ತಾನೆ; ಈ ಶ್ವೇತವರಾಹಕಲ್ಪದ ೧೪ ಮನ್ವಂತರಗಳಲ್ಲಿ ೬ ಮತ್ತು ೭ನೇ ಮನ್ವಂತರಗಳಲ್ಲಿ (ಚಾಕ್ಷುಷ ಮತ್ತು ವೈವಸ್ವತಗಳಲ್ಲಿ) ಈತನೇ (ಪುರಂದರನಾಮಕ ಇಂದ್ರನೇ) ಇಂದ್ರಪದವಿಯಲ್ಲಿರುವನು; ಇತರ ಮನ್ವಂತರಗಳಲ್ಲಿ ಬೇರೆಯವರೂ ಇಂದ್ರಪದವಿಯನ್ನು ಹೊಂದುವುದೂ ಉಂಟು; ಶ್ರೀಹರಿಯು ಸ್ವಯಂ ಇಂದ್ರಪದವಿಯಲ್ಲಿರುವುದೂ ಉಂಟು (ಸ್ವಾಯಂಭುವ ಮನ್ವಂತರದ ಇಂದ್ರನು, ಯಜ್ಞರೂಪೀ ಶ್ರೀಹರಿಯೇ ಆಗಿದ್ದನು).

ನಾಮದಿಂದ, ಅಭವತ್-ಅವತರಿಸಿದನು; ಪಯೋಂಬುಧೇಃ-ಕ್ಷೀರಸಮುದ್ರದಿಂದ, ಲಕ್ಷ್ಮ್ಯಾದೀನಿ-ಶ್ರೀಲಕ್ಷ್ಮಿಯೇ ಮೊದಲಾದ, ಚತುರ್ದಶ-ಹದಿನಾಲ್ಕು, ರತ್ನಾನಿ ಅತಿ-ಶ್ರೇಷ್ಠ ವಸ್ತುಗಳನ್ನು, ಉದ್ಧೃತ್ಯ-ಮೇಲೆ ತೆಗೆದು (ಕ್ಷೀರಸಮುದ್ರದ ಮಥನ ಕಾಲದಲ್ಲಿ ಉದ್ಭವಿಸುವಂತೆ ಮಾಡಿ), ತಾನಿ-ಅವುಗಳನ್ನು ದೇವಾದಿಭ್ಯಃ-ದೇವತೆಗಳೇ ಮೊದಲಾದವರಿಗೆ, ಯಥಾತಥಂ-ಅವರವರ ಯೋಗ್ಯತಾನುಗುಣವಾಗಿ, ದದೌ-ಕೊಟ್ಟನು; ಲಕ್ಷ್ಮೀಂ-ಶ್ರೀಲಕ್ಷ್ಮೀದೇವಿಯನ್ನು ಸಃ-ಆ ಅಜಿತನು, ಸ್ವಯಂ-ತಾನೇ, ಜಗ್ರಾಹ-ಸ್ವೀಕರಿಸಿದನು; ರುದ್ರಃ-ರುದ್ರದೇವನು, ಹಾಲಾಹಲಂ-ಹಾಲಾಹಲವೆಂಬ ಉಗ್ರವಾದ ವಿಷವನ್ನು ಪಪೌ-(ಶ್ರೀ ವಾಯುದೇವನು ಭಗವದಾಜ್ಞೆಯಿಂದ ಪಾನಮಾಡಿ, ಅಲ್ಪವನ್ನು ಅಂಗೈಯಲ್ಲಿ ಮರ್ದನಮಾಡಿ ನಿರ್ವೀರ್ಯಗೊಳಿಸಿ, ಕೊಟ್ಟಿದ್ದನ್ನು) ಪಾನಮಾಡಿದನು; ಧನ್ವಂತರಿಃ ಭೂತ್ವಾ-ಧನ್ವಂತರಿ ನಾಮಕ ಮತ್ತೊಂದು

---

ಇರಲು ಸಹ ಅಸಮರ್ಥವಾದ್ದರಿಂದ ಶ್ರೀಹರಿಯು 'ಅಹಂ' ಎನಿಸುವನು) ಶ್ರೀವಿಷ್ಣುವೇ ವೈರಾಜನಿಂದ (ಬ್ರಹ್ಮನಿಂದಲೇ) ಅಜಿತನಾಮಕನಾಗಿ ಅವತರಿಸಿದನು; ಕ್ಷೀರಸಮುದ್ರದಿಂದ (ತಾನೂ ದೇವತೆಗಳೊಂದಿಗೆ ಸೇರಿ ಮಥನಮಾಡಿ) ಶ್ರೀಲಕ್ಷ್ಮೀದೇವಿಯೇ ಮೊದಲಾದ ೧೪ ರತ್ನಗಳನ್ನು (ಶ್ರೇಷ್ಠ ವಸ್ತುಗಳನ್ನು—ಸ್ವಜಾತಿಯಲ್ಲಿ ಉತ್ತಮವಾದವುಗಳನ್ನು) ಉದ್ಭವಿಸುವಂತೆ ಮಾಡಿ, ದೇವಾದಿಗಳಿಗೆ ಅವರವರ ಯೋಗ್ಯತಾನುಗುಣವಾಗಿ ದೊರಕಿಸಿಕೊಟ್ಟು ಶ್ರೀಲಕ್ಷ್ಮೀದೇವಿಯನ್ನು ತಾನು ಸ್ವೀಕರಿಸಿದನು; ಮಥನಕಾಲದಲ್ಲಿ ಮೊದಲು ಉತ್ಪನ್ನವಾದ ಹಾಲಾಹಲವೆಂಬ ಕಾಲಕೂಟ ವಿಷವನ್ನು ರುದ್ರದೇವನು ಪಾನಮಾಡಿದನು;[1] ಈ ಅಜಿತನೇ ಧನ್ವಂತರೀರೂಪದಿಂದ ಅಮೃತವನ್ನು ಸಮುದ್ರದಿಂದ ಹೊರಗೆ ತಂದು, ಅದನ್ನು ತಾವೇ ಅಪಹರಿಸಲುದ್ಯುಕ್ತರಾದ

1. ಹಾಲಾಹಲ ವಿಷವನ್ನು ಶ್ರೀಹರಿಯ ಆಜ್ಞೆಯಂತೆ, ವಾಯುದೇವನು ಪಾನಮಾಡಿ, ಲೋಕವನ್ನು ವ್ಯಾಪಿಸುತ್ತಿದ್ದ ಆ ವಿಷದಿಂದ ಲೋಕವನ್ನು ರಕ್ಷಿಸಿ, ಶ್ರೀಹರಿಯ ಆಜ್ಞೆಯಿಂದಲೇ ರಕ್ಷಕನೆಂಬ ಕೀರ್ತಿಯನ್ನೂ, ನೀಲಕಂಠನೆಂಬ ಪ್ರಸಿದ್ಧಿಯನ್ನೂ, ರುದ್ರದೇವನಿಗೆ ದೊರಕಿಸಲು, ಆ ವಿಷದ ಅಲ್ಪಭಾಗವನ್ನು ಮಾತ್ರ ಅಂಗೈಯಲ್ಲಿ ಮರ್ದನ ಮಾಡಿ, ಅದರ ಉಗ್ರತೆಯನ್ನು ಪರಿಹರಿಸಿ ರುದ್ರನಿಗಿತ್ತನು—ಅದನ್ನು ಪಾನಮಾಡಿದನು, ರುದ್ರದೇವ. ಈ ಚರಿತ್ರೆಯು, 'ವಾಯುರಸ್ಮಾ ಉಪಾಮಂಥತ್ ಪಿನಷ್ಟಿಸ್ಮಾ ಕುನನ್ನಮಾ। ಕೇಶೀ ವಿಷಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ।' ಎಂಬ (ಶ್ರುತಿಯಲ್ಲಿ) ಉಕ್ತವಾಗಿದೆ. ಕೇಶೀ—ಸುಖರೂಪಿಯಾದ ಶ್ರೀ ನಾರಾಯಣನೇ ಈಶನಾಗಿವುಳ್ಳ ವಾಯುದೇವನು; ಕುನನ್ನಮಾ—ಕುತ್ಸಿತರಾದ ಕಲ್ಯಾದಿಗಳನ್ನು ಅಂಧತಮಸ್ಸಿನಲ್ಲಿ ಮುಳುಗಿಸುವುದರಿಂದ ವಾಯುದೇವನು ಕುನನ್ನಮಾ ಎನಿಸುವನು; ರುದ್ರನೂ ಸಹ ಪಾನಮಾಡಿದ ವಿಷವನ್ನು ಮೊದಲು (ಪಾತ್ರೇಣ) ಅಂಗೈಯಿಂದ (ಪಿನಷ್ಟಿ) ಮರ್ದನಮಾಡಿ (ತಿಕ್ಕಿ), (ಉಪಾಮಂಥತ್) ಪಾನಾರ್ಹವನ್ನಾಗಿ ಮಾಡಿಕೊಟ್ಟನು. ಈ ಶ್ರುತ್ಯರ್ಥವನ್ನೇ ಶ್ರೀಮದಾಚಾರ್ಯರು ಮಹಾಭಾರತ ತಾತ್ಪರ್ಯ ನಿರ್ಣಯದ ೧೦ನೇ ಅಧ್ಯಾಯದ ೧೩ ರಿಂದ ೧೭ ರವರೆಗಿನ ಶ್ಲೋಕಗಳಲ್ಲಿ ನಿರೂಪಿಸಿದ್ದಾರೆ.

ರೂಪವನ್ನು ಸ್ವೀಕರಿಸಿ, ಸುಧಾಂ-ಅಮೃತವನ್ನು (ಕಲಶದಲ್ಲಿ), ಬಹಿಃ-(ಸಾಗರದಿಂದ) ಹೊರಗೆ, ಆನೀಯ-ತಂದು, ದೈತ್ಯದಾನವಾನ್-(ಅದನ್ನು ತಾವೇ ಅಪಹರಿಸಲು ಉದ್ಯುಕ್ತರಾದ) ದೈತ್ಯದಾನವರನ್ನು, ವಂಚಿತ್ವಾ-ವಂಚಿಸಿ, ಸ್ತ್ರೀರೂಪೀ-ಸ್ತ್ರೀರೂಪನಾಗಿ (ದೈತ್ಯಾದಿಗಳನ್ನು ಮೋಹಿಸಿದ ಮೋಹಿನೀರೂಪದಿಂದ), ದೇವತಾಃ-ದೇವತೆಗಳನ್ನು (ಅಮೃತಕ್ಕೆ ಅರ್ಹರಾದ ದೇವತೆಗಳಿಗೆ), ಪಾಯಯಾಮಾಸ-ಕುಡಿಸಿದನು (ದೈತ್ಯಾದಿಗಳನ್ನು ಬೇರೆ ಪಂಕ್ತಿಯಲ್ಲಿ ಕೂಡಿಸಿ, ತಾನೇ ದೇವತೆಗಳ ಕೈಯಲ್ಲಿ ಅಮೃತವನ್ನು ಬಡಿಸಿ, ಉಣಿಸಿದನು); ತದಾ ಏವ-ಆಗಲೇ (ಸಮುದ್ರಮಥನ ಕಾಲದಲ್ಲಿಯೇ), ಕೂರ್ಮರೂಪೇಣ-(ಈ ಅಜಿತನೇ) ಕೂರ್ಮರೂಪದಿಂದ, ಮಂದರಂ-(ಮಥನಕ್ಕಾಗಿ ಕಡಗೋಲಿನಂತೆ ಉಪಯೋಗಿಸಲಾಗಿದ್ದ) ಮಂದರ ಪರ್ವತವನ್ನು, ಸಃ-ಆತನೇ, ಪೃಷ್ಠೇ-ಬೆನ್ನಮೇಲೆ, ದಧ್ರೇ-ಧರಿಸಿದನು (ಸಮುದ್ರದಲ್ಲಿ ಮುಳುಗದಂತೆ ತಡೆದು ಮಥನಕಾರ್ಯವು ಸಾಗುವಂತೆ ಅನುಕೂಲಪಡಿಸಿದನು); ಸಃ-ಆ ಅಜಿತನು, ಅನ್ಯಾನಿ-ಇನ್ನೂ ಬೇರೆ, ವಿಚಿತ್ರಾಣಿ ಚರಿತ್ರಾಣಿ ಅಪಿ-ಅದ್ಭುತವಾದ ಕರ್ಮಗಳನ್ನೂ ಚಕಾರ-ಮಾಡಿದನು.

ತಸ್ಯ ಮನ್ವಂತರಸ್ಯಾಂತೇ ಶ್ರಾದ್ಧದೇವೋ ರವೇಃ ಸುತಃ ।
ಕುರ್ವಾಣಃ ಕೃತಮಾಲಾಯಾಂ ಜಲತರ್ಪಣಮಾದರಾತ್ ॥ ೧೩ ॥
ಅಂಜಲೌ ದೃಷ್ಟವಾನ್ ಮತ್ಸ್ಯಂ ದಯಯಾ ಕಲಶೇ ದಧೌ ।
ನಿಶಾಯಾಂ ವವೃಧೇ ಸೋಽಥ ತತ್ರಾಲಂ ನ ಬಭೂವ ಚ ॥ ೧೪ ॥
ಉವಾಚ ಮಾಂ ನಯಾನ್ಯತ್ರ ದಯಾಲೋ ವಿಪುಲೇ ಕ್ವಚಿತ್ ।
ಇತಿ ತದ್ವಾಚಮಾಕರ್ಣ್ಯ ಶ್ರಾದ್ಧದೇವಃ ಸ ವಿಸ್ಮಿತಃ ॥ ೧೫ ॥
ಕೂಪೇ ತಟಾಗೇ ನದ್ಯಾಂ ಚ ಕ್ರಮಾಚ್ಚಿಕ್ಷೇಪ ಸಾಗರೇ ।
ಅಚಿರಾತ್ ವರ್ಧಮಾನಃ ಸ ಸಾಗರಂ ವ್ಯಾಪ್ಯ ತಸ್ಥಿವಾನ್ ॥ ೧೬ ॥

ದೈತ್ಯರನ್ನು, ಮೋಹಿನೀ (ಸ್ತ್ರೀ) ರೂಪದಿಂದ ಮೋಹಿಸಿ, ವಂಚಿಸಿ, ದೇವತೆಗಳಿಗೆ ಉಣಬಡಿಸಿದನು; ಸಮುದ್ರಮಥನ ಕಾಲದಲ್ಲಿ, ಸಮುದ್ರದಲ್ಲಿ ಮುಳುಗುತ್ತಿದ್ದ ಮಂದರಪರ್ವತವನ್ನು (ಕಡಗೋಲಾಗಿ ಉಪಯೋಗಿಸಲಾಗಿದ್ದುದನ್ನು) ಕೂರ್ಮರೂಪವನ್ನು ಧರಿಸಿ, ಬೆನ್ನಲ್ಲಿ ಹೊತ್ತು ನಿಲ್ಲಿಸಿದನು; ಈ ಅಜಿತನು ಇತರ ಅದ್ಭುತ ಕರ್ಮಗಳನ್ನೂ ಮಾಡಿದನು[1] (೯-೧೨). ಅದೇ ಚಾಕ್ಷುಷ ಮನ್ವಂತರದ

1. ಸಮುದ್ರರಾಜನಾದ ವರುಣದೇವನು, ಶ್ರೀ ಲಕ್ಷ್ಮೀ ವಿವಾಹ ಮಹೋತ್ಸವವನ್ನು ನೆರವೇರಿಸಿದನು—ಇದನ್ನು ಶ್ರೀ ವಾದಿರಾಜ ಸ್ವಾಮಿಗಳು 'ಲಕ್ಷ್ಮೀ ಶೋಭಾನ'ವೆಂಬ ತಮ್ಮ ಕನ್ನಡ ಕಾವ್ಯದಲ್ಲಿ ವರ್ಣಿಸಿದ್ದಾರೆ; ಅಜಿತನ ವಿಚಿತ್ರ ಲೀಲೆಗಳನ್ನು ಆ ಕಾವ್ಯದಿಂದ ತಿಳಿಯಬಹುದು.

ತಸ್ಯ-ಆರನೇ (ಚಾಕ್ಷುಷ), ಮನ್ವಂತರಸ್ಯ-ಮನ್ವಂತರದ, ಅಂತೇ-ಕಡೆಯಕಾಲ ದಲ್ಲಿ (ಮುಗಿಯುವ ಮೊದಲು), ರವೇಃ-ಸೂರ್ಯನ, ಸುತಃ-ಮಗನಾದ, ಶ್ರಾದ್ಧ ದೇವಃ-ಶ್ರಾದ್ಧದೇವನು (ಆಗ ಸತ್ಯವ್ರತನೆಂಬ ರಾಜನಾಗಿದ್ದವನು), ಆದರಾತ್-ಭಕ್ತಿಯಿಂದ, ಕೃತಮಾಲಾಯಾಂ-ಕೃತಮಾಲಾನದಿಯಲ್ಲಿ ಜಲತರ್ಪಣಂ-ಜಲತರ್ಪಣ ವನ್ನು ಕುರ್ವಾಣಃ-ಮಾಡುತ್ತಿರುವವನಾಗಿ, ಅಂಜಲೌ-ಅಂಜಲಿಯಲ್ಲಿ (ಕೈಬೊಗಸೆ ಯಲ್ಲಿ), ಮತ್ಸ್ಯಂ-ಒಂದು ಮೀನನ್ನು ದೃಷ್ಟವಾನ್-ಕಂಡನು; ದಯಯಾ-ಕೃಪೆ ಯಿಂದ, ಕಲಶೇ-ತನ್ನ ಕಲಶದಲ್ಲಿ (ತಂಬಿಗೆ ಅಥವಾ ಕೊಡದಲ್ಲಿ), ದಧೌ-ಹಾಕಿಟ್ಟನು; ಅಥ-ಮುಂದೆ, ನಿಶಾಯಾಂ-ಆ ರಾತ್ರಿಯಲ್ಲಿ ಸಃ-ಆ ಮತ್ಸ್ಯವು, ತತ್ರ-ಕಲಶದಲ್ಲಿ ವವೃಧೇ-ಬೆಳೆಯಿತು; ಚ-ಮತ್ತು ಅಲಂ ನ ಬಭೂವ-(ಕಲಶದಲ್ಲಿನ ಸ್ಥಳವು) ಅದಕ್ಕೆ ಸಾಕಾಗಲಿಲ್ಲ; ಮಾಂ-ನನ್ನನ್ನು ಅನ್ಯತ್ರ-ಬೇರೆ, ಕ್ವಚಿತ್-ಎಲ್ಲಿಯಾದರೂ, ವಿಪುಲೇ-ವಿಸ್ತಾರವಾದಲ್ಲಿ (ಜಲದಲ್ಲಿ), ದಯಾಲೋ-ಹೇ ದಯಾಳು!, ನಯ-ತೆಗೆದುಕೊಂಡು ಹೋಗು, ಉವಾಚ-(ಎಂದು) ನುಡಿಯಿತು; ಇತಿ-ಹೀಗೆಂಬ, ತದ್ವಾಚಂ-ಅದರ ಮಾತನ್ನು ಆಕರ್ಣ್ಯ-ಕೇಳಿ, ವಿಸ್ಮಿತಃ-ಆಶ್ಚರ್ಯಗೊಂಡ, ಸಃ ಶ್ರಾದ್ಧದೇವಃ-ಶ್ರಾದ್ಧ ದೇವನು, ಕ್ರಮಾತ್-ಕ್ರಮವಾಗಿ (ಒಂದಾದನಂತರ ಒಂದರಂತೆ), ಕೂಪೇ-ಭಾವಿ ಯಲ್ಲಿ ತಟಾಗೇ-ಕೆರೆಯಲ್ಲಿ ನದ್ಯಾಂ-ನದಿಯಲ್ಲಿಯೂ, ಸಾಗರೇ ಚ-(ಅಂತ್ಯಕ್ಕೆ) ಸಮುದ್ರದಲ್ಲಿಯೂ, ಚಿಕ್ಷೇಪ-ಹಾಕಿದನು; ಸಃ-ಆ ಮತ್ಸ್ಯವು, ಅಚಿರಾತ್-ಬೇಗಬೇಗ (ಅಲ್ಲಲ್ಲಿ ಹಾಕಿದೊಡನೆ), ವರ್ಧಮಾನಃ-ಬೆಳೆಯುವುದಾಗಿ, ಸಾಗರಂ-ಸಮುದ್ರ ವನ್ನೂ ವ್ಯಾಪ್ಯ-ವ್ಯಾಪಿಸಿ, ತಸ್ಥಿವಾನ್-ನಿಂತಿತು.

ತಮುವಾಚ ಶ್ರಾದ್ಧದೇವಃ ಕೋ ಭವಾನದ್ಭುತಾಕೃತಿಃ ।
ನ ಹಿ ವಿಷ್ಣುಂ ವಿನಾ ತ್ವಾದೃಕ್ ಲೋಕೇಽಸ್ಮಿನ್ನುಪಪದ್ಯತೇ ॥ ೧೭ ॥

---

ಕಡೆಯಭಾಗದಲ್ಲಿ ಶ್ರೀವಿಷ್ಣುವು ಮತ್ತೊಂದು ಅದ್ಭುತವಾದ ಮತ್ಸ್ಯನಾಗಿ ಅವತರಿಸಿದನು; ಸೂರ್ಯಪುತ್ರನಾದ ಶ್ರಾದ್ಧದೇವನು, ಸತ್ಯವ್ರತನಾಮಕರಾಜನಾಗಿದ್ದು ಒಂದು ದಿನ ಕೃತಮಾಲಾನದಿಯಲ್ಲಿ ಜಲತರ್ಪಣವನ್ನು ಮಾಡುತ್ತಿದ್ದನು; ಆಗ ಆತನ ಬೊಗಸೆಯಲ್ಲಿ (ತರ್ಪಣಕ್ಕಾಗಿ ನೀರನ್ನೆತ್ತಿಕೊಂಡಾಗ) ಒಂದು ಮೀನು ಬಂತು; ಅದನ್ನು ಕಂಡು ಕೃಪೆಯಿಂದ (ಈ ಸಣ್ಣಮೀನು ದೊಡ್ಡ ಮೀನಿಗೆ ಆಹಾರವಾಗುವುದಲ್ಲಾ ಎಂಬ ದಯೆಯಿಂದ), ಅದನ್ನು ಕಲಶದಲ್ಲಿಟ್ಟು ಮನೆಗೆ ತಂದನು; ಆ ರಾತ್ರಿ ಆ ಮೀನು ಬೆಳೆದು ಕಲಶವನ್ನು ಪೂರಾ ಆಕ್ರಮಿಸಿತು; ಆಶ್ಚರ್ಯವೆಂದರೆ, ಅದು, 'ಹೇ ದಯಾಳೋ! ನನ್ನನ್ನು ಯಾವುದಾದರೂ ವಿಸ್ತಾರವಾದ ಜಲದಲ್ಲಿ ಬಿಡು', ಎಂದು ನುಡಿಯಿತು; ಅದರ ಮಾತನ್ನು ಕೇಳಿ ಆಶ್ಚರ್ಯಗೊಂಡ ಶ್ರಾದ್ಧದೇವನು, ಅದನ್ನು ಕ್ರಮವಾಗಿ ಮೊದಲು ಕೂಪದಲ್ಲಿಯೂ, ನಂತರ, ಕೆರೆ, ನದಿಗಳಲ್ಲಿಯೂ, ಕಡೆಗೆ ಸಮುದ್ರದಲ್ಲಿಯೂ

**ತತೋ ಹರಿಂ ವಿನಿಶ್ಚಿತ್ಯ ತುಷ್ಟಾವ ಸ್ನೇಹಸಂಯುತಃ ।**
**ತುಷ್ಟೋ ಮತ್ಸ್ಯಸ್ತು ತಂ ಪ್ರಾಹ ಸತ್ಯವ್ರತ ಶೃಣುಷ್ವ ಮೇ ॥ ೧೮ ॥**
**ಸಪ್ತಮೇಽಹನಿ ಸಂಪ್ರಾಪ್ತೇ ಸಾಗರೋ ವೃದ್ಧಿಮೇಷ್ಯತಿ ।**
**ಸ ಜಲೇನಾಖಿಲಾಂ ಭೂಮಿಂ ಜನಂ ಸಂಪ್ಲಾವಯಿಷ್ಯತಿ ॥ ೧೯ ॥**
**ತಾವತ್ತ್ವಂ ಮುನಿಸಂಯುಕ್ತಃ ಸಮುಪ್ತಾನೌಷಧೀಗಣಾನ್ ।**
**ಬೀಜಭೂತಾಂಶ್ಚ ಸಂಗೃಹ್ಯ ಪ್ರತೀಕ್ಷಸ್ವ ಮಹಾಮತೇ ॥ ೨೦ ॥**

ಶ್ರಾದ್ಧದೇವಃ-ಶ್ರಾದ್ಧದೇವನು, ತಂ-ಮತ್ಸ್ಯವನ್ನುದ್ದೇಶಿಸಿ, ಅದ್ಭುತಾಕೃತಿಃ-ಈ ಮಹಾಕಾರದ, ಭವಾನ್-ನೀನು, ಕಃ-ಯಾರು? ವಿಷ್ಣುಂ ವಿನಾ-ಶ್ರೀವಿಷ್ಣುವನ್ನು ಬಿಟ್ಟು ಅಸ್ಮಿನ್ ಲೋಕೇ-ಈ ಜಗತ್ತಿನಲ್ಲಿ ತ್ವಾದೃಕ್-ನಿನಗೆ ಸಮಾನನು, ನ ಹಿ ಉಪಪದ್ಯತೇ-ಯಾರೂ ದೊರೆಯುವುದಿಲ್ಲ (ಇತಿ-ಹೀಗೆ), ಉವಾಚ-ನುಡಿದನು; ತತಃ-ನಂತರ,

---

ಹಾಕಿದನು; ಅದು ಎಲ್ಲೆಲ್ಲಿ ಹಾಕಿದರೂ ಬೆಳೆದು ಆ ಜಲಾಶಯವನ್ನು ವ್ಯಾಪಿಸುತ್ತಿತ್ತು; ಕಡೆಗೆ ಸಮುದ್ರವನ್ನೇ ವ್ಯಾಪಿಸಿ, ನಿಂತಿತು—ಆ ಮಾಯಾಮತ್ಸ್ಯವು[1] (೧೩-೧೭). ಆ ಅದ್ಭುತವನ್ನು ಕಂಡ ಶ್ರಾದ್ಧದೇವನು, 'ಈ ಮಹಾಕಾರದ ನೀನು ಯಾರು? ಶ್ರೀವಿಷ್ಣುವನ್ನುಳಿದು ಈ ಜಗತ್ತಿನಲ್ಲಿ ಬೇರೊಬ್ಬನು ನಿನ್ನಂತೆ ಅದ್ಭುತಮಹಿಮನು, ಇರಲಾರನು' ಎಂದು ನುಡಿದು, ಶ್ರೀಹರಿಯೇ ಎಂದು ತನ್ನಲ್ಲಿ ನಿಶ್ಚಯಿಸಿಕೊಂಡು, ಭಕ್ತಿಪೂರ್ವಕ ಸ್ತೋತ್ರಮಾಡಿದನು; ಸ್ತೋತ್ರದಿಂದ ಸಂತುಷ್ಟನಾದ ಮತ್ಸ್ಯರೂಪೀ ಶ್ರೀಹರಿಯು, 'ಹೇ ಸತ್ಯವ್ರತ! ನಾನು ಹೇಳುವುದನ್ನು ಆಲಿಸು; ಇಂದಿನಿಂದ ಏಳನೇ ದಿನ ಸಮುದ್ರವು ಉಕ್ಕಿ ಪ್ರಜೆಗಳಿಂದ ಕೂಡಿದ ಸಮಸ್ತ ಭೂಮಿಯನ್ನು ವ್ಯಾಪಿಸಿ, ಸರ್ವವನ್ನೂ

---

1. ಶ್ರೀಹರಿಯು ಎರಡಾವರ್ತಿ ಮತ್ಸ್ಯರೂಪದಿಂದ ಅವತರಿಸಿರುವನು. ಬ್ರಹ್ಮದೇವನ ದಿನಕಲ್ಪದ ಪ್ರಳಯಕಾಲದಲ್ಲಿ ಹಯಗ್ರೀವನಾಮಕ ಅಸುರನು ವೇದಗಳನ್ನು ಕದ್ದು ಪ್ರಳಯಜಲವನ್ನು ಹೊಕ್ಕನು; ಆಗ ಶ್ರೀಹರಿಯು ಮತ್ಸ್ಯರೂಪವನ್ನು ತಾಳಿ, ಆ ಜಲವನ್ನು ಪ್ರವೇಶಿಸಿ ಅಸುರನನ್ನು ಸಂಹರಿಸಿ, ವೇದಗಳನ್ನು ಬ್ರಹ್ಮನಿಗಿತ್ತನು—ಇದು ಮೊದಲಿನ ಮತ್ಸ್ಯಾವತಾರ; ಇಲ್ಲಿ ವರ್ಣಿತವಾಗುವ ಮತ್ಸ್ಯಾವತಾರವು ಎರಡನೆಯದು. 'ಜ್ಞಾತ್ವಾ ತದ್ದಾನವೇಂದ್ರಸ್ಯ ಹಯಗ್ರೀವಸ್ಯ ಚೇಷ್ಟಿತಂ । ದಧಾರ ಶಫರೀರೂಪಂ ಭಗವಾನ್ ಹರಿರೀಶ್ವರಃ॥' ಮತ್ತು 'ತತ್ರ ರಾಜರ್ಷಿಃ ಕಶ್ಚಿತ್ ನಾಮ್ನಾ ಸತ್ಯವ್ರತೋ ಮಹಾನ್। ಯೋಽಸೌ ಅಸ್ಮಿನ್ ಮಹಾಕಲ್ಪೇ ತನಯಃ ಸ ವಿವಸ್ವತಃ । ಶ್ರಾದ್ಧದೇವ ಇತಿ ಖ್ಯಾತೋ ಮನುತ್ವೇ ಹರಿಣಾರ್ಪಿತಃ॥'' ಇತ್ಯಾದಿ ಭಾಗವತ ಶ್ಲೋಕ ಭಾಗಗಳಲ್ಲಿ ಉಭಯ ಮತ್ಸ್ಯಾವತಾರಗಳೂ ವರ್ಣಿತವಾಗಿವೆ. ಇಲ್ಲಿ 'ಮಹಾಕಲ್ಪೇ' ಎಂಬುದಕ್ಕೆ 'ದಿನಕಲ್ಪ' ವೆಂಬರ್ಥವನ್ನು ತಿಳಿಯಬೇಕು; ಮನು ಕಲ್ಪಕ್ಕಿಂತ ಮಹತ್ತರವಾದುದರಿಂದ ಮಹಾಕಲ್ಪವೆನಿಸುತ್ತದೆ. ಎರಡನೆಯ ಮತ್ಸ್ಯಾವತಾರವು ಇದೇ ಶ್ವೇತವರಾಹಕಲ್ಪದ (ಬ್ರಹ್ಮದೇವನ ದ್ವಿತೀಯ ಪರಾರ್ಧದ ಮೊದಲಿನ ದಿನಕಲ್ಪ) ೧೪ ಮನ್ವಂತರಗಳಲ್ಲಿ ೬ನೇ ಚಾಕ್ಷುಷ ಮನ್ವಂತರದ ಅಂತ್ಯಭಾಗದ ಜಲಪ್ರಳಯ ಕಾಲದಲ್ಲಿ ಸಂಭವಿಸಿರುವುದು.

ಹರಿಂ-ಶ್ರೀಹರಿಯನ್ನಾಗಿಯೇ, ವಿನಿಶ್ಚಿತ್ಯ-ನಿಶ್ಚಯಿಸಿ, ಸ್ನೇಹಸಂಯುತಃ-ಭಕ್ತಿಯಿಂದ, ತುಷ್ಟಾವ-ಸ್ತುತಿಸಿದನು; ಮತ್ಸ್ಯಃ ತು-ಮತ್ಸ್ಯನಾದರೋ, ತುಷ್ಟಃ-(ಸ್ತೋತ್ರದಿಂದ) ತೃಪ್ತನಾಗಿ, ಸತ್ಯವ್ರತ-ಹೇ ಸತ್ಯವ್ರತ!, ಮೇ-ನನ್ನ ಮಾತನ್ನು (ನನ್ನಿಂದ), ಶೃಣುಷ್ವ-ಕೇಳುವನಾಗು, (ಎಂದು), ತಂ-ಶ್ರಾದ್ಧದೇವನನ್ನು ಕುರಿತು, ಪ್ರಾಹ-ಹೇಳಿದನು; (ಏನು ಹೇಳಿದನೆಂದರೆ), ಸಪ್ತಮೇ ಅಹನಿ-ಏಳನೇ ದಿನವು, ಸಂಪ್ರಾಪ್ತೇ-ಬರುತ್ತಿರಲು (ಇಲ್ಲಿಂದ ಏಳನೆಯ ದಿನ), ಸಾಗರಃ-ಸಮುದ್ರವು, ವೃದ್ಧಿಂ-ವೃದ್ಧಿಯನ್ನು ಏಷ್ಯತಿ-ಹೊಂದುತ್ತದೆ (ಸಮುದ್ರವು ಉಕ್ಕಿಬಂದು ಭೂಮಿಯನ್ನೆಲ್ಲಾ ಆಶ್ರಯಿಸುತ್ತದೆ); ಸಃ-ಆ ಸಮುದ್ರವು, ಜಲೇನ-ನೀರಿನಿಂದ, ಅಖಿಲಾಂ-ಸಮಸ್ತವಾದ, ಭೂಮಿಂ-ಭೂಮಿಯನ್ನೂ, ಜನಂ-ಜನತೆಯನ್ನೂ, ಸಂಪ್ಲಾವಯಿಷ್ಯತಿ-ಮುಳುಗಿಸುತ್ತದೆ (ತೊಳೆದುಬಿಡುತ್ತದೆ); ತಾವತ್-ಅಷ್ಟರೊಳಗೆ (ಸಾಗರವು ಉಕ್ಕಿಬರುವುದರೊಳಗೆ), ತ್ವಂ-ನೀನು, ಮುನಿಸಂಯುಕ್ತಃ-ಸಪ್ತರ್ಷಿಗಳಿಂದ ಸಹಿತನಾಗಿ, ಸಮಸ್ತಾನ್-ಸರ್ವ, ಬೀಜಭೂತಾನ್-ಬೀಜರೂಪದಿಂದಿರುವ, ಔಷಧೀಗಣಾನ್-(ಮುಂದೆ—ಪ್ರಲಯಾನಂತರ ಭೂಮಿಯಲ್ಲಿ ಬೆಳೆಯಲ್ಪಡುವ) ಸಸ್ಯಸಮೂಹಗಳನ್ನು, ಸಂಗೃಹ್ಯ-ಸಂಗ್ರಹಿಸಿ, ಮಹಾಮತೇ-ಹೇ ಮಹಾಪ್ರಾಜ್ಞನಾದ ಶ್ರಾದ್ಧದೇವ!, ಪ್ರತೀಕ್ಷಸ್ವ-(ನನ್ನ ಆಗಮನವನ್ನು) ನಿರೀಕ್ಷಿಸುತ್ತಿರು.

ಇತ್ಯಾಜ್ಞಪ್ತಸ್ತಥಾ ಚಕ್ರೇ ತಾವತ್ಸಪ್ತಮವಾಸರೇ ।
ವವೃಧೇ ಜಲಧಿಃ ಪಶ್ಚಾದ್ಗಿರಿಶೃಂಗಂ ಸಮಾರುಹತ್ ॥ ೨೦ ॥
ತಾವತ್ತತ್ರಾಪಿ ಪಾನೀಯಂ ವರ್ಧಮಾನಂ ನಿರೀಕ್ಷ್ಯ ಸಃ ।
ಮೃತ್ಯುನಿಶ್ಚಯಮಾಪನ್ನಸ್ತಾವನ್ನಾವಂ ಧರಾಮಯೀಂ ॥ ೨೧ ॥
ಪ್ಲವಂತೀಂ ನಿಕಟಾಯಾತಾಂ ದೃಷ್ಟ್ವಾ ತಾಮಾರುಹತ್ತದಾ ।
ಸಾ ಚ ನೌಃ ಪ್ಲವಮಾನಾಪಿ ಪರ್ವತಾಕಾರವೀಚಿಭಿಃ ॥ ೨೨ ॥
ದೋಲ್ಯಮಾನಾ ಮಹಾವಾತೈರ್ಮಜ್ಜಂತೀಮವಲೋಕ್ಯ ತೇ ।
ತತೋ ಹಾಹಾಕೃತಾಃ ಸರ್ವೇ ಮುನಯಸ್ತಂ ಬಭಾಷಿರೇ ॥ ೨೪ ॥

---

ನಾಶಮಾಡುತ್ತದೆ; ಆ ಒಳಗೆ, ಹೇ ಸತ್ಯವ್ರತ! ಸಪ್ತರ್ಷಿಗಳನ್ನೂ ಬರಮಾಡಿಕೊಂಡು, ಮುಂದಿನ ಮನ್ವಂತರದಲ್ಲಿ ಬೆಳೆಯಲು ಬೀಜಭೂತವಾದ ಸರ್ವ ಓಷಧಿ (ಸಸ್ಯ)ಗಳನ್ನೂ ಸಂಗ್ರಹಿಸಿಟ್ಟುಕೊಂಡು, ಸಾಗರ ಜಲದಲ್ಲಿ ಬರುವ ನನ್ನನ್ನು ನಿರೀಕ್ಷಿಸುತ್ತಿರು (೧೭-೨೦). ಮತ್ಸ್ಯರೂಪೀ ವಿಷ್ಣುವಿನಿಂದ ಹೀಗೆ ಆಜ್ಞಪ್ತನಾದ ಶ್ರಾದ್ಧದೇವನು, ಹಾಗೆ ಮಾಡಿದನು (ಸಪ್ತರ್ಷಿಗಳನ್ನು ಬರಮಾಡಿಕೊಂಡನು—ಓಷಧಿಗಳನ್ನು ಸಂಗ್ರಹಿಸಿಟ್ಟುಕೊಂಡನು); ಏಳನೇ ದಿನ ಬರಲು, ಸಮುದ್ರವು ಉಕ್ಕಲು ಆರಂಭವಾಯಿತು; ಭೂಮಿಯೆಲ್ಲ ಜಲಮಯವಾಯಿತು; ಆಗ ಶ್ರಾದ್ಧದೇವನು

ಇತಿ-ಹೀಗೆ, ಆಜ್ಞಪ್ತಃ-(ಆ ಮತ್ಸ್ಯನಿಂದ) ಆಜ್ಞಪ್ತನಾಗಿ, ತಥಾ-ಹಾಗೆಯೇ, ಚಕ್ರೇ-(ಶ್ರಾದ್ಧದೇವನು) ಮಾಡಿದನು; ಸಪ್ತಮವಾಸರೇ ತಾವತ್-ಏಳನೇ ದಿನವು ಬರುವುದರಲ್ಲಿ (ಆರಂಭವಾರೊಡನೆಯೇ), ಜಲಧಿಃ-ಸಮುದ್ರವು, ವವೃಧೇ-ವೃದ್ಧಿಯಾಯಿತು; ಪಶ್ಚಾತ್-ಹೀಗೆ ಸಮುದ್ರವು ಉಕ್ಕಿಬರುತ್ತಿರಲು, ಗಿರಿಶೃಂಗಂ-ಪರ್ವತ ಶಿಖರವನ್ನು, ಸಮಾರುಹತ್-ಸಪ್ತಋಷಿಗಳೊಡನೆ (ಶ್ರಾದ್ಧದೇವನು) ಏರಿದನು; ಸಃ-ಆತನು, ತತ್ರಾಪಿ-ಅಲ್ಲಿಯೂ ಸಹ, ಪಾನೀಯಂ ವರ್ಧಮಾನಂ-ನೀರು ಏರುತ್ತಿರುವುದನ್ನೂ, ನಿರೀಕ್ಷ್ಯ-ಕಂಡು, ತಾವತ್-ಅಷ್ಟು ಹೊತ್ತಿಗೆ, ಮೃತ್ಯುನಿಶ್ಚಯಂ-ಮರಣನಿಶ್ಚಯವನ್ನು (ಸಾಯುವುದು ಸತ್ಯವೆಂಬ), ಆಪನ್ನಃ-(ಸ್ಥಿತಿಯನ್ನು) ಹೊಂದಿದನು; ತಾವತ್-ಅಷ್ಟರಲ್ಲಿ ಪ್ಲವಂತೀಂ-ತೇಲುತ್ತ ನಿಕಟಾಯಾತಾಂ-ಸಮೀಪಕ್ಕೆ ಬಂದ, ಧರಾಮಯೀಂ-ಪೃಥಿವ್ಯಾತ್ಮಕವಾದ, (ಆ ರೂಪದಿಂದ ಬಂದ ಧರಾದೇವಿಯನ್ನು), ನಾವಂ-ನೌಕೆ (ದೋಣಿ)ಯನ್ನು ಧೃತ್ವಾ-ಹಿಡಿದು, ತಾಂ-ಅದನ್ನು, ತದಾ-ತತ್ಕಾಲದಲ್ಲಿ, ಆರುಹತ್-ಹತ್ತಿದನು; ಸಾ ಚ ನೌಃ-ಆ ದೋಣಿಯಾದರೋ, ಪ್ಲವಮಾನಾ ಅಪಿ-ತೇಲುತ್ತಲೇ ಇದ್ದರೂ (ಮುಳುಗದಿದ್ದರೂ), ಪರ್ವತಾಕಾರ ವೀಚಿಭಿಃ-ಪರ್ವತಾಕಾರದ ಸಮುದ್ರದ ಅಲೆ (ತೆರೆ)ಗಳಿಂದಲೂ, ಮಹಾವಾತೈಃ-ಬಿರುಗಾಳಿಯಿಂದಲೂ, ದೋಲ್ಯಮಾನಾ-ದೋಲಾಯಮಾನವಾಗಿ (ತೂಗಾಡುತ್ತ—ಮೇಲೆ ಕೆಳಗೆ ಹೊಯ್ದಾಡುತ್ತ), ಮಜ್ಜಂತೀಂ-ಮುಳುಗಲು ಸಿದ್ಧವಾಗಿರುವುದನ್ನು ಅವಲೋಕ್ಯ-ಕಂಡು, ತೇ ಸರ್ವೇ ಮುನಯಃ-ಆ ಋಷಿಗಳೆಲ್ಲರೂ, ತತಃ-ಆಗ, ಹಾಹಾಕೃತಾಃ-ಹಾಹಾಕಾರ ಮಾಡುತ್ತಿದ್ದು ತಂ-ಶ್ರಾದ್ಧದೇವನನ್ನು ಕುರಿತು, ಬಭಾಷಿರೇ-ಮಾತನಾಡಿದರು.

ಯಸ್ತ್ವಯಾರಾಧಿತೋ ದೇವಸ್ತಮುಪಧಾವ ಮಾಚಿರಂ ।
ತತಸ್ತಮಸ್ತುತಾನಂತಂ ಮತ್ಸ್ಯಾಕಾರಂ ಮಹೇಶ್ವರಂ ॥ ೨೫ ॥

---

ಸಪ್ತರ್ಷಿಗಳೊಡನೆ ಪರ್ವತ ಶಿಖರವನ್ನೇರಿ ನಿಂತನು; ಅಲ್ಲಿಯೂ ಸಹ ನೀರು ಏರಿಬರುತ್ತಿರುವುದನ್ನು ಕಂಡು, ಮರಣವು ತಪ್ಪಿದ್ದಲ್ಲವೆಂದು ನಿಶ್ಚಯಿಸಿದರು; ಅಷ್ಟರೊಳಗೆ, ಒಂದು ದೋಣಿಯು, ತೇಲುತ್ತಾ ಸಮೀಪಕ್ಕೆ ಬಂತು; ಪೃಥಿವಿಯೇ ಆ ರೂಪದಿಂದ ಬಂದಳೆಂದು ಭಾವಿಸಿ, ಅದನ್ನು ಹಿಡಿದು ಎಲ್ಲರೂ ಮೇಲೆಹತ್ತಿ ಕುಳಿತರು; ದೋಣಿಯು ತೇಲುತ್ತಿದ್ದರೂ ಪರ್ವತಾಕಾರದ ಅಲೆಗಳಿಂದಲೂ, ಬಿರುಗಾಳಿಯಿಂದಲೂ ಬಲವಾಗಿ ತೂಗಾಡುತ್ತ ಮುಳುಗಲು ಸಿದ್ಧವಾಗಿರುವುದನ್ನು ಕಂಡು, ಎಲ್ಲರೂ ಹಾಹಾಕಾರಮಾಡಿದರು; ಆಗ ಆ ಋಷಿಗಳು ಶ್ರಾದ್ಧದೇವನಿಗೆ ಹೇಳಿದರು (೨೧-೨೪). 'ನಿನ್ನ ಆರಾಧ್ಯ ದೇವತೆಯನ್ನು ಸ್ತೋತ್ರಮಾಡಿ ಶೀಘ್ರವಾಗಿ ಶರಣು ಹೊಂದು'; ಶ್ರಾದ್ಧದೇವನಾದರೋ ಮತ್ಸ್ಯರೂಪದಿಂದ ಹಿಂದೆ ದರ್ಶನವಿತ್ತು ಈ

ಪ್ರಾದುರ್ಭೂತೋ ಮಹಾಶೃಂಗೋ ಮಹಾಮತ್ಸ್ಯಸ್ತದೈವ ಹಿ ।
ಪ್ರೋವಾಚ ಸ ತಮಾಶ್ವಾಸ್ಯ ವತ್ಸ ಮಾಭೈರಿತಿ ಬ್ರುವನ್ ॥ ೨೬ ॥
ಅನೇನ ಶೃಂಗಸಂಸ್ಥೇನ ಶೇಷಸರ್ಪೇಣ ಯೋಜಯ ।
ಇಮಾಂ ನಾವಂ ತತಃ ಸ್ವಸ್ಥಚೇತಾ ಆಸ್ಸ್ವರ್ಷಿಭಿಃ ಸಹ ॥ ೨೭ ॥

ಋಷಿಗಳು ಹೇಳುತ್ತಾರೆ:—

'ಯಃ-ಯಾವ, ದೇವಃ-ದೇವನು, ತ್ವಯಾ-ನಿನ್ನಿಂದ, ಆರಾಧಿತಃ-ಪೂಜಿಸಲ್ಪಟ್ಟವನೋ, ತಂ-ಆತನನ್ನು; ಮಾಚಿರಂ-ವಿಲಂಬಮಾಡದೇ (ಶೀಘ್ರವಾಗಿ), ಉಪಧಾವ-ಸ್ತುತಿಸಿ ಶರಣುಹೊಂದು'; ತತಃ-ಒಡನೆಯೇ, ಅನಂತಂ-ನಿತ್ಯನೂ (ವ್ಯಾಪ್ತನೂ), ಮಹೇಶ್ವರಂ-ಸರ್ವನಿಯಾಮಕನೂ (ಮಹಾಸ್ವಾಮಿಯೂ), ಮತ್ಸ್ಯಾಕಾರಂ-ಮತ್ಸ್ಯರೂಪಿಯೂ, ತಂ-(ಆದ) ಆ ಶ್ರೀವಿಷ್ಣುವನ್ನೇ, ಅಸ್ತುತ-ಸ್ತೋತ್ರ ಮಾಡಿದನು; ತದೈವ-ಆ ಕ್ಷಣದಲ್ಲಿಯೇ, ಮಹಾಶೃಂಗಃ-ಮಹಾಶೃಂಗವುಳ್ಳ, ಮಹಾಮತ್ಸ್ಯಃ-(ಆ—ಏಳು ದಿನಗಳ ಹಿಂದೆ ದರ್ಶನವಿತ್ತ) ಮಹಾಮತ್ಸ್ಯನು, ಪ್ರಾದುರ್ಭೂತಃ-ಪ್ರತ್ಯಕ್ಷನಾಗಿ, ತಂ-ಶ್ರಾದ್ಧದೇವನನ್ನು ಆಶ್ವಾಸ್ಯ-ರಕ್ಷಣೆಯ ಆಶ್ವಾಸನವನ್ನಿತ್ತು ಪ್ರೋವಾಚ-ಮಾತನಾಡಿದನು; ವತ್ಸ-ಹೇ ಪ್ರಿಯಸತ್ಯವ್ರತ!, ಮಾ ಭೈಃ- ಹೆದರಬೇಡ, ಇತಿ ಬ್ರುವನ್-ಎಂದು ಹೇಳಿ, ಅನೇನ-ಈ, ಶೃಂಗಸಂಸ್ಥೇನ-ಶೃಂಗ(ನನ್ನ ಕೋಡಿನಲ್ಲಿ) ದಲ್ಲಿರುವ, ಶೇಷಸರ್ಪೇಣ-ಶೇಷದೇವನಾದ ಈ ಸರ್ಪದಿಂದ, ಇಮಾಂ-ಈ, ನಾವಂ-ದೋಣಿಯನ್ನು ಯೋಜಯ-ಸೇರಿಸಿ ಬಿಗಿ, (ಕಟ್ಟು); ತತಃ-ನಂತರ, ಋಷಿಭಿಃ ಸಹ-ಋಷಿಗಳೊಂದಿಗೆ, ಸ್ವಸ್ಥಚೇತಾಃ-ಸ್ವಸ್ಥಚಿತ್ತನಾಗಿ (ಯೋಚನೆಯನ್ನು ಬಿಟ್ಟು), ಆಸ್ಸ್ವ-ಕೂಡು (ಇರು).

ತಥಾ ಕೃತ್ವಾ ಸುಖಂ ಲಬ್ಧ್ವಾ ಸ್ವಸ್ಥಚೇತಾ ಹರಿಪ್ರಿಯಃ ।
ಪಪ್ರಚ್ಛ ವಿವಿಧಾನ್ ಪ್ರಶ್ನಾನ್ ಹರಿಃ ಪರ್ಯಹರಚ್ಚ ತಾನ್ ॥ ೨೮ ॥

ತಥಾ ಕೃತ್ವಾ-ಹಾಗೆಮಾಡಿ (ಸರ್ಪದಿಂದ ದೋಣಿಯನ್ನು ಮತ್ಸ್ಯನ ಶೃಂಗಕ್ಕೆ

---

ಸಂದರ್ಭದಲ್ಲಿ ತನ್ನನ್ನು ನಿರೀಕ್ಷಿಸಲು ಆಜ್ಞಾಪಿಸಿದ್ದ ಶ್ರೀವಿಷ್ಣುವನ್ನೇ ಸ್ತೋತ್ರಮಾಡಿದನು; ಒಡನೆಯೇ ಆ ಮಹಾಮತ್ಸ್ಯನು, ಅಲ್ಲಿಯೇ (ಜಲದಲ್ಲಿಯೇ) ಪ್ರತ್ಯಕ್ಷನಾದನು—ಆ ಮತ್ಸ್ಯವು ಮಹಾಶೃಂಗ (ಕೋಡು)ವುಳ್ಳದ್ದಾಗಿತ್ತು 'ಹೇ ವತ್ಸ! ಶ್ರಾದ್ಧದೇವ! ಭಯಪಡಬೇಡ' ಎಂದು ಹೇಳಿ ರಕ್ಷಣೆಯ ಆಶ್ವಾಸನವನ್ನಿತ್ತನು; ಮತ್ತು 'ಈ ನನ್ನ ಶೃಂಗದಲ್ಲಿರುವ ಸರ್ಪದಿಂದ (ಶೇಷನಿಂದ), ಈ ದೋಣಿಯನ್ನು ಕಟ್ಟಿ (ಬಿಗಿದು) ನನಗೊಪ್ಪಿಸು—ಋಷಿಗಳೊಡನೆ ಸ್ವಸ್ಥಚಿತ್ತನಾಗಿ (ದೋಣಿಯಲ್ಲಿ) ಕುಳಿತುಕೋ' ಎಂದು ಹೇಳಿದನು (೨೫-೨೭). ಹಾಗೆ, ಸರ್ಪದಿಂದ ದೋಣಿಯನ್ನು ಮತ್ಸ್ಯನ ಶೃಂಗಕ್ಕೆ ಕಟ್ಟಿ ಶ್ರೀಹರಿಪ್ರಿಯನಾದ ಶ್ರಾದ್ಧದೇವನು, ಸ್ವಸ್ಥಚಿತ್ತನಾಗಿ, ಸುಖದಿಂದ ಕುಳಿತು,

ಬಿಗಿದು), ಸ್ವಸ್ಥಚೇತಾಃ-ಸ್ವಸ್ಥಚಿತ್ತನಾಗಿ, ಸುಖಂ ಲಬ್ಧ್ವಾ-ಸುಖವನ್ನು ಹೊಂದಿ, ಹರಿಪ್ರಿಯಃ-ಹರಿಪ್ರಿಯನಾದ ಶ್ರಾದ್ಧದೇವನು, ವಿವಿಧಾನ್ ಪ್ರಶ್ನಾನ್-ನಾನಾ ಪ್ರಶ್ನೆಗಳನ್ನು ಪಪ್ರಚ್ಛ-(ಮತ್ಸ್ಯರೂಪಿಯನ್ನು) ಕೇಳಿದನು; ಹರಿಃ-ಮಾಯಾಮತ್ಸ್ಯನಾದ ಶ್ರೀಹರಿಯು, ತಾನ್-ಆ ಪ್ರಶ್ನೆಗಳನ್ನು ಪರಿಹರತ್ ಚ-ಉತ್ತರಗಳನ್ನು ಹೇಳಿ ಪರಿಹರಿಸಿದನು.

ಪಪ್ರಚ್ಛಾನೇನ ರೂಪೇಣ ಪುರಾ ಕಿಂ ಕೃತವಾನಿತಿ ।
ಹರಿಃ ಪ್ರಾಹ ಪುರಾಕಲ್ಪೇ ಪ್ರಲಯೇ ಸಮುಪಸ್ಥಿತೇ ॥ ೨೯ ॥
ಹಯಗ್ರೀವೋ ಮಹಾದೈತ್ಯೋ ಪ್ರಾಹರದ್ವೇದಮಬ್ಜಜಾತ್ ।
ಆರಬ್ಧೇ ಶ್ವೇತವಾರಾಹಕಲ್ಪೇಽಸ್ಮಿನ್ ಬ್ರಹ್ಮಣಾರ್ಥಿತಃ ॥
ರೂಪೇಣಾನೇನ ತಂ ಹತ್ವಾ ವೇದಾನಾಪೃತವಾಂಸ್ತತಃ ॥ ೩೦ ॥

ಅನೇನ-ಈ, ರೂಪೇಣ-(ಮತ್ಸ್ಯ) ರೂಪದಿಂದ, ಪುರಾ-ಈ ಮೊದಲು, ಕಿಂ ಕೃತವಾನ್-ಯಾವ ಕಾರ್ಯವನ್ನು ಸಾಧಿಸಿರುವಿ?, ಇತಿ-ಎಂದು, ಪಪ್ರಚ್ಛ-(ಶ್ರಾದ್ಧದೇವನು) ಕೇಳಿದನು; ಹರಿಃ-ಮತ್ಸ್ಯರೂಪೀ ಶ್ರೀಹರಿಯು, ಪ್ರಾಹ-ಹೇಳಿದನು; (ಏನೆಂದರೆ), ಪುರಾಕಲ್ಪೇ-ಹಿಂದಿನ ಕಲ್ಪದ (ಪಾದ್ಮಕಲ್ಪದ), ಪ್ರಲಯೇ-ಪ್ರಲಯ ಕಾಲವು, ಸಮುಪಸ್ಥಿತೇ-ಪ್ರಾಪ್ತವಾಗಲು, ಮಹಾದೈತ್ಯಃ-ಮಹಾದೈತ್ಯನಾದ, ಹಯಗ್ರೀವಃ-ಹಯಗ್ರೀವನು, ಅಬ್ಜಜಾತ್-ಕಮಲೋದ್ಭವನಿಂದ (ನಾಭಿಕಮಲದಿಂದ ಜನಿಸಿದ ಬ್ರಹ್ಮದೇವನಿಂದ), ವೇದಂ-ವೇದವನ್ನು, ಪ್ರಾಹರಾತ್-ಅಪಹರಿಸಿದನು; ಅಸ್ಮಿನ್-ಈ, ಶ್ವೇತವಾರಾಹ ಕಲ್ಪೇ-ಶ್ವೇತ ವಾರಾಹಕಲ್ಪವು ಆರಬ್ಧೇ (ಸತಿ) ಪ್ರಾರಂಭವಾಗುತ್ತಿರಲು (ಆರಂಭವಾಗುವ ಮೊದಲು), ಬ್ರಹ್ಮಣಾ-ಬ್ರಹ್ಮನಿಂದ, ಅರ್ಥಿತಃ-ಪ್ರಾರ್ಥಿಸಲ್ಪಟ್ಟು, ಅನೇನ-ಈ, ರೂಪೇಣ-ರೂಪದಿಂದ, ತಂ-ಆ

---

ಮಾಯಾಮತ್ಸ್ಯನಾದ ಶ್ರೀಹರಿಯನ್ನು ನಾನಾ ಪ್ರಶ್ನೆಗಳನ್ನು ಕೇಳಿದನು; ಶ್ರೀಹರಿಯು ಅವೆಲ್ಲಕ್ಕೂ ಸಮಂಜಸವಾದ ಉತ್ತರಗಳನ್ನು ಹೇಳಿ ಶ್ರಾದ್ಧದೇವನನ್ನು ಸಂತೋಷಗೊಳಿಸಿದನು (೨೮). ಈ ರೂಪದಿಂದ ಈ ಮೊದಲು ಯಾವ ಕಾರ್ಯವನ್ನು ಸಾಧಿಸಿರುವಿ, ಎಂದು ಶ್ರಾದ್ಧದೇವನು ಕೇಳಲು, ಶ್ರೀಹರಿಯು ಹೇಳಿದನು:—ಬ್ರಹ್ಮದೇವನ ಹಿಂದಿನ ದಿನವು (ಪಾದ್ಮಕಲ್ಪವು) ಕಳೆದು ಪ್ರಲಯಕಾಲವು ಪ್ರಾಪ್ತವಾಗಲು, ಬ್ರಹ್ಮದೇವನ ಮುಖದಿಂದ ಹೊರಡುತ್ತಿದ್ದ ವೇದವನ್ನು ಹಯಗ್ರೀವನೆಂಬ ಮಹಾದೈತ್ಯನು ಅಪಹರಿಸಿದನು; ಈ ಶ್ವೇತ ವರಾಹನಾಮಕ ದಿನಕಲ್ಪವು ಆರಂಭವಾಗುವ ಮೊದಲು, ಬ್ರಹ್ಮದೇವನಿಂದ ಪ್ರಾರ್ಥಿತನಾಗಿ, ಈ ರೂಪದಿಂದ, ಪ್ರಲಯಜಲವನ್ನು ಪ್ರವೇಶಿಸಿ, ಹಯಗ್ರೀವಾಸುರನನ್ನು ಸಂಹರಿಸಿ, ವೇದಗಳನ್ನು ಬ್ರಹ್ಮನಿಗೆ ತಂದಿತ್ತೆನು. (೨೯-೩೦). ಓಗೆನ್ನಲು, ಸತ್ಯವ್ರತನು, ಕಲ್ಪಾಂತ್ಯದಲ್ಲಿ ಸಂಭವಿಸುವ ಪ್ರಲಯದಲ್ಲಿ ಸಮಸ್ತ

ಹಯಗ್ರೀವಾಸುರನನ್ನು ಹತ್ವಾ-ಕೊಂದು, ತತಃ-ಅವನಿಂದ, ವೇದಾನ್-ವೇದಗಳನ್ನು ಆಹೃತವಾನ್-(ನಾನು) ಕಸಿದು ತಂದೆನು. (ಕಿತ್ತು ತಂದಿತ್ತೆನು).

ಸತ್ಯವ್ರತ ಉವಾಚ—

ಕಲ್ಪಾಂತಪ್ರಲಯೇ ಸರ್ವೇ ಪ್ರಲೀನಾ ಜೀವರಾಶಯಃ ।
ಮಹಾದೈತ್ಯಃ ಕಥಂ ಜೀವನ್ ಸಂಸ್ಥಿತಸ್ತದ್ವದಸ್ವ ಮೇ ॥ ೩೧ ॥

ಸತ್ಯವ್ರತನು ಮಾತನಾಡುತ್ತಾನೆ:—

ಕಲ್ಪಾಂತಪ್ರಲಯೇ-ಕಲ್ಪಮುಗಿದನಂತರ ಸಂಭವಿಸುವ ಪ್ರಲಯದಲ್ಲಿ, ಸರ್ವೇ-ಎಲ್ಲ ಜೀವರಾಶಯಃ-ಜೀವರಾಶಿಗಳೂ, ಪ್ರಲೀನಾಃ-ನಾಶಹೊಂದಿರುತ್ತವೆ; (ಹೀಗಿರಲು), ಮಹಾದೈತ್ಯಃ-ಈ ಮಹಾದೈತ್ಯನು (ಹಯಗ್ರೀವಾಸುರನು), ಕಥಂ-ಹೇಗೆ, ಜೀವನ್ ಸಂಸ್ಥಿತಃ-ಬದುಕಿಕೊಂಡಿದ್ದನು; ತತ್-ಅದನ್ನು ಮೇ-ನನಗೆ, ವದಸ್ವ-ಹೇಳು.

ಮತ್ಸ್ಯ ಉವಾಚ—

ಪುರಾ ದೇವಾಂತಕೋ ನಾಮ ದೈತ್ಯಃ ಪರಮದಾರುಣಃ ।
ತಪಸಾ ತೋಷಯದ್ದೇವಂ ಬ್ರಹ್ಮಾಣಂ ಸರ್ವತೋ ವರಂ ॥ ೩೨ ॥
ಸರ್ವದೇವವಿನಾಶಾಯ ತಥಾ ಕಲ್ಪಾಂತಜೀವನಂ ।
ವವ್ರೇ ವರದ್ವಯಂ ತಸ್ಮಾದೇವಂ ಚಕ್ರೇ ಸ ದುರ್ಜನಃ ॥ ೩೩ ॥
ದೇವಾನಾಂ ಜೀವನಂ ವೇದಾಸ್ತನ್ನಾಶೇ ದೇವಸಂಕ್ಷಯಃ ।
ದೇವನಾಶೇ ವೃತ್ತಿನಾಶಾತ್ಸರ್ವನಾಶೋ ಭವೇತ್ತದಾ ॥ ೩೪ ॥
ಸ ಏವ ಪ್ರಲಯೇ ಜಾತೋ ಜೀವತಶ್ಚ ಮಹಾಸುರಃ ।
ಹಯಾಕಾರಮುಖತ್ವೇನ ಹಯಗ್ರೀವಃ ಸ ಕಥ್ಯತೇ ॥ ೩೫ ॥

ಪುರಾ-ಪೂರ್ವದಲ್ಲಿ (ಹಿಂದೆ), ಪರಮದಾರುಣಃ-ಮಹಾಉಗ್ರನಾದ, ದೇವಾಂತಕಃ-ದೇವಾಂತಕ, ನಾಮದೈತ್ಯಃ-ಎಂಬ ಹೆಸರಿನ ದೈತ್ಯನು, ತಪಸಾ-ತಪಸ್ಸಿನಿಂದ, ಸರ್ವತಃ ವರಂ-ಎಲ್ಲರಗಿಂತ ಶ್ರೇಷ್ಠನಾದ, ಬ್ರಹ್ಮಾಣಂ ದೇವಂ-ಬ್ರಹ್ಮದೇವನನ್ನು

---

ಜೀವರಾಶಿಗಳೂ ನಷ್ಟಹೊಂದಿರುವಷ್ಟೆ! ಆಗ ಈ ಹಯಗ್ರೀವನೆಂಬ ಮಹಾದೈತ್ಯನು, ಹೇಗೆ ಬದುಕಿದ್ದನೆಂಬುದನ್ನು ಹೇಳೆಂದು, ಮತ್ಸ್ಯನನ್ನು ಕೇಳಿದನು (೩೧). ಪೂರ್ವದಲ್ಲಿ ದೇವಾಂತಕನೆಂಬ ಮಹಾ ಉಗ್ರನಾದ ದೈತ್ಯನಿದ್ದನು;[1] ಈತನು, ದೈತ್ಯಸಹಜವಾದ ಲೋಕಕ್ಷಯಕಾರಕ ಬುದ್ಧಿಯಿಂದ ಪ್ರೇರಿತನಾಗಿ ಬ್ರಹ್ಮದೇವನನ್ನು ಕುರಿತು ತಪಸ್ಸುಮಾಡಿ, ಆ ದೇವೋತ್ತಮನನ್ನು ತನ್ನ ಘೋರವಾದ ತಪಸ್ಸಿನಿಂದ

1. ರಾಮ ರಾವಣರ ಯುದ್ಧದಲ್ಲಿ ದೇವಾಂತಕರಾದ ಕಪಿನಾಯಕರನ್ನು ಎದುರಿಸಿ, ಭಯಂಕರ ಯುದ್ಧವನ್ನು ಮಾಡಿದ ಪರಾಕ್ರಮಿಯು—ಈ ದೇವಾಂತಕನು.

ಅತೋಷಯತ್-ಸಂತುಷ್ಟಿಗೊಳಿಸಿದನು; ಸರ್ವದೇವ ವಿನಾಶಾಯ-ಸಕಲ ದೇವತೆಗಳ ನಾಶವನ್ನೂ, ತಥಾ-ಮತ್ತು ಕಲ್ಪಾಂತಜೀವನಂ-(ತನಗೆ) ಕಲ್ಪಾಂತದಲ್ಲಿ ಸಹ, ಬದುಕುವಿಕೆಯನ್ನೂ ವರದ್ವಯಂ-(ಹೀಗೆ) ಎರಡು ವರಗಳನ್ನು ವವ್ರೇ- ವರಿಸಿದನು (ವರವನ್ನು ಕೇಳೆಂದಾಗ ಕೇಳಿಕೊಂಡನು); ತಸ್ಮಾತ್-ಆದ್ದರಿಂದ, ಸಃ ದುರ್ಜನಃ-ಆ ದುಷ್ಟನು, ಏವಂ ಚಕ್ರೆ-ಹೀಗೆ ಮಾಡಿದನು; (ಏಕೆಂದರೆ), ದೇವಾನಾಂ- ದೇವತೆಗಳಿಗೆ, ವೇದಾಃ-ವೇದಗಳು, ಜೀವನಂ-ಜೀವನವು (ಪ್ರಾಣ ವಿದ್ದಂತೆ); ತನ್ನಾಶೇ-ವೇದಗಳು ನಷ್ಟವಾದರೆ, ದೇವಸಂಕ್ಷಯಃ-ದೇವತೆಗಳ ನಾಶವೇ ಸರಿ (ದೇವತೆಗಳಾರು ಉಳಿಯುವುದಿಲ್ಲ); ದೇವನಾಶೇ-ದೇವತೆಗಳ ನಾಶವಾದರೆ, (ವೃತ್ತಿನಾಶಃ-ಇತರ ಪ್ರಾಣಗಳಿಗೆ ಜೀವನೋಪಾಯವೇ ಇಲ್ಲದಂತಾಗುತ್ತದೆ); ವೃತ್ತಿನಾಶಾತ್-ವೃತ್ತಿನಾಶದಿಂದ, ಸರ್ವನಾಶಃ-ಸರ್ವನಾಶವು, ತದಾ-ಆಗ, ಭವೇತ್- ಉಂಟಾಗುತ್ತದೆ; (ಸರ್ವನಾಶವು—ಲೋಕಕ್ಷಯವು ದುರ್ಜನರ ಧ್ಯೇಯವಾದ್ದರಿಂದ), ಸಃ ಏವ-ಆ (ದೇವಾಂತಕನೇ) ಮಹಾಸುರಃ-ಮಹಾದೈತ್ಯನೇ, ಜೀವತಃ-(ಕಲ್ಪಾಂತ ಪ್ರಲಯವಾದರೂ) ಬದುಕಿದ್ದು, ಪ್ರಲಯೇ-ಪ್ರಲಯಕಾಲದಲ್ಲಿ, ಹಯಾಕಾರ ಮುಖತ್ವೇನ-ಕುದುರೆ ಆಕಾರದ ಮುಖವುಳ್ಳವನಾಗಿ, ಜಾತಃ-ಆದನು; ಸಃ-ಅವನು, ಹಯಗ್ರೀವಃ-ಹಯಗ್ರೀವನೆಂದು, ಕಥ್ಯತೇ-ಹೇಳಲ್ಪಡುತ್ತಾನೆ.

---

ಪ್ರಸನ್ನೀಕರಿಸಿಕೊಂಡನು; ಬ್ರಹ್ಮದೇವನು ವರವನ್ನು ಕೇಳೆನ್ನಲು, ಕಲ್ಪಪ್ರಲಯವಾದರೂ, ತಾನು ಜೀವಿಸಿರಬೇಕೆಂದೂ, ಸಮಸ್ತ ದೇವತೆಗಳ ವಿನಾಶವನ್ನೂ ಸಾಧಿಸಲು ಸಮರ್ಥನಾಗಬೇಕೆಂದೂ, (ಹೀಗೆ) ಎರಡು ವರಗಳನ್ನು ಕೇಳಿ ಪಡೆದುಕೊಂಡನು; ಈ ವರಗಳ ಬಲದಿಂದ, ಹಿಂದೆ ಹೇಳಿದಂತೆ ಪ್ರಲಯಕಾಲದಲ್ಲಿ ವೇದಗಳನ್ನು ಅಪಹರಿಸಿದನು; ಏಕೆಂದರೆ, ಆ ದುಷ್ಟನ ತರ್ಕವು ಹೀಗಿತ್ತು:—'ವೇದಗಳೇ ದೇವತೆಗಳ ಜೀವಿತವು (ಜೀವಿಸಿರುವುದಕ್ಕೆ ಮುಖ್ಯಾಶ್ರಯವು); ವೇದಗಳು ನಷ್ಟವಾದರೆ, ದೇವತೆಗಳು ನಷ್ಟರಾದಂತೆಯೇ ಸರಿ;[1] ಅವರಿಗೆ ಉಪಜೀವನ (ವೃತ್ತಿ) ಇಲ್ಲದಂತಾಗುತ್ತದೆ; ದೇವತೆಗಳ ವಿನಾಶವಾದರೆ ಅವರನ್ನು ಉಪಜೀವಿಸಿರುವ, ಎಲ್ಲಾ ಪ್ರಾಣಿಗಳ ವೃತ್ತಿಯೂ ನಷ್ಟವಾಗುತ್ತದೆ—ಆಗ ಸರ್ವನಾಶವೇ ಸಿದ್ಧಿಸುತ್ತದೆ'; ಆ ಮಹಾದೈತ್ಯನು, ವರದಾನ ಮಾಡಿದ ದೇವಶ್ರೇಷ್ಠನಿಂದಲೇ ವೇದಗಳನ್ನು ಅಪಹರಿಸಿದರೆ ಬೇಗ

1. 'ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ। ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ॥' (ಗೀತಾ) ದೇವತೆಗಳು ಮತ್ತು ಮನುಷ್ಯಾದಿ ಜೀವರು ಪರಸ್ಪರವಾಗಿ ಜೀವನಹೇತುಗಳಾಗಿರುವರು; ವೇದಮೂಲಗಳಾದ ಯಜ್ಞಗಳನ್ನು ಪ್ರಜೆಗಳು ಆಚರಿಸಿದರೆ, ಅಲ್ಲಿ ಅರ್ಪಿಸಲಾಗುವ ಹವಿಸ್ಸು ಮೊದಲಾದವುಗಳಿಂದ ದೇವತೆಗಳು ಜೀವಿಸುತ್ತಾರೆ; ದೇವತೆಗಳು (ಇಂದ್ರ, ಪರ್ಜನ್ಯಾದಿಗಳು) ಮಳೆಗರೆದರೆ ಬೆಳೆಯುವ ಸಸ್ಯಾದಿಗಳಿಂದ ಪ್ರಾಣಿಗಳು ಬದುಕುತ್ತವೆ. ಈ ಜಗಚ್ಚಕ್ರವನ್ನು ಯಾರೂ ಅತಿಕ್ರಮಿಸಿ ಜೀವಿಸಲಾರರೆಂದು ಹೇಳಲಾಗಿದೆ. ಅದನ್ನು (ಈ ಶಾಸ್ತ್ರವಿಧಿಯನ್ನು ಅತಿಕ್ರಮಿಸುವುದೇ ದುರ್ಜನರ—ತಮೋಯೋಗ್ಯರ ಸ್ವಭಾವವು.)

**ಶ್ರುತ್ವೇತ್ಥಂ ವಚನಂ ಪಶ್ಚಾತ್ ಸೋಽನ್ಯಂ ಪ್ರಶ್ನಮಪೃಚ್ಛತ ।**
**ಮಾನವೇಽಸ್ಮಿನ್ ಲಯೇಽತೀತೇ ಸಮುದ್ರಃ ಸ್ವಚ್ಛತಾಂ ಯಯೌ ॥ ೩೬ ॥**

ಇತ್ಥಂ-ಹೀಗೆಂಬ, ವಚನಂ-(ಮತ್ಸ್ಯರೂಪಿಯ) ತನ್ನ ಪ್ರಶ್ನೆಯ ಉತ್ತರವನ್ನು ಶ್ರುತ್ವಾ-ಕೇಳಿ, ಸಃ-ಶ್ರಾದ್ಧದೇವನು, ಅನ್ಯಂ-ಬೇರೊಂದು, ಪ್ರಶ್ನಂ-ಪ್ರಶ್ನೆಯನ್ನು ಅಪೃಚ್ಛತ-ಕೇಳಿದನು; (ಈ ಅನ್ಯಪ್ರಶ್ನೆಯು ಮುಂದಿನ ಮನ್ವಂತರದ ವಿಷಯಕ ವಾದುದು—ಅಥವಾ ಬಹುಪ್ರಶ್ನೆಗಳನ್ನು ಧರ್ಮಜ್ಞಾನ ವಿಷಯಕವಾಗಿ ಮಾಡಿ ತನ್ನ ಸಂಶಯಗಳನ್ನು ಪರಿಹರಿಸಿಕೊಂಡನೆಂಬ ಪ್ರಶ್ನಮಾಲಿಕೆಯಲ್ಲಿ ಅಡಕವಾಗಿರಬಹುದು); (ಮುಂದಿನ ಮನ್ವಂತರ ಚರಿತ್ರೆಯನ್ನು ನಿರೂಪಿಸಲು, ಸೂತನು ಪ್ರವೃತ್ತನಾಗಿ ಹೇಳುತ್ತಾನೆ); ಅಸ್ಮಿನ್-ಈ (ಚಾಕ್ಷುಷ ಮನ್ವಂತರದ), ಮಾನವೇಲಯೇ-ಮನ್ವಂತರಲಯವು (ಮನುಕಲ್ಪದ ಕೊನೆಯಲ್ಲಿ ಸಂಭವಿಸುವ ಲಯಕಾಲವು), ಅತೀತೇ-ಮುಗಿಯುತ್ತಿರಲು, ಸಮುದ್ರಃ-ಸಮುದ್ರವು, ಸ್ವಚ್ಛತಾಂ-ಸ್ವಚ್ಛವಾದುದು (ಶಾಂತತೆಯನ್ನು), ಯಯೌ-ಹೊಂದಿತು.

**ಮತ್ಸ್ಯಸ್ತಿರೋದಧೇ ಪಶ್ಚಾದ್ಭೂಮೌ ಸೃಷ್ಟಿರಭೂತ್ತತಃ ।**
**ಏಷ ಏವ ಮನುರ್ಜಾತಃ ಸಪ್ತಮೋ ಹಿ ರವೇಃ ಸುತಃ ॥ ೩೭ ॥**

ಪಶ್ಚಾತ್-ನಂತರ (ಶ್ರಾದ್ಧದೇವನ ಪ್ರಶ್ನೆಗಳನ್ನೆಲ್ಲ ಉತ್ತರಿಸಿದನಂತರ), ಮತ್ಸ್ಯಃ-ಮತ್ಸ್ಯರೂಪೀ ಶ್ರೀಹರಿಯು, ತಿರೋದಧೇ-ಅಂತರ್ಧಾನವನ್ನು ಹೊಂದಿದನು (ಅದೃಶ್ಯನಾದನು); (ಪಶ್ಚಾತ್-ಮುಂದೆ, ಸಮುದ್ರವು ಶಾಂತವಾಗಿ ಹಿಂದೆಸರಿದು

---

ಕಾರ್ಯಸಿದ್ಧಿಯು ದೊರೆಯುವುದೆಂದು ಭಾವಿಸಿ, ದಿನಕಲ್ಪವು ಮುಗಿದೊಡನೆ ಪ್ರಲಯವಾಗಲು, ಅನ್ಯರಾರೂ ಇಲ್ಲದ ಸಮಯವನ್ನು ಸಾಧಿಸಿ, ಪರಬಲದಿಂದ ಜೀವಂತನಾಗಿರ್ದ್ದಾತನು, ಅಶ್ವಮುಖವುಳ್ಳವನಾಗಿ ಆದನು;[1] ಅವನೇ ಹಯಗ್ರೀವಾಸುರನೆಂಬುವನು (೩೨-೩೫). ಮತ್ಸ್ಯರೂಪಿಯ ಈ ಉತ್ತರವನ್ನು ಕೇಳಿ, ಶ್ರಾದ್ಧದೇವನು, ಮುಂದಿನ ಪ್ರಶ್ನೆಯನ್ನು ಕೇಳಿದನು; ಹೀಗೆ ಮತ್ಸ್ಯರೂಪೀ ಶ್ರೀಹರಿಯಿಂದ, ಸಮಸ್ತ ಧರ್ಮಜ್ಞಾನ ರಹಸ್ಯಗಳನ್ನು ಅರಿತುಕೊಂಡನು; ನಂತರ ಈ ಚಾಕ್ಷುಷ ಮನ್ವಂತರದ ಪ್ರಲಯಕಾಲವು ಕೊನೆಗೊಂಡಿತು—ಸಮುದ್ರವು ಶಾಂತವಾಯಿತು (೩೬). ಶ್ರಾದ್ಧದೇವನ ಪ್ರಶ್ನೆಗಳನ್ನು ಉತ್ತರಿಸಿ, ಮತ್ಸ್ಯರೂಪೀ ಶ್ರೀವಿಷ್ಣುವು ಅದೃಶ್ಯನಾದನು; ಭೂಮಿಯಲ್ಲಿ ಪ್ರಜಾಸೃಷ್ಟಿಗೆ ಎಡೆಯಾಯಿತು— ಸೃಷ್ಟಿಯೂ ಮುಂದರಿಯಿತು; ಈ ಶ್ರಾದ್ಧದೇವನೇ (ಸೂರ್ಯಪುತ್ರನೇ), ಮುಂದಿನ ಏಳನೆಯ ಮನ್ವಂತರದ ಅಧಿಪತಿಯು (ಮನುವು) ಆದನು; ವಿವಸ್ವಾನ್‌ನಾಮಕ ಸೂರ್ಯನ ಪುತ್ರನಾದ ಶ್ರಾದ್ಧದೇವನು, ವೈವಸ್ವತನು; ಆತನ ಈ ಮನ್ವಂತರವು 'ವೈವಸ್ವತ ಮನ್ವಂತರವು

1. ದೈತ್ಯರು ಕಾಮರೂಪಿಗಳು—ಇಚ್ಛಿತ ರೂಪವನ್ನು ಧರಿಸಲು ಶಕ್ತರು.

ತನ್ನ ಸ್ಥಾನವನ್ನು ಹೊಂದಲು), ಭೂಮೌ-ಭೂಮಿಯಲ್ಲಿ ತತಃ-ಭೂಪ್ರದೇಶವು ಮೊದಲಿನಂತೆ (ರೂಪಗೊಳ್ಳಲು) ಪ್ರಾಣಿಗಳ ಉತ್ಪತ್ತಿಗೆ ಎಡೆಯಾದ್ದರಿಂದ, ಸೃಷ್ಟಿ:-ಸೃಷ್ಟಿಯು, ಅಭೂತ್-ಉಂಟಾಯಿತು; ರವೇಃ ಸುತಃ-ಸೂರ್ಯಪುತ್ರನಾದ, ಏಷಃ ಏವ-ಈ ಶ್ರಾದ್ಧದೇವನೇ, ಸಪ್ತಮೋ ಮನುಃ-ಏಳನೇ ಮನುವು, ಜಾತಃ-ಆದನು; ಹಿ-ಇದು ಶ್ರುತಿಸಿದ್ಧವು.

ಇಕ್ಷ್ವಾಕುಮುಖ್ಯಾಸ್ತಸ್ಯಾಸುಃ ಪುತ್ರಾ ದಶ ಮಹಾಬಲಾಃ ।
ಇಂದ್ರಃ ಪುರಂದರಸ್ತತ್ರ ದೇವಾ ರುದ್ರಾದಯಸ್ತಥಾ ॥ ೩೮ ॥
ಕಶ್ಯಪಾದ್ಯಾಶ್ಚ ಋಷಯೋ ವಿಷ್ಣುಭಕ್ತಿಪರಾಯಣಾಃ ।
ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಯೋಽಭವತ್ತುರಾ ॥ ೩೯ ॥
ಯದರ್ಥಂ ನಾರಸಿಂಹಾಖ್ಯೋ ಭೂತ್ವಾ ಹಂತುಂ ಮಹಾಸುರಂ ।
ಹತವಾಂಸ್ತಸ್ಯ ನಪ್ತಾಽಭೂದ್ಬಲಿರ್ನಾಮ ಮಹಾಸುರಃ ॥ ೪೦ ॥

---

(೩೮). ಶ್ರಾದ್ಧದೇವನಿಗೆ ಇಕ್ಷ್ವಾಕು ಮೊದಲಾದ, ಪರಾಕ್ರಮಿಗಳಾದ ಪುತ್ರರು ಜನಿಸಿದರು;[1] ಆತನ ಮನ್ವಂತರದಲ್ಲಿ ಪುರಂದರನು ದೇವೇಂದ್ರನಾದನು; ರುದ್ರಾದಿಗಳೇ ಪದಾಧಿರೂಢ ದೇವತೆಗಳಾದರು; ವಿಷ್ಣುಭಕ್ತರಾದ ಕಶ್ಯಪಾದಿಗಳು

1. ಇಕ್ಷ್ವಾಕು, ನಭಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಷ, ಪೃಷಧ್ರ ಮತ್ತು ವಸುಮಂತರೆಂಬರು ಶ್ರಾದ್ಧದೇವನ ಹತ್ತು ಪುತ್ರರು. ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು, ಮರುತ್ತರು, ಅಶ್ವಿನೀದೇವತೆಗಳು ಮತ್ತು ಋಭುಗಳು, ದೇವತೆಗಳು; ಇವರಿಗೆಲ್ಲ ಶ್ರೇಷ್ಠನು ಪುರಂದರನಾಮಕ ಇಂದ್ರನು. ೧೨ ಆದಿತ್ಯರಲ್ಲಿ ಶ್ರೀವಿಷ್ಣುವೂ ಇದ್ದಾನೆ; ೧೧ ರುದ್ರರಲ್ಲಿ ಪ್ರಧಾನರುದ್ರದೇವನೂ (ಪಾರ್ವತೀಪತಿಯೂ) ಇದ್ದಾನೆ; ಆದ್ದರಿಂದ ಇವರ ವಿನಹ ಅನ್ಯರು, ಈ ದೇವತಾ ವರ್ಗದಲ್ಲಿ ಸೇರಿರುವರೆಂದೂ ಅವರಿಗೆ ಇಂದ್ರನೇ ಜ್ಯೇಷ್ಠನೆಂದೂ ತಿಳಿಯಬೇಕು. ಕಶ್ಯಪ, ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ಭರದ್ವಾಜರೆಂಬುವರು ಸಪ್ತರ್ಷಿಗಳು.

'ಇಕ್ಷ್ವಾಕುರ್ನಭಗಶ್ಚೈವ ಧೃಷ್ಟಃ ಶರ್ಯಾತಿರೇವ ಚ ।
ನರಿಷ್ಯಂತೋಽಥ ನಾಭಾಗಃ ಸಪ್ತಮೋ ದಿಷ್ಟ ಉಚ್ಯತೇ ॥
ಕರೂಷಶ್ಚ ಪೃಷಧ್ರಶ್ಚ ದಶಮೋ ವಸುಮಾನ್ ಸ್ಮೃತಃ ।
ಮನುರ್ವೈವಸ್ವತಸ್ಯೈತೇ ದಶ ಪುತ್ರಾಃ ಪರಂತಪ ॥
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।
ಅಶ್ವಿನಾವೃಭವೋ ರಾಜನ್ನಿಂದ್ರಸ್ತೇಷಾಂ ಪುರಂದರಃ ॥
ಕಶ್ಯಪೋಽತ್ರಿರ್ವಸಿಷ್ಠಶ್ಚ ವಿಶ್ವಾಮಿತ್ರೋಽಥ ಗೌತಮಃ ।
ಜಮದಗ್ನಿರ್ಭರದ್ವಾಜ ಇತಿ ಸಪ್ತರ್ಷಯಃ ಸ್ಮೃತಾಃ ॥" ಈ ಭಾಗವತ ಶ್ಲೋಕಗಳಿಂದ ಉಕ್ತ ವಿವರಗಳನ್ನು ತಿಳಿಯಬಹುದು.

ತಸ್ಯ-ಶ್ರಾದ್ಧದೇವನಿಗೆ (ವೈವಸ್ವತಮನುವಿಗೆ), ಮಹಾಬಲಾಃ-ಮಹಾ ಪರಾಕ್ರಮಿಗಳಾದ, ದಶ-ಹತ್ತುಜನ, ಇಕ್ಷ್ವಾಕುಮುಖ್ಯಾಃ-ಇಕ್ಷ್ವಾಕುವೇ ಮೊದಲಾದ, ಪುತ್ರಾಃ-ಮಕ್ಕಳು, ಅಸುಃ-ಆದರು; ತತ್ರ-ಆ ಮನ್ವಂತರದಲ್ಲಿ ಪುರಂದರಃ-ಪುರಂದರನು, ಇಂದ್ರಃ-ಇಂದ್ರನು (ಇಂದ್ರಪದವಿಯಲ್ಲಿರುವನು); ತಥಾ-ಹಾಗೂ, ರುದ್ರಾದಯಃ-ರುದ್ರ ಮೊದಲಾದವರು, ದೇವಾಃ-(ಪದಾಧಿರೂಢ) ದೇವತೆಗಳಾದರು; ವಿಷ್ಣುಭಕ್ತಿ ಪ ರಾ ಯ ಣಾಃ-ವಿಷ್ಣುಭಕ್ತರಾದ, ಕಶ್ಯಪಾದಯಃ-ಕಶ್ಯಪರೇ ಮೊದಲಾದವರು, ಋಷಯಃ-(ಸಪ್ತ) ಋಷಿಗಳು (ಆದರು); ಪುರಾ-ಹಿಂದೆ, ಹಿರಣ್ಯಕಶಿಪೋಃ-ಹಿರಣ್ಯಕಶಿಪುವಿನ, ಪುತ್ರಃ-ಮಗನಾದ, ಪ್ರಹ್ಲಾದಃ-ಪ್ರಹ್ಲಾದನೆಂಬುವನು, ಯಃ ಅಭವತ್-ಯಾರು ಆದನೋ, (ಮತ್ತು) ಯದರ್ಥಂ-ಯಾವ(ಪ್ರಹ್ಲಾದ)ನಿಗೋಸ್ಕರ, ನಾರಸಿಂಹಾಖ್ಯಃ-(ಶ್ರೀವಿಷ್ಣುವು) ನರಸಿಂಹನೆಂಬ ನಾಮವುಳ್ಳವನಾಗಿ, ಮಹಾಸುರಂ-ಮಹಾಸುರನನ್ನು (ಹಿರಣ್ಯಕನನ್ನು), ಹಂತುಂ-ಸಂಹರಿಸಲಿಕ್ಕೆ, ಭೂತ್ವಾ-ಅವತರಿಸಿ, ಹತವಾನ್-ಸಂಹರಿಸಿದನೋ, ತಸ್ಯ-ಆ ಪ್ರಹ್ಲಾದನ, ನಪ್ತಾ-ಮೊಮ್ಮಗನು (ಪೌತ್ರನು), ಬಲಿಃ ನಾಮ-ಬಲಿಯೆಂಬ, ಮಹಾಸುರಃ-ಮಹಾದೈತ್ಯನು, ಅಭೂತ್-ಆದನು.

**ಸ ಶುಕ್ರವರಸಂವೃದ್ಧೋ ಜಿತ್ವಾ ಶಕ್ರಂ ಸುರೈರ್ವೃತಂ ।**
**ಐಂದ್ರಂ ಪದಮಶಾದ್ದೇವಾ ನಿಲಿಲ್ಯುಸ್ತತ್ರ ತತ್ರ ಹ ॥ ೪೦ ॥**

ಸಃ-ಆ ಬಲಿಯು, ಶುಕ್ರವರಸಂವೃದ್ಧಃ-ಶುಕ್ರಾಚಾರ್ಯರ ವರದಿಂದ ವೃದ್ಧನಾಗಿ (ಹೆಚ್ಚು—ಬಲಾಧಿಕನಾಗಿ), ಸುರೈಃ-ದೇವತೆಗಳಿಂದ, ವೃತಂ-ಕೂಡಿದ (ಪರಿವಾರಿಸಲ್ಪಟ್ಟ), ಶಕ್ರಂ-ಇಂದ್ರನನ್ನು (ಸ್ವರ್ಗಾಧಿಪತಿಯನ್ನು), ಜಿತ್ವಾ-ಗೆದ್ದು ಐಂದ್ರಂ-ಇಂದ್ರನ, ಪದಂ-ಪದವಿಯನ್ನು ಅಶಾತ್-ಆಳಿದನು; ದೇವಾಃ-ದೇವತೆಗಳು, ತತ್ರತತ್ರ-ಅಲ್ಲಲ್ಲಿ(ಇದ್ದಲ್ಲಿಯೇ), ನಿಲಿಲ್ಯುಃ-ಅಡಗಿದರು; ಹ-ಆಶ್ಚರ್ಯವು.

**ದೇವದೌರ್ಭಾಗ್ಯಮಾಲೋಕ್ಯ ದೇವಮಾತಾದಿತಿಸ್ತದಾ ।**
**ನಾನಾವ್ರತೈಶ್ಚ ತಪಸಾ ಮಾಮತರ್ಪಯದಂಜಸಾ ॥ ೪೧ ॥**

---

ಸಪ್ತರ್ಷಿಗಳಾದರು; ಹಿಂದೆ ಹಿರಣ್ಯಕಶಿಪುವೆಂಬ ಮಹಾಸುರನ ಮಗನಾದ ವಿಷ್ಣುಭಕ್ತ ಪ್ರಹ್ಲಾದನಿಗಾಗಿ, ಶ್ರೀ ವಿಷ್ಣುವೇ ನರಸಿಂಹನಾಗಿ ಅವತರಿಸಿ, ಹಿರಣ್ಯಕನನ್ನು ಸಂಹರಿಸಿದನಷ್ಟೆ; ಆತನ ಪೌತ್ರನೇ, ಮಹಾದೈತ್ಯನಾದ ಬಲಿಯು (೩೮-೪೦). ಈ ಬಲಿಯು, ದೈತ್ಯಕುಲಗುರುಗಳಾದ ಶುಕ್ರಾಚಾರ್ಯರ ವರದಿಂದ ಅಭಿವೃದ್ಧನಾಗಿ, ದೇವತೆಗಳಿಂದ ಪರಿವೃತನಾದ ಸ್ವರ್ಗಾಧಿಪತಿ ಇಂದ್ರನನ್ನು ಪರಾಜಯಗೊಳಿಸಿ, ಇಂದ್ರಪದವಿಯನ್ನಾಕ್ರಮಿಸಿದನು; ಆಗ ದೇವತೆಗಳೆಲ್ಲರೂ ಅಲ್ಲಲ್ಲಿ ಅಡಗಿಕೊಂಡರು; ಆಶ್ಚರ್ಯವು! (೪೦). ದೇವತೆಗಳು ಹೀಗೆ ರಾಜ್ಯಭ್ರಷ್ಟರಾಗುತ್ತಿರಲು ಅವರ

ತತೋಽಹಂ ವಾಮನೋ ಭೂತ್ವಾ ತದ್ಗರ್ಭೇ ಕಶ್ಯಪಾನ್ಮುನೇಃ ।
ಪ್ರಹ್ಲಾದಪ್ರಾರ್ಥನಾಂ ಸ್ಮೃತ್ವಾ ಯಾಚಿತ್ವಾ ದೀಕ್ಷಿತಾದ್ಬಲೇಃ ॥ ೪೩ ॥
ಪದತ್ರಯಮಿತಂ ಸ್ಥಾನಂ ತಲ್ಲಬ್ಧ್ವಾಹಂ ತ್ರಿವಿಕ್ರಮಃ ।
ಭೂತ್ವಾ ಭುವಂ ಪದೈಕೇನ ಸ್ವರ್ಗಲೋಕಂ ಪದೈಕತಃ ॥ ೪೪ ॥
ಗೃಹೀತ್ವೈಕಪದಾರ್ಥಂ ತಂ ಬದ್ಧವಾಂಸ್ತು ಬಲಿಂ ಪುನಃ ।
ತತಃ ಸ್ವಸ್ಪಷ್ಟಂ ದತ್ವಾ ಸ ಪ್ರತಿಜ್ಞಾಂ ತೀರ್ಣವಾನ್ನಿಜಾಂ ॥ ೪೫ ॥

ತದಾ- ಆಗ (ಹಾಗೆ ಇಂದ್ರಾದಿಗಳು ರಾಜ್ಯಭ್ರಷ್ಟರಾಗಲು), ದೇವ ದೌರ್ಭಾಗ್ಯಂ- ದೇವತೆಗಳ ದೌರ್ಭಾಗ್ಯವನ್ನು (ಪುಣ್ಯಹೀನತೆಯನ್ನು), ಆಲೋಕ್ಯ-ನೋಡಿ, ನಾನಾವ್ರತೈಃ- ವಿವಿಧ ವ್ರತಗಳಿಂದಲೂ, ಚ-ಮತ್ತು ತಪಸಾ-ತಪಸ್ಸಿನಿಂದಲೂ (ಶ್ರೇಷ್ಠವಾದ ಪಯೋವ್ರತಾಚರಣೆಯಿಂದಲೂ), ದೇವಮಾತಾ ಅದಿತಿಃ- ದೇವಮಾತೆಯಾದ ಅದಿತೀದೇವಿಯು, ಮಾಂ-ನನ್ನನ್ನು, ಅಂಜಸಾ-ಪೂರ್ಣವಾಗಿ, ಅತರ್ಪಯತ್- ತೃಪ್ತಿಗೊಳಿಸಿದಳು (ಮತ್ಸ್ಯರೂಪೀ ಶ್ರೀವಿಷ್ಣುವೇ ಮುಂದಿನ ಮನ್ವಂತರದಲ್ಲಿ ಭಾವ್ಯವಾದ

---

ದೌರ್ಭಾಗ್ಯವನ್ನು ಕಂಡು, ದೇವಮಾತೆಯಾದ ಅದಿತೀದೇವಿಯು, ವಿವಿಧ ವ್ರತಗಳಿಂದಲೂ, ಪಯೋವ್ರತರೂಪದ ಶ್ರೇಷ್ಠತಪಸ್ಸಿನಿಂದಲೂ, (ಸ್ವಪುತ್ರರಿಗೆ ರಾಜ್ಯೈಶ್ವರ್ಯಾದಿಗಳ ಲಾಭಕ್ಕಾಗಿ, ನನ್ನನ್ನು ಆರಾಧಿಸಿ ಸಂತುಷ್ಟಿಗೊಳಿಸಿದಳು; ಆಗ ನಾನು, ಕಶ್ಯಪ ಋಷಿಗಳಿಂದ ಆಕೆಯ ಗರ್ಭವನ್ನು ಪ್ರವೇಶಿಸಿ,[1] ವಾಮನರೂಪದಿಂದ

---

1. ಮೊದಲು ಆಹಾರಾದಿದ್ವಾರಾ ತಂದೆಯ ದೇಹವನ್ನು ಪ್ರವೇಶಿಸಿ, ನಂತರ ರೇತಸ್ಸಿನ ಮೂಲಕ ಮಾತೃಗರ್ಭವನ್ನು ಸೇರಿ, ಶುಕ್ಲಶೋಣಿತಗಳಿಂದಾದ ಪ್ರಾಕೃತ ದೇಹದಲ್ಲಿದ್ದು, ಪ್ರಸವಕಾಲದಲ್ಲಿ ಶಿಶುರೂಪದಿಂದ, ಮಾತೃಗರ್ಭದಿಂದ ಹೊರಬೀಳುವುದು ಸಂಸಾರಿಜೀವರ ಸಾಮಾನ್ಯ ಉತ್ಪತ್ತಿ ಪ್ರಕಾರವಾಗಿದೆ; ಈ ವಿಧ ಜನ್ಮವು ಶ್ರೀಹರಿಗೆ ಎಂದೂ ಇಲ್ಲ. ತಮೋಯೋಗ್ಯರಿಗೆ, ತನ್ನ ಜನ್ಮ ಕರ್ಮಗಳ ವಿಷಯಕ ಮಿಥ್ಯಾಜ್ಞಾನವನ್ನುಂಟುಮಾಡಲಿಕ್ಕಾಗಿ, ಉತ್ಕ್ರಮದಿಂದ ಹುಟ್ಟಿದವನಂತೆ ತೋರಲು, ಶ್ರೀಹರಿಯು, ಮೊದಲು ತಂದೆಯ ಮನಸ್ಸನ್ನು ಪ್ರವೇಶಿಸಿ, ನಂತರ ತನ್ನ ಆ ಅಂಶವನ್ನು ತಾಯಿಯಲ್ಲಿ ಸ್ಥಾಪಿಸುತ್ತಾನೆ—ಅಜ್ಞಾನಿಗಳಿಗೆ ಆಕೆಯು ಗರ್ಭಿಣಿಯಂತೆ ಕಾಣುತ್ತಾಳೆ—ವಿಶೇಷ ಕಾಂತಿಯುಕ್ತಳಾಗಿರುತ್ತಾಳೆ.

'ಭಗವಾನಪಿ ವಿಶ್ವಾತ್ಮಾ ಭಕ್ತಾನಾಮಭಯಂಕರಃ । ಆವಿವೇಶಾಂಶಭಾಗೇನ ಮನ ಆನಕದುಂದುಭೇಃ । ಸ ಬಿಭ್ರತ್ಪೌರುಷಂ ಧಾಮ ಭ್ರಾಜಮಾನೋ ಯಥಾ ರವಿಃ । ತತೋ ಜಗನ್ಮಂಗಲಮಚ್ಯುತಾಂಶಂ ಸಮಾಹಿತಂ ಶೂರಸುತೇನ ದೇವೀ । ದಧಾರ ಸರ್ವಾತ್ಮಕಮಾತ್ಮಭೂತಂ ಕಾಷ್ಠಾ ಯಥಾ ನಂದಕರಂ ಮನಸ್ತಃ । ಸಾ ದೇವಕೀ ಸರ್ವಜಗನ್ನಿವಾಸಭೂತಾ ನಿತರಾಂ ವಿರೇಜೇ ॥' ಇತ್ಯಾದಿ (ಭಾಗವತ) ಶ್ಲೋಕಗಳು, ಕೃಷ್ಣಾವತಾರದ ಪ್ರಕಾರವನ್ನು ನಿರೂಪಿಸುತ್ತವೆ: ಈ ಜನ್ಮ ನಿರೂಪಣೆಯು, ರಾಮ, ವಾಮನಾದಿ ಅವತಾರಗಳಿಗೂ ಅನ್ವಯಿಸುತ್ತದೆಂದು ತಿಳಿಯಬೇಕು.

ಚರಿತ್ರೆಗಳನ್ನು ನಿಶ್ಚಿತ ಭವಿಷ್ಯವನ್ನು ನಡೆದಿರುವಂತೆ ನಿರೂಪಿಸುತ್ತಿದ್ದಾನೆಂದಾಗಲಿ; ಶ್ರೀವಿಷ್ಣುವು ಬ್ರಹ್ಮನಿಗೆ ಹೇಳುತ್ತಿರುವನೆಂದಾಗಲಿ ತಿಳಿಯಬೇಕು); ತತಃ-(ಸಂತುಷ್ಟನಾದನಂತರ), ಕಶ್ಯಪಾತ್ ಮುನೇಃ-ಕಶ್ಯಪಮುನಿಗಳಿಂದ, ತದ್ಗರ್ಭೇ-ಅದಿತೀದೇವಿಯ ಗರ್ಭದಲ್ಲಿ ಅಹಂ-ನಾನೇ, ಭೂತ್ವಾ-ಹುಟ್ಟಿ (ಅವತರಿಸಿ), ಪ್ರಹ್ಲಾದಪ್ರಾರ್ಥನಾಂ-(ಮೊಮ್ಮಗನ ರಕ್ಷಣೆಗಾಗಿ) ಪ್ರಹ್ಲಾದನು ಸಲ್ಲಿಸಿದ ಪ್ರಾರ್ಥನೆಯನ್ನು ಸ್ಮೃತ್ವಾ-ನೆನೆದು, ದೀಕ್ಷಿತಾತ್-ಯಜ್ಞದೀಕ್ಷಿತನಾಗಿದ್ದ ಬಲೇಃ-ಬಲಿಯಿಂದ, ಯಾಚಿತ್ವಾ-ಬೇಡಿ, ಪದತ್ರಯಮಿತಂ-ಮೂರು ಪಾದಗಳ ಅಳತೆಯ, ಸ್ಥಾನಂ-ಭೂಮಿಯನ್ನು (ಪ್ರದೇಶವನ್ನು) (ಹೊಂದಿ), ತಲ್ಲಬ್ಧ್ವಾ-ಅದನ್ನು ಅವನಿಂದ ಪಡೆದನಂತರ, ಅಹಂ-ನಾನು ತ್ರಿವಿಕ್ರಮಃ-ತ್ರಿವಿಕ್ರಮನು, ಭೂತ್ವಾ-ಆಗಿ (ಆ ರೂಪವನ್ನು ತಾಳಿ), ಏಕೇನ ಪದಾ-ಒಂದೇ ಪಾದದಿಂದ, ಭುವಂ-ಭೂಮಿಯನ್ನೂ ಏಕತಃ ಪದಾ-ಒಂದೇ ಪಾದದಿಂದ (ಮತ್ತೊಂದು ಪಾದದಿಂದ), ಸ್ವರ್ಗಲೋಕಂ-

---

ಅವತರಿಸಿದೆನು; ಬಲಿಯ ಅನುಗ್ರಹಕ್ಕಾಗಿ ಪ್ರಹ್ಲಾದನು ಮಾಡಿಕೊಂಡ ಪ್ರಾರ್ಥನೆಯನ್ನು ಸ್ಮರಿಸಿ, (ಅವತರಿಸಿದೊಡನೆ) ಯಜ್ಞದೀಕ್ಷಿತನಾಗಿ ಕುಳಿತಿದ್ದ ಬಲಿಯ ಸಮೀಪಕ್ಕೆ ಧಾವಿಸಿ, ಆತನಿಂದ, ಮೂರುಪಾದ ಭೂಮಿಯನ್ನು ದಾನವಾಗಿ ಪಡೆದೆನು; ಬಲಿಯು ದಾನಪ್ರತಿಜ್ಞೆಯನ್ನು ಮಾಡಿದೊಡನೆ, ತ್ರಿವಿಕ್ರಮರೂಪವನ್ನು ತಾಳಿ, ಒಂದು ಪಾದದಿಂದ ಭೂಲೋಕವನ್ನೂ, ಮತ್ತೊಂದು ಪಾದದಿಂದ, ಸ್ವರ್ಗಲೋಕವನ್ನೂ ಅಳೆದು ತೆಗೆದುಕೊಂಡೆನು; ಮೂರನೇ ಪಾದಕ್ಕೆ ಬಲಿಯು ಸ್ವಾಮ್ಯಕ್ಕೊಳಪಟ್ಟ ಸ್ಥಾನವಿಲ್ಲದ್ದರಿಂದ, ಆತನನ್ನು ವರುಣಪಾಶದಿಂದ ಬಂಧಿಸಿದೆನು; ಬಲಿಯಾದರೋ ತನ್ನ ಬೆನ್ನನ್ನೇ ಕೊಟ್ಟು (ಬೆನ್ನು ಬಗ್ಗಿಸಿ, ತಲೆಯಮೇಲೆ ಪಾದವನ್ನಿಟ್ಟು ಮೂರು ಪಾದವನ್ನು ಮುಟ್ಟಿಸಿದೆನೆಂಬ ಮನಃಶಾಂತಿಯನ್ನು ಅನುಗ್ರಹಿಸೆಂದು ಪ್ರಾರ್ಥಿಸಿ), ನನ್ನ ಅನುಗ್ರಹದಿಂದ, ಪ್ರತಿಜ್ಞೆಯನ್ನು ಪಾಲಿಸಿ ಕೀರ್ತಿಶಾಲಿಯಾದನು[1] (೪೩-೪೫). ಹೀಗೆ ಬಲಿರಾಜನ

1. ಬಲಿಯು ತ್ರಿಲೋಕಾಧಿಪತಿಯಾಗಿದ್ದನು; ಒಂದು ಪಾದದಿಂದ ಭೂಲೋಕವನ್ನೂ (ಉಪಲಕ್ಷಣದಿಂದ ಅಂತರಿಕ್ಷಲೋಕವನ್ನೂ), ಎರಡನೆ ಪಾದಕ್ಕಾಗಿ ಸ್ವರ್ಗಲೋಕವನ್ನೂ ಅಳೆದು ತೆಗೆದುಕೊಂಡನೆಂಬುದು ಆಶ್ಚರ್ಯವೇ ಸರಿ. ಶ್ರೀವಿಷ್ಣುವಿನ ಒಂದು ಪಾದದ ಅನಂತಾಂಶದಲ್ಲಿ ಒಂದಂಶಕ್ಕೆ ಈಡಲ್ಲ—ಇದೀ ವಿಶ್ವವು; ('ಏಕಾಂಶೇನ ಸ್ಥಿತೋ ಜಗತ್' ಎಂದು ಗೀತೆಯಲ್ಲಿ ತಾನೇ ಹೇಳಿಕೊಂಡಿರುವನು); ಹೀಗೆ ಅಳತೆ ಮಾಡಿದ್ದರಿಂದ ಶ್ರೀಹರಿಯು (ವಾಮನನು), ಬಲಿಯನ್ನು ಅನುಗ್ರಹಿಸಲು ಪಾದವನ್ನು ಸಂಕೋಚ ಮಾಡಿಕೊಂಡನೆಂಬುದು, ಸೂಚಿತವಾಗುತ್ತದೆ; ಇಷ್ಟುಮಾತ್ರವಲ್ಲ ಮೂರನೇ ಪಾದಕ್ಕಾಗಿ ಬಲಿಯು ತನ್ನ ತಲೆಯನ್ನೊಡ್ಡಲು, ಅಲ್ಲಿ ತನ್ನ ಪಾದವನ್ನಿಟ್ಟು, ಭಕ್ತಾಗ್ರಣಿಯಾದ ಬಲಿಯನ್ನು ಸತ್ಯಪ್ರತಿಜ್ಞನೆಂಬ ಕೀರ್ತಿಭಾಗಿಯನ್ನಾಗಿ ಮಾಡಿದನು—ಇದರಿಂದಲೂ ಅನುಗ್ರಹಿಸಬೇಕೆಂಬ ಶ್ರೀಹರಿ ಸಂಕಲ್ಪವು ಸ್ಪಷ್ಟವಾಗುತ್ತದೆ. ಅನ್ಯಥಾ ಮೂರು ಪಾದಗಳಲ್ಲಿ—ಒಂದು ಪಾದಪ್ರದೇಶವನ್ನಾದರೂ, ಶ್ರೀಹರಿಗೆ ದಾನವಾಗಿ ಕೊಡಲು ಶಕ್ತನಾಗುವನೇ!!

ಸ್ವರ್ಗಲೋಕವನ್ನೂ, ಗೃಹೀತ್ವಾ-ಆಳೆದು ತೆಗೆದುಕೊಂಡು, ಪುನಃ-ಮತ್ತೆ, ಏಕ ಪದಾರ್ಥಂ-ಉಳಿದ ಮೂರನೆಯ ಪಾದಕ್ಕಾಗಿ, (ಬಲಿಗೆ ಸೇರಿದ ಯಾವ ಪ್ರದೇಶವೂ ಮಿಗಲಿಲ್ಲವಾಗಿ), ತಂ ಬಲಿಂ-ಆ ಬಲಿರಾಜನನ್ನು ಬದ್ಧವಾನ್-(ವರುಣ ಪಾಶಗಳಿಂದ) ಬಂಧಿಸಿದನು; ತತಃ-ಹೀಗಾದನಂತರ, ಸಃ-(ನನ್ನ ಭಕ್ತನಾದ) ಬಲಿಯು, ಸ್ವಪುಷ್ಠಂ-ತನ್ನ ಬೆನ್ನನ್ನು (ಮೂರನೆಯ ಪಾದಕ್ಕಾಗಿ), ದತ್ವಾ-ಕೊಟ್ಟು, ನಿಜಾಂ-ತನ್ನ ಪ್ರತಿಜ್ಞಾಂ-(ಮೂರು ಪಾದಭೂಮಿಯನ್ನು ಕೊಟ್ಟಿರುವೆನೆಂಬ) ಪ್ರತಿಜ್ಞೆಯನ್ನು ತೀರ್ಣವಾನ್-(ಪೂರ್ಣಗೊಳಿಸಿ) ದಾಟಿದನು.

ತಾದೃಶೀಂ ಪ್ರಕಟೀಕೃತ್ಯ ತದ್ಭಕ್ತಿಂ ಲೋಕವಿಶ್ರುತಾಂ ।
ಮಹದ್ಯಶಃ ಪ್ರಥಿತ್ವಾ ಚ ಪಾತಾಲಂ ಸ್ಥಾನಮಾದಿಶಂ ॥ ೪೬ ॥
ಯತ್ರೇಂದ್ರಪದತೋಽಭೋಗಾಃ ವಿಶೇಷಾದೇವ ಸಂಸ್ಥಿತಾಃ ।
ತದ್ಭಕ್ತಿಬದ್ಧಸ್ತದ್ ದ್ವಾರೇ ರೂಪೇಣೈಕೇನ ತಸ್ಥಿವಾನ್ ॥ ೪೭ ॥
ಭೂತ್ವೋಪೇಂದ್ರಸ್ತಥಾ ಶಕ್ರಸಹಕಾರೀ ಸದೈವ ಹಿ ।
ರೂಪೇಣಾನ್ಯೇನ ಚ ಸ್ವರ್ಗೇ ದೇವಪೂಜ್ಯಃ ಸದೋಷಿತಃ ॥ ೪೮ ॥

ತಾದೃಶೀಂ-ಆ ವಿಧದ, ತದ್ಭಕ್ತಿಂ-ಬಲಿರಾಜನ ಭಕ್ತಿಯನ್ನು, ಪ್ರಕಟೀಕೃತ್ಯ-ಪ್ರಕಾಶಗೊಳಿಸಿ, ಲೋಕವಿಶ್ರುತಾಂ-ಲೋಕಪ್ರಸಿದ್ಧವಾದ (ಸರ್ವತ್ರ ಕೇಳಿಬರುವ), ಮಹದ್ಯಶಃ-ಮಹಾಕೀರ್ತಿಯನ್ನು ಪ್ರಥಿತ್ವಾ-ವಿಸ್ತರಿಸಿ, ಪಾತಾಲಂ-ಸುತಲಲೋಕದ, ಸ್ಥಾನಂ-ಸ್ಥಾನವನ್ನು ಆದಿಶಂ-(ಬಲಿಗೆ) ಆಜ್ಞಾಪಿಸಿದೆನು (ಮುಂದಿನ ಎಂಟನೆಯ

---

ಭಕ್ತಿಯನ್ನು ಪ್ರಕಾಶಗೊಳಿಸಿ, ಆತನಿಗೆ ಲೋಕದಲ್ಲಿ ಸರ್ವತ್ರ ಕೇಳಿಬರುವ ದಿವ್ಯಯಶಸ್ಸನ್ನಿತ್ತು, ಮುಂದಿನ (ಎಂಟನೆಯ) ಸಾವರ್ಣಿನಾಮಕ ಮನ್ವಂತರದಲ್ಲಿ ಇಂದ್ರಪದವಿಯನ್ನೂ ಅನುಗ್ರಹಿಸಿ, ಅವರೆಗೆ ಸುತಲಲೋಕದಲ್ಲಿರಲು ಆಜ್ಞಾಪಿಸಿದೆನು;[1] ಅಲ್ಲಿ ಇಂದ್ರಪದವಿಗಿಂತ ಅಧಿಕವಾದ ಸುಖಭೋಗಗಳಿರುತ್ತವೆ; ಇದೂ ಅಲ್ಲದೇ ಆತನ ಭಕ್ತಿಯಿಂದ ಬಂಧಿತನಾಗಿ, ನಿರಂತರವೂ, ಆತನ ದ್ವಾರದಲ್ಲಿ

---

1. ಅತಲ, ವಿತಲಾದಿ ಅಧೋಲೋಕಗಳೆಲ್ಲವನ್ನೂ, ಎಲ್ಲಕ್ಕೂ ಕೆಳಗಿರುವ ಪಾತಾಲ ಲೋಕದ ಹೆಸರಿಂದಲೇ ವ್ಯವಹರಿಸುವುದುಂಟು. ಇಲ್ಲಿ 'ಪಾತಾಲ' ಶಬ್ದದಿಂದ 'ಸುತಲ' ಲೋಕವನ್ನೇ ಗ್ರಹಿಸಬೇಕು; 'ಸಾವರ್ಣೇರಂತರಸ್ಯಾಯಂ ಭವಿತೇಂದ್ರೋ ಮದಾಶ್ರಯಃ । ತಾವತ್ಸುತಲಮಧ್ಯಾಸ್ತಾಂ ವಿಶ್ವಕರ್ಮವಿನಿರ್ಮಿತಂ ॥'—ಎಂದು, (ಭಾಗವತ) ಶ್ರೀವಾಮನನು, ಬಲಿರಾಜನ ಮೇಲೆ ದಯದೋರಲು ಪ್ರಾರ್ಥಿಸುತ್ತಿದ್ದ ಬ್ರಹ್ಮದೇವನನ್ನು ಕುರಿತು, ಮುಂದಿನ ಸಾವರ್ಣಿ ಮನ್ವಂತರದಲ್ಲಿ ನನ್ನ ಆಶ್ರಯದಲ್ಲಿ ಇಂದ್ರನಾಗುತ್ತಾನೆ; ಅಲ್ಲಿಯವರೆಗೆ, ವಿಶ್ವಕರ್ಮ ನಿರ್ಮಿತವಾದ, ಸುಖಭೋಗಗಳುಳ್ಳ ಸುತಲಲೋಕದಲ್ಲಿ ಸುಖದಿಂದ ವಾಸಿಸಲೆಂದು, ಹೇಳಿರುತ್ತಾನೆ, ಇದರಿಂದ ಸುತಲವೆಂಬರ್ಥವೇ ಇಲ್ಲಿ ಗ್ರಾಹ್ಯವು.

ಚರಿತ್ರೆಗಳನ್ನು ನಿಶ್ಚಿತ ಭವಿಷ್ಯವನ್ನು ನಡೆದಿರುವಂತೆ ನಿರೂಪಿಸುತ್ತಿದ್ದಾನೆಂದಾಗಲಿ; ಶ್ರೀವಿಷ್ಣುವು ಬ್ರಹ್ಮನಿಗೆ ಹೇಳುತ್ತಿರುವನೆಂದಾಗಲಿ ತಿಳಿಯಬೇಕು); ತತಃ-(ಸಂತುಷ್ಟನಾದನಂತರ), ಕಶ್ಯಪಾತ್ ಮುನೇಃ-ಕಶ್ಯಪಋಷಿಗಳಿಂದ, ತದ್ಗರ್ಭೇ-ಅದಿತೀದೇವಿಯ ಗರ್ಭದಲ್ಲಿ, ಅಹಂ-ನಾನೇ, ಭೂತ್ವಾ-ಹುಟ್ಟಿ (ಅವತರಿಸಿ), ಪ್ರಹ್ಲಾದಪ್ರಾರ್ಥನಾಂ-(ಮೊಮ್ಮಗನ ರಕ್ಷಣೆಗಾಗಿ) ಪ್ರಹ್ಲಾದನು ಸಲ್ಲಿಸಿದ ಪ್ರಾರ್ಥನೆಯನ್ನು, ಸ್ಮೃತ್ವಾ-ನೆನೆದು, ದೀಕ್ಷಿತಾತ್-ಯಜ್ಞದೀಕ್ಷಿತನಾಗಿದ್ದ, ಬಲೇಃ-ಬಲಿಯಿಂದ, ಯಾಚಿತ್ವಾ-ಬೇಡಿ, ಪದತ್ರಯಮಿತಂ-ಮೂರು ಪಾದಗಳ ಅಳತೆಯ, ಸ್ಥಾನಂ-ಭೂಮಿಯನ್ನು (ಪ್ರದೇಶವನ್ನು) (ಹೊಂದಿ), ತಲ್ಲಬ್ಧ್ವಾ-ಅದನ್ನು ಅವನಿಂದ ಪಡೆದನಂತರ, ಅಹಂ-ನಾನು ತ್ರಿವಿಕ್ರಮಃ-ತ್ರಿವಿಕ್ರಮನು, ಭೂತ್ವಾ-ಆಗಿ (ಆ ರೂಪವನ್ನು ತಾಳಿ), ಏಕೇನ ಪದಾ-ಒಂದೇ ಪಾದದಿಂದ, ಭುವಂ-ಭೂಮಿಯನ್ನೂ, ಏಕತಃ ಪದಾ-ಒಂದೇ ಪಾದದಿಂದ (ಮತ್ತೊಂದು ಪಾದದಿಂದ), ಸ್ವರ್ಗಲೋಕಂ-

ಅವತರಿಸಿದೆನು; ಬಲಿಯ ಅನುಗ್ರಹಕ್ಕಾಗಿ ಪ್ರಹ್ಲಾದನು ಮಾಡಿಕೊಂಡ ಪ್ರಾರ್ಥನೆಯನ್ನು ಸ್ಮರಿಸಿ, (ಅವತರಿಸಿದೊಡನೆ) ಯಜ್ಞದೀಕ್ಷಿತನಾಗಿ ಕುಳಿತಿದ್ದ ಬಲಿಯ ಸಮೀಪಕ್ಕೆ ಧಾವಿಸಿ, ಆತನಿಂದ, ಮೂರುಪಾದ ಭೂಮಿಯನ್ನು ದಾನವಾಗಿ ಪಡೆದನು; ಬಲಿಯು ದಾನಪ್ರತಿಜ್ಞೆಯನ್ನು ಮಾಡಿದೊಡನೆ, ತ್ರಿವಿಕ್ರಮರೂಪವನ್ನು ತಾಳಿ, ಒಂದು ಪಾದದಿಂದ ಭೂಲೋಕವನ್ನೂ, ಮತ್ತೊಂದು ಪಾದದಿಂದ, ಸ್ವರ್ಗಲೋಕವನ್ನೂ ಅಳೆದು ತೆಗೆದುಕೊಂಡೆನು; ಮೂರನೇ ಪಾದಕ್ಕೆ ಬಲಿಯ ಸ್ವಾಮ್ಯಕ್ಕೊಳಪಟ್ಟ ಸ್ಥಾನವಿಲ್ಲದ್ದರಿಂದ, ಆತನನ್ನು ವರುಣಪಾಶದಿಂದ ಬಂಧಿಸಿದೆನು; ಬಲಿಯಾದರೋ ತನ್ನ ಬೆನ್ನನ್ನೇ ಕೊಟ್ಟು (ಬೆನ್ನು ಬಗ್ಗಿಸಿ, ತಲೆಯಮೇಲೆ ಪಾದವನ್ನಿಟ್ಟು ಮೂರು ಪಾದವನ್ನು ಮುಟ್ಟಿಸಿದೆನೆಂಬ ಮನಃಶಾಂತಿಯನ್ನು ಅನುಗ್ರಹಿಸೆಂದು ಪ್ರಾರ್ಥಿಸಿ), ನನ್ನ ಅನುಗ್ರಹದಿಂದ, ಪ್ರತಿಜ್ಞೆಯನ್ನು ಪಾಲಿಸಿ ಕೀರ್ತಿಶಾಲಿಯಾದನು[1] (೬೨-೬೫). ಹೀಗೆ ಬಲಿರಾಜನ

1. ಬಲಿಯು ತ್ರಿಲೋಕಾಧಿಪತಿಯಾಗಿದ್ದನು; ಒಂದು ಪಾದದಿಂದ ಭೂಲೋಕವನ್ನೂ (ಉಪಲಕ್ಷಣದಿಂದ ಅಂತರಿಕ್ಷಲೋಕವನ್ನೂ), ಎರಡನೆ ಪಾದಕ್ಕಾಗಿ ಸ್ವರ್ಗಲೋಕವನ್ನೂ ಅಳೆದು ತೆಗೆದುಕೊಂಡನೆಂಬುದು ಆಶ್ಚರ್ಯವೇ ಸರಿ. ಶ್ರೀವಿಷ್ಣುವಿನ ಒಂದು ಪಾದದ ಅನಂತಾಂಶದಲ್ಲಿ ಒಂದಂಶಕ್ಕೆ ಈಡಲ್ಲ—ಇದೀ ವಿಶ್ವವು; ('ಏಕಾಂಶೇನ ಸ್ಥಿತೋ ಜಗತ್' ಎಂದು ಗೀತೆಯಲ್ಲಿ ತಾನೇ ಹೇಳಿಕೊಂಡಿರುವನು); ಹೀಗೆ ಅಳತೆ ಮಾಡಿದ್ದರಿಂದ ಶ್ರೀಹರಿಯು (ವಾಮನನು), ಬಲಿಯನ್ನು ಅನುಗ್ರಹಿಸಲು ಪಾದವನ್ನು ಸಂಕೋಚ ಮಾಡಿಕೊಂಡನೆಂಬುದು, ಸೂಚಿತವಾಗುತ್ತದೆ; ಇಷ್ಟುಮಾತ್ರವಲ್ಲ ಮೂರನೇ ಪಾದಕ್ಕಾಗಿ ಬಲಿಯು ತನ್ನ ತಲೆಯನ್ನೊಡ್ಡಲು, ಅಲ್ಲಿ ತನ್ನ ಪಾದವನ್ನಿಟ್ಟು, ಭಕ್ತಾಗ್ರಣಿಯಾದ ಬಲಿಯನ್ನು ಸತ್ಯಪ್ರತಿಜ್ಞನೆಂಬ ಕೀರ್ತಿಭಾಗಿಯನ್ನಾಗಿ ಮಾಡಿದನು—ಇದರಿಂದಲೂ ಅನುಗ್ರಹಿಸಬೇಕೆಂಬ ಶ್ರೀಹರಿ ಸಂಕಲ್ಪವು ಸ್ಪಷ್ಟವಾಗುತ್ತದೆ. ಅನ್ಯಥಾ ಮೂರು ಪಾದಗಳಲ್ಲಿ—ಒಂದು ಪಾದಪ್ರದೇಶವನ್ನಾದರೂ, ಶ್ರೀಹರಿಗೆ ದಾನವಾಗಿ ಕೊಡಲು ಶಕ್ತನಾಗುವನೇ!!

ಸ್ವರ್ಗಲೋಕವನ್ನೂ, ಗೃಹೀತ್ವಾ-ಅಳೆದು ತೆಗೆದುಕೊಂಡು, ಪುನಃ-ಮತ್ತೆ, ಏಕಪದಾರ್ಥಂ-ಉಳಿದ ಮೂರನೆಯ ಪಾದಕ್ಕಾಗಿ (ಬಲಿಗೆ ಸೇರಿದ ಯಾವ ಪ್ರದೇಶವೂ ಮಿಗಲಿಲ್ಲವಾಗಿ), ತಂ ಬಲಿಂ-ಆ ಬಲಿರಾಜನನ್ನು ಬದ್ಧವಾನ್-(ವರುಣ ಪಾಶಗಳಿಂದ) ಬಂಧಿಸಿದೆನು; ತತಃ-ಹೀಗಾದನಂತರ, ಸಃ-(ನನ್ನ ಭಕ್ತನಾದ) ಬಲಿಯು, ಸ್ವಪೃಷ್ಠಂ-ತನ್ನ ಬೆನ್ನನ್ನು (ಮೂರನೆಯ ಪಾದಕ್ಕಾಗಿ), ದತ್ವಾ-ಕೊಟ್ಟು ನಿಜಾಂ-ತನ್ನ ಪ್ರತಿಜ್ಞಾಂ-(ಮೂರು ಪಾದಭೂಮಿಯನ್ನು ಕೊಟ್ಟಿರುವೆನೆಂಬ) ಪ್ರತಿಜ್ಞೆಯನ್ನು ತೀರ್ಣವಾನ್-(ಪೂರ್ಣಗೊಳಿಸಿ) ದಾಟಿದನು.

ತಾದೃಶೀಂ ಪ್ರಕಟೀಕೃತ್ಯ ತದ್ಭಕ್ತಿಂ ಲೋಕವಿಶ್ರುತಾಂ ।
ಮಹದ್ಯಶಃ ಪ್ರಥಿತ್ವಾ ಚ ಪಾತಾಲಂ ಸ್ಥಾನಮಾದಿಶಂ ॥ ೪೬ ॥
ಯತ್ರೇಂದ್ರಪದತೋಭೋಗಾಃ ವಿಶೇಷಾದೇವ ಸಂಸ್ಥಿತಾಃ ।
ತದ್ಭಕ್ತಿಬದ್ಧಸ್ತದ್ದ್ವಾರೇ ರೂಪೇಣೈಕೇನ ತಸ್ಥಿವಾನ್ ॥ ೪೭ ॥
ಭೂತ್ವೋಪೇಂದ್ರಸ್ತಥಾ ಶಕ್ರಸಹಕಾರೀ ಸದೈವ ಹಿ ।
ರೂಪೇಣಾನ್ಯೇನ ಚ ಸ್ವರ್ಗೇ ದೇವಪೂಜ್ಯಃ ಸದೋಷಿತಃ ॥ ೪೮ ॥

ತಾದೃಶೀಂ-ಆ ವಿಧದ, ತದ್ಭಕ್ತಿಂ-ಬಲಿರಾಜನ ಭಕ್ತಿಯನ್ನು ಪ್ರಕಟೀಕೃತ್ಯ-ಪ್ರಕಾಶಗೊಳಿಸಿ, ಲೋಕವಿಶ್ರುತಾಂ-ಲೋಕಪ್ರಸಿದ್ಧವಾದ (ಸರ್ವತ್ರ ಕೇಳಿಬರುವ), ಮಹದ್ಯಶಃ-ಮಹಾಕೀರ್ತಿಯನ್ನು ಪ್ರಥಿತ್ವಾ-ವಿಸ್ತರಿಸಿ, ಪಾತಾಲಂ-ಸುತಲಲೋಕದ, ಸ್ಥಾನಂ-ಸ್ಥಾನವನ್ನು ಆದಿಶಂ-(ಬಲಿಗೆ) ಆಜ್ಞಾಪಿಸಿದೆನು (ಮುಂದಿನ ಎಂಟನೆಯ

---

ಭಕ್ತಿಯನ್ನು ಪ್ರಕಾಶಗೊಳಿಸಿ, ಆತನಿಗೆ ಲೋಕದಲ್ಲಿ ಸರ್ವತ್ರ ಕೇಳಿಬರುವ ದಿವ್ಯಯಶಸ್ಸನ್ನಿತ್ತು, ಮುಂದಿನ (ಎಂಟನೆಯ) ಸಾವರ್ಣಿನಾಮಕ ಮನ್ವಂತರದಲ್ಲಿ ಇಂದ್ರಪದವಿಯನ್ನೂ ಅನುಗ್ರಹಿಸಿ, ಅವರೆಗೆ ಸುತಲಲೋಕದಲ್ಲಿರಲು ಆಜ್ಞಾಪಿಸಿದೆನು;[1] ಅಲ್ಲಿ ಇಂದ್ರಪದವಿಗಿಂತ ಅಧಿಕವಾದ ಸುಖಭೋಗಗಳಿರುತ್ತವೆ; ಇದೂ ಅಲ್ಲದೇ ಆತನ ಭಕ್ತಿಯಿಂದ ಬಂಧಿತನಾಗಿ, ನಿರಂತರವೂ, ಆತನ ದ್ವಾರದಲ್ಲಿ

---

1. ಅತಲ, ವಿತಲಾದಿ ಅಧೋಲೋಕಗಳೆಲ್ಲವನ್ನೂ, ಎಲ್ಲಕ್ಕೂ ಕೆಳಗಿರುವ ಪಾತಾಲ ಲೋಕದ ಹೆಸರಿಂದಲೇ ವ್ಯವಹರಿಸುವುದುಂಟು. ಇಲ್ಲಿ 'ಪಾತಾಲ' ಶಬ್ದದಿಂದ 'ಸುತಲ' ಲೋಕವನ್ನೇ ಗ್ರಹಿಸಬೇಕು; 'ಸಾವರ್ಣೇರಂತರಸ್ಯಾಯಂ ಭವಿತೇಂದ್ರೋ ಮದಾಶ್ರಯಃ । ತಾವತ್ಸುತಲಮಧ್ಯಾಸ್ತಾಂ ವಿಶ್ವಕರ್ಮವಿನಿರ್ಮಿತಂ ॥'—ಎಂದು, (ಭಾಗವತ) ಶ್ರೀವಾಮನನು, ಬಲಿರಾಜನ ಮೇಲೆ ದಯದೋರಲು ಪ್ರಾರ್ಥಿಸುತ್ತಿದ್ದ ಬ್ರಹ್ಮದೇವನನ್ನು ಕುರಿತು, ಮುಂದಿನ ಸಾವರ್ಣಿ ಮನ್ವಂತರದಲ್ಲಿ ನನ್ನ ಆಶ್ರಯದಲ್ಲಿ ಇಂದ್ರನಾಗುತ್ತಾನೆ; ಅಲ್ಲಿಯವರೆಗೆ, ವಿಶ್ವಕರ್ಮನಿರ್ಮಿತವಾದ, ಸುಖಭೋಗಗಳುಳ್ಳ ಸುತಲಲೋಕದಲ್ಲಿ ಸುಖದಿಂದ ವಾಸಿಸಲೆಂದು, ಹೇಳಿರುತ್ತಾನೆ. ಇದರಿಂದ ಸುತಲವೆಂಬರ್ಥವೇ ಇಲ್ಲಿ ಗ್ರಾಹ್ಯವು.

ಸಾವರ್ಣಿಮನ್ವಂತರದಲ್ಲಿ ಬಲಿಗೆ ಇಂದ್ರಪದವಿಯನ್ನು ಆಶ್ವಾಸಿಸಿ, ಅವರಿಗೆ ವಾಸಿಸುವುದಕ್ಕಾಗಿ ಸುತಲಲೋಕವನ್ನು ನಿರ್ದೇಶ ಮಾಡಿದೆನು); ಯತ್ರ-ಎಲ್ಲಿ (ಯಾವ ಸುತಲಲೋಕದಲ್ಲಿ), ಭೋಗಾಃ-ಸುಖ ಭೋಗಗಳು, ಇಂದ್ರಪದತಃ-ಇಂದ್ರ ಪದಕ್ಕಿಂತ, ವಿಶೇಷಾತ್ ಏವ-ಅಧಿಕವಾಗಿಯೇ, ಸ್ಥಿತಾಃ-ಇರುವುವೋ, (ಆ ಸ್ಥಾನವನ್ನು ಆದಿಶಂ-ಆಜ್ಞಾಪಿಸಿದೆನು); ಮತ್ತು ತದ್ಭಕ್ತಿಬದ್ಧಃ-ಬಲಿಯ ಭಕ್ತಿಯಿಂದ ಬಂಧಿತನಾಗಿ (ಭಕ್ತಿಗೆ ವಶನಾಗಿ), ಏಕೇನ ರೂಪೇಣ-(ನನ್ನ) ಒಂದು ವಾಮನರೂಪದಿಂದ, ತದ್ದ್ವಾರೇ-ಆತನ ಬಾಗಿಲಲ್ಲಿ ತಸ್ಥಿವಾನ್-ನಿಂತವನು, ಭೂತ್ವಾ-ಆಗಿ, ತಥಾ-ಹಾಗೂ, ಉಪೇಂದ್ರಃ-ಉಪೇಂದ್ರನೆಂಬ, ಅನ್ಯೇನ ರೂಪೇಣ-ಮತ್ತೊಂದು (ವಾಮನ) ರೂಪದಿಂದಲೇ, ಸದಾ-ಯಾವಾಗಲೂ, ಶಕ್ರಸಹಕಾರೀ-ಇಂದ್ರನ ಸಹಾಯಕನಾಗಿ, ಸ್ವರ್ಗೇ-ಸ್ವರ್ಗದಲ್ಲಿ ದೇವಪೂಜ್ಯಃ-ದೇವತೆಗಳಿಂದ ಪೂಜಿಸಲ್ಪಡುತ್ತ ಸದಾ-ಸರ್ವದಾ, ಉಷಿತಃ-ವಾಸವಾಗಿರುವವನಾದೆನು.

**ದುಷ್ಟಕ್ಷತ್ರಿಯಭಾರೇಣ ಖಿನ್ನಾಮಾಲೋಕ್ಯ ಕಾಶ್ಯಪೀಂ ।**
**ಭೂತ್ವಾ ಭಾರ್ಗವರಾಮೋಽಹಂ ನಿಃಕ್ಷತ್ರಾಂ ಕೃತವಾನ್ಮಹೀಂ ॥ ೪೯ ॥**

ದುಷ್ಟಕ್ಷತ್ರಿಯಭಾರೇಣ-ದುಷ್ಟರಾದ ಕ್ಷತ್ರಿಯರ ಭಾರದಿಂದ, ಖಿನ್ನಾಂ-ದುಃಖಿತಳಾದ, ಕಾಶ್ಯಪೀಂ-ಭೂಮಿಯನ್ನು ಆಲೋಕ್ಯ-ಕಂಡು, ಅಹಂ-ನಾನು, ಭಾರ್ಗವ ರಾಮಃ-ಪರಶುರಾಮನು, ಭೂತ್ವಾ-ಆಗಿ (ಭೃಗುಕುಲದಲ್ಲಿ ಅವತರಿಸಿ), ಮಹೀಂ-ಭೂಮಿಯನ್ನು ನಿಃಕ್ಷತ್ರಾಂ-ಕ್ಷತ್ರಿಯರ ರಹಿತವಾದುದನ್ನು ಕೃತವಾನ್- ಮಾಡಿದೆನು.

---

ಒಂದು ರೂಪದಿಂದ (ಇದೇ ವಾಮನರೂಪದಿಂದ) ನಿಂತು, ನಿತ್ಯ ದರ್ಶನವನ್ನೀಯುತ್ತ ರಕ್ಷಿಸುತ್ತೇನೆ; ಮತ್ತು (ಪುರಂದರನಿಗೆ ಸ್ವರ್ಗ ರಾಜ್ಯವನ್ನಿತ್ತು) ಉಪೇಂದ್ರ ನಾಮಕನಾಗಿ ಇನ್ನೊಂದು ರೂಪದಿಂದ, ಇಂದ್ರನಿಗೆ ಸದಾ ಸಹಾಯಕನಾಗಿ, ದೇವಪೂಜಿತನಾಗಿ ಸ್ವರ್ಗದಲ್ಲಿಯೂ ಇರುತ್ತೇನೆ (೪೬-೪೮). ಮುಂದೆ, ದುಷ್ಟಕ್ಷತ್ರಿಯರ ಭಾರದಿಂದ ದುಃಖಿತಳಾದ ಭೂಮಿಯನ್ನು ಕಂಡು,[1] ಭೃಗುಕುಲದಲ್ಲಿ (ಜಮದಗ್ನಿ ಪುತ್ರನಾಗಿ) ಪರಶುರಾಮನಾಗಿ ಅವತರಿಸಿ, ನಾನು, ದುಷ್ಟ ಕ್ಷತ್ರಿಯರು

1. ಕ್ರೀತಿಪಾತ್ರರಾದ ಪುತ್ರರನ್ನು ಹೊತ್ತು ತಿರುಗಲು ಸ್ತ್ರೀಗೆ ಭಾರವೆನಿಸುವುದಿಲ್ಲ; ದ್ವೇಷಿಯಾದ ಒಬ್ಬನು ಸಹ ಭಾರವೆನಿಸುತ್ತಾನೆ. ಈ ದೃಷ್ಟಿಯಿಂದ ಧರ್ಮಮಾರ್ಗದಲ್ಲಿರುವ, ಎಲ್ಲ ಪ್ರಜೆಗಳನ್ನು ಧರಿಸುವ ಭೂದೇವಿಗೆ, (ಧರಾದೇವಿಗೆ) ಭಾರವಾಗುವುದಿಲ್ಲ—ಶ್ರೀಹರಿ ಸೇವೆಯಿಂದೇ ಅವರನ್ನು ಸಂತೋಷದಿಂದ ವಹಿಸುತ್ತಾಳೆ; ಅಧರ್ಮದಲ್ಲಿಯೇ ಆಸಕ್ತರಾದ, ತನ್ನ ಸ್ವಾಮಿಯಾದ ಶ್ರೀವಿಷ್ಣುವಿನ ದ್ವೇಷಿಗಳು, ಅಧಿಕವಾಗಿ ತನ್ನ ಸತ್ಪುತ್ರರಂತಿರುವ ಸಜ್ಜನರನ್ನು ಪೀಡಿಸಲಾರಂಭಿಸಿದಾಗ, ಅದನ್ನು (ಸರ್ವಸಹಳಾದರೂ) ಸಹಿಸಲಾಗದೇ, ತನಗೆ ಭಾರ ಭೂತರಾದ ಅವರ ಸಂಹಾರಕ್ಕಾಗಿ, ತಾನೂ ಶ್ರೀಹರಿಯನ್ನು ಪ್ರಾರ್ಥಿಸಿ ತೊರೆಯಿಡುತ್ತಾಳೆ.

**ರಾವಣಾದ್ಯೈರ್ಮಹಾದೈತ್ಯೈಃ ರಾಕ್ಷಸೀಂ ತನುಮಾಶ್ರಿತೈಃ ।**
**ಉಪಪ್ಲುತಾಂ ಭುವಂ ದೃಷ್ಟ್ವಾ ರಾಮೋ ದಾಶರಥಿಃ ಪುನಃ ॥ ೫೦ ॥**
**ಭೂತ್ವಾ ನಿಹತ್ಯ ತಂ ಲಂಕಾಂ ಮಹಾಭಕ್ತೇ ವಿಭೀಷಣೇ ।**
**ದತ್ತ್ವಾಥ ಗತವಾನ್ ಧಾಮ ಪುನರ್ವೈಕುಂಠಮಾತ್ಮನಃ ॥ ೫೧ ॥**

ಪುನಃ-ಮತ್ತೆ, ರಾವಣಾದ್ಯೈಃ-ರಾವಣನೇ ಮೊದಲಾದ, ರಾಕ್ಷಸೀಂ ತನುಂ-ರಾಕ್ಷಸ ದೇಹವನ್ನು, ಆಶ್ರಿತಾಃ-ಆಶ್ರಯಿಸಿದ, ಮಹಾದೈತ್ಯೈಃ-ಮಹಾ ದೈತ್ಯರಿಂದ, ಉಪಪ್ಲುತಾಂ-ಪೀಡಿತಳಾದ, ಭುವಂ-ಭೂಮಿಯನ್ನು, ದೃಷ್ಟ್ವಾ-ನೋಡಿ, ದಾಶರಥಿಃ-ದಶರಥ ಪುತ್ರನಾದ, ರಾಮಃ-ರಾಮನಾಗಿ, ಭೂತ್ವಾ-ಅವತರಿಸಿ, ತಂ-ಆ ರಾವಣನನ್ನು, ನಿಹತ್ಯ-ಸಂಹರಿಸಿ, ಅಥ-ನಂತರ, ಲಂಕಾಂ-ಲಂಕಾರಾಜ್ಯವನ್ನು, ಮಹಾಭಕ್ತೇ-ಮಹಾ ಭಕ್ತನಾದ, ವಿಭೀಷಣೇ-ವಿಭೀಷಣನಲ್ಲಿ, ದತ್ತ್ವಾ-ಕೊಟ್ಟು (ಸ್ಥಾಪಿಸಿ), ಪುನಃ-ಮತ್ತೆ, ಆತ್ಮನಃ-ನನ್ನದಾದ, ವೈಕುಂಠಧಾಮ-ವೈಕುಂಠಸ್ಥಾನವನ್ನು, ಗತವಾನ್-ಹೊಂದಿದವನು (ಆದೆನು).

**ಅಜ್ಞಾನಾಂಧತಮೋ ಮಗ್ನಂ ವೀಕ್ಷ್ಯ ಲೋಕಂ ನಿಜಂ ಪುನಃ ।**
**ಪರಾಶರಾತ್ಸತ್ಯವತ್ಯಾಂ ಕೃಷ್ಣದ್ವೈಪಾಯನೋಽಭವಂ ॥ ೫೨ ॥**

---

ಭೂಮಿಯಲ್ಲಿರದಂತೆ, ಸರ್ವರನ್ನೂ ಸಂಹರಿಸುತ್ತೇನೆ (೪೯). ಪುನಃ ರಾಕ್ಷಸ ದೇಹದಲ್ಲಿದ್ದು ಲೋಕಪೀಡಕರಾದ ರಾವಣಾದಿ ಮಹಾದೈತ್ಯರಿಂದ, ಪೀಡಿತಳಾದ ಭೂದೇವಿಯ ದುಃಖ ಪರಿಹಾರಕ್ಕಾಗಿ ದಶರಥನ ಪುತ್ರನಾಗಿ, ರಾಮನಾಮಕನಾಗಿ ಅವತರಿಸುತ್ತೇನೆ; ಆ ರಾವಣಾದಿಗಳನ್ನು ಸಂಹರಿಸಿ, ಲಂಕಾರಾಜ್ಯವನ್ನು ಭಕ್ತಾಗ್ರಣಿಯಾದ ವಿಭೀಷಣನಿಗೆ ಕೊಟ್ಟು, ನನ್ನ ನಿತ್ಯಧಾಮವಾದ ವೈಕುಂಠವನ್ನು ಪ್ರವೇಶಿಸಿದೆನು (೫೦-೫೧). ಪುನಃ ಇದೇ ವೈವಸ್ವತ ಮನ್ವಂತರದಲ್ಲಿ ಸಜ್ಜನರು ಅಜ್ಞಾನಾಂಧಕಾರದಲ್ಲಿ ಮುಳುಗಿದುದನ್ನು ಕಂಡು, ಪರಾಶರರಿಂದ, ಸತ್ಯವತೀದೇವಿಯಲ್ಲಿ ಕೃಷ್ಣದ್ವೈಪಾಯನ ನಾಮಕನಾಗಿ ಅವತರಿಸಿದೆನು[1] (೫೨). ಪುನಃ ದುಷ್ಟ ಕ್ಷತ್ರಿಯರಿಂದ ವ್ಯಾಪ್ತವಾಗಲು,

---

1. ವಸುದೇವ ದೇವಕಿಯರನ್ನು ನಿಮಿತ್ತಮಾಡಿ, ಶ್ರೀಕೃಷ್ಣರೂಪದಿಂದ ಪ್ರಕಟನಾದಂತೆ, ಶ್ರೀಹರಿಯು ಪರಾಶರ ಸತ್ಯವತಿಯರನ್ನು ನಿಮಿತ್ತರನ್ನಾಗಿಮಾಡಿ, ಪ್ರತ್ಯಕ್ಷನಾದನೆಂದು ತಿಳಿಯಬೇಕು. ಅಂಬಿಗರ ಪುತ್ರಿಯಂತೆ ಬೆಳೆದ ಸತ್ಯವತೀದೇವಿಯು, ಪರಾಶರರನ್ನು ದೋಣಿಯಲ್ಲಿ ಯಮುನಾ ನದಿಯನ್ನು ದಾಟಿಸುತ್ತಿದ್ದಾಗ, ಆ ನದಿಯ ಒಂದು ನಡುಗಡ್ಡೆಯಲ್ಲಿ ತತ್ಕಾಲದಲ್ಲಿ ಸತ್ಯವತೀದೇವಿಯಿಂದ ಜನಿಸಿದವನಂತೆ, ಶ್ರೀವೇದವ್ಯಾಸರೂಪದಿಂದ ಶ್ರೀಹರಿಯು, ಸ್ವಭಕ್ತರ ತತ್ತ್ವಜ್ಞಾನಾರ್ಥವಾಗಿ, ದೇವತೆಗಳಿಂದ ಪ್ರಾರ್ಥಿತನಾಗಿ, ಪ್ರಕಟನಾದನು; ಯಮುನಾ ದ್ವೀಪದಲ್ಲಿ ಅವತರಿಸಿದ್ದರಿಂದ, ಶ್ರೀಕೃಷ್ಣನೇ ಆದ ತಾನು, ಕೃಷ್ಣದ್ವೈಪಾಯನನೆಂಬ ಅನ್ವರ್ಥನಾಮದಿಂದ ಪ್ರಸಿದ್ಧನಾದನು. ಅವತರಿಸಿದೊಡನೆ, ಪರಾಶರರಿಂದ ಉಪನೀತನಾಗಿ ಬದರಿಗೆ ಪ್ರಯಾಣಮಾಡಿ,

ಪುನಃ-ಮತ್ತೆ (ಇದೇ ವೈವಸ್ವತ ಮನ್ವಂತರದಲ್ಲಿ), ನಿಜಂ-ತನ್ನ, ಲೋಕಂ-ಲೋಕವನ್ನು (ಪ್ರಜೆಗಳನ್ನು), ಅಜ್ಞಾನಾಂಧ ತಮೋಮಗ್ನಂ-ಅಜ್ಞಾನಾಂಧ ಕಾರದಲ್ಲಿ ಮಗ್ನವಾದುದನ್ನು, ವೀಕ್ಷ್ಯ-ಕಂಡು, ಪರಾಶರಾತ್-ಪರಾಶರ ಋಷಿಯನ್ನು ನಿಮಿತ್ತ ಮಾಡಿ, ಸತ್ಯವತ್ಯಾಂ-ಸತ್ಯವತೀದೇವಿಯಲ್ಲಿ ಕೃಷ್ಣದ್ವೈಪಾಯನಃ- ಕೃಷ್ಣದ್ವೈಪಾಯನ ನೆಂಬ (ನಾಮದಿಂದ), ಅಭವಂ-ಅವತರಿಸಿದೆನು.

ಪುನರ್ದುಃಕ್ಷತ್ರಿಯೈರ್ವ್ಯಾಪ್ತಾಂ ವಿಲೋಕ್ಯ ತು ವಸುಂಧರಾಂ ।
ಬ್ರಹ್ಮಾದಿದೇವತಾವೃಂದೈಃ ಪ್ರಾರ್ಥಿತಃ ಕೃಷ್ಣತಾಂ ಗತಃ ॥ ೫೩ ॥
ಪಾಂಡವಾನ್ ಬಲರಾಮಂ ಚ ಪ್ರದ್ಯುಮ್ನಾದೀಂಶ್ಚ ಯಾದವಾನ್ ।
ಸಚಿವೀಕೃತ್ಯ ಹೃತವಾನ್ ಭಾರಭೂತಾಖಿಲಾನ್ ಜನಾನ್ ॥ ೫೪ ॥

ಪುನಃ-ಮತ್ತೊಂದುಕಾಲದಲ್ಲಿ, ದುಃಕ್ಷತ್ರಿಯೈಃ-ದುಷ್ಟಕ್ಷತ್ರಿಯರಿಂದ, ವ್ಯಾಪ್ತಾಂ-ವ್ಯಾಪಿಸಲ್ಪಟ್ಟ, ವಸುಂಧರಾಂ-ಭೂಮಿಯನ್ನು, ವಿಲೋಕ್ಯ ತು-ಕಂಡೇ, ಬ್ರಹ್ಮಾದಿ ದೇವತಾವೃಂದೈಃ-ಬ್ರಹ್ಮನೇ ಮೊದಲಾದ ದೇವತಾಗಣದಿಂದ, ಪ್ರಾರ್ಥಿತಃ-ಪ್ರಾರ್ಥಿಸ ಲ್ಪಟ್ಟು, ಕೃಷ್ಣತಾಂ-ಶ್ರೀಕೃಷ್ಣರೂಪವುಳ್ಳಭಾವವನ್ನು, ಗತಃ-ಹೊಂದಿದೆನು. (ಕೃಷ್ಣರೂಪ ಬ್ರಹ್ಮಾದಿದೇವಸಮೂಹದಿಂದ ಪ್ರಾರ್ಥಿತನಾಗಿ, ಶ್ರೀಕೃಷ್ಣರೂಪದಿಂದ ಅವತರಿಸಿ, ಪಾಂಡವರು, ಬಲರಾಮ, ಪ್ರದ್ಯುಮ್ನಾದಿ ಯಾದವರು, ಈ ಎಲ್ಲರನ್ನೂ (ಧರ್ಮ ಸಂಸ್ಥಾಪನೆಗಾಗಿ ಮಾಡಿದ) ದುಷ್ಟನಿಗ್ರಹ ಕಾರ್ಯದಲ್ಲಿ ಸಹಾಯಕರನ್ನಾಗಿ ಉಪಯೋಗಿಸಿಕೊಂಡು, ಭೂಭಾರಭೂತರಾದ ಸಮಸ್ತ ಜನರನ್ನು ಸಂಹರಿಸಿದೆನು[1] (೫೩-೫೪). ಮತ್ತೂ ಮುಂದೆ ವೈದಿಕ ಸತ್ಕರ್ಮಾನುಷ್ಠಾನದಲ್ಲಿ ಅನರ್ಹರಾದ

ಜ್ಞಾನೋಪದೇಶಕಾರ್ಯದಲ್ಲಿ ತೊಡಗಿದನು—ಶ್ರೀಬಾದರಾಯಣರೆಂಬ ಅನ್ಯ ಅನ್ವರ್ಥನಾಮದಿಂದಲೂ ಪ್ರಸಿದ್ಧನಾದನು. ಮಹಾಭಾರತ ತಾತ್ಪರ್ಯನಿರ್ಣಯದ ೧೦ನೇ ಅಧ್ಯಾಯದಲ್ಲಿ ಶ್ರೀಹರಿಯ ಈ ಅವತಾರದ ಬಗ್ಗೆ ಸಜ್ಜನರಿಗೆ ಬರಬಹುದಾದ ಸಕಲ ಸಂಶಯಗಳು ಯುಕ್ತಾಯುಕ್ತವಾಗಿ ಪರಿಹರಿಸಲ್ಪಟ್ಟು, ನಿರ್ಣಯವು ನಿರೂಪಿತವಾಗಿದೆ. ಮುಕ್ತರಿಂದ ಪೂಜಿಸಲ್ಪಡುವ ಶ್ರೀಕೃಷ್ಣ ನಾಮಕ ಶ್ರೀಹರಿಯ ಮೂಲರೂಪವೂ ಇದೆ. 'ಕೃಷ್ಣೋ ಇಜ್ಯತೇ ವೀತಮೋಹೈಃ' ಇತ್ಯಾದಿ ವಾಕ್ಯಗಳು ಇದನ್ನು ಹೇಳುತ್ತವೆ. ಆ ಮೂಲರೂಪೀ ಶ್ರೀಕೃಷ್ಣನೇ, ಕೃಷ್ಣರೂಪದಿಂದ ಯಾದವರಲ್ಲಿ ಅವತರಿಸಿದನೆಂದು, 'ಕೃಷ್ಣಸ್ತು ಭಗವಾನ್ ಸ್ವಯಂ' ಇತ್ಯಾದಿ (ಭಾಗವತ) ವಾಕ್ಯಗಳೂ ಸಾರುತ್ತವೆ. ಆ ಕೃಷ್ಣನಿಂದ ಅಭಿನ್ನನೂ ಆತನ ಅವತಾರನೂ ಆದ ಶ್ರೀವೇದವ್ಯಾಸರು ಕೃಷ್ಣದ್ವೈಪಾಯನರೆಂಬ ಅನ್ವರ್ಥನಾಮವುಳ್ಳವರು.

1. ಈ ಎರಡು ಶ್ಲೋಕಗಳಲ್ಲಿ ಶ್ರೀಕೃಷ್ಣಾವತಾರದ ಪ್ರಧಾನಕಾರ್ಯವು ಸಂಗ್ರಹವಾಗಿ ನಿರೂಪಿತವಾಗಿದೆ. ಶ್ರೀಹರಿಯ ಅವತಾರ ಚರಿತ್ರೆಗಳ ನಿರ್ಣಯಾತ್ಮಕ ಸಾರಸಂಗ್ರಹವು, ಶ್ರೀಮದಾನಂದತೀರ್ಥ ಭಗವತ್ಪಾದರಿಂದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಉಕ್ತವಾಗಿದೆ. ಅದನ್ನು ಗುರುಮುಖದಿಂದ ಅಧ್ಯಯನಮಾಡಿ ತಿಳಿಯುವುದು ಅತ್ಯವಶ್ಯಕ.

ದಿಂದ ಅವತರಿಸಿದನು); ಪಾಂಡವಾನ್-ಪಾಂಡವರನ್ನೂ ಚ-ಮತ್ತು ಬಲರಾಮಂ-ಬಲರಾಮನನ್ನೂ ಚ-ಹಾಗೂ, ಪ್ರದ್ಯುಮ್ನಾದೀನ್-ಪ್ರದ್ಯುಮ್ನನೇ ಮೊದಲಾದ, ಯಾದವಾನ್-ಯಾದವರನ್ನೂ ಸಚಿವೀಕೃತ್ಯ-ಸಹಾಯಕರನ್ನಾಗಿ ಉಪಯೋಗಿಸಿಕೊಂಡು, ಭಾರಭೂತಾಖಿಲಾನ್-ಭೂಭಾರಭೂತರಾದ ಸಮಸ್ತ ಜನಾನ್-ಜನರನ್ನೂ ಹೃತವಾನ್-ಸಂಹರಿಸಿದನು (ಭೂಮಿಯಿಂದ ತೆಗೆದನು).

**ತಾಮಸಾನ್ ವೈದಿಕೇ ಮಾರ್ಗೇ ಪ್ರವೃತ್ತಾನ್ ವೀಕ್ಷ್ಯ ವೈ ಪುನಃ ।**
**ಬುದ್ಧತಾಂ ಪ್ರಾಪ್ಯ ದುರ್ಮಾರ್ಗೇ ನಿಯೋಜ್ಯೈತಾನದಾಂ ತಮಃ ॥೫೫॥**

ಪುನಃ-ಮತ್ತೆ ಮುಂದೆ, ತಾಮಸಾನ್-ತಾಮಸಜೀವರನ್ನು ವೈದಿಕೇ ಮಾರ್ಗೇ-ವೇದಮಾರ್ಗದಲ್ಲಿ (ವೇದೋಕ್ತ ಸತ್ಕರ್ಮಾನುಷ್ಠಾನಗಳಲ್ಲಿ), ಪ್ರವೃತ್ತಾನ್- ಪ್ರವೃತ್ತರಾಗಿರುವವರನ್ನಾಗಿ, ವೀಕ್ಷ್ಯ-ಕಂಡು, ಬುದ್ಧತಾಂ-ಬೌದ್ಧರೂಪವನ್ನು ಪ್ರಾಪ್ಯ-ಹೊಂದಿ

---

ತಾಮಸಜೀವರು, ವೇದಮಾರ್ಗಾವಲಂಬಿಗಳಾದುದನ್ನು ಕಂಡು, ಬುದ್ಧನಾಗಿ ಅವತರಿಸಿ, ಅವರನ್ನು ದುರ್ಮಾರ್ಗದಲ್ಲಿ ಪ್ರವೃತ್ತರಾಗುವಂತೆ ಮಾಡಿ, ಅವರನ್ನು ತಮಸ್ಸಿಗೆ ಕಳುಹಿಸಿದನು[1] (೫೫). ಮುಂದೆ ೨೮ನೆಯ ಕಲಿಯುಗವು ಆರಂಭವಾಗಿ

---

1. ಶ್ರೀಹರಿಯು ತಾಳಿದ ಬುದ್ಧಾವತಾರದ ಕಥಾ ಸಂದರ್ಭ ಮತ್ತು ಮಹಿಮೆಯು, ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೀಗೆ ನಿರೂಪಿತವಾಗಿದೆ:—ತ್ರಿಪುರಾಸುರರಲ್ಲಿ ಮುಖ್ಯನಾದ ದೈತ್ಯನು ಶುದ್ಧೋದನನೆಂಬ ನಾಮದಿಂದ ಭೂಮಿಯಲ್ಲಿ ಹುಟ್ಟಿದನು; ಅವನಿಗೆ 'ಜಿನ'ನೆಂದೂ ಹೆಸರು. ಗಯಾಕ್ಷೇತ್ರದಲ್ಲಿ (ಗಯಾನಾಮಕ ಪತ್ನಿಯಲ್ಲಿ) ಇವನಿಗೊಂದು ಶಿಶು ಜನಿಸಿತು. ಅದನ್ನು ದೂರದಲ್ಲಿ ಹಾಕಿ, ಶ್ರೀವಿಷ್ಣುವು ಶಿಶುರೂಪದಿಂದ ಅಲ್ಲಿ ಮಲಗಿದನು. ಜಿನನು ತನ್ನದೇ ಶಿಶುವೆಂದು ತಿಳಿದು; ಜಾತಕರ್ಮಾದಿ ವೇದೋಕ್ತ ಸಂಸ್ಕಾರವನ್ನು ಮಾಡಲು ಉದ್ಯುಕ್ತನಾದುದನ್ನು ಕಂಡು, ಶಿಶುರೂಪದ ಶ್ರೀವಿಷ್ಣುವು ಅಪಹಾಸ್ಯಮಾಡಿ ನಕ್ಕನು; ಆಶ್ಚರ್ಯಚಕಿತರಾದ ಜನಾದಿಗಳಿಗೆ ತಾನು ತತ್ತ್ವೋಪದೇಶ ಮಾಡುವುದಾಗಿ ಹೇಳಿ, ಬುದ್ಧದರ್ಶನ ಸಾರವನ್ನು ಉಪದೇಶಿಸಿದನು; ಪರಂಪರೆಯಿಂದ ಪ್ರಾಪ್ತವಾದ ವೇದಮಾರ್ಗವನ್ನು ತ್ಯಜಿಸಲು ಮಾಡಿದ ಉಪದೇಶದಲ್ಲಿ ವಿಶ್ವಾಸಮಾಡದಿರಲು, ಶಿಶುರೂಪದಿಂದ, (ಸ್ವೇಚ್ಛೆಯಿಂದಲೇ) ರುದ್ರಾದಿಗಳು ತನ್ನ ಮೇಲೆ ಪ್ರಯೋಗಿಸಿದ ಶೂಲಾದಿ ಆಯುಧಗಳನ್ನೂ, ತಾನೇ ಆಕಾಶಮಾರ್ಗದಿಂದ ತರಿಸಿದ ಚಕ್ರಾಯುಧವನ್ನೂ ವಶಮಾಡಿಕೊಂಡು, ಚಕ್ರವನ್ನು ಆಸನವನ್ನಾಗಿಮಾಡಿ ಅದರ ಮೇಲೆ ಕೂತು, ತಾನು ವಿಷ್ಣು ಮೊದಲಾದ ದೇವತೆಗಳಿಗಿಂತ ಶ್ರೇಷ್ಠನೆಂದು ನಿದರ್ಶನಮಾಡಿ, ತನ್ನ ಉಪದೇಶದಲ್ಲಿ ಅವರಿಗೆ ವಿಶ್ವಾಸ ಹುಟ್ಟಿಸಿದನು. ಸ್ವಯೋಗ್ಯ ಮಾರ್ಗಗಳಲ್ಲಿ ಜೀವರನ್ನು ಸ್ಥಾಪಿಸುವುದೂ, ತನ್ಮೂಲಕ ಅವರವರ ಗತಿಗಳನ್ನು ಹೊಂದಿಸುವುದೂ, ಶ್ರೀಹರಿ ಸಂಕಲ್ಪವೇ ಆಗಿದೆ. 'ತತಸ್ತು ಬುದ್ಧೋದಿತ ಪಕ್ಷಸಂಸ್ಥಃ ಜಿನೋಽಪಿ ಚಕ್ರೇ ಮತಮನ್ಯದೇವ' (ತಾ.ನಿರ್ಣಯ) ಎಂದಂತೆ ಜಿನನು ಬುದ್ಧೋಪದೇಶವನ್ನೇ ಆಶ್ರಯಿಸಿದ್ದರೂ ಶಬ್ದಾಂತರಗಳಿಂದ ತನ್ನ ಮತವೆಂದು (ಅಲ್ಪ ಪ್ರಭೇದಗಳುಳ್ಳ) ಮತಾಂತರವನ್ನು ಪ್ರವರ್ತಿಸಿದನು. ಹೀಗೆ ಬುದ್ಧ ಜೈನ ಮತಗಳೆರಡೂ ಅವೈದಿಕ ಮತ (ವೇದಪ್ರಾಮಾಣ್ಯ ಒಪ್ಪದ ಮತ)ಗಳೆಂಬುದು ಸ್ಪಷ್ಟಪಡುತ್ತದೆ.

(ಬುದ್ಧಾವತಾರವನ್ನು ತಾಳಿ). ದುರ್ಮಾರ್ಗೇ-(ಆ ಕರ್ಮಗಳಲ್ಲಿ ಅಯೋಗ್ಯರಾದ ಅವರನ್ನು) ದುರ್ಮಾರ್ಗದಲ್ಲಿ ನಿಯೋಜ್ಯ-(ಪ್ರವೃತ್ತರಾಗುವಂತೆ) ಯೋಜನೆಮಾಡಿ, ವೇದಗಳಲ್ಲಿ ಅಪ್ರಾಮಾಣ್ಯ ಬುದ್ಧಿಯನ್ನುಂಟುಮಾಡಿ). ಏತಾನ್-ಅವರನ್ನು, ತಮಃ-ತಮಸ್ಸನ್ನು, ಅದಾಂ-ಹೊಂದಿಸಿದೆನು. (ಅವರಿಗೆ ಯೋಗ್ಯ ಗತಿಯನ್ನು ಕೊಟ್ಟೆನು).

**ಅಷ್ಟಾವಿಂಶಯುಗೇ ತ್ವೇವ ಜಾತೇ ಪಶ್ಚಾತ್ತುಭೂಮಿಷ್ಯೈಃ ।**
**ದಸ್ಯುಭಿರ್ಯವನೈಃ ಕ್ರಾಂತಾಮೇಕವರ್ಣತ್ವಮಾಗತಾಂ ॥ ೩೬ ॥**

**ವೀಕ್ಷ್ಯ ಕಲ್ಕಿತ್ವಮಾಪನ್ನಃ ಸಂಹೃತ್ಯೈತಾನ್ ಕೃತವ್ಯಥಾಂ ।**
**ಪುನಃ ಪುನರ್ಯುಗಾಂತೇ ತು ಪ್ರಾಪ್ತೇ ಧರ್ಮಸ್ಯ ವಿಪ್ಲವೇ ॥ ೩೭ ॥**

**ರಾಜರಾಜೋಹಮೇವಾಂಶೈಃ ಸ್ಥಿತ್ವಾ ಸ ಸುನೃಪೇಷ್ವಹಂ ।**
**ಸ್ಥಾಪಯಾಮಿ ಪುನರ್ಧರ್ಮಂ ಪುನರ್ವೇದಾನ್ ದ್ವಿಜಾದಿಕಾನ್ ॥ ೩೮ ॥**

**ಏವಂ ಪ್ರತಿಯುಗಂ ಬ್ರಹ್ಮನ್ ಪ್ರತಿಮನ್ವಂತರಂ ತಥಾ ।**
**ಸೃಷ್ಟಿಸ್ಥಿತ್ಯಾದಿಕರ್ಮಾಣಿ ಸ್ವಯಮೇವ ಕರೋಮ್ಯಹಂ ॥ ೩೯ ॥**

ಅಷ್ಟಾವಿಂಶಯುಗೇ ತು-೨೮ನೇ ಕಲಿಯುಗವು ಜಾತೇ (ಸತಿ)-ಹುಟ್ಟುತ್ತಿರಲಾಗಿ, ಪಶ್ಚಾತ್-ನಂತರ (ಅದು ಮುಗಿದು; ಅದರ ಸಂಧಿಕಾಲವು ನಡೆಯುತ್ತಿರಲು), ದಸ್ಯುಭಿಃ-ದಸ್ಯು (ಚೋರಾದಿ)ಗಳಿಂದಲೂ, ಯವನೈಃ-ಯವನರಿಂದಲೂ (ತುರುಷ್ಕ

---

ಅದು ಮುಗಿಯುವ ಹೊತ್ತಿಗೆ, ಅದರ ಸಂಧಿಕಾಲವು ನಡೆಯುತ್ತಿರಲು, ಭೂಮಿಯು, ದಸ್ಯುಗಳಿಂದಲೂ, ಯವನರಿಂದಲೂ, ದುಷ್ಟರಾಜರಿಂದಲೂ, ಆಕ್ರಾಂತವಾಗಿ, ವರ್ಣಸಾಂಕರ್ಯದಿಂದ, ಬ್ರಾಹ್ಮಣಾದಿವರ್ಣಗಳು ನಾಶವಾಗಿ, ಎಲ್ಲ ಪ್ರಜೆಗಳೂ ಶೂದ್ರರಂತಾಗಿ, ಒಂದೇ ಜಾತಿಯವರೆನಿಸಿ, ಭೂದೇವಿಯು, ಪುನಃ ದುಃಖಿತಳಾದುದನ್ನು ನೋಡಿ, ಕಲ್ಕಿ ರೂಪದಿಂದ ಅವತರಿಸಿ, ಈ ಎಲ್ಲರನ್ನೂ ಸಂಹರಿಸಿದೆನು; ಕಲಿಯುಗದ ಸಂಧಿಕಾಲದ ಅಂತ್ಯದಲ್ಲಿ[1] ಪುನಃ ಪುನಃ ಧರ್ಮಕ್ಕೆ ಆಘಾತವುಂಟಾಗುತ್ತಿರಲು, ನಾನು ರಾಜರಾಜೇಶ್ವರ ನಾಮಕನಾದ, ನನ್ನ ಅಂಶಗಳಿಂದ, ಸನ್ಮಾರ್ಗಿಗಳಾದ ರಾಜರಲ್ಲಿ (ಪ್ರಜಾನಾಯಕರಲ್ಲಿ—ಅಧಿಕಾರಗಳಲ್ಲಿ) ನಿಂತು, ವೇದಗಳನ್ನೂ, ಬ್ರಾಹ್ಮಣ

1. ಶ್ರೀವಿಷ್ಣುವು, ತ್ರಿಯುಗಹೂತಿ ಎಂದು ವೇದಾದಿಗಳಲ್ಲಿ ಪ್ರಸಿದ್ಧನಾಗಿರುವನು; ಕಲಿಯುಗದಲ್ಲಿ ಭಗವಂತನು ಅವತರಿಸುವುದಿಲ್ಲ; ಬುದ್ಧ, ಕಲ್ಕಿ, ಅವತಾರಗಳು ಕಲಿಯುಗದಲ್ಲಿ ಆದವುಗಳಲ್ಲ; ಪ್ರತಿಯುಗದಂತೆ, ಕಲಿಯುಗಕ್ಕೂ, ಆರಂಭಕ್ಕೆ ಮೊದಲು ಮತ್ತು ಯುಗದ ಅಂತ್ಯದಲ್ಲಿ (ಎರಡೂ ಪಾರ್ಶ್ವಗಳಲ್ಲಿ) ಸಂಧಿಕಾಲಗಳಿರುತ್ತವೆ; ಮೊದಲಿನ ಸಂಧಿಕಾಲದಲ್ಲಿ ಬುದ್ಧಾವತಾರವೂ, ನಂತರ ಸಂಧಿಕಾಲದಲ್ಲಿ ಕಲ್ಕಿ ಅವತಾರವೂ ಆದುದೆಂದು ತಿಳಿಯಬೇಕು.

ರಿಂದಲೂ), ಕುಭೂಮಿಪೈಃ-(ಅಸಮರ್ಥರಾದ) ದುಷ್ಟರಾಜರಿಂದಲೂ (ಅಧಿಕಾರಿಗಳಿಂದಲೂ), ಕ್ರಾಂತಾಂ-ಆಕ್ರಮಿಸಲ್ಪಟ್ಟ, ಏಕವರ್ಣಾತ್ವಂ-ಒಂದೇ ವರ್ಣವುಳ್ಳತನವನ್ನು (ಚಾತುರ್ವರ್ಣ್ಯ ವಿಭಾಗವು ಸಾಂಕರ್ಯದಿಂದ ನಷ್ಟವಾಗಿ ಪ್ರಜೆಗಳೆಲ್ಲರೂ ಶೂದ್ರಸಾದೃಶ್ಯವನ್ನು) ಆಗತಾಂ-ಹೊಂದಿ, ಕೃತವ್ಯಥಾಂ-ದುಃಖಿಯಾಗಿ ಮಾಡಲ್ಪಟ್ಟ ಭೂಮಿಯನ್ನು ವೀಕ್ಷ್ಯ-ನೋಡಿ, ಕಲ್ಕಿತ್ವಂ-ಕಲ್ಕಿ ರೂಪವನ್ನು ಆಪನ್ನಃ- ಹೊಂದಿದವನಾಗಿ, ಏತಾನ್-ಇವರೆಲ್ಲರನ್ನೂ (ದಸ್ಯು ಯವನಾದಿ ನಾಯಕರನ್ನು), ಸಂಹೃತ್ಯ-ಸಂಹಾರಮಾಡಿ, ಯುಗಾಂತೇ ತು-ಯುಗವು ಮುಗಿಯುವ ಕಾಲದಲ್ಲಿ (ಕಲಿಯುಗದ ಸಂಧಿಕಾಲದ ಅಂತ್ಯಭಾಗದಲ್ಲಿ), ಪುನಃ ಪುನಃ-ಮತ್ತೆ ಮತ್ತೆ ಧರ್ಮಸ್ಯ ವಿಪ್ಲವೇ-ಧರ್ಮನಾಶವು, ಪ್ರಾಪ್ತೇ (ಸತಿ)-ಪ್ರಾಪ್ತವಾಗುತ್ತಿರಲು, ರಾಜರಾಜಃ ಅಹಂ ಏವ-ರಾಜರಾಜೇಶ್ವರನಾದ ನಾನೇ, ಸುನೃಪೇಷು-ಸನ್ಮಾರ್ಗಿಗಳಾದ ರಾಜರಲ್ಲಿ (ನಾಯಕರಲ್ಲಿ), ಅಂಶೈಃ-(ನನ್ನ ರಾಜರಾಜೇಶ್ವರನಾಮಕ) ಅಂಶಗಳಿಂದ, ಸ್ಥಿತ್ವಾ-ನಿಂತು, ಸಃ ಅಹಂ-ಆ ನಾನೇ, ಪುನಃ-ಮತ್ತೆ (ಕೃತಯುಗಾರಂಭಕ್ಕೆ ಅವಶ್ಯಕವಾದ ಪರಿಸ್ಥಿತಿಯನ್ನೊದಗಿಸಲು), ವೇದಾನ್-ವೇದಗಳನ್ನೂ, ದ್ವಿಜಾದಿಕಾನ್-ಬ್ರಾಹ್ಮಣಾದಿಗಳನ್ನೂ, ಧರ್ಮಂ-ವರ್ಣಾಶ್ರಮ ಧರ್ಮಗಳನ್ನೂ, ಸ್ಥಾಪಯಾಮಿ-ಸ್ಥಿರವಾಗಿ ನಿಲ್ಲಿಸುತ್ತೇನೆ; ಬ್ರಹ್ಮನ್-ಹೇ ಬ್ರಹ್ಮ! (ಶ್ರೀವಿಷ್ಣುವು ಹೇಳುತ್ತಾನೆ—ಅಥವಾ, ಹೇ! ಜ್ಞಾನಿಯಾದ ಶೌನಕ! ಎಂದು ಸೂತನು ಹೇಳುತ್ತಾನೆಂದಾದರೂ ತಿಳಿಯಬಹುದು-ಅಥವಾ, ಮತ್ಸ್ಯರೂಪಿಯಾದ ಶ್ರೀಹರಿಯು, ಸತ್ಯವ್ರತನಿಗೆ ಮುಂದಿನ ವೈವಸ್ವತ ಮನ್ವಂತರದ ಭವಿಷ್ಯವನ್ನು ಹೇಳುತ್ತಿರುವನೆಂದೂ ತಿಳಿಯಬಹುದು); ಏವಂ-ಹೀಗೆ, ಪ್ರತಿಯುಗಂ-ಪ್ರತಿಯುಗದಲ್ಲಿಯೂ (ಯುಗ-ಎರಡು, ಜೊತೆ; ಧರ್ಮಹಾನಿ,

---

ರನ್ನೂ, ವರ್ಣಾಶ್ರಮ ಧರ್ಮಗಳನ್ನೂ, ರಕ್ಷಿಸಿ, ಸ್ಥಾಪಿಸುತ್ತೇನೆ; ಇದೇ ರೀತಿ ನಾನಾ ಅವತಾರಗಳನ್ನು ಸ್ವೀಕರಿಸಿ, ಪ್ರತಿಯುಗದಲ್ಲಿ ಪ್ರತಿ ಮನ್ವಂತರದಲ್ಲಿ[1] ಧರ್ಮ ಸಂಸ್ಥಾಪನೆಯ ಕಾರ್ಯವನ್ನೂ, ಸೃಷ್ಟ್ಯಾದಿ ಸಕಲ ಕರ್ಮಗಳನ್ನು ಸ್ವಯಂ ನಾನೇ (ಸ್ವತಂತ್ರನಾದ ನಾನೇ) ನಿರ್ವಹಿಸುತ್ತೇನೆ (೫೬-೫೯). ಸೂರ್ಯಪುತ್ರನಾದ

---

1. ವೈವಸ್ವತ ಮನ್ವಂತರದಲ್ಲಿ ಆಗುವವುಗಳೆಂಬ ಭಗವದವತಾರಗಳು, ಸ್ವಾಯಂಭುವಾದಿ ಇತರ ಮನ್ವಂತರಗಳಲ್ಲಿ ಅಲ್ಲಿ ಆದ ಪ್ರಧಾನ ಭಗವದವತಾರಗಳನ್ನು ಮಾತ್ರ ನಿರೂಪಿಸಿರುವುದರಿಂದ, ಎಲ್ಲ ಮನ್ವಂತರಗಳಲ್ಲಿ ಆಗುವುವೆಂದು, 'ಪ್ರತಿ ಮನ್ವಂತರ'ವೆಂಬ ಶಬ್ದಪ್ರಯೋಗವಿರುವುದರಿಂದ, ತಿಳಿಯಲು ಅವಕಾಶವಿದೆ. ಪ್ರಸಿದ್ಧವಾದ ದಶಾವತಾರಗಳೆಲ್ಲವೂ ಪ್ರತಿದಿನ ಕಲ್ಪದಲ್ಲಿ ಒಂದಾವರ್ತಿ ಸಂಭವಿಸುವುವೆಂದು ಅನ್ಯ ಪ್ರಮಾಣಗಳು ಸೂಚಿಸುತ್ತವೆ. ಈ ಪ್ರಕಾರದ (ಪ್ರತಿ ಮನ್ವಂತರದಲ್ಲಿಯೋ ಅಥವಾ ಪ್ರತಿದಿನ ಕಲ್ಪದಲ್ಲಿಯೋ ಎಂಬ) ಸಂಶಯದ ಪರಿಹಾರವನ್ನು ತಾತ್ಪರ್ಯನಿರ್ಣಯದ ಆಳವಾದ ಅಧ್ಯಯನದಿಂದಲೇ ಕಂಡುಕೊಳ್ಳಬೇಕು. ಪ್ರತಿ ಮನ್ವಂತರದಲ್ಲಿ ಸಂಭವಿಸುತ್ತವೆಂಬ ಪಕ್ಷವೇ ಹೆಚ್ಚು ಯುಕ್ತಿಯುಕ್ತವಾಗುತ್ತದೆ.

ಅಧರ್ಮದ ವೃದ್ಧಿ ಆದಾಗಲೆಲ್ಲ). ತಥಾ-ಮತ್ತು, ಪ್ರತಿಮನ್ವಂತರಂ-ಪ್ರತಿಮನ್ವಂತರದಲ್ಲಿಯೂ, ಅಹಂ-ನಾನು, ಸ್ವಯಂ ಏವ-ಸಾಕ್ಷಾತ್ತಾಗಿ (ಸ್ವತಂತ್ರನಾಗಿ), ಸೃಷ್ಟಿಸ್ಥಿತ್ಯಾದಿ ಕರ್ಮಾಣಿ-ಸೃಷ್ಟಿ ಸ್ಥಿತಿ (ಪಾಲನೆ) ಮೊದಲಾದ (ನಾಶಾದಿ) ಕರ್ಮಗಳನ್ನು ಕರೋಮಿ-ಮಾಡುತ್ತೇನೆ.

**ಸಾವರ್ಣಿರಷ್ಟಮಃ ಪಶ್ಚಾನ್ಮನುಃ ಸೂರ್ಯಸುತೋಽಭವತ್।**
**ನಿರ್ಮೋಕವಿರಜಸ್ಕಾದ್ಯಾಃ ತತ್ಸುತಾ ದೇವವರ್ಚಸಃ ॥ ೬೦ ॥**
**ದೇವಾ ಸುತಪಸೋ ನಾಮ ಬಲಿರಿಂದ್ರಸ್ತದಾಽಭವತ್ ।**
**ಗಾಲವಾದ್ಯಾಶ್ಚ ಮುನಯಃ ಸಪ್ತ ತತ್ರ ಪ್ರಕೀರ್ತಿತಾಃ ॥ ೬೧ ॥**

ಪಶ್ಚಾತ್–ನಂತರ (ವೈವಸ್ವತಮನುವಿನ ನಂತರ), ಸೂರ್ಯಸುತಃ-ಸೂರ್ಯನ ಮಗನಾದ, ಸಾವರ್ಣಿಃ-ಸಾವರ್ಣಿಯು, ಅಷ್ಟಮಃ-ಎಂಟನೆಯ, ಮನುಃ-ಮನುವು (ಆಗುವನು); ದೇವವರ್ಚಸಃ-ದೇವತೆಗಳಂತೆ ತೇಜೋವಂತರಾದ, ನಿರ್ಮೋಕ ವಿರಜಸ್ಕಾದ್ಯಾಃ-ನಿರ್ಮೋಕ, ವಿರಜಸ್ಕ ಮೊದಲಾದವರು, ತತ್ಸುತಾಃ-ಆತನ (ಮನುವಿನ) ಮಕ್ಕಳು; ಸುತಪಸಃ ನಾಮ-ಸುತಪರೆಂಬ ಹೆಸರುಳ್ಳವರು, ದೇವಾಃ-ದೇವತೆಗಳು; ತದಾ-ಆಗ (ಆ ಎಂಟನೆಯ ಮನ್ವಂತರದಲ್ಲಿ), ಬಲಿಃ-ಬಲಿರಾಜನೆ, ಇಂದ್ರಃ-ದೇವೇಂದ್ರನು, (ಆ ಪದವಿಯಲ್ಲಿರುವವನು), ಅಭವತ್-ಆದನು; ಚ-ಮತ್ತು, ಗಾಲವಾದ್ಯಾಃ-ಗಾಲವರೇ ಮೊದಲಾದವರು, ತತ್ರ-ಅಲ್ಲಿ (ಆ ಮನ್ವಂತರ

---

ಸಾವರ್ಣಿಯು ಅಷ್ಟಮಮನುವು; ಆತನೇ ಮುಂದಿನ ಮನ್ವಂತರಾಧಿಪತಿಯು; ಆಗ ನಿರ್ಮೋಕ ವಿರಜಸ್ಕಾದಿಗಳು (ಪ್ರಜಾಭಿವೃದ್ಧಿಯಲ್ಲಿ ತೊಡಗುವ) ಮನುಪುತ್ರರು; ಇವರು ದೇವತೆಗಳಂತೆ ಮಹಾತೇಜಸ್ವಿಗಳು (ಆ ಮನ್ವಂತರದಲ್ಲಿ ಮುಂದೆ ಹುಟ್ಟುವ ಪುರುಷರೆಲ್ಲರೂ 'ಮಾನವರು' ಪ್ರತಿ ಮನ್ವಂತರದ ಮನು ಮತ್ತು ಮನುಪುತ್ರರಿಂದಲೇ ಉತ್ಪನ್ನರಾಗುವ ಸಾಧನ ದೇಹಿಗಳೆಲ್ಲರೂ 'ಮಾನವ'ರೆಂದೇ ಕರೆಯಲ್ಪಡುವರು); ಆಗ ಸುತಪರೆಂಬುವರು ದೇವತೆಗಳು; ಬಲಿಯೇ ಇಂದ್ರನು;[1] ಗಾಲವಾದಿ ಋಷಿಗಳು

---

೧. 'ಇಂದ್ರಸ್ತದಾ ಭವತ್' ಎಂಬ ಭೂತಕಾಲ ಪ್ರಯೋಗವು, ಭವಿಷ್ಯದಲ್ಲಿ ಸಂಭವಿಸುವ ನಿಶ್ಚಯವನ್ನು ಸೂಚಿಸುತ್ತದೆ. ಈ ಎರಡೇ ಶ್ಲೋಕಗಳಿಂದ ಈ ಮನ್ವಂತರದ ವಿಷಯವು ಸಂಗ್ರಹೀತವಾಗಿದೆ. ಭಗವದವತಾರಾದಿ ವಿವರಗಳನ್ನು ಈ ಹಿಂದಿನಂತೆ ತಿಳಿಯಬಹುದೆಂಬುದರ ಸೂಚಕವಿದು. ಪ್ರಸಿದ್ಧವಾದ ಮತ್ಸ್ಯಕೂರ್ಮಾದಿ ದಶಾವತಾರಗಳು, ಎಲ್ಲ ಮನ್ವಂತರಗಳಿಗೆ ಸಮವೆಂದೂ, ಆಯಾ ಮನ್ವಂತರಕ್ಕೆ ವಿಶೇಷವಾದ ಪ್ರಧಾನಾವತಾರಗಳು ಅಲ್ಲಲ್ಲಿ ಹೇಳಲ್ಪಡುತ್ತವೆಂದೂ ತಿಳಿಯಬೇಕು; ಉದಾ:—ಸ್ವಾಯಂಭುವ ಮನ್ವಂತರದಲ್ಲಿ 'ಯಜ್ಞ'ನಾಮಕ ಅವತಾರ, ತಾಪಸ ಮನ್ವಂತರದಲ್ಲಿ ಗಜೇಂದ್ರನನ್ನು ಮೋಚನೆ ಮಾಡಿದ ತಾಪಸಹರಿಯ ಅವತಾರ ಇತ್ಯಾದಿ. ಈ ಎಂಟನೇ ಮನ್ವಂತರದಲ್ಲಿ ದೇವಗುಹ್ಯ ಸರಸ್ವತೀ ಎಂಬ ದಂಪತಿಗಳಿಂದ ಸಾರ್ವಭೌಮ ನಾಮಕನಾಗಿ ಶ್ರೀಹರಿಯು ಅವತರಿಸುವನು.

ದಲ್ಲಿ), ಸಪ್ತಮುನಯಃ-ಸಪ್ತರ್ಷಿಗಳೆಂದು, ಪ್ರಕೀರ್ತಿತಾಃ-ಹೇಳಲ್ಪಡುವರು.

**ವಾರುಣಿರ್ನವಮೋ ದಕ್ಷಸಾವರ್ಣಿರಿತಿ ವೈ ಮನುಃ ।**
**ಧೃಷ್ಟಕೇತ್ವಾದಯಸ್ತಸ್ಯ ಸುತಾಃ ಪಾರಾದಯಸ್ತಥಾ ॥ ೬೨ ॥**
**ಇಂದ್ರಸ್ತದಾದ್ಭುತೋ ನಾಮ ಮುನಯೋ ದ್ಯುತಿಮನ್ಮುಖಾಃ ।**
**ತದಾಹಮೃಷಭೋ ಭೂತ್ವಾ ಗತೋಽದ್ಭುತಸಹಾಯತಾಂ ॥ ೬೩ ॥**

ವಾರುಣಿಃ-ವರುಣಪುತ್ರನಾದ, ದಕ್ಷಸಾವರ್ಣಿಃ-ದಕ್ಷಸಾವರ್ಣಿ, ಇತಿ-ಎಂಬುವನು, ನವಮಃ-ಒಂಭತ್ತನೆಯ, ಮನುಃ ವೈ-ಮನುವು, ನಿಶ್ಚಯ; ಧೃಷ್ಟಕೇತ್ವಾದಯಃ-ಧೃಷ್ಟಕೇತು ಮೊದಲಾದವರು, ತಸ್ಯ-ಅತನ, ಸುತಾಃ-ಮಕ್ಕಳು; ತಥಾ-ಮತ್ತು ಪಾರಾದಯಃ-ಪಾರಾದಿಗಳು (ದೇವತೆಗಳು); ತದಾ-ಆಗ, ಅದ್ಭುತಃ ನಾಮ-ಅದ್ಭುತನೆಂಬುವನು, ಇಂದ್ರಃ-ಇಂದ್ರನು; ದ್ಯುತಿಮನ್ಮುಖಾಃ-ದ್ಯುತಿಮಾನ್ ಮೊದಲಾದವರು, ಮುನಯಃ-(ಸಪ್ತ) ಋಷಿಗಳು; ತದಾ-ಆಗ, ಅಹಂ-ನಾನು, ಋಷಭಃ ಭೂತ್ವಾ-

ಸಪ್ತರ್ಷಿಗಳು (೬೦-೬೧). ವರುಣ ಪುತ್ರನಾದ ದಕ್ಷಸಾವರ್ಣಿಯು, ಒಂಭತ್ತನೇ ಮನುವು; ಧೃಷ್ಟಕೇತು ಮೊದಲಾದವರು[1] ಮನುಸುತರು; ಪಾರಾದಿಗಳು ದೇವತೆಗಳು; ಅದ್ಭುತ ನಾಮಕನು ಇಂದ್ರನಾಗುವನು; ದ್ಯುತಿಮಂತ ಮೊದಲಾದವರು ಸಪ್ತರ್ಷಿಗಳು; ಆ ಮನ್ವಂತರದಲ್ಲಿ ನಾನು ಋಷಭನಾಮದಿಂದ ಅವತರಿಸಿ, ಅದ್ಭುತನ (ಇಂದ್ರನ)

1. ಮನುಪುತ್ರರು, ದೇವತೆಗಳು, ಸಪ್ತರ್ಷಿಗಳು, ಋಷಭನ ಅವತಾರ, ಇವುಗಳ ವಿವರವನ್ನು ಭಾಗವತದಿಂದ ತಿಳಿಯಬೇಕು—ಪ್ರಸಕ್ತಭಾಗವತ ಶ್ಲೋಕಗಳನ್ನು ಈ ಮುಂದೆ ಉದಾಹರಿಸಲಾಗಿದೆ. ಶ್ರೀವೇದವ್ಯಾಸರಿಂದ ಕೃತವಾದ ಪುರಾಣೇತಿಹಾಸ ಗ್ರಂಥಗಳಲ್ಲಿ, ಒಂದರಲ್ಲಿ ವಿಸ್ತಾರವಾಗಿ ನಿರೂಪಿಸಿರುವುದನ್ನು, ಇದೇ ವಿಷಯವು ಪ್ರಸಂಗತ್ವೇನ ಮತ್ತೊಂದು ಗ್ರಂಥದಲ್ಲಿ ಬಂದಾಗ, ಸಂಕ್ಷೇಪವಾಗಿ ನಿರೂಪಿಸುವುದೂ, ಒಂದು ಗ್ರಂಥದಲ್ಲಿ ಸಂಗ್ರಹವಾಗಿ ನಿರೂಪಿಸಿರುವುದನ್ನು, ಮತ್ತೊಂದು ಗ್ರಂಥದಲ್ಲಿ ವಿಸ್ತರಿಸುವುದೂ, ಕಂಡುಬರುವ ನಿಯಮವೆಂಬುದನ್ನು ಗಮನದಲ್ಲಿಡುವುದು ಅವಶ್ಯಕ—ಪುರಾಣ, ಉಪಪುರಾಣಾದಿಗಳನ್ನು ಅನ್ಯೋನ್ಯ ಸಹಾಯದಿಂದ ವಿವರಪಡಿಸಿಕೊಂಡು, ವಿಷಯಗಳನ್ನು ಗ್ರಹಿಸಬೇಕು.

'ನವಮೋ ದಕ್ಷಸಾವರ್ಣಿಃ ಮನುರ್ವರುಣಸಂಭವಃ ।
ಭೂತಕೇತುರ್ದೀಪ್ತಕೇತುರಿತ್ಯಾದ್ಯಾಸ್ತತ್ಸುತಾ ನೃಪ ॥
ಪಾರಾಮರೀಚಿಗರ್ಭಾದ್ಯಾ ದೇವಾ ಇಂದ್ರೋಽದ್ಭುತಃ ಸ್ಮೃತಃ ।
ದ್ಯುತಿಮತ್ಪ್ರಮುಖಾಸ್ತತ್ರ ಭವಿಷ್ಯಂತ್ಯೃಷಯಸ್ತತಃ ॥
ಆಯುಷ್ಮತೋಽಂಬುಧಾರಾಯಾಮೃಷಭೋ ಭಗವತ್ಕಲಾ ॥
ಭವಿತಾ...' ಇತ್ಯಾದಿ (ಭಾಗವತ) ವಾಕ್ಯಗಳಿಂದ, ಧೃಷ್ಟಕೇತು ಮೊದಲಾದವರು, ಎಂಬಲ್ಲಿ ಭೂತಕೇತು, ದೀಪ್ತಕೇತು ಮೊದಲಾದವರನ್ನು ತಿಳಿಯಬೇಕು; ಅದರಂತೆ, ಪಾರಾದಿ ದೇವತೆಗಳು ಎಂಬಲ್ಲಿ, ಪಾರಾ, ಮರೀಚಿಗರ್ಭಾದಿಗಳನ್ನು ತಿಳಿಯಬೇಕು; ಆಯುಷ್ಮಂತನಿಂದ ಅಂಬುಧರಾ ದೇವಿಯಲ್ಲಿ ಋಷಭನಾಮಕ ಭಗವದವತಾರವೆಂಬ ವಿವರವನ್ನು ಗ್ರಹಿಸಬೇಕು.

ಋಷಭನಾಮದಿಂದ ಅವತರಿಸಿ, ಅದ್ಭುತಸಹಾಯತಾಂ-ಅದ್ಭುತನ (ಇಂದ್ರನ) ಸಹಾಯಕನು, ಗತಃ-ಆದೆನು (ಸಹಾಯಕಭಾವವನ್ನು ಹೊಂದಿದೆನು).

**ಬ್ರಹ್ಮಸಾವರ್ಣಿನಾಮಾಭೂದ್ದಶಮೋ ವೈ ಮನುಸ್ತದಾ ।**
**ಹವಿಷ್ಮತ್ಪ್ರಮುಖಾ ವಿಪ್ರಾ ದೇವೇಂದ್ರೋಽಭೂತ್ ಸ್ವಯಂ ಶಿವಃ ॥೬೪॥**
**ವಿಷ್ವಕ್ಸೇನೋಽಪ್ಯಹಂ ಭೂತ್ವಾ ತತ್ಸಖ್ಯಂ ಕೃತವಾನಪಿ ।**
**ಸುಖಾಸನಾದ್ಯಾ ದೇವಾಸ್ತು ತಂ ಸದೈವೋಪತಸ್ಥಿರೇ ॥ ೬೫ ॥**

ದಶಮಃ ಮನುಃ-ಹತ್ತನೇ ಮನುವು, ಬ್ರಹ್ಮಸಾವರ್ಣಿನಾಮಾ-ಬ್ರಹ್ಮ ಸಾವರ್ಣಿ ಎಂಬುವನು, ಅಭೂತ್-ಆದನು (ಆಗುತ್ತಾನೆ); ಹವಿಷ್ಮತ್ಪ್ರಮುಖಾಃ-ಹವಿಷ್ಮಂತನೇ ಮೊದಲಾದವರು, ವಿಪ್ರಾಃ-ಸಪ್ತರ್ಷಿಗಳು; ಸ್ವಯಂ ಶಿವಃ-ಸಾಕ್ಷಾತ್ ಶಿವನೇ (ಕೈಲಾಸ ಪತಿಯೇ) ದೇವೇಂದ್ರಃ-ಇಂದ್ರನು, ಅಭೂತ್-ಆದನು; ಅಹಂ ಅಪಿ-ನಾನಾದರೂ, ವಿಷ್ವಕ್ಸೇನಃ ಭೂತ್ವಾ-ವಿಷ್ವಕ್ಸೇನ ನಾಮಕನಾಗಿ ಅವತರಿಸಿ, ತತ್ಸಖ್ಯಂ-ಇಂದ್ರನ (ಇಂದ್ರ ಪದವಿಯಲ್ಲಿದ್ದ ಶಿವನ), ಸಖ್ಯಂ-ಸ್ನೇಹವನ್ನು ಕೃತವಾನ್-ಮಾಡುವವನಾದೆನು; ಸುಖಾಸನಾದ್ಯಾಃ-ಸುಖಾಸನ (ಸುವಾಸನಾದಿ) ಮೊದಲಾದವರು, ದೇವಾಃ-ದೇವತೆಗಳು, ತಂ-ಇಂದ್ರನನ್ನು ಸದಾ ಏವ-ಎಲ್ಲ ಕಾಲದಲ್ಲಿ ಉಪತಸ್ಥಿರೇ- ಸೇವಿಸುತ್ತಿರುವರು.

**ಮನುರೇಕಾದಶೋ ಜಜ್ಞೇ ಧರ್ಮಸಾವರ್ಣಿನಾಮಕಃ ।**
**ಇಂದ್ರೋ ವೈಧೃತನಾಮಾಸೀನ್ಮುನಯಸ್ತ್ವಾರುಣಾದಯಃ ॥ ೬೬ ॥**

---

ಸಹಾಯಕನಾಗಿರುವೆನು (೬೨-೬೩). ಬ್ರಹ್ಮಸಾವರ್ಣಿ ಎಂಬಾತನು, ಹತ್ತನೇ ಮನುವಾದನು; ಹವಿಷ್ಮಂತ ಮೊದಲಾದವರೇ ಸಪ್ತರ್ಷಿಗಳಾದರು; ಸ್ವಯಂ ಶಿವನೇ ಇಂದ್ರನಾದನು; ನಾನು ವಿಷ್ವಕ್ಸೇನನೆಂಬ ನಾಮದಿಂದ ಅವತರಿಸಿ, ಇಂದ್ರಸಖನಾದೆನು; **ಸುಖಾಸನ ಮೊದಲಾದ ದೇವತೆಗಳು**, ಇಂದ್ರನನ್ನು (ಸಖನಾದ ನನ್ನನ್ನು ಸರ್ವದಾ ಸೇವಿಸುತ್ತಿದ್ದರು[1] (೬೪-೬೫). ಧರ್ಮಸಾವರ್ಣಿ ಎಂಬಾತನು ಹನ್ನೊಂದನೆಯ ಮನುವಾದನು;[2] ಆಗ ವೈಧೃತನೆಂಬುವನು ಇಂದ್ರನಾದನು; ಅರುಣಾದಿಗಳು

1. ಬ್ರಹ್ಮಸಾವರ್ಣಿಯು, ಉಪಶ್ಲೋಕನೆಂಬುವನ ಪುತ್ರನು; ಭೂರಿಷೇಣಾದಿಗಳು ಮನುಪುತ್ರರು; ಹವಿಷ್ಮದಾದಿಗಳು ಸಪ್ತರ್ಷಿಗಳು; ಸುವಾಸನಾದಿಗಳು ದೇವತೆಗಳು; ಶಂಭುವೇ ದೇವೇಂದ್ರನು; ವಿಶ್ವಸೃಜನಪತ್ನೀ ವಿಷೂಚೀದೇವಿಯಲ್ಲಿ ವಿಷ್ವಕ್ಸೇನರೂಪದಿಂದ ಶ್ರೀಹರಿಯ ಅವತಾರ; ಭಾಗವತದಿಂದ ಈ ವಿವರಗಳನ್ನು ತಿಳಿಯಬಹುದು.

2. ಅನಾಗತ ಮೊದಲಾದ ೧೦ ಜನ ಮನುಪುತ್ರರು; ಆರ್ಯಕನ ಪತ್ನೀ ವೈಧೃತೀ ನಾಮಕಳಲ್ಲಿ ಧರ್ಮಸೇತುನಾಮದಿಂದ ಭಗವಂತನ ಪ್ರಧಾನವಾದ ಅವತಾರವಾಗುವುದು; ಈ ವಿವರಗಳನ್ನು ಭಾಗವತದಿಂದ ತಿಳಿಯಬೇಕು.

**ವಿಹಂಗಮಾದ್ಯಾ ದೇವಾಶ್ಚ ತಸ್ಮಿನ್ ಮನ್ವಂತರೇಽಭವನ್ ।**

ಧರ್ಮಸಾವರ್ಣಿನಾಮಕಃ-ಧರ್ಮಸಾವರ್ಣಿ ಎಂಬುವನು, ಏಕಾದಶಃಮನುಃ-ಹನ್ನೊಂದನೆಯ ಮನುವು, ಜಜ್ಞೇ-ಆದನು; ವೈಧೃತನಾಮ-ವೈಧೃತ ನೆಂಬುವನು, ಇಂದ್ರಃ-ಇಂದ್ರನು, ಆಸೀತ್-ಆದನು; ಅರುಣಾದಯಃ-ಅರುಣ ಮೊದಲಾದವರು, ಮುನಯಃ-ಸಪ್ತರ್ಷಿಗಳಾದರು; ತಸ್ಮಿನ್ ಮನ್ವಂತರೇ-ಆ ಮನ್ವಂತರದಲ್ಲಿ ವಿಹಂಗಮಾದ್ಯಾಃ-ವಿಹಂಗಮಾದಿಗಳು, ದೇವಾಃ-ದೇವತೆಗಳಾದರು.

**ದ್ವಾದಶೋ ರುದ್ರಸಾವರ್ಣಿರ್ದೇವಶ್ರೇಷ್ಠಾದಯಃ ಸುತಾಃ ॥ ೬೭ ॥**

**ಇಂದ್ರಸ್ತು ಋತಧಾಮಾಽಭೂನ್ಮುನಯೋಽಗ್ನೀಧ್ರಕಾದಯಃ ।**

**ಹರಿತಾದ್ಯಾಸ್ತದಾ ದೇವಾಃ ಸ್ವಧಾಮಾಖ್ಯಾಹಮೇವ ತು ॥ ೬೮ ॥**

ರುದ್ರಸಾವರ್ಣಿಃ-ರುದ್ರಸಾವರ್ಣಿಯು, ದ್ವಾದಶಃ-ಹನ್ನೆರಡನೆಯವನು (ಮನುವು); ದೇವಶ್ರೇಷ್ಠಾದಯಃ-ದೇವಶ್ರೇಷ್ಠನೇ ಮೊದಲಾದವರು, ಸುತಾಃ-ಮನುಪುತ್ರರು; ಇಂದ್ರಃ ತು-ಇಂದ್ರನಾದರೋ, ಋತಧಾಮಾ-ಋತಧಾಮನೆಂಬುವನು, ಅಭೂತ್-ಆದನು; ಅಗ್ನೀಧ್ರಕಾದಯಃ-ಅಗ್ನೀಧ್ರಕ ಮೊದಲಾದವರು, ಮುನಯಃ-(ಸಪ್ತ) ಋಷಿಗಳಾದರು; ತದಾ-ಆ (ಹನ್ನೆರಡನೆಯ) ಮನ್ವಂತರದಲ್ಲಿ ಹರಿತಾದ್ಯಾಃ-ಹರಿತನೇ ಮೊದಲಾದವರು; ದೇವಾಃ-ದೇವತೆಗಳು; ಅಹಂ ತು-ನಾನಾದರೋ, ಸ್ವಧಾಮಾಖ್ಯಾ-ಸ್ವಧಾಮನಾಮಕನಾದೆನು (ಅವತರಿಸುವೆನು).

**ತ್ರಯೋದಶೋ ಮನುರ್ಜಾತೋ ದೇವಸಾವರ್ಣಿನಾಮಕಃ ।**

**ತತ್ಸುತಾಶ್ಚಿತ್ರಸೇನಾದ್ಯಾಃ ಸುಕರ್ಮಾದ್ಯಾಶ್ಚ ದೇವತಾಃ ॥ ೬೯ ॥**

**ದಿವಸ್ಪತಿಸ್ತು ದೇವೇಂದ್ರೋ ನಿರ್ಮೋಚಕಮುಖಾದ್ವಿಜಾಃ ।**

**ಯೋಗೇಶ್ವರೋ ಮಮಾಂಶೋಽಭೂತ್ತಸ್ಮಿನ್ನಂತರೇ ಶುಭೇ ॥ ೭೦ ॥**

---

ಸಪ್ತರ್ಷಿಗಳೂ, ವಿಹಂಗಮನೇ ಮೊದಲಾದವರು ದೇವತೆಗಳೂ ಆದರು (೬೬). ರುದ್ರಸಾವರ್ಣಿಯು ಹನ್ನೆರಡನೆಯ ಮನುವು;[1] ದೇವಶ್ರೇಷ್ಠಾದಿಗಳು ಆತನ ಪುತ್ರರು; ಋತಧಾಮಾ ಎಂಬುವನೇ ಇಂದ್ರನು; ಅಗ್ನೀಧ್ರಕ ಮೊದಲಾದವರು ಸಪ್ತರ್ಷಿಗಳು; ಆಗ ಹರಿತಾದಿಗಳು ದೇವತೆಗಳು; ಸ್ವಧಾಮನಾಮಕನಾಗಿ ನಾನೇ ಅವತರಿಸುವೆನು (೬೭-೬೮). ದೇವಸಾವರ್ಣಿನಾಮಕನೇ ಹದಿಮೂರನೆಯ ಮನುವು; ಚಿತ್ರಸೇನಾದಿ

1. ದೇವವಾನ್, ಉಪದೇವ, ದೇವಶ್ರೇಷ್ಠ ಮೊದಲಾದವರು ಮನುಪುತ್ರರು; ತಪೋಮೂರ್ತಿ, ತಪಸ್ವೀ, ಅಗ್ನೀಧ್ರ ಮೊದಲಾದವರು ಋಷಿಗಳು; ಸತ್ಯಸಹನೆಂಬಾತನಿಂದ ಆತನ ಪತ್ನೀ ಸೂನೃತಾ ಎಂಬಾಕೆಯಲ್ಲಿ ಸ್ವಧಾಮನ ಅವತಾರ.

ದೇವಸಾವರ್ಣಿನಾಮಕಃ-ದೇವಸಾವರ್ಣಿ ಎಂಬುವನು, ತ್ರಯೋದಶಃ ಮನುಃ-ಹದಿಮೂರನೆಯ ಮನುವು, ಜಾತಃ-ಆದನು; ಚಿತ್ರಸೇನಾದ್ಯಾಃ-ಚಿತ್ರಸೇನ ಮೊದಲಾದವರು, ತತ್ಸುತಾಃ-ಆತನ ಪುತ್ರರು; ಸುಕರ್ಮಾದ್ಯಾಃ-ಸುಕರ್ಮಾದಿಗಳು, ದೇವತಾಃ-ದೇವತೆಗಳು; ದಿವಸ್ಪತಿಃ ತು-ದಿವಸ್ಪತಿಯೇ (ಸೂರ್ಯನೇ), ದೇವೇಂದ್ರಃ-ದೇವೇಂದ್ರನು (ಆದನು-ಆಗುವನು); ನಿರ್ಮೋಚಕ ಮುಖಾಃ-ನಿರ್ಮೋಚಕನೇ ಮೊದಲಾದವರು; ದ್ವಿಜಾಃ-ಸಪ್ತರ್ಷಿಗಳು; ತಸ್ಮಿನ್-ಆ, ಶುಭೇ-ಮಂಗಳಕರವಾದ, ಮನ್ವಂತರೇ-ಮನ್ವಂತರದಲ್ಲಿ ಮಮಾಂಶಃ-ನನ್ನ (ಶ್ರೀಹರಿಯ) ಅಂಶವು, ಯೋಗೇಶ್ವರಃ-ಯೋಗೇಶ್ವರನಾಮದಿಂದ, ಅಭೂತ್-ಅವತರಿಸಿತು (ಅವತರಿಸುತ್ತೇನೆ).

**ಇಂದ್ರಸಾವರ್ಣಿನಾಮಾಸೀನ್ಮನುರಂತ್ಯಶ್ಚತುರ್ದಶ ।**
**ಉರ್ವಾದಯಃ ಸುತಾಸ್ತಸ್ಯ ಪವಿತ್ರಾ ದೇವತಾಸ್ತಥಾ ॥ ೭೧ ॥**
**ಶುಚಿರಿಂದ್ರೋಽಗ್ನಿವಾಹಾದ್ಯಾಸ್ತದಾ ಸಪ್ತರ್ಷಯಃ ಸ್ಮೃತಾಃ ।**
**ಬೃಹದ್ಭಾನುರಹಂ ಬ್ರಹ್ಮನ್ ಶುಚಿಮಿಂದ್ರಮನುವ್ರತಃ ॥ ೭೨ ॥**

ಇಂದ್ರಸಾವರ್ಣಿನಾಮಾ-ಇಂದ್ರಸಾವರ್ಣಿ ಎಂಬುವನು, ಚತುರ್ದಶ-ಹದಿನಾಲ್ಕನೆಯ, ಅಂತ್ಯಃ-ಕಡೆಯ (ಈ ಶ್ವೇತವಾರಾಹಕಲ್ಪದ ಕಡೆಯ ಮನ್ವಂತರದ), ಮನುಃ-ಮನುವು, ಆಸೀತ್-ಆದನು; ಉರ್ವಾದಯಃ-ಉರು (ಗಂಭೀರ) ಮೊದಲಾದವರು, ತಸ್ಯ-ಆ ಮನುವಿನ, ಸುತಾಃ-ಪುತ್ರರು; ತಥಾ-ಮತ್ತು ಪವಿತ್ರಾಃ-(ಚಾಕ್ಷುಷನ ಮಕ್ಕಳಾದ) ಪವಿತ್ರನಾಮಕರು, ದೇವತಾಃ-ದೇವತೆಗಳು, ಶುಚಿಃ-ಶುಚಿನಾಮಕನು (ಅಗ್ನಿಪುತ್ರನು), ಇಂದ್ರಃ-ದೇವೇಂದ್ರನು; ತದಾ-ಆಗ, ಅಗ್ನಿವಾಹಾದ್ಯಾಃ-ಅಗ್ನಿವಾಹಾದಿಗಳು, ಸಪ್ತರ್ಷಯಃ-ಸಪ್ತರ್ಷಿಗಳೆಂದು, ಸ್ಮೃತಃ-

---

ಗಳು ಆತನ ಸುತರು; ಸುಕರ್ಮಾದಿ ನಾಮಕರು ಆಗಿನ ದೇವತೆಗಳು; ಸೂರ್ಯನೇ ದೇವೇಂದ್ರನು; ನಿರ್ಮೋಚಕಾದಿಗಳು, ಸಪ್ತರ್ಷಿಗಳು; ಆ ಶುಭ ಮನ್ವಂತರದಲ್ಲಿ ಯೋಗೇಶ್ವರನಾಮಕನಾಗಿ ನಾನೇ ಅವತರಿಸುವೆನು[1] (೬೯-೭೦). ಇಂದ್ರ ಸಾವರ್ಣಿಯು, ಈ ದಿನ ಕಲ್ಪದ (ಶ್ವೇತವಾರಾಹಕಲ್ಪದ) ೧೪ನೇ ಮನ್ವಂತರದ ಅಧಿ ಪತಿಯು—ಆತನೇ ಕಡೆಯವನು; (ಅವನ ಅಧಿಕಾರಾವಧಿಯು ಮುಗಿದೊಡನೆ ದಿನಕಲ್ಪಾಂತ್ಯದ ಪ್ರಲಯವು ಸಂಭವಿಸುತ್ತದೆ. (ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳು) ನಷ್ಟವಾಗುತ್ತವೆ); ಈ ಮನ್ವಂತರದಲ್ಲಿ ಉರು ಮೊದಲಾದವರು ಮನುಪುತ್ರರು; ಚಾಕ್ಷುಷನ ಮಕ್ಕಳಾದ ಪವಿತ್ರಾದಿಗಳು ದೇವತೆಗಳು; ಶುಚಿಯು ದೇವೇಂದ್ರನು; ಅಗ್ನಿವಾಹಾದಿಗಳು ಸಪ್ತರ್ಷಿಗಳು; ಹೇ ಬ್ರಹ್ಮದೇವ! (ಅಥವಾ

1. ಶ್ರೀಹರಿಯು ಸ್ವಾಂಶದಿಂದ ಬೃಹತೀದೇವಿಯಲ್ಲಿ ಅವತರಿಸುವನು—ಆತನೇ ಯೋಗೇಶ್ವರನು.

ತಿಳಿಯಲ್ಪಟ್ಟಿರುವರು; ಬ್ರಹ್ಮನ್-ಹೇ ಬ್ರಹ್ಮ!, ಬೃಹದ್ಭಾನುಃ-ಬೃಹದ್ಭಾನುನಾಮಕನಾಗಿ ಅವತರಿಸಿ, ಶುಚಿಂ ಇಂದ್ರಂ-ಶುಚಿನಾಮಕ ಇಂದ್ರನನ್ನು ಅನುವ್ರತಃ-ಅನುಸರಿಸಿ ಕೊಂಡಿರುತ್ತೇನೆ.

**ಏವಂ ಹಿ ಮನವಃ ಸರ್ವೇ ಚತುರ್ದಶದಿನೇದಿನೇ ।**
**ಜಾಯಂತೇ ಪ್ರಾಯಶಸ್ತ್ವೇವಂ ಪುನಃ ಪುನರಿಹಾಭವತ್ ॥ ೭೩ ॥**
**ಅನ್ಯೇ ಕಪಿಲದತ್ತಾದ್ಯಾ ಅವತಾರಾಃ ಸಹಸ್ರಶಃ ।**
**ಆವಿರ್ಭಾವಂ ತಿರೋಭಾವಂ ಯಥಾಕಾಲಂ ಭಜಂತಿ ಹಿ ॥ ೭೪ ॥**

ಏವಂ-ಹೀಗೆ, ಸರ್ವೇ-ಎಲ್ಲ, ಚತುರ್ದಶ ಮನವಃ-ಹದಿನಾಲ್ಕು ಮನುಗಳು, ದಿನೇ ದಿನೇ-(ಬ್ರಹ್ಮದೇವನ) ಪ್ರತಿಹಗಲಿನಲ್ಲಿ ಜಾಯಂತೇ-(ಅಧಿಕಾರದಲ್ಲಿ) ಇರುತ್ತಾರೆ; ಪ್ರಾಯಶಃ-ಬಹುವಾಗಿ, ಏವಂತು-ಹೀಗೆಯೇ, ಪುನಃ ಪುನಃ-ಮತ್ತೆ ಮತ್ತೆ ಇಹ-ಈ ಲೋಕದಲ್ಲಿ ಅಭವತ್-ಉಂಟಾಯಿತು; (ಹಿಂದಿನ ಕಲ್ಪಗಳೆಲ್ಲ ಹೀಗೆಯೇ ನಡೆದಿರೆ-ಮುಂದಿನ ಕಲ್ಪಗಳಲ್ಲಿಯೂ, ಪ್ರಾಯಃ ಏಕಪ್ರಕಾರವಾಗಿ ನಡೆಯುತ್ತದೆ):

---

ಜ್ಞಾನಿಯಾದ ಹೇ ಸತ್ಯವ್ರತ!) ಆಗ ನಾನು ಬೃಹದ್ಭಾನುನಾಮಕನಾಗಿ ಅವತರಿಸಿ,[1] ಇಂದ್ರನನ್ನು ಅನುಸರಿಸಿಕೊಂಡಿರುತ್ತೇನೆ (೭೧-೭೨). ಹೀಗೆಯೇ ಬ್ರಹ್ಮದೇವನ ಪ್ರತಿದಿನದ ಹಗಲಿನಲ್ಲಿಯೂ, ೧೪ ಮನುಗಳು ಅಧಿಕಾರಕ್ಕೆ ಬರುತ್ತಾರೆ; ಪ್ರಾಯಶಃ (ಬಹುವಾಗಿ ಹೀಗೆ ದೇವತಾ, ಇಂದ್ರ, ಸಪ್ತರ್ಷಿ ಮೊದಲಾದ ಅಧಿಕಾರಿವರ್ಗದವ

---

1. ಸತ್ರಾಯಣನ ಪತ್ನಿಯಾದ ವಿತಾನದೇವಿಯಲ್ಲಿ ಬೃಹದ್ಭಾನುನಾಮಕನಾಗಿ ಶ್ರೀಹರಿಯು ಅವತರಿಸುತ್ತಾನೆ. ಮನುವೇ ಮೊದಲಾದ ಅಧಿಕಾರವರ್ಗದವರು ಯಾರಿಂದ ನಿಯತರಾಗಿ ಯಾವ ಯಾವ ಕರ್ಮಗಳನ್ನು ನಿರ್ವಹಿಸುವರೆಂಬ ವಿವರಗಳು ಶ್ರೀ ಭಾಗವತದಲ್ಲಿ ಹೀಗೆ ನಿರೂಪಿಸಲ್ಪಟ್ಟಿವೆ:—

ಮನವೋ ಮನುಪುತ್ರಾಶ್ಚ ಮುನಯಶ್ಚ ಮಹೀಪತೇ । ಇಂದ್ರಾಃ ಸುರಗಣಾಶ್ಚೈವ ಸರ್ವೇ ಪುರುಷಶಾಸನಾಃ ॥ ಯಜ್ಞಾದಯೋ ಯಾಃ ಕಥಿತಾಃ ಪೌರುಷ್ಯಸ್ತನವೋ ನೃಪ । ಮನ್ವಾದಯೋ ಜಗದ್ಯಾತ್ರಾಂ ನಯಂತ್ಯಾಭಿಃ ಪ್ರಚೋದಿತಾಃ ॥ ಚತುರ್ಯುಗಾಂತೇ ಕಾಲೇನ ಗ್ರಸ್ತಾನ್ ಶ್ರುತಿಗಣಾನ್ ಯಥಾ । ತಪಸಾ ಋಷಯೋಽಪಶ್ಯನ್ ಯತೋ ಧರ್ಮಃ ಸನಾತನಃ ॥ ತತೋ ಧರ್ಮಂ ಚತುಷ್ಪಾದಂ ಮನವೋ ಹರಿಣೋದಿತಾಃ । ಯುಕ್ತಾಃ ಸಂಚಾರಯಂತ್ಯದ್ಧಾ ಸ್ವೇ ಸ್ವೇ ಕಾಲೇ ಮಹೀಂ ನೃಪ ॥ ಪಾಲಯಂತಿ ಪ್ರಜಾಪಾಲಾಃ ಯಾವದಂತಂ ವಿಭಾಗಶಃ । ಯಜ್ಞಭಾಗಭುಜೋ ದೇವಾ ಯೇ ಚ ತತ್ರಾನ್ವಿತಾಶ್ಚ ತೈಃ ॥ ಇಂದ್ರೋ ಭಗವತಾ ದತ್ತಾಂ ತ್ರೈಲೋಕ್ಯಶ್ರಿಯಮೂರ್ಜಿತಾಂ । ಭುಂಜಾನಃ ಪಾತಿ ಲೋಕಾಂಸ್ತ್ರೀನ್ ಕಾಮಂ ಲೋಕೇ ಪ್ರವರ್ಷತಿ ॥ ಜ್ಞಾನಂ ಚಾನುಯುಗಂ ಬ್ರೂತೇ ಹರಿಃ ಸಿದ್ಧಸ್ವರೂಪಧೃಕ್ । ಋಷಿರೂಪಧರಃ ಕರ್ಮಯೋಗಂ ಯೋಗೇಶರೂಪಧೃಕ್ ॥ ಸರ್ಗಂ ಪ್ರಜೇಶರೂಪೇಣ ದಸ್ಯೂನ್ ಹನ್ಯಾತ್ ಸ್ವರಾಟ್ ವಪುಃ । ಇತ್ಯಾದಿ... ಈ ಶ್ಲೋಕಗಳ ಭಾವಾರ್ಥವು ಹೀಗಿದೆ:—ಮನುಗಳೂ ಮನುಪುತ್ರರೂ,

ಅನ್ಯೇ-ಇತರಗಳಾದ (ಇಲ್ಲಿ ಉಕ್ತವಾಗದ), ಸಹಸ್ರಶಃ-ಸಾವಿರಾರು (ಬಹು), ಕಪಿಲದತ್ತಾದ್ಯಾಃ-ಕಪಿಲ, ದತ್ತ ಮೊದಲಾದ, ಅವತಾರಾಃ-(ಭಗವಂತನ) ಅವತಾರಗಳು, ಯಥಾಕಾಲಂ-ಕಾಲಕಾಲಕ್ಕೆ (ಆಯಾ ಕಾಲದ ಪರಿಸ್ಥಿತಿಗಳಿಗೆ ಅನುಸಾರವಾಗಿ), ಆವಿರ್ಭಾವಂ ಅಭಿವ್ಯಕ್ತಿಯನ್ನೂ, ತಿರೋಭಾವಂ-ಅದೃಶ್ಯತೆಯನ್ನೂ ಭಜಂತಿ-ಹೊಂದುತ್ತವೆ; ಹಿ-ಎಂಬುದು ಶ್ರುತಿ ಸಿದ್ಧವು.

ಮನ್ವಂತರಾನುವರ್ಣನವೆಂಬ ೪೪ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೫

ಶ್ರೀ ವೇದವ್ಯಾಸಾಯ ನಮಃ

ಭಗವಾನುವಾಚ—

ಏವಂ ದಿನೇದಿನೇ ಬ್ರಹ್ಮನ್ ಸೃಷ್ಟಿಸ್ಥಿತ್ಯಪ್ಯಯಾದಿಕಂ ।
ಆಸೀದ್ಯಾವದಪೀತಿಃ ಸ್ಯುಃ ಸಾರ್ಧಸಪ್ತಾದಿಕಾಃ ಸಮಾಃ ॥೧॥

---

ರಿಂದ ಸಹಿತರಾಗಿಯೇ) ಸ್ವಕಾರ್ಯಗಳನ್ನು ನಿರ್ವಹಿಸುತ್ತಾರೆ; ಪುನಃ ಪುನಃ ಪ್ರತಿ ಹಗಲಿನಲ್ಲಿ ಹೀಗೆಯೇ ನಡೆಯುತ್ತದೆ; ಕಪಿಲ, ದತ್ತಾತ್ರೇಯಾದಿ ಇತರ ಅನೇಕ ಭಗವದವತಾರಗಳೂ, ಕಾಲಪರಿಸ್ಥಿತಿಗಳಿಗನುಗುಣವಾಗಿ, ಕಾಲಕಾಲಕ್ಕೆ ಪ್ರಕಟವಾಗುತ್ತವೆ—ತಿರೋಧಾನವನ್ನೂ ಹೊಂದುತ್ತವೆ (೭೩-೭೪).

೪೪ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೫

ತಾತ್ಪರ್ಯ:—ಶ್ರೀವಿಷ್ಣುವು ಹೇಳುತ್ತಾನೆ:—ಹೀಗೆ (ನಿನ್ನ) ಪ್ರತಿದಿನದಲ್ಲಿಯೂ, ಸೃಷ್ಟಿಸ್ಥಿತಿ ಲಯಾದಿಗಳು, (ನಿನ್ನ) ೮೭ ೧/೨ ವರ್ಷಗಳವರೆಗೂ (ನಡೆಯುತ್ತವೆ—

---

ಮುನಿಗಳೂ, ಇಂದ್ರರೂ ಯಜ್ಞಾದಿ (ಸ್ವಾಯಂಭುವ ಮನ್ವಂತರದ ಭಗವದವತಾರ) ಅವತಾರಗಳಿಂದ ಪ್ರೇರಿತರಾಗಿ, ಲೋಕರಕ್ಷಣರೂಪದ ಕಾರ್ಯಗಳನ್ನು ನಡೆಸುತ್ತಾರೆ; ಹಿಂದಿನ ಚತುರ್ಯುಗಾಂತ್ಯದಲ್ಲಿ ನಷ್ಟವಾದ (ನಷ್ಟಪ್ರಾಯಗಳಾದ) ಶ್ರುತಿಗಳನ್ನು ಋಷಿಗಳು ತಪಃಪ್ರಭಾವದಿಂದ ಕಂಡು, ಪುನಃ ಜಗತ್ತಿನಲ್ಲಿ ಪ್ರಚಾರಗೊಳಿಸುತ್ತಾರೆ; ಮನುಗಳು ಲೋಕದಲ್ಲಿ ಧರ್ಮಗಳನ್ನು ಪ್ರವರ್ತಿಸುತ್ತಾರೆ (ಆ ಮನ್ವಂತರದಲ್ಲಿ ಆ ಮನುನಿರ್ಮಿತ ಧರ್ಮಶಾಸ್ತ್ರವೇ ಪ್ರಮಾಣವೆನಿಸುತ್ತದೆ); ಮನುಪುತ್ರರು (ಆಯಾಕಾಲದವರು) ಧರ್ಮರಕ್ಷಣೆಗಾಗಿ ದುಡಿಯುತ್ತಾರೆ; ದೇವತೆಗಳು ಯಜ್ಞಭಾಗಗಳನ್ನು ಸ್ವೀಕರಿಸುತ್ತಾರೆ; ಇಂದ್ರರು ಶ್ರೀಹರಿದತ್ತವಾದ ಸ್ವರ್ಗೈಶ್ವರ್ಯವನ್ನು ಭೋಗಿಸುತ್ತ ಮೂರು ಲೋಕಗಳನ್ನು ವೃಷ್ಟ್ಯಾದಿಗಳನಿತ್ತು ರಕ್ಷಿಸುತ್ತಾರೆ; ಶ್ರೀಹರಿಯು (ಕಪಿಲಾದಿ) ಅವತಾರಗಳಿಂದ ಜ್ಞಾನೋಪದೇಶವನ್ನೂ, ಕರ್ಮಯೋಗವನ್ನೂ, ಅಣಿಮಾದಿಸಾಧನವನ್ನೂ (ಬ್ರಹ್ಮಾದಿಗಳಲ್ಲಿ ಸನ್ನಿಹಿತನಾಗಿ) ಸೃಷ್ಟ್ಯಾದಿಗಳನ್ನೂ ಮಾಡುತ್ತಾನೆ; ಇಂದ್ರಾದಿಗಳಲ್ಲಿದ್ದೂ ದಸ್ಯುಗಳನ್ನೂ ಅಸುರರನ್ನೂ (ಸಜ್ಜನ ಪೀಡಕರನ್ನೂ) ಸಂಹರಿಸುತ್ತಾನೆ; ಇತ್ಯಾದಿ ವಿವರಗಳು ಗಮನಾರ್ಹಗಳಾಗಿವೆ

ಅರ್ಥ:—ಏವಂ-ಹೀಗೆ, ಬ್ರಹ್ಮನ್-ಹೇ ಬ್ರಹ್ಮದೇವ! (ಶ್ರೀವಿಷ್ಣುವು ಹೇಳುತ್ತಾನೆ), ದಿನೇ ದಿನೇ-(೧೪ ಮನ್ವಂತರಗಳುಳ್ಳ ನಿನ್ನ) ಪ್ರತಿದಿನದಲ್ಲಿಯೂ, ಸೃಷ್ಟಿಸ್ಥಿತ್ಯಪ್ಯಯಾದಿಕಂ-ಸೃಷ್ಟಿ ಸ್ಥಿತಿ, ಲಯಾದಿಗಳು, ಸಾರ್ಧಸಪ್ತಾಧಿಕಾಃ-ಏಳುವರೆ ಅಧಿಕವಾದ, ಸಮಾಃ-ವರ್ಷಗಳುಳ್ಳ, ಅಶೀತಿಃ-ಎಂಭತ್ತು (೮೭½ ವರ್ಷಗಳು), ಯಾವತ್ ಸ್ಯುಃ-ಆಗುವವರೆಗೆ, ಆಸೀತ್-ನಡೆಯುತ್ತಿತ್ತು (ನಡೆಯುತ್ತದೆ).

**ಸೃಷ್ಟಿಕಾಲಾಷ್ಟಮೇ ಭಾಗೇ ಸಂಜಿಹೀರ್ಷಾಽಭವನ್ಮಮ ।**
**ತತೋ ವೃಷ್ಟೇರಭಾವೇನ ಭೂಮೌ ಸರ್ವಲಯೋಽಭವತ್ ॥ ೨ ॥**

ಸೃಷ್ಟಿಕಾಲಾಷ್ಟಮೇ ಭಾಗೇ-ಸೃಷ್ಟಿಕಾಲದ (ಕಡೆಯ) ಎಂಟನೇ ಭಾಗದಲ್ಲಿ (೧೦೦ ವರ್ಷಗಳ ಸೃಷ್ಟಿಕಾಲದ ಅಂತ್ಯಭಾಗದ ೧೨½ ವರ್ಷಗಳಲ್ಲಿ ೧೨½ ವರ್ಷಗಳು ಉಳಿದಿರುವಾಗಲೇ), ಮಮ-ನನಗೆ, ಸಂಜಿಹೀರ್ಷಾ-ಸಂಹಾರೇಚ್ಛೆಯು (ಜಗತ್ತನ್ನು ನಾಶಮಾಡುವ ಇಚ್ಛೆಯು), ಅಭವತ್-ಉಂಟಾಯಿತು (ಪ್ರಕಟವಾಯಿತು); ತತಃ-ಅದರಿಂದ (ಆ ನನ್ನ ಇಚ್ಛೆಯ ಪ್ರಭಾವದಿಂದ), ಅಲ್ಲಿಂದ ಮುಂದೆ, ಭೂಮೌ-ಭೂಮಿಯಲ್ಲಿ, ವೃಷ್ಟೇಃ-ಮಳೆಯ, ಅಭಾವೇನ-ಅಭಾವದಿಂದ, ಸರ್ವಲಯಃ-ಸರ್ವನಾಶವು (ಸಸ್ಯಾದಿ ಸಮಸ್ತಪ್ರಾಣನಾಶವು), ಅಭವತ್-ಉಂಟಾಯಿತು.

**ಸಂಕರ್ಷಣಮುಖೋತ್ಥೇನ ವಹ್ನಿನಾ ಸಿಂಧುಶೋಷಣಂ ।**
**ಭೂಮಿಪರ್ವತರಾಶೀನಾಂ ತದೈವ ವಿಲಯೋಽಭವತ್ ॥ ೩ ॥**
**ತಸ್ಮಿನ್ ಮಹಾಶ್ಮಶಾನೇ ತು ಮಹಾಭೈರವರೂಪಧೃಕ್ ।**
**ತಾಂಡವಂ ಕತಿಚಿತ್ಕಾಲಂ ಕೃತವಾನ್ ದೇವತಾವೃತಃ ॥ ೪ ॥**

ಸಂಕರ್ಷಣ ಮುಖೋತ್ಥೇನ-ಶೇಷದೇವನ ಮುಖದಿಂದ ಹೊರಟ (ಬ್ರಹ್ಮಾಂಡವನ್ನು ತನ್ನ ಫಣದಲ್ಲಿ ಹೊತ್ತ ಶೇಷದೇವನ ಮುಖದಿಂದ— ಶೇಷಾಂತರ್ಯಾಮಿ ಸಂಕರ್ಷಣರೂಪೀ ಶ್ರೀಹರಿಯಿಂದ ಹೊರಟ), ವಹ್ನಿನಾ-ಅಗ್ನಿಯಿಂದ, ಸಿಂಧು ಶೋಷಣಂ-ಸಮುದ್ರಗಳು ಬತ್ತಿದವು (ಜಲರಹಿತವಾದುವು); ಭೂಮಿಪರ್ವತ ರಾಶೀನಾಂ-ಭೂ, ಪರ್ವತಾದಿ ಸಮೂಹಗಳ, ವಿಲಯಃ-ನಾಶವೂ, ತದಾ ಏವ-ಆ

---

ಹಿಂದಿನ ಬ್ರಹ್ಮನ ೮೭½ ವರ್ಷಗಳಕಾಲ ನಡೆದವು) (೧). ಆಗ (ಸೃಷ್ಟಿಕಾಲದಲ್ಲಿ ಇನ್ನೂ ೧೨½ ವರ್ಷಗಳಕಾಲ ಉಳಿದಿರುವಾಗಿನಿಂದ), ನನಗೆ ಜಗತ್ತನ್ನು ನಾಶಗೊಳಿಸುವ (ಪ್ರಲಯದ) ಇಚ್ಛೆಯುಂಟಾಯಿತು; ಇದರಿಂದ, ಭೂಮಿಯಲ್ಲಿ ಮಳೆಯ ಅಭಾವವುಂಟಾಗಿ, ಸಮಸ್ತ (ಸಸ್ಯಾದಿ ಸಕಲ ಪ್ರಾಣವರ್ಗದ) ಪ್ರಾಣಗಳ ಲಯವು ಆರಂಭಿಸಿತು (೨). ಬ್ರಹ್ಮಾಂಡವನ್ನು ತನ್ನ ತಲೆಯಲ್ಲಿ ಹೊತ್ತ ಶೇಷದೇವನ ಮುಖದಿಂದ ಹೊರಟ ಅಗ್ನಿಯು, ಸಕಲ ಸಮುದ್ರಗಳನ್ನು ಶೋಷಿಸಿತು; ಭೂ, ಪರ್ವತ ಪ್ರದೇಶಗಳೆಲ್ಲವೂ ದಗ್ಧವಾದುವು; ಮಹಾಶ್ಮಶಾನದಂತಿದ್ದ ಅಲ್ಲಿ ಮಹಾಭಯಂಕರ

ಕಾಲದಲ್ಲಿಯೇ, ಅಭವತ್- ಉಂಟಾಯಿತು; ತಸ್ಮಿನ್ - ಆ, ಮಹಾಶ್ಮಶಾನೇ- ಮಹಾಶ್ಮಶಾನ ದಲ್ಲಿ (ಸಕಲಪ್ರಾಣಿಗಳ ಮಾರಣ ಪ್ರದೇಶದಲ್ಲಿ), ಮಹಾಭೈರವರೂಪಧೃಕ್-(ನಾನು) ಮಹಾಭಯಂಕರವಾದ ರೂಪವನ್ನು ಧರಿಸಿ, ದೇವತಾವೃತಃ- ದೇವತೆಗಳಿಂದ ಪರಿವೃತ ನಾಗಿ, ಕತಿಚಿತ್‌ಕಾಲಂ-ಸ್ವಲ್ಪ ಕಾಲದವರೆಗೆ, ತಾಂಡವಂ-ನರ್ತನವನ್ನು ಕೃತವಾನ್- ಮಾಡುವವನಾದೆನು.

ತಿಷ್ಠತಾಂ ಕಲಿಮುಖ್ಯಾನಾಂ ದೈತ್ಯಾನಾಂ ಚೈವ ಸರ್ವಶಃ ।
ತಮೋದ್ವಾರಿ ಮಹಾಘೋರೇ ಪುನರಾವೃತ್ತಿವರ್ಜಿತೇ ॥ ೫ ॥
ವಾಯುರ್ಗದಾಪ್ರಹಾರೇಣ ಲಿಂಗಭೇದಂ ವಿಧಾಯ ತು ।
ವಿನದ್ಯ ಸಿಂಹನಾದಂ ಚ ಸ್ವದೂತ್ಯೈರ್ಮರುತಾದಿಭಿಃ ॥ ೬ ॥
ಪ್ರಾಕ್ಷೇಪಯನ್ ಮಹಾಕಷ್ಟೇ ತಾನಂಧೇತಮಸಿ ಕ್ರಮಾತ್ ।

ಕಲಿಮುಖ್ಯಾನಾಂ-ಕಲಿಯೇ ಮೊದಲಾದ, ದೈತ್ಯಾನಾಂ-ದೈತ್ಯರು (ತಮೋ ಯೋಗ್ಯರು), ಸರ್ವಶಃ-ಸಮಸ್ತರೂ, ಪುನರಾವೃತ್ತಿ ವರ್ಜಿತೇ-ತಿರಿಗಿ ಈ ಲೋಕಕ್ಕೆ ಬರಲಾರದ (ನಿತ್ಯವಾದ), ಮಹಾಘೋರೇ-ಮಹಾಭಯಂಕರವಾದ, ತಮೋ ದ್ವಾರಿ-ತಮಸ್ಸಿನ ದ್ವಾರದಲ್ಲಿ ತಿಷ್ಠತಾಂ-(ತಮಸ್ಸಿನಲ್ಲಿ ಬೀಳಲು ಸಿದ್ಧರಾಗಿ) ನಿಂತಿರು ವವರ ಲಿಂಗಭೇದಂ-ಲಿಂಗದೇಹದ ಭಂಗವನ್ನು ವಾಯುಃ-ವಾಯು ದೇವನು, ಗದಾಪ್ರಹಾರೇಣ- ಗದಾಪ್ರಹಾರದಿಂದ (ಗದೆಯಿಂದ ಹೊಡೆದು), ವಿಧಾಯ-ಮಾಡಿ, ಸಿಂಹನಾದಂ-ಸಿಂಹನಾದವನ್ನು ವಿನದ್ಯ-ಮಾಡಿ, ಸ್ವದೂತ್ಯೈಃ-ತನ್ನ ದೂತರಾದ, ಮರುತಾದಿಭಿಃ-ಮರುದ್ಗಣದವರು ಮೊದಲಾದವರಿಂದ, ಕ್ರಮಾತ್-ಕ್ರಮದಿಂದ (ದೈತ್ಯತಾರತಮ್ಯಾನುಸಾರವಾಗಿ—ಕಲಿಯನ್ನು ಮೊದಲು ಇತ್ಯಾದಿ ಕ್ರಮದಿಂದ), ತಾನ್-ಆ ಎಲ್ಲ ದೈತ್ಯರನ್ನು, ಮಹಾಕಷ್ಟೇ-ಮಹಾ ದುಃಖಪ್ರದವಾದ ಅಂಧೇತಮಸಿ- ಅಂಧತಮಸ್ಸಿನಲ್ಲಿ ಪ್ರಾಕ್ಷೇಪಯನ್-ಕೆಡಹಿಸಿದನು (ದಬ್ಬಿಕೊಟ್ಟು ಬೀಳಿಸಿದನು).

ಭುಂಜಂತಸ್ತತ್ರ ದುರ್ಭೋಗಾನ್ ಸ್ವರೂಪೇಣ ವ್ಯವಸ್ಥಿತಾಃ ॥ ೭ ॥

---

ವಾದ ರೂಪವನ್ನು ಧರಿಸಿ, ನಾನು, ಕೆಲವುಕಾಲ, ದೇವತೆಗಳಿಂದ ಪರಿವೃತನಾಗಿ ನರ್ತಿಸಿದೆನು (೩-೪). ಅಷ್ಟರಲ್ಲಿ ಕಲಿ ಮೊದಲಾದ ದೈತ್ಯರು ಪುನರಾವರ್ತಿರಹಿತವಾದ ಮಹಾಘೋರವಾದ ಅಂಧತಮಸ್ಸಿನ ದ್ವಾರದಲ್ಲಿ ನಿಂತಿರುವರು; ವಾಯುದೇವನು ಗದಾಪ್ರಹಾರದಿಂದ ಅವರ ಲಿಂಗದೇಹವನ್ನು ಭಂಗಗೊಳಿಸಿ, ಸಿಂಹನಾದ ಮಾಡಿ, ಸ್ವದೂತರಾದ (ಭೃತ್ಯರಾದ) ಮರುದ್ಗಣದವರು ಮೊದಲಾದವರಿಂದ ಅವರೆಲ್ಲರನ್ನೂ ತಾರತಮ್ಯ ಕ್ರಮದಿಂದ, ಅಂಧತಮಸ್ಸಿನಲ್ಲಿ ಕೆಡಹಿಸುತ್ತಾನೆ (೫-೬). ಅಲ್ಲಿ ಈ ಎಲ್ಲ

**ಅನಿತ್ಯಾನೀತಿ ಮನ್ವಾನಾ ಮಿಥ್ಯಾಜ್ಞಾನಸ್ವರೂಪಿಣಃ ।**
**ತಿಷ್ಠಂತ್ಯನಂತಕಾಲಂ ಚ ದ್ವೇಷಿಣೋ ಮಮ ಸರ್ವದಾ ॥ ೮ ॥**

ತತ್ರ-ಅಲ್ಲಿ (ಅಂಧತಮಸ್ಸಿನಲ್ಲಿ), ಸ್ವರೂಪೇಣ-ಸ್ವಸ್ವರೂಪದಿಂದ (ಕೇವಲ ಸ್ವರೂಪದೇಹಮಾತ್ರದಿಂದ), ವ್ಯವಸ್ಥಿತಾಃ-ಇರುತ್ತಿದ್ದು ದುರ್ಭೋಗಾನ್-ವಿವಿಧ ದುಃಖಕರವಾದ ಭೋಗಗಳನ್ನು (ಸ್ವರೂಪೇಂದ್ರಿಯಗಳಿಂದ), ಭುಂಜಂತಃ-ಭೋಗಿಸುತ್ತ (ಭೋಗಿಸುವವರಾಗಿ), ಮಿಥ್ಯಾಜ್ಞಾನ ಸ್ವರೂಪಿಣಃ-ಮಿಥ್ಯಾಜ್ಞಾನ ಸ್ವರೂಪರಾದ, ಸರ್ವದಾ-ಸದಾ, ಮಮ-ನನ್ನ ದ್ವೇಷಿಣಃ-ದ್ವೇಷಿಗಳು, ಅನಿತ್ಯಾನಿ ಇತಿ ಮನ್ವಾನಾಃ-(ಅಲ್ಲಿ ತಾವು ಅನುಭವಿಸುವ ದುರ್ಭೋಗಗಳನ್ನು) ಅನಿತ್ಯಗಳೆಂದು ತಿಳಿಯುವವರಾಗಿ, ಅನಂತಕಾಲಂ ಚ-ನಿತ್ಯದಲ್ಲಿ (ಅಂತ್ಯವಿಲ್ಲದ ಕಾಲದಲ್ಲಿಯೂ) ತಿಷ್ಠಂತಿ-(ಅಲ್ಲಿಯೇ) ಇರುತ್ತಾರೆ.

**ಅಥ ವ್ಯುತ್ಕ್ರಮತೋ ನಾಶೇ ಸಮಾರಬ್ಧೇ ಸತಿ ಕ್ರಮಾತ್ ।**
**ಭುವರಾದಿಲಯೇ ಜಾತೇ ದೇವತಾನಾಂ ಲಯೇಪಿ ಚ ॥ ೯ ॥**
**ಶನೈರ್ನವತಿಮಾಬ್ದಾಂತೇ ಬ್ರಹ್ಮಾಂಡಸ್ಯ ಲಯೋ ಭವೇತ್ ।**
**ತತ ಆವರಣಾನಾಂ ಚ ದಶಾನಾಂ ಕ್ರಮಶಸ್ತಥಾ ॥ ೧೦ ॥**

---

ದೈತ್ಯರು, ಸ್ವಸ್ವರೂಪದಿಂದ ಸ್ಥಿತರಾಗಿ, ವಿವಿಧ ದುರ್ಭೋಗಗಳನ್ನು (ದುಃಖವನ್ನೇ ಪ್ರದಾನಮಾಡುವ ಭೋಗಗಳನ್ನು), ಈ ದುಃಖಭೋಗವು ನಿತ್ಯವಾದುದೆಂಬುದಕ್ಕೆ ವಿರುದ್ಧವಾಗಿ ಅನಿತ್ಯವೆಂದು ತಿಳಿಯುವ ಈ ಮಿಥ್ಯಾಜ್ಞಾನಿಗಳು, ನಿತ್ಯವೂ (ದುಃಖವನ್ನೇ) ಭೋಗಿಸುತ್ತ, ಅನಂತಕಾಲಕ್ಕೂ ಅಲ್ಲಿಯೇ ನಿಲ್ಲುವರು; ಇದು ಸರ್ವದಾ ನನ್ನನ್ನು ದ್ವೇಷಿಸುವ ಮಿಥ್ಯಾಜ್ಞಾನಿಗಳಿಗೆ ಲಭಿಸುವ ಆತ್ಯಂತಿಕ ಗತಿಯು[1] (೭-೮). ನಂತರ, ಮುಂದೆ ಸೃಷ್ಟಿಕ್ರಮಕ್ಕೆ ವಿರುದ್ಧವಾದ ಕ್ರಮದಿಂದ ಲಯವು ಆರಂಭವಾಗುತ್ತಿರಲು,

---

1. 'ಅಂಧತಮಃ ಪ್ರವಿಶ್ಯಂತಿ ಯೇ ಅವಿದ್ಯಾಮುಪಾಸತೇ' ಇತ್ಯಾದಿ ಶ್ರುತಿಗಳೂ, 'ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು । ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ॥ ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ' । (ಗೀತಾ) ಮೊದಲಾದ ಸ್ಮೃತಿ ಪ್ರಮಾಣಗಳೂ, ತಮೋಯೋಗ್ಯರಿಗೆ ದೊರೆಯುವ ಗತಿಗಳನ್ನು ನಿರೂಪಿಸುತ್ತವೆ. ತಮೋಯೋಗ್ಯರು ಶ್ರೀವಿಷ್ಣುವಿನಲ್ಲಿ ಮಾಡುವ ದ್ವೇಷವು (ಇವರು ಅನಾದಿ ದ್ವೇಷಿಗಳು—ಅವರ ಸ್ವರೂಪವೇ ತದ್ರೂಪವಾದುದು) ಒಂಭತ್ತು ವಿಧವಾದುದು; 'ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ । ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ । ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ । ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ॥ ಎಂಬಲ್ಲಿ ಸಂಗ್ರಹೀತವಾಗಿದೆ.' (ಅರ್ಥವಿವರಣೆಯು ಈ ಹಿಂದೆ ಪ್ರಸಕ್ತವಾಗಿದೆ. ಅಲ್ಲಿ ನೋಡಬಹುದು).

ಅಥ-ಮುಂದೆ, ವ್ಯುತ್ಕ್ರಮತಃ-ವ್ಯುತ್ಕ್ರಮದ (ಸೃಷ್ಟಿಕ್ರಮಕ್ಕೆ ವಿರುದ್ಧವಾದ), ಕ್ರಮಾತ್-ಕ್ರಮದಿಂದ, ನಾಶೇ-ಲಯವು, ಸಮಾರಬ್ಧೇಸತಿ-ಪ್ರಾರಂಭವಾಗುತ್ತಿರಲು, ಭುವರಾದಿಲಯೇ-ಭುವರ್ಲೋಕ ಮೊದಲಾದುದರ ಲಯವೂ, ದೇವತಾನಾಂ-ದೇವತೆಗಳ, ಲಯೇ ಅಪಿ-ಲಯವೂ ಸಹ, ಜಾತೇ (ಸತಿ)-ಸಂಭವಿಸುತ್ತಿರಲಾಗಿ, ಶನೈಃ-ಮೆಲ್ಲಮೆಲ್ಲಗೆ (ಸಾವಧಾನದಿಂದ), ನವತಿಮಾಬ್ದಾಂತೇ-(ಬ್ರಹ್ಮದೇವನ) ೯೦ನೇ ವರ್ಷದ ಅಂತ್ಯಭಾಗದಲ್ಲಿ, ಬ್ರಹ್ಮಾಂಡಸ್ಯ-ಬ್ರಹ್ಮಾಂಡದ, ಲಯಃ-ಲಯವು (ನಾಶವು), ಭವೇತ್-ಸಂಭವಿಸುತ್ತದೆ; ತತಃ-ಅನಂತರ, ತಥಾ-ಹಾಗೆಯೇ, ಕ್ರಮಶಃ-ಕ್ರಮವಾಗಿ (ವ್ಯುತ್ಕ್ರಮದಿಂದ), ದಶಾನಾಂ-ಹತ್ತು ಆವರಣಾನಾಂ- (ಬ್ರಹ್ಮಾಂಡದ) ಆವರಣಗಳ, ಚ-(ಲಯವು) ಸಹ (ಭವೇತ್-ಸಂಭವಿಸುತ್ತದೆ).

**ತತ್ರತ್ಯ ದೇವದೇಹಾನಾಂ ಸ್ಥೂಲಾನಾಂ ವಿಲಯೋ ಭವೇತ್ ।**
**ಯಾವತ್ಪಂಚೋನಶತಕಮಾದ್ಯಸ್ಯ ಬ್ರಹ್ಮಣೋಽಭವತ್ ॥ ೧೧ ॥**
**ತಾವದಿತ್ಥಮಭೂಲ್ಲೀನಂ ಸರ್ವಸ್ಥಲಂ ಕ್ರಮೇಣ ತು ।**
**ತತಃ ಸೂಕ್ಷ್ಮಲಯಶ್ಚಾಸೀದ್ ವ್ಯುತ್ಕ್ರಮೇಣ ಶನೈಃ ಶನೈಃ ॥ ೧೨ ॥**

ತತ್ರತ್ಯ-ಅಲ್ಲಿರುವ (ಬಹಿರಾವರಣದಲ್ಲಿರುವ), ದೇವ ದೇಹಾನಾಂ-ದೇವತೆಗಳ ದೇಹಗಳ, ವಿಲಯಃ-ನಾಶವು, ಭವೇತ್-ಆಗುತ್ತದೆ; (ಆದರೆ) ಸ್ಥೂಲಾನಾಂ-(ಆದರೆ

---

(ಭೂಲೋಕದ ಮೇಲಿನ) ಭುವರಾದಿ ಲೋಕಗಳ ಮತ್ತು ತದ್ಗತ ದೇವತೆಗಳ ಲಯವೂ ಸಂಭವಿಸುತ್ತ ಬಂದು, ಬ್ರಹ್ಮದೇವನ ೯೦ನೇ ವರ್ಷದ ಅಂತ್ಯಭಾಗದಲ್ಲಿ ಬ್ರಹ್ಮಾಂಡವೂ ಲಯ ಹೊಂದುತ್ತದೆ; ಅನಂತರ ಕ್ರಮವಾಗಿ (ವ್ಯುತ್ಕ್ರಮದಿಂದಲೇ) ಬ್ರಹ್ಮಾಂಡದ ಹತ್ತು ಬಹಿರಾವರಣಗಳೂ ಲಯಗೊಳ್ಳುತ್ತವೆ (೯-೧೦). ಬಹಿರಾವರಣಗಳಲ್ಲಿರುವ ದೇವತೆಗಳ ಸ್ಥೂಲ ದೇಹಗಳೂ ಲಯ ಹೊಂದಿದವು (ಈ ರೀತಿ ಪ್ರಲಯವು ಪ್ರತಿ ಬ್ರಹ್ಮಕಲ್ಪದಲ್ಲಿಯೂ ಸಂಭವಿಸುತ್ತದೆ); ಈ ಬಹಿರಾವರಣ ಮತ್ತು ದೇವದೇಹಗಳ

---

ಮಿಥ್ಯಾಜ್ಞಾನವೇ ಅವರ ಸ್ವರೂಪವೆಂದು ಹೇಳದ್ದರಿಂದ, ದುಃಖವನ್ನೂ ಅವರು ಸುಖವೆಂದೇ ತಿಳಿಯುವರೆಂಬರ್ಥವನ್ನು ಗ್ರಹಿಸಿ, ನರಕದಲ್ಲಿ ಬಿದ್ದು ಅನುಭವಿಸುವ ದುಃಖಗಳನ್ನೂ, ಕೊಳಚೆಯಲ್ಲಿ ಬಿದ್ದ ಕ್ರಿಮಿಯು ಅದನ್ನೇ ಸುಖವೆಂದು ಭ್ರಮಿಸುವಂತೆ, ತಮೋ ಯೋಗ್ಯರೂ, ಸುಖವೆಂದೇ ಭ್ರಮಿಸಿ ಭೋಗಿಸುವರೆಂದು ತಿಳಿಯಕೂಡದು; ಅವರ ಸ್ವರೂಪಜ್ಞಾನವು 'ಧರ್ಮಿಣ್ಯಭ್ರಾಂತಂ ಪ್ರಕಾರೇ ಚ ವಿಪರ್ಯಯಃ' ಎಂಬ ನ್ಯಾಯದಿಂದ, ನರಕದುಃಖದ, ಸತ್ಯತ್ವ, ನಿತ್ಯತ್ವ, ಭಗವದ್ದ್ವೇಷನಿಮಿತ್ತಕತ್ವಾದಿ ಪ್ರಕಾರಗಳಲ್ಲಿ ಮಾತ್ರ ವಿಪರೀತವು; ನರಕದುಃಖವು, ಈಗ ದುಃಖರೂಪದಿಂದ ತೋರುತ್ತಿದೆ—ನಿಜಕ್ಕೂ ಇದು ದುಃಖವಲ್ಲ ಸುಖವೇ ಇರಬೇಕು; ಈ ದುಃಖವು ನಿತ್ಯವಲ್ಲ—ಅನಿತ್ಯವಾದುದು; ಒಂದು ಕಾಲದಲ್ಲಿ ಅಲ್ಲಿಂದ ಮೇಲೆದ್ದು ದ್ವೇಷಿಯಾದ ಹರಿಯನ್ನು ಶಾಸನಮಾಡುತ್ತೇವೆ; ಇತ್ಯಾದಿ ಭಿನ್ನಪ್ರಕಾರದಿಂದ ಅನುಭವಕ್ಕೆ ಬರುತ್ತದೆಯಲ್ಲದೇ ಸುಖವೆಂಬುದಾಗಿ ಅಲ್ಲ.

ಆ ದೇವತೆಗಳ) ಪ್ರಾಕೃತ ದೇಹಗಳಿಗೆ ಮಾತ್ರ; ಆದ್ಯಸ್ಯ ಬ್ರಹ್ಮಣಃ-ಆದ್ಯ ಬ್ರಹ್ಮನ, ಯಾವತ್ ಪಂಚೋನಶತಕಂ-೯೫ನೇ ವರ್ಷದವರೆಗೆ, ಅಭವತ್-(ಈ ಲಯವು) ಸಂಭವಿಸಿತು; ಕ್ರಮೇಣ-(ಬ್ರಹ್ಮಾಂಡದ ಆವರಣಗಳು, ಒಂದಾದ ಮೇಲೆ ಒಂದರಂತೆ, ಪೃಥಿವೀ ಜಲಾದಿಗಳು), ಸರ್ವಸ್ಥಲಂ-ಸರ್ವತ್ರ, ಇತ್ಥಂ-ಹೀಗೆ, ತಾವತ್-ಆ ಕಾಲದವರೆಗೆ, ಲೀನಂ ಅಭೂತ್-(ತಂತಮ್ಮ ಕಾರಣತ್ವಗಳಲ್ಲಿ ಲಯ ಹೊಂದಿದವು; ತತಃ-ಅಲ್ಲಿಂದ ಮುಂದೆ, ಶನೈಃ ಶನೈಃ-ಸಾವಧಾನದಿಂದ, ವ್ಯುತ್ಕ್ರಮೇಣ-ವ್ಯುತ್ಕ್ರಮದಿಂದ, ಸೂಕ್ಷ್ಮಲಯಶ್ಚ-ಸೂಕ್ಷ್ಮತತ್ತ್ವಗಳ (ದೇವತೆಗಳ ಸೂಕ್ಷ್ಮದೇಹಗಳ) ಲಯವು ಸಹ, ಆಸೀತ್-ನಡೆಯಿತು.

**ವಿರಿಂಚೇಶ್ಚರಮೇ ಕಲ್ಪೇ ಯೋಗಿನೋ ಮುಕ್ತಿಗಾಮಿನಃ ।**
**ವಿವಿಶುರ್ಬ್ರಹ್ಮಣೋ ದೇಹೇ ಲಿಂಗಮಾತ್ರಾವಶೇಷಿಣಃ ॥ ೧೩ ॥**

ವಿರಿಂಚೇಃ-ಬ್ರಹ್ಮದೇವನ, ಚರಮೇ ಕಲ್ಪೇ-ಕಡೆಯ ದಿನದಲ್ಲಿ (೧೦೦ನೆಯ ವರ್ಷದ ಕಡೆಯ ದಿನದಲ್ಲಿ), ಮುಕ್ತಿಗಾಮಿನಃ-ಮೋಕ್ಷವನ್ನು ಹೊಂದಲಿರುವ, ಯೋಗಿನಃ-ಜ್ಞಾನಿಜೀವರು, ಲಿಂಗಮಾತ್ರಾವಶೇಷಿಣಃ-ಲಿಂಗದೇಹ ಮಾತ್ರ ಉಳ್ಳವರಾಗಿ, ಬ್ರಹ್ಮಣಃ-ಬ್ರಹ್ಮದೇವನ, ದೇಹೇ-ದೇಹದಲ್ಲಿ, ವಿವಿಶುಃ-ಪ್ರವೇಶಿಸಿದರು.

**ಕರ್ಮಶೇಷಯುತಾಶ್ಚಾನ್ಯೇ ಸಂಸಾರೇ ಪರಿವರ್ತಿನಃ ।**
**ಬ್ರಹ್ಮಾಂಡಸ್ಥಾಖಿಲಾ ಜೀವಾಃ ಸೂತ್ರವಾಯುಮುಪಾಶ್ರಿತಾಃ ॥ ೧೪ ॥**

ಸಂಸಾರೇ ಪರಿವರ್ತಿನಃ-(ಮುಂದಿನ ಕಲ್ಪದಲ್ಲಿ ಸಹ) ಸಂಸಾರದಲ್ಲಿ ಸುತ್ತಲಿರುವ, ಕರ್ಮಶೇಷಯುತಾಃ-ಕರ್ಮಶೇಷಸಹಿತರಾದ, ಅನ್ಯೇ-ಇತರರಾದ, ಬ್ರಹ್ಮಾಂಡಸ್ಥಾಖಿಲಾಜೀವಾಃ-ಬ್ರಹ್ಮಾಂಡದಲ್ಲಿದ್ದ ಸಮಸ್ತ ಜೀವರೂ, ಸೂತ್ರ ವಾಯುಂ- ಸೂತ್ರ ನಾಮಕ ವಾಯುವನ್ನು ಉಪಾಶ್ರಿತಾಃ-ಆಶ್ರಯಿಸಿದರು.

---

ಲಯವು ಆದ್ಯ ಬ್ರಹ್ಮನ ೯೫ ವರ್ಷಗಳ ಅಂತ್ಯದವರೆಗೂ[1] ನಡೆಯಿತು; ಆ ಒಳಗೆ, ಸರ್ವತ್ರ (ಬಹಿರಾವರಣಗಳ ಸರ್ವಪ್ರದೇಶದಲ್ಲಿ) ಕ್ರಮವಾಗಿ ಎಲ್ಲ ಕಾರ್ಯವಸ್ತುಗಳು ಸ್ವಸ್ವಕಾರಣಗಳಲ್ಲಿ ಲೀನವಾದವು (ಲಯ ಹೊಂದಿದವು); ಅಲ್ಲಿಂದ ಮುಂದೆ, ಸೂಕ್ಷ್ಮ ತತ್ತ್ವಗಳ, ಹಾಗೂ ಅಭಿಮಾನಿ ದೇವತೆಗಳ ಸೂಕ್ಷ್ಮ ದೇಹಗಳ ಲಯವು ವ್ಯುತ್ಕ್ರಮದಿಂದಲೇ ನಿಧಾನವಾಗಿ, ಸಾಗಿತು (೧೧-೧೨). ಬ್ರಹ್ಮನ ೧೦೦ನೆಯ ವರ್ಷದ ಕಡೆಯದಿನ ಕಲ್ಪದಲ್ಲಿ ಮುಕ್ತರಾಗಲಿರುವ ಜ್ಞಾನಿಗಳು, ಲಿಂಗದೇಹ ಮಾತ್ರವುಳ್ಳವರಾಗಿ, ಬ್ರಹ್ಮನ ದೇಹವನ್ನು ಪ್ರವೇಶಿಸಿದರು (೧೩). ಮುಂದಿನ ಕಲ್ಪದಲ್ಲಿ ಸಹ ಸಂಸಾರದಲ್ಲಿ

---

1. ಆದಿಸೃಷ್ಟಿಯಲ್ಲಿ ಮಹತತ್ತ್ವದ ನಿರ್ಮಾಣವಾದನಂತರ, ಸ್ಪಷ್ಟವಾಗಿ, ಮಹತತ್ತ್ವಾತ್ಮಕ ಸೂಕ್ಷ್ಮದೇಹವುಳ್ಳ ಪುರುಷನಾಮಕ ಬ್ರಹ್ಮನು, ಆದ್ಯಬ್ರಹ್ಮನೆಂದು ವ್ಯವಹರಿಸಲ್ಪಡುತ್ತಾನೆ. ಈ ವಿಷಯವು ಈ ಹಿಂದೆ ಪ್ರಸಕ್ತವಾಗಿದೆ.

**ಸ ವಾಯುಃ ಪ್ರಾವಿಶದ್ರೂಪೇ ಜಯಾಯಾಃ ಸೋಪ್ಯಲೀಯತ ।**
**ಸಂಕರ್ಷಣೇ ತತಃ ಸೋಪಿ ತತ್ರೈವಾಲೀಯತ ಕ್ರಮಾತ್ ॥ ೧೫ ॥**

ಸಃ ವಾಯುಃ-ಸೂತ್ರನಾಮಕವಾಯುವು, ಜಯಾಯಾಃ-(ಸಂಕರ್ಷಣ ಭಾರ್ಯೆಳಾದ) ಜಯಾದೇವಿಯ (ಜಯಾನಾಮಕ ಶ್ರೀಲಕ್ಷ್ಮೀದೇವಿಯ), ರೂಪೇ-ರೂಪದಲ್ಲಿ ಪ್ರಾವಿಶತ್-ಪ್ರವೇಶ ಮಾಡಿದನು; ಸಃ ಅಪಿ-(ಹೀಗೆ ಪ್ರವಿಷ್ಟನಾದ) ವಾಯುದೇವನೂ, ಸಂಕರ್ಷಣೇ-ಸಂಕರ್ಷಣನಲ್ಲಿ (ಶ್ರೀವಿಷ್ಣುವಿನ ಆ ರೂಪದಲ್ಲಿ), ಅಲೀಯತ-ಲಯ ಹೊಂದಿದನು; ತತಃ-ಮುಂದೆ, ಸಃ ಅಪಿ-ಆ ಸಂಕರ್ಷಣನೂ, ತತ್ರೈವ-ಅಲ್ಲಿಯೇ (ತನ್ನಿಂದ ಅಭಿನ್ನವಾದ ವಾಸುದೇವ ರೂಪದಲ್ಲಿಯೂ), ಕ್ರಮಾತ್-ಕ್ರಮವಾಗಿ, (ಮೂಲರೂಪೀ ಶ್ರೀ ನಾರಾಯಣನಲ್ಲಿಯೂ), ಅಲೀಯತ-ಲೀನನಾದನು.

---

ಸುತ್ತಲಿರುವ, ಕರ್ಮಗಳಿಂದ ಕೂಡಿದ, ಬ್ರಹ್ಮಾಂಡದಲ್ಲಿದ್ದ ಇತರ ಸಮಸ್ತ ಜೀವರೂ, ಸೂತ್ರನಾಮಕ ವಾಯುದೇವನನ್ನು[1] ಆಶ್ರಯಿಸಿದರು (೧೪). ಆ ವಾಯುದೇವನು, ಸಂಕರ್ಷಣಭಾರ್ಯಳಾದ ಶ್ರೀ ಜಯಾದೇವಿಯ ರೂಪದಲ್ಲಿ ಪ್ರವೇಶಿಸಿದನು;[2] ಹೀಗೆ ಪ್ರವೇಶಿಸಿದ ವಾಯುವು, ಸಂಕರ್ಷಣನಲ್ಲಿ ಲೀನವಾದನು; ಆ ಸಂಕರ್ಷಣನು ಶ್ರೀ ವಾಸುದೇವನಲ್ಲಿಯೂ ಕ್ರಮದಿಂದ, (ಮೂಲರೂಪದಿಂದ ಅಭಿವ್ಯಕ್ತವಾದ ವಾಸುದೇವ, ನಾರಾಯಣ ರೂಪಗಳಲ್ಲಿ ವ್ಯುತ್ಕ್ರಮದಿಂದ, ಸಂಕರ್ಷಣನು ವಾಸುದೇವನಲ್ಲಿಯೂ ವಾಸುದೇವನು ನಾರಾಯಣನಲ್ಲಿಯೂ ಐಕ್ಯಹೊಂದಿದನು). ಲೀನನಾದನು (ಐಕ್ಯಗೊಂಡನು) (೧೫). ಸತ್ತ್ವಾದಿ ಗುಣವೈಷಮ್ಯದಿಂದ, ಉಂಟಾದ ರಜೋಗುಣವೂ

1. ಪುರುಷನಾಮಕ ಬ್ರಹ್ಮನು ಸೃಷ್ಟನಾದನಂತರ, ಆತನು ಅಪೇಕ್ಷಿಸಿದಂತೆ ಶ್ರೀವಿಷ್ಣುವು ಸೂತ್ರನನ್ನೂ, ವಾಗಂಭಾರತಿಯರನ್ನೂ ಸೃಷ್ಟಿಸಿದನು; ಅಧ್ಯಾಯ ೨, ಶ್ಲೋಕ ೫೮-೫೯ರಲ್ಲಿ ಸೃಷ್ಟಿಕ್ರಮವನ್ನು ನೋಡಿರಿ;

2. ಅಧ್ಯಾಯ (೨). ಶ್ಲೋಕ ೫೯-೬೦ ನೋಡಿರಿ. ಸೂತ್ರನು ಜಯಾದೇವಿಯಿಂದ ಜನಿಸಿದವನು; ಬ್ರಹ್ಮ-ವಾಯುಗಳಿಗೆ, ಲಕ್ಷ್ಮೀದೇವಿಯು ದ್ವಾರಮಾತ್ರಳು—ಆಕೆಯಲ್ಲಿ ಲಯವಿಲ್ಲ—ಅಲ್ಲಿ ಪ್ರವೇಶದಿಂದ ಸ್ಥಿತಿಯಿಲ್ಲ. ಏವಂಚ ಮುಂದಿನ ಕಲ್ಪದಲ್ಲಿ ಸಂಸಾರದಲ್ಲಿ ಬರುವವರೂ ಸಹ ಮಹಾಪ್ರಲಯದಲ್ಲಿ, ಪರಮಾತ್ಮನ ಉದರಪ್ರವೇಶಮಾಡಿ, ಆತನಲ್ಲಿಯೇ ಸ್ಥಿತರಾಗಿರುವರು; ಮುಕ್ತರಾಗಲಿರುವ ಜೀವರು ಬ್ರಹ್ಮದೇವನೊಡನೆ, ಮಾಯಾನಾಮಕ ಲಕ್ಷ್ಮೀದ್ವಾರಾ ಮಾಯಾಪತಿ ವಾಸುದೇವನನ್ನು ಪ್ರವೇಶಿಸುವರೆಂಬ ಮುಂತಾದ ಪ್ರಮೇಯಗಳು, ಮುಂದಿನ ಶ್ಲೋಕಗಳಲ್ಲಿ ಪ್ರಸಕ್ತವಾಗಲಿವೆ.

ಮಹಾಪ್ರಲಯಕಾಲದಲ್ಲಿ ಎಲ್ಲ ಭಗವದ್ರೂಪಗಳೂ, ಮೂಲರೂಪದಲ್ಲಿ ಐಕ್ಯ ಹೊಂದುತ್ತವೆ. ಪ್ರತಿಬಿಂಬರೂಪ ಅನಂತಜೀವರಲ್ಲಿರುವ ಅನಂತಬಿಂಬರೂಪಗಳೂ ಸಹ, ಜೀವಸ್ವರೂಪ ಧಾರಕ ವ್ಯಾಪಾರವನ್ನು ಬಿಡದಂತೆ (ಬಿಂಬತ್ವದಿಂದ ಇದ್ದು) ಮೂಲ ನಾರಾಯಣನಲ್ಲಿ ಐಕ್ಯ ಹೊಂದುತ್ತವೆ.

**ಸತ್ವಾದಿಗುಣವೈಷಮ್ಯಾದ್ರಜೋ ಮೂಲೋ ಮಹತ್ತನುಃ ।**
**ಯೋ ದೇಹಃ ಸ ವಿರಿಂಚಾತ್ತು ಪೃಥಗ್ಭೂತ್ವಾ ವ್ಯಲೀಯತ ॥ ೧೬ ॥**

ಸತ್ವಾದಿಗುಣವೈಷಮ್ಯಾತ್-ಸತ್ವಾದಿಗುಣಗಳ ವೈಷಮ್ಯದಿಂದ, ರಜೋಮೂಲಃ-ರಜೋಗುಣವೂ ಕಾರಣವಾಗಿವುಳ್ಳ, ಮಹತ್ತನುಃ-ಮಹತ್ತತ್ತ್ವವೇ ದೇಹವಾದ, ಯೋ ದೇಹಃ-(ವಿರಿಂಚಿನ) ಯಾವ ದೇಹವೋ (ಸೃಷ್ಟ್ಯಾರಂಭದಲ್ಲಿ ಮೊದಲಿಗೆ ನಿರ್ಮಿತವಾದ ಪುರುಷನಾಮಕ ದೇಹವೋ), ಸಃ-ಅದು, ವಿರಿಂಚಾತ್ ತು-ಬ್ರಹ್ಮನಿಂದಲೂ, ಪೃಥಕ್ ಭೂತ್ವಾ-ಬೇರೆಯಾಗಿ, ವ್ಯಲೀಯತ-ಲಯ ಹೊಂದಿತು (ತನಗೆ ಕಾರಣವಾದ ಸತ್ವರಜೋಗುಣಗಳಲ್ಲಿ ಲೀನವಾಯಿತು).

**ಲಿಂಗದೇಹಯುತಾಃ ಸರ್ವೇ ಬ್ರಹ್ಮಾದ್ಯಾ ಜೀವರಾಶಯಃ ।**
**ಚರಮಾವರಣವ್ಯೋಮಮಧ್ಯಭಾಗೇ ನಿವೇಶ್ಯ ಚ ॥ ೧೭ ॥**
**ವಿರಜಾಯಾಂ ತ್ಯಕ್ತಲಿಂಗಾಃ ಶುದ್ಧರೂಪಾಶ್ಚ ಸರ್ವಶಃ ।**
**ಮಾಯಾದ್ವಾರಾ ವಾಸುದೇವಂ ಪ್ರವಿಶ್ಯಾನಂದರೂಪಿಣಃ ॥ ೧೮ ॥**
**ನಿರ್ಮುಕ್ತಾಖಿಲಬಂಧಾಸ್ತೇ ಮೋದಂತೇ ಸರ್ವದೈವ ಹಿ ।**
**ಅನಂತಾಸನವೈಕುಂಠನಾರಾಯಣಪುರಾದಿಷು ॥ ೧೯ ॥**
**ಭುಂಜಾನಾ ವಿವಿಧಾನ್ ಭೋಗಾನ್ ಪುನರಾವೃತ್ತಿವರ್ಜಿತಾಃ ।**
**ಪಶ್ಯಂತಿ ಭ್ರಮತೋ ಜೀವಾಂಸ್ತೀರ್ಣಪಾರಾ ಇವಾಪರಾನ್ ॥ ೨೦ ॥**

ಸರ್ವೇ-ಸಮಸ್ತ, ಬ್ರಹ್ಮಾದ್ಯಾಃ-ಬ್ರಹ್ಮಾದಿ, ಜೀವರಾಶಯಃ-ಜೀವ ಸಮೂಹಗಳು (ಮುಕ್ತರಾಗಲಿರುವ ಸರ್ವಜೀವರೂ). ಲಿಂಗದೇಹಯುತಾಃ-(ಸ್ಥೂಲಸೂಕ್ಷ್ಮಗಳಾದ

---

ಮೂಲವಾಗಿ ಉಳ್ಳ[1] ಮಹತ್ತತ್ತ್ವದಿಂದಾದ ವಿರಿಂಚನ ದೇಹವೂ, ಬ್ರಹ್ಮದೇವನಿಂದ ಬೇರೆಯಾಗಿ, ಲಯಗೊಳ್ಳುತ್ತದೆ (ಕಾರಣದಲ್ಲಿ ಲೀನವಾಗುತ್ತದೆ) (೧೬). ಪ್ರಲಯಕಾಲದಲ್ಲಿ, ಬ್ರಹ್ಮಾದಿ ಸಕಲ ಜೀವರೂ, ಬಾಹ್ಯ ಪ್ರಾಕೃತ ದೇಹಗಳನ್ನು ತ್ಯಜಿಸಿ, ಕೇವಲ ಲಿಂಗದೇಹಗಳುಳ್ಳವರಾಗಿ, ಬ್ರಹ್ಮಾಂಡದ ಅಂತಿಮಾವರಣವಾದ ಸತ್ವಾವರಣ

1. ಸತ್ವ-ತಮೋಗುಣಗಳ ಮಿಶ್ರಣದಿಂದ ರಜೋಗುಣವು ಸೃಷ್ಟವಾಯಿತು; ಈ ಮೂರು ಗುಣಗಳುಳ್ಳದ್ದು ಮಹತ್ತತ್ತ್ವ—ಅದು ಬ್ರಹ್ಮದೇವನ ದೇಹವಾಯಿತು; ಹೀಗಿದ್ದೂ 'ರಜೋಮೂಲ' ಎಂದು ಹೇಳುವುದರ ತಾತ್ಪರ್ಯವೇನೆಂದರೆ:—ಬ್ರಹ್ಮದೇವನ ದೇಹದಲ್ಲಿ ರಜೋಗುಣ ನಿರ್ಮಾಣದಲ್ಲಿ ಉಪಯೋಗಿಸಲಾದ ತಮೋಗುಣಾಂಶವಲ್ಲದೇ, ಪ್ರತ್ಯೇಕವಾದ ತಮೋಗುಣವು ಅತ್ಯಲ್ಪ, ಅದು ವಸ್ತುತಃ ಸತ್ವರಜೋಗುಣಪ್ರಧಾನವಾದುದು; ಮಹತ್ತತ್ತ್ವದಿಂದ ಉತ್ಪನ್ನವಾಗುವ ತ್ರಿವಿಧ ಅಹಂಕಾರತತ್ತ್ವದಲ್ಲಿ ತಮೋಗುಣಾಂಶವು ಅಧಿಕವಾಗಿರುತ್ತದೆ. ಇಲ್ಲಿ ಮಹತ್ತತ್ತ್ವ ಅಹಂಕಾರತತ್ತ್ವಗಳ ನಿರ್ಮಾಣವಿಷಯವನ್ನು ನಿರೂಪಿಸುವ ಅಧ್ಯಾಯ (೨) ಶ್ಲೋಕ (೨೫-೨೬) ನೋಡಿರಿ.

ಪ್ರಾಕೃತದೇಹಗಳನ್ನು ತ್ಯಜಿಸಿ) ಲಿಂಗದೇಹಮಾತ್ರ ಸಹಿತರಾಗಿ, ಚರಮಾವರಣವ್ಯೋಮ ಮಧ್ಯಭಾಗೇ-ಅಂತಿಮಾವರಣ (ಸತ್ತ್ವಗುಣಾವರಣ) ಮತ್ತು (ಅದರ ಹೊರಗಿನ) ಅವ್ಯಾಕೃತಾಕಾಶಗಳ ಮಧ್ಯಭಾಗದಲ್ಲಿ ನಿವೇಶ್ಯ ಚ-ಪ್ರವೇಶಮಾಡಿ ನಿಂತು, ವಿರಜಾಯಾಂ-ಅಲ್ಲಿರುವ (ಮಹಾಪ್ರಲಯ ಕಾಲದಲ್ಲಿ ಅಲ್ಲಿಗೆ ಪ್ರಾಪ್ತವಾಗಿರುವ) ವಿರಜಾನದಿಯಲ್ಲಿ ತ್ಯಕ್ತಲಿಂಗಾಃ-(ಸ್ನಾನಮಾಡಿ) ಲಿಂಗದೇಹಗಳನ್ನು ತ್ಯಜಿಸಿ, ಸರ್ವಶಃ-ಎಲ್ಲರೂ, ಶುದ್ಧ ರೂಪಾಃ-ಶುದ್ಧವಾದ (ಅಪ್ರಾಕೃತವಾದ) ಸ್ವರೂಪ ದೇಹಮಾತ್ರ ಉಳ್ಳವರಾಗಿ, ಮಾಯಾದ್ವಾರಾ-(ಬ್ರಹ್ಮದೇವನೊಡನೆ ಸರ್ವರೂ) ಮಾಯಾನಾಮಕ (ವಾಸುದೇವ ಭಾರ್ಯಳಾದ ಲಕ್ಷ್ಮೀ) ದ್ವಾರಾ, ವಾಸುದೇವಂ-ಶ್ರೀವಾಸುದೇವನನ್ನು ಪ್ರವಿಶ್ಯ-ಪ್ರವೇಶಿಸಿ, ಆನಂದರೂಪಿಣಃ ತೇ-ಆನಂದಸ್ವರೂಪರೇ ಆದ ಆ ಮುಕ್ತರು, ನಿರ್ಮುಕ್ತಾಖಿಲಬಂಧಾಃ-ಸಮಸ್ತ ಬಂಧನಿರ್ಮುಕ್ತರಾಗಿ (ಪ್ರಾಕೃತ ದೇಹಾದಿಗಳು ಮತ್ತು ತನ್ನಿಮಿತ್ತಕ ಅಭಿಮಾನಾದಿ-ಅಹಂ ಮಮಕಾರರೂಪ-ಬಂಧನ ಹೇತುಗಳಿಂದ ರಹಿತರಾಗಿ), ಸರ್ವದಾ ಏವ-ಎಲ್ಲ ಕಾಲದಲ್ಲಿ ಮೋದಂತೇ-ಆನಂದಿಸುತ್ತಿರುವರು; ಹಿ-(ಸುಖಸ್ವರೂಪರಾಗಿ, ವಿವಿಧ ಸುಖಭೋಗಗಳನ್ನು ಅನುಭವಿಸುವರೆಂಬುದು) ವೇದಸಿದ್ಧವು; ಪುನರಾವೃತ್ತಿರಹಿತಾಃ-ಸಂಸಾರಕ್ಕೆ ಎಂದೂ ತಿರಿಗಿಬಾರರೇ, ವಿವಿಧಾನ್ ಭೋಗಾನ್-ನಾನಾ ಭೋಗಗಳನ್ನು, ಭುಂಜಾನಾಃ-ಭೋಗಿಸುತ್ತ ಅನಂತಾಸನ ವೈಕುಂಠ ನಾರಾಯಣ ಪುರಾದಿಷು-ಅನಂತಾಸನ, ವೈಕುಂಠ ಮತ್ತು ನಾರಾಯಣಪುರ (ಶ್ವೇತದ್ವೀಪ) ಮೊದಲಾದ ಸ್ಥಾನಗಳಲ್ಲಿ (ಮೋದಂತೇ-ಆನಂದಿಸುವರು); ತೀರ್ಣಪಾರಾಃ-(ಜಲಾಶಯವನ್ನು) ದಾಟಿರದವನ್ನು ಸೇರಿದವರು, ಅಪರಾನ್ ಇವ-ಇತರರನ್ನು (ದಾಟಿರದವರನ್ನು) ನೋಡುವಂತೆ, ಭ್ರಮತಃ-(ಸಂಸಾರದಲ್ಲಿ) ಸುತ್ತುತ್ತಿರುವ, ಜೀವಾನ್-ಜೀವರನ್ನು ಪಶ್ಯಂತಿ-(ಈ ಮುಕ್ತರು) ನೋಡುತ್ತಿರುವರು.

---

ಮತ್ತು ಆದರ ಹೊರಗಿನ ಅವ್ಯಾಕೃತಾಕಾಶಗಳ ಮಧ್ಯದಲ್ಲಿ ಬಂದು, ಅಲ್ಲಿರುವ ವಿರಜಾನದಿಯಲ್ಲಿ ಬ್ರಹ್ಮದೇವನೊಡನೆ ಸರ್ವರೂ, ಸ್ನಾನಮಾಡಿ, ಲಿಂಗದೇಹಗಳನ್ನು ತ್ಯಜಿಸಿ, ಎಲ್ಲರೂ, ಸ್ವರೂಪದೇಹ ಮಾತ್ರವುಳ್ಳವರಾಗಿ ಶುದ್ಧ ಸ್ವರೂಪರಾಗುತ್ತಾರೆ; ಬ್ರಹ್ಮದೇವನು, ಮುಕ್ತರಾಗಲಿರುವ ಸರ್ವರನ್ನೂ ತನ್ನೊಡನೆ ಇಟ್ಟುಕೊಂಡು, ಮಾಯಾನಾಮಕ ಶ್ರೀಲಕ್ಷ್ಮೀದ್ವಾರಾ, ಮಾಯಾಪತಿ ಶ್ರೀ ವಾಸುದೇವನನ್ನು ಪ್ರವೇಶಿಸುತ್ತಾನೆ; ಚಿದಾನಂದೈಕದೇಹಿಗಳಾದ ಈ ಎಲ್ಲರೂ, ಸಕಲಬಂಧ ನಿರ್ಮುಕ್ತರಾಗಿ, ಅಲ್ಲಿ (ಪರಮಾತ್ಮನ ಉದರದಲ್ಲಿ ಪುನಃ ಸೃಷ್ಟಿಕಾಲ ಬರುವವರೆಗೆ) ಧ್ಯಾನದಲ್ಲಿದ್ದು ನಿರಂತರವಾದ ಆನಂದವನ್ನನುಭವಿಸಿ) ನಂತರ, ಅನಂತಾಸನ, ವೈಕುಂಠ, ನಾರಾಯಣ ಪುರಾದಿ (ಶ್ವೇತದ್ವೀಪಾದಿ) ವಿವಿಧ ಮುಕ್ತಸ್ಥಾನಗಳಲ್ಲಿ (ಸ್ವಯೋಗ್ಯತಾನುಸಾರವಾಗಿ ವಿಹರಿಸುತ್ತ) ಸಂಸಾರಕ್ಕೆ ಎಂದೂ ಹಿಂದಿರುಗದೆ, ವಿವಿಧ ಭೋಗಗಳನ್ನು ಅನುಭವಿಸುತ್ತ

ಯಥೋತ್ಪತ್ತಿಮಹತತ್ತ್ವಂ ವಿಲೀನಂ ತು ಗುಣತ್ರಯೇ ।
ಪರಾಂತೇಽಥ ರಜೋ ದೇವೀ ಭೂರಜೋಲಯಮಾತನೋತ್ ॥ ೨೧ ॥
ರಾಶಿತ್ರಯಸ್ಯ ನಾಶೇನ ಗುಣವೈಷಮ್ಯನಾಶತಃ ।
ರಾಶಿದ್ವಯೇ ಸುಸಂಪನ್ನೇ ಗುಣಸಾಮ್ಯಂ ತತೋಽಭವತ್ ॥ ೨೨ ॥
ಸ ಏವ ಪ್ರಲಯೋ ನಾಮ ಗುಣಸಾಮ್ಯಾಭಿದಃ ಸ್ಮೃತಃ ।
ಸೃಷ್ಟ್ಯಾದೌ ಗುಣವೈಷಮ್ಯಮಿತಿ ನಾಮ್ನಾಭಿಧೀಯತೇ ॥ ೨೩ ॥

ಪರಾಂತೇ-ಪ್ರಲಯದಲ್ಲಿ, ಮಹತತ್ತ್ವಂ-ಮಹತತ್ತ್ವವು, ಯಥೋತ್ಪತ್ತಿ-(ಅದು) ಹೇಗೆ ಉತ್ಪನ್ನವಾಯಿತೋ ಹಾಗೆ, ಗುಣತ್ರಯೇ-ಗುಣತ್ರಯಾತ್ಮಕವಾದ ಪ್ರಕೃತಿಯಲ್ಲಿ ವಿಲೀನಂ ತು-ಲೀನವಾಗುತ್ತದೆ (ಸೇರಿಹೋಗುತ್ತದೆ); ಅಥ-ನಂತರ, ರಜೋದೇವಿ-ರಜೋಗುಣನಿಯಾಮಕಳಾದ, ಭೂಃ-ಭೂದೇವಿಯು, (ಭೂನಾಮಕ ಲಕ್ಷ್ಮೀ ರೂಪವು), ರಜೋಲಯಂ-ರಜೋಗುಣದ ಲಯವನ್ನು (ಅದರಲ್ಲಿರುವ ಸತ್ತ್ವ-ತಮೋಗುಣಗಳನ್ನು ಬೇರ್ಪಡಿಸಿ, ಕ್ರಮವಾಗಿ ಸತ್ತ್ವತಮೋಗಳಲ್ಲಿ ಸೇರಿಸಿ), ಆತನೋತ್-ಮಾಡಿದಳು; (ಈ ಕಾರಣದಿಂದ) ರಾಶಿತ್ರಯಸ್ಯ-ಸತ್ತ್ವ, ತಮ, ರಜಗಳೆಂಬ ಮೂರು ರಾಶಿಗಳ, ನಾಶೇನ-ನಾಶದಿಂದ (ಅವುಗಳಲ್ಲಿ ಒಂದಾದ ರಜೋಗುಣದ ಲಯದಿಂದ), ಗುಣವೈಷಮ್ಯ ನಾಶತಃ-ಗುಣಗಳ ವಿಷಮಾವಸ್ಥೆಯು (ಸತ್ತ್ವ, ತಮಗಳೆಂಬ ಎರಡೇ ಗುಣಗಳಿಲ್ಲದೆ ಮೂರು ರಾಶಿಗಳು ಏರ್ಪಟ್ಟಕಾರಣ, ಉಂಟಾದ ವ್ಯತ್ಯಾಸವು ನಷ್ಟವಾದ್ದರಿಂದ), ರಾಶಿದ್ವಯೇ-(ಸತ್ತ್ವ-ತಮಗಳೆಂಬ) ಎರಡು ರಾಶಿಗಳು ಮಾತ್ರ, ಸುಸಂಪನ್ನೇ-(ಮೊದಲಿನಂತೆ) ಏರ್ಪಟ್ಟಕಾರಣ (ಸಿದ್ಧವಾಗು

---

ಸುಖಿಸುವರು; ದಡವನ್ನು ಮುಟ್ಟಿದವರು, ಮುಟ್ಟದವರನ್ನು ನೋಡುವಂತೆ, ಈ ಮುಕ್ತರು, ಸಂಸಾರದಲ್ಲಿ ಸುತ್ತುವ ಜೀವರನ್ನು ಕಾಣುತ್ತಿರುವರು (೧೭-೨೦). ಪ್ರಲಯಕಾಲದಲ್ಲಿ, ಮಹತತ್ತ್ವವು ಹೇಗೆ ಉತ್ಪನ್ನವಾಯಿತೋ ಹಾಗೆ ಗುಣತ್ರಯಾತ್ಮಕ ಪ್ರಕೃತಿಯಲ್ಲಿ[1] ಲಯಹೊಂದುತ್ತದೆ; ರಜೋಗುಣಾಭಿಮಾನಿಯಾದ ಭೂನಾಮಕ ಲಕ್ಷ್ಮೀದೇವಿಯು, ರಜೋಗುಣದಲ್ಲಿರುವ ಸತ್ತ್ವ-ತಮೋಗುಣಗಳನ್ನು ಬೇರ್ಪಡಿಸಿ, ಸತ್ತ್ವ ಮತ್ತು ತಮೋರಾಶಿಗಳಲ್ಲಿ ಸೇರಿಸುತ್ತಾಳೆ—ಇದೇ ರಜೋಗುಣದ ಲಯವೆಂಬುದು; ಹೀಗೆ ರಾಶಿತ್ರಯಗಳ ನಾಶದಿಂದ, ಗುಣವೈಷಮ್ಯವು ನಷ್ಟವಾಗಿ, ರಾಶಿದ್ವಯವು ಏರ್ಪಡುತ್ತದೆ; ಸೃಷ್ಟಿಪೂರ್ವದಲ್ಲಿದ್ದ ಸ್ಥಿತಿಯನ್ನೇ ಪ್ರಕೃತಿಯು ಹೊಂದಿಸಲ್ಪಟ್ಟ ಕಾರಣ, ಗುಣಸಾಮ್ಯವನ್ನು ಹೊಂದಿತೆಂದು ಹೇಳಲಾಗುತ್ತದೆ; ಈ

---

1. ಮುಂದಿನ ೨೬-೨೭ನೇ ಶ್ಲೋಕಗಳಲ್ಲಿ, ಸತ್ತ್ವ-ತಮೋಗುಣಗಳನ್ನು ಮಾತ್ರ ಉಳ್ಳದ್ದಾದ ಪ್ರಕೃತಿಯು, ತ್ರಿಗುಣಾತ್ಮಕವೆಂದೇಕೆ ಹೇಳಲ್ಪಡುತ್ತದೆಂಬುದನ್ನು ವಿವರಿಸಲಾಗಿದೆ.

ತ್ತಿರಲು), ತತಃ-ಅದರಿಂದ, ಗುಣಸಾಮ್ಯಂ-ಗುಣಸಾಮ್ಯವು (ಎರಡೇ ಗುಣಗಳೆಂಬ ಸಮಾನಾವಸ್ಥೆಯು), ಅಭವತ್-ಉಂಟಾಯಿತು; ಸಃ ಏವ-ಅದೇ (ಗುಣಸಾಮ್ಯವೇ) ಪ್ರಲಯಃ ನಾಮ-ಪ್ರಲಯವೆಂಬುದು; ಗುಣಸಾಮ್ಯಾಭಿದಃ-ಗುಣಸಾಮ್ಯವೆಂಬ ಹೆಸರಿನಿಂದಲೇ, ಸ್ಮೃತಃ-ಕರೆಯಲ್ಪಡುತ್ತದೆ (ಗುಣಸಾಮ್ಯವೆಂದೇ ತಿಳಿಯಲ್ಪಡುತ್ತದೆ); ಸೃಷ್ಟ್ಯಾದೌ-ಸೃಷ್ಟಿಯ ಪ್ರಾರಂಭದಲ್ಲಿ (ಇರುವ ಪರಿಸ್ಥಿತಿಯು), ಗುಣವೈಷಮ್ಯಂ, ಗುಣವೈಷಮ್ಯವು, ಇತಿ ನಾಮ್ನಾ-ಎಂಬ ಹೆಸರಿನಿಂದ, ಅಭಿಧೀಯತೇ-ಕರೆಯಲ್ಪಡುತ್ತದೆ.

ಗುಣಾನಾಂ ವಿಷಮೈರ್ಭಾಗೈರ್ಮಹತತ್ತ್ವಂ ಪ್ರಜಾಯತೇ ।
ಅಹಂಕಾರಾದಿಕಂ ಸರ್ವಂ ಪೂರ್ವವಜ್ಜಾಯತೇ ಪುನಃ ॥ ೨೪ ॥

ಗುಣಾನಾಂ-ಗುಣಗಳ, ವಿಷಮೈಃ-ವ್ಯತ್ಯಸ್ತಗಳಾದ (ಹೆಚ್ಚುಕಡಿಮೆಯಾದ), ಭಾಗೈಃ-ಅಂಶಗಳಿಂದ, ಮಹತತ್ತ್ವಂ-ಮಹತತ್ತ್ವವು, ಪ್ರಜಾಯತೇ-ಹುಟ್ಟುತ್ತದೆ (ಸತ್ತ್ವ, ರಜ, ತಮೋಗುಣಗಳು ಮಹತತ್ತ್ವದಲ್ಲಿ ಸಮವಾಗಿರುವುದಿಲ್ಲ); ಪುನಃ-ಅದರಿಂದ ಮುಂದೆ, ಅಹಂಕಾರಾದಿಕಂ-ಅಹಂಕಾರತತ್ತ್ವವೇ ಮೊದಲಾದ, ಸರ್ವಂ-ಎಲ್ಲ ತತ್ತ್ವಗಳೂ, ಪೂರ್ವವತ್-ಹಿಂದೆ ಹೇಳಿದಂತೆ (ಪೂರ್ವದ ಸೂಕ್ಷ್ಮಸೃಷ್ಟಿಯಲ್ಲಿ ಆದಂತೆ), ಜಾಯತೇ-ಹುಟ್ಟುತ್ತವೆ.

ಮಧ್ಯಮಾನಾಂ ತು ಜೀವಾನಾಂ ಯಾಂತಿ ಲಿಂಗಾನಿ ಸರ್ವಶಃ ।
ರಜೋ ಗುಣಾತ್ಮಕತ್ವಾತ್ತು ನಿತ್ಯಾನ್ಯೇವೇತಿ ಚಕ್ಷತೇ ॥ ೨೫ ॥
ರಜೋ ನಿತ್ಯಂ ತದೇವೋಕ್ತಂ ಕೇಚಿದನ್ಯದ್ವದಂತ್ಯಪಿ ।
ಸಾನ್ನಿಧ್ಯಾತ್ತಮಸೋ ರಾಶೇಃ ಸತ್ತ್ವರಾಶ್ಯೇಕಭಾಗಕಃ ॥ ೨೬ ॥

---

ಗುಣಸಾಮ್ಯವೇ ಪ್ರಲಯವು; ಪ್ರಲಯವು ಗುಣಸಾಮ್ಯವೆಂದೇ ಕರೆಯಲ್ಪಡುತ್ತದೆ; ಸೃಷ್ಟಿಯ ಪ್ರಾರಂಭದಲ್ಲಿ ಉಂಟಾಗುವ ಗುಣವೈಷಮ್ಯವೇ ಸೃಷ್ಟಿಯು—ಗುಣವೈಷಮ್ಯವೆಂಬ ನಾಮದಿಂದಲೇ ಕರೆಯಲ್ಪಡುತ್ತದೆ' (೨೧-೨೩).

ತ್ರಿಗುಣಗಳ ಹೆಚ್ಚು ಕಡಿಮೆ ಭಾಗಗಳ ಮಿಶ್ರಣದಿಂದ ಮಹತತ್ತ್ವದ ನಿರ್ಮಾಣವಾಗುತ್ತದೆ (ಅಧ್ಯಾಯ ೨, ಶ್ಲೋಕ ೨೫ ನೋಡಬಹುದು); ಮುಂದೆ ಅಹಂಕಾರತತ್ತ್ವವೇ ಮೊದಲಾದ ಇತರ ಎಲ್ಲ ತತ್ತ್ವಗಳು ಹಿಂದಿನಂತೆ ಸೃಷ್ಟವಾಗುತ್ತವೆ (೨೪). ಗುಣಸಾಮ್ಯದಲ್ಲಿ (ಪ್ರಲಯಕಾಲದಲ್ಲಿ) ಪ್ರತ್ಯೇಕವಾದ ರಜೋಗುಣವಿಲ್ಲದ ಕಾರಣ, ಮಧ್ಯಮ ಜೀವರ (ಮಿಶ್ರಜೀವರ) ಲಿಂಗದೇಹಗಳು ರಜೋಗುಣ

1. ಗುಣವೈಷಮ್ಯವು, ರಜೋಗುಣದ ಉತ್ಪತ್ತಿಯಿಂದ, ಹೇಗೆ ಸಿದ್ಧವಾಗುವುದೆಂಬ ಪ್ರಮೇಯವನ್ನು ಅಧ್ಯಾಯ (೨), ಶ್ಲೋಕ (೨೦-೨೪) ನೋಡಿರಿ.

**ಉಪರಕ್ತ ಇವಾಭಾತಿ ಸ ಭಾಗೋ ರಜ ಇತ್ಯಪಿ ।**

**ಪ್ರಕೃತಿಸ್ತ್ರಿಗುಣಾಹ್ಯೇವಂ ಸರ್ವದೈವಾತ ಉಚ್ಯತೇ ॥ ೨೭ ॥**

ಮಧ್ಯಮಾನಾಂ ಜೀವಾನಾಂ-ಮಧ್ಯಮಜೀವರ (ನಿತ್ಯಸಂಸಾರಿಗಳೆಂಬ ಮಿಶ್ರ ಸ್ವರೂಪದ ಜೀವರ), ಲಿಂಗಾನಿ-ಲಿಂಗದೇಹಗಳೂ, ಸರ್ವಶಃ-ಎಲ್ಲವೂ, ಯಾಂತಿ-(ಲಯವನ್ನು) ಹೊಂದುತ್ತವೆ; ರಜೋಗುಣಾತ್ಮಕತ್ವಾತ್-(ಆ ಲಿಂಗದೇಹಗಳು) ರಜೋಗುಣ ಪ್ರಧಾನಗಳಾದ್ದರಿಂದ, ರಜಃ-ರಜೋಗುಣವೂ, ನಿತ್ಯಂ-ನಿತ್ಯವಾದುದು (ಪ್ರಲಯಕಾಲದಲ್ಲಿ ಅದಕ್ಕೆ ಲಯವಿಲ್ಲ), ತತ್-ಆದ್ದರಿಂದ, ನಿತ್ಯಾನಿ ಏವ

---

ಪ್ರಧಾನಗಳಾದಾಗ್ಯೂ, ಪ್ರಲಯಕಾಲದಲ್ಲಿ ಅವುಗಳಿಗೂ ನಾಶವುಂಟೆಂದು ತಿಳಿಯುತ್ತಾರೆ; ಮತ್ತೆ ಕೆಲವರು, ಮಧ್ಯಮಜೀವರಿಗೆ, ರಜೋಗುಣಕ್ಕೆ ನಾಶವಿಲ್ಲದಕಾರಣ, ಲಿಂಗದೇಹಭಂಗವಿಲ್ಲೆಂದೂ[1] (ಆದ್ದರಿಂದ ಅವರು ನಿತ್ಯವೂ, (ಎಲ್ಲ ಕಲ್ಪಗಳಲ್ಲಿ ಸಂಸಾರದಲ್ಲಿ ಸುತ್ತುತ್ತಿರುವರೆಂದು) ತಿಳಿಯುತ್ತಾರೆ; ಪ್ರಕೃತಿಯು ಸರ್ವದಾ (ಪ್ರಲಯಕಾಲದಲ್ಲಿ ಸಹ) ತ್ರಿಗುಣಾತ್ಮಕವೆಂದು ಮತ್ತೆ ಕೆಲವರು ತಿಳಿಯುತ್ತಾರೆ;

---

1. ಇಲ್ಲಿ ಅಧ್ಯಾಯ (೧೭) ಶ್ಲೋಕ (೨೮-೨೯)ಗಳನ್ನು ನೋಡಿರಿ; ನಿತ್ಯಸಂಸಾರಿಗಳೆಂಬ ಜೀವರಿಗೆ ಲಿಂಗಭಂಗದಿಂದ ಸ್ವಸ್ವರೂಪದ ಆವಿರ್ಭಾವವಿಲ್ಲವೆಂದು, ಕೆಲವರು ತಿಳಿದರೆ, ಶ್ರೀವಾದಿರಾಜರು ಅವರಿಗೆ ಸಹ ಲಿಂಗಭಂಗವುಂಟೆಂದು ತಿಳಿಯುತ್ತಾರೆ—ಅದನ್ನು ಸಪ್ರಮಾಣವಾಗಿ ತಮ್ಮ ಗ್ರಂಥಗಳಲ್ಲಿ ಸಾಧಿಸಿದ್ದಾರೆ. ಶ್ರೀಮದಾಚಾರ್ಯರ ತಾತ್ಪರ್ಯ ನಿರ್ಣಯದ ವಾಕ್ಯಗಳನ್ನೂ ಉದಾಹರಿಸಿ ವಿಮರ್ಶಾತ್ಮಕ ನಿರ್ಣಯವನ್ನು ನಿರೂಪಿಸಿದ್ದಾರೆ. 'ಸ್ವಕ್ಷೇತ್ರೇಹಿ ಚೇತನಗಣಾನ್ ಸುಖದುಃಖಮಧ್ಯಸಂಪ್ರಾಪ್ತಯೇ ತನುಭೃತಾಂ ವಿಸೃತಿಂ ಮಮೇಚ್ಛನ್ । ಸೋಽಯಂ ವಿಹಾರ ಇಹ ಮೇ ತನುಭೃತ್ ಸ್ವಭಾವ ಸಂಭೂತಯೇ ಭವತಿ ಭೂತಕೃದೇವ ಭೂತ್ಯಾ ॥' —ಸಂಸಾರಿಜೀವರ, (ಕೇವಲ ಸುಖ, ಕೇವಲ ದುಃಖ ಮತ್ತು ದುಃಖಮಿಶ್ರ ಸುಖಗಳೆಂಬ) ಸ್ವರೂಪಗಳನ್ನು ಹೊಂದಿಸಲಿಕ್ಕಾಗಿ, ತನುಭೃತ್ ಸ್ವಭಾವ ಸಂಭೂತಯೇ—ದೇಹಧಾರಿಗಳ ತ್ರಿವಿಧ ಸ್ವಭಾವಗಳನ್ನು ಸ್ಪಷ್ಟವಾಗಿ ಪ್ರಕಟಿಸಲಿಕ್ಕಾಗಿಯೇ, ಶ್ರೀಹರಿಯು ಸೃಷ್ಟ್ಯಾದಿ ಕ್ರೀಡೆಯಲ್ಲಿ ತೊಡಗಿರುವನೆಂಬುದು ಈ ಶ್ಲೋಕಗಳ ತಾತ್ಪರ್ಯ; ಲಿಂಗದೇಹಭಂಗದಿಂದ ಸ್ವರೂಪದ ಆವಿರ್ಭಾವದ ನಂತರ, ಮಧ್ಯಮಜೀವರು ನಿತ್ಯವೂ ದುಃಖಮಿಶ್ರಿತ ಸುಖವನ್ನೇ ಅನುಭವಿಸುತ್ತಿರುವರು—ಈ ಕಾರಣದಿಂದಲೇ (ಸಂಸಾರದಲ್ಲಿರುವಂತೆ ಸುಖದುಃಖ ಮಿಶ್ರವಾದ ಸ್ವರೂಪವುಳ್ಳವರಾದ್ದರಿಂದಲೇ ನಿತ್ಯಸಂಸಾರಿಗಳೆನಿಸುವರು.) ಶ್ರೀವಾದಿರಾಜರು ತಮ್ಮ 'ವೈಕುಂಠವರ್ಣನೆ ಅಥವಾ ತತ್ವಸಾರ'ವೆಂಬ ಗ್ರಂಥದ, ೪ನೇ ಸ್ಥಿತಿಸಂಧಿಯಲ್ಲಿ, ನಾನಾಯುಕ್ತಿಗಳಿಂದ, ವಿಮರ್ಶಿಸಿದ ನಂತರ, ಈ ಪ್ರಮೇಯದ ನಿರ್ಣಯವನ್ನು ಹೀಗೆ ನಿರೂಪಿಸಿರುವರು:—

ಆದರಿಂದ ತ್ರಿವಿಧಜೀವರಿಗು ಲಿಂಗದೇಹ  
ತುದಿಯೊಳು ಹೋಹರೆಂಬುದು  
ಬುಧರುಗಳಿಗು ಸಮ್ಮತ ಯಿದನರಿಯದಮೂಢ  
ಒದರಿದರೇನು ಫಲವಾಹೋದು ॥

ಇತಿ-(ಲಿಂಗದೇಹಗಳೂ) ನಿತ್ಯಗಳೇ ಎಂದು, ಚಕ್ಷತೇ-ಹೇಳುತ್ತಾರೆ (ಮಿಶ್ರಜೀವರಿಗೆ ಲಿಂಗಭಂಗವಿಲ್ಲವೆಂದೂ ತಿಳಿಯುತ್ತಾರೆ); ಉಕ್ತಂ ಏವ-ಹೀಗೆ ಹೇಳಿದುದನ್ನೇ, ಕೇಚಿತ್-ಕೆಲವರು, ಅನ್ಯಥ್ ಅಪಿ ವದಂತಿ-ಬೇರೆ ರೀತಿಯಾಗಿಯೂ ಹೇಳುತ್ತಾರೆ; ತಮಸಃ ರಾಶೇಃ-ತಮೋಗುಣರಾಶಿಯ, ಸಾನ್ನಿಧ್ಯಾತ್-ಸಾಮೀಪ್ಯದಿಂದ, ಸತ್ತ್ವರಾಶ್ಯೇಕ ಭಾಗಕಃ-ಸತ್ತ್ವಗುಣರಾಶಿಯ ಒಂದು ಭಾಗವು, ಉಪರಕ್ತಃ ಇವ ಅಭಾತಿ-ಕೆಂಪು (ರಕ್ತ) ವರ್ಣವಿರುವಂತೆ ತೋರುತ್ತದೆ, ಸಃ ಭಾಗಃ-(ಸತ್ತ್ವರಾಶಿಯ) ಆ ಭಾಗವು, ರಜಃ ಇತ್ಯಪಿ-ರಜೋಗುಣವೆಂದೂ, ಏವಂ ಹಿ-ಹೀಗೆಯೇ (ಈ ಕಾರಣದಿಂದ), ಪ್ರಕೃತಿಃ-ಪ್ರಕೃತಿಯು, ತ್ರಿಗುಣಾ-(ಸತ್ತ್ವಾದಿ) ತ್ರಿಗುಣಾತ್ಮಕವೆಂದು, ಸರ್ವದಾ ಏವ-ಎಲ್ಲ ಕಾಲದಲ್ಲಿಯೂ (ಪ್ರಲಯಕಾಲದಲ್ಲಿ ಸಹ ತ್ರಿಗುಣಾತ್ಮಕವೇ ಎಂದು), ಅತಃ-ಆದ್ದರಿಂದಲೇ, ಉಚ್ಯತೇ-ಹೇಳಲ್ಪಡುತ್ತದೆ (ಎನ್ನುತ್ತಾರೆ).

**ಪೂರ್ವೋಕ್ತೇ ವೈ ಲಯೇ ಜಾತೇ ಬ್ರಹ್ಮಣೋಥ ಕ್ರಮಾದಪಿ ।**
**ವಾಸುದೇವಾದಿರೂಪಾಣಾಮಭೂನ್ನಾರಾಯಣೇ ಲಯಃ ॥ ೨೮ ॥**
**ಮಾಯಾದೀನಾಂ ಚ ಸರ್ವೇಷಾಂ ರೂಪಾಣಾಂ ಚ ಕ್ರಮಾಚ್ಛ್ರಿಯಃ ।**
**ಅಂಭೃಣ್ಯಾಮೈಕ್ಯಮಗಮತ್ತತೋ ದೇವ್ಯಾಹಮೇಕಲಃ ॥ ೨೯ ॥**
**ಪ್ರಲಯಸ್ಯಾದಿಮೇ ಭಾಗೇ ಕಿಂಚಿತ್ಕಾಲಮಿದಂ ಹ್ಯಭೂತ್ ।**
**ಮಹಾಪ್ರಲಯಕಾಲೇ ತು ಕೇವಲಂ ರಮಯಾ ಯುತಃ ॥ ೩೦ ॥**
**ಕರೋಮಿ ವಿವಿಧಾಃ ಕ್ರೀಡಾಸ್ತಾನಯೋಗ್ಯಾ ಇಹೋದಿತುಂ ।**

ಕ್ರಮಾತ್ ಅಪಿ-ವ್ಯುತ್ಕ್ರಮದಿಂದಲೂ, ಪೂರ್ವೋಕ್ತೇ-ಈ ಹಿಂದೆ ನಿರೂಪಿಸಿದ, ಬ್ರಹ್ಮಣಃ-ಬ್ರಹ್ಮದೇವನ, ಲಯಃ-ಲಯವು, ಜಾತೇ (ಸತಿ)-ಉಂಟಾಗುತ್ತಿರಲು, ವಾಸುದೇವಾದಿ ರೂಪಾಣಾಂ-(ಶ್ರೀವಿಷ್ಣುವಿನ) ವಾಸುದೇವಾದಿ ರೂಪಗಳಿಗೆ,

---

ಪ್ರಲಯಕಾಲದಲ್ಲಿ ಸಹ, ಸತ್ತ್ವರಾಶಿಯ ಒಂದು ಭಾಗವು, ತಮೋರಾಶಿಯ ಸಾಮೀಪ್ಯದಿಂದ ರಕ್ತವರ್ಣವುಳ್ಳದ್ದಾಗಿ ಕಾಣುವುದರಿಂದ, (ರಜೋಗುಣದ ವರ್ಣವು ರಕ್ತದಂತೆ ಕೆಂಪಾಗಿರುವುದರಿಂದ), ಆ ಭಾಗವೇ ರಜೋಗುಣವೆಂದು ಭಾವಿಸಿ, ಪ್ರಕೃತಿಯು ಎಲ್ಲ ಕಾಲದಲ್ಲಿ ತ್ರಿಗುಣಾತ್ಮಕವೆಂದು ಹೇಳುವರು (೨೫-೨೭). ಈ ಹಿಂದೆ ನಿರೂಪಿಸಿದಂತೆ ಬ್ರಹ್ಮಾಂಡವೂ ಆವರಣಗಳೂ ಲಯಗೊಂಡು, ಬ್ರಹ್ಮದೇವನು ಸಹ ಲಯಹೊಂದಲು (ಲಿಂಗಭಂಗವನ್ನು ಹೊಂದಿ) ಸ್ವರೂಪದಿಂದ ಶ್ರೀಹರಿಯ ಉದರವನ್ನು ಪ್ರವೇಶಿಸಲು, ಕ್ರಮವಾಗಿ ವಾಸುದೇವಾದಿ ರೂಪಗಳು ಸಹ, ಶ್ರೀನಾರಾಯಣನಲ್ಲಿ ಐಕ್ಯವನ್ನು ಹೊಂದುತ್ತವೆ; ಮಾಯಾ, ಜಯಾ, ಕೃತೀ, ಶಾಂತೀನಾಮಕ ಶ್ರೀಲಕ್ಷ್ಮೀರೂಪಗಳೂ, ಶ್ರೀಮಹಾಲಕ್ಷ್ಮೀದೇವಿಯ (ಅಂಭೃಣೀ

(ಕ್ರಮಾದಪಿ- ಅದೇ ಕ್ರಮದಿಂದ), ನಾರಾಯಣೇ-(ಮೂಲರೂಪಿಯಾದ) ಶ್ರೀನಾರಾಯಣನಲ್ಲಿ ಲಯಃ-ಲಯವು (ಲೀನವಾಗುವಿಕೆಯು-ಐಕ್ಯ ಹೊಂದುವಿಕೆಯು), ಅಭೂತ್-ಉಂಟಾಯಿತು; ಚ-ಮತ್ತು ಮಾಯಾದೀನಾಂ-ಮಾಯಾ ಮೊದಲಾದ, ಸರ್ವೇಷಾಂ-ಎಲ್ಲ ಶ್ರಿಯಃ-ಶ್ರೀಲಕ್ಷ್ಮೀದೇವಿಯ, ರೂಪಾಣಾಂ-ರೂಪಗಳಿಗೆ, ಚ-ಸಹ, ಕ್ರಮಾತ್-ಅದೇ ಕ್ರಮದಿಂದ (ಕಡೆಯಲ್ಲಿ ಅಭಿವ್ಯಕ್ತವಾದ ಶಾಂತೀರೂಪಕ್ಕೆ ಮೊದಲು ಇತ್ಯಾದಿ ವ್ಯತ್ಯಮದಿಂದ), ಅಂಭ್ರಣ್ಯಾಂ-ಅಂಭ್ರಣೀರೂಪದಲ್ಲಿ (ಶ್ರೀ ಮಹಾಲಕ್ಷ್ಮೀರೂಪದಲ್ಲಿ), ಐಕ್ಯಂ-ಐಕ್ಯವು; ಅಗಮತ್-ಉಂಟಾಯಿತು. ತತಃ-ನಂತರ, ದೇವ್ಯಾ-ಅಂಭ್ರಣೀದೇವಿಯಿಂದ (ಸಹಿತನಾದ), ಅಹಂ-ನಾನು, ಏಕಲಃ-ಒಬ್ಬನೇ (ಇದೆನು); ಪ್ರಲಯಸ್ಯ-ಪ್ರಲಯಕಾಲದ, ಆದಿಮೇ ಭಾಗೇ-ಪ್ರಾರಂಭಕಾಲದಲ್ಲಿ, ಇದಂ-ಈ ಪರಿಸ್ಥಿತಿಯು, ಕಿಂಚಿತ್‌ಕಾಲಂ, ಸ್ವಲ್ಪಕಾಲ, ಅಭೂತ್ ಹಿ-ಇತ್ತೆಂಬುದು ಪ್ರಸಿದ್ಧವು; ಮಹಾಪ್ರಲಯಕಾಲೇ ತು-ನಂತರದ ಮಹಾಪ್ರಲಯ ಕಾಲದಲ್ಲಿ (ಗಂಭೀರವಾದ ಮಧ್ಯಕಾಲದಲ್ಲಿಯಾದರೋ) ಕೇವಲಂ ರಮಯಾ ಯುತಃ-ರಮಾದೇವಿ ಮಾತ್ರಳಿಂದ ಕೂಡಿ, ವಿವಿಧಾಃ-ನಾನಾವಿಧದ, ಕ್ರೀಡಾಃ-ಕ್ರೀಡೆಗಳನ್ನು ಕರೋಮಿ-ಮಾಡುತ್ತೇನೆ; ತಾಃ-ಅವುಗಳು, ಇಹ-ಇಲ್ಲಿ ಉದಿತುಂ-ಹೇಳುವು

---

ನಾಮಕ) ರೂಪದಲ್ಲಿ ಐಕ್ಯಹೊಂದುತ್ತವೆ; ಆಮುಂದೆ, ಪ್ರಲಯಕಾಲದ ಆರಂಭದಲ್ಲಿ ಸ್ವಲ್ಪಕಾಲ, ಶ್ರೀನಾರಾಯಣನು, ರಮಾದೇವಿಯೊಬ್ಬಳೊಡನೆ ಶಯನದಲ್ಲಿರುತ್ತಾನೆ; ಮುಂದೆ, ಮಹಾಪ್ರಲಯದ ಮಧ್ಯಭಾಗದ ಕಾಲದಲ್ಲಿ ಶ್ರೀವಿಷ್ಣುವು (ನಾನು) ರಮೆಯೊಡನೆ ವಿವಿಧ ಕ್ರೀಡೆಗಳನ್ನು ನಡೆಸುತ್ತೇನೆ; ಅಗಮ್ಯವಾದ ಈ ಕ್ರೀಡೆಗಳನ್ನು ಇಲ್ಲಿ ಹೇಳುವುದು ಯೋಗ್ಯವಾಗುವುದಿಲ್ಲ[1] (೨೮-೩೦). ಎಲ್ಲಕಾಲದ ಎಲ್ಲಬ್ರಹ್ಮಕಲ್ಪಗಳಲ್ಲಿ

---

1. ನಿತ್ಯಾನಂದಪೂರ್ಣಳಾದ ಶ್ರೀ ಲಕ್ಷ್ಮೀದೇವಿಯ ಆನಂದವನ್ನು ಉದ್ರೇಕಿಸಿ, ಸೂರೆಗೊಳ್ಳುವ ಸ್ವರಮಣನಾದ ಶ್ರೀಹರಿಯ ಚಾತುರ್ಯವೂ, ಜಗದುದರನಾದ ಶ್ರೀಹರಿಯು ರಮೆಯೊಡನೆ ರಮಿಸುವ ಮಹಿಮೆಯೂ, ಶ್ರೀದೇವಿಯು ವಿಹರಿಸುವಾಗ ಪ್ರಕಟಿಸುವ ನಾನಾ ರೂಪಗಳೂ, ಈ ರಮಾನಾರಾಯಣರ ವಿಹಾರವೂ, ಬ್ರಹ್ಮಾದಿಗಳಿಗೂ ಅಗೋಚರವು—ಅಚಿಂತ್ಯವು—ಅದ್ಭುತವು; ಪ್ರಲಯಕಾಲದಲ್ಲಿ ಸಹ ಪ್ರತಿಭಾತಪರಾವರರಾದ ಇವರಿಗೆ ಸಹ ಅಗಮ್ಯವಾದುದನ್ನು ನಿರೂಪಿಸುವುದು ಹೇಗೆ! ಆದ್ದರಿಂದಲೇ 'ಉದಿತುಂ ನ ಯೋಗ್ಯಾಃ' ಎಂದುದು. ಶ್ರೀವಾದಿರಾಜರು ತಮ್ಮ ವೈಕುಂಠವರ್ಣನೆಯಲ್ಲಿ 'ಶ್ರೀವಲ್ಲಭ ನಿದ್ರೆಗೊಳ್ಳಿಸಿದ ಸಲ್ಲೀಲೆಯಿಂದ ಸತಿಯರೊಡನಾಡುವ ಉಲ್ಲಾಸಗಳ ಕಾಣದಂತೆ' ಎಂದು, ಹೇಳುತ್ತ ಎಲ್ಲ ಜೀವರನ್ನು ನಿದ್ರಾವಸ್ಥೆಯಲ್ಲಿ (ಮುಕ್ತರನ್ನು ಧ್ಯಾನಾವಸ್ಥೆಯಲ್ಲಿಯೂ ಇಟ್ಟನೆಂದು ಹೇಳಿರುವರು.) 'ಸತಿಯರೊಡನೆ' ಎಂಬ ಬಹುವಚನ ಪ್ರಯೋಗವು, ಆ ಕಾಲದಲ್ಲಿ ಸ್ವಪತಿಯ ಪ್ರೀತಿಗಾಗಿ ಶ್ರೀರಮೆಯು ಬಹುರೂಪಗಳನ್ನು ಸ್ವೀಕರಿಸುವಳೆಂಬುದೂ ಸೂಚಿತವಾಗುತ್ತದೆ. ಸ್ವಸ್ತ್ರೀಯೊಡನೆ, ಲೌಕಿಕ ಪುರುಷರು, ಸ್ತ್ರೀ ಲಜ್ಜೆಯನ್ನು ಗೌರವಿಸಿ, ಏಕಾಂತದಲ್ಲಿ ವಿಹರಿಸಬೇಕೆಂಬ ನೀತಿಯೂ ಈ ನಿರೂಪಣೆಯಿಂದ ಶಿಕ್ಷಿತವೆಂದೂ ತಿಳಿಯಬೇಕು.

ದಕ್ಕೆ, ನ ಯೋಗ್ಯಾಃ-ಯೋಗ್ಯಗಳಾಗುವುದಿಲ್ಲ (ಸರ್ವಜ್ಞರಾದವರ ಬುದ್ಧಿಗೆ ಸಹ ಗೋಚರಿಸತಕ್ಕವುಗಳಲ್ಲ).

**ಏವಂ ಪ್ರಾಯೇಣ ಸರ್ವೇಷು ಬ್ರಹ್ಮಕಲ್ಪೇಷು ಸರ್ವದಾ ॥ ೩೧ ॥**

**ಉದ್ಧೃತ್ಯ ಜೀವರಾಶಿಭ್ಯೋ ನಾನಾಜೀವಗಣಾನ್ ಪೃಥಕ್ ।**

**ತಥಾ ಪ್ರಕೃತಿಭಾಗಾಂಶ್ಚ ದೇಹಯೋಗಾದಿನಾ ಸೃಜೇ ॥ ೩೨ ॥**

ಸರ್ವದಾ-ಸರ್ವಕಾಲದಲ್ಲಿ, ಸರ್ವೇಷು-ಎಲ್ಲ ಬ್ರಹ್ಮಕಲ್ಪೇಷು-ಬ್ರಹ್ಮಕಲ್ಪಗಳಲ್ಲಿ ಪ್ರಾಯೇಣ-ಬಹುವಾಗಿ, (ಇದೇ ನಿಯಮಾನುಸಾರ), ಏವಂ-ಹೀಗೆಯೇ, ಜೀವ ರಾಶಿಭ್ಯಃ-ಜೀವರಾಶಿಗಳಿಂದ, ನಾನಾಜೀವಗಣಾನ್-ವಿವಿಧ ಜೀವಗಣಗಳನ್ನು ಪೃಥಕ್-ಪ್ರತ್ಯೇಕಿಸಿ, ಉದ್ಧೃತ್ಯ-ಎತ್ತಿತೆಗೆದು (ಅನಂತ ಜೀವರುಳ್ಳ ಅನಂತಜೀವ ರಾಶಿಗಳಿರುವ ಅಸೃಜ್ಯರಾಶಿಯಿಂದ ಈ ಕಲ್ಪದಲ್ಲಿ ಸೃಷ್ಟರಾಗಲಿರುವವರನ್ನು ಮಾತ್ರ ಎತ್ತಿಕೊಂಡು), ತಥಾ-ಮತ್ತು ಪ್ರಕೃತಿಭಾಗಾನ್-(ಅನಂತವೂ ಅಪಾರವೂ ಆದ) ಪ್ರಕೃತಿಯಿಂದ ಕೆಲವಂಶಗಳನ್ನು ಮಾತ್ರ, ಚ-ತೆಗೆದುಕೊಂಡು, ದೇಹಯೋಗಾದಿನಾ (ಪ್ರಾಕೃತ) ದೇಹಯೋಗಾದಿರೂಪದಿಂದ, ಸೃಜೇ-ಸೃಷ್ಟಿಮಾಡುತ್ತೇನೆ.

**ಪ್ರಾಯೇಣ ತಾಮಸಾ ಜೀವಾಸ್ತತೋಽಲ್ಪಾಃ ಸಾತ್ತ್ವಿಕಾ ಮತಾಃ ।**

**ಅತ್ಯಲ್ಪಾ ರಾಜಸಾ ಜೀವಾಸ್ತೇ ಸದಾ ಸಂಸೃತೌ ಸ್ಥಿತಾಃ ॥ ೩೩ ॥**

**ಲಭಂತೇ ಸಾತ್ತ್ವಿಕಾ ಮೋಕ್ಷಂ ವೈಕುಂಠಾದಿಷು ತೇ ಸ್ಥಿತಾಃ ।**

**ತಾಮಸಾಸ್ತು ತಮಸ್ಯೇವ ಸ್ಥಿತಾ ದುಃಖಾನಿ ಭುಂಜತೇ ॥ ೩೪ ॥**

ಜೀವಾಃ-(ಸೃಷ್ಟಿಯಲ್ಲಿ ತರಲಾದ) ಜೀವರು, ಪ್ರಾಯೇಣ-ಬಹುವಾಗಿ, ತಾಮಸಾಃ-ತಾಮಸರು (ತಮೋಯೋಗ್ಯರು); ತತಃ-ಅದಕ್ಕಿಂತ (ತಾಮಸರಗಿಂತ), ಸಾತ್ತ್ವಿಕಾಃ-ಸಾತ್ತ್ವಿಕರು (ಮುಕ್ತಿಯೋಗ್ಯರು), ಅಲ್ಪಾಃ-(ಸೃಷ್ಟಿಯಲ್ಲಿ) ಅಲ್ಪಸಂಖ್ಯೆ

---

ಈ ಪೂರ್ವೋಕ್ತ ನಿಯಮವನ್ನೇ ಬಹಳವಾಗಿ ಅನುಸರಿಸಿ, ಅನಂತ ಜೀವರಾಶಿಗಳಿಂದ, ವಿವಿಧ ಜೀವರನ್ನೂ, ಅನಂತವಾದ ಮೂಲಪ್ರಕೃತಿಯಿಂದ, ಕೆಲವು ಅಂಶಗಳನ್ನು ಮಾತ್ರ, ತೆಗೆದುಕೊಂಡು, ಪ್ರಾಕೃತ ದೇಹಸಂಬಂಧರೂಪವಾದ ಸೃಷ್ಟಿಯನ್ನು ಜೀವರಿಗೆ ಮಾಡುತ್ತೇನೆ (ಜೀವರನ್ನು ಸೃಷ್ಟಿಸುತ್ತೇನೆ—ನಿತ್ಯಸ್ವರೂಪರಾದ ಜೀವರಿಗೆ ಇದೇ ಸೃಷ್ಟಿಯು) (೩೧-೩೨). ಸೃಷ್ಟಿಯಲ್ಲಿರುವ ಜೀವರು ಪ್ರಾಯಃ (ಬಹುವಾಗಿ) ತಾಮಸರೇ[1] ಸಾತ್ತ್ವಿಕರು, ಅವರಕ್ಕಿಂತ ಅಲ್ಪಸಂಖ್ಯೆಯುಳ್ಳವರು; ರಾಜಸಜೀವರೇ ಅತ್ಯಲ್ಪಸಂಖ್ಯೆಯಲ್ಲಿರುವರು; ಇವರು ಸರ್ವದಾ ಸಾಂಸಾರಿಕ ಸುಖದುಃಖಗಳಲ್ಲಿಯೇ

---

1 'ಅಸುರಾ ಬಹುಲಾ ಯಸ್ಮಾತ್ ತಸ್ಮಾನ್ನ ಜನತಾಽಮಿಯಾತ್' ಇತ್ಯಾದಿ ವಾಕ್ಯಗಳು ಸೃಷ್ಟಿಯಲ್ಲಿ ಅಸುರಜನರೇ ಬಹುಸಂಖ್ಯೆಯವರೆಂದು ಹೇಳುತ್ತವೆ.

ಯವರು; ರಾಜಸಾಃ-ರಾಜಸರಾದ (ಮಿಶ್ರಸ್ವಭಾವದ), ಜೀವಾಃ-ಜೀವರು, ಅತ್ಯಲ್ಪಾಃ-ಬಹಳ ಸ್ವಲ್ಪರು (ತ್ರಿವಿಧಜೀವರಲ್ಲಿ ಅತ್ಯಲ್ಪ ಸಂಖ್ಯೆಯವರು) ಸದಾ-ಸರ್ವದಾ, ಸಂಸೃತೌ-ಸಂಸಾರದಲ್ಲಿಯೇ ಆಸಕ್ತರಾಗಿ, ಸ್ಥಿತಾಃ-ಇರುವವರು (ಇವರಿಗೆ ಉಭಯ ವಿಧಮೋಕ್ಷವೂ ಇಲ್ಲ—ವೈಕುಂಠಾದಿ ನಿತ್ಯಸುಖಸ್ಥಾನಗಳಾಗಲಿ, ಅಂಧತಮಸ್ಸೇ ಮೊದಲಾದ ನಿತ್ಯದುಃಖಸ್ಥಾನಗಳಾಗಲಿ ಇಲ್ಲ; ಕಿಂತು ಸರ್ವದಾ ಸುಖದುಃಖ ಮಿಶ್ರಾನುಭವವುಳ್ಳ ನಿತ್ಯಸಾಂತಾನಿಕ ಲೋಕಗಳು ಮಾತ್ರ, ಇವರಿಗೆ ಲಿಂಗಭಂಗಾನಂತರ ಲಭಿಸುತ್ತವೆ); ಸಾತ್ವಿಕಾಃ-ಮುಕ್ತಿಯೋಗ್ಯರು, ಮೋಕ್ಷಂ-ಮುಕ್ತಿಯನ್ನು ಲಭಂತೇ-ಹೊಂದುವರು; ತೇ-ಅವರು, ವೈಕುಂಠಾದಿಷು-ವೈಕುಂಠ ಮೊದಲಾದ ಸ್ಥಾನಗಳಲ್ಲಿ ಸ್ಥಿತಾಃ-ಇರುವರು; ತಾಮಸಾಃ ತು-ತಮೋಯೋಗ್ಯರಾದರೋ, ತಮಸಿ ಏವ-ತಮಸ್ಸಿನಲ್ಲಿಯೇ, ಸ್ಥಿತಾಃ-ಇರುವವರಾಗಿ, ದುಃಖಾನಿ-ದುಃಖಗಳನ್ನು ಭುಂಜತೇ-ಭೋಗಿಸುತ್ತಾರೆ.

**ಮದ್ಭಕ್ತಿಃ ಸಾಧನಂ ಮೋಕ್ಷೇ ಮದ್ದ್ವೇಷಸ್ತಮಸಃ ಸ್ಮೃತಃ ।**
**ಕಾಮ್ಯಕರ್ಮರತೇಃ ಸ್ವರ್ಗನಿರಯಾದಿಷು ಸಂಸ್ಥಿತಿಃ ॥ ೩೫ ॥**

ಮೋಕ್ಷೇ-ಮೋಕ್ಷಪ್ರಾಪ್ತಿಯಲ್ಲಿ ಮದ್ಭಕ್ತಿ-ನನ್ನಲ್ಲಿ ಮಾಡುವ ಭಕ್ತಿಯು, ಸಾಧನಂ-ಸಾಧನವು; ತಮಸಃ-ತಮಃಪ್ರಾಪ್ತಿಗೆ, ಮದ್ದ್ವೇಷಃ-ನನ್ನ ದ್ವೇಷವು, ಸ್ಮೃತಃ-(ಸಾಧನವೆಂದು) ಜ್ಞಾನಿಗಳಿಂದ ತಿಳಿಯಲಾಗುತ್ತದೆ; ಕಾಮ್ಯಕರ್ಮರತೇಃ-ಫಲಾಶೆಯಿಂದಾಚರಿಸುವ ಕರ್ಮಗಳಲ್ಲಿನ ಆಸಕ್ತಿಯಿಂದ, ಸ್ವರ್ಗನಿರಯಾದಿಷು-ಸ್ವರ್ಗನರಕಗಳಲ್ಲಿ ಸಂಸ್ಥಿತಿಃ-ಬಹುವಾಗಿ ಇರುವಿಕೆಯು (ಹೆಚ್ಚಾಗಿ ಆಲೋಕಗಳ ವಾಸವೇ) (ಸ್ಮೃತಃ-ಎಂದೂ ತಿಳಿಯಲಾಗಿದೆ).

**ಪ್ರಾಯೇಣ ಬ್ರಾಹ್ಮಕಲ್ಪೇಷು ತಥಾ ದೈನಂದಿನೇಷ್ವಪಿ ।**
**ಪೂರ್ವೋಕ್ತವತ್ ಪ್ರಜಾಯಂತೇ ಸೃಷ್ಟ್ಯಾದ್ಯಾಃ ಸರ್ವದೈವ ಹಿ ॥ ೩೬ ॥**
**ವಿಪರ್ಯಯಃ ಕ್ವಚಿತ್ಕಿಂಚಿದಿತಿ ಶಾಸ್ತ್ರವಿನಿರ್ಣಯಃ ।**
**ಏವಂ ತೇ ಸರ್ವಮಾಖ್ಯಾತಂ ಪೃಷ್ಟಾಪೃಷ್ಟಂ ತ್ವಯಾ ಮಯಾ ॥ ೩೭ ॥**

ಬ್ರಾಹ್ಮಕಲ್ಪೇಷು-ಬ್ರಹ್ಮಕಲ್ಪಗಳಲ್ಲಿ ತಥಾ-ಮತ್ತು ದೈನಂದಿನೇಷು ಅಪಿ-

---

ಆಸಕ್ತರಾಗಿದ್ದು ಸುಖದುಃಖ ಮಿಶ್ರವಾದ ಅಂತ್ಯಗತಿಯನ್ನೇ ಹೊಂದುವರು; ಸಾತ್ವಿಕರು ಮೋಕ್ಷವನ್ನು ಹೊಂದಿ ವೈಕುಂಠಾದಿ ಸ್ಥಾನಗಳಲ್ಲಿ ನಿತ್ಯಸುಖಾನುಭವವುಳ್ಳವರಾಗುತ್ತಾರೆ; ತಾಮಸರು ತಮಸ್ಸಿನಲ್ಲಿಯೇ ನಿತ್ಯವೂ ಸ್ಥಿತರಾಗಿ ಸರ್ವದಾ ದುಃಖವನ್ನೇ ಭೋಗಿಸುತ್ತಾರೆ (೩೩-೩೪). ಮೋಕ್ಷಪ್ರಾಪ್ತಿಗೆ ನನ್ನ ಭಕ್ತಿಯೇ ಸಾಧನವು; ತಮಸ್ಸಿಗೆ ನನ್ನ ದ್ವೇಷವೇ ಕಾರಣವೆಂದೂ, ಕಾಮ್ಯಕರ್ಮಗಳಲ್ಲಿ ಆಸಕ್ತಿಯು, ಸ್ವರ್ಗನರಕಗಳಲ್ಲಿ ಸುತ್ತಲು ಕಾರಣವಾಗುವುದೆಂದೂ, ಜ್ಞಾನಿಗಳಿಂದ, ತಿಳಿಯಲ್ಪಟ್ಟಿರುತ್ತದೆ (೩೫). ಪ್ರತಿ ಬ್ರಹ್ಮಕಲ್ಪದಲ್ಲಿಯೂ, ಬ್ರಹ್ಮನ ಪ್ರತಿದಿನ ಕಲ್ಪದಲ್ಲಿಯೂ, ಸೃಷ್ಟಿ ಮೊದಲಾದವುಗಳು, ಬಹುವಾಗಿ,

ದಿನದಿನದ ಕಲ್ಪಗಳಲ್ಲಿಯೂ (ದಿನಕಲ್ಪಗಳಲ್ಲಿ ಸಹ), ಪ್ರಾಯೇಣ-ಬಹುವಾಗಿ, ಪೂರ್ವೋಕ್ತವತ್-ಈ ಮೊದಲು ಹೇಳಿರುವಂತೆ, ಸೃಷ್ಟ್ಯಾದ್ಯಾಃ-ಸೃಷ್ಟಿ ಮೊದಲಾದವು, ಸರ್ವದಾ ಏವ-ಎಲ್ಲ ಕಾಲದಲ್ಲಿ (ಅನಂತಭವಿಷ್ಯತ್ಕಾಲದಲ್ಲಿ ಸಹ), ಪ್ರಜಾಯಂತೇ-ಸಂಭವಿಸುತ್ತವೆ; ಹಿ-ಇದು ಶ್ರುತಿಪ್ರಸಿದ್ಧವು; ಕ್ವಚಿತ್-ಎಲ್ಲಿಯೋ, ಕಿಂಚಿತ್-ಅತ್ಯಲ್ಪ ವಿಪರ್ಯಯಃ-ವ್ಯತ್ಯಾಸವು, ಇತಿ-(ಸಂದರ್ಭ ವಿಶೇಷಗಳಲ್ಲಿ ಸಂಭವಿಸಬಹುದು) ಎಂದು, ಶಾಸ್ತ್ರವಿನಿರ್ಣಯ-ಶಾಸ್ತ್ರಗಳ ನಿಶ್ಚಿತ ತಾತ್ಪರ್ಯವಾಗಿದೆ; ಏವಂ-ಹೀಗೆ, ತ್ವಯಾ-ನಿನ್ನಿಂದ, ಪೃಷ್ಟಾಪೃಷ್ಟಂ-ಪ್ರಶ್ನಿಸಲ್ಪಟ್ಟ ಮತ್ತು ಪ್ರಶ್ನಿಸಲ್ಪಡದ, ಸರ್ವಂ-ಎಲ್ಲವೂ, ಮಯಾ-ನನ್ನಿಂದ, ತೇ-ನಿನಗೆ, ಆಖ್ಯಾತಂ-ಹೇಳಲ್ಪಟ್ಟಿತು.

**ರಹಸ್ಯಂ ಸರ್ವಶಾಸ್ತ್ರಾಣಾಂ ಕಿಂಚಿನ್ಮಾತ್ರಾವಶೇಷಿತಂ ।**
**ಯದ್ಯದನ್ಯಪುರಾಣಾದೌ ಕೀರ್ತಿತಂ ವಿಸ್ತರಾದಪಿ ॥ ೩೮ ॥**

**ತದಪ್ಯತ್ರೈವ ಜಾನೀಹಿ ನ ವಿರೋಧೋತ್ರ ಕರ್ಹಿಚಿತ್ ।**
**ಸಾರಭೂತಮಿದಂ ಯಸ್ಮಾತ್ತಸ್ಮಾತ್ಸರ್ವಾತ್ಮನೈವ ಹಿ ॥ ೩೯ ॥**
**ಸರ್ವಾಗಮೇಭ್ಯಃ ಶ್ರೇಷ್ಠಃ ಸ್ಯಾದನ್ಯದೇತಸ್ಯ ವಿಸ್ತರಃ ।**
**ಪಠತಃ ಶೃಣ್ವತೋ ವಾಪಿ ಗೃಣತಃ ಸ್ಮರತೋಽಪಿ ವಾ ॥ ೪೦ ॥**
**ಬ್ರಹ್ಮನ್ ರಹಸ್ಯಸ್ಯೈತಸ್ಯ ಸರ್ವಪುಣ್ಯಫಲಂ ಭವೇತ್ ।**
**ಮದ್ಭಕ್ತಿಂ ಪರಮಾಂ ಪ್ರಾಪ್ಯ ನ ಚಿರಾನ್ಮುಕ್ತಿಮಾಪ್ನುಯಾತ್ ॥ ೪೧ ॥**

ಸರ್ವಶಾಸ್ತ್ರಾಣಾಂ-ಸಕಲ ಸಚ್ಛಾಸ್ತ್ರಗಳ, ರಹಸ್ಯಂ-(ಇದು) ರಹಸ್ಯವಾಗಿರೆ (ಗೋಪ್ಯವಾದ ಸರ್ವಪ್ರಮೇಯಗಳ ಸಾರವಾಗಿದೆ); ಅನ್ಯಪುರಾಣಾದೌ-ಬೇರೆ ಪುರಾಣ ಮೊದಲಾದವುಗಳಲ್ಲಿ ವಿಸ್ತರಾತ್ ಅಪಿ-ವಿಸ್ತಾರವಾಗಿಯೇ, ಕೀರ್ತಿತಂ-ಹೇಳಲಾಗುವ, ಯದ್ಯತ್-ಯಾವ ಯಾವ ರಹಸ್ಯವಾದರೂ, ಕಿಂಚಿತ್-ಸ್ವಲ್ಪಮಟ್ಟಿಗೆ,

---

ಈ ಹಿಂದೆ ಹೇಳಿದಂತೆ, ಎಲ್ಲ ಕಾಲದಲ್ಲಿ ನಡೆಯುತ್ತವೆ; ಕೆಲವು ಸಂದರ್ಭಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳೂ ಸಂಭವಿಸುತ್ತವೆ; ಹೀಗೆಂಬುದು ಶಾಸ್ತ್ರನಿರ್ಣಯವು; ಹೇ ಬ್ರಹ್ಮದೇವ! ನೀನು ಕೇಳಿದ ಪ್ರಶ್ನೆಗಳನ್ನು ಪ್ರಸಕ್ತವಾದ ಅನ್ಯವಿಷಯಗಳನ್ನು, ನಾನು, ನಿನಗಾಗಿ ಹೀಗೆ ವಿಸ್ತಾರವಾಗಿ ಉತ್ತರಿಸಿರುವೆನು (೩೬-೩೭). ಸಕಲಶಾಸ್ತ್ರಗಳ ರಹಸ್ಯವು ಹೇಳಿದಂತಾಗಿದೆ; ಇತರ ಪುರಾಣಾದಿಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟ ಪ್ರಮೇಯಗಳಲ್ಲಿ ಅಲ್ಪವೇನಾದರೂ ಉಳಿದಿದ್ದರೆ, ಅದನ್ನು ಸಹ, ಇದುವರೆಗೆ ಹೇಳಿದ್ದರಲ್ಲಿಯೇ ತಿಳಿಯುವವನಾಗು; ಇಲ್ಲಿ ಹೇಳಲಾದುದಕ್ಕೆ ಅವುಗಳಿಂದ ಯಾವ ವಿರೋಧವೂ ಇಲ್ಲ; ಸಾರಭೂತವಾದ ರಹಸ್ಯಗಳೆಲ್ಲವೂ ಇಲ್ಲಿ (ಈ ಉಪದೇಶದಲ್ಲಿ—ಈ ಪುರಾಣದಲ್ಲಿ ಹೇಳಲ್ಪಟ್ಟಿರುವುದರಿಂದ, ಇದು ಸರ್ವಶಾಸ್ತ್ರಾತ್ಮಕವಾದುದೇ ಸರಿ; ಇದು

ಅವಶೇಷಿತಂ- ಉಳಿದಿರುವುದಾದರೆ, ತದಪಿ-ಅದನ್ನೂ ಸಹ, ಅತ್ರೈವ-ಇಲ್ಲಿಯೇ (ಇಲ್ಲಿ ಹೇಳಲಾಗಿರುವುದರಲ್ಲಿಯೇ), ಜಾನೀಹಿ-ತಿಳಿಯುವವನಾಗು (ನೋಡುವವನಾಗು); ಅತ್ರ- ಈ ವಿಷಯದಲ್ಲಿ (ಹೀಗೆ ಆ ಎಲ್ಲವೂ ಇದರಲ್ಲಿಯೇ ಅಡಕವಾಗಿರುತ್ತದೆಂಬಲ್ಲಿ), ಕರ್ಹಿಚಿತ್-ಎಷ್ಟುಮಾತ್ರವೂ, ನ ವಿರೋಧಃ-ವಿರೋಧವಿಲ್ಲ (ಮತ್ತು ಹೇಳಿರುವುದ ರಲ್ಲಿ ಅನ್ಯಶಾಸ್ತ್ರ ವಿರೋಧವು ಇಲ್ಲವೇ ಇಲ್ಲ); ಯಸ್ಮಾತ್-ಯಾವ ಕಾರಣದಿಂದ, ಇದಂ-ಇದು (ಈ ವಿಷ್ಣುರಹಸ್ಯ ಪುರಾಣವು), ಸಾರಭೂತಂ-(ಸರ್ವಶಾಸ್ತ್ರ) ಸಾರವಾದುದೋ, ತಸ್ಮಾತ್-ಆದ್ದರಿಂದಲೇ, ಸರ್ವಾಗಮೇಭ್ಯಃ-ಸರ್ವಶಾಸ್ತ್ರಗಳಿಕಿಂತ, ಸರ್ವಾತ್ಮನಾ-ಸರ್ವಪ್ರಕಾರದಿಂದ, ಶ್ರೇಷ್ಠಃಸ್ಯಾತ್-ಶ್ರೇಷ್ಠವಾಗಿದೆ; ಅನ್ಯತ್-ಬೇರೆಲ್ಲವೂ (ಅನ್ಯಾಗಮಗಳೆಲ್ಲವೂ), ಏತಸ್ಯ-ಇದರ, ವಿಸ್ತರಃ-ವಿಸ್ತಾರವೇ (ಆಗಿದೆ); ಬ್ರಹ್ಮನ್-ಹೇ ಬ್ರಹ್ಮದೇವ!, ಏತಸ್ಯ-ಈ, ರಹಸ್ಯಸ್ಯ-ರಹಸ್ಯದ (ಶ್ರೀವಿಷ್ಣುರಹಸ್ಯದ), ಪಠತಃ- ಪಠನದಿಂದ, ಶೃಣ್ವತಃ-ಶ್ರವಣದಿಂದ, ಅಪಿ ವಾ-ಮತ್ತು ಗೃಣತಃ-ಕೀರ್ತನದಿಂದ, ಅಪಿ ವಾ-ಮತ್ತು ಸ್ಮರತಃ-(ಮಹಿಮಾ) ಸ್ಮರಣದಿಂದಾಗಲಿ (ಪಠನ, ಶ್ರವಣ, ಕೀರ್ತನ, ಸ್ಮರಣಗಳುಳ್ಳ ಅಧಿಕಾರಿಗೆ) ಸರ್ವಪುಣ್ಯಫಲಂ-ಎಲ್ಲ ಪುಣ್ಯಕರ್ಮಗಳ ಫಲವೂ, ಭವೇತ್-ಉಂಟಾಗುತ್ತದೆ; ಪರಮಾಂ-ಉತ್ತಮವಾದ, ಮದ್ಭಕ್ತಿಂ-ನನ್ನ ಭಕ್ತಿಯನ್ನೂ, ಪ್ರಾಪ್ಯ-ಹೊಂದಿ, ನ ಚಿರಾತ್-ಶೀಘ್ರವಾಗಿ, ಮುಕ್ತಿಂ-ಮೋಕ್ಷವನ್ನು ಆಪ್ನುಯಾತ್- (ಅಧಿಕಾರಿಯು) ಹೊಂದುತ್ತಾನೆ.

**ನಾತಃ ಪರತಮಂ ಕಿಂಚಿನ್ಮುಕ್ತಿ ಸಾಧನಮಿಷ್ಯತೇ ।**

**ಅತೋಽಸ್ಯ ಸರ್ವದಾ ಸದ್ಭಿಃ ಕರ್ತವ್ಯಂ ಶ್ರವಣಾದಿ ಚ ॥ ೪೨ ॥**

ಅತಃ-ಇದಕ್ಕಿಂತ (ಸರ್ವಶಾಸ್ತ್ರಗಳ ರಹಸ್ಯಸಾರವನ್ನು ತಿಳಿಯುವುದಕ್ಕಿಂತ), ಪರತಮಂ-ಉತ್ತಮವಾದ, ಕಿಂಚಿತ್-ಯಾವ, ಮುಕ್ತಿಸಾಧನಂ-ಮೋಕ್ಷೋಪಾಯವೂ, ನ ಇಷ್ಯತೇ-ಇರುವುದಿಲ್ಲ ಅತಃ-ಆದ್ದರಿಂದ, ಸದ್ಭಿಃ-ಸಜ್ಜನರಿಂದ (ಮುಮುಕ್ಷು ಗಳಿಂದ), ಸರ್ವದಾ-ನಿರಂತರವಾಗಿ, ಅಸ್ಯ ಶ್ರವಣಾದಿ-ಶ್ರೀವಿಷ್ಣುರಹಸ್ಯದ ಶ್ರವಣ, ಪಠನಾದಿಯು, ಕರ್ತವ್ಯಂ ಚ-ಮಾಡಲ್ಪಡಲೇಬೇಕು (ಮೋಕ್ಷೋಪಯೋಗಿಯಾದ ಶ್ರೀವಿಷ್ಣುಸರ್ವೋತ್ತಮತ್ವ ನಿಶ್ಚಯಜ್ಞಾನಕ್ಕೆ ಅತ್ಯವಶ್ಯಕ).

---

ಸರ್ವಾಗಮಗಳಲ್ಲಿ ಶ್ರೇಷ್ಠವಾದುದು; ಅನ್ಯಾಗಮಗಳೆಲ್ಲ ಇದರ ವಿಸ್ತಾರವೇ ಆಗಿವೆ; ಈ ರಹಸ್ಯ ಗ್ರಂಥದ ಪಠನ, ಶ್ರವಣ ಮತ್ತು ಕೀರ್ತನೆ ಮತ್ತು ಸ್ಮರಣೆಗಳುಳ್ಳ ಅಧಿಕಾರಿಯು, ಸರ್ವ ಪುಣ್ಯಫಲವನ್ನು ಹೊಂದುವನಲ್ಲದೇ, ನನ್ನಲ್ಲಿ ಉತ್ತಮ ಭಕ್ತಿಯನ್ನೂ ಹೊಂದಿ, ಶೀಘ್ರವಾಗಿ ಮುಕ್ತಿಯನ್ನೂ ಪಡೆಯುತ್ತಾನೆ (೩೮-೪೧). ಇದಕ್ಕಿಂತ ಶ್ರೇಷ್ಠವಾದ ಮುಕ್ತಿಸಾಧನವು ಮತ್ತೊಂದಿಲ್ಲ; ಆದ್ದರಿಂದ ಸಜ್ಜನರು, (ಮುಕ್ತಿಸಾಧನವಾದ ಭಕ್ತಿಯನ್ನುತ್ಪಾದಿಸುವುದರಲ್ಲಿ ಸಮರ್ಥವಾದ) ಈ ಶ್ರೀ ವಿಷ್ಣುರಹಸ್ಯದ

**ಸೂತಉವಾಚ—**

**ಶ್ರುತ್ವೈವಂ ಭಗವತ್ಪ್ರೋಕ್ತಂ ಸರ್ವಲೋಕಪಿತಾಮಹಃ ।**
**ಸಸೃಜೇ ಪೂರ್ವವತ್ಸರ್ವಂ ಪ್ರಾಯೇಣೈವ ಹಿ ತಾದೃಶಂ ॥ ೪೩ ॥**
**ಅನಾದ್ಯನಂತಕಾಲಂ ಹಿ ಸೃಷ್ಟಿರೇಷಾ ಸನಾತನೀ ।**
**ನಾನೀದೃಶಂ ಕುತಃ ಕ್ವಾಪಿ ವಿಪ್ರಾ ಭವಿತುಮರ್ಹತಿ ॥ ೪೪ ॥**

ಸರ್ವಲೋಕ ಪಿತಾಮಹಃ-ಜಗತ್ಪಿತಾಮಹನಾದ ಬ್ರಹ್ಮದೇವನು, ಏವಂ-ಈ ಪ್ರಕಾರವಾಗಿ, ಭಗವತ್ಪ್ರೋಕ್ತಂ-ಶ್ರೀವಿಷ್ಣುವಿನಿಂದ ಉಪದೇಶಿಸಲ್ಪಟ್ಟ (ಸೃಷ್ಟ್ಯಾದಿ ಸಂಬಂಧವಾದ ರಹಸ್ಯಗಳನ್ನೊಳಗೊಂಡ ವಿವರಗಳನ್ನು), ಶ್ರುತ್ವಾ-ಕೇಳಿ, ಸರ್ವಂ-ಎಲ್ಲವನ್ನೂ, ಪೂರ್ವವತ್-ಹಿಂದಿನಂತೆ (ಹಿಂದಿನ ಕಲ್ಪಗಳಂತೆ), ಸಸೃಜೇ-ಸೃಷ್ಟಿಸಿದನು; ಪ್ರಾಯೇಣ-ಬಹುವಾಗಿ (ಅದು-ಸೃಷ್ಟಿಯು), ತಾದೃಶಂ ಏವ-ಅದರಂತೆಯೇ (ಹಿಂದಿನ ಸೃಷ್ಟಿಯಂತೆಯೇ) ಹಿ-ಇತ್ತು('ಧಾತಾ ಯಥಾ ಪೂರ್ವಮಕಲ್ಪಯತ್' ಎಂಬ ಶ್ರುತಿಯೂ ಇದನ್ನೇ ಪ್ರಮಾಣೀಕರಿಸುತ್ತದೆ); ಏಷಾ-ಈ, ಸನಾತನೀ-(ಪ್ರವಾಹತಃ) ನಿತ್ಯವಾದ, ಸೃಷ್ಟಿಃ-ಜಗತ್ಸೃಷ್ಟಿಯು, ಅನಾದ್ಯನಂತಕಾಲಂ-ಎಲ್ಲ ಕಾಲದಲ್ಲಿಯೂ, (ತಾದೃಶಂ ಹಿ-ಹಾಗೆಯೇ ಸಂಭವಿಸುತ್ತದೆ); ಕುತಃ-ಯಾವ ಕಾರಣದಿಂದಲೂ, ಕ್ವಾಪಿ-ಎಲ್ಲಿಯೂ (ಎಂದೂ), ವಿಪ್ರಾಃ-ಹೇ ಋಷಿಗಳೇ!, ಅನೀದೃಶಂ-ಹೀಗಿಲ್ಲದ ಸೃಷ್ಟಿಯು (ಭಿನ್ನವಾದ ಸೃಷ್ಟಿಯು), ಭವಿತುಂ-ಸಂಭವಿಸಲು, ನ ಅರ್ಹತಿ-ಸಾಧ್ಯವಿಲ್ಲ.

**ಭಾವಾಭಾವವಿಭೇದೇನ ಪದಾರ್ಥಾಸ್ತು ದ್ವಿಧಾಖಿಲಾಃ ।**
**ಅಚೇತನಸ್ವಭಾವಾಸ್ಸ್ಯುರಭಾವಾಃ ಸರ್ವ ಏವ ಹಿ ॥ ೪೫ ॥**
**ಕಾಯಾತ್ಪ್ರಾಗೇವ ತೇ ಕೇಚಿತ್ತನ್ನಾಶಾತ್ಪರತಃ ಪರೇ ।**
**ತ್ರೈಕಾಲಿಕಾಸ್ತಥಾ ಕೇಚಿದೇವಂ ತೇ ತ್ರಿವಿಧಾಃ ಸ್ಮೃತಾಃ ॥ ೪೬ ॥**

---

(ಸರ್ವಾಗಮಗಳಿಂದ ಶ್ರೇಷ್ಠವೆನಿಸಿದ ಈ ಪುರಾಣದ) ಪಠನ, ಶ್ರವಣ, ಕೀರ್ತನಾದಿಗಳನ್ನು ಅವಶ್ಯವಾಗಿ ಸರ್ವದಾ ಮಾಡತಕ್ಕದ್ದು (೪೨). ಶ್ರೀವಿಷ್ಣು ಪ್ರೋಕ್ತವಾದ ಈ ಸರ್ವವನ್ನೂ ಶ್ರವಣಮಾಡಿದ ಸಕಲ ಜಗತ್ತಿನ ಪಿತಾಮಹನಾದ ಬ್ರಹ್ಮದೇವನು, ಪೂರ್ವಕಲ್ಪಗಳಲ್ಲಿ ಸಂಭವಿಸಿದ ಪ್ರಕಾರವಾಗಿಯೇ ಎಲ್ಲವನ್ನೂ ಸೃಷ್ಟಿಮಾಡಿದನು; ಬಹುವಾಗಿ ಆ ಸೃಷ್ಟಿಯು ಹಿಂದಿನ ಸೃಷ್ಟಿಯಂತೆಯೇ ಇದ್ದಿತು; ಪ್ರವಾಹರೂಪದಿಂದ ನಿತ್ಯವಾದ ಈ ಜಗತ್ಸೃಷ್ಟಿಯು, ಅನಾದ್ಯನಂತಕಾಲದಲ್ಲಿಯೂ ಹೀಗೆಯೇ ನಡೆಯುತ್ತದೆ; ಹೇ ಋಷಿಗಳೇ! ಎಲ್ಲಿಯೂ, ಎಂದೂ (ಯಾವ ಕಾಲದಲ್ಲಿಯೂ) ಇದಕ್ಕೆ ವಿರೋಧವಾದ (ಭಿನ್ನ ಪ್ರಕಾರವಾದ) ಸೃಷ್ಟಿಯು ಸಂಭವಿಸುವುದೇ ಇಲ್ಲ(೪೩-೪೪). ಸೃಷ್ಟವಾದ ಜಗತ್ಪದಾರ್ಥಗಳೆಲ್ಲವೂ, ಭಾವ ಮತ್ತು

ಅಖಿಲಾಃ ಪದಾರ್ಥಾಃ-(ಸೃಷ್ಟವಾದ) ಎಲ್ಲ ವಸ್ತುಗಳೂ, ಭಾವಾಭಾವ ವಿಭೇದೇನ-ಭಾವ ಮತ್ತು ಅಭಾವವೆಂಬ ಭೇದದಿಂದ, ದ್ವಿಧಾ-ಎರಡು ಪ್ರಕಾರವು; ಅಭಾವಾಃ-ಅಭಾವಗಳೆಂಬ, ಸರ್ವಃ ಏವ-ಎಲ್ಲವೂ, ಅಚೇತನ ಸ್ವಭಾವಾಃ ಸ್ಯುಃ-ಅಚೇತನ ಸ್ವಭಾವದವುಗಳೇ (ಜಡಗಳೇ); ತೇ ಕೇಚಿತ್-ಕೆಲವು ಅಭಾವಗಳು, ಕಾರ್ಯಾತ್-ಕಾರ್ಯಕ್ಕಿಂತ (ಸೃಷ್ಟವಾದ ವಸ್ತುವಿಗಿಂತ), ಪ್ರಾಕ್‌ಏವ-ಪೂರ್ವದವುಗಳೇ; ಪರೇ-ಮತ್ತೆ ಕೆಲವು, ನಾಶಾತ್-(ವಸ್ತುನಾಶದ), ಪರತಃ-ನಂತರದವುಗಳೇ; ತಥಾ-ಮತ್ತು ಕೇಚಿತ್-ಕೆಲವು ಅಭಾವಗಳು, ತ್ರೈಕಾಲಿಕಾಃ-ಮೂರೂ ಕಾಲಕ್ಕೆ ಸಂಬಂಧಪಟ್ಟವು (ಎಂದೂ ಇರುವ ಅಭಾವ-ಎಂದೂ ಇರದ ವಸ್ತುವಿನ ಪ್ರತಿಯೋಗಿಯು;[1] ಏವಂ-ಹೀಗೆ, ತೇ-ಅಭಾವಗಳು, ತ್ರಿವಿಧಾಃ ಸ್ಮೃತಾಃ-ತ್ರಿವಿಧವೆಂದು ತಿಳಿಯಲ್ಪಟ್ಟವೆ.

ಭಾವಾಃ ಸರ್ವೇ ಸ್ವಭಾವೇನ ಭಿನ್ನಾ ಏವ ಸ್ವರೂಪತಃ ।
ಚೇತನಾಚೇತನತ್ವೇನ ಸರ್ವೇ ತೇ ದ್ವಿವಿಧಾಃ ಸ್ಮೃತಾಃ ॥ ೪೭ ॥

ಸರ್ವೇ-ಎಲ್ಲ ಭಾವಾಃ-ಭಾವವಸ್ತುಗಳೂ, ಸ್ವಭಾವೇನ-ಸ್ವಭಾವದಿಂದಲೇ, ಸ್ವರೂಪತಃ-ಸ್ವರೂಪದಿಂದ ಸಹ, ಭಿನ್ನಾಃ ಏವ-ಭಿನ್ನವಾದವುಗಳು; ಸರ್ವೇ ತೇ-ಭಾವವಸ್ತುಗಳೆಲ್ಲವೂ, ಚೇತನಾಚೇತನತ್ವೇನ-ಚೇತನ ಮತ್ತು ಅಚೇತನಗಳೆಂಬ ಧರ್ಮದಿಂದ, ದ್ವಿವಿಧಾಃ ಸ್ಮೃತಾಃ-ಎರಡು ವಿಧವೆಂದು ತಿಳಿಯಲ್ಪಟ್ಟವೆ.

---

ಅಭಾವವೆಂಬ ಭೇದದಿಂದ, ಎರಡು ವಿಧವು; ಅಭಾವಗಳೆಂಬುವೆಲ್ಲವೂ ಅಚೇತನ (ಜಡ) ಸ್ವಭಾವದವುಗಳೇ; ಅಭಾವಗಳಲ್ಲಿ ಕೆಲವು ಕಾರ್ಯಕ್ಕಿಂತ (ವಸ್ತುಸೃಷ್ಟಿಗಿಂತ) ಮೊದಲು (ಪೂರ್ವದಲ್ಲಿ) ಇರುತ್ತವೆ (ಇವು ಪ್ರಾಗಭಾವಗಳು); ಮತ್ತೆ ಕೆಲವು ವಸ್ತು (ಕಾರ್ಯದ) ನಾಶದ ನಂತರ ಇರುತ್ತವೆ (ಇವು ಪ್ರಧ್ವಂಸಾಭಾವಗಳು); ತಥಾ-ಹಾಗೂ, ಕೇಚಿತ್-ಕೆಲವು, ತ್ರೈಕಾಲಿಕಾಃ-ಮೂರು (ಭೂತ, ವರ್ತಮಾನ, ಭವಿಷ್ಯತ್) ಕಾಲದವುಗಳು (ಎಂದೂ ಇರದುದು) (ಅತ್ಯಂತಾಭಾವ); ಹೀಗೆ ಅಭಾವಗಳು ತ್ರಿವಿಧವೆಂದು ತಿಳಿಯಲ್ಪಟ್ಟವೆ (೪೫-೪೬). ಭಾವವಸ್ತುಗಳೆಲ್ಲವೂ ಸ್ವಭಾವದಿಂದಲೇ,

---

1. ಘಟವು ಘಟಾಭಾವದ ಪ್ರತಿಯೋಗಿಯು; 'ಯಸ್ಯಾಭಾವೋ ವಿವಕ್ಷ್ಯತೇ ಸ ಪ್ರತಿಯೋಗೀ' ಎಂಬುದು ಈ ವ್ಯವಹಾರದ ನ್ಯಾಯಶಾಸ್ತ್ರನಿಯಮನಿರೂಪಣೆಯು. ಶ್ರೀಮಜ್ಜಯತೀರ್ಥರು ಶಶವಿಷಾಣಾದಿ ಅಸದ್ವಸ್ತುಗಳು ಅತ್ಯಂತಾಭಾವದ ಪ್ರತಿಯೋಗಿಗಳೆಂದು ಹೇಳಿದರು. ಅವರಗಿಂತ ಹಿಂದಿನ ವ್ಯಾಖ್ಯಾನಕಾರರು, ಅಸತ್ತೇ ಅತ್ಯಂತಾಭಾವವೆಂದು ನಿರೂಪಿಸಿರುವರು; ಇದರಂತೆ, ಅತ್ಯಂತಾಭಾವಕ್ಕೆ ಅತ್ಯಂತಾಭಾವವೇ ಪ್ರತಿಯೋಗಿ ಎಂದು ಹೇಳಿದಂತಾಗುತ್ತದೆ. ಈ ಉಭಯ ಅಭಿಪ್ರಾಯಗಳಲ್ಲಿ ತೋರುವ ವಿರೋಧವು, ಶಶವಿಷಾಣಾದಿ ಅದ್ವಸ್ತುಗಳಿಗೂ ಆರೋಪಿತ ಸತ್ತ್ವವನ್ನು ಅಂಗೀಕರಿಸಿ, ಪರಿಹರಿಸಬಹುದು. 'ಸತತ್ತ್ವರತ್ನಮಾಲಾ'ದಲ್ಲಿ ಹೀಗೆ ಪರಿಹರಿಸುವ ಪ್ರಕಾರವನ್ನು ನಿರೂಪಿಸಿದ್ದಾರೆ.

ವಿಷ್ಣುಃ ಶ್ರೀಶ್ಚಾಖಿಲಾ ಜೀವಾಶ್ಚೇತನಾಸ್ತು ಸ್ವಭಾವತಃ ।
ಅನ್ಯೇ ಸರ್ವೇಽಪಿ ಯೇ ಭಾವಾ ಜಡರೂಪಾ ಅಚೇತನಾಃ ॥ ೪೮ ॥

ವಿಷ್ಣುಃ-ಶ್ರೀವಿಷ್ಣುವು, ಶ್ರೀಃ-ಶ್ರೀಲಕ್ಷ್ಮೀದೇವಿಯು, ಅಖಿಲಾಃ-ಸಮಸ್ತ ಜೀವಾಃ-ಜೀವರು, ಸ್ವಭಾವತಃ-ಸ್ವಭಾವದಿಂದಲೇ, ಚೇತನಾಃ ತು-ಚೇತನರೇ; ಅನ್ಯೇ-ಇತರ, ಯೇ-ಯಾವ, ಭಾವಾಃ-ಭಾವವಸ್ತುಗಳೋ, ಸರ್ವೇ ಅಪಿ-ಅವೆಲ್ಲವೂ, ಜಡರೂಪಾಃ-ಜಡರೂಪವುಳ್ಳ, ಅಚೇತನಾಃ-ಅಚೇತನವಸ್ತುಗಳೇ (ಆಗಿವೆ).

ಜಡಪ್ರಕೃತಿಭೇದಾಸ್ತೇ ನಿಯಮ್ಯಾಸ್ತೇ ಶ್ರಿಯಾ ಸದಾ ।
ಯತ್ಕಿಂಚಿದನ್ಯದ್ವಿಷ್ಣೋಃ ಸರ್ವಂ ಪ್ರಕೃತಿಯಂತ್ರಿತಂ ॥ ೪೯ ॥
ಪ್ರಕೃತ್ಯಾ ಸಹ ತತ್ಸರ್ವಂ ಸರ್ವದಾ ವಿಷ್ಣುಯಂತ್ರಿತಂ ।
ಪ್ರಕೃತಿಶ್ಚೇತನಾ ಲಕ್ಷ್ಮೀರ್ಜಡಪ್ರಕೃತಿ ದೇವತಾ ॥ ೫೦ ॥
ಪರಮಃ ಪುರುಷೋ ವಿಷ್ಣುಃ ಪರಮಾತ್ಮೇತಿ ಯಃ ಸ್ಮೃತಃ ।

ತೇ-ಆ ಅಚೇತನ ವಸ್ತುಗಳು, ಜಡಪ್ರಕೃತಿಭೇದಾಃ-ಜಡಪ್ರಕೃತಿಯ (ವಿಕಾರಗಳಿಂದಾದ) ಭೇದಗಳೇ (ಭಿನ್ನವಸ್ತುಗಳೇ); ತೇ-ಅವು, ಸದಾ-ಸರ್ವ ಕಾಲದಲ್ಲಿ ಶ್ರಿಯಾ-ಶ್ರೀಲಕ್ಷ್ಮೀದೇವಿಯಿಂದ, ನಿಯಮ್ಯಾಃ-ನಿಯಮ್ಯವಾದವುಗಳೇ; ವಿಷ್ಣೋಃ-ಶ್ರೀವಿಷ್ಣುವಿನಿಂದ, ಅನ್ಯತ್-ಬೇರೆಯಾದ, ಯತ್-ಯಾವ, ಯತ್ಕಿಂಚಿತ್-ಎಷ್ಟು ಅಲ್ಪವಸ್ತುವೂ (ಅತ್ಯಲ್ಪ ಪದಾರ್ಥವೂ), ಸರ್ವಂ-ಎಲ್ಲವೂ, ಪ್ರಕೃತಿಯಂತ್ರಿತಂ-ಪ್ರಕೃತಿಯ (ಶ್ರೀಲಕ್ಷ್ಮೀದೇವಿಯ) ಅಧೀನವಾದುದೇ; ಪ್ರಕೃತ್ಯಾ ಸಹ-ಪ್ರಕೃತಿಯಿಂದ (ಜಡಪ್ರಕೃತಿ ಮತ್ತು ಅದರ ನಿಯಾಮಕಳಾದ ಲಕ್ಷ್ಮೀದೇವಿಯಿಂದ) ಸಹಿತವಾದ,

---

ತಂತಮ್ಮ ಸ್ವರೂಪದಿಂದಲೇ ಪರಸ್ಪರ ಭಿನ್ನವಾದವುಗಳು; ಭಾವವಸ್ತುಗಳು, ಚೇತನ ಮತ್ತು ಅಚೇತನಗಳೆಂದು ಎರಡು ವಿಧವಾಗಿರುತ್ತವೆ (೪೭). ಶ್ರೀವಿಷ್ಣು ಮಹಾಲಕ್ಷ್ಮೀದೇವಿ, ಸಮಸ್ತರಾದ ಜೀವರು, ಈ ಎಲ್ಲರೂ ಸ್ವಭಾವದಿಂದಲೇ ಚೇತನ ವಸ್ತುಗಳು; ಇತರ ಸರ್ವ ಭಾವವಸ್ತುಗಳೂ ಜಡಸ್ವಭಾವದ ಅಚೇತನ ವಸ್ತುಗಳು (೪೮). ಅಚೇತನ ವಸ್ತುಗಳೆಲ್ಲವೂ ಜಡಪ್ರಕೃತಿಯ ವಿಕಾರಗಳಿಂದಾದ ಭಿನ್ನವಸ್ತುಗಳೇ; ಅವೆಲ್ಲವೂ ಸರ್ವದಾ ಶ್ರೀಲಕ್ಷ್ಮೀದೇವಿಯಿಂದ ನಿಯಮ್ಯವಾದವುಗಳೇ; ಶ್ರೀವಿಷ್ಣುವಿನಿಂದ ಭಿನ್ನವಾದ, ಸರ್ವವೂ, ಪ್ರಕೃತಿಶಬ್ದವಾಚ್ಯಳಾದ ಶ್ರೀದೇವಿಯ ವಶದಲ್ಲಿರುವವುಗಳೇ ಆಗಿವೆ; ಪ್ರಕೃತಿಶಬ್ದವಾಚ್ಯರಾದ ಜಡ ಮತ್ತು ಚೇತನ ಪ್ರಕೃತಿಗಳಿಂದ ಸಹಿತವಾದ ಸಮಸ್ತ ಜಗತತ್ತೂ, ಶ್ರೀವಿಷ್ಣು ನಿಯಮ್ಯವಾದವುಗಳೇ; ಚೇತನ ಪ್ರಕೃತಿಯೇ ಶ್ರೀಲಕ್ಷ್ಮೀದೇವಿಯು; ಆಕೆಯೇ ಜಡಪ್ರಕೃತಿಯ ಅಭಿಮಾನಿ ದೇವತೆಯು. ಎಲ್ಲ ಚೇತನರೂ ಪುರುಷಶಬ್ದವಾಚ್ಯರು; ಶ್ರೀವಿಷ್ಣುವೇ ಪರಮಪುರುಷನು-ಪುರುಷೋತ್ತಮನು; ಆತನೇ ಜ್ಞಾನಿಗಳಿಂದ ಪರಮಾತ್ಮನೆಂದೂ

ತತ್ಸರ್ವಂ-ಆ ಎಲ್ಲವೂ, ಸರ್ವದಾ-ಎಲ್ಲ ಕಾಲದಲ್ಲಿ ವಿಷ್ಣುಯಂತ್ರಿತಂ-ಶ್ರೀವಿಷ್ಣುವಿನ ಅಧೀನವಾದುದೇ; ಚೇತನಾ ಪ್ರಕೃತಿಃ-ಚೇತನ ಪ್ರಕೃತಿಯೇ, ಲಕ್ಷ್ಮೀಃ-ಶ್ರೀಲಕ್ಷ್ಮೀ ದೇವಿಯು (ಪ್ರಕೃತಿ ಶಬ್ದವಾಚ್ಯಳು); ಜಡಪ್ರಕೃತಿದೇವತಾ-ಅಚೇತನ ಪ್ರಕೃತಿಯ ಅಭಿಮಾನಿ ದೇವತೆಯು; ಪರಮಪುರುಷಃ-ಪರಮಪುರುಷನು, (ಪುರುಷಶಬ್ದವಾಚ್ಯ ರಾದ ಸಮಸ್ತ ಚೇತನರಲ್ಲಿ ಉತ್ತಮ ಪುರುಷನು-ಪುರುಷೋತ್ತಮನು), ವಿಷ್ಣುಃ-ಶ್ರೀವಿಷ್ಣುವು; ಯಃ-ಯಾರೋ (ಅತನು), ಪರಮಾತ್ಮಾ ಇತಿ-ಪರಮಾತ್ಮನೆಂದು, ಸ್ಮೃತಃ-ಪ್ರಸಿದ್ಧನಾಗಿರುವನು (ಜ್ಞಾನಿಗಳಿಂದ ಪರಮಾತ್ಮನೆಂದು ತಿಳಿಯಲ್ಪಟ್ಟ ವಿಷ್ಣುವೇ).

> ಏವಂ ಹಿ ಸರ್ವಮೇವೈತದ್ಭೂತಂ ಭವ್ಯಂ ಚ ವಿದ್ಯತೇ ॥ ೫೦ ॥
> ಪ್ರಕೃತಿಃ ಪುರುಷಶ್ಚೇತಿ ದ್ವಾಭ್ಯಾಮೇವ ನಿಯಂತ್ರಿತಂ ।

ಏವಂ-ಹೀಗೆ, ಭೂತಂ-ಹಿಂದಿದ್ದುದು, ಭವ್ಯಂ-ಮುಂದಾಗುವುದು, ಏತತ್-(ಎಂಬ) ಈ, ಸರ್ವಂ-ಎಲ್ಲವೂ (ಜಗತ್ತು); ಪ್ರಕೃತಿಃ-ಪ್ರಕೃತಿ, ಚ-ಮತ್ತು ಪುರುಷಃ-ಪುರುಷ, ಇತಿ-ಎಂಬ, ದ್ವಾಭ್ಯಾಂ ಏವ-ಎರಡರಿಂದಲೇ (ಪ್ರಕೃತಿ ಪುರುಷರಿಂದಲೇ-ಶ್ರೀಲಕ್ಷ್ಮೀನಾರಾಯಣರಿಂದಲೇ), ವಿದ್ಯತೇ-ಇರುತ್ತದೆ (ಸ್ವಗತಿಗಳನ್ನು ಹೊಂದುತ್ತದೆ).

ಹೇಳಲ್ಪಡುವನು[1] (೪೯-೫೦). ಭೂತ, ಭವಿಷ್ಯದ್ವರ್ತಮಾನ ಕಾಲಗಳಲ್ಲಿರುವ ಚೇತನಾಚೇತನಾತ್ಮಕ ಸಕಲ ಜಗತ್ತು ಪ್ರಕೃತಿ ಪುರುಷರೆಂಬೆರಡರಿಂದ (ಶ್ರೀ ಲಕ್ಷ್ಮೀನಾರಾಯಣರಿಂದ) ನಿಯಮ್ಯವಾಗಿರುವುದು—ಸದಾ ಜಗತ್ತು ಅವರೀರ್ವರ ವಶದಲ್ಲಿರುತ್ತದೆ (೫೦). ನಾನಾಸ್ಥಲಗಳಲ್ಲಿ (ಅಂತಃಪುರಾದಿ) ನಾನಾ ಅವಸ್ಥೆಗಳಲ್ಲಿ ನಾನಾ ರೂಪಗಳಿಂದ (ವೇಷಗಳಿಂದ) ಇರುವ ಒಬ್ಬನೇ ಆದ ರಾಜನನ್ನು ಬೇರೆ

---

1. ಪ್ರಕೃತಿಶಬ್ದವಾಚ್ಯರು, ಜಡಪ್ರಕೃತಿ ಮತ್ತು ಶ್ರೀಲಕ್ಷ್ಮೀದೇವಿ; ಹೀಗೆಯೇ ಪುರುಷ ಶಬ್ದವಾಚ್ಯರು, ಚೇತನರು ಮತ್ತು ಶ್ರೀವಿಷ್ಣುವು. ಶ್ರೀವಿಷ್ಣುವೇ ಪರಮಪುರುಷನು—ಪುರುಷೋತ್ತಮನು—ಆತನೇ ಪರಮಾತ್ಮನು.

> 'ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।
> ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿ ಜನ್ಮಸು ॥
> ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
> ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥

ಇತ್ಯಾದಿ ಗೀತಾವಾಕ್ಯಗಳಲ್ಲಿ ಪುರುಷಶಬ್ದವಾಚ್ಯರಾದ ಚೇತನರಲ್ಲಿ ಪ್ರಾಕೃತ ದೇಹಗಳನ್ನು ಹೊಂದುತ್ತ, ಸಂಸಾರದಲ್ಲಿ ಸುತ್ತುವ ಚೇತನರೂ ಅವರಿಂದ ಭಿನ್ನನೂ, ಪರಮಾತ್ಮನೂ ಎಂದು ಕರೆಯಲ್ಪಡುವ ಪರಮಚೇತನನೂ, ಸೇರಿರುವರೆಂದೂ, ಅವರ ಭೇದಜ್ಞಾನವೇ ತಾರಕವೆಂದೂ, ಉಭಯ ಪುರುಷರೂ ಈ ಮಾನವ ದೇಹದಲ್ಲಿರುವರೆಂದೂ ಹೇಳಲಾಗಿದೆ.

(ಮತ್ತು) ನಿಯಂತ್ರಿತಂ-(ಸರ್ವಚೇತನಾಚೇತನಾತ್ಮಕ ಜಗತ್ತು) ನಿಯಮ್ಯವಾಗಿದೆ (ಆ ಇಬ್ಬರ ವಶದಲ್ಲಿರುವುದಾಗಿದೆ).

ಯಥೈಕಮೇವ ರಾಜಾನಂ ನಾನಾರೂಪಧರಂ ನರಾಃ ॥ ೫೨ ॥
ನಾನಾಸ್ಥಾನಗತಂ ನಾನಾವಸ್ಥಾಪ್ರಾಪ್ತಂ ಪೃಥಕ್ ಪೃಥಕ್ ।
ನಾನಾವೇಷೈಸ್ತಥಾ ಭಾವೈರರ್ಚಿತ್ವಾ ಫಲಭಾಗಿನಃ ॥ ೫೩ ॥
ತಥೈಕೋ ವಿಷ್ಣುರೇವಾಮುಂ ನಾನಾರೂಪಾನ್ವಿತಂ ಪೃಥಕ್ ।
ನಾನಾಗಮಾನುಸಾರೇಣ ಪೂಜಯಿತ್ವಾ ಸ್ವಯೋಗ್ಯತಃ ।
ಪ್ರಾಪ್ನುವಂತ್ಯೈಹಿಕಂ ಪ್ರಾಯಃ ಕೇಚಿದಾಮುಷ್ಮಿಕಂ ತಥಾ ॥ ೫೪ ॥
ಪ್ರಾಪ್ನುವಂತ್ಯುಭಯಂ ಕೇಚಿತ್ಕೇಚಿದೇವ ಪರಾಗತಿಂ ।
ತಸ್ಮಾದ್ವೇದಾಂತಶಾಸ್ತ್ರೇಣ ಮುಖ್ಯತೋ ವೇದ್ಯಮೀಶ್ವರಂ ॥ ೫೫ ॥
ವಿಷ್ಣುಮೇವ ಭಜೇನ್ನಿತ್ಯಂ ತತಃ ಸರ್ವೇಷ್ಟಮಾಪ್ನುಯಾತ್ ।

ಯಥಾ-ಹೇಗೆ, ನಾನಾರೂಪಧರಂ-ವಿವಿಧ ರೂಪಗಳನ್ನು ಧರಿಸಿದ, ಏಕಂ ಏವ-ಒಬ್ಬನೇ ಆದ, ರಾಜಾನಂ-ರಾಜನನ್ನು, ನರಾಃ-ಮನುಷ್ಯರು (ಪ್ರಜೆಗಳು), ನಾನಾಸ್ಥಾನಗತಂ-ಬಹುಸ್ಥಾನಗಳಲ್ಲಿ, ನಾನಾವಸ್ಥಾಪ್ರಾಪ್ತಂ-ಬಹುಭಿನ್ನ ಅವಸ್ಥೆಗಳಲ್ಲಿರುವವನನ್ನು (ರಾಜನನ್ನು), ಪೃಥಕ್ ಪೃಥಕ್-ಬೇರೆ ಬೇರೆಯಾಗಿ, ನಾನಾವೇಷೈಃ-ವಿವಿಧ ರೂಪಗಳಿಂದಲೂ, ತಥಾ-ಹಾಗೂ, ಭಾವೈಃ-ಭಾವಗಳಿಂದಲೂ (ಅಥವಾ ವಿವಿಧ ವಸ್ತುಗಳಿಂದಲೂ), ಅರ್ಚಿತ್ವಾ-ಪೂಜಿಸಿ (ಸೇವಿಸಿ), ಫಲಭಾಗಿನಃ-(ಆ ವಿವಿಧ ಸೇವೆಗಳ) ಫಲಗಳನ್ನು ಹೊಂದುವವರೋ, ತಥಾ-ಹಾಗೆ, ವಿಷ್ಣುಃ-ಶ್ರೀವಿಷ್ಣುವು, ಏಕಃ-ಒಬ್ಬನೇ (ಸರ್ವೋತ್ತಮನೇ), (ಆಗಿದ್ದು), ನಾನಾರೂಪಾನ್ವಿತಂ-ಬಹುರೂಪಗಳುಳ್ಳ, ಅಮುಂ-ಈತನನ್ನು, ಸ್ವಯೋಗ್ಯತಃ-(ಜೀವರು) ಸ್ವಯೋಗ್ಯತೆಯಂತೆ, ಪೃಥಕ್-ಪ್ರತ್ಯೇಕವಾಗಿ (ಬೇರೆ ಬೇರೆಯಾಗಿ), ನಾನಾಗಮಾನುಸಾರೇಣ-ವಿಭಿನ್ನ ಆಗಮಗಳನ್ನು ಅನುಸರಿಸಿ, ಪೂಜಯಿತ್ವಾ-ಅರ್ಚಿಸಿ, (ಸೇವಿಸಿ), ಪ್ರಾಯಃ-ಬಹುವಾಗಿ,

---

ಬೇರೆಯಾದ ವೇಷಗಳುಳ್ಳ (ವಸ್ತ್ರಾದಿಗಳಿಂದ ಅಲಂಕೃತರಾದ) ನಾನಾ ಪ್ರಜೆಗಳು, ಭಯಭಕ್ತ್ಯಾದಿ ನಾನಾ ಭಾವಗಳಿಂದ (ಭಿನ್ನಭಿನ್ನ ವಸ್ತುಗಳಿಂದ) ಸೇವಿಸಿ, ಸ್ವಯೋಗ್ಯವಾದ ಫಲಗಳನ್ನು ರಾಜನಿಂದ, ಹೊಂದುವಂತೆ, ಸರ್ವೋತ್ತಮನಾದ ಒಬ್ಬ ವಿಷ್ಣುವನ್ನು ಅನಂತ ಜೀವರು, ವಿವಿಧ ಆಗಮಾನುಸಾರವಾಗಿ, ಸ್ವಯೋಗ್ಯತೆಯಂತೆ, ಪೂಜಿಸಿ (ಸೇವಿಸಿ) ಸ್ವಯೋಗ್ಯ ಫಲಗಳನ್ನು ಪಡೆಯುತ್ತಾರೆ; ಕೆಲವರು ಐಹಿಕ ಫಲವನ್ನೂ, ಇನ್ನು ಕೆಲವರು, ಪರಲೋಕದ ಫಲವನ್ನೂ, ಮತ್ತೆ ಕೆಲವರು, ಉಭಯ (ಇಹಪರ) ಫಲಗಳನ್ನೂ (ಸುಖವನ್ನೂ) ಹೊಂದುತ್ತಾರೆ; ಮತ್ತೆ ಕೆಲವು ಉತ್ತಮಾಧಿ

ಕೇಚಿತ್-ಕೆಲವರು, ಐಹಿಕಂ-ಇಹಲೋಕದ ಫಲವನ್ನು ಪ್ರಾಪ್ನುವಂತಿ-ಹೊಂದುತ್ತಾರೆ; ತಥಾ-ಹಾಗೆಯೇ; ಕೇಚಿತ್-ಕೆಲವರು, ಆಮುಷ್ಮಿಕಂ-ಪರಲೋಕ ಫಲವನ್ನೂ (ಸ್ವರ್ಗಾದಿಗಳನ್ನೂ), ಕೇಚಿತ್-ಮತ್ತೆ ಕೆಲವರು, ಉಭಯಂ-ಎರಡನ್ನೂ (ಇಹಪರ ಸುಖಗಳನ್ನೂ), ಪ್ರಾಪ್ನುವಂತಿ-ಹೊಂದುತ್ತಾರೆ; ಕೇಚಿತ್ ಏವ-ಕೆಲವರು ಮಾತ್ರ (ಅತ್ಯಲ್ಪ ಸಂಖ್ಯೆಯವರು), ಪರಾಗತಿಂ-(ವೈಕುಂಠಾದಿ ಉತ್ತಮಗತಿಯನ್ನು) ಮುಕ್ತಿಯನ್ನು ಹೊಂದುತ್ತಾರೆ. ತಸ್ಮಾತ್-ಆದ್ದರಿಂದ, ವೇದಾಂತ ಶಾಸ್ತ್ರೇಣ-ಉಪನಿಷದಾದಿ ಶಾಸ್ತ್ರದಿಂದ (ಬ್ರಹ್ಮಮೀಮಾಂಸಾಶಾಸ್ತ್ರದಿಂದ), ಮುಖ್ಯತಃ-ಮುಖ್ಯವಾಗಿ, ವೇದ್ಯಂ-ಜ್ಞೇಯನಾದ (ತಿಳಿಯಲ್ಪಡಬೇಕಾದ-ಪ್ರತಿಪಾದ್ಯನಾದ), ಈಶ್ವರಂ- (ಸರ್ವ) ಸ್ವಾಮಿಯಾದ, ವಿಷ್ಣುಂ ಏವ-ಶ್ರೀವಿಷ್ಣುವನ್ನೇ, ನಿತ್ಯಂ-ಸರ್ವದಾ, ಭಜೇತ್-ಸೇವಿಸತಕ್ಕದ್ದು; ತತಃ-ಅದರಿಂದ, ಸರ್ವೇಷ್ಟಂ-ಸರ್ವಾಭೀಷ್ಟಗಳನ್ನು ಆಪ್ನುಯಾತ್-(ಜೀವನು) ಹೊಂದುತ್ತಾನೆ.

ನ ದೇವಃ ಪರಮೋ ವಿಷ್ಣೋರ್ನ ಶಾಸ್ತ್ರಂ ವೇದತಃ ಪರಂ ॥ ೫೬ ॥
ನ ಜ್ಞಾನಾತ್ಪರಮಂ ಚಕ್ಷುರ್ನ ಮುಕ್ತೇಃ ಪರಮಾ ಗತಿಃ ।
ನ ವೈರಾಗ್ಯಾತ್ಪರಂ ಭಾಗ್ಯಂ ನ ಶಾಂತೇಃ ಪರಮಂ ಸುಖಂ ॥ ೫೭ ॥
ನ ಧರ್ಮಸದೃಶಂ ಮಿತ್ರಂ ನ ಕಾಮಸದೃಶೋ ರಿಪುಃ ।

ವಿಷ್ಣೋಃ-ಶ್ರೀವಿಷ್ಣುವಿಗಿಂತ, ಪರಮಃ-ಶ್ರೇಷ್ಠನಾದ, ದೇವಃ-ದೇವತೆಯು, ನ-ಇಲ್ಲ; ವೇದತಃ-ವೇದಕ್ಕಿಂತ, ಪರಂ-ಉತ್ತಮವಾದ, ಶಾಸ್ತ್ರಂ-ಶಾಸ್ತ್ರವು, ನ-ಇಲ್ಲ; ಜ್ಞಾನಾತ್-ಜ್ಞಾನಕ್ಕಿಂತ, ಪರಮಂ-ಶ್ರೇಷ್ಠವಾದ, ಚಕ್ಷುಃ-ಕಣ್ಣು ನ-ಇಲ್ಲ; ಮುಕ್ತೇಃ-ಮೋಕ್ಷಕ್ಕಿಂತ, ಪರಮಾ ಗತಿಃ-ಉತ್ತಮವಾದ ಗತಿಯು, ನ-ಇಲ್ಲ; ವೈರಾಗ್ಯಾತ್-(ವಿಷಯ) ವೈರಾಗ್ಯಕ್ಕಿಂತ, ಪರಂ-ಶ್ರೇಷ್ಠವಾದ, ಭಾಗ್ಯಂ-ಭಾಗ್ಯವು (ಸಂಪತ್ತು), ನ-ಇಲ್ಲ; ಶಾಂತೇಃ-(ಮನಸ್ಸಿನ) ಶಾಂತಿಯಕ್ಕಿಂತ, ಪರಮಂ-ಉತ್ತಮವಾದ, ಸುಖಂ-ಸುಖವು, ನ-ಇಲ್ಲ; ಧರ್ಮ ಸದೃಶಂ-ಧರ್ಮ (ಪುಣ್ಯ)ಕ್ಕೆ ಸಮನಾದ, ಮಿತ್ರಂ ನ-ಮಿತ್ರನಿಲ್ಲ; ಕಾಮ ಸದೃಶಃ-(ನಿಷಿದ್ಧ) ಕಾಮಕ್ಕೆ ಸದೃಶನಾದ, ರಿಪುಃ ನ-ಶತ್ರುವಿಲ್ಲ

---

ಕಾರಿಗಳು ಮುಕ್ತಿಯನ್ನು ಹೊಂದುವರು; ಆದ್ದರಿಂದ ಸಕಲ ಸಚ್ಛಾಸ್ತ್ರಗಳಿಂದ ಮುಖ್ಯ ವೇದ್ಯನಾದ, ಮಹೇಶ್ವರನಾದ ಶ್ರೀವಿಷ್ಣುವನ್ನೇ ಸರ್ವದಾ ಸೇವಿಸತಕ್ಕದ್ದು; ಅದರಿಂದಲೇ ಜೀವರು ಸರ್ವಾಭೀಷ್ಟಗಳನ್ನು ಪಡೆಯುತ್ತಾರೆ (೫೨-೫೫). ಶ್ರೀವಿಷ್ಣುವಿಗಿಂತ ಶ್ರೇಷ್ಠನಾದ ದೇವನಿಲ್ಲ (ಸಮನೂ ಇಲ್ಲ); ವೇದಕ್ಕಿಂತ ಉತ್ತಮವಾದ ಶಾಸ್ತ್ರವಿಲ್ಲ; ಜ್ಞಾನಕ್ಕಿಂತ ಹೆಚ್ಚಿನ (ಅಧಿಕವಾದ) ಕಣ್ಣಿಲ್ಲ; ಮುಕ್ತಿಗಿಂತ ಉತ್ತಮವಾದ ಗತಿ ಇಲ್ಲ; ವೈರಾಗ್ಯಕ್ಕಿಂತ ಹೆಚ್ಚಿನ ಭಾಗ್ಯವಿಲ್ಲ; ಮನಃಶಾಂತಿಗಿಂತ ಉತ್ತಮವಾದ ಸುಖವಿಲ್ಲ; ಧರ್ಮಕ್ಕೆ ಸಮನಾದ ಮಿತ್ರನಿಲ್ಲ; ವಿಷಯಕಾಮನೆಗೆ ಸಮನಾದ ಶತ್ರುವಿಲ್ಲ(೫೬-೫೭). ಆದ್ದರಿಂದ, ನಿತ್ಯಾನಿತ್ಯ, ಶತ್ರುಮಿತ್ರ ಮತ್ತು ಹಿತಾಹಿತಗಳ ಜ್ಞಾನವುಳ್ಳವನಾಗಿ

ಅತೋ ನಿತ್ಯಮನಿತ್ಯಂ ಚ ಹಿತಂ ವಾಹಿತಮೇವ ಚ ॥ ೫೮ ॥
ರಿಪುಂ ಮಿತ್ರಂ ವಿದಿತ್ವೈವಮೈಹಿಕಾಮುಷ್ಮಿಕಾಖಿಲಾತ್ ।
ವಿರಜ್ಯ ಸಾಧಯೇದ್ಯತ್ನಾದ್ಯಮಾಂಶ್ಚ ನಿಯಮಾನಪಿ ॥ ೫೯ ॥
ಬಂಧಾನ್ಮುಮುಕ್ಷುಃ ಸತತಂ ನಿತ್ಯನೈಮಿತ್ತಕರ್ಮಕೃತ್ ।
ಮತ್ಸಂಗನಿರತೋ ನಿತ್ಯಂ ಶೃಣ್ವನ್ ವಿಷ್ಣುಕಥಾಃ ಶುಭಾಃ ॥ ೬೦ ॥
ಕ್ರಮಾತ್ಸಂಪನ್ನಮನನಧ್ಯಾನಯೋಗೇನ ಪೂರಿತಃ ।
ಪಶ್ಯೇದ್ವಿಷ್ಣುಂ ತತಃ ಶೀಘ್ರಂ ಮುಕ್ತಿರಸ್ಯ ಭವೇದ್ಧ್ರುವಂ ॥ ೬೧ ॥

ಅತಃ-ಆದ್ದರಿಂದ, ನಿತ್ಯಂ-ನಿತ್ಯವನ್ನೂ ಅನಿತ್ಯಂ ಚ-ಅನಿತ್ಯವನ್ನೂ ಹಿತಂ-(ತನ್ನ) ಹಿತವನ್ನೂ ವಾ-ಮತ್ತು ಅಹಿತಂ ಚ-ಅಹಿತವನ್ನೂ ಸಹ, ರಿಪುಂ-ಶತ್ರುವನ್ನೂ ಮಿತ್ರಂ-ಮಿತ್ರನನ್ನು ಏವಂ-ಪೂರ್ವೋಕ್ತಪ್ರಕಾರದಿಂದ, ವಿದಿತ್ವಾ-ತಿಳಿದು, ಐಹಿಕಾ ಮುಷ್ಮಿಕಾಖಿಲಾತ್-ಇಹಪರಗಳೆಂಬ ಉಭಯ ಸುಖಾಪೇಕ್ಷೆಯಿಂದ, ವಿರಜ್ಯ-ವಿರಕ್ತನಾಗಿ (ರಹಿತನಾಗಿ), ಯತ್ನಾತ್-ಪ್ರಯತ್ನಪೂರ್ವಕವಾಗಿ, ಯಮಾನ್-ಯಮಗಳನ್ನೂ ಚ-ಮತ್ತು ನಿಯಮಾನ್ ಅಪಿ-ನಿಯಮಗಳನ್ನೂ ಸಹ, ಸಾಧಯೇತ್-ಸಾಧಿಸಬೇಕು (ದೊರಕಿಸಿಕೊಳ್ಳಬೇಕು); ಬಂಧಾತ್-(ಸಂಸಾರ) ಬಂಧದಿಂದ, ಮುಮುಕ್ಷುಃ- ಬಿಡುಗಡೆ ಹೊಂದುವ ಇಚ್ಛೆಯುಳ್ಳವನು (ಮುಕ್ತನಾಗಲಿಚ್ಛಿಸುವವನು), ಸತತಂ-ನಿತ್ಯವೂ, ನಿತ್ಯನೈಮಿತ್ತ ಕರ್ಮಕೃತ್-(ಸ್ವವರ್ಣಾಶ್ರಮೋಚಿತಗಳಾದ) ನಿತ್ಯನೈಮಿತ್ತಕ ಕರ್ಮಗಳನ್ನು ಆಚರಿಸುವವನಾಗಿ, ಮತ್ಸಂಗನಿರತಃ-ನನ್ನ ಸಂಗ ನಿರತನಾಗಿ (ನನ್ನ ಭಕ್ತರ ಸಹವಾಸದಲ್ಲಿ ಆಸಕ್ತನಾಗಿ), ನಿತ್ಯಂ-ನಿತ್ಯವೂ, ಶುಭಾಃ- ಮಂಗಲಕರಗಳಾದ, ವಿಷ್ಣುಕಥಾಃ-ಶ್ರೀವಿಷ್ಣುಮಹಿಮೆಗಳನ್ನು ಶೃಣ್ವನ್-ಶ್ರವಣ ಮಾಡುತ್ತ ಕ್ರಮಾತ್-ಕ್ರಮವಾಗಿ, ಸಂಪನ್ನ ಮನನ ಧ್ಯಾನಯೋಗೇನ-ಸಾಧಿಸಲಾದ (ಪೂರ್ಣಗೊಳಿಸಲಾದ) ಮನನ, ಧ್ಯಾನಗಳ ಪ್ರಭಾವದಿಂದ, ಪೂರಿತಃ-ಸಾಧನ ಪೂರ್ತಿಯುಳ್ಳವನಾಗಿ, ವಿಷ್ಣುಂ-ಶ್ರೀವಿಷ್ಣುವನ್ನು ಪಶ್ಯೇತ್-ಕಾಣುತ್ತಾನೆ; ತತಃ-ನಂತರ, ಅಸ್ಯ-ಈತನಿಗೆ (ಶ್ರೀಹರಿಯನ್ನು ಸಾಕ್ಷಾತ್ತಾಗಿ ಕಂಡ—ಅಪರೋಕ್ಷಜ್ಞಾನಿಗೆ), ಶೀಘ್ರಂ-ಬೇಗನೇ

(ಅವುಗಳನ್ನು ವಿವೇಕಿಸಿ ತಿಳಿದು), ಇಹಪರಗಳ ಸುಖಾಶೆಯನ್ನು ತ್ಯಜಿಸಿ, ಯಮನಿಯಮಗಳನ್ನು ಯತ್ನದಿಂದ ಸಾಧಿಸಬೇಕು; ಸಂಸಾರಬಂಧದಿಂದ ಮುಕ್ತನಾಗಬೇಕೆಂದಿಚ್ಛಿಸುವ ಪುರುಷನು, ಸ್ವವರ್ಣಾಶ್ರಮೋಚಿತವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ನಿತ್ಯವೂ ತಪ್ಪದೇ ಆಚರಿಸುತ್ತ, ಭಗವದ್ವಿಷಯದಲ್ಲಿ ಆಸಕ್ತನಾಗಿ (ಸಜ್ಜನಸಂಗದಲ್ಲಿರುತ್ತ), ಪರಮ ಮಂಗಲಕರಗಳಾದ ಶ್ರೀವಿಷ್ಣುಮಹಿಮೆಗಳನ್ನು ನಿತ್ಯವೂ (ಯೋಗ್ಯಾಧಿಕಾರಿಗಳ ಮುಖದಿಂದ) ಶ್ರವಣಮಾಡಬೇಕು; ಕ್ರಮದಿಂದ, ಮನನ ಧ್ಯಾನಗಳ ಸಿದ್ಧಿಯನ್ನು ಹೊಂದಿ, ಸಾಧನಪೂರ್ತಿಯುಳ್ಳವನಾಗಿ, ಶ್ರೀವಿಷ್ಣುವಿನ

(ಪ್ರಾರಬ್ಧಕರ್ಮಭೋಗವು ಮುಗಿದೊಡನೆ), ಮುಕ್ತಿ-ಮೋಕ್ಷವು, ಭವೇತ್-ಉಂಟಾಗುತ್ತದೆ (ದೊರೆಯುತ್ತದೆ); ಧ್ರುವಂ-ನಿಶ್ಚಯವು.

ಯತೋ ನಾವರ್ತತೇ ಭೂಯಃ ಸಂಸಾರೇ ದುಃಖಸಾಗರೇ ।
ತತ್ಪದಂ ಪರಮಂ ವಿಷ್ಣೋರ್ದೇವೈಃ ಸುಕೃತಕರ್ಮಭಿಃ ॥ ೬೨ ॥
ಸಂಸಾರಬಂಧನಿರ್ಮುಕ್ತೈಃ ಸೇವ್ಯಮಾನಂ ಚ ಯತ್ಸದಾ ।
ರಮಮಾಣಃ ಸದಾ ಸ್ವೈರಂ ತತ್ರ ಲೋಕೇ ಮಹೀಯತೇ ॥ ೬೩ ॥

(ಹೀಗೆ ಮುಕ್ತನಾದವನು ಯಾವ ಸ್ಥಾನವನ್ನು ಹೊಂದುತ್ತಾನೆಂದರೆ) ಯತಃ-ಎಲ್ಲಿಂದ, ದುಃಖಸಾಗರೇ-ದುಃಖಸಮುದ್ರವಾದ (ದುಃಖದಿಂದ ತುಂಬಿರುವ-ಪೂರ್ಣವಾದ), ಸಂಸಾರೇ-(ಜನನ ಮರಣರೂಪದ) ಸಂಸಾರದಲ್ಲಿ, ಭೂಯಃ-ಪುನಃ, ನ ಆವರ್ತತೇ-ತಿರುಗಿಬರುವುದಿಲ್ಲವೋ (ಸುತ್ತುವುದಿಲ್ಲವೋ), ತತ್-ಆ, ವಿಷ್ಣೋಃ-ಶ್ರೀವಿಷ್ಣುವಿನ, ಪರಮಂ ಪದಂ-ಶ್ರೇಷ್ಠವಾದ ಸ್ಥಾನವನ್ನು (ಮತ್ತು), ಯತ್-ಯಾವ ಸ್ಥಾನವು (ಪರಮಪದವು), ಸಂಸಾರಬಂಧ ನಿರ್ಮುಕ್ತೈಃ-ಸಂಸಾರ ಬಂಧದಿಂದ ಮುಕ್ತರಾದ, ಸುಕೃತಕರ್ಮಭಿಃ-ಪುಣ್ಯಕರ್ಮಗಳುಳ್ಳ, ದೇವೈಃ-ದೇವತೆಗಳಿಂದ (ದೇವಸ್ವಭಾವದ ಮುಕ್ತಿಯೋಗ್ಯರಿಂದ), ಸದಾ-ನಿತ್ಯವೂ, ಸೇವ್ಯಮಾನಂ-ಸೇವಿಸಲ್ಪಡುವುದೋ (ಆಶ್ರಯಿಸಲ್ಪಟ್ಟಿರುವುದೋ), (ಆ ಸ್ಥಾನವನ್ನು ಸೇರಿ), ತತ್ರ ಲೋಕೇ-ಆ ಲೋಕದಲ್ಲಿ (ಮುಕ್ತಸ್ಥಾನಗಳಾದ ವೈಕುಂಠಾದಿಗಳಲ್ಲಿ), ಸ್ವೈರಂ-ಸ್ವೇಚ್ಛಾನುಸಾರವಾಗಿ, ಸದಾ-ನಿತ್ಯವೂ, ರಮಮಾಣಃ-ಕ್ರೀಡಿಸುತ್ತ ಮಹೀಯತೇ-ವಿರಾಜಿಸುತ್ತಾನೆ (ಶೋಭಿಸುತ್ತಾನೆ-ಸ್ವಾವರರಿಂದ ಪೂಜಿಸಲ್ಪಡುವನೂ ಆಗುತ್ತಾನೆ).

ಲಿಂಗಭಂಗದಿಂದ ಮುಕ್ತಿಪ್ರಾಪ್ತಿ ವರ್ಣನವೆಂಬ ೪೫ನೇ ಅಧ್ಯಾಯವು ಮುಗಿದುದು.

---

ಸಾಕ್ಷಾದ್ದರ್ಶನವನ್ನು ಹೊಂದುತ್ತಾನೆ; ಈ ದರ್ಶನಲಾಭವನ್ನು ಪಡೆದ ಅಧಿಕಾರಿಯು, (ಆ ಕಾಲದ) ಪ್ರಾರಬ್ಧಕರ್ಮಭೋಗವು ಮುಗಿದೊಡನೆ (ಶೀಘ್ರವಾಗಿ) ಮೋಕ್ಷವನ್ನು ಹೊಂದುವನು-ಇದು ನಿಶ್ಚಯ (೫೮-೬೧). ಹೀಗೆ ಪ್ರಾರಬ್ಧಭೋಗವಾದೊಡನೆ ಮುಕ್ತನಾಗುವ ಅಪರೋಕ್ಷಜ್ಞಾನಿಯಿಂದ ಹೊಂದಲಾಗುವ ಸ್ಥಾನವಾವುವೆಂದರೆ; ದುಃಖಸಾಗರವಾದ ಈ ಸಂಸಾರದಲ್ಲಿ ಸುತ್ತಲು ಪುನಃ ಹಿಂದಿರುಗಿ ಬರದಿರುವ ನಿತ್ಯಸ್ಥಾನವದು—ಅದೇ ಶ್ರೇಷ್ಠವಾದ ವಿಷ್ಣುಪದವು—ಪರಮಪದವು; ಸಂಸಾರ ನಿರ್ಮುಕ್ತರಾದ, ಪುಣ್ಯಜೀವರಾದ ದೇವಸ್ವಭಾವದವರಿಂದ ಮಾತ್ರ ಪ್ರಾಪ್ಯವಾದ ಲೋಕವದು; ಅದೇ ವೈಕುಂಠಾದಿ ನಿತ್ಯಲೋಕಗಳು—ಮುಕ್ತನು, ಆ ಲೋಕದಲ್ಲಿ ಸ್ವೇಚ್ಛಾನುಸಾರವಾಗಿ ಕ್ರೀಡಿಸುತ್ತ (ಇಚ್ಛಿತ ಸುಖಭೋಗಗಳುಳ್ಳವನಾಗಿ) ಸರ್ವ ಕಾಲದಲ್ಲಿ ಸ್ವಾವರರಿಂದ, ಸೇವ್ಯನಾಗಿ, ವಿರಾಜಮಾನನಾಗಿರುವನು (೬೨-೬೩).

೪೫ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೬

### ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

**ಏವಂ ವಃ ಕಥಿತಂ ವಿಪ್ರಾಶ್ಚಿತ್ರಂ ಚಾರಿತ್ರಮೀಶಿತುಃ ।**
**ಪೃಷ್ಟವಂತೋ ಭವಂತೋ ಯಂ ಯಥಾಮತಿ ತದೀರಿತಂ ॥ ೧ ॥**
**ಶ್ಲಾಘನೀಯೋತ್ರ ವಃ ಸಂಗೋ ಲಬ್ಧಃ ಪ್ರಾಚೀನಕರ್ಮಭಿಃ ।**
**ಪುಣ್ಯೈರ್ವಿನಾ ನ ಲಭ್ಯೋ ಹಿ ಸತ್ಸಂಗೋಽಯಂ ಮಹೇಷ್ಟದಃ ॥ ೨ ॥**

**ಅರ್ಥ:**—ವಿಪ್ರಾಃ-ಹೇ ಋಷಿಗಳೇ!, ಏವಂ-ಹೀಗೆ, ವಃ-ನಿಮ್ಮಗಳಿಗೆ, **ಈಶಿತುಃ**-ಸರ್ವಸ್ವಾಮಿಯಾದ ಶ್ರೀವಿಷ್ಣುವಿನ, **ಚಿತ್ರಂ**-ವಿಚಿತ್ರವಾದ (ಅದ್ಭುತವಾದ), **ಚಾರಿತ್ರ್ಯಂ**-ಚರಿತ್ರೆಯು (ಭಕ್ತರನ್ನು ಉದ್ಧರಿಸುವ ಪ್ರಕಾರವು), ಕಥಿತಂ-ನಿರೂಪಿತವಾಯಿತು; ಪೃಷ್ಟವಂತಃ-ಪ್ರಶ್ನಿಸಿದವರು, ಭವಂತಃ-ನೀವು; ಶ್ಲಾಘನೀಯಃ-ಸ್ತುತ್ಯವಾದುದು, ಅಯಂ-ಶ್ರೀವಿಷ್ಣುಮಹಿಮಾವಿಷಯಕ ಪ್ರಶ್ನೆಯು; ತತ್-ಅದು, ಯಥಾಮತಿ-ನನಗೆ ತಿಳಿದಷ್ಟು, ಈರಿತಂ-ಹೇಳಲ್ಪಟ್ಟಿತು; ಅತ್ರ-ಇಲ್ಲಿ (ಈ ಪುಣ್ಯ ಕ್ಷೇತ್ರದಲ್ಲಿ, ಪ್ರಾಚೀನಕರ್ಮಭಿಃ-ಪೂರ್ವ ಪುಣ್ಯಫಲಗಳಿಂದ, ವಃ-ನಿಮ್ಮ, ಸಂಗಃ-ಸಹವಾಸವು, ಲಬ್ಧಃ-ದೊರೆಯಿತು; ಮಹೇಷ್ಟದಃ-ಶ್ರೇಷ್ಠವಾದ ಅಭೀಷ್ಟಗಳನ್ನು ಕೊಡಲು ಸಮರ್ಥವಾದ, ಅಯಂ-ಈ, ಸತ್ಸಂಗಃ-ಸಜ್ಜನಸಂಗವು, ಪುಣ್ಯೈಃ ವಿನಾ-ಪುಣ್ಯವಿಲ್ಲದೇ, ನ ಲಭ್ಯಃ-ದುರ್ಲಭವಾದುದು, ಹಿ-ಹೀಗೆಂಬುದು ಶಾಸ್ತ್ರನಿರ್ಣಯವು.

---

### ಅಧ್ಯಾಯ ೪೬

**ತಾತ್ಪರ್ಯ:**—ಹೇ ಋಷಿಗಳೇ, ಸರ್ವನಿಯಾಮಕನಾದ ಶ್ರೀವಿಷ್ಣುವಿನ ಅದ್ಭುತವಾದ ಮಹಿಮೆಗಳನ್ನು ಕುರಿತು ನೀವು ಪ್ರಶ್ನಿಸುತ್ತಿರುವಿರಿ; ನಾನೂ ಯಥಾಮತಿ ನಿರೂಪಿಸುತ್ತಿರುವೆನು; ಪೂರ್ವಪುಣ್ಯಗಳ ಫಲವಾಗಿ ಈ ಸ್ತುತ್ಯವಾದ ನಿಮ್ಮ ಸಹವಾಸವು ನನಗೆ ಲಭಿಸಿತು; ಶ್ರೇಷ್ಠವಾದ ಅಭೀಷ್ಟವನ್ನು (ಪುರುಷಾರ್ಥವನ್ನು) ಪ್ರದಾನಮಾಡುವ ಸತ್ಸಂಗವು ಮಹಾಪುಣ್ಯದಿಂದ ಮಾತ್ರ ಲಭಿಸುತ್ತದೆಂಬುದು ಶಾಸ್ತ್ರನಿರ್ಣಯವು[1]

---

1. 'ಭವಾಪವರ್ಗೋ ಭ್ರಮತೋ ಯದಾ ಭವೇಜ್ಜನಸ್ಯ ತರ್ಹ್ಯಚ್ಯುತ ಸತ್ಸಮಾಗಮಃ । ಸತ್ಸಂಗಮೋ ಯರ್ಹಿ ತದೈವ ಸದ್ಗತೌ ಪರಾವರೇಶೇ ತ್ವಯಿ ಜಾಯತೇ ರತಿಃ ॥' ಎಂಬ (ಭಾಗವತ) ವಾಕ್ಯವು, 'ಸಂಸಾರದಲ್ಲಿ ಸುತ್ತುತ್ತಿರುವ ಜೀವನಿಗೆ ಬಿಡುಗಡೆಯ ಕಾಲವು ಸಮೀಪಿಸಿದಾಗ, ಹೇ ಕೃಷ್ಣ! ನಿನ್ನ ಇಚ್ಛೆಯಿಂದಲೇ ಸಜ್ಜನರ ಸಹವಾಸವು ದೊರೆಯುತ್ತದೆ; ಸತ್ಸಂಗದಿಂದ ಪುರುಷೋತ್ತಮನಾದ ನಿನ್ನಲ್ಲಿ ಶ್ರೇಷ್ಠ ಭಕ್ತಿಯುಂಟಾಗುತ್ತದೆ—ಅದರಿಂದಲೇ ನಿನ್ನ ದರ್ಶನಲಾಭವಾಗುತ್ತದೆ' ಎಂದು ಹೇಳುತ್ತದೆ.

**ಇಷ್ಟಂ ಹಿ ಸರ್ವಜಂತೂನಾಂ ಪರಮಂ ಸುಖಮುಚ್ಯತೇ ।**

**ತತೋಽಪಿ ಪ್ರಥಮಂ ಪ್ರೋಕ್ತೋ ದುಃಖನಾಶೋಽಖಿಲಪ್ರಿಯಃ ॥ ೩ ॥**

ಪರಮಂ ಸುಖಂ-ಉತ್ಕೃಷ್ಟವಾದ ಸುಖವು, ಸರ್ವಜಂತೂನಾಂ-ಸಕಲ ಪ್ರಾಣಿಗಳಿಗೆ, ಇಷ್ಟಂ ಉಚ್ಯತೇ ಹಿ-ಇಷ್ಟವೆಂದು ಹೇಳಲಾಗುತ್ತದೆಯಷ್ಟೆ; ತತಃ ಅಪಿ-ಅದಕ್ಕಿಂತಲೂ, ಅಖಿಲಪ್ರಿಯಃ-ಸರ್ವರಿಗೂ ಪ್ರಿಯವಾದ, ದುಃಖನಾಶಃ-ದುಃಖಹಾನಿಯು, ಪ್ರಥಮಂ-ಮೊದಲಿನದೆಂದು (ಅಧಿಕೇಷ್ಟವೆಂದು), ಪ್ರೋಕ್ತಃ-ಹೇಳಲ್ಪಡುತ್ತದೆ.

**ಏವಂ ತು ದ್ವಿವಿಧೇಷ್ಟಸ್ಯ ಸಾಧನಂ ಸರ್ವವಾಂಛಿತಂ ।**

**ತದಪಿ ದ್ವಿವಿಧಂ ಜ್ಞೇಯಂ ದೃಷ್ಟಾದೃಷ್ಟವಿಭೇದತಃ ॥ ೪ ॥**

ಏವಂ-ಹೀಗೆ, ಸರ್ವವಾಂಛಿತಂ-ಸರ್ವಾಪೇಕ್ಷಿತವಾದ, ದ್ವಿವಿಧೇಷ್ಟಸ್ಯ-(ಹಿಂದಿನ ಶ್ಲೋಕದಲ್ಲಿ ಹೇಳಿದ) ಎರಡು ಪ್ರಕಾರದ ಇಷ್ಟದ (ದುಃಖಹಾನಿ ಮತ್ತು ಸುಖಪ್ರಾಪ್ತಿಯ), ಸಾಧನಂ ತು-ಆ ಸಾಧನವಾದರೋ, ದ್ವಿವಿಧಂ-ಎರಡು ಪ್ರಕಾರವಾದುದು; ದೃಷ್ಟಾದೃಷ್ಟವಿಭೇದತಃ-ದೃಷ್ಟ ಮತ್ತು ಅದೃಷ್ಟವೆಂಬ ಭೇದದಿಂದ, ಜ್ಞೇಯಂ-(ಆ ದ್ವಿವಿಧ ಸಾಧನವು) ತಿಳಿಯಲ್ಪಡತಕ್ಕದ್ದು.

**ಅದೃಷ್ಟೇನೈವ ದೃಷ್ಟಂ ಸ್ಯಾದ್ವಿನಾ ದೃಷ್ಟಂ ನ ತದ್ಯತಃ ।**

**ಧರ್ಮಾರ್ಥಶ್ಚ ತಥಾ ಕಾಮಸ್ತ್ರಿವರ್ಗಃ ಸಕಲೇಷ್ಟದಃ ॥ ೫ ॥**

ಅದೃಷ್ಟೇನ ಏವ-ಅದೃಷ್ಟದಿಂದಲೇ, ದೃಷ್ಟಂ-ದೃಷ್ಟವು, ಸ್ಯಾತ್-ಸಂಭವಿಸುತ್ತದೆ; ಅದೃಷ್ಟಂ ವಿನಾ-ಅದೃಷ್ಟವಿಲ್ಲದೇ, ತತ್-ದೃಷ್ಟವು, ನ-ಇಲ್ಲ (ಸಂಭವಿಸುವುದಿಲ್ಲ); ಯತಃ-ಯಾವುದರಿಂದ (ಆದರಿಂದಲೇ, ಅದೃಷ್ಟದಿಂದಲೇ), ಸಕಲೇಷ್ಟದಃ-ಸರ್ವಾಭೀಷ್ಟಗಳನ್ನು ಕೊಡುವ, ಧರ್ಮಾರ್ಥಶ್ಚ-ಧರ್ಮಾರ್ಥಗಳೂ, ತಥಾ-ಹಾಗೂ, ಕಾಮಃ-ಕಾಮವೂ, ತ್ರಿವರ್ಗಃ-ತ್ರಿವರ್ಗವು (ಈ ಮೂರು ಗುಂಪಿನ) ಅಭೀಷ್ಟಗಳೂ (ಸಿದ್ಧವಾಗುತ್ತದೆ).

---

(೧-೨). ಉತ್ತಮ ಸುಖವೇ ಸರ್ವಪ್ರಾಣಿಗಳಿಗೆ ಇಷ್ಟವಾದುದು; ಅದಕ್ಕಿಂತ ಮೊದಲಿನದು (ಅಧಿಕೇಷ್ಟವಾದುದು) ದುಃಖನಾಶವು-ಇದೂ ಸರ್ವಪ್ರಿಯವಾದುದೇ (೩). ಹೀಗೆ ದ್ವಿವಿಧವಾದ ಸರ್ವಾಪೇಕ್ಷಿತವಾದ ಪುರುಷಾರ್ಥದ ಸಾಧನವಾದರೂ, ದೃಷ್ಟ ಮತ್ತು ಅದೃಷ್ಟ ಭೇದದಿಂದ ದ್ವಿವಿಧವೆಂದು ತಿಳಿಯತಕ್ಕದ್ದು (೪). ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳು, ತ್ರಿವರ್ಗವೆಂದು ವ್ಯವಹರಿಸಲ್ಪಡುತ್ತವೆ; ಅದೃಷ್ಟದಿಂದಲೇ ದೃಷ್ಟವಾದ (ಯತ್ನಾದಿ), ಸಾಧನವೂ ಸಂಭವಿಸುತ್ತದೆ; ಈ ದೃಷ್ಟಾದೃಷ್ಟ ಸಾಧನಗಳಿಂದ, ಅಭೀಷ್ಟಗಳ ಸಿದ್ಧಿಯಾಗುತ್ತದೆ (೫). ಧರ್ಮವಿಲ್ಲದೇ ಅರ್ಥಕಾಮ

ಗತಿಗಳು-ಸ್ಥಿತಿಗಳು), ಚ-ಮತ್ತು ತದ್ಭೇದಾಃ-ಅವುಗಳ ಪ್ರಭೇದಗಳೂ, ಪೂರ್ವವತ್-ಹಿಂದಿನಂತೆ, ಊಹನೀಯಾಃ ಹಿ-ಊಹಿಸಲ್ಪಡುವವುಗಳು (ಆಗಬೇಕು);

**ಅನಿಷ್ಟಸಾಧನಂ ದ್ವೇಧಾ ದೃಷ್ಟಾದೃಷ್ಟವಿಭೇದತಃ ।**

**ಅಧರ್ಮಾನ್ನಿರ್ಧನೋ ಮರ್ತ್ಯೋ ನ ಕಾಮೋಽರ್ಥಂ ವಿನಾ ಭವೇತ್ ॥ ೯ ॥**

**ಅತೋ ಹಿ ಮನಸಾ ವಾಚಾ ಕರ್ಮಣಾ ಧರ್ಮಮಾಚರೇತ್ ।**

**ಅರ್ಥಕಾಮೌ ಚ ತೇನೈವ ತಂ ವಿನಾ ದುಃಖಸಂತತಿಃ ॥ ೧೦ ॥**

ಅನಿಷ್ಟಸಾಧನಂ-ಅನಿಷ್ಟಪ್ರಾಪ್ತಿಗೆ ಸಾಧನವು, ದೃಷ್ಟಾದೃಷ್ಟವಿಭೇದತಃ-ದೃಷ್ಟ ಮತ್ತು ಅದೃಷ್ಟವೆಂಬ ಭೇದದಿಂದ, ದ್ವೇಧಾ-ಎರಡು ಪ್ರಕಾರವು; ಮರ್ತ್ಯಃ-ಮನುಷ್ಯನು, ಅಧರ್ಮಾತ್-ಅಧರ್ಮದಿಂದ (ಈಗಿನ ಪಾಪದಿಂದ ಅಥವಾ ಹಿಂದಿನ ಪಾಪಫಲದಿಂದ), ನಿರ್ಧನಃ-ದರಿದ್ರನು (ಆಗುವನು); ಅರ್ಥಂ ವಿನಾ-ಧನವಿಲ್ಲದೇ, ಕಾಮಃ-ವಿಷಯಭೋಗವು, ನ ಭವೇತ್-ಉಂಟಾಗುವುದಿಲ್ಲ ಅತಃ ಹಿ-ಆದ್ದರಿಂದಲೇ, ಮನಸಾ-ಮನಸ್ಸಿನಿಂದ, ವಾಚಾ-ನುಡಿಯಿಂದ, ಕರ್ಮಣಾ-ದೇಹದಿಂದ (ಕರ್ಮೇಂದ್ರಿಯಗಳಿಂದ), ಧರ್ಮಂ-ಧರ್ಮವನ್ನು ಆಚರೇತ್-ಆಚರಿಸಬೇಕು; ತೇನ ಏವ-ಧರ್ಮದಿಂದಲೇ, ಅರ್ಥಕಾಮೌ ಚ-ಅರ್ಥ (ಧನ) ಕಾಮಗಳೂ (ಸುಖಭೋಗಗಳೂ), (ಲಭಿಸುತ್ತವೆ); ತಂ ವಿನಾ-ಅದಿಲ್ಲದೇ (ಧರ್ಮವಿಲ್ಲದೇ-ಅರ್ಥವಿಲ್ಲದೇ) ದುಃಖಸಂತತಿಃ-ದುಃಖಪರಂಪರೆಯೇ (ಉಂಟಾಗುತ್ತದೆ).

**ಧರ್ಮಾಧರ್ಮವಿಭೇದಾ ಹಿ ಪ್ರಾಯಶಃ ಪೂರ್ವಮೀರಿತಾಃ ।**

**ಪ್ರತ್ಯೇಕಂ ದ್ವಿವಿಧೌ ಪ್ರೋಕ್ತಾವರ್ಥಕಾಮಾವಪಿ ಸ್ಮ ಹಿ ॥ ೧೧ ॥**

ಧರ್ಮಾಧರ್ಮ ವಿಭೇದಾಃ-ಧರ್ಮ, ಅಧರ್ಮಗಳ ಭೇದಗಳು, ಪ್ರಾಯಶಃ-ಬಹುವಾಗಿ, ಪೂರ್ವಂ-ಈ ಹಿಂದೆ, ಈರಿತಾಃ ಹಿ-ಹೇಳಲಾಗಿರುವುವಷ್ಟೆ ಅರ್ಥ ಕಾಮೌ ಅಪಿ-ಅರ್ಥ, ಕಾಮಗಳೂ ಸಹ, ಪ್ರತ್ಯೇಕಂ-ಒಂದೊಂದೂ, ದ್ವಿವಿಧೌ-

---

ಅನಿಷ್ಟಸಾಧನೆಯೂ, ದೃಷ್ಟಾದೃಷ್ಟ ಪ್ರಭೇದದಿಂದ ಎರಡು ವಿಧವು; ಅಧರ್ಮದಿಂದ ಮನುಷ್ಯನು ದರಿದ್ರನಾಗುತ್ತಾನೆ; ಧನವಿಲ್ಲದೇ, ವಿಷಯಭೋಗಗಳಿಲ್ಲ; ಆದ್ದರಿಂದ ಮನಸ್ಸು-ನುಡಿ-ದೇಹಗಳೆಂಬ ತ್ರಿಕರಣಗಳಿಂದ, ಧರ್ಮವನ್ನೇ ಆಚರಿಸತಕ್ಕದ್ದು; ಅದರಿಂದಲೇ ಅರ್ಥಕಾಮಗಳು—ಇವಿಲ್ಲದೆ ದುಃಖಪರಂಪರೆಯು ತಪ್ಪಿದ್ದಲ್ಲ (೯-೧೦). ಧರ್ಮಾಧರ್ಮ ವಿಭೇದಗಳು ಪ್ರಾಯಃ ಈ ಹಿಂದೆ ಹೇಳಲ್ಪಟ್ಟವೆ; ಅರ್ಥಕಾಮಗಳೂ, ಒಂದೊಂದೂ, ಎರಡು ವಿಧವೆಂದು ಹೇಳಲ್ಪಡುತ್ತವೆ (೧೧). ಅದೃಷ್ಟವಾದ ಮತ್ತು ದೃಷ್ಟವಾದ (ಎರಡು ವಿಧವಾದ ಅರ್ಥವು) ದೃಷ್ಟಾದೃಷ್ಟ (ಕಾಣುವ

ಎರಡು ವಿಧವೆಂದು, ಸ್ಮೃತಿ-ತಿಳಿಯಲ್ಪಟ್ಟಿವೆ.

**ಅದೃಷ್ಟಾರ್ಥೌ ಚ ದೃಷ್ಟಾರ್ಥೌ ದೃಷ್ಟೌ ದೃಷ್ಟಫಲಪ್ರದೌ ।**
**ದೃಶ್ಯಂತೇ ಧನಿನೋ ಲೋಕೇ ನಾನಾಭೋಗ್ಯೈಃ ಸುಖಾನ್ವಿತಾಃ ॥ ೧೨ ॥**
**ಜಿಹ್ವೋಪಸ್ಥಾದಿಸುಖದಃ ಕಾಮೋಪ್ಯತ್ರೈವ ದೃಶ್ಯತೇ ।**

ಅದೃಷ್ಟಾರ್ಥೌ-ಅದೃಷ್ಟಾರ್ಥಗಳು, ಚ-ಮತ್ತು ದೃಷ್ಟಾರ್ಥೌ-ದೃಷ್ಟಾರ್ಥಗಳು (ಈ ಎರಡು ವಿಧದ ಅರ್ಥ ಕಾಮಗಳು); ದೃಷ್ಟೌ-ದೃಷ್ಟವಾದ (ಅರ್ಥ ಕಾಮಗಳು), ದೃಷ್ಟಫಲಪ್ರದೌ-ದೃಷ್ಟವಾದ (ಪ್ರತ್ಯಕ್ಷವಾದ) ಫಲಗಳನ್ನು ಕೊಡುತ್ತವೆ; ಲೋಕೇ-ಜಗತ್ತಿನಲ್ಲಿ ಧನಿನಃ-ಧನವುಳ್ಳವರು, ನಾನಾಭೋಗ್ಯೈಃ-ವಿವಿಧ ಭೋಗಗಳಿಂದ, ಸುಖಾನ್ವಿತಾಃ-ಸುಖವುಳ್ಳವರಾಗಿ, ದೃಶ್ಯಂತೇ-ಕಂಡುಬರುತ್ತಾರೆ; ಅತ್ರ ಏವ-ಅಲ್ಲಿಯೇ (ಧನವಂತರಲ್ಲಿಯೇ), ಜಿಹ್ವೋಪಸ್ಥಾದಿಸುಖದಃ-ಜಿಹ್ವೆ ಮತ್ತು ಉಪಸ್ಥಗಳಿಗೆ ಸುಖವನ್ನುಂಟುಮಾಡುವ, ಕಾಮಃ ಅಪಿ-ಕಾಮವೂ (ವಿಷಯಭೋಗದಿಂದಾಗುವ ಸುಖಾನುಭವವೂ), ದೃಶ್ಯತೇ-ಕಂಡುಬರುತ್ತದೆ. (ಧನಪ್ರಾಪ್ತಿಗೆ ಅವಶ್ಯಕವಾದ ಪೂರ್ವಪುಣ್ಯರೂಪದ ಅದೃಷ್ಟವು ಅದೃಷ್ಟಾರ್ಥವು—ಅದರಿಂದ ಲಭಿಸುವುದು, ದೃಷ್ಟಾರ್ಥವು—ನಾನಾ ಸ್ತ್ರ್ಯಾದಿ ಭೋಗಸಾಮಗ್ರಿಗಳು; ಅರ್ಥದಿಂದಲೇ ಕಾಮವೆಂದೂ ಧನವಂತರಿಂದಲೇ ಕಂಡುಬರುತ್ತದೆ).

**ಅದೃಷ್ಟಫಲದೋ ದ್ವೇಧಾ ನಿತ್ಯಾನಿತ್ಯಫಲತ್ವತಃ ॥ ೧೩ ॥**
**ಕೇವಲಂ ವಿಷ್ಣುತುಷ್ಟ್ಯರ್ಥೌ ಪ್ರೋಕ್ತೌ ನಿತ್ಯಫಲಪ್ರದೌ ।**
**ಅನ್ಯಾವನಿತ್ಯಫಲಕಾವಿತಿ ಶಾಸ್ತ್ರವಿನಿರ್ಣಯಃ ॥ ೧೪ ॥**

ಅದೃಷ್ಟಫಲದಃ-ಅದೃಷ್ಟಫಲವನ್ನು ಕೊಡುವುದು (ಅರ್ಥವು), ನಿತ್ಯಾನಿತ್ಯಫಲತ್ವತಃ-ನಿತ್ಯ ಮತ್ತು ಅನಿತ್ಯ ಫಲವುಳ್ಳದ್ದೆಂಬ ಕಾರಣದಿಂದ, ದ್ವೇಧಾ-ಎರಡು ಪ್ರಕಾರವಾದುದು; ಕೇವಲಂ-ಕೇವಲ, ವಿಷ್ಣುತುಷ್ಟ್ಯರ್ಥೌ-ಶ್ರೀವಿಷ್ಣು ಪ್ರೀತಿಗಾಗಿ ಆಗುವ ಎರಡೂ (ವಿಧದ) ಅರ್ಥಗಳು, ನಿತ್ಯಫಲಪ್ರದೌ-ನಿತ್ಯಫಲವನ್ನು ಕೊಡುವುವೆಂದು, ಪ್ರೋಕ್ತೌ-ಹೇಳಲ್ಪಡುತ್ತವೆ; ಅನ್ಯೌ-ಇತರವಾದ ಎರಡೂ (ಉಭಯವಿಧ

---

ಮತ್ತು ಕಾಣಲಾಗದ) ಫಲಗಳನ್ನು ಕೊಡುತ್ತದೆ; ಲೋಕದಲ್ಲಿ ಧನವಂತರು, ನಾನಾ ಭೋಗ್ಯ ವಸ್ತುಗಳುಳ್ಳವರಾಗಿ ಸುಖಿಗಳಾಗಿರುವುದು ಕಂಡುಬರುತ್ತದೆ; ಅಲ್ಲಿಯೇ (ಧನಿಕರಲ್ಲಿಯೇ) ಜಿಹ್ವೆ (ನಾಲಿಗೆ) ಉಪಸ್ಥ (ಗುಹ್ಯೇಂದ್ರಿಯ) ಗಳಿಗೆ ಸುಖಪ್ರದವಾದ ಕಾಮವೂ, ತದುಪಶಾಂತಿ ಸಾಮಗ್ರಿಗಳೂ ಕಂಡುಬರುತ್ತವೆ (೧೨). ಅದೃಷ್ಟವಾದ (ಪುಣ್ಯರೂಪದ) ಫಲವನ್ನು ಕೊಡುವ ಅರ್ಥವು, ನಿತ್ಯ ಮತ್ತು ಅನಿತ್ಯವೆಂಬ ಭೇದದಿಂದ ಎರಡು ಪ್ರಕಾರವಾದುದು; ದ್ವಿವಿಧವಾದ ಅರ್ಥಗಳೂ, ಕೇವಲ

ಕಾಮಗಳೂ), ಅನಿತ್ಯಫಲಕೌ-ಅನಿತ್ಯಫಲಗಳನ್ನು ಕೊಡುತ್ತವೆ; ಇತಿ-ಎಂದು, ಶಾಸ್ತ್ರವಿನಿರ್ಣಯಃ-ಶಾಸ್ತ್ರನಿರ್ಣಯವು.

**ಅದೃಷ್ಟಫಲಕೇ ಕಾಮೇ ಸ್ತ್ರೀಭೋಗಾದೌ ಚ ಭೋಜನೇ ।**
**ಅವರ್ಜತ್ವೇನ ಜಾಯೇತ ಸುಖಂ ತಾತ್ಕಾಲಿಕಂ ತ್ವಪಿ ॥ ೧೫ ॥**

ಅದೃಷ್ಟಫಲಕೇ-ಅದೃಷ್ಟಫಲವುಳ್ಳ, ಕಾಮೇ-ಕಾಮವು, ಭೋಜನೇ-ಭೋಜನದಲ್ಲಿಯೂ, ಸ್ತ್ರೀಭೋಗಾದೌ-ಸ್ತ್ರೀಭೋಗಾದಿಗಳಲ್ಲಿಯೂ, ಅವರ್ಜತ್ವೇನ-(ಜನ್ಮಾಂತರಗಳಲ್ಲಿ) ತಪ್ಪದೇ (ನಿಯಮೇನ), ಜಾಯೇತ-(ಭೋಗದೊಂದಿಗೇ) ಉಂಟಾಗುತ್ತದೆ; ಅಪಿ ತು-ಆದರೂ ಸಹ, ಸುಖಂ-(ಆ ಭೋಗಜನ್ಯ) ಸುಖವು, ತಾತ್ಕಾಲಿಕಂ-ಭೋಗಕಾಲದಲ್ಲಿ ಮಾತ್ರವಿರುವುದು, (ಕ್ಷಣಿಕವಾದುದು- ಭೋಗಾನಂತರವಿರುವುದಿಲ್ಲ).

**ಏವಮೇವಾಸ್ತಿ ಧನಿನಾಂ ಕೇವಲಾದರ್ಥತಃ ಸುಖಂ ।**
**ಅಭುಜ್ಯಮಾನಮಪಿ ತದ್ಧನಂ ಲೋಕೇ ಸುಖಪ್ರದಂ ॥ ೧೬ ॥**
**ಕೀರ್ತಿರ್ಧರ್ಮಶ್ಚ ತದ್ದಾನಾದ್ದೃಷ್ಟಾದೃಷ್ಟಫಲಂ ಮಹತ್ ।**
**[illegible]ಮನಾಪೂರಣಾತ್ ಸ್ತ್ರೀಣಾಂ ಧರ್ಮಃ ಸ್ಯಾದನ್ಯಥಾಽನ್ಯಥಾ ॥ ೧೭ ॥**

ಏವಂ ಏವ-ಹೀಗೆಯೇ, ಧನಿನಾಂ-ಧನವಂತರಿಗೆ, ಕೇವಲಾತ್ ಅರ್ಥತಃ-ಅರ್ಥ (ಧನ) ಮಾತ್ರದಿಂದ, ಸುಖಂ-ಸುಖವು, ಅಸ್ತಿ-ಇರುತ್ತದೆ; ತದ್ಧನಂ-ಆ ಧನವು, ಅಭುಜ್ಯಮಾನಂ ಅಪಿ-ಭೋಗಿಸಲ್ಪಡದಿದ್ದರೂ (ಭೋಗಕ್ಕಾಗಿ ಉಪಯೋಗಿಸಲ್ಪಡದಿದ್ದರೂ), ಲೋಕೇ-ಜಗತ್ತಿನಲ್ಲಿ ಸುಖಪ್ರದಂ-ಸುಖವನ್ನು ಉಂಟುಮಾಡುವುದು (ಆಗುತ್ತದೆ—ಧನವನ್ನು ನೋಡುವ ಮಾತ್ರದಿಂದ, ತನ್ನ ವಶದಲ್ಲಿರುವುದೆಂಬ ಜ್ಞಾನಮಾತ್ರದಿಂದ, ಒಂದು ವಿಧವಾದ ಸುಖವನ್ನು ಕೊಡುತ್ತದೆ); ತದ್ದಾನಾತ್-ಅದರ (ಆ ಧನದ) ದಾನದಿಂದ, ಮಹತ್-ಮಹತ್ತಾದ (ಅಧಿಕವಾದ), ದೃಷ್ಟಾದೃಷ್ಟಫಲಂ-ಪ್ರತ್ಯಕ್ಷವಾದ ಮತ್ತು ಅಪ್ರತ್ಯಕ್ಷವಾದ ಫಲವು (ದೊರೆಯುತ್ತದೆ); ಕೀರ್ತಿಃ-ಕೀರ್ತಿಯೂ

---

ಶ್ರೀವಿಷ್ಣುಪ್ರೀತ್ಯರ್ಥವಾಗಿ ಮಾತ್ರ ಉಪಯುಕ್ತವಾದರೆ, ನಿತ್ಯಫಲ ಕೊಡುವುವು, ಎಂದು ಹೇಳಲ್ಪಡುತ್ತವೆ; ದ್ವಿವಿಧಗಳಾದ ಕಾಮಗಳೂ, (ಇಹಪರಗಳ) ಅನಿತ್ಯ ಸುಖರೂಪವಾದ ಫಲಗಳನ್ನೇ ಕೊಡುತ್ತವೆ (೧೩-೧೪). ಅದೃಷ್ಟಫಲವುಳ್ಳ ಕಾಮವು, (ಜನ್ಮಾಂತರಗಳಲ್ಲಿ) ಭೋಜನದಲ್ಲಿ ಮತ್ತು ಸ್ತ್ರೀಭೋಗಾದಿಗಳಲ್ಲಿ ಭೋಗದೊಂದಿಗೇ ತಾತ್ಕಾಲಿಕವಾದ (ಕ್ಷಣಿಕವಾದ) ಸುಖಾನುಭವನ್ನುಂಟುಮಾಡುತ್ತದೆ (ಕಾಮವೆಂಬ ಪುರುಷಾರ್ಥದ ಅದೃಷ್ಟಫಲಕ ಶಕ್ತಿಯಿಲ್ಲದಿದ್ದರೆ, ಆ ಭೋಗಗಳಿಂದ ಸಹ ಸುಖವುಂಟಾಗುವುದಿಲ್ಲವೆಂದು ತಿಳಿಯಬೇಕು) (೧೫). ಹೀಗೆಯೇ, ಅದೃಷ್ಟಫಲವುಳ್ಳ

(ಇಹಲೋಕದ ಪ್ರತ್ಯಕ್ಷಫಲ), ಚ-ಮತ್ತು ಧರ್ಮಃ-ಧರ್ಮವು (ಪುಣ್ಯರೂಪದ ಅಪ್ರತ್ಯಕ್ಷ ಫಲವೂ) (ಹೀಗೆ ದ್ವಿವಿಧ ಫಲವನ್ನು ದೊರಕಿಸುತ್ತದೆ). (ಹೀಗೆಯೇ ಕೇವಲ ಕಾಮದಿಂದ ಸಹ ದ್ವಿವಿಧವಾದ ಫಲವು ದೊರೆಯುತ್ತದೆ); ಸ್ತ್ರೀಣಾಂ-ಸ್ತ್ರೀಯರ, ಕಾಮನಾಪೂರಣಾತ್-ಕಾಮಗಳನ್ನು (ಆಶೆಗಳನ್ನು) ಪೂರ್ಣಮಾಡುವುದರಿಂದ, ಧರ್ಮಃ-ಪುಣ್ಯವು, ಸ್ಯಾತ್-ಉಂಟಾಗುತ್ತದೆ; ಅನ್ಯಥಾ-ಪೂರ್ಣಗೊಳಿಸದಿದ್ದರೆ, ಅನ್ಯಥಾ-ಪುಣ್ಯಬರುವುದಿಲ್ಲ(ಪಾಪವೇ ಕಟ್ಟುತ್ತದೆ).

**ಪುರಾ ಹಿ ಬ್ರಹ್ಮಣಾ ದತ್ತೋ ವರಃ ಸುತಪಸಾರ್ಚನಾತ್ ।**
**ಸ್ವಯಂ ಶಕ್ತೋ ಹಿ ಯೋ ಮರ್ತ್ಯೋ ದೇಶತಃ ಕಾಲತೋಽಪಿವಾ॥ ೧೮ ॥**
**ದೋಷಾಭಾವೇ ವ್ಯಪಸ್ಯಂತೀಂ ಸ್ವಪತ್ನೀಂ ಯೋಽವಮಾನಯೇತ್ ।**
**ವಿಷ್ಠಾ ಕ್ರಿಮಿಃ ಸ ಜಾಯೇತ ಸ್ತ್ರೀಹೀನೋ ಜನ್ಮಜನ್ಮನಿ ॥ ೧೯ ॥**
**ದಶಭಿಃ ಪಂಚಭಿಃ ಪುಂಭಿಃ ಸ್ತ್ರಿಯಃ ಕಾಮೋ ನ ಪೂರ್ಯತೇ ।**
**ಅತೋ ಹಿ ಬಹು ನಾರೀಣಾಂ ವರಣಂ ಪಾಪಸಾಧನಂ ॥ ೨೦ ॥**
**ಅಥಾಪಿ ಯದಿ ಕುರ್ವೀತ ಬಹುನಾರೀವ್ರತಿಂ ಕ್ವಚಿತ್ ।**
**ತದಾ ವಾಸರಪರ್ಯಾಯಾದ್ಭೋಗದಾನಂ ಸಮಾಚರೇತ್ ॥ ೨೧ ॥**
**ಅನ್ಯವಾಸರಪರ್ಯಾಯೇ ವ್ಯಪಸ್ಯಂತೀತರಾಂ ಯದಿ ।**
**ಶಕ್ತೋಽಪಿ ತಾಂ ನ ಚೇದ್ಭುಂಜ್ಯಾತ್ತದಾ ದೋಷೋ ನ ವಿದ್ಯತೇ ॥ ೨೨ ॥**
**ಉಭಯೋರಪಿ ಭೋಗೇ ಚ ಶಕ್ತಸ್ಯಾತ್ತರ್ಹಿ ತಾಂ ವ್ರಜೇತ್ ।**

(ಸ್ತ್ರೀಯರ ಕಾಮವನ್ನು ಪೂರ್ತಿಗೊಳಿಸಿ, ಧರ್ಮವನ್ನು ದೊರಕಿಸಿಕೊಳ್ಳುವುದರಲ್ಲಿ ಅನುಸರಿಸಬೇಕಾದ ನಿಯಮಗಳನ್ನು ವಿವರಿಸುತ್ತಾರೆ); ಪುರಾ-ಪೂರ್ವದಲ್ಲಿ ಸುತಪಸಾ-ಭಕ್ತಿಪೂರ್ವಕ ತಪಸ್ಸಿನಿಂದ, ಅರ್ಚನಾತ್-ಸೇವಿಸಿದ್ದರಿಂದ, ಬ್ರಹ್ಮಣಾ-ಬ್ರಹ್ಮದೇವನಿಂದ, ವರಃ-ವರವು, ದತ್ತಃ-(ಸ್ತ್ರೀಯರಿಗೆ) ಕೊಡಲ್ಪಟ್ಟಿತು; (ಆ

---

ಕೇವಲ ಅರ್ಥವು (ಧನವು) ಧನಿಕರಿಗೆ ಸುಖಪ್ರದವಾಗುತ್ತದೆ; ತನ್ನ ಭೋಗಕ್ಕಾಗಿ ಉಪಯೋಗಿಸಲ್ಪಡದಿದ್ದರೂ, ಲೋಕದಲ್ಲಿ (ಧನದರ್ಶನ ಅಥವಾ ಜ್ಞಾನಮಾತ್ರದಿಂದ) ಸುಖವು ಕಂಡುಬರುತ್ತದೆ; ಆ ಧನವನ್ನು ದಾನಕ್ಕಾಗಿ ಉಪಯೋಗಿಸಿದರೆ ದೃಷ್ಟಾದೃಷ್ಟಗಳಾದ ದ್ವಿವಿಧ ಫಲಗಳು ದೊರೆಯುತ್ತವೆ; ಇಹದಲ್ಲಿ ಕೀರ್ತಿಯು ದೃಷ್ಟಫಲ-ಧರ್ಮವು (ಪುಣ್ಯವು) ಅದೃಷ್ಟಫಲ; ಸ್ತ್ರೀಯರ ಕಾಮಗಳನ್ನು ಪೂರ್ಣಗೊಳಿಸುವುದರಿಂದ ಧರ್ಮವೂ (ಪುಣ್ಯವೂ), ಹಾಗೆ ಮಾಡದಿದ್ದರೆ ಅಧರ್ಮವೂ (ಪಾಪವೂ) ಪ್ರಾಪ್ತವಾಗುತ್ತದೆ (೧೬-೧೭). ಇದಕ್ಕೆ ಕಾರಣವೇನೆಂದರೆ:—ಹಿಂದೆ ತಪಸ್ಸಿನಿಂದ ಪ್ರೀತನಾದ ಬ್ರಹ್ಮದೇವನು, ಸ್ತ್ರೀಯರಿಗೆ ವರವನ್ನು ಕೊಟ್ಟಿರುವನು; ಯಾವ

ವರವೇನೆಂದರೆ), ಯಃ-ಯಾವ, ಮರ್ತ್ಯಃ-ಮನುಷ್ಯನು, ಸ್ವಯಂ-ತಾನು, ಶಕ್ತಃ ಹಿ-ಸಮರ್ಥನಾಗಿದ್ದರೂ, ದೇಶತಃ-ದೇಶದಿಂದ (ಸ್ಥಲದಿಂದ), ಅಪಿ ವಾ-ಮತ್ತು ಕಾಲತಃ-ಕಾಲದಿಂದಲೂ, ದೋಷಾಭಾವೇ-(ದೇವಾಲಯಾದಿ ಸ್ಥಳ, ಹಗಲು ಮೊದಲಾದ ನಿಷಿದ್ಧಕಾಲಗಳ) ದೋಷವಿಲ್ಲದಿರುವಾಗಲೂ, ವೃಷಶ್ಯಂತೀಂ-ಸಂಭೋಗೇಚ್ಛೆಯುಳ್ಳ, ಸ್ವಪತ್ನೀಂ-ತನ್ನ-ಭಾರ್ಯಳನ್ನು, ಯಃ-ಯಾವನೇ ಆಗಲಿ, ಅವಮಾನಯೇತ್-(ಅಂಗಸಂಗವನ್ನಿತ್ತು) ಗೌರವಿಸದಿದ್ದರೆ (ಕಾಮಪೂರ್ತಿಯನ್ನು ಕೊಡದಿದ್ದರೆ), ಸಃ-ಆತನು, ವಿಷ್ಠಾ ಕ್ರಿಮಿಃ-ಮಲದಲ್ಲಿ ಕ್ರಿಮಿಯಾಗಿ, ಜಾಯೇತ-ಹುಟ್ಟುವನು, (ಮತ್ತು) ಜನ್ಮಜನ್ಮನಿ-(ಮುಂದಿನ) ಬಹುಜನ್ಮಗಳಲ್ಲಿ, ಸ್ತ್ರೀಹೀನಃ-ಪತ್ನೀ ರಹಿತನು (ಜಾಯೇತ-ಆಗುವನು); ಸ್ತ್ರೀಯಃ-ಸ್ತ್ರೀಯ (ಹೆಂಗಸಿನ), ಕಾಮಃ-ಭೋಗೇಚ್ಛೆಯು, ಪಂಚಭಿಃ-ಐದುಮಂದಿ, ದಶಭಿಃ-ಹತ್ತುಮಂದಿ, ಪುಂಭಿಃ-ಪುರುಷರಿಂದ ಸಹ, ನ ಪೂರ್ಯತೇ-ಪೂರ್ತಿಗೊಳ್ಳುವುದಿಲ್ಲ; ಅತಃ ಹಿ-ಆದ್ದರಿಂದಲೇ, ಬಹುನಾರೀಣಾಂ-ಬಹುಸ್ತ್ರೀಯರ, ವರಣಂ-ವರಿಸುವುದು (ಲಗ್ನ ಮಾಡಿಕೊಳ್ಳು ವುದು), ಪಾಪಸಾಧನಂ-ಪಾಪಸಾಧನವೆನಿಸುತ್ತದೆ; ಅಥಾಪಿ-ಹೀಗಿದ್ದರೂ, ಕ್ವಚಿತ್-ಒಂದುವೇಳೆ, ಬಹುನಾರೀವೃತಿಂ-ಬಹುಸ್ತ್ರೀವರಣವನ್ನು ಯದಿ ಕುರ್ವೀತ-ಮಾಡಿದರೆ, ತದಾ-ಆಗ (ಆ ಸಂದರ್ಭದಲ್ಲಿ), ವಾಸರ ಪರ್ಯಾಯಾತ್-ದಿನಪರ್ಯಾಯದಿಂದ (ಸರ್ತಿಮೇಲೆ ಅವರವರಿಗೆ ಗೊತ್ತಾದ ದಿನಗಳಲ್ಲಿ), ಭೋಗದಾನಂ-ಭೋಗದಾನವನ್ನು ಸಮಾಚರೇತ್-ಮಾಡಬೇಕು; ಅನ್ಯವಾಸರ ಪರ್ಯಾಯೇ-ಅನ್ಯದಿನದಲ್ಲಿ (ಮತ್ತೊಬ್ಬಳ ಸರ್ತಿಯ ದಿನದಲ್ಲಿ), ವೃಷಶ್ಯಂತೀತರಾಂ-ಅತಿಶಯವಾಗಿ ಭೋಗೇಚ್ಛೆಯುಳ್ಳ ಪತ್ನಿಯನ್ನು ಯದಿ-ಒಂದು ಪಕ್ಷ ಶಕ್ತಃ ಅಪಿ-ತಾನು ಭೋಗದಾನದಲ್ಲಿ ಸಮರ್ಥನಾಗಿದ್ದರೂ, ತಾಂ-ಆಕೆಯನ್ನು ನ ಭುಂಜ್ಯಾತ್ ಚೇತ್-ಭೋಗಿಸದಿದ್ದರೆ, ತದಾ-ಆಗ, ದೋಷಃ-ದೋಷವು (ಪಾಪವು), ನ ವಿದ್ಯತೇ-

---

ಪುರುಷನು, ಭೋಗಶಕ್ತಿಯುಳ್ಳವನಾಗಿದ್ದರೂ, ದೋಷವಿಲ್ಲದ ದೇಶ ಕಾಲಗಳಲ್ಲಿ ಸಂಭೋಗವನ್ನಿಚ್ಛಿಸುವ ಸ್ವಪತ್ನಿಯನ್ನು ಭೋಗದಾನದಿಂದ ತೃಪ್ತಿಗೊಳಿಸುವುದಿಲ್ಲವೋ (ಭಾರ್ಯಳ ಇಚ್ಛೆಯನ್ನು ಗೌರವಿಸುವುದಿಲ್ಲವೋ, ಆತನು ಮಲದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ ಮತ್ತು ಮುಂದಿನ ಬಹುಜನ್ಮಗಳಲ್ಲಿ ಪತ್ನೀರಹಿತನಾಗುವನು; ಸ್ತ್ರೀಯರ ಕಾಮವು (ಭೋಗೇಚ್ಛೆಯು) ಐದು-ಹತ್ತು ಪುರುಷರಿಂದ ಸಹ ಪೂರ್ಣಗೊಳ್ಳದಷ್ಟು ಪ್ರಬಲವಾಗಿರುತ್ತದೆ; (ಪತಿವ್ರತಾ ಸ್ತ್ರೀಯರು ಅದನ್ನು ನಿಗ್ರಹಿಸಿಕೊಂಡು, ಕೇವಲ ಸ್ವಪತಿಯಿಂದ ಮಾತ್ರ ದೊರೆಯುವ ಇಚ್ಛಾಪೂರ್ತಿಯಿಂದ ತೃಪ್ತರಾಗಿ ಆತನನ್ನು ಸೇವಿಸುತ್ತಾರೆ—ಈ ಕಾರಣದಿಂದ, ಪುರುಷನ ಮೇಲೆ ಈ ಕರ್ತವ್ಯದ ಹೊರೆಯನ್ನು ಹೇರಲಾಗಿದೆ); ಈ ಕಾರಣದಿಂದಲೇ, ಬಹುಸ್ತ್ರೀಯರನ್ನು ವಿವಾಹಮಾಡಿಕೊಳ್ಳುವುದು,

ಎರಡು ವಿಧವೆಂದು, ಸ್ಮೃತಿ-ತಿಳಿಯಲ್ಪಟ್ಟಿವೆ.

**ಅದೃಷ್ಟಾರ್ಥೌ ಚ ದೃಷ್ಟಾರ್ಥೌ ದೃಷ್ಟೌ ದೃಷ್ಟಫಲಪ್ರದೌ ।**

**ದೃಶ್ಯಂತೇ ಧನಿನೋ ಲೋಕೇ ನಾನಾಭೋಗ್ಯೈಃ ಸುಖಾನ್ವಿತಾಃ ॥ ೧೨ ॥**

**ಜಿಹ್ವೋಪಸ್ಥಾದಿಸುಖದಃ ಕಾಮೋಽಪ್ಯತ್ರೈವ ದೃಶ್ಯತೇ ।**

ಅದೃಷ್ಟಾರ್ಥೌ-ಅದೃಷ್ಟಾರ್ಥಗಳು, ಚ-ಮತ್ತು ದೃಷ್ಟಾರ್ಥೌ-ದೃಷ್ಟಾರ್ಥಗಳು (ಈ ಎರಡು ವಿಧದ ಅರ್ಥ ಕಾಮಗಳು); ದೃಷ್ಟೌ-ದೃಷ್ಟವಾದ (ಅರ್ಥ ಕಾಮಗಳು), ದೃಷ್ಟಫಲಪ್ರದೌ-ದೃಷ್ಟವಾದ (ಪ್ರತ್ಯಕ್ಷವಾದ) ಫಲಗಳನ್ನು ಕೊಡುತ್ತವೆ; ಲೋಕೇ-ಜಗತ್ತಿನಲ್ಲಿ ಧನಿನಃ-ಧನವುಳ್ಳವರು, ನಾನಾಭೋಗ್ಯೈಃ-ವಿವಿಧ ಭೋಗಗಳಿಂದ, ಸುಖಾನ್ವಿತಃ-ಸುಖವುಳ್ಳವರಾಗಿ, ದೃಶ್ಯಂತೇ-ಕಂಡುಬರುತ್ತಾರೆ; ಅತ್ರ ಏವ-ಅಲ್ಲಿಯೇ (ಧನವಂತರಲ್ಲಿಯೇ), ಜಿಹ್ವೋಪಸ್ಥಾದಿಸುಖದಃ-ಜಿಹ್ವೆ ಮತ್ತು ಉಪಸ್ಥಗಳಿಗೆ ಸುಖವನ್ನುಂಟುಮಾಡುವ, ಕಾಮಃ ಅಪಿ-ಕಾಮವೂ (ವಿಷಯಭೋಗರಿಂದಾಗುವ ಸುಖಾನುಭವವೂ), ದೃಶ್ಯತೇ-ಕಂಡುಬರುತ್ತದೆ. (ಧನಪ್ರಾಪ್ತಿಗೆ ಅವಶ್ಯಕವಾದ ಪೂರ್ವಪುಣ್ಯರೂಪದ ಅದೃಷ್ಟವು ಅದೃಷ್ಟಾರ್ಥವು—ಅದರಿಂದ ಲಭಿಸುವುದು, ದೃಷ್ಟಾರ್ಥವು—ನಾನಾ ಸ್ತ್ರ್ಯಾದಿ ಭೋಗಸಾಮಗ್ರಿಗಳು; ಅರ್ಥದಿಂದಲೇ ಕಾಮವೆಂದೂ ಧನವಂತರಿಂದಲೇ ಕಂಡುಬರುತ್ತದೆ).

**ಅದೃಷ್ಟಫಲದೋ ದ್ವೇಧಾ ನಿತ್ಯಾನಿತ್ಯಫಲತ್ವತಃ ॥ ೧೩ ॥**

**ಕೇವಲಂ ವಿಷ್ಣುತುಷ್ಟ್ಯರ್ಥೌ ಪ್ರೋಕ್ತೌ ನಿತ್ಯಫಲಪ್ರದೌ ।**

**ಅನ್ಯಾವನಿತ್ಯಫಲಕಾವಿತಿ ಶಾಸ್ತ್ರವಿನಿರ್ಣಯಃ ॥ ೧೪ ॥**

ಅದೃಷ್ಟಫಲದಃ-ಅದೃಷ್ಟಫಲವನ್ನು ಕೊಡುವುದು (ಅರ್ಥವು), ನಿತ್ಯಾನಿತ್ಯಫಲತ್ವತಃ-ನಿತ್ಯ ಮತ್ತು ಅನಿತ್ಯ ಫಲವುಳ್ಳದ್ದೆಂಬ ಕಾರಣದಿಂದ, ದ್ವೇಧಾ-ಎರಡು ಪ್ರಕಾರವಾದುದು; ಕೇವಲಂ-ಕೇವಲ, ವಿಷ್ಣುತುಷ್ಟ್ಯರ್ಥೌ-ಶ್ರೀವಿಷ್ಣು ಪ್ರೀತಿಗಾಗಿ ಆಗುವ ಎರಡೂ (ವಿಧದ) ಅರ್ಥಗಳು, ನಿತ್ಯಫಲಪ್ರದೌ-ನಿತ್ಯಫಲವನ್ನು ಕೊಡುವುವೆಂದು, ಪ್ರೋಕ್ತೌ-ಹೇಳಲ್ಪಡುತ್ತವೆ; ಅನ್ಯೌ-ಇತರವಾದ ಎರಡೂ (ಉಭಯವಿಧ

---

ಮತ್ತು ಕಾಣಲಾಗದ) ಫಲಗಳನ್ನು ಕೊಡುತ್ತದೆ; ಲೋಕದಲ್ಲಿ ಧನವಂತರು, ನಾನಾ ಭೋಗ್ಯ ವಸ್ತುಗಳುಳ್ಳವರಾಗಿ ಸುಖಿಗಳಾಗಿರುವುದು ಕಂಡುಬರುತ್ತದೆ; ಅಲ್ಲಿಯೇ (ಧನಿಕರಲ್ಲಿಯೇ) ಜಿಹ್ವೆ (ನಾಲಿಗೆ) ಉಪಸ್ಥ(ಗುಹ್ಯೇಂದ್ರಿಯ)ಗಳಿಗೆ ಸುಖಪ್ರದವಾದ ಕಾಮವೂ, ತದುಪಶಾಂತಿ ಸಾಮಗ್ರಿಗಳೂ ಕಂಡುಬರುತ್ತವೆ (೧೨). ಅದೃಷ್ಟವಾದ (ಪುಣ್ಯರೂಪದ) ಫಲವನ್ನು ಕೊಡುವ ಅರ್ಥವು, ನಿತ್ಯ ಮತ್ತು ಅನಿತ್ಯವೆಂಬ ಭೇದದಿಂದ ಎರಡು ಪ್ರಕಾರವಾದುದು; ದ್ವಿವಿಧವಾದ ಅರ್ಥಗಳೂ, ಕೇವಲ

ಕಾಮಗಳೂ), ಅನಿತ್ಯಫಲಕೌ-ಅನಿತ್ಯಫಲಗಳನ್ನು ಕೊಡುತ್ತವೆ; ಇತಿ-ಎಂದು, ಶಾಸ್ತ್ರನಿರ್ಣಯಃ-ಶಾಸ್ತ್ರನಿರ್ಣಯವು.

**ಅದೃಷ್ಟಫಲಕೇ ಕಾಮೇ ಸ್ತ್ರೀಭೋಗಾದೌ ಚ ಭೋಜನೇ ।**
**ಅವರ್ಜತ್ವೇನ ಜಾಯೇತ ಸುಖಂ ತಾತ್ಕಾಲಿಕಂ ತ್ವಪಿ ॥ ೧೫ ॥**

ಅದೃಷ್ಟಫಲಕೇ-ಅದೃಷ್ಟಫಲವುಳ್ಳ, ಕಾಮೇ-ಕಾಮವು, ಭೋಜನೇ-ಭೋಜನದಲ್ಲಿಯೂ, ಸ್ತ್ರೀಭೋಗಾದೌ-ಸ್ತ್ರೀಭೋಗಾದಿಗಳಲ್ಲಿಯೂ, ಅವರ್ಜತ್ವೇನ-(ಜನ್ಮಾಂತರಗಳಲ್ಲಿ) ತಪ್ಪದೇ (ನಿಯಮೇನ), ಜಾಯೇತ-(ಭೋಗದೊಂದಿಗೇ) ಉಂಟಾಗುತ್ತದೆ; ಅಪಿ ತು-ಆದರೂ ಸಹ, ಸುಖಂ-(ಆ ಭೋಗಜನ್ಯ) ಸುಖವು, ತಾತ್ಕಾಲಿಕಂ-ಭೋಗಕಾಲದಲ್ಲಿ ಮಾತ್ರವಿರುವುದು, (ಕ್ಷಣಿಕವಾದುದು- ಭೋಗಾನಂತರವಿರುವುದಿಲ್ಲ).

**ಏವಮೇವಾಸ್ತಿ ಧನಿನಾಂ ಕೇವಲಾದರ್ಥತಃ ಸುಖಂ ।**
**ಅಭುಜ್ಯಮಾನಮಪಿ ತದ್ಧನಂ ಲೋಕೇ ಸುಖಪ್ರದಂ ॥ ೧೬ ॥**
**ಕೀರ್ತಿರ್ಧರ್ಮಸ್ತು ತದ್ದಾನಾದ್ದೃಷ್ಟಾದೃಷ್ಟಫಲಂ ಮಹತ್ ।**
**ಕಾಮನಾಪೂರಣಾತ್ ಸ್ತ್ರೀಣಾಂ ಧರ್ಮಃ ಸ್ಯಾದನ್ಯಥಾಽನ್ಯಥಾ ॥ ೧೭ ॥**

ಏವಂ ಏವ-ಹೀಗೆಯೇ, ಧನಿನಾಂ-ಧನವಂತರಿಗೆ, ಕೇವಲಾತ್ ಅರ್ಥತಃ-ಅರ್ಥ (ಧನ) ಮಾತ್ರದಿಂದ, ಸುಖಂ-ಸುಖವು, ಅಸ್ತಿ-ಇರುತ್ತದೆ; ತದ್ಧನಂ-ಆ ಧನವು, ಅಭುಜ್ಯಮಾನಂ ಅಪಿ-ಭೋಗಿಸಲ್ಪಡದಿದ್ದರೂ (ಭೋಗಕ್ಕಾಗಿ ಉಪಯೋಗಿಸಲ್ಪಡದಿದ್ದರೂ), ಲೋಕೇ-ಜಗತ್ತಿನಲ್ಲಿ ಸುಖಪ್ರದಂ-ಸುಖವನ್ನು ಉಂಟುಮಾಡುವುದು (ಆಗುತ್ತದೆ—ಧನವನ್ನು ನೋಡುವ ಮಾತ್ರದಿಂದ, ತನ್ನ ವಶದಲ್ಲಿರುವುದೆಂಬ ಜ್ಞಾನಮಾತ್ರದಿಂದ, ಒಂದು ವಿಧವಾದ ಸುಖವನ್ನು ಕೊಡುತ್ತದೆ); ತದ್ದಾನಾತ್-ಅದರ (ಆ ಧನದ) ದಾನದಿಂದ, ಮಹತ್-ಮಹತ್ತಾದ (ಅಧಿಕವಾದ), ದೃಷ್ಟಾದೃಷ್ಟಫಲಂ-ಪ್ರತ್ಯಕ್ಷವಾದ ಮತ್ತು ಅಪ್ರತ್ಯಕ್ಷವಾದ ಫಲವು (ದೊರೆಯುತ್ತದೆ); ಕೀರ್ತಿಃ-ಕೀರ್ತಿಯೂ

---

ಶ್ರೀವಿಷ್ಣುಪ್ರೀತ್ಯರ್ಥವಾಗಿ ಮಾತ್ರ ಉಪಯುಕ್ತವಾದರೆ, ನಿತ್ಯಫಲ ಕೊಡುವುವು, ಎಂದು ಹೇಳಲ್ಪಡುತ್ತವೆ; ದ್ವಿವಿಧಗಳಾದ ಕಾಮಗಳೂ, (ಇಹಪರಗಳ) ಅನಿತ್ಯ ಸುಖರೂಪವಾದ ಫಲಗಳನ್ನೇ ಕೊಡುತ್ತವೆ (೧೩-೧೪). ಅದೃಷ್ಟಫಲವುಳ್ಳ ಕಾಮವು, (ಜನ್ಮಾಂತರಗಳಲ್ಲಿ) ಭೋಜನದಲ್ಲಿ ಮತ್ತು ಸ್ತ್ರೀಭೋಗಾದಿಗಳಲ್ಲಿ ಭೋಗದೊಂದಿಗೇ ತಾತ್ಕಾಲಿಕವಾದ (ಕ್ಷಣಿಕವಾದ) ಸುಖಾನುಭವನ್ನುಂಟುಮಾಡುತ್ತದೆ (ಕಾಮವೆಂಬ ಪುರುಷಾರ್ಥದ ಅದೃಷ್ಟಫಲಕ ಶಕ್ತಿಯಿಲ್ಲದಿದ್ದರೆ, ಆ ಭೋಗಗಳಿಂದ ಸಹ ಸುಖವುಂಟಾಗುವುದಿಲ್ಲವೆಂದು ತಿಳಿಯಬೇಕು) (೧೫). ಹೀಗೆಯೇ, ಅದೃಷ್ಟಫಲವುಳ್ಳ

(ಇಹಲೋಕದ ಪ್ರತ್ಯಕ್ಷಫಲ), ಚ-ಮತ್ತು ಧರ್ಮಃ-ಧರ್ಮವು (ಪುಣ್ಯರೂಪದ ಅಪ್ರತ್ಯಕ್ಷ ಫಲವೂ) (ಹೀಗೆ ದ್ವಿವಿಧ ಫಲವನ್ನು ದೊರಕಿಸುತ್ತದೆ). (ಹೀಗೆಯೇ ಕೇವಲ ಕಾಮದಿಂದ ಸಹ ದ್ವಿವಿಧವಾದ ಫಲವು ದೊರೆಯುತ್ತದೆ); ಸ್ತ್ರೀಣಾಂ-ಸ್ತ್ರೀಯರ, ಕಾಮನಾಪೂರಣಾತ್-ಕಾಮಗಳನ್ನು (ಆಶೆಗಳನ್ನು) ಪೂರ್ಣಮಾಡುವುದರಿಂದ, ಧರ್ಮಃ-ಪುಣ್ಯವು, ಸ್ಯಾತ್-ಉಂಟಾಗುತ್ತದೆ; ಅನ್ಯಥಾ-ಪೂರ್ಣಗೊಳಿಸದಿದ್ದರೆ, ಅನ್ಯಥಾ-ಪುಣ್ಯಬರುವುದಿಲ್ಲ(ಪಾಪವೇ ಕಟ್ಟುತ್ತದೆ).

**ಪುರಾ ಹಿ ಬ್ರಹ್ಮಣಾ ದತ್ತೋ ವರಃ ಸುತಪಸಾರ್ಚನಾತ್ ।**
**ಸ್ವಯಂ ಶಕ್ತೋ ಹಿ ಯೋ ಮರ್ತ್ಯೋ ದೇಶತಃ ಕಾಲತೋಪಿವಾ॥ ೧೮ ॥**
**ದೋಷಾಭಾವೇ ವೃಷಸ್ಯಂತೀಂ ಸ್ವಪತ್ನೀಂ ಯೋಽವಮಾನಯೇತ್ ।**
**ವಿಷ್ಠಾ ಕ್ರಿಮಿಃ ಸ ಜಾಯೇತ ಸ್ತ್ರೀಹೀನೋ ಜನ್ಮಜನ್ಮನಿ ॥ ೧೯ ॥**
**ದಶಭಿಃ ಪಂಚಭಿಃ ಪುಂಭಿಃ ಸ್ತ್ರಿಯಃ ಕಾಮೋ ನ ಪೂರ್ಯತೇ ।**
**ಅತೋ ಹಿ ಬಹು ನಾರೀಣಾಂ ವರಣಂ ಪಾಪಸಾಧನಂ ॥ ೨೦ ॥**
**ಅಥಾಪಿ ಯದಿ ಕುರ್ವೀತ ಬಹುನಾರೀವ್ರತಿಂ ಕ್ವಚಿತ್ ।**
**ತದಾ ವಾಸರಪರ್ಯಾಯಾದ್ಭೋಗದಾನಂ ಸಮಾಚರೇತ್ ॥ ೨೧ ॥**
**ಅನ್ಯವಾಸರಪರ್ಯಾಯೇ ವೃಷಸ್ಯಂತೀತರಾಂ ಯದಿ ।**
**ಶಕ್ತೋಪಿ ತಾಂ ನ ಚೇದ್ಭುಂಜ್ಯಾತ್ತದಾ ದೋಷೋ ನ ವಿದ್ಯತೇ ॥ ೨೨ ॥**
**ಉಭಯೋರಪಿ ಭೋಗೇ ಚ ಶಕ್ತಸ್ಯಾತ್ತರ್ಹಿ ತಾಂ ವ್ರಜೇತ್ ।**

(ಸ್ತ್ರೀಯರ ಕಾಮವನ್ನು ಪೂರ್ತಿಗೊಳಿಸಿ, ಧರ್ಮವನ್ನು ದೊರಕಿಸಿಕೊಳ್ಳುವುದರಲ್ಲಿ ಅನುಸರಿಸಬೇಕಾದ ನಿಯಮಗಳನ್ನು ವಿವರಿಸುತ್ತಾರೆ); ಪುರಾ-ಪೂರ್ವದಲ್ಲಿ ಸುತಪಸಾ-ಭಕ್ತಿಪೂರ್ವಕ ತಪಸ್ಸಿನಿಂದ, ಅರ್ಚನಾತ್-ಸೇವಿಸಿದ್ದರಿಂದ, ಬ್ರಹ್ಮಣಾ-ಬ್ರಹ್ಮದೇವನಿಂದ, ವರಃ-ವರವು, ದತ್ತಃ-(ಸ್ತ್ರೀಯರಿಗೆ) ಕೊಡಲ್ಪಟ್ಟಿತು; (ಅ

---

ಕೇವಲ ಅರ್ಥವು (ಧನವು) ಧನಿಕರಿಗೆ ಸುಖಪ್ರದವಾಗುತ್ತದೆ; ತನ್ನ ಭೋಗಕ್ಕಾಗಿ ಉಪಯೋಗಿಸಲ್ಪಡದಿದ್ದರೂ, ಲೋಕದಲ್ಲಿ (ಧನದರ್ಶನ ಅಥವಾ ಜ್ಞಾನಮಾತ್ರದಿಂದ) ಸುಖವು ಕಂಡುಬರುತ್ತದೆ; ಆ ಧನವನ್ನು ದಾನಕ್ಕಾಗಿ ಉಪಯೋಗಿಸಿದರೆ ದೃಷ್ಟಾದೃಷ್ಟಗಳೆಂಬ ದ್ವಿವಿಧ ಫಲಗಳು ದೊರೆಯುತ್ತವೆ; ಇಹದಲ್ಲಿ ಕೀರ್ತಿಯು ದೃಷ್ಟಫಲ-ಧರ್ಮವು (ಪುಣ್ಯವು) ಅದೃಷ್ಟಫಲ; ಸ್ತ್ರೀಯರ ಕಾಮಗಳನ್ನು ಪೂರ್ಣಗೊಳಿಸುವುದರಿಂದ ಧರ್ಮವೂ (ಪುಣ್ಯವೂ), ಹಾಗೆ ಮಾಡದಿದ್ದರೆ ಅಧರ್ಮವೂ (ಪಾಪವೂ) ಪ್ರಾಪ್ತವಾಗುತ್ತದೆ (೧೬-೧೭). ಇದಕ್ಕೆ ಕಾರಣವೇನೆಂದರೆ:—ಹಿಂದೆ ತಪಸ್ಸಿನಿಂದ ಪ್ರೀತನಾದ ಬ್ರಹ್ಮದೇವನು, ಸ್ತ್ರೀಯರಿಗೆ ವರವನ್ನು ಕೊಟ್ಟಿರುವನು; ಯಾವ

ವರವೇನೆಂದರೆ), ಯಃ-ಯಾವ, ಮರ್ತ್ಯಃ-ಮನುಷ್ಯನು, ಸ್ವಯಂ-ತಾನು, ಶಕ್ತಃ ಹಿ-ಸಮರ್ಥನಾಗಿದ್ದರೂ, ದೇಶತಃ-ದೇಶದಿಂದ (ಸ್ಥಲದಿಂದ), ಅಪಿ ವಾ-ಮತ್ತು ಕಾಲತಃ-ಕಾಲದಿಂದಲೂ, ದೋಷಾಭಾವೇ-(ದೇವಾಲಯಾದಿ ಸ್ಥಳ, ಹಗಲು ಮೊದಲಾದ ನಿಷಿದ್ಧಕಾಲಗಳ) ದೋಷವಿಲ್ಲದಿರುವಾಗಲೂ, ವೃಷಸ್ಯಂತೀಂ-ಸಂಭೋಗೇಚ್ಛೆಯುಳ್ಳ, ಸ್ವಪತ್ನೀಂ-ತನ್ನ-ಭಾರ್ಯೆಳನ್ನು ಯಃ-ಯಾವನೇ ಆಗಲಿ, ಅವಮಾನಯೇತ್-(ಅಂಗಸಂಗವನ್ನಿತ್ತು) ಗೌರವಿಸದಿದ್ದರೆ (ಕಾಮಪೂರ್ತಿಯನ್ನು ಕೊಡದಿದ್ದರೆ), ಸಃ-ಅತನು, ವಿಷ್ಟಾ ಕ್ರಿಮಿಃ-ಮಲದಲ್ಲಿ ಕ್ರಿಮಿಯಾಗಿ, ಜಾಯೇತ-ಹುಟ್ಟುವನು, (ಮತ್ತು) ಜನ್ಮಜನ್ಮನಿ-(ಮುಂದಿನ) ಬಹುಜನ್ಮಗಳಲ್ಲಿ ಸ್ತ್ರೀಹೀನಃ-ಪತ್ನೀರಹಿತನು (ಜಾಯೇತ-ಆಗುವನು); ಸ್ತ್ರಿಯಃ-ಸ್ತ್ರೀಯ (ಹೆಂಗಸಿನ), ಕಾಮಃ-ಭೋಗೇಚ್ಛೆಯು, ಪಂಚಭಿಃ-ಐದುಮಂದಿ, ದಶಭಿಃ-ಹತ್ತುಮಂದಿ, ಪುಂಭಿಃ-ಪುರುಷರಿಂದ ಸಹ, ನ ಪೂರ್ಯತೇ-ಪೂರ್ತಿಗೊಳ್ಳುವುದಿಲ್ಲ; ಅತಃ ಹಿ-ಆದ್ದರಿಂದಲೇ, ಬಹುನಾರೀಣಾಂ-ಬಹುಸ್ತ್ರೀಯರ, ವರಣಾಂ-ವರಿಸುವುದು (ಲಗ್ನ ಮಾಡಿಕೊಳ್ಳುವುದು), ಪಾಪಸಾಧನಂ-ಪಾಪಸಾಧನವೆನಿಸುತ್ತದೆ; ಅಥಾಪಿ-ಹೀಗಿದ್ದರೂ, ಕ್ವಚಿತ್-ಒಂದುವೇಳೆ, ಬಹುನಾರೀವೃತಿಂ-ಬಹುಸ್ತ್ರೀವರಣವನ್ನು ಯದಿ ಕುರ್ವೀತ-ಮಾಡಿದರೆ, ತದಾ-ಆಗ (ಆ ಸಂದರ್ಭದಲ್ಲಿ), ವಾಸರ ಪರ್ಯಾಯಾತ್-ದಿನಪರ್ಯಾಯದಿಂದ (ಸರ್ತಿಮೇಲೆ ಅವರವರಿಗೆ ಗೊತ್ತಾದ ದಿನಗಳಲ್ಲಿ), ಭೋಗದಾನಂ-ಭೋಗದಾನವನ್ನು ಸಮಾಚರೇತ್-ಮಾಡಬೇಕು; ಅನ್ಯವಾಸರ ಪರ್ಯಾಯೇ-ಅನ್ಯದಿನದಲ್ಲಿ (ಮತ್ತೊಬ್ಬಳ ಸರ್ತಿಯ ದಿನದಲ್ಲಿ), ವೃಷಸ್ಯಂತೀತರಾಂ-ಅತಿಶಯವಾಗಿ ಭೋಗೇಚ್ಛೆಯುಳ್ಳ ಪತ್ನಿಯನ್ನು ಯದಿ-ಒಂದು ಪಕ್ಷ ಶಕ್ತಃ ಅಪಿ-ತಾನು ಭೋಗದಾನದಲ್ಲಿ ಸಮರ್ಥನಾಗಿದ್ದರೂ, ತಾಂ-ಆಕೆಯನ್ನು ನ ಭುಂಜ್ಯಾತ್ ಚೇತ್-ಭೋಗಿಸದಿದ್ದರೆ, ತದಾ-ಆಗ, ದೋಷಃ-ದೋಷವು (ಪಾಪವು), ನ ವಿದ್ಯತೇ-

---

ಪುರುಷನು, ಭೋಗಶಕ್ತಿಯುಳ್ಳವನಾಗಿದ್ದರೂ, ದೋಷವಿಲ್ಲದ ದೇಶ ಕಾಲಗಳಲ್ಲಿ ಸಂಭೋಗವನ್ನಿಚ್ಛಿಸುವ ಸ್ವಪತ್ನಿಯನ್ನು ಭೋಗದಾನದಿಂದ ತೃಪ್ತಿಗೊಳಿಸುವುದಿಲ್ಲವೋ (ಭಾರ್ಯೆಳ ಇಚ್ಛೆಯನ್ನು ಗೌರವಿಸುವುದಿಲ್ಲವೋ, ಆತನು ಮಲದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ ಮತ್ತು ಮುಂದಿನ ಬಹುಜನ್ಮಗಳಲ್ಲಿ ಪತ್ನೀರಹಿತನಾಗುವನು; ಸ್ತ್ರೀಯರ ಕಾಮವು (ಭೋಗೇಚ್ಛೆಯು) ಐದು-ಹತ್ತು ಪುರುಷರಿಂದ ಸಹ ಪೂರ್ಣಗೊಳ್ಳದಷ್ಟು ಪ್ರಬಲವಾಗಿರುತ್ತದೆ; (ಪತಿವ್ರತಾ ಸ್ತ್ರೀಯರು ಅದನ್ನು ನಿಗ್ರಹಿಸಿಕೊಂಡು, ಕೇವಲ ಸ್ವಪತಿಯಿಂದ ಮಾತ್ರ ದೊರೆಯುವ ಇಚ್ಛಾಪೂರ್ತಿಯಿಂದ ತೃಪ್ತರಾಗಿ ಆತನನ್ನು ಸೇವಿಸುತ್ತಾರೆ—ಈ ಕಾರಣದಿಂದ, ಪುರುಷನ ಮೇಲೆ ಈ ಕರ್ತವ್ಯದ ಹೊರೆಯನ್ನು ಹೇರಲಾಗಿದೆ); ಈ ಕಾರಣದಿಂದಲೇ, ಬಹುಸ್ತ್ರೀಯರನ್ನು ವಿವಾಹಮಾಡಿಕೊಳ್ಳುವುದು,

ಉಂಟಾಗುವುದಿಲ್ಲ; ಉಭಯೋಃ ಅಪಿ-ಇಬ್ಬರ (ಆ ದಿನದಾಕೆ ಮತ್ತು ತನ್ನ ದಿನವಲ್ಲದಿದ್ದರೂ ಅತಿಯಾದ ಭೋಗೇಚ್ಛೆಯುಳ್ಳವಳು-ಈ ಉಭಯರ), ಭೋಗೇ-ಭೋಗದಲ್ಲಿ, ಶಕ್ತಃ ಸ್ಯಾತ್-(ಪುರುಷನು) ಶಕ್ತನಾಗಿದ್ದರೆ, ತರ್ಹಿ-ಆಗ, ತಾಂ-ಆಕೆಯನ್ನೂ ವ್ರಜೇತ್-ಹೊಂದಬೇಕು (ಆಕೆಯ ಕಾಮವನ್ನು ಪೂರ್ತಿಗೊಳಿಸಬೇಕು).

ಪ್ರಸ್ವೇದೈಶ್ಚಾಪಿ ರೋಮಾಂಚೈಃ ಸ್ವಭಾವೈರ್ವೀಕ್ಷಣಾದಿಭಿಃ ॥ ೨೩ ॥
ಭಾವಂ ವಿತರ್ಕಯೇತ್ ಸ್ತ್ರೀಣಾಂ ತತೋ ಭುಂಜೀತ ತಾಃ ಪುಮಾನ್ ।
ವೃಥಾ ರೋಷಂ ನ ಕುರ್ವೀತ ವೃಥಾ ಕಾಮಂ ನ ವರ್ಜಯೇತ್ ॥ ೨೪ ॥
ನಾನುರಕ್ತಾಂ ವಿರಜ್ಯೇತ ಧರ್ಮಿಷ್ಠಾಂ ಚ್ಯಾವಯೇನ್ನ ತು ।
ಸಾಂತ್ವಪೂರ್ವಂ ಸದಾ ಬ್ರೂಯಾನ್ನ ಸ್ತ್ರೀಮುದ್ವೇಜಯೇತ್ ಕ್ವಚಿತ್ ॥ ೨೫ ॥

ಪ್ರಸ್ವೇದೈಃ-(ಮುಖಾದಿಗಳು) ಬೆವರುವುದರಿಂದಲೂ, ಅಪಿ ಚ-ಮತ್ತೂ ರೋಮಾಂಚೈಃ-ರೋಮಾಂಚಗಳಿಂದಲೂ (ಮೇಲೆ ಮೇಲೆ ಮೈನವಿರೇಳುವುದರಿಂದಲೂ), ಸ್ವಭಾವೈಃ-(ಸ್ತ್ರೀ ಸಹಜವಾದ) ಸ್ವಾಭಾವಿಕ, ವೀಕ್ಷಣಾದಿಭಿಃ-(ಲಜ್ಜಾಯುಕ್ತ) ನೋಟ ಮುಂತಾದ್ದರಿಂದಲೂ, ಸ್ತ್ರೀಣಾಂ-ಸ್ತ್ರೀಯರ, ಭಾವಂ-ಭಾವವನ್ನು (ಕಾಮಯುಕ್ತ ಮನೋಭಾವವನ್ನು), ವಿತರ್ಕಯೇತ್-ಊಹಿಸಿ ತಿಳಿಯಬೇಕು; ತತಃ-ನಂತರ (ಹೀಗೆ ತಿಳಿದು), ಪುಮಾನ್-ಪುರುಷನು, ತಾಃ-ಅವರನ್ನು (ಸ್ತ್ರೀಯರನ್ನು), ಭುಂಜೀತ-ಭೋಗಿಸಬೇಕು; (ಸ್ತ್ರೀಯರ ವಿಷಯಕ್ಕೆ ಪುರುಷನು ಹೇಗೆ ನಡೆದುಕೊಳ್ಳಬೇಕೆಂದರೆ), ವೃಥಾ-ವ್ಯರ್ಥವಾಗಿ (ನಿಷ್ಕಾರಣವಾಗಿ), ರೋಷಂ-ಸಿಟ್ಟನ್ನು ನ ಕುರ್ವೀತ-ಮಾಡಬಾರದು; ವೃಥಾ-ಕಾರಣವಿಲ್ಲದೇ, ಕಾಮಂ-ಕಾಮವನ್ನು (ಭೋಗೇಚ್ಛೆಯನ್ನು), ನ ವರ್ಜಯೇತ್-ತ್ಯಜಿಸಬಾರದು; ಅನುರಕ್ತಾಂ-ಪ್ರೇಮಯುಕ್ತಳಾದ ಸ್ತ್ರೀಯನ್ನು (ಭಾರ್ಯಳನ್ನು), ನ ವಿರಜ್ಯೇತ-ತ್ಯಜಿಸಕೂಡದು; ಧರ್ಮಿಷ್ಠಾಂ-ಧರ್ಮದಲ್ಲಿ ನಿರತಳಾದವಳನ್ನು, ನ ಚ್ಯಾವಯೇತ್-ಮಾರ್ಗಚ್ಯುತಳಾಗುವಂತೆ (ಆ

---

ಪುರುಷರಿಗೆ ಪಾಪಸಾಧನವೂ ಆಗಿರುತ್ತದೆ; ಒಂದುವೇಳೆ, ಬಹುಪತ್ನಿಯರನ್ನು ವಿಶೇಷ ಕಾರಣಗಳಿಂದ ಸ್ವೀಕರಿಸಿದರೆ, ದಿನ ಪರ್ಯಾಯದಮೇಲೆ (ಅವರವರಿಗೆ ಗೊತ್ತಾದ ದಿನಗಳಲ್ಲಿ ಮಾತ್ರ) ಅವರಿಗೆ ಭೋಗವನ್ನು ಕೊಡಬೇಕು; ಮತ್ತೊಬ್ಬ ಪತ್ನಿಯ ದಿನದಲ್ಲಿ ಅನ್ಯ ಪತ್ನಿಯು ಅತಿಶಯವಾದ ಭೋಗೇಚ್ಛೆಯುಳ್ಳವಳಾದರೆ, ಆ ದಿನ ಆಕೆಯನ್ನು, ಶಕ್ತನಾದರೂ, ಭೋಗಿಸದಿದ್ದರೆ, ಯಾವ ದೋಷವೂ ಇಲ್ಲ; ಆದರೆ ಉಭಯರನ್ನೂ ಭೋಗಿಸಿ ತೃಪ್ತಿಪಡಿಸಲು ತಾನು ಶಕ್ತನಾಗಿದ್ದರೆ, ಆಗ, ಆಕೆಗೂ ಭೋಗವನ್ನು ಕೊಡಬೇಕು (೧೮-೨೨). ಸ್ತ್ರೀಯರ ಭೋಗೇಚ್ಛೆಯನ್ನು, ಆಕೆಯ ಮುಖಾದಿ ಅಂಗಗಳು ಬೆವರುವುದರಿಂದಲೂ, ಮೇಲಿಂದ ಮೇಲೆ ಉಂಟಾಗುವ ರೋಮಾಂಚಗಳಿಂದಲೂ (ರೋಮಗಳು ಎದ್ದು ನಿಲ್ಲುವುದರಿಂದ ರೋಮಾಂಚವನ್ನು

ಮಾರ್ಗದಿಂದ ಚಲಿಸುವಂತೆ) ಮಾಡಕೂಡದು; ಸದಾ-ಎಲ್ಲ ಕಾಲದಲ್ಲಿ ಸಾಂತ್ವಪೂರ್ವಂ-ಸಮಾಧಾನದಿಂದ, ಬ್ರೂಯಾತ್-(ಆಕೆಯೊಡನೆ) ಮಾತನಾಡ ಬೇಕು; ಕ್ವಚಿತ್-ಸ್ವಲ್ಪವೂ, ಸ್ತ್ರೀಂ-ಸ್ತ್ರೀಯನ್ನು ನ ಉದ್ವೇಜಯೇತ್-ಸಿಟ್ಟಿಗೆಬ್ಬಿಸಬಾರದು (ಅಥವಾ ಭಯಪಡಿಸಬಾರದು).

**ಸಾಪರಾಧಾಮಪಿ ಸ್ತ್ರೀಂ ನೋ ಹನ್ಯಾದ್ಧನ್ ಪತಿತೋ ಭವೇತ್ ।**
**ಹೃತಾಧಿಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಂ ॥ ೨೬ ॥**
**ಪರಿಭೂತಾಮಧಃ ಶಯ್ಯಾಂ ವಾಸಯೇದ್ವ್ಯಭಿಚಾರಿಣೀಂ ।**

ಸಾಪರಾಧಾಂ-ಅಪರಾಧ ಮಾಡಿದವಳಾದ, ಸ್ತ್ರೀಂ ಅಪಿ-ಸ್ತ್ರೀಯನ್ನು ಸಹ (ಸರ್ವತ್ರಸ್ತ್ರೀ ಎಂಬುದಕ್ಕೆ ಪತ್ನೀ ಎಂಬರ್ಥವನ್ನೇ ತಿಳಿಯಬೇಕು), ನೋ ಹನ್ಯಾತ್-ಸಂಹರಿಸಬಾರದು; ಹನ್-ಸಂಹರಿಸುವವನಾಗಿ, ಪತಿತಃ-(ಪುರುಷನು) ಪತಿತನು (ದೋಷಿಯು—ಅಪರಾಧಿಯು), ಭವೇತ್-ಆಗುತ್ತಾನೆ; ವ್ಯಭಿಚಾರಿಣೀಂ-ವ್ಯಭಿಚಾರಿಯಾದ ಭಾರ್ಯೆಳನ್ನು, ಹೃತಾಧಿಕಾರಾಂ-ಕಿತ್ತುಕೊಂಡ ಅಧಿಕಾರವುಳ್ಳ ವಳನ್ನಾಗಿ ಮಾಡಿ (ಗೃಹಿಣಿಯಾಗಿ ನಡೆಸುತ್ತಿದ್ದ ಅಧಿಕಾರವನ್ನು ತಪ್ಪಿಸಿ), ಮಲಿನಾಂ ಮಲಿನ ವಸ್ತ್ರಾದಿಯುಕ್ತಳನ್ನಾಗಿಯೂ, ಪಿಂಡಮಾತ್ರೋಪಜೀವಿನೀಂ-ಹಾಕಿದ ಅನ್ನವನ್ನು ಮಾತ್ರ ತಿಂದು ಜೀವಿಸುವಳನ್ನಾಗಿಯೂ, ಪರಿಭೂತಾಂ-ತಿರಸ್ಕಾರದಿಂದ ಕಾಣುತ್ತಾ

---

ಗುರ್ತಿಸಬಹುದು), ಸ್ತ್ರೀಸಹಜವಾದ ಲಜ್ಜಾಯುಕ್ತ ನೋಟಗಳಿಂದಲೂ, ತರ್ಕಿಸಿ ತಿಳಿಯಬೇಕು; ಅನಂತರ ಪುರುಷನು ಅವರನ್ನು ಭೋಗಿಸಬೇಕು; (ಪುರುಷನಿಗಿಂತ ಅಧಿಕ ಕಾಮಿಗಳಾದರೂ, ಸ್ತ್ರೀಸಹಜವಾದ ಲಜ್ಜೆಯಿಂದ ಅವರು, ತಮ್ಮ ಇಚ್ಛೆಯನ್ನು ನುಡಿದು ಅಥವಾ ಮೇಲೆ ಬಿದ್ದು ತಾವೇ ಮುಂದುವರಿದು ತೋರ್ಪಡಿಸುವುದಿಲ್ಲ. ಈ ಕಾರಣದಿಂದ ಪುರುಷನ ಕರ್ತವ್ಯವನ್ನು ಇಲ್ಲಿ ಸೂಚಿಸಲಾಗಿದೆ); ಸ್ತ್ರೀಯರ ಮೇಲೆ ನಿರ್ನಿಮಿತ್ತವಾಗಿ ಸಿಟ್ಟಾಗಬಾರದು; ತನ್ನ ಭೋಗೇಚ್ಛೆಯನ್ನಾದರೂ ನಿಷ್ಕಾರಣವಾಗಿ (ಪ್ರಬಲ ಕಾರಣಗಳಿಲ್ಲದೇ) ತ್ಯಜಿಸಬಾರದು; ಅನುರಕ್ತಳಾದ (ಸ್ತ್ರೀಯನ್ನು) ಭಾರ್ಯೆಳನ್ನು ತ್ಯಜಿಸಕೂಡದು; ಧರ್ಮಿಷ್ಠಳನ್ನು ಧರ್ಮಮಾರ್ಗದಿಂದ ಚಲಿಸುವಂತೆ (ವ್ರತಾದ್ಯನುಷ್ಠಾನಗಳನ್ನು ತ್ಯಜಿಸುವಂತೆ) ಮಾಡಬಾರದು; ಆಕೆಯೊಡನೆ, ಸದಾ ಸಮಾಧಾನದಿಂದ ಮಾತನಾಡಬೇಕು—ಆಕೆಯನ್ನು ಸಿಟ್ಟಿಗೆಬ್ಬಿಸಬಾರದು ಅಥವಾ ನಿಷ್ಕಾರಣವಾಗಿ ಭಯಪಡಿಸಬಾರದು (೨೩-೨೫). ತಪ್ಪು ಮಾಡಿದ ಪತ್ನಿಯನ್ನು (ನೀಚಕೃತ್ಯಗಳನ್ನು ಮಾಡಿದ ಭಾರ್ಯೆಳನ್ನು) ಸಹ, ಪುರುಷನು, ಸಂಹರಿಸಬಾರದು (ಘೋರಶಿಕ್ಷೆಗಳಿಗೆ ಗುರಿಮಾಡಬಾರದು; ಹಾಗೆ ಮಾಡಿದ ಪತಿಯು (ಪುರುಷನು) ಸ್ವಯಂದೋಷಿ (ಪತಿತನು) ಆಗುತ್ತಾನೆ; ವ್ಯಭಿಚಾರಿಣಿಯಾದ ಸ್ತ್ರೀಯನ್ನು ಗೃಹಿಣಿಯ ಸ್ಥಾನದಿಂದ (ಅಧಿಕಾರದಿಂದ) ತೆಗೆದು, ಮಲಿನವಸ್ತ್ರಾದಿಗಳನ್ನಿತ್ತು ಪ್ರಾಣಧಾರಣೆಗೆ

ಅಧಃ ಶಯ್ಯಾಂ-ನೆಲದಮೇಲೆ ಮಲಗುವಳನ್ನಾಗಿಯೂ, ವಾಸಯೇತ್-ವಾಸಿಸುವಂತೆ (ಜೀವಿಸುವಂತೆ) ಮಾಡಬೇಕು.

ಸೃಷ್ಟಿಕಾರ್ಯೇ ಭಗವತೋ ನಾರ್ಯೋ ಭೂಮಿಸಮಾ ಮತಾಃ ॥ ೨೭ ॥
ನ ಜ್ಞಾಯತೇ ಕದಾ ಕಾಶ್ಚಿತ್ತಾಭ್ಯಃ ಸಾಕ್ಷಾದ್ವಾ ವ್ಯವಧಾನತಃ ।
ತಾಭ್ಯಃ ಕನ್ಯಾಶ್ಚ ಪುತ್ರಾಶ್ಚ ಭವೇಯುರ್ಧರ್ಮತತ್ಪರಾಃ ॥ ೨೮ ॥
ಅಪಿ ಸ್ವವಶಮಾಪನ್ನಾ ನಾರೀ ವಾನ್ಯೋಽಪಿ ಕೋಽಪಿ ವಾ ।
ಮರ್ತ್ಯಃ ಪಶುರ್ವಾ ಕೀಟಾದಿರ್ನತತ್ಪೀಡಾಂ ಸಮಾಚರೇತ್ ॥ ೨೯ ॥
ನ ದ್ರುಹ್ಯೇತ ಸ್ವಮಾರ್ಗಸ್ಥಾನ್ಸನ್ಮಾರ್ಗಸ್ಥಾಂಶ್ಚ ಶಿಕ್ಷಯೇತ್ ।
ಭರಣೇ ಪಾಲನೇ ತೇಷಾಂ ಸಾವಧಾನಃ ಸದಾ ಭವೇತ್ ॥ ೩೦ ॥

ಭಗವತಃ-ಶ್ರೀವಿಷ್ಣುವಿಗೆ, ಸೃಷ್ಟಿಕಾರ್ಯೇ-(ಜೀವರನ್ನು) ಸೃಷ್ಟಿಸುವ ಕಾರ್ಯದಲ್ಲಿ (ಅವರಿಗೆ ಯೋಗ್ಯವಾದ ಪ್ರಾಕೃತ ದೇಹಗಳನ್ನು ಹೊಂದಿಸುವುದರಲ್ಲಿ), ನಾರ್ಯಃ-ಸ್ತ್ರೀಯರು, ಭೂಮಿಸಮಾಃ-ಭೂಮಿಗೆ ಸಮರೆಂದು (ಕ್ಷೇತ್ರ ಸ್ಥಾನದಲ್ಲಿರುವರೆಂದು), ಮತಾಃ-ತಿಳಿಯಲ್ಪಡುವರು; ಕದಾ-ಯಾವ ಕಾಲದಲ್ಲಿ, ತಾಭ್ಯಃ-ಅವರಿಂದ ಸಾಕ್ಷಾತ್-ಸ್ವಯಂ ಆಗಲಿ, ವ್ಯವಧಾನತಃ-ಅವರ ಮುಂದಿನ ಸಂತತಿಯಿಂದಾಗಲಿ, ಕಾಶ್ಚಿತ್-ಯಾವ, ಕನ್ಯಾಃ-ಕನ್ಯೆಯರು, ಪುತ್ರಾಃ ಚ-ಸುತರೂ, ಧರ್ಮ ತತ್ಪರಾಃ-ಧರ್ಮದಲ್ಲಿ ಆಸಕ್ತಿಯುಳ್ಳವರಾಗಿ, ಭವೇಯುಃ-ಹುಟ್ಟುತ್ತಾರೆಂದು, ನ ಜ್ಞಾಯತೇ-(ಪುರುಷರು) ತಿಳಿಯಲಾರರು (ತಿಳಿಯಲಾಗುವುದಿಲ್ಲ); ಅಪಿ-ಮತ್ತು, ಸ್ವವಶಂ-ತನ್ನ ಅಧೀನತೆಯನ್ನು, ಆಪನ್ನಾ-ಹೊಂದಿದ, ನಾರೀ-ಸ್ತ್ರೀ, ವಾ-ಮತ್ತು, ಅನ್ಯಃ ಕಃ ಅಪಿ

---

ಅವಶ್ಯಕವಾದ, ಅನ್ನವನ್ನು ಹಾಕಿ, ನೆಲದ ಮೇಲೆ ಮಲಗುವಂತೆ ಮಾಡಿ, ತಿರಸ್ಕಾರದಿಂದ ಕಾಣುತ್ತ ರಕ್ಷಿಸಲೇಬೇಕು (೨೬). ಸ್ತ್ರೀಯರು ಶ್ರೀಹರಿಯ ಸೃಷ್ಟಿಕಾರ್ಯದಲ್ಲಿ ಭೂಮಿಗೆ (ಕ್ಷೇತ್ರರೂಪರೆಂದು) ಸಮರೆಂದು ಹೇಳಲ್ಪಡುತ್ತಾರೆ; ಅವರಿಂದ ಸ್ವಯಂ ಅಥವಾ ಅವರ ಮುಂದಿನ ಸಂತತಿಯವರಿಂದ, ಯಾವ ಕಾಲದಲ್ಲಿ ಧರ್ಮಪರಾಯಣರಾದ ಯಾವ ಕನ್ಯೆಯರು ಅಥವಾ (ಮತ್ತು) ಪುತ್ರರು ಉದ್ಭವಿಸುವರೆಂಬುದನ್ನು ಯಾರೂ ತಿಳಿಯಲಾರರು; (ಧರ್ಮತತ್ಪರರಾದ ಸಂತಾನಗಳಿಂದ, ವಿಶೇಷವಾಗಿ ಲೋಕಹಿತವು ಸಾಧಿಸುತ್ತದೆ; ಆದ್ದರಿಂದ ಯಾವ ಪುರುಷನೇ ಆಗಲಿ, ತನ್ನ ಅಧೀನರಾದ ಸ್ತ್ರೀಯರನ್ನು ಜಾಗರೂಕನಾಗಿ ರಕ್ಷಿಸಬೇಕು; ಸ್ತ್ರೀ ಮಾತ್ರರಲ್ಲ; ತನ್ನ ಅಧೀನದಲ್ಲಿರುವ (ಶ್ರೀಹರೀಚ್ಛೆಯಿಂದ ತನ್ನ ವಶದಲ್ಲಿ ಸ್ಥಾಪಿಸಲ್ಪಟ್ಟಿರುವ) ಬೇರೆ ಯಾರನ್ನೇ ಆಗಲಿ, ಪಶ್ವಾದಿ ಕ್ಷುದ್ರಪ್ರಾಣಿಗಳನ್ನೇ ಆಗಲಿ, ಯಾವ ಪಥದಿಂದಲೂ ಪೀಡಿಸಕೂಡದು (ಹಿಂಸೆ ಕೊಡಬಾರದು); ಸನ್ಮಾರ್ಗದಲ್ಲಿರುವವರನ್ನು ವಂಚಿಸಬಾರದು—ಅವರಿಗೆ ಯಾವ

ವಾ-ಬೇರೆ ಯಾರೇ ಆಗಲಿ, ಪಶುಃ ವಾ-ಪಶು (ಗೋ ಅಶ್ವಾದಿ)ಗಳಾಗಲಿ, ಕೀಟಾದಿಃ-ಯಾವುದೇ ಕ್ಷುದ್ರಜಂತು ಮೊದಲಾದುದು ಆಗಲಿ, ಮರ್ತ್ಯಃ-ಮನುಷ್ಯನು, ತತ್ಪೀಡಾಂ-ಅದರ (ಆ ಪ್ರಾಣಿಯ) ಹಿಂಸೆಯನ್ನು ನ ಸಮಾಚರೇತ್-ಮಾಡಬಾರದು; ಸ್ವಮಾರ್ಗಸ್ಥಾನ್-ಸ್ವಯೋಗ್ಯಮಾರ್ಗದಲ್ಲಿರುವವರನ್ನು ನ ದ್ರುಹ್ಯೇತ-ವಂಚಿಸ ಬಾರದು (ಅವರಿಗೆ ಯಾವ ದ್ರೋಹವನ್ನೂ—ಕೇಡನ್ನೂ ಮಾಡಬಾರದು); ವಿಮಾರ್ಗಸ್ಥಾನ್-ದುರ್ಮಾರ್ಗದಲ್ಲಿರುವವರನ್ನು ಶಿಕ್ಷಯೇತ್ ಚ-ಶಿಕ್ಷಿಸಲೇ ಬೇಕು—ಯೋಗ್ಯ ಉಪದೇಶದಿಂದ—ಶಾಸನದಿಂದ ಸನ್ಮಾರ್ಗಿಗಳನ್ನಾಗಿ ಮಾಡ ಬೇಕು); ತೇಷಾಂ-ಅವರ (ತನ್ನ ಅಧೀನರ), ಭರಣೇ-ರಕ್ಷಣೆಯಲ್ಲಿಯೂ, ಪಾಲನೇ-ಅನ್ನಾಹಾರಾದಿಗಳನ್ನಿತ್ತು ಪಾಲಿಸುವುದರಲ್ಲಿಯೂ, ಸದಾ-ಯಾವಾಗಲೂ, ಸಾವಧಾನಃ-ಸಮಾಧಾನಚಿತ್ತನಾಗಿ (ಜಾಗರೂಕನಾಗಿ) ಭವೇತ್-ಇರಬೇಕು.

ಏವಮೇವ ಹಿ ಭಾರ್ಯಾಪಿ ಪತಿಂ ಕಾಮುಕಮನ್ವಿಯಾತ್ ।
ದೇಶಜಂ ಕಾಲಜಂ ವಾಪಿ ನ ದೋಷಂ ತತ್ರ ಚಿಂತಯೇತ್ ॥ ೩೦ ॥
ದೋಷಾತ್ತಾಪಂ ಭವೇತ್ತಸ್ಯ ನಾರ್ಯಾಃ ಪಾಪಂ ನ ವಿದ್ಯತೇ ।
ಯದಿ ಸ್ಯಾನ್ಮೈಥುನಾದಸ್ಯ ಮರಣಾದ್ಯಪಕಾರಣಂ ॥ ೩೧ ॥
ರೋಗಾದಿನಾಭಿಭೂತಸ್ಯ ನ ದೋಷಸ್ತಸ್ಯ ವರ್ಜನಾತ್ ।
ವೃಥೈವ ಯಾವಮನ್ಯೇತ ಪತಿಂ ಕಾಮುಕಮಂಗನಾ ॥ ೩೨ ॥
ವಿಟ್‌ಚರೀ ಸೂಕರೀ ವಾ ಸ್ಯಾದ್ದ್ವಿಧವಾಪಿ ತತಃಪರಂ ।
ಸದಾ ಕುರ್ಯಾತ್ಪ್ರಿಯಂ ಪತ್ಯುಃ ಸದಾ ಬ್ರೂಯಾತ್‌ಪ್ರಿಯಂವಚಃ॥ ೩೪ ॥
ಅಧರ್ಮಸ್ಥಮಪಿ ಹ್ಯೇನಂ ಸಾಂತ್ವಪೂರ್ವಂ ಪ್ರಬೋಧಯೇತ್ ।

ಏವಮೇವ-ಹೀಗೆಯೇ (ಪತ್ನೀ ವಿಷಯದಲ್ಲಿ ಪತಿಯು ವರ್ತಿಸಬೇಕಾದ ನಿಯಮಗಳು ಇರುವಂತೆ, ಪತಿವಿಷಯದಲ್ಲಿ ಆಕೆಯು ನಡೆದುಕೊಳ್ಳಬೇಕಾದ ನಿಯಮಗಳೂ ಇವೆ), ಹಿ-ಹೀಗೆಂಬುದು ಶಾಸ್ತ್ರಸಿದ್ಧವೂ ಆಗಿದೆ; ಭಾರ್ಯಾ

---

ಕೇಡನ್ನೂ ಬಗೆಯಬಾರದು; ದುರ್ಮಾರ್ಗದಲ್ಲಿರುವವರನ್ನು ಯೋಗ್ಯವಾಗಿ ಶಿಕ್ಷಿಸಿ, ಸನ್ಮಾರ್ಗವರ್ತಿಗಳನ್ನಾಗಿ ಮಾಡಬೇಕು; ಸ್ವವಶರಾದ ಸರ್ವರನ್ನು ಯೋಗ್ಯರೀತಿಯಿಂದ ಪಾಲನೆ ಮಾಡುವುದರಲ್ಲಿ ಬಹು ಜಾಗರೂಕನಾಗಿರತಕ್ಕದ್ದು (೨೭-೩೦). ಹೀಗೆಯೇ ಪತ್ನಿಯು ಪತಿಯ ವಿಷಯದಲ್ಲಿ ಜಾಗರೂಕಳಾಗಿ ವರ್ತಿಸಬೇಕು-ಕಾಮುಕನಾಗಿ ತನ್ನ ಸಂಗವನ್ನಪೇಕ್ಷಿಸುವ ಪತಿಯನ್ನು ಅನುವರ್ತಿಸಬೇಕು; ಸಂಭೋಗಕ್ಕೆ ನಿಷಿದ್ಧಗಳಾದ ದೇಶಕಾಲಗಳಲ್ಲಿ ಅದನ್ನು ಅಪೇಕ್ಷಿಸುವುದನ್ನು ತಾನು ಯೋಚಿಸತಕ್ಕದ್ದಲ್ಲ; ಆ ಸಂಬಂಧವಾದ ಪಾಪವು ಪತಿಗಲ್ಲದೇ, ಪತ್ನಿಗೆ ಇಲ್ಲವೇ ಇಲ್ಲ; ಆದರೆ ಪತಿಯು

ಅಪಿ-ಪತ್ನಿಯೂ ಸಹ, ಕಾಮುಕಂ-ಕಾಮುಕನಾದ (ತನ್ನ ಸಂಗವನ್ನು ಅಪೇಕ್ಷಿಸುವ), ಪತಿಂ-ಪತಿಯನ್ನು ಅನ್ವಿಯಾತ್-ಅನುಸರಿಸಬೇಕು; ತತ್ರ-ಆ ವಿಷಯದಲ್ಲಿ (ತನ್ನನ್ನು ಭೋಗಿಸಲು ಅವಕಾಶಕೊಡುವ ವಿಷಯದಲ್ಲಿ), ದೇಶಜಂ-ದೇಶ ನಿಮಿತ್ತಕವಾದ, ಅಪಿ ವಾ-ಅಥವಾ ಮತ್ತು ಕಾಲಜಂ-ಕಾಲನಿಮಿತ್ತಕವಾದ, (ಪತಿಯು ಇಚ್ಛಿಸುವ ದೇಶಕಾಲಗಳ), ದೋಷಂ-ದೋಷವನ್ನು ನ ಚಿಂತಯೇತ್-(ತಾನು) ಯೋಚಿಸ ಬಾರದು (ದೋಷಯುಕ್ತವಾದ ದೇಶಕಾಲಗಳೆಂದು ತಿರಸ್ಕರಿಸಕೂಡದು); ದೋಷಾತ್-(ಆ) ದೋಷದಿಂದ, ತಸ್ಯ-ಆತನಿಗೆ (ಪತಿಗೆ), ಪಾಪಂ-ಪಾಪವು, ಭವೇತ್-ಉಂಟಾಗುತ್ತದೆ; ನಾರ್ಯಾಃ-ಸ್ತ್ರೀಗೆ, ಪಾಪಂ-ಪಾಪವು, ನ ವಿದ್ಯತೇ-ಇರುವು ದಿಲ್ಲ; (ಆದರೆ) ಮೈಥುನಾತ್-ಸಂಭೋಗದಿಂದ (ತನ್ನೊಂದಿಗೆ ರಮಿಸುವುದರಿಂದ), ಅಸ್ಯ-ಪತಿಗೆ, ಮರಣಾದ್ಯಪಕಾರಣಂ-ಮರಣಾದಿ ಅಪಕಾರವು (ಅನರ್ಥವು), ಯದಿ ಸ್ಯಾತ್-ಆಗುವಂತಿರುವ ಪಕ್ಷದಲ್ಲಿ, ರೋಗಾದಿನಾ-ರೋಗಾದಿಗಳಿಂದ (ಶಾಪಾದಿ ಗಳಿಂದ ಸ್ತ್ರೀ ಸಂಗದಿಂದ ಮೃತ್ಯುವೇ ಸಂಭವಿಸುವುದೆಂಬ ಮುಂತಾದ ಇತರ ಕಾರಣಗಳನ್ನು 'ಆದಿ' ಪದದಿಂದ ತಿಳಿಯಬೇಕು), ಅಭಿಭೂತಸ್ಯ-ಆಚ್ಛಾದಿತನಾದ (ಮೈಥುನಕ್ಕೆ ಅನರ್ಹನಾದ), ತಸ್ಯ-ಆತನ, ವರ್ಜನಾತ್-ತ್ಯಾಗದಿಂದ (ಭೋಗಕ್ಕೆ ಅವಕಾಶ ಕೊಡದಿರುವುದರಿಂದ) ನ ದೋಷಃ-(ಸ್ತ್ರೀಗೆ) ದೋಷವಿಲ್ಲ; (ಹಾಗಲ್ಲದೇ) ವೃಥಾ ಏವ-ಯಾವ ಕಾರಣವೂ ಇಲ್ಲದೇ, ಕಾಮುಕಂ-ಭೋಗೇಚ್ಛೆಯುಳ್ಳ, ಪತಿಂ-ಪತಿಯನ್ನು ಯಾ-ಯಾವ, ಅಂಗನಾ-ಸ್ತ್ರೀಯು, ಅವಮನ್ಯೇತ-(ತಿರಸ್ಕರಿಸಿ) ಅಪಮಾನಗೊಳಿಸುವಳೋ (ಆಕೆಯು), ವಿಟ್‌ಚರೀ-ಮಲದಲ್ಲಿ ಸಂಚರಿಸುವ ಕ್ರಿಮಿ ಯಾಗಿ, ವಾ-ಅಥವಾ, ಸೂಕರೀ-ಹಂದಿಯಾಗಿ, ಸ್ಯಾತ್-ಜನಿಸುತ್ತಾಳೆ; ತತಃಪರಂ-ಆ ಮುಂದೆ, ವಿಧವಾ ಅಪಿ-ವಿಧವೆಯೂ, ಸ್ಯಾತ್-ಆಗುವಳು; (ಆದ್ದರಿಂದ) ಸದಾ-ಸರ್ವದಾ, ಪತ್ಯುಃ-ಪತಿಗೆ, ಪ್ರಿಯಂ-ಪ್ರಿಯವಾದುದನ್ನೇ, ಕುರ್ಯಾತ್-(ಸ್ತ್ರೀಯು) ಮಾಡಬೇಕು; ಸದಾ-ಯಾವಾಗಲೂ, ಪ್ರಿಯಂ-ಪ್ರಿಯವಾದ, ವಚಃ-

---

ರೋಗಾದಿಗಳಿಂದ, ತನ್ನೊಂದಿಗೆ ಕೂಡಿ ರಮಿಸಿದರೆ ಆತನ ಮರಣವೇ ಮೊದಲಾದ ಅನರ್ಥಗಳು ಸಂಭವಿಸುವ ಹಾಗಿದ್ದಲ್ಲಿ, ಆತನನ್ನು ತ್ಯಜಿಸುವುದರಿಂದ, ಭಾರ್ಯಳಿಗೆ ದೋಷವಿಲ್ಲ; ಹಾಗಲ್ಲದೇ ಸಕಾರಣವಿಲ್ಲದ ತಿರಸ್ಕಾರದಿಂದ, ಮಲದಲ್ಲಿ ಕ್ರಿಮಿಯಾಗಿ ಅಥವಾ ಊರ ಹಂದಿಯಾಗಿ ಹುಟ್ಟುತ್ತಾಳೆ—ಮುಂದೆ ಮನುಷ್ಯಜನ್ಮದಲ್ಲಿ ವಿಧವೆಯಾಗುತ್ತಾಳೆ; ಆದ್ದರಿಂದ, ಸ್ತ್ರೀಯು, ಸದಾ ತನ್ನ ಪತಿಗೆ ಪ್ರಿಯವಾದುದನ್ನೇ ಆಚರಿಸಬೇಕು; ಪ್ರಿಯವಾದ ಮಾತುಗಳನ್ನೇ ನುಡಿಯಬೇಕು—ಪತಿಯು ಅಧರ್ಮ ಮಾರ್ಗದಲ್ಲಿದ್ದರೆ, ಆತನು ಸಮಾಧಾನದಿಂದ ತಿಳಿಹೇಳಿ ಎಚ್ಚರಗೊಳಿಸಿ, ಸನ್ಮಾರ್ಗಿ ಯನ್ನಾಗಿಸಲು ಸರ್ವಪ್ರಯತ್ನವನ್ನೂ ಮಾಡಬೇಕು (೩೧-೩೪). ಸ್ತ್ರೀಯು, ಪತಿಯಿಂದ

ಮಾತುಗಳನ್ನೇ, ಬ್ರೂಯಾತ್-ನುಡಿಯಬೇಕು; ಅಧರ್ಮಸ್ಥಂ ಅಪಿ-ಅಧರ್ಮದಲ್ಲಿದ್ದರೂ, ಏನಂ-ತನ್ನ ಪತಿಯನ್ನು ಸಾಂತ್ವಪೂರ್ವಂ-ಸಮಾಧಾನದಿಂದ (ಉದ್ವೇಗವಿಲ್ಲದಂತೆ), ಪ್ರಬೋಧಯೇತ್-ಎಚ್ಚರಗೊಳಿಸಬೇಕು (ಅಧರ್ಮಮಾರ್ಗವನ್ನು ತ್ಯಜಿಸುವಂತೆ ಬುದ್ಧಿ ಹೇಳಬೇಕು).

**ಮಾನಯೇತ್ ಪತಿಮಾನ್ಯಾನಾಂ ತತ್ಪೋಷ್ಯಾಣಾಂ ಚ ಪೋಷಣಂ ॥**
**ಸದೋದ್ಯತಾ ಭವೇನ್ನಾರೀ ನ ಪ್ರಮಾದ್ಯೇತ ಕರ್ಹಿಚಿತ್ ।**
**ಗೃಹಿಣ್ಯೇವ ಗೃಹಂ ಪುಂಸಾಂ ತದಭಾವೇ ಗೃಹಂ ವನಂ ॥ ೩೬ ॥**
**ಅತೋ ವಿಶ್ರಾಂತಿಹೇತುಃ ಸಾ ತಸ್ಯಾ ಅಪಿ ಪತಿಸ್ತಥಾ ।**
**ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ॥ ೩೭ ॥**
**ಅಮಿತೇಷ್ಟಪ್ರದಾತಾರಂ ಪತಿಂ ನೈವಾವಮಾನಯೇತ್ ।**
**ಆನುಕೂಲ್ಯಂ ಭಜೇದ್ಧರ್ಮೇಣಾಧರ್ಮೇ ಸಾದರಾಭವೇತ್ ॥ ೩೮ ॥**

ಪತಿಮಾನ್ಯಾನಾಂ-(ಸತಿಯು) ಪತಿಯಿಂದ ಮಾನ್ಯರಾದವರನ್ನು ಮಾನಯೇತ್-ಮಾನಿಸಬೇಕು (ಅವರ ಮಾನವನ್ನು ಮಾಡಬೇಕು); ಚ-ಮತ್ತು ತತ್ಪೋಷ್ಯಾಣಾಂ-ಆತನಿಂದ ಪೋಷ್ಯರಾದವರ (ರಕ್ಷಿಸಲ್ಪಡಬೇಕಾದವರ), ಪೋಷಣಂ-ಪೋಷಣೆಯನ್ನು (ಮಾಡಬೇಕು); ನಾರೀ-ಸ್ತ್ರೀಯು, ಸದಾ-ನಿತ್ಯವೂ, ಉದ್ಯತಾಭವೇತ್-ಜಾಗ್ರತಳಾಗಿರಬೇಕು (ತನ್ನ ಈ ಕರ್ತವ್ಯದಲ್ಲಿ ಯತ್ನಶೀಲಳಾಗಿರಬೇಕು); ಕರ್ಹಿಚಿತ್-ಎಂದೂ (ಯಾವ ಕಾಲದಲ್ಲಿಯೂ), ನ ಪ್ರಮಾದ್ಯೇತ-ಮರೆಯಬಾರದು (ತಪ್ಪು ಮಾಡಬಾರದು); ಪುಂಸಾಂ-ಪುರುಷರಿಗೆ, ಗೃಹಿಣೀ ಏವ-ಭಾರ್ಯಳೇ, ಗೃಹಂ-ಗೃಹವು (ಆಶ್ರಯಸ್ಥಾನವು); ತದಭಾವೇ-ಆಕೆಯಿಲ್ಲದ, ಗೃಹಂ-ಮನೆಯು, ವನಂ-ವನವೇ ಸರಿ; ಅತಃ-ಆದ್ದರಿಂದ, ಸಾ-ಆಕೆಯು, ವಿಶ್ರಾಂತಿಹೇತುಃ-(ಪತಿಯ) ವಿಶ್ರಾಂತಿಗೆ ಕಾರಣಳು; (ಶ್ರಮಪರಿಹಾರಕ್ಕೆ ಮುಖ್ಯಸಾಧನಳು); ತಥಾ-ಹಾಗೆಯೇ, ಪತಿಃ-ಪತಿಯು, ತಸ್ಯಾಃ ಅಪಿ-ಆಕೆಗೂ ವಿಶ್ರಾಂತಿ ಕಾರಣನು;

---

ಮಾನ್ಯರಾದವರನ್ನು ಮಾನಿಸ (ಗೌರವಿಸ)ಬೇಕು; ಪತಿಯಿಂದ ಪೋಷ್ಯರಾದವರನ್ನು ಪೋಷಿಸಬೇಕು; ಈ ವಿಷಯದಲ್ಲಿ ಸದಾ ಯತ್ನಶೀಲಳಾಗಿರಬೇಕು-ಪ್ರಮಾದವಾಗದಂತೆ ಎಚ್ಚರವಾಗಿರಬೇಕು; ಪುರುಷರಿಗೆ ಗೃಹಿಣಿಯೇ (ಭಾರ್ಯಳೇ) ಗೃಹವು—ಭಾರ್ಯಳಿಲ್ಲದ ಗೃಹವು, ವನವೇ ಸರಿ; ಆದ್ದರಿಂದ, ಭಾರ್ಯಳೇ ಪುರುಷನಿಗೆ ವಿಶ್ರಾಂತಿ ಕಾರಣಳು; ಅದರಂತೆ, ಆಕೆಗೆ ಪತಿಯೇ ವಿಶ್ರಾಂತಿ ಕಾರಣನು; ಸ್ತ್ರೀಗೆ, ತಂದೆಯು ಮಿತವಾದುದನ್ನೇ ಕೊಡುತ್ತಾನೆ—ಸಹೋದರ ಸುತಾದಿಗಳೂ ಮಿತವನ್ನೇ ಮಾಡುತ್ತಾರೆ (ಮಿತಿಯುಳ್ಳ—ಅಲ್ಪ ಉಪಕಾರವನ್ನೇ ಮಾಡುತ್ತಾರೆ; ಆಕೆಯ ಸಕಲೇಷ್ಟಗಳನ್ನು

ಅಪಿ-ಪತ್ನಿಯೂ ಸಹ, ಕಾಮುಕಂ-ಕಾಮುಕನಾದ (ತನ್ನ ಸಂಗವನ್ನು ಅಪೇಕ್ಷಿಸುವ), ಪತಿಂ-ಪತಿಯನ್ನು ಅನ್ವಿಯಾತ್-ಅನುಸರಿಸಬೇಕು; ತತ್ರ-ಆ ವಿಷಯದಲ್ಲಿ (ತನ್ನನ್ನು ಭೋಗಿಸಲು ಅವಕಾಶಕೊಡುವ ವಿಷಯದಲ್ಲಿ), ದೇಶಜಂ-ದೇಶ ನಿಮಿತ್ತಕವಾದ, ಅಪಿ ವಾ-ಅಥವಾ ಮತ್ತು ಕಾಲಜಂ-ಕಾಲನಿಮಿತ್ತಕವಾದ, (ಪತಿಯು ಇಚ್ಛಿಸುವ ದೇಶಕಾಲಗಳ), ದೋಷಂ-ದೋಷವನ್ನು ನ ಚಿಂತಯೇತ್-(ತಾನು) ಯೋಚಿಸ ಬಾರದು (ದೋಷಯುಕ್ತವಾದ ದೇಶಕಾಲಗಳೆಂದು ತಿರಸ್ಕರಿಸಕೂಡದು); ದೋಷಾತ್-(ಆ) ದೋಷದಿಂದ, ತಸ್ಯ-ಆತನಿಗೆ (ಪತಿಗೆ), ಪಾಪಂ-ಪಾಪವು, ಭವೇತ್-ಉಂಟಾಗುತ್ತದೆ; ನಾರ್ಯಾಃ-ಸ್ತ್ರೀಗೆ, ಪಾಪಂ-ಪಾಪವು, ನ ವಿದ್ಯತೇ-ಇರುವು ದಿಲ್ಲ (ಆದರೆ) ಮೈಥುನಾತ್-ಸಂಭೋಗದಿಂದ (ತನ್ನೊಂದಿಗೆ ರಮಿಸುವುದರಿಂದ), ಅಸ್ಯ-ಪತಿಗೆ, ಮರಣಾದ್ಯಪಕಾರಣಂ-ಮರಣಾದಿ ಅಪಕಾರವು (ಅನರ್ಥವು), ಯದಿ ಸ್ಯಾತ್-ಆಗುವಂತಿರುವ ಪಕ್ಷದಲ್ಲಿ ರೋಗಾದಿನಾ-ರೋಗಾದಿಗಳಿಂದ (ಶಾಪಾದಿ ಗಳಿಂದ ಸ್ತ್ರೀ ಸಂಗದಿಂದ ಮೃತ್ಯುವೇ ಸಂಭವಿಸುವುದೆಂಬ ಮುಂತಾದ ಇತರ ಕಾರಣಗಳನ್ನು 'ಆದಿ' ಪದದಿಂದ ತಿಳಿಯಬೇಕು), ಅಭಿಭೂತಸ್ಯ-ಆಚ್ಛಾದಿತನಾದ (ಮೈಥುನಕ್ಕೆ ಅನರ್ಹನಾದ), ತಸ್ಯ-ಆತನ, ವರ್ಜನಾತ್-ತ್ಯಾಗದಿಂದ (ಭೋಗಕ್ಕೆ ಅವಕಾಶ ಕೊಡದಿರುವುದರಿಂದ) ನ ದೋಷಃ-(ಸ್ತ್ರೀಗೆ) ದೋಷವಿಲ್ಲ (ಹಾಗಲ್ಲದೇ) ವೃಥಾ ಏವ-ಯಾವ ಕಾರಣವೂ ಇಲ್ಲದೇ, ಕಾಮುಕಂ-ಭೋಗೇಚ್ಛೆಯುಳ್ಳ, ಪತಿಂ-ಪತಿಯನ್ನು ಯಾ-ಯಾವ, ಅಂಗನಾ-ಸ್ತ್ರೀಯು, ಅವಮನ್ಯೇತ-(ತಿರಸ್ಕರಿಸಿ) ಅಪಮಾನಗೊಳಿಸುವಳೋ (ಆಕೆಯು), ವಿಟ್‌ಚರೀ-ಮಲದಲ್ಲಿ ಸಂಚರಿಸುವ ಕ್ರಿಮಿ ಯಾಗಿ, ವಾ-ಅಥವಾ, ಸೂಕರೀ-ಹಂದಿಯಾಗಿ, ಸ್ಯಾತ್-ಜನಿಸುತ್ತಾಳೆ; ತತಃಪರಂ-ಆ ಮುಂದೆ, ವಿಧವಾ ಅಪಿ-ವಿಧವೆಯೂ, ಸ್ಯಾತ್-ಆಗುವಳು; (ಆದ್ದರಿಂದ) ಸದಾ-ಸರ್ವದಾ, ಪತ್ಯುಃ-ಪತಿಗೆ, ಪ್ರಿಯಂ-ಪ್ರಿಯವಾದುದನ್ನೇ, ಕುರ್ಯಾತ್-(ಸ್ತ್ರೀಯು) ಮಾಡಬೇಕು; ಸದಾ-ಯಾವಾಗಲೂ, ಪ್ರಿಯಂ-ಪ್ರಿಯವಾದ, ವಚಃ-

---

ರೋಗಾದಿಗಳಿಂದ, ತನ್ನೊಂದಿಗೆ ಕೂಡಿ ರಮಿಸಿದರೆ ಆತನ ಮರಣವೇ ಮೊದಲಾದ ಅನರ್ಥಗಳು ಸಂಭವಿಸುವ ಹಾಗಿದ್ದಲ್ಲಿ ಆತನನ್ನು ತ್ಯಜಿಸುವುದರಿಂದ, ಭಾರ್ಯಳಿಗೆ ದೋಷವಿಲ್ಲ; ಹಾಗಲ್ಲದೇ ಸಕಾರಣವಿಲ್ಲದ ತಿರಸ್ಕಾರದಿಂದ, ಮಲದಲ್ಲಿ ಕ್ರಿಮಿಯಾಗಿ ಅಥವಾ ಊರ ಹಂದಿಯಾಗಿ ಹುಟ್ಟುತ್ತಾಳೆ—ಮುಂದೆ ಮನುಷ್ಯಜನ್ಮದಲ್ಲಿ ವಿಧವೆಯಾಗುತ್ತಾಳೆ; ಆದ್ದರಿಂದ, ಸ್ತ್ರೀಯು, ಸದಾ ತನ್ನ ಪತಿಗೆ ಪ್ರಿಯವಾದುದನ್ನೇ ಆಚರಿಸಬೇಕು; ಪ್ರಿಯವಾದ ಮಾತುಗಳನ್ನೇ ನುಡಿಯಬೇಕು—ಪತಿಯು ಅಧರ್ಮ ಮಾರ್ಗದಲ್ಲಿದ್ದರೆ, ಆತನು ಸಮಾಧಾನದಿಂದ ತಿಳಿಹೇಳಿ ಎಚ್ಚರಗೊಳಿಸಿ, ಸನ್ಮಾರ್ಗಿ ಯನ್ನಾಗಿಸಲು ಸರ್ವಪ್ರಯತ್ನವನ್ನೂ ಮಾಡಬೇಕು (೩೧-೩೪). ಸ್ತ್ರೀಯು, ಪತಿಯಿಂದ

ಮಾತುಗಳನ್ನೇ, ಬ್ರೂಯಾತ್-ನುಡಿಯಬೇಕು; ಅಧರ್ಮಸ್ಥಂ ಅಪಿ-ಅಧರ್ಮದಲ್ಲಿದ್ದರೂ, ಏನಂ-ತನ್ನ ಪತಿಯನ್ನು ಸಾಂತ್ವಪೂರ್ವಂ-ಸಮಾಧಾನದಿಂದ (ಉದ್ವೇಗವಿಲ್ಲದಂತೆ), ಪ್ರಬೋಧಯೇತ್-ಎಚ್ಚರಗೊಳಿಸಬೇಕು (ಅಧರ್ಮಮಾರ್ಗವನ್ನು ತ್ಯಜಿಸುವಂತೆ ಬುದ್ಧಿ ಹೇಳಬೇಕು).

**ಮಾನಯೇತ್ ಪತಿಮಾನ್ಯಾನಾಂ ತತ್ಪೋಷ್ಯಾಣಾಂ ಚ ಪೋಷಣಂ ॥**
**ಸದೋದ್ಯತಾ ಭವೇನ್ನಾರೀ ನ ಪ್ರಮಾದ್ಯೇತ ಕರ್ಹಿಚಿತ್ ।**
**ಗೃಹಿಣ್ಯೈವ ಗೃಹಂ ಪುಂಸಾಂ ತದಭಾವೇ ಗೃಹಂ ವನಂ ॥ ೩೬ ॥**
**ಅತೋ ವಿಶ್ರಾಂತಿಹೇತುಃ ಸಾ ತಸ್ಯಾ ಅಪಿ ಪತಿಸ್ತಥಾ ।**
**ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ॥ ೩೭ ॥**
**ಅಮಿತೇಷ್ಟಪ್ರದಾತಾರಂ ಪತಿಂ ನೈವಾವಮಾನಯೇತ್ ।**
**ಅನುಕೂಲ್ಯಂ ಭಜೇದ್ಧರ್ಮೇಣಾಧರ್ಮೇ ಸಾದರಾಭವೇತ್ ॥ ೩೮ ॥**

ಪತಿಮಾನ್ಯಾನಾಂ-(ಸತಿಯು) ಪತಿಯಿಂದ ಮಾನ್ಯರಾದವರನ್ನು ಮಾನಯೇತ್-ಮಾನಿಸಬೇಕು (ಅವರ ಮಾನವನ್ನು ಮಾಡಬೇಕು); ಚ-ಮತ್ತು ತತ್ಪೋಷ್ಯಾಣಾಂ-ಆತನಿಂದ ಪೋಷ್ಯರಾದವರ (ರಕ್ಷಿಸಲ್ಪಡಬೇಕಾದವರ), ಪೋಷಣಂ-ಪೋಷಣೆಯನ್ನು (ಮಾಡಬೇಕು); ನಾರೀ-ಸ್ತ್ರೀಯು, ಸದಾ-ನಿತ್ಯವೂ, ಉದ್ಯತಾಭವೇತ್-ಜಾಗ್ರತಳಾಗಿರಬೇಕು (ತನ್ನ ಈ ಕರ್ತವ್ಯದಲ್ಲಿ ಯತ್ನಶೀಲಳಾಗಿರಬೇಕು); ಕರ್ಹಿಚಿತ್-ಎಂದೂ (ಯಾವ ಕಾಲದಲ್ಲಿಯೂ), ನ ಪ್ರಮಾದ್ಯೇತ-ಮರೆಯಬಾರದು (ತಪ್ಪು ಮಾಡಬಾರದು); ಪುಂಸಾಂ-ಪುರುಷರಿಗೆ, ಗೃಹಿಣೀ ಏವ-ಭಾರ್ಯಳೇ, ಗೃಹಂ-ಗೃಹವು (ಆಶ್ರಯಸ್ಥಾನವು); ತದಭಾವೇ-ಆಕೆಯಿಲ್ಲದ, ಗೃಹಂ-ಮನೆಯು, ವನಂ-ವನವೇ ಸರಿ; ಅತಃ-ಆದ್ದರಿಂದ, ಸಾ-ಆಕೆಯು, ವಿಶ್ರಾಂತಿಹೇತುಃ-(ಪತಿಯ) ವಿಶ್ರಾಂತಿಗೆ ಕಾರಣಳು; (ಶ್ರಮಪರಿಹಾರಕ್ಕೆ ಮುಖ್ಯಸಾಧನಳು); ತಥಾ-ಹಾಗೆಯೇ, ಪತಿಃ-ಪತಿಯು, ತಸ್ಯಾಃ ಅಪಿ-ಆಕೆಗೂ ವಿಶ್ರಾಂತಿ ಕಾರಣನು;

---

ಮಾನ್ಯರಾದವರನ್ನು ಮಾನಿಸ (ಗೌರವಿಸ)ಬೇಕು; ಪತಿಯಿಂದ ಪೋಷ್ಯರಾದವರನ್ನು ಪೋಷಿಸಬೇಕು; ಈ ವಿಷಯದಲ್ಲಿ ಸದಾ ಯತ್ನಶೀಲಳಾಗಿರಬೇಕು-ಪ್ರಮಾದವಾಗದಂತೆ ಎಚ್ಚರವಾಗಿರಬೇಕು; ಪುರುಷರಿಗೆ ಗೃಹಿಣಿಯೇ (ಭಾರ್ಯಳೇ) ಗೃಹವು—ಭಾರ್ಯಳಿಲ್ಲದ ಗೃಹವು, ವನವೇ ಸರಿ; ಆದ್ದರಿಂದ, ಭಾರ್ಯಳೇ ಪುರುಷನಿಗೆ ವಿಶ್ರಾಂತಿ ಕಾರಣಳು; ಅದರಂತೆ, ಆಕೆಗೆ ಪತಿಯೇ ವಿಶ್ರಾಂತಿ ಕಾರಣನು; ಸ್ತ್ರೀಗೆ, ತಂದೆಯು ಮಿತವಾದುದನ್ನೇ ಕೊಡುತ್ತಾನೆ—ಸಹೋದರರ ಸುತಾದಿಗಳೂ ಮಿತವನ್ನೇ ಮಾಡುತ್ತಾರೆ (ಮಿತಿಯುಳ್ಳ—ಅಲ್ಪ ಉಪಕಾರವನ್ನೇ ಮಾಡುತ್ತಾರೆ; ಆಕೆಯ ಸಕಲೇಷ್ಟಗಳನ್ನು

ಪಿತಾ-ತಂದೆಯು, ಮಿತಂ-ಅಲ್ಪವನ್ನೇ (ತನ್ನ ಪರಿಮಿತಿಯುಳ್ಳ ಕೆಲವೇ ಇಷ್ಟಗಳನ್ನು), ದದಾದಿ-ಕೊಡುತ್ತಾನೆ (ಪೂರೈಸುತ್ತಾನೆ); ಭ್ರಾತಾ-ಸಹೋದರನೂ, ಮಿತಂ-ಕೆಲವೇ ಇಷ್ಟಗಳನ್ನು (ಕೊಡುತ್ತಾನೆ); ಸುತಃ-ಮಗನೂ, ಮಿತಂ-ಮಿತವನ್ನೇ ಮಾಡುತ್ತಾನೆ; ಅಮಿತೇಷ್ಟಪ್ರದಾತಾರಂ-ಸಕಲೇಷ್ಟಗಳನ್ನು ಪೂರ್ಣಗೊಳಿಸುವ, ಪತಿಂ-ಪತಿಯನ್ನು ನೈವ ಅವಮಾನಯೇತ್-ಎಂದೂ ಅವಮಾನಿಸಕೂಡದು (ಕಡಿಮೆಯಾಗಿ ತಿಳಿಯ ಬಾರದು—ತನ್ನ ಸರ್ವಸ್ವವೆಂದೇ ತಿಳಿಯಬೇಕು); ಧರ್ಮೇ-(ಆತನ) ಧರ್ಮ ಕಾರ್ಯಗಳಲ್ಲಿ ಅನುಕೂಲ್ಯಂ-ಅನುಕೂಲಿಸುವಂತೆ, ಭಜೇತ್-ಸೇವಿಸತಕ್ಕದ್ದು; ಅಧರ್ಮೇ-ಅಧರ್ಮಗಳಲ್ಲಿ ಸಾದರಾ-ಆದರ(ಆಸಕ್ತಿ)ವುಳ್ಳವಳು, ನ ಭವೇತ್-ಆಗಬಾರದು.

**ಪೋಷಣಂ ಪುತ್ರಮುಖ್ಯಾನಾಂ ವಿಷ್ಣೋಃ ಪೂಜೇತಿ ಚಿಂತಯೇತ್ ।**
**ವಿಷ್ಣುಭಾವನಯಾ ಭರ್ತಾ ಸೇವ್ಯಃ ಸ್ತ್ರೀಭಿಃ ಸದೈವ ಹಿ ॥ ೩೯ ॥**
**ತೇನೈವ ಸಾ ಲಭೇತ್ ಪುಣ್ಯಂ ನಿತ್ಯಾನಿತ್ಯಸುಖಪ್ರದಂ ॥ ೪೦ ॥**

ಪುತ್ರ ಮುಖ್ಯಾನಾಂ-ಪುತ್ರರೇ ಮೊದಲಾದವರ, ಪೋಷಣಂ-ಪೋಷಣೆಯನ್ನು ವಿಷ್ಣೋಃ-ಶ್ರೀವಿಷ್ಣುವಿನ, ಪೂಜಾ ಇತಿ-ಪೂಜೆಯೆಂದು, ಚಿಂತಯೇತ್-ಚಿಂತಿಸಬೇಕು; ಭರ್ತಾ-ಪತಿಯು, ಸ್ತ್ರೀಭಿಃ-ಸ್ತ್ರೀಯರಿಂದ, ವಿಷ್ಣು ಭಾವನಯಾ-ವಿಷ್ಣುಭಾವನೆಯಿಂದ (ಆತನಲ್ಲಿರುವ ಶ್ರೀವಿಷ್ಣುವಿನ ಪೂಜೆಯೆಂದೇ ತಿಳಿದು), ಸದಾ ಏವ-ಎಲ್ಲ ಕಾಲದಲ್ಲಿ ಸೇವ್ಯಃ-ಸೇವಿಸಲ್ಪಡುವವನಾಗಬೇಕು; ತೇನ ಏವ-ಅದರಿಂದಲೇ, (ಆ ಸೇವೆಯಿಂದಲೇ), ಸಾ-ಆಕೆಯು, ನಿತ್ಯಾನಿತ್ಯ ಸುಖಪ್ರದಂ-ನಿತ್ಯ ಮತ್ತು ಅನಿತ್ಯಗಳೆಂಬ (ಮುಕ್ತಿ ಮತ್ತು ಭೂಸ್ವರ್ಗಸುಖಗಳೆಂಬ) ಉಭಯ ವಿಧಸುಖಪ್ರದವಾದ (ಸುಖಕ್ಕೆ ಕಾರಣವಾಗುವ), ಪುಣ್ಯಂ-ಪುಣ್ಯವನ್ನು ಲಭೇತ್-ಹೊಂದುತ್ತಾಳೆ.

**ಇಹ ಲೋಕೇಽಪಿ ಸುಖಿನೀ ಕೀರ್ತಿಮತ್ಯಪಿ ಜಾಯತೇ ।**
**ಪತಿಸ್ತದನುಕೂಲಃ ಸ್ಯಾದ್ಗಾರ್ಹಸ್ಥ್ಯಂ ಮೋಕ್ಷದಂ ಹಿ ತತ್ ॥ ೪೧ ॥**

---

ಪೂರೈಸುವ ಪತಿಯನ್ನು ಎಂದೂ ತುಚ್ಛೀಕರಿಸಕೂಡದು, ಆತನ ಧರ್ಮಕಾರ್ಯಗಳಲ್ಲಿ ಅನುಕೂಲಳಾಗಿ ಸಹಕರಿಸಬೇಕು—ಅಧರ್ಮಗಳಲ್ಲಿ ಆದರವನ್ನು ಹೊಂದಲಾರದು (೩೫-೩೮). ಪುತ್ರರೇ ಮೊದಲಾದವರ ಪೋಷಣೆಯನ್ನು ಸ್ತ್ರೀಯು, ಶ್ರೀವಿಷ್ಣು ಪೂಜೆಯೆಂದೇ ಚಿಂತಿಸಬೇಕು; ಸರ್ವದಾ ಪತಿಯನ್ನು ವಿಷ್ಣುಭಾವನೆಯಿಂದ (ಪತ್ಯಂತರ್ಗನಾದ ಶ್ರೀವಿಷ್ಣುವೇ ತನ್ನ ಪತಿರೂಪದಿಂದಿರುವನೆಂಬ ಅನುಸಂಧಾನ ವುಳ್ಳವಳಾಗಿ), ಸೇವಿಸಬೇಕು; ಆ ಸೇವೆಯಿಂದಲೇ ನಿತ್ಯಾನಿತ್ಯಗಳೆಂಬ ಉಭಯ ವಿಧ ಸುಖಸಾಧನವಾದ ಪುಣ್ಯವನ್ನು ಹೊಂದುತ್ತಾಳೆ. (ಇಹಪರಲೋಕಗಳ ಸುಖವು ಅನಿತ್ಯಸುಖವು; ಮೋಕ್ಷವೇ ನಿತ್ಯಸುಖವು) (೩೯-೪೦). ಹೀಗೆ ಪತಿಸೇವಾಸಕ್ತಳಾದ

ಇಹ-ಈ, ಲೋಕೇ ಅಪಿ-ಲೋಕದಲ್ಲಿಯೂ, ಸುಖಿನೀ-ಸುಖವುಳ್ಳವಳೂ, ಕೀರ್ತಿಮತೀ ಅಪಿ-ಕೀರ್ತಿಯುಳ್ಳವಳೂ, ಜಾಯತೇ-ಆಗುತ್ತಾಳೆ; ಪತಿಃ-ಪತಿಯು, ತದನು ಕೂಲಃ-ಆಕೆಗೆ ಅನುಕೂಲನು (ಅನುಸರಿಸುವವನು), ಸ್ಯಾತ್-ಆಗುತ್ತಾನೆ; ತತ್-ಆ, ಗಾರ್ಹಸ್ಥ್ಯಂ-ಗೃಹಸ್ಥಧರ್ಮಾಶ್ರಯವೇ, (ಹೀಗೆ ಪರಸ್ಪರಪೂರಕ ಸಹಕಾರಿಗಳಾಗಿ ನಡೆದುಕೊಳ್ಳುವ ಪತಿಪತ್ನಿಯರು ಆಚರಿಸುವ ಗೃಹಸ್ಥಾಶ್ರಮ ಧರ್ಮಗಳೇ), ಮೋಕ್ಷದಂ-ಮೋಕ್ಷವನ್ನು ಕೊಡಲು ಸಮರ್ಥವಾದುದು; ಇ-ಹೀಗೆಂಬುದು ಶಾಸ್ತ್ರನಿರ್ಣಯವು.

**ಸಂಗತೌ ಋತುಕಾಲೇ ತು ದಂಪತೀ ಸಂತತೀಚ್ಛಯಾ ।**
**ವಿಷ್ಣುಪ್ರೀತಿರಿತಿ ಸ್ವಾಂತೇ ಮನ್ವಾನೌ ಮೋಕ್ಷಭಾಗಿನೌ ॥ ೪೨ ॥**
**ವಿಷ್ಣುಭುಕ್ತಾನ್ನಶೇಷೇಣ ಸ್ವಾದುನಾಸ್ವಾದುನಾಪಿ ವಾ ।**
**ಯಥಾಕಾಲಂ ಯಥಾದೇಶಂ ದಂಪತೀ ಮೋಕ್ಷಭಾಗಿನೌ ॥ ೪೩ ॥**

ಋತುಕಾಲೇ-(ಗರ್ಭಾಧಾನಯೋಗ್ಯವಾದ) ಸ್ತ್ರೀಯು ಋತುಸ್ನಾತಳಾದ ನಂತರದ ಕಾಲವು, ಸಂಗತೌ-ಪ್ರಾಪ್ತವಾಗುತ್ತಿರಲು, ದಂಪತೀ-ದಂಪತಿಗಳು (ಪತಿಪತ್ನಿಯರು), ಸಂತತೀಚ್ಛಯಾ-ಸಂತಾನಾಪೇಕ್ಷೆಯಿಂದ, ಸ್ವಾಂತೇ-ತಮ್ಮ ಮನಸ್ಸಿನಲ್ಲಿ, ವಿಷ್ಣುಪ್ರೀತಿಃ ಇತಿ-ಶ್ರೀವಿಷ್ಣುವು ಪ್ರೀತನಾಗಲಿ (ನಮ್ಮ ಈ ಮಿಥುನೀ ಭಾವದಿಂದ ಶ್ರೀವಿಷ್ಣು ಪ್ರೀತನಾಗುವನೆಂದು) ಎಂದು, ಮನ್ವಾನೌ-ತಿಳಿಯುವವರಾಗಿ, ಮೋಕ್ಷಭಾಗಿನೌ-ಮೋಕ್ಷಕ್ಕೆ ಪಾತ್ರರು (ಅರ್ಹರು), ಆಗುತ್ತಾರೆ; ದಂಪತೀ-ದಂಪತಿಗಳು, ಯಥಾಕಾಲಂ-ಕಾಲೋಚಿತವಾಗಿ, ಯಥಾದೇಶಂ-ದೇಶಾನುಗುಣವಾಗಿ, ಸ್ವಾದುನಾ-ರುಚಿಕರವಾದ, ವಾ-ಅಥವಾ, ಅಸ್ವಾದುನಾ-ರುಚಿ ಇಲ್ಲದ, ವಿಷ್ಣುಭುಕ್ತಾನ್ನಶೇಷೇಣ-ಶ್ರೀವಿಷ್ಣುವಿಗೆ ಅರ್ಪಿತವಾದ ಅನ್ನದಿಂದ (ಶ್ರೀವಿಷ್ಣುವು ಭುಂಜಿಸಿ ಅವಶಿಷ್ಟವಾದ ಆಹಾರದಿಂದ), ಮೋಕ್ಷಭಾಗಿನೌ-ಮೋಕ್ಷಭಾಗಿಗಳಾಗುತ್ತಾರೆ (ವಿಷ್ಣು ನಿವೇದಿತ ಆಹಾರಭೋಜನದಿಂದ ಮುಕ್ತಿಯನ್ನು ಹೊಂದಲು ಯೋಗ್ಯರಾಗುತ್ತಾರೆ).

---

ಸ್ತ್ರೀಯು, ಈ ಲೋಕದಲ್ಲಿ ಸುಖವುಳ್ಳವಳೂ, ಕೀರ್ತಿಯುಳ್ಳವಳೂ, ಆಗುತ್ತಾಳೆ; ಪತಿಯು ಆಕೆಗೆ ಅನುಕೂಲನಾಗಿಯೇ ಇರುತ್ತಾನೆ; ಈ ವಿಧವಾದ ಗೃಹಸ್ಥ ಧರ್ಮಪಾಲನೆಯು ಉಭಯರ ಮೋಕ್ಷಕ್ಕೂ ಸಾಧನವಾಗುತ್ತದೆ (ದಂಪತಿಗಳು ಮುಕ್ತಿಗೆ ಪಾತ್ರರಾಗುತ್ತಾರೆ) (೪೧). ಗರ್ಭಾಧಾನ ಯೋಗ್ಯವಾದ ಋತುಕಾಲದಲ್ಲಿ ಸಂತಾನಾಪೇಕ್ಷೆಯಿಂದ ಮೈಥುನದಲ್ಲಿ ತೊಡಗುವ ದಂಪತಿಗಳು (ಪತಿಪತ್ನಿಯರು), ಈ ತಮ್ಮ ರತಿಕ್ರೀಡೆಯು ಶ್ರೀವಿಷ್ಣುಪ್ರೀತಿಕರವಾಗಲೆಂಬ ಅನುಸಂಧಾನವುಳ್ಳವಾದರೆ, ಮೋಕ್ಷಭಾಗಿಗಳಾಗುತ್ತಾರೆ; ಮತ್ತು ದಂಪತಿಗಳು, ಕಾಲದೇಶಾನುಗುಣವಾದ, ರುಚಿಕರವಾದ ಅಥವಾ ರುಚಿಕರವಲ್ಲದ ಅನ್ನವನ್ನು (ಆಹಾರವನ್ನು), ಶ್ರೀವಿಷ್ಣುವಿಗೆ ಅರ್ಪಿಸಿ (ನಿವೇದಿಸಿ)

ನಾನಾವಿಧಾನಿ ಚಾನ್ನಾನಿ ಮಿಲಿತಾನಿ ಸ್ವಕರ್ಮಭಿಃ ।
ವಿಷ್ಣೋರ್ನೈವೇದ್ಯಶಿಷ್ಟಾನಿ ಯಜ್ಞಶಿಷ್ಟಾನಿ ವೈ ಪುನಃ ॥ ೪೪ ॥
ವಿಪ್ರಭುಕ್ತಾವಶಿಷ್ಟಾನಿ ಪೋಷ್ಯಭುಕ್ತಾನಿ ಭಾಗಶಃ ।
ತಾನ್ಯನ್ನಾನಿ ಗೃಹಸ್ಥಸ್ಯ ಪೀಯೂಷಸದೃಶಾನಿ ವೈ ॥ ೪೫ ॥

ಸ್ವಕರ್ಮಭಿಃ-ತಂತಮ್ಮ ಕರ್ಮಗಳಿಂದ, ಮಿಲಿತಾನಿ-ಕೂಡಿದ, ನಾನಾವಿಧಾನಿ-ಬಹುವಿಧವಾದ, ವಿಷ್ಣೋಃ-ಶ್ರೀವಿಷ್ಣುವಿಗೆ, ನೈವೇದ್ಯಶಿಷ್ಟಾನಿ-ನಿವೇದಿಸಲ್ಪಟ್ಟು ಉಳಿದಿರುವ, ಅನ್ನಾನಿ-ಅನ್ನಗಳು (ಆಹಾರಯೋಗ್ಯ ಪದಾರ್ಥಗಳು), ಪುನಃ-ಮತ್ತು ಯಜ್ಞಶಿಷ್ಟಾನಿ-ಯಜ್ಞಶೇಷಗಳೂ (ಅಗ್ನಿಯಲ್ಲಿ ಅರ್ಪಿಸಲಾದ ಹವಿಸ್ಸುಗಳ ಅವಶಿಷ್ಟ ಭಾಗವೂ), ವಿಪ್ರಭುಕ್ತಾವಶಿಷ್ಟಾನಿ-ಬ್ರಾಹ್ಮಣಭೋಜನವಾದನಂತರ ಅವಶಿಷ್ಟವಾದವೂ (ಉಳಿದ ಅನ್ನಗಳೂ), ಭಾಗಶಃ-ಕೆಲವು ಭಾಗದಿಂದ, ಪೋಷ್ಯಭುಕ್ತಾನಿ-ಪೋಷ್ಯವರ್ಗದವರೂ ಭುಂಜಿಸುವ, ತಾನಿ ಅನ್ನಾನಿ-ಆ ಅನ್ನಗಳೆಲ್ಲವೂ, ಗೃಹಸ್ಥಸ್ಯ-ಗೃಹಸ್ಥಜನರಿಗೆ ಪೀಯೂಷ ಸದೃಶಾನಿ-ಅಮೃತಸಮಗಳೆಂದು, ವೈ-ಶಾಸ್ತ್ರನಿರ್ಣಯವು.

ಸದ್ಯೋಗಾಲ್ಲಭತೇ ಸೌಖ್ಯಮನಿತ್ಯಂ ನಿತ್ಯಮೈಹಿಕಂ ।
ತಸ್ಮಾತ್ ತ್ರಿವರ್ಗತೋಽಮುಷ್ಮಾದ್ಭವೇತ್ ಸರ್ವೇಷ್ವಭಾಜನಃ ॥ ೪೬ ॥

---

ಅವಶಿಷ್ಟವಾದುದನ್ನು (ಉಳಿದದ್ದನ್ನೇ) ತಾವು ಉಂಡು ಜೀವಿಸಿ, ಮುಕ್ತಿಯನ್ನೇ ಹೊಂದುತ್ತಾರೆ. (ಜಿಹ್ವೋಪಸ್ಥಗಳಿಂದಾಗುವ ದಂಪತಿಗಳ ವ್ಯಾಪಾರಗಳೂ ಮೋಕ್ಷಸಾಧಕವಾಗಲು, ಅವಶ್ಯಕವಾಗಿ ಇರಬೇಕಾದ ಅನುಸಂಧಾನವು ನಿರೂಪಿತವಾಗಿದೆ; ಜಿಹ್ವೋಪಸ್ಥಗಳೆಂಬ ಇಂದ್ರಿಯಗಳು, ಸಕಲೇಂದ್ರಿಯಗಳ ಮಧ್ಯದಲ್ಲಿ ಅತ್ಯಂತ ಪ್ರಬಲಗಳಾಗಿದ್ದು, ಜೀವನನ್ನು ವಿಷಯಾಸಕ್ತನನ್ನಾಗಿ ಮಾಡಿ, ಸಂಸಾರದಲ್ಲಿ ಬಂಧಿಸುವ ಸಹಜ ಸಾಮರ್ಥ್ಯವುಳ್ಳವುಗಳು (೪೨-೪೩). ಸ್ವಕರ್ಮಗಳಿಂದ ಯುಕ್ತವಾದ (ಸ್ವವರ್ಣಾಶ್ರಮ ಕರ್ಮಗಳನ್ನು ಆಚರಿಸಿ), ಶ್ರೀವಿಷ್ಣುವಿಗೆ ಅರ್ಪಿಸಿದ ನಂತರ ಅವಶಿಷ್ಟವಾಗುವ ಬಹುವಿಧದ ಅನ್ನಗಳೂ (ಆಹಾರ ವಸ್ತುಗಳೂ), ಯಜ್ಞಶೇಷಾನ್ನಗಳೂ, ಬ್ರಾಹ್ಮಣ ಭೋಜನಾನಂತರ ಅವಶಿಷ್ಟವಾದ ಆಹಾರಗಳೂ, ಮತ್ತು ಪೋಷ್ಯವರ್ಗದವರಿಂದ ಭಾಗಶಃ ಭುಂಜಿಸಲ್ಪಟ್ಟ ಅನ್ನಗಳೂ (ಪೋಷ್ಯರಾದ ಭ್ರಾತೃ, ಪುತ್ರ, ಮಿತ್ರಾದಿಗಳು ಉಂಡು ಮಿಕ್ಕ ಆಹಾರ ವಸ್ತುಗಳೂ), ಗೃಹಸ್ಥನಿಗೆ ಅಮೃತಸದೃಶಗಳೆಂದು (ಜನನಮರಣಗಳನ್ನು ಕೊನೆಗಾಣಿಸುವ ಮೋಕ್ಷದಂತೆ—ಸಂಸಾರ ನಿವರ್ತಕಗಳೆಂದು) ಶಾಸ್ತ್ರಗಳು ಉದ್ಘೋಷಿಸುತ್ತವೆ (೪೪-೪೫). ಹೀಗೆ ಗೃಹಸ್ಥನು, ಸದ್ವಿಷಯಗಳ ಭೋಗದಿಂದ, ಐಹಿಕವಾದ ಅನಿತ್ಯಸುಖವನ್ನೂ ನಿತ್ಯವಾದ ಮೋಕ್ಷಸುಖವನ್ನೂ ಹೊಂದುತ್ತಾನೆ; ಆದ್ದರಿಂದ, ಧರ್ಮ ಅರ್ಥ (ಭೋಗ್ಯವಸ್ತುಗಳು). ಕಾಮ (ಅವುಗಳ ಭೋಗ)ಗಳೆಂಬ ಮೂರು ಪುರುಷಾರ್ಥಗಳನ್ನೂ

**ಅತೋ ನ ಬಾಧಯೇದೇತಾನ್ ಬುಭೂಷುಸ್ತ್ರೀನ್ಮಿಥಃ ಕ್ವಚಿತ್ ।**
**ಲಬ್ಧಂ ಧನಂ ಚತುರ್ಧೈವ ಭಕ್ತ್ವೈಕೈಕೇನ ಭಾಗಶಃ ॥ ೪೭ ॥**
**ತ್ರಿವರ್ಗಮಾರ್ಜಯೇದೇಕಂ ನಿಯುಂಜೀತ ಸುಹೃಜ್ಜನೇ ।**

ಸದ್ಯೋಗಾತ್-(ಅಮೃತಸದೃಶಗಳಾದ) ಈ ಸದ್ವಿಷಯಗಳ ಭೋಗದಿಂದ, ಐಹಿಕಂ-ಇಹಲೋಕದ, ಅನಿತ್ಯಂ-ನಶ್ವರವಾದ, ಸೌಖ್ಯಂ-ಸುಖಾನುಭವವನ್ನೂ ನಿತ್ಯಂ-ನಿತ್ಯಸುಖವನ್ನೂ (ಮೋಕ್ಷವನ್ನು), ಲಭತೇ-(ಸದ್ವ್ರತಸ್ಥನು) ಹೊಂದುತ್ತಾನೆ; ತಸ್ಮಾತ್-ಆದ್ದರಿಂದ, ಅಮುಷ್ಮಾತ್-ಈ, ತ್ರಿವರ್ಗತಃ-ತ್ರಿವರ್ಗದಿಂದ (ಧರ್ಮ, ಅರ್ಥ, ಕಾಮಗಳಿಂದ), ನರಃ-ಪುರುಷನು, ಸರ್ವೇಷ್ಟಭಾಕ್-ಸಕಲ ಪುರುಷಾರ್ಥಕ್ಕೆ ಭಾಗಿಯು (ಸರ್ವೇಷ್ಟಗಳನ್ನು ಹೊಂದುವವನು), ಭವೇತ್-ಆಗುತ್ತಾನೆ; ಅತಃ-ಈ ಕಾರಣದಿಂದ, ಬುಭೂಷುಃ-(ನಿತ್ಯಸುಖವುಳ್ಳವನು) ಆಗಬೇಕೆಂದಿಚ್ಛಿಸುವ ಪುರುಷನು, ಕ್ವಚಿತ್-ಸ್ವಲ್ಪಮಾತ್ರವೂ, ಏತಾನ್-ಈ, ತ್ರೀನ್-ಮೂರನ್ನು (ತ್ರಿವರ್ಗವನ್ನು), ಮಿಥಃ-ಪರಸ್ಪರವಾಗಿ, ನ ಬಾಧಯೇತ್-ಬಾಧಿಸುವಂತ (ವಿರೋಧಿಸುವಂತೆ) ಮಾಡಬಾರದು; ಲಬ್ಧಂ-(ದೈವೇಚ್ಛೆಯಿಂದ) ದೊರೆತ, ಧನಂ-ಧನವನ್ನು, ಚತುರ್ಧಾ ಏವ-ನಾಲ್ಕು ಭಾಗಗಳನ್ನಾಗಿಯೇ, ಭಕ್ತ್ವಾ-ವಿಭಾಗಿಸಿ, ಏಕೈಕೇನ-ಒಂದೊಂದು, ಭಾಗಶಃ-ಭಾಗದಿಂದ, ತ್ರಿವರ್ಗಂ-ತ್ರಿವರ್ಗವನ್ನು (ಧರ್ಮ, ಅರ್ಥ; ಕಾಮಗಳನ್ನು), ಆರ್ಜಯೇತ್-ಸಂಪಾದಿಸಬೇಕು, ಏಕಂ-(ಉಳಿದ) ಒಂದು ಭಾಗವನ್ನು ಸುಹೃಜ್ಜನೇ-ಬಂಧುಮಿತ್ರರಲ್ಲಿ (ಅವರ ಹಿತಕ್ಕಾಗಿ), ನಿಯುಂಜೀತ-ಉಪಯೋಗಿಸಬೇಕು.

**ಅಲ್ಪಂ ಚೇದ್ಧನಮಸ್ಯ ಸ್ಯಾತ್ಕಿಂಚಿದ್ಧರ್ಮಂ ಸದಾಽರ್ಜಯೇತ್ ॥ ೪೮ ॥**

ಅಸ್ಯ-ಈತನ (ಹೀಗೆ ಪುರುಷಾರ್ಥಗಳ ಪ್ರಾಪ್ತಿಗಾಗಿ ಯತ್ನಿಸುವ ಪುರುಷನ), ಧನಂ-ಧನವು, ಅಲ್ಪಂ-ಅಲ್ಪವಾದುದು, ಸ್ಯಾತ್ ಚೇತ್-ಆಗಿದ್ದರೆ, ಸದಾ-ಯಾವಾಗಲೂ, ಕಿಂಚಿತ್-ಅಲ್ಪವಾದರೂ, ಧರ್ಮಂ-ಧರ್ಮವನ್ನು ಆರ್ಜಯೇತ್-ಸಂಪಾದಿಸಬೇಕು. (ಅರ್ಥ ಕಾಮಗಳಿಗಳಾಗಿ ವಿನಿಯೋಗಿಸಲ್ಪಡಬೇಕಾದ ಭಾಗವನ್ನು

---

ಅವುಗಳಿಂದ, ಮೋಕ್ಷಸಹಿತವಾದ ಸರ್ವಾಭೀಷ್ಟಗಳನ್ನೂ ಹೊಂದುತ್ತಾನೆ; ಆದ್ದರಿಂದ ಮುಕ್ತನಾಗಲಿಚ್ಛಿಸುವ ಪುರುಷನು, ಈ ತ್ರಿವರ್ಗವನ್ನು ಪರಸ್ಪರ ವಿರೋಧವಿಲ್ಲದಂತೆ ಜಾಗ್ರತನಾಗಿ ನೋಡಿಕೊಳ್ಳಬೇಕು; ಇದಕ್ಕಾಗಿ, ದೈವೇಚ್ಛೆಯಿಂದ ತನಗೆ ದೊರೆಯುವ ಧನವನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿ, ಒಂದೊಂದು ಭಾಗದಿಂದ (ಒಟ್ಟು ಮೂರು ಭಾಗಗಳಿಂದ) ಧರ್ಮ, ಅರ್ಥ, ಕಾಮಗಳನ್ನು ದೊರಕಿಸಲು ವಿನಿಯೋಗಿಸಿ, ಉಳಿದ ಒಂದು ಭಾಗವನ್ನು ಸುಹೃಜ್ಜನರಹಿತಕ್ಕಾಗಿ ಉಪಯೋಗಿಸಬೇಕು (೪೬-೪೭). ಪುರುಷಾರ್ಥಗಳ ಸಿದ್ಧಿಗಾಗಿ ಯತ್ನಿಸುವ ಪುರುಷನಿಗೆ ಲಭಿಸುವ ಧನವು ಅಲ್ಪವಾಗಿದ್ದರೂ, ಅದರಲ್ಲಿ ಸಹ ಒಂದು ಭಾಗವನ್ನು ಧರ್ಮ ಸಂಪಾದನೆಗಾಗಿ ತಪ್ಪದೇ

**ನಾನಾವಿಧಾನಿ ಚಾನ್ನಾನಿ ಮಿಲಿತಾನಿ ಸ್ವಕರ್ಮಭಿಃ ।**
**ವಿಷ್ಣೋರ್ನೈವೇದ್ಯಶಿಷ್ಟಾನಿ ಯಜ್ಞಶಿಷ್ಟಾನಿ ವೈ ಪುನಃ ॥ ೪೪ ॥**
**ವಿಪ್ರಭುಕ್ತಾವಶಿಷ್ಟಾನಿ ಪೋಷ್ಯಭುಕ್ತಾನಿ ಭಾಗಶಃ ।**
**ತಾನ್ಯನ್ನಾನಿ ಗೃಹಸ್ಥಸ್ಯ ಪೀಯೂಷಸದೃಶಾನಿ ವೈ ॥ ೪೫ ॥**

ಸ್ವಕರ್ಮಭಿಃ-ತಂತಮ್ಮ ಕರ್ಮಗಳಿಂದ, ಮಿಲಿತಾನಿ-ಕೂಡಿದ, ನಾನಾ ವಿಧಾನಿ-ಬಹುವಿಧವಾದ, ವಿಷ್ಣೋಃ-ಶ್ರೀವಿಷ್ಣುವಿಗೆ, ನೈವೇದ್ಯಶಿಷ್ಟಾನಿ-ನಿವೇದಿಸಲ್ಪಟ್ಟು ಉಳಿದಿರುವ, ಅನ್ನಾನಿ-ಅನ್ನಗಳು (ಆಹಾರಯೋಗ್ಯ ಪದಾರ್ಥಗಳು), ಪುನಃ-ಮತ್ತು ಯಜ್ಞಶಿಷ್ಟಾನಿ-ಯಜ್ಞಶೇಷಗಳೂ (ಅಗ್ನಿದ್ವಾರಾ ಅರ್ಪಿಸಲಾದ ಹವಿಸ್ಸುಗಳ ಅವಶಿಷ್ಟ ಭಾಗವೂ), ವಿಪ್ರಭುಕ್ತಾವಶಿಷ್ಟಾನಿ-ಬ್ರಾಹ್ಮಣಭೋಜನವಾದನಂತರ ಅವಶಿಷ್ಟವಾದರೂ (ಉಳಿದ ಅನ್ನಗಳೂ), ಭಾಗಶಃ-ಕೆಲವು ಭಾಗದಿಂದ, ಪೋಷ್ಯಭುಕ್ತಾನಿ-ಪೋಷ್ಯವರ್ಗ ದವರೂ ಭುಂಜಿಸುವ, ತಾನಿ ಅನ್ನಾನಿ-ಆ ಅನ್ನಗಳೆಲ್ಲವೂ, ಗೃಹಸ್ಥಸ್ಯ-ಗೃಹಸ್ಥಜೀವರಿಗೆ, ಪೀಯೂಷ ಸದೃಶಾನಿ-ಅಮೃತಸಮಗಳೆಂದು, ವೈ-ಶಾಸ್ತ್ರನಿರ್ಣಯವು.

**ಸದ್ಭೋಗಾಲ್ಲಭತೇ ಸೌಖ್ಯಮನಿತ್ಯಂ ನಿತ್ಯಮೈಹಿಕಂ ।**
**ತಸ್ಮಾತ್ ತ್ರಿವರ್ಗತೋಽಮುಷ್ಮಾದ್ಭವೇತ್ ಸರ್ವೇಷ್ಟಭಾಙ್ನರಃ ॥ ೪೬ ॥**

---

ಅವಶಿಷ್ಟವಾದುದನ್ನು (ಉಳಿದುದನ್ನೇ) ತಾವು ಉಂಡು ಜೀವಿಸಿ, ಮುಕ್ತಿಯನ್ನೇ ಹೊಂದುತ್ತಾರೆ. (ಜಿಹ್ವೋಪಸ್ಥಗಳಿಂದಾಗುವ ದಂಪತಿಗಳ ವ್ಯಾಪಾರಗಳೂ ಮೋಕ್ಷಸಾಧಕವಾಗಲು, ಅವಶ್ಯಕವಾಗಿ ಇರಬೇಕಾದ ಅನುಸಂಧಾನವು ನಿರೂಪಿತ ವಾಗಿದೆ; ಜಿಹ್ವೋಪಸ್ಥಗಳೆಂಬ ಇಂದ್ರಿಯಗಳು, ಸಕಲೇಂದ್ರಿಯಗಳ ಮಧ್ಯದಲ್ಲಿ ಅತ್ಯಂತ ಪ್ರಬಲಗಳಾಗಿದ್ದು, ಜೀವನನ್ನು ವಿಷಯಾಸಕ್ತನನ್ನಾಗಿ ಮಾಡಿ, ಸಂಸಾರದಲ್ಲಿ ಬಂಧಿಸುವ ಸಹಜ ಸಾಮರ್ಥ್ಯವುಳ್ಳವುಗಳು (೪೨-೪೩). ಸ್ವಕರ್ಮಗಳಿಂದ ಯುಕ್ತವಾದ (ಸ್ವವರ್ಣಾಶ್ರಮ ಕರ್ಮಗಳನ್ನು ಆಚರಿಸಿ), ಶ್ರೀವಿಷ್ಣುವಿಗೆ ಅರ್ಪಿಸಿದ ನಂತರ ಅವಶಿಷ್ಟವಾಗುವ ಬಹುವಿಧದ ಅನ್ನಗಳೂ (ಆಹಾರ ವಸ್ತುಗಳೂ), ಯಜ್ಞಶೇಷಾನ್ನಗಳೂ, ಬ್ರಾಹ್ಮಣ ಭೋಜನಾನಂತರ ಅವಶಿಷ್ಟವಾದ ಆಹಾರಗಳೂ, ಮತ್ತು ಪೋಷ್ಯವರ್ಗದವರಿಂದ ಭಾಗಶಃ ಭುಂಜಿಸಲ್ಪಟ್ಟ ಅನ್ನಗಳೂ (ಪೋಷ್ಯರಾದ ಭ್ರಾತೃ, ಪುತ್ರ, ಮಿತ್ರಾದಿಗಳು ಉಂಡು ಮಿಕ್ಕ ಆಹಾರ ವಸ್ತುಗಳೂ), ಗೃಹಸ್ಥನಿಗೆ ಅಮೃತಸದೃಶಗಳೆಂದು (ಜರಾಮರಣಗಳನ್ನು ಕೊನೆಗಾಣಿಸುವ ಮೋಕ್ಷದಂತೆ— ಸಂಸಾರ ನಿವರ್ತಕಗಳೆಂದು) ಶಾಸ್ತ್ರಗಳು ಉದ್ಘೋಷಿಸುತ್ತವೆ (೪೪-೪೫). ಹೀಗೆ, ಗೃಹಸ್ಥನು, ಸದ್ವಿಷಯಗಳ ಭೋಗದಿಂದ, ಐಹಿಕವಾದ ಅನಿತ್ಯಸುಖವನ್ನೂ ನಿತ್ಯವಾದ ಮೋಕ್ಷಸುಖವನ್ನೂ ಹೊಂದುತ್ತಾನೆ; ಆದ್ದರಿಂದ, ಧರ್ಮ ಅರ್ಥ (ಭೋಗ್ಯವಸ್ತು ಗಳು), ಕಾಮ (ಅವುಗಳ ಭೋಗ)ಗಳೆಂಬ ಮೂರು ಪುರುಷಾರ್ಥಗಳನ್ನೂ

**ಅತೋ ನ ಬಾಧಯೇದೇತಾನ್ ಬುಭೂಷುಸ್ತ್ರೀನ್ಮಿಥಃ ಕ್ವಚಿತ್ ।**
**ಲಬ್ಧಂ ಧನಂ ಚತುರ್ಧೈವ ಭಕ್ತ್ವೈಕೈಕೇನ ಭಾಗಶಃ ॥ ೪೭ ॥**
**ತ್ರಿವರ್ಗಮಾರ್ಜಯೇದೇಕಂ ನಿಯುಂಜೀತ ಸುಹೃಜ್ಜನೇ ।**

ಸದ್ಯೋಗಾತ್-(ಅಮೃತಸದೃಶಗಳಾದ) ಈ ಸದ್ವಿಷಯಗಳ ಭೋಗದಿಂದ, ಐಹಿಕಂ-ಇಹಲೋಕದ, ಅನಿತ್ಯಂ-ನಶ್ವರವಾದ, ಸೌಖ್ಯಂ-ಸುಖಾನುಭವವನ್ನೂ ನಿತ್ಯಂ-ನಿತ್ಯಸುಖವನ್ನೂ (ಮೋಕ್ಷವನ್ನು), ಲಭತೇ-(ಸದ್ಗೃಹಸ್ಥನು) ಹೊಂದುತ್ತಾನೆ; ತಸ್ಮಾತ್-ಆದ್ದರಿಂದ, ಅಮುಷ್ಮಾತ್-ಈ, ತ್ರಿವರ್ಗತಃ-ತ್ರಿವರ್ಗದಿಂದ (ಧರ್ಮ, ಅರ್ಥ, ಕಾಮಗಳಿಂದ), ನರಃ-ಪುರುಷನು, ಸರ್ವೇಷ್ಟಭಾಕ್-ಸಕಲ ಪುರುಷಾರ್ಥಕ್ಕೆ ಭಾಗಿಯು (ಸರ್ವೇಷ್ಟಗಳನ್ನು ಹೊಂದುವವನು), ಭವೇತ್-ಆಗುತ್ತಾನೆ; ಅತಃ-ಈ ಕಾರಣದಿಂದ, ಬುಭೂಷುಃ-(ನಿತ್ಯಸುಖವುಳ್ಳವನು) ಆಗಬೇಕೆಂದಿಚ್ಛಿಸುವ ಪುರುಷನು, ಕ್ವಚಿತ್-ಸ್ವಲ್ಪಮಾತ್ರವೂ, ಏತಾನ್-ಈ, ತ್ರೀನ್-ಮೂರನ್ನು (ತ್ರಿವರ್ಗವನ್ನು), ಮಿಥಃ-ಪರಸ್ಪರವಾಗಿ, ನ ಬಾಧಯೇತ್-ಬಾಧಿಸುವಂತೆ (ವಿರೋಧಿಸುವಂತೆ) ಮಾಡಬಾರದು; ಲಬ್ಧಂ-(ದೈವೇಚ್ಛೆಯಿಂದ) ದೊರೆತ, ಧನಂ-ಧನವನ್ನು, ಚತುರ್ಧಾ ಏವ-ನಾಲ್ಕು ಭಾಗಗಳನ್ನಾಗಿಯೇ, ಭಕ್ತ್ವಾ-ವಿಭಾಗಿಸಿ, ಏಕೈಕೇನ-ಒಂದೊಂದು, ಭಾಗಶಃ-ಭಾಗದಿಂದ, ತ್ರಿವರ್ಗಂ-ತ್ರಿವರ್ಗವನ್ನು (ಧರ್ಮ, ಅರ್ಥ; ಕಾಮಗಳನ್ನು), ಆರ್ಜಯೇತ್-ಸಂಪಾದಿಸಬೇಕು, ಏಕಂ-(ಉಳಿದ) ಒಂದು ಭಾಗವನ್ನು ಸುಹೃಜ್ಜನೇ-ಬಂಧುಮಿತ್ರರಲ್ಲಿ (ಅವರ ಹಿತಕ್ಕಾಗಿ), ನಿಯುಂಜೀತ-ಉಪಯೋಗಿಸಬೇಕು.

**ಅಲ್ಪಂ ಚೇದ್ಧನಮಸ್ಯ ಸ್ಯಾತ್ಕಿಂಚಿದ್ಧರ್ಮಂ ಸದಾಽರ್ಜಯೇತ್ ॥ ೪೮ ॥**

ಅಸ್ಯ-ಈತನ (ಹೀಗೆ ಪುರುಷಾರ್ಥಗಳ ಪ್ರಾಪ್ತಿಗಾಗಿ ಯತ್ನಿಸುವ ಪುರುಷನ), ಧನಂ-ಧನವು, ಅಲ್ಪಂ-ಅಲ್ಪವಾದುದು, ಸ್ಯಾತ್ ಚೇತ್-ಆಗಿದ್ದರೆ, ಸದಾ-ಯಾವಾಗಲೂ, ಕಿಂಚಿತ್-ಅಲ್ಪವಾದರೂ, ಧರ್ಮಂ-ಧರ್ಮವನ್ನು ಆರ್ಜಯೇತ್-ಸಂಪಾದಿಸಬೇಕು. (ಅರ್ಥ ಕಾಮಗಳಿಗಳಾಗಿ ವಿನಿಯೋಗಿಸಲ್ಪಡಬೇಕಾದ ಭಾಗವನ್ನು

---

ಅವುಗಳಿಂದ, ಮೋಕ್ಷಸಹಿತವಾದ ಸರ್ವಾಭೀಷ್ಟಗಳನ್ನೂ ಹೊಂದುತ್ತಾನೆ; ಆದ್ದರಿಂದ ಮುಕ್ತನಾಗಲಿಚ್ಛಿಸುವ ಪುರುಷನು, ಈ ತ್ರಿವರ್ಗವನ್ನು ಪರಸ್ಪರ ವಿರೋಧವಿಲ್ಲದಂತೆ ಜಾಗ್ರತನಾಗಿ ನೋಡಿಕೊಳ್ಳಬೇಕು; ಇದಕ್ಕಾಗಿ, ದೈವೇಚ್ಛೆಯಿಂದ ತನಗೆ ದೊರೆಯುವ ಧನವನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿ, ಒಂದೊಂದು ಭಾಗದಿಂದ (ಒಟ್ಟು ಮೂರು ಭಾಗಗಳಿಂದ) ಧರ್ಮ, ಅರ್ಥ, ಕಾಮಗಳನ್ನು ದೊರಕಿಸಲು ವಿನಿಯೋಗಿಸಿ, ಉಳಿದ ಒಂದು ಭಾಗವನ್ನು ಸುಹೃಜ್ಜನರಹಿತಕ್ಕಾಗಿ ಉಪಯೋಗಿಸಬೇಕು (೪೬-೪೭). ಪುರುಷಾರ್ಥಗಳ ಸಿದ್ಧಿಗಾಗಿ ಯತ್ನಿಸುವ ಪುರುಷನಿಗೆ ಲಭಿಸುವ ಧನವು ಅಲ್ಪವಾಗಿದ್ದರೂ, ಅದರಲ್ಲಿ ಸಹ ಒಂದು ಭಾಗವನ್ನು ಧರ್ಮ ಸಂಪಾದನೆಗಾಗಿ ತಪ್ಪದೇ

ಧನವು ಅಲ್ಪವಾದ್ದರಿಂದ, ಪ್ರತ್ಯೇಕಿಸಲು ಶಕ್ಯವಾಗದಿದ್ದರೂ ಧರ್ಮಕ್ಕೆ ಮಾತ್ರ, ಅದರಲ್ಲಿಯೇ ಸ್ವಲ್ಪಭಾಗವನ್ನು ತಪ್ಪದೇ ಉಪಯೋಗಿಸಲೇಬೇಕೆಂದು ಸೂಚಿಸಲಾಗಿದೆ).

**ಪ್ರಾಯಃ ಪೋಷ್ಯಾಣಿ ಬಿಭೃಯಾತ್ ಸ್ವಲ್ಪಮನ್ಯತ್ರ ಯೋಜಯೇತ್ ।**
**ಮಹಾಧನಃ ಪ್ರಕುರ್ವೀತ ದ್ವಿತ್ರಿಭಾಗೈರಪಿ ಧ್ರುವಂ ॥ ೪೯ ॥**
**ಧರ್ಮಮೇವಾಧಿಕೋ ಯಸ್ಮಾತ್ಸ ಏವ ತ್ರಿಷ್ವಪಿ ಸ್ಫುಟಂ ।**

ಪ್ರಾಯಃ-ಹೆಚ್ಚಾಗಿ, ಪೋಷ್ಯಾಣಿ-ಪೋಷ್ಯರನ್ನು (ಪತ್ನೀಪುತ್ರಾದಿ ತನ್ನ ಪೋಷಣಕರ್ತವ್ಯಕ್ಕೆ ವಿಷಯರಾದವರನ್ನು) ಬಿಭೃಯಾತ್-ಪೋಷಣೆ ಮಾಡಬೇಕು (ಅಲ್ಪಧನದಲ್ಲಿ ಬಹುಭಾಗವನ್ನು ಪೋಷ್ಯವರ್ಗದವರ ರಕ್ಷಣೆಗಾಗಿ ವಿನಿಯೋಗಿಸಬೇಕು); ಅಲ್ಪ-ಅಲ್ಪಾಂಶದ ಧನವನ್ನು ಅನ್ಯತ-ಧರ್ಮ ಸಂಪಾದನೆಯಲ್ಲಿ ಯೋಜಯೇತ್-ವಿನಿಯೋಗಿಸಬೇಕು); ಮಹಾಧನಃ-ಮಹಾಧನವುಳ್ಳವನು; ಧ್ರುವಂ-ನಿಶ್ಚಯವಾಗಿ, ದ್ವಿತ್ರಿಭಾಗೈಃ ಅಪಿ-ಎರಡು ಅಥವಾ ಮೂರು ಭಾಗಗಳಷ್ಟು ತನ್ನ ಧನದಿಂದ, ಧರ್ಮಂ ಏವ ಪ್ರಕುರ್ವೀತ-ಧರ್ಮಸಂಪಾದನೆಯನ್ನು ಮಾಡಬೇಕು; ಯಸ್ಮಾತ್-ಏಕೆಂದರೆ (ಯಾವ ಕಾರಣದಿಂದ, ಎಂದರೆ), ತ್ರಿಷು ಅಪಿ-ಈ ಮೂರರಲ್ಲಿ (ಧರ್ಮ, ಅರ್ಥ, ಕಾಮಗಳಲ್ಲಿ), ಸಃ ಏವ-ಅದೇ (ಧರ್ಮವೇ) ಸ್ಫುಟಂ- ಸ್ಪಷ್ಟವಾಗಿ (ಸಂಶಯಕ್ಕೆಡೆ ಇಲ್ಲದೇ), ಅಧಿಕಃ-ಶ್ರೇಷ್ಠವಾದುದು.

**ಅರ್ಥೋ ಹಿ ದ್ವಿವಿಧಃ ಪುಂಸಾಂ ಧನಂ ವಿದ್ಯೇತಿ ಭೇದತಃ ॥ ೫೦ ॥**
**ಆರ್ಜಯೇತ ದ್ವಯಂ ಯಸ್ಮಾದ್ದೃಷ್ಟಾದೃಷ್ಟಫಲಪ್ರದಂ ।**
**ತ್ರಿವರ್ಗೇಣಾಪಿ ಸರ್ವೇಣ ಮೋಕ್ಷ ಏಷ್ಟವ್ಯ ಏವ ಹಿ ॥ ೫೧ ॥**

ಪುಂಸಾ-ಪುರುಷರಿಗೆ, ಅರ್ಥಃ-ಅರ್ಥವೆಂಬುದು, ಧನಂ-ಧನವು, ವಿದ್ಯಾ-ವಿದ್ಯೆಯು, ಇತಿ ಭೇದತಃ-ಎಂಬ ಭೇದದಿಂದ, ದ್ವಿವಿಧಃ-ಎರಡು ಪ್ರಕಾರವಾಗಿರು

---

ವಿನಿಯೋಗಿಸಬೇಕು (೪೮). ಅದಕ್ಕಿಂತ ಅಧಿಕವಾದ ಧನವುಳ್ಳವನು (ಮತ್ತು ಮಹಾಧನಿಕನು) (ನಾಲ್ಕರಲ್ಲಿ) ಎರಡು ಅಥವಾ ಮೂರು ಭಾಗಗಳನ್ನಾದರೂ ಧರ್ಮಕ್ಕಾಗಿಯೇ ವಿನಿಯೋಗಿಸಬೇಕು— ಅಲ್ಪಧನವುಳ್ಳವನು ಬಹುಭಾಗವನ್ನು ತನ್ನಿಂದ ಪೋಷ್ಯರಾದವರ ಪೋಷಣೆಗಾಗಿ ವಿನಿಯೋಗಿಸಬೇಕು; ಉಳಿದ ಅಲ್ಪವನ್ನು ಧರ್ಮಸಂಪಾದನೆಗಾಗಿ ಉಪಯೋಗಿಸ ಬೇಕು; ತ್ರಿವರ್ಗಗಳಲ್ಲಿ ಧರ್ಮವೇ ಶ್ರೇಷ್ಠವಾದುದರಿಂದ, ಅಲ್ಪಧನ, ಮಹಾಧನ ವಂತರಿಗೆ ಹೇಳಲಾದ ಈ ನಿಯಮವು, ಅತ್ಯಂತ ಸಾಧ್ಯವಾದುದು (೪೯). ಧನ ಮತ್ತು ವಿದ್ಯೆ, ಎಂದು, ಪುರುಷರಿಗೆ ಅರ್ಥವು ಎರಡು ವಿಧವಾದುದು; ಉಭಯವಿಧ ಅರ್ಥವನ್ನೂ ಸಂಪಾದಿಸಬೇಕು; ಅರ್ಥವು, ದೃಷ್ಟಾದೃಷ್ಟಗಳೆಂಬ (ಇಹಪರಗಳೆಂಬ) ಉಭಯ ಫಲಗಳನ್ನು ಕೊಡುತ್ತದೆ; ಈ ಎಲ್ಲ

ವುದು: ಹಿ-ನಿಶ್ಚಯವು; ಯಸ್ಮಾತ್-ಯಾವ ಕಾರಣದಿಂದ (ಅರ್ಥವು), ದೃಷ್ಟಾದೃಷ್ಟ ಫಲಪ್ರದಂ-ಇಹಪರಗಳ ಫಲವನ್ನು ಕೊಡುವುದೋ, (ತಸ್ಮಾತ್-ಆ ಕಾರಣದಿಂದ), ದ್ವಯಂ-ಎರಡನ್ನೂ (ಧನ ಮತ್ತು ವಿದ್ಯೆಗಳೆಂಬ ಉಭಯವಿಧ ಅರ್ಥಗಳನ್ನೂ), ಆರ್ಜಯೇತ-ಸಂಪಾದಿಸಬೇಕು; ಸರ್ವೇಣ-ಎಲ್ಲ ತ್ರಿವರ್ಗೇಣ-ತ್ರಿವರ್ಗಗಳಿಂದ, ಅಪಿ-ಸಹ, ಮೋಕ್ಷಃ ಏವ-ಮೋಕ್ಷವೇ, ಏಷ್ಟವ್ಯಃ-ಅಪೇಕ್ಷಿಸಿ ಸಾಧಿಸಲ್ಪಡಬೇಕು.

**ಯತೋ ನಿತ್ಯಂ ಸುಖಂ ಚಾನ್ಯದುಃಖಾತ್ಯಂತನಿವರ್ತನಂ ।**
**ಮುಖ್ಯಂ ತತ್ಸಾಧನಂ ವಿಷ್ಣೋಃ ಪ್ರಸಾದಸ್ತಸ್ಯ ಸಾಧನಂ ॥ ೫೨ ॥**
**ತದ್ಭಕ್ತಿರಥ ತಸ್ಯಾಶ್ಚ ಹೇತುಃ ಸತ್ಸಂಗತಿರ್ಧ್ರುವಂ ।**
**ದಾನತೀರ್ಥತಪೋಧೀತಿ ಮುಖ್ಯಾನ್ಯನ್ಯಾನಿ ಯಾನಿ ಚ ॥ ೫೩ ॥**
**ಕಾರಣಾನಿ ಸತಾಂ ಸಂಗೇ ಶ್ರವಣಾನಿ ತತೋ ಭವೇತ್ ।**
**ಸತಿ ಶೃಣ್ವತಿ ಭಾಷಂತೇ ಶೃಣ್ವಂತಿ ಸತಿ ವಕ್ತರಿ ॥ ೫೪ ॥**
**ಗುಣಾನುಕೀರ್ತನಂ ವಿಷ್ಣೋಸ್ತದ್ಭಕ್ತಾನಾಮಥಾಪಿ ವಾ ।**
**ತ ಏವ ಸಂತೋ ವಿಜ್ಞೇಯಾಸ್ತೇ ಚ ಸರ್ವಾಧಿಕೇಪ್ಸದಾಃ ॥ ೫೫ ॥**

ಯತಃ-ಯಾವುದರಿಂದ, ನಿತ್ಯಂ ಸುಖಂ-ನಿತ್ಯವಾದ ಸುಖವೂ, ಚ-ಮತ್ತು ಅನ್ಯದುಃಖಾತ್ಯಂತನಿವರ್ತನಂ-ಸುಖಭಿನ್ನವಾದ ದುಃಖದ ನಿವೃತ್ತಿಯೂ (ದುಃಖಲೇಶ ರಾಹಿತ್ಯವೂ), (ದೊರೆಯುವುದೋ), ತತ್ಸಾಧನಂ-ಆ ಸಾಧನವು, ಮುಖ್ಯಂ-ಮುಖ್ಯ

ತ್ರಿವರ್ಗದಿಂದ (ಧರ್ಮ, ಅರ್ಥ, ಕಾಮಗಳಿಂದ), ಮೋಕ್ಷವನ್ನೇ ಸಾಧಿಸಿಕೊಳ್ಳಬೇಕು; ತ್ರಿವರ್ಗಗಳು ಮೋಕ್ಷಕ್ಕೆ ಸಾಧನೆಗಳಾಗಬೇಕಲ್ಲದೇ, ಸಾಧಕರು ಅವುಗಳಿಂದಲೇ ತೃಪ್ತರಾಗಬಾರದು)(೫೧). ಅಶೇಷದುಃಖ ನಿವೃತ್ತಿಸಹಿತವಾದ ನಿತ್ಯಸುಖರೂಪದ ಮೋಕ್ಷದ ಪ್ರಾಪ್ತಿಗೆ, ಶ್ರೀವಿಷ್ಣುವಿನ ಪ್ರಸಾದವೇ ಮುಖ್ಯಸಾಧನವು; ಆ ಪ್ರಸಾದಕ್ಕೆ ಆತನಲ್ಲಿ ಮಾಡುವ ಭಕ್ತಿಯೇ ಸಾಧನವು; ಭಕ್ತಿಲಾಭಕ್ಕೆ ಸಜ್ಜನಸಹವಾಸವೇ ಪ್ರಧಾನಸಾಧನವು;[1] ದಾನ, ತೀರ್ಥಯಾತ್ರೆ, ತಪಸ್ಸು ಅಧ್ಯಯನಾದಿ ಇತರ ಸಾಧನ ಗಳೂ ಕಾರಣವಾಗುತ್ತವೆ; ಸಜ್ಜನಸಂಗದಿಂದ ಶ್ರೀವಿಷ್ಣುಮಹಿಮೆಗಳ ನಿರಂತರ

1. 'ಸತಾಂ ಪ್ರಸಂಗಾನ್ಮಮ ವೀರ್ಯಸಂವಿದೋ ಭವಂತಿ ಹೃತ್ಕರ್ಣರಸಾಯನಾಃ ಕಥಾಃ।
ತಜ್ಜೋಷಣಾದಾಶ್ವಪವರ್ಗವರ್ತ್ಮನಿ ಶ್ರದ್ಧಾರತಿರ್ಭಕ್ತಿರನುಕ್ರಮಿಷ್ಯತಿ॥' (ಭಾಗವತ).

ಎಂದರೆ ಸಜ್ಜನರ ಸಾಮೀಪ್ಯಸೇವಾದಿರೂಪಸಂಗದಿಂದ, ಕಿವಿಗಳಿಗೂ ಮನಸ್ಸಿಗೂ ಅಮೃತದಂತೆ ಆನಂದವನ್ನುಂಟುಮಾಡುವ ನನ್ನ ಮಹಿಮೆಗಳೆಂಬ ದಿವ್ಯ ಸಂಪದ್ಯುಕ್ತ ಚರಿತ್ರೆಗಳ ನಿತ್ಯಶ್ರವಣ ಲಾಭವಾಗುತ್ತದೆ; ಅದರ ಸೇವನದಿಂದ ನನ್ನ ಸಾಕ್ಷಾದ್ದರ್ಶನಕ್ಕೆ ಕಾರಣವಾಗುವ ಶ್ರೇಷ್ಠ ಭಕ್ತಿಯು, ಕ್ರಮೇಣ ವೃದ್ಧಿಹೊಂದುತ್ತದೆ. ಸತ್ಸಹವಾಸದ ಈ ಮಹಿಮೆಯು (ಪರಮಲಾಭವು) ಇಲ್ಲಿ ನಿರೂಪಿತವಾಗಿದೆ.

ವಾಗಿ (ಪ್ರಧಾನವಾಗಿ), ವಿಷ್ಣೋಃ-ಶ್ರೀವಿಷ್ಣುವಿನ, ಪ್ರಸಾದಃ-ಪ್ರಸನ್ನತೆಯು ('ಏನಂ ಮೋಚಯಾಮಿ'—ಈ ಜೀವನನ್ನು ಮುಕ್ತನನ್ನಾಗಿ ಮಾಡುತ್ತೇನೆಂಬ ಇಚ್ಛಾರೂಪದ ಪ್ರಸಾದವು); ತಸ್ಯ-ಆ ಪ್ರಸಾದಕ್ಕೆ, ಸಾಧನಂ-ಸಾಧನವಾದುದು, ತದ್ಭಕ್ತಿ:-ಆತನ ಭಕ್ತಿಯು; ಅಥ-ಮುಂದೇನೆಂದರೆ (ಮತ್ತು), ತಸ್ಯಾಃ ಚ-ಆ ಭಕ್ತಿಗೆ, ಹೇತುಃ-ಸಾಧನವು, ಧ್ರುವಂ-ನಿಶ್ಚಯವಾಗಿ, ಸತ್ಸಂಗತಿಃ-ಸಜ್ಜನ ಸಹವಾಸವು; ದಾನತೀರ್ಥ ತಪೋಧೀತಿ ಮುಖ್ಯಾನಿ-ದಾನ, ತೀರ್ಥಯಾತ್ರೆ,ತಪಸ್ಸು ಅಧ್ಯಯನವೇ ಮೊದಲಾದ, ಯಾನಿ-ಯಾವ, ಅನ್ಯಾನಿ-ಇತರ ಸಾಧನಗಳೋ, (ಅವೂ) ಕಾರಣಾನಿ-(ಭಕ್ತಿಗೆ) ಕಾರಣಗಳೇ (ಸಾಧನಗಳೇ); ಸತಾಂ-ಸಜ್ಜನರ, ಸಂಗೇ-ಸಹವಾಸದಲ್ಲಿ, ತತಃ-ನಂತರ (ಮುಂದೆ ಕ್ರಮವಾಗಿ), ಶ್ರವಣಾನಿ-ವಿವಿಧಗಳಾದ ಶ್ರೀಹರಿಮಹಿಮೆಗಳ ಶ್ರವಣವು, ಭವೇತ್-ಆಗುತ್ತದೆ; ಶೃಣ್ವತಿ ಸತಿ-ಕೇಳುತ್ತಿದ್ದರೆ, ಭಾಷಂತೇ-(ಸಜ್ಜನರು ಶ್ರೀಹರಿಗುಣಗಳನ್ನು) ಹೇಳುತ್ತಾರೆ; ವಕ್ತರಿ ಸತಿ-ವಕ್ತೃವು ಇದ್ದರೆ, (ಹೇಳುವವರಿದ್ದರೆ), ಶೃಣ್ವಂತಿ-ಕೇಳುತ್ತಾರೆ; ವಿಷ್ಣೋಃ-ಶ್ರೀವಿಷ್ಣುವಿನ, ಅಥಾಪಿ-ಮತ್ತು, ತದ್ಭಕ್ತಾನಾಂ-ಆತನ ಭಕ್ತರ, ಗುಣಾನುಕೀರ್ತನಂ-ಗುಣಕೀರ್ತನೆಯನ್ನು (ಭಾಷಂತೇ ಶೃಣ್ವಂತಿ-ಹೇಳುತ್ತಾರೆ ಅಥವಾ ಕೇಳುತ್ತಾರೆ); ತೇ ಏವ-ಅವರೇ (ಈ ಲಕ್ಷಣಗಳುಳ್ಳವರೇ), ಸಂತಃ-ಸಜ್ಜನರೆಂದು, ವಿಜ್ಞೇಯಾಃ-ತಿಳಿಯಲ್ಪಡತಕ್ಕವರು (ತಿಳಿಯತಕ್ಕದ್ದು); ತೇ ಚ-ಅವರೇ, ಸರ್ವಾಧಿಕೇಷ್ಟದಾಃ-ಎಲ್ಲರಕ್ಕಿಂತ ಹೆಚ್ಚಾಗಿ ಇಷ್ಟಪ್ರದರು (ಪ್ರಿಯವಾದುದನ್ನು ಮಾಡತಕ್ಕವರು).

---

ಶ್ರವಣವು ಲಭಿಸುತ್ತದೆ—ಅದರಿಂದ ಭಕ್ತಿಯು ಉದ್ಭವಿಸುತ್ತದೆ; ಶ್ರೀವಿಷ್ಣುವಿನ ಮತ್ತು ಆತನ ಭಕ್ತರ ಗುಣಾನುವಾದವನ್ನು ಮಾಡುವ ಅಥವಾ ಹೇಳುವವರಿದ್ದರೆ ಶ್ರವಣಮಾಡುವವರೂ ಮತ್ತು ಕೇಳುವವರಿದ್ದರೆ ಹೇಳುವವರೇ ಸಜ್ಜನರು; ಅವರೇ ಸರ್ವಾಧಿಕ ಹಿತಸಾಧಕರು (ಪ್ರಿಯವನ್ನುಂಟು ಮಾಡಲರ್ಹರು) (೫೨-೫೩). ಏಕಾಂತ ಭಕ್ತರಿಗೆ, ಶ್ರೀವಿಷ್ಣುವೇ, ಮೋಕ್ಷಕ್ಕಿಂತಲೂ ಇಷ್ಟನು; (ಆತನ ಆಜ್ಞೆಯಿಂದೇ ಮೋಕ್ಷವನ್ನಾದರೂ ಸ್ವೀಕರಿಸುತ್ತಾರೆ—ಸುಖಕ್ಕಾಗಿ ಅಲ್ಲ);[1] ಅವರಿಂದಲೂ, ಮತ್ತು ಸಜ್ಜನರಿಂದಲೂ, ಮೋಕ್ಷವು ತಪ್ಪದೇ ಹೊಂದಲ್ಪಡುತ್ತದೆ; ಶ್ರೀವಿಷ್ಣುವು ಮೋಕ್ಷವನ್ನು

---

1. 'ಏಕಾಂತಭಕ್ತಾಸ್ತೇ ಪ್ರೀತಿಮಾತ್ರೋದ್ದೇಶ್ಯಾಸ್ತಥಾ ಹರೇ॥' (ಸ.ರ.ಮಾ.) ಮತ್ತು
'ನೇಚ್ಛಂತಿ ಸಾಯುಜ್ಯಮಪಿ ಫಲತ್ವೇನ ಹರಿರ್ಯದಿ।
ದದಾತಿ ಭಕ್ತಿಸಂತುಷ್ಟ ಆಜ್ಞಾತ್ವೇನೈವ ಗೃಹ್ಣತೇ' ॥ (ಭಾಗ-ತಾ).
ಎಂದರೆ, 'ಶ್ರೀಹರಿಪ್ರೀತಿಯೊಂದನ್ನೇ ಉದ್ದೇಶಿಸಿ ಭಕ್ತಿಮಾಡುವವರು ಏಕಾಂತಭಕ್ತರು'; 'ಭಕ್ತಿಯಿಂದ ಪ್ರೀತನಾಗಿ, ಶ್ರೀಹರಿಯು, ಅವರಿಗೆ ಸಾಯುಜ್ಯ ಮುಕ್ತಿಯನ್ನು ಕೊಟ್ಟರೂ ಅದನ್ನು ಭಕ್ತಿಯ ಫಲವಾಗಿ ಸ್ವೀಕರಿಸಲು ಇಚ್ಛಿಸುವುದಿಲ್ಲ—ಶ್ರೀಹರಿಯ ಆಜ್ಞೆಯೆಂದು ಮಾತ್ರ ಸ್ವೀಕರಿಸುತ್ತಾರೆ'.

ಏಕಾಂತಾನಾಂ ವಿಷ್ಣುರೇವಾಖಿಲೇಷ್ಟೋ
ಮೋಕ್ಷಸ್ತೇಭ್ಯೋಥೋಪಿ ಯೇ ಸಜ್ಜನಾಃ ಸ್ಯುಃ ।
ಯಸ್ಮಾದ್ವಿಷ್ಣುರ್ಮೋಕ್ಷದೋ ಲಭ್ಯ ಏವ
ಶ್ರೇಷ್ಠಸ್ತಸ್ಮಾತ್ಸಂಗಮಃ ಸಜ್ಜನಾನಾಂ ॥ ೫೬ ॥

ಏಕಾಂತಾನಾಂ-ಏಕಾಂತ ಭಕ್ತರಿಗೆ, ವಿಷ್ಣುಃ ಏವ-ಶ್ರೀವಿಷ್ಣುವೇ, ಅಖಿಲೇಷ್ಟಃ-ಸರ್ವಾಧಿಕೇಷ್ಟನು (ಮೋಕ್ಷಕ್ಕಿಂತ ಅಧಿಕೇಷ್ಟನು); ಮೋಕ್ಷಃ-ಮೋಕ್ಷವು, ತೇಭ್ಯಃ-ಅವರಿಂದಲೂ, ಯೇ-ಯಾರು, ಸಜ್ಜನಾಃ-ಸಜ್ಜನರು, ಸ್ಯುಃ-ಆಗಿರುವರೋ, (ತೇಭ್ಯಃ-ಅವರಿಂದಲೂ) (ಲಭ್ಯಃ-ಹೊಂದಲಾಗುತ್ತದೆ); ಯಸ್ಮಾತ್-ಯಾವ ಕಾರಣದಿಂದ, ವಿಷ್ಣುಃ-ಶ್ರೀವಿಷ್ಣುವು, ಮೋಕ್ಷದಃ-ಮುಕ್ತಿಪ್ರದನೋ, ಲಭ್ಯಃ ಏವ-(ಮುಕ್ತಿಯಲ್ಲಿ) ಹೊಂದಲಡುವನೋ, ತಸ್ಮಾತ್-ಆದ್ದರಿಂದ, ಸಜ್ಜನಾನಾಂ-ಸಜ್ಜನರ, ಸಂಗಮಃ-ಸಂಗವು, ಶ್ರೇಷ್ಠಃ-(ಸಾಧನಗಳಲ್ಲಿ) ಶ್ರೇಷ್ಠವು.

ಸತ್ಸಂಗಮಹಿಮಾವರ್ಣನವೆಂಬ ೪೬ನೆಯ ಅಧ್ಯಾಯವು ಮುಗಿದುದು.

## ಅಧ್ಯಾಯ ೪೭

ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

ನಾರೀ ವಾ ಪುರುಷೋ ವಾಪಿ ಯೋ ಮುಮುಕ್ಷುರ್ಭವೇದಿಹ ।
ಸ ದುಸ್ಸಂಗಂ ನ ಕುರ್ವೀತ ಸ್ವಸ್ಯ ಪಾತೋ ಭವೇದ್ಯತಃ ॥ ೧ ॥

ಅರ್ಥ:—ನಾರೀ ವಾ-ಸ್ತ್ರೀಯಾಗಲಿ, ಪುರುಷಃ ವಾಪಿ-ಪುರುಷನಾಗಲಿ, ಯಃ-ಯಾರು, ಇಹ-ಈ ದೇಹದಲ್ಲಿ ಮುಮುಕ್ಷುಃ-ಮೋಕ್ಷಾಪೇಕ್ಷಿಯು, ಭವೇತ್-ಆಗಿರುವನೋ, ಸಃ-ಅವನು, ಯತಃ-ಯಾವುದರಿಂದ, ಸ್ವಸ್ಯ-ತನ್ನ ಪಾತಃ-

---

ಪ್ರದಾನಮಾಡುವವನೂ, ಮೋಕ್ಷದಲ್ಲಿ ಪ್ರಾಪ್ಯನೂ ಆಗಿರುವುದರಿಂದ, ಸಜ್ಜನರ ಸಂಗವೇ ಶ್ರೇಷ್ಠಸಾಧನವು (೫೬).

೪೬ನೇ ಅಧ್ಯಾಯವು ಮುಗಿದುದು.

ಅಧ್ಯಾಯ ೪೭

ತಾತ್ಪರ್ಯ:—ಮನುಷ್ಯ ದೇಹದಲ್ಲಿರುವ ಸ್ತ್ರೀಯಾಗಲಿ ಪುರುಷನಾಗಲಿ ಮೋಕ್ಷಾಪೇಕ್ಷಿಯು, ತನ್ನ ಅಧೋಗತಿಗೆ ಕಾರಣವಾಗುವ ದುರ್ಜನ ಸಂಗವನ್ನು ಮಾಡಕೂಡದು. (ಯತ್ನಪೂರ್ವಕ ತ್ಯಜಿಸಿ ದುರ್ಜನರಿದ ದೂರವಿರಬೇಕು) (೧). ತಂದೆಯಾಗಲಿ, ಸಹೋದರನಾಗಲಿ, ಮಗನಾಗಲಿ, ಯತಿಯಾಗಲಿ, ಯೋಗೀಶ್ವರ

ಅಧೋಗತಿಯು, ಭವೇತ್-ಸಂಭವಿಸುವುದೋ, ದುಸ್ಸಂಗಂ-(ಅಂಥ) ದುರ್ಜನ ಸಹವಾಸವನ್ನು, ನ ಕುರ್ವೀತ-ಮಾಡತಕ್ಕದ್ದಲ್ಲ.

**ಪಿತಾ ಭ್ರಾತಾ ಸುತೋ ವಾಪಿ ಯತಿರ್ಯೋಗೀಶ್ವರೋಽಪಿ ವಾ ।**
**ದೂರಾದೇವ ಸ ಸೇವ್ಯಃ ಸ್ಯಾತ್ಸಾನ್ನಿಧ್ಯಾದುಭಯಚ್ಯುತಿಃ ॥ ೨ ॥**
**ಲೋಹಾಯಸ್ಕಾಂತವನ್ನಾರೀನರಸಂಗತಿರುಚ್ಯತೇ ।**
**ತಥೈವ ನವನೀತಾಗ್ನಿಸದೃಕ್ ತತ್ಸಂಗಮೋ ಭವೇತ್ ॥ ೩ ॥**

ಪಿತಾ-ತಂದೆಯಾಗಲಿ, ಭ್ರಾತಾ-ಸಹೋದರನಾಗಲಿ, ಸುತಃ ಅಪಿ ವಾ-ಮಗನೇ ಆಗಲಿ, ಯತಿಃ-ಸನ್ಯಾಸಿಯಾಗಲಿ, ಯೋಗೀಶ್ವರಃ ಅಪಿ ವಾ-ಯೋಗೀಶ್ವರನೇ ಆಗಲಿ, ಸಃ-ಆತನು, ದೂರಾತ್ ಏವ-ದೂರದಿಂದಲೇ, ಸೇವ್ಯಃ ಸ್ಯಾತ್-(ಸ್ತ್ರೀಯಿಂದ) ಸೇವ್ಯನು ಆಗಿರುತ್ತಾನೆ; ಸಾನ್ನಿಧ್ಯಾತ್-ಸಾಮೀಪ್ಯದಿಂದ, ಉಭಯ ಚ್ಯುತಿಃ-ಉಭಯರ (ಸ್ತ್ರೀಪುರುಷರಿಬ್ಬರ) ಪಾತವು (ಸಂಭವಿಸುತ್ತದೆ; ನಾರೀನರಸಂಗತಿಃ-ಸ್ತ್ರೀ ಪುರುಷರ ಸಾಮೀಪ್ಯವು (ಸಮೀಪದಲ್ಲಿ ಸೇರುವಿಕೆಯು), ಲೋಹಾಯಸ್ಕಾಂತವತ್-ಕಬ್ಬಿಣ ಮತ್ತು ಸೂಜಿಗಲ್ಲುಗಳಂತೆ (ಪರಸ್ಪರ ಆಕರ್ಷಣೆಯುಳ್ಳವರೆಂದು), ಉಚ್ಯತೇ-ಹೇಳಲಾಗುತ್ತದೆ; ತಥಾ ಏವ-ಹಾಗೆಯೇ, ತತ್ಸಂಗಮಃ-ಅವರ ಸೇರುವಿಕೆಯು (ಸ್ತ್ರೀ ಪುರುಷರ ಸಂಗವು—ಸಹವಾಸವು), ನವನೀತಾಗ್ನಿಸದೃಕ್-ಬೆಣ್ಣೆ ಬೆಂಕಿಗಳಂತೆ, ಭವೇತ್-ಆಗುತ್ತದೆ. (ಅಗ್ನಿಯ ಸನ್ನಿಧಾನದಿಂದ, ಬೆಣ್ಣೆಯು ಹೇಗೆ ತಪ್ಪದೇ ಕರಗುವುದೋ ಹಾಗೆ ಪುರುಷನ ಮನಸ್ಸು—ಅಥವಾ ಉಭಯರ ಮನಗಳೂ ದ್ರವಿಸುತ್ತವೆ-ಕರಗಿ ಹರಿಯುತ್ತದೆ.)

**ಪಂಚಚೂಡಾಪ್ಸರಾ ಪ್ರಾಹ ದೇವರ್ಷಿಂ ನಾರದಂ ಪುರಾ ।**
**ರಮ್ಯಂ ಪುರುಷಮಾಲೋಕ್ಯ ಸ್ತ್ರೀಯೋನಿಃ ಖಿದ್ಯತಿ ಭೃಶಂ ॥ ೪ ॥**
**ತಥೈವ ಪುರುಷೋ ನಾರೀಂ ದೃಷ್ಟ್ವಾ ಮಾದ್ಯತಿ ನಾನ್ಯಥಾ ।**
**ಮನಸಾ ಸಂಗಮನ್ವಿಚ್ಛನ್ನಿವೇಕಾದ್ವಿನಿವರ್ತತೇ ॥ ೫ ॥**

---

ನಾಗಲಿ, ಸ್ತ್ರೀಯು ಆತನನ್ನು ದೂರದಿಂದಲೇ ಸೇವಿಸಬೇಕು; (ಸ್ತ್ರೀ ಪುರುಷರ ಅತಿಸಮೀಪದ ವಾಸವೂ ದುಸ್ಸಂಗವೆಂದೇ ಭಾವಿಸಿ ತ್ಯಜಿಸಬೇಕು; ಏಕೆಂದರೆ ಅದರಿಂದ ಮಹಾ ಅನರ್ಥ ಸಂಭವಿಸುತ್ತದೆ); ಸ್ತ್ರೀ ಪುರುಷರ ಸಮೀಪ ವಾಸದಿಂದ ಉಭಯರ ಅಧಃಪಾತವಾಗುತ್ತದೆ; ಈ ಉಭಯರ ಸಹವಾಸವು ಲೋಹ ಮತ್ತು ಅಯಸ್ಕಾಂತದಂತೆ ಪರಸ್ಪರ ಆಕರ್ಷಕವು; ಮತ್ತು ಅವರ ಸಾಮೀಪ್ಯವು ಬೆಣ್ಣೆ ಬೆಂಕಿಗಳಂತೆ (ಅಗ್ನಿಯು ಬೆಣ್ಣೆಯನ್ನು ಕರಗಿಸಿ ನೀರಾಗಿ ಮಾಡುವಂತೆ ಪುರುಷನ ಮನಸ್ಸು ವಿಕಾರಹೊಂದುತ್ತದೆ; 'ಘೃತಕುಂಭಸಮಃ ಪುಮಾನ್' ಇತ್ಯಾದಿ ಹೇಳಿದಂತೆ (೨-೩). ಹಿಂದೆ ಪಂಚಚೂಡಾ

**ಮನಃಕ್ಷೋಭಕರಃ ಸಂಗೋ ದುಃಸಂಗ ಇತಿ ಗೀಯತೇ ।**

ಪುರಾ-ಪೂರ್ವದಲ್ಲಿ ಪಂಚಚೂಡಾ ಅಪ್ಸರಾ-ಪಂಚಚೂಡಾ ನಾಮಕಳಾದ ಅಪ್ಸರೆಯು, ದೇವರ್ಷಿಂ-ದೇವರ್ಷಿಯಾದ, ನಾರದಂ-ನಾರದನನ್ನು ಕುರಿತು, ಪ್ರಾಹ-(ಸ್ವಾನುಭೂತವಾದ ಸ್ತ್ರೀ ಸ್ವಭಾವವನ್ನು) ಹೇಳಿದಳು; (ಏನೆಂದರೆ), ರಮ್ಯಂ-ಸುಂದರನಾದ, ಪುರುಷಂ-ಪುರುಷನನ್ನು ಆಲೋಕ್ಯ-ಕಂಡು, ಸ್ತ್ರೀಯೋನಿಃ-ಸ್ತ್ರೀ ದೇಹವು (ಸ್ತ್ರೀಯು—ಅಥವಾ ಸ್ತ್ರೀಯ ಗುಹ್ಯೇಂದ್ರಿಯವು), ಭೃಶಂ-ಅತಿಶಯವಾಗಿ, ಖಿದ್ಯತಿ-ವ್ಯಥೆಗೊಳ್ಳುತ್ತದೆ (ಆತನ ಸಂಗಕ್ಕಾಗಿ ವ್ಯಥೆಪಡುತ್ತದೆ); ತಥಾ ಏವ-ಹಾಗೆಯೇ, ಪುರುಷಃ-ಪುರುಷನು, ನಾರೀಂ-ಸ್ತ್ರೀಯನ್ನು ದೃಷ್ಟ್ವಾ-ಕಂಡು, ಮಾದ್ಯತಿ-ಮದಿಸುತ್ತಾನೆ (ಉನ್ಮತ್ತನಾಗುತ್ತಾನೆ); ಅನ್ಯಥಾ ನ-ಬೇರೆಯಲ್ಲ (ನಿರ್ವಿಕಾರನಾಗಿ ಉಳಿಯುವುದಿಲ್ಲ); ಮನಸಾ-ಮನಸ್ಸಿನಿಂದ, ಸಂಗಂ-(ಆ ಸ್ತ್ರೀಯ) ಸಂಗವನ್ನು ಅನ್ವಿಚ್ಛನ್-ಇಚ್ಛಿಸುವನಾಗಿ, ವಿವೇಕಾತ್-ವಿವೇಕದಿಂದ, ವಿನಿವರ್ತತೇ-ಹಿಂದಿರುಗುತ್ತಾನೆ (ವಿವೇಕವಿಲ್ಲದವನಾಗುತ್ತಾನೆ); (ಆದ್ದರಿಂದ), ಮನಃಕ್ಷೋಭಕರಃ-ಮನಸ್ಸನ್ನು ವ್ಯಗ್ರಗೊಳಿಸುವ, ಸಂಗಃ-ಸಂಗವು, ದುಃಸಂಗಃ-ದುಸ್ಸಂಗವು, ಇತಿ-ಎಂದು, ಗೀಯತೇ-ಹೇಳಲ್ಪಡುತ್ತದೆ.

**ಪುಂಸಾಂ ಚ ಪುಂಶ್ಚಲೀನಾಂ ಚ ಸಂಗಃ ಸ್ತ್ರೀಣಾಂ ನ ಯುಜ್ಯತೇ ॥ ೬ ॥**
**ವಿಟಾನಾಂ ಚಾಪಿ ನಾರೀಣಾಂ ಸಂಗಃ ಪುಂಸಾಂ ನ ಯುಜ್ಯತೇ ।**

ಸ್ತ್ರೀಣಾಂ-ಸ್ತ್ರೀಯರಿಗೆ, ಪುಂಸಾಂ-ಪುರುಷರ, ಚ-ಮತ್ತು ಪುಂಶ್ಚಲೀನಾಂ-ವ್ಯಭಿಚಾರಿ ಸ್ತ್ರೀಯರ, ಸಂಗಃ-ಸಹವಾಸವು, ನ ಯುಜ್ಯತೇ-ಯೋಗ್ಯವಲ್ಲ; ಪುಂಸಾಂ-ಪುರುಷರಿಗೆ, ನಾರೀಣಾಂ-ಸ್ತ್ರೀಯರ, ಅಪಿ ಚ-ಮತ್ತು ವಿಟಾನಾಂ-ವಿಟಪುರುಷರ

---

ನಾಮಕಳಾದ ಅಪ್ಸರೆಯು, ದೇವರ್ಷಿನಾರದನನ್ನು ಕುರಿತು, ಹೀಗೆ, ಹೇಳಿರುವಳು: ಮನೋಹರನಾದ ಪುರುಷನನ್ನು ಕಂಡು ಸ್ತ್ರೀಯು (ಸ್ತ್ರೀ ಯೋನಿಯು-ಸ್ತ್ರೀ ಜಾತಿಯ, ಸ್ತ್ರೀದೇಹದಲ್ಲಿ ಬಂದ ಪ್ರಾಣಿ ಮಾತ್ರವು), ಅತಿಶಯವಾಗಿ ವ್ಯಥೆಗೊಳ್ಳುತ್ತಾಳೆ (ಮನಸ್ಸು ಆತನ ಸಂಗಕ್ಕಾಗಿ ದುಡುಕಿ ವ್ಯಥೆಪಡುತ್ತದೆ); ಅದರಂತೆ, ಪುರುಷನು ಸ್ತ್ರೀಯನ್ನು ಕಂಡು, ಮನಸ್ಸಿನಿಂದ ಆಕೆಯ ಸಂಗವನ್ನು ಬಯಸಿ, ವಿವೇಕವನ್ನೇ ಕಳೆದುಕೊಳ್ಳುತ್ತಾನೆ—ಉನ್ಮತ್ತನಂತಾಗುತ್ತಾನೆ; ಮನಸ್ಸನ್ನು ಕದಡಿ, ಶಾಂತಿಯನ್ನು ನಾಶಗೊಳಿಸುವ ಸಂಗವು ದುಃಸಂಗವೆನಿಸುತ್ತದೆ; ಸರ್ವರೂ ದುಃಸಂಗವನ್ನು ತ್ಯಜಿಸಿ ದೂರವಿರಬೇಕಾದುದು ಅತ್ಯವಶ್ಯಕ (೪-೫). ಸ್ತ್ರೀಯರಿಗೆ ಪರಪುರುಷರ ಮತ್ತು ವ್ಯಭಿಚಾರಿ ಸ್ತ್ರೀಯರ ಸಹವಾಸವು ಯೋಗ್ಯವಲ್ಲ; ಹಾಗೆಯೇ ಪುರುಷರಿಗೆ, ಪರಸ್ತ್ರೀಯರ ಮತ್ತು ವಿಟಪುರುಷರ ಸಂಗವು ಯೋಗ್ಯವಲ್ಲ; ಉಭಯರಿಗೂ ಈ ವಿಧ ಸಂಗವು ಅನರ್ಥಗಳಿಗೆ ಕಾರಣವಾಗುತ್ತದೆ; (೬). ಪುರುಷನು, ನಿತ್ಯವೂ, ಕಟ್ಟಿಗೆಯ ಹೆಣ್ಣುಗೊಂಬೆಯನ್ನು

(ಪರಸ್ತ್ರೀಯರಲ್ಲಿ ಆಸಕ್ತರಾದವರ), ಸಂಗಃ-ಸಹವಾಸವು, ನ ಯುಜ್ಯತೇ-ಯೋಗ್ಯವಲ್ಲ (ಅನರ್ಥಗಳಿಗೇ ಕಾರಣವಾಗುತ್ತದೆ).

**ಕಾಷ್ಠಪುತ್ತಲಿಕಾಂ ನಿತ್ಯಂ ದೃಷ್ಟ್ವಾ ಮಾದ್ಯೇತ್ಸುಮಾನಯಂ ॥ ೭ ॥**
**ಸ ಕಥಂ ನೈವ ಮಾದ್ಯೇತ ನಾರೀಮುಪಗತಾಮಿಹ ।**
**ಸ್ವಸಾರಂ ಮಾತರಂ ಕನ್ಯಾಮಪಿ ಸ್ವನಿಕಟೇ ಪುಮಾನ್ ॥ ೮ ॥**
**ವಾಸಯೇದೇಕಶಯ್ಯಾದೌ ವಾಸನಸ್ಪರ್ಶನಾದಿಷು ।**
**ಯಥಾ ತೃಣಕುಟೀವಹ್ನಿರ್ನಿದಾಘೇ ಶಕ್ಯತೇ ನ ಹಿ ॥ ೯ ॥**
**ತೋಯೇನ ಶಮಿತುಂ ತದ್ವತ್ಕಾಮೋ ವಿವೇಕವಾರಿಣಾ ।**

ಅಯಂ-ಈ, ಪುಮಾನ್-ಪುರುಷನು, ನಿತ್ಯಂ-ನಿತ್ಯವೂ, ಕಾಷ್ಠಪುತ್ತಲಿಕಾಂ-ಮರದ ಸ್ತ್ರೀ ಗೊಂಬೆಯನ್ನು ದೃಷ್ಟ್ವಾ-ನೋಡಿ, ಮಾದ್ಯೇತ್-(ಮದನತಾಪದಿಂದ) ಎಚ್ಚರ ತಪ್ಪುತ್ತಾನೆ; ಸಃ ಪುಮಾನ್-ಹೀಗಿರುವ ಪುರುಷನು, ಇಹ-ಈ ಲೋಕದಲ್ಲಿ (ದೇಹದಲ್ಲಿ), ಸ್ವಸಾರಂ-ಸಹೋದರಿಯೂ, ಮಾತರಂ-ತಾಯಿಯೂ, ಕನ್ಯಾಂ ಅಪಿ-ಪುತ್ರಿಯೂ ಆದ, ಸ್ವನಿಕಟೇ-ತನ್ನ ಸಮೀಪದಲ್ಲಿ ಉಪಗತಾಂ-ಪ್ರಾಪ್ತಳಾದ, ನಾರೀಂ-ಸ್ತ್ರೀಯನ್ನು (ಕಂಡು), ಕಥಂ-ಹೇಗೆ, ನೈವ ಮಾದ್ಯೇತ-ಕಾಮೋದ್ರೇಕಿತ ನಾಗದಿರುವನು? (ಸಹಜವಾಗಿ ಆಗುತ್ತಾನೆ); ಏಕಶಯ್ಯಾದೌ-ಒಂದೇ ಆಸನ ಶಯ್ಯಾದಿಯಲ್ಲಿ (ಒಂದೇ ಹಾಸಿಗೆ ಮೊದಲಾದುದರಲ್ಲಿ) ವಾಸನ ಸ್ಪರ್ಶನಾದಿಷು-ಸಮೀಪವಾಸ ಸ್ಪರ್ಶಾದಿಗಳಿರುವಂತೆ, (ಸ್ಪರ್ಶಾದಿ ಅವಸ್ಥೆಗಳಲ್ಲಿ) (ಯದಿ) ವಾಸಯೇತ್-ಇರಲು ಅವಕಾಶ ಕೊಟ್ಟರೆ, ಶಮಿತುಂ-(ಕಾಮೋದ್ರೇಕವನ್ನು) ಉಪಶಮಗೊಳಿಸಲು (ಆರಿಸಲು-ಸೋದಿಸಲು), ನ ಶಕ್ಯತೇ-ಸಮರ್ಥನಾಗುವುದಿಲ್ಲ ಹಿ-ನಿಶ್ಚಯವು; ಯಥಾ-ಹೇಗೆ, ನಿದಾಘೇ-ಬೇಸಿಗೆ ಕಾಲದಲ್ಲಿ, ತೃಣಕುಟೀವಹ್ನಿ-ಹುಲ್ಲು ಗುಡಿಸಲಿಗೆ ಹೊತ್ತಿದ ಅಗ್ನಿಯು, ಶಮಿತುಂ-ಆರಿಸಲಿಕ್ಕೆ, ನ ಶಕ್ಯತೇ-ಸಾಧ್ಯವಾಗುವುದಿಲ್ಲವೋ, ತದ್ವತ್-ಹಾಗೆ, ವಿವೇಕವಾರಿಣಾ-ಜ್ಞಾನವೆಂಬ ಜಲದಿಂದ,

---

ನೋಡುತ್ತಿದ್ದರೆ ಸಹ, ಮನಸ್ಸು ವಿಕಾರಗೊಂಡು, ಕಾಮದಿಂದ ಮದಿಸುತ್ತಾನೆ (ಎಚ್ಚರ ತಪ್ಪುತ್ತಾನೆ); ಹೀಗಿರಲು ಸ್ತ್ರೀಯೇ ಅವನ ಸಮೀಪದಲ್ಲಿದ್ದರೆ, ಆಕೆಯು, ಸಹೋದರಿಯಾಗಲಿ, ತಾಯಿಯಾಗಲಿ, ತನ್ನ ಮಗಳೇ ಆಗಲಿ, ಮನೋವಿಕಾರವನ್ನು ಹೊಂದದಿರಲು ಸಾಧ್ಯವಿಲ್ಲ ಏಕತ್ರವಾಸ. ಸ್ಪರ್ಶಾದಿಗಳಿಗೆ ಅವಕಾಶವಿರುವಂತೆ, ಒಂದೇ ಹಾಸಿಗೆ ಮೊದಲಾದವುಗಳಲ್ಲಿರಲು ಅವರಿಗೆ ಅವಕಾಶವಿತ್ತರೆ, ಬೇಸಿಗೆಯಲ್ಲಿ ಬೆಂಕಿ ಹತ್ತಿದ ಹುಲ್ಲುಗುಡಿಸಲನ್ನು ಆರಿಸುವುದು ಹೇಗೆ ದುಸ್ಸಾಧ್ಯವೋ, ಹಾಗೆ ಜ್ಞಾನವೆಂಬ ಜಲದಿಂದ ಕಾಮಜ್ವಾಲೆಯನ್ನು ಉಪಶಮನಗೊಳಿಸಲು ಸಾಧ್ಯವಾಗುವುದಿಲ್ಲ (೭-೯).

ಕಾಮಃ-ಕಾಮವು, (ಶಮಿತುಂ ನ ಶಕ್ಯತೇ-ಕಾಮವನ್ನು ಶಮನಗೊಳಿಸಲು ಸಾಧ್ಯವಾಗುವುದಿಲ್ಲ).

**ತಪಸಶ್ಚ್ಯಾವಿತೋ ಮತ್ಸ್ಯಸಂಗಾದ್ಯೋಗೀ ಸ ಸೌಭರಿಃ ॥ ೧೦ ॥**
**ಶ್ವಾನತ್ವಮುರ್ವಶೀಸಂಗಾದ್ವಿಶ್ವಾಮಿತ್ರೋಽಭಜನ್ಮುನಿಃ ।**
**ಸಹಸ್ರಭಗತಾಂ ಪ್ರಾಪ್ತಃ ಶಕ್ರಶ್ಚಂದ್ರಶ್ಚ ಸಂಕ್ಷಯಂ ॥ ೧೧ ॥**
**ಅಹಲ್ಯಾ ತು ಶಿಲಾದೇಹಮನ್ಯೇ ನಾನಾ ಮುನೀಶ್ವರಾಃ ।**
**ರಾಜರ್ಷಯೋ ದೇವರ್ಷಯಶ್ಚ ಮಹಾಯೋಗೇಶ್ವರಾ ಅಪಿ ॥ ೧೨ ॥**
**ಆರೂಢಯೋಗಾಃ ಪ್ರಾಯೇಣ ಸ್ತ್ರೀಸಂಗಾಚ್ಚ್ಯಾವಿತಾ ಧ್ರುವಂ ।**

ಸಃ-ಆ (ಪ್ರಸಿದ್ಧ), ಯೋಗೀ-ಯೋಗಿಗಳಾದ, ಸೌಭರಿಃ-ಸೌಭರಿ ಋಷಿಯು, ಮತ್ಸ್ಯಸಂಗಾತ್-ಮೈಥುನದಲ್ಲಿದ್ದ ಮೀನುಗಳನ್ನು ನೋಡಿದ್ದರಿಂದ, ತಪಸಃ-ತಪಸ್ಸಿನಿಂದ, ಚ್ಯಾವಿತಃ-ಚ್ಯುತನಾದನು; ಮುನಿಃ-ಮುನಿಯಾದ (ಪ್ರಸಿದ್ಧ ಮುನಿಯಾದ), ವಿಶ್ವಾಮಿತ್ರಃ-ವಿಶ್ವಾಮಿತ್ರನು, ಉರ್ವಶೀಸಂಗಾತ್-ಉರ್ವಶೀ ಸಹವಾಸದಿಂದ, ಶ್ವಾನತ್ವಂ-(ಹೆಣ್ಣನ್ನು ಹಿಂಬಾಲಿಸುವ) ನಾಯಿಯಂತೆ, ಅಭಜತ್-ಆದನು; ಶಕ್ರಃ-ದೇವೇಂದ್ರನು, ಸಹಸ್ರ ಭಗತಾಂ-(ದೇಹದಲ್ಲಿ) ಸಹಸ್ರ ಭಗಗಳುಳ್ಳ ತನುವನ್ನು ಪ್ರಾಪ್ತಃ-ಹೊಂದಿದನು; ಚಂದ್ರಶ್ಚ-ಚಂದ್ರನಾದರೋ, ಸಂಕ್ಷಯಂ-ಕ್ಷಯವನ್ನು (ಹೊಂದಿದನು); ಅಹಲ್ಯಾ ತು-ಅಹಲ್ಯೆಯೂ, ಶಿಲಾದೇಹಂ-(ಶಿಲೆಯಾದಳು) ಶಿಲಾದೇಹವನ್ನು (ಅಭಜತ್-ಹೊಂದಿದಳು); ಅನ್ಯೇ-(ಇನ್ನು) ಇತರ, ನಾನಾ ಮುನೀಶ್ವರಾಃ-ಋಷಿಶ್ರೇಷ್ಠರು (ದೇವಾದಿ ಜ್ಞಾನಿಶ್ರೇಷ್ಠರು), ರಾಜರ್ಷಯಃ-ರಾಜರ್ಷಿಗಳು, ದೇವರ್ಷಯಃ-ದೇವರ್ಷಿಗಳು, ಮಹಾಯೋಗೇಶ್ವರಾಃ ಅಪಿ-ಮಹಾ

---

ಜ್ಞಾನಿಯಾದ ಸೌಭರಿ ಋಷಿಯು, ಸ್ನಾನಕಾಲದಲ್ಲಿ ಮೈಥುನದಲ್ಲಿದ್ದ ಮತ್ಸ್ಯಗಳನ್ನು ಕಂಡು, ಆ ಸುಖವನ್ನು ತಾನೂ ಹೊಂದಲಪೇಕ್ಷಿಸಿ (೫೦ ಕನ್ಯೆಯರನ್ನು ಲಗ್ನವಾಗಿ) ತಪಸ್ಸಿನಿಂದ ಚ್ಯುತನಾದನು; ವಿಶ್ವಾಮಿತ್ರ ಋಷಿಯು ಉರ್ವಶೀ ಸಂಗದಿಂದ ಶ್ವಾನದಂತಾದನು (ಹೆಣ್ಣು ನಾಯಿಯನ್ನು ಬೆನ್ನುಹತ್ತುವ ನಾಯಿಯಂತೆ ಆದನು); ಇಂದ್ರನು, ಅಹಲ್ಯೆಗೆ ಮೋಹಿಸಿ, ಗೌತಮರ ಶಾಪದಿಂದ ಸಹಸ್ರಭಗನಾದನು (ದೇವತಾಕಾರ್ಯಕ್ಕಾಗಿ, ಅಹಲ್ಯಾಗಮನ ಮಾಡಿದ್ದನಾದ ಕಾರಣದಿಂದ—ಗೌತಮರ ಅಧಿಕವಾದ ತಪಸ್ಸನ್ನು ತನಗೆ ಶಾಪಕೊಡುವುದರಿಂದ ಕಳೆದುಕೊಳ್ಳುವಂತೆ ಮಾಡಲು ಹೋಗಿದ್ದನಾದ್ದರಿಂದ), (ದೇವತೆಗಳ ತಪಃಪ್ರಭಾವದಿಂದ ಸಹಸ್ರಾಕ್ಷನಾದನು); ಚಂದ್ರನು ಅಶ್ವಿನ್ಯಾದಿ ೨೭ ದಕ್ಷಪುತ್ರಿಯರನ್ನು ಲಗ್ನವಾಗಿ ಅವರಲ್ಲಿ ವಿಶೇಷವಾಗಿ ರೋಹಿಣೀ ಲೋಲುಪನಾದ್ದರಿಂದ, ಅದನ್ನು ತಿಳಿದ ದಕ್ಷಪ್ರಜಾಪತಿಯು, ಕ್ಷಯರೋಗಿಯಾಗೆಂದು ಚಂದ್ರನಿಗೆ ಶಾಪಕೊಟ್ಟನು—ಇದು ಸ್ತ್ರೀಲೋಲುಪನಾದ

ಯೋಗೇಶ್ವರರೂ ಕೂಡ, ಆರೂಢಯೋಗಾಃ-ಅಪರೋಕ್ಷ ಜ್ಞಾನಿಗಳೂ (ಯೋಗ ವೆಂಬ ನಿಚ್ಚಣಿಯನ್ನು ಏರಿ ಕುಳಿತವರು), ಪ್ರಾಯೇಣ-ಬಹುವಾಗಿ (ಹೆಚ್ಚು ಸಂಖ್ಯೆಯಲ್ಲಿ) ಸ್ತ್ರೀಸಂಗಾತ್-ಸ್ತ್ರೀ ಸಂಗದಿಂದ, ಚ್ಯಾವಿತಾ-ಸ್ಥಾನಚ್ಯುತರಾದರು; ಧ್ರುವಂ-ನಿಶ್ಚಯವು (ಸ್ತ್ರೀ ಸಂಗವು ಜ್ಞಾನಿಗಳಿಗೂ ಅನರ್ಥಕರವೆಂಬುದು ನಿಸ್ಸಂಶಯ).

ಸುಶೀಲಾ ಬ್ರಾಹ್ಮಣೀ ಪೂರ್ವಂ ತಪಸಾರಾಧಯದ್ಧರಿಂ ॥ ೧೩ ॥
ಬಾಲವೈಧವ್ಯಮಾಪನ್ನಾ ಪುರುಷಸ್ಪರ್ಶವರ್ಜಿತಾ ।
ಮ್ರಿಯಮಾಣಾ ತು ಸಾ ಸ್ಪೃಷ್ಟಾ ಪುರುಷೈಃ ಕೃಪಯೈವ ಹಿ ॥ ೧೪ ॥
ತದವಸ್ಥಾಪಿ ಸಾಜ್ಞಾಸೀತ್ ಪುಂಸಂಗಾದೀದೃಶಂ ಸುಖಂ ।
ನಾನುಭೂತಂ ಮಯಾ ಪೂರ್ವಂ ಭೂಯಾದಿತಿ ತದೈವ ಹಿ ॥ ೧೫ ॥
ಮೃತಾ ವಿದೇಹನಗರೇ ವೇಶ್ಯಾಭೂತ್ ಪಿಂಗಲಾಭಿಧಾ ।
ನಾನಾಸತ್ಕರ್ಮನಿಚಯೈಃ ಸಾ ತಾಂ ಲೇಭೇ ಪರಾಂ ಗತಿಂ ॥ ೧೬ ॥

ಸ್ತ್ರೀ ಪುರುಷರ ಪರಸ್ಪರ ಸ್ಪರ್ಶವೂ ಅನರ್ಥಕಾರಕವೆಂಬುದನ್ನು ಪೂರ್ವೇತಿಹಾಸ ದಿಂದ ದೃಷ್ಟಾಂತೀಕರಿಸುತ್ತಾರೆ:—

ಪೂರ್ವಂ-ಹಿಂದೆ, ಸುಶೀಲಾ ಬ್ರಾಹ್ಮಣೀ-ಸುಶೀಲಳಾದ (ಅಥವಾ ಸುಶೀಲಾ ನಾಮಕಳಾದ) ಬ್ರಾಹ್ಮಣ ಸ್ತ್ರೀಯು, ಹರಿಂ-ಶ್ರೀಹರಿಯನ್ನು, ತಪಸಾ-ತಪಸ್ಸಿನಿಂದ, ಆರಾಧಯತ್-ಆರಾಧಿಸುತ್ತಿದ್ದಳು; ಬಾಲವೈಧವ್ಯಂ-ಚಿಕ್ಕವಯಸ್ಸಿನಲ್ಲಿಯೇ (ಪೂರ್ವ ಕರ್ಮ ಫಲವಾಗಿ) ವೈಧವ್ಯವನ್ನು ಆಪನ್ನಾ-ಹೊಂದಿದವಳು (ಆದಳು); (ಈ ಕಾರಣ ದಿಂದ, ಆ ದೇಹದಲ್ಲಿ) ಪುರುಷ ಸ್ಪರ್ಶವರ್ಜಿತಾ-ಪುರುಷ ಸ್ಪರ್ಶವನ್ನೇ ಹೊಂದಲಿಲ್ಲ (ಪ್ರಾಪ್ತ ವಯಸ್ಕಳಾದನಂತರವೂ ಪುರುಷ ಸ್ಪರ್ಶರಹಿತಳಾಗಿದ್ದಳು); ಮ್ರಿಯಮಾಣಾ-ಮರಣಾವಸ್ಥೆಯಲ್ಲಿದ್ದ ಸಾ-ಅವಳು, ಕೃಪಯಾ ಏವ-ಕೃಪಾ ಮಾತ್ರದಿಂದ (ಬೇರಾವ

---

ಫಲವು; ಅಹಲ್ಯೆಗೆ ಇಂದ್ರಸಂಗದಿಂದ ಶಿಲೆಯಾಗಿರಲು ಗೌತಮರಿಂದ ಶಾಪ ಬಂದಿತು (ಇಂದ್ರನು ಗೌತಮರಂತೆ ವೇಷ ಧರಿಸಿ ವಂಚನೆಯಿಂದ ಅಹಲ್ಯೆಯ ಸಂಗದಲ್ಲಿ ತೊಡಗಿದರೂ, ಸಂಗಕಾಲದಲ್ಲಿ ತಿಳಿದ ಅಹಲ್ಯೆಯು, ನಿವೃತ್ತಳಾಗದೇ, ತಪ್ಪು ಭಾವನೆಯಿಂದ ಸಹಿಸಿಕೊಂಡ ಕಾರಣ ಅವಳಿಗೂ ಶಾಪ ಬಂದಿತು—ಏವಂಚ ಪರಪುರುಷನ ಸಂಗವು ಸ್ತ್ರೀಗೆ ಸಹ ಅನರ್ಥಕರವೇ); ಇನ್ನೂ ಇತರರಾದ, ಮುನೀಶ್ವರರು, ರಾಜರ್ಷಿಗಳು, ದೇವರ್ಷಿಗಳು, ಮಹಾಯೋಗೇಶ್ವರರು, ಯೋಗಸಿದ್ಧರೂ ಸಹ (ಅಪರೋಕ್ಷ ಜ್ಞಾನಿಗಳೂ), ಬಹುವಾಗಿ ಸ್ತ್ರೀ ಸಂಗದಿಂದ ಪತಿತರಾಗಿರುವರು—ನಿಶ್ಚಯವು (೧೦-೧೨). ಪರಪುರುಷ ಸ್ಪರ್ಶಾದಿಸಂಗದಿಂದ ಸ್ತ್ರೀಯರಿಗೆ ಸಹ ಅನರ್ಥವು ತಪ್ಪಿದ್ದಲ್ಲ; ಪೂರ್ವದಲ್ಲಿ ಸುಶೀಲಾ ನಾಮಕ ಬ್ರಾಹ್ಮಣ ಸ್ತ್ರೀಯು ತಪಸ್ಸಿನಿಂದ ಶ್ರೀಹರಿಯನ್ನು ಆರಾಧಿಸಿದಳು; ಆಕೆಯು ಪೂರ್ವಕರ್ಮ

ಉದ್ದೇಶವೂ ಇಲ್ಲದ, ವೈದ್ಯರೇ ಮೊದಲಾದ), ಪುರುಷೈಃ-ಪುರುಷರಿಂದ, ಸ್ಪೃಷ್ಟಾ-ಸ್ಪರ್ಶಿಸಲ್ಪಟ್ಟಳು (ಆಕೆಯನ್ನು ಮುಟ್ಟಿದರು); ಹಿ-ಅಷ್ಟು ಕಾರಣದಿಂದಲೇ, ತದವಸ್ಥಾ ಅಪಿ-ಆ (ಮರಣಾವಸ್ಥೆಯಲ್ಲಿ) ಅವಸ್ಥೆಯಲ್ಲಿದ್ದರೂ, ಸಾ-ಆಕೆಯು, ಪುಂಸಂಗಾತ್-ಪುರುಷ ಸಂಗದಿಂದ, ಈದೃಶಂ-ಈ ವಿಧವಾದ, ಸುಖಂ-ಸುಖವುಂಟೆಂದು, ಜ್ಞಾ-ತಿಳಿದವಳು, ಆಸೀತ್-ಆದಳು; ಮಯಾ-ನನ್ನಿಂದ, ಪೂರ್ವಂ-ಈ ಹಿಂದೆ, ನ ಅನುಭೂತಂ-(ಈ ವಿಧ ಸುಖವು) ಅನುಭವಿಸಲ್ಪಡಲಿಲ್ಲ; ಭೂಯಾತ್-ಈ ಸುಖವು ನನಗಾಗಲಿ, ಇತಿ-ಹೀಗೆ (ಚಿಂತಿಸಿ), ತದಾ ಏವ-ಆಗಲೇ, ಮೃತಾ-ಮೃತಳಾದಳು; ವಿದೇಹನಗರೇ-ವಿದೇಹನಗರದಲ್ಲಿ ಪಿಂಗಲಾಭಿಧಾ-ಪಿಂಗಲಾನಾಮಕಳಾಗಿ, ವೇಶ್ಯಾಽಭೂತ್-ವೇಶ್ಯೆಯಾಗಿ ಜನಿಸಿದಳು; ನಾನಾಸತ್ಕರ್ಮನಿಚಯ್ಯೈಃ-ಬಹು ಪುಣ್ಯಕರ್ಮಗಳಿಂದ, ಸಾ-ಆಕೆಯು, ತಾಂ-ಆ(ಜ್ಞಾನಿಗಳು ಹೊಂದುವ), ಪರಾಂ ಗತಿಂ-ಉತ್ತಮ ಗತಿಯನ್ನು ಲೇಭೇ-ಹೊಂದಿದಳು.

ಸದಸದ್ವಾಪಿ ಯತ್ಕರ್ಮ ನ ವೃಥಾ ಜಾಯತೇ ಧ್ರುವಂ ।
ಭವತ್ಯಭಿಭವಃ ಕ್ವಾಪಿ ಪುನಃ ಕಾಲೇ ಫಲತ್ಯಪಿ ॥ ೧೭ ॥

ಯತ್ಕರ್ಮ-ಯಾವುದೊಂದು ಕರ್ಮವೂ, ಸತ್-ಸತ್ಕರ್ಮವಾಗಲಿ, ಅಪಿ ವಾ-ಅಥವಾ, ಅಸತ್, ದುಷ್ಕರ್ಮವಾಗಲಿ, ವೃಥಾ-ವ್ಯರ್ಥವಾದುದು (ಫಲಶೂನ್ಯವಾದುದು), ನ ಜಾಯತೇ-ಆಗುವುದೇ ಇಲ್ಲ; ಧ್ರುವಂ-ನಿಶ್ಚಯವು; ಕ್ವಾಪಿ-ಕೆಲವು

---

ಫಲದಿಂದ, ಪತಿಯ ಮರಣದಿಂದ, ಬಾಲವಿಧವೆಯಾದಳು; ಆ ಜನ್ಮದಲ್ಲಿ ಆಕೆಗೆ, ಈ ಕಾರಣದಿಂದ, ಪುರುಷಸ್ಪರ್ಶವೇ ಆಗಿರಲಿಲ್ಲ; ಮುಂದೊಂದು ದಿನ ಆಕೆಯು, ಮರಣಾವಸ್ಥೆಯನ್ನು ಹೊಂದಿರಲು; ಆಗ ಕೃಪೆಯಿಂದ, (ವೈದ್ಯಾದಿ) ಪುರುಷರು ಆಕೆಯನ್ನು ಸ್ಪರ್ಶಿಸಿದರು; ಆ ಅವಸ್ಥೆಯಲ್ಲಿ ಸಹ ಆಕೆಗೆ ಪುರುಷಸ್ಪರ್ಶದಿಂದ ಯಾವ ಪ್ರಕಾರ ಸುಖವುಂಟೆಂಬುದರ ಅನುಭವವಾಗಿ, ಆ ವಿಧದ ಸುಖವು (ಪುರುಷಸಂಗವು) ತನಗೆ ದೊರೆಯಲೆಂದು ಆಶಿಸಿ ಪ್ರಾಣಬಿಟ್ಟಳು; ಈ ಕಾರಣದಿಂದ ಆಕೆಯು, ವಿದೇಹನಗರದಲ್ಲಿ ಬಹುಪುರುಷರ ಅಂಗಸಂಗವಾಗುವ, ವೇಶ್ಯೆಯಾಗಿ ಜನಿಸಿದಳು;[1]

1. ಈ ಪಿಂಗಲೆಯು, ಒಬ್ಬ ಅಪ್ಸರೆಯು; ಮುಂದೊಂದು ಕಾಲದಲ್ಲಿ ರಮಾವೇಶದಿಂದ ಶ್ರೀಹರಿಯ ಅಂಗಸಂಗವನ್ನು (ಪತ್ನೀಭಾವವನ್ನು) ಹೊಂದಲರ್ಹರಾದ ಕೆಲವೇ ಅಪ್ಸರೆಯರಲ್ಲಿ ಈಕೆಯೂ ಒಬ್ಬಳು; ಪಿಂಗಲಾಜನ್ಮವನ್ನು ನೀಗಿ, (ಸಮೀಪದಲ್ಲಿರುವ ನಿತ್ಯರಮಣನಾದ ಶ್ರೀಹರಿಯನ್ನು ಬಿಟ್ಟು, ಕಾಲಕಾಲಕ್ಕೆ ದ್ರವ್ಯದಿಂದ ನನ್ನ ದೇಹವನ್ನು ವಿಕ್ರಯಿಸಿಕೊಂಡ ವಿಟಪುರುಷರನ್ನು ಪತಿತ್ವೇನ ಸೇವಿಸಿ ವಂಚಿತಳಾದೆನೆಂಬ ತೀವ್ರ ಪಶ್ಚಾತ್ತಾಪಯುಕ್ತಳಾಗಿ ಮರಣಹೊಂದಿ), ಶ್ರೀಕೃಷ್ಣನಿಂದ ಅನುಗ್ರಹೀತಳಾದ ಕುಬ್ಜೆಯಾಗಿ ಹುಟ್ಟಿದಳು; ಶ್ರೀಕೃಷ್ಣನಿಂದ ವಿಶೋಕನೆಂಬ ಪುತ್ರನನ್ನು ಪಡೆದಳು; ಆತನು ನಾರದರ ಶಿಷ್ಯನಾಗಿ ಭೀಮಸೇನನ ಸಾರಥಿಯಾದನು. ಈ ಪ್ರಮೇಯಗಳು, ಭಾಗವತ ತಾತ್ಪರ್ಯ ಮತ್ತು ಮಹಾಭಾರತ ತಾತ್ಪರ್ಯನಿರ್ಣಯಗಳಲ್ಲಿ ಉಕ್ತವಾಗಿವೆ.

ವೇಳೆ, ಅಭಿಭವಃ-ತಿರಸ್ಕಾರವು (ಕರ್ಮವು ಫಲಪಲ್ಲದಂತೆ), ಭವತಿ-ಆಗುತ್ತದೆ; ಪುನಃ-ತಿರಿಗಿ (ಆ ಕರ್ಮವು), ಕಾಲೇ-ಕಾಲಾಂತರದಲ್ಲಿ ಅಪಿ-ಆದರೂ, ಫಲತಿ-ಫಲವನ್ನು ಕೊಡುತ್ತದೆ.

ಏವಂ ಪ್ರಾಯೇಣ ಲೋಕೇಽಸ್ಮಿನ್ ಜಿಹ್ವೋಪಸ್ಥಂ ಚ ದುರ್ಜಯಂ ।
ರಹಸ್ಥಾ ಕಾಮುಕೀ ನಾರೀ ಯಾ ವಾ ಕಾ ವಾಪಿ ಲಭ್ಯತೇ ॥ ೧೮ ॥
ಶಕ್ಯಾ ಲಂಘಯಿತುಂ ಪ್ರಾಯಸ್ತತೋ ವೈ ವರ್ಜಯೇದ್ರಹಃ ।
ವಿರಲಾಃ ಸಂತಿ ಧೀರಾಸ್ತೇ ಕಾಶ್ಚಿದ್ಧೀರಾಶ್ಚ ಯೋಷಿತಃ ॥ ೧೯ ॥
ಅತಃ ಸರ್ವತ್ರ ನೋ ಶಂಕಾ ಕಾರ್ಯಾ ಪುಂಸಿ ಚ ಯೋಷಿತಿ ।
ವೃಥಾ ಶಂಕಾಂ ಪ್ರಕುರ್ವಾಣಃ ತಾವತ್ಪಾಪಂ ಲಭೇತ ಸಃ ॥ ೨೦ ॥

ಏವಂ-ಹೀಗೆ, ಪ್ರಾಯೇಣ-ಬಹಳವಾಗಿ, ಅಸ್ಮಿನ್-ಈ, ಲೋಕೇ-ಜಗತ್ತಿನಲ್ಲಿ ಜಿಹ್ವೋಪಸ್ಥಂ ಚ-ಜಿಹ್ವೆ ಮತ್ತು ಗುಹ್ಯೇಂದ್ರಿಯಗಳೇ, ದುರ್ಜಯಂ-ಜಯಿಸಲಿಕ್ಕೆ ಕಷ್ಟಸಾಧ್ಯಗಳು; ಯಾ ವಾ ಕಾ ವಾ ಅಪಿ-ಯಾವಳಾದರೂ ಒಬ್ಬ, ರಹಸ್ಥಾ-ಏಕಾಂಗಿಯಾಗಿರುವ, ಕಾಮುಕೀ-ಕಾಮಪೀಡಿತಳಾದ, ಲಂಘಯಿತುಂ-ಅತಿಕ್ರಮಿಸಲು, ಶಕ್ಯಾ-ಶಕ್ಯಳಾದ, (ಬಲಾತ್ಕರಿಸಲು ಸಾಧ್ಯಳಾಗುವ), ನಾರೀ-ಸ್ತ್ರೀಯು, ಲಭ್ಯತೇ-ದೊರೆಯುತ್ತಾಳೆ; ತತಃ-ಈ ಕಾರಣದಿಂದ ಸಹ, ಪ್ರಾಯಃ-ಹೆಚ್ಚಾಗಿ (ಬಹುಕಾಲ), ರಹಃ-ಏಕಾಂತವಾಸವನ್ನು ವರ್ಜಯೇತ್ ವೈ-ತ್ಯಜಿಸಬೇಕೆಂಬುದು ಸಾಧುವೇ ಸರಿ; ತೇ-ಹಾಗಿರುವ (ಏಕಾಂತದಲ್ಲಿ ಕಾಮುಕ ಸ್ತ್ರೀಯನ್ನು ಕಂಡೂ ಮನಸ್ಸನ್ನು ನಿಶ್ಚಂಚಲವಾಗಿಟ್ಟುಕೊಳ್ಳುವ), ಧೀರಾಃ-ಧೀರರು (ಮನೋನಿಗ್ರಹವುಳ್ಳವರು), ವಿರಲಾಃ-ವಿರಳರು (ಅತ್ಯಲ್ಪರು), ಸಂತಿ-ಇರುತ್ತಾರೆ; ಕಾಶ್ಚಿತ್-ಕೆಲವು, ಯೋಷಿತಃ-ಸ್ತ್ರೀಯರೂ, ಧೀರಾಃ-ಧೀರರಾಗಿರುತ್ತಾರೆ (ಪರಪುರುಷರ ವಶರಾಗದೇ ನಿಶ್ಚಲವಾದ ಮನಸ್ಸುಳ್ಳವರಾಗಿರುತ್ತಾರೆ); ಅತಃ-ಆದ್ದರಿಂದ, ಪುಂಸಿ ಚ-ಪುರುಷರಲ್ಲಿಯೂ, ಯೋಷಿತಿ ಚ-ಸ್ತ್ರೀಯರಲ್ಲಿಯೂ, ಸರ್ವತ್ರ-ಎಲ್ಲರಲ್ಲಿ ಶಂಕಾ-ಸಂಶಯವು (ಅಥವಾ

---

ನಾನಾ ಸತ್ಕರ್ಮಗಳನ್ನಾಚರಿಸಿ, ಕ್ರಮವಾಗಿ, ಜ್ಞಾನಿಗಳು ಪಡೆಯುವ ಉತ್ತಮಗತಿಯನ್ನು ಹೊಂದಿದಳು (೧೩-೧೬). ಸತ್ಕರ್ಮವಾಗಲಿ ದುಷ್ಕರ್ಮವಾಗಲಿ, ಯಾವುದೊಂದು ಕರ್ಮವೂ, ವ್ಯರ್ಥವಾಗುವುದಿಲ್ಲ—ಇದು ನಿಶ್ಚಯ; ಕೆಲವುವೇಳೆ ಒಂದೊಂದು ಕರ್ಮವು ವ್ಯರ್ಥವಾದಂತೆ (ಫಲರಹಿತವಾದಂತೆ) ತೋರುತ್ತದೆ—ಆದರೆ ಅದು ಕಾಲಾಂತರದಲ್ಲಿ ಫಲವನ್ನು ಕೊಟ್ಟೇ ತೀರುತ್ತದೆ (೧೭). ಜಿಹ್ವೋಪಸ್ಥಗಳು ಹೀಗೆ ದುರ್ಜಯಗಳಾಗಿರುವುದರಿಂದ, ರಹಸ್ಯದಲ್ಲಿ ಪ್ರಾಪ್ತಳಾದ ಯಾವಳೊಬ್ಬ ಕಾಮುಕ ಸ್ತ್ರೀಯನ್ನು ತಡೆಯುವುದಕ್ಕೆ ಅವಳಿಂದ ಆಕರ್ಷಿತನಾಗದೇ ನಿಶ್ಚಲನಾಗಿರುವುದು, ಶಕ್ಯವಲ್ಲ; ಆದ್ದರಿಂದ ದೀರ್ಘಕಾಲ ಏಕಾಂತವಾಸವನ್ನು ಯತ್ನಪೂರ್ವಕವಾಗಿ ತ್ಯಜಿಸ

ಭಯವು—ತನ್ನನ್ನು ಆಕರ್ಷಿಸಿ ವಶಪಡಿಸಿಕೊಳ್ಳುವರೆಂಬ ಭಯವು). ಸ್ತೋಃ ಕಾರ್ಯಾ-ಮಾಡತಕ್ಕದ್ದಲ್ಲ; ವೃಥಾ-ವ್ಯರ್ಥವಾದ (ಆಧಾರವಿಲ್ಲದೇ). ಶಂಕಾಂ-ಸಂಶಯವನ್ನು ಪ್ರಕುರ್ವಾಣಃ-ಮಾಡುವವನಾಗಿ (ಸ್ತ್ರೀ ಪುರುಷರು ಪರಸ್ಪರ ಸಂಶಯಪಡುವುದರಿಂದ). ಸಃ-ಅತನು (ಆ ವ್ಯಕ್ತಿಯು, ಸ್ತ್ರೀಯಾಗಲಿ ಪುರುಷನಾಗಲಿ) ತಾವತ್ ಪಾಪಂ-ಅಷ್ಟರಿಂದಲೇ ಪಾಪವನ್ನು ಲಭೇತ-ಹೊಂದುತ್ತಾನೆ.

ವಿದ್ವಾನ್ ಪರಿಹರೇತ್ಸಂಗಂ ತಥಾ ನಾರ್ಯಪಿ ಭೂರಿಶಃ ।
ದೈವಾದುಪಗತೇ ಸಂಗೇ ನ ಪ್ರಮಾದ್ಯೇದ್ವಿವಿಕ್ತದೃಕ್ ॥ ೨೦ ॥
ಕ್ಷಣಿಕಸ್ಯ ಸುಖಸ್ಯಾರ್ಥೇ ಮಹಾನರ್ಥಂ ಕಥಂ ಸಹೇತ್ ॥ ೨೧ ॥
ಸರ್ವಥಾ ಸದಸದ್ವಿದ್ವಾನಿಹಾಮುತ್ರ ಚ ದುಃಖದಂ ।
ಅಸ್ಥಿಭಿರ್ನಿರ್ಮಿತಂ ಸ್ನಾಯ್ವಾಂ ಛಾದಿತಂ ಲೋಮಚರ್ಮಭಿಃ ॥ ೨೨ ॥
ಮಾಂಸರಕ್ತಕಫಸ್ನಾಯುಮಲಮೂತ್ರೈಃ ಪ್ರಪೂರಿತಂ ।
ಸ್ರವತ್ಸು ನವಭಿರ್ದ್ವಾರೈಃ ರೋಮದ್ವಾರೈಶ್ಚ ಕೋಟಿಭಿಃ ॥ ೨೩ ॥
ಮಲಮೂತ್ರಕಫಸ್ವೇದಸ್ತ್ರಿನ್ನಾರೀಃ ಪುಮಾನಪಿ ।
ರಮಣಾಯ ಮತಿಂ ಕುರ್ಯಾತ್ ಕಥಂ ದುಃಖಫಲೇಃ ಭೃಶಂ ॥ ೨೪ ॥
ವಿದ್ಧಃ ಕುಸುಮಚಾಪಸ್ಯ ಪೌಷ್ಪೈರ್ವರಸುಸಾಯಕೈಃ ।
ಮುಷ್ಟನೇತ್ರೋಃ ಮುಗ್ಧಚೇತಾ ಮಹಾನರ್ಥಂ ನ ಪಶ್ಯತಿ ॥ ೨೫ ॥
ವೀರಃ ಸ ಏವ ಲೋಕೇಽಸ್ಮಿನ್ ಧನ್ಯೋಃ ವಿದ್ವಾನ್ ಸ ಏವ ಹಿ ।
ಪ್ರಹರ್ಕೈಃ ಕಾಮಬಾಣಾನಾಂ ನೈವ ಮೋಹಂ ಪ್ರಜೇತ ಯಃ ॥ ೨೬ ॥

ವಿದ್ವಾನ್-ವಿದ್ವಾಂಸನೂ, ತಥಾ-ಹಾಗೂ, ನಾರೀ ಅಪಿ-ಸ್ತ್ರೀಯೂ, ಭೂರಿಶಃ-ಅತಿಶಯವಾಗಿ, ಸಂಗಂ-ಸಂಗವನ್ನು, (ಪರಸ್ಪರ ಸಹವಾಸವನ್ನು), ಪರಿಹರೇತ್-ತಪ್ಪಿಸಿಕೊಳ್ಳಬೇಕು; ಸಂಗೇ-(ಅನ್ಯೋನ್ಯರ) ಸಹವಾಸವು ದೈವಾತ್-ಅನಿರೀಕ್ಷಿತವಾಗಿ,

ಬೇಕು; ಕೆಲವು ಪುರುಷರು ನಿಶ್ಚಲಚಿತ್ತರಾಗಿರುವುದೂ ಉಂಟು—ಅವರೇ ಧೀರರು; ಸ್ತ್ರೀಯರಲ್ಲಿ ಸಹ ಧೀರರು ಇರುತ್ತಾರೆ—ಪುರುಷರಿಂದ ಆಕರ್ಷಿತರಾಗದೇ ದೃಢ ಮನಸ್ಕರಾಗಿರುತ್ತಾರೆ; ಆದರೆ ಧೀರರು ಬಹು ವಿರಳರು—ಅತ್ಯಲ್ಪ ಸಂಖ್ಯೆಯಲ್ಲಿರುವರು; ಆದ್ದರಿಂದ, ಎಲ್ಲ ಸ್ತ್ರೀ ಪುರುಷರಲ್ಲಿ ಕಾಮವಶರಾಗುತ್ತಾರೆಂಬ ಶಂಕೆಯನ್ನು (ಸಂಶಯವನ್ನು ಅಥವಾ ಭಯವನ್ನು) ಮಾಡತಕ್ಕದ್ದಲ್ಲ; ಪರಸ್ಪರವಾಗಿ ಸ್ತ್ರೀ ಪುರುಷರು ಹೀಗೆ ಶಂಕಿಸುವುದರಿಂದ ಪಾಪವನ್ನೇ ಹೊಂದುತ್ತಾರೆ (೧೮-೨೦). ಜ್ಞಾನಿಯಾದ ಪುರುಷನೂ, ಸ್ತ್ರೀಯೂ, ವಿಶೇಷವಾಗಿ, ಅನ್ಯೋನ್ಯ ಸಹವಾಸವನ್ನು ತಪ್ಪಿಸಿಕೊಳ್ಳಬೇಕು; ಯತ್ನಪೂರ್ವಕ ದೂರವಿರಬೇಕು; ಅನಿರೀಕ್ಷಿತವಾಗಿ (ದೈವಿಕವಾಗಿ) ಸಂಗವು

ಉಪಗತೇ-ಪ್ರಾಪ್ತವಾದರೆ, ವಿವಿಕ್ತದೃಕ್-ವಿವೇಕ ದೃಷ್ಟಿಯುಳ್ಳವನಾಗಿ, ನ ಪ್ರಮಾದ್ಯೇತ್-ಪ್ರಮಾದವಶನಾಗಬಾರದು (ಅಥವಾ ಎಚ್ಚರ ತಪ್ಪಕೂಡದು— ಉನ್ಮಾದವನ್ನು ಹೊಂದಬಾರದು); (ವಿವಿಕ್ತದೃಕ್-ವಿವೇಕವುಳ್ಳವನು) ಕ್ಷಣಿಕಸ್ಯ-ಕ್ಷಣಿಕವಾದ (ಕ್ಷಣಮಾತ್ರದ), ಸುಖಸ್ಯ ಅರ್ಥೇ-ಸುಖಕ್ಕಾಗಿ (ಸುಖದ ಲಾಭಕ್ಕಾಗಿ), ಮಹಾನರ್ಥಂ-ಮಹಾ ಅನರ್ಥವನ್ನು ಕಥಂ-ಹೇಗೆ, ಸಹೇತ್-ಸಹಿಸುತ್ತಾನೆ?; ಸರ್ವಥಾ-ಎಲ್ಲ ಪ್ರಕಾರದಿಂದ, ಸದಸದ್ವಿದ್ವಾನ್-ಸದಾಚಾರ, ದುರಾಚಾರಗಳನ್ನು ತಿಳಿದ ವಿವೇಕಿಯು, ಇಹ-ಇಲ್ಲಿ ಅಮುತ್ರ ಚ-ಪರಲೋಕದಲ್ಲಿ ಸಹ, ದುಃಖದಂ-ದುಃಖಪ್ರದವಾದ, (ಸಂಗವನ್ನು) ಕಥಂ ಸಹೇತ್-ಹೇಗೆ ಸಹಿಸಿಯಾನು?; ನಾರೀ-ಸ್ತ್ರೀ ಆಗಲಿ, ಅಪಿ-ಮತ್ತು ಪುಮಾನ್-ಪುರುಷನಾಗಲಿ, ಕಥಂ-ಹೇಗೆ, ಅಸ್ಥಿಭಿಃ-ಎಲುಬುಗಳಿಂದ (ಮೂಳೆಗಳಿಂದ), ನಿರ್ಮಿತಂ-ರಚಿತವಾದ ಸ್ಥೂಣಂ-ಸ್ತಂಭದಂತಿರುವ, ಲೋಮ ಚರ್ಮಭಿಃ-ಕೂದಲು ಚರ್ಮಗಳಿಂದ, ಛಾದಿತಂ-ಮುಚ್ಚಲ್ಪಟ್ಟ ಮಾಂಸ ರಕ್ತ ಕಫ ಸ್ನಾಯು ಮಲಮೂತ್ರೈಃ-ಮಾಂಸ, ರಕ್ತ, ಕಫ, ಸ್ನಾಯು (ಮಜ್ಜಾ), ಮಲ, ಮೂತ್ರಗಳಿಂದ, ಪ್ರಪೂರಿತಂ-ತುಂಬಿರುವ, ನವಭಿಃ ದ್ವಾರೈಃ-ನವದ್ವಾರಗಳಿಂದ, (ಕಣ್ಣು ಕಿವಿ, ಮೂಗು, ಬಾಯಿ, ಗುದ, ಉಪಸ್ಥ ಗಳಿಂದಾಗುವ ದೇಹದಲ್ಲಿರುವ ೯ ದ್ವಾರಗಳಿಂದ), ಕೋಟಿಭಿಃ-ಅಸಂಖ್ಯವಾದ, ರೋಮದ್ವಾರೈಃ ಚ-ರೋಮಕೂಪಗಳಿಂದಲೂ, ಮಲ ಮೂತ್ರ ಕಫ ಸ್ವೇದಃ-ಮಲ ಮೂತ್ರ, ಕಫ ಮತ್ತು ಬೆವರುಗಳನ್ನು ಸ್ರವತ್-ಸ್ರವಿಸುವ (ಹೊರಸೂಸುವ), (ಈ ನಶ್ವರದೇಹವನ್ನು ಕಥಂ ಸಹೇತ್-ಹೇಗೆ ಸಹಿಸುವನು?), ಭೃಶಂ-ಅತಿಶಯವಾಗಿ, ದುಃಖಫಲೇ-ದುಃಖಪ್ರದವಾದ, ತಸ್ಮಿನ್-ಈ (ಮೈಥುನದಲ್ಲಿ), ಅಥವಾ (ಆ ದೇಹದಲ್ಲಿ), ರಮಣಾಯ-ರಮಿಸುವುದಕ್ಕೆ, ಕಥಂ-ಹೇಗೆ ಮತಿಂ-ಮನಸ್ಸನ್ನು ಕುರ್ಯಾತ್-ಮಾಡಿಯಾನು? (ವಿವೇಕಿಯು ಮನಸ್ಸು ಮಾಡುವುದಿಲ್ಲ); (ಆದರೆ), ಕುಸುಮಚಾಪಸ್ಯ-ಮನ್ಮಥನ, ಪೌಷ್ಪೈಃ-ಪುಷ್ಪಮಯವಾದ, ವರಸುಸಾಯಕೈಃ-ಶ್ರೇಷ್ಠವಾದ ಬಲಿಷ್ಠ ಬಾಣಗಳಿಂದ, ವಿದ್ಧಃ-ತಾಡಿತನಾಗಿ, ಮುಷ್ಟನೇತ್ರಃ-ಕಣ್ಣಿಲ್ಲದವ

---

(ಒಟ್ಟಿಗಿರಬೇಕಾದ ಸಂದರ್ಭವು) ಪ್ರಾಪ್ತವಾದರೆ, ಪರಸ್ಪರ ಆಕರ್ಷಿತರಾಗದಂತೆ ಬಹು ಜಾಗರೂಕರಾಗಿರಬೇಕು; ವಿವೇಕಿಯು, (ಮೈಥುನದ) ಕ್ಷಣಿಕ ಸುಖಕ್ಕಾಗಿ, ಮಹಾ ಅನರ್ಥವನ್ನು ಸಹಿಸಲಾರನು; ದುಷ್ಟವಾದ (ನಿಷಿದ್ಧವಾದ) ಪರಸ್ಪರ ಅಂಗಸಂಗವು ಇಹಪರಲೋಕಗಳಲ್ಲಿ ದುಃಖವನ್ನೇ ಪ್ರದಾನಮಾಡುತ್ತದೆ; ಇದನ್ನು ಸತ್ಕರ್ಮ ದುಷ್ಕರ್ಮಗಳ ವಿವೇಕವನ್ನು ಬಲ್ಲವನು ಎಂದೂ ಆಚರಿಸುವುದಿಲ್ಲ; ಪರಸ್ಪರ ಕ್ರೀಡಾರ್ಥವಾಗಿ ಉಪಯೋಗಿಸುವ ದೇಹರಚನೆಯನ್ನು ಭಾವಿಸಿದರೂ, ಅದರಲ್ಲಿ ಹೇಯತ್ವ ಬುದ್ಧಿಯುಂಟಾಗುವುದರಲ್ಲಿ ಸಂಶಯವಿಲ್ಲ; ಅಸ್ಥಿಗಳಿಂದ ನಿರ್ಮಿತವಾದ

ನಾಗಿ (ದೃಷ್ಟಿಯಿಂದ ವಂಚಿತನಾಗಿ), ಮುಗ್ಧಚೇತಾಃ-ಮೋಹಿತಬುದ್ಧಿಯುಳ್ಳವನಾಗಿ, ಮಹಾನರ್ಥಂ-(ನಿಷಿದ್ಧ ಮೈಥುನದಿಂದ ದೊರೆಯುವ) ಮಹಾ ಅನರ್ಥವನ್ನು, ನ ಪಶ್ಯತಿ-ಕಾಣುವುದಿಲ್ಲ (ತಿಳಿಯುವುದಿಲ್ಲ); ಯಃ-ಯಾರು, ಕಾಮಬಾಣಾನಾಂ-ಮನ್ಮಥನ ಬಾಣಗಳ, ಪ್ರಹರ್ಷೈಃ-ಪ್ರಹಾರಗಳಿಂದ, ಮೋಹಂ-ಮೋಹವನ್ನು, ನೈವ ವ್ರಜೇತ್-ಹೊಂದುವುದಿಲ್ಲವೋ, ಸಃ ಏವ-ಆತನೇ (ಆ ವ್ಯಕ್ತಿಯೇ), ಅಸ್ಮಿನ್-ಈ, ಲೋಕೇ-ಲೋಕದಲ್ಲಿ, ವೀರಃ-ವೀರನು, ವಿದ್ವಾನ್-ಜ್ಞಾನಿಯು, ಧನ್ಯಃ-ಕೃತಕೃತ್ಯನು; ಹಿ-ಹೀಗೆಂಬುದು ಶಾಸ್ತ್ರನಿಶ್ಚಯವು.

**ಅರ್ಥಾ ನಾನಾವಿಧಾ ಲೋಕೇ ಸುಖದುಃಖಾದಿಹೇತವಃ ।**
**ತತ್ರ ಕಂಟಕವೇಧಾದ್ಯಾಃ ಕೇವಲಂ ದುಃಖಹೇತವಃ ॥ ೨೮ ॥**
**ಭಾರಾಪತಾರಣಾದ್ಯಾಶ್ಚ ದುಃಖಸ್ಯೈವ ನಿವರ್ತಕಾಃ ।**
**ಪುತ್ರಾಲಿಂಗನಮುಖ್ಯಾಸ್ತು ಕೇವಲಂ ಸುಖಹೇತವಃ ॥ ೨೯ ॥**
**ಕಟುತಿಕ್ತೌಷಧಾದೀನಿ ದುಃಖಹಾರೀಣಿ ಚಾಂತತಃ ।**
**ಸುಖದಾನ್ಯಪಿ ಜಾತು ಸ್ಯುಃ ಆದೌ ದುಃಖಕರಾಣ್ಯಪಿ ॥ ೩೦ ॥**
**ಅಪಥ್ಯಸ್ವಾದುಭೋಜ್ಯಾದಿ ದುಃಖದಂ ಜಾಯತೇ ತತಃ ।**
**ಆದೌ ಸುಖಕರಂ ತಚ್ಚ ನಾದರೋ ವಿದುಷಾಂ ತತಃ ॥ ೩೧ ॥**

ಲೋಕೇ-ಜಗತ್ತಿನಲ್ಲಿ, ನಾನಾವಿಧಾಃ-ವಿವಿಧಗಳಾದ, ಅರ್ಥಾಃ-ವಸ್ತುಗಳು, ಸುಖದುಃಖಾದಿಹೇತವಃ-ಸುಖದುಃಖಾದಿ (ವಿವಿಧ) ಅನುಭವಗಳಿಗೆ ಕಾರಣ

---

ದೇಹವೆಂಬ ಗೃಹವು (ಮಧ್ಯಕಂಭದ ಮೇಲೆ ನಿಂತಿರುವ ಹಂದರ-ಚಪ್ಪರವು), ಕೂದಲು ಚರ್ಮಗಳಿಂದ ಮುಚ್ಚಲ್ಪಟ್ಟು, ಮಲ, ಮೂತ್ರ, ರಕ್ತ ಕಫ, ಮಾಂಸ, ರಕ್ತ ಮಜ್ಜಾಗಳಿಂದ ತುಂಬಿದೆ; ದೇಹದಲ್ಲಿರುವ ನವದ್ವಾರಗಳಿಂದಲೂ, ಮತ್ತು ಕೋಟಿಃ ರೋಮಕೂಪಗಳಿಂದಲೂ ಮಲ, ಮೂತ್ರ, ಕಫ, ಬೆವರು ಮೊದಲಾದ ಅಸಹ್ಯ ವಸ್ತುಗಳನ್ನು ಸದಾ ಸ್ರವಿಸುತ್ತಿರುವುದು; ಹೀಗಿರುವ ದೇಹಗಳಲ್ಲಿ ಪರಸ್ಪರ ಕೂಡಿ ರಮಿಸಲು ಯಾವ ನಾರಿಯೂ, ಪುರುಷನೂ ಮನಸ್ಸು ಮಾಡಲಾರನು; ಮನ್ಮಥನ ಪ್ರಬಲವಾದ ಪುಷ್ಪಬಾಣಗಳಿಂದ ತಾಡಿತನಾದ ಯಾವನಾಗಲಿ, ಕಣ್ಣಿಲ್ಲದವನಂತೆ; ಅದರಿಂದ ಪ್ರಾಪ್ತವಾಗುವ ದುಃಖಾದಿ ಅನರ್ಥಗಳನ್ನು ಕಾಣದೇ ಮೋಹಿತವಾದ ಬುದ್ಧಿಯುಳ್ಳವನಾಗಿ, ಕಾಮವಶನಾಗಿ ನಷ್ಟನಾಗುತ್ತಾನೆ; ಮನ್ಮಥನ ಬಾಣಪ್ರಹಾರಗಳಿಂದ ಮೋಹಗೊಳ್ಳದವನೇ (ಪುರುಷನಾಗಲಿ ಸ್ತ್ರೀಯಾಗಲಿ) ವೀರನು-ಆತನೇ ನಿಜವಾದ ಜ್ಞಾನಿಯು—ಕೃತಕೃತ್ಯನು (೨೬-೨೭). ಲೋಕದಲ್ಲಿ ವಿವಿಧವಾದ ವಸ್ತುಗಳು, ಸುಖದುಃಖಾದಿ ಅನುಭವಗಳಿಗೆ ಕಾರಣವಾಗುತ್ತವೆ; ಮುಳ್ಳು, ಕೂರೆಯುವ

ಗಳಾಗಿರುತ್ತವೆ; ತತ್ರ-ಹೀಗಿರುವ ವಸ್ತುಗಳಲ್ಲಿ, ಕಂಟಕವೇಧಾದ್ಯಾಃ-ಮುಳ್ಳು, ಅಂಕುಶ (ಚುಚ್ಚಿ ಕೊರೆಯುವ ಆಯುಧ) ಮೊದಲಾದವುಗಳು, ಕೇವಲಂ ದುಃಖಹೇತವಃ-ದುಃಖಮಾತ್ರಕ್ಕೆ ಕಾರಣವಾಗುತ್ತವೆ; ಭಾರಾವ—ತಾರಣಾದ್ಯಾಃ-(ತಲೆಯ ಮೇಲಿನ) ಭಾರವನ್ನು (ಕೆಳಗೆ) ಇಳಿಸುವುದೇ ಮೊದಲಾದವುಗಳು, ದುಃಖಸ್ಯ-ದುಃಖದ, ನಿವರ್ತಕಾ ಏವ-ಪರಿಹಾರ ಕಾರಣಗಳು ಮಾತ್ರ; ಪುತ್ರಾಲಿಂಗನಮುಖ್ಯಾಃ ತು-ಪುತ್ರರನ್ನು ಆಲಂಗಿಸುವುದೇ ಮೊದಲಾದವುಗಳಾದರೋ, ಕೇವಲಂ ಸುಖ ಹೇತವಃ-ಸುಖಮಾತ್ರಕ್ಕೆ ಕಾರಣಗಳು; ಕಟುತಿಕ್ತೌಷಧಾದೀನಿ-ಖಾರ, ಕಹಿ ಮೊದಲಾದ ಔಷಧಿಗಳು, ಅಂತತಃ-ಪರ್ಯವಸಾನದಲ್ಲಿ (ಕೊನೆಗೆ-ಅಥವಾ ಒಳಗಿರುವ), ದುಃಖ ಹಾರೀಣಿ-(ರೋಗ, ತಜ್ಜನ್ಯ) ದುಃಖವನ್ನು ಪರಿಹರಿಸತಕ್ಕವುಗಳು; ಜಾತು-ಕೆಲವುವೇಳೆ, ಸುಖದಾನಿ ಅಪಿ-ಸುಖಪ್ರದಗಳೂ (ಸುಖಹೇತುಗಳೂ), ಸ್ಯುಃ-ಆಗುತ್ತವೆ; ಆದೌ-ಮೊದಲಿಗೆ, ದುಃಖಕರಾಣಿ-ದುಃಖವನ್ನುಂಟುಮಾಡುವುಗಳು, ಅಪಿ-ಆದರೂ (ಸುಖದಾನಿ-ಸುಖಪ್ರದಗಳಾಗುತ್ತವೆ); ಅಪಥ್ಯ ಸ್ವಾದುಭೋಜ್ಯಾದಿ-ಅಪಥ್ಯಗಳಾದ ರುಚಿಕರ ವಸ್ತುಗಳು ಭೋಗವು, ತತಃ-ಆದ್ದರಿಂದಲೇ, ಆದೌ-ಮೊದಲಿಗೆ, ಸುಖಕರಂ-ಸುಖಕರವಾದುದು, ತತ್ ಚ-ಅದೂ ಸಹ, ದುಃಖದಂ-(ಅಂತ್ಯದಲ್ಲಿ) ದುಃಖಕರವೇ, ಜಾಯತೇ-ಆಗುತ್ತದೆ; ತತಃ-ಆದ್ದರಿಂದಲೇ, ವಿದುಷಾಂ-ವಿವೇಕಿಗಳಿಗೆ, ನ ಆದರಃ-ಇಷ್ಟವಲ್ಲ.

ಪರದಾರಪರದ್ರವ್ಯಮುಖಾನ್ಯಾದಾವಪಿ ಸ್ಫುಟಂ ।
ಪ್ರಾಯೋ ನ ಸುಖದಾ ನ ಸ್ಯುರ್ದುಃಖದಾನ್ಯೇವ ಸರ್ವದಾ ॥ ೩೨ ॥
ಸುಖಂ ನ ಸ್ವಪತೇ ರಾತ್ರೌ ಜಾರಸ್ತೋಽದೋಽಪಿ ಯೋ ಭವೇತ್ ।
ಯಸ್ಮಾತ್ತಸ್ಮಾದ್ಯತ್ರಕುತ್ರ ಭಯಂ ತಸ್ಯ ಸದೈವ ಹಿ ॥ ೩೩ ॥

ಪರದಾರ ಪರದ್ರವ್ಯಮುಖಾನಿ-ಪರಸ್ತ್ರೀ, ಪರದ್ರವ್ಯ ಮೊದಲಾದವುಗಳು

---

(ಚುಚ್ಚುವ) ಆಯುಧಾದಿಗಳು ದುಃಖಮಾತ್ರಕ್ಕೆ ಕಾರಣವಾಗುತ್ತವೆ; ಭಾರವನ್ನು ಇಳಿಸುವುದೇ ಮೊದಲಾದವು, ದುಃಖ ಪರಿಹಾರ ಕಾರಣಗಳು ಮಾತ್ರ; ಪುತ್ರಾಲಿಂಗನಾದಿಗಳು ಸುಖಮಾತ್ರ ಕಾರಣಗಳು; ಕಹಿಯಾದ ಔಷಧಿ ಮೊದಲಾದವು ಗಳು, ಸೇವಿಸುವಾಗ ದುಃಖಪ್ರದಗಳಾದರೂ, ಅಂತ್ಯಕ್ಕೆ, ದುಃಖಕಾರಣಗಳಾದ ರೋಗಾದಿಗಳನ್ನು ಪರಿಹರಿಸುತ್ತವೆ-ಸುಖಪ್ರದಗಳಾಗುತ್ತವೆ; ಅಪಥ್ಯಕರಗಳಾದ ಆಹಾರ ಪದಾರ್ಥಗಳು, ರುಚಿಕರಗಳಾಗಿ, ಮೊದಲು ಸುಖಕರವಾದರೂ, ಅವುಗಳನ್ನು ಸೇವಿಸುವುದರಿಂದ, ಅಂತ್ಯಕ್ಕೆ ದುಃಖವೇ ದೊರೆಯುತ್ತದೆ; ಆದ್ದರಿಂದ, ವಿವೇಕಿಗಳಿಗೆ ಇವುಗಳಲ್ಲಿ ಆದರವಿಲ್ಲ (೨೮-೩೧). ಪರಸ್ತ್ರೀ, ಪರದ್ರವ್ಯಾದಿಗಳು ಸುಖಹೇತು ಗಳಾಗುವುದು ಎಲ್ಲಿಯೂ ಕಂಡಿಲ್ಲ; ಅವು, ಸರ್ವಾನುಭವದಿಂದ, ಸ್ಪಷ್ಟವಾಗಿ, ಸರ್ವದಾ

ಪ್ರಾಯಃ ನ-ಪ್ರಾಯಶಃ(ಬಹುವೇಳೆ) ಮಾತ್ರವಲ್ಲ (ಕಿಂತು) ಸ್ಫುಟಂ-ಸ್ಪಷ್ಟವಾಗಿ, ಆದೌ ಅಪಿ-ಮೊದಲಿಗೆ ಸಹ, ಸುಖದಾಃ ನ ಸ್ಯುಃ-ಸುಖಪ್ರದಗಳಾಗುವುದಿಲ್ಲ; ಸರ್ವದಾ-ಯಾವಾಗಲೂ, ದುಃಖದಾನಿ ಏವ-ದುಃಖಪ್ರದಗಳೇ ಸರಿ; (ಏಕೆಂದರೆ), ಯಃ-ಯಾರು, ಜಾರಃ-ಜಾರನೂ, ಚ-ಮತ್ತು ಚೋರಃ-ಕಳ್ಳನೂ, ಭವೇತ್- ಆಗಿರುವನೋ, ರಾತ್ರೌ-ರಾತ್ರಿಯಲ್ಲಿ ಸುಖಂ-ಸುಖವಾಗಿ, ನ ಸ್ವಪತಿ-ನಿದ್ರೆಮಾಡುವುದಿಲ್ಲ; ಯಸ್ಮಾತ್ ಕಸ್ಮಾತ್-ಯಾರಾದರೊಬ್ಬರಿಂದ, ಯತ್ರ ಕುತ್ರ-ಎಲ್ಲಿಯಾದರೂ, ತಸ್ಯ-ಅವನಿಗೆ, ಸದಾ ಏವ-ಎಲ್ಲ ಕಾಲದಲ್ಲಿ ಭಯಂ ಹಿ-ಭಯವಿರುತ್ತದಷ್ಟೆ

**ಪೀಡ್ಯಮಾನೋ ಹನ್ಯಮಾನಃ ಕೇನಚಿನ್ನೋಚ್ಯತೇ ನ ಸಃ ।**
**ಭವಂತಿ ಸಾದರಾಸ್ತತ್ರ ಕೇಚಿಚ್ಚ ತಮುದಾಸತೇ ॥ ೩೪ ॥**
**ಕೇಚಿತ್ಸಮ್ಯಗಿತಿ ಬ್ರೂಯುಃ ಪಾಪೀ ಕೇಚನ ದುಃಖಭಾಕ್ ।**
**ಜೀವನ್ಯಃ ಕ್ರಿಯತೇ ಸರ್ವಂ ಮೃತೋ ನರಕಭಾಗಪಿ ॥ ೩೫ ॥**
**ಏವಮೇವ ಪರದ್ರೋಹೀ ನೇಹಾಮುತ್ರ ಸುಖಂ ಲಭೇತ್ ।**
**ನ ಲಾಭಃ ಪರವಾದೇನ ಹಾನಿಸ್ತಾತ್ಕಾಲಿಕೀ ಸ್ಫುಟಂ ॥ ೩೬ ॥**
**ತತ್ಕಥಂ ಕುರುತೇ ಮೂಢಃ ಪರದ್ರೋಹಾಪವಾದನಂ ।**

ಸಃ-ಆ ತ ನು (ಜಾರಚೋರಾದಿಜನರು), ಪೀ ಡ್ಯ ಮಾ ನಃ-(ಅನ್ಯರಿಂದ) ಪೀಡಿಸಲ್ಪಟ್ಟು, ಹನ್ಯಮಾನಃ-ಘಾತಿಸಲ್ಪಟ್ಟರೂ (ಹೊಡೆಯಲ್ಪಟ್ಟರೂ), ಕೇನಚಿತ್-ಯಾರೊಬ್ಬನಿಂದಲೂ, ನ ಮೋಚ್ಯತೇ-ಬಿಡಿಸಲ್ಪಡುವುದಿಲ್ಲ; ಕೇಚಿತ್-(ಇದನ್ನು ನೋಡುವ) ಕೆಲವರು, ತತ್ರ-ಆ ವಿಷಯದಲ್ಲಿ (ಅಪರಾಧಿಯನ್ನು ಪೀಡಿಸುವ ವಿಷಯದಲ್ಲಿ), ಸಾದರಾಃ-ಆದರವುಳ್ಳವರು, ಭವಂತಿ-ಆಗುತ್ತಾರೆ; ಕೇಚಿತ್ ಚ-ಮತ್ತೆ ಕೆಲವರು, ತಂ-ಅಪರಾಧಿಯನ್ನು ಉದಾಸತೇ-ಉದಾಸೀನ ಮಾಡುತ್ತಾರೆ (ಆ ಪೀಡಿಸುವುದನ್ನು ಗಮನಿಸುವುದೇ ಇಲ್ಲ-ಉಪೇಕ್ಷಿಸುತ್ತಾರೆ); ಕೇಚನ-ಮತ್ತೆ ಕೆಲವರು, ಪಾಪೀ-(ಈ) ಪಾಪಿಯು, ದುಃಖಭಾಕ್-ದುಃಖಭಾಗಿಯಾದುದು; ಸಮ್ಯಕ್-

---

ದುಃಖಪ್ರದಗಳೇ; ಜಾರನೂ, ಚೋರನೂ, ಆದ ವ್ಯಕ್ತಿಯು, ರಾತ್ರಿಯಲ್ಲಿ ಸುಖವಾಗಿ ನಿದ್ರಿಸಲೂ ಅಸಮರ್ಥನಾಗುವನು—ಏಕೆಂದರೆ, ಯಾರಾದರೊಬ್ಬರಿಂದ ಎಲ್ಲಿಯಾದರೂ ತನಗೆ ಭಯ ತಪ್ಪಿದ್ದಲ್ಲವೆಂದು ತಿಳಿದಿರುತ್ತಾನೆ (೩೨-೩೩). ಹಾಗೆ ತನ್ನ ಅಪರಾಧವನ್ನು ತಿಳಿದವರು, ಪೀಡಿಸಿ ಹೊಡೆಯುತ್ತಿದ್ದರೂ ಯಾರೂ ಅವನ ಸಹಾಯಕ್ಕೆ ಬರುವುದಿಲ್ಲ-ಯಾರೊಬ್ಬನು ಅತನನ್ನು ಬಿಡಿಸಲು ಯತ್ನಿಸುವುದಿಲ್ಲ; ಕೆಲವರು ಹಾಗೆ ಶಿಕ್ಷಿಸುತ್ತಿರುವುದರಲ್ಲಿ ಆದರವನ್ನೇ ಹೊಂದುತ್ತಾರೆ; ಮತ್ತೆ ಕೆಲವರು ಪೀಡಿಸಲ್ಪಡುವ ಆ ಅಪರಾಧಿಯನ್ನು ಗಮನಿಸದೇ ಉಪೇಕ್ಷೆಯಿಂದಿರುತ್ತಾರೆ; ಇನ್ನೂ ಕೆಲವರು, ಈ

ಒಳ್ಳೆಯದಾಯಿತು, ಇತಿ-ಎಂದು, ಬ್ರೂಯುಃ-ನುಡಿಯುತ್ತಾರೆ; ಯಃ-ಯಾವನು, ಜೀವನ್-ಬದುಕಿರುವಾಗ, ಸರ್ವಂ-ಈ ಜಾರಚೋರತ್ವಾದಿ ಎಲ್ಲವನ್ನೂ (ಒಂದೊಂದನ್ನು ಸಹ), ಕ್ರಿಯತೇ-ಮಾಡುವನೋ, ಮೃತಃ-ಅವನು ಮೃತನಾದ ನಂತರ, ನರಕಭಾಕ್ ಅಪಿ-ನರಕಭಾಗಿಯೂ (ಆಗುತ್ತಾನೆ); ಏವಮೇವ-ಹೀಗೆಯೇ (ಜಾರತ್ವ ಚೋರತ್ವಗಳಂತೆ), ಪರದ್ರೋಹೀ-ಅನ್ಯರನ್ನು ವಂಚಿಸುವವನೂ (ಮೋಸ ಮಾಡುವವನೂ), ಇಹ-ಇಲ್ಲಿ ಅಮುತ್ರ-ಪರಲೋಕದಲ್ಲಿ ಸುಖಂ-ಸುಖವನ್ನು ನ ಲಭೇತ್-ಹೊಂದುವುದಿಲ್ಲ; ಪರವಾದೇನ-(ಹೀಗೆಯೇ) ಅನ್ಯರನ್ನು ನಿಂದಿಸುವುದ ರಿಂದ, ನ ಲಾಭಃ-ಲಾಭವಿಲ್ಲ; ಸ್ಫುಟಂ-ಸ್ಪಷ್ಟವಾಗಿ, ತಾತ್ಕಾಲಿಕೀ ಹಾನಿಃ-ತಕ್ಷಣದಲ್ಲಿ (ಆಗಲೇ) ಹಾನಿಯೂ (ಕೆಡಕೂ) (ಕಂಡಿದೆ); ಮೂಢಃ-ಮೂರ್ಖನು, ತತ್-ಆದ್ದರಿಂದ, ಪರದ್ರೋಹಾಪವಾದನಂ-ಪರದ್ರೋಹ ನಿಂದೆಗಳನ್ನು, ಕಥಂ ಕುರುತೇ-ಹೇಗೆ ಮಾಡುತ್ತಾನೆ? (ತಿಳಿಯದು—ಆಶ್ಚರ್ಯವು) (ದುಃಖಪ್ರದಗಳಾದ್ದ ರಿಂದ ಮಾಡತಕ್ಕದ್ದಲ್ಲ).

ಕಾಮಾರ್ತೋ ವಾಂಛತಿ ದ್ರಾವಂ ಸ್ವಸ್ತ್ರೀಸಂಗಾತ್ಸುಖಂ ಲಭೇತ್ ॥ ೩೭ ॥
ಪುಣ್ಯಂ ಚ ಜಾಯತೇ ಯಸ್ಮಾತ್ತಸ್ಮಾತ್ಸ ಶ್ರೇಷ್ಠ ಉಚ್ಯತೇ ।
ಕ್ಷುಧಾರ್ತೋ ವಿಷ್ಣುನೈವೇದ್ಯಂ ಸ್ವಾದುಭುಕ್ತ್ವಾ ಸುಖಂ ಲಭೇತ್ ॥ ೩೮ ॥
ಪುಣ್ಯಂ ಚ ಜಾಯತೇ ತಸ್ಮಾತ್ತಥಾ ತತ್ತೀರ್ಥಪಾನತಃ ।
ಪ್ರಕ್ಚಂದನಸುವರ್ಣಾದಿ ವಸ್ತ್ರಾಲಂಕರಣಾನಿ ಚ ॥ ೩೯ ॥
ಭುಜ್ಯತೇ ವಿಷ್ಣುಶೇಷಂ ಚೇತ್ತಥಾ ವಿಪ್ರಾವಶೇಷಿತಂ ।
ತನ್ಮಹಾಫಲದಂ ಲೋಕೇ ಪರತ್ರಾಪಿ ಮಹಾಫಲಂ ॥ ೪೦ ॥

---

ಪಾಪಿಯು ಈ ವಿಧ ಶಿಕ್ಷೆಗೆ (ದುಃಖಕ್ಕೆ) ಭಾಗಿಯಾದುದು ಯೋಗ್ಯವೇ ಆಯಿತೆಂದು ನುಡಿಯುತ್ತಾರೆ; ಬದುಕಿರುವಾಗ ಜಾರತ್ವ ಚೋರತ್ವಾದಿಗಳನ್ನು ಆಚರಿಸಿ, ನಾನಾ ಪೀಡೆಗಳನ್ನು ಅನುಭವಿಸಿ, ಮೃತನಾದ ನಂತರ ನರಕವನ್ನೂ (ಪಾಪಿಗಳನ್ನು ಶಿಕ್ಷಿಸುವ ಯಮಲೋಕದ ಯಾತನಾಸ್ಥಾನಗಳನ್ನೂ) ಹೊಂದುತ್ತಾನೆ; ಇದರಂತೆ, ಪರದ್ರೋಹ, ಪರನಿಂದೆಗಳಿಂದಲೂ, ಇಹಪರಗಳಲ್ಲಿ ಯಾವ ಸುಖವೂ ಇಲ್ಲ; ಅಷ್ಟು ಮಾತ್ರವಲ್ಲ— ತಾತ್ಕಾಲಿಕ ಹಾನಿಯೂ (ಅನಿಷ್ಟ ಪ್ರಾಪ್ತಿಯೂ) ಉಂಟೆಂಬುದು ಲೋಕಾನುಭವ ಸಿದ್ಧವಾಗಿದೆ; ಹೀಗಿದ್ದರೂ ಮೂರ್ಖರು ಈ ವಿಧ ಆಚರಣೆಗಳಲ್ಲಿ ತೊಡಗುವ ರೆಂಬುದು ಆಶ್ಚರ್ಯವೇ ಸರಿ; ವಿವೇಕಿಯು, ಅವುಗಳನ್ನು ಸರ್ವಥಾ ಆಚರಿಸಕೂಡದು (೩೪-೩೬). ಕಾಮಾರ್ತನು ಅದರ ಪರಿಹಾರವನ್ನು ತನ್ನ ಪತ್ನೀ ಸಂಗದಿಂದ ಪಡೆಯಬೇಕು (ಸ್ವಸ್ತ್ರೀ ಭೋಗವನ್ನು ವಾಮದೇವಯಜ್ಞರೂಪದ ಶ್ರೀವಿಷ್ಣುಪೂಜಾತ್ಮಕ

ಕಾಮಾರ್ತಃ-ಮನ್ಮಥನಿಂದ ಪೀಡಿತನಾದವನು, ದ್ರಾವಂ-ರೇತಸ್ಸೇಚನವನ್ನು ವಾಂಛತಿ-ಅಪೇಕ್ಷಿಸಿ, ಸ್ವಸ್ತ್ರೀಸಂಗಾತ್-ತನ್ನ ಪತ್ನಿಯ ಸಂಗದಿಂದ, ಸುಖಂ-(ಆ) ಸುಖವನ್ನು ಲಭೇತ್ ಹೊಂದತಕ್ಕದ್ದು (ಸ್ವಸ್ತ್ರೀಯಿಂದ ಆ ಸುಖವನ್ನೂ ಹೊಂದ ಬಹುದು—ಮೈಥುನಕ್ರಿಯೆಯಲ್ಲಿ ಯೋಗ್ಯವಾದ ಅನುಸಂಧಾನವಿಟ್ಟು ವಿಷ್ಣುಪ್ರೀತಿ ಯನ್ನೂ ಹೊಂದಬಹುದು); ಯಸ್ಮಾತ್-ಯಾವ ಕಾರಣದಿಂದ, ಪುಣ್ಯಂ ಚ-ಪುಣ್ಯವೂ (ಸ್ತ್ರೀಭೋಗವನ್ನು—ವಿಷ್ಣುಪೂಜಾತ್ಮಕ ವಾಮದೇವಯಜ್ಞವೆಂಬ ಅನುಸಂಧಾನದಿಂದ, ಮಾಡಿದರೆ ಮಹಾ ಪುಣ್ಯವೂ), ಜಾಯತೇ-ಉಂಟಾಗುತ್ತದೆಯೋ, ತಸ್ಮಾತ್-ಆ ಕಾರಣದಿಂದ, ಸಃ-ಸ್ವಸ್ತ್ರೀ ಸಂಗವು, ಶ್ರೇಷ್ಠಃ-ಶ್ರೇಷ್ಠವೆಂದು, ಉಚ್ಯತೇ-ಹೇಳಲ್ಪಡುತ್ತದೆ; ಕ್ಷುಧಾರ್ತಃ-ಹಸಿವೆಯಿಂದ ವ್ಯಥೆಪಡುವಾತನು, ಸ್ವಾದು-ರುಚಿಕರವಾದ, ವಿಷ್ಣುನೈವೇದ್ಯಂ-ಶ್ರೀವಿಷ್ಣುವಿಗೆ ಅರ್ಪಿತವಾದ (ನಿವೇದಿಸಲ್ಪಟ್ಟ) ಆಹಾರವನ್ನು (ಅಥವಾ ವಿಷ್ಣು ನೈವೇದ್ಯವನ್ನೇ ರುಚಿಕರವೆಂಬ ಭಾವನೆಯಿಂದ), ಭುಕ್ತ್ವಾ-ಉಂಡು, ಸುಖಂ-ಸುಖವನ್ನು ಲಭೇತ್-ಹೊಂದತಕ್ಕದ್ದು; ತಸ್ಮಾತ್-ಆದರಿಂದ, ಪುಣ್ಯಂ ಚ-ಪುಣ್ಯವೂ, ಜಾಯತೇ-ಉಂಟಾಗುತ್ತದೆ; ತಥಾ-ಹಾಗೆಯೇ (ಇದರಂತೆ), ತತ್ತೀರ್ಥಪಾನತಃ-ವಿಷ್ಣ್ವರ್ಪಿತ ಜಲಪಾನದಿಂದ, (ದಾಹೋಪಶಮನವೂ ಪುಣ್ಯವೂ

---

ಕರ್ಮವೆಂಬ ಭಾವನೆಯಿಂದ ಆಚರಿಸತಕ್ಕದ್ದು);[1] ಆದರಿಂದ ಸುಖವನ್ನೂ ಪುಣ್ಯವನ್ನೂ ಹೊಂದುತ್ತಾನೆ; ಆದ್ದರಿಂದ ಕಾಮಾರ್ತನಿಗೆ ಸ್ವಸ್ತ್ರೀ ಭೋಗವೇ ಶ್ರೇಷ್ಠವು—ಪರಸ್ತ್ರೀ ಸಂಗವನ್ನು ಮನಸ್ಸಿನಿಂದ ಸಹ ಯೋಚಿಸತಕ್ಕದ್ದಲ್ಲ; ಹೀಗೆಯೇ ವಿಷ್ಣುನೈವೇದ್ಯ ಮಾಡಿದ ಆಹಾರ ವಸ್ತುಗಳನ್ನೇ ರುಚಿಕರವೆಂದು ಭೋಜನ ಮಾಡಿ, ಕ್ಷುತ್ಪೀಡೆಯ ಪರಿಹಾರವನ್ನೂ ಪುಣ್ಯವನ್ನೂ ಹೊಂದಬಹುದು; ಇದರಂತೆಯೇ ವಿಷ್ಣ್ವರ್ಪಿತ ಜಲಪಾನದಿಂದ ನೀರಡಿಕೆಯ ಪರಿಹಾರವೂ ಪುಣ್ಯವೂ ಲಭಿಸುತ್ತದೆ; ಗಂಧಪುಷ್ಪಾದಿ ಗಳನ್ನೂ, ಸುವರ್ಣ ವಸ್ತ್ರಾಲಂಕಾರಗಳನ್ನೂ ಹೀಗೆಯೇ ಶ್ರೀವಿಷ್ಣುವಿಗೆ ಸಮರ್ಪಿಸಿ ಉಪಭೋಗ ಮಾಡುವುದರಿಂದ, ವಿಶೇಷವಾಗಿ ಅವು ವಿಪ್ರಾವಶೇಷಿತಗಳಾದರೆ (ಬ್ರಾಹ್ಮಣರಿಗೆ ದಾನಮಾಡಿ ಉಳಿದವುಗಳಾಗಿದ್ದರೆ) ಇಹಪರಗಳಲ್ಲಿ ಮಹಾಫಲವೇ ದೊರೆಯುತ್ತದೆ—ಪುಣ್ಯಫಲರೂಪವಾದ ಅಧಿಕ ಸುಖವನ್ನೇ ಹೊಂದುತ್ತಾನೆ (೩೭-೪೦). ಭೋಗಕಾಲದಲ್ಲಿ ದುಃಖವನ್ನು ಪರಿಹರಿಸುವ ಮತ್ತು ಇಹಪರಗಳಲ್ಲಿ

---

1. ಶ್ರೀಬೃಹದಾರಣ್ಯಕ ಉಪನಿಷತ್ತಿನ ೬ನೇ ಅಧ್ಯಾಯದ ೪ನೇ ಬ್ರಾಹ್ಮಣದಲ್ಲಿ ಸ್ವರ್ಗ ಮೋಕ್ಷಗಳಿಗೆ ಯೋಗ್ಯನಾದ ಸತ್ಪುತ್ರರನ್ನು ಸ್ವಸ್ತ್ರೀಯಲ್ಲಿ ಉತ್ಪಾದನೆಮಾಡುವ ಮಾರ್ಗವೂ, ಸ್ತ್ರೀ ಸಂಭೋಗದಲ್ಲಿ ಯಜ್ಞವೆಂಬ ಅಭಿಸಂಧಿಯಿರಬೇಕಾದ ಆವಶ್ಯಕತೆಯೂ, ಆಗ ಚಿಂತಿಸಬೇಕಾದ ಮಂತ್ರಗಳೂ ನಿರೂಪಿಸಲ್ಪಟ್ಟಿವೆ—ವಾಮದೇವಯಾಗವೆಂಬ ಈ ಭಾವನೆಯ ಫಲವೂ ನಿರೂಪಿತ ವಾಗಿದೆ.

ಲಭಿಸುತ್ತದೆ); ಚ-ಮತ್ತು ಸ್ರಕ್‌ಚಂದನ ಸುವರ್ಣಾದಿವಸ್ತ್ರಾಲಂಕರಣಾನಿ- ಹೂವಿನ ಮಾಲೆ, ಗಂಧ, ಸುವರ್ಣನಿರ್ಮಿತ ವಸ್ತ್ರಾಲಂಕಾರಾದಿಗಳನ್ನು ವಿಷ್ಣುಶೇಷಂ-ವಿಷ್ಣುವಿಗೆ ಅರ್ಪಿಸಿದ ನಂತರ, ಭುಜ್ಯತೇ ಚೇತ್-ಭೋಗಿಸಿದರೆ, ತಥಾ-ಹಾಗೆಯೇ, ವಿಪ್ರಾವಶೇಷಿತಂ-(ಅವು) ಬ್ರಾಹ್ಮಣರಿಗೆ ದಾನಮಾಡಿ ಉಳಿದವುಗಳಾಗಿದ್ದರೆ, ಲೋಕೇ-ಇಹದಲ್ಲಿ, ತತ್-ಅದು (ಅಂಥ ವಸ್ತುಗಳ ಭೋಗವು), ಮಹಾಫಲದಂ-ಅತಿಶಯವಾದ ಫಲವನ್ನು ಕೊಡುವುದೂ (ಆಗುತ್ತದೆ); ಪರತ್ರ ಅಪಿ-ಪರಲೋಕದಲ್ಲಿ ಸಹ, ಮಹಾಫಲಂ-ಮಹಾಫಲವು (ಫಲವಾದ ಮಹಾಸುಖವು), (ಲಭಿಸುತ್ತದೆ).

ಇಹಾಮುತ್ರ ಸುಖಂ ಯೇನ ತತ್ಕಾಲಂ ದುಃಖಹಾರಿ ಯತ್ ।
ಜೈಂಹ್ವೋಪಸ್ಥ್ಯಾದಿ ಕುರ್ವೀತ ತದೈವ ಪ್ರಾಯಶೋ ಬುಧಃ ॥ ೪೧ ॥
ದುಃಖಹಾನಿಃ ಸುಖಾವಾಪ್ತಿರ್ದ್ವಯಮೇಕೈಕಮೇವ ವಾ ।
ಭವೇಚ್ಚ ನ ಭವೇತ್ಪಾಪಂ ತಾದೃಶೀಂ ಚಾಚರೇದ್ಬುಧಃ ॥ ೪೨ ॥

ಯೇನ-ಯಾವುದರಿಂದ, ಇಹಾಮುತ್ರ ಸುಖಂ-ಇಹಪರಗಳಲ್ಲಿ ಸುಖವೋ, (ಮತ್ತು) ತತ್ಕಾಲಂ-ತತ್ಕಾಲದಲ್ಲಿ (ಭೋಗಕಾಲದಲ್ಲಿ), ದುಃಖಹಾರಿ-ದುಃಖವನ್ನು (ಪೀಡೆಯನ್ನು) ಪರಿಹರಿಸುವುದೋ, ಜೈಂಹ್ವೋಪಸ್ಥ್ಯಾದಿ-(ಆ) ಜಿಹ್ವೆ, ಉಪಸ್ಥಾದಿ ಇಂದ್ರಿಯಭೋಗ್ಯ ವಿಷಯಗಳನ್ನೇ, ಕುರ್ವೀತ-ಉಪಯೋಗಿಸತಕ್ಕದ್ದು; ತದಾ ಏವ-ಆಗಮಾತ್ರ, ಪ್ರಾಯಶಃ-ಹೆಚ್ಚಾಗಿ, ಬುಧಃ-ವಿವೇಕಿಯು (ಎನಿಸುವನು); ಬುಧಃ-ವಿವೇಕಿಯು (ಜ್ಞಾನಿಯು), ದುಃಖಹಾನಿಃ-ದುಃಖನಾಶವು, ಸುಖಾವಾಪ್ತಿಃ-ಸುಖಪ್ರಾಪ್ತಿಯು, ದ್ವಯಂ-ಎರಡೂ, ವಾ-ಅಥವಾ ಏಕೈಕಂ ಏವ-(ಅವುಗಳಲ್ಲಿ) ಒಂದೊಂದಾದರೂ, ಭವೇತ್-(ಯಾವುದರ ಸೇವನೆಯಿಂದ) ಉಂಟಾಗುವುದೋ, (ಮತ್ತು), ಪಾಪಂ-ಪಾಪವು, ನ ಭವೇತ್-ಉಂಟಾಗುವುದಿಲ್ಲವೋ, ತಾದೃಶೀಂ ಚ-ಅಂಥದನ್ನೇ, ಆಚರೇತ್-ಸೇವಿಸತಕ್ಕದ್ದು.

ಶೀತವಾತಾತಪಾದೀನಿ ತತ್ಕಾಲಂ ದುಃಖದಾನ್ಯಪಿ ।
ಪಾರತ್ರಿಕ ಸುಖಾಯೈವ ಸಹಂತೇ ಧನ್ಯಪೂರುಷಾಃ ॥ ೪೩ ॥

---

ಸುಖಪ್ರದಗಳಾದ, ಜಿಹ್ವೆ, ಉಪಸ್ಥಾದಿ ಇಂದ್ರಿಯಗಳಿಂದ ಭೋಗ್ಯವಾದ ವಿಷಯಗಳನ್ನೇ (ವಸ್ತುಗಳನ್ನೇ) ಸೇವಿಸತಕ್ಕದ್ದು; ಪ್ರಾಯಃ ಹೀಗೆ ವಿವೇಕವುಳ್ಳವರೇ ಜ್ಞಾನಿಗಳೆಂದು ತಿಳಿಯಲ್ಪಟ್ಟಿರುವರು; ಯಾವುದರ ಭೋಗದಿಂದ, ದುಃಖಹಾನಿಯೂ, ಸುಖಪ್ರಾಪ್ತಿಯೂ, ಅಥವಾ ಈ ಎರಡರಲ್ಲಿ ಯಾವುದೊಂದಾದರೂ ಸಾಧಿಸುವುದೋ, ಅದನ್ನೇ, ಪಾಪ ಉಂಟಾಗದಿದ್ದರೆ ಮಾತ್ರ, ಸೇವಿಸತಕ್ಕದ್ದು (೪೧-೪೨). ಚಳಿಗಾಳಿ ಬಿಸಿಲುಗಳು ತತ್ಕಾಲದಲ್ಲಿ (ತೀರ್ಥಯಾತ್ರೆ ಸ್ನಾನಾದಿಕಾಲದಲ್ಲಿ) ದುಃಖಪ್ರದಗಳಾದರೂ, ಪಾರತ್ರಿಕ ಸುಖಸಾಧನಗಳೇ ಆಗುವುದರಿಂದ, ಭಾಗ್ಯಶಾಲಿಗಳಾದ

ತತ್ಕಾಲಸುಖದಾಃ ಕೇಚಿತ್ ಪರತ್ರಾನರ್ಥಹೇತವಃ ।
ಜೈಂಹ್ವೋಪಸ್ಥ್ಯಾದಯೋಽನ್ಯಾ ಯಾ ದುರ್ಭೋಗಾ ಲೋಕನಿಂದಿತಾಃ ॥
ದುಷ್ಪ್ರತಿಗ್ರಹದುರ್ಭೋಜ್ಯದುರ್ವೃತ್ತಿಪರಪೀಡಕಾಃ ।
ವೇಶ್ಯಾದಿಗಮನಾದ್ಯಾಶ್ಚ ನಾದ್ರಿಯಂತೇ ವಿವೇಕಿಭಿಃ ॥ ೪೫ ॥

ಶೀತವಾತಾತಪಾದೀನಿ-ಚಳಿಗಾಳಿ ಬಿಸಿಲುಗಳು, ತತ್ಕಾಲಂ-ತತ್ಕಾಲದಲ್ಲಿ ದುಃಖದಾನಿ ಅಪಿ-ದುಃಖವನ್ನುಂಟುಮಾಡುತ್ತವೆಯಾದರೂ, ಧನ್ಯಪೂರುಷಾಃ-ಪುಣ್ಯಶಾಲಿಗಳಾದ ಪುರುಷರು, ಪಾರತ್ರಿಕ ಸುಖಾಯ ಏವ-ಪರಲೋಕದ ಸುಖಕ್ಕಾಗಿಯೇ, ಸಹಂತೇ-(ಶೀತಾದಿಗಳನ್ನು) ಸಹಿಸುತ್ತಾರೆ; ಕೇಚಿತ್-ಮತ್ತೆ ಕೆಲವು, ತತ್ಕಾಲಸುಖದಾಃ-ತತ್ಕಾಲದಲ್ಲಿ (ಅನುಭವಕಾಲದಲ್ಲಿ) ಸುಖವನ್ನುಂಟುಮಾಡುತ್ತವೆಯಾದರೂ, ಪರತ್ರ-ಪರಲೋಕದಲ್ಲಿ (ಅಥವಾ ಜನ್ಮಾಂತರಗಳಲ್ಲಿ), ಅನರ್ಥಹೇತವಃ-ಅನರ್ಥಕ್ಕೆ ಕಾರಣಗಳಾಗುತ್ತವೆ; (ಅವು ಯಾವುವೆಂದರೆ) ಯಾಃ-ಯಾವ, ಲೋಕನಿಂದಿತಾಃ- ಲೋಕನಿಂದಿತಗಳಾದ, ಅನ್ಯಾಃ-ಇತರೇ, ಜೈಂಹ್ವೋಪಸ್ಥ್ಯಾದಯಃ-ಜಿಹ್ವೆ, ಉಪಸ್ಥೇಂದ್ರಿಯ ಭೋಗಸಂಬಂಧಗಳಾದ, ದುರ್ಭೋಗಾಃ-(ನಿಷಿದ್ಧ) ದುರ್ಭೋಗಗಳೋ (ಅವು) ಮತ್ತು ದುಷ್ಪ್ರತಿಗ್ರಹ ದುರ್ಭೋಜ್ಯ ದುರ್ವೃತ್ತಿ ಪರಪೀಡಕಾಃ-ದುರ್ದಾನಗಳನ್ನು ಸ್ವೀಕರಿಸುವುದು, ದುಷ್ಟಾನ್ನಭೋಜನ, (ದುಷ್ಟಪ್ರವೃತ್ತಿ) ಪರರಿಗೆ ಉಂಟುಮಾಡುವ ಪೀಡಾರೂಪದ ಪ್ರವೃತ್ತಿಗಳು, ಚ-ಮತ್ತು ವೇಶ್ಯಾದಿ ಗಮನಾದ್ಯಾಃ-ವೇಶ್ಯಾಗಮನಾದಿಗಳು, ವಿವೇಕಿಭಿಃ-ಜ್ಞಾನಿಗಳಿಂದ, ನ ಆದ್ರಿಯಂತೇ-(ಈ ಯಾವುವೂ) ಆದರಿಸಲ್ಪಡುವುದಿಲ್ಲ.

ದುಃಖಹಾನಿಃ ಸುಖಪ್ರಾಪ್ತಿರ್ಯತಃ ಪ್ರಾಯೇಣ ಜಾಯತೇ ।
ಅತ ಇಷ್ಟದ್ವಯೋಪೇತಃ ಸ್ತ್ರೀಸಂಗಃ ಸರ್ವವಾಂಛಿತಃ ॥ ೪೬ ॥

---

ಪುರುಷರು ಅವುಗಳನ್ನು ಸಹಿಸುತ್ತಾರೆ; ತತ್ಕಾಲದಲ್ಲಿ (ಭೋಗಕಾಲದಲ್ಲಿ) ಸುಖಪ್ರದಗಳಾದರೂ, ಪರತ್ರ (ಮುಂದಿನ) ಅನರ್ಥಕ್ಕೆ ಹೇತುಗಳಾದವುಗಳು, ಜಿಹ್ವೋಪಸ್ಥಗಳಿಂದ ಭೋಗ್ಯವಾದ ದುರ್ಭೋಗಗಳು; ಲೋಕನಿಂದಿತವೂ, ಶಾಸ್ತ್ರನಿಷಿದ್ಧವೂ ಆದ, ಪಲಾಂಡು (ನೀರುಳ್ಳಿ) ವೃಂತಾಕ (ಬದನೆಕಾಯಿ), ಪರಸ್ತ್ರೀ, ವೇಶ್ಯಾದಿ ಜಿಹ್ವೋಪಸ್ಥಗಳ ಭೋಗ್ಯವಸ್ತುಗಳೂ, ದುರ್ದಾನ ಸ್ವೀಕಾರ (ಪಾಪಿಗಳಿಂದ ಕೀರ್ತ್ಯಾದಿ ಉದ್ದೇಶಮಾತ್ರದಿಂದ, ಅಕಾಲದೇಶಗಳಲ್ಲಿ ಕೊಡಲ್ಪಡುವ ದಾನಗಳನ್ನು ಅಂಗೀಕರಿಸುವುದು, ದುಷ್ಟಾನ್ನಭೋಜನ (ವಿಷ್ಣ್ವರ್ಪಿತವಲ್ಲದ ಪಾಪಿಗಳ ಅನ್ನಾದಿಗಳ ಭಕ್ಷಣ), ಪರಹಿಂಸಾಕರಗಳಾದ ವಿವಿಧ ದುಷ್ಟಪ್ರವೃತ್ತಿಗಳು ಮತ್ತು ವೇಶ್ಯಾಗಮನಾದಿ, ವಿಷಯಾಸಕ್ತಿಯನ್ನು ವೃದ್ಧಿಗೊಳಿಸುವ, ವ್ಯಾಪಾರಗಳು, ವಿವೇಕಿಗಳಿಂದ, ಆದರಿಸಲ್ಪಡುವುದಿಲ್ಲ (೪೩-೪೫). ದುಃಖಹಾನಿಯು (ಕಾಮಪೀಡೆ ಅಥವಾ ಪೀಡೆಯ

**ತತೋऽಪ್ಯತಿತರಾಂ ಶ್ರೇಷ್ಠಃ ಕ್ಷುಧಾರ್ತಿಶಮನಾ ಭುಜಿಃ ।**
**ತತೋऽಪ್ಯತಿತಮಾಮಾಹುಸ್ತೃಷಾರ್ತಸ್ಯ ಜಲಾಶನಂ ॥ ೪೭ ॥**
**ಸರ್ವೇऽಪಿ ವಿಷಯಾ ಲೋಕೇ ದುರ್ಜಯಾಶ್ಚ ತಥಾಪಿ ಹಿ ।**
**ದುರ್ಜಯಂ ತ್ರಯಮೇತತ್ಸ್ಯಾತ್ ಕ್ರಮಾದಿತಿ ವಿನಿರ್ಣಯಃ ॥ ೪೮ ॥**

ದುಃಖಹಾನಿಃ-ದುಃಖನಾಶವೂ, ಸುಖಪ್ರಾಪ್ತಿಃ-ಸುಖಲಾಭವೂ, ಪ್ರಾಯೇಣ-ಅಧಿಕವಾಗಿ, ಯತಃ-ಯಾವ ಕಾರಣದಿಂದ, ಜಾಯತೇ-ಉಂಟಾಗುವುದೋ, ಅತಃ-ಆ ಕಾರಣದಿಂದ, ಇಷ್ಟದ್ವಯೋಪೇತಃ-ಈ ಎರಡು ಇಷ್ಟಗಳನ್ನು ಪೂರ್ತಿಗೊಳಿಸುವ, (ಈ ಎರಡನ್ನೂ ಉಳ್ಳ), ಸ್ತ್ರೀಸಂಗಃ-ಸ್ತ್ರೀ ಭೋಗವು, ಸರ್ವಾವಾಂಛಿತಃ-ಎಲ್ಲರಿಗೂ ಅಭೀಷ್ಟವಾದುದು (ಆಗಿದೆ); ತತಃ ಅಪಿ-ಅದಕ್ಕಿಂತಲೂ (ಸ್ತ್ರೀಸಂಗಕ್ಕಿಂತ), ಅತಿತರಾಂ ಶ್ರೇಷ್ಠಃ-ಅಧಿಕ ಶ್ರೇಷ್ಠವಾದುದು, ಕ್ಷುಧಾರ್ತಿಶಮನಾ-ಹಸಿವೆಯೆಂಬ ವ್ಯಥೆಯನ್ನು ಪರಿಹರಿಸುವ, ಭುಜಿಃ-ಭೋಜನವು; ತತಃ ಅಪಿ-ಅದಕ್ಕಿಂತ (ಭೋಜನಕ್ಕಿಂತ), ಅತಿ ತಮಾಂ (ಶ್ರೇಷ್ಠಃ)-ಅತ್ಯಂತ ಶ್ರೇಷ್ಠವಾದುದು (ಬಲಿಷ್ಠವಾದುದು—ಜಯಿಸಲಶಕ್ಯವಾದುದು ತೃಷೆಯು) ತೃಷಾರ್ತಸ್ಯ-ನೀರಡಿಕೆಯಿಂದ ಪೀಡಿತನಾದವನಿಗೆ, ಜಲಾಶನಂ-ಜಲಪಾನವು (ಇಷ್ಟವು); ಲೋಕೇ-ಜಗತ್ತಿನಲ್ಲಿ ವಿಷಯಾಃ-ವಿಷಯಗಳು (ಇಂದ್ರಿಯಗಳಿಂದ ಭೋಗಿಸಲ್ಪಡುವ ವಸ್ತುಗಳು) ಸರ್ವೇ ಅಪಿ-ಎಲ್ಲವೂ (ಇಂದ್ರಿಯಗಳನ್ನು ಆಕರ್ಷಿಸುವ ವಸ್ತುಗಳೆಲ್ಲವೂ), ದುರ್ಜಯಾಃ-ಗೆಲ್ಲಲು ಕಷ್ಟಸಾಧ್ಯವಾದವುಗಳೇ (ಇಂದ್ರಿಯಗಳನ್ನು ವಿಷಯಗಳಿಂದ ಸೆಳೆದುಕೊಂಡು ಸ್ವವಶದಲ್ಲಿಟ್ಟುಕೊಳ್ಳುವುದೇ ವಿಷಯಜಯವು); ತ ಥಾ ಪಿ-ಹಾಗಾದರೂ, ಕ್ರಮಾತ್-ಉತ್ಕ್ರಮದಿಂದ, ಏತತ್-ಈ, ತ್ರಯಂ-ಮೂರು, ದುರ್ಜಯಂ ಸ್ಯಾತ್-

---

ಪರಿಹಾರವೂ) ಸುಖಪ್ರಾಪ್ತಿಯೂ, ಈ ಎರಡೂ ಯಾವುದರಿಂದ ದೊರೆಯುವುದೋ ಅದೇ ಸರ್ವವಾಂಛಿತವಾಗುವುದು; ಸ್ತ್ರೀಸಂಗದಿಂದ ಅಧಿಕವಾಗಿ ಈ ಎರಡೂ ದೊರೆಯುವುದರಿಂದ, ಅದು ಸರ್ವಾಪೇಕ್ಷಿತವಾಗಿದೆ; ಅದಕ್ಕಿಂತ ಅಧಿಕೇಷ್ಟವಾದುದು, ಕ್ಷುಧೆಯನ್ನು ಪರಿಹರಿಸುವ ಭೋಜನವು; ಅದಕ್ಕೂ ಅತ್ಯಂತ ಇಷ್ಟವಾದುದು ದಾಹವನ್ನಡಗಿಸುವ ಜಲಪಾನವು; ಲೋಕದಲ್ಲಿ ಎಲ್ಲ ವಿಷಯಗಳೂ ದುರ್ಜಯಗಳೇ ಆಗಿವೆ (ಇಂದ್ರಿಯಗಳನ್ನು ಆಕರ್ಷಿಸುವ ಅವುಗಳ ಶಕ್ತಿಯು ಬಲಿಷ್ಠವಾದುದು); ಅವುಗಳಿಂದ ಇಂದ್ರಿಯಗಳನ್ನು ಜಯಿಸುವುದು ಬಹುಕಷ್ಟಸಾಧ್ಯವಾದುದೇ ಸರಿ; ಆದರೂ, ಉತ್ಕ್ರಮದಿಂದ (ಸ್ತ್ರೀ, ಅನ್ನ, ಜಲಪಾನಗಳೆಂಬ) ಈ ಮೂರು ಅತಿಶಯ ದುರ್ಜಯಗಳೆಂದು ಜ್ಞಾನಿಗಳ ನಿರ್ಣಯವಾಗಿದೆ; (ಈ ಮೂರೂ ಉಪಸ್ಥ ಜಿಹ್ವೇಂದ್ರಿಯಗಳಿಗೆ ಸಂಬಂಧಪಡುತ್ತವೆ—ಇಂದ್ರಿಯಗಳಲ್ಲೆಲ್ಲ ಜಿಹ್ವೋಪಸ್ಥಗಳು ಅತ್ಯಂತ ಪ್ರಬಲವಾದವುಗಳೆಂದು ತಾತ್ಪರ್ಯ) (೪೬-೪೮). ಸುಖಪ್ರಾಪ್ತಿಗಿಂತಲೂ,

ದುರ್ಜಯಗಳಾಗಿವೆ, ಇತಿ-ಎಂಬುದು, ವಿನಿರ್ಣಯಃ-(ಜ್ಞಾನಿಗಳ) ನಿರ್ಣಯವು (ನಿಶ್ಚಿತಾಭಿಪ್ರಾಯವು).

ಸುಖಪ್ರಾಪ್ತೇಃ ಪ್ರಿಯತಮಾ ದುಃಖಹಾನಿರಿಹ ಸ್ಫುಟಂ ।
ಅತ ಏವ ಮಹಾನಿಷ್ಟಂ ದುಃಖಮೇವ ಪ್ರಕೀರ್ತಿತಂ ॥ ೪೯ ॥
ನ ಹಿ ಕಂಟಕವಿದ್ಧಾಂಗೋ ಮುಹುಃ ಶಯ್ಯಾಮಪೇಕ್ಷ್ಯತೇ ।
ಕ್ಷುಧಾ ತೃಷಾ ಪೀಡಿತೋ ವಾ ಕಿಂಚಿದನ್ಯದಪೇಕ್ಷ್ಯತೇ ॥ ೫೦ ॥
ಬಾಧಿತೋ ಮಲಮೂತ್ರಾದ್ಯೈಃ ಕಿಂಚಿದ್ವಾನ್ಯತ್ಸಮೀಹತೇ ।
ಸ್ತ್ರೀಸಂಗಾದಿತ್ರಯೇ ತಸ್ಮಾನ್ನ್ಯಾಯ್ಯಮನ್ಯಾಯ್ಯಮಿತ್ಯಪಿ ॥ ೫೧ ॥
ಸರ್ವದಾ ಚಿಂತಯಾನಃ ಸಂಶ್ಚರೇತ್ಯನ್ಯತರಂ ತ್ಯಜೇತ್ ।

ಸುಖಪ್ರಾಪ್ತೇಃ-ಸುಖಪ್ರಾಪ್ತಿಗಿಂತ, ದುಃಖಹಾನಿಃ-ದುಃಖಹಾನಿಯು, ಪ್ರಿಯತಮಾ-ಅತ್ಯಂತ ಪ್ರಿಯವಾದುದು, ಇಹಸ್ಫುಟಂ-ಹೀಗೆಂಬುದು ಸರ್ವಾನುಭವ ಸಿದ್ಧವೇ ಆಗಿದೆ; ಅತಃ ಏವ-ಈ ಕಾರಣದಿಂದಲೇ, ದುಃಖಂ-ದುಃಖವೇ, ಮಹಾನಿಷ್ಟಂ-ಮಹಾ ಅನಿಷ್ಟವೆಂದು (ಅಧಿಕವಾದ ಅನಿಷ್ಟವೆಂದು), ಪ್ರಕೀರ್ತಿತಂ-ಹೇಳಲ್ಪಟ್ಟಿದೆ; ಕಂಟಕವಿದ್ಧಾಂಗಃ-ಮುಳ್ಳಿನಿಂದ ಚುಚ್ಚಲ್ಪಡುತ್ತಿರುವ ದೇಹವುಳ್ಳವನು, ಮುಹುಃ-ಮತ್ತೆ ಶಯ್ಯಾಂ-ಹಾಸಿಗೆಯನ್ನು ನ ಅಪೇಕ್ಷ್ಯತೇ ಹಿ-ಇಚ್ಛಿಸುವುದಿಲ್ಲವಷ್ಟೆ ಕ್ಷುಧಾ-ಹಸಿವೆಯಿಂದ, ವಾ-ಅಥವಾ, ತೃಷಾ-ನೀರಡಿಕೆಯಿಂದ, ಪೀಡಿತಃ-ಪೀಡಿಸಲ್ಪಟ್ಟವನು, ಅನ್ಯತ್ ಕಿಂಚಿತ್-ಬೇರೇನನ್ನೂ (ನ) ಅಪೇಕ್ಷ್ಯತೇ-(ಅನ್ನಪಾನಗಳಿಂದ ಭಿನ್ನವಾದ ಏನನ್ನೂ) ಇಚ್ಛಿಸುವುದಿಲ್ಲ (ಹೇಗೆ), ಮಲಮೂತ್ರಾದ್ಯೈಃ-ಮಲಮೂತ್ರಗಳಿಂದ, ಬಾಧಿತಃ-ಪೀಡಿಸಲ್ಪಟ್ಟವನು, ಅನ್ಯತ್-(ಅವುಗಳ ವಿಸರ್ಜನೆಯನ್ನಲ್ಲದೇ) ಬೇರೆ, ಕಿಂಚಿತ್ ವಾ-ಏನನ್ನೂ (ನ) ಸಮೀಹತೇ-ಇಚ್ಛಿಸುವುದಿಲ್ಲವೋ (ಹಾಗೆ); (ದುಃಖಹಾನಿಯು, ಸುಖಪ್ರಾಪ್ತಿಗಿಂತ ಅಧಿಕಪ್ರಿಯವಾದುದು); ತಸ್ಮಾತ್-ಆದ್ದರಿಂದ, ಸ್ತ್ರೀ ಸಂಗಾದಿತ್ರಯೇ-ಸ್ತ್ರೀಸಂಗ, ಹಸಿವೆ, ನೀರಡಿಕೆಗಳೆಂಬ ಮೂರರಲ್ಲಿ ನ್ಯಾಯ್ಯಂ-ಧರ್ಮಾನುಗುಣ

---

ದುಃಖಹಾನಿಯು, ಸರ್ವರಿಗೂ ಪ್ರಿಯವಾದುದು; ಈ ಕಾರಣದಿಂದ ದುಃಖವನ್ನು ಮಹಾ ಅನಿಷ್ಟವೆಂದು ಹೇಳುವರು; ಮುಳ್ಳುಗಳಿಂದ ಚುಚ್ಚಿಗೊಂಡಿರುವ ದೇಹವುಳ್ಳವನು, ಅದರಿಂದ ಪರಿಹಾರ ದೊರೆಯುವ (ಅವುಗಳನ್ನು ತೆಗೆದುಹಾಕುವ)ವರೆಗೂ ಮಲಗುವ ಸುಪ್ಪತ್ತಿಗೆಯನ್ನೂ ಇಚ್ಛಿಸುವುದಿಲ್ಲ; ಹಸಿವೆ ನೀರಡಿಕೆಗಳಿಂದ ಪೀಡಿತನಾದವನು, ಅವುಗಳನ್ನು ಕಳೆಯುವ ಅನ್ನಪಾನಾದಿಗಳನ್ನಲ್ಲದೇ ಬೇರೇನನ್ನೂ ಅಪೇಕ್ಷಿಸುವುದಿಲ್ಲ, ಮಲಮೂತ್ರಗಳಿಂದ ಪೀಡಿತನು, ಅವುಗಳ ವಿಸರ್ಜನೆಯನ್ನುಳಿದು ಅನ್ಯವನ್ನು ಇಚ್ಛಿಸದಿರುವಂತೆ; ಆದ್ದರಿಂದ, ದುಃಖಹಾನಿಯನ್ನೂ ಸುಖಪ್ರಾಪ್ತಿಯನ್ನೂ

ವಾದುದು, ಅನ್ಯಾಯ್ಯಂ-ಧರ್ಮವಿರುದ್ಧವಾದುದು, ಇತ್ಯಪಿ-ಎಂಬುದನ್ನೂ ಸರ್ವದಾ-ಯಾವಾಗಲೂ, ಚಿಂತಯಾನಃ ಸನ್-ಯೋಚಿಸುವವನಾಗಿ (ವಿವೇಕಿಸಿ ತಿಳಿದು), ಚರೇತ್-ನಡೆದುಕೊಳ್ಳತಕ್ಕದ್ದು ಅನ್ಯತರಂ-(ಧರ್ಮವಿರೋಧಿಯಾದ ಭೋಗವನ್ನು) ಎರಡರಲ್ಲಿ ಒಂದನ್ನು ತ್ಯಜೇತ್-ತ್ಯಜಿಸಬೇಕು.

ದುಃಖಹಾನಿಃ ಸುಖಪ್ರಾಪ್ತಿರಿದಮಿಷ್ಟಂ ಸ್ಮೃತಂ ದ್ವಯಂ ॥ ೫೨ ॥
ಏತದ್ವಿಘಾತಕಂ ಯತ್ಸ್ಯಾದಥವಾ ಪ್ರತಿಬಂಧಕಂ ।
ದುಃಖಪ್ರದಂ ತದಪ್ಯಾಹುಃ ತಚ್ಚ ಚೋರಖಲಾದಿಕಂ ॥ ೫೩ ॥
ಕಂಟಕಾದ್ಯಾ ವೃಶ್ಚಿಕಾದ್ಯಾಃ ಕೇವಲಂ ದುಃಖಹೇತವಃ ।
ಏವಂ ಯೋಽನಿಷ್ಟಹೇತುಃ ಸ್ಯಾತ್ತಸ್ಯೈವ ದ್ವೇಷಮಾಚರೇತ್ ॥ ೫೪ ॥

ದುಃಖಹಾನಿಃ-ದುಃಖಹಾನಿಯು, ಸುಖಪ್ರಾಪ್ತಿ-ಸುಖಪ್ರಾಪ್ತಿಯು, ಇದಂ ದ್ವಯಂ-ಈ ಎರಡೂ, ಇಷ್ಟಂ ಸ್ಮೃತಂ-ಇಷ್ಟವೆಂದು ತಿಳಿಯಲ್ಪಡುತ್ತದೆ; ಏತದ್ವಿಘಾತಕಂ-ಇಷ್ಟವಿಘಾತಕವೂ (ಇಷ್ಟನಾಶವನ್ನುಂಟುಮಾಡುವುದೂ), ಅಥವಾ, ಪ್ರತಿಬಂಧಕಂ-ತಡೆಹಿಡಿಯುವುದು (ಇಷ್ಟಪ್ರಾಪ್ತಿಯನ್ನು ಅಡ್ಡಗಟ್ಟುವುದು), ಯತ್ ಸ್ಯಾತ್-ಯಾವುದು ಆಗುವುದೋ, ತದಪಿ-ಸಹ ಅದು ದುಃಖಪ್ರದಂ-ದುಃಖಪ್ರದ ವಾದುದೆಂದು (ಸ್ಮೃತಂ-ತಿಳಿಯಲ್ಪಟ್ಟಿದೆ); ತತ್ ಚ-ಅದೂ ಕೂಡ, ಚೋರ ಖಲಾದಿಕಂ-ಚೋರರೇ ಮೊದಲಾದ ದುಷ್ಟರೆಂದು, ಪ್ರಾಹುಃ-(ವಿವೇಕಿಗಳು) ಹೇಳುವರು; ಕಂಟಕಾದ್ಯಾಃ-ಮುಳ್ಳು ಮೊದಲಾದವುಗಳು, ವೃಶ್ಚಿಕಾದ್ಯಾಃ-ಚೇಳು ಮುಂತಾದ ವಿಷಜಂತುಗಳು, ಕೇವಲಂ ದುಃಖಹೇತವಃ-ದುಃಖಸಾಧನ (ಕಾರಣ ಸಾಮಗ್ರಿ) ಮಾತ್ರವಾದವುಗಳು (ಅವುಗಳಿಂದಾದ ದುಃಖವು, ಪೂರ್ವಕರ್ಮ ಫಲವು); ಏವಂ-ಹೀಗೆ, ಯಃ-ಯಾವುದು, ಅನಿಷ್ಟಹೇತುಃ-ಅನಿಷ್ಟಕಾರಣವು, ಸ್ಯಾತ್-ಆಗಿರು

---

ದೊರಕಿಸುವ, ಸ್ತ್ರೀಸಂಗಾಭಿಲಾಷೆ, ಕ್ಷುಧೆ, ತೃಷೆಗಳನ್ನು ಪರಿಹರಿಸಿ, ಸುಖವನ್ನುಂಟು ಮಾಡುವ, ಭೋಗಗಳಲ್ಲಿ ನ್ಯಾಯ್ಯ, ಅನ್ಯಾಯ್ಯಗಳ (ಧರ್ಮಾನುಗುಣ-ಧರ್ಮವಿರೋಧಗಳ) ವಿವೇಕವನ್ನು ಹೊಂದಿ, ಅನ್ಯಾಯ್ಯವನ್ನು ತ್ಯಜಿಸಿ, ನ್ಯಾಯ್ಯವಾದ ಭೋಗವನ್ನೇ ಭೋಗಿಸಬೇಕು (೪೯-೫೧). ದುಃಖಹಾನಿ ಸುಖಪ್ರಾಪ್ತಿಗಳೆಂಬ ಎರಡೂ 'ಇಷ್ಟ'ವೆಂದು ಹೇಳಲ್ಪಡುತ್ತವೆ; ಇಷ್ಟನಾಶವನ್ನುಂಟುಮಾಡುವ ಅಥವಾ ಪ್ರತಿಬಂಧಿಸುವುದನ್ನೇ ದುಃಖಪ್ರದವೆಂದು ಹೇಳುವರು; ಅದಾದರೂ, ಚೋರರು, ದುಷ್ಟಜನರೇ ಮೊದಲಾದ ರೂಪದಿಂದಿರುವುದು; ಕಂಟಕಾದಿ (ಮುಳ್ಳು) ಗಳು ಮತ್ತು ಚೇಳು ಮುಂತಾದ ವಿಷಜಂತುಗಳು, ದುಃಖಕಾರಣಗಳು ಮಾತ್ರ; ಹೀಗೆ ಯಾವುದು ಅನಿಷ್ಟಕ್ಕೆ ಕಾರಣವಾಗಿರುವುದೋ ಅದನ್ನು ಮಾತ್ರ ದ್ವೇಷಿಸಬೇಕು (೫೨-೫೪). ಯಾರ ಮೇಲೂ ನಿಷ್ಕಾರಣವಾಗಿ ದ್ವೇಷಮಾಡಬಾರದು; ಅಸೂಯೆ, ಈರ್ಷ್ಯಾ ಮೊದಲಾದ

ವುದೋ, ತಸ್ಯ ಏವ-ಅದರ ವಿಷಯಕ್ಕೇ, ದ್ವೇಷಂ-ದ್ವೇಷವನ್ನು ಆಚರೇತ್-ಮಾಡಬೇಕು.

**ವೃಥಾದ್ವೇಷಂ ನ ಕುರ್ವೀತ ನಾಸೂಯೇರ್ಷ್ಯಾದಿ ಕಿಂಚನ ।**
**ತತ್ರಾಪಿ ಚ ವಿಶೇಷೇಣ ಸತಾಂ ದ್ವೇಷಂ ಪರಿತ್ಯಜೇತ್ ॥ ೫೫ ॥**
**ವಸ್ತುತೋ ನಿಜಕರ್ಮೈವ ಸುಖದುಃಖಾದಿಕಾರಣಂ ।**
**ವಿವಿಕ್ತಮಾನಸಸ್ತಸ್ಮಾದ್ದುಃಖದಂ ವಾಪಿ ನ ದ್ವಿಷೇತ್ ॥ ೫೬ ॥**

ವೃಥಾದ್ವೇಷಂ-ಕಾರಣವಿಲ್ಲದ ದ್ವೇಷವನ್ನು ನ ಕುರ್ವೀತ-ಮಾಡಬಾರದು; ಅಸೂಯೇರ್ಷ್ಯಾದಿ-ಅಸೂಯೆ, ಈರ್ಷ್ಯಾ-ಮೊದಲಾದ, ಕಿಂಚನ-ಯಾವುದನ್ನು (ಯಾವ ದುರ್ಭಾವನೆಗಳನ್ನು), ನ-ಮಾಡತಕ್ಕದ್ದಲ್ಲ; ತತ್ರಾಪಿ-ಅದರಲ್ಲಿಯೂ, ವಿಶೇಷೇಣ-ವಿಶೇಷವಾಗಿ, ಸತಾಂ-ಸಜ್ಜನರ, ದ್ವೇಷಂ-ದ್ವೇಷವನ್ನು ಪರಿತ್ಯಜೇತ್-ಬಿಡಬೇಕು; ವಸ್ತುತಃ-ವಸ್ತುಸ್ಥಿತಿಯೆಂದರೆ (ಸತ್ಯವಾಗಿ), ಸುಖದುಃಖಾದಿ ಕಾರಣಂ-ಸುಖದುಃಖಾದಿಗಳ ಕಾರಣವು, ನಿಜಕರ್ಮ ಏವ-ತನ್ನ (ಪ್ರತಿಯೊಬ್ಬ ವ್ಯಕ್ತಿಯ) ಕರ್ಮವೇ; ವಿವಿಕ್ತಮಾನಸಃ-ಈ ವಿವೇಕವುಳ್ಳ ಮನಸ್ಸುಳ್ಳವನು, ತಸ್ಮಾತ್-ಈ ಕಾರಣದಿಂದ, ದುಃಖದಂ ಅಪಿ ವಾ-ದುಃಖಪ್ರದನಾದವನನ್ನು ಸಹ, ನ ದ್ವಿಷೇತ್-ದ್ವೇಷಿಸತಕ್ಕದ್ದಲ್ಲ.

**ಪುರಾ ಸರ್ಪೇಣ ಸಂದಷ್ಟಂ ವಿಲೋಕ್ಯಾಪಿ ಮೃತಂ ಸುತಂ ।**
**ತನ್ಮಾತಾ ತತ್ರ ವಿಧವಾ ಗೌತಮೀ ಬ್ರಾಹ್ಮಣೀ ಸತೀ ॥ ೫೭ ॥**
**ತಂ ಸರ್ಪಂ ಹಂತುಮಿಚ್ಛಂತಂ ವ್ಯಾಧಂ ಸದ್ಯೋ ನ್ಯವಾರಯತ್ ।**
**ಯಮಃ ಕಾಲಶ್ಚ ತತ್ರೇತ್ಯ ವ್ಯಾಧಮಾಹ ಸ್ಫುಟಂ ತದಾ ॥ ೫೮ ॥**

ಪುರಾ-ಪೂರ್ವದಲ್ಲಿ, ಸರ್ಪೇಣ-ಸರ್ಪದಿಂದ, ಸಂದಷ್ಟಂ-ಕಚ್ಚಲ್ಪಟ್ಟು ಮೃತಂ-ಮರಣಹೊಂದಿದ, ಸುತಂ-ಮಗನನ್ನು, ವಿಲೋಕ್ಯ ಅಪಿ-ನೋಡಿಯೂ ಸಹ, ತನ್ಮಾತಾ-ಅವನ ತಾಯಿ, ವಿಧವಾ-ವಿಧವೆಯಾದ, ಸತೀ-ಸಾಧ್ವೀ-ಗೌತಮೀ-

---

ಯಾವ ದುರ್ಭಾವನೆಗಳನ್ನೂ ಹೊಂದಬಾರದು; ತತ್ರಾಪಿ ವಿಶೇಷವಾಗಿ, ಸಜ್ಜನ ದ್ವೇಷವನ್ನು ಪರಿತ್ಯಜಿಸಬೇಕು; ಸತ್ಯವೆಂದರೆ, ತನ್ನ ಕರ್ಮವೇ ಸುಖದುಃಖಗಳ ಮುಖ್ಯ ಕಾರಣವು; ಈ ವಿವೇಕಯುಕ್ತ ಮನಸ್ಸುಳ್ಳವನಾಗಿ, ತನಗೆ ದುಃಖ ಕೊಡುವವನನ್ನು ಸಹ ದ್ವೇಷಿಸತಕ್ಕದ್ದಲ್ಲ (೫೫-೫೬). ಹಿಂದೆ, ಸರ್ಪದಷ್ಟನಾಗಿ ಮರಣಹೊಂದಿರುವ ಮಗನನ್ನು ನೋಡಿಯೂ, ಅವನ ತಾಯಿಯಾದ, ಸಾಧ್ವೀ ಗೌತಮೀನಾಮಕ ಬ್ರಾಹ್ಮಣ ವಿಧವೆಯು, (ಪತಿವಿರಹ ದುಃಖಿತಳಾಗಿ ಪುತ್ರನನ್ನು ಕಳೆದುಕೊಂಡಿದ್ದರೂ ಸಹ), ಆ ಹಾವನ್ನು ಕೊಲ್ಲಲು ಸಿದ್ಧನಾಗಿದ್ದ ವ್ಯಾಧನನ್ನು ಕೊಲ್ಲಬೇಡವೆಂದು ನಿವಾರಿಸಿದಳು; ಆಗ

ಗೌತಮೀ ಎಂಬ ಹೆಸರಿನ, ಬ್ರಾಹ್ಮಣೀ-ಬ್ರಾಹ್ಮಣ ಸ್ತ್ರೀಯು, ತಂ ಸರ್ಪಂ-ಆ ಹಾವನ್ನು ಹಂತುಂ-ಕೊಲ್ಲಲು, ಇಚ್ಛಂತಂ-ಇಚ್ಛಿಸುತ್ತಿದ್ದ ವ್ಯಾಧಂ-ವ್ಯಾಧನನ್ನು, ಸದ್ಯಃ-ತತ್ಕಾಲದಲ್ಲಿ ನ್ಯವಾರಯತ್-ತಡೆದಳು (ನಿವಾರಿಸಿದಳು); ಯಮಃ-ಯಮದೇವನು, ಕಾಲಶ್ಚ-ಮೃತ್ಯುದೇವತೆಯೊಂದಿಗೆ, ತತ್ರ-ಅಲ್ಲಿಗೆ, ಏತ್ಯ-ಬಂದು, ತದಾ-ಆಗ, ವ್ಯಾಧಂ-ವ್ಯಾಧನನ್ನು ಕುರಿತು, ಸ್ಫುಟಂ-ಸ್ಪಷ್ಟವಾಗಿ, ಆಹ-ಹೇಳಿದನು.

ನ ಸರ್ಪಃ ಕಾರಣಂ ಮೃತ್ಯೋರ್ನ ಕಾಲೋಽಥ ಯಮೋಽಪಿ ವಾ ।
ನಾನ್ಯಃ ಕಶ್ಚಿದಪಿ ವ್ಯಾಧ ತತ್ತತ್ಕರ್ಮೈವ ಕಾರಣಂ ॥ ೫೯ ॥
ಕರ್ಮಾನುಸಾರೀ ಫಲದಃ ಕೇವಲಂ ಜಗದೀಶ್ವರಃ ।
ತಸ್ಮಾದ್ದ್ವೇಷ್ಯೋ ನ ಚಾನ್ಯೋಽಸ್ತಿ ಸ್ವಯಮೇವಾತ್ಮನೋ ರಿಪುಃ ॥ ೬೦ ॥
ಅದ್ಭುತಂ ಬತ ಲೋಕೇಽಸ್ಮಿನ್ ಶಠಾಃ ಕುರ್ವಂತಿ ತನ್ಮುಹುಃ ।
ದುಃಖಘ್ನಂ ಸುಖಹೇತುಂ ವಾ ನೇಹಾಮುತ್ರ ಯದೀಕ್ಷ್ಯತೇ ॥ ೬೧ ॥
ಅಹೋ ಮಾಯಾಬಲಂ ವಿಷ್ಣೋರ್ಯಯಾ ಭ್ರಾಂತಮಿದಂ ಜಗತ್ ।
ಸ್ವಹಿತಂ ನ ವಿಜಾನಾತಿ ಪಶ್ಯನ್ನಪಿ ನ ಪಶ್ಯತಿ ॥ ೬೨ ॥
ದುಃಖಸ್ಯಾತ್ಯಂತಿಕೀ ಹಾನಿರ್ನಿತ್ಯಾನಂದಸಮುದ್ಭವಃ ।
ಯತಃ ಸ ಮೋಕ್ಷಃ ಸ ಶ್ರೇಷ್ಠಃ ಪುರುಷಾರ್ಥೇಷು ಸರ್ವಶಃ ॥ ೬೩ ॥
ಯತ್ಪ್ರಸಾದಮೃತೇ ನ ಸ್ಯಾತ್ಸ ಮೋಕ್ಷಸ್ತಂ ಹರಿಂ ಸದಾ ।
ಮನಸಾ ಕರ್ಮಣಾ ವಾಚಾ ಭಜೇದನ್ಯಂ ನ ಕರ್ಹಿಚಿತ್ ॥ ೬೪ ॥

ಮೃತ್ಯೋಃ-(ಈತನ) ಮರಣಕ್ಕೆ, ಸರ್ಪಃ-ಹಾವು, ಕಾರಣಂ ನ-ಕಾರಣವಲ್ಲವು; ನ ಕಾಲಃ-ಮೃತ್ಯುದೇವತೆಯೂ ಅಲ್ಲ; ಅಥ-ಮತ್ತು, ಯಮಃ ಅಪಿ ವಾ-ಯಮನೂ

---

ಮೃತ್ಯುದೇವತೆಯೊಂದಿಗೆ, ಅಲ್ಲಿಗೆ ಬಂದ ಯಮದೇವನು, ವ್ಯಾಧನನ್ನು ಕುರಿತು (ಮುಂದಿನಂತೆ) ಹೇಳಿದನು (೫೭-೫೮). 'ಈತನ ಮರಣಕ್ಕೆ ಸರ್ಪವು ಕಾರಣವಲ್ಲ; ಮೃತ್ಯುದೇವತೆಯಾಗಲಿ, ಯಮನಾಗಲಿ (ನಾನಾಗಲಿ) ಕಾರಣರಲ್ಲ—ಅಥವಾ ಬೇರಾವನೂ ಕಾರಣನಲ್ಲ; ಆತನ (ಮೃತನ) ಪೂರ್ವಕರ್ಮವೇ ಕಾರಣವು; ಕರ್ಮಾನುಸಾರವಾದ ಫಲವನ್ನು ಜೀವನ ಭೋಗಕ್ಕೆ ತಂದುಕೊಡುವವನು, ಜಗನ್ನಿಯಾಮಕನಾದ ಸ್ವತಂತ್ರ ಶ್ರೀವಿಷ್ಣುವೇ ಆಗಿದ್ದಾನೆ; ಆದ್ದರಿಂದ ಈತನ ಮರಣಕ್ಕಾಗಿ ಯಾರನ್ನು ದ್ವೇಷಿಸುವುದು ಉಚಿತವಲ್ಲ—ಆ ಕರ್ಮವನ್ನು ಮಾಡಿದ ತಾನೇ ತನಗೆ ಶತ್ರುವು; ಆಶ್ಚರ್ಯವು! ಲೋಕದಲ್ಲಿ ಮೂರ್ಖರು, ಇಹಪರಗಳಲ್ಲಿ ದುಃಖವನ್ನು ಪರಿಹರಿಸಿ, ಸುಖಕಾರಣವಾಗುವುದನ್ನು ವಿವೇಕಿಸಿ ತಿಳಿಯರೇ, ದುಃಖಹೇತುಗಳಾದ ಕರ್ಮಗಳನ್ನೇ ಮಾಡುತ್ತಾರೆ—ಅವರು ಶೋಚನೀಯರು! ಶ್ರೀವಿಷ್ಣುವಿನ ಮಾಯಾ

ಅಲ್ಲ; ವ್ಯಾಧ-ಹೇ ವ್ಯಾಧ!, ಅನ್ಯಃ-ಬೇರೆ, ಕಶ್ಚಿತ್ ಅಪಿ-ಯಾರೊಬ್ಬನೂ, ನ-ಅಲ್ಲ; ತತ್ತತ್-ಆವರವರ, ಕರ್ಮ ಏವ-ಕರ್ಮವೇ, ಕಾರಣಂ-ಕಾರಣವು; ಕರ್ಮಾನುಸಾರೀ-ಕರ್ಮವನ್ನು ಅನುಸರಿಸಿ, ಫಲದಃ-ಫಲದಾತನು, ಕೇವಲಂ ಜಗದೀಶ್ವರಃ-ಜಗನ್ನಿಯಾಮಕನಾದ (ಸ್ವತಂತ್ರ) ಶ್ರೀವಿಷ್ಣು ಮಾತ್ರ; ತಸ್ಮಾತ್-ಆದ್ದರಿಂದ, ದ್ವೇಷ್ಯಃ-ದ್ವೇಷಿಸಲ್ಪಡಲು ಅರ್ಹನು, ಅನ್ಯಃ-(ತಾನಲ್ಲದೇ) ಮತ್ತೊಬ್ಬನು (ತನ್ನಿಂದ ಭಿನ್ನನು), ನಾಸ್ತಿ ಚ-ಇರುವುದೇ ಇಲ್ಲ; ಸ್ವಯಂ ಏವ-ತಾನೇ (ಪ್ರತಿಯೊಬ್ಬನೂ ತಾನೇ), ಆತ್ಮನಃ-ತನ್ನ ರಿಪುಃ-ಶತ್ರುವು; ಅದ್ಭುತಂ-ಆಶ್ಚರ್ಯವು!, ಬತ-ನೋಡು!, ಅಸ್ಮಿನ್-ಈ ಲೋಕೇ-ಜಗತ್ತಿನಲ್ಲಿ ಮುಹುಃ-ಮತ್ತೆ ಮತ್ತೆ (ಪ್ರತಿಜನ್ಮದಲ್ಲಿ), ತತ್-(ಮರಣಾದಿ ಕಾರಣವಾದ) ಅದನ್ನೇ (ಕರ್ಮವನ್ನೇ) ಶಠಾಃ-ಮೂರ್ಖರು, ಕುರ್ವಂತಿ-ಮಾಡುತ್ತಾರೆ; ಇಹಾಮುತ್ರ-ಇಹಪರಗಳಲ್ಲಿ ದುಃಖಘ್ನಂ-ದುಃಖವನ್ನು ನಾಶಗೊಳಿಸುವ, ವಾ-ಮತ್ತು ಸುಖಹೇತುಂ-ಸುಖಕ್ಕೆ ಕಾರಣವಾಗುವುದು ಯತ್-ಯಾವುದೋ, (ಅದನ್ನು) ನ ಈಕ್ಷ್ಯತೇ-ತಿಳಿಯುವುದಿಲ್ಲ; ಇದಂ ಜಗತ್-ಈ ಜಗತ್ತು (ಜೀವಸಮುದಾಯವು), ಯಯಾ-ಯಾವುದರಿಂದ, ಭ್ರಾಂತಂ-ಭ್ರಮಿಸುತ್ತದೆಯೋ, (ಆ) ವಿಷ್ಣೋಃ-ಶ್ರೀವಿಷ್ಣುವಿನ, ಮಾಯಾಬಲಂ-ಮೋಹಕ ಶಕ್ತಿಯು, ಅಹೋ-ಅದ್ಭುತವಾದುದೇ ಸರಿ! ಸ್ವಹಿತಂ-ತನ್ನ ಹಿತವನ್ನು ನ ವಿಜಾನಾತಿ-ತಿಳಿಯುವುದಿಲ್ಲ; ಪಶ್ಯನ್ ಅಪಿ-ಕಂಡೂ ಸಹ (ನೋಡಿಯೂ), ನ ಪಶ್ಯತಿ-ನೋಡುವುದಿಲ್ಲ (ಕಣ್ಣಿದ್ದ ಕುರುಡನಂತಿದೆ, ಈ ಜನಸಮೂಹವು); ದುಃಖಸ್ಯ-ದುಃಖದ, ಅತ್ಯಂತಿಕೀ-ನಿಶ್ಶೇಷವಾದ, ಹಾನಿಃ-ನಾಶವು, ನಿತ್ಯಾನಂದ ಸಮುದ್ಭವಃ-ನಿತ್ಯಾನಂದದಿಂದಲೇ ದೊರೆಯತಕ್ಕದ್ದು; ಯತಃ-ಯಾವ ಕಾರಣದಿಂದ, ಸಃ ಮೋಕ್ಷಃ-ಅದೇ (ನಿತ್ಯಾನಂದವೇ) ಮೋಕ್ಷವೋ, ಸಃ-ಅದೇ (ಮೋಕ್ಷವೇ), ಶ್ರೇಷ್ಠಃ-ಶ್ರೇಷ್ಠವಾದ ಪುರುಷಾರ್ಥವೋ, ಪುರುಷಾರ್ಥೇಷು ಸರ್ವಶಃ-ಎಲ್ಲ ಪುರುಷಾರ್ಥಗಳಲ್ಲಿ ಶ್ರೇಷ್ಠಃ ಮೋಕ್ಷಃ-ಶ್ರೇಷ್ಠವಾದ ಆ ಮೋಕ್ಷವು, ಯತ್ಪ್ರಸಾದಂ ಋತೇ-ಯಾರ ಪ್ರಸನ್ನತೆಯಿಲ್ಲದೇ, ನ ಸ್ಯಾತ್-ದೊರೆಯುವುದಿಲ್ಲವೋ, (ಆ ಕಾರಣದಿಂದ) ತಂ-ಹರಿಂ-ಆ ಶ್ರೀಹರಿಯನ್ನು

---

ಬಲವು (ಬುದ್ಧಿಮೋಹಕ ಸಾಮರ್ಥ್ಯವು) ಅದ್ಭುತವಾದುದು; ಅದರಿಂದ ಈ ಜಗತ್ತು (ಜೀವಸಮೂಹವು) ಭ್ರಾಂತಿಗೊಂಡು, ತನ್ನ ಹಿತವನ್ನು ತಾನೇ ತಿಳಿಯದೇ ಇಹಪರಸುಖಸಾಧನವನ್ನು ತಿಳಿದೂ ತಿಳಿಯದೇ (ಕಣ್ಣಿದ್ದ ಕುರುಡನಂತೆ) ಸಂಸಾರದಲ್ಲಿ ದುಃಖಿಸುತ್ತದೆ; ದುಃಖದ ನಿಃಶೇಷನಾಶವು ನಿತ್ಯಾನಂದದಿಂದಲೇ ಉದ್ಭವಿಸುತ್ತದೆ; ನಿತ್ಯಾನಂದಾನುಭವಸ್ಥಿತಿಯೇ ಮೋಕ್ಷವು; ಪುರುಷಾರ್ಥಗಳಲ್ಲೆಲ್ಲ ಮೋಕ್ಷವೇ ಶ್ರೇಷ್ಠವಾದುದು; ಅದು ಯಾರ ಪ್ರಸಾದವಿಲ್ಲದೇ ಲಭಿಸುವುದಿಲ್ಲವೋ ಆತನೇ ಶ್ರೀಹರಿಯು; ಆ ಶ್ರೀಹರಿಯ ಪ್ರಸನ್ನತೆಯನ್ನು ಸಂಪಾದಿಸಲು, ಮನಸ್ಸು-ಕರ್ಮ-ನುಡಿಗಳಿಂದ

ಸದಾ-ಎಲ್ಲ ಕಾಲದಲ್ಲಿ, ಮನಸಾ-ಮನಸ್ಸಿನಿಂದಲೂ, ಕರ್ಮಣಾ-(ದೈಹಿಕ) ಕರ್ಮದಿಂದಲೂ, ವಾಚಾ-ವಾಗಿಂದ್ರಿಯದಿಂದಲೂ (ನುಡಿಯಿಂದಲೂ), ಭಜೇತ್-ಸೇವಿಸಬೇಕು ಕರ್ಹಿಚಿತ್-ಎಂದೂ (ಹೇಗೂ), ಅನ್ಯಂ ನ-ಬೇರೆ ಯಾರನ್ನೂ ಅಲ್ಲ.

ಪುರುಷಾರ್ಥವರ್ಣನವೆಂಬ ೪೭ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೮

ಶ್ರೀ ವೇದವ್ಯಾಸಾಯ ನಮಃ

**ಮೇಧಾತಿಥಿರುವಾಚ—**

**ಪುರುಷಾರ್ಥೇಷು ಸರ್ವೇಷು ಮೋಕ್ಷಃ ಶ್ರೇಷ್ಠಸ್ತ್ವಯೋದಿತಃ ।**
**ಕಿಯಂತಃ ಪುರುಷಾರ್ಥಾಸ್ತೇ ಕಥಂ ತೇ ತತ್ಫಲಂ ಚ ಕಿಂ ॥ ೧ ॥**
**ಏತನ್ನಃ ಸಮ್ಯಗಾಖ್ಯಾಹಿ ವಯಂ ಶುಶ್ರೂಷವೋಽಖಿಲಾಃ ।**
**ತತ್ತ್ವಜ್ಞೋ ವ್ಯಾಸಶಿಷ್ಯೋಽಸಿ ತಸ್ಮಾತ್ತ್ವಂ ಪೃಚ್ಛ್ಯಸೇ ಮುಹುಃ ॥ ೨ ॥**

ಅರ್ಥ:—ಮೇಧಾತಿಥಿಯು ಮಾತನಾಡುತ್ತಾನೆ:—ಸರ್ವೇಷು-ಎಲ್ಲ ಪುರುಷಾರ್ಥೇಷು-ಪುರುಷಾರ್ಥಗಳಲ್ಲಿ ಮೋಕ್ಷಃ-ಮೋಕ್ಷವು, ಶ್ರೇಷ್ಠಃ-ಶ್ರೇಷ್ಠವೆಂದು, ತ್ವಯಾ-ನಿನ್ನಿಂದ, ಉದಿತಃ-(ಹೇ ಸೂತಾಚಾರ್ಯ!) ಹೇಳಲ್ಪಟ್ಟಿತು; ತೇ-ಆ, ಪುರುಷಾರ್ಥಾಃ-ಪುರುಷಾರ್ಥಗಳು, ಕಿಯಂತಃ-ಎಷ್ಟು (ಮತ್ತು) ತೇ-ಅವುಗಳು, ಕಥಂ-ಯಾವ ಪ್ರಕಾರವಾದುವು (ಯಾವ ಲಕ್ಷಣಗಳುಳ್ಳವು), ಚ ಮತ್ತು ತತ್ಫಲಂ-ಅವುಗಳ ಫಲವು, ಕಿಂ-ಏನು? ಏತತ್-ಇದನ್ನು (ಈ ವಿವರವನ್ನು), ನಃ-ನಮಗೆ,

---

(ತ್ರಿಕರಣಗಳಿಂದ) ಆತನನ್ನೇ ಸರ್ವದಾ ಸೇವಿಸಬೇಕು—ಎಂದೂ, ಹೇಗೂ, ಅದಕ್ಕಾಗಿ ಅನ್ಯರನ್ನು ಆಶ್ರಯಿಸತಕ್ಕದ್ದಲ್ಲ (೬೩-೬೪).

ಸಮ್ಯಕ್-ಸ್ಪಷ್ಟವಾಗಿ, ಆಖ್ಯಾಹಿ-ಹೇಳು; ವಯಂ-ನಾವು, ಅಖಿಲಾಃ-ಎಲ್ಲರೂ ಶುಶ್ರೂಷವಃ-ಕೇಳಲಿಚ್ಛೆಯುಳ್ಳವರು (ಆಗಿರುವೆವು); ತತ್ತ್ವಜ್ಞ-ತತ್ತ್ವಜ್ಞಾನಿಯೂ ವ್ಯಾಸಶಿಷ್ಯಃ-ಶ್ರೀವೇದವ್ಯಾಸರ ಶಿಷ್ಯನೂ, ಅಸಿ-ಆಗಿರುವೆ; ತತಃ-ಆ ಕಾರಣದಿಂದ, ತ್ವಂ-ನೀನು, ಮುಹುಃ-ಪುನಃ ಪುನಃ (ಬಹುವಾರ), ಪೃಚ್ಛ್ಯಸೇ-ಪ್ರಶ್ನಿಸಲ್ಪಡುತ್ತಿರುವಿ.

**ಸೂತ ಉವಾಚ—**

> **ಇಷ್ಟತ್ವಾತ್ ಸರ್ವಜಂತೂನಾಂ ಪ್ರಾರ್ಥ್ಯಮಾನಾ ಯತಶ್ಚ ತೈಃ ।**
> **ತತಸ್ತೇ ಪುರುಷಾರ್ಥಾಃ ಸ್ಯುರ್ದೃಷ್ಟಾದೃಷ್ಟೇಷ್ಟಹೇತವಃ ॥ ೩ ॥**
> **ದುಃಖಹಾನಿಃ ಸುಖಪ್ರಾಪ್ತಿರಿಷ್ಟಂ ದ್ವಿವಿಧಂ ಮತಂ ।**
> **ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೇತಿ ಚತುರ್ವಿಧಃ ॥ ೪ ॥**

ಸರ್ವಜಂತೂನಾಂ-ಸಕಲ ಪ್ರಾಣಿಗಳಿಗೆ, ಇಷ್ಟತ್ವಾತ್-ಅಪೇಕ್ಷಿತವಾದ್ದರಿಂದಲೂ, ಚ-ಮತ್ತು, ತೈಃ-ಅವರಿಂದ, ಯತಃ-ಯಾವ ಕಾರಣದಿಂದ, ಪ್ರಾರ್ಥ್ಯಮಾನಾಃ-ಪ್ರಾರ್ಥಿಸಲ್ಪಡುವುವೋ, ತತಃ-ಆ ಕಾರಣದಿಂದ, ತೇ-ಅವು, ಪುರುಷಾರ್ಥಾಃ-ಪುರುಷಾರ್ಥಗಳು, ಸ್ಯುಃ-ಆಗಿರುತ್ತವೆ (ಪುರುಷಾರ್ಥವೆಂಬ ನಾಮವುಳ್ಳವಾಗಿವೆ); ದೃಷ್ಟಾದೃಷ್ಟೇಷ್ಟಹೇತವಃ-(ಅವು) ದೃಷ್ಟ ಮತ್ತು ಅದೃಷ್ಟಗಳೆಂಬ ಇಷ್ಟಸಾಧನಗಳಾಗಿವೆ; ದುಃಖಹಾನಿಃ-ದುಃಖದ ನಾಶವೂ, ಸುಖಪ್ರಾಪ್ತಿಃ-ಸುಖದ ಲಾಭವೂ, ಇತಿ-ಎಂದು, ಇಷ್ಟಂ-ಇಷ್ಟವು, ದ್ವಿವಿಧಂ-(ಎರಡು ವಿಧವೆಂದು, ಮತಂ-(ಸರ್ವರಿಂದ) ತಿಳಿಯಲ್ಪಡುತ್ತದೆ; (ಪುರುಷಾರ್ಥಃ-ಪುರುಷಾರ್ಥವು): ಧರ್ಮಶ್ಚ-ಧರ್ಮವೆಂದೂ, ಅರ್ಥಶ್ಚ-ಅರ್ಥವೆಂದೂ, ಕಾಮಶ್ಚ-ಕಾಮವೆಂದೂ, ಮೋಕ್ಷಶ್ಚ-ಮೋಕ್ಷವೆಂದೂ, ಚತುರ್ವಿಧಃ-ನಾಲ್ಕು ವಿಧವು.

> **ಪುರುಷಾರ್ಥಸ್ತತೋ ಧರ್ಮಸ್ತ್ವನಿತ್ಯೋಽದೃಷ್ಟಪುಷ್ಕಲಃ ।**
> **ಸ ತಪೋದಾನಭೇದೇನ ದ್ವಿವಿಧಃ ಪರಿಕೀರ್ತಿತಃ ॥ ೫ ॥**

ತತಃ-ಈ ನಾಲ್ಕರಲ್ಲಿ, ಧರ್ಮಃ ಪುರುಷಾರ್ಥಃ-ಧರ್ಮವೆಂಬ ಪುರುಷಾರ್ಥವು, ತು-ಆದರೋ, ಅನಿತ್ಯಃ-ಅನಿತ್ಯವಾದ, ಅದೃಷ್ಟ ಪುಷ್ಕಲಃ-ಅದೃಷ್ಟವಾದ ಒಳ್ಳೆಯ

---

ಸೂತನು ಹೇಳುತ್ತಾನೆ: ಸಕಲಪ್ರಾಣಿಗಳಿಗೆ ಅಪೇಕ್ಷಿತವಾದುದರಿಂದಲೂ, ಮತ್ತು ಪ್ರಾರ್ಥಿಸಲ್ಪಡುವುದರಿಂದಲೂ, ಪುರುಷಾರ್ಥವೆಂಬ ಅನ್ವರ್ಥನಾಮವುಳ್ಳವಾಗಿರುತ್ತವೆ: ದೃಷ್ಟ ಮತ್ತು ಅದೃಷ್ಟಗಳೆಂಬ ಉಭಯವಿಧ ಇಷ್ಟಗಳಿಗೆ ಸಾಧನವಾಗುತ್ತವೆ: ದುಃಖಹಾನಿ ಮತ್ತು ಸುಖಪ್ರಾಪ್ತಿಯೆಂದು ಇಷ್ಟವು ಎರಡು ಪ್ರಕಾರವಾಗಿರುತ್ತದೆ: ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂದು, ಪುರುಷಾರ್ಥಗಳು ನಾಲ್ಕು ವಿಧವಾಗಿವೆ (೩-೪) ಇವುಗಳಲ್ಲಿ ಧರ್ಮವೆಂಬುದು ಅನಿತ್ಯವಾದ ಅದೃಷ್ಟ ಫಲ

ಸದಾ-ಎಲ್ಲ ಕಾಲದಲ್ಲಿ ಮನಸಾ-ಮನಸ್ಸಿನಿಂದಲೂ, ಕರ್ಮಣಾ-(ದೈಹಿಕ) ಕರ್ಮದಿಂದಲೂ, ವಾಚಾ-ವಾಗಿಂದ್ರಿಯದಿಂದಲೂ (ನುಡಿಯಿಂದಲೂ), ಭಜೇತ್-ಸೇವಿಸಬೇಕು ಕರ್ಹಿಚಿತ್-ಎಂದೂ (ಹೇಗೂ), ಅನ್ಯಂ ನ-ಬೇರೆ ಯಾರನ್ನೂ ಅಲ್ಲ.

ಪುರುಷಾರ್ಥವರ್ಣನವೆಂಬ ೪೭ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೪೮

ಶ್ರೀ ವೇದವ್ಯಾಸಾಯ ನಮಃ

**ಮೇಧಾತಿಥಿರುವಾಚ—**

**ಪುರುಷಾರ್ಥೇಷು ಸರ್ವೇಷು ಮೋಕ್ಷಃ ಶ್ರೇಷ್ಠಸ್ತ್ವಯೋದಿತಃ ।**
**ಕಿಯಂತಃ ಪುರುಷಾರ್ಥಾಸ್ತೇ ಕಥಂ ತೇ ತತ್ಫಲಂ ಚ ಕಿಂ ॥ ೧ ॥**
**ಏತನ್ನಃ ಸಮ್ಯಗಾಖ್ಯಾಹಿ ವಯಂ ಶುಶ್ರೂಷವೋಽಖಿಲಾಃ ।**
**ತತ್ತ್ವಜ್ಞೋ ವ್ಯಾಸಶಿಷ್ಯೋಽಪಿ ತತಸ್ತ್ವಾಂ ಪೃಚ್ಛ್ಯಸೇ ಮುಹುಃ ॥ ೨ ॥**

**ಅರ್ಥ:**—ಮೇಧಾತಿಥಿಯು ಮಾತನಾಡುತ್ತಾನೆ:—ಸರ್ವೇಷು-ಎಲ್ಲ ಪುರುಷಾರ್ಥೇಷು-ಪುರುಷಾರ್ಥಗಳಲ್ಲಿ ಮೋಕ್ಷಃ-ಮೋಕ್ಷವು, ಶ್ರೇಷ್ಠಃ-ಶ್ರೇಷ್ಠವೆಂದು, ತ್ವಯಾ-ನಿನ್ನಿಂದ, ಉದಿತಃ-(ಹೇ ಸೂತಾಚಾರ್ಯ!) ಹೇಳಲ್ಪಟ್ಟಿತು; ತೇ-ಆ, ಪುರುಷಾರ್ಥಾಃ-ಪುರುಷಾರ್ಥಗಳು, ಕಿಯಂತಃ-ಎಷ್ಟು (ಮತ್ತು) ತೇ-ಅವುಗಳು, ಕಥಂ-ಯಾವ ಪ್ರಕಾರವಾದುವು (ಯಾವ ಲಕ್ಷಣಗಳುಳ್ಳವು), ಚ ಮತ್ತು ತತ್ಫಲಂ-ಅವುಗಳ ಫಲವು, ಕಿಂ-ಏನು? ಏತತ್-ಇದನ್ನು (ಈ ವಿವರವನ್ನು), ನಃ-ನಮಗೆ,

(ತ್ರಿಕರಣಗಳಿಂದ) ಆತನನ್ನೇ ಸರ್ವದಾ ಸೇವಿಸಬೇಕು—ಎಂದೂ, ಹೇಗೂ, ಅದಕ್ಕಾಗಿ ಅನ್ಯರನ್ನು ಆಶ್ರಯಿಸತಕ್ಕದ್ದಲ್ಲ(೬೩-೬೪).

೪೭ನೇ ಅಧ್ಯಾಯವು ಮುಗಿದುದು.

**ಅಧ್ಯಾಯ ೪೮**

**ತಾತ್ಪರ್ಯ:**—ಮೇಧಾತಿಥಿ ಋಷಿಯು ಪ್ರಶ್ನಿಸುತ್ತಾನೆ: ಹೇ ಸೂತ! ಮೋಕ್ಷವು ಪುರುಷಾರ್ಥಗಳಲ್ಲಿ ಶ್ರೇಷ್ಠವೆಂದು, ನೀನು ಹೇಳಿರುವಿ; ಆ ಪುರುಷಾರ್ಥಗಳೆಂಬುವು, ಎಷ್ಟು? ಮತ್ತು ಅವುಗಳು ಯಾವ ಪ್ರಕಾರವಾಗಿರುವುವು? ಅವುಗಳಿಂದ ದೊರೆಯುವ ಫಲಗಳಾವುವು? ಈ ವಿವರಗಳನ್ನು ಸ್ಪಷ್ಟವಾಗಿ ನಿರೂಪಿಸು; ನಾವೆಲ್ಲರೂ ಕೇಳಲು ಉತ್ಸಾಹಿಗಳಾಗಿದ್ದೇವೆ; ನೀನಾದರೂ, ಶ್ರೀವೇದವ್ಯಾಸರ ಶಿಷ್ಯನಾಗಿ, ತತ್ತ್ವಜ್ಞಾನಿಯಾಗಿರುವಿ; ಆದ್ದರಿಂದ ನಿನ್ನನ್ನು ಮೇಲಿಂದ ಮೇಲೆ ಪ್ರಶ್ನೆ ಮಾಡುತ್ತೇವೆ (೧-೨).

ಸಮ್ಯಕ್-ಸ್ಪಷ್ಟವಾಗಿ, ಆಖ್ಯಾಹಿ-ಹೇಳು; ವಯಂ-ನಾವು, ಅಖಿಲಾಃ-ಎಲ್ಲರೂ; ಶುಶ್ರೂಷವಃ-ಕೇಳಲಿಚ್ಛೆಯುಳ್ಳವರು (ಆಗಿರುವೆವು); ತತ್ತ್ವಜ್ಞಃ-ತತ್ತ್ವಜ್ಞಾನಿಯೂ, ವ್ಯಾಸಶಿಷ್ಯಃ-ಶ್ರೀವೇದವ್ಯಾಸರ ಶಿಷ್ಯನೂ, ಅಸಿ-ಆಗಿರುತ್ತೀ; ತತಃ-ಆ ಕಾರಣದಿಂದ, ತ್ವಂ-ನೀನು, ಮುಹುಃ-ಪುನಃ ಪುನಃ, (ಬಹುವಾರ), ಪೃಚ್ಛ್ಯಸೇ-ಪ್ರಶ್ನಿಸಲ್ಪಡುತ್ತಿರುವಿ.

ಸೂತ ಉವಾಚ—

ಇಷ್ಟತ್ವಾತ್ ಸರ್ವಜಂತೂನಾಂ ಪ್ರಾರ್ಥ್ಯಮಾನಾ ಯತಶ್ಚ ತೈಃ ।
ತತಸ್ತೇ ಪುರುಷಾರ್ಥಾ ಸ್ಯುರ್ದೃಷ್ಟಾದೃಷ್ಟೇಷ್ಟಹೇತವಃ ॥ ೩ ॥
ದುಃಖಹಾನಿಃ ಸುಖಪ್ರಾಪ್ತಿರಿತೀಷ್ಟಂ ದ್ವಿವಿಧಂ ಮತಂ ।
ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೇತಿ ಚತುರ್ವಿಧಃ ॥ ೪ ॥

ಸರ್ವಜಂತೂನಾಂ-ಸಕಲ ಪ್ರಾಣಿಗಳಿಗೆ, ಇಷ್ಟತ್ವಾತ್-ಅಪೇಕ್ಷಿತವಾದ್ದರಿಂದಲೂ, ಚ-ಮತ್ತು ತೈಃ-ಅವರಿಂದ, ಯತಃ-ಯಾವ ಕಾರಣದಿಂದ, ಪ್ರಾರ್ಥ್ಯಮಾನಾಃ-ಪ್ರಾರ್ಥಿಸಲ್ಪಡುವುವೋ, ತತಃ-ಆ ಕಾರಣದಿಂದ, ತೇ-ಅವು, ಪುರುಷಾರ್ಥಾಃ-ಪುರುಷಾರ್ಥಗಳು, ಸ್ಯುಃ-ಆಗಿರುತ್ತವೆ (ಪುರುಷಾರ್ಥವೆಂಬ ನಾಮವುಳ್ಳವಾಗಿವೆ); ದೃಷ್ಟಾದೃಷ್ಟೇಷ್ಟ ಹೇತವಃ-(ಅವು) ದೃಷ್ಟ ಮತ್ತು ಅದೃಷ್ಟಗಳೆಂಬ ಇಷ್ಟಸಾಧನಗಳಾಗಿವೆ; ದುಃಖಹಾನಿಃ-ದುಃಖದ ನಾಶವೂ, ಸುಖಪ್ರಾಪ್ತಿಃ-ಸುಖದ ಲಾಭವೂ, ಇತಿ-ಎಂದು, ಇಷ್ಟಂ-ಇಷ್ಟವು, ದ್ವಿವಿಧಂ-(ಎರಡು ವಿಧವೆಂದು, ಮತಂ-(ಸರ್ವರಿಂದ) ತಿಳಿಯಲ್ಪಡುತ್ತದೆ; (ಪುರುಷಾರ್ಥಃ-ಪುರುಷಾರ್ಥವು); ಧರ್ಮಶ್ಚ-ಧರ್ಮವೆಂದೂ, ಅರ್ಥಶ್ಚ-ಅರ್ಥವೆಂದೂ, ಕಾಮಶ್ಚ-ಕಾಮವೆಂದೂ, ಮೋಕ್ಷಶ್ಚ-ಮೋಕ್ಷವೆಂದೂ, ಚತುರ್ವಿಧಃ-ನಾಲ್ಕು ವಿಧವು.

ಪುರುಷಾರ್ಥಸ್ತತೋ ಧರ್ಮಃ ತ್ವನಿತ್ಯೋ ದೃಷ್ಟಸತ್ಫಲಃ ।
ಸ ತಪೋದಾನಭೇದೇನ ದ್ವಿವಿಧಃ ಪರಿಕೀರ್ತಿತಃ ॥ ೫ ॥

ತತಃ-ಈ ನಾಲ್ಕರಲ್ಲಿ ಧರ್ಮಃ ಪುರುಷಾರ್ಥಃ-ಧರ್ಮವೆಂಬ ಪುರುಷಾರ್ಥವು, ತು-ಆದರೋ, ಅನಿತ್ಯಃ-ಅನಿತ್ಯವಾದ, ಅದೃಷ್ಟ ಸತ್ಫಲಃ-ಅದೃಷ್ಟವಾದ ಒಳ್ಳೆಯ

---

ಸೂತನು ಹೇಳುತ್ತಾನೆ: ಸಕಲಪ್ರಾಣಿಗಳಿಗೆ ಅಪೇಕ್ಷಿತವಾದುದರಿಂದಲೂ, ಮತ್ತು ಪ್ರಾರ್ಥಿಸಲ್ಪಡುವುದರಿಂದಲೂ, ಪುರುಷಾರ್ಥವೆಂಬ ಅನ್ವರ್ಥನಾಮವುಳ್ಳವಾಗಿರುತ್ತವೆ; ದೃಷ್ಟ ಮತ್ತು ಅದೃಷ್ಟಗಳೆಂಬ ಉಭಯವಿಧ ಇಷ್ಟಗಳಿಗೆ ಸಾಧನವಾಗುತ್ತವೆ; ದುಃಖಹಾನಿ ಮತ್ತು ಸುಖಪ್ರಾಪ್ತಿಯೆಂದು ಇಷ್ಟವು ಎರಡು ಪ್ರಕಾರವಾಗಿರುತ್ತದೆ; ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂದು, ಪುರುಷಾರ್ಥಗಳು ನಾಲ್ಕು ವಿಧವಾಗಿವೆ (೩-೪). ಇವುಗಳಲ್ಲಿ ಧರ್ಮವೆಂಬುದು ಅನಿತ್ಯವಾದ ಅದೃಷ್ಟ ಸತ್ಫಲ

ಫಲವುಳ್ಳದ್ದು; ಸಃ-ಅದು (ಧರ್ಮವು), ತಪೋದಾನಭೇದನ-ತಪಸ್ಸು ದಾನಗಳೆಂಬ ಭೇದದಿಂದ, ದ್ವಿವಿಧಃ-ಎರಡು ವಿಧವೆಂದು, ಪರಿಕೀರ್ತಿತಃ-ಹೇಳಲಾಗುತ್ತದೆ.

**ದೇಹೇಂದ್ರಿಯಮನಃಸಾಧ್ಯಂ ಸತ್ಕರ್ಮ ತಪ ಉಚ್ಯತೇ ।**
**ನಿತ್ಯಂ ನೈಮಿತ್ತಿಕಂ ಕಾಮ್ಯಮಿತಿ ತತ್ತ್ರಿವಿಧಂ ಮತಂ ॥ ೬ ॥**

ದೇಹೇಂದ್ರಿಯಮನಃ ಸಾಧ್ಯಂ-ದೇಹ, ಇಂದ್ರಿಯ, ಮನಸ್ಸುಗಳಿಂದ ಸಾಧ್ಯವಾದ, ಸತ್ಕರ್ಮ-ಸತ್ಕರ್ಮವು, ತಪಃ-ತಪಸ್ಸೆಂದು, ಉಚ್ಯತೇ-ಹೇಳಲ್ಪಡುತ್ತದೆ; ತತ್-ಅದು (ಸತ್ಕರ್ಮವು), ನಿತ್ಯಂ-ನಿತ್ಯವೆಂದೂ, ನೈಮಿತ್ತಿಕವೆಂದೂ, ಕಾಮ್ಯಂ-ಕಾಮ್ಯವೆಂದೂ, ಇತಿ ತ್ರಿವಿಧಂ-ಹೀಗೆ ತ್ರಿವಿಧವೆಂದು, ಮತಂ-ತಿಳಿಯಲ್ಪಟ್ಟಿದೆ.

**ತ್ಯಾಗಾದ್ಧನಾದಿನಃ ಪಾತ್ರೇ ವಹ್ನೌ ಹೋಮಾದಿಕಾದಿತಃ ।**
**ಇತಿ ತು ದ್ವಿವಿಧಂ ದಾನಂ ನಾನಾಸುಫಲಸಾಧಕಂ ॥ ೭ ॥**

ಪಾತ್ರೇ-ಸತ್ಪಾತ್ರನಲ್ಲಿ (ಯೋಗ್ಯನಲ್ಲಿ—ಅರ್ಹನಲ್ಲಿ), ಧನಾದಿನಃ-ಧನ ಮೊದಲಾದವುಗಳನ್ನು ತ್ಯಾಗಾತ್-ಅರ್ಪಿಸುವುದರಿಂದಲೂ, ವಹ್ನೌ-ಅಗ್ನಿಯಲ್ಲಿ ಹೋಮಾದಿಕಾದಿತಃ-ಹೋಮಾದಿಗಳನ್ನು ಅರ್ಪಿಸುವುದರಿಂದಲೂ, ಇತಿ ತು-ಹೀಗೆಂದು, ನಾನಾ ಸುಫಲಸಾಧಕಂ-ವಿವಿಧ ಸತ್ಫಲಗಳನ್ನು ಕೊಡುವ, ದಾನಂ-ದಾನವು, ದ್ವಿವಿಧಂ-ಎರಡು ವಿಧವಾದುದು.

**ಪಾತಾಲೇ ಭೂತಲೇ ವ್ಯೋಮ್ನಿ ಸ್ವರ್ಗೇ ವಾ ದೇಹಯೋಗತಃ ।**
**ನಾನಾಸ್ಥಾನಸ್ಥಿತೋ ಜೀವೋ ಭುಂಕ್ತೇ ಭೋಗಾನನೇಕಧಾ ॥ ೮ ॥**

---

ಗಳನ್ನು (ಸ್ವರ್ಗಾದಿ ಸುಖಗಳನ್ನು) ಕೊಡುವುದಾಗಿದೆ; ಇದು, ತಪಸ್ಸು-ದಾನಗಳೆಂದು ಎರಡು ವಿಧವೆಂದು ಹೇಳಲ್ಪಡುತ್ತದೆ (೫). ದೇಹ, ಇಂದ್ರಿಯ, ಮನಸ್ಸುಗಳಿಂದ ಸಾಧ್ಯವಾದ ಸತ್ಕರ್ಮವೇ ತಪಸ್ಸೆಂದು[1] ಕರೆಯಲ್ಪಡುತ್ತದೆ; ಅದು, ನಿತ್ಯ, ನೈಮಿತ್ತಿಕ ಮತ್ತು ಕಾಮ್ಯ[2]ಗಳೆಂಬುದಾಗಿ ತ್ರಿವಿಧವೆಂದು ತಿಳಿಯಲ್ಪಟ್ಟಿರುತ್ತದೆ (೬). ಧನಾದಿ ವಸ್ತುಗಳನ್ನು ಸತ್ಪಾತ್ರನಿಗೆ ಕೊಡುವುದೆಂದೂ, ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಮಾಡುವ ಹೋಮಾದಿಗಳೆಂದೂ, ವಿವಿಧ ಸತ್ಫಲಗಳನ್ನು ಕೊಡುವ ದಾನವು ಎರಡು ವಿಧವಾದುದು (೭). ಜಗತ್ತಿನಲ್ಲಿ ಕೆಲವು ಸುಖಭೋಗಗಳುಳ್ಳ ಸ್ಥಾನಗಳು ಧರ್ಮದಿಂದ

---

1. ದೈಹಿಕ, ವಾಚಿಕ, ಮಾನಸಿಕವೆಂದು ತಪಸ್ಸು ತ್ರಿವಿಧವೆಂದು, ಗೀತೆಯಲ್ಲಿ ಶ್ರೀಕೃಷ್ಣನು (ಅಧ್ಯಾಯ ೧೭-ಶ್ಲೋಕ ೧೪, ೧೫, ೧೬) ಹೇಳಿದ್ದಾನೆ; ಇಲ್ಲಿ ಹೇಳಿರುವ ದೇಹ—ಇಂದ್ರಿಯ—ಮನಸ್ಸುಗಳಲ್ಲಿ ಇಂದ್ರಿಯವೆಂಬ ಎರಡನೆಯದೇ ವಾಗಿಂದ್ರಿಯ ಸಾಧ್ಯವಾದ ತಪಸ್ಸೆಂದು ತಿಳಿಯಬೇಕು; ಈ ತ್ರಿವಿಧ ತಪಸ್ಸುಗಳ ವಿವರಣೆ ಈ ಹಿಂದೆ ಪ್ರಸಕ್ತವಾಗಿದೆ.

2. ಇದೇ ಗ್ರಂಥದ ೨೦ನೇ ಅಧ್ಯಾಯದಲ್ಲಿ ೫೨-೫೩ನೇ ಶ್ಲೋಕಗಳಲ್ಲಿ ಈ ತ್ರೈವಿಧ್ಯದ ನಿರೂಪಣೆಯಿದೆ.

**ದೇಶತಃ ಕಾಲತಶ್ಚಾಪಿ ಚಂಚಲಾನೀಹ ಕಾನಿಚಿತ್ ।**
**ಕಾಲತಶ್ಚಂಚಲತ್ವೇಽಪಿ ದೇಶತಃ ಸ್ಯುರ್ಧ್ರುವಾಣಿ ತು ॥ ೯ ॥**
**ಸ್ಥಾನಾನಿ ಕಾನಿಚಿಲ್ಲೋಕೇ ಧರ್ಮಸಾಧ್ಯಾನಿ ತಾನಿ ತು ।**

ಜೀವಃ-ಜೀವನು, ಪಾತಾಲೇ-ಪಾತಾಲಲೋಕದಲ್ಲಿ ಭೂತಲೇ-ಭೂಲೋಕದಲ್ಲಿ ವ್ಯೋಮ್ನಿ-ಅಂತರಿಕ್ಷ ಲೋಕದಲ್ಲಿ ವಾ-ಅಥವಾ, ಸ್ವರ್ಗೇ-ಸ್ವರ್ಗಲೋಕದಲ್ಲಿ ದೇಹಯೋಗತಃ-ದೇಹವನ್ನು ಹೊಂದುವುದರಿಂದ, ನಾನಾ ಸ್ಥಾನ ಸ್ಥಿತಃ-ವಿವಿಧ ಸ್ಥಾನಗಳಲ್ಲಿದ್ದವನಾಗಿ, ಅನೇಕಧಾ-ಬಹುಪ್ರಕಾರದ, ಭೋಗಾನ್-ಭೋಗಗಳನ್ನು ಭುಂಕ್ತೇ-(ಧರ್ಮದ ಫಲವಾದ ಸುಖವಿಶೇಷಗಳನ್ನು) ಭೋಗಿಸುತ್ತಾನೆ; ಇಹ-ಇವುಗಳಲ್ಲಿ (ಈ ವಿವಿಧ ಭೋಗಗಳಲ್ಲಿ), ಕಾನಿಚಿತ್-ಕೆಲವು, ದೇಶತಃ-ದೇಶನಿಮಿತ್ತದಿಂದ, ಕಾಲತಃ ಅಪಿ ಚ-ಕಾಲನಿಮಿತ್ತವಾಗಿಯೂ, ಚಂಚಲಾನಿ-ಅಸ್ಥಿರ (ನಶ್ವರ)ವಾದವುಗಳು; (ಕಾನಿಚಿತ್-ಮತ್ತೆ ಕೆಲವು), ಕಾಲತಃ-ಕಾಲದಿಂದ, ಚಂಚಲತ್ವೇ ಅಪಿ-ಅಸ್ಥಿರತ್ವ ವಿದ್ದರೂ, ದೇಶತಃ-ದೇಶದಿಂದ, ಧ್ರುವಾಣಿ-ಶಾಶ್ವತವಾದುವು (ಬಹು ದೀರ್ಘಕಾಲ ಇರತಕ್ಕವುಗಳು), ಸ್ಯುಃ ತು-ಆಗಿಯೇ ಇರುತ್ತವೆ; ಕಾನಿಚಿತ್-ಕೆಲವು, ಸ್ಥಾನಾನಿ-

---

ಮಾತ್ರ ಸಾಧ್ಯವಾಗಿರುತ್ತವೆ (ಧರ್ಮದ ಫಲವಾಗಿಯೇ ದೊರೆಯುತ್ತವೆ); ಜೀವನು, ಪಾತಾಲ, ಭೂಲೋಕ, ಅಂತರಿಕ್ಷ ಅಥವಾ ಸ್ವರ್ಗಲೋಕಗಳಲ್ಲಿ ದೇಹವನ್ನು ಹೊಂದಿ, ನಾನಾ ಸ್ಥಾನಗಳಲ್ಲಿದ್ದು ಬಹುವಿಧ ಭೋಗಗಳನ್ನು (ಸುಖವನ್ನು) ಅನುಭವಿಸುತ್ತಾನೆ; ಹೀಗೆ ಧರ್ಮಪ್ರಾಪ್ಯವಾದ ಸ್ಥಾನಗಳಲ್ಲಿ ಕೆಲವು, ದೇಶಕಾಲಗಳಿಂದ ಅನಿತ್ಯವಾಗಿರುತ್ತವೆ; ಕೆಲವು ಕಾಲದಿಂದ ಅನಿತ್ಯವಾದರೂ, ದೇಶದಿಂದ ಧ್ರುವಗಳೂ (ದೀರ್ಘಕಾಲವಿರುವುವೂ) ಆಗಿರುತ್ತವೆ[1] (೮-೯). ಇಷ್ಟಹಾನಿಯೂ ದುಃಖ ಪ್ರಾಪ್ತಿಯೂ, ಅಧರ್ಮದ ಫಲವೆಂದು ಹೇಳಲಾಗಿದೆ; ಈ ರೂಪದ ಫಲವು ಭೂಲೋಕದಲ್ಲಿಯೂ

---

1. ಭೂಲೋಕ, ಭುವರ್ಲೋಕ (ಅಂತರಿಕ್ಷ)ಗಳು ದೈನಂದಿನ ಪ್ರಲಯಕಾಲದಲ್ಲಿ ನಷ್ಟವಾಗುತ್ತವೆ; ಮೇಲಿರುವ ಸತ್ಯಲೋಕಾದಿಗಳು ಮಹಾಪ್ರಲಯದವರೆಗಿನ ದೀರ್ಘಕಾಲದವರೆಗೆ ಇರುತ್ತವೆ. ಆಗ ಆ ಲೋಕಗಳೂ ನಷ್ಟವಾಗುತ್ತವೆ. ಜ್ಞಾನಿಕೃತ ಧರ್ಮಗಳು ಆ ಲೋಕಗಳನ್ನು ಹೊಂದಿಸುತ್ತವೆ; ಅನ್ಯರ ಧರ್ಮಗಳು ಸ್ವರ್ಗಾದಿ ಅನಿತ್ಯ ಲೋಕಗಳನ್ನು ಹೊಂದಿಸುತ್ತವೆ. ಒಂದು ಲೋಕದಲ್ಲಿ (ದೇಶದಲ್ಲಿ-ಪ್ರದೇಶದಲ್ಲಿ) ಬಹುಕಾಲ ವಾಸವಿದ್ದರೂ (ಒಂದು ದೇಹದಲ್ಲಿ ದೀರ್ಘಕಾಲವಿದ್ದರೂ) ಆಗಾಗ ಮಧ್ಯೆ ಮಧ್ಯೆ ಮಾತ್ರ (ಕಾಲತಃ ಅನಿತ್ಯಗಳಾದ) ಸುಖಭೋಗಗಳೂ ಪುಣ್ಯದ ಫಲವಾಗಿ ದೊರೆಯುವುದುಂಟು-ಇತ್ಯಾದಿ ಯುಕ್ತಿಯುಕ್ತವಾದ ಊಹೆಗಳಿಂದ ಈ ಸಂಬಂಧವಾದ ಪ್ರಭೇದಗಳನ್ನು ತಿಳಿಯಬೇಕು. ಕಾಲತಃ ದೇಶತಃ ನಿತ್ಯವಾದ ಭೋಗಗಳುಳ್ಳವು. ವೈಕುಂಠಾದಿ ಸ್ಥಾನಗಳು ಮಾತ್ರವೆಂಬುದನ್ನು ಲಕ್ಷ್ಯದಲ್ಲಿಡಬೇಕು. (ಇದೇ ಅಧ್ಯಾಯದ ೧೪ನೇ ಶ್ಲೋಕವನ್ನು ನೋಡಿರಿ). ದೇಶತಃ ನಿತ್ಯವಾಗಿದ್ದು ಕಾಲತಃ ಚಂಚಲ (ಅಸ್ಥಿರ)ವಾದ ಸ್ಥಾನಗಳ ಮತ್ತು ದೇಶತಃ ಕಾಲತಃ ಸಹ ಅನಿತ್ಯವಾದ ಸ್ಥಾನಗಳ ಬಗ್ಗೆ ಮುಂದಿನ ಅಧ್ಯಾಯವನ್ನು ನೋಡಿರಿ.

ಸ್ಥಾನಗಳು, ಲೋಕೇ-ಜಗತ್ತಿನಲ್ಲಿ ತಾನಿ ತು-ಬಹು ಭೋಗವುಳ್ಳವುಗಳಾದರೂ, ಧರ್ಮ ಸಾಧ್ಯಾನಿ-ಧರ್ಮಸಾಧ್ಯಗಳು (ಧರ್ಮದ) ಫಲರೂಪವಾಗಿಯೇ ದೊರೆಯತಕ್ಕವುಗಳು.

**ಇಷ್ಟಹಾನಿಶ್ಚ ದುಃಖಾಪ್ತಿರಧರ್ಮ ಫಲಮೀರಿತಂ ॥ ೧೦ ॥**

**ತದಪಿ ಪ್ರಾಪ್ಯತೇ ಜೀವೈರ್ಭೂಲೋಕೇ ನಿರಯಾದಿಷು ।**

**ನಿಷಿದ್ಧಕರಣಾತ್ಸ ಸ್ಯಾದ್ವಿಹಿತಾಕರಣಾದಪಿ ॥ ೧೧ ॥**

**ಇತ್ಯಧರ್ಮೋ ದ್ವಿವಿಧಾ ಪ್ರೋಕ್ತೋ ದುರದೃಷ್ಟಪ್ರವರ್ತಕಃ ।**

ಇಷ್ಟಹಾನಿಃ-ಇಷ್ಟಹಾನಿಯು (ನಾಶವು), ಚ-ಮತ್ತು ದುಃಖಾಪ್ತಿಃ-ದುಃಖ ಪ್ರಾಪ್ತಿಯು, ಅಧರ್ಮಫಲಂ-ಅಧರ್ಮದ ಫಲವೆಂದು, ಈರಿತಂ-ಹೇಳಲ್ಪಡುತ್ತದೆ; ತದಪಿ-ಇದೂ ಸಹ (ಇಷ್ಟಹಾನಿ ಮತ್ತು ದುಃಖಪ್ರಾಪ್ತಿಯು), ಜೀವೈಃ-ಜೀವರಿಂದ, ಭೂಲೋಕೇ-ಭೂಲೋಕದಲ್ಲಿ ನಿರಯಾದಿಷು-ನರಕ ಮೊದಲಾದವುಗಳಲ್ಲಿ ಪ್ರಾಪ್ಯತೇ-ಹೊಂದಲ್ಪಡುತ್ತದೆ; ನಿಷಿದ್ಧಕರಣಾತ್-ನಿಷೇಧಿಸಲ್ಪಟ್ಟ ಕರ್ಮಗಳನ್ನು ಮಾಡುವುದರಿಂದಲೂ, ಅಪಿ-ಮತ್ತು ವಿಹಿತಾಕರಣಾತ್-ವಿಧಿಸಲ್ಪಟ್ಟ ಕರ್ಮಗಳನ್ನು ಮಾಡದಿರುವುದರಿಂದಲೂ, ಸಃ ಸ್ಯಾತ್-ಆ ಅಧರ್ಮವು ಉಂಟಾಗುತ್ತದೆ; ಇತಿ ಹೀಗೆ, ದುರದೃಷ್ಟಪ್ರವರ್ತಕಃ-ಅನಿಷ್ಟವನ್ನು ಹೊಂದಿಸುವ ಅದೃಷ್ಟಕ್ಕೆ ಕಾರಣವಾದ, ಅಧರ್ಮಃ-ಅಧರ್ಮವು, ದ್ವಿವಿಧಾ-ಎರಡು ವಿಧವೆಂದು, ಪ್ರೋಕ್ತಃ-ಹೇಳಲ್ಪಡುತ್ತದೆ.

**ಅರ್ಥೋ ಹಿ ತ್ರಿವಿಧಃ ಪ್ರೋಕ್ತೋ ಧನಂ ವಿದ್ಯಾ ಯಶಸ್ತಥಾ ॥ ೧೨ ॥**

**ಪ್ರಾಯೇಣ ತದ್ದೃಷ್ಟಫಲಂ ಕಾಮೋಪ್ಯೇವಂ ಪ್ರಕೀರ್ತಿತಃ ।**

**ಯೇನಾರ್ಥೇನಾಪಿ ಕಾಮೇನಾಪ್ಯದೃಷ್ಟಂ ಜಾಯತೇ ಫಲಂ ॥ ೧೩ ॥**

**ಸ ಧರ್ಮರೂಪೋ ವಿಜ್ಞೇಯೋ ದೃಷ್ಟಂ ತತ್ರಾನುಷಂಗಿಕಂ ।**

ಅರ್ಥಃ-ಅರ್ಥವು (ಅರ್ಥವೆಂಬ ಪುರುಷಾರ್ಥವು), ಧನಂ-ಧನವು, ವಿದ್ಯಾ-ವಿದ್ಯೆಯು, ತಥಾ-ಮತ್ತು ಯಶಃ-ಕೀರ್ತಿಯು, (ಎಂದು), ತ್ರಿವಿಧಃ-ಮೂರು

---

ನರಕಾದಿಗಳಲ್ಲಿಯೂ, ಜೀವರಿಂದ ಹೊಂದಲ್ಪಡುತ್ತದೆ; ಅಧರ್ಮವು, ನಿಷಿದ್ಧವನ್ನು ಮಾಡುವುದು ಮತ್ತು ವಿಹಿತವನ್ನು ಬಿಡುವುದು (ಮಾಡದಿರುವುದು) ಎಂಬುದಾಗಿ ಎರಡು ವಿಧವಾಗಿದೆ; ಅಧರ್ಮವೇ ಅನಿಷ್ಟಕ್ಕೆ ಕಾರಣವಾದ ಅದೃಷ್ಟವನ್ನು ಉತ್ಪಾದಿಸುತ್ತದೆ (೧೦-೧೧). ಅರ್ಥವೆಂಬ ಪುರುಷಾರ್ಥವು, ಧನ-ವಿದ್ಯೆ-ಯಶಸ್ಸು ಎಂಬುದಾಗಿ ತ್ರಿವಿಧವೆಂದು ಹೇಳಲ್ಪಟ್ಟಿದೆ; ಅರ್ಥವು ಬಹುವಾಗಿ ದೃಷ್ಟ (ಇಹ) ಫಲಮಾತ್ರವುಳ್ಳದ್ದು; ಕಾಮವೂ (ಈ ಪುರುಷಾರ್ಥವೂ) ಪ್ರಾಯಃ ದೃಷ್ಟಫಲವುಳ್ಳದ್ದೇ; ಯಾವ ಅರ್ಥಕಾಮಗಳಿಂದ, ಅದೃಷ್ಟ (ಪಾರತ್ರಿಕ) ಫಲವೂ ಹುಟ್ಟುವುದೋ, ಅವು

ಏಧವೆಂದು, ಪ್ರೋಕ್ತಃ ಹಿ-(ಜ್ಞಾನಿಗಳಿಂದ) ನಿಶ್ಚಯಿಸಲಾಗಿದೆ; ತತ್-ಅದು (ಅರ್ಥವು), ಪ್ರಾಯೇಣ-ಬಹುವಾಗಿ (ಪ್ರಧಾನವಾಗಿ-ಹೆಚ್ಚಾಗಿ), ದೃಷ್ಟಫಲಂ-ದೃಷ್ಟವಾದ ಫಲವುಳ್ಳದ್ದು (ಇಹಲೋಕದ ಫಲವುಳ್ಳದ್ದು); ಕಾಮಃ ಅಪಿ-ಕಾಮವೆಂಬ ಪುರುಷಾರ್ಥವೂ ಸಹ, ಏವಂ-ಹೀಗೆಂದೇ (ದೃಷ್ಟಫಲ ಪ್ರಚುರವಾದುದೆಂದೇ), ಪ್ರಕೀರ್ತಿತಃ-ಹೇಳಲ್ಪಡುತ್ತದೆ; ಯೇನ-ಯಾವ, ಅರ್ಥೇನ-ಅರ್ಥದಿಂದಲೂ, ಅಪಿ-ಮತ್ತು ಕಾಮೇನ-ಕಾಮದಿಂದಲೂ, ಅದೃಷ್ಟಂ-ಅದೃಷ್ಟವಾದ (ಪಾರತ್ರಿಕವಾದ), ಫಲಂ ಅಪಿ-ಫಲವೂ ಸಹ, ಜಾಯತೇ-ಹುಟ್ಟುವುದೋ, ಸಃ-ಅದು, (ಆ ಅರ್ಥವೂ ಕಾಮವೂ), ಧರ್ಮರೂಪಃ-ಧರ್ಮವೆಂದೇ, ವಿಜ್ಞೇಯಃ-ತಿಳಿಯಲ್ಪಡಬೇಕು; ತತ್ರ-ಅಲ್ಲಿ (ಅರ್ಥಕಾಮಗಳು ಪಾರತ್ರಿಕ ಸುಖಕ್ಕೆ ಕಾರಣವಾದಲ್ಲಿ), ದೃಷ್ಟಂ-(ಅವುಗಳಿಂದಾಗುವ ದೃಷ್ಟ (ಇಹ) ಫಲವು, ಆನುಷಂಗಿಕಂ-(ಧರ್ಮದಿಂದಲೇ ಹೊರಡುವ) ಅದರಿಂದಲೇ ಅವಶ್ಯಕವಾಗಿ ಪ್ರವಹಿಸುವ ಫಲವೆಂದು (ತಿಳಿಯ ತಕ್ಕದ್ದು).

**ಕಾಲತೋ ದೇಶತೋ ವಾಪಿ ಧ್ರುವಂ ಸ್ಥಾನಂ ತು ಯದ್ಭವೇತ್ ॥ ೧೪ ॥**
**ತನ್ಮೋಕ್ಷಃ ಪ್ರಾಪ್ಯತೇ ವಿಪ್ರಾಃ ಸರ್ವಾನಿಷ್ಟನಿವೃತ್ತಿಮತ್ ।**
**ಇಷ್ಟಸಿದ್ಧಿಃ ಸದಾ ತತ್ರ ತದ್ವಿಷ್ಣೋಃ ಪರಮಂ ಪದಂ ॥ ೧೫ ॥**

ಯತ್-ಯಾವ, ಸ್ಥಾನಂ-ಸ್ಥಾನವು, ಕಾಲತಃ-ಕಾಲದಿಂದ; ಅಪಿ ವಾ-ಮತ್ತು ದೇಶತಃ-ದೇಶದಿಂದಲೂ, ಧ್ರುವಂ-ನಿತ್ಯವಾದುದು (ನಾಶವಿಲ್ಲದುದು), ಭವೇತ್-ಉಂಟಾಗುವುದೋ (ದೊರೆಯುವುದೋ), ತತ್-ಅದು, ವಿಪ್ರಾಃ-ಹೇ ಋಷಿಗಳೇ ವಿಷ್ಣೋಃ-ಶ್ರೀವಿಷ್ಣುವಿನ, ಪರಮಂ ಪದಂ-ಶ್ರೇಷ್ಠವಾದ (ವೈಕುಂಠಾದಿ) ಸ್ಥಾನವು, (ಅದು) ಪ್ರಾಪ್ಯತೇ-(ಅರ್ಹರಾದ ಜೀವರಿಂದ) ಹೊಂದಲ್ಪಡುತ್ತದೆ; ಸರ್ವಾನಿಷ್ಟ ನಿವೃತ್ತಿಮತ್-ನಿವೃತ್ತವಾದ ಸಕಲ ಅನಿಷ್ಟಗಳುಳ್ಳ ಆ ಸ್ಥಾನವೇ, ತನ್ಮೋಕ್ಷಃ-ಪ್ರಸಿದ್ಧವಾದ

---

ಧರ್ಮಸ್ವರೂಪದ ಪುರುಷಾರ್ಥಗಳೆಂದೇ ತಿಳಿಯಲ್ಪಡತಕ್ಕದ್ದು; ಅಲ್ಲಿ ಕಂಡುಬರುವ (ಅನುಭವಕ್ಕೆ ಬರುವ) ದೃಷ್ಟ (ಇಹ) ಫಲಗಳು ಆನುಷಂಗಿಕವಾದ ಧರ್ಮದ ಫಲಗಳೆಂದೇ ಭಾವಿಸಬೇಕು (೧೨-೧೩). ಯಾವುದು ಕಾಲತಃ ಮತ್ತು ದೇಶತಃ ನಿತ್ಯವಾದುದೋ (ನಾಶವಿಲ್ಲದುದೋ), ಅದೇ (ಆ ಸ್ಥಿತಿಯೇ) ಮೋಕ್ಷವೆಂಬುದು; ಯಾವ ಅನಿಷ್ಟವೂ ಇಲ್ಲದ, ಸರ್ವದಾ ಅಪೇಕ್ಷಿತ ಸರ್ವಸ್ವವೂ ಯತ್ನವಿಲ್ಲದೇ ದೊರೆಯುವ, ಆ ಸ್ಥಾನವೇ ಶ್ರೀವಿಷ್ಣುವಿನ ಪರಮಪದಗಳೆಂಬ ವೈಕುಂಠಾದಿಸ್ಥಾನಗಳು; ಆ ಸ್ಥಾನಕ್ಕೆ ಅರ್ಹರಾದ ಜೀವರು, ಆ ನಿತ್ಯಸ್ಥಾನವನ್ನೂ, ಯತ್ನವಿಲ್ಲದ ನಿತ್ಯ ಸುಖ ಭೋಗಗಳನ್ನೂ ಹೊಂದುತ್ತಾರೆ (೧೪-೧೫). ಅನಾದಿಯಿಂದ ಜೀವಸ್ವರೂಪ ವನ್ನಾಚ್ಛಾದಿಸಿರುವ ಲಿಂಗದೇಹದ ಭಂಗವೇ (ತೊಲಗುವಿಕೆಯೇ-ನಾಶವೇ)

ಮೋಕ್ಷವು (ಮುಕ್ತಲೋಕವು); ತತ್ರ-ಅಲ್ಲಿ ಸದಾ-ಎಲ್ಲ ಕಾಲದಲ್ಲಿಯೂ, (ನಿತ್ಯವೂ), ಇಷ್ಟಸಿದ್ಧಿಃ-ಅಪೇಕ್ಷಿತವಾದುದೆಲ್ಲವೂ (ಯತ್ನವಿಲ್ಲದೇ) ಸಿದ್ಧವಾಗುತ್ತದೆ.

**ಲಿಂಗಭೇದಃ ಸ್ಮೃತೋ ಮೋಕ್ಷಃ ಸ ದ್ವಿಧಾ ಪರಿಕೀರ್ತಿತಃ ।**

**ನಿತ್ಯೇಷ್ಟದಃ ಸ್ಯಾತ್ಸನ್ಮೋಕ್ಷೋ ದುರ್ಮೋಕ್ಷೋಽನಿಷ್ಟದಃ ಸದಾ ॥ ೧೬ ॥**

**ಏತದ್ಧಾಮತ್ರಯಂ ವಿಷ್ಣೋಃ ಸನ್ಮೋಕ್ಷಸ್ಥಾನಮುಚ್ಯತೇ ।**

**ನಿತ್ಯಮಂಧಂತಮೋ ವಪ್ರಂ ದುರ್ಮೋಕ್ಷಸ್ಥಾನಮೀರಿತಂ ॥ ೧೭ ॥**

**ಪುನರಾವರ್ತತೇ ನೈವ ಜೀವೋ ಮೋಕ್ಷಂ ಗತಃ ಕ್ವಚಿತ್ ।**

**ಸಂಸಾರೇ ಕರ್ಮಬಂಧಾಖ್ಯೇ ಸುಖದುಃಖಫಲಪ್ರದೇ ॥ ೧೮ ॥**

ಲಿಂಗಭೇದಃ-ಲಿಂಗದೇಹದ ಭಂಗವು (ನಾಶವು-ವಿಮೋಚನೆಯು), ಮೋಕ್ಷಃ-ಮೋಕ್ಷವೆಂದು, ಸ್ಮೃತಃ-ಜ್ಞಾತವಾಗಿದೆ; ಸಃ-ಅದು (ಮೋಕ್ಷವು), ದ್ವಿಧಾ-ಎರಡು ವಿಧವೆಂದು, ಪರಿಕೀರ್ತಿತಃ-ಹೇಳಲ್ಪಟ್ಟಿರುತ್ತದೆ; ನಿತ್ಯೇಷ್ಟದಂ-ಸಂತತವಾಗಿ ಇಷ್ಟವನ್ನೇ ಕೊಡುವುದು, ಸನ್ಮೋಕ್ಷಃ-ಸಮೀಚೀನವಾದ (ನಿತ್ಯಾನಂದರೂಪದ) ಮೋಕ್ಷವು, ಸ್ಯಾತ್-ಆಗಿರುತ್ತದೆ; ಸದಾ-ಸರ್ವದಾ (ನಿರಂತರವಾಗಿ), ಅನಿಷ್ಟದಃ-ಅನಿಷ್ಟವನ್ನೇ (ದುಃಖವನ್ನೇ) ಕೊಡುವುದು, ದುರ್ಮೋಕ್ಷಃ-ದುರ್ಮೋಕ್ಷವಾಗಿದೆ; ಏತತ್-ಈ (ಪ್ರಸಿದ್ಧಗಳಾದ), ವಿಷ್ಣೋಃ-ಶ್ರೀವಿಷ್ಣುವಿನ, ಧಾಮತ್ರಯಂ-ಮೂರು ಸ್ಥಾನಗಳು (ವೈಕುಂಠ, ಶ್ವೇತದ್ವೀಪ, ಅನಂತಾಸನಗಳು), ಸನ್ಮೋಕ್ಷಸ್ಥಾನಂ-ಸನ್ಮೋಕ್ಷಸ್ಥಾನಗಳೆಂದು, ಉಚ್ಯತೇ-ಹೇಳಲ್ಪಡುತ್ತವೆ; ನಿತ್ಯಂ-ನಿತ್ಯವಾದ (ನಾಶವಿಲ್ಲದ),

---

ಮೋಕ್ಷವು; ನಿತ್ಯಾನಿಷ್ಟಪ್ರದವಾದುದು (ದುಃಖಪ್ರದವಾದ್ದು) ಮತ್ತು ನಿತ್ಯ ಇಷ್ಟಪ್ರದವಾದುದು (ಸುಖಪ್ರದವಾದ್ದು) ಎಂಬ ಭೇದದಿಂದ, ಮೋಕ್ಷವು ಎರಡು ವಿಧವಾಗಿದೆ; ಇವು ಕ್ರಮವಾಗಿ ದುರ್ಮೋಕ್ಷವೆಂದೂ, ಸನ್ಮೋಕ್ಷವೆಂದು ಕರೆಯಲ್ಪಡುತ್ತವೆ; ಧಾಮತ್ರಯಗಳು (ಶ್ರೀವಿಷ್ಣುವಿನ ವೈಕುಂಠ, ಶ್ವೇತದ್ವೀಪ, ಅನಂತಾಸನಗಳೆಂಬ ಮೂರು ಲೋಕಗಳು ಸನ್ಮೋಕ್ಷ ಸ್ಥಾನಗಳು; ಅಂಧತಮಸ್ಸು ಮತ್ತು ವಪ್ರವೆಂಬುವು ನಿತ್ಯವಾದ[1] (ವೈಕುಂಠಾದಿಗಳಂತೆ ಪ್ರಲಯದಲ್ಲಿ ಸಹ ನಾಶವಾಗದಿರುವ) ದುರ್ಮೋಕ್ಷ

1. ಭಾರತೋಕ್ತ ಅಂಧತಾಮಿಸ್ರ, ತಾಮಿಸ್ರಗಳೆಂಬುವೇ ಇವು; 'ತಾಮಿಸ್ರಂ ಚಾಂಧತಾಮಿಸ್ರೋ ದ್ವೌ ನಿತ್ಯೌ ಸಂಪ್ರಕೀರ್ತಿತೌ.'—ಇವು ನಿತ್ಯನರಕಗಳು-ದುರ್ಮೋಕ್ಷ ಸ್ಥಾನಗಳು; ರೌರವ, ಮಹಾರೌರವ, ವಹ್ನಿ, ವೈತರಣೀ, ಕುಂಭೀಪಾಕಗಳೆಂಬುವು ಅನಿತ್ಯ ನರಕಗಳು—ಪಾಪಫಲವಾದ ಯಾತನೆಗಳನ್ನು ಅನುಭವಿಸಿದ ನಂತರ ಇವುಗಳಿಂದ ಉತ್ಕ್ರಾಂತಿಯುಂಟು—ಪುನಃ ಜೀವರು ಸಂಸಾರಕ್ಕೆ ಬರುತ್ತಾರೆ—ಸ್ವರ್ಗಾದಿ ಸುಖಭೋಗ ಸ್ಥಾನಗಳಲ್ಲಿ ಪುಣ್ಯಫಲಗಳನ್ನು ಭೋಗಿಸಿ; ಸಂಸಾರಕ್ಕೆ ತಿರಿಗಿ ಬರುವಂತೆ; ಆದರೆ ಮೋಕ್ಷಸ್ಥಾನಗಳಿಂದ ಯಾರೂ ತಿರಿಗಿಬರುವುದಿಲ್ಲ.

ಅಂಧಂತಮಃ- ಅಂಧತಮಸ್ಸೂ, ವಪ್ರಂ-ವಪ್ರವೆಂಬ (ನಿತ್ಯ) ನರಕವೂ, ದುರ್ಮೋಕ್ಷಸ್ಥಾನಂ- ದುರ್ಮೋಕ್ಷಸ್ಥಾನವೆಂದು, ಈರಿತಂ-ಹೇಳಲ್ಪಡುತ್ತವೆ; ಮೋಕ್ಷಂ ಗತಃ-ಮೋಕ್ಷವನ್ನು ಹೊಂದಿದ (ಲಿಂಗಭಂಗವನ್ನು ಹೊಂದಿದ), ಜೀವಃ-ಜೀವನು, ಕ್ವಚಿತ್-ಎಂದೂ (ಹೇಗೂ), ಸುಖದುಃಖಫಲಪ್ರದೇ-ಸುಖದುಃಖರೂಪದ ಫಲಗಳನ್ನುಣಿಸುವ, ಕರ್ಮಬಂಧಾಖ್ಯೇ-ಕರ್ಮಬಂಧವೆಂಬುವ, ಸಂಸಾರೇ-ಸಂಸಾರದಲ್ಲಿ, ನೈವ ಪುನರಾವರ್ತತೇ- ಹಿಂದಿರುಗಿ ಬರುವುದಿಲ್ಲ (ಸಂಸಾರವನ್ನು ಹೊಂದಿ ಸುತ್ತುವುದಿಲ್ಲ).

ಪುರುಷಾರ್ಥವರ್ಣನವೆಂಬ ೪೮ನೆಯ ಅಧ್ಯಾಯವು ಮುಗಿದುದು.

## ಅಧ್ಯಾಯ ೪೯

ಶ್ರೀ ವೇದವ್ಯಾಸಾಯ ನಮಃ

**ಕಹೋಳ ಉವಾಚ—**

**ಧ್ರುವಾಣಿ ದೇಶತೋ ಯಾನಿ ಕಾಲತಶ್ಚಂಚಲಾನಿ ತು ।**
**ಕಿಯಂತಿ ತಾನಿ ಸ್ಥಾನಾನಿ ಮಹಾಭಾಗ ವದಸ್ವ ನಃ ॥ ೧ ॥**
**ಕಾಲತೋ ದೇಶತಶ್ಚಾಪಿ ಚಂಚಲಾನ್ಯಚಲಾನಿ ಚ ।**
**ತಾನಿ ಕಾನೀತಿ ನೋ ಬ್ರೂಹಿ ಯತಃ ಶುಶ್ರೂಷವೋ ವಯಂ ॥ ೨ ॥**

ಅರ್ಥ:—ಕಹೋಳನು ಪ್ರಶ್ನಿಸುತ್ತಾನೆ: ದೇಶತಃ-ದೇಶದಿಂದ, ಧ್ರುವಾಣಿ-ನಿತ್ಯವಾಗಿದ್ದು, ಕಾಲತಃ ತು-ಕಾಲದಿಂದ ಮಾತ್ರ, ಚಂಚಲಾನಿ-ಅಸ್ಥಿರಗಳಾದ, ಸ್ಥಾನಾನಿ-ಸ್ಥಾನಗಳು, ಯಾನಿ-ಯಾವುವು? ಕಿಯಂತಿ-ಎಷ್ಟು? ಮಹಾಭಾಗ-ಹೇ ಮಹಾಭಾಗ್ಯಶಾಲಿಯಾದ ಸೂತ!, ನಃ-ನಮಗೆ, ವದಸ್ವ-ಹೇಳು; ಕಾಲತಃ-ಕಾಲದಿಂದಲೂ, ದೇಶತಃ ಅಪಿ ಚ-ದೇಶದಿಂದಲೂ, ಚಂಚಲಾನಿ-ಅಸ್ಥಿರಗಳಾದ,

---

ಸ್ಥಾನಗಳು; ಮೋಕ್ಷವನ್ನು ಹೊಂದಿದ ಯಾವ ಜೀವನೂ, ಎಂದೂ-ಹೇಗೂ, ಸುಖದುಃಖಪ್ರದವಾದ, ಕರ್ಮಬಂಧರೂಪದ ಈ ಸಂಸಾರಕ್ಕೆ ತಿರುಗಿ ಬರುವುದಿಲ್ಲ (೧೬-೧೮).

೪೮ನೇ ಅಧ್ಯಾಯವು ಮುಗಿದುದು.

**ಅಧ್ಯಾಯ ೪೯**

**ತಾತ್ಪರ್ಯ:**—ಕಹೋಳಋಷಿಯು ಪ್ರಶ್ನಿಸುತ್ತಾನೆ: "ಹೇ ಮಹಾಭಾಗ, ಸೂತ! ಕಾಲತಃ ಚಂಚಲ (ಅಸ್ಥಿರ-ಅನಿತ್ಯ)ವಾಗಿದ್ದರೂ, ದೇಶತಃ ಶಾಶ್ವತಗಳೆಂಬ ಸ್ಥಾನಗಳು ಯಾವುವು? ಎಷ್ಟಿವೆ? ಮತ್ತು ಕಾಲತಃ ಮತ್ತು ದೇಶತಃ (ಉಭಯಥಾ) ಚಂಚಲವೂ

ಚ-ಮತ್ತು ಅಚಲಾನಿ-ಧ್ರುವಗಳಾದ (ಸ್ಥಿರಗಳಾದ) (ಸ್ಥಾನಾನಿ-ಸ್ಥಾನಗಳು), ತಾನಿ-ಅವು, ಕಾನಿ-ಯಾವುವು? ಇತಿ-ಎಂದು, ಬ್ರೂಹಿ-ಹೇಳು; ಯತಃ-ಏಕೆಂದರೆ, ವಯಂ-ನಾವು, ಶುಶ್ರೂಷವಃ-ಕೇಳಲಿಚ್ಛಿಸುತ್ತೇವೆ.

**ಸೂತ ಉವಾಚ—**

**ಯಾವಂತಸ್ತಾರಕಾ ವ್ಯೋಮ್ನಿ ದೃಶ್ಯಂತೋ ದೂರತೋಽಖಿಲಾಃ ।**
**ತೇ ತು ಲೋಕಾಃ ಪುಣ್ಯಸಾಧ್ಯಾಃ ಸರ್ವದೈವ ಭ್ರಮಂತಿ ಹಿ ॥ ೩ ॥**

ಸೂತನು ಹೇಳುತ್ತಾನೆ:—ವ್ಯೋಮ್ನಿ-ಆಕಾಶದಲ್ಲಿ ದೂರತಃ-ದೂರದಲ್ಲಿ ದೃಶ್ಯಂತಃ-ಕಾಣುತ್ತಿರುವ, ಯಾವಂತಃ-ಎಷ್ಟು ತಾರಕಾಃ-ತಾರೆಗಳೋ (ನಕ್ಷತ್ರಗಳೋ), ತೇ ಅಖಿಲಾಃ-ಅವೆಲ್ಲವೂ, ಪುಣ್ಯಸಾಧ್ಯಾಃ-ಪುಣ್ಯದಿಂದ ದೊರೆಯುವ, ಲೋಕಾಃ-ಲೋಕಗಳು; ಸರ್ವದಾ ಏವ-ಎಲ್ಲ ಕಾಲದಲ್ಲಿ ಭ್ರಮಂತಿ ಹಿ-(ತಂತಮ್ಮ ಪಥದಲ್ಲಿ) ಸುತ್ತುತ್ತವೆಯಷ್ಟೆ.

**ಪ್ರತ್ಯೇಕಂ ತೇ ಮಹೋನ್ಮಾನಾದೂರ್ಧ್ವಮೂರ್ಧ್ವಂ ವ್ಯವಸ್ಥಿತಾಃ ।**
**ಕಲ್ಪಾವಸಾನಪರ್ಯಂತಂ ಪ್ರಾಯಸ್ತೇಷಾಂ ಸ್ಥಿತಿರ್ಭವೇತ್ ॥ ೪ ॥**
**ದೂರಾದಲ್ಪಾನಿ ದೃಶ್ಯಂತೇ ಋಕ್ಷಾಣಿ ಸುಮಹಾಂತ್ಯಪಿ ।**
**ಪುಣ್ಯಮಾತ್ರಾವಲಂಬಾಸ್ತೇ ಲೋಕಾ ವಾಯುಭ್ರಮಾನ್ವಿತಾಃ ॥ ೫ ॥**

ತೇ-ಅವು (ಆ ನಕ್ಷತ್ರಲೋಕಗಳು), ಪ್ರತ್ಯೇಕಂ-ಒಂದೊಂದೂ, ಮಹೋನ್ಮಾನಾತ್-ದೊಡ್ಡ ಅಳತೆಯುಳ್ಳವುಗಳು (ಬಹು ವಿಸ್ತಾರವಾದವುಗಳು) ಆದ್ದರಿಂದ, ಊರ್ಧ್ವಂಊರ್ಧ್ವಂ-ಮೇಲೆ ಮೇಲೆ, ವ್ಯವಸ್ಥಿತಾಃ-ಸ್ಥಾಪಿತವಾಗಿವೆ; ಪ್ರಾಯಃ-ಹೆಚ್ಚಾಗಿ, ತೇಷಾಂ-ಅವುಗಳ, ಸ್ಥಿತಿಃ-ಸ್ಥಿತಿಯು (ಇರುವಿಕೆಯು), ಕಲ್ಪಾವಸಾನಪರ್ಯಂತಂ-ಬ್ರಹ್ಮಕಲ್ಪವು ಮುಗಿಯುವವರೆಗೆ, ಭವೇತ್-ಆಗಿರುತ್ತದೆ; ಋಕ್ಷಾಣಿ-ನಕ್ಷತ್ರಗಳು, ಸುಮಹಾಂತಿ ಅಪಿ-ಬಹು ದೊಡ್ಡವಾದುವಾದರೂ,

---

ಅಚಂಚಲವೂ, ಆಗಿರುವ ಸ್ಥಾನಗಳು ಯಾವುವು? ಕೇಳಲಿಚ್ಛಿಸುವ ನಮಗೆ ಹೇಳು (೧-೨). ಸೂತಾಚಾರ್ಯನು ಹೇಳುತ್ತಾನೆ: ದೂರದಲ್ಲಿ ಆಕಾಶದಲ್ಲಿ ತೋರುವ ನಕ್ಷತ್ರಗಳೆಲ್ಲವೂ, ಪುಣ್ಯಲಭ್ಯಗಳಾದ ಲೋಕಗಳು; ಅವೆಲ್ಲವೂ ತಂತಮ್ಮ ಪಥಗಳಲ್ಲಿ ಸರ್ವದಾ ಸುತ್ತುತ್ತಿರುವುವು (೩). ಈ ನಕ್ಷತ್ರಗಳು ಒಂದೊಂದೂ, (ಲೋಕಗಳು) ಬಹು ವಿಸ್ತಾರವಾದವುಗಳು (ಅಧಿಕಮಾನ-ಅಳತೆಯುಳ್ಳವುಗಳು)-ಭೂಮಿಯಿಂದ ಮೇಲೆ ಮೇಲೆ ಸ್ಥಿತವಾಗಿವೆ; ಇವು ಪ್ರಾಯಃ (ಬಹುಭಾಗದವುಗಳು) ಬ್ರಹ್ಮಕಲ್ಪಪರ್ಯಂತವಾಗಿ ಇರುತ್ತವೆ; ಭೂಮಿಯಿಂದ ಬಹುದೂರವಿರುವುದರಿಂದ, ನಕ್ಷತ್ರಗಳು ಅತ್ಯಂತ ದೊಡ್ಡವುಗಳಾದರೂ ಚಿಕ್ಕದಾಗಿ ತೋರುತ್ತವೆ; ಪುಣ್ಯಜೀವರಿಂದ ಮಾತ್ರ

ದೂರಾತ್-ದೂರದಿಂದ, (ಬಹುದೂರವಿರುವುದರಿಂದ) ಅಲ್ಪಾನಿ-ಚಿಕ್ಕವುಗಳೆಂಬಂತೆ, ದೃಶ್ಯಂತೇ-ಕಾಣುತ್ತವೆ; ತೇ ಲೋಕಾಃ-ಆ ಲೋಕಗಳು, ಪುಣ್ಯಮಾತ್ರಾವಲಂಬಾಃ-ಪುಣ್ಯಜೀವಿಗಳಿಂದ ಮಾತ್ರ ಆಶ್ರಯಿಸಲ್ಪಟ್ಟವೆ; ವಾಯುಭ್ರಮಾನ್ವಿತಾಃ- ವಾಯುದೇವನಿಂದ ಸುತ್ತುವುವಾಗಿವೆ (ಮುಖ್ಯ ವಾಯುವಿನ ವಿವಿಧ ರೂಪಗಳಿಂದ ಚಾಲಿತವಾಗಿವೆ).

ಯದಾ ಪುಣ್ಯಂ ಕ್ಷಯೋ ಯಸ್ಯ ಜಾಯತೇ ಸ ತದೈವ ಹಿ ।
ಪತತ್ಯಧಸ್ತಾದ್ರಾತ್ರೌ ತು ಶಕಲೀಭೂಯ ದೃಶ್ಯತೇ ॥ ೬ ॥
ಶಕಲೇ ಶಕಲೇ ಜೀವಾ ಅನೇಕೇ ಯೇ ವ್ಯವಸ್ಥಿತಾಃ ।
ಸ್ಥಾನೇ ಸ್ಥಾನೇ ತು ತೇ ಸರ್ವೇ ಪತಂತ್ಯಪ್ಸು ತೃಣಾದಿಷು ॥ ೭ ॥
ಫಲೇಷ್ವೌಷಧಿಧಾನ್ಯಾದೌ ತತಃ ಪಿತ್ರಾದಿಷು ಕ್ರಮಾತ್ ।
ಸ್ವಸ್ವಕರ್ಮವಶಾತ್ ಸ್ವಾನ್ನಪಾನಾದಿದ್ವಾರತೋಽಖಿಲಾಃ ॥ ೮ ॥
ಪ್ರವಿಷ್ಟಾ ಉದರೇ ಮಾತುಃ ಪ್ರಾಯಸ್ತೇ ಸದ್ಗುಣಾ ನರಾಃ ।
ಜಾಯಂತೇ ಭೂಮಿಲೋಕೇಽಸ್ಮಿನ್ ಸ್ವಕರ್ಮಫಲಭೋಗಿನಃ ॥ ೯ ॥

ಯಸ್ಯ-(ಆ ಲೋಕಗಳಲ್ಲಿರುವ) ಯಾವ ಜೀವನ, ಪುಣ್ಯಂ-ಪುಣ್ಯವು, ಯದಾ-ಯಾವಾಗ, ಕ್ಷಯಂ-ನಾಶವನ್ನು ಜಾಯತೇ-ಹೊಂದುವುದೋ, ಸಃ-ಆ ಜೀವನು, ತದಾ ಏವ ಹಿ-ಆಗಲೇ (ಆ ಕಾಲದಲ್ಲಿಯೇ), ಅಧಸ್ತಾತ್-ಕೆಳಗೆ, ಪತತಿ-ಬೀಳುತ್ತಾನೆ; ರಾತ್ರೌತು-ರಾತ್ರಿ ಕಾಲದಲ್ಲಿ ಆದರೋ, ಶಕಲೀಭೂಯ-

---

ಆಶ್ರಯಿಸಲ್ಪಟ್ಟು ಈ ಲೋಕಗಳು, ವಾಯುವಿನಿಂದ[1] ಸುತ್ತಿಸಲ್ಪಡುತ್ತವೆ (೪-೫). ಈ ಪುಣ್ಯ ಜೀವಿಗಳಲ್ಲಿ ಯಾರ ಪುಣ್ಯವು ಯಾವ ಕಾಲದಲ್ಲಿ ಮುಗಿಯುವುದೋ (ನಷ್ಟವಾಗುವುದೋ) ಆಗಲೇ, ಅಲ್ಲಿಂದ ಭೂಮಿಗೆ ಬೀಳುವ ಶಕಲವನ್ನು (ಶಿಲಾಖಂಡವನ್ನು) (ಕಲ್ಲುತುಂಡನ್ನು) ಆಶ್ರಯಿಸಿ, ಆ ರೂಪದಿಂದ ಕೆಳಗೆ ಬೀಳುತ್ತಾನೆ; ಭೂವಾಸಿಗಳಿಗೆ ಈ ಪತನವು ರಾತ್ರಿ ಕಾಲದಲ್ಲಿ ಕಾಣುತ್ತದೆ; ಪ್ರತಿ ಶಕಲದಲ್ಲಿ ಅಲ್ಲಿಂದ ಹಿಂದಿರುಗುವ ಬಹುಜೀವರು ಇರುತ್ತಾರೆ; ಅವರು ತಮತಮಗೆ ಯೋಗ್ಯವಾದ, ಜಲತೃಣಾದಿಗಳಿರುವ ಭೂಪ್ರದೇಶದಲ್ಲಿ ಬೀಳುತ್ತಾರೆ; ಅಲ್ಲಿಂದ ಮುಂದೆ, ಫಲ, ಸಸ್ಯ,

---

1. ಸೂರ್ಯಚಂದ್ರಾದಿ ಗ್ರಹಗಳೂ ನಕ್ಷತ್ರ ಸಮೂಹಗಳೂ ಧ್ರುವ (ನಕ್ಷತ್ರ)ವನ್ನು ಸುತ್ತುತ್ತವೆಂಬಂಶವೂ ಆಗಮಗಳಲ್ಲಿ ಸಹ ಉಕ್ತವಾಗಿದೆ. ಧ್ರುವನಲ್ಲಿ ಕೇಂದ್ರೀಕೃತವಾದ ವಾಯುಪಾಶಗಳಿಂದ ಇವುಗಳ ಗತಿಯು (ಗಗನಸಂಚಾರವು) ನಿಯಂತ್ರಿತವೆಂದೂ ಹೇಳಲಾಗಿದೆ. ಈ ಗ್ರಹನಕ್ಷತ್ರಾದಿಗಳ ಪರಸ್ಪರ ಗುರುತ್ವಾಕರ್ಷಕ ಶಕ್ತಿವಿಶೇಷಗಳನ್ನೇ ವಾಯುಪಾಶಗಳೆಂದು ನಿರೂಪಿಸಲಾಗಿದೆ, ಎಂದು ವಿಮರ್ಶೆಯಿಂದ ತಿಳಿಯಬರುತ್ತದೆ; ಈ ವಾಯುಪಾಶಗಳೆಂಬುವು, ವಿವಹ, ಪ್ರವಹ, ಪರಾವಹ, ಇತ್ಯಾದಿ ನಾಮಗಳಿಂದ ನಿರ್ದೇಶಿಸಲ್ಪಟ್ಟಿವೆ.

(ಪ್ರಕಾಶಿಸುವ ಶಕಲದಂತಾಗಿ) ಕೆಳಗೆ ಬೀಳುವ ಶಿಲೆಯ ತುಂಡಿನಂತೆ, (ಶಕಲವನ್ನಾಶ್ರಯಿಸಿ), ದೃಶ್ಯತೇ-(ಭೂವಾಸಿಗಳಿಂದ) ಕಾಣಲ್ಪಡುತ್ತಾನೆ; ಶಕಲೇ ಶಕಲೇ-ಪ್ರತಿ ಶಕಲದಲ್ಲಿಯೂ, ಯೇ-ಯಾವ, ಅನೇಕೇ-ಬಹುಸಂಖ್ಯೆಯ, ಜೀವಾಃ-ಜೀವರು, ವ್ಯವಸ್ಥಿತಾಃ-ಇರುವರೋ, ತೇ ಸರ್ವೇ-ಅವರೆಲ್ಲರೂ, ಸ್ಥಾನೇಸ್ಥಾನೇ-ತಮತಮಗೆ (ಯೋಗ್ಯವಾದ) ಸ್ಥಾನಗಳಾದ, ಅಪ್ಸು-ಜಲದಲ್ಲಿ ತೃಣಾದಿಷು-ಹುಲ್ಲುಮೊದಲಾದವುಗಳಲ್ಲಿ, ಪತಂತಿ-ಬೀಳುತ್ತಾರೆ; ತತಃ-ಅನಂತರ, ಕ್ರಮಾತ್-ಕ್ರಮವಾಗಿ, ಫಲೇಷು-ಹಣ್ಣುಗಳಲ್ಲಿ ಓಷಧಿಧಾನ್ಯಾದೌ-ವನಸ್ಪತಿ, ಧಾನ್ಯಾದಿಗಳಲ್ಲಿಯೂ, ಪಿತ್ರಾದಿಷು-ತಂದೆ ಮುಂತಾದ ಪುರುಷರಲ್ಲಿಯೂ, ಸ್ವಸ್ವಕರ್ಮವಶಾತ್-ತಂತಮ್ಮ ಕರ್ಮವಶರಾಗಿ (ಕರ್ಮಾನುಸಾರವಾದ ಯೋನಿಗಳನ್ನು ಹೊಂದಲಿಕ್ಕಾಗಿ), ಸ್ವಾನ್ನಪಾನಾದಿ ದ್ವಾರತಃ-(ಆ ಪಿತ್ರಾದಿಗಳ) ಅನ್ನಪಾನಾದಿಗಳ ದ್ವಾರಾ, ಅಖಿಲಾಃ-ಸಮಸ್ತರೂ, ಪ್ರವಿಷ್ಟಾಃ-ಪ್ರವೇಶಿಸಿ, ಮಾತುಃ-(ನಂತರ ಪಿತೃರೇತೋದ್ವಾರಾ) ತಾಯಿಯ, ಉದರೇ-ಗರ್ಭದಲ್ಲಿ (ಪ್ರವಿಷ್ಟಾಃ-ಪ್ರವೇಶಿಸುವವರಾಗುತ್ತಾರೆ); ಪ್ರಾಯಃ-ಬಹುವಾಗಿ, ತೇ ನರಾಃ-ಈ ಪುರುಷರೆಲ್ಲರೂ (ಮನುಷ್ಯದೇಹದಲ್ಲಿ ಜನಿಸುವ ಈ ಎಲ್ಲರೂ), ಸದ್ಗುಣಾಃ-ಸದ್ಗುಣವಂತರಾಗಿ, ಅಸ್ಮಿನ್-ಈ, ಭೂಮಿಲೋಕೇ-ಭೂಲೋಕದಲ್ಲಿ ಸ್ವಕರ್ಮ-ಫಲ ಭೋಗಿನಃ-ತಮ್ಮ ಕರ್ಮಫಲಗಳನ್ನು ಅನುಭವಿಸುವವರಾಗಿ, ಜಾಯಂತೇ-ಹುಟ್ಟುತ್ತಾರೆ.

**ಏತನ್ಮಂಡಲಮರ್ಕಸ್ಯ ಮಹಾಮಾನಂ ಪ್ರಕೀರ್ತಿತಂ ।**
**ಅತ್ರ ಸಿಂಹಾಸನೇ ದಿವ್ಯೇ ಪದ್ಮಸಂಸ್ಥೋ ದಿವಾಕರಃ ॥ ೧೦ ॥**
**ಉಪಾಸ್ಯತೇ ದೇವಗಣೈಃ ಪುಣ್ಯವದ್ಭಿಸ್ತಥಾ ನರೈಃ ।**
**ಸಿದ್ಧಗಂಧರ್ವವಿದ್ಯಾಧ್ರಾ, ನಾನಾಕೌತುಕಕಾರಿಣಃ ॥ ೧೧ ॥**

---

ಧಾನ್ಯಾದಿಗಳ ದ್ವಾರಾ, ಆ ಎಲ್ಲರೂ, ಅನ್ನಪಾನಾದಿಗಳೊಂದಿಗೆ, ತಂತಮ್ಮ ಕರ್ಮಾನುಸಾರವಾಗಿ, ತಂತಮ್ಮ ಪಿತೃದೇಹವನ್ನು ಪ್ರವೇಶಿಸುತ್ತಾರೆ; ಈ ಕ್ರಮದಿಂದ ಪಿತೃದೇಹವನ್ನು ಹೊಂದಿದ ಆ ಜೀವರು, (ಮುಂದೆ ರೇತೋದ್ವಾರಾ) ಮಾತೃಗರ್ಭವನ್ನು ಪ್ರವೇಶಿಸುತ್ತಾರೆ; ಪ್ರಾಯಃ ಇವರೆಲ್ಲರೂ ಸದ್ಗುಣವಂತರಾಗಿ, ಈ ಭೂಲೋಕದಲ್ಲಿ ಸ್ವಕರ್ಮ ಫಲಭೋಗಕ್ಕಾಗಿ (ಮುಂದಿನ ತಮ್ಮ ಗತಿಸಾಧನೆಗಾಗಿ ಸಹ) ಹುಟ್ಟುತ್ತಾರೆ (೮-೯). ಪ್ರತ್ಯಕ್ಷಗೋಚರವಾದ ಸೂರ್ಯಮಂಡಲ ಬಹುವಿಸ್ತಾರವಾದುದೆಂದು ಹೇಳಲಾಗುತ್ತದೆ; ಅಲ್ಲಿ ಸೂರ್ಯದೇವನು, ದಿವ್ಯ ಸಿಂಹಾಸನದಲ್ಲಿ ಕಮಲದ ಮೇಲೆ ಕುಳಿತು, ದೇವತಾ ಸಮೂಹಗಳಿಂದಲೂ, ಪುಣ್ಯದಿಂದ ಆ ಲೋಕಕ್ಕೆ ಪ್ರಾಪ್ತರಾಗಿರುವ ಮನುಷ್ಯರಿಂದಲೂ, ಸೇವಿಸಲ್ಪಡುತ್ತಾನೆ; ಅನೇಕ ಸಿದ್ಧ ಗಂಧರ್ವ, ವಿದ್ಯಾಧರರು, ಬಹು ವಿಚಿತ್ರ ಕರ್ಮಗಳಿಂದ, ಸೂರ್ಯನನ್ನು ಉಪಾಸಿಸುತ್ತಾರೆ; ಸೂರ್ಯಲೋಕವು,

ಪ್ರಾಸಾದೋದ್ಯಾನ ವಾಪೀಭಿರ್ಹಿರಣ್ಮಮಣಿಮೂರ್ತಿಭಿಃ ।
ಅಟ್ಟಾಟ್ಟಾಲಕರಥ್ಯಾಭಿಃ ಕುಟ್ಟಿಮೈಃ ಕೃತಮೂರ್ತಿಭಿಃ ॥ ೧೨ ॥
ಭ್ರಾಜಮಾನಂ ಪುಣ್ಯವದ್ಭಿರ್ನರೈಃ ಸಮ್ಯಗಧಿಷ್ಠಿತಂ ।
ಕೇಚಿತ್ಕ್ರೀಡಂತಿ ಗಾಯಂತಿ ಭಕ್ಷಂತಿ ಚ ಹಸಂತಿ ಚ ॥ ೧೩ ॥
ಭುಂಜಾನಾ ವಿವಿಧಾನ್ ಭೋಗಾನ್ ಪುಣ್ಯಕರ್ಮಭಿರಾರ್ಜಿತಾನ್ ।
ಪುಣ್ಯಾನುಸಾರಿಫಲಭುಕ್ ಪುಣ್ಯಭೋಗಾತ್ ಪತತ್ಯಧಃ ॥ ೧೪ ॥

ಏತತ್-ಈ(ಪ್ರತ್ಯಕ್ಷಕ್ಕೆ ಕಾಣುವ), ಅರ್ಕಸ್ಯ-ಸೂರ್ಯನ, ಮಂಡಲಂ-ಮಂಡಲವು, ಮಹಾಮಾನಂ-ಅತ್ಯಧಿಕ ಪ್ರಮಾಣವುಳ್ಳದ್ದೆಂದು (ಬಹು ದೊಡ್ಡ-ವಿಸ್ತಾರದ ಮಂಡಲವೆಂದು), ಪ್ರಕೀರ್ತಿತಂ-ಹೇಳಲ್ಪಡುತ್ತದೆ; ಅತ್ರ-ಇಲ್ಲಿ ದಿವ್ಯೇ ಸಿಂಹಾಸನೇ-ಲೋಕವಿಲಕ್ಷಣವಾದ ಸಿಂಹಾಸನದಲ್ಲಿ ದಿವಾಕರಃ-ಸೂರ್ಯದೇವನು, ಪದ್ಮಸಂಸ್ಥಃ-ಕಮಲದಲ್ಲಿ ಕೂತು, ದೇವಗಣೈಃ-ದೇವಸಮೂಹಗಳಿಂದ, ತಥಾ-ಮತ್ತು ಪುಣ್ಯವದ್ಭಿಃ-ಪುಣ್ಯವಂತರಾದ, ನರೈಃ-ಮನುಷ್ಯರಿಂದಲೂ, ಉಪಾಸ್ಯತೇ-ಸೇವಿಸಲ್ಪಡುತ್ತಾನೆ; ಸಿದ್ಧಗಂಧರ್ವವಿದ್ಯಾಧ್ರಾಃ-ಸಿದ್ಧರು, ಗಂಧರ್ವರು ಮತ್ತು ವಿದ್ಯಾಧರರು, ನಾನಾ ಕೌತುಕಕಾರಿಣಃ-ವಿವಿಧ ಆಶ್ಚರ್ಯಕರವಾದ ಕರ್ಮಗಳನ್ನು ಮಾಡುವವರಾಗುತ್ತಾರೆ; ಪ್ರಾಸಾದೋದ್ಯಾನ ವಾಪೀಭಿಃ-ಉಪ್ಪರಿಗೆಯುಳ್ಳ ಗೃಹಗಳು, ಉದ್ಯಾನಗಳು ಮತ್ತು ಭಾವಿಗಳಿಂದಲೂ, ಹಿರಣ್ಮಮಣಿಮೂರ್ತಿಭಿಃ-ಸುವರ್ಣ ರತ್ನಾದಿರಚಿತ ಪ್ರತಿಮೆಗಳಿಂದಲೂ, ಅಟ್ಟಾಟ್ಟಾಲಕರಥ್ಯಾಭಿಃ-ಎತ್ತರವಾದ ಪ್ರಾಸಾದಗಳಿಂದ ಶೋಭಿಸುವ ರಾಜಬೀದಿಗಳಿಂದಲೂ, ಕುಟ್ಟಿಮೈಃ-ಸುತ್ತ ನೆಲಕಟ್ಟಿರುವ,ಕೃತಮೂರ್ತಿಭಿಃ-ಸುಂದರ ವಿಗ್ರಹಗಳಿಂದಲೂ, ಭ್ರಾಜಮಾನಂ-(ಸೂರ್ಯಮಂಡಲವು-ಆ ಲೋಕವು) ಶೋಭಿಸುವುದು (ಆಗಿದೆ); ಪುಣ್ಯವದ್ಭಿಃ-ಪುಣ್ಯವಂತರಾದ, ನರೈಃ-ಮನುಷ್ಯರಿಂದ, ಸಮ್ಯಕ್-ಚೆನ್ನಾಗಿ (ಪೂರ್ಣವಾಗಿ), ಅಧಿಷ್ಠಿತಂ-ಆಶ್ರಯಿಸಲ್ಪಟ್ಟದ್ದು; ಕೇಚಿತ್-(ಪುಣ್ಯದಿಂದ ಅಲ್ಲಿಗೆ ಬಂದಿರುವ ಜೀವರಲ್ಲಿ) ಕೆಲವರು, ಕ್ರೀಡಂತಿ-ವಿಹಾರ

---

ಪುಣ್ಯವಂತರಾದ ಬಹುಪ್ರಜೆಗಳಿಂದ ಆಶ್ರಯಿಸಲ್ಪಟ್ಟು ಪರಮ ಶೋಭಾಯಮಾನವಾಗಿದೆ; ನಾನಾ ಪ್ರಾಸಾದಗಳು, ಉದ್ಯಾನಗಳು, ಬಾವಿಗಳು, ಸುವರ್ಣರತ್ನಗಳಿಂದ ನಿರ್ಮಿತವಾದ ಪುತ್ಥಳಿಗಳಿಂದಲೂ, ದೊಡ್ಡ ದೊಡ್ಡ ಅರಮನೆಗಳುಳ್ಳ ರಾಜಬೀದಿಗಳಿಂದಲೂ, ಸುತ್ತಲೂ (ಹವಳ ಸ್ಫಟಿಕಾದಿ) ಘಟ್ಟಿತ ಭೂಮಿಯುಳ್ಳ ದಿವ್ಯ ಪ್ರತಿಮೆಗಳಿಂದಲೂ, ಶೋಭಿಸುತ್ತದೆ; ಅಲ್ಲಿರುವ ಪ್ರಜೆಗಳು, ಸ್ವಪುಣ್ಯ ಕರ್ಮಗಳಿಂದ ಅರ್ಜಿತವಾದ, ಪುಣ್ಯಾನುಸಾರವಾದ ಬಹುಪ್ರಕಾರದ ಭೋಗವಿಶೇಷಗಳನ್ನು ಭೋಗಿಸುತ್ತಾರೆ; ಅಲ್ಲಿರುವ ಪುಣ್ಯಪುರುಷನು, ಭೋಗದಿಂದ ತನ್ನ ಪುಣ್ಯವು ಮುಗಿದ

ಮಾಡುತ್ತಾರೆ; ಗಾಯಂತಿ-ಗಾನ ಮಾಡುತ್ತಾರೆ; ಭಕ್ಷಂತಿ-(ಅಪೇಕ್ಷಿತ ಆಹಾರಗಳನ್ನು) ಭಕ್ಷಿಸುತ್ತಾರೆ; ಹಸಂತಿ ಚ-(ಸದಾ) ಹಸನ್ಮುಖಿಗಳಾಗಿರುತ್ತಾರೆ (ದುಃಖರಹಿತ ರಾಗಿರುತ್ತಾರೆ); ಪುಣ್ಯಕರ್ಮಭಿಃ-(ತಂತಮ್ಮ) ಪುಣ್ಯಕರ್ಮಗಳಿಂದ, ಆರ್ಜಿತಾನ್-ಸಂಪಾದಿತವಾದ, ವಿವಿಧಾನ್-ಬಹುಪ್ರಕಾರದ, ಭೋಗಾನ್-ಸುಖವಿಶೇಷಗಳನ್ನು ಭುಂಜಾನಾಃ-ಅನುಭವಿಸುವವರು (ಆಗಿರುತ್ತಾರೆ); ಪುಣ್ಯಾನುಸಾರಿ ಫಲಭುಕ್-ಪುಣ್ಯಾನುಸಾರವಾದ ಫಲಭೋಗವುಳ್ಳ (ಆ ಲೋಕವನ್ನು ಹೊಂದಿದ) ಪುಣ್ಯ ಜೀವಿಯು, ಪುಣ್ಯಭೋಗಾತ್-ಪುಣ್ಯಭೋಗದನಂತರ (ಪುಣ್ಯ ಭೋಗದಿಂದ ಮುಗಿಯಲು), ಅಧಃ-ಕೆಳಗೆ (ಕೆಳಗಿನ ಲೋಕಗಳಿಗೆ), ಪತತಿ-ಬೀಳುತ್ತಾನೆ.

**ತಾದೃಶಂ ಮಂಡಲಂ ಭಾಸ್ವದ್ಭಾಸ್ಕರಸ್ಯ ಮಹಾತ್ಮನಃ ।**

**ರಥಾರೂಢಂ ಭ್ರಮತ್ಯೇತದನಿಶಂ ಕೇಶವಾಜ್ಞಯಾ ॥ ೧೫ ॥**

ಮಹಾತ್ಮನಃ-ಮಹಾತ್ಮನಾದ, ಭಾಸ್ಕರಸ್ಯ-ಸೂರ್ಯದೇವನ, ಭಾಸ್ವಾತ್-ಪ್ರಕಾಶಿಸುವ, ಮಂಡಲಂ-ಮಂಡಲವು ತಾದೃಶಂ-ಹಾಗಿರುತ್ತದೆ; ರಥಾರೂಢಂ-ರಥದ ಮೇಲಿದ್ದು ಏತತ್-ಈ ಮಂಡಲವು, ಕೇಶವಾಜ್ಞಯಾ-ಶ್ರೀವಿಷ್ಣುವಿನ ಆಜ್ಞೆಯಿಂದ, ಅನಿಶಂ-ನಿತ್ಯವೂ, ಭ್ರಮತಿ-(ಮೇರುಪರ್ವತವನ್ನು ಪ್ರದಕ್ಷಿಣಾಕಾರವಾಗಿ) ಸುತ್ತುತ್ತದೆ.

**ಯಥಾ ನಾವಿ ಸಮಾರೂಢೋ ಲೋಕೇ ಕ್ರೀಡಾಂ ನಿಜೇಚ್ಛಯಾ ।**

**ನ ವೇತ್ತಿ ಗಮನಂ ಕಿಂಚಿತ್ ಮಂಡಲಸ್ಥಸ್ತಥಾಜನಃ ॥ ೧೬ ॥**

ನಿಜೇಚ್ಛಯಾ-ಸ್ವೇಚ್ಛೆಯಿಂದ, ಲೋಕೇ-ಜಗತ್ತಿನಲ್ಲಿ, ಕ್ರೀಡಾಂ-ಕ್ರೀಡೆಯನ್ನು (ಮಾಡುವವನಾಗಿ), ನಾವಿ ಸಮಾರೂಢಃ-ಹಡಗಿನಲ್ಲಿ ಕೂತು, ಯಥಾ-ಹೇಗೆ, ಗಮನಂ-(ಹಡಗಿನ) ಗಮನವನ್ನು (ಸಂಚರಿಸುತ್ತಿರುವುದೆಂಬುದನ್ನು), ಕಿಂಚಿತ್-ಸ್ವಲ್ಪವನ್ನೂ, ನ ವೇತ್ತಿ-ತಿಳಿಯುವುದಿಲ್ಲವೋ, ತಥಾ-ಹಾಗೆ, ಮಂಡಲಸ್ಥಃ-ಸೂರ್ಯಮಂಡಲದಲ್ಲಿರುವ, ಜನಃ-ಜನವೂ, (ಸೂರ್ಯಮಂಡಲವು ವೇಗದಿಂದ ಸಂಚರಿಸುವುದನ್ನು ತಿಳಿಯುವುದಿಲ್ಲ).

---

ಒಡನೆಯೇ, ಕೆಳಗಿನ ಲೋಕಗಳಿಗೆ (ಭೂಲೋಕಕ್ಕೆ) ಬೀಳುತ್ತಾನೆ (೧೦-೧೪). ಮಹಾತ್ಮನಾದ ಸೂರ್ಯದೇವನ, ಹೀಗೆ ಪ್ರಕಾಶಿಸುವ, ಮಂಡಲವು, ಶ್ರೀವಿಷ್ಣುವಿನ ಆಜ್ಞೆಯಿಂದ, ರಥದ ಮೇಲಿದ್ದು ನಿತ್ಯವೂ ಸುತ್ತುತ್ತದೆ; (ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುತ್ತದೆ) (೧೫). ಹೀಗೆ, ಮಂಡಲವು ವೇಗದಿಂದ ಸಂಚರಿಸುತ್ತಿದ್ದರೂ, ಅಲ್ಲಿರುವ ಜನಸಮೂಹವು, ಸ್ವೇಚ್ಛೆಯಿಂದ, ಲೀಲೆಗಾಗಿ, ಹಡಗನ್ನೇರಿ ಕೂತ ಮನುಷ್ಯನು, ಹಡಗಿನ ಸಂಚಾರವನ್ನು (ಚಲಿಸುವುದನ್ನು) ಹೇಗೆ ಗಮನಿಸುವುದಿಲ್ಲವೋ (ತಿಳಿಯುವುದಿಲ್ಲವೋ), ಹಾಗೆ ಸೂರ್ಯರಥದ ವೇಗವಾದ ಸಂಚಾರವನ್ನು ತಿಳಿಯುವುದಿಲ್ಲ (೧೬). ಸೂರ್ಯಗ್ರಹಣ ಕಾಲದಲ್ಲಿ ಮತ್ತು ಕುರುಕ್ಷೇತ್ರದಲ್ಲಿ

ರವಿಗ್ರಹೇ ಕುರುಕ್ಷೇತ್ರೇ ಯೇ ಮಹಾದಾನಕಾರಿಣಃ ।
ಯೇ ಚ ಸ್ವಸ್ವಾಮಿಕಾರ್ಯೇಷು ಗವಾರ್ಥೇ ವಿಪ್ರಕಾರಣೇ ॥ ೧೭ ॥
ದೇಹಂ ತ್ಯಜಂತಿ ಯಾ ನಾರ್ಯಃ ಪತಿನಾ ಸಹ ಯಾಂತಿ ವಾ ।
ಅಶ್ವದಾಶ್ಚಾಗ್ನಿಶುಶ್ರೂಷಾನಿರತಾ ಯೇ ಚ ಜಂತವಃ ॥ ೧೮ ॥
ಉಪಾಸಕಾಶ್ಚ ಗಾಯತ್ರ್ಯಾ ವೇದಾಧ್ಯಾಯರತಾಶ್ಚ ಯೇ ।
ಸಂಕ್ರಾಂತೌ ದಾನಕರ್ತಾರಃ ಇತ್ಯಾದ್ಯಾಃ ಪುಣ್ಯಭಾಗಿನಃ ॥ ೧೯ ॥
ತೇಜೋಮಯಶರೀರಾಸ್ತೇ ಯಥಾ ಪುಣ್ಯಫಲಂ ಜನಾಃ ।
ದೇಶಕಾಲನಿಯತ್ಯಾ ತೇ ಭೋಗವಂತಃ ಕ್ರಮೇಣ ಚ ॥ ೨೦ ॥
ಸೂರ್ಯಲೋಕೇ ವಸಂತ್ಯೇತೇ ಭುಕ್ತಪುಣ್ಯಾಃ ಪತಂತ್ಯಧಃ ।

ಸೂರ್ಯಲೋಕವನ್ನು ಹೊಂದುವ ಪುಣ್ಯವಂತರನ್ನು ನಿರ್ದೇಶಿಸುತ್ತಾರೆ: ರವಿಗ್ರಹೇ-ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರೇ-ಕುರುಕ್ಷೇತ್ರದಲ್ಲಿ (ಅಥವಾ ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ), ಯೇ-ಯಾರು, ಮಹಾದಾನಕಾರಿಣಃ-ಮಹಾದಾನಗಳನ್ನು ಮಾಡುವರೋ, ಚ-ಮತ್ತು ಯೇ-ಯಾರು, ಸ್ವಸ್ವಾಮಿ ಕಾರ್ಯೇಷು-ತಮ್ಮ ಸ್ವಾಮಿಕಾರ್ಯಗಳಲ್ಲಿ (ತದರ್ಥವಾಗಿ), ಗವಾರ್ಥೇ-ಗೋವಿಗೋಸ್ಕರ (ಗೋ ರಕ್ಷಣೆಗಾಗಿ), ವಿಪ್ರಕಾರಣೇ-ಬ್ರಾಹ್ಮಣರಿಗಾಗಿ, ದೇಹಂ-ದೇಹವನ್ನು ತ್ಯಜಂತಿ-ಬಿಡುವರೋ; ವಾ-ಮತ್ತು ಯಾಃ-ಯಾವ, ನಾರ್ಯಃ-ಸ್ತ್ರೀಯರು, ಪತಿನಾ ಸಹ-ಪತಿಯೊಂದಿಗೆ, ಯಾಂತಿ-ಪ್ರಯಾಣ ಮಾಡುವರೋ (ದೇಹವನ್ನು ಬಿಡುವರೋ—ಸಹಗಮನ ಮಾಡುವರೋ); ಚ-ಮತ್ತು ಅಶ್ವದಾಃ-ಅಶ್ವದಾನವನ್ನು (ಸತ್ಪಾತ್ರರಲ್ಲಿ) ಮಾಡಿದವರೂ, ಅಗ್ನಿಶುಶ್ರೂಷಾನಿರತಾಃ-ಅಗ್ನಿಸೇವೆಯಲ್ಲಿ ಆಸಕ್ತರಾದವರೂ (ನಿತ್ಯವೂ ಅಗ್ನಿಯನ್ನು ರಕ್ಷಿಸಿಕೊಂಡು, ಅದರಲ್ಲಿ

ಮಹಾದಾನ[1] ಗಳನ್ನು ಮಾಡಿದವರೂ, ಸ್ವಾಮಿಕಾರ್ಯವನ್ನು ಸಾಧಿಸುವುದರಲ್ಲಿ ಮತ್ತು ಗೋರಕ್ಷಣೆಯಲ್ಲಿ ಮತ್ತು ಬ್ರಾಹ್ಮಣರ ಹಿತಸಾಧನೆಯಲ್ಲಿ ದೇಹವನ್ನೇ ತ್ಯಜಿಸುವ ಪುರುಷರೂ, ಪತಿಯೊಂದಿಗೆ ಸಹಗಮನ ಮಾಡುವ ಸ್ತ್ರೀಯರೂ, ಅಶ್ವದಾನ ಮಾಡುವವರೂ, ನಿತ್ಯವೂ ಅಗ್ನಿಸೇವೆಯನ್ನಾಚರಿಸುವವರೂ, ಗಾಯತ್ರೀ ಮಂತ್ರೋಪಾಸಕರೂ, ವೇದಾಧ್ಯಯನದಲ್ಲಿ ಆಸಕ್ತರಾದವರೂ, ಸಂಕ್ರಮಣ ಪರ್ವಗಳಲ್ಲಿ ದಾನಗಳನ್ನು ಕೊಡುವವರೂ, ಈ ಮೊದಲಾದ ಪುಣ್ಯಭಾಗಿಗಳು,

1. ಗೋದಾನ, ಭೂದಾನ, ಸುವರ್ಣದಾನಗಳು ಮಹಾದಾನದಲ್ಲಿ ಸೇರುತ್ತವೆ; ವಿವಿಧ ದಾನಗಳು, ಅವುಗಳ ದಾನವಿಧಿಗಳು ಮತ್ತು ದೊರೆಯುವ ಫಲಗಳು, ಸದೃಷ್ಟಾಂತವಾಗಿ ಮತ್ಸ್ಯಪುರಾಣದಲ್ಲಿ ವಿವರಿಸಲ್ಪಟ್ಟಿವೆ.

ಅಗ್ನಿಕಾರ್ಯಗಳನ್ನು ತಪ್ಪದೇ ನಡೆಸುವವರೋ), ಯೇ ಚ ಜಂತವಃ-ಯಾವ (ಅಲ್ಪರಾದ) ಮನುಷ್ಯರು, ಗಾಯತ್ರ್ಯಾಃ-ಗಾಯತ್ರೀ ಮಂತ್ರದ, ಉಪಾಸಕಾಃ-ಉಪಾಸಕರೋ (ಜಪಾನುಷ್ಠಾನವುಳ್ಳವರೋ), ಯೇ ಚ-ಮತ್ತು ಯಾರು, ವೇದಾಧ್ಯಾಯರತಾಃ-ವೇದಾಧ್ಯಯನದಲ್ಲಿ ಆಸಕ್ತರೋ, ಯೇ-ಯಾರು, ಸಂಕ್ರಾಂತೌ-ಸಂಕ್ರಮಣ (ಸೂರ್ಯಸಂಕ್ರಮಣ ಪರ್ವಕಾಲ)ಗಳಲ್ಲಿ ದಾನಕರ್ತಾರಃ-ದಾನಗಳನ್ನು ಮಾಡುವವರೋ, ಇತ್ಯಾದ್ಯಾಃ-ಈ ಮೊದಲಾದ, ಪುಣ್ಯಭಾಗಿನಃ-ಪುಣ್ಯಗಳಿಗೆ ಭಾಗಿಯಾದವರು (ಪಾತ್ರರಾದವರು-ಪುಣ್ಯವಂತರು), ತೇ ಜನಾಃ-ಆ ಜನರು, ತೇಜೋಮಯಶರೀರಾಃ-ತೇಜೋಮಯವಾದ (ತೇಜಃಪ್ರಚುರವಾದ) ದೇಹಗಳುಳ್ಳವರಾಗಿ, ಯಥಾ ಪುಣ್ಯಫಲಂ-(ತಂತಮ್ಮ) ಪುಣ್ಯ ಫಲಾನುಗುಣವಾಗಿ, ಭೋಗವಂತಃ-ಸುಖಭೋಗಗಳನ್ನು (ಹೊಂದುತ್ತಾರೆ); ತೇ-ಅವರು (ಆ ಪುಣ್ಯ ಪುರುಷರು), ದೇಶಕಾಲನಿಯತ್ಯಾ-ದೇಶ, ಕಾಲನಿಯಮಗಳನ್ನು ಅನುಸರಿಸಿ, ಚ-ಮತ್ತು ಕ್ರಮೇಣ-ತಾರತಮ್ಯಾನುಸಾರವಾಗಿ, (ಯಥಾ ಪುಣ್ಯಫಲಂ, ಭೋಗವಂತಃ-ಪುಣ್ಯಾನುಸಾರ ಭೋಗಗಳನ್ನು ಅನುಭವಿಸುತ್ತ), ಏತೇ-ಇವರೆಲ್ಲರೂ, ಸೂರ್ಯ ಲೋಕೇ-ಸೂರ್ಯಲೋಕದಲ್ಲಿ ವಸಂತಿ-ವಾಸ ಮಾಡುತ್ತಾರೆ; (ಏತೇ-ಇವರು) ಭುಕ್ತಪುಣ್ಯಾಃ-ಪುಣ್ಯವನ್ನು ಭೋಗದಿಂದ ಮುಗಿಸಿ, ಅಧಃ-ಕೆಳಗಿನ ಲೋಕಗಳಿಗೆ, ಪತಂತಿ-ಬರುತ್ತಾರೆ; (ಪುಣ್ಯವು ಮುಗಿಯಲು, ಪುಣ್ಯಶೇಷದಿಂದ ಭೂಲೋಕದಲ್ಲಿ ಹುಟ್ಟುತ್ತಾರೆ).

**ಕರ್ಮಶೇಷಾಸ್ತತೋ ನಾನಾ ದೇಹಗಾಃ ಕರ್ಮಕಾರಿಣಃ ॥ ೨೦ ॥**
**ಗತಿಂ ಕರ್ಮಾನುಸಾರೇಣ ಪುನರೇವ ಪ್ರಭುಂಜತೇ ।**

ತತಃ-ನಂತರ (ಸೂರ್ಯಲೋಕದಿಂದ ಕೆಳಗಿಳಿದು), ಕರ್ಮಶೇಷಾಃ-ಶೇಷಗಳುಳ್ಳ ಅವರು, ನಾನಾ ದೇಹಗಾಃ-ವಿವಿಧವಾದ ದೇಹಗಳನ್ನು ಹೊಂದಿ, ಕರ್ಮ ಕರ್ಮ ಕಾರಿಣಃ-(ಅಲ್ಲಿಯೂ) ಕರ್ಮಗಳನ್ನು ಮಾಡುವವರಾಗಿ, ಪುನಃ-ಏವ-ಮತ್ತೂ

ತೇಜೋ ಮಯಗಳಾದ ಶರೀರವನ್ನು ಹೊಂದಿ, ದೇಶಕಾಲಾನುಗುಣವಾದ ನಿಯಮ ಗಳಂತೆ, ತಂತಮ್ಮ ಪುಣ್ಯಗಳಿಗೆ ಯೋಗ್ಯವಾದ ಫಲಗಳನ್ನು ತಾರತಮ್ಯಾನು ಗುಣವಾಗಿ ಅನುಭವಿಸಲಿಕ್ಕೆ, ಸೂರ್ಯಲೋಕದಲ್ಲಿ ವಾಸಿಸುತ್ತಾರೆ; ಅಲ್ಲಿ ಭೋಗಿಸಲ್ಪಟ್ಟ ಪುಣ್ಯವುಳ್ಳವರಾಗಿ, (ಪುಣ್ಯವು ಸವೆದ ನಂತರ) ಅಲ್ಲಿಂದ ಕೆಳಗೆ ಬೀಳುತ್ತಾರೆ (೧೭-೨೦). ಆ ಜೀವರು, ಅವಶಿಷ್ಟವಾದ ಕರ್ಮದಿಂದ, ವಿವಿಧವಾದ ದೇಹಗಳನ್ನು ಹೊಂದಿ, ಅಲ್ಲಿಯೂ ನಾನಾ ಕರ್ಮಗಳನ್ನು ಮಾಡಿ, ಪುನಃ ಕರ್ಮಾನುಸಾರವಾದ ಗತಿಯನ್ನೇ ಹೊಂದಿ, ಕರ್ಮಾನುಗುಣವಾದ ಫಲವನ್ನು ಭೋಗಿಸುತ್ತಾರೆ (೨೦). ಹೀಗೆಯೇ, ಸೂರ್ಯಲೋಕದಂತೆಯೇ, ಚಂದ್ರ (ಸೋಮ)

ಸಹ, ಕರ್ಮಾನುಸಾರೇಣ-ಕರ್ಮಾನುಸಾರವಾಗಿ, ಗತಿಂ-ಸ್ಥಿತಿಯನ್ನು ಪ್ರಭುಂಜತೇ-ಅನುಭವಿಸುತ್ತಾರೆ.

ಏವಂ ಚಂದ್ರಸ್ಯ ಸೋಮಸ್ಯ ಬುಧಭಾರ್ಗವಯೋರಪಿ ॥ ೨೨ ॥
ಗುರೋಃ ಶನೇಶ್ಚ ಋಕ್ಷಾಣಾಂ ತಾರಕಾರೂಪಮಂಡಲೇ ।
ಬಹುಯೋಜನವಿಸ್ತೀರ್ಣೇ ನಾನಾಭೋಗಸಮನ್ವಿತೇ ॥ ೨೩ ॥
ನಾನಾಪುಣ್ಯಫಲಾ ಮರ್ತ್ಯಾ ಮೋದಂತೇ ತತ್ರ ಸಂಸ್ಥಿತಾಃ ।

ಏವಂ-ಹೀಗೆಯೇ (ಸೂರ್ಯಲೋಕದಂತೆಯೇ), ಸೋಮಸ್ಯ ಚಂದ್ರಸ್ಯ-ಸೋಮನಾಮಕನಾದ ಚಂದ್ರನ, ಅಪಿ-ಮತ್ತು, ಬುಧಭಾರ್ಗವಯೋಃ-ಬುಧ, ಶುಕ್ರಗಳ, ಗುರೋಃ-ಗುರುವಿನ, ಶನೇಃ-ಶನಿಯ, ಋಕ್ಷಾಣಾಂ-ನಕ್ಷತ್ರಗಳ, ತಾರಕಾರೂಪಮಂಡಲೇ-(ತಾರಕೆಗಳಂತಿರುವ-ಆಕಾಶದಲ್ಲಿ ಚುಕ್ಕೆಗಳಂತಿರುವ) ತಾರಕೆಗಳ ಸಮೂಹದಲ್ಲಿ ಬಹುಯೋಜನ ವಿಸ್ತೀರ್ಣೇ-ಬಹುಯೋಜನ ವಿಸ್ತಾರವುಳ್ಳ, ನಾನಾಭೋಗಸಮನ್ವಿತೇ-ವಿವಿಧ ಸುಖಭೋಗ ಸಾಮಗ್ರಿಗಳಿಂದ ಕೂಡಿದ, ಇವುಗಳಲ್ಲಿ (ಗ್ರಹನಕ್ಷತ್ರಾದಿಗಳಲ್ಲಿ), ನಾನಾ ಪುಣ್ಯಫಲಾಃ-ವಿವಿಧ ಪುಣ್ಯಫಲಭಾಗಿಗಳಾದ, ಮರ್ತ್ಯಾಃ-ಮನುಷ್ಯರು, ತತ್ರ ಸಂಸ್ಥಿತಾಃ-ಅಲ್ಲಿ ವಾಸಿಸುತ್ತ ಮೋದಂತೇ-ಸುಖಿಸುತ್ತಾರೆ.

ಅನ್ನದಾನರತಾ ಯೇ ಸ್ಯುರುಪಕಾರರತಾಶ್ಚ ಯೇ ॥ ೨೪ ॥
ಶ್ರಾದ್ಧಭಕ್ತಾಶ್ಚ ಗೋದಾನಾ ಜಲದಾಸ್ತಾಪಿ ಯೇ ಜನಾಃ ।
ಶಾಸ್ತ್ರಮೀಮಾಂಸಿಕಾಸಕ್ತಾಃ ಕವಯೋ ಯುದ್ಧಕೌಶಲಾಃ ॥ ೨೫ ॥
ನಾನಾಧಾತುಪ್ರದಾತಾರಃ ಸದ್ವೈದ್ಯಾ ಗಣಕಾಶ್ಚ ಯೇ ।
ಪತಿಶುಶ್ರೂಷಿಕಾ ನಾರ್ಯೋ ದೇವಗೋವಿಪ್ರಪೂಜಕಾಃ ॥ ೨೬ ॥

ಬುಧ, ಶುಕ್ರರ ಮತ್ತು ಗುರು, ಶನಿಗ್ರಹಗಳ ಮಂಡಲಗಳೂ, ಮತ್ತು ನಕ್ಷತ್ರಗಳ ಸಮೂಹಗಳೂ, ಮತ್ತು ತಾರಕೆಗಳಂತಿರುವ ಇತರ ಜ್ಯೋತಿರ್ಮಂಡಲಗಳೂ, ಬಹುಯೋಜನ ವಿಸ್ತೀರ್ಣವುಳ್ಳವುಗಳಾಗಿ, ನಾನಾ ಭೋಗಗಳಿಂದ ಕೂಡಿರುತ್ತವೆ[1] ಆ ಮಂಡಲಗಳಲ್ಲಿ (ಲೋಕಗಳಲ್ಲಿಯೂ) ಸಹ, ವಿವಿಧ ಪುಣ್ಯಫಲಗಳುಳ್ಳ ಮನುಷ್ಯರು (ಮನುಷ್ಯ ದೇಹದಿಂದ ಬಹು ಪುಣ್ಯವನ್ನು ಸಂಪಾದಿಸಿರುವ ಪುಣ್ಯವಂತರು), ವಾಸಿಸುತ್ತ ವಿವಿಧ ಸುಖಾನುಭವವನ್ನು ಪಡೆಯುತ್ತಾರೆ (೨೨-೨೩). ಅನ್ನದಾನದಲ್ಲಿಯೂ, ಪರೋಪಕಾರದಲ್ಲಿಯೂ ಆಸಕ್ತರಾದವರು; ಪಿತೃಶ್ರಾದ್ಧಗಳನ್ನು

1. ಗ್ರಹಗಳ ನಿರೂಪಣೆಯಲ್ಲಿ ಮಂಗಳಗ್ರಹವನ್ನು ಬಿಟ್ಟಿರುವುದನ್ನು ಗಮನಿಸಬೇಕು; ಇದರಿಂದ ಮಂಗಳ (ಕುಜನಲ್ಲಿ) ಗ್ರಹದಲ್ಲಿ ಪುಣ್ಯವಂತರ ವಾಸವಿಲ್ಲೆಂದು ಧ್ವನಿತವಾಗುತ್ತದೆ.

**ಕುಟುಂಬಪೋಷಕಾ ಯಾಶ್ಚ ತಾಶ್ಚೈತಲ್ಲೋಕಗಾಃ ಸ್ಮೃತಾಃ ।**

ಯೇ-ಯಾರು, ಅನ್ನದಾನರತಾಃ-ಅನ್ನದಾನದಲ್ಲಿ ಆಸಕ್ತಿಯುಳ್ಳವರು, ಸ್ಯುಃ-ಆಗಿರುವರೋ, ಚ-ಮತ್ತು ಯೇ-ಯಾರು, ಉಪಕಾರರತಾಃ- ಪರೋಪಕಾರದಲ್ಲಿ ಆಸಕ್ತರೋ, ಚ-ಮತ್ತು ಯೇ-ಜನಾಃ-ಯಾವ ಮನುಷ್ಯರು, ಶ್ರಾದ್ಧಭಕ್ತಾಃ-ಪಿತೃಶ್ರಾದ್ಧಕರ್ಮದಲ್ಲಿ ಆದರವುಳ್ಳವರೋ, ಗೋದಾನಾಃ-ಗೋದಾನವುಳ್ಳವರೋ (ಗೋದಾನ ಮಾಡುವವರೋ), ಜಲದಾಃ-ಜಲದಾನ ಮಾಡುವರೋ, ಶಾಸ್ತ್ರ ಮೀಮಾಂಸಿಕಾಸಕ್ತಾಃ-ಶಾಸ್ತ್ರವಿಮರ್ಶೆಯಲ್ಲಿ ಆಸಕ್ತರೋ, ಕವಯಃ-ಕವಿಗಳೋ, ಯುದ್ಧಕೌಶಲಾಃ-ಯುದ್ಧದಲ್ಲಿ ಕುಶಲರೋ, ನಾನಾ ಧಾತುಪ್ರದಾತಾರಃ-ವಿವಿಧ (ರೋಗಪರಿಹಾರಕ) ಮೂಲರಸಗಳನ್ನು ಕೊಡುವ, ಸದ್ವೈದ್ಯಾಃ-ವೈದ್ಯಶಾಸ್ತ್ರ ನಿಪುಣರೋ, ಯೇ-ಯಾರು, ಗಣಕಾಃ-ಜ್ಯೋತಿಷಜ್ಞರೋ, ಚ-ಮತ್ತು ಪತಿ ಶುಶ್ರೂಷಿಕಾಃ-ಪತಿಸೇವಾಸಕ್ತರಾದ, ನಾರ್ಯಃ-ಸ್ತ್ರೀಯರೋ, ದೇವಗೋವಿಪ್ರ ಪೂಜಕಾಃ-ದೇವ, ಗೋ, ಬ್ರಾಹ್ಮಣ ಪೂಜಕರೋ, ಯಾಶ್ಚ-ಯಾರಾದರೆ, ಕುಟುಂಬ ಪೋಷಕಾಃ-(ನ್ಯಾಯಮಾರ್ಗದಿಂದ) ಕುಟುಂಬವನ್ನು ಪೋಷಿಸುವರೋ, ತಾಶ್ಚ-ಈ ಎಲ್ಲರೂ, ತಲ್ಲೋಕಗಾಃ-ಆ ಲೋಕಗಳನ್ನು ಹೊಂದುವರೆಂದು, ಸ್ಮೃತಾಃ-ತಿಳಿಯ ಲ್ಪಟ್ಟಿರುವರು.

**ವಿವೇಕಕರ್ಮಣಾ ಕೇನ ಗತಯಾಶ್ಚಾಪ್ಯನೇಕಧಾ ॥ ೨೭ ॥**

**ಶಕ್ಯಂತೇ ಕಿಮು ವಕ್ತುಂ ತಾಃ ಕೋ ನಾಮ ಪುರುಷೋಽರ್ಹತಿ ।**

**ಏಕೋ ಹರಿರ್ವಿಜಾನಾತಿ ತದಾಜ್ಞಾನಿಯತೋ ಯಮಃ ॥ ೨೮ ॥**

**ಪ್ರಾಯೇಣೈವ ವಿಜಾನಾತಿ ತಥಾ ನಾನ್ಯೇ ವಿಜಾನತೇ ।**

ಕೇನ-ಯಾವ, ವಿವೇಕ ಕರ್ಮಣಾ ಚ-ಸತ್ಕರ್ಮದಿಂದಲೇ ಪ್ರತ್ಯೇಕವಾದ ಕರ್ಮದಿಂದ), ಅನೇಕಧಾ-ವಿವಿಧವಾದ, ಗತಯಶ್ಚ ಅಪಿ-ಈ ಸ್ಥಾನವಿಶೇಷಗಳು (ಈ ವಿವಿಧ ಲೋಕವಾಸಗಳು), ಶಕ್ಯಂತೇ-ಹೊಂದಲು ಸಾಧ್ಯವಾಗುತ್ತವೆ, ತಾಃ-ಅವು

---

ಭಕ್ತಿಯಿಂದ ಆಚರಿಸುವವರು; ಗೋದಾನ ಜಲದಾನಗಳನ್ನು ಮಾಡುವವರು; ಶಾಸ್ತ್ರಮೀಮಾಂಸೆಯಲ್ಲಿ (ವಿಮರ್ಶೆಯಲ್ಲಿ) ಆಸಕ್ತರು; ಕವಿಗಳು (ಛಂದೋಬದ್ಧ ಪ್ರಬಂಧಗಳನ್ನು ರಚಿಸುವ ಸಾಹಿತಿಗಳು); ಯುದ್ಧ ಕಲಾನಿಪುಣರು; ವಿವಿಧ ರಸ, ಮೂಲಿಕೆ ಮೊದಲಾದವುಗಳಿಂದ ರೋಗಗಳನ್ನು ಪರಿಹರಿಸುವ ವೈದ್ಯರು; ಜ್ಯೋತಿಷಜ್ಞರು; ಪತಿಸೇವಾಪರಾಯಣರಾದ ಸ್ತ್ರೀಯರು; ದೇವಬ್ರಾಹ್ಮಣ ಗೋಪೂಜೆಯಲ್ಲಿ ಆಸಕ್ತಿಯುಳ್ಳವರು; ಧರ್ಮಮಾರ್ಗದಿಂದ ಕುಟುಂಬವನ್ನು ಪೋಷಿಸುವವರು; ಈ ಎಲ್ಲ ಪುಣ್ಯಜೀವರು, ಈ ಲೋಕಗಳನ್ನು ಹೊಂದುವರೆಂದು ತಿಳಿಯಲ್ಪಟ್ಟಿರುವರು (೨೪-೨೬). ಇವರಲ್ಲಿ ಯಾರು ಯಾರು, ಪ್ರತ್ಯೇಕವಾದ ಯಾವ

ಗಳನ್ನು, ಕಿಮು-ಎಂಬುದನ್ನು, ವಕ್ತುಂ-ಹೇಳಲು, ಕೋ ನಾಮ ಪುರುಷಃ-ಯಾವ ಪುರುಷನು, ಅರ್ಹತಿ-ಶಕ್ತನಾಗುವನು? (ಯಾರೂ ಇಂಥ ಸತ್ಕರ್ಮದಿಂದ, ಇಂಥ ಲೋಕದ ಪ್ರಾಪ್ತಿ ಎಂದು ವಿವೇಕಿಸಿ ತಿಳಿಯುವುದು ಸಾಧ್ಯವಿಲ್ಲ); ಹರಿಃ-ಶ್ರೀಹರಿಯು, ಏಕಃ-ಒಬ್ಬನೇ, ವಿಜಾನಾತಿ-(ಈ ಎಲ್ಲವನ್ನು) ತಿಳಿಯುತ್ತಾನೆ; ತದಾಜ್ಞಾನಿಯತಃ-ಶ್ರೀಹರಿಯ ಆಜ್ಞೆಗೆ ಒಳಪಟ್ಟ, ಯಮಃ-ಯಮದೇವನು, ಪ್ರಾಯೇಣ ಏವ-ಬಹುಶಃ-(ಇತರ ದೇವತೆಗಳಿಕ್ಕಿಂತ ಅಧಿಕವಾಗಿ-ಸ್ವಾವರರಗಿಂತ ಹೆಚ್ಚಾಗಿ), ವಿಜಾನಾತಿ-ತಿಳಿಯುತ್ತಾನೆ; ತಥಾ-ಹಾಗೇ, ಅನ್ಯೇ-ಇತರರು, ನ ವಿಜಾನತೇ- ತಿಳಿಯುವುದಿಲ್ಲ.

**ದೇಶತಃ ಸುಸ್ಥಿರಾ ಲೋಕಾಃ ಕಾಲತಶ್ಚಂಚಲಾಃ ಪುನಃ ॥ ೨೯ ॥**
**ಭೂಲೋಕಾತ್ ಸಪ್ತಲೋಕಾಸ್ತು ಯಾವತ್ತಾವತ್ ಪ್ರಕೀರ್ತಿತಾಃ ।**
**ಪಾತಾಲಾನಿ ಚ ಸಪ್ತಾನಿ ಭೂಲೋಕವಿವರತ್ವತಃ ॥ ೩೦ ॥**
**ಭೂಲೋಕ ಏವ ತತ್ರಾಪಿ ವ್ರಜಂತೇ ಪುಣ್ಯಕರ್ಮಣಾ ।**

ಭೂಲೋಕಾತ್ ಯಾವತ್-ಭೂಲೋಕದಿಂದ ಆರಂಭಿಸಿ, ಸಪ್ತಲೋಕಾಃ ತಾವತ್-ಏಳು ಲೋಕಗಳವರೆಗೆ, ದೇಶತಃ-ದೇಶದಿಂದ, ಸುಸ್ಥಿರಾಃ-ಸ್ಥಿರವಾದ (ದೀರ್ಘಕಾಲವಿರುವ), ಲೋಕಾಃ-ಲೋಕಗಳು; ಪುನಃ-ಮತ್ತು (ಅದರ), ಕಾಲತಃ-ಕಾಲದಿಂದ, ಚಂಚಲಾಃ-ಅಸ್ಥಿರವಾದವುಗಳು; ಪಾತಾಲಾನಿ-ಪಾತಾಲ ಲೋಕವೇ ಮೊದಲಾದ, ಸಪ್ತಾನಿ ಚ-ಏಳು ಲೋಕಗಳೂ, ಭೂಲೋಕ ವಿವರತ್ವತಃ-ಭೂಲೋಕದ ವಿವರಗಳಾದ್ದರಿಂದ (ಭೂಮಿಯಲ್ಲಿ ವಿವಿಧ ಹಂತಗಳಲ್ಲಿರುವ ಭೂವಿವರಗಳಾದ್ದರಿಂದ), ಭೂಲೋಕಃ ಏವ-ಭೂಲೋಕವೇ (ಭೂಲೋಕ ಪ್ರಭೇದಗಳೇ), ತತ್ರಾಪಿ-ಆ ಲೋಕಗಳಲ್ಲಿಯೂ, ಪುಣ್ಯಕರ್ಮಣಾ-ಪುಣ್ಯ ಕರ್ಮದಿಂದ ವ್ರಜಂತೇ-ಹೊಂದಿ ವಾಸಿಸುತ್ತಾರೆ.

---

ಯಾವ ಸತ್ಕರ್ಮಗಳಿಂದ, ವಿವಿಧ ಲೋಕಗಳಲ್ಲಿ, ಯಾವ ಲೋಕವನ್ನು ಹೊಂದುತ್ತಾರೆಂದು ವಿವೇಕಿಸಿ, ತಿಳಿಯಲು ಯಾರೂ ಶಕ್ತರಲ್ಲ; ಶ್ರೀಹರಿಯ ಆಜ್ಞೆಯಿಂದ ನಿಯತನಾದ (ಸ್ವಕರ್ಮಾನುಸಾರವಾದ ಸ್ಥಾನಗಳನ್ನು ಕಲ್ಪಿಸುವ ಕಾರ್ಯದಲ್ಲಿ ಆಜ್ಞಪ್ತನಾಗಿ ಕೆಲಸಮಾಡುವ) ಯಮದೇವನು ಪ್ರಾಯಃ ಎಲ್ಲರಗಿಂತ ಹೆಚ್ಚಾಗಿ ಈ ವಿವರಗಳನ್ನು ತಿಳಿಯುತ್ತಾನೆ; ಅವನಂತೆ ಬೇರೆ ಯಾರೂ ತಿಳಿಯರು (೨೭-೨೮). ದೇಶತಃ ದೀರ್ಘಕಾಲ (ಮಹಾಪ್ರಲಯಪರ್ಯಂತ) ಇರುವ ಲೋಕಗಳಾದರೂ, ಕಾಲತಃ ಚಂಚಲಗಳಾದ (ಪುಣ್ಯಭೋಗದವರೆಗೆ ಮಾತ್ರ ವಾಸಯೋಗ್ಯಗಳಾದ) ಲೋಕಗಳೆಂದರೆ, ಭೂಲೋಕಸಹಿತವಾದ ಕೆಳಗಿರುವ ಪಾತಾಲಾದಿ ಸಪ್ತಲೋಕಗಳು; ಈ ಸಪ್ತಪಾತಾಲಾದಿ ಲೋಕಗಳು, ಭೂವಿವರಗಳೇ ಆಗಿದ್ದು ಭೂಮಿಯ ಒಳಗೆ ವಿವಿಧ ಹಂತಗಳಲ್ಲಿರುವ ವಿವರಗಳಾದ್ದರಿಂದ, ಭೂಲೋಕ ಪ್ರಭೇದಗಳೇ ಆಗಿರುವುವು;

**ನಾನಾಭೋಗಾಶ್ಚ ತತ್ರಾಪಿ ಮಣಿಕುಟ್ಟಿಮಭೂಮಯಃ ॥ ೩೦ ॥**
**ಮಹಾರತ್ನಪ್ರದೀಪಾಶ್ಚ ಸುಂದರ್ಯಃ ಸುಂದರಾ ನರಾಃ ।**
**ರಥಾ ಅಶ್ವಾ ಗಜಾ ಗಾವೋ ನಾನೋದ್ಯಾನಾನಿ ದೀರ್ಘಿಕಾಃ ॥ ೩೧ ॥**

ತತ್ರಾಪಿ- ಆ ಲೋಕಗಳಲ್ಲಿಯೂ, ನಾನಾಭೋಗಾಃ- ವಿವಿಧವಾದ ಭೋಗಗಳು (ಸುಖಸಾಧನಗಳು), ಚ- ಮತ್ತು ಕುಟ್ಟಿಮ ಭೂಮಯಃ- (ಸ್ಫಟಿಕಾದಿ) ನೆಲಕಟ್ಟಿನ ಭೂಮಿಗಳು; ಚ- ಹಾಗೂ, ಮಹಾರತ್ನಪ್ರದೀಪಾಃ- ಅನರ್ಘ್ಯಗಳಾದ ರತ್ನದೀಪಗಳೂ, ಸುಂದರ್ಯಃ- ಸುಂದರಸ್ತ್ರೀಯರೂ, ಸುಂದರಾಃ- ಸುಂದರರಾದ, ನರಾಃ- ಮನುಷ್ಯರೂ, ರಥಾ- ರಥಗಳು, ಅಶ್ವಾಃ- ಅಶ್ವಗಳೂ, ಗಜಾಃ- ಆನೆಗಳೂ, ಗಾವಃ- ಗೋವುಗಳೂ, ದೀರ್ಘಿಕಾಃ- ಸರೋವರಗಳೂ, ನಾನೋದ್ಯಾನಾನಿ- ಅನೇಕ ಉದ್ಯಾನಗಳೂ (ವಿಹಾರೋಪವನಗಳೂ) (ಇರುತ್ತವೆ).

**ಸ್ವಕರ್ಮನಿರತಾ ಯೇ ತು ದಾತಾರಶ್ಚೋಪಕಾರಿಣಃ ।**
**ಪಾಪಭೀತಾಶ್ಚ ಯೇ ಮರ್ತ್ಯಾಸ್ತ ಏತೇಷು ವ್ರಜಂತಿ ಹಿ ॥ ೩೩ ॥**

ಯೇತು- ಯಾರಾದರೆ, ಸ್ವಕರ್ಮನಿರತಾಃ- ಸ್ವವಿಹಿತ ಕರ್ಮಗಳಲ್ಲಿ ನಿರತರಾಗಿರುವರೋ, ದಾತಾರಃ- ದಾನಶೂರರೂ, ಚ- ಮತ್ತು ಉಪಕಾರಿಣಃ- ಪರೋಪಕಾರಿಗಳೂ, ಯೇ- ಯಾವ, ಮರ್ತ್ಯಾ- ಮನುಷ್ಯರು, ಪಾಪಭೀತಾಃ- ಪಾಪಭೀತರೋ (ಪಾಪಕರ್ಮಾಚರಣೆಯಿಂದ ದೂರವಿರುವರೋ), ತೇ- ಅವರು, ಏತೇಷು- ಈ ಲೋಕಗಳಲ್ಲಿ ವ್ರಜಂತಿ- ಸಂಚರಿಸುತ್ತ ವಿಹರಿಸುತ್ತಾರೆ; ಹಿ- ನಿಶ್ಚಯವು.

**ಕೀರ್ತನಶ್ರವಣಾದೀನಿ ಯೋ ವಿಷ್ಣೋಃ ಕುರ್ವತೇ ನರಃ ।**
**ಪ್ರಾಯೇಣ ಕಾಮಬದ್ಧಾಸ್ತೇ ವೈಕುಂಠಾದಿಷು ಸಂಸ್ಥಿತಾಃ ॥ ೩೪ ॥**

---

ಇವುಗಳನ್ನು ಪುಣ್ಯಜೀವರು, ಸತ್ಕರ್ಮಗಳ ಫಲವಾಗಿ ಹೊಂದುತ್ತಾರೆ (೨೯-೩೦). ಆ ಲೋಕಗಳಲ್ಲಿ ಸಹ (ಪುಣ್ಯಪ್ರಾಪ್ತವಾದ ಇತರ ಲೋಕಗಳಂತೆ), ಬಹುವಿಧ ಸುಖಸಾಧನಗಳಿರುತ್ತವೆ; ಸ್ಫಟಿಕ ಹವಳಾದಿಗಳಿಂದ ಕಟ್ಟಿದ ಭೂಪ್ರದೇಶಗಳೂ, ಅನರ್ಘ್ಯವಾದ ರತ್ನದೀಪಗಳೂ (ಆ ಲೋಕಗಳಲ್ಲಿ ಸೂರ್ಯಪ್ರಕಾಶವಿಲ್ಲ), ಸುಂದರ ಸ್ತ್ರೀಪುರುಷರೂ, ರಥ, ಅಶ್ವ, ಗಜ, ಗೋವು ಮೊದಲಾದ ಉಪಯುಕ್ತ ಪಶುಗಳೂ (ವಾಹನಾದಿಗಳಾಗಿ ಉಪಯೋಗಿಸಲು ಬರುವುವು), ಸರೋವರಗಳೂ, ಕ್ರೀಡೋದ್ಯಾನಗಳೂ ಇರುತ್ತವೆ (೩೦-೩೧). ಸ್ವವಿಹಿತ ಕರ್ಮಾನುಷ್ಠಾನನಿರತರೂ, ಮಹಾದಾನಿಗಳೂ, ಪರೋಪಕಾರಿಗಳೂ, ಪಾಪಭೀರುಗಳೂ ಆದ ಮನುಷ್ಯರು ಈ ಲೋಕಗಳನ್ನು ಹೊಂದುತ್ತಾರೆ (೩೩). ಯಾವ ಮನುಷ್ಯನು ಶ್ರೀವಿಷ್ಣುಮಹಿಮೆಗಳ ನಿತ್ಯಶ್ರವಣ ಸಂಕೀರ್ತನಾದಿಗಳಲ್ಲಿ ಆಸಕ್ತನಾಗಿರುವನೋ, ಮತ್ತು ವೈಕುಂಠಾದಿಗಳ

ಅಮುಕ್ತಸ್ಥಾನಗಾ ನಾನಾಭೋಗಾಃ ಪುಣ್ಯವಶಾದಿಮೇ ।
ಕರ್ಮಶೇಷಾತ್ ಪುನರ್ಭೂಮೌ ಜನಿತ್ವಾ ಪುನರೇವ ಹಿ ॥ ೩೫ ॥
ಶ್ರವಣಾದಿಮಹಿಮಾ ವಿಷ್ಣೋಃ ಕುರ್ವಾಣಾಃ ಕ್ಷೀಣವಾಸನಾಃ ।
ಜಾತಾಪರೋಕ್ಷಾಃ ಕೃಷ್ಣಸ್ಯ ಯಾಂತಿ ತೇ ಪರಮಂ ಪದಂ ॥ ೩೬ ॥
ಕಾಲತೋ ದೇಶತೋ ವಾಪಿ ಚಂಚಲತ್ವಂ ನ ತಸ್ಯ ಹಿ ।
ತತ್ರ ಗತ್ವಾ ನಿವೃತ್ತಿರ್ನೋ ಜಾಯತೇ ಸಂಸೃತೌ ಪುನಃ ॥ ೩೭ ॥

ಯಃ-ಯಾವ, ನರಃ-ಪುರುಷನು, ವಿಷ್ಣೋಃ-ಶ್ರೀವಿಷ್ಣುವಿನ, ಕೀರ್ತನ ಶ್ರವಣಾದೀನಿ-ನಾಮಸಂಕೀರ್ತನ, ಮಹಿಮೆಗಳ ಶ್ರವಣಾದಿಗಳನ್ನು, ಕುರ್ವತೇ-ಮಾಡುವನೋ, (ಆತನೂ ಮತ್ತು), ಪ್ರಾಯೇಣ-ಹೆಚ್ಚಾಗಿ, ಕಾಮಬದ್ಧಾಃ-ಭೋಗಾಸಕ್ತರಾದ, ತೇ-ಅವರೂ (ಉತ್ತಮ ಭಕ್ತರೂ), ವೈಕುಂಠಾದಿಷು-ವೈಕುಂಠಾದಿ

---

ಅಮುಕ್ತಭಾಗಗಳಲ್ಲಿ ತಮ್ಮ ಪೂರ್ವಪುಣ್ಯ ಪ್ರಭಾವದಿಂದ ನಾನಾ ಅಲೌಕಿಕ ಭೋಗಗಳನ್ನು ಅನುಭವಿಸಿದವರೂ, ಭೋಗಾಸಕ್ತರಾದರೆ, ಕರ್ಮಶೇಷದಿಂದ ಪುನಃ ಭೂಲೋಕದಲ್ಲಿ ಜನಿಸಿ, ಪುನಃ ಶ್ರೀವಿಷ್ಣುಮಹಿಮೆಗಳ ಶ್ರವಣಾದಿಗಳನ್ನು ಮಾಡಿ, ಭೋಗಾಶೆಯ ವಾಸನೆಯನ್ನು ಕಳೆದುಕೊಂಡು, ಶ್ರೀಕೃಷ್ಣನನ್ನು ಪ್ರತ್ಯಕ್ಷೀಕರಿಸಿಕೊಂಡು, ವೈಕುಂಠಾದಿಗಳಲ್ಲಿ ಮುಕ್ತಭಾಗಗಳನ್ನು ಸೇರುತ್ತಾರೆ;[1] ಆ ಸ್ಥಾನಗಳಿಗೆ ಕಾಲತಃ ದೇಶತಃ

---

1. ಅಮುಕ್ತವೈಕುಂಠಾದಿ ಸ್ಥಾನಗಳು, ಸಾಧನಪೂರ್ತಿಯುಳ್ಳ ದೇವತೆಗಳಿಂದ ಮಾತ್ರ ಲಭ್ಯವಾದವುಗಳು; ಜನಲೋಕದಿಂದ ಮೇಲಿನ ಲೋಕಗಳು ಸಹ, ಅಪರೋಕ್ಷಜ್ಞಾನಿಗಳಿಂದ ಮಾತ್ರ ಪ್ರಾಪ್ಯವಾದುವು; 'ಅಜನಾನ್ನ ಜನಿರ್ಭುವಿ'—ಎಂದು ಜನಲೋಕದಿಂದ ಮೇಲಿರುವ ಲೋಕಗಳಿಂದ ಭೂಲೋಕದಲ್ಲಿ ಜನ್ಮವಿಲ್ಲೆಂದು ಹೇಳಲಾಗಿದೆ. ಅಮುಕ್ತ ವೈಕುಂಠಾದಿಗಳಿಂದ, ಸ್ವರ್ಗವೇ ಮೊದಲಾದ ಅನ್ಯಭೋಗ ಸ್ಥಾನಗಳಿಂದ, ಪುಣ್ಯವು ಮುಗಿದೊಡನೆ, ಭೂಮಿಯಲ್ಲಿ ಹುಟ್ಟುವಂತೆ, ಪುನಃ ಸಂಸಾರಕ್ಕೆ ಬರುವುದಿಲ್ಲ. ಆದ್ದರಿಂದ ಕರ್ಮಶೇಷದಿಂದ ಭೂಮಿಯಲ್ಲಿ ಜನಿಸಿ, ಅಪರೋಕ್ಷಜ್ಞಾನವನ್ನು ಹೊಂದಿದನಂತರ, ಮುಕ್ತರಾಗುವರೆಂಬುದನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಈ ಹಿಂದೆ ಬೇರೊಂದು ಸಂದರ್ಭದಲ್ಲಿ ಈ ಸಂಶಯದ ಪರಿಹಾರವನ್ನು ಸೂಚಿಸಲಾಗಿದೆ—ಆ ಭಾಗವನ್ನು ಪುನಃ ನೋಡಬಹುದು; ಅಮುಕ್ತವೈಕುಂಠ ಭಾಗದಲ್ಲಿದ್ದ ಜಯವಿಜಯರು, ಶಾಪನಿಮಿತ್ತವಾಗಿ ಭೂಮಿಯಲ್ಲಿ ಹುಟ್ಟಿದಂತೆ, ಅಲ್ಲಿರುವ ಅನ್ಯದೇವತೆಗಳು, ಒಂದಂಶದಿಂದ, ಭೂಲೋಕದಲ್ಲಿ ತಾವು ಸಾಧಿಸಲಿಚ್ಛಿಸುವ ಅಥವಾ ಭಗವದಾಜ್ಞೆಯಂತೆ ಸಾಧಿಸಬೇಕಾದ ಅವಶಿಷ್ಟ ಭಗವತ್ಸೇವಾರ್ಥವಾಗಿ, ಭೂಮಿಯಲ್ಲಿ ವಿಶೇಷ ಸಂದರ್ಭಗಳಲ್ಲಿ ಒಂದಂಶದಿಂದ ಮಾತ್ರ ಜನಿಸಬಹುದು—ಆಗ ಮೂಲರೂಪದಿಂದ ಅಪರೋಕ್ಷದರ್ಶನಕ್ಕೆ ಅರ್ಹರೇ ಆಗಿರುತ್ತಾರೆ. ಅಮುಕ್ತ ವೈಕುಂಠಾದಿಗಳಲ್ಲಿ ಸಹ ಪುಣ್ಯವಶರಾಗಿ ಅನುಭವಿಸುವ ಭೋಗಗಳನ್ನು, ಜ್ಞಾನಿಗಳೂ ಸಹ ಆಸಕ್ತರಹಿತರಾಗಿ ಭೋಗಿಸಬೇಕೆಂಬ ನೀತಿಯೂ ಸೂಚಿತವಾಗಿದೆ.

ಸ್ಥಾನಗಳಲ್ಲಿ ಸಂಸ್ಥಿತಾಃ-ಇರುವವರು (ಆಗುತ್ತಾರೆ); ಇಮೇ-ಇವರು, ಅಮುಕ್ತಸ್ಥಾನಗಾಃ-ಅಮುಕ್ತರಿಗೆ ಪ್ರವೇಶವುಳ್ಳ (ವೈಕುಂಠಾದಿಲೋಕಗಳ) ಅಮುಕ್ತ (ಮುಕ್ತರಿಲ್ಲದ) ಭಾಗಗಳಲ್ಲಿದ್ದು ಪುಣ್ಯವಶಾತ್-ಪುಣ್ಯಪ್ರಭಾವರಿಂದ, ನಾನಾ ಭೋಗಾಃ-ವಿವಿಧ (ಅಲೌಕಿಕ) ಭೋಗಗಳುಳ್ಳವರಾಗಿರುತ್ತಾರೆ; ಕರ್ಮಶೇಷಾತ್-ಕರ್ಮಶೇಷದಿಂದ, ಪುನಃ-ಮತ್ತೂ, ಭೂಮೌ-ಭೂಲೋಕದಲ್ಲಿ ಜನಿತ್ವಾ-ಜನಿಸಿ, ಪುನಃ-ಮತ್ತೂ ವಿಷ್ಣೋಃ-ಶ್ರೀವಿಷ್ಣುವಿನ, ಮಹಿಮಾಃ-ಮಹಿಮೆಗಳನ್ನು ಶ್ರವಣಾದಿ-ಶ್ರವಣಮನನಾದಿಗಳನ್ನು, ಕುರ್ವಾಣಾಃ-ಮಾಡುವವರಾಗಿ, ಕ್ಷೀಣವಾಸನಾಃ-(ಭೋಗಾಶೆಯ) ವಾಸನೆಯನ್ನು ಕಳೆದುಕೊಂಡು, ಜಾತಪರೋಕ್ಷಾಃ-ಉಂಟಾದ (ಹೊಂದಿದ) ಅಪರೋಕ್ಷ (ಬ್ರಹ್ಮದರ್ಶನ)ವುಳ್ಳವರಾಗಿ,ತೇ-ಅವರು, ಕೃಷ್ಣಸ್ಯ-ಶ್ರೀಕೃಷ್ಣನ, ಪರಮಂ ಪದಂ-ಶ್ರೇಷ್ಠಸ್ಥಾನವನ್ನು ಯಾಂತಿ-ಹೊಂದುತ್ತಾರೆ; ತಸ್ಯ-ಆ ಸ್ಥಾನಕ್ಕೆ, ಕಾಲತಃ-ಕಾಲದಿಂದ, ದೇಶತಃ ಅಪಿ ವಾ-ದೇಶದಿಂದಲೇ ಆಗಲಿ, ಚಂಚಲತ್ವಂ-ಅಸ್ಥಿರತ್ವವು (ಅನಿತ್ಯತ್ವವು-ನಶ್ವರತೆಯು), ನ-ಇಲ್ಲ; ಹಿ-ಇದು ವೇದಸಿದ್ಧವು; ತತ್ರ-ಅಲ್ಲಿಗೆ, ಗತ್ವಾ-ಹೋಗಿ, ಪುನಃ-ಮತ್ತೆ ಸಂಸೃತೌ-ಸಂಸಾರದಲ್ಲಿ ನಿವೃತ್ತಿಃ-ತಿರಿಗಿ ಬರುವಿಕೆಯು, ನೋ ಜಾಯತೇ-ಉಂಟಾಗುವುದಿಲ್ಲ.

**ಇಚ್ಛಾಮಾತ್ರೇಣ ತೇ ಭೋಗಾನ್ ಭುಂಜಾನಾಃ ಸರ್ವದೈವ ಹಿ ।**

**ಸುಖಧಾರಾನ್ವಿತಾ ಜೀವಾಸ್ತೇ ಮುಕ್ತಾ ಇತಿ ಕೀರ್ತಿತಾಃ ॥ ೩೮ ॥**

ತೇ-ಅವರು (ಹೀಗೆ ಪರಮಪದವನ್ನು ಸೇರಿದವರು), ಇಚ್ಛಾಮಾತ್ರೇಣ-ಇಚ್ಛಿಸುವ ಮಾತ್ರದಿಂದ (ಯತ್ನಾದಿಶ್ರಮದ ಅವಶ್ಯಕತೆಯಿಲ್ಲದೇ ಸಿದ್ಧವಾಗುವ), ಭೋಗಾನ್-ಭೋಗಗಳನ್ನು ಭುಂಜಾನಾಃ-ಭೋಗಿಸುವವರಾಗಿ, ಸರ್ವದಾ ಏವ-ಎಲ್ಲ ಕಾಲದಲ್ಲಿಯೂ, ಸುಖಧಾರಾನ್ವಿತಾಃ-ಸುಖಪ್ರವಾಹಯುತರಾಗಿಯೇ ಇರುವರು; ತೇ ಜೀವಾಃ-ಆ ಜೀವರು, ಮುಕ್ತಾಃ-ಮುಕ್ತರು ಇತಿ-ಎಂದು, ಕೀರ್ತಿತಾಃ-ಹೇಳಲ್ಪಡುವರು (ಕರೆಯಲ್ಪಡುವರು).

**ಅನಿತ್ಯಾ ನರಕಾ ಯೇ ತು ಪಾತಾಲಾದಧರಸ್ಥಿತಾಃ ।**

**ತತ್ರ ಪಾಪಿಜನಾ ನಾನಾದುಃಖಭೋಗಿನ ಏವ ಹಿ ॥ ೩೯ ॥**

---

ಚಂಚಲತ್ವವಿಲ್ಲ; ಅಲ್ಲಿಗೆ ಹೋದವರು, ಮತ್ತೆ ಸಂಸಾರಕ್ಕೆ ಬರುವುದಿಲ್ಲ(೩೪-೩೭). ಆ ಜೀವರೇ ಮುಕ್ತರೆಂದು ಕರೆಯಲ್ಪಡುವರು; ಸದಾ ಸುಖಧಾರೆಯಲ್ಲಿ ಮಿಂದು ಆನಂದಿಸುತ್ತಿರುವರು; ಅವರಿಗೆ ಅಪೇಕ್ಷಿತವಾದ ಭೋಗಗಳೆಲ್ಲವೂ, ತತ್ಕಾಲದಲ್ಲಿ ಸಿದ್ಧವಾಗುತ್ತವೆ—ಇಚ್ಛಿಸಿದರೆ ಸರಿ—ಯತ್ನಮಾಡಬೇಕಾದ ಅವಶ್ಯಕತೆ ಇಲ್ಲ; ಆ ಭೋಗಗಳನ್ನು ಯಥೇಚ್ಛವಾಗಿ ಭೋಗಿಸಿ ಸದಾ ಸುಖಿಸುತ್ತಿರುತ್ತಾರೆ (೩೮). ಅನಿತ್ಯ ನರಕಗಳು, ಪಾತಾಲಲೋಕದ ಕೆಳಭಾಗದಲ್ಲಿವೆ; ಅಲ್ಲಿ ಬಹುವಿಧವಾದ

ಪರದಾರರತಾ ಯೇ ಚ ಪರದ್ರವ್ಯಾಪಹಾರಿಣಃ ।
ಪರಾಪವಾದನಿರತಾಃ ಶಕ್ತ್ಯಾ ದಾನವಿವರ್ಜಿತಾಃ ॥ ೪೦ ॥
ವಂಚಕಾಶ್ಚಾಪಿ ಲುಬ್ಧಾಶ್ಚ ಸ್ವಕರ್ಮತ್ಯಾಗಿನಶ್ಚ ಯೇ ।
ನಿಷಿದ್ಧಸ್ಯ ಚ ಕರ್ತಾರೋ ದೇವಬ್ರಾಹ್ಮಣನಿಂದಕಾಃ ॥ ೪೧ ॥
ಅತಿಥ್ಯದ್ವೇಷಿಣೋ ಯೇ ಚ ಕ್ರೂರಾ ಹಿಂಸಾಪರಾಯಣಾಃ ।
ವೃಥಾ ಮಾಂಸಭುಜೋ ಯೇ ತು ವೃಥಾ ಸ್ವಾದುಭುಜೋಽಪಿ ಯೇ ॥೪೨॥
ಮಾತಾಪಿತೃಗುರೂಣಾಂ ಚ ಪೂಜ್ಯಾನಾಂ ಚಾವಮಾನಕಾಃ ।
ಸ್ತ್ರೀಬಾಲತ್ಯಾಗಿನೋ ಯೇ ಚ ವೃಥಾ ತದ್ದ್ರೋಹಿಣೋಽಪಿ ಯೇ ॥ ೪೩ ॥
ಪರ್ವಕಾಲಾವಮಂತಾರಃ ತೀರ್ಥಾನಾಂ ಚಾವಮಾನಕಾಃ ।
ಅಪಕಾರರತಾ ಯೇ ಚ ಕನ್ಯಾವಿಕ್ರಯಜೀವಿನಃ ॥ ೪೪ ॥
ನಿಂದ್ಯವೃತ್ತಿರತಾ ಯೇ ಚ ಪಿಶುನಾ ವೇದವಿಕ್ರಯಾಃ ।
ಸೋಮವಿಕ್ರಯಿಣೋ ಯೇ ಚ ಕೇವಲಂ ಭೋಗಲಾಲಸಾಃ ॥ ೪೫ ॥
ನಾಸ್ತಿಕಾಃ ಪತಿತಾ ಮೂಢಾ ವೇದವಿಶ್ವಾಸವರ್ಜಿತಾಃ ।
ವಿಶ್ವಂಬಲಾಶ್ಚ ಪಾಖಂಡಾ ಜಿಹ್ವೋಪಸ್ಥಪರಾಯಣಾಃ ॥ ೪೬ ॥
ಅಧಿಕಾರಸ್ಥ ತತ್ಕಿಷ್ಟ ಸದ್ಭಾವೇಽಪಿ ಹಿ ಯೇ ನರಾಃ ।
ನ ಕುರ್ವಂತೇ ಸುಕರ್ಮಾಣಿ ಜ್ಞಾನೇ ಯತ್ನಂ ನ ಕುರ್ವತೇ ॥ ೪೭ ॥
ಪತಿನಿಂದಾಪರಾ ನಾರ್ಯಃ ಕುಟುಂಬಸ್ಯಾಪಿ ವಂಚಕಾಃ ।
ಪುಂಶ್ಚಲ್ಯಃ ಕ್ರೂರಕರ್ಮಾಣ್ಯೋ ವಿಪ್ರಾಣಾಮವಮಾನಕಾಃ ॥ ೪೮ ॥
ಅತಿಥಿದ್ವೇಷನಿರತಾ ಜಿಹ್ವೋಪಸ್ಥಪರಾಯಣಾಃ ।
ಏವಂ ನಾನಾವಿಧಾ ನಾರ್ಯಃ ಪುಮಾಂಸೋ ವಾಪಿ ಪಾಪಕಾಃ ॥ ೪೯ ॥
ಅನಿತ್ಯೇ ನಿರಯೇ ವಿಪ್ರಾಃ ದುರ್ಭೋಗಾನೇವ ಭುಂಜತೇ ।

---

ದುಃಖಗಳನ್ನು ಅನುಭವಿಸುವ, ಪಾಪಿಗಳಿರುತ್ತಾರೆ; ಅಲ್ಲಿಗೆ ಬರುವ ಪಾಪಿಗಳು ಯಾರು, ಯಾರೆಂದರೆ:—ಪರಸ್ತ್ರೀಯರಲ್ಲಿ ಆಸಕ್ತರು; ಪರದ್ರವ್ಯವನ್ನು ಅಪಹರಿಸಿದವರು; ಅನ್ಯರನ್ನು ನಿಂದಿಸುವವರು; ಶಕ್ತ್ಯನುಸಾರವಾಗಿ ದಾನಮಾಡದವರು; ವಂಚಕರು; ಲೋಭಿಗಳು; ವಿಹಿತ ಕರ್ಮಗಳನ್ನು ಬಿಟ್ಟವರು; ನಿಷಿದ್ಧಕರ್ಮಗಳನ್ನು ಆಚರಿಸಿದವರು; ದೇವಬ್ರಾಹ್ಮಣನಿಂದಕರು; ಅತಿಥಿ ಸೇವೆಯನ್ನು ದ್ವೇಷಿಸುವವರು; ಕ್ರೂರರು; ಪರಪೀಡೆಯಲ್ಲಿ ಆಸಕ್ತರು; ವ್ಯರ್ಥವಾಗಿ (ವಿಧಿ ಇಲ್ಲದೇ-ಫಲವಿಲ್ಲದೇ-ಕೇವಲ

ಯೇ-ಯಾವ, ಅನಿತ್ಯನರಕಾಃ-ಅನಿತ್ಯ ನರಕಗಳೋ, ತು-ಅವಾದರೋ, ಪಾತಾಲಾತ್-ಪಾತಾಲಲೋಕದಿಂದ, ಅಧರಸ್ಥಿತಾಃ-ಕೆಳಗಿರುತ್ತವೆ; ತತ್ರ-ಅವುಗಳಲ್ಲಿ ಪಾಪಿಜನಾಃ-ಪಾಪಿಗಳಾದ ಜೀವರು, ನಾನಾದುಃಖಭೋಗಿನಃ ಏವ-ವಿವಿಧವಾದ ದುಃಖಗಳನ್ನೇ ಭೋಗಿಸುವವರಾಗುತ್ತಾರೆ; ಈ ಮುಂದೆ ನಿರೂಪಿಸುವ ಪಾಪಿಗಳೆಲ್ಲರೂ ಈ ಅನಿತ್ಯ ನರಕಗಳಲ್ಲಿ ದುರ್ಭೋಗಗಳನ್ನೂ ದುಃಖಾನುಭವವನ್ನೂ ಪಡೆಯುತ್ತಾರೆ; ಅವರು ಯಾರೆಂದರೆ:—ಯೇ ಚ-ಯಾರು, ಪರದಾರರತಾಃ-ಪರಸ್ತ್ರೀಯರಲ್ಲಿ ಆಸಕ್ತರಾಗಿರುವರೋ; ಪರದ್ರವ್ಯಾಪಹಾರಿಣಃ-ಪರದ್ರವ್ಯವನ್ನು ಅಪಹರಿಸುವರೋ; ಪರಾಪವಾದನಿರತಾಃ-ಪರನಿಂದೆಯಲ್ಲಿ ಆಸಕ್ತರೋ; ಶಕ್ತ್ಯಾ-(ತಮ್ಮ) ಶಕ್ತಿ ಇದ್ದಷ್ಟು ದಾನ ವಿವರ್ಜಿತಾಃ-ದಾನ ಮಾಡದವರೋ; ಅಪಿ ಚ-ಮತ್ತು ವಂಚಕಾಃ-ಪರರನ್ನು ಮೋಸಪಡಿಸುವವರೋ; ಚ-ಹಾಗೂ, ಲುಬ್ಧಾಃ-ಆಶಾಗ್ರಸ್ತರೋ (ಅಥವಾ ಲೋಭಿಗಳೋ); ಯೇ ಚ-ಯಾರು, ಸ್ವಕರ್ಮತ್ಯಾಗಿನಃ-ಸ್ವವಿಹಿತ ಕರ್ಮಗಳನ್ನು ಬಿಟ್ಟವರೋ; ನಿಷಿದ್ಧಸ್ಯ-ನಿಷೇಧಿಸಲ್ಪಟ್ಟ ಕರ್ಮಗಳನ್ನು ಕರ್ತಾರಃ-ಮಾಡುವರೋ; ದೇವಬ್ರಾಹ್ಮಣನಿಂದಕಾಃ-ದೇವ ಬ್ರಾಹ್ಮಣರನ್ನು ನಿಂದಿಸುವರೋ; ಯೇ ಚ-ಯಾರು, ಅತಿಥಿದ್ವೇಷಿಣಃ-ಅತಿಥಿ ಸೇವೆಯನ್ನು ದ್ವೇಷಿಸುವರೋ (ಮಾಡಲು ಸಂತೋಷಿಸುವು

ರುಚಿಗಾಗಿ)[1] ಮಾಂಸವನ್ನು ಭಕ್ಷಿಸುವವರು; ನಾಲಿಗೆ ರುಚಿಗಾಗಿ ತಿನ್ನುವವರು (ವಿಷ್ಣ್ವರ್ಪಿತವಲ್ಲದ ಆಹಾರಗಳನ್ನು ಸೇವಿಸುವವರು); ತಾಯಿ, ತಂದೆ, ಗುರು ಮೊದಲಾದ ಪೂಜ್ಯ ಜನರನ್ನು ಅವಮಾನಿಸತಕ್ಕವರು; (ಗೌರವದಿಂದ ಕಂಡು ನಡೆದುಕೊಳ್ಳದವರು); ತಮ್ಮಿಂದ ಪೋಷ್ಯರಾದ, ಸ್ತ್ರೀಯರನ್ನೂ ಬಾಲಕರನ್ನೂ ಪೋಷಿಸದೇ ಕೈಬಿಡುವವರು; ಅಥವಾ ನಿಷ್ಕಾರಣವಾಗಿ ಅಪರನ್ನು ವಂಚಿಸುವವರು;

1. ದ್ವಾಪರಾದಿ ಇತರ ಯುಗಗಳಲ್ಲಿ (ಕಲಿಯುಗವನ್ನು ಬಿಟ್ಟು) ಪಿತೃಶ್ರಾದ್ಧಾದಿ ವಿಶೇಷ ದಿನಗಳಲ್ಲಿ ಬ್ರಾಹ್ಮಣರಿಗೆ ಸಹ ಅನಿಷಿದ್ಧ ಪ್ರಾಣಿಗಳ ಮಾಂಸದ ಭಕ್ಷಣೆಗೆ ಅವಕಾಶವಿರುತ್ತದೆ—ಪಶುಯಜ್ಞದಲ್ಲಿ ಯಜ್ಞಶೇಷವಾಗಿ ಮಾಂಸ ಭಕ್ಷಣಕ್ಕೂ ಅವಕಾಶವಿದೆ. ಹೀಗಿರುವ ನಿಯಮಗಳಂತಲ್ಲದೇ ಕೇವಲ ನಾಲಿಗೆ ರುಚಿಗಾಗಿ ಅಥವಾ ದೇಹಪುಷ್ಟಿ ಮೊದಲಾದ ಅನ್ಯಕಾರಣಗಳಿಂದ ಮಾಂಸ ಭಕ್ಷಣ ಮಾಡುವುದು 'ವ್ಯರ್ಥ ಮಾಂಸಭಕ್ಷಣ'ವೆನಿಸುತ್ತದೆ. ವ್ಯರ್ಥಮಾಂಸ ಮಾಂಸಭಕ್ಷಣವು, ಸರ್ವರಿಗೂ ನಿಷಿದ್ಧವೇ—ಕೇವಲ ಬ್ರಾಹ್ಮಣರಿಗಲ್ಲ. 'ಪಿತೃಯಜ್ಞೇ ದೇವಯಜ್ಞೇ ಮಾಂಸೇನ ಹರಿಪೂಜನಂ । ತಸ್ಮಾದ್ವಿಹಿತಮಾತ್ರೇಷು ರಾಗಂ ಮುಕ್ತ್ವಾ ಯಥಾವಿಧಿ । ಸಮಾಹಿತೋ ಹರಿಂ ಸ್ಮೃತ್ವಾ ವರ್ತನ್ನಾಜೀ ಪರೇಽರ್ಪಯೇತ್ ॥' (ಭಾಗ ತಾ. ೧೧.೫.೧೨) —ಪಿತೃಯಜ್ಞ, ದೇವಯಜ್ಞಗಳಲ್ಲಿ ಮಾಂಸದಿಂದ ಹರಿಪೂಜೆಯು ಮಾಡಲ್ಪಡುತ್ತದೆ; ಶಾಸ್ತ್ರವಿಹಿತವಾದಲ್ಲಿ ಮಾತ್ರ ರಾಗವನ್ನು ಬಿಟ್ಟು ವಿಧಿಪ್ರಕಾರ ಶ್ರೀವಿಷ್ಣುಪ್ರೀತ್ಯರ್ಥವಾಗಿ ಶ್ರೀಹರಿಯನ್ನು ಸ್ಮರಿಸಿ ಈ ಯಜ್ಞದಿಂದ ಭಗವತ್ಪೂಜೆಯನ್ನು ಮಾಡತಕ್ಕದ್ದು, ಎಂದು ಕ್ರಿಯಾವಿಧಾನ ಗ್ರಂಥದಲ್ಲಿ ಉಕ್ತವಾಗಿದೆ.

ದಿಲ್ಲವೋ); ಕ್ರೂರಾಃ-ಕ್ರೂರ ಸ್ವಭಾವದವರೋ (ಉಗ್ರರೋ-ಮೃದುವಾದ ನಡವಳಿಕೆ ಇಲ್ಲದವರೋ); ಹಿಂಸಾ ಪರಾಯಣಾಃ-ಪರಹಿಂಸೆಯಲ್ಲಿ (ಪೀಡಿಸುವುದರಲ್ಲಿ) ಆಸಕ್ತರೋ; ಯೇ ಚ-ಯಾರು, ವೃಥಾ ಮಾಂಸಭುಜಃ-ವ್ಯರ್ಥವಾಗಿ ಮಾಂಸವನ್ನು ಭಕ್ಷಿಸುವರೋ; ವೃಥಾ ಸ್ವಾದುಭುಜಃ-ವ್ಯರ್ಥವಾಗಿ (ಜಿಹ್ವೆಯನ್ನು ತೃಪ್ತಿಗೊಳಿಸಲು ಮಾತ್ರ—ವಿಷ್ಣ್ವರ್ಪಣೆಯಾಗದ) ರುಚಿಕರವಾದ ಆಹಾರವನ್ನು ಸೇವಿಸುವರೋ; ಚ-ಮತ್ತು, ಯೇಪಿ-ಯಾರು, ಪೂಜ್ಯಾನಾಂ-ಪೂಜ್ಯರಾದ, ಮಾತಾಪಿತೃ ಗುರೂಣಾಂ-ತಾಯಿ, ತಂದೆ, ಗುರುಗಳ, ಅವಮಾನಕಾಃ-ಅಪಮಾನಪಡಿಸುವರೋ; ಯೇ ಚ-ಯಾರು, ಸ್ತ್ರೀಬಾಲ ತ್ಯಾಗಿನಃ-(ಪೋಷ್ಯರಾದ) ಸ್ತ್ರೀಯರು ಮತ್ತು ಬಾಲಕರನ್ನು ಪೋಷಿಸುವುದಿಲ್ಲವೋ; ಅಪಿ ಯೇ-ಮತ್ತೆ ಯಾರು, ವೃಥಾ-ನಿಷ್ಕಾರಣವಾಗಿ, ತದ್ದ್ರೋಹಿಣಃ-ಅವರಿಗೆ (ಆ ಸ್ತ್ರೀಬಾಲಕರನ್ನು) ವಂಚನೆ ಮಾಡುವರೋ (ಅಥವಾ) ದ್ವೇಷಿಸುವರೋ; ಪರ್ವಕಾಲಾವಮಂತಾರಃ-ಪುಣ್ಯಕಾಲಗಳ ನಿಂದಕರೋ; ತೀರ್ಥಾನಾಂ-ಪುಣ್ಯಕರ (ಗಂಗಾದಿ) ತೀರ್ಥಗಳನ್ನು ಗೌರವಿಸುವುದಿಲ್ಲವೋ; ಅಪಕಾರತಾಃ-ಅನ್ಯರಿಗೆ ಅಹಿತ ಮಾಡುವುದರಲ್ಲಿಯೇ ಆಸಕ್ತರೋ; ಯೇ ಚ-ಯಾರು, ಕನ್ಯಾವಿಕ್ರಯೇ ಜೀವಿನಃ-ಹೆಣ್ಣುಗಳನ್ನು ವಿಕ್ರಯಮಾಡಿ (ಹಣ ಪಡೆದು ಭೋಗಕ್ಕಾಗಿ ಕೊಡುವರೋ) ಜೀವಿಸುವರೋ; ನಿಂದ್ಯವೃತ್ತಿರತಾಃ-ಅಯೋಗ್ಯವಾದ ವೃತ್ತಿಗಳಲ್ಲಿರುವರೋ; ಯೇ ಚ-ಮತ್ತು ಯಾರು, ಪಿಶುನಾಃ-ಚಾಡಿಕೋರರೋ; ವೇದವಿಕ್ರಯಾಃ-ವೇದವನ್ನು ಮಾರುವರೋ (ವೇದವಿದ್ಯೆಯನ್ನು ದ್ರವ್ಯಕ್ಕಾಗಿ ಉಪದೇಶಿಸುವರೋ); ಸೋಮವಿಕ್ರಯಿಣಃ-ಜಲವನ್ನೇ (ಅಥವಾ ಸೋಮಲತೆಯನ್ನೇ) ಮಾರಾಟಮಾಡುವರೋ; ಯೇ ಚ-ಯಾರು, ಕೇವಲಂ ಭೋಗಲಾಲಸಾಃ-ವಿಷಯಭೋಗದಲ್ಲಿಯೇ ಆಸಕ್ತರೋ, ನಾಸ್ತಿಕಾಃ-ನಾಸ್ತಿಕರೋ; ಪತಿತಾಃ-ಧರ್ಮಭ್ರಷ್ಟರೋ; ಮೂಢಾಃ-ಮೂರ್ಖರೋ (ಯೋಗ್ಯೋಪದೇಶವನ್ನು ಸ್ವೀಕರಿಸದವರೋ); ವೇದವಿಶ್ವಾಸ

---

ಪರ್ವಕಾಲಗಳನ್ನು ಹೀನವಾಗಿ ತಿಳಿಯುವವರು; ಪುಣ್ಯತೀರ್ಥಗಳಲ್ಲಿ ಪೂಜ್ಯಬುದ್ಧಿ ಇಲ್ಲದವರು; ಪರರಿಗೆ ಅಪಕಾರ ಮಾಡಿ ಸಂತೋಷಿಸುವವರು; ತಮ್ಮ ಕನ್ಯೆಯರನ್ನು ವಿಕ್ರಯಮಾಡಿ ಅದರಿಂದ ಜೀವಿಸುವವರು; (ಹಣ ಪಡೆದು ಪುರುಷರಿಗೆ ಭೋಗಕ್ಕಾಗಿ ಕೊಡುವವರು); ನಿಂದ್ಯವಾದ (ಅಯೋಗ್ಯವಾದ) ವೃತ್ತಿಗಳನ್ನು ಕೈಗೊಳ್ಳುವವರು; ಚಾಡಿಕೋರರು; (ಅನಾವಶ್ಯಕವಾಗಿ ಹೇಳಬಾರದ ಒಬ್ಬರ ಮಾತುಗಳನ್ನು ಅನ್ಯರಿಗೆ ಹೇಳುವುದು ಇತ್ಯಾದಿ); ದ್ರವ್ಯ ತೆಗೆದುಕೊಂಡು ವೇದವಿದ್ಯೆಯನ್ನು ಹೇಳುವವರು; ಯಜ್ಞೋಪಯೋಗಿಯಾದ ಸೋಮಲತೆಯನ್ನು ಅಥವಾ ಜಲವನ್ನು ವಿಕ್ರಯಿಸುವವರು (ಮಾರುವವರು); ಕೇವಲ ವಿಷಯಭೋಗದಲ್ಲಿ ಆಸಕ್ತರಾದವರು; ನಾಸ್ತಿಕರು; ಪತಿತರು; ಮೂಢರು; ವೇದದಲ್ಲಿ ನಂಬಿಕೆಯಿಲ್ಲದವರು; ಸ್ವೇಚ್ಛಾಪ್ರವೃತ್ತಿಯುಳ್ಳವರು; (ವಿಧಿನಿಷೇಧಗಳನ್ನು ಮಾನ್ಯಮಾಡದವರು); ಪಾಖಂಡಿಗಳು; (ಚಾರ್ವಾಕಾದಿ

ವರ್ಜಿತಾಃ-ವೇದಗಳಲ್ಲಿ ನಂಬಿಕೆಯಿಲ್ಲದವರೋ; ವಿಶೃಂಖಲಾಃ-ಸ್ವೇಚ್ಛಾಪ್ರವೃತ್ತಿಯುಳ್ಳ ವರೋ (ವಿಧಿ ನಿಷೇಧಗಳೆಂಬ ನಿಯಮಗಳನ್ನು ಮಾನ್ಯ ಮಾಡದವರೋ); ಜಿಹ್ವೌಪಸ್ಥ್ಯಪರಾಯಣಾಃ-ಜಿಹ್ವೆ ಮತ್ತು ಉಪಸ್ಥೇಂದ್ರಿಯಗಳನ್ನೇ ತುಷ್ಟಿಗೊಳಿಸುವುದ ರಲ್ಲಿಯೇ ಆಸಕ್ತರೋ; ಯೇ ನರಾಃ-ಯಾವ ಪುರುಷರು, ಅಧಿಕಾರಶ್ಚ-ಅರ್ಹತೆಯೂ (ಕರ್ಮಾಚರಣೆಯಲ್ಲಿ ವರ್ಣ ಮತ್ತು ಆಶ್ರಮ ನಿಮಿತ್ತವಾದ ಅಧಿಕಾರವೂ), ಶಕ್ತಿಶ್ಚ-ಸಾಮರ್ಥ್ಯವೂ, ಸದ್ಭಾವೇ ಅಪಿ-ಇದ್ದರೂ ಸಹ, ಸುಕರ್ಮಾಣಿ-ಸತ್ಕರ್ಮ ಗಳನ್ನು ನ ಕುರ್ವಂತಿ-ಮಾಡುವುದಿಲ್ಲವೋ; ಅಪಿ-ಮತ್ತೇ, ಪತಿನಿಂದಾಪರಾಃ-ಪತಿನಿಂದೆಯಲ್ಲಿ ಆಸಕ್ತಿಯುಳ್ಳ, ನಾರ್ಯಃ-ಸ್ತ್ರೀಯರೂ; ಕುಟುಂಬಸ್ಯ-ಕುಟುಂಬದ (ಕುಲವನ್ನು), ವಂಚಕಾಃ-ವಂಚಕರೋ (ಧರ್ಮಾಚರಣೆಗಳ ತ್ಯಾಗ ಮತ್ತು ಹಿತಸಾಧಕ ಕರ್ಮಗಳ ಪರಿತ್ಯಾಗ ಮಾಡುವರೋ); ಪುಂಶ್ಚಲ್ಯಃ-ಪರಪುರುಷರಲ್ಲಿ ಆಸಕ್ತರೋ (ವ್ಯಭಿಚಾರಿಗಳೋ); ಕ್ರೂರ ಕರ್ಮಣ್ಯಾಃ-ಪರಪೀಡಕ ಉಗ್ರ ಕರ್ಮಗಳುಳ್ಳವರೋ; ವಿಪ್ರಾಣಾಂ-ಬ್ರಾಹ್ಮಣರ, ಅವಮಾನಕಾಃ- ಅಪಮಾನ (ನಿಂದೆ) ಮಾಡುವರೋ; ಅತಿಥಿ ದ್ವೇಷ ನಿರತಾಃ-ಅತಿಥಿಗಳನ್ನು ಅನಾದರಿಸುವ ಪ್ರವೃತ್ತಿಯುಳ್ಳವರೋ; ಜಿಹ್ವೋಪಸ್ಥಪರಾಯಣಾಃ-ಜಿಹ್ವೆ ಮತ್ತು ಗುಹ್ಯೇಂದ್ರಿಯಗಳಲ್ಲಿ ಆಸಕ್ತರೋ; ಏವಂ-ಹೀಗೆ, ನಾನಾ ವಿಧಾಃ-ಬಹು ವಿಧವಾದ, ನಾರ್ಯಃ-ಸ್ತ್ರೀಯರೂ, ಅಪಿ ವಾ-ಮತ್ತು ಪುಮಾಂಸಃ-ಪುರುಷರೂ, (ಆದ) ಪಾಪಕಾಃ-ಪಾಪಕರ್ಮಿಗಳು, ವಿಪ್ರಾಃ-ಹೇ ಬ್ರಾಹ್ಮಣರೇ! ಅನಿತ್ಯೇ-ಅನಿತ್ಯವಾದ, ನಿರಯೇ-ನರಕದಲ್ಲಿ ದುರ್ಭೋಗಾನ್ ಏವ-ದುಃಖಕರಗಳಾದ ದುಷ್ಟ ವಿಷಯಗಳನ್ನೇ, ಭುಂಜತೇ-ಹೊಂದುತ್ತಾರೆ. (ದುರ್ವಿಷಯಗಳನ್ನೂ ಶಾಸನ ರೂಪದ ದುಃಖಗಳನ್ನೂ ಅನುಭವಿಸು ತ್ತಾರೆ).

ಕರ್ಮಶೇಷಾತ್ತತೋ ಭೂಮೌ ಸ್ಥಾವರಾದಿಕ್ರಮೇಣ ಚ ॥ ೫೦ ॥

---

ಮತಾನುಯಾಯಿಗಳಾಗಿ ಪಾಪಪುಂಜಗಳಂತಿರುವವರು); ಜಿಹ್ವೆ, ಗುಹ್ಯೇಂದ್ರಿಯಗಳ ವ್ಯಾಪಾರಗಳಲ್ಲಿಯೇ ಆಸಕ್ತರು; ಅಧಿಕಾರ (ಅರ್ಹತೆ) ಮತ್ತು ಶಕ್ತಿ ಇದ್ದರೂ ಸತ್ಕರ್ಮಗಳನ್ನು ಮಾಡದವರು; ಮತ್ತು ಜ್ಞಾನಕ್ಕಾಗಿ (ತತ್ತ್ವಜ್ಞಾನಕ್ಕಾಗಿ) ಯತ್ನಿಸದವರು; ಮತ್ತು ಪತಿನಿಂದೆಯಲ್ಲಿ ತೊಡಗಿದ ಸ್ತ್ರೀಯರು; ಕುಟುಂಬವಂಚಕರು (ಪೋಷ್ಯವರ್ಗದ ಪಶುಭೃತ್ಯಾದಿಗಳನ್ನು ವಂಚಿಸುವವರು); ಪರಪುರುಷರಿಂದ ಆಕರ್ಷಿತರಾದ ವ್ಯಭಿಚಾರ ಸ್ತ್ರೀಯರು; ಉಗ್ರಕರ್ಮಿಗಳು; ಬ್ರಾಹ್ಮಣರನ್ನು ಅವಮಾನಿಸುವ ಸ್ತ್ರೀಯರು; ಅತಿಥಿಗಳನ್ನು ದ್ವೇಷಿಸುವವರು; ಜಿಹ್ವೋಪಸ್ಥ ಪರಾಯಣರು; ಹೀಗೆ ಬಹುವಿಧ ಪಾಪಿಗಳಾದ ಪುರುಷರು ಮತ್ತು ಸ್ತ್ರೀಯರೂ ಅನಿತ್ಯ ನರಕಗಳಲ್ಲಿ ದುರ್ಭೋಗಗಳನ್ನು (ದುಃಖಪ್ರದ ಭೋಗಗಳನ್ನೂ) ನಾನಾ ದುಃಖಗಳನ್ನು ಅನುಭವಿಸುತ್ತಾರೆ (೩೯-೪೯).

ಪ್ರಾಪ್ಯ ಜಂಗಮತಾಂ ಭೂಯಃ ಸ್ವಕರ್ಮಗತಿಭಾಗಿನಃ ।
ಶ್ರವಣೇ ಕೀರ್ತನಾದೌ ಚ ಮಹಾವಿಷ್ಣೋಶ್ಚ ಯೇ ಜನಾಃ ॥ ೫೧ ॥
ದ್ವೇಷಿಣೋ ನಿಂದಕಾ ವಾ ಯೇಪ್ಯುದಾಸಾ ವೇದನಿಂದಕಾಃ ।
ವಿಷ್ಣುವೈಷ್ಣವವಿದ್ವೇಷಾಃ ಸ್ವಧರ್ಮನಿರತಾ ಅಪಿ ॥ ೫೨ ॥
ಪುಣ್ಯಾನಾಮಪಿ ಕರ್ತಾರೋ ಯೇಪಿ ಸ್ಯುರ್ಜ್ಞಾನಿಮಾನಿನಃ ।
ಕಿಂಚಿತ್ಕಾಲಂ ತೇಪಿ ಪುಣ್ಯಲೋಕೇ ಸ್ಥಿತ್ವಾ ಪತಂತ್ಯಧಃ ॥ ೫೩ ॥
ಭೂಮೌ ತೇ ಕರ್ಮಶೇಷೇಣ ಭೂತ್ವಾಪಿ ಪುನರೇವ ಹಿ ।
ವಿಷ್ಣುವೈಷ್ಣವವಿದ್ವೇಷಾತ್ ಪೂರ್ಣಸ್ವಗತಿಸಾಧನಾಃ ॥ ೫೪ ॥
ಯಾಂತ್ಯೇವ ತತ್ತಮೋ ಘೋರಂ ನಾವರ್ತಂತೇ ತತಃ ಪುನಃ ।
ಕಾಲತೋ ದೇಶತಶ್ಚಾಪಿ ಸ ನಿತ್ಯೋ ಲೋಕ ಉಚ್ಯತೇ ॥ ೫೫ ॥

ತತಃ- ಅನಂತರ (ನರಕ ದುಃಖಾನುಭವನಾಂತರ), ಕರ್ಮಶೇಷಾತ್-(ಪಾಪ) ಕರ್ಮಶೇಷದಿಂದ, ಭೂಮೌ- ಭೂಮಿಯಲ್ಲಿ ಸ್ಥಾವರಾದಿ ಕ್ರಮೇಣ ಚ (ಏವ)-ತೃಣ, ಗುಲ್ಮ, ವೃಕ್ಷಸ್ಥಾವರ ದೇಹಗಳನ್ನು ಕ್ರಮದಿಂದ ಹೊಂದಿಯೇ, ಭೂಯಃ-ಮತ್ತು ಜಂಗಮತಾಂ-ಜಂಗಮ ಪ್ರಾಣಿ ದೇಹಸ್ಥಿತಿಯನ್ನು, ಪ್ರಾಪ್ಯ-ಹೊಂದಿ, ಸ್ವಕರ್ಮಗತಿ ಭಾಗಿನಃ-ಸ್ವಕರ್ಮಾನುಸಾರವಾದ ಗತಿಗಳನ್ನು ಹೊಂದುತ್ತಾರೆ; ಮಹಾವಿಷ್ಣೋಃ-ಶ್ರೀ ವಿಷ್ಣುವಿನ, ಶ್ರವಣೇ-ಮಹಿಮಾಶ್ರವಣದಲ್ಲಿ ಕೀರ್ತನಾದೌ ಚ-ಕೀರ್ತನಾದಿ ಗಳಲ್ಲಿಯೂ (ಮನನಾದಿಗಳಲ್ಲಿ ಸಹ), ಯೇ-ಯಾವ, ಜನಾಃ-ಜನರು, ದ್ವೇಷಿಣಃ- ದ್ವೇಷಿಗಳೋ, ವಾ-ಅಥವಾ (ಮತ್ತು) ನಿಂದಕಾಃ-ನಿಂದಕರೂ (ಆಗಿರುವರೋ);

---

ನರಕದುಃಖಾನುಭವದನಂತರ ಕರ್ಮಶೇಷದಿಂದ, ಭೂಲೋಕದಲ್ಲಿ ತೃಣ, ಲತೆ, ವೃಕ್ಷಾದಿ ಕ್ರಮದಿಂದ ಸ್ಥಾವರ ಜನ್ಮಗಳನ್ನು ಹೊಂದಿ, ಕ್ರಮವಾಗಿ (ಈ ಹಿಂದಿನ ಅಧ್ಯಾಯಗಳಲ್ಲಿ ನಿರೂಪಿಸಿರುವ ಕ್ರಮದಿಂದ) ಜಂಗಮ (ಸಂಚಾರಶಕ್ತಿಯುಳ್ಳ) ಪ್ರಾಣದೇಹಗಳನ್ನು ಹೊಂದಿ, ಸ್ವಕರ್ಮಾನುಸಾರವಾದ ಗತಿಗಳನ್ನು ಹೊಂದುತ್ತಾರೆ; ಶ್ರೀಮಹಾವಿಷ್ಣುವಿನ ಮಹಿಮೆಗಳ ಶ್ರವಣ, ಕೀರ್ತನಗಳಲ್ಲಿ ತೊಡಗಿದ ಜನರಾಗಲಿ, ಅಥವಾ ಶ್ರೀವಿಷ್ಣುವನ್ನು ದ್ವೇಷಿಸಿ ನಿಂದಿಸುವವರಾಗಿ, ಅಥವಾ ಉದಾಸೀನರಾಗಿರು ವವರೇ ಆಗಲಿ, ವೇದನಿಂದಕರಾಗಿ (ವೇದಪ್ರಾಮಾಣ್ಯವನ್ನು ಒಪ್ಪದೇ ತಿರಸ್ಕರಿಸುತ್ತ), ಶ್ರೀವಿಷ್ಣುವನ್ನು ವಿಷ್ಣುಭಕ್ತರನ್ನೂ ದ್ವೇಷಿಸುವುದರಲ್ಲಿ ನಿಷ್ಠರಾಗಿದ್ದು ತಮ್ಮ ಸ್ವಧರ್ಮಗಳನ್ನು ತಪ್ಪದೇ ಆಚರಿಸುತ್ತಿದ್ದರೂ ಮತ್ತು ವ್ರತ, ದಾನ, ಯಜ್ಞಾದಿ ಪುಣ್ಯಕರ್ಮಗಳನ್ನು ಮಾಡುವವರಾದರೂ, ತಾವೇ ಜ್ಞಾನಿಗಳೆಂಬ ದುರಭಿಮಾನ ವುಳ್ಳವರಾಗಿ, ಆ ಪುಣ್ಯಕರ್ಮಗಳ ಫಲವಾಗಿ ಸ್ವಲ್ಪಕಾಲ ಪುಣ್ಯಲೋಕದಲ್ಲಿದ್ದು ಮತ್ತೆ

ಯೇ ಅಪಿ-ಮತ್ತು ಯಾರು, ಉದಾಸಾಃ-ಉದಾಸೀನರಾಗಿರುವರೋ (ಆಗ್ರಹ ರಹಿತರಾಗಿರುವರೋ); (ಅವರು), ವೇದನಿಂದಕಾಃ-ವೇದಪ್ರಾಮಾಣ್ಯವನ್ನು ತಿರಸ್ಕರಿಸುತ್ತ ವಿಷ್ಣು ವೈಷ್ಣವ ವಿದ್ವೇಷಾಃ-ಶ್ರೀವಿಷ್ಣುವನ್ನು ವಿಷ್ಣುಭಕ್ತರನ್ನು ವಿಶೇಷ ದ್ವೇಷಿಸುವರಾಗಿ, ಸ್ವಧರ್ಮ ನಿರತಾಃ ಅಪಿ-ಸ್ವಧರ್ಮಗಳನ್ನು ತಪ್ಪದೇ ಆಚರಿಸುತ್ತಿದ್ದರೂ, ಅಪಿ-ಮತ್ತು ಪುಣ್ಯಾನಾಂ-(ವ್ರತದಾನಾದಿ) ಪುಣ್ಯಕರ್ಮಗಳ, ಕರ್ತಾರಃ-ಕರ್ತೃಗಳು (ಪುಣ್ಯಕರ್ಮಗಳನ್ನು ಮಾಡುವವರಾಗಿ), ಯೇಪಿ-ಯಾರು, ಜ್ಞಾನಿಮಾನಿನಃ-ತಾವೇ ಜ್ಞಾನಿಗಳೆಂಬ ದುರಭಿಮಾನಿಗಳು, ಸ್ಯುಃ-ಆಗಿರುವರೋ, ತೇಪಿ-ಅವರೂ ಸಹ, ಕಿಂಚಿತ್ಕಾಲಂ-ಸ್ವಲ್ಪಕಾಲ, ಪುಣ್ಯಲೋಕೇ-ಪುಣ್ಯಾಪ್ರಾಪ್ಯಗಳಾದ ಲೋಕಗಳಲ್ಲಿ ಸ್ಥಿತ್ವಾ-ಇದ್ದು ಅಧಃ-ಕೆಳಗೆ, ಪತಂತಿ-ಬೀಳುತ್ತಾರೆ; ತೇ-ಅವರು, ಕರ್ಮಶೇಷೇಣ-ಪುಣ್ಯಶೇಷದಿಂದ, ಭೂಮೌ-ಭೂಮಿಯಲ್ಲಿ ಪುನರೇವ-ಮತ್ತೆಯೂ, ಭೂತ್ವಾ ಅಪಿ-(ಮನುಷ್ಯತ್ವವನ್ನು ಹೊಂದಿ) ಜನಿಸಿದರೂ, ವಿಷ್ಣುವೈಷ್ಣವ ವಿದ್ವೇಷಾತ್-ವಿಷ್ಣುವೈಷ್ಣವರ ವಿಶೇಷ ದ್ವೇಷದಿಂದ, ಪೂರ್ಣಸ್ವಗತಿ ಸಾಧನಾಃ-ತಮ್ಮ ಅಂತಿಮಗತಿಗೆ ಬೇಕಾದ ಪೂರ್ಣ ಸಾಧನೆಯನ್ನು ಹೊಂದಿ, ತತ್-ಆ (ವೇದಾದಿಗಳಲ್ಲಿ ಪ್ರಸಿದ್ಧವಾದ), ಘೋರಂ-ಭಯಂಕರವಾದ (ಮಹಾದುಃಖಸ್ಥಾನವಾದ), ತಮಃ ಏವ-ತಮಸ್ಸನ್ನೇ, ಯಾಂತಿ-ಹೊಂದುತ್ತಾರೆ; ತತಃ-ಅಲ್ಲಿಂದ ಪುನಃ-ತಿರುಗಿ, ನ ಆವರ್ತಂತೇ-ಬರುವುದಿಲ್ಲ; ಸಃ ಲೋಕವು-ಆ ಲೋಕವು (ನಿತ್ಯನರಕವು—ಅಂಧತಮಸ್ಸು), ಕಾಲತಃ-ಕಾಲದಿಂದಲೂ, ಅಪಿ ಚ-ಮತ್ತೂ ದೇಶತಃ-ದೇಶದಿಂದಲೂ, ನಿತ್ಯಃ-ನಿತ್ಯವಾದುದೆಂದು, ಉಚ್ಯತೇ-(ಶಾಸ್ತ್ರಗಳಿಂದ-ಜ್ಞಾನಿಗಳಿಂದ) ಹೇಳಲ್ಪಡುತ್ತದೆ.

**ಅತಸ್ತಥಾ ನ ಕರ್ತವ್ಯಂ ಸರ್ವಥಾ ಸ್ವಹಿತೇಪ್ಸುನಾ ।**

**ಯೇನ ಸ್ಯಾತ್ತಾದೃಶೇ ಘೋರೇ ಪಪ್ರಾಂತಂ ನರಕೇ ಪುನಃ ॥ ೫೬ ॥**

ಅತಃ-ಆದ್ದರಿಂದ, ಸ್ವಹಿತೇಪ್ಸುನಾ-ತನ್ನ ಹಿತವನ್ನು ಇಚ್ಛಿಸುವ ಯಾರಿಂದಲೂ, ಯೇನ-ಯಾವ ಪಾಪಕರ್ಮದಿಂದ, ಪುನಃ-(ಮನುಷ್ಯ ದೇಹದಿಂದ) ಮತ್ತೇ,

---

ಕೆಳಗೆ ಬೀಳುತ್ತಾರೆ; ಪುಣ್ಯಶೇಷದಿಂದ ಭೂಮಿಯಲ್ಲಿ ಮನುಷ್ಯರಾಗಿ ಜನಿಸಿ, ವಿಷ್ಣುವೈಷ್ಣವ ವಿದ್ವೇಷದಿಂದ, ಸಾಧನ ಪರಿಪೂರ್ತಿಯನ್ನು ಹೊಂದಿ, ಘೋರವಾದ ತಮಸ್ಸಿನಲ್ಲಿ ಬೀಳುತ್ತಾರೆ; ಅಲ್ಲಿಂದ ತಿರುಗಿ ಬರುವುದಿಲ್ಲ; ಅದೇ ನಿತ್ಯ ನರಕವು-ದೇಶತಃ ಕಾಲತಃ ನಿತ್ಯವೆಂದು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿದೆ (ಜ್ಞಾನಿಗಳಿಂದಲೂ ಹಾಗೆಂದೇ ಹೇಳಲ್ಪಡುತ್ತವೆ) (೫೦-೫೫). ಆದ್ದರಿಂದ ತನ್ನ ಹಿತವನ್ನು ಸಾಧಿಸಿಕೊಳ್ಳುವ ಇಚ್ಛೆಯುಳ್ಳ ಯಾರೂ, ಘೋರ ನರಕಗಳಿಗೆ ಕಾರಣವಾಗುವ ಈ ಪರಿಯ ಪಾಪಗಳನ್ನು ಸರ್ವಥಾ ಮಾಡಬಾರದು; ತತ್ರಾಪಿ ಪಪ್ರವೇ ಕಡೆಯದಾಗಿವುಳ್ಳ ನಿತ್ಯನರಕಕ್ಕೆ ಕಾರಣವಾಗ

ತಾದೃಶೇ-ಆ ಪ್ರಕಾರದ, (ಅನಿತ್ಯ ಮತ್ತು ನಿತ್ಯವಾದ), ಘೋರೇ-ಭಯಂಕರವಾದ, ವಪ್ರಾಂತಂ-ವಪ್ರವೇ ಕಡೆಯಲ್ಲಿರುವ, ನರಕೇ-ನರಕದಲ್ಲಿ ಸ್ಯಾತ್-(ವಾಸವು) ಉಂಟಾಗುವುದೋ, ತಥಾ-ಹಾಗೆ (ಅಂತಹ ಪಾಪವನ್ನು), ಸರ್ವಥಾ-ಸರ್ವಪ್ರಕಾರ ದಿಂದ, ನ ಕರ್ತವ್ಯಂ-ಮಾಡತಕ್ಕದ್ದಲ್ಲ(ತ್ಯಜಿಸತಕ್ಕದ್ದು).

ಅಂಧೇತಮಸ್ಯವಸ್ಥಾನಂ ಪಂಚಕಷ್ಟೇ ಸದೈವ ಹಿ ।
ಮಹಾಪಾಪಾನಿ ಕುರ್ವಾಣಾ ಕುರ್ವಾಣಾಶ್ಚೋಪಪಾತಕಂ ॥ ೫೭ ॥
ನಾನಾವಿಧಾನ್ಯನೇಕಾನಿ ಪಾಪಕರ್ಮಾಣಿ ಮಾನವಾಃ ।
ಕುರ್ವಾಣಾ ನಿರಯಾನ್ ಪ್ರಾಪ್ಯ ನಿವೃತ್ತಿಂ ಯಾಂತಿ ಕಾಲತಃ ॥ ೫೮ ॥
ಪ್ರದ್ವೇಷೇಣ ಮಹಾವಿಷ್ಣೋಸ್ತದ್ಭಕ್ತಾನಾಂ ಚ ಸರ್ವಥಾ ।
ಸದಾಗಮಾನಾಂ ವಿದ್ವೇಷಾತ್ತಮ ಏವ ಗತಿಃ ಸ್ಮೃತಾ ॥ ೫೯ ॥

---

ಬಹುದಾದ ಪಾಪಗಳನ್ನು ಎಂದೂ ಆಚರಿಸತಕ್ಕದ್ದಲ್ಲ (೫೬). ಅಂಧ ತಮಸ್ಸೆಂಬ ನಿತ್ಯನರಕವು, ಸರ್ವೇಂದ್ರಿಯಗಳಿಂದ, ಸರ್ವದಾ ದುಃಖವನ್ನೇ ಅನುಭವಿಸುವ ನಿತ್ಯಸ್ಥಿತಿಯೆಂದು, ಶಾಸ್ತ್ರಸಿದ್ಧವೂ ಆಗಿದೆ; ಮಹಾಪಾಪಗಳನ್ನೂ ಉಪಪಾತಕಗಳನ್ನೂ ಬಹುವಿಧವಾದ ಇತರ ಅನೇಕ ಪಾಪಗಳನ್ನೂ[1] ಮಾಡುವ ಮನುಷ್ಯರು, ಅನಿತ್ಯ

1. ಪಾಪಗಳು ೮ ವಿಧಗಳೆಂದು ನಿರೂಪಿಸಲ್ಪಟ್ಟಿವೆ; ಶ್ರೀ ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಶ್ರೀಮದಾಚಾರ್ಯರು, ಧರ್ಮತತ್ತ್ವವೆಂಬ ಗ್ರಂಥದಿಂದ ಪ್ರಮಾಣಗಳನ್ನು ಉದಹರಿಸಿ ಅವುಗಳನ್ನು ವಿವರಿಸಿರುವರು; ತಥಾಹಿ—

'ಪಿಪೀಲಿಕವಧಾದೀನಿ ಕ್ಷುದ್ರಪಾಪೋದಿತಾನಿ ಚ ।
ಪಾಪಮಸ್ತ್ರಿಮತಾಂ ಹತ್ಯಾ ಫಲಚೌರ್ಯಾದಿರೇವ ವಾ ।
ಪರದಾರಾದಿಕಂ ಚಾಪಿ ಹ್ಯುಪಪಾತಕ ಸಂಜ್ಞಿತಂ ।
ಪಾತಕಂ ಶೂದ್ರಹತ್ಯಾದಿ ಬ್ರಹ್ಮಹತ್ಯಾದಿಕಂ ಮಹತ್ ।
ದೇವಸ್ವ ಹರಣಾದೀನಿ ಸುಮಹಾಂತಿ ವಿದೋ ವಿದುಃ ।
ದೇವಾವಜ್ಞಾ ಸತಾಂ ಚೈವ ತತೋಽಪಿ ಸುಮಹತ್ತರಾ ।
ಮಹನ್ಮಹತ್ತರಾ ತಸ್ಯ ಅವಜ್ಞಾ ಕೇಶವೇ ತು ಯಾ ।'

—ಇವುಗಳ ಭಾವಾರ್ಥವೇನೆಂದರೆ:—ಇರುವೆ ಮೊದಲಾದ ಪ್ರಾಣಿಗಳ ವಧೆ ಮೊದಲಾದವು ಕ್ಷುದ್ರಪಾಪಗಳು; ಅಸ್ಥಿಗಳುಳ್ಳ ಪ್ರಾಣಿವಧೆ ಮತ್ತು ಹಣ್ಣು ಮೊದಲಾದ ಕಳ್ಳತನಗಳು ಪಾಪವು; ಪರಸ್ತ್ರೀಗಮನಾದಿಗಳು ಉಪಪಾತಕ; ಶೂದ್ರಹತ್ಯಾದಿಗಳು ಪಾತಕ; ಬ್ರಹ್ಮಹತ್ಯಾದಿಗಳು ಮಹಾಪಾತಕ; ದೇವಸ್ವವನ್ನು ಅಪಹರಿಸುವುದೇ ಮೊದಲಾದವು ಸುಮಹಾಪಾತಕ; ಅದಕ್ಕಿಂತ ದೇವತೆಗಳ ತಿರಸ್ಕಾರ, ಸಜ್ಜನರ (ವಿಷ್ಣುಭಕ್ತರ) ತಿರಸ್ಕಾರಗಳು, ಸುಮಹತ್ತರ ಮಹಾಪಾತಕ; ಶ್ರೀಹರಿಯ ತಿರಸ್ಕಾರವು (ಅವಜ್ಞೆ)ಯು, ಅದಕ್ಕಿಂತ ಅತಿಶಯವಾದ ಸುಮಹನ್ಮಹತ್ತರ ಮಹಾಪಾತಕವು.

**ಯತಃ ಕದಾಪಿ ಕಾಲೇನ ನಾನಾ ಯತ್ನೈರಪಿ ಧ್ರುವಂ ।**
**ಕಥಂಚಿದಪಿ ನೈವಸ್ಯಾನ್ನಿರ್ಗತಿಸ್ತಮಸಸ್ತತಃ ।**
**ಸುಖಲೇಶಃ ಸುಖೋ ವಾಯುಃ ಸುಖಗಂಧೋಽಪಿ ಯತ್ರ ನ ॥ ೬೦ ॥**
**ಕ್ಷಣಮಾತ್ರಮಪಿ ಪ್ರಾಪ್ಯಃ ಕೇವಲಂ ದುಃಖಭೋಜನಂ ।**
**ತಾದೃಶಸ್ತಮಸೋ ಭೀತ್ಯಾ ನ ಕುರ್ಯಾತ್ ಕರ್ಮ ತಾದೃಶಂ ॥ ೬೧ ॥**

ಪಂಚಕಷ್ಟೇ-ಪಂಚವಿಧ ದುಃಖಗಳುಳ್ಳ (ಐದು, ಉಪಲಕ್ಷಣದಿಂದ, ಮನಮೊದಲಾದ, ಸರ್ವೇಂದ್ರಿಯಗಳಿಂದ ದುಃಖವೇ ದೊರೆಯುವ), ಅಂಧೇ

---

ನರಕಲೋಕಗಳನ್ನು ಹೊಂದಿ, ಸ್ವಲ್ಪಕಾಲಾನಂತರ ಅಲ್ಲಿಂದ ನಿವೃತ್ತಿಯನ್ನು ಹೊಂದಿ (ದುಃಖಾನುಭವದಿಂದ ಮುಕ್ತರಾಗಿ) ಹಿಂದಿರುಗಿ ಬರುತ್ತಾರೆ; ಆದರೆ, ಶ್ರೀಮಹಾವಿಷ್ಣುವಿನ ಮತ್ತು ವಿಷ್ಣುಭಕ್ತರ ಪ್ರದ್ವೇಷದಿಂದಲೂ, ಸರ್ವಪ್ರಕಾರದಿಂದ ಸಚ್ಛಾಸ್ತ್ರಗಳನ್ನು ದ್ವೇಷಿಸುವುದರಿಂದಲೂ (ಅವುಗಳ ಪ್ರಾಮಾಣ್ಯವನ್ನು ತಿರಸ್ಕರಿಸಿ, ಅವುಗಳನ್ನು ದೂಷಿಸುವುದರಿಂದಲೂ), ಬಹುಕಾಲದಿಂದ ಸಹ, ಎಂದೂ, ಯಾವ ಪ್ರಯತ್ನಗಳಿಂದಲೂ, ಎಷ್ಟು ಪ್ರಯಾಸಪಟ್ಟರೂ, ನಿರ್ಗಮನವಿಲ್ಲದ (ಹೊರಗೆ

---

ಈ ಪಾಪಗಳ ಫಲಗಳೂ ಹೀಗೆ ಹೇಳಲ್ಪಟ್ಟಿವೆ:—

'ಮಾನುಷೇಷು ತು ದುಃಖಿತ್ವಂ ಕ್ಷುದ್ರಪಾಪಫಲಂ ಸ್ಮೃತಂ ।
ಪಾಪಾತ್ತು ವರ್ಣಬಾಹ್ಯತ್ವಂ ತಿರ್ಯಗ್ಯೋನಿಗತಿಸ್ತಥಾ ।
ಸಹಸ್ರವರ್ಷನರಕಂ ಕ್ಷುದ್ರಪಾತಕಜಂ ಫಲಂ ।
ಉಪಪಾತಕತಶ್ಚಾಪಿ ನರಕಂ ಯುಗಮಾತ್ರಕಂ ।
ಚತುರ್ಯುಗಾವಸಾನಂ ತು ಪಾತಕಸ್ಯ ಫಲಂ ಸ್ಮೃತಂ ।
ಮಹಾಪಾತಕ ಜನ್ಯಂ ಚ ಕಲ್ಪಾವಧಿಸಮೀರಿತಂ ।
ಸುಮಹಾಪಾತಕಾಚ್ಚಾಪಿ ಯಾವದ್ಬ್ರಹ್ಮಲಯೋ ಭವೇತ್ ।
ತತ್ತರಾಣಾಂ ಪಾತಕಾನಾಂ ಫಲಮಂಧಂತಮಃ ಸ್ಮೃತಂ ।

ಇವುಗಳ ತಾತ್ಪರ್ಯ:—ಮನುಷ್ಯರೀತರಲ್ಲಿ ದುಃಖವನ್ನನುಭವಿಸುವುದು ಕ್ಷುದ್ರಪಾಪದ ಫಲ; ನಾಲ್ಕು ವರ್ಣಗಳಿಗಿಂತ ಕೆಳಗಿನಜಾತಿ ಮತ್ತು ಪಶ್ವಾದಿಯೋನಿ ಪ್ರಾಪ್ತಿಯು ಪಾಪದ ಫಲ; ಕ್ಷುದ್ರಪಾತಕದ ಫಲವು ೧೦೦೦ ವರ್ಷ ನರಕಾನುಭವ; ಉಪಪಾತಕದ ಫಲ ಒಂದು ಯುಗಕಾಲ ನರಕಾನುಭವ; ೪ ಯುಗಪರ್ಯಂತ ನರಕಾನುಭವವು ಪಾತಕದ ಫಲ; ಕಲ್ಪಪರ್ಯಂತ ನರಕವಾಸವು ಮಹಾಪಾತಕದ ಫಲ; ಬ್ರಹ್ಮಲಯ (ಮಹಾಪ್ರಲಯ) ಪರ್ಯಂತ ನರಕವಾಸ ಸುಮಹಾಪಾತಕದ ಫಲ; ಅದಕ್ಕಿಂತ ಅಧಿಕ ಪಾಪಗಳಿಗೆ ಅಂಧತಮಸ್ಸೇ ಫಲ.

ಶ್ರೀಹರಿ ದ್ವೇಷವೆಂಬುದು ೬ ಪ್ರಕಾರವಾಗಿದೆ; ಅದರ ವಿಸ್ತಾರವಾದ ವಿವರವು ಈ ಹಿಂದಿನ ಅಧ್ಯಾಯಗಳಲ್ಲಿ ಪ್ರಸಕ್ತವಾಗಿದೆ—ಅದೇ ಶ್ರೀಹರಿಯ ದ್ವೇಷವು. ಅಥವಾ ತಿರಸ್ಕಾರವು—ಅದೇ ಅವಜ್ಞೆಯೆಂದೂ ಕರೆಯಲ್ಪಡುತ್ತದೆ.

ತಮಸಿ-ಅಂಧತಮಸ್ಸಿನಲ್ಲಿ ಸದಾ ಏವ-ನಿತ್ಯವೂ, ಅವಸ್ಥಾನಂ-ವಾಸಿಸುವ ಸ್ಥಿತಿಯೆಂಬುದು, ಹಿ-ಶಾಸ್ತ್ರಸಿದ್ಧವೇ ಆಗಿದೆ (ಆದ್ದರಿಂದ ಸರ್ವಥಾ, ತಥಾ ನ ಕರ್ತವ್ಯಂ-ಹಾಗೆ ಮಾಡತಕ್ಕದ್ದಲ್ಲ ಎಂದು ಹಿಂದಿನ ಶ್ಲೋಕದಿಂದ ಅನ್ವಯವನ್ನು ತಿಳಿಯಬೇಕು); ಮಹಾ ಪಾಪಾನಿ-ಮಹಾ ಪಾಪಗಳನ್ನೇ, ಕುರ್ವಾಣಾಃ-ಮಾಡುವವರು, ಚ-ಮತ್ತು ಉಪಪಾತಕಂ-ಉಪಪಾತಕಗಳನ್ನೇ, ಕುರ್ವಾಣಾಃ-ಮಾಡುವವರು, (ಮತ್ತು) ನಾನಾ ವಿಧಾನಿ-ಬಹು ವಿಧವಾದ, ಅನೇಕಾನಿ-ಅನೇಕವಾದ (ಬಹು), ಪಾಪಕರ್ಮಾಣಿ-ಪಾಪಕರ್ಮಗಳನ್ನು, ಕುರ್ವಾಣಾಃ-ಮಾಡುವ; ಮಾನವಾಃ-ಮನುಷ್ಯರು, ನಿರಯಾನ್-(ಅನಿತ್ಯ) ನರಕಗಳನ್ನು ಪ್ರಾಪ್ಯ-ಹೊಂದಿ, ಕಾಲತಃ-ಕೆಲವು ಕಾಲದ ಮೇಲೆ, ನಿವೃತ್ತಿಂ-(ಅಲ್ಲಿಂದ) ಬಿಡುಗಡೆಯನ್ನು (ಹಿಂದಿರುಗುವಿಕೆಯನ್ನು), ಯಾಂತಿ-ಹೊಂದುತ್ತಾರೆ; (ಆದರೆ), ಮಹಾವಿಷ್ಣೋಃ-ಶ್ರೀ ಮಹಾವಿಷ್ಣುವಿನ, ಪ್ರದ್ವೇಷೇಣ-ಆಗ್ರಹಪೂರ್ವಕವಾದ ದ್ವೇಷದಿಂದ, ಚ-ಮತ್ತು, ತದ್ಭಕ್ತಾನಾಂ (ಪ್ರದ್ವೇಷೇಣ)-ವಿಷ್ಣುಭಕ್ತರ ದ್ವೇಷದಿಂದಲೂ, ಸರ್ವಥಾ-ಸರ್ವಪ್ರಕಾರದ, ಸದಾಗಮನಾಂ-ಸಚ್ಛಾಸ್ತ್ರಗಳ (ವೇದಾದಿಗಳ), ವಿದ್ವೇಷಾತ್-ವಿಶೇಷವಾದ ದ್ವೇಷದಿಂದ (ದೂಷಣೆಯಿಂದ), ತಮಃ ಏವ ಗತಿಃ-ಅಂಧತಮಸ್ಸೇ ದೊರೆಯುವುದೆಂದು, ಸ್ಮೃತಾ-(ಜ್ಞಾನಿಗಳಿಂದ) ತಿಳಿಯಲ್ಪಟ್ಟು ನಿಶ್ಚಿತವಾಗಿದೆ; ಯತಃ-ಎಲ್ಲಿಂದ (ಆ ತಮಸ್ಸಿನಿಂದ), ಕಾಲೇನ-ಬಹುಕಾಲಾನಂತರ ಸಹ, ಕದಾಪಿ-ಎಂದೂ, ನಾನಾಯತ್ನೈಃ ಅಪಿ-ಯಾವ ವಿಧದ ಪ್ರಯತ್ನಗಳಿಂದಲೂ, ಧ್ರುವಂ-ನಿಶ್ಚಯವಾಗಿಯೂ, ಕಥಂಚಿತ್ ಅಪಿ-ಏನು ಮಾಡಿದರೂ (ಎಷ್ಟು ಪ್ರಯಾಸಪಟ್ಟರೂ), ನಿರ್ಗತಿಃ-ಹೊರಗೆ ಬರೋಣವು, ನ ಸ್ಯಾತ್ ಏವ-ಆಗುವುದೇ ಇಲ್ಲ; ತತಃ-ಆ, ತಮಸಃ-ತಮಸ್ಸಿನ, (ನಿರ್ಗತಿಃ ನೈವ-ಹೊರಗೆ ಬರುವುದೇ ಇಲ್ಲ); ಯತ್ರ-ಎಲ್ಲಿ (ಆ ತಮಸ್ಸಿನಲ್ಲಿ), ಸುಖೋ ವಾಯುಃ-ಸುಖಕರವಾದ ಗಾಳಿಯು, ಸುಖಗಂಧಃ-ಹಿತಕರ ಗಂಧವೂ (ವಾಸನೆಯೂ), ಸುಖಲೇಶಃ ಅಪಿ-ಅಲ್ಪವಾದರೂ, ಒಂದು ಕ್ಷಣಕಾಲವಾದರೂ, ಪ್ರಾಪ್ಯಃ-ದೊರಕುವುದಿಲ್ಲವೋ (ಹೊಂದಲ್ಪಡುವುದಿಲ್ಲವೋ), (ಕಿಂತು), ಕೇವಲಂ ದುಃಖಭೋಜನಂ-ದುಃಖಭೋಗ ಮಾತ್ರವು ದೊರಕುವುದೋ, ತಾದೃಶಃ-ಆ

---

ಬರಲಾಗದ) ನಿತ್ಯನರಕವು ತಪ್ಪದೇ ಲಭಿಸುತ್ತದೆ; ಅಲ್ಲಿ ಸುಖವಾಯು, ಸುಖಕರ ಗಂಧಾದಿ, ಸುಖಲೇಶವೂ, ಕ್ಷಣ ಮಾತ್ರವೂ ಲಭಿಸುವುದಿಲ್ಲ; ಸರ್ವದಾ ದುಃಖಭೋಗ ಮಾತ್ರವೇ ಇರುತ್ತದೆ; ಈ ವಿಧವಾದ ತಮಸ್ಸಿನ ಭಯದಿಂದಲಾದರೂ (ನಿತ್ಯ ಮತ್ತು ಅನಿತ್ಯ ನರಕಗಳ ಭಯದಿಂದಲಾದರೂ), ನರಕಸಾಧಕವಾದ ಕರ್ಮವನ್ನು ಮಾಡಬಾರದು (೫೭-೬೧). ಹೀಗೆ, ಶ್ರೀ ಮಹಾವಿಷ್ಣುವಿನ ನಾನಾ ಲೋಕಗಳ ಪ್ರದಾನ ಮಹಿಮೆಯೂ, ಆ ಗತಿಸಾಧಕ ಕರ್ಮವಿಶೇಷಗಳೂ, ನನ್ನಿಂದ ನಿರೂಪಿತವಾದವು; ಈ

ಪ್ರಕಾರದ, ತಮಸಃ-ನರಕದ, ಭೀತ್ಯಾ-ಭಯದಿಂದ, ತಾದೃಶಂ-ಅಂತಹ (ಆ ನರಕಕ್ಕೆ ಕಾರಣವಾಗುವ) ಕರ್ಮ-ಕರ್ಮವನ್ನು ನ ಕುರ್ಯಾತ್-ಮಾಡಕೂಡದು.

**ಇದಂ ರಹಸ್ಯಂ ಪರಮಂ ಮಹಾವಿಷ್ಣೋರ್ಮಯೇರಿತಂ ।**

**ಶ್ರವಣಾತ್ ಕೀರ್ತನಾದಸ್ಯ ಮಹಾಯಜ್ಞಫಲಂ ಲಭೇತ್ ॥ ೬೨ ॥**

ಇದಂ-ಈ, ಮಹಾವಿಷ್ಣೋಃ-ಶ್ರೀಮಹಾವಿಷ್ಣುವಿನ, ಪರಮಂ-ಉತ್ಕೃಷ್ಟವಾದ, ರಹಸ್ಯಂ-ರಹಸ್ಯವಾದ ಮ ಹಿ ಮೆ ಯು, ಮಯಾ-ನನ್ನಿಂದ, ಈರಿತಂ-ನಿರೂಪಿತ ವಾಯಿತು; ಅಸ್ಯ-ಇದರ, (ಶ್ರೀವಿಷ್ಣುವಿನ ನಾನಾಲೋಕ ಗತಿಪ್ರದತ್ವ ಮಹಿಮೆಯ), ಶ್ರವಣಾತ್-ಶ್ರವಣದಿಂದ, ಕೀರ್ತನಾತ್-ಪ್ರವಚನದಿಂದಲೂ (ಅಥವಾ ಮನನ ದಿಂದ), ಮಹಾಯಜ್ಞಫಲಂ-ಶ್ರೇಷ್ಠವಾದ ಯಜ್ಞಫಲವನ್ನು ಲಭೇತ್-ಹೊಂದುತ್ತಾನೆ.

ನಾನಾಲೋಕವರ್ಣನವೆಂಬ ೪೯ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೫೦

ಶ್ರೀ ವೇದವ್ಯಾಸಾಯ ನಮಃ

**ಶಾಕಲ್ಯ ಉವಾಚ—**

**ಕೇಚಿದ್ಭಕ್ತ್ಯಾ ಹರೇರ್ಮುಕ್ತಿಂ ಯಾಂತಿ ತದ್ದ್ವೇಷಿಣಸ್ತಮಃ ।**

**ಪರವೃತ್ತಿಸ್ತತೋ ನೈವೇತ್ಯುಕ್ತಂ ವೇದಾರ್ಥಸಂಮತಂ ॥ ೧ ॥**

ಶಾಕಲ್ಯನು ಶ್ರೋತೃಗಳ ಪರವಾಗಿ ಪ್ರಶ್ನಿಸುತ್ತಾನೆ:—

**ಅರ್ಥ:**—ಹರೇಃ-ಶ್ರೀಹರಿಯು, ಭಕ್ತ್ಯಾ-ಭಕ್ತಿಯಿಂದ, ಕೇಚಿತ್-ಕೆಲವು ಜೀವರು, ಮುಕ್ತಿಂ-ಮೋಕ್ಷವನ್ನು ಯಾಂತಿ-ಹೊಂದುತ್ತಾರೆ; ತದ್ದ್ವೇಷಿಣಃ-ಶ್ರೀವಿಷ್ಣು ದ್ವೇಷಿಗಳು, ತಮಃ-ತಮಸ್ಸನ್ನು, (ಯಾಂತಿ-ಹೊಂದುತ್ತಾರೆ); ತತಃ-

---

ಶ್ರೀವಿಷ್ಣುವಿನ ರಹಸ್ಯ ಮಹಿಮೆಯ ಶ್ರವಣಮನನಗಳು, ಯೋಗ್ಯಜೀವರಿಗೆ ಮಹಾ ಯಜ್ಞಫಲವನ್ನೇ ದೊರಕಿಸುತ್ತವೆ (೬೨).

೪೯ನೇ ಅಧ್ಯಾಯವು ಮುಗಿದುದು.

**ಅಧ್ಯಾಯ ೫೦**

**ತಾತ್ಪರ್ಯ:**—ಶ್ರೀಹರಿಯಲ್ಲಿ ಭಕ್ತಿಮಾಡುವ ಕೆಲವು ಜೀವರು, ಮೋಕ್ಷವನ್ನೂ ದ್ವೇಷಮಾಡುವವರು ತಮಸ್ಸನ್ನೂ ಹೊಂದುವರೆಂದು ಹೇ ಸೂತಾಚಾರ್ಯ! ಹೇಳಿದೆಯಷ್ಟೆ ಅವರವರು ಹೊಂದುವ ಸ್ಥಾನಗಳಿಂದ ಪುನರಾವೃತ್ತಿಯಿಲ್ಲವೆಂಬುದು, ನಿಶ್ಚಿತವಾದ ವೇದತಾತ್ಪರ್ಯವೆಂದೂ ಹೇಳಿದೆಯಷ್ಟೆ(೧). ರಾಸಾಯನಿಕ ದ್ರವ್ಯ ಮತ್ತು

ಅಲ್ಲಿಂದ(ಅವರುಗಳು ಹೊಂದಿದ) ಸ್ಥಾನಗಳಿಂದ, ಪರಾವೃತ್ತಿಃ-ಪುನಃ ಬರೋಣವು (ಸಂಸಾರಕ್ಕೆ ಮತ್ತೆ ಬರುವುದು), ನೈವ ಇತಿ-ಇಲ್ಲವೆಂದು, ವೇದಾರ್ಥಸಂಮತಂ-ವೇದತಾತ್ಪರ್ಯಕ್ಕೆ ಸಂಮತವಾದ ಪ್ರಮೇಯವು, ಉಕ್ತಂ-ಹೇಳಲ್ಪಟ್ಟಿತು.

**ರಸೌಷಧಿಸಮಾಯೋಗಾದ್ಯಾಂತಿ ಲೋಹಾನಿ ಹೇಮತಾಂ ।**

**ತಥೈವ ಭಗವತ್ಸ್ಮೃತ್ಯಾ ಜೀವಾಶ್ಚೈತನ್ಯಮಾಪ್ನುಯುಃ ॥ ೨ ॥**

ರಸೌಷಧಿ ಸಮಾಯೋಗಾತ್-ರಸ, ಓಷಧಿಗಳನ್ನು ಕೂಡಿ ಪ್ರಯೋಗಿಸುವುದರಿಂದ, ಲೋಹಾನಿ-ಲೋಹಗಳು, ಹೇಮತಾಂ-ಸುವರ್ಣತ್ವವನ್ನು (ಭಂಗಾರ ಸ್ವರೂಪವನ್ನು), ಯಾಂತಿ-ಹೊಂದುತ್ತವೆ; ತಥಾ ಏವ-ಹಾಗೆಯೇ, ಭಗವತ್ಸ್ಮೃತ್ಯಾ-ಶ್ರೀಹರಿಯ ನಿರಂತರ ಚಿಂತನದಿಂದ, ಜೀವಾಃ-ಜೀವರು, ಚೈತನ್ಯಂ-ಸ್ವರೂಪವನ್ನು (ಸ್ವಸ್ವಭಾವಸ್ಥಿತಿಯನ್ನು-ಸ್ವರೂಪದ ಆವಿರ್ಭಾವವನ್ನು), ಆಪ್ನುಯುಃ-ಹೊಂದುತ್ತಾರೆ.

**ಅಜಾಮಿಲೋ ಮಹಾಪಾಪೋ ದುರಾಚಾರೋಽಪಿ ಭೂರಿಶಃ ।**

**ಕೀರ್ತನಾದೇವ ಕೃಷ್ಣಸ್ಯ ಪರಂ ಪದಮವಾಪ್ತವಾನ್ ॥ ೩ ॥**

ಭೂರಿಶಃ-ಅಧಿಕವಾದ (ಬಹುಪ್ರಕಾರದ) ದುರಾಚಾರಃ ಅಪಿ-ದುರಾಚಾರಗಳುಳ್ಳವನಾದರೂ, ಮಹಾಪಾಪಃ-ಮಹಾಪಾಪಿಯಾದ, ಅಜಾಮಿಲಃ-ಅಜಾಮಿಲನು, ಕೃಷ್ಣಸ್ಯ-ಶ್ರೀಹರಿಯ, ಕೀರ್ತನಾತ್ ಏವ-ನಾಮೋಚ್ಚಾರಣದಿಂದಲೇ, ಪರಂ ಪದಂ-ಉತ್ತಮಗತಿಯನ್ನು, ಅವಾಪ್ತವಾನ್-ಹೊಂದಿದನು.

**ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।**

**ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ॥ ೪ ॥**

**ದ್ವೇಷಿಣೋಽಪಿ ಹರೇರ್ಮುಕ್ತಿಂ ಚೈದ್ಯಪೌಂಡ್ರಸೃಗಾಲಕಾಃ ।**

**ಕಂಸಸಾಲ್ವಾದಯೋಽನ್ಯೇಽಪಿ ಗತಾ ಇತಿ ಹಿ ನಃ ಶ್ರುತಂ ॥ ೫ ॥**

---

ಓಷಧಿಗಳ (ಗಿಡಮೂಲಿಕೆಗಳ) ಪ್ರಯೋಗದಿಂದ, ಲೋಹಗಳು ಭಂಗಾರವಾಗುತ್ತವೆ; ಅದರಂತೆ, ನಿರಂತರ ಭಗವಂತನ ಧ್ಯಾನದಿಂದ, ಜೀವರು ಜ್ಞಾನಸ್ವರೂಪವನ್ನು ಹೊಂದುತ್ತಾರೆ— ಪ್ರಾಕೃತದೇಹಗಳಿಂದ ಮುಕ್ತರಾಗಿ ಶುದ್ಧಸ್ವರೂಪವನ್ನು ಹೊಂದುತ್ತಾರೆ (೨). ಬಹು ದುರಾಚಾರಗಳುಳ್ಳವನಾದರೂ, ಮಹಾಪಾಪಿಯಾದ ಅಜಾಮಿಲನು ಶ್ರೀಹರಿಯ ನಾಮೋಚ್ಚಾರಣದಿಂದಲೇ ಉತ್ತಮ ಗತಿಯನ್ನು ಹೊಂದಿದನು (೩). ದುರ್ಮತಿಗಳು ಸ್ಮರಿಸಿದರೂ ಶ್ರೀಹರಿಯು ಅವರ ಪಾಪಗಳನ್ನು ಪರಿಹರಿಸುತ್ತಾನೆ; ಅಗ್ನಿಯು, ಇಚ್ಛೆಯಿಲ್ಲದೇ (ತಿಳಿಯದೆ) ಮುಟ್ಟಿದರೂ ಸುಡುತ್ತದಷ್ಟೆ! ಶಿಶುಪಾಲ, ಪೌಂಡ್ರಕವಾಸುದೇವ, ಸೃಗಾಲವಾಸುದೇವ, ಕಂಸ, ಸಾಲ್ವಾದಿಗಳು ಮತ್ತು ಇತರರೂ ಸಹ ಶ್ರೀಹರಿ ಸ್ಮರಣೆಯಿಂದ ಮೋಕ್ಷವನ್ನೇ ಹೊಂದಿರುವರೆಂದು ಕೇಳುತ್ತೇವೆ;

**ದ್ವೇಷೇಣಾಪಿ ಹರೇ ರೂಪಂ ಧ್ಯಾಯಂತೋ ನಾಮಕೀರ್ತಕಾಃ ।**

**ಪ್ರಾಪ್ತೋऽಪರೋಕ್ಷಂ ಪ್ರಾಪುಸ್ತೇ ಯೇ ಹತಾ ಹರಿಣಾ ಸ್ವಯಂ ॥ ೬ ॥**

ಹರಿಃ-ಶ್ರೀಹರಿಯು, ದುಷ್ಟಚೇತ್ತೈಃ ಅಪಿ-ದುಷ್ಟಬುದ್ಧಿಗಳಿಂದ ಸಹ, ಸ್ಮೃತಃ-ಸ್ಮರಿಸಲ್ಪಟ್ಟು, ಪಾಪಾನಿ-(ಅವರ) ಪಾಪಗಳನ್ನು ಹರತಿ-ಪರಿಹರಿಸುತ್ತಾನೆ; ಅನಿಚ್ಛಯಾ ಅಪಿ-ಇಚ್ಛೆಯಿಲ್ಲದೆಯೂ, ಸಂಸ್ಪೃಷ್ಟಃ-ಸ್ಪರ್ಶಿಸಲ್ಪಟ್ಟ ಪಾವಕಃ-ಅಗ್ನಿಯೂ (ಬೆಂಕಿಯನ್ನು ತಿಳಿಯದೇ ಮುಟ್ಟಿದರೂ), ದಹತಿ ಏವ ಹಿ-ಸುಡುತ್ತದಷ್ಟೆ ಹರೇಃ-ಶ್ರೀಹರಿಯ, ದ್ವೇಷಿಣಃ-ದ್ವೇಷಿಗಳಾದ, ಚೈದ್ಯಪೌಂಡ್ರ ಸೃಗಾಲಕಾಃ-ಶಿಶುಪಾಲ, ಪೌಂಡ್ರಕವಾಸುದೇವ, ಸೃಗಾಲವಾಸುದೇವರೂ, ಕಂಸ ಸಾಲ್ವಾದಯಃ-ಕಂಸ, ಸಾಲ್ವ ಮೊದಲಾದವರು, ಅನ್ಯೇಪಿ-ಇತರರೂ ಸಹ, ಮುಕ್ತಿಂ-ಮೋಕ್ಷವನ್ನು ಗತಾಃ-ಹೊಂದಿದರು, ಇತಿ-ಎಂದು, ನಃ-ನಮಗೆ, ಶ್ರುತಂ-ಕೇಳಿಬಂದಿದೆ; ನಾಮಕೀರ್ತಕಾಃ-ನಾಮಕೀರ್ತನೆಯಲ್ಲಿ (ನಾಮೋಚ್ಚಾರಣದಲ್ಲಿ) ತೊಡಗಿದವರು, ದ್ವೇಷೇಣ ಅಪಿ-ದ್ವೇಷಭಾವದಿಂದಲೇ, ಹರೇಃ-ಶ್ರೀಹರಿಯ, ರೂಪಂ-ರೂಪವನ್ನು ಧ್ಯಾಯಂತಃ-ಸಂತತಚಿಂತಿಸುವರಾಗಿ, ಅಪರೋಕ್ಷಂ-ಸಾಕ್ಷಾತ್ಕಾರವನ್ನು ಪ್ರಾಪ್ತಾಃ- ಹೊಂದಿಯೇ-ಯಾರು, ಹರಿಣಾ-ಶ್ರೀಹರಿಯಿಂದ, ಸ್ವಯಂ-ಸಾಕ್ಷಾತ್ತಾಗಿ, ಹತಾಃ- ಸಂಹರಿಸಲ್ಪಟ್ಟರೋ, (ತೇ-ಅವರೂ), ಪ್ರಾಪುಃ-(ಮುಕ್ತಿಯನ್ನು) ಹೊಂದಿದರು.

**ಸಾಂಕೇತ್ಯಂ ಪಾರಿಹಾಸ್ಯಂ ಚ ಸ್ತೋಭಂ ಹೇಲನಮೇವ ವಾ ।**

**ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ ॥ ೭ ॥**

**ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।**

**ಹರಿರಿತ್ಯೇವ ಯೇನಾಹ ಪುಮಾನ್ನಾರ್ಹತಿ ಯಾತನಾಂ ॥ ೮ ॥**

**ಪ್ರಸಂಗಾದಪಿ ಯೋ ಬ್ರೂಯಾತ್ ಹರಿರಿತ್ಯಕ್ಷರದ್ವಯಂ ।**

**ನ ತಸ್ಯ ಯಾತನಾ ಲೇಶೋ ಮಹಾಪಾಪಶತೈರಪಿ ॥ ೯ ॥**

---

**ಶ್ರೀಹರಿಯ ನಾಮೋಚ್ಚಾರಣಮಾಡುವವರು, ದ್ವೇಷದಿಂದ ಶ್ರೀಹರಿಯ ರೂಪವನ್ನು ಚಿಂತಿಸಿದರೂ, ಅಪರೋಕ್ಷವನ್ನು ಪಡೆದಿರುವರೆಂದೂ, ಶ್ರೀಹರಿಯಿಂದ ಸಾಕ್ಷಾತ್ತಾಗಿ ಸಂಹರಿಸಲ್ಪಟ್ಟವರು ಮುಕ್ತಿಯನ್ನೇ ಹೊಂದಿರುವರೆಂದೂ ತಿಳಿದುಬರುತ್ತದೆ (೪-೬). ಅನ್ಯವಸ್ತು ನಿರ್ದೇಶಕ್ಕಾಗಲಿ, (ಸಂಕೇತಕ್ಕಾಗಲಿ, ವ್ಯವಹಾರಕ್ಕಾಗಿ ವಸ್ತುವನ್ನು ಗುರ್ತಿಸಲು), ಪರಿಹಾಸಕ್ಕಾಗಲಿ, ಅವಹೇಳನಕ್ಕಾಗಲಿ ಅಥವಾ ವ್ಯರ್ಥವಾಗಿ ಆಗಲಿ (ಈ ಯಾವ ಉದ್ದೇಶವೂ ಇಲ್ಲದೇ), ಶ್ರೀಹರಿಯ ನಾಮವನ್ನುಚ್ಚರಿಸುವುದು ಸರ್ವಪಾಪಹರವೆಂದು ಜ್ಞಾನಿಗಳು ತಿಳಿದಿರುವರು; ಬಿದ್ದವನು, ಎಡವಿದವನು, ಭಗ್ನದೇಹಿಯು, ಸರ್ಪಾದಿದಂಶಿತನು, ಅಗ್ನಿತಪ್ತನು, ಪರರಿಂದ ತಾಡಿತನು, ಯಾರೇ**

ಜಲಭ್ರಾಂತ್ಯಾಪಿ ಯತ್ಪೀತಂ ಕ್ಷೀರಂ ತತ್ತರ್ಪಕಂ ಭವೇತ್ ।
ಸ್ವಾದುತಾಪಿ ನ ಗಚ್ಛೇತ ತಥೈವ ಹರಿಸಂಸ್ಮೃತಿಃ ॥ ೧೦ ॥

ಸಾಂಕೇತ್ಯಂ-ಸಂಕೇತವಾದ (ಅನ್ವರ್ಥವಲ್ಲದ್ದು-ವಸ್ತುವ್ಯವಹಾರಕ್ಕಾಗಿ ಗೊತ್ತುಪಡಿಸಿದ) ನಾಮವನ್ನಾಗಲಿ, ಪಾರಿಹಾಸ್ಯಂ-ಪರಿಹಾಸಕ್ಕಾಗಿ ಉಪಯೋಗಿಸಿದುದನ್ನಾಗಲಿ, ಚ-ಮತ್ತು ಸ್ತೋಭಂ-ವ್ಯರ್ಥವಾದುದನ್ನಾಗಲಿ, ವಾ-ಅಥವಾ, ಹೇಲನಂ ಏವ-ಅವಹೇಳನಕ್ಕಾಗಿ ಉಚ್ಚರಿಸಿದುದನ್ನಾಗಲಿ, ವೈಕುಂಠನಾಮಗ್ರಹಣಂ- ಶ್ರೀಹರಿನಾಮವನ್ನು ಉಚ್ಚರಿಸುವುದು (ಸಂಕೇತಕ್ಕಾಗಿ-ಅನ್ಯವಸ್ತು ನಿರ್ದೇಶನಕ್ಕಾಗಿ, ಪರಿಹಾಸಕ್ಕಾಗಿ, ವ್ಯರ್ಥವಾಗಿ, ಅಥವಾ ಅವಹೇಳನಕ್ಕಾಗಿ ಉಚ್ಚರಿಸಲ್ಪಟ್ಟ ಶ್ರೀಹರಿನಾಮವನ್ನು), ಅಶೇಷಾಘಹರಂ-ಸಕಲ ಪಾಪಗಳನ್ನು ಪರಿಹರಿಸುವುದೆಂದು, ವಿದುಃ-(ಜ್ಞಾನಿಗಳು) ತಿಳಿಯುವರು; ಪತಿತಃ-ಬಿದ್ದವನು (ಅಥವಾ ಧರ್ಮಭ್ರಷ್ಟನು), ಸ್ಖಲಿತಃ-ಕಾಲಿಡವಿದನು (ಮುಗ್ಗರಿಸಿದವನು-ಜಾರಿದವನು), ಭಗ್ನಃ ಆಶಾಭಂಗವನ್ನು ಹೊಂದಿದವನು (ಅಥವಾ ಭಗ್ನವಾದ-ಮುರಿದ, ಹಸ್ತಪಾದಾದಿಗಳುಳ್ಳವನು), ಸಂದಷ್ಟಃ-(ಸರ್ಪಾದಿಗಳಿಂದ) ಕಚ್ಚಲ್ಪಟ್ಟವನು, ತಪ್ತಃ-ಮನಸ್ಸಿನ ತಾಪವುಳ್ಳವನು (ಅಥವಾ ಅಗ್ನಿದಗ್ಧನಾದವನು), ಆಹತಃ-ತಾಡಿತನಾದವನು, ಹರಿಃ ಇತ್ಯೇವ-'ಹರಿ' ಎಂಬುದಾಗಿ ಮಾತ್ರ, ಯೇನ-ಯಾವ ಕಾರಣದಿಂದ, ಆಹ-ಹೇಳಿದನೋ, ಪುಮಾನ್-(ಆ) ಪುರುಷನು, ಯಾತನಾಂ-(ಆ ಪತನಾದಿ ನಿಮಿತ್ತ) ದುಃಖವನ್ನು ನ ಅರ್ಹತಿ-

---

ಆಗಲಿ, ಯಾವ ಕಾರಣದಿಂದಲೇ ಆಗಲಿ 'ಹರಿ' ಎಂದು ಮಾತ್ರ ನುಡಿಯುವುದರಿಂದ, ಈ ಯಾವುದರಿಂದಲೂ ಯಾತನೆಯನ್ನು (ಪೀಡೆಯನ್ನು-ಹಿಂಸೆಯನ್ನು) ಹೊಂದುವುದಿಲ್ಲ (ತತ್ಕಾಲದಲ್ಲಿ ಉಪಶಾಂತಿಯನ್ನು ಪಡೆಯುತ್ತಾನೆ); ಪ್ರಸಂಗದಿಂದಾದರೂ (ಅನಿರೀಕ್ಷಿತ ಸಂದರ್ಭಗಳಿಂದ), ಬಹುಪಾಪಗಳನ್ನಾಚರಿಸಿದವನಾದರೂ 'ಹರಿ' ಎಂಬೆರಡಕ್ಷರಗಳನ್ನು ಉಚ್ಚರಿಸಿದರೆ ಆ ಪಾಪನಿಮಿತ್ತವಾಗಿ ಅಲ್ಪದುಃಖವನ್ನೂ ಹೊಂದುವುದಿಲ್ಲ; ಅಷ್ಟುಮಾತ್ರವಲ್ಲ ಸುಖವನ್ನೂ ಹೊಂದುತ್ತಾನೆ; ಜಲವೆಂಬ ಭ್ರಾಂತಿಯಿಂದ ಕ್ಷೀರವನ್ನು ಪಾನ ಮಾಡಿದ ಮನುಷ್ಯನು ತೃಷೆಯ ಪರಿಹಾರವನ್ನೂ (ದಾಹದ ಪರಿಹಾರವನ್ನೂ), ಸುಖಕರವಾದ ರುಚಿಯನ್ನೂ ಅನುಭವಿಸುವನಷ್ಟೆ ಹಾಗೆಯೇ ಹರಿಸ್ಮರಣೆಯು, ದುಃಖವನ್ನು ಉಪಶಮಗೊಳಿಸಿ, ಸುಖವನ್ನೂ ಕೊಡುತ್ತದೆ (೭-೧೦). ಶ್ರೀಹರಿಯ ನಾಮಕ್ಕೆ ಪಾಪವನ್ನು ದಹಿಸುವ ಶಕ್ತಿ ಎಷ್ಟಿದೆಯೋ, ಅಷ್ಟು ಪಾಪವನ್ನು ಪಾಪಿ ಜನರೆಲ್ಲರೂ (ಒಂದಾಗಿ ಸಹ) ಮಾಡಲು ಶಕ್ತರಲ್ಲ; ದೇಹದಿಂದ ದೇಹವನ್ನು ಹೊಂದುತ್ತ ಸಂಸಾರದಲ್ಲಿ ಸುತ್ತುತ್ತಿರುವ ಜೀವನಿಗೆ, ಯಾವನಿಗಾದರೂ, ಯಾವುದೊಂದು ದೇಹದಲ್ಲಿಯಾದರೂ, ಯಾವುದೋ ಒಂದು ಕಾಲದಲ್ಲಿ ಹೇಗಾದರೂ ತಪ್ಪದೇ ಅವಶ್ಯವಾಗಿ ಶ್ರೀಹರಿಸ್ಮರಣೆಯು ಸಂಭವಿಸಿಯೇ ತೀರುತ್ತದೆ;

**ದ್ವೇಷೇಣಾಪಿ ಹರೇ ರೂಪಂ ಧ್ಯಾಯಂತೋ ನಾಮಕೀರ್ತಕಾಃ ।**
**ಪ್ರಾಪ್ತೋಽಪರೋಕ್ಷಂ ಪ್ರಾಪುಸ್ತೇ ಯೇ ಹತಾ ಹರಿಣಾ ಸ್ವಯಂ ॥ ೬ ॥**

ಹರಿಃ-ಶ್ರೀಹರಿಯು, ದುಷ್ಟಚಿತ್ತೈಃ ಅಪಿ-ದುಷ್ಟಬುದ್ಧಿಗಳಿಂದ ಸಹ, ಸ್ಮೃತಃ-ಸ್ಮರಿಸಲ್ಪಟ್ಟು, ಪಾಪಾನಿ-(ಅವರ) ಪಾಪಗಳನ್ನು ಹರತಿ-ಪರಿಹರಿಸುತ್ತಾನೆ; ಅನಿಚ್ಛಯಾ ಅಪಿ-ಇಚ್ಛೆಯಿಲ್ಲದೆಯೂ, ಸಂಸ್ಪೃಷ್ಟಃ-ಸ್ಪರ್ಶಿಸಲ್ಪಟ್ಟ ಪಾವಕಃ-ಅಗ್ನಿಯೂ (ಬೆಂಕಿಯನ್ನು ತಿಳಿಯದೇ ಮುಟ್ಟಿದರೂ), ದಹತಿ ಏವ ಹಿ-ಸುಡುತ್ತದಷ್ಟೆ ಹರೇಃ-ಶ್ರೀಹರಿಯ, ದ್ವೇಷಿಣಃ-ದ್ವೇಷಿಗಳಾದ, ಚೈದ್ಯಪೌಂಡ್ರ ಸೃಗಾಲಕಾಃ-ಶಿಶುಪಾಲ, ಪೌಂಡ್ರಕವಾಸುದೇವ, ಸೃಗಾಲವಾಸುದೇವರೂ, ಕಂಸ ಸಾಲ್ವಾದಯಃ-ಕಂಸ, ಸಾಲ್ವ ಮೊದಲಾದವರು, ಅನ್ಯೇಪಿ-ಇತರರೂ ಸಹ, ಮುಕ್ತಿಂ-ಮೋಕ್ಷವನ್ನು ಗತಾಃ-ಹೊಂದಿದರು, ಇತಿ-ಎಂದು, ನಃ-ನಮಗೆ, ಶ್ರುತಂ-ಕೇಳಿಬಂದಿದೆ; ನಾಮಕೀರ್ತಕಾಃ-ನಾಮಕೀರ್ತನೆಯಲ್ಲಿ (ನಾಮೋಚ್ಚಾರಣದಲ್ಲಿ) ತೊಡಗಿದವರು, ದ್ವೇಷೇಣ ಅಪಿ-ದ್ವೇಷಭಾವದಿಂದಲೇ, ಹರೇಃ-ಶ್ರೀಹರಿಯ, ರೂಪಂ-ರೂಪವನ್ನು ಧ್ಯಾಯಂತಃ-ಸಂತತಚಿಂತಿಸುವರಾಗಿ, ಅಪರೋಕ್ಷಂ-ಸಾಕ್ಷಾತ್ಕಾರವನ್ನು ಪ್ರಾಪ್ತಾಃ- ಹೊಂದಿಯೇ-ಯಾರು, ಹರಿಣಾ-ಶ್ರೀಹರಿಯಿಂದ, ಸ್ವಯಂ-ಸಾಕ್ಷಾತ್ತಾಗಿ, ಹತಾಃ- ಸಂಹರಿಸಲ್ಪಟ್ಟರೋ, (ತೇ-ಅವರೂ), ಪ್ರಾಪುಃ-(ಮುಕ್ತಿಯನ್ನು) ಹೊಂದಿದರು.

**ಸಾಂಕೇತ್ಯಂ ಪಾರಿಹಾಸ್ಯಂ ಚ ಸ್ತೋಭಂ ಹೇಲನಮೇವ ವಾ ।**
**ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ ॥ ೭ ॥**
**ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।**
**ಹರಿರಿತ್ಯೇವ ಯೇನಾಹ ಪುಮಾನ್ನಾರ್ಹತಿ ಯಾತನಾಂ ॥ ೮ ॥**
**ಪ್ರಸಂಗಾದಪಿ ಯೋ ಬ್ರೂಯಾತ್ ಹರಿರಿತ್ಯಕ್ಷರದ್ವಯಂ ।**
**ನ ತಸ್ಯ ಯಾತನಾ ಲೇಶೋ ಮಹಾಪಾಪಶತೈರಪಿ ॥ ೯ ॥**

---

ಶ್ರೀಹರಿಯ ನಾಮೋಚ್ಚಾರಣಮಾಡುವವರು, ದ್ವೇಷದಿಂದ ಶ್ರೀಹರಿಯ ರೂಪವನ್ನು ಚಿಂತಿಸಿದರೂ, ಅಪರೋಕ್ಷವನ್ನು ಪಡೆದಿರುವರೆಂದೂ, ಶ್ರೀಹರಿಯಿಂದ ಸಾಕ್ಷಾತ್ತಾಗಿ ಸಂಹರಿಸಲ್ಪಟ್ಟವರು ಮುಕ್ತಿಯನ್ನೇ ಹೊಂದಿರುವರೆಂದೂ ತಿಳಿದುಬರುತ್ತದೆ (೪-೬). ಅನ್ಯವಸ್ತು ನಿರ್ದೇಶಕ್ಕಾಗಲಿ, (ಸಂಕೇತಕ್ಕಾಗಲಿ, ವ್ಯವಹಾರಕ್ಕಾಗಿ ವಸ್ತುವನ್ನು ಗುರ್ತಿಸಲು), ಪರಿಹಾಸಕ್ಕಾಗಲಿ, ಅವಹೇಳನಕ್ಕಾಗಲಿ ಅಥವಾ ವ್ಯರ್ಥವಾಗಿ ಆಗಲಿ (ಈ ಯಾವ ಉದ್ದೇಶವೂ ಇಲ್ಲದೇ), ಶ್ರೀಹರಿಯ ನಾಮವನ್ನುಚ್ಚರಿಸುವುದು ಸರ್ವಪಾಪಹರವೆಂದು ಜ್ಞಾನಿಗಳು ತಿಳಿದಿರುವರು; ಬಿದ್ದವನು, ಎಡವಿದವನು, ಭಗ್ನದೇಹಿಯು, ಸರ್ಪಾದಿದಂಶಿತನು, ಅಗ್ನಿತಪ್ತನು, ಪರರಿಂದ ತಾಡಿತನು, ಯಾರೇ

**ಜಲಭ್ರಾಂತ್ಯಾಪಿ ಯತ್ಪೀತಂ ಕ್ಷೀರಂ ತತ್ತರ್ಪಕಂ ಭವೇತ್ ।**
**ಸ್ವಾದುತಾಪಿ ನ ಗಚ್ಛೇತ ತಥೈವ ಹರಿಸಂಸ್ಮೃತಿಃ ॥ ೧೦ ॥**

ಸಾಂಕೇತ್ಯಂ-ಸಂಕೇತವಾದ (ಅನ್ಯಾರ್ಥವಲ್ಲದ್ದು-ವಸ್ತುವ್ಯವಹಾರಕ್ಕಾಗಿ ಗೊತ್ತು ಪಡಿಸಿದ)ನಾಮವನ್ನಾಗಲಿ, ಪಾರಿಹಾಸ್ಯಂ-ಪರಿಹಾಸಕ್ಕಾಗಿ ಉಪಯೋಗಿಸಿದುದ ನ್ನಾಗಲಿ, ಚ-ಮತ್ತು ಸ್ತೋಭಂ-ವ್ಯರ್ಥವಾದುದನ್ನಾಗಲಿ, ವಾ-ಅಥವಾ, ಹೇಲನಂ ಏವ-ಅವಹೇಳನಕ್ಕಾಗಿ ಉಚ್ಚರಿಸಿದುದನ್ನಾಗಲಿ, ವೈಕುಂಠನಾಮಗ್ರಹಣಂ- ಶ್ರೀಹರಿ ನಾಮವನ್ನು ಉಚ್ಚರಿಸುವುದು (ಸಂಕೇತಕ್ಕಾಗಿ-ಅನ್ಯವಸ್ತು ನಿರ್ದೇಶನಕ್ಕಾಗಿ, ಪರಿಹಾಸ ಕ್ಕಾಗಿ, ವ್ಯರ್ಥವಾಗಿ, ಅಥವಾ ಅವಹೇಳನಕ್ಕಾಗಿ ಉಚ್ಚರಿಸಲ್ಪಟ್ಟ ಶ್ರೀಹರಿನಾಮವನ್ನು), ಅಶೇಷಾಘಹರಂ-ಸಕಲ ಪಾಪಗಳನ್ನು ಪರಿಹರಿಸುವುದೆಂದು, ವಿದುಃ-(ಜ್ಞಾನಿಗಳು) ತಿಳಿಯುವರು; ಪತಿತಃ-ಬಿದ್ದವನು (ಅಥವಾ ಧರ್ಮಭ್ರಷ್ಟನು), ಸ್ಖಲಿತಃ- ಕಾಲೆಡವಿದನು (ಮುಗ್ಗರಿಸಿದವನು-ಜಾರಿದವನು), ಭಗ್ನಃ ಆಶಾಭಂಗವನ್ನು ಹೊಂದಿ ದವನು (ಅಥವಾ ಭಗ್ನವಾದ-ಮುರಿದ, ಹಸ್ತಪಾದಾದಿಗಳುಳ್ಳವನು), ಸಂದಷ್ಟಃ- (ಸರ್ಪಾದಿಗಳಿಂದ) ಕಚ್ಚಲ್ಪಟ್ಟವನು, ತಪ್ತಃ-ಮನಸ್ಸಿನ ತಾಪವುಳ್ಳವನು (ಅಥವಾ ಅಗ್ನಿದಗ್ಧನಾದವನು), ಆಹತಃ-ಕಾಡಿತನಾದವನು, ಹರಿಃ ಇತ್ಯೇವ-'ಹರಿ' ಎಂಬುದಾಗಿ ಮಾತ್ರ, ಯೇನ-ಯಾವ ಕಾರಣದಿಂದ, ಆಹ-ಹೇಳಿದನೋ, ಪುಮಾನ್-(ಆ) ಪುರುಷನು, ಯಾತನಾಂ-(ಆ ಪತನಾದಿ ನಿಮಿತ್ತ) ದುಃಖವನ್ನು ನ ಅರ್ಹತಿ-

---

ಆಗಲಿ, ಯಾವ ಕಾರಣದಿಂದಲೇ ಆಗಲಿ 'ಹರಿ' ಎಂದು ಮಾತ್ರ ನುಡಿಯುವುದರಿಂದ, ಈ ಯಾವುದರಿಂದಲೂ ಯಾತನೆಯನ್ನು (ಪೀಡೆಯನ್ನು-ಹಿಂಸೆಯನ್ನು) ಹೊಂದುವು ದಿಲ್ಲ (ತತ್ಕಾಲದಲ್ಲಿ ಉಪಶಾಂತಿಯನ್ನು ಪಡೆಯುತ್ತಾನೆ); ಪ್ರಸಂಗದಿಂದಾದರೂ (ಅನಿರೀಕ್ಷಿತ ಸಂದರ್ಭಗಳಿಂದ), ಬಹುಪಾಪಗಳನ್ನಾಚರಿಸಿದವನಾದರೂ 'ಹರಿ' ಎಂಬೆರಡಕ್ಷರಗಳನ್ನು ಉಚ್ಚರಿಸಿದರೆ ಆ ಪಾಪನಿಮಿತ್ತವಾಗಿ ಅಲ್ಪದುಃಖವನ್ನೂ ಹೊಂದುವುದಿಲ್ಲ; ಅಷ್ಟುಮಾತ್ರವಲ್ಲ ಸುಖವನ್ನೂ ಹೊಂದುತ್ತಾನೆ; ಜಲವೆಂಬ ಭ್ರಾಂತಿಯಿಂದ ಕ್ಷೀರವನ್ನು ಪಾನ ಮಾಡಿದ ಮನುಷ್ಯನು ತೃಷೆಯ ಪರಿಹಾರವನ್ನೂ (ದಾಹದ ಪರಿಹಾರವನ್ನೂ), ಸುಖಕರವಾದ ರುಚಿಯನ್ನೂ ಅನುಭವಿಸುವನಷ್ಟೆ ಹಾಗೆಯೇ ಹರಿಸ್ಮರಣೆಯು, ದುಃಖವನ್ನು ಉಪಶಮಗೊಳಿಸಿ, ಸುಖವನ್ನೂ ಕೊಡುತ್ತದೆ (೭-೧೦). ಶ್ರೀಹರಿಯ ನಾಮಕ್ಕೆ ಪಾಪವನ್ನು ದಹಿಸುವ ಶಕ್ತಿ ಎಷ್ಟಿದೆಯೋ, ಅಷ್ಟು ಪಾಪವನ್ನು, ಪಾಪಿ ಜನರೆಲ್ಲರೂ (ಒಂದಾಗಿ ಸಹ) ಮಾಡಲು ಶಕ್ತರಲ್ಲ; ದೇಹದಿಂದ ದೇಹವನ್ನು ಹೊಂದುತ್ತ ಸಂಸಾರದಲ್ಲಿ ಸುತ್ತುತ್ತಿರುವ ಜೀವನಿಗೆ, ಯಾವನಿಗಾದರೂ, ಯಾವುದೊಂದು ದೇಹದಲ್ಲಿಯಾದರೂ, ಯಾವುದೋ ಒಂದು ಕಾಲದಲ್ಲಿ ಹೇಗಾದರೂ ತಪ್ಪದೇ ಅವಶ್ಯವಾಗಿ ಶ್ರೀಹರಿಸ್ಮರಣೆಯು ಸಂಭವಿಸಿಯೇ ತೀರುತ್ತದೆ;

ಹೊಂದುವುದಿಲ್ಲವೋ ಯಃ-ಯಾವ ಮನುಷ್ಯನು, ಪ್ರಸಂಗಾತ್ ಅಪಿ- ಅನ್ಯಸಂದರ್ಭ ನಿಮಿತ್ತವಾಗಿ ಆದರೂ, ಹರಿಃ ಇತಿ-'ಹರಿ' ಎಂಬ, ಅಕ್ಷರದ್ವಯಂ- ಎರಡಕ್ಷರಗಳನ್ನು ಬ್ರೂಯಾತ್-ನುಡಿಯುವನೋ, ತಸ್ಯ-ಅತನಿಗೆ, ಮಹಾಪಾಪಶತೈಃ ಅಪಿ-ನೂರಾರು ಪಾಪಗಳಿಂದ ಸಹ, ಯಾತನಾಲೇಶಃ-ಅತ್ಯಲ್ಪದುಃಖವೂ, ನ-ಇರುವುದಿಲ್ಲ; ಯತ್ ಕ್ಷೀರಂ-ಯಾವ ಕ್ಷೀರವು, ಜಲಭ್ರಾಂತ್ಯಾ ಅಪಿ-ಜಲವೆಂಬ ಭ್ರಾಂತಿಯಿಂದಾದರೂ, ಪೀತಂ-ಕುಡಿಯಲ್ಪಡುವುದೋ, ತತ್-ಅದು, ತರ್ಪಕಂ-(ದಾಹದಿಂದ) ತೃಪ್ತಿ ಯನ್ನುಂಟುಮಾಡುವುದು, ಭವೇತ್-ಆಗುತ್ತದೆ; ಸ್ವಾದುತಾ ಅಪಿ-ಕ್ಷೀರದ ರುಚಿಯೂ, ನ ಗಚ್ಛೇತ-ಹೋಗುವುದಿಲ್ಲ (ರುಚಿಯಾಗಿಯೂ ಇರುತ್ತದೆ ಮತ್ತು ದಾಹವನ್ನೂ ಅಡಗಿಸುತ್ತದೆ); ಹರಿಸ್ಮೃತಿಃ-ಶ್ರೀಹರಿ ಸ್ಮರಣೆಯೂ, ತಥಾ ಏವ-ಹಾಗೆಯೇ (ಅಗ್ನಿ ಯಂತೆ ಪಾಪವನ್ನು ದಹಿಸುತ್ತದೆ, ಕ್ಷೀರದಂತೆ ಸುಖವನ್ನು ಕೊಡುತ್ತದೆ-ದುಃಖವನ್ನೂ ಪರಿಹರಿಸುತ್ತದೆ).

**ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ ।**
**ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥ ೧೧ ॥**
**ಪರಿವರ್ತಿನಿ ಸಂಸಾರೇ ಕದಾ ಕಸ್ಯಾಪಿ ದೇಹಿನಃ ।**
**ಅವಶ್ಯಂ ತು ಘಟೇತ್ಯೇವ ಕಥಂಚಿದ್ಧರಿಸಂಸ್ಮೃತಿಃ ॥ ೧೨ ॥**
**ತತ್ಕಥಂ ಸ್ಯಾತ್ತಮಃಪ್ರಾಪ್ತಿರ್ದ್ವೇಷೇಣಾಪಿ ಹರೇರಿಹ ।**
**ಏವಂ ನಸ್ಸಂಶಯಂ ಛಿಂದಿ ವ್ಯಾಸಶಿಷ್ಯೋ ಮಹಾಮತಿಃ ॥ ೧೩ ॥**
**ಪ್ರಾಯೇಣೈವ ರಹಸ್ಯಾನಿ ವ್ಯಾಸಸ್ತ್ವಾಮುಕ್ತವಾನ್ ಹರಿಃ ।**
**ಅತಃ ಪ್ರಶ್ನೋತ್ತರಂ ಬ್ರೂಹಿ ಯದಿ ಜಾನಾಸಿ ಸೂತಜ ॥ ೧೪ ॥**

ಹರೇಃ-ಶ್ರೀಹರಿಯ, ನಾಮ್ನಃ-ನಾಮಕ್ಕೆ, ಪಾಪನಿರ್ಹರಣೇ-ಪಾಪವನ್ನು ದಹಿಸುವುದರಲ್ಲಿ, ಯಾವತೀ ಶಕ್ತಿಃ-ಎಷ್ಟು ಸಾಮರ್ಥ್ಯವು, ಅಸ್ತಿ-ಇರುವುದೋ, ತಾವತ್-ಅಷ್ಟು ಪಾತಕಂ-ಪಾಪವನ್ನು, ಕರ್ತುಂ-ಮಾಡಲಿಕ್ಕೆ, ಪಾತಕೀ ಜನಃ-ಪಾಪಿಜನರು (ಸರ್ವರೂ ಒಂದಾಗಿ ಸಹ), ನ ಶಕ್ನೋತಿ-ಶಕ್ತರಾಗುವುದಿಲ್ಲ; ಪರಿವರ್ತಿನಿ-ಸುತ್ತುವ (ದೇಹದಿಂದ ಅನ್ಯದೇಹಗಳನ್ನು ಹೊಂದುತ್ತ ಸುತ್ತುವ),

---

ಆದ್ದರಿಂದ ಶ್ರೀಹರಿಯ ದ್ವೇಷದಿಂದಾದರೂ ಯಾರಿಗೂ ತಮಃಪ್ರಾಪ್ತಿಯಾಗಲು ಅವಕಾಶವೇ ಇರುವುದಿಲ್ಲ—ಹೀಗಿರಲು ಜೀವರಿಗೆ ನರಕವಾಸವು ಹೇಗೆ ಯುಕ್ತವಾಗುತ್ತದೆ? ವ್ಯಾಸಶಿಷ್ಯನೂ, ಮಹಾಪ್ರಾಜ್ಞನೂ ಆದ ಹೇ ಸೂತ!, ವ್ಯಾಸರೂಪೀ ಶ್ರೀಹರಿಯು, ನಿನಗೆ ಎಲ್ಲ ರಹಸ್ಯವನ್ನೂ ಹೇಳಿಯೇ ಇರುತ್ತಾನೆ; ನಿನಗೆ ತಿಳಿದಿರುವಂತೆ ನನ್ನ ಸಂಶಯಗಳಿಗೆ (ಈ ಪ್ರಶ್ನೆಗಳಿಗೆ) ಪರಿಹಾರವನ್ನು ಹೇಳು (೧೧-೧೪).

ಸಂಸಾರೇ-ಸಂಸಾರದಲ್ಲಿ, ದೇಹಿನಃ-ಜೀವನಿಗೆ, ಕಸ್ಯಾಪಿ-ಯಾರಿಗಾದರೂ, ಕದಾಪಿ-ಯಾವಾಗಲಾದರೂ (ಯಾವುದೊಂದು, ಮನುಷ್ಯ ದೇಹದಲ್ಲಿಯಾದರೂ), ಕಥಂಚಿತ್-ಹೇಗಾದರೂ ಹರಿ ಸಂಸ್ಮೃತಿಃ-ಶ್ರೀಹರಿಯ ಸ್ಮರಣೆಯು, ಅವಶ್ಯಂತು-ಅವಶ್ಯವಾಗಿಯೇ (ತಪ್ಪದೇ), ಘಟೇತ ಏವ-ಒದಗುತ್ತದೆ (ಸಂಭವಿಸುತ್ತದೆ); ತತ್-ಆ ಕಾರಣದಿಂದ (ಅದರಿಂದ ಎಲ್ಲ ಪಾಪಗಳೂ ನಷ್ಟವಾಗುವುದರಿಂದ), ಇಹ-ಈ ಲೋಕದಲ್ಲಿ, ಹರೇಃ-ಶ್ರೀ ಹ ರಿ ಯ, ದ್ವೇಷೇಣ ಅಪಿ-ದ್ವೇಷದಿಂದಾದರೂ, ತಮಃಪ್ರಾಪ್ತಿಃ-ತಮಸ್ಸಿನ ಪ್ರಾಪ್ತಿಯು (ನರಕವಾಸವು), ಕಥಂ ಸ್ಯಾತ್-ಹೇಗೆ ಉಂಟಾಗುತ್ತದೆ; ಏವಂ-ಹೀಗೆ, ನಃ-ನಮಗಿರುವ, ಸಂಶಯಂ-ಸಂಶಯವನ್ನು ಛಿಂದಿ-ಕತ್ತರಿಸು (ಪರಿಹರಿಸು), ವ್ಯಾಸಶಿಷ್ಯಃ-ವೇದವ್ಯಾಸರ ಶಿಷ್ಯನೂ, ಮಹಾಮತಿಃ-ಮಹಾಪ್ರಾಜ್ಞನೂ ಆದ, ಸೂತಜ-ಹೇ ಸೂತಾಚಾರ್ಯ, ಪ್ರಾಯೇಣ-ಬಹುಶಃ, ವ್ಯಾಸಃ ಹರಿಃ-ಶ್ರೀವ್ಯಾಸರೂಪೀ ಶ್ರೀಹರಿಯು, ರಹಸ್ಯಾನಿ-ರಹಸ್ಯಗಳನ್ನು ತ್ವಾಂ-ನಿನಗೆ (ನಿನ್ನನ್ನು ದ್ದೇಶಿಸಿ), ಉಕ್ತವಾನ್ ಏವ-ಹೇಳಿಯೇ ಇರುತ್ತಾನೆ; ಅತಃ-ಆದ್ದರಿಂದ, ಜಾನಾಸಿ ಯದಿ-ತಿಳಿದಿರುವೆಯಾದರೆ (ತಿಳಿದಿರುವ), ಪ್ರಶ್ನೋತ್ತರಂ-(ನನ್ನ) ಪ್ರಶ್ನೆಗಳ ಉತ್ತರವನ್ನು ಬ್ರೂಹಿ-ಹೇಳು.

**ಸೂತ ಉವಾಚ—**

> **ಸತ್ಯಮೇವೋದಿತಂ ಬ್ರಹ್ಮನ್ ಲೋಹಂ ಯಾತಿ ಸುವರ್ಣತಾಂ ।**
> **ಕೇನಾಪ್ಯುಪಾಯೇನಾಥಾಪಿ ಖರ್ಪರಂ ಹೇಮ ನೋ ಭವೇತ್ ॥ ೧೫ ॥**
> **ತಥಾ ಯಃ ಸತ್ತ್ವಭಾವಸ್ಯಾತ್ಸ ಏವ ಹರಿಕೀರ್ತನಾತ್ ।**
> **ಉತ್ತಮಾಂ ಗತಿಮಾಪ್ನೋತಿ ನಾನ್ಯ ಇತ್ಯೇವ ನಿಶ್ಚಯಃ ॥ ೧೬ ॥**

ಸೂತನು ಹೇಳುತ್ತಾನೆ:[1]

ಬ್ರಹ್ಮನ್-ಹೇ ಶಾಕಲ್ಯರೇ! ಸತ್ಯಂ ಏವ-ಸತ್ಯವೇ, ಉದಿತಂ-(ನಿಮ್ಮಿಂದ)

---

ಸೂತನು ಹೇಳುತ್ತಾನೆ:—ಹೇ ಶಾಕಲ್ಯರೇ! ನೀವು ಸತ್ಯವನ್ನೇ ಹೇಳಿರುವಿರಿ; ರಸಾದಿ ಪ್ರಯೋಗದಿಂದ ಲೋಹವು ಭಂಗಾರವಾಗುವುದಲ್ಲದೇ ಖರ್ಪರವು (ಚಿಪ್ಪು ಅಥವಾ ಗಡಿಗೆಯ ತುಂಡು) ಭಂಗಾರವಾಗುವುದೇ ಇಲ್ಲ; ಹಾಗೆಯೇ, ಯಾವ ಜೀವರು ಸ್ವರೂಪದಿಂದಲೇ ಸಾತ್ವಿಕರೋ (ಮುಕ್ತಿಯೋಗ್ಯರೋ-ಭಕ್ತ್ಯಾದಿ ಸದ್ಗುಣ ಸ್ವಭಾವದವರೋ) ಅವರು ಮಾತ್ರ ಶ್ರೀಹರಿಸ್ಮರಣ ಕೀರ್ತನಾದಿಗಳಿಂದ, ಉತ್ತಮ ಗತಿಯನ್ನು ಹೊಂದುವರಲ್ಲದೇ—ಅನ್ಯರಲ್ಲ (೧೫-೧೬). ಅಗ್ನಿಯು ಕಾಷ್ಠಗಳನ್ನು

---

೧. ಈ ಎಲ್ಲ ಸಂಶಯಗಳಿಗೂ ಸಯುಕ್ತಿಕವಾದ ಉತ್ತರಗಳು ಇಲ್ಲಿಂದ ಮುಂದೆ ಪ್ರಸಕ್ತವಾಗಲಿವೆ; ಆದ್ದರಿಂದ ಅದಿ ಟಿಪ್ಪಣಿಗಳ ವಿವರಣೆ ಅನವಶ್ಯಕವಾಗಿದೆ.

ಹೇಳಲ್ಪಟ್ಟಿತು; ಲೋಹಂ-ಲೋಹವು, ಸುವರ್ಣತಾಂ-ಹಿರಣ್ಮಯತ್ವವನ್ನು ಯಾತಿ-ಹೊಂದುತ್ತದೆ (ಬಂಗಾರವಾಗುತ್ತದೆ); ಅಥಾಪಿ-ಹಾಗಾದರೂ, ಕೇನಾಪಿ-ಯಾವುದೊಂದು, ಉಪಾಯೇನ-ಸಾಧನದಿಂದಲೂ, ಖರ್ಪರಂ-ಚಿಪ್ಪು (ಮಣ್ಣು ಗಡಿಗೆಯ ತುಂಡು), ಹೇಮ-ಬಂಗಾರವಾದುದು, ನೋ ಭವೇತ್-ಆಗುವುದಿಲ್ಲ; ತಥಾ-ಹಾಗೆಯೇ, ಯಃ-ಯಾರು, ಸತ್ತ್ವಭಾವಃ-ಶುಭಸ್ವರೂಪನು, ಸ್ಯಾತ್-ಆಗಿರುವನೋ, ಸಃ ಏವ-ಅವನೇ ಹರಿಕೀರ್ತನಾತ್-ಶ್ರೀಹರಿಯ ಧ್ಯಾನದಿಂದ, ಉತ್ತಮಾಂ-ಉತ್ತಮವಾದ, ಗತಿಂ-ಮೋಕ್ಷಸ್ಥಾನವನ್ನು ಆಪ್ನೋತಿ-ಹೊಂದುತ್ತಾನೆ; ನ ಅನ್ಯಃ-ಮತ್ತೊಬ್ಬನಲ್ಲ; ಇತಿ ಏವ-ಹೀಗೆಂಬುದೇ, ನಿಶ್ಚಯಃ-ನಿರ್ಣಯವು.

**ಅಗ್ನಿರ್ದಹತಿ ಕಾಷ್ಠಾನಿ ನಾದಾಹ್ಯಂ ದಹತಿ ಕ್ವಚಿತ್ ।**
**ತಥಾ ಸ್ವಭಾವಭಕ್ತಾನಾಂ ದೋಷಾನ್ಮಲಿನಚೇತಸಾಂ ॥ ೧೭ ॥**

---

ದಹಿಸುತ್ತದೆಯಲ್ಲದೇ ದಾಹಯೋಗ್ಯವಲ್ಲದ ವಸ್ತುಗಳನ್ನಲ್ಲ; ಹೀಗೆಯೇ ಸ್ವಭಾವದಿಂದಲೇ ಹರಿಭಕ್ತರಾದವರ ದೋಷಗಳನ್ನು ಪರಿಹರಿಸುತ್ತದೆಯಲ್ಲದೇ, ಪಾಪಸ್ವರೂಪದ ದೋಷಗಳನ್ನಲ್ಲ; ಶ್ರೀಹರಿನಾಮವು ದಾಹ್ಯವಾದ ಪಾಪವನ್ನೇ ದಹಿಸುತ್ತದೆ; ಹರಿನಾಮಕೀರ್ತನದಿಂದ ಸರ್ವಪಾಪ ನಾಶವಾಗುತ್ತಿದ್ದರೆ, ಮೋಕ್ಷವಾಗಲು ಯಾವ ಪ್ರತಿಬಂಧಕವೂ (ಅಡ್ಡಿಯೂ) ಇಲ್ಲದಂತಾಗುತ್ತದೆ;[1] ಲೌಕಿಕ ಪ್ರಸ್ತಾಪಗಳಲ್ಲಿ ಪ್ರಸಂಗತ್ವೇನ ಸಂದರ್ಭಾನುಸಾರ ಉಚ್ಚರಿಸುವ ಶ್ರೀಹರಿ ನಾಮದಿಂದಲೂ

---

೧. ಅಪರೋಕ್ಷವಾಗುವ ಮೊದಲು, ಸಾಧನಾವಸ್ಥೆಯಲ್ಲಿರುವ ಜೀವರ ಪಾಪಗಳು ದಾಹ್ಯ-ಅದಾಹ್ಯಗಳೆಂಬ ಭೇದದಿಂದ ದ್ವಿವಿಧವಾಗಿರುತ್ತವೆ; ಅಜ್ಞಾನಕೃತವಾದ (ತಿಳಿಯದೇ ಮಾಡಿದ) ಮತ್ತು ಜ್ಞಾತವಾದರೂ ಕ್ಷುದ್ರವಾದ ಪಾಪಗಳು ದಾಹ್ಯಗಳು; ಪಾತಕ, ಮಹಾ ಪಾತಕಾದಿಗಳು ಅದಾಹ್ಯಗಳು; ನಾಮಸಂಕೀರ್ತನದಿಂದ ದಾಹ್ಯಗಳು ನಾಶವಾಗುತ್ತವೆ—ಅದಾಹ್ಯಗಳ ಉಗ್ರತೆಯು ಉಪಮರ್ದಗೊಳ್ಳುತ್ತದೆ. ಅಪರೋಕ್ಷ ಜ್ಞಾನಿಯಿಂದ ಉಚ್ಚರಿತವಾದ (ಜೀವಯೋಗ್ಯತಾನುಗುಣವಾದ ಉತ್ಕೃಷ್ಟ ಭಕ್ತಿಯಿಂದ ಉಚ್ಚರಿಸಲ್ಪಟ್ಟ) ಶ್ರೀಹರಿನಾಮವು ದಾಹ್ಯ-ಅದಾಹ್ಯಗಳೆರಡನ್ನೂ ನಾಶಮಾಡುತ್ತದೆ. ಹೀಗಲ್ಲದೇ, ತಾತ್ಕಾಲಿಕವಾದ (ಆ ಕಾಲದಲ್ಲಿ—ಸಾಧನಾವಸ್ಥೆಯಲ್ಲಿರಬಹುದಾದ) ಭಕ್ತಿಯಿಂದ ನಾಮೋಚ್ಚಾರಣ ಮಾಡುವುದರಿಂದ ಸರ್ವಪಾಪ ನಾಶವಾಗುವುದಾದರೆ, ಪುನರ್ಜನ್ಮವೇ ಇಲ್ಲದಂತಾಗುತ್ತದೆ—ಆದರೆ ವಸ್ತುಸ್ಥಿತಿಯು ಹಾಗಿಲ್ಲ; ಬಹುಜನರು ಭಕ್ತಿಯಿಂದಲೇ ಶ್ರೀಹರಿನಾಮವನ್ನು ಉಚ್ಚರಿಸುತ್ತಾರೆ—ಅವರೆಲ್ಲರೂ ತತ್ಕಾಲದಲ್ಲಿ ಮುಕ್ತರಾಗುವುದಿಲ್ಲ—ಪುನರ್ಜನ್ಮವಿಲ್ಲದವರಾಗುವುದಿಲ್ಲ; ಪೂರ್ವಪಾಪಗಳೇ ಪುನರ್ಜನ್ಮಕ್ಕೆ ಕಾರಣಗಳು. ಭಕ್ತಿಯಿಲ್ಲದೇ ಪ್ರಾಸಂಗಿಕವಾಗಿ ಉಚ್ಚರಿಸಲ್ಪಡುವ ಶ್ರೀಹರಿನಾಮವು ಫಲಪ್ರದವಾಗುವುದೇ ಇಲ್ಲ; ಮತ್ತು ತಾಮಸ ಜೀವರು (ಅಸುರಸ್ವಭಾವದವರು ಉಚ್ಚರಿಸುವ ನಾಮದಿಂದಲೂ ಅವರಿಗೆ ಯಾವ ಫಲವೂ ದೊರೆಯುವುದಿಲ್ಲ). ಈ ಪ್ರಮೇಯವು ಮುಂದಿನ ಶ್ಲೋಕಗಳಲ್ಲಿ ವಿವೃತವಾಗಿದೆ.

ಹರಿನಾಮ ದಹೇತ್ ಪಾಪಂ ದಾಹ್ಯಮೇವ ಹಿ ಯದ್ಭವೇತ್ ।
ಸರ್ವಪಾಪಕ್ಷಯೇ ಮುಕ್ತೌ ನ ಕಿಂಚಿತ್ ಪ್ರತಿಬಂಧಕಂ ॥ ೧೮ ॥
ಪ್ರಾಸಂಗಿಕಾದಪಿ ಹರೇರ್ನಾಮಸಂಕೀರ್ತನಾದ್ಯದಿ ।
ಸರ್ವಪಾಪಂ ವಿನಶ್ಯೇತ ತರ್ಹಿ ಸ್ಯಾನ್ನ ಪುನರ್ಜನಿಃ ॥ ೧೯ ॥
ನೈವೇತ್ಥಂ ದೃಶ್ಯತೇ ಲೋಕೇ ತಸ್ಮಾದೇವಂ ವಿನಿರ್ಣಯಃ ।
ಸರ್ವಥಾಘಹರಂ ವಿಷ್ಣೋರ್ನಾಮತದ್ಭಕ್ತಿಪೂರ್ವಕಂ ॥ ೨೦ ॥
ಅಭಕ್ತೋದಾಹೃತಂ ನೈವ ಫಲದಾತೃ ಭವೇತ್ ಕ್ವಚಿತ್ ।

ಅಗ್ನಿಃ-ಅಗ್ನಿಯು, ಕಾಷ್ಠಾನಿ-ಒಣಕಟ್ಟಿಗೆಗಳನ್ನು (ಮರದ ಪದಾರ್ಥಗಳನ್ನು), ದಹತಿ-ದಹಿಸುತ್ತದೆ; ಅದಾಹ್ಯಂ-ದಹಿಸಲಾಗದ (ಕಲ್ಲಾರು ಮೊದಲಾದ) ವಸ್ತುವನ್ನು ಕ್ವಚಿತ್-ಎಲ್ಲಿಯೂ (ಎಷ್ಟು ಮಾತ್ರಕ್ಕೂ), ನ ದಹತಿ-ದಹಿಸುವುದಿಲ್ಲ; ತಥಾ-ಹಾಗೆಯೇ, ಸ್ವಭಾವಭಕ್ತಾನಾಂ-ಸ್ವರೂಪದಿಂದಲೇ ಭಕ್ತರಾದವರ, ದೋಷಾನ್-ದೋಷಗಳನ್ನು (ಹರಿನಾಮವು), (ದಹತಿ-ದಹಿಸುತ್ತದೆ); ಮಲಿನ ಚೇತಸಾಂ ನ-ದೋಷಸ್ವರೂಪದವರ ದೋಷಗಳನ್ನಲ್ಲ; ಹರಿನಾಮ-ಶ್ರೀಹರಿಯ ನಾಮವು, ಯತ್-ಯಾವುದು, ದಾಹ್ಯಂ-ದಾಹಯೋಗ್ಯವು, ಭವೇತ್-ಆಗಿರುವುದೋ, (ತತ್) ಪಾಪಂ-ಆ ಪಾಪವನ್ನು ದಹೇತ್-ಸುಡುತ್ತದೆ (ದಹಿಸುತ್ತದೆ-ನಾಶಮಾಡುತ್ತದೆ); ಸರ್ವಪಾಪಕ್ಷಯೇ-(ಹಾಗಲ್ಲದೇ) ಎಲ್ಲ ಪಾಪಗಳ ನಾಶವಾದರೆ, ಮುಕ್ತೌ-ಮೋಕ್ಷವು ದೊರೆಯುವುದರಲ್ಲಿ ಪ್ರತಿಬಂಧಕಂ-ಅಡ್ಡಿಬರುವುದು, ನ ಕಿಂಚಿತ್-ಯಾವುದೂ ಇರುವುದಿಲ್ಲ; ಪ್ರಾಸಂಗಿಕಾತ್ ಅಪಿ-ಪ್ರಸಂಗತ್ವೇನ (ಯಾವುದೋ ಮಾತಿನ ಮಧ್ಯದಲ್ಲಿ ಉದ್ದೇಶವಿಲ್ಲದೇ), ಹರೇಃ-ಶ್ರೀಹರಿಯ, ನಾಮಸಂಕೀರ್ತನಾತ್-ನಾಮವನ್ನು ಉಚ್ಚರಿಸುವುದರಿಂದ, ಸರ್ವಪಾಪಂ-ಎಲ್ಲ ಪಾಪವೂ, ಯದಿ ವಿನಶ್ಯೇತ-ನಾಶ ಹೊಂದುವುದಾದರೆ, ತರ್ಹಿ-ಆಗ, ಪುನರ್ಜನಿಃ-ಪುನರ್ಜನ್ಮವೇ ನ ಸ್ಯಾತ್-ಆಗದಿರಬೇಕು; (ಆದರೆ) ಲೋಕೇ-ಜಗತ್ತಿನಲ್ಲಿ ಇತ್ಥಂ-ಹೀಗೆ, ನೈವ ದೃಶ್ಯತೇ-ಕಂಡುಬರುವುದೇ ಇಲ್ಲ;

---

ಸರ್ವಪಾಪಗಳು ನಾಶವಾಗುತ್ತಿದ್ದರೆ, ಪುನರ್ಜನ್ಮವೇ ಇಲ್ಲವೆಂದಾದೀತು! ಆದರೆ ಜಗತ್ತಿನಲ್ಲಿ ವಸ್ತುಸ್ಥಿತಿ ಮಾತ್ರ ಹಾಗಿರುವುದು ಕಂಡುಬರುವುದಿಲ್ಲ. ಆದ್ದರಿಂದ, ಶಾಸ್ತ್ರಜ್ಞರ ಉತ್ತಮವಾದ ನಿರ್ಣಯವೇನೆಂದರೆ:— ಭಕ್ತಿಪೂರ್ವಕ ಉಚ್ಚರಿಸಲಾದ ಶ್ರೀವಿಷ್ಣುವಿನ ನಾಮವೇ, ಸರ್ವಪ್ರಕಾರದಿಂದ ಪಾಪಹರವಾಗುತ್ತದೆ; ಅಭಕ್ತರಿಂದ (ಭಕ್ತಿಯಿಲ್ಲದವರಿಂದ ಅಥವಾ ತಾಮಸ ಜೀವರಿಂದ) ಉಚ್ಚಾರಿತವಾದ ಶ್ರೀಹರಿನಾಮವು ಎಲ್ಲಿಯೂ ಫಲಪ್ರದವಾಗುವುದೇ ಇಲ್ಲ (೧೭-೨೦). ಮನಸ್ಸಿನಲ್ಲಿ ಭಕ್ತಿಯು ಜಾಗ್ರತವಾಗಿರುವಾಗ ಮಾತ್ರ, ಸಂಕೇತ ಪರಿಹಾಸಾದಿಗಳಿಂದ ಉಚ್ಚರಿಸಿದ ಶ್ರೀಹರಿನಾಮವು, ಪುರುಷನ

ತಸ್ಮಾತ್-ಆದ್ದರಿಂದ, ಏವಂ-ಹೀಗೆ (ಮುಂದೆ ಹೇಳುವಂತೆ), ವಿನಿರ್ಣಯಃ-ನಿಶ್ಚಯಿಸಲಾಗಿದೆ; ತದ್ಭಕ್ತಿಪೂರ್ವಕಂ-ಆತನಲ್ಲಿ ಭಕ್ತಿಪೂರ್ವಕವಾಗಿ ಉಚ್ಚರಿಸಲ್ಪಟ್ಟ ವಿಷ್ಣೋಃ-ಶ್ರೀವಿಷ್ಣುವಿನ, ನಾಮ-ನಾಮವೇ, ಸರ್ವಥಾ-ಸರ್ವಪ್ರಕಾರದಿಂದ (ನಿಶ್ಶೇಷವಾಗಿ), ಅಘಹರಂ-ಪಾಪವನ್ನು ಪರಿಹರಿಸುತ್ತದೆ; ಅಭಕ್ತೋದಾಹೃತಂ-ಭಕ್ತಿಯಿಲ್ಲದೇ ಉಚ್ಚರಿಸಿದುದು (ಮತ್ತು ದುರ್ಜನರಿಂದ ಉಚ್ಚರಿತವಾದುದು), ಕ್ವಚಿತ್-ಎಲ್ಲಿಯೂ (ಅಲ್ಪವಾಗಿ ಸಹ), ಫಲದಾತೃ-ಫಲವನ್ನು (ಪಾಪದಹನ ಫಲವನ್ನು) ಕೊಡುವುದು, ನೈವ ಭವೇತ್-ಆಗುವುದೇ ಇಲ್ಲ.

**ಯದಿ ಜಾಗರ್ತಿ ಚಿತ್ತೇ ಸ್ಯಾದ್ಭಕ್ತಿಸ್ತರ್ಹ್ಯೇವ ದೇಹಿನಃ ॥ ೨೧ ॥**
**ಸಂಕೇತಪರಿಹಾಸಾದೇಃ ಕೀರ್ತನಾತ್ಪಾಪಸಂಕ್ಷಯಃ ।**
**ಅಜಾಮಿಲಾದಯೋಽನ್ಯೇಽಪಿ ಪ್ರಾಯೋ ಯೇ ಪಾಪಕರ್ಮಿಣಃ ॥ ೨೨ ॥**
**ಸ್ವಭಾವೇನೈವ ತೇ ಭಕ್ತಾಃ ಪ್ರಾರಬ್ಧಾದ್ದುಷ್ಟಚೇತಸಃ ।**
**ಅಂತರ್ಭಕ್ತ್ಯೈವ ತಂ ನಾಮ ಜಗೃಹುರ್ನಾನ್ಯಥಾ ಕ್ವಚಿತ್ ॥ ೨೩ ॥**

ಯದಾ-ಯಾವಾಗ, ಚಿತ್ತೇ-ಮನಸ್ಸಿನಲ್ಲಿ, ಭಕ್ತಿಃ-ಭಕ್ತಿಯು, ಜಾಗರ್ತಿ ಸ್ಯಾತ್-ಜಾಗೃತವಾಗಿರುವುದೋ, ತರ್ಹಿ ಏವ-ಆಗ ಮಾತ್ರ, ದೇಹಿನಃ-ಜೀವನ,

ಪಾಪಗಳನ್ನು ನಾಶಮಾಡುತ್ತದೆ; ಅಜಾಮಿಲ ಮೊದಲಾದವರು ಮತ್ತು ಇತರ ಪಾಪಕರ್ಮಗಳಲ್ಲಿ ಆಸಕ್ತರು, ಪ್ರಾಯಃ ಸ್ವಭಾವದಿಂದ ಭಕ್ತರೇ ಆಗಿದ್ದು, ಪ್ರಾರಬ್ಧ ಕರ್ಮದಿಂದ ಮಾತ್ರ ದುರ್ಬುದ್ಧಿಗಳಾಗಿರುವರು; ಮತ್ತು ಅವರೆಲ್ಲರೂ ಭಕ್ತಿಯುತ ಮನಸ್ಸಿನಿಂದಲೇ ಶ್ರೀಹರಿನಾಮವನ್ನು ಉಚ್ಚರಿಸಿದರು—ಅನ್ಯಥಾ ಅಲ್ಲ; ಕೇವಲ ಸಂಕೇತಾದಿಗಳಿಂದ ಹರಿನಾಮವನ್ನುಚ್ಚರಿಸಿ, ಪಾಪಕ್ಷಯವನ್ನು ಹೊಂದಲಿಲ್ಲ (೨೧-೨೩).[1] ಹೀಗೆ ಭಕ್ತಿಪೂರ್ವಕ ನಾಮೋಚ್ಚಾರಣೆ ಮಾಡಿದಾಗ ಮಾತ್ರ,

೧. ಅಜಾಮಿಲನ ನಾಮೋಚ್ಚಾರಣ ರಹಸ್ಯವನ್ನು ತಿಳಿಸುತ್ತ ಶ್ರೀಮದಾನಂದತೀರ್ಥ ಭಗವತ್ಪಾದರು, ಭಾಗವತ ತಾತ್ಪರ್ಯದಲ್ಲಿ ಹೀಗೆ ಹೇಳಿರುವರು:—'ಸರ್ವಥಾಽಘಹರಂ ವಿಷ್ಣೋರ್ನಾಮ ತದ್ಭಕ್ತಿಪೂರ್ವಕಂ । ಅಭಕ್ತೋದಾಹೃತಂ ನೈವ ಫಲದಾತೃ ಭವೇತ್ ಕ್ವಚಿತ್ । ನಾಮಸ್ವಾಮಿತಯಾ ತಸ್ಯ ಸ್ಮರಣಂ ಜಾಯತೇ ಯತಃ । ಭಕ್ತಸ್ಯಾತೋ ನಾಮಕೀರ್ತಿಃ ಸಂಕೇತಾದಾವಪೀರಿತಾ॥'—ಇದರಲ್ಲಿ ಈ ಗ್ರಂಥದ ವಾಕ್ಯವೇ ಉದಾಹೃತವಾಗಿರುವುದನ್ನು ಗಮನಿಸಬೇಕು; 'ಅಭಕ್ತೋದಾಹೃತಂ...' ಇದು ಈ ಅಧ್ಯಾಯದ ೨೦-೨೧ನೇ ಶ್ಲೋಕವಾಗಿದೆ. ಉದಾಹೃತ ವಾಕ್ಯಗಳ ಭಾವಾರ್ಥ:—'ಶ್ರೀಹರಿನಾಮೋಚ್ಚಾರಣವು ಭಕ್ತಿಪೂರ್ವಕವಾದುದಾದರೆ, ಸರ್ವಥಾ ಪಾಪಪರಿಹಾರಕವಾಗುತ್ತದೆ; ಭಕ್ತಿ ಇಲ್ಲದ ಉಚ್ಚಾರವು ಪಾಪಪರಿಹಾರಕವಲ್ಲ; ಸಂಕೇತಾದಿ ಹರಿನಾಮಕೀರ್ತನದಿಂದ, ಹರಿಯು ಈ ನಾಮಕ್ಕೆ ಸ್ವಾಮಿಯು (ಅದರಿಂದ ಮುಖ್ಯ ಪ್ರತಿಪಾದ್ಯನು) ಎಂಬ ಸ್ಮರಣವುಂಟಾಗುತ್ತದೆ; ಈ ಕಾರಣದಿಂದ ಹರಿಭಕ್ತನಿಗೆ ಪುತ್ರಾದಿಗಳ ಸಂಕೇತಾದಿಗಳಿಂದ ಉಚ್ಚರಿಸಿದರೆ ಸಹ, ಪಾಪಪರಿಹಾರಕವಾಗುತ್ತದೆ.'

ಪಾಪಸಂಕ್ಷಯಃ- ಪಾಪನಾಶವು, ಸಂಕೇತಪರಿಹಾಸಾದೇಃ-ಸಂಕೇತ ಪರಿಹಾಸಗಳ, (ನಿಮಿತ್ತದ) ಕೀರ್ತನಾತ್-(ಶ್ರೀಹರಿನಾಮ) ಕೀರ್ತನದಿಂದ, (ಸ್ಯಾತ್-ಆಗುತ್ತದೆ); ಅಜಾಮಿಲಾದಯಃ- ಅಜಾಮಿಲನೇ ಮೊದಲಾದವರು, ಯೇ-ಯಾವ, ಅನ್ಯೇ-ಇತರರಾದ, ಪಾಪಕರ್ಮಿಣಃ ಅಪಿ-ಪಾಪಕರ್ಮಗಳನ್ನಾಚರಿಸಿದವರು ಸಹ, ಪ್ರಾಯಃ-ಬಹುಪಾಗಿ, ಸ್ವಭಾವೇನ ಏವ-ಸ್ವರೂಪದಿಂದಲೇ, ಭಕ್ತಾಃ-ಭಕ್ತರು; ಪ್ರಾರಬ್ಧಾತ್-ಪ್ರಾರಬ್ಧ ಕರ್ಮದ ಪ್ರಭಾವದಿಂದ, ದುಷ್ಟಚೇತಸಃ-ದುರ್ಬುದ್ಧಿಗಳು (ಆಗಿ ವರ್ತಿಸುವರು); (ಅವರು), ಅಂತರ್ಭಕ್ತ್ಯೈವ-ಅಂತರಂಗದಲ್ಲಿ ಭಕ್ತಿಯುಳ್ಳವರಾಗಿಯೇ (ಮನಸ್ಸಿನ ಭಕ್ತಿಯಿಂದಲೇ), ತಂ ನಾಮ-ಆ (ಶ್ರೀಹರಿಯ) ನಾಮವನ್ನು ಜಗೃಹುಃ- ಉಚ್ಚರಿಸಿದರು (ಹಿಡಿದರು- ಆಶ್ರಯಿಸಿದರು); ಕ್ವಚಿತ್- ಎಲ್ಲಿಯೂ, ಅನ್ಯಥಾ ನ- ಬೇರೆಯಾಗಿ ಅಲ್ಲ (ಕೇವಲ ಪರಿಹಾಸಾದಿಗಳಿಂದಲ್ಲ).

ತರ್ಹ್ಯೇವ ತೇ ಗತಾ ಮುಕ್ತಿಂ ನ ಸಾ ಭಕ್ತ್ಯಾ ವಿನಾಽಪ್ಯತೇ ।
ಚೈದ್ಯಸಾಲ್ವಾದಯೋ ದೈತ್ಯಾ ಅನ್ಯೇಽಪಿ ಬಹವಃ ಪುರಾ ॥ ೨೪ ॥
ಸ್ವಭಾವಭಕ್ತಾಃ ಶ್ರೀಶಸ್ಯ ದುಷ್ಟಾವಿಷ್ಟಾ ದ್ವಿಷಂತ್ಯಮುಂ ।

ತರ್ಹಿ ಏವ- ಆಗಮಾತ್ರ (ಹಾಗೆ ಭಕ್ತಿಪೂರ್ವಕ ಹರಿನಾಮೋಚ್ಚಾರಣ ಮಾಡಿದಾಗ ಮಾತ್ರ), ತೇ-ಅವರು (ಸಂಕೇತಾದಿ ನಾಮಗಳನ್ನುಚ್ಚರಿಸಿದವರು), ಮುಕ್ತಿಂ- ಮುಕ್ತಿಯನ್ನು (ಸಕಲಪಾಪಗಳಿಂದ ಪರಿಹಾರವನ್ನು), ಗತಾಃ-ಹೊಂದಿರುವರು; ಸಾ-ಆ ಮುಕ್ತಿಯು, ಭಕ್ತ್ಯಾ ವಿನಾ-ಭಕ್ತಿಯನ್ನು ಬಿಟ್ಟು ನ ಆಪ್ಯತೇ-ಹೊಂದಲ್ಪಡುವುದಿಲ್ಲ; ಚೈದ್ಯಸಾಲ್ವಾದಯಃ-ಶಿಶುಪಾಲ, ಸಾಲ್ವ ಮೊದಲಾದ ದುರ್ಜನರು, ಅನ್ಯೇಽಪಿ- ಇನ್ನು ಇತರ, ಬಹವಃ- ಬಹುಜೀವರು, ಪುರಾ- ಹಿಂದೆ, (ಈ ಪರಿ ಮುಕ್ತರಾದವರು) ಶ್ರೀಶಸ್ಯ-ಶ್ರೀಹರಿಯ ಸ್ವಭಾವಭಕ್ತಾಃ-ಸ್ವರೂಪ ಸಿದ್ಧವಾದ (ಭಕ್ತಿಯುಳ್ಳವರು) ಭಕ್ತರು; ದುಷ್ಟಾವಿಷ್ಟಾಃ-ದೈತ್ಯರಿಂದ ಆವಿಷ್ಟರಾಗಿ (ಪ್ರಚುರದೈತ್ಯ ವ್ಯಾಪಾರವುಳ್ಳವರಾಗಿ ದೈತ್ಯರೆಂದೇ ಪ್ರಸಿದ್ಧರಾದವರಾಗಿ), ಅಮುಂ- ಶ್ರೀಹರಿಯನ್ನು ದ್ವಿಷಂತಿ- ದ್ವೇಷಿಸಿರುವರು.

ಭೂತಗ್ರಹಪಿಶಾಚಾದ್ಯೈರಾವಿಷ್ಟಸ್ಯ ತು ಕಸ್ಯಚಿತ್ ॥ ೨೫ ॥

---

ಅಜಾಮಿಲಾದಿಗಳು ಮುಕ್ತಿಯನ್ನು ಹೊಂದಿದರು; ಭಕ್ತಿಯಿಲ್ಲದೇ ಮುಕ್ತಿಯೆಂಬುದಿಲ್ಲ; ಇನ್ನು ಶಿಶುಪಾಲ, ಸಾಲ್ವ ಮೊದಲಾದವರೂ, ಮತ್ತು ಹಿಂದಿನ ಇನ್ನಿತರ ಬಹುಮಂದಿ, ಸ್ವರೂಪದಿಂದ ಶ್ರೀಹರಿಯ ಭಕ್ತರಾಗಿದ್ದು ದುಷ್ಟದೈತ್ಯರಿಂದ ಆವಿಷ್ಟರಾಗಿ, ಈತನನ್ನು (ಶ್ರೀಹರಿಯನ್ನು) ದ್ವೇಷಿಸಿದರು (೨೪). ಭೂತ, ಗ್ರಹ, ಪಿಶಾಚಾದಿಗಳಿಂದ ಆವಿಷ್ಟನಾದ ಯಾರೊಬ್ಬನ ದುರುಕ್ತಿ ಮೊದಲಾದವುಗಳಿಂದ ಸಜ್ಜನರಿಗೆ ಹೇಗೆ ಆತನಲ್ಲಿ ದ್ವೇಷಾದಿಗಳುಂಟಾಗುವು ದಿಲ್ಲವೋ, ಮತ್ತು ಅಲ್ಲಿ ಪ್ರವಿಷ್ಟನಾಗಿರುವ ಭೂತಾದಿಗಳನ್ನೇ

ದುರುಕ್ತಾದೇರ್ನ ಚೋದ್ವೇಗಸ್ತದೀಯಾನಾಂ ಪ್ರಜಾಯತೇ ।
ಕಿಂತು ಯೇನ ಪ್ರವಿಷ್ಟಃ ಸಃ ತಮೇವ ದ್ವಿಷತೇ ಜನಾಃ ॥ ೨೬ ॥
ತಸ್ಯಾಪಸಾರಬಂಧಾದೌ ಕ್ಲೇಶನಾದೌ ಯತಂತಿ ವಾ ।
ತಥಾ ಯೇನ ಸಮಾವಿಷ್ಟೋ ಹರಿದ್ವೇಷಂ ಕರೋತ್ಯಯಂ ॥ ೨೭ ॥
ತಮೇವ ಪಾತಯತ್ಯಂಧೇ ತಮಸಿ ದ್ವೇಷಿಣಂ ಹರಿಃ ।
ಭಕ್ತಂ ತು ತಾರಯತ್ಯೇವ ತದ್ಭಕ್ತೋ ನ ಪ್ರಣಶ್ಯತಿ ॥ ೨೮ ॥

ಭೂತಗ್ರಹ ಪಿಶಾಚಾದ್ಯೈಃ-ಭೂತ, ಪ್ರೇತ, ಪಿಶಾಚಾದಿಗಳಿಂದ, ಆವಿಷ್ಟಸ್ಯ-ಆವಿಷ್ಟನಾದ (ಆವೇಶ ಹೊಂದಿರುವ), ಕಸ್ಯಚಿತ್-ಯಾವನೊಬ್ಬನ, ದುರುಕ್ತಾದೇಃ ತು-ದುಷ್ಟನುಡಿ ಮೊದಲಾದ (ನಿಂದಾದಿ) ವರ್ತನೆಯಿಂದಲೇ, ತದೀಯಾನಾಂ-ಆತನ ಜನರಿಗೆ (ಸ್ವಜನರಿಗೆ), ಉದ್ವೇಗಃ-ದ್ವೇಷಾದಿಭಾವನೆಯು, ನ ಚ ಪ್ರಜಾಯತೇ-ಉಂಟಾಗುವುದೇ ಇಲ್ಲ; ಕಿಂತು-ಮತ್ತೇನೆಂದರೆ, ಸಃ-ಆತನು, ಯೇನ-ಯಾರಿಂದ, ಪ್ರವಿಷ್ಟಃ-ಆವಿಷ್ಟನಾಗಿರುವನೋ, ತಂ ಏವ-ಆತನನ್ನೇ (ಭೂತಪ್ರೇತಾದಿಯನ್ನೇ), ಜನಾಃ-ಜನರು, ದ್ವಿಷತೇ-ದ್ವೇಷಿಸುತ್ತಾರೆ; ತಸ್ಯ-ಆತನ (ಆ ದುಷ್ಟಚೇತನನ), ಅಪಸಾರಬಂಧಾದೌ-ಹೊರಗೆ ಹಾಕುವ, ಮತ್ತು ಬಂಧನಾದಿ ಮಾಡುವುದರಲ್ಲಿ ವಾ-ಮತ್ತು ಕ್ಲೇಶನಾದೌ-(ಅದಕ್ಕೆ) ಕ್ಲೇಶ ಕೊಡುವುದರಲ್ಲಿ (ದುಃಖವನ್ನುಂಟು ಮಾಡುವುದರಲ್ಲಿ), ಯತಂತಿ-ಯತ್ನಮಾಡುತ್ತಾರೆ; ತಥಾ-ಹಾಗೆಯೇ, ಅಯಂ-ಈತನು (ಶಿಶುಪಾಲಾದಿಗಳು), ಯೇನ-ಯಾರಿಂದ, ಸಮಾವಿಷ್ಟಃ-ಆವೇಶಗೊಂಡು, ಹರಿದ್ವೇಷಂ-ಶ್ರೀಹರಿಯ ದ್ವೇಷವನ್ನು ಕರೋತಿ-ಮಾಡುತ್ತಾನೆಯೋ, ತಂ ಏವ-ಆತನನ್ನೇ (ಆವಿಷ್ಟ ದುಷ್ಟಚೇತನವನ್ನೇ), ದ್ವೇಷಿಣಂ-ತನ್ನನ್ನು ದ್ವೇಷಿಸುವ ಆತನನ್ನೇ, ಅಂಧೇ ತಮಸಿ-ಅಂಧತಮಸ್ಸಿನಲ್ಲಿ ಪಾತಯತಿ-ಹಾಕುತ್ತಾನೆ; ಭಕ್ತಂ ತು-ಸ್ವಭಾವ ಭಕ್ತನಾದ ಜೀವನನ್ನು (ಶಿಶುಪಾಲಾದಿ ದೇಹಗಳಲ್ಲಿರುವ ಜಯ ಮೊದಲಾದ ತನ್ನ ಭಕ್ತರನ್ನು), ತಾರಯತಿ ಏವ-ರಕ್ಷಣೆಯನ್ನೇ ಮಾಡುತ್ತಾನೆ (ಸಂಸಾರದಿಂದ ದಾಟಿಸಿ

---

ದ್ವೇಷಿಸುವರೋ, ಹಾಗೂ ಆ ಭೂತಾದಿಗಳನ್ನು ದೇಹದಿಂದ ಹೊರಗೆ ಹಾಕಲು ಅಥವಾ ನಿರ್ವ್ಯಾಪಾರವಾಗುವಂತೆ ಬಂಧನಮಾಡಲು, ಅಥವಾ (ಆ ದುಷ್ಟವ್ಯಕ್ತಿಗೆ) ಅದಕ್ಕೆ ದುಃಖವನ್ನೇ ಉಂಟುಮಾಡಲು, ಹೇಗೆ ಯತ್ನಿಸುವರೋ, ಹಾಗೆಯೇ ಯಾರಿಂದ ಆವಿಷ್ಟನಾಗಿ, ತನ್ನನ್ನು ದ್ವೇಷಿಸುವನೋ, ಆ ಆವಿಷ್ಟ ದುಷ್ಟನನ್ನು ಅಂಧತಮಸ್ಸಿನಲ್ಲಿ ಕೆಡಹುತ್ತಾನೆ—ಭಕ್ತನಾದ ಆ ಪುರುಷನನ್ನು (ದೈತ್ಯರು ಆವಿಷ್ಟರಾದ ಜೀವನನ್ನು-ಸ್ವಭಾವ ಭಕ್ತನನ್ನು), ದುರಿತಗಳಿಂದ ಪಾರುಮಾಡುತ್ತಾನೆ; ಹರಿಭಕ್ತನು ಎಂದೂ ನಷ್ಟನಾಗುವುದಿಲ್ಲ (ಅನರ್ಥಗಳಿಗೆ ಒಳಗಾಗುವುದಿಲ್ಲ) (೨೫-೨೮). ಬಹುಜನ್ಮಗಳ

ಮುಕ್ತಿಯನ್ನೇ ಕೊಡುತ್ತಾನೆ); ತದ್ಭಕ್ತಃ-ಆತನ (ಶ್ರೀಹರಿಯ) ಭಕ್ತನು, ನ ಪ್ರಣಶ್ಯತಿ-(ಎಂದೂ) ನಷ್ಟನಾಗುವುದಿಲ್ಲ (ಪಾಪಗಳಿಂದ ದುಃಖಾದ್ಯನರ್ಥಗಳನ್ನು ಹೊಂದುವುದಿಲ್ಲ).

**ಜನ್ಮಜನ್ಮಾಂತರಾಭ್ಯಾಸಾತ್ಸಾಧಿತಂ ಯೇನ ಯದ್ಯಥಾ ।**
**ತತ್ತಥೈವ ಹಿ ಸಂವರ್ಧೇನ್ಮುಕ್ತೌ ತಮಸಿ ವಾ ಕ್ಷಿಪೇತ್ ॥ ೨೯ ॥**

**ದ್ವೇಷಿಣೋಽಪಿ ಯದಾ ಮುಕ್ತಿಸ್ತರ್ಹಿ ಭಕ್ತಿಂ ಕರೋತಿ ಕಃ ।**
**ರಮಾಬ್ರಹ್ಮಾದಯಃ ಕಿಂ ನು ಮೂಢಾಸ್ತದ್ಭಕ್ತಿಕಾರಿಣಃ ॥ ೩೦ ॥**

ಜನ್ಮಜನ್ಮಾಂತರಾಭ್ಯಾಸಾತ್-ಬಹುಜನ್ಮಗಳ ಅಭ್ಯಾಸದಿಂದ, ಯೇನ-ಯಾರಿಂದ (ಯಾವ ಜೀವನಿಂದ), ಯತ್-ಯಾವುದು (ಶ್ರೀಹರಿಭಕ್ತಿಯೋ ಅಥವಾ ದ್ವೇಷವೋ), ಯಥಾ-ಹೇಗೆ, ಸಾಧಿತಂ-ಸಾಧಿಸಲ್ಪಟ್ಟಿರುವುದೋ, ತತ್-ಅದು (ಭಕ್ತಿ ಅಥವಾ ದ್ವೇಷವು), ಸಂವರ್ಧೇತ್-ವೃದ್ಧಿಗೊಳ್ಳುತ್ತದೆ; ಮುಕ್ತೌ-ಮುಕ್ತಿಯಲ್ಲಿ ವಾ-ಅಥವಾ, ತಮಸಿ-ತಮಸ್ಸಿನಲ್ಲಿ (ಆ ಜೀವನನ್ನು) ಕ್ಷಿಪೇತ್-(ಶ್ರೀಹರಿಯು) ಹಾಕುತ್ತಾನೆ; ದ್ವೇಷಿಣಃ ಅಪಿ-(ಶ್ರೀಹರಿಯ) ದ್ವೇಷಿಗೂ ಸಹ, ಯದಾ ಮುಕ್ತಿಃ-ಮೋಕ್ಷವಾಗುವುದಾದರೆ, ತರ್ಹಿ-ಆಗ, ಕಃ-ಯಾರು, ಭಕ್ತಿಂ-ಭಕ್ತಿಯನ್ನು ಕರೋತಿ-ಮಾಡುತ್ತಾನೆ; ತದ್ಭಕ್ತಿಕಾರಿಣಃ-ಶ್ರೀಹರಿಯಲ್ಲಿ ಭಕ್ತಿಮಾಡುವ, ರಮಾಬ್ರಹ್ಮಾದಯಃ-ಶ್ರೀಮಹಾಲಕ್ಷ್ಮೀ, ಬ್ರಹ್ಮ ಮೊದಲಾದ ದೇವತೆಗಳು, ಕಿಂನು ಮೂಢಾಃ-ಮೂರ್ಖರೇನು? (ಸರ್ವಥಾ ಅಲ್ಲ-ಉತ್ತಮ ಜ್ಞಾನಿಗಳು-ಸರ್ವಜ್ಞರು).

**ತಮೇವಂ ವಿದ್ವಾನ್ ಅಮೃತೋ ಯಮೇವೈಷ ವೃಣುತೇತಿ ಸಃ ।**
**ಮೋಕ್ಷಭಾಗೀತಿವಾಕ್ ಶ್ರೌತೀ ಕಥಂ ಲೋಕಾನುಪಾದಿಶೇತ್ ॥ ೩೧ ॥**

**ವೈರಾಗ್ಯೇಣ ತದಾ ಕಿಂ ಸ್ಯಾತ್ಕಿಂ ವಾ ಸ್ಯಾಚ್ಛಮಾದಿಭಿಃ ।**
**ಕಿಂ ಯೋಗೈಶ್ಚಾಪಿ ಕಿಂ ದಾನೈರ್ಯಜ್ಞೈಃ ಕೃಚ್ಛ್ರಾದಿಭಿಶ್ಚ ಕಿಂ ॥ ೩೨ ॥**

**ಹಿರಣ್ಯಕಶಿಪುರ್ದ್ವೇಷಾದ್ಯದಿ ವಿಷ್ಣುಪದಂ ವ್ರಜೇತ್ ।**
**ಪ್ರಹ್ಲಾದಸ್ತತ್ಸುತಃ ಕಸ್ಮಾದ್ಧರಿಭಕ್ತಿಂ ದೃಢಾಂ ಚರೇತ್ ॥ ೩೩ ॥**

---

ಅಭ್ಯಾಸದಿಂದ, ಯಾವುದು ಸಾಧಿಸಲ್ಪಟ್ಟಿದೆಯೋ ಅದೇ (ಭಕ್ತಿ ಅಥವಾ ದ್ವೇಷವೇ) ವೃದ್ಧಿಗೊಳ್ಳುತ್ತದೆ; ತದನುಸಾರವಾಗಿ ಶ್ರೀಹರಿಯು ಆ ಜೀವನನ್ನು ಮೋಕ್ಷಕ್ಕಾಗಲಿ, ಅಂಧತಮಸ್ಸಿಗಾಗಲಿ ಹಾಕುತ್ತಾನೆ; ಹರಿದ್ವೇಷದಿಂದಲೂ ಮುಕ್ತಿಯಾಗುವುದಾದರೆ ಯಾರು ಭಕ್ತಿಯನ್ನು ಮಾಡುತ್ತಾರೆ? ಭಕ್ತಿಯನ್ನೇ ಸದಾಕಾಲದಲ್ಲಿ ಮಾಡುವ ರಮಾ ಬ್ರಹ್ಮಾದಿ ದೇವತೆಗಳು ಮೂಢರೇನು? ಅವರು ಜ್ಞಾನಿಗಳಲ್ಲಿ ಶ್ರೇಷ್ಠರು—ನಿರಂತರ ವಾಗಿ ಶ್ರೀಹರಿಯನ್ನು ಭಕ್ತಿಯಿಂದ ಸೇವಿಸುತ್ತಾರೆ (೨೯-೩೦). ಹಾಗೆ ಭಕ್ತಿಲಭ್ಯ

ತಂ-ಆ ಪರಬ್ರಹ್ಮನನ್ನು ಏವಂ-ಹೀಗೆ (ಸರ್ವೋತ್ತಮನೆಂದು), ವಿದ್ವಾನ್-ತಿಳಿದವನೇ (ಈ ಪ್ರಕಾರದ ಯಥಾರ್ಥ ಜ್ಞಾನನಿಶ್ಚಯವುಳ್ಳವನೇ), ಅಮೃತಃ-ಮುಕ್ತನು (ಭವತಿ-ಆಗುತ್ತಾನೆ; ಅನ್ಯಮಾರ್ಗವಿಲ್ಲ ಇತ್ಯಾದಿ) ಎಂದೂ, ಏಷಃ-ಈ ಪರಬ್ರಹ್ಮನು, ಯಂ-ಯಾವ ಜೀವನನ್ನು ವೃಣುತೇ-ಸ್ವೀಕರಿಸುವನೋ (ಸಂಸಾರದಿಂದ ಮೋಚನೆ ಮಾಡುವೆನೆಂದು ಸಂಕಲ್ಪಿಸುವನೋ-ಯಾರ ವಿಷಯದಲ್ಲಿ ಈ ವಿಧ ಪ್ರಸನ್ನತೆಯುಳ್ಳವನಾಗುವನೋ), ಸಃ ಏವ-ಆತನೇ (ಆ ಜೀವನೇ), ಮೋಕ್ಷಭಾಗೀ-ಮೋಕ್ಷವನ್ನು ಹೊಂದುವವನು, ಇತಿ-ಎಂದು, ಶ್ರೌತೀ ವಾಕ್-ವೇದವಾಣಿಯು (ಅಪೌರುಷೇಯ ವಾಕ್ಯವು), ಕಥಂ-ಹೇಗೆ, ಲೋಕಾನ್-ಪ್ರಜೆಗಳನ್ನು (ಜೀವರನ್ನು ಉದ್ದೇಶಿಸಿ), ಉಪದಿಶೇತ್-ಉಪದೇಶ ಮಾಡೀತು? ತದಾ-ಆಗ (ಭಕ್ತಿ ಲಭ್ಯವಾದ ಶ್ರೀಹರಿ ಪ್ರಸನ್ನತೆಯು ಅವಶ್ಯಕವಿಲ್ಲವೆಂದರೆ), ವೈರಾಗ್ಯೇಣ-ವಿಷಯ ವೈರಾಗ್ಯದಿಂದ, ಕಿಂ ಸ್ಯಾತ್-ಏನು ಫಲವಾಗುವುದು? ಚ-ಮತ್ತು ಸಮಾಧಿಭಿಃ-ಮನೋನಿಗ್ರಹಾದಿಗಳಿಂದ (ಧ್ಯಾನಾದಿಗಳಿಂದ), ಕಿಂ ವಾ ಸ್ಯಾತ್-ಏನುತಾನೆ ಆದೀತು? ಅಪಿ ಚ-ಮತ್ತೂ ಕಿಂ ಯೋಗೈಃ-ಅನ್ಯಸಾಧನೆಗಳಿಂದೇನು ಫಲ? ದಾನೈಃ ಕಿಂ- ದಾನಗಳಿಂದೇನು? ಯಜ್ಞೈಃ-ವಿವಿಧ ಯಜ್ಞಗಳಿಂದಲೂ, ಕೃಚ್ಛ್ರಾದಿಭಿಃ-ಕೃಚ್ಛ್ರ (ಚಾಂದ್ರಾಯಣಾದಿ ವ್ರತಾನುಷ್ಠಾನಾದಿ)ಗಳಿಂದ, ಕಿಂ-ಏನು ಪ್ರಯೋಜನ? (ಈ ಎಲ್ಲವೂ ವ್ಯರ್ಥವೆಂದೇ ಪ್ರಾಪ್ತವಾಗುವುದಿಲ್ಲವೇ?); ಹಿರಣ್ಯಕಶಿಪುಃ-ಹಿರಣ್ಯಕಶಿಪುವು, ದ್ವೇಷಾತ್-ಹರಿದ್ವೇಷದಿಂದ, ವಿಷ್ಣುಪದಂ-ಶ್ರೀವಿಷ್ಣುವಿನ ಸ್ಥಾನವನ್ನು (ಮೋಕ್ಷವನ್ನು) ಯದಿ ವ್ರಜೇತ್-ಹೊಂದಿದನಾದರೆ, ತತ್ಸುತಃ-ಅವನ ಮಗನಾದ, ಪ್ರಹ್ಲಾದಃ- ಪ್ರಹ್ಲಾದನು, ದೃಢಾಂ-ದೃಢವಾದ, ಹರಿಭಕ್ತಿಂ-ಶ್ರೀಹರಿ ಭಕ್ತಿಯನ್ನು ಕಸ್ಮಾತ್-ಏಕೆ (ಯಾವ ಕಾರಣದಿಂದ), ಚರೇತ್-ಮಾಡಿದನು? (ಆದ್ದರಿಂದ ಹಿರಣ್ಯಕಶಿಪುಗೆ ದ್ವೇಷದಿಂದ ತಮಸ್ಸೇ ದೊರೆಯಿತು-ಆ ದೇಹದಲ್ಲಿದ್ದ ಸ್ವಭಾವಭಕ್ತನಾದ ಜಯನಿಗೆ ಮುಕ್ತಿ ದೊರೆಯಿತು-ವೈಕುಂಠ ಸ್ಥಾನವು ಲಭಿಸಿತು).

ಜ್ವರಿತೋ ಯಃ ಪಿಬೇತ್ ಕ್ಷೀರಂ ಭ್ರಾಂತ್ಯಾ ವಾ ಪ್ರಮಯಾಥ ವಾ ।
ತಿಕ್ತಮೇವ ಭವೇತ್ತಚ್ಚ ಜ್ವರಂ ಚಾಪಿ ವಿವರ್ಧಯೇತ್ ॥ ೩೪ ॥

---

ಪ್ರಸಾದದಿಂದಲೇ ಮೋಕ್ಷವು ಲಭ್ಯವಲ್ಲದಿದ್ದರೆ, ವೇದವಾಣಿಯು (ನಿತ್ಯವೂ ಅಪೌರುಷೇಯವೂ, ಆದ್ದರಿಂದಲೇ ನಿರ್ದುಷ್ಟವೂ ಆದ ವೇದವು), ಶ್ರೀಹರಿಯನ್ನು ಸರ್ವೋತ್ತಮನೆಂಬ ಜ್ಞಾನ ನಿಶ್ಚಯವುಳ್ಳವನೇ (ಆ ಜ್ಞಾನಲಭ್ಯ ಭಕ್ತಿಯಿಂದ) ಮುಕ್ತನಾಗುತ್ತಾನೆ (ಅಮೃತನಾಗುತ್ತಾನೆ— ನಿತ್ಯಾನಂದ ಸ್ಥಿತಿಯನ್ನು ಹೊಂದುತ್ತಾನೆ); ಮತ್ತು ಶ್ರೀಹರಿಯು, ಯಾರನ್ನು ಆರಿಸಿಕೊಳ್ಳುವನೋ, (ಯಾವ ಜೀವನಿಗೆ ಮುಕ್ತಿಯನ್ನೀಯುವೆನೆಂದು ಸಂಕಲ್ಪಿಸುವನೋ) ಆತನೇ ಮೋಕ್ಷಭಾಗಿಯಾಗುತ್ತಾನೆ,

ತಥಾ ಸ್ವಭಾವದುಷ್ಟೇನ ಹರಿರ್ಧ್ಯಾತಃ ಸ್ಮೃತೋಽಪಿ ವಾ ।
ಸರ್ವಥಾಽಪಕರೋತ್ಯೇವ ತದರ್ಥಂ ಹಿ ಯತಸ್ತಮಃ ॥ ೩೫ ॥
ಅನ್ಯಥಾ ಕಸ್ತಮೋ ಯಾಯಾದ್ಯದನಾರಂಭಣಶ್ರುತೌ ।
ಅನಂತಂ ವಪ್ರಮಿತ್ಯುಕ್ತಂ ನ ಪರಾವರ್ತತೇ ಯತಃ ॥ ೩೬ ॥

ಯಃ-ಯಾರೊಬ್ಬನು, ಜ್ವರಿತಃ-ಜ್ವರಪೀಡಿತನಾಗಿ, ಭ್ರಾಂತ್ಯಾ-ಭ್ರಮೆಯಿಂದಾಗಲಿ, ಅಥವಾ, ಪ್ರಮಯಾ ವಾ-ಯಥಾರ್ಥವಾಗಿ ತಿಳಿದೇ ಆಗಲಿ, ಕ್ಷೀರಂ-ಹಾಲನ್ನು ಪಿಬೇತ್-ಕುಡಿದರೆ, ತತ್-ಅದು, ತಿಕ್ತಂ ಏವ-ಕಹಿಯಾಗಿಯೇ, ಭವೇತ್-ಆಗುತ್ತದೆ (ರುಚಿದೋರುತ್ತದೆ); ಅಪಿ ಚ ಮತ್ತು (ನಾಲಿಗೆಗೆ ಕಹಿದೋರುವುದು ಮಾತ್ರವಲ್ಲ), ಜ್ವರಂ-ಜ್ವರವು, ವಿವರ್ಧಯೇತ್-ಹೆಚ್ಚುಗುತ್ತದೆ; ತಥಾ-ಹಾಗೆಯೇ, ಸ್ವಭಾವ ದುಷ್ಟೇನ-ಸ್ವರೂಪದಿಂದಲೇ ದುಷ್ಟನಾದ (ಹರಿದ್ವೇಷಿಯಾದ)ವನಿಂದ, ಹರಿಃ-ಶ್ರೀಹರಿಯು, ಧ್ಯಾತಃ-ಚಿಂತಿಸಲ್ಪಟ್ಟವನು, ವಾ-ಅಥವಾ, ಸ್ಮೃತಃ-ಸ್ಮರಿಸಲ್ಪಟ್ಟವನು (ಆದರೆ), ಸರ್ವಥಾ-ಎಲ್ಲ ವಿಧದಿಂದ, ತದರ್ಥಂ-ಅವುಗಳ ಪ್ರಯೋಜನವನ್ನು (ಧ್ಯಾನ, ಸ್ಮೃತಿಗಳ ಫಲವನ್ನು), ಅಪಕರೋತಿ ಏವ-ವಿರುದ್ಧವನ್ನೇ ಮಾಡುತ್ತದೆ; ಯತಃ-ಆ ಕಾರಣದಿಂದಲೇ, ತಮಃ-ತಮಸ್ಸು (ತಮಃಪ್ರಾಪ್ತಿಯು), ಹಿ-ಎಂಬುದು

---

ಎಂದು, ಪ್ರಜೆಗಳನ್ನು ಉದ್ದೇಶಿಸಿ ಏಕೆ ಉಪದೇಶ ಮಾಡುವುದು?[1] (ಮಾಡುತ್ತಿರಲಿಲ್ಲ); ದ್ವೇಷಾದಿಗಳಿಂದ ಸಹ ಮೋಕ್ಷವಾಗುವಂತಿದ್ದರೆ, ಕಷ್ಟಸಾಧ್ಯವಾದ ವೈರಾಗ್ಯದಿಂದೇನು ಫಲ? ಧ್ಯಾನಾದಿಸಾಧನಗಳಿಂದೇನು ಪ್ರಯೋಜನ? ವಿವಿಧ ಯೋಗಗಳಿಂದ, ದಾನಗಳಿಂದ, ಯಜ್ಞಗಳಿಂದ, ಕೃಚ್ಛ್ರ (ಚಾಂದ್ರಾಯಣಾದಿ ವ್ರತಾಚರಣೆ)ಗಳಿಂದ, ಏನು ಫಲ? (ವ್ಯರ್ಥವೆಂದು ಪ್ರಾಪ್ತ ವಾಗುವುದಿಲ್ಲವೇ?); ಹಿರಣ್ಯಕಶಿಪುವು ದ್ವೇಷದಿಂದ, ವಿಷ್ಣುಪದವನ್ನು ಹೊಂದಿದ್ದು ಸತ್ಯವಾದರೆ (ದ್ವೇಷದಿಂದ ಅಂಧತಮಸ್ಸೇ ಲಭಿಸಿತು) ಆತನ ಮಗನಾದ ಪ್ರಹ್ಲಾದನು ದೃಢವಾದ ಹರಿಭಕ್ತಿಯನ್ನೇಕೆ ಆಚರಿಸಿದನು? (೩೧-೩೩). ಜ್ವರಪೀಡಿತನೊಬ್ಬನು, ಕ್ಷೀರವನ್ನು ಹಾಲೆಂದು ತಿಳಿದಾಗಲಿ ಅಥವಾ ಭ್ರಾಂತಿಯಿಂದಾಗಲಿ, ಪಾನಮಾಡಿದರೆ, ಅದು ಅವನಿಗೆ ಕಹಿಯಾಗಿ ರುಚಿದೋರು ತ್ತದಲ್ಲದೇ ಜ್ವರವೂ ವೃದ್ಧಿಯಾಗುತ್ತದೆ; ಅದರಂತೆ, ಸ್ವರೂಪದಿಂದಲೇ ದುಷ್ಟನಾದ (ಹರಿದ್ವೇಷಿಯಾದ) ದೇಹಿಯು, ಶ್ರೀಹರಿಯನ್ನು ಧ್ಯಾನಿಸಲಿ ಅಥವಾ ಸ್ಮರಿಸಲಿ, ಅದರಿಂದ ಆತನಿಗೆ, ಸುಜೀವಿಗೆ ದೊರೆಯುವ ಫಲದಿಂದ ವಿರುದ್ಧವಾದ, ಫಲವೇ

---

೧. 'ತಮೇವಂ ವಿದ್ವಾನ್ ಅಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ' ಮತ್ತು 'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬುವೇ ಪ್ರಸಕ್ತ ಶ್ರುತಿವಾಕ್ಯಗಳು—ಅವುಗಳ ಅರ್ಥವೇ ತಾತ್ಪರ್ಯದಲ್ಲಿ ಉಕ್ತವಾಗಿವೆ.

ಶಾಸ್ತ್ರಸಿದ್ಧಃ ಅನ್ಯಥಾ-ಹಾಗಲ್ಲದಿದ್ದರೆ, ಕಃ-ಯಾರು, ತಮಃ-ತಮಸ್ಸನ್ನು ಯಾಯಾತ್-ಹೊಂದುವನು? (ಹರಿದ್ವೇಷದಿಂದಲ್ಲದೇ ತಮಸ್ಸಿಲ್ಲ-ಸರ್ವವಿಧ ದ್ವೇಷಗಳು ಈ ಹಿಂದೆ ಪ್ರಸಕ್ತವಾಗಿ ವಿವರಿಸಲ್ಪಟ್ಟಿವೆ); ಯತ್-ಯಾವುದು (ಆ ತಮಸ್ಸು), ಅನಾರಂಭಣ ಶ್ರುತೌ-ಅನಾರಂಭಣ ಶ್ರುತಿಯಲ್ಲಿ (ಅನಾದಿ ಎಂದು ಹೇಳುವ ವೇದದಲ್ಲಿ), ಅನಂತಂ-ನಿತ್ಯವೆಂದೂ, ವಪ್ರಂ-ವಪ್ರನಾಮಕವೆಂದೂ (ಮತ್ತು) ಯತಃ-ಎಲ್ಲಿಂದ, ನ ಪರಾವರ್ತತೇ-ತಿರಿಗಿ ಬರುವುದಿಲ್ಲವೋ, ಇತಿ-ಎಂದೂ, ಉಕ್ತಂ-ಹೇಳಲ್ಪಟ್ಟಿರುತ್ತದೆ.

ರಹಸ್ಯಮಿತ್ಥಂ ಜ್ಞಾತ್ವೈವ ಪ್ರಿಯವ್ರತಮುಖಾ ನೃಪಾ ।
ತಸ್ಯ ಭಕ್ತ್ಯೈವ ಪರಮಂ ಯಾತಾಃ ಪದಮಲೌಕಿಕಂ ॥ ೩೭ ॥
ತ್ಯಕ್ತವಾನ್ ರಾವಣಂ ಭ್ರಾತಾ ಜ್ಯೇಷ್ಠಂ ಬಂಧುರ್ವಿಭೀಷಣಃ ।
ಸರ್ವಸ್ವಮರ್ಪಯದ್ಭಕ್ತ್ಯಾ ವಾಮನಾಯ ಬಲಿಃ ಪುರಾ ॥ ೩೮ ॥
ಪತಿಪುತ್ರಗೃಹಾದೀನಿ ತ್ಯಕ್ತ್ವಾ ಗೋಪ್ಯೋಽಪಿ ತಂ ಯಯುಃ ।
ಪೂರ್ವಂ ರಾಜಾ ವಿದೇಹಾಖ್ಯಸ್ತ್ಯಕ್ತಕಾಮೋ ಹರಿಂ ವ್ರಜತ್ ॥ ೩೯ ॥
ರಾಜರ್ಷಿದೇವರ್ಷಿಮುಖ್ಯಾಃ ಸಮಸ್ತಾ
ಬ್ರಹ್ಮರ್ಷಯಶ್ಚಾಪಿ ಸಮಾಧಿಯೋಗೈಃ ।
ತ್ಯಕ್ತಾಶನಾಸ್ತ್ಯಕ್ತ ಶರೀರಭಾವಾಃ
ಸರ್ವಾತ್ಮನಾ ತಂ ಶರಣಂ ಪ್ರಪನ್ನಾಃ ॥ ೪೦ ॥

ಇತ್ಥಂ-ಹೀಗಿರುವ, ರಹಸ್ಯಂ-ರಹಸ್ಯವನ್ನು ಜ್ಞಾತ್ವಾ ಏವ-ತಿಳಿದೇ, ಪ್ರಿಯವ್ರತಮುಖಾಃ-ಪ್ರಿಯವ್ರತನೇ ಮೊದಲಾದ, ನೃಪಾಃ-ರಾಜರು, ತಸ್ಯ-ಶ್ರೀಹರಿಯ, ಭಕ್ತ್ಯಾ ಏವ-ಭಕ್ತಿಯಿಂದಲೇ, ಅಲೌಕಿಕಂ-ಲೋಕವಿಲಕ್ಷಣವಾದ, ಪರಮಂ-ಶ್ರೇಷ್ಠವಾದ, ಪದಂ-ಸ್ಥಾನವನ್ನು (ಉತ್ತಮ ಗತಿಯನ್ನು), ಯಾತಾಃ-ಹೊಂದಿದರು; ಬಂಧುಃ-ಬಂಧುವಾದ, ಭ್ರಾತಾ-ಸಹೋದರ, ವಿಭೀಷಣಃ-ವಿಭೀಷಣನು,

---

ದೊರೆಯುತ್ತದೆ—(ದುಷ್ಟಸ್ವರೂಪವು ಜ್ವರಗ್ರಸ್ತಜೀವನಿದ್ದಂತೆ; ಹರಿಧ್ಯಾನ ಸ್ಮರಣೆಗಳು ಕ್ಷೀರವಿದ್ದಂತೆ; ಜ್ವರಿತನಿಗೆ ಕ್ಷೀರದಿಂದ ಲಭಿಸಬೇಕಾದ್ದರಿಂದ ವಿರುದ್ಧವಾದ ಫಲವೇ ದೊರೆಯುವಂತೆ, ದುಷ್ಟನಿಗೆ ತಮಸ್ಸೇ ಲಭಿಸುತ್ತದೆಂದು ತಾತ್ಪರ್ಯ); ಹಾಗಲ್ಲದಿದ್ದರೆ, (ಧ್ಯಾನಸ್ಮರಣೆಗಳಿಂದ) ಯಾರುತಾನೇ ತಮಸ್ಸನ್ನು ಹೊಂದಿಯಾರು? ತಮಸ್ಸಾದರೋ ಶ್ರುತಿಯು, ಆದಿ ಮತ್ತು ಅಂತ್ಯಗಳಿಲ್ಲದ (ಸೃಷ್ಟಿ ಲಯಗಳಿಲ್ಲದ, ಪ್ರಲಯಕಾಲದಲ್ಲಿ (ವೈಕುಂಠಾದಿಗಳಂತೆ) ಸಹ ನಾಶವಿಲ್ಲದ ನಿತ್ಯ ಸ್ಥಾನವೆಂದೂ, ಅಲ್ಲಿಂದ (ಯಾರೂ, ಎಂದೂ) ಹಿಂದಿರುಗಿ ಬರುವುದಿಲ್ಲವೆಂದೂ, ಹೇಳುತ್ತದೆ (೩೪-೩೬). (ಈ ರಹಸ್ಯಶಾಸ್ತ್ರ) ಪ್ರಮೇಯವನ್ನು ತಿಳಿದೇ, ಪ್ರಿಯವ್ರತನೇ ಮೊದಲಾದ ರಾಜರು,

ಜ್ಯೇಷ್ಠಂ-ಅಣ್ಣನಾದ, ರಾವಣಂ-ರಾವಣನನ್ನು, ತ್ಯಕ್ತವಾನ್-ತ್ಯಜಿಸಿದನು (ಶ್ರೀರಾಮ ನನ್ನೇ ಶರಣುಹೊಂದಿದನು); ಪುರಾ-ಪೂರ್ವದಲ್ಲಿ, ಬಲಿಃ-ಬಲಿಚಕ್ರವರ್ತಿಯು, ಭಕ್ತ್ಯಾ-ಭಕ್ತಿಯಿಂದ, ವಾಮನಾಯ-ವಾಮನರೂಪಿ ಶ್ರೀಹರಿಗೆ, ಸರ್ವಸ್ವಂ-(ತನ್ನ) ಎಲ್ಲವನ್ನೂ (ರಾಜ್ಯೈಶ್ವರ್ಯಾದಿಗಳನ್ನು), ಅರ್ಪಯತ್-ಅರ್ಪಿಸಿದನು; ಗೋಪ್ಯಃ-ಗೋಪಿಕಾಸ್ತ್ರೀಯರು, ಪತಿ ಪುತ್ರ-ಗೃಹಾದೀನಿ ಅಪಿ-ಪತಿ, ಪುತ್ರ, ಗೃಹಾದಿಗಳನ್ನು ಸಹ, ತ್ಯಕ್ತ್ವಾ-ತ್ಯಜಿಸಿ, ತಂ-ಶ್ರೀಕೃಷ್ಣನನ್ನು, ಯಯುಃ-ಹೊಂದಿದರು; ಪೂರ್ವಂ-ಹಿಂದೆ, ವಿದೇಹಾಖ್ಯಃ-ವಿದೇಹನೆಂಬ, ರಾಜಾ-ರಾಜನು, ತ್ಯಕ್ತಕಾಮಃ-ಸರ್ವಕಾಮಗಳನ್ನು ತ್ಯಜಿಸಿದವನಾಗಿ, ಹರಿಂ-ಶ್ರೀಹರಿಯನ್ನು, ವ್ರಜತ್-ಹೊಂದಿದನು; (ಹೆಚ್ಚೇನು!), ರಾಜರ್ಷಿದೇವರ್ಷಿಮುಖ್ಯಾಃ-ರಾಜಋಷಿಗಳು, ದೇವಋಷಿಗಳೇ ಮೊದಲಾದವರೂ, ಸಮಸ್ತಾಃ-ಎಲ್ಲ, ಬ್ರಹ್ಮರ್ಷಯಶ್ಚ ಅಪಿ-ಬ್ರಹ್ಮಋಷಿಗಳೂ ಸಹ, ಸಮಾಧಿ ಯೋಗೈಃ-ಧ್ಯಾನಯೋಗಾದಿಗಳಿಂದ, ತ್ಯಕ್ತಾಶನಾಃ-ಅನ್ನಾಹಾರಗಳನ್ನು ಬಿಟ್ಟು, ತ್ಯಕ್ತಶರೀರಭಾವಾಃ-ದೇಹಾಭಿಮಾನವನ್ನು ತ್ಯಜಿಸಿದವರಾಗಿ, (ದೈಹಿಕ ಸರ್ವಸುಖಗಳನ್ನು ತ್ಯಜಿಸಿ), ಸರ್ವಾತ್ಮನಾ-ಸರ್ವಭಾವದಿಂದ (ಪಿತೃ, ಮಾತೃ, ಬಂಧು ಇತ್ಯಾದಿ ಭಾವಗಳಿಂದ), ತಂ-ಆ ಶ್ರೀಹರಿಯನ್ನೇ, ಶರಣಂ-ಆಶ್ರಯವನ್ನು, ಪ್ರಪನ್ನಾಃ-ಹೊಂದಿದರು.

**ದ್ವೇಷೇಣ ಮುಕ್ತಿರ್ಯದಿ ಕಸ್ಯಚಿತ್ಸ್ಯಾತ್**
**ತರ್ಹ್ಯತ್ರ ಲೋಕೇಽಪಿ ಪರಸ್ಯ ತಾಪಾತ್ ।**
**ಸಂತೋಷತೋ ಲಬ್ಧಫಲಾಸ್ಸುರೇವ**
**ನೈನಂ ತಥಾ ತದ್ವಿಷತೋ ಹಿ ಮೋಕ್ಷಃ ॥ ೪೦ ॥**

ದ್ವೇಷೇಣ-ಹರಿದ್ವೇಷದಿಂದ, ಮುಕ್ತಿಃ-ಮೋಕ್ಷವು, ಕಸ್ಯಚಿತ್-ಯಾರೊಬ್ಬನಿಗೆ,

---

ಶ್ರೀಹರಿಯ ಭಕ್ತಿಯಿಂದಲೇ ಲೋಕವಿಲಕ್ಷಣವಾದ ಪರಮಪದವನ್ನು ಹೊಂದಿದರು; ಅನುಜನಾದ ವಿಭೀಷಣನು, ಹರಿಭಕ್ತಿಯಿಂದ ಪ್ರಭಾವಿತನಾಗಿಯೇ ಜ್ಯೇಷ್ಠನಾದ ರಾವಣನನ್ನು ತ್ಯಜಿಸಿ, ಶ್ರೀರಾಮನನ್ನು ಶರಣುಹೊಂದಿದನು; ಬಲಿಚಕ್ರವರ್ತಿಯು, ಪೂರ್ವದಲ್ಲಿ ಭಕ್ತಿಯಿಂದ ವಾಮನರೂಪಿ ಶ್ರೀಹರಿಗೆ ತನ್ನ ಸರ್ವಸ್ವವನ್ನೂ ಅರ್ಪಿಸಿದನು; ಗೋಪಿಕಾಸ್ತ್ರೀಯರೂ ಭಕ್ತಿಯಿಂದಲೇ ಪತಿ ಪುತ್ರ ಗೃಹಾದಿ ಸರ್ವವನ್ನೂ ತ್ಯಜಿಸಿ, ಶ್ರೀಕೃಷ್ಣನನ್ನು ಸೇರಿದರು; ಪೂರ್ವದಲ್ಲಿ ಹೀಗೆಯೇ ವಿದೇಹನೆಂಬ ರಾಜನು, ಸರ್ವಕಾಮಗಳನ್ನು ತ್ಯಜಿಸಿ, ಶ್ರೀಹರಿಯನ್ನೇ ಸೇರಿದನು; ಹೆಚ್ಚೇನು! ರಾಜರ್ಷಿ ದೇವರ್ಷಿ ಮೊದಲಾದವರೂ, ಸಮಸ್ತ ಬ್ರಹ್ಮರ್ಷಿಗಳೂ ಕೂಡ, ಶ್ರೀಹರಿಧ್ಯಾನಾದಿ ಸಾಧನಗಳಿಂದ, ಅನ್ನಾಹಾರಾದಿ ಗಳನ್ನೂ, ಶರೀರಾಭಿಮಾನವನ್ನೂ ತ್ಯಜಿಸಿ, ಸರ್ವಭಾವ ದಿಂದ ಶ್ರೀಹರಿಯನ್ನೇ ಶರಣುಹೊಂದಿದರು (೩೭-೪೦). ದ್ವೇಷಭಾವನೆಯಿಂದ ಯಾರೊಬ್ಬನಿಗೆ ಮೋಕ್ಷವು ದೊರೆಯುವುದೆಂಬುದು ಸಂಭಾವ್ಯವಾದರೆ, ಲೋಕದಲ್ಲಿ

ಯದಿ ಸ್ಯಾತ್-ಆಗುವುದಾದರೆ, ತರ್ಹಿ-ಆಗ, ಅತ್ರ-ಈ, ಲೋಕೇ-ಲೋಕದಲ್ಲಿ ಪರಸ್ಯ-ಅನ್ಯರ, ತಾಪಾತ್ ಅಪಿ-ಪೀಡೆಯಿಂದಲೂ, ಸಂತೋಷತಃ-ಸಂತೋಷದಿಂದ, ಲಬ್ಧಫಲಾಃ-ಇಷ್ಟಲಾಭವುಳ್ಳವರು, ಸ್ಯುಃ-ಆಗಬೇಕು; ತಥಾ ನೈನಂ-(ಆದರೆ) ಹಾಗೆ ಅನುಭವವಿಲ್ಲ; ತದ್ದ್ವಿಷತಃ-ಹರಿದ್ವೇಷಿಗಳಿಗೆ, ಮೋಕ್ಷಃ ನಹಿ-ಮುಕ್ತಿಯು ಇಲ್ಲವೇ ಇಲ್ಲ.

ದ್ರಷ್ಟವ್ಯಃ ಸರ್ವಥೈವಾತ್ಮಾ ತಮೇವೈಕಂ ಚ ಜಾನಥ ।
ನಾನ್ಯವಾರ್ತಾಃ ಕುರುಧ್ವಂ ಚ ಶ್ರೋತವ್ಯಃ ಪ್ರಥಮಂ ಹಿ ಸಃ ॥ ೪೨ ॥
ಮಂತವ್ಯಶ್ಚಿಂತನೀಯಶ್ಚ ಪ್ರೀತಃ ಸಾಕ್ಷಾದ್ಭವೇದ್ಧರಿಃ ।
ಪ್ರಸಾದೇನೈವ ತಸ್ಯೈವ ಮೋಕ್ಷಃ ಸ್ಯಾನ್ನೈತದನ್ಯಥಾ ॥ ೪೩ ॥
ಶ್ರುತಿರಾಹೇತ್ಥಮಾಶ್ವಾಸಾ ತಸ್ಮಾದ್ಭಕ್ತ್ಯೈವ ಮೋಚನಂ ।

ಸರ್ವಥಾ-ಸರ್ವವಿಧದಿಂದ (ಸರ್ವಪ್ರಯತ್ನದಿಂದ), ಆತ್ಮಾ-ಶ್ರೀಹರಿಯು, ದ್ರಷ್ಟವ್ಯಃ-ನೋಡಲ್ಪಡಬೇಕು (ಆತನ ದರ್ಶನವಿಲ್ಲದೇ ಮೋಕ್ಷವಿಲ್ಲ); (ಹಾಗೆ ಆತನನ್ನು ನೋಡಲಿಚ್ಛಿಸಿದರೆ), ಏಕಂ-ಸ್ವತಂತ್ರಪ್ರಭುವಾದ, ತಂ ಏವ-ಆತನನ್ನೇ, ಜಾನಥ-ತಿಳಿ; ಚ-ಮತ್ತು, ಅನ್ಯಾವಾರ್ತಾಃ-ಇತರ (ಲೌಕಿಕ) ವಾರ್ತೆಗಳನ್ನು ನ ಕುರುಧ್ವಂ-ಮಾಡಬೇಡ ('ತದಲಂ ಬಹುಲೋಕ ವಿಚಿಂತನಯಾ-ದ್ವಾದಶ ಸ್ತೋತ್ರದಲ್ಲಿ ಹೇಳಿದಂತೆ, ಬಹುಲೋಕವಾರ್ತೆಯನ್ನು ತ್ಯಜಿಸು); ಪ್ರಥಮಂ- ಮೊದಲಿಗೆ, ಸಃ-ಶ್ರೀಹರಿಯು, ಶ್ರೋತವ್ಯಃ-ಶ್ರವಣ ಮಾಡಲ್ಪಡಬೇಕು (ಮಹಿಮೆಗಳ

---

ಪರಪೀಡೆಯಿಂದ, ಇಷ್ಟಲಾಭವು ಸಂತೋಷವೂ ಆಗಬೇಕು—ಆದರೆ, ಲೋಕಾನುಭವವು ಹಾಗಿಲ್ಲ; ಆದ್ದರಿಂದ ಶ್ರೀಹರಿಯ ದ್ವೇಷದಿಂದ ಮೋಕ್ಷವಿಲ್ಲೆಂಬುದೇ ನಿರ್ಣಯವು (೪೧). ಶ್ರೀಹರಿಯನ್ನು ಸಂದರ್ಶಿಸಲಿಚ್ಛಿಸುವವನು, ಅನ್ಯ (ಲೋಕ) ವಾರ್ತೆಗಳನ್ನು ತ್ಯಜಿಸಿ, ಶ್ರೀಹರಿಸಂಬಂಧವಾದ ಜ್ಞಾನವನ್ನೇ ಸಂಪಾದಿಸಬೇಕು; (ಶ್ರೀಹರಿಯೊಬ್ಬನನ್ನೇ ತಿಳಿಯಬೇಕು); ಅದಕ್ಕಾಗಿ, ಮೊದಲಿಗೆ, ಆತನ ಮಹಿಮೆಗಳನ್ನು (ನಿರಂತರವಾಗಿ) ಶ್ರವಣಮಾಡಬೇಕು; ಆ ಮಹಿಮೆಗಳ (ಗುಣಗಳ) ಮನನ-ಧ್ಯಾನಗಳಿಂದ ಪ್ರೀತನಾದ ಶ್ರೀಹರಿಯು, ಪ್ರತ್ಯಕ್ಷ ಗೋಚರನಾಗುತ್ತಾನೆ (ದರ್ಶನ ಭಾಗ್ಯವನ್ನು ಕರುಣಿಸುತ್ತಾನೆ); ಮೋಕ್ಷವು, ಆತನ ಪ್ರಸಾದದಿಂದ ಮಾತ್ರ ಲಭ್ಯವಲ್ಲದೇ ಅನ್ಯಥಾ ದೊರೆಯುವುದೇ ಇಲ್ಲ; ಹೀಗೆಂದು ಶ್ರುತಿಯೇ ಭರವಸೆಯನ್ನು ನೀಡುತ್ತಿದೆ;[1] ಆದ್ದರಿಂದ ಭಕ್ತಿಯಿಂದ ಮಾತ್ರ ಮೋಕ್ಷವೆಂಬುದು ಸತ್ಯ (೪೨-೪೩). ಭಕ್ತಿಯಿಲ್ಲದೇ

---

೧. 'ತಮೇವೈಕಂ ಜಾನಥ ಅನ್ಯಾ ವಾಚಾ ವಿಮುಂಚಥ' ಇತ್ಯಾದಿ ಶ್ರುತಿವಾಕ್ಯಗಳ ತಾತ್ಪರ್ಯವನ್ನೇ ಇಲ್ಲಿ ಹೇಳಲಾಗಿದೆ.

ಶ್ರವಣವಾಗಬೇಕು); ಚ ಮತ್ತು (ನಂತರ), ಮಂತವ್ಯಃ-ಮನನಮಾಡಲ್ಪಡಬೇಕು; ಚಿಂತನೀಯಶ್ಚ-ಧ್ಯಾನವನ್ನೂ ಮಾಡತಕ್ಕದ್ದು (ಧ್ಯಾನಿಸಲ್ಪಡುವವನಾಗಬೇಕು); ಹರಿಃ-ಶ್ರೀಹರಿಯು, ಪ್ರೀತಃ-(ಭಕ್ತಿಯುತ ಶ್ರವಣಾದಿಗಳಿಂದ) ಪ್ರೀತನಾಗಿ, ಸಾಕ್ಷಾತ್ ಭವೇತ್-ಪ್ರತ್ಯಕ್ಷನಾಗುತ್ತಾನೆ; ತಸ್ಯ-ಶ್ರೀಹರಿಯ, ಪ್ರಸಾದೇನ ಏವ-ಪ್ರಸಾದಿಂದಲೇ, ಮೋಕ್ಷಃ-ಮೋಕ್ಷವು, ಸ್ಯಾತ್-ಆಗುತ್ತದೆ; ಏತತ್-ಇದು, (ಮೋಕ್ಷವು), ಅನ್ಯಥಾ-ಬೇರೆ ರೀತಿಯಿಂದ (ಬೇರಾವ ಪ್ರಕಾರದಿಂದಲೂ-ಯತ್ನದಿಂದಲೂ), ನೈವ-ಆಗುವುದೇ ಇಲ್ಲ; ಶ್ರುತಿಃ-ಶ್ರುತಿಯು ಇತ್ಥಂ-ಹೀಗೆ ಆಹ-ಹೇಳುತ್ತದೆ. ಆಶ್ವಾಸಾ-ಶ್ರುತಿಯು ನೀಡುವ ಭರವಸೆಯು ತಸ್ಮಾತ್-ಹೀಗಿರುವುದರಿಂದ, ಭಕ್ತ್ಯಾ ಏವ-ಭಕ್ತಿಯಿಂದಲೇ, ಮೋಚನಂ-ಮೋಕ್ಷವು.

> ವಿನಾ ಭಕ್ತ್ಯಾ ಪ್ರಸಾದೋ ನ ಮುಕ್ತಿಃ ಸ್ಯಾತ್ತಂ ವಿನಾ ನ ಹಿ ॥ ೪೪ ॥
> ಅತೋ ದ್ವೇಷೇಣ ಮುಕ್ತಿಃ ಸ್ಯಾತ್ ಕಿಂತು ಸ್ಯಾತ್ತು ತಮಸ್ಥಿತಿಃ ।
> ರಹಸ್ಯಂ ಪರಮಂ ಏತದ್ವಿಷ್ಣೋರಮಿತತೇಜಸಃ ॥ ೪೫ ॥
> ಯಥಾ ಶ್ರುತಂ ಭಗವತೋ ವ್ಯಾಸಾದುಕ್ತಂ ಭವತ್ಸು ತತ್ ।
> ಶ್ರವಣಾತ್ಪಠನಾದಸ್ಯ ಚಿಂತನಾದಪಿ ಮಾನವಃ ।
> ಪ್ರಾಪ್ನೋತಿ ಪರಮಾಂ ಭಕ್ತಿಂ ವಿಷ್ಣೋರಮಿತತೇಜಸಃ ॥ ೪೬ ॥

ವಿನಾ ಭಕ್ತ್ಯಾ-ಭಕ್ತಿಯಿಲ್ಲದೇ, ಪ್ರಸಾದಃ-ಪ್ರಸಾದವು, ನ-ಇಲ್ಲ (ದೊರೆಯುವುದಿಲ್ಲ); ತಂ ವಿನಾ-ಅದಿಲ್ಲದೇ (ಪ್ರಸಾದವಿಲ್ಲದೇ), ಮುಕ್ತಿಃ-ಮೋಕ್ಷವು, ನ ಸ್ಯಾತ್-ಆಗುವುದಿಲ್ಲ; ಹಿ-ಹೀಗೆಂಬುದು ಶಾಸ್ತ್ರನಿರ್ಣಯವು; ಅತಃ-ಆದ್ದರಿಂದ, ದ್ವೇಷೇಣ-ಹರಿದ್ವೇಷದಿಂದ, ಮುಕ್ತಿಃ-ಮುಕ್ತಿಯು, ಸ್ಯಾತ್-ಆಗುತ್ತದೆ; ಕಿಂತು-ಆದರೆ, ತಮಸ್ಥಿತಿಃ-ಅಂಧತಮಸ್ಸಿನಲ್ಲಿರುವುದೆಂಬ ತು-ಆ ಮುಕ್ತಿಯೇ, ಸ್ಯಾತ್-ಆಗುತ್ತದೆ; ಅಮಿತ ತೇಜಸಃ-ಪೂರ್ಣಶಕ್ತನಾದ, ವಿಷ್ಣೋಃ-ಶ್ರೀವಿಷ್ಣುವಿನ, ಏತತ್-ಈ, ಪರಮಂ-ಶ್ರೇಷ್ಠವಾದ, ರಹಸ್ಯಂ-ರಹಸ್ಯವು, ಭಗವತಃ-ಪರಮಪೂಜ್ಯರಾದ (ನಾರಾಯಣಾವತಾರರಾದ-ಷಡ್ಗುಣೈಶ್ವರ್ಯಪೂರ್ಣರಾದ), ವ್ಯಾಸಾತ್-ಶ್ರೀ ವೇದವ್ಯಾಸರಿಂದ,

---

ಪ್ರಸಾದವಿಲ್ಲ; ಅದಿಲ್ಲದೇ ಮೋಕ್ಷವಿಲ್ಲ; ದ್ವೇಷದಿಂದಲೂ ಮುಕ್ತಿಯು ದೊರೆಯುತ್ತದೆ—ಆದರೆ ಅಂಧತಮಸ್ಸಿನಲ್ಲಿ ನಿತ್ಯ ದುಃಖದಲ್ಲಿ ಬೀಳುವುದೆಂಬ ಮುಕ್ತಿಯು; ಅನಂತಶಕ್ತಿಯುತನಾದ ಶ್ರೀವಿಷ್ಣುವಿನ ಈ ಮಹಿಮೆಯು, ಅತ್ಯಂತ ರಹಸ್ಯವಾದುದು; ಶ್ರೀಮನ್ನಾರಾಯಣಾವತಾರರಾದ ವೇದವ್ಯಾಸರಿಂದ ನಾನು ಹೇಗೆ ಶ್ರವಣಮಾಡಿದ್ದೆನೋ, ಅದನ್ನೇ (ಹಾಗೆಯೇ) ನಿಮ್ಮಲ್ಲಿಟ್ಟಿದ್ದೇನೆ; ನಿಮಗಾಗಿ ಹೇಳಿರುತ್ತೇನೆ; ಅದ್ಭುತ ಮಹಿಮನಾದ ಶ್ರೀವಿಷ್ಣುವಿನ ಈ ಮುಕ್ತಿಪದ ಮಹಿಮೆಯನ್ನು

ಯಥಾ-ಹೀಗೆ, ಶ್ರುತಂ-(ನನ್ನಿಂದ) ಶ್ರವಣ ಮಾಡಲ್ಪಟ್ಟಿತೋ, ತತ್-ಅದು, ಭವತ್ಸು-ನಿಮ್ಮಲ್ಲಿ, ಉಕ್ತಂ-ಹೇಳಲಾಯಿತು; ಅಸ್ಯ-ಈ ರಹಸ್ಯದ, ಶ್ರವಣಾತ್-ಶ್ರವಣದಿಂದ, ಪಠನಾತ್-ಪಠನದಿಂದಲೂ (ಓದುವುದರಿಂದ- ಪಾರಾಯಣದಿಂದ), ಅಪಿ-ಮತ್ತು ಚಿಂತನಾತ್-ಮನನಧ್ಯಾನಗಳಿಂದ, ಮಾನವಃ- ಮನುಷ್ಯನು, ಅಮಿತತೇಜಸಃ-ಅಚಿಂತ್ಯ (ಪೂರ್ಣ) ಶಕ್ತಿಯುತನಾದ, ವಿಷ್ಣೋಃ- ಶ್ರೀವಿಷ್ಣುವಿನ, ಪರಮಂ-ಶ್ರೇಷ್ಠವಾದ, ಭಕ್ತಿಂ-ಭಕ್ತಿಯನ್ನು ಪ್ರಾಪ್ನೋತಿ-ಹೊಂದುತ್ತಾನೆ.

ಭಕ್ತಿದ್ವೇಷವಿಭಾಗ ನಿರೂಪಣವೆಂಬ ೫೦ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೫೧

ಶ್ರೀ ವೇದವ್ಯಾಸಾಯ ನಮಃ

**ವಿರಜಾ ಉವಾಚ—**

**ಕಾಮೋದ್ರೇಕಃ ಕ್ಷುಧಾ ತೃಷ್ಣಾ ನ ದೋಷಾ ವಿಷಯೇ ಸತಿ ।**
**ಗುಣಾ ಏವ ತತೋ ಮೋಕ್ಷೇ ತತ್ತ್ವಿತಿರ್ನ ವಿರುಧ್ಯತೇ ॥ ೧ ॥**
**ರಸಾಯನೈಃ ಸುಯತ್ನೇನ ಧನಿನೋ ಭೋಗಲಿಪ್ಸವಃ ।**
**ಕಾಮೋದ್ರೇಕಕ್ಷುಧಾದೀನಿ ವರ್ಧಯಂತ್ಯಪಿ ಭೂರಿಶಃ ॥ ೨ ॥**
**ದುಃಖದತ್ವಂ ಕಥಂ ತೇಷಾಂ ತನ್ನಿವೃತ್ತ್ಯೈ ಚ ಯತ್ಯತೇ ।**
**ಕಥಂ ನು ದೋಷತಾ ತೇಷಾಂ ಯಾಥಾತಥ್ಯೇನ ತದ್ವದ ॥ ೩ ॥**

**ಅರ್ಥ:**—ವಿರಜನು ಪ್ರಶ್ನಿಸುತ್ತಾನೆ:

ಕಾಮೋದ್ರೇಕಃ-ಭೋಗೇಚ್ಛೆಯ ಉದ್ರೇಕವೂ, ಕ್ಷುಧಾ-ಹಸಿವು, ತೃಷಾ-

---

ಶ್ರವಣ, ಪಠನಾದಿಗಳಿಂದಲೂ, ಮನನಧ್ಯಾನಗಳಿಂದಲೂ ಸೇವಿಸುವ ಮಾನವನು, ಶ್ರೀವಿಷ್ಣುವಿನಲ್ಲಿ ಉತ್ತಮ ಭಕ್ತಿಯನ್ನು ಪಡೆಯುತ್ತಾನೆ (೪೪-೪೬).

೫೦ನೇ ಅಧ್ಯಾಯವು ಮುಗಿದುದು.

ಅಧ್ಯಾಯ ೫೧

**ತಾತ್ಪರ್ಯ:**—ಕಾಮಾತುರತೆ, ಹಸಿವು, ತೃಷೆ (ದಾಹ)ಗಳು, ಅವುಗಳ ಉಪಶಮನಕ್ಕೂ, ತನ್ಮೂಲಕ ಸುಖಪ್ರಾಪ್ತಿಗೂ ಕಾರಣವಾಗುವ ಭೋಗ್ಯವಸ್ತುಗಳಿದ್ದಲ್ಲಿ ದೋಷಗಳೇ ಅಲ್ಲ, ಗುಣಗಳೇ ಆಗುತ್ತವೆ. ಆದ್ದರಿಂದ ಇವು ಮುಕ್ತರಿಗೆ ಇರುತ್ತವೆಂಬುದು, ಮುಕ್ತರು ನಿರ್ದೋಷಿಗಳೆಂಬುದನ್ನು ವಿರೋಧಿಸುವುದಿಲ್ಲ. ಆದರೆ

ನೀರಡಿಕೆಯೂ, ವಿಷಯೇ ಸತಿ-ಭೋಗ್ಯವಸ್ತುಗಳಿರುತ್ತಿರಲು, ನ ದೋಷಾ:-ದೋಷಗಳೇ ಅಲ್ಲ; ಗುಣಾಃ ಏವ-ಗುಣಗಳೇ ಆಗುತ್ತವೆ (ಸುಖೋದ್ರೇಕ ಹೇತುಗಳಾದ್ದರಿಂದ); ತತಃ-ಆದ್ದರಿಂದ, ಮೋಕ್ಷೇ-ಮುಕ್ತಿಯಲ್ಲಿ ತತ್ಸ್ಥಿತಿಃ-ಕಾಮಾದಿಗಳ ಇರುವಿಕೆಯು, ನ ವಿರುಧ್ಯತೇ-(ಮುಕ್ತರು ದೋಷರಹಿತರೆಂಬುದನ್ನು) ವಿರೋಧಿಸುವುದಿಲ್ಲ; ಭೋಗಲಿಪ್ಸವಃ-ವಿಷಯಭೋಗವನ್ನಿಚ್ಛಿಸುವ, ಧನಿನಃ-(ಲೌಕಿಕ) ಶ್ರೀಮಂತರು, ರಸಾಯನೈಃ-(ವಿವಿಧ) ರಸಾಯನಗಳ ಸೇವನೆಯಿಂದ, ಸುಯತ್ನೇನ-ಬಹು ಪ್ರಯತ್ನಪಟ್ಟು, ಭೂರಿಶಃ-ಹೆಚ್ಚಾದ (ಅತಿಶಯವಾದ), ಕಾಮೋದ್ರೇಕ ಕ್ಷುಧಾದೀನಿ-ಕಾಮೋದ್ರೇಕ, ಹಸಿವೆ ಮೊದಲಾದವುಗಳನ್ನು, ವರ್ಧಯಂತಿ-ವೃದ್ಧಿಗೊಳಿಸಿಕೊಳ್ಳುತ್ತಾರೆ; ಅಪಿ-ಹೀಗಿರಲು, ತೇಷಾಂ-ಅವರಿಗೆ (ಮುಕ್ತರಿಗೆ), ದುಃಖದತ್ವಂ-(ಕಾಮಾದಿಗಳ ವೃದ್ಧಿಯು) ದುಃಖಕೊಡುತ್ತದೆಂಬುದು, ಕಥಂ-ಹೇಗೆ; ಚ-ಮತ್ತು ತನ್ನಿವೃತ್ತ್ಯೈ-(ಕಾಮ, ಹಸಿವೆ ತೃಷೆಗಳ) ನಿವೃತ್ತಿಗಾಗಿ, (ಕಥಂ-ಹೇಗೆ) ಯತ್ನತೇ-ಯತ್ನಮಾಡುತ್ತಾರೆ; ತೇಷಾಂ-ಮುಕ್ತರಿಗೆ, ದೋಷತಾ-ಈ ದೋಷತ್ವವು, ಕಥಂ ನು-ಹೇಗೆತಾನೆ ಉಂಟಾದೀತು? (ಮುಕ್ತರು, ಕಾಮೋದ್ರೇಕಾದಿಗಳುಳ್ಳವರಾದರೂ ನಿರ್ದೋಷಿಗಳೆಂಬುದು ಹೇಗೆ?). ತತ್-ಅದನ್ನು, ಯಾಥಾತಥ್ಯೇನ-ಯಥಾರ್ಥವಾಗಿ (ಇದ್ದಂತೆ-ಅದರ ಸತ್ಯವನ್ನು), ವದ-ಹೇಳು.

**ಸೂತ ಉವಾಚ—**

**ಮಹಾಸುಖಸ್ಯ ವೃದ್ಧ್ಯರ್ಥಂ ವಿಶೇಷಾದ್ರುಚಿವೃದ್ಧಯೇ ।**
**ಕಿಂಚಿದ್ದುಃಖಂ ಚ ಸುಖವದ್ಭಾಂಧತೇ ಸುಮನೀಷಿಭಿಃ ॥ ೪ ॥**
**ಸ್ವೇಚ್ಛಯೈವ ಪ್ರಜಾಯಂತೇ ಮೋಕ್ಷೇ ಕಾಮಕ್ಷುಧಾದಯಃ ।**
**ಅತಸ್ತು ಸುಖವತ್ತೇಽಪಿ ಸ್ವೇಚ್ಛಾ ಏವ ತತೋ ಗುಣಾಃ ॥ ೫ ॥**

---

ಲೋಕದಲ್ಲಿ ಧನಿಕರು, ಭೋಗೇಚ್ಛುಗಳಾಗಿ, ರಸಾಯನ ಸೇವನೆಗಳಿಂದ, ಬಹುಯತ್ನಪಟ್ಟು ಕಾಮಾತುರತೆ ಮುಂತಾದವುಗಳನ್ನು ವೃದ್ಧಿಗೊಳಿಸಿಕೊಳ್ಳುವುದು ಕಂಡಿದೆ; ಹೀಗಿರಲು ಕಾಮೋದ್ರೇಕಾದಿಗಳು ಮುಕ್ತರಿಗೆ ದುಃಖಪ್ರದಗಳು ಹೇಗಾಗುತ್ತವೆ? ಮತ್ತು ಅವುಗಳ ನಿವೃತ್ತಿಗಾಗಿ ಮುಕ್ತರು ಏಕೆ (ಯಾವ ಪ್ರಕಾರದಿಂದ) ಯತ್ನಿಸುತ್ತಾರೆ? ಮುಕ್ತರು ದೋಷಿಗಳು ಹೇಗೆ ಅಲ್ಲ? ಇದರ ನಿಜವನ್ನು ನಮಗಾಗಿ ನಿರೂಪಿಸು (೧-೩). ಭೋಗಿಸುವ ವಿಷಯಗಳು ವಿಶೇಷ ರುಚಿಕರವಾಗುವಂತೆ ಮಾಡಿಕೊಳ್ಳಲು ಮತ್ತು ಅತಿಶಯ ಸುಖಾರ್ಥವಾಗಿಯೂ, ಕ್ಷಣಿಕವಾದ ಅಲ್ಪದುಃಖವನ್ನು (ಕಾಮಾದಿಗಳ ಪೀಡೆಯನ್ನು) ಸುಖದಂತೆಯೇ, ವಿವೇಕಿಗಳು ಇಚ್ಛಿಸುತ್ತಾರೆ; ಆದರೆ ಮೋಕ್ಷಾವಸ್ಥೆಯಲ್ಲಿರುವ ಜೀವರು, ಕಾಮಾದಿಗಳನ್ನು ಸ್ವೇಚ್ಛೆಯಿಂದಲೇ ಅಪೇಕ್ಷಿಸಿ ಪಡೆಯುತ್ತಾರೆ; ಅವೂ ಸುಖದಂತೆ ಗುಣಗಳೇ ವಿನಹ

**ಸುಖಾರ್ಥಮಿಷ್ಯತೇ ಯತ್ತತ್ ಕಥಂ ದುಃಖತ್ವಮರ್ಹತಿ ।**
**ಏಕಮೇವೇಂದ್ರಿಯಂ ಯದ್ವನ್ನಾನಾವಿಷಯಸಮಾಹತಃ ॥ ೬ ॥**
**ಸುಖದಂ ದುಃಖದಂ ತದ್ವದ್ವಿಜ್ಞೇಯಂ ತೃಟ್ ಕ್ಷುಧಾದಿಕಂ ।**

ಸುಮನೀಷಿಭಿಃ-ವಿವೇಕಿಗಳಿಂದ, ವಿಶೇಷಾತ್-ವಿಶೇಷವಾದ, ರುಚಿವೃದ್ಧಯೇ-ರುಚಿವೃದ್ಧಿಗೂ (ಭೋಗಿಸುವ ವಿಷಯಗಳ ಸ್ವಾದುತ್ವವನ್ನು ಹೆಚ್ಚಿಸಲು ಮತ್ತಾ ಸುಖಸ್ಯ-ಅಧಿಕಸುಖದ, ವೃದ್ಧ್ಯರ್ಥಂ-ವೃದ್ಧಿಗಾಗಿಯೂ, ಕಿಂಚಿತ್-ಅಲ್ಪವಾದ (ತಾತ್ಕಾಲಿಕವಾಗಿದ್ದು ಉತ್ತರಕ್ಷಣದಲ್ಲಿ ನಷ್ಟವಾಗುವ), ದುಃಖಂ ಚ-ದುಃಖವನ್ನೂ, ಸುಖವತ್-ಸುಖದಂತೆಯೇ, ವಾಂಛತೇ-ಇಚ್ಛಿಸಲ್ಪಡುತ್ತದೆ; ಮೋಕ್ಷೇ-ಮುಕ್ತಿಯಲ್ಲಿ (ಮೋಕ್ಷಾವಸ್ಥೆಯಲ್ಲಿರುವ ಜೀವರಿಗೆ), ಕಾಮಕ್ಷುಧಾದಯಃ-ಕಾಮಾತುರತೆ, ಕ್ಷುಧಾದಿಗಳು, ಸ್ವೇಚ್ಛಯಾ ಏವ-(ಮುಕ್ತರ) ಇಚ್ಛೆಯಿಂದಲೇ (ಅವರಿಂದ ಅಪೇಕ್ಷಿಸಲ್ಪಟ್ಟೇ), ಪ್ರಜಾಯಂತೇ-ಹುಟ್ಟುತ್ತವೆ (ಉಂಟಾಗುತ್ತವೆ); ಅತಃ-ಆದ್ದರಿಂದ, ತೇ ಅಪಿ-ಆ ಕಾಮಾದಿಗಳೂ, ಸುಖವತ್-ಸುಖದಂತೆ, ತತಃ-ಆದ್ದರಿಂದ, ಸ್ವೇಚ್ಛಾಃ ಗುಣಾಃ ಏವ-ಸ್ವೇಚ್ಛೆಯಿಂದಾದ ಗುಣಗಳೇ (ದೋಷಗಳಲ್ಲ); ಯತ್-ಯಾವುದು (ಕಾಮಾದಿಯು), ಸುಖಾರ್ಥಂ-ಸುಖಕ್ಕಾಗಿಯೇ, ಇಷ್ಯತೇ-ಇರುತ್ತದೆಯೋ, ತತ್-ಅದು, ದುಃಖತ್ವಂ-

---

ದೋಷಗಳಲ್ಲ; ಸುಖಾಧಿಕ್ಯಕ್ಕಾಗಿಯೇ ಉಂಟಾಗಿರುವ ಕಾಮಾದಿಗಳು ದುಃಖಸ್ವರೂಪದವುಗಳು ಹೇಗಾಗುತ್ತವೆ? ಒಂದೇ ಇಂದ್ರಿಯವು, ಸ್ವತಃ ದೋಷರಹಿತವಾದುದಾದರೂ, ಭಿನ್ನಗಳಾದ ಬಹುವಿಷಯಗಳ ಸನ್ನಿಕರ್ಷದಿಂದ, ಸುಖಪ್ರದವೂ ದುಃಖಪ್ರದವೂ ಹೇಗೆ ಆಗುವುದೋ, ಹಾಗೆ, ಮುಕ್ತರ ಸ್ವರೂಪವು (ನಿರ್ದೋಷಗಳೇ ಆದ ಇವರ ಇಚ್ಛಾದಿಗಳು), ಸುಖರೂಪವೇ ಆದ ಕಾಮಾದಿಗಳ ವೃದ್ಧಿಯನ್ನು ಕ್ಷಣಕಾಲ ಮಾತ್ರ ಹೊಂದಿ, ಸುಖಾಧಿಕ್ಯಾನುಭವದಿಂದ ಹರ್ಷಿಸುತ್ತದೆ.[1] (೪-೬). ಭಕ್ಷಿಸುವ ಇಚ್ಛೆಯೇ ಕ್ಷುಧೆಯು; ಪಾನೇಚ್ಛೆಯೇ ಪಿಪಾಸೆಯು; ಕ್ರಿಯಾಕರಣದಲ್ಲಿ ಇಚ್ಛೆಯೇ ಕಾರಣವು (ಇಚ್ಛೆಯು ಮೊದಲು, ನಂತರ ಪ್ರವೃತ್ತಿಯು); ಪ್ರವೃತ್ತಿಯ ನಂತರ

---

1. ಲೌಕಿಕರ ಕಾಮಾದಿ ಅಧಿಕ್ಯವು ಯತ್ನಸಾಧ್ಯವು ಮತ್ತು ದುಃಖಪ್ರದವು; ಆವರು ಅದನ್ನು ಮುಂದಿನ ಸುಖಾಧಿಕ್ಯದ ಅನುಭವಕ್ಕಾಗಿ ಸಹಿಸಿಕೊಳ್ಳುತ್ತಾರೆ; ಆದರೆ ಮುಕ್ತರ ಕಾಮಾದಿಗಳ ಆಧಿಕ್ಯವು ಪೀಡಾಕರವಲ್ಲ—ನಿರ್ದೋಷಿಗಳಾದ ಅವರಿಗೆ ದುಃಖವೆಲ್ಲಿಂದ ಬರುತ್ತದೆ? ಮತ್ತು ಯತ್ನಸಾಧ್ಯವೂ ಅಲ್ಲ—ಇಚ್ಛಾ ಮಾತ್ರದಿಂದ ಉಂಟಾಗುತ್ತದೆ; ಆದರಿಂದ ವಿಷಯಭೋಗ ಮತ್ತು ಸುಖಾಧಿಕ್ಯಗಳು ಯುಕ್ತವಾಗುತ್ತವೆ; ವಿಷಯಗಳ (ಭೋಗ್ಯವಸ್ತುಗಳ) ಪ್ರಾಪ್ತಿಯಾದರೂ ಯತ್ನಸಾಧ್ಯವಾದವುಗಳಲ್ಲ—ಮುಕ್ತರ ಇಚ್ಛಾಮಾತ್ರದಿಂದ, ಯಾವ ಯತ್ನವೂ ಇಲ್ಲದೇ ಸಿದ್ಧವಾಗಿ ಭೋಗಿಸಲ್ಪಡುತ್ತವೆ ಮತ್ತು ಸುಖಾಧಿಕ್ಯ ಕಾರಣವಾಗುತ್ತವೆ. ೯ ರಿಂದ ೧೧ನೇ ಶ್ಲೋಕದಲ್ಲಿ ಈ ಮುಂದೆ ಇದರ ವಿವರವನ್ನು ಕಾಣಬಹುದು.

ದುಃಖಿತ್ವವನ್ನು (ದುಃಖದ ಸ್ವಭಾವವನ್ನು). ಕಥಂ-ಹೇಗೆ, ಅರ್ಹತಿ-ಹೊಂದಲು ಯೋಗ್ಯವಾಗುತ್ತದೆ? ಯದ್ವತ್-ಹೇಗೆ, ಏಕವಿವ ಇಂದ್ರಿಯಂ- ಒಂದೇ (ಚಕ್ಷುರಾದಿ) ಇಂದ್ರಿಯವು, ನಾನಾವಸ್ತು ಸಮಾಜತಃ-ವಿವಿಧ ವಿಷಯಗಳ ಸಂಯೋಗದಿಂದ, ಸುಖದಂ-ಸುಖಪ್ರದವೂ, ದುಃಖದಂ-ದುಃಖಪ್ರದವೂ, (ಆಗುವುದೋ), ತದ್ವತ್- ಅದರಂತೆ, ತೃಟ್ಕ್ಷುಧಾದಿಕಂ-ದಾಹ, ಕ್ಷುಧಾದಿಗಳೆಂದು ವಿಜ್ಞೇಯಂ- ತಿಳಿಯಬೇಕು.

**ಬುಭುಕ್ಷೈವ ಕ್ಷುಧಾ ನಾಮ ಪಿಪಾಸೈವ ತೃಷಾ ಭವೇತ್ ॥ ೭ ॥**

**ಪ್ರವೃತ್ತೌ ಕಾರಣಂ ವಾಂಛಾ ಸುಖದುಃಖಂ ತತಃಪರಂ ।**

**ಇಷ್ಟಲಾಭಾತ್ಸುಖೋತ್ಪತ್ತಿರನಿಷ್ಟಾದ್ದುಃಖಸಂತತಿಃ ॥ ೮ ॥**

ಬುಭುಕ್ಷಾ ಏವ-ಭಕ್ಷಿಸಬೇಕೆಂಬ ಇಚ್ಛೆಯೇ, ಕ್ಷುಧಾ ನಾಮ-ಕ್ಷುಧೆ ಎಂಬುದು; ಪಿಪಾಸಾ ಏವ-ಕುಡಿಯಬೇಕೆಂಬ ಇಚ್ಛೆಯೇ, ತೃಷಾ-ತೃಷೆಯು (ದಾಹ), ಭವೇತ್- ಎನಿಸುತ್ತದೆ; ವಾಂಛಾ-ಇಚ್ಛೆಯು, ಪ್ರವೃತ್ತೌ-ಪ್ರವೃತ್ತಿಯಲ್ಲಿ (ಕ್ರಿಯಾಕರಣದಲ್ಲಿ), ಕಾರಣಂ-ಕಾರಣವು, ತತಃ ಪರಂ-ಪ್ರವೃತ್ತಿಯ ನಂತರ, ಸುಖದುಃಖಂ-ಸುಖ ಅಥವಾ ದುಃಖವು; (ಈ ಕ್ರಮದಲ್ಲಿ ಸಂಭವಿಸುತ್ತವೆ); ಇಷ್ಟಲಾಭಾತ್-ಇಷ್ಟಪ್ರಾಪ್ತಿಯಿಂದ, ಸುಖೋತ್ಪತ್ತಿಃ-ಸುಖಾನುಭವದ ಉದಯವು; ಅನಿಷ್ಟಾತ್-ಇಷ್ಟಹಾನಿಯಿಂದ, ದುಃಖ ಸಂತತಿಃ-ದುಃಖ ಪರಂಪರೆಯು.

**ಯತ್ಕಿಂಚಿಲ್ಲಭ್ಯತೇ ದೈವಾದಕಸ್ಮಾದಪ್ಯವಾಂಛಿತಂ ।**

**ತದ್ಭೋಗ ಇಚ್ಛಯೈವ ಸ್ಯಾದನ್ಯಥಾ ನ ಸುಖಂ ಭವೇತ್ ॥ ೯ ॥**

ಅವಾಂಛಿತಂ ಅಪಿ-ಅಪೇಕ್ಷಿಸಲ್ಪಡದಿದ್ದರೂ, ಯತ್ಕಿಂಚಿತ್-ಯಾವುದೊಂದು (ಭೋಗ್ಯವಸ್ತುವು-ವಿಷಯವು), ದೈವಾತ್-ಅದೃಷ್ಟದಿಂದ, ಅಕಸ್ಮಾತ್-ಶ್ರೀಹರಿಯಿಂದಲೇ (ಕಾರಣ ತಿಳಿಯದೇ), ಲಭ್ಯತೇ-ದೊರೆಯುತ್ತದೆಯೋ, ತದ್ಭೋಗಃ- ಅದರ ಭೋಗವು, ಇಚ್ಛಯಾ ಏವ-ಇಚ್ಛೆಯಿಂದಲೇ, ಸ್ಯಾತ್-ಆಗಬೇಕು; ಅನ್ಯಥಾ- ಹಾಗಲ್ಲದಿದ್ದರೆ, ಸುಖಂ-ಸುಖವು, ನ ಭವೇತ್-ಆಗುವುದಿಲ್ಲ (ಉಂಟಾಗುವುದಿಲ್ಲ).

---

ಸುಖದುಃಖಾದಿಗಳ ಅನುಭವವು; ಇಷ್ಟ ಲಾಭದಿಂದಲೇ ಸುಖೋದಯವು; ಇಷ್ಟಹಾನಿಯಿಂದ ದುಃಖಪರಂಪರೆಯು (೭-೮). ಅಪೇಕ್ಷಿಸಲ್ಪಡದಿದ್ದರೂ ಯಾವುದೊಂದು ವಿಷಯವು (ಭೋಗ್ಯವಸ್ತುವು) ಅದೃಷ್ಟವಶಾತ್ ಶ್ರೀಹರೀಚ್ಛೆಯಿಂದಲೇ ಪ್ರಾಪ್ತವಾದುದೋ, ಅದರ ಭೋಗವು ಇಚ್ಛೆಯಿಂದಲೇ (ಇಚ್ಛಿಸಿಯೇ) ಆಗಬೇಕು; ಇಚ್ಛಿಸಿ ಭೋಗಿಸದಿದ್ದರೆ ಅದರಿಂದ ಸುಖವೇ ದೊರೆಯುವುದಿಲ್ಲ (೯). ಇಚ್ಛಾಯುಕ್ತವಾದ ಭೋಗವೇ ಸುಖಪ್ರದವಾದುದು; ಇಚ್ಛೆಯಿಲ್ಲದಿದ್ದರೂ, ಸುಗಂಧಾದಿಗಳ ಭೋಗವು ಆಗಬಹುದು—ಆಗ ಸುಖವೇ ಲಭಿಸುವುದೆಂಬ ನಿಯಮವಿಲ್ಲ; ಆ ಗಂಧವು ಅನಿಷ್ಟಕ್ಕೆ

**ಅನಿಚ್ಛತೋಽಪಿ ಯೋ ಭೋಗಃ ಸುಗಂಧಾದೇರ್ಯಥಾ ಭವೇತ್ ।**
**ಸೋಽಪ್ಯನಿಷ್ಟವಿರುದ್ಧಶ್ಚೇತ್ತರ್ಹ್ಯೇವ ಸುಖದಾಯಕಃ ॥ ೧೦ ॥**

ಅನಿಚ್ಛತಃ ಅಪಿ-ಅಪೇಕ್ಷಿಸದ ಮನುಷ್ಯನಿಗೂ, ಸುಗಂಧಾದೇಃ-ಪರಿಮಳ ಗಂಧ ಮೊದಲಾದವುಗಳ, ಯಃ-ಯಾವ, ಭೋಗಃ-ಭೋಗವು, ಯಥಾ-ಹೇಗೆ, ಭವೇತ್-ಉಂಟಾಗುವುದೋ, ಸಃ ಅಪಿ-ಆ ಭೋಗವೂ ಸಹ, ಅನಿಷ್ಟ ವಿರುದ್ಧಃ ಚೇತ್-ಇಷ್ಟವಲ್ಲದುದಕ್ಕೆ ವಿರುದ್ಧವಾದುದಾದರೆ ಮಾತ್ರ, ತರ್ಹಿ ಏವ-ಆಗಲೇ, ಸುಖದಾಯಕಃ-ಸುಖಪ್ರದವಾಗುತ್ತದೆ (ದುರ್ಗಂಧವಲ್ಲದಿದ್ದರೂ ಇಷ್ಟವಲ್ಲದ ಗಂಧವಾದರೆ, ಅದು ಸುಖಪ್ರದವಲ್ಲ).

**ತಸ್ಮಾದಾವಶ್ಯಕತ್ವೇನ ತದೇತತ್ಸರ್ವಮಿಷ್ಯತೇ ।**
**ಅನಿಚ್ಛಯಾಪಿ ಜಾಯಂತೇ ಕಾಮಾದ್ಯಾಃ ಸಂಸೃತೌ ಯತಃ ॥ ೧೧ ॥**
**ದೋಷಾಸ್ತೇ ವಿಷಯಾಭಾವೇ ವಿಷಯೋಪನತೌ ಗುಣಾಃ ।**

ತಸ್ಮಾತ್-ಈ ಕಾರಣದಿಂದ, ಆವಶ್ಯಕತ್ವೇನ-ಅತ್ಯವಶ್ಯಕವಾಗಿ, ತತ್ ಏತತ್-ಆ ಈ ಇಚ್ಛೆಯೇ, ಸರ್ವಂ-ಎಲ್ಲವೂ ಎಂದು (ಸುಖಭೋಗದಲ್ಲಿ ಪ್ರಧಾನ ಕಾರಣವೆಂದು) ಇಷ್ಯತೇ-ತಿಳಿಯಲ್ಪಡುತ್ತದೆ; ಯತಃ-ಯಾವ ಕಾರಣದಿಂದ, ಸಂಸೃತೌ-ಸಂಸಾರಾವಸ್ಥೆಯಲ್ಲಿ ಕಾಮಾದ್ಯಾಃ-ಕಾಮೋದ್ರೇಕಾದಿಗಳು, ಅನಿಚ್ಛಯಾ ಅಪಿ-ಇಚ್ಛಿಸದಿದ್ದರೂ, ಜಾಯಂತೇ-(ಜೀವರಿಗೆ) ಉಂಟಾಗುತ್ತವೆಯೋ, ತೇ-(ಆದ್ದರಿಂದ) ಅವು, ದೋಷಾಃ-ದೋಷಗಳೇ ಸರಿ; (ತೇ-ಆ ಕಾಮಾದಿಗಳು), ವಿಷಯಾಭಾವೇ-ಭೋಗ್ಯವಸ್ತುಗಳು ಇಲ್ಲದಾಗ, (ದೋಷಾಃ-ದೋಷಗಳಾಗುತ್ತವೆ); ವಿಷಯೋಪನತೌ-ಭೋಗ್ಯವಸ್ತುಗಳು ಸಮೀಪದಲ್ಲಿರಲು, ಗುಣಾಃ-ಗುಣಗಳೇ ಆಗುತ್ತವೆ (ಭೋಗದಿಂದ ಸುಖವುಂಟಾಗುತ್ತದೆಯಾಗಿ ಕಾಮಾದಿಗಳು ಗುಣಗಳೇ ಆಗುತ್ತವೆ).

**ಸ್ವರ್ಗೇ ಯದ್ಯಪಿ ಜಾಯಂತೇ ಸರ್ವೇಽರ್ಥಾವಾಂಛಯಾ ಸಮಂ ॥೧೨**
**ತಥಾಪ್ಯಸೂಯಾ ದೋಷೇಣ ಕ್ಷಯಿಷ್ಣುತ್ವಾದತೃಪ್ತಿತಃ ।**
**ಸ್ವಲ್ಪತ್ವಾದಪಿ ಮೋಕ್ಷೇಣ ಕಥಂ ಸ್ವರ್ಗಃ ಸಮೋ ಭವೇತ್ ॥ ೧೩ ॥**

---

ವಿರೋಧವಾಗಿದ್ದರೆ ಮಾತ್ರ ಸುಖಪ್ರದವಾಗುತ್ತದೆ (೧೦). ಆದ್ದರಿಂದ, ಭೋಗದಿಂದ ಸುಖಪ್ರಾಪ್ತಿಯಾಗುವಲ್ಲಿ ಇಚ್ಛೆಯೇ ಪ್ರಧಾನ ಕಾರಣವೆಂದು ತಿಳಿದುಬರುತ್ತದೆ; ಸಂಸಾರದಲ್ಲಿಯಾದರೋ, ಜೀವರು ಇಚ್ಛಿಸದಿದ್ದರೂ, ಕಾಮಕ್ಷುಧಾದಿಗಳು ಉಂಟಾಗುತ್ತವೆ; ವಿಷಯಗಳಿಲ್ಲದಿದ್ದರೆ (ಅವುಗಳ ಉಪಶಮನಕ್ಕೆ ಅವಶ್ಯಕವಾದ ಭೋಗ್ಯವಸ್ತುಗಳು ಸಿದ್ಧವಾಗಿಲ್ಲದಿದ್ದರೆ) ಅವು ದೋಷಗಳು—ಇದ್ದರೆ ಗುಣಗಳೇ ಸರಿ (೧೧). ಯದ್ಯಪಿ, ಸ್ವರ್ಗಲೋಕದಲ್ಲಿ ಇಚ್ಛೆಯೊಂದಿಗೆ ಭೋಗ್ಯವಸ್ತುಗಳೂ ಸಿದ್ಧವಾಗಿರುತ್ತವೆ; ಆದರೂ

**ಅತಃ ಸ್ವರ್ಗಸ್ಯ ಮುಕ್ತೇಃ ಸ್ಯಾದಂತರಂ ಮಹದಂತರಂ ।**
**ವಿಚಕ್ಷಣಾ ನ ವಾಂಛಂತಿ ತಸ್ಮಾತ್ಸ್ವರ್ಗಾದಿ ಕಿಂಚನ ॥ ೧೪ ॥**
**ಮೋಕ್ಷಮೇವಾಭಿವಾಂಛಂತಿ ಯತ್ರ ಕಾಲಭಯಂ ನಹಿ ।**
**ನ ಚಾಸೂಯಾದಯೋ ದೋಷಾಃ ತೃಪ್ತಿಃ ಸ್ವಾನಂದಪೂರಣಾತ್ ॥೧೫॥**

ಯದ್ಯಪಿ ಸ್ವರ್ಗೇ (ಹೀಗಿರುವುದು ಸಂಸಾರದಲ್ಲಿ ಆದರೂ) ಸ್ವರ್ಗದಲ್ಲಿಯಾದರೋ ಸರ್ವೇ-ಎಲ್ಲಾ ಅರ್ಥಾಃ-ವಿಷಯಗಳು ವಾಂಛಯಾ ಸಮಂ-ಇಚ್ಛೆಯೊಂದಿಗೇ, ಜಾಯಂತೇ-ಹುಟ್ಟುತ್ತವೆ (ಇಚ್ಛಿಸಿದೊಡನೆ ಸಿದ್ಧವಾಗಿರುತ್ತವೆ—ಭೋಗಿಸಲವಕಾಶವಿರುತ್ತದೆ); ತಥಾಪಿ-ಹೀಗಿದ್ದರೂ (ಇಚ್ಛಾಯುಕ್ತವಾದ ವಿಷಯಗಳಿದ್ದರೂ), ಅಸೂಯಾ ದೋಷೇಣ-(ಅಧಿಕಭೋಗವುಳ್ಳ ಅನ್ಯರನ್ನು ಕಂಡು) ಅಸೂಯೆಯುಂಟಾಗುವುದೆಂಬ ದೋಷದಿಂದ, ಕ್ಷಯಿಷ್ಣುತ್ವಾತ್-(ಭೋಗವು ನಷ್ಟಹೊಂದುವಪದಾರ್ಥರಿಂದಲೂ) ನಶ್ವರವಾದುದರಿಂದಲೂ, ಅತೃಪ್ತಿತಃ-ಅತೃಪ್ತಿಯಿಂದಲೂ (ಭೋಗವು ಸಾಕೆಂಬ ಅಲಂಬುದ್ಧಿಯುಂಟಾಗದಿರುವುದರಿಂದಲೂ), ಸ್ವಲ್ಪತ್ವಾತ್ ಅಪಿ-ಅಲ್ಪ (ಸುಖಪ್ರದ)ವಾದುದರಿಂದಲೂ, ಕಥಂ-ಹೇಗೆ, ಸ್ವರ್ಗಃ-ಸ್ವರ್ಗವು, ಮೋಕ್ಷೇಣ-ಮುಕ್ತಿಯಿಂದ, ಸಮಂ-ಸಮವಾದುದು, ಭವೇತ್-ಆದೀತು? (ಸರ್ವಥಾ ಸಮವಲ್ಲ). ಅತಃ-ಆದ್ದರಿಂದ, (ಈ ಅಸೂಯಾದಿ ದೋಷಕಾರಣಗಳಿಂದ), ಸ್ವರ್ಗಸ್ಯ-ಸ್ವರ್ಗಕ್ಕೂ, ಮುಕ್ತೇಃ-ಮೋಕ್ಷಕ್ಕೂ, ಅಂತರಂ-ವ್ಯತ್ಯಾಸವು (ಸ್ವರ್ಗಮುಕ್ತಿಗಳ ಸ್ವರೂಪಭೇದವು), ಮಹದಂತರಂ-ಅಧಿಕವಾದ ಭೇದವುಳ್ಳದ್ದು ಸ್ಯಾತ್-ಆಗಿರುತ್ತದೆ; ತಸ್ಮಾತ್-ಆದ್ದರಿಂದ, ವಿಚಕ್ಷಣಾಃ-ಕುಶಲರು (ಬುದ್ಧಿಶಾಲಿಗಳು), ಸ್ವರ್ಗಾದಿ ಕಿಂಚನ-ಸ್ವರ್ಗ ಮೊದಲಾದ ಯಾವುದನ್ನೂ (ಯಾವ ಸುಖಭೋಗವನ್ನೂ), ನ ವಾಂಛಂತಿ-ಆಶಿಸುವುದಿಲ್ಲ; ಯತ್ರ-ಎಲ್ಲಿ ಕಾಲಭಯಂ ನ ಹಿ-ಕಾಲಭಯವಿಲ್ಲವೋ (ಭೋಗಕ್ಕೆ ನಾಶದ ಭಯವಿಲ್ಲವೋ), ಅಸೂಯಾದಯಃ-ಅಸೂಯೆ

---

ಸ್ವರ್ಗಭೋಗಕ್ಕಿಂತ ಮುಕ್ತರ ಭೋಗವು ವಿಲಕ್ಷಣವಾದುದು; ಅಸೂಯಾ ದೋಷದಿಂದಲೂ, (ತನಗಿಂತ ಅಧಿಕ ಭೋಗವುಳ್ಳವರನ್ನು ಕಂಡು ಸ್ವರ್ಗದಲ್ಲಿ ಅಸೂಯೆಯುಂಟಾಗುತ್ತದೆ), ಸ್ವರ್ಗಭೋಗಗಳು ನಶ್ವರಗಳಾದ್ದರಿಂದಲೂ, (ಸ್ವರ್ಗವಾಸಿಯೂ ಅಪೇಕ್ಷಿಸುವವರೆಗೂ ಭೋಗಿಸಲು, ನಂದನವನ, ಇಂದ್ರಸಭೆಯ ಗಾನನೃತ್ಯಗಳಲ್ಲಿ ಅವಕಾಶವಿರುವುದಿಲ್ಲ); ಭೋಗದಿಂದ ತೃಪ್ತಿಯುಂಟಾಗದಿರುವುದರಿಂದಲೂ ಮೋಕ್ಷ ಸುಖಕ್ಕಿಂತ ಅಲ್ಪವಾದುದರಿಂದಲೂ, ಮೋಕ್ಷಸುಖವು ಸ್ವರ್ಗಸಮವಾಗಲಾರದು (ಹೇಗಾದೀತು?); ಆದ್ದರಿಂದ ಸ್ವರ್ಗಕ್ಕೂ, ಮೋಕ್ಷಕ್ಕೂ ಮಹದಂತರವಿರುವುದೆಂದು ತಿಳಿಯಿರಿ; ಆದ್ದರಿಂದ ವಿವೇಕಿಗಳು (ಈ ಅಂತರವನ್ನು ತಿಳಿದ ಬುದ್ಧಿಶಾಲಿಗಳು) ಸ್ವರ್ಗಸುಖಾದಿಗಳನ್ನು ಸ್ವಲ್ಪವೂ ಅಪೇಕ್ಷಿಸುವುದಿಲ್ಲ;

ಮೊದಲಾದ, ದೋಷಾಃ-ದೋಷಗಳು, ನ ಚ-ಇಲ್ಲವೇ ಇಲ್ಲವೋ, ಸ್ವಾನಂದ ಪೂರಣಾತ್-ತನ್ನ ಆನಂದದ ಪೂರ್ಣತ್ವದಿಂದ, ತೃಪ್ತಿಃ-ತೃಪ್ತಿಯೋ (ನಿತ್ಯ ತೃಪ್ತಿ ಇರುವುದೋ), ಮೋಕ್ಷಂ ಏವ-ಆ ಮೋಕ್ಷವನ್ನೇ, ವಾಂಛಂತಿ-ಆಶಿಸುತ್ತಾರೆ.

ಕಲಶೀಮಣಿಕಾದೀನಿ ಕಮಂಡಲುಮುಖಾನ್ಯಪಿ ।
ಮಹನ್ಮಹತರಾಣಿ ಸ್ಯುಸ್ತೋಕಸ್ತೋಕತರಾಣಿ ಚ ॥ ೧೬ ॥
ಯಥಾವಕಾಶಂ ನದ್ಯಾದೌ ಪೂರ್ಯಂತೇ ತದ್ವದೇವ ಹಿ ।
ಸ್ವಾನಂದಪೂರ್ಣಾಃ ಸರ್ವೇಽಪಿ ನೈವಾಸೂಯಂತಿ ಕರ್ಹಿಚಿತ್ ॥ ೧೭ ॥
ದೃಶ್ಯಂತೇ ಕತಿಚಿಲ್ಲೋಕೇ ಸಂತುಷ್ಟಾಃ ಸ್ವಾಮಿದರ್ಶನಾತ್ ।
ಕೇಚಿತ್ತದಾಸನಾದೇಶ್ಚ ಪ್ರೀತಿವಾದ್ಯೈಸ್ತಥಾಪರೇ ॥ ೧೮ ॥
ಕೇಚಿತ್ಸನ್ನಿಧಿಮಾಪನ್ನಾಸ್ತುಷ್ಯಂತೇ ದೂರತೋ ಪರೇ ।
ಮೋಕ್ಷೇಽಪ್ಯೇವಂವಿಧಾ ಜೀವಾ ಸ್ವಯೋಗ್ಯಾದೇವ ತೋಷಿಣಃ ॥ ೧೯ ॥

ಕಲಶೀಮಣಿಕಾದೀನಿ-ಕೊಡ, ಗಿಂಡಿ ಮೊದಲಾದವು, ಅಪಿ-ಮತ್ತು ಕಮಂಡಲುಮುಖಾನಿ-ಕಮಂಡಲು (ಯತ್ಯಾದಿಗಳು ಉಪಯೋಗಿಸುವ ಪಾತ್ರೆ ವಿಶೇಷ) ಮುಂತಾದವು, ಮಹನ್ಮಹತ್ತರಾಣಿ-ಪರಿಮಾಣದಲ್ಲಿ ಒಂದಕ್ಕಿಂತ ಒಂದು ದೊಡ್ಡದು, ಚ-ಮತ್ತು, ಸ್ತೋಕಸ್ತೋಕತರಾಣಿ-ಅಲ್ಪಕ್ಕಿಂತ ಅಲ್ಪವಾದವುಗಳು; ನದ್ಯಾದೌ-ನದೀ ಮೊದಲಾದ ಜಲಾಶಯಗಳಲ್ಲಿ, ಯಥಾವಕಾಶಂ-ತಮ್ಮಲ್ಲಿ ಹಿಡಿಯುವಷ್ಟು (ಸ್ಥಳಾವಕಾಶವಿದ್ದಷ್ಟು), ಪೂರ್ಯಂತೇ-(ನೀರಿನಿಂದ) ತುಂಬುತ್ತವೆ, ಹಿ-ಇದು ಸ್ವಾಭಾವಿಕವಷ್ಟೆ; ತದ್ವತ್ ಏವ-ಅದರಂತೆಯೇ, ಸರ್ವೇ ಅಪಿ-ಎಲ್ಲ ಮುಕ್ತರೂ, ಸ್ವಾನಂದಪೂರ್ಣಾಃ-ತಮ್ಮ ಯೋಗ್ಯತೆಯಿದ್ದಷ್ಟು ಪೂರ್ಣವಾದ ಆನಂದವುಳ್ಳವರೇ (ಆಗಿರುವರು); ಕರ್ಹಿಚಿತ್-ಹೇಗೂ (ಯಾವ ಕಾಲದಲ್ಲಿಯೂ),

---

ಕಾಲಭಯವಿಲ್ಲದ (ನಿತ್ಯಭೋಗಕ್ಕೆ ಅವಕಾಶವಿರುವ), ಅಸೂಯಾದಿ ದೋಷಗಳಿಲ್ಲದ, ಸ್ವಯೋಗ್ಯತೆಗೆ ಪೂರ್ಣವಾದ ಆನಂದವನ್ನು ಎಲ್ಲಿ ಪಡೆದು ನಿತ್ಯ ತೃಪ್ತರಾಗಿರಬಹುದೋ ಆ ಮೋಕ್ಷವನ್ನೇ ಬಯಸುತ್ತಾರೆ (೧೩-೧೫). ಮುಕ್ತಿಯಲ್ಲಿ ಅಧಿಕವಾದ ಆನಂದವುಳ್ಳವರನ್ನು (ಅಧಿಕಭೋಗಗಳುಳ್ಳವರನ್ನು) ಕಂಡು ಯಾರೊಬ್ಬರೂ ಅಸೂಯೆಪಡುವುದಿಲ್ಲ; ಎಲ್ಲರೂ ಸ್ವಯೋಗ್ಯತೆಗೆ ಪೂರ್ಣವಾದ ಆನಂದವುಳ್ಳವರೇ ಆಗಿರುತ್ತಾರೆ; ಹಂಡೆ, ಕೊಡ, ಕಮಂಡಲು, ಗಿಂಡಿ ಮೊದಲಾದ ಪಾತ್ರೆಗಳು. ನದ್ಯಾದಿ ಜಲಾಶಯಗಳಲ್ಲಿ ತಂತಮ್ಮಲ್ಲಿರುವ ಸ್ಥಳಾವಕಾಶದಷ್ಟು ಜಲವನ್ನು ತುಂಬಿಕೊಂಡು, ಒಂದೊಂದೂ ಪೂರ್ಣವೇ ಆಗುವಂತೆ, ಮುಕ್ತರೂ ಸ್ವಸ್ವಯೋಗ್ಯ ಆನಂದದಿಂದ ಪೂರ್ಣರೇ ಆಗಿರುತ್ತಾರೆ; ಪಾತ್ರೆಗಳು ಪರಿಮಾಣದಲ್ಲಿ ದೊಡ್ಡದರಕ್ಕಿಂತ ದೊಡ್ಡದು,

ನ್ಯೈವ ಅಸೂಯಂತಿ-ಅನ್ಯೋನ್ಯವಾಗಿ ಅಸೂಯೆಪಡುವುದಿಲ್ಲ; ಲೋಕೇ-ಈ ಲೋಕದಲ್ಲಿ ಸಹ, ಕತಿಚಿತ್-ಕೆಲವರು (ಎಷ್ಟೋ ಜನರು), ಸ್ವಾಮಿದರ್ಶನಾತ್-ಪ್ರಭುವಿನ (ರಾಜನ) ದರ್ಶನದಿಂದ, ಸಂತುಷ್ಟಾಃ-ತೃಪ್ತರಾಗುವವರು, ದೃಶ್ಯಂತೇ-ಕಂಡುಬರುತ್ತಾರೆ; ಚ-ಮತ್ತು ಕೇಚಿತ್-ಕೆಲವರು, ಸಹಾಸನಾದೇಃ-ಒಂದಿಗಿರುವ ಆಸನಾದಿಗಳಿಂದ (ಪ್ರಭುವಿನೊಡನೆ ಕುಳಿತುಕೊಳ್ಳುವುದರಿಂದಲೂ), ಅಪರೇ-ಮತ್ತೂ ಕೆಲವರು, ಪ್ರೀತಿವಾದ್ಯೈಃ-(ಸ್ವಾಮಿಯ) ಪ್ರಿಯನುಡಿಗಳಿಂದಲೂ, ಕೇಚಿತ್-ಕೆಲವರು, ಸನ್ನಿಧಿಂ-(ಸ್ವಾಮಿಯ) ಸಮೀಪವನ್ನು ಆಪನ್ನಾಃ-ಹೊಂದಿ, ಅಪರೇ-ಇನ್ನೂ ಕೆಲವರು, ದೂರತಃ-ದೂರದಿಂದಲೇ (ಕಾಣುವ ಮಾತ್ರದಿಂದಲೂ), ತೃಪ್ಯಂತೇ-ತೃಪ್ತರಾಗುತ್ತಾರೆ; ಏವಂ-ಹೀಗೆಯೇ, ಮೋಕ್ಷೇ ಅಪಿ-ಮುಕ್ತಿಯಲ್ಲಿಯೂ, ಏವಂ ವಿಧಾಃ ಜೀವಾಃ-ಹೀಗೆ ಭಿನ್ನಭಿನ್ನ ಸ್ಥಿತಿಗಳಲ್ಲಿರುವ ಜೀವರು, ಸ್ವಯೋಗ್ಯಾತ್ ಏವ-ತಂತಮ್ಮ ಯೋಗ್ಯತೆಯಂತೆ, ತೋಷಿಣಃ-ತೃಪ್ತರಾಗಿರುತ್ತಾರೆ.

ಸಂಸಾರೇ ಸುಖದುಃಖಾದೇರುತ್ಪತ್ತಿಃ ಕಾರಣಂ ಯಥಾ ।
ಅಭಿವ್ಯಕ್ತಿಸ್ತಥಾ ಮುಕ್ತೌ ಸುಖಾದೇಃ ಕಾರಣಂ ಭವೇತ್ ॥ ೨೦ ॥
ನಿತ್ಯಾನಂದೇಷ್ವತಸ್ತತ್ರ ಫಲಪುಷ್ಪಾದ್ಯಪೇಕ್ಷತೇ ।
ನಾನಾಭಿವ್ಯಂಜಕೈರ್ಯೋಗಾತ್ ಕಾಲೇ ಕಾಲೇ ಚ ಸರ್ವದಾ ॥ ೨೧ ॥
ಸಂತತಾ ಸುಖಧಾರೈವ ನಾಸ್ತ್ಯನ್ಯಾದಂತರಾ ಕ್ವಚಿತ್ ।

ಯಥಾ-ಹೇಗೆ, ಸಂಸಾರೇ-ಸಂಸಾರಾವಸ್ಥೆಯಲ್ಲಿ ಸುಖದುಃಖಾದೇಃ-ಸುಖ ದುಃಖಾದಿಗಳಿಗೆ, ಉತ್ಪತ್ತಿಃ-ಉತ್ಪತ್ತಿಯು, (ವಿಷಯಭೋಗದಿಂದ ಜನ್ಯತ್ವವು), ಕಾರಣಂ-ಕಾರಣವೋ (ಹೇತುವೋ), ತಥಾ-ಹಾಗೆ, ಮುಕ್ತೌ-ಮುಕ್ತಿಯಲ್ಲಿ ಸುಖಾದೇಃ-ಸುಖಾದಿಗಳಿಗೆ, ಅಭಿವ್ಯಕ್ತಿಃ-ಅವುಗಳ ಪ್ರಾಕಟ್ಯವು (ಇದ್ದ ಸುಖವು ವ್ಯಕ್ತವಾಗುವುದು), ಕಾರಣಂ-ಕಾರಣವು, ಭವೇತ್-ಆಗುತ್ತದೆ; ತತ್ರ-ಮುಕ್ತಿಯಲ್ಲಿ

---

ಚಿಕ್ಕದ್ದರಲ್ಲಿಂತ ಚಿಕ್ಕದು ಎಂಬ ತಾರತಮ್ಯವಿರುವಂತೆ, ಮುಕ್ತಜೀವರೂ ತಾರತಮ್ಯವುಳ್ಳವರಾಗಿರುವರು; ಆದ್ದರಿಂದ ಸರ್ವರೂ ಆನಂದಪೂರ್ಣರೇ ಆಗಿರುವುದರಿಂದ ಪರಸ್ಪರ ಅಸೂಯೆಪಡುವ ಕಾರಣವೇ ಇರುವುದಿಲ್ಲ. ಲೋಕದಲ್ಲಿ ಸಹ, ಕೆಲವರು, ಪ್ರಭು ದರ್ಶನದಿಂದಲೂ, ಕೆಲವರು ಆತನೊಂದಿಗೆ ಆಸೀನರಾಗುವುದರಿಂದಲೂ, ಮತ್ತೆ ಕೆಲವರು, ಆತನ ಪ್ರೀತಿಯ ನುಡಿಗಳಿಂದಲೂ, ಇನ್ನು ಕೆಲವರು ಕೇವಲ ಆತನ ಹತ್ತಿರದಲ್ಲಿ ನಿಲ್ಲುವುದರಿಂದಲೂ, ಕೆಲವರು ದೂರದಿಂದಲೇ ಕಾಣುವುದರಿಂದಲೂ, ತೃಪ್ತರಾಗುವುದುಂಟಲ್ಲವೇ! ಹಾಗೆ ಸರ್ವಮುಕ್ತರೂ ನಿತ್ಯತೃಪ್ತರೇ ಆಗಿರುತ್ತಾರೆ (೧೬-೧೯). ಸಂಸಾರಾವಸ್ಥೆಯಲ್ಲಿ ವಿಷಯಭೋಗದಿಂದ ಉತ್ಪನ್ನವಾಗುವ ಸುಖಾದ್ಯನುಭವವು ಜೀವನ ಸುಖಾದಿಗಳಿಗೆ ಕಾರಣವಾಗುತ್ತದೆ; ಮುಕ್ತಿಯಲ್ಲಿ

ಅತಃ-ಈ ಕಾರಣದಿಂದ, ನಿತ್ಯಾನಂದೇ ಅಪಿ-ನಿತ್ಯಾನಂದವಿದ್ದರೂ, ಫಲಪುಷ್ಪಾದಿ-ಫಲಪುಷ್ಪಾದಿಗಳನ್ನು ಅಪೇಕ್ಷ್ಯತೇ-(ಆನಂದದ ಅಭಿವ್ಯಕ್ತಿಯು) ಅಪೇಕ್ಷಿಸುತ್ತದೆ; ಕಾಲೇಕಾಲೇ-ಆಯಾಕಾಲದಲ್ಲಿ (ಮುಕ್ತರು ಇಚ್ಛಿಸುವ ಕಾಲದಲ್ಲಿ), ನಾನಾಭಿವ್ಯಂಜನಕೈಃ-ವಿವಿಧ ಆನಂದ ವಿಶೇಷಗಳನ್ನು ಅಭಿವ್ಯಕ್ತಗೊಳಿಸುವ, (ಪುಷ್ಪಾದಿ) ವಸ್ತುಗಳಿಂದ, ಯೋಗಾತ್-ಸಂಬಂಧ ಹೊಂದಿ (ವಸ್ತುಗಳ ಭೋಗದಿಂದ), ಸರ್ವದಾ-ಯಾವಾಗಲೂ, ಸಂತತಾ-ನಿರಂತರವಾದ (ವಿಚ್ಛಿತ್ತಿಯಿಲ್ಲದ), ಸುಖಧಾರಾ-ಸುಖದ ಧಾರೆಯೇ, ಸ್ಯಾತ್-ಉಂಟಾಗುತ್ತದೆ (ಇರುತ್ತದೆ); ಅನ್ಯತ್-ಬೇರೆ, ಕ್ವಚಿತ್-ಯಾವುದೊಂದು, ಅಂತರಾ-ಪ್ರತಿಬಂಧಕವು (ಆ ಸುಖಧಾರೆಗೆ), ನ (ಸ್ಯಾತ್)-ಇರುವುದೇ ಇಲ್ಲ.

ದಗ್ಧಾನಾಂ ಕಾಷ್ಠಭಾರಾಣಾಂ ಕಿಂಚಿದ್ಭಸ್ಮಾನ್ನಶಿಷ್ಯತೇ ॥ ೨೨ ॥
ಅಮುತ್ರ ತು ಮಲಂ ಸ್ವಲ್ಪಂ ನ ಕಿಂಚಿದಪಿ ಶಿಷ್ಯತೇ ।
ಅತಸ್ತೇ ವಿಮಲಾ ಲೋಕಾ ಮಲಸ್ನಾನವಿವರ್ಜಿತಾಃ ॥ ೨೩ ॥

ದಗ್ಧಾನಾಂ-ದಹಿಸಲ್ಪಟ್ಟ, ಕಾಷ್ಠಭಾರಾಣಾಂ-ಮರದ ತೊಲೆಗಳ ಮಧ್ಯದಲ್ಲಿ ಭಸ್ಮಾತ್-ಭಸ್ಮದಿಂದ (ಬೂದಿಯಿಂದ), ಕಿಂಚಿತ್-(ಬೇರೆಯಾದ) ಏನೂ, ನ ಶಿಷ್ಯತೇ-ಉಳಿಯುವುದಿಲ್ಲ. ಅಮುತ್ರ ತು-ಮುಕ್ತಲೋಕದಲ್ಲಿ ಆದರೂ, ಕಿಂಚಿತ್-ಯಾವುದೊಂದು, ಸ್ವಲ್ಪಂ-ಅಲ್ಪವಾದ, ಮಲಂ-ಮಲವೂ (ಕೊಳೆಯೂ), ಅಪಿ-ಸಹ, ನ ಶಿಷ್ಯತೇ-ಉಳಿಯುವುದೇ ಇಲ್ಲ. ಅತಃ-ಆದ್ದರಿಂದ, ತೇ ಲೋಕಾಃ-ಆ ವೈಕುಂಠಾದಿ ಲೋಕಗಳು (ಅಥವಾ ಮುಕ್ತರ ದೇಹಗಳು), ವಿಮಲಾಃ-ಅತ್ಯಂತ ಪರಿಶುದ್ಧವಾದವುಗಳು; ಮಲಸ್ನಾನವಿವರ್ಜಿತಾಃ-ಮಲಮಾಂಸಾದಿ ರಹಿತವಾದವುಗಳು (ಇಲ್ಲದವುಗಳು).

---

ಆದರೋ, ಸುಖವು ಮುಕ್ತನ ಸ್ವರೂಪವೇ ಆಗಿದ್ದು, ಅದರ ಅಭಿವ್ಯಕ್ತಿಗೆ, ಮುಕ್ತರ ಪುಷ್ಪಾದಿಗಳ ಭೋಗವು ಕಾರಣವಾಗುತ್ತದೆ—ಅವುಗಳಿಂದ ಸುಖವು ಜನ್ಯವಾಗುವುದಿಲ್ಲ; ಆದ್ದರಿಂದ ಮುಕ್ತಿಯಲ್ಲಿ ಮುಕ್ತರಿಗೆ ನಿತ್ಯಾನಂದವಿದ್ದರೂ, ಆನಂದ ವಿಶೇಷಗಳ ಅಭಿವ್ಯಕ್ತಿಗೆ, ಫಲಪುಷ್ಪ ಸ್ನಾನಾದಿವ್ಯಂಜಕ ವಸ್ತುಗಳು ಅಪೇಕ್ಷಿತವಾಗುತ್ತದೆ—ಅವುಗಳ ಸಂಬಂಧದಿಂದ, ಇದ್ದ ಆನಂದವೇ ಪ್ರಕಟವಾಗುತ್ತದೆ (ವ್ಯಕ್ತವಾಗುತ್ತದೆ); ವಿವಿಧ ಅಭಿವ್ಯಂಜಕ ವಸ್ತುಗಳ ಯೋಗದಿಂದ ಸರ್ವದಾ, ಮುಕ್ತರು ಇಚ್ಛಿಸುವ ಎಲ್ಲ ಕಾಲದಲ್ಲಿ ನಿರಂತರವಾದ ಸುಖಧಾರೆಯು ಇದ್ದೇ ಇರುತ್ತದೆ; ಬೇರೇನೂ ಆ ಧಾರೆಯನ್ನು ತಡೆಯುವುದೇ ಇಲ್ಲ (೨೦-೨೧). ದಹಿಸಲ್ಪಟ್ಟ ಮರದ ತೊಲೆಗಳು (ಕಾಷ್ಠಭಾರಗಳು), ಅತ್ಯಲ್ಪಭಸ್ಮ (ಬೂದಿ)ವನ್ನು ಹಿಂದೇಳಿಸುತ್ತವೆ—ಅದನ್ನುಳಿದು ಬೇರೇನೂ ಉಳಿಯುವುದಿಲ್ಲ. ಮುಕ್ತಿಯಲ್ಲಿ ಆದರೋ, (ಫಲಾದಿ ಬಹುವಸ್ತುಗಳನ್ನು ಭೋಗಿಸಿದರೂ) ಮುಕ್ತರ

ತತ್ರಸ್ಥಾಶ್ಚೇತನಾಃ ಸರ್ವೇ ತೈಜಸಾ ಇವ ರಾಶಯಃ ।
ನಿದ್ರಾಲಸ್ಯ ಪ್ರಮಾದಾದ್ಯೈರ್ದೋಷೈರ್ನಾನಾವಿಧೈಃ ಸದಾ ॥ ೨೪ ॥
ಉಜ್ಝಿತಾ ಜ್ಞಾನಸಂಪನ್ನಾ ರಮಮಾಣಾ ನಿಜೇಚ್ಛಯಾ ।
ಸ್ವೈರಂ ಸ್ಥಾನೇಷು ತೇ ವಿಷ್ಣೋರ್ವೈಕುಂಠಾದಿಷು ಸರ್ವದಾ ॥ ೨೫ ॥
ಅನಂತಕಾಲಂ ಮೋದಂತೇ ನಾವರ್ತಂತೇ ಕಥಂಚನ ।
ಯೇ ಪಠಂತಿ ಸದಾ ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥ ೨೬ ॥

ತತ್ರಸ್ಥಾಃ-ಅಲ್ಲಿರುವ (ಮುಕ್ತಸ್ಥಾನಗಳಲ್ಲಿರುವ), ಸರ್ವೇ-ಸಮಸ್ತ ಚೇತನಾಃ-ಜೀವರೂ, ತೈಜಸಾಃ-ತೇಜೋಮಯವಾದ, ರಾಶಯಃ ಇವ-ಸಮೂಹಗಳಂತಿರುವರು; ನಿದ್ರಾಲಸ್ಯ ಪ್ರಮಾದಾದ್ಯೈಃ-ನಿದ್ರೆ, ಆಲಸ್ಯ, ಪ್ರಮಾದ ಮೊದಲಾದ, ನಾನಾವಿಧೈಃ-ಬಹುವಿಧ, ದೋಷೈಃ-ದೋಷಗಳಿಂದ, ಸದಾ-ಎಲ್ಲ ಕಾಲದಲ್ಲಿಯೂ, ಉಜ್ಝಿತಾಃ-ತ್ಯಜಿಸಲ್ಪಟ್ಟವರು (ಇಲ್ಲದವರು-ರಹಿತರು)ಆಗಿರುತ್ತ, ಜ್ಞಾನಸಂಪನ್ನಾಃ-(ಸ್ವಯೋಗ್ಯ) ಪೂರ್ಣಜ್ಞಾನವುಳ್ಳವರಾಗಿ (ಜ್ಞಾನಸ್ವರೂಪರೇ ಆಗಿ), ನಿಜೇಚ್ಛಯಾ-ಸ್ವೇಚ್ಛೆಯಿಂದಲೇ (ಇಚ್ಛಾನುಸಾರವಾಗಿ), ರಮಮಾಣಾಃ-ಕ್ರೀಡಿಸುತ್ತಲಿರುವರು; ಸ್ವೈರಂ-ಸ್ವೇಚ್ಛಾನುಸಾರವಾಗಿ, ವಿಷ್ಣೋಃ-ಶ್ರೀವಿಷ್ಣುವಿನ, ವೈಕುಂಠಾದಿಷು-ವೈಕುಂಠ ಮೊದಲಾದ (ಮುಕ್ತರಿಗೆ ನಿಯತಗಳಾದ) ಸ್ಥಾನೇಷು-ಸ್ಥಾನಗಳಲ್ಲಿ, ಸರ್ವದಾ-ಅನಂತಕಾಲದಲ್ಲಿ ಅನಂತಕಾಲಂ-ಅಂತವಿಲ್ಲದ ಭವಿಷ್ಯತ್ಕಾಲದಲ್ಲಿ ಸಹ, ಮೋದಂತೇ-ಸುಖಿಸುತ್ತಾರೆ; ಕಥಂಚನ-ಯಾವ ಕಾರಣದಿಂದಲೂ (ಯಾವ ಪ್ರಕಾರದಿಂದಲೂ-ಅಂಶಾದಿಗಳಿಂದ ಸಹ), ನ ಆವರ್ತಂತೇ-(ಸಂಸಾರಕ್ಕೆ) ಹಿಂದಿರುಗುವುದಿಲ್ಲ; ಯೇ-ಯಾವ ಅಧಿಕಾರಿಜೀವರು, ಸದಾ-ನಿತ್ಯವೂ, ಭಕ್ತ್ಯಾ-ಭಕ್ತಿಯಿಂದ (ಭಗವಂತನ ಸರ್ವೋತ್ತಮತ್ವ ಜ್ಞಾನಪೂರ್ವಕವಾದ ಪ್ರೀತಿಯಿಂದ), ಪಠಂತಿ-(ಈ ಮುಕ್ತಾವಸ್ಥಾವರ್ಣನರೂಪದ) ಅಧ್ಯಾಯವನ್ನು ಪಠಿಸುವರೋ (ಕೀರ್ತನಾದಿಗಳಿಂದ

---

ದೇಹದಲ್ಲಿ ಅತ್ಯಲ್ಪ ಮಲವೂ ಉಳಿಯುವುದಿಲ್ಲ ಮಲ, ಸ್ವೇದಾದಿ (ಮಾಂಸಾದಿ) ಯಾವುದೂ ನಿಲ್ಲುವುದಿಲ್ಲವಾದ್ದರಿಂದ, ಮುಕ್ತರ ದೇಹಗಳು (ಮುಕ್ತಲೋಕಗಳೂ) ಅತ್ಯಂತ ವಿಮಲವಾದವುಗಳು (ಶುದ್ಧವಾಗಿರುವುವು) (೨೨-೨೩). ಮುಕ್ತಲೋಕಗಳಲ್ಲಿರುವ ಎಲ್ಲರೂ ತೇಜೋಸಮೂಹಗಳಂತಿರುವರು; ನಿದ್ರೆ, ಆಲಸ್ಯ, ಪ್ರಮಾದ ಮೊದಲಾದ ವಿವಿಧ ದೋಷಗಳ ಲೇಶವೂ ಎಂದೂ ಇಲ್ಲದೇ, ಸರ್ವರೂ ಜ್ಞಾನಪೂರ್ಣರಾಗಿ, ಸ್ವೇಚ್ಛೆಯಿಂದ, ಶ್ರೀವಿಷ್ಣುವಿನ ವೈಕುಂಠಾದಿ ಲೋಕಗಳಲ್ಲಿ ಸರ್ವದಾ ಕ್ರೀಡಿಸುತ್ತಿರುವರು; ಹೀಗೆ ಅನಂತಕಾಲದಲ್ಲಿಯೂ ಆನಂದದಿಂದ ವಿಹರಿಸುತ್ತಿದ್ದು ಯಾವ ಕಾರಣದಿಂದಲೂ, ಯಾವ ಪ್ರಕಾರದಿಂದಲೂ, ಸಂಸಾರಕ್ಕೆ

ಸೇವಿಸುವವರೋ), (ತೇ-ಅವರು), ವಿಷ್ಣುಲೋಕೇ-ವಿಷ್ಣುಲೋಕದಲ್ಲಿ (ವೈಕುಂಠಾದಿಗಳಲ್ಲಿ) ಮಹೀಯತೇ-ವಿರಾಜಿಸುವವರಾಗುತ್ತಾರೆ (ಅಥವಾ ಸ್ಥಾವರರಿಂದ ಸೇವ್ಯರಾಗಿ ವಿಹರಿಸುತ್ತಾರೆ).

ಮುಕ್ತಾವಸ್ಥಾ ವರ್ಣನವೆಂಬ ೫೦ನೆಯ ಅಧ್ಯಾಯವು ಮುಗಿದುದು.

## ಅಧ್ಯಾಯ ೫೧

ಶ್ರೀ ವೇದವ್ಯಾಸಾಯ ನಮಃ

ಭಾಗುರಿರುವಾಚ—

ತಪ್ಯಮಾನಾಸ್ತ್ರಿಧಾ ತಾಪೈಃ ಸರ್ವೇ ಜೀವಗಣಾಃ ಸದಾ ।
ಪರಮೇಷ್ಟತಮಂ ಕೇನ ಮನ್ಯಂತೇ ವಿಷ್ಣುಮೇವ ಹಿ ॥ ೧ ॥
ಕೇಚಿತ್ತ್ವ ಮೋಕ್ಷಂ ವಾಂಛಂತಿ ಕರ್ಮಬಂಧಾಸ್ಸುಮುಕ್ಷವಃ ।
ವಿಷ್ಣುರೇವ ಹಿ ಮೋಕ್ಷಸ್ಯ ಮುಖ್ಯದಾತೇತಿ ಗೀಯತೇ ॥ ೨ ॥
ಅನ್ಯೇ ತದಾಜ್ಞಯಾ ಕಿಂಚಿತ್ತಥಾ ದೇವೋತ್ತಮಾ ಇತಿ ।
ಆವಶ್ಯಕಃ ಪ್ರಸಾದೋಽಸ್ಯ ಸಮುಪಾಸ್ಯತಮೋ ಹಿ ಸಃ ॥ ೩ ॥
ತತ್ಕಥಂ ಸ ಉಪಾಸ್ಯಃ ಸ್ಯಾತ್ತನ್ಮ ಆಖ್ಯಾಹಿ ವಿಸ್ತರಾತ್ ।

ಭಾಗುರಿಯು ಪ್ರಶ್ನಿಸುತ್ತಾನೆ:—

**ಅರ್ಥ:**—ಸರ್ವೇ-ಎಲ್ಲ ಜೀವಗಣಾಃ-ಜೀವಸಮೂಹಗಳು, ಸದಾ-ಎಲ್ಲ ಕಾಲದಲ್ಲಿ ತ್ರಿಧಾ-ಮೂರು ವಿಧದ, ತಾಪೈಃ-ತಾಪಗಳಿಂದ (ದುಃಖಗಳಿಂದ), ತಪ್ಯಮಾನಾಃ-ದುಃಖಿಸುವವರು (ಆಗಿರುತ್ತಾರೆ); ಕೇನ-ಯಾವುದರಿಂದ, ವಿಷ್ಣುಂ ಏವ-ಶ್ರೀವಿಷ್ಣುವನ್ನೇ, ಹಿ-ಶಾಸ್ತ್ರಸಿದ್ಧನಾದ್ದರಿಂದ, ಪರಮೇಷ್ಟತಮಂ-(ತಮಗೆ) ಪ್ರಿಯತಮನೆಂದು (ಶ್ರೇಷ್ಠ ಹಿತಕಾರಿಯೆಂದು), ಮನ್ಯಂತೇ-ತಿಳಿಯುತ್ತಾರೆ (ತಿಳಿಯ

---

ತಿರಿಗಿಬರುವುದಿಲ್ಲ; ಮುಕ್ತರ ಮಹಿಮಾಪ್ರತಿಪಾದಕವಾದ ಈ ಅಧ್ಯಾಯದ ಶ್ರವಣಪಠನಗಳಿಂದ, ವಿಷ್ಣುಲೋಕವನ್ನೇ ಹೊಂದಿ, ವಿರಾಜಿಸುತ್ತಾರೆ (೨೪-೨೬).

೫೦ನೇ ಅಧ್ಯಾಯವು ಮುಗಿದುದು.

ಅಧ್ಯಾಯ ೫೧

**ತಾತ್ಪರ್ಯ:**—ಎಲ್ಲ ಜೀವರೂ ಸರ್ವದಾ ತಾಪತ್ರಯ ಪೀಡಿತರಾಗಿ ದುಃಖಿಸುತ್ತಿರುವರು; ಅವರು ಶ್ರೀವಿಷ್ಣುವೇ ತಮಗೆ ಪ್ರಿಯತಮನೆಂದು (ತಮ್ಮ ಸರ್ವಪ್ರಕಾರದ ಹಿತಸಾಧಕನಾದ ಆಪ್ತಶ್ರೇಷ್ಠನೆಂದು) ಯಾವ ಉಪಾಯದಿಂದ ತಿಳಿಯ ಬಲ್ಲರು? ಜೀವರಾಶಿಗಳಲ್ಲಿ (ಅಲ್ಪಸಂಖ್ಯೆಯಲ್ಲಿ ಸ್ವಪ್ಪರಾಗಿರುವ ಮುಕ್ತಿಯೋಗ್ಯರು)

ಬಲ್ಲರು)?; ಕೇಚಿತ್ ಚ-(ಜೀವರಾಶಿಗಳಲ್ಲಿ) ಕೆಲವರು (ಅಲ್ಪ ಸಂಖ್ಯೆಯವರು) ಮಾತ್ರವೇ, ಕರ್ಮಬಂಧಾತ್-ಕರ್ಮಬಂಧದಿಂದ, ಮುಮುಕ್ಷವಃ-ಬಿಡುಗಡೆ ಹೊಂದಲಪೇಕ್ಷಿಸುವರಾಗಿ, ಮೋಕ್ಷಂ-ಮುಕ್ತಿಯನ್ನು ವಾಂಛಂತಿ-ಆಶಿಸುತ್ತಾರೆ; ವಿಷ್ಣುಃ ಏವ-ಶ್ರೀವಿಷ್ಣುವೇ, ಮೋಕ್ಷಸ್ಯ-ಮುಕ್ತಿಯ, ಮುಖ್ಯದಾತಾ-ಮುಖ್ಯದಾತನು, ಇತಿ-ಎಂದು, ಗೀಯತೇ ಹಿ-ಶಾಸ್ತ್ರ(ಗಳಲ್ಲಿ) ಸ್ತುತ್ಯನಾಗಿರುವನಷ್ಟೆ!, ಅನ್ಯೇ-ಇತರ, ದೇವೋತ್ತಮಾಃ-ದೇವಶ್ರೇಷ್ಠರು, ತದಾಜ್ಞಯಾ-ಶ್ರೀವಿಷ್ಣುವಿನ ಆಜ್ಞೆಯಿಂದ, ಕಿಂಚಿತ್-ಕೆಲಮಟ್ಟಿಗೆ (ಕೆಲವರು ಮಾತ್ರ), ತಥಾ-ಹಾಗೆ, ಇತಿ-ಎಂದು (ಮೋಕ್ಷವನ್ನು ಕೊಡುವವರೆಂದು), (ಗೀಯಂತೇ-ಹೇಳಲ್ಪಡುತ್ತಾರೆ); (ಹೀಗಿದ್ದರೂ-ವಾಯುಬ್ರಹ್ಮರು ಮುಕ್ತಿದಾತರೆಂದರೂ), ಅಸ್ಯ-ಶ್ರೀವಿಷ್ಣುವಿನ, ಪ್ರಸಾದಃ-ಪ್ರಸಾದವು ('ಏನಂ ಮೋಚಯಾಮಿ' ಎಂಬ ಸಂಕಲ್ಪರೂಪದ ಮನಃಪ್ರಸನ್ನತೆಯು), ಆವಶ್ಯಕಃ-ಅವಶ್ಯಕವಾದುದೇ ಸರಿ; ಹಿ-ಆದ್ದರಿಂದ, ಸಃ-ಆ ಶ್ರೀವಿಷ್ಣುವು, ಸಮುಪಾಸ್ಯತಮಃ-ಭಕ್ತಿಯಿಂದ ಉಪಾಸಿಸಲ್ಪಡಬೇಕಾದವರಲ್ಲಿ ಶ್ರೇಷ್ಠನು (ಸೇವ್ಯತಮನು); ಸಃ-ಆತನು, ತತ್ಕಥಂ-ಅದು ಹೇಗೆ, ಉಪಾಸ್ಯಃ-ಉಪಾಸ್ಯನು (ಸೇವಿಸಲ್ಪಡುವವನು), ಸ್ಯಾತ್-

---

ಕೆಲವರು ಮಾತ್ರ[1] ಸಂಸಾರದಲ್ಲಿ ಸುತ್ತುವುದಕ್ಕೆ ಕಾರಣವಾದ ಕರ್ಮಬಂಧದಿಂದ ಮುಕ್ತರಾಗುವ ಇಚ್ಛೆಯಿಂದ ಮೋಕ್ಷವನ್ನು ಅಪೇಕ್ಷಿಸುತ್ತಾರೆ; ಮೋಕ್ಷವಾದರೂ, ಶ್ರೀವಿಷ್ಣುಪ್ರಸಾದ ಮಾತ್ರ ಲಭ್ಯವೆಂದು ವೇದಾದಿಶಾಸ್ತ್ರಗಳು ಸಾರುತ್ತವೆ; ಶ್ರೀವಿಷ್ಣುವೇ ಮುಖ್ಯಮೋಕ್ಷದಾತನು—ಅನ್ಯ ಶ್ರೇಷ್ಠದೇವತೆಗಳು, ಆತನ ಆಜ್ಞೆಯಿಂದ, ಕೆಲವರು (ಸಂದರ್ಭ ವಿಶೇಷಗಳಲ್ಲಿ ಮಾತ್ರ) ಮೋಕ್ಷವನ್ನು ಕೊಡುವರೆಂದೂ ಶಾಸ್ತ್ರಗಳು ಹೇಳುತ್ತವೆ;[2] ಹಾಗೆ ಮುಕ್ತಿಯನ್ನು ಕೊಡಬಹುದಾದರೂ, ಅದಕ್ಕೂ ಶ್ರೀವಿಷ್ಣುವಿನ ಪ್ರಸಾದವು ಅತ್ಯವಶ್ಯಕ-ಅದಿಲ್ಲದೇ ಅವರೂ ಮೋಕ್ಷಪ್ರದರಾಗುವುದಿಲ್ಲ; ಆ ಶ್ರೀವಿಷ್ಣು ಪ್ರಸಾದವಾದರೋ ಆತನ ಭಕ್ತಿಯುತ ಉಪಾಸನೆಯಿಂದ ಮಾತ್ರ ಲಭಿಸುತ್ತದೆ; ಆದ್ದರಿಂದ ಆ ಉಪಾಸನೆಯನ್ನು ಹೇಗೆ ಆಚರಿಸಬೇಕೆಂಬುದನ್ನು, ಹೇ ಸೂತ! ನಮಗಾಗಿ

---

1. 'ಅಸುರಾ ಬಹುಲಾ ಯಸ್ಮಾತ್' ಇತ್ಯಾದಿ ಪ್ರಮಾಣವಾಕ್ಯಗಳು, ಪ್ರತಿ ಬ್ರಹ್ಮಕಲ್ಪದಲ್ಲಿ ಸೃಷ್ಟರಾಗುವ ಜೀವರಲ್ಲಿ ಅಸುರರೇ (ತಮೋಯೋಗ್ಯ ಜೀವರೇ) ಅಧಿಕ ಸಂಖ್ಯೆಯಲ್ಲಿರುವರೆಂದು ಹೇಳಿ, ಆದ್ದರಿಂದಲೇ ('ತಸ್ಮಾನ್ನ ಜನತಾಮಿಯಾತ್') ಜನಸಮ್ಮರ್ದದಲ್ಲಿ ಸೇರಕೂಡದೆಂದು ಎಚ್ಚರಿಸುತ್ತವೆ. 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ' ಇತ್ಯಾದಿ ಗೀತಾ ವಾಕ್ಯಗಳೂ ಸಜ್ಜನರು ಅಲ್ಪಸಂಖ್ಯೆಯಲ್ಲಿರುವರೆಂಬುದನ್ನು ಸೂಚಿಸುತ್ತವೆ.

2. 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' ಇತ್ಯಾದಿ ಪ್ರಮಾಣಗಳು, ಶ್ರೀಹರಿಯ ಆಜ್ಞೆಯಿಂದ ಬ್ರಹ್ಮವಾಯುಗಳೂ ಮೋಕ್ಷವನ್ನು ಕೊಡುವ ಅಧಿಕಾರವನ್ನು ಹೊಂದಿರುವರೆಂದು ಹೇಳುತ್ತವೆ. ಹಾಗೇ ಭಾರತ್ಯಾದಿ ಇತರರು 'ಅನುಜ್ಞಾಪ್ರದಾಯಿನಃ'—ಮುಕ್ತಿದಾನವನ್ನು ಸಮ್ಮತಿಸಿ ಅನುಗ್ರಹಿಸುವವರು ಮಾತ್ರ.

ಸೇವಿಸುವರೋ), (ತೇ-ಅವರು), ವಿಷ್ಣುಲೋಕೇ-ವಿಷ್ಣುಲೋಕದಲ್ಲಿ (ವೈಕುಂಠಾದಿಗಳಲ್ಲಿ) ಮಹೀಯತೇ-ವಿರಾಜಿಸುವವರಾಗುತ್ತಾರೆ (ಅಥವಾ ಸ್ವಾಪರರಿಂದ ಸೇವ್ಯರಾಗಿ ವಿಹರಿಸುತ್ತಾರೆ).

ಮುಕ್ತಾವಸ್ಥಾ ವರ್ಣನವೆಂಬ ೫೧ನೆಯ ಅಧ್ಯಾಯವು ಮುಗಿದುದು.

## ಅಧ್ಯಾಯ ೫೨

ಶ್ರೀ ವೇದವ್ಯಾಸಾಯ ನಮಃ

**ಭಾಗುರಿರುವಾಚ—**

**ತಪ್ಯಮಾನಾಸ್ತ್ರಿಧಾ ತಾಪೈಃ ಸರ್ವೇ ಜೀವಗಣಾಃ ಸದಾ ।**
**ಪರಮೇಷ್ಟತಮಂ ಕೇನ ಮನ್ಯಂತೇ ವಿಷ್ಣುಮೇವ ಹಿ ॥ ೧ ॥**
**ಕೇಚಿಚ್ಚ ಮೋಕ್ಷಂ ವಾಂಛಂತಿ ಕರ್ಮಬಂಧಾನ್ಮುಮುಕ್ಷವಃ ।**
**ವಿಷ್ಣುರೇವ ಹಿ ಮೋಕ್ಷಸ್ಯ ಮುಖ್ಯದಾತೇತಿ ಗೀಯತೇ ॥ ೨ ॥**
**ಅನ್ಯೇ ತದಾಜ್ಞಯಾ ಕಿಂಚಿತ್ತಥಾ ದೇವೋತ್ತಮಾ ಇತಿ ।**
**ಆವಶ್ಯಕಃ ಪ್ರಸಾದೋಽಸ್ಯ ಸಮುಪಾಸ್ಯತಮೋ ಹಿ ಸಃ ॥ ೩ ॥**
**ತತ್ಕಥಂ ಸ ಉಪಾಸ್ಯಃ ಸ್ಯಾತ್ತನ್ನ ಆಖ್ಯಾಹಿ ವಿಸ್ತರಾತ್ ।**

ಭಾಗುರಿಯು ಪ್ರಶ್ನಿಸುತ್ತಾನೆ:—

**ಅರ್ಥ:**—ಸರ್ವೇ-ಎಲ್ಲ ಜೀವಗಣಾಃ-ಜೀವಸಮೂಹಗಳು, ಸದಾ-ಎಲ್ಲ ಕಾಲದಲ್ಲಿ ತ್ರಿಧಾ-ಮೂರು ವಿಧದ, ತಾಪೈಃ-ತಾಪಗಳಿಂದ (ದುಃಖಗಳಿಂದ), ತಪ್ಯಮಾನಾಃ-ದುಃಖಿಸುವವರು (ಆಗಿರುತ್ತಾರೆ); ಕೇನ-ಯಾವುದರಿಂದ, ವಿಷ್ಣುಂ ಏವ-ಶ್ರೀವಿಷ್ಣುವನ್ನೇ, ಹಿ-ಶಾಸ್ತ್ರಸಿದ್ಧನಾದ್ದರಿಂದ, ಪರಮೇಷ್ಟತಮಂ-(ತಮಗೆ) ಪ್ರಿಯತಮನೆಂದು (ಶ್ರೇಷ್ಠ ಹಿತಕಾರಿಯೆಂದು), ಮನ್ಯಂತೇ-ತಿಳಿಯುತ್ತಾರೆ (ತಿಳಿಯ

---

ತಿರಿಗಿಬರುವುದಿಲ್ಲ; ಮುಕ್ತರ ಮಹಿಮಾಪ್ರತಿಪಾದಕವಾದ ಈ ಅಧ್ಯಾಯದ ಶ್ರವಣಪಠನಗಳಿಂದ, ವಿಷ್ಣುಲೋಕವನ್ನೇ ಹೊಂದಿ, ವಿರಾಜಿಸುತ್ತಾರೆ (೨೪-೨೬).

೫೧ನೇ ಅಧ್ಯಾಯವು ಮುಗಿದುದು.

ಅಧ್ಯಾಯ ೫೨

**ತಾತ್ಪರ್ಯ:**—ಎಲ್ಲ ಜೀವರೂ ಸರ್ವದಾ ತಾಪತ್ರಯ ಪೀಡಿತರಾಗಿ ದುಃಖಿಸುತ್ತಿರುವರು; ಅವರು ಶ್ರೀವಿಷ್ಣುವೇ ತಮಗೆ ಪ್ರಿಯತಮನೆಂದು (ತಮ್ಮ ಸರ್ವಪ್ರಕಾರದ ಹಿತಸಾಧಕನಾದ ಆಪ್ತಶ್ರೇಷ್ಠನೆಂದು) ಯಾವ ಉಪಾಯದಿಂದ ತಿಳಿಯಬಲ್ಲರು? ಜೀವರಾಶಿಗಳಲ್ಲಿ (ಅಲ್ಪಸಂಖ್ಯೆಯಲ್ಲಿ ಸ್ವಚ್ಛರಾಗಿರುವ ಮುಕ್ತಿಯೋಗ್ಯರು)

ಬಲ್ಲರು)?: ಕೇಚಿತ್ ಚ-(ಜೀವರಾಶಿಗಳಲ್ಲಿ) ಕೆಲವರು (ಅಲ್ಪ ಸಂಖ್ಯೆಯವರು) ಮಾತ್ರವೇ, ಕರ್ಮಬಂಧಾತ್-ಕರ್ಮಬಂಧದಿಂದ, ಮುಮುಕ್ಷವಃ-ಬಿಡುಗಡೆ ಹೊಂದಲಪೇಕ್ಷಿಸುವವರಾಗಿ, ಮೋಕ್ಷಂ-ಮುಕ್ತಿಯನ್ನು ವಾಂಛಂತಿ-ಆಶಿಸುತ್ತಾರೆ; ವಿಷ್ಣುಃ ಏವ-ಶ್ರೀವಿಷ್ಣುವೇ, ಮೋಕ್ಷಸ್ಯ-ಮುಕ್ತಿಯ, ಮುಖ್ಯದಾತಾ-ಮುಖ್ಯದಾತನು, ಇತಿ-ಎಂದು, ಗೀಯತೇ ಹಿ-ಶಾಸ್ತ್ರ(ಗಳಲ್ಲಿ) ಸ್ತುತ್ಯನಾಗಿರುವನಷ್ಟೆ, ಅನ್ಯೇ-ಇತರ, ದೇವೋತ್ತಮಾಃ-ದೇವಶ್ರೇಷ್ಠರು, ತದಾಜ್ಞಯಾ-ಶ್ರೀವಿಷ್ಣುವಿನ ಆಜ್ಞೆಯಿಂದ, ಕಿಂಚಿತ್-ಕೆಲಮಟ್ಟಿಗೆ (ಕೆಲವರು ಮಾತ್ರ), ತಥಾ-ಹಾಗೆ, ಇತಿ-ಎಂದು (ಮೋಕ್ಷವನ್ನು ಕೊಡುವವರೆಂದು), (ಗೀಯಂತೇ-ಹೇಳಲ್ಪಡುತ್ತಾರೆ); (ಹೀಗಿದ್ದರೂ-ವಾಯುಬ್ರಹ್ಮರು ಮುಕ್ತಿದಾತರೆಂದರೂ), ಅಸ್ಯ-ಶ್ರೀವಿಷ್ಣುವಿನ, ಪ್ರಸಾದಃ-ಪ್ರಸಾದವು ('ಏನಂ ಮೋಚಯಾಮಿ' ಎಂಬ ಸಂಕಲ್ಪರೂಪದ ಮನಃಪ್ರಸನ್ನತೆಯು), ಅವಶ್ಯಕಃ-ಅವಶ್ಯಕವಾದುದೇ ಸರಿ; ಹಿ-ಆದ್ದರಿಂದ, ಸಃ-ಆ ಶ್ರೀವಿಷ್ಣುವು, ಸಮುಪಾಸ್ಯತಮಃ-ಭಕ್ತಿಯಿಂದ ಉಪಾಸಿಸಲ್ಪಡಬೇಕಾದವರಲ್ಲಿ ಶ್ರೇಷ್ಠನು (ಸೇವ್ಯತಮನು); ಸಃ-ಆತನು, ತತ್ಕಥಂ-ಅದು ಹೇಗೆ, ಉಪಾಸ್ಯಃ-ಉಪಾಸ್ಯನು (ಸೇವಿಸಲ್ಪಡುವವನು), ಸ್ಯಾತ್-

---

ಕೆಲವರು ಮಾತ್ರ[1] ಸಂಸಾರದಲ್ಲಿ ಸುತ್ತುವುದಕ್ಕೆ ಕಾರಣವಾದ ಕರ್ಮಬಂಧದಿಂದ ಮುಕ್ತರಾಗುವ ಇಚ್ಛೆಯಿಂದ ಮೋಕ್ಷವನ್ನು ಅಪೇಕ್ಷಿಸುತ್ತಾರೆ; ಮೋಕ್ಷವಾದರೂ, ಶ್ರೀವಿಷ್ಣುಪ್ರಸಾದ ಮಾತ್ರ ಲಭ್ಯವೆಂದು ವೇದಾದಿಶಾಸ್ತ್ರಗಳು ಸಾರುತ್ತವೆ; ಶ್ರೀವಿಷ್ಣುವೇ ಮುಖ್ಯಮೋಕ್ಷದಾತನು—ಅನ್ಯ ಶ್ರೇಷ್ಠದೇವತೆಗಳು, ಆತನ ಆಜ್ಞೆಯಿಂದ, ಕೆಲವರು (ಸಂದರ್ಭ ವಿಶೇಷಗಳಲ್ಲಿ ಮಾತ್ರ) ಮೋಕ್ಷವನ್ನು ಕೊಡುವವರೆಂದೂ ಶಾಸ್ತ್ರಗಳು ಹೇಳುತ್ತವೆ;[2] ಹಾಗೆ ಮುಕ್ತಿಯನ್ನು ಕೊಡಬಹುದಾದರೂ, ಅದಕ್ಕೂ ಶ್ರೀವಿಷ್ಣುವಿನ ಪ್ರಸಾದವು ಅತ್ಯವಶ್ಯಕ-ಅದಿಲ್ಲದೇ ಅವರೂ ಮೋಕ್ಷಪ್ರದರಾಗುವುದಿಲ್ಲ; ಆ ಶ್ರೀವಿಷ್ಣು ಪ್ರಸಾದವಾದರೋ ಆತನ ಭಕ್ತಿಯುತ ಉಪಾಸನೆಯಿಂದ ಮಾತ್ರ ಲಭಿಸುತ್ತದೆ; ಆದ್ದರಿಂದ ಆ ಉಪಾಸನೆಯನ್ನು ಹೇಗೆ ಆಚರಿಸಬೇಕೆಂಬುದನ್ನು, ಹೇ ಸೂತ! ನಮಗಾಗಿ

---

1. 'ಅಸುರಾ ಬಹುಲಾ ಯಸ್ಮಾತ್' ಇತ್ಯಾದಿ ಪ್ರಮಾಣವಾಕ್ಯಗಳು, ಪ್ರತಿ ಬ್ರಹ್ಮಕಲ್ಪದಲ್ಲಿ ಸೃಷ್ಟರಾಗುವ ಜೀವರಲ್ಲಿ ಅಸುರರೇ (ತಮೋಯೋಗ್ಯ ಜೀವರೇ) ಅಧಿಕ ಸಂಖ್ಯೆಯಲ್ಲಿರುವರೆಂದು ಹೇಳಿ, ಆದ್ದರಿಂದಲೇ ('ತಸ್ಮಾನ್ನ ಜನತಾಮಿಯಾತ್') ಜನಸಮ್ಮರ್ದದಲ್ಲಿ ಸೇರಕೂಡದೆಂದು ಎಚ್ಚರಿಸುತ್ತವೆ. 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ' ಇತ್ಯಾದಿ ಗೀತಾ ವಾಕ್ಯಗಳೂ ಸಜ್ಜನರು ಅಲ್ಪಸಂಖ್ಯೆಯಲ್ಲಿರುವರೆಂಬುದನ್ನು ಸೂಚಿಸುತ್ತವೆ.

2. 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' ಇತ್ಯಾದಿ ಪ್ರಮಾಣಗಳು, ಶ್ರೀಹರಿಯ ಆಜ್ಞೆಯಿಂದ ಬ್ರಹ್ಮವಾಯುಗಳೂ ಮೋಕ್ಷವನ್ನು ಕೊಡುವ ಅಧಿಕಾರವನ್ನು ಹೊಂದಿರುವರೆಂದು ಹೇಳುತ್ತವೆ. ವಾಣೀ ಭಾರತ್ಯಾದಿ ಇತರರು 'ಅನುಜ್ಞಾಪ್ರದಾಯಿನಃ'—ಮುಕ್ತಿದಾನವನ್ನು ಸಮ್ಮತಿಸಿ ಅನುಗ್ರಹಿಸುವವರು ಮಾತ್ರ.

ಆಗಬೇಕು? ತತ್-ಅದನ್ನು (ಆ ಮಾರ್ಗವನ್ನು), ನಃ-ನಮಗೆ, ವಿಸ್ತರಾತ್-ವಿಸ್ತಾರವಾಗಿ, ಆಖ್ಯಾಹಿ-ಹೇಳು.

**ಸೂತ ಉವಾಚ—**

**ಏವಮೇವ ಪುರಾ ಪೃಷ್ಟೋ ನಾರದೇನ ಮಹರ್ಷಿಣಾ ॥ ೪ ॥**

**ಹಿರಣ್ಯಗರ್ಭಸ್ತದ್ವಕ್ಷ್ಯೇ ಯಚ್ಛುಕಾತ್‌ಶ್ರುತವಾನಹಂ ।**

ಏವಂ ಏವ-ಹೀಗೆಯೇ (ನಿನ್ನಂತೆಯೇ), ಪುರಾ-ಹಿಂದೆ, ಮಹರ್ಷಿಣಾ-ಮಹರ್ಷಿಯಾದ, ನಾರದೇನ-ನಾರದನಿಂದ, ಹಿರಣ್ಯಗರ್ಭಃ-ಬ್ರಹ್ಮದೇವನು, ಪೃಷ್ಟಃ-ಪ್ರಶ್ನಿಸಲ್ಪಟ್ಟನು; ಯತ್-ಯಾವುದರ ವಿವರವನ್ನು ಅಹಂ-ನಾನು, ಶುಕಾತ್-ಶುಕಾಚಾರ್ಯರಿಂದ, ಶ್ರುತವಾನ್-ಕೇಳಿ ತಿಳಿದಿರುವೆನೋ, ತತ್-ಅದನ್ನೇ, ವಕ್ಷ್ಯೇ-ಹೇಳುತ್ತೇನೆ.

**ಕದಾಚಿತ್ಸತ್ಯಲೋಕಸ್ಥಂ ಬ್ರಹ್ಮಾಣಂ ನಾರದೋಽಬ್ರವೀತ್ ॥ ೫ ॥**

**ನಾರದ ಉವಾಚ—**

**ದೇವದೇವ ಕಥಂ ಬ್ರಹ್ಮನ್ ಸರ್ವಲೋಕಪಿತಾಮಹ ।**

**ಸಂಸಾರದುಃಖಸಂತಪ್ತೈರ್ಮುಕ್ತಿಮಾತ್ರ ಫಲೇಪ್ಸುಭಿಃ ॥ ೬ ॥**

**ಆರಾಧನೀಯಃ ಸರ್ವಾತ್ಮಾ ಸ ವಿಷ್ಣುರ್ಮೋಕ್ಷದಃ ಸತಾಂ ।**

**ತನ್ಮೇ ಶೃಣ್ವತ ಆಖ್ಯಾಹಿ ಲೋಕಾನಾಂ ಚ ಹಿತಾಯ ವೈ ॥ ೭ ॥**

ಕದಾಚಿತ್-ಒಂದುವೇಳೆ, ನಾರದಃ-ನಾರದನು, ಸತ್ಯಲೋಕಸ್ಥಂ-ಸತ್ಯ ಲೋಕದಲ್ಲಿದ್ದ ಬ್ರಹ್ಮಾಣಂ-ಬ್ರಹ್ಮದೇವನನ್ನು ಕುರಿತು, ಅಬ್ರವೀತ್-ನುಡಿದನು;

ನಾರದನು ಹೇಳುತ್ತಾನೆ:—

ದೇವದೇವ-ದೇವಶ್ರೇಷ್ಠನಾದ, ಬ್ರಹ್ಮನ್-ಹೇ ಬ್ರಹ್ಮದೇವ! ಸರ್ವಲೋಕ

---

ವಿಸ್ತಾರವಾಗಿ ನಿರೂಪಿಸು (೧-೩). ಸೂತನು ಹೇಳುತ್ತಾನೆ:—ಹೇ ಭಾಗುರೇ! ಹಿಂದೆ, ನಿನ್ನಂತೆಯೇ, ನಾರದ ಮಹರ್ಷಿಯು, ಬ್ರಹ್ಮದೇವನನ್ನು ಪ್ರಶ್ನಿಸಿದನು; ಆ ನಾರದ ಬ್ರಹ್ಮರ ಸಂವಾದವನ್ನು ಶುಕಾಚಾರ್ಯರಿಂದ, ನಾನು ತಿಳಿದಿರುವೆನು—ಅದನ್ನೇ ನಿಮಗೆ ಹೇಳುತ್ತೇನೆ(೪). ಒಂದು ದಿನ, ಸತ್ಯಲೋಕದಲ್ಲಿ ಸರ್ವಲೋಕ ಪಿತಾಮಹನೂ (ಸರ್ವ ಜಗತ್ತಿನ ಸೃಷ್ಟಿಕರ್ತನೂ), ದೇವದೇವನೂ ಆದ ಬ್ರಹ್ಮದೇವನನ್ನು ಕುರಿತು, ನಾರದನು ಹೀಗೆ ಪ್ರಶ್ನಿಸಿದನು; 'ಹೇ ಬ್ರಹ್ಮದೇವ! ದೇವೋತ್ತಮ! ಸಂಸಾರ ದುಃಖದಿಂದ ಅತ್ಯಂತ ತಪ್ತರಾಗಿ, ಮೋಕ್ಷಮಾತ್ರವನ್ನು ಅಪೇಕ್ಷಿಸುವ ಜನರು, ಸಜ್ಜನರಿಗೆ ಮುಕ್ತಿಪ್ರದನೂ, ಸರ್ವಸ್ವಾಮಿಯೂ ಆದ, ಶ್ರೀವಿಷ್ಣುವನ್ನು ಹೇಗೆ ಆರಾಧಿಸಬೇಕೆಂಬುದನ್ನು ತಿಳಿಯಲಿಚ್ಛಿಸುವ ನನಗೂ, ಲೋಕಹಿತಾರ್ಥವಾಗಿಯೂ, ನಿರೂಪಿಸಿ

ಪಿತಾಮಹ- ಹೇ ಸಕಲಜಗತ್ತಿನ ಪಿತಾಮಹನೇ! ಸಂಸಾರದುಃಖಸಂತಪ್ತೈಃ- ಸಂಸಾರತಾಪಗಳಿಂದ ದುಃಖಿತರಾದ, ಮುಕ್ತಿ ಮಾತ್ರಫಲೇಪ್ಸುಭಿಃ-ಮೋಕ್ಷಫಲವನ್ನು ಮಾತ್ರ ಅಪೇಕ್ಷಿಸುವವರಿಂದ, ಸತಾಂ-ಸಜ್ಜನರಿಗೆ, ಮೋಕ್ಷದಃ-ಮುಕ್ತಿಪ್ರದನಾದ, ಸರ್ವಾತ್ಮಾ-ಸರ್ವಸ್ವಾಮಿಯಾದ, ಸಃ ವಿಷ್ಣುಃ- ಆ ಶ್ರೀವಿಷ್ಣುವು, ಕಥಂ- ಹೇಗೆ (ಯಾವ ಪ್ರಕಾರದಿಂದ), ಆರಾಧನೀಯಃ-ಆರಾಧಿಸಲ್ಪಡಬೇಕು? ತತ್-ಅದನ್ನು, ಶೃಣ್ವತಃ- ಕೇಳುತ್ತಿರುವ ಮೇ-ನನಗೂ, ಚ-ಮತ್ತು ಲೋಕಾನಾಂ-ಲೋಕಗಳ (ಸಕಲಪ್ರಜೆಗಳ), ಹಿತಾಯ ವೈ- ಹಿತಕ್ಕಾಗಿಯೂ, ಆಖ್ಯಾಹಿ-ಹೇಳು.

ಬ್ರಹ್ಮೋವಾಚ—

ಮನಸಾ ಕರ್ಮಣಾ ವಾಚಾ ತಥಾ ಸರ್ವೇಂದ್ರಿಯೈರಪಿ ।
ಆರಾಧನೀಯಃ ಸರ್ವೇಶೋ ಲಬ್ಧೇನಾಪಿ ಧನಾದಿನಾ ॥ ೮ ॥

ಮನಸಾ- ಮನಸ್ಸಿನಿಂದಲೂ, ಕರ್ಮಣಾ-(ದೇಹದಿಂದಲೂ) ಕರ್ಮೇಂದ್ರಿಯಗಳಿಂದಲೂ, ಅಪಿ-ಮತ್ತು ವಾಚಾ-ವಾಗಿಂದ್ರಿಯದಿಂದಲೂ, ತಥಾ-ಹಾಗೂ, ಸರ್ವೇಂದ್ರಿಯೈಃ-ಸಕಲೇಂದ್ರಿಯಗಳಿಂದ, ಲಬ್ಧೇನ-(ಅತ್ಯಾಯಾಸವಿಲ್ಲದೇ ಸ್ವಧರ್ಮದಿಂದ) ದೊರೆತ, ಧನಾದಿನಾ ಅಪಿ-ಅಲ್ಪವಾದ ಧನಾದಿ ವಸ್ತುಗಳಿಂದಲೂ ಸರ್ವೇಶಃ- ಸರ್ವಸ್ವಾಮಿಯಾದ ಶ್ರೀವಿಷ್ಣುವು, ಆರಾಧನೀಯಃ-ಆರಾಧಿಸಲ್ಪಡಬೇಕು (ಸೇವಿಸಲ್ಪಡಬೇಕು).

ಸರ್ವೇಷಾಂ ಇಂದ್ರಿಯಾಣಾಂ ಹಿ ಶ್ರೋತ್ರಂ ಶ್ರೇಷ್ಠತಮಂ ಸ್ಮೃತಂ ।
ಸರ್ವಜ್ಞೋ ಜಾಯತೇ ಯೇನ ಶೃಣ್ವಾನಃ ಸತ್ಕಥಾಂ ಸತಾಂ ॥ ೯ ॥
ವರ್ಣಯಂತಿ ಮಹಾವಿಷ್ಣೋರ್ಮಹಿಮಾನಂ ಭೃಶಾವೃತಾಃ ।
ಅಥವಾ ತಸ್ಯ ಭಕ್ತಾನಾಂ ತೇ ಸಂತೋಽನ್ಯೇಽಸ್ಯಥೈವ ಹಿ ॥ ೧೦ ॥

(೫-೭). ಬ್ರಹ್ಮದೇವನು ಹೀಗೆ ಹೇಳಿದನು:—ಮನಸ್ಸು, ಕರ್ಮ, ನುಡಿಗಳಿಂದ ಮತ್ತು ಸಮಸ್ತ ಇಂದ್ರಿಯಗಳಿಂದಲೂ, ನ್ಯಾಯ ಮಾರ್ಗದಿಂದ ಅತ್ಯಾಯಾಸವಿಲ್ಲದೇ ಲಬ್ಧವಾದ ಅಲ್ಪ ಧನಾದಿಗಳಿಂದ ಸಹ ಸರ್ವಸ್ವಾಮಿಯಾದ ಶ್ರೀವಿಷ್ಣುವನ್ನು ಆರಾಧಿಸಬೇಕು (೮). ಸಜ್ಜನರಿಂದ ಸತ್ಕಥೆಗಳನ್ನು ಶ್ರವಣಮಾಡಿ, ಸ್ವಯೋಗ್ಯ ಪೂರ್ಣ ಜ್ಞಾನವನ್ನು ದೊರಕಿಸಿಕೊಳ್ಳಲು ಸಾಧನವಾದ ಶ್ರವಣೇಂದ್ರಿಯವು ಎಲ್ಲ ಇಂದ್ರಿಯಗಳಲ್ಲಿ ಅತ್ಯಂತ ಶ್ರೇಷ್ಠವಾದುದು; ಸದಾ ಉತ್ಸಾಹಿಗಳಾದ ಶ್ರೋತೃಗಳಿಂದ ಪರಿವೃತರಾಗಿ, ಶ್ರೀವಿಷ್ಣುವಿನ ಅಥವಾ (ಮತ್ತು) ವಿಷ್ಣುಭಕ್ತರ ಮಹಿಮೆಗಳನ್ನು ವರ್ಣಿಸುವವರೇ (ಅದರಲ್ಲಿ ಆಸಕ್ತರಾದವರೇ) ಸತ್ಪುರುಷರು—ಅವರೇ ಸಂತರು; ಅದಿಲ್ಲದವರು ಸಂತರಲ್ಲ; ಇದೇ ಸತ್ಪುರುಷರ ಮುಖ್ಯ ಲಕ್ಷಣವು (೯-೧೦). ಮನುಷ್ಯರಿಗೆ (ಮನುಷ್ಯ

ಸರ್ವೇಷಾಂ-ಎಲ್ಲ, ಇಂದ್ರಿಯಾಣಾಂ-ಇಂದ್ರಿಯಗಳ ಮಧ್ಯದಲ್ಲಿ, ಶ್ರೋತ್ರಂ-ಶ್ರವಣೇಂದ್ರಿಯವು, ಶ್ರೇಷ್ಠತಮಂ-ಅತ್ಯಂತ ಶ್ರೇಷ್ಠವೆಂದು, ಸ್ಮೃತಂ-ತಿಳಿಯಲಟ್ಟಿದೆ; ಯೇನ-ಯಾವುದರಿಂದ (ಆ ಇಂದ್ರಿಯದಿಂದ), ಸತಾಂ-ಸಜ್ಜನರ (ಅವರು ಹೇಳುವ), ಸತ್ಕಥಾಂ-ಸತ್ಕಥೆಗಳನ್ನು (ಶ್ರೀವಿಷ್ಣುವಿನ ಮತ್ತು ವಿಷ್ಣುಭಕ್ತರ ಮಹಿಮೆಗಳನ್ನು), ಶೃಣ್ವಾನಃ-ಶ್ರವಣಮಾಡುವವನಾಗಿ, ಸರ್ವಜ್ಞಃ-(ತಿಳಿಯಬೇಕಾದ) ಎಲ್ಲವನ್ನೂ ತಿಳಿದವನು, ಜಾಯತೇ-ಆಗುತ್ತಾನೆ; (ಯೇ-ಯಾರ), ಭೃಶಾವೃತಾಃ-(ಶ್ರವಣೋತ್ಸುಕರಾದವರಿಂದ) ಅತಿಶಯವಾಗಿ ಪರಿವೃತರಾಗಿ (ಅಥವಾ ಸತ್ಕಥೆಗಳಿಂದ ಆವೃತರಾದ ಮನಸ್ಸುಳ್ಳವರಾಗಿ), ಮಹಾವಿಷ್ಣೋಃ-ಶ್ರೀ ಮಹಾವಿಷ್ಣುವಿನ, ಅಥವಾ, ತಸ್ಯ-ಆತನ, ಭಕ್ತಾನಾಂ-ಭಕ್ತರ, ಮಹಿಮಾನಂ-ಮಹಿಮೆಯನ್ನು, ವರ್ಣಯಂತಿ-ವರ್ಣಿಸುವರೋ, ತೇ-ಅವರು, ಸಂತಃ-ಸತ್ಪುರುಷರು (ಸಜ್ಜನರು); ಅನ್ಯೇ-ಇತರರು, ಅನ್ಯಥಾ ಏವ-ಸತ್ಪುರುಷರೇ ಅಲ್ಲ ಹಿ-ಇದು (ಈ ಲಕ್ಷಣವು) ಶಾಸ್ತ್ರಸಿದ್ಧವು.

**ವಾಗಿಂದ್ರಿಯಂ ಮನುಷ್ಯಾಣಾಂ ಶ್ರೋತ್ರಸ್ಯ ಪರಮಃ ಸಖಾ ।**

**ಪರಸ್ಪರೋಪಕಾರಿತ್ವಾತ್ಪರಮಂ ಸಖ್ಯಮೇತಯೋಃ ॥ ೧೧ ॥**

ಮನುಷ್ಯಾಣಾಂ-ಮನುಷ್ಯರಿಗೆ (ಮಾನುಷ ದೇಹದಲ್ಲಿರುವ ಜೀವರಿಗೆ), ವಾಗಿಂದ್ರಿಯಂ-ವಾಗಿಂದ್ರಿಯವು, ಶ್ರೋತ್ರಸ್ಯ-ಶ್ರವಣೇಂದ್ರಿಯದ, ಪರಮಃ-ಉತ್ತಮನಾದ, ಸಖಾ-ಸಖನು; ಪರಸ್ಪರೋಪಕಾರಿತ್ವಾತ್-(ಈ ಎರಡೂ ಇಂದ್ರಿಯಗಳು) ಪರಸ್ಪರವಾಗಿ (ಒಂದಕ್ಕೊಂದು) ಉಪಕಾರಿಗಳಾದ್ದರಿಂದ, ಏತಯೋಃ-ಇವೆರಡರ, ಸಖ್ಯಂ-ಸ್ನೇಹವು, ಪರಮಂ-ಶ್ರೇಷ್ಠವಾದುದು.

**ಯಾನೀಂದ್ರಿಯಾಣಿ ಚಾನ್ಯಾನಿ ಜ್ಞಾನಕರ್ಮಕರಾಣಿ ಚ ।**

**ಉಪಾಂಗಾನಿ ಶರೀರಸ್ಯ ಮಿಥಃ ಸಖ್ಯಂ ಪ್ರಕುರ್ವತೇ ॥ ೧೨ ॥**

**ಸರ್ವೇಷಾಮಪಿ ಚೈತೇಷಾಂ ಮನಃ ಶ್ರೇಷ್ಠತಮಂ ಮಹತ್ ।**

**ತದಾನುಕೂಲ್ಯಾದೇತಾನಿ ಸ್ವಸ್ವಕಾರ್ಯಕರಾಣಿ ಹಿ ॥ ೧೩ ॥**

ಜ್ಞಾನಕರ್ಮಕರಾಣಿ-ಜ್ಞಾನಸಾಧನಗಳೂ, ಕರ್ಮಗಳನ್ನು ಮಾಡುವುವೂ ಆದ, ಯಾನಿ-ಯಾವ, ಅನ್ಯಾನಿ-ಇತರ, (ಶ್ರೋತ್ರ, ವಾಗಿಂದ್ರಿಯಗಳಿಂದ ಭಿನ್ನವಾದ),

---

ದೇಹದಲ್ಲಿ ಬಂದಿರುವ ಜೀವರಿಗೆ), ಶ್ರೋತ್ರೇಂದ್ರಿಯದ ಪರಮಸಖನು, ವಾಗಿಂದ್ರಿಯವು; ಈ ಎರಡು ಇಂದ್ರಿಯಗಳು (ಶ್ರೋತ್ರ ಮತ್ತು ವಾಗಿಂದ್ರಿಯಗಳು) ಪರಸ್ಪರ ಉಪಕಾರಿಗಳಾದ್ದರಿಂದ, ಇವುಗಳ ಸಖ್ಯವೇ ಶ್ರೇಷ್ಠವಾದುದು (೧೧). ಇತರ ಜ್ಞಾನೇಂದ್ರಿಯಗಳೂ, ವಿವಿಧ ಕರ್ಮಗಳನ್ನು ಸಾಧಿಸುವ ಉಪಾಂಗಭೂತ ಕರ್ಮೇಂದ್ರಿಯಗಳು (ಹಸ್ತಪಾದಾದಿಗಳಲ್ಲಿ ಅಧಿಷ್ಠಿತವಾದ ಕರ್ಮಕಾರಿಗಳಾದ ಇಂದ್ರಿಯಗಳು, ಪರಸ್ಪರವಾಗಿ ಒಂದೊಂದೂ ಅನ್ಯೇಂದ್ರಿಯಗಳ ಸಹಾಯದಿಂದಲೇ

ಇಂದ್ರಿಯಾಣಿ-ಇಂದ್ರಿಯಗಳೋ (ಮನುಷ್ಯ ದೇಹಗತವಾದ ಅನ್ಯೇಂದ್ರಿಯಗಳು), ಶರೀರಸ್ಥ-ಶರೀರದ, ಉಪಾಂಗಾನಿ-ಸಹಾಯಕ ಅಂಗಗಳು ಮಾತ್ರ; (ಪ್ರಧಾನಗಳಲ್ಲ-ಅಮುಖ್ಯವಾದವುಗಳು); ಮಿಥಃ-ಪರಸ್ಪರವಾಗಿ, ಸಖ್ಯಂ-ಸಖ್ಯವನ್ನು (ಸಹಾಯವನ್ನು), ಪ್ರಕುರ್ವತೇ-ಮಾಡುತ್ತವೆ; (ಜೀವನ ಇಚ್ಛೆಯಂತೆ ವರ್ತಿಸುತ್ತವೆ); ಈ ಎಲ್ಲ ಇಂದ್ರಿಯಗಳಲ್ಲಿ ಶ್ರೇಷ್ಠತಮಂ ಮನಃ-ಶ್ರೇಷ್ಠತಮವಾದುದೇ ಮನಸ್ಸು; ಸರ್ವೇಷಾಂ ಏತೇಷಾಂ-(ಮನಸ್ಸೆಂಬ ಈ ಅಂತರಿಂದ್ರಿಯವು ಮಹತ್-ಅತ್ಯಂತ ಮಹತ್ವವುಳ್ಳದ್ದು); ತದಾನುಕೂಲ್ಯಾತ್-ಅ ದ ರ ಅನುಕೂಲ್ಯದಿಂದಲೇ (ಅದಕ್ಕನುಕೂಲವಾಗಿಯೇ, ಅಥವಾ ಅದರ ಸಹಾಯದಿಂದಲೇ), ಏತಾನಿ-ಈ ಇಂದ್ರಿಯಗಳು, ಸ್ವಸ್ವಕಾರ್ಯಕರಾಣಿ ಹಿ-ತಂತಮ್ಮ ಕಾರ್ಯಗಳನ್ನು ಮಾಡುತ್ತವೆಂಬುದೂ ಸರ್ವಾನುಭವಸಿದ್ಧವೇ ಆಗಿದೆ.

ಬಾಹ್ಯಾಂತರವಿಭೇದೇನ ದ್ವಿಧಾರಾಧನಮೀಶಿತುಃ ।
ಅಂತರಂ ಮನಸಾ ನಿಷ್ಠಾ ಸದಾ ಸರ್ವೇಶ್ವರೇ ತು ಯಾ ॥ ೧೪ ॥
ವಿವೇಕೋ ಹಿ ಮನೋಧೀನಸ್ತತೋ ತೇನ ವಿಚಿಂತಯೇತ್ ।

ಈಶಿತುಃ-ಸರ್ವೇಶನಾದ ಶ್ರೀಹರಿಯ, ಆ ರಾ ಧ ನಂ-ಆರಾಧನೆಯು (ಪೂಜೆಯು-ಸೇವೆಯು), ಬಾಹ್ಯಾಂತರವಿಭೇದೇನ-ಬಾಹ್ಯ ಮತ್ತು ಅಂತರವೆಂಬ ಭೇದದಿಂದ, ದ್ವಿಧಾ-ಎರಡು ಪ್ರಕಾರವಾದುದು; ಸರ್ವೇಶ್ವರೇ-ಸರ್ವೇಶ್ವರನಾದ ಶ್ರೀವಿಷ್ಣುವಿನಲ್ಲಿ ಯಾ-ಯಾವ, ಸದಾ-ಸರ್ವಕಾಲಿಕವಾದ, ಮನಸಾ ನಿಷ್ಠಾ-ಮನಸ್ಸಿನಿಂದ ಮಾಡುವ ನಿಷ್ಠೆಯೋ (ದೀಕ್ಷೆಯೋ-ನಿಶ್ಚಯವೋ), ಅಂತ-(ಸಾ-ಅದೇ) ಅಂತರಾರಾಧನೆಯು; ವಿವೇಕಃ-ವಿವೇಕವೆಂಬುದು (ಕರ್ತವ್ಯ-ಅಕರ್ತವ್ಯಗಳನ್ನು ನಿರ್ಣಯಿಸಿಕೊಳ್ಳುವ ವಿವೇಕವೆಂಬ ಬುದ್ಧಿಯು), ಮನೋಧೀನಃ-ಮನಸ್ಸಿನ (ಅಂತರಿಂದ್ರಿಯದ) ಅಧೀನವಾದುದು; ತತಃ-ಆದ್ದರಿಂದ, ತೇನ-ಅದರಿಂದ (ಬುದ್ಧಿಯಿಂದ), ವಿಚಿಂತಯೇತ್-ಯೋಚಿಸಬೇಕು.

---

ಕೆಲಸಮಾಡುತ್ತವೆ—ಆದ್ದರಿಂದ ಪರಸ್ಪರ ಸಖ್ಯವೂ ಉಂಟು; ಈ ಎಲ್ಲಾ ಇಂದ್ರಿಯಗಳಿಗೆ ಮನಸ್ಸು ಶ್ರೇಷ್ಠತಮವಾಗಿದ್ದು ಬಹು ಮಹತ್ವವುಳ್ಳದ್ದಾಗಿದೆ; ಎಲ್ಲ ಜ್ಞಾನಕರ್ಮೇಂದ್ರಿಯಗಳು ಮನಸ್ಸಿನ ಅನುಕೂಲ್ಯದಿಂದಲೇ (ಸಹಾಯದಿಂದಲೇ) ಕೆಲಸಮಾಡುತ್ತವೆ (೧೨-೧೩). ಸರ್ವಸ್ವಾಮಿಯಾದ ಶ್ರೀಹರಿಯ ಆರಾಧನೆಯು, ಬಾಹ್ಯ ಮತ್ತು ಆಂತರಭೇದದಿಂದ ಎರಡು ಪ್ರಕಾರವಾಗಿರುವುದು; ಶ್ರೀಹರಿಯಲ್ಲಿ ಸರ್ವದಾ ಮಾಡುವ ಮನಸ್ಸಿನ ನಿಷ್ಠೆಯು, ಆಂತರ ಆರಾಧನೆಯು; ವಿವೇಕವೆಂಬುದು ಮನಸ್ಸಿನ ಅಧೀನವಾದ ವ್ಯಾಪಾರವು; ಕರ್ತವ್ಯ ಮತ್ತು ಅಕರ್ತವ್ಯಗಳನ್ನು ವಿವೇಕದಿಂದ ಯೋಚಿಸಿ, ನಿರ್ಣಯಿಸಿಕೊಳ್ಳಬೇಕು (೧೪). ಪ್ರಥಮತಃ ವಿವೇಕದಿಂದ ಅವಶ್ಯ

**ಪಿತರಂ ಮಾತರಂ ವಾಪಿ ಯಂ ವಾ ಕಂ ವಾ ಗುರುಂ ನರಃ ॥ ೧೫ ॥**
**ಹುಂಕೃತ್ಯೈವ ಭವೇತ್ಪಾಪೀ ಪಾಪಂ ಕುರ್ವನ್ ಪತತ್ಯಧಃ ।**
**ತಾನ್ಯೇವ ಪ್ರಾಣನಿರ್ಮುಕ್ತಾನ್ ವಹ್ನೌ ಸಮ್ಯಗ್ದಹನ್ನಪಿ ॥ ೧೬ ॥**
**ನ ದ್ರೋಹೀ ನೈವ ಪಾಪೀಯಾನ್ ಪುಣ್ಯವಾನೇವ ಜಾಯತೇ ।**
**ತತಃ ಪ್ರಾಣೋ ಹಿ ಸರ್ವೇಷಾಂ ಪಿತಾ ಮಾತಾ ಸುಹೃದ್ಗುರುಃ ॥ ೧೭ ॥**

ನರಃ-ಮನುಷ್ಯನು, ಪಿತರಂ-ತಂದೆಯನ್ನಾಗಲಿ, ಅಪಿ ವಾ-ಅಥವಾ, ಮಾತರಂ-ತಾಯಿಯನ್ನಾಗಲಿ, ಯಂ ವಾ ಕಂ ವಾ-ಯಾರೇ ಆಗಲಿ, ಗುರುಂ-ಗುರುವನ್ನಾಗಲಿ (ತನಗೆ ವಿದ್ಯೋಪದೇಶಮಾಡಿದ ಗುರುಗಳಲ್ಲಿ ಯಾರೊಬ್ಬನನ್ನಾಗಲಿ), ಹುಂಕೃತ್ಯ ಏವ-ಕೇವಲ ಹುಂಕಾರಮಾತ್ರದಿಂದ ಸಂಬೋಧಿಸಿ (ಅವರ ಸಮ್ಮುಖದಲ್ಲಿ ತನ್ನ ದುರಹಂಕಾರ ಪ್ರದರ್ಶಕವಾದ 'ಹುಂ' ಎಂಬ ಶಬ್ದವನ್ನು ಉಚ್ಚರಿಸಿದರೂ), ಪಾಪೀ-ಪಾಪಿಯು, ಭವೇತ್-ಆಗುತ್ತಾನೆ; ಪಾಪಂ-ಈ ಪಾಪವನ್ನು (ಅವಿನಯವರ್ತನಾರೂಪದ ಪಾಪವನ್ನು), ಕುರ್ವನ್-ಮಾಡಿ, ಅಧಃ-ಕೆಳಗೆ, ಪತತಿ-ಬೀಳುತ್ತಾನೆ (ಸಾಧನಮಾರ್ಗದಿಂದ ಚ್ಯುತನಾಗುತ್ತಾನೆ-ಭ್ರಷ್ಟನಾಗುತ್ತಾನೆ); (ಹೀಗಿದ್ದರೂ), ತಾನಿ ಏವ-ಆ ಜನರನ್ನೇ, (ತಂದೆ, ತಾಯಿ, ಗುರು ಮೊದಲಾದವರನ್ನು), ಪ್ರಾಣನಿರ್ಮುಕ್ತಾನ್-ಬಿಡಲ್ಪಟ್ಟ ಪ್ರಾಣವುಳ್ಳವರಾದರೆ (ಮೃತರಾಗಿದ್ದರೆ), ವಹ್ನೌ-ಅಗ್ನಿಯಲ್ಲಿ, ಸಮ್ಯಕ್-ಪೂರ್ಣವಾಗಿ, ದಹನ್ ಅಪಿ-ದಹಿಸಿದರೂ, ದ್ರೋಹೀ ನ-ಅವರ ದ್ರೋಹಿಯು (ದ್ವೇಷಿಯು-ಅಪಕಾರಿಯು) ಎನಿಸುವುದಿಲ್ಲ; ಪಾಪೀಯಾನ್ ನ ಏವ-ಪಾಪಿಯಂತೂ ಅಲ್ಲವೇ ಅಲ್ಲ; ಪುಣ್ಯವಾನ್ ಏವ-(ಅವರ ದೇಹಕ್ಕೆ ಅಗ್ನಿಸಂಸ್ಕಾರ ಮಾಡಿದ) ಪುಣ್ಯವನ್ನುಳ್ಳವನೇ, ಜಾಯತೇ-ಆಗುತ್ತಾನೆ; ತತಃ-ಈ ಕಾರಣದಿಂದ, ಸರ್ವೇಷಾಂ-ಸರ್ವಮನುಷ್ಯರಿಗೆ, ಪ್ರಾಣಃ-ಪ್ರಾಣನೇ (ಮುಖ್ಯಪ್ರಾಣನೇ-ದೇಹದಲ್ಲಿ ಜೀವನನ್ನು ನಿಲ್ಲಿಸಿ, ಯುಕ್ತವಾದ ಕಾಲದಲ್ಲಿ ಅಲ್ಲಿಂದ ಹೊರಗೆ

---

ತಿಳಿಯಬೇಕಾದ ಕರ್ತವ್ಯವನ್ನು ನಿರೂಪಿಸುತ್ತಾರೆ; ತಂದೆಯಾಗಲಿ, ತಾಯಿಯಾಗಲಿ, ವಿದ್ಯಾದಾನಮಾಡಿದ ಯಾರೊಬ್ಬ ಗುರುವನ್ನೇ ಆಗಲಿ, ಹುಂಕಾರದಿಂದ ಪ್ರತಿಭಟಿಸುವುದು ಮಹಾ ಪಾಪವು; ದುರಹಂಕಾರ ಲಕ್ಷಣವಾದ ಈ ವರ್ತನೆಯನ್ನು ಅನುಸರಿಸಿ, ಸಾಧನ ಮಾರ್ಗದಿಂದ ತತ್ಕಾಲದಲ್ಲಿ ಚ್ಯುತನಾಗುತ್ತಾನೆ (ಸಾಧನ ಮಟ್ಟದಿಂದ ಕೆಳಗೆ ಬೀಳುತ್ತಾನೆ); ಅದೇ ತಂದೆ ಮೊದಲಾದವರು ಮೃತರಾದನಂತರ, ಅವರ ದೇಹಗಳನ್ನು ಅಗ್ನಿಯಲ್ಲಿ ಚೆನ್ನಾಗಿ ದಹಿಸಿದರೂ, ಅವರ ದ್ರೋಹಿ ಎನಿಸುವುದಿಲ್ಲ—ಪಾಪಿಯಾಗುವುದಿಲ್ಲ; ಪ್ರತ್ಯುತ, ಪುಣ್ಯವನ್ನೇ ಹೊಂದುತ್ತಾನೆ; ಆದ್ದರಿಂದ, ಈ ಎಲ್ಲರಲ್ಲಿರುವ ಪ್ರಾಣನೇ, ತಂದೆ, ತಾಯಿ ಮತ್ತು ಗುರುವೂ ಆಗಿರುವನೆಂದು ತಿಳಿಯಬೇಕು (೧೫-೧೭). ಪತ್ನೀ ಪುತ್ರಾದಿ ಸಕಲವೂ, ಅವರೊಳಗಿದ್ದು ನಿಯಾಮಕನಾದ ಪ್ರಾಣಾಧೀನರೆಂದು

ಕರೆರೂಯ್ಯುವನೂ ಆದ ಮುಖ್ಯಪ್ರಾಣನೇ), ಪಿತಾ-ತಂದೆಯು, ಮಾತಾ-ತಾಯಿಯು, ಸುಹೃತ್-ಬಂಧುವು, ಗುರುಃ-ಗುರುವು; ಹಿ-ನಿಶ್ಚಯವು.

ಸ್ತ್ರೀಪುತ್ರಾದ್ಯಖಿಲಂ ಪ್ರಾಣೋ ನಾನ್ಯದಿತ್ಯೇವ ಚಿಂತಯೇತ್ ।
ಮುಖ್ಯಪ್ರಾಣೋ ಹಿ ಭಗವಾನ್ ಸೂತ್ರವಾಯುಸ್ತಥಾಪರಃ ॥ ೧೮ ॥
ಪಾದಾಂಗುಷ್ಠ ಸ್ಥಿತೋ ಯೇಷಾಂ ಜೀವಾಸ್ತಿಷ್ಠಂತಿ ಸರ್ವದಾ ।
ಲಬ್ಧಂ ಕರ್ಮವಶಾದ್ದೇಹಂ ಯದಾ ತ್ಯಾಜಯಿತುಂ ಹರಿಃ ॥ ೧೯ ॥
ಸಮೀಯತೇ ತದಾ ಯಾತಿ ಸ್ವಯಮೇವ ಬಹಿಃ ಪುರಃ ।

ಸ್ತ್ರೀ ಪುತ್ರಾದ್ಯಖಿಲಂ-ಪತ್ನೀ ಪುತ್ರಾದಿ ಸಮಸ್ತವನ್ನೂ, ಪ್ರಾಣಃ ಇತ್ಯೇವ-ಮುಖ್ಯಪ್ರಾಣನೆಂದೇ (ಮುಖ್ಯಪ್ರಾಣಾಧೀನರೆಂದೇ-ಆತನನ್ನುಳಿದು ಚೇಷ್ಟಿಸಲು ಅಸಮರ್ಥರೆಂದು), ನ ಅನ್ಯತ್-ಬೇರೆಯಲ್ಲವೆಂದು, ಚಿಂತಯೇತ್-ತಿಳಿಯಬೇಕು; ಭಗವಾನ್-ಷಡ್ಗುಣ್ಯೈಶ್ವರ್ಯಪೂರ್ಣನಾದ ಶ್ರೀಹರಿಯೇ, ಮುಖ್ಯಪ್ರಾಣಃ-(ಮುಖ್ಯ ಪ್ರಾಣಶಬ್ದವಾಚ್ಯನಾಗಿ ದೇಹಗತ ಸರ್ವಪ್ರಾಣರ ಪ್ರೇರಕನಾಗಿ ಅವರೆಲ್ಲರನ್ನೂ ಚೇಷ್ಟಿಸುತ್ತಾನೆ) ಮುಖ್ಯಪ್ರಾಣನು; ತಥಾ-ಹಾಗೆಯೇ ಮುಖ್ಯ ಪ್ರಾಣಶಬ್ದವಾಚ್ಯನಾದ, ಅಪರಃ-ಮತ್ತೊಬ್ಬನೇ, ಸೂತ್ರವಾಯುಃ-ಸೂತ್ರನಾಮಕ ವಾಯುದೇವನು; ಯೇಷಾಂ-ಯಾವ ಪ್ರಾಣಗಳ, ಪಾದಾಂಗುಷ್ಠ ಸ್ಥಿತಃ-ಪಾದದ ಅಂಗುಷ್ಠದಲ್ಲಿ ಸ್ಥಿತನಾಗಿರುವನೋ, ಜೀವಾಃ-(ಅವರಿಗೆ) ಜೀವರು, ಸರ್ವದಾ-ಸದಾ, ತಿಷ್ಠಂತಿ-(ಆ ದೇಹದಲ್ಲಿ) ನಿಲ್ಲುತ್ತಾರೆ; ಕರ್ಮವಶಾತ್-(ಜೀವ) ಕರ್ಮದ ಫಲವಾಗಿ, ಲಬ್ಧಂ-ದೊರೆತ, ದೇಹಂ-ದೇಹವನ್ನು, ಯದಾ-ಯಾವಕಾಲಕ್ಕೆ, ಹರಿಃ-ಶ್ರೀಹರಿಯು, ತ್ಯಾಜಯಿತುಂ-ಬಿಡಿಸಲಿಕ್ಕೆ (ಜೀವನಿಗೆ ಆ ದೇಹ ಸಂಬಂಧವನ್ನು ಬಿಡಿಸಲು), ಸಮೀಯತೇ-ಇಚ್ಛಿಸುವನೋ, ತದಾ-ಆಗ, ಸ್ವಯಂ-ತಾನೇ (ಸೂತ್ರವಾಯುವೇ), ಬಹಿಃ ಹೊರಗೆ (ಬಂದು), ಪುರಃ-ಮುಂದೆ, ಯಾತಿ-ಹೋಗುತ್ತಾನೆ.

---

ತಿಳಿಯಬೇಕು; ಶ್ರೀಹರಿಯೇ ಮುಖ್ಯ 'ಪ್ರಾಣನು'; (ಮುಖ್ಯವಾಗಿ ಪ್ರಾಣಶಬ್ದವಾಚ್ಯನು—ಆತನೇ ('ಮುಖ್ಯ ಪ್ರಾಣನು'); ಆತನ ನಂತರ ಮುಖ್ಯಪ್ರಾಣನೆಂಬ ಪ್ರಸಿದ್ಧ ನಾಮವುಳ್ಳವನು, ಆತನಿಂದ ಭಿನ್ನನೂ, ನಿತ್ಯ ನಿಯಮ್ಯನೂ ಆದ, ಸೂತ್ರನಾಮಕ ವಾಯುವು; ಯಾವಾತನು, ಸಕಲಜೀವರ ಪಾದಾಂಗುಷ್ಠದಲ್ಲಿ ಸ್ಥಿತನಾಗಿದ್ದರೆ ಮಾತ್ರ, ಜೀವರು ದೇಹದಲ್ಲಿರುವರೋ ಆತನೇ ಸೂತ್ರನಾಮಕ ವಾಯುದೇವನು-ಮುಖ್ಯಪ್ರಾಣನು; ಜೀವನು ಕರ್ಮವಶನಾಗಿ ಹೊಂದಿಸಲ್ಪಟ್ಟಿರುವ ಆ ದೇಹವನ್ನು ಶ್ರೀಹರಿಯು ಯಾವಾಗ ತ್ಯಜಿಸಲು ಸಂಕಲ್ಪಿಸುವನೋ, ಆಗ ವಾಯುದೇವನೂ ದೇಹವನ್ನು ತ್ಯಜಿಸಿ ಮುಂದೆ ಹೊರಡುತ್ತಾನೆ (೧೮-೧೯). ಪಾದಾಂಗುಷ್ಠಸ್ಥಿತನಾದ ವಾಯುದೇವನು, ತತ್ತ್ವಾಭಿಮಾನಿ ದೇವತೆಗಳಿಂದ ಕೂಡಿ,

ಪಾದಾಂಗುಷ್ಠಸ್ಥಿತೋ ಜ್ಞಾನೀ ವಾಯುಸ್ತಾತ್ತ್ವಿಕದೈವತೈಃ ॥ ೨೦ ॥
ಜೀವಮಾದಾಯ ಯಾತ್ಯೇವ ಕ್ಷಣಮಾತ್ರಂ ನ ತಿಷ್ಠತಿ ।

ಪಾದಾಂಗುಷ್ಠಸ್ಥಿತಃ-ದೇಹದ ಪಾದಾಂಗುಷ್ಠದಲ್ಲಿರುತ್ತಿರುವ (ಕಾಲ ಹೆಬ್ಬೆರಳಲ್ಲಿರುವ), ಜ್ಞಾನೀ-ಶ್ರೀಹರಿಯ ಸಂಕಲ್ಪವನ್ನು ತಿಳಿದ) ಸರ್ವಜ್ಞನಾದ, ವಾಯುಃ-ಶ್ರೀವಾಯುದೇವನು, ತಾತ್ತ್ವಿಕದೈವತೈಃ-ತಾತ್ತ್ವಿಕ ದೇವತೆಗಳಿಂದ ಸಹಿತನಾಗಿ, ಜೀವಂ-ಜೀವನನ್ನು ಆದಾಯ-ತೆಗೆದುಕೊಂಡು, ಯಾತಿ-(ದೇಹದಿಂದ) ಹೊರಡುತ್ತಾನೆ; ಕ್ಷಣಮಾತ್ರಂ- ಒಂದು ಕ್ಷಣಕಾಲ ಮಾತ್ರವೂ, ನ ತಿಷ್ಠತಿ ಏವ-(ಅಲ್ಲಿ) ನಿಲ್ಲುವುದೇ ಇಲ್ಲ.

ದೇಹೇ ತಿಷ್ಠನ್ನಪಿ ಹರಿಃ ಸರ್ವಧೀಪ್ರೇರಕಃ ಸದಾ ॥ ೨೧ ॥
ಪೂರ್ವಕರ್ಮಾನುಸಾರೇಣ ಫಲಂ ಭೋಜಯತೇಽಧುನಾ ।
ಭವಿಷ್ಯತ್ಫಲಭೋಗಾರ್ಥಮಿದಾನೀಂ ಕಾರಯತ್ಯಪಿ ॥ ೨೨ ॥
ತದಿಚ್ಛಾವಶತಃ ಕ್ವಾಪಿ ಸ್ವೇಷ್ಟಂ ಸುಖಮವಾಪ್ನುಯಾತ್ ।
ಸುಖಾರ್ಥಂ ಯತಮಾನೋಽಪಿ ಕರ್ಹಿಚಿದ್ದುಃಖಮಿಚ್ಛತಿ ॥ ೨೩ ॥
ಕೃತೋ ಮಯಾ ವೃಥಾ ಯತ್ನಸ್ತದೇತ್ತಂ ಚಿಂತಯೇದಯಂ ।
ನ ಹಿ ಮೂಢೋ ವಿಜಾನಾತಿ ತಾದೃಗ್ಯತ್ನಸ್ಯತತ್ಫಲಂ ॥ ೨೪ ॥
ವ್ರಜನ್ನೇವ ಧನಾದ್ಯರ್ಥಂ ಗರ್ತಪಾತಾದಿಕಂ ಲಭೇತ್ ।
ತದೇದಗತಿಯತ್ನಸ್ಯ ಫಲಮೀಶ್ವರಭಾವಿತಂ ॥ ೨೫ ॥
ನ ಹ್ಯಯಂ ಸತ್ಯಸಂಕಲ್ಪೋ ಯೇನ ಯತ್ನಾತ್ಸುಖಂ ಸದಾ ।
ಭುಂಜೀತ ಕ್ವಾಪಿ ನೋ ದುಃಖಂ ತಸ್ಮಾದೀಶ್ವರಯಂತ್ರಿತಃ ॥ ೨೬ ॥

ಹರಿಃ-ಶ್ರೀಹರಿಯು, ದೇಹೇ-(ಈ) ದೇಹದಲ್ಲಿ ತಿಷ್ಠನ್ ಅಪಿ-ಇರುತ್ತಿದ್ದರೂ,

---

ಜೀವನನ್ನು ತೆಗೆದುಕೊಂಡು ಹೊರಹೊರಡುತ್ತಾನೆ; ಒಂದು ಕ್ಷಣ ಕಾಲವೂ ಅಲ್ಲಿ ನಿಲ್ಲುವುದಿಲ್ಲ. ಶ್ರೀಹರಿಯು, ಜೀವಶರೀರದಲ್ಲಿದ್ದರೂ, ಸರ್ವ ಪ್ರಾಣ ದೇಹಗಳಲ್ಲಿ ನಿಂತು ಸರ್ವರ ಮನಃಪ್ರೇರಕನಾಗಿರುತ್ತಾನೆ (ನಿರ್ಲಿಪ್ತನಾಗಿರುತ್ತಾನೆ); ಆಯಾ ಜೀವರ ಪೂರ್ವಕರ್ಮಾನುಸಾರವಾಗಿ, ಕಾಲಕಾಲಕ್ಕೆ, ಪೂರ್ವ ಕರ್ಮದ ಫಲಗಳನ್ನು (ಸುಖ ದುಃಖಗಳನ್ನು), ಉಣಿಸುತ್ತಾನೆ; ಮುಂದೆ (ಕಾಲಾಂತರದಲ್ಲಿ ಅಥವಾ ಜನ್ಮಾಂತರಗಳಲ್ಲಿ) ಭೋಗಿಸಲಿಕ್ಕಾಗಿ, ಈಗ (ಈ ದೇಹದಲ್ಲಿ), ಅವರಿಂದ ಕರ್ಮಗಳನ್ನು ಮಾಡಿಸುತ್ತಾನೆ; ಜೀವನು, ಒಂದೊಂದು ವೇಳೆ ತಾನು ಇಚ್ಛಿಸಿದ ಸುಖವನ್ನು ಹೊಂದುತ್ತಾನೆ; ಇದೂ ಶ್ರೀಹರೀಚ್ಛಾವಶದಿಂದಲೇ ದೊರೆಯುತ್ತದೆ. ಏಕೆಂದರೆ, ಮತ್ತೆ ಕೆಲವು ವೇಳೆ, ಸುಖಕ್ಕಾಗಿ ಯತ್ನಮಾಡಿದರೂ, ಸುಖವನ್ನು ಹೊಂದುವುದೇ ಇಲ್ಲ—ಅದು ಮಾತ್ರವಲ್ಲ

ಸದಾ-ಸರ್ವಕಾಲದಲ್ಲಿ ಸರ್ವಧೀಪ್ರೇರಕಃ-ಸರ್ವಜೀವರ ಬುದ್ಧಿಪ್ರೇರಕನಾಗಿರುವನು; ಪೂರ್ವಕರ್ಮಾನುಸಾರೇಣ-(ಆಯಾಜೀವರ) ಪೂರ್ವಕರ್ಮಾನುಸಾರವಾಗಿ, ಅಧುನಾ-ಈಗ (ವರ್ತಮಾನಕಾಲದಲ್ಲಿ), ಫಲಂ-ಫಲವನ್ನು (ಫಲವಾದ ಸುಖದುಃಖಾದಿಗಳನ್ನು), ಭೋಜಯತೇ-ಭೋಗಿಸುವಂತೆ ಮಾಡುತ್ತಾನೆ (ಉಣಿಸುತ್ತಾನೆ); ಭವಿಷ್ಯತ್ಫಲಭೋಗಾರ್ಥಂ-ಮುಂದಿನ ಫಲಭೋಗಕ್ಕಾಗಿ, ಇದಾನೀಂ-ಈಗ (ಕಾರಯತಿ ಅಪಿ-ಮಾಡಿಸುತ್ತಾನೆ ಸಹ; ಕ್ವಾಪಿ-ಒಂದೊಂದು ವೇಳೆ (ಪರಿಸ್ಥಿತಿ ವಿಶೇಷದಲ್ಲಿ), ತದಿಚ್ಛಾವಶತಃ-ಶ್ರೀಹರೀಚ್ಛಾಧೀನವಾಗಿ, ಸ್ವೇಷ್ಟಂ-ತನಗೆ ಇಷ್ಟವಾದ ಸುಖವನ್ನು, ಅವಾಪ್ನುಯಾತ್-(ಜೀವನು) ಹೊಂದುತ್ತಾನೆ; ಕರ್ಹಿಚಿತ್-ಮತ್ತೆ ಕೆಲವು ವೇಳೆ, ಸುಖಾರ್ಥಂ-ಸುಖಕ್ಕಾಗಿ, ಯತಮಾನಃ ಅಪಿ-(ಜೀವನು) ಯತ್ನಮಾಡಿದರೂ, ದುಃಖಂ-ದುಃಖ ಪ್ರಾಪ್ತಿಯನ್ನೇ, ಇಚ್ಛತಿ-(ಶ್ರೀಹರಿಯು) ಇಚ್ಛಿಸುತ್ತಾನೆ; ತದಾ-ಆಗ ಅಯಂ-ಈ ಜೀವನು, ಮಯಾ-ನನ್ನಿಂದ, ವೃಥಾ ಯತ್ನಃ-ವ್ಯರ್ಥವಾದ ಯತ್ನವು, ಕೃತಃ-ಮಾಡಲ್ಪಟ್ಟಿತು (ಸರಿಯಾದ ಯತ್ನವನ್ನು ಮಾಡಲಿಲ್ಲ), ಇತ್ಥಂ-ಎಂದು (ಹೀಗೆ), ಚಿಂತಯೇತ್-ತಿಳಿಯುತ್ತಾನೆ (ತನ್ನ ಯತ್ನಗಳು ಶ್ರೀಹರಿಯ ಅಧೀನಗಳಾಗಿ ಫಲಪ್ರದವಾಗುವುವೆಂದು ತಿಳಿಯುವುದಿಲ್ಲ); ಮೂಢಃ-ಅಜ್ಞಾನಿಯು, ತಾದೃಗ್ಯತ್ನಸ್ಯ-ಆ ವಿಧದ ಯತ್ನಕ್ಕೆ, ತತ್ಫಲಂ-ಅದು ಫಲವೆಂದು (ಯಾವ ಪ್ರಯತ್ನಕ್ಕೆ ಯಾವ ಫಲವೆಂಬುದನ್ನು). ನ ಹಿ ವಿಜಾನಾತಿ-ತಿಳಿಯುವುದೇ ಇಲ್ಲ; ಧನಾದ್ಯರ್ಥಂ-ಧನಕ್ಕಾಗಿ (ಧನಾದಿಗಳನ್ನು ದೊರಕಿಸಲು ಯತ್ನಿಸುತ್ತಿರುವಾಗ), ವ್ರಜನ್ ಏವ-ಸಂಚರಿಸುವವನಾಗಿಯೇ, ಗರ್ತಪಾತಾದಿಕಂ-ತಗ್ಗಿನಲ್ಲಿ ಬೀಳುವ ಮುಂತಾದ ದುಃಖವನ್ನು ಲಭೇತ್-ಹೊಂದುತ್ತಾನೆ; ತದೇವ ಫಲಂ-ಅದೇ ಫಲವೇ (ಗರ್ತಪಾತವೇ), ಗತಿಯತ್ನಸ್ಯ-ಸಂಚಾರರೂಪಯತ್ನಕ್ಕೆ, ಈಶ್ವರ ಭಾವಿತಂ-ಶ್ರೀಹರೀಚ್ಛೆಯುಂಟಾಯಿತು; ಅಯಂ-ಈ ಜೀವನು, ಯೇನ-ಯಾವುದರಿಂದ, ಯತ್ನಾತ್-ಯತ್ನದಿಂದ,

---

ದುಃಖವನ್ನೇ ಹೊಂದುತ್ತಾನೆ; ಇದೂ (ದುಃಖವೂ) ಶ್ರೀಹರೀಚ್ಛೆಯಿಂದಲೇ ದೊರೆತದ್ದು—ಅನ್ಯಥಾ ಅಲ್ಲ; ಆದರೂ, ಜೀವನು ಮಾತ್ರ, ನಾನು ವ್ಯರ್ಥವಾದ ಯತ್ನವನ್ನು ಮಾಡಿದೆನು (ಸರಿಯಾಗಿ ಯತ್ನಿಸಲಿಲ್ಲ), ಆ ಕಾರಣದಿಂದ ಹೀಗಾಯಿತೆಂದು ತಿಳಿಯುತ್ತಾನೆ; ತನ್ನ ಯತ್ನಗಳು ಇಚ್ಛಿತ ಫಲವನ್ನು ದೊರಕಿಸುವುದೂ, ಪೂರ್ಣವಾಗಿ ಶ್ರೀಹರೀಚ್ಛಾಧೀನವೆಂಬುದನ್ನು ತಿಳಿಯುವುದಿಲ್ಲ; ಧನಾದಿಗಳನ್ನು ದೊರಕಿಸುವ ಯತ್ನಕ್ಕಾಗಿ ಸಂಚರಿಸುವ ದೇಹಿಯು, ಗುಂಡಿಯಲ್ಲಿ ಬಿದ್ದು ದುಃಖಿಸುತ್ತಾನೆ; ಆತನ ಸಂಚಾರರೂಪ ಯತ್ನಕ್ಕೆ, ಶ್ರೀಹರಿಯು ಇಚ್ಛಿಸಿದ ಫಲವೇ ಇದು; ಸದಾ ತನ್ನ ಯತ್ನಾನುಸಾರವಾದ ಸುಖವನ್ನು ಪಡೆಯಲು ಜೀವನು ಸತ್ಯಸಂಕಲ್ಪನಲ್ಲ; ಹಾಗೆಯೇ ದುಃಖವನ್ನು ಎಂದೂ ಭೋಗಿಸದಿರಲು ಸಾಧ್ಯವೇ ಇಲ್ಲ—ಅದನ್ನು ಇಚ್ಛಿಸದಿದ್ದರೂ,

ಸದಾ-ಸರ್ವದಾ (ಯತ್ನಮಾಡಿದಾಗೆಲ್ಲ), ಸುಖಂ-ಸುಖವನ್ನೇ, ಭುಂಜೀತ-ಭೋಗಿಸುವನೋ, ಕ್ವಾಪಿ-(ಮತ್ತು) ಎಂದೂ, ನೋ ದುಃಖಂ-ದುಃಖವನ್ನಲ್ಲವೋ, ಸತ್ಯಸಂಕಲ್ಪಃ-(ಅಂತಹ) ಸತ್ಯಸಂಕಲ್ಪನು (ಇಚ್ಛಿಸಿದುದನ್ನೆಲ್ಲಾ ಪಡೆಯುವವನು), ಸ ಹಿ-ಅಲ್ಲವೇ ಅಲ್ಲ; ತಸ್ಮಾತ್-ಅದ್ದರಿಂದ, ಈಶ್ವರಯಂತ್ರಿತಃ-(ಜೀವನು, ಸದಾ) ಶ್ರೀಹರಿಯ ಅಧೀನನೇ ಆಗಿರುವನು.

ಸ ಏಕಃ ಸತ್ಯಸಂಕಲ್ಪೋ ದುರ್ಜ್ಞೇಯಗತಿರೀಶ್ವರಃ ।
ಅನಾದ್ಯನಂತಕಾಲಂ ಹಿ ಸ ಏಕೋ ಜೀವನಾಯಕಃ ॥ ೨೭ ॥
ಮುಖ್ಯಸೌಹಾರ್ದಮಸ್ಯೈವ ಸಂಪಾದ್ಯಂ ಸರ್ವದೈವ ತತ್ ।
ಅನಾದ್ಯನಂತಕಾಲಂ ಹಿ ಯೇನ ಸಾಕಂ ಸದಾ ಸ್ಥಿತಿಃ ॥ ೨೮ ॥

ಈಶ್ವರಃ-ಸರ್ವನಿಯಾಮಕನಾದ ಶ್ರೀಹರಿಯು, ದುರ್ಜ್ಞೇಯಗತಿಃ-ತಿಳಿಯಲಾಗದ ಸಂಕಲ್ಪಾದಿಗಳುಳ್ಳವನು; ಸಃ ಏಕಃ-ಅತನೊಬ್ಬನೇ, ಸತ್ಯಸಂಕಲ್ಪಃ-ಸತ್ಯಸಂಕಲ್ಪನು (ಎಂದೂ ಹೇಗೂ ವ್ಯರ್ಥವಾಗದ ಇಚ್ಛೆಯುಳ್ಳವನು); ಅನಾದ್ಯನಂತ ಕಾಲಂ-ಅನಾದಿಯಿಂದ, ಮುಂದೆ ಅನಂತಕಾಲದಲ್ಲಿ ಜೀವನಾಯಕಃ-(ಸರ್ವ) ಜೀವರ ಪ್ರಭುವು (ಆಳುವ ಸ್ವಾಮಿಯು), ಸಃ ಏಕಃ-ಸ್ವತಂತ್ರನಾದ ಆತನೊಬ್ಬನೇ, ಸರ್ವದಾ-ಎಲ್ಲ ಕಾಲದಲ್ಲಿ ಅಸ್ಯ-ಆತನ (ಶ್ರೀಹರಿಯ), ಮುಖ್ಯ ಸೌಹಾರ್ದಂ ಏವ-ಮುಖ್ಯ ಸ್ನೇಹವನ್ನೇ (ಅಧಿಕ ಭಕ್ತಿಯನ್ನೇ), ಸಂಪಾದ್ಯಂ-ಸಂಪಾದಿಸತಕ್ಕದ್ದು; ತತ್ ಏವ-ಅದೇ (ಪ್ರಥಮ ಕರ್ತವ್ಯವು), ಯೇನ, (ಏಕೆಂದರೆ) ಆತನಿಂದ, ಸಾಕಂ-ಕೂಡಿ, ಸದಾ ಸ್ಥಿತಿಃ-ಸರ್ವದಾ ಇರುವಿಕೆಯು, ಅನಾದ್ಯನಂತ ಕಾಲಂ ಹಿ-ಅನಾದ್ಯನಂತ ಕಾಲದಿಂದಲೂ ಇರತಕ್ಕದ್ದಾಗಿದೆ.

---

ಸತ್ಯಸಂಕಲ್ಪನಲ್ಲವಾದ್ದರಿಂದ, ಹಾಗಾಗದು; ಯಾವ ಯತ್ನದ ಫಲವು ಯಾವ ವಿಧವಾಗಿರುವುದೆಂಬುದನ್ನು ಜೀವನು, ಎಂದೂ ತಿಳಿಯುವುದಿಲ್ಲ; ಆದ್ದರಿಂದ ಜೀವನು (ಸರ್ವಜೀವರು) ಸರ್ವದಾ ಶ್ರೀಹರಿಯ ಅಧೀನರೆಂದು ತಿಳಿಯತಕ್ಕದ್ದು (೨೦-೨೬). ಸತ್ಯಸಂಕಲ್ಪನು ಶ್ರೀಹರಿಯೊಬ್ಬನೇ; ಆತನ ಮಾರ್ಗವನ್ನು (ಸಂಕಲ್ಪ ಪ್ರೇರಣಾದಿಗಳನ್ನು) ಯಾರೂ ತಿಳಿಯಲಾರರು; ಅನಾದ್ಯನಂತಕಾಲದಲ್ಲಿ ಸ್ವತಂತ್ರನಾದ ಜೀವರ ಪ್ರಭುವೂ ಆತನೇ; ಆದ್ದರಿಂದ ಆತನ ಭಕ್ತಿಯನ್ನೇ, ಮುಖ್ಯವಾಗಿ (ಪ್ರಧಾನವಾಗಿ), ಸರ್ವದಾ ಸಂಪಾದಿಸುವುದು ಜೀವರ ಮುಖ್ಯ ಕರ್ತವ್ಯವಾಗಿದೆ—ಅನಾದಿಕಾಲದಿಂದ ಮುಂದೆ ಅನಂತಕಾಲದಲ್ಲಿ (ಸರ್ವದಾ) ಆತನಿಂದ ಕೂಡಿಯೇ ಇರತಕ್ಕವನು, ಜೀವ; ಆತನ ವಿಯೋಗವು, ಎಂದಿಗೂ ಯಾವ ಕಾರಣದಿಂದಲೂ, ಆಗುವುದೇ ಇಲ್ಲ (೨೭-೨೮). ಯಾವಾತಗೆ ಎಂದೂ ಮೃತ್ಯುಭಯವಿಲ್ಲವೋ, ಯಾರು ತನ್ನ ಮಹದೈಶ್ವರ್ಯದಿಂದ ವಿಮುಕ್ತನಾಗುವುದಿಲ್ಲವೋ, ಯಾರ ಪ್ರೇಮವು (ಪ್ರೀತಿಯ-ವಾತ್ಸಲ್ಯವು) ಎಂದೂ

ನಾಸ್ತಿ ಮೃತ್ಯುಭಯಂ ಯಸ್ಯ ನಾಸ್ತಿ ಸಂಪದ್ವಿಯೋಜನಂ ।
ನ ಪ್ರೇಮಭಂಗೋ ಯಸ್ಮಾತ್ಸ್ಯಾನ್ನಿರ್ದಯತ್ವಾದಿಕಂ ತಥಾ ॥ ೨೯ ॥
ನೈವಾವಸಾನವಾರ್ತಾಸ್ತಿ ನಿಷೇವ್ಯಶ್ಚೇತಸೈವ ಸಃ ।
ಪಿತ್ರಾದಿಷು ಪ್ರವಿಶ್ಯೈವ ಯಃ ಸೃಜತ್ಯಖಿಲಂ ಜಗತ್ ॥ ೩೦ ॥
ಮಾತ್ರಾದೌ ಪ್ರವಿಶನ್ನೇವ ಪಾಲಯತ್ಯಪಿ ಸರ್ವಶಃ ।
ತಥೈವ ಸಂಹರತ್ಯೇವ ಸೈನಿಕಾದಿಷು ಸಂಸ್ಥಿತಃ ॥ ೩೧ ॥
ಗುರ್ವಾದಿಷು ಪ್ರವಿಶ್ಯಾಪಿ ಸ ಏವಾರ್ಥಪ್ರಕಾಶಕಃ ।
ದಾತಾ ನಿಯಂತಾ ಸರ್ವೇಷಾಂ ನೃಪಾದಿಷು ಸ ಸಂಸ್ಥಿತಃ ॥ ೩೨ ॥
ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।
ಕೈವಲ್ಯದಃ ಸ ಏವೈಕೋ ಯೋ ವಿಷ್ಣುರಿತಿ ಗೀಯತೇ ॥ ೩೩ ॥

ಯಸ್ಯ-ಯಾವನಿಗೆ (ಶ್ರೀಹರಿಗೆ), ಮೃತ್ಯುಭಯಂ-ಮರಣಭಯವು, ನಾಸ್ತಿ-ಇರುವುದಿಲ್ಲವೋ, ಸಂಪದ್ವಿಯೋಜನಂ-ಸರ್ವಸಂಪತ್ತಿನಿಂದ ವಿಯೋಗವೆಂಬುದಿಲ್ಲವೋ; ತಥಾ-ಮತ್ತು ಯಸ್ಮಾತ್-ಯಾವ ಕಾರಣದಿಂದ, ನಿರ್ದಯತ್ವಾದಿಕಂ-ನಿರ್ದಯತ್ವ (ನೈರ್ಘೃಣ್ಯ-ಪಕ್ಷಪಾತಾದಿ) ಮೊದಲಾದ ದೋಷಗಳು, (ನ) ಸ್ಯಾತ್-ಇರುವುದಿಲ್ಲವೋ; ಪ್ರೇಮಭಂಗಃ ನ-(ಯಾರ) ಪ್ರೀತಿವಾತ್ಸಲ್ಯಗಳಿಗೆ, ಎಂದೂ ಚ್ಯುತಿಯಿಲ್ಲವೋ, ಅವಸಾನವಾರ್ತಾ-ನಾಶವೆಂಬುದರ ವಾರ್ತೆಯೂ (ಸುದ್ದಿಯೂ), ನೈವಾಸ್ತಿ-ಎಂದಿಗೂ ಇರುವುದಿಲ್ಲವೋ (ಕೇಳಬರುವುದಿಲ್ಲವೋ); ಸಃ ಏವ-ಆತನೇ, ಚೇತಸಾ ಬುದ್ಧಿಪೂರ್ವಕವಾಗಿ, ನಿಷೇವ್ಯಃ-ಸೇವಿಸಲ್ಪಡುವವನು (ಆಗಬೇಕು); (ಅವನು ಯಾರಾಗಬೇಕೆಂದರೆ), ಯಃ-ಯಾರು, ಪಿತ್ರಾದಿಷು-ತಂದೆ ಮೊದಲಾದ

---

ತಪ್ಪುವುದಿಲ್ಲವೋ ಮತ್ತು ಯಾರಲ್ಲಿ ನಿರ್ದಯತ್ವ, ಪಕ್ಷಪಾತಾದಿ ದೋಷಗಳಿಲ್ಲವೋ (ಸರ್ವಸಮನೂ, ದಯಾಸಾಗರನೂ ಆಗಿರುವನೋ), ಯಾವ ಪ್ರಕಾರದ ನಾಶದ[1] ಸುದ್ದಿಯೇ ಯಾರ ಬಳಿ ಎಂದೂ ಸುಳಿಯಲು ಸಮರ್ಥವಲ್ಲವೋ, ಆತನೇ ಸರ್ವರಿಂದ ಬುದ್ಧಿಪೂರ್ವಕ ಸೇವಿಸಲ್ಪಡಲು ಅರ್ಹನು; ಮತ್ತು ಯಾರು ತಂದೆ ಮೊದಲಾದವರಲ್ಲಿದ್ದು ಜಗತ್ತನ್ನು ಸೃಷ್ಟಿ ಮಾಡುವನೋ, ತಾಯಿ ಮುಂತಾದವರಲ್ಲಿದ್ದು ಸರ್ವರನ್ನು ಸರ್ವವಿಧದಿಂದ ಪಾಲಿಸುವನೋ, ಹಾಗೂ ಯೋಧರೇ ಮೊದಲಾದ ಸಕಲ ಸಂಹಾರ ಕರ್ತರಲ್ಲಿದ್ದು ಸರ್ವರನ್ನು ಸಂಹರಿಸುವನೋ, ಮತ್ತು ಗುರುಗಳೇ ಮೊದಲಾದವರ

1. 'ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ । ನಾಶಶ್ಚತುರ್ವಿಧಃ ಪ್ರೋಕ್ತಃ...' —ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಮತ್ತು ಅಪೂರ್ಣತ್ವಗಳೆಂಬುವು ನಾಲ್ಕು ವಿಧದ ನಾಶಗಳು'—ಇವು ಯಾವುವೂ ಎಂದೂ ಶ್ರೀಹರಿಗೆ ಇರುವುದಿಲ್ಲ.

ಬಂಧುಗಳಲ್ಲಿ ಪ್ರವೇಶ್ಯ-ಪ್ರವಿಷ್ಟನಾಗಿ, ಅಖಿಲಂ-ಸಮಸ್ತ ಜಗತ್-ಜಗತ್ತನ್ನು ಸೃಜತಿ-ಸೃಷ್ಟಿಸುತ್ತಾನೆಯೋ; ಮಾತ್ರಾದೌ-ತಾಯಿ ಮೊದಲಾದವರಲ್ಲಿ ಏಶನ್ ಏವ-ಪ್ರವೇಶಿಸಿಯೇ, ಸರ್ವಶಃ-ಸರ್ವರನ್ನು (ಸರ್ವ ಪ್ರಕಾರದಿಂದ), ಪಾಲಯತಿ ಅಪಿ-ರಕ್ಷಣೆಯನ್ನೂ ಮಾಡುತ್ತಾನೆಯೋ; ತಥೈವ-ಹಾಗೂ, ಸೈನಿಕಾದಿಷು-ಸೈನಿಕ ಮೊದಲಾದವರಲ್ಲಿ (ಸಕಲ ಸಂಹಾರಕರ್ತರಲ್ಲಿ), ಸಂಸ್ಥಿತಃ-ಇದ್ದು ಸಂಹರತಿ-ಸಂಹರಿಸುವನೋ; ಅಪಿ-ಮತ್ತು ಗುರ್ವಾದಿಷು-ಗುರುಗಳೇ ಮೊದಲಾದವರಲ್ಲಿ ಪ್ರವಿಶ್ಯ-ಪ್ರವೇಶಿಸಿ, ಸಃ-ಏವ-ತಾನೇ, ಅರ್ಥ ಪ್ರಕಾಶಕಃ-ಯಥಾರ್ಥವನ್ನು ಪ್ರಕಾಶಿಸುವನೋ, (ತತ್ವಜ್ಞಾನವನ್ನುಂಟುಮಾಡುವನೋ), ನೃಪಾದಿಷು-ರಾಜಾದಿಗಳಲ್ಲಿ ಸಂಸ್ಥಿತಃ-ಇರುವ, ಸಃ-ಆತನೇ, ಸರ್ವೇಷಾಂ-ಎಲ್ಲರಿಗೂ, ದಾತಾ-ವೃತ್ತಿ ಮೊದಲಾದವುಗಳ ಕಲ್ಪಕನೋ, ನಿಯಂತಾ-ನಿಯಮನಮಾಡುವನೋ (ನಿಯಾಮಕನಾಗಿರುವನೋ), ಭವಪಾಶೇನ-ಸಂಸಾರವೆಂಬ ಪಾಶದಿಂದ, ಬಂಧಕಃ-(ಜೀವರನ್ನು) ಬಂಧಿಸಿರುವವನೋ, ಚ-ಮತ್ತು ಭವಪಾಶಾತ್ ಆ(ಭವ) ಪಾಶದಿಂದ, ಮೋಚಕಃ-ಮುಕ್ತರನ್ನಾಗಿಮಾಡಿ (ಬಿಡಿಸಿ), ಕೈವಲ್ಯದಃ-ಮೋಕ್ಷವನ್ನೂ ಕೊಡುವಾತನೋ; ಸಃ ಏವ-ಆತನೇ, ಏಕಃ-ಸ್ವತಂತ್ರನು; ಯಃ-ಯಾರು, ವಿಷ್ಣುಃ-ಶ್ರೀವಿಷ್ಣುವೆಂದು, ಗೀಯತೇ-(ವೇದಾದಿ ಸಚ್ಛಾಸ್ತ್ರಗಳಲ್ಲಿ) ಸ್ತುತಿಸಲ್ಪಡುವಾತನು; (ಆತನ ಭಕ್ತಿಯನ್ನು ಸಂಪಾದಿಸುವುದೇ ಪ್ರಧಾನ ಕರ್ತವ್ಯವಾಗಿರಬೇಕು).

ಯಸ್ಯ ಸಖ್ಯೇ ಸುಸಂಪನ್ನೇ ಸಖಾಯಂ ಸರ್ವ ಏವ ಹಿ ।
ಯಸ್ಮಿನ್ ರುಷ್ಟೇಽಖಿಲಾರುಷ್ಟಾ ಭೃತ್ಯಭಾರ್ಯಾಸುತಾದಯಃ ॥ ೩೪ ॥
ಸ ಏವ ಸಕಲಶ್ರೇಷ್ಠಃ ಪ್ರೇಷ್ಠಃ ಪ್ರೇಷ್ಠತಮಾದಪಿ ।
ಸ ಮೇ ಭೂಯಾತ್ಸಮೋ ಭೂಯಾತ್ಸಮೇ ಭೂಯಾತ್ಸದೈವ ಹಿ ॥ ೩೫ ॥
ಇತ್ಥಂ ದೃಢೋ ಮನೋಭಾವಸ್ತದಾರಾಧನಮಾಂತರಂ ।
ದುಃಖಿಲಾಭೇಪಿ ಮನ್ಯೇತ ಹರಿಣಾಲ್ಪಂ ಕೃತಂ ಕ್ಷಿತಿ ॥ ೩೬ ॥

---

ಲ್ಲಿದ್ದು ತತ್ವಜ್ಞಾನವನ್ನುಂಟುಮಾಡುವನೋ, ರಾಜ ಮೊದಲಾದ ಅಧಿಕಾರಿ ಜನರಲ್ಲಿದ್ದು ಯಾರು ಎಲ್ಲರಿಗೆ ವೃತ್ತಿಕಲ್ಪಕನಾಗಿ, ನಿಯಾಮಕನಾಗಿರುವನೋ, ಯಾರು ಭವಪಾಶದಿಂದ ಜೀವರನ್ನು ಬಂಧಿಸಿರುವನೋ ಮತ್ತು ಯಾವಾತನೇ ಆ ಪಾಶದಿಂದ ಮೋಚನೆ ಮಾಡುವವನೂ ಆಗಿರುವನೋ, ಆತನೇ ಸ್ವತಂತ್ರನೂ ಸರ್ವೋತ್ತಮನೂ ಆದ ಶ್ರೀವಿಷ್ಣುವೆಂದು ಸ್ತುತಿಸಲ್ಪಟ್ಟಿರುವನು; ಆತನಲ್ಲಿ ಭಕ್ತಿಯನ್ನು ಸಂಪಾದಿಸಿಕೊಳ್ಳುವುದೇ ಸರ್ವರ ಪ್ರಧಾನ ಕರ್ತವ್ಯವಾಗಿರಬೇಕು (೨೯-೩೩). ಶ್ರೀಹರಿಯ ಸಖ್ಯವನ್ನು ಭದ್ರವಾಗಿ ದೊರಕಿಸಿಕೊಂಡವನು, ಸರ್ವರಿಗೂ ಸಖನಾಗಿರುವನು (ಪ್ರಿಯನಾಗುವನು): ಶ್ರೀಹರಿಯು ಈತನ ವಿಷಯಕ್ಕೆ ಕುಪಿತನಾದರೆ (ಆತನ ಆಜ್ಞೆಯನ್ನು ಉಲ್ಲಂಘಿಸುವುದರಿಂದ ಈತನ ಅನುಗ್ರಹಕ್ಕಾಗಿಯೇ ಸಿಟ್ಟಾದರೆ), ಭೃತ್ಯ,

ಮಹತ್ಪಾಪಫಲಂ ಮನ್ಯೇ ದಯಯಾ ತದ್ದಯಾಲುನಾ ।
ಇತ್ಥಂ ಭಾವಯಮಾನಸ್ಯ ಸಖಾ ವಿಷ್ಣುರ್ಭವೇತ್ಸದಾ ॥ ೩೭ ॥
ದದ್ಯಾದಿಷ್ಟಾನಿ ಭೂರೀಣಿ ಯಾನಿ ನ ಕ್ಷಯಮಾಪ್ನುಯುಃ ।

ಯಸ್ಯ-ಯಾವಾತನ, ಸಖ್ಯಂ-ಸಖ್ಯವು (ಸ್ನೇಹವು), ಸುಸಂಪನ್ನೇ-ದೃಢವಾಗಿ ಸಂಪಾದಿಸಲ್ಪಟ್ಟರೆ, ಸರ್ವೇ ಏವ-ಎಲ್ಲರೂ ಸಹ, ಸಖಾಯಂ-ಸಖ್ಯಭಾವ (ಪ್ರೀತಿ)ವುಳ್ಳವರೇ, (ಆಗುವರು); (ಶ್ರೀಹರಿಯ ವಾತ್ಸಲ್ಯಕ್ಕೆ-ಪ್ರೀತಿಗೆ ಪಾತ್ರನಾದವನು, ಸರ್ವರ ಪ್ರೀತಿಪಾತ್ರನೂ ಆಗುತ್ತಾನೆ); ಯಸ್ಮಿನ್-ಯಾರು, ರುಷ್ಟೇ (ಸತಿ)-ಕುಪಿತನಾಗುತ್ತಿರಲು, ಭೃತ್ಯಭಾರ್ಯಾಸುತಾದಯಃ-ಭೃತ್ಯರು, ಭಾರ್ಯರು, ಮತ್ತು ಪುತ್ರಾದಿ, ಅಖಿಲಾಃ-ಸಮಸ್ತರೂ, ರುಷ್ಟಾಃ-(ಈತನ ವಿಷಯಕ್ಕೆ) ಕುಪಿತರಾಗಿರುವರೋ, ಸಃ ಏವ-ಆತನೇ, ಸಕಲಶ್ರೇಷ್ಠಃ-ಸರ್ವ ಶ್ರೇಷ್ಠನು (ಸರ್ವೋತ್ತಮನಾದ ಶ್ರೀಹರಿಯು); ಸಃ-ಆ ಶ್ರೀಹರಿಯು, ಮೇ-ನನಗೆ, ಪ್ರೇಷ್ಠತಮಾತ್ ಅಪಿ-ಅತಿಪ್ರಿಯವಾದ ವಸ್ತುವಿಗಿಂತಲೂ, ಪ್ರೇಷ್ಠಃ-ಪ್ರಿಯನು, ಭೂಯಾತ್-ಆಗಲಿ, ಸಃ ಮೇ ಭೂಯಾತ್-ಆತನೇ ನನಗೆ ಪ್ರಿಯತಮನಾಗಲಿ, ಸಃ ಮೇ ಭೂಯಾತ್ ಸದಾಏವ-ಸರ್ವಕಾಲದಲ್ಲಿ ಆತನೇ ನನಗೆ ಪ್ರಿಯತಮನಾಗಿರಲಿ; ಇತ್ಥಂ-ಹೀಗೆಂಬ, ದೃಢಃ-ದೃಢವಾದ (ನಿಶ್ಚಲವಾದ), ಮನೋಭಾವಃ-ಮನಸ್ಸಿನ ಭಾವನೆಯು, ಅಂತರಂ-ಅಂತರಂಗದ, ತದಾರಾಧನಂ-ಶ್ರೀಹರಿಯ ಆರಾಧನೆಯು (ಪೂಜೆಯು); ದುಃಖಲಾಭೇ ಅಪಿ-(ಈ ವಿಧದ ಅಂತರಂಗದ ಆರಾಧನೆಯಲ್ಲಿರುವಾಗ) ದುಃಖವೇ ಒದಗಿದರೆ, ದಯಾಲುನಾ-ದಯಾಳುವಾದ (ಕೃಪಾಸಾಗರನಾದ), ಹರಿಣಾ-ಶ್ರೀಹರಿಯಿಂದ, ದಯಯಾ-ಕೃಪೆಮಾಡಿ, ಮಹತ್ಪಾಪಫಲಂ-(ಹಿಂದಿನ) ಮಹಾಪಾಪದ ಫಲವು, ತತ್ ಅಲ್ಪಂ ಕೃತಂ-ಸ್ವಲ್ಪವಾಗಿ ಮಾಡಲ್ಪಟ್ಟಿತು (ಅನ್ಯಥಾ ಅಧಿಕ ದುಃಖವೇ ಪ್ರಾಪ್ತವಾಗಬೇಕಾಗಿತ್ತು), ಇತಿ ಮನ್ಯೇತ-ಹೀಗೆ ತಿಳಿಯಬೇಕು; ಇತ್ಥಂ-ಹೀಗೆಂದೇ ಮನ್ಯೇ-

---

ಭಾರ್ಯಾ, ಪುತ್ರಾದಿ ಸರ್ವರೂ ಈತನ ಮೇಲೆ ಕುಪಿತರಾಗಿಯೇ ವರ್ತಿಸುತ್ತಾರೆ; ಸರ್ವಶ್ರೇಷ್ಠನಾದ ಈ ಶ್ರೀಹರಿಯೇ, ನನಗೆ ಅತ್ಯಂತ ಪ್ರಿಯವಾದ ವಸ್ತುವಿಗಿಂತ ಪ್ರಿಯನಾಗಿರಲಿ (ಪ್ರಿಯತಮನಾಗಿರಲಿ). ಆತನೇ ಪ್ರಿಯತಮನಾಗಲಿ-ಸರ್ವದಾ ಪ್ರಿಯತಮನಾಗಿರಲಿ, ಎಂಬ ದೃಢವಾದ ಮನೋಭಾವವೇ ಶ್ರೀಹರಿಯ, ಅಂತರಂಗದ ಆರಾಧನೆಯೆನಿಸುತ್ತದೆ; ದುಃಖವೇ ಪ್ರಾಪ್ತವಾದರೂ, ಈ ಅಂತರ ಆರಾಧನೆಯಿಂದ ವಿಮುಖನಾಗಕೂಡದು; ಪೂರ್ವದ ಮಹಾಪಾಪದ ಫಲವಾದ ಮಹದ್ದುಃಖವನ್ನು ಅಲ್ಪವನ್ನಾಗಿ ಮಾಡಿ ಕಾಪಾಡಿದನೆಂದು ತಿಳಿಯಬೇಕು; ಶ್ರೀಹರಿಯ ಕೃಪೆಯು ಹೀಗೆ ಮಹದ್ದುಃಖಗಳನ್ನು ಪರಿಹರಿಸುವುದೆಂಬ ನಿಶ್ಚಯಭಾವನೆಯುಳ್ಳವನ ವಿಷಯದಲ್ಲಿ

ಏವ-ವ್ಯರ್ಥವಾಗಿಯೇ, ಪಾಹಿ ಪಾಹಿ ಇತಿ-ರಕ್ಷಿಸು, ರಕ್ಷಿಸೆಂದು, ಬಹಿಶ್ಚಿತ್ತಃ-ಮನಃಪೂರ್ವಕವಲ್ಲದೇ (ನಾಲಿಗೆಯಿಂದ ಮಾತ್ರ), ವದನ್ ಅಪಿ-ನುಡಿಯುತ್ತಿದ್ದರೂ, ಅನೃಜುಃ-ಡೊಂಕಾದ, ಶುನಃ ಪುಚ್ಛಂ ಇವ-ನಾಯಿಯ ಬಾಲದಂತೆ (ಮತ್ತೆ ಮತ್ತೆ ಮಾಡಿದ ತಪ್ಪನ್ನೇ ಮಾಡುತ್ತ ವಕ್ರಮಾರ್ಗದಲ್ಲಿಯೇ ಇರುತ್ತ), ಸ್ವಸ್ಯ-ತನ್ನ ಹಿತಂ-ಹಿತವನ್ನು ನ ಕರೋತಿ-ಆಚರಿಸುವುದಿಲ್ಲ; ದಾರಿದ್ರ್ಯಾದೀನಿ-ಬಡತನವೇ ಮೊದಲಾದ, ಅನೇಕಶಃ-ಬಹು ಪ್ರಕಾರದ, ಪಾಪಕರ್ಮಾಣಿ-(ತನ್ನ) ಪಾಪಕರ್ಮಗಳನ್ನು (ಅವುಗಳ ಫಲಗಳನ್ನು), ಭುಂಜಾನಃ-ಅನುಭವಿಸುತ್ತಿದ್ದರೂ, ಭೂರಿಶಃ-ಹೆಚ್ಚಾಗಿ, ಪಾಪಕರ್ಮಾಣಿ-ಪಾಪಕರ್ಮಗಳನ್ನು ಪುನಃ ಪುನಃ-ಮತ್ತೆ ಮತ್ತೆ ಕರೋತಿ ಏವ-ಮಾಡುತ್ತಲೇ ಇರುತ್ತಾನೆ; ಸದಸಚ್ಚ-ಸತ್ಕರ್ಮ ಅಸತ್ಕರ್ಮಗಳನ್ನು (ಹಿತಾಹಿತಸಾಧಕ ಕರ್ಮಗಳನ್ನು), ಅವಿಜಾನತಾ-ತಿಳಿಯದ (ವಿವೇಕವಿಲ್ಲದ), ನಿರ್ಲಜ್ಜಾಯ-ಲಜ್ಜೆಯನ್ನು ತೊರೆದ (ಅಧರ್ಮಾಚರಣೆಯಲ್ಲಿರಬೇಕಾದ ಲಜ್ಜೆಯನ್ನು ಬಿಟ್ಟ), ಅತಿಧೃಷ್ಟಾಯ-ಅತ್ಯಂತ ಭಯರಹಿತನಾಗಿ ವರ್ತಿಸುವವನಿಗೋಸ್ಕರ, ಚೋದನಂ-(ಸನ್ಮಾರ್ಗದ) ಉಪದೇಶವು, ಜಲರೇಖಾವತ್-ನೀರಿನಲ್ಲಿ ಮೂಡಿಸುವ ರೇಖೆಗಳಂತೆ (ಅವು ಮರುಕ್ಷಣದಲ್ಲಿ ಅದೃಶ್ಯವಾಗುವಂತೆ), ವ್ಯರ್ಥತಾಂ ಏವ-ವ್ಯರ್ಥತೆಯನ್ನೇ (ನಿಷ್ಫಲತ್ವವನ್ನೇ), ಗಚ್ಛತಿ-ಹೊಂದುತ್ತದೆ.

**ಬಾಹ್ಯಮಾರಾಧನಂ ದ್ವೇಧಾ ಶರೀರೇಣ ಧನಾದಿನಾ ॥ ೪೨ ॥**
**ಮನೋಯೋಗಶ್ಚ ತತ್ರಾಪಿ ವಿಶೇಷಫಲದೋ ಭವೇತ್ ।**

ಬಾಹ್ಯಂ-ಬಾಹ್ಯದ (ಅಂತರಭಿನ್ನವಾದ) ಆರಾಧನಂ-(ಶ್ರೀಹರಿಯ) ಆರಾಧನೆಯು, ಶಾರೀರೇಣ-ಶರೀರದಿಂದಲೂ, ಧನಾದಿನಾ-ದ್ರವ್ಯಾದಿಗಳಿಂದಲೂ, (ಎಂದು), ದ್ವೇಧಾ-ಎರಡು ವಿಧವು; ತತ್ರಾಪಿ-ಅದರಲ್ಲಿಯೂ (ಈ ದ್ವಿವಿಧ ಆರಾಧನೆಯಲ್ಲಿ ಸಹ), ಮನೋಯೋಗಃ ಚ-ಮನಃಪೂರ್ವಕವಾದ ಪ್ರವೃತ್ತಿಯೇ

---

ಶ್ರೀಹರಿಯು ಅಧಿಕಪ್ರಮಾಣದ ದುಃಖವನ್ನಿತ್ತಿರುವನೆಂದು ಬಗೆಯುತ್ತಾನೆ; ಪಾಹಿ (ರಕ್ಷಿಸು), ಪಾಹಿ ಎಂದು ನುಡಿಯುತ್ತಿದ್ದರೂ ಮನಃಪೂರ್ವಕವಾಗಿ (ಶ್ರದ್ಧೆಯಿಂದ—ಭಕ್ತಿಯುತನಾಗಿ ಉಚ್ಚರಿಸುವುದಿಲ್ಲ ಮತ್ತು ಪುನಃ ಪುನಃ ತಿದ್ದಿ ಸರಿಪಡಿಸಲುಬಾರದ ನಾಯಿಯ ಡೊಂಕುಬಾಲದಂತೆ, ವಕ್ರಮಾರ್ಗವನ್ನೇ ಅನುಸರಿಸುತ್ತ ಬಡತನವೇ ಮುಂತಾದ ಬಹುದುಃಖಗಳನ್ನು ಅನುಭವಿಸುತ್ತಿದ್ದರೂ, ಪಾಪಕರ್ಮಗಳನ್ನೇ ಮಾಡುತ್ತಿರುತ್ತಾನೆ; ಸತ್, ಅಸತ್ ಎಂಬ ವಿವೇಕವಿಲ್ಲದ (ಸರಿ, ತಪ್ಪುಗಳನ್ನು ತಿಳಿಯಲಾರದ) ಯಾವ ಮೂಢನು, ಅಧರ್ಮವನ್ನಾಚರಿಸುವುದರಲ್ಲಿ ನಾಚಿಕೆಪಡದ (ನಿರ್ಲಜ್ಜನಾದ), ಅತ್ಯಂತ ಧಾರ್ಷ್ಟ್ಯದಿಂದ, ಸ್ವೇಚ್ಛಾ ಪ್ರವೃತ್ತಿಯುಳ್ಳವನಾಗುವನೋ, ಅಂಥವನಿಗೆ ಸನ್ಮಾರ್ಗವನ್ನು ಉಪದೇಶಿಸುವುದೂ ವ್ಯರ್ಥವೇ. ಜಲದಲ್ಲಿ ಲೇಖಿಸುವ ರೇಖೆಗಳು

ತಿಳಿಯುತ್ತೇನೆಂದು, ಭಾವಯಮಾನಸ್ಯ-ಭಾವಿಸಿ (ಶ್ರೀಹರಿಯಲ್ಲಿ ಅಧಿಕ ಪ್ರೇಮವನ್ನು ಹೊಂದುವವನಿಗೆ), ವಿಷ್ಣುಃ-ಶ್ರೀವಿಷ್ಣುವು, ಸದಾ-ಸರ್ವದಾ, ಸಖಾ-ಸಖನು, (ಯಾವಾಗಲೂ ಸಖನಾಗಿ ಜೊತೆಯಲ್ಲಿರುವ ರಕ್ಷಕನು), ಭವೇತ್-ಆಗುವನು; ಯಾನಿ-ಯಾವುವು, ಕ್ಷಯಂ-ನಾಶವನ್ನು, ನ ಆಪ್ನುಯುಃ-ಹೊಂದುವುದಿಲ್ಲವೋ, (ತಾನಿ-ಅಂಥ), ಭೂರೀಣಿ-ಬಹು, ಇಷ್ಟಾನಿ-ಇಷ್ಟಾರ್ಥಗಳನ್ನು, ದದ್ಯಾತ್-ಕೊಡುತ್ತಾನೆ.

**ಅಹನ್ಯಹನಿ ಧೃಷ್ಟೋಽಯಮೀಶ್ವರಾಜ್ಞಾಂ ವಿಲಂಘಯನ್ ॥ ೬೮ ॥**

**ನೈವಾಲಂ ಮನುತೇ ಮೂಢೋ ದುಃಖೇ ಸ್ವಲ್ಪೇಽಪ್ಯಲಂ ವದಃ ।**

**ಮೃಷೈವ ಪಾಹಿ ಪಾಹೀತಿ ಬಹಿಶ್ಚಿತ್ತೋ ವದನ್ನಪಿ ॥ ೬೯ ॥**

**ನ ಕರೋತಿ ಹಿತಂ ಸ್ವಸ್ಯ ಶುನಃ ಪುಚ್ಛಮಿವಾನೃಜುಃ ।**

**ಭುಂಜಾನಃ ಪಾಪಕರ್ಮಾಣಿ ದಾರಿದ್ರ್ಯಾದೀನ್ಯನೇಕಶಃ ॥ ೭೦ ॥**

**ಪುನಃ ಪುನಃ ಕರೋತ್ಯೇವ ಪಾಪಕರ್ಮಾಣಿ ಭೂರಿಶಃ ।**

**ನಿರ್ಲಜ್ಜಾಯಾತಿಧೃಷ್ಟಾಯ ಸದಸಚ್ಚಾವಿಜಾನತೇ ॥ ೭೧ ॥**

**ಬೋಧನಂ ಜಲರೇಖಾವದ್ವ್ಯರ್ಥತಾಮೇವ ಗಚ್ಛತಿ ।**

ಧೃಷ್ಟಃ-ಧೃಷ್ಟನಾಗಿ (ಪರಿಣಾಮದ ಎಚ್ಚರವಿಲ್ಲದೆ), ಅಹನ್ಯಹನಿ-ದಿನ ದಿನದಲ್ಲಿ (ಪ್ರತಿದಿನವೂ), ಅಯಂ-ಈ (ಸಂಸಾರಿ) ಜೀವನು, ಈಶ್ವರಾಜ್ಞಾಂ-ಶ್ರೀಹರಿಯ (ಶ್ರುತಿಸ್ಮೃತ್ಯುಕ್ತ) ಆಜ್ಞೆಯನ್ನು ವಿಲಂಘಯನ್-ಉಲ್ಲಂಘಿಸುತ್ತ (ಮೀರುತ್ತಾ), ಮೂಢಃ-ಮೂರ್ಖನಾಗಿ, ದುಃಖೇ-ದುಃಖವು, ಸ್ವಲ್ಪೇ ಅಪಿ-ಸ್ವಲ್ಪವಾಗಿದ್ದರೂ, ಅಲಂ ವದಃ-ಹೆಚ್ಚೆಂದು ಹೇಳುತ್ತ (ಸಾಕಷ್ಟು ಅಧಿಕವೆಂದು ಹೇಳುತ್ತ), ಅಲಂ-(ತನ್ನ ಆಜ್ಞೋಲ್ಲಂಘನೆಯನ್ನು) ಅಧಿಕವೆಂದು, ನೈವ ಮನುತೇ-ತಿಳಿಯುವುದೇ ಇಲ್ಲ; ಮೃಷಾ

---

(ಸಖ್ಯನಾಮಕ[1] ಭಕ್ತಿಯನ್ನು ಸಾಧಿಸಿರುವ ಭಕ್ತನ ವಿಷಯದಲ್ಲಿ), ಯಾವಾಗಲೂ, ಸಖನಾಗಿ ಜೊತೆಯಲ್ಲಿದ್ದು ರಕ್ಷಕನಾಗಿರುತ್ತಾನೆ; ಶ್ರೀಹರಿಯು, ಆತನಿಗೆ, ಅಕ್ಷಯವಾದ ಇಷ್ಟಾರ್ಥಗಳನ್ನೂ ಕೊಡುತ್ತಾನೆ (೬೪-೬೭). ಮೂಢ ಮಾನವನು, ಪ್ರತಿದಿನದಲ್ಲಿಯೂ, ಪರಿಣಾಮದ ಎಚ್ಚರಿಕೆ ಇಲ್ಲದೇ, ಶ್ರೀವಿಷ್ಣುವಿನ ಶಾಸ್ತ್ರೋಕ್ತವಾದ ಆಜ್ಞೆಗಳನ್ನು ಉಲ್ಲಂಘಿಸುತ್ತಿದ್ದರೂ, ಸ್ವಲ್ಪವಾಗಿ ಅನುಭವಿಸಬೇಕಾಗಿ ಬಂದ ದುಃಖಗಳನ್ನೂ ಮಹದ್ದುಃಖವೆಂದೇ ತಿಳಿಯುತ್ತಾನೆ; ತನ್ನ ಆಜ್ಞೋಲ್ಲಂಘನೆಗಳನ್ನು ಅಲ್ಪವೆಂದು ಬಗೆದು

---

1 ಶ್ರವಣ, ಕೀರ್ತನಾದಿ ನವಭಕ್ತಿಗಳು ಈ ಹಿಂದೆ ಪ್ರಸಕ್ತವಾದಲ್ಲಿ ನಿರೂಪಿತವಾಗಿದೆ—ಸಖ್ಯವೆಂಬ ಭಕ್ತಿಯ ಸ್ವರೂಪ ಲಕ್ಷಣವನ್ನು ಇಲ್ಲಿ ವಿವರಿಸಲಾಗಿದೆ.

ಏವ-ವ್ಯರ್ಥವಾಗಿಯೇ, ಪಾಹಿ ಪಾಹಿ ಇತಿ-ರಕ್ಷಿಸು, ರಕ್ಷಿಸೆಂದು, ಬಹಿಶ್ಚಿತ್ತಃ-ಮನಃಪೂರ್ವಕವಲ್ಲದೇ (ನಾಲಿಗೆಯಿಂದ ಮಾತ್ರ), ವದನ್ ಅಪಿ-ನುಡಿಯುತ್ತಿದ್ದರೂ, ಅನೃಜುಃ-ಡೊಂಕಾದ, ಶುನಃ ಪುಚ್ಛಂ ಇವ-ನಾಯಿಯ ಬಾಲದಂತೆ (ಮತ್ತೆ ಮತ್ತೆ ಮಾಡಿದ ತಪ್ಪನ್ನೇ ಮಾಡುತ್ತ ವಕ್ರಮಾರ್ಗದಲ್ಲಿಯೇ ಇರುತ್ತ), ಸ್ವಸ್ಯ-ತನ್ನ ಹಿತಂ-ಹಿತವನ್ನು ನ ಕರೋತಿ-ಆಚರಿಸುವುದಿಲ್ಲ; ದಾರಿದ್ರ್ಯಾದೀನಿ-ಬಡತನವೇ ಮೊದಲಾದ, ಅನೇಕಶಃ-ಬಹು ಪ್ರಕಾರದ, ಪಾಪಕರ್ಮಾಣಿ-(ತನ್ನ) ಪಾಪಕರ್ಮಗಳನ್ನು (ಅವುಗಳ ಫಲಗಳನ್ನು), ಭುಂಜಾನಃ-ಅನುಭವಿಸುತ್ತಿದ್ದರೂ, ಭೂರಿಶಃ-ಹೆಚ್ಚಾಗಿ, ಪಾಪಕರ್ಮಾಣಿ-ಪಾಪಕರ್ಮಗಳನ್ನು ಪುನಃ ಪುನಃ-ಮತ್ತೆ ಮತ್ತೆ ಕರೋತಿ ಏವ-ಮಾಡುತ್ತಲೇ ಇರುತ್ತಾನೆ; ಸದಸಚ್ಚ-ಸತ್ಕರ್ಮ ಅಸತ್ಕರ್ಮಗಳನ್ನು (ಹಿತಾಹಿತಸಾಧಕ ಕರ್ಮಗಳನ್ನು), ಅವಿಜಾನತಾ-ತಿಳಿಯದ (ವಿವೇಕವಿಲ್ಲದ), ನಿರ್ಲಜ್ಜಾಯ-ಲಜ್ಜೆಯನ್ನು ತೊರೆದ (ಅಧರ್ಮಾಚರಣೆಯಲ್ಲಿರಬೇಕಾದ ಲಜ್ಜೆಯನ್ನು ಬಿಟ್ಟ), ಅತಿಧೃಷ್ಟಾಯ-ಅತ್ಯಂತ ಭಯರಹಿತನಾಗಿ ವರ್ತಿಸುವವನಿಗೋಸ್ಕರ, ಬೋಧನಂ-(ಸನ್ಮಾರ್ಗದ) ಉಪದೇಶವು, ಜಲರೇಖಾವತ್-ನೀರಿನಲ್ಲಿ ಮೂಡಿಸುವ ರೇಖೆಗಳಂತೆ (ಅವು ಮರುಕ್ಷಣದಲ್ಲಿ ಅದೃಶ್ಯವಾಗುವಂತೆ), ವ್ಯರ್ಥತಾಂ ಏವ-ವ್ಯರ್ಥತೆಯನ್ನೇ (ನಿಷ್ಫಲತ್ವವನ್ನೇ), ಗಚ್ಛತಿ-ಹೊಂದುತ್ತದೆ.

**ಬಾಹ್ಯಮಾರಾಧನಂ ದ್ವೇಧಾ ಶರೀರೇಣ ಧನಾದಿನಾ ॥ ೪೨ ॥**
**ಮನೋಯೋಗಶ್ಚ ತತ್ರಾಪಿ ವಿಶೇಷಫಲದೋ ಭವೇತ್ ।**

ಬಾಹ್ಯಂ-ಬಾಹ್ಯದ (ಅಂತರಭಿನ್ನವಾದ) ಆರಾಧನಂ-(ಶ್ರೀಹರಿಯ) ಆರಾಧನೆಯು, ಶಾರೀರೇಣ-ಶರೀರದಿಂದಲೂ, ಧನಾದಿನಾ-ದ್ರವ್ಯಾದಿಗಳಿಂದಲೂ, (ಎಂದು), ದ್ವೇಧಾ-ಎರಡು ವಿಧವು; ತತ್ರಾಪಿ-ಅದರಲ್ಲಿಯೂ (ಈ ದ್ವಿವಿಧ ಆರಾಧನೆಯಲ್ಲಿ ಸಹ), ಮನೋಯೋಗಃ ಚ-ಮನಃಪೂರ್ವಕವಾದ ಪ್ರವೃತ್ತಿಯೇ

---

ಶ್ರೀಹರಿಯು ಅಧಿಕಪ್ರಮಾಣದ ದುಃಖವನ್ನಿತ್ತಿರುವನೆಂದು ಬಗೆಯುತ್ತಾನೆ; ಪಾಹಿ (ರಕ್ಷಿಸು), ಪಾಹಿ ಎಂದು ನುಡಿಯುತ್ತಿದ್ದರೂ ಮನಃಪೂರ್ವಕವಾಗಿ (ಶ್ರದ್ಧೆಯಿಂದ—ಭಕ್ತಿಯುತನಾಗಿ ಉಚ್ಚರಿಸುವುದಿಲ್ಲ; ಮತ್ತು ಪುನಃ ಪುನಃ ತಿದ್ದಿ ಸರಿಪಡಿಸಲಾಗದ ನಾಯಿಯ ಡೊಂಕುಬಾಲದಂತೆ, ವಕ್ರಮಾರ್ಗವನ್ನೇ ಅನುಸರಿಸುತ್ತ ಬಡತನವೇ ಮುಂತಾದ ಬಹುದುಃಖಗಳನ್ನು ಅನುಭವಿಸುತ್ತಿದ್ದರೂ, ಪಾಪಕರ್ಮಗಳನ್ನೇ ಮಾಡುತ್ತಿರುತ್ತಾನೆ; ಸತ್, ಅಸತ್ ಎಂಬ ವಿವೇಕವಿಲ್ಲದ (ಸರಿ, ತಪ್ಪುಗಳನ್ನು ತಿಳಿಯಲಾರದ) ಯಾವ ಮೂಢನು, ಅಧರ್ಮವನ್ನಾಚರಿಸುವುದರಲ್ಲಿ ನಾಚಿಕೆಪಡದ (ನಿರ್ಲಜ್ಜನಾದ), ಅತ್ಯಂತ ಧಾರ್ಷ್ಟ್ಯದಿಂದ, ಸ್ವೇಚ್ಛಾ ಪ್ರವೃತ್ತಿಯುಳ್ಳವನಾಗುವನೋ, ಅಂಥವನಿಗೆ ಸನ್ಮಾರ್ಗವನ್ನು ಉಪದೇಶಿಸುವುದೂ ವ್ಯರ್ಥವೇ. ಜಲದಲ್ಲಿ ಲೇಖಿಸುವ ರೇಖೆಗಳು

ತಿಳಿಯುತ್ತೇನೆಂದು, ಭಾವಯಮಾನಸ್ಯ-ಭಾವಿಸಿ (ಶ್ರೀಹರಿಯಲ್ಲಿ ಅಧಿಕ ಪ್ರೇಮವನ್ನು ಹೊಂದುವವನಿಗೆ), ವಿಷ್ಣುಃ-ಶ್ರೀವಿಷ್ಣುವು, ಸದಾ-ಸರ್ವದಾ, ಸಖಾ-ಸಖನು, (ಯಾವಾಗಲೂ ಸಖಿನಾಗಿ ಜೊತೆಯಲ್ಲಿರುವ ರಕ್ಷಕನು), ಭವೇತ್-ಆಗುವನು; ಯಾನಿ-ಯಾವುವು, ಕ್ಷಯಂ-ನಾಶವನ್ನು ನ ಆಪ್ನುಯುಃ-ಹೊಂದುವುದಿಲ್ಲವೋ, (ತಾನಿ-ಅಂಥ), ಭೂರೀಣಿ-ಬಹು, ಇಷ್ಟಾನಿ-ಇಷ್ಟಾರ್ಥಗಳನ್ನು, ದದ್ಯಾತ್-ಕೊಡುತ್ತಾನೆ.

ಅಹನ್ಯಹನಿ ಧೃಷ್ಟೋಽಯಮೀಶ್ವರಾಜ್ಞಾಂ ವಿಲಂಘಯನ್ ॥ ೩೮ ॥
ನೈವಾಲಂ ಮನುತೇ ಮೂಢೋ ದುಃಖೇ ಸ್ವಲ್ಪೇಽಪ್ಯಲಂ ವದಃ ।
ಮೃಷೈವ ಪಾಹಿ ಪಾಹೀತಿ ಬಹಿಶ್ಚಿತ್ತೋ ವದನ್ನಪಿ ॥ ೩೯ ॥
ನ ಕರೋತಿ ಹಿತಂ ಸ್ವಸ್ಯ ಶುನಃ ಪುಚ್ಛಮಿವಾನೃಜುಃ ।
ಭುಂಜಾನಃ ಪಾಪಕರ್ಮಾಣಿ ದಾರಿದ್ರ್ಯಾದೀನ್ಯನೇಕಶಃ ॥ ೪೦ ॥
ಪುನಃ ಪುನಃ ಕರೋತ್ಯೇವ ಪಾಪಕರ್ಮಾಣಿ ಭೂರಿಶಃ ।
ನಿರ್ಲಜ್ಜಾಯಾತಿಧೃಷ್ಟಾಯ ಸದಸಚ್ಚಾವಿಜಾನತೇ ॥ ೪೧ ॥
ಬೋಧನಂ ಜಲರೇಖಾವದ್ವ್ಯರ್ಥತಾಮೇವ ಗಚ್ಛತಿ ।

ಧೃಷ್ಟಃ-ಧೃಷ್ಟನಾಗಿ (ಪರಿಣಾಮದ ಎಚ್ಚರವಿಲ್ಲದೆ), ಅಹನ್ಯಹನಿ-ದಿನ ದಿನದಲ್ಲಿ (ಪ್ರತಿದಿನವೂ), ಅಯಂ-ಈ (ಸಂಸಾರಿ) ಜೀವನು, ಈಶ್ವರಾಜ್ಞಾಂ-ಶ್ರೀಹರಿಯ (ಶ್ರುತಿಸ್ಮೃತ್ಯುಕ್ತ) ಆಜ್ಞೆಯನ್ನು ವಿಲಂಘಯನ್-ಉಲ್ಲಂಘಿಸುತ್ತ (ಮೀರುತ್ತಾ), ಮೂಢಃ-ಮೂರ್ಖನಾಗಿ, ದುಃಖೇ-ದುಃಖವು, ಸ್ವಲ್ಪೇ ಅಪಿ-ಸ್ವಲ್ಪವಾಗಿದ್ದರೂ, ಅಲಂ ವದಃ-ಹೆಚ್ಚೆಂದು ಹೇಳುತ್ತ (ಸಾಕಷ್ಟು ಅಧಿಕವೆಂದು ಹೇಳುತ್ತ), ಅಲಂ-(ತನ್ನ ಆಜ್ಞೋಲ್ಲಂಘನೆಯನ್ನು) ಅಧಿಕವೆಂದು, ನೈವ ಮನುತೇ-ತಿಳಿಯುವುದೇ ಇಲ್ಲ; ಮೃಷಾ

(ಸಖ್ಯನಾಮಕ[1] ಭಕ್ತಿಯನ್ನು ಸಾಧಿಸಿರುವ ಭಕ್ತನ ವಿಷಯದಲ್ಲಿ), ಯಾವಾಗಲೂ, ಸಖಿನಾಗಿ ಜೊತೆಯಲ್ಲಿದ್ದು ರಕ್ಷಕನಾಗಿರುತ್ತಾನೆ; ಶ್ರೀಹರಿಯು, ಆತನಿಗೆ, ಅಕ್ಷಯವಾದ ಇಷ್ಟಾರ್ಥಗಳನ್ನೂ ಕೊಡುತ್ತಾನೆ (೩೬-೩೭). ಮೂಢ ಮಾನವನು, ಪ್ರತಿದಿನದಲ್ಲಿಯೂ, ಪರಿಣಾಮದ ಎಚ್ಚರಿಕೆ ಇಲ್ಲದೇ, ಶ್ರೀವಿಷ್ಣುವಿನ ಶಾಸ್ತ್ರೋಕ್ತವಾದ ಆಜ್ಞೆಗಳನ್ನು ಉಲ್ಲಂಘಿಸುತ್ತಿದ್ದರೂ, ಸ್ವಲ್ಪವಾಗಿ ಅನುಭವಿಸಬೇಕಾಗಿ ಬಂದ ದುಃಖಗಳನ್ನೂ ಮಹದ್ದುಃಖವೆಂದೇ ತಿಳಿಯುತ್ತಾನೆ; ತನ್ನ ಆಜ್ಞೋಲ್ಲಂಘನೆಗಳನ್ನು ಅಲ್ಪವೆಂದು ಬಗೆದು

1 ಶ್ರವಣ, ಕೀರ್ತನಾದಿ ನವಭಕ್ತಿಗಳು ಈ ಹಿಂದೆ ಪ್ರಸಕ್ತವಾದಲ್ಲಿ ನಿರೂಪಿತವಾಗಿವೆ—ಸಖ್ಯವೆಂಬ ಭಕ್ತಿಯ ಸ್ವರೂಪ ಲಕ್ಷಣವನ್ನು ಇಲ್ಲಿ ವಿವರಿಸಲಾಗಿದೆ.

ಏವ-ವ್ಯರ್ಥವಾಗಿಯೇ, ಪಾಹಿ ಪಾಹಿ ಇತಿ-ರಕ್ಷಿಸು, ರಕ್ಷಿಸೆಂದು, ಬಹಿಶ್ಚಿತ್ತ:-ಮನಃಪೂರ್ವಕವಲ್ಲದೇ (ನಾಲಿಗೆಯಿಂದ ಮಾತ್ರ), ವದನ್ ಅಪಿ-ನುಡಿಯುತ್ತಿದ್ದರೂ, ಅನ್ಯಜಃ-ಡೊಂಕಾದ, ಶುನಃ ಪುಚ್ಛಂ ಇವ-ನಾಯಿಯ ಬಾಲದಂತೆ (ಮತ್ತೆ ಮತ್ತೆ ಮಾಡಿದ ತಪ್ಪನ್ನೇ ಮಾಡುತ್ತ ವಕ್ರಮಾರ್ಗದಲ್ಲಿಯೇ ಇರುತ್ತ), ಸ್ವಸ್ಯ-ತನ್ನ ಹಿತಂ-ಹಿತವನ್ನು ನ ಕರೋತಿ-ಆಚರಿಸುವುದಿಲ್ಲ. ದಾರಿದ್ರ್ಯಾದೀನಿ-ಬಡತನವೇ ಮೊದಲಾದ, ಅನೇಕಶಃ-ಬಹು ಪ್ರಕಾರದ, ಪಾಪಕರ್ಮಾಣಿ-(ತನ್ನ) ಪಾಪಕರ್ಮಗಳನ್ನು (ಅವುಗಳ ಫಲಗಳನ್ನು), ಭುಂಜಾನಃ-ಅನುಭವಿಸುತ್ತಿದ್ದರೂ, ಭೂರಿಶಃ-ಹೆಚ್ಚಾಗಿ, ಪಾಪಕರ್ಮಾಣಿ-ಪಾಪಕರ್ಮಗಳನ್ನು ಪುನಃ ಪುನಃ-ಮತ್ತೆ ಮತ್ತೆ ಕರೋತಿ ಏವ-ಮಾಡುತ್ತಲೇ ಇರುತ್ತಾನೆ; ಸದಸಚ್ಚ-ಸತ್ಕರ್ಮ ಅಸತ್ಕರ್ಮಗಳನ್ನು (ಹಿತಾಹಿತಸಾಧಕ ಕರ್ಮಗಳನ್ನು), ಅವಿಜಾನತಾ-ತಿಳಿಯದ (ವಿವೇಕವಿಲ್ಲದ), ನಿರ್ಲಜ್ಜಾಯ-ಲಜ್ಜೆಯನ್ನು ತೊರೆದ (ಅಧರ್ಮಾಚರಣೆಯಲ್ಲಿರಬೇಕಾದ ಲಜ್ಜೆಯನ್ನು ಬಿಟ್ಟ), ಅತಿಧೃಷ್ಟಾಯ-ಅತ್ಯಂತ ಭಯರಹಿತನಾಗಿ ವರ್ತಿಸುವವನಿಗೋಸ್ಕರ, ಚೋದನಂ-(ಸನ್ಮಾರ್ಗದ) ಉಪದೇಶವು, ಜಲರೇಖಾವತ್-ನೀರಿನಲ್ಲಿ ಮೂಡಿಸುವ ರೇಖೆಗಳಂತೆ (ಅವು ಮರುಕ್ಷಣದಲ್ಲಿ ಅದೃಶ್ಯವಾಗುವಂತೆ), ವ್ಯರ್ಥತಾಂ ಏವ-ವ್ಯರ್ಥತೆಯನ್ನೇ (ನಿಷ್ಫಲತ್ವವನ್ನೇ), ಗಚ್ಛತಿ-ಹೊಂದುತ್ತದೆ.

ಬಾಹ್ಯಮಾರಾಧನಂ ದ್ವೇಧಾ ಶರೀರೇಣ ಧನಾದಿನಾ ॥ ೪೨ ॥
ಮನೋಯೋಗಶ್ಚ ತತ್ರಾಪಿ ವಿಶೇಷಫಲದೋ ಭವೇತ್ ।

ಬಾಹ್ಯಂ-ಬಾಹ್ಯದ (ಅಂತರಭಿನ್ನವಾದ) ಆರಾಧನಂ-(ಶ್ರೀಹರಿಯ) ಆರಾಧನೆಯು, ಶಾರೀರೇಣ-ಶರೀರದಿಂದಲೂ, ಧನಾದಿನಾ-ದ್ರವ್ಯಾದಿಗಳಿಂದಲೂ, (ಎಂದು), ದ್ವೇಧಾ-ಎರಡು ವಿಧವು; ತತ್ರಾಪಿ-ಅದರಲ್ಲಿಯೂ (ಈ ದ್ವಿವಿಧ ಆರಾಧನೆಯಲ್ಲಿ ಸಹ), ಮನೋಯೋಗಃ ಚ-ಮನಃಪೂರ್ವಕವಾದ ಪ್ರವೃತ್ತಿಯೇ

---

ಶ್ರೀಹರಿಯು ಅಧಿಕಪ್ರಮಾಣದ ದುಃಖವನ್ನಿತ್ತಿರುವನೆಂದು ಬಗೆಯುತ್ತಾನೆ; ಪಾಹಿ (ರಕ್ಷಿಸು), ಪಾಹಿ ಎಂದು ನುಡಿಯುತ್ತಿದ್ದರೂ ಮನಃಪೂರ್ವಕವಾಗಿ (ಶ್ರದ್ಧೆಯಿಂದ—ಭಕ್ತಿಯುತನಾಗಿ ಉಚ್ಚರಿಸುವುದಿಲ್ಲ; ಮತ್ತು ಪುನಃ ಪುನಃ ತಿದ್ದಿ ಸರಿಪಡಿಸಲುಬಾರದ ನಾಯಿಯ ಡೊಂಕುಬಾಲದಂತೆ, ವಕ್ರಮಾರ್ಗವನ್ನೇ ಅನುಸರಿಸುತ್ತ ಬಡತನವೇ ಮುಂತಾದ ಬಹುದುಃಖಗಳನ್ನು ಅನುಭವಿಸುತ್ತಿದ್ದರೂ, ಪಾಪಕರ್ಮಗಳನ್ನೇ ಮಾಡುತ್ತಿರುತ್ತಾನೆ; ಸತ್, ಅಸತ್ ಎಂಬ ವಿವೇಕವಿಲ್ಲದ (ಸರಿ, ತಪ್ಪುಗಳನ್ನು ತಿಳಿಯಲಾರದ) ಯಾವ ಮೂಢನು, ಅಧರ್ಮವನ್ನಾಚರಿಸುವುದರಲ್ಲಿ ನಾಚಿಕೆಪಡದ (ನಿರ್ಲಜ್ಜನಾದ), ಅತ್ಯಂತ ಧಾರ್ಷ್ಟ್ಯದಿಂದ, ಸ್ವೇಚ್ಛಾ ಪ್ರವೃತ್ತಿಯುಳ್ಳವನಾಗುವನೋ, ಅಂಥವನಿಗೆ ಸನ್ಮಾರ್ಗವನ್ನು ಉಪದೇಶಿಸುವುದೂ ವ್ಯರ್ಥವೇ. ಜಲದಲ್ಲಿ ಲೇಖಿಸುವ ರೇಖೆಗಳು

(ಭಕ್ತಿಯುತ ಮನಸ್ಸಿನೊಂದಿಗೆ ಆಚರಿಸುವುದೇ). ವಿಶೇಷಫಲದಃ-ಅಧಿಕ ಫಲವನ್ನು ಕೊಡುವುದು, ಭವೇತ್-ಆಗುತ್ತದೆ.

ನಿತ್ಯಂ ನೈಮಿತ್ತಿಕಂ ಕರ್ಮ ಯಥಾಜಾತಿ ಯಥಾಶ್ರಮಂ ॥ ೪೩ ॥
ಕೃತ್ವಾ ಸಮರ್ಪಯೇದ್ವಿಷ್ಣೌ ಮುಖ್ಯಂ ಶಾರೀರಮೇವ ಯತ್ ।
ಧಾರಣಂ ತಪ್ತಚಕ್ರಾದೇರ್ಮೃದಾ ಚಾಪಿ ತದಂಕನಂ ॥ ೪೪ ॥
ಜಾಪನಂ ವಿಷ್ಣುಮಂತ್ರಾಣಾಂ ಪೂಜಾ ತತ್ಪ್ರತಿಮಾದಿಷು ।
ಮಹಿಮಾಶ್ರವಣಂ ವಿಷ್ಣೋರ್ವಾಚಾ ತದ್ಗುಣವರ್ಣನಂ ॥ ೪೫ ॥
ಯಾತ್ರಾ ಪ್ರದಿಕ್ಷಣಂ ಪದ್ಭ್ಯಾಂ ಕರಾಭ್ಯಾಂ ಪರಿಚಾರಣಂ ।
ನೇತ್ರಾಭ್ಯಾಂ ವೀಕ್ಷಣಂ ತಸ್ಯ ಸಾಷ್ಟಾಂಗನಮನಾನಿ ಚ ॥ ೪೬ ॥
ತತ್ಪಾದತುಲಸೀಪುಷ್ಪಕಸ್ತೂರೀಚಂದನಾದಿನಾಂ ।
ಆಘ್ರಾಣಂ ಸ್ಪರ್ಶನಂ ಮೂರ್ತೇಶ್ಚಲಾಚಲವಿಭೇದತಃ ॥ ೪೭ ॥
ನಿರ್ವಾಹಾರ್ಥಂ ಶರೀರಸ್ಯ ತನ್ನಿವೇದಿತಭೋಜನಂ ।
ಉತ್ಸರ್ಗಾನ್ಮಲಮೂತ್ರಾದೇಶ್ಚಿತ್ತಸ್ವಾಸ್ಥ್ಯಂ ಯತೋ ಭವೇತ್ ॥ ೪೮ ॥
ಅತಃ ಪಾಯುರುಪಸ್ಥಂ ಚ ತದಾರಾಧನಸಾಧನಂ ।
ಶಾರೀರಾರಾಧನಂ ವಿಷ್ಣೋರ್ಜ್ಞಾನೀಹ್ಯೈತನ್ಮಹಾಮತೇ ॥ ೪೯ ॥

ಯಥಾಜಾತಿ-ವರ್ಣವಿಹಿತವೂ, ಯಥಾಶ್ರಮಂ-ಆಶ್ರಮವಿಹಿತವೂ, (ಆದ), ನಿತ್ಯಂ-ನಿತ್ಯ, (ಮತ್ತು) ನೈಮಿತ್ತಿಕಂ-ನೈಮಿತ್ತಿಕ; ಕರ್ಮ-ಕರ್ಮಗಳನ್ನು, ಕೃತ್ವಾ-ಆಚರಿಸಿ (ಮಾಡಿ), ವಿಷ್ಣೌ-ಶ್ರೀವಿಷ್ಣುವಿನಲ್ಲಿ ಸಮರ್ಪಯೇತ್-ಅರ್ಪಣೆಮಾಡತಕ್ಕದ್ದು (ಯತ್-ಯಾವುದೋ, ಅದು), ಮುಖ್ಯಂ-ಪ್ರಧಾನವಾದ, ಶಾರೀರಂ ಏವ-ಶಾರೀರ

---

ಉತ್ತರಕ್ಷಣದಲ್ಲಿ ಅದೃಶ್ಯವಾಗುವಂತೆ, ಉಪದೇಶವೂ ವ್ಯರ್ಥವಾಗುತ್ತದೆ (೩೮-೪೧). ಶ್ರೀಹರಿಯ ಬಾಹ್ಯಾರಾಧನೆಯು, ಶರೀರದಿಂದ ಮತ್ತು ಧನಾದಿಗಳಿಂದ, ಎಂಬ ಭೇದದಿಂದ, ಎರಡು ವಿಧವಾದುದು; ಈ ಉಭಯ ವಿಧದ ಆರಾಧನೆಗಳೂ, ಶ್ರದ್ಧಾಭಕ್ತಿಯುತವಾಗಿ ಆಚರಿಸಲ್ಪಟ್ಟು ವಿಶೇಷ (ಅಧಿಕ) ಫಲಪ್ರದಗಳಾಗುತ್ತವೆ (೪೨). ವರ್ಣ ಮತ್ತು ಆಶ್ರಮಕ್ಕೆ ಉಚಿತವಾದ (ವಿಹಿತವಾದ) ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸಿ, ಶ್ರೀವಿಷ್ಣುವಿನಲ್ಲಿ ಅರ್ಪಿಸುವುದು, ಶಾರೀರಕ ಆರಾಧನೆಯಲ್ಲಿ ಪ್ರಧಾನವಾದುದು; ತಪ್ತಚಕ್ರಾದಿ ವಿಷ್ಣುಲಾಂಛನಗಳನ್ನು ದೇಹದಲ್ಲಿ ಧರಿಸುವುದು, ಗೋಪೀಚಂದನಾದಿಗಳಿಂದ ದೇಹದಲ್ಲಿ ಚಕ್ರಾದಿಗಳನ್ನು ಗುರ್ತಿಸಿಕೊಳ್ಳುವುದು; ಶ್ರೀವಿಷ್ಣುಸ್ವರೂಪವನ್ನು ಪ್ರತಿಪಾದಿಸುವ ಮಂತ್ರಗಳನ್ನು ಜಪಿಸುವುದು; ಪ್ರತಿಮೆ

ಆರಾಧನೆಯೇ (ಆಗಿರುತ್ತದೆ): ತಪ್ತಚಕ್ರಾದೇಃ-ತಪ್ತಚಕ್ರಾದಿಗಳ, ಧಾರಣಂ-(ಶರೀರದಲ್ಲಿ) ಧರಿಸುವುದು; ಅಪಿ-ಮತ್ತು ಮೃದಾ ಚ-ಮೃತ್ತಿಕೆಯಿಂದಲೂ, (ಗೋಪೀಚಂದನಾದಿಗಳಿಂದಲೂ), ತದಂಕನಂ-ಚಕ್ರಾದಿಗಳಿಂದ (ದೇಹವನ್ನು) ಗುರ್ತಿಸಿಕೊಳ್ಳುವುದು; ವಿಷ್ಣುಮಂತ್ರಾಣಾಂ-ವಿಷ್ಣು ಮಂತ್ರಗಳ (ಓಂ ವಿಷ್ಣವೇ ನಮಃ ಇತ್ಯಾದಿ ಮಂತ್ರಗಳ) ಜಾಪನಂ-ಜಪ ಮಾಡುವುದು; ತತ್ಪ್ರತಿಮಾದಿಷು-ಶ್ರೀವಿಷ್ಣುವಿನ ಪ್ರತಿಮಾದಿಗಳಲ್ಲಿ ಪೂಜಾ-ಪೂಜೆಯೂ; ವಿಷ್ಣೋಃ-ಶ್ರೀವಿಷ್ಣುವಿನ, ಮಹಿಮಾ ಶ್ರವಣಂ-ಮಹಿಮೆಗಳನ್ನು ಶ್ರವಣಮಾಡುವುದು; ವಾಚಾ-ನುಡಿಯಿಂದ, ತದ್ಗುಣವರ್ಣನಂ-ಶ್ರೀವಿಷ್ಣುಮಹಿಮೆಗಳನ್ನು ಕೀರ್ತಿಸುವುದು (ಉಚ್ಚರಿಸುವುದು); ಪದ್ಭ್ಯಾಂ-ಕಾಲುಗಳಿಂದ, ಯಾತ್ರಾ ಪ್ರದಿಕ್ಷಣಂ-ಯಾತ್ರೆ (ಪುಣ್ಯ ತೀರ್ಥಕ್ಷೇತ್ರಗಳಿಗೆ ಹೋಗುವುದು) ಮತ್ತು ಪ್ರದಕ್ಷಿಣೆ ಮಾಡುವುದು; ಕರಾಭ್ಯಾಂ-ಕೈಗಳಿಂದ, ಪರಿಚಾರಣಂ-(ವಿಷ್ಣುಮಂದಿರಾದಿಗಳ ಮಾರ್ಜನೆ ಮೊದಲಾದ) ಸೇವೆಯನ್ನು ಮಾಡುವುದು; ನೇತ್ರಾಭ್ಯಾಂ-ಕಣ್ಣುಗಳಿಂದ, ವೀಕ್ಷಣಂ-ನೋಡುವುದು; ಸಾಷ್ಟಾಂಗ ನಮನಾನಿ ಚ-(ದೇಹದಿಂದ) ಸಾಷ್ಟಾಂಗ ನಮಸ್ಕಾರಗಳನ್ನು ಮಾಡುವುದು; ತತ್ಪಾದ ತುಲಸೀ ಪುಷ್ಪ ಕಸ್ತೂರೀಚಂದನಾದಿನಾಂ-ಶ್ರೀವಿಷ್ಣುವಿಗೆ ಅರ್ಪಿತವಾದ ತುಲಸೀ, ಪುಷ್ಪ

ಮೊದಲಾದವುಗಳಲ್ಲಿ ಶ್ರೀವಿಷ್ಣುವನ್ನು ಪೂಜಿಸುವುದು; ಶ್ರೀವಿಷ್ಣು ಮಹಿಮೆಗಳನ್ನು ಶ್ರವಣಮಾಡುವುದು; ನುಡಿಯಿಂದ ಶ್ರೀವಿಷ್ಣು ಮಹಿಮೆಗಳನ್ನು ವರ್ಣಿಸುವುದು; ಪಾದಗಳಿಂದ ತೀರ್ಥಯಾತ್ರೆಗಳನ್ನು ಮಾಡುವುದು (ವಿಷ್ಣು ದೇವಾಲಯಾದಿಗಳ) ಪ್ರದಕ್ಷಿಣೆ ಮಾಡುವುದು; ಕೈಗಳಿಂದ ದೇವಗೃಹಮಾರ್ಜನಾದಿ ಸೇವೆ ಮಾಡುವುದು; ಕಣ್ಣುಗಳಿಂದ ಶ್ರೀವಿಷ್ಣು ದರ್ಶನವನ್ನು ಸಾಧಿಸಿಕೊಳ್ಳುವುದು ವಿಷ್ಣು ಪ್ರತಿಮೆಗಳನ್ನು ನೋಡುವುದು): ದೇಹದಿಂದ ಸಾಷ್ಟಾಂಗ[1] ನಮಸ್ಕಾರ ಮಾಡುವುದು; ಶ್ರೀವಿಷ್ಣ್ವರ್ಪಿತವಾದ ತುಲಸೀ, ಪುಷ್ಪ ಕಸ್ತೂರಿ, ಗಂಧಾದಿಗಳನ್ನು ಆಘ್ರಾಣಿಸುವುದು; ಚಲ ಮತ್ತು ಅಚಲಗಳೆಂಬ ದ್ವಿವಿಧ ವಿಷ್ಣು ಪ್ರತಿಮೆಗಳ ಸ್ಪರ್ಶಪಡೆಯುವುದು;[2] ಶರೀರ ರಕ್ಷಣೆಗಾಗಿ, ಶ್ರೀವಿಷ್ಣುವಿಗೆ ಅರ್ಪಿತವಾದ ಅನ್ನಾದಿ ಆಹಾರಗಳನ್ನು ಸೇವಿಸುವುದು; ಈ ಎಲ್ಲವೂ ಶಾರೀರಕ ಆರಾಧನೆಗಳೇ; ಪಾಯು, ಉಪಸ್ಥಗಳೂ ಶ್ರೀಹರಿಪೂಜಾ ಸಾಧನಗಳೇ ಆಗಿವೆ; ಮಲಮೂತ್ರ ವಿಸರ್ಜನೆಯಿಂದ, ಜಪಾದಿಗಳಿಗೆ ಆವಶ್ಯಕವಾದ

1. 'ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ। ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ॥' (ಕೃ.ಮಹಾರ್ಣವ) ಇದರ ಭಾವಾರ್ಥ:— ಎದೆ, ತಲೆ, ಕಣ್ಣು (ನೋಟ), ಮನಸ್ಸು ನುಡಿ, ಪಾದಗಳು, ಕೈಗಳು, ಮಂಡಿ (ಜಾನು-ಮೊಣಕಾಲು). ಇವೆಲ್ಲವನ್ನೂ ಉಪಯೋಗಿಸಿ ಮಾಡುವ ನಮನವು, ಸಾಷ್ಟಾಂಗ ನಮಸ್ಕಾರವೆನಿಸುತ್ತದೆ.

2 ವಿಷ್ಣುಭಕ್ತರು, ಶ್ರೀವಿಷ್ಣುವಿನ ಚಲಪ್ರತಿಮೆಗಳೆನಿಸುವರು—ಅವರ ಪಾದಸ್ಪರ್ಶ, ಆಲಿಂಗನಾದಿಗಳು ಸ್ಪರ್ಶೇಂದ್ರಿಯದಿಂದಾಗುವ ಶ್ರೀಹರಿಸೇವೆಯು (ಶಾರೀರಕ ಆರಾಧನೆಯು).

ಕಸ್ತೂರಿ, ಗಂಧ ಮೊದಲಾದವುಗಳ, ಆಘ್ರಾಣಂ-ಆಘ್ರಾಣಿಸುವುದು (ಮೂಸಿ ನೋಡುವುದು); ಚಲಾಚಲ ವಿಭೇದತಃ-ಚಲ ಮತ್ತು ಅಚಲವೆಂಬ ಭೇದದಿಂದ (ದ್ವಿವಿಧವಾದ), ಮೂರ್ತೇಃ-ಶ್ರೀವಿಷ್ಣುಪ್ರತಿಮೆಯ, ಸ್ಪರ್ಶನಂ-ಸ್ಪರ್ಶವನ್ನು ಹೊಂದುವುದು (ಅಲಿಂಗನಾದಿಗಳಿಂದ ಸ್ಪರ್ಶಪಡೆಯುವುದು); ಶರೀರಸ್ಯ-ದೇಹದ, ನಿರ್ವಾಹಾರ್ಥಂ-ರಕ್ಷಣೆಗಾಗಿ, ತನ್ನಿವೇದಿತಭೋಜನಂ-ಶ್ರೀವಿಷ್ಣುವಿಗೆ ಅರ್ಪಿತವಾದ ಆಹಾರವನ್ನು ಭೋಜನಮಾಡುವುದು; ಯತಃ-ಯಾವ ಕಾರಣದಿಂದ, ಮಲಮೂತ್ರಾದೇಃ-ಮಲಮೂತ್ರಾದಿಗಳ, ಉತ್ಸರ್ಗಾತ್-ಉತ್ಸರ್ಜನದಿಂದ (ದೇಹದಿಂದ ಹೊರಗೆಹಾಕುವುದರಿಂದ), ಚಿತ್ತಸ್ವಾಸ್ಥ್ಯಂ-ಮನಸ್ಸಿನ ಸ್ವಸ್ಥತೆಯು (ಸಮಾಧಾನ ಸ್ಥಿತಿಯು) ಭವೇತ್-ಉಂಟಾಗುವುದೋ, ಅತಃ-ಆ ಕಾರಣದಿಂದ, ಪಾಯುಃ-ಪಾಯು, ಚ-ಮತ್ತು, ಉಪಸ್ಥಂ-ಉಪಸ್ಥವೂ, (ಮಲ ಮತ್ತು ಮೂತ್ರಗಳನ್ನು ವಿಸರ್ಜಿಸುವ ಕರ್ಮೇಂದ್ರಿಯಗಳು), ತದಾರಾಧನಸಾಧನಂ-ಶ್ರೀವಿಷ್ಣುವಿನ ಆರಾಧನೆಗೆ ಸಾಧನವೆನಿಸುತ್ತದೆ (ಭವೇತ್-ಸಾಧನವೇ ಆಗುತ್ತದೆ); ಮಹಾಮತೇ-ಹೇ ಪ್ರಾಜ್ಞನಾದ ಭಾಗುರಿ!, ಏತತ್-ಇದು (ಈ ಎಲ್ಲವೂ), ವಿಷ್ಣೋಃ-ಶ್ರೀವಿಷ್ಣುವಿನ, ಶಾರೀರಾರಾಧನಂ-ದೇಹನಾಧ್ಯಗಳಾದ ಆರಾಧನೆಯೆಂದು (ಪೂಜೆ-ಸೇವೆ, ಎಂದು), ಜಾನೀಹಿ-ತಿಳಿ.

ದಾನಂ ವಿಪ್ರೇಽನಲೇ ಹೋಮೋ ಧನೇನಾರಾಧನಂ ದ್ವಿಧಾ ।
ವಿಪ್ರೋಽಗ್ನಿರ್ವದನಂ ವಿಷ್ಣೋಸ್ತತ್ತೋಷಾತ್ತಸ್ಯ ತೋಷಣಂ ॥ ೫೦ ॥
ಪಿತರೋ ದೇವತಾಶ್ಚಾಗ್ನಿವಿಪ್ರೇಭ್ಯಸ್ತೋಷಮಾಪ್ನುಯುಃ ।
ವಿಪ್ರಸ್ಯಾಧಃ ಶರೀರೇ ತು ವಸಂತಿ ಪಿತರೋಽಖಿಲಾಃ ॥ ೫೧ ॥
ನಾಭೇರೂರ್ಧ್ವಂ ತು ತಿಷ್ಠಂತಿ ದೇವತಾಃ ಸರ್ವ ಏವ ಹಿ ।
ಸರ್ವದೇಹಮಭಿವ್ಯಾಪ್ಯ ವಸತಿ ಶ್ರೀಧರೋ ಹರಿಃ ॥ ೫೨ ॥
ಕುರ್ವೀತ ಸತತಂ ತಸ್ಮಾದ್ಧರಿಭಾವನಯಾಽಖಿಲೈಃ ।
ದೇವತಾಪಿತೃತುಷ್ಟ್ಯರ್ಥಂ ಬ್ರಾಹ್ಮಣಾನಾಂ ಪ್ರತೋಷಣಂ ॥ ೫೩ ॥
ಯದ್ಯದಿಷ್ಟತಮಂ ಸ್ವಸ್ಯ ಧನವಸ್ತ್ರಗೃಹಾದಿಕಂ ।
ರಥಭೂಮಿಗಜಾಶ್ವಾದಿ ತೇಭ್ಯೋ ದೇಯಂ ಹಿತೇಪ್ಸುನಾ ॥ ೫೪ ॥

---

ಮನಸ್ಸಿನ ಸಮಾಧಾನ ಸ್ಥಿತಿಯನ್ನು-ಮನಃಸ್ವಾಸ್ಥ್ಯವನ್ನು, ಈ ಕರ್ಮೇಂದ್ರಿಯಗಳು ದೊರಕಿಸುತ್ತವೆ (೪೩-೪೯). ಧನದಿಂದ ಶ್ರೀಹರಿಯನ್ನು ಆರಾಧಿಸುವುದು, ಬ್ರಾಹ್ಮಣರಿಗೆ ದಾನಕೊಡುವುದು ಮತ್ತು ಅಗ್ನಿಯಲ್ಲಿ ಹೋಮಮಾಡುವುದು, ಎಂಬುದಾಗಿ ದ್ವಿವಿಧವಾಗಿರುತ್ತದೆ; ವಿಪ್ರ ಮತ್ತು ಅಗ್ನಿ ಈ ಉಭಯವೂ ಶ್ರೀವಿಷ್ಣುವಿನ

ವಿಪ್ರೇ-ಬ್ರಾಹ್ಮಣನಲ್ಲಿ (ಮಾಡುವ), ದಾನಂ-ದಾನವೂ, ಅನಲೇ-ಅಗ್ನಿಯಲ್ಲಿ (ಅರ್ಪಿಸುವ), ಹೋಮಃ-ಹವಿಸ್ಸುಗಳೂ (ಹವಿಸ್ಸುಗಳ ದಾನವೂ), (ಎಂದು), ಧನೇನ-ಧನದಿಂದ, ಆರಾಧನಂ-(ಶ್ರೀಹರಿಯ) ಆರಾಧನೆಯು, ದ್ವಿಧಾ-ಎರಡು ಪ್ರಕಾರವು; ವಿಷ್ಣೋಃ-ಶ್ರೀವಿಷ್ಣುವಿಗೆ, ಅಗ್ನಿಃ-ಅಗ್ನಿಯೂ, ವಿಪ್ರಃ-ಬ್ರಾಹ್ಮಣನೂ, ವದನಂ-ಮುಖವು (ವಿಪ್ರ ಮತ್ತು ಅಗ್ನಿಗಳು ಶ್ರೀವಿಷ್ಣುವಿನ ಮುಖವೇ); ತತ್ತೋಷಾತ್-(ಈ ಉಭಯರ) ಇವರನ್ನು ತೃಪ್ತಿಗೊಳಿಸುವುದರಿಂದ, ತಸ್ಯ-ಶ್ರೀವಿಷ್ಣುವಿನ, ತೋಷಣಂ-ತೃಪ್ತಿಯು (ಉಂಟಾಗುತ್ತದೆ); ಅಗ್ನಿವಿಪ್ರೇಭ್ಯಃ-ಅಗ್ನಿ ಮತ್ತು ವಿಪ್ರರಿಂದ (ಇವರ ದ್ವಾರಾ), ಪಿತರಃ-ಪಿತೃಗಳೂ, ದೇವತಾಃ ಚ-ದೇವತೆಗಳೂ ಸಹ, ತೋಷಂ-ತೃಪ್ತಿಯನ್ನು ಆಪ್ನುಯುಃ-ಹೊಂದುತ್ತಾರೆ; ವಿಪ್ರಸ್ಯ-ಬ್ರಾಹ್ಮಣನ, ಅಧಃ ಶರೀರೇತು-ದೇಹದ ಕೆಳಭಾಗದಲ್ಲಿಯೇ, ಅಖಿಲಾಃ-ಸಮಸ್ತರಾದ, ಪಿತರಃ-ಪಿತೃಗಳು, ವಸಂತಿ-ವಾಸಿಸುತ್ತಾರೆ; ನಾಭೇಃ-ನಾಭಿಯ (ಹೊಕ್ಕಳಿನ), ಊರ್ಧ್ವಂತು-ಮೇಲ್ಭಾಗದಲ್ಲಿಯಾದರೋ, ಸರ್ವೇ-ಸಮಸ್ತ ದೇವತಾಃ ಏವ-ದೇವತೆಗಳೇ, ತಿಷ್ಠಂತಿ-ಇರುತ್ತಾರೆ; ಸರ್ವದೇಹಂ-ಪೂರ್ಣ ದೇಹವನ್ನು ಅಭಿವ್ಯಾಪ್ಯ-ಚೆನ್ನಾಗಿ ವ್ಯಾಪಿಸಿ, ಶ್ರೀಧರಃ-ಶ್ರೀಧರನಾದ (ಲಕ್ಷ್ಮೀವಕ್ಷನಾದ), ಹರಿಃ-ಶ್ರೀಹರಿಯು, ವಸತಿ-ವಾಸಿಸುತ್ತಾನೆ; ತಸ್ಮಾತ್-ಆದ್ದರಿಂದ, ಅಖಿಲೈಃ-(ಸ್ವಹಿತವನ್ನಾಶಿಸುವ) ಸರ್ವರಿಂದ, ಹರಿಭಾವನಯಾ-(ವಿಪ್ರನಲ್ಲಿ) ಶ್ರೀಹರಿಯೇ ನಿಂತಿರುವನೆಂಬ ಅನುಸಂಧಾನದಿಂದ, ದೇವತಾಪಿತೃತುಷ್ಟ್ಯರ್ಥಂ-ದೇವತೆಗಳು ಮತ್ತು ಪಿತೃಗಳ ಸಂತುಷ್ಟಿಗಾಗಿ, ಬ್ರಾಹ್ಮಣಾನಾಂ-ವಿಪ್ರರ, ಪ್ರತೋಷಣಂ-ವಿಶೇಷತುಷ್ಟಿಯು, ಸತತಂ-ನಿರಂತರವಾಗಿ, ಕುರ್ವೀತ-ಮಾಡಲ್ಪಡತಕ್ಕದ್ದು; ಹಿತೇಪ್ಸುನಾ-(ಸ್ವಪರ) ಹಿತಾಕಾಂಕ್ಷೆಯುಳ್ಳವನಿಂದ, ಸ್ವಸ್ಯ-ತನಗೆ, ಇಷ್ಟತಮಂ-ಅತಿಪ್ರಿಯವಾದುದು, ಯದ್ಯತ್-ಯಾವುದೋ ಅದನ್ನು ಧನವಸ್ತ್ರಗೃಹಾದಿಕಂ-ಧನ, ವಸ್ತ್ರ ಗೃಹಾದಿಗಳಾಗಲಿ, ರಥ ಭೂಮಿ ಗಜಾಶ್ವಾದಿ-ರಥ,

---

ಮುಖವಿದ್ದಂತೆ; ಅವರು ತೃಪ್ತರಾದರೆ ಶ್ರೀವಿಷ್ಣುವು ನಿಯಮೇನ ತೃಪ್ತನಾಗುತ್ತಾನೆ; ವಿಪ್ರರನ್ನು ತುಷ್ಟಿಗೊಳಿಸುವುದರಿಂದ, ಪಿತೃಗಳೂ ಮತ್ತು ದೇವತೆಗಳೂ ತೃಪ್ತರಾಗುತ್ತಾರೆ;[1] ವಿಪ್ರದೇಹದ ಕೆಳಭಾಗದಲ್ಲಿ ಸಮಸ್ತ ಪಿತೃಗಳು ವಾಸಿಸುತ್ತಾರೆ-ನಾಭಿ

---

1. ಸ್ವಪಿತೃಗಳು ತಮ್ಮ ಕರ್ಮಾನುಸಾರವಾದ ಗತಿಗಳನ್ನು ದೇಹಾಂತರಗಳಲ್ಲಿ ಅಥವಾ ಲೋಕಾಂತರಗಳಲ್ಲಿ ಇರಬಹುದು; ಅವರ ಸಂತತಿಯ ಅಧಿಕಾರಿಗಳು ಅವರನ್ನು ಸ್ಮರಿಸಿ ಮಾಡುವ ಪೂಜಾದಿಗಳನ್ನು ಸ್ವೀಕರಿಸಿ, ಅವರ ಪಿತೃಗಳಿಗೆ, ಅವರು ಎಲ್ಲಿದ್ದರೂ, ಯೋಗ್ಯ ರೂಪಾಂತರಗಳಿಂದ (ಪಿಂಡಾದಿ-ವಸ್ತ್ರಾದಿ ವಸ್ತುಗಳನ್ನು ಸ್ವೀಕರಿಸಿ ಅದರ ಫಲವನ್ನು) ಮುಟ್ಟಿಸುವ, ಅಧಿಕಾರದಲ್ಲಿ ನೇಮಿಸಲಾದ ಪಿತೃದೇವತೆಗಳ ಗಣವಿದೆ; ಬ್ರಾಹ್ಮಣ ದೇಹವನ್ನು ಆಶ್ರಯಿಸಿ ಅಂಶದಿಂದ ಸ್ಥಿತರಾದ ಈ ದೇವತೆಗಳು, ಬ್ರಾಹ್ಮಣನ ಸತ್ಕಾರ ಪೂಜಾದಿಗಳಿಂದ ಪ್ರೀತರಾಗಿ, (ಬ್ರಾಹ್ಮಣ ಪೂಜಕನ-ಆರಾಧಕನ) ಪಿತೃಗಳಿಗೆ ತೃಪ್ತಿಯನ್ನು ಉಂಟುಮಾಡುತ್ತಾರೆ.

ಭೂಮಿ, ಗಜ, ಅಶ್ವ ಇತ್ಯಾದಿಗಳಾಗಲಿ, ತೇಭ್ಯಃ-ಬ್ರಾಹ್ಮಣರಿಗೋಸ್ಕರ, ದೇಯಂ-ಕೊಡಲ್ಪಡತಕ್ಕದ್ದು.

**ಸದಾ ಸರ್ವತ್ರ ಸರ್ವಸ್ಮೈ ದಾನೇ ವೃದ್ಧಿಃ ಶತೋತ್ತರಾ ।**
**ದೇಶಕಾಲಾನುಸಾರೇಣ ತಥಾ ಪಾತ್ರವಿಶೇಷತಃ ॥ ೫೫ ॥**
**ಸಹಸ್ರಾಯುತಲಕ್ಷಾಣಿ ಕೋಟ್ಯರ್ಬುದಪರಾರ್ಧಕಂ ।**
**ಅನಂತಮಪಿ ಜಾಯೇತ ಪುಣ್ಯಕರ್ಮ ತಥೇತರತ್ ॥ ೫೬ ॥**

ಸದಾ-ಸರ್ವದಾ, ಸರ್ವತ್ರ-ಎಲ್ಲ ದೇಶದಲ್ಲಿ ಸರ್ವಸ್ಮೈ-ಎಲ್ಲರಿಗೂ, ದೇಶಕಾಲಾನುಸಾರೇಣ-ದೇಶ ಮತ್ತು ಕಾಲಗಳ ವೈಶಿಷ್ಟ್ಯವನ್ನನುಸರಿಸಿ (ದೇಶ ಕಾಲಗಳ ಪಾವಿತ್ರ್ಯತೆಗನುಗುಣವಾಗಿ), ತಥಾ-ಹಾಗೂ, ಪಾತ್ರವಿಶೇಷತಃ-ಪಾತ್ರನ (ದಾನ ಸ್ವೀಕರಿಸುವವನ) ಶ್ರೇಷ್ಠತೆಯನ್ನನುಸರಿಸಿ, ದಾನೇ-ದಾನದಲ್ಲಿ (ದಾನಕರ್ಮದ ಫಲದಲ್ಲಿ), ಶತೋತ್ತರಾ-(ದೇಶ, ಕಾಲ, ಪಾತ್ರಗಳ ತಾರತಮ್ಯಾನುಸಾರ) ಉತ್ತರೋತ್ತರ ನೂರುಮಡಿ, ಸಹಸ್ರಾಯುತ ಲಕ್ಷಾಣಿ-ಸಾವಿರ, ಹತ್ತುಸಾವಿರ, ಲಕ್ಷಮಡಿ, ಕೋಟ್ಯರ್ಬುದಪರಾರ್ಧಕಂ-ಕೋಟಿ, ಅರ್ಬುದ, ಪರಾರ್ಧಗಳಷ್ಟು ವೃದ್ಧಿಃ-ಆಧಿಕ್ಯವು, ಜಾಯೇತ-ಉಂಟಾಗುತ್ತದೆ; ತಥಾ-ಹೀಗೆಯೇ, ಇತರತ್-ಅನ್ಯ, ಪುಣ್ಯಕರ್ಮ- ಪುಣ್ಯಕರ್ಮಗಳೂ (ದೇಶಕಾಲಾದಿಗಳಿಂದ ಫಲಾಧಿಕ್ಯವುಳ್ಳವುಗಳಾಗುತ್ತವೆ).

---

ಯಿಂದ ಮೇಲ್ಭಾಗದಲ್ಲಿ ಸಕಲದೇವತೆಗಳೂ ಸ್ಥಿತರಾಗಿರುವರು;[1] ದೇಹವೆಲ್ಲವನ್ನು ವ್ಯಾಪಿಸಿ, ಲಕ್ಷ್ಮೀವಕ್ಷನಾದ ಶ್ರೀಹರಿಯೇ ಸ್ಥಿತನಾಗಿರುತ್ತಾನೆ; ಆದ್ದರಿಂದ ಸರ್ವರೂ ಸರ್ವಕಾಲದಲ್ಲಿ ಬ್ರಾಹ್ಮಣರನ್ನು ವಿಶೇಷವಾಗಿ ಸಂತುಷ್ಟಗೊಳಿಸಬೇಕು; ಶ್ರೀಹರಿ ಸನ್ನಿಧಾನವನ್ನು ಚಿಂತಿಸಿ ಅವರನ್ನು ಪೂಜಿಸಬೇಕು–ಆದರಿಸಬೇಕು–ಗೌರವಿಸಬೇಕು-ಸೇವಿಸಬೇಕು; ಅದರಿಂದ ದೇವತೆಗಳೂ, ಪಿತೃಗಳೂ ಸಂತುಷ್ಟರಾಗುತ್ತಾರೆ; ಹಿತಾಕಾಂಕ್ಷಿಗಳಾದವರು, ತನಗೆ ಅತಿಪ್ರಿಯವಾದ ವಸ್ತುಗಳನ್ನೇ—ಧನ, ವಸ್ತ್ರ ಗೃಹಾದಿ

---

1. ಇಲ್ಲಿ ಪ್ರಸಕ್ತರಾದ ದೇವತೆಗಳು ತತ್ತ್ವಾಭಿಮಾನಿ ದೇವತೆಗಳಲ್ಲ; ಪ್ರತಿ ಮನ್ವಂತರದ ಆರಂಭದಲ್ಲಿ ಇಂದ್ರಾದಿ ಪದಗಳಿಗೆ (ಅಧಿಕಾರ ಸ್ಥಾನಗಳಿಗೆ) ನೇಮಕರಾಗಿ, ತಮಗೆ ನಿರ್ದಿಷ್ಟವಾದ ಕಾರ್ಯಗಳನ್ನು ನಿರ್ವಹಿಸುವ ದೇವಗಣದವರು. ಮನು ಮೊದಲಾದವರ ಪ್ರತ್ಯೇಕ ಕರ್ಮಗಳನ್ನು ನಿರೂಪಿಸುತ್ತ ಭಾಗವತದಲ್ಲಿ 'ಯಜ್ಞಭಾಗಭುಜೋ ದೇವಾ...' ಇತ್ಯಾದಿ (ಭಾಗ.೮-೧೪-೬) ವಾಕ್ಯಗಳು, ಇಂದ್ರನಿಗೆ (ಯಜ್ಞಭಾಗಗಳನ್ನು ಸ್ವೀಕರಿಸಿ) ಸಹಾಯಕರಾಗಿ ಕೆಲಸ ಮಾಡುವ ಅಧಿಕಾರಿಗಳೆಂದು ಈ ಪದಾರೂಢರಾದ ಸುರಗಣದವರು ನಿರೂಪಿಸಲ್ಪಟ್ಟಿರುತ್ತಾರೆ. ಯಜ್ಞವೆಂದರೆ, ವಿವಿಧವಾದ ದ್ರವ್ಯಯಜ್ಞ-ಧ್ಯಾನ ಯಜ್ಞಾದಿಗಳು ಮತ್ತು ಯಜ್ಞಶಬ್ದದಿಂದ ಹೇಳಲ್ಪಡುವ ವಿಷ್ಣುಪೂಜಾತ್ಮಕವಾದ ಸರ್ವಜೀವರ ಸರ್ವಕರ್ಮಗಳು; (ಇವುಗಳನ್ನು ತಾವು ಸ್ವೀಕರಿಸಿ, ತಮ್ಮ ಅಂತರ್ಯಾಮಿಯಿಂದ ಅಭಿನ್ನನಾದ ಶ್ರೀಹರಿಯಲ್ಲಿ ಅರ್ಪಿಸಿ, ಕರ್ಮಕರ್ತನಾದ ಜೀವನಿಗೆ ಯೋಗ್ಯವಾದ ಅನುಗ್ರಹವನ್ನು ದೊರಕಿಸಿಕೊಡುವ ಅಧಿಕಾರಿ ದೇವತೆಗಳು—ಇಲ್ಲಿ ಪ್ರಸಕ್ತರು.)

**ಸರ್ವೇಷಾಂ ದೇವತಾದೀನಾಮಗ್ನಿರ್ದೂತ ಇತಿ ಶ್ರುತಃ ।**
**ಯಥಾ ಗೌಸ್ತೃಣಧಾನ್ಯಾದಿ ಭುಕ್ತ್ವಾ ಕ್ಷೀರವಹಾ ಭವೇತ್ ॥ ೫೭ ॥**
**ತಥಾಗ್ನಿರ್ಹವಿರಾದಾಯ ತತ್ತದ್ದ್ರವ್ಯಸಮುದ್ಭವಂ ।**
**ರಸಂ ಪೀಯೂಷತಾಂ ನೀತ್ವಾ ಪ್ರಾಪಯತ್ಯೇವ ನಾನ್ಯಥಾ ॥ ೫೮ ॥**

ಸರ್ವೇಷಾಂ-ಸಮಸ್ತರಾದ, ದೇವತಾದೀನಾಂ-ದೇವತೆಗಳಿಗೆ, ಅಗ್ನಿಃ-ಅಗ್ನಿದೇವನು, ದೂತಃ-ದೂತನು, ಇತಿ-ಎಂದು, ಶ್ರುತಃ-ಪ್ರಸಿದ್ಧನಾಗಿರುವನು; ಗೌಃ-ಹಸುವು, ಯಥಾ-ಹೇಗೆ, ತೃಣಧಾನ್ಯಾದಿ-ಹುಲ್ಲು ಕಾಳುಗಳನ್ನು ಭುಕ್ತ್ವಾ-ತಿಂದು, ಕ್ಷೀರವಹಾ-ಹಾಲನ್ನು ಕೊಡುವುದು (ತೃಣಾದಿಗಳನ್ನು ಕೊಟ್ಟವರಿಗಾಗಿ ತನ್ನ ಕೆಚ್ಚಲಲ್ಲಿ ಕ್ಷೀರವನ್ನು ಧರಿಸುತ್ತದೆಯೋ), ತಥಾ-ಹಾಗೆ, ಅಗ್ನಿಃ-ಅಗ್ನಿಯು, ಹವಿಃ-ಹವಿಸ್ಸನ್ನು ಆದಾಯ-ತೆಗೆದುಕೊಂಡು, ತತ್ತದ್ದ್ರವ್ಯ ಸಮುದ್ಭವಂ-ಆಯಾ (ತೃಣಾದಿ) ಪದಾರ್ಥಗಳಿಂದ ದೊರೆತ, ರಸಂ-ರಸವನ್ನು ಪೀಯೂಷತಾಂ-ಅಮೃತಭಾವವನ್ನು ನೀತ್ವಾ-ಹೊಂದಿಸಿ, ಪ್ರಾಪಯತಿ-(ದೇವತೆಗಳಿಗೆ) ಮುಟ್ಟಿಸುತ್ತಾನೆ; ಅನ್ಯಥಾ-ಬೇರೆ ವಿಧದಿಂದ, ನ ಏವ-ಅಲ್ಲ.

**ದೇವಾನಾಂ ಹವ್ಯವಾಹೋಽಸೌ ಪಿತೃಣಾಂ ಕವ್ಯವಾಹನಃ ।**
**ತರ್ಪಕೋಽಥ ದ್ವಿರೂಪೋಽಸೌ ಮುಖ್ಯತೋ ವಿಷ್ಣುತೋಷಕಃ ॥ ೫೯ ॥**

ಅಸೌ-ಈ ಅಗ್ನಿದೇವನು, ದೇವಾನಾಂ-ದೇವತೆಗಳಿಗೆ, ಹವ್ಯವಾಹಃ-ಹವಿಸ್ಸುಗಳನ್ನು ಮುಟ್ಟಿಸುವವನು; ಪಿತೃಣಾಂ-ಪಿತೃಗಳಿಗೆ, ಕವ್ಯವಾಹನಃ-ಕವ್ಯಗಳನ್ನು (ಪಿಂಡಾದಿಗಳನ್ನು) ಮುಟ್ಟಿಸುವವನು; (ಹೀಗೆ) ತರ್ಪಕಃ-(ದೇವತೆಗಳನ್ನೂ ಪಿತೃಗಳನ್ನೂ) ತೃಪ್ತಿಗೊಳಿಸುವ, ಅಸೌ-ಈ ಅಗ್ನಿದೇವನು, ದ್ವಿರೂಪಃ-ಎರಡು ರೂಪ

---

ಗಳಾಗಲಿ, ರಥ, ಭೂ, ಗಜ, ಅಶ್ವಾದಿಗಳಾಗಲಿ, ಬ್ರಾಹ್ಮಣರಿಗೆ ದಾನಮಾಡಬೇಕು (ತನಗೆ ಬೇಡದವುಗಳನ್ನು ಸರ್ವಥಾ ಕೊಡಬಾರದು) (೫೦-೫೪). ದಾನದ ಫಲವು, ದೇಶ, ಕಾಲ, ಪಾತ್ರಗಳನ್ನನುಸರಿಸಿ, ವೃದ್ಧಿಹೊಂದುತ್ತದೆ; (ಅಧಿಕವಾಗುತ್ತದೆ)— ಪುಣ್ಯದೇಶ, ಪುಣ್ಯಕಾಲ, ಸತ್ಪಾತ್ರರಲ್ಲಿ ಮಾಡಿದ ದಾನವು, ದೇಶಾದಿಗಳ ಪಾವಿತ್ರ್ಯತೆಯ ತಾರತಮ್ಯವನ್ನನುಸರಿಸಿ, ೧೦೦, ೧೦೦೦, ೧,೦೦,೦೦೦, ೧೦೦,೦೦,೦೦೦; (ಕೋಟಿ), ಅರ್ಬುದ (ದಶಕೋಟಿ), ಪರಾರ್ಧ (ಬ್ರಹ್ಮದೇವನ) ೫೦ ವರ್ಷಗಳಿಗಾಗುವ ಮಾನವದಿನಗಳಷ್ಟು (ಅಷ್ಟುಮಡಿ) (೫೦x೩೬೦x೨೦೦೦x೪೩,೬೦,೦೦೦x೩೬೦) :ಪರಾರ್ಧ ಅಧಿಕಫಲವು ದೊರೆಯುತ್ತದೆ; ದಾನದಂತೆ ಇತರ ಪುಣ್ಯಕರ್ಮಕ್ಕೂ ಹೀಗೆಯೇ ಫಲಾಧಿಕ್ಯವನ್ನು ತಿಳಿಯಬೇಕು (೫೫-೫೬). ಅಗ್ನಿದೇವನು, ಸಮಸ್ತ ದೇವತೆಗಳ ದೂತನಾಗಿದ್ದಾನೆ—ಇಂದ್ರಾದಿ ದೇವತೆಗಳು, ಭೂಲೋಕದ ಪ್ರಜೆಗಳು

ಗಳುಳ್ಳವನು; ಮುಖ್ಯತಃ-ಮುಖ್ಯವಾಗಿ, ವಿಷ್ಣುತೋಷಕಃ-(ಅಗ್ನಿಯು) ಶ್ರೀವಿಷ್ಣುವನ್ನು (ಆಯಾ ದೇವತೆಗಳ ದ್ವಾರವೂ, ನೇರವಾಗಿಯೂ) ಸಂತೃಪ್ತಿಗೊಳಿಸುವವನು (ಆಗಿದ್ದಾನೆ).

ಅತ್ಯಂತಂ ಯೋ ದರಿದ್ರಃ ಸ್ಯಾತ್ಸೋಽಪಿ ಚಾಹಾರಮಾತ್ರಕಂ ।
ಲಭತೇ ವಾನ್ಯಥಾ ತಸ್ಯ ಜಾಯತೇ ಜೀವನಂ ಕಥಂ ॥ ೬೦ ॥
ಆಹಾರಮಾತ್ರಾದಪ್ಯೇಕಂ ಗ್ರಾಸಂ ವಹ್ನೌ ಸಮರ್ಪಯೇತ್ ।
ಕಿಂಚಿದ್ದದ್ಯಾಚ್ಚ ವಿಪ್ರಾಯ ನ ಶೂನ್ಯಂ ದಿವಸಂ ನಯೇತ್ ॥ ೬೧ ॥
ಸ್ವಯಂ ವೃಥಾ ನ ಭುಂಜೀತ ದದ್ಯಾಚ್ಚ ಜುಹುಯಾದಪಿ ।
ನ ಮಹಾಧನಿಕಾಃ ಸರ್ವೇ ನ ಸರ್ವೇ ಧರ್ಮತತ್ಪರಾಃ ॥ ೬೨ ॥
ಅತೋ ಬುಭೂಷುಃ ಶಕ್ತ್ಯೈವ ದಾನಹೋಮಾದಿಕಂ ಚರೇತ್ ।
ಪುಣ್ಯಮೇವ ಪರತ್ರಾಸ್ಯ ಸಹಾಯೋಽತ್ರಾಪಿ ವಿದ್ಯತೇ ॥ ೬೩ ॥

ಯಃ-ಯಾರೊಬ್ಬನು, ಅತ್ಯಂತಂ-ಅತಿಯಾಗಿ, ದರಿದ್ರಃ-ಬಡವನು, ಸ್ಯಾತ್-ಆಗಿರುವನೋ, ಸಃ ಅಪಿ-ಅವನೂ ಕೂಡ, ಆಹಾರಮಾತ್ರಕಂ-ಆಹಾರದ ಅಲ್ಪವನ್ನಾದರೂ, ಲಭೇತ ವಾ-ಹೊಂದಿಯೇ ತೀರುತ್ತಾನೆ; ಅನ್ಯಥಾ-ಹಾಗಲ್ಲದಿದ್ದರೆ, (ಆಹಾರದ ಅಂಶವೂ ದೊರೆಯದಿದ್ದರೆ), ತಸ್ಯ-ಅವನ, ಜೀವನಂ-ಜೀವದಿಂದಿರುವುದು (ಬದುಕಿರುವುದು), ಕಥಂ-ಹೇಗೆ, ಜಾಯತೇ-ಆಗುತ್ತದೆ? (ಅಂಥ ದರಿದ್ರನೂ ಸಹ), ಆಹಾರಮಾತ್ರಾತ್-(ತನಗೆ ದೈವಯೋಗದಿಂದ ಲಭಿಸುವ) ಆಹಾರದ

---

ಅಗ್ನಿಯಲ್ಲಿ ತಮ್ಮನ್ನುದ್ದೇಶಿಸಿ ಅರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸಲು, ಅಗ್ನಿದೇವನು ಮುಖದಂತಿರುವನು; (ದೇವಮುಖನೆಂದೇ ಅಗ್ನಿಯು ಪ್ರಸಿದ್ಧನಾಗಿದ್ದಾನೆ). ಹೇಗೆ, ಗೋವು, ಹುಲ್ಲುಕಾಳುಗಳನ್ನು ತಿಂದು ಕ್ಷೀರರೂಪದಿಂದ, ಅದನ್ನು ತನ್ನ ರಕ್ಷಕನಿಗೆ ಮುಟ್ಟಿಸುತ್ತದೆಯೋ, ಹಾಗೆ, ಅಗ್ನಿಯು, ಹವಿಸ್ಸುಗಳ ರಸವನ್ನು ರೂಪಾಂತರದಿಂದ, (ಅಮೃತಭಾವವನ್ನು ಹೊಂದಿಸಿ) ಆಯಾ ದೇವತೆಗಳಿಗೆ (ದೇವತೆಗಳು 'ಅಮೃತಾಂಧಸ'ರು—ಅಮೃತವೇ ಆಹಾರವಾಗಿವುಳ್ಳವರು) ಮುಟ್ಟಿಸುತ್ತಾನೆ; (ಚರು, ಸಮಿಧೆಗಳನ್ನೇ ಮುಟ್ಟಿಸುವುದಿಲ್ಲ) (೫೭-೫೮). ಈ ಅಗ್ನಿದೇವನು, ದೇವತೆಗಳಿಗೆ ಹವ್ಯಗಳನ್ನು ಮುಟ್ಟಿಸುತ್ತಾನೆ; ಪಿತೃಗಳಿಗೆ ಕವ್ಯಗಳನ್ನು (ತಿಲಪಿಂಡಾದಿಗಳನ್ನು—ರೂಪಾಂತರದಿಂದ) ಮುಟ್ಟಿಸುತ್ತಾನೆ; ದೇವತೆಗಳನ್ನೂ ಪಿತೃಗಳನ್ನೂ ತೃಪ್ತಿಗೊಳಿಸುವ, ಎರಡು ರೂಪಗಳುಳ್ಳವನು—ಅಗ್ನಿಯು; ಮುಖ್ಯವಾಗಿ ಶ್ರೀವಿಷ್ಣುವನ್ನು ತೃಪ್ತಿಗೊಳಿಸುವವನೂ ಈತನೇ (೫೯). ಎಂತಹ ಅತ್ಯಂತ ದರಿದ್ರನೂ ಸಹ ಅಲ್ಪವಾದ ಆಹಾರವನ್ನಾದರೂ (ಪ್ರಾಣಧಾರಣೆಗೆ ಅವಶ್ಯವಾದಷ್ಟಾದರೂ) ತಪ್ಪದೇ ಹೊಂದುತ್ತಾನೆ;

ಅಂಶದಿಂದ (ಆಹಾರದಲ್ಲಿ), ಏಕಂ ಗ್ರಾಸಂ ಅಪಿ-ಒಂದು ತುತ್ತನ್ನಾದರೂ, ವಹ್ನೌ-ಅಗ್ನಿಯಲ್ಲಿ ಸಮರ್ಪಯೇತ್-(ಭಕ್ತಿಯಿಂದ) ಹೋಮಿಸಬೇಕು; ಚ-ಮತ್ತು ಕಿಂಚಿತ್-(ಅದರಲ್ಲಿಯೇ) ಅಲ್ಪವನ್ನು ವಿಪ್ರಾಯ-ಬ್ರಾಹ್ಮಣನಿಗೆ, ದದ್ಯಾತ್-ಕೊಡಬೇಕು; ಶೂನ್ಯಂ ದಿವಸಂ-ಈ ಎರಡೂ ಇಲ್ಲದೇ, ದಿನವನ್ನು ನ ನಯೇತ್-ಕಳೆಯಬಾರದು; ವೃಥಾ-ವ್ಯರ್ಥವಾಗಿ, ಸ್ವಯಂ-ತಾನೇ, ನ ಭುಂಜೀತ-ಭೋಜನ ಮಾಡತಕ್ಕದ್ದಲ್ಲ; ದದ್ಯಾತ್ ಚ-ದಾನ ಮಾಡಲೇಬೇಕು; ಜುಹುಯಾತ್ ಅಪಿ-ಅಗ್ನಿಯಲ್ಲಿಯೂ ಹೋಮ ಮಾಡಬೇಕು; ಸರ್ವೇ-ಎಲ್ಲರೂ, ಮಹಾಧನಿಕಾಃ-ಶ್ರೀಮಂತರು (ಧನವಂತರು), ನ-ಆಗಿಲ್ಲ ಸರ್ವೇ-(ಧನವಿದ್ದವರು) ಎಲ್ಲರೂ, ನ ಧರ್ಮತತ್ಪರಾಃ-ಧರ್ಮದಲ್ಲಿ (ಶಾಸ್ತ್ರವಿಹಿತವನ್ನಾಚರಿಸುವುದರಲ್ಲಿ) ಆಸಕ್ತಿಯುಳ್ಳವರಲ್ಲ; ಅತಃ-ಆದ್ದರಿಂದ, ಬುಭೂಷುಃ-(ಸದ್ಗತಿ)ಯನ್ನಿಚ್ಛಿಸುವವನು, ಶಕ್ತ್ಯಾ-(ತನ್ನ) ಶಕ್ತ್ಯಾನುಸಾರವಾಗಿ, ದಾನಹೋಮಾದಿಕಂ-ದಾನ, ಹೋಮಾದಿಗಳನ್ನು ಚರೇತ್ ಏವ-ಮಾಡಲಿಕ್ಕೇ ಬೇಕು; ಅಸ್ಯ-(ದಾನಹೋಮಾದಿ) ಕರ್ತನಿಗೆ, ಪರತ್ರ- ಪರಲೋಕ ಸಾಧನವಾದ, ಪುಣ್ಯಂ ಏವ-ಪುಣ್ಯವೇ, ವಿದ್ಯತೇ-ಲಭಿಸುತ್ತದೆ; ಅತ್ರಾಪಿ-ಈ ಲೋಕದಲ್ಲಿಯೂ, ಸಹಾಯಃ(ವಿದ್ಯತೇ)-(ಪರಸ್ಪರ) ಸಹಾಯವೂ ದೊರೆಯುತ್ತದೆ.[1]

ಅತಸ್ತದಾರ್ಜನಂ ಮುಖ್ಯಂ ವಂಧ್ಯಂ ಸ್ಯಾತ್ತದ್ವಿನಾ ದಿನಂ ।
ಏವಂ ಯಮೈಶ್ಚ ನಿಯಮೈರ್ಬಾಹ್ಯೈರಾಂತರಕೈರಪಿ ॥ ೬೪ ॥
ಭಕ್ತ್ಯಾ ಪರಮಯಾ ಯುಕ್ತಃ ಪೂಜಯೇತ್ಪುರುಷೋತ್ತಮಂ ।
ಸ ಏವ ಮುಕ್ತಿಭಾಗೀ ಸ್ಯಾನ್ನಾನ್ಯೋಪಾಯಶತೈರಪಿ ॥ ೬೫ ॥

---

ಇಲ್ಲವಾದರೆ ಅವನು ಹೇಗೆ ಬದುಕಿರುತ್ತಾನೆ? ದೈವಯೋಗದಿಂದ ಲಭಿಸುವ ಆದರಲ್ಲಿಯೇ ಒಂದು ತುತ್ತನ್ನು ಅಗ್ನಿಯಲ್ಲಿ ಹೋಮಮಾಡಬೇಕು; ಅಲ್ಪವನ್ನು ಬ್ರಾಹ್ಮಣನಿಗೆ ಕೊಡಬೇಕು; ಇವಿಲ್ಲದೇ ಇರುವ ಶೂನ್ಯದಿನವನ್ನು ಎಂದೂ ಕಳೆಯಬಾರದು; ವ್ಯರ್ಥವಾಗಿ, ಹೋಮದಾನಗಳಿಲ್ಲದೇ, ತಾನೇ ಭೋಜನಮಾಡಕೂಡದು; ಎಲ್ಲರೂ ಧನಿಕರಾಗಿರುವುದಿಲ್ಲ; ಧನವಂತರೆಲ್ಲರೂ ಧರ್ಮದಲ್ಲಿ ಆಸಕ್ತಿಯುಳ್ಳವರಾಗಿರುವುದಿಲ್ಲ. ಆದ್ದರಿಂದ, ಸದ್ಗತಿಯನ್ನು ಹೊಂದುವ ಇಚ್ಛೆಯುಳ್ಳವನು, ತನ್ನ ಶಕ್ತ್ಯಾನುಸಾರವಾಗಿ ದಾನಹೋಮಾದಿಗಳನ್ನು ತಪ್ಪದೇ ಮಾಡುತ್ತಿರಬೇಕು; ಇದರಿಂದ ಪರಲೋಕ ಸಾಧಕವಾದ ಪುಣ್ಯವೂ, ಇಹದಲ್ಲಿ(ಪರಸ್ಪರ) ಸಹಾಯಗಳೂ ಲಭಿಸುತ್ತವೆ (೬೦-೬೩). ಹೀಗೆ ದಾನಹೋಮಗಳು ಇಹಪರ ಹಿತಸಾಧಕವಾದ್ದರಿಂದ, ಯಥಾಶಕ್ತಿ

---

1. ಹೋಮಾದಿಗಳಿಂದ 'ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ' (ಗೀತಾ) ತೃಪ್ತರಾದ ದೇವತೆಗಳಿಂದ, ವೃಷ್ಟ್ಯಾದಿ ದ್ವಾರಾ ಈ ಲೋಕದ ಪ್ರಜೆಗಳಿಗೆ ಸಹಾಯ ದೊರೆಯುತ್ತದೆ; ದಾನದಿಂದ ಸಹಾಯವಾಗುವುದೆಂಬುದು ಪ್ರತ್ಯಕ್ಷಸಿದ್ಧವೇ ಆಗಿದೆ; ಹೀಗೆ ಹೋಮ (ಯಜ್ಞ) ದಾನಾದಿಗಳು ಲೋಕಹಿತಸಾಧನಗಳಾಗಿವೆ.

ಅತಃ-ಆದ್ದರಿಂದ, (ಹೀಗೆ-ದಾನಹೋಮಾದಿಗಳು ಇಹ-ಪರ ಹಿತಸಾಧಕ ಗಳಾದ್ದರಿಂದ), ತದಾರ್ಜನಂ-(ಅವುಗಳ ಫಲವನ್ನು) ಸಂಪಾದಿಸುವುದು, ಮುಖ್ಯಂ-ಮುಖ್ಯವಾದುದು (ಪ್ರಧಾನ ಗುರಿಯಾಗಿರಬೇಕು); ತದ್ವಿನಾ-ಅದಿಲ್ಲದೇ (ಹೋಮ ದಾನಗಳಿಲ್ಲದೇ), ದಿನಂ-ದಿವಸವು ವಂಧ್ಯಂ ಸ್ಯಾತ್-(ಬಂಜೆಯ ಜನದಂತೆ) ವ್ಯರ್ಥವಾದುದು ಆಗುತ್ತದೆ; ಏವಂ-ಹೀಗೆಯೇ (ದಾನಹೋಮಾದಿಯಂತೆ), ಬಾಹ್ಯೈಃ-ಬಾಹ್ಯಗಳೂ (ದೇಹಸಾಧ್ಯಗಳೂ), ಆಂತರಿಕೈಃ ಅಪಿ-ಆಂತರಿಕವೂ (ಮನಸ್ಸಾಧ್ಯಗಳೂ)ಆದ, ಯಮ್ಯೈಃ-ಯಮಗಳಿಂದಲೂ, ಚ-ಮತ್ತು ನಿಯಮ್ಯೈಃ-ನಿಯಮಗಳಿಂದಲೂ, ಪರಮಯಾ-ಶ್ರೇಷ್ಠವಾದ, ಭಕ್ತ್ಯಾ-ಭಕ್ತಿಯಿಂದ, ಯುಕ್ತಃ-ಕೂಡಿದವನಾಗಿ (ಭಕ್ತಿಯಿಂದ), ಪುರುಷೋತ್ತಮಂ-ಶ್ರೀಹರಿಯನ್ನು, ಪೂಜಯೇತ್-ಆರಾಧಿಸಬೇಕು; ಸಃ ಏವ-(ಹೀಗೆ ಆರಾಧಿಸುವ ಅಧಿಕಾರಿ ಜೀವನೇ), ಮುಕ್ತಿಭಾಗೀ ಸ್ಯಾತ್-ಮೋಕ್ಷಭಾಗಿಯಾಗುತ್ತಾನೆ; ಅನ್ಯೋಽಪಾಯಶತೈಃ ಅಪಿ-(ಇದರಿಂದ) ಭಿನ್ನವಾದ ನೂರಾರು ಉಪಾಯಗಳಿಂದಲೂ (ಬಹುಪರಿಯ ಸಾಧನಗಳಿಂದಲೂ), ನ-ಅಲ್ಲ (ಮುಕ್ತಿಭಾಗಿಯಾಗುವುದೇ ಇಲ್ಲ).

ತಾಪತ್ರಯ ಪರಿಹಾರಮಾರ್ಗ ಮತ್ತು ಭಗವದಾರಾಧನೆಯ ಮಹಿಮಾ
ನಿರೂಪಣವೆಂಬ ೫೨ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೫೩

ಶ್ರೀ ವೇದವ್ಯಾಸಾಯ ನಮಃ

ಬ್ರಹ್ಮೋವಾಚ—

ಆಶ್ಚರ್ಯಮೇತಲ್ಲೋಕಸ್ಯ ಜ್ಞಾತ್ವಾ ಪಾಪೇ ಪ್ರವರ್ತತೇ ।
ಸ್ವಸ್ಯ ಕನ್ಯಾಂ ಸ್ನುಷಾಂ ಭಾರ್ಯಾಂ ಸ್ವಸಾರಂ ವಾಪಿ ಮಾತರಂ ॥ ೧ ॥

---

ಅವುಗಳನ್ನು ಸಂತತವಾಗಿ ಆಚರಿಸಿ ಅವುಗಳ ಸತ್ಫಲವನ್ನು ದೊರಕಿಸಿಕೊಳ್ಳಬೇಕಾದುದು, ಪ್ರತಿಯೊಬ್ಬ ಮುಮುಕ್ಷುವಿನ ಕರ್ತವ್ಯವಾಗಿದೆ; ಇವುಗಳಂತೆ, ಬಾಹ್ಯ ಮತ್ತು ಆಂತರಿಕಗಳಿಂದ ಯಮನಿಯಮಗಳನ್ನೂ[1] ಶ್ರೇಷ್ಠವಾದ ಭಕ್ತಿಯಿಂದ ಆಚರಿಸಿ, ಶ್ರೀ ಪುರುಷೋತ್ತಮನನ್ನು ಆರಾಧಿಸಬೇಕು; ಹೀಗೆ ಮಾಡುವವನೇ ಮುಕ್ತಿಭಾಗಿಯುತ್ತಾನೆ-ಅನ್ಯವಾದ ನೂರಾರು ಸಾಧನಗಳಿಂದ ಮುಕ್ತಿಯು ದೊರೆಯುವುದಿಲ್ಲ(೬೪-೬೫).

ಅಧ್ಯಾಯ ೫೩

ತಾತ್ಪರ್ಯ:—ಬ್ರಹ್ಮದೇವನು ಹಯಗ್ರೀವವಿದ್ಯೆಯ ಸಾರವನ್ನು ನಾರದನಿಗೆ

---

1. ಯಮನಿಯಮಗಳ ವಿವರಣೆಯು ಈ ಹಿಂದೆ ಪ್ರಸಕ್ತವಾಗಿದೆ.

ಸಕಾಮೇನ ಕಟಾಕ್ಷೇಣ ನಿರೀಕ್ಷ್ಯೇತಾಪಿ ಯೋ ನರಃ ।
ತಸ್ಮೈ ದ್ರುಹ್ಯತಿ ಶಕ್ತಿಶ್ಚೇತ್ ಹಂತಿ ಘಾತಯತೇಽಥವಾ ॥ ೨ ॥
ಸ ಕಥಂ ಪರಕನ್ಯಾದಿ ಜಾರವೃತ್ತ್ಯಾಭಿಕಾಂಕ್ಷತಿ ।
ಸ್ವದೇಹಸ್ಯ ಸ್ವಸುತ್ರಾದೇರೀಷತ್ತಾಪಾದಿನಾ ತಪೇತ್ ॥ ೩ ॥
ಕಥಂ ನಿರಾಗಸಾಂ ಮಾಂಸಂ ಸ ಭೋಕ್ತುಮಪಿ ವಾಂಛತಿ ।
ಗೋಜಾವಿಮೃಗಪಕ್ಷ್ಯಾದಿ ಪ್ರಾಣಿಜಾತಂ ತೃಣಾದಿಭುಕ್ ॥ ೪ ॥
ಜಲೇಚರಾಶ್ಚ ಮತ್ಸ್ಯಾದ್ಯಾ ಪ್ರಾಯೇಣ ಜಲವೃತ್ತಯಃ ।
ನಾನೋಪಾಯೈಶ್ಚ ತಾನ್ ಹಂತುಂ ಯತಂತೇ ಮಾಂಸಲೋಭತಃ ॥ ೫ ॥

ಅರ್ಥ:—ಬ್ರಹ್ಮದೇವನು ನಾರದನಿಗೆ ಹೇಳುತ್ತಾನೆ:—

ಜ್ಞಾತ್ವಾ-(ಪಾಪವೆಂದು) ತಿಳಿದೂ, ಪಾಪೇ-ಪಾಪಾಚರಣದಲ್ಲಿ ಪ್ರವರ್ತತೇ-(ಜೀವಸಮೂಹವು) ಪ್ರವೃತ್ತಿಯುಳ್ಳದ್ದಾಗುತ್ತದೆ; ಲೋಕಸ್ಯ-(ಪ್ರಜೆಗಳ) ಲೋಕದ, ಏತತ್-ಈ ವಿಧಪ್ರವೃತ್ತಿಯು, ಆಶ್ಚರ್ಯಂ-ಆಶ್ಚರ್ಯವೇ ಸರಿ (ಜ್ಞಾನಿಗಳಿಗೆ ಅದ್ಭುತ ವೆನಿಸುತ್ತದೆ); ಯಃ-ಯಾವ, ನರಃ-ಮನುಷ್ಯನು, ಸ್ವಸ್ಯ-ತನ್ನ ಕನ್ಯಾಂ-ಮಗಳನ್ನು ಸ್ನುಷಾಂ-ಸೊಸೆಯನ್ನು ಭಾರ್ಯಾಂ-ಪತ್ನಿಯನ್ನು ಸ್ವಸಾರಂ-ಸಹೋದರಿಯನ್ನು ಅಪಿ ವಾ-ಅಥವಾ, ಮಾತರಂ-ತಾಯಿಯನ್ನು ಸಕಾಮೇನ-ಕಾಮಯುಕ್ತವಾದ, ಕಟಾಕ್ಷೇಣ-ದೃಷ್ಟಿಯಿಂದ, ನಿರೀಕ್ಷ್ಯೇತ ಅಪಿ-ನೋಡುವ ಮಾತ್ರದಿಂದ, ತಸ್ಮೈ-ಅಂಥವನಿಗಾಗಿ, ದ್ರುಹ್ಯತಿ-ದ್ರೋಹಚಿಂತನೆ ಮಾಡುತ್ತಾನೆ (ದ್ವೇಷಿಸುತ್ತಾನೆ); ಶಕ್ತಿಃ ಚೇತ್-ಶಕ್ತಿಯಿದ್ದರೆ, ಹಂತಿ-ಕೊಲ್ಲುತ್ತಾನೆ; ಅಥವಾ, ಘಾತಯತೇ-ಹೊಡೆದು ಗಾಯಗೊಳಿಸುತ್ತಾನೆ; ಸಃ-(ಹೀಗಿರುವ) ಆ ಮನುಷ್ಯನು, ಕಥಂ-ಹೇಗೆ, ಜಾರವೃತ್ತ್ಯಾ-ಜಾರತನದಿಂದ (ಮಿಂಡನಂತೆ-ಉಪಪತಿಯಂತೆ), ಪರಕನ್ಯಾದಿ-ಅನ್ಯರ ಹೆಣ್ಣು ಮಕ್ಕಳನ್ನು (ಅನ್ಯರ

---

ಹೇಳುತ್ತಾನೆ:—ಪಾಪವೆಂದು ತಿಳಿದೂ, ಪಾಪಕರ್ಮದಲ್ಲಿ ಆಸಕ್ತರಾಗುವ ಜನರ ಪ್ರವೃತ್ತಿಯು ಆಶ್ಚರ್ಯವೇ ಸರಿ; ತನ್ನ ಮಗಳನ್ನಾಗಲಿ, ಸೊಸೆ, ಹೆಂಡತಿ, ಸಹೋದರಿ, ಅಥವಾ ತಾಯಿಯನ್ನು ಯಾರಾದರೂ ಕಾಮಯುಕ್ತನಾಗಿ ನೋಡುವಮಾತ್ರದಿಂದ, ಕುಪಿತನಾಗಿ ಆತನನ್ನು ದ್ವೇಷಿಸುತ್ತಾನಲ್ಲದೇ, ಕೈಕಾಲು ಮುರಿಯುವಂತೆ ಹೊಡೆಯಲು ಅಥವಾ ಕೊಲ್ಲಲು ಸಹ ಯತ್ನಿಸುತ್ತಾನೆ; ಇಂಥವನು, ಪರಕನ್ಯಾದಿಗಳನ್ನು ಜಾರತನದಿಂದ ಭೋಗಿಸಲಿಚ್ಛಿಸುತ್ತಾನೆ; ತನ್ನ ದೇಹಕ್ಕಾಗಲಿ, ಅಥವಾ ತನ್ನ ಸುತಾದಿಗಳಿಗಾಗಲಿ, ಸ್ವಲ್ಪ ತಾಪವಾದರೂ, ತಾನು ದುಃಖಿಸುವ ಮನುಷ್ಯನು, ನಿರುಪದ್ರವಿಗಳಾದ ಪ್ರಾಣಿಗಳ ಮಾಂಸಭೋಜನವನ್ನು ಅಪೇಕ್ಷಿಸುತ್ತಾನೆ; (ಇದೂ ಆಶ್ಚರ್ಯವೇ!); ಹಸು, ಮೇಕೆ, ಕುರಿ, ಹರಿಣ, ಪಕ್ಷಿ ಮೊದಲಾದ ಪ್ರಾಣಿಗಳು, ಕೇವಲ ತೃಣಾದಿಗಳನ್ನು ತಿಂದು

ಕನ್ಯಾದಿ ಸ್ತ್ರೀಯರನ್ನು), ಅಧಿಕಾಂಕ್ಷತಿ-(ಭೋಗಾರ್ಥವಾಗಿ) ಆಶಿಸುತ್ತಾನೆ? (ಮತ್ತು), ಸ್ವದೇಹಸ್ಯ-ತನ್ನ ದೇಹಕ್ಕೆ, ಸ್ವಪುತ್ರಾದೇಃ-ತನ್ನ ಮಕ್ಕಳೇ ಮೊದಲಾದ ಆಪ್ತರಿಗೆ, ಈಷತ್ತಾ ಪಾ ದಿ ನಾ-ಅಲ್ಪತಾಪ (ದುಃಖ)ವಾದರೂ, ಅದರಿಂದ, ತಪೇತ್-(ತಾನು) ದುಃಖಿಯಾಗುವನೋ, ಸಃ-ಅಂತಹ ಮನುಷ್ಯನು, ಕಥಂ-ಹೇಗೆ, ನಿರಾಗಸಾಂ-ನಿರಪರಾಧಿಗಳಾದ (ತನಗೆ ಯಾವ ಹಿಂಸೆಯನ್ನೂ ಕೊಡದ—ಸೌಮ್ಯ ಸ್ವಭಾವದ) ಪ್ರಾಣಗಳ, ಮಾಂಸಂ-ಮಾಂಸವನ್ನು, ಭೋಕ್ತುಂ ಅಪಿ-ತಿನ್ನಲಿಕ್ಕೂ, ವಾಂಛತಿ-ಇಚ್ಛಿಸುವನು? ತೃಣಾದಿ ಭುಕ್-ಹುಲ್ಲು ಮುಂತಾದುದನ್ನು ತಿಂದು ಜೀವಿಸುವುದು, ಗೋಜಾವಿ ಮೃಗ ಪಕ್ಷ್ಯಾದಿ ಪ್ರಾಣಜಾತಂ-ಹಸು, (ಅಜ)ಮೇಕೆ, ಕುರಿ, ಜಿಂಕೆ, ಪಕ್ಷಿ ಮೊದಲಾದ ಪ್ರಾಣಿ ಸಮೂಹವು; ಮತ್ಸ್ಯಾದ್ಯಾಃ-ಮೀನು ಮೊದಲಾದ, ಜಲೇಚರಾಃ-ಜಲಚರ ಪ್ರಾಣಿಗಳು, ಪ್ರಾಯೇಣ-ವಿಶೇಷವಾಗಿ, ಜಲವೃತ್ತಯಃ-ಜಲವೇ ಜೀವನಾಧಾರವಾಗಿವುಳ್ಳವುಗಳು; ತಾನ್-ಇಂತಹ ನಿರುಪದ್ರವ ಪ್ರಾಣಿಗಳನ್ನು ಮಾಂಸಲೋಭತಃ-(ಅವುಗಳ ದೇಹದ) ಮಾಂಸದ ಮೇಲಿನ ಆಶೆಯಿಂದ, ಹಂತುಂ-ಕೊಲ್ಲುವುದಕ್ಕೆ, ನಾನೋಪಾಯೈಃ-ವಿವಿಧ ಉಪಾಯಗಳಿಂದ, ಯತಂತೇ-(ಅಜ್ಞರು) ಯತ್ನಿಸುತ್ತಾರೆ (ಇದೂ ಆಶ್ಚರ್ಯವೇ ಸರಿ).

**ತೃಣಾದಿನಾ ಜಲೇನಾಪಿ ಯೇ ಜೀವಂತಿ ನಿರಾಗಸಃ ।**
**ತಾನ್ ಹತ್ವೋತ್ಕೃತ್ಯ ಮಾಂಸಾನಿ ಖಾದಂತೋ ನೈವ ಬಿಭ್ಯತಿ ॥ ೬ ॥**
**ಸ್ವಸ್ಯಾಪರಾಧಂ ಯಃ ಕಶ್ಚಿದಲ್ಪಮಪ್ಯಾಚರೇತ ತಂ ।**
**ಭೃಶಂ ದಂಡಯತೇ ಮೂಢಃ ಪ್ರಭುತ್ವಮತಿದರ್ಶಯನ್ ॥ ೭ ॥**
**ಅಪರಾಧಸಹಸ್ರಾಣಿ ಪ್ರತ್ಯಹಂ ಪ್ರತಿನಾಡಿಕಂ ।**
**ಸರ್ವೇಶ್ವರಸ್ಯ ಕುರ್ವಾಣೋ ನ ಬಿಭೇತಿ ತದದ್ಭುತಂ ॥ ೮ ॥**

---

ಜೀವಿಸುತ್ತವೆ (ಮನುಷ್ಯನಿಗೆ ಯಾವ ವಿಧದಿಂದಲೂ ತೊಂದರೆ ಕೊಡುವುದಿಲ್ಲ); ಮೀನು ಮೊದಲಾದ ಜಲಚರ ಪ್ರಾಣಿಗಳು, ಪ್ರಾಯಃ ಜಲದಿಂದಲೇ ಜೀವಿಸುತ್ತವೆ; ಇಂಥ ಪ್ರಾಣಿಗಳನ್ನು ಮಾಂಸಲೋಭದಿಂದ, ಸಂಹರಿಸಲು, ನಾನಾ ಉಪಾಯಗಳಿಂದ ಯತ್ನಿಸುತ್ತಾರೆ (ಆಶ್ಚರ್ಯ!) (೧-೫). ತೃಣಜಲಾದಿಗಳಿಂದ ಬದುಕುವ, ನಿರುಪದ್ರವಿಗಳಾದ (ಮನುಷ್ಯನಿಗೆ ಯಾವ ಅಪರಾಧವನ್ನೂ ಮಾಡದ) ಈ ಪ್ರಾಣಿಗಳನ್ನು ಕೊಂದು, ಅವುಗಳ ದೇಹದಿಂದ ಮಾಂಸವನ್ನು ಕಿತ್ತು ತೆಗೆದು ತಿಂದರೂ, ಮನುಷ್ಯರು ನಿರ್ಭಯರಾಗಿರುವರು, ಆಶ್ಚರ್ಯ! ಈ ಮೂರ್ಖರು, ತಮ್ಮ ಪ್ರಭುತ್ವವನ್ನು (ಇಲ್ಲದುದನ್ನು) ಪ್ರದರ್ಶಿಸಿ, ತಮ್ಮ ವಿಷಯದಲ್ಲಿ ಯಾರಾದರೂ ಸ್ವಲ್ಪ ತಪ್ಪನ್ನು ಮಾಡಿದರೂ, ತಕ್ಷಣವೇ, ಅವರನ್ನು ದಂಡಿಸುತ್ತಾರೆ; (ಶಿಕ್ಷಿಸುತ್ತಾರೆ); ಪ್ರತಿನಿತ್ಯವೂ, ಅಷ್ಟೇಕೆ! ಪ್ರತಿ ಘಳಿಗೆಯಲ್ಲಿಯೂ, ಸರ್ವೇಶ್ವರನಾದ ಶ್ರೀಹರಿಯ ಆಜ್ಞೆಗಳನ್ನು

**ಪಶುಭ್ಯೋ ಮಾನುಷಾಣಾಂ ಚ ಬುದ್ಧಿರೇವಾವಶಿಷ್ಯತೇ ।**
**ಆಹಾರೋ ಮೈಥುನಂ ನಿದ್ರಾ ಭಯಾದಿಸಕಲಂ ಸಮಂ ॥ ೯ ॥**
**ತಾದೃಗ್ಬುದ್ಧೇರ್ವಿನಾಶಾಯ ಮದ್ಯಂ ಪಿಬತಿ ದುರ್ಮತಿಃ ।**
**ಪರಿಧಾನಮಪಿ ಸ್ವಸ್ಯ ನೀತಂ ಬುಧ್ಯತಿ ನೈವ ಸಃ ॥ ೧೦ ॥**
**ಸ ಕಥಂ ಸುಖಮಾಪ್ನೋತಿ ನಾರೀಸಂಗೇನ ಮೋಹಿತಃ ।**
**ಸಂಗೋಪಿ ದುರ್ಲಭೋ ಯತ್ರ ತಾಢ್ಯಮಾನೋ ನ ಬುಧ್ಯತೇ ॥ ೧೧ ॥**
**ಈದೃಶೀಂ ಮದಿರಾಂ ಪೀತ್ವಾ ಮೂಢಃ ಸುಖಮಭೀಪ್ಸತಿ ।**

ತೃಣಾದಿನಾ-ಹುಲ್ಲು ಮುಂತಾದ್ದರಿಂದ, ಅಪಿ-ಮತ್ತು ಜಲೇನ-ಜಲದಿಂದಲೂ, ನಿರಾಗಸಃ-(ಮನುಷ್ಯನಿಗೆ ಯಾವ) ಉಪದ್ರವವನ್ನೂ ಕೊಡದೇಯೇ ಜೀವಂತಿ-ಯಾವ ಪ್ರಾಣಿಗಳು ಬದುಕುವುವೋ, ತಾನ್-ಅವುಗಳನ್ನು ಹತ್ವಾ-ಕೊಂದು, ಮಾಂಸಾದಿ-(ಆ ದೇಹಗಳ) ಮಾಂಸಖಂಡಗಳನ್ನು, ಉತ್ಕೃತ್ಯ-ಕಿತ್ತಿ ತೆಗೆದು, ಖಾದಂತಃ-ಭಕ್ಷಿಸುವವರೂ ನೈವ ಬಿಭ್ಯತಿ-ಹೆದರುವುದಿಲ್ಲ (ಆಶ್ಚರ್ಯವು!); ಸ್ವಸ್ಯ-ತನಗೆ, ಅಲ್ಪಂ ಅಪಿ-ಸ್ವಲ್ಪವೇ ಆದ, ಅಪರಾಧಂ-ತಪ್ಪನ್ನು ಯಃ-ಯಾರು, ಆಚರೇತ-ಮಾಡುವನೋ, ತಂ-ಅವನನ್ನು ಮೂಢಃ-ಮೂಢ ಮನುಷ್ಯನು, ಅತಿಪ್ರಭುತ್ವಂ-ಮಹಾ (ತನ್ನಲ್ಲಿಲ್ಲದ) ಪ್ರಭುತ್ವವನ್ನು (ಅಧಿಕಾರವನ್ನು), ದರ್ಶಯನ್-ಪ್ರದರ್ಶನ ಮಾಡುವವನಾಗಿ, ಭೃಶಂ-ಶೀಘ್ರವಾಗಿ (ಚೆನ್ನಾಗಿ—ಅಧಿಕವಾಗಿ), ದಂಡಯತೇ-ದಂಡಿಸುತ್ತಾನೆ (ಶಿಕ್ಷಿಸುತ್ತಾನೆ); ಸರ್ವೇಶ್ವರಸ್ಯ-ಸರ್ವರ ಪ್ರಭುವಾದ ಶ್ರೀಹರಿಗೆ, ಪ್ರತ್ಯಹಂ-ಪ್ರತಿದಿನವೂ, ಪ್ರತಿನಾಡಿಕಂ-ಪ್ರತಿಘಳಿಗೆಯೂ, ಅಪರಾಧ ಸಹಸ್ರಾಣಿ-ಸಹಸ್ರಾರು ಅಪರಾಧಗಳನ್ನು (ವಿಧಿನಿಷೇಧರೂಪದ ಶ್ರೀಹರಿಯ ಆಜ್ಞೆಗಳನ್ನು ಉಲ್ಲಂಘಿಸುವುದರಿಂದ), ಕುರ್ವಾಣಃ-ಮಾಡುವವನಾಗಿ, ನ ಬಿಭೇತಿ-

---

ಉಲ್ಲಂಘಿಸಿ, ಸಹಸ್ರಾರು ಅಪರಾಧಗಳನ್ನು ಮಾಡುತ್ತಿದ್ದರೂ, ನಿರ್ಭಯರಾಗಿರುತ್ತಾರೆ, ಆಶ್ಚರ್ಯ!; ಪಶುಗಳಿಗೂ ಮನುಷ್ಯರಿಗೂ ಇರುವ ವ್ಯತ್ಯಾಸವೆಂದರೆ, ಬುದ್ಧಿಯು—ಅದು ಇತರ ಯಾವ ಪ್ರಾಣಿಗೂ ಇಲ್ಲ; ಆಹಾರ, ನಿದ್ರೆ, ಭಯ, ಸ್ತ್ರೀ-ಪುರುಷಸಂಗ (ಮೈಥುನ) ಮುಂತಾದುವೆಲ್ಲವೂ ಉಭಯರಿಗೂ ಸಮವೇ; (ಎಲ್ಲ ಪ್ರಾಣಿಗಳಂತೆ ಮನುಷ್ಯನಿಗೂ ಇವೆಲ್ಲ ಉಂಟು); ಹೀಗೆ ತನ್ನ ಉತ್ತಮತ್ವಕ್ಕೆ (ವೈಶಿಷ್ಟ್ಯಕ್ಕೆ) ಕಾರಣವಾದ ಬುದ್ಧಿಯನ್ನು ವಿನಾಶಮಾಡುವ ಮದ್ಯವನ್ನು ದುರ್ಬುದ್ಧಿಯುಳ್ಳ ಮನುಷ್ಯನು ಕುಡಿಯುತ್ತಾನೆ. ಮದ್ಯಪಾನ ಮಾಡಿದವನಿಗೆ ತನ್ನ ಮೈಮೇಲಿನ ವಸ್ತ್ರದ ಪರಿವೆಯೂ ಇರುವುದಿಲ್ಲ; ಇಂಥವನು ಸ್ತ್ರೀಸಂಗದಿಂದ ಸುಖವನ್ನು ಹೇಗೆ ಹೊಂದುವನು? ಆಶ್ಚರ್ಯ! ಕೇವಲ ಸ್ತ್ರೀ ಮೋಹಿತನಾಗಿ ಉದ್ರಿಕ್ತನಾಗುತ್ತಾನೆ; ಆ ಸ್ತ್ರೀ ಸಂಗವಾದರೂ, ಎಲ್ಲಿ ದುರ್ಲಭವಾಗಿರುವುದೋ (ಕಷ್ಟಸಾಧ್ಯವೋ), ಅಲ್ಲಿ

(ಸರ್ವಶಾಸಕನಾದ ಶ್ರೀ ಹ ರಿ ಯಿಂ ದ) ಹೆದರುವುದಿಲ್ಲ, ತತ್ ಅದ್ಭುತಂ-ಇದು ಅತ್ಯಾಶ್ಚರ್ಯಕರವು! ಪಶುಭ್ಯಃ-ಪಶುಗಳಿಂದ, ಮಾನುಷಾಣಾಂ ಚ-ಮನುಷ್ಯರಿಗೆ, ಬುದ್ಧಿಃ ಏವ-ಬುದ್ಧಿಯೇ (ಸರಿ-ತಪ್ಪುಗಳನ್ನು ತಿಳಿಯುವ ವಿವೇಕವೇ), ಅವಶಿಷ್ಯತೇ-ಅಧಿಕವಾಗಿರುತ್ತದೆ (ಅಧಿಕ್ಯಕ್ಕೆ-ಉತ್ತಮತ್ವಕ್ಕೆ ಕಾರಣವಾಗಿರುತ್ತದೆ); ಆಹಾರಃ-ಆಹಾರವು, ಮೈಥುನಂ-(ಸ್ತ್ರೀ-ಪುರುಷ) ಗಂಡುಹೆಣ್ಣಿನ ಸಂಗವೂ, ನಿದ್ರಾ-ನಿದ್ರೆಯೂ, ಭಯಾದಿ ಸಕಲಂ-ಭಯವೇ ಮೊದಲಾದವುಗಳೆಲ್ಲವೂ, ಸಮಂ-(ಪಶುಗಳೊಂದಿಗೆ) ಸಮಾನವೇ; ತಾದೃಕ್-ಹೀಗೆ (ತನ್ನ ಆಧಿಕ್ಯಹೇತುವಾದ), ಬುದ್ಧೇಃ-ಬುದ್ಧಿಯ, ವಿನಾಶಾಯ-ನಾಶಕ್ಕಾಗಿ (ನಾಶವನ್ನುಂಟುಮಾಡುವ), ಮದ್ಯಂ- ಮದ್ಯವನ್ನು (ಮದಿರಾ, ಸುರೆ), ದುರ್ಮತಿಃ-ಮೂಢನು, ಪಿಬತಿ-ಕುಡಿಯುತ್ತಾನೆ; ಸಃ-ಅವನು (ಮದ್ಯಪಾನ ಮಾಡಿದವನು), ಸ್ವಸ್ಯ-ತನ್ನ ನೀತಂ-ತೆಗೆದುಕೊಳ್ಳಲಟ್ಟ (ಕಳಚಿ ಬಿದ್ದುಹೋದ), ಪರಿಧಾನಂ ಅಪಿ-(ಮಾನರಕ್ಷಣೆಯ) ವಸ್ತ್ರವನ್ನೂ ಸಹ, ನೈವ ಬುಧ್ಯತಿ-ತಿಳಿಯುವುದಿಲ್ಲ; ಸಃ-ಇಂಥವನು (ಆ ಮದ್ಯಪಾನ ಮಾಡಿದವನು), ನಾರೀಸಂಗೇನ-ಸ್ತ್ರೀ ಸಂಗದಿಂದ, ಮೋಹಿತಃ-ಮೋಹಿತನಾಗಿ (ಆಕರ್ಷಿತನಾಗಿ), ಕಥಂ-ಹೇಗೆ, ಸುಖಂ-ಸುಖವನ್ನು ಆಪ್ನೋತಿ-ಹೊಂದುತ್ತಾನೆ; ಯತ್ರ-ಎಲ್ಲಿ(ಯಾವ ಸಂದರ್ಭದಲ್ಲಿ), ಸಂಗಃ ಅಪಿ-ಸ್ತ್ರೀ ಸಂಗವೂ, ದುರ್ಲಭಃ-(ಪರಸ್ತ್ರೀಯರಂತೆ) ಕಷ್ಟಲಭ್ಯವಾದುದೋ, ತಾಡ್ಯಮಾನಃ-ತಾಡಿತನಾದರೂ (ಹೊಡೆಯಲ್ಪಟ್ಟರೂ—ಘಾತಿಸಲ್ಪಟ್ಟರೂ), ನ ಬುಧ್ಯತೇ- ತಿಳಿಯುವುದಿಲ್ಲ; ಈದೃಶೀಂ-ಈ ವಿಧದ, ಮದಿರಾಂ ಮದ್ಯವನ್ನು ಪೀತ್ವಾ-ಕುಡಿದು, ಮೂರ್ಖಃ-ಮೂರ್ಖ ಮನುಷ್ಯನು ಸುಖಂ-ಸುಖವನ್ನು ಅಭೀಪ್ಸತಿ-ಹೊಂದಲಿಚ್ಛಿಸುತ್ತಾನೆ.

ಅಸ್ತು ವಾ ಮದ್ಯಪಾನೇನ ಮಾದನಂ ದುಷ್ಟಚೇತಸಾಂ ॥ ೧೨ ॥
ಪಾನಾಭಾವೇಪಿ ಮಾದ್ಯಂತಿ ಶ್ರೀಮದೇನ ವಿಮೋಹಿತಾಃ ।
ಮಾದ್ಯಂತಿ ಪಶವೋ ಯದ್ವತ್ ದೃಷ್ಟ್ವಾ ನೀಲತೃಣಾದಿಕಂ ॥ ೧೩ ॥

---

ಮದ್ಯಪಾನದಿಂದ ಮದಿಸಿದವನು (ಎಚ್ಚರದಪ್ಪಿದವನು), ಹೊಡೆಯಲ್ಪಟ್ಟರೂ ತಿಳಿಯುವುದಿಲ್ಲ (ಹೊಡೆತದ ಜ್ಞಾನವಾದರೂ, ವಿವೇಕ ಹುಟ್ಟುವುದಿಲ್ಲ); ಈ ವಿಧದ ದುಃಸ್ಥಿತಿಗೆ ಕಾರಣವಾಗುವ ಮದ್ಯವನ್ನು ಕುಡಿದು ಸುಖವನ್ನು ಇಚ್ಛಿಸುತ್ತಾನೆ (೬-೧೧). ದುರ್ಬುದ್ಧಿಗಳಿಗೆ ಮದ್ಯಪಾನದಿಂದ ಮದವೇರಲಿ; ಆದರೆ, ಮದ್ಯಪಾನವಿಲ್ಲದೆಯೇ ಧನಾದಿ ಸಂಪತ್ತುಗಳಿಂದ ಮೋಹಿತರಾಗಿ, ಮದಿಸುವ ಶ್ರೀಮಂತರೂ ಇರುವರು; ಅವರು ಹಸಿರುಹುಲ್ಲು ಮೊದಲಾದವನ್ನು ಕಂಡು, ಎಚ್ಚರವಿಲ್ಲದೇ, ತಾಡನಾದಿಗಳನ್ನೂ ಲಕ್ಷಿಸದೇ ಧಾವಿಸುವ ಪಶುಗಳಂತೆ, ಶ್ರೀಮದಯುಕ್ತರು, ಎಚ್ಚರ ತಪ್ಪುತ್ತಾರೆ; ಅವರು ಗುರುಗಳನ್ನು ಸಹ ಕಣ್ಣೆತ್ತಿ ನೋಡುವುದಿಲ್ಲ; ಬ್ರಾಹ್ಮಣಾದಿ ಪೂಜ್ಯರನ್ನೂ, ತಂದೆ ಮೊದಲಾದ ಗೌರವಾರ್ಹರನ್ನೂ ತಿರಸ್ಕರಿಸಿ ವರ್ತಿಸುತ್ತಾರೆ; ಇದರಿಂದ ಶೀಘ್ರವಾಗಿ

**ತಥಾ ಶ್ರೀಮದಮತ್ತಾಸ್ತೇ ನ ಪಶ್ಯಂತಿ ಗುರೂನಪಿ ।**
**ಅವಜಾನಂತಿ ಪಿತ್ರಾದೀನ್ ಬ್ರಾಹ್ಮಣಾಂಶ್ಚಾವಜಾನತೇ ॥ ೧೪ ॥**
**ಚ್ಯವಂತೇ ಸಂಪದಃ ಸದ್ಯಃ ಸಾವಧಾನಾಸ್ತತಃ ಪರಂ ।**
**ಅಸತಾಂ ಶ್ರೀಮದಾಂಧಾನಾಂ ದಾರಿದ್ರ್ಯಂ ಪರಮಾಂಜನಂ ॥ ೧೫ ॥**

ದುಷ್ಟಚೇತಸಾಂ-ದುರಾತ್ಮರಿಗೆ (ಬುದ್ಧಿಶೂನ್ಯರಿಗೆ), ಮದ್ಯಪಾನೇನ-ಮದ್ಯಪಾನದಿಂದ, ಮಾದನಂ-ಮದವೇರುವುದು (ಎಚ್ಚರ ತಪ್ಪುವುದು), ಅಸ್ತು ವಾ-ಒಂದುವೇಳೆ ಇರಲಿ; ಪಾನಾಭಾವೇ ಅಪಿ-ಮದ್ಯಪಾನವಿಲ್ಲದಿದ್ದರೂ, ಶ್ರೀಮದೇನ-ಸಂಪತ್ತಿನ ಮದದಿಂದ, ವಿಮೋಹಿತಾಃ-ಮೋಹಿತರಾಗಿ (ಎಚ್ಚರ ತಪ್ಪಿ), ನೀಲತೃಣಾದಿಕಂ-ಗರಿಕೆಹುಲ್ಲು ಮೊದಲಾದುದನ್ನು (ಹಸಿರುಹುಲ್ಲು ಇತ್ಯಾದಿ), ದೃಷ್ಟ್ವಾ-ಕಂಡು, ಯದ್ವತ್-ಹೇಗೆ, ಪಶವಃ-ಪಶುಗಳು, ಮಾದ್ಯಂತಿ-ಮದಿಸುತ್ತವೆಯೋ (ಹಾಡನಾದಿಗಳನ್ನು ಲಕ್ಷಿಸದೇ ತೃಣಾದಿ ಆಹಾರದ ಕಡೆಗೆ ನುಗ್ಗುವುವೋ), ತಥಾ-ಹಾಗೆಯೇ, ಮಾದ್ಯಂತಿ-ಮದಿಸುತ್ತಾರೆ; ತೇ-ಆ, ಶ್ರೀಮದಮತ್ತಾಃ-ಸಂಪತ್ತಿನಿಂದ ಮತ್ತರಾದವರು, ಗುರೂನ್ ಅಪಿ-ಗುರುಗಳನ್ನು ಸಹ, ನ ಪಶ್ಯಂತಿ-ಕಣ್ಣಿನಿಂದ ನೋಡುವುದಿಲ್ಲ (ಅಲಕ್ಷಿಸುತ್ತಾರೆ); ಪಿತ್ರಾದೀನ್-ತಂದೆ ಮೊದಲಾದ ಹಿರಿಯರನ್ನು, ಅವಜಾನಂತಿ-ತಿರಸ್ಕರಿಸುತ್ತಾರೆ; ಚ-ಮತ್ತು ಬ್ರಾಹ್ಮಣಾನ್-ಬ್ರಾಹ್ಮಣರನ್ನೂ ಅವಜಾನತೇ-ಹೀನವಾಗಿ ಕಾಣುತ್ತಾರೆ; (ಹೀಗೆಮಾಡಿ), ಸದ್ಯಃ-ಶೀಘ್ರವಾಗಿ, ಸಂಪದಃ-ಧನಾದಿ ಸಂಪತ್ತುಗಳನ್ನು ಚ್ಯವಂತೇ-ಕಳೆದುಕೊಳ್ಳುತ್ತಾರೆ (ಸಂಪದಾದಿಗಳಿಂದ ಭ್ರಷ್ಟರಾಗುತ್ತಾರೆ); ತತಃ ಪರಂ-ನಂತರ (ಸಂಪತ್ತು ನಷ್ಟವಾದಮೇಲೆ), ಸಾವಧಾನಾಃ-ಸಮಾಧಾನ ಮನಸ್ಸುಳ್ಳವರು (ಮದರಹಿತರು) (ಆಗುತ್ತಾರೆ); ಶ್ರೀಮದಾಂಧಾನಾಂ-ಐಶ್ವರ್ಯದ ಮದದಿಂದ ಕುರುಡರಾದ, ಅಸತಾಂ-ದುಷ್ಟರಿಗೆ, ದಾರಿದ್ರ್ಯಂ-ಬಡತನವು, ಪರಮಾಂಜನಂ-ಶ್ರೇಷ್ಠವಾದ ಅಂಜನವು (ಕಣ್ಣುಕಾಣುವಂತೆ ಮಾಡುವ ಔಷಧಿಯು ಕಾಡಿಗೆಯ ಕಪ್ಪು).

**ಸದಸದ್ವೇನ ವೀಕ್ಷ್ಯೇಣ ನಾವಮನ್ಯೇತ ಕಾನಪಿ ।**
**ಏವಂ ಯದ್ಯಪಿ ಲೋಕೇಽಸ್ಮಿನ್ ಪ್ರಾಯೋ ನರವಿಚೇಷ್ಟಿತಂ ॥ ೧೬ ॥**

---

ಸಂಪತ್ತಿನಿಂದ ಚ್ಯುತರಾಗುತ್ತಾರೆ—ಆಗ ಹಿಂದಿನ ಮದಪಿಳಿದು ಸೌಮ್ಯಭಾವವನ್ನು ಹೊಂದುತ್ತಾರೆ; ಶ್ರೀಮದದಿಂದ ಕುರುಡರಾದವರಿಗೆ ದಾರಿದ್ರ್ಯವೇ ಪರಮಾಂಜನವು-(ಕಣ್ಣಿನ ಕಾಡಿಗೆಯು) ದೃಷ್ಟಿಯನ್ನು ಸರಿಪಡಿಸುವ ಉತ್ತಮ ಔಷಧಿಯು(೧೨-೧೫). ಈ ದಾರಿದ್ರ್ಯವೆಂಬ ದಿವ್ಯೌಷಧಿಯಿಂದ ವಿವೇಕವೆಂಬ ಕಣ್ಣು ತೆರೆಯುತ್ತದೆ—ಆದರಿಂದ ಯಾವ ಪೂಜಾರ್ಹರನ್ನೂ ಅವಮಾನಿಸುವುದಿಲ್ಲ. ಮನುಷ್ಯ ವರ್ತನೆಯು ಈ ಲೋಕದಲ್ಲಿ ಪ್ರಾಯಃ ಯದ್ಯಪಿ ಹೀಗಿರುತ್ತದೆ—ಆದರೂ, ಮದಾದಿಗಳಿಂದ ವಿವೇಕ

**ತಥಾಪಿ ತಾರಿಣೀ ತೇಷಾಮೇಕಾ ಸತ್ಸಂಗತಿರ್ಧ್ರುವಂ ।**

**ತೀರ್ಥಯಾತ್ರಾಯಜ್ಞದಾನತಪೋಭಿಃ ಪೂರ್ವಜನ್ಮಸು ॥ ೧೭ ॥**

**ತೋಷಿತೋ ಯೈರ್ಮಹಾವಿಷ್ಣುಃ ಸತಾಂ ಸಂಗಂ ಲಭಂತಿ ತೇ ।**

ಯೇನ- ಯಾವ ದಾರಿದ್ರ್ಯವೆಂಬ ಔಷಧಿಯಿಂದ, ಸತ್ ಅಸತ್-ಸರಿ ತಪ್ಪುಗಳನ್ನು ವೀಕ್ಷೇತ-ನೋಡುವನೋ, (ವಿವೇಕವು ಉದಯಿಸುವುದೋ), ಅಪಿ-ಮತ್ತು ಕಾನ್(ಅಪಿ)-ಯಾರನ್ನೂ ನ ಅವಮನ್ಯೇತ-ಅಗೌರವದಿಂದ ಕಾಣುವುದಿಲ್ಲವೋ (ಪೂಜ್ಯರನ್ನು ತಿರಸ್ಕರಿಸುವುದಿಲ್ಲವೋ) (ಆ ದಾರಿದ್ರ್ಯವೇ ದಿವ್ಯೌಷಧಿಯು); ಅಸ್ಮಿನ್-ಈ, ಲೋಕೇ-ಜಗತ್ತಿನಲ್ಲಿ ನರವಿಚೇಷ್ಟಿತಂ-ಮನುಷ್ಯರ ವರ್ತನೆಯು, ಪ್ರಾಯಃ-ಹೆಚ್ಚಾಗಿ, ಏವಂ ಯದ್ಯಪಿ-ಹೀಗಿದ್ದಾಗಲೂ, ತಥಾಪಿ-ಆದರೂ ಸಹ, ತೇಷಾಂ-ಅವರಿಗೆ (ಅವಿವೇಕಿಗಳಾದ ಮನುಷ್ಯರಿಗೆ), ಸತ್ಸಂಗತಿಃ-ಸಜ್ಜನ ಸಹವಾಸವು, ಏಕಾ-ಒಂದೇ, ತಾರಿಣೀ-ರಕ್ಷಣೆಮಾಡಲು ಸಮರ್ಥವಾದುದು; (ಈ ದುಃಸ್ಥಿತಿಯಿಂದ ದಾಟಿಸುವ ಶಕ್ತಿಯುಳ್ಳದ್ದು); ಧ್ರುವಂ-ನಿಶ್ಚಯವು; ತೀರ್ಥಯಾತ್ರಾಯಜ್ಞದಾನ ತಪೋಭಿಃ-ತೀರ್ಥಯಾತ್ರೆ, ಯಜ್ಞ, ದಾನ, ತಪಸ್ಸುಗಳಿಂದ, ಪೂರ್ವಜನ್ಮಸು-ಹಿಂದಿನ ಜನ್ಮಗಳಲ್ಲಿ ಯೈಃ-ಯಾರಿಂದ, ಮಹಾವಿಷ್ಣುಃ-ಶ್ರೀಮಹಾವಿಷ್ಣುವು, ತೋಷಿತಃ-ತುಷ್ಟಿಗೊಳಿಸಲ್ಪಟ್ಟಿರುವನೋ, ತೇ-ಅವರು, ಸತಾಂ-ಸಜ್ಜನರ (ಸಾಧುಗಳ-ಸತ್ಪುರುಷರ), ಸಂಗಂ-ಸಂಗವನ್ನು(ಸಹವಾಸಾದಿಗಳನ್ನು), ಲಭಂತಿ-ಹೊಂದುತ್ತಾರೆ.

**ತೀರ್ಯತೇ ಯೇನ ತತ್ತೀರ್ಥಂ ತೀರ್ಯತೇ ಸಾಧುಸಂಗತೇಃ ॥ ೧೮ ॥**

**ಅತಸ್ತತ್ಪರಮಂ ತೀರ್ಥಂ ನ ಜಲಂ ತೀರ್ಥಮುಚ್ಯತೇ ।**

**ಧಾವಕಾ ರಜಕಾಃ ಪಾಪಾಃ ಧೀವರಾದ್ಯಾ ಹ್ಯನೇಕಶಃ ॥ ೧೯ ॥**

**ಪ್ರಾಯಸ್ತೀರ್ಥೇ ವಸಂತೋಽಪಿ ಭಾವಶುದ್ಧಿಂ ಲಭಂತಿ ನ ।**

**ಪೃಚ್ಛಾನುಭವಮಾತ್ರೇಯಂ ಕಥಮಾತ್ಮಾ ಪ್ರಸೀದತಿ ॥ ೨೦ ॥**

ಯೇನ-ಯಾವುದರಿಂದ, ತೀರ್ಯತೇ-ದಾಟುವನೋ, ತತ್ ತೀರ್ಥಂ-ಅದೇ

---

ಶೂನ್ಯರಾದ ಮನುಷ್ಯರಿಗೆ ಸಾಧುಸಂಗವೆಂಬ ಪ್ರಧಾನಸಾಧನವು, ಸನ್ಮಾರ್ಗಕ್ಕೆ ಒಯ್ಯುವ ಸಾಮರ್ಥ್ಯವುಳ್ಳದ್ದಾಗಿರೆ—ನಿಶ್ಚಯವು; ಈ ಸಾಧುಸಂಗವು, ಹಿಂದಿನ ಜನ್ಮಗಳಲ್ಲಿ ತೀರ್ಥಯಾತ್ರೆ, ಯಜ್ಞ, ದಾನ, ತಪಸ್ಸುಗಳಿಂದ, ಶ್ರೀವಿಷ್ಣುವನ್ನು ತುಷ್ಟಿಗೊಳಿಸಿದವರಿಗೆ ಮಾತ್ರ ಲಭಿಸುತ್ತದೆ (೧೬-೧೭). ಯಾವುದರಿಂದ (ದಾಟಲಶಕ್ಯವಾದ ಸ್ಥಿತಿಯನ್ನು ದಾಟುವನೋ) ಅದು ತೀರ್ಥವೆನಿಸುತ್ತದೆ; ಸಾಧುಸಂಗದಿಂದ, ದುರ್ಮಾರ್ಗವನ್ನು ದಾಟುವುದರಿಂದ (ಅದರಿಂದ ರಕ್ಷಿತನಾಗುವುದರಿಂದ), ಅದೇ (ಸಾಧುಸಂಗವೇ) ಶ್ರೇಷ್ಠತೀರ್ಥವು—ಜಲಮಾತ್ರವು ತೀರ್ಥವಲ್ಲ; ಬಟ್ಟೆ ಒಗೆಯುವ ಅಗಸರು,

ತೀರ್ಥವು; ಸಾ ಧು ಸಂ ಗ ತೇಃ-ಸಾಧುಸಂಗದಿಂದ, ತೀ ರ್ಯ ತೇ-ದಾಟುತ್ತಾನೆ (ಅವಿವೇಕಿಯು ಸಂಸಾರದಲ್ಲಿ ವಿಪತ್ಕರವಾದ ಮಾರ್ಗವನ್ನು ದಾಟುತ್ತಾನೆ-ಅತಿಕ್ರಮಿಸುತ್ತಾನೆ); ಅತಃ-ಆದ್ದರಿಂದ, ತತ್-ಅದೇ (ಸಾಧುಸಂಗವೇ), ಪರಮಂ ತೀರ್ಥಂ-ಶ್ರೇಷ್ಠವಾದ ತೀರ್ಥವು, ಜಲಂ-ಜಲವು, ನ ತೀರ್ಥಂ-ತೀರ್ಥವಲ್ಲ, ಉಚ್ಯತೇ-(ಎಂದು) ಹೇಳಲ್ಪಡುತ್ತದೆ; ಧಾವಕಾಃ-ಬಟ್ಟೆಗಳನ್ನು ಒಗೆಯುವವರು (ಶುದ್ಧಿಮಾಡುವವರು), ರಜಕಾಃ-ಅಗಸರು, ಧೀವರಾದ್ಯಾಃ-ಬೆಸ್ತರು (ಮೀನು ಹಿಡಿಯುವವರು) ಮೊದಲಾದ, ಅನೇಕಶಃ ಬಹುವಿಧರಾದ, ಪಾಪಾಃ-ಪಾಪಜೀವಿಗಳು (ಪಾಪಾಚರಣೆಯಲ್ಲಿರುವವರು), ಪ್ರಾಯಃ-ಹೆಚ್ಚಾಗಿ (ಬಹುಕಾಲ), ತೀರ್ಥೇ-ಜಲದಲ್ಲಿ ವಸಂತಃ ಅಪಿ-ಇರುತ್ತಿದ್ದರೂ, ಭಾವಶುದ್ಧಿಂ-ಅಂತಃಕರಣ (ಮನಸ್ಸಿನ) ಶುದ್ಧಿಯನ್ನು ನ ಲಭಂತಿ-ಹೊಂದುವುದಿಲ್ಲ; ಕಥಂ-ಹೇಗೆ, (ಸಾಧುಸಂಗದಿಂದ), ಆತ್ಮಾ-ಪರಮಾತ್ಮನು, ಪ್ರಸೀದತಿ-(ಭಾವಶುದ್ಧಿಯನ್ನು ಅನುಗ್ರಹಿಸುವನೆಂಬಲ್ಲಿ) ಪ್ರಸನ್ನನಾಗುವನೆಂಬಲ್ಲಿ, ಆತ್ಮೀಯಂ-ನಿನ್ನ ಸ್ವಂತ, ಅನುಭವಂ-ಅನುಭವವನ್ನು ಪೃಚ್ಛ-(ಹೇ ನಾರದ!) ಕೇಳು.[1]

**ಸತ್ಸಂಗೇನಾಥವಾ ತೀರ್ಥೇ ಕಿಂಚ ಲಾಭಾದಿಕಂ ಭವೇತ್ ।**
**ಫಲಂ ತಾತ್ಕಾಲಿಕಂ ತೀರ್ಥೇ ಬಹಿರ್ಮಲವಿಶೋಧನಂ ॥ ೨೦ ॥**
**ಪಿಪಾಸಾಹರಣಂ ಚಾಪಿ ತದ್ದ್ವಯಂ ಜಾಯತೇ ತತಃ ।**
**ವಾಪೀಕೂಪತಟಾಗಾದೌ ಯತ್ರ ಕುತ್ರ ಜಲಾಶಯೇ ॥ ೨೨ ॥**
**ಬಹಿರ್ಮಲವಿಶುದ್ಧಿಃ ಸ್ಯಾನ್ನಾಂತರ್ಮಲವಿಶೋಧನಂ ।**
**ಗಂಗಾದಿಪುಣ್ಯತೀರ್ಥಾನಿ ಕಾಲೇನೈವ ಫಲಂತಿ ಹಿ ॥ ೨೩ ॥**

---

ಮೀನುಗಾರರು ಮೊದಲಾದ ಪಾಪಪ್ರವೃತ್ತಿಯುಳ್ಳ ಬಹುಜನರು, ಸದಾ ನೀರಿನಲ್ಲಿಯೇ ಇರುತ್ತಿದ್ದರೂ, ಅವರಿಗೆ ಅಂತಃಕರಣಶುದ್ಧಿಯು ಲಭಿಸುವುದಿಲ್ಲ; ಸಾಧುಸಂಗದಿಂದ ಶ್ರೀಹರಿಯು ಪ್ರೀತನಾಗಿ, ಭಾವಶುದ್ಧಿಯನ್ನು ಅನುಗ್ರಹಿಸುವನೆಂಬಲ್ಲಿ ಹೇ ನಾರದ! ನಿನ್ನ ಅನುಭವವನ್ನೇ ಕೇಳು (೧೮-೨೦). ಸತ್ಸಂಗದಿಂದ ಮಹಾಫಲವಿದ್ದರೆ, ತೀರ್ಥಸೇವೆಯಿಂದ ಅಲ್ಪವಾದರೂ ಪ್ರಯೋಜನವಿದೆ; ದೇಹದ ಮಲವನ್ನು ಪರಿಹರಿಸಿ ಶುದ್ಧಗೊಳಿಸುವ ತಾತ್ಕಾಲಿಕವಾದ ಫಲವು ತೀರ್ಥದಲ್ಲಿದೆ; ನೀರಡಿಕೆಯನ್ನೂ (ಪಿಪಾಸಾ-ತೃಷೆ)

---

1. ನಾರದನು, ಹಿಂದಿನ ಜನ್ಮದಲ್ಲಿ ದಾಸೀಪುತ್ರನಾಗಿ ಹುಟ್ಟಿ ಚಾತುರ್ಮಾಸ್ಯ ಸಂಕಲ್ಪದಿಂದ ಕೂತಿದ್ದ ಸನ್ಯಾಸಿಗಳ ಸಹವಾಸ (ಸೇವಾದಿ) ಗಳಿಂದ, ಉದ್ಧೃತನಾಗಿ, ಶ್ರೀಹರಿಯ ಅನುಗ್ರಹದಿಂದ ಭಾವಶುದ್ಧಿಯನ್ನು ಹೊಂದಿ, ಜ್ಞಾನವನ್ನೂ, ಮುಂದೆ, ಬ್ರಹ್ಮದೇವನ ಪುತ್ರತ್ವವನ್ನೂ ಹೊಂದಿದ ವೃತ್ತಾಂತವು, ಭಾಗವತದಲ್ಲಿ ವರ್ಣಿಸಲ್ಪಟ್ಟಿದೆ. ಆ ನಿನ್ನ ಅನುಭವವನ್ನೇ, ಸಾಧುಸಂಗದ ಮಹಿಮೆಯ ವಿಷಯಕ್ಕೆ ಪ್ರಮಾಣವೆಂದು ತಿಳಿ, ಎಂದು ಬ್ರಹ್ಮದೇವನು ಹೇಳುತ್ತಾನೆ.

**ಅದೃಷ್ಟದ್ವಾರತಸ್ತಸ್ಮಾತ್ತೀರ್ಥಂ ಸಾಧುಸಂಗತಿಃ ।**
**ಗಂಗಾದಿತೀರ್ಥಸೇವಾ ಚ ಫಲಂ ದಾತುಂ ಯದೋನ್ಮುಖಾ ॥ ೨೪ ॥**
**ಜನ್ಮಾಂತರೇಷು ಜಾಯತೇ ತದಾ ಸತ್ಸಂಗತಿರ್ಭವೇತ್ ।**

ಸತ್ಸಂಗೇನ-ಸಾಧುಸಂಗದಿಂದ, ಅಥವಾ ತೀರ್ಥೇ, ತೀರ್ಥಾದಿಗಳಲ್ಲಿ ಕಿಂಚ-ಹೇಗೂ, ಲಾಭಾದಿಕಂ-ಪ್ರಯೋಜನಾದಿಗಳ ಪ್ರಾಪ್ತಿಯು, ಭವೇತ್-ಉಂಟಾಗುತ್ತದೆ; (ಅಥವಾ, ಸತ್ಸಂಗದಿಂದ, 'ಕಥಮಾತ್ಮಾ ಪ್ರಸೀದತಿ'-ಶ್ರೀಹರಿಯು ಹೇಗೆ ಪ್ರಸನ್ನನಾಗುತ್ತಾನೆಂಬಲ್ಲಿ 'ಆತ್ಮೀಯಮನುಭವಂ ಪೃಚ್ಛ'-ನಿನ್ನ ಅನುಭವವನ್ನೇ ಕೇಳು, ಎಂದು ಹಿಂದಿನ ಶ್ಲೋಕದಿಂದಲೂ, ಅನ್ವಯಿಸಿಕೊಳ್ಳಬಹುದು); ತೀರ್ಥೇ-ತೀರ್ಥ ವಿಷಯದಲ್ಲಿ ಫಲಂ-(ದೊರೆಯುವ) ಫಲವು, ತಾತ್ಕಾಲಿಕಂ-(ತೀರ್ಥಸೇವೆಯ ಒಂದಿಗೇ), ಆ ಕಾಲದಲ್ಲಿಯೇ (ಆಗುತ್ತದೆ); ತತಃ ತೀರ್ಥ (ಜಲ)ದಿಂದ, ಬಹಿರ್ಮಲವಿಶೋಧನಂ (ದೇಹದ) ಹೊರಗಿನ ಮಲದಿಂದ ಶುದ್ಧತೆಯೂ, ಅಪಿ ಚ-ಮತ್ತು ಪಿಪಾಸಾಹರಣಂ-ನೀರಡಿಕೆಯ (ತೃಷೆಯ) ಪರಿಹಾರವೂ, ಜಾಯತೇ-ದೊರೆಯುತ್ತದೆ; ತದ್ದ್ವಯಂ-ಅವೆರಡೂ ಪ್ರಯೋಜನಗಳು, ವಾಪೀಕೂಪತಟಾಗಾದೌ-ವಾಪೀ (ಇಳಿದು ತುಂಬುವ ಕೊಳ), ಕೂಪ-(ಸೇದುವ)ಭಾವಿ, ಕೆರೆ ಮೊದಲಾದ, ಯತ್ರ ಕುತ್ರ ಎಲ್ಲಿಯಾದರೂ ಇರುವ, ಜಲಾಶಯೇ-ಜಲಾಶಯದಲ್ಲಿ (ಜಲಸ್ಥಾನದಲ್ಲಿ) (ಆಗುತ್ತವೆ); (ಆದರೆ ಇವುಗಳಿಂದ), ಬಹಿರ್ಮಲವಿಶುದ್ಧಿಃ-ಹೊರಗಿನ ಮಲಶೋಧನವು, ಸ್ಯಾತ್-ಆಗುತ್ತದೆಯಲ್ಲದೇ, ಅಂತರ್ಮಲ ವಿಶೋಧನಂ ನ-ಒಳಗಿನ ಮಲದ ಶೋಧವಾಗುವುದಿಲ್ಲ; (ಅಂತರ್ಮಲದಿಂದ ಶುದ್ಧಿಯು-ಅಂತಃಕರಣ ಶುದ್ಧಿಯು, ಗಂಗಾದಿ ಪುಣ್ಯತೀರ್ಥಗಳಿಂದ ಆಗಬಹುದೆಂದರೆ), ಗಂಗಾದಿಪುಣ್ಯತೀರ್ಥಾನಿ-ಗಂಗಾದಿ ಪುಣ್ಯತೀರ್ಥಗಳು, ಕಾಲೇನ-ಬಹುಕಾಲದ ನಂತರ, ಏವ-ಮಾತ್ರವೇ, ಫಲಂತಿ ಹಿ-ಆ ಫಲವನ್ನು ಕೊಡುತ್ತವೆಂಬುದು ಶಾಸ್ತ್ರಸಿದ್ಧವು; ಅದೃಷ್ಟದ್ವಾರತಃ-(ಗಂಗಾದಿ ತೀರ್ಥಗಳು) ಅದೃಷ್ಟವಾದ ಪುಣ್ಯವನ್ನು

---

ಪರಿಹರಿಸುತ್ತದೆ; ಈ ಎರಡೂ ಫಲಗಳು, ವಾಪೀಕೂಪ, ತಟಾಕ ಮೊದಲಾದ ಯಾವ ಜಲಾಶಯಗಳಲ್ಲಿ ಆದರೂ, ದೊರೆಯುತ್ತವೆ; ಆದರೆ ಅಂತಃಶುದ್ಧಿಯು ಈ ತೀರ್ಥದಿಂದ ಲಭಿಸುವುದಿಲ್ಲ; ಗಂಗಾದಿ ಪುಣ್ಯತೀರ್ಥಗಳಿಂದ ಸಹ ಅಂತಃಶುದ್ಧಿಯು, ಬಹುಕಾಲದಲ್ಲಿ ದೊರೆಯುತ್ತದೆ—ತತ್ಕಾಲದಲ್ಲಿ ಅಲ್ಲ; ಹೇಗೆಂದರೆ—ಗಂಗಾದಿ ತೀರ್ಥಗಳನ್ನು ಸ್ನಾನಾದಿಗಳಿಂದ ಸೇವಿಸಿದರೆ, ಪುಣ್ಯವು ಹುಟ್ಟುತ್ತದೆ; ಅದು ಜನ್ಮಾಂತರಗಳಲ್ಲಿ ಫಲಕೊಡಲು ಸಿದ್ಧವಾದಾಗ (ಫಲೋನ್ಮುಖವಾದಾಗ) ತತ್ಕಾಲದಲ್ಲಿ ಅಂತಃಶುದ್ಧಿಯನ್ನು ದೊರಕಿಸಲು ಸಮರ್ಥವಾದ, ಸಾಧುಸಂಗವನ್ನು ದೊರಕಿಸುತ್ತದೆ (೨೧-೨೪). ಸಾಧುಸಂಗವು ಯಾವಾಗ ದೊರಕುವುದೋ, ಆಗಲೇ (ಅದರಿಂದಲೇ)

ಉತ್ಪಾದಿಸಿ, ಆ ಮೂಲಕ, (ಫಲಂತಿ-ಫಲಿಸುತ್ತವೆ); ತತ್ ತೀರ್ಥಂ-(ಆ ಪುಣ್ಯ ಲಭ್ಯವಾದ) ತೀರ್ಥವೇ, ಸಾಧುಸಂಗತಿಃ-ಸಾಧುಸಂಗವು; ಗಂಗಾದಿ ತೀರ್ಥಸೇವಾ ಚ-ಗಂಗಾದಿಗಳ ಜಲ (ತೀರ್ಥ) ಸೇವೆಯಾದರೋ, ಯದಾ-ಯಾವಾಗ, ಫಲಂ-ಫಲವನ್ನು ದಾತುಂ-ಕೊಡಲಿಕ್ಕೆ, ಉನ್ಮುಖಾ-ಸಿದ್ಧವಾಗಿ, ಜಾಯತೇ-ನಿಲ್ಲುವುದೋ, ತದಾ-ಆಗ, ತಸ್ಮಾತ್-ಆ ತೀರ್ಥಸೇವೆಯ ಪುಣ್ಯದಿಂದಲೇ, ಜನ್ಮಾಂತರೇಷು-ಜನ್ಮಾಂತರಗಳಲ್ಲಿ ಸತ್ಸಂಗತಿಃ-ಸಾಧುಸಂಗವು, ಭವೇತ್-ಉಂಟಾಗುತ್ತದೆ (ದೊರೆಯುತ್ತದೆ.)

ಯದೈವ ಸ್ಯಾತ್ಸತಾಂ ಸಂಗಸ್ತದೈವಾತ್ಮಾ ಪ್ರಸೀದತಿ ॥ ೨೫ ॥
ಯದಿ ಸ್ಯಾದ್ಗುಣವಾನಾತ್ಮಾ ತದಾ ಸ ಸುಫಲೋ ಭವೇತ್ ।
ಅಹಲ್ಯಾ ರಾಮಸಂಗೇನ ಪ್ರಾಪ್ತವತ್ಯುತ್ತಮಾಂ ಗತಿಂ ॥ ೨೬ ॥
ತಾಟಕಾ ಶೂರ್ಪಣಖ್ಯಾದ್ಯಾಃ ಸದ್ಯೋಽನರ್ಥಂ ಪ್ರಪೇದಿರೇ ।
ತ್ವಮಪ್ಯಾಸೀಃ ಪುರಾ ವತ್ಸ ವಿಪ್ರದಾಸೀಸಮುದ್ಭವಃ ॥ ೨೭ ॥
ಯೋಗಿನಾಂ ಸಂಗಲಾಭೇನ ಮದುದರೇ ಜನ್ಮ ಲಬ್ಧವಾನ್ ।

ಸತಾಂ-ಸಾಧುಗಳ, ಸಂಗಃ-ಸಂಗವು, ಯದಾ ಏವ ಸ್ಯಾತ್-ಯಾವಾಗ ಆಗುವುದೋ, ತದಾ ಏವ-ಆಗಲೇ (ಆಗಮಾತ್ರ), ಆತ್ಮಾ-ಶ್ರೀಹರಿಯು, ಪ್ರಸೀದತಿ-ಪ್ರಸನ್ನನಾಗುತ್ತಾನೆ; ಆತ್ಮಾ-(ಸಾಧುಸಂಗವನ್ನು ಪಡೆದ) ಜೀವನು, ಗುಣವಾನ್-ಸದ್ಗುಣಶೀಲನು, ಯದಿ ಸ್ಯಾತ್-ಆಗಿದ್ದರೆ, ತದಾ-ಆಗ (ತತ್ಕಾಲದಲ್ಲಿ), ಸಃ-ಆತನು, ಸುಫಲಃ-ಸತ್ಫಲವನ್ನು ಹೊಂದಿದವನು, ಭವೇತ್-ಆಗುತ್ತಾನೆ; ಅಹಲ್ಯಾ-ಅಹಲ್ಯ

---

ಶ್ರೀಹರಿಯು ಪ್ರಸನ್ನನಾಗುತ್ತಾನೆ; ಸತ್ಸಂಗವನ್ನು ಪಡೆದ ಜೀವನು, ಸದ್ಗುಣಶೀಲನಾಗಿದ್ದರೆ (ಸಾತ್ವಿಕ ಸ್ವರೂಪನಾದರೆ), ತತ್ಕಾಲದಲ್ಲಿಯೇ, ಅದರ ಫಲವನ್ನು ಹೊಂದುತ್ತಾನೆ; ಶ್ರೀರಾಮನ ಕಟಾಕ್ಷಸಂಗದಿಂದಲೇ,[1] ಅಹಲ್ಯೆಯು ತತ್ಕಾಲದಲ್ಲಿ ಗೌತಮರ ಭಾರ್ಯಾಸ್ಥಾನವನ್ನು ಹೊಂದಿ, ಸಂತೋಷಿಸಿದಳು; ಆದರೆ ದುಷ್ಟಚೇತನರಾದ ತಾಟಕಾ, ಶೂರ್ಪಣಖೀ ಮೊದಲಾದವರು ಅನರ್ಥವನ್ನೇ (ಶ್ರೀರಾಮನ ಸಂಗದಿಂದ ವಿನಾಶವನ್ನೇ) ಹೊಂದಿದರು; ಪ್ರಿಯ ನಾರದ! ನೀನು ಪೂರ್ವಜನ್ಮದಲ್ಲಿ ಬ್ರಾಹ್ಮಣ

---

1. ಶಿಲೆಯಾಗಿ ಬಿದ್ದಿದ್ದ ಅಹಲ್ಯೆಯು ಶ್ರೀರಾಮನ ಪಾದಸ್ಪರ್ಶದಿಂದ ಶಾಪಮುಕ್ತಳಾಗಿ ತತ್ಕಾಲದಲ್ಲಿ ಗೌತಮಋಷಿಗಳ ಪತ್ನೀಸ್ಥಾನವನ್ನು ಅಲಂಕರಿಸಿದಳೆಂದೂ ಹೇಳುವುದುಂಟು; ಆದರೆ, ಸಂಗ್ರಹ ರಾಮಾಯಣದಂತೆ, ಶ್ರೀರಾಮನು, ಕಲ್ಲನ್ನು ಎಡವಲಿಲ್ಲ; ವಿಶ್ವಾಮಿತ್ರರು ಗೌತಮರ ಆಶ್ರಮ ಪ್ರದೇಶದ ಮಹಿಮೆಯನ್ನು ಹೇಳುತ್ತ ಕಲ್ಲಾಗಿ ಬಿದ್ದಿದ್ದ ಅಹಲ್ಯೆಯನ್ನು ನೋಡು, ಎಂದರು; ಶ್ರೀರಾಮನ ದೃಷ್ಟಿಪಾತವಾದೊಡನೆಯೇ, ಆ ಶಿಲೆಯು ಸ್ತ್ರೀ ಭಾವವನ್ನು ಹೊಂದಿತು. ಈ ವೃತ್ತಾಂತವೇ ಸತ್ಯವಾದುದೆಂದು ತಿಳಿಯಬೇಕು. ಕಲ್ಪಾಂತರ ರಾಮಾವತಾರದಲ್ಲಿ ಪಾದಸ್ಪರ್ಶವೂ ಆಗಿರಬಹುದು—ಪುರಾಣಾಂತರ ವಾಕ್ಯಗಳೂ ಇರಬಹುದು.

ದೇವಿಯು, ರಾಮಸಂಗೇನ-ಶ್ರೀರಾಮನ ಸಂಗದಿಂದ (ಕಟಾಕ್ಷ ಬಿದ್ದ ಮಾತ್ರದಿಂದ), ಉತ್ತಮಾಂ-ಉತ್ತಮವಾದ, ಗತಿಂ-ಗತಿಯನ್ನು (ಸ್ಥಾನವನ್ನು ಗೌತಮರ ಭಾರ್ಯಾತ್ವ ರೂಪದ ಸ್ವಸ್ಥಾನವನ್ನು), ಪ್ರಾಪ್ತವತೀ-ಹೊಂದಿದವಳಾದಳು; (ಅದೇ) ತಾಟಕಾ ಶೂರ್ಪಣಖ್ಯಾದ್ಯಾಃ-(ಸದ್ಗುಣ ಸ್ವಭಾವದವರಲ್ಲದ) ತಾಟಕಾ, ಶೂರ್ಪಣಖೀ ಮೊದಲಾದವರು, ಸದ್ಯಃ-(ಶ್ರೀರಾಮನ ದರ್ಶನಾದಿ ರೂಪಸಂಗದಿಂದ) ತತ್ಕಾಲದಲ್ಲಿ ಅನರ್ಥಂ-ಅನರ್ಥವನ್ನೇ (ವಿನಾಶವನ್ನೇ), ಪ್ರಪೇದಿರೇ-ಹೊಂದಿದರು; ವತ್ಸ-ಹೇ ಪ್ರಿಯ ನಾರದ!, ತ್ವಂ ಅಪಿ-ನೀನೂ ಸಹ, ಪುರಾ-ಹಿಂದಿನ ಜನ್ಮದಲ್ಲಿ ವಿಪ್ರದಾಸೀಸಮುದ್ಭವಃ-ಬ್ರಾಹ್ಮಣರ ಸೇವಕಳಾದ (ದಾಸೀ) ಸ್ತ್ರೀಯಿಂದ ಹುಟ್ಟಿದವನು; ಆಸೀಃ-ಆಗಿದ್ದಿ; ಯೋಗಿನಾಂ-ಸನ್ಯಾಸಿಗಳ, ಸಂಗಲಾಭೇನ-ಸಹವಾಸವು ದೊರೆತದ್ದ ರಿಂದ, (ಅದರ ಫಲವಾಗಿ), ಮದುದರೇ-ನನ್ನ ಗರ್ಭದಲ್ಲಿ ಜನ್ಮ-ಜನ್ಮವನ್ನು ಲಬ್ಧವಾನ್-ಹೊಂದಿರುವ (ನನ್ನ ಪುತ್ರನಾಗಿ ಜನಿಸಿರುವಿ).

ಜಾತೋ ಭಾಗವತಃ ಶ್ರೇಷ್ಠಃ ಪ್ರಹ್ಲಾದಸ್ತವ ಸಂಗತಃ ॥ ೨೮ ॥
ಪರೀಕ್ಷಿಚ್ಛುಕಸಂಗೇನ ಲಬ್ಧವಾನ್ ಪರಮಾಂ ಗತಿಂ ।
ಪೂರ್ವಂ ಸ್ಮ ಬ್ರಹ್ಮಣೋ ಯೋಽಭೂನ್ಮಾನಸಾನ್ನಾರದಾಹ್ವಯಃ ॥ ೨೯ ॥
ಸೋಽಪಿ ಸತ್ಸಂಗಲಾಭೇನ ಪ್ರಾಪ್ತವಾನ್ ವೈಷ್ಣವಂ ಪದಂ ।
ಏವಂ ನಾನಾ ಮುನಿಶ್ರೇಷ್ಠಾಸ್ತಥಾ ರಾಜರ್ಷಿಸತ್ತಮಾಃ ॥ ೩೦ ॥
ಸತ್ಸಂಗೇನೈವ ಸಂಪ್ರಾಪ್ತಾಸ್ತತ್ಪರಂ ವೈಷ್ಣವಂ ಪದಂ ।

ತವ ಸಂಗತಃ-(ಸತ್ಪುರುಷನಾದ) ನಿನ್ನ ಸಂಗದಿಂದ, ಪ್ರಹ್ಲಾದಃ-ಪ್ರಹ್ಲಾದನು, ಶ್ರೇಷ್ಠಃ-ಶ್ರೇಷ್ಠನಾದ, ಭಾಗವತಃ-ಭಗವದ್ಭಕ್ತನು, ಜಾತಃ-ಆದನು;[1] ಶುಕಸಂಗೇನ-ಶುಕಾಚಾರ್ಯರ ಸಂಗದಿಂದ, ಪರೀಕ್ಷಿತ್-ಪರೀಕ್ಷಿದ್ರಾಜನು, ಪರಮಾಂಗತಿಂ-ಶ್ರೇಷ್ಠ

ಸೇವಕಿಯಾದ ದಾಸೀಪುತ್ರನಾಗಿ ಹುಟ್ಟಿದ್ದು ಸನ್ಯಾಸಿಗಳ ಸಹವಾಸ ಸೇವೆಗಳಿಂದ, ನನ್ನ ಪುತ್ರನಾಗಿ ಜನಿಸಿದಿ (೨೫-೨೭). ಪ್ರಹ್ಲಾದನು ಸಾಧುಸಂಗದಿಂದ ಭಾಗವತೋತ್ತಮನೆನಿಸಿದನು; ಶ್ರೀಶುಕರ ಸಮಾಗಮದಿಂದ ಪರೀಕ್ಷಿತನು ಉತ್ತಮ ಗತಿಯನ್ನು ಹೊಂದಿದನು; ನೀನು ಪೂರ್ವದಲ್ಲಿ ನನ್ನ ಮನಸ್ಸಿನಿಂದ ಜನಿಸಿ, ಮಾನಸಪುತ್ರನೆನಿಸಿ, ಮುಂದಿನ ನನ್ನ ಸೃಷ್ಟಿಯಲ್ಲಿ ನನ್ನ ತೊಡೆಯಿಂದ ಜನಿಸಿರುವಿ; ಸತ್ಸಂಗಲಾಭದಿಂದಲೇ ನಿನಗೆ ನನ್ನ ಪುತ್ರತ್ವವು ಲಭಿಸಿತು; ಹೀಗೆಯೇ ಬಹುಮುನಿ

1. ಪ್ರಹ್ಲಾದನು ಮಾತೃಗರ್ಭದಲ್ಲಿರುವಾಗ, ಆತನ ತಾಯಿಗೆ ನಾರದರ ಸಂಗವು ಲಭಿಸಿತು; ಆಕೆಯನ್ನು ನಿಮಿತ್ತಮಾಡಿ, ಗರ್ಭಸ್ಥ ಪ್ರಹ್ಲಾದನಿಗೆ, ಭಗವತತ್ತ್ವವನ್ನು ಉಪದೇಶಿಸಿದರು; ಹೀಗೆ ಅಪ್ರತ್ಯಕ್ಷವಾಗಿ (ಪರಂಪರೆಯಿಂದ) ಆದರೂ ಸಾಧುಸಂಗವು, ಮಹಾಫಲದಾಯಕವು.

ವಾದ ಗತಿಯನ್ನು ಲಬ್ಧವಾನ್-ಹೊಂದಿದನು; ('ಭೇಜೇ ಖಗೇಂದ್ರ ಧ್ವಜಪಾದ ಮೂಲಂ'-ಗರುಡಧ್ವಜನಾದ ಶ್ರೀಹರಿಯ ಪಾದಮೂಲವನ್ನು ಸೇರಿದನೆಂದು, ಶ್ರೀಶುಕರ ಭಾಗವತೋಪದೇಶದಿಂದ ಪರೀಕ್ಷಿತನಿಗೆ ಲಭಿಸಿದ ಮಹಾಫಲವು ವರ್ಣಿತವಾಗಿದೆ); ಪೂರ್ವದಲ್ಲಿ (ಮೊದಲು), ಯಃ-ಯಾವನು, ನಾರದಾಹ್ವಯಃ-ನಾರದನೆಂಬ ಹೆಸರಿನಿಂದ, ಬ್ರಹ್ಮಣಃ-ಬ್ರಹ್ಮದೇವನ, ಮಾನಸಾತ್-ಮನಸ್ಸಿನಿಂದ, ಅಭೂತ್-ಜನಿಸಿದನೋ, ಸಃ ಅಪಿ-ಅವನೂ, ಸತ್ಸಂಗಲಾಭೇನ-ಸಾಧುಸಂಗವನ್ನು ಹೊಂದಿದ್ದರಿಂದ, ವೈಷ್ಣವಂ-ಭಕ್ತಶ್ರೇಷ್ಠನ, ಪದಂ-ಸ್ಥಾನವನ್ನು ಪ್ರಾಪ್ತವಾನ್-ಹೊಂದಿದನು; (ಮೊದಲು ಮನಸ್ಸಿನಿಂದ ಹುಟ್ಟಿ ಬ್ರಹ್ಮಮಾನಸ ಪುತ್ರನೆಂದೆನಿಸಿದ, ನಾರದನು, ಪುನಃ ಮುಂದಿನ ಸೃಷ್ಟಿಯಲ್ಲಿ ಬ್ರಹ್ಮನ ತೊಡೆಯಿಂದ, ಅದೇ ನಾಮದಿಂದ ಜನಿಸಿದನು); ಏವಂ-ಹೀಗೆ, ನಾನಾ ಮುನಿಶ್ರೇಷ್ಠಾಃ-ಬಹು ಮುನಿ ಶ್ರೇಷ್ಠರೂಪಿ ತಥಾ-ಮತ್ತು, ರಾಜರ್ಷಿಸತ್ತಮಾಃ-ರಾಜಋಷಿಗಳೂ, ಸತ್ಸಂಗೇನ ಏವ-ಸಾಧುಸಂಗದಿಂದಲೇ, ವೈಷ್ಣವಂ ಪದಂ-ಶ್ರೀಹರಿಯನ್ನು (ಮುಕ್ತಿಯನ್ನು ಅಥವಾ ಉತ್ತಮ ಗತಿಯನ್ನು), ಸಂಪ್ರಾಪ್ತಾಃ-ಹೊಂದಿರುವರು.

**ದೇವಾ ಅಪಿ ಹಿ ದೇವತ್ವಂ ಪ್ರಾಪ್ತಾಃ ಸತ್ಸಂಗಲಾಭತಃ ॥ ೩೦ ॥**
**ಅಹಮಪ್ಯಾಪ್ತವಾಂಸ್ತೇನ ತಸ್ಮಾತ್ಸತ್ಸಂಗಮೋ ವರಃ ।**

ಸತ್ಸಂಗಲಾಭತಃ-ಸಾಧುಸಂಗವು ದೊರೆತದ್ದರಿಂದ, ದೇವಾಃ ಅಪಿ-ದೇವತೆಗಳೂ ಸಹ, ದೇವತ್ವಂ-ದೇವತ್ವವನ್ನು (ಸ್ವಯೋಗ್ಯ ಸ್ಥಾನಮಾನಗಳನ್ನು-ಪದಗಳನ್ನು), ಪ್ರಾಪ್ತಾಃ-ಹೊಂದಿದರು; ಅಹಂ ಅಪಿ-ನಾನೂ ಸಹ, ಆಪ್ತವಾನ್, (ನನ್ನ ಪದವನ್ನು ಆದರಿಂದಲೇ, ಸಾಧುಪ್ರಧಾನನಾದ ಶ್ರೀಹರಿಯ ಸಂಗವನ್ನು ಹೊಂದಿಯೇ) ಹೊಂದಿರುವೆನು; ತೇನ-ಈ ಕಾರಣದಿಂದ, ಸತ್ಸಂಗಮಃ-ಸಾಧುಸಮಾಗಮವು, ವರಃ-ಶ್ರೇಷ್ಠವಾದುದು (ಮೋಕ್ಷಕ್ಕೆ ಉತ್ತಮ ಸಾಧನವು).

**ನೇದೃಶಂ ಸಾಧನಂ ಮುಕ್ತೌ ನೇದೃಶಂ ಪರಮಂ ಹಿತಂ ॥ ೩೧ ॥**
**ಮನಸಸ್ತೋಷಕಂ ನಾನ್ಯದಿಹಾಮುತ್ರ ಚ ವಿದ್ಯತೇ ।**
**ಶ್ರುತ್ವಾ ಧರ್ಮಂ ವಿಜಾನಾತಿ ಶ್ರುತ್ವಾ ಪೂಜ್ಯಶ್ಚ ಜಾಯತೇ ॥ ೩೨ ॥**

---

ಗಳೂ, ರಾಜರ್ಷಿಗಳೂ ಸತ್ಸಂಗದಿಂದ ಉತ್ತಮ ಗತಿಗಳನ್ನು (ಮುಕ್ತಿಯನ್ನೂ) ಹೊಂದಿರುವರು (೨೮-೩೦). ದೇವತೆಗಳೂ, ಸಾಧುಸಂಗದಿಂದಲೇ ದೇವತ್ವವನ್ನು (ತಂತಮ್ಮ ಪದವಿಗಳನ್ನು) ಹೊಂದಿರುವರು, ನಾನು ಹಾಗೆಯೇ ನನ್ನ ಸ್ಥಾನವನ್ನು ಹೊಂದಿರುವೆನು; ಈ ಕಾರಣದಿಂದ ಸಾಧು ಸಮಾಗಮವು ಮುಕ್ತಿಗೆ ಶ್ರೇಷ್ಠಸಾಧನವೆಂದು ತಿಳಿ (೩೦). ಮೋಕ್ಷಪ್ರಾಪ್ತಿಗೆ ಈ ವಿಧವಾದ ಮತ್ತೊಂದು ಸಾಧನವಿಲ್ಲ; ಇದಕ್ಕೆ ಸದೃಶವಾದ ಉತ್ತಮ ಹಿತಸಾಧಕವಾದುದು ಮತ್ತೊಂದಿಲ್ಲ; ಇಹಪರಗಳಲ್ಲಿ

**ಶ್ರುತ್ವಾ ವಿಶ್ರಾಂತಿಮಾಪ್ನೋತಿ ಶ್ರುತ್ವಾ ಸರ್ವಜ್ಞತಾಂ ಲಭೇತ್ ।**
**ಶ್ರುತ್ವಾ ಮನನಮಾಪ್ನೋತಿ ಮನನಾದ್ಧ್ಯಾನಮಾಚರೇತ್ ॥ ೩೪ ॥**
**ಧ್ಯಾನಸಾಕ್ಷಾದ್ಭವೇದ್ವಿಷ್ಣುಸ್ತತೋ ಮೋಕ್ಷಃ ಕರಃಸ್ಥಿತಃ ।**

ಈದೃಶಂ-ಈ ವಿಧವಾದ, ಮುಕ್ತೌ-ಮೋಕ್ಷ ವಿಷಯದಲ್ಲಿ(ಮುಕ್ತಿ ಪ್ರಾಪ್ತಿಯಲ್ಲಿ), ಸಾಧನಂ-ಸಾಧನವು, ನ-ಇರುವುದಿಲ್ಲ; ಈದೃಶಂ-ಈ ವಿಧದ (ಸಾಧುಸಂಗದಂಥ) ಪರಮಂ ಹಿತಂ-ಉತ್ತಮ ಹಿತಸಾಧಕವಾದುದು, ನ-(ಮತ್ತೊಂದು) ಇಲ್ಲ; ಇಹ-ಇಲ್ಲಿ; ಅಮುತ್ರ ಚ-ಪರದಲ್ಲಿ ಸಹ, ಮನಸಃ-ಮನಸ್ಸಿಗೆ, ತೋಷಕಂ-ಸಂತುಷ್ಟಿಯನ್ನೀಯುವುದು, ಅನ್ಯತ್-ಮತ್ತೊಂದು (ಸಾಧನವು); ನ ವಿದ್ಯತೇ-ಇರುವುದಿಲ್ಲ; ಶ್ರುತ್ವಾ-(ಸಾಧುಗಳ ಮುಖದಿಂದ) ಭಗವನ್ಮಹಿಮೆಗಳನ್ನು ಶ್ರವಣಮಾಡಿ, ಧರ್ಮಂ-ಧರ್ಮವನ್ನು (ಅಧರ್ಮದಿಂದ ವಿವೇಚಿಸಿ), ವಿಜಾನಾತಿ-ತಿಳಿಯುತ್ತಾನೆ; ಶ್ರುತ್ವಾ-ಶ್ರವಣದಿಂದ (ಬಹುಶ್ರುತನೆಂಬ ಕಾರಣದಿಂದ), ಪೂಜ್ಯಶ್ಚ-(ಅನ್ಯರಿಂದ) ಪೂಜ್ಯನೂ (ಗೌರವಿಸಲ್ಪಡುವವನೂ), ಜಾಯತೇ-ಆಗುತ್ತಾನೆ; ಶ್ರುತ್ವಾ-ಶ್ರವಣದಿಂದ, ವಿಶ್ರಾಂತಿಂ-ಮನಃಶಾಂತಿಯನ್ನು (ವಿಷಯಾಶೆಯಿಂದ ನಿವೃತ್ತಿಯನ್ನು-ವೈರಾಗ್ಯವನ್ನು), ಆಪ್ನೋತಿ-ಹೊಂದುತ್ತಾನೆ; ಶ್ರುತ್ವಾ-ಶ್ರವಣದಿಂದ, ಸರ್ವಜ್ಞತಾಂ-(ಸ್ವಯೋಗ್ಯವಾದ) ಪೂರ್ಣಶಾಸ್ತ್ರ ಜ್ಞಾನವನ್ನು ಲಭೇತ್-ಹೊಂದುವನು; ಶ್ರುತ್ವಾ-ಶ್ರವಣದಿಂದ, ಮನನಂ-ಮನನವನ್ನು (ಸಂಶಯ, ವಿಪರ್ಯಯಗಳ ಪರಿಹಾರಾರ್ಥ ಚಿಂತನೆಯನ್ನು), ಆಪ್ನೋತಿ-ಹೊಂದುತ್ತಾನೆ (ಮಾಡುತ್ತಾನೆ-ಚಿಂತನದಲ್ಲಿ ತೊಡಗುತ್ತಾನೆ); ಮನನಾತ್-ಮನನದಿಂದ, (ಜ್ಞಾನ ನಿಶ್ಚಯವನ್ನು ಹೊಂದಿ), ಧ್ಯಾನಂ-(ಶ್ರೀಹರಿಯ)

---

ಮನಃಶಾಂತಿಯನ್ನೊದಗಿಸುವ ಸಾಧನವು ಅನ್ಯವಿಲ್ಲ; ಸಾಧುಗಳಿಂದ ಧರ್ಮವನ್ನು ತಿಳಿಯುತ್ತಾನೆ; ಬಹುಶಾಸ್ತ್ರ ಪ್ರಮೇಯಗಳನ್ನು ತಿಳಿದು, ಇತರರಿಂದ ಪೂಜ್ಯನಾಗುತ್ತಾನೆ (ಗೌರವಿಸಲ್ಪಡುತ್ತಾನೆ); ಸಾಧುಗಳ ಮುಖದಿಂದ ಭಗವನ್ಮಹಿಮೆಗಳನ್ನು ಶ್ರವಣಮಾಡಿ ವಿಷಯ ವೈರಾಗ್ಯವನ್ನೂ, ಅದರಿಂದ (ವಿಶ್ರಾಂತಿ) ಮನಃಶಾಂತಿಯನ್ನೂ ಹೊಂದುತ್ತಾನೆ; ಶಾಸ್ತ್ರಾರ್ಥಗಳ ಶ್ರವಣದಿಂದ ಸ್ವಯೋಗ್ಯಪೂರ್ಣಜ್ಞಾನಿಯಾಗುತ್ತಾನೆ; ಶ್ರವಣದಿಂದ, ಸಂಶಯ ವಿಪರ್ಯಯಗಳನ್ನು ಪರಿಹರಿಸುವ ಮನನ (ಚಿಂತನೆ)ದಲ್ಲಿ ತೊಡಗುತ್ತಾನೆ; ಮನನದಿಂದ ಜ್ಞಾನನಿಶ್ಚಯವನ್ನು ಹೊಂದಿ, ಶ್ರೀಹರಿಧ್ಯಾನದಲ್ಲಿ ಆಸಕ್ತನಾಗುತ್ತಾನೆ; ಧ್ಯಾನದಿಂದ (ಸಮಾಧಿಯಲ್ಲಿ ಮನಸ್ಸು ನಿಂತಾಗ), ಶ್ರೀವಿಷ್ಣುವಿನ ಸಾಕ್ಷಾದ್ದರ್ಶನ ಲಾಭವಾಗುತ್ತದೆ; ಆಗ (ಅಪರೋಕ್ಷ ಜ್ಞಾನವಾದಾಗ) ಮುಕ್ತಿಯು ಕರಗತವೇ ಸರಿ[1] (೩೨-೩೪). ಭಗವನ್ಮಹಿಮೆಗಳನ್ನು ಸಾಧುಗಳಿಂದ ಶ್ರವಣಮಾಡದವನು, ಪಶುವೇ

1. 'ಯಸ್ಯ ಜ್ಞಾನಂ ತಸ್ಯ ಮೋಕ್ಷ ಇತಿ ನಾತ್ರ ವಿಚಾರಣಾ ।' (ಆಗ್ನೇಯ ಪುರಾಣ—ಭಾಷ್ಯೋದಾಹೃತ)—ಜ್ಞಾನವಂತನಿಗೇ ಮೋಕ್ಷವೆಂಬಲ್ಲಿ ವಿಚಾರಕ್ಕೆಡೆಯಿಲ್ಲ.

ಧ್ಯಾನವನ್ನು ಆಚರೇತ್-ಆಚರಿಸುತ್ತಾನೆ; ಧ್ಯಾನದಿಂದ-(ಪಕ್ವವಾದ) ಧ್ಯಾನದಿಂದ (ಸಮಾಧಿಯಲ್ಲಿ), ವಿಷ್ಣುಃ-ಶ್ರೀವಿಷ್ಣುವು, ಸಾಕ್ಷಾದ್ಭವೇತ್-ಪ್ರತ್ಯಕ್ಷನಾಗುತ್ತಾನೆ (ಶ್ರೀಹರಿ ಸಂದರ್ಶನವನ್ನು ಪಡೆಯುತ್ತಾನೆ); ತತಃ-ಅದರಿಂದ (ಅಪರೋಕ್ಷ ದರ್ಶನದಿಂದ), ಮೋಕ್ಷಃ-ಮುಕ್ತಿಯು, ಕರಃ ಸ್ಥಿತಃ-ಕೈಯಲ್ಲಿದ್ದಂತೆಯೇ (ಸಿದ್ಧವೇ ಆಗಿರುತ್ತದೆ).

ಅಶ್ರೋತಾ ಪಶುವನ್ಮರ್ತ್ಯಃ ಸದಸನ್ನೈವ ವೇತ್ತಿ ಸಃ ॥ ೩೫ ॥
ವೃಥಾ ಜನ್ಮ ಭವೇತ್ತಸ್ಯ ಮಾತೃಯೌವನಹಾರಿಣಃ ।
ಅಧರ್ಮಂ ನ ವಿಜಾನಾತಿ ಜ್ಞಾತ್ವಾಪಿ ನ ತ್ಯಜತ್ಯಮುಂ ॥ ೩೬ ॥
ಅಶೃಣ್ವನ್ ಪುರುಷಸ್ತಸ್ಮಾಚ್ಛ್ರವಣಂ ಸರ್ವದಾ ಚರೇತ್ ।
ಈದೃಶಂ ಶ್ರವಣಂ ಶ್ರೇಷ್ಠಂ ಸರ್ವೇಷಾಂ ಪರಮಂ ಹಿತಂ ॥ ೩೭ ॥
ಅತಃ ಸದ್ಭ್ಯೋಽನಿಶಂ ಕುರ್ಯಾಚ್ಛ್ರವಣಂ ತೇನ ಸದ್ಗತಿಃ ।

ಅಶ್ರೋತಾ-ಶ್ರವಣಮಾಡದಿರುವ, ಮರ್ತ್ಯಃ-ಮನುಷ್ಯನು, ಪಶುವತ್-ಪಶು ವಿದ್ದಂತೆಯೇ ಸರಿ; ಸಃ-ಅವನು (ಶ್ರವಣವಿಲ್ಲದವನು), ಸದಸತ್-ಶ್ರೀಹರಿಯನ್ನೂ ಜಗತ್ತನ್ನೂ (ಸರಿತಪ್ಪುಗಳನ್ನೂ—ಸತ್ ಅಸತ್ ವಸ್ತುಗಳ ತಾರತಮ್ಯವನ್ನೂ), ನೈವ ವೇತ್ತಿ-ಎಂದೂ ತಿಳಿಯಲಾರನು; ತಸ್ಯ-ಆ, ಮಾತೃ ಯೌವನ ಹಾರಿಣಃ-ತಾಯಿಯ ತಾರುಣ್ಯವನ್ನು (ತನ್ನ ಪ್ರಸವದಿಂದ) ಅಪಹರಿಸಿದವನ, ಜನ್ಮ-ಜನ್ಮವು, ವೃಥಾ-ವ್ಯರ್ಥವೇ, ಭವೇತ್-ಆಗುತ್ತದೆ; (ಅವನು), ಅಧರ್ಮಂ-ಅಧರ್ಮವನ್ನು (ಅಕರ್ತವ್ಯವಾವುದೆಂಬುದನ್ನು) ನ ವಿಜಾನಾತಿ-ತಿಳಿಯುವುದಿಲ್ಲ; ಜ್ಞಾತ್ವಾ ಅಪಿ-ತಿಳಿದರೂ, ಅಮುಂ-ಅಧರ್ಮಾಚರಣೆಯನ್ನು ನ ತ್ಯಜತಿ-(ಸಾಧುಸಂಗ ವಿಲ್ಲದವನು), ಬಿಡುವುದಿಲ್ಲ; ಅಶೃಣ್ವನ್-ಶ್ರವಣ ಮಾಡದ, ಪುರುಷಃ-ಪುರುಷನು (ಅಧರ್ಮವನ್ನು ತ್ಯಜಿಸುವುದಿಲ್ಲ), ತಸ್ಮಾತ್-ಆದ್ದರಿಂದ, ಶ್ರವಣಂ-(ಸಜ್ಜನರ ಮುಖದಿಂದ ಭಗವನ್ಮಹಿಮೆಗಳನ್ನು ಪ್ರತಿಪಾದಿಸುವ ಶಾಸ್ತ್ರಾರ್ಥಗಳ) ಶ್ರವಣವನ್ನು ಸರ್ವದಾ-ಸದಾ, ಆಚರೇತ್-ಮಾಡುತ್ತಿರಬೇಕು; ಈದೃಶಂ-ಹೀಗಿರುವ (ಇಂಥ ಫಲವುಳ್ಳ), ಶ್ರವಣಂ-ಶ್ರವಣವು, ಶ್ರೇಷ್ಠಂ-ಶ್ರೇಷ್ಠವಾದುದು; ಸರ್ವೇಷಾಂ - ಸರ್ವರಿಗೂ,

---

ಸರಿ; ಅವನು ಸರಿತಪ್ಪುಗಳನ್ನು (ಧರ್ಮಾಧರ್ಮಗಳನ್ನು ತಾರತಮ್ಯಸಹಿತವಾದ ಶ್ರೀಹರಿಯ ಸರ್ವೋತ್ತಮತ್ವವನ್ನು) ಎಂದೂ ತಿಳಿಯುವುದಿಲ್ಲ. ಅವನ ಜನ್ಮವು ವ್ಯರ್ಥ—ಕೇವಲ ತನ್ನ ತಾಯಿಯ ತಾರುಣ್ಯವನ್ನು ಅಪಹರಿಸಿದ ಫಲವುಳ್ಳದ್ದು; ಸಾಧುಸಂಗವಿಲ್ಲದ ಪುರುಷನು, ಅಧರ್ಮವನ್ನು ತಿಳಿದರೂ ತ್ಯಜಿಸುವುದಿಲ್ಲ ಆದ್ದರಿಂದ ಶ್ರೇಷ್ಠವಾದ ಶ್ರವಣವನ್ನು ಸದಾ ಮಾಡುತ್ತಿರಬೇಕು; ಶ್ರವಣವು ಸರ್ವರಿಗೂ ಪರಮಹಿತ ಸಾಧಕವು; ಆದ್ದರಿಂದ ಸರ್ವದಾ ಸಾಧುಸಂಗದಲ್ಲಿ ದೊರೆಯುವ ಶ್ರವಣವನ್ನು ಅವಶ್ಯವಾಗಿ ಆಚರಿಸಬೇಕು—ಅದರಿಂದಲೇ ಮುಕ್ತಿಯು (೩೫-೩೭). ಹೇ ನಾರದ!

ಪರಮಂ ಹಿತಂ-ಅತ್ಯಂತ ಹಿತಸಾಧಕವು; ಅತಃ-ಆದ್ದರಿಂದ, ಸದ್ಭಿಃ-ಸತ್ಪುರುಷರಿಂದ, ಅನಿಶಂ-ನಿರಂತರವಾಗಿ, ಶ್ರವಣಂ-ಶ್ರವಣವನ್ನು ಕುರ್ಯಾತ್-ಮಾಡತಕ್ಕದ್ದು; ತೇನ-ಅದರಿಂದಲೇ, ಸದ್ಗತಿಃ-ಸದ್ಗತಿಯು (ಲಭಿಸುತ್ತದೆ).

ತದ್ದಿನಂ ದುರ್ದಿನಂ ವಿದ್ಧಿ ಮೇಘಛನ್ನಂ ನ ದುರ್ದಿನಂ ॥ ೩೮ ॥
ಯದ್ದಿನಂ ಹರಿಸಂಕೀರ್ತಿಕಥಾಮೃತವಿವರ್ಜಿತಂ ।
ಯಥೈವ ವಹ್ನಿಸಂಬಂಧಾಚ್ಛೀಘ್ರಂ ತೂಲಾದಿ ದಹ್ಯತೇ ॥ ೩೯ ॥
ಕಾಷ್ಠಾದಿಕಂ ವಿಲಂಬೇನ ತತೋಽಪ್ಯಾರ್ದ್ರೇಂಧನಾದಿಕಂ ॥ ೪೦ ॥
ಹೇಮಲೋಮಾದಿಕಂ ಚಾನ್ಯಚ್ಛುದ್ಧ್ಯತ್ಯೇವ ನ ದಹ್ಯತೇ ।
ಕಾನಿಚಿದ್ಬಲಹೀನಾನಿ ವಿದೀರ್ಯಂತೇ ಚ ಕಾನಿಚಿತ್ ॥ ೪೧ ॥
ತಥೈವ ನಾನಾಪಾಪಾನಿ ಪುಣ್ಯಾನ್ಯಪಿ ಚ ಕಾನಿಚಿತ್ ।
ಕೀರ್ತನಾಚ್ಛ್ರವಣಾದ್ಧ್ಯಾನಾತ್ತಥಾ ನಾಮಾರ್ಚನಾದಿನಾ ॥ ೪೨ ॥
ವಿನಶ್ಯಂತಿ ಚ ಶುದ್ಧ್ಯಂತಿ ದರ್ಶನಾದಪಿ ವೈ ಹರೇಃ ।
ತಸ್ಮಾತ್ತಸ್ಯ ಸದಾ ಕಾರ್ಯಂ ಕೀರ್ತನಶ್ರವಣಾದಿಕಂ ॥ ೪೩ ॥
ಸರ್ವದಾ ಹಿತಕೃತ್ತ್ವಾನ್ನಾನ್ಯದೀದೃಕ್ ಪ್ರಕೀರ್ತಿತಂ ।

ಯದ್ದಿನಂ-ಯಾವ ದಿನವು, ಹರಿಸಂಕೀರ್ತಿಕಥಾಮೃತ ವಿವರ್ಜಿತಂ-ಶ್ರೀಹರಿ ಸಂಕೀರ್ತನ ಮತ್ತು ಕಥಾಮೃತಗಳಿಂದ ರಹಿತವಾದುದು (ಯಾವ ದಿನದಲ್ಲಿ ಇವು ಆಚರಿಸಲ್ಪಡಲಿಲ್ಲವೋ), ತದ್ದಿನಂ-ಆ ದಿನವನ್ನು ದುರ್ದಿನಂ-ದುರ್ದಿನವೆಂದು (ಕೆಟ್ಟದಿನವೆಂದು), ವಿದ್ಧಿ-(ಹೇ ನಾರದ!), ತಿಳಿ; ಮೇಘಛನ್ನಂ-ಮೇಘಾಚ್ಛಾದಿತವಾದ

---

ಯಾವ ದಿನವು, ಕೀರ್ತನ ಕಥಾಮೃತ ಶ್ರವಣಗಳಿಂದ ರಹಿತವಾದುದೋ, ಆ ದಿನವನ್ನೇ ದುರ್ದಿನವೆಂದು ತಿಳಿ; ಮೋಡಕವಿದ ದಿನವಲ್ಲ; ಅಗ್ನಿ ಸಂಬಂಧದಿಂದ, ಹತ್ತಿರಾಶಿಯು, ತಕ್ಷಣದಲ್ಲಿ ದಹಿಸಿಹೋಗುತ್ತದೆ; ಕಟ್ಟಿಗೆ ಮೊದಲಾದವುಗಳು ಸ್ವಲ್ಪ ವಿಲಂಬದಿಂದ ಸುಟ್ಟುಹೋಗುತ್ತವೆ; ಅದಕ್ಕೂ ಅಧಿಕಕಾಲ ವಿಲಂಬದಿಂದ ಹಸಿಕಟ್ಟಿಗೆ ಮುಂತಾದವು ದಹಿಸಲ್ಪಡುತ್ತವೆ; ಭಂಗಾರ ಕಬ್ಬಿಣ ಮೊದಲಾದ ಕೆಲವು ವಸ್ತುಗಳು ಅಗ್ನಿಯಿಂದ ದಹಿಸಲ್ಪಡುವುದಿಲ್ಲ-ತಮ್ಮ ಮಲವನ್ನು ಕಳೆದುಕೊಂಡು ಶುದ್ಧವಾಗುತ್ತವೆ; ಮತ್ತೆ ಕೆಲವು ವಸ್ತುಗಳು—ಬಲಹೀನವಾದವುಗಳು—ಚಟಚಟ ಶಬ್ದಮಾಡಿ ಸೀಳಿಹೋಗುತ್ತವೆ; ಹೀಗೆಯೇ ಶ್ರೀಹರಿಯ ಕೀರ್ತನ ಶ್ರವಣಧ್ಯಾನಗಳಿಂದಲೂ, ಆತನ ನಾಮರೂಪಗಳ ಅರ್ಚನದಿಂದಲೂ,[1] ಅಧಿಕಾರಿ ಜೀವನ ಬಹುಪಾಪಗಳನ್ನೂ, ಸಮಸ್ತ

1. ನಾರಾಯಣಾದಿ ನಾಮಗಳನ್ನೂ, ರಾಮಕೃಷ್ಣಾದಿ ಸ್ವೇಷ್ಟರೂಪಗಳನ್ನೂ ಅಭಿಷೇಕಾದಿಗಳಿಂದ ಅರ್ಚಿಸುವುದೂ ಮಹಾಫಲಪ್ರದವು.

ದಿನವನ್ನು (ಸೂರ್ಯಪ್ರಕಾಶ ರಹಿತವಾದ ದಿನವು), ನ ದುರ್ದಿನಂ-ದುರ್ದಿನವಲ್ಲ (ಕೀರ್ತನ ಕಥಾಮೃತಾದಿಗಳಿಗೆ ಈ ಮಹಿಮೆ ಏಕೆಂದರೆ), ಯಥಾ-ಹೇಗೆ, ವಹ್ನಿಸಂಬಂಧಾತ್-ಅಗ್ನಿಯ ಸಂಬಂಧದಿಂದ, ತೂಲಾದಿ-ಹತ್ತಿ ಮೊದಲಾದುದು, ಶೀಘ್ರಂ-ತಕ್ಷಣದಲ್ಲಿ ದಹ್ಯತೇ ಏವ-ತಪ್ಪದೇ ದಹಿಸಿ ಹೋಗುತ್ತದೆಯೋ; ಕಾಷ್ಠಾದಿಕಂ-ಕಟ್ಟಿಗೆ ಮೊದಲಾದವು, ವಿಲಂಬೇನ-ಕಾಲವಿಲಂಬದಿಂದ (ಸ್ವಲ್ಪಕಾಲ ದಲ್ಲಿ ದಹಿಸಲ್ಪಡುತ್ತದೆಯೋ), ತತೋಪಿ-ಅದಕ್ಕೂ ಅಧಿಕ ವಿಲಂಬದಿಂದ, ಆರ್ದ್ರೇಂಧನಾದಿಕಂ-ಹಸಿಕಟ್ಟಿಗೆ ಮೊದಲಾದವು (ದಹಿಸಲ್ಪಡುತ್ತದೆಯೋ), ಚ-ಮತ್ತು ಹೇಮಲೋಹಾದಿಕಂ-ಭಂಗಾರ, ಕಬ್ಬಿಣ ಮೊದಲಾದ ಕಾನಿಚಿತ್-ಕೆಲವು ವಸ್ತುಗಳು, ನ ದಹ್ಯತೇ-ದಹಿಸಲ್ಪಡುವುದಿಲ್ಲ, ಶುದ್ಧ್ಯಂತಿ ಏವ-(ಮಲವನ್ನು ಕಳೆದುಕೊಂಡು ಶುದ್ಧಸ್ವರೂಪವನ್ನು ಮಾತ್ರ ಹೊಂದುತ್ತವೆಯೋ) ಶುದ್ಧಿಯನ್ನು ಮಾತ್ರ (ಅಗ್ನಿಯಿಂದ) ಹೊಂದುತ್ತವೆ; ಬಲಹೀನಾನಿ-ಬಲವಿಲ್ಲದ, ಕಾನಿಚಿತ್-ಕೆಲವು ಪದಾರ್ಥಗಳು, ವಿದೀರ್ಯಂತೇ ಚ-ಸೀಳುತ್ತವೆ (ಅಗ್ನಿಯಿಂದ ಒಡೆಯುತ್ತವೆ-ಬಿರುಕು ಬಿಡುತ್ತವೆ) ಮಾತ್ರ; ತಥಾ-ಹಾಗೆಯೇ, ಕೀರ್ತನಾತ್-(ಶ್ರೀಹರಿಯ) ನಾಮಕೀರ್ತನ ದಿಂದ (ಉಚ್ಚಾರದಿಂದ), ಶ್ರವಣಾತ್-ಆತನ ಮಹಿಮೆಗಳ ಶ್ರವಣದಿಂದ, ಧ್ಯಾನಾತ್-ಚಿಂತನದಿಂದ (ಆತನ ರೂಪಧ್ಯಾನದಿಂದ), ತಥಾ-ಮತ್ತು ನಾಮಾರ್ಚನಾದಿನಾ-ಆತನ ನಾಮರೂಪಾದಿಗಳ ಅರ್ಚನೆಯಿಂದಲೂ, ನಾನಾ ಪಾಪಾನಿ-ವಿವಿಧ ಪಾಪಗಳೂ, ಕಾನಿಚಿತ್-ಕೆಲವು, ಪುಣ್ಯಾನಿ ಚ-(ಮೋಕ್ಷ ಪ್ರತಿಬಂಧಕಗಳಾದ) ಅನಿಷ್ಟ ಪುಣ್ಯಗಳೂ, ವಿನಶ್ಯಂತಿ-ನಷ್ಟವಾಗುತ್ತವೆ; ಹರೇಃ-ಶ್ರೀಹರಿಯ, ದರ್ಶನಾತ್-ಅಪರೋಕ್ಷ ದರ್ಶನದಿಂದ, ಶುದ್ಧ್ಯಂತಿ-(ಜೀವರನ್ನು) ಶುದ್ಧಿಗೊಳಿಸುತ್ತವೆ (ಪ್ರತಿಬಂಧಕ ಪಾಪಪುಣ್ಯಗಳ ನಾಶದಿಂದ ಜೀವಸ್ವರೂಪಗಳು ಪವಿತ್ರವಾಗುತ್ತವೆ); ತಸ್ಮಾತ್-ಆದ್ದರಿಂದ (ಕೀರ್ತನಾದಿಗಳ ಮಾಹಾತ್ಮ್ಯೆಯು ಹೀಗಿರುವುದರಿಂದ),

ಅನಿಷ್ಟ ಪುಣ್ಯಗಳನ್ನೂ ನಾಶಮಾಡುವ ಶ್ರೀಹರಿಯ ಅಪರೋಕ್ಷ ದರ್ಶನದಿಂದಲೂ,[1] ಜೀವರು ಸ್ವರೂಪ ಶುದ್ಧಿಯನ್ನು ಹೊಂದುತ್ತಾರೆ. ಶ್ರವಣಾದಿಗಳ ಮಾಹಾತ್ಮ್ಯೆಯು ಹೀಗಿರುವುದರಿಂದ, ಸರ್ವದಾ ಅವುಗಳನ್ನು ಆಚರಿಸುತ್ತಿರಬೇಕು; ಇದಕ್ಕೆ ಸದೃಶವಾದ ಹಿತಸಾಧನೆಯು ಮತ್ತೊಂದಿಲ್ಲ; ಹೀಗೆಂಬುದು ಜ್ಞಾನಿಲೋಕದಲ್ಲಿ ಪ್ರಸಿದ್ಧವಾಗಿದೆ (೩೮-೪೩). ಸ್ವವಿಹಿತ ಕರ್ಮಾನುಷ್ಠಾನದಲ್ಲಿ ಅಶಕ್ತನೂ, ಎಂದೂ ದಾನಮಾಡುವ

1. 'ಅನಭೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ। ಕಿಮು ಪಾಪಂ ಪರಬ್ರಹ್ಮ ಜ್ಞಾನಿನೋ ನಾತ್ರ ಸಂಶಯಃ ।' (ಪಾದ್ಮ)—ಎಂದರೆ, 'ಜ್ಞಾನಿಯ (ಸಾಕ್ಷದ್ದರ್ಶನವನ್ನು ಪಡೆದ ಅಧಿಕಾರಿ ಜೀವನ). ಅನಾರಬ್ಧವಾದ ಅನಿಷ್ಟ (ಕಾಮ್ಯ) ಪುಣ್ಯವೂ ನಷ್ಟ, ಜ್ಞಾನಮಹಿಮೆಯಿಂದ ನಾಶ ಹೊಂದುತ್ತದೆ; ಹೀಗಿರಲು ಬ್ರಹ್ಮಜ್ಞಾನಿಯ ಪಾಪವು ನಿಃಶೇಷವಾಗಿ ನಾಶಹೊಂದುತ್ತದೆಂಬಲ್ಲಿ ಸಂಶಯವಿಲ್ಲ'.

ತಸ್ಯ- ಆತನ (ಶ್ರೀಹರಿಯ), ಕೀರ್ತನಶ್ರವಣಾದಿಕಂ- ಕೀರ್ತನಶ್ರವಣಾದಿಗಳನ್ನು (ಮನನ-ಧ್ಯಾನಗಳನ್ನು), ಸದಾ- ದಿನವೂ, ಕಾರ್ಯಂ- ಮಾಡತಕ್ಕದ್ದು ತತ್-ಅದೇ, ಸರ್ವದಾ-ಎಲ್ಲ ಕಾಲದಲ್ಲಿ ಹಿತಕೃತ್ ಸ್ಯಾತ್-ಹಿತಕರವಾದುದು ಆಗಿರುತ್ತದೆ; ಅನ್ಯತ್- ಬೇರಾವುದೂ, ಈದೃಕ್-ಈ ಪ್ರಕಾರವಾದುದು (ಮಹಿಮೆಯುಳ್ಳದ್ದು), ನ- ಅಲ್ಲವೆಂದು, ಪ್ರಕೀರ್ತಿತಂ-ಪ್ರಸಿದ್ಧವಾಗಿವೆ.

ಸ್ವಕರ್ಮಕರಣಾಶಕ್ತೋ ದರಿದ್ರೋ ದಾನವರ್ಜಿತಃ ॥ ೪೪ ॥
ಅಲ್ಪಾವಕಾಶಃ ಸ್ವಲ್ಪಾಯುರ್ಯೋ ವಾ ಕೋ ವಾ ಮುಮುಕ್ಷುಕಃ ।
ಸ ಕುರ್ಯಾದಾದರಂ ವಿಷ್ಣೋಃ ಕೀರ್ತನೇ ಶ್ರವಣೇಽಪಿ ವಾ ॥ ೪೫ ॥
ದೇಹಸ್ಯ ನ ಮಹಾಯಾಸೋ ನಾಪಿ ವಿತ್ತವ್ಯಯೋ ಮಹಾನ್ ।
ಮಹಾನಿಷ್ಟನಿವೃತ್ತಿಶ್ಚ ಮಹೇಷ್ಟಮಪಿ ಸಿದ್ಧ್ಯತಿ ॥ ೪೬ ॥

ಸ್ವಕರ್ಮಕರಣಾಶಕ್ತ-ಸ್ವವಿಹಿತ (ವರ್ಣಾಶ್ರಮ) ಕರ್ಮಗಳನ್ನು ಆಚರಿಸಲು ಅಶಕ್ತನಾದವನು, ವಾ-ಅಥವಾ (ಮತ್ತು), ದಾನವರ್ಜಿತಃ-ಎಂದೂ ದಾನವನ್ನು ಮಾಡದ, ದರಿದ್ರಃ-ದರಿದ್ರನೂ (ಕಡುಬಡವನೂ), ಅಲ್ಪಾವಕಾಶಃ-ಅಲ್ಪವಾದ ಅವಕಾಶ ಮಾತ್ರವುಳ್ಳವನು (ಇತರ ಅನಿವಾರ್ಯ ಕರ್ತವ್ಯಗಳಿಂದ ಅಥವಾ ಪ್ರಬಲ ಕಾರಣಗಳಿಂದ, ಅಥವಾ ಆಯುರ್ಮಾನದಲ್ಲಿ ಅಲ್ಪಕಾಲ ಮಾತ್ರ ಉಳಿದಿರುವುದ ರಿಂದ), ವಾ-ಅಥವಾ, ಅಲ್ಪಾಯುಃ-ಅಲ್ಪವಾದ ಆಯುಷ್ಯ ಮಾತ್ರವುಳ್ಳವನು, ಯೋ ವಾ ಕೋ ವಾ-ಯಾರೇ ಆಗಲಿ, ಮುಮುಕ್ಷುಕಃ-ಮೋಕ್ಷವನ್ನು ಆಶಿಸುವವನು, ಸಃ-ಅವನು, (ಇಂಥವನು), ವಿಷ್ಣೋಃ-ಶ್ರೀವಿಷ್ಣುವಿನ, ಕೀರ್ತನೇ-ಸ್ತುತಿಸುವುದ ರಲ್ಲಿ (ಮಹಿಮಾಜ್ಞಾನಯುಕ್ತನಾಗಿ ನಾಮಸಂಕೀರ್ತನದಲ್ಲಿ), ಅಪಿವಾ-ಮತ್ತು ಅಥವಾ, ಶ್ರವಣೇ-(ಸಾಧುಗಳಿಂದ ಶ್ರೀವಿಷ್ಣುಮಹಿಮೆಗಳನ್ನು) ಶ್ರವಣ ಮಾಡುವುದ ರಲ್ಲಿಯೂ, ಆದರಂ-ಆದರವನ್ನು (ವಿಶ್ವಾಸವನ್ನು-ಫಲಪ್ರದವೆಂಬ ನಂಬಿಕೆಯನ್ನು), ಕುರ್ಯಾತ್-ಮಾಡಬೇಕು; ದೇಹಸ್ಯ-(ಅದರಿಂದ) ದೇಹಕ್ಕೆ, ಮಹಾಯಾಸಃ- ಹೆಚ್ಚಾದ ಆಯಾಸವು (ಶ್ರಮವು), ನ-ಇಲ್ಲ ಮಹಾನ್-ಹೆಚ್ಚಾದ, ವಿತ್ತವ್ಯಯಃ-ದ್ರವ್ಯದ ಖರ್ಚು, ಅಪಿ ನ-ಸಹ ಇಲ್ಲ (ಇದು ಮಾತ್ರವಲ್ಲ-ಸುಲಭ ಸಾಧ್ಯವೆಂದು ಮಾತ್ರವಲ್ಲ),

---

ಸಾಮರ್ಥ್ಯವಿಲ್ಲದ ದರಿದ್ರನೂ, ಅಲ್ಪಾವಕಾಶವುಳ್ಳ ಅಲ್ಪಾಯುಗಳೂ, ಯಾರೇ ಆಗಲಿ, ಮೋಕ್ಷವನ್ನು ಅಪೇಕ್ಷಿಸುವವನು, ಶ್ರೀಹರಿಯ ಕೀರ್ತನ ಶ್ರವಣಾದಿಗಳನ್ನು ದಿನವೂ ತಪ್ಪದೇ ಆಚರಿಸಬೇಕು; ಅದರಲ್ಲಿ ಹೆಚ್ಚಾದ ಆದರವನ್ನು ಹೊಂದಿರಬೇಕು—ಇದಕ್ಕಾಗಿ ದೇಹದಿಂದ ಹೆಚ್ಚು ಆಯಾಸಪಡಬೇಕಾಗಿಲ್ಲ; ದ್ರವ್ಯ ವೆಚ್ಚವೂ ಇಲ್ಲ; ಸುಲಭ ಸಾಧ್ಯವಾದ ಈ ಸಾಧನೆಗಳಿಂದ ಮಹಾ ಅನಿಷ್ಟಗಳ ಪರಿಹಾರವಾಗಿ, ಮಹಾಭೀಷ್ಟಗಳೆಲ್ಲವೂ ದೊರೆಯುತ್ತವೆ (೪೪-೪೬). ಹೀಗಿರುವ ಶ್ರವಣ ಕೀರ್ತನಗಳಲ್ಲಿ ಆದರ

ಮಹಾನಿಷ್ಟ ನಿವೃತ್ತಿ:-ಮಹಾನಿಷ್ಟಗಳ ನಿವೃತ್ತಿಯೂ, (ಬರಲಿರುವ ಮಹಾ ಅನರ್ಥಗಳ ಪರಿಹಾರವೂ), ಚ-ಮತ್ತು ಮಹೇಷ್ಟಂ ಅಪಿ-ಮಹತ್ವವುಳ್ಳ ಅಭೀಷ್ಟಗಳೂ ಸಹ, ಸಿದ್ಧ್ಯತಿ-ಸಿದ್ಧಿಸುತ್ತದೆ.

ಯತ್ರಾದರಮಕುರ್ವಾಣೋ ಮೂಢಾನ್ಮೂಢತಮೋ ಹಿ ಸಃ ।
ಅಜ್ಞಾನಾಂ ಜ್ಞಾನದೋ ಯಃ ಸ್ಯಾನ್ಮಜ್ಜತಾಂ ತಾರಕಂ ಪರಂ ॥ ೪೭ ॥
ನಿಧಾನಮಧನಾನಾಂ ಚ ಶ್ರೇಯಃ ಶ್ರೇಯಸ್ತಮಾದಪಿ ।
ತಾಪಾಪಹಂ ಪ್ರತಪ್ತಾನಾಂ ಶ್ರವಣಂ ಕೀರ್ತನಂ ಹರೇಃ ॥ ೪೮ ॥
ನಾನೇನ ಸದೃಶಂ ಕಿಂಚಿತ್ಪರಮಂ ಹರಿತೋಷಣಂ ।
ಅತ ಏತತ್‌ದ್ವಯಂ ಕಾರ್ಯಂ ಸರ್ವದೈವ ಮುಮುಕ್ಷುಣಾ ॥ ೪೯ ॥

ಯತ್ರ-ಯಾವುದರಲ್ಲಿ (ಕೀರ್ತನ ಶ್ರವಣಗಳಲ್ಲಿ), ಆದರಂ-ಆಸಕ್ತಿಯನ್ನು ಅಕುರ್ವಾಣಃ-ಹೊಂದದ, ಸಃ-ಆ ಮನುಷ್ಯನೇ, ಮೂಢಾತ್-ಮೂರ್ಖನಗಿಂತ, ಮೂಢತಮಃ-ಅತ್ಯಂತ ಮೂರ್ಖನು; ಯಃ-ಯಾವಾತನು (ಶ್ರೀಹರಿಯು), ಅಜ್ಞಾನಾಂ-ಜ್ಞಾನವಿಲ್ಲದವರಿಗೆ, ಜ್ಞಾನದಃ-ಜ್ಞಾನಪ್ರದನು, ಸ್ಯಾತ್-ಆಗಿರುವನೋ; ಮಜ್ಜತಾಂ-(ಸಂಸಾರಸಾಗರದಲ್ಲಿ) ಮುಳುಗುತ್ತಿರುವವರಿಗೆ, ಪರಂ-ಶ್ರೇಷ್ಠನಾದ, ತಾರಕಂ-ರಕ್ಷಕನು (ಸಾಗರವನ್ನು ದಾಟಿಸುವವನು); ಅಧನಾನಾಂ-ದರಿದ್ರರಿಗೆ, ನಿಧಾನಂ-ಆಶ್ರಯನೂ; ಶ್ರೇಯಸ್ತಮಾತ್-ಉತ್ತಮ ಶ್ರೇಯಸ್ಸುಗಳೆಲ್ಲಕಿಂತ, ಶ್ರೇಯಃ-(ಶ್ರೀಹರಿಯು) ಶ್ರೇಯೋರೂಪನೂ ಆಗಿರುವನೋ (ಪುರುಷಾರ್ಥನೋ); ಹರೇಃ-(ಆ) ಶ್ರೀಹರಿಯು, ಶ್ರವಣಂ-ಶ್ರವಣವೂ, ಕೀರ್ತನಂ-ಸಂಕೀರ್ತನವೂ, ಪ್ರತಪ್ತಾನಾಂ-ದುಃಖಸಂತಪ್ತರಾದವರ, ತಾಪಾಪಹಂ-ತಾಪವನ್ನು ಪರಿಹರಿಸತಕ್ಕದ್ದಾಗಿದೆ; (ಮೇಲಾಗಿ), ಅನೇನ ಇದರಿಂದ (ಶ್ರವಣ ಕೀರ್ತನಗಳಿಂದ), ಸದೃಶಂ-ಸಮವಾದ, ಪರಮಂ-ಉತ್ತಮವಾದ, ಹರಿತೋಷಣಂ-ಶ್ರೀಹರಿಪ್ರೀತಿಯನ್ನು ದೊರಕಿಸುವ, ಕಿಂಚಿತ್-ಯಾವುದೊಂದೂ, ನ-ಇಲ್ಲ, ಅತಃ-ಆದ್ದರಿಂದ, ಮುಮುಕ್ಷುಣಾ-ಮೋಕ್ಷಾ

---

ಮಾಡದವನು, ಮೂಢರಲ್ಲಿ ಮೂಢತಮನು; ಶ್ರೀಹರಿಯು ಅಜ್ಞಾನಿಗಳಿಗೆ ಜ್ಞಾನಪ್ರದನೂ, ಸಂಸಾರ ಸಾಗರದಲ್ಲಿ ಮುಣುಗುತ್ತಿರುವವರನ್ನು ದಾಟಿಸುವವನೂ, ದರಿದ್ರರಿಗೆ ಆಶ್ರಯನೂ, ಎಲ್ಲ ಶ್ರೇಯಸ್ಸುಗಳಲ್ಲಿ ಪರಮ ಶ್ರೇಯೋರೂಪನೂ (ಪುರುಷಾರ್ಥ ಸ್ವರೂಪನೂ) ಆಗಿರುವನು; ಆತನ ಮಹಿಮಾ ಶ್ರವಣ ಮತ್ತು ನಾಮಸಂಕೀರ್ತನವು, ದುಃಖಸಂತಪ್ತರಾದವರ ಎಲ್ಲ ತಾಪಗಳನ್ನೂ ಪರಿಹರಿಸುತ್ತದೆ; ಇದಕ್ಕಿಂತ ಶ್ರೀಹರಿಪ್ರೀತಿಗೆ ಕಾರಣವಾಗುವ ಮತ್ತೊಂದು ಸಾಧನವಿಲ್ಲ; ಆದ್ದರಿಂದ ಸರ್ವಮುಮುಕ್ಷುಗಳೂ ಸದಾ ಈ ಎರಡನ್ನಾದರೂ, (ಕೀರ್ತನಶ್ರವಣಗಳನ್ನು) ತಪ್ಪದೇ ಆಚರಿಸಬೇಕು (೪೭-೪೯). ಎಲ್ಲಿ ಸತ್ಪುರುಷರ ಸಹವಾಸವಿರುವುದೋ, ಅದು ಕೀಕಟ

ಪೇಕ್ಷೆಯಿಂದ, ಸರ್ವದಾ ಏವ-ಎಲ್ಲ ಕಾಲದಲ್ಲಿಯೂ, ಏತತ್‌ದ್ವಯಂ-ಈ ಎರಡು (ಶ್ರವಣ ಕೀರ್ತನಗಳು), ಕಾರ್ಯಂ-ಮಾಡಲ್ಪಡತಕ್ಕದ್ದು.

**ಸ ಏವ ದೇಶೋಽತಿಪವಿತ್ರ ಈರಿತೋ ।**
**ಯಃ ಕೀಕಟಾಖ್ಯೋಽತಿವಿಗರ್ಹಿತೋಽಪಿ ॥**
**ಸ ಏವ ಕಾಲೋಽತಿಪವಿತ್ರ ಉಚ್ಯತೇ ।**
**ಯತ್ರೈವ ಸದ್ಭಿಃ ಸಹ ಸಂಗತಿಃ ಸ್ಯಾತ್ ॥ ೫೦ ॥**
**ತತ್ರೈವ ಗಂಗಾಯಮುನಾ ಚ ತತ್ರ ।**
**ಗೋದಾವರೀ ತತ್ರ ಸರಸ್ವತೀ ಚ ॥**
**ಸರ್ವಾಣಿ ತೀರ್ಥಾನಿ ವಸಂತಿ ತತ್ರ ।**
**ಯತ್ರಾಚ್ಯುತೋದಾರಕಥಾಪ್ರಸಂಗಃ ॥ ೫೧ ॥**

ಸಃ ಏವ ದೇಶಃ-ಆ ದೇಶವೇ, ಅತಿಪವಿತ್ರಃ-ಅತ್ಯಂತ ಪವಿತ್ರವೆಂದು, ಈರಿತಃ-ಹೇಳಲ್ಪಡುತ್ತದೆ; ಯಃ-ಯಾವುದು, ಕೀಕಟಾಖ್ಯಃ-ಕೀಕಟವೆಂಬ, ಅತಿ ವಿಗರ್ಹಿತಃ ಅಪಿ-ಅತಿ ನಿಂದಿತವಾದ ದೇಶವಾದರೂ (ಅದೇ ಪವಿತ್ರ ದೇಶವು); ಯತ್ರ-ಎಲ್ಲಿ (ಯಾವ ದೇಶದಲ್ಲಿ), ಸದ್ಭಿಃ-ಸಾಧುಗಳಿಂದ, ಸಹ-ಕೂಡಿ, ಸಂಗತಿಃ-ಸಹವಾಸವು, ಸ್ಯಾತ್-ಆಗುವುದೋ (ಆ ದೇಶವೇ ಪವಿತ್ರ ದೇಶವು); ಸಃ ಏವ ಕಾಲಃ-ಅದೇ ಕಾಲವೇ (ಸಾಧುಸಂಗವಿರುವ ಕಾಲವೇ), ಅತಿ ಪವಿತ್ರಃ-ಅತ್ಯಂತ ಪವಿತ್ರಕಾಲವೆಂದು, ಉಚ್ಯತೇ-ಹೇಳಲ್ಪಡುತ್ತದೆ; ಯತ್ರ-ಎಲ್ಲಿ, ಅಚ್ಯುತೋದಾರ ಕಥಾಪ್ರಸಂಗಃ-ಶ್ರೀಹರಿಯ ಉತ್ಕೃಷ್ಟವಾದ ಕಥಾಪ್ರಸಕ್ತಿಯೋ (ಶ್ರೇಷ್ಠವಾದ ಶ್ರೀವಿಷ್ಣು ಮಹಿಮೆಗಳ ಪ್ರಸಂಗವು ನಡೆದಿರುವುದೋ), ತತ್ರ ಏವ-ಅಲ್ಲಿಯೇ, ಗಂಗಾ-ಭಾಗೀರಥಿಯು, ಚ-ಮತ್ತು ತತ್ರ-ಅಲ್ಲಿ ಯಮುನಾ-ಯಮುನೆಯು, ಚ-ಹಾಗೂ, ತತ್ರ-ಅಲ್ಲಿ ಗೋದಾವರೀ-ಗೋದಾವರಿಯು, ಸರಸ್ವತೀ-ಸರಸ್ವತಿಯು; ತತ್ರ-ಅಲ್ಲಿ

---

ಮೊದಲಾದ ನಾಮವುಳ್ಳ ಅತಿ ತುಚ್ಛವಾದ (ನಿಂದಿತವಾದ) ದೇಶವಾದರೂ, ಅದೇ ಅತಿ ಪವಿತ್ರ ದೇಶವೆಂದೂ, ಸತ್ಸಂಗವಿರುವ ಕಾಲವೇ ಅತಿ ಪವಿತ್ರಕಾಲವೆಂದೂ ಹೇಳಲ್ಪಡುತ್ತದೆ; ಎಲ್ಲಿ ಹರಿಕಥಾ ಪ್ರಸಂಗವೋ, (ಎಲ್ಲಿ ಶ್ರೀ ಅಚ್ಯುತನ ಉತ್ಕೃಷ್ಟ ಮಹಿಮಾಪ್ರತಿಪಾದಕ ಸಂಭಾಷಣೆಗಳೋ), ಅಲ್ಲಿ ಗಂಗಾ, ಯಮುನಾ, ಗೋದಾವರೀ, ಸರಸ್ವತೀ, ಮತ್ತು ಇತರ ಸರ್ವ ಪವಿತ್ರ ತೀರ್ಥಾಭಿಮಾನಿ ದೇವತೆಗಳೆಲ್ಲರೂ ಇರುವರು (ಸನ್ನಿಹಿತರಾಗಿರುತ್ತಾರೆ—ಸಾಧುಸಂಗದಲ್ಲಿ ಹರಿಕಥಾ ಪ್ರಸಂಗವಿರುವುದರಿಂದ, ಈ ಎಲ್ಲ ತೀರ್ಥಾಭಿಮಾನಿಗಳ ಸಾನ್ನಿಧ್ಯವೂ ಇರುತ್ತದೆ); (೫೦-೫೧). ಸಂಸಾರಚಕ್ರದಲ್ಲಿ ಸುತ್ತುತ್ತಿರುವ ಮನುಷ್ಯರಿಗೆ ಇಹಪರಗಳಲ್ಲಿ

(ಹರಿಕಥಾಪ್ರಸಂಗವಿದ್ದಲ್ಲಿ), ಸರ್ವಾಣಿ - ಸಮಸ್ತ ತೀರ್ಥಾನಿ-ತೀರ್ಥಗಳೂ (ತೀರ್ಥಾಭಿಮಾನಿ ದೇವತೆಗಳೂ), ವಸಂತಿ-ಇರುತ್ತಾರೆ.

**ಸಂಸಾರಚಕ್ರೇ ಭ್ರಮತಾಂ ನರಾಣಾಂ ।**
**ಇಹಾಪ್ಯಮುತ್ರಾಪಿ ಮಹಾಫಲಪ್ರದಃ ॥**
**ಸತ್ಸಂಗ ಏಕೋಽಸ್ತಿ ನ ಹೀತರಸ್ಯಾ-**
**ದ್ಯತ್ರಾಚ್ಯುತೋದಾರಕಥಾಪ್ರಸಂಗಃ ॥ ೫೨ ॥**

ಯತ್ರ-ಎಲ್ಲಿ ಅಚ್ಯುತೋದಾರ ಕಥಾಪ್ರಸಂಗಃ-ಶ್ರೀಹರಿಯ ಉತ್ಕೃಷ್ಟವಾದ ಮಹಿಮಾನುವಾದ ಪ್ರಸಂಗವೋ, (ಅದೇ), ಸತ್ಸಂಗಃ ಏಕಃ-ಸಾಧುಸಂಗ ಒಂದು ಮಾತ್ರ, ಅಸ್ತಿ-ಆಗಿರುತ್ತದೆ; ಇತರಃ-ಬೇರಾವುದೂ, ನ ಸ್ಯಾತ್-ಅಲ್ಲ (ಆಗುವುದಿಲ್ಲ); (ಸಜ್ಜನ ಸಮೂಜದಲ್ಲಿ ಮಾತ್ರ ಅಚ್ಯುತ ಕಥಾಪ್ರಸಂಗವಿರುತ್ತದೆ—ಅನ್ಯತ್ರವಲ್ಲ); ಸಂಸಾರಚಕ್ರೇ-ಸಂಸಾರ ಚಕ್ರದಲ್ಲಿ (ಸಿಕ್ಕಿ), ಭ್ರಮತಾಂ-ಸುತ್ತುತ್ತಿರುವ, ನರಾಣಾಂ-ಮನುಷ್ಯರಿಗೆ, ಇಹಾಪಿ-ಇಲ್ಲಿಯೂ, ಅಮುತ್ರಾಪಿ-ಪರದಲ್ಲಿಯೂ, ಮಹಾಫಲಪ್ರದಃ-ಉತ್ಕೃಷ್ಟ ಫಲವನ್ನು ಕೊಡುವುದು; (ಸತ್ಸಂಗಃ ಏಕಃ-ಸಾಧುಸಂಗ ಒಂದೇ—ಅನ್ಯದಾವುದೂ ಅಲ್ಲ).

**ಯತ್ಕೀರ್ತನಾಚ್ಛ್ರವಣಾದ್ಯಸ್ಯ ಗಾನಾತ್ ।**
**ಯತ್ಸಂಸ್ಮೃತೇಶ್ಚಾಪಿ ಯದರ್ಚನೇನ ॥**
**ಸರ್ವೇಷ್ಟಸಿದ್ಧಿಃ ಸತತಂ ಪ್ರಜಾಯತೇ ।**
**ಸ ಏಕ ಏವಾಸ್ತಿ ರಮಾಪತಿಃ ಪ್ರಭುಃ ॥ ೫೩ ॥**

ಯತ್ಕೀರ್ತನಾತ್-ಯಾರನ್ನು ಸ್ತುತಿಸುವುದರಿಂದ, ಶ್ರವಣಾತ್-(ಯಾರ ಮಹಿಮೆಗಳನ್ನು) ಶ್ರವಣಮಾಡುವುದರಿಂದ, ಯಸ್ಯ-ಯಾರ, ಗಾನಾತ್-(ಗುಣ) ಗಾನದಿಂದ, ಯದರ್ಚನೇನ-ಯಾರ ಅರ್ಚನೆಯಿಂದ, ಚ-ಮತ್ತು ಯತ್ಸಂಸ್ಮೃತೇಃ ಅಪಿ-ಯಾರ ಸ್ಮರಣದಿಂದ ಸಹ, ಸತತಂ-ಎಂದೂ (ಸದಾ), ಸರ್ವೇಷ್ಟಸಿದ್ಧಿಃ-ಸಕಲಾಭಿಷ್ಟಪ್ರಾಪ್ತಿಯು, ಪ್ರಜಾಯತೇ-ಉಂಟಾಗುವುದೋ, ಸಃ-ಆತನು, ಪ್ರಭುಃ-ಸರ್ವಶಕ್ತನಾದ (ಸರ್ವವನ್ನೂ ಆಳುವ ಮಹಾಸ್ವಾಮಿಯಾದ), ರಮಾಪತಿಃ-ಲಕ್ಷ್ಮೀಪತಿಯಾದ ನಾರಾಯಣನು, ಏಕಃ ಏವ-ಒಬ್ಬನು ಮಾತ್ರ, ಅಸ್ತಿ-ಇರುವನು.

---

ಮಹಾಫಲಪ್ರದವಾದುದು, ಸದಾ ಅಚ್ಯುತಕಥಾಪ್ರಸಂಗವಿರುವ, ಸತ್ಸಂಗ ಒಂದೇ-ಅನ್ಯವಾದುದು, ಯಾವುದೊಂದೂ ಅಲ್ಲವೇ ಅಲ್ಲ (೫೨). ಯಾರ ನಾಮಸಂಕೀರ್ತನದಿಂದ, ಯಾರ ಮಹಿಮೆಗಳ ಶ್ರವಣದಿಂದ, ಯಾರ ಅರ್ಚನದಿಂದ, ಮತ್ತು ಯಾರ ಸ್ಮರಣದಿಂದ ಸಹ, ಸದಾ ಸರ್ವಾಭೀಷ್ಟಗಳ ಸಿದ್ಧಿಯು ತಪ್ಪದೇ ದೊರೆಯುವುದೋ, ಆತನು, ಜಗತ್ಪ್ರಭುವಾದ, ಲಕ್ಷ್ಮೀಪತಿಯೊಬ್ಬನೆ (೫೩).

ಯಚ್ಛ್ರೂಯಮಾಣಂ ಹರತೇ ಮನಾಂಸಿ ।
ಯತ್ಪಾನತಃ ಸ್ಯಾದಧಿಕಾ ಪಿಪಾಸಾ ॥
ನವೋ ನವೋ ಯತ್ರ ರಸಶ್ಚ ಲಭ್ಯತೇ ।
ಕೋ ನಾಮ ತಸ್ಮಾದ್ವಿರಜೇದ್ರಸಜ್ಞಃ ॥ ೫೪ ॥

ಶ್ರೂಯಮಾಣಂ-ಕೇಳಲ್ಪಟ್ಟ ಯತ್-ಯಾವುದು, ಮನಾಂಸಿ-(ಕೇಳುವವರ) ಮನಸ್ಸುಗಳನ್ನು ಹರತೇ-ಅಪಹರಿಸುತ್ತದೆಯೋ (ಆಕರ್ಷಿಸುವುದೋ), ಯತ್ಪಾನತಃ-ಯಾವುದರ ಪಾನದಿಂದ (ಕಥಾಮೃತವನ್ನು ಶ್ರವಣ ಪುಟದಿಂದ ಪಾನಮಾಡಿದರೆ), ಅಧಿಕಾ-(ಮೊದಲಿಗಿಂತ) ಹೆಚ್ಚಾದ, ಪಿಪಾಸಾ-ನೀರಡಿಕೆಯು (ಮತ್ತೂ ಪಾನಮಾಡಬೇಕೆಂಬ ದಾಹವು), ಸ್ಯಾತ್-ಉಂಟಾಗುವುದೋ, ಯತ್ರ-ಎಲ್ಲಿ (ಯಾವುದರ ಶ್ರವಣದಲ್ಲಿ), ನವಃ ನವಃ-ಹೊಸಹೊಸದಾದ (ನೂತನವಾದ), ರಸಶ್ಚ-ರಸವೂ, ಲಭ್ಯತೇ-ದೊರೆಯುತ್ತದೆಯೋ, ತಸ್ಮಾತ್-ಅಂತಹ ಹರಿಕಥಾ ಶ್ರವಣದಿಂದ, ರಸಜ್ಞ-ಸಾರಜ್ಞನು (ಸಾರವನ್ನು ಗ್ರಹಿಸಬಲ್ಲ), ಕೋ ನಾಮ-ಯಾರುತಾನೇ, ವಿರಜೇತ್-ರಹಿತನಾದಾನು? (ಬಿಟ್ಟಾನು? ಎಂದೂ ತ್ಯಜಿಸುವುದಿಲ್ಲ).

ಏವಂ ವಿಧಾದ್ಯೋ ಹರಿಸತ್ಕಥಾಮೃತಾ-
ದ್ವಿರಕ್ತಚಿತ್ತಃ ಪಶುರೇವ ಸಾಕ್ಷಾತ್ ॥
ಅಶೃಂಗಪುಚ್ಛೋ ದ್ವಿಪದೋ ನ ಹೀತರಃ ।
ಸ್ಯಾಚ್ಚೇನ್ಮೃತೋ ಭವಿತಾ ನಾರಕೀ ಸಃ ॥ ೫೫ ॥

---

ಯಾವುದರ ಶ್ರವಣವು ಮನಸ್ಸನ್ನು ಆಕರ್ಷಿಸುವುದೋ (ಮನೋಹರವಾದುದೋ), ಯಾವುದರ ಪಾನದಿಂದ ತೃಷೆಯು (ಕಡಿಮೆಯಾಗುವುದರ ಬದಲು) ಹೆಚ್ಚೇ ಆಗುವುದೋ, ಮತ್ತು ಯಾವುದರಲ್ಲಿ (ಪ್ರತಿಕ್ಷಣವೂ) ಹೊಸಹೊಸ ರಸವು ದೊರೆಯುವುದೋ, ಅಂತಹ ಹರಿಕಥಾಮೃತವನ್ನು ಯಾವ ಸಾರಗ್ರಾಹಿಯು, ತೊರೆಯುವನು? (ಸರ್ವಥಾ ಬಿಡುವುದಿಲ್ಲ) (೫೪). ಈ ವಿಧ ಮಹಿಮೆಯುಳ್ಳ ಶ್ರೀಹರಿಯ ಶ್ರೇಷ್ಠವಾದ ಕಥಾಮೃತದಿಂದ ಆಕರ್ಷಿತವಾಗದ ಚಿತ್ತವುಳ್ಳ ಮನುಷ್ಯನು, ಕೋಡುಬಾಲಗಳಿಲ್ಲದ, ಎರಡು ಕಾಲಿನ ಪಶುವೇ ಸರಿ—ಬೇರೆಯಲ್ಲ; ಈತನು ಮರಣಾನಂತರ, ತಪ್ಪದೇ ನರಕವಾಸವನ್ನೇ[1] ಹೊಂದುತ್ತಾನೆ (೫೫). ಲೋಕದಲ್ಲಿ

1. 'ನರಕ' ಶಬ್ದದಿಂದ ಯಮಲೋಕದ ಯಾತನಾಸ್ಥಾನಗಳೊಂದಿಗೆ ಪಶು ಪಕ್ಷಿ ಸಸ್ಯಾದಿ ಯೋನಿಗಳನ್ನೂ ತಿಳಿಯಬೇಕು; ಹರಿಕಥೆಯಲ್ಲಿ ತಿರಸ್ಕಾರ ಬುದ್ಧಿಯುಳ್ಳವನಾದರೆ ಒಂದನೇ ನರಕವನ್ನೂ, ಉದಾಸೀನನಾಗಿ ತೊರೆದಿದ್ದರೆ ಎರಡನೇ ನರಕವನ್ನೂ ಹೊಂದುವನೆಂದು ತಿಳಿಯಬೇಕು

ಯಃ-ಯಾವ ಮನುಷ್ಯನು, ಏವಂ ವಿಧಾತ್-ಈ ವಿಧವಾದ (ಈ ಮಹಿಮೆಯುಳ್ಳ), ಹರಿ ಸತ್ಕಥಾಮೃತಾತ್-ಶ್ರೀಹರಿಯ ಉತ್ಕೃಷ್ಟಕಥೆಯೆಂಬ ಅಮೃತದಿಂದ, ವಿರಕ್ತಚಿತ್ತಃ-ಆಸಕ್ತಿ ಇಲ್ಲದ ಮನಸ್ಸುಳ್ಳವನೋ (ಕಥಾಮೃತವನ್ನು ತ್ಯಜಿಸಿದವನೋ), (ಸಃ-ಆತನು), ಅಶೃಂಗಪುಚ್ಛಃ-ಕೋಡುಬಾಲವಿಲ್ಲದ, ದ್ವಿಪದಃ-ಎರಡು ಕಾಲಿನ, ಸಾಕ್ಷಾತ್ ಪಶುಃ ಏವ-ಪ್ರತ್ಯಕ್ಷ (ಮನುಷ್ಯನಾದರೂ) ಪಶುವೇ ಸರಿ; ನ ಹಿ ಇತರಃ-ಬೇರೆಯಲ್ಲ; ಸಃ-ಆತನು, ಮೃತಃ ಚೇತ್-ಮರಣಹೊಂದಿದರೆ, ನಾರಕೀ-ನರಕವಾಸಿಯು, ಭವಿತಾ ಸ್ಯಾತ್-ಆಗುವುದೇ ನಿಶ್ಚಯವು.

ಪ್ರಾಯೇಣ ಯನ್ನಿಷ್ಫಲಮೇವ ಲೋಕೇ ।
ಸ್ತೋಕಪ್ರದಂ ವಾಪಿ ಕಥಂಚನ ಸ್ಯಾತ್ ॥
ವದೇತ್ಸ್ಮರೇತ್ ಶೃಣುಯಾಚ್ಚ ಶಶ್ವತ್ ।
ಮಹಾಫಲಂ ವಿಷ್ಣುಕಥಾಮೃತಂ ತ್ಯಜೇತ್ ॥ ೫೬ ॥

ಲೋಕೇ-ಲೋಕದಲ್ಲಿ, ಪ್ರಾಯೇಣ-ಬಹಳವಾಗಿ, (ಬಹುಜನರು), ಯತ್-ಯಾವುದು, ನಿಷ್ಫಲಂ-ಫಲವಿಲ್ಲದುದೋ, ಅಪಿ ವಾ-ಅಥವಾ, ಕಥಂಚನ-ಬಹು ಶ್ರಮದಿಂದ, ಸ್ತೋಕಪ್ರದಂಏವ-ಅಲ್ಪ (ಕ್ಷುದ್ರವೂ ನಶ್ವರವೂ ಆದ) ಫಲವನ್ನು ಮಾತ್ರ ಕೊಡುವುದು, ಸ್ಯಾತ್-ಆಗಿರುವುದೋ, ತತ್-ಅದನ್ನೇ, ವದೇತ್-ಹೇಳುತ್ತಾರೆ, ಸ್ಮರೇತ್-ಸ್ಮರಿಸುತ್ತಾರೆ, ಚ-ಹಾಗೂ, ಶಶ್ವತ್-ಸರ್ವದಾ, ಶೃಣುಯಾತ್-ಕೇಳುತ್ತಾರೆ; ಮಹಾಫಲಂ-ಮಹಾಫಲವುಳ್ಳ, ವಿಷ್ಣುಕಥಾಮೃತಂ-ಶ್ರೀಹರಿಯ ಕಥಾಮೃತವನ್ನು ತ್ಯಜೇತ್-ತೊರೆದುಬಿಡುತ್ತಾರೆ.

ಏತಾವತಾಲಂ ಸಕಲೇಶ್ವರೋಹಂ ।
ಯಚ್ಛ್ರೀಪತೇಃ ಸದ್ಗುಣವೀರ್ಯಸಂಭಾನ್ ॥
ಶೃಣ್ವನ್ ಪ್ರಗಾಯನ್ ಅಥ ಕೀರ್ತಯಂಶ್ಚ ।
ತೃಪ್ಯಾಮಿ ನಾದ್ಯಾಪಿ ನವಂ ನವಂ ಸ್ವದನ್ ॥ ೫೭ ॥

---

ಪ್ರಾಯಃ (ಬಹುವಾಗಿ—ಬಹುಜನರು), ನಿಷ್ಫಲವಾದ ಅಥವಾ ಕಷ್ಟದಿಂದ ಅಲ್ಪ ಫಲವನ್ನು ಕೊಡುವುದನ್ನೇ ಹೇಳುತ್ತಾರೆ, ಸ್ಮರಿಸುತ್ತಾರೆ, ಸದಾ ಶ್ರವಣಮಾಡುತ್ತಾರೆ; ಮಹಾಫಲಪ್ರದವಾದ ಶ್ರೀವಿಷ್ಣು ಕಥಾಮೃತವನ್ನು ತ್ಯಜಿಸುತ್ತಾರೆ (೫೬). ಹದಿನಾಲ್ಕು ಲೋಕದ ಆಳುವ ಸ್ವಾಮಿಯೂ, ಮಹೈಶ್ವರ್ಯಯುಕ್ತವಾದ ಸತ್ಯಲೋಕದಲ್ಲಿರುತ್ತಿರುವನೂ ಆದ ನಾನು, ಅದ್ಯಾಪಿ, ಲಕ್ಷ್ಮೀಪತಿಯಾದ ಶ್ರೀಮಹಾವಿಷ್ಣುವಿನ ಕಲ್ಯಾಣ ಗುಣಗಣಗಳ, ನಿರಂತರ ಶ್ರವಣ, ಗಾನ, ಕೀರ್ತನೆಗಳಲ್ಲಿಯೇ ಆಸಕ್ತನಾದರೂ, ನಿತ್ಯನೂತನ ರುಚಿಯನ್ನೇ ಕಾಣುತ್ತಲಿರುವುದರಿಂದ, ತೃಪ್ತನಾಗುತ್ತಿರುವುದಿಲ್ಲ—ಮತ್ತೆ

(ವಿಷ್ಣುಕಥಾಮೃತವೇ ಅತ್ಯಾದರಣೀಯವೆಂಬಲ್ಲಿ ನಾನೇ ನಿದರ್ಶನದಂತಿರುವೆ ನೆನ್ನುತ್ತಾನೆ- ಬ್ರಹ್ಮದೇವ;) ಏತಾವತಾ ಅಲಂ-ಇಷ್ಟೇ ಸಾಕು (ನನ್ನ ನಿದರ್ಶನವೇ ಸಾಕು); ಸಕಲೇಶ್ವರಃ-(೧೪ ಲೋಕಗಳಿಗೆ ಒಡೆಯನಾದ) ಸರ್ವನಿಯಾಮಕನಾದ, ಅಹಂ-ನಾನು, ಶ್ರೀಪತೇಃ-ಲಕ್ಷ್ಮೀಪತಿಯಾದ ಶ್ರೀವಿಷ್ಣುವಿನ, ಸದ್ಗುಣ ವೀರ್ಯ ಸಂಘಾನ್-ಕಲ್ಯಾಣ ಗುಣಗಳನ್ನೂ, ಅಚಿಂತ್ಯಶಕ್ತ್ಯಾದಿ-ಮಹಿಮೆಗಳ ಗಣಗಳನ್ನೂ, ಶೃಣ್ವನ್-ಶ್ರವಣ ಮಾಡುತ್ತಲೂ, ಪ್ರಗಾಯನ್-(ಭಕ್ತಿಪೂರ್ವಕ, ಉಚ್ಚಕಂಠದಿಂದ) ಗಾನಮಾಡುತ್ತಲೂ, ಅಥ-ಮತ್ತು ಕೀರ್ತಯನ್ ಚ-ಕೀರ್ತಿಸುತ್ತಲೂ (ಸ್ತುತಿಸುತ್ತಲೂ), ಇದ್ದರೂ, ಅದ್ಯಾಪಿ-ಈಗಲೂ, ನವಂನವಂ-ಹೊಸಹೊಸ ರುಚಿಯನ್ನು ಸ್ವದನ್-ಆಸ್ವಾದಿಸುತ್ತ, ನ ತೃಪ್ಯಾಮಿ-ತೃಪ್ತನಾಗುತ್ತಿರುವುದಿಲ್ಲ (ಹೀಗಿರುವಾಗ ಆ ಅಮೃತವನ್ನು ತ್ಯಜಿಸುವುದೆಂತು?).

ಶ್ರೋತುಂ ಸಮೀಹೇಽನ್ಯಮುಖಾದಪಿ ಸ್ಮ ।
ಯದ್ಯಪ್ಯಹಂ ಸರ್ವವಿದಾಂ ವರಿಷ್ಠಃ ॥
ವರಾಯುರದ್ಯಾಪಿ ಕಥಂ ನ ಮನ್ಯೇ ।
ಮಂದಾಯುಷಸ್ತ್ರ ನ ಚಾದ್ರಿಯಂತೇ ॥ ೫೮ ॥
ಶ್ರುತ್ವಾಲ್ಪಮೇವಾಲಮಿತಿ ಸ್ಮ ಮನ್ಯತೇ ।
ಸರ್ವಜ್ಞ ಇತ್ಯೇವ ತತೋಽಭಿಮನ್ಯತೇ ॥
ಅತ್ಯಲ್ಪಮಾಯುರ್ಬಹುಮನ್ಯಮಾನೋಽ-
ತ್ಯಲ್ಪೇನ ಮಾದ್ಯೇತ ಧನಾದಿನಾಲ್ಪಕಃ ॥ ೫೯ ॥

---

ಮತ್ತೆ ಅದೇ ಅಮೃತವನ್ನು ಆಸ್ವಾದಿಸಲು ಇಚ್ಛಿಸುತ್ತೇನೆ; ವಿಷ್ಣುಕಥಾಮೃತವೇ ಅತ್ಯಾದರಣೀಯವೆಂಬಲ್ಲಿ ಈ ನನ್ನ ಅನುಭವವೇ ಸಾಕಷ್ಟೆ (೫೭). ಯದ್ಯಪಿ, ಸರ್ವಜ್ಞಾನಿಗಳಲ್ಲಿ ಶ್ರೇಷ್ಠನು; ಹೀಗಿದ್ದರೂ ಅನ್ಯಭಗವದ್ಭಕ್ತರ ಮುಖದಿಂದ ಶ್ರೀವಿಷ್ಣು ಮಹಿಮೆಗಳನ್ನು ಶ್ರವಣಮಾಡಲು ಉತ್ಸಾಹಿಸುತ್ತೇನೆ;[1] ಪರಾಯುವಾದ ನಾನೂ ಸಹ, ಕ್ಷಣಮಾತ್ರವೂ ಬಿಡದಂತೆ ಕಥಾಮೃತ ಶ್ರವಣಾದಿಗಳಲ್ಲಿ ಆಸಕ್ತನಾಗಿರುವಾಗ,

---

1. ಭಗವನ್ಮಹಿಮೆಗಳ ವರ್ಣನೆಯು, ಅವರವರ (ತಾರತಮ್ಯದಲ್ಲಿ ಕೆಳಗಿನ ಭಕ್ತರ) ಮುಖದಿಂದ ಬಂದರೂ ಉತ್ತಮರು ಆದರಿಸುತ್ತಾರೆ—ಆದರಿಸಬೇಕೆಂಬಲ್ಲಿ ಬ್ರಹ್ಮದೇವನೇ ನಿದರ್ಶನನು; ಭಗವದ್ಗುಣವು ಸ್ವರೂಪಸ್ಥಿತವಾದ ಆನಂದವನ್ನು ಉದ್ರೇಕಿಸುವ ಸಾಧನವು—ಅದರ ನಿರೂಪಣೆಯು ಅಧಮರಿಂದ ಆದ ಮಾತ್ರದಿಂದ, ಆ ಗುಣಕ್ಕೆ ಯಾವ ಪ್ರಕಾರದ ಕೊರತೆಯೂ (ನ್ಯೂನತೆಯೂ) ಉಂಟಾಗುವುದಿಲ್ಲ—ತನ್ನ ಕಾರ್ಯದಲ್ಲಿ ಅದು ಸದಾ ಏಕಪ್ರಕಾರಕ ಸಾಮರ್ಥ್ಯವುಳ್ಳದ್ದೇ ಆಗಿರುತ್ತದೆ.

ಪಶ್ಯೇದ್ವಿವೇಕೇನ ಯದಾ ಸ್ವತೋಽಧಿಕಾನ್ ।
ಶ್ರುತೇನ ಬುದ್ಧ್ಯಾ ವಯಸಾ ಧನಾದಿನಾ ॥
ಶೃಣ್ವನ್ ಕಥಾಶ್ಚಾಪಿ ಪುರಾತನಾನಾಂ ।
ನ ತುಚ್ಛಮಾತ್ಮಾನಮವೇತಿ ಮೂಢಧೀಃ ॥ ೬೦ ॥

ಅಹಂ-ನಾನು, ಯದ್ಯಪಿ, ಸರ್ವಏದಾಂ-ಸಕಲಜ್ಞಾನಿಗಳಿಗೆ, ವರಿಷ್ಠಃ-ಶ್ರೇಷ್ಠನೇ (ಆಗಿದ್ದೇನೆ); (ಹೀಗಿದ್ದರೂ) ಅನ್ಯಮುಖಾತ್ ಅಪಿ-(ಭಗವದ್ಭಕ್ತರಾದ) ಇತರರ ಮುಖದಿಂದಲಾದರೂ, ಶ್ರೋತುಂ-(ಭಗವನ್ಮಹಿಮೆಗಳನ್ನು) ಕೇಳಲು, ಸಮೀಹೇಸ್ಮ-ಉತ್ಸಾಹಪೂರ್ವಕ ಇಚ್ಛಿಸುತ್ತೇನೆ; ಪರಾಯುಃ-ಪರನಾಮಕ (ದೀರ್ಘತಮಗಳಾದ ೧೦೦ ವರ್ಷಗಳ) ಆಯುಷ್ಯವುಳ್ಳವನಾದರೂ, (ಒಂದು ಕ್ಷಣವನ್ನು ವ್ಯರ್ಥಗೊಳಿಸ ದಂತೆ, ಶ್ರವಣಮಾಡಲು, ಸಮೀಹೇ-ಉತ್ಸಾಹಿಸುತ್ತೇನೆ); ಮಂದಾಯುಷಃ-ಅಲ್ಪಾಯುಷ್ಯವುಳ್ಳವರು, ತತ್ರ-ವಿಷ್ಣುಕಥಾಶ್ರವಣದಲ್ಲಿ, ಕಥಂ-ಹೇಗೆ, ನ ಆದ್ರಿಯಂತೇ-ಆದರವನ್ನು ಹೊಂದುವುದಿಲ್ಲ (ಎಂಬುದನ್ನು), ನ ಮನ್ಯೇ-ತಿಳಿಯೆನು (ಅದಕ್ಕೆ ಕಾರಣವನ್ನು ತಿಳಿಯನೆಂದಲ್ಲ; ಅತ್ಯಾಶ್ಚರ್ಯವೆಂದರ್ಥ); ಅಲ್ಪಂ ಏವ-ಸ್ವಲ್ಪವನ್ನೇ, (ಅಲ್ಪಗುಣಗಳನ್ನು ಅಲ್ಪಕಾಲದಲ್ಲಿ), ಶ್ರುತ್ವಾ-ಕೇಳಿ, ಅಲಂ ಇತಿ-ಸಾಕೆಂದು (ಪೂರ್ಣವಾಗಿ ಕೇಳಿರುವೆನೆಂದು), ಮನ್ಯತೇ ಸ್ಮ-ತಿಳಿಯುತ್ತಾನೆ; ತತಃ-ಅಷ್ಟು ಶ್ರವಣದಿಂದಲೇ, ಸರ್ವಜ್ಞಃ ಇತ್ಯೇವ-(ತನ್ನನ್ನು) ಸರ್ವಜ್ಞನೆಂದೇ, ಅಭಿಮನ್ಯತೇ-(ದೃಢವಾಗಿ) ತಿಳಿಯುತ್ತಾನೆ; ಅತ್ಯಲ್ಪಂ-ಅತ್ಯಂತ ಅಲ್ಪವಾದ, ಆಯುಃ-ಆಯುಷ್ಯವನ್ನು ಬಹುಮನ್ಯಮಾನಃ-ದೀರ್ಘಾವಧಿಯುಳ್ಳದ್ದೆಂದು ತಿಳಿಯುವನಾಗಿ, ಅಲ್ಪಕಃ-ಅಲ್ಪನಾದ ಮಾನವನು, ಅತ್ಯಲ್ಪೇನ-ಅತಿಸ್ವಲ್ಪವಾದ, ಧನಾದಿನಾ-ಧನಾದಿಗಳಿಂದ, ಮಾದ್ಯೇತ-ಗರ್ವಿತನಾಗುತ್ತಾನೆ; ಶ್ರುತೇನ-ಶ್ರವಣಾದಿಗಳಿಂದ (ಬಹುಶ್ರುತತ್ವಾದಿಗಳಿಂದ, ಅಥವಾ

---

ಅಲ್ಪಾಯುಗಳಾದ ಮನುಷ್ಯಮಾತ್ರರು, ಹೇಗೆ ಶ್ರವಣಾದಿಗಳಲ್ಲಿ ಆದರವನ್ನು ಹೊಂದುವುದಿಲ್ಲವೆಂಬುದನ್ನು ತಿಳಿಯೆನು (ಆಶ್ಚರ್ಯ!); ಮಾನವನು, ಸ್ವಲ್ಪಕಾಲ, ಸ್ವಲ್ಪ ಭಗವದ್ಗುಣಗಳನ್ನೇ ಕೇಳಿ, ಪೂರ್ಣ ಶ್ರವಣವಾಯಿತೆಂದು ಭಾವಿಸಿ ಸರ್ವಜ್ಞನೆಂದೇ ತನ್ನನ್ನು ತಿಳಿಯುತ್ತಾನೆ. ಅಲ್ಪಾಯುವಾದರೂ ದೀರ್ಘಕಾಲಾವಕಾಶವಿರುವುದೆಂದೂ, ಅಲ್ಪಧನಾದಿಗಳಿಂದ, ಬಹು ದೊಡ್ಡ ಶ್ರೀಮಂತನೆಂದೂ ತಿಳಿದು ಗರ್ವಿಸುತ್ತಾನೆ—ಆತಏವ ಈತನೇ ಅಲ್ಪಕನು—ತುಚ್ಛನು; ಶ್ರವಣದಿಂದ (ಅಧ್ಯಯನಾದಿಗಳಿಂದ), ಬುದ್ಧಿಬಲದಿಂದ, ವಯಸ್ಸಿನಿಂದ ಮತ್ತು ಧನಾದಿಗಳಿಂದ, ತನಗಿಂತ ಅಧಿಕರನ್ನು ವಿವೇಚಿಸಿ ನೋಡಿಯೂ, ಈ ಮುಂತಾದ ಗುಣಗಳಿಂದ ಆಢ್ಯರಾದ ಪೂರ್ವಿಕರ ಚರಿತ್ರೆಗಳನ್ನು ಕೇಳಿಯೂ, ತನ್ನ ಅಲ್ಪತ್ವವನ್ನು ತಿಳಿಯದವನೇ ಮೂಢಬುದ್ಧಿಯು—ಮೂರ್ಖನು (೫೮-೬೦). ವಿವಿಧವಾದ, ಅಯುತ (೧೦,೦೦೦), ಲಕ್ಷ ಯೋನಿಗಳಲ್ಲಿ

ವೇದಾಧ್ಯಯನಾದಿಗಳಿಂದ), ಬುದ್ಧ್ಯಾ-ಬುದ್ಧಿಬಲದಿಂದಲೂ, ವಯಸಾ-ವಯಸ್ಸಿನಿಂದಲೂ, ಧನಾದಿನಾ-ಧನಾದಿ ಸಂಪತ್ತುಗಳಿಂದಲೂ, ಸ್ವತಃ ಅಧಿಕಾನ್-ತನಗಿಂತ ದೊಡ್ಡವರನ್ನು (ಅಧಿಕರನ್ನು), ವಿವೇಕೇನ-ವಿವೇಚಿಸಿ, ಯದಾ ಪಶ್ಯೇತ್-ಯಾವಾಗ ತಿಳಿಯುವನೋ; ಅಪಿ ಚ-ಮತ್ತೂ ಪುರಾತನಾನಾಂ-(ಈ ಗುಣಗಳಿಂದ ಆಢ್ಯರಾದ) ಪೂರ್ವಿಕರ, ಕಥಾಃ-ಚರಿತ್ರೆಗಳನ್ನು ಶೃಣ್ವನ್-ಕೇಳಿದವನಾಗಿಯೂ, ಆತ್ಮಾನಂ-ತನ್ನನ್ನು, ಅಲ್ಪಂ-ಅಲ್ಪನೆಂದು, ನ ಅವೇತಿ-(ಯಾರು) ತಿಳಿಯುವುದಿಲ್ಲವೋ, ಮೂಢಧೀಃ-(ಅವನೇ) ಮೂಢ ಬುದ್ಧಿಯು (ಮೂರ್ಖನು).

ಪ್ರಭ್ರಾಮ್ಯ ನಾನಾಯುತ ಲಕ್ಷಯೋನೀಃ ।
ಸುದುರ್ಲಭಂ ಮಾನುಷಮಾಪ್ಯ ಜನ್ಮ ॥
ಕರೋತಿ ನೈವಾತ್ಮಹಿತಂ ವಿಮೂಢ-
ಸ್ತಮಾರೂಢಚ್ಯುತಮಾಹುರ್ನಿತಾಂತಂ ॥ ೬೧ ॥

ನಾನಾಯುತ ಲಕ್ಷಯೋನೀಃ-ವಿವಿಧ ಅಯುತ, ಲಕ್ಷ ಯೋನಿಗಳನ್ನು (ಪಶುಪಕ್ಷಿವೃಕ್ಷಾದಿ ಬಹುದೇಹಗಳನ್ನು ಹೊಂದುತ್ತ), ಪ್ರಭ್ರಾಮ್ಯ-ಕಷ್ಟದಿಂದ ಸುತ್ತಿ (ಅಲ್ಲಿ ನಾನಾದುಃಖಗಳನ್ನನುಭವಿಸಿ, ಸುದುರ್ಲಭಂ-ಬಹುದುರ್ಲಭವಾದ (ಪೂರ್ವದ ಬಹುಪುಣ್ಯಫಲದಿಂದ ಮಾತ್ರ ದೊರೆಯುವ), ಮಾನುಷಂ ಜನ್ಮ-ಮನುಷ್ಯಜನ್ಮವನ್ನು ಆಪ್ಯ-ಹೊಂದಿ, ವಿಮೂಢಃ-ಅತಿಮೂರ್ಖನಾದವನು, ಆತ್ಮಹಿತಂ-ತನ್ನ ಹಿತವನ್ನು (ಶ್ರೇಯಸ್ಸನ್ನು), ನೈವ ಕರೋತಿ-ಮಾಡಿಕೊಳ್ಳುವುದಿಲ್ಲ ತಂ-ಆತನನ್ನು (ಅಂಥವನನ್ನು), ನಿತಾಂತಂ-ಅತ್ಯಂತವಾಗಿ (ನಿಸ್ಸಂಶಯವಾಗಿ), ಆರೂಢಚ್ಯುತಂ-'ಆರೂಢಚ್ಯುತ'ನೆಂದು, ಆಹುಃ-(ಜ್ಞಾನಿಗಳು) ಕರೆಯುತ್ತಾರೆ.

ಅತ್ಯಲ್ಪಮಾಯುಸ್ತದುಪದ್ರವಾಸ್ತ್ವೈ-
ರಾಶಾಸಹಸ್ರೈರ್ಗ್ರಥಿತಂ ದಿನೇ ದಿನೇ ॥
ಅಥಾಪಿ ವಿದ್ವಾನ್ ಪ್ರಯತೇತ ಸರ್ವಥಾ ।
ಸತ್ಸಂಗಮಾಯ್ಯೈವ ನ ಹೀತರಾದ್ಧಿತಂ ॥ ೬೨ ॥

---

(ದೇಹಗಳಲ್ಲಿ) ಸುತ್ತಿ ಅತ್ಯಂತ ದುರ್ಲಭವಾದ ಮನುಷ್ಯ ಜನ್ಮವನ್ನು ಹೊಂದಿಯೂ, ಆತ್ಮಹಿತವನ್ನು ಸಾಧಿಸಿಕೊಳ್ಳದವನೇ ವಿಮೂಢನು (ಅತಿ ಮೂರ್ಖನು)-ಇಂಥವನನ್ನು 'ಆರೂಢ ಚ್ಯುತ' ಎನ್ನುವರು (ಆರೂಢ ಚ್ಯುತನೆಂದರೆ, ಉಚ್ಚಸ್ಥಾನಕ್ಕೇರಿ ಅಲ್ಲಿಂದ ಕೆಳಗೆ ಬಿದ್ದವನು—ಉ ಚ್ಚ ತ ಮ ವಾ ದ ಮನುಷ್ಯ ದೇಹವನ್ನು—ಸಾಧನದೇಹಗಳಲ್ಲಿ ಶ್ರೇಷ್ಠವಾದ ದೇಹವನ್ನು ಹೊಂದಿಯೂ ಅದರ ಉಪಯೋಗ ಮಾಡಿಕೊಳ್ಳದ ಮೂರ್ಖನು, ಪುನಃ ಪಶ್ವಾದಿ ನೀಚಯೋನಿಗಳನ್ನೇ ಹೊಂದುತ್ತಾನೆ) (೬೧).

ಅತ್ಯಲ್ಪಂ-(ಮನುಷ್ಯನಿಗೆ) ಬಹು ಅಲ್ಪಾವಧಿಯ, ಆಯುಃ-ಆಯುಷ್ಯವು; ತತ್-ಅದು, ದಿನೇದಿನೇ-ಪ್ರತಿದಿನವೂ, ಉಪದ್ರವಾನ್ವಿತ್ಯೈಃ-ಉಪದ್ರವಗಳಿಂದ (ವಿವಿಧ ಪೀಡೆಗಳಿಂದ) ಕೂಡಿದ, ಅಶಾಸಹಸ್ರೈಃ-(ಅತ ಏವ ಪೂರ್ಣವಾಗಿ ದೊರಕಿಸಿ ಕೊಳ್ಳಲಾಗದ) ಸಹಸ್ರಾರು ಆಶೆಗಳಿಂದ, ಗ್ರಥಿತಂ-ಬದ್ಧವಾದುದು; ಅಥಾಪಿ-ಮನುಷ್ಯ ಜನ್ಮ ಈ ವಿಧವಾದುದಾದರೂ, ವಿದ್ವಾನ್-ವಿವೇಕಿಯಾದವನು (ಶಾಸ್ತ್ರಜ್ಞಾನಿಯು, ವಿಶೇಷವಾಗಿ), ಸರ್ವಥಾ-ಸರ್ವಪ್ರಕಾರದಿಂದ, ಸತ್ಸಂಗಮಾಯ ಏವ-ಸಾಧು ಸಂಗಕ್ಕಾಗಿಯೇ, ಪ್ರಯತೇತ-ಯತ್ನಿಸಬೇಕು; ಇತರಾತ್-ಬೇರಾವುದರಿಂದಲೂ, ಹಿತಂ-(ಸ್ವಹಿತ-ಪರಹಿತಗಳು) ಹಿತವು, ನ-ಸಾಧಿಸುವುದಿಲ್ಲ.

ಚಿಂತಾಕುಲೋಽಪಿ ವ್ಯಥಿತೋಽಪಿ ಪೂರುಷಃ ।
ಸತ್ಸಂಗಲಬ್ಧ್ವಾ ಶೃಣುಯಾದ್ದಿನೇದಿನೇ ॥
ನಿಶ್ಚಿಂತಚಿತ್ತೋ ನ ಭವೇದಯಂ ಕ್ವಚಿತ್ ।
ಜೀವೇತ ಯಾವತ್ ಪ್ರಯತೇತ ತಾವತ್ ॥ ೬೩ ॥

ಪೂರುಷಃ-ಮನುಷ್ಯನು, ಚಿಂತಾಕುಲೋಽಪಿ-ಚಿಂತೆಗಳಿಂದ ಆವೃತನಾದರೂ, ವ್ಯಥಿತಃ ಅಪಿ-ಪರಿಪರಿಯ ವ್ಯಥೆಗಳುಳ್ಳವನಾದರೂ, ಸತ್ಸಂಗಲಬ್ಧ್ವಾ-ಸಾಧುಸಂಗವನ್ನು ಹೊಂದಿ, ದಿನೇದಿನೇ-ಪ್ರತಿದಿನದಲ್ಲಿ ಶೃಣುಯಾತ್-(ಶ್ರೀವಿಷ್ಣುಕಥಾ) ಶ್ರವಣಮಾಡಬೇಕು; ಅಯಂ-ಈ ಮನುಷ್ಯನು, ಕ್ವಚಿತ್-ಎಂದೂ, ನಿಶ್ಚಿಂತಚಿತ್ತಃ-ಚಿಂತೆಯಿಲ್ಲದ ಮನಸ್ಸುಳ್ಳವನು, ನ ಭವೇತ್-ಆಗುವುದಿಲ್ಲ; (ಆದ್ದರಿಂದ-ನಿಶ್ಚಿಂತನಾದಾಗ ಶ್ರವಣಾದಿಗಳೆಂದು ತಿಳಿದು ಸುಮ್ಮನಿರತಕ್ಕದ್ದಲ್ಲವಾದ್ದರಿಂದ), ಯಾವತ್ ಜೀವೇತ-ಬದುಕಿರುವವರೆಗೆ, ತಾವತ್-ಆ ಪರ್ಯಂತ, ಪ್ರಯತೇತ-(ಸಾಧುಸಂಗ-ಶ್ರವಣಾದಿಗಳಿಗಾಗಿ) ಯತ್ನಿಸಬೇಕು.

---

ಮನುಷ್ಯನು ಆಯುಷ್ಯವು ಅತ್ಯಲ್ಪವಾದುದು; ಬಹು ಉಪದ್ರವಗಳಿಂದ ಕೂಡಿದುದು; ಹೀಗಿದ್ದರೂ ಸಹಸ್ರಾರು ಆಶೆಗಳಿಂದ ಬದ್ಧವಾದುದು; ಇಂಥ ದೇಹದಿಂದ ಸಹ, ವಿವೇಕಿಯು, ಸಾಧುಸಂಗವನ್ನು ದೊರಕಿಸಿಕೊಂಡು, ವಿಷ್ಣುಕಥಾಶ್ರವಣಾದಿಗಳ ಅವಕಾಶವನ್ನು ಸರ್ವಪ್ರಯತ್ನದಿಂದ ಕಲ್ಪಿಸಿಕೊಳ್ಳಬೇಕು; ಬೇರಾವುದೂ ಹಿತಸಾಧಕವಲ್ಲ (೬೨). ಸತ್ಪುರುಷ ಸಹವಾಸವನ್ನು ಪಡೆದ ಪುರುಷನು, ಬಹುಚಿಂತೆಯಿಂದ ನಿತ್ಯವೂ ವ್ಯಥಿತನಾಗಿದ್ದರೂ ಸಹ, ಶ್ರವಣಾದಿಗಳನ್ನು ಮಾಡಬೇಕು—ನಿಶ್ಚಿಂತೆಯ ಸ್ಥಿತಿಯು, ಮನುಷ್ಯ ದೇಹದಲ್ಲಿ ಎಂದಿಗೂ ಪ್ರಾಪ್ತವಾಗುವುದೇ ಇಲ್ಲ; ಆದ್ದರಿಂದ ಚಿಂತಾವ್ಯಥೆಯು ಪರಿಹಾರವಾದನಂತರ ಶ್ರವಣಾದಿ ಸಾಧನೆಗಳಲ್ಲಿ ತೊಡಗಬಹುದೆಂದು ತಿಳಿಯದೇ, ಬದುಕಿರುವವರೆಗೆ ಶ್ರವಣಾದಿಗಳಿಗೆ ಯತ್ನಿಸುತ್ತಲೇ ಇರಬೇಕು (೬೩). ಭಗವನ್ಮಹಿಮೆಗಳನ್ನೂ ಅವುಗಳನ್ನು ಪ್ರತಿಪಾದಿಸುವ ಶಾಸ್ತ್ರಗಳನ್ನೂ

**ಶ್ರುತ್ವಾಖಿಲಂ ತನ್ಮನಸಾವಧಾರ್ಯ ।**
**ನಿಶ್ಚಿತ್ಯ ಕಾರ್ಯಂ ಚ ಯದಪ್ಯಕಾರ್ಯಂ ॥**
**ಹಿತಾಹಿತಂ ನಿತ್ಯಮನಿತ್ಯಮುತ್ತಮಂ ।**
**ಬಧ್ನೀತ ನಿತ್ಯೇ ಸ್ವಮನೋ ಹರೇಃ ಪದೇ ॥ ೬೪ ॥**

ಅಖಿಲಂ-ಸಕಲವನ್ನು, ಶ್ರುತ್ವಾ-ಕೇಳಿ, ತತ್-ಆ ಎಲ್ಲವನ್ನೂ, ಮನಸಾ-ಮನಸ್ಸಿನಲ್ಲಿ ಅವಧಾರ್ಯ-ಧಾರಣ ಮಾಡಿ, ಕಾರ್ಯಂ-ಕಾರ್ಯವನ್ನು (ಕರ್ತವ್ಯವನ್ನೂ), ಚ-ಮತ್ತು ಯತ್ ಅಕಾರ್ಯಂ ಅಪಿ-ಯಾವುದು ಅಕಾರ್ಯವೋ (ಮಾಡತಕ್ಕದ್ದಲ್ಲವೋ; ಅದನ್ನು), ನಿಶ್ಚಿತ್ಯ-ನಿರ್ಣಯಿಸಿಕೊಂಡು, ಹಿತಾಹಿತಂ-ಹಿತ, ಅಹಿತವನ್ನೂ, ನಿತ್ಯಮನಿತ್ಯಂ-ನಿತ್ಯವನ್ನೂ ಅನಿತ್ಯವನ್ನೂ, ಉತ್ತಮಂ (ನಿಶ್ಚಿತ್ಯ)-ಶ್ರೇಷ್ಠವಾದುದನ್ನು ನಿಶ್ಚಯಿಸಿಕೊಂಡು, ಸ್ವಮನಃ-ತನ್ನ ಮನಸ್ಸನ್ನು, ನಿತ್ಯೇ-ನಿತ್ಯವಾದ (ಶಾಶ್ವತ ಆಶ್ರಯವಾದ), ಹರೇಃ-ಶ್ರೀವಿಷ್ಣುವಿನ, ಪದೇ-ಪಾದಗಳಲ್ಲಿ, ಬಧ್ನೀತ-ಬಂಧನ ಮಾಡಬೇಕು (ಸ್ಥಿರವಾಗಿ ನಿಲ್ಲಿಸಬೇಕು).

**ಕ್ರಮೇಣ ಸಂಪಾದ್ಯ ಶಮಂ ದಮಂ ಚ ।**
**ವಿವೇಕದೃಷ್ಟ್ಯಾ ವಿರಜೇತಾಖಿಲಾಚ್ಚ ॥**
**ಸುಖಾದೈಹಿಕಾಮುಷ್ಮಿಕಾಚ್ಚಾಪ್ಯನಿತ್ಯಾ-**
**ದ್ದುಷ್ಟಾತ್ ಸ್ತೋಕಾಚ್ಚುದ್ಧಧೀರ್ಮೋಕ್ತುಮಿಚ್ಛನ್ ॥ ೬೫ ॥**

ಕ್ರಮೇಣ-ಕ್ರಮವಾಗಿ, ಶಮಂ-ಶಮವನ್ನೂ (ಭಗವನ್ನಿಷ್ಠೆಯನ್ನೂ), ದಮಂ ಚ-(ಇಂದ್ರಿಯ ನಿಗ್ರಹವನ್ನೂ) ದಮವನ್ನೂ ಸಂಪಾದ್ಯ-ದೊರಕಿಸಿಕೊಂಡು, ವಿವೇಕ ದೃಷ್ಟ್ಯಾ-(ನಿತ್ಯಾನಿತ್ಯ) ವಿವೇಕಜ್ಞಾನದಿಂದ, ಅಖಿಲಾತ್ ಚ-(ಭಗವದನ್ಯವಾದ) ಸಮಸ್ತ ವಸ್ತುಗಳಿಂದಲೂ, ವಿರಜೇತ-ವಿರಕ್ತನಾಗಬೇಕು (ಅವುಗಳಲ್ಲಿ ಆಸಕ್ತಿಯನ್ನು ತೊರೆಯಬೇಕು); (ಅಖಿಲಾತ್ ಎಂಬುದರಿಂದ ವಿವಕ್ಷಿತವಾದುದನ್ನು ವಿವರಿಸುತ್ತಾನೆ);

---

ಶ್ರವಣಮಾಡಿ, ಕರ್ತವ್ಯ, ಅಕರ್ತವ್ಯಗಳನ್ನು ನಿಶ್ಚಯಿಸಿಕೊಳ್ಳಬೇಕು; ನಿತ್ಯಾನಿತ್ಯ ವಿವೇಕಜ್ಞಾನದಿಂದ ಹಿತಾಹಿತಗಳನ್ನು ತಿಳಿದು, ನಿತ್ಯಾಶ್ರಯವಾದ ಶ್ರೀವಿಷ್ಣುಪಾದದಲ್ಲಿ ತನ್ನ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬೇಕು (೬೪). ಕ್ರಮವಾಗಿ ಭಗವನ್ನಿಷ್ಠ ಬುದ್ಧಿಯನ್ನೂ ಇಂದ್ರಿಯನಿಗ್ರಹವನ್ನೂ ಸಂಪಾದಿಸಿ ವೃದ್ಧಿಗೊಳಿಸಿಕೊಳ್ಳುತ್ತ ವಿವೇಕಜ್ಞಾನದಿಂದ, ಅನಿತ್ಯವೂ, ದೋಷಯುಕ್ತವೂ, ತುಚ್ಛವೂ ಆದ ಇಹಪರ ಸುಖಗಳಲ್ಲಿ ಆಸಕ್ತಿಯನ್ನು ತೊರೆಯಬೇಕು—ವಿಶೇಷವಾದ ಅಂತಃಕರಣ ಶುದ್ಧಿಯನ್ನು ಸಂಪಾದಿಸಬೇಕು (೬೫). ಗೂಢವಾದ ಉಪನಿಷದರ್ಥ ವಿಶೇಷಗಳನ್ನೂ, ವೇದಾರ್ಥ ನಿರ್ಣಯಜ್ಞಾನವನ್ನೂ ವೃದ್ಧಿಗೊಳಿಸಿಕೊಳ್ಳುತ್ತ ನಿತ್ಯವೂ ಶ್ರೀಹರಿಯ ಧ್ಯಾನದಲ್ಲಿ ಉದ್ಯುಕ್ತನಾಗಬೇಕು;

ಅನಿತ್ಯಾತ್-ಅನಿತ್ಯವೂ, ದುಷ್ಟಾತ್-ದೋಷಯುಕ್ತವೂ, ಸ್ತೋಕಾತ್-ಅಲ್ಪವೂ, (ತುಚ್ಛವೂ), (ಆದ), ಐಹಿಕಾತ್-ಇಹಲೋಕದ, ಚ-ಹಾಗೂ, ಆಮುಷ್ಮಿಕಾತ್-ಪರಲೋಕದ (ಸ್ವರ್ಗಾದಿಗಳ), ಸುಖಾತ್-ಸುಖದಿಂದ (ವಿರಜೇತ-ವಿರಕ್ತನಾಗ ಬೇಕು); ಮೋಕ್ಷಂ-ಬಿಡುಗಡೆಯನ್ನು ಹೊಂದಲು (ಸಂಸಾರದಿಂದ ಮುಕ್ತನಾಗಲು), ಇಚ್ಛನ್-ಇಚ್ಛಿಸುವವನಾಗಿ, ಶುದ್ಧಧೀಃ-ಶುದ್ಧಾಂತಕರಣವುಳ್ಳವನು (ಆಗಬೇಕು).

ವೇದಾಂತಾನಾಂ ಜ್ಞಾನಮುತ್ಪಾದ್ಯ ಚಿತ್ರಂ ।
ಕುರ್ಯಾನ್ನಿತ್ಯಂ ಧ್ಯಾನಮೇವೇಶ್ವರಸ್ಯ ॥
ಧ್ಯಾನಾಭಾವೇ ಚಿಂತಯೇದ್ವಿಷ್ಣುಕರ್ಮಾ-
ಣ್ಯೇವಂ ದೇಹಂ ಸಾರ್ಥಕಂ ಸ್ವಸ್ಯ ಕುರ್ಯಾತ್ ॥ ೬೬ ॥

ಚಿತ್ರಂ-ಅಲೌಕಿಕವಾದ (ಭಗವತ್ಸಂಬಂಧವಾದ), ವೇದಾಂತಾನಾ-ವೇದ ನಿರ್ಣಯಗಳ (ಉಪನಿಷತ್ತುಗಳ, ಅಥವಾ ಬ್ರಹ್ಮಸೂತ್ರಗಳ), ಜ್ಞಾನಂ-ಜ್ಞಾನವನ್ನು ಉತ್ಪಾದ್ಯ-ಯತ್ನದಿಂದ ಹುಟ್ಟಿಸಿಕೊಂಡು (ಸಂಪಾದಿಸಿ), ನಿತ್ಯಂ-ಪ್ರತಿದಿನವೂ, ಈಶ್ವರಸ್ಯ-ಶ್ರೀಹರಿಯ, ಧ್ಯಾನಂ ಏವ-ಧ್ಯಾನವನ್ನೇ, ಕುರ್ಯಾತ್-ಮಾಡಬೇಕು

ಧ್ಯಾನದಿಂದ ಮನಸ್ಸನ್ನು ಶ್ರೀಹರಿಯಲ್ಲಿ ನಿಲ್ಲಿಸಲು ಅಸಮರ್ಥನಾದರೆ, [1]ವಿಷ್ಣು ಪ್ರೀತಿಕರವಾದ ಕರ್ಮಗಳನ್ನೇ ಚಿಂತಿಸಿ, ಆಚರಿಸಬೇಕು (ಅಥವಾ ಸರ್ವಕರ್ಮಗಳನ್ನು ಆತನ ಪ್ರೀತಿಗಾಗಿಯೇ ಆಚರಿಸಬೇಕು); ಹೀಗೆ, ತನಗೆ ದೊರೆತ ಮಾನುಷ್ಯ ದೇಹವನ್ನು ಸಫಲಮಾಡಿಕೊಳ್ಳಬೇಕು (೬೬). ಧ್ಯಾನದಿಂದ ಸುಪ್ರೀತನಾಗಿಯೇ ಶ್ರೀಹರಿಯು, ಅಧಿಕಾರಿಗೆ ತನ್ನ ಸಾಕ್ಷಾತ್ ದರ್ಶನವನ್ನು ಅನುಗ್ರಹಿಸುತ್ತಾನೆ; ಆ ಮುಂದೆ ಶೀಘ್ರವಾಗಿ,

1. 'ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥
ಅಭ್ಯಾಸೇಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥
ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥' (ಗೀತಾ)

ಇವುಗಳ ಭಾವಾರ್ಥ:—ಧ್ಯಾನಾರ್ಥವಾಗಿ ಮನಸ್ಸನ್ನು ಏಕಾಗ್ರವಾಗಿ ನಿಶ್ಚಂಚಲವಾಗಿ ನಿಲ್ಲಿಸಲು ಅಶಕ್ತನಾದರೆ, ನನ್ನ ಪ್ರಾಪ್ತಿಯನ್ನಪೇಕ್ಷಿಸಿ, ಅದಕ್ಕಾಗಿ ಅಭ್ಯಾಸ ಯೋಗದಲ್ಲಿ ತೊಡಗು; ಅದಕ್ಕೂ ಅಸಮರ್ಥನಾದರೆ, ನನ್ನ ಉದ್ದೇಶವಾಗಿ ಕರ್ಮಗಳನ್ನು ಮಾಡು; ಅದರಿಂದಲೂ ಸಿದ್ಧಿಯನ್ನು ಹೊಂದುವಿ (ಮನಃಶುದ್ಧಿಯನ್ನೂ ಧ್ಯಾನಶಕ್ತಿಯನ್ನೂ ಪಡೆಯುವಿ); ಇದಕ್ಕೂ ಅಶಕ್ತನಾದರೆ, ನನ್ನಲ್ಲಿಯೇ ಸರ್ವಕರ್ಮಗಳನ್ನು ಅರ್ಪಿಸುವುದೆಂಬ (ನನ್ನ ಪ್ರೀತಿಗಾಗಿಯೇ ಸರ್ವಕರ್ಮಗಳನ್ನು ಮಾಡುವೆನೆಂಬ) ಅನುಸಂಧಾನವನ್ನು ಹೊಂದಿ, ಸರ್ವಕರ್ಮಗಳಲ್ಲಿ ಫಲಾಶೆಯನ್ನು ತ್ಯಜಿಸುವುದನ್ನು ಆಶ್ರಯಿಸು... ಈ ಪ್ರಮೇಯವೇ ಇಲ್ಲಿ ಸೂಚಿತವೆಂದು ತಿಳಿಯಬೇಕು.

(ಆದರಿಂದಲೇ ಅಪರೋಕ್ಷ ದರ್ಶನಲಾಭವು); ಧ್ಯಾನಾಭಾವೇ-ಧ್ಯಾನದ ಅಭಾವದಲ್ಲಿ (ಧ್ಯಾನಿಸಲು-ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸಲು, ಅಶಕ್ತನಾದಲ್ಲಿ), ವಿಷ್ಣುಕರ್ಮಾಣಿ ಏವಂ-ಶ್ರೀವಿಷ್ಣುಪ್ರೀತಿಕರಗಳಾದ ಕರ್ಮಗಳನ್ನೇ, ಚಿಂತಯೇತ್-ಯೋಚಿಸಬೇಕು (ವಿಷ್ಣ್ವರ್ಪಣ ಬುದ್ಧಿಯಿಂದಲೇ ಸರ್ವಕರ್ಮಗಳನ್ನು ಮಾಡಬೇಕು); ಏವಂ-ಹೀಗೆ, ಸ್ವಸ್ಯ ದೇಹಂ-ತನ್ನ (ಮಾನುಷ) ದೇಹವನ್ನು ಸಾರ್ಥಕಂ-ಫಲವುಳ್ಳದ್ದನ್ನಾಗಿ (ಸಫಲವನ್ನಾಗಿ), ಕುರ್ಯಾತ್-ಮಾಡಬೇಕು.

ಧ್ಯಾನೇನ ತುಷ್ಟೋ ದರ್ಶಯೇದಾತ್ಮರೂಪಂ ।
ಪಶ್ಚಾದ್ಬಂಧಾನ್ಮುಕ್ತಿಮಾಂ ಯಾತಿ ಸದ್ಯಃ ॥
ಲಿಂಗೋದ್ಭೇದಾದಾತ್ಮಸೌಖ್ಯಸ್ಯ ಲಾಭೋ ।
ಮೋಕ್ಷೋ ಹ್ಯೇಷಃ ಸೂಚ್ಯತೇ ವೇದಗರ್ಭಃ ॥ ೬೭ ॥

ಧ್ಯಾನೇನ-ಧ್ಯಾನದಿಂದ, ತುಷ್ಟಃ-ಸಂತುಷ್ಟನಾದ ಶ್ರೀಹರಿಯು, ಆತ್ಮರೂಪಂ-ತನ್ನ ರೂಪವನ್ನು, ದರ್ಶಯೇತ್-ತೋರಿಸುತ್ತಾನೆ (ಅಧಿಕಾರಿಗೆ ತಾನು ಪ್ರತ್ಯಕ್ಷನಾಗುತ್ತಾನೆ); ಪಶ್ಚಾತ್-ಅನಂತರ, ಸದ್ಯಃ-ಶೀಘ್ರವಾಗಿ, [1]ಬಂಧಾತ್-(ಸಂಸಾರ) ಬಂಧದಿಂದ, (ಮೋಕ್ಷ ಪ್ರತಿಬಂಧಕ ಪ್ರಾರಬ್ಧಕರ್ಮಗಳಿಲ್ಲದಿದ್ದರೆ) ಮೋಕ್ಷವನ್ನೇ ಹೊಂದುತ್ತಾನೆ; ಲಿಂಗದೇಹದ ನಾಶವು (ವಿರಜಾಸ್ನಾನದಿಂದ) ಆಯಿತೆಂದರೆ, ಸ್ವಸ್ವರೂಪ ಸ್ಥಿತ ಆನಂದದ ಅನುಭವವು ದೊರೆಯುತ್ತದೆ—ಅದು ನಿತ್ಯವಾಗಿರುವುದು; ಇದನ್ನೇ

---

1. 'ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ'—'ಪ್ರಾರಬ್ಧಕರ್ಮದ ಪ್ರತಿಬಂಧವಿಲ್ಲದಿದ್ದರೆ, ಈ ಜನ್ಮದಲ್ಲಿಯೇ (ಅಥವಾ ಪ್ರತಿಬಂಧವಿದ್ದಲ್ಲಿ ಜನ್ಮಾಂತರದಲ್ಲಿ) ಶ್ರುತಿಯು ಹಾಗೆ ಹೇಳುವುದರಿಂದ ಅಪರೋಕ್ಷ ದರ್ಶನವಾಗುತ್ತದೆ'; ಮತ್ತು 'ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ'— ಸಾಧನ ಪೂರ್ತಿಯಾದ ಜನ್ಮದಲ್ಲಿಯೇ ಬ್ರಹ್ಮದರ್ಶನವಾಗುವುದೆಂಬ ನಿಯಮವಿಲ್ಲದಂತೆ, ಮೋಕ್ಷವನ್ನು ಹೊಂದುವುದರಲ್ಲಿ ಸಹ ನಿಯಮವಿಲ್ಲ, ಎಂದರೆ, ಪ್ರತಿಬಂಧಕ ಪ್ರಾರಬ್ಧವು ಅಪರೋಕ್ಷದ ನಂತರವಿದ್ದರೆ, ಆಗಲೇ— ಆ ದೇಹದಿಂದಲೇ ಮುಕ್ತನಾಗುವುದಿಲ್ಲ—ಅದರ ಭೋಗಾನಂತರ ಮುಕ್ತನಾಗುತ್ತಾನೆ— ಬ್ರಹ್ಮದರ್ಶಿಗೆ ಮೋಕ್ಷವು ಸಿದ್ಧವೇ—ತಪ್ಪದೇ ಹೊಂದುವನು? ಎಂದು, ಈ ಎರಡು ಬ್ರಹ್ಮಸೂತ್ರಗಳು ನಿರ್ಣಯವನ್ನು ಹೇಳುತ್ತವೆ. ಈ ಅರ್ಥ ವಿಶೇಷವನ್ನು ಸಂಗ್ರಹಿಸಿ, ಶ್ರೀವಾದಿರಾಜರು, 'ಸ್ವೋತ್ಪತ್ತಿ ಜನ್ಮಾಂತರಮೇವ ಪ್ರತಿಬಂಧಾಭಾವೇ ಮುಕ್ತಿಸಾಧನತ್ವಮಹಿಮೋಪೇತಜ್ಞಾನವಿಷಯಾಯ ನಮಃ'—ಎಂದು ತಮ್ಮ ಅಧಿಕರಣ ನಾಮಾವಳಿಯಲ್ಲಿ ನಿರೂಪಿಸಿರುವರು. 'ಜ್ಞಾನವು—ಅಪರೋಕ್ಷ ದರ್ಶನವು ಹುಟ್ಟಿದ (ಲಭಿಸಿದ) ನಂತರ, ಪ್ರತಿಬಂಧಕ ಪ್ರಾರಬ್ಧಕರ್ಮವಿಲ್ಲದಿದ್ದರೆ, ಮುಂದಿನ ಜನ್ಮದಲ್ಲಿಯೇ (ಜ್ಞಾನವಾದ ದೇಹಪಾತ ನಂತರವೇ), ಜ್ಞಾನವು ಮುಕ್ತಿಯನ್ನು ಸಾಧಿಸಿಕೊಡುವುದೆಂಬ ಮಹಿಮೆಯುಳ್ಳದ್ದು; ಈ ಮಹಿಮೋಪೇತವಾದ ಜ್ಞಾನಕ್ಕೆ (ಅಪರೋಕ್ಷಕ್ಕೆ) ಗೋಚರನಾಗುವವನು—ಶ್ರೀಹರಿ.

ಮುಕ್ತತಾಂ-ಮುಕ್ತಿಯನ್ನು ಯಾತಿ-ಹೊಂದುತ್ತಾನೆ; ಲಿಂಗೋದ್ಭೇದಾತ್-ಲಿಂಗ ದೇಹದ ಭಂಗದಿಂದ, ಆತ್ಮಸೌಖ್ಯಸ್ಯ-ಸ್ವರೂಪಾನಂದದ, ಲಾಭಃ-(ನಿತ್ಯಾನುಭವ) ಪ್ರಾಪ್ತಿಯು (ಆಗುತ್ತದೆ); ಏಷಃ ಹಿ-ಇದೇವೇ, ಮೋಕ್ಷಃ-ಮೋಕ್ಷವು; ವೇದಗರ್ಭಃ-ವೇದಗಳ ಮಹಾತಾತ್ಪರ್ಯವು (ನಿಶ್ಚಿತಾಭಿಪ್ರಾಯವು), ಸ್ತೂಯತೇ-(ಹೀಗೆಂದೇ) ಪ್ರಶಂಸಿಸುತ್ತದೆ.

ನಾರದೈವಂ ಮಯಾ ಪ್ರೋಕ್ತಂ ಸರ್ವಜೀವಹಿತೇಪ್ಸುನಾ ।
ರಹಸ್ಯಂ ಪರಮಂ ವಿಷ್ಣೋರ್ಮಹಿಮಾಂ ಸಂಗತೇಃ ಸತಾಂ ॥ ೬೮ ॥
ಉಪಾದಿಶತ್ತ್ವ ಶಿಷ್ಯೇಭ್ಯಸ್ತ್ವಮಪ್ಯೇವಂ ಹಿತೇಪ್ಸಯಾ ।
ಸಜ್ಜನಾನಾಂ ಸ್ವಯಂಚಿತ್ತೇ ತ್ವಮಪ್ಯೇತದ್ವಿಚಿಂತಯ ॥ ೬೯ ॥

ನಾರದ-ಹೇ ನಾರದ! ಸರ್ವಜೀವಹಿತೇಪ್ಸಯಾ-ಸಕಲ ಜೀವರಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ, ಮಯಾ-ನನ್ನಿಂದ, ಏವಂ-ಹೀಗೆ (ಈ ರಹಸ್ಯವು), ಪ್ರೋಕ್ತಂ-ಹೇಳಲ್ಪಟ್ಟಿತು; ವಿಷ್ಣೋಃ-ಶ್ರೀವಿಷ್ಣುವಿನ, ಪರಮಂ-ಶ್ರೇಷ್ಠವಾದ, ರಹಸ್ಯಂ-ರಹಸ್ಯವನ್ನೂ (ರಹಸ್ಯ ಸಾರವನ್ನೂ), ಸತಾಂ-ಸಾಧುಗಳ, ಸಂಗತೇಃ-ಸಂಗದ, ಮಹಿಮಾಂ-ಮಹಿಮೆಯನ್ನೂ (ಪ್ರಭಾವವನ್ನೂ-ಹಿತಸಾಧಕ ಸಾಮರ್ಥ್ಯವನ್ನೂ), ತ್ವಂ ಅಪಿ-ನೀನೂ ಸಹ, ಏವಂ-ಹೀಗೆಯೇ ಸಜ್ಜನಾನಾಂ-ಸಜ್ಜನರ, ಹಿತೇಪ್ಸಯಾ-ಹಿತಾರ್ಥವಾಗಿ, ಶಿಷ್ಯೇಭ್ಯಃ-(ನಿನ್ನ) ಶಿಷ್ಯರಿಗೆ, ಉಪಾದಿಶ್ತ್ವ-ಉಪದೇಶಿಸು; ತ್ವಂ ಅಪಿ-ನೀನೂ, ಸ್ವಯಂ ಚಿತ್ತೇ-ನಿನ್ನ ಮನಸ್ಸಿನಲ್ಲಿ, ಏತತ್-ಇದನ್ನು ವಿಚಿಂತಯ-ಚಿಂತಿಸುತ್ತಿರು.

ಶ್ರೀಶುಕ ಉವಾಚ—

ಏವಮಾದಿಶ್ಯ ಭಗವಾನ್ ನಾರದಾಯ ಪಿತಾಮಹಃ ।
ತೂಷ್ಣೀಮಾಸೀತ್ತತೋ ನತ್ವಾ ನಾರದಸ್ತ್ರಿದಿವಂ ಯಯೌ ॥ ೭೦ ॥

---

ಮೋಕ್ಷವೆಂದು ವೇದಗಳ ಮಹಾತಾತ್ಪರ್ಯವು ಪ್ರಶಂಸಿಸುತ್ತದೆ (೬೭). ಹೇ ನಾರದ! ಸರ್ವಜೀವರ ಹಿತಕ್ಕಾಗಿ, ಶ್ರೀವಿಷ್ಣುಸಂಬಂಧವಾದ ಪರಮರಹಸ್ಯವನ್ನೂ, ಸಾಧುಸಂಗದ ಮಹಿಮೆಯನ್ನೂ, ಹೀಗೆ ಹೇಳಿರುವೆನು; ನೀನೂ ಸಹ ಸಜ್ಜನರ ಹಿತಾರ್ಥವಾಗಿ, ನಿನ್ನ ಶಿಷ್ಯರಿಗೆ ಇದನ್ನೇ ಉಪದೇಶಿಸು—ನೀನೂ ನಿನ್ನ ಮನಸ್ಸಿನಲ್ಲಿ ಈ ರಹಸ್ಯವನ್ನು ಸದಾ ಚಿಂತಿಸುತ್ತಿರು (೬೮-೬೯). ಶ್ರೀ ಶುಕರು ಹೇಳುತ್ತಾರೆ:— ಪಿತಾಮಹನಾದ ಭಗವಾನ್ ಬ್ರಹ್ಮದೇವನು, ಹೀಗೆ ನಾರದನಿಗೆ ಆಜ್ಞಾಪಿಸಿ (ಉಪದೇಶಿಸಿ), ಸುಮ್ಮನಾದನು; ನಂತರ, ನಾರದನು ನಮಸ್ಕರಿಸಿ ಸ್ವರ್ಗಲೋಕದ ಕಡೆಗೆ ಹೋದನು (ಲೋಕಾಂತರ ಸಂಚಾರಕ್ಕಾಗಿ ಆಕಾಶಕ್ಕೇರಿದನು). ಇದೆಲ್ಲವನ್ನೂ

**ಏವಮಾಹ ಪುರಾ ವ್ಯಾಸೋ ಜನಕೋ ದಯಯಾ ಮಮ ।**

**ತದುಕ್ತವಾನಹಂ ತುಭ್ಯಂ ತ್ವಮಪ್ಯಾತ್ಮನಿ ಚಿಂತಯ ॥ ೭೦ ॥**

ಭಗವಾನ್-ಪೂಜ್ಯನಾದ, ಪಿತಾಮಹಃ-ಬ್ರಹ್ಮದೇವನು, ಏವಂ-ಹೀಗೆ, ನಾರದಾಯ-ನಾರದನಿಗೆ, ಆದಿಶ್ಯ-ಆಜ್ಞಾಪಿಸಿ, ತೂಷ್ಣೀಂ ಆಸೀತ್-ಸುಮ್ಮನಾದನು; ತತಃ-ನಂತರ, ನಾರದಃ-ನಾರದನು, ನತ್ವಾ-ನಮಸ್ಕರಿಸಿ, ದಿವಂ-ಸ್ವರ್ಗವನ್ನು ಕುರಿತು, ಯಯೌ-ಪ್ರಯಾಣ ಮಾಡಿದನು; ಪುರಾ-ಹಿಂದೆ, ಮಮ-ನನ್ನ ಜನಕಃ-ತಂದೆಯಾದ, ವ್ಯಾಸಃ-ಶ್ರೀವ್ಯಾಸರು, ದಯಯಾ-ದಯೆಯಿಂದ, ಏವಂ-ಹೀಗೆಂದು, ಆಹ-ಹೇಳಿದರು; ತತ್-ಅದನ್ನೇ, ಅಹಂ-ನಾನು, ತುಭ್ಯಂ-ನಿನಗೋಸ್ಕರ (ಸೂತಾಚಾರ್ಯನಿಗೆ), ಉಕ್ತವಾನ್-ಹೇಳಿರುವೆನು; ತ್ವಂ ಅಪಿ-ನೀನಾದರೂ, ಆತ್ಮನಿ-ಮನಸ್ಸಿನಲ್ಲಿ ಚಿಂತಯ-ಸದಾ ಧರಿಸಿರು (ಈ ಪ್ರಮೇಯಗಳನ್ನು ಮನನಮಾಡುತ್ತಿರು).

**ಸೂತ ಉವಾಚ—**

**ಇತ್ಯಾದಿಶ್ಯ ಶುಕೋ ಯೋಗೀ ಸ್ವೈರಚಾರೀ ವಿನಿರ್ಗತಃ ।**

**ತದ್ವದುಕ್ತಂ ಮಯಾ ವಿಪ್ರಾ ರಹಸ್ಯಂ ಪರಮಾದ್ಭುತಂ ॥ ೭೨ ॥**

ಸೂತನು ಹೇಳುತ್ತಾನೆ:

ಯೋಗೀ-ಯೋಗಿಗಳಾದ, ಶುಕಃ-ಶ್ರೀಶುಕರು, ಇತಿ-ಹೀಗೆ, ಆದಿಶ್ಯ-ಆಜ್ಞಾಪಿಸಿ (ಉಪದೇಶಿಸಿ), ಸ್ವೈರಚಾರೀ-ಸ್ವೇಚ್ಛಾ ಸಂಚಾರಿಗಳಾದ ಅವರು, ವಿನಿರ್ಗತಃ-ಹೊರಟುಹೋದರು; ವಿಪ್ರಾಃ-ಹೇ ಋಷಿಗಳೇ! (ಬ್ರಾಹ್ಮಣ ಶ್ರೇಷ್ಠರೇ!), ಮಯಾ-ನನ್ನಿಂದ, ಪರಮಾದ್ಭುತಂ-ಅತ್ಯಾಶ್ಚರ್ಯಕರವಾದ, ರಹಸ್ಯಂ-ರಹಸ್ಯವು (ಗೋಪನೀಯವಾದ ಪ್ರಮೇಯಸಾರವು), ತದ್ವತ್-ಅದರಂತೆ (ಶ್ರೀಶುಕರು ಹೇಳಿದಂತೆಯೇ), ಉಕ್ತಂ-ಹೇಳಲ್ಪಟ್ಟಿರುತ್ತದೆ.

ವಿಷ್ಣುಮಹಿಮೆ ಮತ್ತು ಸಾಧುಸಂಗವರ್ಣನವೆಂಬ ೫೨ನೇ ಅಧ್ಯಾಯವು ಮುಗಿದುದು.

---

ನನ್ನ ತಂದೆಗಳಾದ ಶ್ರೀವೇದವ್ಯಾಸರು, ಕೃಪೆಯಿಂದ, ನನಗೆ ಹೇಳಿದರು; ಅದನ್ನೇ (ಅವರು ಹೇಳಿದಂತೆ), ಹೇ ಸೂತ! ನಿನಗೋಸ್ಕರ ಹೇಳಿದ್ದೇನೆ. ಈ ಮಹಾ ಪ್ರಮೇಯವನ್ನು ಸದಾ ಮನನ ಮಾಡುತ್ತಿರು (೭೦-೭೧). ಸೂತನು ಹೇಳುತ್ತಾನೆ:— ಹೀಗೆ ಯೋಗೀಶ್ವರರಾದ ಶ್ರೀಶುಕರು ನನಗೆ ಆಜ್ಞಾಪಿಸಿ, ಯದೃಚ್ಛಾ ಸಂಚಾರಿಗಳಾದ ಆ ಮಹಾನುಭಾವರು ಹೊರಟುಹೋದರು; ಈ ಅದ್ಭುತವಾದ ಶ್ರೇಷ್ಠ ರಹಸ್ಯವನ್ನು, ಹೇ ಶೌನಕಾದಿಗಳೇ! ನಿಮಗೋಸ್ಕರ, ನಾನು ಶ್ರೀಶುಕರಿಂದ ಕೇಳಿದಂತೆ ಹೇಳಿದ್ದೇನೆ (೭೨).

೫೨ನೇ ಅಧ್ಯಾಯವು ಮುಗಿದುದು.

# ಅಧ್ಯಾಯ ೫೪

ಶ್ರೀ ವೇದವ್ಯಾಸಾಯ ನಮಃ

**ಸುಮಂತುರುವಾಚ—**

**ಕರ್ಮಾನುಸಾರೀ ಫಲದಃ ಸರ್ವಸ್ಯ ಜಗದೀಶ್ವರಃ ।**
**ತರ್ಹಿ ಯತ್ನಂ ವೃಥೈವಾಸ್ಯ ಕಿಮರ್ಥಂ ಯತತೇ ನರೈಃ ॥ ೧ ॥**

ಅರ್ಥ:—ಸುಮಂತು ಪ್ರಶ್ನಿಸುತ್ತಾನೆ:

ಜಗದೀಶ್ವರಃ-ಜಗನ್ನಿಯಾಮಕನಾದ ಶ್ರೀವಿಷ್ಣುವು, ಸರ್ವಸ್ಯ-ಎಲ್ಲರಿಗೂ, ಕರ್ಮಾನುಸಾರೀ-ಪೂರ್ವಕರ್ಮಾನುಸಾರವಾಗಿ, ಫಲದಃ-ಫಲವನ್ನು ಕೊಡುವವನಷ್ಟೆ! ತರ್ಹಿ-ಹಾಗಾದರೆ, ಅಸ್ಯ-ಜೀವನ, ಯತ್ನಂ-(ಅಪೇಕ್ಷಿತ ಫಲಕ್ಕಾಗಿ) ಯತ್ನಿಸುವುದು, ವೃಥಾಏವ-ವ್ಯರ್ಥವೇ; ನರೈಃ-ಮನುಷ್ಯರಿಂದ, ಕಿಮರ್ಥಂ-ಏತಕ್ಕಾಗಿ (ಯಾವ ಪ್ರಯೋಜನಕ್ಕಾಗಿ), ಯತತೇ-ಯತ್ನ ಮಾಡಲಾಗುತ್ತದೆ?

**ಸೂತ ಉವಾಚ—**

**ಅದೃಷ್ಟಾಜ್ಜಾಯತೇ ಯತ್ನೋ ಯತ್ನಾತ್ಕರ್ಮ ಕರೋತ್ಯಯಂ ।**
**ಜಾಯತೇ ಕರ್ಮಣಾಽದೃಷ್ಟಂ ಪ್ರವಾಹೋಽನಾದಿರೇವ ಹಿ ॥ ೨ ॥**

ಅದೃಷ್ಟಾತ್-ಅದೃಷ್ಟದಿಂದ, ಯತ್ನಃ-ಜೀವಯತ್ನವು, ಜಾಯತೇ-ಸಂಭವಿಸುತ್ತದೆ; ಅಯಂ-ಈ ಜೀವನು, ಯತ್ನಾತ್-ಆ ಯತ್ನದಿಂದ, ಕರ್ಮ-ಕರ್ಮವನ್ನು, ಕರೋತಿ-ಮಾಡುತ್ತಾನೆ; ಕರ್ಮಣಾ-ಕರ್ಮದಿಂದ, ಅದೃಷ್ಟಂ-ಅದೃಷ್ಟವು, ಜಾಯತೇ-ಹುಟ್ಟುತ್ತದೆ; [1]ಪ್ರವಾಹಃ-(ಈ) ಪ್ರವಾಹವು, ಅನಾದಿಃ ಏವ-ಅನಾದಿಯಾದುದು; ಹಿ-ಹೀಗೆಂಬುದು ಶಾಸ್ತ್ರಸಿದ್ಧವು.

---

## ಅಧ್ಯಾಯ ೫೪

**ತಾತ್ಪರ್ಯ:**—ಸುಮಂತುಋಷಿಯು ಪ್ರಶ್ನೆಮಾಡುತ್ತಾನೆ: ಜಗನ್ನಿಯಾಮಕನಾದ ಶ್ರೀಹರಿಯು ಸರ್ವರಿಗೂ ಅವರವರ ಪೂರ್ವ ಕರ್ಮಾನುಸಾರವಾಗಿ ಫಲಕೊಡುವನಾದರೆ, ಮನುಷ್ಯರು, ವ್ಯರ್ಥವಾಗಿ, ಪ್ರಯತ್ನವನ್ನೇಕೆ ಮಾಡುವರು? (೧). ಸೂತಾಚಾರ್ಯನು ಹೇಳುತ್ತಾನೆ: ಅದೃಷ್ಟದಿಂದ ಯತ್ನವು ಸಂಭವಿಸುತ್ತದೆ; ಯತ್ನದಿಂದ

---

1. ಅದೃಷ್ಟವೆಂಬುದು ಅತೀಂದ್ರಿಯವಾದ (ಚಕ್ಷುರಾದಿ ಜ್ಞಾನೇಂದ್ರಿಯಗಳಿಗೆ ಗೋಚರಿಸುವ—ಅನುಮಾನ ಆಗಮಗಳಿಂದ ಸಿದ್ಧವಾಗುವ) ಶಕ್ತಿವಿಶೇಷವು. ಒಂದು ಕರ್ಮದಿಂದ, ಈ ವಿಧ ಶಕ್ತಿವಿಶೇಷವು ಹುಟ್ಟಿ, ಅದು ಸೂಕ್ಷ್ಮ ಮನಸ್ಸಿನಲ್ಲಿ ನೆಲೆಗೊಳಿಸಲ್ಪಟ್ಟು, ಕಾಲಾಂತರದಲ್ಲಿ ಶ್ರೀಹರಿಯಿಂದ ಉದ್ಬೋಧಿತವಾಗಿ ಅನ್ಯಕರ್ಮಕ್ಕೆ ಅಥವಾ ಫಲಭೋಗಕ್ಕೆ ಕಾರಣವಾಗುತ್ತದೆ—ಈ ಶಕ್ತಿವಿಶೇಷವನ್ನೂ, ಪೂರ್ವಾದೃಷ್ಟ, ಸಂಸ್ಕಾರ, ಇತ್ಯಾದಿ ನಾಮಗಳಿಂದ ವ್ಯವಹರಿಸುವುದುಂಟು.

**ಜಾಯತೇ ನೃಪಪುತ್ರೋಽಯಮಕಸ್ಮಾನ್ನಿಧಿಲಾಭವಾನ್ ।**

**ಇತ್ಯಾದಿ ಫಲಭಾಙ್ಮರ್ತ್ಯಃ ಕೇವಲಾದೃಷ್ಟತೋ ಭವೇತ್ ॥ ೩ ॥**

**ಅದೃಷ್ಟೋಪನತಂ ಕಿಂಚಿಲ್ಲಭ್ಯತೇ ಯದ್ಧನಾದಿಕಂ ।**

**ಯತ್ನೇನೈವ ಹಿ ತದ್ಭೋಗೋ ಜಾಯತೇ ನಾನ್ಯಥಾ ಕ್ವಚಿತ್ ॥ ೪ ॥**

ಅಯಂ-ಈ ಜೀವನು (ಒಬ್ಬ ಜೀವನು), ನೃಪಪುತ್ರಃ-ರಾಜಪುತ್ರನಾಗಿ, ಜಾಯತೇ-ಹುಟ್ಟುತ್ತಾನೆ; ಅಕಸ್ಮಾತ್-ಕಾರಣವಿಲ್ಲದೇ (ತೋರುವ ಕಾರಣವಿಲ್ಲದೇ-ಶ್ರೀಹರಿಯಿಂದಲೇ), ನಿಧಿಲಾಭವಾನ್-ದ್ರವ್ಯನಿಧಿಯನ್ನು ಹೊಂದಿದವನಾಗುತ್ತಾನೆ; ಇತ್ಯಾದಿ-ಈ ಮುಂತಾದ, ಫಲಭಾಕ್-ಫಲಭಾಗಿಯಾಗಿಯು, ಮರ್ತ್ಯಃ-ಮನುಷ್ಯನು, ಕೇವಲಾದೃಷ್ಟತಃ-ಅದೃಷ್ಟಮಾತ್ರದಿಂದ (ಅದರ ಫಲರೂಪವಾಗಿಯೇ), ಭವೇತ್-ಆಗುತ್ತಾನೆ; (ಇಲ್ಲಿ ಫಲಪ್ರಾಪ್ತಿಗಾಗಿ ಯಾವ ಯತ್ನವೂ ನಡೆದಿರುವುದಿಲ್ಲ); ಅದೃಷ್ಟೋಪನತಂ-ಅದೃಷ್ಟದಿಂದ ಪ್ರಾಪ್ತವಾದ, ಯತ್ ಕಿಂಚಿತ್-ಯಾವುದೊಂದು, ಧನಾದಿಕಂ-ಧನಾದಿಯೋ, ತದ್ಭೋಗಃ-ಅದರ ಭೋಗವು, ಯತ್ನೇನ ಏವ-ಪುರುಷ ಯತ್ನದಿಂದಲೇ, ಜಾಯತೇ-ಉಂಟಾಗುತ್ತದೆ; ಕ್ವಚಿತ್-ಎಲ್ಲಿಯೂ, ಅನ್ಯಥಾ ನ-ಬೇರೆ ಯಲ್ಲ (ಯತ್ನವಿಲ್ಲದೇ, ಅದೃಷ್ಟ ಲಭ್ಯವಾದುದರ ಭೋಗವು ಕೂಡುವುದಿಲ್ಲ-ಕಂಡಿರುವುದಿಲ್ಲ).

**ಚರ್ವಣೇ ಗಿಲನೇ ಪಾಕೇ ಮಲೋತ್ಸರ್ಗಾದಿಕರ್ಮಸು ।**

**ಯತ್ನಸ್ಯೈವ ಪ್ರಧಾನತ್ವಂ ಸ ಯತ್ನಃ ಕರ್ಮಣೈವ ಹಿ ॥ ೫ ॥**

ಚರ್ವಣೇ-(ಆಹಾರವನ್ನು) ಅಗಿಯುವುದರಲ್ಲಿ (ಹಲ್ಲುಗಳಿಂದ ನುರಿಯುವುದ ರಲ್ಲಿ), ಗಿಲನೇ-(ಅದನ್ನು) ನುಂಗುವುದರಲ್ಲಿ, ಪಾಕೇ-ಪಾಕಮಾಡುವುದರಲ್ಲಿ (ಅಡಿಗೆ ಮಾಡುವುದರಲ್ಲಿ), ಮಲೋತ್ಸರ್ಜನಾದಿ ಕರ್ಮಸು-ಮಲವಿಸರ್ಜನೆ ಮಾಡುವ ಮುಂತಾದ ಕರ್ಮಗಳಲ್ಲಿ ಯತ್ನಸ್ಯ ಏವ-ಯತ್ನಕ್ಕೇ, ಪ್ರಧಾನತ್ವಂ-ಪ್ರಾಮುಖ್ಯತೆಯು (ಅದೃಷ್ಟವು ಅಪ್ರಧಾನ-ಅಮುಖ್ಯವಾದ ದೂರದ ಕಾರಣವು); ಸಃ ಯತ್ನಃ-(ಹೀಗೆ

---

ಜೀವನು ಕರ್ಮವನ್ನು ಮಾಡುತ್ತಾನೆ; ಕರ್ಮದಿಂದ ಅದೃಷ್ಟವು ಹುಟ್ಟುತ್ತದೆ—ಈ ಪ್ರಕಾರದ ಪ್ರವಾಹವು ಅನಾದಿಯಾದುದು (೨). ಒಬ್ಬನು ಹುಟ್ಟುತ್ತಲೇ ರಾಜಪುತ್ರನಾಗುತ್ತಾನೆ; (ಶ್ರೀಮಂತನಾಗಿರುತ್ತಾನೆ); ಮತ್ತೊಬ್ಬನಿಗೆ ಅಕಸ್ಮಾತ್ತಾಗಿ (ಯತ್ನವಿಲ್ಲದೇ) ದ್ರವ್ಯನಿಧಿಯು ದೊರೆತು ಶ್ರೀಮಂತನಾಗುತ್ತಾನೆ; ಇತ್ಯಾದಿ ಫಲಗಳು ಅದೃಷ್ಟಮಾತ್ರದಿಂದ, ದೊರೆಯುತ್ತವೆ; ಅದೃಷ್ಟದಿಂದಲೇ ದೊರೆಯುವ ಧನಾದಿಗಳ ಭೋಗವು ಮನುಷ್ಯ ಯತ್ನದಿಂದಲೇ ಸಾಧ್ಯ-ಅನ್ಯಥಾ ಅಲ್ಲ (೩-೪). ಯತ್ನದ ಸ್ಥಾನವು ಹೀಗಿರುವುದೆಂಬುದು, ಆಹಾರಚರ್ವಣ, ಚರ್ವಿತವನ್ನು ನುಂಗುವುದು, ಪಾಕಮಾಡು ವುದು, ಮಲವಿಸರ್ಜನೆ ಮೊದಲಾದ ಕರ್ಮಗಳಲ್ಲಿ ಮೇಲೆದ್ದು ತೋರುತ್ತದೆ; ಹೀಗೆ

ಪ್ರಧಾನಕಾರಣವಾದ) ಆ ಯತ್ನವು, ಕರ್ಮಣಾ ಏವ ಹಿ-ಕರ್ಮದಿಂದಲೇ (ಸಾಧ್ಯ) ಎಂಬುದು ಸರ್ವಾನುಭವವಷ್ಟೆ

**ಅದೃಷ್ಟಂ ದೃಷ್ಟಸಾಹಾಯ್ಯಂ ಪ್ರಾಯಃ ಸರ್ವಫಲೋದ್ಭವೇ ।**
**ಪುತ್ರಸ್ತ್ರೀಭೋಗಭಕ್ಷ್ಯಾದೌ ತಥೈವೇಚ್ಛಾ ಹರೇರ್ಯತಃ ॥ ೬ ॥**

ಸರ್ವಫಲೋದಯೇ-ಎಲ್ಲವಿಧ ಫಲಗಳ ಪ್ರಾಪ್ತಿಯಲ್ಲಿ, ಪ್ರಾಯಃ-ಬಹುವಾಗಿ, ಅದೃಷ್ಟಂ-ಅದೃಷ್ಟವು, ದೃಷ್ಟಸಾಹಾಯ್ಯಂ-ದೃಷ್ಟವಾದುದರ (ಯತ್ನ-ಕರ್ಮಗಳ) ಸಹಾಯವುಳ್ಳದ್ದಾಗಿರುವುದು; ಪುತ್ರ ಸ್ತ್ರೀಭೋಗ ಭಕ್ಷ್ಯಾದೌ-ಪುತ್ರಪ್ರಾಪ್ತಿ ಸ್ತ್ರೀ ಭೋಗಲಾಭ, ಪುಷ್ಟಿಕರವಾದ ಆಹಾರ ಪ್ರಾಪ್ತಿ ಮುಂತಾದವುಗಳಲ್ಲಿ, ಯತಃ-ಯಾವ ಕಾರಣದಿಂದ, ಹರೇಃ-ಶ್ರೀಹರಿಯ ಇಚ್ಛೆಯು, ತಥಾ ಏವ-ಹಾಗಿರುವುದರಿಂದಲೇ (ಯತ್ನಾದಿಗಳ ಸಹಾಯದಿಂದ ಅದೃಷ್ಟವು ಫಲಪ್ರದವಾಗುತ್ತದೆ).

**ಶರೀರಮಿಂದ್ರಿಯಾಣ್ಯಾಹುರ್ಯತ್ನಸ್ಯ ಕರಣಾನಿ ವೈ ।**
**ಕರ್ಮಾನುಸಾರತೋ ಯಸ್ಯ ದದ್ಯಾದೀಶಃ ಸ್ವಯಂ ಪ್ರಭುಃ ॥ ೭ ॥**
**ಯಾವತ್ಕಾರಣಸಾಮಗ್ರೀ ತಾವತಾ ಯತ್ನಮಾಚರೇತ್ ।**
**ಕ್ವಚಿತ್ಸ್ಯಾತ್ಫಲದೋ ಯತ್ನಃ ಕ್ವಚಿದೇವ ವೃಥಾ ಭವೇತ್ ॥ ೮ ॥**
**ವಿಪರ್ಯಯೋ ಭವೇತ್ ಕ್ವಾಪಿ ಸರ್ವಂ ತದ್ವಿಷ್ಣುಯಂತ್ರಿತಂ ।**
**ಪ್ರಾಯೇಣೇದಂ ಪುರಾ ಪ್ರೋಕ್ತಂ ಮಯಾತ್ರ ಭವತಾಂ ಪುನಃ ॥ ೯ ॥**
**ಅಥಾಪಿ ಕಿಂಚಿದ್ವಕ್ಷ್ಯಾಮಿ ಶೃಣುಧ್ವಂ ತತ್ಸಮಾಹಿತಾಃ ।**

ಶರೀರಂ-ಶರೀರ (ದೇಹ)ವನ್ನೂ, ಇಂದ್ರಿಯಾಣಿ-ಇಂದ್ರಿಯಗಳನ್ನೂ, ಯತ್ನಸ್ಯ-ಯತ್ನದ, ಕರಣಾನಿ-ಸಾಧನಗಳೆಂದು, ಆಹುಃ-ಹೇಳುವರು; ವೈ-ಇದು ಸರ್ವಾನುಭವಸಿದ್ಧವು; ಸ್ವಯಂ ಪ್ರಭುಃ ಈಶಃ-ಸ್ವತಂತ್ರ ಪ್ರಭುವಾದ ಶ್ರೀಹರಿಯು,

---

ಯತ್ನವೇ ಪ್ರಧಾನ ಕಾರಣವಾಗಿವುಳ್ಳ ಭೋಜನಾದಿಗಳೂ ಯದ್ಯಪಿ ಅದೃಷ್ಟದಿಂದ ಲಭಿಸುವ ಫಲಗಳೇ ಆಗಿರುತ್ತವೆ—ಅವುಗಳ ಭೋಗವು ಯತ್ನಸಾಧ್ಯವಾದುದು; ಆ ಯತ್ನವು ಕರ್ಮದಿಂದ ಸಂಭವಿಸುತ್ತದೆ (೫). ಹೀಗೆ ಫಲಪ್ರಾಪ್ತಿಯಲ್ಲಿ ಅದೃಷ್ಟವು, ದೃಷ್ಟವಾದ ಯತ್ನಾದಿಗಳ ಸಹಾಯವನ್ನು ಅಪೇಕ್ಷಿಸುತ್ತದೆಂಬುದು, ಸಂತಾನಲಾಭ, ಸ್ತ್ರೀ ಭೋಗ, ಸುಪುಷ್ಟ (ಮೃಷ್ಟಾನ್ನ) ಭೋಜನಾದಿಗಳಲ್ಲಿ ಕಂಡುಬರುತ್ತದೆ; ಹೀಗೆ ದೃಷ್ಟ ಸಹಾಯದಿಂದಲೇ ಅದೃಷ್ಟದ ಫಲಭೋಗವು ಜೀವರಿಗುಂಟಾಗಬೇಕೆಂಬುದು ಶ್ರೀಹರಿಯ ಇಚ್ಛೆಯಿಂದಲೇ ನಿಯತವಾಗಿದೆ (೬). ಶರೀರವೂ, ಅದರಲ್ಲಿರುವ ಇಂದ್ರಿಯಗಳೂ, ಜೀವ ಯತ್ನಕ್ಕೆ ಸಾಧನಗಳೆಂಬುದು ಪ್ರತ್ಯಕ್ಷಸಿದ್ಧವಾದ ಸರ್ವಾನುಭವವಾಗಿದೆ; ಯತ್ನಸಾಧ್ಯವಾದ ಕರ್ಮಾನುಸಾರವಾಗಿ ಫಲವನ್ನು ಕೊಡು

ಯಸ್ಯ-(ಯಾರಿಗೆ) ಜೀವನಿಗೆ, ಕರ್ಮಾನುಸಾರತಃ-(ಯತ್ನ ಸಾಧ್ಯವಾದ) ಕರ್ಮಾನುಗುಣವಾಗಿ, ದದ್ಯಾತ್-(ಫಲವನ್ನು) ಕೊಡುತ್ತಾನೆ; (ಯಸ್ಯ ದದ್ಯಾತ್-ಯಾರಿಗೆ ಕೊಡುವನೋ, ಸ್ವಯಂ ಪ್ರಭುಃ-ಆತನೇ ಸ್ವತಂತ್ರನಾದ ಶ್ರೀಹರಿಯು); (ಹೀಗೆ ಯತ್ನಾನುಸಾರವಾದ ಫಲ ದೊರೆಯುವುದರಿಂದ), ಯಾವತ್-ಎಷ್ಟು ಕಾರಣ ಸಾಮಗ್ರೀ-(ಕರ್ಮಕಾರಣವಾದ) ಇಂದ್ರಿಯಾದಿ ಸಾಧನಗಳು ಇರುವುವೋ, ತಾವತಾ-ಅವರೆಗೆ (ಅಷ್ಟು), ಯತ್ನಂ-ಯತ್ನವನ್ನು ಆಚರೇತ್-(ಫಲೋದಯಕ್ಕಾಗಿ) ಮಾಡಬೇಕು; ಯತ್ನಃ-ಯತ್ನವು, ಕ್ವಚಿತ್-ಕೆಲವುವೇಳೆ, ಫಲದಃ-ಫಲವನ್ನು ಕೊಡುವುದು, ಸ್ಯಾತ್-ಆಗುತ್ತದೆ; ಕ್ವಚಿತ್-ಮತ್ತೆ ಕೆಲವು ಸಲ, ವೃಥಾ ಏವ-ವ್ಯರ್ಥವೇ (ಫಲರಹಿತವೇ), ಭವೇತ್-ಆಗುತ್ತದೆ; ಕ್ವಾಪಿ-ಒಂದೊಂದುವೇಳೆ (ಒಂದೊಂದು ಸಂದರ್ಭದಲ್ಲಿ), ವಿಪರ್ಯಯಃ ಅಪಿ-ವಿರುದ್ಧವಾದ ಫಲವನ್ನು ಕೊಡುವುದೂ, ಭವೇತ್-ಆಗುತ್ತದೆ; ಸರ್ವಂ ತತ್-ಆ ಎಲ್ಲವೂ (ವಿವಿಧ ಯತ್ನಗಳು ಮತ್ತು ಅವುಗಳ ವಿವಿಧ ಫಲಗಳೂ), ವಿಷ್ಣು ಯಂತ್ರಿತಂ-ಶ್ರೀವಿಷ್ಣುವಿನ ಅಧೀನವಾದುದು; ಇದಂ-ಈ ಪ್ರಮೇಯವು, ಮಯಾ-ನನ್ನಿಂದ ಪ್ರಾಯೇಣ-ಸಂಶಯವಿಲ್ಲದೇ, ಪುರಾ-ಈ ಮೊದಲು, ಅತ್ರ-ಇಲ್ಲಿ ಭವತಾಂ ಪುರಃ-ನಿಮ್ಮೆದುರಿಗೆ, ಪ್ರೋಕ್ತಂ-ಹೇಳಲ್ಪಟ್ಟಿದೆ; ಅಥಾಪಿ-ಹಾಗಿದ್ದರೂ, ಕಿಂಚಿತ್-ಮತ್ತೂ ಸ್ವಲ್ಪವನ್ನು (ಅಧಿಕ ವಿವರವನ್ನು), ವಕ್ಷ್ಯಾಮಿ-ಹೇಳುತ್ತೇನೆ; ತತ್-ಅದನ್ನು ಸಮಾಹಿತಾಃ-ಏಕಚಿತ್ತರಾಗಿ, ಶೃಣುಧ್ವಂ-ಶ್ರವಣಮಾಡಿರಿ.

ಪುರಾ ಸುಭದ್ರೋನಾಮಾಭೂತ್ ಬ್ರಾಹ್ಮಣೋ ವೇದವಿತ್ತಮಃ ॥ ೧೦ ॥
ಗಂಗಾತೀರೇ ಸಮಾಸೀನೋ ಜಲೂಕಾಂ ತತ್ರ ದೃಷ್ಟವಾನ್ ।
ಕರಪಾದವಿಹೀನಾಂ ತಾಮೀಷನ್ಮಗ್ನಾಂ ಸರಿಜ್ಜಲೇ ॥ ೧೧ ॥
ದೃಷ್ಟ್ವಾ ವಿಸ್ಮಯಮಾಪನ್ನಸ್ತಜ್ಜೀವನಮಚಿಂತಯತ್ ।

ಪುರಾ-ಪೂರ್ವದಲ್ಲಿ ವೇದವಿತ್ತಮಃ-ಶ್ರೇಷ್ಠವೇದತತ್ವಜ್ಞನಾದ, ಸುಭದ್ರಃ ನಾಮಾ-ಸುಭದ್ರನೆಂಬ ಹೆಸರುಳ್ಳ, ಬ್ರಾಹ್ಮಣಃ-ಬ್ರಾಹ್ಮಣನು, ಅಭೂತ್-ಇದ್ದನು;

---

ವವನೇ ಸ್ವತಂತ್ರನಾದ, ಸರ್ವಸ್ವಾಮಿ, ಶ್ರೀಹರಿಯು; ಆದ್ದರಿಂದ ಸಾಧನ ಸಾಮಗ್ರಿಗಳು ಯಾರಿಗೆ ಎಷ್ಟಿರುವುವೋ, ಅಷ್ಟೇ (ಅವರೆಗೆ) ಯತ್ನವನ್ನು ಮಾಡಲೇಬೇಕು (ಯತ್ನಮಾಡಲೆಂದೇ ಶ್ರೀಹರಿಯು ಆ ಸಾಧನಗಳನ್ನು ಕೊಟ್ಟಿರುತ್ತಾನೆ); ಯತ್ನವು ಕ್ವಚಿತ್ ಫಲವುಳ್ಳದ್ದಾಗುತ್ತದೆ-ಕೆಲವುವೇಳೆ ವ್ಯರ್ಥವಾಗುತ್ತದೆ—ಮತ್ತೆ ಕೆಲವು ಸಂದರ್ಭಗಳಲ್ಲಿ ಇಚ್ಛಿತಫಲದ ವಿರುದ್ಧ ಫಲವನ್ನೇ ಕೊಡುತ್ತದೆ; ಈ ಎಲ್ಲವೂ (ಯತ್ನವೂ ಫಲವೂ) ಶ್ರೀವಿಷ್ಣುವಿನ ಅಧೀನಗಳೇ ಆಗಿವೆ; ಈ ಪ್ರಮೇಯವನ್ನು ಈ ಮೊದಲು, ನಿಮ್ಮಗಳೆದುರಿನಲ್ಲಿ ನಾನು ಹೇಳಿದ್ದೇನೆ; ಆದರೂ ಈಗ ಅದೇ ವಿಷಯದಲ್ಲಿ ಮತ್ತು ಕಿಂಚಿದ್ವಿಶೇಷವನ್ನು ಹೇಳುತ್ತೇನೆ; ಸಮಾಹಿತಮನಸ್ಕರಾಗಿ ಶ್ರವಣಮಾಡಿರಿ (೭-೯).

(ಒಂದುವೇಳೆ) ಗಂಗಾತೀರೇ-ಗಂಗಾನದೀ ತೀರದಲ್ಲಿ ಸಮಾಸೀನಃ-ಕೂತು, ತತ್ರ-ಅಲ್ಲಿ (ಗಂಗಾಜಲದಲ್ಲಿ), ಜಲೂಕಾಂ-ಜಿಗಣೆಯನ್ನು (ಜಲದಲ್ಲಿರುವ ಕ್ರಿಮಿ ವಿಶೇಷವನ್ನು), ದೃಷ್ಟವಾನ್-ಕಂಡವನಾದನು; ಕರಪಾದ ವಿಹೀನಾಂ-ಕೈಕಾಲುಗಳಿಲ್ಲದ, ತಾಂ-ಅದನ್ನು ಸರಿಜ್ಜಲೇ-ನದೀಜಲದಲ್ಲಿ ಈಷತ್-ಸ್ವಲ್ಪ ಮಗ್ನಾಂ-ಮುಳುಗಿರುವು ದಾಗಿ, ದೃಷ್ಟ್ವಾ-ನೋಡಿ, ವಿಸ್ಮಯಂ-ಆಶ್ಚರ್ಯವನ್ನು ಆಪನ್ನಃ-ಹೊಂದಿದವನಾಗಿ, ತಜ್ಜೀವನಂ-ಅದರ ಜೀವನನ್ನು (ಹೇಗೆ ಬದುಕಿರುತ್ತದೆಂಬುದನ್ನು), ಅಚಿಂತಯತ್-ಯೋಚಿಸಿದನು.

**ಕರಪಾದವಿಹೀನೋಽಯಂ ದೇಹೀ ಜೀವತ್ಯಯಂ ಕಥಂ ॥ ೧೨ ॥**
**ಅನುದ್ಯೋಗಃ ಕಥಂ ಭಕ್ಷ್ಯಂ ಲಭತೇ ಚ ದಿನೇದಿನೇ ।**

ಸುಭದ್ರನ ಯೋಚನೆಯ ಪ್ರಕಾರವನ್ನು ವರ್ಣಿಸುತ್ತಾರೆ:

ಕರಪಾದವಿಹೀನಃ-ಹಸ್ತಪಾದಾದಿ ಅವಯವಗಳಿಲ್ಲದ, ಅಯಂ-ಈ, ದೇಹೀ-ಪ್ರಾಣಿಯು (ಶರೀರಿಯು), ಕಥಂ-ಹೇಗೆ, ಜೀವತಿ-ಬದುಕಿದೆ?; ಅನುದ್ಯೋಗಃ-ಯಾವ ಯತ್ನವನ್ನು ಮಾಡದ, ಅಯಂ-ಈ ಪ್ರಾಣಿಯು, ದಿನೇ ದಿನೇ-ಪ್ರತಿನಿತ್ಯವೂ, ಕಥಂ-ಹೇಗೆ, ಭಕ್ಷ್ಯಂ-ಆಹಾರವನ್ನು ಲಭತೇ ಚ-ಹೊಂದುತ್ತದೆ?

**ನಹಿ ಭಕ್ಷ್ಯಂ ವಿನಾ ಕಶ್ಚಿಜ್ಜೀವತೀತ್ಯುಪಲಭ್ಯತೇ ॥ ೧೩ ॥**
**ಏವಂ ಚಿಂತಾಂ ಪ್ರಕುರ್ವಾಣೋ ದದರ್ಶೈಕಂ ತು ಕೀಟಕಂ ।**
**ಜಲಪ್ರವಾಹತೋ ಯಾತಂ ಜಲೂಕಾವದನಾಂತಿಕೇ ॥ ೧೪ ॥**
**ಅಗ್ರಸತ್ಕೀಟಕಂ ಸಾ ತು ಸವಿಸ್ಮಯಮವಾಪ್ತವಾನ್ ।**
**ಅಹೋ ಚಿತ್ರಮಹೋ ಚಿತ್ರಂ ವೃಥಾ ಯತ್ನಂ ಪ್ರಕುರ್ವತೇ ॥ ೧೫ ॥**

---

ವೇದತತ್ವಜ್ಞರಲ್ಲಿ ಶ್ರೇಷ್ಠನಾದ ಸುಭದ್ರನೆಂಬ ಒಬ್ಬ ಬ್ರಾಹ್ಮಣನು, ಪೂರ್ವಕಾಲ ದಲ್ಲಿದ್ದನು; ಆತನು ಒಂದುವೇಳೆ ಗಂಗಾತೀರದಲ್ಲಿ ಕೂತಿರುವಾಗ, ಜಲದಲ್ಲಿ ಒಂದು ಜಿಗಣೆಯನ್ನು ಕಂಡನು; ಹಸ್ತಪಾದಾದಿ ಅವಯಗಳಿಲ್ಲದ ಆ ಕ್ರಿಮಿಯು, ಗಂಗಾಜಲದಲ್ಲಿ ಸ್ವಲ್ಪ ಮುಳುಗಿತ್ತು; ಅದನ್ನು ಈ ಬ್ರಾಹ್ಮಣನು ಕಂಡು, ಆಶ್ಚರ್ಯಚಕಿತನಾಗಿ, ಅದರ ಜೀವನನ್ನು ಕುರಿತು ಆಲೋಚಿಸಿದನು (೧೦-೧೧). ಕೈಕಾಲುಗಳಿಲ್ಲದ ಈ ಪ್ರಾಣಿಯು ಹೇಗೆ ಬದುಕಿರುತ್ತದೆ? ದಿನದಿನವೂ ಬೇಕಾದ ಆಹಾರವು ಇದಕ್ಕೆ ಯಾವ ಯತ್ನವನ್ನೂ ಮಾಡದೇ ಹೇಗೆ ಲಭಿಸುತ್ತದೆ? (೧೨). ಆಹಾರವಿಲ್ಲದೇ ಯಾವುದೊಂದು ಪ್ರಾಣಿಯೂ ಜೀವಿಸಿರಲಾರದೆಂಬುದು ಪ್ರತ್ಯಕ್ಷಸಿದ್ಧವಾಗಿದೆ; ಹೀಗೆ ಮುಂತಾಗಿ ಯೋಚಿಸುತ್ತಿರಲು, ನೀರಿನ ಪ್ರವಾಹದೊಂದಿಗೆ ಒಂದು ಚಿಕ್ಕ ಹುಳುವು, ಆ ಜಲೂಕದ ಬಾಯಿಹತ್ತಿರಕ್ಕೆ ಬಂದದ್ದನ್ನು ಕಂಡನು; ಜಲೂಕವು, ಆ ಕೀಟವನ್ನು ಗ್ರಾಸಮಾಡಿತು

**ವಿಮೋಹಿತಾ ಜನಾಃ ಸರ್ವೇ ವೃತ್ತಿದಃ ಕೇವಲೋ ಹರಿಃ ।**

**ಅಥ ತಸ್ಥೌ ನಿರುದ್ಯೋಗಸ್ತತ್ರೈವ ಹಿ ಸುಭದ್ರಕಃ ॥ ೧೬ ॥**

ಭಕ್ಷ್ಯಂವಿನಾ-ಆಹಾರವಿಲ್ಲದೇ, ಕಶ್ಚಿತ್-ಯಾವುದೊಂದು ಪ್ರಾಣಿಯೂ, ನ ಜೀವತಿ-ಬದುಕುವುದಿಲ್ಲ, ಇತಿ-ಎಂಬುದು, ಉಪಲಭ್ಯತೇ ಹಿ-ಕಂಡು ಬರುತ್ತದಷ್ಟೆ (ಪ್ರತ್ಯಕ್ಷ ಸಿದ್ಧವಷ್ಟೆ); ಏವಂ-ಹೀಗೆ, ಚಿಂತಾಂ-ಯೋಚನೆಯನ್ನು ಪ್ರಕುರ್ವಾಣಃ-ಮಾಡುತ್ತಿರಲು, ಜಲಪ್ರವಾಹತಃ-ಜಲಪ್ರವಾಹದಿಂದ, ಜಲೂಕಾವದನಾಂತಿಕೇ-ಜಲೂಕದ ಮುಖದ (ಬಾಯಿ) ಹತ್ತಿರಕ್ಕೆ, ಯಾಂತಂ-ಬಂದ, ಏಕಂ-ಒಂದು, ಕೀಟಕಂ ತು-ಹುಳವನ್ನಾದರೋ, ದದರ್ಶ-ಕಂಡನು; ಸಾ ತು-ಆ ಜಲೂಕವಾದರೂ, ಕೀಟಕಂ-ಆ ಹುಳವನ್ನು, ಅಗ್ರಸತ್-ನುಂಗಿತು; ಸಃ-ಆ ಬ್ರಾಹ್ಮಣನು, ವಿಸ್ಮಯಂ-ಆಶ್ಚರ್ಯವನ್ನು, ಅವಾಪ್ತವಾನ್-ಹೊಂದಿದವನಾದನು; ಅಹೋ ಚಿತ್ರಂ-ಅತ್ಯಾಶ್ಚರ್ಯವು!, ಅಹೋಚಿತ್ರಂ-ಅತಿಶಯ ವಿಚಿತ್ರವು! ಸರ್ವೇ-ಸಮಸ್ತ ಜನಾಃ-ಜನರೂ, ವಿಮೋಹಿತಾಃ-ಮೂಢರಾಗಿ (ಜ್ಞಾನವಿಲ್ಲದೇ), ವೃಥಾ-ವ್ಯರ್ಥವಾಗಿ, ಯತ್ನಂ-(ಆಹಾರಾದಿಗಳಿಗಾಗಿ) ಯತ್ನವನ್ನು ಪ್ರಕುರ್ವತೇ-ಮಾಡುತ್ತಾರೆ; ವೃತ್ತಿದಃ-ವೃತ್ತಿಪ್ರದನು (ಜೀವಿತವನ್ನು ಕಲ್ಪಿಸುವವನು), ಕೇವಲಃ ಹರಿಃ-ಶ್ರೀಹರಿಯು ಮಾತ್ರ (ಸ್ವತಂತ್ರನಾದ ಶ್ರೀಹರಿಯೇ); ಅಥ-ಹೀಗೆ ಯೋಚಿಸಿ, ಸುಭದ್ರಕಃ-ಆ ಸುಭದ್ರನು, ನಿರುದ್ಯೋಗಃ-ಯತ್ನವನ್ನೆಲ್ಲ ತ್ಯಜಿಸಿ, ತತ್ರೈವ-ಅಲ್ಲಿಯೇ, ತಸ್ಥೌ-ಕೂತನು (ಗಂಗಾ ತೀರದಲ್ಲಿಯೇ ಇರುವವನಾದನು); ಹಿ-ಹೀಗೆ ನಿರ್ಣಯಿಸಿದುದು ಆಶ್ಚರ್ಯವು.

**ಧ್ಯಾಯಮಾನೋ ಹರಿಂ ಚಿತ್ತೇ ಮೀಲಿತಾಕ್ಷಃ ಸುಖಾಸನಃ ।**

**ದಿನಾಂತೇ ಧ್ಯಾನನಿರ್ಮುಕ್ತೋ ಭಕ್ಷ್ಯಂ ಕಿಂಚಿನ್ನಲಬ್ಧವಾನ್ ॥ ೧೭ ॥**

**ತತಃ ಸಂಧ್ಯಾಮುಪಾಸ್ಯೈವಂ ಧ್ಯಾಯನ್ ತಸ್ಥೌ ನಿಶಾಮಪಿ ।**

**ಪುನಃ ಪ್ರಾತಃ ಪುನರರ್ಕತ್ತಮೇವಂ ಚಕ್ರೇ ದಿನತ್ರಯಂ ॥ ೧೮ ॥**

---

(ಬಾಯಿಯೊಳಗೆ ತೆಗೆದುಕೊಂಡಿತು); ಸುಭದ್ರನಿಗೆ ಆಶ್ಚರ್ಯವಾಯಿತು; ಆಶ್ಚರ್ಯದಿಂದ, ಅಹೋ ಆಶ್ಚರ್ಯವು! ಅದ್ಭುತವು! ಮೂಢರಾದ ಜನರು, ವ್ಯರ್ಥವಾಗಿ (ಆಹಾರಾದಿ) ಜೀವಿಕಾ ವೃತ್ತಿಗಳಿಗಾಗಿ ಯತ್ನಿಸುತ್ತಾರೆ—ಸ್ವತಂತ್ರನಾದ ಶ್ರೀಹರಿಯೇ ಸರ್ವರಿಗೂ ಇದ್ದಲ್ಲಿಯೇ ಆಹಾರವನ್ನು ಒದಗಿಸಿ ರಕ್ಷಿಸುತ್ತಾನೆಂದು, ಉದ್ಗರಿಸಿ, ಅಲ್ಲಿಂದ ಮುಂದೆ ಯಾವ ಉದ್ಯೋಗವೂ ಇಲ್ಲದೇ (ಯತ್ನಗಳನ್ನೆಲ್ಲಾ ತ್ಯಜಿಸಿ) ಗಂಗಾತೀರದಲ್ಲಿಯೇ ಕೂತನು (೧೩-೧೬). ಸುಖಾಸನದಲ್ಲಿ ಕೂತು, ಮನಸ್ಸಿನಲ್ಲಿ ಕಣ್ಣುಮುಚ್ಚಿ ಧ್ಯಾನಮಾಡುತ್ತ ಸಾಯಂಕಾಲದವರೆಗಿದ್ದರೂ, ಯಾವ ಆಹಾರವನ್ನೂ ಹೊಂದಲಿಲ್ಲ; ಸಮಾಧಿಯಿಂದ ಎಚ್ಚೆತ್ತು ಸಂಧ್ಯೋಪಾಸನೆಯನ್ನು ಮಾಡಿ, ಆ ರಾತ್ರಿಯೆಲ್ಲ ಪುನಃ ಧ್ಯಾನದಲ್ಲಿ ಮಗ್ನನಾದನು; ಪ್ರಾತಃಕಾಲದಲ್ಲಿ ಪುನಃ ಧ್ಯಾನದಿಂದ

ಚತುರ್ಥೇ ದಿವಸೇ ಪ್ರಾತಃ ಸುಸ್ನಾತಃ ಕ್ಷುಧಯಾರ್ದಿತಃ ।
ಚುಕ್ರೋಶೋಚ್ಚೈ ರಮಾನಾಥ ಕ್ವಾಸಿ ಕ್ವಾಸೀತಿ ವೈ ಮುಹುಃ ॥ ೧೯ ॥
ವೃದ್ಧಬ್ರಾಹ್ಮಣರೂಪೇಣ ಪ್ರಾದುರ್ಭೂತಸ್ತದಗ್ರತಃ ।
ಹರಿಃ ಸಾಕ್ಷಾದ್ದಯಾಕ್ಲಿನ್ನಚೇತಾ ವಿಶ್ವಂಭರೋ ವಿಭುಃ ॥ ೨೦ ॥

ಸುಖಾಸನಃ-ಸುಖಾಸನದಲ್ಲಿ ಕೂತು (ಧ್ಯಾನಮಾಡಲು ಸ್ವೋಚಿತವಾದ ಪದ್ಮಾಸನಾದಿ ಆಸನಗಳೊಂದರಲ್ಲಿ ಕೂತು). ಮೀಲಿತಾಕ್ಷಃ-ಕಣ್ಣುಮುಚ್ಚಿ ಚಿತ್ತೇ-ಮನಸ್ಸಿನಲ್ಲಿ ಹರಿಂ-ಶ್ರೀಹರಿಯನ್ನು ಧ್ಯಾಯಮಾನಃ-ಧ್ಯಾನಿಸುವವನು (ಆದನು); ದಿನಾಂತೇ-ಸಾಯಂಕಾಲದಲ್ಲಿ ಧ್ಯಾನನಿರ್ಮುಕ್ತಃ-ಧ್ಯಾನವನ್ನು ಬಿಟ್ಟುಎದ್ದು ಕಿಂಚಿತ್-ಯಾವ, ಭಕ್ಷ್ಯಂ-ಆಹಾರವನ್ನು ನ ಲಬ್ಧವಾನ್-ಹೊಂದಲಿಲ್ಲವು; ತತಃ-ನಂತರ, ಸಂಧ್ಯಾಂ-ಸಂಧ್ಯಾವಂದನೆಯನ್ನು ಉಪಾಸ್ಯ-ಮಾಡಿ, ಏವಂ-ಹೀಗೆಯೇ, ಧ್ಯಾಯನ್-ಧ್ಯಾನಮಾಡುತ್ತ ನಿಶಾಂ ಅಪಿ-ರಾತ್ರಿಯಲ್ಲಿಯೂ, ತಸ್ಥೌ-ಇದ್ದನು (ನಿರಾಹಾರನಾಗಿಯೇ ಇದ್ದನು); ಪುನಃ-ಮತ್ತೆ ಪ್ರಾತಃ-ಬೆಳಿಗ್ಗೆ, ಪುನಃ-ಮತ್ತೆ ನಕ್ತಂ-ರಾತ್ರಿ, ಏವಂ-ಹೀಗೆಯೇ (ಆಹಾರವಿಲ್ಲದೆ), ದಿನತ್ರಯಂ-ಮೂರು ದಿನಗಳಲ್ಲಿ ಚಕ್ರೇ-(ಧ್ಯಾನ) ಮಾಡಿದನು; ಚತುರ್ಥೇ-ನಾಲ್ಕನೆಯ, ದಿವಸೇ-ದಿನದಲ್ಲಿ ಪ್ರಾತಃ-ಬೆಳಿಗ್ಗೆ, ಸುಸ್ನಾತಃ-ಭಕ್ತಿಪೂರ್ವಕ ಸ್ನಾನಮಾಡಿ, ಕ್ಷುಧಯಾರ್ದಿತಃ-ಹಸಿವಿನಿಂದ, ಪೀಡಿತನಾಗಿ, ರಮಾನಾಥ-ಹೇ ಲಕ್ಷ್ಮೀಪತೇ! ಕ್ವಾಸಿ-ಎಲ್ಲಿರುವಿ, ಕ್ವಾಸಿ-ಎಲ್ಲಿರುವಿ, ಇತಿ-ಎಂದು, ಮುಹುಃ-ಮತ್ತೆಮತ್ತೆ ಉಚ್ಚೈಃ-ಗಟ್ಟಿಯಾಗಿ, ಚುಕ್ರೋಶ-ಕೂಗಿಕೊಂಡನು; ವಿಶ್ವಂಭರಃ-ಜಗದ್ರಕ್ಷಕನೂ, ವಿಭುಃ-ಸರ್ವತ್ರ ಇರುವವನೂ, ಸಾಕ್ಷಾತ್ ಹರಿಃ-ಆದ ಸ್ವಯಂ ಶ್ರೀಹರಿಯು, ದಯಾಕ್ಲಿನ್ನಚೇತಾಃ-ಕೃಪೆಯಿಂದ ಮನಸ್ಸು ಕರಗಿ, ತದಗ್ರತಃ-ಆ ಸುಭದ್ರನ ಎದುರಿಗೆ, ವೃದ್ಧಬ್ರಾಹ್ಮಣರೂಪೇಣ-ವೃದ್ಧಬ್ರಾಹ್ಮಣ ರೂಪದಿಂದ, ಪ್ರಾದುರ್ಭೂತಃ-ಪ್ರತ್ಯಕ್ಷನಾದನು (ಪ್ರಕಟನಾದನು).

ಅಪಿ ವತ್ಸ ಸುಭದ್ರ ತ್ವಂ ಕುತಃ ಖಿದ್ಯಸಿ ಮಾ ಖಿದ ।
ಸಿಸೃಕ್ಷುರ್ಭಗವಾನಾದೌ ಮುಖಬಾಹೂರುಪಾದತಃ ॥ ೨೧ ॥

---

ಎದ್ದು ಸಂಧ್ಯಾದಿಗಳನ್ನಾಚರಿಸಿ, ಪುನಃ ರಾತ್ರಿಯೂ ಇದೇ ಪ್ರಕಾರ ಮೂರು ದಿನಗಳವರೆಗೆ ಮಾಡುತ್ತಿದ್ದನು; ನಾಲ್ಕನೆಯ ದಿನ ಪ್ರಾತಃಕಾಲ ಹಸಿವಿನಿಂದ ಪೀಡಿತನಾಗಿ, ಸ್ನಾನಮಾಡಿ, ಯಾವ ಆಹಾರವೂ ದೊರೆಯದಿರಲು, 'ಹೇ ರಮಾನಾಥ! ಎಲ್ಲಿರುವಿ' ಎಂದು ಮತ್ತೆ ಮತ್ತೆ ಕೂಗತೊಡಗಿದನು; ಆಗ, ಅವನೆದುರಿಗೆ, ಸರ್ವರಕ್ಷಕನಾದ, ಸರ್ವತ್ರಸ್ಥಿತನಾದ ಶ್ರೀಹರಿಯು, ಸುಭದ್ರನ ಮೇಲೆ ಕೃಪಾಯುಕ್ತನಾಗಿ, ವೃದ್ಧ ಬ್ರಾಹ್ಮಣರೂಪದಿಂದ, ಪ್ರತ್ಯಕ್ಷನಾದನು (೧೭-೨೦). ಮತ್ತುಸುಭದ್ರನನ್ನು

ವಿಪ್ರಕ್ಷತ್ರಿಯವಿಟ್‌ಶೂದ್ರಾನ್ನಿರ್ಮಾಯೈವಾಖಿಲಂ ಜಗತ್ ।
ವೃತ್ತ್ಯಾ ಸಂಯೋಜಯಾಮಾಸ ನಾನಾವಿದ್ಯಾಪ್ರವೃತ್ತಯಾ ॥ ೨೨ ॥
ಪರಸ್ಪರೋಪಕಾರಾಯ ಮುಖಬಾಹೂರುಪಾದಜಾಃ ।
ಸ್ವಯಂ ಪ್ರದರ್ಶ್ಯ ತಾ ವೃತ್ತೀರ್ಲೋಕೇ ಪ್ರಥಯಮಾತನೋತ್ ॥ ೨೩ ॥

ಬ್ರಾಹ್ಮಣರೂಪೀ ಶ್ರೀಹರಿಯು ಮಾತನಾಡುತ್ತಾನೆ:

ವತ್ಸ ಸುಭದ್ರ-ಹೇ ಪ್ರಿಯಸುಭದ್ರ!, ತ್ವಂ-ನೀನು, ಕುತಃ-ಏತಕ್ಕೆ, ಅಪಿ ಖಿದ್ಯಸಿ-ದುಃಖಿಸುತ್ತಿರುವಿ? ಮಾ ಖಿದ-ದುಃಖಿಸಬೇಡ; (ಕೇಳು). ಸಿಸೃಕ್ಷುಃ-ಸೃಷ್ಟಿಮಾಡಲಿಚ್ಛಿಸಿದ, ಭಗವಾನ್-ವಿರಾಟ್ ಪುರುಷನಾದ ಶ್ರೀಹರಿಯು, ಆದೌ-ಮೊದಲಿಗೆ, ಮುಖಬಾಹೂರುಪಾದತಃ-ಮುಖ, ಬಾಹು, ಊರು (ತೊಡೆ), ಪಾದಗಳಿಂದ, (ಪ್ರತ್ಯೇಕವಾಗಿ ಒಂದೊಂದರಿಂದ), ವಿಪ್ರ ಕ್ಷತ್ರಿಯ ವಿಟ್ ಶೂದ್ರಾನ್-ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ನಿರ್ಮಾಯ-ಸೃಷ್ಟಿಸಿ, ಅಖಿಲಂ-ಸಮಸ್ತ ಜಗತ್-ಜಗತ್ತನ್ನೂ, ಏವ-ಹೀಗೆಯೇ ಸೃಷ್ಟಿಸಿ, ನಾನಾವಿದ್ಯಾ ಪ್ರವೃತ್ತಯಾ-ವಿವಿಧ ವಿದ್ಯೆಗಳನ್ನು ಪ್ರವರ್ತಿಸುವುದರಿಂದ, ಪರಸ್ಪರೋಪಕಾರಾಯ-ಅನ್ಯೋನ್ಯವಾದ ಉಪಕಾರವಾಗಲೆಂದು, ಮುಖ ಬಾಹೂರು ಪಾದಜಾಃ-ಮುಖಾದಿ ನಾಲ್ಕು (ವಿರಾಟ್ ದೇಹದ) ಅವಯವಗಳಿಂದ ಹುಟ್ಟಿದ ಬ್ರಾಹ್ಮಣಾದಿ ಪ್ರಜೆಗಳನ್ನು, ವೃತ್ತ್ಯಾ-ಜೀವಿಕಾ ಮಾರ್ಗಗಳಿಂದ (ವೃತ್ತಿಗಳಿಂದ), ಸಂಯೋಜಯಾಮಾಸ-ಯೋಜನೆಮಾಡಿ ವ್ಯವಸ್ಥೆಗೊಳಿಸಿದನು; ತಾಃ-ಆ, ವೃತ್ತೀಃ-(ಭಿನ್ನಭಿನ್ನ) ವೃತ್ತಿಗಳನ್ನು, ಸ್ವಯಂ-ತಾನೇ, ಪ್ರದರ್ಶ್ಯ-ಆಚರಿಸಿ (ತೋರಿಸಿ), ಲೋಕೇ-ಜಗತ್ತಿನಲ್ಲಿ ಪ್ರಥಯಂ-ವಿಸ್ತಾರವನ್ನಾಗಿ, ಆತನೋತ್-ಮಾಡಿದನು.

ಪಶುಪಕ್ಷಿಮೃಗಾದೀನಾಂ ಕ್ರಿಮಿಕೀಟಾದಿನಾಮಪಿ ।
ಮುಖಪಾದಾದಿಶಾರೀರ ವ್ಯಾಪಾರೈರ್ವೃತ್ತಿಮಾತನೋತ್ ॥ ೨೪ ॥

---

ಉದ್ದೇಶಿಸಿ ಹೀಗೆ ಮಾತನಾಡಿದನು:— 'ಹೇ ಪ್ರಿಯ ಸುಭದ್ರ! ಏತಕ್ಕಾಗಿ ದುಃಖಿಸುತ್ತಿರುವಿ? ದುಃಖಪಡಬೇಡ; ನಿನ್ನ ದುಃಖದ ಮೂಲಕಾರಣವನ್ನು ತಿಳಿಸುತ್ತೇನೆ, ಕೇಳು; ಪೂರ್ವದಲ್ಲಿ ಶ್ರೀಹರಿಯು, ವಿರಾಟ್ ದೇಹದಿಂದ, ಸೃಷ್ಟಿ ಮಾಡಲಿಚ್ಛಿಸಿ, ಅದರ, ಮುಖ, ಬಾಹು, ತೊಡೆ ಮತ್ತು ಪಾದಗಳಿಂದ ಕ್ರಮವಾಗಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರನ್ನು ಸೃಷ್ಟಿಸಿದನು; ನಂತರ ಹೀಗೆ ಆ ದೇಹ ವನ್ನು ನಿಮಿತ್ತೀಕರಿಸಿ, ಭಗವಂತನು, ಸಮಸ್ತ ಜಗತ್ತನ್ನೂ ನಿರ್ಮಿಸಿದನು; ವಿವಿಧ ವಿದ್ಯಾಪ್ರವರ್ತಕನಾಗಿ, ಈ ನಾಲ್ಕೂ ವರ್ಣರ ಪ್ರಜೆಗಳಿಗೆ (ಅವರ ದ್ವಾರಾ ಇತರ ಸರ್ವರಿಗೂ) ಪರಸ್ಪರ ಉಪಕಾರವಾಗುವಂತೆ (ಸಹಾಯವಾಗುವಂತೆ), ಜೀವಿಕೆ (ವೃತ್ತಿ)ಗಳನ್ನು ವಿಧಿಸಿ, ಅವರಿಗೆ ಉಪದೇಶಿಸಿ ವ್ಯವಸ್ಥೆಗೊಳಿಸಿದನು; ಆ ವಿವಿಧ

ಪಶುಪಕ್ಷಿ ಮೃಗಾದೀನಾಂ-ಪಶು, ಪಕ್ಷಿ ಮೃಗಾದಿಗಳಿಗೂ, ಅಪಿ-ಮತ್ತು ಕ್ರಿಮಿಕೀಟಾದಿನಾಂ-ಕ್ರಿಮಿ, ಕೀಟಾದಿಗಳಿಗೂ, ಮುಖಪಾದಾದಿ ಶಾರೀರ ವ್ಯಾಪಾರೈಃ-ಮುಖ (ಬಾಯಿ) ಪಾದ ಮೊದಲಾದ ಶರೀರದ ಅವಯವಗಳ ವ್ಯಾಪಾರಗಳಿಂದ, (ಶರೀರದ ಅವಯವಗಳ ಕಾರ್ಯಗಳಿಂದ), ವೃತ್ತಿಂ-ಜೀವನೋಪಾಯವನ್ನು ಆತನೋತ್-ಗೊತ್ತು ಮಾಡಿದನು.

ಧಾವನೈರ್ವಾಹನೈರ್ಯುದ್ಧೈರ್ವೃಷೋಷ್ಟ್ರಗಜವಾಜಿನಾಂ ।
ಜೀವನಂ ಕಲ್ಪಯಾಮಾಸ ಮೃಗಾದೀನಾಂ ಪರಸ್ಪರಂ ॥ ೨೫ ॥
ಕೇಚಿನ್ನಖಾಯುಧಾಃ ಕೇಚಿದ್ದಂಷ್ಟ್ರಿಣಃ ಶೃಂಗಿಣಃ ಪರೇ ।
ಪರಸ್ಪರೇಣ ಜೀವಂತಿ ಕೇಚಿತ್ ತೃಣಜಲಾದಿಭಿಃ ॥ ೨೬ ॥
ಪಾದವ್ಯಾಪಾರಿಣಃ ಕೇಚಿತ್ ಪಕ್ಷವ್ಯಾಪಾರಿಣಃ ಪರೇ ।
ಏವಂ ತೇಷಾಂ ಸಾಧನಾನಿ ಶರೀರೇಷು ನಿಯೋಜ್ಯ ಚ ॥ ೨೭ ॥
ಜೀವಿಕಾಃ ಕಲ್ಪಯಾಮಾಸ ಮಾನುಷೇಷ್ವಪಿ ಸರ್ವಶಃ ।

ಧಾವನೈಃ-ವೇಗವಾದ ಸಂಚಾರಗಳಿಂದಲೂ, ವಾಹನೈಃ-ವಾಹನಗಳಿಂದಲೂ, ಯುದ್ಧೈಃ-ಯುದ್ಧಗಳಿಂದಲೂ, ವೃಷೋಷ್ಟ್ರ ಗಜವಾಜಿನಾಂ-ಎತ್ತು ಒಂಟೆ, ಆನೆ, ಕುದುರೆಗಳಿಗೆ, ಜೀವನಂ-ಜೀವನವನ್ನು ಕಲ್ಪಯಾಮಾಸ-ಗೊತ್ತು ಮಾಡಿದನು (ನಿಯತವಾಗಿ ಮಾಡಿದನು); ಮೃಗಾದೀನಾಂ-ಪಶ್ವಾದಿಗಳಿಗೆ, ಪರಸ್ಪರಂ-ಅನ್ಯೋನ್ಯವಾಗಿ (ಒಂದಕ್ಕೊಂದು), (ಜೀವನಂ-ಜೀವಿಕೆಯು-ಆಹಾರವಾಗುವುದರ ಮೂಲಕ ಬದುಕುತ್ತವೆ); ಕೇಚಿತ್-(ಇವುಗಳಲ್ಲಿ ಕೆಲವು ನಖಾಯುಧಾಃ-ನಖಗಳೇ ಆಯುಧವಾಗುಳ್ಳವು, ಕೇಚಿತ್-ಕೆಲವು ದಂಷ್ಟ್ರಿಣಃ-ಹಲ್ಲುಗಳುಳ್ಳವು (ಅವೇ ಆಯುಧವಾಗುಳ್ಳವು); ಪರೇ-ಇನ್ನೂ ಇತರ ಪ್ರಾಣಿಗಳು, ಶೃಂಗಿಣಃ-

---

ವೃತ್ತಿಗಳನ್ನು ಸ್ವಯಂ ಆಚರಿಸಿ ತೋರಿಸಿ, ಜಗತ್ತಿನಲ್ಲಿ ಪ್ರಚಾರಗೊಳಿಸಿದನು (೨೦-೨೩). ಪಶು, ಪಕ್ಷಿ ಮೃಗಾದಿಗಳಿಗೂ, ಕ್ರಿಮಿಕೀಟಾದಿಗಳಿಗೂ, ಮುಖ, ಪಾದಾದಿ ಶರೀರದ ಅವಯವಗಳ ಕ್ರಿಯೆಗಳಿಂದಲೇ ಜೀವನೋಪಾಯವಾಗುವಂತೆ ಮಾಡಿದನು (೨೪). ವೇಗವಾಗಿ ಸಂಚರಿಸುವುದು, ವಾಹನಗಳಾಗುವುದು, ಯುದ್ಧದಲ್ಲಿ ಉಪಯೋಗಿಸುವುದೇ ಮೊದಲಾದ ಕರ್ಮಗಳಿಂದ, ಎತ್ತು, ಒಂಟೆ, ಆನೆ, ಕುದುರೆ ಮೊದಲಾದ ಪ್ರಾಣಿಗಳಿಗೆ, ಜೀವನವನ್ನು ಕಲ್ಪಿಸಿದನು; ಮೃಗಾದಿಗಳಿಗೆ ಒಂದಕ್ಕೊಂದು (ಅನ್ಯೋನ್ಯವಾಗಿ) ಆಹಾರವಾಗುವುದರ ಮೂಲಕ ಜೀವಿಸುವಂತೆಯೂ ವ್ಯವಸ್ಥೆಗೊಳಿಸಿರುವನು; ಕೆಲವು ಪ್ರಾಣಿಗಳಿಗೆ ನಖಗಳೇ ಆಯುಧಗಳು; ಕೆಲವಕ್ಕೆ ದಂಷ್ಟ್ರಗಳೇ (ಹಲ್ಲುಗಳೇ) ಆಯುಧಗಳು; ಮತ್ತೆ ಕೆಲವಕ್ಕೆ ಕೋಡುಗಳು ಆಯುಧವಾಗಿರುತ್ತವೆ; ಇವು ಅನ್ಯೋನ್ಯವಾಗಿ ಸಂಹರಿಸಿ, ಭಕ್ಷಿಸಿ ಜೀವಿಸುತ್ತವೆ; ಇನ್ನೂ

ಕೋಡುಗಳುಳ್ಳವು; ಪರಸ್ಪರೇಣ-ಅನ್ಯೋನ್ಯವಾಗಿ (ಒಂದನ್ನೊಂದು ಭುಂಜಿಸಿಯೂ), ಕೇಚಿತ್-ಕೆಲವು, ತೃಣಜಲಾದಿಭಿಃ-ಹುಲ್ಲು ನೀರುಗಳಿಂದಲೂ, ಜೀವಂತಿ-ಜೀವಿಸುತ್ತವೆ; ಕೇಚಿತ್-ಕೆಲವು ಪ್ರಾಣಿಗಳು, ಪಾದವ್ಯಾಪಾರಿಣಃ-ಪಾದಗಳಿಂದಲೂ, ಕೇಚಿತ್-ಕೆಲವು, ಪಕ್ಷ ವ್ಯಾಪಾರಿಣಃ-ಪಕ್ಷ (ರೆಕ್ಕೆ)ಗಳಿಂದಲೂ ವ್ಯಾಪಾರ ಮಾಡುತ್ತವೆ (ತಮ್ಮ ಜೀವಿತಕ್ಕೆ ಬೇಕಾದ ಯತ್ನರೂಪವಾದ ಕ್ರಿಯೆಗಳನ್ನು ಮಾಡುತ್ತವೆ); ಏವಂ-ಹೀಗೆ, ತೇಷಾಂ-ಅವುಗಳಿಗೆ, ಶರೀರೇಷು ಚ-ಶರೀರದಲ್ಲಿಯೇ, ನಿಯೋಜ್ಯ-ಯೋಜನ ಮಾಡಿ (ಶರೀರದ ಅವಯವಗಳಲ್ಲಿಯೇ ಯತ್ನಸಾಧನಗಳನ್ನು ಸೇರಿಸಿಟ್ಟು), ಸರ್ವಶಃ-ಸಮಸ್ತರಾದ, ಮಾನುಷೇಷು-ಮನುಷ್ಯರಲ್ಲಿ ಅಪಿ-ಆದರೋ, ಜೀವಿಕಾಃ-(ಪ್ರತ್ಯೇಕವಾದ ಜೀವಿಕೆಗಳನ್ನು), ಕಲ್ಪಯಾಮಾಸ-ಗೊತ್ತುಮಾಡಿರುವನು (ಸೃಷ್ಟಿಸಿರುವನು).

**ಅನುಲೋಮ್ಯಾತ್ ಪ್ರಾತಿಲೋಮ್ಯಾತ್ ಪ್ರಜಾ ಜಾತಾ ಹ್ಯನೇಕಶಃ ॥ ೨೮**

**ನಾನಾಜಾತಿಸಹಸ್ರಾಸ್ತಾ ವೃತ್ತ್ಯಾ ಜೀವಂತಿ ನಾನ್ಯಥಾ ।**

ಅನುಲೋಮ್ಯಾತ್-ಅನುಲೋಮ ಪ್ರಕಾರದಿಂದಲೂ, ಪ್ರಾತಿಲೋಮ್ಯಾತ್-ಪ್ರತಿಲೋಮ ವಿಧದಿಂದಲೂ, ಅನೇಕಶಃ-ಬಹುವಿಧರಾದ, ಪ್ರಜಾಃ-ಪ್ರಜೆಗಳು, ಜಾತಾಃ-ಹುಟ್ಟುವರು; ತಾಃ-ಅವರು (ಹಾಗೆ ಹುಟ್ಟಿದವರು), ನಾನಾಜಾತಿಸಹಸ್ರಾಃ-ವಿವಿಧವಾದ ಸಹಸ್ರಾರು ಜಾತಿಗಳಿಗೆ ಸೇರಿರುವರು; (ಅವರು), ವೃತ್ತ್ಯಾ-(ಪ್ರತ್ಯೇಕವಾದ ವಿವಿಧ) ವೃತ್ತಿಯಿಂದ, ಜೀವಂತಿ-ಜೀವಿಸುತ್ತಾರೆ, ಅನ್ಯಥಾ ನ-ಬೇರೆಯಲ್ಲ (ವೃತ್ತಿಯನ್ನು ಅವಲಂಬಿಸದೇ ಜೀವಿಸುವವರು ಯಾರೂ ಇಲ್ಲ).

**ಕರಪಾದವಿಹೀನಾ ಯೇ ಮೂಕಾ ಅಂಧಾಶ್ಚ ಪಂಗವಃ ॥ ೨೯ ॥**

**ಅಶಕ್ತಾಶ್ಚಾಪ್ಯನಾಥಾಶ್ಚ ಜಂಗಮಾಃ ಸ್ಥಾವರಾ ಅಪಿ ।**

**ತಾನ್ ಸರ್ವಾಂಸ್ತತ್ರತತ್ರೈವ ಗ್ರಾಸಂ ಪ್ರಾಪಯತಿ ಪ್ರಭುಃ ॥ ೩೦ ॥**

---

ಕೆಲವು ಮೃಗಾದಿಗಳು, ಹುಲ್ಲು-ನೀರುಗಳಿಂದಲೇ ಜೀವಿಸುತ್ತವೆ; ಕೆಲವು ಪಾದವ್ಯಾಪಾರವುಳ್ಳವು; ಮತ್ತೆ ಕೆಲವು ಪಕ್ಷಗಳಿಂದ (ಪಕ್ಷಿಗಳು-ರೆಕ್ಕೆಗಳಿಂದ) ವ್ಯಾಪಾರ ಮಾಡುತ್ತವೆ; ಹೀಗೆ ವಿವಿಧ ಪ್ರಾಣಿಗಳಿಗೆ, ಅವುಗಳ ದೇಹಗಳಲ್ಲಿಯೇ ಜೀವನ ಸಾಧನಗಳನ್ನು ಯೋಜನೆಮಾಡಿ, ಜೀವಿಕೆಗಳನ್ನು ಕಲ್ಪಿಸಿರುವನು; ಹೀಗೆಯೇ ಸಮಸ್ತ ಮಾನವರಿಗೂ ವಿವಿಧ ವೃತ್ತಿಗಳನ್ನು ಗೊತ್ತುಪಡಿಸಿರುವನು (೨೫-೨೭). ಮನುಷ್ಯರಲ್ಲಿ ಕೆಲವು ಅನುಲೋಮಿಗಳು; ಮತ್ತೆ ಕೆಲವರು ಪ್ರತಿಲೋಮಿಗಳು; ಹೀಗೆ ವಿವಿಧ ಸ್ತ್ರೀ ಪುರುಷರಿಂದ ಜನಿಸುವ ಪ್ರಜೆಗಳು ಸಹಸ್ರಾರು ವಿಭಿನ್ನ ಜಾತಿಗಳಿಗೆ ಸೇರಿರುವರು; ಆ ಎಲ್ಲರೂ ಭಿನ್ನಭಿನ್ನ ವೃತ್ತಿಗಳನ್ನು ಅವಲಂಬಿಸಿಯೇ ಜೀವಿಸುತ್ತಾರೆ—ಯಾವ ವೃತ್ತಿಯನ್ನು ಮಾಡದೇ ಯಾರೂ ಜೀವಿಸುವುದಿಲ್ಲ (೨೮). ಹಸ್ತಪಾದಗಳಿಲ್ಲದವರು, ಮೂಕರು, ಕುರುಡರು, ಹೆಳವರು ಮತ್ತು ಅಶಕ್ತರೂ, ಅನಾಥರೂ ಆದ ಸಮಸ್ತ ಸ್ಥಾವರಜಂಗಮ

ಗರ್ಭಸ್ಥಾನ್ ಜಾಠರಾನ್ ಬಾಲಾನ್ ಯಜ್ಜೀವಯಿತುಮಿಚ್ಛತಿ ।
ತರ್ಹಿ ಪ್ರಾಪಯತೇ ಭಕ್ಷ್ಯಂ ಯಾವಜ್ಜೀವಂ ನ ಸಂಶಯಃ ॥ ೩೧ ॥
ಕ್ಲೇಶಿತ್ವಾ ಜೀವಯತ್ಯನ್ಯಾನ್ ಸುಖಯಿತ್ವಾಪಿ ಜೀವಯೇತ್ ।
ತತ್ತನ್ನಾನಾಕರ್ಮವಶಾತ್ ಸ್ವತಂತ್ರೇಚ್ಛೋ ಹರಿಃ ಸದಾ ॥ ೩೨ ॥

ಪ್ರಭುಃ-ಸರ್ವಶಕ್ತನೂ ಸರ್ವರ ಸ್ವಾಮಿಯೂ ಆದ ಶ್ರೀಹರಿಯು, ಯೇ-ಯಾರು, ಕರಪಾದವಿಹೀನಾಃ-ಕೈಕಾಲುಗಳಿಲ್ಲದವರೋ, ಮೂಕಾಃ-ಮೂಕರೋ, ಚ-ಮತ್ತು ಅಂಧಾಃ-ಕುರುಡರೋ, ಪಂಗವಃ-ಹೆಳವರೋ (ಊನವಾದ ತೊಡೆಗಳುಳ್ಳವರೋ—ಶಕ್ತಿಯಿಲ್ಲದೇ ತೆವಳಿ ಸಂಚರಿಸುವರೋ), ಅಶಕ್ತಾಃ-(ಇನ್ನು ಬೇರೆ ವಿಧಗಳಿಂದ) ಅಶಕ್ತರೂ, ಅನಾಥಾಃ ಚ-ಅನಾಥರೂ (ಸಹಾಯರಹಿತರೂ) ಆಗಿರುವರೋ, ಜಂಗಮಾಃ-ಜಂಗಮ (ಸಂಚರಿಸುವ) ಪ್ರಾಣಿಗಳೂ, ಸ್ಥಾವರಾಃ ಅಪಿ-ಸ್ಥಾವರ (ಗಮನಶಕ್ತಿರಹಿತ) ಪ್ರಾಣಿಗಳೂ ಸಹ, ತಾನ್ ಸರ್ವಾನ್-ಆ ಎಲ್ಲರನ್ನೂ ತತ್ರ ತತ್ರ ಏವ-ಅಲ್ಲಲ್ಲಿಯೇ (ಅವರಿದ್ದಲ್ಲಿಯೇ), ಗ್ರಾಸಂ-ಆಹಾರವನ್ನು ಪ್ರಾಪಯತಿ-ಹೊಂದಿಸುತ್ತಾನೆ; ಗರ್ಭಸ್ಥಾನ್-ಗರ್ಭದಲ್ಲಿರುವವರನ್ನೂ, ಜಾಠರಾನ್-ಹೊಟ್ಟೆಯಲ್ಲಿರುವ (ಕ್ರಿಮಿ ಮುಂತಾದ) ಪ್ರಾಣಿಗಳನ್ನೂ, ಬಾಲಾನ್-ಎಳೆವಯಸ್ಸಿನ ಪ್ರಾಣಿಗಳನ್ನೂ, ಯಾವತ್-ಎಲ್ಲಿಯವರೆಗೆ, ಜೀವಯಿತುಂ-ಬದುಕಿಸಿರಲು, ಇಚ್ಛತಿ-(ಶ್ರೀಹರಿಯು, ಪ್ರಭುವು) ಇಚ್ಛಿಸುವನೋ, ತರ್ಹಿ-ಆಗ (ಅವರೆಗೆ), ಯಾವಜ್ಜೀವಂ-ಬದುಕಿರುವವರೆಗೂ, ಭಕ್ಷ್ಯಂ-ಆಹಾರವನ್ನು ಪ್ರಾಪಯತೇ-ಒದಗಿಸುತ್ತಾನೆ; ನ ಸಂಶಯಃ-ಸಂದೇಹವಿಲ್ಲ; ಕ್ಲೇಶಿತ್ವಾ-ಕ್ಲೇಶಪಡಿಸಿ (ಕಷ್ಟಪಡಿಸಿ), ಜೀವಯತಿ-(ಕೆಲವರನ್ನು) ಬದುಕಿಸಿರುತ್ತಾನೆ; ಅನ್ಯಾನ್-ಬೇರೆ ಕೆಲವರನ್ನು ಸುಖಯಿತ್ವಾ ಅಪಿ-ಸುಖಪಡಿಸಿಯೂ, ತತ್ತನ್ನಾನಾಕರ್ಮವಶಾತ್-ಅವರವರ (ಆಯಾಜೀವರ) ವಿವಿಧ ಕರ್ಮಾನುಸಾರವಾಗಿ, ಸ್ವತಂತ್ರೇಚ್ಛಃ-

---

ಪ್ರಾಣಿಗಳೆಲ್ಲರಿಗೂ, ಅಲ್ಲಲ್ಲಿಯೇ (ಅವರಿರುವಲ್ಲಿಯೇ) ಸಮರ್ಥನೂ ಸರ್ವರಕ್ಷಕನೂ ಆದ ಶ್ರೀಹರಿಯು, ಗ್ರಾಸವನ್ನು (ದೇಹಧಾರಣೆಗೆ ಅವಶ್ಯವಾದ ಆಹಾರವನ್ನು) ಒದಗಿಸುತ್ತಾನೆ; ಮಾತೃಗರ್ಭದಲ್ಲಿರುವ ಜೀವರಿಗೂ, ಜಠರಗತ ಕ್ರಿಮಿ ಮುಂತಾದ ಪ್ರಾಣಿಗಳಿಗೂ, ಅಸಹಾಯರಾದ ಬಾಲಕರಿಗೂ (ಶಿಶುಗಳಿಗೂ), ಅವರು ಎಲ್ಲಿವರೆಗೆ ಜೀವಿಸಿರಲು ಶ್ರೀಹರಿಯು ಇಚ್ಛಿಸುವನೋ, ಅವರೆಗೆ, ಅವರು ಬದುಕಿರುವಪರ್ಯಂತ ಆಹಾರವನ್ನು ಮುಟ್ಟಿಸುತ್ತಾನೆ-ಸಂಶಯವಿಲ್ಲ; ಸ್ವೇಚ್ಛಾನುಸಾರ ವರ್ತಿಸುವ ಪೂರ್ಣ ಸ್ವತಂತ್ರನಾದರೂ, ಶ್ರೀಹರಿಯು, ಆಯಾ ಜೀವರ ಕರ್ಮಾನುಸಾರವಾಗಿ, ಕೆಲವರನ್ನು ಕ್ಲೇಶಗೊಳಿಸಿಯೂ, ಅನ್ಯರನ್ನು ಸುಖದಿಂದಲೂ, ಸರ್ವದಾ ರಕ್ಷಿಸುತ್ತಾನೆ-ಆಯುಷ್ಯ ಮುಗಿಯುವ ಪರ್ಯಂತ ಜೀವಿಸುವಂತೆ ವ್ಯವಸ್ಥೆಮಾಡುತ್ತಾನೆ; ಹೀಗೆ

ಸ್ವೇಚ್ಛಾನುಸಾರವರ್ತಿಸುವ ಸ್ವತಂತ್ರನಾದರೂ, ಹರಿಃ-ಶ್ರೀಹರಿಯು, ಸದಾ-ಎಲ್ಲ ಕಾಲದಲ್ಲಿ ಜೀವಯೇತ್-ಬದುಕಿಸಿರುತ್ತಾನೆ. (ಸ್ವೇಚ್ಛೆಯಿಂದಲೇ ಅವರವರ ಕರ್ಮಾನುಸಾರವಾದ ಜೀವಿಕೆಗಳನ್ನು ಒದಗಿಸುತ್ತಾನೆ-ಈ ನಿಯಮಪಾಲನೆಯಿಂದ ಆತನ ಸ್ವಾತಂತ್ರ್ಯಕ್ಕೆ ಹಾನಿಯಿಲ್ಲ—ಹಾಗೂ ಆತನಲ್ಲಿ ವೈಷಮ್ಯಾದಿ ದೋಷಗಳಿಗೂ ಅವಕಾಶವಿಲ್ಲ).

ಜಲೂಕಾದ್ಯಾಶ್ಚ ಯೇ ಕೇಚಿತ್ ಪ್ರಾಣಿನಃ ಶಕ್ತಿವರ್ಜಿತಾಃ ।
ತೇಷಾಂ ಗ್ರಾಸಂ ಮುಖೇಷ್ವೇವ ಪ್ರಾಪಯತ್ಯೇಷ ವೈ ಪ್ರಭುಃ ॥ ೩೩ ॥
ಮುಖಪ್ರಾಪ್ತಂ ಚ ತೇ ಗ್ರಾಸಂ ಮುಖವ್ಯಾಪರತೋಽಪಿ ಹಿ ।
ಗ್ರಸಂತಿ ಚ ಗಿಲಂತ್ಯೇವ ನ ಕಶ್ಚಿದ್ಯತ್ನ ಇಷ್ಯತೇ ॥ ೩೪ ॥

ಯೇ-ಯಾವ, ಶಕ್ತಿವರ್ಜಿತಾಃ-(ಆಹಾರವನ್ನು ಸಂಪಾದಿಸಿಕೊಳ್ಳುವ) ಶಕ್ತಿಯಿಲ್ಲದ, ಕೇಚಿತ್-ಕೆಲವು, ಜಲೂಕಾದ್ಯಾಶ್ಚ-ಜಲೂಕವೇ ಮೊದಲಾದ, ಪ್ರಾಣಿನಃ-ಪ್ರಾಣಿಗಳೋ, ತೇಷಾಂ-ಅವುಗಳಿಗೆ, ಏಷಃ-ಈ, ಪ್ರಭುಃ-ಶ್ರೀಹರಿಯು, ಮುಖೇಷು ಏವ-ಬಾಯೊಳಗೇ ಗ್ರಾಸಂ-ಆಹಾರವನ್ನು, ಪ್ರಾಪಯತಿ-ಹೊಂದಿಸುತ್ತಾನೆ; ಮುಖಪ್ರಾಪ್ತಂ ಚ-ಬಾಯಿಗೆ ಬಂದ, ಗ್ರಾಸಂ-ಆಹಾರವನ್ನು, ತೇ-ಅವು, ಮುಖವ್ಯಾಪಾರತಃ-ಮುಖವ್ಯಾಪಾರದಿಂದ (ಕ್ರಿಯೆಗಳಿಂದ), ಗ್ರಸಂತಿ-ಹಿಡಿದು, ಗಿಲಂತಿ ಏವ ಹಿ-ನುಂಗುತ್ತವೆಯಷ್ಟೆ; ಕಶ್ಚಿತ್ ಯತ್ನಃ-(ಬೇರೆ) ಯಾವ ಯತ್ನವೂ, ನ ಇಷ್ಯತೇ-(ಅವುಗಳಿಗೆ) ಇರುವುದಿಲ್ಲ(ನಿಯತವಾಗಿರುವುದಿಲ್ಲ).

ಹಸ್ತೈಃ ಪಾದೈಶ್ಚ ಕರ್ಣಾದ್ಯೈರಿಂದ್ರಿಯೈಃ ಪಟವೋ ಹಿ ಯೇ ।
ಅಟನೇ ವಚನೇ ನಾನಾ ಕರ್ಮಕೌಶಲಕೇಽಪಿ ಚ ॥ ೩೫ ॥

---

ಮಾಡುವುದರಿಂದ, ಆತನ ಸ್ವಾತಂತ್ರ್ಯಕ್ಕೆ ಹಾನಿಯಿಲ್ಲ ಮತ್ತು ಆತನಲ್ಲಿ ವೈಷಮ್ಯಾದಿ ದೋಷಗಳೂ ಇಲ್ಲವೆಂದು ಸಿದ್ಧವಾಗುತ್ತದೆ (೨೯-೩೨). ಶಕ್ತಿಶೂನ್ಯಗಳಾದ ಜಲೂಕಾದಿ (ಜಿಗಣೆ ಮೊದಲಾದ) ಪ್ರಾಣಿಗಳಿಗೆ, ಶ್ರೀಹರಿಯು, (ಅವುಗಳಿಗೆ ಯತ್ನಿಸಲು ಬೇಕಾದ ಹಸ್ತಪಾದಾದಿ ಸಾಧನಗಳಿಲ್ಲದ ಆ ಪ್ರಾಣಿಗಳಿಗೆ), ಅವುಗಳ ಮುಖದಲ್ಲಿಯೇ (ಬಾಯೊಳಗೇ) ಗ್ರಾಸವನ್ನು ಒದಗಿಸುತ್ತಾನೆ; ಅವು, ಅಲ್ಲಿ ಬಂದ ಆಹಾರವನ್ನಾದರೂ, ಮುಖವ್ಯಾಪಾರದಿಂದ, ಹಿಡಿದು ನುಂಗುತ್ತವೆ; ಅವುಗಳು ಮಾಡಬೇಕಾದ ಬೇರಾವ ವಿಧದ ಯತ್ನವೂ ಅವುಗಳಿಗೆ ನಿಯತವಾಗಿಲ್ಲ (ಯತ್ನ ಮಾಡಿಯೇ ಆಹಾರವನ್ನು ಪಡೆಯುವ ನಿಯಮಕ್ಕೆ, ಅವು, ಒಳಪಡುವುದಿಲ್ಲ) (೩೩-೩೪). ಸಂಚಾರಮಾಡುವ, ಮಾತನಾಡುವ ಮತ್ತು ವಿವಿಧ ಕುಶಲ ಕರ್ಮಗಳಲ್ಲಿ ಯಾರು ಶಕ್ತರಾಗಿರುವರೋ, ಅವರು ತಮ್ಮ ಶಕ್ತ್ಯಾನುಗುಣವಾದ ಯತ್ನವನ್ನು ಮಾಡಿಯೇ ಜೀವಿಕೆಯನ್ನು ಹೊಂದುತ್ತಾರೆ; (ಹೀಗೆ ಯತ್ನ ಮಾಡಿಸಿಯೇ ಅವರಿಗೆ

**ಯೇ ಶಕ್ತಾಸ್ತೈಃ ಸ್ವಶಕ್ತ್ಯೈವ ಯತ್ನಾಜ್ಜೀವನಮಾಪ್ಯತೇ ।**

**ಸುಭದ್ರ ತ್ವಂ ಪ್ರಭುರ್ದಕ್ಷೋ ನಾನಾವಿದ್ಯಾವಿಶಾರದಃ ॥ ೩೬ ॥**

**ಶಕ್ತ್ಯಾ ಯತ್ನಂ ವಿಧಾಯೈವ ಜೀವಿಕಾಂ ಪ್ರಾಪ್ಸ್ಯಸಿ ಧ್ರುವಂ ।**

ಅಟನೇ-ಸುತ್ತುವುದರಲ್ಲಿ ವಚನೇ-ಮಾತನಾಡುವುದರಲ್ಲಿ ನಾನಾ ಕರ್ಮ ಕೌಶಲಕೇ ಅಪಿ ಚ-ವಿವಿಧವಾದ ಕುಶಲ ಕರ್ಮಗಳಲ್ಲಿಯೂ, ಯೇ-ಯಾರು, ಶಕ್ತಾಃ-ಸಮರ್ಥರಾಗಿರುವರೋ, ತೈಃ-ಅವರಿಂದ, ಸ್ವಶಕ್ತ್ಯೈವ-ತಮ್ಮ ಶಕ್ತಿಯಿಂದಲೇ, ಯತ್ನಾತ್-(ನಡೆಯುವ) ಯತ್ನದಿಂದ, ಜೀವನಂ-ಜೀವಿಕೆಯನ್ನು ಆಪ್ಯತೇ-ಹೊಂದಲಾಗುತ್ತದೆ (ಇದೇ ಶ್ರೀಹರಿನಿಯಮವು); ಸುಭದ್ರ-ಹೇ ಸುಭದ್ರ!, ತ್ವಂ-ನೀನು, ಪ್ರಭುಃ-ಶಕ್ತನಾಗಿರುವಿ; ದಕ್ಷಃ-ದೇಹಶಕ್ತಿಯೂ ಇದೆ; ನಾನಾವಿದ್ಯಾವಿಶಾರದಃ-ಬಹುವಿದ್ಯೆಗಳಲ್ಲಿ ವಿಶಾರದನಾಗಿರುವಿ; ಶಕ್ತ್ಯಾ-(ನಿನ್ನ) ಶಕ್ತಿಯಿದ್ದಷ್ಟು ಯತ್ನಂ-ಯತ್ನವನ್ನು ವಿಧಾಯ ಏವ-ಮಾಡಿಯೇ, ಜೀವಿಕಾಂ-ಜೀವಿಕೆಯನ್ನು ಪ್ರಾಪ್ಸ್ಯಸಿ-ಹೊಂದುವಿ; ಧ್ರುವಂ-ನಿಶ್ಚಯವು.

**ಅದೃಷ್ಟಂ ನೃಪವಚ್ಛ್ರೇಷ್ಠಂ ನಾನಾಯತ್ನಾಸ್ತು ದಾಸವತ್ ॥ ೩೭ ॥**

**ನ ಹಿ ದಾಸೈರ್ವಿನಾ ರಾಜಾ ಫಲಭಾಗೀ ವಿಲೋಕ್ಯತೇ ।**

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ॥ ೩೮ ॥**

ಅದೃಷ್ಟಂ-ಅದೃಷ್ಟವು (ಪುಣ್ಯಪಾಪಗಳು), ನೃಪವತ್-ರಾಜನಂತೆ, ಶ್ರೇಷ್ಠಂ-ಶ್ರೇಷ್ಠವು (ಫಲದಾನದಲ್ಲಿ ಪ್ರಧಾನ ಕಾರಣವು); ನಾನಾಯತ್ನಾಃ ತು-ವಿವಿಧ ಯತ್ನಗಳಾದರೋ (ಫಲಪ್ರಾಪ್ತಿಗಾಗಿ ಈಗ ಮಾಡುವ ಯತ್ನಗಳು), ದಾಸವತ್-(ರಾಜಾಧೀನರಾದ ಭೃತ್ಯರಂತೆ-ಅದೃಷ್ಟಾಧೀನಗಳು); ದಾಸೈಃ ವಿನಾ-ಭೃತ್ಯರಿಲ್ಲದೇ, ರಾಜಾ-ರಾಜನು, ಫಲಭಾಗೀ-ಫಲವನ್ನು ಹೊಂದುವುದು, ನ ವಿಲೋಕ್ಯತೇ ಹಿ-

---

ಜೀವಿಕೆಯನ್ನು ಈಯುವೆನೆಂದೇ ಶ್ರೀಹರಿಸಂಕಲ್ಪವು); ಹೇ ಸುಭದ್ರ! ನೀನಾದರೋ ಯತ್ನಮಾಡುವ ಶಕ್ತಿಯುಳ್ಳವನು; ದೇಹಸಾಮರ್ಥ್ಯವಿದೆ; ವಿವಿಧ ವಿದ್ಯೆಗಳಲ್ಲಿ ನಿಪುಣನಾಗಿರುವಿ; ಶಕ್ತ್ಯನುಸಾರವಾದ ಯತ್ನವನ್ನು ಮಾಡು; ನಿನಗೆ ಆಹಾರವು ನಿಶ್ಚಯವಾಗಿ ದೊರೆಯುತ್ತದೆ (೩೫-೩೬). ಪುಣ್ಯ-ಪಾಪ ರೂಪದ ಅದೃಷ್ಟವೇ ಫಲಪ್ರಾಪ್ತಿ ವಿಷಯದಲ್ಲಿ ಶ್ರೇಷ್ಠ (ಪ್ರಧಾನ) ಕಾರಣವು; ಅದೃಷ್ಟವು ರಾಜನಂತೆ-ಫಲಕ್ಕಾಗಿ ಮಾಡುವ ನಾನಾ ಯತ್ನಗಳು ರಾಜಭೃತ್ಯರಿದ್ದಂತೆ, ಅಪ್ರಧಾನ ಕಾರಣಗಳು; ಭೃತ್ಯನಿಲ್ಲದ ರಾಜನು ಫಲಭಾಗಿಯಾಗುವುದು ಲೋಕದಲ್ಲಿ ಕಂಡಿಲ್ಲ; ಈ ಪ್ರಮೇಯದ ನಿಶ್ಚಯವನ್ನು ತಿಳಿಸಲು, ಜ್ಞಾನಿಗಳು, ಪುರಾತನವಾದ ಒಂದು ಇತಿಹಾಸವನ್ನು ಹೇಳುತ್ತಾರೆ (೩೭-೩೮). ಹಿಂದೆ, ಜಯಂತೀ ಎಂಬ ನಗರದಲ್ಲಿ

ಕಾಣಲಾಗುವುದಿಲ್ಲವಷ್ಟೇ; ಅತ್ರ-ಈ ವಿಷಯದಲ್ಲಿ ಇಮಂ-ಈ (ಮುಂದೆ ಹೇಳುವ), ಪುರಾತನಂ-ಹಿಂದಿನ ಕಾಲದಲ್ಲಿ ನಡೆದ, ಇತಿಹಾಸಂ-ಚರಿತ್ರೆಯನ್ನು, ಉದಾಹರಂತಿ-(ಜ್ಞಾನಿಗಳೇ) ಉದಾಹರಿಸುತ್ತಾರೆ.

ಜಯಂತೀನಗರೇ ಪೂರ್ವಂ ಸುದಾಮನಿ ಮಹೀಪತೌ ।
ವಿಚಿತ್ರಶ್ಚ ಪ್ರಚಂಡಶ್ಚ ಸಖಾಯೌ ದ್ವೌ ಬಭೂವತುಃ ॥ ೭೯ ॥
ಏಕದಾ ನರ್ಮಗೋಷ್ಠೀಷು ವಿವಾದಂ ಸಮಭೂತ್ತಯೋಃ ।
ಅದೃಷ್ಟಶ್ರೇಷ್ಠತಾಮಾಹ ವಿಚಿತ್ರೋಽಥ ಪ್ರಚಂಡಕಃ ॥ ೪೦ ॥
ಪ್ರಯತ್ನಶ್ರೇಷ್ಠತಾಮಾಹ ತತ್ತಂ ನಾನಾನಿದರ್ಶನೈಃ ।
ನಿಶ್ಚಯಾರ್ಥಂ ಸುದಾಮಾನಂ ರಾಜಾನಂ ತೌ ಪ್ರಜಗ್ಮತುಃ ॥ ೪೧ ॥

ಪೂರ್ವಂ-ಪೂರ್ವಕಾಲದಲ್ಲಿ, ಜಯಂತೀನಗರೇ-ಜಯಂತೀ ನಗರದಲ್ಲಿ, ಸುದಾಮನಿ-ಸುದಾಮನೆಂಬುವನು, ಮಹೀಪತೌ-ರಾಜನಾಗಿರುತ್ತಿರಲು, ವಿಚಿತ್ರಃ-ವಿಚಿತ್ರನು, ಚ-ಹಾಗೂ, ಪ್ರಚಂಡಃ ಚ-ಪ್ರಚಂಡನೆಂಬುವನೂ, ದ್ವೌಸಖಾಯೌ-ಇಬ್ಬರು ಸಖರಾಗಿ (ಸ್ನೇಹಿತರಾಗಿ), ಬಭೂವತುಃ-ಇರುತ್ತಿದ್ದರು; ಏಕದಾ-ಒಂದು ವೇಳೆ, ತಯೋಃ-ಅವರಿಬ್ಬರಲ್ಲಿ, ನರ್ಮಗೋಷ್ಠೀಷು-ತಮಾಷೆಯಾಗಿ (ಸಂತೋಷಕ್ಕಾಗಿ) ಮಾತನಾಡುತ್ತಲಿದ್ದಾಗ, ವಿವಾದಂ-ವಿವಾದವು, ಸಮಭೂತ್-ಉಂಟಾಯಿತು; ವಿಚಿತ್ರಃ-ವಿಚಿತ್ರನು, ಅದೃಷ್ಟ ಶ್ರೇಷ್ಠತಾಂ-(ಫಲಪ್ರಾಪ್ತಿಗೆ) ಅದೃಷ್ಟವೇ ಶ್ರೇಷ್ಠ ಕಾರಣವೆಂದು (ಅದೃಷ್ಟಕ್ಕೆ ಶ್ರೇಷ್ಠತ್ವವನ್ನು-ಪ್ರಧಾನ ಕಾರಣತ್ವವನ್ನು), ಆಹ-ಹೇಳಿದನು; ಅಥ-ನಂತರ, ಪ್ರಚಂಡಕಃ-ಪ್ರಚಂಡನು, ನಾನಾನಿದರ್ಶನೈಃ-ಬಹುದೃಷ್ಟಾಂತಗಳಿಂದ, ಪ್ರಯತ್ನ ಶ್ರೇಷ್ಠತಾಂ-ಪ್ರಯತ್ನಕ್ಕೇ ಪ್ರಧಾನತ್ವವನ್ನು (ಫಲಪ್ರಾಪ್ತಿಗೆ ಯತ್ನವೇ ಮುಖ್ಯ ಕಾರಣವೆಂದು), ಆಹ-ವಾದಿಸಿದನು; ತತ್-ಈ ಕಾರಣದಿಂದ, ನಿಶ್ಚಯಾರ್ಥಂ-(ಇದರ-ಈ ವಿವಾದದ) ನಿರ್ಣಯವನ್ನು ತಿಳಿಯಲಿಕ್ಕಾಗಿ, ತಂ-ಆ, ಸುದಾಮಾನಂ-ಸುದಾಮನೆಂಬ, ರಾಜಾನಂ-ರಾಜನನ್ನು ಕುರಿತು (ರಾಜನ ಸಮೀಪಕ್ಕೆ), ತೌ-ಅವರಿಬ್ಬರೂ, ಪ್ರಜಗ್ಮತುಃ-ಹೋದರು.

---

ಸುದಾಮನೆಂಬ ರಾಜನಿರುವಾಗ, ವಿಚಿತ್ರ ಮತ್ತು ಪ್ರಚಂಡರೆಂಬ ಇಬ್ಬರು ಸಖರಿದ್ದರು; ಒಂದು ದಿನ, ಅವರು ಸಂತೋಷದಿಂದ ಮಾತನಾಡುತ್ತ ಕಾಲಕಳೆಯುತ್ತಿರಲು, ಅವರಲ್ಲಿ ವಿವಾದ ಹುಟ್ಟಿತು; ಫಲಪ್ರಾಪ್ತಿಗೆ, ಅದೃಷ್ಟವೇ ಶ್ರೇಷ್ಠ ಕಾರಣವೆಂದು, ವಿಚಿತ್ರನು ವಾದಿಸಿದನು; ಪ್ರಚಂಡನು ಪ್ರಯತ್ನವೇ ಮುಖ್ಯ (ಶ್ರೇಷ್ಠ) ಕಾರಣವೆಂದನು—ನಾನಾ ನಿದರ್ಶನಗಳಿಂದ ಹಾಗೆಂದೇ ಸಾಧಿಸಿದನು; ಇದರ ನಿಶ್ಚಯವನ್ನು (ಇಬ್ಬರಲ್ಲಿ ಯಾರ ಅಭಿಪ್ರಾಯವು ಸರಿ ಎಂಬುದನ್ನು) ನಿರ್ಣಯಿಸಿಕೊಳ್ಳಲು, ಉಭಯರೂ ರಾಜಾ ಸುದಾಮನಬಳಿ ಹೋದರು (೩೯-೪೧). ರಾಜನು ಅವರ ವಿವಾದವನ್ನು ಕೇಳಿ,

ಶ್ರುತ್ವಾ ವಿವಾದಂ ನೃಪತಿಃ ಕ್ರೋಧಾದಿವ ನಿಶಾಮುಖೇ ।
ದೇವಾಲಯೇ ಬಹಿರ್ಗ್ರಾಮಾದಿಮೌ ನಿಕ್ಷಿಪ್ಯತಾಮಿತಿ ॥ ೪೨ ॥
ಭೃತ್ಯಾನಾಜ್ಞಾಪಯಾಮಾಸ ತೇ ತಥೈವ ಪ್ರಚಕ್ರಿರೇ ।
ಅಂಧಕಾರಾವೃತೇ ತಸ್ಮಿನ್ ಶಿವದೇವಾಲಯೇಽಥ ತೌ ॥ ೪೩ ॥
ಸ್ಥಾಪಿತೌ ರಾಜಭೃತ್ಯಕೈರ್ದ್ವಾರಾಣ್ಯಪಿ ಪಿಧಾಯ ಚ ।

ನೃಪತಿಃ-ರಾಜನು, ವಿವಾದಂ-(ಉಭಯರ) ವಾದವನ್ನು ಶ್ರುತ್ವಾ-ಕೇಳಿ, ಕ್ರೋಧಾತ್ ಇವ-ಕೋಪದಿಂದ ಎಂಬಂತೆ (ಸಿಟ್ಟಾದವನಂತೆ), ನಿಶಾಮುಖೇ-ಸಾಯಂಕಾಲ (ಕತ್ತಲಾಗುತ್ತಿರಲು), ಗ್ರಾಮಾತ್‌ಬಹಿಃ-ಊರಿನಿಂದ ಹೊರಗಿರುವ, ದೇವಾಲಯೇ-ದೇವಾಲಯದಲ್ಲಿ ಇಮೌ-ಈ ಇಬ್ಬರೂ, ನಿಕ್ಷಿಪ್ಯತಾಂ-ಕೂಡಿ ಹಾಕಲ್ಪಡಲಿ, ಇತಿ-ಎಂದು, ಭೃತ್ಯಾನ್-(ತನ್ನ) ಭೃತ್ಯರನ್ನು ಆಜ್ಞಾಪಯಾಮಾಸ-ಆಜ್ಞಾಪಿಸಿದನು; ತೇ-ಅವರು, ತಥೈವ-ಹಾಗೆಯೇ, ಪ್ರಚಕ್ರಿರೇ-ಮಾಡಿದರು; ಅಥ-ನಂತರ, ತೌ-ಅವರಿಬ್ಬರೂ, ಅಂಧಕಾರಾವೃತೇ-ಕಗ್ಗತ್ತಲೆಯಿಂದ ಆವೃತವಾದ, ತಸ್ಮಿನ್-ಆ, ಶಿವದೇವಾಲಯೇ-ಶಿವದೇವಾಲಯದಲ್ಲಿ (ರುದ್ರದೇವರಗುಡಿಯಲ್ಲಿ), ದ್ವಾರಾಣಿ ಅಪಿ-ಬಾಗಿಲುಗಳನ್ನೂ ಪಿಧಾಯ-ಮುಚ್ಚಿ ರಾಜಭೃತ್ಯಕೈಃ-ರಾಜಭೃತ್ಯರಿಂದ, ಸ್ಥಾಪಿತೌ-ಇಡಲ್ಪಟ್ಟರು (ಗುಡಿಯಲ್ಲಿ ಕೂಡಿಹಾಕಲ್ಪಟ್ಟರು).

ಅದೃಷ್ಟವಾದೀ ನಿಶ್ಚೇಷ್ಟೋ ವಿಚಿತ್ರಃ ಪತಿತೋ ಭುವಿ ॥ ೪೪ ॥
ಯತ್ನವಾದೀ ಪ್ರಚಂಡಸ್ತು ಯತ್ನಂ ತತ್ರಾಪಿ ನಾಮುಚತ್ ।
ಘನಾಂಧತಮಸೇ ತತ್ರ ಯತಮಾನಃ ಪ್ರಚಂಡಕಃ ॥ ೪೫ ॥
ಲೇಭೇ ನಾನಾವಿಧಾನ್ನೇನ ಪೂರ್ಣಪಾತ್ರಂ ಶಿವಾಂತಿಕೇ ।
ನಿವೇದಿತಂ ಯದ್ರುದ್ರಾಯ ಧನಿಕೇನಾತ್ರ ಕೇನಚಿತ್ ॥ ೪೬ ॥

---

ಕೋಪಗೊಂಡವನಂತೆ, ಆ ಇಬ್ಬರನ್ನೂ ನಗರದ ಹೊರಗಿರುವ ದೇವಸ್ಥಾನದಲ್ಲಿ ಆ ರಾತ್ರಿ ಬಂಧನದಲ್ಲಿಡಲು, ತನ್ನ ಭೃತ್ಯರನ್ನು ಆಜ್ಞಾಪಿಸಿದನು; ಭೃತ್ಯರು ರಾಜಾಜ್ಞೆಯಂತೆ, ಅವರನ್ನು ಕರೆದೊಯ್ದು ಅಂಧಕಾರ ಮುಸುಗಿದ ಆ ಶಿವದೇವಾಲಯದಲ್ಲಿ ಹಾಕಿ, ದ್ವಾರಗಳನ್ನು ಮುಚ್ಚಿದರು (೪೨-೪೩). ಅದೃಷ್ಟವಾದಿಯಾದ ವಿಚಿತ್ರನು, ನಿಶ್ಚೇಷ್ಟಿತನಾಗಿ ನೆಲದಮೇಲೆ ಬಿದ್ದುಕೊಂಡನು; ಯತ್ನವಾದಿಯಾದ ಪ್ರಚಂಡನು, ಅಲ್ಲಿಯೂ ಯತ್ನವನ್ನು ಬಿಡಲಿಲ್ಲ; ಆ ಗಾಢಾಂಧಕಾರದಲ್ಲಿ ಯತ್ನಮಾಡುತ್ತಿದ್ದ ಪ್ರಚಂಡನಿಗೆ, ಶಿವನ ಸಮೀಪದಲ್ಲಿ ಒಬ್ಬಾನೊಬ್ಬ ಧನಿಕನಿಂದ, ರುದ್ರದೇವನ ಪ್ರೀತ್ಯರ್ಥವಾಗಿ ಸ್ಥಾಪಿತವಾಗಿದ್ದ ವಿವಿಧಾನ್ನಗಳಿಂದಲೂ ಪಂಚರತ್ನಗಳಿಂದಲೂ ಯುಕ್ತವಾದ ಪೂರ್ಣ ಪಾತ್ರೆಯೊಂದು ದೊರಕಿತು (೪೪-೪೬). ಹಸಿವೆಯಿಂದ

**ಪಂಚರತ್ನಯುತಾನ್ನೇನ ಪೂರ್ಣಪಾತ್ರಂ ತದಾಪ ಸಃ ।**

ಅದೃಷ್ಟವಾದೀ-ಅದೃಷ್ಟವಾದಿಯಾದ, ವಿಚಿತ್ರಃ-ವಿಚಿತ್ರನು, ನಿಶ್ಚೇಷ್ಟಂ-ನಿಶ್ಚೇಷ್ಟನಾಗಿ (ಕೈಕಾಲುಗಳನ್ನೂ ಅಲ್ಲಾಡಿಸದೇ), ಭುವಿ-ನೆಲದಮೇಲೆ, ಪತಿತಃ-ಬಿದ್ದುಕೊಂಡನು; ಯತ್ನವಾದೀ-ಯತ್ನವಾದಿಯಾದ, ಪ್ರಚಂಡಃ ತು-ಪ್ರಚಂಡನಾದರೋ, ತತ್ರಾಪಿ-ಅಲ್ಲಿಯೂ ತಹ (ಆ ಕಗ್ಗತ್ತಲೆಯಲ್ಲಿ ಸಹ), ಯತ್ನಂ-ಯತ್ನವನ್ನು ನ ಅಮುಂಚತ್-ಬಿಡಲಿಲ್ಲ; ತತ್ರ-ಆ ದೇವಾಲಯದ, ಘನಾಂಧತಮಸೇ-ಗಾಢವಾದ ಕತ್ತಲಲ್ಲಿ, ಯತಮಾನಃ-ಯತ್ನಮಾಡುತ್ತಿದ್ದ ಪ್ರಚಂಡಕಃ-ಪ್ರಚಂಡನು, ಶಿವಾಂತಿಕೇ-ಶಿವನ ಸಮೀಪದಲ್ಲಿ, ನಾನಾವಿಧಾನ್ನೇನ-ಬಹುವಿಧ ಪಕ್ವಾನ್ನಗಳಿಂದ, ಪೂರ್ಣಪಾತ್ರಂ-ಪೂರ್ಣವಾದ ಪಾತ್ರೆಯನ್ನು ಲೇಭೇ-ಹೊಂದಿದನು; ಕೇನಚಿತ್-ಒಬ್ಬಾನೊಬ್ಬ, ಧನಿಕೇನ-ಧನಿಕನಿಂದ, ಅತ್ರ-ಇಲ್ಲಿ, ಪಂಚರತ್ನಯುತಾನ್ನೇನ-ಪಂಚರತ್ನಗಳಿಂದ ಸಹಿತವಾದ ಅನ್ನದಿಂದ, ಪೂರ್ಣಪಾತ್ರಂ-ಪೂರ್ಣವಾದ (ತುಂಬಿದ) ಪಾತ್ರೆಯನ್ನು, ಯತ್-ಯಾವುದು, ರುದ್ರಾಯ-ಶಿವನಿಗೋಸ್ಕರ, ನಿವೇದಿತಂ-ಅರ್ಪಿಸಲ್ಪಟ್ಟಿತ್ತೋ, ತತ್-ಅದನ್ನು ಸಃ-ಆ ಪ್ರಚಂಡನು, ಆಪ-ಹೊಂದಿದನು.

**ಭುಂಜಾನೋನ್ನಂ ಪ್ರಚಂಡಸ್ತನ್ಮುದಿತಃ ಕ್ಷುಧಯಾರ್ದಿತಃ ॥ ೪೭ ॥**
**ವಿಚಿತ್ರಂ ಗರ್ಹಯಾಮಾಸ ಮೂಢಯತ್ನೋ ಮಹಾನಿತಿ ।**
**ಪಶ್ಯೇದಂ ಯತ್ನತೋ ಲಬ್ಧಂ ಮಯಾನ್ನಂ ಸುಮನೋಹರಂ ॥ ೪೮ ॥**
**ಯತ್ನಹೀನಃ ಕ್ಷುಧಾರ್ತಸ್ತ್ವಂ ಮೃತವತ್ಪತಿತಃ ಕ್ಷಿತೌ ।**

ಪ್ರಚಂಡಃ-ಪ್ರಚಂಡನು, ಕ್ಷುಧಯಾರ್ದಿತಃ-ಹಸಿವಿನಿಂದ ಪೀಡಿತನಾಗಿದ್ದು ಮುದಿತಃ-(ಅನ್ನಲಾಭದಿಂದ) ಹರ್ಷಿತನಾಗಿ, ತತ್ ಅನ್ನಂ-ಆ ಅನ್ನವನ್ನು ಭುಂಜಾನಃ-ತಿನ್ನುತ್ತ (ಊಟ ಮಾಡುತ್ತ), ಮೂಢ-ಹೇ ಮೂರ್ಖ! ವಿಚಿತ್ರ!, ಯತ್ನಃ-(ಪುರುಷ) ಯತ್ನವೇ, ಮಹಾನ್-(ಫಲದಲ್ಲಿ) ಶ್ರೇಷ್ಠಕಾರಣವು, ಇತಿ-ಎಂದು, ವಿಚಿತ್ರಂ-ವಿಚಿತ್ರನನ್ನು ಗರ್ಹಯಾಮಾಸ-ತೆಗಳಿದನು (ತಿರಸ್ಕಾರಪೂರ್ವಕ ಮಾತನಾಡಿದನು); ಪಶ್ಯ-ನೋಡು! ಹೇ ವಿಚಿತ್ರ! ಮಯಾ-ನನ್ನಿಂದ, ಇದಂ-ಈ, ಸುಮನೋಹರಂ-(ಅತಿರುಚಿಯಾದ) ಮನೋಹರವಾದ, ಅನ್ನಂ-ಅನ್ನವು,

---

ಪೀಡಿತನಾದ ಪ್ರಚಂಡನು, ಅನ್ನಲಾಭದಿಂದ ಹರ್ಷಿತನಾಗಿ, ಅನ್ನವನ್ನು ಭಕ್ಷಿಸುತ್ತ ವಿಚಿತ್ರನನ್ನು ಉದ್ದೇಶಿಸಿ, 'ಹೇ ಮೂಢ! ಪುರುಷ ಪ್ರಯತ್ನವೇ, ಫಲಪ್ರಾಪ್ತಿಯಲ್ಲಿ ಪ್ರಧಾನ ಹೇತುವು' ಎಂದು, ತಿರಸ್ಕಾರದಿಂದ ನುಡಿದು, 'ನೋಡು! ನನ್ನ ಯತ್ನದಿಂದ, ಅತ್ಯಂತ ಮನೋಹರವಾದ ಅನ್ನವು ನನಗೆ ಲಭಿಸಿತು; ಯತ್ನಹೀನನಾದ ನೀನು, ಹಸಿವಿನಿಂದ ಬಳಲಿ, ಮೃತಪ್ರಾಯನಾಗಿ ಭೂಮಿಯಲ್ಲಿ ಬಿದ್ದಿರುವಿ. ಈಗಲಾದರೂ ತಿಳಿಯಿತೇ, ಯತ್ನವೇ ಪ್ರಧಾನ ಕಾರಣವೆಂದು!' (೪೭-೪೮). ವಿಚಿತ್ರನು ಹೇಳುತ್ತಾನೆ:—'ಹೇ

ಯತ್ನತಃ- ಯತ್ನದಿಂದ, ಲಬ್ಧಂ- ಹೊಂದಲ್ಪಟ್ಟಿತು (ದೊರೆಯಿತು); ಯತ್ನಹೀನಃ- ಯತ್ನ ಮಾಡದ, ತ್ವಂ- ನೀನು ಕ್ಷುಧಾರ್ತಃ- ಹಸಿವಿನಿಂದ ಬಳಲಿ, ಮೃತವತ್- ಮೃತಪ್ರಾಯ ನಾಗಿ, ಕ್ಷಿತೌ- ಭೂಮಿಯಲ್ಲಿ ಪತಿತಃ- ಬಿದ್ದಿರುವಿ.

**ವಿಚಿತ್ರ ಉವಾಚ—**

**ಅಪಿ ಮೂಢ ನ ಜಾನಾಸಿ ತ್ವಯಾಪ್ಯೇತದದೃಷ್ಟತಃ ॥ ೪೯ ॥**

**ಲಬ್ಧಂ ನೈವಾನ್ಯಥಾ ವಿದ್ಧಿ ಯತ್ನಸ್ತದುಪಪಾದಕಃ ॥ ೫೦ ॥**

ವಿಚಿತ್ರನು ಹೇಳುತ್ತಾನೆ:—

ಅಪಿ- ಹೀಗಿದ್ದರೂ (ನೀನು ಹೀಗೆ ನುಡಿದರೂ), ಮೂಢ- ಹೇ ಅಜ್ಞಾನಿ! ನ ಜಾನಾಸಿ- (ನೀನು) ಸತ್ಯವನ್ನು ತಿಳಿದಿಲ್ಲ; ತ್ವಯಾಪಿ- ನಿನ್ನಿಂದ ಸಹ, ಏತತ್- (ಈ ಅನ್ನ ಪೂರ್ಣ ಪಾತ್ರೆಯು) ಇದು, ಅದೃಷ್ಟದಿಂದಲೇ (ಪುಣ್ಯಫಲವಾಗಿಯೇ), ಲಬ್ಧಂ- ಹೊಂದಲ್ಪಟ್ಟಿತು; ಅನ್ಯಥಾ- ಬೇರೆ, ನೈವ- ಅಲ್ಲವೇ ಅಲ್ಲ; ವಿದ್ಧಿ- (ನಿಶ್ಚಯವಾಗಿ) ತಿಳಿ; ಯತ್ನಃ- (ನೀನು ಮಾಡಿದ) ಯತ್ನವು, ತದುಪಪಾದಕಃ- ಅದೃಷ್ಟಪ್ರದರ್ಶಕವು (ಮಾತ್ರ).

**ಕಶ್ಚಿದ್ಧಾವನ್ ಪತೇದ್ಗರ್ತೇ ಕಶ್ಚಿದ್ಧಾವನ್ ಲಭೇನ್ನಿಧಿಂ ।**

**ಕಶ್ಚಿದ್ಯತ್ನಾಲ್ಲಭೇದ್ದುಃಖಂ ಕಶ್ಚಿದ್ಯತ್ನಾತ್ಸುಖಂ ಲಭೇತ್ ॥ ೫೧ ॥**

**ಅದೃಷ್ಟಮೇವ ಪರಮಂ ಲಾಭಾಲಾಭನಿಯಾಮಕಂ ।**

ಕಶ್ಚಿತ್- ಒಬ್ಬನು, ಧಾವನ್ ಓಡುವವನಾಗಿ, ಗರ್ತೇ- ಗುಂಡಿಯಲ್ಲಿ (ತಗ್ಗಿನಲ್ಲಿ), ಪತೇತ್- ಬೀಳುವನು; ಕಶ್ಚಿತ್- ಒಬ್ಬನು, ಧಾವನ್- ಓಡುತ್ತಿದ್ದು ನಿಧಿಂ- ನಿಧಿಯನ್ನು (ಮಹಾಧನವನ್ನು), ಲಭೇತ್- ಹೊಂದುತ್ತಾನೆ; ಕಶ್ಚಿತ್- ಒಬ್ಬನು, ಯತ್ನಾತ್- ಯತ್ನ ಮಾಡಿ, ದುಃಖಂ- ದುಃಖವನ್ನೇ, ಲಭೇತ್- ಹೊಂದುವನು; ಕಶ್ಚಿತ್- ಮತ್ತೊಬ್ಬನು, ಯತ್ನಾತ್- ಯತ್ನದಿಂದ, ಸುಖಂ- ಸುಖವನ್ನೇ, ಲಭೇತ್- ಹೊಂದುತ್ತಾನೆ; ಲಾಭಾಲಾಭ ನಿಯಾಮಕಂ- ಲಾಭ, ಅಲಾಭ(ಹಾನಿ)ಗಳ ನಿಯಾಮಕವಾದುದು (ನಿಯಂತ್ರಿಸು ವುದು); ಅದೃಷ್ಟಂ ಏವ- ಅದೃಷ್ಟವೇ, ಪರಮಂ- ಪ್ರಧಾನವಾದುದು.

---

ಮೂಢ! ನೀನು ಸತ್ಯವನ್ನು ತಿಳಿದಿರುವುದಿಲ್ಲ; ಈ ಅನ್ನಪೂರ್ಣ ಪಾತ್ರೆಯು, ನಿನಗೆ ಅದೃಷ್ಟದಿಂದಲೇ ದೊರೆಯಿತು- ಬೇರೆ ಅಲ್ಲ- ನಿನ್ನ ಯತ್ನವು ಅದೃಷ್ಟ ಪ್ರಾಪ್ತವಾಗಲಿದ್ದ ಫಲಪ್ರಕಾಶಕವು ಮಾತ್ರವೆಂದು ತಿಳಿ (೪೯-೫೦). ಒಬ್ಬನು ಓಡುತ್ತ ತಗ್ಗಿನಲ್ಲಿ ಬೀಳುತ್ತಾನೆ; ಇನ್ನೊಬ್ಬನು ಹಾಗೆಯೇ ಓಡುತ್ತ (ಮಾರ್ಗದಲ್ಲಿ) ನಿಧಿಯನ್ನು ಪಡೆಯುತ್ತಾನೆ; ಒಬ್ಬನು, ಯತ್ನದಿಂದ (ಸುಖಕ್ಕಾಗಿ ಮಾಡುವ ಯತ್ನದಿಂದ) ದುಃಖವನ್ನೇ ಹೊಂದುತ್ತಾನೆ—ಮತ್ತೊಬ್ಬನು ಯತ್ನದಿಂದ ಸುಖವನ್ನೂ ಹೊಂದುತ್ತಾನೆ; ಲಾಭನಷ್ಟಗಳ ನಿಯಾಮಕವಾದುದು, ಅದೃಷ್ಟವೇ ಸರಿ- ಅದೇ ಪ್ರಧಾನ ಕಾರಣವು

ವೃಷ್ಟಿರ್ಭವತ್ಯದೃಷ್ಟೇನ ಜಾಯತೇ ಮ್ರಿಯತೇ ತತಃ ॥ ೫೨ ॥
ಧನಸ್ತ್ರೀಪುತ್ರಗೇಹಾದಿಸರ್ವಂ ತೇನೈವ ಲಭ್ಯತೇ ।
ದುಃಖಂ ಪ್ರಾಪ್ನೋತಿ ತೇನೈವ ಯತ್ನಸಾಧ್ಯಮಿದಂ ನ ಹಿ ॥ ೫೩ ॥
ತೇನೈವ ಜಾಯತೇ ಯತ್ನಃ ಸಾಮಗ್ರೀಘಟಕಂ ಚ ಯತ್ ।
ತದಪೇಕ್ಷ್ಯೈವ ದೇವೋಽಪಿ ಸುಖದುಃಖಾದಿ ಯಚ್ಛತಿ ॥ ೫೪ ॥

ಅದೃಷ್ಟೇನ-ಅದೃಷ್ಟಫಲವಾಗಿಯೇ, ವೃಷ್ಟಿಃ-ಮಳೆಯು, ಭವತಿ-ಸುರಿಯುತ್ತದೆ (ಸಂಭವಿಸುತ್ತದೆ); ತತಃ-ಅದೃಷ್ಟದಿಂದಲೇ, ಜಾಯತೇ-(ಜೀವನು) ಹುಟ್ಟುತ್ತಾನೆ; ಮ್ರಿಯತೇ-ಸಾಯುತ್ತಾನೆ; (ಜನನ ಮರಣಗಳು ಅದೃಷ್ಟದಿಂದಲೇ ಸಂಭವಿಸುತ್ತವೆ); ಧನ ಸ್ತ್ರೀ ಪುತ್ರ ಗೇಹಾದಿ ಸರ್ವಂ-ಧನ, ಸ್ತ್ರೀ, ಪುತ್ರ, ಗೃಹಾದಿ ಎಲ್ಲವೂ, ತೇನ ಏವ-ಅದೃಷ್ಟದಿಂದಲೇ (ಅದೃಷ್ಟಾನುಸಾರವಾಗಿಯೇ), ಲಭ್ಯತೇ-ದೊರೆಯುತ್ತದೆ; ತೇನ ಏವ-ಅದೃಷ್ಟದಿಂದಲೇ, ದುಃಖಂ-ದುಃಖವನ್ನು, ಪ್ರಾಪ್ನೋತಿ-ಹೊಂದುತ್ತಾನೆ; ಇದಂ-ದುಃಖವು, ಯತ್ನಸಾಧ್ಯಂ-ಯತ್ನದಿಂದಾದುದು, ನ ಹಿ-ಅಲ್ಲವಷ್ಟೆ (ದುಃಖಕ್ಕಾಗಿ ಯಾರೂ ಯಾವ ಯತ್ನವನ್ನೂ ಮಾಡುವುದಿಲ್ಲ): ಯತ್ನಃ-(ಯತ್ನದೋಷದಿಂದ ದುಃಖವೆಂದು ಮುಂತಾಗಿ ಹೇಳಲ್ಪಡುವ ದೋಷಯುಕ್ತವೆಂಬ) ಯತ್ನವೂ, ಯತ್-ಯಾವುದು, ಸಾಮಗ್ರೀಘಟಕಂ-ಫಲಪ್ರದ ಪದಾರ್ಥಗಳ ಯೋಗವನ್ನು ಸಾಧಿಸುವುದೋ (ಆ ಯತ್ನವೂ), ತೇನ ಏವ-ಅದೃಷ್ಟದಿಂದಲೇ, ಜಾಯತೇ-ಉಂಟಾಗುತ್ತದೆ; ದೇವಃ ಅಪಿ-ಶ್ರೀಹರಿಯೂ, ತದಪೇಕ್ಷ್ಯ ಏವ-ಯತ್ನವನ್ನು ಲಕ್ಷಿಸಿಯೇ, ಸುಖದುಃಖಾದಿ-ಸುಖದುಃಖಾದಿ ಅನುಭವಗಳನ್ನು, ಯಚ್ಛತಿ-ಹೊಂದಿಸುತ್ತಾನೆ.

ಇತ್ಯಾದ್ಯದೃಷ್ಟಸ್ತವನಂ ವಿಚಿತ್ರೇ ಸತಿ ಕುರ್ವತಿ ।
ಭುಂಜಾನಸ್ತು ಪ್ರಚಂಡೋಽನ್ನಂ ತಲ್ಲೇಭೇ ರತ್ನಪಂಚಕಂ ॥ ೫೫ ॥

---

(೫೧). ಅದೃಷ್ಟದಿಂದ ಮಳೆ ಬರುತ್ತದೆ; ಜನನ ಮರಣಗಳು ಅದೃಷ್ಟದಿಂದಲೇ ಸಂಭವಿಸುತ್ತವೆ (ಯತ್ನದಿಂದಲ್ಲ); ಐಶ್ವರ್ಯ, ಭಾರ್ಯಾ, ಸುತ ಗೃಹಾದಿಗಳೆಲ್ಲವೂ ಅದೃಷ್ಟದಿಂದಲೇ ದೊರೆಯುತ್ತವೆ; ದುಃಖ ಪ್ರಾಪ್ತಿಯೂ ಅದೃಷ್ಟದಿಂದಲೇ ಸರಿ; ದುಃಖಕ್ಕಾಗಿ ಯಾರೂ ಯತ್ನಿಸುವುದಿಲ್ಲವಷ್ಟೆ ಮತ್ತು ಯತ್ನವೂ ಸಹ ಅದೃಷ್ಟದಿಂದಲೇ ಉಂಟಾಗುತ್ತದೆ; ಆ ಯತ್ನವೇ ಅದೃಷ್ಟ ಪ್ರಾಪ್ತವಾಗಲಿರುವ ಸಾಮಗ್ರಿಗಳ ಯೋಗವನ್ನು ದೊರಕಿಸುತ್ತದೆ—ಅದರಿಂದಲೇ ಸುಖದುಃಖಾದಿ ಅನುಭವಗಳುಂಟಾಗುತ್ತವೆ; ಈ ಯತ್ನವನ್ನು ಅಪೇಕ್ಷಿಸಿಯೇ ಶ್ರೀಹರಿಯೂ ಸುಖದುಃಖಾದಿಗಳನ್ನು (ಜೀವರಿಗೆ) ಕೊಡುತ್ತಾನೆ (೫೨-೫೪). ಹೀಗೆ ಮುಂತಾಗಿ, ವಿಚಿತ್ರನು, ಅದೃಷ್ಟದ ಪ್ರಭಾವವನ್ನು ಪ್ರಶಂಸಿಸುತ್ತಿರಲು, ಇತ್ತ ಪ್ರಚಂಡನು, ಅನ್ನವನ್ನು ಭಕ್ಷಣಮಾಡುತ್ತಿರಲು, ಅಲ್ಲಿ

**ಪಾಷಾಣಬುದ್ಧ್ಯಾ ತತ್ಯಾಜ ವಿಚಿತ್ರೋಪರಿ ತದ್ದ್ರುತಂ ।**
**ವಿಚಿತ್ರೋಽದೃಷ್ಟಲಬ್ಧಂ ತದಿತಿ ಮತ್ವಾ ಬಬದ್ಧ ತತ್ ॥ ೫೬ ॥**
**ಪ್ರಚಂಡೋಽನ್ನಂ ತು ತದ್ಭುಕ್ತ್ವಾ ಪೀತ್ವಾ ಚಾಪಿ ಘಟೇಜಲಂ ।**
**ಸುಷ್ವಾಪಾತ್ರ ಸುಖಂ ರಾತ್ರೌ ದಿವಾ ತಾವಾಹ್ವಯನ್ನೃಪಃ ॥ ೫೭ ॥**

ಇತ್ಯಾದಿ- ಹೀಗೆ ಮುಂತಾಗಿ, ಅದೃಷ್ಟಸ್ತವನಂ-ಅದೃಷ್ಟ ಪ್ರಶಂಸೆಯನ್ನು, ವಿಚಿತ್ರೇ-ವಿಚಿತ್ರನು, ಕುರ್ವತಿ ಸತಿ-ಮಾಡುತ್ತಿರಲು, (ಇತ್ರ), ಪ್ರಚಂಡಃ ತು-ಪ್ರಚಂಡನಾದರೂ, ಅನ್ನಂ- ಅನ್ನವನ್ನು, ಭುಂಜಾನಃ- ಭಕ್ಷಿಸುವವನಾಗಿ, ತತ್ - ಅಲ್ಲಿ (ತತ್ರ), ರತ್ನಪಂಚಕಂ- ಐದು ರತ್ನಗಳನ್ನು, ಲೇಭೇ-ಹೊಂದಿದನು; ಪಾಷಾಣಬುದ್ಧ್ಯಾ-(ಕತ್ತಲೆಯಲ್ಲಿ) ಕಲ್ಲುಗಳೆಂದು ತಿಳಿದು, ತತ್- ಆ ರತ್ನ ಪಂಚಕವನ್ನು, ವಿಚಿತ್ರೋಪರಿ- ವಿಚಿತ್ರನಮೇಲೆ ತತ್ಯಾಜ-ಎಸೆದನು (ಹಾಕಿದನು); ವಿಚಿತ್ರಃ-ವಿಚಿತ್ರನು, ತತ್ -ಅದನ್ನು, ಅದೃಷ್ಟಲಬ್ಧಂ ಇತಿ-ಅದೃಷ್ಟದಿಂದ ದೊರೆತುದೆಂದು, ಮತ್ವಾ-ಭಾವಿಸಿ, ತತ್-ಅದನ್ನು, ಬಬದ್ಧ-(ವಸ್ತ್ರದ ತುದಿಯಲ್ಲಿ ಬಿಗಿದನು) ಕಟ್ಟಿಕೊಂಡನು; ಪ್ರಚಂಡಃ ತು-ಪ್ರಚಂಡನಾದರೋ, ತತ್ ಅನ್ನಂ- ಆ ಅನ್ನವನ್ನು, ಭುಕ್ತ್ವಾ-ಉಂಡು, ಅಪಿ ಚ-ಮತ್ತು, ಘಟೇಜಲಂ- (ಪೂರ್ಣಪಾತ್ರೆಯ ಪಕ್ಕದಲ್ಲಿದ್ದ) ಕಲಶದ ನೀರನ್ನು, ಪೀತ್ವಾ-ಕುಡಿದು, ಅತ್ರ-ಆ ದೇವಾಲಯದಲ್ಲಿ, ರಾತ್ರೌ-ರಾತ್ರಿಯಲ್ಲ ಸುಖಂ-ಸುಖವಾಗಿ, ಸುಷ್ವಾಪ-ನಿದ್ರಿಸಿದನು; ದಿವಾ-ಹಗಲುಬರಲು (ಬೆಳಗಾಗಲು), ನೃಪಃ-ರಾಜನು, ತೌ-ಆ ಇಬ್ಬರನ್ನೂ ಆಹ್ವಯತ್ -ಕರೆಸಿದನು.

**ಪ್ರಚಂಡಂ ಮುದಿತಂ ದೃಷ್ಟ್ವಾ ವಿಚಿತ್ರಂ ಮ್ಲಾನಮೇವ ಚ ।**
**ಪಪ್ರಚ್ಛ ವೃತ್ತಂ ಕಿಮಿತಿ ತಾವಥ ಪ್ರೋಚತುಶ್ಚ ತಂ ॥ ೫೮ ॥**
**ಪ್ರಚಂಡಃ ಪ್ರಾಹ ಸರ್ವಂ ತದ್‌ವೃತ್ತಂ ರಾತ್ರೌ ಬಭೂವ ಯತ್ ।**
**ವಿಚಿತ್ರಃ ಪಂಚರತ್ನಾನಿ ನೃಪಸ್ಯಾಗ್ರೇ ನ್ಯವೇದಯತ್ ॥ ೫೯ ॥**

---

(ಅನ್ನಪೂರ್ಣ ಪಾತ್ರೆಯಲ್ಲಿ) ಐದು ರತ್ನಗಳನ್ನು ಹೊಂದಿದನು; ಕೈಗೆ ತೆಗೆದುಕೊಂಡು, ಕತ್ತಲಾದ್ದರಿಂದ, ಅವುಗಳನ್ನು ಪಾಷಾಣ (ಕಲ್ಲು)ಗಳೆಂದು ತಿಳಿದು, ವಿಚಿತ್ರನ ಮೇಲೆಸೆದನು; ವಿಚಿತ್ರನು ಅವುಗಳನ್ನು ತನ್ನ ವಸ್ತ್ರದಲ್ಲಿ ಬಿಗಿದುಕೊಂಡು, ತನ್ನ ಅದೃಷ್ಟದಿಂದ ಲಭಿಸಿದವುಗಳೆಂದು ಭಾವಿಸಿದನು; ಪ್ರಚಂಡನು ಅನ್ನವನ್ನು ಭಕ್ಷಿಸಿ, ಕಲಶದಲ್ಲಿದ್ದ ನೀರನ್ನು ಕುಡಿದು, ಅಲ್ಲಿ ರಾತ್ರಿಯೆಲ್ಲಾ ಸುಖವಾಗಿ ನಿದ್ರಿಸಿದನು; ಪ್ರಾತಃಕಾಲದಲ್ಲಿ ರಾಜನು ಉಭಯರನ್ನೂ ಕರೆಸಿಕೊಂಡನು (೫೫-೫೭). ಪ್ರಚಂಡನನ್ನು ಹರ್ಷಿತನನ್ನಾಗಿಯೂ, ವಿಚಿತ್ರನನ್ನು ಬಾಡಿದ ಮುಖವುಳ್ಳವನನ್ನಾಗಿಯೂ ಕಂಡು, ರಾಜನು, ರಾತ್ರಿ ಏನು ನಡೆಯಿತೆಂದು ವಿಚಾರಿಸಲು, ಅವರಿಬ್ಬರೂ ರಾಜನಿಗೆ

**ಮಹಾಧನಾನಿ ರತ್ನಾನಿ ವಿಲೋಕ್ಯ ನೃಪತಿಃ ಸ್ವಯಂ ।**
**ಶಾಂತೋ ವಿವಾದೋ ಯುವಯೋರಿತ್ಯವಾದೀತ್ತಯೋಃ ಪುರಃ ॥ ೬೦ ॥**

ಪ್ರಚಂಡಂ-ಪ್ರಚಂಡನನ್ನು ಮುದಿತಂ-ಹರ್ಷಿತನನ್ನಾಗಿಯೂ, ಚ-ಮತ್ತು ವಿಚಿತ್ರಂ-ವಿಚಿತ್ರನನ್ನು ಮ್ಲಾನಂ ಏವ-ಬಾಡಿದ ಮುಖವುಳ್ಳವನನ್ನಾಗಿಯೂ (ರಾತ್ರಿ ಅನ್ನ ನೀರುಗಳಿಲ್ಲದ್ದರಿಂದ) ದೃಷ್ಟ್ವಾ-ನೋಡಿ, (ರಾಜನು), ವೃತ್ತಂ ಕಿಂ ಇತಿ-(ರಾತ್ರಿ) ಏನು ನಡೆಯಿತೆಂದು, ಪಪ್ರಚ್ಛ-ಕೇಳಿದನು; ಅಥ-ನಂತರ, ತೌ-ಆ ಇಬ್ಬರೂ, ತಂ-ರಾಜನನ್ನು ಕುರಿತು, ಪ್ರೋಚತುಃ-ಹೇಳಿದರು; ಪ್ರಚಂಡಃ-ಪ್ರಚಂಡನು, ಯತ್-ಯಾವುದು, ರಾತ್ರೌ-ರಾತ್ರಿಯಲ್ಲಿ ಬಭೂವ-ನಡೆಯಿತೋ, ತತ್ ವೃತ್ತಂ ಸರ್ವಂ-ಆ ವೃತ್ತಾಂತವನ್ನೆಲ್ಲವನ್ನೂ, ಪ್ರಾಹ-ಹೇಳಿದನು; ವಿಚಿತ್ರಃ-ವಿಚಿತ್ರನು, ನೃಪಸ್ಯ-ರಾಜನ, ಅಗ್ರೇ-ಮುಂದೆ, ಪಂಚರತ್ನಾನಿ-(ತನಗೆ ದೊರೆತ) ಐದು ರತ್ನಗಳನ್ನು ನ್ಯವೇದಯತ್-ಇಟ್ಟು (ಅರ್ಪಿಸಿ) ತನಗೆ ದೊರೆತ ಪರಿಯನ್ನೂ ನಿವೇದಿಸಿದನು; ನೃಪತಿಃ-ರಾಜನು, ಸ್ವಯಂ-ತಾನೇ ಪ್ರತ್ಯಕ್ಷವಾಗಿ, ಮಹಾಧನಾನಿ-ಅನರ್ಘ್ಯಗಳಾದ (ಬಹುಬೆಲೆ ಬಾಳುವ), ರತ್ನಾನಿ-ರತ್ನಗಳನ್ನು ವಿಲೋಕ್ಯ-ನೋಡಿ, ಯುವಯೋಃ-ನಿಮ್ಮಿಬ್ಬರ, ವಿವಾದಃ-ವಿವಾದವು (ಅದೃಷ್ಟ ಮತ್ತು ಯತ್ನಗಳಲ್ಲಿ ಯಾವುದು ಶ್ರೇಷ್ಠವೆಂಬ ನಿಮ್ಮ ಜಗಳವು), (ಸ್ವಯಂ-ತಾನಾಗಿಯೇ, ನನಗೆ ಚಿಂತಾಶ್ರಮಗಳಿಲ್ಲದೇ), ಶಾಂತಃ-ಶಾಂತ ವಾಯಿತು (ಮುಗಿಯಿತು-ಪರ್ಯವಸಾನಗೊಂಡಿತು), ಇತಿ-ಎಂದು, ತಯೋಃ-ಆ ಇಬ್ಬರ, ಪುರಃ-ಮುಂದೆ, ಅವಾದೀತ್-ನುಡಿದನು.

**ರಾಜೋವಾಚ—**

**ಯತ್ನೇನ ಯದಸಾಧ್ಯಂ ಸ್ಯಾತ್ತದದೃಷ್ಟೇನ ಲಭ್ಯತೇ ।**
**ಜನನೇ ಮರಣೇ ದುಃಖೇ ನಿಧಿಲಾಭೇಽಪಹಾರಿಣೇ ॥ ೬೧ ॥**

---

ಹೇಳಿದರು; ಪ್ರಚಂಡನು ರಾತ್ರಿ ನಡೆದುದೆಲ್ಲವನ್ನೂ (ತಾನು ಸುಖವಾಗಿ ಉಂಡು ಮಲಗಿ ನಿದ್ರಿಸಿದುದನ್ನು) ಹೇಳಿದನು; ವಿಚಿತ್ರನು ತನಗೆ ದೊರೆತ ಐದು ಕಲ್ಲುಗಳನ್ನು ರಾಜನೆದುರಿಗೆ ಇಟ್ಟು, ನಡೆದುದೆಲ್ಲವನ್ನೂ (ಪ್ರಚಂಡನ ತಿರಸ್ಕಾರದ ನುಡಿ ಮುಂತಾದುದೆಲ್ಲವನ್ನೂ) ವಿಜ್ಞಾಪಿಸಿಕೊಂಡನು; ರಾಜನು ಮುಂದಿಟ್ಟ ಶಿಲೆಗಳು ಅನರ್ಘ್ಯವಾದ ರತ್ನಗಳನ್ನಾಗಿ ತಿಳಿದು, ನಿಮ್ಮಿಬ್ಬರ ವಿವಾದವು, (ಅದೃಷ್ಟ ಪ್ರಯತ್ನಗಳಲ್ಲಿ ಯಾವುದು ಪ್ರಧಾನವೆಂಬುದು) ನನಗೆ ಶ್ರಮವಿಲ್ಲದೇ, ತಾನಾಗಿಯೇ ಕೊನೆಗಂಡಿದೆ, ಎಂದು ನುಡಿದನು (೫೮-೬೦). 'ಯಾವ ಕಾರ್ಯಸಿದ್ಧಿಯು (ಫಲವು) ಯತ್ನದಿಂದ ಅಸಾಧ್ಯವೋ ಅದು ಅದೃಷ್ಟದಿಂದ ಲಭಿಸುತ್ತದೆ; ಜನನ, ಮರಣ, ದುಃಖ, ನಿಧಿಲಾಭ, ಅದರ ನಷ್ಟ (ಅಪಹಾರ) ಇವು ಯಾವುವೂ ಮನುಷ್ಯಯತ್ನದಿಂದ ಆಗುವುದಿಲ್ಲ; ಇವೆಲ್ಲವೂ ಅದೃಷ್ಟಮಾತ್ರದಿಂದ ಸಂಭವಿಸುತ್ತವೆ—ಅದೃಷ್ಟಮಾತ್ರ ಕಾರಣವಾಗಿವುಳ್ಳವು

**ನೈವ ಯತ್ನೋ ನರಸ್ಯ ಸ್ಯಾತ್ಕೇವಲಾದೃಷ್ಟಹೇತು ತತ್ ।**

ಯತ್-ಯಾವುದು, ಯತ್ನೇನ-ಯತ್ನದಿಂದ, ಅಸಾಧ್ಯಂ-ಅಸಾಧ್ಯವಾದುದು, ಸ್ಯಾತ್-ಆಗಿರುವುದೋ, ತತ್-ಅದು, ಅದೃಷ್ಟೇನ-ಅದೃಷ್ಟದಿಂದ, ಲಭ್ಯತೇ- ದೊರೆಯುತ್ತದೆ; ಜನನೇ-ಹುಟ್ಟುವುದರಲ್ಲಿ, ಮರಣೇ-ಸಾಯುವುದರಲ್ಲಿ, ದುಃಖೇ-ದುಃಖಪ್ರಾಪ್ತಿಯಲ್ಲಿ, ನಿಧಿಲಾಭೇ-ಧನನಿಧಿಯು ದೊರೆಯುವಲ್ಲಿ, ಅಪಹಾರಿಣೇ-(ಅದರ) ಅಪಹಾರದಲ್ಲಿ, ನರಸ್ಯ-ಮನುಷ್ಯನ, ಯತ್ನಃ-ಯತ್ನವು, ನೈವ ಸ್ಯಾತ್-ಇರುವುದೇ ಇಲ್ಲ; ತತ್-ಆ ಎಲ್ಲವೂ, ಕೇವಲಾದೃಷ್ಟಹೇತು-ಅದೃಷ್ಟ ಮಾತ್ರ ಕಾರಣವಾಗಿವುಳ್ಳದ್ದು.

**ಅನುಕೂಲಂ ಯದಾಽದೃಷ್ಟಂ ತದಾ ಯತ್ನಃ ಫಲಾನ್ವಿತಃ ॥ ೬೨ ॥**

**ಅನ್ಯಥೇತರಥೈವ ಸ್ಯಾದ್ಯತ್ನೋಽಪಿ ಸ್ಯಾದದೃಷ್ಟತಃ ।**

ಯದಾ-ಯಾವ ಕಾಲದಲ್ಲಿ, ಅದೃಷ್ಟಂ-ಅದೃಷ್ಟವು, ಅನುಕೂಲಂ-ಅನುಕೂಲವಾಗಿರುವುದೋ (ಕಾರ್ಯಸಿದ್ಧಿಗೆ ಅನುಕೂಲವಾಗಿರುವುದೋ), ತದಾ-ಆಗ, ಯತ್ನಃ-ಯತ್ನವು, ಫಲಾನ್ವಿತಃ-ಫಲಯೋಗವುಳ್ಳದ್ದಾಗುತ್ತದೆ (ಫಲವನ್ನು ಕೊಡುತ್ತದೆ); ಅನ್ಯಥಾ-ಹಾಗಲ್ಲದಿದ್ದರೆ (ಅದೃಷ್ಟವು ಅನುಕೂಲವಾಗಿಲ್ಲದಿದ್ದರೆ), ಇತರಥಾ ಏವ-ಬೇರೆ ರೀತಿಯೇ (ಫಲರಹಿತವೇ), ಸ್ಯಾತ್-ಆಗುತ್ತದೆ; ಯತ್ನಃ ಅಪಿ-ಯತ್ನವು ಸಹ, ಅದೃಷ್ಟತಃ-ಅದೃಷ್ಟದಿಂದಲೇ, ಸ್ಯಾತ್-ಸಂಭವಿಸುತ್ತದೆ.

**ಅನ್ನಮಾತ್ರಂ ತ್ವಯಾ ಲಬ್ಧಂ ತ್ವಯಾ ಯತ್ನೇನ ಮಾರ್ಗತಾ ॥ ೬೩ ॥**

**ಪ್ರಚಂಡಸ್ತ್ಯಕ್ತವಾನ್ ರತ್ನಪಂಚಕಂ ಸ್ವಯಮೇವ ಹಿ ।**

**ಅಯತ್ನೇನೈವ ತಲ್ಲಬ್ಧಂ ಕೇವಲಾದೃಷ್ಟಕಾರಣಾತ್ ॥ ೬೪ ॥**

**ವಿಚಿತ್ರೇಣ ತತೋ ದೃಷ್ಟಂ ಪ್ರಬಲಂ ಯತ್ನತಃ ಸ್ಮೃತಂ ।**

**ಅಥಾಪಿ ಚರ್ವಣಾದೀನಿ ಯತ್ನಸಾಧ್ಯಾನಿ ನಾನ್ಯಥಾ ॥**

**ತಸ್ಮಾದ್ಯತ್ನಸ್ಯ ಸರ್ವತ್ರ ಸ್ಯಾದದೃಷ್ಟಸಹಾಯತಾ ॥ ೬೫ ॥**

ತ್ವಯಾ-ನಿನ್ನಿಂದ (ಹೇ ಪ್ರಚಂಡ!), ಯತ್ನೇನ-ಯತ್ನದಿಂದ, ಮಾರ್ಗತಾ-

---

ಗಳು (೬೧). ಯಾವ ಕಾಲದಲ್ಲಿ ಅದೃಷ್ಟವು ಫಲಸಿದ್ಧಿಗೆ ಅನುಕೂಲವಾಗಿರುವುದೋ, ಆಗ ಯತ್ನವು ಫಲಪ್ರದವಾಗುತ್ತದೆ; ಇಲ್ಲದಿದ್ದರೆ ಫಲವಿಲ್ಲ-ಯತ್ನವೂ ಸಹ ಅದೃಷ್ಟದಿಂದಲೇ ಸಂಭವಿಸುತ್ತದೆ (೬೨). ಹೇ ಪ್ರಚಂಡ! ನೀನು ಯತ್ನಮಾಡಿ, ಕತ್ತಲಲ್ಲಿ ಹುಡುಕಿದ್ದರಿಂದ, ನಿನಗೆ ಅನ್ನ ಮಾತ್ರ ಲಭ್ಯವಾಯಿತು; ಹೇ ವಿಚಿತ್ರ!, ಪ್ರಚಂಡನು ತಾನಾಗಿಯೇ ರತ್ನ ಪಂಚಕವನ್ನುತ್ಯಜಿಸಿದನು; ಅದು ಯಾವ ಯತ್ನವೂ ಇಲ್ಲದೇ, ಕೇವಲ ಅದೃಷ್ಟದಿಂದಲೇ ನಿನಗೆ ಲಭಿಸಿತು; ಆದ್ದರಿಂದ ಯತ್ನಕ್ಕಿಂತ ಅದೃಷ್ಟವೇ ಪ್ರಬಲವೆಂದು (ಫಲಪ್ರಾಪ್ತಿಯಲ್ಲಿ ಬಲಿಷ್ಠಕಾರಣವೆಂದು) ಹೇಳಲ್ಪಡುತ್ತದೆ; ಹೀಗಿದ್ದರೂ, ಆಹಾರ

ಮಾರ್ಗಣ (ಹುಡುಕಿದ ಕಾರಣ)ದಿಂದ, ತ್ವಯಾ-ಯತ್ನಿಸಿದ ನಿನ್ನಿಂದ, ಅನ್ನ ಮಾತ್ರಂ-ಕೇವಲ ಅನ್ನವಷ್ಟೇ, ಲಬ್ಧಂ-ಹೊಂದಲ್ಪಟ್ಟಿತು; ಪ್ರಚಂಡಃ-ಪ್ರಚಂಡನು, ಸ್ವಯಂ ಏವ-ತಾನಾಗಿಯೇ, ರತ್ನಪಂಚಕಂ-ರತ್ನಪಂಚಕವನ್ನು ತ್ಯಕ್ತವಾನ್ ಹಿ-ತ್ಯಜಿಸಿದ ನಷ್ಟೆ; ತತ್-ಅದು, ಅಯತ್ನೇನ ಏವ-(ಯಾವ ವಿಧವಾದ) ಯತ್ನವೂ ಇಲ್ಲದೇ, ಕೇವಲಾದೃಷ್ಟಕಾರಣಾತ್-ಅದೃಷ್ಟಮಾತ್ರ ಕಾರಣದಿಂದ, ವಿಚಿತ್ರೇಣ-ವಿಚಿತ್ರನಿಂದ, ಲಬ್ಧಂ-ಹೊಂದಲ್ಪಟ್ಟಿತು; ತತಃ-ಆದ್ದರಿಂದ, ಯತ್ನತಃ-ಯತ್ನಕ್ಕಿಂತ, ಅದೃಷ್ಟಂ-ಅದೃಷ್ಟವು, ಪ್ರಬಲಂ-ಬಲಿಷ್ಠ ಕಾರಣವೆಂದು, ಸ್ಮೃತಂ-ತಿಳಿಯಲ್ಪಡುತ್ತದೆ; ಅಥಾಪಿ-ಹೀಗಿದ್ದರೂ, ಚರ್ವಣಾದೀನಿ-ಆಹಾರವನ್ನು ಜಗಿಯುವುದು, ನುಂಗುವುದು ಮುಂತಾದ ಕ್ರಿಯೆಗಳು, ಯತ್ನಸಾಧ್ಯಾನಿ-ಯತ್ನದಿಂದ ಸಾಧ್ಯವಾದವುಗಳು; ಅನ್ಯಥಾ ನ-ಬೇರೆಯಲ್ಲ; ತಸ್ಮಾತ್-ಆದ್ದರಿಂದ (ರಾತ್ರಿ ವೃತ್ತಾಂತದ ನಿದರ್ಶನದಿಂದ), ಯತ್ನಸ್ಯ-ಯತ್ನಕ್ಕೆ, ಸರ್ವತ್ರ-ಎಲ್ಲ ಸಂದರ್ಭಗಳಲ್ಲಿ, ಅದೃಷ್ಟಸಹಾಯತಾ-ಅದೃಷ್ಟದ ಸಹಾಯವು, ಸ್ಯಾತ್-ಇರುತ್ತದೆಂದು ತಿಳಿಯಿರಿ.

ಬ್ರಾಹ್ಮಣ ಉವಾಚ—

ನೃಪೇಣೋಕ್ತಂ ತದಾಕರ್ಣ್ಯ ಜಗ್ಮತುಃ ಛಿನ್ನಸಂಶಯೌ ।
ಪ್ರಚಂಡಶ್ಚ ವಿಚಿತ್ರಶ್ಚ ಮುದಿತೌ ಸ್ವಂ ಸ್ವಮಾಲಯಂ ॥ ೬೬ ॥
ಅತಃ ಸುಭದ್ರ ಶಕ್ತ್ಯಾ ತ್ವಂ ಕುರ್ವನ್ಯತ್ನಮತಂದಿತ್ರಃ ।
ಅದೃಷ್ಟವಶತೋ ಲಬ್ಧ್ವಾ ಧನವಸ್ತ್ರಾದಿಕಾಖಿಲಂ ॥ ೬೭ ॥

ಸೂತ ಉವಾಚ—

ಇತ್ಯಾದಿಶ್ಯ ಸುಭದ್ರಂ ಸ ಭಗವಾನ್ ವಿಶ್ವರೂಪಧೃಕ್ ।
ಅಂತರ್ದಧೇ ಸುಭದ್ರೋಽಥ ಶಕ್ತ್ಯಾ ಯತ್ನಂ ವಿಧಾಯ ಚ ॥ ೬೮ ॥

---

ಚರ್ವಣಾದಿ (ಅಗಿಯುವುದು, ನುಂಗುವುದು ಇತ್ಯಾದಿ)ಗಳು, ಯತ್ನದಿಂದ ಸಾಧ್ಯವಾಗುತ್ತವೆ—ಬೇರೆಯಲ್ಲ; ಆದ್ದರಿಂದ ಯತ್ನಕ್ಕೆ, ಸರ್ವತ್ರ ಅದೃಷ್ಟದ ಸಹಾಯ ಬೇಕೆಂದು ತಿಳಿಯಿರಿ (೬೩-೬೫). ರಾಜನು ಹೇಳಿದ ಈ ನಿರ್ಣಯ ವಾಕ್ಯವನ್ನು ಕೇಳಿ, ಸಂಶಯದ ಪರಿಹಾರವನ್ನು ಹೊಂದಿದ ಪ್ರಚಂಡ ಮತ್ತು ವಿಚಿತ್ರರಿಬ್ಬರೂ ಹರ್ಷಿತರಾಗಿ ತಂತಮ್ಮ ಗೃಹಗಳಿಗೆ ಹೋದರು; ವೃದ್ಧ ಬ್ರಾಹ್ಮಣನು ಸುಭದ್ರನಿಗೆ ಹೇಳುತ್ತಾನೆ:—'ಹೇ ಸುಭದ್ರ! ಯತ್ನದ ಸ್ಥಾನವು ಹೀಗಿರುವುದರಿಂದ (ಜಲೂಕದಂತಲ್ಲದೇ, ಯತ್ನ ಸಾಮಗ್ರಿಗಳುಳ್ಳ ನೀನು), ಸುಮ್ಮನೆ ಕೂಡದೆ, ಆಲಸ್ಯಮಾಡದೇ (ಶೀಘ್ರವಾಗಿ) ನಿನ್ನ ಶಕ್ತ್ಯನುಸಾರವಾಗಿ ಯತ್ನಿಸು; ಅದೃಷ್ಟಾನುಸಾರವಾಗಿ ಧನವಸ್ತ್ರಾದಿ ಸಮಸ್ತವನ್ನು ಹೊಂದುವಿ', ಎಂದು ಉಪದೇಶಿಸಿ, ಆ ವೃದ್ಧ ಬ್ರಾಹ್ಮಣರೂಪದಿಂದ ಬಂದಿದ್ದ

**ಪೂರ್ವಕರ್ಮಾನುರೋಧೇನ ಧನಧಾನ್ಯಾದಿಲಬ್ಧವಾನ್ ।**
**ಯಸ್ಮಾದದೃಷ್ಟಂ ಸರ್ವತ್ರ ಜೀವಯತ್ನಮಪೇಕ್ಷ್ಯತೇ ॥ ೬೯ ॥**
**ತಸ್ಮಾತ್ಕುರ್ವೀತ ಶಕ್ತ್ಯೈವ ಪ್ರಯತ್ನಂ ಕೇಶವಾಜ್ಞಯಾ ।**
**ಅನಾದಿಕಾಲಸಂಕಲ್ಪ ಏವಮೇವ ಮಹೇಶಿತುಃ ॥ ೭೦ ॥**

ಬ್ರಾಹ್ಮಣನು ಸುಭದ್ರನಿಗೆ ಹೇಳುತ್ತಾನೆ:—ನೃಪೇಣ-ರಾಜನಿಂದ, ಉಕ್ತಂ-ಹೇಳಿದುದನ್ನು, ಆಕರ್ಣ್ಯ-ಕೇಳಿ, ತದಾ-ಆಗ, ಛಿನ್ನಸಂಶಯೌ-ಸಂಶಯವನ್ನು ಕಳೆದು ಕೊಂಡ, ಪ್ರಚಂಡಶ್ಚ-ಪ್ರಚಂಡನೂ, ವಿಚಿತ್ರಶ್ಚ-ವಿಚಿತ್ರನೂ, ಮುದಿತೌ-ಹರ್ಷಿತರಾಗಿ, ಸ್ವಂಸ್ವಂ-ತಂತಮ್ಮ, ಆಲಯಂ-ಗೃಹವನ್ನು ಕುರಿತು, ಜಗ್ಮತುಃ-ಹೋದರು; ಅತಃ-ಆದ್ದರಿಂದ (ಯತ್ನದ ಸ್ಥಾನವು ಹೀಗಿರುವುದರಿಂದ), ಸುಭದ್ರ-ಹೇ ಸುಭದ್ರ!, ತ್ವಂ-ನೀನು, ಅತಂದ್ರಿತಃ-ಆಲಸ್ಯರಹಿತನಾಗಿ, ಶಕ್ತ್ಯಾ-ನಿನ್ನ ಶಕ್ತಿ ಇದ್ದಷ್ಟು (ಯತ್ನಮಾಡಲಿಕ್ಕೆ ಅವಶ್ಯವಾದ, ಶ್ರೀಹರಿದತ್ತವಾದ ಸಾಧನಗಳನ್ನು ಉಪಯೋಗಿಸಿ), ಯತ್ನಂ-ಯತ್ನ ವನ್ನು ಕುರ್ವನ್-ಮಾಡುವವನಾಗಿ, ಅದೃಷ್ಟವಶತಃ-ಅದೃಷ್ಟಾಧೀನನಾಗಿ, ಧನ ವಸ್ತ್ರಾದಿ-ಧನ, ವಸ್ತ್ರ ಮೊದಲಾದ, ಅಖಿಲಂ ಚ-ಸಮಸ್ತವನ್ನು, ಲಬ್ಧ್ವಾ-ಹೊಂದಿ, (ಸುಖಿಯಾಗು); ಇತಿ-ಹೀಗೆ, ಆದಿಶ್ಯ-ಉಪದೇಶಿಸಿ, ಸಃ-ಆ, ವಿಶ್ವರೂಪಧೃಕ್-ಸರ್ವ ರೂಪನಾದ (ವೃದ್ಧಬ್ರಾಹ್ಮಣ ರೂಪದಿಂದ ಬಂದು ಉಪದೇಶಿಸಿದ), ಭಗವಾನ್-ಶ್ರೀಹರಿಯು, ಅಂತರ್ದಧೇ-ಅದೃಶ್ಯನಾದನು; ಅಥ-ಮುಂದೆ, ಸುಭದ್ರಃ-ಸುಭದ್ರನು, ಶಕ್ತ್ಯಾ-ಶಕ್ಯನುಸಾರವಾದ, ಯತ್ನಂ-ಪ್ರಯತ್ನವನ್ನು ವಿಧಾಯ ಚ-ಮಾಡಿಯೇ, ಪೂರ್ವಕರ್ಮಾನುರೋಧೇನ-ತನ್ನ ಪೂರ್ವಕರ್ಮಾನುಗುಣವಾಗಿ, ಧನಧಾನ್ಯಾದಿ-ಧನಧಾನ್ಯಾದಿಗಳನ್ನು, ಲಬ್ಧವಾನ್-ಹೊಂದಿದನು; ಯಸ್ಮಾತ್-ಯಾವ ಕಾರಣದಿಂದ, ಅದೃಷ್ಟಂ-(ಫಲಪ್ರಾಪಕವಾದ) ಅದೃಷ್ಟವು, ಸರ್ವತ್ರ-ಎಲ್ಲ ಸಂದರ್ಭಗಳಲ್ಲಿ

---

ಶ್ರೀಹರಿಯು, ಅದೃಶ್ಯನಾದನು; ಮುಂದೆ, ಸುಭದ್ರನು ಶಕ್ತ್ಯನುಸಾರ ಯತ್ನಮಾಡಿ, ತನ್ನ ಪೂರ್ವಕರ್ಮಾನುಸಾರವಾಗಿ ಧನಧಾನ್ಯಾದಿಗಳನ್ನು ಹೊಂದಿ ಸುಖಿಯಾದನು; ಫಲವನ್ನು ಕೊಡಲು ಸಿದ್ಧವಾಗಿರುವ (ಫಲೋನ್ಮುಖವಾದ) ಅದೃಷ್ಟವು, ಎಲ್ಲ ಸಂದರ್ಭಗಳಲ್ಲಿ ಶಕ್ತ್ಯನುಸಾರವಾದ ಜೀವಯತ್ನವನ್ನು ಅಪೇಕ್ಷಿಸುತ್ತದೆ; ಯತ್ನವಿಲ್ಲದೇ ಫಲಕೊಡುವುದಿಲ್ಲ; ಆದ್ದರಿಂದ, ಶ್ರೀ ಕೇಶವನ ಆಜ್ಞೆಯಿಂದಲೇ ಯತ್ನ ಮಾಡುತ್ತಿರುವೆನೆಂಬ ಭಾವನೆಯಿಂದ, ಪುರುಷನು ಶಕ್ತ್ಯನುಸಾರ ಯತ್ನಿಸಬೇಕು—ಇದಕ್ಕಾಗಿಯೇ ಶ್ರೀಹರಿಯು, ಜೀವರಿಗೆ ಭಿನ್ನಭಿನ್ನಗಳಾದ ಯತ್ನ ಸಾಮಗ್ರಿಗಳನ್ನು ಒದಗಿಸಿರುತ್ತಾನೆ; ಸ್ವತಂತ್ರಪ್ರಭುವಾದ ಶ್ರೀಹರಿಯ ಸಂಕಲ್ಪವೇ, ಅನಾದಿಕಾಲದಿಂದ, ಹೀಗಿದೆ; (ಯತ್ನವಿಲ್ಲದೆ ಫಲವನ್ನು ಪೂರ್ವಕರ್ಮಾನುಸಾರ ಕೊಡಲು ಶಕ್ತನೇ ಆಗಿದ್ದರೂ, ಕೊಡುವುದಿಲ್ಲ—ಆತನು ಸತ್ಯಸಂಕಲ್ಪನು (೬೬-೭೦). ಜೀವನು

ಜೀವಯತ್ನಂ-ಪುರುಷಯತ್ನವನ್ನು ಅಪೇಕ್ಷ್ಯತೇ-ಅಪೇಕ್ಷಿಸುತ್ತದೆಯೋ, ತಸ್ಮಾತ್-ಆ ಕಾರಣದಿಂದ, ಕೇಶವಾಜ್ಞಯಾ-ಶ್ರೀಹರಿಯ ಆಜ್ಞೆಯಿಂದಲೇ (ಯತ್ನ ಮಾಡುತ್ತೇನೆಂಬ ಭಾವನೆಯಿಂದ), ಶಕ್ತ್ಯೈವ-ಶಕ್ತಿಯಿದ್ದಷ್ಟು ಪ್ರಯತ್ನಂ-ಪ್ರಯತ್ನವನ್ನು ಕುರ್ವೀತ-ಮಾಡತಕ್ಕದ್ದು; ಏವಂ ಏವ-ಹೀಗೆಂದೇ (ಯತ್ನಸಾಮಗ್ರಿಗಳನ್ನುಳ್ಳವರಿಂದ ಯತ್ನ ಮಾಡಿಸಿಯೇ ಅವರ ಅದೃಷ್ಟಾನುಸಾರ ಫಲಪ್ರದನಾಗುವೆನೆಂದೇ), ಮಹೇಶಿತುಃ-ಸ್ವತಂತ್ರಪ್ರಭುವಾದ ಶ್ರೀಹರಿಯ, ಅನಾದಿಕಾಲಸಂಕಲ್ಪಃ-ಅನಾದಿಯಿಂದಿರುವ ಸಂಕಲ್ಪವಾಗಿದೆ (ಸತ್ಯಸಂಕಲ್ಪನಾದ್ದರಿಂದ ಶ್ರೀಹರಿಯು, ಪ್ರಯತ್ನವಿಲ್ಲದೇ ಫಲಕೊಡಲು ಸಮರ್ಥನೇ ಆಗಿದ್ದರೂ, ಹಾಗೆ ಯತ್ನವಿಲ್ಲದೇ ಫಲಕೊಡುವುದಿಲ್ಲ).

**ತಮನುಲ್ಲಂಘಯನ್ಮರ್ತ್ಯೋ ನಾಪರಾಧೀ ಹರೇರ್ಭವೇತ್ ।**
**ತಮುಲ್ಲಂಘ್ಯಾಪರಾಧೀಸ್ಯಾದನ್ಯಥಾ ಶ್ರುತಿಚೋದಿತೌ ॥ ೭೧ ॥**
**ವ್ಯರ್ಥೌ ವಿಧಿನಿಷೇಧೌ ತು ಭವೇತಾಂ ಯತ್ನತೋ ವಿನಾ ।**
**ದೃಷ್ಟಾದೃಷ್ಟಫಲಪ್ರೇಪ್ಸುಃ ಕುರ್ಯಾದ್ಯತ್ನಂ ಹರಿಂ ಸ್ಮರನ್ ॥ ೭೨ ॥**
**ತೇನ ತುಷ್ಯೇಜ್ಜಗನ್ನಾಥಃ ಕುಪ್ಯೇದಿತರಥಾ ಪ್ರಭುಃ ।**
**ಶ್ರುತಿಸ್ಮೃತೀ ತು ತಸ್ಯಾಜ್ಞೇ ಚರೇತ್ತದನುಸಾರತಃ ॥ ೭೩ ॥**

ತಂ-ಆ (ಶ್ರೀಹರಿಯ ಸಂಕಲ್ಪವನ್ನು—ಯತ್ನದಿಂದಲೇ ಅದೃಷ್ಟಾನುಸಾರವಾದ ಫಲಪ್ರದನಾಗುವೆನೆಂಬ) ಸಂಕಲ್ಪವನ್ನು ಅನುಲ್ಲಂಘಯನ್-ಮೀರದೇ (ಯತ್ನ ಮಾಡಿ), ಮರ್ತ್ಯಃ-ಮನುಷ್ಯನು, ಹರೇಃ-ಶ್ರೀಹರಿಗೆ, ಅಪರಾಧೀ-ಅಪರಾಧ ಮಾಡಿದವನು, ನ ಭವೇತ್-ಆಗುವುದಿಲ್ಲ; ತಂ-ಅದನ್ನು ಉಲ್ಲಂಘ್ಯ-ಮೀರಿ ನಡೆದು, ಅಪರಾಧೀ-ಅಪರಾಧಿಯು, ಸ್ಯಾತ್-ಆಗುತ್ತಾನೆ; ಅನ್ಯಥಾ-ಹಾಗಲ್ಲದಿದ್ದರೆ (ಜೀವರು

---

ಯತ್ನಮಾಡಿಯೇ ಫಲವನ್ನು ಅಪೇಕ್ಷಿಸತಕ್ಕದ್ದೆಂಬ ಶ್ರೀಹರಿಯ ಸಂಕಲ್ಪವನ್ನು (ಆಗಮಾತ್ರ ಅದೃಷ್ಟಾನುಸಾರವಾದ ಫಲಗಳನ್ನು ಕೊಡುವೆನೆಂಬ ಸಂಕಲ್ಪವನ್ನು), ಮೀರದೇ ಯತ್ನಮಾಡಿದರೆ, ಶ್ರೀಹರಿಗೆ ಅಪರಾಧಿಯಾಗುವುದಿಲ್ಲ; ಹಾಗಲ್ಲದೆ ಅದನ್ನು ಉಲ್ಲಂಘಿಸಿ (ಯತ್ನಮಾಡದೇ ಕೂತು ಫಲವನ್ನು ಇಚ್ಛಿಸಿದರೆ) ಅಪರಾಧಿಯಾಗುತ್ತಾನೆ; ಹಾಗೆ ಜೀವನು ಯತ್ನ ಮಾಡಲೇಬೇಕೆಂಬುದು ಶ್ರೀಹರಿಸಂಕಲ್ಪವಾಗಿರದಿದ್ದರೆ, ಶ್ರುತಿ ವಿಹಿತವಾದ ವಿಧಿನಿಷೇಧಗಳು ವ್ಯರ್ಥವಾಗುತ್ತವೆ; (ಅವುಗಳನ್ನಾಚರಿಸುವ ಅಧಿಕಾರಿಗಳೇ ಇಲ್ಲವೆಂದು ಪ್ರಾಪ್ತವಾಗುತ್ತದೆ); ಆದ್ದರಿಂದ ಇಹಪರ ಫಲಗಳನ್ನು ಅಪೇಕ್ಷಿಸುವವನು ಶ್ರೀಹರಿಯನ್ನು ಸ್ಮರಿಸಿ (ಆತನ ಅಧೀನನಾಗಿಯೇ ಯತ್ನಿಸುವನೆಂಬ ಅನುಸಂಧಾನ ವುಳ್ಳವನಾಗಿ) ಯತ್ನವನ್ನು ಯಥಾಯೋಗ್ಯವಾಗಿ ಮಾಡಲೇಬೇಕು; ಅದರಿಂದ ಶ್ರೀಹರಿಯು ಪ್ರೀತನಾಗುತ್ತಾನೆ-ಇಲ್ಲದಿದ್ದರೆ ಕುಪಿತನಾಗುತ್ತಾನೆ; ಏಕೆಂದರೆ, ವಿಧಿ ನಿಷೇಧಗಳನ್ನು ನಿರೂಪಿಸುವ ಶ್ರುತಿಸ್ಮೃತಿಗಳು ಶ್ರೀಹರಿಯ ಆಜ್ಞೆಗಳು—ಆಜ್ಞಾಧಾರಕ

ಯತ್ನಮಾಡಬೇಕೆಂಬುದು ಶ್ರೀಹರಿ ಸಂಕಲ್ಪವಲ್ಲದಿದ್ದರೆ), ಯತ್ನತಃ ವಿನಾ-ಯತ್ನವನ್ನು ಬಿಟ್ಟು, ಶ್ರುತಿಚೋದಿತೌ-ವೇದಾದಿಗಳಲ್ಲಿ ಹೇಳಲ್ಪಟ್ಟಿರುವ (ವಿಧಿಸಲ್ಪಟ್ಟಿರುವ), ವಿಧಿ ನಿಷೇಧೌ ತು-ವಿಧಿನಿಷೇಧಗಳೇ (ಮಾಡು-ಬಿಡು ಎಂಬ ನಿಯಮಗಳು), ವ್ಯರ್ಥೌ-ವ್ಯರ್ಥವಾದವುಗಳು, ಭವೇತಾಂ-ಆಗುತ್ತವೆ; (ಆ ನಿಯಮಗಳನ್ನು ಪಾಲಿಸಬೇಕಾದವರು-ಅವುಗಳಿಗೆ ಅಧಿಕಾರಿಗಳು, ಇಲ್ಲವೆಂದೇ ಪ್ರಾಪ್ತವಾಗುತ್ತದೆ);[1] (ಆದ್ದರಿಂದ), ದೃಷ್ಟಾದೃಷ್ಟ ಫಲಪ್ರೇಪ್ಸುಃ-ಇಹಪರಗಳ ಫಲವನ್ನು ಅಪೇಕ್ಷಿಸುವವನು, ಹರಿಂ-ಶ್ರೀಹರಿಯನ್ನು ಸ್ಮರನ್-ಸ್ಮರಿಸಿ (ಆ ತನ್ನ ಯತ್ನವೂ ಶ್ರೀಹರಿಯ ಅಧೀನ ವಾಗಿಯೇ ಆತನ ಪ್ರೇರಣೆಯಿಂದಲೇ ನಡೆಯುವುದೆಂಬ ಅನುಸಂಧಾನವುಳ್ಳವನಾಗಿ), ಯತ್ನಂ-ಯತ್ನವನ್ನು ಕುರ್ಯಾತ್-ಮಾಡಬೇಕು; ಜಗನ್ನಾಥಃ-ಜಗದೊಡೆಯನಾದ ಶ್ರೀಹರಿಯು, ತೇನ-ಅದರಿಂದ-ಅವಿಧ ಯತ್ನದಿಂದ, ತೃಪ್ಯೇತ್-ಪ್ರೀತನಾಗುತ್ತಾನೆ; ಇತರಥಾ-ಹಾಗೆ ನಡೆಯದಿದ್ದರೆ, ಪ್ರಭುಃ-ಸ್ವಾಮಿಯು (ಶ್ರೀಹರಿಯು), ಕುಪ್ಯೇತ್-(ಆ ಜೀವನಮೇಲೆ) ಕುಪಿತನಾಗುತ್ತಾನೆ; (ಏಕೆಂದರೆ), ಶ್ರುತಿ ಸ್ಮೃತೀ-(ವಿಧಿನಿಷೇಧಗಳನ್ನು ನಿರೂಪಿಸುವ) ಶ್ರುತಿ ಸ್ಮೃತಿಗಳು, ತಸ್ಯ-ಆತನ, ಆಜ್ಞೇ ತು-ಆಜ್ಞೆಗಳೇ (ಆಗಿವೆ); ತದನುಸಾರತಃ-ಅವುಗಳನ್ನನುಸರಿಸಿ, ಚರೇತ್-ಆಚರಣೆಯುಳ್ಳವನಾಗಬೇಕು.

ಯಥಾ ಸ್ವಾತಂತ್ರ್ಯಭಾಗಂ ಸ್ಯಾತ್ ಫಲಮಸ್ಯ ವಿನಿಶ್ಚಯಾತ್ ।
ಅನ್ಯಥಾಽನರ್ಥಮಾಪ್ನೋತಿ ಪುರುಷೋ ನಾತ್ರ ಸಂಶಯಃ ॥ ೭೪ ॥
ಉಲ್ಲಂಘಯನ್ನೃಪಸ್ಯಾಜ್ಞಾಂ ಯಥೈವ ಭೃತಕೋ ಲಭೇತ್।
ಆಜ್ಞಾಭಂಗೋ ನರೇಂದ್ರಾಣಾಂ ವಿಪ್ರಾಣಾಂ ಮಾನಖಂಡನಂ ॥
ಪೃಥಕ್ ಶಯ್ಯಾ ಚ ನಾರೀಣಾಂ ಅಶಸ್ತ್ರವಧ ಉಚ್ಯತೇ ॥ ೭೫ ॥

---

ನಾದ ಭೃತ್ಯನಮೇಲೆ ಮಾತ್ರ ಪ್ರಭುವಿನ ಪ್ರಸಾದವಾಗುತ್ತದೆ (೭೧-೭೩). ವಿಧಿ-ನಿಷೇಧಾನುಸಾರ ಯತ್ನಿಸುವ ಜೀವನಿಗೆ; ಯತ್ನಸಾಧ್ಯವಾದ ಫಲದಲ್ಲಿ ಶ್ರೀಹರಿಯು ತನ್ನಲ್ಲಿ ಸ್ಥಾಪಿಸಿರುವ ಸ್ವಾತಂತ್ರ್ಯಾಂಶದಷ್ಟು ಭಾಗದ ಫಲವು ತಪ್ಪದೇ ಲಭಿಸುತ್ತದೆ; ಅನ್ಯಥಾ (ವಿಧಿನಿಷೇಧಗಳನ್ನುಲ್ಲಂಘಿಸಿದರೆ) ಅನರ್ಥವೇ ದೊರೆಯುತ್ತದೆ—ಸಂದೇಹವಿಲ್ಲ; ರಾಜಾಜ್ಞೆಯನ್ನು ಉಲ್ಲಂಘಿಸಿದ ಭೃತ್ಯನಂತೆ, ಈತನೂ ಫಲಭಾಗಿ ಯಾಗುತ್ತಾನೆ; ರಾಜರಿಗೆ ಅವರ ಆಜ್ಞೆಯನ್ನು ಮೀರುವುದು, ಅಶಸ್ತ್ರ

---

1. ಸ್ವತಂತ್ರನಾದ್ದರಿಂದ ಭಗವಂತನು ವಿಧಿನಿಷೇಧಗಳಿಂದ ಬದ್ಧನಾಗಲು ಶಕ್ಯವಿಲ್ಲ; ಜಡವಸ್ತುವೂ, ಜ್ಞಾನಶೂನ್ಯವಾದುದರಿಂದ ವಿಧಿನಿಷೇಧಗಳಿಗೆ ಅಧಿಕಾರಿಯಾಗಲಾರದು; ಆದ್ದರಿಂದ ಜೀವರೇ, ಪರಾಧೀನರಾದ್ದರಿಂದ, ಅವುಗಳಿಗೆ ಅಧಿಕಾರಿಗಳು—ಆ ನಿಯಮಗಳನ್ನು ಪಾಲಿಸಿ, ಉಕ್ತಫಲಗಳನ್ನು ಹೊಂದಲರ್ಹರೆಂದು ಯುಕ್ತಿಯಿಂದ ಸಹ ಸಿದ್ಧವಾಗುತ್ತವೆ. 'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂದು (ಬ್ರಹ್ಮಸೂತ್ರದಲ್ಲಿ) ಈ ಪ್ರಮೇಯವು ನಿರ್ಣಯಿಸಲ್ಪಟ್ಟಿರುತ್ತದೆ.

ಅಸ್ಯ-ಈತನಿಗೆ (ಹೀಗೆ ವಿಧಿನಿಷೇಧಾನುಸಾರ ಯತ್ನಮಾಡುವ ಜೀವನಿಗೆ), ಯಥಾ ಸ್ವಾತಂತ್ರ್ಯಭಾಗಂ-(ತನ್ನಲ್ಲಿ ಶ್ರೀಹರಿಯಿಂದ ಸ್ಥಾಪಿತವಾಗಿರುವ) ಸ್ವಾತಂತ್ರ್ಯದ ಅಂಶದಷ್ಟು ಫಲಂ-(ಯತ್ನದ) ಫಲವು, ವಿನಿಶ್ಚಯಾತ್-ನಿಶ್ಚಯವಾಗಿಯೂ, ಸ್ಯಾತ್-ದೊರೆಯುತ್ತದೆ; ಅನ್ಯಥಾ-ಹಾಗಲ್ಲದಿದ್ದರೆ (ವಿಧಿನಿಷೇಧಾನುಸಾರ ನಡೆಯ ದಿದ್ದರೆ), ಪುರುಷಃ-ಜೀವನು (ಮನುಷ್ಯನು), ಅನರ್ಥಂ-ಅನರ್ಥವನ್ನು (ಕೇಡನ್ನು), ಆಪ್ನೋತಿ-ಹೊಂದುತ್ತಾನೆ; ಅತ್ರ-ಈ ವಿಷಯದಲ್ಲಿ ಸಂಶಯಃ ನ-ಸಂಶಯವಿಲ್ಲ; ಯಥಾ-ಹೇಗೆಂದರೆ, ನೃಪಸ್ಯ-ರಾಜನ, ಆಜ್ಞಾಂ-ಆಜ್ಞೆಯನ್ನು ಉಲ್ಲಂಘಯನ್-ಅತಿಕ್ರಮಿಸಿದ (ತಿರಸ್ಕರಿಸಿ ನಡೆದ), ಭೃತಕಃ-ಭೃತ್ಯನು, ಯಥಾ ಲಭೇತ್ ಏವ-ಹೇಗೆ (ರಾಜನ ನಿಗ್ರಹವನ್ನೇ) ಹೊಂದುವನೋ (ಹಾಗೆ ಜೀವನೂ ಶಿಕ್ಷಾರ್ಹನಾಗುತ್ತಾನೆ); ನರೇಂದ್ರಾಣಾಂ-ರಾಜರಿಗೆ, ಆಜ್ಞಾಭಂಗಃ-(ತಮ್ಮ) ಆಜ್ಞೆಯನ್ನು ಮುರಿಯುವುದು (ಮೀರುವುದು), ವಿಪ್ರಾಣಾಂ-ಬ್ರಾಹ್ಮಣರಿಗೆ, ಮಾನಖಂಡನಂ-ಅಪಮಾನಗೊಳಿಸುವುದು ಚ-ಮತ್ತು ನಾರೀಣಾಂ-ಸ್ತ್ರೀಯರಿಗೆ (ಭಾರ್ಯೆಗೆ), ಪೃಥಕ್ ಶಯ್ಯಾ-ಬೇರೆ ಹಾಸಿಗೆಯಲ್ಲಿ ಮಲಗುವುದು (ಆಕೆಯ ಸೇವೆಗೆ ಅವಕಾಶವಿಲ್ಲದಂತೆ ಮಾಡುವುದು), ಅಶಸ್ತ್ರವಧಃ-ಆಯುಧರಹಿತವಾದ (ಶಸ್ತ್ರವನ್ನು ಪ್ರಯೋಗಿಸದೇ ಪ್ರಾಪ್ತವಾಗುವ) ಮರಣದಂತೆಯೇ ಸರಿ; ಉಚ್ಯತೇ-(ಎಂದು) ಹೇಳಲಾಗುತ್ತದೆ.

**ಆಜ್ಞಾಮುಲ್ಲಂಘಯನ್ ವಿಷ್ಣೋಃ ಪುರುಷೋಽಯಂ ದಿನೇದಿನೇ ।**
**ಕ್ಷಣೇಕ್ಷಣೇಽಪಿ ಸತತಂ ದೃಪ್ತತ್ವಾನ್ನ ಬಿಭೇತಿ ವೈ ॥ ೭೬ ॥**
**ಅನುಜ್ಞಾಲಂಘನಾದ್ವಿಷ್ಣೋರ್ಬಂಧಃ ಪಾಪಂ ಹಿ ಜಾಯತೇ ।**
**ತಾದೃಶಸ್ಯಾಸ್ಯ ದಯಯಾ ದತ್ತೇಲ್ಪಂ ದುಃಖಮೀಶ್ವರಃ ॥ ೭೭ ॥**
**ಅತಃ ಪಾಹೀತಿ ಪಾಹೀತಿ ಮನಸಾ ಕರ್ಮಣಾ ಗಿರಾ ।**
**ತಮೇವ ಶರಣಂ ಯಾಯಾತ್ ಕೋಽನ್ಯಸ್ತ್ರಾತಾಸ್ತಿ ಸಂಸೃತೌ ॥ ೭೮ ॥**

---

ಮರಣವಿದ್ದಂತೆ—ಇದನ್ನು ರಾಜನು ಹೇಗೆ ಸಹಿಸುವನು? ಅದರಲ್ಲಿಯೂ, ಸ್ವತಂತ್ರ ಪ್ರಭುವೂ ಸರ್ವಶಕ್ತನೂ ಆದ ಶ್ರೀಹರಿಯು, ಹೇಗೆ ಅಂತಹ ಜೀವನನ್ನು ಶಾಸನಮಾಡದಿರುತ್ತಾನೆ? ಬ್ರಾಹ್ಮಣರನ್ನು ಅಪಮಾನಗೊಳಿಸುವುದೂ, ಸ್ವಪತ್ನಿಯನ್ನು ಅನ್ಯಶಯ್ಯೆಯಲ್ಲಿಡುವುದೂ ಹೀಗೆಯೇ ಅಶಸ್ತ್ರ ಮರಣದಂತೆ ಅಸಹನೀಯವು (೭೪-೭೫). ಮನುಷ್ಯನು ಶ್ರೀವಿಷ್ಣುವಿನ ಆಜ್ಞೆಯನ್ನು ದಿನದಿನವೂ, ಪ್ರತಿ ಕ್ಷಣವೂ ಉಲ್ಲಂಘಿಸುತ್ತ ಧೈರ್ಯಗೊಂಡು, ಭಯರಹಿತನಾಗುತ್ತಾನೆ; ಆದರೆ ಅದರಿಂದ ಸಂಸಾರಬಂಧವು ಭದ್ರ (ಬಿಗಿಯಾಗುತ್ತದೆ)ವಾಗುತ್ತದೆ-ಪಾಪವೂ ವೃದ್ಧಿಗೊಳ್ಳುತ್ತದೆ; ಹೀಗೆ ಮಹಾಪಾಪಗಳಿಗೆ ಪಾತ್ರನಾದ ಮನುಷ್ಯನಿಗೆ, ಕೃಪೆಯಿಂದ, ಶ್ರೀಹರಿಯು,

ಪುರುಷಃ-ಮನುಷ್ಯನು, ದಿನೇದಿನೇ-ಪ್ರತಿದಿನವೂ, ವಿಷ್ಣೋಃ-ಶ್ರೀವಿಷ್ಣುವಿನ, ಆಜ್ಞಾಂ-ಆಜ್ಞೆಯನ್ನು (ಶಾಸ್ತ್ರವಿಹಿತ ಕರ್ಮಗಳ ಆಚರಣೆಯನ್ನು), ಉಲ್ಲಂಘಯನ್-ಮೀರಿನಡೆದು, ಕ್ಷಣೇಕ್ಷಣೇ ಅಪಿ-ಪ್ರತಿ ಕ್ಷಣದಲ್ಲಿಯೂ ಹಾಗೆ ವರ್ತಿಸುತ್ತ ಧೃಷ್ಟತ್ವಾತ್-ಧೈರ್ಯವುಂಟಾಗಿ, ಸತತಂ-ನಿರಂತರವಾಗಿ, ನ ಬಿಭೇತಿ ವೈ-ಭಯರಹಿತನಾಗುತ್ತಾನೆ; ವಿಷ್ಣೋಃ-ಶ್ರೀಹರಿಯ, ಅನುಜ್ಞಾಲಂಘನಾತ್-ಆಜ್ಞೋಲ್ಲಂಘನೆಯಿಂದ, ಬಂಧಃ-(ಸಂಸಾರ) ಬಂಧವೂ, ಪಾಪಂ-ಪಾಪವೂ, ಜಾಯತೇ-ಉಂಟಾಗುತ್ತದೆ; ತಾದೃಶಸ್ಯ-ಹೀಗೆ ತನ್ನ ಆಜ್ಞೆಯನ್ನು ಮೀರುವ ಪಾಪಿಯಾದ, ಅಸ್ಯ-ಈ ಜೀವನಿಗೆ, ಈಶ್ವರಃ-(ಯೋಗ್ಯ ಶಿಕ್ಷೆಯನ್ನು ವಿಧಿಸಲು ಶಕ್ತನೂ ಸ್ವತಂತ್ರನೂ ಆದ) ಶ್ರೀಹರಿಯು, ದಯಯಾ-ಕೃಪೆಮಾಡಿ, ಅಲ್ಪಂ-ಅತ್ಯಲ್ಪವಾದ, ದುಃಖಂ-ದುಃಖವನ್ನು (ಮಾತ್ರ), ದತ್ತೇ-ಕೊಡುತ್ತಾನೆ; ಅತಃ-ಆದ್ದರಿಂದ, ಮನಸಾ-ಮನಸ್ಸಿನಿಂದ, ಕರ್ಮಣಾ-ಕೃತಿಗಳಿಂದ, ಗಿರಾ-ನುಡಿಯಿಂದ (ತ್ರಿಕರಣಗಳಿಂದಲೂ), ಪಾಹಿ ಪಾಹಿ-ರಕ್ಷಿಸು, ರಕ್ಷಿಸು, ಇತಿ-ಎಂದು, ತಂ ಏವ-ಆ ಶ್ರೀಹರಿಯನ್ನೇ, ಶರಣಂ-ಆಶ್ರಯವನ್ನು ಯಾಯಾತ್-ಹೊಂದಬೇಕು; ಸಂಸೃತೌ-(ಘೋರವಾದ) ಸಂಸಾರದಲ್ಲಿ ತ್ರಾತಾ-ರಕ್ಷಣೆ ಮಾಡುವವನು, ಅನ್ಯಃ ಕಃ-ಬೇರೆ ಯಾರು, ಅಸ್ತಿ-ಇರುವನು? (ಯಾರೂ ಇಲ್ಲ).

ಪಾಪಂ ಪರಿಹರೇಚ್ಛಕ್ತ್ಯಾ ತಥಾ ಪುಣ್ಯಂ ಚರೇದಪಿ ।
ಸ್ಮರೇಚ್ಚ ಸತತಂ ಭಕ್ತ್ಯಾ ಪರಯಾ ವಿಷ್ಣುಮೇವ ಹಿ ॥ ೭೯ ॥
ತಸ್ಯೈವ ಸ್ಮರಣಂ ಶ್ರೇಷ್ಠಂ ಸರ್ವಸ್ಮಾದಪಿ ಪುಣ್ಯತಃ ।
ಸರ್ವೇಷಾಮೇವ ಪಾಪಾನಾಂ ಶ್ರೇಷ್ಠಾ ತಸ್ಯೈವ ವಿಸ್ಮೃತಿಃ ॥ ೮೦ ॥

ಶಕ್ತ್ಯಾ-ಶಕ್ತಿಯಿದ್ದಷ್ಟು, ಪಾಪಂ-ಪಾಪವನ್ನು ಪರಿಹರೇತ್-ಪರಿಹರಿಸಿಕೊಳ್ಳಬೇಕು (ವಿಹಿತ ಕರ್ಮಗಳನ್ನು ತ್ಯಜಿಸದೇ, ನಿಷಿದ್ಧಗಳನ್ನಾಚರಿಸದೇ ಇರಬೇಕು); ತಥಾ-

---

ಅಲ್ಪದುಃಖವನ್ನೇ ಕೊಡುತ್ತಾನೆ; ಇದನ್ನರಿತು, ವಿವೇಕಿಯಾದವನು, 'ಪಾಹಿ ಪಾಹಿ' (ರಕ್ಷಿಸು, ರಕ್ಷಿಸೆಂದು) ಸಂತತವಾಗಿ ಶ್ರೀಹರಿಯನ್ನೇ ಶರಣುಹೊಂದಬೇಕು—ಈ ಘೋರವಾದ (ದುಃಖ ಪ್ರಚುರವಾದ) ಸಂಸಾರದಲ್ಲಿ ಆತನ ವಿನಹ, ಅನ್ಯರಾರೂ ರಕ್ಷಕರಿಲ್ಲ—ಮನೋವಾಕ್ ಕರ್ಮಗಳಿಂದ ಆತನನ್ನೇ ಶರಣುಹೊಂದಬೇಕು (ಆಜ್ಞಾಧಾರಕನಾಗಿ ನಡೆಯತಕ್ಕದ್ದು) (೭೬-೭೮). ಶಕ್ತ್ಯನುಸಾರವಾಗಿ ಪಾಪವನ್ನು ಪರಿಹರಿಸಿಕೊಂಡು (ಪಾಪಕರ್ಮಗಳನ್ನು ತ್ಯಜಿಸಿ, ಪುಣ್ಯಕರ್ಮಗಳನ್ನೇ ಆಚರಿಸುತ್ತಿರಬೇಕು; ಶ್ರೇಷ್ಠ ಭಕ್ತಿಯಿಂದ ಶ್ರೀವಿಷ್ಣುವನ್ನು ಸರ್ವದಾ ಸ್ಮರಿಸುತ್ತಿರಬೇಕು; ಆತನ ಸ್ಮರಣೆಯೇ ಸರ್ವಪುಣ್ಯಕ್ಕಿಂತ ಶ್ರೇಷ್ಠ ಪುಣ್ಯವು; ಆತನ ವಿಸ್ಮರಣೆಯೇ ಎಲ್ಲ ಪಾಪಗಳ ಮಧ್ಯದಲ್ಲಿ ಅಧಿಕ ಪಾಪವು (೭೯-೮೦). ಶ್ರೀಹರಿಸ್ಮರಣೆಯಿಂದ,

ಹಾಗೆಯೇ, ಪುಣ್ಯಂ ಅಪಿ-ಪುಣ್ಯವನ್ನೂ ಚರೇತ್-ಆಚರಿಸಬೇಕು; (ಸತ್ಕರ್ಮಗಳನ್ನು ಆಚರಿಸತಕ್ಕದ್ದು); ಸತತಂ-ಸರ್ವದಾ, ಪರಯಾ-ಶ್ರೇಷ್ಠವಾದ, ಭಕ್ತ್ಯಾ-ಭಕ್ತಿಯಿಂದ, ವಿಷ್ಣುಂ ಏವ-ಶ್ರೀವಿಷ್ಣುವನ್ನೇ, ಸ್ಮರೇತ್-ಸ್ಮರಿಸಬೇಕು; ಚ ಹಿ-ಹಾಗೆಯೇ ಸರಿ (ಇದುವೇ ಮುಮುಕ್ಷುಗಳ ಮುಕ್ತಿಪ್ರದಮಾರ್ಗವು); ಸರ್ವಸ್ಮಾತ್-ಸಮಸ್ತ ಪುಣ್ಯತಃ-ಪುಣ್ಯಕರ್ಮಕ್ಕಿಂತಲೂ, ತಸ್ಯ-ಶ್ರೀಹರಿಯ, ಸ್ಮರಣಂ ಏವ-ಸ್ಮರಣೆಯೇ, ಶ್ರೇಷ್ಠಂ-ಉತ್ಕೃಷ್ಟವಾದುದು (ಶ್ರೇಷ್ಠ ಪುಣ್ಯವು); ತಸ್ಯ-ಶ್ರೀಹರಿಯ, ವಿಸ್ಮೃತಿಃ ಏವ-ವಿಸ್ಮೃತಿಯೇ (ಸ್ಮರಿಸದಿರುವುದೇ), ಸರ್ವೇಷಾಂ-ಸಮಸ್ತ ಪಾಪಾನಾಂ-ಪಾಪಗಳಿಗೆ, ಶ್ರೇಷ್ಠಾ-ಶ್ರೇಷ್ಠವಾದ (ಅಧಿಕವಾದ-ಹೀನವಾದ) ಪಾಪವು.

ತತ್ಸ್ಮೃತೇರ್ಜಾಯತೇ ಪುಣ್ಯಂ ವಿಶೇಷಫಲದಂ ನೃಣಾಂ ।
ಪಾಪಂ ಹೀನಫಲಂ ತು ಸ್ಯಾದತಸ್ತಂ ಸಂತತಂ ಸ್ಮರೇತ್ ॥ ೮೧ ॥
ತೇನೈವ ಸುಖಮಾಪ್ನೋತಿ ತೇನ ಸರ್ವೇಷ್ಟಭಾಗ್ಭವೇತ್ ।
ತೇನೈವ ಮೋಕ್ಷಮಾಪ್ನೋತಿ ನಾನ್ಯತ್ಸಾಧನಮೀದೃಶಂ ॥ ೮೨ ॥

ತತ್ಸ್ಮೃತೇಃ-ಶ್ರೀಹರಿಸ್ಮರಣೆಯಿಂದ, ನೃಣಾಂ-ಮನುಷ್ಯರಿಗೆ, ವಿಶೇಷ ಫಲದಂ-ಅಧಿಕ ಫಲವನ್ನು ದೊರಕಿಸುವ, ಪುಣ್ಯಂ-ಪುಣ್ಯವು, ಜಾಯತೇ-ಹುಟ್ಟುತ್ತದೆ; ಪಾಪಂ ತು-(ವಿಸ್ಮರಣರೂಪದ) ಪಾಪವಾದರೋ, ಹೀನ ಫಲಂ-ಕನಿಷ್ಠವಾದ (ದುಃಖರೂಪದ) ಫಲವುಳ್ಳದ್ದು ಸ್ಯಾತ್-ಆಗುತ್ತದೆ; ಅತಃ-ಆದ್ದರಿಂದ, ತಂ-ಶ್ರೀಹರಿಯನ್ನು, ಸತತಂ-ಸರ್ವದಾ, ಸ್ಮರೇತ್-ಸ್ಮರಿಸುತ್ತಿರಬೇಕು; ತೇನ ಏವ-ಅದರಿಂದಲೇ (ಸ್ಮರಣ ಜನ್ಯ ಪುಣ್ಯದಿಂದಲೇ), ಸುಖಂ-ಸುಖವನ್ನು, ಆಪ್ನೋತಿ-ಹೊಂದುತ್ತಾನೆ; ತೇನ ಏವ-ಅದರಿಂದಲೇ, ಸರ್ವೇಷ್ಟಭಾಕ್ ಭವೇತ್-ಸರ್ವಾಭೀಷ್ಟವನ್ನು ಹೊಂದುತ್ತಾನೆ; ತೇನೈವ-ಅದರಿಂದಲೇ, ಮೋಕ್ಷಂ-ಮೋಕ್ಷವನ್ನು ಆಪ್ನೋತಿ- ಹೊಂದುತ್ತಾನೆ; ಈದೃಶಂ-ಈ ವಿಧದ, ಸಾಧನಂ-(ಸುಲಭ) ಸಾಧನವು, ಅನ್ಯತ್ ನ-ಮತ್ತೊಂದಿಲ್ಲ.

ಅದೃಷ್ಟಪ್ರಯತ್ನಗಳ ಸ್ಥಾನನಿರೂಪಣವೆಂಬ ೫೪ನೆಯ ಅಧ್ಯಾಯವು ಮುಗಿದುದು.

---

ಮನುಷ್ಯರಿಗೆ ಉತ್ಕೃಷ್ಟ ಫಲವನ್ನು ದೊರಕಿಸುವ ಪುಣ್ಯವು ಉದಯಿಸುತ್ತದೆ; ವಿಸ್ಮರಣ ಜನ್ಯಪಾಪವು ಕನಿಷ್ಠವಾದ (ದುಃಖರೂಪದ) ಫಲವುಳ್ಳದ್ದಾಗುತ್ತದೆ; ಆದ್ದರಿಂದ ಸರ್ವದಾ ಶ್ರೀಹರಿಯನ್ನು ಭಕ್ತಿಯಿಂದ ಸ್ಮರಿಸುತ್ತಿರಬೇಕು; ಆ ಪುಣ್ಯದಿಂದ ಸುಖವೂ ಸರ್ವಾಭೀಷ್ಟಪ್ರಾಪ್ತಿಯೂ, ಲಭಿಸುತ್ತದೆ; ಅದರಿಂದಲೇ ಮೋಕ್ಷವೂ ದೊರೆಯುತ್ತದೆ; ಅದಕ್ಕೆ ಸಮನಾದ ಮತ್ತೊಂದು ಮೋಕ್ಷಸಾಧನವಿಲ್ಲ(೮೧-೮೨).

೫೪ನೇ ಅಧ್ಯಾಯವು ಮುಗಿದುದು.

## ಅಧ್ಯಾಯ ೫೫

ಶ್ರೀ ವೇದವ್ಯಾಸಾಯ ನಮಃ

**ಸೂತ ಉವಾಚ—**

**ನಾನಾ ಯೋನೀಃ ಪರ್ಯಟನ್ನೇಷ ಜೀವೋ ।**
**ದೈವಾದ್ಯಾಯಾನ್ಮಾನುಷಂ ದೇಹಮೇನಂ ॥**
**ರೇತೋಬಿಂದೋಃ ಸ್ತ್ರೀರಜೋ ರಕ್ತಯೋಗಾ-**
**ದೇತತ್ಸಿದ್ಧಿಃ ಶ್ರೀಹರೇರಿಚ್ಛಯೈವ ॥ ೧ ॥**

ಸೂತಾಚಾರ್ಯನು ಹೇಳುತ್ತಾನೆ:—

ಅರ್ಥ:—ಏಷಃ-ಈ, ಜೀವಃ-(ಸಂಸಾರಿ) ಜೀವನು, ನಾನಾ ಯೋನೀಃ-ಬಹು ದೇಹಗಳನ್ನು (ವಿವಿಧ ಪ್ರಾಣಿ ದೇಹಗಳನ್ನು), ಪರ್ಯಟನ್-(ಹೊಂದುತ್ತ) ಸುತ್ತಿ ದೈವಾತ್-ಅದೃಷ್ಟ ವಿಶೇಷದಿಂದ (ಶ್ರೀಹರಿಯ ಅನುಗ್ರಹದಿಂದ), ಏನಂ-ಈ, ಮಾನುಷಂ ದೇಹಂ-ಮನುಷ್ಯದೇಹವನ್ನು, ಯಾಯಾತ್-ಹೊಂದುತ್ತಾನೆ; ರೇತೋ ಬಿಂದೋಃ-ಪುರುಷರೇತಸ್ಸಿನ ಬಿಂದುವಿಗೆ, ಸ್ತ್ರೀ ರಜೋರಕ್ತಯೋಗಾತ್-ಸ್ತ್ರೀ ರಜಸ್ಸಿನ ರಕ್ತಸಂಬಂಧದಿಂದ, ಶ್ರೀಹರೇಃ-ಶ್ರೀಹರಿಯ, ಇಚ್ಛಯಾ ಏವ-ಇಚ್ಛೆಯಿಂದಲೇ, ಏತತ್-ಈ ದೇಹದ, ಸಿದ್ಧಿಃ-ಸಿದ್ಧಿಯು (ಮನುಷ್ಯದೇಹ ಪ್ರಾಪ್ತಿಯುಂಟಾಗುತ್ತದೆ).

**ನಾನಾಕಾರಾಣ್ಯಸ್ಥಿವೃಂದಾನಿ ಚೈಷ ।**
**ರೇತೋಮೂಲಾನ್ನಿರ್ಮಿಮೀತೇಽಥ ರಕ್ತಾತ್ ॥**
**ಮೇದೋ ಮಾಂಸ ಸ್ನಾಯು ಸಂಘಾನ್ ಕ್ರಮೇಣ ।**
**ವರ್ಷೇತ್ಸಾತ್ವಾಜ್ಜಾಠರಸ್ಯೈವ ತಪ್ಯೇತ್ ॥ ೨ ॥**

---



ತಾತ್ಪರ್ಯ:—ಈ ಜೀವನು, ವಿವಿಧ ಪ್ರಾಣಿದೇಹಗಳನ್ನು ಹೊಂದುತ್ತ ಸುತ್ತುತ್ತಲಿದ್ದು ಅದೃಷ್ಟವಶದಿಂದ (ಪೂರ್ವಪುಣ್ಯದ ಫಲವಾಗಿ), ಈ ಮನುಷ್ಯ ದೇಹವನ್ನು ಹೊಂದುತ್ತಾನೆ; ಪುರುಷ ರೇತಸ್ಸಿನ ಒಂದು ಬಿಂದುವು, ಸ್ತ್ರೀ ರಕ್ತ ಮಿಶ್ರಿತ ರಜಸ್ಸಿನೊಂದಿಗೆ ಸೇರಿ, ಶ್ರೀಹರೀಚ್ಛೆಯಿಂದಲೇ, ಈ ದೇಹವು ಸಿದ್ಧವಾಗುತ್ತದೆ; ಜೀವನಿಗೆ ಮನುಷ್ಯದೇಹದ ಪ್ರಾಪ್ತಿಯುಂಟಾಗುತ್ತದೆ (೧). ಸ್ವೇಚ್ಛಾಸ್ವರೂಪನೇ ಆದ ಶ್ರೀಹರಿಯು, ಪುರುಷ ರೇತಸ್ಸಿನಿಂದ, ನಾನಾ ಆಕಾರವುಳ್ಳ, ಮನುಷ್ಯದೇಹದ ಅಸ್ಥಿಗಳನ್ನೂ, ಸ್ತ್ರೀಯ ಶೋಣಿತದಿಂದ ಆ ದೇಹದ ಮೇದಸ್ಸು ಮಾಂಸ, ಸ್ನಾಯು ಮುಂತಾದವುಗಳನ್ನೂ ಕ್ರಮೇಣ (ಕಾಲಕ್ರಮದಿಂದ), ನಿರ್ಮಿಸುತ್ತಾನೆ; ಗರ್ಭಸ್ಥ ಜೀವನು ತಾಯಿಯ ಜಾಠರಾಗ್ನಿಯ ತಾಪದಿಂದ, ದುಃಖಿಸುತ್ತ ಬೆಳೆಯುತ್ತಾನೆ;

ತ್ವಙ್ಮಾಂಸಾಸ್ಥ್ಯಾದೀಂಶ್ಚ ಧಾತೂನ್ ಜನನ್ಯಾಃ ।
ಕುಕ್ಷೌ ಪೇಶ್ಯಾ ನಾಲರಂಧ್ರೇಣ ಸಮ್ಯಕ್ ॥
ಮಾತುರ್ಹೃದ್ಯಾತ್ ಪ್ರಾಪಿತಾದನ್ನಧಾತೋಃ ।
ಕಾಲೇಕಾಲೇ ವರ್ಧತೇ ತೇನ ಗರ್ಭಃ ॥ ೩ ॥

ಏಷಃ-ಸ್ವೇಚ್ಛಾಸ್ವಭಾವನಾದ ಶ್ರೀಹರಿಯು, ನಾನಾಕಾರಾಣಿ-ವಿವಿಧ ಆಕಾರಗಳುಳ್ಳ, ಅಸ್ಥಿವೃಂದಾನಿ-ಅಸ್ಥಿಸಮೂಹಗಳನ್ನೂ ರೇತೋಮೂಲಾತ್-ರೇತಸ್ಸಿನ ಮೂಲಕವೂ, ಅಥ-ಮತ್ತು ರಕ್ತಾತ್-ಸ್ತ್ರೀ ರಕ್ತದಿಂದ, ಮೇದೋ ಮಾಂಸ ಸ್ನಾಯು ಸಂಘಾನ್-ಮೇದಸ್ಸು ಮಾಂಸ, ಸ್ನಾಯುಗಳ ಸಮೂಹಗಳನ್ನೂ, ಕ್ರಮೇಣ-ಕ್ರಮವಾಗಿ, ನಿರ್ಮಿಮೀತೇ-ನಿರ್ಮಾಣಮಾಡುತ್ತಾನೆ; ಜಾಠರಸ್ಥ-ಜಠರದ (ಹೊಟ್ಟೆಯೊಳಗಿನ), ವಹ್ನೇಃ-ಅಗ್ನಿಯ, ತಾಪಾತ್-ಕಾವಿದಿಂದ, ತಪ್ಯೇತ್ ಏವ-(ಕೋಮಲ ದೇಹದೊಳಗಿನ ಈ ಜೀವನು) ನಿಶ್ಚಯವಾಗಿ ದುಃಖಿಸುತ್ತಾನೆ; ಜನನ್ಯಾಃ-ತಾಯಿಯ, ಕುಕ್ಷೌ-ಹೊಟ್ಟೆಯಲ್ಲಿ, ಪೇಶ್ಯಾ-ಕೋಮಲವಾದ, ನಾಲರಂಧ್ರೇಣ-ರಕ್ತನಾಳದೊಳಗಿನ ರಂಧ್ರದಿಂದ (ರಂಧ್ರದ ಮೂಲಕ),ಸಮ್ಯಕ್-ಚೆನ್ನಾಗಿ (ಪೂರ್ಣವಾಗಿ-ಸಾಕಷ್ಟು),ಪ್ರಾಪಿತಾತ್-ಹೊಂದಿಸಲ್ಪಡುವ, (ದೊರಕಿಸಲಾಗುವ), ಮಾತುಃ-ತಾಯಿಯ, ಹೃದ್ಯಾತ್- ಪ್ರೇಮಯುಕ್ತವಾದ, ಅನ್ನಧಾತೋಃ-ಆಹಾರರ ಸಾರದಿಂದ, ತ್ವಙ್ಮಾಂಸಾಸ್ಥ್ಯಾದೀನ್-ಚರ್ಮ, ಮಾಂಸ, ಅಸ್ಥಿ(ಮೂಳೆಗಳು) ಮೊದಲಾದ, ಧಾತೂನ್-ವಸ್ತುಗಳನ್ನು(ದೇಹ ಪೋಷಕ ಪದಾರ್ಥಗಳನ್ನು), ಗರ್ಭಃ-ಗರ್ಭವು, ಕಾಲೇಕಾಲೇ-ಆಯಾ (ನಿಯತ) ಕಾಲದಲ್ಲಿ ತೇನ-(ಉಪಯೋಗಿಸಿಕೊಂಡು)ಅದರಿಂದ, ವರ್ಧತೇ-ಬೆಳೆಸಿಕೊಳ್ಳುತ್ತದೆ.

ನೀಚೈರ್ವಕ್ತ್ರ ಕ್ವಾಥ್ಯಮಾನೋ ನಲೇನ ।
ಸಂಜ್ಞಾಮೇಷಃ ಪ್ರಾಪ್ನುತೇ ಪಂಚಮಾಸ್ಯೆಃ ॥
ತತ್ರಸ್ಥೋಽಯಂ ಚಿಂತಯತ್ಯೇಷ ಭೂರಿ ।
ಸ್ತ್ರೀಪುತ್ರಾದ್ಯೈಃ ಕ್ಷೇತ್ರ ಭೃತ್ಯಾದಿಭಿಶ್ಚ ॥ ೪ ॥

---

ತಾಯಿಯ ಪ್ರೇಮಯುಕ್ತವಾದ ಅನ್ನಸಾರದಿಂದ, ತನ್ನ ದೇಹದ ಚರ್ಮ-ಮಾಂಸ-ಅಸ್ಥಿಗಳನ್ನು ವೃದ್ಧಿಗೊಳಿಸಿಕೊಳ್ಳುತ್ತಾನೆ; ತಾಯಿಯ ಅನ್ನಸಾರವು, ತಾಯಿ ಹೊಟ್ಟೆಯಲ್ಲಿರುವ ಈ ಜೀವನ ದೇಹಕ್ಕೆ ಕೋಮಲವಾದ ರಕ್ತನಾಳಗಳ ದ್ವಾರಾ ಸಾಕಷ್ಟು ದೊರಕಿಸಲ್ಪಡುತ್ತದೆ (೨-೩). ಕ್ರಿಮಿ ಮೊದಲಾದ ತುಚ್ಛ ಪ್ರಾಣಿಗಳಿಂದ ಪೀಡಿಸಲ್ಪಟ್ಟ ಮುಖಾದ್ಯವಯಗಳುಳ್ಳ ಈ ಗರ್ಭಸ್ಥ ಜೀವನು, ಗರ್ಭಪ್ರವೇಶಮಾಡಿದ ಐದನೇ ತಿಂಗಳಲ್ಲಿ ಜ್ಞಾನವನ್ನು ಪಡೆಯುತ್ತಾನೆ (ಗರ್ಭಕೋಶದಲ್ಲಿ ಬಿದ್ದಿರುವ ತನ್ನ ಸ್ಥಿತಿಯನ್ನು ಅರಿಯುತ್ತಾನೆ); ಆಗ ಬಹುವಾಗಿ ಹೀಗೆ ಚಿಂತಿಸುತ್ತಾನೆ:—ಪತ್ನೀಪುತ್ರಾದಿಗಳಲ್ಲಿಯೂ,

**ಪೂರ್ವದೇಹೇ ಬದ್ಧಚೇತಾ ನಿತಾಂತಂ ।**
**ನಾಕಾರ್ಷಂ ಯಚ್ಛ್ರೀಪತೇಸ್ತೋಷಣಾರ್ಥಂ ॥**
**ಪುಣ್ಯಂ ದಾನಂ ವಿಪ್ರದೇವಾರ್ಚನಾದಿ ।**
**ಯಚ್ಚಾಕಾರ್ಷಂ ಪಾಪರಾಶೀನನೇಕಾನ್ ॥ ೫ ॥**

ಏಷಃ- ಈ ಗರ್ಭಸ್ಥ ಜೀವನು, ನೀಚೈಃ- ತುಚ್ಛ ಕೃಮ್ಯಾದಿಗಳಿಂದ, ಕ್ವಾಥ್ಯಮಾನಃ- ಕುದಿಸಲ್ಪಡುವ (ದಹಿಸಲ್ಪಡುವ) ವಕ್ತ್ರ-ಮುಖ (ಬಾಯಿ)ವುಳ್ಳವನಾಗಿ, ಅನಲೇನ- ಅಗ್ನಿಯಿಂದ (ಜಾಠರಾಗ್ನಿಯಿಂದ ಸಹ), (ಕ್ವಾ ಥ್ಯ ಮಾ ನಃ- ದಹಿಸಲ್ಪಡುವ ದೇಹವುಳ್ಳವನಾಗಿ), ಪಂಚಮಾಸ್ಯೈಃ- ಐದು ತಿಂಗಳಿಗೆ (ಮಾತೃಗರ್ಭವನ್ನು ತಂದೆಯ ರೇತಸ್ಸಿನ ದ್ವಾರಾ ಹೊಕ್ಕ ಐದು ತಿಂಗಳಿಗೆ), ಸಂಜ್ಞಾಂ- ಸಂಜ್ಞೆಯನ್ನು (ಜ್ಞಾನವನ್ನು- ತನ್ನ ಇರುವಿಕೆಯ ಅರಿವನ್ನು), ಪ್ರಾಪ್ನುತೇ- ಹೊಂದುತ್ತಾನೆ; ತತ್ರಸ್ಥಃ- ಗರ್ಭದಲ್ಲಿರುವ, ಏಷಃ ಅಯಂ- ಈ ಜೀವನು (ಹೀಗೆ ಅರಿವನ್ನು ಹೊಂದಿದ ಜೀವನು), ಭೂರಿ- ಬಹುವಾಗಿ, ಚಿಂತಯತಿ- ಆ ಲೋ ಚ ಸು ತ್ತಾ ನೆ; ಪೂರ್ವದೇಹೇ- ಹಿಂದಿನ ದೇಹದಲ್ಲಿ, ಸ್ತ್ರೀ- ಪುತ್ರಾದ್ಯೈಃ- ಪತ್ನೀ ಪುತ್ರಾದಿಗಳಿಂದಲೂ, ಚ- ಮತ್ತು ಕ್ಷೇತ್ರ ಭೃತ್ಯಾದಿಭಿಃ- ಭೂಮಿ, ಸೇವಕರೇ ಮೊದಲಾದವರಿಂದಲೂ, ನಿತಾಂತಂ- ಅತಿಶಯವಾಗಿ, ಬದ್ಧಚೇತಾಃ- ಬದ್ಧವಾದ ಮನಸ್ಸುಳ್ಳವನಾಗಿ (ಅವುಗಳಲ್ಲಿ ಅತ್ಯಂತ ಆಸಕ್ತನಾಗಿ), ಶ್ರೀಪತೇಃ- ಶ್ರೀಹರಿಯ, ತೋಷಣಾರ್ಥಂ- ಪ್ರೀತ್ಯರ್ಥವಾಗಿ, ಯತ್- ಯಾವ ಕಾರಣದಿಂದ, ದಾನಂ- ದಾನವನ್ನೂ, ವಿಪ್ರದೇವಾರ್ಚನಾದಿ- ಬ್ರಾಹ್ಮಣ, ದೇವಪೂಜಾದಿಗಳನ್ನೂ, ಪುಣ್ಯಂ- ಯಾವುದೊಂದು ಪುಣ್ಯಕರ್ಮವನ್ನೂ ನ ಅಕಾರ್ಷಂ- ಮಾಡಲಿಲ್ಲವೋ; ಚ- ಮತ್ತು ಯತ್- ಯಾವ ಕಾರಣದಿಂದ, ಅನೇಕಾನ್- ಬಹುವಿಧದ, ಪಾಪರಾಶೀನ್- ಪಾಪ ಸಮೂಹಗಳನ್ನೇ, ಅಕಾರ್ಷಂ- ಮಾಡಿದೆನೋ, (ಅದರಿಂದ ಈ ಗರ್ಭಕೋಶದಲ್ಲಿ ಬಿದ್ದಿರುವೆನು—ಮುಂದಿನ ಶ್ಲೋಕದಿಂದ ಅನ್ವಯವನ್ನು ತಿಳಿಯಬೇಕು).

**ತಸ್ಮಾನ್ನಾನಾ ಯಾತನಾ ವೃಂದಭೋಗಾತ್ ।**
**ಶೇಷಾತ್ ಪಾಪಾದತ್ರ ಗರ್ಭೇ ಶಯಾನಃ ॥**
**ವಿಣ್ಮೂತ್ರಾದ್ಯೈಃ ಕ್ವಾಥ್ಯಮಾನೋ ನಿತಾಂತಂ ।**
**ಪೀಡಾಮೇನಾಂ ಕಂ ಕೃಪಾಲುಂ ಬ್ರವೀಮಿ ॥ ೬ ॥**

---

ಭೂ, ಗೃಹ, ಭೃತ್ಯಾದಿಗಳಲ್ಲಿ ಅತಿಯಾಗಿ ಆಸಕ್ತಚಿತ್ತನಾಗಿ, ಹಿಂದಿನ ದೇಹದಲ್ಲಿ ಶ್ರೀಹರಿ- ಪ್ರೀತ್ಯರ್ಥವಾಗಿ, ದೇವಬ್ರಾಹ್ಮಣ ಪೂಜಾದಿಗಳನ್ನೂ, ದಾನ ಮೊದಲಾದ ಪುಣ್ಯಗಳನ್ನೂ ಆಚರಿಸಲಿಲ್ಲ; ಪ್ರತ್ಯುತ, ಅನೇಕ ಪಾಪರಾಶಿಗಳನ್ನೇ ಆಚರಿಸಿದೆನು (೪-೫). ಆ ಪಾಪಗಳ ಫಲವಾಗಿ, ನರಕಾದಿಗಳಲ್ಲಿ ನಾನಾ ಯಾತನೆಗಳನ್ನು ಅನುಭವಿಸಿ,

ತಸ್ಮಾತ್-ಆ ಕಾರಣದಿಂದ (ಹಿಂದಿನ ದೇಹದಲ್ಲಿ ಮಾಡಿದ ಪಾಪಗಳಿಂದ), ನಾನಾ ಯಾತನಾವೃಂದ ಭೋಗಾತ್-(ನರಕದಲ್ಲಿನ) ವಿವಿಧ ಯಾತನಾ ಸಮೂಹಗಳ ಭೋಗದಿಂದ, ಶೇಷಾತ್-(ಉಳಿದುಳಿದಿರುವ) ಅವಶಿಷ್ಟವಾದ, ಪಾಪಾತ್-ಪಾಪದಿಂದ, ಅತ್ರ ಗರ್ಭೇ-ಈ ಗರ್ಭಕೋಶದಲ್ಲಿ ಶಯಾನಃ-ಮಲಗಿ (ಬಿದ್ದುಕೊಂಡು), ವಿಣ್ಮೂತ್ರಾದ್ಯೈಃ-ಮಲಮೂತ್ರಗಳಿಂದ, ನಿತಾಂತಂ-ಅತಿಶಯವಾಗಿ, ಕ್ವಾಥ್ಯಮಾನಃ-ಕುದಿಯುತ್ತಿರುವ (ದುಃಖಿಸುತ್ತಿರುವ) ನಾನು, ಏನಾಂ-ಈ, ಪೀಡಾಂ-ಪೀಡೆಯನ್ನು (ಹಿಂಸೆಯನ್ನು), ಕಂ ಕೃಪಾಲುಂ-ಯಾವ ಕೃಪಾಲುವಿಗೆ, ಬ್ರವೀಮಿ-ಹೇಳಲಿ? (ಕಂ-ಸುಖಸ್ವರೂಪನಾದ, ಕೃಪಾಲುಂ-ದಯಾಪೂರ್ಣನಾದ, ಶ್ರೀಹರಿಯಲ್ಲಿಯೇ ವಿಜ್ಞಾಪಿಸಿಕೊಳ್ಳುತ್ತೇನೆ).

ಯೇನಾತ್ರಾಹಂ ಪಾತಿತೋ ಗರ್ಭಯಂತ್ರೇ ।
ಯಶ್ಚಾತ್ರಾಪಿ ಪ್ರಾಪಯೇನ್ಮಹ್ಯಮನ್ನಂ ॥
ಯತ್ನಂ ದೇಹಂ ಸರ್ವದಾ ವರ್ಧಮಾನೋ ।
ನಾನಾ ಕಾರ್ಯಾಣ್ಯತ್ರ ಚಿತ್ರಾಣಿ ಧತ್ತೇ ॥ ೭ ॥
ಸ್ರಷ್ಟಾ ದ್ರಷ್ಟಾ ಕೇವಲಃ ಸಂತತಂ ಯೋ ।
ವಿಶ್ವಸ್ಯಾಸ್ಯ ಪ್ರೀಣಕಃ ಪೀಡಕಶ್ಚ ॥
ತಂ ದೇವೇಶಂ ನಿರ್ಗತೋ ಯೋನಿಯಂತ್ರಾತ್ ।
ನಾನಾ ಧರ್ಮೈಸ್ತೋಷಯಿಷ್ಯಾಮಿ ದಾನೈಃ ॥ ೮ ॥

---

ಪಾಪಶೇಷದಿಂದ ಈ ಗರ್ಭಕೋಶದಲ್ಲಿ ಬಂದು ಬಿದ್ದಿರುವೆನು; ಅಲ್ಲಿರುವ ಮಲಮೂತ್ರಾದಿಗಳಿಂದ ದಹಿಸಲಾದ (ಕುದಿಯುತ್ತಿರುವ—ದುಃಖಿಸುತ್ತಿರುವ) ದೇಹವುಳ್ಳ ನಾನು, ನನ್ನ ಈ ವಿಧ ಪೀಡೆಯನ್ನು ಯಾವ ಕೃಪಾಲುವಿನಲ್ಲಿ ವಿಜ್ಞಾಪಿಸಿಕೊಳ್ಳಲಿ?—ಆಗಲಿ, ಆನಂದಸ್ವರೂಪನೂ ಕೃಪಾಸಮುದ್ರನೂ ಆದ ಶ್ರೀಹರಿಯಲ್ಲಿಯೇ ವಿಜ್ಞಾಪಿಸಿಕೊಳ್ಳುತ್ತೇನೆ (೬). 'ಯಾವಾತನಿಂದ ನಾನು ಈ ಗರ್ಭಾಗಾರದಲ್ಲಿ ತರಲ್ಪಟ್ಟಿರುವೆನೋ, ಯಾವಾತನೇ, ನನಗೆ ಇಲ್ಲಿಯೂ ಆಹಾರವನ್ನು ಒದಗಿಸುವನೋ, ಮತ್ತು ಸದಾ ನನ್ನ ದೇಹವನ್ನೂ, ಅದರ ಯತ್ನವನ್ನೂ (ಕ್ರಿಯೆಗಳನ್ನೂ) ವೃದ್ಧಿಗೊಳಿಸುವನೋ, ಹಾಗೂ, ಇಲ್ಲಿ ಅನ್ಯರಾರಿಂದಲೂ ಸಾಧ್ಯವಿಲ್ಲದ ಬಹು ವಿಚಿತ್ರ ಕಾರ್ಯಗಳನ್ನು ನಿರ್ವಹಿಸುವನೋ ಆ ದೇವೋತ್ತಮನಾದ, ಶ್ರೀಹರಿಯನ್ನೇ ಶರಣು ಹೊಂದುತ್ತೇನೆ; ಗರ್ಭದಿಂದ ಹೊರಗೆ ಹೋದೊಡನೆ, ದಾನಾದಿ ಬಹು ಪುಣ್ಯಕರ್ಮಗಳಿಂದ ಶ್ರೀಹರಿಯನ್ನು ಸಂತುಷ್ಟಿಗೊಳಿಸಲಿಕ್ಕಾಗಿಯೇ ಯತ್ನಿಸುತ್ತೇನೆ; ಅದರಿಂದ ಶ್ರೀಹರಿಯು ಪ್ರೀತನಾದರೆ ಮಾತ್ರ, ಪುನಃ ಈ ವಿಧವಾದ ಗರ್ಭವಾಸವನ್ನು

ಯೇನೇದೃಶಂ ಗರ್ಭವಾಸಂ ನಯಾಮಿ ।
ಸ್ಯಾಮಾನಂದೀ ನಿತ್ಯಮಸ್ಯೈವ ಲೋಕೇ ॥
ಯೇಷಾಮರ್ಥೇಽಕಾರಿಷಂ ಪಾಪಸಂಘಂ ।
ತೇ ಸ್ತ್ರೀಪುತ್ರಕ್ಷೇತ್ರ ಗೇಹಾದಯೋ ಮಾಂ ॥ ೯ ॥
ಪ್ರೇತಂ ದೃಷ್ಟ್ವಾ ತತ್ಯಜುಃ ಶೀಘ್ರಮೇವ ।
ತಸ್ಮುರ್ನೈತತ್ತಸಂನಿಧೌ ಮೇ ಕೃತಘ್ನಾಃ ॥
ಭೂಯೋ ನೈಷಾಂ ಸಂಗಮಂ ಜಾತು ಕುರ್ಯಾಂ ।
ಯೇನಾಹಂ ಸ್ಯಾಮೀದೃಶಃ ಕಷ್ಟಭಾಗೀ ॥ ೧೦ ॥

ಗರ್ಭಸ್ಥಜೀವನ ಸಂಕಲ್ಪಪ್ರಕಾರವನ್ನು ವಿವರಿಸುತ್ತಾರೆ:—ಯೇನ-ಯಾವಾತನಿಂದ, ಅತ್ರ-ಈ ಗರ್ಭಯಂತ್ರೇ[1]-ಗರ್ಭರೂಪದ ಯಂತ್ರದಲ್ಲಿ (ಕಾರ್ಯಾಲದಲ್ಲಿ), ಅಹಂ-ನಾನು, ಪಾತಿತಃ-ಹಾಕಲ್ಪಟ್ಟಿರುವೆನೋ; ಯಃ ಚ-ಯಾವಾತನೇ, ಅತ್ರಾಪಿ-ಇಲ್ಲಿಯೂ ಸಹ, ಮಹ್ಯಂ-ನನಗೆ, ಅನ್ನಂ-ಆಹಾರವನ್ನು ಪ್ರಾಪಯೇತ್-ಹೊಂದಿಸುವನೋ, ಸರ್ವದಾ-ಸದಾ, ದೇಹಂ-ಈ ನನ್ನ ದೇಹವನ್ನೂ, ಯತ್ನಂ-(ನನ್ನಿಂದಾಗಬೇಕಾದ) ಯತ್ನವನ್ನೂ, ವರ್ಧಮಾನಃ-ವೃದ್ಧಿಗೊಳಿಸುತ್ತಾ, ಅತ್ರ-ಈ ಗರ್ಭಕೋಶದಲ್ಲಿ, ಚಿತ್ರಾಣಿ-ವಿಚಿತ್ರವಾದ (ಆಶ್ಚರ್ಯಕರಗಳಾದ), ನಾನಾ ಕಾರ್ಯಾಣಿ-ಬಹುಕಾರ್ಯಗಳನ್ನು (ಅನ್ಯರಾರಿಂದಲೂ ಸಾಧ್ಯವಾಗದ), ಧತ್ತೇ-ವಹಿಸಿ ನಿರ್ವಹಿಸುತ್ತಾನೆಯೋ, (ಮತ್ತು), ಯಃ ಕೇವಲಃ-ಯಾವಾತನು, ಸ್ವತಂತ್ರನಾಗಿ, ಸಂತತಂ-ನಿರಂತರವಾಗಿ, ದ್ರಷ್ಟಾ-ನೋಡುತ್ತಿರುವನೋ (ಸರ್ವಸಾಕ್ಷಿಯಾಗಿರುವನೋ), ಸ್ರಷ್ಟಾ-(ಮತ್ತು) ಸೃಷ್ಟಿಕರ್ತನೂ ಆಗಿರುವನೋ, ಅಸ್ಯ-ಈ, ವಿಶ್ವಸ್ಯ-ಜಗತ್ತಿನ (ಸಕಲ ಚೇತನರಿಗೆ), ಪ್ರೀಣಕಃ-ಸುಖಪ್ರದನೂ, ಚ-ಮತ್ತು ಪೀಡಕಃ-ದುಃಖ

ಹೊಂದುವುದಿಲ್ಲ—ಅಷ್ಟು ಮಾತ್ರವಲ್ಲ; ಸದಾ ವೈಕುಂಠಾದಿ ಆತನ ಲೋಕಗಳಲ್ಲಿ ಆನಂದದಿಂದ ಇರಬಲ್ಲೆನು; ಇನ್ನು ಮುಂದೆ ಎಂದೂ, ಸತೀಸುತಾದಿಗಳಲ್ಲಿ ಹಿಂದಿನಂತೆ ಆಸಕ್ತನಾಗುವುದಿಲ್ಲ; ಯಾರಿಗಾಗಿ ಬಹು ಪಾಪಗಳನ್ನಾಚರಿಸಿದೆನೋ, ಆ ಸತೀಪುತ್ರ, ಕ್ಷೇತ್ರ ಗೃಹಾದಿಗಳು, ನಾನು ಮೃತನಾದೊಡನೆ, ನನ್ನನ್ನು ತ್ಯಜಿಸಿದರು; ಈ ಕೃತಘ್ನರು, ನನ್ನ ಆ ಮೃತದೇಹದ ಸಮೀಪದಲ್ಲಿ ಸಹ ನಿಲ್ಲಲಿಲ್ಲ; ಇಂಥವರ ಸಂಗವನ್ನು ಮುಂದೆಂದೂ ನಿಶ್ಚಯವಾಗಿ ಮಾಡೆನು; ಅವರಲ್ಲಿ ಹೊಂದಿದ ಆಸಕ್ತಿಯೇ ಈ ವಿಧ ಕಷ್ಟಭಾಗಿಯನ್ನಾಗಿ

1. ಜೀವರಿಗೆ ಗರ್ಭದಿಂದ ಹೊರಬಂದಮೇಲೆ (ಜನನವಾದ ಮೇಲೆ) ಸಾಧನೋಪಯೋಗಿಯಾದ ದೇಹವನ್ನು ಅವರವರ ಕರ್ಮಾನುಸಾರ, ರೂಪಿಸುವ ಯಂತ್ರೋಪಕರಣದಂತಿರುವುದು, ಸ್ತ್ರೀ ಗರ್ಭಕೋಶ—ಅದೇ ಗರ್ಭಯಂತ್ರವು.

ಪ್ರದನೂ ಆಗಿರುವನೋ, ತಂ-ಆ, ದೇವೇಶಂ-ಸರ್ವಸ್ವಾಮಿಯಾದ (ಬ್ರಹ್ಮಾದಿಗಳಿಗೂ ನಿಯಾಮಕನಾದ) ಶ್ರೀಹರಿಯನ್ನು, ಯೋನಿಯಂತ್ರಾತ್-ಗರ್ಭಾಗಾರದಿಂದ,[1] ನಿರ್ಗತಃ-ಹೊರಗೆ ಹೋದನಂತರ, ದಾನ್ಯೈಃ-ದಾನಗಳಿಂದ, ನಾನಾಧರ್ಮೈಃ-ಬಹುಧರ್ಮಗಳಿಂದಲೂ (ಪುಣ್ಯಕರ್ಮಗಳನ್ನು ಆಚರಿಸುವುದರಿಂದಲೂ), ತೋಷಯಿಷ್ಯಾಮಿ-ತುಷ್ಟಿಪಡಿಸುತ್ತೇನೆ; ಯೇನ-ಅದರಿಂದ (ಯಾವ ಆಚರಣೆಯಿಂದ ಶ್ರೀಹರಿಯು ಪ್ರೀತನಾಗುವನೋ ಅದರಿಂದ), ಈದೃಶಂ-ಈ ವಿಧದ, ಗರ್ಭವಾಸಂ-ಗರ್ಭದಲ್ಲಿರುವ ಅವಸ್ಥೆಯನ್ನು, ನ ಯಾಮಿ-ಹೊಂದುವುದಿಲ್ಲ; (ಮತ್ತು), ಅಸ್ಯ ಲೋಕೇ ಏವ-ಆತನ (ಶ್ರೀಹರಿಯ) ಲೋಕದಲ್ಲಿಯೇ (ವೈಕುಂಠಾದಿ ಸ್ಥಾನಗಳಲ್ಲಿಯೇ), ನಿತ್ಯಂ-ಸದಾ, ಆನಂದೀ-ಆನಂದಿಸುವವನು, ಸ್ಯಾಂ-ಆಗುವೆನು; (ಮತ್ತು ಗರ್ಭದಿಂದ ಹೊರಬಿದ್ದಮೇಲೆ-ಆ ಜನ್ಮದಲ್ಲಿ), ಯೇಷಾಂ-ಯಾರ, ಅರ್ಥೇ-ಪ್ರಯೋಜನಕ್ಕಾಗಿ, ಪಾಪಸಂಘಂ-ಬಹುಪಾಪಗಳನ್ನು ಅಕಾರಿಷಂ-(ಹಿಂದಿನ ಜನ್ಮನಲ್ಲಿ) ಮಾಡಿದೆನೋ, ತೇ-ಆ, ಸ್ತ್ರೀಪುತ್ರ ಕ್ಷೇತ್ರ ಗೇಹಾದಯಃ-ಭಾರ್ಯಾಪುತ್ರ ಭೂ, ಗೃಹಾದಿಗಳು, ಪ್ರೇತಂ-ಮೃತನಾದ, ಮಾಂ-ನನ್ನನ್ನು ದೃಷ್ಟ್ವಾ-ನೋಡಿ, ಶೀಘ್ರಂ-ಬೇಗನೆ, ತತ್ಯಜುಃ ಏವ-ಬಿಟ್ಟೇಹೋದರು; ಕೃತಘ್ನಾಃ-ಕೃತಘ್ನರಾದ (ಉಪಕಾರವನ್ನು ಸ್ಮರಿಸದ) ಅವರು, ಮೇ-ನನ್ನ, ಏತತ್ಸನ್ನಿಧೌ-ದೇಹದ ಸಮೀಪದಲ್ಲಿ ನ ತಸ್ಥುಃ-ನಿಲ್ಲಲಿಲ್ಲ; ಭೂಯಃ ಜಾತು-ಮತ್ತೆಂದೂ, ಏಷಾಂ-ಇವರುಗಳ (ಸತಿಸುತಾದಿಗಳ), ಸಂಗಮಂ-ಸಹವಾಸವನ್ನು (ಆಸಕ್ತಿಯನ್ನು), ನ ಕುರ್ಯಾಂ-ಮಾಡುವುದಿಲ್ಲ; ಯೇನ-ಯಾವ ಆಸಕ್ತಿಯಿಂದ, ಅಹಂ-ನಾನು, ಈದೃಶಃ-ಈ ಪ್ರಕಾರದ, ಕಷ್ಟಭಾಗೀ-(ಗರ್ಭವಾಸದ ದುಃಖಭಾಗಿಯು) ಕಷ್ಟವನ್ನು ಹೊಂದುವವನು, ಸ್ಯಾಂ-ಆಗುವೆನೋ (ಅದನ್ನೆಂದೂ ಮಾಡಲಾರೆನು).

ಇತ್ಥಂ ಚಿಂತಾಮಗ್ನಚೇತಾ ನಿತಾಂತಂ ।
ವಾಯೋರ್ವೇಗಾತ್ ಪ್ರಾಪ್ಯತೇ ಯೋನಿಯಂತ್ರಂ ॥
ಭೂಯೋ ಭೂಯೋ ಪ್ರೇರ್ಯಮಾಣೋಽನಿಲೇನ ।
ಸ್ವಲ್ಪಾಕಾಶೇ ಯೋನಿಯಂತ್ರೇಽತಿತಪ್ತೇ ॥ ೧೧ ॥

ಮಾಡಿದೆ' (೭-೧೦). ಹೀಗೆ ಅತ್ಯಂತ ಚಿಂತಾಮಗ್ನನಾದ ಗರ್ಭಸ್ಥಜೀವನು, ಸೂತಿಕಾವಾಯುವಿನ ವೇಗದಿಂದ, ಯೋನಿಯಂತ್ರವನ್ನು ಇಕ್ಕಟ್ಟಾದ ದ್ವಾರವನ್ನು) ಹೊಂದಿಸಲ್ಪಡುತ್ತಾನೆ; ಮತ್ತೆಮತ್ತೆ ವಾಯು ಚೋದನೆಯಿಂದ, ಮುಂದೂಡಲ್ಪಟ್ಟು ಅಲ್ಪಾವಕಾಶದ ಅತ್ಯುಷ್ಣವಾದ ಯೋನಿದ್ವಾರದಲ್ಲಿ ನುಗ್ಗಿಸಲ್ಪಡುವಾಗ ಮೂರ್ಛಿತನಾಗು

1. ಜೀವರಿಗೆ ದೇಹಸಂಬಂಧದಿಂದ ಜನನಕ್ಕಾಗಿ ಏರ್ಪಟ್ಟಿರುವ ಸ್ತ್ರೀ ಯೋನಿರೂಪದ ಉಪಕರಣವೇ 'ಯೋನಿಯಂತ್ರ'ವು.

ಮೂರ್ಧಾಂ ಪ್ರಾಪ್ತೋ ದೀನಚೇತಾಃ ಕಥಂಚಿತ್ ।
ಸ್ಮೃತ್ಯಾ ತ್ಯಕ್ತೋ ಯಾತಿ ಕಷ್ಟಾದ್ಬಹಿಶ್ಚ ॥
ಜೀವೋ ಹ್ಯೇಷಃ ಸ್ಪರ್ಶನಾದ್ಬಾಹ್ಯವಾಯೋ-
ರ್ಗರ್ಭೇ ಧ್ಯಾತಂ ವಿಸ್ಮರತ್ಯೇವ ಸರ್ವಂ ॥ ೧೨ ॥

ಇತ್ಥಂ-ಈ ಪ್ರಕಾರದ, ನಿತಾಂತಂ-ಅತ್ಯಂತವಾದ, ಚಿಂತಾಮಗ್ನಚೇತಾಃ-ಚಿಂತೆಯಲ್ಲಿ ಮುಳುಗಿದ ಮನಸ್ಸುಳ್ಳ ಆ ಜೀವನು, ವಾಯೋಃ-(ಸೂತಿಕಾ) ವಾಯುವಿನ ವೇಗಾತ್-ವೇಗದಿಂದ (ಬಲದಿಂದ), ಯೋನಿಯಂತ್ರಂ-ಯೋನಿರೂಪ ಉಪಕರಣವನ್ನು (ಯೋನಿ ದ್ವಾರವನ್ನು), ಪ್ರಾಪ್ನುತೇ-ಹೊಂದುತ್ತಾನೆ; (ಗರ್ಭಕೋಶದಿಂದ ವಾಯುವಿನಿಂದ ನೂಕಲ್ಪಟ್ಟು ಯೋನಿ ದ್ವಾರಕ್ಕೆ ಬರುತ್ತಾನೆ); ಭೂಯಃ ಭೂಯಃ-ಪುನಃ ಪುನಃ, ಅನಿಲೇನ-ಆ ವಾಯುವಿನಿಂದ, ಪ್ರೇರ್ಯಮಾಣಃ-ಚೋದಿತನಾಗಿ (ದೂಡಲ್ಪಟ್ಟು), ಸ್ವಲ್ಪಾಕಾಶೇ-ಅಲ್ಪಾವಕಾಶವುಳ್ಳ (ಇಕ್ಕಟ್ಟಾದ), ಅತಿತಪ್ತೇ-ಅತ್ಯುಷ್ಣವಾಗಿರುವ, ಯೋನಿಯಂತ್ರೇ-ಯೋನಿ ದ್ವಾರದಲ್ಲಿ ಮೂರ್ಧಾಂ-ಮೂರ್ಛೆಯನ್ನು, ಪ್ರಾಪ್ತಃ-ಹೊಂದಿ, ದೀನಚೇತಾಃ-ಅತಿದುಃಖಿತನಾಗಿ, ಸ್ಮೃತ್ಯಾತ್ಯಕ್ತಃ-ಸ್ಮರಣ ಶಕ್ತಿರಹಿತನಾಗಿ, ಕಥಂಚಿತ್-ಕಷ್ಟದಿಂದ (ಹೇಗೋ), ಬಹಿಃ ಯಾತಿ-ಹೊರಗೆ ಬರುತ್ತಾನೆ; ಏಷಃ ಜೀವಃ-ಹೀಗೆ ಹುಟ್ಟಿದ ಜೀವನು, ಬಾಹ್ಯವಾಯೋಃ-ಹೊರಗಿರುವ ವಾಯುವಿನ, ಸ್ಪರ್ಶನಾತ್-ಸ್ಪರ್ಶದಿಂದ, ಗರ್ಭೇ-ಗರ್ಭದಲ್ಲಿ ಧ್ಯಾತಂ-ನಿಶ್ಚಯಿಸಿದುದನ್ನು (ಮಾಡಿದ ಸಂಕಲ್ಪವನ್ನು), ಸರ್ವಂ-ಎಲ್ಲವನ್ನೂ, ವಿಸ್ಮರತಿ ಏವ-ಮರೆತೇ ಬಿಡುತ್ತಾನೆ.

ಮಾತುಸ್ತನ್ಯಂ ವಾಂಛಮಾನೋಽತಿರೋದ-
ತ್ಯುಚ್ಚೈಃ ಪಶ್ಚಾದೀದೃಶೋ ಜಾಯತೇ ಚ ॥
ಬಾಲ್ಯೇಽಪ್ಯೇಷಃ ಸ್ವೇಚ್ಛಹಾನೇಃ ಸದೈವ ।
ದುಃಖೇನಾರ್ತಃ ಕ್ರೋಶಮಾನೋ ನಿತಾಂತಂ ॥ ೧೩ ॥

---

ತ್ತಾನೆ—ಸ್ಮರಣೆ ತಪ್ಪುತ್ತದೆ—ಅಸಹಾಯ ಸ್ಥಿತಿಯಲ್ಲಿ ದುಃಖಿಸುತ್ತದೆ, ಬಹುಕಷ್ಟದಿಂದ ಹೊರಗೆ ಬರುತ್ತಾನೆ; ಹೀಗೆ ಹೊರಗೆಬಂದ (ಜನಿಸಿದ) ಜೀವನು, ಬಾಹ್ಯವಾಯುವಿನ ಸ್ಪರ್ಶದಿಂದ, ಗರ್ಭದಲ್ಲಿದ್ದಾಗ ಧ್ಯಾನಿಸಿದ (ಮಾಡಿದ ನಿಶ್ಚಯವನ್ನು) ಸಂಕಲ್ಪವನ್ನು ಪೂರ್ಣವಾಗಿ ಮರೆತುಬಿಡುತ್ತಾನೆ (೧೧-೧೨). ತಾಯಿಯ ಸ್ತನ್ಯಪಾನವನ್ನು ಇಚ್ಛಿಸಿ ರೋದನಮಾಡುತ್ತಾನೆ; ಸದಾ ಗಟ್ಟಿಯಾಗಿ ಸ್ತನವನ್ನಪೇಕ್ಷಿಸಿ (ಆಹಾರಕ್ಕಾಗಿ) ಅಳುತ್ತಿರುವನು; ಮುಂದೆ ಕ್ರಮೇಣ ಬಾಲ್ಯಾವಸ್ಥೆಯನ್ನು ಹೊಂದುತ್ತಾನೆ—ಅಲ್ಲಿ ನಿರಂತರವಾಗಿ ಸ್ವೇಚ್ಛಾಭಂಗವನ್ನೇ ಹೊಂದುತ್ತ ದುಃಖಪೀಡಿತನಾಗಿ ಅತ್ಯಂತವಾಗಿ

ಮಕ್ಷೀದಂಶಾದ್ಯೈರ್ಮುಹುಃ ಖಾದ್ಯಮಾನಃ ।
ಶಕ್ತ್ಯಾ ಹೀನಃ ಕ್ರೋಶತೇ ಭೂಯ ಏವ ॥
ವಕ್ತುಂ ಶಕ್ತೋ ನೈಷ ಕಂಡ್ವಾದಿ ಪೀಡಾಂ ।
ದೂರೀಕರ್ತುಂ ನೈವ ಶಕ್ತಃ ಸ್ವಯಂ ಚ ॥ ೧೪ ॥
ನಾಸಾಕಂಠೇ ಶ್ಲೇಷ್ಮಣಾ ರುದ್ಧ್ಯಮಾನೋ ।
ನಿಷ್ಠ್ಯೂತೋಽಪಿ ತ್ಯಕ್ತುಮೇಷೋಽಸಮರ್ಥಃ ॥
ಮಾತಾ ರೋಗಂ ನೈವ ಜಾನಾತಿ ಸಮ್ಯಕ್ ।
ನೈವಾವಸ್ಥಾಮೇಷ ವಕ್ತುಂ ಸಮರ್ಥಃ ॥ ೧೫ ॥
ಅನ್ಯೋ ರೋಗಶ್ಚೌಷಧಂ ಕಿಂಚಿದನ್ಯತ್ ।
ಕಿಂಚಿಚ್ಚಾನ್ಯಜ್ಜಾಯತೇ ದೈವಯೋಗಾತ್ ॥
ಏವಂ ನಾನಾದುಃಖಭೋಗೇಷು ಬಾಲ್ಯೇ ।
ಪ್ರಾಪ್ತಃ ಕೌಮಾರಂ ತತಃ ಕ್ರೀಡನಾದೌ ॥ ೧೬ ॥
ಸಕ್ತಃ ಸ್ವಾಂತೇ ನೈವ ಜಾನಾತಿ ಪಥ್ಯಂ ।
ಮಾತಾಪಿತ್ರಾದ್ಯೈರ್ಮುಹುರ್ವಾರ್ಯಮಾಣಃ ॥
ಪಶ್ಚಾತ್ ಪ್ರಾಪ್ತೋ ಯೌವನಂ ಜ್ಞಾನಹೀನೋ ।
ದೋಷಾವಸ್ಥಾಚ್ಛಿಂತಯಾನೋ ವ್ಯವಾಯಂ ॥ ೧೭ ॥
ಭಾರ್ಯಾಂ ವಿತ್ತಂ ಭೋಗಸಂಪತ್ತಿಕಾಮೋ ।
ನೋ ಜಾನೀತೇ ಬಂಧಮೋಕ್ಷಸ್ಯ ವಾರ್ತಾಂ ॥

---

ಅಸಂತೃಪ್ತಿಯಿಂದ ಕೂಗಾಡುತ್ತಾನೆ (ಚೀರುತ್ತಾನೆ—ಗಟ್ಟಿಯಾಗಿ ರೋದಿಸುತ್ತಾನೆ); ನೊಣ, ಸೊಳ್ಳೆ ಮುಂತಾದವುಗಳು ಮತ್ತೆಮತ್ತೆ ಕಚ್ಚಿದರೂ, ಅವುಗಳನ್ನು ನಿವಾರಿಸಿಕೊಳ್ಳುವ ಶಕ್ತಿಯಿಲ್ಲದೇ ಪುನಃಪುನಃ ರೋದನವನ್ನೇ ಮಾಡುತ್ತಾನೆ; ತನಗಾಗುವ ಕೆರೆತ (ತುರಿ) ಮುಂತಾದ ಹಿಂಸೆಯನ್ನು ಹೇಳಲೂ ಶಕ್ತಿಯಿಲ್ಲದೇ, ತಾನೇ ಅದನ್ನು ಪರಿಹರಿಸಿಕೊಳ್ಳಲೂ ಅಸಮರ್ಥನಾಗಿರುತ್ತಾನೆ; ಮೂಗು ಬಾಯಿಗಳಲ್ಲಿ ಕಫ ಕಟ್ಟಿಕೊಂಡು ಹೊರಸೂಸುತ್ತಿದ್ದರೂ, ಅದನ್ನು ತ್ಯಜಿಸಲು (ಉಗುಳಲು ಅಥವಾ ಒರೆಸಿಕೊಳ್ಳಲು) ಅಶಕ್ತನಾಗಿರುವನು; ತನಗೆ ಬಂದ ರೋಗವೇನೆಂದು ತಾಯಿಯೂ ಸರಿಯಾಗಿ ತಿಳಿಯುವುದಿಲ್ಲ—ತನ್ನ ಅವಸ್ಥೆಯನ್ನು ಹೇಳಿಕೊಳ್ಳಲು ತಾನೂ ಶಕ್ತನಲ್ಲ; ಹೀಗಾಗಿ, ತನಗೆ ಒದಗಿರುವ ರೋಗವೇ ಬೇರೆ—ಔಷಧವೇ ಬೇರೆ—ಆಗುವ ಪರಿಣಾಮವೇ ಬೇರೆ—ಅದೃಷ್ಟಾನುಸಾರ ರೋಗವು ಗುಣಮುಖವಾಗಬಹುದು,

ಮಾತುಃ-ತಾಯಿಯ, ಸ್ತನ್ಯಂ-ಸ್ತನವನ್ನು (ಮೊಲೆಯನ್ನು), ವಾಂಛಮಾನಃ-(ಪಾನಮಾಡಲು) ಇಚ್ಛಿಸುವನಾಗಿ, ಉಚ್ಚೈಃ-ಗಟ್ಟಿಯಾಗಿ, ಅತಿರೋದತಿ-ಬಹುವಾಗಿ ಅಳುತ್ತಾನೆ; ಪಶ್ಚಾತ್-ಮುಂದೆ (ಕ್ರಮವಾಗಿ), ಈದೃಶಃ ಚ-(ಮುಂದೆ ಹೇಳುವ) ಪ್ರಕಾರದವನೇ, ಜಾಯತೇ-ಆಗುತ್ತಾನೆ; ಏಷಃ-ಈ ಜೀವನು, ಬಾಲ್ಯೇಽಪಿ-ಬಾಲ್ಯಾವಸ್ಥೆಯಲ್ಲಿ ಆದರೂ, ಸ್ವೇಷ್ಟಹಾನೇಃ-ತನ್ನ ಇಚ್ಛೆಯು ಪೂರ್ಣವಾಗದಿರುವುದರಿಂದ (ಇಚ್ಛಾಭಂಗದಿಂದ), ಸದಾ-ಸರ್ವದಾ, ದುಃಖೇನ-ದುಃಖದಿಂದ, ಆರ್ತಃ-ವ್ಯಥೆಗೊಂಡು, ನಿತಾಂತಂ-ಅತಿಯಾಗಿ, ಕ್ರೋಶಮಾನಃ-ಕೂಗುತ್ತ (ಚೀರಾಡುತ್ತ—ಅಸಂತುಷ್ಟನಾಗಿ ರೋದಿಸುತ್ತ), ಮಕ್ಷೀದಂಶಾದ್ಯೈಃ-ನೊಣ, ಸೊಳ್ಳೆ ಮುಂತಾದವುಗಳಿಂದ, ಮುಹುಃ-ಪುನಃ ಪುನಃ, ಖಾದ್ಯಮಾನಃ-ದಂಶಿತನಾಗಿ (ಕಚ್ಚಲ್ಪಟ್ಟವನಾಗಿ), ಶಕ್ತ್ಯಾಹೀನಃ-(ನಿವಾರಿಸಿಕೊಳ್ಳುವ) ಶಕ್ತಿಯಿಲ್ಲವನಾಗಿ, ಭೂಯಃ-ಮತ್ತೆ ಮತ್ತೆ ಕ್ರೋಶತೇ ಏವ-ರೋದನವನ್ನೇ ಮಾಡುತ್ತಾನೆ; ಏಷಃ-ಈ (ಶೈಶವಾವಸ್ಥೆಯಲ್ಲಿರುವ) ಜೀವನು, ಕಂಡ್ವಾದಿಪೀಡಾಂ-ಕೆರೆತದ (ಉಗುರಿನಿಂದ ಕೆರೆಯುವ ಇಚ್ಛೆ) ಮುಂತಾದ (ತನ್ನ ದೇಹದಲ್ಲಿ ಆಗುವ) ಪೀಡೆಯನ್ನು ವಕ್ತುಂ-ಹೇಳಲಿಕ್ಕೆ, ನ ಶಕ್ತಃ-ಸಮರ್ಥನಲ್ಲ; ಸ್ವಯಂ ಚ-ತಾನೇ, ದೂರೀಕರ್ತುಂ-ಅದನ್ನು ಪರಿಹರಿಸಿಕೊಳ್ಳಲು, ನೈವ ಶಕ್ತಃ-ಸಮರ್ಥನೂ ಅಲ್ಲ; ನಾಸಾಕಂಠೇ-ಮೂಗು ಗಂಟಲಲ್ಲಿ, ಶ್ಲೇಷ್ಮಣಾ-ಕಫದಿಂದ,

---

ಅಥವಾ ಉಲ್ಬಣವಾಗಬಹುದು; ಹೀಗೆ ನಾನಾ ದುಃಖಭೋಗಗಳಿರುವ ಬಾಲ್ಯಾವಸ್ಥೆಯನ್ನು ಕಳೆದು, ಮುಂದೆ ಕೌಮಾರಾವಸ್ಥೆಯನ್ನು ಹೊಂದಿ, [1]ಆಟಪಾಟಗಳಲ್ಲಿ ಆಸಕ್ತನಾಗುತ್ತಾನೆ; ಮಾತಾಪಿತೃಗಳು ನಿವಾರಿಸಿದರೂ, ತನ್ನ ಹಿತವನ್ನು ತನ್ನ ಬುದ್ಧಿಯಿಂದ ವಿವೇಕಿಸಿ ತಿಳಿಯಲು ಅಶಕ್ತನಾಗಿರುವನು; ಮುಂದೆ, ತಾರುಣ್ಯಾವಸ್ಥೆಯನ್ನು ಹೊಂದಿ, ವಿವೇಕಶೂನ್ಯನಾಗಿ, ಸ್ತ್ರೀಸಂಗ, ಹೆಂಡತಿ, ಧನಾದಿಗಳನ್ನೇ ಚಿಂತಿಸುತ್ತ ವಿಷಯಭೋಗಗಳಿಂದ ತೃಪ್ತಿಯನ್ನು ಸಾಧಿಸುವುದರಲ್ಲಿಯೇ ಆಸಕ್ತನಾಗುತ್ತಾನೆ; ಈ ವಿಧ ಯೌವನಾವಸ್ಥೆಯಲ್ಲಿ, ಬಂಧಮೋಕ್ಷಗಳ ಸಮಾಚಾರವೇ ಇವನ ಬಳಿ ಸುಳಿಯುವುದಿಲ್ಲ—ಸಂಸಾರವೆಂಬ ಬಂಧದಿಂದ ಮುಕ್ತನಾಗುವ ವಿಚಾರದಲ್ಲಿ ಮನಸ್ಸು ಪ್ರವೇಶಿಸುವುದಿಲ್ಲ (ಜೀವಿತದ ಈ ಮುಖ್ಯ ಗುರಿಯನ್ನು ತಿಳಿಯುವುದಕ್ಕೆ ಅವಕಾಶವೇ ಇರುವುದಿಲ್ಲ) (೧೩-೧೭). ಹೀಗೆ, ತಾರುಣ್ಯಾವಸ್ಥೆಯಲ್ಲಿ ವಿಷಯಭೋಗದಿಂದ

---

1. ಪುರುಷನ ಮೊದಲಿನ (ಜನನಾರಭ್ಯ) ೧೫ ವರ್ಷಗಳು ಬಾಲ್ಯಾವಸ್ಥೆಯೆಂದು ಪರಿಗಣಿಸಲ್ಪಡುತ್ತವೆ. ೧೬ನೇ ವಯಸ್ಸಿನಿಂದ ಆರಂಭಿಸಿ, ಯೌವನಾವಸ್ಥೆಯನ್ನು ಹೊಂದಿದವನೆಂದು ಹೇಳಲ್ಪಡುತ್ತಾನೆ; ಬಾಲ್ಯಾವಸ್ಥೆಯಲ್ಲಿಯೇ, ಶೈಶವ (೩ ವರ್ಷದವರೆಗೆ), ಕೌಮಾರ (೫ ವರ್ಷದವರೆಗೆ), ಪೌಗಂಡ (೯ ವರ್ಷದವರೆಗೆ), ಕೈಶೋರ (೧೫ ತುಂಬುವವರೆಗೆ) ಗಳೆಂಬ ಪ್ರಭೇದಗಳಿರುತ್ತವೆ.

ರುಧ್ಯಮಾನಃ-ಬಂಧಿತನಾದರೂ, ನಿಷ್ಠ್ಯೂತಃ ಅಪಿ-(ಶ್ಲೇಷ್ಮವು) ಹೊರಸೂಸುತ್ತಿದ್ದರೂ, ತ್ಯಕ್ತುಂ-(ಅದನ್ನು) ತ್ಯಜಿಸಲು (ಉಗುಳಲು ಅಥವಾ ಒರೆಸಿಕೊಳ್ಳಲು), ಏಷಃ-ಈತನು, ಅಸಮರ್ಥಃ-ಅಶಕ್ತನಾಗಿರುವನು; ಮಾತಾ-ತಾಯಿಯು, ರೋಗಂ-(ತನಗೆ ಬಂದ) ರೋಗವನ್ನು ಸಮ್ಯಕ್-ಸರಿಯಾಗಿ, ನೈವ ಜಾನಾತಿ-ತಿಳಿಯುವುದೇ ಇಲ್ಲ; ಏಷಃ-ಈತನು, ಅವಸ್ಥಾಂ-(ತನ್ನ) ಅವಸ್ಥೆಯನ್ನು ವಕ್ತುಂ-ಹೇಳಲು, ನೈವ ಸಮರ್ಥಃ-ಶಕ್ತನೇ ಅಲ್ಲ; (ಆದ್ದರಿಂದ), ಅನ್ಯಃ ರೋಗಃ-ರೋಗವು ಬೇರೆ, ಔಷಧಂ-ಔಷಧಿಯು, ಅನ್ಯತ್ ಕಿಂಚಿತ್-ಬೇರೆ ಒಂದು (ಆ ರೋಗಪರಿಹಾರಕವಲ್ಲ); ಚ-ಮತ್ತೇನೆಂದರೆ, ದೈವಯೋಗಾತ್-ಅದೃಷ್ಟಾನುಸಾರವಾಗಿ (ದೈವೇಚ್ಛೆಯಿಂದ), ಅನ್ಯತ್ ಕಿಂಚಿತ್-ಬೇರೊಂದು ಪರಿಣಾಮವೇ (ಅಥವಾ ರೋಗವೇ), ಜಾಯತೇ-ಆಗುತ್ತದೆ (ಹುಟ್ಟಿಕೊಳ್ಳುತ್ತದೆ); ಏವಂ-ಹೀಗೆ, ನಾನಾದುಃಖಭೋಗೇಷು-ವಿವಿಧ ದುಃಖಗಳ ಭೋಗದಲ್ಲಿ, ಬಾಲ್ಯೇ-ಬಾಲ್ಯಾವಸ್ಥೆಯಲ್ಲಿದ್ದು, ತತಃ-ಅನಂತರ, ಕೌಮಾರಂ-ಕೌಮಾರಾವಸ್ಥೆಯನ್ನು ಪ್ರಾಪ್ತಃ-ಹೊಂದಿ, ಕ್ರೀಡನಾದೌ-ಕ್ರೀಡಾದಿಗಳಲ್ಲಿ (ಆಟಪಾಟಗಳಲ್ಲಿ), ಸಕ್ತಃ-ಆಸಕ್ತನಾಗಿ, ಮಾತಾಪಿತ್ರಾದ್ಯೈಃ-ತಾಯಿ, ತಂದೆ ಮೊದಲಾದವರಿಂದ, ಮುಹುಃ-ಮತ್ತೆ ಮತ್ತೆ ವಾರ್ಯಮಾಣಃ-ನಿವಾರಿಸಲ್ಪಟ್ಟರೂ, ಸ್ವಾಂತೇ-ತನ್ನಲ್ಲಿ (ಮನಸ್ಸಿನಿಂದ), ಪಥ್ಯಂ-(ತನ್ನ) ಹಿತವನ್ನು ನೈವ ಜಾನಾತಿ-ತಿಳಿಯುವುದೇ ಇಲ್ಲ; ಪಶ್ಚಾತ್-ನಂತರ (ಕೌಮಾರಾವಸ್ಥೆಯನ್ನು ದಾಟಿ), ಯೌವನಂ-ತಾರುಣ್ಯಾವಸ್ಥೆಯನ್ನು ಪ್ರಾಪ್ತಃ-ಹೊಂದಿ, ಜ್ಞಾನಹೀನಃ-ಜ್ಞಾನ (ವಿವೇಕ)ವಿಲ್ಲದೇ, ವ್ಯವಾಯಂ-ಸ್ತ್ರೀಭೋಗ(ಮೈಥುನ)ವನ್ನೂ, ಭಾರ್ಯಾಂ-ಹೆಂಡತಿಯನ್ನೂ, ವಿತ್ತಂ-ಧನವನ್ನೂ ಚಿಂತಯಾನಃ-(ಸದಾ) ಚಿಂತಿಸುತ್ತ ದೋಷಾವಸ್ಥಾಃ-(ನಾನಾ) ದುರವಸ್ಥೆಗಳನ್ನು (ಹೊಂದಿ), ಭೋಗಸಂಪತ್ತಿಕಾಮಃ-ವಿಷಯಭೋಗದಿಂದ ಪೂರ್ಣತೃಪ್ತಿಯನ್ನು ಹೊಂದಲಿಚ್ಛಿಸಿ, ಬಂಧಮೋಕ್ಷಸ್ಯ-(ಸಂಸಾರವು ಬಂಧನ

---

ತೃಪ್ತಿಯನ್ನು ಹೊಂದದೇ ಇದ್ದರೂ, (ವಿಷಯಭೋಗದಿಂದ) ನಿವೃತ್ತನಾಗದೇ, ಪುನಃಪುನಃ ಬೇರೆಬೇರೆ ಭೋಗಗಳನ್ನೇ ಆಶಿಸುವವನಾಗುತ್ತಾನೆ; ಅತ್ಯಾಯಾಸಪಡುತ್ತ ನೂತನ ಯತ್ನಗಳಲ್ಲಿ ತೊಡಗಿ, ಕಾರ್ಯೋನ್ಮುಖನಾಗುತ್ತಾನೆ; ಆಗಲೂ ಅಭೀಷ್ಟಗಳು ಪೂರ್ಣವಾಗದಿದ್ದರೂ ಸಹ, ತನ್ನ ದೃಢಸಂಕಲ್ಪದಿಂದ ನಿವೃತ್ತನಾಗುವುದಿಲ್ಲ; ಜೀವರಲ್ಲಿ ಕೆಲವು ಅಜ್ಞಾನಿಗಳು ಮಾತೃಗರ್ಭಲ್ಲಿಯೇ ಮೃತರಾಗುತ್ತಾರೆ—ಈ ಪೂರ್ವೋಕ್ತ ಬಾಲ್ಯಾದಿ ಅವಸ್ಥೆಗಳನ್ನೂ ಕಾಣುವುದಿಲ್ಲ; ಮತ್ತೆ ಕೆಲವರು ಬಾಲ್ಯಾವಸ್ಥೆಯಲ್ಲಿಯೇ ಮೃತರಾಗುತ್ತಾರೆ; ಕೆಲವರು ಯೌವನಾವಸ್ಥೆಯಲ್ಲಿ ಅತ್ಯಂತ ವಿಷಯಾಸಕ್ತರಾಗಿ, ಭೋಗದಿಂದ ಸರ್ವಥಾ ತೃಪ್ತಿಯನ್ನು ಹೊಂದದೇ, ಅಂತ್ಯಾವಸ್ಥೆಯನ್ನು ಸೇರುತ್ತಾರೆ; ಅವರೆಗೆ ತಮ್ಮ ಅತೃಪ್ತಿಯನ್ನು ದೊಡ್ಡ ಧ್ವನಿಯಿಂದ ಸಾರುತ್ತಲೇ ಇರುವರು (ಆದರೂ

ರೂಪವೆಂದೂ) ಬಂಧ ಮತ್ತು (ಅದರಿಂದ ಬಿಡುಗಡೆಯೆಂಬ) ಮೋಕ್ಷದ, ವಾರ್ತಾಂ-ವಾರ್ತೆಯನ್ನು (ಅವುಗಳ ಮಾತನ್ನು) ಸಹ, ನೋ ಜಾನೀತೇ-ತಿಳಿಯುವುದಿಲ್ಲ (ಕಿವಿಯಲ್ಲಿ ಕೇಳುವುದಿಲ್ಲ).

ಏವಂ ಕಾಮಾನಾಪ್ನುವನನ್ಯಕಾಮಾನ್ ।
ಭೂಯೋ ಭೂಯಶ್ಚಿಂತಯಾನೋಽತಿಯತ್ನಾತ್ ॥ ೧೮ ॥
ಭೂತ್ವೋದ್ಯೋಗೀ ವಂಧ್ಯವಾಂಛೋಪಿ ಭೂಯೋ ।
ವಜ್ರಸ್ವಾಂತೇನೈವ ಯತ್ನಾದ್ವಿರಜ್ಯೇತ್ ॥
ಕೇಚಿದ್ಗರ್ಭೇ ಯಾಂತಿ ನಾಶಂ ವಿಮೂಢಾಃ ।
ಕೇಚಿದ್ಬಾಲ್ಯೇ ಯೌವನೇ ಕೇಚಿದೇವಂ ॥ ೧೯ ॥
ಭೋಗಾಸಕ್ತಾಸ್ತೃಪ್ತಿಹೀನಾ ನಿತಾಂತಂ ।
ಮೇರೋರಾವಂ ಕುರ್ವತೇತ್ಯೇವ ಕಾಲಃ ॥
ಕಂಠಪ್ರಾಣೋ ಭ್ರಾಂತನೇತ್ರೋ ವಿವಾಚಃ ।
ಸ್ತ್ರೀಪುತ್ರಾದೀನ್ನೈವ ಚಿಂತೇತ ಚಿತ್ತೇ ॥ ೨೦ ॥

ಏವಂ-ಹೀಗೆ (ತಾರುಣ್ಯಾವಸ್ಥೆಯಲ್ಲಿ), ಕಾಮಾನ್-ಕಾಮಗಳ ತೃಪ್ತಿಯನ್ನು ನ ಆಪ್ನುವನ್-ಹೊಂದದಿರುವವನಾಗಿ, ಅನ್ಯಕಾಮಾನ್-ಬೇರೆ ಕಾಮಗಳನ್ನು (ಭೋಗಗಳನ್ನು), ಭೂಯೋ ಭೂಯಃ-ಪುನಃ ಪುನಃ (ಅತಿಶಯವಾಗಿ), ಚಿಂತಯಾನಃ-ಚಿಂತಿಸುವವನಾಗಿ, ಅತಿ ಯತ್ನಾತ್-ಅತಿ ಪ್ರಯಾಸದಿಂದ, ಉದ್ಯೋಗಿ-ಸಂತತ ಯತ್ನದಲ್ಲಿ ತೊಡಗಿ, ವಂಧ್ಯವಾಂಛಃ ಅಪಿ-ವ್ಯರ್ಥವಾದ ಅಭೀಷ್ಟಗಳುಳ್ಳವನಾದರೂ, ಭೂಯಃ-ಮತ್ತೂ, ವ ಜ್ರ ಸ್ವಾಂ ತೇ-(ವ ಜ್ರ ದಂ ತೆ) ದೃಢವಾದ ಮನಸ್ಸಿನಲ್ಲಿ ಯತ್ನಾತ್-ಯತ್ನ (ಮಾಡುವ ಹವ್ಯಾಸ)ದಿಂದ, ನೈವ ವಿರಜ್ಯೇತ್-ವೈರಾಗ್ಯವನ್ನು ಹೊಂದುವುದಿಲ್ಲ (ಯತ್ನವನ್ನು ತ್ಯಜಿಸುವುದಿಲ್ಲ); ಕೇಚಿತ್-ಕೆಲವು, ವಿಮೂಢಾಃ-ಅಜ್ಞಾನಿಗಳು (ಅಜ್ಞಾನಾವಸ್ಥೆಯಲ್ಲಿದ್ದೇ), ಗರ್ಭೇ-ತಾಯಿಯ ಗರ್ಭದಲ್ಲಿರುವಾಗಲೇ, ನಾಶಂ-ನಾಶವನ್ನು, ಯಾಂತಿ-ಹೊಂದುತ್ತಾರೆ (ಮೃತರಾಗುವರು); ಏವಂ-ಹೀಗೆಯೇ,

---

ಅನ್ಯಜೀವರಿಗೆ ಅವರ ಅನುಭವದಿಂದ ವಿವೇಕ ಹುಟ್ಟುವುದಿಲ್ಲ); ಹೀಗೆ ಅತೃಪ್ತರಾಗಿಯೇ ಅಂತ್ಯಾವಸ್ಥೆಯನ್ನು ಹೊಂದಿದವರು, ಕಂಠಗತಪ್ರಾಣರಾಗಿ, ಕಣ್ಣುಗುಡ್ಡೆಗಳು ಗರ್‍ರನೆ ತಿರುಗುತ್ತ ಮಾತು ನಿಂತಾಗ ಮಾತ್ರ ಭಾರ್ಯಾಪುತ್ರಾದಿಗಳ ಚಿಂತೆಯನ್ನು ಬಿಡುತ್ತಾರೆ (೧೮-೨೦). ದೀರ್ಘಾಯುಷ್ಯಯೋಗದಿಂದ (ಪೂರ್ವಪುಣ್ಯದಿಂದ) ಜೀವನು, ವೃದ್ಧಾಪ್ಯವನ್ನು ಹೊಂದಿದರೂ, ಮಂದಬುದ್ಧಿಯಾಗಿ, ತನ್ನ ಯೌವನದ ಅನುಭವಗಳನ್ನೂ ಗಮನಿಸದೇ, ಪುನಃ ವಿಷಯಭೋಗವನ್ನೇ ಆಶಿಸಿ ವ್ಯಥೆಪಡುತ್ತಾನೆ;

ಕೇಚಿತ್-ಕೆಲವರು, ಬಾಲ್ಯೇ-ಬಾಲ್ಯಾವಸ್ಥೆಯಲ್ಲಿಯೂ, ಕೇಚಿತ್-ಮತ್ತೆ ಕೆಲವರು, ಯೌವನೇ-ತಾರುಣ್ಯಾವಸ್ಥೆಯಲ್ಲಿಯೂ (ಮೃತರಾಗುತ್ತಾರೆ); ನಿತಾಂತಂ-ಅತಿಯಾಗಿ, ಭೋಗಾಸಕ್ತಾಃ-ವಿಷಯಭೋಗದಲ್ಲಿ ಆಸಕ್ತರಾಗಿ, ತೃಪ್ತಿಹೀನಾಃ-(ಭೋಗದಿಂದ) ತೃಪ್ತಿಯನ್ನು ಹೊಂದದೇ, ಮೇರೋರಾವಂ-ದೊಡ್ಡ ಧ್ವನಿಯನ್ನು ಕುರ್ವಂತೇ-ಮಾಡುವರು (ತಮ್ಮ ಅತೃಪ್ತಿಯನ್ನು ಸಾರುವರು); ಇತ್ಯೇವಕಾಲಃ-ಹೀಗೆ (ಅತೃಪ್ತಿಯಿಂದಲೇ) ಕಾಲವು (ಗತಿಸುತ್ತದೆ); ಕಂಠಪ್ರಾಣಃ-ಕಂಠಕ್ಕೆ ಬಂದ ಪ್ರಾಣವುಳ್ಳವನಾಗಿ (ಮರಣಸನ್ನಿಹಿತವಾಗಲು), ಭ್ರಾಂತನೇತ್ರಃ-ಸುತ್ತುತ್ತಿರುವ ಕಣ್ಣುಳ್ಳವನಾಗಿ, ವಿವಾಚಃ-ಮಾತು ನಿಂತು (ಮಾತನಾಡಲು ಸಹ ಬರದಿರಲು), ಚಿತ್ತೇ-(ಆಗ) ತನ್ನ ಮನಸ್ಸಿನಲ್ಲಿ ಸ್ತ್ರೀಪುತ್ರಾದೀನ್-ಪತ್ನೀ ಪುತ್ರಾದಿಗಳನ್ನು ನೈವ ಚಿಂತೇತ-ಚಿಂತಿಸುವುದಿಲ್ಲ (ಅವರುಗಳ ಚಿಂತೆಯನ್ನು ಆಗ ಮಾತ್ರ ಬಿಡುತ್ತಾನೆ).

**ದೈವಾತ್ ಪ್ರಾಪ್ತೋ ವಾರ್ಧಕಂ ಮೂಢಚೇತಾಃ ।**
**ಭೂಯೋ ಭೋಗಾನ್ ವಾಂಛಮಾನೋಽಪಿ ಖಿದ್ಯೇತ್ ॥**
**ಜಿಹ್ವೋಪಸ್ಥದ್ರವ್ಯಲಾಭಾದಿವಾಂಛಾ ।**
**ನೈವ ಕ್ಷೀಣಾ ಜಾಯತೇ ಜೀವಿತೇಚ್ಛಾ ॥ ೨೧ ॥**

ದೈವಾತ್-ಅದೃಷ್ಟದಿಂದ (ದೀರ್ಘಾಯುಷ್ಯಯೋಗದಿಂದ), ವಾರ್ಧಕಂ-ವೃದ್ಧಾಪ್ಯವನ್ನು ಪ್ರಾಪ್ತಃ-ಹೊಂದಿದ, ಮೂಢಚೇತಾಃ-ಮಂದಬುದ್ಧಿಯು, ಭೂಯಃ-ಪುನಃ, (ಯೌವನದ ಅತೃಪ್ತಿರೂಪದ ಅನುಭವವನ್ನೂ ಗಮನಿಸದೇ), ಭೋಗಾನ್-ವಿಷಯಭೋಗಗಳನ್ನು ವಾಂಛಮಾನಃ-ಆಶಿಸುವವನಾಗಿ, ಖಿದ್ಯೇತ್ ಅಪಿ-ಮತ್ತೂ ವ್ಯಥೆಪಡುತ್ತಾನೆ; ಜಿಹ್ವೋಪಸ್ಥ ದ್ರವ್ಯಲಾಭಾದಿ ವಾಂಛಾ-ಜಿಹ್ವೆ (ನಾಲಿಗೆ-ರಸನೇಂದ್ರಿಯ), ಗುಹ್ಯೇಂದ್ರಿಯ, ಧನಲಾಭ ಮೊದಲಾದವುಗಳ ಆಶೆಯೂ, ಜೀವಿತೇಚ್ಛಾ-ಬದುಕಬೇಕೆಂಬ ಆಶೆಯೂ, ಕ್ಷೀಣಾ-ಕ್ಷೀಣಿಸುವುದು (ಕಡಿಮೆಯಾಗುವುದು), ನೈವ ಜಾಯತೇ-ಆಗುವುದೇ ಇಲ್ಲ.

**ಏವಂ ಜೀವನ್ನೇಷ ನ ಕ್ವಾಪಿ ಕಾಲೇ ।**
**ಮೋಕ್ಷೇ ಹೇತುಂ ನೈವ ವಿಷ್ಣುಂ ಸ್ಮರೇತ ॥**
**ಭುಕ್ತ್ವಾ ಭೋಗಾನ್ ಭೂಯ ಏವಾಭಿವಾಂಛನ್ ।**
**ಕರ್ಮೈರಾರ್ತೋ ಭಗ್ನಕಾಮೋಽಪಿ ಭೂಯಃ ॥ ೨೨ ॥**

---

ಜಿಹ್ವೋಪಸ್ಥ ಇಂದ್ರಿಯಗಳಿಂದ ಪುನಃ ವಿಷಯಗಳನ್ನು ಭೋಗಿಸಲು ಯತ್ನಿಸುತ್ತಾನೆ; ದ್ರವ್ಯಾಶೆಯು ತೊಲಗುವುದಿಲ್ಲ; ಜೀವಿತಾಶೆಯನ್ನೂ ತೊರೆಯುವುದಿಲ್ಲ—ಬದುಕಿರಬೇಕು-ಧನವನ್ನು ಸಂಪಾದಿಸಬೇಕು-ವಿಷಯಗಳನ್ನು ಭೋಗಿಸಬೇಕು, ಎಂಬ ಆಶೆಯು ನಿವೃತ್ತವಾಗುವುದಿಲ್ಲ (೨೧). ಹೀಗೆ, ಜೀವಿಸುವ ಮನುಷ್ಯನು, ಯಾವ ಕಾಲದಲ್ಲಿಯೂ,

ಚರ್ವನ್ನೇವಂ ಚರ್ವಿತಂ ಜನ್ಮಜನ್ಮ-
ನ್ಯತ್ತ್ಯೇವಾಮುಂ ಕಾಲರುದ್ರೋsಕಸ್ಮಾತ್ ॥
ನೇಮಂ ದೇಹಂ ಸ್ವೇಚ್ಛಯಾ ಪ್ರಾಪ್ನುತೇSಯಂ ।
ತಿಷ್ಠತ್ಯತ್ರ ಸ್ವೇಚ್ಛಯಾ ನೈವ ಮೂಢಃ ॥ ೨೩ ॥
ಕಾಮಾನ್ನೈಷ ಪ್ರಾಪ್ನುತೇ ಸ್ವೇಚ್ಛಯಾ ನೋ ।
ಮೃತ್ಯುಂ ನೈವ ಸ್ವೇಚ್ಛಯಾ ಯಾತ್ಯಕಸ್ಮಾತ್ ॥
ಕಾಲೇ ಕಾಲೇ ಪಾರತಂತ್ರ್ಯಂ ವಿಲೋಕ್ಯ ।
ಸ್ವಾತಂತ್ರ್ಯಂ ವೈ ಸರ್ವದಾ ಮನ್ಯತೇSಯಂ ॥ ೨೪ ॥

ಏಷಃ-ಈ ಮೂಢಜೀವನು, ಏವಂ-ಹೀಗೆ, ಜೀವನ್-ಬದುಕಿ (ಜೀವನವನ್ನು ಕಳೆದು), ಕ್ವಾಪಿ ಕಾಲೇ-ಯಾವ ಕಾಲದಲ್ಲಿಯೂ, ಮೋಕ್ಷಹೇತುಂ-ಸಂಸಾರದಿಂದ ಮುಕ್ತನಾಗುವ ಸಾಧನವನ್ನು, ನ ಸ್ಮರೇತ-ಮನಸ್ಸಿನಲ್ಲಿ ತರುವುದಿಲ್ಲ; ವಿಷ್ಣುಂ-ಮೋಕ್ಷಪ್ರದನಾದ ಶ್ರೀವಿಷ್ಣುವನ್ನು, ನೈವ (ಸ್ಮರೇತ)-ಸ್ಮರಿಸುವುದೂ ಇಲ್ಲ; ಭೋಗಾನ್-ವಿಷಯಗಳನ್ನು, ಭುಕ್ತ್ವಾ-ಭೋಗಿಸಿ, ಭೂಯಃ-ಮತ್ತೆ ಅಭಿವಾಂಛನ್ ಏವ-ಆಶಿಸುತ್ತಲೇ, ಭಗ್ನಕಾಮಃ-(ತೃಪ್ತಿಯನ್ನು ಹೊಂದಬೇಕೆಂಬ) ಆಶೆಯನ್ನು ಹೊಂದದಿದ್ದರೂ (ಭಗ್ನವಾದ ಇಚ್ಛೆಯುಳ್ಳವನಾದರೂ), ಭೂಯಃ-ಪುನಃ ಪುನಃ (ಅಧಿಕವಾಗಿ), ಕರ್ಮ್ಯೈಃ-(ಅದಕ್ಕಾಗಿ, ವಿಷಯಲಾಭಕ್ಕಾಗಿ, ಭೋಗ್ಯವಸ್ತುಗಳನ್ನು ದೊರಕಿಸಿಕೊಳ್ಳುವ, ಇಂದ್ರಿಯಗಳನ್ನು ತೃಪ್ತಿಗೊಳಿಸುವ) ಕರ್ಮಗಳಿಂದ, ಆರ್ತಃ(ಭವತಿ)-ದುಃಖಿಸುತ್ತಾನೆ; ಏವಂ-ಹೀಗೆ, ಜನ್ಮಜನ್ಮನಿ-ಪ್ರತಿಜನ್ಮದಲ್ಲಿಯೂ, ಚರ್ವಿತಂ-ಭೋಗಿಸಿದುದನ್ನೇ, ಚರ್ವನ್-ಭೋಗಿಸುತ್ತ (ಇರಲು), ಅಕಸ್ಮಾತ್-ಶ್ರೀಹರೀಚ್ಛೆಯಿಂದ, ಅಮುಂ-ಈ ಜೀವನನ್ನು, ಕಾಲರುದ್ರಃ-ಕಾಲಮೃತ್ಯುವು, ಅತ್ತಿ ಏವ-ನುಂಗಿಯೇಬಿಡುತ್ತದೆ;

---

ಮೋಕ್ಷಸಾಧನವನ್ನು ಯೋಚಿಸುವುದಿಲ್ಲ—ಮೋಕ್ಷಪ್ರದನಾದ ಶ್ರೀವಿಷ್ಣುವನ್ನು ಸ್ಮರಿಸುವುದೂ ಇಲ್ಲ; ಪುನಃಪುನಃ ವಿಷಯಭೋಗದಲ್ಲಿಯೇ ಆಸಕ್ತನಾಗುತ್ತಾನೆ; ತೃಪ್ತಿಯನ್ನು ಪಡೆಯಲು ಅಸಮರ್ಥನಾದರೂ (ಭಗ್ನಾಶನಾದರೂ), ಪುನಃ ಇಂದ್ರಿಯಗಳಿಗೆ ಭೋಗಸಾಧನೆಗಳನ್ನು ಒದಗಿಸಿಕೊಳ್ಳುವ ಪ್ರಯತ್ನಗಳಲ್ಲಿಯೇ ತೊಡಗಿ ದುಃಖಿಸುತ್ತಾನೆ; ಹೀಗೆಯೇ ಪ್ರತಿ ಜನ್ಮವನ್ನೂ ವ್ಯರ್ಥಗೊಳಿಸುತ್ತಾನೆ; ಪ್ರತಿ ಜನ್ಮದಲ್ಲಿ ಹಿಂದೆ ಭೋಗಿಸಿದ ಭೋಗಗಳನ್ನೇ ಮತ್ತೆಮತ್ತೆ ಭೋಗಿಸುತ್ತ ಶ್ರೀಹರೀಚ್ಛೆಯಿಂದ, ತನ್ನ ಕರ್ಮಾನುಸಾರ, ಕಾಲಮೃತ್ಯುವಿನ ವಶನಾಗುತ್ತಾನೆ; ಹೀಗೆ ಸಂಸಾರದಲ್ಲಿ ಸುತ್ತುವ ಈ ಜೀವನು, ಈ ದೇಹವನ್ನು ತನ್ನ ಇಚ್ಛೆಯಂತೆ ಹೊಂದುವುದಿಲ್ಲ; ಈ ಮಂದಬುದ್ಧಿಯು ಆ ದೇಹದಲ್ಲಿ ತಾನು ಇಚ್ಛಿಸುವ ಪರ್ಯಂತ ಇರುವುದೂ ಇಲ್ಲ; ಸುಖ ದುಃಖಾದಿ

ಅಯಂ-ಈ(ಸಂಸಾರಿ) ಜೀವನು, ಇಮಂ ದೇಹಂ-ಈ ದೇಹವನ್ನು, ಸ್ವೇಚ್ಛಯಾ-ತನ್ನ ಇಚ್ಛೆಯಿಂದ (ಇಚ್ಛಿಸಿದ ದೇಹವನ್ನು), ನ ಪ್ರಾಪ್ನುತೇ-ಹೊಂದುವುದಿಲ್ಲ; ಅತ್ರ-(ದೊರೆತಿರುವ ದೇಹದಲ್ಲಿ), ಮೂಢಃ-ಈ ಮಂದಬುದ್ಧಿಯು, ಸ್ವೇಚ್ಛಯಾ-ಸ್ವೇಚ್ಛೆಯಿಂದ (ತಾನು ಇಚ್ಛಿಸುವ ಪರ್ಯಂತ), ನೈವ ತಿಷ್ಠತಿ-ನಿಲ್ಲುವುದೂ ಇಲ್ಲ (ಇರುವುದಿಲ್ಲ—ಬದುಕಿರುವುದಿಲ್ಲ); ಏಷಃ-ಈತನು, ಕಾಮಾನ್-(ಸುಖಾದಿ) ಭೋಗಗಳನ್ನು, ಸ್ವೇಚ್ಛಯಾ-ತನ್ನ ಇಚ್ಛಾನುಸಾರವಾಗಿ, ನ ಪ್ರಾಪ್ನುತೇ-ಹೊಂದುವುದಿಲ್ಲ; ನೋ ಮೃತ್ಯುಂ-ಮರಣವನ್ನೂ (ಸ್ವೇಚ್ಛೆಯಿಂದ) ಹೊಂದುವುದಿಲ್ಲ; ಅಕಸ್ಮಾತ್-ಅಕಸ್ಮಾತ್ತಾಗಿ, (ತನಗೆ ತಿಳಿಯದೇ) ಮರಣ ಪ್ರಾಪ್ತವಾದರೂ, ಸ್ವೇಚ್ಛಯಾ-ಇಚ್ಛಾಪೂರ್ವಕವಾಗಿ (ಒಪ್ಪಿ-ಅಂಗೀಕರಿಸಿ), ನೈವ ಯಾತಿ-(ದೇಹವನ್ನು ಬಿಟ್ಟು) ಹೋಗುವುದಿಲ್ಲ; ಕಾಲೇ ಕಾಲೇ-ಈ ಎಲ್ಲ ಸಂದರ್ಭಗಳಲ್ಲಿ, ಪಾರತಂತ್ರ್ಯಂ-(ತನ್ನ) ಪರಾಧೀನತ್ವವನ್ನು, ವಿಲೋಕ್ಯ-ಕಂಡೂ (ಅನುಭವಿಸಿಯೂ), ಸರ್ವದಾ-ಸದಾ, ಸ್ವಾತಂತ್ರ್ಯಂ ವೈ-ಸ್ವಾತಂತ್ರ್ಯವನ್ನೇ, (ತಾನು ಸ್ವತಂತ್ರನೆಂದೇ), ಅಯಂ-ಈ ಜೀವನು, ಮನ್ಯತೇ-ತಿಳಿಯುತ್ತಾನೆ.

> ಸ್ವಲ್ಪಪ್ರಾಪ್ತೌ ಮಾದ್ಯತಿ ಕ್ಷಿಪ್ರಮೇಷ ।
> ಕ್ಷೀಣೋತ್ಯಂತಂ ನೈವ ಕಾಮಾದ್ವಿರಜ್ಯೇತ್ ॥
> ಶ್ರಾಂತಃ ಕ್ಲಾಂತೋ ಮ್ಲಾನಚಿತ್ತೋಽತಿದೀನಃ ।
> ಸಂಸಾರಾಬ್ಧೌ ಪಾತ್ಯಮಾನೋ ಮುಹುಶ್ಚ ॥ ೨೫ ॥

ಏಷಃ-ಈ ಮಂದನು, ಸ್ವಲ್ಪಪ್ರಾಪ್ತೌ-ಅಲ್ಪ (ಸುಖ ಧನಾದಿ) ಪ್ರಾಪ್ತಿಯಲ್ಲಿ (ದೊರೆತಾಗ), ಕ್ಷಿಪ್ರಂ-ಶೀಘ್ರವಾಗಿ(ಒಡನೆಯೇ), ಮಾದ್ಯತಿ-ಹರ್ಷಿಸುತ್ತಾನೆ; ಕ್ಷೀಣಃ-ಕ್ಷೀಣಿಸಿ, (ದುಃಖಾದಿಗಳಿಂದ ಕೃಶನಾಗಿ), ಅತ್ಯಂತಂ-ಅತಿಶಯವಾಗಿ, ಶ್ರಾಂತಃ-ಆಯಾಸಪಟ್ಟು, ಕ್ಲಾಂತಃ-ಅಶಕ್ತನಾಗಿ, ಮ್ಲಾನಚಿತ್ತಃ-ನಿರುತ್ಸಾಹಿಯೂ, ಅತಿದೀನಃ-

---

ಭೋಗಗಳನ್ನು ತನ್ನ ಇಚ್ಛಾನುಸಾರವಾಗಿ ಹೊಂದುವುದಿಲ್ಲ; ಸ್ವೇಚ್ಛೆಯಿಂದ ಮೃತನಾಗುವುದಿಲ್ಲ; ತನಗೆ ತಿಳಿಯದೇ ಮೃತ್ಯುವು ಪ್ರಾಪ್ತವಾದಾಗ, ಸ್ವೇಚ್ಛೆಯಿಂದ ಅಂಗೀಕರಿಸಿ, ದೇಹವನ್ನು ಬಿಟ್ಟು ಹೊರಡುವುದಿಲ್ಲ; ಈ ಎಲ್ಲ ಅನುಭವಗಳಿಂದ ತನ್ನ ಅತ್ಯಂತ ಪರಾಧೀನತ್ವವನ್ನು ಕಂಡೂ ಸಹ, ಸದಾ, ತಾನು ಸ್ವತಂತ್ರನೆಂದೇ ತಿಳಿಯುತ್ತಾನೆ (೨೨-೨೪). ಹೀಗೆ, ಸಂಸಾರದಲ್ಲಿ ಸುತ್ತುವ ಈ ಮೂಢ ಜೀವನು, ಅಲ್ಲಲ್ಲಿ (ಆಯಾ ದೇಹಗಳಲ್ಲಿ) ತನ್ನ ಇಚ್ಛೆಯಂತೆ ಒಂದೊಂದು ವೇಳೆ ಅಲ್ಪಫಲಗಳು ದೊರೆತಾಗ ವಿಶೇಷವಾಗಿ ಹರ್ಷಿಸುತ್ತಾನೆ; ದುಃಖಾದಿ ಅನಿಷ್ಟಗಳಿಂದ, ಕೃಶನಾಗಿ, ಅತ್ಯಾಯಾಸದಿಂದ ಅಶಕ್ತನೂ ನಿರುತ್ಸಾಹಿಯೂ ಆಗಿ, ಜ್ಞಾನಿಗಳ ಕೃಪಾವಿಷಯನಾದ ಸ್ಥಿತಿಯನ್ನು ಹೊಂದಿದರೂ (ಅತ್ಯಂತ ದೀನನಾದರೂ), ಎಚ್ಚರಗೊಳ್ಳದೇ, ಪುನಃ ಸಂಸಾರಸಾಗರದಲ್ಲಿ

ಅತ್ಯಂತ ದೀನನೂ (ಕೃಪಾವಿಷಯನೂ) ಆದರೂ, ಕಾಮಾತ್-ವಿಷಯಭೋಗಾಶೆ ಯಿಂದ, ನೈವ ವಿರಜ್ಯೇತ್-ವಿರಕ್ತನಾಗುವುದಿಲ್ಲ (ಆಶೆಯನ್ನು ಬಿಡುವುದಿಲ್ಲ); ಮುಹುಶ್ಚ-ಮತ್ತೆ ಮತ್ತೆ ಸಂಸಾರಬ್ಧೌ-ಸಂಸಾರಸಾಗರದಲ್ಲಿ ಪಾತ್ಯಮಾನಃ-ಬೀಳಿಸಲ್ಪಟ್ಟು (ತಳ್ಳಲ್ಪಟ್ಟ ಮೂಢಜೀವನು, ತನ್ನ ಉದ್ಧಾರವನ್ನು ಮನಸ್ಸಿಗೆ ತಾರದಿರುವುದು ಆಶ್ಚರ್ಯವೇ ಸರಿ).

**ಮೋಕ್ಷೇಚ್ಛಾವಾನ್ ವಿಷ್ಣುಮೇಕಂ ಶರಣ್ಯಂ ।**
**ಮೋಕ್ಷೇಶಂ ತಂ ಸರ್ವದೈವ ಸ್ಮರೇತ ॥**
**ಶ್ರಾವ್ಯಾ ನಿತ್ಯಂ ತತ್ಕಥಾ ಸನ್ಮುಖೇಭ್ಯೋ ।**
**ನಾನಾವ್ಯಾಪಾರೈರ್ಮುಹುರಾಕೃಷ್ಯಮಾಣಃ ॥ ೨೬ ॥**
**ಸ್ವಲ್ಪೇ ಕಾಲೇ ಸಾಧನಂ ಭೂರಿ ವಾಂಛನ್ ।**
**ಭೂಯೋ ಭೂಯಸ್ತದ್ಯಶಃ ಶ್ರಾವ್ಯಮೇವ ॥**
**ನಾಸ್ಮಾದನ್ಯತ್ಸಾಧನಂ ಬಂಧಮೋಕ್ಷೇ ।**
**ಚಿತ್ತಾರಾಮಂ ಕರ್ಣಮಾತ್ರೈಕಸಾಧ್ಯಂ ॥ ೨೭ ॥**

ಮೋಕ್ಷೇಚ್ಛಾವಾನ್-ಮುಮುಕ್ಷುವು (ಮೋಕ್ಷವನ್ನು ಇಚ್ಛಿಸುವ ಪುರುಷನು), ಶರಣ್ಯಂ-ಆಶ್ರಯಾರ್ಹನಾದ, ಏಕಂ-ಸರ್ವೋತ್ತಮನಾದ (ಸ್ವತಂತ್ರನಾದ), ತಂ-ಆ (ವೇದಪ್ರಸಿದ್ಧನಾದ), ಮೋಕ್ಷೇಶಂ-ಮೋಕ್ಷಸ್ವಾಮಿಯಾದ, ವಿಷ್ಣುಂ-ಶ್ರೀವಿಷ್ಣುವನ್ನೇ, ಸರ್ವದಾ-ಸದಾ, ಸ್ಮರೇತ ಏವ-ಸ್ಮರಿಸುತ್ತಲಿರಬೇಕು; ಸನ್ಮುಖೇಭ್ಯಃ-ಸಜ್ಜನರ ಮುಖದಿಂದ, ನಿತ್ಯಂ-ನಿತ್ಯವೂ, ತತ್ಕಥಾ-ಶ್ರೀವಿಷ್ಣುಮಹಿಮೆಗಳನ್ನು ಶ್ರಾವ್ಯಾ-(ಅವಶ್ಯವಾಗಿ) ಕೇಳಬೇಕು (ಶ್ರವಣಮಾಡಬೇಕು); ನಾನಾವ್ಯಾಪಾರೈಃ-ನಾನಾ (ಲೌಕಿಕ) ವ್ಯವಹಾರಗಳಿಂದ, ಮುಹುಃ-ಪುನಃ ಪುನಃ, ಆಕೃಷ್ಯಮಾಣಃ-ಸೆಳೆಯಲ್ಪಟ್ಟವ

---

ತಳ್ಳಲ್ಪಡುತ್ತಾನೆ (ಇದೇ ವಿಷಯಭೋಗಾಸಕ್ತಿಯ ಫಲವು!) (೨೫). ಮುಮುಕ್ಷು ಪುರುಷನು, ಮೋಕ್ಷಪ್ರದನಾದ ಸರ್ವೋತ್ತಮನಾದ ಶ್ರೀಹರಿಯನ್ನೇ, ಸರ್ವದಾ ಸ್ಮರಿಸುತ್ತ ಶರಣುಹೊಂದಬೇಕು; ಸಜ್ಜನರ ಮುಖದಿಂದ ಶ್ರೀವಿಷ್ಣುಮಹಿಮಾ ಪ್ರತಿಪಾದಕ ಚರಿತ್ರೆಗಳನ್ನು ನಿತ್ಯವೂ ಶ್ರವಣಮಾಡಬೇಕು; ಲೌಕಿಕ ವ್ಯವಹಾರಗಳಿಂದ ಸೆಳೆಯಲ್ಪಡುವ ಮನಸ್ಸುಳ್ಳವನು ಸಹ, ಶೀಘ್ರವಾಗಿ ಅಧಿಕವಾಗಿ ಮೋಕ್ಷಸಾಧನೆಯನ್ನು ಮಾಡಿಕೊಳ್ಳಲಿಚ್ಛಿಸಿ, ಪುನಃಪುನಃ (ವಿಶೇಷವಾಗಿ) ಶ್ರೀವಿಷ್ಣುವಿನ ಸತ್ಕೀರ್ತಿಯನ್ನು (ಸದ್ಗುಣಗಳ ಸ್ತುತಿಯನ್ನು) ಕೇಳುತ್ತಿರಬೇಕು; ಸಂಸಾರದಿಂದ ಮುಕ್ತನಾಗಲು ಇದಕ್ಕಿಂತ ಮತ್ತೊಂದು ಸಾಧನವಿಲ್ಲ—ಅನ್ಯಸಾಧನೆಗಳೆಂಬುವು ಕಿವಿಯಿಂದ ಕೇಳಲಿಕ್ಕೆ ಮಾತ್ರ ಮನೋಹರಗಳಲ್ಲದೇ ಫಲಪ್ರದಗಳಲ್ಲ (೨೬-೨೭). ಶ್ರೀವಿಷ್ಣುಕಥಾ ಶ್ರವಣದ

ನಾದರೂ, ಸ್ವಲ್ಪೇಕಾಲೇ-ಸ್ವಲ್ಪಕಾಲದಲ್ಲಿ(ಶೀಘ್ರವಾಗಿ), ಭೂರಿ ಸಾಧನಂ-ಅಧಿಕವಾದ ಸಾಧನೆಯನ್ನು, ವಾಂಛನ್-ಅಪೇಕ್ಷಿಸಿ, ಭೂಯೋ ಭೂಯಃ-ಮತ್ತೆ ಮತ್ತೆ (ವಿಶೇಷವಾಗಿ, ಮೇಲಿಂದಮೇಲೆ), ತದ್ಯಶಃ-ಶ್ರೀಹರಿಯ ಕೀರ್ತಿಯನ್ನು (ಸ್ತುತಿಯನ್ನು), ಶ್ರಾವ್ಯಂ ಏವ-ಕೇಳತಕ್ಕದ್ದೇ (ಶ್ರವಣಮಾಡತಕ್ಕದ್ದು); ಬಂಧಮೋಕ್ಷೇ-ಸಂಸಾರದಿಂದ ಮುಕ್ತನಾಗುವಲ್ಲಿ, ಅಸ್ಮಾತ್-ಇದಕ್ಕಿಂತ (ನಿರಂತರ ಸ್ಮರಣ ಮತ್ತು ಕಥಾಶ್ರವಣಗಳಿಗಿಂತ), ಅನ್ಯತ್-ಬೇರೊಂದು, ಸಾಧನಂ-ಸಾಧನವು (ಮಾರ್ಗವು-ಉಪಾಯವು), ನ-ಇಲ್ಲ (ಅನ್ಯತ್‌ಸಾಧನಂ-ಬೇರೆ ಸಾಧನವೆಂಬುದು), ಕರ್ಣಮಾತ್ರೈಕಸಾಧ್ಯಂ-ಕೇಳಲಿಕ್ಕೆ ಮಾತ್ರ ಬರುವ, ಚಿತ್ತಾರಾಮಂ-ಮನೋಹರತ್ವವುಳ್ಳದ್ದು (ಮೋಕ್ಷಫಲಪ್ರದವಲ್ಲ).

ಕ್ವತ್ಯಾ ಯೋಗಾಃ ಕುತ್ರ ತತ್ಸಾಧನಾನಿ ।
ಕುತ್ರ ಧ್ಯಾನಂ ನಷ್ಟಚಿತ್ತಸ್ಯ ನಿತ್ಯಂ ॥
ಯೋಗಾರೂಢಾಸ್ತಾಪಸಾ ಜ್ಞಾನಿನೋಽಪಿ ।
ಶ್ರೀಮದ್ವಿಷ್ಣೋಃ ಸತ್ಕಥಾಸಕ್ತಚಿತ್ತಾಃ ॥ ೨೮ ॥

ಸತ್ಕಥಾಶ್ರವಣದ ಶ್ರೇಷ್ಠತೆಯನ್ನು ವಿಶದಗೊಳಿಸುತ್ತಾರೆ:—ಯೋಗಾಃ-ವಿವಿಧ ಯೋಗಗಳು, ಕ್ವತ್ಯಾಃ-ಎಲ್ಲಿಯವು? (ಶ್ರವಣದಮುಂದೆ); ತತ್ಸಾಧನಾನಿ-ಆ ಯೋಗಗಳ ಸಿದ್ಧಿಗೆ ಅವಶ್ಯಕವಾದ (ಯಮ, ನಿಯಮಾದಿ) ಸಾಧನಗಳು, ಕುತ್ರ-ಎಲ್ಲಿ? (ಎಷ್ಟು ಕಷ್ಟಸಾಧ್ಯಗಳು?); ನಷ್ಟಚಿತ್ತಸ್ಯ-ಮನೋನಿಗ್ರಹವಿಲ್ಲದವನಿಗೆ (ವಿಷಯ

---

ಮುಂದೆ, ಎಲ್ಲಿಯ ಯೋಗಗಳು? ಅವುಗಳ ಸಿದ್ಧಿಗೆ ಕಾರಣಗಳೆಂಬ ಯಮನಿಯಮಾದಿ ಸಾಧನೆಗಳು ಅದೆಷ್ಟು ಕಷ್ಟದಿಂದ ಲಭ್ಯಗಳು? ಮನೋನಿಗ್ರಹವಿಲ್ಲದವನಿಗೆ ಧ್ಯಾನವು ಸಾಧ್ಯವೇ?[1] ಯೋಗಸಿದ್ಧರೂ, ತಪಸ್ವಿಗಳೂ, ಅಪರೋಕ್ಷ ಜ್ಞಾನಿಗಳೂ ಸಹ ನಿತ್ಯವೂ

---

1. ಶ್ರವಣದ ಶ್ರೇಷ್ಠತೆಯ ನಿರೂಪಣೆಯು, ಯೋಗಾದಿ ಇತರ ಸಾಧನೆಗಳು ವ್ಯರ್ಥವೆಂದು ಮಾತ್ರ ತಿಳಿಯಬಾರದು. 'ಸರ್ವೇ ಮನೋನಿಗ್ರಹ ಲಕ್ಷಣಾಂತಾಃ ಪರೋಧಿಯೋಗೋ ಮನಸಃ ಸಮಾಧಿಃ॥' (ಭಾಗವತ) ಎಂದು, ಎಲ್ಲ ಸಾಧನಗಳ ಗುರಿಯು, ಮನಃಶಾಂತಿಯೇ; ಆದರಿಂದಲೇ ಏಕಾಗ್ರಚಿತ್ತನಾಗಿ ಧ್ಯಾನಿಸಲು ಸಾಧ್ಯವೆಂದು ಹೇಳಲಾಗಿದೆ. ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನವಾಗುವ ಉಪಾಸನೆಯು ಎರಡು ವಿಧವು; ಆಸನಾದಿಗಳಲ್ಲಿ ಕೂತು ಮಾಡುವ ಧ್ಯಾನರೂಪವಾದುದು ಒಂದು; ಮತ್ತೊಂದು ಶಾಸ್ತ್ರಾಭ್ಯಾಸ ರೂಪವಾದುದು; ಈ ಎರಡನೆಯ ಉಪಾಸನೆಯಲ್ಲಿ ಶ್ರವಣ, ಮನನ, ಧ್ಯಾನಗಳು ಮೂರೂ ಯೋಗ್ಯಪ್ರಮಾಣದಲ್ಲಿ ಕೂಡಿರುತ್ತವೆ. ಶಾಸ್ತ್ರಾಭ್ಯಾಸವು ಪ್ರಧಾನವಾಗಿ ಶ್ರವಣ ರೂಪವಾದುದೇ (ಅನ್ಯರು ಹೇಳಿದ್ದನ್ನು ಕೇಳುವುದು ಮಾತ್ರ ಶ್ರವಣವಲ್ಲ); ಗುರುಮುಖದಿಂದ ಅರ್ಥ ವಿಶೇಷಗಳನ್ನು ತಿಳಿದು ಅದರ ಮನನಾರ್ಥವಾಗಿ ತಾನು ಗ್ರಂಥಾವಲೋಕನ ಮಾಡುವುದೂ ಶ್ರವಣದಲ್ಲಿ ಅಂತರ್ಭಾವಗೊಳ್ಳುತ್ತದೆ; ಏಕಾಗ್ರತೆಯಿಂದಲೇ ಸಾಧ್ಯವಾಗುವ ಈ ಶ್ರವಣ ಮನನಗಳು ಧ್ಯಾನರೂಪವೂ ಆಗಿರುತ್ತವೆ; ಆದ್ದರಿಂದ ಶಾಸ್ತ್ರಾಭ್ಯಾಸ

ಭೋಗಾದಿಗಳಿಂದ ಆಕರ್ಷಿತರಿಗೆ), ಧ್ಯಾನಂ-ಧ್ಯಾನವು, ಕುತ್ರ-ಎಲ್ಲಿಂದ? (ಹೇಗೆ ಸಾಧ್ಯ?); ಯೋಗಾರೂಢಾಃ-ಯೋಗಸಿದ್ಧರೂ, ತಾಪಸಾಃ-ತಪಸ್ವಿಗಳೂ, ಅಪಿ-ಮತ್ತು ಜ್ಞಾನಿನಃ-ಜ್ಞಾನಿಗಳೂ (ಬ್ರಹ್ಮದರ್ಶಿಗಳೂ), ನಿತ್ಯಂ-ಸದಾ, ಶ್ರೀಮದ್ವಿಷ್ಣೋಃ-ಶ್ರೀಮಹಾವಿಷ್ಣುವಿನ, ಸತ್ಕಥಾಸಕ್ತ ಚಿತ್ತಾಃ-ಸತ್ಕಥಾಶ್ರವಣದಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿರುವರು.

ಸ್ವೀಯೇ ವರ್ಣೇ ಚಾಶ್ರಮೇ ವಾಪಿ ನಿತ್ಯಂ ।
ಯತ್ಕರ್ಮ ಸ್ಯಾತ್ತಸ್ಯ ಸಂಕೋಚತೋಽಪಿ ॥
ಶ್ರಾವ್ಯಂ ವಿಷ್ಣೋಃ ಸದ್ಯಶಃ ಸರ್ವದೈವ ।
ತೇನೈವ ಸ್ಯಾನ್ಮುಕ್ತಬಂಧೋ ನರೋಽಯಂ ॥ ೨೯ ॥

ಸ್ವೀಯೇ-ತನ್ನ, ವರ್ಣೇ-ವರ್ಣದಲ್ಲಿ (ಜಾತಿಗೆ), ಚ-ಮತ್ತು ಆಶ್ರಮೇ ವಾಪಿ-ಆಶ್ರಮದಲ್ಲಿ (ಆಶ್ರಮಕ್ಕೆ), ನಿತ್ಯಂ-ನಿತ್ಯವೂ (ಯೋಗ್ಯವಾದ), ಯತ್ಕರ್ಮಸ್ಯಾತ್-ಯಾವ ಕರ್ಮವು (ವಿಧಾಯಕವಾಗಿರುವುದೋ) ಇರುವುದೋ, ತಸ್ಯ-ಅದರ, (ಆ ಕರ್ಮಗಳ), ಸಂಕೋಚತಃ ಅಪಿ-ಸಂಕೋಚರಿಂದಲಾದರೂ (ವಿಸ್ತರಿಸದೇ ಅತ್ಯಾವಶ್ಯಕವಾದಷ್ಟುಮಾತ್ರ ಆಚರಿಸಿ, ಸರ್ವದಾ ಏವ-ಎಲ್ಲ ಕಾಲದಲ್ಲಿ, ವಿಷ್ಣೋಃ-ಶ್ರೀವಿಷ್ಣುವಿನ, ಸದ್ಯಶಃ-ಪವಿತ್ರಕೀರ್ತಿಯನ್ನು (ಮಾಹಾತ್ಮ್ಯಗಳನ್ನು), ಶ್ರಾವ್ಯಂ-ಶ್ರವಣ ಮಾಡತಕ್ಕದ್ದು; ಅಯಂ ನರಃ-ಈ ಮನುಷ್ಯನು, ತೇನ ಏವ-ಅದರಿಂದಲೇ (ಶ್ರವಣದಿಂದಲೇ-ತಜ್ಜನ್ಯ ಶ್ರೇಷ್ಠಭಕ್ತಿಯಿಂದಲೇ), ಮುಕ್ತಬಂಧಃ-ಸಂಸಾರದಿಂದ ಮುಕ್ತನು, ಸ್ಯಾತ್-ಆಗುತ್ತಾನೆ.

---

ಶ್ರೀಹರಿಯ ಪವಿತ್ರ ಗುಣಶ್ರವಣದಲ್ಲಿ ಆಸಕ್ತರಾಗುತ್ತಾರೆ; ಇದರಿಂದಲೂ ಶ್ರವಣದ ಶ್ರೇಷ್ಠತೆಯನ್ನು ತಿಳಿಯಬಹುದಾಗಿದೆ (೨೮). ಆದ್ದರಿಂದ ಸ್ವವರ್ಣಾಶ್ರಮಗಳಿಗೆ ಉಚಿತವಾದ (ವಿಧಿಸಲ್ಪಟ್ಟಿರುವ) ನಿತ್ಯಕರ್ಮಗಳನ್ನು ಸಂಕೋಚದಿಂದಾದರೂ ಬಿಡದಂತೆ ಆಚರಿಸಿ, ಕಾಲಾವಕಾಶವನ್ನು ಕಲ್ಪಿಸಿಕೊಂಡು, ಶ್ರೀವಿಷ್ಣುವಿನ ಪವಿತ್ರ ಕೀರ್ತಿಯನ್ನು (ಗುಣಾನುವಾದವನ್ನು) ನಿತ್ಯವೂ ಶ್ರವಣ ಮಾಡತಕ್ಕದ್ದು; ಅದರಿಂದ,

---

ರೂಪದ ಭಗವದುಪಾಸನೆಯೂ ಅಪರೋಕ್ಷಕ್ಕೆ ಸ್ವಯಂ ಸಾಧನವಾಗಬಲ್ಲದೆಂದೂ ಹೇಳಲಾಗಿದೆ. ಪ್ರಸಕ್ತವಾಗಿರುವ ಸತ್ಕಥಾಶ್ರವಣವು ಈ ವಿಧವಾದುದೆಂದು ತಿಳಿಯಬೇಕು. 'ಪಾನೇನ ತೇ ದೇವ ಕಥಾಸುಧಾಯಾಃ ಪ್ರವೃದ್ಧಭಕ್ತ್ಯಾ ವಿಶದಾಶಯಾ ಯೇ । ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ ಯಥಾಂಜಸಾ ತ್ವಾ ಪುರಕುಂಠಧಿಷ್ಣ್ಯಂ ॥'' (ಭಾಗ)—ಕಥಾಮೃತವನ್ನು ಶ್ರವಣಪುಟಗಳಿಂದ ಪಾನಮಾಡಿ, ಅದರಿಂದ ಪ್ರವೃದ್ಧವಾದ ಭಕ್ತಿಯಿಂದ, ವೈರಾಗ್ಯವನ್ನೂ ಜ್ಞಾನವನ್ನೂ (ಅಪರೋಕ್ಷವನ್ನೂ) ಹೊಂದಿ, ನಿತ್ಯಮುಕ್ತಲೋಕಗಳನ್ನು ಹೊಂದುವರು; ಇಲ್ಲಿಯೂ ಶ್ರವಣದ ಮಹಿಮೆಯೇ ಉಕ್ತವಾಗಿದೆ.

**ಈದೃಶಂ ಶ್ರವಣಂ ವಿಷ್ಣೋಃ ಕೀರ್ತನಂ ಮನನಾದಿಕಂ ।**
**ಮಹಾಫಲಪ್ರದಂ ನೃಣಾಂ ಸತ್ಸಂಗಾದೇವ ಲಭ್ಯತೇ ॥ ೩೦ ॥**

ಈದೃಶಂ- ಈ ವಿಧವಾದ, (ಹೀಗೆ ಸಾಧನೆಗಳಲ್ಲಿ ಶ್ರೇಷ್ಠವಾದ), ವಿಷ್ಣೋಃ- ಶ್ರೀವಿಷ್ಣುವಿನ, (ಶ್ರೀ ವಿಷ್ಣುಮಹಿಮೆಗಳ), ಶ್ರವಣಂ- ಶ್ರವಣವೂ, ಕೀರ್ತನಂ- ಕೀರ್ತನವೂ, ಮನನಾದಿಕಂ- ಮನನಾದಿಗಳೂ, (ಮನನ ಧ್ಯಾನಗಳಿಂದ ಸಹಿತವಾದ ಶ್ರವಣವೂ), ನೃಣಾಂ- ಮಾನವರಿಗೆ, ಮಹಾಫಲಪ್ರದಂ- ಬಹುಫಲಪ್ರದವಾದುದು; ಸತ್ಸಂಗಾತ್ ಏವ- (ಅದು) ಸತ್ಪುರುಷರ ಸಹವಾಸದಿಂದಲೇ, ಲಭ್ಯತೇ- ದೊರೆಯುತ್ತದೆ

**ತೀರ್ಥಯಾತ್ರಾತಪೋದಾನಯಜ್ಞಾದ್ಯಾಃ ಸಕಲಾಃ ಕ್ರಿಯಾಃ ।**
**ಸಾಧನಂ ಸ್ಯುಃ ಸತಾಂ ಸಂಗೇ ತಸ್ಮಾದ್ವಿಷ್ಣುಕಥಾಶ್ರುತಿಃ ॥ ೩೧ ॥**

**ತತೋ ಭಕ್ತಿರ್ಭವೇದ್ವಿಷ್ಣೌ ಪುನಶ್ಚ ಶ್ರವಣಂ ತತಃ ।**
**ಕೀರ್ತನಂ ಮನನಂ ಧ್ಯಾನಂ ಕ್ರಮಾತ್ಸಂಪದ್ಯತೇ ಯದಿ ॥ ೩೨ ॥**

---

ಮುಮುಕ್ಷುವಾದ ಮನುಷ್ಯನು, ಸಂಸಾರಬಂಧದಿಂದ ಮುಕ್ತನಾಗುತ್ತಾನೆ (೨೯). ಈ ವಿಧವಾದ ಮಹಿಮೆಯುಳ್ಳ ಸತ್ಕಥಾಶ್ರವಣವು, ಮನನಾದಿಗಳಿಂದ ಸಹಿತವಾಗಿ, ಮೋಕ್ಷವೆಂಬ ಮಹಾಪುರುಷಾರ್ಥವನ್ನೇ ದೊರಕಿಸುತ್ತದೆ; ಹೀಗಿರುವ ಶ್ರೀವಿಷ್ಣು ಕಥಾಶ್ರವಣವು ಸಾಧುಸಂಗದಿಂದ' ಮಾತ್ರ ಲಭಿಸುತ್ತದೆ (೩೦). ತೀರ್ಥಯಾತ್ರೆ, ತಪಸ್ಸು, ದಾನ, ಯಜ್ಞ ಮೊದಲಾದ ಎಲ್ಲ ಸತ್ಕರ್ಮಗಳು, ಸಾಧುಸಂಗದಿಂದಲೇ

**ತರ್ಹ್ಯೇವ ಸಂಸೃತೇರ್ಮೋಕ್ಷೋ ನಾನ್ಯಥಾ ಸ್ಯಾತ್ಕಥಂಚನ ।**

**ಸತಾಂ ಭವಾದೃಶಾಂ ಸಂಗಾತ್ ಸ್ಮಾರಿತಂ ವಿಷ್ಣುವೈಭವಂ ॥ ೨೩ ॥**

ತೀರ್ಥಯಾತ್ರಾ ತಪೋದಾನ ಯಜ್ಞಾದ್ಯಾಃ-ತೀರ್ಥಯಾತ್ರೆ, ತಪಸ್ಸು ದಾನ, ಯಜ್ಞಾದಿಗಳೆಂಬ, ಸಕಲಾಃ-ಸಮಸ್ತ ಕ್ರಿಯಾಃ-ಕೃತಿಗಳೂ (ಕರ್ಮಗಳೂ), ಸತಾಂ-ಸಜ್ಜನರ, ಸಂಗೇ-ಸಂಗದಲ್ಲಿಯೇ, (ಸಜ್ಜನರಿಂದ ಕೂಡಿ ಆಚರಿಸಲ್ಪಟ್ಟರೆ ಮಾತ್ರ), ಸಾಧನಂ-(ಮೋಕ್ಷ) ಸಾಧನವಾಗಿ, ಸ್ಯುಃ-ಆಗುತ್ತವೆ; ತಸ್ಮಾತ್-ಅದರಿಂದ (ಸಾಧುಸಂಗದಿಂದ), ಕಥಾಶ್ರುತಿಃ-ಕಥಾಶ್ರವಣವೂ, ತತಃ-ಅದರಿಂದ (ಶ್ರವಣದಿಂದ), ವಿಷ್ಣೌ-ಶ್ರೀವಿಷ್ಣುವಿನಲ್ಲಿ ಭಕ್ತಿ-ಭಕ್ತಿಯೂ, ಭವೇತ್-ಉಂಟಾಗುತ್ತದೆ; ತತಃ-ಅದರಿಂದ, (ಭಕ್ತಿಯಿಂದ), ಪುನಶ್ಚ-ಮತ್ತೂ ಶ್ರವಣಂ-ಶ್ರವಣವೂ, ಕೀರ್ತನಂ-ನಾಮಸಂಕೀರ್ತನವೂ (ಗುಣಾನುವಾದವೂ), ಮನನಂ-(ಸಂಶಯಾದಿಗಳ ಪರಿಹಾರಕ್ಕಾಗಿ) ಮನನವೂ, ಕ್ರಮಾತ್-ಕ್ರಮವಾಗಿ, ಧ್ಯಾನಂ-ಅಪರೋಕ್ಷ ದರ್ಶನವೂ, ಯದಿ ಸಂಪದ್ಯತೇ-ಯಾವಾಗ ದೊರೆಯುವುದೋ, ತರ್ಹಿ ಏವ-ಆಗ ಮಾತ್ರ, ಸಂಸೃತೇಃ-ಸಂಸಾರದಿಂದ, ಮೋಕ್ಷಃ-ಮುಕ್ತಿಯು; ಸ್ಯಾತ್ ಆಗುತ್ತದೆ; ಅನ್ಯಥಾ-ಬೇರೆ ಯಾವ ವಿಧದಿಂದಲೂ, ಕಥಂಚನ ನ-ಕಷ್ಟದಿಂದ ಸಹ ಲಭಿಸುವುದಿಲ್ಲ; ಭವಾದೃಶಾಂ-ನಿಮ್ಮಂತಹ, ಸತಾಂ-ಸಜ್ಜನರ, ಸಂಗಾತ್-ಸಹವಾಸದಿಂದ, ವಿಷ್ಣು-ವೈಭವಂ-ಶ್ರೀವಿಷ್ಣುವಿನ ಮಹಾಮಹಿಮೆಯು, ಸ್ಮಾರಿತಂ-ಜ್ಞಾಪಿಸಲ್ಪಟ್ಟಿತು.

**ಉಪದಿಷ್ಟಂ ಸತಾಂ ಮುಕ್ತ್ಯೈ ಮಹ್ಯಂ ದ್ವೈಪಾಯನೇನ ಯತ್ ।**

**ರಹಸ್ಯಂ ಪರಮಂ ಹ್ಯೇತನ್ಮಹಾವಿಷ್ಣೋರತಿಪ್ರಿಯಂ ॥ ೨೪ ॥**

**ಶ್ರವಣಾತ್ಕೀರ್ತನಾದಸ್ಯ ಧ್ಯಾನಯಜ್ಞಫಲಂ ಲಭೇತ್ ।**

**ನಾನೇನ ಸದೃಶಂ ಕಿಂಚಿನ್ಮುಕ್ತಿತೋ ವಿಷ್ಣುಭಕ್ತಿತಃ ॥ ೨೫ ॥**

---

ಮೋಕ್ಷಸಾಧನವಾಗುತ್ತವೆ (ಅಥವಾ ಈ ಎಲ್ಲ ಸತ್ಕ್ರಿಯೆಗಳ ಫಲವಾಗಿಯೇ ಸತ್ಪುರುಷಸಂಗವು ಲಭಿಸುತ್ತದೆ); ಸಾಧುಸಂಗದಿಂದ ಶ್ರೀವಿಷ್ಣುಕಥಾಶ್ರವಣವೂ, ಅದರಿಂದ ವಿಷ್ಣುಭಕ್ತಿಯೂ, ಭಕ್ತಿಯಿಂದ ಅಧಿಕ ಶ್ರವಣವೂ, ಶ್ರವಣದಿಂದ, ಕೀರ್ತನ (ಗುಣಾನುವಾದ), ಮನನಗಳೂ, ಅದರಿಂದ ಶ್ರೀವಿಷ್ಣುವಿನ ಸಾಕ್ಷಾದ್ದರ್ಶನವೂ, ಕ್ರಮವಾಗಿ ದೊರೆಯುತ್ತವೆ; ಸಾಕ್ಷಾದ್ದರ್ಶನದಿಂದಲೇ ಮೋಕ್ಷವು; ಅನ್ಯಸಾಧನಗಳಿಂದ ಎಂದೂ ಮೋಕ್ಷವು ಸ್ವಯಂ ಸಿದ್ಧಿಸುವುದಿಲ್ಲ (ಅಥವಾ ಶ್ರವಣಾದಿಗಳಿಂದ ಭಿನ್ನವಾದ ಸಾಧನಗಳು ಮುಕ್ತಿಸಾಧನಗಳೇ ಅಲ್ಲ); ಹೇ ಶೌನಕಾದಿಗಳೇ! ನಿಮ್ಮಂಥ ಸಜ್ಜನರ ಸಹವಾಸದಿಂದ, ನನ್ನಲ್ಲಿ ಶ್ರೀವಿಷ್ಣುವೈಭವದ ಸ್ಮರಣೆಯುಂಟಾಗಿ, ಧನ್ಯನಾದೆ (೨೨-೨೩). ಶ್ರೀಕೃಷ್ಣದ್ವೈಪಾಯನರಿಂದ, (ಶ್ರೀವೇದವ್ಯಾಸರಿಂದ), ಸಜ್ಜನರ ಸಂಸಾರ ಬಂಧವಿಮುಕ್ತಿಗಾಗಿ, ನನಗೆ ಉಪದೇಶಿಸಲ್ಪಟ್ಟ ರಹಸ್ಯವನ್ನೇ ನಾನು ನಿಮ್ಮೆಲ್ಲರಿಗೆ

**ಈದೃಶಂ ಶ್ರವಣಂ ವಿಷ್ಣೋಃ ಕೀರ್ತನಂ ಮನನಾದಿಕಂ ।**
**ಮಹಾಫಲಪ್ರದಂ ನೃಣಾಂ ಸತ್ಸಂಗಾದೇವ ಲಭ್ಯತೇ ॥ ೩೦ ॥**

ಈದೃಶಂ-ಈ ವಿಧವಾದ, (ಹೀಗೆ ಸಾಧನೆಗಳಲ್ಲಿ ಶ್ರೇಷ್ಠವಾದ), ವಿಷ್ಣೋಃ-ಶ್ರೀವಿಷ್ಣುವಿನ, (ಶ್ರೀ ವಿಷ್ಣುಮಹಿಮೆಗಳ), ಶ್ರವಣಂ-ಶ್ರವಣವೂ, ಕೀರ್ತನಂ-ಕೀರ್ತನವೂ, ಮನನಾದಿಕಂ-ಮನನಾದಿಗಳೂ, (ಮನನ ಧ್ಯಾನಗಳಿಂದ ಸಹಿತವಾದ ಶ್ರವಣವೂ), ನೃಣಾಂ-ಮಾನವರಿಗೆ, ಮಹಾಫಲಪ್ರದಂ-ಬಹುಫಲಪ್ರದವಾದುದು; ಸತ್ಸಂಗಾತ್ ಏವ-(ಅದು) ಸತ್ಪುರುಷರ ಸಹವಾಸದಿಂದಲೇ, ಲಭ್ಯತೇ-ದೊರೆಯುತ್ತದೆ.

**ತೀರ್ಥಯಾತ್ರಾತಪೋದಾನಯಜ್ಞಾದ್ಯಾಃ ಸಕಲಾಃ ಕ್ರಿಯಾಃ ।**
**ಸಾಧನಂ ಸ್ಯುಃ ಸತಾಂ ಸಂಗೇ ತಸ್ಮಾದ್ವಿಷ್ಣುಕಥಾಶ್ರುತಿಃ ॥ ೩೧ ॥**

**ತತೋ ಭಕ್ತಿರ್ಭವೇದ್ವಿಷ್ಣೌ ಪುನಶ್ಚ ಶ್ರವಣಂ ತತಃ ।**
**ಕೀರ್ತನಂ ಮನನಂ ಧ್ಯಾನಂ ಕ್ರಮಾತ್ಸಂಪದ್ಯತೇ ಯದಿ ॥ ೩೨ ॥**

---

ಮುಮುಕ್ಷುವಾದ ಮನುಷ್ಯನು, ಸಂಸಾರಬಂಧದಿಂದ ಮುಕ್ತನಾಗುತ್ತಾನೆ (೨೯). ಈ ವಿಧವಾದ ಮಹಿಮೆಯುಳ್ಳ ಸತ್ಕಥಾಶ್ರವಣವು, ಮನನಾದಿಗಳಿಂದ ಸಹಿತವಾಗಿ, ಮೋಕ್ಷವೆಂಬ ಮಹಾಪುರುಷಾರ್ಥವನ್ನೇ ದೊರಕಿಸುತ್ತದೆ; ಹೀಗಿರುವ ಶ್ರೀವಿಷ್ಣು ಕಥಾಶ್ರವಣವು ಸಾಧುಸಂಗದಿಂದ[1] ಮಾತ್ರ ಲಭಿಸುತ್ತದೆ (೩೦). ತೀರ್ಥಯಾತ್ರೆ, ತಪಸ್ಸು ದಾನ, ಯಜ್ಞ ಮೊದಲಾದ ಎಲ್ಲ ಸತ್ಕರ್ಮಗಳು, ಸಾಧುಸಂಗದಿಂದಲೇ

1. 'ಭವಾಪವರ್ಗೋ ಭ್ರಮತೋ ಯದಾ ಭವೇಜ್ಜನಸ್ಯ ತರ್ಹ್ಯಚ್ಯುತ ಸತ್ಸಮಾಗಮಃ । ಸತ್ಸಂಗಮೋ ಯರ್ಹಿ ತದೈವ ಸದ್ಗತೌ ಪರಾವರೇಶೇ ತ್ವಯಿ ಜಾಯತೇ ರತಿಃ ॥'—ಎಂದರೆ, ಸಂಸಾರದಲ್ಲಿ ಸುತ್ತುತ್ತಿರುವ ಜೀವನಿಗೆ ಬಿಡುಗಡೆಯ ಕಾಲವು ಸಮೀಪಿಸಿದಾಗ, ಹೇ ಕೃಷ್ಣ! ನಿನ್ನ ಇಚ್ಛೆಯಿಂದಲೇ ಸಜ್ಜನ ಸಹವಾಸವು ದೊರೆಯುತ್ತದೆ; ಸಾಧುಸಂಗದಿಂದ ಪುರುಷೋತ್ತಮನಾದ ನಿನ್ನಲ್ಲಿ, ಸಾಕ್ಷಾದ್ದರ್ಶನಕ್ಕೆ ಸಾಧನವಾಗುವ ಶ್ರೇಷ್ಠಭಕ್ತಿಯು ಉದಯವಾಗುತ್ತದೆ; ಮತ್ತು ಈ ವಿಧ ಭಕ್ತಿಯು ಸಾಧುಸಂಗದಿಂದ ಹೇಗೆ ದೊರೆಯುತ್ತದೆಂಬುದನ್ನೂ ಭಾಗವತವು, ಹೀಗೆ ವಿಶದಗೊಳಿಸುತ್ತದೆ:—'ಸತಾಂ ಪ್ರಸಂಗಾನ್ಮಮ ವೀರ್ಯಸಂವಿದೋ ಭವಂತಿ ಹೃತ್ಕರ್ಣರಸಾಯನಾಃ ಕಥಾಃ । ತಜ್ಜೋಷಣಾದಾಶ್ವಪವರ್ಗವರ್ತ್ಮನಿ ಶ್ರದ್ಧಾ ರತಿರ್ಭಕ್ತಿರನುಕ್ರಮಿಷ್ಯತಿ ॥'—ಎಂದರೆ, ಸತ್ಪುರುಷರ ನಿಕಟ ಸಂಗದಿಂದ, ಕಿವಿಗಳಿಗೂ ಮನಸ್ಸಿಗೂ ಅಮೃತದಂತೆ ಆನಂದ ವನ್ನುಂಟುಮಾಡುವ, ನನ್ನ ಮಹಿಮಾ ರೂಪ ದಿವ್ಯಸಂಪತ್ಪ್ರದ ಚರಿತ್ರೆಗಳ ನಿತ್ಯಲಾಭವಾಗುತ್ತದೆ; ಆ ಅಮೃತಸೇವನೆಯಿಂದ, ನನ್ನ ಸಾಕ್ಷಾದ್ದರ್ಶನವನ್ನು ದೊರಕಿಸುವ ಶ್ರೇಷ್ಠಭಕ್ತಿಯು ಅಭಿವೃದ್ಧಿಗೊಳ್ಳುತ್ತದೆ. ಹೀಗೆಂದು ಕಪಿಲರೂಪೀ ಶ್ರೀಹರಿಯು ತನ್ನ ತಾಯಿ, ದೇವಹೂತಿದೇವಿಗೆ ಉಪದೇಶಿಸಿರುವನು.

**ತರ್ಹ್ಯೇವ ಸಂಸೃತೇರ್ಮೋಕ್ಷೋ ನಾನ್ಯಥಾ ಸ್ಯಾತ್ಕಥಂಚನ ।**

**ಸತಾಂ ಭವಾದೃಶಾಂ ಸಂಗಾತ್ ಸ್ಮಾರಿತಂ ವಿಷ್ಣುವೈಭವಂ ॥ ೩೩ ॥**

ತೀರ್ಥಯಾತ್ರಾ ತಪೋದಾನ ಯಜ್ಞಾದ್ಯಾಃ-ತೀರ್ಥಯಾತ್ರೆ, ತಪಸ್ಸು, ದಾನ, ಯಜ್ಞಾದಿಗಳೆಂಬ, ಸಕಲಾಃ-ಸಮಸ್ತ ಕ್ರಿಯಾಃ-ಕೃತಿಗಳೂ (ಕರ್ಮಗಳೂ), ಸತಾಂ-ಸಜ್ಜನರ, ಸಂಗೇ-ಸಂಗದಲ್ಲಿಯೇ, (ಸಜ್ಜನರಿಂದ ಕೂಡಿ ಆಚರಿಸಲ್ಪಟ್ಟರೆ ಮಾತ್ರ), ಸಾಧನಂ-(ಮೋಕ್ಷ) ಸಾಧನವಾಗಿ, ಸ್ಯುಃ-ಆಗುತ್ತವೆ; ತಸ್ಮಾತ್-ಅದರಿಂದ (ಸಾಧುಸಂಗದಿಂದ), ಕಥಾಶ್ರುತಿಃ-ಕಥಾಶ್ರವಣವೂ, ತತಃ-ಅದರಿಂದ (ಶ್ರವಣದಿಂದ), ವಿಷ್ಣೌ-ಶ್ರೀವಿಷ್ಣುವಿನಲ್ಲಿ ಭಕ್ತಿಃ-ಭಕ್ತಿಯೂ, ಭವೇತ್-ಉಂಟಾಗುತ್ತದೆ; ತತಃ-ಅದರಿಂದ, (ಭಕ್ತಿಯಿಂದ), ಪುನಶ್ಚ-ಮತ್ತೂ, ಶ್ರವಣಂ-ಶ್ರವಣವೂ, ಕೀರ್ತನಂ-ನಾಮಸಂಕೀರ್ತನವೂ (ಗುಣಾನುವಾದವೂ), ಮನನಂ-(ಸಂಶಯಾದಿಗಳ ಪರಿಹಾರಕ್ಕಾಗಿ) ಮನನವೂ, ಕ್ರಮಾತ್-ಕ್ರಮವಾಗಿ, ಧ್ಯಾನಂ-ಅಪರೋಕ್ಷ ದರ್ಶನವೂ, ಯದಿ ಸಂಪದ್ಯತೇ-ಯಾವಾಗ ದೊರೆಯುವುದೋ, ತರ್ಹಿ ಏವ-ಆಗ ಮಾತ್ರ, ಸಂಸೃತೇಃ-ಸಂಸಾರದಿಂದ, ಮೋಕ್ಷಃ-ಮುಕ್ತಿಯು; ಸ್ಯಾತ್ ಆಗುತ್ತದೆ; ಅನ್ಯಥಾ-ಬೇರೆ ಯಾವ ವಿಧದಿಂದಲೂ, ಕಥಂಚನ ನ-ಕಷ್ಟದಿಂದ ಸಹ ಲಭಿಸುವುದಿಲ್ಲ; ಭವಾದೃಶಾಂ-ನಿಮ್ಮಂತಹ, ಸತಾಂ-ಸಜ್ಜನರ, ಸಂಗಾತ್-ಸಹವಾಸದಿಂದ, ವಿಷ್ಣುವೈಭವಂ-ಶ್ರೀವಿಷ್ಣುವಿನ ಮಹಾಮಹಿಮೆಯು, ಸ್ಮಾರಿತಂ-ಜ್ಞಾಪಿಸಲ್ಪಟ್ಟಿತು.

**ಉಪದಿಷ್ಟಂ ಸತಾಂ ಮುಕ್ತ್ಯೈ ಮಹ್ಯಂ ದ್ವೈಪಾಯನೇನ ಯತ್ ।**

**ರಹಸ್ಯಂ ಪರಮಂ ಹ್ಯೇತನ್ಮಹಾವಿಷ್ಣೋರತಿಪ್ರಿಯಂ ॥ ೩೪ ॥**

**ಶ್ರವಣಾತ್ಕೀರ್ತನಾದಸ್ಯ ಜ್ಞಾನಯಜ್ಞಫಲಂ ಲಭೇತ್ ।**

**ನಾನೇನ ಸದೃಶಂ ಕಿಂಚಿನ್ಮುಮುಕ್ಷೋರ್ವಿಷ್ಣುಭಕ್ತಿತಃ ॥ ೩೫ ॥**

---

ಮೋಕ್ಷಸಾಧನವಾಗುತ್ತವೆ (ಅಥವಾ ಈ ಎಲ್ಲ ಸತ್ಕ್ರಿಯೆಗಳ ಫಲವಾಗಿಯೇ ಸತ್ಪುರುಷಸಂಗವು ಲಭಿಸುತ್ತದೆ); ಸಾಧುಸಂಗದಿಂದ ಶ್ರೀವಿಷ್ಣುಕಥಾಶ್ರವಣವೂ, ಅದರಿಂದ ವಿಷ್ಣುಭಕ್ತಿಯೂ, ಭಕ್ತಿಯಿಂದ ಅಧಿಕ ಶ್ರವಣವೂ, ಶ್ರವಣದಿಂದ, ಕೀರ್ತನ (ಗುಣಾನುವಾದ), ಮನನಗಳೂ, ಅದರಿಂದ ಶ್ರೀವಿಷ್ಣುವಿನ ಸಾಕ್ಷಾದ್ದರ್ಶನವೂ, ಕ್ರಮವಾಗಿ ದೊರೆಯುತ್ತವೆ; ಸಾಕ್ಷಾದ್ದರ್ಶನದಿಂದಲೇ ಮೋಕ್ಷವು; ಅನ್ಯಸಾಧನಗಳಿಂದ ಎಂದೂ ಮೋಕ್ಷವು ಸ್ವಯಂ ಸಿದ್ಧಿಸುವುದಿಲ್ಲ (ಅಥವಾ ಶ್ರವಣಾದಿಗಳಿಂದ ಭಿನ್ನವಾದ ಸಾಧನಗಳು ಮುಕ್ತಿಸಾಧನಗಳೇ ಅಲ್ಲ); ಹೇ ಶೌನಕಾದಿಗಳಿರಾ ನಿಮ್ಮಂಥ ಸಜ್ಜನರ ಸಹವಾಸದಿಂದ, ನನ್ನಲ್ಲಿ ಶ್ರೀವಿಷ್ಣುವೈಭವದ ಸ್ಮರಣೆಯುಂಟಾಗಿ, ಧನ್ಯನಾದೆ (೩೦-೩೩). ಶ್ರೀಕೃಷ್ಣದ್ವೈಪಾಯನರಿಂದ, (ಶ್ರೀವೇದವ್ಯಾಸರಿಂದ), ಸಜ್ಜನರ ಸಂಸಾರ ಬಂಧವಿಮುಕ್ತಿಗಾಗಿ, ನನಗೆ ಉಪದೇಶಿಸಲ್ಪಟ್ಟ ರಹಸ್ಯವನ್ನೇ ನಾನು ನಿಮ್ಮೆಲ್ಲರಿಗೆ

**ಅನಾಖ್ಯೇಯಾನ್ಯಭಕ್ತೇಭ್ಯಃ ಶ್ರಾವ್ಯಂ ಚೈವಾತಿಭಕ್ತಿತಃ ।**
**ಜ್ಞಾನಾನೀಹ ರಹಸ್ಯಾನಿ ಪ್ರಾಯೇಣಾತ್ರೋದಿತಾನಿ ವೈ ॥ ೩೬ ॥**
**ಕಲೌ ಯುಗೇ ಮಹಾಘೋರೇ ಪುಣ್ಯವಿಪ್ರವಕಾರಿಣಿ ।**
**ಕ್ವಚಿತ್ ಕ್ವಚಿದಿದಂ ಲಭ್ಯಂ ಸದ್ಯೋ ಭಕ್ತಿಕರಂ ಹರೇಃ ॥ ೩೭ ॥**

ದ್ವೈಪಾಯನೇನ-ಶ್ರೀಕೃಷ್ಣದ್ವೈಪಾಯನರಿಂದ (ಶ್ರೀವೇದವ್ಯಾಸರಿಂದ), ಮಹ್ಯಂ-ನನಗೆ, ಸತಾಂ-ಸಜ್ಜನರ, ಮುಕ್ತ್ಯೈ-ಸಂಸಾರಬಂಧದ ವಿಮುಕ್ತಿಗಾಗಿ, ಯತ್-ಯಾವುದು, ಉಪದಿಷ್ಟಂ-ಉಪದೇಶಿಸಲ್ಪಟ್ಟಿತೋ, (ಅದೇ), ವಿಷ್ಣೋಃ-ಶ್ರೀವಿಷ್ಣುವಿಗೆ, ಅತಿಪ್ರಿಯಂ-ಅತಿಪ್ರಿಯವಾದ, ಏತತ್-ಈ, ಪರಮಂ-ಶ್ರೇಷ್ಠವಾದ, ರಹಸ್ಯಂ-ರಹಸ್ಯವು (ಈ ವಿಷ್ಣುರಹಸ್ಯವೆಂಬ ಪುರಾಣವು): ಅಸ್ಯ-ಇದರ, ಶ್ರವಣಾತ್-ಶ್ರವಣದಿಂದಲೂ, ಕೀರ್ತನಾತ್-ಕೀರ್ತನದಿಂದಲೂ (ಪಠಣ-ಅನುವಾದಗಳಿಂದ), ಜ್ಞಾನಯಜ್ಞಫಲಂ-ಜ್ಞಾನಯಜ್ಞದ ಫಲವನ್ನು (ಜ್ಞಾನಸಾಧನ ರೂಪದ ಶ್ರೀವಿಷ್ಣು ಪೂಜೆಯ ಫಲವನ್ನು-ಶ್ರೀವಿಷ್ಣು ಪ್ರಸನ್ನತೆಯನ್ನು), ಲಭೇತ್-(ಅಧಿಕಾರಿಜೀವನು) ಹೊಂದುತ್ತಾನೆ; ಮುಖ್ಯತಃ-ಮುಖ್ಯವಾಗಿ (ಪ್ರಧಾನವಾಗಿ), ವಿಷ್ಣುಭಕ್ತಿಕೃತ್-ವಿಷ್ಣು ಭಕ್ತಿಯನ್ನು ದೊರಕಿಸುವ (ಉದ್ಬೋಧಿಸುವ), ಅನೇನ-ಈ 'ವಿಷ್ಣುರಹಸ್ಯ'ಕ್ಕೆ, ಸದೃಶಂ-ಸದೃಶವಾದ, ಕಿಂಚಿತ್-ಮತ್ತೊಂದು ಸಾಧನೆಯು (ಗ್ರಂಥವು-ಶಾಸ್ತ್ರವು), ನ-ಇಲ್ಲವು; ಅತಿಭಕ್ತಿತಃ-ಅತ್ಯಾದರಪೂರ್ವಕವಾಗಿ, ಶ್ರಾವ್ಯಂ ಚೈವ-(ಈ ರಹಸ್ಯವು) ಶ್ರವಣ ಮಾಡಲ್ಪಡತಕ್ಕದ್ದೇ ಸರಿ; ಅತ್ರ-ಇಲ್ಲಿ, ಉದಿತಾನಿ-ಹೇಳಲಾಗಿರುವ, ಇಹ-ಇಲ್ಲಿರುವ (ಗೂಢವಾಗಿ ಅಡಗಿ, ಸೂಚಿತವಾಗಿರುವ), ಜ್ಞಾನಾನಿ-ತತ್ತ್ವಜ್ಞಾನ ವಿಷಯಕವಾದ, ರಹಸ್ಯಾನಿ-ರಹಸ್ಯಗಳು, ಪ್ರಾಯೇಣಾ-ಬಹುವಾಗಿ (ಅವುಗಳಲ್ಲಿ ಬಹುಭಾಗವು), ಅಭಕ್ತೇಭ್ಯಃ-ಭಕ್ತಿ ಇಲ್ಲದವರಿಗೆ (ಯೋಗ್ಯಜೀವರಾದರೂ ತತ್ಕಾಲದಲ್ಲಿ ಶ್ರದ್ಧೆಯಿಲ್ಲದವರಿಗೆ), ಅನಾಖ್ಯೇಯಾನಿ-ಹೇಳಲ್ಪಡತಕ್ಕವುಗಳಲ್ಲ

---

ನಿರೂಪಿಸಿರುವೆನು; (ಅದೇ ಈ 'ವಿಷ್ಣುರಹಸ್ಯ'ವೆಂಬ ಈವರೆಗೆ ಅನುವಾದಿಸಿದ ಪುರಾಣವು); ಇದರ ಶ್ರವಣ, ಕೀರ್ತನ (ಪಠಣ)ಗಳಿಂದ, ಜ್ಞಾನಯಜ್ಞದ ಫಲವನ್ನು ಅಧಿಕಾರಿಯು ಹೊಂದುವನು; ಈ ಜ್ಞಾನಯಜ್ಞದ ಪ್ರಧಾನಫಲವಾದ ವಿಷ್ಣುಭಕ್ತಿಯಿಂದ, ಅನ್ಯವಾದ, ಅದರ ಸದೃಶವಾದ, ಸಾಧನವಿಲ್ಲ; ಆದ್ದರಿಂದ, ವಿಷ್ಣುರಹಸ್ಯವನ್ನು ಅತ್ಯಾದರ ಪೂರ್ವಕವಾಗಿ ಶ್ರವಣಮಾಡತಕ್ಕದ್ದು ಅತ್ಯವಶ್ಯಕ; ಇಲ್ಲಿ ಉಕ್ತವಾದ ತತ್ತ್ವಜ್ಞಾನ ವಿಷಯಕ ರಹಸ್ಯಗಳನ್ನು ಶ್ರದ್ಧೆಯಿಲ್ಲದವರಿಗೆ (ದುಷ್ಟಸ್ವಭಾವದವರಿಗೆ ಸರ್ವಥಾ) ಹೇಳತಕ್ಕದ್ದಲ್ಲ; ಹೀಗೆಂಬುದು ಜ್ಞಾನಿಗಳ ನಿಶ್ಚಿತಾಭಿಪ್ರಾಯವು; ಪುಣ್ಯನಾಶಕರವಾದ ಈ ಘೋರ (ಮುಂಬರಲಿರುವ) ಕಲಿಯುಗದಲ್ಲಿ, ತತ್ಕಾಲದಲ್ಲಿ ಶ್ರೀವಿಷ್ಣುಭಕ್ತಿಯನ್ನು ಉದ್ಬೋಧಿಸುವ ಈ ವಿಷ್ಣುರಹಸ್ಯವು, ಕೆಲವರಿಗೆ ಮಾತ್ರ—ಸ್ವಲ್ಪ ಮಾತ್ರ, ಲಭಿಸುತ್ತದೆ

(ದುರ್ಜನರಿಗೆ ಸರ್ವಥಾ ಹೇಳತಕ್ಕದ್ದಲ್ಲ); ವೈ-ಇದು ಜ್ಞಾನಿಗಳ ನಿಶ್ಚಯವು; ಮಹಾಘೋರೇ-ಅತಿ ಭಯಂಕರವಾದ (ಸಾಧಕರಿಗೆ ಭಯಪ್ರದವಾದ) ಪುಣ್ಯ ವಿಪ್ಲವಕಾರಿಣ-ಪುಣ್ಯನಾಶಕರವಾದ, ಕಲೌಯುಗೇ-ಕಲಿಯುಗದಲ್ಲಿ, ಸದ್ಯಃ-ತತ್ಕಾಲ ದಲ್ಲಿ ಹರೇಃ-ಶ್ರೀಹರಿಯ, ಭಕ್ತಿಕರಂ-ಭಕ್ತಿಯನ್ನುಂಟುಮಾಡುವ, ಇದಂ-ಈ ವಿಷ್ಣುರಹಸ್ಯವು, ಕ್ವಚಿತ್-ಸ್ವಲ್ಪಮಾತ್ರ, ಕ್ವಚಿತ್-ಎಲ್ಲಿಯೋ ಕೆಲವರಿಗೆ ಮಾತ್ರ, ಲಭ್ಯಂ-ಲಭ್ಯವಾಗುತ್ತದೆ.

**ಅಮೃತಂ ದುರ್ಲಭಂ ನೃಣಾಂ ತಸ್ಮಾದೇತದ್ವರಂ ತತಃ ।**
**ಮಂದಭಾಗ್ಯೈಃ ಕಥಂ ಲಭ್ಯಂ ಕಥಂ ಚಾತ್ರಾದರೋ ಭವೇತ್ ॥ ೩೮ ॥**

ನೃಣಾಂ-ಮಾನವರಿಗೆ, ಅಮೃತಂ-ಅಮೃತವು, ದುರ್ಲಭಂ-ದುರ್ಲಭ ವಾದುದು (ದೇವಯೋಗ್ಯವಾದ ಅಮೃತವು ಮನುಷ್ಯಮಾತ್ರರಿಗೆ ದೊರೆಯುವುದು ಸಾಧ್ಯವಿಲ್ಲದಂತೆ); ತಸ್ಮಾತ್-ಅದಕ್ಕಿಂತಲೂ (ಅಮೃತಕ್ಕಿಂತಲೂ), ಏತತ್-ಇದು (ಈ ವಿಷ್ಣುರಹಸ್ಯವು, ವರಂ-ಶ್ರೇಷ್ಠವಾದುದು; ತತಃ-ಆದ್ದರಿಂದ ಮಂದಭಾಗ್ಯೈಃ-ಅಲ್ಪಪುಣ್ಯವುಳ್ಳವರಿಂದ, ಕಥಂ-ಹೇಗೆ, ಲಭ್ಯಂ-ಲಭ್ಯವಾದೀತು? (ಮಹಾಪುಣ್ಯವುಳ್ಳವ ರಿಗೆ ಮಾತ್ರ ದೊರೆಯುತ್ತದೆ); ಚ-ಹಾಗೂ, ಅತ್ರ-ಇದರಲ್ಲಿ (ಇಲ್ಲಿ ಉಕ್ತವಾದ ರಹಸ್ಯಗಳಲ್ಲಿ), ಕಥಂ-ಹೇಗೆ, ಆದರಃ-ಶ್ರದ್ಧೆಯು, ಭವೇತ್-ಉಂಟಾದೀತು? (ಆಗುವುದಿಲ್ಲ)

**ವಿಷ್ಣುಮಾಯಾವಮುಷ್ಟಧಿಯಾಂ ಶಾಸ್ತ್ರೇ ಭಾಗವತೇ ಪುನಃ ।**
**ದ್ವೇಷ ಏವಾಧಿಕೋ ಯದ್ವಾ ನೈವ ತತ್ರಾದರೋ ಭವೇತ್ ॥ ೩೯ ॥**
**ತಾದೃಶಾಮತಿದುಷ್ಟಾನಾಂ ವಿಷ್ಣುವೈಷ್ಣವನಿಂದಿನಾಂ ।**
**ದ್ವೇಷಿಣಾಂ ವಿಷ್ಣುಶಾಸ್ತ್ರಾಣಾಮತ್ರ ಭಕ್ತಿಃ ಕಥಂ ಭವೇತ್ ॥ ೪೦ ॥**

ಪುನಃ-ಮತ್ತು (ಅಷ್ಟುಮಾತ್ರವಲ್ಲ-ಆದರವುಂಟಾಗುವುದಿಲ್ಲವೆಂದು ಮಾತ್ರ ವಲ್ಲ), ವಿಷ್ಣುಮಾಯಾವಮುಷ್ಟಧಿಯಾಂ-ಶ್ರೀ ವಿ ಷ್ಣು ವಿ ನ ಇಚ್ಛೆಯಿಂದಲೇ

(೩೪-೩೭). ಮನುಷ್ಯರಿಗೆ, ದೇವಯೋಗ್ಯವಾದ ಅಮೃತವು ದುರ್ಲಭವಾದುದು; ಅಮೃತಕ್ಕಿಂತ ಶ್ರೇಷ್ಠವಾದುದು ಶ್ರೀವಿಷ್ಣುರಹಸ್ಯವು; ಮಹಾಪುಣ್ಯವಂತರಿಗೆ ಮಾತ್ರ ಲಭಿಸುವುದಾಗಿದ್ದು, ಮಂದಭಾಗ್ಯರಿಗೆ ದೊರೆಯದು; ಹೀಗಿರಲು, ಇವರಿಗೆ (ಅಲ್ಪಪುಣ್ಯವುಳ್ಳವರಿಗೆ) ಇಲ್ಲಿ ಉಕ್ತವಾದ ರಹಸ್ಯಗಳಲ್ಲಿ ಆದರವು ಹೇಗೆ ಉಂಟಾದೀತು? (ಆಗುವುದಿಲ್ಲ) (೩೮). ಭಗವದ್ವಿಷಯಕವಾದ ಈ ಶಾಸ್ತ್ರದಲ್ಲಿ ಶ್ರೀವಿಷ್ಣುಮಾಯಾ (ಇಚ್ಛಾ) ಮೋಹಿತವಾದ ಬುದ್ಧಿಯುಳ್ಳವರಿಗೆ, ದ್ವೇಷವೇ (ವಿರೋಧವೇ) ಉಂಟಾಗುತ್ತದೆ—ಆದರಲ್ಲಿ ಆದರವಂತೂ ಹುಟ್ಟುವುದೇ ಇಲ್ಲ; ಶ್ರೀವಿಷ್ಣುವನ್ನೂ ವಿಷ್ಣುಭಕ್ತರನ್ನೂ ನಿಂದಿಸುವ (ತುಚ್ಛವಾಗಿ ಕಾಣುವ) ಈ ವಿಧವಾದ

(ಶ್ರೀಹರ್ಯಧೀನಾದ ಪ್ರಕೃತಿಬಂಧದಿಂದ) ಮೋಹಿತವಾದ ಬುದ್ಧಿಯುಳ್ಳವರಿಗೆ, ಭಾಗವತೇ ಶಾಸ್ತ್ರೇ-ಭಗವತ್ಸಂಬಂಧವಾದ ಶಾಸ್ತ್ರದಲ್ಲಿ (ವಿಷ್ಣುರಹಸ್ಯಗಳನ್ನು ತಿಳಿಯುವುದರಲ್ಲಿ), ಅಧಿಕಃ-ಬಹುವಾದ, ದ್ವೇಷಃ ಏವ-ದ್ವೇಷವೇ (ವಿರೋಧವೇ), ಭವೇತ್-ಉಂಟಾಗುತ್ತದೆ; ಯದ್ವಾ-ಅಥವಾ, ತತ್ರ-ಆ ಶಾಸ್ತ್ರದಲ್ಲಿ ಆದರಃ-ಆದರವು (ವಿಶ್ವಾಸವು-ಶ್ರದ್ಧೆಯು), ನ ಭವೇತ್ ಏವ-ಉಂಟಾಗುವುದೇ ಇಲ್ಲ; ತಾದೃಶಾಂ-ಹಾಗಿರುವ (ಬುದ್ಧಿಮೋಹವುಳ್ಳ), ಅತಿ ದುಷ್ಟಾನಾಂ-ಅತಿ ದುಷ್ಟಸ್ವಭಾವದ, ವಿಷ್ಣು ವೈಷ್ಣವನಿಂದಿನಾಂ-ಶ್ರೀವಿಷ್ಣು ಮತ್ತು ವಿಷ್ಣುಭಕ್ತರ ನಿಂದಕರಿಗೆ, ವಿಷ್ಣುಶಾಸ್ತ್ರಾಣಾಂ-ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕ ಶಾಸ್ತ್ರಗಳ, ದ್ವೇಷಿಣಾಂ-ದ್ವೇಷಿಗಳಿಗೆ (ತಮೋಯೋಗ್ಯ ಜೀವರಿಗೆ), ಅತ್ರ-ಇದರಲ್ಲಿ (ಈ ವಿಷ್ಣುರಹಸ್ಯದಲ್ಲಿ), ಭಕ್ತಿಃ-ಭಕ್ತಿಯು (ಆದರ ಮತ್ತು ಶ್ರದ್ಧೆಗಳು), ಕಥಂ-ಹೇಗೆ (ಯಾವ ಕಾರಣದಿಂದ), ಭವೇತ್-ಉಂಟಾಗುತ್ತದೆ? (ಉಂಟಾಗುವುದೇ ಇಲ್ಲ).

**ಯಥಾ ಯಥಾ ಕಲೇರ್ವೃದ್ಧಿಸ್ತಥಾ ತಥಾ ಭವೇದ್ಧ್ರುವಂ ।**
**ಉಚ್ಛೇದೋ ವಿಷ್ಣುಶಾಸ್ತ್ರಾಣಾಂ ತದ್ವಿರುದ್ಧಪ್ರವರ್ತನಂ ॥ ೪೧ ॥**
**ಅತೋಽತಿ ದುರ್ಲಭಂ ಲೋಕೇ ಭವಿಷ್ಯತಿ ನ ಸಂಶಯಃ ।**
**ಏತಂ ವಿಷ್ಣುರಹಸ್ಯಾಖ್ಯಂ ಪುರಾಣಂ ವ್ಯಾಸಭಾಷಿತಂ ॥ ೪೨ ॥**
**ವಿಷ್ಣುಭಕ್ತಾಯ ಶಾಂತಾಯ ಧರ್ಮಿಷ್ಠಾಯ ಮುಮುಕ್ಷವೇ ।**
**ಆಖ್ಯೇಯಮಾದರೇಣೈವ ನೈವಾಖ್ಯೇಯಮನಾದೃತೇ ॥ ೪೩ ॥**

ಯಥಾ ಯಥಾ-ಹೇಗೆ ಹೇಗೆ, ಕಲೇಃ-ಕಲಿಯ, ವೃದ್ಧಿಃ-ಅಭಿವೃದ್ಧಿಯೋ; ತಥಾತಥಾ-ಹಾಗೆಹಾಗೆ, ಧ್ರುವಂ ಭವೇತ್-(ಈ ವಿಷ್ಣು ವೈಷ್ಣವ, ನಿಂದೆಯೂ, ವೈಷ್ಣವ ಶಾಸ್ತ್ರಗಳ ದ್ವೇಷವೂ) ಸ್ಥಿರವಾಗುತ್ತದೆ; ವಿಷ್ಣುಶಾಸ್ತ್ರಾಣಾಂ-ವೈಷ್ಣವ ಶಾಸ್ತ್ರಗಳ, ಉಚ್ಛೇದಃ-ನಾಶವೂ, ತದ್ವಿರುದ್ಧ ಪ್ರವರ್ತನಂ-ಆ ಶಾಸ್ತ್ರಗಳ ವಿರುದ್ಧವಾದ ಪ್ರವೃತ್ತಿಯೂ

---

ದುರ್ಜನರಿಗೆ, ಮತ್ತು ಶ್ರೀವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸಿರುವ ಶಾಸ್ತ್ರಗಳನ್ನು ನಿಂದಿಸುವ ಈ ತಮೋಯೋಗ್ಯರಿಗೆ, ಈ ವಿಷ್ಣುರಹಸ್ಯ ಪುರಾಣದಲ್ಲಿ ಆದರ ವಿಶ್ವಾಸಗಳು ಎಂದಿಗೂ ಉಂಟಾಗುವುದಿಲ್ಲ (೩೯-೪೦). ಲೋಕದಲ್ಲಿ ಕಲಿಪ್ರಭಾವವು ಹೇಗೆಹೇಗೆ ವೃದ್ಧಿಗೊಳ್ಳುವುದೋ ಹಾಗೆ ಹಾಗೆ (ಅದೇ ಪ್ರಮಾಣದಲ್ಲಿ), ವೈಷ್ಣವ ಶಾಸ್ತ್ರಗಳ ನಾಶವೂ, ತದ್ವಿರುದ್ಧಪ್ರವೃತ್ತಿಯೂ, ನಿಶ್ಚಯವಾಗಿ ಉಂಟಾಗುತ್ತದೆ; ಅದರಿಂದ, ಶ್ರೀ ವೇದವ್ಯಾಸರಿಂದ ಉಕ್ತವಾದ, ಈ ವಿಷ್ಣುರಹಸ್ಯವೆಂಬ ಪುರಾಣವೂ, ಜಗತ್ತಿನಲ್ಲಿ ಅತ್ಯಂತ ದುರ್ಲಭವಾಗುತ್ತದೆಂಬಲ್ಲಿ ಸಂಶಯವಿಲ್ಲ; ಈ ಕಾರಣದಿಂದ, ಇದನ್ನು ಮುಮುಕ್ಷುವೂ, ಧರ್ಮಿಷ್ಠನೂ, ಶಾಂತಚಿತ್ತನೂ ಆದ ವಿಷ್ಣುಭಕ್ತನಿಗೆ ಮಾತ್ರ ಆದರದಿಂದ ಉಪದೇಶಿಸಬೇಕು—ಆದರವಿಲ್ಲದವನಿಗೆ ಹೇಳಲೇಕೂಡದು

(ಜನರ ನಡವಳಿಕೆಯೂ). (ಸಂಭವಿಸುತ್ತದೆ); ಅತಃ-ಆದ್ದರಿಂದಲೇ, ಲೋಕೇ-ಜಗತ್ತಿನಲ್ಲಿ ಅತಿದುರ್ಲಭಂ ಭವಿಷ್ಯತಿ-(ವಿಷ್ಣುಶಾಸ್ತ್ರವು) ಅತ್ಯಂತ ದುರ್ಲಭವಾಗುವುದು; ನ ಸಂಶಯಃ-ಸಂದೇಹವಿಲ್ಲ (ನಿಶ್ಚಯವು). ಏತಂ-ಈ, ವ್ಯಾಸಭಾಷಿತಂ-ಶ್ರೀವೇದವ್ಯಾಸರಿಂದ ಹೇಳಲಾದ, ವಿಷ್ಣುರಹಸ್ಯಾಖ್ಯಂ-ಶ್ರೀ ವಿಷ್ಣುರಹಸ್ಯವೆಂಬ, ಪುರಾಣಂ-ಪುರಾಣವು, ಮುಮುಕ್ಷವೇ-ಮೋಕ್ಷಾಪೇಕ್ಷೆಯುಳ್ಳವನೂ, ಧರ್ಮಿಷ್ಠಾಯ-(ತದರ್ಥವಾಗಿ) ವಿಹಿತ ಕರ್ಮಾಚರಣೆಯಲ್ಲಿ ನಿಷ್ಠೆಯುಳ್ಳವನೂ, ಶಾಂತಾಯ-ಶಾಂತ ಚಿತ್ತನೂ, ವಿಷ್ಣುಭಕ್ತಾಯ-(ಆದ) ವಿಷ್ಣುಭಕ್ತನಿಗೆ (ಶ್ರೀವಿಷ್ಣುವಿನಲ್ಲಿ ಭಕ್ತಿಯುಳ್ಳ ಸುಜೀವನಿಗೆ), ಆದರೇಣ ಏವ-ಆದರದಿಂದಲೇ (ಪ್ರೀತ್ಯುತ್ಸಾಹಗಳಿಂದಲೇ), ಆಖ್ಯೇಯಂ-ಹೇಳಲ್ಪಡತಕ್ಕದ್ದು ಅನಾದೃತೇ-ಆದರವಿಲ್ಲದವನಿಗೆ, ನೈವ ಆಖ್ಯೇಯಂ-ಹೇಳತಕ್ಕದ್ದಲ್ಲವೇ ಅಲ್ಲ.

**ಯತ್ಫಲಂ ಸರ್ವತೀರ್ಥೈಃ ಸ್ಯಾತ್ ಸರ್ವಯಜ್ಞೈಶ್ಚ ಯತ್ಫಲಂ ।**
**ಸರ್ವದಾನೈಃ ಕರ್ಮಭಿಶ್ಚ ಯದ್ಯತ್ಕಾಲೇನ ಲಭ್ಯತೇ ॥ ೪೪ ॥**
**ಸಕೃಚ್ಛ್ರವಣತಶ್ಚಾಸ್ಯ ಕೀರ್ತನಾತ್ಸ್ಯಾತ್ತು ತತ್ಫಲಂ ।**
**ಅಂತೇ ಮುಕ್ತಿಮವಾಪ್ನೋತಿ ಯತೋ ನಾವರ್ತತೇ ಪುನಃ ॥ ೪೫ ॥**

ಸರ್ವತೀರ್ಥೈಃ-ಸಕಲ ಪುಣ್ಯತೀರ್ಥಗಳ ಸೇವೆಯಿಂದ, ಯತ್ಫಲಂ-ಯಾವ ಫಲವೋ, ಸರ್ವಯಜ್ಞೈಃ-ಸಕಲ ಯಜ್ಞಾಚರಣೆಯಿಂದ, ಯತ್ಫಲಂ-ಯಾವ ಫಲವು, ಸ್ಯಾತ್-ಉಂಟಾಗುವುದೋ; ಸರ್ವದಾನೈಃ-ಸಮಸ್ತದಾನಗಳಿಂದಲೂ, ಚ-ಮತ್ತು ಕರ್ಮಭಿಃ-ಕರ್ಮಗಳಿಂದಲೂ, ಕಾಲೇನ-ಆಯಾಕಾಲದಲ್ಲಿ (ಕಾಲನಿಯಾಮಕ ಶ್ರೀಹರಿಯಿಂದ), ಯದ್ಯತ್-ಯಾವ ಯಾವ ಫಲವು, ಲಭ್ಯತೇ-ದೊರೆಯುವುದೋ, ತತ್ಫಲಂ-ಆ ಫಲವು (ಪುಣ್ಯವಿಶೇಷವು), ಅಸ್ಯ-ಈ ಪುರಾಣದ, ಸಕೃತ್-ಒಂದಾವರ್ತಿ, ಶ್ರವಣಾತ್-ಶ್ರವಣಮಾಡುವುದರಿಂದಲೂ, ಕೀರ್ತನಾತ್ ಚ-ಕೀರ್ತನ (ಪಠಣ-ಅನುವಾದ)ದಿಂದಲೇ, ಸ್ಯಾತ್ ತು-ತಪ್ಪದೇ ದೊರೆಯುತ್ತದೆ; ಯತಃ-ಎಲ್ಲಿಂದ, (ಯಾವ ಮುಕ್ತಸ್ಥಾನದಿಂದ), ಪುನಃ-ಮತ್ತೆ ನ ಆವರ್ತತೇ-(ಸಂಸಾರಕ್ಕೆ)

---

(೪೧-೪೩). ಸಕಲಪುಣ್ಯತೀರ್ಥಗಳಿಂದ ಮತ್ತು ಸಕಲ ಯಜ್ಞಗಳಿಂದಲೂ ಯಾವ ಫಲವೋ (ಪುಣ್ಯವೋ), ಮತ್ತು ವಿವಿಧ ದಾನಗಳಿಂದಲೂ, ಸತ್ಕರ್ಮಗಳಿಂದಲೂ, ಆಯಾ ಕಾಲದಲ್ಲಿ ದೊರೆಯುವ ಯಾವ ಫಲವೋ, ಈ ವಿಷ್ಣುರಹಸ್ಯಪುರಾಣದ ಒಂದಾವರ್ತಿ ಶ್ರವಣದಿಂದ, ಕೀರ್ತನದಿಂದ (ಪಠಣ ಅನುವಾದಗಳಿಂದ), ಆ ಫಲವು ದೊರೆಯುತ್ತದೆ—ಅಷ್ಟು ಮಾತ್ರವಲ್ಲ, ಅಂತ್ಯಕ್ಕೆ ಪುನರಾವೃತ್ತಿರಹಿತವಾದ ಮೋಕ್ಷವನ್ನೂ ಹೊಂದುತ್ತಾನೆ (೪೪-೪೫). ಅನಂತಸೂರ್ಯಪ್ರಭಾಯುತರೂ, ಅಪರಿಮಿತ ಶಕ್ತಿಸ್ವರೂಪರೂ, ಷಡ್ಗುಣೈಶ್ವರ್ಯ ಪೂರ್ಣರೂ ಆದ ಭಗವಾನ್

ತಿರುಗಿಬರುವುದಿಲ್ಲವೋ, ಮುಕ್ತಿಂ-(ಅಂಥ) ಮೋಕ್ಷವನ್ನು, ಅಂತೇ-(ಈ ಪುರಾಣ ಶ್ರವಣದಿಂದಾಗುವ ಸಾಧನಾಂತ್ಯದಲ್ಲಿ) ಪರ್ಯವಸಾನದಲ್ಲಿ ದೊರೆಯುವ ಪ್ರಧಾನಫಲರೂಪವಾಗಿ, ಅವಾಪ್ನೋತಿ-ಹೊಂದುತ್ತಾನೆ.

**ನಮಸ್ತಸ್ಮೈ ಭಗವತೇ ವ್ಯಾಸಾಯಾಮಿತತೇಜಸೇ ।**
**ಯೇನ ಪ್ರವರ್ತಿತೋ ದೀಪೋ ವಿದ್ಯಾಜ್ಞಾನಮಯೋ ಮಹಾನ್ ॥ ೪೬ ॥**

**ಋಷಯ ಊಚುಃ—**

**ಧನ್ಯಕ್ಷಣೋಯಂ ತವ ಸಂಗಮಾದ್ಯತಃ ।**
**ಕಿಯತ್ತಥಾಯುರ್ಬತ ಗತ್ವರಂ ಚ ॥**
**ಯತ್ರೇದೃಶಂ ತ್ವನ್ಮುಖಪದ್ಮನಿಸ್ಸೃತಂ ।**
**ಪೀತಂ ಮುಹುರ್ವಿಷ್ಣುಕಥಾಮೃತಂ ಹಿ ನಃ ॥ ೪೭ ॥**

ಯೇನ-ಯಾರಿಂದ, ವಿದ್ಯಾಜ್ಞಾನಮಯಃ-ವಿವಿಧ ವಿದ್ಯೆ ಮತ್ತು ತತ್ತ್ವಜ್ಞಾನ ರೂಪದ, ಮಹಾನ್-ಶ್ರೇಷ್ಠವಾದ, ದೀಪಃ-ಪ್ರದೀಪವು (ಪ್ರಕಾಶವು), ಪ್ರವರ್ತಿತಃ-(ಜಗತ್ತಿನಲ್ಲಿ) ಪ್ರವೃತ್ತವಾಗಿರುವುದೋ, ತಸ್ಮೈ-ಅಂತಹ, ಅಮಿತ ತೇಜಸೇ-ಅನಂತ ಶಕ್ತಿಸ್ವರೂಪರೂ (ಅನಂತಪ್ರಕಾಶರೂಪರೂ), ಭಗವತೇ-ಷಡ್ಗುಣೈಶ್ವರ್ಯ ಪೂರ್ಣರೂ, ವ್ಯಾಸಾಯ-(ಆದ) ಶ್ರೀವ್ಯಾಸಮಹರ್ಷಿಗಳಿಗೆ, ನಮಃ-ನಮಸ್ಕಾರವು; ಋಷಿಗಳು ಹೇಳುತ್ತಾರೆ:—ಹೇ ಸೂತ!, ಯತ್ರ-ಎಲ್ಲ (ಯಾವ ನಿನ್ನ ಸಹವಾಸದಲ್ಲಿ) ತ್ವನ್ಮುಖಪದ್ಮನಿಃಸೃತಂ-ನಿನ್ನ ಮುಖಕಮಲದಿಂದ ಹೊರಬಿದ್ದ, ಈದೃಶಂ-ಈ ಪ್ರಕಾರದ ಮಹಿಮೆಯುಳ್ಳ, ವಿಷ್ಣುಕಥಾಮೃತಂ-ಶ್ರೀವಿಷ್ಣುಕಥಾಮೃತವು, ಮುಹುಃ-ನಿರಂತರ ವಾಗಿ, ಪೀತಂ-ಪಾನಮಾಡಲ್ಪಟ್ಟಿತೋ, (ಅಂಥ) ತವ ಸಂಗಮಾತ್-ನಿನ್ನ ಸಹವಾಸ ದಿಂದ, ನಃ-ನಮ್ಮಗಳ, ಗತ್ವರಂ-(ಧಾವಿಸುವ) ಕ್ಷಣಿಕವಾದ (ಅಶಾಶ್ವತವಾದ), ಆಯುಃ-ಆಯುಷ್ಯವು, ಕಿಯತ್-ಸ್ವಲ್ಪವಾದರೂ, ಯತಃ-ಯಾವ ಕಾರಣದಿಂದ

---

ಶ್ರೀವೇದವ್ಯಾಸರಿಗೋಸ್ಕರ ನಮಸ್ಕಾರವು; ವಿದ್ಯಾಜ್ಞಾನ ಸ್ವರೂಪರಾದ ಯಾರಿಂದ, ಜಗತ್ತಿನಲ್ಲಿ ಜ್ಞಾನಪ್ರದೀಪವು ಪ್ರಜ್ವಲಿಸುವುದೋ, ಅಂತಹ ಶ್ರೀವೇದವ್ಯಾಸರನ್ನು ಪುನಃ ಪುನಃ ನಮಸ್ಕರಿಸುವೆನು; ಶೌನಕಾದಿ ಋಷಿಗಳು ಸೂತಾಚಾರ್ಯನನ್ನುದ್ದೇಶಿಸಿ ಹೇಳು ತ್ತಾರೆ:—ಹೇ ಸೂತಾಚಾರ್ಯ! ನಿನ್ನ ಮುಖಪದ್ಮದಿಂದ ಹೊರಬಿದ್ದ ಶ್ರೀವಿಷ್ಣು ಕಥಾಮೃತವನ್ನು ಪುನಃ ಪುನಃ (ನಿರಂತರವಾಗಿ) ಪಾನಮಾಡಿದ ನಾವು ಧನ್ಯರು; ನಿನ್ನ ಸಂಗದಲ್ಲಿ ಗತವಾದ (ಕಳೆದ) ಅಸ್ಥಿರವಾದ (ಕ್ಷಣಿಕವಾದ—ಅಶಾಶ್ವತವಾದ), ನಮ್ಮ ಆಯುಷ್ಯವು ಸಾರ್ಥಕವಾಯಿತು; ಈ ವಿಷ್ಣುರಹಸ್ಯ ಪುರಾಣದ ಮಂಗಲಸಮಯದ ಕ್ಷಣವು ನಮ್ಮನ್ನು ಕೃತಕೃತ್ಯರನ್ನಾಗಿ ಮಾಡಿದೆ (೪೬-೪೭). ಈ ದಿವ್ಯಕಥಾಶ್ರವಣದಿಂದ

(ಸಾರ್ಥಕವಾಯಿತೋ), ತಥಾ-ಹಾಗೆಯೇ, ಅಯಂ-ಈ ಮಂಗಲಸಮಯವು, ಧನ್ಯಕ್ಷಣಃ-(ನಮ್ಮನ್ನು) ಧನ್ಯರನ್ನಾಗಿ (ಕೃತಕೃತ್ಯರನ್ನಾಗಿ) ಮಾಡುವ ಕ್ಷಣವಾಗಿದೆ; ಬತ-ಅದ್ಭುತವು! (ಇದೇ ನಮ್ಮ ಆಯುಷ್ಯದಲ್ಲಿ ಅತ್ಯಂತ ಪವಿತ್ರವಾದ ಕ್ಷಣವೆಂದು ಭಾವಿಸುವೆವು).

ಪಿತ್ರ್ಯರ್ಣಮುತ್ತೀರ್ಣಮನೇನ ತೂರ್ಣಂ ।
ದೇವರ್ಣಮಪ್ಯೇಷ ನರೋಽವತೀರ್ಣಃ ॥
ಕೃತಂ ಚ ಕರ್ತವ್ಯಮನೇನ ಪೂರ್ಣಂ ।
ಯೋ ವಿಷ್ಣುಗಾಥಾಶ್ರವಣಾದರಃ ಸ್ಯಾತ್ ॥ ೪೮ ॥

ಯಃ-ಯಾವಾತನು, ವಿಷ್ಣುಗಾಥಾಶ್ರವಣಾದರಃ-ಶ್ರೀವಿಷ್ಣುಕಥಾಶ್ರವಣದಲ್ಲಿ ಆದರವುಳ್ಳವನು, ಸ್ಯಾತ್-ಆಗಿರುವನೋ, ಅನೇನ-ಆತನಿಂದ, ಕರ್ತವ್ಯಂ-ಅವಶ್ಯವಾಗಿ (ಮನುಷ್ಯನಾಗಿ) ಮಾಡಬೇಕಾದದು, ಪೂರ್ಣಂ-ಸಂಪೂರ್ಣವಾಗಿ, ಕೃತಂ ಚ-ಮಾಡಲ್ಪಟ್ಟಂತೆಯೇ ಸರಿ; ಅನೇನ-ಆತನಿಂದ, ತೂರ್ಣಂ-ಶೀಘ್ರವಾಗಿ, ಪಿತ್ರ್ಯರ್ಣಂ-ಪಿತೃಋಣವು, ಉತ್ತೀರ್ಣಂ-ತೀರಿಸಲ್ಪಟ್ಟಿತು (ದಾಟಲ್ಪಟ್ಟಿತು-ಪರಿಹರಿಸಿಕೊಳ್ಳಲ್ಪಟ್ಟಿತು); ಏಷಃ-ಈ, ನರಃ-(ಶ್ರವಣಾದರವುಳ್ಳ) ಮನುಷ್ಯನು, ದೇವರ್ಣಂ ಅಪಿ-ದೇವಋಣವನ್ನು ಸಹ, ಅವತೀರ್ಣಃ-ದಾಟಿದವನೇ (ತೀರಿಸಿದವನೇ) ಸರಿ.

ಕಿಂ ವರ್ಣಯಾಮೋ ಬತ ಭಾಗ್ಯಸಂಪದಂ ।
ಯೋ ವ್ಯಾಸವಕ್ತ್ರಾಂಬುಜಗಂಧವಾಸಿತಂ ॥

---

ಶೀಘ್ರವಾಗಿ ನಮ್ಮಗಳ ಪಿತೃಋಣವೂ, ದೇವಋಣವೂ ತೀರಿತು;[1] ಯಾವ ಮನುಷ್ಯಜೀವನು, ಶ್ರೀವಿಷ್ಣುಕಥಾಶ್ರವಣದಲ್ಲಿ ಆದರವುಳ್ಳವನಾಗುವನೋ ಅವನು ಕೃತಕೃತ್ಯನೇ ಸರಿ; (ಅವಶ್ಯವಾಗಿ, ಮನುಷ್ಯಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಮಾಡಬೇಕಾದ ಸರ್ವಕರ್ತವ್ಯಗಳನ್ನೂ ಮಾಡಿದವನೇ ನಿಶ್ಚಯ) (೪೮). ಶ್ರೀವೇದವ್ಯಾಸರ ಮುಖವೆಂಬ ಕಮಲಗಂಧದಿಂದ ಸುವಾಸಿತವಾದ ಶ್ರೀವಿಷ್ಣುರಹಸ್ಯವೆಂಬ

---

1. ದೇವಋಣ, ಋಷಿಋಣ ಮತ್ತು ಪಿತೃಋಣಗಳೆಂಬ ಮೂರು ಋಣಗಳನ್ನು ಹೊತ್ತು ಹುಟ್ಟಿರುತ್ತಾನೆ—ಮನುಷ್ಯನು; 'ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ'—ಎಂಬ ಶ್ರುತಿಯು, ಈ ಮೂರೂ ಋಣಗಳನ್ನು ತೀರಿಸುವ ಬಗೆಯನ್ನು ನಿರೂಪಿಸುತ್ತದೆ. 'ವೈಶ್ವದೇವ'ವು ದೇವಯಜ್ಞವು; 'ಬ್ರಹ್ಮಯಜ್ಞ'ವು ಋಷಿಯಜ್ಞವು ಮತ್ತು ತರ್ಪಣ, ಶ್ರಾದ್ಧ ಪುತ್ರಸಂತಾನಾದಿಗಳು ಪಿತೃಯಜ್ಞವು. ಇವು (ವೈಶ್ವದೇವ, ಬ್ರಹ್ಮಯಜ್ಞ ತರ್ಪಣಾದಿಗಳು) ಈ ಮೂರು ಋಣಗಳ ಪರಿಹಾರಕ್ಕಾಗಿ ವಿಧಿಸಲ್ಪಟ್ಟವೆ. 'ಯಜ್ಞ'ವೆಂದರೆ ಶ್ರೀವಿಷ್ಣುಪೂಜಾತ್ಮಕ ಕರ್ಮ. ಈ ಮೂರನ್ನೂ 'ಯಜ್ಞ'ವೆಂದು ಕರೆದಿರುವುದು, ಎಲ್ಲವನ್ನೂ ಶ್ರೀಹರಿಸ್ಮರಣೆಪೂರ್ವಕ, ಶ್ರೀಹರಿಪೂಜೆಯೆಂಬ ಭಾವನೆಯಿಂದಲೇ ಆಚರಿಸಬೇಕೆಂಬುದನ್ನು ಸೂಚಿಸುತ್ತದೆ. ಯಜ್ಞಗಳು

ಪೀತಂ ಪಯೋ ವಿಷ್ಣುರಹಸ್ಯನಾಮಕಂ ।
ಪುನಃ ಪಿಬೇನ್ನೋ ಜನನೀಪಯಃ ಪುಮಾನ್ ॥ ೪೯ ॥

ಬತ-ಆಶ್ಚರ್ಯವು! (ನೋಡಿರಿ!), (ಈತನ) ಭಾಗ್ಯಸಂಪದಂ-ಪುಣ್ಯವೆಂಬ ಮಹಾಸಂಪತ್ತನ್ನು, ಕಿಂ-ಏನೆಂದು (ಎಷ್ಟೆಂದು), ವರ್ಣಯಾಮಃ-ವರ್ಣಿಸೋಣ; (ವರ್ಣಿಸಲು ಅಶಕ್ಯವಾದ ಮಹಾಪುಣ್ಯವನ್ನು ಹೊಂದುತ್ತಾನೆ); ಯಃ-ಯಾರು, ವ್ಯಾಸವಕ್ತ್ರಾಂಬುಜಗಂಧವಾಸಿತಂ-ಶ್ರೀವೇದವ್ಯಾಸರ ಮುಖಕಮಲದ ಪರಿಮಳ ಗಂಧದಿಂದ ಸುವಾಸಿತವಾದ, ವಿಷ್ಣುರಹಸ್ಯನಾಮಕಂ-ಶ್ರೀವಿಷ್ಣುರಹಸ್ಯವೆಂಬ, ಪಯಃ-ಅಮೃತವನ್ನು, ಪೀತಂ-ಕುಡಿದಿರುವನೋ (ಅಮೃತವು ಯಾರಿಂದ ಪಾನ ಮಾಡಲ್ಪಟ್ಟಿರುವುದೋ), ಪುಮಾನ್-ಆ ಪುರುಷನು (ಜೀವನು), ಪುನಃ-ಮತ್ತೆ ಜನನೀಪಯಃ-ಮಾತೃಸ್ತನ್ಯದ ಕ್ಷೀರವನ್ನು (ತಾಯಿಯ ಹಾಲನ್ನು), ನೋ ಪಿಬೇತ್-ಕುಡಿಯುವುದಿಲ್ಲ (ಪುನರ್ಜನ್ಮರಹಿತನಾಗುತ್ತಾನೆ-ಮುಕ್ತನಾಗುತ್ತಾನೆ).

ತ್ವಂ ಸೂತ ಜೀವಾಬ್ದಶತಾನಿ ಭೂಯೋ ।
ವ್ಯಾಸಪ್ರಿಯೋ ವಿಷ್ಣುಕಥಾಭಿಲಾಷಃ ॥
ಇಷ್ಟಾನಿ ಸಿಧ್ಯಂತು ಸದಾ ತವಾತ್ರ ।
ತಥಾ ಪರತ್ರಾಪಿ ಹರೇಃ ಪ್ರಸಾದಾತ್ ॥ ೫೦ ॥

ಸೂತ-ಹೇ ಸೂತ!, ವ್ಯಾಸಪ್ರಿಯಃ-ಶ್ರೀವೇದವ್ಯಾಸರಿಗೆ ಪ್ರಿಯನೂ

---

ಅಮೃತವು ಯಾರಿಂದ ಪಾನಮಾಡಲ್ಪಟ್ಟಿರುವುದೋ, ಆತನ ಮಹಾಭಾಗ್ಯವನ್ನು (ಪುಣ್ಯರಾಶಿಯನ್ನು), ಎಷ್ಟೆಂದು ವರ್ಣಿಸೋಣ! ಆಶ್ಚರ್ಯವು! ಈ ಅಮೃತವನ್ನು ಪಾನ ಮಾಡಿದವನು, ಪುನಃ ತಾಯಿಯ ಹಾಲನ್ನು ಎಂದೂ ಪಾನಮಾಡುವ ಅವಸ್ಥೆಯನ್ನು ಹೊಂದುವುದಿಲ್ಲ—ಪುನರ್ಜನ್ಮವಿಲ್ಲದ ಮುಕ್ತನಾಗುತ್ತಾನೆ (ಮೋಕ್ಷವನ್ನೇ ಹೊಂದುತ್ತಾನೆ) (೪೯). ಹೇ ಸೂತ! ಶ್ರೀವಿಷ್ಣುಕಥಾನುವಾದದಲ್ಲಿ ವಿಶೇಷವಾದ ಉತ್ಸಾಹಿಯಾಗಿ, ಶ್ರೀವ್ಯಾಸರ ಪ್ರಿಯನಾದ ನೀನು, ದೀರ್ಘಾಯುವಾಗಿ (ನೂರುವರ್ಷ

---

ಬಹುವಿಧವಾಗಿವೆ; ಅವುಗಳಲ್ಲಿ ಜ್ಞಾನಯಜ್ಞವೇ ಶ್ರೇಷ್ಠವಾದುದು. 'ಏವಂ ಬಹು ವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ । ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ'—'ಜೀವರ ಉದ್ಧಾರಕ್ಕಾಗಿ ವಿಸ್ತರಿಸಲಾದ ಬಹು ಯಜ್ಞಗಳ ಮಧ್ಯೆ ಜ್ಞಾನಯಜ್ಞವೇ ಶ್ರೇಷ್ಠವು'; ಎಲ್ಲ ಕರ್ಮಗಳ ಫಲಸಮೃದ್ಧಿಯು ಜ್ಞಾನದಿಂದಲೇ ಲಭಿಸುತ್ತದೆ. ಶ್ರೀವಿಷ್ಣುಕಥಾ ಶ್ರವಣರೂಪದ ಜ್ಞಾನಯಜ್ಞದಿಂದ, ಇತರ ಯಜ್ಞಗಳ ಫಲಪ್ರಾಪ್ತಿಯಾಗುವುದರಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದಲೇ ಶೌನಕಾದಿ ಋಷಿಗಳು, ದೇವಋಣ, ಪಿತೃಋಣಗಳಿಂದ (ಉಪಲಕ್ಷಣದಿಂದ ಸೂಚಿತವಾದ ಋಷಿಋಣದಿಂದಲೂ) ಈ ಜ್ಞಾನಯಜ್ಞದಿಂದ ಪರಿಹಾರವನ್ನು ಹೊಂದಿರುವುದೆಂದು ಹೇಳಿರುತ್ತಾರೆ.

(ಪ್ರೀ ತಿ ಪಾ ತ್ರನೂ). ಭೂಯಃ-ಅತಿಶಯವಾಗಿ, ವಿಷ್ಣುಕಥಾಭಿಲಾಷಃ-ಶ್ರೀವಿಷ್ಣು-ಗುಣಾನುವಾದ ದಲ್ಲಿ ವಿಶೇಷ ಉತ್ಸಾಹವುಳ್ಳವನೂ (ಆಗಿ), ತ್ವಂ-ನೀನು, ಅಬ್ದಶತಾನಿ-ನೂರು ವರ್ಷಗಳಕಾಲ (ಪೂರ್ಣಾಯುಷ್ಯವುಳ್ಳವನಾಗಿ), ಜೀವ-ಜೀವಿಸು; ಅತ್ರ-ಇಹದಲ್ಲಿಯೂ, ತಥಾ-ಹಾಗೂ, ಪರತ್ರ ಅಪಿ-ಪರಲೋಕಗಳಲ್ಲಿ ಸಹ, ಹರೇಃ-ಶ್ರೀಹರಿಯ, ಪ್ರಸಾದಾತ್-ಪ್ರಸನ್ನತೆಯಿಂದ (ಅನುಗ್ರಹದಿಂದ), ತವ-ನಿನ್ನ ಇಷ್ಟಾನಿ-ಅಭೀಷ್ಟಗಳು, ಸಿದ್ಧ್ಯಂತು-ಸಿದ್ಧಿಸಲಿ.

**ಇತ್ಥಂ ತೇ ಮುನಯಃ ಸರ್ವೇ ಶೌನಕಾದ್ಯಾ ಮಹೌಜಸಃ ।**
**ಶ್ರುತ್ವಾ ವಿಷ್ಣುರಹಸ್ಯಾನಿ ಶಂಸಮಾನಾಶ್ಚ ಸೂತಜಂ ॥ ೫೦ ॥**
**ಪ್ರಾಪುರ್ಮುದಂ ಪುರಾ ವಿಷ್ಣೋರ್ದೃಢಾಂ ಭಕ್ತಿಮವಾಪ್ನುವನ್ ।**
**ಪ್ರಾಪ್ನುವಂತ್ಯಖಿಲೇಷ್ಟಾನಿ ಯತೋ ಬ್ರಹ್ಮಾದಯೋಽಖಿಲಾಃ ॥ ೫೨ ॥**

ಇತ್ಥಂ-ಹೀಗೆ, ಮಹೌಜಸಃ-ಮಹಾತಪಸ್ವಿಗಳಾದ (ಬ್ರಹ್ಮವರ್ಚಸ್ವಿಗಳಾದ), ಶೌನಕಾದ್ಯಾಃ-ಶೌನಕರೇ ಮೊದಲಾದ, ಸರ್ವೇ-ಸಮಸ್ತರಾದ, ತೇ ಮುನಯಃ-ಆ ಋಷಿಗಳು, ಸೂತಜಂ-ಸೂತಪುತ್ರನಾದ ಸೂತಾಚಾರ್ಯನನ್ನು ಶಂಸಮಾನಾಃ-ಪ್ರಶಂಸಿಸುವವರಾಗಿ, ವಿಷ್ಣುರಹಸ್ಯಾನಿ-ಶ್ರೀವಿಷ್ಣುವಿಷಯಕ ರಹಸ್ಯಗಳನ್ನು (ತತ್ತ್ವಜ್ಞಾನ ಸಂಬಂಧವಾದ ಗೋಪ್ಯತಮಸಾರ ವಿಶೇಷಗಳನ್ನು), ಶ್ರುತ್ವಾ-ಶ್ರವಣಮಾಡಿ, ಮುದಂ-ಸಂತೋಷವನ್ನು ಪ್ರಾಪುಃ-ಹೊಂದಿದರು; ಪುರಾ-(ಈ ಪುರಾಣಶ್ರವಣದಿಂದ)

---

ಪರ್ಯಂತ) ಜೀವಿಸು; ಶ್ರೀಹರಿಪ್ರಸಾದದಿಂದ ಇಹಪರಗಳಲ್ಲಿ ನಿನ್ನ ಸರ್ವಾಭೀಷ್ಟಗಳು ಸಿದ್ಧಿಸಲಿ (೫೦). ಹೀಗೆ, ಮಹಾತಪಸ್ವಿಗಳಾದ ಶೌನಕಾದಿ ಆ ಸಮಸ್ತಮುನಿಗಳೂ, ಶ್ರೀವಿಷ್ಣುತತ್ತ್ವವಿಷಯಕವಾದ ಗೋಪ್ಯವಾದ ಸಕಲ ಸಾರರಹಸ್ಯಗಳನ್ನೂ ಶ್ರವಣಮಾಡಿ, ಸೂತಪುತ್ರನಾದ (ಸೂತಜಾತಿಯವನಾದ) ರೋಮಹರ್ಷಣನನ್ನು[1] ಪ್ರಶಂಸಿಸಿ,

1. 'ಬ್ರಾಹ್ಮಣ್ಯಾಂ ಕ್ಷತ್ರಿಯಾತ್ಸೂತಃ ಪ್ರಾತಿಲೋಮ್ಯೇನ ಜಾಯತೇ । ಕ್ಷತ್ರಿಯಾಣಾಮಸೌ ಧರ್ಮಂ ಕರ್ತುಮರ್ಹತ್ಯಶೇಷತಃ ॥'' ಇತ್ಯಾದಿ ಪ್ರಮಾಣಗಳಿಂದ, ಕ್ಷತ್ರಿಯ ಪುರುಷನಿಂದ ಬ್ರಾಹ್ಮಣಸ್ತ್ರೀಯಲ್ಲಿ ಜನಿಸಿದವನು ಸೂತನು—ಪ್ರತಿಲೋಮಜಾತಿಗೆ ಸೇರಿದವನು; ಈತನಿಗೆ ಸಕಲ ಕ್ಷತ್ರಿಯಧರ್ಮದಲ್ಲಿ ಅಧಿಕಾರವುಂಟು. (ಇಲ್ಲಿ್ನೇ ಅಧ್ಯಾಯದಲ್ಲಿ ವಿವರಿಸಲಾದ ಜಾತಿವಿವೇಕ ಮತ್ತು ಅವರ ಅಧಿಕಾರವಿಶೇಷಗಳನ್ನು ನೋಡಿಕೊಳ್ಳಬೇಕು). ಶ್ರೀವೇದವ್ಯಾಸರಿಂದ ಅನುಗ್ರಹೀತನಾಗಿ ಪುರಾಣಪ್ರವರ್ತಕನಾದವನು ರೋಮಹರ್ಷಣನು; ಆತನಿಗೇ ಸೂತನೆಂಬ ನಾಮಾಂತರ.

ನೈಮಿಷಾರಣ್ಯದಲ್ಲಿ ಸೂತನು ಶೌನಕಾದಿಗಳಿಗೆ ಪುರಾಣಗಳನ್ನು ಶ್ರವಣಮಾಡಿಸುತ್ತಿರುವಾಗ, ತೀರ್ಥಯಾತ್ರಾಕ್ರಮದಿಂದ ಅಲ್ಲಿಗೆ ಪ್ರಾಪ್ತನಾದ ಬಲರಾಮನು, ತನ್ನನ್ನು ಎದ್ದು ಗೌರವಿಸಲಿಲ್ಲವೆಂಬ ಆಕ್ರೋಶದಿಂದ ಸೂತನನ್ನು ದರ್ಭೆಯಿಂದ ಸಂಹರಿಸಿದನು; ಉಗ್ರಶ್ರವನೆಂಬುವನು, ರೋಮಹರ್ಷಣನ ಮಗನು—ಸೂತಪುತ್ರನಾದ್ದರಿಂದ 'ಸೌತಿ' ಎಂದೂ ಕರೆಯಲ್ಪಡುತ್ತಾನೆ.

ಪೂರ್ವದಲ್ಲಿ(ಅಥವಾ, ಎಲ್ಲಕ್ಕೂ ಪ್ರಥಮವಾಗಿ, ಪ್ರಧಾನವಾಗಿ), ವಿಷ್ಣೋಃ-ಶ್ರೀಮಹಾ ವಿಷ್ಣುವಿನ, ದೃಢಾಂ-ನಿಶ್ಚಲವಾದ, ಭಕ್ತಿಂ-ಭಕ್ತಿಯನ್ನು ಅವಾಪ್ನುವನ್-ಹೊಂದಿದರು; ಯತಃ-(ಯಾವ) ಈ ವಿಷ್ಣುಕಥಾಶ್ರವಣದಿಂದ (ವಿಷ್ಣುರಹಸ್ಯ ಜ್ಞಾನದಿಂದ) ಬ್ರಹ್ಮಾದಯಃ-ಚತುರ್ಮುಖನೇ ಮೊದಲಾದ, ಅಖಿಲಾಃ-ಸಮಸ್ತಜೀವರೂ, ಅಖಿಲೇಷ್ಟಾನಿ-ಸಕಲಾಭೀಷ್ಟಗಳನ್ನೂ, ಪ್ರಾಪ್ನುವಂತಿ-ಹೊಂದುತ್ತಾರೆ.

ಹೀಗೆ ಶ್ರೀವಿಷ್ಣುರಹಸ್ಯದಲ್ಲಿ ಅವಶಿಷ್ಟವಿಷ್ಣುಮಹಿಮಾ ವರ್ಣನವೆಂಬ
೫೫ನೇ ಅಧ್ಯಾಯವು ಮುಗಿದುದು.

॥ ಶ್ರೀಕೃಷ್ಣಾರ್ಪಣಮಸ್ತು ॥
॥ ಶ್ರೀವೇದವ್ಯಾಸಾರ್ಪಣಮಸ್ತು ॥
ಗ್ರಂಥ ಪರಿಸಮಾಪ್ತಿಯಾಯಿತು.

---

ಸಂತೋಷವನ್ನು ಹೊಂದಿದರು—ಶ್ರೀವಿಷ್ಣುವಿನಲ್ಲಿ ದೃಢವಾದ ಭಕ್ತಿಯನ್ನು ಹೊಂದಿ, ಹೀಗೆ ಪೂರ್ವದಲ್ಲಿ ಶೌನಕಾದಿ ಋಷಿಗಳು, ಈ ಪುರಾಣಶ್ರವಣದಿಂದ ಕೃತಾರ್ಥರಾದರು; ಏನಾಶ್ಚರ್ಯ! ಶ್ರೀವಿಷ್ಣುಮಹಿಮೆಗಳ ಶ್ರವಣದಿಂದ ಬ್ರಹ್ಮಾದಿ ದೇವತೆಗಳೂ ಸಕಲಾಭೀಷ್ಟಗಳನ್ನು ಹೊಂದುವರು (೫೦-೫೨).

---

ರೋಮಹರ್ಷಣನನ್ನು ಪುನಃ ಬದುಕಿಸಿ, ಬಲರಾಮನು, ಶೌನಕಾದಿ ಬ್ರಾಹ್ಮಣರನ್ನು ಶಿರಸ್ಸಿಂಬಿ, ಸೂತನನ್ನು ಸಂಹರಿಸಿದ ಪ್ರಾಯಶ್ಚಿತ್ತಾರ್ಥವಾಗಿ ಬಲ್ವಲನೆಂಬ ರಾಕ್ಷಸನನ್ನು ಕೊಂದು, ಭೂಪ್ರದಕ್ಷಿಣೆಗೆ ಹೊರಟುಹೋದನು; ಇಷ್ಟಾರಿ ಭಾರತದಲ್ಲಿ ಉಕ್ತವಾಗಿದೆ.

ಹೀಗೆ ಶ್ರೀವಿಷ್ಣುರಹಸ್ಯದಲ್ಲಿ ೫೫ನೇ ಅಧ್ಯಾಯವು ಮುಗಿದುದು.

ಗ್ರಂಥವೂ ಪರಿಸಮಾಪ್ತವಾಯಿತು.

ದಾವಣಗೆರೆಯಲ್ಲಿರುವ ಹರಿಭಕ್ತ ಸೇವಕ, ಬೆಳಗಾಂಕರ್ ಭೀಮರಾಯನಿಂದ ರಚಿತವಾದ
ತಾತ್ಪರ್ಯ ಟಿಪ್ಪಣಿ ಸಹಿತವಾದ ಕರ್ನಾಟಕಭಾಷಾಂತರವೂ ಮುಗಿಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

ಪೂರ್ವದಲ್ಲಿ(ಅಥವಾ, ಎಲ್ಲಕ್ಕೂ ಪ್ರಥಮವಾಗಿ, ಪ್ರಧಾನವಾಗಿ), ವಿಷ್ಣೋಃ-ಶ್ರೀಮಹಾವಿಷ್ಣುವಿನ, ದೃಢಾಂ-ನಿಶ್ಚಲವಾದ, ಭಕ್ತಿಂ-ಭಕ್ತಿಯನ್ನು ಅವಾಪ್ನುವನ್-ಹೊಂದಿದರು; ಯತಃ-(ಯಾವ) ಈ ವಿಷ್ಣುಕಥಾಶ್ರವಣದಿಂದ (ವಿಷ್ಣುರಹಸ್ಯ ಜ್ಞಾನದಿಂದ) ಬ್ರಹ್ಮಾದಯಃ-ಚತುರ್ಮುಖನೇ ಮೊದಲಾದ, ಅಖಿಲಾಃ-ಸಮಸ್ತಜೀವರೂ, ಅಖಿಲೇಷ್ಟಾನಿ-ಸಕಲಾಭೀಷ್ಟಗಳನ್ನೂ, ಪ್ರಾಪ್ನುವಂತಿ-ಹೊಂದುತ್ತಾರೆ.

ಹೀಗೆ ಶ್ರೀವಿಷ್ಣುರಹಸ್ಯದಲ್ಲಿ ಅವಶಿಷ್ಟವಿಷ್ಣುಮಹಿಮಾ ವರ್ಣನವೆಂಬ
೫೫ನೇ ಅಧ್ಯಾಯವು ಮುಗಿದುದು.

॥ ಶ್ರೀಕೃಷ್ಣಾರ್ಪಣಮಸ್ತು॥
॥ ಶ್ರೀವೇದವ್ಯಾಸಾರ್ಪಣಮಸ್ತು॥
ಗ್ರಂಥ ಪರಿಸಮಾಪ್ತಿಯಾಯಿತು.

---

ಸಂತೋಷವನ್ನು ಹೊಂದಿದರು—ಶ್ರೀವಿಷ್ಣುವಿನಲ್ಲಿ ದೃಢವಾದ ಭಕ್ತಿಯನ್ನು ಹೊಂದಿ, ಹೀಗೆ ಪೂರ್ವದಲ್ಲಿ ಶೌನಕಾದಿ ಋಷಿಗಳು, ಈ ಪುರಾಣಶ್ರವಣದಿಂದ ಕೃತಾರ್ಥರಾದರು; ಏನಾಶ್ಚರ್ಯ! ಶ್ರೀವಿಷ್ಣುಮಹಿಮೆಗಳ ಶ್ರವಣದಿಂದ ಬ್ರಹ್ಮಾದಿ ದೇವತೆಗಳೂ ಸಕಲಾಭೀಷ್ಟಗಳನ್ನು ಹೊಂದುವರು (೫೧-೫೨).

---

ರೋಮಹರ್ಷಣನನ್ನು ಪುನಃ ಬದುಕಿಸಿ, ಬಲರಾಮನು, ಶೌನಕಾದಿ ಬ್ರಾಹ್ಮಣರನ್ನು ತಿರಸ್ಕರಿಸಿ, ಸೂತನನ್ನು ಸಂಹರಿಸಿದ ಪ್ರಾಯಶ್ಚಿತ್ತಾರ್ಥವಾಗಿ ಬಲ್ವಲನೆಂಬ ರಾಕ್ಷಸನನ್ನು ಕೊಂದು, ಭೂಪ್ರದಕ್ಷಿಣೆಗೆ ಹೊರಟುಹೋದನು; ಇತ್ಯಾದಿ ಭಾರತದಲ್ಲಿ ಉಕ್ತವಾಗಿದೆ.

ಹೀಗೆ ಶ್ರೀವಿಷ್ಣುರಹಸ್ಯದಲ್ಲಿ ೫೫ನೇ ಅಧ್ಯಾಯವು ಮುಗಿದುದು.

ಗ್ರಂಥವೂ ಪರಿಸಮಾಪ್ತವಾಯಿತು.

ದಾವಣಗೆರೆಯಲ್ಲಿರುವ ಹರಿಭಕ್ತ ಸೇವಕ, ಬೆಳಗಾಂಕರ್ ಭೀಮರಾಯನಿಂದ ರಚಿತವಾದ
ತಾತ್ಪರ್ಯ ಟಿಪ್ಪಣಿ ಸಹಿತವಾದ ಕರ್ನಾಟಕಭಾಷಾಂತರವೂ ಮುಗಿಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು॥